# ಶ್ರೀ ಮದ್ವಿಶಿಷ್ಟಾದ್ವೈತಸಿದ್ಧಾನ್ತರತ್ನಮಾಲಾ

---

## ಆರನೆಯ ರತ್ನವು

ಸಮಸ್ತಾಽಜ್ಞಾನಾಂಧಕಾರನಿವಾರಕದಿನಮಣಿಯಾದ

# ಶ್ರೀಮದ್ಭಗವದ್ಗೀತೆಯೂ,

# ಶ್ರೀ ರಾಮಾನುಜ ಭಾಷ್ಯವೂ,

# ಶ್ರೀ ಯಾಮುನೀಯ ಗೀತಾರ್ಥಸಾರವೂ ಸಹ.

## ದ್ವಿತೀಯ ಷಟ್ಕವು



ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರು

**ಸಿ. ಯಂ. ವಿಜಯರಾಘವಾಚಾರ್ಯರಿಂದ**

ರಚಿಸಲ್ಪಟ್ಟ

## ಆಚಾರ್ಯಹೃದಯಾನ್ವೇಷಿಣೀ

**ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಚಂದ್ರಿಕಾರ್ಥಗಳೂ**

**ಶ್ರುತಿ ಸ್ಮೃತೀತಿಹಾಸ ಪುರಾಣ ಪ್ರಮಾಣಗಳೊಂದಿಗೆ**

**ಉಪಪಾದನೆಯೂ ಸಹ.**



೧೯೩೨.

**ಕ್ರಯ : ೩—೮—೦ ರೂಪಾಯಿಗಳು**

## ನಮ್ಮಲ್ಲಿ ದೊರೆಯುವ ಗ್ರಂಥಗಳು

ಆಚಾರ್ಯ ಹೃದಯಾನ್ವೇಷಿಣೀ ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಗಳೊಡನೆ
ಶ್ರೀಮನ್ನಿಗಮಾನ್ತ ಮಹಾದೇಶಿಕರವರ

| | | | | |
|---|---|---|---|---|
| ೧. | ಅಭೀತಿಸ್ತವವೆಂಬ ಶ್ರೀರಂಗನಾಥಸ್ತೋತ್ರವು | ೦ | ೧೨ | ೦ |
| ೨. | ಶ್ರೀಸ್ತುತಿ ಎಂಬ ಶ್ರೀ ರಂಗನಾಯಕೀ ಸ್ತೋತ್ರವು | ೦ | ೧೨ | ೦ |
| ೩. | ಶ್ರೀಮದ್ರಹಸ್ಯತ್ರಯಸಾರವು:— | | | |
| | (೧) ಗುರುಪರಂಪರಾಸಾರವು | ೦ | ೧೨ | ೦ |
| | (೨) ಉಪೋದ್ಘಾತಾಧಿಕಾರವು ಮತ್ತು ಸಾರನಿಷ್ಕರ್ಷಾಧಿಕಾರವು | ೦ | ೯ | ೦ |
| | (೩) ಪ್ರಧಾನ ಪ್ರತಿತಂತ್ರಾಧಿಕಾರವು ಮತ್ತು ಅರ್ಥಪಞ್ಚಕಾಧಿಕಾರವು | ೦ | ೧೨ | ೦ |
| | (೪) ತತ್ವತ್ರಯಾಧಿಕಾರವು | ೦ | ೧೨ | ೦ |
| | (೫) ಪರದೇವತಾ ಪರಮಾರ್ಥ್ಯಾಧಿಕಾರವು ಮತ್ತು ಮುಮುಕ್ಷುತ್ವಾಧಿಕಾರವು | ೦ | ೧೧ | ೦ |
| | (೬) ಅಧಿಕಾರಿವಿಭಾಗಾಧಿಕಾರವು, ಉಪಾಯವಿಭಾಗಾಧಿಕಾರವು ಮತ್ತು ಪ್ರಪತ್ತಿಯೋಗ್ಯಾಧಿಕಾರವು | ೦ | ೯ | ೦ |
| | (೭) ಪರಿಕರವಿಭಾಗಾಧಿಕಾರವು ಮತ್ತು ಸಾಙ್ಗಪ್ರಪದನಾಧಿಕಾರವು | ೦ | ೧೧ | ೦ |
| | (೮) ಕೃತಕೃತ್ಯಾಧಿಕಾರವು, ಸ್ವನಿಷ್ಠಾಭಿಜ್ಞಾನಾಧಿಕಾರವು ಮತ್ತು ಉತ್ತರಕೃತ್ಯಾಧಿಕಾರವು | ೦ | ೧೨ | ೦ |
| | (೯) ಪುರುಷಾರ್ಥಕಾಷ್ಠಾಧಿಕಾರವು, ಶಾಸ್ತ್ರೀಯ ನಿಯಮನಾಧಿಕಾರವು ಮತ್ತು ಅಪರಾಧಪರಿಹಾರಾಧಿಕಾರವು | ೧ | ೦ | ೦ |
| | (೧೦) ಸ್ಥಾನವಿಶೇಷಾಧಿಕಾರವು, ನಿರ್ಯಾಣಾಧಿಕಾರವು | ೦ | ೧೦ | ೦ |
| | (೧೧) ಗತಿಚಿಂತನಾಧಿಕಾರವು, ಪರಿಪೂರ್ಣಬ್ರಹ್ಮಾನುಭವಾಧಿಕಾರವು | ೦ | ೧೨ | ೦ |
| | (೧೨) ಸಿದ್ಧೋಪಾಯಶೋಧನಾಧಿಕಾರವು | ೦ | ೧೪ | ೦ |
| | (೧೩) ಸಾಧ್ಯೋಪಾಯ ಶೋಧನಾಧಿಕಾರವು | ೧ | ೦ | ೦ |
| | (೧೪) ಪ್ರಭಾವವ್ಯವಸ್ಥಾಧಿಕಾರ, ಪ್ರಭಾವರಕ್ಷಾಧಿಕಾರ ೪೩೬ ಪುಟಗಳು | ೨ | ೮ | ೦ |
| | (೧೫) ಮೂಲಮನ್ತ್ರಾಧಿಕಾರವು | ೩ | ೦ | ೦ |
| | (೧೬) ದ್ವಯಮನ್ತ್ರಾಧಿಕಾರವು | | | |
| ೪. | ಶ್ರೀ ಯಾಮುನೇಯರವರ ಚತುಶ್ಶ್ಲೋಕೀ | ೦ | ೮ | ೦ |
| ೫. | ಶ್ರೀ ವಿಷ್ಣುಸಹಸ್ರನಾಮಾವಳಿ (ಅರ್ಥ ಸಹಿತ) | ೦ | ೧೪ | ೦ |
| ೬. | (೧) ಶ್ರೀಮದ್ಭಗವದ್ಗೀತಾಭಾಷ್ಯದ ಪ್ರಥಮಷಟ್ಕವು ೮೦೦ ಪುಟ, ಮೂಲಕ್ಕೂ ಭಾಷ್ಯಕ್ಕೂ ಪ್ರತಿಪದಾರ್ಥ, ತಾತ್ಪರ್ಯ ಚಂದ್ರಿಕೆಯ ಅರ್ಥಗಳೂ, ಗೀತಾರ್ಥ ಸಙ್ಗ್ರಹ ಸಹ | ೩ | ೦ | ೦ |
| | (೨) ,, ದ್ವಿತೀಯ ಷಟ್ಕವು ೮೬೪ ಪುಟಗಳು | ೬ | ೪ | ೦ |
| | (೩) ,, ತೃತೀಯ ,, ೧ ನೆಯ ಭಾಗ | ೪ | ೦ | ೦ |
| ೭. | ಶ್ರೀ ಸ್ತೋತ್ರರತ್ನಮಾಲಾ ೨ ನೆಯ ಭಾಗ | ೪ | ೦ | ೦ |
| ೮. | ಶ್ರೀ ಸೂಕ್ತವೂ ಅದರ ಭಾಷ್ಯವೂ | ೧ | ೧೦ | ೦ |



ಸಿ. ಯಂ. ವಿಜಯರಾಘವಾಚಾರ್,
ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರ್,
ಬಸವನಗುಡಿ, ಬೆಂಗಳೂರು ೩೭,

# ವಿ ಜ್ಞಾ ಪ ನಾ

ಶ್ರೀ ಶ್ರೀನಿವಾಸಕೃಪೆಯಿಂದಲೂ, ಆಚಾರ್ಯರ ಅನುಗ್ರಹದಿಂದಲೂ ದಾಸನು ಮುದ್ರಿಸಿದ ಪ್ರಥಮ ಷಟ್ಕದ ಆಚಾರ್ಯ ಹೃದಯಾನ್ವೇಷಿಣೀ ಎಂಬ ಭಾಷ್ಯವನ್ನು, ಅನೇಕ ಮಹನೀಯರು ಪರಮಾದರದಿಂದ ಪರಿಗ್ರಹಿಸಿದುದಕ್ಕಾಗಿ ತುಂಬಾ ಕೃತಜ್ಞನಾಗಿದ್ದೇನೆ.

ಅನೇಕ ಪಂಡಿತ ಶಿಖಾಮಣಿಗಳೊಂದಿಗೆ ವಿವಾದಾಸ್ಪದಗಳಾದ ಭಾಗಗಳನ್ನು ವಿಚಾರಮಾಡಿ, ಅವರುಗಳಿಗೆ ಸಮ್ಮತವಾದ ಅಭಿಪ್ರಾಯಗಳೇ ಇದರಲ್ಲಿ ಅಡಗಿರುವದರಿಂದ ಶಾಸ್ತ್ರಜ್ಞರು ಅವುಗಳು ಉಪಾದೇಯವೆಂದು ಭಾವಿಸುವರೆಂದು ನಂಬುತ್ತೇನೆ. ಹನ್ನೊಂದನೆಯ ಅಧ್ಯಾಯದ ಕೊನೆಯ ಹತ್ತು ಶ್ಲೋಕಗಳಿಗೆ ದಾಸನು ಬರೆದಿರುವ ನೂತನಾಭಿಪ್ರಾಯವೇ ಶ್ರೀ ವ್ಯಾಸಮಹರ್ಷಿ ಗೀತಾಚಾರ್ಯರುಗಳಿಗೆ ಹೃದಯಂಗಮವಾದುದೆಂದು ಭಾವಿಸಿ ಬರೆದಿರುತ್ತೇನೆ. ಈ ಅಭಿಪ್ರಾಯವು ಶ್ರೀ ಭಾಷ್ಯಕಾರರ ಮತಿಯನ್ನು ಹೊಂದಿದೆಯೆಂದೂ ತೋರಿಸಿರುವೆನು. ಪುಸ್ತಕ ಮುದ್ರಣವು ಈಗ ಅನೇಕ ಕಾರಣಗಳಿಂದ ಹಿಂದೆ ೧೯೪೨ ರಲ್ಲಿಗಿಂತ ಮೂರರಷ್ಟಾಗಿದ್ದರೂ, ಕರುಣಾಸಾಗರನಾದ ಭಗವಾನ್ ಲೀಲಾಸಾರಥಿಯು ಸತ್ಯಸಙ್ಕಲ್ಪನಾದುದರಿಂದ ತಾನೇ ನಿಂತು ಬರೆಸಿದುದೂ ಅಲ್ಲದೆ ಪೂರೈಸಿಕೊಟ್ಟು, ಅದನ್ನು ಕೈಙ್ಕರ್ಯವಾಗಿ ಪರಿಗ್ರಹಿಸಿರುತ್ತಾನೆ. ಕ್ರಯವು ೩ ೪-೦ ರಿಂದ ೬-೮-೦ಕ್ಕೆ ಹೆಚ್ಚಿಸಿರುತ್ತದೆ.

ಶ್ರೀ ಕೃಷ್ಣಾರ್ಪಣಮಸ್ತು.

೧—೧—೧೯೪೨
ಬಸವನಗುಡಿ, ಬೆಂಗಳೂರು

ದಾಸ
ಚುಂ. ಮೋ. ವಿಜಯರಾಘವಶರ್ಮಾ

# ಶ್ರೀ ಭಗವದ್ಗೀತಾ ದ್ವಿತೀಯ ಷಟ್ಕದ ಅಕಾರಾದಿ ಕ್ರಮವು

OFFICE OF THE RAJAGURU
HIS HOLINESS,
SREE BRAMHATANTRA
PARAKALA SWAMI MUTT

MYSORE
*Date 5 - 6 - 1940*

ಶ್ರೀಮಾನ್ ಸಿ. ಯಂ. ವಿಜಯರಾಘವಾಚಾರ್ಯರ್, ಬಿ. ಎ., ಯವರು ಭಗವದ್ಗೀತೆ, ರಹಸ್ಯತ್ರಯಸಾರ ಮುಂತಾದ ಸಂಸ್ಕೃತ ದ್ರಾವಿಡ ವೇದಾನ್ತ ಗ್ರಂಥಗಳನ್ನು ಸ್ವಂತವಾಗಿ ಅಚ್ಚುಹಾಕಿ ಆ ಪ್ರತಿಗಳನ್ನು ಶ್ರೀ ಶ್ರೀ ಸ್ವಾಮಿಗಳವರ ಸನ್ನಿಧಾನಕ್ಕೆ ಸಮರ್ಪಿಸಿ, ಅವುಗಳಲ್ಲಿ ತಾವು ಪಟ್ಟಿರುವ ಪರಿಶ್ರಮವನ್ನು ಅರಿಕೆ ಮಾಡಿದರು. ಇದನ್ನು ಲಾಲಿಸಿ ಶ್ರೀ ಶ್ರೀ ಗಳವರು ಬಹಳ ಸಂತೋಷಿಸಿ,—

"ಶ್ರೀಮಾನ್ ವಿಜಯರಾಘವಾಚಾರ್ಯರು, ಲೌಕಿಕ ವಿದ್ಯಾಪಾರಂಗತರಾಗುವದರಲ್ಲಿ ಮತ್ತು ಮೈಸೂರು ಸರ್ಕಾರದ ಮಹೋನ್ನತಾಧಿಕಾರದಲ್ಲಿ ಬಹು ಕಾಲ ಕಳೆದರೂ, ವಿಶಿಷ್ಟಾದ್ವೈತವೇದಾನ್ತ ಗ್ರಂಥಗಳನ್ನು ಅಭಿನಿವೇಶದೊಡನೆ ಇಷ್ಟು ಮಟ್ಟಿಗೆ ವ್ಯಾಸಂಗ ಮಾಡಿರುವುದು ವಿಶೇಷಾಭಿನಂದನೀಯವಾಗಿದೆ. ಭಗವದ್ಗೀತೆ ರಹಸ್ಯತ್ರಯಸಾರ ಮೊದಲಾದ ಗ್ರಂಥಗಳನ್ನು ಶೋಧನದೃಷ್ಟಿಯಿಂದ ಪರಿಶೀಲಿಸಿ ಪೂರ್ವಾಚಾರ್ಯರುಗಳ ಅಭಿಪ್ರಾಯಗಳೊಡನೆ ಸಮನ್ವಯ ಮಾಡಿ ಮುದ್ರಿಸಿರುವುದು ಜನಗಳಿಗೆ ಹೃದಯಂಗಮವಾಗಿರುವುದು. ಮತ್ತು ಕನ್ನಡದ ಟೀಕೆಯೊಡನೆ ಪ್ರಕಟಪಡಿಸಿರುವುದು ಮತ್ತಷ್ಟು ಕನ್ನಡಿಗರಿಗೆ ಮಹೋಪಕಾರವಾಗಿದೆ. ಇವರು ಕೇವಲ ತತ್ವಜ್ಞಾನ ನಿರತರಾಗಿರುವರಲ್ಲದೆ ಜನಗಳಲ್ಲಿ ತತ್ವಜ್ಞಾನವನ್ನು ಪ್ರಚಾರಪಡಿಸಲು ಬದ್ಧಾದರರಾಗಿರುವುದರಿಂದ ಇವರಿಗೆ ಇತೋಽಪ್ಯತಿಶಯವಾಗಿ ಭಗವತ್ಕೃಪೆಯುಂಟಾಗಲೆಂದು ಆಶಂಸಿಸುತ್ತೇವೆ." ಎಂದು ಅಪ್ಪಣೆ ಕೊಡಿಸಿರುತ್ತಾರೆ.

ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ಯ.
Hon. Superintendent.

ಶ್ರೀ ಬ್ರಂಹ ತಂತ್ರ ಪರಕಾಲ ಶ್ರೀ ಮಠ
ಶ್ರೀ ಹಯಗ್ರೀವ ಲಕ್ಷ್ಮೀನಾರಾಯಣ ಶ್ರೀ ಎಂಬ ಸೀಲು ಇದೆ.

Vedamurthi Sriman, Dr. R. Nagaraja Sarma, Ph. D., of the Presidency College, Madras, who is well known throughout India for his philosophical lore, wrote in the "HINDU" of 14th January 1941 as follows :—

With a "Foreword contributed by Mr. M. Shama Rao, Retired Director of Public Instruction Mysore, the volume under notice contains an excellent exposition of the moral and metaphysical message of the Bhagavad Gita. The author has, with scrupulous care and attention kept close to the interpretation of the classic text attempted by the master-minds of Visishtadvaita - Ramanuja, Vedanta - Desika and Yamuna.

The volume contains the text of the first six chapters of the Gita and Ramanuja's Bhashya thereon done into Kanarese. The rendering is exact without being pedantic and is flawless and flowing. Mr. Achar has given a word-for word rendering of the text and the Bhashya, and incorporated into the general discussion of each stanza the striking contrbutions made by Vedanta-Desika and Yamuna (i. e., "Tatparyachandrika and Gitarthasara.") In addition, summaries of the chapters are given stanza by stanza, together with an exhaustive alphabetical Index.

On page 177 explanation is attempted of the undoubtedly difficult stanza - "Karmanyeva - adhikaraste." Whether or not the Gita advocates pacifism as the universal weapon or panacea is a live and open issue. Mr. Vijayaraghavachar explains .. " . .... Karmavoo - phalavoo - ninnadheenavalla - vemba - anusandhana - ira - takkaddu - Yuddha - ninage - vihita - karmavoo . .. . " If one elects to adopt the profession of a soldier, and enters military service, it must be preposterous of him to preach pacifism on the field, unless indeed he wants to play the truant and run away as a deserter. The Lord sternly reminds Arjuna that he being a Kshatriya, his duty was to fight to the finish. Karma is three - fold - Nitya, Naimittika and Kamya. Karma in all its aspects is not under the control of any finite self, however eminent. It is under the control of the Lord. Even so, the consequences that flow from each type of Karma, are not under the control of the finite. Arjuna is frequently reminded that as a Kshatriya he must fight. Pacifism may be an excellent virtue under certain conditions or circumstances of limited applicability. It cannot be universalized.

On page 467, the nature and significance of "Karma" "A-karma", and "Vikarma" are explained. That programme alone

must count which would free Arjuna, free all finite beings, from the ills of finite existence itself. It is only that "Karma", that Programme which the Lord elucidates in the context in question. ("Mokshase - asubhat ..........") Mr. Achar has strikingly brought out the significance of "Asubhat" in his explanation of what exactly is the peculiar "Karma" as contradistinguished from "A-Karma", and "Vi-Karma" that is the subject - matter of the discussion.

Lastly on page 557, the author brings oui the relation between the Sankhya, and Yoga, schools and the methods of spiritual realization adopted by them. With reference to fhe crucial terms "Ubhayoh phalam", and "Sthanam" (5 - 4, and 5-5) he explains that the Sankhya and the Yoga approaches, notwithstanding their apparent differences and divergences, lead an aspirant to one and the same goal of self - realization, or freedom from the ills of finite existence. It is noteworthy that in interpreting the term "Pasyati", Mr. Vijayaraghavachar underlines the importance of learning spiritual truths and translating them into practice only with the help of a Guru.

It should be noted that in many contexts, Mr. Vijayaraghavachar makes reference to the interpretations of other Acharyas as well, beside the three Visishtadwaita Acharyas, and has produced altogether excellent treatment of the topics and critical discussions.

R. NAGA RAJA SARMA

ಶ್ರೀರಸ್ತು

ಶ್ರೀಮದ್ವೇದಮಾರ್ಗೇತ್ಯಾದಿ ಶುಭಗುಣಾಲಂಕೃತರಾದ ಶ್ರೀಮದ್ರಾಜಸಂಪದ್ವಿಭೂಷಿತರಾದ

**ವಿಜಯರಾಘವಾಚಾರ್ಯರ ಸ|| ಕ್ಕೆ.**

**ಅರಮನೆ ಧರ್ಮಾಧಿಕಾರಿ ಹೊಳವನಹಳ್ಳಿ ಶೇಷಾಚಾರ್ಯನ ವಿಜ್ಞಾಪನಾ.**

ಉಭಯ ಕುಶಲ ಸಾಂ||

ನೂತನವಾಗಿ ತಮ್ಮಿಂದ ವಿರಚಿತವಾದ ಕರ್ಣಾಟಕ ವ್ಯಾಖ್ಯಾನ ಸಮಲಂಕೃತವಾದ ಶ್ರೀಮದ್ಭಗವದ್ಗೀತಾ ಪುಸ್ತಕವನ್ನು ತಾವು ಪರಮ ವಿಶ್ವಾಸದಿಂದ ಕಳುಹಿಸಿದುದನ್ನು ನಾನು ಪರಮಾದರದಿಂದ ಆಮೂಲಾಗ್ರವಾಗಿ ನೋಡಿದೆ. ಬಹಳ ಸಂತೋಷವಾಯಿತು.

ಶ್ರೀಮದ್ರಾಮಾನುಜ ಸಿದ್ಧಾಂತಾನುಸಾರವಾಗಿ ಶ್ರೀಮದ್ಗೀತಾರ್ಥ ಗ್ರಹಣೇಚ್ಛಾ ಉಳ್ಳ ಜನರುಗಳಿಗೆ ಬಹಳ ಉಪಕಾರಕವಾಗಿರುತ್ತೆ. ಶ್ರುತಿಸ್ಮೃತಿಗಳ ಆಧಾರದಿಂದ ಸ್ಥಾಪಿತವಾದ ಶ್ರೀಮದ್ರಾಮಾನುಜ ಸಿದ್ಧಾಂತತತ್ವವೆಲ್ಲ ವಿಚಾರಪೂರ್ವಕವಾಗಿ ಗೀತಾರೂಢವಾಗಿ ಸಮರ್ಥಿತವಾಗಿ ಇರುತ್ತೆ.

ತಾವು ಪೂರ್ಣವಾಗಿ ಆಂಗ್ಲೇಯ ಭಾಷಾಭಿಜ್ಞರಾಗಿ ಮೈಸೂರು ರಾಜಕೀಯ ವಿದ್ಯಾಶಾಖೆಯಲ್ಲಿ ಗಣ್ಯವಾದ ಅಧಿಕಾರದಲ್ಲಿರುವಾಗಲು ಈ ಸಂಸ್ಕೃತಭಾಷಾಮಯವಾದ ಸದ್ಗ್ರಂಥಾನುಭವದ ಸಂಸ್ಕಾರವನ್ನು ಅಭಿವೃದ್ಧಿಗೆ ತಂದು, ಲೌಕಿಕದಿಂದ ವಿರಾಮವನ್ನು ಹೊಂದಿದಮೇಲೆ ತಮ್ಮ ವೇದಾನ್ತ ಗ್ರಂಥಗಳ ಅಭ್ಯಾಸವನ್ನು ವಿಚಾರಪೂರ್ವಕವಾಗಿ ಮಾಡಿ ಅದರ ಫಲರೂಪವಾಗಿ ಲೋಕೋಪಕಾರಮೂಲಕ ಆತ್ಮೋದ್ಧಾರಕವಾದ ಶ್ರೀ ಭಗವತ್ಸೇವಾದೃಷ್ಟಿಯಿಂದ ಈ ಗ್ರಂಥರಚನೆ ಮಾಡೋಣವಾಗಿರುವದು ಬಹಳ ಶ್ಲಾಘನೀಯವಾದ ವಿಷಯವು.

ಆಸ್ತಿಕ ಮಹಾಜನರು ಈ ತಮ್ಮ ಸವ್ಯಾಖ್ಯಾನ ಗೀತಾ ಪುಸ್ತಕವನ್ನು ತೆಗೆದುಕೊಂಡು ಪಠಿಸಿ ಸಂತೋಷಹೊಂದೋಣದರ ಮೂಲಕ ತಮ್ಮ ಈ ಪ್ರಯತ್ನವು ಸಫಲವಾಗಲೆಂದು ಅಪೇಕ್ಷಿಸುತ್ತೇನೆ.

೧೮—೧೨—೪೦
ಹೊಳವನಹಳ್ಳಿ

**ಧ. ಹೊ. ಶೇಷಾಚಾರ್ಯ**

PANDIT
M. D. ALASINGARACHARIAR,
Presidency Callege, (Retd.)

40, South Tank Square
TRIPLICANE
Madras, 26 - 3 - 1940

## ಪೂಜ್ಯರಲ್ಲಿ ಅಳಸಿಂಗರಾಚಾರ್ಯದಾಸನ ವಿಜ್ಞಾಪನೆ :—

ತಾವು ಕೃಪಾಪೂರ್ವಕವಾಗಿ ಅನುಗ್ರಹಿಸಿ ಕೊಟ್ಟ ತಮ್ಮ ಭಗವದ್ಗೀತೆಯ ಪ್ರಥಮ ಸಂಪುಟವನ್ನು ಕೃತಜ್ಞತೆಯೊಡನೆ ಸ್ವೀಕರಿಸಿದೆನು. ನಾನು ಶ್ರೀ ಮಹಾಭಾರತದ ಭೀಷ್ಮ ಪರ್ವವನ್ನು ಪರಿವರ್ತಿಸುತ್ತಿರುವ ಸಂದರ್ಭದಲ್ಲಿ, ಸಾಮಾನ್ಯ ಜನರ ಅವಗಾಹನೆಗಾಗಿ ಗೀತೆಯ ಶ್ಲೋಕಗಳಿಗೆ ಆಪಾತಾರ್ಥವನ್ನು ಮಾತ್ರ ಅದರಲ್ಲಿ ಸೇರಿಸಿ, ಮೂಲ ಶ್ಲೋಕಗಳೊಡನೆ ಪ್ರಕಟಿಸಿದುದಲ್ಲದೆ, ಆ ಭಗವದ್ಗೀತೆಯನ್ನೇ ಪ್ರತ್ಯೇಕವಾದ ಸಣ್ಣ ಪುಸ್ತಕವನ್ನಾಗಿಯೂ ಪ್ರಕಟಪಡಿಸಿದ್ದೆನು. ಆದರೆ ಈಗ ಅದರ ಪ್ರತಿಗಳೆಲ್ಲವೂ ಮುಗಿದುಹೋಗಿವೆ. ಈಗಲೂ ಅನೇಕರು ಆ ಪುಸ್ತಕದ ಪ್ರತಿಗಳನ್ನು ಕೇಳುತ್ತಿರುವರು. ಆದರೆ ವಿವರವಾದ ರಾಮಾನುಜ ಭಾಷ್ಯದೊಡನೆ ಅದನ್ನು ತಿರುಗಿ ಪ್ರಕಟಿಸಬೇಕೆಂಬ ಉದ್ದೇಶವು ನನಗಿದ್ದುದರಿಂದ, ನಾನು ಅದರ ಪುನರ್ಮುದ್ರಣಕ್ಕೆ ಯತ್ನಿಸಲಿಲ್ಲ. ಆ ನನ್ನ ಉದ್ದೇಶವು ಈಗ ತಮ್ಮಿಂದ ಪೂರ್ಣವಾದುದಕ್ಕಾಗಿ ನಾನು ಬಹಳ ತೃಪ್ತನಾಗಿರುತ್ತೇನೆ. ನಾನು ಉದ್ದೇಶಿಸಿದ್ದ ರೀತಿಗಿಂತಲೂ ತಮ್ಮ ಈಗಿನ ಪುಸ್ತಕವು ಅನೇಕ ವಿಧದಲ್ಲಿ ಅತಿಶಯಿಸಿದೆಯೆಂಬುದನ್ನು ನಾನು ಮನಃಪೂರ್ವಕವಾಗಿ ತಮ್ಮಲ್ಲಿ ವಿಜ್ಞಾಪಿಸಿಕೊಳ್ಳುತ್ತೇನೆ.

ಇತಿ ತಮ್ಮ ಕೃಪಾಪಾತ್ರನಾದ
**ದೇವಶಿಖಾಮಣಿ ಅಳಸಿಂಗರಾಚಾರ್ಯದಾಸಃ**

# GITA BHASHYA OF RAMANUJA

BHAGAVAD GITA BHASAYA OF SRI RAMANUJA : Translated and expounded in Kannada by C. M. Vijayaraghavachar, No. 3. North Publi Square Road, Basavangudi, Bangalore. Shatka 3. part 2. containing the last chapter pp. 2251-2656. Price Rs. 4.

This brings the laborious work of the Kannada translation and elucidation of the Gita Bhashya of Ramanuja undertaken more than a decade back, by this great doyen of Visistadvaita scholars in the Mysore State, to a successful conclusion. The present instalment deals with the whole of the 18th chapter of, the Gita and maintains the same level of scholarly treatment, depth of conviction and mastery of details over the texts and traditions of the Visishtadvaita Sampradaya. The Bhashya of Ramanuja is faithfully interpreted with elucidations where required from the commentary of Vedanta Desika and with the help of citations from a large body of ancillary literature of the Pancaratra, the Ramayana, and the Brahma Sutras. The relevant portion of Yamuna's short epitome of the Gita is also explained at the end.

The most significant point in Ramanuja's exposition of this chapter is his fixation of the meaning of the terms "Sannyasa" and "Tyaga" as synonymous with active performance of karmas with a relinquishment of all desires for fruits (phala-tyaga) and the idea of independent doership (Kartrtva tyaga) in accordance with the declaration of Gita 18. 11. That is the only kind of "Tyaga or Sannyasa" countenanced in the Gita and not the total abandonment of all karma as such, as Sankara would have it. This view of Ramanuja has the support of Madhva also. But then, it is not apparent why on such a view the term Etani api in 18. 6. should not be extended to comprehend the performance without desire for fruit and without the assumption of independent doership, of even the so-called "kamya karmas" like the Jyotishtoma which are also prescribed in the Vedas—particularly in the light of what Ramanuja himself has said about "Moksha-viniyoga" of " Nitya " and "Naimittika" karmas ( p. 2279 ).

The author lays rightful emphasis on the significance of the terms "Svabhava" and "Sahaja" (in verses 41 and 41) in regard to the duties assigned to the various Varnas, and addresses some thoughtful remarks to the modern Social Reformer on the preconditioned nature of the fundamental basis of Traigunya

differentiation that lies at the back of the classification of Varnas according to the Gita.

There is a passing criticism of certain of the interpretations of other Bhashyakaras, particularly of Sankara. But the author's difficulty in appreciating the rationale of Madhava's position under 18. 55. that the aspirant's true knowledge of God's unlimited excellences is not complete and absolute in all details, but only commensurate with his knowing capacity, is due to an unwarranted presumption regarding the nature of Prama. The view that Man can never comprehend God in all his entirety, but only to some extent and that there are countless other excellences of the Supreme beyond the comprehension of finite intelligence is not also without textual support. Vide Rig Veda-VII, 99, 1-2. There is one verse in the Mahabharata:

Khoi tam veditum askto yo na syat tadvidho aparah.

Tadvidha'sca aparo nasti tasmat tam veda sa svayam.

Which is sufficient answer to the objection raised by the author (p. 2437).

Another important text of his chapter is verse 66 upon which the school of Ramanuja has founded its classical exposition of the doctrine of Prapatti peculiar to it. It is, however, significant that Ramanuja's first explanation of the verse steers clear of any allusion to this doctrine technically understood as an easy method Laghupaya for all those who are unable to follow the more rigorous code of Vedic Bhaktiyoga aided by Karmayoga through "tyaga" as already defined. The author has devoted considerable attention to the exposition of the technique of Prapatti and its accessories, in the light of the views of Desika's Rahasyatrayasara.

The differentiation between the two upayas is said (p. 2553) to lie in this that in Prapatti the observance of Nitya and naimitika karmas is not an "anga" as it is in the other case though their performance is equally obligatory in Prapatt, having been enjoined by other sources (p. 2553). This disposes of the erroneous view entertained by some followers of Ramanuja that a Prapanna can bid good-bye to all the Vedic duties of his Varnasrama.

A more tangible distinction between the two methods is to be found in regard to their Adhikaris. The Ramanuja school has thus gone a long way in extending and liberalising the practical programme of Means of Release held out by the Gita

by this reorientation of its message with the help of the doctrine of Prapatti met with in the Panharatras. The attempted explanation (p. 2511) of the solitary nature of the reference to Prapatti in the Gita, is thus hardly convincing.

— **B. N. Krishnamurthi Sarma**

["Probably Sri B. N. K. does not believe Prapathi to be an Upayam for the ordinary people for attaining Moksham and as such the argument advanced by me on page 2511 does not appeal to him as Convincing. Countless pranamas I have quoted to show that it is an upayam. The Sangathi between stanzas 65 to 66 remanis however unexplained by him."

Arjuna, the champion of the weak possessing universel love for mankind ,wanted a simple method by which all, without any distrnction of caste or color, can attain salvation when that was announced in stanza 66, he said "ಗತೆ ೕಪೋಹಸ್ಮೃತಿರ್ಲಬ್ಧಾ ಕರಿಷ್ಯೇವಚ ನಂತವ" got himself ready for war as advised by his Lord."]

—**Author**

ಶ್ರಿಯೈನಮಃ
ಶ್ರೀನಿವಾಸಾಯನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ



# ಶ್ರೀಮದ್ಭಗವದ್ಗೀತಾಯಾಂ

## ದ್ವಿತೀಯ ಷಟ್ಕಮ್

---

### ಸಪ್ತಮೋಽಧ್ಯಾಯಃ

**ಭಾ. ಪ್ರಥಮೇನಾಧ್ಯಾಯಷಟ್ಕೇನ ಪರಮಪ್ರಾಪ್ಯಭೂತಸ್ಯ ಪರಸ್ಯ ಬ್ರಹ್ಮಣೋ ನಿರವದ್ಯಸ್ಯ ನಿಖಿಲ ಜಗದೇಕಕಾರಣಸ್ಯ ಸರ್ವಜ್ಞಸ್ಯ ಸರ್ವಭೂತಸ್ಯ ಸತ್ಯಸಙ್ಕಲ್ಪಸ್ಯ**

**ಭಾಷ್ಯಾರ್ಥವು:—** ಹಿಂದಿನ ಷಟ್ಕದ ಅಭಿಪ್ರಾಯವನ್ನೂ ಮುಂದಿನ ಷಟ್ಕದ ಅಭಿಪ್ರಾಯವನ್ನೂ ಸಙ್ಗ್ರಹವಾಗಿ ತಿಳಿಸಿ, ಇವೆರಡಕ್ಕೂ ಇರುವ ಸಙ್ಗತಿಯನ್ನು ಪ್ರಥಮತಃ ಪ್ರದರ್ಶಿಸುತ್ತಾರೆ—**ಪ್ರಥಮೇನಾಧ್ಯಾಯಷಟ್ಕೇನ** - ಮೊದಲನೆಯ ಆರು ಅಧ್ಯಾಯಗಳಿಂದ ಸೇರಿದ ಪ್ರಥಮ ಷಟ್ಕದ, ಗೀತಾಶಾಸ್ತ್ರದ ಹದಿನೆಂಟು ಅಧ್ಯಾಯಗಳೂ ಮೂರು ಷಟ್ಕಗಳಾಗಿ ವಿಭಾಗಿಸಲ್ಪಟ್ಟು ಅವುಗಳಲ್ಲಿ ಪ್ರಥಮ ದ್ವಿತೀಯ ಷಟ್ಕಗಳಿಗಿರುವ ಪರಸ್ಪರ ಸಂಬಂಧಗಳು ಹೇಳಲ್ಪಡುವುವು, **ಪರಮ ಪ್ರಾಪ್ಯಭೂತಸ್ಯ** - ಸರ್ವೋತ್ಕೃಷ್ಟನಾಗಿ ಪ್ರಪನ್ನನಿಗೆ ಪ್ರಾಪ್ಯನಾಗಿರುವ, **ಪರಸ್ಯ ಬ್ರಹ್ಮಣಃ** - ಪರಬ್ರಹ್ಮವಾಗಿರುವ, ಶ್ರೀಮನ್ನಾರಾಯಣನ, **ನಿರವದ್ಯಸ್ಯ** - ಅವಿದ್ಯಾದಿ ಹೇಯ ಗಂಧವೇ ಇಲ್ಲದೇ ಇರುವ, **ನಿಖಿಲ ಜಗದೇಕ ಕಾರಣಸ್ಯ** - ಯಾವ ಜಗತ್ಕಾರಣನೋ ಆತನೇ ಧ್ಯೇಯವಸ್ತುವೆಂದು ಹೇಳಲು ಹೊರಟು ಶ್ರೀಮನ್ನಾರಾಯಣನೇ ಉಪಾಸ್ಯನೆಂದು ಹೇಳುವ ಉದ್ದೇಶದಿಂದ ಕಾರ್ಯವಾದ ಸಮಸ್ತ ಜಗತ್ತುಗಳಿಗೂ ಒಬ್ಬನೇ ಸರ್ವವಿಧ ಕಾರಣನಾಗಿರುವ, **ಸರ್ವಜ್ಞಸ್ಯ** - ಸಮಸ್ತವನ್ನೂ ಸ್ವತಃ ಏಕಕಾಲದಲ್ಲೇ ಸಾಕ್ಷಾತ್ಕರಿಸುವನಾದ, **ಸರ್ವಭೂತಸ್ಯ** - ಸರ್ವ ಶರೀರಕನಾದ, **ಸತ್ಯ ಸಙ್ಕಲ್ಪಸ್ಯ** - ಅಪ್ರತಿಹತ ಸಙ್ಕಲ್ಪವುಳ್ಳ, **ಮಹಾವಿಭೂತೇಃ** - ಮಹತ್ತಾದ ನಿತ್ಯವಿಭೂತಿ ಎಂದೂ ಲೀಲಾ ವಿಭೂತಿ ಎಂದೂ ಇರುವ ಎರಡು ವಿಧ ನಿಯಾಮ್ಯ ವರ್ಗವನ್ನುಳ್ಳ, **ಶ್ರೀಮತೋ ನಾರಾಯಣಸ್ಯ** - ಎಲ್ಲಾ ವ್ಯಾಪಾರಗಳನ್ನೂ ತನಗೆ ನಿತ್ಯಾನಪಾಯಿನಿಯಾದ ಲಕ್ಷ್ಮಿಯೊಂದಿಗೇನೇ ನಡೆಸುತ್ತಿರುವ ನಾರಾಯಣನ,

**ಭಾ. ಎಷಹಾ ವಿಭೂತೇಃ ಶ್ರೀಮತೋ ನಾರಾಯಣಸ್ಯ ಪ್ರಾಪ್ತ್ಯುಪಾಯಭೂತಃ ತದುಪಾಸನಂ ವಕ್ತುಂ ತದಙ್ಗಭೂತ ಮಾತ್ಮಜ್ಞಾನಪೂರ್ವಕ ಕರ್ಮಾನುಷ್ಠಾನ ಸಾಧ್ಯಮ್ ಪ್ರಾಪ್ತುಃ ಪ್ರತ್ಯಗಾತ್ಮನೋ ಯಾಥಾತ್ಮ್ಯದರ್ಶನ ಮುಕ್ತಮ್.**

**ಪ್ರಾಪ್ತ್ಯುಪಾಯಭೂತಂ**-ಪ್ರಾಪ್ತಿಗೆ ಉಪಾಯರೂಪವಾದ, **ತದುಪಾಸನಂ**-ಆ ಲಕ್ಷ್ಮೀನಾರಾಯಣರ ಉಪಾಸನವನ್ನು,**ವಕ್ತುಮ್**-ಈ ಮುಂದಿನಷಟ್ಕದಲ್ಲಿ ಹೇಳುವದಕ್ಕಾಗಿ,**ತದಙ್ಗಭೂತಂ**-ಆ ಪರಮಾತ್ಮೋಪಾಸನೆಗೆ ಅಙ್ಗರೂಪವಾದ, **ಆತ್ಮಜ್ಞಾನಪೂರ್ವಕ ಕರ್ಮಾನುಷ್ಠಾನಸಾಧ್ಯಮ್**-ಪ್ರತ್ಯಗಾತ್ಮನ (ಜೀವಾತ್ಮನ) ಯಥಾರ್ಥಸ್ವರೂಪದ ಜ್ಞಾನದೊಂದಿಗೆ ಕರ್ಮಯೋಗಾನುಷ್ಠಾನದಿಂದ ಸಾಧಿಸಲ್ಪಡಬಹುದಾದ, **ಪ್ರಾಪ್ತುಃ** - ಪ್ರಾಪ್ತನಾದ, ಈ ಪ್ರತ್ಯಗಾತ್ಮನ, **ಯಾಥಾತ್ಮ್ಯದರ್ಶನಂ**-ಯೋಗಮೂಲಕ ಉಂಟಾಗುವ ಸಾಕ್ಷಾತ್ಕಾರವು, **ಉಕ್ತಮ್**-ಹೇಳಲ್ಪಟ್ಟಿತು. ಈ ವಾಕ್ಯದ ಮೂಲಕ ಪ್ರಥಮ ಷಟ್ಕದಲ್ಲಿ ಹೇಳಲ್ಪಟ್ಟುದು, ಕರ್ಮಯೋಗದಿಂದ ಸಾಧ್ಯವಾದ ಅಙ್ಗರೂಪವಾದ ಪ್ರತ್ಯಗಾತ್ಮ ಯಾಥಾತ್ಮ್ಯ ದರ್ಶನವು; ಮಧ್ಯಮ ಷಟ್ಕದಲ್ಲಿ ಹೇಳುವದು, ಅಂಗಿರೂಪವಾದ ಪರಮಾತ್ಮೋಪಾಸನೆಯು; ಜೀವಾತ್ಮನು ಪ್ರಾಪ್ತಾ, ಪರಮಾತ್ಮನು ಪ್ರಾಪ್ಯನು, ಆತನನ್ನು ಹೊಂದಬೇಕಾದರೆ ಭಕ್ತಿರೂಪವಾದ ಪರಮಾತ್ಮೋಪಾಸನೆಯು ಆವಶ್ಯಕವು. ಇದು ಮಧ್ಯಮ ಷಟ್ಕದಲ್ಲಿ ಹೇಳಲ್ಪಡುತ್ತದೆ. ಇದು ಕೈಗೂಡಬೇಕಾದರೆ ಪ್ರಥಮ ಷಟ್ಕದಲ್ಲಿ ಹೇಳಲ್ಪಟ್ಟ ಪ್ರತ್ಯಗಾತ್ಮದರ್ಶನವು ಆವಶ್ಯಕವು, ಜೀವಾತ್ಮನ ಯಾಥಾತ್ಮ್ಯ ಸ್ವರೂಪದ ಸಾಕ್ಷಾತ್ಕಾರವು; ಇದು ಕರ್ಮಯೋಗದಿಂದಲೇ ಲಭ್ಯವು. ಈ ಕರ್ಮಯೋಗಕ್ಕೆ ಬೇಕಾದುದು ನಿತ್ಯನೈಮಿತ್ತಿಕಗಳಿಂದ ಸೇರಿದ ಯಜ್ಞ ದಾನ ತಪಸ್ಸೇ ಮೊದಲಾದ ಅನುಷ್ಠಾನದಿಂದ ಆತ್ಮಸ್ವರೂಪದ ಯಾಥಾತ್ಮ್ಯಚಿನ್ತನವೆಂದು ಹಿಂದೆ ಹೇಳಲ್ಪಟ್ಟಿತು. ಈ ಹಿಂದಿನ ವಾಕ್ಯದಲ್ಲಿ **"ಪರಮ ಪ್ರಾಪ್ಯಭೂತಸ್ಯ"** ಎಂದಾರಂಭಿಸಿ **"ತದುಪಾಸನಂ ವಕ್ತುಂ"** ಎಂಬುವವರೆಗೂ ಮಧ್ಯಮ ಷಟ್ಕದಲ್ಲಿ ಹೇಳುವ ಅಭಿಪ್ರಾಯವು ತಿಳಿಸಲ್ಪಟ್ಟಿತು. **"ತದಙ್ಗಭೂತಂ"** ಎಂದಾರಂಭಿಸಿ **"ಉಕ್ತಂ"** ಎಂಬುವವರೆಗೂ ಪ್ರಥಮ ಷಟ್ಕಾಭಿಪ್ರಾಯವು. ಪರಮಪುರುಷ ವಿಷಯವೆಲ್ಲಾ ಮುಂದಿನ ಷಟ್ಕದಲ್ಲಿ ಎಲ್ಲಿ ಹೇಳಲ್ಪಟ್ಟಿರುತ್ತದೆ ಎಂದು ಕೇಳಬಹುದು. ತಾನು ಪರಮ ಪ್ರಾಪ್ಯಭೂತನೆಂದು ಎಲ್ಲಿ ಉಪದೇಶಿಸಲ್ಪಟ್ಟಿರುತ್ತದೆ ಎಂದರೆ **"ಮಾಮೇವೈಷ್ಯಸ್ಯ ಸಂಶಯಃ"** (ಗೀ. ೮. ೭) ಎಂಬಲ್ಲಿಯೂ, ಮತ್ತು **"ಮಾಮುಪೇತ್ಯತು ಕೌನ್ತೇಯ ಪುನರ್ಜನ್ಮ ನವಿದ್ಯತೇ"** (ಗೀ.೮.೧೬) ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಆದರೆ ತಾನೇ ಪರಬ್ರಹ್ಮನೆಂದು ಎಲ್ಲಿಯಾದರೂ ಹೇಳಲ್ಪಟ್ಟಿದೆಯೇ ಎಂದರೆ ಗೀ. ೧೦. ೧೨ನೆಯ ಶ್ಲೋಕದಲ್ಲಿ **"ಪರಂ ಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್"** ಇದರಿಂದ ದಿವ್ಯ ವೈಕುಂಠದಲ್ಲಿರುವವನೇ ಪರಬ್ರಹ್ಮನಾಗಿಯೂ ಪ್ರಾಪ್ಯನು. ಇದರಿಂದ ಈತನಿಗಿಂತಲೂ ಬೇರೆಯಾಗಿ ನಿರ್ಗುಣ ಬ್ರಹ್ಮನಿದ್ದಾನೆಂಬ ವಾದವು ಸರಿಯಲ್ಲವೆಂದೂ ಹೇಳಿದಂತಾಯಿತು. ಆತನು **ನಿರವದ್ಯ**ನೆಂದು ಎಲ್ಲಿ ಹೇಳಿದೆ ಎಂದರೆ **"ಜನ್ಮಕರ್ಮ ಚ ಮೇ ದಿವ್ಯಂ"** (ಗೀ. ೪. ೯) ಎಂದೂ, **"ಪರಂಭಾವ ಮಜಾನಂತಃ"** (ಗೀ. ೭. ೨೪) ಎಂದೂ, ಹೇಳಿರುವದರಿಂದಲೂ, ಪರಮಪುರುಷ ಶಬ್ದವಾಚ್ಯನಾದುದರಿಂದಲೂ, ಆತನು ಹೇಯಪ್ರತ್ಯನೀಕನು. ಇದರಿಂದ ಅಚಿದ್ವಿಕಾರಗಳೂ ಮತ್ತು ಚಿದ್ವಿಕಾರಗಳಾದ ದುಃಖಾದಿಗಳೂ ಪರಮಪುರುಷನಿಗೆ ಸಂಬಂಧಿಸುವದಿಲ್ಲವು ಎಂಬ ತಾತ್ಪರ್ಯವು. **"ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ"** ಎಂಬ ಚಿದಚಿದ್ವೈಲಕ್ಷಣ್ಯವನ್ನು ಬೋಧಿಸುವ ಶ್ರೀ ಪರಾಶರ ವಾಕ್ಯವು ಅನುಸಂಧೇಯವು. **ನಿಖಿಲಜಗದೇಕ** ಕಾರಣನೆಂಬುದು **"ಅಹಂಕೃತ್ಸ್ನಸ್ಯ ಜಗತಃ ಪ್ರಭವಃ**

**ಪ್ರಲಯಸ್ತಥಾ"** (ಗೀ.೭.೬) ಎಂಬುದರಿಂದಲೂ **"ಅಹಂ ಸರ್ವಸ್ಯ ಪ್ರಭವಃ ಮತ್ತಸ್ಸರ್ವಂ ಪ್ರವರ್ತತೇ"** (ಗೀ. ೧೦. ೮) ಎಂಬುದರಿಂದಲೂ ವ್ಯಕ್ತವು. ಇದರಿಂದ ಚಿದಚಿದಾತ್ಮಕನಾಗಿ ಸಮಸ್ತ ಜಗತ್ತಿಗೂ ಸರ್ವೇಶ್ವರನಾದ ತಾನೇ ಉಪಾದಾನ ನಿಮಿತ್ತಾದಿ ಕಾರಣನೆಂಬ ಭಾವವು. ಕೆಲವರು ಈತನು ನಿಮಿತ್ತ ಕಾರಣನು ಮಾತ್ರವೇ, ಉಪಾದಾನಕಾರಣವು ಪ್ರಕೃತಿಯೆಂದು ಹೇಳುವರು; ಇದು **"ಯಥೋರ್ಣನಾಭಿಸ್ಸೃಜತೇಗೃಹ್ಣತೇ ಚ"** ಪರಬ್ರಹ್ಮನಿರ್ಮಿತವಾದ ಒಂದು ಜಾಡರ ಹುಳುವಿಗೇ ತಾನು ಕಟ್ಟಿದ ಗೂಡಿಗೆ ಉಪಾದಾನ ನಿಮಿತ್ತ ಕಾರಣವಾಗಿರುವ ಶಕ್ತಿ ಇರುವಾಗ ಪರಮಾತ್ಮನಿಗೆ ಆ ಶಕ್ತಿ ಇಲ್ಲವೇ? ಆದುದರಿಂದ ಹೀಗೆ ಅನೇಕ ಶ್ರುತಿ ಸ್ಮೃತಿ ಮುಂತಾದವುಗಳಿಗೆ ವಿರೋಧವಾದುದರಿಂದ ಸರ್ವಕಾರಣನೇ ಅವನು; ಪ್ರಳಯದಲ್ಲಿ ಸೂಕ್ಷ್ಮ ಚಿದಚಿದಾತ್ಮಕನು; ಸೃಷ್ಟಿಕ್ರಮದಲ್ಲಿ ಕಾರ್ಯಭೂತನಾಗಿ ಸ್ಥೂಲ ಚಿದಚಿದಾತ್ಮನಾಗುವನೆಂದು ತಿಳಿಸುವದಕ್ಕಾಗಿ **ಜಗದೇಕಕಾರಣನೆಂದು** ಹೇಳಲ್ಪಟ್ಟಿತು. **ಸರ್ವಜ್ಞ**ನೆಂದು ಹಿಂದೆಯೇ **"ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂ ತಪ"** ಎಂಬಲ್ಲಿಯೇ ಹೇಳಲ್ಪಟ್ಟಿರುತ್ತದೆ. **ಸರ್ವ ಭೂತಸ್ಯ,** ತಾನು ಸರ್ವ ಚಿದಚಿದಾತ್ಮಕನೆಂದು (ಗೀ. ೧೧. ೪೦) **ಅನಂತ ವೀರ್ಯಾ ಮಿತ ವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ** ಎಂಬುದರಿಂದ ವ್ಯಕ್ತವು, ಹೀಗೆ ಚಿದಚಿದಾತ್ಮಕನಾಗಿರುವದರಿಂದಲೇ, ಸಮಸ್ತವೂ ಪರಬ್ರಹ್ಮವೆಂಬ ಸಾಮಾನಾಧಿಕರಣ್ಯವು ಸರ್ವಸಮಂಜಸನಾಗಿ ನಮ್ಮ ಸಿದ್ಧಾಂತಕ್ಕೆ ಸರಿಹೋಗುತ್ತದೇ ವಿನಾ, ಇತರ ಸಿದ್ಧಾಂತಗಳಿಗೆ ಸರಿಹೋಗುವದಿಲ್ಲವು: ಇದರಿಂದ **"ತತ್ತ್ವಮಸಿ"** ಎಂಬ ವಾಕ್ಯಕ್ಕೂ ಸರ್ವಸಮಂಜ ಸಾರ್ಥವು ನಮ್ಮ ಸಿದ್ಧಾಂತದ ಮೂಲಕ ದೊರೆಯುತ್ತದೆ. ಇದನ್ನೆಲ್ಲಾ ತಿಳಿಸುವ ಅಭಿಪ್ರಾಯದಿಂದ **ಸರ್ವಭೂತಸ್ಯ** ಎಂಬ ಪ್ರಯೋಗವು. ಹಾಗೆಯೇ ಪ್ರಾಪ್ಯನಾದ ತನ್ನ ಮಹಾತ್ಮ್ಯೆಯನ್ನು ತಿಳಿಸುವ ಸಂದರ್ಭದಲ್ಲಿಯೂ, **"ಮಯಾ ತತ ಮಿದಂ ಸರ್ವಂ"** (ಗೀ. ೯. ೪) ಎಂದು **"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್"** ಇತ್ಯಾದಿ ಶ್ರುತಿಯ ಅರ್ಥವಾಗಿ ಸರ್ವಾಂತರ್ಯಾಮಿತ್ವವು ಪ್ರದರ್ಶಿಸಲ್ಪಟ್ಟಿತು. **ಮಹಾ ವಿಭೂತೇಃ** ಎಂಬ ಪ್ರಯೋಗದಿಂದ **"ಭೂಮಿರಾಪಃ"** (ಗೀ. ೭. ೪) ಎಂಬ ಶ್ಲೋಕದಿಂದಲೂ, ವಿಭೂತ್ಯಧ್ಯಾಯದಿಂದಲೂ, ಮಹಾವಿಭೂತಿಯು ತನಗುಂಟೆಂದು ಹೇಳಲ್ಪಟ್ಟಿರುತ್ತದೆ. ಇಷ್ಟು ಅರ್ಥವೂ ಸರ್ವೇಶ್ವರನಿಗೆ **ನಾರಾಯಣ**ನೆಂಬ ಒಂದು ಶಬ್ದದಲ್ಲಿ ಅಡಗಿರುವದರಿಂದ ನಾರಾಯಣನೇ ಪರತತ್ವವೆಂದು ನಿರೂಪಿಸುವದಕ್ಕಾಗಿ **ಶ್ರೀಮತೋ ನಾರಾಯಣಸ್ಯ** ಎಂಬ ಪ್ರಯೋಗವು. ಈ ನಾರಾಯಣನು ಸದಾ ತನ್ನೊಂದಿಗೆ ನಿತ್ಯಯೋಗವನ್ನು ಹೊಂದಿರುವ ಲಕ್ಷ್ಮಿಯೊಂದಿಗೆ ಸೇರಿ ಸಮಸ್ತ ಜಗದ್ವ್ಯಾಪಾರಗಳನ್ನೂ ನಿತ್ಯ ವಿಭೂತಿಯ ವ್ಯಾಪಾರಗಳನ್ನೂ ನಡೆಸುತ್ತಾನೆಂದು ತಿಳಿಸುವದಕ್ಕಾಗಿಯೂ, **"ಆನೀದ ವಾತಗ್ಂ ಸ್ವಧಯಾತದೇಕಂ"** ಎಂಬ ಶ್ರುತ್ಯರ್ಥವನ್ನು ತಿಳಿಸುವದಕ್ಕಾಗಿಯೂ, ಉಪಾಯ ದಶೆಯಲ್ಲೂ ಪ್ರಾಪ್ಯದಶೆಯಲ್ಲೂ ಲಕ್ಷ್ಮೀಯುಕ್ತನಾಗಿರುತ್ತಾನೆಂಬುದನ್ನು ತಿಳಿಸುವದಕ್ಕಾಗಿಯೂ, **ಶ್ರೀಮತೋ ನಾರಾಯಣಸ್ಯ** ಎಂಬ ಪ್ರಯೋಗವು. ವೇದದಲ್ಲಿ ಅನೇಕ ಕಡೆಗಳಲ್ಲಿ ಅನೇಕ ನಾಮಗಳಿಂದ ಹೇಳಲ್ಪಟ್ಟಿರುವನೆಲ್ಲಾ **ನಾರಾಯಣನೇ** ಎಂದು ತಿಳಿಸುವದಕ್ಕಾಗಿ, ಪುರುಷ ಸೂಕ್ತವು, **"ಸಹಸ್ರಶೀರ್ಷಂ ದೇವಂ"** ಎಂದಾರಂಭಿಸಿ **ಯಚ್ಚಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ। ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ"** ಎಂದು ಮುಗಿಸಿರುತ್ತದೆ. ಈ ಪರಬ್ರಹ್ಮವಾದ ನಾರಾಯಣನು ಯಾರೆಂಬ ವಿವೇಚನೆಯಲ್ಲಿ **"ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂದು ಹೇಳಿರುವದರಿಂದಲೂ, **ಶ್ರೀಮತೋ ನಾರಾಯಣಸ್ಯ** ಎಂದು ಪ್ರಯೋಗಿಸಿರುತ್ತಾರೆ. ಆದುದರಿಂದ ಈ ಸರ್ವೇಶ್ವರ ವಿಶೇಷಣಗಳನ್ನು ಶ್ರೀ

**ಭಾ. ಇದಾನೀಂ ಮಧ್ಯಮೇನ ಷಟ್ಕೇನ ಪರಬ್ರಹ್ಮಭೂತ ಪರಮಪುರುಷ ಸ್ವರೂಪಂ ತದುಪಾಸನಂಚ ಭಕ್ತಿ ಶಬ್ದವಾಚ್ಯ ಮುಚ್ಯತೇ।**

ಭಾಷ್ಯಕಾರರು ತಮ್ಮ ಮನ ಬಂದಂತೆ ಪ್ರಯೋಗಿಸಲಿಲ್ಲವು. ಮುಂದಿನ ಷಟ್ಕದಲ್ಲಿ ಇವುಗಳು ಉಪಪಾದಿತವಾಗುತ್ತದೆಂದು ತೋರಿಸುವದಕ್ಕಾಗಿಯೇ ಅಂತಹ ವಿಶೇಷಣಗಳನ್ನು ಕೊಟ್ಟಿರುತ್ತಾರೆ. ಮುಂದಿನ ಷಟ್ಕದಲ್ಲಿ ಮುಖ್ಯವಾಗಿ ಹೇಳುವದೇನೆಂಬ ಆಶಯದಲ್ಲಿ, **ಪ್ರಾಪ್ತ್ಯುಪಾಯ ಭೂತಂ ತದುಪಾಸನಂ** ಎಂದು ಹೇಳಿದರು. ಪರಮಾತ್ಮೋಪಾಸನವೇ ತತ್ಕ್ರತುನ್ಯಾಯದ ಪ್ರಕಾರ ಪರಮಾತ್ಮ ಪ್ರಾಪ್ತಿಗೆ ಉಪಾಯವು. ಆದುದರಿಂದ ಪುರುಷಸೂಕ್ತವೂ ಕೂಡ ಇಂತಹ ಉಪಾಸನವನ್ನೇ ಮುಖ್ಯೋಪಾಯವಾಗಿ ಕೊಂಡಾಡಿರುತ್ತದೆ. ಹಾಗಾದರೆ ಇದು ವರೆಗೂ ಆರು ಅಧ್ಯಾಯಗಳಿಂದ ಹೇಳಿದುದೆಲ್ಲಾ ಅನಾವಶ್ಯಕವೋ ಅಥವಾ ಐಚ್ಛಿಕವೋ ? ಎಂದರೆ ಅವೂ ಆವಶ್ಯಕವು. ಈ ಪರಮಾತ್ಮೋಪಾಸನೆಗೆ, ನಿತ್ಯ ನೈಮಿತ್ತಿಕಗಳೊಂದಿಗೆ ಸೇರಿದ ಯಜ್ಞದಾನ ತಪಸ್ಸೇ ಮೊದಲಾದವುಗಳ ಅನುಷ್ಠಾನದಿಂದ ಆತ್ಮ ಯಾಥಾತ್ಮ್ಯ ಜ್ಞಾನಾನುಸಂಧಾನದಿಂಮುಂಟಾಗುವ ಅತ್ಮಾವಲೋಕನವು ಅಙ್ಗವಾಗಿ, ಆವಶ್ಯಕವೆಂದು ಹಿಂದಿನ ಷಟ್ಕದಲ್ಲಿ ಹೇಳಲ್ಪಟ್ಟಿತೆಂದು, ಎರಡು ಷಟ್ಕಗಳಿಗೂ ಅಙ್ಗಾಙ್ಗಿಭಾವದಿಂದಿರುವ ಸಂಬಂಧ ವನ್ನು ಹೀಗೆ ಮೇಲಿನ ವಾಕ್ಯದಿಂದ ಸ್ಥಾಪಿಸಿರುತ್ತಾರೆ. **ಪ್ರತ್ಯಗಾತ್ಮನ ಯಾಥಾತ್ಮ್ಯ ದರ್ಶನವು ಅಙ್ಗವು, ಪರಮಾತ್ಮ ಯಾಥಾತ್ಮ ದರ್ಶನವು ಅಙ್ಗಿಯು** ಇದೇ ಪರಮಪ್ರಾಪ್ತ್ಯ ವನ್ನುಂಟುಮಾಡುವದಾದುದರಿಂದ ಅಂತಹ ಉಪಾಸಕನನ್ನು **" ಯುಕ್ತತಮೋಮತಃ "** ಎಂದು ಹಿಂದಿನ ಅಧ್ಯಾಯಾಂತ್ಯದಲ್ಲಿ ಕೊಂಡಾಡಿದರು. ಅಙ್ಗದ ವಿಷಯವೆಲ್ಲಾ ಪ್ರಥಮ ಷಟ್ಕದಲ್ಲಿ ಹೇಳಲ್ಪಟ್ಟು, ಈ ದ್ವಿತೀಯ ಷಟ್ಕವು ಅಙ್ಗಿಯ ವಿಷಯವಾದುದರಿಂದ ಎರಡಕ್ಕೂ ಸಙ್ಗತಿಯು ವ್ಯಕ್ತಪಟ್ಟಿತು ಎಂಬ ತಾತ್ಪರ್ಯವು. ಈ ಉಪಾಸನವೆಂಥಾದ್ದು ಎಂಬುದನ್ನೂ ಅದಕ್ಕೆ ಭಕ್ತಿಯೋಗವೆಂಬ ಹೆಸರು ಹೇಗೆ ಕೂಡುತ್ತೆಂಬುದನ್ನೂ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ—ಈ ಭಕ್ತಿಯೋಗಕ್ಕೆ ಪರಬ್ರಹ್ಮಸ್ವರೂಪದ ಯಥಾರ್ಥಜ್ಞಾನವೂ ಆವಶ್ಯಕವಾದು ದರಿಂದ ಈ ಮಧ್ಯಮ ಷಟ್ಕದಲ್ಲಿ ಪರಮ ಪುರುಷನ ಸ್ವರೂಪ. ಸ್ವಭಾವ, ರೂಪಗುಣಾದಿಗಳು ಆ ಪರಮ ಪುರುಷನ ಉಪಾಸನವೂ ಸಹ, ಮುಖ್ಯವಾಗಿ ಹೇಳಲ್ಪಡುತ್ತವೆಂದು ತಿಳಿಸುತ್ತಾರೆ. **ಇದಾನೀಂ** - ಈಗಲಾದರೋ, **ಮಧ್ಯಮ ಷಟ್ಕದಿಂದ, ಪರಬ್ರಹ್ಮಭೂತ ಪರಮಪುರುಷ ಸ್ವರೂಪಂ**-ಪರಬ್ರಹ್ಮನಾದ ಪರಮ ಪುರುಷನ ಸ್ವರೂಪವು ಮತ್ತು **ತದುಪಾಸನಂಚ**-ಆ ಪರಮ ಪುರುಷನ ಉಪಾಸನವೂ, ಆ ಉಪಾಸನಕ್ಕೇನೆ ಏನು ಹೆಸರು ಎಂದರೆ, **ಭಕ್ತಿಶಬ್ದ ವಾಚ್ಯಮ್** - ಭಕ್ತಿಯೋಗ ಶಬ್ದದಿಂದ ಹೇಳಿಸಿಕೊಳ್ಳುವಂತಾದ್ದು, ಅಂತಹ ಉಪಾಸನೆಯು, **ಉಚ್ಯತೇ** - ಹೇಳಲ್ಪಡುತ್ತದೆ. ಇದರಿಂದ ಸಗುಣ ನಿರ್ಗುಣ ಬ್ರಹ್ಮೋಪಾಸನೆ ಎಂದು ಎರಡುವಿಧ ಉಪಾ ಸನೆಗಳು ಈ ಗೀತಾಶಾಸ್ತ್ರದಲ್ಲಿ ಹೇಳಲ್ಪಟ್ಟಿಲ್ಲವೆಂಬ ಭಾವವು ದ್ಯೋತಿತವು. ಶ್ರೀ ಭಾಷ್ಯಕಾರರು ಈ ಎರಡು ವಾಕ್ಯಗಳಿಂದ ಶ್ರೀ ಯಾಮುನೇಯವರ ಗೀತಾರ್ಥ ಸಙ್ಗ್ರಹದ ೨-೩ನೆಯ ಶ್ಲೋಕಾ ರ್ಥಗಳನ್ನೇ ಉಪಪಾದಿಸುತ್ತಾರೆ. ಅವು ಯಾವುವೆಂದರೆ.—

**ಜ್ಞಾನಕರ್ಮಾತ್ಮಿಕೇ ನಿಷ್ಠೇ ಯೋಗಲಕ್ಷ್ಯೇ ಸುಸಂಸ್ಕೃತೇ ।**
**ಆತ್ಮಾನುಭೂತಿ ಸಿದ್ಧ್ಯರ್ಥೇ ಪೂರ್ವಷಟ್ಕೇನ ಚೋದಿತೇ ॥೨॥**
**ಮಧ್ಯಮೇ ಭಗವತ್ತತ್ವಯಾಥಾತ್ಮ್ಯಾವಾಪ್ತಿ ಸಿದ್ಧಯೇ ।**
**ಜ್ಞಾನಕರ್ಮಾಭಿರ್ನಿರ್ವರ್ತ್ಯೋ ಭಕ್ತಿಯೋಗಃ ಪ್ರಕೀರ್ತಿತಃ ॥೩॥**

ಇವುಗಳ ಪ್ರತಿಪದಾರ್ಥ ಮೊದಲಾದವುಗಳಿಗೆ ೫೮-೬೦ನೆಯ ಪುಟಗಳನ್ನು ಪರಾಂಬರಿಸಿ. **ಆತ್ಮ**

**ಭಾ. ತದೇತದುತ್ತರತ್ರ(೧)“ಯತಃಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್। ಸ್ವಕರ್ಮಣಾತ ಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ। ” ಇತ್ಯಾರಭ್ಯ (೨) “ವಿಮುಚ್ಯ ನಿರ್ಮಮ ಶ್ಯಾನ್ತೋ ಬ್ರಹ್ಮಭೂಯಾಯ ಕಲ್ಪತೇ। ಬ್ರಹ್ಮಭೂತಃ ಪ್ರಸನ್ನಾತ್ಮಾ**

**ಜ್ಞಾನಪೂರ್ವಕ ಕರ್ಮಾನುಷ್ಠಾನಸಾಧ್ಯಂ** ಎಂಬಲ್ಲಿ **ಆತ್ಮಜ್ಞಾನಪೂರ್ವಕಂ** ಎಂಬುವ ಸಙ್ಗ್ರಹ ಶ್ಲೋಕದ **ಸುಸಂಸ್ಕೃತೇ** ಎಂಬುದರ ವ್ಯಾಖ್ಯಾನವು. ಚನ್ನಾಗಿ 'ಸಂಸ್ಕಾರ ಹೊಂದ ಬೇಕಾದರೆ ಆತ್ಮಜ್ಞಾನಪೂರ್ವಕವಾಗಿರಬೇಕೆಂಬುದು ವ್ಯಕ್ತವು. ಸಙ್ಗ್ರಹ ಶ್ಲೋಕದಲ್ಲಿ **ಯೋಗಲಕ್ಷೇ** ಎಂದು ಹೇಳಿ, ಆ ಯೋಗವು ಯಾವುದೆಂದರೆ ವಿಷಯಗಳಿಂದ ಚಿತ್ತವೃತ್ತಿಯನ್ನು ನಿರೋಧಿಸಿ ಆತ್ಮಚಿತ್ತನವು; ಇದನ್ನೇ **ಆತ್ಮಾನುಭೂತಿ ಸಿದ್ಧ್ಯರ್ಥೇ** ಎಂದು ವಿವರಿಸಿರುವದನ್ನ ನುಸರಿಸಿ, **ಪ್ರತ್ಯಗಾತ್ಮನ ಯಾಥಾತ್ಮ್ಯದರ್ಶನವನ್ನೇ** ಫಲವಾಗಿ ಉಳ್ಳದ್ದು ಈ ಯೋಗ ವೆಂದು ಪ್ರಥಮ ಷಟ್ಕಾಭಿಪ್ರಾಯವನ್ನು ತಿಳಿಸಿದರು. ಇದರಿಂದ ಪರಮಾತ್ಮೋಪಾಸನವು ಹೇಳಲ್ಪಡಲಿಲ್ಲವೆಂಬುದು ಸ್ಪಷ್ಟವು. ಈ ಮಧ್ಯಮ ಷಟ್ಕದಲ್ಲಿ ಹೇಳಲ್ಪಡುವುದು ಪರಬ್ರಹ್ಮ ಭೂತ ಪರಮ ಪುರುಷ ಸ್ವರೂಪವೂ ಮತ್ತು ತದುಪಾಸನವೂ ಎಂದು ಯತಿವರ್ಯರು ಹೇಳಿರು ವದು **ಭಗವತ್ತತ್ವ** ಮತ್ತು ಅದರ **ಯಾಥಾತ್ಮ್ಯ ವಾಪ್ತಿ** ಎಂದು ಸಙ್ಗ್ರಹ ಶ್ಲೋಕದಲ್ಲಿ ಹೇಳಿರುವ ವಿವರಣವ; **ಭಗವತ್ತತ್ವ**ವೆಂದರೆ ಭಗವತ್ಸ್ವರೂಪವೆಂಬ ಭಾವವು. **ಯಾಥಾತ್ಮ್ಯ** ವೆಂದರೆ ಹೇಗಿದೆಯೋ ಹಾಗಿರುವ ಅದರ ಪ್ರಕಾರವು, ಸ್ವಭಾವಾದಿಗಳು.

ಹಿಂದಿನ ವಾಕ್ಯದಲ್ಲಿ ಪರಮಾತ್ಮನ ಉಪಾಸನವೇ ಭಕ್ತಿಶಬ್ದವಾಚ್ಯವೆಂದು ಹೇಳಲ್ಪಟ್ಟಿತು. ಹಾಗೆ ಹೇಳಲು ಪ್ರಮಾಣವಿದೆಯೋ ಎಂದು ಅಕ್ಷೇಪಿಸಬಹುದೆಂದು ಯೋಚಿಸಿ, ಪ್ರಮಾಣವನ್ನು ಉದಾಹರಿಸುವದ್ವಾರಾ ಸಮಾಧಾನವನ್ನು ಹೇಳುತ್ತಾರೆ. ಆರನೆಯ ಅಧ್ಯಾಯದ ಕೊನೆಯ ಶ್ಲೋಕದಿಂದಲೇ ಕರ್ಮಾನುಷ್ಠಾನ ಸಾಧ್ಯವಾದ ಪ್ರತ್ಯಗಾತ್ಮ ದರ್ಶನರೂಪ ಯೋಗವು ಅಙ್ಗ ವಾಗಿ ಪರಮಾತ್ಮದರ್ಶನರೂಪ ಯೋಗಕ್ಕೆ ಹೇತುವೆಂಬುದನ್ನೇನೋ ಊಹಿಸಬಹುದು. ಆದರೆ ಅದು ಭಕ್ತಿ ಶಬ್ದವಾಚ್ಯವೆಂಬುದು ಎಲ್ಲಿ ತೋರಿಬರುತ್ತದೆ ಎಂದರೆ ಹೇಳುತ್ತಾರೆ. **ತದೇತತ್**- ಅಂತಹ ಈ ಅಭಿಪ್ರಾಯವೇ, **ಉತ್ತರತ್ರ**-ಮುಂದಿನ ಹದಿನೆಂಟನೆಯ ಅಧ್ಯಾಯದಲ್ಲಿ, **“ಯತಃ ಪ್ರವೃತ್ತಿರ್ಭೂತಾನಾಂ” ಇತ್ಯಾರಭ್ಯ**-ಎಂದಾರಂಭಿಸಿ, **“ವಿಮುಚ್ಯನಿರ್ಮಮಃ” ಇತಿ** - ಎಂಬ ಶ್ಲೋಕಗಳ ಮೂಲಕ, **ಸಂಕ್ಷಿಪ್ಯ ವಕ್ಷ್ಯತೇ**-ಸಂಕ್ಷೇಪಿಸಿ ಹೇಳಲ್ಪಡುತ್ತದೆ. ಈ ಶ್ಲೋಕಗಳ ತಾತ್ಪರ್ಯವೇನೆಂದರೆ-ಸರ್ವಕಾರಣರೂಪನಾದ ಯಾವ ನನ್ನಿಂದ ಈ ಶರೀರಗಳ ಉತ್ಪತ್ತಿಯೇ ಮೊದಲಾದ ಪ್ರವೃತ್ತಿಯು ನಡೆಯುತ್ತದೆಯೋ, ಯಾವ ನನ್ನಿಂದ ಈ ಸಮಸ್ತವೆಲ್ಲಾ ವ್ಯಾಪಿ ಸಲ್ಪಟ್ಟಿದೆಯೋ, ಅಂತಹ ಪರಮಾತ್ಮನಾದ ನನ್ನನ್ನು ತಮ್ಮ ತಮ್ಮ ಕರ್ಮಗಳಿಂದ ಪೂಜಿಸಿ ಸಿದ್ಧಿಯನ್ನು ಹೊಂದುವನು. ಬ್ರಹ್ಮರುದ್ರೇಂದ್ರಾದಿಗಳಿಗೂ ಕೂಡ ನಾನು ಅಂತರಾತ್ಮನಾಗಿರು ವದರಿಂದ ಅವರುಗಳನ್ನು ಶಾಸ್ತ್ರದ ಮೂಲಕ ಅರ್ಚಿಸಿದರೆ, ತನ್ಮೂಲಕವಾಗಿ ಸರ್ವ ಕರ್ಮಾ ರಾಧ್ಯನಾದ ನಾನೇ ಅರ್ಚಿಸಲ್ಪಟ್ಟು, ಆಗಲೂ ನನ್ನ ಪ್ರಸಾದದಿಂದಲೇ ಮನುಷ್ಯನು ಸಿದ್ಧಿ ಯನ್ನು ಹೊಂದುವನು. ನನ್ನಿಂದಲೇ ಎಲ್ಲವೂ ಉತ್ಪತ್ತಿಯನ್ನು ಹೊಂದುತ್ತವೆ. ನಾನೇ ಎಲ್ಲ ವನ್ನೂ ವ್ಯಾಪಿಸಿರುತ್ತೇನೆಂಬುದು ಹಿಂದೆಯೂ ಗೀತೆಯಲ್ಲಿ ಅನೇಕಸಲ ಹೇಳಲ್ಪಟ್ಟಿರುತ್ತದೆ. ೫೩-೫೪ನೆಯ ಶ್ಲೋಕಾಭಿಪ್ರಾಯಗಳೇನೆಂದರೆ ಇದರ ಪೂರ್ವಾರ್ಧವು **“ಅಹಂಕಾರಂ ಬಲಂ ದರ್ಪ ಕಾಮಂ ಕ್ರೋಧಂ ಪರಿಗ್ರಹಮ್”** ಎಂದಿರುತ್ತದೆ. ಅಹಂಕಾರವೆಂದರೆ ಆತ್ಮವಲ್ಲದ

(೧) ಗೀ. ೧೮. ೪೬ (೨) ಗೀ. ೧೮. ೫೩.

**ಭಾ. ನಶೋಚತಿ ನಕಾಂಕ್ಷತಿ । ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂಲಭತೇ ಪರಾಂ"॥ ಇತಿ ಸಂಕ್ಷಿಪ್ಯ ವಕ್ಷ್ಯತೇ । ಉಪಾಸನಂತು ಭಕ್ತಿರೂಪಾಪನ್ನಮೇವ ಪರಪ್ರಾಪ್ತ್ಯು ಪಾಯ ಭೂತಮಿತಿ ವೇದಾಂತವಾಕ್ಯಸಿದ್ಧಮ್. (೩)ತಮೇವ ವಿದಿತ್ವಾತಿಮೃತ್ಯು ಮೇತಿ" (೪)'ತಮೇವಂ ವಿದ್ವಾನಮೃತ ಇಹಭವತಿ,'ಇತ್ಯಾದಿನಾಭಿಹಿತಂ ವೇದನಂ**

ದೇಹದಲ್ಲಿ ಆತ್ಮವೆಂಬ ಅಭಿಮಾನವು ; **ಬಲಂ**-ಈ ಅಭಿಮಾನಕ್ಕೆ ಕಾರಣವಾದ ವಾಸನಾಬಲವು, ಇವುಗಳಿಂದುಂಟಾಗುವುವು— ದರ್ಪವು, ದರ್ಪವೆಂದರೆ ಯಾವುದನ್ನು ಅಂಗೀಕರಿಸಬೇಕೋ ಅದನ್ನು ಅಂಗೀಕರಿಸದೆ ಇರೋಣವು, ಕಾಮವು, ಕ್ರೋಧವು, ಪರಿಗ್ರಹವು ಇವುಗಳನ್ನೆಲ್ಲಾ **ವಿಮುಚ್ಯ**-ಬಿಟ್ಟವನಾಗಿ, **ನಿರ್ಮಮಃ** ಯಾವ ವಸ್ತುವೂ ತನ್ನದಲ್ಲಮದರಿಂದ ತನ್ನದು ಎಂಬ ಬುದ್ಧಿ ಇಲ್ಲದವನಾಗಿ, **ಶಾಂತಃ**-ಆತ್ಮಾನುಭವರೂಪ ಸುಖವುಳ್ಳವನಾಗಿ, **ಬ್ರಹ್ಮಭೂಯಾಯ ಕಲ್ಪತೇ** ಎಂದರೆ **ಬ್ರಹ್ಮಭಾವಾಯ ಕಲ್ಪತೇ** ಎಂಬರ್ಥವು, ಆತ್ಮನ ಯಥಾವಸ್ಥಿತ ಸ್ವರೂಪ ವನ್ನನುಭವಿಸುವನು ; **ಬ್ರಹ್ಮಭೂತಃ**-ಹೀಗೆ ಯಥಾವಸ್ಥಿತ ಆತ್ಮಸ್ವರೂಪವನ್ನು ತಿಳಿದುದ ರಿಂದ, ತನ್ನ ಸ್ವರೂಪವು ನನಗೆ (ಪರಮಾತ್ಮನಿಗೆ) ಶೇಷಭೂತವೆಂದು ತಿಳಿದವನಾಗಿ, **ಪ್ರಸ ನ್ನಾತ್ಮಾ**- ಕ್ಲೇಶ ಕರ್ಮಾದಿಗಳಿಂದ ಕಲುಷಿತವಾಗದ ಸ್ವರೂಪವುಳ್ಳವನಾಗಿ, **ನ ಶೋಚತಿ**- ನಾನಲ್ಲದೆ ಇನ್ನು ಯಾವುದಕ್ಕಾಗಿಯೂ ಶೋಕಿಸುವದಿಲ್ಲವು. **ನ ಕಾಂಕ್ಷತಿ**-ಮದ್ವ್ಯತಿರಿಕ್ತವಾದ ಯಾವುದನ್ನೂ ಅಪೇಕ್ಷಿಸುವುದಿಲ್ಲವು, **ಸರ್ವೇಷು ಭೂತೇಷು**-ನಾನಲ್ಲದಿರುವ ಇತರ ಭೂತ ಗಳಲ್ಲೆಲ್ಲಾ ಅನಾದರವಿರುವನಾದುದರಿಂದ, **ಸಮಃ**- ಅಲ್ಪಾಸ್ಥಿರವಾದುವೆಂಬ ಸಮಬುದ್ಧಿ ಯುಳ್ಳವನಾಗಿ, ಅದರಿಂದ ಎಲ್ಲಾ ಐಹಿಕವಸ್ತು ಸಮೂಹವೆಲ್ಲಾ ತೃಣದಂತೆ ಭಾವಿಸಿದವ ನಾಗಿ, **ಮದ್ಭಕ್ತಿಂ ಲಭತೇ ಪರಾಂ**-ಶ್ರಿಯಃಪತಿಯಾಗಿ ಹೇಯಪ್ರತ್ಯನೀಕನಾಗಿ ಕಲ್ಯಾಣ ಗುಣಾಕರನಾಗಿ ಆಶ್ರಯೋಚಿತ ಗುಣಯುಕ್ತನಾಗಿರುವ ನನ್ನಲ್ಲಿ ಅತ್ಯರ್ಥ ಪ್ರಿಯನಾದುದರ ಅನುಭವರೂಪವಾದ ಪರಭಕ್ತಿಯನ್ನು ಹೊಂದುವನು. ಹೀಗೆ ಉಪಾಸನವೇ ಭಕ್ತಿಶಬ್ದ ವಾಚ್ಯ ವೆಂದೂ, ಶ್ರೀ ಭಾಷ್ಯದಲ್ಲೂ **"ಏವಂರೂಪಾ ಧ್ರುವಾಸ್ಮೃತಿ ರೇವ ಭಕ್ತಿಶಬ್ದೇನಾಭಿಧೀ ಯತೇ ; ಉಪಾಸನಪರ್ಯಾಯತ್ವಾದ್ಭಕ್ತಿಶಬ್ದಸ್ಯ"** ಎಂಬುದರಿಂದ ತಿಳಿಸುತ್ತಾರೆ. ಮುಂದಿನ ವಾಕ್ಯದಲ್ಲಿ ಉಪಾಸನವು ಭಕ್ತಿರೂಪವಾದರೇನೇ ಪರಮ ಪ್ರಾಪ್ಯವನ್ನು ಹೊಂದಬಹುದು ಎಂದು ಹೇಳಿ ಅದಕ್ಕೆ ಪ್ರಮಾಣ ವಾಕ್ಯಗಳನ್ನು ಉದಾಹರಿಸುತ್ತಾರೆ—**ಉಪಾಸನಂತು** - ಮೋಕ್ಷೋ ಪಾಯವಾದ ಉಪಾಸನವಾದರೋ, **ಭಕ್ತಿರೂಪಾಪನ್ನ ಮೇವ**-ಭಕ್ತಿರೂಪವನ್ನು ಹೊಂದಿದ ರೇನೆ, **ಪರಪ್ರಾಪ್ತ್ಯುಪಾಯ ಭೂತಮಿತಿ** - ಪ್ರಾಪ್ಯನಾದ ಪರಬ್ರಹ್ಮವನ್ನು ಹೊಂದಲು ಉಪಾಯವಾಗುತ್ತದೆಂಬುದು ವೇದಾಂತ ಪ್ರಮಾಣವಾಕ್ಯಗಳಿಂದ ಸಿದ್ಧವು. ತಾವೇನೂ ಕಲ್ಪನೆ ಮಾಡಿ ಹೇಳಲೂ ಇಲ್ಲವು ; ಅಥವಾ ಶ್ರುತ್ಯರ್ಥವನ್ನು ಮನಬಂದಂತೆ ಉಪಬ್ರಹ್ಮಣಮಾಡಿ ಹೇಳಿದುದೂ ಅಲ್ಲವು ; ಸಾಕ್ಷಾತ್ತಾಗಿ ಶ್ರುತಿಯಲ್ಲಿ ಕಂಠೋಕ್ತವಾದ ವಿಷಯವೆಂಬ ತಾತ್ಪ ರ್ಯವು. ಆ ಪ್ರಮಾಣಗಳನ್ನು ಉದಾಹರಿಸುತ್ತಾರೆ.

ಇಲ್ಲಿ ಪೂರ್ವಪಕ್ಷಗಳು ತೋರಬಹುದು—ಏನೆಂದರೆ **"ತಮೇವಂ ವಿದಿತ್ವಾ ಅತಿಮೃತ್ಯು ಮೇತಿ"** ಎಂಬ ಶ್ರುತಿವಾಕ್ಯ ಬಲದಿಂದ ವೇದನವೆಂದರೆ ಜ್ಞಾನಮಾತ್ರದಿಂದಲೇ ಮೋಕ್ಷವೆಂದು ತೋರಿಬರುತ್ತದೆ ; ಕೆಲವು ಕಡೆ ಕರ್ಮಕ್ಕೆ ಪ್ರಾಧಾನ್ಯ ಹೇಳಿರುವದರಿಂದ ಮೋಕ್ಷಕ್ಕೆ ಕರ್ಮಸಮುಚ್ಚಯಬೇಕೆಂದು ತೋರಿಬರುತ್ತದೆ ; ಪರಮ ಪುರುಷನ ಉಪಾಸನದಿಂದಲೇ

(೩) ಶ್ವೇತಾ ೩. ೮. (೪) ಪುರುಷಸೂಕ್ತವು.

ಮೋಕ್ಷವೆಂಬುದು ಒಪ್ಪತಕ್ಕದ್ದಲ್ಲವು ; ಏಕೆಂದರೆ ರುದ್ರೇಂದ್ರಾದಿಗಳ ಉಪಾಸನವು ಅಥರ್ವ ಶಿರಸ್ಸು ಮತ್ತು ಪ್ರತರ್ದನವಿದ್ಯೆಗಳಲ್ಲಿ ಹೇಳಲ್ಪಟ್ಟಿರುತ್ತದೆ ; ಈ ಪೂರ್ವಪಕ್ಷಗಳ ಖಂಡನಕ್ಕಾಗಿ ಶ್ರೀ ಭಾಷ್ಯಕಾರರು ಈ ಅವತಾರಿಕೆಯಲ್ಲಿ ನಾಲ್ಕು ವಿಷಯಗಳನ್ನು ಸ್ಥಾಪಿಸುತ್ತಾರೆ.

೧. ಮೋಕ್ಷದಾಯಕ ಉಪಾಯವು ಉಪಾಸನೆಯೇ ವಿನಾ ಶ್ರೀ ಶಂಕರಾಭಿಪ್ರಾಯದ ಹಾಗೆ **ತತ್ತ್ವಮಸ್ಯಾದಿ** ವಾಕ್ಯಜನ್ಯಜ್ಞಾನವಲ್ಲವು.

೨. ಉಪಾಸನವೂ ಕೂಡ, ಕೇವಲ ಉಪಾಸನವಾದರೆ ಕಾರ್ಯಕಾರಿಯಾಗುವದಿಲ್ಲವು ; ಅದು ಭಕ್ತಿರೂಪವಾದರೇನೇ ಪರಮಪುರುಷವರಣೀಯತಾ ಉಂಟಾಗಿ ಪ್ರಾಪ್ಯವು ಲಭಿಸುತ್ತದೆ.

೩. ಈ ಭಕ್ತಿರೂಪಾಪನ್ನವಾದುದು ಉಪಾಸನವೇ ವಿನಾ ಅದಕ್ಕೆ ಕರ್ಮಸಮುಚ್ಚಯವು ಯಾದವ ಪ್ರಕಾಶಸಿದ್ಧಾಂತಿಗಳು ಹೇಳುವಹಾಗೆ ಬೇಕಿಲ್ಲವು. ಆದರೆ ಅದಕ್ಕೆ ಅಙ್ಗವಾಗಿ ನಿತ್ಯ ನೈಮಿತ್ತಿಕಗಳು ಆವಶ್ಯಕವು.

೪. ಇಂತಹ ಉಪಾಸನವೂ ಪರಬ್ರಹ್ಮ ವಿಷಯವಾದರೇನೇ ಕಾರ್ಯಕಾರಿಯಾಗುತ್ತದೆ. ಅನ್ಯದೇವತಾ ವಿಷಯವಾದರೆ ಇಲ್ಲವು, ಹೀಗೆ ನಾಲ್ಕು ಪ್ರತಿಜ್ಞೆಗಳು. ಹೀಗೆ **ವೇದಾನ್ತವಾಕ್ಯ ಸಿದ್ಧಮ್** ಎಂದು ಹೇಳಿರುವದು, ಇವು ನಾಲ್ಕು ಅಭಿಪ್ರಾಯಗಳೂ ಸ್ಥಾಪಿತವಾಗಿವೆ ಎಂಬಭಿಪ್ರಾಯದಿಂದ.

ಇವುಗಳಲ್ಲಿ **ಪ್ರಥಮ ಪ್ರತಿಜ್ಞೆಯ**ನ್ನು "**ತಮೇವ ವಿದಿತ್ವಾ**" ಎಂದಾರಂಭಿಸಿ, **ಅವಗಮ್ಯತೇ** ಎಂದು ಮುಗಿಸಿರುವ ವಾಕ್ಯದಿಂದ ಬೋಧಿಸುತ್ತಾರೆ:—"**ತಮೇವ ವಿದಿತ್ವಾ** - ಆತನನ್ನೇ ಉಪಾಸನಮಾಡಿ, **ಮೃತ್ಯುಂ**-ಸಂಸಾರವನ್ನು, **ಅತ್ಯೇತಿ**-ದಾಟುತ್ತಾನೆ" ಇದರಿಂದ ಉಪಾಸನವೇ ಮೋಕ್ಷೋಪಾಯವೆಂದೂ, ಆ ಉಪಾಸನವು ಜಗತ್ಕಾರಣನಾದ ಪರಮಾತ್ಮ ವಿಷಯವಾದುದೇ ಆಗಿರಬೇಕೆಂದೂ, ಏವ ಎಂಬುದರಿಂದ ಹೇಳಲ್ಪಟ್ಟಿತು. ಬರೀ ವಾಕ್ಯಜನ್ಯ ಜ್ಞಾನ ಮಾತ್ರವು ಉಪಾಯವಲ್ಲವು ; ಆತನ ಉಪಾಸನ ಮೂಲಕ ಪರಮಾತ್ಮ ಸಾಕ್ಷಾತ್ಕಾರದಿಂದಲೇ ಮೋಕ್ಷವು ಎಂಬುದು ಸಿದ್ಧವು. ಇದರಿಂದಲೇ ಅನ್ಯದೇವತೆಯ ಉಪಾಸನವೂ ನಿರಸ್ತವು. ಆದರೆ ಪ್ರತರ್ದನ ವಿದ್ಯೆಯಲ್ಲಿ ತತ್ತ್ವಚ್ಛರೀರಕವಾಗಿ ಪರಮಾತ್ಮನಿದ್ದಾನೆಂದು ಭಾವಿಸಿ ಉಪಾಸನವನ್ನು ಮಾಡಿದರೆ ಅದೂ ಅಪ್ರತೀಕಾಲಂಬನರೂಪೋಪಾಸನೆಯಾಗಿ ಮೋಕ್ಷ ಹೇತುವಾದರೂ, ಈ ಷಟ್ಕದಲ್ಲೇ ೧೨ನೆಯ ಅಧ್ಯಾಯದ ೨ನೆಯ ಶ್ಲೋಕದಲ್ಲಿ ಅದು ಕ್ಲೇಶಕರವಾದುದೆಂದು ನಿರಾಕರಿಸಲ್ಪಟ್ಟಿರುವದರಿಂದಲೂ ಅಂತಹ ಉಪಾಸನಕ್ಕಿಂತ ಸಾಕ್ಷಾತ್ತಾದ ಪರಮಾತ್ಮೋಪಾಸನೆಯೇ ಸರ್ವೋತ್ತಮವಾದುದು. ಕರ್ಮಸಮುಚ್ಚಯಾಭಿಪ್ರಾಯವು ಹಿಂದೆಯೇ ೬ನೆಯ ಅಧ್ಯಾಯಾಂತ್ಯದಲ್ಲೂ ಮುಂದೆ ೧೮ನೆಯ ಅಧ್ಯಾಯದಲ್ಲೂ ನಿರಸ್ತವು. ಮುಂದೆ ನಾಲ್ಕನೆಯ ಪ್ರತಿಜ್ಞೆಯನ್ನು ಸಾಧಿಸುವ ಪ್ರಮಾಣವನ್ನು ಉದಾಹರಿಸುತ್ತಾರೆ.

೪. "**ತಂ**-ಮೇಲೆ ಉಪಪಾದಿಸಿದ ರೀತಿಯಲ್ಲಿ, ಜಗತ್ಕಾರಣನಾಗಿಯೂ ಕಲ್ಯಾಣ ಗುಣಾಕಾರನಾಗಿಯೂ ಆಶ್ರಯೋಪಯುಕ್ತ ಸೌಲಭ್ಯಾದಿ ಗುಣವಿಶಿಷ್ಟನಾಗಿಯೂ ಇರುವ ಸರ್ವೇಶ್ವರನನ್ನು, **ಏವಂ**-ಮೇಲೆ ಹೇಳಿದ ರೀತಿಯಲ್ಲಿ ದಿವ್ಯಮಙ್ಗಳ ವಿಗ್ರಹಯುಕ್ತನನ್ನಾಗಿ, **ವಿದ್ವಾನ್**-ಉಪಾಸನಾಮೂಲಕ ಸಾಕ್ಷಾತ್ಕರಿಸಿದವನು, ಮತ್ತು ಶರಣಾಗತಿಯನ್ನು ಅನುಷ್ಠಿಸಿ ಆತನನ್ನು ತಿಳಿದವನು, **ಇಹ** - ಈ ಲೋಕದಲ್ಲೇ, **ಅಮೃತಃ ಭವತಿ** - ಮುಕ್ತನಿಗೆ ಸಮಾನನಾಗುವನು. ಇಲ್ಲಿ **ತಮೇವಂ ವಿದ್ವಾನ್** ಎಂದಿರುವದರಿಂದ ಅವನನ್ನು ಹೀಗೆ ತಿಳಿದವನು ಎಂದಿರುವದರಿಂದ ಭಕ್ತಿಯೋಗ ಮತ್ತು ಭರನ್ಯಾಸ ಇವೆರಡು ವಿಧವಾದ ಉಪಾಯನಿಷ್ಠರೂ ಹೇಳಲ್ಪಟ್ಟರೆಂದು ಅಭಿಪ್ರಾಯಪಡುತ್ತಾರೆ. ಶ್ರೀ ಭಾಷ್ಯಕಾರರು ವೇದಾರ್ಥಸಙ್ಗ್ರಹದಲ್ಲಿ,

**ಭಾ. (೫) "ಆತ್ಮಾವಾ ಅರೇ ದ್ರಷ್ಟವ್ಯಃ....ನಿದಿಧ್ಯಾಸಿತವ್ಯಃ", (೬) "ಆತ್ಮಾನಮೇವ**

ಭಗವಂತನಲ್ಲಿ ಶರಣಾಗತಿಯನ್ನನುಷ್ಠಿಸದಲ್ಲದೆ ಮುಕ್ತಿಯಿಲ್ಲವೆಂದು **"ಪ್ರಪತ್ತಿಮಂತರೇಣ ಮೋಕ್ಷಾSಸಿದ್ಧಾ ಪ್ರಮಾಣಮಾಹ-ದೈವೀಹ್ಯೇಷಾ ಗುಣಮಯೀ"** ಇತ್ಯಾದಿ ವಾಕ್ಯದಿಂದ ಉಪದೇಶಿಸಿರುತ್ತಾರೆ. ಹಾಗಾದರೆ ಉಪಾಸನೆಯು ಉಪಾಯವಲ್ಲವೋ ? ಎಂದರೆ, ಹಾಗಲ್ಲವು. ಉಪಾಸನೆಗೂ ಅಙ್ಗರೂಪದಲ್ಲಿ ಶರಣಾಗತಿಯು ಆವಶ್ಯಕವು ; ಭರನ್ಯಾಸದಲ್ಲಿ ಶರಣಾಗತಿಯೇ ಅಙ್ಗಿಯು. ಆದುದರಿಂದ ಹಾಗೆ ವ್ಯಾಖ್ಯಾನ ಮಾಡಿದರು. ಈ ಅಭಿಪ್ರಾಯವನ್ನನುಸರಿಸಿ ಪ್ರಪತ್ತಿಯು ಎರಡು ವಿಧವೆಂದೂ, ಉಪಾಸನೆಯಲ್ಲಿ ಅದು ಸದ್ವಾರಕವೆಂದೂ, ಸ್ವತಂತ್ರ ಪ್ರಪತ್ತಿಯಾದ ಭರನ್ಯಾಸದಲ್ಲಿ ಅದ್ವಾರಕವೆಂದೂ, ಹೇಳಿ, ಸಾಧ್ಯೋಪಾಯಗಳು ಭಕ್ತಿಪ್ರಪತ್ತಿ ಎರಡು ವಿಧವೆಂದು ಉಪದೇಶಿಸಿದರು. ಶ್ರುತಪ್ರಕಾಶಿಕಾಚಾರ್ಯರೂ ಸಹ ಶ್ರೀ ಭಾಷ್ಯಕಾರರು ಬರೆದ ವೇದಾರ್ಥ ಸಙ್ಗ್ರಹ ವ್ಯಾಖ್ಯಾನದಲ್ಲಿ **"ತಮೇವಂ ವಿದ್ವಾನ್" ಇತ್ಯಾದಿ ವಾಕ್ಯಾನಾಂ ಉಪಾಸನವಿಧಿ ಪರತ್ವಾತ್, ಉಪಾಸನಸ್ಯಚ ಸ್ವನಿಷ್ಪತ್ತ್ಯರ್ಥಂ ಪ್ರಪತ್ತಿ ಸಾಪೇಕ್ಷತ್ವಾಚ್ಚ ಉಕ್ತಾರ್ಥಃ ಫಲಿತಃ"** ಎಂಬುದರಿಂದ ಶ್ರೀ ಭಾಷ್ಯಕಾರರ ಅಭಿಪ್ರಾಯವನ್ನೇ ಸಮರ್ಥನ ಮಾಡಿರುತ್ತಾರೆ. ಮುಂದಕ್ಕೆ **"ನಾನ್ಯಃಪನ್ಥಾ ಅಯನಾಯ ವಿದ್ಯತೇ"** ಎಂದಿರುತ್ತದೆ. **ಈಯತೇ ಇತ್ಯಯನಂ** ಎಂಬುದರಿಂದ **ಅಯನ ಶಬ್ದವು** ಪ್ರಾಪ್ಯವನ್ನು ಇಲ್ಲಿ ಬೋಧಿಸುತ್ತದೆ. ಆದುದರಿಂದ ಶರಣಾಗತಿಯಿಲ್ಲದೆ ಪ್ರಾಪ್ಯವಿಲ್ಲವೆಂಬುದು ಶ್ರುತಿಸಿದ್ಧವಾದ ನಂತರ, ತತ್ತ್ವಮಸ್ಯಾದಿ ವಾಕ್ಯಜನ್ಯಜ್ಞಾನದಿಂದಲೇ ಜೀವನ್ಮುಕ್ತಿಯು ಎಂದು ಇತರರು ಹೇಳುವ ಅಭಿಪ್ರಾಯವು ಸರಿಯಲ್ಲವೆಂದು ಹೇಳಿದಂತಾಯಿತು." **ಇತ್ಯಾದಿನಾಭಿಹಿತಂ ವೇದನಮ್**-ಇವೇ ಮೊದಲಾದ ಪ್ರಮಾಣಗಳಿಂದ ಹೇಳಲ್ಪಟ್ಟ ವೇದನವು, ದರ್ಶನ ಸಮಾನಾಕಾರವಾದುದೆಂದು, ಪ್ರಮಾಣಗಳನ್ನುದಾಹರಿಸಿ ಹೇಳುತ್ತಾರೆ, (೫) **"ಆತ್ಮಾವಾಅರೇ"** ಎಂಬ ಪೂರಾ ವಾಕ್ಯವು ಹೇಗೆಂದರೆ—**''ಆತ್ಮಾವ ಅರೇ ದ್ರಷ್ಟವ್ಯಶ್ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ''** "ಓ ಮೈತ್ರೇಯಿಯೇ, ಪರಮಾತ್ಮನು, **ದ್ರಷ್ಟವ್ಯಃ**- ಉಪಾಸನೆಯ ಮೂಲಕ ಸಾಕ್ಷಾತ್ಕರಿಸಲ್ಪಡತಕ್ಕವನು ; ಅದು ಹೇಗೆಂದರೆ, ಆತನೇ **ಶ್ರೋತವ್ಯಃ**-ಗುರೂಪದೇಶ ಮೂಲಕ ಆತನ ಸ್ವರೂಪಾದಿಗಳನ್ನು ಕೇಳಿ ತಿಳಿಯಲು ಯೋಗ್ಯನು ; ಕೇಳಿ ತಿಳಿದನಂತರ, ಆತನೇ **ಮನ್ತವ್ಯಃ**-ಪುನಃ ಪುನಃ ಮನನಮಾಡಲು ಯೋಗ್ಯನು ; ಅನಂತರ **ನಿದಿಧ್ಯಾಸಿತವ್ಯಃ**-ತೈಲಧಾರೆಯ ಹಾಗೆ ಸ್ಮೃತಿ ಸಂತಾನ ಮೂಲಕ ಸಾಕ್ಷಾತ್ಕರಿಸಲ್ಪಡತಕ್ಕವನು ; ಈ ಪ್ರಮಾಣದಲ್ಲಿ ಹಿಂದಿನ ಶ್ರುತಿಯಲ್ಲಿ ಹೇಳಿದ ವೇದನವೇ, ವಿಶೇಷಿಸಲ್ಪಟ್ಟು **ದ್ರಷ್ಟವ್ಯಃ** ಎಂದೂ **ನಿದಿಧ್ಯಾಸಿತವ್ಯಃ** ಎಂದೂ ದರ್ಶನ ಸಮಾನಾಕಾರವಾದುದೆಂದೂ ಸ್ಮೃತಿಸಂತಾನರೂಪವಾದುದೆಂದೂ ಹೇಳಲ್ಪಟ್ಟು ಎರಡೂ ಐಕಾರ್ಥ್ಯವುಳ್ಳುದು ಎಂಬ ಭಾವದಿಂದ ಉದಾಹರಿಸಲ್ಪಟ್ಟಿರುತ್ತದೆ. ಆದರೆ ಹಾಗೆ ಎರಡೂ ಐಕಾರ್ಥ್ಯವುಳ್ಳದಾದರೆ, ಪುನರುಕ್ತಿಯಾಗುವದಿಲ್ಲವೇ ? ಆದುದರಿಂದ ಭಿನ್ನಾರ್ಥವುಳ್ಳವೆಂಬ ಶಙ್ಕೆ ಉಂಟಾಗಬಹುದೆಂದು ಯೋಚಿಸಿ, ಪುನರುಕ್ತಿಗೆ ಅವಕಾಶವಿಲ್ಲವೆಂದು ವೇದನ ಶಬ್ದವು ಸಾಮಾನ್ಯವಾಗಿ ಉಪಾಸನೆಯನ್ನು ಹೇಳುತ್ತದೆಂದೂ ಅದೇ ಸ್ಮೃತಿಸಂತಾನರೂಪವಾಗಿ ದರ್ಶನ ಸಮಾನಾಕಾರವಾದುದೆಂದು ವಿಶೇಷಿಸಿ ಹೇಳಲ್ಪಟ್ಟಿರುತ್ತದೆಂದೂ ತಿಳಿಸುತ್ತಾರೆ. **ಆದುದರಿಂದ ದ್ರಷ್ಟವ್ಯಃ** ಎಂಬುದರಿಂದ ಉಪಾಸನೆಯು ದರ್ಶನ ಸಮಾನಾಕಾರವೆಂದು ವಿಶೇಷಿಸಿ ಹೇಳಿ, ಅದೇ ಸ್ಮೃತಿ ಸಂತಾನರೂಪವಾದುದೆಂದೂ ತಿಳಿಸಿ, ಹೀಗೆ ಉಪಾಸನೆಯನ್ನು

(೫) ಬೃ. ೬. ೫. ೬. (೬) ಬೃ. ೧. ೪. ೧೫.

**ಭಾ. ಲೋಕಮುಪಾಸೀತ"(೭)ಸತ್ವಶುದ್ಧೌ ಧ್ರುವಾಸ್ಮೃತಿಃ, ಸ್ಮೃತಿಲಮ್ಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ" (೮) 'ಭಿದ್ಯತೇ ಹೃದಯಗ್ರನ್ಥಿ ಶ್ಛಿದ್ಯಂತೇ ಸರ್ವಸಂಶಯಾಃ ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ||' ಇತ್ಯಾದಿಭಿ ರೈಕಾರ್ಥ್ಯಾತ್ಸ್ಮೃತಿ ಸಂತಾನರೂಪಂ ದರ್ಶನ ಸಮಾನಾಕಾರಂ ಧ್ಯಾನೋಪಾಸನ ಶಬ್ದವಾಚ್ಯ**

ಮಾಡತಕ್ಕದ್ದೆಂದು ವಿಧಿಸಿತು. ಆದರೆ ಮಧ್ಯದಲ್ಲಿ **ಶ್ರೋತವ್ಯೋಮನ್ತವ್ಯಃ** ಎಂದು ವಿಧಿಸಿರುವದೇಸು ಎಂದರೆ, ಅದು ವಿಧಿಯಲ್ಲವು. ನಿದಿಧ್ಯಾಸನಕ್ಕೆ ಸಹಾಯವಾದವುಗಳ ಅನುವಾದವೆಂದು ಭಾವಿಸತಕ್ಕದ್ದು. ಈ ಸ್ಮೃತಿ ಸಂತಾನರೂಪವಾದುದೂ, ದರ್ಶನ ಸಮಾನಾಕಾರವಾದುದೂ ಸಹ ಉಪಾಸನವೇ ಎಂದು ಗ್ರಹಿಸತಕ್ಕದ್ದೆಂಬುವದಕ್ಕೆ ಬೃಹದಾರಣ್ಯಕ ವಾಕ್ಯವನ್ನು ಉದಾಹರಿಸುತ್ತಾರೆ:— ಹಾಗಾದರೆ ಈ ಸ್ಮೃತಿ ಸಂತಾನರೂಪಧ್ಯಾನವೂ ದರ್ಶನ ಸಮಾನಾಕಾರವೂ ಒಂದೇ ಎಂದು ಹೇಳುತ್ತೀರಲ್ಲಾ ಅದಕ್ಕೇನಾದರೂ ಸಾಧನವುಂಟೋ ಎಂದರೆ, ಅಂತಹ ಸ್ಮೃತಿ ಸಂತಾನರೂಪಧ್ಯಾನಕ್ಕೆ ದರ್ಶನ ಸಮಾನಾಕಾರಕ್ಕೂ ಒಂದೇ ರೂಪ ಫಲವನ್ನು ಶ್ರುತಿಗಳು ಬೋಧಿಸುವದರಿಂದ ಎರಡೂ ಒಂದೇ. ಇದಕ್ಕಾಗಿ ಇನ್ನು ಎರಡು ಶ್ರುತಿಗಳನ್ನು ಉದಾಹರಿಸುತ್ತಾರೆ. (೬) ಬ್ರಹ್ಮವಿತ್ತಲ್ಲದವನು ಅನುಷ್ಠಿಸಿದ ಯಜ್ಞಯಾಗಾದಿ ಪುಣ್ಯಕರ್ಮಗಳ ಫಲವು ಎಂದಿಗಿದ್ದರೂ ನಶಿಸಿ ಹೋಗುವುವು. ಆದುದರಿಂದ ಏನು ಮಾಡತಕ್ಕದ್ದು ಎಂದರೆ ಹೇಳಲ್ಪಡುತ್ತದೆ, "**ಆತ್ಮಾನಮೇವ ಲೋಕಮುಪಾಸೀತ** - ಮಿಕ್ಕಿದ್ದೆಲ್ಲವನ್ನೂ ಬಿಟ್ಟು ಬ್ರಹ್ಮವಿತ್ತಾಗತಕ್ಕವನು, **ಆತ್ಮಾನಂ** - ಉಪಾಯಭೂತನಾದ ಪರಮಾತ್ಮನನ್ನು, **ಲೋಕಂ**-ಫಲವನ್ನಾಗಿ ಎಂದರೆ ಉಪೇಯನನ್ನಾಗಿ, **ಉಪಾಸೀತ** - ಉಪಾಸನವನ್ನು ಮಾಡು." (೭) "ಮೋಕ್ಷ ಸಾಧನಭೂತವಾದ ಉಪಾಸನಾ ಪ್ರಕಾರವನ್ನು ಉಪದೇಶಮಾಡಿ, ಅಂತಹ ಉಪಾಸನಾ ನಿಷ್ಪತ್ತಿಗೆ, ಮನಸ್ಸಿಗೆ ಉಪಾಸನಾ ಪ್ರತಿಬಂಧಕಗಳಾದ ಪಾಪರಾಹಿತ್ಯವು ಆವಶ್ಯಕವು; ಅದಕ್ಕಾಗಿ ಸಾತ್ವಿಕಾಹಾರವು ಮುಖ್ಯವೆಂದು ಈ ಶ್ರುತಿಯು ಉಪದೇಶಿಸುತ್ತದೆ. **ಆಹಾರಶುದ್ಧೌ** - ರಾಜಸ ತಾಮಸಗಳನ್ನು ಪರಿತ್ಯಜಿಸಿ ದೋಷದುಷ್ಟವಲ್ಲದ ಸಾತ್ವಿಕಾಹಾರ ಸೇವನೆಯಾದರೆ, **ಸತ್ವಶುದ್ಧಿಃ** - ಮನಸ್ಸು ನಿರ್ಮಲವಾದುದಾಗುತ್ತದೆ, **ಸತ್ವಶುದ್ಧೌ** - ಹೀಗೆ ಮನಸ್ಸು ನಿರ್ಮಲವಾಗಲು, **ಧ್ರುವಾಸ್ಮೃತಿಃ**-ಅವಿಚ್ಛಿನ್ನವಾದ ಸ್ಮೃತಿ ಸಂತಾನರೂಪವಾದ ಆತ್ಮಧ್ಯಾನವು ಸಿದ್ಧಿಸುತ್ತದೆ, **ಸ್ಮೃತಿಲಮ್ಭೇ**-ಹೀಗೆ ಆತ್ಮಧ್ಯಾನವು ಉಂಟಾದರೆ, **ಸರ್ವಗ್ರಂಥೀನಾಂ ವಿಪ್ರಮೋಕ್ಷಃ**-ಶಿಕ್ಕನ್ನು ಬಿಡಿಸಲು ಕಷ್ಟವಾಗಿದ್ದ ಸಮಸ್ತ ಗಂಟುಗಳ ಬಿಡುಗಡೆಯು ದೊರೆಯುತ್ತದೆ, ಇದರಿಂದ ಸ್ಮೃತಿರೂಪವಾದ ಬೇರೇ ವಿಲಕ್ಷಣ ಸಾಕ್ಷಾತ್ಕಾರದಿಂದ ಮೋಕ್ಷವೆಂದೇ ಹೇಳಿದಂತಾಯಿತು ಎಂದು ಭಾವಿಸತಕ್ಕದಲ್ಲವು; ಮತ್ತೇನೆಂದರೆ ದರ್ಶನ ಸಮನಾಕಾರ ಸ್ಮೃತಿಸಂತಾನದಿಂದ ಮೋಕ್ಷವೆಂದು ತಿಳಿಯತಕ್ಕದ್ದು." (೮) **ತಸ್ಮಿನ್** - ಆ ಮಹಾತ್ಮನಾದ **ಪರಾವರೇ**-ಶ್ರೇಷ್ಠರಾದ ಬ್ರಹ್ಮರುದ್ರೇಂದ್ರಾದಿಗಳಿಗಿಂತಲೂ ಶ್ರೇಷ್ಠನಾದ ಅಥವಾ ಶ್ರೇಷ್ಠವಾದ ಚಿತ್ತೂ ಅವರವಾದ ಅಚಿತ್ತೂ ಅವುಗಳಿಗೆಲ್ಲಾ ಆತ್ಮನಾಗಿರುವ ಪರಮಾತ್ಮನು, **ದೃಷ್ಟೇಸತಿ** ದರ್ಶನ ಸಮಾನಾಕಾರ ಜ್ಞಾನ ವಿಷಯನಾದರೆ, **ಹೃದಯಗ್ರಂಥಿಃ** -ಅಂತಃಕರಣದ ಗ್ರಂಥಿಯು ಎಂದರೆ ರಾಗದ್ವೇಷಾದಿಗಳು, ಹೃದಯ ಶಬ್ದದಿಂದ ಜೀವಾತ್ಮನು **ಹೃತ್ ಅಯತಿ** ಎಂಬ ವ್ಯುತ್ಪತ್ತಿಯಿಂದ ಹೇಳಲ್ಪಟ್ಟು, ಅವನ **ಗ್ರಂಥಿಯು** ಎಂದರೆ ಬಂಧಕವಾದ ಪ್ರಕೃತಿ ಸಂಬಂಧವು, ತನ್ಮೂಲಕ ವಿಷಯೋಪ ಭೋಗಗಳೂ **ಭಿದ್ಯತೇ** - ನಾಶಹೊಂದು

(೭) ಛಾಂ. ೭. ೨೬. ೨. (೮) ಮುಂ. ೨. ೨. ೮

**ಭಾ.** **ಮಿತ್ಯವಗಮ್ಯತೇ। ಪುನಶ್ಚ (೯) "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ। ಯಮೇ ವೈಷವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್" ಇತಿ ವಿಶೇಷಣಾತ್, ಪರೇಣಾತ್ಮನಾ ವರಣೀಯತಾ ಹೇತುಭೂತಂ ಸ್ಮರ್ಯಮಾಣ ವಿಷಯಸ್ಯಾತ್ಯರ್ಥ ಪ್ರಿಯತ್ವೇನ ಸ್ವಯಮಪ್ಯತ್ಯರ್ಥ ಪ್ರಿಯರೂಪಂ ಸ್ಮೃತಿ ಸಂತಾನಮೇವೋಪಾಸನ ಶಬ್ದವಾಚ್ಯ ಮಿತಿ ಹಿ ನಿಶ್ಚೀಯತೇ। ತದೇವ**

ತ್ರವೆ, **ಸರ್ವಸಂಶಯಾಃ ಛಿದ್ಯಂತೇ**-ಅಜ್ಞಾನದಿಂದುಂಟಾಗುವ ಸಮಸ್ತ ಸಂಶಯಗಳೂ ತೊಲಗುತ್ತವೆ. **ಕ್ಷೀಯಂತೇ ಚಾಸ್ಯ ಕರ್ಮಾಣಿ**-ಪ್ರಾರಬ್ಧ ವ್ಯತಿರಿಕ್ತ ಅನೇಕ ಜನ್ಮಾರ್ಜಿತಗಳಾದ **ಸಂಚಿತ**ವೆಂಬ ಹೆಸರುಳ್ಳ ಪಾಪಗಳೆಲ್ಲಾ ಕ್ಷಯಿಸಿ ಹೋಗುತ್ತವೆ ಎಂದರೆ ಫಲಗಳನ್ನು ಕೊಡುವ ಶಕ್ತಿಯನ್ನು ಕಳೆದುಕೊಳ್ಳುತ್ತವೆ, **ಇತ್ಯಾದಿಭಿಃ**-ಇವೇ ಮೊದಲಾದ ಶ್ರುತಿಪ್ರಮಾಣಗಳಿಂದ, ಎಲ್ಲವೂ ಒಂದೇ ಅಭಿಪ್ರಾಯವುಳ್ಳವುಗಳಾದುದರಿಂದ **ಸ್ಮೃತಿಸಂತಾನರೂಪಂ ದರ್ಶನ ಸಮಾನಾಕಾರಂ**-ಅವಿಚ್ಛಿನ್ನವಾದ ಸ್ಮೃತಿ ಸಮೂಹರೂಪವಾದ ಪರಮಾತ್ಮ ಸಾಕ್ಷಾತ್ಕಾರವೇ, **ಧ್ಯಾನೋಪಾಸನ ಶಬ್ದವಾಚ್ಯ ಮಿತ್ಯವಗಮ್ಯತೇ**-ಧ್ಯಾನ ಮತ್ತು ಉಪಾಸನ ಶಬ್ದಗಳಿಂದ ಹೇಳಲ್ಪಟ್ಟಿರುತ್ತದೆಂದು ತೋರಿಬರುತ್ತದೆ. **ವಿದ್ವಾನ್** ಎಂಬ ಶಬ್ದದಲ್ಲಿ ತೋರುವ **ವೇದನವೂ, ದ್ರಷ್ಟವ್ಯಃ** ಎಂಬಲ್ಲೂ, **ದೃಷ್ಟೇ** ಎಂಬಲ್ಲೂ ತೋರಿಬರುವ **ದರ್ಶನ ಸಮಾನಾಕಾರ ಜ್ಞಾನವೂ, ಧ್ರುವಾಸ್ಮೃತಿಃ** ಎಂಬಲ್ಲಿರುವ ಸ್ಮೃತಿ ಸಂತಾನರೂಪವಾದ ಉಪಾಸನೆಯೂ, ಎಲ್ಲವೂ ಒಂದೇ ಅಭಿಪ್ರಾಯವುಳ್ಳವೆಂಬ ಭಾವವು.

೨. ಮುಂದೆ ಬರೀ ಉಪಾಸನೆಯು ಕಾರ್ಯಕಾರಿಯಾಗುವದಿಲ್ಲವು, ಆ ಉಪಾಸನದಿಂದ ಭಗವಂತನು ಪ್ರೀತನಾಗುವದರ ಮೂಲಕ ಆತನಿಂದ ವರಿಸಲ್ಪಟ್ಟರೆ, ಅನುಗ್ರಹಿಸಲ್ಪಟ್ಟರೆ, ಆಗ ಅದು ಕಾರ್ಯಕಾರಿಯಾಗುತ್ತದೆಂಬುದನ್ನು ಮುಂದೆ ಉಪಪಾದಿಸುತ್ತಾರೆ. ಹೀಗೆ ಪರಮಪುರುಷ ವರಣೀಯತೆಯೇ ಮುಖ್ಯವೆಂದು **"ಯಮೇವೈಷ ವೃಣುತೇ ತೇನ ಲಭ್ಯಃ"** ಎಂಬ ಶ್ರುತಿಯನ್ನು ಉದಾಹರಿಸುತ್ತಾರೆ. **ಪುನಶ್ಚ**-ಮುಂದೆ ಆ ಉಪನಿಷತ್ತೇ ಹೇಳಿರುವದೇನೆಂದರೆ— **"ನಾಯಮಾತ್ಮಾ"** ಎಂದಾರಂಭಿಸಿ **"ತನೂಂ ಸ್ವಾಂ" ಇತಿ**-ಎಂದು ಮುಗಿಸಿರುವ ವಾಕ್ಯ ಮೂಲಕವಾಗಿ, **ವಿಶೇಷಣಾತ್**-ವಿಶೇಷಿಸಿ ಆ ಧ್ಯಾನೋಪಾಸನೆಗಳನ್ನು ಹೇಳಿರುವವದರಿಂದ, **ಪರೇಣಾತ್ಮನಾ**-ಪರಮಾತ್ಮನಿಂದ, **ವರಣೀಯತಾ ಹೇತುಭೂತಂ**-ದಿವ್ಯ ವೈಕುಂಠ ಪ್ರಾಪ್ತಿಗೆ ಯೋಗ್ಯನೆಂದು ಪರಿಗ್ರಹಿಸುವದಕ್ಕೆ ಕಾರಣವಾದ, **ಸ್ಮರ್ಯಮಾಣ ವಿಷಯಸ್ಯಾತ್ಯರ್ಥ ಪ್ರಿಯತ್ವೇನ**-ಇಂತಹ ಸ್ಮೃತಿ ಸಂತಾನರೂಪಧ್ಯಾನಕ್ಕೆ ವಿಷಯವಾದ ಆತನ ದಿವ್ಯಮಙ್ಗಳ ವಿಗ್ರಹವು ಪ್ರಿಯತಮವಾದುದರಿಂದ, **ಸ್ವಯಮಪ್ಯತ್ಯರ್ಥಪ್ರಿಯರೂಪಂ**-ಸ್ಮೃತಿಸಂತಾನರೂಪ ಧ್ಯಾನವು ಭಕ್ತಿರೂಪವಾದುದಾಗಿ ತುಂಬಾ ಪ್ರಿಯವಾಗಿರುವದರಿಂದಲೂ, **ಸ್ಮೃತಿ ಸಂತಾನ ಮೇವೋಪಾಸನ ಶಬ್ದವಾಚ್ಯಮಿತಿ ಹಿ ನಿಶ್ಚೀಯತೇ**-ಈ ಸ್ಮೃತಿ ಸಂತಾನರೂಪವಾದುದೇ ಉಪಾಸನ ಶಬ್ದದಿಂದ ಹೇಳಿಸಿಕೊಳ್ಳುವಂಥಾದ್ದು ಎಂಬದಾಗಿ ಅಲ್ಲವೇ ನಿಶ್ಚಯಿಸಲ್ಪಟ್ಟಿರುತ್ತದೆ. ಈ **"ನಾಯಮಾತ್ಮಾ"** ಎಂಬ ಮುಂಡಕ ವಾಕ್ಯವು ಮೂರನೆಯ ಅಧ್ಯಾಯದ ಅವತಾರಿಕೆಯಲ್ಲಿ ಉದಾಹರಿಸಲ್ಪಟ್ಟಿರುವದರಿಂದ ಇದರರ್ಥಕ್ಕೆ ಹಿಂದೆ ೨೪೭ನೆಯ ಪುಟವನ್ನು ನೋಡಿ. ಇಲ್ಲಿ ನಾವು ಮುಖ್ಯವಾಗಿ ತಿಳಿಯತಕ್ಕಂಶವು ಇಷ್ಟೇ:- **"ನಾಯಮಾತ್ಮಾ ಪ್ರವಚನೇನ"** ಎಂಬ ವಾಕ್ಯದಿಂದ ಶ್ರವಣ ಮನನ ನಿದಿಧ್ಯಾಸನಾದಿಗಳು

(೯) ಮುಂಡಕ. ೩. ೨. ೩.

**ಭಾ. ಹಿ ಭಕ್ತಿರಿತ್ಯುಚ್ಯತೇ (೧೦) 'ಸ್ನೇಹಪೂರ್ವಮನುಧ್ಯಾನಂ ಭಕ್ತಿರಿತ್ಯಭಿಧೀಯತೇ' ಇತ್ಯಾದಿ ವಚನಾತ್, ಅತಃ (೧೧)ತಮೇವಂ ವಿದ್ವಾನಮೃತ ಇಹಭವತಿ, ನಾನ್ಯಃಪನ್ಥಾ**

ಸಂಪೂರ್ಣವಾಗಿ ನಿಷೇಧಿಸಲ್ಪಡಲಿಲ್ಲವು. ಅವುಗಳ ಅವಶ್ಯಕತೆಯೇ ಇಲ್ಲವೆಂದಭಿಪ್ರಾಯ ಪಟ್ಟರೆ, ಅವುಗಳ ಆವಶ್ಯಕತೆಯನ್ನು ಹೇಳುವ ಅನೇಕ ಇತರ ಪ್ರಮಾಣಗಳಿಗೆ ವಿರೋಧ ವಾಗುತ್ತದೆ. ಹಾಗೆಯೇ ಪರಮ ಪುರುಷನು ತನ್ನ ಸ್ವತಂತ್ರೇಚ್ಛಾನುಸಾರ ಬೇಕಾದವರನ್ನು ಮೋಕ್ಷಕ್ಕೆ ಕರೆದುಕೊಳ್ಳುವನೆಂದರೆ, ಆತನಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳನ್ನಾ ರೋಪಿಸಿದಂತಾಗುತ್ತದೆ, ಮತ್ತು ಶಾಸ್ತ್ರ ನೈರರ್ಥಕ್ಯವೂ ಪ್ರಾಪ್ತವಾಗುತ್ತದೆ. ಆದುದರಿಂದ ಪರಮಾತ್ಮನು ತನ್ನ ವರಣೀಯತೆಯನ್ನು ಪ್ರಪನ್ನನಲ್ಲಿ ಕಂಡುಬರುವ ಒಂದು ವಿಶೇಷ ಗುಣಕ್ಕಧೀನವಾಗಿಯೇ ವಿಧಿಸತಕ್ಕದ್ದು ನ್ಯಾಯವು ಅದು ಯಾವುದೆಂದರೆ.—ವರಣೀಯತೆಗೆ ಕಾರಣಭೂತವಾದ ಭಕ್ತಿಯೇ, ಈ ಭಕ್ತಿಯಿಂದ ಯಾವನು ಭಗವಂತನಿಗೆ ಪ್ರಿಯತಮನಾಗು ವನೋ, ಅಂತವನನ್ನೇ ಭಗವಂತನು ಮುಕ್ತಿಗೆ ಯೋಗ್ಯನನ್ನಾಗಿ ಭಾವಿಸುವನು. ಪರೀಕ್ಷಕನು ಹೆಚ್ಚು ಮಾರ್ಕುಗಳನ್ನು ತನಗೆ ಬುದ್ಧಿಶಾಲಿ ಎಂದು ತೋರಿದವನಿಗೆ ಮಾತ್ರ ಕೊಟ್ಟಲ್ಲವೇ ಆತನನ್ನು ತೇರ್ಗಡೆಯನ್ನು ಹೊಂದಿಸುವನು. ಹಾಗೆಯೇ ಈ ಗೀತೆಯಲ್ಲಿ ಮುಂದೆಯೂ ಹೇಳಲ್ಪಟ್ಟಿರುತ್ತದೆ. **"ಪ್ರಿಯೋ ಹಿ ಜ್ಞಾನಿನೋತ್ಯರ್ಥಮಹಂ, ಸ ಚ ಮಮ ಪ್ರಿಯಃ"** "ನಾನು ತುಂಬಾ ಜ್ಞಾನಿಗೆ ಅತ್ಯಂತ ಪ್ರಿಯತಮನು, ಆ ಕಾರಣದಿಂದಲೇ ಅವನೂ ಕೂಡ ನನಗೆ ಪ್ರಿಯತಮನು" ಎಂದು ಸರ್ವೇಶ್ವರನೇ ಅರ್ಜುನನಿಗೆ ಹೇಳುತ್ತಾನೆ. ಹೀಗೆ ಸ್ಮೃತಿ ಸಂತಾನರೂಪವಾದ ಉಪಾಸನವೇ ಭಕ್ತಿಶಬ್ದದಿಂದ ಹೇಳಲ್ಪಡುತ್ತದೆಂದು ಮುಂದಿನ ವಾಕ್ಯ ದಿಂದ ಹೇಳುತ್ತಾರೆ—**ತದೇವ ಹಿ** - ಆ ಸ್ಮೃತಿ ಸಂತಾನರೂಪವಾದ ಉಪಾಸನವೇ, **ಭಕ್ತಿ ರಿತ್ಯುಚ್ಯತೇ**-ಭಕ್ತಿ ಶಬ್ದದಿಂದ ಹೇಳಲ್ಪಡುತ್ತದೆ. ಹೀಗೆ ಹೇಳಲು ಪ್ರಮಾಣವುಂಟೋ? ಎಂದರೆ, ಮುಂದೆ ಪ್ರಮಾಣವನ್ನು ಉದಾಹರಿಸುತ್ತಾರೆ. **"ಸ್ನೇಹಪೂರ್ವ ಮನುಧ್ಯಾನಂ**- ಭಕ್ತಿಪೂರ್ವಕವಾದ ಉಪಾಸನವು, **ಭಕ್ತಿರಿತ್ಯಭಿಧೀಯತೇ**-ಭಕ್ತಿ ಎಂದು ಹೇಳಿಸಿಕೊಳ್ಳುತ್ತದೆ." **ಇತ್ಯಾದಿ ವಚನಾತ್**-ಎಂಬಿವೇ ಮೊದಲಾದ ಪ್ರಮಾಣವಾಕ್ಯಗಳಿಂದ. ಈ ಲೈಜ್ಗೋತ್ತರ ವಾಕ್ಯವು ತುಂಬಾ ಪ್ರೀತಿಯಿಂದ ಮಾಡುವ ಉಪಾಸನಾನುಷ್ಠಾನವೇ ಭಕ್ತಿ ಶಬ್ದದಿಂದ ಹೇಳಿಸಿ ಕೊಳ್ಳುತ್ತದೆಂದು ಬೋಧಿಸುತ್ತದೆ. ಇನ್ನೂ ಅನೇಕ ಕಡೆಗಳಲ್ಲೂ ಈ ಅಭಿಪ್ರಾಯವೇ ಉಪ ಪಾದಿತವಾಗುತ್ತದೆ. **"ಯಾಪ್ರೀತಿ ರವಿವೇಕಾನಾಂ ವಿಷಯೇಷ್ವನುವರ್ತಿನಾಂ। ತ್ವಾಮನು ಸ್ಮರತ ಸ್ಸಾಮೇ ಹೃದಯಾನ್ಮಾಪ ಸರ್ಪತು"** (ವಿ. ಪು. ೧. ೨೦. ೧೯) ಯಾವ ವಿಧವಾದ ಪ್ರೀತಿಯು ವಿಷಯೋಪ ಭೋಗಗಳಲ್ಲೇ ಯಾವಾಗಲೂ ಆಸಕ್ತರಾಗಿರುವವರಿಗೆ ಇರುತ್ತದೋ, ಅಂತಹ ಪ್ರೀತಿಯು ನಿನ್ನನ್ನೇ ಯಾವಾಗಲೂ ಅನುಸರಿಸುತ್ತಿರುವ ನನ್ನ ಹೃದಯವನ್ನು ಬಿಟ್ಟುಹೋಗದಿರಲಿ, ಎಂದರೆ ನನ್ನ ಹೃದಯವನ್ನು ಸದಾ ಆಕ್ರಮಿಸಿ ಇರಲಿ ಎಂಬ ಭಾವವು. ಇನ್ನು ಕೆಲವರು **"ಹೃದಯಾನ್ಮಾಪ ಸರ್ಪತು"** ಎಂಬ ಪಾಠವನ್ನಂಗೀಕರಿಸಿ, **ಮಾಪ** - ಓ ಲಕ್ಷ್ಮೀಪತಿಯೇ ಅಂತಹ ವಿಷಯಗಳಲ್ಲಿ ಪ್ರೀತಿಯು ನಿನ್ನನ್ನೇ ಅನುಸರಿಸುತ್ತಿರುವ ನನ್ನ ಹೃದಯದಿಂದ ತೊಲಗಲಿ ಎಂದು ಅರ್ಥಮಾಡಿರುತ್ತಾರೆ. ಈ ಅರ್ಥವು ಅಷ್ಟು ಸ್ವಾರಸ್ಯವಿಲ್ಲವು. ಮತ್ತು **ನಾಥಯೋನಿ ಸಹಸ್ರೇಷು ಯೇಷು ಯೇಷು ವ್ರಜಾಮ್ಯಹಂ।**

**ತೇಷು ತೇಷ್ವಚ್ಯುತಾಭಕ್ತಿ ರಚ್ಯುತಾಸ್ತು ಸದಾ ತ್ವಯಿ॥** (ವಿ. ಪು. ೧. ೨೦. ೧೮) ಓ ಸ್ವಾಮಿಯೇ, ಯಾವಯಾವ ಅನೇಕ ಯೋನಿಗಳಲ್ಲಿ ನಾನು ಜನಿಸುವೆನೋ ಆ ಜನ್ಮಗಳಲ್ಲೆಲ್ಲಾ

(೧೦) ಲೈಜ್ಗೋತ್ತರಃ (೧೧) ಪುರುಷಸೂಕ್ತಮ್.

**ಭಾ. ಆಯನಾಯ ವಿದ್ಯತೆ (೧೨) 'ನಾಹಂ ವೇದೈರ್ನತಪಸಾ ನ ದಾನೇನ ನಚೇಜ್ಯಯಾ। ಶಕ್ಯ ಏವಂ ವಿಧೋದ್ರಷ್ಟುಮ್ ದೃಷ್ಟವಾನಸಿ ಮಾಂ ಯಥಾ। ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ। ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ**

ಓ ಅಚ್ಯುತನೇ, ನಿನ್ನಲ್ಲಿ ಭಕ್ತಿಯು ಚ್ಯುತಿ ಇಲ್ಲದ್ದಾಗಿರಲಿ, ಎಂದರೆ ಸ್ಥಿರವಾಗಿ ಹೃದಯದಲ್ಲಿ ಭಕ್ತಿಯು ನೆಲಗೊಳ್ಳುವ ಹಾಗೆ ಅನುಗ್ರಹಿಸೆಂಬ ತಾತ್ಪರ್ಯವು.

ಮತ್ತು, **ಕ್ವನಾಕ ಪೃಷ್ಟಗಮನಂ ಪುನರಾವರ್ತಿ ಲಕ್ಷಣಂ।**

**ಕ್ವಜಪೋ ವಾಸುದೇವೇತಿ ಮುಕ್ತಿಬೀಜ ಮನುತ್ತಮಂ?** ॥ ವಿ.ಪು. ೨.೬.೪೪.

ವಿಷ್ಣು ಸಂಸ್ಮರಣದಿಂದ ಸಮಸ್ತ ಕ್ಲೇಶ ಸಮೂಹವೆಲ್ಲಾ ತೊಲಗಿ ಮುಕ್ತಿಯನ್ನು ಹೊಂದುವನೆಂದು ಹಿಂದೆ ಹೇಳಿ, ಅಂತಹ ಮುಕ್ತಿಬೀಜವಾದ ಭಗವತ್ಸಂಕೀರ್ತನವನ್ನು ಮಾಡುವವರಿಗೆ ದೇವೇಂದ್ರಪದವೂ ಕೂಡ ವಿಘ್ನಕಾರಿಯಾದುದರಿಂದ ಅವರಿಗೆ ಬೇಕಿಲ್ಲವು. ಏಕೆಂದರೆ ಪುನಃ ಈ ಭೂಲೋಕಕ್ಕೇನೇ ಬರಬೇಕಾಗುತ್ತದೆ. ಹಿಂತಿರಿಗಿ ಬರಬೇಕಾದ ಲಕ್ಷಣವುಳ್ಳ ಸ್ವರ್ಗಲೋಕವೆಲ್ಲಿ? ವಾಸುದೇವ ವಾಸುದೇವವೆಂದು ಸದಾ ಧ್ಯಾನವು ಮುಕ್ತಿಗೆ ಸರ್ವೋತ್ಕೃಷ್ಟಕಾರಣವಾದುದಾಗಿರುವದು ಎಲ್ಲಿ? ಎಂದರೆ ಅದಕ್ಕೂ ಇದಕ್ಕೂ ಅಜಗಜನ್ಯಾಯವು ಎಂಬ ಭಾವವು. ಇವೇ ಮೊದಲಾದ ಅನೇಕ ಪ್ರಮಾಣಗಳಿಂದ ಭಗವದ್ಭಕ್ತಿಯು ನಿರತಿಶಯವಾದ ಸುಖರೂಪವಾದುದೆಂಬುದು ಸಿದ್ಧವು. ಹೀಗೆ ಮಹನೀಯರ ವಿಷಯದಲ್ಲಿ ಮಾಡುವ ವಿಶೇಷ ಪ್ರೀತಿಯೇ ಭಕ್ತಿ ಶಬ್ದದಿಂದ ಹೇಳಲ್ಪಡುತ್ತದೆ. ಆದುದರಿಂದ ಪರತ್ವಾದಿ ಮಹಾ ಕಲ್ಯಾಣ ಗುಣಗಳಿಂದ ಯುಕ್ತನಾದ ಪರಮಾತ್ಮನಲ್ಲಿ ತೋರಿಸುವ ಪ್ರೀತಿಯೂ, ತನ್ಮೂಲಕ ಸದಾ ಅನುಧ್ಯಾನವೂ ಭಕ್ತಿ ಶಬ್ದದಿಂದ ಹೇಳಲ್ಪಡುತ್ತದೆಂದು ತೋರಿಸುವದಕ್ಕಾಗಿ **"ಪ್ರೀತಿರೂಪ ಮನುಧ್ಯಾನಂ"** ಎಂಬ ಪ್ರಮಾಣವನ್ನು ಉದಾಹರಿಸಿದರು.

ಮುಂಡಕವೇ ಮೊದಲಾದ ಪ್ರಮಾಣಗಳಲ್ಲಿ ಪರಮಾತ್ಮ ವರಣೀಯತೆಯೇ ಮೋಕ್ಷಹೇತುವೆಂದು ಹೇಳಲ್ಪಟ್ಟಿತು. ಪುರುಷ ಸೂಕ್ತವೇ ಮೊದಲಾದವುಗಳಲ್ಲಿ ವೇದನ ಶಬ್ದದಿಂದ ತೋರಿಬರುವ ಉಪಾಸನವೇ ಉಪಾಯವೆಂದು ಹೇಳಲ್ಪಟ್ಟಿತು. ಈಗ ಇವೆರಡು ವಿಧ ಶ್ರುತಿ ವಾಕ್ಯಗಳಿಗೂ ಏಕಕಂಠ್ಯವನ್ನುಂಟುಮಾಡಬೇಕಾದರೆ, ಭಕ್ತಿ ಶಬ್ದವು ಪ್ರೀತಿ ಪುರಸ್ಸರವಾದ ಉಪಾಸನವನ್ನೇ ಬೋಧಿಸುತ್ತದೆಂದು ಅಙ್ಗೀಕರಿಸತಕ್ಕದೆಂದು ಮುಂದಿನ ವಾಕ್ಯದಿಂದುಪದೇಶಿಸುತ್ತಾರೆ.—**ಅತಃ**-ಹೀಗೆ ಅಭಿಪ್ರಾಯವನ್ನು ಅಙ್ಗೀಕರಿಸಿದರೇನೆ ಎಂದರೆ ವೇದನ ಶಬ್ದದಿಂದ ಹೇಳಲ್ಪಟ್ಟ ಉಪಾಸನವು ಮುಕ್ತ್ಯುಪಾಯವಾದ ಪರಮಾತ್ಮನಲ್ಲಿ ತೋರುವ ನಿರತಿಶಯ ಭಕ್ತಿರೂಪವಾದುದರಿಂದ, **"ತಮೇವಂ ವಿದ್ವಾನ ಮೃತ ಇಹ ಭವತಿ। ನಾನ್ಯಃ ಪಂಥಾ ಅಯನಾಯ ವಿದ್ಯತೇ"** ಎಂಬ ಪುರುಷಸೂಕ್ತ ವಾಕ್ಯಕ್ಕೂ, **"ನಾಹಂ ವೇದೈರ್ನತಪಸಾ"** ಇತ್ಯಾದಿ ಗೀತಾವಾಕ್ಯಗಳಿಗೂ, **ಇತ್ಯನಯೋಃ** - ಹೀಗೆ ಇವೆರಡಕ್ಕೂ **ಏಕಾರ್ಥತ್ವಂ** - ಒಂದೇ ಅಭಿಪ್ರಾಯವುಳ್ಳೋಣವು ಎಂದರೆ ಪರಸ್ಪರ ಸಾಮಂಜಸ್ಯವು, **ಸಿದ್ಧಂ ಭವತಿ** - ಸಿದ್ಧವಾದುದಾಗುತ್ತದೆ; ಇಲ್ಲವಾದರೆ ಪರಸ್ಪರ ವಿರುದ್ಧಾಭಿಪ್ರಾಯಗಳುಳ್ಳವಾಗುತ್ತವೆಂಬ ಭಾವವು. ಪರಮಪುರುಷನಲ್ಲದೆ ಬೇರೆ ಸಿದ್ಧೋಪಾಯನಿಲ್ಲವೆಂದು ಹೇಳಿದುದರಿಂದ, ಆತನ ಯಥಾರ್ಥಸ್ವರೂಪದ ಜ್ಞಾನವಲ್ಲದೆ ಬೇರೆ ಜ್ಞಾನವೆಲ್ಲಾ ನಿರರ್ಥಕವೆಂಬ ಭಾವವು ಸಹ ತೋರಿಬರುತ್ತದೆ. ಈ ಅಭಿಪ್ರಾಯವೇ **ನಾನ್ಯಃಪನ್ಥಾ ವಿದ್ಯತೇ ಅಯನಾಯ** ಎಂಬುದರಿಂದ ಹೇಳಲ್ಪಟ್ಟಿತು. **"ನಾಹಂವೇದೈಃ"** ಎಂಬ ಗೀತಾ ವಾಕ್ಯಾಭಿಪ್ರಾಯವೇನೆಂದರೆ.—**ದೃಷ್ಟವಾ ನಸಿ ಮಾಂ**

(೧೨) ಗೀ. ೧೧. ೫೩.

**ಭಾ. ಪರಂತಪ' ಇತ್ಯನಯೋ ರೇಕಾರ್ಥತ್ವಂ ಸಿದ್ಧಂ ಭವತಿ । ತತ್ರ ಸಪ್ತಮೇ ತಾವದು ಪಾಸ್ಯಭೂತ ಪರಮಪುರುಷಸ್ವರೂಪ ಯಾಥಾತ್ಮ್ಯಂ, ಪ್ರಕೃತ್ಯಾ ತತ್ತಿರೋಧಾನಂ, ತನ್ನಿವೃತ್ತಯೇ ಭಗವತ್ಪ್ರಪತ್ತಿಃ, ಉಪಾಸಕ ವಿಧಾಭೇದಾ ಜ್ಞಾನಿನಶ್ಶ್ರೈಷ್ಠ್ಯಂ ಚೋಚ್ಯತೇ ||**

**ಯಥಾ**-ಈಗ ನೀನು ನನ್ನನ್ನು ಹೇಗೆ ಸಾಕ್ಷಾತ್ತಾಗಿ ನೋಡಿರುತ್ತೀಯೋ, **ಏವಂ ವಿಧಃ ಅಹಂ** - ಇಂತಹವನಾದ ನಾನು, **ದ್ರಷ್ಟುಂ**-ಸಾಕ್ಷಾತ್ಕರಿಸಲು, **ಶಕ್ಯಃ**-ಯೋಗ್ಯನಾಗಿ ಆಗುವಂತವನು, **ನ ವೇದೈಃ**-ವೇದಗಳ ಪ್ರವಚನ ಅಧ್ಯಾಪನಗಳಿಂದಲೂ ಆಗುವದಿಲ್ಲವು, **ನ ತಪಸಾ** - ತಪಸ್ಸುಗಳಿಂದಲೂ ಆಗುವದಿಲ್ಲವು, **ನ ದಾನೇನ**-ದಾನಮಾಡುವವರಿಂದಲೂ ಅಲ್ಲವು, **ನ ಚೇಜ್ಯಯಾ** - ಯಜ್ಞ ಯಾಗಾದಿಗಳಿಂದಲೂ ಅಲ್ಲವು, ಇನ್ನು ಯಾವುದರಿಂದ ತಾನು ಶಕ್ಯನೆಂದರೆ ಹೇಳುತ್ತಾರೆ. **ಹೇ ಅರ್ಜುನ**-ಓ ಅರ್ಜುನನೇ, **ಹೇ ಪರಂತಪ**-ಓ ಶತ್ರು ತಾಪಕನೇ, **ಭಕ್ತ್ಯಾತ್ವನನ್ಯಯಾ**-ಬೇರೆ ಇನ್ನೊಂದರ ಸಂಬಂಧವಿಲ್ಲದಿರುವ ಎಂದರೆ ಅವ್ಯಭಿಚರಿತ ಭಕ್ತಿಯಿಂದ ಮಾತ್ರವೇ, **ಏವಂ ವಿಧಃ ಅಹಂ** - ಇಂತಹ ದಿವ್ಯ ಮಙ್ಗಳವಿಗ್ರಹ, ಕಲ್ಯಾಣಗುಣ, ವಿಭೂತ್ಯೈಶ್ವರ್ಯ ಯುಕ್ತನಾದ ನಾನು, **ತತ್ವತಃ ಜ್ಞಾತುಂ** - ಶಾಸ್ತ್ರಜ್ಞಾನ ಮೂಲಕ ಹೇಗಿದ್ದೇನೋ ಹಾಗೆ ಯಥಾರ್ಥವಾಗಿ ತಿಳಿಯುವವಕ್ಕೂ, **ತತ್ವತಃ ದ್ರಷ್ಟುಂ**-ಹೇಗಿದ್ದೇನೋ ಹಾಗೆ ಸಾಕ್ಷಾತ್ಕರಿಸುವದಕ್ಕೂ, **ತತ್ವತಃ ಪ್ರವೇಷ್ಟುಂ ಚ** - ಅನಂತರ ಯಥಾರ್ಥವಾದ ಪರಿಪೂರ್ಣ ಬ್ರಹ್ಮಾನುಭವ ಕೈಂಕರ್ಯಗಳನ್ನು ಹೊಂದುವವಕ್ಕೂ ಸಹ, **ಶಕ್ಯಃ** - ಸಾಧ್ಯನಾಗುವೆನು" ಎಂಬುದು ತಾತ್ಪರ್ಯವು, ಕೇವಲ ಯಜ್ಞ, ದಾನ, ಹೋಮ, ಜಪ, ವೇದಾಧ್ಯಯನಾದಿಗಳೆಲ್ಲಾ ಸರ್ವೇಶ್ವರನಲ್ಲಿ ನಿಶ್ಚಲವಾದ ಭಕ್ತಿಯಿಲ್ಲದ ಪಕ್ಷದಲ್ಲಿ ನಿರರ್ಥಕವೆಂದೂ ಭಕ್ತಿಯುಕ್ತವಾದ ಧ್ಯಾನದಿಂದಲೇ ಶಾಸ್ತ್ರಜ್ಞಾನ, ಪರಮಾತ್ಮ ಸಾಕ್ಷಾತ್ಕಾರ ಮೋಕ್ಷಪ್ರಾಪ್ತಿ ಸಹ ಉಂಟಾಗುತ್ತವೆಂಬ ಭಾವವು. ಹೀಗೆ ಈ ಎರಡನೆಯ ಷಟ್ಕದಲ್ಲಿ ಹೇಳಲ್ಪಡುವದು, ಭಕ್ತಿಯೋಗವು ಎಂದರೆ ಅವ್ಯಭಿಚರಿತವಾದ ಭಕ್ತಿಯಿಂದ ಕೂಡಿದ ಸ್ಮೃತಿ ಸಂತಾನರೂಪವಾದ ಉಪಾಸನವು. ಇದೇ ಭಗವಂತನ ಪ್ರಾಪ್ತಿಗೆ ಉಚಿತವಾದ ಸಾಧ್ಯೋಪಾಯವೆಂದೂ, ಇದರಿಂದ ಪ್ರೀತನಾದ ಭಗವಂತನೇ ಸಿದ್ಧೋಪಾಯನಾಗಿ ನೆರವೇರಿಸಿಕೊಡುವನೆಂದೂ, ಈ ಮುಂದಿನ ಆರು ಅಧ್ಯಾಯಗಳಿಂದ ಹೇಳಲ್ಪಡುತ್ತವೆಂದು ತಿಳಿಸಿರುತ್ತಾರೆ. ಈ ಮಧ್ಯಮ ಷಟ್ಕದಲ್ಲಿ ಉಪಪಾದಿತವೆಂದು ಹಿಂದೆ ಹೇಳಲ್ಪಟ್ಟ ನಾಲ್ಕು ಪ್ರತಿಜ್ಞಾ ವಾಕ್ಯಗಳಲ್ಲಿ ಎರಡು ಹೀಗೆ ಕಂಠೋಕ್ತವಾಗಿ ಉಪಾಪಾದಿತವು. ಮಿಕ್ಕ ಎರಡು ಪ್ರತಿಜ್ಞೆಗಳೂ ಅರ್ಥತಃ ಸ್ಥಾಪಿತವು. ಹೇಗೆಂದರೆ ವೇದನವೆಂದರೆ ಉಪಾಸನವಲ್ಲದೆ ಬೇರೇ ಮಾರ್ಗವಿಲ್ಲವೆಂದು ನಿಷೇಧಿಸಿರುವದರಿಂದ, ಕರ್ಮ ಸಮುಚ್ಚಯವೂ ಆವಶ್ಯಕವೆಂಬ ಯಾದವಪ್ರಕಾಶಮತವು ಸರಿಯಲ್ಲವು ಎಂದು ಹೇಳಿದಂತಾಯಿತು. ಮುಂದಿನ ವಾಕ್ಯದಲ್ಲಿ ಈ ಏಳನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆಂಬುದನ್ನು ಸೂಚಿಸುತ್ತಾರೆ. **ತತ್ರ ಸಪ್ತಮೇತಾವತ್**-ಆ ಮಧ್ಯಮ ಷಟ್ಕದಲ್ಲಿರುವ ಏಳನೆಯ ಅಧ್ಯಾಯದಲ್ಲಾದರೋ, (೧) **ಉಪಾಸ್ಯಭೂತನಾದ ಪರಮಪುರುಷನ ಸ್ವರೂಪದ ಯಾಥಾತ್ಮ್ಯವೂ,** (೨) **ಪ್ರಕೃತ್ಯಾ ತತ್ತಿರೋಧಾನಮ್**-ಈ ಜೀವಾತ್ಮನಿಗಿರುವ ಪ್ರಕೃತಿ ಸಂಬಂಧದಿಂದ ಆ ಭಗವತ್ಸ್ವರೂಪದ ಯಾಥಾತ್ಮ್ಯವು ತಿಳಿಯದೆ ಮರೆಸಿ ಹೋಗಿರೋಣವೂ ; (೩) **ತನ್ನಿ ವೃತ್ತಯೇ** - ಆ ಯಾಥಾತ್ಮ್ಯ ತಿರೋಧಾನವು ನಿವೃತ್ತಿಸಿ ಹೋಗುವವಕ್ಕಾಗಿ, **ಭಗವತ್ಪ್ರಪತ್ತಿಃ** - ಭಗವಂತನಲ್ಲಿ ಅಙ್ಗರೂಪ ಶರಣಾಗತಿಯೂ, ಇದರಿಂದ ಭಗವತ್ಸ್ವರೂಪ ತಿರೋಧಾನಕ್ಕೆ ಕಾರಣಭೂತವಾದ ಪಾಪಗಳ ನಿವೃತ್ತಿಯುಂಟಾಗುತ್ತದೆಂಬ ಭಾವವು. ಇಲ್ಲಿ ಹೇಳಿರುವ ಪ್ರಪತ್ತಿಯು ಸ್ವತಂತ್ರ ಪ್ರವೃತ್ತಿ

ಯಲ್ಲವೆಂಬುದು ಇದರಿಂದ ವ್ಯಕ್ತವು. (೪) **ಉಪಾಸಕ ವಿಧಾಭೇದಾಃ** - ಉಪಾಸಕರ ವಿಧ ವಲ್ಲಿರುವ ನಾಲ್ಕು ಭೇದವೂ ; (೫) **ಜ್ಞಾನಿನಶ್ಶ್ರೈಷ್ಠ್ಯಂ ಚ** - ಭಗವತ್ಸ್ವರೂಪ ಯಾಥಾ ಥ್ಯಾದಿಗಳನ್ನು ತಿಳಿದು ಮೋಕ್ಷಾರ್ಥಿಗಳಾಗಿ ಭಗವದುಪಾಸಕರಾದ ಜ್ಞಾನಿಗಳ ಸರ್ವೋತ್ಕೃಷ್ಟ ತೆಯೂ ಸಹ, **ಉಚ್ಯತೇ**-ಹೇಳಲ್ಪಡುತ್ತವೆ. ಈ ಐದು ವಿಷಯಗಳೂ ಈ ಏಳನೆಯ ಅಧ್ಯಾಯ ದಲ್ಲಿ ಹೇಳಲ್ಪಡುತ್ತವೆಂಬ ಭಾವವು ಎಂದು ಇದರಿಂದ ಹೇಳಿದಂತಾಯಿತು. ಆದರೆ ಆರು ಅಧ್ಯಾಯಗಳಿಂದಲೂ ಕರ್ಮಯೋಗವೇ ಮುಖ್ಯವಾಗಿ ಕೊಂಡಾಡಲ್ಪಟ್ಟಿತಲ್ಲಾ ಎಂದರೆ ಹೌದು; ಮುಖ್ಯವೇ, ಆದರೆ ಅಙ್ಗತ್ವೇನ ಮುಖ್ಯವು ; ಅಙ್ಗಿಯಾಗಿ ಮುಖ್ಯವಲ್ಲವು. ಹಾಗಾದರೆ ಕರ್ಮ ಯೋಗವು ಆವಶ್ಯಕವೇ ಎಂಬ ಚರ್ಚೆಯಲ್ಲಿ ವೇದನ ಸಾಧನವಾಗಿ ಅದು ಬೇಕೆಂದು ಶ್ರೀ ಯತಿ ವರ್ಯರು ಪ್ರಥಮಸೂತ್ರದ ಶ್ರೀ ಭಾಷ್ಯದಲ್ಲಿ "**ಸರ್ವಾಸೂಪನಿಷತ್ಸು ಮೋಕ್ಷಸಾಧನತಯಾ ವಿಹಿತಂ ವೇದನ ಮುಪಾಸನಮಿತ್ಯುಕ್ತಂ** ಎಂದೂ ಹೇಳಿ, "**ಧ್ರುವಾನುಸ್ಮೃತಿರೇವಭಕ್ತಿ ಶಬ್ದೇನಾಭಿಧೀಯತೇ ಉಪಾಸನಾ ಪರ್ಯಾಯಾದ್ಭಕ್ತಿಶಬ್ದಸ್ಯ**" ಎಂದೂ ಹೇಳಿ "**ಏವಂ ರೂಪಾಯಾ ಧ್ರುವಾನುಸ್ಮೃತೇ ಸ್ಸಾಧನಾನಿ ಯಜ್ಞಾದೀನಿ ಕರ್ಮಾಣಿ**" ಎಂದು ಉಪದೇಶಿ ಸಿರುವದರಿಂದ ಕರ್ಮವು ಭಕ್ತಿಗೆ ಅಙ್ಗವು. ಈ ಅಭಿಪ್ರಾಯವೇ "**ಸರ್ವಾಪೇಕ್ಷಾ ಚ ಯಜ್ಞಾದಿ ಶ್ರುತೇರಶ್ವವತ್**" ಎಂಬ (ಶಾರೀ. ೩. ೪. ೨೬) "**ಸಹಕಾರಿತ್ವೇ ನ ಚ**" (ಶಾರೀ. ೩. ೪. ೩೩) ಎಂಬ ಸೂತ್ರಗಳಲ್ಲೂ ಉಪಪಾದಿತವು. ನಾಲ್ಕನೆಯ ಪ್ರತಿಜ್ಞೆಯ ಪ್ರಕಾರ ಉಪಾಸ್ಯನು ಪರಮ ಪುರುಷನಾಗಿಯೇ ಇರಬೇಕೇ ವಿನಾ ಅನ್ಯ ದೇವತೆಯಾಗಿರಕೂಡದು. ಆದರೆ ಅಥರ್ವ ಶಿರಸ್ಸು ಪ್ರತರ್ದನಾದಿ ವಿದ್ಯೆಗಳಲ್ಲಿ ಅನ್ಯದೇವತೋಪಾಸನವು ಹೇಳಲ್ಪಟ್ಟು ಬ್ರಹ್ಮವಿದ್ಯೆಗಳಲ್ಲಿ ಸೇರಿಸಲ್ಪಟ್ಟಿವೆಯಲ್ಲಾ ಎಂದರೆ ರುದ್ರೇಂದ್ರಾದಿಗಳಿಗೆ ಅಂತರ್ಯಾಮಿಯಾದ ನಾರಾಯಣನೇ ಅಲ್ಲಿಯೂ ಉಪಾಸ್ಯನೆಂದು ಭಾವಿಸತಕ್ಕದ್ದು. ಅಲ್ಲಿ ಪರಬ್ರಹ್ಮವನ್ನು ಕುರಿತು ಹೇಳುವಾಗ **ಶಿವ ಶಂಭು** ಇತ್ಯಾದಿ ಶಬ್ದಗಳೂ ಸಹ ಹೇಳಲ್ಪಟ್ಟಿವೆಯಲ್ಲಾ ಎಂದರೆ ವ್ಯುತ್ಪತ್ತಿ ಮೂಲಕ ಪರಿಶುದ್ಧನೆಂದೂ, ಸುಖವನ್ನುಂಟುಮಾಡುವನೂ ಎಂದು ಅರ್ಥಮಾಡಿ ವೇದದಲ್ಲಿ ಹೇಳಲ್ಪ ಟ್ಟಿರುವ ಇಂತಹ ಶಬ್ದಗಳೆಲ್ಲಾ ಶ್ರೀಮನ್ನಾರಾಯಣನನ್ನೇ ಬೋಧಿಸುತ್ತವೆ ಎಂದು ಪುರುಷ ಸೂಕ್ತದಲ್ಲಿ ಹೇಳಿರುತ್ತದೆ. ಉಪಾಸ್ಯನಾದ ಪರಮಪುರುಷನು ಯಾರು ಎಂಬ ವಿಷಯದಲ್ಲಿ "**ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ**" ಎಂಬುದರಿಂದ ಲಕ್ಷ್ಮೀಪತಿ ಎಂದು ಹೇಳಿ "**ಸಹಸ್ರ ಶೀರ್ಷಂ**" ಎಂದಾರಂಭಿಸಿ ಶಿವ, ಶಂಭು, ಅಚ್ಯುತ, ಅಕ್ಷರ ಮೊದಲಾದ ಶಬ್ದಗಳೆಲ್ಲಾ ಶ್ರೀಮನ್ನಾರಾಯಣನನ್ನೇ ಹೇಳುತ್ತವೆ ಎಂದು ಬೋಧಿಸಿ "**ಯಚ್ಚ ಕಿಂಚಿ**"ತ್ತೆಂಬ ವಾಕ್ಯದ ಮೂಲಕ **ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯಾನಾರಾಯಣಸ್ಥಿತಃ**-ಎಂದು ಮುಗಿಸಿರುವದರಿಂದ, ಶ್ರೀಮನ್ನಾರಾಯಣನೇ ಉಪಾಸ್ಯನೇ ವಿನಾ ಅನ್ಯದೇವತೆಯಲ್ಲವು, ಆದುದರಿಂದ **ಶಿವ, ಶಂಭು, ಇಂದ್ರ** ಮೊದಲಾದ ಶಬ್ದಗಳೂ ಕೂಡ, "**ಸಾಕ್ಷಾದಪ್ಯವಿರೋಧಂ ಜೈಮಿನಿ**" ಎಂಬ ಬ್ರಹ್ಮಸೂತ್ರದ ಪ್ರಕಾರ ನಾರಾಯಣನನ್ನೇ ಬೋಧಿಸುತ್ತವೆಂದು ಭಾವಿಸತಕ್ಕದ್ದು. ಆದುದರಿಂದ ಪರಮಾತ್ಮನೇ ಉಪಾಸ್ಯನು, ಅನ್ಯದೇವತೆಗಳಲ್ಲವೆಂಬುದೂ ಅರ್ಥಾತ್ ಸಂಗತವು.

**ಅವತಾರಿಕೆಯು**—ಲಕ್ಷ್ಮೀಯುಕ್ತನಾದ ಭಗವಾನ್ ಉಪದೇಶಿಸುತ್ತಾರೆ.—ಹಿಂದಿನ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಇದುವರೆಗೂ ಹೇಳಿದ ಅಙ್ಗವಾಗಿರುವ ಪ್ರಶಸ್ತವಾದ ಜೀವಾತ್ಮಯೋಗಕ್ಕಿಂತಲೂ ಅಙ್ಗಿರೂಪದಲ್ಲಿ ಮುಂದೆ ವಿಸ್ತರಿಸುವ ಭಗವದುಪಾಸನವಾದ ಭಕ್ತಿಯೋಗವು ಸರ್ವೋತ್ಕೃಷ್ಟವಾದುದೆಂದು, **ಶ್ರದ್ಧಾವಾನ್ಭಜತೇ ಯೋಮಾಂ ಸಮೇ ಯುಕ್ತ ತಮೋ ಮತಃ**" (ಗೀ ೬. ೪೭) ಎಂಬುದರಿಂದ ತಿಳಿಸಿದರು. "**ಮಾಂ**" ಎಂಬ

**ಶ್ರೀ ಭಗವಾನುವಾಚ—**

**ಮೂ. ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥** ೧.

ಶಬ್ದದಿಂದ ಹೇಳಲ್ಪಟ್ಟ ಸರ್ವೇಶ್ವರನಾದ ತನ್ನ ಯಥಾರ್ಥವಾದ ಸ್ವರೂಪವೆಂತಾದ್ದೆಂದು ಹೇಳಲುಪಕ್ರಮಿಸುತ್ತಾರೆ.

**ಮೂಲಕ್ಕೆ ಅರ್ಥವು—ಹೇಪಾರ್ಥ** - ಓ ಕುಂತೀಪುತ್ರನಾದ ಅರ್ಜುನನೇ, **ಮಯಿ**-ಮೇಲೆ ಅವತಾರಿಕೆಯಲ್ಲಿ ಉಪಪಾದಿಸಲ್ಪಟ್ಟ ಸ್ವರೂಪ ರೂಪಗುಣ ವಿಭವೈಶ್ವರ್ಯಾದಿಗಳಿಂದ ಯುಕ್ತನಾಗಿ ಚೇತನರ ರಕ್ಷಣೆಯಲ್ಲಿ ಅವಸರ ಪ್ರತೀಕ್ಷೆಯನ್ನು ಮಾಡಿಕೊಂಡಿರುವ ನನ್ನಲ್ಲಿ, **ಆಸಕ್ತಮನಾಃ**-ನನ್ನನ್ನಗಲಿ ತನಗೆ ಒಂದು ಕ್ಷಣವಾದರೂ ಇರಲು ಸಾಧ್ಯವಿಲ್ಲವೆಂದು ತಿಳಿದು ನನ್ನಲ್ಲೇ ಸಂಬಂಧಿಸಿಕೊಂಡಿರುವ ಮನಸ್ಸುಳ್ಳವನಾಗಿ, ಹಾಗೆ ನನ್ನಲ್ಲಿ ಮನಸ್ಸು ಸಕ್ತವಾಗಿದ್ದರೇನೇ, **ಯೋಗಂ ಯುಂಜನ್**-ನನ್ನನ್ನೇ ಉಪಾಸನಮಾಡುವನಾಗಿಯೂ, ಈ ಭಕ್ತಿಯೋಗವನ್ನು ಯುಂಜನ್ ಎಂದು ಹೇಳಲ್ಪಟ್ಟಿತಲ್ಲಾ, ಹೇಗೆ ಯೋಗವನ್ನು ಅನುಷ್ಠಿಸತಕ್ಕದ್ದು ಎಂದರೆ, ಪ್ರತ್ಯಗಾತ್ಮ ಯೋಗವನ್ನು ಅನುಷ್ಠಿಸುವ ಕ್ರಮವನ್ನು, ಈಗತಾನೇ ಆರನೆಯ ಅಧ್ಯಾಯದಲ್ಲಿ ಹೇಳಲಿಲ್ಲವೇ, ಅದೇ ಪ್ರಕಾರವಾಗಿಯೇ ಅತಿದೇಶಮಾಡಿ ಸ್ಥಳ, ಆಸನ ಪ್ರಾಣಾಯಾಮಾದಿ ನಿಯಮಗಳನ್ನನುಸರಿಸಿ ನನ್ನ ಯೋಗವನ್ನು ಕೈಕೊಂಡವನಾಗಿ ಎಂಬ ಭಾವವು, **ಮದಾಶ್ರಯಃ**-ನನ್ನನ್ನೇ ಆಶ್ರಯವಾಗಿ ಉಳ್ಳವನಾಗಿ **ಮಾಂ** - ದಿವ್ಯಮಙ್ಗಳ ವಿಗ್ರಹಯುಕ್ತನಾಗಿ ಉಪಾಸ್ಯನಾಗಿರುವ ನನ್ನನ್ನು, **ಅಸಂಶಯಂ** - ಅನ್ಯಥಾ ಜ್ಞಾನ, ವಿಪರೀತ ಜ್ಞಾನಾದಿಗಳೊಂದೂ ಇಲ್ಲದೆ ನಿಸ್ಸಂಶಯವಾಗಿಯೂ, **ಸಮಗ್ರಂ** - ರೂಪ ಗುಣ ವಿಭವೈಶ್ವರ್ಯಾದಿಗಳಿಂದಲೂ ಪರಿಪೂರ್ಣನಾಗಿರುವ ಹಾಗೂ, ಇವೆರಡೂ ಕ್ರಿಯಾವಿಶೇಷಣಗಳು, **ಯಥಾಜ್ಞಾಸ್ಯಸಿ** - ಯಾವ ನಾನು ಉಪದೇಶಿಸುವದರ ಜ್ಞಾನದಿಂದ ತಿಳಿಯುತ್ತೀಯೋ **ತತ್** - ಅಂತಹ ಉಪದೇಶವನ್ನು **ಶೃಣು** - ಕೇಳು. ಕೇಳುತ್ತಾ ಇರುವವನನ್ನೇ ಕೇಳು ಎಂದು ಹೇಳುವದರಭಿಪ್ರಾಯವು, ಇದು ಪರಮೋಪದೇಶವಾದುದರಿಂದ ಚನ್ನಾಗಿ ಗಮನಕೊಟ್ಟು ಸಾವಧಾನದಿಂದ ಕೇಳು ಎಂಬ ಭಾವವು. ನಾನು ಉಪದೇಶಿಸುವದರಲ್ಲಿ ಆದರಾತಿಶಯವನ್ನು ತೋರು. ಏಕೆಂದರೆ ಉಪದೇಶವು ಪರಮ ಶ್ರೇಯಸ್ಸನ್ನು ನಿನಗೆ ಉಂಟುಮಾಡುತ್ತದೆಯಾದುದರಿಂದ ಎಂಬ ಭಾವವು. ನನ್ನಲ್ಲಿ ಮನಸ್ಸು ಸಕ್ತವಾದರೇನೆ ನನ್ನ ಕೃಪೆಯಿಂದ ಭಕ್ತಿಯೋಗಾರಂಭವೂ, ನಿರ್ವಿಘ್ನವಾಗಿ ಯೋಗನಿಷ್ಪತ್ತಿಯೂ ಸಹ ಉಂಟಾಗುತ್ತವೆಂಬ ಭಾವವೂ ತೋರಿಬರುತ್ತವೆ. ಮನಸ್ಸು ಹೇಗೆ ಸಕ್ತವಾಗಿರಬೇಕೆಂದರೆ, ಆತನಿಂದಲೇ ತನಗೆ ಸತ್ತೆಯು, ಆತನೇ ತನಗೆ ಆಧಾರನು, ಆತನ ಸಂಬಂಧವಿಲ್ಲದಿದ್ದರೆ ತನಗೆ ಸ್ವರೂಪವೇ ಇಲ್ಲವೆಂಬ ಭಾವ ಉಂಟಾಗುವ ಹಾಗೆ ಮನಸ್ಸು ಸಕ್ತವಾಗಿರಬೇಕು. ಈ ಸಂದರ್ಭದಲ್ಲಿ,

**"ನ ಚ ಸೀತಾತ್ವಯಾ ಹೀನಾ ನ ಚಾಹ ಮಪಿರಾಘವ ।**
**ಮುಹೂರ್ತ ಮಪಿ ಜೀವಾವೋ ಮತ್ಸ್ಯಾವಿವ ಜಲಾದ್ಧೃತಾ ॥**

ಎಂಬ ಲಕ್ಷ್ಮಣ ವಾಕ್ಯವು ಅನುಸಂಧೇಯವು. ಈಶ್ವರ ಕೋಟಿಯಲ್ಲಿದ್ದು ದಾಸಭೂತಳಾಗಿರುವ ಶ್ರೀಮಹಾಲಕ್ಷ್ಮಿಯೇ ಯಾಗಲಿ ಅಥವಾ ಜೀವ-ಕೋಟಿಯಲ್ಲಿ ನಿತ್ಯಸೂರಿವರ್ಗಕ್ಕೆ ಸೇರಿದ ಲಕ್ಷ್ಮಣನಾದ ತಾನೇಯಾಗಲಿ ಸರ್ವೇಶ್ವರನ ವಿಶ್ಲೇಷೆಯನ್ನು ಒಂದು ಕ್ಷಣವಾಗಲಿ ಮತ್ಸ್ಯಗಳು ನೀರಿನ ವಿಶ್ಲೇಷೆಯನ್ನು ಹೇಗೆ ಸಹಿಸಲಾರವೋ ಹಾಗೆ ಸಹಿಸಲಾರವೆಂಬುದು **ಮದಾಶ್ರಯಃ** ಎಂಬುದರ ತಾತ್ಪರ್ಯವು. ಲಕ್ಷ್ಮಣನೂ ಕೂಡ ಭಗವದಂಶನೆಂಬುವ ಮಹರ್ಷಿಯ ಉಕ್ತಿ

**ಭಾ. ಮಯ್ಯಾಭಿ ಮುಖ್ಯೇನ ಸಕ್ತಮನಾಃ-ಮತ್ಪ್ರಿಯತ್ವಾತಿರೇಕೇಣ ಮತ್ಸ್ವರೂಪೇಣ ಗುಣೈಶ್ಚ ಚೇಷ್ಟಿತೇನ ಮದ್ವಿಭೂತ್ಯಾ ವಿಶ್ಲೇಷೇಸತಿ, ತತ್ಕ್ಷಣಾದೇವ ವಿಶೀರ್ಯಮಾಣ ಸ್ವಭಾವತಯಾ ಮಯಿ ಸುಗಾಢಂ ಬದ್ಧಮನಾಃ, ಮದಾಶ್ರಯಃ-ತಥಾ ಸ್ವಯಂಚ ಮಯಾವಿನಾ ವಿಶೀರ್ಯಮಾಣತಯಾ ಮದಾಶ್ರಯೋ-ಮದೇಕಾಧಾರಃ, ಮದ್ಯೋಗಂ ಯುಂಜನ್ - ಯೋಕ್ತುಮ್ ಪ್ರವೃತ್ತೋ, ಯೋಗವಿಷಯಭೂತಂ ಮಾಂ**

ಇದ್ದರೂ, "**ಅಹಂ ಸರ್ವಂ ಕರಿಷ್ಯಾಮಿ**" ಇತ್ಯಾದಿ ಲಕ್ಷ್ಮಣೋಕ್ತಿಗಳ ಮೂಲಕ ನಿತ್ಯರಲ್ಲಿ ಸೇರಿದ ಆದಿಶೇಷನೆಂಬ ಭಾವನೆಯು ಸಂಪ್ರದಾಯೋಕ್ತಿಗಳಿಂದ ತೋರಿಬರುತ್ತದೆ. ಅದೂ ಅಲ್ಲದೆ **ಮದಾಶ್ರಯಃ** ಎಂದು ಹೇಳಿರುವದರಿಂದ ಮೋಕ್ಷಸಿದ್ಧಿಗೆ ಅನ್ಯದೇವತಾ ಭಜನವು ಕಾರ್ಯಕಾರಿಯಲ್ಲವೆಂಬುದೂ ಸ್ಥಾಪಿತವು; "**ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಸ್ಸ್ಮೃತಾಃ। ಪ್ರತಿಬುಧ್ದಾನ ಸೇವಂತೇ ಯಸ್ಮಾತ್ಪರಿಮಿತಂ ಫಲಮ್** ॥" ಎಂಬ ವ್ಯಾಸೋಕ್ತಿಯು ಅನುಸಂಧೇಯವು. ಇಲ್ಲಿ ಪ್ರತಿಬುದ್ಧನು ಯಾರು ಎಂದರೆ "**ಪ್ರತಿಬುದ್ಧಸ್ತು ಮೋಕ್ಷಭಾಕ್**" ಎಂಬ ಪ್ರಮಾಣಾನುಸಾರ ಮೋಕ್ಷಾರ್ಥಿಯು. ಇತರರು ಬೇಕಾದರೆ ಅವರನ್ನು ಭಜಿಸಲಿ. ಮೋಕ್ಷಾರ್ಥಿಯು ಅವರನ್ನು ಭಜಿಸಿ ಫಲವಿಲ್ಲವು. ಏಕೆಂದರೆ ಅವರಿಗೆ ಮೋಕ್ಷವನ್ನು ಕೊಡುವ ಶಕ್ತಿಯಿಲ್ಲವಾದುದರಿಂದ. **ಜ್ಞಾಸ್ಯಸಿ** - ಎಂದು ಹೇಳಿರುವದರಿಂದ ಭಕ್ತಿಯೋಗವು ಜ್ಞಾನರೂಪವಾದುದೆಂಬುದನ್ನು ಗ್ರಹಿಸತಕ್ಕದ್ದು. "**ಇದಂ ಜ್ಞಾನಮುಪಾಶ್ರಿತ್ಯ ಮಮಸಾಧರ್ಮ್ಯ ಮಾಗತಾಃ**" ಎಂಬ (ಗೀ. ೧೪) ಶ್ಲೋಕವು ಇಲ್ಲ ಅನುಸಂಧೇಯವು. **ಅಸಂಶಯಂ ಸಮಗ್ರಂ ಯಥಾಜ್ಞಾಸ್ಯಸಿ** ಎಂದು ಹೇಳಿರುವದು ನಿರ್ಗುಣವಾದಕ್ಕೆ ಅನುಕೂಲವಿಲ್ಲವು. ಜ್ಞೇಯವೇ ಇಲ್ಲವು, ಪರಬ್ರಹ್ಮವು ಜ್ಞಾನಮಾತ್ರವೇ ಎಂಬ ವಾದಕ್ಕೂ ಅನುಕೂಲವಿಲ್ಲವು.

**ಭಾಷ್ಯಾರ್ಥವು:—** ಹಿಂದಿನ ಅಧ್ಯಾಯಾಂತ್ಯ ಶ್ಲೋಕದಲ್ಲಿ "**ಮಾಂ**" ಎಂಬ ಶಬ್ದದಿಂದ ಪ್ರಸ್ತುತವಾದ ಭಗವಂತನಾದ ತನ್ನ ಉಪಾಸನವೇ ಸರ್ವಶ್ರೇಷ್ಠವಾದುದರಿಂದ ತನ್ನ ಯಾಥಾತ್ಮ್ಯಸ್ವರೂಪವನ್ನು ಹೇಳಲುಪಕ್ರಮಿಸಿ, ಎಂತಹ ಜ್ಞಾನದಿಂದ ತನ್ನನ್ನು ಯಥಾರ್ಥವಾಗಿ ತಿಳಿಯಬಹುದೋ, ಅಂತಹ ಜ್ಞಾನವನ್ನುಪದೇಶಿಸುವೆನು, ಸಾವಧಾನದಿಂದ ಕೇಳು ಎಂದು **ಶ್ರೀ ಭಗವಾನುವಾಚ**-ಶ್ರೀ ಕೃಷ್ಣಭಗವಾನರವರು ಹೇಳುತ್ತಾರೆ. ಮೊದಲು **ಮಯಿ ಆಸಕ್ತಮನಾಃ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ. ನನ್ನಲ್ಲಿ **ಆ** ಎಂದರೆ, **ಅಭಿಮುಖ್ಯೇನ** - ಅಭಿಮುಖ್ಯವಾಗಿರುವದರ ಮೂಲಕ, **ಸಕ್ತಮನಾಃ** - ನನ್ನಲ್ಲೇ ಸಂಬದ್ಧವಾದ ಮನಸ್ಸುಳ್ಳವನಾದ, ಎಂದರೆ, **ಮತ್ಪ್ರಿಯತ್ವಾತಿರೇಕೇಣ** - ನನಗೆ ತುಂಬಾ ಪ್ರಿಯನಾಗಿರುವದರ ಆಧಿಕ್ಯದಿಂದಲೂ, **ಮತ್ಸ್ವರೂಪೇಣ** - ನನ್ನ ಸ್ವರೂಪದಿಂದಲೂ, **ಗುಣೈಶ್ಚ** - ನನ್ನ ಕಲ್ಯಾಣ ಗುಣಗಳಿಂದಲೂ, **ಚೇಷ್ಟಿತೇನ**-ನನ್ನ ದಿವ್ಯ ಚೇಷ್ಟಿತಗಳಿಂದಲೂ, ಮತ್ತು **ಮದ್ವಿಭೂತ್ಯಾ** - ನನ್ನ ನಿಯಾಮ್ಯ ವರ್ಗದಿಂದಲೂ, ಇದರಿಂದ ಈ ಲೋಕದ ನಿಯಾಮ್ಯ ವರ್ಗ ಮಾತ್ರವೇ ಹೇಳಲ್ಪಡಲಿಲ್ಲವು, ಈತನು ಮುಂದೆ ಅನುಭವಿಸುವ ನಿತ್ಯವಿಭೂತಿಯಾದ ಪರಮಪದದಲ್ಲಿರುವ ನಿತ್ಯಮುಕ್ತಾದಿ ಪರಿಜನಾದಿಗಳೂ ಸೂಚಿತವು; ಏಕೆಂದರೆ ಅಲ್ಲೀಗ ವಿಶ್ಲೇಷಕ್ಕೆ ಕಾರಣವಿಲ್ಲವು. **ವಿಶ್ಲೇಷೇಸತಿ**-ಮನಸ್ಸಿಗೆ ವಿಚ್ಛೇದ ಉಂಟಾಗಲಾಗಿ, **ತತ್ಕ್ಷಣಾದೇವ ವಿಶೀರ್ಯಮಾಣ ಸ್ವಭಾವತಯಾ** - ಒಡನೆಯೇ ತಾನು ನಷ್ಟನಾದೆನೆಂದು ತಿಳಿದುಕೊಳ್ಳುವ ಸ್ವಭಾವವುಳ್ಳವನಾದುದರಿಂದ, ಅಂತಹ ದುಸ್ಥಿತಿಯಲ್ಲಿ ತನಗೆ ಏನೊಂದು ಮಾಡಲು ಉತ್ಸಾಹಶೂನ್ಯನಾಗಿ ತನಗೆ ತುಂಬಾ ದುರ್ಗತಿ ಪ್ರಾಪ್ತವಾದಹಾಗೆ ಭಾವಿಸುವನೆಂಬ ಭಾವವು; **ಮಯಿ ಸುಗಾಢಂ ಬದ್ಧಮನಾಃ**-ನನ್ನಲ್ಲೇ ತುಂಬಾ ಸ್ಥಿರನಾಗಿ ಬಂಧಿಸಲ್ಪಟ್ಟ ಮನಸ್ಸನ್ನುಳ್ಳವನಾಗಿ; **ಪ್ರಿಯೋಹಿ**

**ಭಾ. ಅಸಂಶಯಂ - ನಿಸ್ಸಂಶಯಂ, ಸಮಗ್ರಂ - ಸಕಲಂ, ಯಥಾಜ್ಞಾಸ್ಯಸಿ - ಯೇನ ಜ್ಞಾನೇನೋಕ್ತೇನ ಜಾಸ್ಯಸಿ, ತಜ್ಜ್ಞಾನ ಮವಹಿತ ಮನಾಃಶೃಣು ||೧||**

**ಜ್ಞಾನಿನೋಽತ್ಯರ್ಥಂ ಅಹಂ** (ಗೀ. ೭. ೧೮) ಎಂದು ಮುಂದೆ ಹೇಳುವ ಹಾಗೆ, ಆತನು ನಾನೇ ಪರಮ ಪ್ರಿಯನು ಎಂದು ಭಾವಿಸುವವನು, ನನ್ನ ಸ್ವರೂಪವನ್ನೇ ಚಿಂತಿಸುವನು, ನನ್ನ ಕಲ್ಯಾಣಗುಣಗಳನ್ನೇ ಕೊಂಡಾಡುವನು, ನನ್ನ ದಿವ್ಯ ಚೇಷ್ಟಿತಗಳನ್ನು ಕೇಳಿ ಸಂತೋಷಿಸುವನು, ನನ್ನ ನಿಯಾಮ್ಯ ವರ್ಗವನ್ನು ಕಂಡು ಆಶ್ಚರ್ಯಪಡುವನು, ಹೀಗೆ ಮನಸ್ಸು ಯಾವಾಗಲೂ ಇವುಗಳೊಂದಿಗೇನೆ ಸಕ್ತವಾಗಿರುವದು, ಇವಕ್ಕೇನಾದರೂ ಚ್ಯುತಿಯುಂಟಾದರೆ ತಾನು ಆಗಲೇ ನಷ್ಟನಾದವನೆಂದು ಭಾವಿಸುವನು ; ಶ್ರೀಮದಾಳ್ವಾರರು ಇಂತಹ ಭೋಗವಿಲ್ಲದಿರುವ ದಿವಸವು, **ಪಟ್ಟಿನಿ ನಾಳೀ**-ಎಂದರೆ ಊಟವಿಲ್ಲದ ದಿವಸವೇ ಎಂದು ಹೇಳಿಕೊಂಡಿರುತ್ತಾರೆ; ಹೀಗೆ ಆತನ ಮನಸ್ಸು ನನ್ನಲ್ಲಿ ಯಾವಾಗಲೂ ಬಂದಿಸಲ್ಪಟ್ಟಿರುತ್ತದೆಂಬ ಭಾವವು. **ಮದಾಶ್ರಯಃ**-ನನ್ನನೇ ಆಶ್ರಯವಾಗಿವುಳ್ಳವನಾಗಿ ಎಂದರೆ, **ತಥಾ ಸ್ವಯಂಚ**-ಹಾಗೆಯೇ ತಾನೂ ಸಹ, **ಮಯಾ ವಿನಾ ವಿಶೀರ್ಯಮಾಣತಯಾ**-ನಾನು ಇಲ್ಲದಿದ್ದರೆ ನಷ್ಟವಾಗಿಹೋಗುವುದರಿಂದ, ಮದಾಶ್ರಯನೆಂದರೆ, **ಮದೇಕಾಧಾರಃ**-ನನ್ನೊಬ್ಬನನ್ನೇ ಆಧಾರವಾಗಿ ಉಳ್ಳವನಾಗಿ, **ಮದಾಶ್ರಯಃ** ಎಂಬುವದಕ್ಕೆ **ಮದೇಕಾಧಾರಃ** ಎಂದು ಮೂಲದಲ್ಲಿಲ್ಲದ ಏಕಶಬ್ದ ಪ್ರಯೋಗದ ಮೂಲಕ ಅವಧಾರಣಾರ್ಥವು ಹೇಗೆ ಎಂದರೆ **ಅಬ್ಭಕ್ಷಃ** ನೀರನ್ನು ಸೇವಿಸುವನು ಎಂದರೆ ನೀರನ್ನು ಮಾತ್ರವೇ ಸೇವಿಸುವವನು, ಇತರಾಹಾರವಿಲ್ಲದವನೆಂದು ಹೇಗೆ ಅರ್ಥಹೇಳಬೇಕೋ ಹಾಗೆಂದು ಭಾವಿಸತಕ್ಕದ್ದು; ಇದರಿಂದ **ಮದಾಶ್ರಯಃ** ಎಂಬುದರಿಂದ ಆತನನುಭವವೇ ಮುಖ್ಯವಾದ ಆಶ್ರಯವಾಗಿವುಳ್ಳವನೆಂಬ ಭಾವವು ತೋರಿಬರುತ್ತದೆ; **ಮದ್ಯೋಗಂ**-ನನ್ನನ್ನುಕುರಿತುಉಪಾಸನೆಯನ್ನು, **ಯುಂಜನ್**-ಎಂದರೆ **ಯೋಕ್ತುಂ ಪ್ರವೃತ್ತಃ**-ಅದಕ್ಕೆ ಉಪಕಾರಕಗಳಾದ ಭಜನೀಯ ವಿಷಯತತ್ತ್ವಜ್ಞಾನದಲ್ಲಿ ಪ್ರವರ್ತಿಸಿದವನಾಗಿ, **ಯೋಗವಿಷಯಭೂತಂ ಮಾಂ**-ಆ ಉಪಾಸನೆಗೆ ವಿಷಯಭೂತನಾದ ಎಂದರೆ ಉಪಾಸ್ಯನಾದ ನನ್ನನ್ನು, **ಅಸಂಶಯಂ** ಎಂದರೆ **ನಿಸ್ಸಂಶಯಂ**-ಯಾವ ಸಂದೇಹವೂ ಇಲ್ಲದಿರೋಣ ಹೇಗೋ ಹಾಗೆ, ವಿಶೇಷಣವಿದ್ದರಲ್ಲವೆ ಸಂಶಯವೂ, ತನ್ನಿವೃತ್ತಿಯೂ; **ಸಮಗ್ರಂ** ಎಂದರೆ **ಸಕಲಂ**-ಸಂಪೂರ್ಣವಾಗಿ, **ಯಥಾಜ್ಞಾಸ್ಯಸಿ** ಎಂದರೆ, **ಯೇನ ಜ್ಞಾನೇನೋಕ್ತೇನ ಜ್ಞಾಸ್ಯಸಿ**-ಯಾವ ಮುಂದೆ ಹೇಳಲ್ಪಡುವ ಜ್ಞಾನದಿಂದ ತಿಳಿಯುತ್ತೀಯೋ, **ತಜ್ಜ್ಞಾನಂ**-ಅಂತಹ ಜ್ಞಾನವನ್ನು, **ಜ್ಞಾಸ್ಯಸಿ** ಎಂಬ ಕ್ರಿಯಾಪದದ ಮೂಲಕ ಉಪದೇಶದಿಂದುಂಟಾಗುವ ಜ್ಞಾನವು ದ್ಯೋತಿತವಾದುದರಿಂದ, **ಯೇನ ಜ್ಞಾನೇನ** ಎಂಬ ವ್ಯಾಖ್ಯಾನವು, **ತತ್** ಎಂಬುದು **ಯತ್** ಎಂಬುದನ್ನಪೇಕ್ಷಿಸುತ್ತದೆ, ಆದುದರಿಂದ **ತತ್** ಎಂದರೆ **ತಜ್ಜ್ಞಾನಂ** ಎಂದು ಅರ್ಥಮಾಡಿ, **ಯೇನ ಜ್ಞಾನೇನ** ಎಂಬುದು **ಯಥಾ** ಎಂಬುದರರ್ಥವೆಂದು ವ್ಯಕ್ತಪಡಿಸಿರುತ್ತಾರೆ ; **ಅವಹಿತ ಮನಾಃ**-ಸಾವಧಾನಚಿತ್ತವುಳ್ಳವನಾಗಿ, **ಶೃಣು**-ಉಪದೇಶಿಸುವೆನು ಕೇಳು. ಭಾಷ್ಯದಲ್ಲಿ **ಮಯಾಸಕ್ತ ಮನಾಃ** ಎಂಬಲ್ಲಿರುವ ಅಸ್ಮಚ್ಛಬ್ದ ವಿವರಣೆಯಲ್ಲಿ, **ಮತ್ಸ್ವರೂಪೇಣ ಗುಣೈಶ್ಚ ಚೇಷ್ಟಿತೇನ ವಿಭೂತ್ಯಾ** ಎಂಬ ಪ್ರಯೋಗವಿರುವುದರಿಂದ, ಇವೆಲ್ಲವೂ ಹೇಳಲ್ಪಡುತ್ತವೆಂಬುದೂ, ಇವುಗಳಿಂದ ತಾನು ಕೂಡಿದವನೇ ವಿನಾ ನಿರ್ವಿಶೇಷನಲ್ಲವೆಂಬ ಭಾವವೂ ಜೋಧಿತವು; ಏಕೆಂದರೆ ಸ್ವರೂಪ ರೂಪಗುಣ ವಿಭವಗಳಿಂದ ಆತನು ಸರ್ವದಾ ವಿಶಿಷ್ಟನಾಗಿಯೇ ಇರುತ್ತಾನೆಯೇ ವಿನಾ ವಿಶ್ಲೇಷ ಎಂಬುದು ಆತನಿಗೆ ಎಂದಿಗೂ ಇಲ್ಲವೆಂಬ ಭಾವವನ್ನು ತಮ್ಮ ಭಾಷ್ಯದಿಂದ ಪ್ರದರ್ಶಿಸಿರುತ್ತಾರೆ. ಸರ್ವೇಶ್ವರನಿಗೆ ಇವುಗಳಿಂದ ವಿಶ್ಲೇಷ ಎಂಬುದು ಎಂದಿಗೂ ಇಲ್ಲದಿದ್ದರೂ, ಉಪಾಸಕನ ಮನಸ್ಸಿನಿಂದ ಇವುಗಳ ಅನುಭವದ ವಿಶ್ಲೇಷೆಯುಂಟಾಗ

ಬಹುದು; ಆದರೆ ಭಕ್ತಿಯೋಗನಿಷ್ಠನ ಮನಸ್ಸಿನಿಂದ ವಿಶ್ಲೇಷೆಯು ಎಂದಿಗೂ ಇಲ್ಲವೆಂಬ ಭಾವವು ಇಲ್ಲಿ **ಮಯ್ಯಾಸಕ್ತ ಮನಾಃ, ಮದಾಶ್ರಯಃ** ಎಂಬ ಎರಡೂ ಒಂದೇ ಅರ್ಥವುಳ್ಳವಲ್ಲವೋ ? ಪುನರುಕ್ತಿಯಲ್ಲವೋ? ಎಂದರೆ ಅಲ್ಲವೆಂದು ತಿಳಿಸುವುದಕ್ಕಾಗಿ **ಸ್ವಯಂ ಚ** ಎಂದಾರಂಭಿಸಿ ಬೇರೆ ವಿಧವಾಗಿ ಅರ್ಥಮಾಡಿರುತ್ತಾರೆ, **ಮದೇಕಾಧಾರಃ** ಎಂಬುದಾಗಿ; ಮದನುಭವವೇ ಆತನಿಗೆ ಮುಖ್ಯ ಧಾರಕವು ಎಂಬ ತಾತ್ಪರ್ಯವು. ಇಲ್ಲಿ **ಮಯ್ಯಾಸಕ್ತಮನಾಃ** ಎಂಬುದಕ್ಕೆ **ಮತ್ಪ್ರಿಯ ತ್ವಾತಿರೇಕೇಣ ಮಯಿ ಸುಗಾಢಂ ಬದ್ಧ**ಮನಾಃ ಎಂದು ಶ್ರೀಭಾಷ್ಯಕಾರರು ಭಾಷ್ಯವನ್ನು ಬರೆದಿರುತ್ತಾರೆ. ಅದಕ್ಕೆ ಎರಡು ವಿಧವಾಗಿ ಅರ್ಥಮಾಡಬಹುದೆಂದು ಶ್ರೀ ದೇಶಿಕರು ಅಭಿಪ್ರಾಯಪಡುವರು. ನನ್ನನ್ನೇ ಪ್ರೀತಿಗೆ ವಿಷಯವಾಗಿ ಉಳ್ಳವನು ಎಂದು **"ಪ್ರಿಯೋ ಹಿ ಜ್ಞಾನಿ ನೋತ್ಯರ್ಥಂ ಅಹಂ"** ಎಂಬುದರ ತಾತ್ಪರ್ಯವು ಹೇಳಲ್ಪಟ್ಟಿತು; ಅಥವಾ ನನಗೆ ಪ್ರಿಯವಾಗಿರುವದರ ಅತಿರೇಕದಿಂದ ಸುಘೃಢಂ ಬದ್ಧಮನಾಃ ಎಂದಾಗಲಿ ಅರ್ಥಮಾಡಿ **ಸಚ ಮಮಪ್ರಿಯಃ** ಎಂಬುದರ ತಾತ್ಪರ್ಯವು ಹೇಳಲ್ಪಟ್ಟಿತೆಂದಾದರೂ ಭಾವಿಸಬಹುದು; ಇದರಿಂದ, ನನಗೆ ತಾನು ತುಂಬಾ ಪ್ರಿಯನು ಹೇಗಾಗಬೇಕೋ ಹಾಗೆ ಸದಾ ಚಿಂತಿಸುತ್ತಿರುವವನೆಂಬ ಭಾವವು ಉಂಟಾಗುತ್ತದೆ. **ಯೋಗಂ ಯುಂಜನ್** ಎಂದು ಮೂಲದಲ್ಲಿ ಹೇಳಿರುವುದರ ಅಭಿಪ್ರಾಯವು ಸಾಕ್ಷಾತ್ತಾಗಿ ಉಪಾಸನಾನುಷ್ಠಾನಕ್ರಮವು ಇಲ್ಲಿ ಹೇಳಲ್ಪಡುತ್ತದೆಂಬ ಭಾವವು. ಸಾಧಾರಣವಾಗಿ ಯೋಗಾನುಷ್ಠಾನಕ್ರಮವನ್ನು ಹಿಂದಿನ ಅಧ್ಯಾಯದಿಂದಲೇ ಗ್ರಹಿಸಬಹುದು. ಆ ಉಪಾಸನೆಗೆ ಪ್ರಯತ್ನರೂಪವಾದ ಭಜನೀಯ ವಿಷಯತ್ವಜ್ಞಾನ ಮುಂತಾದ ಸಹಕಾರಿಗಳು ಮುಂದೆ ಬೋಧಿಸಲ್ಪಡುವುವು, ಎಂಬ ತಾತ್ಪರ್ಯವು. ಇಲ್ಲಿ **"ಯೋಗಂ"** ಎಂಬುದು ಇತರರು ಅಭಿಪ್ರಾಯಪಡುವಹಾಗೆ ಹಿಂದೆ ಹೇಳಿದ ಯೋಗವಾದ ಕರ್ಮಯೋಗಾದಿಗಳ ವಿಷಯವಲ್ಲವು, ಮುಂದೆ ಹೇಳುವ ಭಕ್ತಿಯೋಗಕ್ಕೆ ಸಂಬಂಧಿಸಿದುವೆಂದು ತಿಳಿಯತಕ್ಕದ್ದು. ಹೀಗೆ ಯೋಗಶಬ್ದಕ್ಕೆ ಪ್ರಕರಣಾನುಗುಣವಾಗಿ ಅನೇಕಾರ್ಥವುಂಟು. ಅದನ್ನು ತಿಳಿಸುವುದಕ್ಕಾಗಿಯೇ **ಯೋಕ್ತುಂ ಪ್ರವೃತ್ತಃ** ಎಂಬ ವ್ಯಾಖ್ಯಾನವು; ಇದು ಶತೃ ಪ್ರತ್ಯಯದಿಂದ ತೋರಿಬರುವ ವಿಷಯವು. **ಮಾಂ** ಎಂಬುದಕ್ಕೆ **ಯೋಗವಿಷಯಭೂತಂ ಮಾಂ** ಎಂದು , ವ್ಯಾಖ್ಯಾನಮಾಡಿರುವುದರಿಂದ ನನ್ನನ್ನು ಉಪಾಸನೆಮಾಡುವದಕ್ಕೆ ಮುಂಚಿತವಾಗಿ ಉಪಾಸ್ಯನಾದ ನನ್ನ ವಿಷಯದ ಸ್ವರೂಪಾದಿಗಳನ್ನೆಲ್ಲಾ ತತ್ವತಃ ತಿಳಿಯತಕ್ಕವು ಉಂಟು ಎಂದು ತೋರಿಬರುತ್ತದೆ. **ಯಥಾ ಜ್ಞಾಸ್ಯಸಿ** ಎಂದು ಮುಂದೆ ಇರುವದರಿಂದ ಇದು ವ್ಯಕ್ತವು. **ಯಥಾಜ್ಞಾಸ್ಯಸಿ** ಎಂದು ಹೇಳಿರುವುದರಿಂದ ಸಮಗ್ರವಾಗಿಯೇ ಈ ಗೀತಾಶಾಸ್ತ್ರ ಮಾತ್ರದಿಂದಲೇ ಪರಬ್ರಹ್ಮವಿಷಯಿಕವಾದ ಸಕಲ ಜ್ಞಾನವನ್ನೂ ಹೊಂದಬಹುದೆಂಬ ಆಶಯವು ತೋರಿಬರುತ್ತದೆ. ಇದು ಮುಂದಿನ ಶ್ಲೋಕದಲ್ಲಿ ಕಂಠೋಕ್ತವು. ಇದರಿಂದಲೇ ಶ್ರೀಕೃಷ್ಣ ಭಗವಾನರೇ ಪರಬ್ರಹ್ಮವು. ಈತನಿಗಿಂತಲೂ ಮೇಲಾಗಿ ನಿರ್ಗುಣ ಬ್ರಹ್ಮನೊಬ್ಬನಿದ್ದಾನೆಂಬ ವಾದವು ಇಲ್ಲಿ ಕೂಡುವದಿಲ್ಲವು. **ಸಮಗ್ರಂ** ಎಂಬ ಕ್ರಿಯಾವಿಶೇಷಣ ಬೇರೆ ಇರುವದರಿಂದ ಪರಬ್ರಹ್ಮಸ್ವರೂಪಾದಿಗಳೆಲ್ಲಾ ಸಂಪೂರ್ಣವಾಗಿ ಇಲ್ಲಿಯೇ ತಾನು ಉಪದೇಶಿಸುವದಾಗಿ ಪ್ರತಿಜ್ಞಾವಾಕ್ಯವು. ಸರ್ವಪ್ರಕಾರ ವಿಶಿಷ್ಟತ್ವವನ್ನೂ ಉಪಪಾದಿಸಿ ಹೇಳುವಹಾಗೆ ಪ್ರತಿಜ್ಞೆಯು. ಇಲ್ಲಿ **ಯಥಾಜ್ಞಾಸ್ಯಸಿ** ಎಂಬುದರಲ್ಲಿ ಪರಮಾತ್ಮನ ಯಥಾರ್ಥ ಸ್ವರೂಪಾದಿಗಳ ಜ್ಞಾನವು ಹೇಳಲ್ಪಟ್ಟಿತೇ ವಿನಾ ಈ ಶ್ರೋತೃವಿನ ಯೋಗ್ಯತಾನುಗುಣ ಜ್ಞಾನವು ವಿವಕ್ಷಿತವಲ್ಲವು.

**ಮೂಲಕ್ಕೆ ಅರ್ಥವು:—**ಹಿಂದಿನ ಶ್ಲೋಕದಲ್ಲಿ, **ಯಥಾಜ್ಞಾಸ್ಯಸಿ ತಚ್ಛೃಣು** ಎಂಬ ಪ್ರತಿಜ್ಞಾವಾಕ್ಯದಲ್ಲಿ ಹೇಳಿದ ತನ್ನನ್ನು ಕುರಿತ ಜ್ಞಾನವೆಂತಾದ್ದೆಂದು ಸ್ವಲ್ಪ ವಿಸ್ತರಿಸಿ ಹೇಳುತ್ತಾರೆ. ತಾನು ಮುಂದೆ ಉಪದೇಶಿಸುವ ಜ್ಞಾನವು ಪರಬ್ರಹ್ಮಸ್ವರೂಪಾದಿಗಳನ್ನು ಕುರಿತದ್ದು

**ಮೂ. ಜ್ಞಾನಂ ತೇಽಹಂ ಸವಿಜ್ಞಾನಂ ಇದಂ ವಕ್ಷ್ಯಾಮ್ಯ ಶೇಷತಃ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯ ಮವಶಿಷ್ಯತೇ॥ ೨.**

**ಭಾ. ಅಹಂ ತೇ ಮದ್ವಿಷಯಮಿದಂ ಜ್ಞಾನಂ ವಿಜ್ಞಾನೇನ ಸಹಾಽಶೇಷತೋ ವಕ್ಷ್ಯಾಮಿ; ವಿಜ್ಞಾನಂ-ವಿವಿಕ್ತಾಕಾರ ವಿಷಯಂ ಜ್ಞಾನಂ; ಯಥಾಹಂ ಮದ್ವ್ಯತಿ**

ಮಾತ್ರವೇ ಅಲ್ಲದೆ ತಾನು ಓಗೆ ವಿಶೇಷಣಗಳಿಂದ ಸೇರಿದ್ದರೂ, ಅವೆಲ್ಲಕ್ಕಿಂತಲೂ ವಿಲಕ್ಷಣನು ಎಂಬುದರ ವಿಷಯವಾದುದು; ಅದನ್ನು ನೀನು ಅದರಾತಿಶಯದಿಂದ ಗ್ರಹಿಸಿದುವಾದರೆ ಪರಬ್ರಹ್ಮ ವಿಷಯವಾಗಿ ಬೇರೆ ಇನ್ನು ಯಾವ ಜ್ಞಾತವ್ಯಾಂಶವೂ ಇರುವದಿಲ್ಲವೆಂದು, ಹಿಂದಿನ ಶ್ಲೋಕದಲ್ಲಿನ **"ಅಸಂಶಯಂಸಮಗ್ರಂ"** ಎಂಬ ಪದಗಳಿಂದ ತೋರಿಬರುವ ಅರ್ಥವನ್ನು ವ್ಯಕ್ತಪಡಿಸುತ್ತಾರೆ. **ಅಹಂ-ಶಾಧಿಮಾಂ ತ್ವಾಂ ಪ್ರಸನ್ನಂ** ಎಂದು ಪ್ರಾರ್ಥಿಸಿದುದರಿಂದ ಶರಣಾಗತರಕ್ಷಾದೀಕ್ಷಾವಹನಾಗಿ, ಅದರಿಂದ ನಿರತಿಶಯ ಕೃಪಾವಾತ್ಸಲ್ಯಾದಿಗಳಿಂದ ಪ್ರೇರಿತನಾದ ನಾನು, **ತೇ**-ಅತ್ಯಗ್ರ ಪ್ರಿಯನಾದ ನಿನಗೆ, **ಇದಂ**-ಈ ಮುಂದೆ ಹೇಳಲುಪಕ್ರಮಿಸಿರುವ ಭಕ್ತಿಯೋಗವಿಷಯವಾದ, **ಜ್ಞಾನಂ**-ನನ್ನ ಸ್ವರೂಪಾದಿಗಳನ್ನು ಕುರಿತು ಜ್ಞಾನವನ್ನು, **ವಕ್ಷ್ಯಾಮಿ**-ಹೇಳುವೆನು, ಆ ಜ್ಞಾನವೆಂತಾದ್ದೆಂದರೆ, **ಸವಿಜ್ಞಾನಂ**-ವಿಶೇಷ ಜ್ಞಾನರೂಪವಾದ ಎಂದರೆ ವಿಲಕ್ಷಣವಾದ ಜ್ಞಾನವನ್ನು ಉಪದೇಶಿಸುವೆನು. ಇತರವಾದವುಗಳಿಗಿಂತ ತಾನು ಹೇಗೆ ವಿಲಕ್ಷಣನೆಂಬ ಜ್ಞಾನವನ್ನೂ ಸಹ ಬೋಧಿಸುವೆನೆಂಬ ಭಾವವು. ಯಾವ ವಿಶೇಷಣಗಳಿಂದ ನಾನು ಯುಕ್ತನು, ನನ್ನ ನಿರೂಪಿತ ಸ್ವರೂಪ ವಿಶೇಷಣಗಳು ಯಾವುವು, ಹಾಗಿದ್ದರೂ ಅವುಗಳಿಂದ ನಾನು ಹೇಗೆ ವಿಲಕ್ಷಣನು, ಇತ್ಯಾದಿ ಜ್ಞಾನಗಳಿಂದ ಯುಕ್ತವಾದ ನನ್ನ ಸ್ವರೂಪಜ್ಞಾನವನ್ನು ಹೇಳುವೆನು. ಹೇಗೆ ಹೇಳುವೆನು ಎಂದರೆ, **ಅಶೇಷತಃ**-ಏನೊಂದೂ ಶೇಷವಿಲ್ಲದಹಾಗೆ ಹೇಳುವೆನು ; ಹಾಗೆಂದರೇನೆಂದು ಕೇಳುತ್ತೀಯೋ ? **ಇಹ**-ಈ ಸಂದರ್ಭದಲ್ಲಿ, ಈ ನನ್ನ ರೂಪಾದಿಗಳನ್ನು ತಿಳಿಯುವ ಸಂದರ್ಭದಲ್ಲಿ **ಯತ್**-ಯಾವ ವಿಲಕ್ಷಣ ಜ್ಞಾನದಿಂದಕೂಡಿದ ಇದನ್ನು, **ಜ್ಞಾತ್ವಾ**-ತಿಳಿದು, **ಜ್ಞಾನಂ ಜ್ಞಾತ್ವಾ** ಎಂಬ ಪ್ರಯೋಗವು **ಪಾಕಂ ಪಚತಿ** ಎಂಬ ಪ್ರಯೋಗದಹಾಗೆ, **ಭೂಯಃ**-ಪುನಃ, **ಜ್ಞಾತವ್ಯಂ**-ತಿಳಿಯತಕ್ಕಂಶವು, **ಅನ್ಯತ್**-ಬೇರೆಯಾವುದೂ, **ನಾವಶಿಷ್ಯತೇ**-ಉಳಿದಿರುವುದಿಲ್ಲವೋ? ಹಾಗೆ ಅಶೇಷತಃ ಹೇಳುವೆನು; ಇನ್ನು ಬೇರೆ ತಿಳಿದುಕೊಳ್ಳಬೇಕೆಂಬ ಆವಶ್ಯಕತೆಯಿಲ್ಲವು, ಸಂಪೂರ್ಣವಾಗಿ ಜ್ಞಾತವ್ಯಾಂಶವು ಎಷ್ಟು ಬೇಕೋ ಅಷ್ಟನ್ನೂ ನಿನಗೆ ಉಪದೇಶಿಸುವೆನೆಂಬ ಭಾವವು. ಉತ್ತರಾರ್ಧವೆಲ್ಲಾ ಪೂರ್ವಾರ್ಧದಲ್ಲಿರುವ **ಅಶೇಷತಃ** ಎಂಬುದರ ವಿವರಣವು. **ಅಶೇಷತಃ** ಎಂದು ಹೇಳಿರುವದರಿಂದ ನಿರ್ಗುಣಬ್ರಹ್ಮಸ್ವರೂಪವೂ, ತದುಪಾಸನವೂ ಈ ಮುಂದೆ ಎಲ್ಲಿಯೂ ಹೇಳಲಿಲ್ಲವು. ಆದುದರಿಂದ ನಿರ್ಗುಣೋಪಾಸನವಲ್ಲದೆ ಸಗುಣಬ್ರಹ್ಮೋಪಾಸನೆಯು ಮಾತ್ರವೇ ಇಲ್ಲಿ ಹೇಳಲ್ಪಟ್ಟಿತೆಂಬ ವಾದವು ಕೂಡುವುದಿಲ್ಲವೆಂಬ **ಭಾವವೂ** ತೋರಿಬರುತ್ತದೆ.

**ಭಾಷ್ಯಾರ್ಥವು:—**ತಾವು ಈಗ ಮುಂದೆ ಹೇಳುವ ಉಪದೇಶವು ತನ್ನ ಸ್ವರೂಪಜ್ಞಾನವೇನು, ಮತ್ತು ತಾನು ವ್ಯಾಪಿಸಿರುವವುಗಳಿಗಿಂತ ಹೇಗೆ ವಿಲಕ್ಷಣನು ಎಂಬ ಜ್ಞಾನವೇನು, ಇವುಗಳಿಂದ ಯುಕ್ತವಾದುದೆಂದೂ, ಅವು ತಿಳಿದ ನಂತರ ಸಾಧನಾನುಷ್ಠಾನಕ್ಕೆ ಬೇಕಾದುದು ಇನ್ನು-ಯಾವ ಜ್ಞಾನವೂ ಇರುವದಿಲ್ಲವೆಂದೂ ಉಪದೇಶಿಸುತ್ತಾರೆ— **ಅಹಂ**-ನಾನು, **ತೇ**-ನಿನಗೆ, **ಮದ್ವಿಷಯಂ ಜ್ಞಾನಂ**-ನನ್ನ ಸ್ವರೂಪಾದಿಗಳ ವಿಷಯವಾದ ಜ್ಞಾನವನ್ನು, **ವಿಜ್ಞಾನೇನ ಸಹ**-ವಿಜ್ಞಾನದೊಂದಿಗೆ, **ಅಶೇಷತಃ**-ನಿಶ್ಶೇಷವಾಗಿ, **ವಕ್ಷ್ಯಾಮಿ**-ಹೇಳುವೆನು, **ವಿಜ್ಞಾನ** ವೆಂದರೆ

**ಭಾ. ರಿಕ್ತಾ ತ್ಸಮಸ್ತಚಿದಚಿದ್ವಸ್ತು ಜಾತಾ ನ್ನಿಖಿಲಹೇಯಪ್ರತ್ಯನೀಕತಯಾ ನಾನಾ ವಿಧಾನವಧಿಕಾತಿಶಯಾಽಸಂಖ್ಯೇಯ ಕಲ್ಯಾಣಗುಣಗಣಾನನ್ತ ಮಹಾ ವಿಭೂತಿ ತಯಾ ಚವಿವಿಕ್ತಃ, ತೇನ ವಿವಿಕ್ತವಿಷಯಜ್ಞಾನೇನ ಸಹ ಮತ್ಸ್ವರೂಪವಿಷಯ**

**ವಿವಿಕ್ತಾಕಾರ ವಿಷಯಂ ಜ್ಞಾನಂ** - ಪರಸ್ವರೂಪವು ಮಿಕ್ಕವುಗಳಿಗಿಂತ ವಿಲಕ್ಷಣವೆಂದು ಹೇಳುವ ವಿಶೇಷಗಳಿಂದ ಯುಕ್ತವಾದ ವಿಲಕ್ಷಣವಾದ ಜ್ಞಾನವು ; ಈ ವಿಜ್ಞಾನವು ಇತರರು ಅಭಿಪ್ರಾಯಪಡುವಹಾಗೆ ನಿದಿಧ್ಯಾಸನ ಪರವಲ್ಲವು. ಈ ಜ್ಞಾನವಿಜ್ಞಾನಗಳೆರಡೂ ಪರಮಾತ್ಮೋಪಾಸನಕ್ಕೆ ಪೂರ್ವಭಾವಿಯಾಗಿಯೇ ಬೇಕಾದವು; ಅವು ಯಾವುವೆಂದರೆ— (೧) ಸ್ವರೂಪನಿರೂಪಕ ಧರ್ಮಗಳೂ, (೨) ನಿರೂಪಿತ ಸ್ವರೂಪ ವಿಶೇಷಣಗಳೂ; ಇವೆರಡರಲ್ಲಿ ಪರಮಾತ್ಮವಿಷಯವಾದ ಸರ್ವಜ್ಞಾನಗಳು ಅಂತರ್ಗತಗಳು ; ಇವುಗಳು ಜ್ಞಾನ ವಿಜ್ಞಾನ ಶಬ್ದಗಳಿಂದ ಬೋಧಿಸಲ್ಪಟ್ಟವು. ಹೇಗೆ ವೈಲಕ್ಷಣ್ಯವೆಂಬುದನ್ನು ಉಪಪಾದಿಸುತ್ತಾರೆ—ಉಭಯಲಿಂಗವಾದ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಗಳ ಮೂಲಕವಾಗಿಯೂ ಮತ್ತು ಆತನ ನಿಯಾಮ್ಯ ವರ್ಗವಾದ ಉಭಯ ವಿಭೂತಿಗಳಾದ ನಿತ್ಯ ವಿಭೂತಿ ಲೀಲಾ ವಿಭೂತಿಗಳಿಗಿಂತಲೂ ವಿಲಕ್ಷಣನು ; ಅದನ್ನೇ ಮುಂದಿನ ವಾಕ್ಯದಿಂದ ಉಪಪಾದಿಸಿ ಹೇಳುತ್ತಾರೆ - ಸರ್ವಜ್ಞ **ಅಹಂ**- ಸರ್ವೇಶ್ವರನಾಗಿಯೂ, ಪುರುಷೋತ್ತಮನಾಗಿಯೂ ಇರುವ ನಾನು, **ಯಥಾ** - ಹೇಗೆ - **ಮದ್ವ್ಯತಿರಿಕ್ತಾತ್** - ನನಗಿಂತ ಬೇರೆಯಾಗಿ, ನನ್ನೊಂದಿಗೇನೇ ಶರೀರರೂಪದಿಂದ ಸೇರಿರುವ, ಸಮಸ್ತ ಚಿದಚಿದ್ರೂಪದಲ್ಲಿರುವ, **ವಸ್ತುಜಾತಾತ್** - ವಸ್ತು ಸಮೂಹಗಳಿಗಿಂತಲೂ, **ನಿಖಿಲ ಹೇಯ ಪ್ರತ್ಯನೀಕತಾಯಾ** - ಸಮಸ್ತ ದೋಷಗಳ ಗಂಧವೇ ಇಲ್ಲದಿರುವುದರಿಂದಲೂ, **ನಾನಾ ವಿಧಾ....ಮಹಾ ವಿಭೂತಿ ತಯಾ ಚ** - ನಾನಾವಿಧಗಳಾದ ಮತ್ತು ಅವಧಿ ಇಲ್ಲದ ನಿರತಿಶಯಗಳಾದ ಅಸಂಖ್ಯೇಯಗಳಾದ ಕಲ್ಯಾಣ ಗುಣಗಳ ಸಮೂಹವೇನು, ಮತ್ತು **ಅನನ್ತ ಮಹಾ ವಿಭೂತಿತಯಾ ಚ** - ಅನಂತಗಳಾದ ನಿತ್ಯ ವಿಭೂತಿ ಲೀಲಾವಿಭೂತಿ ಹೀಗೆ ಎರಡುವಿಧ ನಿಯಾಮ್ಯ ವರ್ಗವನ್ನು ಹೊಂದಿರುವುದರಿಂದಲೂ ಕೂಡ, **ವಿವಿಕ್ತಃ** - ವಿಲಕ್ಷಣನು, ನಾನುಚಿತ್ತು ಅಚಿತ್ತುಗಳನ್ನೆಲ್ಲಾ ವ್ಯಾಪಿಸಿ ಅವುಗಳಿಗೆಲ್ಲಾ ಆತ್ಮಾವಾಗಿರುವೆನು; ಆದರೂ ಅವುಗಳ ದೋಷಗಳಾದ ಸ್ವರೂಪ ವಿಕಾರವೇನು, ಸ್ವಭಾವವಿಕಾರ ವೇನು ಇವು ಯಾವುಗಳನ್ನೂ ಹೊಂದದೇ ಇರುವುದರಿಂದ ವಿಲಕ್ಷಣನು, ಹೀಗೆ ಹೇಯಪ್ರತ್ಯನೀಕತ್ವ, ಕಲ್ಯಾಣ ಗುಣಾಕರತ್ವ, ಜಗತ್ಕಾರಣತ್ವ, ಉಭಯ ವಿಭೂತಿ ನಾಯಕತ್ವ, ಸರ್ವನಿಯಮಾಮ್ಯತ್ವ, ಇವುಗಳು ನನಗಿರುವದರಿಂದ, ಎಲ್ಲಾ ವಸ್ತುಜಾತಗಳಿಗಿಂತಲೂ ವಿಲಕ್ಷಣನೆಂಬ ಭಾವವು. ಇಂತಹ ಸರ್ವವೈಲಕ್ಷಣ್ಯವನ್ನು ಶ್ರೀ ಪರಾಶರರು ಒಂದು ಶ್ಲೋಕಾರ್ಧವಾದ "**ಅವಿಕಾರಾಯ ಶುಧ್ಧಾಯ ನಿತ್ಯಾಯ ಪರಮಾತ್ಮನೇ** - " ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ— ಜಗತ್ತಿಗೆ ಉಪಾದಾನಾದಿಕಾರಣನಾಗಿರುವದರಿಂದ, ಪ್ರಕೃತಿಯ ಹಾಗೆ ಸ್ವರೂಪ ವಿಕಾರ ಉಂಟೋ ಎಂದರೆ **ಅವಿಕಾರಾಯ** ಎಂದು ಹೇಳಲ್ಪಟ್ಟಿತು. ಆಗಲಿ, ಪರಮಾತ್ಮನೂ ಚೇತನನಾದುದರಿಂದ ಬದ್ಧಚೇತನರಾದರೋ " **ಅಶುದ್ಧಾಸ್ತೇ ಸಮಸ್ತಾಸ್ತು** " ಎಂದು ಹೇಳಲ್ಪಟ್ಟಿರುತ್ತಾರೆ. ಆದರೆ ಮುಕ್ತರಾದ ಚೇತನರು ಶುದ್ಧರಾಗಿರುತ್ತಾರೆ, ಅವರ ಹಾಗೋ ಎಂದರೆ ಮುಕ್ತರಿಗೂ ವಿಲಕ್ಷಣನೆಂದು **ನಿತ್ಯಾಯ** ಎಂಬುದರಿಂದ ಹೇಳಲ್ಪಟ್ಟಿತು. ಮುಕ್ತರೂ ಬದ್ಧ ದೆಶೆಯಲ್ಲಿ ಅಶುದ್ಧರಾಗಿದ್ದರು. ಪರಮಾತ್ಮನಿಗೆ ಶುದ್ಧತ್ವವು ನಿತ್ಯವಾದುದು, ಆದುದರಿಂದ ವಿಲಕ್ಷಣನು. ಆದರೆ ನಿತ್ಯರಿಗೆ ಅವಿಕಾರತ್ವ ನಿತ್ಯಶುದ್ಧತ್ವವಿದೆ. ಅವರ ಹಾಗೆಯೇ ಪರಮಾತ್ಮನೊ? ಎಂದರೆ ಆ ನಿತ್ಯಸೂರಿಗಳಿಗಿಂತಲೂ ವಿಲಕ್ಷಣನೆಂದು ಬೋಧಿಸುವುದಕ್ಕಾಗಿ **ಪರಮಾತ್ಮನೇ** ಎಂದು ಹೇಳಲ್ಪಟ್ಟಿತು. ಇವರಿಗಿಂತ ಶ್ರೇಷ್ಠ

**ಭಾ. ಜ್ಞಾನಂ ವಕ್ಷ್ಯಾಮಿ; ಕಿಂ ಬಹುನಾ; ಯತ್ ಜ್ಞಾನಂ ಜ್ಞಾತ್ವಾ ಮಯಿ ಪುನರನ್ಯತ್ ಜ್ಞಾತವ್ಯಂ ನಾವಶಿಷ್ಯತೇ ||೨||**

ವಾಗಿ ಸರ್ವಶೇಷಿಯಾಗಿ ಅವರಿಗೂ ನಿಯಾಮಕನಾಗಿರುವುದರಿಂದ ಅವರಿಗಿಂತಲೂ ವಿಲಕ್ಷಣನು. ಹೀಗೆ ಸರ್ವವಸ್ತು ಜಾತಗಳಿಗಿಂತಲೂ ವಿಲಕ್ಷಣನು. ಇವೇ ಮೊದಲಾದ ಜ್ಞಾನವೇ ಗ ವಿಜ್ಞಾನ ಶಬ್ದದಿಂದ ಉಪದೇಶಿಸಲ್ಪಟ್ಟಿತೆಂಬ ಭಾವವು. ಮುಂದೆ **ಸದೈಕ ರೂಪಾ ರೂಪಾಯ ವಿಷ್ಣವೇ ಸರ್ವಜಿಷ್ಣವೇ** ಎಂಬುದರಿಂದ ಹೀಗೆ ಸರ್ವವ್ಯಾಪಿಯಾಗಿದ್ದರೂ ಸ್ವರೂಪ ಸ್ವಭಾವ ವಿಕಾರಗಳಿಲ್ಲದೆ ಹೇಯಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಗಳಿಂದ ಏಕರೂಪನಾಗಿದ್ದಾನೆಂದೂ, ಹೇಳಲ್ಪಡುತ್ತದೆ. **ತೇನ ವಿವಿಕ್ತ ವಿಷಯಜ್ಞಾನೇನ ಸಹ**-ಅಂತಹ ಸರ್ವವೈಲಕ್ಷಣ್ಯವನ್ನು ಬೋಧಿಸುವ ಜ್ಞಾನದೊಂದಿಗೆ ಸೇರಿದ, **ಮತ್ಸ್ವರೂಪವಿಷಯಜ್ಞಾನಂ**-ನನ್ನ ಸ್ವರೂಪವನ್ನು ತಿಳಿಸುವ ಜ್ಞಾನವನ್ನು, **ವಕ್ಷ್ಯಾಮಿ**-ಹೇಳುವೆನು, ಉಪದೇಶಿಸುವೆನು. ಇಲ್ಲಿ ಜ್ಞಾನವನ್ನು ಹೇಳುವನು ಎಂದರೆ ಇಂತಹ ಜ್ಞಾನವನ್ನುಂಟುಮಾಡುವ ಶಾಸ್ತ್ರವಿಷಯವಾದ ಉಪದೇಶವನ್ನು ಹೇಳುವೆನು ಕೇಳು ಎಂಬ ಭಾವವು; ಆದುದರಿಂದ ಲಾಕ್ಷಣಿಕ ಪ್ರಯೋಗವು. ಇಲ್ಲಿ ವಿಜ್ಞಾನಶಬ್ದವು ಇತರರು ಹೇಳುವಹಾಗೆ ಉಪಾಸನ ಪರವಲ್ಲವು. ಏಕೆಂದರೆ ಉಪಾಸನಕ್ಕೆ ಈ ಜ್ಞಾನವಿಜ್ಞಾನಗಳು ಹೇತುಗಳಾಗಿ ಹೇಳಲ್ಪಟ್ಟಿವೆ. ಉಪಾಸನವು ಜ್ಞಾನರೂಪವಾದರೂ, ಮನಸ್ಸಿನ ವ್ಯಾಪಾರವಾದ ನಿರತಿಶಯಪ್ರೀತಿಯಿಂದ ಕೂಡಿದ ಭಜನವು. **ಕಿಂ ಬಹುನಾ**-ಇನ್ನು ಹೆಚ್ಚಾಗಿ ಹೇಳುವದರಿಂದೇನು ? ಸಂಕ್ಷೇಪವಾಗಿ ನಾನು ಮುಂದೆ ಹೇಳುವವರ ಮಹಾತ್ಮ್ಯೆಯನ್ನು ತಿಳಿಸುವೆನು ಕೇಳು ಎಂಬ ಭಾವವು; ಅದೇನೆಂದರೆ, **ಯತ್ ಜ್ಞಾನಂ ಜ್ಞಾತ್ವಾ**-ಯಾವ ಜ್ಞಾನವನ್ನರಿತು, **ಮಯಿ**-ನನ್ನ ವಿಷಯದಲ್ಲಿ, ಇದು ಇಹ ಎಂಬುದರ ಅರ್ಥವು. **ಪುನರನ್ಯತ್**-ಪುನಃ ಬೇರೆ, **ಜ್ಞಾತವ್ಯಂ**-ಉಪಾಯಾನುಷ್ಠಾನಕ್ಕೆ ತಿಳಿಯತಕ್ಕ ಅಂಶವು, **ನಾವಶಿಷ್ಯತೇ**-ಯಾವುದೂ ಉಳಿದಿರುವುದಿಲ್ಲವೋ; ಅಂತಹ ವಿಜ್ಞಾನದಿಂದ ಯುಕ್ತವಾದ ಜ್ಞಾನವನ್ನು ಪರಮಾತ್ಮೋಪಾಸನಕ್ಕೆ ಮುಂಚಿತವಾಗಿಯೇ ತಿಳಿಯಬೇಕಾದುದನ್ನು, ನಿನಗೆ ಉಪದೇಶಿಸುವೆನೆಂಬ ತಾತ್ಪರ್ಯವು. ಆದರೆ ಕೆಲವರು ನನ್ನ ಸ್ವರೂಪಜ್ಞಾನ ವಿಜ್ಞಾನಗಳನ್ನು ತಿಳಿದ ನಂತರ ಬೇರೆ ಜ್ಞಾತವ್ಯಾಂಶವೇ ಇಲ್ಲವೆಂದರೆ ಈ ವಾಕ್ಯಜನ್ಯಜ್ಞಾನದಿಂದ ಸರ್ವಜ್ಞನೇ ಆಗುತ್ತಾನೆಂದು ಅಭಿಪ್ರಾಯವನ್ನು ಹೇಳಿರುತ್ತಾರೆ. ಇದು ಸರಿಯಲ್ಲವು. **"ಯೋವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ"** ಎಂಬುದು ಸರ್ವಜ್ಞತೆಯ ಲಕ್ಷಣವು. ಏಕಕಾಲದಲ್ಲೇ ಎಲ್ಲವನ್ನೂ ಸದಾ ತಾನಾಗಿಯೇ ಪ್ರತ್ಯಕ್ಷೀಕರಿಸುವ ಶಕ್ತಿಯೇ ಸರ್ವಜ್ಞತೆಯು; ಇದು ಬದ್ಧದೆಶೆಯಲ್ಲಿ ಚೇತನರಿಗೆ ಸಾಧ್ಯವೇ ಇಲ್ಲವು. ಸರ್ವೇಶ್ವರನ ವಿಭವಾವತಾರಗಳಲ್ಲೂ ನಿತ್ಯಸೂರಿಗಳ ಅವತಾರದೆಶೆಯಲ್ಲೂ ಸಾಧ್ಯವೇ ವಿನಾ ಇತರರಿಗೆ ಇಲ್ಲವು. ಆದುದರಿಂದ ಜ್ಞಾನಶಬ್ದವು ಸರ್ವೇಶ್ವರನ ಸ್ವರೂಪ ನಿರೂಪಕ ಧರ್ಮಗಳ ಜ್ಞಾನವನ್ನೂ, ವಿಜ್ಞಾನ ಶಬ್ದವು ನಿರೂಪಿತ ಸ್ವರೂಪ ವಿಶೇಷಣಗಳ ಜ್ಞಾನವನ್ನೂ, **ಬೋಧಿಸುತ್ತವೆ**. ಈ ಶ್ಲೋಕದಲ್ಲಿ ತನ್ನ ಪ್ರಾಪ್ತಿಗೆ ಬೇಕಾದ ಸಮಗ್ರವಾದ ಎಲ್ಲಾ ಜ್ಞಾನವನ್ನು ಹೇಳುತ್ತೇನೆ ಕೇಳು ಎಂದು ಹೇಳಿರುವುದರಿಂದ, ಸರ್ವೇಶ್ವರನಿಗೆ ತನ್ನನ್ನು ಆಶ್ರಯಿಸಿರುವುದರ ವಿಷಯದಲ್ಲಿ ಎಷ್ಟು ವಿಶೇಷ ಕೃಪೆಯೆಂಬುದನ್ನು ತಿಳಿಸಿ ಅಂತಹ ಅಮೋಘೋಪದೇಶದಲ್ಲಿ ಈಷದಪಿ ಸಂದೇಹ ಬೇಡವೆಂಬ ಭರವಸೆಯನ್ನು ಕೊಟ್ಟಿರುತ್ತಾರೆ. ಈ ಮುಂದಿನ ಉಪದೇಶವೆಲ್ಲಾ ಇದರಿಂದ ಯಥಾರ್ಥವಾದುದೇ ವಿನಾ ವ್ಯಾವಹಾರಿಕ ದಶೆಯ ವಿಷಯವಾದುದಲ್ಲವೆಂಬುದೂ **ತೋರಿ** ಬರುತ್ತದೆ. ಹೀಗೆ ಈಗ ಉಪದೇಶಿಸಲ್ಪಡುವ ಜ್ಞಾನವಿಜ್ಞಾನಗಳುಂಟಾದ ನಂತರ ಇನ್ನು ಯಾವ

**ಭಾ. ಅ. ವಕ್ಷ್ಯಮಾಣಸ್ಯ ಜ್ಞಾನಸ್ಯ ದುಷ್ಪ್ರಾಪತಾ ಮಾಹ—**

**ಮೂ. ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ॥** ೩.

ಜ್ಞಾತವ್ಯಾಂಶವೂ ಉಪಾಯಾನುಷ್ಠಾನಕ್ಕೆ ಇರುವುದಿಲ್ಲವೆಂದು ಹೇಳಿರುವುದರಿಂದ, ಲೋಕ ಗುರುವಿನ ಉಪದೇಶದ ಮಹಾತ್ಮೆಯೂ, ಕೃಪಾಪ್ರಭಾವವೂ ಎರಡೂ ಇಲ್ಲಿ ವ್ಯಕ್ತವು. ಯಾವ ಜ್ಞಾನವು ಜ್ಞಾನವೆನಿಸಲು ಅರ್ಹವೆಂಬ ವಿಷಯದಲ್ಲಿ ಶ್ರೀ ಪರಾಶರರು ಹೇಳುತ್ತಾರೆ. **"ಸಜ್ಞಾಯತೇ ಯೇನ ತದಸ್ತದೋಷಂ ಶುದ್ಧಂ ಪರಂ ನಿರ್ಮಲ ಮೇಕರೂಪಂ। ಸಂದೃಶ್ಯತೇವಾಪ್ಯವಗಮ್ಯತೇವಾ ತಜ್ಜ್ಞಾನ ಮಜ್ಞಾನ ಮತೋನ್ಯದುಕ್ತಂ"** ಯಾವ ಜ್ಞಾನವು, ಪರಮಾತ್ಮ ಸ್ವರೂಪಾದಿಗಳ ವೈಲಕ್ಷಣ್ಯವನ್ನು ತಿಳಿದು ಭಕ್ತಿರೂಪಾಪನ್ನ ಜ್ಞಾನದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಆತನ ಪ್ರಾಪ್ತಿಯನ್ನು ಹೊಂದಿಸುತ್ತದೋ ಅದೇ ವಿಜ್ಞಾನ ಸಹಿತ ಜ್ಞಾನವು. ಮಿಕ್ಕಿದುದೆಲ್ಲಾ ಅಜ್ಞಾನದಲ್ಲೇ ಸೇರಿದುದು."

**ಭಾಷ್ಯಾವತಾರಿಕೆಯ ಅರ್ಥವು:— ವಕ್ಷ್ಯಮಾಣಸ್ಯ** - ಮುಂದೆ ಉಪದೇಶಿಸುವ, **ಜ್ಞಾನಸ್ಯ**-ವಿಜ್ಞಾನದೊಂದಿಗೆ ಕೂಡಿದ ಜ್ಞಾನದ, **ದುಷ್ಪ್ರಾಪತಾಂ**-ಪ್ರಾಪ್ತಿಯ ಅಸಾಧ್ಯತೆಯನ್ನು ಮುಂದಿನ ಶ್ಲೋಕದಿಂದ, **ಅಹ**-ಹೇಳುತ್ತಾರೆ. ಇಂತಹ ಜ್ಞಾನವಿಜ್ಞಾನಗಳನ್ನು ಹೊಂದುವದೇನೂ ಸುಲಭ ಸಾಧ್ಯವಲ್ಲವು, ಅಥವಾ ಒಂದುವೇಳೆ ಜ್ಞಾತವ್ಯಾಂಶವನ್ನೇನೋ ಸಙ್ಗ್ರಹಿಸಿದರೂ ಉಪಾಸನಾರೂಪ ಸಾಧನಾನುಷ್ಠಾನಮಾಡುವದೂ ಇನ್ನೂ ದುರ್ಲಭವೆಂದು ಉಪದೇಶಿಸುತ್ತಾರೆ. —

**ಮೂಲಕ್ಕೆ ಅರ್ಥವು:—ಮನುಷ್ಯಾಣಾಂ ಸಹಸ್ರೇಷು**-ಅನೇಕ ಮನುಷ್ಯರಲ್ಲಿ, ಇಲ್ಲಿ **ಮನುಷ್ಯ** ಶಬ್ದವು ಶಾಸ್ತ್ರಾಧಿಕಾರಿಯಾಗಿ ಈ ವಿಧವಾದ ಉಪಾಯಾನುಷ್ಠಾನಕ್ಕೆ ಇಚ್ಛೆಯೂ, ಸಾಮರ್ಥ್ಯವೆಂದರೆ ಅಧಿಕಾರವೂ ಇರುವವರನ್ನು ಬೋಧಿಸುತ್ತದೆ. ತ್ರೈವರ್ಣಿಕರಿಗೆ ಮಾತ್ರವೇ ಉಪಾಸನದಲ್ಲಿ ಅಧಿಕಾರವು, ಸ್ತ್ರೀ ಶೂದ್ರಾದಿಗಳಿಗೆ ಇಲ್ಲವು. ಆದರೆ ದೇವಹೂತಿಗೆ ಕಪಿಲರು ಉಪಾಸನಕ್ರಮವನ್ನೇ ಉಪದೇಶಿಸಿರುತ್ತಾರೆ. ವೇದದಲ್ಲಿ ಕೆಲವು ಸ್ತ್ರೀಯರಿಗೆ ವೇದಾಧಿಕಾರವೂ ಉಪಾಸನವೂ ಇತ್ತೆಂದು ತೋರಿಬರುತ್ತದೆ. ಈ ವಿವಾದಾಸ್ಪದ ವಿಷಯವನ್ನು ಕುರಿತು ದಾಸನು ಬರೆದ ಶ್ರೀಮದ್ರಹಸ್ಯತ್ರಯಸಾರದಲ್ಲಿ ಚರ್ಚಿಸಲ್ಪಟ್ಟಿರುತ್ತದೆ. ಆದರೆ ಶಿಷ್ಟಾಚಾರ ರೀತ್ಯಾ ಸ್ತ್ರೀಯರಿಗೆ ಅಧಿಕಾರವಿಲ್ಲವೆಂದು ನಿರ್ಧರಿಸಲ್ಪಟ್ಟಿರುತ್ತದೆ. ಅದಕ್ಕೆ ಕಾರಣಗಳೂ ಉಂಟು. ಶ್ರೀ ವೇದವ್ಯಾಸರು **ಯೋಷಿತ್ಸಾಧುಃ** ಎಂದು ಹೇಳಿದ ವಾಕ್ಯವು ಇಲ್ಲಿ ಅನುಸಂಧೇಯವು. **"ಭರ್ತೃಶುಶ್ರೂಷಯಾ ನಾರೀ ಲಭತೇ ಸ್ವರ್ಗಮುತ್ತಮಂ"** ಎಂಬ ವಾಲ್ಮೀಕಿ ಮಹರ್ಷಿವಾಕ್ಯವೂ ಸಹ ಅನುಸಂಧೇಯವು, ಇಲ್ಲಿ **ಸ್ವರ್ಗಮುತ್ತಮಂ** ಎಂಬುದರಿಂದ ಮೋಕ್ಷವೇ ಹೇಳಲ್ಪಟ್ಟಿತು. ಶೂದ್ರಾದಿಗಳಿಗೆ ಉಪಾಸನೆಯಲ್ಲಿ ಅಧಿಕಾರವಿಲ್ಲವೆಂಬುದು ಅಪಶೂದ್ರಾಧಿಕರಣದಲ್ಲಿ ಉಪಪಾದಿತವು. ಶ್ರೀರಾಮಚಂದ್ರನ ಕಾಲದಲ್ಲಿ ಒಬ್ಬ ಶೂದ್ರನು ತನ್ನ ಸ್ವಧರ್ಮವನ್ನು ತೊರೆದು ಉಪಾಸನಾನಿರತನಾಗಿದ್ದುದರ ಮೂಲಕ ಅನರ್ಥವು ಪ್ರಾಪ್ತವಾದುದರಿಂದ ಸಂಹರಿಸಲ್ಪಟ್ಟನೆಂಬ ವೃತ್ತಾಂತವಿರುತ್ತದೆ. **ಶೂದ್ರಸ್ಸಾಧುಃ** ಎಂಬ ವ್ಯಾಸೋಕ್ತಿಯ ಪ್ರಕಾರ ಬಹು ಸುಲಭವಾಗಿಯೇ ಶೂದ್ರನಿಗೆ ಮೋಕ್ಷಪ್ರಾಪ್ತಿಯುಂಟಾಗುವಾಗ ಈ ಕಷ್ಟತರವಾದ ಉಪಾಸನೆಯು ಅನಾವಶ್ಯಕವು. ಅದೂ ಅಲ್ಲದೆ ಮನುಷ್ಯರಲ್ಲದೆ ದೇವತೆಗಳಿಗೂ ಸಹ ಉಪಾಸನದಲ್ಲಿ ಅಧಿಕಾರ

ಉಂಟೆಂಬ ತಮುಪರ್ಯಪಿ ಬಾದರಾಯಣ **ಸ್ಸಂಭವಾತ್** (೧.೩.೨೫) ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂದ **ಮನುಷ್ಯಾಣಾಂ** ಎಂಬುದು **ಆರ್ಥಿತ್ವ ಸಾಮರ್ಥ್ಯ** ವಿರುವ ಎಲ್ಲರಿಗೂ ಉಪಲಕ್ಷಣವೆಂದು ಭಾವಿಸತಕ್ಕದ್ದು. ಪ್ರಕೃತದಲ್ಲಿ ಅರ್ಜುನನು ಮನುಷ್ಯನಾದುದರಿಂದಲೂ, ಆತನನ್ನು ವ್ಯಾಜಮಾಡಿಕೊಂಡು ಉಪದೇಶವು ಇತರರಿಗಾದುದರಿಂದಲೂ, **ಮನುಷ್ಯಾಣಾಂ** ಎಂಬ ಪ್ರಯೋಗವು, **ಮನುಷ್ಯಾಣಾಂ** ಎಂಬ ಪ್ರಯೋಗಕ್ಕೆ ಇನ್ನೊಂದು ಕಾರಣವೂ ಉಂಟು. ವ್ಯಾಸ ಸೂತ್ರ (೧.೩.೨೪) ದಲ್ಲಿ **"ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್"** ಎಂಬಲ್ಲಿ **ಮನುಷ್ಯ** ಶಬ್ದವೇ ಉಪಯೋಗಿಸಲ್ಪಟ್ಟಿರುತ್ತದೆ. ಶಾಸ್ತ್ರವು ಮನುಷ್ಯಾಧಿಕಾರಿಯನ್ನೇ ಕುರಿತು ಉಂಟಾದುದರಿಂದಲೂ ಉಪಾಸಕನಾದ ಮನುಷ್ಯನ ಅನುಗ್ರಹಕ್ಕಾಗಿ ಆತನ ಹೃದಯದಲ್ಲೇ ಕಠಶ್ರುತಿಯಲ್ಲಿ ಹೇಳಿರುವಹಾಗೆ **"ಅಙ್ಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿತಿಷ್ಠತಿ"** ಎಂದು ಇರುವದರಿಂದ **ಮನುಷ್ಯ** ನೆಂದು ಪ್ರಯೋಗಿಸಿರಬಹುದು. ಅದೂ ಅಲ್ಲದೆ ಶ್ರೀ **ಕೃಷ್ಣ** ಭಗವಾನರವರು ಮನುಷ್ಯಾವತಾರಿಯಾಗಿ, ಧರ್ಮಸ್ಥಾಪನೆಯೂ ಧರ್ಮೋಪದೇಶವೂ ಮನುಷ್ಯರಿಗಾಗಿಯೇ ಯಾದುದರಿಂದ **ಮನುಷ್ಯಾಣಾಂ** ಎಂಬ ಪ್ರಯೋಗವು. **ಸಹಸ್ರೇಷು** ಎಂಬ ಪದವು ಸಹಸ್ರಕ್ಕಿಂತಲೂ ಹೆಚ್ಚಾದ ಸಂಖ್ಯೆಯಲ್ಲೇ ಅಭಿಪ್ರಾಯವಾದುದರಿಂದ, ಅನೇಕ ಮಂದಿಗಳಲ್ಲಿ ಎಂಬರ್ಥವನ್ನು ಹೇಳತಕ್ಕದ್ದು, **ಕಶ್ಚಿತ್**-ಯಾವನೋ ಒಬ್ಬನು, ಇಲ್ಲಿಯೂ ಒಬ್ಬನು ಎಂಬುದರಿಂದ ಒಬ್ಬನೇಯಲ್ಲವು, ಬಹಳ ದುರ್ಲಭವಾದುದರಿಂದ ಎಲ್ಲೋ ಒಬ್ಬೊಬ್ಬನು ಎಂಬ ಭಾವವು, ಏಕೆಂದರೆ ಶ್ರೀಕೃಷ್ಣನ ಎದುರಿಗೇನೇ ಭೀಷ್ಮದ್ರೋಣರಾದ ಬ್ರಹ್ಮವಿತ್ತುಗಳಿದ್ದಾರೆ. ಅದೂ ಅಲ್ಲದೆ ಅಕ್ರೂರ ಉದ್ಧವಾದಿಗಳಿದ್ದಾರೆಂಬುದೂ ಸರ್ವೇಶ್ವರನಿಗೆ ತಿಳಿದ ವಿಷಯವೇ, **ಸಿದ್ಧಯೇ**-ಸಿದ್ಧಿಯನ್ನು ಹೊಂದುವದಕ್ಕಾಗಿ, **ಯತತೇ**-ಅದಕ್ಕೆ ಬೇಕಾದ ಜ್ಞಾನ ವಿಜ್ಞಾನಗಳನ್ನು ಹೊಂದಲು ಪ್ರಯತ್ನಿಸುವನು, **ಯತತಾ ಮಪಿ ಸಿದ್ಧಾನಾಂ**-ಒಂದುವೇಳೆ ಹೀಗೆ ಪ್ರಯತ್ನಪಟ್ಟು ಜ್ಞಾನ ವಿಜ್ಞಾನಗಳನ್ನು ಹೊಂದುವ ಸಿದ್ಧಿಯುಂಟಾದವರಲ್ಲೂ, **ಸಹಸ್ರೇಷು**-ಅನೇಕರಲ್ಲಿ, **ಕಶ್ಚಿತ್**-ಯಾವನೋ ಒಬ್ಬೊನು, **ಮಾಂ**-ನನ್ನನ್ನು, **ತತ್ವತಃ**-ಯಥಾವತ್ತಾಗಿ, ನಾನು ಹೇಗಿರುವೆನೋ ಹಾಗೆ, **ಸಿದ್ಧಯೇ**-ಮೋಕ್ಷಪ್ರಾಪ್ತಿರೂಪ ಸಿದ್ಧಿಗೋಸ್ಕರವಾಗಿ ಭಗವಂತನ ಪ್ರೀತಿಯುಂಟಾಗಿ ಆತನ ಪ್ರಾಪ್ತಿಯುಂಟಾಗುವ ತಿಳಿಯೋಣವೇ ಇಲ್ಲಿ ತತ್ತ್ವತಃ ತಿಳಿಯೋಣವು, **ವೇತ್ತಿ**-ಪರಮಾತ್ಮ ಸಾಕ್ಷಾತ್ಕಾರ ಉಂಟಾಗುವವರೆಗೂ ಉಪಾಸನೆ ಮಾಡುತ್ತಾನೆ. ಹೀಗೆ ಹೇಳಿದುದರಿಂದ ಮೋಕ್ಷೋಪಾಯವನ್ನು ಅನುಷ್ಠಿಸಬೇಕೆಂಬ ಉದ್ದೇಶದಿಂದ ಅದಕ್ಕೆ ಬೇಕಾದ ಸಾಧನರೂಪವಾದ ಜ್ಞಾನಗಳನ್ನೆಲ್ಲಾ ಸಙ್ಗ್ರಹಿಸುವದಕ್ಕಾಗಿ ಯತ್ನಿಸುವರೇ ದುರ್ಲಭವು, ಅನೇಕರಿಗೆ ಅಧಿಕಾರವೇ ಇಲ್ಲವು. ಇನ್ನು ಬಹುಮಂದಿಗೆ ಸಾಮರ್ಥ್ಯವೇ ಇಲ್ಲವು. ಇವೆರಡೂ ಇರುವವರಿಗೆ ಪ್ರಯತ್ನವೇ ಇಲ್ಲವು. ಅದಕ್ಕೆ ಬೇಕಾದ ಜ್ಞಾನಸಂಪಾದನೆಯ ಮಧ್ಯದಲ್ಲೇ ವಿಚ್ಛಿತಿಯುಂಟಾಗಬಹುದು. ಅಥವಾ ಜ್ಞಾನಸಂಪಾದನೆಯನ್ನು ಮಾಡಿದರೂ, ತತ್ತ್ವತಃ ಉಪಾಸನೆಯ ಪ್ರವೃತ್ತಿಯಿಲ್ಲದೆ ಹೋಗಬಹುದು. ಒಂದುವೇಳೆ ಉಪಾಸನೆಯನ್ನು ಮಾಡಿದರೂ ಪ್ರಾಪ್ಯವನ್ನು ಹೊಂದುವಹಾಗೆ **ತತ್ವತಃ** ಅದನ್ನು ಮಾಡುವದೂ ಇನ್ನೂ ದುರ್ಲಭವು. ಹೇಗೆಂದರೆ ಕೆಲವರು ಅಚಿತ್ತನ್ನೂ ಇನ್ನು ಕೆಲವರು ಬ್ರಹ್ಮರುದ್ರಾದಿಗಳನ್ನೂ ಹೀಗೆ ಪ್ರತೀಕಾಲಂಬನ ರೂಪ ಉಪಾಸನವನ್ನು ಮಾಡಬಹುದು. ಇವರುಗಳು ತತ್ತ್ವತಃ ನನ್ನನ್ನು ತಿಳಿದು ನನ್ನನ್ನು ಉಪಾಸಿಸಿದವರಲ್ಲವು. ಆದುದರಿಂದ ಅಂತವರಿಗೆ ಮೋಕ್ಷಫಲವಿಲ್ಲವೆಂಬುದೂ ಸೂಚಿತವು. ಹೀಗೆ ಸರಿಯಾದ ಯಥಾರ್ಥವಾದ ಜ್ಞಾನಸಪ್ರಾಪ್ತಿಯುಂಟಾಗಿ ಪರಮಾತ್ಮಸಾಕ್ಷಾತ್ಕಾರ ಮೂಲಕ ಪ್ರಾಪ್ಯವು ದೊರೆಯುವದು ಪರಮದುರ್ಲಭವೆಂಬ ಭಾವವು. ಈ ಶ್ಲೋಕದಲ್ಲಿ ವಿಜ್ಞಾನಸಹಿತವಾದ

**ಭಾ. ಮನುಷ್ಯಾಃ - ಶಾಸ್ತ್ರಾಧಿಕಾರಯೋಗ್ಯಾಃ, ತೇಷಾಂ ಸಹಸ್ರೇಷು ಕಶ್ಚಿದೇವ ಸಿದ್ಧಿ ಪರ್ಯಂತಂ ಯತತೇ। ಸಿದ್ಧಿಪರ್ಯಂತಂ ಯತಮಾನಾನಾಂ ಸಹಸ್ರೇಷು ಕಶ್ಚಿದೇವ ಮಾಂ ವಿದಿತ್ವಾ ಮತ್ತಸ್ಸಿದ್ಧಯೇ ಯತತೇ। ಮದ್ವಿದಾಂ ಸಹಸ್ರೇಷು ಕಶ್ಚಿದೇವ ತತ್ತ್ವತೋ ಯಥಾವಸ್ಥಿತಂ ಮಾಂ ವೇತ್ತಿ। ನ ಕಶ್ಚಿದಿತ್ಯಭಿಪ್ರಾಯಃ।**

ಜ್ಞಾನವು ಏತಕ್ಕೆಂಬುದು ನಿರ್ಧರಿಸಿ ಹೇಳಲ್ಪಟ್ಟಿತು. ಆತನ ಸ್ವರೂಪ ರೂಪಗುಣ ವಿಭವೈಶ್ವರ್ಯ ಗಳ ಜ್ಞಾನದಿಂದ ಆತನಲ್ಲಿ ನಿರತಿಶಯಭಕ್ತಿಯು ನೆಲೆಗೊಂಡು, ಏಕಾಂತ್ಯದಿಂದ ಧ್ಯಾನಿಸಿ, ಸಾಕ್ಷಾತ್ಕರಿಸಿ, ಆತನ ಪ್ರಾಪ್ತಿಯುಂಟಾಗುವದಕ್ಕಾಗಿ ಎಂದು ಹೇಳಲ್ಪಟ್ಟಿತು. ಆ ಕಾರಣದಿಂದ ಇಂತಹ ಜ್ಞಾನವು ಸಙ್ಕಲ್ಪ, ಯತನ, ಉಪಾಯಾನುಷ್ಠಾನಗಳಮೂಲಕ ಪರಮಾತ್ಮಪ್ರಾಪ್ತಿ ಹೇತುವೆಂದು ಹೇಳಿ, ಅಂತಹ ಜ್ಞಾನವನ್ನು ಹೊಂದಿ, ಸ್ಥೈರ್ಯದಿಂದಲೂ ಉಪಾಯಾನುಷ್ಠಾನ ವನ್ನು ಮಾಡಿ ಫಲವನ್ನು ಸಾಧಿಸಿಕೊಳ್ಳುವದು ಸುಲಭವಲ್ಲವೆಂದು ಹೇಳಿದರು. ಇಲ್ಲಿ **ಕಶ್ಚಿದ್ಯ ತತಿ ಸಿದ್ಧಯೇ** ಎಂಬಲ್ಲಿ ಸಿದ್ಧಿಯಾವದು ಎಂದರೆ ಮುಂದೆ **ಸಿದ್ಧಾನಾಂ** ಎಂದು ಹೇಳಿ ಅವರು ಗಳಲ್ಲಿ ಯಾವನೋ ಒಬ್ಬನು **ಮಾಂ ವೇತ್ತಿತತ್ತ್ವತಃ** ಎಂದು ಹೇಳಿರುವದರಿಂದ ಈ ಜ್ಞಾನ ದಿಂದ ಉಪಾಸನಾರ್ಹ ಅಧಿಕಾರವನ್ನು ಹೊಂದುವದೇ ಸಿದ್ಧಿಯು.

**ಭಾಷ್ಯಾರ್ಥವು:—**ಇಲ್ಲಿ **ಮನುಷ್ಯಾಃ** ಎಂದರೆ **ಶಾಸ್ತ್ರಾಧಿಕಾರಯೋಗ್ಯಾಃ**-ಶಾಸ್ತ್ರಾಧಿ ಕಾರದಿಂದ ಉಪಾಸನಕ್ಕೆ ಅರ್ಹರು ಹೇಳಲ್ಪಟ್ಟರು. ಸ್ತ್ರೀಶೂದ್ರಾದಿಗಳನ್ನು ವ್ಯಾವರ್ತಿಸಿ ಹೇಳು ವದಕ್ಕಾಗಿಯೂ, ಅಧಿಕಾರವುಳ್ಳ ದೇವತೆಗಳನ್ನು ಬೋಧಿಸುವದಕ್ಕಾಗಿಯೂ ಹಾಗೆ ವ್ಯಾಖ್ಯಾ ನವು **ತೇಷಾಂ** ಅಂತಹ ಶಾಸ್ತ್ರಾಧಿಕಾರವಿರುವವರ, **ಸಹಸ್ರೇಷು**-ಸಾವಿರಾರು ಮಂದಿಗಳಲ್ಲಿ, **ಕಶ್ಚಿದೇವ** - ಯಾವನೋ ಒಬ್ಬನು ಸಿದ್ಧಿಪರ್ಯಂತವಾಗಿ, **ಯತತೇ**-ಪ್ರಯತ್ನಿಸುವನು. ಸಿದ್ಧಿ ಪರ್ಯಂತವಾಗಿಯೂ, **ಯತಮಾನಾನಾಂ ಸಹಸ್ರೇಷು**-ಪ್ರಯತ್ನಿಸುವರ ಸಾವಿರಾರು ಮಂದಿ ಗಳಲ್ಲಿ, **ಕಶ್ಚಿದೇವ**-ಎಲ್ಲೋ ಒಬ್ಬೊಬ್ಬನು, **ಮಾಂ ವಿದಿತ್ವಾ**-ನನ್ನನ್ನು ಉಪಾಸನೆ ಮಾಡಿದವ ನಾಗಿ, **ಮತ್ತಃ**-ನನ್ನ ಮೂಲಕವಾಗಿಯೇ ಸಿದ್ಧಿಗೋಸ್ಕರ, **ಯತತೇ**-ಪ್ರಯತ್ನ ಮಾಡುವನು, **ಮದ್ವಿದಾಂ ಸಹಸ್ರೇಷು**-ನನ್ನನ್ನುಪಾಸಿಸುವ ಸಾವಿರಾರು ಮಂದಿಯಲ್ಲಿ, **ಕಶ್ಚಿದೇವ**-ಎಲ್ಲಿ ಯೋ ಒಬ್ಬನು, **ತತ್ತ್ವತಃ**-ಪ್ರಾಪ್ಯನೇ ಪ್ರಾಪಕನು ಎಂದು ಯಥಾರ್ಥವಾಗಿ ತಿಳಿದು, **ಮಾಂ ವೇತ್ತಿ**-ನನ್ನನ್ನು ಉಪಾಸಿಸಿಸುವನು, ಎಂದರೆ **ನ ಕಶ್ಚಿದಿತ್ಯಭಿಪ್ರಾಯಃ**-ಯಾವನೊಬ್ಬನೂ ಇಲ್ಲವೆಂಬ ಭಾವವು. ಹೀಗೆ ಹೇಳಿಬಿಟ್ಟರೆ ಗೀತಾಶಾಸ್ತ್ರವೇ ನಿರರ್ಥಕವೆಂಬಭಿಪ್ರಾಯ ಬರ ಬಹುದು. ಈ ಭಕ್ತಿಯೋಗವು ಗುರೂಪಾಯವು, ಬಹು ಕಷ್ಟದಿಂದ ಸಾಧಿಸತಕ್ಕದ್ದೆಂಬ ಭಾವ ದಿಂದ ಹಾಗೆ ಅಪ್ಪಣೆ ಕೊಡಿಸಿರುತ್ತಾರೆ. ಶ್ರೀನಾಥಮುನಿ ಮೊದಲಾದವರ ಕಾಲದಲ್ಲಿ ಉಪಾಸ ನವು ವಿಶೇಷವಾಗಿ ರೂಢಿಯಲ್ಲಿದ್ದುದು, ಶ್ರೀ ಭಾಷ್ಯಕಾರರ ಕಾಲಕ್ಕೇನೆ ಕಮ್ಮಿಯಾಗುತ್ತಾ ಬಂದಿತು. ಇನ್ನೊಂದು ಸಾಧನಾನುಷ್ಠಾನವಾದ ಭರನ್ಯಾಸವು ಉಪಾದೇಯವಾಗಿ ಬಂದುದ ರಿಂದ ಶ್ರೀ ಯಾಮುನೇಯರೂ, ಶ್ರೀ ಭಾಷ್ಯಕಾರರೂ, ಅವರ ಶಿಷ್ಯರುಗಳೂ ಸಹ ಈ ಲಘು ವಾದ ಉಪಾಯವನ್ನೇ ಅನುಷ್ಠಿಸಿದರಾದಪ್ರಯುಕ್ತ **ನ ಕಶ್ಚಿದಿತ್ಯಭಿಪ್ರಾಯಃ** ಎಂದು ಪ್ರಯೋ ಗವು; ಅಥವಾ ಸರ್ವೇಶ್ವರನು ಕೃಷ್ಣಾವತಾರವನ್ನು ಮಾಡಿ ಈ ಸಾಧನಾನುಷ್ಠಾನವನ್ನು ವಿಶದ ವಾಗಿ ಉಪದೇಶಿಸುವದಕ್ಕೆ ಮೊದಲು ಹಿಂದೆ **"ಯೋಗೋ ನಷ್ಟಃ ಪರಂತಪ"** (ಗೀತ.೪.೨.) ಎಂಬಲ್ಲಿ ಹೇಳಿರುವಹಾಗೆ ಬಹಳ ಅಪರೂಪವಾಗಿ ಇಲ್ಲವೇ ಇಲ್ಲವೆಂದು ಹೇಳಬಹುದೆಂಬ ಅಭಿ ಪ್ರಾಯದಿಂದ ನಕಶ್ಚಿತ್ ಯಾವನೂ ಇಲ್ಲವೆಂಬ ಪ್ರಯೋಗವು. ಭರನ್ಯಾಸ ರೂಪಾನುಷ್ಠಾನದ

**ಭಾ. (೧) "ಸ ಮಹಾತ್ಮಾ ಸು ದುರ್ಲಭಃ", (೨) "ಮಾಂ ತು ವೇದ ನ ಕಶ್ಚನ" ಇತಿ ಹಿ ವಕ್ಷ್ಯತೇ ||೩||**

**ಮೂ. ಭೂಮಿರಾಪೋಽನಲೋ ವಾಯುಃ ಖಂಮನೋಬುದ್ಧಿ ರೇವಚ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ||** ೪.

ಅನುಸಂಧಾನವೇ ಅವರು ಬರೆದಿರುವ ಅಮೋಘವಾದ ಶರಣಾಗತಿಗದ್ಯದಲ್ಲಿ ಅನುಸಂಧೇಯವು; ಆದರೆ ಉಪಾಸನದ್ವಾರಾಸಿದ್ಧಿ ಎಂಬುವದೇನೋ ದುರ್ಲಭವೆಂದೇ ಅಂಗೀಕರಿಸಿದವರಾಗಿ, ಆ ದೌರ್ಲಭ್ಯವೇ ಮುಂದೆಯೂಕೂಡ ಉಪಪಾದಿತವಾಗಿದೆ ಎಂದು ತಿಳಿಸುವದಕ್ಕಾಗಿ ಅಂತಹ ವಾಕ್ಯಗಳನ್ನು ಉದಾಹರಿಸುತ್ತಾರೆ. **(೧) ಸ ಮಹಾತ್ಮಾ ಸುದುರ್ಲಭಃ"-ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ ಮಾಂ ಪ್ರಪದ್ಯತೇ। ವಾಸುದೇವ ಸ್ಸರ್ವಮಿತಿ ಸ ಮಹಾತ್ಮಾಸು ದುರ್ಲಭಃ"** ಎಂಬುದು ಪೂರಾ ಶ್ಲೋಕವು. ಇದರರ್ಥವು ಮುಂದೆ ಬರೆಯಲ್ಪಡುತ್ತದೆ. ಅನೇಕ ಜನ್ಮಗಳು ಕಳೆದನಂತರ ಸುಕೃತ ಪರಿಪಾಕದಿಂದ ಪರಮಾತ್ಮಸ್ವರೂಪಾದಿಗಳನ್ನು ತಿಳಿದವನಾಗಿ ಉಪಾಸನೆಯನ್ನಾರಂಭಿಸಿ ಅಂಗಪ್ರಪದನವನ್ನು ಮಾಡುವನು. ಹೀಗೆ ವಾಸುದೇವನೇ ಸರ್ವವೆಂದು ಭಾವಿಸುವ ಮಹಾತ್ಮನು ದೊರೆಯುವದು ತುಂಬಾ ದುರ್ಲಭವು. **(೨) "ಮಾಂ ತು ವೇದ ನ ಕಶ್ಚನ"-"ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ। ಭವಿಷ್ಯಾಣಿ ಚ ಭೂತಾನಿ ಮಾಂತುವೇದ ನಕಶ್ಚನ"** ಎಂಬುದು ಪೂರಾ ಶ್ಲೋಕವು. ಸರ್ವೇಶ್ವರನಾಗಿ ಸರ್ವಜ್ಞನಾದ ನಾನು ಹಿಂದೆ ಇದ್ದ, ಈಗ ಇರುವ, ಮುಂದೆ ಹುಟ್ಟುವ ಪ್ರಾಣಿಗಳನ್ನೆಲ್ಲಾ ಸದಾ ತಿಳಿದಿರುವೆನು. ಲೋಕೋಪಕಾರಕ್ಕಾಗಿ ನಾನು ಅವತರಿಸಿರುವೆನೆಂಬುದನ್ನು ಮಾತ್ರ ಯಾರೂ ಅರಿಯಲಾರರು. ಅದನ್ನು ತಿಳಿಯುವರು ತುಂಬಾ ದುರ್ಲಭವೆಂಬ ಭಾವವು. **ಇತಿ ಹಿವಕ್ಷ್ಯತೇ-** ಹೀಗೆ ಅಲ್ಲವೇ ಮುಂದೆ ಹೇಳಲ್ಪಡುತ್ತದೆ.

**ಮೂಲಕ್ಕೆ ಅರ್ಥವು:—**ಈ ಶ್ಲೋಕ ಮೊದಲುಗೊಂಡು **"ನತ್ವಂ ತೇಷು ತೇ ಮಯಿ"** (೧೨ನೆಯ ಶ್ಲೋಕ) ಎಂಬುವವರೆಗೂ ತನ್ನ ಮಹಾತ್ಮ್ಯೆಯನ್ನು ಉಪದೇಶಿಸುತ್ತಾರೆ. ಸವಿಜ್ಞಾನವಾದ ಜ್ಞಾನವನ್ನುಪದೇಶಿಸುವೆನೆಂಬ ಪ್ರತಿಜ್ಞಾವಾಕ್ಯದಿಂದ ಈಶ್ವರನಾದ ತಾನು ತನ್ನೊಂದಿಗೆ ಸೇರಿಯೇ ಇರುವ ಚಿತ್ತಿಗಿಂತಲೂ ಅಚಿತ್ತಿಗಿಂತಲೂ ಹೇಗೆ ವಿಲಕ್ಷಣನೆಂಬುದನ್ನೂ, ತಾನು ಅವುಗಳಿಗೆ ಹೇಗೆ ಶೇಷಿ ಎಂಬುದನ್ನೂ ತಿಳಿಸುವದಕ್ಕಾಗಿ, ಮೂಲ ಪ್ರಕೃತಿಯನ್ನೂ ಅದರ ವಿಕಾರಗಳನ್ನೂ, ಅವು ಎಂಟು ವಿಧವೆಂಬುದನ್ನೂ, ಈ ಶ್ಲೋಕದ ಮೂಲಕ ನಿರೂಪಣೆ ಮಾಡುತ್ತಾರೆ. ಹಾಗೆ ಹೇಳುವಾಗ ಪ್ರತ್ಯಕ್ಷದಲ್ಲಿ ಕಣ್ಣಿಗೆ ಕಾಣುವ ವ್ಯಷ್ಟಿ ಸೃಷ್ಟಿಯ ವಿಕಾರಗಳನ್ನು ಕಣ್ಣಿಗೆ ಕಾಣದ ಸಮಷ್ಟಿ ಸೃಷ್ಟಿಯ ವಿಕಾರಗಳನ್ನೂ ಸೇರಿಸಿಕೊಂಡು ಮೂಲಪ್ರಕೃತಿಯವರೆಗೂ ಹೇಳುತ್ತಾರೆ. **ಭೂಮಿ**-ಪೃಥಿವೀ, **ಆಪಃ**-ನೀರು, **ಅನಲಃ**-ತೇಜಸ್ಸು, **ವಾಯುಃ**-ವಾಯುವು, **ಖಂ**-ಆಕಾಶವೂ, ಹೀಗೆ ಪಂಚಭೂತಗಳು ಹೇಳಲ್ಪಟ್ಟವು. ಇವುಗಳಲ್ಲೇ ಪಂಚತನ್ಮಾತ್ರೆಗಳೂ ಸಹ ಸೇರಿದವು, ಆದುದರಿಂದ ಹತ್ತು ವಿಕಾರಗಳು ಹೇಳಲ್ಪಟ್ಟವು. ಮನಸ್ಸಿನ ಮೂಲಕವಾಗಿ ಅಂತರಿಂದ್ರಿಯವು ಹೇಳಲ್ಪಟ್ಟಿದುದರಿಂದ ಅದರೊಂದಿಗೆ ಬಹಿರಿಂದ್ರಿಯಗಳಾದ ಐದು ಜ್ಞಾನೇಂದ್ರಿಯಗಳೂ ಐದು ಕರ್ಮೇಂದ್ರಿಯಗಳೂ ಹೇಳಲ್ಪಟ್ಟವು. ಇವು ಮನಸ್ಸಿಗೆ ಅಧೀನವಾದುದರಿಂದ ಯಾವಾಗ ಮನಸ್ಸು ಹೇಳಲ್ಪಟ್ಟಿತೋ ಉಪಲಕ್ಷಣವಾಗಿ ಏಕಾದಶೇಂದ್ರಿಯಗಳೂ ಹೇಳ

(೧) ಗೀ. ೭. ೧೯. (೨) ೭. ೨೬.

**ಭಾ. ಅಸ್ಯ ವಿಚಿತ್ರಾ ನನ್ತಭೋಗ್ಯ ಭೋಗೋಪಕರಣ ಭೋಗಸ್ಥಾನರೂಪೇಣಾ ವಸ್ಥಿತಸ್ಯ ಜಗತಃ, ಪ್ರಕೃತಿ ರಿಯಂ ಗನ್ಧಾದಿಗುಣಕ ಪೃಥಿವ್ಯಪ್ತೇಜೋವಾಯ್ವಾಕಾ**

ಲ್ಪಟ್ಟವು, ಹೀಗೆ ೨೧ ವಿಕಾರಗಳು ಬೋಧಿತವಾದವು; **ಬುದ್ಧಿ** ಎಂದರೆ ಮಹತ್ತತ್ತ್ವವೂ, ಅಹಂಕಾರವೂ, ಈ ವಿಕಾರಗಳಿಗೆಲ್ಲಾ ಪ್ರಧಾನವಾದ ಮೂಲಪ್ರಕೃತಿಯೂ, ಹೀಗೆ ೨೪ ಅಚಿತ್ತತ್ತ್ವಗಳುಂಟೆಂದು ಸಾಂಖ್ಯರು ಹೇಳಿದುದನ್ನೇ ಶಾಸ್ತ್ರಜ್ಞರೆಲ್ಲಾ ಅಂಗೀಕರಿಸಿರುತ್ತಾರೆ. ಮನಶ್ಶಬ್ದಕ್ಕೆ ಅಹಂಕಾರವೆಂದೂ, ಅಹಂಕಾರಶಬ್ದಕ್ಕೆ ಅವಿದ್ಯಾಸಂಯುಕ್ತವಾದ ಅವ್ಯಕ್ತವೆಂದೂ ಹೀಗೆ ಸರ್ವತ್ರ ಲಾಕ್ಷಣಿಕಾರ್ಥಗಳನ್ನೇ ಕೆಲವರು ಕಲ್ಪಿಸಿರುತ್ತಾರೆ. ಇದು ಸರಿಯಲ್ಲವು. ಇದರಿಂದ ಸಾಂಖ್ಯರು ಇಪ್ಪತ್ತು ನಾಲ್ಕಾಗಿ ವಿಭಾಗಿಸಿದುದನ್ನೇ ಇಲ್ಲಿ ಮೂಲಪ್ರಕೃತಿಯೂ ಎಂಟು ವಿಕಾರಗಳೂ ಸೇರಿ ಒಂಭತ್ತಾಗಿ ವಿಭಾಗಿಸಲ್ಪಟ್ಟಿರುತ್ತದೆ. ಪ್ರಕೃತಿ ವಿಕಾರಗಳನ್ನು ಅನೇಕರು ಒಟ್ಟುಗೂಡಿಸಿ ಅವರವರಿಗೆ ಇಷ್ಟಬಂದಂತೆ ವಿಭಾಗಿಸಿರುತ್ತಾರೆ. ಅಭಿಪ್ರಾಯಗಳಲ್ಲೇನೂ ವಿರೋಧವಿಲ್ಲವು. **ಇತಿ**-ಹೀಗೆ, **ಮೇ**-ನನ್ನ ಸಂಬಂಧವಾದ, **ಪ್ರಕೃತಿಃ**-ಮೂಲ ಪ್ರಕೃತಿಯು **ಭಿನ್ನಾ**-ವಿಕಾರಹೊಂದುವದರಿಂದ ಬೇರೆಬೇರೆಯಾಗಿ, **ಅಷ್ಟಧಾ**-ಎಂಟು ವಿಧವಾದುದಾಗಿರುತ್ತದೆ. ಇವುಗಳಿಗೆ **ವಿಕೃತಿ**ಗಳೆಂದು ಹೆಸರು. ಆದರೆ ಸಾಂಖ್ಯರ ವಿಭಾಗವೂ ಶಾಸ್ತ್ರಸಮ್ಮತವಾದುದು. ಇಲ್ಲಿ ಹೇಳಿರುವ ವಿಭಾಗವು ಸಾಂಖ್ಯರ ವಿಭಾಗವೂ ಸಹ ಎರಡೂ ಒಂದೇ ವಿನಾ ಬೇರೆಯಲ್ಲವೆಂಬುದು ಮೇಲಿನ ವ್ಯಾಖ್ಯಾನದಿಂದ ವ್ಯಕ್ತವು. ಆದರೆ ಪ್ರಕೃತಿಯೂ ಪ್ರಕೃತಿಯ ಕಾರ್ಯಗಳೂ, ೨೪ ಎಂದು ಪ್ರಬುದ್ಧ ಜ್ಞಾನ ಮಹಿಮೆಯುಳ್ಳ ಶ್ರೀ ವ್ಯಾಸರಿಗೆ ತಿಳಿಯದೇ ಎಂದರೆ **ಅಷ್ಟೌ ಪ್ರಕೃತಯಷ್ಷೋಡಶ ವಿಕಾರಾಃ** ಎಂಬ ಗರ್ಭೋಪನಿಷದ್ವಾಕ್ಯವನ್ನನುಸರಿಸಿಯೇ ಹೇಳಿರುತ್ತಾರೆ. ಅವರೇ ಮೋಕ್ಷ ಧರ್ಮದಲ್ಲೂ (ಅ. ೩೧೫) **"ಅಷ್ಟೌ ಪ್ರಕೃತಯಃ ಪ್ರೋಕ್ತಾ ವಿಕಾರಾಶ್ಚಾಪಿ ಷೋಡಶ। ಆಸಾನ್ತು ಸಪ್ತವ್ಯಕ್ತಾನಿ ಪ್ರಾಹುರಧ್ಯಾತ್ಮ ಚಿನ್ತಕಾಃ। ಅವ್ಯಕ್ತಂಚ ಮಹಾಂಶ್ಚೈವ ತಥಾಹಂಕಾರ ಏವಚ। ಪೃಥಿವೀ ವಾಯುರಾಕಾಶ ಮಾಪೋ ಜ್ಯೋತಿಶ್ಚ ಪಂಚಮಂ। ಏತಾಃ ಪ್ರಕೃತಯಸ್ತ್ವಷ್ಟೌ ವಿಕಾರಾನಪಿ ಮೇ ಶೃಣು। ಶ್ರೋತ್ರಂ ತ್ವಕ್ಚೈವ ಚಕ್ಷುಶ್ಚೈವ ಜಿಹ್ವಾ ಘ್ರಾಣಂಚ ಪಂಚಮಂ। ಶಬ್ದಸ್ಸ್ಪರ್ಶಶ್ಚ ರೂಪಂಚ ರಸೋ ಗನ್ಧ ಸ್ತ ಥೈವಚ॥ ವಾಕ್ಚ ಹಸ್ತೌ ಚ ಪಾದೌಚ ಪಾಯುರ್ಮೇಢ್ರಂ ತಥೈವ ಚ। ಏತೇ ವಿಶೇಷಾ ರಾಜೇನ್ದ್ರ ಮಹಾಭೂತೇಷು ಪಂಚಸು।** ಎಂದು ಹೇಳಿರುತ್ತಾರೆ. ಆದರೆ ಪ್ರಕೃತಿಗಳು ಎಂಟು ಯಾವುವು, ವಿಕಾರಗಳು ೧೬ ಯಾವುವು ಎಂಬ ಗಣನೆಯಲ್ಲಿ ಸ್ವಲ್ಪ ವ್ಯತ್ಯಾಸವು, ಏಕೆಂದರೆ ಈ ಶ್ಲೋಕದಲ್ಲಿ ಹಾಗೆ ವಿಭಾಗಿಸಿಲ್ಲವು. ಪ್ರಕೃತಿ ವಿಕಾರಗಳೂ ಸೇರಿ ಒಂಭತ್ತಾಗಿ ಹೇಳಲ್ಪಟ್ಟಿವೆ. ಅವ್ಯಕ್ತ ಮಹದಹಂಕಾರಗಳನ್ನೂ ಪಂಚ ತನ್ಮಾತ್ರೆಗಳನ್ನೂ ಎಂಟು ಪ್ರಕೃತಿಗಳೆಂದೂ, ಹನ್ನೊಂದು ಇಂದ್ರಿಯಗಳನ್ನೂ ಪಂಚಭೂತಗಳನ್ನೂ ಸೇರಿಸಿ ೧೬ ವಿಕಾರಗಳೆಂದೂ ಭಾವಿಸುವದು ಯುಕ್ತವೆಂಬುದು ಶ್ರೀ ಭಾಷ್ಯಕಾರರಭಿಪ್ರಾಯವು. ಹೀಗೆಯೇ ಭಾಗವತದಲ್ಲೂ ಹೇಳಲ್ಪಟ್ಟಿರುತ್ತದೆ. **ಅಷ್ಟೌ ವಿಕೃತಯಃ ಪ್ರೋಕ್ತಾಸ್ತ್ರಯ ಏವ ಹಿ ತದ್ಗುಣಾಃ। ವಿಕಾರಾಷ್ಷೋಡಶಾಚಾರ್ಯೈಃ ಪುಮಾನೇಕಸ್ಸ ಮನ್ವಯಾತ್"** (ಭಾ. ೬. ೬. ೨೨) ಇದು ಶ್ರೀ ಭಾಷ್ಯಕಾರರೂ ಮತ್ತು ಶ್ರೀ ದೇಶಿಕರವರೂ ಅನುಗ್ರಹಿಸಿರುವ ವ್ಯಾಖ್ಯಾನುಸಾರವಾಗಿರುತ್ತದೆ.

**ಭಾಷ್ಯಾರ್ಥವು.—ಅಸ್ಯ** - ಈ ಪರಿದೃಶ್ಯವಾದ, ಪ್ರತ್ಯಕ್ಷಗೋಚರವಾದ, **ವಿಚಿತ್ರಾ.... ರೂಪೇಣ**-ವಿಚಿತ್ರಗಳಾದ ಅನಂತಗಳಾದ ಭೋಗ್ಯವಸ್ತುಗಳೇನು, ಭೋಗಕ್ಕೆ ಬೇಕಾದ ಸಹ

**ಭಾ. ಶಾದಿ ರೂಪೇಣ ; ಮನಃಪ್ರಭೃತೀಂದ್ರಿಯರೂಪೇಣ ಮಹದಹಂಕಾರ ರೂಪೇಣ ಚಾಷ್ಟಧಾ ಭಿನ್ನಾಮದೀಯೇತಿ ವಿದ್ಧಿ ||೪||**

ಕಾರಿ ದ್ರವ್ಯಗಳೇನು. ಭೋಗಕ್ಕನುಕೂಲವಾಗಿರುವ ಪ್ರದೇಶಗಳೇನು, ಈ ರೂಪಗಳಿಂದ **ಅವಸ್ಥಿತಸ್ಯ ಜಗತಃ**-ಇರುವ ಜಗತ್ತಿನ, **ಪ್ರಕೃತಿರಿಯಂ**-ಈ ಪ್ರಕೃತಿ ಎಂದು ಕರೆಯಲ್ಪಡುವ ಅಚಿತ್ತತ್ವವು, **ಗನ್ಧಾದಿ ಗುಣಕ**-ಗನ್ಧವೇ ಮೊದಲಾದ ಗುಣಗಳನ್ನುಳ್ಳ ಎಂದರೆ ಶಬ್ದ ಸ್ಪರ್ಶ ರೂಪ ರಸ ಗಂಧವೆಂಬ ಪಂಚ ತನ್ಮಾತ್ರೆಗಳುಳ್ಳ ಪೃಥಿವೀ, ಅಪ್ಪು, ತೇಜಸ್ಸು, ವಾಯುವು, **ಆಕಾಶಾದಿರೂಪೇಣ** - ಆಕಾಶವೇ ಮೊದಲಾದ ರೂಪದಿಂದಲೂ, ಇವರಿಂದ ೧೦ ವಿಕಾರಗಳು ಹೇಳಲ್ಪಟ್ಟವು, ಮತ್ತು **ಮನಃ ಪ್ರಭೃತಿ ಇಂದ್ರಿಯ ರೂಪೇಣ** - ಮನಸ್ಸವೇ ಮೊದಲಾದ ಇಂದ್ರಿಯ ರೂಪದಿಂದಲೂ ಚಕ್ಷುಸ್ಸು, ಶ್ರೋತ್ರ ಜಿಹ್ವೆ, ನಾಸಿಕಾ, ತ್ವಕ್ಕು ಎಂಬ ಪಂಚ ಜ್ಞಾನೇಂದ್ರಿಯಗಳೂ, ಮುಖ, ಪಾದ, ಪಾಣಿ, ಪಾಯು, ಉಪಸ್ಥ ಎಂಬ ಪಂಚ ಕರ್ಮೇಂದ್ರಿಯಗಳೂ, ಹೀಗೆ ೧೧ ಇಂದ್ರಿಯಗಳು ಹೇಳಲ್ಪಟ್ಟವು, **ಮಹದಹಂಕಾರ ರೂಪೇಣಚ** - ಮೂಲದಲ್ಲಿ ಮಹತ್ತತ್ವವು ಬುದ್ಧಿ ಎಂದು ಹೇಳಲ್ಪಟ್ಟಿರುತ್ತದೆ, ಬುದ್ಧಿ ಎಂದರೆ ಜ್ಞಾನವಲ್ಲವು, ಅಹಂಕಾರವು ಅಹಂಭಾವೋತ್ಪತ್ತಿಗೆ ಕಾರಣಭೂತವಾದ ತತ್ವವು, ಹೀಗೆ ಮಹದಂಕಾರರೂಪದಿಂದಲೂ **ಅಷ್ಟಧಾ**-ಹೀಗೆ ಎಂಟು ವಿಕಾರ ಹೊಂದಿದ ರೂಪದಿಂದ, **ಭಿನ್ನಾ**-ಬೇರೆಬೇರೆಯಾಗಿ ತೋರುವಂಥಾದ್ದಾಗಿದೆ, ಇದಕ್ಕೆ ಕರ್ತೃಪದವು, **ಪ್ರಕೃತಿರಿಯಂ** ಎಂದು ಹಿಂದೆ ಇರುತ್ತದೆ, **ಈ** ಪ್ರಕೃತಿಯೂ ಅದರ ಎಂಟು ವಿಧ ವಿಕಾರಗಳೂ ಸಹ **ಮದೀಯಾ**-ನನ್ನ ಸಂಬಂಧವಾದುದಾಗಿ, **ವಿದ್ಧಿ**-ತಿಳಿ ; ಮೂಲದಲ್ಲಿರುವ **ಮೇ** ಎಂಬ ಪದಕ್ಕೆ **ಮದೀಯಾ** ಎಂದು ಅರ್ಥಮಾಡಿರುತ್ತಾರೆ. ಸಾಮಾನ್ಯ ಸಂಬಂಧ ಷಷ್ಠಿ ಎಂದು ತೋರಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. **ಈ** ಸಂಬಂಧವೆಂಥಾದ್ದೆಂದರೆ ಸ್ವಸ್ವಾಮಿಭಾವವೆಂಬ ಸಂಬಂಧವು. ಸರ್ವೇಶ್ವರನು ಸ್ವಾಮಿಯು, ಅಚೇತನವೆಲ್ಲಾ ಆತನ, **ಸ್ವಂ** - ಸ್ವತ್ತು, ಅದೇ ಶೇಷೇ ಷಷ್ಠೀ ಎಂಬುದಾಗಿ ಭಾವಿಸಿ ಶೇಷ ಶೇಷಿಭಾವವನ್ನು ಹೇಳುತ್ತದೆ. ಇವೆಲ್ಲಾ ಶೇಷವು, ಸರ್ವೇಶ್ವರನು ಶೇಷಿಯು ಎಂದು ಹೇಳಬಹುದು. ಇದು ನಿಯಮಿಸಲು ಯೋಗ್ಯವಾದುದು, ಆತನು ನಿಯಾಮಕನು, ಇದರಿಂದ ಶರೀರಾತ್ಮ ಸಂಬಂಧವು ಹೇಳಲ್ಪಟ್ಟಿತು. ಇದನ್ನೇ ಶ್ರುತಿಯು **"ಯಸ್ಯಪೃಥಿವೀಶರೀರಂ, ಯಸ್ಯಾಪಶ್ಶರೀರಂ, ಯಸ್ಯಾತ್ಮಾಶರೀರಂ, ಯಸ್ಯಸರ್ವಾಣಿ ಭೂತಾನಿಶರೀರಂ"** ಎಂದು ಪ್ರತಿಪಾದಿಸುತ್ತದೆ. ಪ್ರಕೃತಿಯು ತನಗೆ ಶರೀರವಾಗಿ ತನಗೆ ಅಪೃಥಕ್ಸಿದ್ಧ ವಿಶೇಷವೆಂಬುದು **"ನತದಸ್ತಿ ವಿನಾ ಯತ್ಸ್ಯಾತ್ ಮಯಾಭೂತಂ ಚರಾಚರಂ"** ಗೀ. ೧೦. ೩೯ ಎಂಬಲ್ಲಿ ವ್ಯಕ್ತವು. ಇಲ್ಲಿ ಪ್ರಕೃತಿಯ ವಿಕಾರಗಳನ್ನು ಉಪದೇಶಿಸುವಾಗ ಪ್ರತ್ಯಕ್ಷಗಳಾದ ಕಾರ್ಯಗಳಿಂದ ಹಿಡಿದು ಕ್ರಮೇಣ ಕಾರಣವಾದ ಮೂಲ ಪ್ರಕೃತಿಯವರೆಗೂ ಹೇಳಲ್ಪಟ್ಟಿರುತ್ತದೆ.

| | | |
|---|---|---|
| ಮೂಲಪ್ರಕೃತಿ ಅಹಂಕಾರ ಮಹತ್ತತ್ವಗಳು | ೩ | |
| ಪಂಚ ತನ್ಮಾತ್ರೆಗಳೂ ಪಂಚಭೂತಗಳೂ | ೧೦ | ಹೀಗೆ ೨೪ (ಪ್ರಕೃತಿ ೧, |
| ಮನಸ್ಸು, ದಶೇಂದ್ರಿಯಗಳೂ | ೧೧ | ವಿಕೃತಿಗಳು ೨೩) |

ಇವುಗಳನ್ನೇ ಮೂಲಪ್ರಕೃತಿಯಲ್ಲಡೆ ಎಂಟು ವಿಕಾರಗಳು ಎಂದು ಹೇಳಲ್ಪಟ್ಟವು. ಹೀಗೆ ಕಾರಣದಿಂದ ವಿಕಾರಮೂಲಕ ಕಾರ್ಯ ಉಂಟಾಗುವಾಗ ಕಾರಣಗಳ ಸ್ವಲ್ಪಭಾಗಗಳು ಮಾತ್ರವೇ ವಿಕಾರ ಹೊಂದುವದರಿಂದ ೨೪ ವಿಭಾಗಗಳೂ ಉಂಟು. ಕೆಲವು ಸ್ಥಳಗಳಲ್ಲಿ ಶ್ರುತಿಯು ಪ್ರಕೃತಿ ಭೇದಗಳನ್ನು ತಮಸ್ಸು, ಅಕ್ಷರ ಅವ್ಯಕ್ತ ಶಬ್ದಗಳನ್ನುಪಯೋಗಿಸಿ ಅಚಿತ್ತತ್ವ ಸಂಖ್ಯೆಯನ್ನು ಹೆಚ್ಚಿಸಿ ಹೇಳುತ್ತದೆ. ಹೀಗೆ ಸಂಖ್ಯೆಯಲ್ಲಿ ವ್ಯತ್ಯಾಸಕ್ಕೆ ಕಾರಣವು, ಪ್ರಕೃತಿಯ ವಿಕಾರ ಪ್ರಭೇ

ದಗಳಲ್ಲಿ ಕೆಲವನ್ನು ಹೇಳಿ ಕೆಲವನ್ನು ಹೇಳದಿರೋಣವು. ಹಾಗೆಯೇ ಇಲ್ಲಿ ಒಂಭತ್ತೆಂಬ ಪ್ರಭೇದಕ್ಕೆ ಒಟ್ಟುಕೂಡಿಸಿ ಹೇಳಿ ಕೆಲವನ್ನು ಹೇಳದಿರೋಣವು. ಉಪಲಕ್ಷಣ ಮುಖೇನ ಹೇಳಲ್ಪಟ್ಟವೆಂದೂ ಭಾವಿಸಬಹುದು.

ಈ ಅಚಿತ್ತತ್ತ್ವವೇನು ಮಿಥ್ಯೆಯೇ ಸತ್ಯವೇ ಎಂಬ ವಿವೇಚನೆಯಲ್ಲಿ, ಕೆಲವರು ಮಿಥ್ಯೆ ಎಂದು ಅಭಿಪ್ರಾಯಪಡುವರು. ಇದು ಶಾಸ್ತ್ರಸಮ್ಮತವಾದ ಅಭಿಪ್ರಾಯವಲ್ಲವು. ಶ್ರುತಿಗಳು **"ಅಜಾಮೇಕಂ"** ಎಂದು ಆರಂಭಿಸಿ ಹೇಳಿರುವವರಿಂದ ಪ್ರಕೃತಿಗೆ ಉತ್ಪತ್ತಿ ವಿನಾಶಗಳಿಲ್ಲವು, ಸ್ವರೂಪ ವಿಕಾರಮಾತ್ರ ಉಂಟು ಎಂದು ಹೇಳಿದಂತಾಯಿತು. **"ಗೌರನಾದ್ಯನ್ತವತೀ"** ಎಂಬ ಶ್ರುತಿಯೂ ಇದನ್ನೇ ಸಮರ್ಥಿಸುತ್ತದೆ. ಪರಮ ಸಂಹಿತೆಯಲ್ಲಿ **"ಅಚೇತನಾ ಪರಾರ್ಥಾಚ ನಿತ್ಯಾ ಸತತ ವಿಕ್ರಿಯಾ। ತ್ರಿಗುಣಾ ಕರ್ಮಿಣಾಂ ಕ್ಷೇತ್ರಂ ಪ್ರಕೃತೇರೂಪ ಉಚ್ಯತೇ"** ಎಂಬಲ್ಲಿ ಪ್ರಕೃತಿಯ ಲಕ್ಷಣಗಳು ಹೇಳಲ್ಪಟ್ಟಿರುತ್ತದೆ. ಅಚೇತನವು, **ಪರಾರ್ಥಾಚ** ಭೋಕ್ತಾವಾದ ಚೇತನನಿಗಾಗಿಯೇ, ಇದರಿಂದ ಪರಾಕ್ತ್ವವೂ, ಎಂದರೆ ಇತರರಿಗೆ ಪ್ರಕಾಶವಾಗಿರೋಣವೂ. ಭೋಗ್ಯ ಶಬ್ದಾಭಿದೇಯತ್ವವೂ ಹೇಳಲ್ಪಟ್ಟವು. ಶ್ರುತಿಯೂ ಅಚಿತ್ತನ್ನು ಭೋಗ್ಯವೆಂದೇ **"ಭೋಕ್ತಾಭೋಗ್ಯಂ ಪ್ರೇರಿತಾರಂ ಚ ಮತ್ವಾ"** ಎಂಬಲ್ಲಿ ಹೇಳಿರುತ್ತದೆ. **ನಿತ್ಯಾ**-ಸ್ವರೂಪವು ವಿಕಾರಯುಕ್ತವಾದರೂ ದ್ರವ್ಯವು ನಿತ್ಯವು. ಆದರೂ **ಸತತ ವಿಕ್ರಿಯಾ** - ಯಾವಾಗಲೂ ವಿಕಾರವನ್ನೇ ಹೊಂದುವಂಥಾದ್ದು ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ಪರಾಶರರೂ **" ತ್ರಿಗುಣಂ ತಜ್ಜಗದ್ಯೋನಿ ರನಾದಿಪ್ರಭಾವಾಪ್ಯಯಾ "** ಎಂದೂ ಹೇಳಿರುತ್ತಾರೆ. ಆದುದರಿಂದ ಪ್ರತ್ಯಕ್ಷವನ್ನು **ಮಿಥ್ಯೆ** ಎಂದು ಅಪಲಾಪವನ್ನು ಹೇಳುವದು ಸಾಹಸವೇ ಸರಿ. ಇದೇ ಗ್ರಂಥದಲ್ಲೇ ಮುಂದೆ **"ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ"** ವೆಂಬಲ್ಲಿ **ಅನಾದಿ** ಎಂದು ಹೇಳಲ್ಪಟ್ಟಿರುತ್ತದೆ. ಮಿಥ್ಯಾವಾದವು ಸರಿಯಲ್ಲವೆಂಬುದನ್ನು ಪ್ರಥಮ ಸೂತ್ರದ ಮಹಾ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುವ ಸಂದರ್ಭದಲ್ಲ ಶ್ರೀ ಭಾಷ್ಯದಲ್ಲಿ ಕಾಣಬಹುದು. ಇಲ್ಲಿಯೂ ಸಮಗ್ರವಾಗಿ ನಿನಗೆ ವಿಜ್ಞಾನ ಸಹಿತ ಜ್ಞಾನವನ್ನು ಹೇಳುತ್ತೇನೆ ; ಅದನ್ನು ತಿಳಿದನಂತರ ಬೇರೇ ಜ್ಞಾತವ್ಯಾಂಶವೇ ಇಲ್ಲವೆಂದೂ ಹೇಳಿ, ಕರುಣಾಸಾಗರನು ವಂಚನೆ ಬುದ್ಧಿಯಿಂದ ಅಸತ್ಯವಾದುದನ್ನು ಉಪದೇಶಿಸುವನೇ ? ಪ್ರಾಜ್ಞರು ಆಲೋಚಿಸಬಹುದು.

**" ವಿಶ್ವಂ ಸತ್ಯಂ "** ಎಂಬುದಕ್ಕೆ ಪ್ರಾಜ್ಞರಾದ ವಿದ್ಯಾರಣ್ಯರ ವ್ಯಾಖ್ಯಾನದಲ್ಲಿ ವಿಶ್ವಕ್ಕೆ ಸತ್ಯತ್ವವನ್ನು ಅಙ್ಗೀಕರಿಸಿರುವ ಹಾಗೆ ತೋರುತ್ತದೆ. **"ತದೇತತ್ ಸತ್ಯಂ"** ಎಂಬ ಮುಂಡಕ ವಾಕ್ಯದಲ್ಲಿ **ಏತತ್** ಎಂಬುದು ಜಗತ್ತು ಎಂದು ವ್ಯಕ್ತವಾಗಿದ್ದರೂ, ಶ್ರೀಮಚ್ಛಂಕರಾಚಾರ್ಯರವರು ಬಹ್ಮವೆಂದು ಅರ್ಥಮಾಡಿರುತ್ತಾರೆ. **ಯಥಾತಥ್ಯತೋರ್ಥಾ ವ್ಯದದಾಚ್ಛಾಶ್ವತೀಭ್ಯಃ ಸಮಾಭ್ಯಃ** ಎಂಬ ಈಶಾವಾಸ್ಯವಾಕ್ಯದಲ್ಲಿ ಯಥಾರ್ಥವಾಗಿ ವಸ್ತುಗಳನ್ನು ಸೃಷ್ಟಿಸಿದನೆಂದು ಹೇಳಿರುತ್ತದೆ. **" ಯಚ್ಚಿಕೇತ ಸತ್ಯ ಮೇತನ್ನಮೋಘಂ "** ಎಂಬ ಋಗ್ವೇದ ಮಂತ್ರವು ಜಗತ್ತು ಸತ್ಯವೆಂದು ಹೇಳುತ್ತದೆ. **"ಅಜಾಮೇಕಾಂ"** ಎಂಬ ಶ್ರುತಿವಾಕ್ಯವು ನಿತ್ಯತ್ವವನ್ನೇ ಬೋಧಿಸುತ್ತದೆ. **"ಐತದಾತ್ಮ್ಯಮಿದಂ ಸರ್ವಂತತ್ಸತ್ಯಂ"** ಎಂಬ ಶ್ರುತಿಯೂ ವಿಶ್ವ ಸತ್ಯತ್ವವನ್ನು ಬೋಧಿಸುತ್ತದೆ. ಇದಕ್ಕೆ ಅದ್ವೈತಾರ್ಥಸಿದ್ಧಿಗಾಗಿ ತತ್ಸತ್ಯಂ ಎಂಬುದಕ್ಕೆ ಇಲ್ಲದ ಅವಧಾರಣವನ್ನು ಸೇರಿಸಿ **ತದೇವಸತ್ಯಂ** ಪರಮಾತ್ಮ ಮಾತ್ರ ಸತ್ಯವೆಂದು ಅರ್ಥಮಾಡಿರುತ್ತಾರೆ. **"ಇದಂ ಸರ್ವಂಯದಯಮಾತ್ಮಾ" "ಬ್ರಹ್ಮೈವೇದಂ ಸರ್ವಂ" "ಆತ್ಮೈವೇದಂ ಸರ್ವಂ" "ಸರ್ವಂ ಖಲ್ವಿದಂ ಬ್ರಹ್ಮ"** ಇತ್ಯಾದಿ ಶ್ರುತಿವಾಕ್ಯಗಳು ಪರಮಾತ್ಮ ವ್ಯತಿರಿಕ್ತವೇ ಇಲ್ಲವೆಂದು ಹೇಳುವದಿಲ್ಲವು, ಸಾಮಾನಾಧಿಕರಣ್ಯವನ್ನು ಹೇಳಲು ಪರಮಾತ್ಮನಿಗಿಂತ ಭಿನ್ನ

**ಮೂ. ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ ೫.**

ವಾದ ಚಿದಚಿದ್ರೂಪ ಸಮ್ಮೇಳನವು ಸತ್ಯವಾಗಿ ಇದ್ದರೇನೇ ಸಾಧ್ಯವೇ ವಿನಾ ಅನ್ಯಥಾ ಇಲ್ಲವು. ಇಂತಹ ದೂಷಣಗಳೆಲ್ಲಾ ಉಂಟಾಗುವ ಹಾಗೆ ಜಗತ್ತು ಶೂನ್ಯವಾದವು ಎಂದು ಶ್ರೀಮಚ್ಛಂಕರಾಚಾರ್ಯರು ಎಲ್ಲಿಯೂ ಹೇಳಿಲ್ಲವೆಂದೂ ಅವರ ಶಿಷ್ಯರುಗಳಾದ ಅದ್ವೈತಿಗಳೂ ಕೂಡ ಅವರ ಮಿಥ್ಯಾವಾದವನ್ನು ಸರಿಯಾಗಿ ಗ್ರಹಿಸಲಿಲ್ಲವೆಂದೂ, ಜಗತ್ತು ಸತ್ಯವೆಂಬುವದಕ್ಕೆ ಅನುಕೂಲವಾಗುವ ಹಾಗೆ ಅದ್ವೈತ ಶಿಖಾಮಣಿಗಳಾದ ಶ್ರೀಮಾನ್ ಕೋಕಿಲೇಶ್ವರಶಾಸ್ತ್ರಿಗಳೆಂಬ ಕಲ್ಕತ್ತಾ ವಿಶ್ವವಿದ್ಯಾನಿಲಯಕ್ಕೆ ಸೇರಿದವರು ಅವರು ಬರೆದಿರುವ ಅದ್ವೈತಾ ಫಿಲಾಸಫಿ ಎಂಬ ಇಂಗ್ಲೀಷು ಗ್ರಂಥವಲ್ಲಿ ಬರೆದಿರುತ್ತಾರೆ. ಹಾಗೆಯೇ "ನಿರ್ಗುಣಬ್ರಹ್ಮ" ಶಬ್ದಕ್ಕೆ ಸರ್ವ ವಿಶೇಷಣ ರಹಿತವೆಂದು ಶ್ರೀ ಶಂಕರಾಚಾರ್ಯರ ಅಭಿಪ್ರಾಯವಲ್ಲವೆಂದು ಹೇಳಿರುತ್ತಾರೆ. ಶ್ರೀ ವೇದವ್ಯಾಸರು ಎಲ್ಲಿಯೂ ತಮ್ಮ ಬ್ರಹ್ಮಸೂತ್ರದಲ್ಲಿ ವಿಶ್ವವು ಮಿಥ್ಯೆ ಎಂದು ಹೇಳಲಿಲ್ಲ ವಾದುದರಿಂದ ಈ ಭಗವದ್ಗೀತೆಯಲ್ಲೂ ಎಲ್ಲಿಯೂ ಹೇಳಿಲ್ಲವು.

**ಅವ:—**ಪ್ರತಿಜ್ಞಾವಾಕ್ಯದಲ್ಲಿ **"ಜ್ಞಾನಂ ಸವಿಜ್ಞಾನಂ"** ನಿನಗೆ ಉಪದೇಶಿಸುವನೆಂದು ಹೇಳಲ್ಪಟ್ಟಿತು. **ವಿಜ್ಞಾನಶಬ್ದದಿಂದ** ಸಕಲೇತರ ವೈಲಕ್ಷಣ್ಯವು ಹೇಳಲ್ಪಟ್ಟಿತು. **ಚಿದಚಿತ್ತು** ಗಳಿಗಿಂತ ತಾನು ಹೇಗೆ ವಿಲಕ್ಷಣನೆಂದು ಹೇಳಲುಪಕ್ರಮಿಸಿ ಹಿಂದಿನ ಶ್ಲೋಕದಲ್ಲಿ ತನ್ನ ಶರೀರವಾಗಿ, ಸ್ವತ್ತಾಗಿರುವ ಅಚಿದ್ವಸ್ತುವು, **ಭಿನ್ನಾ** ಎಂಬ ಶಬ್ದದಿಂದ ತೋರುವ ಸತತ ಪರಿಣಾಮವನ್ನು ಹೊಂದುವ ದ್ರವ್ಯವೆಂದು ಹೇಳಲ್ಪಟ್ಟಿತು. ಹೀಗೆ ಸ್ವರೂಪ ವಿಕಾರ ಹೊಂದು ವದರಿಂದ ಅಪರಾ ಪ್ರಕೃತಿಯೆಂದು ಹೇಳಿಸಿಕೊಳ್ಳುವ ಅಚಿತ್ತಿನೊಂದಿಗೆ ಸೇರಿಕೊಂಡೇ ಇರುವ ಇಂತಹ ಸ್ವರೂಪ ವಿಕಾರವಿಲ್ಲದಿರುವದರಿಂದ **"ಪರಾ"** ಎಂದು ಹೇಳಲ್ಪಟ್ಟ ದ್ರವ್ಯವೆಂದು ಹೇಳಿಸಿಕೊಳ್ಳುವ ಚಿದ್ವಸ್ತುವನ್ನು ನಿರೂಪಣೆಮಾಡಿ ಅದು ಹೇಗೆ ಈಶ್ವರ ತತ್ವಕ್ಕಿಂತ ಬೇರೆ ಯಾದುದೆಂಬುದನ್ನು ತಿಳಿಸುತ್ತಾರೆ. ಶ್ವೇತಾಶ್ವತರ ಶ್ರುತಿಯು **ಭೋಕ್ತಾಭೋಗ್ಯಂ ಪ್ರೇರಿ ತಾರಂ ಚ ಮತ್ವಾ"** (೧. ೧೨) ಮೂರು ನಿತ್ಯಗಳಾದ ತತ್ವಗಳನ್ನು ನಿರೂಪಿಸುತ್ತದೆ. **ಈ ಭೋಕ್ತಾ**ವಾದ ಚಿದ್ದ್ರವ್ಯವು, **ಭೋಗ್ಯಂ** ಎಂದು ಹೇಳಲ್ಪಟ್ಟಿರುವ ಅಚಿದ್ದ್ರವ್ಯದಿಂದ ಸೇರಿ, ಪರಮಾತ್ಮನು ಇವೆರಡನ್ನೂ ವ್ಯಾಪಿಸಿದರೆ ಆಗ ಅಚಿದ್ದ್ರವ್ಯಕ್ಕೆ ಸತ್ತೆಯುಂಟಾಗು ತ್ತದೆ; ಭೋಕ್ತಾವಾದ ಚಿದ್ದ್ರವ್ಯಕ್ಕೆ ಕೆಲಸಮಾಡುವ ಶಕ್ತಿಯುಂಟಾಗುತ್ತದೆ. ಹೀಗೆ ಪರಮಾತ್ಮನು ಯಾವಾಗಲೂ ಚಿದಚಿತ್ತುಗಳಿಂದ ವಿಶಿಷ್ಟನಾಗಿಯೇ ಇರುವನೆಂದು ನಮ್ಮಗಳ ಸಿದ್ಧಾಂತವಾದುದರಿಂದ ಇದಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತವೆಂದು ಹೆಸರು. ಈ ಶ್ರುತಿಯಲ್ಲಿ ಹೇಳಿರುವ ಮೂರು ತತ್ತ್ವಗಳೂ ನಿತ್ಯವಾಗಿ ಒಟ್ಟಿಗಿರುತ್ತವೆ. ಹಾಗೆಯೇ ಇನ್ನೊಂದು ಶ್ರುತಿಯೂ **"ಕ್ಷರಂ ಪ್ರಧಾನಂ, ಅಮೃತಾಕ್ಷರಂ ಹರಃ, ಕ್ಷರಾತ್ಮಾನೌ ಈಶತೇದೇವ ಏಕಃ"** (ಶ್ವೇ. ೧. ೧೦) ಕ್ಷರವೆಂದರೆ ವಿಕಾರ ಹೊಂದುವ ಪ್ರಕೃತಿ, ಸ್ವರೂಪ ವಿಕಾರವಿಲ್ಲದೆ ಅಕ್ಷರನು, **"ಹರತೀತಿ ಹರಃ"**ಎಂಬುವದರಿಂದ ಭೋಕ್ತಾವಾದ ಜೀವಾತ್ಮನು. ಇವರಿಬ್ಬರಿಗೂ ನಿಯಾಮಕನು ಪರಮಾತ್ಮನು; ಹೀಗೆ ಮೂರು ತತ್ವಗಳು ಒಟ್ಟಿಗಿವೆ. ಹೀಗೆ ತತ್ವತ್ರಯವನ್ನು **ಬೋಧಿಸುವ "ಪ್ರಧಾನ ಕ್ಷೇತ್ರಜ್ಞ ಪತಿರ್ಗುಣೇಶಃ" (ಶ್ವೇ)** ಇತ್ಯಾದಿ ಇನ್ನೂ ಶ್ರುತಿಸ್ಮೃತಿ ವಾಕ್ಯಗಳುಂಟು.

**ಅರ್ಥವು:—ಹೇ ಮಹಾಬಾಹೋ** – ಮಹತ್ತಾದ ಬಾಹುಬಲವುಳ್ಳ ಅರ್ಜುನನೇ, **ಇಯಂ** – ಈಗತಾನೆ ಹಿಂದೆ ಹೇಳಲ್ಪಟ್ಟ ಪ್ರಕೃತಿಯು, **ಅಪರಾ** – ವಿಕಾರದ್ರವ್ಯವಾದುದರಿಂದ ಉತ್ಕೃಷ್ಟವಾದುದಲ್ಲವು, ಇದರಿಂದಲೇ ಮುಂದೆ ತಾನು ಉಪದೇಶಮಾಡುವ ದ್ರವ್ಯ ವಿಶೇಷವು

ಉತ್ಕೃಷ್ಟವಾದುದೆಂಬುದು ತೋರಿಬರುತ್ತದೆ. **ಇತಃ**-ಈ ಜಡವಾದ ಅಚೇತನ ದ್ರವ್ಯಕ್ಕಿಂತಲೂ, **ಅನ್ಯಾಂ**-ವಿಲಕ್ಷಣವಾಗಿ ಬೇರೆಯಾಗಿಯೂ, ಮತ್ತು **ಪರಾಂ**-ಶ್ರೇಷ್ಠವಾದುದಾಗಿಯೂ, ಹೇಗೆ ಶ್ರೇಷ್ಠವೆಂದರೆ ಸ್ವರೂಪ ವಿಕಾರವಿಲ್ಲದೇ ಇರುವದರಿಂದಲೂ, ಮತ್ತು ಎರಡನೆಯ ಅಧ್ಯಾಯ ದಲ್ಲಿ ಜೀವ ಸ್ವರೂಪವು ಚನ್ನಾಗಿ ಬೋಧಿತವಾಗಿರುವದರಿಂದಲೂ ಶ್ರೇಷ್ಠವಾದುದಾಗಿ, **ಜೀವ ಭೂತಾಂ** - ಜೀವನೆಂದು ಕರೆಯಲ್ಪಡುವ, ಜೀವರೂಪನಾಗಿರುವ, **ಪ್ರಕೃತಿಂ** - ತತ್ವವನ್ನಾಗಿ, **ವಿದ್ಧಿ**-ತಿಳಿ. ಈ ಲೀಲಾ ವಿಭೂತಿಯ ಮಹಾತ್ಮ್ಯೆಯೆಲ್ಲಾ ಈ ಜೀವತತ್ತ್ವದ್ದೇ ಎಂದು ತಿಳಿಸುತ್ತಾರೆ---**ಯಯಾ**-ಯಾವ ಈ ಶ್ರೇಷ್ಠವಾದ ಚೇತನ ತತ್ತ್ವದಿಂದ, **ಜಗತ್**-ಜಡಪ್ರಕೃತಿ ಯಾದ ಜಗತ್ತು, **ಧಾರ್ಯತೇ**-ಧರಿಸಲ್ಪಡುತ್ತದೆಯೋ, ಜಡಪ್ರಕೃತಿಗೆ ತಾನಾಗಿಯೇ ಈ ಜಗತ್ತಿ ನಲ್ಲಿ ಯಾವ ಕೆಲಸವನ್ನೂ ಮಾಡಲು ಶಕ್ತಿ ಇಲ್ಲವು. ಹಾಗೆಯೇ ಅಣುವಾದ ಚೇತನ ಪ್ರಕೃತಿಗೆ ಜಡ ಪ್ರಕೃತಿಯ ಸಂಬಂಧವಿಲ್ಲದೆ ಯಾವ ಕೆಲಸವೂ ನಡೆಯುವುದಿಲ್ಲವು. ಇವೆರಡೂ ಸೇರಿದ ರೇನೆ ಈ ಲೋಕದಲ್ಲಿ ವಿಚಿತ್ರಾದ್ಭುತ ಕೆಲಸಗಳು ಜರುಗುತ್ತವೆ. ಆದುದರಿಂದಲೇ **ಯಯೇದಂ ಧಾರ್ಯತೇ ಜಗತ್** ಎಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವನ್ನೇ **"ಅಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮರೂಪೇ ವ್ಯಾಕರವಾಣಿ"** ಎಂದು ಶ್ರುತಿಯು (ಛಾಂ. ೬.೩.೨.) ಉಪದೇಶಿಸುತ್ತದೆ. **ಅಹಂ**-ನಾನು, ನಾಮರೂಪಗಳುಂಟುಮಾಡಿ ದೆನು ಎಂದು ಪರಬ್ರಹ್ಮನು ಹೇಳುತ್ತಾನೆ ಹೇಗೆಂದರೆ, **ಇಮಾಸ್ತಿಸ್ರೋದೇವತಾಃ** - ತೇಜಸ್ಸು, ಅಪ್ಪು, ಅನ್ನವೆಂದರೆ ಪೃಥಿವೀ ಇವುಗಳನ್ನು **ಅನುಪ್ರವಿಶ್ಯ** - ಅನುಪ್ರವೇಶಮಾಡಿ ಹೇಗೆ ಅನುಪ್ರವೇಶಮಾಡಿ ಎಂದರೆ **ಅನೇನ ಜೀವೇನಾತ್ಮನಾ**-ಈ ನಿರ್ವ್ಯಾಪಾರನಾದ ಸಮಷ್ಟಿರೂಪ ಜೀವನಿಂದ ವಿಶಿಷ್ಟನಾದ ತನ್ನಿಂದ ಅನು ಪ್ರವೇಶಮಾಡಲ್ಪಟ್ಟು ; ಇದರಿಂದ ಜೀವನೊಂದಿಗೆ ಅಚಿತ್ತನ್ನು ಪ್ರವೇಶಿಸಿ ನಾಮರೂಪವನ್ನು ಮಾಡಿದೆನೆಂದರೆ, ಅಚಿತ್ತು, ಚೇತನ, ಪರಮಾತ್ಮ, ಹೀಗೆ ಮೂರು ತತ್ವಗಳೂ ಒಟ್ಟಿಗೇ ಇರುತ್ತವೆಂಬುದು ಇಲ್ಲಿಯೂ ಸ್ಪಷ್ಟವು. ಪ್ರಳಯದಲ್ಲಿ ಅಚಿತ್ತೂ ಚಿತ್ತೂ ಸಹ ನಾಮರೂಪಕ್ಕೆ ಅನರ್ಹವಾದ ಸ್ಥಿತಿಯಲ್ಲಿದ್ದವು. ಅನಂತರ ಅವುಗಳ ಸಂಮೇಳನ ಮತ್ತು ಪರಮಾತ್ಮನ ಅನುಪ್ರವೇಶಗಳಿಂದ ಸ್ಥೂಲರೂಪವನ್ನು ಹೊಂದಿ ನಾಮ ರೂಪಗಳನ್ನೂ, ಪ್ರವೃತ್ತಿಗಳನ್ನೂ, ಹೊಂದಿದವಾದುದರಿಂದ ಎರಡಕ್ಕೂ, **ಪ್ರಕರೋತಿ** ಎಂಬು ದರ ಮೂಲಕ ಪ್ರಕೃತಿ ಎಂಬ ಹೆಸರು. ಇದರಿಂದ ಮುಖ್ಯವಾಗಿ ನಾವು ಗ್ರಹಿಸತಕ್ಕ ಅಂಶ ವ್ಯಾವುದು ಎಂದರೆ **"ಯಸ್ಯ ಪೃಥಿವೀ ಶರೀರಂ, ಯಸ್ಯ ಆಪಶ್ಶರೀರಂ, ಯಸ್ಯಾತ್ಮಾ ಶರೀರಂ, ಯಸ್ಯ ಸರ್ವಾಣಿ ಭೂತಾನಿ ಶರೀರಂ"** (ಬೃ. ೫. ೭) ಎಂದು ಹೇಳಿರುವ ಹಾಗೆ ಎಲ್ಲವೂ ಪರಮಾತ್ಮನಿಗೆ ಶರೀರವೆಂದೂ, ಪರಮಾತ್ಮನು ಅವೆಲ್ಲಕ್ಕೂ ಆತ್ಮನೆಂದು ಹೇಳಿದಂತಾ ಯಿತು. ಇಲ್ಲಿ ಜೀವಭೂತವಾದುದು, **ಮೇ ಪರಾ ಪ್ರಕೃತಿಂ ವಿದ್ಧಿ** ಎಂದು ಸುವ್ಯಕ್ತವಾಗಿ ಹೇಳಿರುವಾಗ ತಾನು ಜೀವಭೂತ ಪ್ರಕೃತಿಗಿಂತಲೂ ವಿಲಕ್ಷಣನೆಂಬುದು ವಿಶದವಾಗಿರುವಾಗ, ಅದ್ವೈತಾಭಿಪ್ರಾಯಕ್ಕೆ ಅವಕಾಶವು ಹೇಗೋ ತಿಳಿಯದು. ಇನ್ನು ಕೆಲವರು **ಜೀವಭೂತಾಂ ಪರಾಂ ಪ್ರಕೃತಿಂ** ಎಂಬುದಕ್ಕೆ ಲಕ್ಷ್ಮೀ ಎಂದು ಹೇಳಿದರೆ, ಜೀವವರ್ಗವೆಲ್ಲಾ ಬಿಟ್ಟುಹೋಗುವ ದಿಲ್ಲವೆ ? ಆಗ ಉಪಲಕ್ಷಣಾರ್ಥವನ್ನು ಕಲ್ಪಿಸಬೇಕಾಗುತ್ತದೆ. ಪರಿಶುದ್ಧವಾದ ಜೀವಾತ್ಮ ತತ್ವ ವನ್ನೂ ಅಪರಿಶುದ್ಧವಾದ ಜಡತತ್ವವನ್ನೂ ಒಟ್ಟುಕೂಡಿಸಿ ಉಪಲಕ್ಷಣ ರೂಪದಲ್ಲಿ ಹೇಳಲು ಸಾಧ್ಯವೋ ? ಜೀವಾತ್ಮ ತತ್ವವು ಗುಣಾಷ್ಟಕಗಳಿಂದ ಪರಮಾತ್ಮತತ್ವಕ್ಕೆ ಸಮಾನವೆಂದು ಸಾಧ್ಯವೋ ? ಜೀವಾತ್ಮತತ್ವವು ಗುಣಾಷ್ಟಕಗಳಿಂದ ಪರಮಾತ್ಮತತ್ವಕ್ಕೆ ಸಮಾನವೆಂದು ಛಾಂದೋಗ್ಯವು ಉದ್ಘೋಷಿಸುತ್ತದೆ. ಪ್ರಶಸ್ತವಾದ ಜ್ಞಾನವಿಕಾಸವನ್ನು ಹೊಂದಿರುವನನ್ನು

**ಭಾ. ಇಯಂ ಮಮಾಽಪರಾಪ್ರಕೃತಿಃ ; ಇತಸ್ತ್ವನ್ಯಾಂ-ಇತೋಽಚೇತನಾಯಾ ಶ್ಚೇತನ ಭೋಗ್ಯಭೂತಾಯಾಃ ಪ್ರಕೃತೇರ್ವಿಸಜಾತೀಯಾಕಾರಾಂ ಜೀವಭೂತಾಂ ಪರಾಂ-ತಸ್ಯಾ ಭೋಕ್ತೃತ್ವೇನ ಪ್ರಧಾನಭೂತಾಂ ಮದೀಯಾಂ ಪ್ರಕೃತಿಂ ವಿದ್ಧಿ ; ಯಯೇದಂ ಅಚೇತನಂ ಕೃತ್ಸ್ನಂ ಜಗದ್ಧಾರ್ಯತೇ ||೫||**

ಜಡಪದಾರ್ಥದೊಂದಿಗೆ ಸೇರಿಸುವದು ನ್ಯಾಯವೇ ? ಜಡಪ್ರಕೃತಿಯ ಎಂಟು ಸ್ವರೂಪ ವಿಕಾರಗಳುಳ್ಳ ವಿಕೃತಿಗಳಲ್ಲಿ ಸ್ವರೂಪವಿಕಾರವಿಲ್ಲದ ಜೀವತತ್ವವನ್ನು ಸೇರಿಸಿ ಹೇಳಬಹುದೇ ? ಆದುದರಿಂದ ಪ್ರಾಣಿವರ್ಗವೇ **ಜೀವಭೂತಾಂ** ಎಂಬುದರಿಂದ ಹೇಳಲ್ಪಟ್ಟಿತೆಂದು ಭಾವಿಸುವುದೇ ಯುಕ್ತವಾಗಿ ತೋರುತ್ತದೆ.

**ಭಾಷ್ಯಾರ್ಥವು:—ಇಯಂ**-ಈ ಹಿಂದೆ ಹೇಳಿದುದು, **ಮಮ**-ನನ್ನ ಸಂಬಂಧವಾದ, **ಅಪರಾಪ್ರಕೃತಿಃ**-ಉತ್ಕೃಷ್ಟವಲ್ಲದ ಅಚೇತನ ದ್ರವ್ಯವು, **ಇತಸ್ತ್ವನ್ಯಾಂ** ಎಂದರೆ, **ಇತಃ** ಎಂದರೆ **ಅಚೇತನಾಯಾಃ ಚೇತನಭೋಗ್ಯ ಭೂತಾಯಾಃ**-ಚೇತನಿಗೆ ಭೋಗ್ಯರೂಪವಾದ ಅಚೇತನ ಕ್ಕಿಂತಲೂ, **ವಿಸಜಾತೀಯಾಕಾರಂ**-ವ್ಯತ್ಯಸ್ತವಾದ ಗುಣವುಳ್ಳ, ಅದು ಯಾವುದೆಂದರೆ, ಎಂದಿಗೂ ಸ್ವರೂಪವಿಕಾರವಿಲ್ಲದೆ, ವಿಕಾರಹೊಂದುವ ದ್ರವ್ಯವನ್ನು ಶರೀರವಾಗಿ ಧರಿಸುವದರಿಂದ ಜನನ ವೃದ್ಧಿ, ಜರಾಮರಣಾದಿ ಸ್ವಭಾವ ಪರಿಣಾಮಗಳನ್ನು ಹೊಂದಿ ಕರ್ಮವಶ್ಯಕತೆಯಿಂದ ಜ್ಞಾನಸಂಕೋಚವನ್ನು ಹೊಂದಿರುವ, ಇಲ್ಲಿರುವ **ತು** ಶಬ್ದವು ಆ ಅಚೇತನ ಪ್ರಕೃತಿಗಿಂತಲೂ ಈ ಚೇತನಪ್ರಕೃತಿಯು ವಿಲಕ್ಷಣವಾದುದೆಂಬುದನ್ನು ಸೂಚಿಸುತ್ತದೆ. **ಜೀವಭೂತಾಂ**-ಜೀವ ರೂಪನಾದ, **ಪರಾಂ**-ಉತ್ಕೃಷ್ಟವಾದ, ಹೇಗೆ ಉತ್ಕೃಷ್ಟವಾದವೆಂದರೆ, **ತಸ್ಯಾಃ**-ಆಚೇತನ ತತ್ವದ **ಭೋಕ್ತೃತ್ವೇನ**-ಅನುಭವಿತಾವಾಗಿರುವುದರಿಂದ, **ಪ್ರಧಾನ ಭೂತಾಂ**-ಮುಖ್ಯವಾದ, **ಮದೀಯಾಂ**-ನನ್ನ ಸಂಬಂಧವಾದ, ನನಗೆ ಶೇಷಭೂತವಾದ ನನಗೆ ಶರೀರವಾಗಿರುವದರಿಂದ ನನ್ನಿಂದಲೇ ಅಧೇಯವಾಗಿಯೂ ನಿಯಾಮ್ಯವಾಗಿಯೂ ಇರುವ, **ಪ್ರಕೃತಿಂ**-ತತ್ವವನ್ನಾಗಿ, **ವಿದ್ಧಿ**-ತಿಳಿ, ಅದು ಹೇಗೆ ಪ್ರಧಾನವಾದ ಪ್ರರಾಪ್ರಕೃತಿಯೆನ್ನುತ್ತೀಯೋ, ಹೇಳುತ್ತೇನೆ ಕೇಳು, **ಯಯಾ**-ಯಾವ ಈ ಜೀವವೆಂಬ ಪರಾಪ್ರಕೃತಿಯಿಂದಲೇ, **ಜಗತ್**-ಸಮಸ್ತ ಅಚೇತನದ್ರವ್ಯದಿಂದ ಕೂಡಿದ ಜಗತ್ತು, **ಧಾರ್ಯತೇ**-ಪ್ರವೃತ್ತಿಯನ್ನು ಹೊಂದುವ ಸತ್ತೆಯನ್ನು ಪಡೆದಿರುದೆತ್ತೂ ಅಂತಹ ಪರಾಪ್ರಕೃತಿಯು ಎಂಬ ಭಾವವು.

ತತ್ವತ್ರಯ ನಿರೂಪಣ ಮಾಡುವವಕ್ಕೆ ಆರಂಭಿಸಿ ಮೂರ ಶ್ಲೋಕಗಳಿಂದ ಈ ಮೂರು ತತ್ವಗಳನ್ನು ನಿರೂಪಣೆಮಾಡಿ, ಮೊದಲು ಭೋಗ್ಯತತ್ವವನ್ನು ಕುರಿತು ಹೇಳಿ, ಈಗ ಅದಕ್ಕಿಂತ ಸ್ವರೂಪ ವಿಕಾರವಿಲ್ಲದುದರಿಂದ ಅದಕ್ಕಿಂತಲೂ ಉತ್ತಮವಾದ ತನ್ನ ನಿಯಾಮ್ಯವರ್ಗಕ್ಕೇ ಸೇರಿದ ಪರಾಪ್ರಕೃತಿ ಎಂದು ಜೀವತತ್ವವನ್ನು ಬೋಧಿಸುತ್ತಾರೆ, **ಇಯಂ**-ಈ ಹಿಂದಿನ ಶ್ಲೋಕದಲ್ಲಿ ನಿರೂಪಣೆ ಮಾಡಿದುದು, **ಮಮ**-ನನಗೆ ಸಂಬಂಧಿಸಿದ ಎಂದರೆ ನನ್ನ ಸ್ವತ್ತಾಗಿ, ನನ್ನ ಶರೀರವಾಗಿ, ನನಗೆ ಶೇಷಭೂತವಾಗಿ ನನ್ನ ನಿಯಾಮ್ಯವರ್ಗವಾದ ವಿಭೂತಿಗೆ ಸೇರಿದ ಅಚೇತನ ದ್ರವ್ಯವೆಂಬ ತಾತ್ಪರ್ಯವು, **ಅಪರಾಪ್ರಕೃತಿಃ**-ಶ್ರೇಷ್ಠವಲ್ಲದ ಪ್ರಕೃತಿಯು, ಹಾಗಾದರೆ ಶ್ರೇಷ್ಠವಾದ ಪ್ರಕೃತಿ ಒಂದುಂಟೊ ? ಎಂದರೆ ಉಂಟೆಂದು ಹೇಳುತ್ತಾರೆ ; **ಇತಃ** ಎಂದರೆ **ಅಚೇತನಾಯಾಃ**-ಈ ಅಚೇತನತತ್ವಕ್ಕಿಂತಲೂ, ಅದು ಎಂತಾದ್ದೆಂದರೆ **ಚೇತನಭೋಗ್ಯ ಭೂತಾಯಾಃ** ಈ ಪರಾಪ್ರಕೃತಿ ಎಂದು ನಾನು ಮುಂದೆ ಹೇಳುವ ಚೇತನ ತತ್ವಕ್ಕೆ ಭೋಗ್ಯಭೂತವಾದುದು, ಇಂತಹ **ಪ್ರಕೃತೇಃ**-ಅಚೇತನ ಪ್ರಕೃತಿಗಿಂತಲೂ, **ವಿಸಜಾತೀಯಾಕಾರಾಂ**-ವ್ಯತ್ಯಸ್ತವಾದ ಗುಣವುಳ್ಳ, ಅದು ಯಾವುದೆಂದರೆ ಅಚಿತ್ತಿನಹಾಗೆ ಸ್ವರೂಪಪರಿಣಾಮಾದಿಗಳಿಲ್ಲದೆ, ಹಿಂದೆ ಎರಡ

ನೆಯ ಅಧ್ಯಾಯದಲ್ಲಿ ಹೇಳಿದಹಾಗೆ ನಿತ್ಯವಾದ ಸ್ವಯಂಪ್ರಕಾಶ ರೂಪಸ್ವರೂಪವನ್ನು ಹೊಂದಿದ್ದರೂ, ಈ ಪ್ರಕೃತಿಯ ಸಂಬಂಧದಿಂದ ಜನನ, ವೃದ್ಧಿಮರಣಾದಿ ಪರಿಣಾಮಗಳನ್ನೂ ಜ್ಞಾನ ಸಂಕೋಚವನ್ನೂ ಮಾತ್ರ ಹೊಂದಿರುವ, ಆದುದರಿಂದ **ವಿಸಜಾತೀಯಯಾಕಾರಾಂ** ಎಂದು ಹೇಳಲ್ಪಟ್ಟಿತು, **ಜೀವಭೂತಾಂ**-ಜೀವತತ್ತ್ವವಾಗಿರುವ, **ಪರಾಂ**-ಶೇಷ್ಠವಾದ, ಹೇಗೆ ಶ್ರೇಷ್ಠವಾದುದು ಎಂದರೆ, **ತಸ್ಯಾಃಭೋಕ್ತೃತ್ವೇನ ಪ್ರಧಾನ ಭೂತಾಂ**-ಆ ಅಪಾರವಾದ ಚೇತನ ಪ್ರಕೃತಿಯ ಭೋಕ್ತಾವಾಗಿರುವದರಿಂದ ಮುಖ್ಯವಾದ, **ಮದೀಯಾಂ**-ನನ್ನ ಸಂಬಂಧವಾದ ನನಗೆ ಶೇಷಭೂತವಾಗಿ, ಶರೀರವಾಗಿ, ಅ ಕಾರಣದಿಂದ ನಿಯಾಮ್ಯವರ್ಗಕ್ಕೆ ಸೇರಿದುದಾಗಿರುವ, **ಪ್ರಕೃತಿಂ ವಿದ್ಧಿ**-ಪ್ರಕರೇತೀತಿ ಪ್ರಕೃತಿಃ ಎಂಬ ವ್ಯುತ್ಪತ್ತಿಮೂಲಕ ಸಮಸ್ತವಿಧ ಪ್ರವೃತ್ತಿಗಳಿಗೂ ಕಾರಣವಾದ ತತ್ತ್ವವನ್ನಾಗಿ ತಿಳಿ. ಇದನ್ನೇ ವಿವರಿಸಿ ಹೇಳುತ್ತಾರೆ—**ಯಯಾ**-ಯಾವ ಉತ್ಕೃಷ್ಟವಾದ ಜೀವತತ್ತ್ವದ ಮೂಲಕವಾಗಿಯೇ, **ಇದಂ ಅಚೇತನಂ ಕೃತ್ಸ್ನಂ ಜಗತ್**-ಈ ಅಚಿದ್ರೂಪವಾದ ಸಮಸ್ತ ಜಗತ್ತೂ, **ಧಾರ್ಯತೇ**-ಪ್ರವೃತ್ತಿಗೆ ಅನುಕೂಲವಾದ ಸತ್ತೆಯನ್ನು ಹೊಂದಿರುತ್ತದೋ ಈ ಅಂತಹ ಶ್ರೇಷ್ಠವಾದ ಪ್ರಕೃತಿ ಎಂಬ ಭಾವವು. ಜಗತ್ತಿನಲ್ಲಿ ಈಶ್ವರನ ಅಂತರ್ಯಾಮಿತ್ವದೊಂದಿಗೆ ಚಿದಚಿತ್ತುಗಳೇ ಇರುವವು. ಚಿತ್ತು ಈ ಜಗತ್ತನ್ನೆಲ್ಲಾ ಧರಿಸಿವೆ ಎಂದರೆ ಅಚಿತ್ತಿಗೆ ಸತ್ತಾದಾಯಕವು; ಅಚಿತ್ತಿಗೂ ಚಿತ್ತಿಗೂ ಶೇಷ ಶೇಷೀಸಂಬಂಧವೆಂದೂ ಇಲ್ಲಿ ಹೇಳಲ್ಪಡುವುದರಿಂದ ಜಗಚ್ಛಬ್ದದಿಂದ, ಅಚಿದ್ಭಾಗ ಜಗತ್ತೇ ಬೋಧಿತವಾಯಿತೆಂದು ಭಾವಿಸತಕ್ಕದ್ದು. ಇಲ್ಲಿ **ಇದಂ ಜಗತ್** ಎಂದು ಅರ್ಜುನನಿಗೆ ಪ್ರತ್ಯಕ್ಷದಲ್ಲಿ ಕೈಯಿಂದ ತೋರಿಸುವದರಿಂದ, ಅಚಿತ್ತಿನ ಪರಾಕ್ತ್ವವೂ ಚೇತನರಾದ ಅರ್ಜುನಾದಿಗಳ ಪ್ರತ್ಯಕ್ತ್ವವೂ ಸಹ ಶಾಸ್ತ್ರವಿಷಯಾಭಿಪ್ರಾಯಗಳೂ ಬೋಧಿತವೆಂದು ಊಹಿಸಬಹುದು, ಈ ಶ್ಲೋಕ ಮತ್ತು ಹಿಂದಿನ ಶ್ಲೋಕಗಳಿಂದ ಹೇಳಲ್ಪಟ್ಟಿದುದು ಏನೆಂದರೆ— •

೧. **ಅಚೇತನ ತತ್ತ್ವವು** ೨೪ ಪ್ರಭೇದಗಳನ್ನು ಒಳಗೊಂಡಿರುವ ೮ ವಿಧವು; ಸತತ ವಿಕಾರ ಹೊಂದುವದೇ ಅದರ ಸ್ವರೂಪವು; ಅದು ಸರ್ವೇಶ್ವರನಿಗೆ ಶೇರಿದುದಾಗಿ, ಆತನಿಗೆ ಶರೀರವಾಗಿ ಆತನಿಂದ ನಿಯಮಿಸಲ್ಪಡತಕ್ಕದ್ದಾಗಿ ಇರುತ್ತದೆಂದು ವಿಕಾರ ಹೊಂದುವದರಿಂದ ಅಪರಾತತ್ತ್ವವೆಂದು ಹೇಳಲ್ಪಟ್ಟಿತು. ಇದು ಇನ್ನೊಂದು ಶ್ರೇಷ್ಠವಾದ ತತ್ತ್ವವಾದ ಭೋಕ್ತಾವಾದ ಜೀವಾತ್ಮನಿಗೆ ಭೋಗ್ಯವಸ್ತುವಾಗಿ ಆತನಿಗೂ ಕೂಡ ಶೇಷಭೂತವು.

೨. ಚೇತನತತ್ತ್ವವು, ಜೀವಾತ್ಮತತ್ತ್ವವು. ಇದಕ್ಕೆ ಸ್ವರೂಪ ವಿಕಾರತ್ವವಿಲ್ಲದೆ ಇರುವದರಿಂದ ಅಚೇತನಕ್ಕಿಂತ ಇದು ಉತ್ತಮವಾದ ತತ್ತ್ವವು. ಚೇತನತತ್ತ್ವವು ಇದಕ್ಕೆ ಭೋಗ್ಯವಾದುದರಿಂದ, ಅದರ ಸತ್ತೆಯು ಸರ್ವೇಶ್ವರ ಸಙ್ಕಲ್ಪಾನುಸಾರವಾಗಿ ಚೇತನ ತತ್ತ್ವಾಧೀನವಾದುದು. ಚೇತನಾಚೇತನ ಸಮ್ಮೇಳನವೂ ಸರ್ವೇಶ್ವರಾತ್ಮತ್ವವೂ ಸೇರಿದುದರಿಂದ ಜಗತ್ತಿನ ಸಕಲ ಪ್ರವೃತ್ತಿಗಳೂ ಉಂಟಾಗುತ್ತವೆ. ಇದು ಮುಂದೆ ಚೆನ್ನಾಗಿ **"ಅಧಿಷ್ಠಾನಂ ಪಥಾಕರ್ತಾ"** ಎಂಬಲ್ಲಿ (ಗೀ. ೧೮.೧೪.) ಉಪಪಾದಿತವು. ಇಲ್ಲಿ **"ಯಯೇದಂ ಧಾರ್ಯತೇ ಜಗತ್"** ಎಂಬುದಕ್ಕೆ ಚಿದಚಿತ್ಸಂಶ್ಲೇಷಯೇ ಜಗತ್ತಿನ ಪ್ರವೃತ್ತಿಗೆ ಮೂಲವೆಂಬುವ ಅಂಶವನ್ನು ಮರೆತು ಕೆಲವರು ಜಗತ್ತಿನ ಧಾರಣವು ಯಯಾ ಎಂಬ ಸ್ತ್ರೀಲಿಂಗವಿರುವದರಿಂದ, ಲಕ್ಷ್ಮಿಯಿಂದ ಎಂಬಭಿಪ್ರಾಯಪಟ್ಟು, **ಪ್ರಕೃತಿ** ಎಂದರೆ ಶ್ರೀ ಎಂದು ಅರ್ಥಹೇಳಿ ಇದಕ್ಕನುಸಾರವಾಗಿ **ಜೀವಭೂತಾಂ** ಎಂಬುದಕ್ಕೆ ಅರ್ಥ ಹೇಳಬೇಕಾಗಿರುವದರಿಂದ, ಪ್ರಕರಣವನ್ನು ಬಿಟ್ಟು, **"ಜೀವಾನಾಂ ಪ್ರಾಣಧಾರಿಣೀ"** ಎಂದರ್ಥಮಾಡಿರುತ್ತಾರೆ. ಅಚಿತ್ತತ್ತ್ವವನ್ನು ಹಿಂದಿನ ಶ್ಲೋಕದಲ್ಲಿ ಹೇಳಿ, ಮುಂದಿನ ಶ್ಲೋಕದಲ್ಲಿ ಈಶ್ವರತತ್ತ್ವನಿರೂಪಣ ಮಾಡಿದ್ದಾರೆ, ಈ ಶ್ಲೋಕದಲ್ಲಿ ಚಿತ್ತತ್ತ್ವವನ್ನೇ ಹೇಳು

ವದೇ ಪ್ರಕರಣವೆಂದು ಹೇಳಲ್ಪಟ್ಟಿತು. ಅದಕ್ಕಾಗಿಯೇ **"ಜೀವ ಭೂತಾಂ"** ಎಂಬ ಪ್ರಯೋಗ ವಿರುವವರಿಂದ ಅದಕ್ಕೆ **ಜೀವ ರೂಪಾಂ** ಎಂದೇ ಅರ್ಥ ಹೇಳತಕ್ಕದ್ದು. ಆದರೆ ಅದಕ್ಕೆ ಪ್ರಕೃತಿ ಎಂಬ ಪ್ರಯೋಗವೂ, ಸ್ತ್ರೀಲಿಂಗವೂ ಸರಿಯೇ ಎಂದಾಕ್ಷೇಪಣೆ ತಂದರೆ, ಅಲ್ಲಿ ಪ್ರಕೃತಿ ಶಬ್ದದಿಂದ ಇವೆರಡು ಸಮಷ್ಟಿ ತತ್ವವನ್ನು ಹೇಳಿದುದಕ್ಕೆ ಕಾರಣವು, ವ್ಯಷ್ಟಿಕ್ರಮದಲ್ಲಿ ಇವೆರಡೂ ಸೇರಿ ಪ್ರಕರೋತೀತಿಪ್ರಕೃತಿಃ ಎಂಬ ವ್ಯುತ್ಪತ್ತ್ಯನುಸಾರವಾಗಿ ಜಗತ್ತಿನ ಪ್ರವೃತ್ತಿಗಳುಂಟಾಗುವಹಾಗೆ ಸರ್ವೇಶ್ವರನ ಸಙ್ಕಲ್ಪವು · ಆದುದರಿಂದ ಪ್ರಕೃತಿ ಎಂಬ ಪ್ರಯೋಗವು. ಇವೆರಡಕ್ಕೂ **ಪ್ರಕೃತಿ** ಎಂಬ ಪ್ರಯೋಗದ ಅರ್ಥದ ವಿವರಣೆಯೇ **"ಯಯೇದಂ ಧಾರ್ಯತೇ ಜಗತ್"** ಎಂದು ಭಾವಿಸತಕ್ಕದ್ದು. ಆದರೆ ಲಕ್ಷ್ಮೀ ಎಂದು ಅರ್ಥ ಹೇಳುವವರು, ಚಿತ್ ತತ್ತ್ವವನ್ನು ಹೇಳ ಬೇಡವೇ ಎಂದಾಕ್ಷೇಪಬಂದೀತೆಂದು ಭಾವಿಸಿ, ಉಪಲಕ್ಷಣವಾಗಿ ಅಚಿತ್ತತ್ವದಲ್ಲೇ ಹೇಳಲ್ಪಟ್ಟಿ ತೆಂದು ಭಾವಿಸತಕ್ಕದ್ದೆಂದು ಅಭಿಪ್ರಾಯಪಡುವರು. ಇಷ್ಟು ಕ್ಲೇಶಗಳೂ ಇಲ್ಲದಹಾಗೆ **ಜೀವ ಭೂತಾಂ** ಎಂಬುದಕ್ಕೆ ಜೀವರೂಪ ತತ್ವವೇ ಹೇಳಲ್ಪಟ್ಟಿತೆಂದು ಭಾವಿಸುವದು ಸರ್ವಸಮಂ ಜಸವು. ಹೀಗೆ **ಲಕ್ಷ್ಮೀ** ಎಂದು ಅರ್ಥಮಾಡಿದರೆ ಮುಂದಿನ ಶ್ಲೋಕದಲ್ಲಿ **ಸರ್ವಾಣಿ ಭೂತಾನಿ ಏತದ್ಯೋನೀನಿ** ಎಂಬ ವಾಕ್ಯವು ಸಮಂಜಸವಾಗುವದಿಲ್ಲವು. ಸರ್ವಭೂತಗಳಲ್ಲೂ ಲಕ್ಷ್ಮಿ ಇದ್ದಾಳೆಂದು ಹೇಳಿದಂತಾಯಿತು. ಅಂತರಾತ್ಮಾವಾಗಿ ಇದ್ದಾಳೆ ಅದಕ್ಕೇನು ಎಂದರೆ, ಸರ್ವೇ ಶ್ವರನನ್ನು ಹೇಳದೆ ಲಕ್ಷ್ಮಿಯನ್ನು ಮಾತ್ರ ಹೇಳಬಹುದೋ ? ಎಂಬ ಆಕ್ಷೇಪವುಂಟಾಗುತ್ತದೆ. ಆದುದರಿಂದ ಈ ಶ್ಲೋಕದಲ್ಲಿ ಜೀವತತ್ವವೇ ಹೇಳಲ್ಪಟ್ಟಿತೆಂಬುದು ಸಿದ್ಧವು. ಇತಿಹಾಸಪುರಾ ಣಾದಿ ಎಲ್ಲಾ ಶಾಸ್ತ್ರಗಳಲ್ಲೂ ತತ್ವನಿರೂಪಣಮಾಡುವಾಗ ಅಚಿತ್ತು, ಚಿತ್ತು, ಈಶ್ವರ, ಹೀಗೆಯೇ **"ಭೋಕ್ತಾ ಭೋಗ್ಯಂ ಪ್ರೇರಿತಾರಂಚ"** ಎಂಬಲ್ಲಿ ಹೇಳಿರುವಹಾಗೆ, ಮೂರನ್ನು ಹೇಳುವ ಪದ್ಧತಿಯೇ ಉಂಟು. ಅಷ್ಟುದೂರ ಏತಕ್ಕೆ ? ಮುಂದೆಯೇ **"ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪೀ"** ಎಂದು ಹೇಳಲ್ಪಟ್ಟಿರುತ್ತದೆಯಷ್ಟೇ. **ಯಯೇದಂ ಧಾರ್ಯತೇ ಜಗತ್**-ಎಂಬಲ್ಲಿ ಚಿತ್ತು ಅಚಿತ್ತನ್ನು ಧರಿಸಿರುವದು ಹೇಗೆ, ಎಂದು ಕೇಳಬಹುದು. ಇದಕ್ಕೆ ನಿದರ್ಶನವಾಗಿ ಒಬ್ಬನ ಶರೀರದಲ್ಲಿ ಆತ್ಮನು ಇರುವವರೆಗೂ ಶರೀರಧಾರಣೆಯುಂಟು. ನಾನಾ ವಿಧ ಕೆಲಸಗಳು ದೇಹದಲ್ಲೂ ನಡೆಯುವುವು. ಅತ್ಯದ್ಭುತ ವಿಚಿತ್ರ ಕೆಲಸಗಳನ್ನು ಆತನು ಮಾಡುವನು ; ಆ ಆತ್ಮನು ಹೊರಟುಹೋದರೆ ಎಲ್ಲಾ ಕೆಲಸಗಳೂ ನಿಂತುಹೋಗುತ್ತವೆ; ಶರೀರವು ಆಗ ಪ್ರೇತವೆನಿಸುವದು. ಆಗಲಿ, ಈ ಪ್ರವೃತ್ತಿಗಳೇನೋ ಜಾಗರಾವಸ್ಥೆಯಲ್ಲಿ ಚೇತನ ಸಙ್ಕಲ್ಪ ಪೂರ್ವಕವಾಗಿ ಉಂಟಾಗತಕ್ಕದ್ದು, ಸ್ವಪ್ನಾವಸ್ಥೆಯಲ್ಲಿ ಹೇಗೆ ? ಎಂದರೆ, ಜೀವಾತ್ಮನ ಸ್ವರೂಪದಿಂದಲೇ ಸಿದ್ಧವು. ಹಾಗೆಯೇ ಮಾವಿನ ಮರದಲ್ಲಿನ ಪ್ರವೃತ್ತಿಗಳಾದ ಒಂದು ಕಾಲ ದಲ್ಲಿ ಚಿಗರುವದು, ಮತ್ತೊಂದುಕಾಲದಲ್ಲಿ ಕಾಯಿಯೂ, ಹಾಗೆಯೇ ಹಣ್ಣೂ ಉಂಟಾಗುವದೆ ಲ್ಲವೂ, ಅದರಲ್ಲಿರುವ ಜೀವಸ್ವರೂಪಮೂಲಕವೆಂದು ಭಾವಿಸತಕ್ಕದ್ದು. ಹೀಗೆ ಜೀವಾತ್ಮನು ಅಚಿತ್ತಿನಮೂಲಕ ಪ್ರವರ್ತಿಸುವದೂ ಸಹ ಪರಮಾತ್ಮನ ದೆಸೆಯಿಂದಲೇ ಎಂದು ಮುಂದೆ **ಮಯಿಸರ್ವಮಿದಂ ಪ್ರೋತಂ** ಎಂಬಲ್ಲಿ ಹೇಳಲ್ಪಡುತ್ತದೆ. ಹಾಗೆಯೇ ಮುಂದೆ ೧೮ ನೆಯ ಅಧ್ಯಾಯದಲ್ಲೂ **"ಭ್ರಾಮಯರ್ನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ"** (ಗೀ. ೧೮.೬೧.) ಎಂಬಲ್ಲೂ ವ್ಯಕ್ತವು. ಆ ಶ್ಲೋಕವನ್ನು ಪರಾಂಬರಿಸಿ.

**ಮೂಲಕ್ಕೆ ಅರ್ಥವು:—**ಹಿಂದೆ **ಯಯೇದಂ ಧಾರ್ಯತೇ ಜಗತ್** ಎಂಬುದರ ಅಭಿ ಪ್ರಾಯವನ್ನೇ ಪೂರ್ವಾರ್ಧದಿಂದ ವ್ಯಕ್ತಪಡಿಸಿ, ಉತ್ತರಾರ್ಧದಿಂದ ಈಶ್ವರತತ್ವ ನಿರೂಪಣೆ ಯನ್ನು ಮಾಡಿ, ಇವೆರಡು ತತ್ವಗಳಾದ ಚೇತನಾಚೇತನಗಳೂ ತನಗೆ ಶರೀರವಾಗಿರುವದರ

**ಮೂ. ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯ ಸ್ತಥಾ ॥ ೬.**

**ಭಾ. ಏತಚ್ಚೇತನಾ ಚೇತನ ಸಮಷ್ಟಿರೂಪ ಮದೀಯ ಪ್ರಕೃತಿದ್ವಯ ಯೋನೀನಿ, ಬ್ರಹ್ಮಾದಿಸ್ತಂಬ ಪರ್ಯನ್ತಾನ್ಯುಚ್ಚಾವಚ ಭಾವೇನಾವಸ್ಥಿತಾನಿ, ಚಿದಚಿನ್ಮಿಶ್ರಾಣಿ ಮದೀಯಾನಿ-ಸರ್ವಾಣಿ ಭೂತಾನೀತ್ಯುಪಧಾರಯ । ಮದೀಯ ಪ್ರಕೃತಿ ದ್ವಯ**

ಮೂಲಕ ಅಧೀನಗಳಾಗಿ, ಶೇಷಗಳಾಗಿ, ನಿಯಾಮ್ಯಗಳಾಗಿವೆ ಎಂದೂ, ಆ ಕಾರಣದಿಂದ ತಾನೇ ಸರ್ವಕಾರಣನೆಂದೂ, ಇವೆಲ್ಲಾ ಕಾರ್ಯವೆಂದೂ, ಈ ಶ್ಲೋಕದಲ್ಲಿ ಹೇಳುತ್ತಾರೆ. **ಸರ್ವಾಣಿ ಭೂತಾನಿ**-ಸಮಸ್ತ ಭೂತಗಳೂ, ಈ ಲೋಕದ ಮತ್ತು ಇದರಹಾಗೆ ಇರುವ ಸ್ವರ್ಗಾದಿ ಇತರ ಲೋಕಗಳ ಸಮಸ್ತ ಭೂತಗಳೂ, **ಏತದ್ಯೋನೀನಿ**-ಈ ಚಿದ ಚಿತ್ತುಗಳನ್ನೇ ಕಾರಣವಾಗಿವುಳ್ಳವು ; ಇವುಗಳ ಸಂಶ್ಲೇಷಯುಳ್ಳವೇ ಸಮಸ್ತಗಳೂ ಎಂದು ಹೇಳಲ್ಪಟ್ಟಿತು, **ಇತಿ**-ಹೀಗೆಂಬುದಾಗಿ, **ಉಪಧಾರಯ**-ತಿಳಿ, ಇವೆರಡೂ ಹಿಂದೆಯೇ, **ಮೇ**-ನನ್ನ, ಸಂಬಂಧವಾದ ಎರಡು ಪ್ರಕೃತಿ ಎಂದು ಹೇಳಿರುವದರಿಂದ ತಾನು ಇವೆರಡಕ್ಕೂ ಅಂತರಾತ್ಮಾ ಎಂದೂ, ಶೇಷಿ ಎಂದೂ, ನಿಯಾಮಕನೆಂದೂ ಹೇಳಿದಂತಾಯಿತು. ಆ ಕಾರಣದಿಂದ ಈ ಲೀಲಾ ವಿಭೂತಿಯ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ತಾನು ಕಾರಣನೆಂದು ಉತ್ತರಾರ್ಧದಿಂದ ತಿಳಿಸುತ್ತಾರೆ. **ತಥಾ** ಎಂದರೆ **ತಥಾಸತಿ**-ಹಾಗಾದುದರಿಂದಲೇ. ಎಂದರೆ ಈ ಎರಡು ಪ್ರಕೃತಿಗಳೂ ನನ್ನವಾಗಿ, ನನಗೆ ಅಧೀನಗಳಾಗಿ, ಜಗತ್ತಿಗೆಲ್ಲಾ ಕಾರಣಭೂತಗಳಾಗಿರುವದರಿಂದಲೇ, ಎಂಬರ್ಥವು ; **ಅಹಂ**-ನಾನು, **ಕೃತ್ಸ್ನಸ್ಯ ಜಗತಃ**-ಸಮಸ್ತ ಜಗತ್ತಿನ, ಇದರಿಂದ ಸಮಸ್ತ ಲೀಲಾ ವಿಭೂತಿಯೆಲ್ಲವೂ ಹೇಳಲ್ಪಟ್ಟಿತು, **ಪ್ರಭವಃ ಪ್ರಲಯಃ**-ಸೃಷ್ಟಿ ಲಯಗಳಿಗೂ ಕಾರಣನು ; **ಇತ್ಯುಪಧಾರಯ** ಎಂದು ಪೂರ್ವಾರ್ಧದಲ್ಲಿರುವದನ್ನು, ಇಲ್ಲಿಗೂ ಅನ್ವಯಿಸಬಹುದು, ಎಂದು ತಿಳಿ ಎಂಬ ಭಾವವು. ಸೃಷ್ಟಿ ಲಯಗಳನ್ನು ಹೇಳಿದ ನಂತರ ಅವುಗಳೊಂದಿಗೆ ಸ್ಥಿತಿಯು ಇದ್ದೇಇರಬೇಕಾದುದರಿಂದ, ಸ್ಥಿತಿಯೂ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಇಲ್ಲಿ ನಿತ್ಯವಿಭೂತಿಯು ಹೇಳಲ್ಪಡಲಿಲ್ಲವೋ ಎಂದರೆ ಇಲ್ಲವು, ಏಕೆಂದರೆ ಅದು ನಿತ್ಯವಿಭೂತಿಯಾದುದರಿಂದ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಸಿಕ್ಕಿದುದಲ್ಲವು. ಆದರೆ ಆತನು ಅದಕ್ಕೂ ಕಾರಣನಲ್ಲವೋ, ಎಂದರೆ ಕಾರಣನೇ, ಅದಕ್ಕೆ ಲಯಮಾತ್ರವಿಲ್ಲವು, ಆದರೆ ಸಾದಿಯಾದುದು ಸಾಂತವಾಗಿರಬೇಕಲ್ಲವೊ ? ಎಂದರೆ ಸರ್ವೇಶ್ವರನ ಸಙ್ಕಲ್ಪಾನುಸಾರ ನಿತ್ಯೇಚ್ಛೆಯಿಂದ ಸಿದ್ಧವಾದವುಗಳು ನಿತ್ಯಗಳಾಗುತ್ತವೆ. ಅನಿತ್ಯೇಚ್ಛೆಯಿಂದ ಉತ್ಪನ್ನವಾದವುಗಳು ಅನಿತ್ಯಗಳಾಗುತ್ತವೆಂದು ತಿಳಿಯತಕ್ಕದ್ದು.

**ಭಾಷ್ಯಾರ್ಥವು:—**ಮೊದಲು ಸೃಷ್ಟಿಗೆ ಪೂರ್ವದಲ್ಲಿ ಸಮಷ್ಟಿರೂಪದಲ್ಲಿದ್ದ ಪ್ರಕೃತಿಪುರುಷರಾದ ಪ್ರಕೃತಿದ್ವಯದ ಸಮ್ಮೇಳನದಿಂದ **"ಬಹುಸ್ಯಾಂ ಪ್ರಜಾಯೇಯ"** ಎಂದು ಶ್ರುತಿಯು ಹೇಳುವ ಹಾಗೆ ಸಮಸ್ತ ಭೂತಗಳೂ ಉತ್ಪನ್ನವಾಗುತ್ತವೆ ಎಂದೂ, ಅದಕ್ಕೆ ತನ್ನ ಸಙ್ಕಲ್ಪವೂ ಆವಶ್ಯಕವೆಂದೂ, ಬೋಧಿಸುತ್ತಾರೆ. ಮೊದಲು **ಏತತ್** ಎಂಬುದರಲ್ಲಿ ತೋರುವ ಅರ್ಥವನ್ನು ವಿವರಿಸುತ್ತಾರೆ— **ಏತತ್**-ಈ ಎಂದರೆ ಚೇತನಾಚೇತಗಳ, **ಸಮಷ್ಟಿರೂಪ**-ಮೂಲರೂಪದಲ್ಲಿರುವ, **ಮದೀಯ**-ನನ್ನ ಸಂಬಂಧವಾದ ಎಂದರೆ ನನ್ನ ಶರೀರವಾಗಿ ನನಗೆ ಶೇಷವಾಗಿಯೂ, ನಿಯಾಮ್ಯ ವಿಭೂತಿಯಾಗಿಯೂ ಇರುವ, **ಪ್ರಕೃತಿದ್ವಯಯೋನೀನಿ**-ಈ ಎರಡು ವಸ್ತುಗಳನ್ನೇ ಕಾರಣವಾಗಿವುಳ್ಳವು ಎಂದರೆ ಅವುಗಳಿಂದುಂಟಾದವು, ಯಾವುವೆಂದರೆ, **ಸರ್ವಾಣಿ ಭೂತಾನಿ ;** ಇದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ—**ಬ್ರಹ್ಮಾದಿ ಸ್ತಂಬ ಪರ್ಯನ್ತ**-ಚತು

**ಭಾ. ಯೋನೀನಿ ಹಿ ತಾನಿ ಮದೀಯಾನ್ಯೇವ । ತಥಾ ಪ್ರಕೃತಿದ್ವಯಯೋನಿತ್ವೇನ** ಮುಃಖಬ್ರಹ್ಮನನ್ನು ಮೊದಲುಮಾಡಿಕೊಂಡು ಅಲ್ಪವಾದ ಕ್ರಿಮಿಕೀಟಗಳ ಪರ್ಯನ್ತವಾಗಿ, **ಉಚ್ಚಾವಚ ಭಾವೇನಾವಸ್ಥಿತಾನಿ**-ಉತ್ಕೃಷ್ಟಾಪಕೃಷ್ಟಭಾವಗಳಿಂದಿರುವ, **ಚಿದಚಿನ್ಮಿಶ್ರಾಣಿ**-ಇದೂ ಭೂತಾನಿ ಎಂಬುದರ ಅರ್ಥವು, ಚಿತ್ತು ಅಚಿತ್ತುಗಳ ಮಿಶ್ರಗಳಾದ, **ಮದೀಯಾನಿ**-ನನ್ನ ಸಂಬಂಧವಾದ ಎಂದರೆ ನನಗೆ ಶೇಷಭೂತವಾಗಿ, ನನಗೆ ಶರೀರವಾಗಿ, ನನ್ನ ನಿಯಾಮ್ಯ ವರ್ಗಕ್ಕೆ ಸೇರಿದುದಾಗಿ ಎಂಬ ಭಾವವು. **ಸರ್ವಾಣಿ ಭೂತಾನಿ**-ಸಮಸ್ತ ಭೂತಗಳೂ, **ಇತಿ**-ಎಂಬುದಾಗಿ, **ಉಪಧಾರಯ**-ತಿಳಿ ; ಆದರೆ ಮೂಲದಲ್ಲಿ **ಏತದ್ಯೋನೀನಿ ಭೂತಾನಿ ಸರ್ವಾಣಿ** ಎಂದು ಇಷ್ಟೇ ಇರುವಾಗ **ಮದೀಯಾನಿ** ಎಂದು ಹೇಗೆ ಅರ್ಥಮಾಡಿದಿರಿ ಎಂದಾಕ್ಷೇಪಿಸುವ ರೆಂದು ಭಾವಿಸಿ ಕಾರಣವನ್ನು ಹೇಳುತ್ತಾರೆ. ಎರಡು ವಿಧ ಪ್ರಕೃತಿಗಳೂ ನನ್ನ ಸ್ವತ್ತಾಗಿ,**"ಮೇ"** ಎಂದು ಹಿಂದೆ ಎರಡು ಶ್ಲೋಕಗಳಲ್ಲೂ ಹೇಳಿರುವದರಿಂದ, ಆ ನನ್ನ ಸ್ವತ್ತುಗಳಿಂದಲೇ ನನ್ನ ಸಙ್ಕಲ್ಪದಿಂದಲೇ ಅವುಗಳ ಸಮ್ಮೇಳನದಿಂದುಂಟಾದ ಸರ್ವಭೂತಗಳೂ **ಸಹ, ಮದೀಯಾನಿ**-ನನ್ನವೇ ನನ್ನ ವಿಭೂತಿವರ್ಗಕ್ಕೇನೆ ಸೇರಿದವು ಎಂಬ ಭಾವವು. ಇದನ್ನೇ ವಿಶದೀಕರಿಸುತ್ತಾರೆ. **ತಾನಿ ಮದೀಯ ಪ್ರಕೃತಿದ್ವಯ ಯೋನೀನಿ ಹಿ**-ಆ ಸಮಸ್ತ ಭೂತಗಳೂ, ನನ್ನದಾದ, ನನ್ನ ಸ್ವತ್ತಾದ ಎರಡು ಪ್ರಕೃತಿಗಳಾದ ಚಿದಚಿತ್ತುಗಳನ್ನೇ ಕಾರಣವಾಗಿವುಳ್ಳವು ; ಆದುದರಿಂದ ಎಂದರೆ ಆ ಎರಡು ದ್ರವ್ಯಗಳಿಂದಲೇ ಈ ಸಮಸ್ತ ಭೂತಗಳೂ ನನ್ನ ಸಙ್ಕಲ್ಪದಿಂದುಂಟಾಗಿರು ವವಾದುದರಿಂದಲೇ, **ಮದೀಯಾನ್ಯೇವ**-ನನ್ನ ಸಂಬಂಧವಾದವುಗಳೇ ; ಆದರೆ ಪ್ರಕೃತಿ ಶಬ್ದವು ಅಚಿತ್ತಿಗೇನೋ ನ್ಯಾಯವು. ಚಿತ್ತಿಗೆ **ಪ್ರಕೃತಿ** ಎಂಬ ವ್ಯವಹಾರವು ಹೇಗೆ ಕೂಡುತ್ತ ದೆಂದಾಕ್ಷೇಪಿಸಿದರೆ, ಯದ್ಯಪಿ ಚಿತ್ತಿನ ಸ್ವರೂಪವು ಜ್ಞಾನರೂಪವಾಗಿ ಅಮೊಘವಾದುದಾದರೂ, ಈ ಅಚಿತ್ಸಂಬಂಧದಿಂದ ಜ್ಞಾನತಿರೋಹಿತವಾಗಿ, ವಿಚಿತ್ರವಾದ ಕರ್ಮವನ್ನೆಸಗುತ್ತಾ, ಭೋಗಾದಿಗಳಲ್ಲಿ ಸಕ್ತನಾಗಿ, ನಾನಾರೂಪಗಳನ್ನು ಹೊಂದಿರುವ ಈಗಿನ ರೂಪಕ್ಕಿಂತ ಸೃಷ್ಟಿಗೆ ಪೂರ್ವ ದಶೆಯಲ್ಲಿ ಅಚಿತ್ ಪಕೃತಿಗೆ ಸಮವಾಗಿರುವದರಿಂದ ಪ್ರಕೃತಿ ಶಬ್ದದಿಂದಲೇ ಪರಾಪ್ರಕೃತಿಯೆಂದು ಹಿಂದೆ ಹೇಳಲ್ಪಟ್ಟನು. ಇವೆರಡನ್ನೂ ಒಟ್ಟುಗೂಡಿಸಿಯೇ ಇಲ್ಲಿ ಮೂಲದಲ್ಲಿರುವ **ಏತತ್** ಎಂಬ ಶಬ್ದವು ತದನುಗುಣವಾಗಿಯೇ ಶ್ರೀ ಯತಿವರ್ಯರಿಂದ **ಚೇತನಾಚೇತನ ಸಮಷ್ಟಿರೂಪ ಮದೀಯ ಪ್ರಕೃತಿದ್ವಯ ಯೋನೀನಿ** ಎಂದು ವ್ಯಾಖ್ಯಾನಮಾಡಲ್ಪಟ್ಟಿರುತ್ತದೆ. **ಮದೀಯ** ನೆಂಬುದು ಹಿಂದಿನ **ಮೇ** ಎಂಬ ಪದಗಳಿಂದ ತೋರುವದೂ ಅಲ್ಲದೆ, ಶ್ರುತಿಯೂ ಕೂಡ, **"ಯಸ್ಯ ಪೃಥಿವೀ ಶರೀರಂ" "ಯಸ್ಯಾಪಶ್ಶರೀರಂ" "ಯಸ್ಯ ತೇಜಶ್ಶರೀರಂ"** ಎಂದೂ **"ಯಸ್ಯ ಆತ್ಮಾ ಶರೀರಂ"** ಎಂದೂ ಹೇಳಿದ ಹಾಗೆಯೇ, **"ಯಸ್ಯ ಸರ್ವಾಣಿ ಭೂತಾನಿ ಶರೀರಂ"** ಎಂದು ಒಟ್ಟುಕೂಡಿಸಿ ಹೇಳಿರುವದರಿಂದಲೂ, **ಮದೀಯಾನಿ ಸರ್ವಾಣಿ ಭೂತಾನಿ** ಎಂದೂಪ್ರಯೋಗಿಸಿರುತ್ತಾರೆ. ಈ ಕಾರಣದಿಂದಲೇ ಮುಂದೆ ನಾನೇ, **ಪ್ರಭವಃ ಪ್ರಲಯಃ** - ಸೃಷ್ಟಿಲಯಕರ್ತಾ ಅಲ್ಲದೆ ಜಗತ್ತಿಗೆ **ಶೇಷಿಯೂ** ನಾನೇ ಎಂದು ವ್ಯಾಖ್ಯಾನಮಾಡಿರುತ್ತಾರೆ. **ವಿಭೂತಿ** ಎಂದರೆ ನಿಯಾಮ್ಯವರ್ಗವು ; ಸೃಷ್ಟಿಗೆ ಪೂರ್ವದಲ್ಲಿ ಎರಡೂ ಅಚಿತ್ಪ್ರಾಯದಲ್ಲಿ ನಾಮ ರೂಪಾನರ್ಹ ದಶೆಯಲ್ಲಿದುದರಿಂದ ಎರಡಕ್ಕೂ ಪ್ರಕೃತಿ ಎಂದೇ ಇಲ್ಲಿ ವ್ಯವಹಾರವು. **"ಅಚಿದ ವಿಶಿಷ್ಟಾನ್ ಪ್ರಳಯೇ ಜಂತೂ ನವಲೋಕ್ಯ ಜಾತನಿರ್ವೇದಾ । ಕರಣ ಕಳೇಬರ ಯೋಗಂ ವಿತರಸಿ ವೃಷಶೈಲನಾಥಕರುಣೇ ತ್ವಂ** (ದಯಾ. ೧೭) ಎಂದು ಹೇಳಿರುವದರಿಂದ, ಚಿದಚಿತ್ಸಮ್ಮೇಳನಕ್ಕೆ ಮುಂದೆ ಚಿತ್ತೂ ಕೂಡ ಅಚಿತ್ಪ್ರಾಯವಾಗಿಯೇ ಇತ್ತು ಎಂದೂ, ಸರ್ವೇಶ್ವರನ ಕರುಣೆಯು ಜಂತುಗಳಿಗೆ ಕರಣ ಕಳೇಬರ ಯೋಗದ್ವಾರಾ ಅಚಿತ್ಸಂಬಂಧವನ್ನುಂಟುಮಾಡಿದುದ

**ಭಾ. ಕೃತ್ಸ್ನಸ್ಯ ಜಗತಃ ತಯೋರ್ದ್ವಯೋರಪಿ ಮದ್ಯೋನಿತ್ವೇನ ಮದೀಯತ್ವೇನ ಚ ಕೃತ್ಸ್ನಸ್ಯ ಜಗತಃ ಅಹಮೇವ ಪ್ರಭವೋಽಹಮೇವಚ ಪ್ರಲಯೋಽಹಮೇವಚ ಶೇಷೀತ್ಯುಪಧಾರಯ । ತಯೋಃ ಚಿದಚಿತ್ಸಮಷ್ಟಿಭೂತಯೋಃ ಪ್ರಕೃತಿ ಪುರುಷ**

ರಿಂದ ನಾಮರೂಪಗಳೂ, ಅತ್ಯದ್ಭುತ ಪ್ರವೃತ್ತಿಗಳೂ ತನ್ಮೂಲಕವಾಗಿ ಅವರಿಗೆ, ಬ್ರಹ್ಮರುದ್ರೇಂದ್ರಾದಿಗಳು ಮೊದಲುಗೊಂಡು ಕ್ರಿಮಿಕೀಟಾದಿಗಳವರೆಗೂ ಉಚ್ಚಾವಚಾವಸ್ಥೆಗಳೂ, ಎಲ್ಲಾ ಆಯಾಜಂತುಗಳ ಪ್ರಳಯಪೂರ್ವದಲ್ಲಿ ಪ್ರಾಪ್ತವಾಗಿದ್ದ ಕರ್ಮಾನುಸಾರ ಲಭಿಸುವುವು ಎಂಬ ತಾತ್ಪರ್ಯವು.

ಉತ್ತರಾರ್ಧಕ್ಕೆ ಭಾಷ್ಯವನ್ನು ಬರೆಯುತ್ತಾರೆ—**ತಥಾ** ಎಂದರೆ **ತಥಾಸತಿ** ಎಂಬರ್ಥವು, ಹಾಗಾಗಲಾಗಿ, ಅಥವಾ ಆ ಎರಡು ಪ್ರಕೃತಿಯು ನನ್ನದಾಗಿ ನನಗೆ ಶೇಷಭೂತವಾಗಲಾಗಿ, ಮತ್ತೆ ಅವೆರಡೂ ಸೇರಿರುವ ಸಮಸ್ತ ಭೂತಗಳೂ ನನಗೆ ಶೇಷಭೂತವಾಗಲಾಗಿ, **ಕೃತ್ಸ್ನಸ್ಯ ಜಗತಃ**-ಸಮಸ್ತ ಜಗತ್ತಿಗೂ, **ಪ್ರಕೃತಿದ್ವಯ ಯೋನಿತ್ವೇನ**-ಈ ಎರಡು ಪ್ರಕೃತಿಗಳಾದ ಚಿದಚಿತ್ತುಗಳ ಸಮ್ಮೇಳನರೂಪಕಾರಣವಿರುವದರಿಂದ ಮತ್ತು **ತಯೋರ್ದ್ವಯೋರಪಿ**-ಆ ಎರಡಾದ ಚಿದಚಿತ್ಪ್ರಕೃತಿಗಳಿಗೂ ಕೂಡ, **ಮದ್ಯೋನಿತ್ವೇನ ಮದೀಯತ್ವೇನ ಚ**-ನಾನೇ ಕಾರಣವಾಗಿಯೂ, ಅವುಗಳೂ ನನ್ನ ಸ್ವತ್ತೇಯಾಗಿ ನನ್ನ ನಿಯಾಮ್ಯ ವರ್ಗಕ್ಕೇ ಸೇರಿದವುಗಳಾದುದರಿಂದಲೇ, **ಕೃತ್ಸ್ನಸ್ಯ ಜಗತಃ**-ಸಮಸ್ತ ಲೀಲಾ ವಿಭೂತಿಗೆ ಸೇರಿದ ಜಗತ್ತುಗಳಿಗೂ, **ಅಹಮೇವ ಪ್ರಭವಃ**-ನಾನೇ ಉತ್ಪತ್ತಿಗೆ ಕಾರಣನು, **ಅಹಮೇವ ಪ್ರಲಯಃ**-ನಾನೇ ಲಯಕ್ಕೆ ಕಾರಣನೂ, **ಅಹಮೇವ ಚ ಶೇಷೀ**-ನಾನೇ ಅವುಗಳಿಗೆಲ್ಲಾ ಸ್ವಾಮಿಯು **ಇತಿ**-ಎಂಬುದಾಗಿ, **ಉಪಧಾರಯ**-ತಿಳಿ. ಯಾವಾಗ ಸೃಷ್ಟಿಲಯಗಳು ಹೇಳಲ್ಪಟ್ಟವೋ, ಸ್ಥಿತಿಗೂ ಸಹ ತಾನೇ ಕಾರಣನೆಂದು ಹೇಳುವ ಕೆಲಸವಿಲ್ಲವೆಂದು ಭಾವವು. **ಇದು ಅಹಮೇವಚ ಶೇಷೀ** ಎಂಬುದರಿಂದಲೂ ವ್ಯಕ್ತಪಡುತ್ತದೆ.

ಆದರೆ ಪ್ರಕೃತಿಯು **"ಅಜಾಮೇಕಾಂ"**ಎಂಬ ಶ್ರುತಿಯಿಂದಲೂ, ಪುರುಷನಾದ ಜೀವಾತ್ಮವರ್ಗವು **"ನಿತ್ಯೋ ನಿತ್ಯಾನಾಂ"** ಎಂಬ ಶ್ರುತಿಯಿಂದಲೂ, ಮತ್ತು ಇದೇ ಗೀತೆಯಲ್ಲೇ ಮುಂದೆ **"ಪ್ರಕೃತಿಂ ಪುರುಷಂಚೈವ ವಿದ್ಧ್ಯನಾದೀ ಉಭಾವಪಿ"** ಎಂಬ ವಾಕ್ಯದಿಂದಲೂ, ನಿತ್ಯವಾದವುಗಳಾದ ನಂತರ, ಸರ್ವೇಶ್ವರನು ಹೇಗೆ ಇವುಗಳಿಗೆ ಕಾರಣನು ಎಂದಾಕ್ಷೇಪಿಸಬಹುದು. ಇದರ ಸಮಾಧಾನಕ್ಕಾಗಿ ಪರಮಪುರುಷನೇ ಅವುಗಳ ಪ್ರಲಯ ಉತ್ಪತ್ತಿಗಳಿಗೆ ಕಾರಣನು ಎಂದು ಹೇಳಲ್ಪಟ್ಟಿತು. **ಪ್ರಲಯ** ವೆಂದರೆ ನಾಶವಲ್ಲವು, **ಲಿಙ್-ಸಂಶ್ಲೇಷಣೇ** ಎಂಬ ಧಾತುರೀತ್ಯಾ ಸ್ವಾಮಿಸಙ್ಕಲ್ಪಾನುಸಾರ ಅವುಗಳ ಸೂಕ್ಷ್ಮದಶೆಯಲ್ಲಿ ನಾಮರೂಪಾನರ್ಹಸ್ಥಿತಿಯಲ್ಲಿ ಸರ್ವೇಶ್ವರನೊಂದಿಗೆ ಸಂಶ್ಲೇಷಿಸಿಕೊಂಡಿರುವದೇ ಉತ್ಪತ್ತಿ ಅಥವಾ ಸೃಷ್ಟಿ, ಎಂದರೆ **ಸೃಜವಿಸರ್ಗೇ** ಎಂಬ ಧಾತ್ವರ್ಥದ ಪ್ರಕಾರ**"ತೋಯೇನಜೀವಾ ನ್ವ್ಯಸಸರ್ಜ ಭೂಮ್ಯಾಮ್"** (ಅಂಭಸಿ) ಎಂದು ಹೇಳಿರುವ ಪ್ರಕಾರ ಅಚಿತ್ತಿನೊಂದಿಗೆ ಚಿತ್ತನ್ನು ಸೇರಿಸಿ, ಸೂಕ್ಷ್ಮದಶೆಯಲ್ಲಿ ನಾಮರೂಪಾನರ್ಹವಾದುದು, ಸ್ಥೂಲದಶೆಯನ್ನು ಹೊಂದಿ ನಾಮರೂಪಾರ್ಹವಾಗುವದೇ ಸೃಷ್ಟಿಯು ; ಇದರಿಂದ ಇಲ್ಲದಿರುವದರ ಉತ್ಪತ್ತಿಯೆಂಬರ್ಥವಲ್ಲವು ; ಲಯವೆಂದರೆ ನಾಶವೆಂಬರ್ಥವೂ ಅಲ್ಲವು ; ಇರುವ ದ್ರವ್ಯಕ್ಕೆ ನಾಶವು ಎಂದಿಗೂ ಇಲ್ಲವು ; ಇಲ್ಲದಿರುವದು ಎಂದಿಗೂ ಉತ್ಪನ್ನವಾಗುವದೂ ಇಲ್ಲವು. ಇದು ಆಧುನಿಕ ಶಾಸ್ತ್ರಜ್ಞರ ಅಭಿಪ್ರಾಯಕ್ಕೆ ಅನುಗುಣವಾದ ವಿಷಯವು. ಆದುದರಿಂದ ನೈಯಾಯಿಕನ ಕಾರ್ಯಕಾರಣ ಭಿನ್ನತ್ವವು ಸರ್ವಾತ್ಮನಾ ಕೂಡು

**ಭಾ. ಯೋರಪಿ ಪರಮ ಪುರುಷಯೋನಿತ್ವಮ್ ಶ್ರುತಿಸ್ಮೃತಿ ಸಿದ್ಧಮ್. (೧) "ಮಹಾನವ್ಯಕ್ತೇ ಲೆಯತೇ, ಅವ್ಯಕ್ತಮಕ್ಷರೇ ಲೀಯತೇ, ಅಕ್ಷರಂ ತಮಸಿಲೀಯತೇ,**

ವದಿಲ್ಲವು. ಇಲ್ಲದಿರುವದು ಹೊಸದಾಗಿ ಉಂಟಾಗುವದಿಲ್ಲವು, ಇರುವದು ಎಂದಿಗೂ ನಾಶವಾಗುವದಿಲ್ಲವು. ಆದುದರಿಂದ **ಸೃಷ್ಟಿ ಲಯ** ಶಬ್ದಗಳ ಸರಿಯಾದ ಅರ್ಥವನ್ನು ಗ್ರಹಿಸತಕ್ಕದ್ದು-**ಸ್ಥೂಲ ಚಿದಚಿದ್ವಿಶಿಷ್ಟ ಪರಮಾತ್ಮನು ಸೂಕ್ಷ್ಮ ಚಿದಚಿದ್ವಿಶಿಷ್ಟನಾಗುವದೇ ಲಯವು. ಸೂಕ್ಷ್ಮ ಚಿದಚಿದ್ವಿಶಿಷ್ಟನು ಸ್ಥೂಲಚಿದ್ವಿಶಿಷ್ಟನಾಗುವದೇ ಸೃಷ್ಟಿಯು.** ಪೂರ್ವಾವಸ್ಥೆಯು ನಾಮರೂಪಾನರ್ಹವಾದ ಅವಸ್ಥೆಯು · ಉತ್ತರಾವಸ್ಥೆಯು ನಾಮರೂಪಾರ್ಹವಾದ **ಅವಸ್ಥೆಯು.** ಪ್ರಳಯಾವಸ್ಥೆಯು ಸೂಕ್ಷ್ಮ ಚಿದಚಿತ್ತುಗಳಿಂದ ಯುಕ್ತನಾಗಿರುವ ಪರಬ್ರಹ್ಮವನ್ನೇ **ಅಸತ್ತೆಂದು, ಅಸದ್ವಾ ಇದಮಗ್ರ ಅಸೀತ್** (ತೈ. ಅ. ೭೧) ಎಂಬಲ್ಲೂ **"ಅಸದೇವೇದಮಗ್ರ ಅಸೀತ್"** (ಛಾಂ. ೬.೧೯.೧) ಎಂಬಲ್ಲೂ ಹೇಳಿರುತ್ತದೆ. ಸೃಷ್ಟ್ಯುನ್ಮುಖನಾಗಿರುವ **ಸೂಕ್ಷ್ಮ ಚಿದಚಿತ್ತು**ಗಳಿಂದ ಯುಕ್ತನಾದ ಪರಬ್ರಹ್ಮವೇ **ಸದೇವ ಸೌಮ್ಯೇದಮಗ್ರ ಅಸೀತ್** (ಛಾಂ. ೬.೨.೧) ಎಂಬಲ್ಲಿ ಸಚ್ಛಬ್ದದಿಂದ ಬೋಧಿಸಲ್ಪಟ್ಟಿರುತ್ತಾನೆ.

ಹೀಗೆ ಅಚಿತ್ತಿಗೆ ಸ್ವರೂಪವಿಕಾರವೂ, ಚಿತ್ತಿಗೆ ಅಚಿತ್ಸಂಸರ್ಗದಿಂದ ಸ್ವಭಾವ ವಿಕಾರವೂ, ಅಚಿತ್ತು ಚಿತ್ತಿನೊಂದಿಗೆ ಸೇರಿ ಸತ್ತೆಯನ್ನು ಹೊಂದೋಣವೂ, ಅಚಿತ್ತು ಭೋಗ್ಯವಾಗಿಯೂ, ಚಿತ್ತು ಭೋಕ್ತಾವಾಗಿಯೂ, ಹೀಗೆಲ್ಲಾ ಇರಲು ಕಾರಣವು ಸರ್ವೇಶ್ವರ ಸಙ್ಕಲ್ಪವು ; ಸರ್ವೇಶ್ವರನು ಇವೆರಡನ್ನೂ ಅನುಪ್ರವೇಶಮಾಡಿ ಹೀಗೇ ಇರಬೇಕೆಂದು ಪ್ರೇರಿತಾವಾಗಿ ಸಙ್ಕಲ್ಪಿಸಿರುತ್ತಾನೆ ಯಾದುದರಿಂದ ಆತನೇ ಇವೆರಡಕ್ಕೂ ಕಾರಣನು ಎಂದು ಮುಂದೆ ತಿಳಿಸುತ್ತಾರೆ. **ಚಿದಚಿತ್ಸಮಷ್ಟಿ ಭೂತಯೋಃ**-ಪ್ರಳಯದಶೆಯಲ್ಲಿ ನಿರ್ವ್ಯಾಪಾರದಶೆಯನ್ನು ಹೊಂದಿರುವ, **ತಯೋಃ**-ಆ ಎರಡು ಪ್ರಕೃತಿಗಳಾದ, **ಪ್ರಕೃತಿ ಪುರುಷಯೋರಪಿ**-ಪ್ರಕೃತಿಪುರುಷರಿಗೂ, **ಪರಮ ಪುರುಷಯೋನಿತ್ವಂ**-ಪರಮ ಪುರುಷನೇ ಕಾರಣನಾಗಿರುವ ಭಾವವೂ, ಶ್ರುತಿಸ್ಮೃತಿ ಪ್ರಮಾಣಗಳಿಂದ ಸಿದ್ಧವು. ಹೇಗೆಂದರೆ—ಮಹತ್ತತ್ತ್ವವು, **ಮಹಾನವ್ಯಕ್ತೇಲೀಯತೇ** ಎಂಬ ಶ್ರುತ್ಯನುಸಾರ ಗುಣಸಾಮ್ಯ ಹೊಂದುವ ಸ್ಥಿತಿಯನ್ನು ಹೊಂದಿ ಅವ್ಯಕ್ತದೊಂದಿಗೆ ಸಂಶ್ಲೇಷಿಸುತ್ತದೆ, **"ಅವ್ಯಕ್ತಮಕ್ಷರೇಲೀಯತೇ"** ಯಾವ ಅವಸ್ಥೆಯಲ್ಲಿ ತ್ರಿಗುಣಸಾಮ್ಯವೂಕೂಡ ಸ್ಫುಟವಲ್ಲವೋ ಅಂತಹ ಅವಸ್ಥೆಯು ಚೇತನ ಸಮಷ್ಟಿಗರ್ಭವಾಗಿ ಅಕ್ಷರಶಬ್ದದಿಂದ ಹೇಳಿಸಿಕೊಳ್ಳುತ್ತದೆ. ಹಾಗೆಯೇ ಇಲ್ಲಿ ಮಹತ್ತತ್ತ್ವವನ್ನೇ ಆಗಲಿ ಅವ್ಯಕ್ತವನ್ನೇ ಆಗಲಿ ಅಚಿತ್ತತ್ತ್ವಮಾತ್ರವೆಂದು ಭಾವಿಸತಕ್ಕದ್ದಲ್ಲವು. ಚಿದಚಿನ್ಮಿಶ್ರವೆಂದೇ ಭಾವಿಸತಕ್ಕದ್ದು, ಏಕೆಂದರೆ **"ಪ್ರಧಾನಾದಿ ವಿಶೇಷಾಂತಂ ಚೇತನಾಽಚೇತನಾತ್ಮಕಂ"** ಎಂಬುದು ಶ್ರೀ ಪರಾಶರೋಕ್ತಿಯು. **ಅಕ್ಷರಂ ತಮಸಿಲೀಯತೇ** ಅಕ್ಷರವು ತಮಸ್ಸೊಂದಿಗೆ ಸೇರುತ್ತದೆ. ತಮಸ್ಸಿನ ಅವಸ್ಥೆಯಲ್ಲಿ ಇದು ಚಿದ್ಭಾಗ, ಇದು ಅಚಿದ್ಭಾಗವೆಂದು ವಿಮರ್ಶಿಸಲು ಸಾಧ್ಯವಿಲ್ಲದ ಅ ಸ್ಥೆಯು. ಇದಕ್ಕೆ ಪ್ರಧಾನ ಪ್ರಕೃತಿ ಶಬ್ದಗಳ ಪ್ರಯೋಗವುಂಟು. ಇದು ಅತಿ ಸೂಕ್ಷ್ಮಾವಸ್ಥೆಯು. ಪರಮಾತ್ಮನಿಗೆ ಮಾತ್ರವೇ ಗೋಚರವು. ಇಂತಹ ಅತಿ ಸೂಕ್ಷ್ಮನಾಗಿರುವ ಚಿದಚಿಚ್ಛರೀರಕನು ಪರಮಾತ್ಮನು. ಇಂತಹ ಪರಮಾತ್ಮನಿಗೆ ಮಾತ್ರವೇ ಗೋಚರಾವಸ್ಥೆಯನ್ನೇ **"ತಮಃ ಪರೇ ದೇವ ಏಕೀ ಭವತಿ"** ಎಂಬುದು ಹೇಳುತ್ತದೆ. ಮಹದಾದಿ ಅವಸ್ಥೆಗಳನ್ನು ಬಿಟ್ಟು ಬೇರೆ ಪ್ರಕೃತಿಯ ಅವಸ್ಥೆಯೊಂದಿಗೆ ಸೇರುವದರಿಂದ ಅಲ್ಲೆಲ್ಲಾ **ಲೀಯತೇ ಲೀಯತೇ** ಎಂದು ಹೇಳಲ್ಪಟ್ಟಿತು. ಇಲ್ಲಿ ತಮಸ್ಸಿನ **ಅವಸ್ಥೆಯನ್ನು**

(೧) ಸುಬಾಲ. ೨.

**ಭಾ. ತಮಃ ಪರೇದೇವ ಏಕೀ ಭವತಿ", (೨) ವಿಷ್ಣೋಃ ಸ್ವರೂಪಾತ್ಪರತೋ ದಿತೇ ದ್ವೇ ರೂಪೇಪ್ರಧಾನಂ ಪುರುಷಶ್ಚ ವಿಪ್ರ. (೩) ಪ್ರಕೃತಿ ರ್ಯಾ ಮಯಾ ಖ್ಯಾತಾಽವ್ಯಕ್ತಾ, ವ್ಯಕ್ತ ಸ್ವರೂಪಿಣೀ। ಪುರುಷಶ್ಚಾಪ್ಯುಭಾವೇತೌ ಲೀಯೇತೇ ಪರಮಾತ್ಮನಿ। ಪರ ಮಾತ್ಮಾಚ ಸರ್ವೇಷಾ ಮಾಧಾರಃ ಪರಮೇಶ್ವರಃ। ವಿಷ್ಣುನಾಮಾ ಸ ವೇದೇಷು ವೇದಾಂತೇಷು ಚ ಗೀಯತೇ", ಇತ್ಯಾದಿಕಾ ಹಿ ಶ್ರುತಿಸ್ಮೃತಯಃ ||೬||**

ಬಿಡುವ ಸಂದರ್ಭವಲ್ಲದೆ ಪರಮಾತ್ಮನೊಂದಿಗೆ ಮಾತ್ರ ಮೊದಲಿನ ಹಾಗೆಯೇ ಸಂಶ್ಲೇಷವನ್ನು ಬೋಧಿಸಬೇಕಾಗಿರುವದರಿಂದ **ಲೀಯತೇ** ಎಂಬುದಕ್ಕೆ ಬದಲಾಗಿ **ಏಕೀ ಭವತಿ** ಎಂದು ಪ್ರಯೋಗಿಸಲ್ಪಟ್ಟಿರುತ್ತದೆ. ಏಕವಲ್ಲದೆ ಅನೇಕವಾದುದು ಏಕವಾಗಿರುವಹಾಗೆ ತೋರಿದರೇನೇ ಏಕೀಭವತಿ ಎಂಬ ಪ್ರಯೋಗವು. ಇದು ವೈಯಾಕರಣರಿಗೆ ಸಮ್ಮತವಾದುದು.

(೨) ಈ ಮುಂದಿನ ಎರಡು ಶ್ಲೋಕಗಳು ಬ್ರಹ್ಮಪುರಾಣದಲ್ಲೂ ಇವೆ. **ಹೇ ವಿಪ್ರ**-ಓ ಬ್ರಾಹ್ಮಣನಾದ ಮೈತ್ರೇಯನೇ, **ವಿಷ್ಣೋಃಸ್ವರೂಪಾತ್**-ಆ ಮಹಾ ವಿಷ್ಣುವಿನ ರೂಪದಿಂದ ಇಲ್ಲಿ ಸ್ವರೂಪ ಶಬ್ದವು ರೂಪವಾಚೀ. ಎರಡು ರೂಪಗಳು **ಉದಿತೇ-ತಸ್ಮಾತ್ತಮಸ್ಸಂಜಾಯತೇ** ಎಂಬ ಶ್ರುತ್ಯನುಸಾರವಾಗಿ, ಉತ್ಪನ್ನವಾದವುಗಳಾಗಿವೆ, ಅಥವಾ **ದಿತೇ** ಎಂದೂ, ಪದಚ್ಛೇದ ವನ್ನು ಮಾಡಬಹುದು, ಆಗ **ದಿತೇ** ಎಂದರೆ ವಿಭಕ್ತಗಳಾಗಿವೆ. ಇದಕ್ಕೆ ಉತ್ತರಾರ್ಧವು **"ತಸ್ಯೈವ ಯೋಽನ್ಯೇನ ಧೃತೇ ವಿಯುಕ್ತೇ ರೂಪಾಂತರಂ ತದ್ದ್ವಿಜಕಾಲಸಂಜ್ಞಾಂ"** ಎಂಬುದಾಗಿ. **ಈ** ಪ್ರಧಾನ ಪುರುಷರುಗಳು, **ವಿಯುಕ್ತೇ**-ಸೃಷ್ಟ್ಯರ್ಹವಾದ ಸಂಯೋಗವಿಲ್ಲದಿರೋಣವು **ಹೇಗೋ** ಹಾಗೇ, ಆ ಪರಮಾತ್ಮನಿಗಾಗಿಯೇ, ಯಾವ ಇನ್ನೊಂದರಿಂದ ಧರಿಸಲ್ಪಟ್ಟದ್ದಿತೋ, ಅದನ್ನೇ ಕಾಲವೆಂದು ಹೇಳುತ್ತಾರೆ. **(೩) ವ್ಯಕ್ತಾವಕ್ತಸ್ವರೂಪಿಣೀ**-ಸಮಷ್ಟಿ ವ್ಯಷ್ಟಿರೂಪ ದಲ್ಲಿರುವ, **ಯಾ ಪ್ರಕೃತಿಃ**-ಯಾವ ಪ್ರಕೃತಿಯು, **ಮಯಾಖ್ಯಾತಾ**-ನನ್ನಿಂದ ಹೇಳಲ್ಪಟ್ಟಿತೋ, ಅದೂ ಮತ್ತು **ಪುರುಷಶ್ಚ**-ಜೀವತತ್ವವೂ ಸಹ, **ಉಭೌ ಏತೌ**-ಈ ಎರಡೂ ಕೂಡ, **ಲೀಯೇತೇ ಪರಮಾತ್ಮನಿ**-ಪರಮಾತ್ಮನಲ್ಲಿ ಸಂಶ್ಲೇಷಿಸಿಕೊಂಡಿರುತ್ತವೆ, ಪ್ರಕೃತಿಗೆ ಲಯವಾ ದರೋ ಪುರುಷದ್ವಾರಾ ಎಂದು ತಿಳಿಯತಕ್ಕದ್ದು, **ಪರಮಾತ್ಮಾ ಚ**-ಪರಮಾತ್ಮನಾದರೋ, **ಸರ್ವೇಷಾಮಾಧಾರಃ**-ಎಲ್ಲಕ್ಕೂ ಆಧಾರನಾಗಿರುತ್ತಾನೆ. ಅಂತಹ ಪರಮೇಶ್ವರನು, **ವಿಷ್ಣು ನಾಮಾ**-ವಿಷ್ಣುವೆಂಬ ಹೆಸರುಳ್ಳವನಾಗಿ, **ಸಃ**-ಆತನು, ವೇದಗಳಲ್ಲೂ ವೇದಾಂತಗಳಲ್ಲೂ ಅನೇಕ ಹೆಸರುಗಳಿಂದ, **ಗೀಯತೇ**-ಸ್ತೋತ್ರಮಾಡಲ್ಪಟ್ಟಿರುತ್ತಾನೆ. ಹಿರಣ್ಯಗರ್ಭ' ಧಾತೃ, ಪ್ರಜಾ ಪತಿ, ರುದ್ರ, ಸತ್, ಬ್ರಹ್ಮ, ಆತ್ಮಾ, ಶಿವ, ಶಂಭು ಮೊದಲಾದ ಹೆಸರುಗಳಿಂದ ಶ್ರೀ ಮಹಾ ವಿಷ್ಣುವೇ ಕೊಂಡಾಡಲ್ಪಟ್ಟಿರುತ್ತಾನೆಂಬ ಭಾವವು. ಇದರಿಂದ ಶ್ರೀಮನ್ನಾರಾಯಣನಿಗಿಂತ ಪರ ತ್ವವನ್ನು ಹೊಂದಿದ ನಿರ್ಗುಣನಾದ ಪರಶಿವನೊಬ್ಬನಿದ್ದಾನೆಂಬ ವಾದವು ದೂರೀಕೃ ತವು. ಏಕೆಂದರೆ ನಾರಾಯಣ ಶಬ್ದ ನಿರ್ವಚನದಿಂದಲೇ ವ್ಯಕ್ತವು. **ಇತ್ಯಾದಿಕಾ ಹಿ**-ಇವೇ ಮೊದಲಾದವುಗಳುಳ್ಳವಷ್ಟೆ, ಶ್ರುತಿಗಳೂ ಸ್ಮೃತಿಗಳೂ. ಇವುಗಳಿಂದ ಸ್ಥಾಪಿತವಾದುದು ಏನೆಂ ದರೆ-ಸರ್ವೇಶ್ವರನಿಗೆ ಶರೀರವಾಗಿ ಆತನಿಗೇನೇ ಶೇಷಭೂತವಾಗಿ, ಸ್ವತ್ತಾಗಿ, ನಿಯಾಮ್ಯವರ್ಗಕ್ಕೆ ಸೇರಿದವುಗಳಾಗಿ ಎರಡು ಪ್ರಕೃತಿಗಳು ಪ್ರಳಯಕಾಲದಲ್ಲಿ ಸಮಷ್ಟಿರೂಪದಲ್ಲಿ ಬಹುಸೂಕ್ಷ್ಮದಶೆ ಯಲ್ಲಿ ನಾಮರೂಪಾನರ್ಹದಶೆಯಲ್ಲಿರುತ್ತವೆ. ಅದರಲ್ಲಿ ಒಂದು ಜಡಪ್ರಕೃತಿಯಾಗಿ ಸ್ವರೂಪ ವಿಕಾರವುಳ್ಳದ್ದಾಗಿ ಅಷ್ಟು ಉತ್ಕೃಷ್ಟವಾದುದಲ್ಲವು. ಇದಕ್ಕೆ ಧಾರಕವಾಗಿ, ಸ್ವರೂಪ ವಿಕಾರವಿಲ್ಲ

(೨) ವಿ. ಪು. ೧. ೨. ೨೪. (೩) ವಿ. ಪು. ೬. ೪. ೩೯.

**ಮೂ. ಮತ್ತಃಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ।**

ಮವರಿಂದ ಉತ್ಕೃಷ್ಟವಾಗಿ, ಅವರೆ ಪ್ರಕೃತಿಸಂಬಂಧದಿಂದ ಸ್ವಭಾವ ಮಾತ್ರ ವಿಕಾರಹೊಂದುವ ದಾಗಿರುವ ಸಂಕುಚಿತ ಜ್ಞಾನವುಳ್ಳ ಪುರುಷಶಬ್ದವಾಚ್ಯವಾದ ಚೇತನ ತತ್ವವು. ಈ ಚೇತನ ವರ್ಗವೂ ಸರ್ವೇಶ್ವರನಿಗೆ ಶರೀರವು; ಶೇಷವಾದ ಸ್ವತ್ತು ನಿಯಾಮ್ಯ ವರ್ಗವು, ಇವೆರಡರ ಸಮ್ಮೇಳನದಿಂದ ಸ್ಥೂಲವಾಗಿ ತೋರುವುದೇ ಸೃಷ್ಟಿಯು. ಮುಖ್ಯವಾಗಿ ಸ್ಥೂಲವಾಗುವದು ಸ್ವರೂಪವಿಕಾರವುಳ್ಳ ಅಚಿದ್ದ್ರವ್ಯವು. ಚಿದ್ದ್ರವ್ಯವು ಅಣುವಾಗಿ ಏಕರೂಪವಾಗಿಯೇ ಇರುತ್ತದೆ. ಪ್ರಳಯಕ್ಕೂ ಸೃಷ್ಟಿಗೂ ಎಲ್ಲಕ್ಕೂ ಕಾರಣನು ಶ್ರೀಕೃಷ್ಣನಾದ ಸರ್ವೇಶ್ವರನೇ. ಪರಮಾತ್ಮನಲ್ಲಿ ಪ್ರಳಯವೆಂದರೆ, ಕ್ಷೀರದಲ್ಲಿ ನೀರು ಬೆರೆತಹಾಗೆ ವಿಭಾಗಾನರ್ಹಸಂಶ್ಲೇಷವು. ಸೃಷ್ಟಿಯೆಂದರೆ ಈ ನೀರೇ ಸ್ವಾಮಿಸಙ್ಕಲ್ಪದಿಂದ ಬಹುವಾಗಿ ತೋರಿ ಕ್ಷೀರದಿಂದ ಪ್ರತ್ಯೇಕಿಸಲ್ಪಡುವಿಕೆಯು, ಪ್ರತ್ಯೇಕಿಸಲ್ಪಟ್ಟನಂತರ ಪರಮಾತ್ಮನಿಂದ ದೂರವಾದುವೆಂಬ ಅಭಿಪ್ರಾಯಕೂಡದು. **ತತ್ಸೃಷ್ಟ್ವಾ ತದೇವಾನು ಪ್ರಾವಿಶತ್** ಅಗಲೂ ಸ್ವರೂಪತಃ ಆತ್ಮಾವಾಗಿ ಅನುಪ್ರವೇಶವೂ, **"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ"** ಎಂದು ಹೇಳಿರುವಹಾಗೆ ಅಂತರ್ಬಹಿರ್ವ್ಯಾಪ್ತಿಯೂ ಉಂಟು. ಆದುದರಿಂದ ಪರಮಾತ್ಮನು ಹೀಗೆ ಇವುಗಳಿಂದ ವಿಶಿಷ್ಟನಾಗಿಯೇ ಇರುತ್ತಾನೆ. ಹೀಗೆ ವಿಶಿಷ್ಟಾದ್ವೈತಭಾವವನ್ನೇ, ಶ್ರುತಿಸ್ಮೃತೀತಿಹಾಸ ಪುರಾಣಗಳು ಬೋಧಿಸುತ್ತವೆ. ॥೬॥

**ಮೂಲಕ್ಕೆ ಅರ್ಥವು:—**ಹೀಗೆ ಎಲ್ಲಾ ಚಿದಚಿತ್ತುಗಳೂ ತನ್ನ ಸ್ವತ್ತಾಗಿ ತಾನು ನಿಯಾಮಕನಾಗಿದ್ದರೆ, ತನಗೆ ಇನ್ನು ಯಾರಾದರೂ ನಿಯಾಮಕರುಂಟೋ ಎಂದರೆ ತಾನು **"ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ"**(ಶ್ವೇ.೬.೮) ಮತ್ತು **"ನ ತಸ್ಯ ಕಶ್ಚಿತ್ಪತಿರಸ್ತಿ ಲೋಕೇ"** (ಶ್ವೇ.೬.೯) ಇತ್ಯಾದಿ ಬಹು ಶ್ರುತಿಗಳಲ್ಲಿ ಉಪಪಾದಿಸಿರುವಹಾಗೆ ಆತನಿಗೆ ಅಧಿಕರೂ ಇಲ್ಲ, ಸಮರೂ ಇಲ್ಲವೆಂದು ಈ ಶ್ಲೋಕಾರ್ಧದಿಂದ ಹೇಳುತ್ತಾರೆ. **ಹೇ ಧನಂಜಯ**-ಓ ಅರ್ಜುನನೇ, **ಮತ್ತಃ ಪರತರಂ ನ ಕಿಂಚಿದಸ್ತಿ**-ನನಗಿಂತಲೂ ಶ್ರೇಷ್ಠವಾದುದಾಗಿ ಎಂದರೆ ನನಗೆ ಕಾರಣವಾಗಿ, ಶೇಷಿಯಾಗಿ, ನಿಯಾಮಕನಾಗಿ, ಯಾವುದೊಂದೂ ಇಲ್ಲವು. ನಾನೇ ಎಲ್ಲಕ್ಕೂ ಸಮಸ್ತ ಅಚೇತನ ಚೇತನರಿಗೂ ಕಾರಣನು, ಶೇಷಿಯು, ನಿಯಾಮಕನೇ ವಿನಾ ನನಗೆ ಕಾರಣಭೂತರಾಗಿ, ಶೇಷಿಯಾಗಿ, ನಿಯಾಮಕರಾಗಿ ಯಾರೂ ಇಲ್ಲವೆಂಬ ಭಾವವು. ಈ ಲೀಲಾವಿಭೂತಿಯಲ್ಲಿರುವದೆಲ್ಲಾ ಮೂರೇ ಎಂದು **"ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ"**ಎಂಬ ಶ್ರುತಿಯು ಹೇಳುತ್ತದೆ. ಹಾಗಾದರೆ ಸಮನಾಗಿರುವದು ಯಾವುದಾದರೂ ಉಂಟೋ ಎಂದರೆ? ಅದೂ ಇಲ್ಲವೆಂದು ಹೇಳುತ್ತಾರೆ, **ಮತ್ತಃ ಅನ್ಯತ್ ಕಿಂಚಿದಪಿ ನಾಸ್ತಿ**-ನನಗಿಂತಲೂ ಬೇರೆಯಾದುದೇ ಇಲ್ಲವು ಎಂದರೆ ಸಮನಾದುದೂ ಇಲ್ಲವೆಂದು ಅರ್ಥವಾಗಿ ತೋರಿಬರುತ್ತದೆ. ಹೀಗೆ ತಾನೇ ಸರ್ವಶರೀರಕನು, ಸರ್ವಶೇಷಿ, ಸರ್ವನಿಯಾಮಕನಾಗಿದ್ದಾನೆಂದೂ ತನಗೊಬ್ಬ ಶೇಷಿ ನಿಯಾಮಕರ್‍ಯಾರೂ ಇಲ್ಲವೆಂದು ಹೇಳಿದಂತಾಯಿತು. ಸಗುಣನಾದ ಶ್ರೀಕೃಷ್ಣನು ಹೀಗೆ ಹೇಳಿದನಂತರ ನಿರ್ಗುಣ ಪರಬ್ರಹ್ಮವಾದಕ್ಕೆ ಅವಕಾಶವಿಲ್ಲವಾಗಿ ತೋರುತ್ತದೆ. ಶ್ರುತಿಯು **ನ ತತ್ಸಮಃ** ಎಂದು ಹೇಳಿರುವದು ಹೇಗೆ? ಲಕ್ಷ್ಮಿಯು ಪರಮಾತ್ಮನಿಗೆ ಸಮವೆಂದು ಆಂಜನೇಯನು **"ತುಲ್ಯಶೀಲವಯೋವೃತ್ತಾಂ ತುಲ್ಯಾಭಿಜನಲಕ್ಷಣಾಂ"** (ರಾ. ಸುಂ. ೧೬.೫) ಎಂಬಲ್ಲಿ ಹೇಳಿರುತ್ತಾನೆ. ವಿಷ್ವಕ್ಸೇನ ಸಂಹಿತೆಯಲ್ಲಿ **"ಯಥಾ ಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ। ತಥಾ ವ್ಯಾಪ್ತಂ ತಯಾ ಸರ್ವಂ ನಿಯನ್ತ್ರೀ ಚ ತಥೇಶ್ವರೀ"** ಎಂದೂ **"ಅಸ್ಯಾ ಮಮ ಚ ಶೇಷಂ ಹಿ ವಿಭೂತಿರುಭಯಾತ್ಮಿಕಾ** ಎಂದೂ ಹೇಳಲ್ಪಟ್ಟಿರುತ್ತದೆ. **"ಯಥಾ ಸರ್ವಗತೋ**

**ಭಾ. ಯಥಾಸರ್ವಕಾರಣಸ್ಯಾಪಿ ಪ್ರಕೃತಿದ್ವಯಸ್ಯ ಕಾರಣತ್ವೇನ ಸರ್ವಾಚೇತನವಸ್ತು ಶೇಷಿಣಶ್ಚೇತನಸ್ಯಾಪಿ ಶೇಷಿತ್ವೇನ, ಕಾರಣತಯಾ ಶೇಷಿತಯಾ ಚಾಹಂ ಪರತರಃ ತಥಾ ಜ್ಞಾನಶಕ್ತಿ ಬಲಾದಿ ಗುಣಯೋಗೇನ ಚಾಹಮೇವಪರತರಃ ಮತ್ತೋsನ್ಯತ್-ಮದ್ವ್ಯತಿರಿಕ್ತಂ ಜ್ಞಾನಬಲಾದಿ ಗುಣಾನ್ತರಯೋಗಿ ಕಿಂಚಿದಪಿ ಪರತರಂನಾಸ್ತಿ||೬||**

---

**ವಿಷ್ಣುಃ ತಥೈವೇಯಂ ದ್ವಿಜೋತ್ತಮ" "ತ್ವಯ್ಯೈತದ್ವಿಷ್ಣುನಾ ಚಾಂಬ ಜಗದ್ವ್ಯಾಪ್ತಂ ಚರಾಚರಂ"** ಎಂದೂ ಹೇಳಿರುತ್ತಾರೆ. ಹಾಗೆಯೇ ಶ್ರೀ ಯತಿವರ್ಯರೂ **ಭಗವಾನ್ನಾರಾಯಣಾಭಿ ಮತಾನುರೂಪ ಸ್ವರೂಪ ರೂಪವಿಭವೈಶ್ವರ್ಯ"** ಯುಕ್ತಳೆಂದು ಹೇಳಿರುತ್ತಾರೆ. ಇದರಿಂದ **"ನ ತತ್ಸಮಃ"** ಎಂಬ ಶ್ರುತಿಗೆ ವಿರೋಧವಾಗುವುದಿಲ್ಲವೋ ? ಎಂದರೆ ಅದೇ ವಿಷ್ವಕ್ಸೇನ ಸಂಹಿತಾವಾಕ್ಯವೇ ಈ ಸಂದೇಹವನ್ನು ಹೋಗಲಾಡಿಸುತ್ತದೆ. ಅಲ್ಲಿ **"ಮಚ್ಛೇಷಭೂತಾ ಸರ್ವೇಷಾಂ ಈಶ್ವರೀವಲ್ಲಭಾ ಮಮ"** ಎಂದು ವ್ಯಕ್ತವಾಗಿ ಲಕ್ಷ್ಮಿಯು ಪರಮಾತ್ಮನಿಗೆ ಶೇಷಭೂತಳೆಂದು ಹೇಳಿರುವದರಿಂದಲೇ ಪರಮಾತ್ಮನಿಗೆ ಶ್ರುತಿಯು ನಿಸ್ಸಮಾಭ್ಯಧಿಕತ್ವವನ್ನು ಸ್ಥಾಪಿಸಿರುತ್ತದೆ. ಈ ಅಭಿಪ್ರಾಯವೇ ಈ ಶ್ಲೋಕಾರ್ಧದಲ್ಲಿ ಉಪಪಾದಿತವು.

**ಭಾಷ್ಯಾರ್ಥವು:**—ತನಗಿಂತಲೂ **ಪರತರ**ನಾದವನು ಯಾರೂ ಇಲ್ಲವೆಂಬುದರಿಂದ, ಅರ್ಥವಾಗಿ ತೋರಿಬರುವದನ್ನು ಮೊದಲು ಉಪಪಾದಿಸಿ, ನಿಸ್ಸಮಾಭ್ಯಧಿಕ ಶ್ರುತ್ಯರ್ಥವುಂಟಾಗುವದಕ್ಕೆ ಹೇಗೆ ಅನ್ವಯವೆಂಬುದನ್ನು ಅನುಗ್ರಹಿಸುತ್ತಾರೆ. **ಮತ್ತಃ ಪರತರಂನಾಸ್ತಿ** ಎಂದು ಇದ್ದ ಹಾಗೆಯೇ ಅನ್ವಯಿಸಿಬಿಟ್ಟರೆ, ಹಿಂದೆ ಉಪಪಾದಿಸಿದ ತನಗಿಂತ ಶ್ರೇಷ್ಠರಿಲ್ಲವೆಂಬುದೇ ಹೇಳಿದಂತಾಗುತ್ತದೆ; ಸಮರೂ ಇಲ್ಲವೆಂದು ವ್ಯಾವರ್ತಿಸಿ ಹೇಳಿದ ಹೆಚ್ಚಿನರ್ಥವು ಉಂಟಾಗುವದಿಲ್ಲವು. ಆ ಅರ್ಥವೂ ತೋರಿಬರುವ ಹಾಗೆ ಅನ್ವಯವು ಸಾಧುವಾದುದರಿಂದ ಹಾಗೆ ಅನ್ವಯವನ್ನು ಪ್ರದರ್ಶಿಸುತ್ತಾರೆ. ತನಗೆ ವೈಲಕ್ಷಣ್ಯವು ಈ ಎರಡು ಪ್ರಕೃತಿಗಳಿಗೆ ಕಾರಣತ್ವ, ಶೇಷಿತ್ವ, ನಿಯಾಮಕತ್ವ ಇವುಗಳ ಮಾತ್ರದಿಂದಲೇ ಅಲ್ಲವು, ಮಹತ್ತಾದ ಷಾಡ್ಗುಣ್ಯಾದಿ ಕಲ್ಯಾಣಗುಣಗಳ ಪ್ರಭಾವದಿಂದಲೂ ತನಗೆ ವೈಲಕ್ಷಣ್ಯವೆಂಬುದು ಅರ್ಥವಾಗಿ ತೋರಿಬರುವದರಿಂದ ಅದನ್ನೇ ಉಪಪಾದಿಸಿರುತ್ತಾರೆ; **ಯಥಾ**-ಹೇಗೆ, **ಸರ್ವಕಾರಣಸ್ಯಾಪಿ ಪ್ರಕೃತಿದ್ವಯಸ್ಯ**-ಸಮಷ್ಟಿರೂಪವಾದ ಚೇತನಾಚೇತನರೂಪವಾದ ಎರಡು ಪ್ರಕೃತಿಗಳೂ ಜಗತ್ತಿನ ಸಮಸ್ತ ವಸ್ತುಗಳಿಗೂ ಕಾರ್ಯರೂಪವಾದ ವ್ಯಷ್ಟಿರೂಪಕ್ಕೆ ಕಾರಣವಾಗಿದ್ದರೂ, **ಸರ್ವಾಚೇತನವಸ್ತುಶೇಷಿಣಃ** ಸಮಸ್ತ ಅಚೇತನವಸ್ತುಗಳಿಗೂ ಶೇಷಿಯಾಗಿರುವ, **ಚೇತನಸ್ಯಾಪಿ**-ಶೇಷಿಯಾಗಿರುವ ಚೇತನವರ್ಗಕ್ಕೂ ಕೂಡ, **ಕಾರಣತ್ವೇನ**-ಕಾರಣವಾಗಿರುವದರಿಂದ, ಹೀಗೆ **ಅಹಂ**-ನಾನು, **ಕಾರಣತಯಾ**-ಕಾರಣವಾಗಿರುವದರಿಂದಿಲೂ, **ಶೇಷಿತಯಾ** - ಶೇಷಿಯಾಗಿರುವದರಿಂದಲೂ, ಇದು ಮೂಲದಲ್ಲಿಲ್ಲದಿರುವಾಗ ಈ ಉಪಪಾದನೆ ಹೇಗೆ ಎಂದರೆ, ಹಿಂದೆ **ಮೇ ಪ್ರಕೃತಿಃ, ಮೇ ಪರಾ ಪ್ರಕೃತಿಃ** ಎಂದು ಹೇಳಲ್ಪಟ್ಟಿರುವದರಿಂದ ತೋರಿಬರುವ ಅಭಿಪ್ರಾಯವು ; ಆದುದರಿಂದ ಹಾಗೆ ಉಪಪಾದನವು. **ಪರತರಃ**-ಅವುಗಳಿಗಿಂತ ವಿಲಕ್ಷಣವಾಗಿ ನಾನು ಶ್ರೇಷ್ಠನು, ಮೂಲದಲ್ಲಿ **ಪರತರಃ** ಎಂದು ಇಷ್ಟುಮಾತ್ರವೇ ಇದ್ದರೂ, ಹಿಂದೆ ಹೇಳಲ್ಪಟ್ಟ ವೈಲಕ್ಷಣ್ಯವನ್ನೇ ಹೇಳಿ, ಆ ಕಾರಣಗಳಿಂದ ಪರತರವೆಂದು ಸ್ಥಾಪಿಸಿದರು. ಆದರೆ ವೈಲಕ್ಷಣ್ಯವು ಇಷ್ಟು ಮಾತ್ರವೇ ಎಂದರೆ, ಸ್ವರೂಪ ಸ್ವಭಾವ ವಿಕಾರಗಳಿಲ್ಲದಿರುವದು ಮಾತ್ರವೇ, ವೈಲಕ್ಷಣ್ಯವಲ್ಲವು ; ರೂಪ ಗುಣವಿಭವೈಶ್ವರ್ಯಾದಿಗಳಿಂದಲೂ ವಿಲಕ್ಷಣನಾಗಿ ಪರತರನೆಂದು ಸ್ಥಾಪಿಸಲು ಹೊರಟು, ಕಲ್ಯಾಣಗುಣಗಳೊಂದರಿಂದ ವೈಲಕ್ಷಣ್ಯವನ್ನು ಹೇಳಿದರೆ ಎಲ್ಲಾ ವಿಷಯದಲ್ಲೂ ವೈಲಕ್ಷಣ್ಯವನ್ನು ಉಪಪಾದಿಸಿದಹಾಗಾಗುತ್ತದೆಂದು ಭಾವಿಸಿ, ಷಾಡ್ಗುಣ್ಯಯುಕ್ತನಾಗಿ ಕಲ್ಯಾಣಗುಣ

ಮಹೋದಧಿ ಎಂದು ಪರತತ್ತ್ವವನ್ನು ಉಪಪಾದಿಸುತ್ತಾರೆ. **ತಥಾ**-ಹಾಗೆಯೇ ಎಂದರೆ ಕಾರಣತ್ವೇನ ಶೇಷಿತ್ವೇನ ಪರತರನು ಹೇಗೋ ಹಾಗೆಯೇ ಎಂಬರ್ಥವು, **ಜ್ಞಾನ**-ಸರ್ವಜ್ಞತೆ, **ಶಕ್ತಿ**-ಅಘಟಿತಘಟನಾಶಕ್ತಿ, **ಬಲ**-ಶ್ರಮವಿಲ್ಲದೆ ಎಲ್ಲವನ್ನೂ ಧರಿಸುವ ಸಾಮರ್ಥ್ಯವು, **ಆದಿ**-ಇವೇ ಮೊದಲಾದ, **ಗುಣಯೋಗೇನ ಚ**-ಕಲ್ಯಾಣಗುಣಗಳ ಸಂಬಂಧವಿರುವುದರಿಂದಲೂ, **ಅಹಮೇವ ಪರತರಃ**-ನಾನೊಬ್ಬನೇ ಸರ್ವಶ್ರೇಷ್ಠನು. ಇಲ್ಲಿ ಮೂಲದಲ್ಲಿಲ್ಲದ ಅವಧಾರಣವು ಹೇಗೆ ಕೂಡುತ್ತದೆ ಎಂದರೆ ತನಗೆ ಸಮರಾಗಲಿ ಅಧಿಕರಾಗಲಿ ಇಲ್ಲವೆಂಬ ಅರ್ಥದಲ್ಲಿ ಹೇಳಿದ ವಾಕ್ಯವಾದುದರಿಂದ ಕೂಡುತ್ತದೆ. ನಾನೊಬ್ಬನೇ ಸರ್ವಶ್ರೇಷ್ಠನೆಂದರೆ, ತನಗೆ ಸಮರೂ ಇಲ್ಲವೆಂದು ಹೇಳಿದಂತೆಯೇ ಆಯಿತು. ಆದರೆ ಮೂಲದಲ್ಲಿ ಅವಧಾರಣವಿಲ್ಲವು. ಇಲ್ಲದಿದ್ದರೂ ಆ ಅರ್ಥವು ಉಂಟಾಗುತ್ತದೆಂದು, ಅನ್ವಯವನ್ನು ತೋರಿಸಿಕೊಡುತ್ತಾರೆ. ಇತರರು **ಮತ್ತಃ ಪರತರಂ** ಎಂದು ಅನ್ವಯಿಸುವುದರಿಂದ ಸಮನಿಷೇಧ ಉಂಟಾಗುವುದಿಲ್ಲವು. **ಮತ್ತಃ ಅನ್ಯತ್** ಎಂದರೆ **ಮದ್ವ್ಯತಿರಿಕ್ತಂ**-ನನಗಿಂತ ಬೇರೆಯಾಗಿ, **ಜ್ಞಾನಬಲಾದಿ ಗುಣಾಂತರಯೋಗಿ**-ಜ್ಞಾನಬಲಾದಿ ಗುಣಾಂತರಗಳುಳ್ಳವನಾಗಿ, **ಕಶ್ಚಿದಪಿ**-ಯಾವ ಒಬ್ಬನೂ ಕೂಡ, **ಪರತರಃ**-ಶ್ರೇಷ್ಠನಾದವನು, **ನಾಸ್ತಿ**-ಇರುವುದಿಲ್ಲವು, ಬೇರೆ ಇನ್ನೊಬ್ಬನು ಯಾರೂ ಇರುವುದಿಲ್ಲವು; ಬ್ರಹ್ಮರುದ್ರೇಂದ್ರಾದಿಗಳಿಗಿಂತಲೂ ತಾನು ಶ್ರೇಷ್ಠತಮನೆಂಬುದು ಇದರಿಂದ ವ್ಯಕ್ತವು. ಅದು ಹೇಗೆ ಹೇಳುತ್ತೀರಿ ಎಂದು ಕೇಳಿದರೆ, ಮತ್ಸ್ಯಾವತಾರೇತಿಹಾಸದಿಂದ ಚತುರ್ಮುಖನಿಗಿಂತಲೂ ಪರತರನೆಂಬುದು ವ್ಯಕ್ತವು, ಬಾಣಾಸುರಾದೀತಿಹಾಸಗಳಿಂದ ರುದ್ರನಿಗಿಂತ ಪರತರನೆಂಬುದು ವ್ಯಕ್ತವು. ಗೋವರ್ಧನೋದ್ಧಾರಣ, ಪಾರಿಜಾತಾಪಹರಣ ಮುಂತಾದ ಇತಿಹಾಸಗಳಿಂದ ಇಂದ್ರನಿಗಿಂತ ಪರತರನೆಂಬುದು ವ್ಯಕ್ತವು. ಆದುದರಿಂದಲೇ ಮಹರ್ಷಿಯು **"ಬ್ರಹ್ಮಾ ಸ್ವಯಮ್ಭೂಶ್ಚತುರಾನನೋ ವಾ ರುದ್ರಸ್ತ್ರಿನೇತ್ರಸ್ತ್ರಿಪುರಾಂತಕೋ ವಾ। ಇಂದ್ರೋ ಮಹೇಂದ್ರಸ್ಸುರನಾಯಕೋ ವಾ ತ್ರಾತುಂ ನ ಶಕ್ತಾ ಯುಧಿ ರಾಮವಧ್ಯಂ॥** (ರಾ. ಸುಂ. ೫೧. ೪೫) ಎಂದು ಹೇಳಿರುತ್ತಾರೆ. ಹೀಗೆ **ಮತ್ತಃ ಅನ್ಯತ್ ಕಶ್ಚಿದಪಿ ಪರತರಃ ನಾಸ್ತಿ** ಎಂದು ಶ್ರೀಕೃಷ್ಣನು ಹೇಳಿಕೊಂಡಿರುವುದನ್ನು ಹಿಂದಿನ ಮೂರು ಶ್ಲೋಕಗಳ ಅಭಿಪ್ರಾಯವನ್ನೂ ಒಟ್ಟಿಗೆ ಸೇರಿಸಿ ಪರ್ಯಾಲೋಚಿಸಿದರೆ (೧) ಪ್ರಕೃತಿಪರಿಣಾಮವು ಸರ್ವೇಶ್ವರನ ಸಙ್ಕಲ್ಪನಿಯಮನಾದಿಗಳಾವಶ್ಯಕತೆಯೇ ಇಲ್ಲದೆ ನಡೆಯುತ್ತವೆ ಎಂಬ ವಾದವೂ, (೨) ಪ್ರಕೃತಿಪುರುಷರುಗಳಿಂದ ಮಾತ್ರವೇ ಜಗತ್ತಿನ ವ್ಯಾಪಾರವೆಲ್ಲಾ ನಡೆಯುತ್ತವೆ ಎಂಬ ವಾದವೂ (೩) ಪುರುಷನು ಪಾಷಾಣದಹಾಗೆ ಇದ್ದಾನೆ, ಪ್ರಕೃತಿಯೇ ಎಲ್ಲಾ ಕೆಲಸವನ್ನೂ ಮಾಡುತ್ತದೆಂಬ ವಾದವೂ, (೪) ತ್ರಿಮೂರ್ತಿಗಳ ಐಕ್ಯವನ್ನೂ, ಸಾಮ್ಯವನ್ನೂ, ಅವರುಗಳಲ್ಲಿ ಒಬ್ಬನು ಶ್ರೇಷ್ಠನೆಂದೂ, ಈ ತ್ರಿಮೂರ್ತಿಗಳಿಗಿಂತಲೂ ಶ್ರೇಷ್ಠನಾದ ಪರಮಶಿವನೊಬ್ಬನಿದ್ದಾನೆಂದೂ ಹೇಳುವ ವಾದಗಳೂ, (೫) ಇಲ್ಲಿ ಹೇಳಲ್ಪಟ್ಟ ಪರಬ್ರಹ್ಮವು ಸಗುಣನು ಇವನಿಗಿಂತ ಶ್ರೇಷ್ಠವಾದ ನಿರ್ಗುಣಬ್ರಹ್ಮವುಂಟೆಂಬ ವಾದವೂ, ಮತ್ತು (೬) ಪ್ರವಾಹರೂಪದಲ್ಲಿ ಹೊಸಹೊಸ ಈಶ್ವರರುಗಳಾಗುತ್ತಾರೆಂಬ ವಾದಗಳೂ, ಎಲ್ಲವೂ ನಿರಸ್ತವೆಂಬುದು ಸ್ಪಷ್ಟವು.

**ಮೂಲಕ್ಕೆ ಅರ್ಥವು:—** ಮುಂದೆ ತನ್ನಿಂದಲೇ ಈ ಜಗತ್ತು ಆಧೇಯವು, ತಾನೇ ಸರ್ವಕ್ಕೂ ಆಧಾರವೂ, ಅಲ್ಲದೆ ಸರ್ವವಸ್ತುಗಳ ಸತ್ತಾಸ್ಥಿತಿ ವ್ಯಾಪಾರಗಳೆಲ್ಲಾ ತನಗೇನೇ ಅಧೀನವು, ಶೇಷಭೂತವು, ನಿಯಾಮ್ಯವು, ಹೀಗೆ ತನಗೆ ಇವೆಲ್ಲವೂ ಅಪೃಥಕ್ಸಿದ್ಧ ವಿಶೇಷಣಗಳಾಗಿ **(೧) "ತತ್ಸರ್ವಂ ವೈ ಹರೇಸ್ತನುಃ"** ಎಂದು ಹೇಳಿರುವಹಾಗೆ ಶರೀರವು, ತಾನೇ ಅವಕ್ಕೆಲ್ಲಾ

(೧) ವಿ. ಪು.

**ಮೂ. ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ||** ೭.

ಆತ್ಮಾ ಎಂದು ಉತ್ತರಾರ್ಧದಿಂದ ಉಪದೇಶಿಸುತ್ತಾರೆ. **ಸರ್ವಮಿದಂ**-ಈ ಪರಿದೃಶ್ಯವಾದ ಸಮಸ್ತ ಅಚಿತ್ತು ಚಿತ್ತು ಇವುಗಳ ಸಮ್ಮೇಳನದಿಂದುಂಟಾದ ಸಮಸ್ತ ಜಗತ್ತೂ, **ಸೂತ್ರೇ**-ದಾರದಲ್ಲಿ, **ಪ್ರೋತಂ**-ಪೋಣಿಸಿರುವ, **ಮಣಿಗಣಾ ಇವ**-ರತ್ನಗಳ ಸಮೂಹವೋಪಾದಿಯಲ್ಲಿ, **ಮಯಿ**-ಅವೆಲ್ಲಕ್ಕೂ ಆತ್ಮಾವಾದ ನನ್ನಲ್ಲಿ, **ಪ್ರೋತಂ**-ಆಶ್ರಯಿಸಿಕೊಂಡಿವೆ, ಎಲ್ಲವೂ ನನ್ನ ಶರೀರವಾಗಿ ನಾನು ಅವಕ್ಕೆಲ್ಲಾ ಆತ್ಮಾವಾದುದರಿಂದ ಅವುಗಳೆಲ್ಲಾ ನನಗೆ ಅಧೀಯವೂ ನಾನು ಸರ್ವಾಧಾರನು ಎಂದು ಹೇಳಲ್ಪಟ್ಟಿತು. **ಮಯಿಪ್ರೋತಂ**-ಎಂದು ಹೇಳಿದುದರಿಂದ ತನಗೆ ಇವೆಲ್ಲಾ ಅಪೃಥಕ್ಸಿದ್ಧ ವಿಶೇಷಣವೆಂದೂ, ಅವುಗಳು ವಿವಿಧ ಮಣಿಗಳಾಗಿ ವೈಚಿತ್ರ್ಯ, ಅನಂತ್ಯ ಮೊದಲಾದುವುಗಳಿಗೆ ತಾನೇ ಕಾರಣನೆಂದೂ ಮಣಿಗಣವನ್ನು ಕಟ್ಟುವದಕ್ಕೆ ಸೂತ್ರವು ಹೇಗೆ ಗೂಢವಾಗಿ ಒಳಗಿರುತ್ತದೋ ಹಾಗೆ ಅವುಗಳಿಗೆಲ್ಲಾ ತಾನು ಅಂತರಾತ್ಮಾನಾಗಿರುವವರಿಂದ ತಾನೇ ಧಾರಕನು, ಅವೆಲ್ಲಾ ಅಧೇಯಗಳೆಂಬ ಭಾವಗಳು ಸೂಚಿಸಲ್ಪಟ್ಟವು.

ಶರೀರಾತ್ಮಭಾವಕ್ಕೆ ಲಕ್ಷಣಗಳೇನು ಎಂದರೆ:—

**೧. ಯಸ್ಯ ಚೇತನಸ್ಯ ಯದ್ದ್ರವ್ಯಂ ಸರ್ವಾತ್ಮನಾ ಸ್ವಾರ್ಥೇ ನಿಯಂತುಂ ಶಕ್ಯಂ, ತತ್ತಸ್ಯ ಶರೀರಂ**-ಯಾವ ಚೇತನನಿಗೆ ಯಾವ ದ್ರವ್ಯವು ಅಪೃಥಕ್ಸಿದ್ಧ ವಿಶೇಷಣವಾಗಿ ತನ್ನ ಪ್ರಯೋಜನಕ್ಕಾಗಿಯೇ ನಿಯಮಿಸಲು ಶಕ್ಯವೋ, ಅದು ಆತನಿಗೆ ಶರೀರವು.

**೨. ಯಸ್ಯ ಚೇತನಸ್ಯ ಯದ್ದ್ರವ್ಯಂ ಸ್ವಾರ್ಥೇಧಾರಯಿತುಂ ಶಕ್ಯಂ, ತತ್ ತಸ್ಯ ಶರೀರಂ**-ಯಾವ ಚೇತನಿಗೆ ಯಾವ ದ್ರವ್ಯವು ತನ್ನ ಪ್ರಯೋಜನಕ್ಕಾಗಿಯೇ ಧರಿಸಲು ಶಕ್ಯವೋ, ಅದು ಆತನಿಗೆ ಶರೀರವು.

**೩. ಯಸ್ಯ ಯದ್ದ್ರವ್ಯಂ ಶೇಷತ್ವೈಕರೂಪಂ, ತತ್ ತಸ್ಯಶರೀರಂ**-ಯಾವ ದ್ರವ್ಯವು ಯಾವ ಚೇತನನಿಗೆ ಮಾತ್ರವೇ ಅಧೀನವಾದುದಾಗಿ ಆತನ ಪ್ರಯೋಜನಮಾತ್ರಕ್ಕೇನೆ ಆಗಿದೆಯೋ, ಅದು ಆತನಿಗೆ ಶರೀರವು.

ಹೀಗೆ ಚಿತ್ತು ಅಚಿತ್ತುಗಳೂ ಸಹ, ಆತ್ಮಾನಾದ ಪರಮಾತ್ಮನಿಗೇನೇ ನಿಯಾಮ್ಯಗಳಾಗಿ ಧಾರ್ಯಗಳಾಗಿ, ಶೇಷಗಳಾಗಿರುವವರಿಂದಲೇ, ಎಲ್ಲವೂ ಆತನಿಗೆ ಶರೀರವೆಂದು ಇಲ್ಲಿ ಹೇಳಲ್ಪಟ್ಟಿದೆ ಎಂದು ಭಾಷ್ಯದಲ್ಲಿ ಬೃಹದಾರಣ್ಯಕ ವಾಕ್ಯಗಳಾದ, **ಯಸ್ಯ ಪೃಥಿವೀ ಶರೀರಂ, ಯಸ್ಯಾತ್ಮಾಶರೀರಂ** ಎಂಬುವದನ್ನು ಉದಾಹರಿಸುತ್ತಾರೆ. ಹೀಗೆ, **"ಭೂಮಿರಾಪೋನಲಃ"** ಎಂದಾರಂಭಿಸಿ ಹೇಳಿದ ನಾಲ್ಕು ಶ್ಲೋಕಗಳಿಂದ ಸಮಸ್ತ ಚಿದಚಿತ್ತುಗಳೂ ತನಗೆ ಶರೀರವೆಂದೂ, ತಾನೇ ಸರ್ವನಿಯನ್ತಾಶೇಷಿ ಆಧಾರನೆಂದೂ, ಆದುದರಿಂದ ಸಮಸ್ತ ಸೃಷ್ಟಿ, ಸ್ಥಿತಿ, ಲಯಗಳಿಗೂ ತಾನೇ ಕಾರಣನೆಂದೂ, ಲೋಕದಲ್ಲಿ ಕಂಡುಬರುವ ಸತ್ತಾಸ್ಥಿತಿ ವ್ಯಾಪಾರಗಳೆಲ್ಲಾ ತನ್ನ ಅಧೀನವೆಂದೂ, ತಾನೇ ಎಲ್ಲಾ ಚೇತನರಿಗಿಂತ ಶ್ರೇಷ್ಠನೆಂದೂ, ಹೇಳಲ್ಪಟ್ಟವು. ಈ ಶರೀರಾತ್ಮಭಾವವನ್ನು ಚನ್ನಾಗಿ ಮನಸ್ಸಿನಲ್ಲಿಟ್ಟವರಿಗೆ ಸರ್ವಶ್ರುತ್ಯರ್ಥಗಳು ಸರ್ವಸಮಂಜಸವಾಗುತ್ತವೆ ಹಾಗಿಲ್ಲವಾದರೆ ಶ್ರುತಿಗಳಿಗೆ ಬಾಧ್ಯಬಾಧಕಗಳನ್ನು ಕಲ್ಪಿಸಬೇಕಾಗಿ ಬರುತ್ತದೆ. ಮುಖ್ಯಾರ್ಥ ಹೇಳುವ ಸ್ಥಳದಲ್ಲಿ ಗೌಣಾರ್ಥ ಹೇಳಬೇಕಾಗುತ್ತದೆ. ಐಕ್ಯಶ್ರುತಿ, ಭೇದಶ್ರುತಿ, ಘಟಕಶ್ರುತಿ, ಇವುಗಳಿಗೆ ಸಾಮರಸ್ಯವು ದೊರಕುತ್ತದೆ.

**ಭಾಷ್ಯಾರ್ಥವು:—**ಹಿಂದೆ ಸರ್ವ ಜಗತ್ತಿನ ಸೃಷ್ಟಿಸ್ಥಿತಿ ಲಯಗಳಿಗೆ ತಾನೇ ಸರ್ವವಿಧ ಕಾರಣನು ಎಂದು ಹೇಳಲ್ಪಟ್ಟಿತು. ಹಾಗೆ ಜಗದ್ವಿಕಾರಗಳಿಗೆ ತಾನು ಕಾರಣನಾದರೆ ತನಗೆ ವಿಕಾರತ್ವವಿಲವೋ ಎಂದರೆ ಅವುಗಳೆಲ್ಲಾ ತನಗೇನೋ ಅಪೃಥಕ್ಸಿದ್ಧಗಳಾಗಿ ಶರೀರವಾಗಿದ್ದರೂ

**ಭಾ. ಸರ್ವಮಿದಂ ಚಿದಚಿದ್ವಸ್ತುಜಾತಂ ಕಾರ್ಯಾವಸ್ಥಂ ಕಾರಣಾವಸ್ಥಂಚ ಮಚ್ಛರೀರಭೂತಂ. ಸೂತ್ರೇ ಮಣಿಗಣವತ್ ಆತ್ಮತಯಾ ಅವಸ್ಥಿತೇ ಮಯಿ, ಪ್ರೋತಂ-ಆಶ್ರಿತಂ, (೧) "ಯಸ್ಯ ಪೃಥಿವೀ ಶರೀರಂ" (೨) "ಯಸ್ಯಾತ್ಮಾ ಶರೀರಂ"**

ಶರೀರಗತ ದೋಷಗಳು ಆತ್ಮಾವಾಗಿರುವ ಜೀವನಿಗೆ ಹೇಗೆ ಅಂಟುವದಿಲ್ಲವೋ ಹಾಗೆಯೇ ತನಗೂ ಅಂಟುವದಿಲ್ಲವೆಂದು ಹೇಳುತ್ತಾರೆ. ತಾನು ಎಲ್ಲಕ್ಕೂ ಧಾರಕನು, ಅವೆಲ್ಲಾ ಧಾರ್ಯವು, ಹೀಗೆ ಇರುವದರಿಂದ ಅವಯವಗತ ದೋಷಗಳು ತನಗೆ ಸಂಬಂಧಿಸುವದಿಲ್ಲವೆಂಬ ಅಭಿಪ್ರಾಯವು ತೋರಿಬರುವಹಾಗೆ ಹೇಳುತ್ತಾರೆ. **ಸರ್ವಮಿದಂ**-ಈ ಸಮಸ್ತವೆಲ್ಲವೂ ಎಂದರೆ, **ಚಿದಚಿದ್ವಸ್ತುಜಾತಂ ಕಾರ್ಯಾವಸ್ಥಂ ಕಾರಣಾವಸ್ಥಂ ಚ**-ಕಾರಣಾವಸ್ಥೆಯಲ್ಲಿ ಇದ್ದು ಕಾರ್ಯಾವಸ್ಥೆಯಲ್ಲೂ ತೋರಿಬರುವ ಈ ಸಮಸ್ತ ಚಿದಚಿದ್ವಸ್ತುಸಮೂಹವೂ, **ಮಚ್ಛರೀರಭೂತಂ**-ನನಗೆ ಶರೀರವಾದವು, **ಮಚ್ಛರೀರಭೂತಂ** ಎಂದು ಮೂಲದಲ್ಲಿ ಎಲ್ಲಿ ಹೇಳಿದೆ ಎಂದರೆ, ಮುಂದೆ **ಸೂತ್ರೇ ಮಣಿಗಣಾ ಇವ** ಎಂಬ ದೃಷ್ಟಾಂತದಿಂದ ತೋರಿಬರುತ್ತದೆಂಬ ಅಭಿಪ್ರಾಯದಿಂದ ಹಾಗ ಪ್ರಯೋಗಿಸಿರುತ್ತಾರೆ; ಈ ದೃಷ್ಟಾಂತದಿಂದ **ತತ್ಸೃಷ್ಟ್ವಾ ತದೇವಾನುಪ್ರಾವಿಶತ್** ಎಂಬ ಶ್ರುತಿಯ ಪ್ರಕಾರ ಅನುಪ್ರವೇಶವೂ, ಅಂತರಾತ್ಮತ್ವವೂ ಆಶ್ರಯಾಶ್ರಯಿಭಾವವೂ ಹೇಳಲ್ಪಟ್ಟವು. ಆದುದರಿಂದಲೇ **ಪ್ರೋತಂ** ಎಂದರೆ ಆಶ್ರಿತಂ ಎಂದು ಮುಂದೆ ವ್ಯಾಖ್ಯಾನವು, ಇದಕ್ಕೆ ಆಧಾರಾಧೇಯ ಭಾವವೆಂದೂ ಹೆಸರುಂಟು. **ಸೂತ್ರೇ**-ಒಂದು ಧಾರದಲ್ಲಿರುವ, **ಮಣಿಗಣವತ್**-ರತ್ನಾದಿ ಮಣಿಗಳ ಸಮೂಹದ ಹಾಗೆ, **ಆತ್ಮತಯಾ**-ಆತ್ಮಾವಾಗಿರುವ ಭಾವದಿಂದ, **ಅವಸ್ಥಿತೇ**-ಇರುವ, **ಮಯಿ**-ನನ್ನಲ್ಲಿ, **ಪ್ರೋತಂ** ಎಂದರೆ **ಆಶ್ರಿತಂ**-ಆಶ್ರಯಿಸಲ್ಪಟ್ಟಿವೆ. ಸೂತ್ರ ದೃಷ್ಟಾಂತದಿಂದ ಮಣಿಗಳೆಲ್ಲಾ ಹೇಗೆ ಒಂದು ಸೂತ್ರಕ್ಕೆ ಅಧೀನವೋ, ಹಾಗೆ ಸಮಸ್ತ ಜಗತ್ತೂ ಅನೇಕ ಅಂಡಗಳೂ ಪರಮಾತ್ಮನಿಗೆ ಅಧೀನವೆಂಬುದೂ, ಸೂತ್ರವು ಹೇಗೆ ಅಪ್ರತ್ಯಕ್ಷವಾಗಿ ಸೂತ್ರವಾಗಿ ಮಣಿಗಳಲ್ಲಿ ಅಡಕವಾಗಿದೆಯೋ ಹಾಗೆ ಪರಮಾತ್ಮನು ಅದೃಶ್ಯವಾಗಿ ಅಂತರಾತ್ಮಾವಾಗಿದ್ದಾನೆಂಬುದೂ, ತೋರಿಬರುತ್ತದೆ. ಇದರಿಂದ ಪರಮಾತ್ಮನಿಗೆ ಅಂತರ್ವ್ಯಾಪ್ತಿ ಮಾತ್ರವೇ ಎಂದು ಭಾವಿಸತಕ್ಕದ್ದಲ್ಲವು; ಬಹಿರ್ವ್ಯಾಪ್ತಿಯೂ ಸಹ ಉಂಟೆಂದು ತಿಳಿಸುವದಕ್ಕಾಗಿಯೇ, **ಪ್ರೋತಂ** ಎಂದರೆ **ಆಶ್ರಿತಂ** ಎಂಬ ವ್ಯಾಖ್ಯಾನವು. ಇಲ್ಲಿ **ಪ್ರೋತ** ಶಬ್ದದಿಂದ **"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ"** ಎಂಬ ಶ್ರುತ್ಯರ್ಥವು ಉಪಪಾದಿತವು. ಸೂತ್ರಕ್ಕೆ ಮಣಿಗಣಗಳು ಸೇರಿದ್ದರೂ ಮಣಿಗಳ ಸ್ವರೂಪ ಸ್ವಭಾವಗಳು ಸೂತ್ರಕ್ಕೇನೂ ಅನ್ವಯಿಸುವದಿಲ್ಲವೆಂಬ ನಿರ್ವಿಕಾರತ್ವವೂ ಬೋಧಿತವು. **ಸೂತ್ರೇಮಣಿಗಣ**ವೆಂಬುದರಿಂದ ಈಶ್ವರನು ಚಿದಚಿತ್ತುಗಳಿಂದ ಯಾವಾಗಲೂ ವಿಶಿಷ್ಟನಾಗಿರುವ ವಿಶಿಷ್ಟಾದ್ವೈತ ತತ್ವವೂ ಸೂಚಿತವು. ಮಣಿಗಳ ಶಬ್ದದಿಂದ ಸೃಷ್ಟಿಯ ವಿವಿಧ ವೈಚಿತ್ರ್ಯತೆಯೂ ಬೋಧಿತವು. ಶರೀರಾತ್ಮಭಾವವೀಗ ಮುಖ್ಯವಾಗಿ ಈ ಶ್ಲೋಕದಲ್ಲಿ ತೋರಿಬರುವ ಅಭಿಪ್ರಾಯವು; ಅದು ಶ್ರುತಿ ಪ್ರಮಾಣಗಳಿಂದ ಸಿದ್ಧವೆಂದು ಹೇಳುತ್ತಾರೆ--

(೧) **ಯಸ್ಯ**-ಯಾವ ಸರ್ವೇಶ್ವರನಿಗೆ, ಪೃಥಿವಿಯು ಶರೀರವೂ, (೨) **ಯಸ್ಯ**-ಯಾವನಿಗೆ **ಆತ್ಮಾ (ಜಾತ್ಯೇಕ ವಚನ)**-ಜೀವವರ್ಗವೆಲ್ಲಾ ಶರೀರವೋ,(ಹೀಗೆ ಸರ್ವ ಚಿದಚಿದ್ವರ್ಗವೆಲ್ಲಾ ಸರ್ವೇಶ್ವರನಿಗೆ ಶರೀರವೆಂದು ಹೇಳುತ್ತದ.) (೩) **"ಏಷಃ**-ಈ ಶ್ರೀಮನ್ನಾರಾಯಣನು, **ಸರ್ವಭೂತಾನ್ತರಾತ್ಮಾ**-ನಿತ್ಯವಿಭೂತಿ, ಲೀಲಾವಿಭೂತಿ ಇವೆರಡರಲ್ಲಿರುವ ಚಿದಚಿದ್ವರ್ಗಕ್ಕೆಲ್ಲಾ

(೧) ಬೃ. ಉ. ೭. ೩. (೨) ಬೃ. ಉ. ೭. ೨೩.

**ಭಾ. (೩) "ಏಷ ಸರ್ವಭೂತಾನ್ತರಾತ್ಮಾऽಪಹತ ಪಾಪ್ಮಾದಿವ್ಯೋ ದೇವ ಏಕೋ ನಾರಾಯಣಃ" ಇತ್ಯಾತ್ಮಶರೀರಭಾವೇನಾ ವಸ್ಥಾನಂಚ ಜಗದ್ಬ್ರಹ್ಮಣೋ ರನ್ತರ್ಯಾಮಿ ಬ್ರಾಹ್ಮಣಾದಿಷು ಸಿದ್ಧಂ ||೭||**

ಅನ್ತರಾತ್ಮನು, **ಅಪಹತ ಪಾಪ್ಮಾ**-ಹೀಗೆ ಎಲ್ಲಾದರಲ್ಲೂ ಅನ್ತರಾತ್ಮನಾಗಿದ್ದರೂ ಲೀಲಾ ವಿಭೂತಿಯ ಪೃಥಿವ್ಯಾದಿಗಳ ಸಂಬಂಧದಿಂದ ತದ್ಗತದೋಷಲೇಶವೂ ಇಲ್ಲದವನು, **ದಿವ್ಯಃ**-ಪರ ಮವ್ಯೋಮ ಶಬ್ದ ವಾಚ್ಯವಾದ ದಿವಿಯಲ್ಲಿರುವವನು, ಅಥವಾ ಪರಮಪದ ನಿಲಯನು ನಿಯಾ ಮಕನು, **ದೇವಃ**-ಲೀಲಾಸಕ್ತನು ಇದರಿಂದ ಲೀಲಾವಿಭೂತಿನಾಯಕತ್ವವು ಹೇಳಲ್ಪಟ್ಟಿತು. ಅಥವಾ ತಾನೇ ಜ್ಯೋತಿರ್ಮಯನಾಗಿ ಸರ್ವಪ್ರಕಾಶಕನು, **ಏಕಃ-ಅದ್ವಿತೀಯಃ**, ಸಮಾಭ್ಯಧಿ ಕರಹಿತನು, ಇಂತವನು ಯಾರೆಂದರೆ ಈ ಎಲ್ಲಾ ಅರ್ಥವೂ ಬೋಧಿತವಾಗುವ ಪುರುಷಸೂಕ್ತ ನಾರಾಯಣಾನುವಾಕ ಮೂಲಮಂತ್ರದ್ವಯಾದಿಗಳೆಲ್ಲಾ ಪ್ರತಿಪಾದನಾದ **ನಾರಾಯಣಃ**-ಲಕ್ಷ್ಮೀಪತಿಯಾದ ನಾರಾಯಣನೇ ಎಂದು ಹೇಳಿರುತ್ತದೆ. ಬೃಹದಾರಣ್ಯಕ ಶ್ರುತಿಯು ಸಮಸ್ತ ಜಗತ್ತೂ ಪರಮಾತ್ಮನಿಗೆ ಶರೀರವೆಂದು ಹೇಳಿತು. ಛಾಂದೋಗ್ಯವು **"ಐತದಾತ್ಮ್ಯಮಿದಂ ಜಗತ್"** (೬.೮.೭.) ಎಂದು ಜಗತ್ತಿಗೆ ಅಂತರಾತ್ಮನಾಗಿರುವ ಉಪದೇಶವನ್ನು ಬೋಧಿಸಿತು. ಹೀಗೆ ಸರ್ವಭೂತಗಳಿಗೂ ಅಂತರಾತ್ಮನಾದವನು ಯಾರು ಎಂಬ ಚರ್ಚೆಯಲ್ಲಿ ಸುಬಾಲೋಪ ನಿಷತ್ತು ನಿಸ್ಸಂದೇಹವಾಗಿ ಅಖಿಲಹೇಯ ಪ್ರತ್ಯನೀಕನಾಗಿ ನಾರಾಯಣ ಶಬ್ದದಿಂದ ತೋರಿ ಬರುವ ಕಲ್ಯಾಣ ಗುಣಾಕರನು ಎಂದು ಹೇಳಿತು. ಇದರಿಂದ ನಿರ್ಗುಣಬ್ರಹ್ಮ ಮೊದಲಾದ ವಾದ ಗಳಿಗೆ ಯಾವದಕ್ಕೂ ಅವಕಾಶವೇ ಇಲ್ಲವು. ಏಕೆಂದರೆ ನಾರಾಯಣ ಶಬ್ದವಾಚ್ಯನು ನಿರ್ಗುಣ ನಾಗುವದಿಲ್ಲವು. ಸರ್ವೇಶ್ವರನ ಸ್ವರೂಪ ನಿರೂಪಕ, ನಿರೂಪಿತಸ್ವರೂಪ ವಿಶೇಷಣ ಮೊದಲಾದ ಸರ್ವಾಭಿಪ್ರಾಯಗಳೂ ನಾರಾಯಣ ಶಬ್ದದ ತತ್ಪುರುಷ ಬಹುವ್ರೀಹಿ ಅರ್ಥಗಳಿಂದ ಸುವ್ಯಕ್ತವು, ಹೀಗೆ ಎಲ್ಲವೂ ಆತನಿಗೆ ಶರೀರವೆಂದು ಇದೇ ಗೀತೆಯಲ್ಲಿ (೧೧-೧೩) **ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕದಾ। ಅಪ್ಯಶ್ಯ ದ್ದೇವದೇವಸ್ಯ ಶರೀರೇ ಪಾಂಡವಸ್ತದಾ"** ಎಂದು ಮುಂದೆ ಹೇಳಲ್ಪಡುತ್ತದೆ. **"ಸೋಽಭಿಧ್ಯಾಯ ಶರೀರಾತ್ಸ್ವಾತ್"** (ಮನುಸ್ಮೃತಿ) **"ಜಗತ್ಸರ್ವಂ ಶರೀರಂತೇ"** (ರಾ.ಯು. ೧೨೦-೨೫) **"ಯದಮ್ಬು ವೈಷ್ಣವಃಕಾಯಃ"** (ವಿ.ಪು. ೨.೧೨.೩೭) **"ತಾನಿಸರ್ವಾಣಿ ತದ್ವಪುಃ"** (ವಿ.ಪು. ೧.೨೨.೮೬) **"ತತ್ಸರ್ವಂ ವೈ ಹರೇಸ್ತನುಃ"** ಇತ್ಯಾದಿ ಧರ್ಮಶಾಸ್ತ್ರಪುರಾಣೋಕ್ತಿಗಳೂ ಉಂಟು. **ಇತಿ**-ಎಂಬುವಾಗಿ **ಜಗದ್ಬ್ರಹ್ಮಣೋಃ**-ಜಗತ್ತಿಗೂ ಪರಬ್ರಹ್ಮನಿಗೂ, **ಆತ್ಮಶರೀರ ಭಾವೇನಾ ವಸ್ಥಾನಂ**-ಪರಮಾತ್ಮನು ಆತ್ಮಾ ಚಿದಚಿತ್ತೆಲ್ಲಾ ಆತನಿಗೆ ಶರೀರವೆಂಬ ಭಾವದಿಂದಿರೋಣವೂ ಸಹ, ಅಂತರ್ಯಾಮಿ ಬ್ರಾಹ್ಮಣಾ ದಿಗಳಲ್ಲಿ, **ಸಿದ್ಧಂ**-ಸ್ಥಾಪಿತವು ; ಈ **"ಮಯಿ ಸರ್ವಮಿದಂ ಪ್ರೋತಂ"** ಎಂಬ ಅಭಿಪ್ರಾಯ ವನ್ನು ಚನ್ನಾಗಿ ಜ್ಞಾಪಕದಲ್ಲಿಟ್ಟರೆ **ಅದ್ವೈತಶ್ರುತಿ, ಭೇದಶ್ರುತಿ** ಇವುಗಳಿಗೆ ಪರಸ್ಪರ ವಿರೋಧ ವಿಲ್ಲದೆ ಸರ್ವಸಮಂಜಸವಾಗಿ ಅನ್ವಯಿಸಬಹುದು. ಅದ್ವೈತಿಗಳಿಗೆ ಭೇದಶ್ರುತಿಯನ್ನು ಅನ್ವಯಿ ಸುವಾಗ ಗಂಟಲು ಹಿಡಿಯುತ್ತದೆ. ದ್ವೈತವನ್ನು ಬೋಧಿಸುವವರಿಗೆ ಅದ್ವೈತಶ್ರುತಿಗಳು ಕಷ್ಟವು. ಈ ಶರೀರಾತ್ಮಭಾವವನ್ನು ಚನ್ನಾಗಿ ಗ್ರಹಿಸಿ ವಿಶಿಷ್ಟಾದ್ವೈತವನ್ನು ಹೇಳುವವರಿಗಾ ದರೆ ಅದ್ವೈತ ಮತ್ತು ದ್ವೈತ ಶ್ರುತಿಗಳೆಲ್ಲವೂ ಸಮಂಜಸವಾದುವರಿಂದ, ಶ್ರೀ ಯತಿವರ್ಯರು ಗ್ರಂಥೋಪಸಂಹಾರದಲ್ಲಿ **"ಸರ್ವಂ ಸಮಂಜಸಂ"** ಎಂದು ವ್ಯಕ್ತವಾಗಿ ಹೇಳಿರುತ್ತಾರೆ.

(೩) ಸುಬಾಲ ೭

**ಭಾ. ಅ. ಅತಸ್ಸರ್ವಸ್ಯ ಪರಮಪುರುಷ ಶರೀರತ್ವೇನಾತ್ಮಭೂತ ಪರಮಪುರುಷ ಪ್ರಕಾರತ್ವಾತ್ ಸರ್ವಪ್ರಕಾರಃ ಪರಮಪುರುಷ ಏವಾ ವಸ್ಥಿತ ಇತಿ ಸರ್ವೈಶ್ಶಬ್ದೈ ಸ್ತಸ್ಯೈವಾಭಿಧಾನ ಮಿತಿ ತತ್ತತ್ಸಾಮಾನಾಧಿಕರಣ್ಯೇನಾಹ—**

ಹೀಗೆ ಶರೀರಾತ್ಮಭಾವವನ್ನು ಚನ್ನಾಗಿ ಗ್ರಹಿಸಿದರೆ **ಜಗನ್ಮಿಥ್ಯಾ** ಎಂದು ಹೇಳುವ ಆವಶ್ಯಕತೆಯೂ ಇರುವದಿಲ್ಲವು. ಈ ಶ್ಲೋಕವು ಮಿಥ್ಯಾವಾದಕ್ಕೂ ಪ್ರತ್ಯುತ್ತರವಿರುವದು. ಮಣಿಗಣವಿದ್ದರಲ್ಲವೇ ಸೂತ್ರದಲ್ಲಿ ಪ್ರೋತನಾಗಬಹುದು ಮಣಿಗಣವೇ ಮಿಥ್ಯಾವಾದರೆ ಪ್ರೋತವಾಗುವದು ಹೇಗೆ? ಸ್ವಾಮಿ ಶ್ರೀಕೃಷ್ಣಭಗವಾನರವರು ತಮ್ಮ ವಿಭೂತಿಯ ವೈವಿಧ್ಯ, ವೈಚಿತ್ರ್ಯ, ಆನಂತ್ಯ ಮೊದಲಾದುವುಗಳನ್ನು ತಿಳಿಸುವುದಕ್ಕಾಗಿಯೇ ಮಣಿಗಣವೆಂದು ಹೇಳಿಕೊಂಡಿರುವಾಗ ಅವೆಲ್ಲಾ ಮಿಥ್ಯೆ ಎಂದು ಹೇಳುತ್ತಾರಲ್ಲಾ ಎಂದು ಪರಿತಾಪಪಡಬೇಕಾಗುತ್ತದೆ. ರಾಜರುಗಳಿಗೇನೇ ವಿಚಿತ್ರಾನಂತ ವಿಭೂತಿಯುಂಟು ಹಾಗಿರುವಲ್ಲಿ ರಾಜಾಧಿರಾಜನಿಗಿಲ್ಲವೇ?

**ಭಾಷ್ಯಾವತಾರಿಕೆಯ ಅರ್ಥವು—**ಹಿಂದೆ **"ಭೂಮಿರಾಪೋಽನಲಃ"** ಎಂಬುದರಿಂದಲೂ, **"ಅಪರೇಯಂ"** ಎಂಬುದರಿಂದಲೂ ಭೇದಶ್ರುತ್ಯರ್ಥದ ಉಪಬ್ರಹ್ಮಣವೂ, **"ಮಯಿ ಸರ್ವಮಿದಂ ಪ್ರೋತಂ"** ಎಂಬುದರಿಂದ ಆಧಾರಾಧೇಯ ಭಾವವೂ, ತನ್ಮೂಲಕ ಘಟಕಶ್ರುತಿಯ ಉಪಬ್ರಹ್ಮಣವೂ ಮಾಡಲ್ಪಟ್ಟು, ಹೀಗೆ ಇವೆರಡರ ಅರ್ಥಗಳು ವಿದಿತವಾದರೆ ಅಭೇದಶ್ರುತ್ಯರ್ಥದ ಉಪಬ್ರಹ್ಮಣವೂ ತನ್ಮೂಲಕ ಸಾಮಾನಾಧಿಕರಣ್ಯದಿಂದ ಹೇಳುವ ತಾತ್ಪರ್ಯಗಳೂ, ವ್ಯಕ್ತಪಡುತ್ತವೆ ಎಂದೂ, ಮುಂದಿನ ನಾಲ್ಕು ಶ್ಲೋಕಗಳಿಂದ ಅನುಗ್ರಹಿಸುತ್ತಾರೆ— ಕೆಲವರು ರಸಾದಿಗುಣವಿಶಿಷ್ಟನು ಪರಮಾತ್ಮನಾದ ನಾನು, **ಮಯಿಪ್ರೋತಂ** ಎಂಬಲ್ಲಿ ಅರ್ಥಮಾಡಿ, ಮುಂದೆ **ರಸೋಽಹಂ ಅಪ್ಸು** ಎಂದರೆ ತಾನು ರಸವಿಶಿಷ್ಟನೆಂದು ಅರ್ಥಮಾಡಿರುತ್ತಾರೆ. ಇದು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಈ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಸಾಮಾನಾಧಿಕರಣ್ಯದಿಂದಲೇ **ರಸೋಽಹಂ** ಎಂದು ಅರ್ಥಮಾಡುವದೇ ಯುಕ್ತವೆಂದು ತಿಳಿಸುವದಕ್ಕಾಗಿ ಈ ಮುಂದಿನ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಅದೂ ಅಲ್ಲದೆ ಇತರರ ಅರ್ಥದಲ್ಲಿ ಹಿಂದೆ ಮುಖ್ಯವಾಗಿ ತಿಳಿಯಬೇಕಾದ ಆಧಾರಾಧೇಯ ಭಾವವೇ ಹೊಂದುವದಿಲ್ಲವು. **ಅತಃ**-ಆ ಕಾರಣದಿಂದ, ಯಾವ ಕಾರಣದಿಂದ ಎಂದರೆ, ಅಚೇತನ ಮತ್ತು ಚೇತನ ಪ್ರಕೃತಿಗಳೆರಡೂ, **ಮೇ ಅಪರಾ ಪ್ರಕೃತಿಃ-ಮೇ ಪರಾ ಪ್ರಕೃತಿಃ** ಎಂದೂ, ಅವು ತನಗೆ ಶರೀರವಾಗಿ ಆ ಕಾರಣದಿಂದ, ತನ್ನದಾಗಿ ಹೇಳಿಕೊಂಡಿರುವದರಿಂದ, **ಸರ್ವಸ್ಯ**-ಸಮಸ್ತಕ್ಕೂ, **ಪರಮಪುರುಷ ಶರೀರತ್ವೇನ**-ಪರಮಪುರುಷನಿಗೆ ಶರೀರವಾಗಿರುವ ಭಾವವಿರುವದರಿಂದ, **ಆತ್ಮಭೂತ ಪರಮಪುರುಷ ಪ್ರಕಾರತ್ವಾತ್**-ಅವುಗಳಿಗೆ ಆತ್ಮನಾದ ಪರಮಪುರುಷನ ಅಪೃಥಕ್ಸಿದ್ಧ ವಿಶೇಷಣಗಳಾದುದರಿಂದ, **ಸರ್ವಪ್ರಕಾರಃ**-ಸಮಸ್ತ ವಿಶೇಷಗಳುಳ್ಳವನಾದ, **ಪರಮಪುರುಷನೇ** ಹಾಗೆ **ಅವಸ್ಥಿತ ಇತಿ**-ಇರುತ್ತಾನೆಯಾದುದರಿಂದ, **ಸರ್ವೈಶ್ಶಬ್ದೈಃ**-ಸಮಸ್ತ ವಿಶೇಷಣಗಳನ್ನು ಬೋಧಿಸುವ ಶಬ್ದಗಳಿಂದ, **ತಸ್ಯೈವ**-ಆ ವಿಶೇಷ್ಯನಾದ, **ಅಭಿಧಾನ ಮಿತಿ**-ಮುಖ್ಯವೃತ್ತಿಯಿಂದಲೇ ಹೇಳಲ್ಪಡೋಣವು ಎಂದು, **ತತ್ಸಾಮಾನಾಧಿಕರಣ್ಯೇನಾಹ**-ಶರೀರವಾಚಕಗಳಿಗೂ ಶರೀರಿಗೂ ಸಾಮಾನಾಧಿಕರಣ್ಯವು ಕೂಡುವುದರಿಂದ, **ರಸೋಽಹಂ**-ಎಂಬಿವೇ ಮೊದಲಾದ ಸಾಮಾನಾಧಿಕರಣ್ಯದಿಂದ, **ಆಹ**-ಹೇಳುತ್ತಾರೆ ಇಲ್ಲಿ **ಸರ್ವಪ್ರಕಾರಃ**-ಎಂದು ಹೇಳಿರುವವರ ಅಭಿಪ್ರಾಯವೇನೆಂದರೆ ಗುಣಗುಣಿಗೂ ಜಾತಿವ್ಯಕ್ತಿಗಳನ್ನು ಬೋಧಿಸುವ ಶಬ್ದಗಳಿಗೂ, ಹೇಗೆ ಸಮಾನಾಧಿಕರಣ್ಯವೋ ಹಾಗೆ ಎಂದು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಜಗತ್ತೆಲ್ಲಾ ಪರಮಾತ್ಮನಿಗೆ ಪ್ರಕಾರವು, ಅಪೃಥಕ್ಸಿದ್ಧವಿಶೇಷಣವು, ಪರಮಾತ್ಮನು ಪ್ರಕಾರಿಯು, ವಿಶೇಷ್ಯವು. **ಮನು**

**ಭಾ. (೩) "ಏಷ ಸರ್ವಭೂತಾನ್ತರಾತ್ಮಾಽಪಹತ ಪಾಪ್ಮಾದಿವ್ಯೋ ದೇವ ಏಕೋ ನಾರಾಯಣಃ" ಇತ್ಯಾತ್ಮಶರೀರಭಾವೇನಾ ವಸ್ಥಾನಂಚ ಜಗದ್ಬ್ರಹ್ಮಣೋ ರನ್ತರ್ಯಾಮಿ ಬ್ರಾಹ್ಮಣಾದಿಷು ಸಿದ್ಧಂ ||೭||**

ಅನ್ತರಾತ್ಮನು, **ಅಪಹತ ಪಾಪ್ಮಾ**-ಹೀಗೆ ಎಲ್ಲಾದರಲ್ಲೂ ಅನ್ತರಾತ್ಮಾನಾಗಿದ್ದರೂ ಲೀಲಾ ವಿಭೂತಿಯ ಪೃಥಿವ್ಯಾದಿಗಳ ಸಂಬಂಧದಿಂದ ತದ್ಗತದೋಷಲೇಶವೂ ಇಲ್ಲದವನು, **ದಿವ್ಯಃ**-ಪರಮವ್ಯೋಮ ಶಬ್ದವಾಚ್ಯವಾದ ದಿವಿಯಲ್ಲಿರುವವನು, ಅಥವಾ ಪರಮಪದ ನಿಲಯನು ನಿಯಾಮಕನು, **ದೇವಃ**-ಲೀಲಾಸಕ್ತನು ಇದರಿಂದ ಲೀಲಾವಿಭೂತಿನಾಯಕತ್ವವು ಹೇಳಲ್ಪಟ್ಟಿತು. ಅಥವಾ ತಾನೇ ಜ್ಯೋತಿರ್ಮಯನಾಗಿ ಸರ್ವಪ್ರಕಾಶಕನು, **ಏಕಃ-ಅದ್ವಿತೀಯಃ**, ಸಮಾಭ್ಯಧಿಕರಹಿತನು, ಇಂತವನು ಯಾರೆಂದರೆ ಈ ಎಲ್ಲಾ ಅರ್ಥವೂ ಬೋಧಿತವಾಗುವ ಪುರುಷಸೂಕ್ತ ನಾರಾಯಣಾನುವಾಕ ಮೂಲಮಂತ್ರದ್ವಯಾದಿಗಳೆಲ್ಲಾ ಪ್ರತಿಪಾದನಾದ **ನಾರಾಯಣಃ**-ಲಕ್ಷ್ಮೀಪತಿಯಾದ ನಾರಾಯಣನೇ ಎಂದು ಹೇಳಿರುತ್ತದೆ. ಬೃಹದಾರಣ್ಯಕ ಶ್ರುತಿಯು ಸಮಸ್ತ ಜಗತ್ತೂ ಪರಮಾತ್ಮನಿಗೆ ಶರೀರವೆಂದು ಹೇಳಿತು. ಛಾಂದೋಗ್ಯವು **"ಐತದಾತ್ಮ್ಯಮಿದಂ ಜಗತ್"** (೬.೮.೭.) ಎಂದು ಜಗತ್ತಿಗೆ ಅಂತರಾತ್ಮಾವಾಗಿರುವ ಉಪದೇಶವನ್ನು ಬೋಧಿಸಿತು. ಹೀಗೆ ಸರ್ವಭೂತಗಳಿಗೂ ಅಂತರಾತ್ಮಾನಾದನನು ಯಾರು ಎಂಬ ಚರ್ಚೆಯಲ್ಲಿ ಸುಬಾಲೋಪನಿಷತ್ತು ನಿಸ್ಸಂದೇಹವಾಗಿ ಅಖಿಲಹೇಯ ಪ್ರತ್ಯನೀಕನಾಗಿ ನಾರಾಯಣ ಶಬ್ದದಿಂದ ತೋರಿಬರುವ ಕಲ್ಯಾಣ ಗುಣಾಕರನು ಎಂದು ಹೇಳಿತು. ಇದರಿಂದ ನಿರ್ಗುಣಬ್ರಹ್ಮ ಮೊದಲಾದ ವಾದಗಳಿಗೆ ಯಾವದಕ್ಕೂ ಅವಕಾಶವೇ ಇಲ್ಲವು. ಏಕೆಂದರೆ ನಾರಾಯಣ ಶಬ್ದವಾಚ್ಯನು ನಿರ್ಗುಣನಾಗುವದಿಲ್ಲವು. ಸರ್ವೇಶ್ವರನ ಸ್ವರೂಪ ನಿರೂಪಕ, ನಿರೂಪಿತಸ್ವರೂಪ ವಿಶೇಷಣ ಮೊದಲಾದ ಸರ್ವಾಭಿಪ್ರಾಯಗಳೂ ನಾರಾಯಣ ಶಬ್ದದ ತತ್ಪುರುಷ ಬಹುವ್ರೀಹಿ ಅರ್ಥಗಳಿಂದ ಸುವ್ಯಕ್ತವು, ಹೀಗೆ ಎಲ್ಲವೂ ಆತನಿಗೆ ಶರೀರವೆಂದು ಇದೇ ಗೀತೆಯಲ್ಲಿ (೧೧-೧೩) **ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕದಾ। ಅಪಶ್ಯ ದ್ದೇವದೇವಸ್ಯ ಶರೀರೇ ಪಾಂಡವಸ್ತದಾ"** ಎಂದು ಮುಂದೆ ಹೇಳಲ್ಪಡುತ್ತದೆ. **"ಸೋಽಭಿಧ್ಯಾಯ ಶರೀರಾತ್ಸ್ವಾತ್"** (ಮನುಸ್ಮೃತಿ) **"ಜಗತ್ಸರ್ವಂ ಶರೀರಂತೇ"** (ರಾ.ಯು. ೧೨೦-೨೫) **"ಯದಮ್ಬು ವೈಷ್ಣವಃಕಾಯಃ"** (ವಿ.ಪು. ೨.೧೨.೩೭) **"ತಾನಿಸರ್ವಾಣಿ ತದ್ವಪುಃ"** (ವಿ.ಪು. ೧.೨೨.೮೬) **"ತತ್ಸರ್ವಂ ವೈ ಹರೇಸ್ತನುಃ"** ಇತ್ಯಾದಿ ಧರ್ಮಶಾಸ್ತ್ರಪುರಾಣೋಕ್ತಿಗಳೂ ಉಂಟು. **ಇತಿ**-ಎಂಬುದಾಗಿ **ಜಗದ್ಬ್ರಹ್ಮಣೋಃ**-ಜಗತ್ತಿಗೂ ಪರಬ್ರಹ್ಮನಿಗೂ, **ಆತ್ಮಶರೀರ ಭಾವೇನಾ ವಸ್ಥಾನಂ**-ಪರಮಾತ್ಮನು ಆತ್ಮಾ ಚಿದಚಿತ್ತೆಲ್ಲಾ ಆತನಿಗೆ ಶರೀರವೆಂಬ ಭಾವದಿಂದಿರೋಣವೂ ಸಹ, ಅಂತರ್ಯಾಮಿ ಬ್ರಾಹ್ಮಣಾದಿಗಳಲ್ಲಿ, **ಸಿದ್ಧಂ**-ಸ್ಥಾಪಿತವು ; ಈ **"ಮಯಿ ಸರ್ವಮಿದಂ ಪ್ರೋತಂ"** ಎಂಬ ಅಭಿಪ್ರಾಯವನ್ನು ಚನ್ನಾಗಿ ಜ್ಞಾಪಕದಲ್ಲಿಟ್ಟರೆ **ಅದ್ವೈತಶ್ರುತಿ, ಭೇದಶ್ರುತಿ** ಇವುಗಳಿಗೆ ಪರಸ್ಪರ ವಿರೋಧವಿಲ್ಲದೆ ಸರ್ವಸಮಂಜಸವಾಗಿ ಅನ್ವಯಿಸಬಹುದು. ಅದ್ವೈತಿಗಳಿಗೆ ಭೇದಶ್ರುತಿಯನ್ನು ಅನ್ವಯಿಸುವಾಗ ಗಂಟಲು ಹಿಡಿಯುತ್ತದೆ. ದ್ವೈತವನ್ನು ಬೋಧಿಸುವವರಿಗೆ ಅದ್ವೈತಶ್ರುತಿಗಳು ಕಷ್ಟವು. ಈ ಶರೀರಾತ್ಮಭಾವವನ್ನು ಚನ್ನಾಗಿ ಗ್ರಹಿಸಿ ವಿಶಿಷ್ಟಾದ್ವೈತವನ್ನು ಹೇಳುವವರಿಗಾದರೆ ಅದ್ವೈತ ಮತ್ತು ದ್ವೈತ ಶ್ರುತಿಗಳೆಲ್ಲವೂ ಸಮಂಜಸವಾದುದರಿಂದ, ಶ್ರೀ ಯತಿವರ್ಯರು ಗ್ರಂಥೋಪಸಂಹಾರದಲ್ಲಿ **"ಸರ್ವಂ ಸಮಂಜಸಂ"** ಎಂದು ವ್ಯಕ್ತವಾಗಿ ಹೇಳಿರುತ್ತಾರೆ.

(೩) ಸುಬಾಲ ೬

**ಭಾ. ಅ. ಅತಸ್ಸರ್ವಸ್ಯ ಪರಮಪುರುಷ ಶರೀರತ್ವೇನಾತ್ಮಭೂತ ಪರಮಪುರುಷ ಪ್ರಕಾರತ್ವಾತ್ ಸರ್ವಪ್ರಕಾರಃ ಪರಮಪುರುಷ ಏವಾ ವಸ್ಥಿತ ಇತಿ ಸರ್ವೈಶ್ಶಬ್ದೈ ಸ್ತಸ್ಯೈವಾಭಿಧಾನ ಮಿತಿ ತತ್ತ ತ್ಸಾಮಾನಾಧಿಕರಣ್ಯೇನಾಹ—**

ಹೀಗೆ ಶರೀರಾತ್ಮಭಾವವನ್ನು ಚನ್ನಾಗಿ ಗ್ರಹಿಸಿದರೆ **ಜಗನ್ಮಿಥ್ಯಾ** ಎಂದು ಹೇಳುವ ಆವಶ್ಯಕತೆಯೂ ಇರುವದಿಲ್ಲವು. ಈ ಶ್ಲೋಕವು ಮಿಥ್ಯಾವಾದಕ್ಕೂ ಪ್ರತ್ಯುತವಿರುದ್ಧವು. ಮಣಿಗಣವಿದ್ದರಲ್ಲವೇ ಸೂತ್ರದಲ್ಲಿ ಪ್ರೋತವಾಗಬಹುದು ಮಣಿಗಣವೇ ಮಿಥ್ಯಾವಾದರೆ ಪ್ರೋತವಾಗುವದು ಹೇಗೆ? ಸ್ವಾಮಿ ಶ್ರೀಕೃಷ್ಣಭಗವಾನರವರು ತಮ್ಮ ವಿಭೂತಿಯ ವೈವಿಧ್ಯ, ವೈಚಿತ್ರ್ಯ, ಆನಂತ್ಯ ಮೊದಲಾದುವುಗಳನ್ನು ತಿಳಿಸುವುದಕ್ಕಾಗಿಯೇ ಮಣಿಗಣವೆಂದು ಹೇಳಿಕೊಂಡಿರುವಾಗ ಅವೆಲ್ಲಾ ಮಿಥ್ಯೆ ಎಂದು ಹೇಳುತ್ತಾರಲ್ಲಾ ಎಂದು ಪರಿತಾಪಪಡಬೇಕಾಗಿರುತ್ತದೆ. ರಾಜರುಗಳಿಗೇನೇ ವಿಚಿತ್ರಾನಂತ ವಿಭೂತಿಯುಂಟು. ಹಾಗಿರುವಲ್ಲಿ ರಾಜಾಧಿರಾಜನಿಗಿಲ್ಲವೇ?

**ಭಾಷ್ಯಾವತಾರಿಕೆಯ ಅರ್ಥವು—**ಹಿಂದೆ **"ಭೂಮಿರಾಪೋऽನಲಃ"** ಎಂಬುದರಿಂದಲೂ, **"ಅಪರೇಯಂ"** ಎಂಬುದರಿಂದಲೂ ಭೇದಶ್ರುತ್ಯರ್ಥದ ಉಪಬ್ರಹ್ಮಣವೂ, **"ಮಯಿ ಸರ್ವಮಿದಂ ಪ್ರೋತಂ"** ಎಂಬುದರಿಂದ ಆಧಾರಾಧೇಯ ಭಾವವೂ, ತನ್ಮೂಲಕ ಘಟಕ ಶ್ರುತಿಯ ಉಪಬ್ರಹ್ಮಣವೂ ಮಾಡಲ್ಪಟ್ಟು, ಹೀಗೆ ಇವೆರಡರ ಅರ್ಥಗಳು ವಿದಿತವಾದರೆ ಅಭೇದ ಶ್ರುತ್ಯರ್ಥದ ಉಪಬ್ರಹ್ಮಣವೂ ತನ್ಮೂಲಕ ಸಾಮಾನಾಧಿಕರಣ್ಯದಿಂದ ಹೇಳುವ ತಾತ್ಪರ್ಯಗಳೂ, ವ್ಯಕ್ತಪಡುತ್ತವೆ ಎಂದೂ, ಮುಂದಿನ ನಾಲ್ಕು ಶ್ಲೋಕಗಳಿಂದ ಅನುಗ್ರಹಿಸುತ್ತಾರೆ— ಕೆಲವರು ರಸಾದಿಗುಣವಿಶಿಷ್ಟನು ಪರಮಾತ್ಮನಾದ ನಾನು, **ಮಯಿಪ್ರೋತಂ** ಎಂಬಲ್ಲಿ ಅರ್ಥ ಮಾಡಿ, ಮುಂದೆ **ರಸೋऽಹಂ ಅಪ್ಸು** ಎಂದರೆ ತಾನು ರಸವಿಶಿಷ್ಟನೆಂದು ಅರ್ಥಮಾಡಿರುತ್ತಾರೆ. ಇದು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಈ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಸಾಮಾನಾಧಿಕರಣ್ಯದಿಂದಲೇ **ರಸೋऽಹಂ** ಎಂದು ಅರ್ಥಮಾಡುವದೇ ಯುಕ್ತವೆಂದು ತಿಳಿಸುವದಕ್ಕಾಗಿ ಈ ಮುಂದಿನ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಅದೂ ಅಲ್ಲದೆ ಇತರರ ಅರ್ಥದಲ್ಲಿ ಹಿಂದೆ ಮುಖ್ಯವಾಗಿ ತಿಳಿಯಬೇಕಾದ ಆಧಾರಾಧೇಯ ಭಾವವೇ ಹೊರಪಡುವದಿಲ್ಲವು. **ಅತಃ**-ಆ ಕಾರಣದಿಂದ, ಯಾವ ಕಾರಣದಿಂದ ಎಂದರೆ, ಅಚೇತನ ಮತ್ತು ಚೇತನ ಪ್ರಕೃತಿಗಳೆರಡೂ, **ಮೇ ಅಪರಾ ಪ್ರಕೃತಿಃ-ಮೇ ಪರಾ ಪ್ರಕೃತಿಃ** ಎಂದೂ, ಅವು ತನಗೆ ಶರೀರವಾಗಿ ಆ ಕಾರಣದಿಂದ, ತನ್ನದಾಗಿ ಹೇಳಿಕೊಂಡಿರುವದರಿಂದ, **ಸರ್ವಸ್ಯ**-ಸಮಸ್ತಕ್ಕೂ, **ಪರಮಪುರುಷ ಶರೀರತ್ವೇನ**-ಪರಮಪುರುಷನಿಗೆ ಶರೀರವಾಗಿರುವ ಭಾವವಿರುವದರಿಂದ, **ಆತ್ಮಭೂತ ಪರಮಪುರುಷ ಪ್ರಕಾರತ್ವಾತ್**-ಅವುಗಳಿಗೆ ಆತ್ಮಾವಾದ ಪರಮಪುರುಷನ ಅಪೃಥಕ್ಸಿದ್ಧ ವಿಶೇಷಣಗಳಾದುದರಿಂದ, **ಸರ್ವಪ್ರಕಾರಃ**-ಸಮಸ್ತ ವಿಶೇಷಣಗಳುಳ್ಳವನಾದ, **ಪರಮಪುರುಷನೇ** ಹಾಗೆ **ಅವಸ್ಥಿತ ಇತಿ**-ಇರುತ್ತಾನೆಯಾದುದರಿಂದ, **ಸರ್ವೈಶ್ಶಬ್ದೈಃ**-ಸಮಸ್ತ ವಿಶೇಷಣಗಳನ್ನು ಬೋಧಿಸುವ ಶಬ್ದಗಳಿಂದ, **ತಸ್ಯೈವ**-ಆ ವಿಶೇಷ್ಯವಾದ, **ಅಭಿಧಾನ ಮಿತಿ**-ಮುಖ್ಯವೃತ್ತಿಯಿಂದಲೇ ಹೇಳಲ್ಪಡೋಣವು ಎಂದು, **ತತ್ಸಾಮಾನಾಧಿಕರಣ್ಯೇನಾಹ**-ಶರೀರವಾಚಕಗಳಿಗೂ ಶರೀರಿಗೂ ಸಾಮಾನಾಧಿಕರಣ್ಯವು ಕೂಡುವುದರಿಂದ, **ರಸೋऽಹಂ**-ಎಂಬಿವೇ ಮೊದಲಾದ ಸಾಮಾನಾಧಿಕರಣ್ಯದಿಂದ, **ಅಹ**-ಹೇಳುತ್ತಾರೆ. ಇಲ್ಲಿ **ಸರ್ವಪ್ರಕಾರಃ**-ಎಂದು ಹೇಳಿರುವವರ ಅಭಿಪ್ರಾಯವೇನೆಂದರೆ ಗುಣಗುಣಿಗೂ ಜಾತಿವ್ಯಕ್ತಿಗಳನ್ನು ಬೋಧಿಸುವ ಶಬ್ದಗಳಿಗೂ, ಹೇಗೆ ಸಮಾನಾಧಿಕರಣ್ಯವೋ ಹಾಗೆ ಎಂದು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಜಗತ್ತೆಲ್ಲಾ ಪರಮಾತ್ಮನಿಗೆ ಪ್ರಕಾರವು, ಅಪೃಥಕ್ಸಿದ್ಧವಿಶೇಷಣವು, ಪರಮಾತ್ಮನು ಪ್ರಕಾರಿಯು, ವಿಶೇಷ್ಯವು. **ಮನು**

**ಷ್ಯೋಽಹಂ** ಎಂಬಲ್ಲಿ ಹೇಗೆ ಸಾಮಾನಾಧಿಕರಣ್ಯ ಸಿದ್ಧಿಯುಂಟೋ ಹಾಗೆ ಎಂದು ಭಾವಿಸತಕ್ಕದ್ದು. ಲೋಕದಲ್ಲಿ ಸಮಸ್ತ ವಸ್ತುಗಳನ್ನು ಬೋಧಿಸುವ ಶಬ್ದಗಳೂ ತತ್ತಚ್ಛರೀರಕ ಪರಮಾತ್ಮನನ್ನು ಬೋಧಿಸುವದರಿಂದ ಸಾಮಾನಾಧಿಕರಣ್ಯವು ಸಮಂಜಸವಾಗಿ ನಮ್ಮ ಸಿದ್ಧಾಂತಕ್ಕೆ ಕೂಡುತ್ತದೆ ಎಂಬ ಭಾವವು. ಎಲ್ಲಾದರಲ್ಲೂ ಆತ್ಮಾವಾಗಿ ಪರಮಾತ್ಮನಾಗಿರುವದರಿಂದ ಆತನನ್ನೇ ಬೋಧಿಸುತ್ತದೆ ಎಂಬ ತಾತ್ಪರ್ಯವು. ಯಾವ ಕಾರಣದಿಂದ ಪರಮಾತ್ಮನಿಗೂ ಆತನು ಅನುಪ್ರವೇಶ ಮಾಡಿರುವ ಜಗತ್ತಿಗೂ ಸಾಮಾನಾಧಿಕರಣ್ಯವು ಕೂಡುತ್ತದೆ ಎಂಬುದು, ಈ ಮುಂದಿನ ಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಕೆಲವರು ಮಾಡಿರುವ ಅರ್ಥವನ್ನು ಪರಿಶೀಲಿಸಿದರೆ, ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಙ್ಗತಿಯೇ ಇರುವದಿಲ್ಲವು. ಹಿಂದಿನ ಶ್ಲೋಕದಲ್ಲಿ ಚಿದಚಿತ್ತುಗಳಿಗೂ ಪರಮಾತ್ಮನಿಗೂ ಶರೀರಾತ್ಮಭಾವವು ಹೇಳಲ್ಪಟ್ಟಿರುವದರಿಂದಲೇ ಸರ್ವಜಗತ್ತಿಗೂ ಪರಮಾತ್ಮನಿಗೂ ಸಾಮಾನಾಧಿಕರಣ್ಯವು ಕೂಡುತ್ತದೆಂದು **ರಸೋಹಮಪ್ಸು** ಎಂದು ಹೇಳಲ್ಪಟ್ಟಿತೆಂದು ಸಙ್ಗತಿಯೆಂದು ಹೇಳುವೆವು. ಆಗಲಿ **ರಸೋಹಮಪ್ಸು** ಎಂದೆಲ್ಲಾದರೂ ಸಾಮಾನಾಧಿಕರಣ್ಯೋಕ್ತಿಯುಂಟೋ ? ಎಂದರೆ, ಅಪ್ಪು ಪರಮಾತ್ಮ‍ರೂ ಶರೀರಾತ್ಮಭಾವದಿಂದ ಒಂದೇ ಎಂಬ ಸಾಮಾನಾಧಿಕರಣ್ಯವು ಹಿಂದೆಯೇ ದ್ಯೋತಿತವಾಗುವದರಿಂದ, ಅದರಲ್ಲಿ ಪ್ರಧಾನವಾಗಿರುವ ರಸಾದಿಗಳಿಗೂ ಕೂಡ ಈ ಶರೀರಾತ್ಮಭಾವವು, ಕೂಡುತ್ತದೆಂದು ಮುಂದೆ ಉಪಪಾದಿಸುವೆವು. **"ವಿಶ್ವಂ ಶುಭಾಶ್ರಯವದೀಶ ವಪುಸ್ತ್ವದೀಯಂ ಸರ್ವಾಗಿರಸ್ತ್ವಯಿಪತನ್ತಿ ತತೋಽಸಿ ಸರ್ವಃ"** (ಶರಣಾಗತಿ ದೀಪಿಕಾ. ೭) **ಹೇ ಈಶ**–ಓ ದೀಪ ಪ್ರಕಾಶಸ್ವಾಮಿಯೇ, ನಿನ್ನ ದಿವ್ಯ ಮಂಗಳವಿಗ್ರಹವು ಹೇಗೆ ನಿನಗೆ ಶರೀರವೋ, ಹಾಗೆಯೇ ಈ ಜಗತ್ತೆಲ್ಲಾ ಅಪೃಥಕ್ಸಿದ್ಧ ವಿಶೇಷಣವಾಗಿ ನಿನಗೆ ಶರೀರವು ; ಆದುದರಿಂದ ಶರೀರವನ್ನು ಬೋಧಿಸುವ ಶಬ್ದಗಳೆಲ್ಲಾ ಶರೀರಿಯಾಗಿ ಆತ್ಮಾವಾಗಿರುವ ನಿನ್ನನ್ನೇ ಬೋಧಿಸುತ್ತವೆ ; ಆದುದರಿಂದ **ತತೋಽಸಿ ಸರ್ವಃ** ಸಾಮಾನಾಧಿಕರಣ್ಯದಿಂದ ಈ ಜಗತ್ತೂ ಜಗತ್ತಿನ ವಸ್ತುಗಳೂ, ಅವುಗಳಿಗೆ ಸಂಬಂಧಿಸಿದ ವಿಶೇಷಣಗಳೂ ಎಲ್ಲವೂ ನೀನೇ ಎಂಬುದಾಗಿ ಹೇಳಲ್ಪಡುತ್ತೀಯೆ, ಎಂಬುದು ಈ ಶ್ಲೋಕಾರ್ಥವು. ಇದನ್ನನುಸರಿಸಿಯೇ ಶ್ರೀ ಪರಾಶರರು ವಿಷ್ಣುಪುರಾಣದ ೨. ೧೨. ೩೮ ರಲ್ಲಿ ಈ ಶರೀರಾತ್ಮಭಾವವೇ ಸಾಮಾನಾಧಿಕರಣ್ಯಕ್ಕೆ ಪರಮಾತ್ಮನ ವಿಷಯದಲ್ಲಿ ನಿಬಂಧನವೆಂದು ಹೇಳಲುಪಕ್ರಮಿಸಿ, ಹಿಂದಿನ ಶ್ಲೋಕದಲ್ಲಿ ಬ್ರಹ್ಮಾಂಡವೆಲ್ಲಾ ಪರಮಾತ್ಮನಿಗೆ ಶರೀರವೆಂದು ಹೇಳಿ, ಮುಂದಿನ ಶ್ಲೋಕದಲ್ಲಿ,

**ಜ್ಯೋತೀಂಷಿ ವಿಷ್ಣು ರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋದಿಶಶ್ಚ ।**
**ನದ್ಯ ಸ್ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ ॥**

ಚಂದ್ರಸೂರ್ಯಾದಿಗಳೂ ಲೋಕಗಳೂ ಮುಂತಾದುವುಗಳೆಲ್ಲವೂ ವಿಷ್ಣುವೇ ಎಂದರೆ ಅವೆಲ್ಲಾ ತತ್ತಚ್ಛರೀರಕ ಪರಮಾತ್ಮನೇ ಎಂದು ಹೇಳಿ, ಒಂದೊಂದಾಗಿ ಇವು ವಿಷ್ಣುವು ಎಂದು ಹೇಳುವದೇನಿದೆ, **ಯದಸ್ತಿ**–ಸ್ವರೂಪವಿಕಾರವಿಲ್ಲದುದರಿಂದ ಅಸ್ತಿಶಬ್ದವಾಚ್ಯವಾದ ಸರ್ವ ಜೀವವರ್ಗವೂ, **ಯನ್ನಾಸ್ತಿ**–ಸ್ವರೂಪವಿಕಾಶವಿರುವದರಿಂದ ನಾಸ್ತಿ ಶಬ್ದವಾಚ್ಯವಾದ ಸರ್ವ ಅಚಿದ್ವರ್ಗವೂ ಸಹ, ವಿಷ್ಣುವೇ ಎಂದು ಹೇಳಲ್ಪಟ್ಟಿತು. ಜಗತ್ತುಗಳೆಲ್ಲಾ ಈ ಚಿದಚಿತ್ತುಗಳೇ ಆಗಿರುವದರಿಂದ ಸಮಸ್ತ ವಿಶ್ವವೂ ಪರಮಾತ್ಮನೇ ಎಂದು ವಿಷ್ಣು ಸಹಸ್ರನಾಮದಲ್ಲಿ **ವಿಶ್ವಾಯ ನಮಃ** ಎಂಬುದು ಪ್ರಥಮನಾಮವು. ಎಲ್ಲಾ ಚಿತ್ತೂ ಅಚಿತ್ತೂ ಈಶ್ವರನಲ್ಲಿ ಅಡಗಿರುವದರಿಂದ ಪ್ರಥಮನಾಮವು ವಿಶ್ವಾನುಪ್ರವೇಶದಿಂದುಂಟಾದ ಈ ವಿಶ್ವಸಾಮಾನಾಧಿಕರಣ್ಯದಿಂದ ಪರಿಪೂರ್ಣತೆಯನ್ನು ಬೋಧಿಸುತ್ತದೆ. ಆದುದರಿಂದ ಜಾತಿ ಗುಣಾದಿ ಶಬ್ದ ಬೋಧಕ

**ಮೂ. ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವ ಸ್ಸರ್ವವೇದೇಷು ಶಬ್ದಃಖೇ ಪೌರುಷಂ ನೃಷು ॥** ೮.
**ಪುಣ್ಯೋ ಗಂಧಃ ಪೃಥಿವ್ಯಾಂಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥** ೯.

ಗಳಾಗಿ ಪ್ರಕಾರವನ್ನು ತಿಳಿಸುವ ಶಬ್ದಗಳೂ ಪ್ರಕಾರಿಯನ್ನು ಬೋಧಿಸುತ್ತವೆ ಎಂಬುದು ಲಾಕ್ಷಣಿಕವಾಗಿ ಯಲ್ಲವು, ಮುಖ್ಯ ವೃತ್ತಿಯಿಂದಲೇ ಹಾಗೆ ಹೇಳಿಕೆ ಉಂಟೆಂದು ತಿಳಿಸುವದ ಕ್ಕಾಗಿಯೇ, ಇಲ್ಲಿ **ಅಭಿಧಾನಂ** ಎಂದು ಪ್ರಯೋಗಿಸಿರುತ್ತಾರೆ. ಆದರೆ ಇಲ್ಲಿ ಒಂದು ಪೂರ್ವ ಪಕ್ಷವನ್ನು ತರಬಹುದು, ಏನೆಂದರೆ—**ರಸೋಽಹಮಪ್ಸು, ಪ್ರಭಾಸ್ಮಿ ಶಶಿಸೂರ್ಯಯೋಃ** ಎಂದು ಹೇಳಿದೆಯಲ್ಲಾ ? ಈಗ ಉಪಪಾದಿಸಿದರೀತ್ಯಾ, ಅಪ್ಪು, ಶಶಿ, ಸೂರ್ಯರು ಪರಮಾತ್ಮ ನಿಗೆ ಶರೀರವು, ಇವುಗಳೇ ನಾನಾಗಿದ್ದೇನೆಂದ ಶ್ರೀಕೃಷ್ಣನು ಹೇಳದೆ, ಅವುಗಳಲ್ಲಿರುವ ರಸವೂ, ಪ್ರಭೆಯೂ, ನಾನು ಎಂಬುದು ಹೇಗೆ ಎಂಬರೆ. ಯಾವಾಗ ಅಪ್ಪು, ಶಶಿ, ಸೂರ್ಯರೇ ಪರಮಾ ತ್ಮನೊಂದಿಗೆ ಸಾಮಾನಾಧಿಕರಣ್ಯದಿಂದ ಹೇಳಲ್ಪಟ್ಟರೆ, ಅವುಗಳ ಸತ್ತಾಪಾದಕವಾಗಿ ಪ್ರಧಾನ ಗಳಾದ ಸರ್ವವಿಶೇಷಣಗಳೂ ಸಹ ತಾನೇ ಎಂಬುದು ಸಿದ್ಧವೆಂದು, **ರಸೋಽಹಮಪ್ಸು** ಎಂಬಿವೇ ಮೊದಲಾದವುಗಳಿಂದ ಹೇಳುತ್ತಾರೆ. ಯಾವಾಗ ಅವುಗಳಿಗೆಲ್ಲಾ ಪರಮಾತ್ಮನು ಆತ್ಮಾವಾದನೋ ಅವುಗಳಿಗೆ ಸಾರಭೂತಗುಣಗಳನ್ನುಂಟುಮಾಡಿ ಸತ್ತೆಯನ್ನು ಕೊಟ್ಟು ಪ್ರವೃತ್ತಿಗಳನ್ನುಂಟುಮಾಡು ವನೂ ತಾನೇ ಎಂದು ಈಗ ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ ತಾನೇ ಸರ್ವಕ್ಕೂ ಆಶ್ರಯ ನೆಂದು ಹೇಳಿದರು. ಆದುದರಿಂದಲೇ ಅವುಗಳ **"ಸತ್ತಾ ಸ್ಥಿತಿ ಪ್ರಯತನ ಫಲೇಷು ಏತದಾ ಯತ್ತಮೇತತ್"** ಎಂದು ಹೇಳಿರುವ ಮೇರಿಗೆ ಸ್ವರೂಪಲಾಭ ಅನಂತರ ಉಂಟಾಗುವ ಸ್ಥಿತಿ, ಸರ್ವವ್ಯಾಪಾರ ಭೋಗಮೋಕ್ಷಾದಿ ಫಲಗಳು, ಹೀಗೆ ಎಲ್ಲಾದರಲ್ಲೂ, **ಏತದ್ವಿಶ್ವಂ**-ಈ ವಿಭೂತಿ ಯಲ್ಲವೂ, **"ಏತದಾಯತ್ತಂ"** ಪರಮಾತ್ಮನಿಗೆ ಅಧೀನವಾದುದು. ಹೀಗೆ ವಸ್ತುರೂಪವೆಲ್ಲಾ ನನ್ನ ಅಧೀನವಾದುದರಿಂದ ನಾನೇ ವಸ್ತುಸ್ವರೂಪವೆಂದು ಸಾಮಾನಾಧಿಕರಣ್ಯದಿಂದ ಹೇಳು ತ್ತಾರೆ. ಒಂದು ದೃಷ್ಟಾಂತದ ಮೂಲಕ ಈ ವಿಷಯವು ಸುಲಭವಾಗಿ ಗ್ರಾಹ್ಯವಾಗಬಹುದು. ಹೇಗೆಂದರೆ ಈಗ **ಮನುಷ್ಯೋಽಹಂ** ಎಂಬ ಸಮಾನಾಧಿಕರಣ್ಯವು, ಈ ವಿಧ ಪ್ರಾಣಿಗೆ ಅಪೃಥ ಕ್ಸಿದ್ಧ ವಿಶೇಷಣವಾಗಿ ಶರೀರವಿರುವದರಿಂದ ಶರೀರವನ್ನು ಬೋಧಿಸುವ ಅಹಂ ಎಂಬುದಕ್ಕೂ ಮನುಷ್ಯತ್ವದಿಂದ ಬೋಧಿತವಾದ ಶರೀರಕ್ಕೂ ಸಾಮಾನಾಧಿಕರಣ್ಯವು ಕೂಡುತ್ತದೆ. ಈ ಮನು ಷ್ಯತ್ವವೂ ಶರೀರದಲ್ಲಿರುವ ಜಾತಿಯಾದುದರಿಂದ ಇದಕ್ಕೂ ಪರಮಾತ್ಮ ಶರೀರತ್ವವಿರುವದರಿಂದ **"ಪ್ರಾಣಿಷು ಮನುಷ್ಯೋಽಹಂ"** ಎಂದು ಪ್ರಾಣಿಗಳಲ್ಲಿ ಮನುಷ್ಯತ್ವ ದೇವತ್ವಾದಿಗಳ ಪ್ರಾಧಾ ನ್ಯದಿಂದ, ಪ್ರಾಣಿಷು ದೇವೋಽಹಂ, ಮನುಷ್ಯೋಽಹಂ ಇತ್ಯಾದಿ ಪ್ರಯೋಗಗಳು ಸರ್ವಸಮಂಜಸ ವೆಂದು ತಿಳಿಯತಕ್ಕದ್ದು. ಈ ಸಂದರ್ಭದಲ್ಲಿ, **ತಸ್ಮೈ ಶಬ್ದಾದಿರೂಪಾಯ ನಮಃ ಕೃಷ್ಣಾಯ ವೇಧಸೇ"** (ವಿ. ಪು. ೧. ೧೪. ೩೩) ಎಂಬ ಶ್ರೀ ಪರಾಶರೋಕ್ತಿಯು ಅನುಸಂಧೇಯವು.

**ಮೂಲಕ್ಕೆ ಅರ್ಥವು:**—ಹೀಗೆ ನನಗೆ ಶರೀರವಾದ ಚಿದಚಿತ್ತುಗಳಲ್ಲೂ ಸಾರಭೂತವಾ ದುವೂ ಕೂಡ ನನ್ನ ಶರೀರಕ್ಕೆ ಸಂಬಂಧಿಸಿದವು ; ಆದುದರಿಂದ ಮುಖ್ಯ ವೃತ್ತ್ಯಾ ಅವೂಕೂಡ ನಾನೇ ಎಂದು ಹೇಳಿಕೊಳ್ಳುತ್ತಾರೆ. **ಹೇ ಕೌನ್ತೇಯ, ಅಪ್ಸು**-ಅಪ್ಪುಗಳಲ್ಲಿ, **ರಸೋಽಹಂ**- ಪ್ರಧಾನಭೂತವಾದ ರಸವೂ ನಾನೇ, **ಶಶಿ ಸೂರ್ಯಯೋಃ**-ಚಂದ್ರ ಸೂರ್ಯರಲ್ಲಿ, **ಪ್ರಭಾಸ್ಮಿ**- ಸ್ವರೂಪಪಾದಕವಾದ ಲೋಕೋಪಕಾರಕವಾಗಿ ಪ್ರಧಾನವಾದ, **ಪ್ರಭಾಸ್ಮಿ**-ಪ್ರಕಾಶವಾಗಿರು

**ಮೂ. ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ ।**
**ಬುದ್ಧಿ ರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಂ ಮಹಂ ॥** ೧೦.
**ಬಲಂ ಬಲವತಾಂ ಚಾಹಂ ಕಾಮರಾಗ ವಿವರ್ಜಿತಂ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥** ೧೧.

ತ್ತೇನೆ; ಹಾಗೆಯೇ, **ಸರ್ವವೇದೇಷು**-ಸಮಸ್ತ ವೇದಗಳಲ್ಲೂ ಸಾರಭೂತವಾದ **ಪ್ರಣವ** ವಾಗಿದ್ದೇನೆ. **ಶಬ್ದಃಖೇ**-ಆಕಾಶಕ್ಕೆ ಪ್ರಾಶಸ್ತ್ಯವನ್ನು ಕೊಡುವ ಶಬ್ದರೂಪನೂ ನಾನೇ; **ಪೌರುಷಂನೃಷು**-ಮನುಷ್ಯರಲ್ಲಿ ಸಂತಾನಕ್ಕೆ ಕಾರಣಭೂತವಾದ ರೇತಸ್ಸೇ ಎಂದಾಗಲಿ ಅಥವಾ ಪುರುಷನಿಗಿರುವ ಕರ್ತೃತ್ವಸ್ವರೂಪಸಾಹಸವೆಂದಾಗಲಿ, ಅಥವಾ ಆತನಿಗಿರುವ ಬುದ್ಧಿವಿವೇಕವಾಗಲಿ, ನಾನೇ, **ಪುಣ್ಯೋಗಂಧಃ ಪೃಥಿವ್ಯಾಂಚ**-ಭೂಮಿಯಲ್ಲಿರುವ ಶ್ರೇಷ್ಠವಾದ ಗಂಧವೂ ನಾನೇ; ಪುಣ್ಯಗಂಧವು ಸತ್ವಗುಣಾಭಿವೃದ್ಧಿಗೆ ಉಪಯುಕ್ತವಾಗಿ ಸಾರಭೂತವಾದುದು, **ತೇಜಶ್ಚಾಸ್ಮಿ ವಿಭಾವಸೌ**-ಅಗ್ನಿಯಲ್ಲಿರುವ ದಾಹಶಕ್ತಿಯೂ ನಾನೇ; ಅಗ್ನಿಯು ಅಸುರ ಸಂಹಾರಾನಂತರದಲ್ಲಿ ಅಹಂಕಾರಯುಕ್ತನಾಗಲು, ಸಿದ್ಧರೂಪೀ ಭಗವಾನನು ಅಗ್ನಿಯಸ್ವರೂಪವಾದ ದಾಹಶಕ್ತಿಯು ಇಲ್ಲದಹಾಗೆ ಮಾಡಿದನು; ಒಂದು ತೃಣವನ್ನು ಕೂಡ ಸುಡಲು ಆಗ ಶಕ್ತಿ ಇಲ್ಲದೆಹೋಗಲು; ಅನಂತರ ಆ ಶಕ್ತಿಯನ್ನು ದಯಪಾಲಿಸಿದ ಇತಿಹಾಸವು ಉಪನಿಷತ್ತುಗಳಲ್ಲಿ ವ್ಯಕ್ತವು. ಅದು ಇಲ್ಲಿ ಅನುಸಂಧೇಯವು ಆದುದರಿಂದ ಅಗ್ನಿಗೆ ಸತ್ತೆಯು ದಾಹಕಶಕ್ತಿಯಲ್ಲಿ; **ಜೀವನಂ ಸರ್ವ ಭೂತೇಷು**-ಸಮಸ್ತ ಪ್ರಾಣಿಗಳಲ್ಲೂ ನಾನು ಪ್ರಾಣರೂಪನು, ಇಲ್ಲಿ **"ಪಂಚಧಾವಸ್ಥಿತೋ ಯಶ್ಚೇಷ್ಟಾಂಕುರುತೇಽನಿಶಮ್"** (ವಿ. ಪು. ೧.೧೪.೩೦) ಎಂದೂ **ವಾಯವ್ಯಾತ್ಮನೇ ನಮಃ** ಎಂದೂ ಹೇಳಿರುವದು ಅನುಸಂಧೇಯವು. ಇಲ್ಲಿ **ಸರ್ವಭೂತೇಷು** ಎಂದು ಹೇಳಿರುವದರಿಂದ ಚತುರ್ಮುಖ ಮೊದಲುಗೊಂಡು ಸಮಸ್ತ ದೇವಪ್ರಮುಖರೂ ಮನುಷ್ಯರೂ ತಿರ್ಯಕ್ಕುಗಳೂ ಸ್ಥಾವರಗಳೂ ಎಲ್ಲವೂ ಹೇಳಲ್ಪಟ್ಟವು. **"ಯೇನಜಾತಾನಿ ಜೀವಂತಿ"** ಎಂಬ ಶ್ರುತ್ಯರ್ಥವು ಬೋಧಿಸಲ್ಪಟ್ಟಿತು. **ತಪಶ್ಚಾಸ್ಮಿ ತಪಸ್ವಿಷು**-ತಪಸ್ವಿಗಳಿಗೆ ಸತ್ತಾದಾಯಕವಾದ ತಪಸ್ಸೂ ನಾನೇ; **ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥಸನಾತನಂ**-ಓ ಅರ್ಜುನನೇ ಹಿಂದೆ ಪ್ರಾಣಿಗಳಿಗೆಲ್ಲಾ ಪ್ರಾಣವೇ ನಾನು ಎಂದು ಹೇಳಿದ್ದೇನು, ಸರ್ವಪ್ರಾಣಿಗಳಿಗೂ ಅನಾದಿ ಯಾಗಿ ಬೀಜರೂಪನಾಗಿ ಜನ್ಮ ಅಥವಾ ಉತ್ಪತ್ತಿಯಾಗಿರುವವನೇ ನಾನು ಎಂದರೆ ಮೊಗು ವಾಗುವದಕ್ಕಾಗಲಿ, ಕ್ರಿಮಿಯಾಗುವದಕ್ಕಾಗಲಿ, ಸಸ್ಯ ಅಥವಾ ವೃಕ್ಷವಾಗುವದಕ್ಕಾಗಲಿ, ಬೀಜವು ನಾನೇ ಎಂದು ತಿಳಿ. ಮತ್ತು ಪರಿಣಾಮಿ ದ್ರವ್ಯಗಳಿಗೆಲ್ಲಾ ಪರಿಣಾಮವನ್ನುಂಟು ಮಾಡುವ ಬೀಜರೂಪ ದ್ರವ್ಯವೂ ನಾನೇ ಎಂದು ತಿಳಿ ಎಂಬರ್ಥವೂ ಆಗಬಹುದು; **ಬುದ್ಧಿ ರ್ಬುದ್ಧಿ ಮತಾಮಸ್ಮಿ**-ಮೇಧಾಯುಕ್ತರಾದವರಲ್ಲಿರುವ ನಿಶ್ಚಯಜ್ಞಾನವೂ ನಾನೇ; **ತೇಜ ಸ್ತೇಜಸ್ವಿನಾಮಹಂ**-ಪ್ರತಾಪಶೀಲರಲ್ಲಿರುವ ಪ್ರತಾಪವೂ ಎಂದರೆ ಇತರರಿಂದ ತಿರಸ್ಕರಿಸಲ್ಪ ಡದೇ ಇರುವ ಶಕ್ತಿಯೂ ನಾನೇ, ಅವರಿಗೆ ಸ್ವರೂಪದಾಯಕನೂ ನಾನೇ ಎಂಬರ್ಥವು; **ಬಲಂ ಬಲವತಾಂ ಚಾಹಂ**-ಧಾರಣಾದಿ ಶಕ್ತಿಯುಳ್ಳವರಲ್ಲಿರುವ ಧಾರಣ ಶಕ್ತಿಯೂ ನಾನೇ; **ಹೇ ಭರತರ್ಷಭ**-ಓ ಭರತವಂಶ ಶ್ರೇಷ್ಠನಾದ ಅರ್ಜುನನೇ, **ಭೂತೇಷು**-ದೇವ ಮನುಷ್ಯಾದಿ ರೂಪದಲ್ಲಿರುವ ಪ್ರಾಣಿಗಳಲ್ಲಿ, **ಕಾಮರಾಗ ವಿವರ್ಜಿತಂ**-ದುಷ್ಟವಾದ ಅಭಿಲಾಷೆಯಿಂದುಂ ಟಾದ ವಿಷಯೋಪಭೋಗರಾಗವಲ್ಲದಿರುವ, **ಕಾಮೋಽಸ್ಮಿ**-ಸ್ವದಾರ ಸುತಾದಿಗಳಲ್ಲೂ, ಪ್ರಜೆಗಳ ಹಿತಚಿಂತನೆಯಲ್ಲೂ, ಭಾಗವತರಲ್ಲೂ, ಭಗವಂತನಲ್ಲೂ, ಶಾಸ್ತ್ರದಲ್ಲೂ, ಮೋಕ್ಷದಲ್ಲೂ ಹೀಗೆ ಸಾತ್ವಿಕ ವಿಷಯಗಳಲ್ಲಿರುವ ಪ್ರೀತಿಯೂ ಸಹ ನಾನೇ.

**ಭಾ. ಏತೇ ಸರ್ವೇಽವಿಲಕ್ಷಣಾಭಾವಾ ಮತ್ತ ಏವೋತ್ಪನ್ನಾಃ, ಮಚ್ಛೇಷಭೂತಾಃ, ಮಚ್ಛರೀರತಯಾ ಮಯ್ಯೇವಾವಸ್ಥಿತಾಃ ; ಅತ ಸ್ತತ್ಪ್ರಕಾರೋಽಹಮೇವಾವಸ್ಥಿತಃ ॥ ॥೮, ೯, ೧೦, ೧೧॥**

**ಭಾಷ್ಯಾರ್ಥವು:—** ಈ ನಾಲ್ಕು ಶ್ಲೋಕಗಳ ಅರ್ಥವೆಲ್ಲಾ ಸರ್ವರಿಗೂ ವೇದ್ಯವಾಗುವದರಿಂದ ಆ ಶ್ಲೋಕಗಳಿಂದ ತೋರಿಬರುವ ಮುಖ್ಯಾಭಿಪ್ರಾಯವೇನೆಂಬುದನ್ನು ಮಾತ್ರ ವ್ಯಕ್ತಪಡಿಸುತ್ತಾರೆ:—**ರಸೋಽಹಂ**-ಇತ್ಯಾದಿ ಸಾಮಾನಾಧಿಕರಣ್ಯವು ಮುಖ್ಯವೃತ್ತಿಯಾಗಿಯೇ ಹೇಗೆ ಕೂಡುತ್ತದೆಂಬುದನ್ನು ಮಾತ್ರ ಇಲ್ಲಿ ಉಪಪಾದಿಸಿರುತ್ತಾರೆ. **ರಾಜನೇ ರಾಷ್ಟ್ರವು** ಎಂದು ಹೇಳಿದಹಾಗೆ ಆರೋಪರೂಪವಾದ ಹೇಳಿಕೆಯಲ್ಲವು ಎಂಬ ಭಾವವು. **ಏತೇ ಸರ್ವೇ**-ಅಪ್ಪುಗಳಲ್ಲಿ ರಸವೂ, ಚಂದ್ರ ಸೂರ್ಯರಲ್ಲಿ ಪ್ರಭೆ, ಇವೇ ಮೊದಲಾದ ಸಮಸ್ತಗಳಾದ, **ವಿಲಕ್ಷಣಾಃ ಭಾವಾಃ**-ಸತ್ತಾ ಎಂದರೆ ಸ್ವರೂಪ, ಪ್ರಾಧಾನ್ಯ, ಮೊದಲಾದ ಚಿದಚಿತ್ತುಗಳಲ್ಲಿರುವ **ವಿಲಕ್ಷಣ** ಭಾವಗಳು, **ಮತ್ತ ಏವೋತ್ಪನ್ನಾಃ**-ನನ್ನಿಂದಲೇ ಉತ್ಪನ್ನವಾದವುಗಳು, ಇತರರುಯಾರಿಂದಲೂ ಉಂಟಾಗಲಶಕ್ಯವೆಂಬ ಭಾವವು, **ಮಚ್ಛೇಷಭೂತಾಃ**-ಅವು ನನಗೇನೇ ಅಧೀನವಾದವುಗಳು, ನನಗೆ ಅಪೃಥಕ್ಸಿದ್ಧವಾದವುಗಳಾದ ಶರೀರಗಳಾದ ಚೇತನಾಚೇತನ ದ್ರವ್ಯಗಳಿಗೆ ಸಂಬಂಧಿಸಿದವಾದುದರಿಂದ ಅಧೀನವಾದವುಗಳು, **ಮಚ್ಛರೀರತಯಾ ಮಯ್ಯೇವಾವಸ್ಥಿತಾಃ**-ಅವು ನನ್ನ ಶರೀರ ಸಂಬಂಧಿಗಳಾದಪ್ರಯುಕ್ತ ಅವು ನನ್ನಲ್ಲೇ ಅಪೃಥಕ್ಸಿದ್ಧಗಳಾಗಿ ಇರುವಂತವುಗಳು, **ಅತಃ**-ಆ ಕಾರಣದಿಂದ, **ತತ್ಪ್ರಕಾರಃ**-ಆ ವಿಶೇಷಣಗಳುಳ್ಳವನಾಗಿಯೇ, **ಅಹಮೇವಾವಸ್ಥಿತಃ**-ನಾನೇ ಇರುವವನು, ಅವುಗಳಿಗೆಲ್ಲಾ ಸಾರಭೂತವಾಗಿರುವ ವಿಲಕ್ಷಣಭಾವಗಳನ್ನುಂಟುಮಾಡಿದವನು ನಾನೇ, ಆ ವಸ್ತುಗಳಿಗೆಲ್ಲಾ ಆಧಾರಕನು ನಾನೇ ; ಆದುದರಿಂದ **"ಆಧೇಯತ್ವಪ್ರಭೃತಿ ನಿಯಮ್ಯ ಆದಿಕರ್ತುಶ್ಶರೀರಂ"** ಆಧೇಯತ್ವಾದಿಗಳಿಂದ ಅವೆಲ್ಲಾ ನನಗೆ ಶರೀರವು ; ಅವು ಯಾವಾಗ ಶರೀರವಾಯಿತೋ ಅವುಗಳ ವಿಶೇಷಣಗಳಾಗಿ ವೈಲಕ್ಷಣ್ಯವನ್ನುಂಟುಮಾಡುವವುಗಳೂ ಕೂಡ ನನಗೆ ಶರೀರಗಳೇ ; ಶರೀರವಾಚಕಗಳಾದ ಶಬ್ದಗಳೂ ಶರೀರಿಯಾದ ಆತ್ಮಾವನ್ನೂ ಬೋಧಿಸುವದರಿಂದ **ರಸೋಽಹಮಪ್ಸು** ಇತ್ಯಾದಿ ಸಾಮಾನಾಧಿಕರಣ್ಯ ನಿರ್ದೇಶಗಳೂ ಕೂಡುತ್ತವೆ ಎಂಬ ಭಾವವು. ಈ ಅಭಿಪ್ರಾಯವನ್ನೇ, **ಮಚ್ಛರೀರತಯಾ ಮಯ್ಯೇವಾವಸ್ಥಿತಾಃ** ಎಂದು ಹೇಳಿ ಸಾಮಾನಾಧಿಕರಣ್ಯಕ್ಕೆ ಇದೀಗ ಹೇತುವೆಂದು ತೋರಿಸಿರುತ್ತಾರೆ. ನಾನೇ ಪರಮಾತ್ಮನಿಗೆ ಶರೀರವಾದರೆ, ನನಗೆ ಶರೀರಗಳಾದ ಸರ್ವಾಯವಗಳೂ ಕೂಡ ಪರಮಾತ್ಮನಿಗೆ ಶರೀರವೆಂದು ಇಲ್ಲಿ ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು:—ರಸೋಽಹಮಪ್ಸು** ಎಂದಾರಂಭಿಸಿ ಹೇಳಿದ ನಾಲ್ಕು ಶ್ಲೋಕಗಳ ತಾತ್ಪರ್ಯವೇನೆಂಬುದನ್ನು ಈ ಶ್ಲೋಕದ ಮೂಲಕ ವ್ಯಕ್ತಪಡಿಸುತ್ತಾರೆ. **"ರಸೋಽಹಮಪ್ಸು"** ಎಂದಾರಂಭಿಸಿ, **"ಕಾಮೋಽಸ್ಮಿ ಭರತರ್ಷಭ"** ಎಂದು ಮುಗಿಸಿ ಹೇಳಿದುದರ ಅಭಿಪ್ರಾಯವು, ಮುಖ್ಯವಾಗಿ ಈ ಚೇತನರುಗಳು ತಮ್ಮ ತಮ್ಮ ಕಾರ್ಯಾನುಗುಣವಾಗಿ ಭೋಗ್ಯವಸ್ತುಗಳಲ್ಲಿ ಪ್ರಾಧಾನ್ಯವಾದವುಗಳನ್ನೇಲ್ಲಾ ಅನುಭವಿಸುವರು ಎಂಬುದು. "ಅವುಗಳು ಸಾತ್ವಿಕ ರಾಜಸತಾಮಸರೂಪಭೋಗ್ಯವಸ್ತುಗಳಾಗಿ ಅವು ನನ್ನಿಂದ ಉಂಟಾಗಿ, ಅವು ನನ್ನ ಶರೀರಗಳಾಗಿರುವದರಿಂದ ಅವು ನನ್ನಿಂದ ಭೋಕ್ತೃಗಳ ಭೋಗಕ್ಕಾಗಿ ಉಂಟಾದವು" ಎಂದು ತಿಳಿಸುವದಕ್ಕಾಗಿ ಸಾಮಾನಾಧಿಕರಣ್ಯೋಕ್ತಿಯು. ಹೀಗೆ ತನಗೆ ಶರೀರಗಳಾದ ಸಕಲ ವಸ್ತುಗಳ ಸಾರಭೂತವಾದ ವೈಲಕ್ಷಣ್ಯವೆಲ್ಲಾ ತನ್ನ ಮೂಲಕವಾಗಿಯೇ ಉಂಟಾದವು; ಆದುದರಿಂದ ಅವುಗಳ ಸತ್ತಾ ಸ್ಥೇಮ ಪ್ರಯತನ ಫಲಗಳೆಲ್ಲಾ ತನ್ನ ಅಧೀನವಾದವು, ಆದುದರಿಂದ

**ಮೂ. ಯೇ ಚೈವ ಸಾತ್ವಿಕಾಭಾವಾ ರಾಜಸಾ ಸ್ತಾಮಸಾಶ್ಚ ಯೇ।**
**ಮತ್ತ ಏವೇತಿ ತಾನ್ವಿದ್ಧಿ ನತ್ವಹಂ ತೇಷು ತೇ ಮಯಿ॥** ೧೨.

**ಭಾ. ಕಿಂ ವಿಶಿಷ್ಯಾಭಿಧೀಯತೇ? ಸಾತ್ವಿಕಾ ರಾಜಸಾ ಸ್ತಾಮಸಾಶ್ಚ ಜಗತಿ ದೇಹತ್ವೇನೇ ನ್ದ್ರಿಯತ್ವೇನ ಭೋಗ್ಯತ್ವೇನ ತತ್ತದ್ಧೇತುತ್ವೇನ ಚಾವಸ್ಥಿತಾ ಯೇ ಭಾವಾಃ, ತಾನ್**

ಸರ್ವಕ್ಕೂ ಆಧಾರನು ತಾನು; ತನಗೆ ಯಾವ ಆಧಾರವೂ ಬೇಕಿಲ್ಲವೆಂದು ಉಪದೇಶಿಸುತ್ತಾರೆ. **ಯೇ ಚೈವ ಸಾತ್ವಿಕಾಭಾವಾಃ**-ಲೋಕದಲ್ಲಿ ಸತ್ವಪ್ರಾಚುರ್ಯದಿಂದ ಸಾತ್ವಿಕಗಳಾಗಿ ತೋರುವುವು ಯಾವುವೋ, ಹಾಗೆಯೇ, **ಯೇ ರಾಜಸಾಃ**-ಯಾವುವು ರಜೋಗುಣಪ್ರಾಚುರ್ಯದಿಂದ ರಾಜಸಗಳಾಗಿ ತೋರುವುವೋ ಹಾಗೆಯೇ, **ಯೇ ತಾಮಸಾಃ**-ಯಾವುವು ತಮೋಗುಣ ಪ್ರಾಚುರ್ಯದಿಂದ ತಾಮಸಗಳಾಗಿ ತೋರುವುವೊ, **ತಾನ್**-ಅವೆಲ್ಲವನ್ನು, **ಮತ್ತ ಯೇವೇತಿ ವಿದ್ಧಿ**-ನನ್ನಿಂದಲೇ ಉಂಟಾದವೆಂದು ತಿಳಿ. ಸಾತ್ವಿಕ ಭಾವಗಳೇನೋ ತನ್ನಿಂದ ಉಂಟಾದವೆಂದು ತಿಳಿಯಬಹುದು. ನಿಕೃಷ್ಟಗಳಾದ ರಾಜಸ ತಾಮಸಭಾವಗಳು ಹೇಗೆ ಆತನಿಂದುಂಟಾದವೆಂದು ಹೇಳಲಾಗುತ್ತದೆ? ಎಂದರೆ ಭೋಕ್ತೃಗಳ ಹಿಂದಿನ ಕರ್ಮಾನುಗುಣವಾಗಿ ಈ ಭಾವಗಳು ಉಂಟಾಗುತ್ತವೆ. ಅಂತಹ ಫಲಗಳನ್ನು ಈ ಭೋಕ್ತೃಗಳು ಅನುಭವಿಸುವದಕ್ಕಾಗಿ, ಭೋಗ್ಯವಸ್ತುವಾದ ಅಚೇತನ ವಸ್ತುವಿನಲ್ಲೂ ರಾಜಸ ತಾಮಸಭಾವಗಳೂ ಕೂಡ ಉಂಟೇ ಉಂಟು. ಹೀಗೆ ಕರ್ಮಾನಗುಣಾನುಭವಕ್ಕಾಗಿ ಸಾತ್ವಿಕ ರಾಜಸತಾಮಸವಸ್ತುಗಳೆಲ್ಲಾ ತನ್ನಿಂದಲೇ ಉಂಟಾದವೆಂದೂ, ಅವುಗಳ ಸತ್ತಾಸ್ಥಿತಿ ವ್ಯಾಪಾರಗಳೆಲ್ಲಾ ತನ್ನ ಅಧೀನವಾದವೆಂದೂ ಹೇಳಿ, ತಮ್ಮಿಂದ ಅವುಗಳಿಗುಂಟಾಗುವ ಪ್ರಯೋಜನವನ್ನು ತಿಳಿಸಿದರು. ಅವುಗಳಿಂದ ತಮಗೇನಾದರೂ ಫಲವುಂಟೋ? ಶರೀರಾತ್ಮಭಾವದಲ್ಲಿ, ನಮ್ಮ ಆತ್ಮಾವಿಗೆ ಶರೀರದಿಂದ ಪ್ರಯೋಜನವೂ, ಶರೀರಕ್ಕೆ ಆತ್ಮಾವಿನಿಂದ ಪ್ರಯೋಜನವೂ, ಹೀಗೆ ಪರಸ್ಪರವುಂಟು; ಹೇಗೆಂದರೆ ಆತ್ಮಾವಿಗೆ ಶರೀರಮೂಲಕವಾಗಿ ಸರ್ವಾನುಭವವು ಮರಣವುಂಟಾಗುವವರೆಗೂ ಉಂಟು, ಹಾಗೆಯೇ ಆತ್ಮಾವಿನ ಮೂಲಕವಾಗಿ ಶರೀರದ ಎಲ್ಲಾ ಅವಯವಗಳೂ ತಮ್ಮ ತಮ್ಮ ಕೆಲಸವನ್ನು ಸರಿಯಾಗಿ ನಡೆಸುತ್ತವೆ, ಶರೀರವು ಕೊಳೆಯುವದಿದಿಲ್ಲವು. ಹೀಗೆ ಏನಾದರೂ ಪರಸ್ಪರೋಪಕಾರವುಂಟೋ ಎಂದರೆ, ಪರಮಾತ್ಮನಿಂದೇನೋ ಸರ್ವೋಪಕಾರವು ಈ ಚಿದಚಿತ್ತುಗಳಿಗೇನೋ ಉಂಟೆಂಬುದು ಸಿದ್ಧವು. ಅವುಗಳಿಂದ ತನಗೆ ಯಾವ ವಿಧವಾದ ಉಪಕಾರವೂ ಇಲ್ಲವು. ಅವುಗಳೊಂದಿಗೆ ಇರುವದರಿಂದ ದೋಷಗಂಧವಾಗಲಿ, ವಿಕಾರವಾಗಲಿ ಇಲ್ಲವು. ಉಪಕಾರವು ಯಾವುದೂ ಇಲ್ಲವೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ—**ನತ್ವಹಂ ತೇಷು**-ಅವುಗಳಲ್ಲಿ ನಾನಿಲ್ಲವು, ಎಂದರೆ ನನ್ನ ಸತ್ತಾ ಸ್ಥಿತಿ ನಿಯಮನಕ್ಕೆ ಕಾರಣಭೂತರು ಯಾರೂ ಇಲ್ಲವು; ಅವರುಗಳಿಂದ ನನಗೆ ಯಾವ ವಿಧವಾದ ಫಲವೂ ಇಲ್ಲವು. **ತೇ**-ಅವರುಗಳಾದರೋ, **ಮಯಿ**-ನನ್ನಲ್ಲಿರುತ್ತಾರೆ ಎಂದರೆ ನನ್ನಿಂದಲೇ ಸರ್ವವನ್ನೂ ಹೊಂದುತ್ತಾರೆ. ಸತ್ತಾಸ್ಥಿತಿನಿಯಮನ ಮೊದಲಾದ ಸರ್ವವಿಧವಾದ ಉಪಕಾರಗಳನ್ನೂ ಅವರು ನನ್ನಿಂದಲೇ ಹೊಂದುತ್ತಾರೆ.॥೧೨॥

**ಭಾಷ್ಯಾರ್ಥವು:—**ಹಿಂದೆ **"ರಸೋಹಮಪ್ಸು"** ಇತ್ಯಾದಿಗಳಿಂದ ಏನು ಹೇಳಿದಂತಾಯಿತು ತಾತ್ಪರ್ಯವೇನು ಎಂದು ಪ್ರಶ್ನಿಸಿ, ಅದಕ್ಕೆ ಉತ್ತರವನ್ನು ದಯಪಾಲಿಸುತ್ತಾರೆ—**ಕಿಂ ವಿಶಿಷ್ಯಾಭಿಧೀಯತೇ**-ಏನು ವಿಶೇಷಿಸಿ ಇಲ್ಲಿ ಹೇಳಲ್ಪಟ್ಟಿತು ಎಂದರೆ, ಹಿಂದಿನ ನಾಲ್ಕು ಶ್ಲೋಕಗಳಲ್ಲೂ ಸಾಮಾನಾಧಿಕರಣ್ಯದಿಂದ ಹೇಳಲ್ಪಟ್ಟದುದರ ತಾತ್ಪರ್ಯವೇನೆಂದರೆ ಎಂಬ ಭಾವವು. ಸಾತ್ವಿಕ ರಾಜಸ ತಾಮಸರೂಪಗಳಾಗಿ ಜಗತ್ತಿನಲ್ಲಿ, **ದೇಹತ್ವೇನ**-ದೇಹಭಾವದಿಂದಲೂ, **ಇಂದ್ರಿಯ**

**ಭಾ. ಸರ್ವಾನ್ ಮತ್ತ ಏವೋತ್ಪನ್ನಾನ್ ವಿದ್ಧಿ. ತೇ ಮಚ್ಛರೀರತಯಾ ಮಯ್ಯೇವಾವಸ್ಥಿತಾ ಇತಿ ಚ. ನತ್ವಹಂತೇಷು-ನಾಹಂ ಕದಾಚಿದಪಿ ತದಾಯತ್ತಸ್ಥಿತಿಃ; ಅನ್ಯತ್ರಾತ್ಮಾಯತ್ತಸ್ಥಿತಿತ್ವೇಽಪಿ ಶರೀರಸ್ಯ, ಶರೀರೇಣಾತ್ಮನ ಸ್ಸ್ಥಿತಾವಪ್ಯುಪಕಾರೋ ವಿದ್ಯತೇ; ಮಮತು ತೈರ್ನ ಕಶ್ಚಿತ್ತಥಾವಿಧ ಉಪಕಾರಃ; ಕೇವಲ ಲೀಲೈವ ಪ್ರಯೋಜನ ಮಿತ್ಯರ್ಥಃ.** ||೧೨||

**ತ್ವೇನ**-ಇಂದ್ರಿಯರೂಪದಲ್ಲೂ, **ಭೋಗ್ಯತ್ವೇನ**-ಭೋಗ್ಯವೆಂಬ ಭಾವದಿಂದಲೂ, ಮತ್ತು **ತತ್ತದ್ಧೇತುತ್ವೇನಚ**-ಆ ಆ ವಸ್ತುಗಳಿಗೆ ಕಾರಣಗಳೆಂಬ ಭಾವದಿಂದಲೂ, **ಅವಸ್ಥಿತಾಃ**-ಇರುವ **ಯೇಭಾವಾಃ**-ಯಾವ ವಸ್ತುಗಳುಂಟೋ, **ತಾನ್ ಸರ್ವಾನ್**-ಅವೆಲ್ಲವನ್ನೂ, **ಮತ್ತ ಏವ ಉತ್ಪನ್ನಾನ್**-ನನ್ನಿಂದಲೇ ಉಂಟಾದವುಗಳನ್ನಾಗಿ, **ವಿದ್ಧಿ**-ತಿಳಿ, ಜಗತ್ತಿನಲ್ಲಿರುವ ಚೇತನಾಚೇತನ ಸಮಸ್ತ ವಸ್ತುಗಳೂ ಯಾವ ಯಾವ ರೂಪದಲ್ಲಿದ್ದು ಈ ಭೋಕ್ತಾವಿಗೆ ಉಪಕಾರಕಗಳಾಗ ಬಹುದು ಎಂದರೆ, **ದೇವತ್ವೇನ**-ವೆಂದಾರಂಭಿಸಿ, **ಅವಸ್ಥಿತಾ ಯೇ ಭಾವಾಃ** ಎಂದು ಮುಗಿಸಿ, ತಿಳಿಸಿರುತ್ತಾರೆ. ದೇಹರೂಪದಲ್ಲೂ, ಇಂದ್ರಿಯಗಳ ರೂಪದಲ್ಲೂ, ಪೂರ್ವ ಕರ್ಮಾನುಗುಣೋಪಭೋಗಕ್ಕೆ ಬೇಕಾದ ಭೋಗ್ಯವಸ್ತುರೂಪದಲ್ಲೂ ಅವುಗಳ ಉತ್ಪತ್ತಿಗೆ ಕಾರಣಭೂತ ದ್ರವ್ಯಗಳಲ್ಲೂ, ಈ ಸಾತ್ವಿಕ ರಾಜಸ ತಾಮಸವಸ್ತುಗಳಿರುತ್ತವೆಂದು ತಿಳಿಸಿದರು. ಇವುಗಳಿಗೆಲ್ಲಾ ತಾನೇ ಕಾರಣನೆಂದು **ಮತ್ತ ಏವ** ಎಂಬುದರಿಂದ ಹೇಳಲ್ಪಟ್ಟಿತು. ಮತ್ತು **"ಪ್ರಹರ್ಷಃ ಪ್ರೀತಿರಾನಂದಃ ಸುಖಂಸಂಶಾನ್ತಿ ಚಿತ್ತತಾ"** ಎಂಬಲ್ಲಿ ತೋರುವ ಸಾತ್ವಿಕ ಭಾವಗಳಿಗೂ, **"ಅತುಷ್ಟಿಃ ಪರಿತಾಪಶ್ಚ ಶ್ಕೋಧೋಮೋಹಸ್ತಥಾಽಕ್ಷಮಾ"** ಇತ್ಯಾದಿ ರಾಜಸಭಾವಗಳಿಗೂ, **"ಅವಿವೇಕ ಸ್ತಥಾ ಮೋಹಃ ಪ್ರಮಾದಃ ಸ್ವಪ್ನ ತಂದ್ರಿತಾ"** ಇತ್ಯಾದಿ ತಾಮಸ ಭಾವಗಳಿಗೂ, ನಾನೇ ಕಾರಣನೆಂಬ ಭಾವವೂ ತೋರಿಬರುತ್ತದೆ. **ಮತ್ತ ಏವ** ಎಂಬುದರಿಂದ ತೋರುವರ್ಥವು ಇಷ್ಟೇ ಅಲ್ಲವು, ಅವಧಾರಣದಿಂದ ನಿಮಿತ್ತೋಪಾದಾನಾದಿ ಸರ್ವವಿಧ ಕಾರಣನೂ ತಾನೇ ಎಂಬುದೂ ಸ್ಪಷ್ಟವು. ಜೀವಾತ್ಮನ ಕರ್ಮವೂ ನಿಮಿತ್ತಕಾರಣವಲ್ಲವೋ, ಎಂದರೆ, ಅದಕ್ಕನುಸಾರವಾಗಿ ಸ್ವಾಮಿ ಸಙ್ಕಲ್ಪಕ್ಕೆ ಅಧೀನವಾದುದರಿಂದ ಶಙ್ಕಾವಿಗೆ ಕಾರಣವಿಲ್ಲವು. ಇಷ್ಟು ಮಾತ್ರವೇ ಅಲ್ಲದೆ **ಮತ್ತ ಏವ** ಎಂಬುದರಿಂದ ತೋರಿಬರುವ ಅರ್ಥವು ಇನ್ನೂ ಉಂಟೆಂದು ತಿಳಿಸುತ್ತಾರೆ—**ಮಚ್ಛರೀರತಯಾ ಮಯ್ಯೇವಾವಸ್ಥಿತಾ ಇತಿ ಚ ತಾನ್ ವಿದ್ಧಿ**-ಆ ಸಾತ್ವಿಕಾದಿ ಸಮಸ್ತಗಳೂ ನನಗೆ ಶರೀರವಾಗಿರುವದರಿಂದ ಅಪೃಥಕ್ಸಿದ್ಧಳಾಗಿ ನನ್ನಲ್ಲೇ ಇರುವಂತವೆಂದೂ ಸಹ ತಿಳಿ. ಈ ಅರ್ಥವು ಮೂಲದಲ್ಲಿಲ್ಲದುದು ಹೇಗೆ ಬಂತೆಂದರೆ, **ರಸೋಹಮಪ್ಸು** ಎಂದು ಪ್ರಾರಂಭಿಸಿ ಸಾತ್ವಿಕ ರಾಜಸಗಳೆಂದು ಮುಗಿಸಿರುವದರಿಂದ, ಈ ಸಾಮಾನಾಧಿಕರಣ್ಯಕ್ಕೆ ಶರೀರತಯಾ ಅಪೃಥಕ್ಸಿದ್ಧವಿಶೇಷಣವಾಗಿ ಅವನಲ್ಲೇ ಇರಬೇಕಾದುದು ಆವಶ್ಯಕವಾದುದರಿಂದ **ಮತ್ತ ಏವ** ಎಂಬುದರಿಂದ ಆರ್ಥವಾಗಿ ಈ ಅಭಿಪ್ರಾಯವು ತೋರಿಬರುತ್ತದೆಂಬ ತಾತ್ಪರ್ಯವು. ಇಲ್ಲಿ **ಮಚ್ಛರೀರತಯಾ ಮಯ್ಯೇವ ಅವಸ್ಥಿತಿಯೇ** ಈ ಸಾಮಾನಾಧಿಕರಣ್ಯಕ್ಕೆ ಕಾರಣವೆಂದು ಸ್ಪಷ್ಟವಾಗಿ ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಇತರ ಸಿದ್ಧಾಂತಿಗಳೂ ಸಾಮಾನಾಧಿಕರಣ್ಯೋಕ್ತಿಯನ್ನೂ ಶರೀರಾತ್ಮಭಾವದಿಂದ ಹೇಳದಿರುವದರಿಂದ ಸಾಮಾನಾಧಿಕರಣ್ಯದ ಸರ್ವಸಮಂಜಸವಾದ ಅಭಿಪ್ರಾಯವು ಇತರರಿಗೆ ವೇದ್ಯವಿಲ್ಲವೆಂದು ತಿಳಿಸುವದಕ್ಕಾಗಿಯೂ ಹಾಗೆ ವ್ಯಾಖ್ಯಾನವು. **ನತ್ವಹಂ ತೇಷು**-ಎಂದರೆ ನಾನು ಅವುಗಳಲ್ಲಿಲ್ಲವು ಎಂಬರ್ಥವೆಂದಿಗೂ ಅಲ್ಲವು, ಏಕೆಂದರೆ ಅಂತರ್ಯಾಮಿತ್ವೇನ ಅವುಗಳಲ್ಲಿ ವ್ಯಾಪ್ತಿಯುಂಟೇ ಉಂಟು ಎಂದು ಹಿಂದೆಯೇ ಹೇಳಲ್ಪಟ್ಟಿತು. ಆದುದರಿಂದ ಹಾಗೆ ಅರ್ಥವಲ್ಲವೆಂದು ತಿಳಿಸುವದಕ್ಕಾಗಿ ಹೇಳುತ್ತಾರೇನೆಂದರೆ-

**ನಾಹಂ ಕದಾಚಿದಪಿ ತದಾಯತ್ತಸ್ಥಿತಿಃ**-ನಾನು ಎಂದಿಗಾಗಲಿ ಅವುಗಳಿಗೆ ಅಧೀನವಾದ ಸ್ಥಿತಿಯುಳ್ಳವನಲ್ಲವು, ಇದನ್ನು ಹೇಳಬೇಕಾದ ಆವಶ್ಯಕತೆ ಏನೆಂದು ಕೇಳಬಹುದು, ಇದರ ತಾತ್ಪರ್ಯವನ್ನು ಮುಂದೆ ವ್ಯಕ್ತಪಡಿಸುತ್ತಾರೆ. **ಅನ್ಯತ್ರ**-ಬೇರೆ ಕಡೆಯಲ್ಲಾದರೋ ಎಂದರೆ ಜೀವಾತ್ಮರ ವಿಷಯದಲ್ಲಾದರೋ, **ಆತ್ಮಾಯತ್ತಸ್ಥಿತಿತ್ವೇಽಪಿ ಶರೀರಸ್ಯ**-ಯದ್ಯಪಿ ಆತ್ಮಾವಿಗೇನೇ ಅಧೀನವಾದ ಸ್ಥಿತಿಯನ್ನು ಶರೀರವು ಹೊಂದಿದ್ದರೂ ಕೂಡ, **ಶರೀರೇಣ**-ಶರೀರದಿಂದ, **ಆತ್ಮನ ಸ್ಥಿತೌ ಅಪಿ ಉಪಕಾರೋ ವಿದ್ಯತೇ**-ಆತ್ಮನಿಗೆ ಶರೀರದಲ್ಲಿ ಇರುವದರಲ್ಲಿ ಕೂಡ ಉಪಕಾರವುಂಟು. ದೇಹವು ಸರಿಯಾಗಿದ್ದರಲ್ಲವೇ ಆತ್ಮನು ಅದರಲ್ಲಿ ವಸಿಸುವನು, ಶರೀರವು ಭೇದಿಸಲ್ಪಟ್ಟರೆ ಆತ್ಮನು ನಿಲ್ಲಲಾರನು, ಆದುದರಿಂದ ಶರೀರದಿಂದ ಆತ್ಮನಿಗೆ ಉಪಕಾರವುಂಟು. ಇದಲ್ಲದೆ ಸರ್ವವಿಧ ಶ್ರೇಯಸ್ಸನ್ನು ಹೊಂದುವದಕ್ಕೆ ಆತ್ಮನಿಗೆ ಶರೀರವೇ ಕಾರಣವು. ಹೀಗೆ ಪರಸ್ಪರ ವಿಶೇಷೋಪಕಾರಣಗಳುಂಟು. ಪರಮಾತ್ಮನಾದ ತನಗಾದರೋ ಅಂತಹ ಉಪಕಾರವು ಯಾವುದು ಇಲ್ಲವೆಂಬ ಅಭಿಪ್ರಾಯವೆಂದು ತಿಳಿಸುತ್ತಾರೆ. **ಮಮತು**-ಪರಿಪೂರ್ಣಕಾಮನಾದ ನನಗಾದರೋ, **ತೈಃ**-ಈ ಮೇಲೆ ಹೇಳಿದ ಜಗತ್ತಿನ ಸಮಸ್ತ ವಸ್ತುಗಳಿಂದಲೂ, **ನಕಶ್ಚಿತ್ತಥಾವಿಧಿ ಉಪಕಾರಃ**-ಈಷದಪಿ ಅಂತಹ ಉಪಕಾರವು ಯಾವುದೂ ಇರುವದಿಲ್ಲವು. ಹಾಗಾದರೆ ಜಗತ್ತಿನ ಸೃಷ್ಟಿ ಸ್ಥಿತಿ ಲಯ ಅನುಪ್ರವೇಶ ರಕ್ಷಣಾದಿ ಈ ಪ್ರವೃತ್ತಿಗಳೆಲ್ಲಾ ನಿನಗೆ ಏಕೆ? **ಪ್ರಯೋಜನ ಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ**-ಒಂದು ಪ್ರಯೋಜನದ ಆಶೆಯಿಲ್ಲದೆ ಒಬ್ಬ ಅಲ್ಪಜ್ಞನೂ ಕೂಡ ಪ್ರವರ್ತಿಸುವದಿಲ್ಲವು. ಹೀಗಿರುವಾಗ ಸರ್ವಜ್ಞನಾದ ನೀನು ಏತಕ್ಕೆ ಪ್ರವರ್ತಿಸುತ್ತೀಯೋ? ಪ್ರಯೋಜನವೇನು? ಸೃಷ್ಟ್ಯಾದಿಗಳಲ್ಲಿ ಸ್ವಪ್ರಯೋಜನವಿರಬೇಕು. ಇಲ್ಲವೇ ಪರಪ್ರಯೋಜನವಿರಬೇಕು. ಪರಿಪೂರ್ಣಕಾಮನಾದುದರಿಂದ ಸ್ವಪ್ರಯೋಜನವಿಲ್ಲವೆಂದಾಯಿತು. ಪರಪ್ರಯೋಜನಕ್ಕಾಗಿ ಎಂದರೆ ಕರುಣಾಸಾಗರನು ಸೃಷ್ಟಿಸಿ ಬಂಧಕ್ಕೆ ಒಳಪಡಿಸಿ, ದುಃಖಕ್ಕೆ ಗುರಿಮಾಡಬಹುದೋ? ಆದುದರಿಂದ ಸೃಷ್ಟಿಗೆ ಕಾರಣವೇ ಇಲ್ಲವು; ಎಂದಾಕ್ಷೇಪವೆಂದರೆ ಜೀವಾತ್ಮರ ಕರ್ಮಾನುಗುಣ ಫಲಕೊಡುವ, **ಕೇವಲ ಲೀಲೈವ ಪ್ರಯೋಜನಮಿತ್ಯರ್ಥಃ**-ತಾನು ಪರಿಪೂರ್ಣಕಾಮನಾಗಿ ತನಗೆ ಬೇಕಾದುದು ಯಾವುದೂ ಇಲ್ಲದುದರಿಂದ ಕೇವಲ ಲೀಲೆ ಮಾತ್ರವೇ ತನಗೆ ಪ್ರಯೋಜನವೆಂಬ ಭಾವವು **"ಲೋಕವತ್ತು ಲೀಲಾಕೈವಲ್ಯಂ"** (೨.೧.೩೩) ಎಂಬ ಬ್ರಹ್ಮಸೂತ್ರವು ಲೋಕದಲ್ಲೂ ಪೂರ್ಣಕಾಮರಾದ ರಾಜಾದಿಗಳಿಗೆ ಲೀಲೆಯು ಹೇಗೆ ಯುಕ್ತವಾದುದೋ, ಹಾಗೆಯೇ ಪರಿಪೂರ್ಣಕಾಮನಾದ ಈ ರಾಜಾಧಿರಾಜನಿಗೂ, ಈ ಜಗತ್ತಿನ ಸರ್ವವಿಧ ವ್ಯಾಪಾರಗಳೂ ಲೀಲೆಯೇ ಎಂದು ಹೇಳುತ್ತದೆ. ಇತಿಹಾಸಪುರಾಣಾದಿಗಳೂ ಈ ಅರ್ಥವನ್ನೇ ಉಪಬ್ರಹ್ಮಣಮಾಡುತ್ತವೆ. ಹೇಗೆಂದರೆ:—

೧. **ಲೀಲಾಜಗತ್ಪತೇ ಸ್ತಸ್ಯ ಛಂದತಸ್ಸಂಪ್ರವರ್ತತೇ**-ಆ ಜಗತ್ತಿಗೆಲ್ಲಾ ಸ್ವಾಮಿಯಾದ ಸರ್ವೇಶ್ವರನ ಲೀಲೆಯು ತನ್ನ ಸಙ್ಕಲ್ಪದಿಂದಲೇ ಪ್ರವೃತ್ತಿಯನ್ನು ಹೊಂದುತ್ತದೆ.

೨. **ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ**-(ಭಾರತ ಸಭಾಪರ್ವ) ಷಾಡ್ಗುಣ್ಯಪರಿಪೂರ್ಣನಾದ ಸರ್ವೇಶ್ವರನು ಬಾಲನು ಹೇಗೆ ಆಟದ ಸಾಮಾನುಗಳಿಂದ ವಿಹರಿಸುತ್ತಾನೋ, ಹಾಗೆ ತನ್ನ ಸೃಷ್ಟಿಯಿಂದುಂಟಾದುದರ ಮೂಲಕ ಆನಂದಿಸುತ್ತಾನೆ.

೩. **ಕ್ರೀಡಾಹರೇರಿದಂ ಸರ್ವಂ**-(ಭಾರ. ಶಾಂತಿ. ೨೦೬.೫೮) ಇವೆಲ್ಲಾ ಶ್ರೀಹರಿಯ ಆಟವು.

೪. **ಕ್ರೀಡತೋ ಬಾಲಕಸ್ಯೇವ ಚೇಷ್ಟಾಂ ತಸ್ಯ ನಿಶಾಮಯ**-(ವಿ.ಪು. ೧.೨.೧೮.) ಬಾಲನಹಾಗೆ ಆಡುತ್ತಿರುವ ವಿಷ್ಣುವಿನ ವಿಚಿತ್ರ ಚೇಷ್ಟೆಯನ್ನಾಗಿ ತಿಳಿ.

**ಮೂ. ತ್ರಿಭಿ ರ್ಗುಣಮಯೈ ರ್ಭಾವೈ ರೇಭಿ ಸ್ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾ ಮೇಭ್ಯಃ ಪರಮವ್ಯಯಮ್ ॥ ೧೩.**

**೫. ಹರೇ ವಿಹರಸಿ ಕ್ರೀಡಾ ಕನ್ದುಕೈರಿವ ಜನ್ತುಭಿಃ**-ಓ ಶ್ರೀಹರಿಯೇ ಆಟದ ಚಂಡುಗಳೋಪಾದಿಯಲ್ಲಿ ಪ್ರಾಣಿಗಳೊಂದಿಗೆ ವಿಹರಿಸುತ್ತೀಯೆ (ವಿಷ್ಣುಧರ್ಮ) ಹೀಗೆ ಸರ್ವ ಜಗದ್ವ್ಯಾಪಾರಗಳು ಪರಮಾತ್ಮನಿಗೆ ಲೀಲೆ ಎಂಬುವಕ್ಕೆ ಇನ್ನೂ ಅನೇಕ ಪ್ರಮಾಣಗಳುಂಟು.॥೧೨॥

**ಮೂಲಕ್ಕೆ ಅರ್ಥವು:—** ಹಿಂದಿನ ಶ್ಲೋಕಗಳಿಂದ ಸರ್ವೇಶ್ವರನ ಸ್ವರೂಪಯಾಥಾತ್ಮ್ಯವು ಉಪದೇಶಿಸಲ್ಪಟ್ಟಿತು. ಮುಂದೆ ಈ ಅಧ್ಯಾಯದಲ್ಲಿನ ಎರಡನೆಯ ವಿಷಯವಾದ ಜೀವಾತ್ಮನು ಇಂತಹ ವಿಲಕ್ಷಣ ಸ್ವರೂಪನಾದ ಪರಮಾತ್ಮನ ಯಥಾವತ್ತಾದ ಜ್ಞಾನವನ್ನು ಏಕೆ ಹೊಂದುವುದಿಲ್ಲವೆಂಬುದು ಉಪದೇಶಿಸಲ್ಪಡುತ್ತದೆ. **ತ್ರಿಭಿಃ**-ಸಾತ್ವಿಕ ರಾಜಸ ತಾಮಸಗಳೆಂದು ಮೂರಾದ, **ಗುಣಮಯೈಃ**-ಗುಣಪ್ರಾಚುರ್ಯಗಳುಳ್ಳ, **ಏಭಿರ್ಭಾವೈಃ**-ಪರಿದೃಶ್ಯಗಳಾದ **ಈ** ವಸ್ತುಗಳಿಂದ, **ಮೋಹಿತಂ**-ಮೋಹಗೊಳಿಸಲ್ಪಟ್ಟುದಾಗಿ, **ಸರ್ವಮಿದಂಜಗತ್**-ಅಚಿತ್ತಿನೊಡ ಸೇರಿದ, ಸಮಸ್ತ ಚೇತನರೂಪವಾದ ಜಗತ್ತು, **ಏಭ್ಯಃ**-ಹೀಗೆ ತ್ರಿಗುಣ ಸಂಬಂಧವುಳ್ಳ ವಸ್ತುಗಳಿಗಿಂತಲೂ ಎಂದರೆ ಚೇತನಾಚೇತನವರ್ಗಕ್ಕಿಂತಲೂ, **ಪರಂ**-ಸರ್ವೋತ್ಕೃಷ್ಟನಾಗಿ ವಿಲಕ್ಷಣನಾಗಿರುವ, ಮತ್ತು **ಅವ್ಯಯಂ**-ಸ್ವರೂಪ ಸ್ವಭಾವ ಪರಿಣಾಮಗಳು ಯಾವದೂ ಇಲ್ಲದೆ ಸದಾ ಏಕರೂಪನಾಗಿರುವ, **ಮಾಂ**-ಹಿಂದಿನ ಶ್ಲೋಕಗಳಲ್ಲಿ ಉಪಪಾದಿಸಿದಂತೆ ಮಾಹಾತ್ಮ್ಯಯುಳ್ಳ ನನ್ನನ್ನು, **ನಾಭಿಜಾನಾತಿ**-ಯಥಾವತ್ತಾಗಿ ಈ ಲೋಕವು ತಿಳಿಯಲಾರದು. ಈ ಜಗತ್ತು ಎರಡು ವಿಧವಾದ ತನ್ನ ಶರೀರಗಳಾದ ಪ್ರಕೃತಿಗಳಿಂದುಂಟಾದುದು. ಇವು ತನಗೆ ಅಪೃಥಕ್ಸಿದ್ಧ ವಿಶೇಷಣಗಳಾಗಿ, ತಾನು ಅವುಗಳಿಗೆ ಆತ್ಮನಾಗಿ, ಶೇಷಿಯಾಗಿ, ನಿಯಾಮಕನಾಗಿ, ಇದ್ದರೂ ಅವುಗಳ ಯಾವ ದೋಷಗಳಿಂದಲೂ ಲಿಪ್ತನಾಗದೆ ವಿಲಕ್ಷಣನಾಗಿ ಇರುವವನು; ಮತ್ತು ಸರ್ವೇಶ್ವರನಾದ ತಾನು ಎಲ್ಲಾದಕ್ಕೂ ಸರ್ವವಿಧಕಾರಣನು, ತನ್ನಿಂದಲೇ ಎಲ್ಲಾದಕ್ಕೂ ಸೃಷ್ಟಿ ಸ್ವರೂಪ, ಸ್ಥಿತಿ, ಲಯಾದಿಗಳು, ಪ್ರಾಪ್ತವಾಗುತ್ತವೆ; ಹೀಗೆ ತಾನು ವಿಲಕ್ಷಣನೆಂಬುವದನ್ನು ಈ ಅಚಿತ್ಸಂಬಂಧವಿರುವ ಚೇತನ ವರ್ಗವು, ಈ ಅಚಿತ್ತಿನ ಭೋಗ್ಯತೆಯಿಂದ ಕರ್ಮಾನುಗುಣ ಮೋಹಿತರಾಗಿ ತನ್ನ ಮಾಹಾತ್ಮ್ಯೆಯನ್ನು ಅರಿಯಲಾರರೆಂದು ಹೇಳಲ್ಪಟ್ಟಿತು. ಈ ಶ್ಲೋಕದಿಂದ ಮುಖ್ಯವಾಗಿ ತಿಳಿಯತಕ್ಕ ವಿಷಯವೇನೆಂದರೆ, ಜ್ಞಾನಸ್ವರೂಪನಾಗಿಯೂ ಜ್ಞಾನಗುಣಕನಾಗಿ ಇರುವ ಈ ಚೇತನನಿಗೆ ಶರೀರ ಪ್ರಾಪ್ತಿಯಿಂದ ಜ್ಞಾನವು ತಿರೋಹಿತವಾಗುತ್ತದೆಂಬುದು. ವಜ್ರವು ಕೆಸರಿನಲ್ಲಿ ಬಿದ್ದರೆ ಹೇಗೆ ಮಾಲಿನ್ಯವನ್ನು ಹೊಂದಿ ಪ್ರಕಾಶಶೂನ್ಯವಾಗುತ್ತದೋ, ಹಾಗೆ ಈತನ ಜ್ಞಾನವು ತಿರೋಹಿತವಾಗುತ್ತದೆ ಎಂಬ ಭಾವವು ಮುಕ್ತಿಯನ್ನು ಹೊಂದುವಾಗ ಈ ನಿಕೃಷ್ಟ ಪ್ರಕೃತಿ ಸಂಬಂಧವು ತೊಲಗುವುದರಿಂದ ಈ ಜ್ಞಾನ ತಿರೋಹಿತತ್ವವೂ ತೊಲಗುತ್ತದೆ. ಆ ಅವಸ್ಥೆಯಲ್ಲಿ ತನ್ನ ಸ್ವೈಜಸ್ವರೂಪದಿಂದ ಜೀವಾತ್ಮನು ಬೆಳಗುವನು ಎಂದು ಶ್ರುತಿಯು **"ಸ್ವೇನರೂಪೇಣಾಭಿನಿಷ್ಪದ್ಯತೇ"** (ಛಾಂ. ೮.೧೨.೨) ಎಂಬಲ್ಲಿ ಹೇಳುತ್ತದೆ. ಇದನ್ನನುಸರಿಸಿ ಬ್ರಹ್ಮಸೂತ್ರವೂ **"ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್"** ಎಂಬಲ್ಲಿಯೂ ಉಪಪಾದಿತವು. ಅಪರಿಚ್ಛಿನ್ನ ಜ್ಞಾನರೂಪನಾದ ಜೀವಾತ್ಮನಿಗೆ ಕರ್ಮಮೂಲಕ ಪ್ರಾಪ್ತವಾಗಿದ್ದ ಪ್ರಕೃತಿ ಸಂಬಂಧದಿಂದ ಉಂಟಾದ ಜ್ಞಾನತಿರೋಹಿತತ್ವವು ಕಳೆದು ಹೋಗುವದರಿಂದ ತನ್ನ ಸ್ವೈಜವಾದ ಸರ್ವಜ್ಞತ್ವಾದಿಗುಣಾಷ್ಟಕಗಳು ಆಗ ಪ್ರಕಾಶಿಸುತ್ತವೆ ಎಂಬ ಭಾವವು. ಒಂದು ವೇಳೆ ತಾನು ವಿಲಕ್ಷಣನೆಂಬ ಒಳ್ಳೇ ಜ್ಞಾನವಿದ್ದರೂ, ಐಹಿಕವಸ್ತುಗಳ ಭೋಗ್ಯತೆಯಿಂದ ಪರವಶನಾಗಿ, ಮೋಹವನ್ನು ಹೊಂದುತ್ತಾನೆಂಬ ಭಾವವೂ ಸಹ ತೋರಿಬರುತ್ತದೆ.

**ಭಾ. ತದೇವಂ ಚೇತನಾ ಚೇತನಾತ್ಮಕಂ ಕೃತ್ಸ್ನಂ ಜಗನ್ಮದೀಯಂ, ಕಾಲೇ ಕಾಲೇ ಮತ್ತ ಏವೋತ್ಪದ್ಯತೇ, ಮಯಿಚಪ್ರಲೀಯತೇ, ಮಯ್ಯೇವಾವಸ್ಥಿತಂ ಮಚ್ಛರೀರ ಭೂತಂ ಮದಾತ್ಮಕಂ ಚೇತ್ಯಹಮೇವ ಕಾರಣಾವಸ್ಥಾಯಾಂ ಕಾರ್ಯಾವಸ್ಥಾಯಾಂ ಚ ಸರ್ವಶರೀರತಯಾ ಸರ್ವಪ್ರಕಾರೋಽವಸ್ಥಿತಃ। ಅತಃ ಕಾರಣತ್ವೇನ ಶೇಷಿತ್ವೇನ ಚ ಜ್ಞಾನಾದ್ಯಸಂಖ್ಯೇಯ ಕಲ್ಯಾಣಗುಣಗಣೈಶ್ಚಾಹ ಮೇವ ಸರ್ವೈಃಪ್ರಕಾರೈಃ ಪರ ತರೋ, ಮತ್ತೋಽನ್ಯತ್ಯೇನಾಪಿ ಕಲ್ಯಾಣಗುಣಗಣೇನ ಪರತರಂ ನವಿದ್ಯತೇ। ಏವಂ**

**ಭಾಷ್ಯಾರ್ಥವು:—**ಮೊದಲು ಮೂಲದಲ್ಲಿರುವ **ಮಾಂ** ಎಂಬ ಪದದಲ್ಲಿ ತೋರಿಬರುವ ಪೂರ್ವಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟ ತನ್ನ ಮಾಹಾತ್ಮ್ಯೆಯನ್ನೂ ವೈಲಕ್ಷಣ್ಯವನ್ನೂ ಅನು ವಾದಮಾಡಿ ಹೇಳುತ್ತಾರೆ. **ಏವಂ**-ಮೇಲೆ ಉಪದೇಶಿಸಲ್ಪಟ್ಟ ರೀತಿಯಲ್ಲಿ, **ಚೇತನಾಚೇತ ನಾತ್ಮಕಂ**-ಚೇತನಾಚೇತನರೂಪವಾದ, **ಮದೀಯಂ**-ನನ್ನ ಶರೀರವಾಗಿ, ನನ್ನ ಸ್ವತ್ತಾಗಿ, ಆದುದರಿಂದ ನನಗೆ ಶೇಷಭೂತವಾಗಿರುವ, **ಕೃತ್ಸ್ನಂ ಜಗತ್**-ಸಮಸ್ತ ಜಗತ್ತೂ, **ಕಾಲೇ ಕಾಲೇ**-ನನಗೆ ಉಚಿತವೆಂದು ತೋರಿದ ಆ ಆ ಕಾಲಗಳಲ್ಲಿ, **ಮತ್ತ ಏವೋತ್ಪದ್ಯತೇ**-ಸರ್ವ ಕಾರಣಭೂತನಾದ ನನ್ನಿಂದಲೇ ಉತ್ಪತ್ತಿಯನ್ನು ಹೊಂದುತ್ತದೆ. **ಮಯಿ ಚ ಪ್ರಲೀಯತೇ**-ನನ್ನಲ್ಲೇ ಪ್ರಳಯದಲ್ಲಿ ಸಂಶ್ಲೇಷೆಯನ್ನು ಸೂಕ್ಷ್ಮರೂಪದಲ್ಲಿ ಹೊಂದುತ್ತದೆ, **ಮಯ್ಯೇವಾವಸ್ಥಿ ತಂ**-ಹೀಗೆ ನನ್ನಲ್ಲೇ ಇರುವ ಎಂದರೆ ನನಗೆ ಅಧೀನವಾದ, **ಮಚ್ಛರೀರಭೂತಂ**-ನನಗೆ ಶರೀರ ರೂಪವಾಗಿ, **ಮದಾತ್ಮಕಂ ಚ**-ನನ್ನನ್ನೇ ಆತ್ಮಾವಾಗಿವುಳ್ಳದು, **ಅಹಮೇವ**-ನಾನೇ ಕಾರಣಾ ವಸ್ಥೆಯಲ್ಲೂ ಕಾರ್ಯಾವಸ್ಥೆಯಲ್ಲೂಸಹ, **ಸರ್ವ ಶರೀರತಯಾ**-ಈ ಚಿದಚಿತ್ತೆಲ್ಲಾ ಶರೀರವಾಗಿ ರುವದರಿಂದ, **ಸರ್ವಪ್ರಕಾರೋಽವಸ್ಥಿತಃ**-ಸಮಸ್ತ ವಿಶೇಷಣ ವಿಶಿಷ್ಟನಾಗಿ ಇರುವೆನು. ಇಲ್ಲಿ ಒಂದು ಕಲ್ಪದಲ್ಲಿ ಒಬ್ಬ ಈಶ್ವರನು ಇನ್ನೊಂದು ಕಲ್ಪದಲ್ಲಿ ಇನ್ನೊಬ್ಬ ಈಶ್ವರನು, ರಿಪಬ್ಲಿಕ್ಕಿನ ಪ್ರೆಸಿಡೆಂಟುಗಳ ಹಾಗೆ, ಉಂಟೆಂಬ ಇತ್ಯಾದಿ ವಾದನಿರಸನಕ್ಕಾಗಿಯೂ ಪ್ರತಿಕಲ್ಪದಲ್ಲೂ ತಾನೇ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣನೆಂದೂ, ಈ ಉತ್ಪತ್ತಿ ಸ್ಥಿತಿಲಯಾದಿಗಳು ಬೇಗ ಬೇಗ ನಡೆ ಯದೆ ಸರ್ವೇಶ್ವರನ ಸಂಙ್ಕಲ್ಪಾನುಸಾರ ಒಂದಾದ ನಂತರ ಇನ್ನೊಂದು ಬಹು ಕಾಲಕ್ಕೆ ಉಂಟಾ ಗುತ್ತದೆಂದೂ ಸೂಚಿಸುವದಕ್ಕಾಗಿ ಕಾಲೇ ಕಾಲೇ ಎಂಬ ಪ್ರಯೋಗವು. **ಅತಃ**-ಆ ಕಾರಣ ದಿಂದ, **ಕಾರಣತ್ವೇನ ಶೇಷಿತ್ವೇನ ಚ**-ಕಾರಣನಾಗಿಯೂ ಶೇಷಿಯಾಗಿಯೂ ಇರುವದರಿಂದ **ಅನಾದಿಯಾದ, ಅಸಂಖ್ಯೇಯಗಳಾದ, ಕಲ್ಯಾಣ·ಗುಣಗಳಿಂದಲೂ ಸಹ, ಅಹಮೇವ**-ನಾನೇ, **ಸರ್ವೈಃ ಪ್ರಕಾರೈಃ**-ಈ ನನ್ನ ಸ್ವತ್ತಾದ ಸಮಸ್ತ ಚಿದಚಿದ್ರೂಪ ವಿಶೇಷಣಗಳಿಗಿಂತಲೂ, **ಪರತರಃ**-ಉತ್ಕೃಷ್ಟನಾದವನು, ಮೂಲದಲ್ಲಿರುವ, **ತ್ರಿಭಿಃ ಗುಣಮಯೈಃ ಏಭಿಃ** ಎಂಬ ಮೂರು ಪದಗಳಿಂದ **ತೋರಿಬರುವ** ದುಃಖಮಿಶ್ರತ್ವವೂ, ನಶ್ವರತ್ವವೂ ಇತ್ಯಾದಿ ದೋಷಗಳು ತನಗಿಲ್ಲ **ವೆಂಬ ಭಾವವೂ ತೋರಿಬರುತ್ತವೆ**, ಅದು ಹೇಗೆಂದರೆ **ತ್ರಿಭಿರ್ಗುಣಮಯೈಃ** ಎಂಬುವರಿಂದ ರಾಜಸ **ತಾಮಸಗಳಿಗೆ** ಆಕರವೆಂದು ತೋರಿಬರುವದರಿಂದ ದುಃಖಮಿಶ್ರತ್ವವೂ ಅದರಿಂದಲೇ **ಮೋಹಿತಂ** ಎಂಬುದರಿಂದ ಮೋಹವೂ ಕೂಡ ಉಟಾಗುತ್ತದೆಂಬುದು ವ್ಯಕ್ತವು. ಇದು ಕಾರ್ಯಾವಸ್ಥೆಯನ್ನು ಹೊಂದಿರುವದು ಎಂಬುದರಿಂದ ಅನಿತ್ಯತ್ವವೂ, ಈ ಸುಖ ದುಃಖಾದಿ ಅನುಭವಗಳೆಲ್ಲಾ ಕಾರ್ಯಗಳಾದ ಇಂದ್ರಿಯಗಳ ಮೂಲಕವಾದುದರಿಂದ ಪರಿಚ್ಛಿನ್ನತ್ವವೂ, ಕ್ಷುದ್ರತ್ವವೂ, ವ್ಯಕ್ತವೆಂಬ ಭಾವವು. ಇನ್ನೂ ಹೇಗೆ ಪರತರನು ಎಂಬುದನ್ನು ಅನುವಾದ ಮಾಡಿ ಹೇಳುತ್ತಾರೆ. ಸರ್ವಕಾರಣನೂ ಆಗಿ, ಸರ್ವಶೇಷಿಯೂ ಆಗಿ, ಜ್ಞಾನಾದಿ ಸಮಸ್ತ ಕಲ್ಯಾಣ ಗುಣಗಳಿಗೂ ಆಕರನಾಗಿ, ಇರುವದರಿಂದಲೂ ತಾನು ಸರ್ವಶ್ರೇಷ್ಠನು ; ಇದು ಎಲ್ಲಿ

**ಭಾ. ಭೂತಂ ಮಾಂ, ತ್ರಿಭ್ಯ ಸ್ಸಾತ್ವಿಕ ರಾಜಸತಾಮಸಗುಣಮಯೇಭ್ಯೋ ಭಾವೇಭ್ಯಃ ಪರಂ-ಮದಸಾಧಾರಣೈಃ ಕಲ್ಯಾಣಗುಣಗಣೈಃ ತತ್ತದ್ಭೋಗ್ಯತಾಪ್ರಕಾರೈಶ್ಚ ಪರಂ-ಉತ್ಕೃಷ್ಟತಮಂ, ಅವ್ಯಯಂ-ಸದೈಕರೂಪಮಪಿ, ತ್ರೈರೇವ ತ್ರಿಭಿರ್ಗುಣಮಯೈ ರ್ನಿಹೀನತರೈಃ ಕ್ಷಣಧ್ವಂಸಿಭಿಃ ಪೂರ್ವಕರ್ಮಾನುಗುಣದೇಹೇಂದ್ರಿಯ ಭೋಗ್ಯ ತ್ವೇನಾವಸ್ಥಿತೈಃ ಪದಾರ್ಥೈರ್ಮೋಹಿತಂ ದೇವತಿರ್ಯಙ್ಮನುಷ್ಯಸ್ಥಾವರಾತ್ಮನಾವಸ್ಥಿತ ಮಿದಂ ಜಗನ್ನಾಭಿಜಾನಾತಿ ||೧೩||**

ಹೇಳಲ್ಪಟ್ಟಿದೆ ಎಂದಾಕ್ಷೇಪಿಸಿದರೆ, **ಮತ್ತಃ ಪರತರಂ ನಾಸ್ತಿ** ಎಂಬಲ್ಲಿ ಎಲ್ಲಾ ವಿಧದಲ್ಲೂ ಉತ್ಕೃಷ್ಟನಾಗಿಯೇ ಇರಬೇಕು ಎಂದಾದನಂತರ ಸ್ವರೂಪ, ರೂಪ, ಗುಣ, ವಿಭವ, ಐಶ್ವರ್ಯಾದಿ ಸಮಸ್ತಗಳಲ್ಲೂ ಪರತರನೇ ಆಗಿರಬೇಕೆಂಬುದು ಸ್ಫುಟವು, **ಏವಂಭೂತಂಮಾಂ**-ಹೀಗಲ್ಲವೇ ಹಿಂದೆ ತನ್ನ ಯಥಾತ್ಮ್ಯಸ್ವರೂಪವನ್ನು ಉಪದೇಶಿಸಿದುದು. ಈ ಪ್ರಾಣಿವರ್ಗಕ್ಕಿಂತ **ವಿಲಕ್ಷಣ** ನಾಗಿ, ಸಮಸ್ತ ದುಃಖ ಪ್ರತ್ಯನೀಕಸ್ವರೂಪವುಳ್ಳವನೆಂದೂ ನಿರತಿಶಯಾನಂದ ಸ್ವರೂಪನೆಂದೂ, ಸದಾ ಏಕರೂಪನಾಗಿ ನಿತ್ಯನೆಂದೂ ಹೇಳಲ್ಪಟ್ಟಿತೆಂಬ ಭಾವವು. ಪ್ರಾಣಿವರ್ಗಕ್ಕೂ ಕರಣ ಕಳೇಬರಾದಿಪ್ರದಾನಮೂಲಕ ಲೋಕ ಪಿತಾವಾದುದರಿಂದ ಹಿತೈಷಿಯಾಗಿಯೂ, ತನಗೆ ಶೇಷ ಭೂತರಾದವರ ಉಜ್ಜೀವನವನ್ನೇ ತನಗೆ ಪರಮ ಲಾಭವಾಗಿ ಎಣಿಸುವನಾಗಿಯೂ, ಸರ್ವಜ್ಞ ನಾಗಿ ಸರ್ವಶಕ್ತಿಯುಳ್ಳವನಾಗಿಯೂ, ಇರುವದರಿಂದ ಅನ್ಯನಿರಪೇಕ್ಷನಾಗಿ ಅನಿಷ್ಟನಿವರ್ತನ ಇಷ್ಟ ಪ್ರಾಪಣ ಮಾಡಬೇಕೆಂಬ ಅವಸರ ಪ್ರತೀಕ್ಷಕನಾಗಿಯೂ ಇರುವ; **"ಮಾಂ"** ನನ್ನನ್ನು, ಎಂಬಭಿಪ್ರಾಯದಿಂದ, **ಏವಂ ಭೂತಂ** ಎಂದು ಭಾಷ್ಯದಲ್ಲಿ ಪ್ರಯೋಗವು. ಅಂತಹ ನನ್ನನ್ನು **ತ್ರಿಭ್ಯಃ** ಎಂದರೆ, **ಸಾತ್ವಿಕ ರಾಜಸತಾಮಸಗುಣಮಯಿಗಳಾದ** ಆ ಕಾರಣದಿಂದಲೇ ದುಃಖ ಮಿಶ್ರತ್ವಾದಿ ದೋಷಗಳುಳ್ಳ ಎಂಬ ಭಾವವು, **ಭಾವೇಭ್ಯಃ**-ವಸ್ತುಗಳಿಗಿಂತಲೂ ಎಂದರೆ ಚೇತ ನಾಚೇತನಗಳಿಗಿಂತಲೂ(ಇವು **ಏಭ್ಯಃ** ಎಂಬುದರ ವ್ಯಾಖ್ಯಾನವು) **ಪರಂ**-ಶ್ರೇಷ್ಠನಾದ ಎಂದರೆ, **ಮದಸಾಧಾರಣೈಃ**-ನನಗೆ ಮಾತ್ರವೇ ಮುಖ್ಯವಾದ ಕಲ್ಯಾಣಗುಣಗಳಿಂದಲೂ, **ತತ್ತದ್ಭೋಗ್ಯ ತಾಪ್ರಕಾರೈಶ್ಚ**-ಆಯಾ ಕಲ್ಯಾಣಗುಣಗಳ ಭೋಗ್ಯತೆಯ ಪ್ರಕಾರಗಳಿಂದಲೂ ಸಹ, **ಪರಂ**-ಉತ್ಕೃಷ್ಟನಾದವನೆಂಬುದನ್ನೂ, **ಅವ್ಯಯಂ** ಎಂದರೆ, **ಸದೈಕರೂಪಮಪಿ** - ಯಾವಾಗಲೂ ಮೇಲೆ ಹೇಳಿರುವುಗಳಹಾಗೆ ಯಾವವಿಧ ವಿಕಾರವೂ ಇಲ್ಲದೆ ಒಂದೇ ರೀತಿಯಲ್ಲಿರುವವನಾಗಿ ಇದ್ದರೂ ಆನಂದಮಯನಾದ ಸ್ವಾಮಿಯ ಅನುಭವಕ್ಕೆ ಪ್ರಾಕೃತ ಭೋಗಗಳಹಾಗೆ ಚ್ಯುತಿ ಇಲ್ಲ ವೆಂಬ ಭಾವವೂ ತೋರಿಬರುತ್ತದೆ. **ಇದಂ ಜಗತ್ ನಾಭಿಜಾನಾತಿ**-ಈ ಜಗತ್ತು ತಿಳಿಯುವ ದಿಲ್ಲ, ಮುಂದೆ **ಇದಂ ಜಗತ್** ಎಂಬುದಕ್ಕೆ ವಾಖ್ಯಾನವನ್ನು ಬರೆಯುತ್ತಾರೆ. **ತ್ರೈರೇವ ತ್ರಿಭಿ ರ್ಗುಣಮಯೈಃ**-ಆ ಮೂರಾದ ಸತ್ವರಜಸ್ತಮೋರೂಪ ಗುಣಗಳಿಂದ ಸೇರಿದ, ಆ ಕಾರಣ ದಿಂದಲೇ, **ನಿಹೀನತರೈಃ**-ಮೇಲೆ ಹೇಳಿದ ದೋಷಯುಕ್ತಗಳಾಗಿ ತುಂಬಾ ನಿಕೃಷ್ಟಗಳಾದ, **ಕ್ಷಣಧ್ವಂಸಿಭಿಃ**-ಅತ್ಯಲ್ಪಕಾಲದಲ್ಲಿ ನಾಶವಾಗುವ ಎಂದರೆ ಅನಿತ್ಯಗಳಾದ, ಎಂದರೆ **ಪುಣ್ಯ** ಭಾಗವು ನಶಿಸಿಹೋದ ಒಡನೆಯೇ ಒಂದು ಕ್ಷಣವಾದರೂ ಆ ಭೋಗಗಳು ನಿಲ್ಲಲಾರವೆಂಬ ಭಾವವು. **ಪೂರ್ವಕರ್ಮಾನುಗುಣವಾಗಿ** ಉಂಟಾದ **ದೇಹೇಂದ್ರಿಯಭೋಗ್ಯತ್ವೇನಾವಸ್ಥಿತೈಃ**-ದೇಹ ಮತ್ತು ಇಂದ್ರಿಯುಗಳ ಮೂಲಕ ಭೋಗ್ಯವಾದವುಗಳಾಗಿರುವ, **ಪದಾರ್ಥ** ಗಳಿಂದ, **ಮೋಹಿತಂ**-ಮೋಹವನ್ನು ಹೊಂದಿದ, ದೇವ, ತಿರ್ಯಕ್ಕು, ಮನುಷ್ಯ, ಸ್ಥಾವರರೂಪದಲ್ಲಿರುವ **ಇದಂ ಜಗತ್**-ಈ ಜಗತ್ತೂ ಎಂದರೆ ಪ್ರಾಣಿವರ್ಗವು, **ನಾಭಿಜಾನಾತಿ**-ತಿಳಿಯುವದಿಲ್ಲವು; ತನ್ನ ಯಥಾರ್ಥಸ್ವರೂಪವನ್ನು ತಿಳಿಯಲಾರದು; ಏಕೆ ತಿಳಿಯಲಾರದು ಎಂದರೆ ಸಾತ್ವಿಕ

**ಭಾ. ಅವ. ಕಥಂ ಸ್ವತ ಏವಾ ನವಧಿಕಾತಿಶಯಾನಂದೇ ನಿತ್ಯೇ ಸದೈಕರೂಪೇ ಲೌಕಿಕ ವಸ್ತು ಭೋಗ್ಯತಾಪ್ರಕಾರೈಶ್ಚೋತ್ಕೃಷ್ಟತಮೇ ತ್ವಯಿ ಸ್ಥಿತೇಷ್ವತ್ಯಂತ ನಿಹೀನೇಷು ಗುಣಮಯೇಷ್ವಸ್ಥಿರೇಷು ಭಾವೇಷು ಸರ್ವಸ್ಯ ಭೋಕ್ತೃವರ್ಗಸ್ಯ ಭೋಗ್ಯತ್ವ ಬುದ್ಧಿರುಪಜಾಯತ ಇತ್ಯತ್ರಾಹ:—**

ರಾಜಸ ತಾಮಸಗುಣಯುಕ್ತಗಳಾದ ಪೂರ್ವಕರ್ಮಾನುಗುಣ ಪ್ರಾಪ್ತವಾಗಿರುವ ದೇಹೇಂದ್ರಿಯ ಗಳಿಂದ ಸೇರಿರುವದರಿಂದ ಅದರ ಸಹಜಜ್ಞಾನವು ತಿರೋಹಿತವಾಗಿರುವದರಿಂದ ಅರಿಯಲಾರದು ಎಂಬ ಭಾವವು. ಸೃಷ್ಟಿಗೆ ಮುಂದೆ ಕರ್ಮವೆಲ್ಲಿಯದು ? ಎಂಬ ಸಂಶಯವು ಕೆಲವರಿಗುಂಟು; **"ಪ್ರಕೃತಿಂ ಪುರುಷಂಚೈವ ವಿದ್ಯನಾದೀ ಉಭಾವಪಿ"** (ಗೀ. ೧೩.೧೯) ಎಂದು ಮುಂದೆಯೇ ಹೇಳಲ್ಪಡುವದರಿಂದ, ಯಾವಾಗ ಇವೆರಡೂ ಅನಾದಿಯೋ ಅವರಿಂದುಂಟಾಗುವ ಕರ್ಮವೂ **ಅನಾದಿಯೇ** ಎಂದು ಭಾವಿಸತಕ್ಕದು. ಹೀಗೆ ಒಪ್ಪದಿದ್ದರೆ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯ **ದೋಷಗಳನ್ನು** ಕಲ್ಪಿಸಬೇಕಾಗುತ್ತದೆ. ಇಲ್ಲಿ ಭೋಗ್ಯವಸ್ತುವು ತ್ರಿಗುಣಾತ್ಮಕವಾಗಿ ಸತ್ವ **ಗುಣವೂ** ಇರುವಾಗ ಮೋಹವೇತಕ್ಕೆ ಉಂಟಾಗಬೇಕು ಎಂಬ ಶಙ್ಕಾ ಉಂಟಾಗಬಹುದು. ಅದೂ ಅಲ್ಲದೆ ತನ್ನ ಸತ್ವಗುಣವೂ ಸಹ ರಜಸ್ತಮೋಗುಣಗಳೊಂದಿಗೆ ಸೇರಿರುವದರಿಂದ, ತಾನು **ಭೋಗ್ಯವಸ್ತುವಿಗೆ ವಶವಾಗಕೂಡದು**, ಪರಮಾತ್ಮನನ್ನು ಸ್ಮರಿಸತಕ್ಕದ್ದು ಎಂದು ಏಕೆ ಜ್ಞಾನ **ಉಂಟಾಗುವದಿಲ್ಲವು** ? ಎಂದು ಪ್ರಶ್ನಿಸಬಹುದು. ಅನ್ನವು ವಿಷಸಂಪೃಕ್ತವಾಗಿರಬಹುದು; ಅದು **ಮಧುವಿನಿಂದ** ಸೇರಲ್ಪಟ್ಟಿದ್ದರೆ ಈ ಮಧುವಿನ ರುಚಿಗೆ ಮರುಳಾಗಿ ಅಂತಹ ದೋಷಯುಕ್ತವಾದ ಅನ್ನವನ್ನೂ ಕೂಡ, ಅಜ್ಞಾನದಿಂದ ಸೇವಿಸಿಬಿಡುವರು. ಹಾಗೆಯೇ ಅವರವರ ಕರ್ಮಾನು **ಗುಣವಾಗಿ** ದೋಷಯುಕ್ತವಾದ ಐಹಿಕವಿಷಯಗಳಲ್ಲಿ ಭೋಗ್ಯರೂಪ ಬುದ್ಧಿಯು ಉತ್ಪನ್ನವಾಗಿ **ಮೋಹಕ್ಕೆ** ವಶವಾಗುವರು. ಮೂಲದ **ಇದಂ ಜಗತ್** ಎಂಬುದಕ್ಕೆ, **ದೇವತಿರ್ಯಗಾದ್ಯಾತ್ಮನಾವಸ್ಥಿತಂ** ಎಂದು ವ್ಯಾಖ್ಯಾನದ ಅಭಿಪ್ರಾಯವು, ದೇವತೆಗಳಲ್ಲಿ ಮುಖ್ಯಾಧಿಕಾರಿಗಳಾದ **ಚತುರ್ಮುಖರುದ್ರೇಂದ್ರಾದಿಗಳೂ ಕೂಡ** ನಮ್ಮ ಹಾಗೆ ಜೀವಕೋಟಿಗೆ ಸೇರಿದವರಾದಪ್ರಯುಕ್ತ **ಅವರೂ ಕೂಡ** ಅನೇಕ ಸಂದರ್ಭಗಳಲ್ಲಿ ಮೋಹಕ್ಕೆ ಒಳಪಟ್ಟವರಾಗಿ ತೊಂದರೆಗಳನ್ನನುಭವಿಸಿರುತ್ತಾರೆಂಬುದು ಇತಿಹಾಸಪುರಾಣಾದಿಗಳಲ್ಲಿ ಸುಪ್ರಸಿದ್ಧವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು, ಮೂಲದಲ್ಲಿ **ಇದಂ ಜಗತ್** ಎಂದು ಇರುವದರಿಂದ ಪ್ರತ್ಯಕ್ಷಕ್ಕೇನೇ ಈ ಮೋಹವೈಚಿತ್ರ್ಯತೆಯು ಗೋಚರವೆಂಬ ಭಾವವು ತೋರಿಬರುತ್ತದೆ. **"ಬ್ರಹ್ಮಾದ್ಯಾಸ್ಸಕಲಾ ದೇವಾ ಮನುಷ್ಯಾಃ ಪಶವಸ್ತಥಾ। ವಿಷ್ಣುಮಾಯಾ ಮಹಾವರ್ತಮೋಹಾಂಧತಮಸಾವೃತಾಃ"** (ವಿ. ಪು. ೫. ೩೦. ೧೮) ಎಂಬ ಶ್ಲೋಕವು ಈ ಸಂದರ್ಭದಲ್ಲನುಸಂಧೇಯವೆಂದು ಶ್ರೀ **ದೇಶಿಕರವರು** ಉದಾಹರಿಸಿರುತ್ತಾರೆ. **ಚತುರ್ಮುಖಬ್ರಹ್ಮನೇ** ಮೊದಲಾದ ಸಕಲ ದೇವತೆಗಳೂ ಮನುಷ್ಯರೂ, ಪಶುಗಳೂ, **ತಥಾ** ಎಂಬುದರಿಂದ ಸಕಲ ಪ್ರಾಣಿಗಳೂ, ವಿಷ್ಣುವಿನ ಪ್ರಕೃತಿ **ರೂಪವಾದ** ದೇಹವೆಂಬುದೇ ಒಂದು ದೊಡ್ಡ ಸುಳಿಯು, ಅದರಲ್ಲಿ ಮೋಹವೆಂಬ ಗಾಢಾಂಧ **ಕಾರದಿಂದ** ಆವರಿಸಲ್ಪಟ್ಟಿರುವರು; ಸುಳಿಯಿಂದ ತಪ್ಪಿಸಿಕೊಳ್ಳುವ ಮಾರ್ಗ ತಿಳಿಯದ ಹಾಗೆ ಗಾಢಾಂಧಕಾರದಿಂದ ಆವರಿಸಲ್ಪಟ್ಟಿರುವವರು ಎಂದು ಹೇಳಲ್ಪಟ್ಟಿದುತ್ತದೆ. ಆದುದರಿಂದ **ನಾನು ಇವುಗಳಿಗಿಂತ ಪರಂ** ಎಂದೂ **ಅವ್ಯಯ**ನೆಂದೂ ಇಂತಹ ಜನರು ತಿಳಿಯಲಾರರು ಎಂದು ಉಪದೇಶವು.

**ಭಾಷ್ಯಾವತಾರಿಕೆಯ ಅರ್ಥವು:—**ಹೀಗೆ ಪರಮಪುರುಷನು ತನ್ನ ಯಥಾತ್ಮ್ಯಜ್ಞಾನ ವನ್ನುಪದೇಶಿಸಿದ್ದಾಯಿತು. ಮುಂದೆ ಈ ಅಧ್ಯಾಯದಲ್ಲಿ ಹೇಳಲ್ಪಡುವ ಎರಡನೆಯ ವಿಷಯ

ವಾದ ಇಂತಹ ಯಥಾತ್ಮ್ಯಜ್ಞಾನವನ್ನು ಏಕೆ ಮನುಷ್ಯನು ತಿಳಿಯದೇ ಇರುವನು ಎಂಬುದಕ್ಕೆ ಕಾರಣವು ಉಪದೇಶಿಸಲ್ಪಡುತ್ತದೆ. ಈ ಅವತಾರಿಕೆಯ ಮೂಲಕ ಅವೆರಡಕ್ಕೂ ಸಙ್ಗತಿಯನ್ನು ತೋರಿಸುತ್ತಾರೆ. **ಸ್ವತ ಏವ**-ಸ್ವತಂತ್ರವಾಗಿಯೇ, **ಅನವಧಿಕಾತಿಶಯಾನಂದೇ** - ಅವಧಿಯಿಲ್ಲದ ಅತಿಶಯವುಳ್ಳ ಆನಂದಸ್ವರೂಪನಾದ, **ನಿತ್ಯೇ**-ನಿತ್ಯನಾದ, **ಸದೈಕರೂಪೇ**-ಸ್ವರೂಪ ಸ್ವಭಾವ ವಿಕಾರಗಳೊಂದೂ ಇಲ್ಲದೆ ಯಾವಾಗಲೂ ಒಂದೇ ರೂಪನಾಗಿರುವ, ಮತ್ತು ಲೌಕಿಕ ವಸ್ತುಗಳ ಭೋಗ್ಯತಾಪ್ರಕಾರಗಳಿಗಿಂತ ಉತ್ಕೃಷ್ಟತಮನಾದ, **ತ್ವಯಿ**-ನೀನು, **ಸ್ಥಿತೇಽಪಿ**-ಇರುತ್ತಿದ್ದರೂ ಕೂಡ, **ಅತ್ಯಂತ ನಿಹೀನೇಷು**-ಅತ್ಯಂತ ನಿಕೃಷ್ಟಗಳಾದ, ನೀಚಕಗಳಾದ, **ಗುಣಮಯೇಷು**-ಈ ಸಾತ್ವಿಕ, ರಾಜಸ, ತಾಮಸಗುಣಗಳ ಪ್ರಾಚುರ್ಯವುಳ್ಳ, **ಅಸ್ಥಿರೇಷು**-ಅನಿತ್ಯಗಳಾದ, **ಭಾವೇಷು**-ವಸ್ತುಗಳಲ್ಲಿ, **ಸರ್ವಸ್ಯಭೋಕ್ತೃವರ್ಗಸ್ಯ**-ದೇವಮನುಷ್ಯಾದಿ ಸಮಸ್ತ ಭೋಕ್ತೃವರ್ಗಕ್ಕೆ, ಭೋಗ್ಯತ್ವಬುದ್ಧಿಯು, **ಕಥಂ ಉಪಜಾಯತೇ**-ಹೇಗೆ ಉಂಟಾಗುತ್ತದೆ ? **ಇತ್ಯತ್ರಾಹ**-ಎಂಬ ಶಙ್ಕಾ ಸಮಾಧಾನಾರ್ಥವಾಗಿ, ಹೇಳುತ್ತಾರೆ:—ಇಲ್ಲಿ **ಸರ್ವಸ್ಯ ಭೋಕ್ತೃವರ್ಗಸ್ಯ** ಎಂದು ಹೇಳಿರುವದರಿಂದ ದೇವತೆಗಳಿಗೂ ಕೂಡ ಈ ಭೋಕ್ತೃತ್ವ ಬುದ್ಧಿಯು ತಪ್ಪಿದ್ದಲ್ಲವೆಂಬ ಭಾವವು. ದೇಹಿಯಾದರೆ ಭೋಕ್ತೃಭಾವವು ತಪ್ಪಿದ್ದಲ್ಲವೆಂಬ ತಾತ್ಪರ್ಯವು. ಇಲ್ಲಿ **ನಿರತಿಶಯಾನಂದೇ** ಎಂದು ಹೇಳಿರುವದರಭಿಪ್ರಾಯವು, ತೈತ್ತರೀಯಾದಿ ಶ್ರುತಿಗಳಲ್ಲಿ ಎಲ್ಲಾ ವಿಧ ಸರ್ವಸ್ವಮೃದ್ಧಿಯುಕ್ತನಾದ ಒಬ್ಬ ಮನುಷ್ಯಾನಂದವನ್ನು ಒಂದಾಗಿ ಭಾವಿಸಿ, ಅದಕ್ಕೆ ನೂರರಷ್ಟು ಆನಂದವು ಇನ್ನೊಂದು, ಅದಕ್ಕೆ ನೂರರಷ್ಟು ಆನಂದವಿನ್ನೊಂದು ಎಂದು ಹೀಗೆಯೇ ಹೇಳುತ್ತಾಹೋಗಿ ಕೊನೆಯಲ್ಲಿ ಅವರ ನೂರರಷ್ಟು ಆನಂದವು ಪರಮಾತ್ಮನ ಆನಂದವಾಗುತ್ತದೋ ಎಂದು ಪರ್ಯಾಲೋಚಿಸಿ, ಆಗಲೂ ಅದನ್ನು ಗ್ರಹಿಸಲು ಅಸಾಧ್ಯವಾಗಿ, **"ಯತೋ ವಾಚೋನಿವರ್ತಂತೇಽಪ್ರಾಪ್ಯ ಮನಸಾ ಸಹ"** ಎಂದು ಶ್ರುತಿಯು ವಿ ರಾ ಮ ವ ನ್ನು ಹೊಂದಿತು ಎಂಬ ಭಾವವನ್ನು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆದುದರಿಂದ ಮನುಷ್ಯಾನಂದಕ್ಕೂ ಪರಮಾತ್ಮನಾನಂದಕ್ಕೂ ಅಜಗಜನ್ಯಾಯವೆಂದು ಹೇಳಿ ವ್ಯತ್ಯಾಸವನ್ನು ತೋರಿಸುವದಕ್ಕಾಗಿ, ಪರಮಾತ್ಮಾನಂದವು ನಿರತಿಶಯವಾದುದು, ಮನುಷ್ಯಾನಂದವು ಅತ್ಯಂತ ನಿಹೀನವಾದುದು, ಪರಮಾತ್ಮಾನಂದವು **ನಿತ್ಯ** ವಾದುದು, ಮನುಷ್ಯಾನಂದವು **ಅಸ್ಥಿರ** ವಾದುದು, ಪರಮಾತ್ಮಾನಂದವು ಸದೈಕರೂಪವಾದುದು; **ಮನುಷ್ಯಾನಂದವು** ದುಃಖ ಮಿಶ್ರತ್ವಾದಿ ದೋಷ ಯುಕ್ತವಾಗಿ ಬಹುಮುಖವಾದುದು. ಆದುದರಿಂದಲೇ **ರಾಜಸ ತಾಮಸಾದಿ** ಗುಣಮಯವಾದುದು. ಅದೂ ಅಲ್ಲದೆ ಈ ಭೋಕ್ತೃವರ್ಗವು **ಸ್ವಸ್ಯ**-ತನಗೇನೇ ಶೇಷತ್ವೇನ **ಸ್ವಸ್ವಾಮಿ** ಭಾವಸಂಬಂಧಯುಕ್ತವಾದುದು. ಹೀಗೆ ಈ ಎರಡು ಆನಂದಗಳಿಗೂ ವ್ಯತ್ಯಾಸವಿರುವಾಗ ಆನಂದಮಯನಾಗಿರುವ ನಿನ್ನನ್ನು ಪ್ರಾಪ್ಯವಾಗಿ ಹೊಂದದೆ ಈ ಅಪಕೃಷ್ಟಾನಂದದಲ್ಲಿ ಭೋಗ್ಯತಾ ಬುದ್ಧಿಯು ಏಕೆ ? ಎಂದರೆ ಹೇಳುತ್ತಾರೆ. ಕರ್ಮಮೂಲಕ ಪ್ರಾಪ್ತವಾದ ದೇಹರೂಪಪ್ರಕೃತಿ ಸಂಬಂಧದಿಂದ ಈ ಚೇತನವರ್ಗದ ಜ್ಞಾನವು ತಿರೋಹಿತವಾಗಿರುವದರಿಂದ ಇಂತಹ ನಿರತಿಶಯಾನಂದ ಸ್ವರೂಪನಾಗಿ **"ಆನಂದಯಾತಿ"** ಎಂದು ಹೇಳಿರುವಹಾಗೆ ನಿರತಿಶಯಾನಂದವನ್ನು ಕೊಡುವ ತನ್ನ ಸ್ವರೂಪ ಯಥಾತ್ಮ್ಯವನ್ನು ತಿಳಿಯದೇ ಹೋಗುತ್ತಾರೆಂದು ಈ ಮುಂದಿನ ಶ್ಲೋಕದಲ್ಲಿ ಉಪದೇಶಿಸುತ್ತಾರೆಂಬ ಭಾವವು.

**ಮೂಲಕ್ಕೆ ಅರ್ಥವು:—ಏಷಾ**- ಈ ಪ್ರತ್ಯಕ್ಷಗೋಚರವಾದ, **ಮಮ**-ನನಗೆ, ಶರೀರವಾಗಿ, ನನ್ನ ಸ್ವತ್ತಾಗಿರುವ, **ದೈವೀ**-ದಿವು ಕ್ರೀಡಾ ಎಂಬ ಧಾತುವಿನಿಂದ ದೇವಶಬ್ದವು ಕ್ರೀಡಾಪರನಾದ ಸರ್ವೇಶ್ವರನನ್ನು ಹೇಳುತ್ತದೆ, ತತ್ಸಂಬಂಧವಾದ, **ಮಾಯಾ**-ಅಚೇತನ ಪ್ರಕೃತಿಯು


K4024

**ಮೂ. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**

**ಭಾ. ಮಮೈಷಾ ಗುಣಮಯೀ-ಸತ್ವರಜಸ್ತಮೋಮಯೀ, ಮಾಯಾ, ಯಸ್ಮಾದ್ದೈವೀ ದೇವೇನ ಕ್ರೀಡಾಪ್ರವೃತ್ತೇನಮಯೈವ ನಿರ್ಮಿತಾ, ತಸ್ಮಾತ್ಸರ್ವೈರ್ದುರತ್ಯಯಾ-ದುರತಿಕ್ರಮಾ.**

**ದುರತ್ಯಯಾ**-ದಾಟಲು ಅಸಾಧ್ಯವಾದುದು. ಆತ್ಮಾವಿಗೆ ಪ್ರಕೃತಿ ಸಂಬಂಧವಿರುವವರಿಂವಲೇ ಬದ್ಧನಾಗಿರುತ್ತಾನೆ. ಇದೇ ಈತನ ಜ್ಞಾನತಿರೋಧಾನಕ್ಕೆ ಕಾರಣವು. ಇದರಿಂದ ಪರಮಾತ್ಮನ ಯಥಾರ್ಥವಾದ ಸ್ವರೂಪವನ್ನು ಅರಿಯಲಾರನು; ಆತ್ಮನು ಸ್ವತಃ ಸರ್ವಜ್ಞತೆ; ಸತ್ಯಸಙ್ಕಲ್ಪತೆ ಮೊದಲಾದ ಗುಣಾಷ್ಟಕಗಳಿಂದ ಕಂಗೊಳಿಸುವ ಸ್ವರೂಪವುಳ್ಳವನು. ಅದು ಈಗ ಕರ್ಮಾನುಸಾರವೆತ್ತಿದ ದೇಹದಿಂದ ಮರೆಸಿಹೋಗಿರುತ್ತದೆ. ಮೂರು ತತ್ವಗಳಲ್ಲಿ ಅಚಿತ್ ಚಿತ್ತು ಈಶ್ವರರುಗಳಲ್ಲಿ ಇದು ಒಂದು ತಾನೇ ಪ್ರತ್ಯಕ್ಷ ಗೋಚರವಾಗಿರುವದು; ಮಿಕ್ಕ ಎರಡು, ಚಿತ್ತು ಈಶ್ವರರು ಪ್ರತ್ಯಕ್ಷಗೋಚರವಲ್ಲವು; ಆದುದರಿಂದಲೇ **ಏಷಾ** ಎಂಬ ಪ್ರಯೋಗವು. ಪ್ರತ್ಯಕ್ಷಕ್ಕೆ ಅಪಲಾಪ ಹೇಳಿ, ಶ್ರುತಿಯು ನಿತ್ಯವೆಂದು ಹೇಳುವುದನ್ನು ಮಿಥ್ಯಾ ಎಂದು ಹೇಳಬಹುದೇ? ಅದೂ ಅಲ್ಲದೆ ತ್ರಿಗುಣಗಳ ಪ್ರಾಚುರ್ಯವಿರುವದು ಎಂದು **ಗುಣಮಯೀ** ಎಂಬಲ್ಲಿ ಮಯಟ್ ಎಂಬ ಪ್ರತ್ಯಯವಿರುತ್ತದೆ. ಇಲ್ಲದುದಕ್ಕೆ ತ್ರಿಗುಣಪ್ರಾಚುರ್ಯವೆಂದರೇನು? ಮತ್ತು **ಮಮ ಮಾಯಾ** ಎಂದಿರುವದರಿಂದ **ಮಾಯಾ** ಎಂಬುದಕ್ಕೆ ಶ್ರುತಿಯಲ್ಲಿ ಹೇಳಿರುವ ಹಾಗೆ ಪ್ರಕೃತಿ ಎಂದರ್ಥಮಾಡದೆ ಐಂದ್ರಜಾಲಿಕ ಮಿಥ್ಯಾತ್ವ ಮೊದಲಾದ ಅರ್ಥಮಾಡಿದರೆ ಸರ್ವೇಶ್ವರನಿಗೆ ಮಾಯಾ ಸಂಬಂಧದಿಂದ ಮೋಹವನ್ನು ಕಲ್ಪಿಸಿದಂತಾಗುವದಿಲ್ಲವೇ? ಹಾಗೆ ಮಾಯಾ ಮಿಥ್ಯೆಯಾದರೆ ಏನೂ ಇಲ್ಲದೆ ಇರುವದನ್ನು ದಾಟುವದು ಅಸಾಧ್ಯವು ಎಂದು ಹೇಳುವದು ಹಾಸ್ಯಾಸ್ಪದವಲ್ಲವೆ? ಆದುದರಿಂದ ಮಾಯಾ ಶಬ್ದಕ್ಕೆ ಪ್ರಕೃತಿ ಎಂದೇ ಅರ್ಥ ಹೇಳಿದರೇನೇ ಸಾಮಂಜಸ್ಯವು ಎಂದು ಭಾಷ್ಯದಲ್ಲಿ ಯತಿವರ್ಯರು ತೋರಿಸಿರುತ್ತಾರೆ.

**ಭಾಷ್ಯಾರ್ಥವು:—ಮಮ**-ಲೀಲಾವಿಭೂತಿಗೆ ಸ್ವಾಮಿಯಾದ ನನಗೆ, **ಏಷಾ**-ಲೋಕದ ಸರ್ವವಿಧ ಮೋಹಗಳಿಗೂ ಕಾರಣಭೂತವಾಗಿ ಪ್ರತ್ಯಕ್ಷಕ್ಕೆ ಗೋಚರವಾದ, **ಈ ಗುಣಮಯೀ** ಎಂದರೆ **"ಸತ್ವರಜಸ್ತಮೋಮಯೀ"** ಸತ್ವರಜಸ್ತಮೋಗುಣಗಳ ಪ್ರಾಚುರ್ಯವುಳ್ಳ, **ಮಾಯಾ** ವಿಚಿತ್ರ ಸೃಷ್ಟಿಗೆ ಆಕರವಾದ ಪ್ರಕೃತಿಯು, **ಯಸ್ಮಾತ್** - ಯಾವ ಕಾರಣದಿಂದ, **ದೈವೀ** ಎಂದರೆ **ದೇವೇನ - ಕ್ರೀಡಾಪ್ರವೃತ್ತೇನ ಮಯೈವ ನಿರ್ಮಿತಾ**-ಕ್ರೀಡೆಯಲ್ಲಿ ಪ್ರವರ್ತಿಸಿರುವ ನನ್ನಿಂದಲೇ ನಿರ್ಮಿಸಲ್ಪಟ್ಟಿತೋ, **ತಸ್ಮಾತ್**-ಆ ಕಾರಣದಿಂದಲೇ, **ಸರ್ವೈಃ**-ಸಮಸ್ತ ದೇವ ಮನುಷ್ಯಾದಿ ಸರ್ವ ಪ್ರಾಣಿವರ್ಗಗಳಿಂದಲೂ, ದೇಹವಿದ್ದರೆ ಮೋಹ ತಪ್ಪದು, ಇದು ಸಾರ್ವತ್ರಿಕವಾಗಿ ದೇವತೆಗಳಿಗೂ ಕೂಡ ತಪ್ಪದು ಎಂದು ತಿಳಿಸುವದಕ್ಕಾಗಿ **ಸರ್ವೈಃ** ಎಂಬ ಪ್ರಯೋಗವು, **ದುರತ್ಯಯಾ** ಎಂದರೆ **ದುರತಿಕ್ರಮಾ**-ಅತಿಕ್ರಮಿಸಿ ನಡೆಯುವುದು ಸುಲಭ ಸಾಧ್ಯವಲ್ಲವು. ಇಲ್ಲಿ **ಮಯೈವನಿರ್ಮಿತಾ** ಎಂದು ಹೇಳಿರುವದರಿಂದ ಈ ಪ್ರಕೃತಿ ನಿರ್ಮಾಣವು ಲೀಲಾರ್ಥವಾಗಿ ತನ್ನಿಂದಲೇ ನಿರ್ಮಿತವೆಂಬ ಭಾವವು ಸೂಚಿಸಲ್ಪಟ್ಟಿತು. ವಂಚಿಸಬೇಕೆಂಬ ಭಾವನೆಯಿಂದ ಮಾಯಾ ಎಂದರೆ ಪ್ರಕೃತಿಯ ನಿರ್ಮಾಣವಲ್ಲವು. ಕರ್ಮಾನುಗುಣವಾಗಿ ಸುಖದುಃಖಾನುಭವಗಳಿಗೂ ಸುಕೃತರೂಪ ಧರ್ಮಾನುಚರಣೆಯ ಮೂಲಕ ಜ್ಞಾನಸಂಪಾದನೆಗೂ, ಉಪಾಯಾನುಷ್ಠಾನಕ್ಕೂ, ಅನುಕೂಲಿಸುವಹಾಗೆ ಪರಮಕೃಪಾಳುವಾದ ನನ್ನಿಂದ ಕರಣ ಕಳೇಬರ ಯೋಗ

**ಭಾ. ಅಸ್ಯಾಃ ಮಾಯಾಶಬ್ದ ವಾಚ್ಯತ್ವ ಮಾಸುರರಾಕ್ಷಸಾಸ್ತ್ರಾದೀನಾ ಮಿವ ವಿಚಿತ್ರಕಾರ್ಯ**

ವನ್ನುಂಟುಮಾಡುವದಕ್ಕಾಗಿ ನನ್ನಿಂದಲೇ ನಿರ್ಮಿಸಲ್ಪಟ್ಟ ಪ್ರಕೃತಿಯು. ಮಾಯಾ ನಿರ್ಮಾಣವು ತನಗೆ ಯಶಸ್ಸನ್ನುಂಟುಮಾಡುವಂಥಾದ್ದು ಎಂದು ಹೇಳಿಕೊಂಡರೇನೇ ವಿನಾ, ಮಿಥ್ಯಾತ್ವಾದಿಗಳನ್ನು ಆರೋಪಿಸುವದಕ್ಕಾಗಿಯೂ, ವಂಚಿಸುವದಕ್ಕಾಗಿಯೂ, ತಾನು ನಿರ್ಮಿಸಿದುದಲ್ಲವು ಎಂಬ ಭಾವವು. ಹಾಗಾದರೆ **ದುರತಿಕ್ರಮಾ** ಏತಕ್ಕೆ ಎಂದು ಕೇಳಬಹುದು. ತನ್ನನ್ನು ಹೊಂದಲು ಸಾಧನವಾಗಿ ಉಪಯೋಗಿಸಲಿ ಎಂದು ಕರಣಕಳೇಬರಗಳನ್ನು ಕೊಟ್ಟು, **ಕರ್ತಾ ಶಾಸ್ತ್ರಾರ್ಥವತ್ವಾತ್** ಎಂಬ ಸೂತ್ರದಲ್ಲಿ ತೋರಿಬರುವಹಾಗೆ ಕರ್ತೃತ್ವವನ್ನೂ, **ಕೃತಪ್ರಯತ್ನಾಪೇಕ್ಷಸ್ತು** ಎಂಬಲ್ಲಿ ತೋರಿಬರುವಹಾಗೆ, ಪ್ರಥಮಸಙ್ಕಲ್ಪರೂಪ ಸ್ವಾತಂತ್ರವನ್ನೂ, ಕೊಟ್ಟಿದ್ದರೆ ಆ ಸಾಧನವನ್ನೂ ಆ ಸ್ವಾತಂತ್ರ್ಯವನ್ನೂ ಸರಿಯಾಗಿ ಉಪಯೋಗಿಸದೆ ದುರುಪಯೋಗಪಡಿಸುವದರ ಮೂಲಕ **ದುರತಿಕ್ರಮಾ** ಎಂಬ ಭಾವವು. **ದುರತ್ಯಯಾ** ವೆಂದರೆ ಬಹಳ ಕಷ್ಟದಿಂದ ಅತಿಕ್ರಮಿಸಲು ಸಾಧ್ಯವು ಎಂಬ ಭಾವವು. ಉಪಾಯವೇನೂ ಕಷ್ಟವಲ್ಲವು, ಅದನ್ನು ಅನುಷ್ಠಿಸಬೇಕೆಂಬ ಬುದ್ಧಿಯು ಕರ್ಮವಾಸನಾಬಲದಿಂದ ಉತ್ಪನ್ನವಾಗುವುದಿಲ್ಲವಾದುದರಿಂದ, **ದುರತ್ಯಯಾ**. ಉಪಾಯವಾದರೋ ಸುಲಭವೇ; ಆತನು ನಮ್ಮ ಕರ್ಮಾನುಗುಣವಾಗಿ ಹಾಕಿದ ಈ ಪ್ರಕೃತಿ ಎಂಬ ಬೇಡಿಯನ್ನು ತೆಗೆದುಹಾಕಲು ಆತನೇ ಶಕ್ತನೇ ವಿನಾ, ಇತರರಿಗೆ ಯಾರಿಗೂ ಆ ಶಕ್ತಿಯು ಇರುವದಿಲ್ಲವು ಅದನ್ನು ತೆಗೆದುಹಾಕುವಹಾಗೆ ಆತನನ್ನು ವಶಮಾಡಿಕೊಳ್ಳಬೇಕಾದರೆ, **"ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ"** ಎಂದು ಹೇಳಿರುವ ಹಾಗೆ ಆತನಲ್ಲಿ ಮಾಡುವ **ಶರಣಾಗತಿಯು** ಎಂದು ಮುಂದೆ ಉತ್ತರಾರ್ಧದಿಂದ ಹೇಳಿ, ಅದು ಏತಕ್ಕಾಗಿ ದುರತ್ಯಯವಾಯಿತು ಎಂದು ಹೇಳಿ, ಹಾಗೆ ಶರಣಾಗತಿ ಮಾಡದ ದುಷ್ಕೃತಿಗಳು ನಾಲ್ಕುವಿಧವೆಂದು ಮುಂದಿನ ಶ್ಲೋಕದಲ್ಲಿ ತಿಳಿಸಿ, ಶರಣಾಗತಿಯನ್ನು ಮಾಡುವ ಸುಕೃತಿಗಳೂ ನಾಲ್ಕುವಿಧವೆಂದೂ ಅದರ ಮುಂದಿನ ಶ್ಲೋಕದಲ್ಲೂ ಉಪದೇಶಿಸುತ್ತಾರೆ.

ಆದರೆ ಮಾಯಾ ಶಬ್ದಕ್ಕೆ ಪ್ರಕೃತಿ ಎಂಬ ಅರ್ಥವು ಹೇಗೆ ಎಂದು ಕೇಳಿದರೆ ಹೇಳುತ್ತಾರೆ- **ತಸ್ಯಾಃ**-ಈ ಪ್ರಕೃತಿಗೆ, **ಮಾಯಾ ಶಬ್ದ ವಾಚ್ಯತ್ವಂ**-ಮಾಯಾ ಶಬ್ದಪ್ರಯೋಗವು, **ಅಸುರ ರಾಕ್ಷಸಾಸ್ತ್ರಾದೀನಾಮಿವ**-ಅಸುರಾಸ್ತ್ರವೆಂಬ ಮತ್ತು ರಾಕ್ಷಸಾಸ್ತ್ರವೆಂಬ ಪ್ರಯೋಗಗಳ ಹಾಗೆ, **ವಿಚಿತ್ರಕಾರ್ಯಕರತ್ವೇನ**-ವಿಚಿತ್ರವಾದ ಕಾರ್ಯಗಳನ್ನು ಈ ಪ್ರಕೃತಿಯು ಉಂಟುಮಾಡುವದರಿಂದ, ಅದಕ್ಕೆ ಮಾಯಾ ಎಂಬ ಪ್ರಯೋಗವೆಂಬ ಭಾವವು. ಅಸುರಾಸ್ತ್ರಕ್ಕೂ ರಾಕ್ಷಸಾಸ್ತ್ರಕ್ಕೂ ಹಾಗೆ ಹೆಸರುಗಳು ಅಸುರ ರಾಕ್ಷಸಸ್ವಭಾವಗಳಿಂದ ಹೇಗೋ, ಹಾಗೆಯೇ ಪ್ರಕೃತಿಯೂ, ವಿಚಿತ್ರವಾದ ಮೋಹ, ಭ್ರಮರೂಪಕರ್ಮಗಳನ್ನು ಮಾಡಿಸುವದರಿಂದಲೂ ಲೋಕದಲ್ಲಿ ಬಹು ವಿವಿಧವಾಗಿ ಅತ್ಯದ್ಭುತವಾದ ಕರ್ಮಗಳನ್ನು ಈ ಚೇತನನು ಮಾಡುವಹಾಗೆ ಮಾಡುತ್ತದೆಯಾದುದರಿಂದಲೂ, ಮಾಯಾ ಎಂದು ಹೆಸರು. ವಿಚಿತ್ರ ಹೇಗೆ ಎಂದರೆ, ನಾಲ್ಕು ಸಾವಿರಮೈಲಿ ದೂರದಲ್ಲಿ ಹಾಡಿದುದನ್ನು ಪ್ರತ್ಯಕ್ಷವಾಗಿ ಇಲ್ಲಿಯೇ ಕೇಳುವ ಹಾಗೆ ಈ ಪ್ರಕೃತಿಯು ಮಾಡಿಸುತ್ತದೆ. ಹಿಂದೆ ದೂರದಲ್ಲಿ ಬೇರೆಸ್ಥಳದಲ್ಲಿ ಹಾಡಿದುದನ್ನು ಈಗ ತನಗೆ ಬೇಕಾದಾಗ ಕೇಳುವಹಾಗೆ ಮಾಡುತ್ತದೆ. ನದೀಪ್ರವಾಹ ಪತನಶಕ್ತಿಯನ್ನು, ಮನೆಗೆ ಬೆಳಕಿಗೂ, ಕಾಫಿ ಮೊದಲಾದುವುಗಳನ್ನು ಕಾಸುವದಕ್ಕೂ ಉಪಯೋಗಿಸುವಹಾಗೆ ಮಾಡುತ್ತದೆ. ಹೀಗೆ ವಿಚಿತ್ರ ಶಕ್ತಿಯುಳ್ಳದು. ಅದೂ ಅಲ್ಲದೆ, ಮನುಷ್ಯರಲ್ಲೂ, ಇನ್ನೂ ಪಕ್ಷಿ ಮೃಗಾದಿಗಳಲ್ಲೂ ಸೌಂದರ್ಯಾದಿ ವೈಚಿತ್ರ್ಯವಿರುವಹಾಗೆ ಮಾಡಿರುತ್ತದೆ. ಆದುದರಿಂದ ಮಾಯಾಶಬ್ದವಾಚ್ಯವಾದುದು ಎಂಬ ತಾತ್ಪರ್ಯವು

**ಭಾ. ಕಶ್ಚೈಕಶ್ಯೇನ; ಯಥಾಚ (೧)"ತತೋಭಗವತಾ ತಸ್ಯ ರಕ್ಷಾರ್ಥಂ ಚಕ್ರಮುತ್ತಮಂ। ಆಜಗಾಮ ಸಮಾಜ್ಞಪ್ತಂ ಜ್ವಾಲಾಮಾಲಿ ಸುದರ್ಶನಂ। ತೇನಮಾಯಾ ಸಹಸ್ರಂ ತ ಚ್ಛಂಬರಸ್ಯಾ ಶುಗಾಮಿನಾ। ಬಾಲಸ್ಯ ರಕ್ಷತಾ ದೇಹಮೇಕೈಕಶ್ಯೇನ ಸೂದಿತಂ"॥**

ಇತರರು ಮಾಡಿರುವ ಅರ್ಥವು ಸಮರ್ಪಕವಿಲ್ಲವೆಂದು ತೋರಿಸುವವಕ್ಕಾಗಿ, ಮಾಯಾ ಶಬ್ದದ ತಮ್ಮ ತಾತ್ಪರ್ಯವನ್ನೂ ಅದಕ್ಕೆ ಪ್ರಮಾಣಗಳನ್ನೂ ತಿಳಿಸುತ್ತಾರೆ.

ಹೀಗೆ ಮಾಯಾ ಶಬ್ದಕ್ಕೆ ವಿಚಿತ್ರವಾದುದನ್ನುಂಟುಮಾಡುವ ಅರ್ಥದಲ್ಲಿ ಪ್ರಯೋಗ ವುಂಟೋ ? ಎಂದರೆ ಉಂಟೆಂದು ಪ್ರಮಾಣಗಳನ್ನು ಉದಾಹರಿಸುತ್ತಾರೆ—ಪ್ರಮಾಣವು, ಪ್ರಹ್ಲಾದಚರಿತ್ರೆಯಲ್ಲಿ, ಶಂಬರಾಸುರನಿಂದ ಮಾಯಾಸ್ತ್ರದಿಂದ ಪ್ರಹ್ಲಾದನನ್ನು ಬಂಧಿಸುವ ಸಂಧರ್ಭವು. ಶ್ರೀ ಪರಾಶರರು ಹೇಳುತ್ತಾರೆ. **ತತಃ**-ಅನಂತರದಲ್ಲಿ, **ಭಗವತಾ**-ಭಗವಂತ ನಿಂದ, **ತಸ್ಯ**-ತನ್ನ ಭಕ್ತನಾದ ಪ್ರಹ್ಲಾದನ, **ರಕ್ಷಾರ್ಥಂ**-ರಕ್ಷಣೆಗೋಸ್ಕರ, **ಸಮಾಜ್ಞಪ್ತಂ**-ಪರಮಭಕ್ತನಾನುದರಿಂದ ವಿಶೇಷವಾಗಿ ಅಜ್ಞಾಪಿಸಲ್ಪಟ್ಟ, **ಜ್ವಾಲಾಮಾಲಿ**-ಜ್ವಾಲೆಗಳ ದಿವ್ಯ ತೇಜಸ್ಸುಗಳ ಮಾಲೆಯನ್ನು ಹೊಂದಿರುವ, **ಸುದರ್ಶನಂ**-ಸುದರ್ಶನವೆಂಬ ಹೆಸರುಳ್ಳ, **ಚಕ್ರ ಮುತ್ತಮಂ**-ಶತ್ರುನಿಗ್ರಹದಲ್ಲಿ ಪರಮಶ್ರೇಷ್ಠವಾದ, ಚಕ್ರಾಯುಧವು, **ಅಜಗಾಮ**-ಬಂದಿತು, **ಅಶುಗಾಮಿನಾ**-ಬಹು ಶೀಘ್ರವಾಗಿ ಸಂಚರಿಸುವ, **ಬಾಲಸ್ಯದೇಹಂ ರಕ್ಷತಾ**-ಬಾಲನಾದ ಪ್ರಹ್ಲಾದನ ಶರೀರವನ್ನು ರಕ್ಷಿಸಿಕೊಂಡಿರುವ, **ತೇನ**-ಆ ಸುದರ್ಶನ ಚಕ್ರದಿಂದ, ಹಿರಣ್ಯಕಶಿಪು ನಿಂದ ಕಳುಹಿಸಲ್ಪಟ್ಟ ಶಂಬರಾಸುರನ, **ಮಾಯಾಸಹಸ್ರಂ**-ಸಾವಿರ ವಿಚಿತ್ರಕರ್ಮಗಳೆಲ್ಲಾ, **ಏಕೈಕಶ್ಯೇನ**-ಒಂದೊಂದಾಗಿ ಕ್ರಮವಾಗಿ, **ಸೂದಿತಂ**-ಧ್ವಂಸಮಾಡಲ್ಪಟ್ಟಿತು, **ಏಕೈಕಂಚ ನಿಷೂದಿತಂ**-ಎಂಬುದು ಪಾಠಾಂತರವು, ಪ್ರತಿಯೊಂದೂ ಸಂಹರಿಸಲ್ಪಟ್ಟಿತು ಎಂಬರ್ಥವು. **ಇತ್ಯಾದೌ**-ಇವೇ ಮೊದಲಾದುವುಗಳಲ್ಲಿ, **ಯಥಾಚ**-ಹೇಗೆ ಹೇಳಿದೆಯೋ ಹಾಗೆ **ಮಾಯಾ** ಶಬ್ದವು ಮಿಥ್ಯವಾದುದನ್ನು ಬೋಧಿಸುವದಿಲ್ಲವು. ಸತ್ಯವಾದ ವಿಚಿತ್ರ ಕರ್ಮವನ್ನು ಮಾಡು ವಂತಾದ್ದನ್ನು ಬೋಧಿಸುತ್ತದೆಂಬ ತಾತ್ಪರ್ಯವು. ಯಾವಾಗ ಸುದರ್ಶನ ಚಕ್ರದಿಂದ ಸೂದಿತ ವಾಯಿತೋ, ಅದು ಸತ್ಯವಾಗಿರಬೇಕೇ ವಿನಾ ಮಿಥ್ಯೆಯಲ್ಲವೆಂಬ ಭಾವವು. ಈ ಚಕ್ರಕ್ಕೆ ಸುದ ರ್ಶನವೆಂಬ ಹೆಸರು ಏತಕ್ಕೆಂದರೆ ಶ್ರೀ ಪೌಷ್ಕರ ಸಂಹಿತೆಯಲ್ಲಿ **"ಪ್ರಣತಾನಂಚ ಭಕ್ತಾನಾಂ ಯಸ್ಮಾಚ್ಚ ಸುಲಭಂ ಸದಾ। ದದಾತಿ ದರ್ಶನಂ ತೇಷಾಂ ಸ್ಮೃತಂ ತಸ್ಮಾತ್ಸುದರ್ಶನಂ"** ಎಂದು ಪ್ರಣತರಾದ ಭಕ್ತರಲ್ಲಿ ಸುಲಭನಾಗಿ ದರ್ಶನವನ್ನು ಅವರಿಗೆ ಕೊಡುವದರಿಂದ ಚಕ್ರಾಳ್ವಾ ರಿಗೆ ಸುದರ್ಶನನೆಂಬ ಹೆಸರೆಂದು ಹೇಳಿ, ಹಾಗೆ ಪ್ರಣತರಲ್ಲದವರಿಗೆ ನೋಡಲು ಅಸಾಧ್ಯನಾಗಿರು ವದರಿಂದ ಆತನಿಗೆ ದುರ್ದರ್ಶನವೇಬ ಹೆಸರೂ ಉಂಟು. ಇದನ್ನು ತಿಳಿಸುವವಕ್ಕಾಗಿಯೇ ಜ್ವಾಲಾಮಾಲಿ ಎಂಬ ಪ್ರಯೋಗವು. ಅಂತವರು ಸುದರ್ಶನದ ತೇಜಸ್ಸನ್ನು ನೋಡಲಾರರು ಎಂಬ ಭಾವವು. ಅದನ್ನೇ ಹೇಳುತ್ತಾರೆ, **ಅತಃ**-ಆ ಕಾರಣದಿಂದ ಇಲ್ಲಿ, **ಮಾಯಾ** ಶಬ್ದವು, **ನ ಮಿಥ್ಯಾತ್ವವಾಚೀ**-ಮಿಥ್ಯೆಯಾದುದೆಂಬರ್ಥವನ್ನು ಬೋಧಿಸಲಾರದು. ಆದರೆ ಮಿಥ್ಯೆಯಾಗಿ ರುವ ಪದಾರ್ಥಗಳನ್ನು ಮಾಡಿತೋರಿಸುವವನಿಗಲ್ಲವೇ ಮಾಯಾವಿ ಎಂದು ಹೇಳುವದು ? ಆದುದರಿಂದ **ಮಾಯೆ** ಎಂದರೆ ಮಿಥ್ಯೆಯಾದ ಪದಾರ್ಥಗಳನ್ನು ಮಾಡುವ ಶಕ್ತಿಯಲ್ಲವೋ ಎಂದು ಆಕ್ಷೇಪ ತರಬಹುದೆಂದು ಯೋಚಿಸಿ, ಆ ಸಂದರ್ಭದಲ್ಲಿ ಸಮಾಧಾನವನ್ನು ಹೇಳುತ್ತಾರೆ. **ಐಂದ್ರಜಾಲಿಕಾದಿಷ್ವಪಿ**-ಇಂದ್ರಜಾಲಕ್ಕೆ ಸಂಬಂಧಿಸಿದಂತವುಗಳಲ್ಲೂ ಸಹ, **ಕೇನಚಿನ್ಮಂತ್ರಾಷ**

(೧) ವಿ. ಪು. ೧. ೧೯. ೧೯-೨೦.

**ಭಾ. ಇತ್ಯಾದೌ. ಅತೋ ಮಾಯಾ ಶಬ್ದೋ ನ ಮಿಥ್ಯಾರ್ಥತ್ವವಾಚೀ। ಐನ್ದ್ರಜಾಲಿಕಾದಿಷ್ವಪಿಕೇನ ಚಿನ್ಮನ್ತ್ರೌಷಧಾದಿನಾ ಮಿಥ್ಯಾರ್ಥ ವಿಷಯಾಯಾಃ ಪಾರಮಾರ್ಥಿಕ್ಯಾ ಏವಬುದ್ಧೇರುತ್ಪಾದಕತ್ವೇನ ಮಾಯಾವೀತಿ ಪ್ರಯೋಗಃ। ತಥಾ ಮನ್ತ್ರೌಷಧಾದಿರೇವಚ ತತ್ರ ಮಾಯಾ,ಸರ್ವಪ್ರಯೋಗೇಷ್ವನುಗತಸ್ಯೈಕಸ್ಯೈವ ಶಬ್ದಾರ್ಥತ್ವಾತ್. ತತ್ರ ಮಿಥ್ಯಾರ್ಥೇಷು ಮಾಯಾಶಬ್ದ ಪ್ರಯೋಗೋ ಮಾಯಾಕಾರ್ಯಬುದ್ಧಿ ವಿಷಯ**

---

**ಧಾದಿನಾ**-ಯಾವುದೋ ಒಂದು ಮಂತ್ರವೋ ಔಷಧಿಯೋ, ಇವೇ ಮೊದಲಾದುವುಗಳಿಂದ **ಮಿಥ್ಯಾರ್ಥವಿಷಯಾಯಾಃ**-ಸುಳ್ಳಾದ ವಿಷಯಗಳಿಗೇನೇ, **ಪಾರಮಾರ್ಥಿಕ್ಯಾ ಏವ**-ನಿಶ್ಚಯವಾದವು ಎಂಬ ಭಾವನೆಯುಳ್ಳ, **ಬುದ್ಧೇರುತ್ಪಾದಕತ್ವೇನ**-ಬುದ್ಧಿಯನ್ನುಂಟುಮಾಡುವದರಿಂದ, **ಮಾಯಾವೀ** ಎಂದು **ಪ್ರಯೋಗವು, ತಥಾ**-ಹಾಗೆಯೇ, **ಮಂತ್ರೌಷಧಾದಿ ರೇವಚ**-ಸತ್ಯವಾದ ಮಂತ್ರ ಔಷಧಗಳೇ ಮುಂತಾದವುಗಳನ್ನುಳ್ಳದುತಾನೇ **ತತ್ರಮಾಯಾ**-ಅಲ್ಲಿಯೂ ಮಾಯೆ ಎಂದು ಹೇಳಿಸಿಕೊಳ್ಳುವದು ; ಉದಾಹರಿಸಿದ ಪ್ರಮಾಣದಲ್ಲಿ **ಮಾಯಾ** ಶಬ್ದವು ಸತ್ಯವಾದುದಾಗಿದ್ದರೂ ಭಿನ್ನಭಿನ್ನವಾಗಿ ವ್ಯತ್ಯಸ್ತವಾಗಿ ತೋರುವದನ್ನು ಬೋಧಿಸಿದರೂ, **ಈ** ಶ್ಲೋಕದಲ್ಲಿ ಮಾಯಾ ಶಬ್ದವು ಮಿಥ್ಯಾರ್ಥವನ್ನು ಬೋಧಿಸುತ್ತದೆಂದು ಏಕೆ ಒಪ್ಪಕೂಡದು ಎಂದರೆ, ಒಂದು ಹೇತುವಿನ ಮೂಲಕ ಸಮಾಧಾನವನ್ನು ಹೇಳುತ್ತಾರೆ. ಒಂದು ಶಬ್ದಕ್ಕೆ ಅನೇಕ ಕಡೆಯಲ್ಲಿ ಪ್ರಯೋಗವನ್ನು ಕಂಡರೆ, ಅಲ್ಲೆಲ್ಲಾ ಒಂದೇ ಯಾವುದೋ ಸಮಾನವಾದ ಮುಖ್ಯಾಂಶದ ಮೂಲಕ ಹಾಗೆ ಪ್ರಯೋಗವೆಂದು ಭಾವಿಸುವದು ಯುಕ್ತವೆಂದು ಉಪದೇಶಿಸುತ್ತಾರೆ. **ಸರ್ವಪ್ರಯೋಗೇಷು**-ಸಮಸ್ತ ಪ್ರಯೋಗಗಳಲ್ಲೂ, **ಅನುಗತಸ್ಯೈಕಸ್ಯೈವ**-ಎಲ್ಲಾದರಲ್ಲೂ ಅನುಸರಿಸಿ ತೋರಿಬರುವ ಒಂದಂಶಕ್ಕೇನೆ, **ಶಬ್ದಾರ್ಥತ್ವಾತ್**-ಆ ಶಬ್ದದ ಅರ್ಥವೆಂದು ಭಾವಿಸುವದು ಯುಕ್ತವಾದುದರಿಂದ, ಈ ನ್ಯಾಯವನ್ನು ಈಗ ಮಾಯಾಶಬ್ದಪ್ರಯೋಗಗಳಲ್ಲಿ ಪ್ರದರ್ಶಿಸುತ್ತಾರೆ. **ತತ್ರ**-ಆ ಸಂದರ್ಭವಲ್ಲಿ, **ಮಿಥ್ಯಾರ್ಥೇಷು**-ಸುಳ್ಳಾದ ವಿಷಯಗಳಲ್ಲಿ, **ಮಾಯಾ ಶಬ್ದದ ಪ್ರಯೋಗವು, ಮಾಯಾ ಕಾರ್ಯಬುದ್ಧಿ ವಿಷಯತ್ವೇನ**-ಸುಳ್ಳಾದುದನ್ನುಂಟು ಮಾಡಿದುದು ಸತ್ಯವಾದ ಬುದ್ಧಿಗೆ ವಿಷಯವಾಗುವುದರ ಮೂಲಕ, **ಔಪಚಾರಿಕಃ**-ಲಾಕ್ಷಣಿಕವಾದುದು ; ಸುಳ್ಳಾಗಿರುವದು ಸತ್ಯವೆಂದು ಜ್ಞಾನವಿಷಯವಾಗುವ ಹಾಗೆ ಮಾಡುವದು ಯಾವುದೋ ಅದು ಮಾಯೆ ಎನಿಸುತ್ತದೆ. ಇದರಿಂದ ಹಾಗೆ ಭ್ರಮವನ್ನುಂಟುಮಾಡುವದು ಮಿಥ್ಯೆಯಲ್ಲವು ; ಅಂತಹ ಜ್ಞಾನವೂ ಮಿಥ್ಯೆಯಲ್ಲವು. ಸುಳ್ಳಾಗಿರುವ ಪದಾರ್ಥ ಜ್ಞಾನವನ್ನುಂಟುಮಾಡುವದರಿಂದ ಲಾಕ್ಷಣಿಕವಾಗಿ ಸತ್ಯವಾದುದಕ್ಕೂ **ಮಾಯಾ** ಎಂಬ ಶಬ್ದಪ್ರಯೋಗವೆಂಬ ಭಾವವು. ಹಾಗೆ ಲಾಕ್ಷಣಿಕಪ್ರಯೋಗ ಉಂಟೆಂಬುದಕ್ಕೆ ಒಂದು ನಿದರ್ಶನವನ್ನು ಕೊಡುತ್ತಾರೆ, **ಮಂಚಾಃ ಕ್ರೋಶನ್ತೀತಿವತ್**-ಮಂಚಗಳು ಕೂಗುತ್ತವೆ ಎಂಬ ಪ್ರಯೋಗವು ಹೇಗೆ ಲಾಕ್ಷಣಿಕವೋ ಹಾಗೆ. ಮಂಚಗಳು ಕೂಗುತ್ತವೆ ಎಂದರೆ ಮಂಚದಲ್ಲಿ ಮಲಗಿರುವರು ಕೂಗುತ್ತಾರೆ ಎಂಬರ್ಥವು ಹೇಗೋ, ಹಾಗೆಯೇ ಮಿಥ್ಯಾರ್ಥವನ್ನುಂಟುಮಾಡುವದಕ್ಕೂ **ಮಾಯಾ** ಎಂಬ ಪ್ರಯೋಗವೆಂಬ ತಾತ್ಪರ್ಯವು. ಆದರೆ **ಮಾಯಾ** ಶಬ್ದಕ್ಕೆ ಬೇರೆ ಬೇರೆ ಅರ್ಥವಿರಕೂಡದೋ ? ಒಂದೇ ಪ್ರವೃತ್ತಿ ನಿಮಿತ್ತವಿರಬೇಕೆಂಬುದೇನು ? ಎಂದರೆ, ಸಂಬಂಧಮೂಲಕವಾಗಲಿ, ಗುಣಯೋಗಮೂಲಕವಾಗಲಿ, ಸಾಮಾನ್ಯ ಭಾವವನ್ನು ತೋರಿಸುವದು ಅಸಾಧ್ಯವಾ- ಸಂದರ್ಭಗಳಲ್ಲಿ ಪ್ರಯೋಗಗಳಿಗೆ ಬೇರೆಬೇರೆ ಅರ್ಥಕಲ್ಪನೆಯು ನ್ಯಾಯವು. ಹಾಗಲ್ಲದೆ, **ವಿಚಿತ್ರ ಕಾರ್ಯಕರತ್ವ** ರೂಪ ಸಂಬಂಧವನ್ನು ಎಲ್ಲಾ ಪ್ರಯೋಗಗಳಲ್ಲೂ ಪ್ರದರ್ಶಿಸುವದು ಸಾಧ್ಯವಾ-

**ಭಾ. ತ್ವೇನೌಪಚಾರಿಕಃ, ಮಂಚಾಃ ಕ್ರೋಶನ್ತೀತಿವತ್। ಏಷಾಗುಣಮಯೀ ಪಾರಮಾರ್ಥಿಕೀ ಭಗವನ್ಮಾಯೈವ (೧) "ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ" ಇತ್ಯಾದಿಷ್ವಭಿಧೀಯತೇ। ಅಸ್ಯಾಃ ಕಾರ್ಯಂ ಭಗವತ್ಸ್ವರೂಪ**

ಗಿರುವಾಗ ಮಿಥ್ಯಾತ್ವವನ್ನಾರೋಪಿಸುವದು ನ್ಯಾಯವಿಲ್ಲವೆಂಬ ಭಾವವು. ಇದೂ ಹಾಗಿರಲಿ; **ಮಾಯಾ** ಶಬ್ದಕ್ಕೆ ಮಿಥ್ಯೆಯಾದುದೆಂಬರ್ಥವನ್ನು ಹೇಳಿದರೆ, **ಅಸತ್ಯವಾದುದು ಗುಣಮಯೀ** ಎಂದು ಹೇಗೆ ಹೇಳಿಸಿಕೊಳ್ಳುತ್ತದೆ? ಯಾವಾಗ ಮಾಯೆಯು **ಗುಣಮಯವಾಯಿತೋ** ಆವಾಗ ಅದು ಅಸತ್ಯವೆಂಬ ವಾದವು ದೂರೀಕೃತವಾಯಿತು. ಆಗ ದುರತ್ಯಯಾ ಎಂಬ ಹೇಳಿಕೆಯೂ ಕೂಡುವದಿಲ್ಲವು. ಶುಕ್ತಿರಜತರೂಪ ಭ್ರಮಜ್ಞಾನದಲ್ಲಿ ಮಾಯಾಶಬ್ದವೆಲ್ಲಿಯೂ ಪ್ರಯೋಗಿಸಲ್ಪಟ್ಟಿಲ್ಲವೆಂದೂ ಹೇಳುತ್ತಾರೆ. ಈ ಭ್ರಮಜ್ಞಾನಕ್ಕೆ ಕಾರಣವಾದ ಶುಕ್ತಿಯೂ ಸತ್ಯವಾದುದರಿಂದ ಮಿಥ್ಯಾ ಎಂದು ಹೇಳಲು ಸಾಧ್ಯವಲ್ಲವು. ಆದುದರಿಂದ **ಮಾಯಾ** ಎಂಬ ಶಬ್ದದ ಸರಿಯಾದ ಪ್ರಯೋಗವು ವಿಚಿತ್ರ ಸೃಷ್ಟಿಕರತ್ವವನ್ನು ಬೋಧಿಸುವ ಸಂಧರ್ಭದಲ್ಲಿ ಎಂದು ಭಾವಿಸತಕ್ಕ-ಸ್ಟ. **ಈ** ಕಾರಣದಿಂದಲೇ ಶ್ರುತಿಯಲ್ಲೂ **ಮಾಯಾ** ಶಬ್ದವು ಸತ್ಯವಾದ ವಿಚಿತ್ರ ಸೃಷ್ಟಿಕರಿಯಾದ ಪ್ರಕೃತಿಯನ್ನೇ ಬೋಧಿಸುತ್ತದೆ ಎಂದು ಹೇಳಿ, ಅದಕ್ಕೆ ಶ್ರುತಿಪ್ರಮಾಣವ-್ನ ತೋರಿಸುತ್ತಾರೆ. **ಏಷಾ**-ಈ ಪ್ರತ್ಯಕ್ಷವಾದ, **ಗುಣಮಯೀ**-ತ್ರಿಗುಣಗಳ ಪ್ರಾಚುರ್ಯವುಳ್ಳ, **ಪಾರಮಾರ್ಥಿಕೀ-"ಅಜಾಮೇಕಾಂ"** ಇತ್ಯಾದಿ ಶ್ರುತಿಗಳ ಮೂಲಕ ಅನಾದಿಯಾಗಿರುವದರಿಂದ ಸತ್ಯವಾಗಿರುವ, **ಭಗವನ್ಮಾಯೈವ**-ಭಗವಂತನಿಗೆ ಶರೀರವಾಗಿ ಶೇಷಭೂತವಾಗಿ, ಒಂದೆಯೇ ತ-್ನ ಸಂಬಂಧವಾದ ಪ್ರಕೃತಿ ಎಂದು ಹೇಳಿಸಿಕೊಂಡಿರುವ ಭಗವಂತನ ಮಾಯೆಯೇ **"ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ"** "ಮಾಯೆಯನ್ನು ಪ್ರಕೃತಿ ಎಂದು ತಿಳಿ, ಮಾಯೆಯುಳ್ಳವನನ್ನು ಸರ್ವೇಶ್ವರನೆಂದು ತಿಳಿ" ಎಂದು **ಇತ್ಯಾದಿಷು**-ಶ್ವೇತಾಶ್ವರೋಪನಿಷತ್ತೇ ಮೊದಲಾದುವುಗಳಲ್ಲಿ, **ಅಭಿಧೀಯತೇ**-ಹೇಳಲ್ಪಟ್ಟಿರುತ್ತದೆ. ಈ ವಾಕ್ಯದ ಹಿಂದಿನ ಶ್ರುತಿವಾಕ್ಯವು, **"ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್। ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ"** (ಶ್ವೇ. ೪. ೯.) ಮಾಯೆಯಿಂದ ಬದ್ಧನಾದವನು ಜೀವನೆಂದು ಹೇಳಿರುವದರಿಂದ ವಿಚಿತ್ರಸೃಷ್ಟಿಗೆ ಹೇತುಭೂತವಾದ ಪ್ರಕೃತಿಯೇ ಹೇಳಲ್ಪಟ್ಟಿತೆಂಬುದು ಸಿದ್ಧವು. ಆದುದರಿಂದ ಶ್ರೀ ಯಾಮುನೇಯವರೂ ಸಹ ಈ ಶ್ಲೋಕಾಭಿಪ್ರಾಯವನ್ನು ಈ ಅಧ್ಯಾಯದ ಸಂಗ್ರಹ ಶ್ಲೋಕದಲ್ಲಿ **"ಪ್ರಕೃತ್ಯಾಸ್ಯತಿರೋಧಿಃ"** ಎಂದೇ ಹೇಳಿರುತ್ತಾರೆ. ಪರಮಾತ್ಮನ ಯಥಾರ್ಥಸ್ವರೂಪದ ಜ್ಞಾನವಿಲ್ಲದಿರೋಣವು ಈ ಚೇತನನಿಗಿರುವ ಪ್ರಕೃತಿ ಸಂಬಂಧವು. ಪ್ರಕೃತಿಯಿಂದುಂಟಾಗುವ ಅಜ್ಞಾನನಿವೃತ್ತಿಗೆ ಭೇಷಜವು ಶರಣಾಗತಿಯು ಎಂದೂ ಹೇಳಲ್ಪಟ್ಟಿರುತ್ತದೆ. ಈ ವಿಷಯದಲ್ಲಿ ಹೆಚ್ಚು ವಿವಾದವು ಬೇಕಿಲ್ಲವು. ಶ್ರುತಿಯೇ **ಮಾಯಾ** ಶಬ್ದಕ್ಕೆ ನಿತ್ಯವಾದ ಪ್ರಕೃತಿ ಎಂದು ಅರ್ಥವನ್ನು ಹೇಳಿಬಿಟ್ಟಿದೆ ಎಂಬ ಭಾವವು. ಆದರೆ ಭಗವಚ್ಛರೀರವಾದ ಪ್ರಕೃತಿಗೆ **ಮಾಯೆ** ಎಂಬ ಹೆಸರು ಏಕೆ? ಎಂದು ಪ್ರಶ್ನಿಸಬಹುದೆಂದು ಅದಕ್ಕೆ ಉತ್ತರವನ್ನು ದಯಪಾಲಿಸಿರುತ್ತಾರೆ. **ಅಸ್ಯಾಃ ಕಾರ್ಯಂ**-ಈ ಪ್ರಕೃತಿಯ ಕಾರ್ಯವಾದರೋ ಅದನ್ನೇ ಶರೀರವಾಗಿ ವಹಿಸಿರುವ ಚೇತನ ವರ್ಗಕ್ಕೆ, **ಭಗವತ್ಸ್ವರೂಪತಿರೋಧಾನಂ** ಭಗವಂತನ ಯಥಾರ್ಥವಾದ ಸ್ವರೂಪವನ್ನು ಮರೆಸಿಬಿಡೋಣವು. ಇನ್ನೂ ಏನೆಂದರೆ,—**ಸ್ವಸ್ವರೂಪ ಭೋಗ್ಯತ್ವ ಬುದ್ಧಿಶ್ಚ**-ತನ್ನ ಸ್ವರೂಪದಲ್ಲೇ ಎಂದರೆ ಪ್ರಕೃತಿಯಲ್ಲೇ ಭೋಗ್ಯಬುದ್ಧಿಯೂ ಸಹ. ಮಾಯಾ ಶಬ್ದದಿಂದ ಪ್ರಕೃತಿಯು ಏಕೆ ಹೇಳಿಸಿಕೊಳ್ಳುತ್ತದೆ ಎಂಬುದಕ್ಕೆ ಎರಡು ಕಾರ್ಯಗ

**ಭಾ. ತಿರೋಧಾನಂ, ಸ್ವಸ್ವರೂಪ ಭೋಗ್ಯಬುದ್ಧಿಶ್ಚ। ಅತೋ ಭಗವನ್ಮಾಯಯಾ ಮೋಹಿತಂ ಸರ್ವಂ ಜಗತ್ ಭಗವಂತ ಮನವಧಿಕಾತಿಶಯಾನಂದಸ್ವರೂಪಂ ನಾಭಿಜಾನಾತಿ.** ॥ ೧೩॥ ॥

**ಭಾ. ಅ. ಮಾಯಾ ವಿಮೋಚನೋಪಾಯಮಾಹ:—**

ಇನ್ನು ಅದು ಉಂಟುಮಾಡುವದರಿಂದ ಅದಕ್ಕೆ ಆ ಹೆಸರು ಎಂದು ಹೇಳಿದರು, ಆ ಎರಡು ಕಾರ್ಯಗಳು ಯಾವುವೆಂದರೆ—ಚೇತನನಿಗೆ ತತ್ಸಂಬಂಧವಿರುವದರಿಂದ ಅವನಿಗೆ ಪರಮಾತ್ಮನ **ಯಥಾರ್ಥ** ಸ್ವರೂಪವು ವೇದ್ಯವಾಗದಹಾಗೆ ಅದನ್ನು ಮರೆಸಿಬಿಡೋಣವು, (೨) ಭೋಗ್ಯವಾದ **ಪ್ರಕೃತಿ**ಯಲ್ಲಿ ಭೋಗ್ಯತ್ವಬುದ್ಧಿಯನ್ನುಂಟುಮಾಡೋಣವು, ಎಂದರೆ ವೈಷಯಿಕ ಸುಖಗಳಲ್ಲಿ **ಆಶೆಯೂ**, ಹೀಗೆ ಪ್ರಕೃತಿಯು ಪರಮಾತ್ಮನ ಯಥಾರ್ಥಸ್ವರೂಪವನ್ನು ಮರಸಿ, ತನ್ನಲ್ಲಿ ಭೋಗ್ಯತಾಬುದ್ಧಿಯನ್ನುಂಟುಮಾಡುವದರಿಂದಲೇ ಹಿಂದಿನ ಶ್ಲೋಕದಲ್ಲಿ, **ಏಭಿಃ ಸರ್ವಮಿದಂ ಜಗತ್ ಮೋಹಿತಂ ನಾಭಿಜಾನಾತಿ** ಎಂದು ಹೇಳಿ, ಆ ಶ್ಲೋಕದ ಉಪಪಾದನೆಯೇ ಇದು ಎಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಅತಃ**-ಆ ಕಾರಣದಿಂದಲೇ, **ಭಗವನ್ಮಾಯಯಾ**-ಭಗವತ್ಸಂಬಂಧಿಯಾದ ಈ ಪ್ರಕೃತಿಯಿಂದ, **ಮೋಹಿತಂ**-ಮೇಲೆ ಉಪಪಾದಿಸಿದ ರೀತಿಯಲ್ಲಿ ಮೋಹಗೊಳಿಸಲ್ಪಟ್ಟ, **ಸರ್ವಂ ಜಗತ್**-ಸಮಸ್ತ ಜಗತ್ತೂ, ಭಗವಂತನನ್ನು, **ಅನವಧಿಕಾತಿಶಯಾನಂದಸ್ವರೂಪಂ**-ಅವಧಿಯಿಲ್ಲದ ಅತಿಶಯವುಳ್ಳ ಆನಂದ ಸ್ವರೂಪವನ್ನಾಗಿ, **ನಾಭಿಜಾನಾತಿ** ತಿಳಿಯುವುದಿಲ್ಲವು. ಹೀಗೆ ಭಗವಂತನ ಅಚಿತ್ಪ್ರಕೃತಿಯೂ, ವಿಚಿತ್ರಕಾರ್ಯಕರತ್ವಕ್ಕೆ ಉಪಯುಕ್ತವಾಗಿರುವದರಿಂದಲೇ, ಶ್ರುತಿಯಲ್ಲೂ ಮಾಯಾ ಶಬ್ದಪ್ರಯೋಗವು, **"ಮಾಯಿನಂತಮಹೇಶ್ವರಂ"**ಎಂಬಲ್ಲಿ ಮಹೇಶ್ವರಶಬ್ದವು ಸರ್ವೇಶ್ವರನನ್ನು ಬೋಧಿಸುತ್ತದೆ. ಹೀಗೆ ಮಾಯೆಯಾದ ಪ್ರಕೃತಿಗೆ ವಿಚಿತ್ರಕಾರ್ಯಕರತ್ವ ಉಂಟೆಂಬುದನ್ನು ಉಪನಿಷತ್ತೇ ಹೇಳುತ್ತದೆ. **"ಅಸ್ಮಾನ್ಮಾಯೀ ಸೃಜತೇ ವಿಶ್ವ ಮೇತತ್, ತಸ್ಮಿಂಶ್ಚಾನ್ಯೋಮಾಯಯಾ ಸನ್ನಿರುದ್ಧಃ"** (ಶ್ವೇ. ೪. ೯.) ಈ ಮಾಯಾಶಬ್ದವಾಚ್ಯವಾದ ಪ್ರಕೃತಿಯಮೂಲಕವಾಗಿ ಭಗವಂತನು ಈ ವಿಶ್ವವನ್ನೆಲ್ಲಾ ಸೃಷ್ಟಿಸುತ್ತಾನೆ; ಆ ವಿಶ್ವದಲ್ಲಿ ಅನ್ಯನಾದ ಜೀವಾತ್ಮನು ಪ್ರಕೃತಿಯಿಂದ ಬಂಧಿಸಲ್ಪಟ್ಟವನಾಗಿರುತ್ತಾನೆ ಎಂದಿರುತ್ತದೆ. ಹಿಂದಿನ ಶ್ಲೋಕದಲ್ಲೇ **ಸರ್ವಂಜಗತ್ ಮಾಂ ನಾಭಿಜಾನಾತಿ** ಎಂದು ಹೇಳಿರುವಾಗ ಪುನಃ ಆ ಶ್ಲೋಕಾಭಿಪ್ರಾಯವೇ ಇಲ್ಲಿ ಹೇಳಲ್ಪಟ್ಟಿತೆಂದು ತಿಳಿಸಿರುವದು ಸಂಗ್ರಹ ಶ್ಲೋಕದಲ್ಲಿ, **ಪ್ರಕೃತ್ಯಾಸ್ಯ ತಿರೋಧಿಃ** ಎಂಬ ವಾಕ್ಯದ ಜ್ಞಾಪಕಾರ್ಥವಾಗಿ ಎಂದು ಭಾವಿಸತಕ್ಕದ್ದು.

**ಭಾಷ್ಯಾವತಾರಿಕೆಯ ಅರ್ಥವು:—**ಶ್ರೀ ಯಾಮುನೇಯರ ಸಂಗ್ರಹಶ್ಲೋಕವನ್ನನುಸರಿಸಿ, ಈ ಅಧ್ಯಾಯದ ಮೂರನೆಯ ವಿಷಯವಾದ ಮಾಯಾತರಣೋಪಾಯವಾದ ಶರಣಾಗತಿಯು ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ಈ ಅರ್ಧಶ್ಲೋಕಕ್ಕೆ ಕೊಟ್ಟಿರುತ್ತಾರೆ. ಈ ಶ್ಲೋಕವನ್ನು ಎರಡಾಗಿ ವಿಭಾಗಿಸಲೂ ಅದೇ ಕಾರಣವು. ಪೂರ್ವಾರ್ಧದಿಂದ, ಭಗವತ್ಸ್ವರೂಪ ಯಥಾತ್ಮ್ಯವು ತಿಳಿಯದೇ ಇರುವದಕ್ಕೆ ಕಾರಣವು, ಚೇತನನು ಧರಿಸಿಕೊಂಡಿರುವ ದೇಹರೂಪವಾದ ಮಾಯಾರೂಪ ಕವಚವು. ಅದನ್ನು ತೆಗೆದು ಬಿಸಾಡುವ ಉಪಾಯವು ಯಾವುದೆಂದರೆ ಸರ್ವೇಶ್ವರನಲ್ಲಿ ಮಾಡುವ ಪ್ರಪದನವು. ಈ ಚೇತನನ ಕರ್ಮಾನುಸಾರವಾಗಿ ಸರ್ವೇಶ್ವರನು ಈ ದೇಹಕವಚವು ಚೇತನನಿಗುಂಟಾಗುವಹಾಗೆ ಮಾಡಿರುತ್ತಾನೆ. ಇದು ಅಂಟಿಕೊಂಡು ಬಂದಿರುತ್ತದೆ. ಹಳೇ ಕವಚ ಹರಿದುಹೋದರೆ ಪುನಃಪುನಃ ಹೊಸಹೊಸ ಕವಚಗಳನ್ನು ಹಾಕಿಕೊಳ್ಳು

**ಮೂ. ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ ||** **೧೪.**

ತ್ತಾನೆಂಬ **"ನವಾನಿಗೃಹ್ಣಾತಿ ನರೋಽಪರಾಣಿ"** ಎಂದು ಹಿಂದೆಯೇ ಗೀತಾ ಎರಡನೆಯ ಅಧ್ಯಾಯದಲ್ಲೇ ಹೇಳಲ್ಪಟ್ಟಿರುತ್ತದೆ. ಈ ಕವಚವನ್ನು ಯಾರು ಕರ್ಮಾನುಸಾರ ಅಂಟಿಕೊಳ್ಳುವಹಾಗೆ ಮಾಡಿದರೋ ಅವರೇ ಅದನ್ನು ಬಿಡಿಸಿ ತೆಗೆದುಹಾಕಬಲ್ಲರು. ಇದಕ್ಕಾಗಿ ಭಗವಂತನನ್ನು ನಾವು ವಶಮಾಡಿಕೊಳ್ಳಬೇಕು. **"ತಸ್ಯಚ ವಶೀಕರಣಂ ತಚ್ಛರಣಾಗತಿರೇವ"** ಎಂದು ಹೇಳಿರುವಹಾಗೆ ಆತನಲ್ಲಿ ಮಾಡುವ ಶರಣಾಗತಿಯೇ ಮಾಯಾ ವಿಮೋಚನಕ್ಕೆ ಉಪಾಯವೆಂದು ಹೇಳುತ್ತಾರೆ. ಸಂಗ್ರಹಶ್ಲೋಕದಲ್ಲಿ ಸುಮ್ಮನೆ **ಶರಣಾಗತಿ** ಎಂದಿರುತ್ತದೆ; ಆ ಮಾಯಾನಿವೃತ್ತ್ಯರ್ಥಂ ಶರಣಾಗತಿಃ ಎಂದು ಇಟ್ಟುಕೊಳ್ಳತಕ್ಕದ್ದೆಂಬ ಭಾವವು. ಆದುದರಿಂದಲೇ **ಮಾಯಾವಿಮೋಚನೋಪಾಯಮಾಹ** ಎಂದು ಹೇಳಲ್ಪಟ್ಟಿರುತ್ತದೆ.

**ಮೂಲಕ್ಕೆ ಅರ್ಥವು:—ಮಾಮೇವ**-ಈ ಬಂಧನದಿಂದ ಬಿಡಿಸಲು ಸಮರ್ಥನೂ ಅದಕ್ಕೆ ಸುಗುಣವಾಗಿ ಕೃಪಾಸಾಗರನೂ ಆದ ನನ್ನನ್ನೇ, **ಯೇ ಪ್ರಪದ್ಯಂತೇ**-ಯಾರು ಪ್ರಪದನ ಎಂದರೆ ಶರಣಾಗತ್ಯನುಷ್ಠಾನದ ಮೂಲಕ ಆಶ್ರಯಿಸುವರೋ, **ತೇ**-ಅವರು, **ಮಾಯಾ ಮೇತಾಂ**-ಇಷ್ಟಪ್ರಾಪ್ತಿಗೆ ಪ್ರತಿಬಂಧಕವಾಗಿರುವ ಈ ದುರತ್ಯಯವೆಂದು ಹೇಳಿರುವ ಪ್ರಕೃತಿಯನ್ನು, **ತರಂತಿ**-ದಾಟುತ್ತಾರೆ. ಅವನನ್ನು ಸಿದ್ಧೋಪಾಯನನ್ನಾಗಿ ಪ್ರಪದನಮೂಲಕ ವರಿಸಿದರೆ, ಆತನು ಅದರಿಂದ ಪ್ರೀತನಾಗಿ ಉಪಾಸನೆಯೂ ಮೋಕ್ಷವೂ ಸಹ ಕೈಗೂಡುವನು ಎಂಬ ತಾತ್ಪರ್ಯವು. ಇಲ್ಲಿ **ಮಾಮೇವ** ಎಂಬವಧಾರಣವಿರುವದರಿಂದ ಮೋಕ್ಷಪ್ರಾಪ್ತಿಯನ್ನುಂಟು ಮಾಡಲು ಮಾತ್ರ ತಾನೊಬ್ಬನೇ ಸಮರ್ಥನೇ ವಿನಾ ಇನ್ನು ಯಾರೂ ಸಮರ್ಥರಲ್ಲವೆಂಬ ಭಾವವು. ಇದರಿಂದ ಬ್ರಹ್ಮರುದ್ರೇಂದ್ರಾದಿ ಅನ್ಯದೇವತಾ ಭಜನವು ನಿಷೇಧಿಸಲ್ಪಟ್ಟಿರುತ್ತದೆ. ಇದನ್ನೇ ಮುಂದೆ ವಿಪುಳವಾಗಿ ಉಪಪಾದಿಸಿ ಹೇಳುತ್ತಾರೆ. (ಗೀ. ೭. ೨೦.) ಎರಡನೆಯ ಅಧ್ಯಾಯದಲ್ಲಿ ಅರ್ಜುನನು ತನಗೆ ಪರಮ ಶ್ರೇಯಸ್ಸನ್ನು ಪ್ರಾರ್ಥಿಸಿ, **"ಶಾಧಿಮಾಂ ತ್ವಾಂ ಪ್ರಪನ್ನಂ"** ಎಂದು ತಾನು ಮೋಕ್ಷಾರ್ಥಿ ಎಂಬುದನ್ನು ವ್ಯಕ್ತಪಡಿಸಿರುವದರಿಂದ, ಅರ್ಜುನನು ಮೋಕ್ಷೋಪಾಯವನ್ನು ಅಪೇಕ್ಷಿಸುವನೆಂದಾಯಿತು. ಕರ್ಮಯೋಗೋಪದೇಶಮೂಲಕ ಆತನು ಯುದ್ಧಮಾಡಲು ಪ್ರೋತ್ಸಾಹಿಸಲ್ಪಡಬೇಕಾಗಿರುವದರಿಂದ ಈ ಶ್ಲೋಕಾರ್ಧದಲ್ಲಿ ಹೇಳಿರುವ ಪ್ರಪದನವು ಉಪಾಸನಾಂಗವಾದ ಶರಣಾಗತಿಯು. ಉಪಾಸನಾರಂಭಕ್ಕೆ ಪ್ರತಿಬಂಧಕಗಳಾದ ಪಾಪಗಳ ವಿಮೋಚನಕ್ಕಾಗಿ ಉಪದೇಶಿಸಿದ ಶರಣಾಗತಿಯು. ಆದರೆ ಸ್ತ್ರೀ ಶೂದ್ರಾದಿಗಳು ಉಪಾಸನಕ್ಕೆ ಅನರ್ಹರು, ಇನ್ನೂ ಅರ್ಹರಾದ ತ್ರೈವರ್ಣಿಕರಲ್ಲೇ ಅನೇಕ ಅಶಕ್ತರುಂಟು. ಅವರಿಗೆಲ್ಲಾ ಮಾಯಾತರಣವು ಎಂದರೆ ಪ್ರಕೃತಿ ಬಂಧವಿಮೋಚನವು ಹೇಗೆ ಎಂಬ ಪ್ರಶ್ನೆಯು ನ್ಯಾಯವಾಗಿ ಈ ಸಂದರ್ಭದಲ್ಲೇ ಉಂಟಾಗತಕ್ಕದ್ದೇಯಾಗಿರುತ್ತದೆ. ಅಂತಹ ಅಶಕ್ತರಿಗೆ ಪರಮ ಕೃಪಾಳುವು ಈ ಗುರೂಪಾಯಕ್ಕೆ ಬದಲಾಗಿ ಲಘೂಪಾಯವನ್ನು ಕೊನೆಯಲ್ಲಿ ವಿಧಿಸಿರುತ್ತಾನೆ. ಇದು ಇತರ ಪ್ರಮಾಣಗಳಾದ ಕಠವಲ್ಲಿ ತೈತ್ತಿರೀಯ ಭಗವಚ್ಛಾಸ್ತ್ರ ಮತ್ತು ಶ್ರೀಮದ್ರಾಮಾಯಣಾದಿ ಇತಿಹಾಸ, ಪದ್ಮಪುರಾಣ ಮೊದಲಾದುವುಗಳಿಂದ ವ್ಯಕ್ತವು. ಅಂಥವರಿಗೂ ಕೂಡ ಈ ಪ್ರಪದನವು ಸಾಧ್ಯೋಪಾಯವಾಗಿ ಮಾಯಾ ತರಣವನ್ನುಂಟುಮಾಡಿ ಮೋಕ್ಷವನ್ನುಂಟುಮಾಡುವದರಲ್ಲಿ ಸಂದೇಹವಿಲ್ಲವು. ಶರಣಾಗತಿಯು ಸರ್ವೋತ್ಕೃಷ್ಟ ಭೇಷಜವು. ಇಲ್ಲಿ ಉಪಾಸನಾರಂಭಕ್ಕೆ ವಿಘ್ನಗಳಾದ ಪಾಪಗಳ ನಿರ್ಮೂಲನಕ್ಕಾಗಿ ಅದು ಹೇಳಲ್ಪಟ್ಟಿದ್ದರೂ, ಅಶಕ್ತನಿಗೆ ಇದೇ, ಭರನ್ಯಾಸರೂಪದಲ್ಲಿ ಪರಮೌಷಧವಾಗಿ ಪರಿಣಮಿಸಿ, ಈ ಪ್ರಾಕೃತ ದೇಹ

**ಭಾ. ಮಾಮೇವ-ಸತ್ಯಸಙ್ಕಲ್ಪಂ ಪರಮಕಾರುಣಿಕ ಮನಾಲೋಚಿತ ವಿಶೇಷಾಶೇಷಲೋಕಶರಣ್ಯಂ, ಯೇ ಶರಣಂ ಪ್ರಪದ್ಯಂತೇ,ತ ಏತಾಂ-ಮದೀಯಾಂ ಗುಣಮಯೀಂ ಮಾಯಾಂತರಂತಿ-ಮಾಯಾ ಮುತ್ಸೃಜ್ಯ ಮಾಮೇವೋಪಾಸತೇ ಇತ್ಯರ್ಥಃ॥೧೪॥**

ತ್ಯಾಗರೂಪ ಮಾಯಾ ತರಣಕ್ಕೂ ಹೇತುವಾಗಿ, ಮೋಕ್ಷವನ್ನುಂಟುಮಾಡುತ್ತದೆ, ಎಂಬುದರಲ್ಲಿ ಸಂದೇಹವಿಲ್ಲವು. ಇದು ಗೀತಾ ಚರಮ ಶ್ಲೋಕದಲ್ಲಿ ಮುಂದೆ ಪ್ರೋಕ್ತವು. ಈ ಪ್ರಪದನವು ಭಕ್ತಿಯೋಗಕ್ಕೂ ಭರನ್ಯಾಸಕ್ಕೂ ಹೀಗೆ ಎರಡಕ್ಕೂ ಆವಶ್ಯಕವು. ಭರನ್ಯಾಸದಲ್ಲಿ ಅದ್ವಾರಕವಗಿ ಎಂದರೆ ಸ್ವತಂತ್ರವಾಗಿ ಉಪಾಯವು. ಭಕ್ತಿಯೋಗದಲ್ಲಾದರೋ ಸದ್ವಾರಕವಾಗಿ ಕರ್ಮಯೋಗಮೂಲಕವಾಗಿಯಾಗಲಿ ಅಥವಾ ಕರ್ಮಯೋಗ ಜ್ಞಾನಯೋಗಗಳ ಮೂಲಕವಾಗಿಯಾಗಲಿ ಸಾಧನವೆಂದು ಭಾವಿಸತಕ್ಕದ್ದು.

**ಭಾಷ್ಯಾರ್ಥವು:—ಮಾಮೇವ**-ನನ್ನನ್ನೇ, ಇಲ್ಲಿರುವ ಅವಧಾರಣದಿಂದ ಆರ್ಥವಾಗಿ ತೋರಿಬರುವದನ್ನು ಸೂಚಿಸುತ್ತಾರೆ. **ಸತ್ಯಸಂಕಲ್ಪಂ**-ಸತ್ಯವಾದ ಸಂಕಲ್ಪವನ್ನು ಹೊಂದಿರುವನನ್ನು, ಇವರಿಂದ ತನ್ನ ಸಂಕಲ್ಪಾನುಸಾರ ನಡೆಸಿಕೊಳ್ಳುವ ಸಾಮರ್ಥ್ಯವು ಹೇಳಲ್ಪಟ್ಟಿತು, ಮತ್ತು **ಪರಮ ಕಾರುಣಿಕಂ**-ನಿರತಿಶಯ ಕಾರುಣ್ಯವುಳ್ಳವನನ್ನೂ, ಮತ್ತು **ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯಂ**-ಆಲೋಚಿಸಲ್ಪಡದ ಏನೊಂದೂ ವಿಶೇಷವಿಲ್ಲದಿರುವ, ಎಂದರೆ ಏನೊಂದೂ ತಾರತಮ್ಯವಿಲ್ಲದೆ ಸಮಸ್ತ ಜನರಿಗೂ ರಕ್ಷಕನಾಗಿರುವ ನನ್ನನ್ನು, **ಯೇ**-ಯಾರು, **ಶರಣಂ ಪ್ರಪದ್ಯಂತೆ**-ಪ್ರಪದನಮೂಲಕ ಶರಣಹೊಂದುತ್ತಾರೋ, **ತೇ**-ಅವರು, **ಮದೀಯಾಂ ಗುಣಮಯೀಂ ಮಾಯಾಂ**-ಮೂಲದಲ್ಲಿ **ಮಾಯಾಂ** ಎಂದು ಇಷ್ಟು ಮಾತ್ರವೇ ಇದೆ, ಹಿಂದೆ ಹೇಳಲ್ಪಟ್ಟಿದುದೇ ಇಲ್ಲಿಯೂ ಹೇಳಲ್ಪಟ್ಟು, ಇನ್ನೊಂದುಸಾರಿ, 'ಅದು ಮಿಥ್ಯೆಯಲ್ಲ ಸತ್ಯವೆಂದು ಸ್ಥಾಪಿಸುವದಕ್ಕಾಗಿ ಆ ಎರಡು ವಿಶೇಷಣಗಳು ಪೂರ್ವಾರ್ಧದಲ್ಲಿ ಹೇಳಿದುದನ್ನು ಜ್ಞಾಪಿಸುತ್ತಾರೆ, ನನಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವಾಗಿರುವ ಚೇತನನ ಕರ್ಮಾನುಗುಣ ಸುಖದುಃಖಾನುಭವಕ್ಕಾಗಿ ಏರ್ಪಡಿಸಲ್ಪಟ್ಟ ಪ್ರಕೃತಿಯನ್ನು, **ತರಂತಿ**-ದಾಟುತ್ತಾರೆ, ಎಂದರೆ **ಮಾಯಾ ಮುತ್ಸೃಜ್ಯ**-ಪ್ರಕೃತಿ ಸಂಬಂಧ ದೋಷದಿಂದ ಬಿಡಲ್ಪಟ್ಟವರಾಗಿ **ಮಾಮೇವೋಪಾಸತೇ ಇತ್ಯರ್ಥಃ**-ನನ್ನನ್ನೇ ನಿರ್ವಿಘ್ನವಾಗಿ ಉಪಾಸನೆಯನ್ನು ಮಾಡುತ್ತಾರೆಂಬ ಭಾವವು. ಉಪಾಸನಾ ವಿರೋಧಿ ಪಾಪಗಳಿಂದ ಬಿಡಲ್ಪಟ್ಟವರಾಗಿ ಉಪಾಸನೆ ಮಾಡಿ ಉಪಾಸನದ ನಿಷ್ಪತ್ತಿಯನ್ನು ಹೊಂದುತ್ತಾರೆಂಬ ಭಾವವು. ಭಕ್ತಿಯೋಗವನ್ನು ಹೇಳಬೇಕಾದ ಪ್ರಕರಣವಾದುದರಿಂದ ಹೀಗೆ ವ್ಯಾಖ್ಯಾನವು. ಇಲ್ಲಿ **ಅನಾಲೋಚಿತ ವಿಶೇಷಾಶೇಷಲೋಕಶರಣ್ಯನು** ಎಂದು ಹೇಳಿರುವದರಿಂದ ಪ್ರಪದನವು ಅಂಗವಾಗಿ ಉಪಾಸನಕ್ಕೆ ಅನುಗ್ರಾಹಕವೆಂದು ಇಷ್ಟು ಮಾತ್ರವೇ ಹೇಳಿಬಿಟ್ಟರೆ, ಈ ವಿಶೇಷಣವು ಸಾರ್ಥಕ್ಯವನ್ನು ಹೊಂದುವುದಿಲ್ಲವು, ಏಕೆಂದರೆ ಸರ್ವರಿಗೂ ಆತನು ಶರಣ್ಯನಾಗುವದಿಲ್ಲವು, ತ್ರೈವರ್ಣಿಕರಾದ ಉಪಾಸಕರಿಗೆ ಮಾತ್ರವೇ ಶರಣ್ಯನು ಆಗುತ್ತಾನೆ. ಉಪಾಸನಕ್ಕೆ ಸಾಮರ್ಥ್ಯರೂಪವಾದ ಅಧಿಕಾರವಿಲ್ಲದವರಿಗೂ ಕೂಡ ಈ ಪ್ರಪದನವು ಅಂಗಿರೂಪದಲ್ಲಿ ಉಪಾಸನದ ಅಪೇಕ್ಷೆಯಿಲ್ಲದೇನೇ ಉಪಾಯವು ಎಂಬ ಭಾವದಿಂದ ಹಾಗೆ ಪ್ರಯೋಗವು. ವೇದಾಂತಸಂಗ್ರಹದಲ್ಲಿ ಶ್ರೀ ಯತಿವರ್ಯರಿಗೆ ಹಾಗೆಯೇ ಅಭಿಪ್ರಾಯವು. **"ಪ್ರಪತ್ತಿಮಂತರೇಣ ಮೋಕ್ಷಾಸಿದ್ಧೌ ಪ್ರಮಾಣಮಾಹ" ದೈವೀ ಹ್ಯೇಷಾ ಗುಣಮಯೀ" ಇತ್ಯಾದಿನಾ"** ಎಂದು ಹೇಳಿರುತ್ತಾರೆ. ಇದರ ಉಪಪಾದನೆಗೆ ಹಿಂದೆ ೭೭-೭೮ ನೆಯ ಪುಟಗಳನ್ನು ಪರಾಂಬರಿಸಿ. **ಅನಾಲೋಚಿತ ವಿಶೇಷ ಶರಣ್ಯನೆಂಬುದನ್ನು** ಪಾಪಿಷ್ಠನಾದ ಕ್ಷತ್ರ

ಬಂಧುವಿನ ಮತ್ತು ಸುಕೃತಿಯಾದ ಪುಂಡರೀಕನ ವೃತ್ತಾಂತಗಳಿಂದ ಗ್ರಹಿಸಬಹುದು. ಇದೂ ಅಲ್ಲದೆ ಕಾಕ, ಗಜೇಂದ್ರ, ವಿಭೀಷಣ, ದ್ರೌಪದಿ ಮುಂತಾದ ವೃತ್ತಾಂತಗಳಿಂದಲೂ ಗ್ರಹಿಸ ಬಹುದು. ಸರ್ವೇಶ್ವರನೇ **"ಯದಿವಾ ರಾವಣಸ್ಸ್ವಯಂ"** ಎಂದು ಹೇಳಿರುವದೇ, ಅನಾಲೋಚಿತ ವಿಶೇಷ ಶರಣ್ಯನೆಂಬುದನ್ನು ವ್ಯಕ್ತಗೊಳಿಸುತ್ತದೆ. ಇಲ್ಲಿ **ತರಂತಿ** ಎಂದು ಹೇಳಿರುವದರಿಂದಲೂ ಮಿಥ್ಯಾತ್ವಕ್ಕೆ ಅನುಕೂಲವಿಲ್ಲವು. ಏನೂ ಇಲ್ಲದೇ ಇರುವದನ್ನು ದಾಟುವೆನೆಂಬುದು ದುರ್ಯೋಧನನು ರಾಜಸೂಯ ಸಭೆಯಲ್ಲಿ ನೀರಿಲ್ಲದಕಡೆ ನೀರು ಇದೆ ಎಂಬ ಭ್ರಾಂತಿಯಿಂದ ದಾಟಿ, ಬಿದ್ದು, ದ್ರೌಪದಿ ಮೊದಲಾದವರ ಅಪಹಾಸ್ಯಕ್ಕೆ ಗುರಿಯಾದಹಾಗೆ ಪರಿಹಾಸವಿಷಯವು. ಶರಣಾಗತಿಯ ಮೂಲಕ ಆಶ್ರಯಿಸಲ್ಪಡುವನಲ್ಲಿ ಮುಖ್ಯವಾಗಿ ಕೆಲವು ಗುಣಗಳಿರಬೇಕು. ಅವುಗಳು ಯಾವುವೆಂದರೆ (೧) ಕೇಳಿದುದನ್ನು ಕೊಡುವ ಸಾಮರ್ಥ್ಯವಿರಬೇಕು; ಮತ್ತು ಕೊಡುತ್ತೇನೆಂದು ಹೇಳಿದುದನ್ನು ನಡೆಸಿಕೊಡುವ ಸ್ಥಿರ ಸಂಕಲ್ಪವಿರಬೇಕು. ಕೊಡಲು ಸಾಮರ್ಥ್ಯವೇ ಇಲ್ಲದವರನ್ನು ಆಶ್ರಯಿಸಿ ಫಲವೇನು ? ಆದುದರಿಂದ ಅನ್ಯದೇವತೆಗಳು ಮೋಕ್ಷವನ್ನು ಕೊಡುವ ಸಾಮರ್ಥ್ಯವೇ ಇಲ್ಲದವರು, ಮುಮುಕ್ಷುವಿನಿಂದ ಆಶ್ರಯಿಸಲ್ಪಡಲನರ್ಹರು; ಆದುದರಿಂದ ಸತ್ಯಸಂಕಲ್ಪನೆಂದು ಹೇಳಿದರು. ಸಾಮರ್ಥ್ಯವೇನೋ ಇರಬಹುದು. ಈತನ ದೈನ್ಯವೆಳೆಯನ್ನು **ಕಂಡು** ಮರುಗದವನು ಏನನ್ನು ಕೊಟ್ಟಾನು ? ಪರಮ ಕಾರುಣ್ಯವುಳ್ಳವನಾದರೆ ಅಪೇಕ್ಷಿತವಾದುದನ್ನು ಕೊಡಬಹುದು. ಆದುದರಿಂದ **ಪರಮ ಕಾರುಣಿಕಂ** ಎಂಬ ಪ್ರಯೋಗವು. ಸಾಧಾರಣವಾಗಿ ಲೋಕದಲ್ಲಿ ನ್ಯಾಯಾಧಿಪತಿಯು ಶಕ್ತನಾಗಿಯೂ ಇರಬಹುದು, ಪರಮಕಾರುಣಿಕನಾಗಿಯೂ ಇರಬಹುದು. ಆದರೆ ಕೆಲವು ನಿಬಂಧನೆಗಳಿಗೆ ಒಳಪಟ್ಟಿರುವದರಿಂದ ಅಪರಾಧಿಯನ್ನು ಕ್ಷಮಿಸುವ ಸ್ವಾತಂತ್ರ್ಯವಿಲ್ಲದಿರಬಹುದು. ಸ್ವತಂತ್ರನಾದ ಸರ್ವೇಶ್ವರನು ಕ್ಷಮಾಗುಣ ಭೂಮಿಷ್ಠನಾಗಿರುವದರಿಂದ, **ಅನಾಲೋಚಿತ ವಿಶೇಷಾಲೋಕಶರಣ್ಯನು;** ತಾನು "ಸರ್ವಲೋಕ ಶರಣ್ಯನೆಂದು" ಹೇಳಿಕೊಂಡು ತನ್ನಲ್ಲಿ ಶರಣಾಗತಿಯನ್ನು ಮಾಡಿದರೆ **"ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ"** ಎಂದು ಹೇಳಿದವನು; ಹಾಗಾದರೆ, ಪರಮ ಪಾಪಿಯು ಶರಣಾಗತನಾದರೂ ಆತನನ್ನು ರಕ್ಷಿಸಿಬಿಡುವನೋ ? ಎಂದರೆ ರಕ್ಷಿಸುವನೆಂದು **"ಯದಿವಾರಾವಣಸ್ಸ್ವಯಂ"** ಎಂದು ಹೇಳಿರುವದರಿಂದ, **ಅನಾಲೋಚಿತ ವಿಶೇಷಾಲೋಕಶರಣ್ಯನ. ನ ಜಾತಿಭೇದಂ ನ ಕುಲಂ ನ ಲಿಂಗಂ ನ ಗುಣಕ್ರಿಯಾಃ। ನ ದೇಶಕಾಲೌ ನಾವಸ್ಥಾಂ ಯೋಗೋಹ್ಯಯ ಮಪೇಕ್ಷತೇ** ಎಂದು ಹೇಳಿರುವ ಹಾಗೆ ಈ ಶರಣಾಗತಿಯು ಜಾತಿ, ಕುಲ, ಲಿಂಗ, ಗುಣಕ್ರಿಯಾ, ಅವಸ್ಥಾದಿಗಳ ಉತ್ಕರ್ಷವನ್ನು ಅಪೇಕ್ಷಿಸುವದಿಲ್ಲವಾದುದರಿಂದ ಅನಾಲೋಚಿತ ವಿಶೇಷಾಶೇಷಲೋಕ ಶರಣ್ಯನು. ಇಲ್ಲಿ ಹೇಳಲ್ಪಟ್ಟ ಕಾರುಣ್ಯವೂ ಅದರ ಪ್ರಿಯ ಸಹೋದರಿಯಾದ ಕ್ಷಮಾ ಇವೆರಡೂ ಇಲ್ಲದ ಪಕ್ಷದಲ್ಲಿ ಈತರ ಕಲ್ಯಾಣಗುಣಗಳೆಲ್ಲವೂ ತಮ್ಮ ಮಹಿಮೆಯನ್ನು ಕಳೆದುಕೊಳ್ಳುತ್ತಿದ್ದವು. ಈ ಸರ್ವಶಕ್ತತೆಯಿಂದ ಕೂಡಿದ ಸತ್ಯಸಂಕಲ್ಪತೆಯೂ, ಕ್ಷಮಾಗುಣದಿಂದ ಸೇರಿದ ಕಾರಣ್ಯವೂ ಇರುವದರಿಂದಲೇ ಎಲ್ಲರೂ ಶರಣಾಗತಿಯನ್ನನುಷ್ಠಿಸಿ ಆಶ್ರಯಿಸಲು ಅರ್ಹರು, ಎಂಬ ಭಾವವೂ ತೋರಿಬರುತ್ತದೆ, ಇಲ್ಲಿ ಉಪಪಾದಿತವಾಗಿರುವ ಈ ಶರಣಾಗತಿಯು ಸಮರ್ಥನಿಗೆ ಗುರೂಪಾಯವಾದ ಉಪಾಸನೆಗೆ ಅಂಗವಾಗಿ ಇಲ್ಲಿ ಹೇಳಲ್ಪಟ್ಟಿರುತ್ತದೆ. ಇದೂ ಅಲ್ಲದೆ ಶ್ರೀ ಯತಿವರ್ಯರೇ ಅನುಗ್ರಹಿಸಿರುವ ಗದ್ಯತ್ರಯದಲ್ಲಿ ಈ ಶರಣಾಗತಿಯು, ಅಸಮರ್ಥನಿಗೆ ಲಘೂಪಾಯವಾಗಿ ಅಂಗಿರೂಪದಲ್ಲಿ ಉಪದೇಶಿಸಿರುತ್ತಾರೆ. ಎರಡಕ್ಕೂ ಅನ್ವಯಿಸುವಹಾಗೆ ಇಲ್ಲಿ **ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯನು** ಎಂದು ಹೇಳಿದರು. ಆದರೆ ಈ ಉಪಾಸನೆಯ ವಿಷಯದಲ್ಲಿ ಭಕ್ತಿ

**ಭಾ. ಅ. ಕಿಮಿತಿ ಭಗವದುಪಾಸನಾಪಾದಿನೀಂ ಭಗವತ್ಪ್ರಪತ್ತಿಂ ಸರ್ವೇ ನ ಕುರ್ವತ ಇತ್ಯತ್ರಾಹ—**

ಯೋಗವು ಸಮರ್ಥರಾದ ತ್ರೈವರ್ಣಿಕರಿಗೆ ಮಾತ್ರ ಅನ್ವಯಿಸುವ ಸಂದರ್ಭದಲ್ಲಿ ಈ ಪ್ರಯೋಗಕ್ಕೆ ಸಾರ್ಥಕ್ಯವೇನು? ಎಂದರೆ **ಅಶೇಷಾಶೇಷಲೋಕ** ವೆಂಬುವರಿಂದ ಆಗ ಉಪಾಸನಾರ್ಹವಾದ ಸರ್ವಜನರೆಂದಿಟ್ಟುಕೊಂಡು, ಅವರಲ್ಲಿ ಕುಲ, ಗುಣ, ಕ್ರಿಯಾಗಳನ್ನು ಯಾವುದನ್ನೂ ಪರಿಗಣಿಸದೆ, ಆತನು ಎಷ್ಟೇ ದೋಷಯುಕ್ತನಾಗಿದ್ದರೂ ಸರ್ವೇಶ್ವರನಿಗೆ ಆತನು ಪ್ರಿಯನಾಗಿ ಆತನ ಯೋಗಾರಂಭ ನಿಷ್ಪತ್ತಿಗಳಿಗೆ ಪ್ರತಿಬಂಧಕಗಳಾದ ಪಾಪಗಳೆಲ್ಲಾ ತೊಲಗಿ ಭಕ್ತಿಯೋಗವು ಕೈಗೂಡುತ್ತದೆಂಬ ಭಾವವು. **ಮಾಯಾಂತರಂತಿ** ಎಂಬುದಕ್ಕೆ **ಮಾಯಾಂ ಉತ್ಸೃಜ್ಯ ಮಾಮೇವೋಪಾಸತೇ ಇತ್ಯರ್ಥಃ** ಎಂಬ ವ್ಯಾಖ್ಯಾನಕ್ಕೆ ಕಾರಣವು, ಪ್ರಕರಣವು ಉಪಾಸನ ಪ್ರಕರಣವಾಗಿ ಅದಕ್ಕೆ ಶರಣಾಗತಿಯು ಅಂಗವಾದುದರಿಂದ ಹಾಗೆ ತಾತ್ಪರ್ಯವನ್ನು ಸೂಚಿಸುತ್ತಾರೆ. ಇದು ಅಂಗರೂಪ ಶರಣಾಗತಿಯೆಂದು ವಿವೇಕಿಸಿದುದರಿಂದಲೇ ಅಂಗಿರೂಪ ಶರಣಾಗತಿಯು ಬೇರೆ ಒಂದುಂಟೆಂಬುದು ದ್ಯೋತಿತವು. ಇದನ್ನು ಗದ್ಯದಲ್ಲಿ ಉಪದೇಶಿರುತ್ತಾರೆ. ಶ್ರೀ ದೇಶಿಕರವರು ಈ ಅಂಗಿ ಪ್ರಪತ್ತಿಗೆ ಅಧಿಕಾರಿ, ಅದರ ಸ್ವರೂಪ ಮೊದಲಾದವುಗಳನ್ನು ಶ್ರೀಮದ್ರಹಸ್ಯತ್ರಯಸಾರದ ಅಧಿಕಾರಿ ವಿಭಾಗ, ಪರಿಕರವಿಭಾಗ, ಸಾಂಗಪ್ರಪದನಾದಿಕಾರಗಳಲ್ಲಿ ಉಪಪಾದಿಸಿರುತ್ತಾರೆ. ಇವುಗಳಿಗೆ ದಾಸನು ಬರೆದಿರುವ ವ್ಯಾಖ್ಯಾನೋಪಪಾದನೆಗಳನ್ನು ಪರಾಂಬರಿಸಬಹುದು.

**ಭಾಷ್ಯಾವತಾರಿಕೆಯ ಅರ್ಥವು:—**ಹೀಗೆ ಈ ಮಾಯಾ ತರಣೋಪಾಯವು ಬಹು ಸುಲಭವಾದುದೇಯಾಗಿರುವಾಗ, **ಮಮ ಮಾಯಾದುರತ್ಯಯಾ** ಎಂದು ಹೇಳಲು ಕಾರಣವೇನು? ಹಾಗಾದರೆ ಅನುಷ್ಠಿಸಲು ಶಕ್ತಿಯೂ ಅಧಿಕಾರವೂ ಇರುವ, ಸರ್ವರೂ ಅನುಷ್ಠಿಸಿ, ಮಾಯಾಬಂಧದಿಂದ ತಪ್ಪಿಸಿಕೊಳ್ಳಬಹುದಲ್ಲಾ, ಅದೇತಕ್ಕೆ ಎಲ್ಲರೂ ಅನುಷ್ಠಿಸುವದಿಲ್ಲವೆಂದು ಸಹೇತುವಾಗಿ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. **ಕಿಮಿತಿ**-ಇದೇತಕ್ಕೆ, **ಭಗವದುಪಾಸನಾಪಾದಿನೀಂ**-ಭಗವಂತನ ಉಪಾಸನೆಯನ್ನು ಸುಕರವಾಗಿ ಕೈಗೂಡಿಸುವ, **ಭಗವತ್ಪ್ರಪತ್ತಿಂ**-ಈಗ ಹೇಳಲ್ಪಟ್ಟ ಭಗವಂತನಲ್ಲಿ ಶರಣಾಗತಿಯನ್ನು, **ಸರ್ವೇ**-ಅದಕ್ಕೆ ಅರ್ಹರಾದ ಸಮಸ್ತರೂ, ಇಲ್ಲಿ ಸರ್ವೇ ಎಂದ ಪದವಿದ್ದರೂ, ಉಪಾಸನಾರ್ಹ ಸರ್ವೇ ಎಂದೇ ಸಂಕೋಚಪಡಿಸಿ ಅರ್ಥ ಹೇಳತಕ್ಕದ್ದಾಗಿರುತ್ತದೆ. ಇಂತಹ ಪ್ರಯೋಗಗಳು ಅನೇಕವಿರುತ್ತವೆ. ಹಾಗೆ ಅರ್ಥ ಹೇಳದೇ ಇದ್ದರೆ, ಶಾಸ್ತ್ರ ಸಾಮಂಜಸ್ಯವು ಪಲಾಯನ ಸೂಕ್ತವನ್ನು ಜಪಿಸುತ್ತದೆ; **ನಕುರ್ವತೇ**-ಅನುಷ್ಠಿಸುವದಿಲ್ಲವು? **ಇತ್ಯತ್ರಾಹ**-ಶಂಕಾವಿಗೆ ಸಮಾಧಾನವನ್ನು ಶ್ರೀಕೃಷ್ಣ ಭಗವಾನರವರು ಹೇಳುತ್ತಾರೆ. ಹಿಂದೆ ಹೇಳಲ್ಪಟ್ಟ ಶರಣಾಗತಿಯೇನು ಅದ್ವಾರಕವೇ ಸದ್ವಾರಕವೇ ಎಂಬ ವಿಚಾರದಲ್ಲಿ ಎರಡಕ್ಕೂ ಅನ್ವಯಿಸುತ್ತದೆ ಎಂಬ ಭಾವನೆಯಿಂದ ಹಿಂದೆ **"ಅನಾಲೋಚಿತವಿಶೇಷಾಶೇಷ ಲೋಕಶರಣ್ಯ"** ಎಂಬಲ್ಲಿ ಸೂಚಿಸಿ, ಇಲ್ಲಿ ಪ್ರಕರಣಾನುಗುಣವಾಗಿ ಈ ಶರಣಾಗತಿಯು ಸದ್ವಾರಕವಾಗಿ ಭಕ್ತಿಯೋಗವನ್ನುಂಟುಮಾಡುವಂತಾದ್ದೆಂದು ತಿಳಿಸುವದಕ್ಕಾಗಿ **"ಭಗವದುಪಾಸನಾಪಾದನೀಂ ಭಗವತ್ಪ್ರಪತ್ತಿಂ"** ಎಂಬ ಪ್ರಯೋಗವು.

**ಮೂಲಕ್ಕೆ ಅರ್ಥವು:—**ಈ ಮಾಯಾ ತರಣೋಪಾಯವು. ಶರಣಾಗತಿಯಾಗಿ **ಸುಲಭ**ವಾಗಿ ತೋರುತ್ತಿದ್ದರೂ, ಅದು **ದುರತ್ಯಯಾ** ಎಂದು ಹೇಳಲ್ಪಟ್ಟಿತಲ್ಲಾ; ಅದು ಹೇಗೆಂದರೆ

**ಮೂ. ನಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಅಸುರಂ ಭಾವಮಾಶ್ರಿತಾಃ ॥** ೧೫.

ಅರ್ಜುನನು ಪ್ರಶ್ನಿಸಬಹುದೆಂದು ಭಾವಿಸಿ, ಹಿಂದೆ ಮಾಡಿದ ಸುಕೃತ ದುಷ್ಕೃತಗಳೇ ಈ ಶರಣಾಗತಿಯನ್ನನುಷ್ಠಿಸುವವಕ್ಕೂ, ಅನುಷ್ಠಿಸದೇ ಇರುವದಕ್ಕೂ ಕಾರಣವೆಂದು ಈ ಮುಂದಿನ ಎರಡು ಶ್ಲೋಕಗಳ ಮೂಲಕ ತಿಳಿಸುವವರಾಗಿ, ಲೋಕದಲ್ಲಿ ದುಷ್ಕೃತಿಗಳೇ ಹೆಚ್ಚಾದುದರಿಂದ ಆ ದುಷ್ಕೃತ ಪರಿಪಾಕವು ಅವರನ್ನು ಶರಣಾಗತ್ಯನುಷ್ಠಾನಮಾಡಲು ಬಿಡುವದಿಲ್ಲವೆಂದು ಹೇಳಿ, ಹಾಗೆ ಶರಣಾಗತಿಯನ್ನನುಷ್ಠಿಸದ ದುಷ್ಕೃತಿಗಳನ್ನು ಉತ್ತರೋತ್ತರ **ದುಷ್ಕೃತಾತಿಶಯದಿಂದ ನಾಲ್ಕು ವಿಧವೆಂದೂ,** ಹಾಗೆಯೇ ಅದರ ಮುಂದಿನ ಶ್ಲೋಕದಲ್ಲಿ, ಶರಣಾಗತಿಯನ್ನನುಷ್ಠಿಸುವವರು ಸುಕೃತಿಗಳೆಂದೂ, ಅವರೂ **ತರತಮಭೇದದಿಂದ ನಾಲ್ಕು ವಿಧವೆಂದೂ** ಉಪದೇಶಿಸುತ್ತಾರೆ. ಅನೇಕರು, **ನಮಾಂ ಪ್ರಪದ್ಯಂತೇ**-ನನ್ನನ್ನು ಕುರಿತು ಶರಣಾಗತಿಯನ್ನನುಷ್ಠಿಸುವದಿಲ್ಲವು. ಏಕೆಂದರೆ ಅವರು, **ದುಷ್ಕೃತಿನಃ**-ಹಿಂದೆ ದುಷ್ಕರ್ಮಿಗಳಾಗಿ ಪಾಪಿಷ್ಠರಾಗಿ ಹುಟ್ಟಿರುವವರು, ಆದುದರಿಂದಲೇ ಪುನಃಪುನಃ ಸಂಸಾರದಲ್ಲೇ ಬಿದ್ದು ನರಳುತ್ತಾರೆಂದು, **ಬಹೂನಾಂ ಜನ್ಮನಾಮಂತೇ** ಎಂದು ಮುಂದೆ ಹೇಳಲ್ಪಡುತ್ತದೆ. ನಾವುಗಳೆಲ್ಲರೂ ಸೃಷ್ಟಿಮೊದಲುಗೊಂಡು ಇದುವರೆಗೂ ಇನ್ನೂ ಮಾಯಾ ಸಂಬಂಧಕ್ಕೆ ಒಳಪಟ್ಟು, ಜನ್ಮಗಳನ್ನು ಎತ್ತುತ್ತಲೇ ಇರುವದರಿಂದ ಇದುವರೆಗೂ ಶರಣಾಗತಿಯನ್ನನುಷ್ಠಿಸದ ಗೋಷ್ಠಿಗೆ ಸೇರಿದವರೆಂದು ಹೇಳಿದಂತಾಯಿತು. ಈಗೀಗ ಸುಸಮಯವು; ಮನುಷ್ಯಜನ್ಮವೂ ಪ್ರಾಪ್ತವಾಗಿ, ಶ್ರಿಯಃಪತಿಯನ್ನು ಆಶ್ರಯಿಸಿ, ಆತನಿಂದ ರಕ್ಷಿಸಲ್ಪಡುವದಕ್ಕೆ ಯೋಗ್ಯವಾದ ಸಮಯವು. ಆದುದರಿಂದ ಈ ಸದುಪದೇಶವನ್ನು ಮನಸ್ಸಿನಲ್ಲಿಟ್ಟು ಮೊದಲು ಶರಣಾಗತಿಯನ್ನು ಶಾಸ್ತ್ರರೀತ್ಯಾ ಅನುಷ್ಠಿಸಿ, ಈ ಪ್ರಕೃತಿ ಬಂಧವನ್ನು ದಾಟತಕ್ಕದ್ದು. ಅಂತಹ ದುಷ್ಕೃತಿಗಳು ಯಾರೆಂಬ ವಿವೇಚನೆಯಲ್ಲಿ ಹೇಳುತ್ತಾರೆ. **(೧) ಮೂಢಾಃ**-ಅಜ್ಞಾನಿಗಳು, ಸರಿಯಾದ ಜ್ಞಾನವಿಲ್ಲದವರು, ದೇಹಾತ್ಮಭ್ರಮ, ಸ್ವತಂತ್ರಾತ್ಮಭ್ರಮವುಳ್ಳವರು. **(೨) ನರಾಧಮಾಃ**-ಸರಿಯಾದ ಜ್ಞಾನಕ್ಕೆ ಅವಕಾಶವಿದ್ದರೂ ಅದನ್ನು ಹೊಂದದೆಯೂ, ಶಾಸ್ತ್ರೋಪದೇಶಕ್ಕೆ, ಅವಕಾಶವಿದ್ದು ಅದನ್ನು ಹೊಂದಿದ್ದರೂ, ಅದರಲ್ಲಿ ವಿಶ್ವಾಸವಿಲ್ಲದೆ ಇರುವವರು. ಜ್ಞಾನಕ್ಕೆ ಅವಕಾಶವಿಲ್ಲದೇ ಇರುವವರಿಗಿಂತ, ಜ್ಞಾನವನ್ನು ಹೊಂದಿದ್ದರೂ ವಿಶ್ವಾಸ ಶೂನ್ಯರಾಗಿ ಉಪಾಯಾನುಷ್ಠಾನ ಮಾಡದೇ ಇರುವದರಿಂದ ನರಾಧಮರು, ಇವರು ಹೆಚ್ಚು ದುಷ್ಕೃತಿಗಳು, **(೩) ಮಾಯಯಾಪಹೃತಜ್ಞಾನಾಃ**-ಇಲ್ಲಿ **ಅಪಹೃತಜ್ಞಾನಾಃ** ಎಂದಿರುವದರಿಂದ ಈ ದುಷ್ಕೃತಿಗಳೂ ಮೊದಲು ಜ್ಞಾನವಿದ್ದು ಅನಂತರ ಅಪಹೃತಜ್ಞಾನರೆಂದಾಯಿತು; ಇತರರ ಮಾಯಾವಾದಗಳಿಗೆ ಒಳಪಟ್ಟು ಜ್ಞಾನವನ್ನು ಕಳೆದುಕೊಂಡವರು. ಹಿಂದಿನ ನರಾಧಮರು ತಮಗೇ ಆ ಜ್ಞಾನದಲ್ಲಿ ವಿಶ್ವಾಸವಿಲ್ಲದೇ ಬಿಟ್ಟವರು, ಆದರೆ ಇವರು ಸಹವಾಸಕ್ಕೆ ಅನರ್ಹರಾದ ಕುದೃಷ್ಟಿಗಳೊಂದಿಗೆ ಬುದ್ಧಿಪೂರ್ವಕವಾಗಿ ಸೇರಿ ಅವರ ಕುತರ್ಕಗಳಿಗೆ ವಶರಾಗಿ ಅದರಿಂದ ಅಪಹೃತಜ್ಞಾನರು; ಆದುದರಿಂದ ಅವರಿಗಿಂತ ಇವರು ಅಪಕೃಷ್ಟರು. **(೪) ಆಸುರಂಭಾವಮಾಶ್ರಿತಾಃ**-ತಾನು ಭಗವಂತನಿಗೆ ಶೇಷಭೂತನು; ಆತನೇ ನಮಗೆ ಸತ್ತಾದಾಯಕನು; ಆತನೇ ಪ್ರಾಪಕನು ಪ್ರಾಪ್ಯನು ಇತ್ಯಾದಿ ಅಮೋಘ ಜ್ಞಾನೋಪದೇಶವೆಲ್ಲಾ ಪರಮಾತ್ಮನನ್ನೇ ದ್ವೇಷಿಸಲು ಕಾರಣಭೂತವಾಗಿ ಆಸುಭಾವವನ್ನು ಆಶ್ರಯಿಸಿದವರು; ಪ್ರಹ್ಲಾದನಿಂದ ಹೊಂದಿದ ಅಮೋಘವಾದ ಜ್ಞಾನವು, ಹಿರಣ್ಯಕಶಿಪುವಿಗೆ ವಿಷ್ಣುವನ್ನು ಹೆಚ್ಚುಹೆಚ್ಚಾಗಿ ದ್ವೇಷಿಸಲು ಹೇಗೆ ಹೇತುವಾಯಿತೋ ಹಾಗೆ ಎಂಬ ಭಾವವು;

**ಭಾ. ದುಷ್ಕೃತಿನಃ ಪಾಪಕರ್ಮಾಣೋ ಮಾಂ ನ ಪ್ರಪದ್ಯಂತೇ. ದುಷ್ಕೃತ ತಾರತಮ್ಯೇನ ತೇ ಚತುರ್ವಿಧಾಭವಂತಿ-ಮೂಢಾಃ, ನರಾಧಮಾಃ, ಮಾಯಯಾಪಹೃತ ಜ್ಞಾನಾಃ ಆಸುರಂಭಾವ ಮಾಶ್ರಿತಾಃ-ಇತಿ। ಮೂಢಾಃ-ವಿಪರೀತಜ್ಞಾನಾಃ, ಪೂರ್ವೋಕ್ತ ಪ್ರಕಾರೇಣ ಭಗವಚ್ಛೇಷತ್ವೈಕರಸ ಮಾತ್ಮಾನಂ ಭೋಗ್ಯಜಾತಂಚ ಸ್ವಶೇಷತಯಾ**

---

ದುರ್ಯೋಧನನಿಗೂ ಶ್ರೀಕೃಷ್ಣನಲ್ಲಿ ದ್ವೇಷವು ಆತನ ಮಹಾತ್ಮ್ಯೆಯು ತಿಳಿದಹಾಗೆಲ್ಲಾ ಹೆಚ್ಚಿತು. ಇಂತವರು ಪರಮನೀಚರು, ಹೀಗೆ ದುಷ್ಕೃತಿಗಳಾಗಿಯೂ ದುಷ್ಕೃತ ತಾರತಮ್ಯವುಳ್ಳವರಾಗಿಯೂ ಇರುವದರಿಂದ, ಅವರು ತನ್ನನ್ನು ಶರಣುಹೊಂದುವದಿಲ್ಲವೆಂದು ಹೇಳಿದರು ಎಂಬ ತಾತ್ಪರ್ಯವು. ಇಂತವರನ್ನು ಮುಂದೆ ೯-೧೨ ನೆಯ **"ಮೋಘಾಶಾಃ"** ಎಂಬ ಶ್ಲೋಕದಲ್ಲಿ ನಿಂದಿಸಿರುತ್ತಾರೆ. ಇಂತವರಿಗೆ ಫಲವೂ ೧೬-೧೯ **"ಕ್ಷಿಪಾಮ್ಯಜಸ್ರಮಶುಭಾನ್"** ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತವೆ. ಅನೇಕ ವ್ಯಾಖ್ಯಾತೃಗಳು ಈ ನಾಲ್ಕು ವಿಶೇಷಣಗಳೂ ಎಲ್ಲಾ ದುಷ್ಕೃತಿಗಳಿಗೂ ಅನ್ವಯಿಸುತ್ತದೆಂದು ಬರೆದಿರುತ್ತಾರೆ. ಶರಣಾಗತಿಯನ್ನನುಷ್ಠಿಸದೇ ಇರುವರೆಲ್ಲರಿಗೂ ಇಂತಹ ನಾಲ್ಕು ಗುಣಗಳೂ ಸಮುಚ್ಚಯವಾಗಿ ಇರುವದನ್ನು ಲೋಕದಲ್ಲಿ ಕಂಡಿರುವದಿಲ್ಲವು. ಜ್ಞಾನಶೂನ್ಯನು ಶರಣಾಗತಿಯನ್ನು ಅನುಷ್ಠಿಸುವದಿಲ್ಲವು; ಆದುದರಿಂದ ಆತನು ನರಾಧಮನು ಹೇಗೆ? ಹಾಗೆ ಶರಣಾಗತಿಯನ್ನನುಷ್ಠಿಸದವರೆಲ್ಲರೂ ಅಸುರಭಾವವನ್ನೇ ಹೊಂದಿರಬೇಕೆಂಬ ನಿಯಮವೇನು? ಅಸುರಭಾವವನ್ನು ಹೊಂದಿದವನು ತುಂಬಾ ನಿಕೃಷ್ಟನು; ಮೂಢನು ಅಷ್ಟು ನಿಕೃಷ್ಟನಾಗುವನೇ? ಆದುದರಿಂದ ನಿಕೃಷ್ಟತೆಯಲ್ಲೂ ತರತಮ ಭಾವವು ಈ ಶ್ಲೋಕದಲ್ಲಿ ಹೇಳಲ್ಪಟ್ಟಿದೆ ಎಂದು ಭಾವಿಸುವದೇ ಸಮಂಜಸವು. ಈ ಶ್ಲೋಕದಲ್ಲಿ ದುಷ್ಕೃತಿಗಳ ವಿಷಯವನ್ನು ಹೇಳಿ, ಮುಂದಿನ ಶ್ಲೋಕದಲ್ಲಿ ಸುಕೃತಿಗಳ ವಿಷಯವನ್ನು ಹೇಳುವವರಿಂದ, ಈ ಎರಡು ಶ್ಲೋಕಗಳು ಒಟ್ಟಿಗೆ ಪಠನೀಯಗಳು. ದುಷ್ಕೃತಿಗಳಿಗೆ ಈ ಶ್ಲೋಕದಲ್ಲಿ ನಾಲ್ಕು ವಿಶೇಷಗಳಿಂದ ನಾಲ್ಕು ವಿಧ ದುಷ್ಕೃತಿಗಳೆಂದೂ ಉತ್ತರ ಶ್ಲೋಕದಹಾಗೆಯೇ ಸುಕೃತಿಗಳು ನಾಲ್ಕು ವಿಶೇಷಣಗಳಿಂದ ನಾಲ್ಕು ವಿಧವೆಂದೂ, ಎರಡಕ್ಕೂ ಮಧ್ಯೆ, **ಚತುರ್ವಿಧಾಃ** ಎಂದು ಹೇಳಿದರೆ, ಹಿಂದಕ್ಕೆ ದುಷ್ಕೃತಿಗಳ ವಿಷಯದಲ್ಲಿ **ಚತುರ್ವಿಧಾ ನ ಭಜಂತೇಮಾಂ** ಎಂಬ ಅರ್ಥವು ಸೂಚಿತವಾಗುವದರಿಂದ, **ನಮಾಂದುಷ್ಕೃತಿನೋ ಪ್ರಪದ್ಯಂತೇ** ಎಂಬಲ್ಲಿ **ಚತುರ್ವಿಧಾಃ ನ ಪ್ರಪದ್ಯಂತೇ** ಎಂದು ಇಟ್ಟುಕೊಳ್ಳುವದು ಸಮಂಜಸವಾಗಿ ತೋರುತ್ತದೆ.

**ಭಾಷ್ಯಾರ್ಥವು:—**ಯಾರು ತನ್ನನ್ನು ಶರಣ ಹೊಂದುವದಿಲ್ಲವೆಂಬ ಪ್ರಶ್ನೆಯು ಉಂಟಾಗಬಹುದೆಂದು ಯೋಚಿಸಿ, ದುಷ್ಕೃತಿಗಳು ಪ್ರಪದನವನ್ನು ಅನುಷ್ಠಿಸುವದಿಲ್ಲವೆಂದು ಹೇಳುತ್ತಾರೆ. ಹಾಗೆಯೇ ದುಷ್ಕೃತಿಗಳಲ್ಲಿ ತಾರತಮ್ಯವನ್ನು ಉಪದೇಶಿಸುತ್ತಾರೆ. ನಾಲ್ಕುವಿಧವೆಂದು ಕಂಠೋಕ್ತವಾಗಿ ಹೇಳದಿದ್ದರೂ ಉತ್ತರಶ್ಲೋಕದಲ್ಲಿ ಸುಕೃತಿಗಳ ವಿಷಯದಲ್ಲಿ ನಾಲ್ಕುವಿಧ ತಾರತಮ್ಯಗಳನ್ನು ಹೇಳುವದರಿಂದ ಇಲ್ಲಿಯೂ ನಾಲ್ಕುವಿಧ ದುಷ್ಕೃತಿಗಳನ್ನು ತರತಮಭೇದದಿಂದ ಹೇಳಿರಬಹುದು ಎಂದು ತಿಳಿಸುತ್ತಾರೆ. **ದುಷ್ಕೃತಿನಃ** ಎಂದರೆ **ಪಾಪಕರ್ಮಾಣಃ**- ಪಾಪಕರ್ಮಗಳನ್ನು ಮಾಡಿರುವವರು, **ಮಾಂ ನ ಪ್ರಪದ್ಯಂತೇ**-ನನ್ನನ್ನು ಶರಣ ಹೊಂದುವದಿಲ್ಲವು. ದುಷ್ಕೃತ ತಾರತಮ್ಯದಿಂದ, **ತೇ**-ಅವರು, **ಚತುರ್ವಿಧಾಃ**-ನಾಲ್ಕು ತರಗತಿಯವರು, **ಭವಂತಿ**-ಆಗುತ್ತಾರೆ. **(೧) ಮೂಢಾಃ, (೨) ನರಾಧಮಾಃ, (೩) ಮಾಯಯಾಪಹೃತಜ್ಞಾನಾಃ, (೪) ಆಸುರಂ ಭಾವಮಾಶ್ರಿತಾಃ,** ಎಂಬುದಾಗಿ. **ಮೂಢಾಃ** ಯಾರೆಂದರೆ, ವಿಪರೀತ ಜ್ಞಾನವುಳ್ಳವರು. **ಪೂರ್ವೋಕ್ತಪ್ರಕಾರೇಣ**-ಹಿಂದೆ ಹೇಳಿದ ಪ್ರಕಾರ (ಗೀ. ೭. ೫.) **ಭಗವಚ್ಛೇಷತ್ವೈಕ ರಸ ಮಾತ್ಮಾನಂ**-ಭಗವಂತನಿಗೆ ಶೇಷವಾಗಿರುವಿಕೆಯೇ ಮುಖ್ಯಾನಂದರೂಪ ಸ್ವರೂಪವುಳ್ಳ

**ಭಾ. ಮನ್ಯಮಾನಾಃ; ನರಾಧಮಾಃ - ಸಾಮಾನ್ಯೇನ ಜ್ಞಾತೇಪಿ ಮತ್ಸ್ವರೂಪೇ, ಮದಾನುಕೂಲ್ಯಾಜ್ಞಾನರ್ಹಾಃ; ಮಾಯಯಾಪಹೃತಜ್ಞಾನಾಃ-ಮದ್ವಿಷಂ ಮದೈಶ್ವರ್ಯ**

ಆತ್ಮವನ್ನು, ಆತನಿಗೆ ಭೋಗ್ಯಭೂತವಾಗಿ ಸರ್ವೇಶ್ವರನಾದ ನನ್ನಿಂದ ಏರ್ಪಡಿಸಲ್ಪಟ್ಟ ಅಚೇತನವನ್ನೂ ಸಹ, **ಸ್ವಶೇಷತಯಾಮನ್ಯಮಾನಾಃ**-ತನಗೇನೇ ಶೇಷಭೂತವಾದುವೆಂದು ಭಾವಿಸುವವರು ಮೂಢರು. ಜ್ಞಾನವೇ ಇಲ್ಲದವರು ಎಂಬರ್ಥವಲ್ಲವು. ಅವರಿಗೂ ಜ್ಞಾನವುಂಟು; ಆ ಜ್ಞಾನವು ವಿಪರೀತವಾದುದು, ಭ್ರಾಂತಿರೂಪವಾದುದು. ಅಚೇತನಕ್ಕೂ ವಿಲಕ್ಷಣವಾಗಿ ಆತ್ಮನು ಇರುವಾಗ ದೇಹವೇ ಆತ್ಮಾ ಎಂಬ ಭ್ರಮೆಯೂ, ತಾನೂ ಇತರ ಚೇತನರೂ ಸರ್ವ ಅಚೇತನವೂ ಎಲ್ಲಾ ಭಗವಂತನಿಗೆ ಶೇಷಭೂತವಾಗಿರುವಾಗ ತನಗೆ ಶೇಷಭೂತವೆಂಬ ಸ್ವತಂತ್ರಾತ್ಮಭ್ರಮೆಯೂ, ತಾನೇ ಪರಮಾತ್ಮನೆಂಬ ಭ್ರಮೆಯೂ, ಇವುಗಳಿಂದ ವಿಪರೀತಜ್ಞಾನವುಳ್ಳವರು. ತಾವು ಹಿಂದೆ ೪ ನೆಯ ಶ್ಲೋಕವೊದಲು ೧೨ ನೆಯ ಶ್ಲೋಕ ಪೂರ್ತಿ ಉಪದೇಶಿಸಿದ ವಿಜ್ಞಾನ ಸಹಿತವಾದ ಜ್ಞಾನವು ಇಂತಹ ವಿಪರೀತಜ್ಞಾನವನ್ನೆಲ್ಲಾ ದೂರೀಕೃತಮಾಡುತ್ತದೆಂಬುದೂ ತೋರಿಬರುತ್ತದೆ. ತತ್ವತ್ರಯಗಳಾದ ಅಚಿತ್ತು ಚಿತ್ತು, ಈಶ್ವರ, ಇವರುಗಳ ಯಥಾರ್ಥಜ್ಞಾನದಿಂದ, ಭ್ರಾಂತಿಗಳೆಲ್ಲಾ ತೊಲಗುತ್ತವೆ. ಶ್ರುತಿಯೂ ಕಂಠೋಕ್ತವಾಗಿ **"ಭೋಕ್ತಾ ಭೋಗ್ಯಂ ಪ್ರೇರಿತಾರಂಚಮತ್ವಾ"** ಎಂದು (ಶ್ವೇ ೧೨) ಬೇರೆಬೇರೆ ಎಂಬುದಾಗಿ ಹೇಳಿರುವಾಗ ಈ ಮೂರು ಭ್ರಾಂತಿಗಳಿಗೂ ಅವಕಾಶವೆಲ್ಲಿಯದು? **ಭೋಗ್ಯಪ್ರಕೃತಿಯನ್ನು** ಅಪರಾ ಎಂದು ಹೇಳಿ, **"ಅನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ"** ಎಂದು ಚಿತ್ತಿಗೆ ಅಚಿತ್ತಿಗಿಂತ ವೈಲಕ್ಷಣ್ಯವನ್ನು ಹೇಳಿ, **"ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ"** ಎಂದೂ, **"ಮಯಿ ಸರ್ವ ಮಿದಂ ಪ್ರೋತಂ"** ಎಂದೂ ಈಶ್ವರತತ್ವವನ್ನು ನಿರೂಪಿಸಿ ಮೇಲಿನ ಉಪನಿಷದರ್ಥವನ್ನೇ ವಿಜ್ಞಾನ ಸಹಿತವಾದ ಜ್ಞಾನವಾಗಿ ಉಪದೇಶಿಸಿರುತ್ತಾರೆ. ಈ ಮೂರು ಭ್ರಮಗಳೂ ಹೇಗೆ ಹೋಗುತ್ತವೆಂಬುದು,

**ಪ್ರಕೃತ್ಯಾತ್ಮ ಭ್ರಾಂತಿರ್ಗಳತಿ ಚಿದಚಿಲ್ಲಕ್ಷಣಧಿಯಾ।**
**ತಥಾ ಜೀವೇಶೈಕ್ಯ ಪ್ರಭೃತಿ ಕಲಹ ಸ್ತದ್ವಿಭಜನಾತ್।**
**ಅತೋ ಭೋಕ್ತಾಭೋಗ್ಯಂ ತದುಭಯ ನಿಯನ್ತೇತಿ ನಿಗಮೈ।**
**ರ್ವಿಭಕ್ತಂ ನ ಸ್ತತ್ವತ್ರಯ ಮುಪದಿಶಂತ್ಯ ಕ್ಷತಧಿಯಃ॥** ಎಂಬ ಶ್ಲೋಕದಲ್ಲಿ

ಉಪಪಾದಿಸಲ್ಪಟ್ಟಿರುತ್ತದೆ, ಚಿತ್ತು ಅಚಿತ್ತುಗಳ ಲಕ್ಷಣಜ್ಞಾನದಿಂದ ಪ್ರಕೃತಿಯೇ ಆತ್ಮಾ ಎಂಬ ಭ್ರಾಂತಿಯು ತೊಲಗುತ್ತದೆ. ಜೀವನೂ ಪರಮಾತ್ಮನೂ ಒಂದೇ ಎಂಬ ಭ್ರಮವು ಅವೆರಡೂ ಬೇರೆ ಬೇರೆ ಎಂದು ಹೇಳುವ ಶ್ರುತಿಗಳಿಂದ ತೊಲಗುತ್ತದೆ. ಆದುದರಿಂದ ಉಪನಿಷತ್ತಿನಲ್ಲಿ **"ಭೋಕ್ತಾ ಭೋಗ್ಯಂ ಪ್ರೇರಿತಾ"** ಎಂದು ವಿಭಾಗಿಸಿ, **ಅಕ್ಷತಜ್ಞಾನವುಳ್ಳ** ನಮ್ಮ ದೇಶಿಕರು ತತ್ವತ್ರಯ ಉಂಟು, ಎಂದು ಉಪದೇಶಿಸಿದರು. ಆದುದರಿಂದ ಮೂಢರು ಯಾರು ಎಂದರೆ **ಕ್ಷತಧಿಯರು-ವಿಪರೀತಜ್ಞಾನರು** ಎಂಬ ಭಾವವು. **(೨) ನರಾಧಮಾಃ**-ಇವರು ಮೂಢರಿಗೂ ತೃತೀಯಾವಸ್ಥೆಯವರಾದ **ಮಾಯಯಾಪಹೃತಜ್ಞಾನರಿಗೂ** ಮಧ್ಯೆ ಇರುವವರು. ಇವರಿಗೆ ಜ್ಞಾನವಿದ್ದರೂ ಪರಮಾತ್ಮಾಭಿಮುಖ್ಯ ವಿಲ್ಲದವರಾದುದರಿಂದ ನರಾಧಮರೆಂದು ವ್ಯಾಖ್ಯಾನ ಮಾಡುತ್ತಾರೆ; ಇವರು ಯಾರೆಂದರೆ, **ಮತ್ಸ್ವರೂಪೇ ಸಾಮಾನ್ಯೇನ ಜ್ಞಾತೇಪಿ** ನನ್ನ ಸ್ವರೂಪವು ಸಾಮಾನ್ಯವಾಗಿ ತಿಳಿದಿದ್ದರೂ ಕೂಡ ಎಂದರೆ ಉಪನಿಷತ್ತಿನ ಸಾರಭೂತ ಜ್ಞಾನವಿಶೇಷವಿಲ್ಲದಿದ್ದರೂ ಇತಿಹಾಸ ಪುರಾಣಾದಿಮೂಲಕ ಪರಮಾತ್ಮಸ್ವರೂಪ ಜ್ಞಾನವಿದ್ದರೂ

ಭಾ. ವಿಷಯಂಚ ಜ್ಞಾನಂಪ್ರಸ್ತುತಂ ಯೇಷಾಂ ತದಸಂಭಾವನಾಪಾದಿನೀಭಿಃ ಕೂಟ ಯುಕ್ತಿಭಿ ರಪಹೃತಂ ತೇತಥೋಕ್ತಾಃ ; ಆಸುರಂಭಾವಮಾಶ್ರಿತಾಃ-ಮದ್ವಿಷಯಂ ಮದೈಶ್ವರ್ಯ ವಿಷಯಂಚ ಜ್ಞಾನಂ ಸುದೃಢ ಮುಪಪನ್ನಂ ಯೇಷಾಂ ದ್ವೇಷಾ ಯೈವ ಭವತಿ, ತ ಆಸುರಂಭಾವಮಾಶ್ರಿತಾಃ। ಉತ್ತರೋತ್ತರಾಃ ಪಾಪಿಷ್ಠತಮಾಃ ॥೧೫॥

ಎಂಬರ್ಥವು ; **ಮದಾನುಮುಖ್ಯಾನರ್ಹಾಃ**-ನನಗೆ ಅಭಿಮುಖವಾಗಿ ಬರಲು ಅನರ್ಹರು. ಇವರಿಗೆ ಉಪನಿಷತ್ತಿನ ಜ್ಞಾನವಿಲ್ಲದಿದ್ದರೂ ಪುರಾಣೇತಿಹಾಸಗಳ ಜ್ಞಾನವಿದ್ದು ಆಶ್ರಯಿಸದವರಾದುದ ರಿಂದ **ನರಾಧಮರು**-ಅಧಮ ಮನುಷ್ಯರು. **(೩) ಮಾಯಯಾಪಹೃತಜ್ಞಾನಾಃ** ಎಂದರೆ, **ಯೇಷಾಂ**-ಯಾರಿಗೆ, **ಮದ್ವಿಷಯಂ ಮದೈಶ್ವರ್ಯ ವಿಷಯಂಚ**-ನನ್ನ ವಿಷಯವಾದ ಮತ್ತು ನನ್ನ ವಿಭೂತಿನಿಯಮನರೂಪ ಐಶ್ವರ್ಯ ವಿಷಯವಾದ, **ಜ್ಞಾನಂ ಪ್ರಸ್ತುತಂ**-ಈಗ ಹೇಳಲ್ಪಟ್ಟ ಜ್ಞಾನವು, **ತದಸಂಭಾವನಾಪಾದಿಭಿಃ ಕೂಟಯುಕ್ತಿಭಿಃ** - ಹಾಗೆಲ್ಲಾದರೂ ಉಂಟೋ ಎಂದು ಹೇಳುವ ಕುತರ್ಕಗಳಿಂದ, **ಅಪಹೃತಂ**-ಅಪಹರಿಸಲ್ಪಟ್ಟಿತೋ, **ತೇ**-ಅವರು, **ತಥೋಕ್ತಾಃ**-ಮಾಯಾಯಾಪಹೃತ ಜ್ಞಾನರೆಂದು ಹೇಳಲ್ಪಡುವರು, **(೪) ಆಸುರಂ ಭಾವ ಮಾಶ್ರಿತಾಃ** ಎಂದರೆ **ಮದ್ವಿಷಯಂ**-ನನ್ನ ವಿಷಯವಾದ ಮತ್ತು **ಮದೈಶ್ವರ್ಯ ವಿಷಯಂಚ** ನನ್ನ ಐಶ್ವರ್ಯವಿಷಯವಾದ, ಜ್ಞಾನವು, **ಸುದೃಢಮುಪಪನ್ನಂ**-ಚನ್ನಾಗಿ ಉಂಟಾಗಿದ್ದರೂ ಕೂಡ, **ಯೇಷಾಂ ದ್ವೇಷಾಯೈವ ಭವತಿ**-ಯಾರಿಗೆ ಆ ಜ್ಞಾನವು ನನ್ನಲ್ಲಿ ದ್ವೇಷಕ್ಕಾಗಿಯೇ ಪರಿಣಮಿಸುತ್ತದೋ **ತೇ**-ಅವರು, **ಆಸುರಂ ಭಾವಮಾಶ್ರಿತಾಃ**-ಎಂದು ಹೇಳಲ್ಪಡುವರು. ಆಸುರಭಾವವೆಂದರೇನೆಂಬುದು ಮುಂದೆ ಷೋಡಶೋಽಧ್ಯಾಯ ೪ ನೇಯ ಶ್ಲೋಕವಲ್ಲಿ ಉಪಪಾದಿ ತವು. ಅಂತಹ ಆಸುರಭಾವವುಳ್ಳವರಿಗೆ ಅವರಿಗೆ ಉಂಟಾದ ಜ್ಞಾನವೆಲ್ಲಾ ತನ್ನನ್ನು ದ್ವೇಷಿ ಸುವದಕ್ಕಾಗಿ ಪರಿಣಮಿಸುತ್ತದೇವಿನಾ ಅನ್ಯಥಾ ಅಲ್ಲವು. ಇದಕ್ಕೆ ದುರ್ಯೋಧನಾದಿಗಳು ನಿದರ್ಶನವು. ವಿಷ್ಣು ಧರ್ಮದಲ್ಲಿ **"ವಿಷ್ಣುಭಕ್ತಿಪರೋದೈವೋ ವಿಪರೀತಸ್ತಥಾ ಸುರಃ"** ಎಂದು ಹೇಳಿರುವದರಿಂದ ವಿಷ್ಣು ಭಕ್ತಿಯಲ್ಲಿ ಆಸಕ್ತಿಯುಳ್ಳವನು ದೈವೀ ಸಂಪತ್ತುಳ್ಳವನೆಂದೂ ಅದರಲ್ಲಿ ದ್ವೇಷಯುಕ್ತನು ಆಸುರೀಸ್ವಭಾವವುಳ್ಳವನೆಂದೂ, ಹೇಳಲ್ಪಡುವನು. ಆದುದರಿಂದಲೇ **ದ್ವೇಷಾಯೈವ ಭವತಿ** ಎಂಬ ಪ್ರಯೋಗವು. ಇವರು ಪಾಪಿಷ್ಠತಮರೆಂದು ಹೇಳುತ್ತಾರೆ. **ಉತ್ತರೋತ್ತರ ಪಾಪಿಷ್ಠತಮಾಃ**-ಈಗ ಹೇಳಿದ ನಾಲ್ಕು ಜನ ಪಾಪಿಷ್ಠರಲ್ಲಿ ಮೊದಲು ಹೇಳಿದ ವರಿಗಿಂತ ಅನಂತರ ಹೇಳಲ್ಪಟ್ಟವರು ಹೆಚ್ಚು ಪಾಪಿಷ್ಠರೆಂಬಭಾವವು. ಈ ನಾಲ್ವರಲ್ಲಿ ಅಸುರ ಸ್ವಭಾವದವರು ಪರಮ ಪಾಪಿಷ್ಠರಾದುದರಿಂದ ೧೬ ನೇಯ ಅಧ್ಯಾಯದಲ್ಲಿ, ಅಂತವರಿಗೆ ಸದ್ಗತಿ ದುರ್ಲಭವೆಂದು **"ಕ್ಷಿಪಾಮ್ಯಜಸ್ರಂ ಆಸುರಿಷ್ವೇವ ಯೋನಿಷು"** ಎಂದು ಹೇಳಿ, ಅವರು ಪುನಃ ಪುನಃ ಆಸುರಯೋನಿಯಲ್ಲೇ ಹುಟ್ಟುವದರಿಂದ ಕೊನೆಗೆ **ತತೋಯಾನ್ತ್ಯಧಮಾಂಗತಿಂ"** (ಗೀ. ೧೬. ೨೦) ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಇವರು ಪಾಪಿಷ್ಠತಮರು. ಹೀಗೆ ದುಷ್ಕೃತಿಗಳ ತಾರತಮ್ಯವು ಹೇಳಲ್ಪಟ್ಟಿತೆಂದು ಭಾವಿಸುವುದರಲ್ಲಿ ಸಾಮಂಜಸ್ಯವಿರುವದರಿಂದ ಸಮುಚ್ಚಯದಿಂದ ಎಲ್ಲಾ ಒಂದೇವಿಧ ದುಷ್ಕೃತಿಗಳನ್ನು ಕುರಿತು ಹೇಳಿದುದೆಂದು ವ್ಯಾಖ್ಯಾನ ಮಾಡುವದು ಮಂದವು. ತುಂಬಾ ಜ್ಞಾನವಿಲ್ಲದವನು ಮಾಡುವ ಅಪರಾಧಕ್ಕಿಂತಲೂ ಜ್ಞಾನ ವಿದ್ದೂ ಅಪರಾಧಮಾಡುವವನು ಹೆಚ್ಚು ಅಪರಾಧಿಯಾಗುವನೆಂಬ ಭಾವದಿಂದ **"ವಿದುಷೋ ತಿಕ್ರಮೋ ದಂಡಭೂಯಸ್ತ್ವಂ** ವಿದ್ವಾಂಸನು ಎಂದರೆ ತುಂಬಾ ತಿಳಿದವನು ಮಾಡುವ ಅಪರಾ ಧಕ್ಕೆ ಹೆಚ್ಚಾದ ಶಿಕ್ಷೆಯು ಎಂಬ ನ್ಯಾಯಾನುಸಾರ, **ಉತ್ತರೋತ್ತರಾಃ ಪಾಪಿಷ್ಠತಮಾಃ** ಎಂದು

**ಮೂ. ಚತುರ್ವಿಧಾ ಭಜನ್ತೇ ಮಾಂ ಜನಾ ಸ್ಸುಕೃತಿನೋಽರ್ಜುನ।**
**ಆರ್ತೋ ಜಿಜ್ಞಾಸು ರರ್ಥಾರ್ಥೀಜ್ಞಾನೀಚ ಭರತರ್ಷಭ। ೧೬.**

ಹೇಳಲ್ಪಟ್ಟಿತು. ಜ್ಞಾನಾತಿಶಯವಿದ್ದೂ ಭಗವಂತನ ಮಹಿಮೆಗೆ ಕುಂದಕವಾಗುವಹಾಗೆ ಸಾಕ್ಷಾತ್ಪ್ರವರ್ತನೆಯು ಅತಿ ಹೇಯವಾದ ಅಪರಾಧವೆಂಬ ಭಾವವು. ಇಂತಹ ಪ್ರವರ್ತನೆಗೆ ಅವರವರ ದುಷ್ಕೃತ ತಾರತಮ್ಯವೇ ಕಾರಣವು.

**ಮೂಲಕ್ಕೆ ಅರ್ಥವು:—**ಹಿಂದೆ ದುಷ್ಕೃತಿಗಳು ತನ್ನಲ್ಲಿ ಶರಣಾಗತಿ ಮಾಡುವದಿಲ್ಲವೆಂದು ಹೇಳಿ, ಅವರುಗಳು ದುಷ್ಕೃತ ತಾರತಮ್ಯದಿಂದ ನಾಲ್ಕುವಿಧವೆಂದು ಹೇಳಿದರು. ಸುಕೃತಿಗಳಾದರೋ ತನ್ನಲ್ಲಿ ಶರಣಾಗತಿಯನ್ನನುಷ್ಠಿಸಿ ಉಪಾಸನೆಯನ್ನು ಮಾಡುವರೆಂದು ಹೇಳಲು ಹೊರಟು ದುಷ್ಕೃತಿಗಳನ್ನು ವಿಭಾಗಿಸಿ ಹೇಳಿದಹಾಗೆ ಸುಕೃತಿಗಳನ್ನೂ ಸುಕೃತ ತಾರತಮ್ಯದಿಂದ ನಾಲ್ಕುವಿಧವಾಗಿ ವಿಂಗಡಿಸಿ ಹೇಳುತ್ತಾರೆ—**ಹೇ ಅರ್ಜುನ**-ಓ ಅರ್ಜುನನೇ, **ಸುಕೃತಿನೋ ಜನಾಃ**-ಸುಕೃತಿಗಳಾದವರು, ಭಜಸೇವಾಯಾಂ ಎಂದು ಧಾತ್ವರ್ಥವಾದರೂ, ಆ ಧಾತುವೇ **ಭಕ್ತಿಯೋಗ ಭಕ್ತ** ಇತ್ಯಾದಿ ಪದಗಳಲ್ಲಿರುವದರಿಂದ, ಪ್ರಕರಣವು ಪರಮಾತ್ಮೋಪಾಸನರೂಪ ಭಕ್ತಿಯೋಗವಾಗಿ, ಹಿಂದಿನ ಶ್ಲೋಕದಲ್ಲಿ ಭಕ್ತಿಯೋಗಾಧಿಕಾರಪ್ರಾಪ್ತಿಗಾಗಿ ಪ್ರಪತ್ತಿಯನ್ನು ಅನುಷ್ಠಿಸದವರನ್ನು ನಿಂದಿಸಿ ಈ ಶ್ಲೋಕದಲ್ಲಿ ಅಂತವರನ್ನು ಸುಕೃತಿಗಳೆಂದು ಶ್ಲಾಘಿಸಿರುವದರಿಂದಲೂ **ಭಜನ್ತೇ** ಎಂಬ ಪದಕ್ಕೆ ಪ್ರಪದನವನ್ನು ಅಂಗವಾಗಿ ಅನುಷ್ಠಿಸಿ ಉಪಪಾದಿಸುತ್ತಾರೆಂಬ ವ್ಯಾಖ್ಯಾನವು. **ಮಾಂ**-ನನ್ನನ್ನು, **ಭಜಂತೇ**-ಪ್ರಪದನವನ್ನು ಮಾಡಿ ಉಪಾಸಿಸುತ್ತಾರೆ, ಅವರೂ, **ಚತುರ್ವಿಧಾಃ**-ಸುಕೃತ ತಾರತಮ್ಯದಿಂದ ನಾಲ್ಕು ತರಗತಿಗೆ ಸೇರಿದವರು, **ಹೇ ಭರತರ್ಷಭ**-ಓ ಭರತವಂಶಶ್ರೇಷ್ಠನೇ, ಹೀಗೆ ಎರಡುಸಲ ಸಂಬೋಧನೆಯು, ಅರ್ಜುನನಲ್ಲಿರುವ ಪ್ರೀತ್ಯತಿಶಯವು ವ್ಯಕ್ತಗೊಳಿಸಲ್ಪಟ್ಟಿತು. ಹಿಂದಿನ ಗೋಷ್ಠಿಗೆ ಸೇರದೆ, ಅರ್ಜುನನು ಈ ಗೋಷ್ಠಿಗೆ ಸೇರಿದವನೆಂದು ಸೂಚಿಸುವದಕ್ಕಾಗಿ ಪ್ರೀತ್ಯತಿಶಯದಿಂದ ಎರಡನೆಯ ಸಂಭೋದನೆಯು· ಅಥವಾ ಪ್ರಜ್ಞಾಬಲ ಮಾತ್ರವೇ ಅಲ್ಲದೆ ಅರ್ಜುನನಲ್ಲಿ ಅಭಿಜಾತ್ಯಬಲವೂ ಉಂಟು, ಹೀಗೆ ನೀನೂ ಪರಮ ಸುಕೃತಿಗಳ ಕೋಟಿಯಲ್ಲೇ ಸೇರಿದವನೆಂಬ ಭಾ ಸೂಚನೆಗಾಗಿಯೂ ಭರತರ್ಷಭವೆಂಬ ಸಂಬೋಧನೆಯು. ಆಭಿಜಾತ್ಯವೂ ಒಂದು ದೊಡ್ಡ ಬಲವೆಂದು ಲೋಕಪ್ರಸಿದ್ಧವಾಗಿರವುದು ವಿದುರನೀತಿಯಲ್ಲಿ ಸುಪ್ರಸಿದ್ಧವು **"ಅಷ್ಟೌ ಗುಣಾಃ ಪುರುಷಂ ದೀಪಯಂತಿ ಪ್ರಜ್ಞಾಚ ಕೌಲ್ಯಂಚ ದಮುಶ್ಶ್ರುತಂಚ"** (ಉದ್ಯೋಗ. ೩೩. ೧೦೬) ಎಂಬ ಶ್ಲೋಕವು ಅನುಸಂಧೇಯವು. ಆದುದರಿಂದ ಒಳ್ಳೇ ಅಭಿಜಾತ್ಯವು ಲಭಿಸುವದೂ ಸಹ ಸುಕೃತ ಪರಿಪಾಕದಿಂದಲೇ ಎಂದು ಭಾವಿಸತಕ್ಕದ್ದಾಗಿರುತ್ತವೆ. ಅದೂಅಲ್ಲದೆ ದಮ, ಶ್ರುತ ಮೊದಲಾದವೂ ಸಹ ಸುಕೃತಶಾಲಿಗೆ ಲಭಿಸತಕ್ಕವು. ಅವೂ ಅರ್ಜುನನಲ್ಲಿ ಉಂಟು. ಆ ನಾಲ್ಕು ಮಂದಿ ಸುಕೃತಿಗಳು ಯಾರೆಂದರೆ, (೧) **ಆರ್ತಃ**-ದೀನನಾದವನು, ದೈನ್ಯವೇತಕ್ಕೆಂದರೆ ಹಿಂದೆ ತನಗೆ ಪ್ರಾಪ್ತವಾಗಿದ್ದ ಐಹಿಕ ಸುಖರೂಪವಾದುದು, ಪ್ರಾರಬ್ಧ ಕರ್ಮಾನುಸಾರ ತೊಲಗಿಹೋಯಿತೇ ಎಂಬ ದೈನ್ಯದಿಂದ ಅದನ್ನು ಪುನಃ ಪ್ರಾರ್ಥಿಸುವವನು, ಹಿಂದೆ ಕಳೆದುಕೊಂಡಿದ್ದರಜ್ಞಾನವಿದ್ದರಲ್ಲವೇ ಆರ್ತನಾಗುವನು. ಆದುದರಿಂದ ಆರ್ತನು ಕಳೆದುಕೊಂಡ ಐಹಿಕೈಶ್ವರ್ಯದ ಪುನಃ ಪ್ರಾಪ್ತಿಯನ್ನಪೇಕ್ಷಿಸುವನೆಂಬುದು ಸುವ್ಯಕ್ತವು. ಅದನ್ನು ಪಡೆಯುವದಕ್ಕಾಗಿ ಅಂಗ ಶರಣಾಗತಿಮಾಡಿ ಉಪಾಸಿಸುವನು, (೨) **ಅರ್ಥಾರ್ಥೀ**-ದ್ರವ್ಯಾದಿಗಳನ್ನು ಅಪೇಕ್ಷಿಸುವವನು, ತನಗೆ ಪ್ರಯೋಜನಕರವಾಗಿ ಸುಖರೂಪಗಳಾಗಿರುವದೆಲ್ಲಾ ಈ ಅರ್ಥಶಬ್ದದಲ್ಲೇ ಸೇರಿತು. ಮಕ್ಕಳಿಲ್ಲದೇ, ಮನೆಯಿಲ್ಲದೆ, ಜೀವನೋ

ಪಾಯವಿಲ್ಲದೆ, ಅವುಗಳನ್ನಪೇಕ್ಷಿಸುವವರೂ ಈ ಪಂಗಡಕ್ಕೇ ಸೇರಿದವರು; ಅದೂ ಅಲ್ಲದೆ ಸ್ವರ್ಗ ಕಾಮಿಗಳೂ ಮತ್ತು ಇತರ ಲೋಕಭೋಗಗಳನ್ನೂ ಅಪೇಕ್ಷಿಸುವವರೂ, ಅರ್ಥಾರ್ಥಿಗಳೇ; ಆದುದರಿಂದ ಅರ್ಥಾರ್ಥಿಯು ಎರಡು ವಿಧವು. ೧. ಐಹಿಕೈಶ್ವರ್ಯ ಕಾಮಿಯೊಬ್ಬನು, ೨. ಸ್ವರ್ಗ ಲೋಕಾದಿ ಭೋಗಗಳನ್ನು ಅಪೇಕ್ಷಿಸುವನೊಬ್ಬನು ; (೩) **ಜಿಜ್ಞಾಸುಃ**-ವಿಮರ್ಶಿಸಿ ತಿಳಿಯಲಪೇಕ್ಷೆಯುಳ್ಳವನಿಗೆ ಜಿಜ್ಞಾಸುವೆಂದು ಹೆಸರು. ಪರಮಾತ್ಮನನ್ನು ತಿಳಿಯಲಪೇಕ್ಷೆಯುಳ್ಳವನು ಮುಂದೆ ಹೇಳುವ ಜ್ಞಾನೀ ಎಂಬ ನಾಲ್ಕನೆಯ ತರಗತಿಯವನಲ್ಲೇ ಅಂತರ್ಗತನಾದುದರಿಂದ ಆದನ್ನು ವ್ಯಾವರ್ತಿಸಿ ಇಲ್ಲಿ ಹೇಳುವದು ನ್ಯಾಯವಾದುದರಿಂದ, ತನ್ನ ಆತ್ಮಸ್ವರೂಪವನ್ನು ವಿಮರ್ಶಿಸಿ ತಿಳಿಯುವುದು ಬ್ರಹ್ಮವಿದ್ಯೆಗೆ ಅಂಗವೆಂದು ಶ್ರುತಿಪ್ರತಿಪಾದ್ಯವಾದುದರಿಂದ ಅದನ್ನು ವಿಮರ್ಶಿಸಿ ತಿಳಿಯುವನೆಂದು ಅರ್ಥಮಾಡತಕ್ಕದ್ದು. ಆತನು ಆತ್ಮಪ್ರಾಪ್ತಿಯನ್ನು ಅಪೇಕ್ಷಿಸುವದರಿಂದ ತತ್ಪ್ರಾಪ್ತಿಗಾಗಿ ಪರಮಪದವಲ್ಲದ ಕೈವಲ್ಯವೆಂಬುವನ್ನು ಹೊಂದಿ ಅಲ್ಲಿ ಮುಕ್ತಿಗಾಗಿ ಪರಮಾತ್ಮೋಪಾಸನೆಯನ್ನು ಪೂರೈಸಿ, ಅಲ್ಲಿಂದ ಹಾಗೆಯೇ ದಿವ್ಯವೈಕುಂಠಕ್ಕೆ ಹೋಗುವನು ಎಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತದೆ. ಅದೇ ಇಲ್ಲಿಯೂ ಮುಂದೆ ಎಂಟನೆಯ ಅಧ್ಯಾಯದಲ್ಲೂ ಉಪಪಾದಿತವಾಗಿರುತ್ತದೆ. ಪಟ್ಟಣವನ್ನು ಕುರಿತು ಹೋಗುವವನು, ವೃಕ್ಷದ ನೆರಳಲ್ಲಿ ಸ್ವಲ್ಪ ಕಾಲ ವಿಶ್ರಮಿಸಿಕೊಂಡು ಹೋಗುವವನಹಾಗೆ ಕೈವಲ್ಯದಲ್ಲಿ ಸ್ವಲ್ಪಕಾಲವಿದ್ದು ಅನಂತರ ಮುಂದಕ್ಕೆ ಪರಮಪದಕ್ಕೆ ಹೋಗುವನು. ಜಿಜ್ಞಾಸುವು ಯಾರೆಂಬುದು ಹಿಂದೆಯೇ ೬. ೪೪ ರಲ್ಲಿ, **"ಜಿಜ್ಞಾಸು ರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ"** ಎಂಬಲ್ಲಿ ಸೂಚಿತವು. ಪರಿಶುದ್ಧಾತ್ಮಸ್ವರೂಪಪ್ರಾಪ್ತಿ ಬೇಕೆಂಬ ಅಪೇಕ್ಷೆಯುಳ್ಳವನೆಂಬ ಭಾವವು ಚನ್ನಾಗಿ ತೋರಿಬರುತ್ತದೆ ; ಇಂತಹ ಆತ್ಮಪ್ರಾಪ್ತಿಯನ್ನು ಕೋರುವ ಉಪಾಸಕನ ವಿಷಯವು ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುತ್ತದೆ. ಇವನು ಪಂಚಾಗ್ನಿ ವಿದ್ಯಾನಿಷ್ಠನೆಂದು ಹೇಳಲ್ಪಡುವನು. (೪) **ಜ್ಞಾನೀ**-ಮೇಲೆ ಉಪದೇಶಿಸಲ್ಪಟ್ಟ ವಿಜ್ಞಾನ ಸಹಿತವಾದ ಜ್ಞಾನವುಳ್ಳವನು, ತತ್ವತ್ರಯ ಜ್ಞಾನವುಳ್ಳವನು; ತಾನು ಪರಮಾತ್ಮನಿಗೇನೆ ಸ್ವೈಜವಾದ ಶೇಷಭೂತನು ; ತನ್ನ ಸತ್ತಾಸ್ಥಿತಿ ಪ್ರವೃತ್ತಿಗಳೆಲ್ಲಾ ಆ ಪರಮಾತ್ಮಾಯತ್ತವಾದುದೆಂದು ತಿಳಿದವನು; ತನಗೆ ಪ್ರಾರಬ್ಧಕರ್ಮಾನುಗುಣವಾಗಿ ಪ್ರಾಪ್ತವಾಗಿರುವ ಸಂಸಾರಬಂಧರೂಪ ಮಾಯಾಶರಣಕ್ಕೆ ಆ ಪರಮಕಾರುಣಿಕನಾದ ಸತ್ಯಸಂಕಲ್ಪನಾದವನೇ ಪ್ರಾಪಕನೂ ಮತ್ತು ಅವನೇ ಪ್ರಾಪ್ಯನು ಎಂಬೀಜ್ಞಾನವುಳ್ಳವನು. ಭಕ್ತಿಯೋಗದಲ್ಲಿಳಿಯುವಹಾಗೆ ಮಾಡುವವನೂ, ತನ್ನನ್ನು ಸೇರಿಸಿಕೊಳ್ಳುವವನೂ ಶ್ರಿಯಃಪತಿಯೇ ಎಂದು ನಂಬಿದವನು. ಹೀಗೆ ಈ ನಾಲ್ಕುವಿಧ ಸುಕೃತಿಗಳೂ ನನ್ನನ್ನು ಶರಣಾಗತಿಯಮೂಲಕ ಆಶ್ರಯಿಸಿ ಉಪಾಸನ ಪ್ರತಿಬಂಧಕ ಪಾಪಗಳನ್ನೆಲ್ಲಾ ಜಯಿಸಿ ತಮ್ಮ ತಮ್ಮ ಮನೋರಥಾವಾಪ್ತಿಗಾಗಿ ನನ್ನನ್ನು ಉಪಾಸಿಸುತ್ತಾರೆ. ಇಲ್ಲಿ ಆರ್ತನಿಗಿಂತ ಅರ್ಥಾರ್ಥಿಯು ಉತ್ತಮನೆಂದೂ ಅರ್ಥಾರ್ಥಿಗಿಂತ ಜಿಜ್ಞಾಸು ಉತ್ತಮನೆಂದೂ, ಜಿಜ್ಞಾಸುವಿಗಿಂತ ಜ್ಞಾನಿಯು ಉತ್ತಮನೆಂದೂ ಹೇಳಿದಂತಾಯಿತು. ಆರ್ತನೂ ಅರ್ಥಾರ್ಥಿಯೂ ಸಹ ಐಶ್ವರ್ಯಕಾಮಿಗಳಾಗಿ ಆರ್ತನು ತನಗೆ ತಪ್ಪಿಹೋದುದನ್ನು ಪ್ರಾರ್ಥಿಸುವನಾಗಿಯೂ, ಅರ್ಥಾರ್ಥಿಯು ಇಲ್ಲದುದನ್ನು ಪ್ರಾರ್ಥಿಸುವನಾಗಿಯೂ, ಇರುವಾಗ ಇಬ್ಬರೂ ಕಾಮ್ಯಫಲವನ್ನಪೇಕ್ಷಿಸುವರಾಗಿರುವಾಗ, ಆರ್ತನಿಗಿಂತ ಅರ್ಥಾರ್ಥಿಯು ಹೇಗೆ ಮೇಲೆಂದು ಕೇಳಿದರೆ, ಆರ್ತನು ತನ್ನ ಹಿಂದಿನ ಸ್ಥಿತಿಮಾತ್ರ ದೊರೆತರೆ ಸಾಕೆಂದು ಪ್ರಾರ್ಥಿಸುವನು, ಅರ್ಥಾರ್ಥಿಯಾದರೋ ತನಗೆ ಇದುವರೆಗೂ ಇದ್ದ ಸ್ಥಿತಿಗಿಂತ ಉತ್ತಮಸ್ಥಿತಿಯನ್ನಪೇಕ್ಷಿಸುವದರಿಂದ ಉತ್ತಮನೆಂಬ ಭಾವವು. ಇವರುಗಳಲ್ಲಿ ಆರ್ತನಿಗೂ ಅರ್ಥಾರ್ಥಿಗೂ ಪುನಸ್ಸಂಸಾರವುಂಟು. ಪರಮಾತ್ಮೋಪಾಸನವನ್ನು ಮಾಡಿದ ಸುಕೃತಪರಿಪಾಕದಿಂದ ಉತ್ತಮ

**ಭಾ. ಸುಕೃತಿನಃ-ಪುಣ್ಯಕರ್ಮಾಣೋ, ಮಾಂ ಶರಣ ಮುಪಗಮ್ಯ ಮಾಮೇವ ಭಜನ್ತೇ, ತೇಚ ಸುಕೃತ ತಾರತಮ್ಯೇನ ಚತುರ್ವಿಧಾಃ-ಸುಕೃತ ಗರೀಯಸ್ತ್ವೇನ ಪ್ರತಿಪತ್ತಿ ವೈಶೇಷ್ಯಾ ದುತ್ತರೋತ್ತರಾಧಿಕತಮಾ ಭವಂತಿ। ಆರ್ತಃ - ಪ್ರತಿಷ್ಠಾಹೀನಃ, ಭ್ರಷ್ಟೈಶ್ವರ್ಯಃ ಪುನಸ್ತತ್ಪ್ರಾಪ್ತಿಕಾಮಃ। ಅರ್ಥಾರ್ಥೀ-ಅಪ್ರಾಪ್ತೈಶ್ವರ್ಯತಯಾ**

ಜನ್ಮವನ್ನು ಎತ್ತುವರು. ಆದರೆ ಪರಮಾತ್ಮೋಪಾಸನವನ್ನು ಮಾಡಿದ ಒಳ್ಳೆ ಸಂಸ್ಕಾರವು ವ್ಯರ್ಥವಾಗುವದಿಲ್ಲವು. **"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್"** ಎಂಬಲ್ಲಿ ಉಪಪಾದಿಸಿರುವಹಾಗೆ ಕೆಲವು ಜನ್ಮಗಳು ಕಳೆದ ನಂತರವಾಗಲಿ ಕ್ರಮೇಣ ಉಪಾಯಾನುಷ್ಠಾನವನ್ನು ಮಾಡಿ ಮೋಕ್ಷವನ್ನು ಹೊಂದುವರು. ಈ ಅರ್ಥವು ಮುಂದೆ, **"ಮದ್ಭಕ್ತಾ ಯಾಂತಿಮಾಮಪಿ"** (ಗೀ. ೭. ೨೩) ಎಂಬಲ್ಲಿ ಸುವ್ಯಕ್ತವು.

**ಭಾಷ್ಯಾರ್ಥವು:—**ಹಿಂದೆ ಶರಣಾಗತಿಯನ್ನು ಮಾಡದವರು ದುಷ್ಕೃತಿಗಳೆಂದು ಹೇಳಿ, ಈಗ ಸುಕೃತಗಳ ವಿಷಯವನ್ನು ಹೇಳುವದರಿಂದ, ಇಲ್ಲಿ **ಭಜಂತೇ** ಎಂದು ಹೇಳಿದ್ದರೂ, ಶರಣಾಗತಿಯನ್ನು ಮಾಡಿ **ಭಜಂತೇ**-ಉಪಾಸಿಸುತ್ತಾರೆಂದು ವ್ಯಾಖ್ಯಾನಮಾಡತಕ್ಕದ್ದೇ ನ್ಯಾಯವೆಂದು ಭಾಷ್ಯವನ್ನು ಬರೆಯುತ್ತಾರೆ. ೧೮ ನೆಯ ಅಧ್ಯಾಯದ ೬೬ ಮತ್ತು ಚರಮ ಶ್ಲೋಕದಲ್ಲಿ ಈ ಅಭಿಪ್ರಾಯವು ವ್ಯಕ್ತವು. **ಸುಕೃತಿನಃ** ಎಂದರೆ **ಪುಣ್ಯಕರ್ಮಾಣಃ**-ಪುಣ್ಯಕರ್ಮವನ್ನು ಮಾಡಿದವರು, **ಮಾಂ**-ನನ್ನನ್ನು, **ಶರಣ ಮುಪಗಮ್ಯ**-ಶರಣವನ್ನು ಹೊಂದಿ, **ಮಾಮೇವ ಭಜಂತೇ** ನನ್ನನ್ನೇ ಉಪಾಸಿಸುತ್ತಾರೆ, **ತೇಚ**-ಅವರುಗಳಾದರೋ, **ಸುಕೃತ ತಾರತಮ್ಯದಿಂದ ಚತುರ್ವಿಧಾಃ**-ನಾಲ್ಕು ತರಗತಿಯವರು ಎಂದರೆ, **ಸುಕೃತಗರೀಯಸ್ತ್ವೇನ**-ಸುಕೃತದ ಅಧಿಕ್ಯದಿಂದುಂಟಾದ, **ಪ್ರತಿಪತ್ತಿ ವೈಶೇಷ್ಯಾತ್**-ಮನೋರಥವಿಷಯಜ್ಞಾನ ವಿಶೇಷದಿಂದ, ಫಲಾಕಾಂಕ್ಷೆಯ ತಾರತಮ್ಯವೇ ಪ್ರತಿಪತ್ತಿ ವಿಶೇಷಕ್ಕೆ ಕಾರಣವು, **ಉತ್ತರೋತ್ತರಾತ್**-ಉತ್ತರೋತ್ತರ ಹೇಳಲ್ಪಟ್ಟವರಿಗಿಂತ, **ಅಧಿಕತಮಾ ಭವಂತಿ**-ಶ್ರೇಷ್ಠರೆನಿಸುತ್ತಾರೆ. ನಾಲ್ಕು ಜನರೂ ಶರಣಾಗತರಾಗಿ ಶ್ರದ್ಧೆಯಿಂದ ಉಪಾಸನೆ ಮಾಡುವವರೇ ಸರಿ· ಪೂರ್ವಜನ್ಮಾರ್ಜಿತ ಸುಕೃತ ತಾರತಮ್ಯ ಭೇದದಿಂದ ಫಲೇಚ್ಛಾದಲ್ಲಿ ಭೇದವು. ಅದರ ತಾರತಮ್ಯದಿಂದಲೇ ವೈಶೇಷ್ಯವೂ, ಉತ್ತರೋತ್ತರಾಧಿತಮರೂ, ಎಂದು ಹೇಳಿದರು. ಆ ನಾಲ್ಕು ಜನರಲ್ಲಿ ಆರ್ತನೂ, ಅರ್ಥಾರ್ಥಿಗಳೂ ಕಾಮ್ಯ ಫಲಾರ್ಥಿಗಳು. ಈ ಆರ್ತನೂ, ಅರ್ಥಾರ್ಥಿಯೂ, ಸಹಪ್ರವೃತ್ತಿಧರ್ಮವನ್ನನುಷ್ಠಿಸುವ ಸುಕೃತಿಗಳಾದ ಪರಮಾತ್ಮೋಪಾಸಕರು. ಜಿಜ್ಞಾಸುವೂ, ಜ್ಞಾನಿಯೂ ಸಹ ನಿವೃತ್ತಿಧರ್ಮವನ್ನನುಷ್ಠಿಸುವ ಸುಕೃತಿಗಳಾದ ಪರಮಾತ್ಮೋಪಾಸಕರು. **"ಪ್ರವೃತ್ತಿಃ ಪುನರಾವೃತ್ತಿರ್ನಿವೃತ್ತಿಃ ಪರಮಾಗತಿಃ"** ಎಂದು (೨೧೯. ೪) ಶ್ರೀ ವ್ಯಾಸರು ಹೇಳಿರುವಹಾಗೆ ಆರ್ತಾರ್ಥಾರ್ಥಿಗಳು ಪುನರಾವೃತ್ತಿಯುಳ್ಳವರು ; ಜಿಜ್ಞಾಸು ಜ್ಞಾನಿಗಳಾದರೋ ಪರಮಗತಿಯಾದ ಪರಬ್ರಹ್ಮಾನುಭವವನ್ನು ಹೊಂದುವವರು. ಮುಂದೆ ೮ ನೆಯ ಅಧ್ಯಾಯದಲ್ಲಿ ಈ ಎರಡು ವಿಧ ಸುಕೃತಿಗಳಿಗೂ ಇರುವ ವೈಲಕ್ಷಣ್ಯವನ್ನು ಬಹು ಸ್ವಾರಸ್ಯವಾಗಿ ತೋರಿಸುತ್ತಾರೆ. ಜಿಜ್ಞಾಸುವೂ ಜ್ಞಾನಿಯೂ ಕಾಮ್ಯಫಲಾರ್ಥಿಗಳಲ್ಲವು, ಜಿಜ್ಞಾಸುವು ಮೋಕ್ಷಾರ್ಥಿಯಲ್ಲಮದರಿಂದ ಜ್ಞಾನಿಗಿಂತ ಉತ್ಕೃಷ್ಟತೆಯಲ್ಲಿ ಕಮ್ಮಿಯು. ಆದುದರಿಂದ ಕ್ರಮವು ಹೇಗೆಂದರೆ ; ಆರ್ತನು, ಅರ್ಥಾರ್ಥಿಯು ಜಿಜ್ಞಾಸುವು, ಜ್ಞಾನಿಯು ; ಆದರೆ ಮೂಲದಲ್ಲಿ ಕ್ರಮ ವ್ಯತ್ಯಾಸವಿದೆಯಲ್ಲಾ **ಉತ್ತರೋತ್ತರಾಧಿಕಾಃ** ಎಂದು ಹೇಳಲು ಹೇಗಾಗುತ್ತದೆಂದರೆ. ಅರ್ಥದಿಂದಲೇ ಕ್ರಮವು ಏರ್ಪಡುವವರಿಂದ ಛಂದಸ್ಸಿಗಾಗಿ ಕ್ರಮವ್ಯತ್ಯಾಸವಿರುತ್ತದೆ. ಅದು ಬಾಧಕವಲ್ಲವು. ಈ ನಾಲ್ವರು ಯಾರೆಂದರೆ ಹೇಳುತ್ತಾರೆ.

**ಭಾ. ಐಶ್ವರ್ಯಕಾಮಃ । ತಯೋಽರ್ಮುಖಭೇದ ಮಾತ್ರಂ । ಐಶ್ವರ್ಯ ವಿಷಯತಯೈಕಾ ದೇಕ ಏವಾಧಿಕಾರಃ । ಜಿಜ್ಞಾಸುಃ-ಪ್ರಕೃತಿ ವಿಯುಕ್ತಾತ್ಮಸ್ವರೂಪಾವಾಪ್ತೀಚ್ಛುಃ, ಜ್ಞಾನಮೇವಾ ಸ್ಯ ಸ್ವರೂಪಮಿತಿ ಜಿಜ್ಞಾಸು ರಿತ್ಯುಕ್ತಂ। ಜ್ಞಾನೀ ಚ-ಇತಸ್ತ್ರ್ಯನ್ಯಾಂ**

(೧) **ಆರ್ತಃ** ಎಂದರೆ **ಪ್ರತಿಷ್ಠಾ ಹೀನಃ**-ಪ್ರತಿಷ್ಠೆಯನ್ನು ಕಳಕೊಂಡವನು, **ಭ್ರಷ್ಟೈಶ್ವರ್ಯನಾಗಿ** ಪುನಸ್ತತ್ಪ್ರಾಪ್ತಿಕಾಮನು, ಐಶ್ವರ್ಯವನ್ನು ಕಳೆದುಕೊಂಡಿದುದರಿಂದ ಆರ್ತನಾಗಿ ಪುನಃ ಅದನ್ನು ಹೊಂದುವದಕ್ಕಾಗಿ ಭಗವಂತನನ್ನು ಉಪಾಸಿಸುವವನು. ಇದಕ್ಕೆ ಧ್ರುವನು ನಿದರ್ಶನವು. (೨) **ಅರ್ಥಾರ್ಥೀ** ಎಂದರೆ **ಅಪ್ರಾಪ್ತೈಶ್ವರ್ಯತಯಾ ಐಶ್ವರ್ಯಕಾಮಃ**-ಐಶ್ವರ್ಯವಿಲ್ಲದುದರಿಂದ ಐಶ್ವರ್ಯವನ್ನು ಅಪೇಕ್ಷಿಸುವವನು, ಇಲ್ಲಿ ಅರ್ಥ ಶಬ್ದದಿಂದ ದ್ರವ್ಯಮಾತ್ರವೇ ಹೇಳಲ್ಪಡಲಿಲ್ಲವು, ಅರ್ಥನೀಯವಾದ ಭೋಗಸಂಪತ್ತೆಲ್ಲಾ ಹೇಳಲ್ಪಟ್ಟಿತು. ಮಕ್ಕಳಿಲ್ಲದುದರಿಂದ ತತ್ಪ್ರಾಪ್ತಿಗಾಗಿ ಉಪಾಸಿಸುವನೂ ಅರ್ಥಾರ್ಥಿಯು. ಇವರಿಬ್ಬರೂ ಕಾಮ್ಯಫಲಾರ್ಥಿಗಳಾದುದರಿಂದ ಇಬ್ಬರಿಗೂ ತುಂಬಾ ತಾರತಮ್ಯವಿಲ್ಲವೆಂದು ಹೇಳುತ್ತಾರೆ. **ತಯೋಃ**-ಈ ಇಬ್ಬರಿಗೂ, **ಮುಖಭೇದಮಾತ್ರಂ**-ಫಲಕಾಮನೆಯಿಂದ ಅಲ್ಪವ್ಯತ್ಯಾಸಮಾತ್ರವೇ. **ಐಶ್ವರ್ಯ ವಿಷಯತಯಾ**-ಇಬ್ಬರು ಅಪೇಕ್ಷಿಸುವದೂ ಐಶ್ವರ್ಯವಿಷಯವಾಗಿ ಸಾಮ್ಯವಿರುವದರಿಂದ, **ಏಕಏವ ಅಧಿಕಾರಃ**-ಅಧಿಕಾರವು ಒಂದೆಯೇ; ಒಬ್ಬನು ತಪ್ಪಿಹೋದ ಐಶ್ವರ್ಯವನ್ನೂ, ಇನ್ನೊಬ್ಬನು ಇಲ್ಲದ ಐಶ್ವರ್ಯವನ್ನೂ, ಬಯಸುವದರಿಂದ, ಮುಖಭೇದ ಮಾತ್ರವೆಂದೂ ಅವರಿಬ್ಬರೂ ಕಾಮ್ಯಫಲಾಪೇಕ್ಷಿಗಳಾಗಿ ಅವರಿಗೆ **ಏಕಏವ ಅಧಿಕಾರಃ** ಎಂದು ಹೇಳಿದರು. (**೩**) **ಜಿಜ್ಞಾಸುಃ** ಎಂದರೆ ವಿಮರ್ಶಿಸಿ ತಿಳಿಯಲು ಇಚ್ಛೆಯುಳ್ಳವನು, ಯಾವುದನ್ನು ಎಂಬ ವಿಷಯದಲ್ಲಿ ಹೇಳುತ್ತಾರೆ, **ಪ್ರಕೃತಿ ವಿಯುಕ್ತ**-ಪ್ರಕೃತಿಯಿಂದ ಬಿಡಲ್ಪಟ್ಟ, **ಆತ್ಮರೂಪಾವಾಪ್ತೀಚ್ಛುಃ** ಆತ್ಮಸ್ವರೂಪವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವನು, ಕೈವಲ್ಯಪ್ರಾಪ್ತಿಯನ್ನಪೇಕ್ಷಿಸುವನು. ಕೈವಲ್ಯವೆಂಬ ಸ್ಥಾನವಿಶೇಷವು ಕೆಲವರು ಹೇಳುವಹಾಗೆ ವೈಕುಂಠವಲ್ಲವು, ಅಲ್ಲಿ ಭಗವದುಪಾಸನೆಮಾಡಿ ಮುಂದಕ್ಕೆ ಪರಮಪದಕ್ಕೆ ಹೋಗುತ್ತಾನೆಂದು ತಿಳಿಯತಕ್ಕದ್ದು, ಜಿಜ್ಞಾಸು ಶಬ್ದಕ್ಕೆ ತಿಳಿಯಬೇಕೆಂಬಪೇಕ್ಷೆಯುಳ್ಳವನೆಂಬರ್ಥವಾದರೆ, ಪರಮಾತ್ಮಸ್ವರೂಪಯಥಾತ್ಮ್ಯವನ್ನು ತಿಳಿಯಬೇಕೆಂಬುವನೆಂದಾಗಲಿ ಅಥವಾ ಭಕ್ತಿಶ್ರದ್ಧಾರಹಿತನಾಗಿ ಭಗವಂತನ ಸ್ವರೂಪವನ್ನು ಮಾತ್ರ ತಿಳಿಯಬೇಕೆಂಬ ಕುತೂಹಲವುಳ್ಳವನೆಂದಾಗಲಿ ಏಕೆ ಅರ್ಥಮಾಡಕೂಡದೆಂಬುದಾಗಿ ಕೇಳಬಹುದು. ಅದೂ ಅಲ್ಲದೆ ಮಾತ್ಸ್ಯ ಪುರಾಣದಲ್ಲಿ (೭೭-೪೯) **"ಯೋಽಯಂ ಜಿಜ್ಞಾಸವೋ ಭಕ್ತಾಃ"** ಎಂದು ಜಿಜ್ಞಾಸು ಶಬ್ದದಿಂದ ಪರಮಾತ್ಮಭಕ್ತನೇ ಹೇಳಲ್ಪಟ್ಟಿರುತ್ತಾನೆ. ಹೀಗೆ ಶಂಕಾ ಉಂಟಾದೀತೆಂದು ಭಾವಿಸಿ **ಪ್ರಕೃತಿ ವಿಯುಕ್ತ ಜೀವಾತ್ಮಸ್ವರೂಪ** ಪ್ರಾಪ್ತಿಯನ್ನಪೇಕ್ಷಿಸುವನೆಂದು ವ್ಯಾಖ್ಯಾನಮಾಡಿ ಅದಕ್ಕೆ ಕಾರಣವನ್ನು ಹೇಳುತ್ತಾರೆ. **ಜ್ಞಾನಮೇವ ಅಸ್ಯಸ್ವರೂಪಮಿತಿ**-ಜ್ಞಾನವೇ ಈ ಜೀವಾತ್ಮನ ನೈಜವಾದ ಸ್ವರೂಪವಾದುದರಿಂದ, **ಜಿಜ್ಞಾಸು ರಿತ್ಯುಕ್ತಂ**-ಜಿಜ್ಞಾಸುವೆಂದು ಈ ಅಧಿಕಾರಿಯು ಹೇಳಲ್ಪಟ್ಟನು. ಜ್ಞಾನಿಯು ಅವಲಂಬಿಸುವ ಬ್ರಹ್ಮವಿದ್ಯೆಗೆ ಅಂಗವಾಗಿ ಅನೇಕಕಡೆಗಳಲ್ಲಿ ಶ್ರುತಿಯಲ್ಲೂ ಮತ್ತು ಈ ಗೀತೆಯಲ್ಲೇ ಆರನೆಯ ಅಧ್ಯಾಯದಲ್ಲೇ ಜೀವಾತ್ಮ ಯಥಾತ್ಮ್ಯದರ್ಶನವು ಪರಮ ಭೋಗ್ಯರೂಪವಾಗಿ ಹೇಳಲ್ಪಟ್ಟಿರುತ್ತದೆ. ಈ ನಾಲ್ಕುವಿಧ ಅಧಿಕಾರಿಗಳಲ್ಲಿ ಈತನೂ ಒಬ್ಬನಾಗಿ ಹೇಳಲ್ಪಟ್ಟಿರಬೇಕಾಗಿರುವದರಿಂದಲೂ, ಆತ್ಮನು ಜ್ಞಾನಸ್ವರೂಪನಾಗಿರುವದರಿಂದಲೂ, ಜಿಜ್ಞಾಸುವು ಪ್ರಕೃತಿವಿಯುಕ್ತವಾದ ಆತ್ಮಸ್ವರೂಪಪ್ರಾಪ್ತಿಯನ್ನಪೇಕ್ಷಿಸುವನೆಂದು ವ್ಯಾಖ್ಯಾನ ಮಾಡಬೇಕಾಗಿರುತ್ತದೆ. ಈ ಜಿಜ್ಞಾಸುವಿನ

**ಭಾ. "ಪ್ರಕೃತಿಂ ವಿದ್ಧಿಮೇ ಪರಾಂ" ಇತ್ಯಾದಿನಾ ಭಿಹಿತ ಭಗವಚ್ಛೇಷ ತಯ್ಯೈಕ ರಸಾತ್ಮಸ್ವರೂಪವಿತ್, ಪ್ರಕೃತಿವಿಯುಕ್ತ ಕೇವಲಾತ್ಮನ್ಯಪರ್ಯವಸ್ಯನ್ ಭಗವಂತಂ ಪ್ರೇಪ್ಸುಃ ಭಗವಂತಮೇವ ಪರಮ ಪ್ರಾಪ್ಯಂ ಮನ್ವಾನಃ ||೧೬||**

ವಿಷಯವೆಲ್ಲಾ ೮ ನೆಯ ಅಧ್ಯಾಯದಲ್ಲಿ ವಿಸ್ತರಿಸಿ ಹೇಳಲ್ಪಟ್ಟಿರುತ್ತದೆ. **(೪) ಜ್ಞಾನೀಚ- "ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ"** (ಗೀ. ೭. ೫.) **ಇತ್ಯಾದಿನಾ**-ಎಂಬಿವೇ ಮೊದಲಾದುವುಗಳಿಂದ, **ಅಭಿಹಿತ**-ಹೇಳಲ್ಪಟ್ಟ, **ಭಗವಚ್ಛೇಷತ್ವೈಕರಸಾತ್ಮಸ್ವರೂಪವಿತ್**-ಭಗವಂತನಿಗೆ ಶೇಷಭೂತವಾಗಿ ಮುಖ್ಯಾನಂದಸ್ವರೂಪನೆಂದು ಆತ್ಮಸ್ವರೂಪವನ್ನು ತಿಳಿದವನು; **ಪ್ರಕೃತಿ ವಿಯುಕ್ತ ಕೇವಲಾತ್ಮನ್ಯಪರ್ಯವಸ್ಯನ್**-ತನ್ನ ಆತ್ಮವು ಪ್ರಕೃತಿ ವಿಯುಕ್ತ ದಶೆಯಲ್ಲಿ ಮಹಾಜ್ಞಾನಸ್ವರೂಪನೆಂದು ತಿಳಿದು ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸುವದರಲ್ಲೇ ನಿಂತುಬಿಡದೇ, **ಭಗವಂತಂ ಪ್ರೇಪ್ಸುಃ**-ಭಗವಂತನನ್ನು ಪ್ರಾಪ್ಯವಾಗಿ ಹೊಂದತಕ್ಕದ್ದೆಂದು, ಭಗವಂತನನ್ನೇ **ಪರಮಂ ಪ್ರಾಪ್ಯಂ ಮನ್ವಾನಃ**-ಪರಮ ಪ್ರಾಪ್ಯವನ್ನಾಗಿ ತಿಳಿದವನು, ಇಲ್ಲಿ **ಭಗವಂತಮೇವ** ಎಂದು ಹೇಳಿರುವದರಿಂದ ಈ ಜ್ಞಾನಿಗೆ ವಿಳಂಬವು ಇಷ್ಟವಿಲ್ಲವು, ಶೀಘ್ರದಲ್ಲೇ ದೇಹಾವಸಾನದಲ್ಲೇ ಪರಮಾತ್ಮನನ್ನು ಹೊಂದಬೇಕೆಂಬ ಕುತೂಹಲವುಂಟೆಂಬುದು ಸೂಚಿತವು. ಇಲ್ಲಿ **ಪ್ರಕೃತಿ ವಿಯುಕ್ತಕೇವಲಾತ್ಮನ್ಯ ಪರ್ಯವಸ್ಯನ್** ಎಂದು ಜ್ಞಾನಿಯ ವಿಷಯದಲ್ಲಿ ವ್ಯಾಖ್ಯಾನ ಮಾಡಿರುವದರಿಂದ, ಜ್ಞಾನಿಗೆ ಕರ್ಮಯೋಗ ಮೂಲಕವಾಗಲಿ ಅಥವಾ ಅದರೊಂದಿಗೆ ಜ್ಞಾನಯೋಗದ ಸಹಾಯದಿಂದಾಗಲಿ ಆತ್ಮಾವಲೋಕನಪ್ರಾಪ್ತಿಯು ಆವಶ್ಯಕವೆಂದು ಹಿಂದೆ ಹೇಳಿದುದನ್ನು ಜ್ಞಾಪಿಸುತ್ತಾರೆ.

ಈ ನಾಲ್ಕುವಿಧ ಸುಕೃತಿಗಳೂ ಪರಮಾತ್ಮನಲ್ಲಿ ಶರಣಾಗತಿಯನ್ನು ಮಾಡಿ ಪರಮಾತ್ಮನನ್ನೇ ಉಪಾಸಿಸುವದರಿಂದ ಇವರೆಲ್ಲರೂ ಭಕ್ತಿಯೋಗನಿಷ್ಠರು. ಈ ನಾಲ್ಕು ಭಕ್ತಿಯೋಗನಿಷ್ಠರಲ್ಲಿ ಜ್ಞಾನಿಯೊಬ್ಬನೇ ಮೋಕ್ಷಪೇಕ್ಷೆಂಬುವನು. ಇತರ ಮೂರು ತರಗತಿಯವರೂ ಮೋಕ್ಷೇತರ ಫಲಗಳನ್ನಪೇಕ್ಷಿಸುವರೆಂದು ತಿಳಿಯತಕ್ಕದ್ದು. ಅರ್ತ, ಅರ್ಥಾರ್ಥಿ, ಜಿಜ್ಞಾಸುಗಳು ಯಾವ ಫಲಗಳನ್ನು ಕೋರುವವರು ಎಂದರೆ? ಫಲೇಚ್ಛೆಯಲ್ಲಿ ವ್ಯತ್ಯಾಸವೆಂಬುದನ್ನು ವ್ಯಕ್ತವಾಗಿ ಭಾಷ್ಯದಲ್ಲಿ ತೋರಿಸಿರುತ್ತಾರೆ. ಆದರೆ ಜಿಜ್ಞಾಸುವು ಆತ್ಮಪ್ರಾಪ್ತಿಯನ್ನಪೇಕ್ಷಿಸಿದರೂ, ಆತನಿಗೆ ಪುನರಾವೃತ್ತಿ ಇಲ್ಲವೆಂದು ಮುಂದೆ ಹೇಳಲ್ಪಡುತ್ತದೆ. ಆತ್ಮಪ್ರಾಪ್ತಿಯನ್ನು ಹೊಂದಿದನಂತರ ಮೋಕ್ಷಪ್ರಾಪ್ತಿಯನ್ನು ಹೊಂದುವವನು, ಆದುದರಿಂದ ವಿಳಂಬವನ್ನು ಸಹಿಸುವವನು. ಜ್ಞಾನಿಯಾದರೋ ಹಾಗೆ ವಿಳಂಬವನ್ನು ಸಹಿಸದವನಾದುದರಿಂದ ಆತನಿಗೆ ಪರಬ್ರಹ್ಮಪ್ರಾಪ್ತಿಯು ಸಾಕ್ಷಾತ್ತಾಗಿ ಲಭಿಸುತ್ತದೆ. ಇದನ್ನು ಅರ್ಜುನನು ಗ್ರಹಿಸಿದ್ದರೂ ೧೨ ನೆಯ ಅಧ್ಯಾಯದಲ್ಲಿ ಜ್ಞಾನಿಯಾಗಿ ಮುಕ್ತಿಹೊಂದುವದಕ್ಕೆ ಮನಸ್ಸಿನ ಐಕ್ಯಾಂತ್ಯವು ಆವಶ್ಯಕವಾಗಿ ಅದನ್ನು ಹೊಂದುವದು ಕಷ್ಟವಾಗಿ ತೋರಿ, ಜಿಜ್ಞಾಸುವಾಗಿ ನಿನ್ನನ್ನು ಬಂದುಸೇರುವದು ಅನುಕೂಲವೇ ಎಂದು ಪ್ರಶ್ನಿಸುವನು. ಇದು ಅಷ್ಟು ಅನುಕೂಲವಾದುದಲ್ಲವೆಂದು ಅಲ್ಲಿ ಹೇಳುತ್ತಾರೆ. ಮಿಕ್ಕ ಇಬ್ಬರಿಗೂ ಪುನರಾವೃತ್ತಿಯುಂಟು. ಮೋಕ್ಷಾಪೇಕ್ಷೆಯಿಂದ ಭಗವಂತನನ್ನು ಆಶ್ರಯಿಸುವ ಜ್ಞಾನಿಯ ವಿಷಯದಲ್ಲಿ ಭಗವಂತನು ಪ್ರೀತನಾಗುವದರಿಂದ ಆತನು ತಾನಾಗಿಯೇ ಪ್ರಾರ್ಥನೆ ಇಲ್ಲದೇನೇ ಐಹಿಕ ಸುಖವನ್ನೂ ಕೊಡಬಹುದು. **"ತಸ್ಮಿನ್ ಪ್ರಸನ್ನೇ ಕಿಮಹಾಸ್ತ್ಯಲಭ್ಯಂ"** ಚತುರ್ವಿಧ ಪುರುಷಾರ್ಥಗಳೂ ಆತನ ಅನುಗ್ರಹದಿಂದ ಉಂಟಾಗಬಹುದು. ಇದಕ್ಕೆ ಕುಚೇಲ ವೃತ್ತಾಂತವು ನಿದರ್ಶನವು.

**ಮೂ. ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥ ಮಹಂ, ಸ ಚ ಮಮ ಪ್ರಿಯಃ ॥ ೧೭.**

**ಮೂಲಕ್ಕೆ ಅರ್ಥವು:—**ಇತರ ಮೂರು ಜನರು ಪರಮ ಪ್ರಾಪ್ಯನಾದ ತನ್ನನ್ನು ಬಿಟ್ಟು ಇತರ ಪುರುಷಾರ್ಥಗಳನ್ನು ಪ್ರಾರ್ಥಿಸುವದರಿಂದಲೂ, ಜ್ಞಾನಿಯಾದರೋ ತನ್ನನ್ನೇ ಪರಮ ಪ್ರಾಪ್ಯವನ್ನಾಗಿ ಪ್ರಾರ್ಥಿಸುವದರಿಂದಲೂ, ಜ್ಞಾನಿಯೇ ಸರ್ವಶ್ರೇಷ್ಠನೆಂದು ಹೇಳುತ್ತಾರೆ. ಆ ಜ್ಞಾನಿಗೆ ನಾನು ಪ್ರಿಯತಮನು, ಆ ಕಾರಣದಿಂದ ನನಗೂ ಆತನು ಪ್ರಿಯತಮನೆಂದು ಹೇಳುತ್ತಾರೆ. **ತೇಷಾಂ**-ಮೇಲೆ ಹೇಳಿದ ನಾಲ್ಕು ಮಂದಿ ಭಕ್ತರಲ್ಲಿ ಎಂದರೆ ಭಕ್ತಿಯೋಗವನ್ನು ಮಾಡುವವರಲ್ಲಿ, **ಜ್ಞಾನೀ**-ಮೋಕ್ಷಾರ್ಥಿಯಾಗಿರುವ ಪ್ರಪನ್ನನು, **ವಿಶಿಷ್ಯತೇ**-ಹೆಚ್ಚು ಮಹಿಮೆಯುಳ್ಳವನೆಂಬ ವಿಶೇಷವನ್ನು ಹೊಂದಿದವನು. ಯಾವ ಕಾರಣದಿಂದ? ಅದೇನು ಆತನಲ್ಲಿ ಅಷ್ಟು ಮಹಿಮೆಯು? ಎಂದರೆ, ಆತನು **ನಿತ್ಯಯುಕ್ತಃ**-ಸದಾ ನನ್ನನ್ನೇ ಧ್ಯಾನಿಸುವವನು, ಪ್ರಾಪ್ಯನಾದ ನನ್ನನ್ನು ಹೊಂದುವತನಕವೂ, ತದನಂತರವೂ, ನನ್ನಲ್ಲಿಯೇ ಯಾವಾಗಲೂ ಸಕ್ತವಾದ ಮನಸ್ಸುಳ್ಳವನು, ಇದರಿಂದ ಇತರ ಮೂವರೂ ಹಾಗಲ್ಲವೆಂದು ಹೇಳಿದ್ದಂತಾಯಿತು ಇವರು ಮನೋರಥಪ್ರಾಪ್ತಿಯುಂಟಾಗುವವರೆಗೂ ಧ್ಯಾನಿಸುವರು, ಪ್ರಾಪ್ತಕಾಮರಾದ ಒಡನೆಯೇ ಧ್ಯಾನದಿಂದ ನಿವೃತ್ತಿಯನ್ನು ಹೊಂದುವರು. ಇನ್ನೂ ಆತನಲ್ಲಿ ವಿಶೇಷವೇನೆಂದರೆ— **ಏಕಭಕ್ತಿಃ**-ನಾನೇ ಪ್ರಾಪ್ಯರೂಪ ಫಲವಾಗಿಯೂ ನಾನೇ ಉಪಾಸ್ಯವಾಗಿಯೂ ಇದುವದರಿಂದ ನನ್ನೊಬ್ಬನಲ್ಲೇ ಭಕ್ತಿಯುಳ್ಳವನು, ಇತರರಾದರೋ ತಮ್ಮ ಮನೋರಥ ಫಲದಲ್ಲೂ ವಿಶ್ವಾಸವೂ ನನ್ನಲ್ಲೂ ಭಕ್ತಿಯೂ ಹೀಗೆ ಪ್ರತ್ಯೇಕವಾಗಿ ವಿಶ್ವಾಸವು ಎರಡರಲ್ಲೂ ಇರುತ್ತದೆ. ಹೀಗೆ ನಿತ್ಯಯುಕ್ತನಾರಿಯೂ ಏಕಭಕ್ತಿಯಾಗಿಯೂ ಇರಲು ಕಾರಣವೇನೆಂದರೆ, **ಹಿ**-ಯಾವ ಕಾರಣದಿಂದ, **ಜ್ಞಾನಿನಃ**-ಜ್ಞಾನಿಗೆ, **ಅಹಂ**-ನಾನು, **ಅತ್ಯರ್ಥಂ**-ಇಷ್ಟು ಎಂದು ಹೇಳಲು ಸಾಧ್ಯವಲ್ಲದಷ್ಟು **ಪ್ರಿಯಃ**-ಪ್ರಿಯನೋ, ಆ ಕಾರಣದಿಂದಲೇ, **ಸಚ**-ಆ ಜ್ಞಾನಿಯೂ ಕೂಡ, **ಮಮ**-ನನಗೂ ಸಹ, **ಅತ್ಯರ್ಥಂ ಪ್ರಿಯಃ**-ಬಾಯಿಂದ ಇಷ್ಟೆಂದು ಹೇಳಲು ಸಾಧ್ಯವಲ್ಲದಷ್ಟು ಪ್ರಿಯನು. ಹೀಗೆ ಆ ಜ್ಞಾನಿಯು ಸದಾ ನನ್ನನ್ನೇ ಧ್ಯಾನಿಸುವವನಾಗಿ, ನನ್ನೊಬ್ಬನಲ್ಲೇ ಭಕ್ತಿಯುಳ್ಳವನಾಗಿ, ಅನ್ಯದೇವತಾ ಭಜನೆಯಿಲ್ಲದವನಾಗಿ, ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ಪ್ರೀತಿಯನ್ನು ನನ್ನಲ್ಲಿಟ್ಟಿರುವವನಾಗಿರುವದರಿಂದ, ಆತನು ಇವರೆಲ್ಲರಿಗಿಂತ ಶ್ರೇಷ್ಠನು. ಆದುದರಿಂದ ಅವನಲ್ಲಿ ನನಗೆ ಪ್ರೀತಿಯು ಇಷ್ಟೆಂದು ಹೇಳಲು ಅಳವಿಲ್ಲವು. ಮಿಕ್ಕ ಮೂರು ಮಂದಿಗಳೂ ಪ್ರಿಯರೇ, ಆದರೆ ಈ ಜ್ಞಾನಿಯಲ್ಲಾದರೋ ನನಗಿರುವ ಪ್ರೀತ್ಯತಿಶಯವು ನಿರುಪಮವಾದುದು ಎಂಬ ಭಾವವು. ಏತಕ್ಕೆ ನಿರುಪಮವು ಎಂದರೆ ವಿವೇಕದಿಂದ ಯಾವುದು ಸರ್ವೋತ್ಕೃಷ್ಟವೋ ಅದನ್ನೇ ಅಪೇಕ್ಷಿಸಿ ನನ್ನನ್ನೇ ಉಪಾಸಿಸುತ್ತಾನಾದುದರಿಂದ ತುಂಬಾ ವಿವೇಕಿಯಾದುದರಿಂದ ಆತನು ನನಗೆ ಅತ್ಯರ್ಥಪ್ರಿಯನು. ಇತರರನ್ನು ಬಿಟ್ಟು ನನ್ನನ್ನೇ ಆಶ್ರಯಿಸಿದ್ದು ಒಂದು ದೊಡ್ಡ ವಿವೇಕವು; ಅದರಲ್ಲೂ ನನ್ನನ್ನು ಆಶ್ರಯಿಸಿ ನಿರತಿಶಯವಾದ ಚ್ಯುತಿಯಿಲ್ಲದ ನಿಶ್ಶ್ರೇಯಸ್ಸನ್ನು ಪ್ರಾರ್ಥಿಸಿರುವದರಿಂದ ಆ ವಿವೇಕದ ಮಹತ್ತು ಇಷ್ಟೆಂದು ಹೇಳಲು ಸಾಧ್ಯವಿಲ್ಲವು. ಆದುದರಿಂದ **"ವಿಭೀಷಣೋ ಮಹಾ ಪ್ರಾಜ್ಞಃ"** ಎಂದು ಮಹರ್ಷಿ ಹೇಳಿರುವಹಾಗೆ ಆತನು ನನಗೆ ಅತ್ಯರ್ಥಪ್ರಿಯನೆಂಬ ಭಾವವು. ಈ ಶ್ಲೋಕಾಭಿಪ್ರಾಯವೇ ಮೋಕ್ಷಧರ್ಮ ೩೫೦ ನೆಯ ಅಧ್ಯಾಯದಲ್ಲಿ ವ್ಯಕ್ತವು. ಅಲ್ಲಿ **"ಚತುರ್ವಿಧಾಮಮಜನಾ ಭಕ್ತಾ ಏವ ಹಿ ತೇ ಶ್ರುತಂ । ತೇಷಾ ಮೇಕಾನ್ತಿನ ಶ್ರೇಷ್ಠಾ ಯೇಚೈವಾನನ್ಯದೇವತಾಃ । ಅಹಮೇವಗತಿಸ್ತೇಷಾಂ ನಿರಾಶೀಃ ಕರ್ಮ**

**ಭಾ. ತೇಷಾಂ ಜ್ಞಾನೀ ವಿಶಿಷ್ಯತೇ, ಕುತಃ? ನಿತ್ಯಯುಕ್ತ ಏಕಭಕ್ತಿರಿತಿ ಚ; ಜ್ಞಾನಿನೋ ಹಿ ಮದೇಕ ಪ್ರಾಪ್ಯಸ್ಯಮಾಯಾಯೋಗೋ ನಿತ್ಯಃ; ಇತರಯೋಸ್ತು ಯಾವತ್ಸಾಭಿ ಲಷಿತಪ್ರಾಪ್ತಿ ಮಯಾ ಯೋಗಃ; ತಥಾ ಜ್ಞಾನಿನೋ ಮಯ್ಯೇಕಸ್ಮಿನ್ನೇವ ಭಕ್ತಿಃ; ಇತರಯೋಸ್ತು ಸ್ವಾಭಿ ಲಷಿತೇ ತತ್ಸಾಧನತ್ವೇನ ಚ ಮಯಿ ಚ। ಅತಸ್ಸ**

---

**ಕಾರಿಣಾಂ। ಯೇ ಚ ಶಿಷ್ಟಾಸ್ತ್ರಯೋ ಭಕ್ತಾಃ ಫಲಕಾಮಾ ಹಿ ತೇ ಮತಾಃ। ಸರ್ವೇ ಚ್ಯವನ ಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್॥** (೩೩. ೩೪. ೩೫) ಎಂದು ಹೇಳಿ ಜ್ಞಾನಿಯೊಬ್ಬನೀಗ ಮಹಾ ಪ್ರಾಜ್ಞನು; ಮಿಕ್ಕ ಮೂರು ಮಂದಿಯೂ ಜಾರಿದವರೇ ಎಂದು ಉಪದೇಶಿಸಲ್ಪಟ್ಟಿರುತ್ತದೆ. ಜಿಜ್ಞಾಸುವೂ ಇಲ್ಲಿಗೆ ಪುನಃ ಬಾರದೆ ಸ್ವಲ್ಪಕಾಲ ಕೈವಲ್ಯದಲ್ಲಿದ್ದು ಅನಂತರ ಮೋಕ್ಷಹೊಂದುವನು; ಹೀಗಿರುವಾಗ ಆತನು ಚ್ಯವನ ಧರ್ಮವುಳ್ಳವನು ಹೇಗೆ? ಎಂದಾಕ್ಷೇಪಿಸಿದರೆ, ತತ್ಕಾಲದಲ್ಲಿ ಮೋಕ್ಷವಿಲ್ಲದೆ ಕೈವಲ್ಯಪ್ರಾಪ್ತಿಯಾದುದರಿಂದ ಚ್ಯವನ ಧರ್ಮವುಳ್ಳವನು ಎಂದರೆ ಮೋಕ್ಷಕ್ಕಿಂತ ನಿಹೀನವಾದ ಪ್ರಾಪ್ತಿಯುಳ್ಳವನೆಂಬ ಭಾವವು.

**ಭಾಷ್ಯಾರ್ಥವು:—**ಹಿಂದಿನ ಶ್ಲೋಕದಲ್ಲಿ ಭಕ್ತರುಗಳು ನಾಲ್ಕುವಿಧವೆಂದು ಹೇಳಿದರು. ಇಲ್ಲಿ ಅವರುಗಳಲ್ಲಿ ಜ್ಞಾನಿಯು ಮಹಾಪ್ರಾಜ್ಞನಾಗಿ ಸರ್ವಶ್ರೇಷ್ಠನೆಂದು ಹೇಳಿ ಅದಕ್ಕೆ ಮೂರು ಕಾರಣಗಳನ್ನು ತಿಳಿಸುತ್ತಾರೆ. ಹಾಗೆ ಸರ್ವಶ್ರೇಷ್ಠನಾದುದರಿಂದ ಆ ನಾಲ್ವರಲ್ಲಿ ಜ್ಞಾನಿಯಲ್ಲಿ ತಮಗೆ ಪ್ರೀತಿಯು **ಅಭ್ಯಧಿಕಾಭವೇತ್** ಎಂಬಲ್ಲಿ ಹೇಳಿರುವಹಾಗೆ ತುಂಬಾ ನಿರತಿಶಯವಾದುದೆಂದು ಹೇಳುತ್ತಾರೆ, **ತೇಷಾಂ ಜ್ಞಾನೀ ವಿಶಿಷ್ಯತೇ**-ಆ ನಾಲ್ವರ ಮಧ್ಯದಲ್ಲಿ ವಿಲಕ್ಷಣನಾದವನು ಜ್ಞಾನಿಯೇ ಎಂದರೆ ಅವರುಗಳಲ್ಲಿ ಶ್ರೇಷ್ಠತಮನು ಎಂಬರ್ಥವು. **ತೇಷಾಂ** ಎಂಬುದು ನಿರ್ಧಾರಣ ಷಷ್ಠಿಯು, **ಕುತಃ**-ಏಕೆಂದರೆ, ಆತನು ನಿತ್ಯಯುಕ್ತನಾಗಿಯೂ ಏಕಭಕ್ತಿಯುಳ್ಳವನಾಗಿಯೂ, **ಇತಿಚ**-ಇರುವದರಿಂದ; ಅದು ಹೇಗೆ ನಿತ್ಯಯುಕ್ತನು ಏಕಭಕ್ತಿಯು ಎಂದರೆ ಉಪಪಾದಿಸುತ್ತಾರೆ. **ಜ್ಞಾನಿನೋ ಹಿ**-ಜ್ಞಾನಿಗಾದರೋ, **ಮದೇಕ ಪ್ರಾಪ್ಯಸ್ಯ**-ನಾನೇ ಮುಖ್ಯಪ್ರಾಪ್ಯನಾದುದರಿಂದ **ಮಯಾ ಯೋಗಃ**-ನನ್ನೊಂದಿಗೆ ಆತನಿಗೆ ಧ್ಯಾನರೂಪಸಂಬಂಧವು, **ನಿತ್ಯಃ**-ನಿತ್ಯವಾದುದು. ಪ್ರಾಪಕನೇ ಪ್ರಾಪ್ಯನೂ ಆಗುವದರಿಂದ ಫಲದಶೆಯಲ್ಲೂ ಸಹ ನಿತ್ಯಯುಕ್ತತೆಯು ಅನುಸರಿಸಿ ಬರುತ್ತದೆಂಬ ಭಾವವು. **ಇತರಯೋಸ್ತು**-ಇನ್ನು ಇತರ ಎರಡುವಿಧ ಭಕ್ತರಿಗಾದರೋ ಹಾಗಲ್ಲವು. ಇನ್ನು ಮೂರುವಿಧ ಭಕ್ತರಿರುವಾಗ ದ್ವಿವಚನ ಹೇಗೆ ಎಂದರೆ ಆರ್ತನನ್ನೂ ಅರ್ಥಾರ್ಥಿಯನ್ನೂ ಕಾಮ್ಯ ಮನೋರಥವುಳ್ಳವರಾದುದರಿಂದ ಒಂದು ಪಂಗಡದವರೆಂದೂ ಜಿಜ್ಞಾಸುವನ್ನು ಇನ್ನೊಂದು ಪಂಗಡವೆಂದೂ ದ್ವಿವಚನವು; **ಯಾವತ್ಸ್ವಾಭಿಲಷಿತ ಪ್ರಾಪ್ತಿ**-ಎಲ್ಲಿವರೆಗೆ ಅವರ ಮನೋರಥಾವಾಪ್ತಿಯೋ, ಅಲ್ಲಿವರೆಗೂ, **ಮಯಾ ಯೋಗಃ**-ನನ್ನೊಂದಿಗೆ ಸಂಬಂಧವು ಎಂದರೆ ನನ್ನ ವಿಷಯಧ್ಯಾನವು. ಮನೋರಥಪ್ರಾಪ್ತಿಯಾದನಂತರ ವಿಲ್ಲವಾದುದರಿಂದ ನಿತ್ಯಯುಕ್ತರಲ್ಲವೆಂಬ ಭಾವವು. ಇದರಿಂದ ಆತ್ಮಸ್ವರೂಪ ಪ್ರಾಪ್ತಿಕಾಮನಾದ ಜಿಜ್ಞಾಸುವೂ ಫಲಪ್ರಾಪ್ತ್ಯನಂತರವೂ ಪರಮಾತ್ಮನಲ್ಲಿ ನಿತ್ಯಯೋಗವುಳ್ಳವನಲ್ಲವೆಂದು ಹೇಳಿದಂತಾಯಿತು. ಮುಂದೆ ಜ್ಞಾನಿಯು ಏಕಭಕ್ತಿಯು ಹೇಗೆಂಬುದನ್ನು ಹೇಳುತ್ತಾರೆ. **ತಥಾ**-ಹಾಗೆಯೇ, **ಜ್ಞಾನಿನಃ**-ಜ್ಞಾನಿಗೆ, **ಮಯ್ಯೇಕಸ್ಮಿನ್ನೇವ**-ನನ್ನೊಬ್ಬನಲ್ಲೇ, **ಭಕ್ತಿಃ**-ಭಕ್ತಿಯು, ಇತರರಿಗಾದರೋ ಹಾಗಲ್ಲವೆಂದು ತಿಳಿಸುತ್ತಾರೆ—**ಇತರಯೋಸ್ತು**-ಇನ್ನು ಎರಡು ಪಂಗಡದ ಭಕ್ತಿಯೋಗನಿಷ್ಠರಿಗೂ ಎಂದರೆ ಆರ್ತಾರ್ಥಾರ್ಥಿಗಳಾದ ಐಶ್ವರ್ಯಕಾಮಿ ಮತ್ತು ಜಿಜ್ಞಾಸುಗ

**ಭಾ. ಏವ ವಿಶಿಷ್ಯತೇ। ಕಿಂಚ - ಪ್ರಿಯೋಹಿ ಜ್ಞಾನಿನೋಽತ್ಯರ್ಥ ಮಹಂ-ತತ್ರಾರ್ಥ ಶಬ್ದೋಽಭಿಧೇಯ ವಚನಃ ; ಜ್ಞಾನಿನೋಽಹಂ ಯಥಾ ಪ್ರಿಯಃ, ತಥಾಮಯಾ ಸರ್ವಜ್ಞೇನ ಸರ್ವಶಕ್ತಿನಾಪ್ಯಭಿಧಾತುಂ ನ ಶಕ್ಯತ ಇತ್ಯರ್ಥಃ ಪ್ರಿಯತ್ವಸ್ಯೇಯತ್ತಾ ರಹಿತತ್ವಾತ್। ಯಥಾ ಜ್ಞಾನಿನಾಮಗ್ರೇಸರಸ್ಯ ಪ್ರಹ್ಲಾದಸ್ಯ (೧) "ಸತ್ವಾಸಕ್ತ**

ೀಗೂ, **ಸ್ವಾಭಿಲಷಿತೇ**-ತಮಗೆ ಇಷ್ಟವಾದ ಮನೋರಥವಲ್ಲೂ, **ತತ್ಸಾಧನತ್ವೇನ ಮಯಿ ಚ**-ಅದನ್ನು ಸಾಧಿಸಿಕೊಡುವವನಾದುದರಿಂದ ನನ್ನಲ್ಲೂ ಸಹ ಹೀಗೆ ಇತರರಿಗೆ ಎರಡರಲ್ಲೂ ಪ್ರೀತಿಯು ; ಜ್ಞಾನಿಗಾದರೋ ಅಭಿಲಷಿತವಾದ ಪ್ರಾಪ್ಯನೂ ನಾನೇ, ಮತ್ತು ಅದನ್ನು ಸಾಧಿಸಿ ಕೊಡುವವನು ನಾನೇ, ಹೀಗೆ ಪ್ರಾಪ್ಯನೂ ಪ್ರಾಪಕನೂ ನಾನೇಯಾದುದರಿಂದ ನನ್ನೊಬ್ಬನಲ್ಲೇ ಭಕ್ತಿಯುಳ್ಳವನು (ವ್ಯಧಿಕರಣ ಬಹುವ್ರೀಹಿಯು). **ಅತಸ್ಸ ಏವ ವಿಶಿಷ್ಯತೇ**-ಆದುದರಿಂದ ಅವನೇ ಎಂದರೆ ಜ್ಞಾನಿಯೇ ಸರ್ವಶ್ರೇಷ್ಠನು. ಮುಂದೆ ಮೂರನೆಯ ಕಾರಣವನ್ನು ಹೇಳುತ್ತಾರೆಂಬ ಭಾವದಿಂದ **ಕಿಂಚ** ಎಂಬ ಪ್ರಯೋಗವು. ಮತ್ತೇನೆಂದರೆ, **ಪ್ರಿಯೋಹಿ ಜ್ಞಾನಿನೋಽತ್ಯರ್ಥಮಹಂ**-ಅತ್ಯರ್ಥಂ ಎಂಬ ಶಬ್ದಕ್ಕೆ ವ್ಯಾಖ್ಯಾನ ಬರೆಯುತ್ತಾರೆ. **ಅತ್ರ**-ಈ ಅತ್ಯರ್ಥವೆಂಬುವರಲ್ಲಿರುವ, **ಅರ್ಥ ಶಬ್ದವು, ಅಭಿಧೇಯ ವಚನಃ**-ಹೇಳುವದು ಎಂಬ ಅರ್ಥವುಳ್ಳದು ಎಂದರೆ ಹಾಗೆ ಪ್ರಯೋಗಿಸಲ್ಪಟ್ಟಿರುತ್ತದೆ, ಆದುದರಿಂದ **ಅತ್ಯರ್ಥಂ** ಎಂಬುದರಿಂದ ಹೇಳಲು ಅಸಾಧ್ಯವೆಂಬರ್ಥವು ತೋರಿಬರುತ್ತದೆ. ಮುಂದೆ **ಪ್ರಿಯೋಹಿ** ಎಂದಾರಂಭಿಸಿದ ವಾಕ್ಯಕ್ಕೆ ವ್ಯಾಖ್ಯಾನ ಬರೆಯುತ್ತಾರೆ, **ಜ್ಞಾನಿನೋ ಹಂ ಯಥಾ ಪ್ರಿಯಃ**-ಜ್ಞಾನಿಗೆ ನಾನು ಎಷ್ಟರ ಮಟ್ಟಿಗೆ ಪ್ರಿಯನೋ, **ತಥಾ**-ಹಾಗೆ, **ಮಯಾ**-ನನ್ನಿಂದ, **ಸರ್ವಜ್ಞೇನ ಸರ್ವಶಕ್ತಿನಾಪ್ಯಭಿಧಾತುಂ ನ ಶಕ್ಯತ ಇತ್ಯರ್ಥಃ**-ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ ಇದ್ದರೂ, ಇಷ್ಟೆಂದು ಹೇಳಲು ಸಾಧ್ಯವಿಲ್ಲವೆಂಬಭಿಪ್ರಾಯವು. ಜ್ಞಾನಿಗೆ ತಾನು ಎಷ್ಟು ಪ್ರಿಯನು ಎಂದು ಹೇಳಲು ಸರ್ವಜ್ಞನಾಗಿ ಸರ್ವಶಕ್ತನಾರಿರುವ ತನಗೂ ಕೂಡ ಸಾಧ್ಯವಿಲ್ಲವು, ಅದು ನಿರವಧಿಕಾತಿಶಯ ವುಳ್ಳದೆಂಬ ಭಾವವು. ಇದು **ಅತ್ಯರ್ಥ** ವೆಂಬ ಪದದಿಂದುಂಟಾದ ಅರ್ಥವು. ಆದರೆ ಸರ್ವಜ್ಞನಿಗೆ ಹೇಳಲು ತಿಳಿಯದು ಎಂದರೆ ಆತನಿಗೆ ಅಪಿಜ್ಞತೆ ಹೇಳಿದಹಾಗಾಗಲಿಲ್ಲವೇ? ಸರ್ವಶಕ್ತನಿಗೂ ಸಾಧ್ಯವಿಲ್ಲವೆಂದರೆ ಆತನಿಗೆ ಅಶಕ್ತತೆಯನ್ನಾರೋಪಿಸಿದಹಾಗಾಗುವದಿಲ್ಲವೆ ? ಎಂಬಾಕ್ಷೇಪಗಳು ಬಂದೀತೆಂದು ಸಮಾಧಾನರೂಪದಲ್ಲಿ ಕಾರಣವನ್ನು ಹೇಳುತ್ತಾರೆ. **ಪ್ರಿಯತ್ವಸ್ಯೇ ಯತ್ತಾ ರಹಿತತ್ವಾತ್**-ಆ ಜ್ಞಾನಿಯಾದ ಭಕ್ತನು ಮಾಡುವ ಪ್ರೀತಿಗೆ ಎಲ್ಲೆಯೇ ಇಲ್ಲದುದರಿಂದ; ಇಲ್ಲದಿರುವದರ ವಿಷಯವು ತಿಳಿಯಲಿಲ್ಲವೆಂಬುದು ಸರ್ವಜ್ಞತೆಗಾಗಲಿ ಸರ್ವಶಕ್ತತೆಗಾಗಲಿ ಕುಂದುಕವಲ್ಲವೆಂಬ ಭಾವವು. ಗಗನ ಕುಸುಮವು ಇಲ್ಲದಿರುವದು, ಅದು ತಿಳಿಯದು ಎಂದರೆ ಸರ್ವಜ್ಞತೆಗೆ ಹೇಗೆ ಕುಂದುಕವು ? ಅದೂಕೂಡ ತಿಳಿಯುವದು ಎಂದರೇನೇ ಸರ್ವಜ್ಞತೆಗೆ ಕುಂದುಕವಾಗುತ್ತದೆ. ಹಾಗೆ ತಿಳಿಯುವದೆಂದು ಹೇಳುವನು ಉನ್ಮತ್ತನಾಗುತ್ತಾನೆ, ಪ್ರೀತಿಯ ಎಲ್ಲೆಯು ಇಲ್ಲದಿರುವುದು. ಅದು ತಿಳಿಯದೆಂಬುದೇನೂ ದೋಷವಾಗುವದಿಲ್ಲವೆಂಬ ಭಾವವು. **"ಯನ್ನಾಸ್ತ್ಯೇವ ತದಜ್ಞತಾ ಮನುಗುಣಾಂ ಸರ್ವಜ್ಞತಾಯಾ ವಿದು। ರ್ವ್ಯೋಮಾಂಭೋಜಮಿದಂತಯಾ ಕಿಲ ವಿದನ್ ಭ್ರಾಂತೋಯ ಮಿತ್ಯುಚ್ಯತೇ"** (ಶ್ರೀ ಕೂರೇಶರ ಶ್ರೀಸ್ತವ) ಎಂಬುದು **ಈ** ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಜ್ಞಾನಿಗೆ ತನ್ನಲ್ಲಿರುವ ಪ್ರೀತಿಯು ಎಲ್ಲೆಯಿಲ್ಲದ್ದು ಎಂಬ ಪ್ರಸಿದ್ಧಿ ದ್ಯೋತಕವಾಗಿ **ಹಿ** ಶಬ್ದವು ಮೂಲದಲ್ಲಿರುವದರಿಂದ ಆ ಪ್ರಸಿದ್ಧಿ ನಿದರ್ಶನಕ್ಕಾಗಿ ಪ್ರಹ್ಲಾದ ಚರಿತ್ರೆಯಲ್ಲಿಂದ ಉದಾಹರಿಸುತ್ತಾರೆ. **ಯಥಾ ಜ್ಞಾನಿನಾ ಮಗ್ರೇಸ**

**ಭಾ. ಮತಿಃ ಕೃಷ್ಣೇ ದಹ್ಯಮಾನೋ ಮಹೋರಗೈಃ। ನ ವಿವೇದಾತ್ಮನೋ ಗಾತ್ರಂ ತತ್ಸ್ಮೃತ್ಯಾಹ್ಲಾದ ಸಂಸ್ಥಿತಃ" ಇತಿ ; ತಥೈವ ಸೋಽಪಿ ಮಮ ಪ್ರಿಯಃ ॥೧೭॥**

**ಠಸ್ಯ ಪ್ರಹ್ಲಾದಸ್ಯ**-ಹೇಗೆ ಜ್ಞಾನಿಗಳಲ್ಲಿ ಅಗ್ರೇಸರನಾದ ಪ್ರಹ್ಲಾದನಿಗೆ ಶ್ರೀಮಹಾವಿಷ್ಣುವಿನಲ್ಲಿದ್ದ ಪ್ರೀತಿಯೋ, ಹಾಗೆಯೇ ಅವನೂ ನನಗೆ ಅತ್ಯರ್ಥ ಪ್ರಿಯನು ಎಂದು ಮುಂದೆ ಇದೆ. "**ಸತು**-ಆ ಪ್ರಹ್ಲಾದನಾದರೋ, **ಕೃಷ್ಣೇ ಅಸಕ್ತಮತಿಃ**-ಕೃಷ್ಣನಲ್ಲೇ ಸಕ್ತವಾದ ಮನಸ್ಸುಳ್ಳವನಾದುದರಿಂದ, **ಮಹೋರಗೈಃ** - ಮಹಾಘಟಸರ್ಪಗಳಿಂದ, **ದಹ್ಯಮಾನಃ**-ಕಚ್ಚಲ್ಪಟ್ಟವನಾದರೂ, **ತತ್ಸ್ಮೃತ್ಯಾಹ್ಲಾದ ಸಂಸ್ಥಿತಃ**-ಶ್ರೀಕೃಷ್ಣನ ಸ್ಮರಣೆಯಿಂದುಂಟಾದ ಆನಂದದಲ್ಲೇ ಇರುವವನಾಗಿ, **ಆತ್ಮನೋಗಾತ್ರಂ**-ತನ್ನ ಶರೀರವನ್ನು ಎಂದರೆ ತನ್ನ ಶರೀರಕ್ಕೆ ಬಾಧೆಯುಂಟಾದುದನ್ನು, **ನವಿವೇದ**-ತಿಳಿಯದೇ ಹೋದನು, **ಇತಿ**-ಎಂಬುದು ಇಲ್ಲಿ ಪ್ರಹ್ಲಾದನಿಗೆ ಶ್ರೀಕೃಷ್ಣನಲ್ಲಿದ್ದ ಪ್ರೀತಿಯು ಎಲ್ಲೆ ಇಲ್ಲದುದು ನಿರವಧಿಕಾತಿಶಯವುಳ್ಳದು ಎಂಬಭಾವವು. ಪ್ರಹ್ಲಾದ ಚರಿತ್ರೆಗಿಂತ ಈಚಿನ ಅವತಾರವು ಕೃಷ್ಣಾವತಾರವು. ಹೀಗಿರುವಾಗ **ಕೃಷ್ಣೇ ಅಸಕ್ತಮತಿಃ** ಎಂಬ ಮಹರ್ಷಿಪ್ರಯೋಗವು ಹೇಗೆ ಎಂದರೆ ಕೃಷ್ಣಶಬ್ದದಿಂದ ನಿರ್ವೃತಿ ಎಂದರೆ ಸುಖಸೂಚಕದಿಂದಾಗಲಿ, ಅಥವಾ ಹಿಂದಿನ ಕಲ್ಪಗಳಲ್ಲಿ ನಡೆಸಿದ ಕೃಷ್ಣಾವತಾರದಿಂದಾಗಲಿ ಕಾಳೀಯ ಮರ್ದನನಾಗಿ ಭಕ್ತನಿಗೆ ಸರ್ಪಗಳ ಭಯವಿಲ್ಲವೆಂದು ದ್ಯೋತನಕ್ಕಾಗಲಿ, ಅಥವಾ ಭಕ್ತರ ದುಃಖಗಳನ್ನೆಲ್ಲಾ ಆಕರ್ಷಣಮಾಡುವದರಿಂದಾಗಲಿ, ಅಥವಾ ಕೃಷ್ಣಾವತಾರಿಯೂ ನೃಸಿಂಹಾವತಾರಿಯೂ ವಿಷ್ಣುವಾದ ಒಬ್ಬನೇ ಎಂಬ ಭಾವನೆಯಿಂದಾಗಲಿ ಕೃಷ್ಣೇ ಎಂಬ ಪ್ರಯೋಗವು. ಹಾಗೆ ಆನಂದಾನುಭವಸ್ಥಿತಿಯಲ್ಲಿ, ತಾನು ಪರಮಾತ್ಮನಿಗಿಂತ ಬೇರೇ ಎಂಬ ಜ್ಞಾನವೇ ಶೂನ್ಯವಾದಾಗ ಇನ್ನು ತನ್ನ ಶರೀರದಮೇಲೆ ಜ್ಞಾನವುಂಟೇ ? ಆದುದರಿಂದ **ನವಿವೇದಾತ್ಮನೋಗಾತ್ರಂ** ಎಂದು ಹೇಳಲ್ಪಟ್ಟಿತು." ಯಾವಾಗ ಜ್ಞಾನಿಗೆ ತನ್ನಲ್ಲಿರುವ ಪ್ರೀತಿಗೆ ಎಲ್ಲೆ ಇಲ್ಲವೋ, ಆಗ ತನಗೆ ಭಕ್ತನಲ್ಲಿರುವ ಪ್ರೀತಿಯೂ ತಾದೃಶ್ಯವೇ ಎಂದು ಮುಂದೆ ಹೇಳುತ್ತಾರೆ. **ತಥೈವ**-ಅದೇಮೇರೆಗೆ **ಸೋಽಪಿ**-ಆ ಭಕ್ತನೂಕೂಡ, **ಮಮಪ್ರಿಯಃ**-ನನಗೆ ಅತ್ಯರ್ಥಪ್ರಿಯನು. ಹೀಗೆ ಭಕ್ತನು ತನ್ನಲ್ಲಿ ನಿರತಿಶಯ ಪ್ರೀತಿಯನ್ನು ಮಾಡಿದುದಕ್ಕೆ ಪ್ರತಿಯಾಗಿ ತಾನು ಆತನಲ್ಲಿ ನಿರತಿಶಯ ಪ್ರೀತಿಯನ್ನು ಮಾಡಬೇಕಾಗಿದೆಯಲ್ಲಾ ಎಂದು ಸರ್ವೇಶ್ವರನಿಗೆ ಸ್ವಲ್ಪ ಅತೃಪ್ತಿ ಎಂದು ಕೆಲವಾಚಾರ್ಯರ ಉಪಪಾದನೆಯು. ಹೀಗೆ ಭಕ್ತನು ಅತ್ಯರ್ಥ ಪ್ರೀತಿಯಿಂದ ನೋಡಿದರೆ, ತಾನೂ ಆತನನ್ನು ಅತ್ಯರ್ಥಪ್ರೀತಿಯಿಂದ ನೋಡುವನು ಎಂಬ ಅಭಿಪ್ರಾಯವನ್ನೇ ಮನಸ್ಸಿನಲ್ಲಿಟ್ಟು ಮಹರ್ಷಿಯು **"ಯಶ್ಚ ರಾಮಂ ನಪಶ್ಯೇತ್ತು ಯಂಚರಾಮೋ ನಪಶ್ಯತಿ"** (ರಾ. ಅಯೋಧ್ಯಾ. ೧೭.೧೪) ಎಂಬಲ್ಲಿ ಹೇಳಿರುತ್ತಾರೆ. "ಯಾವನು ಇಂತಹ ಹೇಯ ಪ್ರತ್ಯನೀಕನಾಗಿ ಕಲ್ಯಾಣಗುಣಕರನಾದ ರಾಮನನ್ನು ದೌರ್ಭಾಗ್ಯವಶಾತ್ ಅತ್ಯರ್ಥ ಪ್ರೀತಿವಿಶ್ವಾಸಾದಿಗಳಿಂದ ನೋಡುವದಿಲ್ಲವೋ, ಅಂತವನನ್ನು ಶ್ರೀರಾಮನೂ ಆ ಕಾರಣದಿಂದ ಅತ್ಯರ್ಥಪ್ರೀತಿಯಿಂದ ನೋಡುವದಿಲ್ಲವು" ಎಂದು ಹೇಳಲ್ಪಟ್ಟಿರುವನು. ಅಂತವನು ನಿರ್ಭಾಗ್ಯನೆಂದು **"ನಿಂದಿತ ಸ್ಸವಸೇ ಲ್ಲೋಕೇ ಸ್ವಾತ್ಮಾಪ್ಯೇನಂವಿಗರ್ಹತೇ"** ಎಂದು ಉತ್ತರಾರ್ಧದಲ್ಲಿ ಹೇಳಿರುತ್ತದೆ. ಮೂಲ ಶ್ಲೋಕದಲ್ಲಿ ಉತ್ತರಾರ್ಧದಲ್ಲಿ ಅನ್ವಯರೂಪದಲ್ಲಿ ಹೇಳಿರುವದು ಈ ಶ್ಲೋಕದಲ್ಲಿ ವ್ಯತಿರೇಕರೂಪದಲ್ಲಿ ಪ್ರೋಕ್ತವು.

**ಮೂಲಕ್ಕೆ ಅರ್ಥವು:—**ಹಿಂದಿನ ಶ್ಲೋಕದಲ್ಲಿ ಹೇಳಿದ ಜ್ಞಾನಿಯ ಶ್ರೈಷ್ಠ್ಯವನ್ನೇ ಪುನಃ ಸಮರ್ಥನೆಮಾಡಿ ಹೇಳುತ್ತಾರೆ. ಹಿಂದೆ ನಾಲ್ವರೂ ಪ್ರಿಯರೇ ಎಂದು ಹೇಳಿ, ಅವರುಗಳಲ್ಲಿ ಜ್ಞಾನಿಯು ಪ್ರಿಯತಮನೆಂದು ಹೇಳಿದರು. ಈ ನಾಲ್ವರೂ ತನಗೆ ತೋರಿಸುವ ಪ್ರೀತಿಯ ತಾರ

**ಮೂ. ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಮ್ ।**
**ಆಸ್ಥಿತ ಸ್ಸ ಹಿ ಯುಕ್ತಾತ್ಮಾ ಮಾ ಮೇವಾ ನುತ್ತಮಾಂ ಗತಿಮ್ ॥ ೧೮.**

**ಭಾ. ಸರ್ವ ಏವೈತೇ ಮಾಮೇವೋ ಪಾಸತ ಇತ್ಯುದಾರಾಃ-ವದಾನ್ಯಾಃ । ಯೇ ಮತ್ತೋಽಯಕ್ಕಿಂಚಿದಪಿ ಗೃಹ್ಣನ್ತಿ, ತೇಹಿ ಮಮ ಸರ್ವಸ್ಯ ದಾಯಿನಃ ; ಜ್ಞಾನೀ**

ತಮ್ಮ್ಯಾನುಗುಣವಾಗಿ ತಾನೂ ಅವರಲ್ಲಿ ಪ್ರೀತಿಯನ್ನೂ ಕರುಣೆಯನ್ನೂ ತೋರಿ, ಅವರಿಷ್ಟಾನುಸಾರ ಫಲಪ್ರದನೆಂದು ಹೇಳಿಕೊಳ್ಳುತ್ತಾರೆ. ಈ ಶ್ಲೋಕದಲ್ಲಾದರೋ ನಾಲ್ವರೂ ಉದಾರರೇ, ತನ್ನ ಮಹಿಮೆಯನ್ನು ಕೊಂಡಾಡುವರೇ. ಆದರೆ ಜ್ಞಾನಿಯಾದರೋ ತನಗೆ ಆತ್ಮಭೂತನು ಎಂದು ಹೇಳುತ್ತಾರೆ. ಆತನಿಲ್ಲದೆ ತಮಗೆ ಸ್ವರೂಪವೇ ಇಲ್ಲವೆಂದು ಹೇಳುತ್ತಾರೆ.—**ಏತೇ ಸ್ಸರ್ವೇ**-ಈ ನಾಲ್ಕುವಿಧ ಭಕ್ತರೆಲ್ಲರೂ, **ಉದಾರಾ ಏವ**-ಉದಾರರೇ ಸರಿ, ನನ್ನಿಂದ ತಮ್ಮ ಮನೋರಥಗಳನ್ನು ಪಡೆದು ನನ್ನ ಮಹಿಮೆಯನ್ನು ಕೊಂಡಾಡುವರೇ ಸರಿ. **ಜ್ಞಾನೀತು**-ಜ್ಞಾನಿಯಾದರೋ ಉದಾರನು ಮಾತ್ರವೇ ಅಲ್ಲದೆ, **ಆತ್ಮೈವ**-ನನಗೆ ಸ್ವರೂಪ ಅಥವಾ ಸತ್ತಾ ದಾಯಕನೇ ಎಂಬುದು, **ಮೇ ಮತಂ**-ಶ್ರೀಕೃಷ್ಣನಾದ ನನ್ನ ಮತವು. ಉಪನಿಷತ್ತುಗಳಲ್ಲೂ ಇತರ ಶ್ರುತಿಗಳಲ್ಲಾದರೋ ನಾನು ಸರ್ವ ಚಿದಚಿತ್ತುಗಳಿಗೂ ಆತ್ಮಾ ಎಂದು, **"ಸ ತ ಆತ್ಮಾ"** ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟಿರುತ್ತದೆ. ಈಗ ಶ್ರೀಕೃಷ್ಣನಾಗಿ ನಾನು ಹೇಳುವದೇನೆಂದರೆ, ಕುಚೇಲ, ಅಕ್ರೂರ, ಉದ್ಧವಾದಿಗಳಿಂದಲೇ ತನಗೆ ವಿಶೇಷ ಮಹಿಮೆಯಾದುದರಿಂದ ಇವರುಗಳೇ ತನಗೆ ಆತ್ಮಸ್ವರೂಪದಾಯಕರೆಂಬ ಭಾವವು. ಅರ್ಜುನಾದಿಗಳ ವಿಷಯದಲ್ಲೇ **ಮಮ ಪ್ರಾಣಾಹಿ ಪಾಂಡವಾಃ**-ಎಂದು ಹೇಳಿದರು ; ಇಲ್ಲಿ ಜ್ಞಾನಿಗಳೇ ತನಗೆ **"ಆತ್ಮೈವಮೇ ಮತಂ"** ಎಂದು ಹೇಳಿದರು. ಹಾಗೆ ಅವರು ನನಗೆ ಆತ್ಮಾ ಎಂದು ಭಾವಿಸಲು ಕಾರಣವೇನೆಂದು ಕೇಳುವಿಯೋ ? ಹೇಳುತ್ತೇನೆ ಕೇಳು, **ಹಿ**-ಯಾವ ಕಾರಣದಿಂದ, **ಸಃ**-ಆ ಜ್ಞಾನಿಯು, **ಯುಕ್ತಾತ್ಮಾ**-ನನ್ನನ್ನೇ ಯಾವಾಗಲೂ ಧ್ಯಾನಿಸುತ್ತಾ ನನ್ನನ್ನೇ ಹೊಂದಬೇಕೆಂದು ನನ್ನಲ್ಲೇ ಯಾವಾಗಲೂ ಮನಸ್ಸನ್ನಿಟ್ಟವನಾಗಿ, **ಮಾಮೇವ**-ಇನ್ನು ಎಲ್ಲರನ್ನೂ ಬಿಟ್ಟು ನನ್ನೊಬ್ಬನನ್ನು ಮಾತ್ರವೇ, **ಅನುತ್ತಮಾಂಗತಿಂ**-ಸರ್ವೋತ್ಕೃಷ್ಟವಾದ ಪ್ರಾಪ್ಯರೂಪಗತಿಯನ್ನಾಗಿ, **ಅಸ್ಥಿತಃ**-ಆಶ್ರಯಿಸಿರುತ್ತಾನೋ, ಆ ಕಾರಣದಿಂದ ಆತನೇ ನನಗೆ ಆತ್ಮನು. ತಾನಲ್ಲದೆ ತನಗೆ ಬೇರೆ ಗತಿಯೇ ಇಲ್ಲವೆಂದು ಆತನು ಸ್ಥಿರವಾಗಿ ನಂಬಿರುವಂರಿಂದ ಆತನಿಲ್ಲದೆ ತನಗೂ ಸ್ವರೂಪ ಉಂಟಾಗುವದಿಲ್ಲವೆಂಬಭಿಪ್ರಾಯವು. ಸರ್ವವಿಧ ಮಹಿಮೆಯನ್ನು ತನಗೆ ಉಂಟುಮಾಡಿದವರೇ ಜ್ಞಾನಿಗಳು ಎಂಬುದು ತಾತ್ಪರ್ಯವು. ಇನ್ನೊಂದು ಸ್ಥಳದಲ್ಲಿ ಈ ಜ್ಞಾನಿಗಳು ನನ್ನ ಪಾದಗಳಿಗೆ ನಮಸ್ಕರಿಸಿ ನಮಸ್ಕರಿಸಿ ಅದಕ್ಕೆ ವಿಶೇಷ ಮಾಹಾತ್ಮ್ಯವನ್ನುಂಟುಮಾಡಿದ್ದಾರೆಂದು ಹೇಳಿರುತ್ತಾರೆ. ॥೧೮॥

**ಭಾಷ್ಯಾರ್ಥವು:—**ಹಿಂದಿನ ಶ್ಲೋಕದಲ್ಲಿ ನಾಲ್ಕುಜನ ಭಕ್ತರೂ ಎಲ್ಲರೂ ಪ್ರಿಯರೂ ಎಂದು ಹೇಳಿ ಅವರಲ್ಲಿ ಜ್ಞಾನಿಯು ನಿರತಿಶಯ ಪ್ರಿಯನು ಎಂದು ಹೇಳಿದಹಾಗೆ, ಇಲ್ಲಿಯೂ ನಾಲ್ವರೂ ಉದಾರರೇ ಎಂದು ತಿಳಿಸಿ ಜ್ಞಾನಿಯಾದರೋ ತನಗೆ ಸ್ವರೂಪದಾಯಕನಾಗಿ ಆತ್ಮಾ ಎಂದು ಜ್ಞಾನಿಯ ಸರ್ವಶ್ರೈಷ್ಠ್ಯವನ್ನೇ ಸಮರ್ಥನೆ ಮಾಡುತ್ತಾರೆ—ಜ್ಞಾನಿಯು ಆ ನಾಲ್ಕು ಭಕ್ತರುಗಳಲ್ಲಿ ಸರ್ವಶ್ರೇಷ್ಠನೆಂದು ಹೇಳಿದುದರಿಂದ ಮಿಕ್ಕವರೂ ಸಹ ಉತ್ತಮರೇ, ಅವರಲ್ಲಿ ಈತನು ಸರ್ವೋತ್ತಮನು ಎಂದು ಹೇಳಿದಂತಾಯಿತು. ಆ ಭಾವವನ್ನೇ ಪುನಃ ಸಮರ್ಥನೆ ಮಾಡಿ ಹೇಳುತ್ತಾರೆ. ಇದರಿಂದ ಅಪ್ರಸನ್ನರು ಅಷ್ಟು ಪ್ರಿಯರಲ್ಲವೆಂದು ಹೇಳಿದಂತಾಯಿತು. **"ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯ ಚ ರಕ್ಷಿತಾ"** ಎಂಬುದು ಅನುಸಂಧೇಯವು. ಸ್ವಜನರು

**ಭಾ. ತ್ವಾತ್ಮೈವ ಮೇ ಮತಂ - ತದಾಯತ್ತಧಾರಣೋ ಹ ಮಿತಿ ಮನ್ಯೇ। ಕಸ್ಮಾದೇವಂ? ಯಸ್ಮಾದಯಂ ಮಯಾ ವಿನಾ ತ್ಮಧಾರಣಾಸಂಭಾವನಯಾ ಮಾಮೇವಾ ನುತ್ತಮಂ ಪ್ರಾಪ್ಯ ಮಾಸ್ಥಿತಃ। ಅತಸ್ತೇನ ವಿನಾ ಮಮಾಪ್ಯಾತ್ಮಧಾರಣಂ ನ ಸಂಭವತಿ। ತತೋಽಮಮಾತ್ಮಾಹಿ ಸಃ ||೧೮||**

ಯಾರು ಎಂದರೆ ತನ್ನನ್ನು ಆಶ್ರಯಿಸಿದ ಪ್ರಪನ್ನರು. **ಸರ್ವ ಏವೈತೇ**-ಈ ನಾಲ್ವರು ಸರ್ವರೂ, **ಮಾಮೇವ**-ಇತರ ದೇವತೆಗಳನ್ನೆಲ್ಲಾ ತ್ಯಜಿಸಿ ನನ್ನನ್ನೇ, **ಉಪಾಸತೇ ಇತಿ**-ಉಪಾಸನೆ ಮಾಡುತ್ತಾರೆ, ಆದುದರಿಂದ, ಅವರೆಲ್ಲರೂ, **ಉದಾರಾಃ** ಎಂದರೆ **ವದಾನ್ಯಾಃ**-ನನಗೇ ಪ್ರಾಪಕತ್ವ ವನ್ನು ದಾನಮಾಡುವ ದಾನಶೀಲರು ಅಥವಾ ತಮಗೆ ಬೇಕಾದುದನ್ನೆಲ್ಲಾ ಕೊಡುವ ದಾತೃವು ನಾನೆಂದು ಹೊಗಳುವವರು. ಉತ್ಕರ್ಷವನ್ನು ಹೇಳುವದಕ್ಕಾಗಿ ಉದಾರರೆಂಬಲ್ಲಿ ವು ಅಷ್ಟು ಸ್ವಾರಸ್ಯ ವಲ್ಲವು. ಅವರೇ ಭಗವಂತನನ್ನು ಕುರಿತು ಪ್ರಾರ್ಥಿಸುವಾವಸ್ಥೆಯಲ್ಲಿರುವಾಗ ಅವರನ್ನು **ಉದಾರರು ವದಾನ್ಯರು** ಎಂದು ಹೇಳಿದ ಅಭಿಪ್ರಾಯವೇನೆಂಬುದನ್ನು ವ್ಯಕ್ತಪಡಿಸುತ್ತಾರೆ ಹೇಗೆಂದರೆ, **ಯೇ**-ಯಾರು, **ಮತ್ತಃ**-ನನ್ನ ಮೂಲಕವಾಗಿ, **ಯತ್ಕಿಂಚಿದಪಿ ಗೃಹ್ಣನ್ತಿ**-ಯಾವ ಅಲ್ಪಸ್ವಲ್ಪವನ್ನಾದರೂ ಸ್ವೀಕರಿಸಲು ಯೋಗ್ಯರಾಗಿ ಮಾಡಿಗೊಂಡು ಸ್ವೀಕರಿಸುತ್ತಾರೋ, **ತೇ**-ಅವರು, **ಮಮ ಸರ್ವಸ್ಯ ದಾಯಿನಃ**-ನಾನು ಪರಿಪೂರ್ಣಕಾಮನಾದರೂ, ನನಗೆ ಸರ್ವಸ್ವ ವನ್ನೂ ಕೊಡುವವರನ್ನಾಗಿ ಭಾವಿಸುವೆನು. ತಾನೇನೋ ಉದಾರನಾಗಿರಬೇಕೆಂಬ ಸ್ಥಿರಸಂಕಲ್ಪ ವಿರಬಹುದು, ಇವರುಗಳು ಏನನ್ನೂ ಉಪಾಸನೆಮೂಲಕ ಭಜಿಸಿ ಪಡೆಯದೆ ಇದ್ದ ಪಕ್ಷದಲ್ಲಿ ಕೊಟ್ಟುದುದನ್ನು ಪರಿಗ್ರಹಿಸುವವರೇ ಇಲ್ಲವಾಗಿ ತನ್ನನ್ನು **ಪರಮದಾತಾ** ಎಂದು ಹೇಳುವ ವರೇ ಇಲ್ಲವಾಗುತ್ತದೆ. ಆದುದರಿಂದ ತನಗೆ ಇವರು ಸರ್ವಸ್ವವನ್ನು ಕೊಡುವವರು, ಉದಾರರು ಎಂಬ ಭಾವವು. ಹೇಗೆಂದರೆ ನನ್ನಲ್ಲಿ ವಿಶೇಷ ಧನವೂ ಸತ್ಪಾತ್ರದಲ್ಲಿ ಅದನ್ನು ವಿನಿಯೋಗಿಸ ಬೇಕೆಂಬ ಕುತೂಹಲವೂ ಇರಿಬಹುದು. ಅಂತವರು ಬಂದು ಯಾಚಿಸದೇ ಇದ್ದರೆ ನಾನು ಕೊಡುವದಾತಾ ಎಂಬ ಯಶಸ್ಸು ಹೇಗೆ ತಾನೇ ಉಂಟಾದೀತು? ನಾನು ಮಹಾದಾತಾ ಎಂಬ ಬಿರುದನ್ನು ಕೊಡುವವರು ಈ ನಾಲ್ವರು ಭಕ್ತರೇ ಎಂಬ ಭಾವವು. ಜ್ಞಾನಿಯನ್ನು ಮಾತ್ರ ಇನ್ನೂ ಹೆಚ್ಚಾಗಿ ಶ್ಲಾಘಿಸುತ್ತಾರೆ. **ಜ್ಞಾನೀತು**- ಜ್ಞಾನಿಯಾದರೋ, **ಆತ್ಮೈವಮೇಮತಂ** ಎಂದರೆ **ತದಾಯತ್ತ ಧಾರಣೋಹಮಿತಿ ಮನ್ಯೇ**-ಆತನಿಗೆ ಅಧೀನವಾದ ಸ್ವರೂಪಧಾರಣೆಯು ಳ್ಳವನು ನಾನು ಎಂದು ತಿಳಿಯುತ್ತೇನೆ. ಉಪನಿಷತ್ತಿನ ಸಿದ್ಧಾಂತವು ತಾನು ಸರ್ವಕ್ಕೂ ಆತ್ಮಾ ಎಂಬುದಾಗಿ. ಇಲ್ಲಿ ಜ್ಞಾನಿಯು ತಾನೇ ಎಂದು ತಾದಾತ್ಮ್ಯವನ್ನು ಹೇಳಲಿಲ್ಲವು. ಹಾಗೆ ಹೇಳಿದರೆ ಅನೇಕ ಶ್ರುತಿ ಪ್ರಮಾಣಗಳಿಗೆ ವಿರೋಧವಾದುದಾಗುತ್ತದೆ. ಇದೂ ಅಲ್ಲದೆ ಹಾಗೆ ಅಭಿಪ್ರಾಯವಾದರೆ ಇಲ್ಲಿನ ವ್ಯತಿರೇಕ ನಿರ್ದೇಶವು ಕೂಡುವುದಿಲ್ಲವು. ತಾದಾತ್ಮ್ಯದಿಂದ ಆತ್ಮೈವ ಎಂದು ಹೇಳಲಿಲ್ಲವು. ಯಾವ **ಕಾರಣದಿಂದ** ಹಾಗೆ ಹೇಳಿದುದು ಎಂದರೆ ಉತ್ತರಾರ್ಧದಿಂದ **"ಆಸ್ಥಿತಃ"** ಎಂದಾರಂಭಿಸಿ ಹೇಳುತ್ತಾರೆ. ನಾನೇ ಸರ್ವೋತ್ಕೃಷ್ಟಗತಿಯು ನಾನಲ್ಲದೆ ಇನ್ನು ಯಾರೂ ಇಲ್ಲವೆಂದು ಲೋಕವಲ್ಲೆಲ್ಲಾ ಪ್ರಸಿದ್ಧಿಪಡಿಸುವಂತವನು ಜ್ಞಾನಿಯು. ಅವ ನನ್ನು ಬಿಟ್ಟರೆ ಇನ್ನು ಯಾರೂ ಇಲ್ಲವು. ಆತನಿಗೆ ಸರ್ವಸ್ವವೂ ನಾನೇ, ಪ್ರಾಪಕನೂ ನಾನೇ; ಪ್ರಾಪ್ಯನೂ ನಾನೇ, ಹೀಗೆ ನನಗೆ ಸ್ವರೂಪದಾಯಕನು ಜ್ಞಾನಿಯೊಬ್ಬನೇಯಾದುದರಿಂದ ಅತನೇ ನನಗೂ ಧಾರಕನೆಂದು **ಆತ್ಮೈವಮೇಮತಂ** ಎಂದು ಹೇಳಿದರು. ಇದೀಗ ಸರಸವಾದ **ಅರ್ಥವು**. ಜ್ಞಾನೀ ಮಾತ್ರತಾನೇ ಎಂದು ಸ್ವರೂಪೈಕ್ಯವನ್ನು ಹೇಳಿಕೊಳ್ಳಲಿಲ್ಲವು. ಶರೀರಕ್ಕೆ ಯಾವುದು ಧಾರಕವೋ ಅದು ಆತ್ಮಾವೆನಿಸುತ್ತದೆ. ಇಲ್ಲಿ ಪ್ರಿಯತ್ವಾತಿಶಯವನ್ನು ಹೇಳುವದ

ಕ್ಕಾಗಿ ಆತನಲ್ಲೇ ಅವಧಾರಣಪೂರ್ವಕವಾದ **ಆತ್ಮತ್ವಾರೋಪವು ಆತ್ಮೈವ** ಎಂಬುವಾಗಿ. ಇವನ್ನೇ ಉತ್ತರಾರ್ಧದಿಂದ ವ್ಯಕ್ತಪಡಿಸುತ್ತಾರೆ.—ಇನ್ನು ಮೂರುಜನ ಭಕ್ತರು ತನ್ನನ್ನು ಆಶ್ರಯಿಸುವದಕ್ಕೂ ಜ್ಞಾನಿಯು ಆಶ್ರಯಿಸುವದಕ್ಕೂ ವ್ಯತ್ಯಾಸ ಉಂಟೆಂದು ಹೇಳುತ್ತಾರೆ. ಇವರುಗಳೆಲ್ಲಾ ಆಶ್ರಯಿಸುವದು ತಮ್ಮತಮ್ಮ ಮನೋರಥಾವಾಪ್ತಿಗಾಗಿ. ಜ್ಞಾನಿಯು ಆಶ್ರಯಿಸುವದು, ನನ್ನನ್ನು ಪಡೆಯುವದಕ್ಕಾಗಿ. ಆದುದರಿಂದ ಜ್ಞಾನಿಯ ಪ್ರೀತ್ಯತಿಶಯವು ನಿರತಿಶಯವಾದುದು, ಮಹಾವಿಲಕ್ಷಣವಾದುದು. ಆದುದರಿಂದಲೇ ಆತನು ನನಗೆ ಆತ್ಮಾ ಎಂದು ಹೇಳಿದೆನೆಂದು ಉಪದೇಶಿಸುತ್ತಾರೆ:—**ಯಸ್ಮಾದೇವಂ ?**-ಯಾವಕಾರಣದಿಂದ ಆ ಜ್ಞಾನಿಯು ನನಗೆ ಆತ್ಮಾ ಎಂದು ಹೇಳುತ್ತೀಯೋ ಹೇಳುವೆನು ಕೇಳು ಎಂಬಭಿಪ್ರಾಯವು. ಇದು ಮೂಲದಲ್ಲಿಲ್ಲವಲ್ಲಾ ಹೀಗೆ ವ್ಯಾಖ್ಯಾನಕ್ಕೆ ಬೀಜವೇನು ? ಎಂದರೆ, ಇದು ಮೂಲದ **ಹಿ** ಶಬ್ದದಿಂದ ತೋರುವ ಅರ್ಥವು, **ಹಿ**-ಯಾವ ಕಾರಣದಿಂದ, ಎಂಬುದರಿಂದ ಹಾಗೆ **ಆತ್ಮೈವ** ಎಂದು ಹೇಳಿದುದಕ್ಕೆ ಕಾರಣವನ್ನು ತಿಳಿಸುತ್ತಾರೆ— **ಯಸ್ಮಾದಯಂ** - ಯಾವಕಾರಣದಿಂದ ಈ ಜ್ಞಾನಿಯು, **ಮಯಾವಿನಾ**-ನನ್ನಿಂದವಲ್ಲದೆ, **ಆತ್ಮಧಾರಣಾ ಸಂಭಾವನಯಾ**-ತನಗೆ ಆತ್ಮಧಾರಣೆಯೇ ಇಲ್ಲವೆಂದು ಭಾವಿಸುವದರಿಂದ, **ಮಾಮೇವ,** ನನ್ನೊಬ್ಬನನ್ನೇ, (ಇನ್ನೆಲ್ಲರನ್ನೂ ಬಿಟ್ಟು), **ಅನುತ್ತಮಂ ಪ್ರಾಪ್ಯಮಾಸ್ಥಿತಃ**-ಸರ್ವಶ್ರೇಷ್ಠವಾದ ಪ್ರಾಪ್ಯವನ್ನಾಗಿ, ಆಶ್ರಯಿಸಿದನೋ, **ಅತಃ**-ಆ ಕಾರಣದಿಂದಲೇ, **ತೇನ ವಿನಾ**-ಇತಹ ಜ್ಞಾನಿಯು ಇಲ್ಲದಿದ್ದರೆ, **ಮಮಾಪಿ**-ನನಗೂ ಕೂಡ, **ಆತ್ಮಧಾರಣಂ ನ ಸಂಭವತಿ**-ಸ್ವರೂಪಧಾರಣೆಯು ಉಂಟಾಗುವದಿಲ್ಲವು. **ತತಃ**-ಆ ಕಾರಣದಿಂದಲೇ, **ಮಮಾತ್ಮಾಹಿ ಸಃ**-ಆ ಜ್ಞಾನಿಯು ನನಗೂ ಆತ್ಮಾ ಎಂಬುದು ಸಿದ್ಧವು. ಜ್ಞಾನಿಗೆ ನಾನೇ ಪ್ರಾಪಕನು, ನಾನೇ ಪ್ರಾಪ್ಯನೂ ಸಹ. ನಾನಿಲ್ಲದೆ ತನಗೆ ಬೇರೆಗತಿ ಗಂತವ್ಯವಿಲ್ಲವೆಂದು ಭಾವಿಸುವನು. ಆದುದರಿಂದ ಇವನಲ್ಲದೆ ಸರ್ವಮಹಿಮೆಯನ್ನು ಕೊಡುವದಾತಾ ಇನ್ನು ಯಾರೂ ನನಗಿಲ್ಲವು ಎಂಬುದು ಮುಖ್ಯ ತಾತ್ಪರ್ಯವು. ನಾನಿಲ್ಲದೆ ಅವನಿಲ್ಲವು. ಅವನಿಲ್ಲದೆ ನಾನಿಲ್ಲವು. ಇಲ್ಲಿ ಜ್ಞಾನಿಯು **ಮಯಾವಿನಾ ಆತ್ಮಧಾರಣಾಸಂಭಾವನಯಾ,** ನಾನಿಲ್ಲದೆ ಆತ್ಮನಿಗೆ ಆತ್ಮಧಾರಣೆಯೇ ಇಲ್ಲವೆಂದು ಹೇಳಿ ವ್ಯಾಖ್ಯಾನಮಾಡಿರುವದು, **ಯುಕ್ತಾತ್ಮಾ** ಎಂಬುದರ ಉಪಪಾದನವು. ನಿರಂತರ ಪರಮಾತ್ಮಧ್ಯಾನವೇ ತನಗೆ ಸತ್ತಾದಾಯಕವೆಂದು ಪರಮಾತ್ಮನಲ್ಲೇ ಯಾವಾಗಲೂ ಸಕ್ತವಾದ ಮನಸ್ಸಾದುದರಿಂದ ಪರಮಾತ್ಮನ ಧ್ಯಾನವಿಲ್ಲದೆ ತನಗೆ ಆತ್ಮಧಾರಣವೇ ಇಲ್ಲವೆಂದು ಜ್ಞಾನಿಯು ಭಾವಿಸುವನೆಂದು ಅರ್ಥಮಾಡಿದರು. ಯಾವಾಗ ಆತನು ನನ್ನನ್ನು ಧ್ಯಾನಿಸದೇ ಬಿಟ್ಟನೋ ಆಗ ತಾನು ಇಲ್ಲದಹಾಗೆಯೇ ಭಾವಿಸಿಕೊಳ್ಳುವನು ; ತನ್ನ ಜನ್ಮ ನಿರರ್ಥಕವೆಂದು ತಿಳಿದುಕೊಳ್ಳುವನು. ಇಲ್ಲಿ **ಗತಿ** ಶಬ್ದವು **ಗಂತವ್ಯ** ಪರವಾದುದರಿಂದ **ಪ್ರಾಪ್ಯ** ವೆಂದರ್ಥಮಾಡಿದರು. ಪರಮಾತ್ಮನಿಲ್ಲದೆ ಜ್ಞಾನಿಗೆ ಆತ್ಮಧಾರಣವಿಲ್ಲವೆಂಬುದಕ್ಕೆ ಶಾಸ್ತ್ರಪ್ರಮಾಣವಿರುವದರಿಂದ ಒಪ್ಪತಕ್ಕದ್ದೇನೋ ಸರಿ. ಅದರಿಂದ ಸರ್ವೇಶ್ವರನಾದ ತನಗೆ, ಜ್ಞಾನಿಯಿಲ್ಲದೆ ಆತ್ಮಧಾರಣೆಯಿಲ್ಲವೆಂಬ ಮಾತನ್ನು ಹೇಗೆ ಒಪ್ಪತಕ್ಕದ್ದು ಎಂದು ಕೇಳತಕ್ಕದ್ದು. ಅತ್ಯರ್ಥಪ್ರೀತಿಯುಕ್ತರಿಗೆ ಅಭಿಪ್ರಾಯವು ಹಾಗೆಯೇ. ಒಬ್ಬರನ್ನು ಬಿಟ್ಟು ಇನ್ನೊಬ್ಬರು ಇರಲು ಸಾಧ್ಯವೇ ಇಲ್ಲವೆಂದು ಭಾವಿರುವರು. ಪ್ರಮಾಣವೂ ಹಾಗೆಯೇ ಎಂದು ಶ್ರೀ ದೇಶಿಕರವರು ಉದಾಹರಿಸುತ್ತಾರೆ, **(೧) ನತಸ್ಯಾನ್ಯಃ ಪ್ರಿಯತರಃ ಪ್ರತಿಬುದ್ಧೈರ್ಮಹಾತ್ಮಭಿಃ। ವಿದ್ಯತೇ ತ್ರಿಷುಲೋಕೇಷುತತೋಽಸ್ಮ್ಯೈಕಾಂತಿತಾಂಗತಃ। ನಾರದ್ಯೈ ತದ್ಧಿತೇ ಸತ್ಯಂ ವಚನಂ ಸಮುದಾಹೃತಂ। ನಾಸ್ಯಭಕ್ತ್ಯೈಃ ಪ್ರಿಯತರೋ ಲೋಕೇ ಕಶ್ಚನ**

(೧) ಸುಬಾ. ೬.

**ಮೂ. ಬಹೂನಾಂ ಜನ್ಮನಾ ಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ।**
**ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ॥ ೧೯.**

**ವಿದ್ಯತೇ"** ಜ್ಞಾನಿಗಿಂತ ಭಗವಂತನಿಗೆ ಪ್ರಿಯತರನಾದವನಿಲ್ಲವು, ಭಗವಂತನಿಗಿಂತ ಪ್ರಿಯತರನಾದವನೂ ಜ್ಞಾನಿಗಿಲ್ಲವು ಭಗವಂತನು ಜ್ಞಾನಿಗೆ ಆತ್ಮಾ ಎಂದೂ ಭಗವಂತನಿಲ್ಲದೆ ಜ್ಞಾನಿಗೆ ಆತ್ಮಧಾರಣವಿಲ್ಲವೆಂದರೆ, ಸ್ವರೂಪ ಸತ್ತಾದಾಯಕನೇ ಭಗವಂತನಾದುದರಿಂದ ಹೇಳಿಕೆಯು ಸಮಂಜಸವು. ಭಗವಂತನಿಗೆ ಜ್ಞಾನಿಯೇ ಆತ್ಮಾ ಎಂದೂ, ಜ್ಞಾನಿಯಿಲ್ಲದೆ ತನಗೆ ಆತ್ಮಧಾರಣೆಯೇ ಇಲ್ಲವೆಂದರೆ ಜ್ಞಾನಿಯೇ ತನಗೆ ಸ್ವರೂಪದಾಯಕನು, ತನ್ನನ್ನೇ ಪ್ರಾಪ್ಯವನ್ನಾಗಿ ತಿಳಿದು ತನ್ನಲ್ಲೇ ಯಾವಾಗಲೂ ಐಕಾಂತ್ಯದಿಂದ ಸಕ್ತವಾದ ಮನಸ್ಸುಳ್ಳವನು. ಇತರ ಮೂವರಾದರೋ ತನಗೆ ಅತಿಶಯವನ್ನು ಮಾತ್ರ ಉಂಟುಮಾಡತಕ್ಕವರು. ಹೀಗೆ ವೈಲಕ್ಷಣ್ಯವೆಂಬ ಭಾವವು. ಈ ಶ್ಲೋಕವಲ್ಲಿ **ಮೇ ಮತಂ** ಎಂಬುದು ನಪುಂಸಕವಾದುದರಿಂದ **ಜ್ಞಾನೀ** ಎಂಬುದರೊಂದಿಗೆ ಅನ್ವಯಿಸಲು ಸಾಧ್ಯವಿಲ್ಲದೆ **ಮೇಮತಃ** ಎಂದು ಪಾಠಾಂತರ ಮಾಡಿಕೊಂಡಿರುತ್ತಾರೆ. **ಜ್ಞಾನೀತ್ವಾತ್ಮೈವ ಇತಿ ಮೇಮತಂ** ಎಂದು **ಇತಿ** ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಸುಲಭವಾಗಿ ಅನ್ವಯಿಸಬಹುದು. ॥೧೮॥

**ಮೂಲಕ್ಕೆ ಅರ್ಥವು:—**ಹಿಂದೆ ಜ್ಞಾನಿಯಲ್ಲದ ಇತರ ಮೂರುವಿಧ ಭಕ್ತರು ಇತರ ಪುರುಷಾರ್ಥಗಳನ್ನು ಪ್ರಾರ್ಥಿಸುವವರಾಗಿ ತನ್ನ ಉದಾರಭಾವವನ್ನು ಕೊಂಡಾಡುವರೆಂದೂ, ಜ್ಞಾನಿಯಾದರೋ ತಾನೇ ಪ್ರಾಪಕನೂ ಪ್ರಾಪ್ಯನೂ ಎಂದೂ, ತಾನಲ್ಲದೆ ಇನ್ನು ಯಾವುದನ್ನೂ ಅಪೇಕ್ಷಿಸುವದಿಲ್ಲವಾದುದರಿಂದ ತನಗೆ ಸ್ವರೂಪದಾಯಕನೇ ಅವನು ಎಂದು ಕೊಂಡಾಡಿದರು. ಆ ಅಭಿಪ್ರಾಯವನ್ನೇ ಇಲ್ಲಿಯೂ ಸಮರ್ಥನೆ ಮಾಡುವವರಾಗಿ ಆ ಜ್ಞಾನಿಯೂ ತನ್ನನ್ನೇ ಪ್ರಾಪಕನೆಂದೂ ಪ್ರಾಪ್ಯವೆಂದೂ, ಹೀಗೆ ತನಗೆ ಸರ್ವವೂ ಭಗವಂತನೇ, ಪಿತಾ, ಮಾತಾ, ಸುಹೃತ್ ಗತಿ ಎಲ್ಲವೂ ತನಗೆ ನಾರಾಯಣನೇ ಎಂದು ಭಾವಿಸುವವನು ಎಂದು ಹೇಳಿ, ಅಂತಹ ಜ್ಞಾನಿಯು ಪರಮದುರ್ಲಭವೆಂದೂ, ಅನೇಕ ಜನ್ಮಗಳ ಸುಕೃತ ಪರಿಪಾಕದಿಂದ ಜ್ಞಾನಿಯಾಗಿ ತನ್ನನ್ನು ಶರಣಹೊಂದುವನೆಂದೂ, ಉಪದೇಶಿಸುತ್ತಾರೆ.—**ಬಹೂನಾಂ ಜನ್ಮನಾಮಂತೇ**-ಸುಕೃತಗಳನ್ನು ಮಾಡಿದ ಅನೇಕ ಜನ್ಮಗಳು ಕಳೆದನಂತರ ಎಂದರೆ ಒಂದು ಸುಕೃತಜನ್ಮದಿಂದ ಹೆಚ್ಚು ಸುಕೃತದ ಇನ್ನೊಂದು ಜನ್ಮ, ಹೀಗೆ ಅನೇಕ ಸುಕೃತ ಜನ್ಮಗಳು ಕಳೆದನಂತರ, **ಜ್ಞಾನವಾನ್**-ಜ್ಞಾನಿಯಾಗಿ, ಆ ಸುಕೃತಮಹಿಮೆಯಿಂದ, ಜನ್ಮಕಾಲದಲ್ಲಿ ಭಗವಂತನ ಕಟಾಕ್ಷವೀಕ್ಷಣಬಲದಿಂದ ಸಾಧುಜನಸಲ್ಲಾಪ, ಗುರೂಪಸದನಾದಿಗಳು ಪ್ರಾಪ್ತವಾಗಿ, ತನ್ಮೂಲಕ ತನ್ನ ಸ್ವರೂಪವೇನು ಭಗವಂತನ ಸ್ವರೂಪವೇನು, ತಾನು ಭಗವಂತನಿಗೆ ಶೇಷನು ದಾಸಭೂತನು ಇತ್ಯಾದಿ ಹಿಂದೆ ನಾನು ಹೇಳಿರುವ ಜ್ಞಾನ ವಿಜ್ಞಾನರೂಪ ಉಪದೇಶಗಳು ದೊರೆತು ಜ್ಞಾನವಾನ್ ಆಗಿ, ಎಂಬರ್ಥವು. ಇಲ್ಲಿ **ಜ್ಞಾನವಾನ್** ಎಂದಿರುವದರಿಂದ, **ಮಾಂ** - ಪರಮಕಾರುಣಿಕನಾಗಿರುವ ಮತ್ತು ಜ್ಞಾನಿಯಾದವನೊಬ್ಬನು ಸಿಕ್ಕುವನೇ ಎಂದು ಅವಸರ ಪ್ರತೀಕ್ಷೆಯಲ್ಲಿರುವ ನನ್ನನ್ನು, **ಪ್ರಪದ್ಯತೇ** - ಉಪಾಸನ ನಿಷ್ಪತ್ತಿಗೋಸ್ಕರ ಶರಣಾಗತಿಯನ್ನು ಮಾಡುವನು. **ಸಃ** - ಅಂತಹ ಜ್ಞಾನಿಯು, **ಮಹಾತ್ಮಾ**-ಜ್ಞಾನಾಧಿಕ್ಯದಿಂದ ಬಹು ನಿರ್ಮಲವಾಗಿರುವ ಪರಮೋತ್ಕೃಷ್ಟವಾಗಿರುವ ಮನಸ್ಸುಳ್ಳವನು, ಮತ್ತು **ಸುದುರ್ಲಭಃ** - ಬಹು ಕಷ್ಟದಿಂದ ದೊರೆಯತಕ್ಕವನು. ಆದೇನು ಆತನಲ್ಲಿ ಅಷ್ಟು ವಿಶೇಷವು ? ಎಂದರೆ ಆತನು, **ವಾಸುದೇವಸ್ಸರ್ವಮಿತಿ** ಭಾವಿಸಿರುವನು, ಶ್ರೀವಾಸುದೇವನೇ ತನಗೆ ಸರ್ವಸ್ವವು ಎಂದು ಭಾವಿಸಿರುವವನು; ತನ್ನ ಸ್ವರೂಪಕ್ಕೂ, ಆತ್ಮಧಾರಣೆಗೂ, ತನಗೆ ಸಕಲ ವಿಧವಾದ ಕರಣ ಕಳೇಬರಯೋಗ,

**ಭಾ. ನಾಲ್ಪಸಂಖ್ಯಾ ಸಂಖ್ಯಾತಾನಾಂ ಪುಣ್ಯಜನ್ಮನಾಂ ಫಲಮಿದಂ, ಯನ್ಮಚ್ಛೇಷತ್ವೈಕ ರಸಾತ್ಮಯಾಥಾತ್ಮ್ಯಜ್ಞಾನಪೂರ್ವಕಂ ಮತ್ಪ್ರಪದನಮ್; ಅಪಿತು ಬಹೂನಾಂ ಜನ್ಮನಾಂ - ಪುಣ್ಯಜನ್ಮನಾಮನ್ತೇ - ಅವಸಾನೇ, ವಾಸುದೇವಶೇಷತ್ವೈಕರಸೋಽಹಂ**

ಶಾಸ್ತ್ರದಾನ, ಗುರೂಪಸದನ, ಉಪಾಯಾನುಷ್ಠಾನ ಮೊದಲಾದ ಉಪಕಾರಗಳನ್ನುಂಟು ಮಾಡುವುದಕ್ಕೂ, ಹೀಗೆ ಪ್ರಾಪಕ ಪ್ರಾಪ್ಯನಾಗಿ ಸರ್ವಕ್ಕೂ ಆತನೇ ಕಾರಣಭೂತನೆಂದು ದೃಢವಾಗಿ ನಂಬಿದವನು. ಆದುದರಿಂದಲೇ ಆತನು **ಮಹಾತ್ಮನು**, ಇಂತವನು ಸಿಕ್ಕುವದು ಪರಮ ದುರ್ಲಭವು ಎಂಬ ಭಾವವು. ಇಲ್ಲಿ ಹೇಳಿರುವ ಪ್ರಪದನವು. ಉಪಾಸನ ರೂಪೋ ಪಾಯದಲ್ಲಿ ಸಮರ್ಥನಾದವನನ್ನು ಕುರಿತು ತದಂಗವಾದ ಕರ್ಮಯೋಗ ಪ್ರಶಂಸೆಯಿಂದ ಆತನ ಮೂಲಕ ಯುದ್ಧ ಮಾಡಿಸಿ, ದುಷ್ಟನಿಗ್ರಹ ಶಿಷ್ಟಪರಿಪಾಲನಾದಿಗಳು ನಡೆಯಬೇಕಾ ದುದರಿಂದ ಭಕ್ತ್ಯಂಗವಾದ ಪ್ರಪತ್ತಿಯು ವಿಧಿಸಲ್ಪಟ್ಟಿತೆಂದು ಭಾವಿಸತಕ್ಕದ್ದು. ಉಪಾಸನೆಗೆ ಅಸಮರ್ಥನಾದವನಿಗೂ ಈ ಶ್ಲೋಕವನ್ನೂ ೧೮ನೆಯ ಶ್ಲೋಕದ ಹಾಗೆ ಅನ್ವಯಿಸಬಹುದು. ಅಶಕ್ತನಾಗಿರುವ ಪ್ರಪತ್ತಿನಿಷ್ಠನೂ ಕೂಡ ಇಂತಹ ಶೇಷತ್ವ ಜ್ಞಾನವಿಲ್ಲದೆ ಭಗವಂತನಲ್ಲಿ ಭರನ್ಯಾಸವನ್ನು ಅನುಷ್ಠಿಸನು, ಇವನೂ ಕೂಡ ಅನೇಕ ಸುಕೃತ ಜನ್ಮಗಳು ಕಳೆದ ನಂತರ, ಸದ್ಗುರು ಪ್ರಾಪ್ತಿ ಮತ್ತು ಉಪದೇಶಗಳು ದೊರೆತು ಅಙ್ಗರೂಪವಾದ ಭರನ್ಯಾಸವನ್ನು ಅನುಷ್ಠಿಸುವನು. ಅಂತವನೂ ಕೂಡ **ಮಹಾತ್ಮನೇ**. ಅಂತವನೂ ಕೂಡ, **ದುರ್ಲಭವೇ** ಎಂಬಭಿಪ್ರಾಯವನ್ನೂ ಸಹ ಈ ಶ್ಲೋಕದ ಮೂಲಕ ಗ್ರಹಿಸಬಹುದು. ಇದು ಅಪ್ರಸ್ತುತ ವಿಷಯವೆಂದು ಭಾವಿಸತಕ್ಕದ್ದಲ್ಲವು. ಜ್ಞಾನಾಗ್ರೇಸರರಾದ ವ್ಯಾಸಮಹರ್ಷಿಯ ಗ್ರಂಥರಚನೆ, ಭಗವದುಕ್ತಿ, ಇವೆರಡು ಸೇರಿರುವ ಗ್ರಂಥವು. ಇಂತಹ ಅತ್ಯದ್ಭುತವಾಗಿರುವ ಗ್ರಂಥದಲ್ಲಿ ಎರಡು ವಿಧವಾಗಿಯೂ ಅನ್ವಯಿಸಿಕೊಳ್ಳಲೆಂಬ ಮಹದುದ್ದೇಶವುಳ್ಳದ್ದು ಇದು ಎಂದು ಹೇಳಲು ಏನೊಂದೂ ಅಭ್ಯಂತರವಿಲ್ಲವು. ಇಲ್ಲಿ ಒಂದು ಸಂದೇಹವು ಉಂಟಾಗಬಹುದು. ಏನೆಂದರೆ ಹೀಗೆ ಪ್ರಪದನಾನುಷ್ಠಾನ ಮಾಡಿ ಕೃಪಾಸಾಗರನ ಕೃಪೆಯನ್ನು ಹೊಂದಲು ಅನೇಕ ಜನ್ಮ ಸಂತತಿಗಳು ಕಳೆಯಬೇಕೇ ? ಎಂದರೆ, ಜ್ಞಾನವಿಜ್ಞಾನಗಳಿಲ್ಲದೆ ಅನೇಕ ಜನ್ಮಗಳು ಕಳೆದು ಹೋಗುತ್ತವೆ ಎಂಬುದರಲ್ಲೇನು ಸಂದೇಹ ಬೇಕಿಲ್ಲವು. ಸೃಷ್ಟಿಯಾದನಂತರ ಇದುವರೆಗೂ ಮುಕ್ತಿಯನ್ನು ಹೊಂದದೆ ಅನೇಕ ಜನ್ಮಗಳನ್ನು ನಾವು ಎತ್ತುತ್ತಿರುವದನ್ನೇ ದೃಷ್ಟಾನ್ತವಾಗಿ ಇಟ್ಟುಕೊಳ್ಳಬಹುದು. ತಿರ್ಯಗಾದಿ ಜನ್ಮಗಳು ಹಾಗಿರಲಿ. ಮನುಷ್ಯ ಜನ್ಮದಲ್ಲೇ ಎಲ್ಲೋ ಒಬ್ಬೊಬ್ಬನೀಗ ಇಂತಹ ಜ್ಞಾನಿಯು ; ಮಿಕ್ಕವರಿಗೆಲ್ಲಾ ಪುನರ್ಜನ್ಮ ಉಂಟೆಂಬುದು ಸಿದ್ಧವು. ಉಪಾಯಾನುಷ್ಠಾನ ಮಾಡುವವರು ಅತಿವಿರಳರೆಂದು ಹಿಂದೆಯೇ **"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ"** ಎಂಬಲ್ಲೂ ವ್ಯಕ್ತಪಡಿಸಲ್ಪಟ್ಟಿತು.

**ಭಾಷ್ಯಾರ್ಥವು :—** ನೀನು ಹೀಗೆ ವಿಜ್ಞಾನ ಸಹಿತವಾದ ಜ್ಞಾನವನ್ನು ಹೊಂದಬೇಕಾದರೆ ಅನೇಕ ಜನ್ಮಗಳ ಪುಣ್ಯಫಲವಿರಬೇಕು, ಹಾಗೆ ಪುಣ್ಯವನ್ನು ಸಂಪಾದಿಸುವದು ಅತಿ ದುರ್ಲಭ ವೆಂದು ಹೇಳಿ, ಅಂತಹ ಜ್ಞಾನಿಯ ಶ್ರೈಷ್ಠ್ಯವನ್ನೇ ಪ್ರದರ್ಶಿಸುತ್ತಾರೆ. **ಅಲ್ಪಸಂಖ್ಯಾ ಸಂಖ್ಯಾತಾನಾಂ** - ಅಲ್ಪ ಸಂಖ್ಯೆಯಿಂದ ಎಣಿಸಬಹುದಾದ ಪುಣ್ಯಜನ್ಮಗಳ, **ನ ಫಲಮಿದಂ**- ಇದು ಫಲವಲ್ಲವು, **ಇದಂ** ಎಂದರೆ ಯಾವುದೆಂಬುದನ್ನು ತಿಳಿಸುತ್ತಾರೆ. **ಯತ್**-ಯಾವ, **ಮಚ್ಛೇಷತ್ವೈ ಕರಸ** - ನನಗೊಬ್ಬನಿಗೆ ಶೇಷಭೂತನಾಗಿದ್ದೇನೆಂಬ ಆನಂದದಿಂದ ಕೂಡಿದ **ಆತ್ಮಯಾಥಾತ್ಮ್ಯ ಜ್ಞಾನಪೂರ್ವಕವಾದ, ಮತ್ಪ್ರಪದನಮ್** - ನನ್ನಲ್ಲಿ ಶರಣಾಗತಿಯನ್ನು ಮಾಡುವದೆಂಬುದು ಯಾವುದುಂಟೋ ಅದು; **ಅಪಿತು**-ಮತ್ತೇನೆಂದರೆ, **ಬಹೂನಾಂ ಜನ್ಮನಾಂ**

**ಭಾ. ತದಾಯತ್ತ ಸ್ವರೂಪಸ್ಥಿತಿ ಪ್ರವೃತ್ತಿಶ್ಚ, ಸಚಾಸಂಖ್ಯೇಯೈಃ ಕಲ್ಯಾಣಗುಣಗಣೈಃ ಪರತರ ಇತಿ ಜ್ಞಾನವಾನ್ ಭೂತ್ವಾ ವಾಸುದೇವ ಏವ ಮಮ ಪರಮಪ್ರಾಪ್ಯಂ ಪ್ರಾಪಕಂ ಚಾನ್ಯದಪಿ ಯನ್ಮನೋರಥವರ್ತಿ ಸ ಏವ ಮಮ ತತ್ಸರ್ವಮಿತಿ ಮಾಂ ಪ್ರಪದ್ಯತೇ**

ಎಂದರೆ ಬಹುವಾದ **ಪುಣ್ಯಜನ್ಮ**ಗಳ **ಅನ್ತೇ** – ಎಂದರೆ, **ಅವಸಾನೇ** – ಕಳೆದನಂತರ, **ವಾಸುದೇವ ಶೇಷತ್ವೈಕ ರಸೋಽಹಂ** – ಶ್ರೀವಾಸುದೇವನಿಗೆ, ಶೇಷಭೂತನಾಗಿರುವ ನಿರತಿಶಯಾನಂದವುಳ್ಳವನು ನಾನು, ಮತ್ತು **ತದಾಯತ್ತ ಸ್ವರೂಪ ಸ್ಥಿತಿ ಪ್ರವೃತ್ತಿಶ್ಚ** – ಆ ವಾಸುದೇವನಿಗೆ ಅಧೀನವಾದ ಸ್ವರೂಪ ಸ್ಥಿತಿ ಪ್ರವೃತ್ತಿಗಳನ್ನುಳ್ಳವನು ನಾನು, **ಸಚ** – ಆ ವಾಸುದೇವನಾದರೋ, ಅಸಂಖ್ಯೇಯಗಳಾದ **ಕಲ್ಯಾಣ** ಗುಣಗಳಿಂದ ಯುಕ್ತನಾಗಿರುವದರಿಂದಲೇ, **ಪರತರಃ** – ಎಲ್ಲರಿಗಿಂತ ಶ್ರೇಷ್ಠನು, ಇತಿ-ಎಂಬದಾಗಿ, **ಜ್ಞಾನವಾನ್ ಭೂತ್ವಾ** – ಜ್ಞಾನವನ್ನು ಹೊಂದಿದವನಾಗಿ, **ವಾಸುದೇವ ಏವ** – ಶ್ರೀ ವಾಸುದೇವನೇ, **ಮಮ** – ನನಗೆ **ಪ್ರಾಪಕನೂ** ಮತ್ತು **ಪರಮ ಪ್ರಾಪ್ಯನೂ** ಸಹ, ಮತ್ತು **ಅನ್ಯದಪಿ** – ಇಷ್ಟೇ ಅಲ್ಲದೇ ಬೇರೆಯಾದ, **ಯನ್ಮನೋರಥವರ್ತಿ** – ಯಾವುವು ನನ್ನ ಮನಸ್ಸಿನಲ್ಲಿ ಪುರುಷಾರ್ಥವಾಗಿ ಇವೆಯೋ ಅವೆಲ್ಲವೂ, **ಸ ಏವ**- ಅಂತಹ ಮೇಲೆ ಹೇಳಿದ ಸ್ವರೂಪ ರೂಪ ಗುಣಾದಿಗಳುಳ್ಳ, ಭಗವಂತನೇ, **ಮಮ ತತ್ಸರ್ವಮ್**- ನನಗೆ ಅವೆಲ್ಲವೂ ಅವನೇ ಇತಿ ಎಂಬದಾಗಿ, **ಮಾಂ ಪ್ರಪದ್ಯತೇ** ಎಂದರೆ ನನ್ನಲ್ಲಿ ಅಙ್ಗ ಶರಣಾಗತಿಯನ್ನು ಮಾಡಿ, **ಮಾಂ ಉಪಾಸ್ತೇ** – ನನ್ನನ್ನು ಉಪಾಸನೆ ಮಾಡುತ್ತಾನೆ. **ಯೇ ಜನ್ಮಕೋಟಿಭಿಸ್ಸಿದ್ಧಾಸ್ತೇಷಾಮನ್ತೇತ್ರಸಂಸ್ಥಿತಿಃ** – "ಯಾರು ಅನೇಕ ಜನ್ಮಗಳಿಂದುಂಟಾದ ಸುಕೃತ ಪರಿಪಾಕದಿಂದ ಸಿದ್ಧರಾಗಿದ್ದಾರೋ ಅವರಿಗೀಗ ಕೊನೆಯಲ್ಲಿ ಈ ಮೋಕ್ಷೋಪಾಯದಲ್ಲಿ ನಿಷ್ಠೆಯುಂಟಾಗುತ್ತದೆ"; (ಪೌ. ಸಂ.) (೨) **ಜನ್ಮಾಂತರ ಸಹಸ್ರೇಷು ತಪೋಧ್ಯಾನ ಸಮಾಧಿಭಿಃ। ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇ ಭಕ್ತಿಃ ಪ್ರಜಾಯತೇ"** (ಪಾಂಚರಾತ್ರ) "ಅನೇಕ ಜನ್ಮಗಳಲ್ಲಿ ಮಾಡಿದ ತಪಸ್ಸೇನು ಧ್ಯಾನವೇನು ಸಮಾಧಿ ಏನು ಇವುಗಳಿಂದ ಕ್ಷೀಣವಾದ ಪಾಪಗಳುಳ್ಳ ಮನುಷ್ಯರಿಗೆ ಎಂದರೆ ಸುಕೃತಶಾಲಿಗಳಿಗೆ, ಕೊನೆಯಲ್ಲಿ ಶ್ರೀಕೃಷ್ಣನಲ್ಲಿ ಭಕ್ತಿಯು ಹುಟ್ಟುತ್ತದೆ", 'ಇತ್ಯಾದಿ ಪ್ರಮಾಣಗಳೂ, **ಬಹೂನಾಂ ಜನ್ಮನಾಂ** ಎಂಬುದರ ಅಭಿಪ್ರಾಯವನ್ನೇ ಸೂಚಿಸುತ್ತವೆ. ಈ ಮೇಲಿನ **"ಜನ್ಮಾಂತರ ಸಹಸ್ರೇಷು"** ಎಂಬ ಶ್ಲೋಕದಲ್ಲಿ ಕೆಲವರು ವಿಶೇಷಾರ್ಥವನ್ನು ಹೇಳುವರು, ಇದು ಸರಿಯೇ ಎಂದು ಪ್ರಾಸಙ್ಗಿಕವಾಗಿ ಕೇಳುವೆವು. ಹಿಂದಿನ ಅನೇಕ ಜನ್ಮಗಳಲ್ಲಿ ಅನುಷ್ಠಿಸಿದ ತಪಸ್ಸು, ಧ್ಯಾನ ಸಮಾಧಿಗಳಿಂದ ಪಾಪಗಳನ್ನು ಕಳೆದುಕೊಂಡು ಈಗ ಜನ್ಮವೆತ್ತಿರುವವರಿಗೆ ಹಿಂದಿನ ಜನ್ಮಗಳಲ್ಲಿ ಅಂತಹ ಕರ್ಮಯೋಗಾನುಷ್ಠಾನವನ್ನು ಮಾಡಿರುವದರಿಂದ ಈಗ ಕರ್ಮಯೋಗದ ಅವಶ್ಯಕತೆ ಇಲ್ಲದೆಯೇ ಉಪಾಸನಕ್ಕೆ ಅರ್ಹತೆಯುಂಟಾಗುತ್ತದೆಂಬ ವಾದವು ಶಾಸ್ತ್ರಸಮ್ಮತವಾದುದೇ ಎಂಬುದು. ಫಲಕ್ಕೆ ಅಙ್ಗಾಙ್ಗಿಗಳ ಸಾಹಚರ್ಯೆಯು ಬೇಕಾಗಿರುವದರಿಂದ ಅಙ್ಗ ಅಥವಾ ಅಙ್ಗಿಯಿಂದಲೇ ಫಲಸಿದ್ಧಿಯುಂಟೆಂಬ ವಾದವು ಶಾಸ್ತ್ರಸಮ್ಮತವಲ್ಲವು. ಹೇಗೆಂದರೆ:— ಒಂದು ಯಜ್ಞದ ಕೆಲವು ಅಂಗಗಳು ನಡೆದು ವಿಘ್ನಪ್ರಾಪ್ತವಾದರೆ ಪುನಃ ಆ ಯಜ್ಞವನ್ನೇ ಕಾಲಾನಂತರ ಪ್ರಾರಂಭಿಸಿದರೆ, ಹಿಂದೆ ಮಾಡಿದ ಅಂಗಗಳ ತ್ಯಾಗವು ಶಾಸ್ತ್ರಸಮ್ಮತವಲ್ಲವೆಂದು ತೋರುತ್ತದೆ. ಆದರೆ ಅಂತಹ ಪೂರ್ವಜನ್ಮಕೃತ ಸುಕೃತದ ಸಂಸ್ಕಾರವು ನಿರರ್ಥಕವೋ? ಎಂದರೆ ಆ ಸಂಸ್ಕಾರ ಬಲದಿಂದ ಕರ್ಮಯೋಗವು ಶೀಘ್ರವಾಗಿ ನಿಷ್ಪನ್ನವಾಗಿ ಉಪಾಸನೆಗೆ ಅರ್ಹನಾಗುತ್ತಾನೆಂದು ಭಾವಿಸತಕ್ಕದ್ದಾಗಿರುತ್ತದೆ. ಇಲ್ಲಿ ಸುಮ್ಮನೆ ಜನ್ಮನಾಂ ಎಂದಿರುವದಕ್ಕೆ **ಪುಣ್ಯಜನ್ಮನಾಂ** ಎಂದು ವ್ಯಾಖ್ಯಾನಕ್ಕೆ ಕಾರಣವೇನೆಂದರೆ, ಕಟುಕರೇ ಮೊದಲಾದವರ ಹಾಗೆ

**ಭಾ. ಮಾಮುಪಾಸ್ತೇ, ಸಮಹಾತ್ಮಾ - ಸ ಮಹಾಮನಾಃ, ಸುದುರ್ಲಭಃ - ದುರ್ಲಭ ತರೋ ಲೋಕೇ. ವಾಸುದೇವಸ್ಸರ್ವಮಿತ್ಯಸ್ಯಾ ಯಮೇವಾರ್ಥಃ, (೧) "ಪ್ರಿಯೋ ಹಿ ಜ್ಞಾನಿನೋಽತ್ಯರ್ಥ ಮಹಮ್, (೨) "ಆಸ್ಥಿತಸ್ಸ ಹಿ ಯುಕ್ತಾತ್ಮಾಮಾ ಮೇವಾ ನುತ್ತಮಾಂಗತಿಮ್" ಇತಿ ಪ್ರಕ್ರಮಾತ್ ! ಜ್ಞಾನವಾಂಶ್ಚಾ ಯ ಮುಕ್ತ ಲಕ್ಷಣ**

ಸಾವಿರ ಅಥವಾ ಕೋಟಿ ಜನ್ಮ ಎತ್ತಿದ ಮಾತ್ರದಿಂದಲೇ ಜ್ಞಾನಿಯಾಗುವವಾದರೆ, ಇಷ್ಟು ಜನ್ಮ ಎತ್ತಿದರೆ ಜ್ಞಾನಿಯಾಗುವನೆಂದು ಶ್ರುತಿಯಲ್ಲಿ ಎಲ್ಲಿಯಾದರೂ ಹೇಳಿರಬೇಕಾಗಿತ್ತು. ಆಗ ಅಷ್ಟು ಜನ್ಮ ಕಳೆದ ನಂತರ ಎಲ್ಲರಿಗೂ ಮೋಕ್ಷವೇ ಎಂದು ಏರ್ಪಡುತ್ತದೆ. ಆಗ ಮನುಷ್ಯಪ್ರಯತ್ನ ಬೇಕಿಲ್ಲವು ಎಂದಾಗುತ್ತದೆ. ಗುರೂಪದೇಶ ಶಾಸ್ತ್ರಗಳ ವೈಯರ್ಥ್ಯವೂ ಉಂಟಾಗುತ್ತದೆ. ಅಥವಾ ವೈಯರ್ಥ್ಯವಿಲ್ಲದಿದ್ದರೆ ಇವುಗಳಿಂದ ಕ್ಷಿಪ್ರವಾಗಿ ಮೋಕ್ಷವು. ಹೀಗೆಲ್ಲಾ ಏರ್ಪಡುತ್ತದೆ. ಆದುದರಿಂದ, **ಜನ್ಮನಾಂ** ಎಂದರೆ ಪುಣ್ಯ ಜನ್ಮಗಳೆಂದೇ ವ್ಯಾಖ್ಯಾನ ಮಾಡಿರುತ್ತಾರೆ. ಇಲ್ಲಿ **ಜ್ಞಾನವಾನ್ ಮಾಂ ಪ್ರಪದ್ಯತೇ** ಎಂದರೆ ಜ್ಞಾನಿಯು ಬಹು ಜನ್ಮಗಳನ್ನೆತ್ತಿ ಅನಂತರ ನನ್ನಲ್ಲಿ ಪ್ರಪತ್ತಿಯನ್ನನುಷ್ಠಿಸುವನೆಂಬ ಅರ್ಥವಲ್ಲವು; ಆದುದರಿಂದ ಆ ಪುಣ್ಯ ಜನ್ಮಗಳ ಮಹಾತ್ಮ್ಯ ಯಿಂದ, **ಜ್ಞಾನವಾನ್ ಭೂತ್ವಾ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅಷ್ಟು ಪುಣ್ಯ ಜನ್ಮಗಳ ಅವಸಾನದಲ್ಲೀಗ ಈಗ ನಾನು ನಿನಗೆ ಉಪದೇಶಿಸಿದ ಜ್ಞಾನವುಳ್ಳವನಾಗುತ್ತಾನೆಂಬ ಭಾವವು. ಜ್ಞಾನೋತ್ಪಾದನೆಯಾದನಂತರವೂ ಬಹು ಜನ್ಮಗಳು ಕಳೆಯಬೇಕೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಪ್ರಪದನಕ್ಕೆ ವಿಜ್ಞಾನಸಹಿತ ಜ್ಞಾನವು ಹೇತುವಾದರೆ ಒಡನೆಯೇ ಪ್ರಪದನಾ ನುಷ್ಠಾನದಲ್ಲಿ ಪ್ರವೃತ್ತಿಯುಂಟಾಗಿ ಮೋಕ್ಷವು ಸಿದ್ಧಿಸುತ್ತದೆ. ಜನ್ಮ ಸಂತತಿಗಳು ಏತಕ್ಕೆ ಕಳೆಯಬೇಕು ಎಂಬಾಕ್ಷೇಪಕ್ಕೆ ಉತ್ತರವಿಲ್ಲವಾಗುತ್ತದೆ. ಯಾವ ಜನ್ಮದಲ್ಲಿ ಜ್ಞಾನವಾನ್ ಆದನೋ ಆ ಜನ್ಮದಲ್ಲೇ ಪ್ರಪತ್ತಿಯನ್ನೂ ಅನುಷ್ಠಿಸುವನು. ಶ್ರೀ ಆನಂದ ತೀರ್ಥಯರೂ ಇಂತಹ ಅಭಿಪ್ರಾಯವನ್ನೇ ಖಂಡಿಸಿರುತ್ತಾರೆ. ಇಲ್ಲಿ **ಮಾಂ ಪ್ರಪದ್ಯತೇ** ಎಂಬುದಕ್ಕೆ ಮಾಮುಪಾಸ್ತೇ ಎಂಬ ಭಾಷ್ಯವು ಹೇಗೆ? ಎಂದರೆ, ಇಲ್ಲಿ ಪ್ರಪದನವು ಅಙ್ಗ ಪ್ರಪತ್ತಿಯಾಗಿ, ಉಪಾಸನಕ್ಕೆ ಅರ್ಹತೆಯನ್ನು ಸಂಪಾದಿಸಿಕೊಡುವ ಪ್ರಪತ್ತಿಯೆಂದು ವ್ಯಕ್ತಪಡಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಈ ಶ್ಲೋಕದಲ್ಲಿ ಮುಖ್ಯವಾಗಿ ಭಿನ್ನಾರ್ಥಗಳಿಗೆ ಅವಕಾಶ ದೊರತಿರು ವದು "**ವಾಸುದೇವಸ್ಸರ್ವಂ**" ಎಂಬ ಸಾಮಾನಾಧಿಕರಣ್ಯವಿರುವ ವಾಕ್ಯವು. ಕೆಲವರು ಇವಕ್ಕೆ ಸಮಸ್ತವೂ ವಾಸುದೇವನೆಂಬ ಜ್ಞಾನಬಂದವನು ಮಹಾತ್ಮನು, ಅಂತವನು ಸುದುರ್ಲಭ ವೆಂದು ಅರ್ಥ ಮಾಡಿರುತ್ತಾರೆ; ಜಗತ್ತಿಗೆ ಪರಬ್ರಹ್ಮ ವ್ಯತಿರಿಕ್ತ ಸ್ವತ್ತೇ ಇಲ್ಲದುದರಿಂದ ಜಗತ್ತು ಪರಬ್ರಹ್ಮಕ್ಕಿಂತ ಬೇರೆಯಲ್ಲವೆಂದು ಹೇಳಿ, ಹಾಗೆ ಪರಬ್ರಹ್ಮನೊಬ್ಬನೇ ಇರುವವನು, ಭಿನ್ನವಾಗಿ ತೋರುವದೆಲ್ಲಾ ಭ್ರಾಂತಿಜ್ಞಾನವೆಂಬದಾಗಿ ಯಾವಾಗ ಏರ್ಪಟ್ಟಿತೋ, ಆಗ ಅಂತಹ ಜ್ಞಾನದಿಂದ ಜೀವನ್ಮುಕ್ತಿಯನ್ನು ಹೊಂದುವನು ಎಂದು ಹೇಳುವರು. ಇಂತಹ ಅಭಿಪ್ರಾಯ ದಿಂದ ಈ ಸಾಮಾನಾಧಿಕರಣ್ಯವು ಹೇಳಲ್ಪಡಲಿಲ್ಲವೆಂದು ಮುಂದಿನ ವಾಕ್ಯಗಳಿಂದ ತೋರಿಸು ತ್ತಾರೆ—ಘಟಪಟಾದಿಗಳೂ ಪರಬ್ರಹ್ಮವೂ ಒಂದೇಯಲ್ಲವು. ಚಿತ್ತೂ ಅಚಿತ್ತೂ ಎಂದಿಗೂ ಈಶ್ವರಕೋಟಿಯಲ್ಲಿ ಸೇರಲು ಸಾಧ್ಯವಿಲ್ಲವು. ಮತ್ತು ಅವುಗಳಿಗಿಂತಲೂ ತಾನು ಹೇಗೆ ವಿಲಕ್ಷಣನು ಎಂಬುದೇ ಜ್ಞಾನದಲ್ಲಿ ಸೇರಿದುದು. ಅದನ್ನೇ ಶ್ರೀ ಕೃಷ್ಣಭಗವಾನರವರು "**ಭೂಮಿರಾಪೋನಲೋ**" ಎಂದಾರಂಭಿಸಿ ವಿಸ್ತಾರವಾಗಿ ಉಪದೇಶಿಸಿರುತ್ತಾರೆ. ಅಪರಾ ಪ್ರಕೃತಿ ಅಚಿತ್ತೆಂದೂ, ಪರಾಪ್ರಕೃತಿ ಚಿತ್ತೆಂದೂ, ಇವೆರಡೂ ತನ್ನದೆಂದೂ, ಇವಕ್ಕೆಲ್ಲಾ ತಾನೇ ಆಧಾರನೆಂದು "**ಮಯಿಸರ್ವಮಿದಂ ಪ್ರೋತಂ**" ಎಂದು ಹೇಳಿ, "**ಮತ್ತಃ ಪರತರಂ**

**ಭಾ. ಏವಮಸ್ಯೈವ ಪೂರ್ವೋಕ್ತ ಜ್ಞಾನಿತ್ವಾತ್ ; "ಭೂಮಿರಾಪಃ" ಇತ್ಯಾರಭ್ಯ, 'ಅಹಙ್ಕಾರ ಇತೀಯಂ ಮೇ ಭಿನ್ನಾಪ್ರಕೃತಿರಷ್ಟಧಾ। ಅಪರೇಯಂಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ। ಜೀವಭೂತಾಂ' ಇತಿಹಿಚೇತನಾಚೇತನಸ್ಯಪ್ರಕೃತಿದ್ವಯಸ್ಯ**

**ನಾನ್ಯತ್** ". ಎಂದು ಅವುಗಳಿಗಿಂತ ಸರ್ವೋತ್ಕೃಷ್ಟತೆಯನ್ನು ಹೇಳಿಕೊಂಡಿರುತ್ತಾರೆ. ಹೀಗಿರುವಾಗ ಎಲ್ಲವೂ ಪರಬ್ರಹ್ಮವೇ ಎಂಬ ವಾದಕ್ಕೆ ಗೀತೆಯು ಏನೊಂದೂ ಸಹಾಯವನ್ನು ಕೊಡಲಾರದು. ಹಾಗಾದರೆ **ವಾಸುದೇವಸ್ಸರ್ವಂ** ಎಂದರೆ ಎಲ್ಲವೂ ಪರಬ್ರಹ್ಮ ಶರೀರವಾಗಿ ವಾಸುದೇವಾತ್ಮಕವು ಎಂಬ ಜ್ಞಾನದ ಆವಶ್ಯಕತೆಯು ಉಪದೇಶಿಸಲ್ಪಟ್ಟಿತು ಎಂದು ಹೇಳೋಣವೋ ಎಂದರೆ, ಇದು ಶಾಸ್ತ್ರರೀತ್ಯಾ ಸಮಂಜಸವಾದರೂ ಪ್ರಕರಣಕ್ಕೆ ಅನುಗುಣವಾಗುದಲ್ಲವು. ಶರಣಾಗತನ ಭಾವವು ಹೇಗಿರತಕ್ಕದ್ದು ಎಂದರೆ ಸರ್ವೇಶ್ವರನು ತನಗೆ " **ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್** ಎಂದು ಮುಂದೆ ಉಪದೇಶಿಸುವ ಹಾಗೆ ಸಮಸ್ತವೂ ತನಗೆ ವಾಸುದೇವನೇ ಎಂಬ ಜ್ಞಾನವುಳ್ಳವನಾದನೋ, ಆಗ ಒಡನೆಯೇ ಶರಣಾಗತನಾಗುತ್ತಾನೆ. **"ಪಿತಾತ್ವಂ ಮಾತಾತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್ತ್ವಮೇವತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಂ"** (ಸ್ತೋತ್ರರತ್ನ ೬೦) ಎಂಬ ಶ್ಲೋಕದಲ್ಲೂ ಮತ್ತು **" ತ್ವಮೇವ ಮಾತಾ ಚ ಪಿತಾತ್ವಮೇವ ತ್ವಮೇವ ಬಂಧುಶ್ಚ ಗುರುಸ್ತ್ವಮೇವ। ತ್ವಮೇವ ವಿದ್ಯಾದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮದೇವ ದೇವ ॥** ಎಂಬ ಗಾಂಧಾರಿ ವಾಕ್ಯಕ್ಕನುಗುಣವಾಗಿ " **ವಾಸುದೇವ ಏವ ಮಮ ಪ್ರಾಪ್ಯಂ ಪ್ರಾಪಕಂ ಚ, ಅನ್ಯದಪಿ ಯನ್ಮನೋರಥವರ್ತಿತತ್ಸರ್ವಮಿತಿ** " ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ವಾಸುದೇವಸ್ಸರ್ವಂ** ಎಂದು ಯಾವಾಗ ಸಾಮಾನಾಧಿಕರಣ್ಯದಿಂದ ಹೇಳಲ್ಪಟ್ಟಿತೋ ಆಗ ಎರಡೂ ಭಿನ್ನಾರ್ಥವುಳ್ಳವುಗಳೆಂಬುದು ಸಿದ್ಧವು. ಎರಡೂ ಪರಬ್ರಹ್ಮವೇ ಆದರೇನು ? ಎಂದರೆ, ತುರಗ ಅಶ್ವಶಬ್ದಗಳಿಗೆ ಹೇಗೆ ಸಾಮಾನಾಧಿಕರಣ್ಯವು ಸಿದ್ಧಿಸುವದಿಲ್ಲವೋ, ಹಾಗೆಯೇ ಇಲ್ಲಿಯೂ ಕೂಡುವುದಿಲ್ಲವೆಂದು ಹೇಳುವೆವು. ಆದುದರಿಂದ ತಾವು ಮಾಡಿರುವ ವ್ಯಾಖ್ಯಾನವೇ ಸಮಂಜಸವಾದುದೆಂದು ಮುಂದೆ ಉಪಪಾದಿಸುತ್ತಾರೆ.

**ವಾಸುದೇವ ಸ್ಸರ್ವ ಮಿತ್ಯಸ್ಯಾಯಮೇವಾರ್ಥಃ** - ವಾಸುದೇವಸ್ಸರ್ವಂ ಎಂಬುದಕ್ಕೆ ನಾವು ಹೇಳಿದ ಈ ಅರ್ಥವೇ ಸರಿಯಾದಭಿಪ್ರಾಯವು, ಏಕೆಂದರೆ ಹೇಳುತ್ತಾರೆ. **"ಪ್ರಿಯೋಹಿ ಜ್ಞಾನಿನೋಽತ್ಯರ್ಥಮಹಂ"** - ಜ್ಞಾನಿಗೆ ನಾನು ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ಪ್ರಿಯನೆಂದೂ, " **ಆಸ್ಥಿತ ಸ್ಸಹಿ ಯುಕ್ತಾತ್ಮಾ ಮಾಮೇವಾನುತ್ತಮಾಂಗತಿಂ** " ನನ್ನನ್ನೇ ಸರ್ವಶ್ರೇಷ್ಠವಾದ ಪ್ರಾಪ್ಯವೆಂದು ನನ್ನಲ್ಲೇ ಯಾವಾಗಲೂ ಸಕ್ತವಾದ ಮನಸ್ಸನ್ನುಳ್ಳವನಾಗಿ ನನ್ನನ್ನೇ ಸರ್ವಶ್ರೇಷ್ಠವಾದ ಪ್ರಾಪ್ಯನೆಂದು ಆಶ್ರಯಿಸಿರುವನೆಂದೂ, **ಪ್ರಕ್ರಮಾತ್** - ಉಪಕ್ರಮಿಸಿ ಹೇಳಿರುವದರಿಂದ ; ಇದರಿಂದ ಪ್ರಾಪಕನೂ ಅವನೇ, ಪ್ರಾಪ್ಯನೂ ಅವನೇ, ಎಂದು ಹೇಳಿದಂತಾಯಿತು. ಇಲ್ಲಿ **ಜ್ಞಾನವಾಂಶ್ಚಾಯಂ** ಈ ಜ್ಞಾನವಾನ್ ಎಂಬಧಿಕಾರಿಯೂ ಕೂಡ, **ಉಕ್ತಲಕ್ಷಣ ಏವ** - ಈಗ ಹೇಳಲ್ಪಟ್ಟ ಲಕ್ಷಣವುಳ್ಳವನೇ ಎಂದರೆ ಮೇಲೆ ಹೇಳಿದ ಹಾಗೆ " **ವಾಸುದೇವ ಶೇಷತ್ವೈಕರ ಸೋಽಹಂ** " ಎಂಬ ಜ್ಞಾನವುಳ್ಳವನೆಂಬ ಭಾವವು. ಏಕೆಂದರೆ **ಅಸ್ಯೈವ** - ಈ ಜ್ಞಾನಿಯೇ **ಪೂರ್ವೋಕ್ತಜ್ಞಾನಿತ್ವಾತ್** - ಹಿಂದೆ ಹೇಳಿದ ಜ್ಞಾನಭಾವವನ್ನುಳ್ಳವನೇಯಾದುದರಿಂದ ಅದು ಹೇಗೆ ಎಂದರೆ ಉಪಪಾದಿಸುತ್ತಾರೆ, " **ಭೂಮಿರಾಪಃ** " **ಇತ್ಯಾರಭ್ಯ** - ಎಂದಾರಂಭಿಸಿ, " **ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ। ಅಪರೇಯ ಮಿತ ಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ। ಜೀವಭೂತಾಂ** " **ಇತಿಹಿ** -

**ಭಾ. ಪರಮಪುರುಷ ಶೇಷತ್ವೈಕರಸತೋಕ್ತಾ ; ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ । ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ " ಇತ್ಯಾರಭ್ಯ " ಯೇ ಚೈವ ಸಾತ್ವಿಕಾ ಭಾವಾ ರಾಜಸಾ ಸ್ತಾಮಸಾಶ್ಚ ಯೇ । ಮತ್ತ ಏವೇತಿ ತಾನ್ವಿದ್ಧಿ ನತ್ವಹಂ ತೇಷು ತೇ ಮಯಿ "। ಇತಿ ಪ್ರಕೃತಿದ್ವಯಸ್ಯ ಕಾರ್ಯಕಾರಣೋಭಯಾವಸ್ಥಸ್ಯ ಪರಮ ಪುರುಷಾಯತ್ತಸ್ವರೂಪಸ್ಥಿತಿ ಪ್ರವೃತ್ತಿತ್ವಮ್, ಪರಮ ಪುರುಷಸ್ಯ ಚ ಸರ್ವೈಃ ಪ್ರಕಾರೈಸ್ಸರ್ವಸ್ಮಾತ್ ಪರತ್ವಮುಕ್ತಮ್ ; ಅತ ಸ್ಸ ಏವಾತ್ರ ಜ್ಞಾನೀ ತ್ಯುಚ್ಯತೇ ॥ ೧೯ ॥**

ಹೀಗೆಯಲ್ಲವೇ, ಚೇತನಾಚೇತನಗಳಾದ **ಪ್ರಕೃತಿದ್ವಯಸ್ಯ** – ಎರಡು ವಿಧ ತತ್ವಗಳಿಗೂ, **ಪರಮ ಪುರುಷ ಶೇಷತ್ವೈಕರಸತಾ** - ಪರಮ ಪುರುಷನಿಗೇನೇ ಶೇಷವಾಗಿರುವ ಭಾವವು, **ಉಕ್ತಾ** – ಹೇಳಲ್ಪಟ್ಟಿತು. **" ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ । ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ "** " ಈ ಚಿದಚಿತ್ತುಗಳಿಂದ ಕೂಡಿದ ಸಮಸ್ತ ಜಗತ್ತಿನ ಸೃಷ್ಟಿಕರ್ತನೂ, ಸ್ಥಿತಿ ಮೊದಲಾದವುಗಳ ಪ್ರವರ್ತಕನೂ, ಪ್ರಳಯ ಕರ್ತಾವೂ ನಾನೇ, ನನಗೆ ಸಮಾನರಾಗಿಯೂ ಅಧಿಕರಾಗಿಯೂ ಯಾರೂ ಇಲ್ಲವು ". **ಇತ್ಯಾರಭ್ಯ** ಎಂದಾರಂಭಿಸಿ, **" ಯೇಚೈವ ಸಾತ್ವಿಕಾ ಭಾವಾ ರಾಜಸಾ ಸ್ತಾಮಸಾ ಶ್ಚಯೇ । ಮತ್ತ ಏವೇತಿ ತಾನ್ವಿದ್ಧಿ ನತ್ವಹಂ ತೇಷು ತೇಮಯಿ "** " ಯಾವ ಸಾತ್ವಿಕ ರಾಜಸ ತಾಮಸ ಚಿದಚಿದ್ವಸ್ತುಗಳೆಂದು ತೋರುವವೋ ಅವೆಲ್ಲವೂ ನನ್ನಿಂದಲೇ ಉಂಟಾದವು. ಅವುಗಳ ಸತ್ತಾಸ್ಥಿತಿ ಪ್ರಯತ್ನಗಳೆಲ್ಲಾ ನನ್ನಿಂದಲೇ. ಅವುಗಳಿಗೆಲ್ಲಾ ನಾನೇ ಆಧಾರನು, ಅವೆಲ್ಲಾ ಆಧೇಯವು, ನನಗಾದರೋ ಬೇರೆ ಆಧಾರವಿಲ್ಲವು ". **ಇತಿ** - ಹೀಗೆ, **ಪ್ರಕೃತಿದ್ವಯಸ್ಯ** – ಚಿದ ಚಿದ್ರೂಪವಾದ ಎರಡು ವಿಧ ತತ್ವಕ್ಕೂ, **ಕಾರ್ಯಕಾರಣೋ ಭಯಾವಸ್ಥಸ್ಯ** – ಕಾರ್ಯಾವಸ್ಥೆಯಲ್ಲೂ, ಕಾರಣಾವಸ್ಥೆಯಲ್ಲೂ ಇರುವದಕ್ಕೆ, **ಪರಮ ಪುರುಷಾಯತ್ತ ಸ್ವರೂಪಸ್ಥಿತಿಪ್ರವೃತ್ತಿತ್ವಂ** – ಪರಮ ಪುರುಷನಿಗೆ ಅಧೀನವಾದ ಸ್ವರೂಪಸ್ಥಿತಿ ಪ್ರವೃತ್ತಿಗಳನ್ನು ಹೊಂದಿರೋಣವು, **ಪರಮ ಪುರುಷಸ್ಯಚ** – ಪರಮ ಪುರುಷನಿಗಾದರೋ ಎಂದರೆ ಪರಮ ಪುರುಷನ ಸ್ವರೂಪಸ್ಥಿತಿ ಪ್ರವೃತ್ತಿಗಳಾದರೋ, **ಸರ್ವೈಃ ಪ್ರಕಾರೈಃ** - ಸರ್ವಪ್ರಕಾರದಿಂದಲೂ, **ಸರ್ವಸ್ಮಾತ್ಪರತರತ್ವ ಮುಕ್ತಮ್** – ಯಾವುದಕ್ಕೂ ಅಧೀನವಾಗದೆ ಎಲ್ಲಾದಕ್ಕಿಂತ ಉತ್ಕೃಷ್ಟವಾದುದೆಂಬುದು, ಸರ್ವವೂ ತನಗೆ ಅಧೀನವೆಂದೂ ತಾನು ಯಾರಿಗೂ ಅಧೀನವಲ್ಲವೆಂಬುದು, **ಉಕ್ತಮ್** - ಹೇಳಲ್ಪಟ್ಟಿತು. ಎಲ್ಲಿ ಎಂದರೆ **" ಮಯಿಸರ್ವಮಿದಂ ಪ್ರೋತಮ್ "** ಎಂಬಲ್ಲೂ **" ರಸೋಽಹಮಪ್ಸು "** (ಗೀ. ೭. ೭.) ಎಂಬಲ್ಲೂ ಹೇಳಲ್ಪಟ್ಟಿತೆಂಬ ಭಾವವು. **ಅತಃ** – ಆ ಕಾರಣದಿಂದ **ಸಏವ** – ಅಂತಹ ತತ್ವತ್ರಯ ಜ್ಞಾನವುಳ್ಳವನಾಗಿ ತಾನು ವಾಸುದೇವಶೇಷತ್ವೈಕರಸನಾಗಿರುವನೆಂಬವನೇ, **ಜ್ಞಾನೀತ್ಯುಕ್ತಂ** - ಜ್ಞಾನೀ ಎಂಬದಾಗಿ ಹೇಳಲ್ಪಟ್ಟಿತು. ಎಲ್ಲವೂ ಮಿಥ್ಯೆಯು, ತಾನೂ ಪರಮಾತ್ಮನೇ, ಆದುದರಿಂದ ಪರಮಾತ್ಮ ವ್ಯತಿರಿಕ್ತವಾದುದೇ ಇಲ್ಲವೆಂಬ ಜ್ಞಾನವುಳ್ಳವನೇ ಜ್ಞಾನೀ ಎಂದು ಹೇಳಲಿಲ್ಲವು. ಒಂದು ಸ್ವರೂಪ ವಿಕಾರವುಳ್ಳ ಅಚಿತ್ಪ್ರಕೃತಿ, ಇದು ಅಪರಾ ಪ್ರಕೃತಿಯು ; ಇನ್ನೊಂದು ಸ್ವರೂಪ ವಿಕಾರವಿಲ್ಲದೆ ಜ್ಞಾನ ಸ್ವಭಾವದ ವಿಕಾರಮಾತ್ರವುಳ್ಳದುದಾಗಿರುವದು, ಆ ಕಾರಣದಿಂದ ಪರಾಪ್ರಕೃತಿಯು ; ಇವೆರಡೂ ಒಟ್ಟಿಗೆ ಸೇರಿರುವದರಿಂದ ಸಮಸ್ತ ಜಗತ್ತಿನ ವ್ಯಾಪಾರಗಳೆಲ್ಲಾ ನಡೆಯುತ್ತವೆ. ಹಾಗೆ ಮಾಡುವವನು ಈಶ್ವರನು ; ಅವೆರಡೂ ಸರ್ವೇಶ್ವರನಿಗೆ ಅಧೀನವಾದ ಸ್ವರೂಪ ಸ್ಥಿತಿ ಪ್ರವೃತ್ತಿಗಳುಳ್ಳವು. ಅವು ನನಗೆ ಶರೀರವು, ಶೇಷಭೂತವಾದವು, ಅವು ನನ್ನ ನಿಯಾಮ್ಯ ವರ್ಗಕ್ಕೆ ಸೇರಿದವು, ಅವುಗಳಿಗೆ ನಾನು ಆತ್ಮಾ. ಈ ವಿಧವಾದ

**ಭಾ. ಅವ. ತಸ್ಯಜ್ಞಾನಿನೋ ದುರ್ಲಭತ್ವ ಮೇವೋಪಪಾದಯತಿ ॥—**

**ಮೂ. ಕಾಮೈ ಸ್ತೈ ಸ್ತೈ ರ್ಹೃತಜ್ಞಾನಾಃ ಪ್ರಪದ್ಯನ್ತೇ ನ್ಯದೇವತಾ ।**
**ತಂ ತಂ ನಿಯಮ ಮಾಸ್ಥಾಯ ಪ್ರಕೃತ್ಯಾ ನಿಯತಾ ಸ್ವಯಾ ॥ ೨೦.**

ಈ ಮೂರು ತತ್ವಗಳಾದ ಚಿದಚಿದೀಶ್ವರರ ಸ್ವರೂಪ ಸ್ಥಿತಿ ಪ್ರವೃತ್ತಿಗಳ ಜ್ಞಾನವುಳ್ಳವನನ್ನೇ ಜ್ಞಾನವಾನ್ ಎಂದು ಉಪದೇಶಿಸಿತೇ ವಿನಾ, **ವಾಸುದೇವಸ್ಸರ್ವಂ** ಎಂಬುದರಿಂದ ಈ ವಿಶ್ವದಲ್ಲಿ ರುವದೆಲ್ಲಾ ವಾಸುದೇವನೊಬ್ಬನೇ ವಿನಾ, ಈ ಪರಿದೃಶ್ಯವಾದ ಜಗತ್ತು ಎಲ್ಲವೂ ಮಿಥ್ಯೆಯೆಂದು ಎಂದಿಗೂ ಬೋಧಿಸಲಿಲ್ಲವು; ಮತ್ತು ವಾಸುದೇವನೆನಿಸುವ ನಿರ್ಗುಣ ಪರಮಾತ್ಮ ಒಬ್ಬನೇ ಇರುವನು, ಜೀವನೂ ಅವಿದ್ಯಾ ಗೃಹೀತನಾದ ಪರಮಾತ್ಮನೇ, ಅಚಿತ್ತೆಲ್ಲಾ ಮಿಥ್ಯೆ ಎಂದೂ ಬೋಧಿಸಲಿಲ್ಲವು. ಆದುದರಿಂದ ಇಂತಹ ಜ್ಞಾನವುಳ್ಳವನಾದರೋ, **ಸಮಹಾತ್ಮಾ ಸುದುರ್ಲಭಃ** ಎಂಬುದರಿಂದ ಅಂತಹ ಜ್ಞಾನಿಯು ಅತಿ ವಿರಳವು. ಅವನು ಮಹಾತ್ಮಾ ಏಕೆಂದರೆ ಆತನೇ ಜೀವದಶೆಯಲ್ಲೇ ಮುಕ್ತನಾಗುವದರಿಂದ ಜೀವನ್ಮುಕ್ತನೆಂದು ಕೊಂಡಾಡಲಿಲ್ಲವು; ಜೀವನ್ಮುಕ್ತಿಭಾವವು ಶಾಸ್ತ್ರಸಮ್ಮತವಲ್ಲವೆಂಬುದು ಭಾಷ್ಯಾದಿಗಳಲ್ಲಿ ಸುಪ್ರಸಿದ್ಧವು. ಪಙ್ಕ್ತಿ ಪಾವನತ್ವಾದಿ ಮಹಾ ಭಾಗವತರೂಪ ಮಹಾತ್ಮ್ಯೆಯು ಇದ್ದರೂ ಇರಬಹುದು; ಆದರೆ ಇಲ್ಲಿ ಅನಾವಶ್ಯಕವಾಗಿ ಅದೂ ಇಲ್ಲಿ ಹೇಳಲಿಲ್ಲವು. ಇಲ್ಲಿ ಮುಖ್ಯವಾಗಿ ಹೇಳಬೇಕಾದ ಮಹಾತ್ಮೆಯು ಯಾವುದೆಂದರೆ **ಜ್ಞಾನವಾನ್** ಆದುದರಿಂದಲೇ, **ಮಾಹಾತ್ಮ್ಯೆಯು**. ಪರಮಾತ್ಮನ ಸ್ವರೂಪ ಜ್ಞಾನವೂ ತನ್ನ ಸ್ವರೂಪ ಜ್ಞಾನವೂ ಚನ್ನಾಗಿ ಉಂಟಾಗಿರುವದರ ಮೂಲಕ ತಾನು ಪರಮಾತ್ಮನಿಗೆ ಶೇಷಭೂತನಾಗಿ ಆತನಿಗೆ ಅಧೀನನು ಎಂಬ ಸುಜ್ಞಾನವುಳ್ಳವನಾದುದರಿಂದ **ಮಹಾತ್ಮಾ** ಎಂಬುದಕ್ಕೆ ಮಹಾಮನಾಃ ಎಂದು ಅರ್ಥ ಮಾಡಿರುತ್ತಾರೆ. **ಸುದುರ್ಲಭಃ** ಎಂಬುದಕ್ಕೆ **ದುರ್ಲಭತರಃ** ಎಂಬ ವ್ಯಾಖ್ಯಾನದಿಂದ ಮೋಕ್ಷಾರ್ಥಿಯಲ್ಲದೆ ಇತರ ಪುರುಷಾರ್ಥಿಗಳಾಗಿಯಾದರೂ, ತನ್ನನ್ನು ಉಪಾಸನ ಮಾಡುವದೂ ದುರ್ಲಭವೇ ಎಂಬ ಸೂಚನೆಗಾಗಿ; ಮೋಕ್ಷಾರ್ಥಿಯಾಗಿ ಉಪಾಸಿಸುವನಾದರೋ **ದುರ್ಲಭತರನು**.

**ಭಾಷ್ಯಾವತಾರಿಕೆಯ ಅರ್ಥವು :—ತಸ್ಯ ಜ್ಞಾನಿನಃ** - ವಾಸುದೇವಸ್ಸರ್ವಂ ಎಂದು ತನಗೆ ಪ್ರಾಪಕನೂ ಪ್ರಾಪ್ಯನೂ, ಐಹಿಕದಲ್ಲೂ ಸರ್ವವಿಧ ಉಪಕಾರಕನೂ ಎಂದೂ, ಆದುದರಿಂದ ತಾನು ವಾಸುದೇವ ಶೇಷತ್ವೈಕರಸನು ಎಂದು ತಿಳಿದಿರುವ ಪ್ರಾಜ್ಞನಾದ ಜ್ಞಾನಿಯ, **ದುರ್ಲಭತ್ವಮೇವ,** - ದುರ್ಲಭತ್ವವನ್ನೇ, **ಉಪಪಾದಯತಿ** - ಈ ಮುಂದಿನ ಶ್ಲೋಕಗಳಿಂದಲೂ, ಉಪಪಾದನೆ ಮಾಡುತ್ತಾರೆ. ನಾನೇ ಸರ್ವವಿಧ ಬಂಧುವು, ನನ್ನಿಂದಲೇ ಸರ್ವವನ್ನೂ ಹೊಂದಬೇಕೆಂದು ತಿಳಿದವನು ಜ್ಞಾನಿಯು; ಆದುದರಿಂದ ನನ್ನನ್ನು ಬಿಟ್ಟು ಅನ್ಯದೇವತೆಗಳನ್ನಾಶ್ರಯಿಸುವದಿಲ್ಲವು; ಆದುದರಿಂದ ಜ್ಞಾನಿಯ ಶ್ರೇಷ್ಠ್ಯವನ್ನು ದೃಢೀಕರಿಸುವದಕ್ಕಾಗಿ ಮುಂದಿನ ಮೂರು ಶ್ಲೋಕಗಳಿಂದಲೂ ಅನ್ಯದೇವತಾಭಜನ ಮಾಡುವರೆಲ್ಲರೂ ಜ್ಞಾನಶೂನ್ಯರೆಂದು ನಿಂದಿಸುವ ಪ್ರಕರಣವಾಗಿ ಹೇಳುತ್ತಾರೆ. ಫಲಾಂತರಕ್ಕಾಗಿ ದೇವತಾಂತರ ಭಜನಮಾಡಿ ಅದಕ್ಕೆ ಮನಸ್ಸನ್ನು ಕೊಡತಕ್ಕವರು ಅಜ್ಞಾನಿಗಳು ಎಂದು ಹೇಳಲು ಹೊರಟು, ಜ್ಞಾನಿಯು ಇಂತಹ ಅಭಿಸಂಧಿ ಇಲ್ಲದಿರುವನಾದುದರಿಂದ ಸರ್ವ ಶ್ರೇಷ್ಠನೆಂದು ತಿಳಿಸುತ್ತಾರೆ. ಈ ಅವತಾರಿಕೆಯು ೨೦ರಿಂದ ೨೭ರ ಅಂತ್ಯದಲ್ಲಿ "**ಸರ್ಗೇಯಾನ್ತಿ ಪರನ್ತಪ**" ಎಂದು ಹೇಳಿರುವವರೆಗೂ ಅನ್ವಯಿಸುವದಾಗಿ ಜ್ಞಾನಿಯ ದುರ್ಲಭತ್ವವೇ ಉಪಪಾದಿಸಲ್ಪಡುತ್ತದೆ.

**ಮೂಲಕ್ಕೆ ಅರ್ಥವು :—**ಜ್ಞಾನಿಗಳ ಶ್ರೈಷ್ಠ್ಯವು, ಅಜ್ಞಾನಿಗಳ ಪ್ರವೃತ್ತಿಯ ಉಪಪಾದನದಿಂದಲೂ ಏರ್ಪಡುವದರಿಂದ, **ಹೃತಜ್ಞಾನಾಃ** - ಪ್ರಾರಬ್ಧ ಕರ್ಮವಾಸನೆಯಿಂದ ಸರ್ವೇಶ್ವರನ

**ಭಾ. ಸರ್ವ ಏವ ಹಿ ಲೌಕಿಕಾಃ ಪುರುಷಾಃ ಸ್ವಯಾ ಪ್ರಕೃತ್ಯಾ-ವಾಸನಯಾ ಗುಣಮಯ್ಯೆ ಭಾವ ವಿಷಯಯಾ, ನಿಯತಾಃ - ನಿತ್ಯಾನ್ವಿತಾಃ, ತೈಸ್ತೈಃ - ಸ್ವವಾಸನಾನುರೂಪೈ ರ್ಗುಣಮಯ್ಯೈರೇವ, ಕಾಮ್ಯೈಃ - ಇಚ್ಛಾ ವಿಷಯಭೂತೈಃ, ಹೃತಮತ್ಸ್ವರೂಪ ವಿಷಯಜ್ಞಾನಾಃ, ತತ್ತತ್ಕಾಮ ಸಿದ್ಧ್ಯರ್ಥ ಮನ್ಯದೇವತಾಃ - ಮದ್ವ್ಯತಿರಿಕ್ತಾಃ**

ವಿಷಯವಾದ ಯಾಥಾತ್ಮ್ಯ ಜ್ಞಾನಶೂನ್ಯರು, ಏನು ಮಾಡುತ್ತಾರೆಂಬುದನ್ನು ತಿಳಿಸುತ್ತಾರೆ— ಇಲ್ಲಿ ಹೇಳಲ್ಪಡುವ ಅಧಿಕಾರಿಗಳು ಯಾರು ಎಂದರೆ **ಚತುರ್ವಿಧಾಭಜನ್ತೇ ಮಾಂ** ಎಂದು ನಾಲ್ಕು ವಿಧವಾದ ತನ್ನನ್ನು ಉಪಾಸಿಸುವ ಭಕ್ತರಾಗಿರುವ ಸುಕೃತಿಗಳನ್ನು ಬಿಟ್ಟು, ಅದರ ಹಿಂದಿನ ಶ್ಲೋಕದಲ್ಲಿ ಹೇಳಿದ ದುಷ್ಕೃತಿಗಳಲ್ಲೇ ಸೇರಿದವರು. ಇವರು ಮೂಢರಾದುದರಿಂದ ಅನ್ಯದೇವತೆಗಳನ್ನು ಆಶ್ರಯಿಸುತ್ತಾರೆ. ಮುಂದೆ ಇವರನ್ನೇ ಒಂಬು ಕಡೆಯಲ್ಲಿ **ಅಲ್ಪ ಮೇಧಸ್ಸುಗಳೆಂದೂ ಅಬುದ್ಧಯಃ** ಎಂದೂ, ಮೂಢರೆಂದೂ, ಹೇಳುತ್ತಾರೆ. ಆದುದರಿಂದ **ಹೃತಜ್ಞಾನಾಃ** ಎಂಬುವದನ್ನೇ ಈ ಶ್ಲೋಕಕ್ಕೆ ಕರ್ತೃಪದವಾಗಿ ಇಟ್ಟುಕೊಳ್ಳಬಹುದು. ಜ್ಞಾನಿಗಳು ದುರ್ಲಭವಾದುದರಿಂದ, ಲೋಕದಲ್ಲಿ ಮೂಢರೇ ಹೆಚ್ಚು ಎಂಬ ಭಾವದಿಂದ ಹೇಳುತ್ತಾರೆ. **ಸ್ವಯಾ**- ತಮ್ಮ ತಮ್ಮ, **ಪ್ರಕೃತ್ಯಾ** - ಕರ್ಮವಾಸನಾದಿಗಳ ಮೂಲಕ ಪ್ರಾಪ್ತವಾದ ಹೇಹದಿಂದ. **ನಿಯತಾಃ** - ಅದಕ್ಕನುಗುಣವಾದ ರಾಜಸ ತಾಮಸ ಸ್ವಭಾವಯುಕ್ತರಾಗಿ, **ತೈಸ್ತೈಃ ಕಾಮ್ಯೈಃ** ಆಯಾಯಾ ಪ್ರಾರಬ್ಧ ಕರ್ಮಗಳೇನು, ತತ್ಸಂಬಂಧವಾಸನೆ ಏನು, ಇವುಗಳನ್ನನುಸರಿಸಿದ **ತುಚ್ಛ** ಪುರುಷಾರ್ಥಗಳಿಂದ, **ಹೃತ ಜ್ಞಾನಾಃ**—ಪರಮಾತ್ಮ ವಿಷಯವಾದ ಜ್ಞಾನವಿಲ್ಲದೆ, ಅಜ್ಞಾನಿಗಳಾದವರು, **ಅನ್ಯದೇವತಾಃ** - ಬ್ರಹ್ಮರುದ್ರೇಂದಾದಿ ಜೀವಕೋಟಿಗೇನೇ ಸೇರಿದ ಅನ್ಯದೇವತೆಗಳನ್ನು, **ತಂ ತಂ ನಿಯಮ ಮಾಸ್ಥಾಯ** - ಆಯಾಯಾ ದೇವತಾರಾಧನೆಯ ಪ್ರಕರಣಗಳಲ್ಲಿ ಹೇಳಿರುವ ಕ್ರಮವನ್ನವಲಂಬಿಸಿ, **ಪ್ರಪದ್ಯನ್ತೇ** - ಶರಣ ಹೊಂದುತ್ತಾರೆ. "ಅಜ್ಞಾನಿಯಾದವನೀಗ ಹೀಗೆಲ್ಲಾ ಮಾಡುವನು, ಜ್ಞಾನಿಯಾದರೋ ಅಪಹೃತ ಜ್ಞಾನನಲ್ಲವಾದುದರಿಂದ, ಸತ್ವಗುಣಾವಿಷ್ಟನಾಗಿ ತುಚ್ಛಕಾಮಗಳಿಗೆ ಮನಸ್ಸನ್ನು ಕೊಡದೆ, ಅನ್ಯದೇವತೆಗಳನ್ನಾರಾಧಿಸದೇ ನನ್ನನ್ನೇ ಆಶ್ರಯಿಸಿ, ಪರಮ ನಿಶ್ರೇಯಸ್ಸನ್ನು ಹೊಂದುವನು ಎಂಬ ಭಾವವೂ, ದ್ಯೋತಿತವು.

**ಭಾಷ್ಯಾರ್ಥವು :**—ಸರ್ವೇಶ್ವರನಲ್ಲಿ ಶರಣಾಗತಿ ಮಾಡಿ ತಮ್ಮ ಇಷ್ಟಾರ್ಥವನ್ನು ಹೊಂದುವರು ತುಂಬಾ ವಿರಳರು ; ಜ್ಞಾನಿಯಾಗಿ ಮೋಕ್ಷಾರ್ಥಿಯಾಗಿ ಪರಮಪುರುಷರನ್ನಾಶ್ರಯಿಸುವನು ಪರಮ ದುರ್ಲಭವು ಎಂದು ಯಾವಾಗ ಹೇಳಲ್ಪಟ್ಟಿತೋ, ಮಿಕ್ಕ ಎಲ್ಲಾ ಲೋಕದ ಜನರೂ ಅಜ್ಞಾನದಿಂದ ಅನ್ಯ ದೇವತೆಗಳನ್ನೇ ಆರಾಧಿಸುತ್ತಾರೆಂಬುದು ಈಗ ವಿವಕ್ಷಿತವಾದುದರಿಂದ, **ಸರ್ವ ಏವ ಹಿ ಲೌಕಿಕ ಪುರುಷಾಃ** ಎಂದಾರಂಭಿಸಿರುತ್ತಾರೆ. ಮಿಕ್ಕ ಎಲ್ಲಾ ಲೋಕದ ಜನರೂ, **ಸ್ವಯಾ ಪ್ರಕೃತ್ಯಾ** ಎಂದರೆ **ವಾಸನಯಾ ಗುಣಮಯಭಾವ ವಿಷಯಯಾ** - ತಾವು ಹಿಂದೆ ಮಾಡಿದ ಕರ್ಮವಾಗಿ ಈಗ ಪ್ರಾರಬ್ಧವೆನಿಸುವದಕ್ಕೆ ಅನುಗುಣವಾದ ರಾಜಸ ತಾಮಸ ವಿಷಯವಾದ ವಾಸನೆಯಿಂದ, **ನಿಯತಾಃ** ಎಂದರೆ **ನಿತ್ಯಾನ್ವಿತಾಃ** - ಸದಾ ಕೂಡಿದವರಾಗಿ, ಇದರಿಂದ ಪ್ರತಿಯೊಬ್ಬನಿಗೂ ಕರ್ಮವಾಸನಾದಿಗಳು ಬೇರೆಬೇರೆ ಎಂದು ಆಯಾ ಕರ್ಮವಾಸನೆಗೆ ಅನುಗುಣವಾದ ಎಂಬರ್ಥದಲ್ಲಿ **ಸ್ವಯಾ** ಎಂಬ ಪ್ರಯೋಗವೆಂಬ ಭಾವವು. **ತೈಸ್ತೈಃ** ಎಂದರೆ **ಸ್ವವಾಸನಾನುರೂಪೈ ರ್ಗುಣಮಯ್ಯೈ ರೇವ - " ವಿಧಿ ವಿಹಿತಂ ಬುದ್ಧಿರನುಸರತಿ "** ಎಂದೂ **ಅವಶ್ಯಾಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್ "** ಎಂದೂ, ಹೇಳಿರುವ ಹಾಗೆ, ತಮ್ಮ ತಮ್ಮ ಕರ್ಮವಾಸನೆಗೆ ಅನುಗುಣಗಳಾದ ರಾಜಸ ತಾಮಸ ಗುಣಗಳ ಪ್ರಾಚುರ್ಯ

**ಭಾ. ಕೇವಲೇನ್ದ್ರಾದಿ ದೇವತಾಃ, ತಂ ತಂ ನಿಯಮ ಮಾಸ್ಥಾಯ-ತತ್ತದ್ದೇವತಾ ವಿಶೇಷ ಮಾತ್ರಪ್ರೀಣನಾಽಸಾಧಾರಣಂ ನಿಯಮ ಮಾಸ್ಥಾಯ, ಪ್ರಪದ್ಯನ್ತೇ-ತಾ ಏವಾ ಶ್ರಿತ್ಯಾರ್ಚಯನ್ತೇ || ೨೦ ||**

ಗಳುಳ್ಳ, **ಕಾಮೈಃ** ಎಂದರೆ **ಇಚ್ಛಾವಿಷಯ ಭೂತೈಃ** - ಇಚ್ಛೆಗಳಿಗೆ ವಿಷಯಗಳಾದ ಪುರುಷಾರ್ಥಗಳಿಂದ, **ಹೃತ ಮತ್ಸ್ವರೂಪಜ್ಞಾನಾಃ** - ಆ ಕಾರಣದಿಂದಲೇ ಅಪಹರಿಸಲ್ಪಟ್ಟ ನನ್ನ ಸ್ವರೂಪ ವಿಷಯ ಜ್ಞಾನವುಳ್ಳವರಾಗಿ, ಇದು ಮೂಲದ **ಹೃತಜ್ಞಾನಾಃ** ಎಂಬುದರ ಭಾಷ್ಯವು. ಇಲ್ಲಿನ ಜ್ಞಾನಶಬ್ದವು ಈ ಅಧ್ಯಾಯ ಪ್ರಾರಂಭದಲ್ಲಿ ಹೇಳಿದ ವಿಜ್ಞಾನಯುಕ್ತವಾದ ಜ್ಞಾನವನ್ನೇ ಬೋಧಿಸುವದರಿಂದ, **ಹೃತಮತ್ಸ್ವರೂಪಜ್ಞಾನಾಃ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ತತ್ತತ್ಕಾಮ ಸಿದ್ಧ್ಯರ್ಥಂ** - ಆ ಆ ಇಷ್ಟಾರ್ಥಗಳ ಸಿದ್ಧಿಗೋಸ್ಕರ, ಹೀಗೆ ಹೃತಜ್ಞಾನರಾದುದರಿಂದಲೇ, **ಅನ್ಯ ದೇವತಾಃ** ಎಂದರೆ **ಮದ್ವ್ಯತಿರಿಕ್ತಾಃ ಕೇವಲೇನ್ದ್ರಾದಿ ದೇವತಾಃ**-ನನಗಿಂತ ಬೇರೆಯಾದ ಕೇವಲ ಇಂದ್ರಾದಿ ದೇವತೆಗಳನ್ನು, ಮದ್ವ್ಯತಿರಿಕ್ತವೆಂದು ಏಕೆ ಹೇಳಿದರು ಎಂದರೆ ಈಶ್ವರ ಕೋಟಿಗೆ ಸೇರದೆ ಜೀವಕೋಟಿಗೆ ಸೇರಿದವರೆಂಬ ಭಾವವು. ಇವರು ಪರಮಾತ್ಮನಲ್ಲದ ಸ್ವರೂಪತಃ ಪರಮಾತ್ಮನಿಗಿಂತ ಭಿನ್ನರಾಗಿರುವ ಇತರ ಆತ್ಮರುಗಳು. "**ನಿತ್ಯೋನಿತ್ಯಾನಾಂ**" ಎಂಬ ಮತ್ತು ಇನ್ನೂ ಇತರ ಅನೇಕ ಶ್ರುತಿಗಳಲ್ಲಿ ಹೇಳಿರುವ ಹಾಗೆ ಪರಮಾತ್ಮನಲ್ಲದ ಇತರ ಆತ್ಮರುಗಳೂ, ಉಂಟೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆ ಅಭಿಪ್ರಾಯದಿಂದಲೇ **ಕೇವಲ** ಶಬ್ದ ಪ್ರಯೋಗವೂ ಕೂಡ ಎಂದು ಭಾವಿಸತಕ್ಕದ್ದು. ಈ ಕೇವಲ ಶಬ್ದದಿಂದ ಅವರುಗಳಿಗೆ ಮೋಕ್ಷವನ್ನು ಕೊಡುವ ಶಕ್ತಿ ಇಲ್ಲವೆಂಬ ಭಾವವೂ ದ್ಯೋತಿತವು. ಹಾಗೆ ಅಜ್ಞಾನವಿರುವದರಿಂದಲೇ ತನ್ನನ್ನು ಅವರುಗಳು ಆಶ್ರಯಿಸುವದಿಲ್ಲವೆಂಬ ಭಾವವೂ ದ್ಯೋತಿತವು. ಇಂದ್ರಾದಿ ಎಂದು ಇಂದ್ರನನ್ನು ಮೊದಲು ಮಾಡಿಕೊಂಡು ಇಲ್ಲಿ ಹೇಳುವದರಿಂದ ಚತುರ್ಮುಖನೂ ರುದ್ರನೂ ಯಾವ ಕೋಟಿಗೆ ಸೇರಿದವರು ಎಂಬ ಪ್ರಶ್ನೆಯು ಉಂಟಾಗಬಹುದು; ಬ್ರಹ್ಮಾದಿ ಸ್ತಂಬ ಪರ್ಯಂತ ಸಮಸ್ತ ಚಿದ್ವರ್ಗವೂ ಜೀವಕೋಟಿಗೆ ಸೇರಿದವರೇ ವಿನಾ ಈಶ್ವರಕೋಟಿಗೆ ಸೇರಿದವರಲ್ಲವು. ಸರ್ವೇಶ್ವರನು ಪ್ರತಿಯೊಂದು ಅಂಡದಲ್ಲೂ ಜೀವರುಗಳು ಮಾಡಿದ ಸುಕೃತ ಮಹಾತ್ಮ್ಯೆಯನ್ನು ಮೂಲ ಮಾಡಿಕೊಂಡು ಸೃಷ್ಟಿ ಸೃಷ್ಟಿಯ ಅಧಿಕಾರವನ್ನು ಒಬ್ಬ ಬ್ರಹ್ಮನಲ್ಲೂ, ಲಯಾಧಿಕಾರವನ್ನು ಒಬ್ಬ ರುದ್ರನಲ್ಲೂ ಇಟ್ಟಿರುತ್ತಾನೆಂದು ಭಾವಿಸತಕ್ಕದ್ದು. ಈ ವಿಷಯದಲ್ಲಿ ನಿರ್ಣಯವಾದ ಜ್ಞಾನಾಪೇಕ್ಷೆಯುಳ್ಳವರು ಶ್ರೀಮದ್ರಹಸ್ಯ ತ್ರಯಸಾರದ **ಪರದೇವತಾ ಪಾರಮಾರ್ಥ್ಯಾಧಿಕಾರ**ವನ್ನು ಅವಲೋಕಿಸಬಹುದು. ಹಾಗಾದರೆ ಇಂದ್ರನಿಂದ ಆರಂಭಿಸುವದಕ್ಕೂ ಆದಿ ಪದದಲ್ಲಿ ಚತುರ್ಮುಖಾದಿಗಳನ್ನು ಸೇರಿಸಿ ವ್ಯಾಖ್ಯಾನ ಮಾಡುವದಕ್ಕೂ ಕಾರಣವೇನೆಂಬುದು ನ್ಯಾಯವಾದ ಪ್ರಶ್ನೆಯು. ವಿಷ್ಣುಧರ್ಮ ದ್ವಿತೀಯದಲ್ಲಿರುವ "**ತ್ವಮಿನ್ದ್ರಸ್ಸತ್ಯಮೇವೈ ತದ್ದೇವ ಸ್ತ್ರಿಭುವನೇಶ್ವರಃ ತ್ವಯಾಪಿ ಪ್ರಾಪ್ತ ಮೈಶ್ವರ್ಯಂ ಯತಸ್ತಂ ತೋಷಯಾಮ್ಯಹಮ್**" ಎಂಬ ವಾಕ್ಯವನ್ನು ಮನಸ್ಸಿನಲ್ಲಿಟ್ಟು ಹಾಗೆ ವ್ಯಾಖ್ಯಾನವು. "ಓ ಇಂದ್ರನೇ ನೀನು ಮಹತ್ತಾದ ಐಶ್ವರ್ಯವುಳ್ಳವನಾಗಿರುವದರಿಂದಲೇ ನೀನು ಇಂದ್ರನೆಂಬುದೂ, ದೇವೇಂದ್ರನೆಂಬುದೂ ಮೂರು ಲೋಕಕ್ಕೂ ಈಶ್ವರನೆಂಬುದೂ ಎಲ್ಲವೂ ಸತ್ಯವೇ. ಇಂತಹ ಅಪಾರವಾದ ಐಶ್ವರ್ಯವೆಲ್ಲಾ ನಿನಗೂ ಯಾವನಿಂದ ಪ್ರಾಪ್ತವೋ ಅಂತಹ ನನ್ನೇ ಆಶ್ರಯಿಸಿ ಸಂತೋಷಪಡಿಸುವೆನು. ಮುಂದೆ "**ನಾಹಮಾರಾಧಯಾಮಿ ತ್ವಾಂ ತವ ಬದ್ಧೋಯ ಮಂಜಲಿ**" ಎಂದರೆ ನಿನ್ನನ್ನು ನಾನು ಆರಾಧಿಸುವದಿಲ್ಲವು. ನಿನಗೆ ಕೈಮುಗಿದಿರುತ್ತೇನೆ ಎಂದು ಇದೆ. ಆಗಲಿ "**ಪರಸ್ಪರಂ ಭಾವಯನ್ತಃ**" ಎಂದು (ಗೀ. ೩-೧೧.)

ಹಿಂದೆ ಉಪದೇಶಿಸಿದುದಕ್ಕೆ **ಹೃತಜ್ಞಾನಾಃ** ಎಂದು ಇಲ್ಲಿ ಹೇಳಿರುವದು ವಿರೋಧವಾಗುವ ದಿಲ್ಲವೋ ? ಎಂದರೆ ಇಲ್ಲವು. ಅಲ್ಲಿ ಹೇಳಿದುದು ವಿಹಿತಕರ್ಮಗಳೊಂದಿಗೆ ಕರ್ಮಯೋಗಾನು ಷ್ಠಾನರೂಪ ಆರಾಧನೆಯನ್ನು ಭಗವಂತನಲ್ಲಿ ಸಮರ್ಪಿಸೋಣವು. ಭಗವಂತನನ್ನು ಬಿಟ್ಟು ಅನ್ಯದೇವತಾಶ್ರಯಣವಲ್ಲವು. **ತಂ ತಂ ನಿಯಮಮಾಸ್ಥಾಯ** ಎಂದರೆ **ತತ್ತದ್ದೇವತಾ ವಿಶೇಷಮಾತ್ರಪ್ರೀಣನಾಽಸಾಧಾರಣಂ ನಿಯಮಮಾಸ್ಥಾಯ**-ಆಯಾ ದೇವತಾವಿಶೇಷಗಳು ಮಾತ್ರವೇ ಸಂತೋಷಿಸುವದಕ್ಕಾಗಿಯೇ ಏರ್ಪಟ್ಟ ಕ್ರಮವನ್ನು ಅವಲಂಬಿಸಿ, ಆಯಾ ದೇವತೆಗಳ ಪ್ರೀಣನಕ್ಕಾಗಿಯೇ ಏರ್ಪಟ್ಟ ಮಂತ್ರಕ್ರಮ ಮೊದಲಾದವುಗಳಿಂದ ಕೂಡಿದ ಅರ್ಚನೆಯ ಕ್ರಮವನ್ನನುಸರಿಸಿ ಎಂಬ ಭಾವವು, **ಪ್ರಪದ್ಯನ್ತೇ** ಎಂದರೆ **ತಾ ಏವಾಶ್ರಿತ್ಯಾರ್ಚಯನ್ತೇ**-ಆ ಅನ್ಯದೇವತೆಗಳನ್ನೇ ಆಶ್ರಯಿಸಿ ಎಂದರೆ ಅವರಲ್ಲೇ ಶರಣಾಗತಿ ಮಾಡಿ, ಹೀಗೆ ಪೂಜಿಸು ತ್ತಾರೆ ಎಂಬರ್ಥವು. **ಆಶ್ರಿತ್ಯ ಅರ್ಚಯನ್ತೇ** ಎಂಬುದರಿಂದ ಈ ಅನ್ಯದೇವತೋಪಾಸನ ದಲ್ಲಾಗಲಿ ಅಥವಾ ಪರಮಾತ್ಮೋಪಾಸನದಲ್ಲಾಗಲಿ, ಉಪಾಸನಾಕ್ರಮವು ತತ್ತದ್ದೇವತೆಯ ಶರಣಾಗತಿಯನ್ನು ಮಾಡಿ **ಅರ್ಚಿಸಿ** ಅನಂತರ ಉಪಾಸನವು ಎಂಬುದು. ಇಲ್ಲಿ **ಅರ್ಚಯನ್ತೇ** ಎಂದು ಇರುವದು ಮೂಲದ ಪ್ರಪದ್ಯನ್ತೇ ಎಂಬುದರ ವ್ಯಾಖ್ಯಾನವು. ಪ್ರಪದನವು ಇಲ್ಲಿ ಹೇಳಿರುವದು ಭಜನಕ್ಕೆ ಅಙ್ಗವಾಗಿ ಹೇಳಿರುವದರಿಂದ, ಆಶ್ರಿತ್ಯ ಎಂಬುದರಿಂದ ಅಂಗ ಪ್ರಪದನ ವನ್ನೂ ಆ ದೇವತೆಯ ಅರ್ಚನವನ್ನೂ, ಉಪಾಸನಕ್ಕೆ ಪೂರ್ವಭಾವಿಯಾಗಿ ಮಾಡತಕ್ಕದ್ದೆಂದು ಸೂಚಿಸುವದಕ್ಕಾಗಿ ಅರ್ಚಯನ್ತೇ ಎಂಬ ವ್ಯಾಖ್ಯಾನವು ; ಇಲ್ಲಿ ಅರ್ಚನವು ಪ್ರಕರಣವಶಾತ್ ಉಪಾಸನಕ್ಕೆ ಪೂರ್ವಭಾವಿಯಾದ ಅರ್ಚನವು. ಇಂತಹ ಅನ್ಯದೇವತಾ ಭಜನವು ಸರಿಯಲ್ಲವು; ತನ್ನ ಭಜನವೇ ಯುಕ್ತವಾದುದು ಎಂದು ಹೇಳುವದೇ ಪ್ರಕರಣವೆಂದು ತಿಳಿಯತಕ್ಕದ್ದು. ಅನ್ಯದೇವತೆಗಳೂ ಕೂಡ ಪರಮಾತ್ಮರೇ ಆದಪಕ್ಷದಲ್ಲಿ ಅನ್ಯದೇವತಾ ಭಜನವು ಹೇಗೆ ನಿಂದ್ಯವು ? ತಾನೇ ಪ್ರತಿಬಿಂಬ ರೂಪದಲ್ಲಿ ಅವರುಗಳಾಗಿರುವಾಗ ನಿಂದ್ಯವಾಗಲು ಕಾರಣವೇ ಇಲ್ಲವು. ಅನ್ಯದೇವತೆಗಳು ನಮ್ಮ ಸಿದ್ಧಾನ್ತರೀತ್ಯ ಜೀವಕೋಟಿಗೆ ಸೇರಿದವರಾದ ಪ್ರಯುಕ್ತ ಅವರಿಗೆ ಸಾಧ್ಯವಾದ ಎಂದರೆ ಪರಮಾತ್ಮನಿಂದಲೇ ಅನುಗ್ರಹಿಸಲ್ಪಟ್ಟ, ಅಲ್ಪಾಸ್ಥಿರ ಫಲಗಳ ನ್ನೀಯುವದರಿಂದ ಅನ್ಯದೇವತಾ ಭಜನವು ಸರಿಯಲ್ಲವು. ಅದ್ವೈತಿಗಳಿಗೆ ಅನ್ಯದೇವತಾ ಭಜನವು ನಿಂದ್ಯವಾಗಲು ಕಾರಣವಿಲ್ಲವು, ಏಕೆಂದರೆ ಅನ್ಯದೇವತೆಯೂ ಪರಮಾತ್ಮನೇ, ತಾನೂ ಪರಮಾತ್ಮನೇ ; ಹೀಗಿರುವಾಗ ಪ್ರಾಪ್ಯ ಪಾಪಕ ಭಾವಗಳೇ ಕೂಡುವದಿಲ್ಲವು. ಮೂಲದಲ್ಲಿ **ಅನ್ಯದೇವತಾಃ** ಎಂಬಲ್ಲಿರುವ **ಅನ್ಯ** ಶಬ್ದದಿಂದ ಪರಮಾತ್ಮನಿಗಿಂತ ಬೇರೆಯಾಗಿ **ಅನ್ಯರು** ಎಂಬರ್ಥವು ವ್ಯಕ್ತವಾಗಿರುವಾಗ, ಈ ಅನ್ಯದೇವತೆಗಳೂ ಪರಮಾತ್ಮಬಿಂಬವೇ ಎಂಬ ಅದ್ವೈತಾಭಿಪ್ರಾಯಕ್ಕೆ **ಅನ್ಯದೇವತಾ** ಶಬ್ದ ಪ್ರಯೋಗವು ತುಂಬಾ ವಿರುದ್ಧವು. ಗೀತೆಯಲ್ಲಿ ಅದ್ವೈತಾಭಿಪ್ರಾಯಕ್ಕೆ ಎಲ್ಲಿಯೂ ಅನುಕೂಲವೇ ಇಲ್ಲವು. ಇಲ್ಲಿ ಅನ್ಯದೇವತಾ ಭಜನರನ್ನು ಹೃತಜ್ಞಾನರೆಂದು ಹೇಳಿರುವದು ಏತಕ್ಕೆಂದರೆ :—" **ಪ್ರತಿಬುದ್ಧಾನ ಸೇವನ್ತೇ ಯಸ್ಮಾತ್ಪರಿಮಿತಂ ಫಲಮ್** " ಅವರಿಗೆ ಮೋಕ್ಷ ಕೊಡುವ ಶಕ್ತಿ ಇಲ್ಲದೆ, **ಅಲ್ಪಾಸ್ಥಿರ** ಫಲಗಳನ್ನು ಕೊಡುವವರಾದುದರಿಂದ. ಈ ಸಂದರ್ಭದಲ್ಲಿ " **ಆರೋಗ್ಯಂ ಭಾಸ್ಕರಾದಿಚ್ಛೇತ್ ಧನಮಿಚ್ಛೇದ್ಧುತಾಶನಾತ್ । ಈಶ್ವರಾದ್ಜ್ಞಾನಮನ್ವಿಚ್ಛೇ ನ್ಮೋಕ್ಷಮಿಚ್ಛೇಜ್ಜನಾರ್ದ ನಾತ್** " ಎಂಬ ಶ್ಲೋಕವೂ ಅನುಸಂಧೇಯವು (ಬ್ರಹ್ಮಾಂಡಪುರಾಣೇ.) ಹೀಗೆ **ಅನ್ಯದೇವತಾಃ ಪ್ರಪದ್ಯನ್ತೇ** ಎಂದು ವ್ಯಕ್ತವಾಗಿ ಮೂಲದಲ್ಲಿದ್ದರೂ, ಕೆಲವರು ಈ ಶ್ಲೋಕವು ಜ್ಞಾನಿಯಲ್ಲದ ಮಿಕ್ಕ ಮೂರು ಮಂದಿಗಳ ವಿಷಯವಾದುದು ಎಂದು ಅಭಿಪ್ರಾಯ ಪಡುವದು ಆಶ್ಚರ್ಯ

**ಮೂ. ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ**
**ತಸ್ಯ ತಸ್ಯಾ ಚಲಾಂ ಶ್ರದ್ಧಾಂ ತಾ ಮೇವ ವಿದಧಾಮ್ಯ ಹಮ್ ॥** ೨೧.

ವಾಗಿರುತ್ತದೆ. ಶ್ರೀ ಯಾಮುನೇಯರ ಸಙ್ಗ್ರಹಶ್ಲೋಕವಾದ "**ಐಕಾನ್ತ್ಯಂ ಭಗವತ್ಯೇಷಾಂ ಸಮಾನ ಮಧಿಕಾರಿಣಾಂ**" (೨೮) ಎಂಬುದರಿಂದ ಈ ನಾಲ್ವರು ಐಕಾನ್ತ್ಯದಿಂದ ಭಗವಂತನನ್ನೇ ಆಶ್ರಯಿಸಿದವರು. ಅನ್ಯದೇವತೆಗಳನ್ನು ಈ ನಾಲ್ವರೂ ಆಶ್ರಯಿಸಿದವರಲ್ಲವು. ಈ ಅಭಿಪ್ರಾಯದಿಂದಲೇ **ಚತುರ್ವಿಧಾ ಭಜನ್ತೇ ಮಾಂ** ಎಂದು ನನ್ನನ್ನೇ ಪ್ರಪದನಮಾಡಿ ಆಶ್ರಯಿಸಿ ಉಪಾಸಿಸುವರು ಎಂದು ಹೇಳಲ್ಪಟ್ಟಿತು. ಆ ಮೂವರಿಗೂ ಜ್ಞಾನಿಗೂ ಪರಮಾತ್ಮ ಭಜನದಲ್ಲಿ ವ್ಯತ್ಯಾಸವೇನೆಂದರೆ, ಆ ಮೂವರೂ ಫಲಸಿದ್ಧಿಯವರೆಗೂ ಪರಮಾತ್ಮನನ್ನು ಭಜಿಸುವವರು, ಜ್ಞಾನಿಯಾದರೋ ಪರಮೈಕಾನ್ತಿಯಾಗಿ ಯಾವಾಗಲೂ ಪರಮಾತ್ಮನನ್ನೇ ಭಜಿಸುವವನು. ಈ ಶ್ಲೋಕದಲ್ಲಿ ಹೇಳಿರುವ ಹಾಗೆ ಅನ್ಯದೇವತೆಗಳನ್ನು ಭಜಿಸುವವರಿಗೆ ಪುನಃ ಪುನಃ ಸಂಸಾರ ಪ್ರಾಪ್ತಿಯೇ ವಿನಾ ಮೋಕ್ಷವಿಲ್ಲವು. ಅನ್ಯದೇವತೆಗಳಿಗೆ ಯಾರಿಗೂ ಮೋಕ್ಷವನ್ನು ಕೊಡುವ ಶಕ್ತಿಯು ಇರುವದಿಲ್ಲವು; ಮುಕುಂದನಿಗೆ ಮಾತ್ರವೇ ಆ ಶಕ್ತಿಯು. ಶ್ರುತಿ ಸ್ಮೃತಿ ಇತಿಹಾಸಗಳು ವಿಷ್ಣುಪುರಾಣ ಇವುಗಳಲ್ಲಿ ಎಲ್ಲಿಯೂ ಬ್ರಹ್ಮರುದ್ರೇಂದ್ರಾದಿಗಳು ಮೋಕ್ಷವನ್ನು ಕೊಟ್ಟ ಇತಿಹಾಸವಿಲ್ಲವು. ಮಾರ್ಕಂಡೇಯರಿಗೆ ಕೃಪೆಗೈದುದು ಪರಮ ಪುರುಷನ ಕೃಪೆಯೇ, ಅಲ್ಲಿ ರುದ್ರನು ಪುರುಷಾಕಾರರೂಪದಲ್ಲಿ ಸಹಾಯಕನು.

**ಮೂಲಕ್ಕೆ ಅರ್ಥವು :—** ಹೀಗೆ ಅನ್ಯದೇವತಾ ಭಜನವು ಇವರಿಗೆ ಉಂಟಾದರೆ, ನಿನ್ನನ್ನು ಆರಾಧಿಸದೆ ಇದ್ದುದರಿಂದ, ಅವರನ್ನೇನಾದರೂ ನಿರಾಕರಿಸುತ್ತೀಯೋ ಎಂದೇನಾದರೂ ಕೇಳುವಿಯೋ, ಎಂದರೆ ಹಾಗಲ್ಲವು; ಅವರಿಗೆ ಅಂತಹ ಅನ್ಯದೇವತಾ ಭಜನದಲ್ಲಿ ಯಾವಾಗ ಮನಸ್ಸಾಯಿತೋ, ಆವಾಗ ಅವರಿಗೆ ಅಂತಹ ಭಜನದಲ್ಲೇ ಶ್ರದ್ಧೆಯುಂಟಾಗುವಹಾಗೆ ನಾನೇ ಮಾಡಿ, ಆ ಅನ್ಯದೇವತೆಗಳನ್ನು ಕುರಿತು ಪ್ರಾರ್ಥಿಸಿದ ಫಲವನ್ನೇ ನಾನೇ ಅವರ ಮೂಲಕ ಕೊಡಿಸುತ್ತೇನೆ. ಅದೇನು ಹಾಗೆ ಮಾಡಲು ಕಾರಣವು ಎಂದು ಕೇಳಿದುದಾದರೆ, ಅವರು ಪ್ರಾರಬ್ಧ ಕರ್ಮಾನುಗುಣವಾಗಿ ಅನ್ಯದೇವತಾರಾಧನೆಯನ್ನು ಮಾಡುತ್ತಾರೆ; ಅವರಲ್ಲಾದರೂ ಶ್ರದ್ಧೆಯನ್ನುಂಟುಮಾಡಿ, ಅವರು ಬೇಡಿದ ಇಷ್ಟಾರ್ಥವನ್ನು ಕೊಡದೇ ಹೋದರೆ ಅವರಲ್ಲಿ ಅವರಿಗೆ ತುಂಬಾ ಆಶೆ ಇರುವದರಿಂದ ತತ್ಪ್ರಾಪ್ತಿಗೋಸ್ಕರ, ಇನ್ನೂ ಅಧರ್ಮಕ್ಕೆ ಬಿದ್ದು ಕೆಟ್ಟುಹೋಗಬಹುದು. ಅಂತವರಲ್ಲೂ ಸಹ ನನಗೆ ಕೃಪೆ ಇರುವದರಿಂದ, ಅವರಿಗೆ ಅವರಲ್ಲಾದರೂ ಶ್ರದ್ಧೆಯನ್ನು ಸ್ಥಿರಪಡಿಸುತ್ತೇನೆಂದು, ತಮ್ಮ ಕೃಪಾ ಪ್ರಭಾವವನ್ನು ಈ ಶ್ಲೋಕದಲ್ಲಿ ಹೇಳಿ, ಮುಂದಿನ ಶ್ಲೋಕದಲ್ಲಿ ಅವರು ಕೋರಿದುದನ್ನು ನಾನೇ ಕೊಡುತ್ತೇನೆಂದು ತಿಳಿಸುತ್ತಾರೆ— **ಯಃ ಯಃ ಭಕ್ತಃ**-ಯಾವ ಯಾವ ಈ ಅನ್ಯದೇವತಾ ಭಕ್ತನು. **ಯಾಂ ಯಾಂ** ಯಾವ ಯಾವ **ತನುಂ**-ನನಗೆ ಶರೀರವಾಗಿರುವ ಅನ್ಯದೇವತೆಯನ್ನು, ಅಥವಾ ಯಾವ ಅನ್ಯದೇವತಾ ರೂಪವನ್ನು, ಮೊದಲನೆಯ ಅರ್ಥವು ಸ್ವಾರಸ್ಯವಾದುದರಿಂದ, ಭಾಷ್ಯದಲ್ಲಿ ಉಪಾದೇಯವು. **ಶ್ರದ್ಧಯಾ**-ಶ್ರದ್ಧೆಯಿಂದ, **ಅರ್ಚಿತುಂ ಇಚ್ಛತಿ**-ಪೂಜಿಸಲು, ಉಪಾಸಿಸಲು ಅಪೇಕ್ಷಿಸುವನೋ, **ಅಹಮ್**-ಪ್ರಾಣಿ ವರ್ಗದಲ್ಲಿ ಸಹಜ ಕರುಣೆಯುಳ್ಳ ನಾನು, **ತಸ್ಯ ತಸ್ಯ**-ಆ ಅನ್ಯದೇವತಾ ಭಕ್ತನಿಗೇನೇ, **ತಾಮೇವ ಶ್ರದ್ಧಾಂ** ಅಂತಹ ಶ್ರದ್ಧೆಯನ್ನೇ, **ಅಚಲಾಂ**-ಸ್ಥಿರವಾದುದಾಗಿ, **ವಿದಧಾಮಿ**-ಮಾಡುವೆನು ಎಂದರೆ ಸ್ಥಿರವಾದ ಶ್ರದ್ಧೆಯಿಂದ ಉಪಾಸನೆ ಮಾಡುವ ಹಾಗೆ ಮಾಡುವೆನು ಎಂಬ ಭಾವವು. ಹಿಂದಿನ ಶ್ಲೋಕದಲ್ಲಿ, "**ಮೇ ಪರಾಂ ಪ್ರಕೃತಿಂ**" (೭-೫) "**ಮೇ ಭಿನ್ನಾ ಪ್ರಕೃತಿಃ**" ಎಂದು ಮದೀಯವಾದುದು ಎಂದು ಹೇಳಿದುದು ಶರೀರಾತ್ಮ

**ಭಾ. ತಾ ಅಪಿ ದೇವತಾ ಮದೀಯಾಸ್ತನವಃ (೧)"ಯ ಆದಿತ್ಯೇ ತಿಷ್ಠನ್ ಯಮಾದಿತ್ಯೋ** ಭಾವದಿಂದ ಎಂಬುದನ್ನು, ಇಲ್ಲಿ **ಯಾಂ ಯಾಂ ತನುಂ** ಎಂಬ ಪ್ರಯೋಗದಿಂದ ವ್ಯಕ್ತಪಡಿಸಿರುತ್ತಾರೆ. ಸಮಸ್ತ ಚಿದಚಿತ್ತುಗಳೂ ಸರ್ವೇಶ್ವರನಿಗೆ ಶರೀರವಾದುದರಿಂದ ಅನ್ಯದೇವತೆಗಳೂ ಸಹ ಶರೀರವೇ ಎಂಬ ಭಾವವು. ಈ ಭಾವವು ಆ ಅನ್ಯದೇವತೆಯನ್ನು ಭಜಿಸುವವರಿಗೆ ತಿಳಿಯದು. ಭಜಿಸಿ ಫಲ ಸಙ್ಗತ್ಯಾಗ ಮಾಡಿದರೆ ಅದು ಆಗ ಅನ್ಯದೇವತಾ ಭಜನೆಯೆಂದೆನಿಸುವದಿತವು. ಅಂತಹ ಆರಾಧನೆ ಭಜನಾದಿಗಳು ನಿಂದ್ಯವೂ ಅಲ್ಲವು ಹಾಗಾದರೆ ಇಲ್ಲಿ "**ಯಾಂ ಯಾಂ ತನುಂ**" ಎಂದು ಹೇಳಲು ಕಾರಣವೇನೆಂದು ಪ್ರಶ್ನಿಸಬಹುದು. ಅದಕ್ಕೆ ಎರಡು ಕಾರಣವು. (೧) ಆ ಅನ್ಯದೇವತೆಗಳೂ ನನ್ನ ಶರೀರವೇ ಆದುದರಿಂದ, ಇಂತಹ ಭಜನವು ಸರಿಯಲ್ಲದಿದ್ದರೂ ನನಗೆ ಸಂಬಂಧಿಸುವದರಿಂದ, "**ತಾಮೇವ ವಿದಧಾಮ್ಯಹಂ**" ನಾನೇ ಇಂತಹ ಭಜನ ಶ್ರದ್ಧೆಯನ್ನು ಸ್ಥಿರಪಡಿಸುತ್ತೇನೆಂದು ಹೇಳಿದರು. (೨) ಅವರು ಹೇಗೆ ಸರ್ವೇಶ್ವರನಿಗೆ ಶರೀರವೋ, ಈ ಭಕ್ತನೂ ಶರೀರವೇ. ಇದರಿಂದ ಒಂದು ನನ್ನ ಶರೀರವನ್ನು ಆರಾಧಿಸದಂತಾಯಿತು. ಈ ವಿಷಯವನ್ನು ಚನ್ನಾಗಿ ಅರಿತ ಸರ್ವಜ್ಞನಾದ ನಾನು ಈ ಭಕ್ತನು ತನ್ನ ಮನೋರಥಾವಾಪ್ತಿಯನ್ನು ಹೊಂದದೇ ಎಲ್ಲಿ ಅಧರ್ಮಗಳಲ್ಲಿ ಬೀಳುವನೋ ಎಂದು ಶಂಕಿಸಿ ಕರುಣಾವಿಷ್ಟನಾಗಿ "**ತಾಮೇವ ವಿಧದಾಮ್ಯಹಮ್**" ಎಂದು ಹೇಳುತ್ತಾರೆ. ಇಲ್ಲಿ "**ಅರ್ಚಿತು ಮಿಚ್ಛತಿ**" ಎಂಬಲ್ಲಿ ಪ್ರಾರಬ್ಧ ಕರ್ಮ ವಾಸನಾನುಸಾರವಾಗಿಯೇ ಈತನಿಗೆ ಪ್ರವೃತ್ತಿಯುಂಟಾಗುವಾಗ, **ಅರ್ಚಿತು ಮಿಚ್ಛತಿ** ಎಂಬಲ್ಲಿ ಇಚ್ಛಾ ಶಬ್ದಪ್ರಯೋಗವು ಹೇಗೆ? ಎಂದು ಕೇಳಬಹುದು. "**ಕರ್ತಾ ಶಾಸ್ತ್ರಾರ್ಥವತ್ವಾತ್**" ಎಂಬ ಬ್ರಹ್ಮಸೂತ್ರದ ಪ್ರಕಾರ ಈತನಿಗೆ ಕರ್ತೃತ್ವವುಂಟು; ಅದು **ಪರಾತ್ತು ತಚ್ಛ್ರುತೇಃ** ಎಂಬ ಸೂತ್ರಾನುಸಾರ ಜೀವನ ಕರ್ಮಾನುಗುಣವಾದ ಸರ್ವೇಶ್ವರ ಸಙ್ಕಲ್ಪಕ್ಕೆ ಅಧೀನವಾದರೂ, ಪ್ರಥಮ ಸಂಙ್ಕಲ್ಪವಿಷಯದಲ್ಲಿ ಈ ಜೀವನಿಗೆ ಸ್ವಾತಂತ್ರ್ಯ ಉಂಟೆಂಬುದು "**ಕೃತ ಪ್ರಯತ್ನಾ ಪೇಕ್ಷಸ್ತು**" ೨.೩.೪೧. ಎಂಬ ಸೂತ್ರದಲ್ಲಿ ವ್ಯಕ್ತವಾದುದರಿಂದ **ಪ್ರಥಮ ಸಂಙ್ಕಲ್ಪ ವಿಷಯದಲ್ಲಿ** ಈತನಿಗೆ ಸ್ವಾಮಿದತ್ತ ಸ್ವಾತಂತ್ರ್ಯವಿರುವದರಿಂದ, "**ಅರ್ಚಿತು ಮಿಚ್ಛತಿ**" ಎಂಬ ಸರ್ವಶಾಸ್ತ್ರಸಮ್ಮತವಾದ ಪ್ರಯೋಗವು. ಇದರಿಂದ ಶಾಸ್ತ್ರವೈಯರ್ಥ್ಯವಿಲ್ಲವು. ಪ್ರಾರಬ್ಧ **ಕರ್ಮವೇ** ಎಲ್ಲಾ ಪ್ರವೃತ್ತಿಗಳಿಗೂ ಕಾರಣವಾಗಿ ಬಿಟ್ಟರೆ, ಶಾಸ್ತ್ರವೈಯರ್ಥ್ಯವೂ ಪುರುಷ ಪ್ರಯತ್ನ ನೈರರ್ಥಕ್ಯವೂ ಗುರೂಪದೇಶದ ನಿಷ್ಫಲತ್ವವೂ ಇವೇ ಮೊದಲಾದ ಅಸಾಮಂಜಸ್ಯಗಳು ಪ್ರಾಪ್ತವಾಗುವುವು. ಯಾವಾಗ ಆತನು ಅನ್ಯದೇವತೆಯನ್ನೇ ಆರಾಧಿಸತಕ್ಕದ್ದೆಂದು ಸಙ್ಕಲ್ಪಿಸಿಬಿಟ್ಟನೋ, **ಆಗ ತಾಮೇವ ವಿದಧಾಮ್ಯಹಂ** ಎಂಬಲ್ಲಿ ತೋರಿರುವ ಸ್ವಾಮಿಯ ಪ್ರೇರಕತ್ವವು ವಿಶದಪಟ್ಟಿತು. ಆದುದರಿಂದಲೇ ಶ್ರುತಿಯು ಸರ್ವೇಶ್ವರನನ್ನು **ಪ್ರೇರಿತಾ** ಎಂದು "**ಪ್ರೇರಿತಾರಂಚಮತ್ವಾ**" ಎಂಬಲ್ಲಿ ಹೇಳಿರುತ್ತದೆ. **ತಾಮೇವ ಶ್ರದ್ಧಾಂ** ಎಂಬಲ್ಲಿರುವ ಅವಧಾರಣವು, ಮೇಲೆ ಪೂರ್ವಾರ್ಧದಲ್ಲೂ ಶ್ರದ್ಧಯಾ ಎಂದಿರುವದರಿಂದ, ಅಂತಹ ಶ್ರದ್ಧೆಯನ್ನೇ ಎಂದು ಶ್ರದ್ಧಾಯೊಂದಿಗೆ ಸೇರಿಸಿ ಅರ್ಥಮಾಡುವದೇ ಸರಸವು. ಆದರೆ **ತಾಂ** ಎಂಬ ಸರ್ವನಾಮವಿರುವದರಿಂದ ಒಂದೆ ನಿರೂಪಿಸಲ್ಪಟ್ಟ ಶ್ರದ್ಧೆ ಎಂಬರ್ಥವು ದೊರೆಯುವದರಿಂದ, ಅವಧಾರಣವನ್ನು **ಅಹಂ** ಎಂಬುವದರೊಂದಿಗೆ ಸೇರಿಸಿ **ಅಹಮೇವ ವಿದಧಾಮಿ** ಎಂಬ ವ್ಯಾಖ್ಯಾನವಾದರೆ, ಆವಾಗಲೂ ಸ್ವಾರಸ್ಯವಾದುದಾಗಿ ತಾನೇ ಪ್ರೇರಿತವಾಗಿಯೇ ಸರ್ವ ವ್ಯಾಪಾರಗಳೂ ಲೋಕದಲ್ಲಿ ಜರಗುತ್ತವೆ

(೧) ಬೃ. ೭. ೯.

**ಭಾ. ನವೇದ ಯಸ್ಯಾದಿತ್ಯ ಶ್ಶರೀರಂ " ಇತ್ಯಾದಿಶ್ರುತಿಭಿಃ ಪ್ರತಿಪಾದಿತಾಃ। ಮದೀಯಾ ಸ್ತನವ ಇತ್ಯಜಾನನ್ನಪಿ, ಯೋ ಯೋ ಯಾಂ ಯಾಂ ಮದೀಯಾ ಮಾದಿತ್ಯಾದಿ ಕಾಂ ತನುಂ ಭಕ್ತಶ್ಶ್ರದ್ಧಯಾ ರ್ಚಿತು ಮಿಚ್ಛತಿ; ತಸ್ಯ ತಸ್ಯಾಽಜಾನತೋಽಪಿ,**

ಎಂಬ ಅಭಿಪ್ರಾಯವೂ ದ್ಯೋತಿತವಾಗುತ್ತದೆ. ಆಗ ಮುಂದಿನ ಶ್ಲೋಕದಲ್ಲಿ ಹೇಳಿರುವ **ಮಯ್ಯೈವ ವಿಹಿತಾರ್ನ** ಎಂಬುದಕ್ಕನುಗುಣವಾಗುತ್ತದೆ.

**ಭಾಷ್ಯಾರ್ಥವು :—**ಅನ್ಯದೇವತಾರಾಧನೆಯಲ್ಲಿ ಶ್ರದ್ಧೆಯುಳ್ಳ ಭಕ್ತರಿಗೆ ಶ್ರದ್ಧೆಯನ್ನು ಹೆಚ್ಚಿಸುವನೂ ನಾನೇ ಎಂದೂ ಈ ಶ್ಲೋಕದಲ್ಲಿ ತಿಳಿಸಿ, ಮುಂದಿನ ಶ್ಲೋಕದಲ್ಲಿ ಅವರು ಕೋರುವ ಕಾಮ್ಯ ಫಲಗಳನ್ನೂ ನಾನೇ ಕೊಡುತ್ತೇನೆಂದೂ ಶ್ರೀ ಕೃಷ್ಣಭಗವಾನರವರು ಅರ್ಜುನನಿಗೆ ಉಪದೇಶಿಸುತ್ತಾರೆ. **ತಾ ಅಪಿದೇವತಾಃ** – ಆ ಅನ್ಯದೇವತೆಗಳೂ ಕೂಡ, **ಮದೀಯಾ ಸ್ತನವಃ** - ನನ್ನ ಸಂಬಂಧವಾದ ಶರೀರಗಳೆಂಬದಾಗಿ (೧) **ಯಃ** – ಯಾವ ಜಗತ್ಕಾರಣನಾದ ಪರಮಾತ್ಮನು, **ಆದಿತ್ಯೇ ತಿಷ್ಠನ್** – ಸೂರ್ಯನಲ್ಲೇ ಅಂತರ್ಯಾಮಿಯಾಗಿ ಆ ಸೂರ್ಯನೆಂದು ಹೇಳಿಸಿಕೊಳ್ಳುವ ಆತ್ಮನಿಗೂ ಆತ್ಮನಾಗಿದ್ದಾನೆಯೋ, **ಯಂ** – ಇಂತಹ ಪ್ರಸಿದ್ಧ ಪರಮಾತ್ಮನನ್ನು, **ಆದಿತ್ಯೋನವೇದ** – ಸೂರ್ಯನಾಗಿರುವ ಆತ್ಮನು ತಿಳಿಯದೇ ಹೋದನೋ, **ಯಸ್ಯಾದಿತ್ಯಶ್ಶರೀರಂ** – ಯಾವ ಪ್ರಸಿದ್ಧನಾದ ಸರ್ವೇಶ್ವರನಾಗಿ ಸರ್ವ ಶರೀರಿಯಾಗಿರುವ ನಾರಾಯಣನಿಗೆ ಈ ಸೂರ್ಯನೆನಿಸುವ ಆತ್ಮವೂ ಶರೀರವೋ, ಮುಂದಕ್ಕೆ **ಸ ತ ಆತ್ಮಾ ಅಂತರ್ಯಾಮ್ಯಮೃತಃ** ಅವನೇ ನಿನಗೂ ಆತ್ಮಾ ಅನ್ತರ್ಯಾಮಿಯು, **ಅಮೃತಃ** ಎಂದರೆ ನಿರುಪಾಧಿಕ ಅಮೃತತ್ವಶಾಲೀ ಆನಂದಸ್ವರೂಪನಾಗಿ ಆನಂದದಾಯಕನು ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. **ಇತ್ಯಾದಿಶ್ರುತಿಭಿಃ** – ಇವೇ ಮೊದಲಾದ, ಶ್ರುತಿಗಳಿಂದ, **ಉಪಪಾದಿತಾಃ** ಉಪಪಾದಿಸಲ್ಪಟ್ಟಿರುತ್ತಾರೆ. ಈ ಅನ್ಯ ದೇವತೆಗಳೆಲ್ಲಾ ಪರಮಾತ್ಮನಿಗೆ ಶರೀರವೆಂಬುದು ಶ್ರುತಿಪ್ರಮಾಣ ಸಿದ್ಧವಾದುದು. ಬೃಹದಾರಣ್ಯಕಮಾತ್ರವೇ ಹಾಗೆ ಹೇಳುವದೆಂದು ತಿಳಿಯ ಕೂಡದೆಂದೂ, ಈ ಅಭಿಪ್ರಾಯವನ್ನು ಅತರ ಶ್ರುತಿಗಳೂ ಬೋಧಿಸುತ್ತವೆ ಎಂದು **ಆದಿ** ಪದವು. ಸುಬಾಲೋಪನಿಷತ್ತು, **"ಯೋಽಕ್ಷರ ಮನ್ತರೇ ಸಂಚರನ್ನ ಸ್ಯಾಕ್ಷರಂ ಶರೀರಂ, ಯ ಮಕ್ಷರಂ ನವೇದ; ಯೋಮೃತ್ಯುಮನ್ತರೇ ಸಂಚರನ್ಯಸ್ಯಮೃತ್ಯುಶ್ಶರೀರಂ ಯಂ ಮೃತ್ಯು ರ್ನವೇದ; ಏಷ ಸರ್ವಭೂತಾನ್ತರಾತ್ಮಾಽಪಹತ ಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ"** ಹಾಗೆಯೇ ಸಮಸ್ತ ಜೀವಾತ್ಮರೂ, ಆದುದರಿಂದ ಸಮಸ್ತ ಅನ್ಯದೇವತೆಗಳೂ ಪರಮಾತ್ಮನಾದ ನಾರಾಯಣನಿಗೆ ಶರೀರವಾದುದರಿಂದ, ಅನ್ಯದೇವತೆಯು **ತನು** ವೆಂದು ಮೂಲದಲ್ಲಿ ಹೇಳಿರುವದು ಶ್ರುತಿ ಪ್ರಮಾಣಗಳಿಂದ ಸಿದ್ಧವೆಂದು ತೋರ್ಪಡಿಸಿದರು. ಇದರಿಂದ ಅನ್ಯದೇವತೆಯು ಪರಮಾತ್ಮನೇ ಅಲ್ಲವು, ಪೃಥಕ್ಕಾಗಿ ಪರಮಾತ್ಮನಿಗೆ ಶರೀರವೆಂದು ವ್ಯಕ್ತವಾಗಿ ಹೇಳಲ್ಪಟ್ಟಿತು. ಪರಮಾತ್ಮನಲ್ಲದೆ ಬೇರೇ ಆತ್ಮವೇ ಇಲ್ಲವೆಂಬ ಭಾವವು ಇದರಿಂದ ನಿರಾಕರಿಸಲ್ಪಟ್ಟಿತು. ಎರಡು ಬೇರೆಬೇರೆ ವಿಧಗಳಾದ ಆತ್ಮಾ ಎಂದು ಭಾವಿಸದೇ ಹೋದರೆ ಶ್ರುತಿಯು ಹೇಳುವ ಶರೀರಾತ್ಮ ಭಾವವು ಕೂಡುವದೇ ಇಲ್ಲವು. ಇದೂ ಅಲ್ಲದೆ ಮುಂದೆ **ದೇವಾನ್ ದೇವ ಯಜೋಯಾ ನ್ತಿಮದ್ಭಕ್ತಾಯಾನ್ತಿ ಮಾಮಪಿ,** ಎಂಬಲ್ಲಿ ಹೇಳಿರುವ ಪ್ರಾಪ್ಯಾಪ್ರಾಪ್ಯ ಭಾವಗಳ ಭೇದವನ್ನು ಹೇಳಲು ಸಾಧ್ಯವೇ ಇಲ್ಲವಾಗುತ್ತದೆ. ಆಗಲಿ ಮೂಲದಲ್ಲಿರುವುದು **ಅನ್ಯದೇವತಾಃ**-ಎಂದು ಇಷ್ಟು ಮಾತ್ರವೇ ಇರುವದು, **ತನುಂ** ಎಂಬುದರಿಂದ ಆಯಾ ದೇವತೆಗಳ ಶರೀರವೆಂದು ಅರ್ಥ ಮಾಡದೆ ಪರಮಾತ್ಮನ ಶರೀರವೆಂದು ಅರ್ಥ ಹೇಳಿ ಶರೀರಾತ್ಮ ಭಾವವು ತೋರಿಬರುತ್ತದೆನ್ನುತ್ತೀರಿ, ರಾಮಕೃಷ್ಣಾದಿಗಳನ್ನು ವಿಷ್ಣುವೇ

**ಭಾ. ಮತ್ತನುವಿಷಯ್ಯೈಷಾ ಶ್ರದ್ಧೇತ್ಯನುಸಂಧಾಯ ತಾಮೇವಾ ಚಲಾಂ - ನಿರ್ವಿಘ್ನಾಂ ವಿದಧಾಮ್ಯಹಂ ॥ ೨೧ ॥**

ಎಂದು ಹೇಗೆ ಹೇಳುತ್ತಾರೋ ಹಾಗೆಯೇ ನಾವು ಅನ್ಯದೇವತೆಯೂ ಪರಮಾತ್ಮನೆಂದೇ ಹೇಳುತ್ತೇವೆ ಎಂದು ಆಕ್ಷೇಪ ತಂದರೆ, ಆಗ ಅನ್ಯದೇವತಾ ಪ್ರಯಣ ಮಾಡಿವವರನ್ನು **ಹೃತಜ್ಞಾನ** ರೆಂದು ಏಕೆ ಶ್ರೀಕೃಷ್ಣ ಭಗವಾನರವರು ನಿಂದಿಸಿದರು ? ಅಂತವರೂ ಅನ್ಯದೇವತೆಗಳೂ ಕೂಡ ಪರಮಾತ್ಮ ಭೇದವೇ ಎಂಬ ಅದ್ವೈತಜ್ಞಾನದಿಂದ ಭಾವಿಸುವವರಿಂದ ಬಹು ಪ್ರಾಜ್ಞರಲ್ಲವೇ ? ಅಂತವರನ್ನು ಪ್ರಬುದ್ಧಜ್ಞಾನರೆಂದು ಹೇಳದೆ ಹೃತಜ್ಞಾನರೆಂದು ನಿಂದಿಸಬಹುದೋ ? ಆದುದರಿಂದ ಅನ್ಯದೇವತೆಗಳೂ ನಮ್ಮ ಹಾಗೆ ಜೀವಕೋಟಿಗೆ ಸೇರಿದ ಪರಸ್ಪರ ಭಿನ್ನರಾದ ಆತ್ಮರುಗಳು. ನಾರಾಯಣನಿಗೆ ಸಂಬಂಧಿಸಿದ ನಾರಶಬ್ದವಾಚ್ಯರು. **ನರಸಂಬನ್ಧಿನೋ ನಾರಾಃ, ತೇಷಾಂ ಅಯನಂ ನಾರಾಯಣಃ** ಎಂದು ನಾರಾಯಣ ಶಬ್ದವ್ಯುತ್ಪತ್ತಿಯಿಂದಲೇ ಪರಮಾತ್ಮನಿಗಿಂತ ಭಿನ್ನವಾಗಿ, ಆತನಿಗೆ ಶರೀರವಾಗಿ, ಆತನು ಅವುಗಳಿಗೆ ಆತ್ಮಾವಾಗಿ, ಅನೇಕ ಆತ್ಮರುಗಳುಂಟೆಂದು ಅನೇಕ ಶ್ರುತಿಗಳು ಉದ್ಘೋಷಿಸುತ್ತವೆ. **" ದ್ವಾಸುಪರ್ಣಾ" " ಭೋಗ್ಯಂ ಭೋಕ್ತಾ ಪ್ರೇರಿತಾರಂಚಮತ್ವಾ" " ಪೃಥಗಾತ್ಮಾನಂಪ್ರೇರಿತಾರಂಚಮತ್ವಾ" " ಕರಣಾಧಿಪಾಧಿಪಃ " " ದ್ವಾವಜಾ ಈಶನೀಶಾ " " ನಿತ್ಯೋನಿತ್ಯಾನಾಂ "** ಇತ್ಯಾದಿಗಳು ; ಹಾಗೆಯೇ ಮುಂದೆ **" ಮಮಸಾಧರ್ಮ್ಯಮಾಗತಾಃ " " ದೇವಾನ್ ದೇವಯಜೋಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ " " ಉತ್ತಮಃ ಪುರುಷಸ್ತ್ವನ್ಯಃ "** ಇತ್ಯಾದಿ ಮಹರ್ಷಿಗಳ ವಾಕ್ಯಗಳನ್ನೆಲ್ಲಾ ಆರಿಸಿದರೆ ಗ್ರಂಥವು ಬೆಳೆದು ಹೋಗುತ್ತಿದೆ.

ಆಗಲಿ, **ಯಾಂ ಯಾಂ ತನುಂ** ಎಂದರೆ ನೀವು ಹೇಳುವ ಹಾಗೆ ಪರಮಾತ್ಮ ಶರೀರವಾಗಿಯೇ ಅನ್ಯ ದೇವತೆಗಳನ್ನು ಉಪಾಸಿಸುತ್ತಾರೆಂದು ಅರ್ಥ ಮಾಡುವೆವು, ಅದೂ ಪರಮಾತ್ಮನೋಪಾಸನೆಯೇ ಆಯಿತು. ಬಾಧಕವೇನು ಎಂದರೆ, ಅಂತವರನ್ನು ಹಿಂದೆ **" ಹೃತಜ್ಞಾನಾಃ "** ಎಂದು ನಿಕೃಷ್ಟ ಭಾವದಿಂದ ನಿಂದಿಸಬಹುದೋ ? ಎಂದು ಕೇಳುವೆವು. ಅದಕ್ಕೆ ಅವರು ಅನೇಕ ಬ್ರಹ್ಮವಿದ್ಯೆಗಳಾದ ಆದಿತ್ಯಾದಿಗಳಲ್ಲಿ ಈ ಭಾವವೇ ಉಂಟಲ್ಲಾ ? ಇದು ಉತ್ಕೃಷ್ಟ ಜ್ಞಾನವಲ್ಲವೋ ? ಎಂದರೆ ಅಂತವರನ್ನು ಮುಂದೆ (೯. ೨೪) ರಲ್ಲಿ **" ನತುಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿತೇ "** ಎಂದು ಪುನಃ ನಿಂದಿಸಿರುವದು ಹೇಗೆ ? ಎಂದು ಕೇಳುವೆವು. ಆಗಲಿ ಪರಮಾತ್ಮನಿಗೆ ಈ ಅನ್ಯದೇವತೆಗಳು ಶರೀರವೆಂಬುದೇನೋ ಒಪ್ಪೋಣ. ಶರೀರಕ್ಕೆ ಮಾಡಿದ ಅರ್ಚನಾದಿಗಳಿಂದ ಪರಮಾತ್ಮನು ಪ್ರೀತನಾಗಿ **" ಶ್ರದ್ಧಾಂ ವಿದಧಾಮಿ "** ಎಂದೂ ಮುಂದಿನ ಶ್ಲೋಕದಲ್ಲಿ **" ಲಭತೇ ಚ ತತಃ ಕಾಮಾನ್ "** ಎಂದು ಹೇಳಿರುವದು ಹೇಗೆ ನ್ಯಾಯವು ? ಎಂದಾಕ್ಷೇಪಿಸಿದರೆ ಶರೀರದ ಮೇಲೆ ಹಾಕಿದ ಪುಷ್ಪಮಾಲಿಕೆಗಳಿಂದ ರಾಜನ ಆತ್ಮವು ಪ್ರೀತವಾಗಿ ಮಾಲಿಕೆಯನ್ನು ಸಮರ್ಪಿಸಿದವನ ಕೋರಿಕೆಯು ಹೇಗೆ ನೆರವೇರುತ್ತದೋ ಹಾಗೆ ಎಂದು ಭಾವಿಸತಕ್ಕದ್ದು. **ಮದೀಯಾ ಸ್ತನವ ಇತ್ಯಜಾನನ್ನಪಿ**- ಈ ಅನ್ಯದೇವತೆಗಳೆಲ್ಲಾ ನನ್ನ ಶರೀರವೆಂದು ತಿಳಿಯದೇ ಇದ್ದರೂ, **ಯಃ ಯಃ ಭಕ್ತಃ**- ಯಾವ ಯಾವ ಭಕ್ತನು, **ಯಾಂ ಯಾಂ** - ಯಾವ ಯಾವ, **ಮದೀಯಾಂ ಆದಿತ್ಯಾದಿಕಾಂ ತನುಂ** - ಅನ್ಯದೇವತೆಯಾದ ಆದಿತ್ಯನೇ ಮೊದಲಾದ ನನ್ನ ಶರೀರವನ್ನು **ಶ್ರದ್ಧಯಾರ್ಚಿತುಮಿಚ್ಛತಿ** - ಶ್ರದ್ಧೆಯಿಂದ ಉಪಾಸನೆಗೆ ಅಂಗವಾಗಿ ಪೂಜೆಯನ್ನು ಮಾಡಲು ಇಚ್ಛಿಸುತ್ತಾನೋ, **ತಸ್ಯ ತಸ್ಯಾಜಾನತೋಽಪಿ** - ಹೀಗೆ ತನ್ನ ಶರೀರವೆಂದು ತಿಳಿಯದಿರುವ ಆ ಆ ಅಧಿಕಾರಿಗೂ ಕೂಡ, **ಮತ್ತನುವಿಷಯ್ಯೈಷಾಶ್ರದ್ಧಾ** - ನನ್ನ ಶರೀರವಾದ ಈ ಅನ್ಯದೇವತೆಯನ್ನು ಕುರಿತದ್ದು

**ಮೂ. ಸ ತಯಾ ಶ್ರದ್ಧಯಾ ಯುಕ್ತ ಸ್ತಸ್ಯಾರಾಧನ ಮೀಹತೇ ।**
**ಲಭತೇ ಚ ತತಃ ಕಾಮಾ ನ್ಮಯೈವ ವಿಹಿತಾ ನ್ಹಿ ತಾನ್ ॥ ೨೨.**

ಶ್ರದ್ಧೆಯು, **ಇತ್ಯಹ ಮನುಸಂಧಾಯ** - ಹೀಗೆ ನಾನು ಭಾವಿಸಿದವನಾಗಿ, **ತಾಮೇವ** ಅಂತಹ ಶ್ರದ್ಧೆಯನ್ನೇ, **ಅಚಲಾಂ** ಎಂದರೆ **ನಿರ್ವಿಘ್ನಾಂ** - ವಿಘ್ನಗಳೊಂದೂ ಇಲ್ಲದ ಹಾಗೆ ಸ್ಥಿರವಾದುದಾಗಿ, **ಅಹಂ ವಿದಧಾಮಿ** - ನಾನು ಮಾಡುವೆನು - ಈ ಭಾಷ್ಯದಲ್ಲಿ ಅನ್ಯದೇವತಾ ಭಜನವನ್ನು ಮಾಡುವ ಈ ಅಧಿಕಾರಿಯು, ಆ ಅನ್ಯದೇವತೆಯು ಭಗವಂತನಿಗೆ ಶರೀರವೆಂಬ ಜ್ಞಾನವಿಲ್ಲದೆ ಇರುವನೆಂದು ಹೇಳಿರುತ್ತಾರೆ; ಏಕೆಂದರೆ ಆ ಅನ್ಯದೇವತೆಯು ಭಗವಂತನಿಗೆ ತನುವೆಂದು ಉಪಾಸನೆಯನ್ನು ಮಾಡಿದುದೇಯಾದರೆ ಪ್ರತರ್ದನಾದಿ ವಿದ್ಯೆಗಳಲ್ಲಿನ ಹಾಗೆ ಪರಮಾತ್ಮೋಪಾಸನೆಯೆಂದೇ ಎನಿಸಿಕೊಳ್ಳುತ್ತದೆ. ಆದುದರಿಂದಲೇ **ಮದೀಯಾಸ್ತನವ ಇತ್ಯಜಾನನ್ನಪಿ** ಎಂಬ ಪ್ರಯೋಗವು. (ಗೀ. ೯. ೨೪) ನೆಯ ಶ್ಲೋಕದಲ್ಲಿ **" ನತು ಮಾ ಮಭಿಜಾನನ್ತಿ ತತ್ತ್ವೇನ "** ಎಂಬಲ್ಲಿ ಈ ಅಭಿಪ್ರಾಯವು ವ್ಯಕ್ತವು. ಹಾಗೆ ಆ ಅಧಿಕಾರಿಗೆ ತನುತ್ವೇನ ಜ್ಞಾನವಿಲ್ಲದಿದ್ದರೆ, ಮೂಲದಲ್ಲಿ **ತನು** ಎಂಬ ಶಬ್ದವು ಅನುಪಪನ್ನವಲ್ಲವೋ ? ಮತ್ತು ನಿರರ್ಥಕವಲ್ಲವೋ ? **ತನು** ಶಬ್ದಕ್ಕೆ ಬದಲಾಗಿ **ದೇವತಾಂ** ಎಂಬ ಪ್ರಯೋಗವಿರಬೇಕಾಗಿತ್ತಲ್ಲವೇ ? ಎಂದರೆ ಸರ್ವೇಶ್ವರನಾದ ತಾನು ಏತಕ್ಕಾಗಿ, ಅನ್ಯದೇವತೆಯನ್ನು ಈತನು ಆರಾಧಿಸುವಾಗ, ಈತನಿಗೆ ಶ್ರದ್ಧೆಯನ್ನು ಹೆಚ್ಚಿಸತಕ್ಕದ್ದು ಎಂಬ ಪ್ರಶ್ನೆಗೆ ಸಮಾಧಾನವಾಗಿ **ತನು** ಎಂಬ ಪ್ರಯೋಗವು. ತನ್ನ ಶರೀರವನ್ನು ಆರಾಧಿಸಿದನೇ ಎಂದು ಅದು ಸರಿಯಾದ ಮಾರ್ಗವಲ್ಲದಿದ್ದರೂ, ಅಭಿಮಾನದಿಂದ ಆತನ ಶ್ರದ್ಧೆಯನ್ನು **ಅಚಲಾಂ ವಿಧಧಾಮಿ** ಎಂದು ಹೇಳಿಕೊಂಡರೆಂಬ ಭಾವವು. **" ಮತ್ತನು ವಿಷಯೈಷಾ ಶ್ರದ್ಧೇತ್ಯಹ ಮನುಸಂಧಾಯ "** ವೆಂಬುದರಿಂದ ಈ ಮೇಲಿನಭಿಪ್ರಾಯವು ವ್ಯಕ್ತವು. ಶ್ರದ್ಧೆಯನ್ನು ಅಚಲವಾಗಿ ಮಾಡುತ್ತೇನೆ ಎಂದರೆ ಪ್ರತಿಬಂಧಕವಿಲ್ಲದೆ ಫಲ ಲಾಭವುಂಟಾಗುವಹಾಗೆ ಮಾಡುತ್ತೇನೆಂಬರ್ಥವು; ಅದಕ್ಕಾಗಿಯೇ **ಅಚಲಾಂ** ಎಂಬುದಕ್ಕೆ **ನಿರ್ವಿಘ್ನಾಂ** ಎಂಬ ವ್ಯಾಖ್ಯಾನವು. ॥

**ಮೂಲಕ್ಕೆ ಅರ್ಥವು :—** ಅನ್ಯದೇವತಾ ಭಜನವು ಸರಿಯಲ್ಲದಿದ್ದರೂ ನನ್ನ ಶರೀರವೇ ಶ್ರದ್ಧೆಯಿಂದ ಅರ್ಚಿಸಲ್ಪಟ್ಟಿತಲ್ಲಾ ಎಂಬ ಅಭಿಮಾನದಿಂದ ಆ ಶ್ರದ್ಧೆಯನ್ನೇನೋ ನಿರ್ವಿಘ್ನವಾಗಿರುವ ಹಾಗೆ ಮಾಡುತ್ತೇನೆಂದು ಹೇಳಿದ್ದೇನೋ ಸರಿಯೇ. ಆದರೆ ಆತನು ಬೇಡುವ ಇಷ್ಟಾರ್ಥಗಳ ಫಲಸಿದ್ಧಿಯು ಹೇಗೆ ? ಎಂದು ಕೇಳುತ್ತೀಯೋ; ಆ ಇಷ್ಟಾರ್ಥಗಳನ್ನೂ ನಾನೇ ಕೊಡುತ್ತೇನೆ ಎಂದು ಹೇಳುತ್ತಾರೆ. ಈ ಅನ್ಯದೇವತಾ ಭಕ್ತನು ಅಪೇಕ್ಷಿಸುವದು ಯಾವುದೂ ಆ ಅನ್ಯದೇವತೆಯ ಸ್ವತ್ತಲ್ಲವು. ಅವೂ ನನಗೆ ಸೇರಿದವುಗಳೇ. ನನ್ನ ಶರೀರವಾದ ಆ ಅನ್ಯದೇವತೆಯನ್ನು ಭಜಿಸಿದರೆಂಬ ಅಭಿಮಾನದಿಂದಲೇ ಆ ಇಷ್ಟಾರ್ಥಗಳನ್ನು ನಾನೇ ಕ್ಷಿಪ್ರದಲ್ಲಿ ಕೊಡುತ್ತೇನೆಂದು ಹೇಳುತ್ತಾರೆ—**ತಯಾ ಶ್ರದ್ಧಯಾ** - ಅಂತಹ ಅಚಲವಾದ-ನಿರ್ವಿಘ್ನವಾದ ಶ್ರದ್ಧೆಯಿಂದ, **ಯುಕ್ತಃ** - ಸೇರಿದವನಾದ, **ಸಃ** - ಆ ಅನ್ಯದೇವತಾ ಭಜನವನ್ನಾರಂಭಿಸಿದವನು, **ತಸ್ಯ** - ಆ ಅನ್ಯದೇವತೆಯ, **ಆರಾಧನಂ** - ಆರಾಧನೆಯನ್ನು, **ಈಹತೇ** - ಅನುಷ್ಠಿಸುತ್ತಾನೆ ಎಂದರೆ ಆರಾಧನೆಯ ಮೂಲಕ ಉಪಾಸಿಸುತ್ತಾನೆಂಬ ಭಾವವು, **ತತಃ** - ಆ ಕಾರಣದಿಂದ ಎಂದರೆ ನನ್ನ ಶರೀರವನ್ನು ಕುರಿತು ಆರಾಧನಾದಿಗಳನ್ನು ನಡೆಸಿದುದರಿಂದಲೇ, **ತಾನ್ ಕಾಮಾನ್** - ಆ ಅಧಿಕಾರಿಯು ಯಾವ ಅಭೀಷ್ಟಗಳನ್ನು ಯಾಚಿಸಿದನೋ ಅವುಗಳನ್ನೇ, **ಲಭತೇಚ** - ಹೊಂದಿಯೂ ಹೊಂದುತ್ತಾನೆ. ಆದರೆ ಆ ಇಷ್ಟಾರ್ಥಗಳನ್ನು ಯಾರು ಅನುಗ್ರಹಿಸಿದುದು ಎಂದು ಕೇಳುತ್ತೀಯೋ ? **ಮಯೈವ ವಿಹಿತಾನ್** - ಅವು

**ಭಾ. ಸ ತಯಾ ನಿರ್ವಿಘ್ನಯಾ, ಶ್ರದ್ಧಯಾ ಯುಕ್ತಸ್ತಸ್ಯ - ಇನ್ದ್ರಾದೇ ರಾರಾಧನಂ ಪ್ರತೀ ಹತೇ। ತತಃ - ಮತ್ತನುಭೂತೇನ್ದ್ರಾದಿ ದೇವತಾರಾಧನಾ ತ್ತಾನೇವ ಹಿ ಸ್ವಾಭಿ ಲಷಿತಾನ್ ಕಾಮಾನ್ ಮಯ್ಯೈವ ವಿಹಿತಾನ್ ಲಭತೇ। ಯದ್ಯಪ್ಯಾರಾಧನಕಾ ಲೇ ಆರಾಧ್ಯೇನ್ದ್ರಾದಯೋ ಮದಿಯಾ ಸ್ತನವಃ, ತತ ಏವ ತದರ್ಚನಂ ಚ**

ನನ್ನಿಂದಲೇ ಕೊಡಲ್ಪಟ್ಟವಷ್ಟೇ. ಅವರನ್ನಾರಾಧಿಸಿದರೆ ನೀನೇನು ಕೊಡುವದು? ಎಂಬ ಪ್ರಶ್ನೆಗೆ ಹಿಂದಿನ ಶ್ಲೋಕದ ಅವತಾರಿಕೆಯಲ್ಲೇ ಉತ್ತರವು ದೊರೆಯುತ್ತದೆ ಇಲ್ಲಿ **ಮಯ್ಯೈವ** ಎಂದು ಅವಧಾರಣವಿರುವದರಿಂದ ಸ್ವತಂತ್ರಿಸಿ ಅನ್ಯದೇವತೆಗಳು ತಾವೇ ಕೊಡಲು ಅವರಿಗೆ ಶಕ್ತಿ ಇಲ್ಲವೆಂಬುದು ತೋರಿಬರುತ್ತದೆ. ಏಕೆಂದರೆ ಅವು ಅವರ ಸ್ವತ್ತಲ್ಲವು, ನಾನೇ ಅವರನ್ನು ಪ್ರೇರಿಸಿ ಅವರ ಮೂಲಕ ಕೊಡಿಸುವೆನು ಎಂಬ ಭಾವವು. ಉಭಯ ವಿಭೂತಿನಾಯಕನು ಸರ್ವೇಶ್ವರನಾದುದರಿಂದ ತಾನೇ ಕೊಡಲು ಶಕ್ತಿಯುಳ್ಳವನೆಂದು ತೋರಿಸುವದಕ್ಕಾಗಿಯೇ **ಮಯ್ಯೈವ** ಎಂಬಲ್ಲಿ ಅವಧಾರಣವು. ಅವರೂ ಕೂಡ ಸರ್ವೇಶ್ವರನ ಸ್ವತ್ತೇಯಾಗಿರುವಾಗ ಅವರಿಗೆ ಸ್ವತಂತ್ರಿಸಿ ಕೊಡಲು ಶಕ್ತಿ ಎಲ್ಲಿಯದು? **"ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಂ"** ಜೀವಾತ್ಮನು ಸ್ವತ್ತು ಎಂಬುದೂ, ಪರಬ್ರಹ್ಮವು ಸ್ವಾಮಿಯೂ ಎಂಬುದೂ, ಸ್ಥಾಪಿತವೆಂದು ಹೇಳಲ್ಪಟ್ಟಿರುತ್ತದೆ **"ಮಮ ನಾಥ ಯದಸ್ತಿ ಯೋಽಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ। ನಿಯತಸ್ವ ಮಿತಿ ಪ್ರಬುದ್ಧಧೀಃ ಅಥವಾ ಕಿನ್ನು ಸಮರ್ಪಯಾಮಿ ತೇ"** (ಸ್ತೋತ್ರರತ್ನ ೫೩.) ಜೀವಾತ್ಮನಿಗೆ ಸೇರಿದುದಾಗಿ ಯಾವ ವಸ್ತುವೂ ಇಲ್ಲವೆಂದು ಚನ್ನಾಗಿ ಬೋಧಿಸು - ಈ ಮೇಲಿನ ಶ್ರೀ ಯಾಮುನೇಯರ ಶ್ಲೋಕವು ಇಲ್ಲಿ ಅನುಸಂಧೇಯವು. ಜೀವಕೋಟಿಗೆ ಸೇರಿದ ಇಂದ್ರಾದಿಗಳು ಏನನ್ನೂ ಕೊಡಲು ಶಕ್ತರಲ್ಲವು. ಆದುದರಿಂದ **ಮಯ್ಯೈವ ವಿಹಿತಾನ್** ಎಂದು ಹೇಳಲ್ಪಟ್ಟಿತು. ತನ್ನದಾಗಿ ಯಾವುದೂ ಇಲ್ಲದಿದ್ದರೂ ಎರಡು ದಿನಗಳಿಗಾಗಿ ಸರ್ವೇಶ್ವರನು ಈತನದು ಎಂದು ಅನುಗ್ರಹ ಮಾಡಿರುವದನ್ನು ಮೂಲ ಮಾಡಿ ಕೊಂಡು ಈತನು ನಾನಾ ವಿಧವಾಗಿ ತಾನೇ ಯಜಮಾನನೆಂದು ಮೆರೆಯುವವನ್ನು ನೋಡಿದರೆ ತುಂಬಾ ಹಾಸ್ಯಾಸ್ಪದವಾಗಿ ತೋರುತ್ತದೆ.

**ಭಾಷ್ಯಾರ್ಥವು :—ಸಃ** - ಆ ಅನ್ಯದೇವತಾ ಭಕ್ತನು, ಹಿಂದಿನ ಶ್ಲೋಕದಲ್ಲಿ **ಯೋ ಯೋ** ಎಂದು ಎರಡು ಸಾರಿ ಹೇಳಿರುವ ಹಾಗೆ, ಇಲ್ಲಿಯೂ ಎರಡು ಸಾರಿ ಹೇಳಲ್ಪಟ್ಟಿತೆಂದು ಭಾವಿಸಬಹುದು, **ತಯಾ** - ಅಂತಹ ಎಂದರೆ **ನಿರ್ವಿಘ್ನತಯಾ** - **ಅಚಲಾ** ಶಬ್ದಾರ್ಥವು, ಪ್ರತಿಬಂಧಕಗಳಿಲ್ಲದ ಶ್ರದ್ಧೆಯಿಂದ ಯುಕ್ತನಾದವನಾಗಿ, **ತಸ್ಯ** ಎಂದರೆ, **ಇಂದ್ರಾದೇಃ** - ಇಂದ್ರನೇ ಮೊದಲಾದ ಅನ್ಯದೇವತೆಯ, ಆದಿ ಶಬ್ದದಿಂದ ಚತುರ್ಮುಖ ಬ್ರಹ್ಮ ಮೊದಲು ಗೊಂಡು ಎಲ್ಲಾ ದೇವತೆಗಳೂ ಹೇಳಲ್ಪಟ್ಟರು, **ಆರಾಧನಂ ಪ್ರತೀಹತೇ** - ಆರಾಧನೆಯನ್ನು ಕುರಿತು ಮಾಡಲು ಪ್ರವರ್ತಿಸುವನು. ಹಿಂದಿನ ಶ್ಲೋಕಗಳಲ್ಲಿ **ಅನ್ಯದೇವತಾಃ** - ಎಂದೂ, **ತನುಂ** ಎಂದೂ, ಸ್ತ್ರೀಲಿಂಗವಿರುವಾಗ ಇಲ್ಲಿ **ತಸ್ಯ** ಎಂಬ ಪುಲ್ಲಿಂಗ ಪ್ರಯೋಗವು ಹೇಗೆ ಎಂದರೆ ಆ ಅನ್ಯದೇವತೆ ಮತ್ತು ತನು ಶಬ್ದಗಳಿಂದ ಬೋಧಿತರಾದವರು ಬ್ರಹ್ಮ ರುದ್ರೇಂದ್ರಾದಿ ಗಳಾದುದರಿಂದ, **ತಸ್ಯ** ಎಂಬ ಪುಲ್ಲಿಂಗ ಪ್ರಯೋಗವು, ಆದುದರಿಂದಲೇ **ಇಂದ್ರಾದೇಃ** ಎಂದು ಭಾಷ್ಯವು. ಮುಂದಿನ ಶ್ಲೋಕದಲ್ಲೂ **"ದೇವಾನ್ ದೇವಯಜೋ ಯಾಂತಿ"** ಎಂದ್ದು ಇರುತ್ತದೆ. ಇಲ್ಲಿಯೂ **ತಸ್ಯಾಃ** ಎಂಬ ಪದಚ್ಛೇದವು ಸಾಧ್ಯವು; ಆದರೆ ಆಗ **ರಾಧನಂ** ಎಂದರೆ ಆರಾಧನಂ ಎಂದು ಅರ್ಥ ಹೇಳಬೇಕಾಗುತ್ತದೆ, ರಾಧನಂ ಎಂದು ಉಪಸರ್ಗವಿಲ್ಲದ ಪ್ರಯೋಗವು ವಾಡಿಕೆಯಲ್ಲಿ ಇಲ್ಲವು. ಆದುದರಿಂದ **ತಸ್ಯ ಆರಾಧನಂ** ಎಂಬ ಪದಚ್ಛೇದವೇ

**ಭಾ. ಮದಾರಾಧನ ಮಿತಿ ನ ಜಾನಾತಿ ; ತಥಾಪಿ ತಸ್ಯ ವಸ್ತುತೋ ಮದಾರಾಧನತ್ವಾ ದಾರಾಧಿಕಾಭಿ ಲಷಿತ ಮಹ ಮೇವ ವಿದಧಾಮಿ ॥ ೨೨ ॥**

ಯುಕ್ತವು. ಕೆಲವರು **ತತಃ** ಎಂಬುದಕ್ಕೆ ಆ ದೇವತೆಗಳಿಂದಲೇ ಎಂದು ಅರ್ಥ ಮಾಡಿರುತ್ತಾರೆ, ಮುಂದೆ **ಮಯೈವ ವಿಹಿತಾನ್** ಎಂಬುದರಲ್ಲಿ ತೋರಿಬರುವ ಸ್ವಾರಸ್ಯಕ್ಕೆ ಕುಂದಕವು, ಆದುದರಿಂದ **ಮತ್ತನುಭೂತೇನ್ದ್ರಾದಿ ದೇವತಾರಾಧನಾತ್** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ತತಃ** ಎಂದರೆ **ಆ ನಿಮಿತ್ತವಾಗಿ** ಎಂಬರ್ಥವೇ ಇಲ್ಲಿ ಉಚಿತವು, ನನಗೆ ಶರೀರವಾದ ಇಂದ್ರಾದಿ ದೇವತೆಗಳ ಆರಾಧನ ನಿಮಿತ್ತವಾಗಿ **ತಾನೇವ ಹಿ ಸ್ವಾಭಿಲಷಿತಾನ್ ಕಾಮಾನ್**- ಅವರಿಗೆ ಬೇಕಾದ ಆ ಇಷ್ಟಾರ್ಥಗಳನ್ನೇ, **ಮಯೈವ ವಿಹಿತಾನ್** ನನ್ನಿಂದಲೇ ಕೊಡಲ್ಪಟ್ಟವುಗಳನ್ನಾಗಿ, **ಲಭತೇ** - ಹೊಂದುವನು, **ಆರಾಧನ ಕಾಲೇ** - ಪೂಜಿಸುವ ಕಾಲದಲ್ಲಿ, **ಆರಾಧ್ಯೇನ್ದ್ರಾದಯೋ ಮದೀಯಾಸ್ತನವಃ** - ಆರಾಧಿಸಲ್ಪಟ್ಟ ಇಂದ್ರಾದಿಗಳೂ ನನ್ನ ಶರೀರವೆಂದೂ, **ತತ ಏವ** - ಆ ಕಾರಣದಿಂದ, **ತದರ್ಚನಂ** - ಅವರುಗಳನ್ನು ಅರ್ಚಿಸೋಣವಾದರೋ, **ಮದಾರಾಧನಮಿತಿ** - ನನ್ನ ಆರಾಧನಾರೂಪವಾದುದೆಂದೂ, **ಯದ್ಯಪಿ ನಜಾನಾತಿ**-ಯದ್ಯಪಿ ತಿಳಿದವನಲ್ಲವು, **ತಥಾಪಿ** - ಹಾಗಾದರೂ, **ವಸ್ತುತಃ** - ವಾಸ್ತವವಾಗಿಯೂ, **ತಸ್ಯ ಮದಾರಾಧನತ್ವಾತ್**-ಅದು ನನ್ನ ಆರಾಧನರೂಪವಾದುದರಿಂದ, **ಆರಾಧಕಾಭಿಲಷಿತಂ** ಆರಾಧಿಸಿದವನ ಇಷ್ಟಾರ್ಥವನ್ನು, **ಅಹಮೇವ ವಿದಧಾಮಿ** - ನಾನೇ ಉಂಟು ಮಾಡುವೆನು, ಕೊಡುವೆನು. ಮೂಲದಲ್ಲಿರುವ **" ಹಿ "** ಬೇರೇ ಪದವಾಗಿಯೂ **" ತಾನ್ "** ಎಂಬುದನ್ನು ಬೇರೇ ಪದವಾಗಿಯೂ ಮಾಡಿದರೇನೆ ಸರಸವು ; ಒಂದೇ ಪದವಾಗಿ **ಹಿತಾನ್** ಎಂದು ಮಾಡುವದು ಅಷ್ಟು ಸ್ವಾರಸ್ಯವಲ್ಲವು ; ಭಕ್ತನು ಅನ್ಯದೇವತೆಯನ್ನು ಕರ್ಮವಾಸನಾಮೂಲಕ ಕೋರುವದೆಲ್ಲಾ ಹಿತ ಹೇಗಾಗುತ್ತದೆ ? ಪ್ರತ್ಯುತ ಅಹಿತವಾಗಿಯೇ ಪರಿಣಮಿಸಬಹುದು. ಆದುದರಿಂದ ಪ್ರಕರಣವಿರುದ್ಧವು. ಮುಂದೆಯೇ **" ಅನ್ತವತ್ತು ಫಲಂತೇಷಾಂ "** ಎಂದು ನಿಂದಿತವಾದುದು, **ಹಿತ** ವಾದುದು ಹೇಗೆ? ಆದರೆ ಅವನು ಏನನ್ನು ಕೋರುತ್ತಾನೋ ಅದನ್ನೇ ತಾನೇ ಕೊಡತಕ್ಕದ್ದು. ಆದುದರಿಂದ **ತಾನ್** ಎಂಬ ತಚ್ಛಬ್ದವೇ ನ್ಯಾಯವು. ಆ ಕಾರಣದಿಂದ ವ್ಯಾಖ್ಯಾನವು **ತಾನೇವ ಹಿ ಸ್ವಾಭಿಲಷಿತಂ** ಎಂದು ಮಾಡಲ್ಪಟ್ಟಿತು. ಆದರೆ ಆ ಉಪಾಸಕನಿಗೆ ಇಂದ್ರಾದಿಗಳು ಭಗವಂತನ ಶರೀರವೆಂದು ತಿಳಿಯದು, ಆದರೂ ಅವರುಗಳನ್ನು ಆರಾಧಿಸಿದರೆ ನಾನು ಅವುಗಳನ್ನು ಕೊಡುವದಕ್ಕೆ ಕಾರಣವೇನೆಂದರೆ, ಅವರುಗಳಿಗೆ ಜ್ಞಾನವಿಲ್ಲದಿದ್ದರೂ ಆ ಇಂದ್ರಾದಿಗಳು ನನ್ನ ಶರೀರವೆಂಬುದು ನನಗೆ ತಿಳಿಯುವದಾದುದರಿಂದ ನಾನೇ ಕೊಡುತ್ತೇನೆ. ನಾನು ಕರುಣಾರ್ದ್ರ ಹೃದಯನಾದುದರಿಂದ ಆ ಆರಾಧಕನ ಇಷ್ಟಾರ್ಥವನ್ನು ಸಲ್ಲಿಸದೇ ಹೋದರೆ ತನಗೆ ಇಷ್ಟವಾದುದರ ಪ್ರಾಪ್ತಿಗಾಗಿ ಅಧರ್ಮಗಳಲ್ಲಿ ಪ್ರವರ್ತಿಸಬಹುದು. ಅದಕ್ಕಾಗೀ ಅವುಗಳನ್ನೇ ನಾನೇ ಕೊಡುತ್ತೇನೆಂಬ ಭಾವವು. ಆಗಲಿ ಹೀಗೆ ಅನ್ಯದೇವತಾಭಜನದಿಂದಲೇ ಭಕ್ತನ ಕೋರಿಕೆಗಳನ್ನು ನೀನೇ ಕೊಡುವದರಿಂದ ಎಲ್ಲರೂ ಅನ್ಯದೇವತೆಯನ್ನೇ ಭಜಿಸಲಿ, ನಿನ್ನನ್ನು ಆರಾಧಿಸಬೇಕೆಂಬ ಆವಶ್ಯಕತೆ ಏನು ? ಮೋಕ್ಷಾರ್ಥಿಯೂ ಕೂಡ ಅನ್ಯದೇವತೆಯನ್ನೇ ಪ್ರಾರ್ಥಿಸಲಿ, ಆಗಲೂ ನೀನೇ ಕೊಡುವವನಾಗು, ಎಂಬಾಕ್ಷೇಪವು ಬಂದೀತೆಂದು ಭಾವಿಸಿ, ತನ್ನಿವಾರಣಾರ್ಥವಾಗಿ ಶ್ರೀಕೃಷ್ಣಭಗವಾನರವರು ಮುಂದಿನ ಶ್ಲೋಕದ ಮೂಲಕ ಅಂತಹ ಶಙ್ಕೆಗಳನ್ನು ನಿವಾರಿಸುತ್ತಾರೆ. ಮೇಲಿನ ಎರಡು ಶ್ಲೋಕಗಳಲ್ಲಿ ಹೇಳಲ್ಪಟ್ಟದುದು ತನಗೆ ಶರೀರಗಳಾದ ಇಂದ್ರಾದಿಗಳ ಉಪಾಸನೆಯು ; ಆ ಉಪಾಸನೆಯಲ್ಲಿ ಇಂದ್ರಾದಿಗಳು ಶರೀರವೆಂದು ತಿಳಿದು ನನ್ನನ್ನೇ ಉಪಾಸಿಸಿದರೆ ಆಗ ಪುನರಾವೃತ್ತಿಯಿಲ್ಲದ ಮೋಕ್ಷವು ಲಭಿಸುತ್ತದೆಂದು ಮುಂದೆಹೇಳುತ್ತಾರೆ. ೨೧.

**ಮೂ. ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।**
**ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ॥ ೨೩.**

**ಮೂಲಕ್ಕೆ ಅರ್ಥವು :—**ಅನ್ಯದೇವತಾರಾಧನೆಯು ಏಕೆ ನಿಂದ್ಯವು ? ನೀನೇ ಫಲವನ್ನೀಯುವೆನೆಂದು ಯಾವಾಗ ಏರ್ಪಟ್ಟಿತೋ, ಅವರುಗಳು ಅನ್ಯದೇವತೆಗಳನ್ನೇ ಭಜಿಸಲಿ ಬಾಧಕವೇನು ಎಂದರೆ ಅನ್ಯದೇವತೋಪಾಸನಕ್ಕೂ ತನ್ನನ್ನು ಉಪಾಸಿಸುವದಕ್ಕೂ ತುಂಬಾ ತಾರತಮ್ಯ ಉಂಟೆಂದು ತಿಳಿಸುತ್ತಾರೆ. ಆ ಅನ್ಯದೇವತಾ ಭಜನದಿಂದುಂಟಾಗುವ ಫಲವು (೧) ಅಲ್ಪಾಸ್ಥಿರವಾದುದು ಎಂದೂ (೨) ಅವರು ಕೊಡುವ ತುಂಬಾ ಹೆಚ್ಚಿನ ಫಲವು ಆ ಅನ್ಯದೇವತೆಯೊಂದಿಗೆ ಸಾಯುಜ್ಯವೂ ಎಂದೂ (೩) ಆ ಅನ್ಯದೇವತೆಯ ಭಜನದ ಮೂಲಕ ಇವಕ್ಕೆ ಹೆಚ್ಚಿನದು ದೊರೆಯಲಾರದುದರಿಂದ ಮೋಕ್ಷ ಪದವಿಯು ಎಂದಿಗೂ ದೊರೆಯುವದಿಲ್ಲವು ಎಂದೂ, (೪) ನನ್ನ ಭಜನದಲ್ಲಾದರೋ ಆ ಅಲ್ಪವಾದ ಫಲಗಳನ್ನು ಕೋರಿದರೆ, ಅವುಗಳನ್ನು ಕೊಟ್ಟೂ ಅವುಗಳೊಂದಿಗೆ ನನ್ನ ಕೃಪಾಪ್ರಭಾವದ ಮೂಲಕ ಒಂದಾನೊಂದು ಕಾಲದಲ್ಲಿ ನನ್ನ ಸಾಯುಜ್ಯವನ್ನೂ ಹೊಂದುವ ಸಂಭವವುಂಟೆಂದೂ (೫) ಜ್ಞಾನಿಯಾದ ಪಕ್ಷದಲ್ಲಿ ನನ್ನ ಸಾಯುಜ್ಯವನ್ನೇ ಹೊಂದುವನೆಂದೂ ಉಪದೇಶಿಸುತ್ತಾರೆ :-**ತತ್ ಫಲಂತು**-ಆ ಅನ್ಯದೇವತೋಪಾಸನೆಯಿಂದುಂಟಾಗುವ ಫಲವಾದರೋ, **ಅಂತವತ್** - ಅಲ್ಪವಾದುದಾಗಿಯೂ, ಅಲ್ಪಕಾಲಿಕವಾಗಿಯೂ ಎಂದರೆ ಅಸ್ಥಿರವಾಗಿಯೂ, **ಭವತಿ** - ಆಗುತ್ತದೆ; ಇಲ್ಲಿ ತು ಶಬ್ದವು ಶಙ್ಕಾವ್ಯಾವರ್ತಿಗಾಗಿ ಎಂದು ಇಟ್ಟುಕೊಳ್ಳಬಹುದು. ಶಙ್ಕೆಗಳು ಮೇಲೆಯೇ ನಿರೂಪಿಸಲ್ಪಟ್ಟಿರುತ್ತವೆಯಷ್ಟೇ. ಇದು ಏತಕ್ಕೆ ಅಲ್ಪಗಳು ಮತ್ತು ಅಲ್ಪಕಾಲಿಕಗಳೆಂದರೆ ಹೇಳುತ್ತಾರೆ **ತೇಷಾಂ ಅಲ್ಪಮೇಧಸಾಂ** - ಆ ಅನ್ಯದೇವತೆಗಳನ್ನು ಭಜಿಸುವವರು ಅಲ್ಪ ಬುದ್ಧಿಯುಳ್ಳವರು, ಆ ಅನ್ಯದೇವತೆಯು ಕೊಡುವ ಫಲವಾದರೋ **ಅಂತವತ್** - ನಾಶವುಳ್ಳದ್ದೆಂಬ ಭಾವವು. ಇದು ೧ನೆಯ ಉಪದೇಶವು. ಜ್ಞಾನಿಯಾದರೋ **ಪ್ರತಿಬುದ್ಧನು**, ಅವನು ಯಾಚಿಸುವ ಫಲವು **ಅಂತವತ್ತಲ್ಲವು**, ಶಾಶ್ವತವಾದುದು. ಆದುದರಿಂದ ಅನ್ಯದೇವತೆಗಳ ಮೂಲಕ ಇದು ಲಭಿಸಲಾರದ ಪ್ರಯುಕ್ತ **ಜ್ಞಾನಿಗೆ ಅನ್ಯದೇವತಾ ಭಜನವು ಸ್ವರೂಪ ಹಾನಿಕರವಾದುದು.** ಇದೇ ಮೇಲೆ ಹೇಳಿರುವ ೫ನೆಯ ಉಪದೇಶವು. ಆದುದರಿಂದ ಕೆಲವರು ಜ್ಞಾನಿಗೆ ಅನ್ಯದೇವತಾಭಜನವೂ ಬೇಕೆಂದು ಅಭಿಪ್ರಾಯ ಪಟ್ಟಿರುವದು ಯುಕ್ತವಾದುದಲ್ಲವು. ಅನ್ಯದೇವತೆಯ ಮೂಲಕ ಹೆಚ್ಚಿನ ಪುರುಷಾರ್ಥವು ದೊರೆಯುವದೇ ಇಲ್ಲವೊ ? ಎಂದರೆ ಹೇಳುತ್ತಾರೆ. ತುಂಬಾ ಹೆಚ್ಚಿನ ಪುರುಷಾರ್ಥವು ಆ ಅನ್ಯದೇವತೆಯಿಂದ ಉಂಟಾಗಬಹುದಾದುದು ಆ ಅನ್ಯದೇವತೆಯೊಂದಿಗೆ ಸಾಯುಜ್ಯವು. ಇದು ೩ನೆಯ ಉಪದೇಶವು. ಆದುದರಿಂದ ಜ್ಞಾನಿಗೆ ಅನ್ಯದೇವತಾ ಭಜನೆಯು ಸುತರಾಂ ಯೋಗ್ಯವಾದುದಲ್ಲವೆಂಬ ಭಾವವೂ ಸಹ ತೋರಿಬರುತ್ತದೆ. **ಈ ಅನ್ತವತ್ತು ಫಲಂ ತೇಷಾಂ** ಎಂಬ ಪ್ರಯೋಗವು ಬೃಹದಾರಣ್ಯಕದ **ಯೋವಾ ಏತದಕ್ಷರಂ ಗಾರ್ಗ್ಯವಿದಿತ್ವಾಽಸ್ಮಿಁಲ್ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿವರ್ಷ ಸಹಸ್ರಾಣ್ಯನ್ತವದೇವಾಸ್ಯ ತದ್ಭವತಿ** (೫. ೮. ೧೦) ಎಂಬ ವಾಕ್ಯವನ್ನು ಜ್ಞಾಪಿಸುತ್ತದೆ. ಅಕ್ಷರಶಬ್ದವಾಚ್ಯನಾದ ಪರಮಾತ್ಮನ ಉಪಾಸನೆಯಿಲ್ಲದೆ ಕೇವಲ ಯಜ್ಞಯಾಗ ತಪಸ್ಸುಗಳನ್ನು ಬಹುಕಾಲ ಅನುಷ್ಠಿಸಿದರೂ ಆತನಿಗೆ ಅಂತವತ್ತಾದ ಫಲವು ಎಂದು ಹೇಳಲ್ಪಟ್ಟಿರುತ್ತದೆ. ಆತನು ಪುನಃ ಪುನಃ ಸಂಸಾರ ಬಂಧವನ್ನು ಹೊಂದುವನು. ಹಾಗಲ್ಲದೆ ಅಕ್ಷರವಾಚ್ಯನಾದ ಪರಬ್ರಹ್ಮವನ್ನು ಉಪಾಸಿಸಿದರೆ ಬಂಧದಿಂದ ಬಿಡಲ್ಪಟ್ಟವನಾಗಿ ಅಂತವನು ಈ ಲೋಕವನ್ನು ಬಿಟ್ಟು ಮುಕ್ತನಾಗುವನು. ಪ್ರಸಙ್ಗಾತ್ ಅನ್ಯ

ದೇವತಾ ಭಜನಕ್ಕೂ ಪರದೇವತಾ ಭಜನಕ್ಕೂ ಇರುವ ತಾರತಮ್ಯವನ್ನು ವ್ಯಕ್ತಪಡಿಸುತ್ತಾರೆ- **ದೇವ ಯಜಃ**-ಅನ್ಯದೇವತಾ ಭಜಕರು, **ದೇವಾ್ ಯಾಂತಿ**-ಆ ಅನ್ಯದೇವತೆಯೊಂದಿಗೆ ಸಾಯುಜ್ಯವನ್ನು ಹೊಂದಬಹುದು. ಇದೇ ಅವರು ಕೊಡತಕ್ಕ ಹೆಚ್ಚಿನ ಪುರುಷಾರ್ಥವು. ಇದು ಳನೆಯದು. ಇದರಿಂದ ಬ್ರಹ್ಮರುದ್ರೇಂದ್ರಾದಿಗಳಿಗೆ ಮೋಕ್ಷ ಕೊಡುವ ಶಕ್ತಿಯು ಎಂದಿಗೂ ಇಲ್ಲವೆಂಬುದು ವ್ಯಕ್ತವು. ತಮ್ಮ ಲೋಕಸಾಯುಜ್ಯಕ್ಕಿಂತ ಹೆಚ್ಚಿನ ಪುರುಷಾರ್ಥ ವನ್ನು ಅವರು ಕೊಡಲಾರರು, ಹಾಗೆ ಸಾಯುಜ್ಯವನ್ನು ಹೊಂದಿದನಂತರವಾಗಲಿ ಪರದೇವತೆಯ ಉಪಾಸನವನ್ನು ಮಾಡಿದರೆ ಮೋಕ್ಷವನ್ನು ಹೊಂದಬಹುದೇ ವಿನಾ, ಹಾಗಿಲ್ಲದಿದ್ದರೆ **ಆಬ್ರಹ್ಮಭವನಾಲ್ಲೋಕಾಃ ಪುನರಾವೃತ್ತಿನೋಽರ್ಜುನ** ಎಂದು ಮುಂದೆ ಉಪದೇಶಿಸುವ ಹಾಗೆ ಅದೂ ಕೂಡಾ ಅಂತವತ್ತಾದುದೇ ಆಗುತ್ತದೆ ಎಂಬ ಭಾವವೂ ಸೂಚಿತವು. ಇಲ್ಲಿ **ದೇವಾ್ ದೇವಯಜೋಽಯಾಂತಿ** ಎಂದು ಹೇಳಿರುವದು ಎಲ್ಲಾ ಅನ್ಯದೇವತೋಪಾಸಕ ರಿಗೂ ಅನ್ಯದೇವತೆಯ ಸಾಯುಜ್ಯವು ದೊರೆಯುತ್ತದೆ ಎಂಬರ್ಥವಲ್ಲವು. ಅದಕ್ಕಾಗಿ ಉಪಾಸಿಸಿದರೆ ದೊರೆಯಬಹುದೆಂಬ ಭಾವವು.

ಮುಂದೆ ಅನ್ಯದೇವತೋಪಾಸಕರಿಗೂ ತಮ್ಮ ಉಪಾಸಕರಿಗೂ ಇರುವ ವೈಲಕ್ಷಣ್ಯವನ್ನು ತಿಳಿಸುತ್ತಾರೆ, **ಮದ್ಭಕ್ತಾ ಯಾಂತಿ ಮಾಮಪಿ** - ನನ್ನ ಭಕ್ತರು, ನನ್ನ ಸಾಯುಜ್ಯವು ಅವರಿಗೆ ಅಪೇಕ್ಷಿತವಾದ ಪಕ್ಷದಲ್ಲಿ, ಅದನ್ನು ಕೂಡ **ಮಾಮಪಿ ಯಾಂತಿ**-ನನ್ನನ್ನೂ ಹೊಂದುವರು. ಇಲ್ಲಿಯೂ ಕೂಡ ಎಲ್ಲಾ ಭಕ್ತರು ತನ್ನ ಸಾಯುಜ್ಯವನ್ನೇ ಅಪೇಕ್ಷಿಸುತ್ತಾರೆ, ಎಂಬರ್ಥ ವಲ್ಲವು. ಅದರಿಂದ ಎಲ್ಲರಿಗೂ ಮೋಕ್ಷವು ಎಂದು ಹೇಳಲ್ಪಡಲಿಲ್ಲವು. ಸರ್ವೇಶ್ವರನಾಗಿ ತಾನು ಕೊಡತಕ್ಕ ಹೆಚ್ಚಿನ ಪುರುಷಾರ್ಥವು ತನ್ನ ಸಾಯುಜ್ಯವು. ಇದು ಉಪಾಸಕನಿಗೆ ಅಪೇಕ್ಷಿತ ವಾಗಿದ್ದಲ್ಲಿ ಅದೂ ದೊರೆಯುತ್ತದೆಂಬರ್ಥವು. ಆ ಅನ್ಯದೇವತೆಗಳ ಸಾಯುಜ್ಯವು ಪುನರಾವೃತ್ತಿ ಲಕ್ಷಣವುಳ್ಳದುದು, ಈ ತನ್ನ ಸಾಯುಜ್ಯವು ನಿರತಿಶಯವಾದುದಾಗಿ ಶಾಶ್ವತವಾಗಿ ಪುನರಾ ವೃತ್ತಿ ಲಕ್ಷಣವಿಲ್ಲದುದು. ಒಂದು ವೇಳೆ ಈ ಪರದೇವತೋಪಾಸಕರು ಮೋಕ್ಷಾರ್ಥಿಗಳಲ್ಲದೆ ಅಲ್ಪಾಸ್ಥಿರ ಫಲಗಳನ್ನು ಅನ್ಯದೇವತೋಪಾಸಕರ ಹಾಗೆ ಅಪೇಕ್ಷಿಸಿದರೂ ನನ್ನನ್ನಾಶ್ರಯಿಸಿದ ಸುಕೃತಮಾಹಾತ್ಮ್ಯೆಯಿಂದ, **ಮದ್ಭಕ್ತಾಃ** ಈ ನಾಲ್ಕು ವಿಧ ಭಕ್ತರೆಲ್ಲರೂ **ಯಾಂತಿ ಮಾಮಪಿ** - ನನ್ನನ್ನೂ ಸಹ ಹೊಂದುವರು. **ಆರ್ತಾರ್ಥಾರ್ಥಿ**ಗಳಾದರೂ ಒಂದಾನೊಂದು ಕಾಲದಲ್ಲಿ ಅವರು ಬಂಧಕಗಳಾದ ಐಹಿಕಾದಿ ಭೋಗಗಳಿಗಾಗಿ ನನ್ನನ್ನು ಉಪಾಸಿಸಿದ ಸುಕೃತದ ದಶೆಯಿಂದ ಅವರನ್ನು ಜನನಕಾಲದಲ್ಲಿ ನಾನು ದಿವ್ಯ ಕಟಾಕ್ಷದಿಂದ ನೋಡುವದರ ಮೂಲಕ, ಸಾತ್ವಿಕ ಸಂಭಾಷಣೆ, ಗುರೂಪಸದನಾದಿಗಳು ದೊರೆತು, ಜ್ಞಾನಿಯಾಗಿ ನನ್ನನ್ನು ಹೊಂದುವ ಸಂಭವ ಉಂಟು. ಇದು ಅನ್ಯದೇವತಾಭಜಕರಿಗೆ ಲಭಿಸದು ಎಂಬ ಭಾವವು. ಇಲ್ಲಿ **ಮದ್ಭಕ್ತಾಃ** ಎಂಬುದರಿಂದ ನಾಲ್ಕು ವಿಧ ಭಕ್ತರೂ ಹೇಳಲ್ಪಟ್ಟರು. ಇಲ್ಲಿ **ಅಪಿ** ಶಬ್ದ ಸ್ವಾರಸ್ಯದಿಂದ ಈ ಅರ್ಥವು ಸೂಚಿತವು. ಹೀಗೆ ಅರ್ಥ ಹೇಳದಿದ್ದರೆ **ಅಪಿ** ಶಬ್ದವು ವ್ಯರ್ಥವು. **ಮದ್ಭಕ್ತಾ ಯಾಂತಿ ಮಾಮ್** ಎಂದು ಇಷ್ಟೇ ಹೇಳಬಹುದಾಗಿತ್ತು. ಆಗಲೂ ಸರಿಹೋಗುವು ದಿಲ್ಲವು. ಬರೀ ಪಾದಪೂರಣಕ್ಕಾಗಿ **ಅಪಿ** ಪ್ರಯೋಗವು ಎಂದರೆ ಮಹರ್ಷಿ ವಚನಕ್ಕೆ ತುಂಬಾ ನ್ಯೂನತೆಯನ್ನು ಕಲ್ಪಿಸಿದಂತಾಗುವದು. ಹೀಗೆ ಪರದೇವತೋಪಾಸಕನು ಐಹಿಕ ಕಾಮನಾಗಿದ್ದು ಅನಂತರ ಜ್ಞಾನವಾ್ ಆಗಿ ಮುಕ್ತಿ ಹೊಂದಿದುದಕ್ಕೆ ಅನೇಕ ನಿದರ್ಶನಗಳುಂಟು. ಜಾನಶ್ರುತಿಯು ಐಹಿಕದಲ್ಲೇ ಸಕ್ತನಾಗಿದ್ದರೂ ಹಂಸಪಕ್ಷಿಗಳ ವೃತ್ತಾಂತದ ಮೂಲಕ ರೈಕ್ವರನ್ನಾಶ್ರಯಿಸಿ ಮುಕ್ತಿಯನ್ನು ಹೊಂದುವ ಹಾಗೆ ಸರ್ವೇಶ್ವರನು ಕರುಣಿಸಿರುತ್ತಾನೆ.

ತನ್ನ ಭಕ್ತನಾದ ಜನಮೇಜಯನೂ ಐಹಿಕದಲ್ಲೇ ಸಕ್ತನಾಗಿರಲು ವೈಶಂಪಾಯನರನ್ನು ಪ್ರೇರಿಸಿ ಭಾರತ ಕಥೆಯನ್ನೆಲ್ಲಾ ಕೇಳಲು ಪ್ರಥಮತಃ ಇಷ್ಟವಿಲ್ಲದಿದ್ದರೂ, ಅನಂತರ ಇಷ್ಟವನ್ನುಂಟುಮಾಡಿ ಆ ರಾಜನಿಗೆ ಮುಕ್ತಿಯನ್ನಿತ್ತನೆಂಬ ವೃತ್ತಾಂತವಿದೆ. ಹೀಗೆ ಕರುಣಾಸಾಗರನು ತನ್ನ ಭಕ್ತರಿಗೆ ಐಹಿಕ ಮಮತೆಯನ್ನು ತೊಲಗಿಸಿ ಮುಕ್ತಿಯನ್ನಿತ್ತಿರುವದಕ್ಕೆ ಇನ್ನೂ ಅನೇಕ ನಿದರ್ಶನಗಳುಂಟು. ಆರ್ತನಾದ ಗಜೇಂದ್ರನೂ ಪಾಪಿಯಾದ ಕ್ಷತ್ರಬಂಧುವೂ ಆರ್ತನಾದ ಸುಗ್ರೀವನೂ ಪುತ್ರಾಪೇಕ್ಷೆಯುಳ್ಳ ಅದಿತಿಯೂ ಅಜಾಮಿಳನೂ ರಾಜಭೋಗದಲ್ಲಿದ್ದ ಯಾಮುನೇಯರೂ, ಅನುಗ್ರಹಿಸಲ್ಪಟ್ಟರೆಂದು ಕೇಳಿರುತ್ತೇವೆ. ಆದುದರಿಂದ **ಮದ್ಭಕ್ತಾ ಯಾನ್ತಿಮಾಮಪಿ** ನನ್ನ ಭಕ್ತರುಗಳು ನನ್ನನ್ನೂ ಹೊಂದುವ ಸಂಭವವುಂಟೇ ವಿನಾ ಈ ಸುಕೃತವು ಅನ್ಯದೇವತಾಭಕ್ತರಿಗಿಲ್ಲವು. ಏಕೆಂದರೆ ಆ ಸುಕೃತ ಮೂಲಕವಾಗಿ ಅವರು ಮಾತ್ರ ಬುದ್ಧಿಯೋಗವನ್ನು ಹೊಂದಿ ಜ್ಞಾನಿಗಳಾಗುವ ಸಂಭವ ಉಂಟೆಂಬ ಭಾವವು. ಈ ಅಭಿಪ್ರಾಯವನ್ನೇ ಶ್ರೀಕೃಷ್ಣನು ಇನ್ನೊಂದು ಕಡೆಯಲ್ಲೂ ಸೂಚಿಸಿರುತ್ತಾರೆ, **ಸ್ವಲ್ಪ ಮಪ್ಯಸ್ಯಧರ್ಮಸ್ಯ ತ್ರಾಯತೇ ಮಹತೋ ಭಯಾತ್** " (ಗೀ. ೨.೪೦) " **ನಮೇಭಕ್ತಃ ಪ್ರಣಶ್ಯತಿ** " (ಗೀ. ೯.೩೧) ಹೀಗೆ ಐಹಿಕಾಪೇಕ್ಷೆಯಿಂದ ಉಪಾಸನೆಯಲ್ಲೂ ಪರದೇವತೋಪಾಸನೆಯು ಅನ್ಯದೇವತೋಪಾಸನೆಗಿಂತ ಉತ್ತಮವೆಂಬುದು " **ಉದಾರಾಸ್ಸರ್ವ ಏವೈತೇ** " ಎಂಬ ಸ್ತುತಿವಾಕ್ಯದಿಂದಲೂ, **ತದ್ಭವತ್ಯಲ್ಪಮೇಧಸಾಂ** . ಎಂಬ ನಿಂದಾವಾಕ್ಯದಿಂದಲೂ ವ್ಯಕ್ತವು. ಆದರೆ ಇಲ್ಲಿ ಒಂದು ಪೂರ್ವಪಕ್ಷವು ಉದಿಸಬಹುದು,-ಸಂಧ್ಯಾವಂದನಾದಿ ನಿತ್ಯನೈಮಿತ್ತಿಕ ಕರ್ಮಗಳಲ್ಲಿ, ಸೂರ್ಯಾಗ್ನಿ ಮೊದಲಾದವರುಗಳ ಭಜನವು ನಡೆಯುತ್ತದಲ್ಲಾ ಅದು **ಏಕೆ** ನಿಂದ್ಯವಲ್ಲವು ? ನಿಂದ್ಯವಾದರೆ ಸಂಧ್ಯಾವಂದನಾದಿಗಳನ್ನು ಬಿಟ್ಟು ಬಿಡಬಹುದೋ ? ಎಂದರೆ ಜ್ಞಾನಿಯಾದವನಿಗೆ ಸಂಧ್ಯಾವಂದನಾದಿ ಕರ್ಮಗಳೇ ಬೇಕಿಲ್ಲವೆಂದು ಕೆಲವರು ಅಭಿಪ್ರಾಯಪಡುವರು. ಈ ಅಭಿಪ್ರಾಯವು **ಅಹರಹಸ್ಸಂಧ್ಯಾಮುಪಾಸೀತ** ಇತ್ಯಾದಿಗಳಿಗೆ ವಿರೋಧವಾದುದರಿಂದ ಈ ನಿತ್ಯನೈಮಿತ್ತಿಕಾದಿಗಳು ಈತನು ಎತ್ತಿದ ಬ್ರಾಹ್ಮಣಾದಿ ಶರೀರಕ್ಕೆ ಸಂಬಂಧಿಸಿದವಾದುದರಿಂದ ದೇಹಾವಸಾನದವರೆಗೂ ಮಾಡಿಯೇ ತೀರಬೇಕು. ಹಾಗೆ ಮಾಡದೇ ಹೋದರೆ ಆಜ್ಞಾಚ್ಛೇದೀಮಮದ್ರೋಹೀ ಎಂದು ಹೇಳಿರುತ್ತದೆ. ಅದೂ ಅಲ್ಲದೆ " **ಸಂಧ್ಯಾಹೀನೋzಶುಚಿರ್ನಿತ್ಯ ಮನರ್ಹ ಸ್ಸರ್ವಕರ್ಮಸು** ಎಂದು ಹೇಳಿರುತ್ತದೆ. ಇವುಗಳು ಯಾವ ಕಾಮ್ಯ ಫಲಕ್ಕಾಗಿಯೂ ಅನುಷ್ಠಿಸಲ್ಪಡುವದಿಲ್ಲವು. ಶ್ರೀಮನ್ನಾರಾಯಣಾಯೇತಿ ಸಮರ್ಪಯಾಮಿ ಎಂದು ತ್ಯಾಗವನ್ನೂ ಹೇಳಿ ಭಗವತ್ಪ್ರೀತ್ಯರ್ಥವಾಗಿ ಮಾಡುವದರಿಂದ, ಆ ಸೂರ್ಯಾಗ್ನಿ ದೇವತೆಗಳಿಗೆ ಅಂತರ್ಯಾಮಿಯಾಗಿರುವ ಶ್ರೀ ಮಹಾ ವಿಷ್ಣುವಿನ ಆರಾಧನವಾಗುತ್ತದೆ ಯಾದುದರಿಂದ ಅನ್ಯದೇವತಾ ಭಜನವಾಗುವದಿಲ್ಲವು. ಶ್ರೀ ವ್ಯಾಸಮಹರ್ಷಿಯ ಶಿಷ್ಯರಾದ ಜೈಮಿನ್ಯಾಚಾರ್ಯರು ಈ ನಿತ್ಯನೈಮಿತ್ತಿಕಗಳಲ್ಲಿ ಹೇಳಲ್ಪಡುವ ಸೂರ್ಯಾಗ್ನಿ ಮೊದಲಾದ ಪದಗಳೂ ಕೂಡ ವ್ಯುತ್ಪತ್ತಿ ಮೂಲಕ ಪರಮಾತ್ಮನನ್ನೇ ಬೋಧಿಸುತ್ತವೆ ಎಂದೂ, ಸಂಧ್ಯಾವಂದನಾದಿಗಳೂ ಕೂಡ ಭಗವದ್ಭಜನಗಳೇ ಎಂದೂ, ಅಭಿಪ್ರಾಯ ಪಟ್ಟಿರುತ್ತಾರೆ. ಈ ಅಂಶವು **ಸಾಕ್ಷಾದಪ್ಯವಿರೋಧಂ ಜೈಮಿನಿಃ** ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ಆದುದರಿಂದ ಎಂತಹ ಜ್ಞಾನಿಯಾಗಲಿ, ಉಪಾಯಾನುಷ್ಠಾನ ಮಾಡಿದ ಕೃತಕೃತ್ಯನೇಯಾಗಲಿ, ಸಂಧ್ಯಾವಂದನಾದಿಗಳನ್ನು ಎಂದಿಗೂ ಬಿಡತಕ್ಕದ್ದಲ್ಲವು. ಬಿಟ್ಟರೆ ಸಂಪೂರ್ಣ ದೋಷಿಯಾಗುವನೆಂಬುದಕ್ಕೆ ಪ್ರಮಾಣಗಳುಂಟು. ಇದೇ ಗೀತೆಯಲ್ಲೇ ಅನೇಕ ಕಡೆಗಳಲ್ಲಿ ನಿತ್ಯನೈಮಿತ್ತಿಕಗಳು ಆವಶ್ಯ ಕರ್ತವ್ಯಗಳೆಂದು ಹೇಳಲ್ಪಟ್ಟಿರುತ್ತದೆ " **ಸ್ವೇಸ್ವೇ ಕರ್ಮಣ್ಯಭಿರತಃ** " (ಗೀ. ೧೮. ೪೫)

**ಭಾ. ತೇಷಾಮಲ್ಪಮೇಧಸಾಂ-ಅಲ್ಪಬುದ್ಧೀನಾ ಮಿಂದ್ರಾದಿ ಮಾತ್ರ ಯಾಜಿನಾಂ, ತದಾರಾಧನಫಲ ಮಲ್ಪಂ ಅನ್ತವಚ್ಚ ಭವತಿ। ಕುತಃ? ದೇವಾನ್‌ದೇವಯಜೋಯಾನ್ತಿ-**

**" ನಿಯತಂ ಕುರುಕರ್ಮ ತ್ವಂ "** (ಗೀ. ೩. ೮) ಇತ್ಯಾದಿಗಳು ಅನುಸಂಧೇಯಗಳು. ಇಷ್ಟು ದೂರ ಏತಕ್ಕೆ ? ಗೀತೆಯು ಶಾಸ್ತ್ರಾವತರಣವೇ ಕ್ಷತ್ರಿಯ ಧರ್ಮವನ್ನು ತ್ಯಜಿಸಿದ ಅರ್ಜುನನಿಗೆ ತನ್ನ ಧರ್ಮ ಪರಿತ್ಯಾಗವು ಸರಿಯಲ್ಲವೆಂದು ತಿಳಿಸುವದಕ್ಕಾಗಿಯೇ. ಆದುದರಿಂದ ವರ್ಣಾಶ್ರಮ ಧರ್ಮಗಳ ಪರಿತ್ಯಾಗವು ಪರಮನಿಂದನೀಯ ವಿಷಯವು. ಕೆಲವರು **ಮದ್ಭಕ್ತಾಃ** ಎಂಬುದು ಜ್ಞಾನಿಯನ್ನು ಮಾತ್ರ ಬೋಧಿಸುತ್ತದೆಂದೂ ಇತರ ಮೂವರಾದ ಆರ್ತಾದಿಗಳು ಹೇಳಲ್ಪಡಲಿಲ್ಲವೆಂದು ವಾದಿಸುವರು. ಭಕ್ತ ಶಬ್ದಕ್ಕೆ ನಾಲ್ವರು ಅರ್ಥವಾಗಿರುವಾಗ ಜ್ಞಾನಿಯು ಮಾತ್ರ ಎಂಬುದು ಹೇಗೋ ತಿಳಿಯದು. ಈ ಅರ್ಥವು **ಚತುರ್ವಿಧಾ ಭಜನ್ತೇಮಾಂ** ಎಂದು ನಾಲ್ಕು ಜನ ಭಕ್ತರೆಂದು ಹೇಳುವ ಗೀತಾಚಾರ್ಯ ವಾಕ್ಯಕ್ಕೆ ಪರಮ ವಿರುದ್ಧವಾದುದರಿಂದ ಅನಾದರಣೀಯವು. ಅನ್ಯದೇವತೆಯ ಭಕ್ತರನ್ನು ಪೂರ್ವಾರ್ಧದಲ್ಲಿ ಅಲ್ಪ ಮೇಧಸ್ಸುಗಳೆಂದು ನಿಂದಿಸಿರುವದರಿಂದ ಅದಕ್ಕೆ ಪ್ರತಿದ್ವಂದ್ವಿಯಾಗಿ **" ಮದ್ಭಕ್ತಾಃ "** ಎಂದು ಹೇಳಿರುವದರಿಂದ ಪರದೇವತೆಯ ಉಪಾಸಕರಾದ ನಾಲ್ವರೂ ಹೇಳಲ್ಪಟ್ಟರೆಂಬುದು ಸಿದ್ಧವು.

**ಭಾಷ್ಯಾರ್ಥವು :—**ಆ ಅನ್ಯದೇವತೆಗಳ ಉಪಾಸನೆಯನ್ನು ಮಾಡಿ ನನ್ನಿಂದಲೇ ಕೊಡಲ್ಪಟ್ಟ ಅಭೀಷ್ಟಗಳನ್ನು ಪಡೆದವರನ್ನು **ಹೃತಜ್ಞಾನಾಃ** ಅಪಹರಿಸಲ್ಪಟ್ಟ ಜ್ಞಾನವುಳ್ಳವರೆಂದು ನಿಂದಿಸಿದರಲ್ಲಾ ಕಾರಣವೇನು ? ಎಂದು ಕೇಳುತ್ತೀಯೋ, ಉತ್ತರವನ್ನು ಹೇಳುತ್ತೇನೆ ಕೇಳು ಎನ್ನುತ್ತಾರೆ.- **ತೇಷಾಮಲ್ಪಮೇಧಸಾಂ** ಎಂದರೆ **ಅಲ್ಪ ಬುದ್ಧೀನಾಮಿಂದ್ರಾದಿ ಮಾತ್ರ ಯಾಜಿನಾಂ**-ಮಂದಬುದ್ಧಿಗಳಾಗಿ ಸರ್ವೇಶ್ವರನನ್ನು ಬಿಟ್ಟು ಇಂದ್ರಾದಿ ದೇವತೆಗಳನ್ನು ಮಾತ್ರವೇ ಭಜಿಸುವವರಿಗೆ, **ತದಾರಾಧನಫಲಂ** - ಅಂತವರ ಆರಾಧನೆಯಿಂದುಂಟಾಗುವ ಫಲವು ಅಲ್ಪವೂ ಮತ್ತು **ಅನ್ತವಚ್ಚ** - ಅಸ್ಥಿರವಾದವುಗಳಾಗಿಯೂ, ನಾಶವುಳ್ಳವುಗಳಾಗಿಯೂ, **ಭವತಿ** - ಆಗುತ್ತದೆ. ಮಹತ್ತಾದ ಸರ್ವೇಶ್ವರನ ಮೂಲಕ ಮಹತ್ವದವನ್ನು ಬೇಡದೆ, ಅಲ್ಪರಾದವರನ್ನು ಯಾಚಿಸಿ ಅಲ್ಪ ಫಲವನ್ನು ಪಡೆಯುವದರಿಂದಲಾಗಲಿ, ಅವರು ಅಲ್ಪಪ್ರಜ್ಞರು. ಮೂಲದಲ್ಲಿ ಅನ್ತವತ್ತು ಎಂದು ಇಷ್ಟು ಮಾತ್ರವಿದ್ದರೂ, ಭಾಷ್ಯದಲ್ಲಿ **ಅಲ್ಪಂ ಅನ್ತವಚ್ಚ** ಎಂದು ವ್ಯಾಖ್ಯಾನ ಮಾಡಲು ಕಾರಣವೇನೆಂದರೆ, ಅಲ್ಪ ಬುದ್ಧಿಗಳು ಕೋರುವ ಫಲವೂ ಅಲ್ಪವೇ ಎಂಬ ಅಭಿಪ್ರಾಯವು. **ಕೌಪೀನಾಚ್ಛಾದನ ಪ್ರಾಯವಾಂಛಾ ಕಲ್ಪದ್ರುಮಾದಪಿ। ಜಾಯತೇ ಯದಪುಣ್ಯಾನಾಂ ಸೋಽಪರಾಧಃಸ್ವದೋಷಜಃ "** (ವಿ. ಪು. ೬.೩೦ ೨೦) ಎದುರಿಗೆ ಕಲ್ಪವೃಕ್ಷವೇ ಇದ್ದರೂ ಕೌಪೀನಕ್ಕಾಗಿ ಸ್ವಲ್ಪ ಬಟ್ಟೆ ಬೇಕೆಂಬ ಆಸೆಯು ನಿರ್ಭಾಗ್ಯರಿಗೆ ಉದಿಸಬಹುದು, ಪ್ರಾರಬ್ಧ ಕರ್ಮವಾಸನೆಯ ದೋಷವೇ ಇದಕ್ಕೆ ಕಾರಣವೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಅಲ್ಪಬುದ್ಧಿಗಳು ಕೋರುವ ಫಲವೂ ಅಲ್ಪವೂ ಹೌದು ಮತ್ತು ಅದು ಅಸ್ಥಿರವೂ ಹೌದು ಇಲ್ಲಿ **ಅಲ್ಪ ಮೇಧಸಾಂ**-ಅಲ್ಪ ಪ್ರಜ್ಞರೆಂದು ನಿಂದಿಸಿದುದರಿಂದ ಅನ್ಯದೇವತಾ ಭಜನವು ನಿಂದ್ಯವೆಂದೇ ಹೇಳಿದಂತಾಯಿತು. ಹೀಗಿರುವಲ್ಲಿ ಕೆಲವರು ಮಾರ್ಗತ್ವೇನ ಅನ್ಯದೇವತೆಯನ್ನು ಹೊಂದಿ ಸರ್ವೇಶ್ವರನನ್ನು ಕೊನೆಗೆ ಹೊಂದಬೇಕೆಂದೂ, ಪರಿವಾರ ರೂಪದಲ್ಲಿ ಅನ್ಯದೇವತೆ ಭಜನವನ್ನು ಮಾಡಬೇಕೆಂದೂ ಅಭಿಪ್ರಾಯ ಪಟ್ಟಿರುತ್ತಾರೆ. ಈ ಅಭಿಪ್ರಾಯವು ಹೇಗೋ ನಮಗೆ ತೋಚದು. ಅಲ್ಪಾಸ್ಥಿರ ಫಲಕ್ಕಾಗಿಯೇ ಪರಮಾತ್ಮನನ್ನೇ ಭಜಿಸುವವರನ್ನು ಉದಾರರು ಎಂದು **ಉದಾರಾಸ್ಸರ್ವ ಏವೈತೇ** ಎಂಬಲ್ಲಿ ಹೇಳಿದರು ; ಅಂತಹ ಅಲ್ಪಾಸ್ಥಿರ ಫಲಗಳನ್ನು ದೇವತಾಂತರದ ಮೂಲಕ ಯಾಚಿಸುವವರನ್ನು ಅಲ್ಪ

**ಭಾ. ಯತ ಇನ್ದ್ರಾದೀನ್-ದೇವಾನ್ ತದ್ಯಾಜಿನೋ ಯಾನ್ತಿ । ಇಂದ್ರಾದಯೋಽಪಿ ಹಿ ಪರಿಚ್ಛಿನ್ನ ಭೋಗಾಃ ಪರಿಮಿತಕಾಲವರ್ತಿನಶ್ಚ ; ತತ ಸ್ತತ್ಸಾಯುಜ್ಯಂ ಪ್ರಾಪ್ತಾಃ ತೈಸ್ಸಹ ಪ್ರಚ್ಯವನ್ತೇ । ಮದ್ಭಕ್ತಾ ಅಪಿ ತೇಷಾ ಮೇವ ಕರ್ಮಣಾಂ ಮದಾರಾಧನ**

ಮೇಧಸ್ಸುಗಳು ಎಂದು ನಿಂದಿಸಿದರು. ಆದುದರಿಂದ ಅನ್ಯದೇವತಾ ಸರ್ವಪ್ರಕಾರದಲ್ಲೂ ನಿಂದ್ಯವು. ಕಾಮ್ಯ ಕರ್ಮಗಳೇ ನಿಂದ್ಯವು, ಅದನ್ನೇ ಅನ್ಯದೇವತಾ ಮೂಲಕ ಯಾಚಿಸುವದು ಪರಮ ನಿಂದ್ಯವು. ಶ್ರೀ ವೇದವ್ಯಾಸರೇ ಬೇರೆ ಕಡೆಯಲ್ಲಿ.

**" ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಸ್ಸ್ಮೃತಾಃ ।**
**ಪ್ರತಿ ಬುದ್ಧಾ ನ ಸೇವಂತೇ ಯಸ್ಮಾತ್ಪರಿಮಿತಂ ಫಲಂ " ॥**

ಚತುರ್ಮುಖ ಬ್ರಹ್ಮನನ್ನೇಯಾಗಲಿ, ರುದ್ರನನ್ನೇಯಾಗಲಿ, ಇನ್ನು ಯಾವ ಯಾವ ಅನ್ಯ ದೇವತೆಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತಾರೋ ಅವರುಗಳನ್ನೆಲ್ಲಾ, ಪ್ರಜ್ಞಾಶಾಲಿಗಳು ಭಜಿಸುವದಿಲ್ಲವು. ಏಕೆಂದರೆ, ಇವರುಗಳು ಕೊಡತಕ್ಕ ಫಲಗಳೆಲ್ಲಾ ಅಲ್ಪಾಸ್ಥಿರಗಳಾದವು ಎಂದು ಹೇಳಲ್ಪಟ್ಟಿರುತ್ತದೆ. ಪ್ರತಿಬುದ್ಧರು ಯಾರೆಂದರೆ **ಪ್ರತಿಬುದ್ಧಸ್ತು ಮೋಕ್ಷಭಾಕ್**-ಪರಮಾತ್ಮನನ್ನು ಭಜಿಸಿ ಮೋಕ್ಷವನ್ನು ಹೊಂದುವವನು. ಬ್ರಹ್ಮ ರುದ್ರೇಂದ್ರಾದಿಗಳೆಲ್ಲಾ ಈ ಬ್ರಹ್ಮಾಂಡಕ್ಕೆ ಸೇರಿದವರಾಗಿ, ಸುಕೃತಪರಿಪಾಕದಿಂದ ಹೆಚ್ಚು ಅಧಿಕಾರಗಳನ್ನು ಹೊಂದಿದ ನಮ್ಮ ಹಾಗೇ ಇರುವ ಜೀವರುಗಳು. ಪರಿವಾರ ವಿಷಯ ಹೇಗೆ? ಶ್ರೀಮನ್ನಾರಾಯಣನ ನಿತ್ಯವಿಭೂತಿಯಲ್ಲಿರುವ ನಿತ್ಯಸೂರಿಗಳೇ ಆತನ ಪರಿಜನವು, ಇವರುಗಳು ಅನಂತ ವಿಷ್ವಕ್ಸೇನಾದಿಗಳು. ಇವರು ನಿತ್ಯ ಜೀವರು. **ದೇವಾನ್ ದೇವ ಯಜೋಯಾನ್ತಿ** ಎಂದರೆ **ಯತ ಇಂದ್ರಾದೀನ್ ದೇವಾನ್ ತದ್ಯಾಜಿನೋಯಾನ್ತಿ**-ಯಾವ ಕಾರಣದಿಂದ, **ದೇವಾನ್** ಎಂದರೆ **ಇಂದ್ರಾದೀನ್**-ಇಂದ್ರಾದಿಗಳನ್ನು, ಅವರುಗಳನ್ನು ಭಜಿಸುವವರು ಅಪೇಕ್ಷಿಸಿದರೆ ಹೊಂದಬಹುದೋ, **ಇಂದ್ರಾದಯೋಽಪಿ**-ಈ ಇಂದ್ರಾದಿಗಳಾದರೋ, **ಪರಿಚ್ಛಿನ್ನಭೋಗಾ ಹಿ** ಪರಿಮಿತಿಯುಳ್ಳ ಭೋಗವುಳ್ಳವರಷ್ಟೆ ಮತ್ತು **ಪರಿಮಿತಕಾಲವರ್ತಿನಶ್ಚ**-ಪರಿಮಿತಕಾಲದವರೆಗೆ ಮಾತ್ರ ಇರುವವರಷ್ಟೇ, **ತತಃ**-ಆ ಕಾರಣದಿಂದಲೇ, **ತತ್ಸಾಯುಜ್ಯಂ ಪ್ರಾಪ್ತಾಃ ತೈಸ್ಸಹ ಪ್ರಚ್ಯವನ್ತೇ**-ಅಂತವರ ಸಾಯುಜ್ಯವನ್ನು ಹೊಂದಿದವರು, ಅವರೊಂದಿಗೇನೇ ತಮ್ಮ ಲೋಕಗಳ ದಶೆಯಿಂದ ಜಾರಿಬೀಳಬಹುದು. ಇಲ್ಲಿ **ದೇವಯಜಃ** ಎಂಬಲ್ಲಿ ದೇವಶಬ್ದವು ಪರಮಾತ್ಮನನ್ನು ಬೋಧಿಸುವದಿಲ್ಲವೆಂದು ತಿಳಿಸುವದಕ್ಕಾಗಿ, **ದೇವಾನ್** ಎಂದರೆ **ಇಂದ್ರಾದೀನ್** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇವರೂ ನಮ್ಮಹಾಗೆಯೇ ಜೀವಕೋಟಿಗೆ ಸೇರಿದವರು. ಆದರೆ ಪೂರ್ವಾಚರಿತ ಸುಕೃತ ಪರಿಪಾಕ ಮಹಿಮೆಯಿಂದ ಹೆಚ್ಚಿನ ಅಧಿಕಾರವನ್ನು ಅನುಭವಿಸುತ್ತಿರುವ ಭಗವದ್ಭಕ್ತರು. **ದೇವಾನ್ ದೇವ ಯಜೋಯಾನ್ತಿ** ಎಂಬುದರಿಂದ ಅನ್ಯದೇವತಾ ಭಕ್ತರೆಲ್ಲರಿಗೂ ಅನ್ಯದೇವತೆಯೊಂದಿಗೆ ಸಮಾನ ಭೋಗರೂಪವಾದ ಸಾಯುಜ್ಯವು ದೊರೆಯುತ್ತದೆಂಬ ಅಭಿಪ್ರಾಯವಲ್ಲವು. ಅಧಿಕಾರಿಯು ಧನವನ್ನು ಬಯಸಿದರೆ ಸಾಯುಜ್ಯವನ್ನು ಕೊಡಬಹುದೋ? ಅನ್ಯದೇವತಾರಾಧನ ಮೂಲಕ ಈ ಅಧಿಕಾರಿಗೆ ಎಷ್ಟರವರೆಗೆ ಫಲವು ಲಭಿಸಬಹುದು, ಎಂದರೆ ತನ್ನೊಂದಿಗೆ ಸಾಯುಜ್ಯವೆಂದು ಮುಂದೆ ತಿಳಿಸುತ್ತಾರೆ. ಇವೆರಡು ಸಾಯುಜ್ಯಕ್ಕೂ ವೈಲಕ್ಷಣ್ಯವೇನು? ಎಂದರೆ ಅನ್ಯದೇವತಾ ಸಾಯುಜ್ಯವು ಪುನರಾವರ್ತಿ ಲಕ್ಷಣವುಳ್ಳದು ಎಂದು ಪ್ರದರ್ಶಿಸುವದಕ್ಕೆ, **ತೈಸ್ಸಹ ಪ್ರಚ್ಯವಂತೇ** ಎಂಬ ವ್ಯಾಖ್ಯಾನವು. ತನ್ನೊಂದಿಗೆ ಸಾಯುಜ್ಯವಾದರೋ **" ನ ಚ ಪುನ ರ್ನಿವರ್ತ್ತಂತೇ** ಎಂದು ಮುಂದೆ ವ್ಯಾಖ್ಯಾನ ಮಾಡಿರುತ್ತಾರೆ. ಇಲ್ಲಿ ಅನ್ಯದೇವತೆಗಳು ಯಾರು ಎಂಬಲ್ಲಿ ಬ್ರಹ್ಮಾದಿ ಎಂದಾರಂಭಿಸದೆ ಇಂದ್ರಾದಿ ಎಂದಾರಂಭಿಸಿ ಹೇಳಲು ಕಾರಣ

**ಭಾ. ರೂಪತಾಂ ಜ್ಞಾತ್ವಾ ಪರಿಚ್ಛಿನ್ನಫಲಸಙ್ಗಂ ತ್ಯಕ್ತ್ವಾ ಮತ್ಪ್ರೀಣನೈಕ ಪ್ರಯೋಜನಾಃ ಮಾಂ ಪ್ರಾಪ್ನುವಂತಿ; ನ ಚ ಪುನರ್ನಿವರ್ತನ್ತೇ; (೧) "ಮಾಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನವಿದ್ಯತೇ" ಇತಿ ಹಿ ವಕ್ಷ್ಯತೇ ॥ ೨೩ ॥**

**ವೇನು?** ಎಂದರೆ (೧) ಅನೇಕರಿಗೆ ಸ್ವರ್ಗಾದಿ ಭೋಗಗಳೇ ಮಹತ್ತಾದವೆಂಬ ಅಭಿಪ್ರಾಯ ವಿರುವದರಿಂದ ಹಾಗೆ ವ್ಯಾಖ್ಯಾನವೆಂದು ಭಾವಿಸಬಹುದು, (೨) ಅಥವಾ ವೃಷ್ಟಿ ಸೃಷ್ಟಿ ಲಯಗಳಿಗೆ ಮಹತ್ತಾದ ಅಧಿಕಾರಿಗಳಾದ ಚತುರ್ಮುಖ ಬ್ರಹ್ಮ ಮತ್ತು ರುದ್ರರಿಗೆ ಕಲ್ಪಾಂತದಲ್ಲಿ ಮೋಕ್ಷವೆಂದು ಹೇಳಿರುವದರಿಂದ ಇಲ್ಲಿ **ತ್ರೈಸ್ಸಹಪ್ರತ್ಯವಂತೇ** ಎಂದು ಹೇಳಬೇಕಾದ ಆವಶ್ಯಕವು ತೋರಿ ಪುನರಾವೃತ್ತಿ ಇಲ್ಲದ ಅವರಿಬ್ಬರನ್ನೂ ಬಿಟ್ಟು, ಇಂದ್ರನಿಂದ ಆರಂಭಿಸಿ ವ್ಯಾಖ್ಯಾನ ಮಾಡಿರುತ್ತಾರೆ. **ವಿಭೀಷಣನು** ಆತನು ಮಾಡಿದ ಶರಣಾಗತಿಯ ಮೂಲಕ ಮೋಕ್ಷಯೋಗ್ಯನಾಗಿದ್ದರೂ ಶ್ರೀರಾಮಾವತಾರದ ಉಪಸಂಹಾರ ಕಾಲದಲ್ಲಿ ಜೊತೆಯಲ್ಲೇ ಬರುತ್ತೇನೆಂದು ಪ್ರಾರ್ಥಿಸಿದರೂ **ಪ್ರಜಾಸ್ಸಂರಕ್ಷಧರ್ಮೇಣ ನೋತ್ತರಂ ವಕ್ತುಮರ್ಹಸಿ"** ಎಂದು ಉತ್ತರಕಾಂಡದಲ್ಲಿ ಹೇಳಿರುವ ಹಾಗೆ, ಇನ್ನೂ ಕೆಲವು ದಿನ ಲಂಕೆಯಲ್ಲೇ ಇದ್ದು ಪ್ರಜೆಗಳಿಗೆ ಧರ್ಮವನ್ನು ಬೋಧಿಸಿ ಧರ್ಮದಿಂದ ಪ್ರಜಾ ಪರಿಪಾಲನೆಯನ್ನು ಮಾಡು ಎಂದು ಹೇಳಿದ ಹಾಗೆ ಚತುರ್ಮುಖ ರುದ್ರರು ಕಲ್ಪಾಂತದವರೆಗೂ ಸೃಷ್ಟಿಲಯ ಕಾರ್ಯಗಳಲ್ಲಿದ್ದು ಅನಂತರ ತನ್ನನ್ನು ಬಂದು ಸೇರತಕ್ಕದ್ದೆಂದು ಆಜ್ಞಾಪಿಸಲ್ಪಟ್ಟವರು. ಆದುದರಿಂದ **ಇಂದ್ರಾದಿ** ಎಂದಾರಂಭಿಸಿ ಹೇಳಿರುತ್ತಾರೆ. (೩) ಇನ್ನೊಂದು ಕಾರಣವನ್ನೂ ಹೇಳಬಹುದು. ಅದು ೮೫೦ನೆಯ ಪುಟದಲ್ಲಿರುವ ವಿಷ್ಣುಧರ್ಮಶ್ಲೋಕದಿಂದ ವ್ಯಕ್ತವು.

ಸರ್ವೇಶ್ವರನನ್ನೇ ಭಜಿಸುವವರಿಗುಂಟಾಗಬಹುದಾದ ಮಾಹಾತ್ಮ್ಯೆಯನ್ನು ಪ್ರದರ್ಶಿಸಿ, ಇವೆರಡು ವಿಧ ಭಜನಗಳಿಗೂ ಇರುವ ವೈಲಕ್ಷಣ್ಯವನ್ನು ವ್ಯಕ್ತಪಡಿಸುತ್ತಾರೆ. ದೇವತೆಗಳನ್ನು ಉಪಾಸಿಸಿದವರು ದೇವತೆಗಳನ್ನೇ ಹೇಗೆ ಹೊಂದುವರೋ ಹಾಗೆಯೇ, **ಮದ್ಭಕ್ತಾ ಯಾನ್ತಿ ಮಾಮಪಿ"** ಇಲ್ಲಿರುವ **ಅಪಿ** ಶಬ್ದವು ವೈಲಕ್ಷಣ್ಯವನ್ನು ಸೂಚಿಸುತ್ತದೆ. ಆದುದರಿಂದ **ಮದ್ಭಕ್ತಾಃ** ಎಂಬುದರೊಂದಿಗೆ ಸೇರಿಸಿ ವ್ಯಾಖ್ಯಾನ ಮಾಡಿರುತ್ತಾರೆ, ನನ್ನ ಭಕ್ತರಾದರೋ, ಅವರು ಒಂದು ವೇಳೆ ಕಾಮ್ಯ ಫಲವನ್ನು ಅಪೇಕ್ಷಿಸಿದರೆ ಅದನ್ನೂ ಕೊಟ್ಟು, ಅನಂತರ ಕಡೆಗೆ ನಾನು ಕೊಡುವ ಹೆಚ್ಚಿನ ಫಲವಾದರೋ, **ಮಾಂ ಯಾನ್ತಿ** - ನನ್ನ ಸಾಯುಜ್ಯವನ್ನೇ ಹೊಂದುತ್ತಾರೆ ಎಂದು ಹೇಳುತ್ತಾರೆ. ಐಹಿಕಗಳ ಆಶೆಯನ್ನು ತೊರೆದು ಮೋಕ್ಷಾರ್ಥಿಯಾಗಿ ಜ್ಞಾನಿಯಾಗಿ ಭಕ್ತ್ಯುಪಾಯವನ್ನವಲಂಬಿಸಿದವನಾದರೆ ನನ್ನ ಸಾಯುಜ್ಯವೇ ಒಡನೆ ಉಂಟಾಗುತ್ತದೆ, ಹಾಗಲ್ಲದೆ ಅರ್ಥಾರ್ಥಿಯಾಗಿದ್ದರೂ, ಆರ್ತನಾಗಿದ್ದರೂ, ನನ್ನ ಭಜನದ ಮಾಹಾತ್ಮ್ಯೆಯಿಂದ ಆ ಅಲ್ಪ ಸಾರವನ್ನು ನಿರಾಕರಿಸಿ, ಕಾಲಾನುಕೂಲದಲ್ಲಿ ಆತನು ಜ್ಞಾನಿಯಾಗಿ ನನ್ನ ಸಾಯುಜ್ಯವನ್ನು ಹೊಂದುವ ಸಂಭವ ಉಂಟು. ಇದೀಗ ನನ್ನ ಭಜನಕ್ಕೂ ಅನ್ಯದೇವತಾ ಭಜನಕ್ಕೂ ಇರುವ ವ್ಯತ್ಯಾಸವೆಂದು ಹೇಳುತ್ತಾರೆ.— **ತೇಷಾಮೇವ ಕರ್ಮಣಾಂ** - ಆ ನನ್ನ ಭಕ್ತರುಗಳು ಮಾಡುವ ಭಜನರೂಪವಾದ ಕರ್ಮಗಳು, ಆರ್ತಾರ್ಥಾರ್ಥಿಗಳು ಮಾಡುವ ಕರ್ಮಗಳೂ ಕೂಡ, **ಮದಾರಾಧನರೂಪತಾಂ ಜ್ಞಾತ್ವಾ** - ನನ್ನ ಆರಾಧನ ರೂಪವಾದವೆಂಬುದನ್ನು ತಿಳಿದಂತಾವರಾಗಿ, **ಪರಿಚ್ಛಿನ್ನ ಫಲಸಂಙ್ಗಂತ್ಯಕ್ತ್ವಾ** - ತಾವು ಮಾಡುತ್ತಿದ್ದ ಕರ್ಮಗಳು ಅಲ್ಪಾಸ್ಥಿರ ಫಲಗಳುಳ್ಳವಾದುದರಿಂದ ಅಂತಹ ಪರಿಮಿತಿಯುಳ್ಳ ಐಹಿಕಾದಿ ಫಲಗಳ ಸಙ್ಗವನ್ನು ತ್ಯಜಿಸಿದವರಾಗಿ, ಅನಂತರ **ಮತ್ಪ್ರೀಣನೈಕಪ್ರಯೋಜನಾಃ** - ನನ್ನನ್ನು ಪ್ರಾಪ್ಯವಾಗಿ ಅಪೇಕ್ಷಿಸುವದರಿಂದ ನನಗೆ ಪ್ರೀತಿಯನ್ನುಂಟುಮಾಡುವದೇ ಮುಖ್ಯ ಪ್ರಯೋಜನವುಳ್ಳವರಾಗಿ, **ಮಾಂ ಪ್ರಾಪ್ನು**

**ಭಾ. ಅವ. ಇತರೇತು ಸರ್ವಸಮಾಶ್ರಯಣೀಯತ್ವಾಯ ಮಮ ಮನುಷ್ಯಾದಿಷ್ವವತಾರಮಪ್ಯ ಕಿಂಚಿತ್ಕರಂ ಕುರ್ವಂತೀತ್ಯಾಹ—**

**ವಂತಿ** - ಕೊನೆಗೆ ನನ್ನನ್ನೇ ಉಪಾಸಿಸಿ, ನನ್ನ ಪ್ರೀತಿಯನ್ನು ಸಂಪಾದಿಸಿಕೊಂಡವರಾಗಿ, **"ಸೋಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ"** ಎಂದು ಹೇಳಿರುವ ಹಾಗೆ ಪರಿಪೂರ್ಣ ಬ್ರಹ್ಮಾನುಭವ ರೂಪವಾದ ನನ್ನ ಸಾಯುಜ್ಯವನ್ನು ಹೊಂದುವರು. **ನ ಚ ಪುನರ್ನಿವರ್ತನ್ತೇ** - **"ಅನಾವೃತ್ತಿಶ್ಶಬ್ದಾತ್"** ಎಂಬ ಸೂತ್ರಾನುಸಾರವಾಗಿಯೂ, **"ನ ಚ ಪುನರಾವರ್ತತೇ"** ಎಂಬ ಶ್ರುತ್ಯನುಸಾರವಾಗಿಯೂ, ಪುನಃ ಅಲ್ಲಿಂದ ತಿರಿಗಿ ಬರುವದಿಲ್ಲವು. ಹಾಗೆಯೇ ಮುಂದೆ ಹೇಳಲ್ಪಡುತ್ತದೆಂದು ತಿಳಿಸುತ್ತಾರೆ.—**"ಹೇ ಕೌಂನ್ತೇಯ**- ಓ ಕುಂತೀ ಪುತ್ರನಾದ ಅರ್ಜುನನೇ, **ಮಾಮುಪೇತ್ಯತು** - ನನ್ನನ್ನು ಹೊಂದಿದ ನಂತರವಾದರೋ, **ಪುನರ್ಜನ್ಮವು, ನವಿದ್ಯತೇ** - ಇರುವದಿಲ್ಲವು." **ಇತಿ ಹಿ** - ಎಂಬದಾಗಿ ಅಲ್ಲವೇ **ವಕ್ಷ್ಯತೇ**-ಮುಂದೆ ಹೇಳಲ್ಪಡುತ್ತದೆ. (೮.೧೬) ಆದುದರಿಂದ ಐಹಿಕಾಮುಷ್ಮಿಕಕ್ಕಾಗಿ ಯಾವ ಫಲೋದ್ದೇಶದಿಂದಾಗಲಿ ನನ್ನನ್ನೇ ಭಜನೆ ಮಾಡುವವರು ನನ್ನನ್ನೇ ಕೊನೆಗಾದರೂ ಹೊಂದುವರು. ಜ್ಞಾನಿಯಾದ ಪಕ್ಷದಲ್ಲಿ ಒಡನೆಯೇ ನನ್ನನ್ನು ಹೊಂದುವರು; ಜ್ಞಾನಿಯಾಗದೆ ಇತರ ಎರಡು ಮಂದಿಗಳಲ್ಲಿ ಯಾರೇ ಆಗಲಿ ನನ್ನನ್ನು ಐಹಿಕಾದಿಗಳಿಗಾಗಲಿ ಉಪಾಸಿಸಿದರೂ, ನನ್ನನ್ನು ಉಪಾಸಿಸಿದ ಸುಕೃತ ವಿಶೇಷಮೂಲಕ ಐಹಿಕಗಳಲ್ಲಿ ಜಿಹಾಸೆಯನ್ನುಂಟುಮಾಡಿ. ಮೋಕ್ಷಕ್ಕಾಗಿಯೇ ನನ್ನನ್ನು ಭಜಿಸುವಹಾಗೆ ಮಾಡಿ, ಕಾಲಾನುಕಾಲದಲ್ಲಿ ನನ್ನ ಸಾಯುಜ್ಯವನ್ನು ಕೊಡುವೆನು. ಈ ಸುಕೃತವು ಅನ್ಯದೇವತಾ ಭಜನದಿಂದ ಸಿದ್ಧಿಸತಕ್ಕದ್ದಲ್ಲವೆಂಬ ಭಾವವು. ಈ ಅಭಿಪ್ರಾಯವನ್ನೇ ಶ್ರೀ ನಾರಾಯಣಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಚನ್ನಾಗಿ ವಿಶದೀಕರಿಸಿರುತ್ತಾರೆ. ಶಾಂಡಿಲ್ಯ ಸಂಹಿತೆಯಲ್ಲಿ ಈ ಅಭಿಪ್ರಾಯವು ವ್ಯಕ್ತವೆಂದು ಶ್ರೀ ದೇಶಿಕರವರು ಅದರ ಸಮರ್ಥನೆಗೋಸ್ಕರ ಉದಾಹರಿಸಿರುತ್ತಾರೆ. **"ಭಗವನ್ತಂ ಸಮುದ್ದಿಶ್ಯ ತದೇಕಶರಣಾನರಾಃ। ಕದಾಚಿನ್ನ ಚ ಹೀಯನ್ತೇ ಕಾಮ್ಯಕರ್ಮರತಾ ಅಪಿ"** ಕಾಮ್ಯಫಲಾಪೇಕ್ಷೆಯುಳ್ಳವರಾಗಿ ಭಗವಂತನನ್ನೇ ಶರಣ ಹೊಂದಿದವರಿಗೆ ಎಂದಿಗೂ ನ್ಯೂನತೆ ಇರುವದಿಲ್ಲವು ಎಂದರೆ ಕಾಲಕ್ರಮೇಣ ಮುಕ್ತಿಯನ್ನೇ ಹೊಂದುವರೆಂಬ ತಾತ್ಪರ್ಯವು. ಅನ್ಯದೇವತಾ ಭಜನಕ್ಕಾದರೋ ಆ ದೇವತಾ ಸಾಯುಜ್ಯದಲ್ಲಿ ಮಾತ್ರವೇ ಪರಿಸಮಾಪ್ತಿಯೇ ವಿನಾ ಭಗವತ್ಪ್ರಾಪ್ತಿಯು ಇಲ್ಲವೆಂಬುದು ಸಿದ್ಧವು. ಆದುದರಿಂದ ಮೋಕ್ಷಾರ್ಥಿಗೆ ಅನ್ಯದೇವತಾ ಭಜನದಿಂದ ಇಷ್ಟವು ಸಿದ್ಧಿಸದು, ಸ್ವರೂಪಕ್ಕೆ ಕುಂದಕವು. ಈ ನಾರಾಯಣೀಯರ ಅರ್ಥವೂ ಭಾಷ್ಯದಲ್ಲೇ ಅಂತರ್ಗತವು. ಏಕೆಂದರೆ **"ತೇಷಾಮೇವ ಕರ್ಮಣಾಂ ಮದಾರಾಧನರೂಪತಾಂ ಜ್ಞಾತ್ವಾ"** ಎಂಬುದರಿಂದ ಇದನ್ನು ಊಹಿಸಬಹುದು. ಹಾಗಲ್ಲದೆ **ಮದ್ಭಕ್ತಾಃ** ಎಂಬಲ್ಲಿ ಜ್ಞಾನಿಗಳು ಮಾತ್ರವೇ ಶ್ರೀ ಭಾಷ್ಯಕಾರರಿಂದ ಹೇಳಲ್ಪಟ್ಟರೆಂದರೆ, ಮುಂದಿನ ಶ್ಲೋಕಾವತಾರಿಕೆಯಲ್ಲಿ **ಇತರೇತು** ಎಂಬ ಪ್ರಯೋಗವಿರುವದರಿಂದ, ಆರ್ತನೂ, ಅರ್ಥಾರ್ಥಿ, ಪುನರಾವೃತ್ತಿ ಇಲ್ಲದ ಜಿಜ್ಞಾಸುವೂ ಎಲ್ಲರೂ, **ಇತರೇತು** ಎಂಬಲ್ಲಿ ಸೇರಬೇಕಾಗಿ ಬರುವದರಿಂದ ಶ್ರೀ ಕೃಷ್ಣ ಭಗವಾನರವರಿಂದ ಉದಾರರೆಂದೂ ಸುಕೃತಿಗಳೆಂದೂ ಕೊಂಡಾಡಲ್ಪಟ್ಟವರನ್ನು **ಅಬುದ್ಧಯಃ** - ಜ್ಞಾನಶೂನ್ಯರೆಂದೂ, ಪರತ್ವವನ್ನು ತಿಳಿಯದವರೆಂದೂ ಹೇಳಬೇಕಾಗುತ್ತದೆ. ಇದಲ್ಲದೆ ಶ್ರೀ ದೇಶಿಕರವರು **ಈ ಇತರೇ** ಎಂಬುದಕ್ಕೆ ಚತುರ್ವಿಧ ಭಕ್ತರಲ್ಲದೆ **ಅನ್ಯೇ** ಎಂದು ಅರ್ಥ ಬರೆದಿರುತ್ತಾರೆ. ಆದುದರಿಂದ ಯತಿವರ್ಯರ ಶ್ರೀ ದೇಶಿಕವರ್ಯರ ಶ್ರೀ ನಾರಾಯಣೀಯರ ಅರ್ಥಗಳಿಗೆ ಐಕಕಂಠ್ಯವುಂಟು. ಶ್ರೀ ಶಂಕರಾಚಾರ್ಯರೂ ಈ ಅರ್ಥ

**ಮೂ. ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾ ಮಬುದ್ಧಯಃ ||**
**ಪರಂಭಾವ ಮಜಾನನ್ತೋ ಮಮಾ ವ್ಯಯ ಮನುತ್ತಮಮ್ ||** **೨೪.**

ವನ್ನೇ ಅನುಮೋದಿಸಿರುತ್ತಾರೆ. ಇಲ್ಲಿ **ಅಲ್ಪಮೇಧಸಾಂ** ಎಂದು ನಿಂದಿಸಿರುವದು ಕೋಪದಿಂದಲೇ ಅಥವಾ ಪರಿತಾಪದಿಂದಲೇ ಎಂದರೆ ಪರಮಕಾರುಣಿಕನಾಗಿ ಪರಿತಾಪದಿಂದ ಹೇಳಿದುದೆಂಬುದು ಶ್ರೀ ಶಂಕರಾಭಿಪ್ರಾಯವು. ನಮ್ಮ ಯತಿವರ್ಯರ ಅಭಿಪ್ರಾಯವೂ ಹಾಗೆಯೇ.

**ಭಾಷ್ಯಾವತಾರಿಕೆಯ ಅರ್ಥವು :**—ಹೀಗೆ ಐಹಿಕಾದಿ ಫಲಾಂತರಗಳಿಗಾಗಿ ಅನ್ಯದೇವತಾ ಭಜನ ಮಾಡುವದು ನಿಂದ್ಯವಾದುದು ಎಂದೂ, ಭಗವಂತನಾದ ನಿನ್ನ ಭಜನವಾದರೋ ಪರಮ ನಿಶ್ಶ್ರೇಯಸ್ಸಿಗೆ ಸಾಧಕವೆಂದೂ, ಒಪ್ಪತಕ್ಕದ್ದೇನೋ ಸರಿಯೇ. ಆದರೆ ಭಗವಂತನಾದ ನಿನ್ನ ಸಾಕ್ಷಾತ್ಕಾರವಿಲ್ಲದಿರುವಾಗ ಏನೋ ನಿನ್ನನ್ನು ಭಜಿಸದೇ ಹೋಗಬಹುದು. ಪರಮ ಕಾರುಣಿಕನಾದ ನಿನ್ನನ್ನು ಎಲ್ಲರೂ ಸಾಕ್ಷಾತ್ಕರಿಸಿ ಆಶ್ರಯಿಸಲಿ ಎಂಬ ಪರಮೋದಾರ ಭಾವದಿಂದ ನೀನು ಮನುಷ್ಯನಾಗಿ ವಸುದೇವ ಕುಮಾರನಾಗಿ ಅವತರಿಸಿ ಪ್ರತ್ಯಕ್ಷನಾಗಿರುವಾಗ, ನಿನ್ನನ್ನೇ ಏಕೆ ಭಜಿಸುವದಿಲ್ಲವೆಂಬುದಕ್ಕೆ ಕಾರಣವನ್ನು ಮುಂದಿನ ಶ್ಲೋಕದಲ್ಲಿ ಹೇಳಿರುತ್ತಾರೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ.—**ಇತರೇತು** - ಮದ್ಭಕ್ತರಲ್ಲದ ಇತರರಾದರೋ, ಮೇಲೆ ಹೇಳಿದ ಚತುರ್ವಿಧ ಭಕ್ತರಲ್ಲದ ಇತರರು, **ಸರ್ವಸಮಾಶ್ರಯಣೀಯತ್ವಾಯ** -ಸಮಸ್ತರೂ ನನ್ನನ್ನು ಆಶ್ರಯಿಸಲೆಂಬ ಭಾವದಿಂದ, **ಮನು** - ಪರಮ ಕಾರುಣ್ಯದಿಂದ ಪ್ರೇರಿತನಾದ ನನ್ನ **ಅವತಾರಮಪಿ** - ಅವತಾರವನ್ನೂ ಕೂಡ, **ಅಕಿಂಚಿತ್ಕರಂ ಕುರ್ವಂತೀತ್ಯಾಹ**-ಅಲ್ಪವಾಗಿ ಮಾಡಿಬಿಡುವರು ಎಂದು ಮುಂದೆ ಹೇಳುತ್ತಾರೆ. ನನ್ನ ಅಮಾನುಷ ಚೇಷ್ಟಿತಗಳೇ ಮೊದಲಾದವುಗಳಿಂದ ಮನುಷ್ಯಾವತಾರಿಯಾದ ಭಗವಂತನೆಂದು ತಿಳಿಯುವ ಪ್ರಜ್ಞೆ ಇಲ್ಲದವರಾಗಿ ಕೇವಲ ಮನುಷ್ಯನೆಂದೇ ನನ್ನನ್ನು ಭಾವಿಸುವರು ಎಂದು ಹೇಳುತ್ತಾರೆಂಬ ಭಾವವು.

**ಮೂಲಕ್ಕೆ ಅರ್ಥವು :—ಮಮ** - ಎಲ್ಲರೂ ನನ್ನನ್ನು ಆಶ್ರಯಿಸಿ ಪರಮ ಶ್ರೇಯಸ್ಸನ್ನು ಹೊಂದಿ ಉಜ್ಜೀವಿಸಲಿ ಎಂಬ ಕಾರುಣ್ಯಾತಿಶಯದಿಂದಲೂ ಉದಾರ ಭಾವದಿಂದಲೂ ಮನುಷ್ಯಾವತಾರಿಯಾಗಿ ಅವತರಿಸಿರುವ ನನ್ನ, **ಅವ್ಯಯಂ** - ಸ್ವಲ್ಪವೂ ನಾಶವಿಲ್ಲದ ಎಂದರೆ ನನ್ನ ಸ್ವರೂಪ ಸ್ವಭಾವವನ್ನು ಸ್ವಲ್ಪವೂ ಬಿಡದೇ ಇರುವ, **ಅನುತ್ತಮಂ** - ನನ್ನ ಪರಭಾವಕ್ಕಿಂತಲೂ ಉತ್ತಮವಾದುದಿಲ್ಲದ ಎಂದರೆ ಅಸದೃಶವಾದ, **ಪರಂ ಭಾವಂ** - ಪರತ್ವವನ್ನು, **ಅಜಾನನ್ತಃ** - ತಿಳಿಯದೇ ಇರುವ, **ಅಬುದ್ಧಯಃ** - ಬುದ್ಧಿ ಇಲ್ಲದವರು, ಯಾವ ಬದ್ಧಿಯಿಲ್ಲದವರು ? ಎಂದರೆ ನಾನು ವಿಷ್ಣುವಿನ ಅವತಾರವು, ನನ್ನ ಚೇಷ್ಟಿತಗಳು ದಿವ್ಯವು, ಅನೇಕ ಸಂದರ್ಭಗಳಲ್ಲಿ ಅತಿ ಮಾನುಷವು ಇತ್ಯಾದಿ ಬುದ್ಧಿಯಿಲ್ಲದವರೆಂಬ ಭಾವವು; ಮೂಢರು, **ಮಾಂ** - ನನ್ನನ್ನು, ಹೇಗೆ ತಿಳಿಯುವರೆಂದರೆ ಹೇಳುತ್ತಾರೆ. **ಅವ್ಯಕ್ತಂ ವ್ಯಕ್ತಿ ಮಾಪನ್ನಂ ಮನ್ಯಂತೇ** - ಇದುವರೆಗೂ ಜನಿಸದೇ ಇರುವ ಒಬ್ಬನು ಈಗ ಮನುಷ್ಯರೂಪವನ್ನು ಹೊಂದಿ ಹುಟ್ಟಿರುವನೆಂದು ತಿಳಿಯುವರು. **ಪರಂಭಾವ ಮಜಾನನ್ತಃ** - ನನ್ನ ಪರತ್ವವನ್ನು ತಮ್ಮ ಅಜ್ಞಾನದಿಂದ ತಿಳಿಯದವರಾಗಿ ಎಂದು ಹೇಳಲು ಕಾರಣವೇನೆಂದರೆ ? ಪರತ್ವ ಸೂಚಕ ಅತಿಮಾನುಷ ಚೇಷ್ಟಿತಗಳನ್ನು ತಾನು ಮಾಡಿದ್ದರೂ ಅವರು ತಿಳಿಯದೇ ಹೋಗುವರು ಎಂಬ ಭಾವವು ಸೂಚಿತವು. ಬಾಲನಾಗಿ ಪೂತನಾಸಂಹಾರ, ಶಕಟಾಸುರ ಭಂಜನ ಗೋವರ್ಧನೋದ್ಧರಣ, ಕಾಳೀಯಮರ್ದನ, ಯಮಳಾರ್ಜುನ ಭಂಜನ, ಧೇನುಕಾಸುರ ಸಂಹಾರ, ಶಿಶುಪಾಲ ವಧೆ, ಇವೇ ಮೊದಲಾದ ಅಸಂಖ್ಯೇಯ ಅತಿಮಾನುಷ ದಿವ್ಯಚೇಷ್ಟಿತಗಳಿಂದ ಪರತ್ವವನ್ನು ಊಹಿಸಬಹುದಾಗಿತ್ತು. ಅವುಗಳನ್ನು ತಿಳಿಯದ ಮೂಢರಾದುದರಿಂದ ತನ್ನನ್ನು

**ಭಾ. ಸರ್ವೈಃ ಕರ್ಮಭಿ ರಾರಾಧ್ಯೋಽಹಂ ಸರ್ವೇಶ್ವರೋ ವಾಙ್ಮನಸಾ ಪರಿಚ್ಛೇದ್ಯ ಸ್ವರೂಪ ಸ್ವಭಾವಃ ಪರಮಕಾರುಣ್ಯಾ ದಾಶ್ರಿತ ವಾತ್ಸಲ್ಯಾಚ್ಚ ಸರ್ವಸಮಾಶ್ರಯಣೀಯತ್ವಾ ಯಾ ಜಹತ್ಸ್ವಭಾವ ಏವ ವಸುದೇವ ಸೂನು ರವತೀರ್ಣ ಇತಿ ಮಮೈವಂ ಪರಂ ಭಾವ ಮವ್ಯಯಮನುತ್ತಮ ಮಜಾನಂತಃ ಪ್ರಾಕೃತರಾಜಸೂನುಸಮಾನ ಮಿತಃ**

ಆಶ್ರಯಿಸುವದಿಲ್ಲವೆಂಬ ಭಾವವು. ಜ್ಞಾನಿಯಾದವರು ಹೇಗೆ ಭಾವಿಸುವರು ಎಂಬುದು ಪೂರ್ವಾರ್ಧದಲ್ಲಿ ದ್ಯೋತಿತವು. ಮೂಢರೀಗ ಶ್ರೀಕೃಷ್ಣನಾದ ತಾನು ಒಬ್ಬ ಮನುಷ್ಯನೆಂದು ಭಾವಿಸುವರು ಎಂದರೆ ಜ್ಞಾನಿಗಳು ಹಾಗೆ ಭಾವಿಸುವರಲ್ಲವೆಂಬುದು ವ್ಯಕ್ತವು. ಅಂತಹ ಜ್ಞಾನಿಗೆ ನಾನು ಮನುಷ್ಯರೂಪದಲ್ಲಿದ್ದರೂ ಪರತತ್ವವೆಂಬುದು ತಿಳಿಯುವದು, ಇದಕ್ಕೆ ಮಾರ್ಕಂಡೇಯರೂ, ರುಕ್ಮಿಣಿಯು ಕಾಗದವನ್ನು ಕಳುಹಿಸಿದ ಬ್ರಾಹ್ಮಣನು, ಸಂಜಯ, ವಿದುರ, ಅಕ್ರೂರ, ಉದ್ಧವ, ವಿಶ್ವಾಮಿತ್ರ, ಭಾರಧ್ವಾಜರು ವಿಭೀಷಣಾದಿಗಳು ಪರಾಶರ, ವ್ಯಾಸ, ವ್ಯಾಸಾದಿಗಳು ನಿದರ್ಶನವು. ಸಾಧಾರಣ ಮನುಷ್ಯನೆಂದು ಭಾವಿಸುವರೇ ಅನೇಕರು. ಆದರೆ ಮಹಾನುಭಾವರಾದ ನನ್ನ ಭಕ್ತರು ಹೀಗೆ ಮನುಷ್ಯರಾಗಿದ್ದರೂ ತನ್ನ ಪರತ್ವವನ್ನು ಅರಿಯುವರು ಎಂದೂ, ಸಾಧಾರಣ ಜನರು ಅರಿಯಲಾರರೆಂದೂ, **"ಮಲ್ಲಾನಾ ಮಶನಿ ರ್ನೃಣಾಂ ನರವರ ಸ್ತ್ರೀಣಾಂ ಸ್ಮರೋ ಮೂರ್ತಿಮಾನ್ ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭುಜಾಂ ಶಾಸ್ತಾ ಸ್ವಪಿತ್ರೋಃ ಶಿಶುಃ। ಮೃತ್ಯು ರ್ಭೋಜಪತೇರ್ವಿರಾಡ ವಿದುಷಾಂ ತತ್ವಂ ಪರಂ ಯೋಗಿನಾಂ ವೃಷ್ಣೀನಾಂ ಪರದೇವತೇತಿ ವಿದಿತೋ ರಙ್ಗಂಗತ ಸ್ಸಾಗ್ರಜಃ"** ಎಂಬಲ್ಲಿ (ಭಾ. ೧೦ ೪೩.೧೭) ಹೇಳಲ್ಪಟ್ಟಿದೆ. ಇದು ಕಂಸ ವಧೆಗಾಗಿಯೂ, ಚಾಣೂರಮುಷ್ಟಿಕ ಸಂಹಾರಕ್ಕಾಗಿಯೂ, ಶ್ರೀಕೃಷ್ಣ ಬಲರಾಮರು ಕುವಲಯಾಪೀಡವೆಂಬ ಮತ್ತಗಜವನ್ನು ಕೊಂದು, ಅದರ ದಂತಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡು ಕಂಸನ ರಂಗಸ್ಥಳಕ್ಕೆ ಹಾರಿದಾಗ ಇತ್ತ ಸೇವೆಯನ್ನು ಕವಿಯು ವರ್ಣಿಸುವ ಪ್ರಕರಣವು. ಅಲ್ಪರಿಗೆ ಸಾಧಾರಣನಾಗಿ ಸೇವೆಯು, ಯೋಗಿಗಳಿಗಾದರೋ ಪರತತ್ವವಾಗಿ ಸೇವೆಯು. **ಅವ್ಯಕ್ತಂ ವ್ಯಕ್ತಿಮಾಪನ್ನಂ** ಎಂಬ ಪ್ರಯೋಗದಲ್ಲಿ ಇನ್ನೊಂದು ಸ್ವಾರಸ್ಯವು ತೋರಿಬರುತ್ತದೆ. ಜ್ಞಾನಿಗಳೂ **ಕೂಡ ಅವ್ಯಕ್ತಂ ವ್ಯಕ್ತಿಮಾಪನ್ನಂ** ಎಂದೇ ತಿಳಿಯುವರು; ಹೇಗೆಂದರೆ, ಎಲ್ಲಾ ಲೋಕವನ್ನೂ **"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ"** ಎಂದು ಹೇಳಿರುವ ಹಾಗೆ ಸ್ವರೂಪತಃ ವ್ಯಾಪಿಸಿರುವಾಗ ಅವ್ಯಕ್ತನೆಂದೇ, ಮತ್ತು ವಿಭವಾವತಾರ ಕಾಲಗಳಲ್ಲಿ ದಿವ್ಯಮಙ್ಗಳ ವಿಗ್ರಹಯುಕ್ತನಾಗುವದರ ಮೂಲಕ **ವ್ಯಕ್ತಿಮಾಪನ್ನಂ** - ವ್ಯಕ್ತಿಯನ್ನು ಹೊಂದಿದವನೆಂದೇ, ತಿಳಿಯುವರು ಎಂಬ ಧ್ವನ್ಯರ್ಥವು ಉಂಟಾಗುತ್ತದೆ. ಹಾಗೆ ಉಂಟಾಗಲು **ಅಬುದ್ಧಯಃ** ಎಂಬ ಪ್ರಯೋಗವೂ ಕಾರಣವು. ಅವತರಿಸಿರುವನು ಅಕಾರ ವಾಚ್ಯನಾದ ವಿಷ್ಣುವೇ ಎಂಬ **ಬುದ್ಧಯಃ**-ಬುದ್ಧಿಯುಳ್ಳವರು ಎಂಬ ಧ್ವನ್ಯರ್ಥವು ತೋರಿಬರುತ್ತದೆ. ಈ "ಮಲ್ಲಾನಾಮಶನಿಃ" ಎಂಬ ಮೇಲಿನ ಶ್ಲೋಕದಲ್ಲೇ **ಅವಿದುಷಾಂ** ಎಂಬುದಕ್ಕೆ ಅಕಾರವಾಚ್ಯನು ವಿಷ್ಣುವೆಂದು ತಿಳಿದವರೆಂದು ಕೆಲವರು ವ್ಯಾಖ್ಯಾನ ಮಾಡಿರುತ್ತಾರೆ.

**ಭಾಷ್ಯಾರ್ಥವು :—** ಮೊದಲು **ಮಮ ಪರಂಭಾವಂ** - ಎಂಬ ಪದಗಳಲ್ಲಿ, ಗರ್ಭಿತವಾದ ಅರ್ಥವನ್ನು ವ್ಯಕ್ತಪಡಿಸುತ್ತಾರೆ— **ಸರ್ವೈಃ ಕರ್ಮಭಿ ರಾರಾಧ್ಯೋಽಹಂ** - ನಾನು ಸಮಸ್ತ ಕರ್ಮಗಳಿಂದಲೂ ಆರಾಧಿಸಲಪ್ಪಡುವವನು, **ಸರ್ವೇಶ್ವರಃ** - ಸಮಸ್ತವನ್ನೂ ವ್ಯಾಪಿಸಿ ನಿಯಮಿಸುವ ಶಕ್ತಿಯುಳ್ಳವನಾಗಿರುವ ಸಮಸ್ತಕ್ಕೂ ಸ್ವಾಮಿಯಾದವನು, **ವಾಙ್ಮನಸಾ ಪರಿಚ್ಛೇದ್ಯಸ್ವಭಾವಃ** - ವಾಕ್ಕಿನಿಂದಲೂ ಮನಸ್ಸಿನಿಂದಲೂ ಇಷ್ಟೆಂದು ಹೇಳಲು ಸಾಧ್ಯವಿಲ್ಲದ

**ಭಾ. ಪೂರ್ವ ಮನಭಿವ್ಯಕ್ತ ಮಿದಾನೀಂ ಕರ್ಮವಶಾ ಜ್ಜನ್ಮವಿಶೇಷಂ ಪ್ರಾಪ್ಯ, ವ್ಯಕ್ತಿಮಾಪನ್ನಂ-ಪ್ರಾಪ್ತಂ, ಮಾಮಬುದ್ಧಯೋ ಮನ್ಯನ್ತೇ, ಅತೋ ಮಾಂ ನಾಶ್ರಯನ್ತೇ; ನಕರ್ಮಭಿ ರಾರಾಧಯನ್ತಿ ಚ || ೨೪ ||**

ಗುಣಗಳೇ ಮೊದಲಾದವುಗಳ ಮಾಹಾತ್ಮ್ಯಯುಳ್ಳವನು, **ಪರಮಕಾರುಣ್ಯದಿಂದಲೂ ಆಶ್ರಿತರಲ್ಲಿರುವ ವಾತ್ಸಲ್ಯದಿಂದಲೂ** ಸಹ, **ಸರ್ವಸಮಾಶ್ರಯಣೀಯತ್ವಾಯ**-ಸಮಸ್ತರೂ ನನ್ನನ್ನು ಆಶ್ರಯಿಸಿ ಉತ್ತೀರ್ಣರಾಗಲಿ ಎಂಬ ಭಾವದಿಂದ ಎಂದರೆ ನನ್ನಲ್ಲಿ ಶರಣಾಗತಿ ಮೊದಲಾದ ಉಪಾಯಾನುಷ್ಠಾನದ್ವಾರಾ ನನ್ನನ್ನು ಆಶ್ರಯಿಸಲಿ ಎಂಬ ಭಾವದಿಂದ, **ಅಜಹತ್ಸ್ವಭಾವ ಏವ** ಈ ಮೇಲೆ ಹೇಳಿದ ಪರತ್ವ ಸೂಚಕ ಕಲ್ಯಾಣ ಗುಣಗಳನ್ನು ಬಿಡದೇನೇ, ಅವತಾರ ಕಾಲದಲ್ಲಿ ತನ್ನ ಸ್ವಭಾವಗಳನ್ನು ಮರೆಸಿಕೊಳ್ಳದೆ ಅವತರಿಸುವನೆಂದು ಹಿಂದೆ ಅವತಾರ ರಹಸ್ಯವನ್ನು ಬೋಧಿಸುವ ಶ್ಲೋಕಗಳಿಂದ ವ್ಯಕ್ತವು. (ಗೀ. ೪. ೬) **ವಸುದೇವನ ಪುತ್ರನಾಗಿ ಅವತೀರ್ಣ ಇತಿ**-ಅವತರಿಸಿರುತ್ತಾನೆಂಬ, **ಪರಂ ಭಾವಂ** - ಪರತ್ವ ಸೂಚಕ ಭಾವವನ್ನು, ಅದು ಎಂಥಾದ್ದೆಂದರೆ, **ಅವ್ಯಯಂ**-ನಾಶರಹಿತವಾದುದು, ಮತ್ತು **ಅನುತ್ತಮಂ**-ಸರ್ವೋತ್ಕೃಷ್ಟವಾದುದು, ಇದಕ್ಕಿಂತಲೂ ಉತ್ಕೃಷ್ಟವಾದುದು ಇಲ್ಲದ ಇಂತಹ ಪರತ್ವವನ್ನು, **ಅಜಾನನ್ತಃ**-ತಿಳಿಯದೇ ಇರುವವರಾಗಿ, **ಪ್ರಾಕೃತ ರಾಜಸೂನು ಸಮಾನಂ** - ಇಹಲೋಕದ ರಾಜಕುಮಾರನಿಗೆ ಸಮಾನನನ್ನಾಗಿ **ಇತಃ ಪೂರ್ವಂ** - ಇದಕ್ಕೆ ಮೊದಲು, **ಅನಭಿವ್ಯಕ್ತಂ** - ಇದು **ಅವ್ಯಕ್ತಂ** ಎಂಬುದರ ವ್ಯಾಖ್ಯಾನವು, ಜನ್ಮವೆತ್ತದೇ ಇದ್ದವನು, **ಇದಾನೀಂ**-ಈಗ **ಕರ್ಮವಶಾಜ್ಜನ್ಮವಿಶೇಷಂ ಪ್ರಾಪ್ಯವ್ಯಕ್ತಿಂ** - ಕರ್ಮವಶನಾಗಿರುವದರಿಂದ ಜನ್ಮವನ್ನು ಎತ್ತಿ ಸರ್ವರಿಗೂ ಒಬ್ಬ ಮನುಷ್ಯರೂಪವನ್ನು, **ಆಪನ್ನಂ** ಎಂದರೆ **ಪ್ರಾಪ್ತಂ** - ಹೊಂದಿರುವವನನ್ನಾಗಿ, **ಮಾಂ**-ನನ್ನನ್ನು, **ಅಬುದ್ಧಯಃ** - ಜ್ಞಾನಶೂನ್ಯರು, **ಮನ್ಯಂತೇ** - ತಿಳಿಯುತ್ತಾರೆ. ಇದರಿಂದ ಜ್ಞಾನಿಗಳು ಹಾಗೆ ಭಾವಿಸುವದಿಲ್ಲವೆಂಬುದು ವ್ಯಕ್ತವು. ನನ್ನಲ್ಲಿ ಪರಂಭಾವವನ್ನೇ ತಿಳಿಯುವರು ಎಂದು ಹೇಳಿದಂತಾಯಿತು. **ಅತಃ ಮಾಂ ನಾಶ್ರಯನ್ತೇ** - ಆದುದರಿಂದ ಅಜ್ಞರು ನನ್ನನ್ನು ಆಶ್ರಯಿಸುವದಿಲ್ಲವು, ನನ್ನನ್ನು ಶರಣಹೊಂದುವದಿಲ್ಲವು, **ನಕರ್ಮಭಿ ರಾರಾಧಯನ್ತಿ ಚ**-ಆದುದರಿಂದ ಸ್ವವರ್ಣೋಚಿತ ಕರ್ಮಗಳಿಂದಲೂ, ನನ್ನನ್ನು ಆರಾಧನ ರೂಪವಾದ ಸ್ತುತಿ ನಮಸ್ಕಾರ ಅರ್ಚನೆಗಳಿಂದಲೂ, ಪೂಜಿಸುವದಿಲ್ಲವು. ಭಜನವೆಂದರೆ ಉಪಾಯಾನುಷ್ಠಾನವು; ಇಲ್ಲಿ ಉಪಾಸನೆಯು, ಅದು ಸಿದ್ಧಿಸುವದಕ್ಕಾಗಿ ತದಙ್ಗರೂಪ ಕರ್ಮಯೋಗವನ್ನೇ ಅನುಷ್ಠಿಸುವದಿಲ್ಲವು; ಹೀಗಿರುವಾಗ ನನ್ನನ್ನು ಅವರು ಉಪಾಸಿಸುವದೆಂಬುದು ಎಂದಿಗೂ ಇಲ್ಲವು. ಯಾವಾಗ ಉಪಾಸನೆಯು ಇಲ್ಲವೋ ಅವಕ್ಕೆ ಉಪಕಾರಕಗಳಾಗಿ ಸ್ತುತಿ ನಮಸ್ಕಾರಾದಿಗಳನ್ನೂ ಕೂಡ ಮಾಡುವದಿಲ್ಲವೆಂಬ ಭಾವವೂ ತೋರಿಬರುತ್ತದೆ. ಭಜನವು ಎಂದರೆ ಆಶ್ರಯಣವು ಪ್ರಪದನವಾಗಲಿ ಆಗಬಹುದು. ಇಲ್ಲಿ **ಮಮ ಭಾವ ಮಜಾನಂತಃ** ಎಂಬುದಕ್ಕೆ ಪ್ರಮಾಣ ಸಿದ್ಧವಾದ ನನ್ನ ಯಥಾರ್ಥವಾದ ಸ್ಥಿತಿಯನ್ನು ತಿಳಿದವರಾಗಿ ಎಂದು ಕೆಲವರು ಅರ್ಥ ಮಾಡಿರುತ್ತಾರೆ. ಹೀಗೆ ಹೇಳಿದರೆ ಶ್ಲೋಕ ಸ್ವಾರಸ್ಯಕ್ಕೇ ಕುಂದಕವು. ಈ ಲೋಕದಲ್ಲಿ ಅನೇಕರು **ಅಬುದ್ಧಯಃ** - ಅಜ್ಞರೇ ಸರಿ ಏಕೆಂದರೆ **ಪರಂ ಭಾವ ಮಜಾನಂತಃ** - ಕಣ್ಣಿಗೆ ಕಾಣುವಹಾಗೆಯೇ ನನ್ನ ಪರತ್ವವನ್ನು ನಾನಾ ವಿಧವಾಗಿ ವ್ಯಕ್ತಪಡಿಸಿರುತ್ತೇನೆ; ಯಶೋದೆಗೆ ಬಾಯಲ್ಲಿಯೇ ಸಮಸ್ತ ವಿಶ್ವವನ್ನೂ ತೋರಿಸಿದುದೂ ಅನೇಕ ತನ್ನ ದಿವ್ಯ ಚೇಷ್ಟಿತಗಳಾದ ಗೋವರ್ಧನೋದ್ಧರಣಾದಿ ಅತಿಮಾನುಷ ದಿವ್ಯ ಚೇಷ್ಟಿತಗಳನ್ನೂ ತೋರಿಸಿದುದೂ ಅನೇಕ ಅಸುರರನ್ನು ಅತಿ ಸುಲಭವಾಗಿ ಕೊಂದುದೂ ಹೀಗೆ ತನ್ನ **ಪರಂ ಭಾವ ಮಜಾನಂತಃ** ತನ್ನ

**ಭಾ. ಅವ. ಕುತ ಏವ ನ್ನಪ್ರಕಾಶ್ಯತ ಇತ್ಯತ್ರಾಹ—**

**ಮೂ. ನಾಹಂ ಪ್ರಕಾಶ ಸ್ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋ ಯಂ ನಾಭಿಜಾನಾತಿ ಲೋಕೋ ಮಾ ಮಜ ಮವ್ಯಯಮ್ ॥ ೨೫.**

ಪರತ್ವವನ್ನು ತಿಳಿಯದಿರುವ ಮೂಢರು ; ತನ್ನ ಪರತ್ವವನ್ನು ಚನ್ನಾಗಿ ವ್ಯಕ್ತಪಡಿಸಿದ್ದರೂ, ಕಣ್ಣು ಬಿಟ್ಟು ನೋಡವೆ ಈ ಅಜ್ಞರು ನನ್ನನ್ನು ಆಶ್ರಯಿಸುವದಿಲ್ಲವೆಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು :—**ನೀನಾದರೋ ಕೃಪೌದಾರ್ಯಾದಿ ಗುಣಗಳಿಂದ ಪ್ರೇರಿತನಾಗಿ ಸರ್ವರೂ ನಿನ್ನನ್ನಾಶ್ರಯಿಸಿ ಉತ್ತೀರ್ಣರಾಗಲಿ ಎಂದು ಅವತರಿಸಿರುತ್ತೀಯೇ. ನೀನು ಸಾಧಾರಣ ಮನುಷ್ಯನಲ್ಲವು ಎಂದು ಸರ್ವರೂ ತಿಳಿದು ನಿನ್ನನ್ನಾಶ್ರಯಿಸಲಿ ಎಂದು ಅತಿಮಾನುಷ ದಿವ್ಯ ಚೇಷ್ಟಿತಗಳನ್ನು ಪ್ರದರ್ಶಿಸಿರುತ್ತೀಯೇ ; ಹೀಗಿದ್ದರೂ ದುರ್ಯೋಧನ ದುಶ್ಯಾಸನಾದಿ ಕ್ರೂರ ಕರ್ಮಿಗಳಿಗೂ ಇನ್ನೂ ಅನೇಕ ಸಾಧಾರಣ ಮನುಷ್ಯರಿಗೂ ಪರತತ್ವ ವೇಬುದು ಏಕೆ ಗೋಚರವಲ್ಲವು ಎಂದು ಅರ್ಜುನನು ಪ್ರಶ್ನಿಸಬಹುದೆಂದು ಯೋಚಿಸಿ, ಅದಕ್ಕೆ ಉತ್ತರವಾಗಿ ಈ ಮುಂದಿ ' ಶ್ಲೋಕವನ್ನು ಅನುಗ್ರಹಿಸಿರುತ್ತಾರೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ.—**ಕುತಃ**-ಯಾವ ಕಾರಣದಿಂದ, **ಏವಂ**-ಈ ಪ್ರಕಾರವಾಗಿ ಎಂದರೆ ನಾನು ನನ್ನ ದಿವ್ಯ ಚೇಷ್ಟಿತಗಳಿಂದ ಪರತತ್ವವೆಂದು, **ನಪ್ರಕಾಶ್ಯತೇ** - ವ್ಯಕ್ತವಾಗಿದ್ದರೂ, ಅವರಿಗೆ ತೋರಿಬರುವದಿಲ್ಲವು, ಇತ್ಯತ್ರಾಹ-ಎಂಬೀ ವಿಷಯದಲ್ಲಿ ಹೇಳುತ್ತಾರೆ. ಅವರುಗಳು ತಮ್ಮ ಪ್ರಾರಬ್ಧ ದುಷ್ಕರ್ಮಗಳ ಮೂಲಕ ಕಣ್ಣು ಬಿಟ್ಟು ನೋಡುವದಿಲ್ಲವು. ಆದುದರಿಂದ ನನ್ನ ಪರತ್ವವು ಅವರಿಗೆ ಪ್ರಕಾಶಿಸದು ಎಂದು ಹೇಳುತ್ತಾರೆ.

**ಮೂಲಕ್ಕೆ ಅರ್ಥವು :—**ನನ್ನ ಯೋಗಮಾಯಾ ಶಕ್ತಿಯಿಂದ ಸಾಧಾರಣ ಜನರು ನಾನು ಪರತತ್ವವೆಂದು ಅರಿಯಲಾರರೆಂದು ತಿಳಿಸುತ್ತಾರೆ.—**ಸರ್ವಸ್ಯ** - ಸಮಸ್ತ ಜನಗಳಿಗೂ **ಅಹಂ**-ಸಕಲರೂ ಆಶ್ರಯಿಸಲು ಯೋಗ್ಯವಾದ ಕಾರುಣ್ಯ ಸೌಲಭ್ಯ ಸೌಶೀಲ್ಯಾದಿ ಕಲ್ಯಾಣ ಗುಣಗಳಿಂದ ಯುಕ್ತನಾದ ನಾನು, **ನ ಪ್ರಕಾಶಃ** - ಹಾಗೆ ಪರತತ್ವವೆಂದು **ತೋರುವದೇ** ಇಲ್ಲವು, ಚನ್ನಾಗಿ ಕಣ್ಣು ಬಿಟ್ಟು ನೋಡಿದುದಾದರೆ ಸರ್ವಸಮಾಶ್ರಯಣೀಯತ್ವಕ್ಕೆ ಯೋಗ್ಯವಾದ ಕಲ್ಯಾಣ ಗುಣನಿಧಿಯಾಗಿದ್ದರೂ ಸಮಸ್ತರಿಗೂ ನಾನು ಪ್ರಕಾಶನಲ್ಲವು, ಇದಕ್ಕೆ ಕಾರಣವೇನು ಎಂದು ಕೇಳುತ್ತೀಯೋ ? **ನಾನು, ಯೋಗಮಾಯಾ ಸಮಾವೃತಃ** - ಯೋಗವೆಂದರೆ ಇಲ್ಲಿ ಸಂಬಂಧವು, ಮಾನುಷರೂಪ ಸಂಬಂಧವಾದ **ಮಾಯಾ**-ವಿಚಿತ್ರ ಸೃಷ್ಟಿಯನ್ನುಂಟುಮಾಡುವ ಶಕ್ತಿಯಿಂದ ಸೇರಿರುವೆನಾದುದರಿಂದ, **" ಮಾಯಾ "** ಶಬ್ದಕ್ಕೆ ವಿಚಿತ್ರ ಸೃಷ್ಟಿಕರತ್ವವೇ ಸರಿಯಾದ ಅರ್ಥವೆಂದು ಹಿಂದೆಯೇ (ಗೀ. ೭.೧೪) ಸ್ಥಾಪಿಸಲ್ಪಟ್ಟಿರುತ್ತದೆ. ಎಲ್ಲರೂ ತನ್ನ **" ಪರಂಭಾವ "**ವನ್ನು ತಿಳಿಯದೇ ಇರುವದಕ್ಕೆ ಕಾರಣವು ತನ್ನ **ಯೋಗಮಾಯಾ** ಸಮಾವೃತತ್ವವೆಂದು ತಿಳಿಸಿರುತ್ತಾರೆ; ಅವರುಗಳು ಭ್ರಮಯುಕ್ತರಾಗುವದಕ್ಕೆ ಕಾರಣವು ನನ್ನ ಮಾನುಷ ಶರೀರವು ; ಅತ್ಯದ್ಭುತ ದಿವ್ಯಚೇಷ್ಟೆಯಿಂದ ಸೇರಿದ್ದರೂ ಕೂಡ ಮಾನುಷದೇಹ ಯುಕ್ತನಾಗಿರುವದರಿಂದ ಮನುಷ್ಯನೆಂದೇ ಭಾವಿಸುವರು ಎಂಬರ್ಥವು ; ಆದುದರಿಂದಲೇ, **ಮೂಢೋಯಂ ಲೋಕಃ**-ಹೀಗೆ ಅಜ್ಞರಾದ ಸಮಸ್ತ ಲೋಕದ ಜನರೂ, ತನ್ನ ಭಕ್ತರನ್ನು ವ್ಯಾವರ್ತಿಸಿ ಸಮಸ್ತಲೋಕದ ಜನವೆಂಬಭಿಪ್ರಾಯವು, **ಮಾಂ** - ಪರಂಭಾವವನ್ನು ಹೊಂದಿದ ನನ್ನನ್ನು, **ಅಜಂ ಅವ್ಯಯಂ** - ಉತ್ಪತ್ತಿ ನಾಶರಹಿತನೆಂದು ಎಂದರೆ ಜನ್ಮ ಮರಣಗಳುಳ್ಳ ಮನುಷ್ಯನಲ್ಲವು, ನಾನು ನಿರ್ವಿಕಾರನಾದ ಸರ್ವಕಾರಣ ವಸ್ತುವಾದ ನಿತ್ಯನಾದ ಸರ್ವೇಶ್ವರ ನೆಂದು, **ನಾಭಿಜಾನಾತಿ** - ತಿಳಿಯುವದಿಲ್ಲವು. ನಾನು ಮನುಷ್ಯನಾಗಿ ಅವತರಿಸಿರುವದರಿಂದ,

**ಭಾ. ಕ್ಷೇತ್ರಜ್ಞಾಸಾಧಾರಣ ಮನುಷ್ಯತ್ವಾದಿ ಸಂಸ್ಥಾನ ಯೋಗಾಖ್ಯ ಮಾಯಯಾ ಸಮಾವೃತೋ ಹಂ ನ ಸರ್ವಸ್ಯ ಪ್ರಕಾಶಃ । ಮಯಿ ಮನುಷ್ಯತ್ವಾದಿ ಸಂಸ್ಥಾನದರ್ಶನ**

ಅವರ ಪ್ರಾರಬ್ಧ ಕರ್ಮಾನುಗುಣವಾಗಿ ನನ್ನ ದಿವ್ಯಚೇಷ್ಟಿತಗಳು ಅವರುಗಳ ಕಣ್ಣಿಗೆ ಬೀಳುವದಿಲ್ಲವು, ಕೇವಲ ಸಾಮಾನ್ಯ ಮನುಷ್ಯನೆಂದೇ ಭಾವಿಸಿಬಿಡುವರು ಎಂಬ ಭಾವವು. ಕೆಲವರು **ಯೋಗಮಾಯಾ ಸಮಾವೃತಃ** ಎಂಬುದಕ್ಕೆ ಬೇರೆ ಅರ್ಥವನ್ನು ಕಲ್ಪಿಸಿರುತ್ತಾರೆ, ಶ್ರೀಕೃಷ್ಣನು ತಾನೇ ಗುಣಕೃತವಾದ ಒಂದು ತೆರೆಯ ಮೂಲಕ ಬಚ್ಚಿಟ್ಟುಕೊಂಡಿದ್ದಾನೆಂದು ಅರ್ಥ ಮಾಡಿರುತ್ತಾರೆ, ಇದರಿಂದ ಸರ್ವೇಶ್ವರನು ತಾನೇ ದೋಷಿ ಎಂದು ಹೇಳಿಕೊಂಡಂತೆ ಆಯಿತು. ಕಾರುಣ್ಯ ಸೌಲಭ್ಯ ಸೌಶೀಲ್ಯಾದಿ ಗುಣಯುಕ್ತನಾಗಿ ಸರ್ವರೂ ಆಶ್ರಯಿಸಲಿ ಎಂದಿರುವ ಪರಮೋದಾರ ಭಾವಯುಕ್ತನಾಗಿ ಅವತರಿಸಿರುವಾಗ, ಎಲ್ಲರೂ ಎಲ್ಲಿ ಆಶ್ರಯಿಸಿಬಿಡುತ್ತಾರೋ ಎಂದು ವಂಚಕನಾಗಿ ತೆರೆಯನ್ನು ಹಾಕಿಕೊಂಡಿದ್ದಾನೆಂದು ಅರ್ಥ ಮಾಡುವದು ತುಂಬಾ ವಿರುದ್ಧವು. ಇದೂ ಅಲ್ಲದೆ ತಾನು ತೆರೆಯಲ್ಲಿ ಬಚ್ಚಿಟ್ಟುಕೊಂಡು, ಲೋಕದ ಜನರು ತನ್ನನ್ನು ತಿಳಿಯಲಿಲ್ಲ, **ಮೂಢೋಯಂ ಲೋಕಃ** ಎಂದು ಬೈಯ್ಯಲು, ಪರತ್ವವನ್ನು ಬಿಡದೇನೆ ಅವತರಿಸುವದಕ್ಕೆ ಕಾರಣವೇ ಇಲ್ಲವಾಗುತ್ತದೆ. ಯಾವಾಗ ಮೂಢರೆಂದರೆ ತಾನು ಪರತ್ವವನ್ನು ಬಿಡದೇನೆ ಅವತರಿಸಿ, ಪರತ್ವವನ್ನು ತಿಳಿಯಲು ಬೇಕಾದಷ್ಟು ನಿದರ್ಶನಗಳಿದ್ದರೂ, ಅದರಿಂದ ತನ್ನ **ಪರಂಭಾವವನ್ನು** ತಿಳಿಯದೇ ಹೋದರೆ ಆಗ **ಮೂಢೋಯಂ ಲೋಕಃ** ಎಂದು ಹೇಳಬಹುದು. ಇದು ನಿಂದೆಯೇ ಅಲ್ಲವು, ಪರಿತಾಪದಿಂದಲೇ ಹೇಳಿದ ಮಾತು. ಮನುಷ್ಯ ದೇಹಯುಕ್ತನಾಗಿದ್ದರೂ ತನ್ನ ಅತಿಮಾನುಷ ದಿವ್ಯ ಚೇಷ್ಟಿತಗಳಿಂದಲಾಗಲಿ, ಸರ್ವರೂ ತನ್ನ ಪರತ್ವವನ್ನು ತಿಳಿದು ಆಶ್ರಯಿಸಲಿ, ಎಂದು **ಯೋಗಮಾಯಾ ಸಮಾವೃತಃ** - ಮಾನುಷ ರೂಪ ಸಂಬಂಧವಾದ, **ಮಾಯಾ** - ದಿವ್ಯಾದ್ಭುತ ಸೃಷ್ಟಿ ಕರತ್ವದಿಂದ, **ಸಮಾವೃತಃ**-ಕೂಡಿದವನು ಎಂದರೆ ಮಾನುಷ ರೂಪದಿಂದ ದಿವ್ಯ ವಿಚಿತ್ರ ಚೇಷ್ಟೆಗಳಿಂದ ಸೇರಿದವನು ಎಂಬರ್ಥವೇ ಸರಸವು. ಆದರೆ **ಸಮಾವೃತಃ** ಎಂಬ ಪ್ರಯೋಗದಿಂದ ಯಾವುದರಿಂದಲೋ ಆವರಿಸಲ್ಪಟ್ಟು ಮರೆಸಿಕೊಂಡಿರುವನೆಂಬರ್ಥ ತೋರಿಬರುವದಿಲ್ಲವೋ ? ಎಂದರೆ ತನ್ನ ಮಹಾತ್ಮ್ಯೆಯನ್ನು ತಿಳಿಸುವ ದಿವ್ಯ ಕಲ್ಯಾಣಗುಣಗಳೇನು, ಅತ್ಯದ್ಭುತಗಳಾದ ಅತಿಮಾನುಷ ದಿವ್ಯ ಚೇಷ್ಟಿತಗಳೇನು, ಇವುಗಳಿಂದಲೇ ಸುತ್ತುವರಿಯಲ್ಪಟ್ಟವನು ಎಂಬರ್ಥವು. ಹೀಗಿದ್ದರೂ ತನ್ನನ್ನು ತಿಳಿಯದ ಮೂಢೋಯಂ ಲೋಕವು ಎಂಬರ್ಥವು. ಸುಂಟರಗಾಳಿಯ ರೂಪದಲ್ಲಿ ಬಂದ ತೃಣಾವರ್ತನನ್ನು, ನಾನು ಬಾಲರೂಪದಲ್ಲಿದ್ದರೂ ಗಂಟಲು ಹಿಸಿಕಿ ಬಂಡೆಯ ಮೇಲೆ ಬೀಳಿಸಿದರೆ ಏನೋ ಕಲ್ಲಿನ ಮೇಲೆ ಬಿದ್ದು ಸತ್ತನು ಎಂಬುವರು. ಮಗುವಾದ ನಾನು ಆತನ ಮೇಲೆ ಬಿದ್ದುದರಿಂದ ನಾನು ಸಾಯಲಿಲ್ಲವೆಂದು ಹೀಗೆ ಸಾಮಾನ್ಯವಾಗಿ ತಿಳಿಯುವರು. ಆದುದರಿಂದ ಅಜ್ಞರು ಎಂಬ ಭಾವವು. ಶಕಟಾಸುರನನ್ನು ಬಾಲನಾಗಿ ನಾನು ಕೊಂದರೆ ಎಲ್ಲೋ ಅಪಾಯ ಸ್ಥಳಕ್ಕೆ ಬಾಲನು ಒದ್ದುಬಿಟ್ಟನು, ಅದರಿಂದ ಸತ್ತನು ಎನ್ನುವರೇ ವಿನಾ ನನ್ನ ಅತ್ಯದ್ಭುತ ವ್ಯಾಪಾರವೆಂಬ ಭಾವವು ಅವರಿಗಿಲ್ಲವು.

**ಭಾಷ್ಯಾರ್ಥವು :**—ಹೀಗೆ ಅತ್ಯದ್ಭುತ ದಿವ್ಯ ಚೇಷ್ಟಿತಗಳಾದ ನನ್ನ **ಪರತ್ವ**ವನ್ನು ತಿಳಿಯಬಹುದಾಗಿದ್ದರೂ ಎಲ್ಲರೂ ತಿಳಿಯದೇ ಇರುವದಕ್ಕೆ ಕಾರಣವು **"ಯೋಗಮಾಯಾ ಸಮಾವೃತತ್ವ"** ವನ್ನು ಹೇತುತ್ವೇನ ಹೇಳಿರುವದರಿಂದ, ಕಾರಣವನ್ನು ತಿಳಿಸುವ ಉದ್ದಿಶ್ಯವಾಗಿ ಮೊದಲು ಇದಕ್ಕೆ ಭಾಷ್ಯವನ್ನು ಬರೆದಿರುತ್ತಾರೆ. **ಕ್ಷೇತ್ರಜ್ಞಾಸಾಧಾರಣ ಮನುಷ್ಯತ್ವಾದಿ ಸಂಸ್ಥಾನ ಯೋಗಾಖ್ಯಮಾಯಯಾ** - ಜೀವಾತ್ಮನಿಗೆ ಮಾತ್ರವೇ ಅಸಾಧಾರಣವಾದ

**ಭಾ. ಮಾತ್ರೇಣ ಮೂಢೋऽಯಂ ಲೋಕೋ-ಮಾಮತಿ ವಾಯ್ವಿಂದ್ರ ಕರ್ಮಾಣ ಮತಿ ಸೂರ್ಯಾಗ್ನಿ ತೇಜಸ ಮುಪಲಭ್ಯಮಾನ ಮಜ ಮವ್ಯಯಂ ನಿಖಿಲಜಗದೇಕ ಕಾರಣಂ ಸರ್ವೇಶ್ವರಂ ಮಾಂ ಸರ್ವಸಮಾಶ್ರಯಣೀಯತ್ವಾಯ ಮನುಷ್ಯತ್ವ ಸಂಸ್ಥಾನಮಾಸ್ಥಿತಂ ನಾಭಿಜಾನಾತಿ || ೨೫ ||**

ಮನುಷ್ಯ ಮೊದಲಾದ ಶರೀರದ ಸಂಬಂಧರೂಪ ಮಾಯೆಯಿಂದ ಎಂದರೆ ಸೃಷ್ಟಿ ಕರತ್ವದಿಂದ, **ಸಮಾವೃತಃ** – ಆವರಿಸಲ್ಪಟ್ಟಿರುವದರಿಂದ ಮನುಷ್ಯ ಶರೀರ ಧಾರಣೆಯು ಜೀವಾತ್ಮನಿಗೇನೇ ಅಸಾಧಾರಣವಾದುದು, ಸರ್ವೇಶ್ವರನಿಗೆ ಅಸಾಧಾರಣವಾದುದಲ್ಲವು, ಯಾವಾಗ ಶ್ರೀಕೃಷ್ಣನು ಮಾನುಷರೂಪಧಾರಿಯೋ ಆಗ ಆ ಕಾರಣದಿಂದ ಎಲ್ಲರೂ ಮನುಷ್ಯನೆಂದೇ ತಿಳಿಯುವರೇ ವಿನಾ ಸರ್ವೇಶ್ವರನೆಂದು ತಿಳಿಯಲಾರರೆಂಬುದು ಅಭಿಪ್ರಾಯವು. ಇಲ್ಲಿ **ಮಾಯಾ** ಶಬ್ದಕ್ಕೆ ಅರ್ಥವನ್ನು ಬರೆಯಲಿಲ್ಲವು, ಏಕೆಂದರೆ ಹಿಂದೆ ಮಾಯಾ ಶಬ್ದಕ್ಕೆ ವಿಚಿತ್ರ ಸೃಷ್ಟಿ ಕರತ್ವವೆಂದು ಅರ್ಥವನ್ನು ಹೇಳಿದ್ದರು. ಮಾಯಾ, ಎಂಬುದಕ್ಕೆ ಪ್ರಕೃತಿಯೆಂದರ್ಥ ಮಾಡಿದರೆ, ರೂಪವಿಲ್ಲದ ಸಂದರ್ಭದಲ್ಲೂ ಪ್ರಕೃತಿಯು ಪರಸ್ವರೂಪಕ್ಕೂ ಶರೀರವಾದುದರಿಂದ ಒಂದು ವಿಧವಾಗಿ ಮಾಯಾ ಸಮಾವೃತತ್ವ ಆಗಲೂ ಉಂಟೇ ಉಂಟು. ಈಗ ರೂಪವನ್ನು ಹೊಂದಿರುವಾಗ ಮನುಷ್ಯ ಸಂಸ್ಥಾನವು ಒದಗಿರುವದರಿಂದ ಅದರ ಆವರಣವೆಂಬುದು ತಾತ್ಪರ್ಯವು; "**ಯವನಿಕಾಮಾಯಾ**" (ಚತುಶ್ಲೋಕೀ) ಎಂಬಲ್ಲಿ ಹೇಗೆ ಭಾವನೆಯೋ ಇಲ್ಲಿಯೂ **ಭಾವಿಸ** ತಕ್ಕದ್ದು. ಆದುದರಿಂದ ಯೋಗಮಾಯಾವೆಂದರೆ ಮನುಷ್ಯತ್ವಾದಿ ಸಂಬಂಧರೂಪ **ಮಾಯಾ**; ಅಂತಹ ಯೋಗಮಾಯಾ ಎಂಬುದು ಪರಮಾತ್ಮನ ಒಂದು ಶಕ್ತಿಯು, ಇದು ಪ್ರಕೃತ್ಯಾವರಣವನ್ನುಂಟುಮಾಡುವ ಪರಮಾತ್ಮನಿಗೇನೇ ಅಸಾಧಾರಣವಾದ ಶಕ್ತಿಯು ಎಂದು ತಿಳಿಯತಕ್ಕದ್ದು. ಆದುದರಿಂದ **ಮಾಯಾ** ಶಬ್ದವು ಇಂದ್ರಜಾಲವೆಂಬರ್ಥವಲ್ಲವೆಂದು ತಿಳಿಯತಕ್ಕದ್ದು. ಹೀಗೆ **ಯೋಗಮಾಯಾ ಸಮಾವೃತ**ನಾದುದರಿಂದಲೇ **ಅಹಂ** – ನಾನು **ನ ಸರ್ವಸ್ಯ ಪ್ರಕಾಶಃ**– ಸರ್ವರಿಗೂ ವೇದ್ಯನಲ್ಲವು. ಇಲ್ಲಿ ಪ್ರಕಾಶವು ಹೇಗೆ? ಎಂದರೆ, ಪರತ್ವೇನ ಪ್ರಕಾಶವು, ನಾನು ಪರತತ್ವವೆಂದು ಪ್ರಕಾಶವಾಗುವದಿಲ್ಲವೆಂಬ ಭಾವವು. ಹಾಗಾದರೆ ನನ್ನದೇ ದೋಷವೆನ್ನುತ್ತೀಯೋ? ಹಾಗಲ್ಲವು, ನನ್ನಿಂದೇನೂ ದೋಷವಿಲ್ಲವೆಂದು ಹೇಳುತ್ತಾರೆ. ಲೋಕದ ಜನರು ನನ್ನ ಮಹಾತ್ಮ್ಯೆಯನ್ನು ತೋರಿಸಿದರೂ ನೋಡದೇ ಹೋಗಿರುತ್ತಾರೆ. ನಾನು ಅವತರಿಸಿರುವದು ಎಲ್ಲರೂ ನನ್ನನ್ನು ಪರತತ್ವವೆಂದು ತಿಳಿದು ಸರ್ವರೂ ಆಶ್ರಯಿಸಲಿ ಎಂದು; ಹೀಗಿದ್ದರೂ ನನ್ನ ಮಾಹಾತ್ಮ್ಯೆಯನ್ನು ತಿಳಿಯದೇ ಹೋಗಿರುತ್ತಾರೆಂದು ತಿಳಿಸುತ್ತಾರೆ. ಇದು ನನ್ನ ತಪ್ಪಲ್ಲವು. ಅವರವರುಗಳ ದುಷ್ಕರ್ಮಗಳ ಮೂಲಕ ಮೂಢರು ಎಂದು ಮುಂದೆ ಹೇಳುತ್ತಾರೆ. ಉತ್ತರಾರ್ಧವು ಪೂರ್ವಾರ್ಧದ ವಿವರಣವಾಗಿ ಭಾಷ್ಯವನ್ನು ಬರೆದಿರುತ್ತಾರೆ. **ಮೂಢೋಯಂ** ಎಂಬುದಕ್ಕೆ ಅರ್ಥ ಬರೆಯುವರಾಗಿ ಹೇಗೆ ಮೂಢರೆಂಬುದನ್ನು ತಿಳಿಸುತ್ತಾರೆ.—**ಮಯಿ**– ಹೀಗೆ **ಯೋಗಮಾಯಾ ಸಮಾವೃತ**ನಾದ ನನ್ನಲ್ಲಿ, **ಮನುಷ್ಯತ್ವಾದಿ ಸಂಸ್ಥಾನದರ್ಶನ ಮಾತ್ರೇಣ** – ಮನುಷ್ಯ ಸಂಬಂಧವಾದ ಶರೀರದ ದರ್ಶನ ಮಾತ್ರದಿಂದ, **ಮೂಢೋಯಂ ಲೋಕಃ** – ಮೂಢರಾದ ಈ ಲೋಕದ ಜನರು, **ಮಾಂ** – ನನ್ನನ್ನು, ನಾನು ಎಂತವನೆಂದರೆ ಹೇಳುತ್ತಾರೆ.—**ಅತಿವಾಯ್ವಿಂದ್ರಕರ್ಮಾಣಂ**–ವಾಯು, ಇಂದ್ರರಿಗಿಂತಲೂ ಅತಿಶಯಿತವಾದ ಕರ್ಮಗಳುಳ್ಳ ನನ್ನನ್ನು, ಮತ್ತು ಎಂತಹ ನನ್ನನ್ನು ಎಂದರೆ "**ಅತಿ ಸೂರ್ಯಾಗ್ನಿತೇಜಸಂ**– ಸೂರ್ಯನೇನು ಅಗ್ನಿಯೇನು ಇವರುಗಳು ತೇಜಸ್ಸಿಗಿಂತಲೂ ಅತಿಶಯವಾದ ತೇಜಸ್ಸುಳ್ಳ ನನ್ನನ್ನು, **ಉಪಲಭ್ಯಮಾನಂ** – ಹೀಗೆ ಕಣ್ಣು ಬಿಟ್ಟು ನೋಡುವವರಿಗೆ ತೋರುತ್ತಿರುವ

ನನ್ನನ್ನು, **ಅಜಮವ್ಯಯಂ ನಿಖಿಲ ಜಗದೇಕ ಕಾರಣಂ**-ಉತ್ಪತ್ತಿ ನಾಶವಿಲ್ಲದೆ ಸಮಸ್ತ ಜಗತ್ತಿಗೂ ಮುಖ್ಯ ಕಾರಣಭೂತನಾಗಿ ನಿರ್ವಿಕಾರನಾದ, ಇಲ್ಲಿ **ಅವ್ಯಯಂ** ಎಂದು ಹೇಳಿದುದ ರಿಂದ ಧರ್ಮದಲ್ಲೂ ಸ್ವರೂಪದಲ್ಲೂ ಜಗತ್ತಿನೊಂದಿಗಿದ್ದರೂ ನಿರ್ವಿಕಾರನೆಂಬ ಭಾವವು ಸೂಚಿತವು. ಸರ್ವೇಶ್ವರನಾದ **ಮಾಂ** ಇಂತಹ ನನ್ನನ್ನು, **ಸರ್ವಸಮಾಶ್ರಯಣೀಯತ್ವಾಯ** - ಸರ್ವರೂ ನನ್ನನ್ನು ಶರಣಾಗತಿಯ ಮೂಲಕ ಆಶ್ರಯಿಸಲೆಂಬದಾಗಿ, **ಮನುಷ್ಯ ಸಂಸ್ಥಾನ ಮಾಸ್ಥಿತಂ**-ಮನುಷ್ಯಾಕಾರವನ್ನು ಹೊಂದಿದವನನ್ನಾಗಿ, **ನಾಭಿಜಾನಾತಿ**-ತಿಳಿಯುವದಿಲ್ಲವು. ಹಾಗಾದರೆ ಆ ಮೂಢರು ಹೇಗೆ ತಿಳಿಯುವರು ಎಂದರೆ ಕರ್ಮಾಧೀನನಾಗಿ ಜನ್ಮವೆತ್ತಿರುವ ಒಬ್ಬ ಸಾಧಾರಣ ಮನುಷ್ಯನು, ವಸುದೇವ ಪುತ್ರನು, ಎಂದು ಭಾವಿಸುವರು ಎಂಬ ತಾತ್ಪರ್ಯವು. ವಾಯು, ಇಂದ್ರ ಮೊದಲಾದವರುಗಳಿಗೂ ಅತಿಶಯವಾದ ದಿವ್ಯಾದ್ಭುತ ಚೇಷ್ಟಿತಗಳುಳ್ಳವ ನೆಂದೂ ಸೂರ್ಯಾಗ್ನಿಗಳ ತೇಜಸ್ಸಿಗೂ ಮೀರಿದ ತೇಜಸ್ಸುಳ್ಳವನೆಂದೂ ನಾನು ತೋರ್ಪಡಿಸಿ ಕೊಂಡಿದ್ದರೂ ಅದನ್ನು ಗಮನಿಸದೆ, ಮೂಢರಾದ ಈ ಲೋಕದ ಜನರು ನಾನು ಮನುಷ್ಯ ರೂಪದಿಂದ ಅವತರಿಸಿರುವದರಿಂದ ಕೇವಲ ಮನುಷ್ಯನೆಂದೇ ಭಾವಿಸುವರು. ಮನುಷ್ಯಾವ ತಾರಿಯಾಗಿದ್ದರೂ, ನನ್ನ ಅತ್ಯದ್ಭುತ ಕಲ್ಯಾಣಗುಣಗಳೇನು, ದಿವ್ಯ ತೇಜಸ್ಸೇನು, ದಿವ್ಯಾದ್ಭುತ ಅತಿಮಾನುಷ ಚೇಷ್ಟಿತಗಳೇನು ಇವುಗಳೊಂದನ್ನೂ ಪರಿಗಣಿಸದೇ ಇರುವ ಮೂಢ ಜನವು ನನ್ನ ಪರತ್ವವನ್ನು ತಿಳಿಯದವರಾಗಿರುತ್ತಾರೆಂಬ ಭಾವವು. **" ನತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾನ್ತಿ ಕುತೋಽಯ ಮಗ್ನಿಃ। ತಮೇವ ಭಾನ್ತ ಮನುಭಾತಿ ಸರ್ವಂ, ತಸ್ಯ ಭಾಸಾ ಸರ್ವಮಿದಂ ವಿಭಾತಿ॥ "** ಎಂಬ ಕಠ ವಾಕ್ಯದಲ್ಲಿ (೨. ೫. ೧೫) ಸೂರ್ಯ ಅಗ್ನಿಗಳಿಗೂ ತೇಜಸ್ಸನ್ನುಂಟುಮಾಡಿದವನು ತಾನು, ಆದುದರಿಂದ **ಅತಿ ಸೂರ್ಯಾಗ್ನಿ ತೇಜಸಂ** ಎಂಬ ಪ್ರಯೋಗವು. ಒಬ್ಬ ಸಿದ್ಧನ ರೂಪವನ್ನು ಧರಿಸಿ ವಾಯು ಮತ್ತು ಅಗ್ನಿಯ ಹೆಮ್ಮೆಯನ್ನು ಮುರಿದರೆಂಬ ಇತಿಹಾಸವು ಶ್ರುತಿ ಪ್ರತಿಪಾದ್ಯವಾದುದರಿಂದ, **ಅತಿ ವಾಯ್ವಿಂದ್ರ ಕರ್ಮಾಣಂ** ಎಂಬ ಪ್ರಯೋಗವು. ಅಥವಾ ವಾಯುವಿಗಿಂತ ಹೆಚ್ಚು ಮಾಹಾತ್ಮ್ಯೆಯುಳ್ಳವನೆಂದು ಎಲ್ಲಿ ತೋರ್ಪಡಿಸಿಕೊಂಡರೆಂದರೆ, ತೃಣಾವರ್ತನೆಂಬ ದೈತ್ಯನು ದೊಡ್ಡ ಸುಂಟರಗಾಳಿಯ ರೂಪದಲ್ಲಿ ಬಂದು, ಬಾಲನಾದ ಶ್ರೀಕೃಷ್ಣನನ್ನು ಎತ್ತಿಕೊಂಡು ಹೋದ ವೃತ್ತಾಂತದಿಂದ ವ್ಯಕ್ತವು. ಇಂದ್ರನಿಗಿಂತಲೂ ಅತಿಶಯವಾದ ದಿವ್ಯ ಚೇಷ್ಟಿತವುಳ್ಳವನೆಂ ಬುದು ಗೋವರ್ಧನೋದ್ಧರಣ, ಅದಿತಿಗೆ ಕುಂಡಲಗಳ ಪ್ರಧಾನ ಐರಾವತ, ಪಾರಿಜಾತಾಪಹರಣ ವೃತ್ತಾಂತಗಳಿಂದ ವ್ಯಕ್ತವು. **ಅತಿ ಸೂರ್ಯ ತೇಜಸ್ಸುಳ್ಳವನೆಂಬುದು** ಪೌಂಡ್ರಕ ವಾಸುದೇವ ಸಂಹಾರಾನಂತರ ಆತನ ಮಗನಾದ ಸುದಕ್ಷಿಣನು ರುದ್ರೋಪಾಸನ ಲಬ್ಧವರದ ಮಾಹಾತ್ಮ್ಯೆ ಯಿಂದ ಉತ್ಪನ್ನವಾದ ಅತಿಭೀಷಣನಾಗಿ ಜ್ವಲಿಸುತ್ತಿರುವ ಮೂರ್ತಿಯನ್ನು, ಕೋಟಿಸೂರ್ಯ ಪ್ರಕಾಶವುಳ್ಳ ಜಾಜ್ವಲ್ಯಮಾನವಾದ ತನ್ನ ಸುದರ್ಶನ ಚಕ್ರದಿಂದ ಖಂಡಿಸಿದುದರಿಂದ ವ್ಯಕ್ತವು ಅಥವಾ ವಿಪ್ರನ **ಮೃತಪುತ್ರ**ರನ್ನು ತಂದು ಕೊಡುವದಕ್ಕಾಗಿ ಅರ್ಜುನನೊಂದಿಗೆ ಹೊರಟಾಗ ಗಾಢಾಂಧಕಾರದಲ್ಲಿ ಭೀತನಾದ ಅರ್ಜುನನಿಗೆ ಸಮಾಧಾನಾರ್ಥವಾಗಿ **" ಸಹಸ್ರಾದಿತ್ಯ ಸಂಕಾಶಂ ಸ್ವಚಕ್ರಂ ಪ್ರಾಹಿಣೋತ್ಪುರಃ "** ಎಂದು ಸಹಸ್ರ ಸೂರ್ಯಪ್ರಕಾಶವನ್ನುಂಟು ಮಾಡುವ ಹಾಗೆ ಚಕ್ರವನ್ನು ಕಳುಹಿಸಿದನು ಎಂದಿರುವದರಿಂದಲೂ ಅತಿಸೂರ್ಯ ತೇಜಸ್ಸುಳ್ಳವ ನೆಂಬುದು ವ್ಯಕ್ತವು. **ಅತ್ಯಗ್ನಿ ತೇಜಸ್ಸುಳ್ಳ**ವನೆಂಬುದು ದಾವಾಗ್ನಿಯ ದೆಶೆಯಿಂದ ಗೋಪ ಸಂರಕ್ಷಣ ವೃತ್ತಾಂತದಿಂದಲಾಗಲಿ ಊಹಿಸಬಹುದು. ಇಲ್ಲಿ ಇಂದ್ರ, ವಾಯು, ಅಗ್ನಿ ಸೂರ್ಯರು ಗಳನ್ನು ಅತಿಕ್ರಮಿಸಿದ ಅನಂತವೀರ್ಯನ ದಿವ್ಯ ಚೇಷ್ಟಿತಗಳನ್ನು ಹೇಳಿದುದು, ವತ್ಸಾಪಹಾ

**ಮೂ. ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂತು ವೇದ ನಕಶ್ಚನ ॥** **೨೬.**

ರೇತಿಹಾಸದಲ್ಲಿ ಚತುರ್ಮುಖನನ್ನೂ, ಬಾಣಾಸುರ ಮತ್ತು ವೃಕಾಸುರ ವೃತ್ತಾಂತಗಳಿಂದ ರುದ್ರನನ್ನು ಮಿರಿಸಿದ ದಿವ್ಯ ಚರ್ಯೆಗಳನ್ನುಳ್ಳವನೆಂಬುದಕ್ಕೂ ಉಪಲಕ್ಷಣವು. **"ಇತೀ ದೃಶಾನ್ಯನೇಕಾನಿ ವೀರ್ಯಾಣೀಹ ಪ್ರದರ್ಶಯನ್ । ಭುಭುಜೇ ವಿಷಯಾನ್ ಗ್ರಾಮ್ಯಾನ್"** ಎಂದು ಮಹರ್ಷಿಯು ಹೇಳಿರುವ ಹಾಗೆ ತನ್ನ ಪರತ್ವ ಪ್ರದರ್ಶನಕ್ಕಾಗಿ ಲೆಖ್ಖವಿಲ್ಲದ **ಅತಿದೇವ ಮಾನುಷ** ಚರಿತ್ರೆಗಳನ್ನು ತೋರಿಸಿದರೂ, **ಮೂಢೋಯಂ ಲೋಕಃ** - ಪರತ್ವವನ್ನು ಊಹಿಸುವ ಯೋಗ್ಯತೆ ಇಲ್ಲದ ಈ ಮೂಢ ಜನರು ನನ್ನನ್ನು ಸರ್ವೇಶ್ವರನನ್ನಾಗಿ, **ನಾಭಿಜಾನಾತಿ** – ತಿಳಿಯುವುದಿಲ್ಲವು ಎಂಬ ತಾತ್ಪರ್ಯವು. ಇದರಿಂದಲೂ ಹಿಂದಿನ ಶ್ಲೋಕದ **ಯೋಗ ಮಾಯಾ ಸಮಾವೃತಃ** ಎಂಬುದಕ್ಕೆ ಭಾಷ್ಯದಲ್ಲಿ ಅರ್ಥ ಮಾಡಿರುವದೇ ಸ್ವಾರಸ್ಯವು. ತಿಳಿಯದ ಹಾಗೆ ಮುಸುಕು ಹಾಕಿಕೊಂಡು ಶ್ರೀಕೃಷ್ಣನು ಕೂತಿದ್ದಾನೆಂದು ಅರ್ಥ ಮಾಡುವದು ನಿಸ್ಸಾರವು. ಇಲ್ಲಿ **ಅಜಮವ್ಯಯಂ** ಎಂಬ ಎರಡು ಪದಗಳ ವ್ಯಾಖ್ಯಾನವಾಗಿ **ನಿಖಿಲ ಜಗದೇಕ ಕಾರಣಂ ಸರ್ವೇಶ್ವರಂ** ಎಂದು ಹೇಳಿರುತ್ತಾರೆ. ಹಿಂದೆ **"ಅಜೋಪಿ ಸನ್ನವ್ಯಯತ್ಮಾ ಭೂತಾನಾ ಮೀಶ್ವರೋಪಿ ಸನ್"** (ಗೀ. ೪.೬.) ಎಂಬ ಅವತಾರ ರಹಸ್ಯವನ್ನು ಪಪಾದಿಸುವ ಶ್ಲೋಕಾರ್ಥವು ಇಲ್ಲಿ ಅನುಸಂಧೇಯವು.

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ **ಯೋಗಮಾಯಾ ಸಮಾವೃತ**ನಾಗಿರುವದರಿಂದ ಶ್ರೀಕೃಷ್ಣರೂಪದಲ್ಲಿ ವಸುದೇವತನಯನಾಗಿ ಮಾನುಷರೂಪದಲ್ಲಿದ್ದು ದಿವ್ಯಾದ್ಭುತ ಚೇಷ್ಟಿತಗಳನ್ನು ಪ್ರದರ್ಶಿಸಿದರೂ, ತನ್ನನ್ನು ಪರತತ್ವವೆಂದು ಲೋಕದ ಜನರು ಮೌಢ್ಯದಿಂದ ತನ್ನನ್ನು ತಿಳಿಯದೇ ಹೋದುದು ಈಗ ಮಾತ್ರವೇ ಅಲ್ಲವು. ಹಿಂದೆಯೂ ಅನೇಕ ಅವತಾರಗಳನ್ನೆತ್ತಿ ಅತ್ಯದ್ಭುತ ಚೇಷ್ಟೆಗಳನ್ನು ನಡೆಸಿರುವೆನು; ಆಗಲೂ ಎಲ್ಲರೂ ನನ್ನನ್ನು ಪರತತ್ವವೆಂದು ತಿಳಿಯದೇ ಹೋದರು. ಮುಂದೆಯೂ ಕೂಡ ಹೀಗೆಯೇ ಅವತಾರವನ್ನೆತ್ತಿ ಅತ್ಯದ್ಭುತ ಚೇಷ್ಟೆಗಳನ್ನು ನಡೆಸುವೆನು, ಆಗಲೂ ಸಾಧಾರಣ ಲೋಕದ ಜನರು ನನ್ನನ್ನು ತಿಳಿಯುವದಿಲ್ಲವು. ಹೀಗೆ ಇವರೆಲ್ಲರೂ ನನ್ನನ್ನು ಹಿಂದೆಯೂ ತಿಳಿಯಲಿಲ್ಲವು; ಈಗಲೂ ತಿಳಿಯುಪದಿಲ್ಲವು; ಮುಂದೆಯೂ ತಿಳಿಯುವದಿಲ್ಲವೆಂಬುದು ನಾನು ಸರ್ವಜ್ಞನಾದ ಪ್ರಯುಕ್ತ ನನಗೆ ಚನ್ನಾಗಿ ತಿಳಿಯುವದು ಎಂದು ಈ ಮುಂದಿನ ಶ್ಲೋಕದಿಂದ ಹೇಳುತ್ತಾರೆ:-**ಹೇ ಅರ್ಜುನ**-ಓ ಅರ್ಜುನನೇ, **ಅಹಂ**-ನಾನು ಸರ್ವಜ್ಞನಾದ ಪ್ರಯುಕ್ತ, **ಸಮತೀತಾನಿ** – ಕಳೆದುಹೋದ ಮತ್ತು **ವರ್ತಮಾನಾನಿ** – ಈಗ ಇರುವ, **ಭವಿಷ್ಯಾಣಿಚ** – ಮುಂದೆಯೂ ಜನ್ಮಗಳನ್ನೆತ್ತುವ, **ಭೂತಾನಿ** – ಪ್ರಾಣಿಗಳನ್ನು, **ವೇದ**-ತಿಳಿದಿರುವೆನು, ಆದುದರಿಂದ ಹೇಳುವೆನು ಕೇಳು, **ಕಶ್ಚನ**-ಈ ಮೇಲೆ ಹೇಳಿದ ಪ್ರಾಣಿಗಳಲ್ಲಿ ಯಾವನೊಬ್ಬನೂ ಎಂದರೆ ನನ್ನ ಕೆಲವು ಭಕ್ತರುಗಳಲ್ಲದ ಆಯಾ ಕಾಲದಲ್ಲಿದ್ದ ಯಾವನೊಬ್ಬನೂ **ಮಾಂತು**-ಹೀಗೆ ಅವತಾರಿಯಾಗಿ ಅತ್ಯದ್ಭುತ ಚೇಷ್ಟೆಗಳಿಂದ ಪರತ್ವ ಪ್ರದರ್ಶಿಸುತ್ತಲಿರುವ ನನ್ನನ್ನು, **ನವೇದ**-ಅವರುಗಳ ಪ್ರಾರಬ್ಧ ಕರ್ಮವಿಶೇಷಗಳಿಂದ ತಿಳಿಯಲಿಲ್ಲವು. **ಮಾಂತು ವೇದ ನಕಶ್ಚನ** ಎಂದು ಶ್ರೀಕೃಷ್ಣನು ಹೇಳುವದರಲ್ಲಿ, ಲೋಕದ ಜನರು ತಾನು ಪರತತ್ವವೆಂದು ತಿಳಿಯದೇ ಹೋದರು ಎಂದಷ್ಟೇ ತಾತ್ಪರ್ಯವಲ್ಲವು. ಆತನಿಗೆ ಪರಿತಾಪವೇನೆಂದರೆ, ತಿಳಿದೂ ಆಶ್ರಯಿಸದೇ ಹೋಗುವಷ್ಟು ಪ್ರಾರಬ್ಧವು ತುಂಬಾ ಬಲಿಷ್ಠವೇ ? ಎಂಬುದು. **ವೇದ** ಎಂಬ ಪದವು ವೇದನವೆಂಬುದರಲ್ಲೂ ಇರುವದರಿಂದ **ನವೇದ** ಶಬ್ದಕ್ಕೆ ಅರ್ಥವೇನೆಂದರೆ ಅಜ್ಞ ಶರಣಾಗತಿಯ ಮೂಲಕ ನನ್ನನ್ನು ಆಶ್ರಯಿಸಿ ನನ್ನ ದಿವ್ಯ ಮಙ್ಗಳ ವಿಗ್ರಹವನ್ನುಪಾಸಿಸಿ,

**ಭಾ. ಅತೀತಾನಿ ವರ್ತಮಾನಾನ್ಯನಾಗತಾನಿ ಚ ಸರ್ವಾಣಿ ಭೂತಾನ್ಯಹಂ ವೇದ-ಜಾನಾಮಿ; ಮಾಂತು ವೇದ ನ ಕಶ್ಚನ-ಮಯಾನುಸಂಧೀಯ ಮಾನೇಷು ಕಾಲತ್ರಯವರ್ತಿಷು**

ಸಾಕ್ಷಾತ್ಕರಿಸುವದಿಲ್ಲವೆಂಬುದರಲ್ಲಿ ತಾತ್ಪರ್ಯವು. ಈಗ ಮಾತ್ರವೇ ಲೋಕದ ಜನರು ತಿಳಿಯ ಲಿಲ್ಲವೆಂದಲ್ಲವು. ಹಿಂದೆಯೂ ತ್ರೇತಾಯುಗದಲ್ಲಿ ದಶರಥ ಕುಮಾರನಾಗಿ ಶ್ರೀರಾಮನಾಗಿ ಅವತರಿಸಿ ಬಾಲನಾಗಿ ತಾಟಕ ಸಂಹಾರವೇನು, ಸುಬಾಹು ಮಾರೀಚ ನಿಗ್ರಹವೇನು, ಅಹಲ್ಯಾ ಶಾಪ ಶಮನವೇನು, ಪರಶುರಾಮ ಗರ್ವಭಂಗವೇನು, ಹದಿನಾಲ್ಕು ಸಹಸ್ರ ರಾಕ್ಷಸರನ್ನು ೧½ ಮುಹೂರ್ತದಲ್ಲಿ ನಾಶಮಾಡಿದುದೇನು, ಸಪ್ತತಾಳ ಭಂಜನವೇನು, ಸಮುದ್ರತರಣಕ್ಕೆ ಪೂರ್ವವೇ ವಿಭೀಷಣನನ್ನು ಲಂಕಾಭಿಷಕ್ತನಾಗಿ ಮಾಡಿದುದೇನು, ಸೇತು ಬಂಧನವೇನು, ಇತ್ಯಾದಿ ದಿವ್ಯಾದ್ಭುತ ಚೇಷ್ಟಿತಗಳನ್ನು ಪ್ರದರ್ಶಿಸಿದ್ದರೂ ಹಿಂದಿನ ಲೋಕದ ಜನರೂ ತನ್ನನ್ನು ತಿಳಿಯದೇ ಹೋದರು. ಮುಂದೆಯೂ ಧರ್ಮಕ್ಕೆ ಗ್ಲಾನಿಯುಂಟಾಗುವದರಿಂದ ಕಲ್ಕಿಯಾಗಿ ಅವತರಿಸಿ ದಿವ್ಯಾದ್ಭುತ ಚೇಷ್ಟೆಗಳನ್ನು ನಡೆಸುವೆನು. ಆಗಲೂ ಅನೇಕರು ನನ್ನನ್ನು ತಿಳಿಯದೇ ಆಶ್ರಯಿಸುವದಿಲ್ಲವು. ಇವೆಲ್ಲವೂ ನಾನು ಸರ್ವಜ್ಞನಾದುದರಿಂದ ನನಗೆ ತಿಳಿಯುವದು, ಎಂಬುದು ತಾತ್ಪರ್ಯವು. ಈ ಶ್ಲೋಕದಲ್ಲೂ ಕೂಡ, ತಾನು ಹಿಂದಿನ ಕಾಲದಲ್ಲೂ, ಈಗಲೂ, ಮುಂದಿನ ಕಾಲದಲ್ಲೂ ಅವತರಿಸಿದಾಗೆಲ್ಲಾ ತೆರೆಯನ್ನೇ ಹಾಕಿಕೊಂಡಿರುವದರಿಂದ ಸಾಧಾರಣ ಜನರು ಮೂರು ಕಾಲದಲ್ಲೂ ತಿಳಿಯಲಾರರೆಂದು ಅರ್ಥಮಾಡುವದು ಸ್ವಾರಸ್ಯವೇ ಇಲ್ಲವಾಗುತ್ತದೆ. ಎಲ್ಲರಿಗೂ ಕೃಪೆಮಾಡುವದಕ್ಕಾಗಿಯೇ ಅವತಾರದ ಉದ್ದೇಶ್ಯವು. ಎಲ್ಲಾ ಅವತಾರಗಳಲ್ಲೂ ಅತ್ಯದ್ಭುತ ದಿವ್ಯ ಚೇಷ್ಟಿತಗಳನ್ನು ನಡೆಸಿರುತ್ತೇನೆ. ಅವೆಲ್ಲವೂ ಅತಿಮಾನುಷವಾದುವು. ನನ್ನ ಪರತ್ವ ಸೂಚಕವಾದವು. ಹಾಗಿದ್ದರೂ ನನ್ನನ್ನು ಆಶ್ರಯಿಸುವ ವಿವೇಕಜ್ಞಾನ ಶೂನ್ಯರೇ ಎಂಬ ಪರಿತಾಪವನ್ನೇ ಈ ಶ್ಲೋಕವೂ ಸೂಚಿಸುತ್ತದೆ. ಹಾಗೆ ಆಶ್ರಯಿಸುವುದಿಲ್ಲವೆಂಬುದು ಸರ್ವಜ್ಞನಾದುದರಿಂದ ತನಗೆ ಚನ್ನಾಗಿ ತಿಳಿಯುವದು ಎಂಬರ್ಥವು. **ವ್ಯಾಸೋಕ್ತಿಯು** ಬಹು ಗೂಢವಾದುದರಿಂದ ಅಪ್ರಧಾನವಾಗಿ ಮೊದಲು ಹೇಳಲ್ಪಟ್ಟು, ಪ್ರಧಾನವಾಗಿ ಕೊನೆಗೆ ವ್ಯಕ್ತವು. ಹೀಗೆ ತಾನು ತೆರೆಯನ್ನು ಹಾಕಿಕೊಂಡಿರುವದು ಅವರುಗಳು ತನ್ನನ್ನು ತಿಳಿಯದೇ ಇರುವದಕ್ಕೆ ಕಾರಣವೆಂಬುದು ಸರಿಯಾದ ಅಭಿಪ್ರಾಯವಲ್ಲವೆಂಬುದು ಮುಂದಿನ ಶ್ಲೋಕದಲ್ಲೇ ಶ್ರೀಕೃಷ್ಣ ಭಗವಾನರವರೇ ವ್ಯಕ್ತಪಡಿಸಿರುತ್ತಾರೆ. ಪೂರ್ವಜನ್ಮಾರ್ಜಿತಗಳಾದ ಕರ್ಮವಾಸನೆಯ ಮೂಲಕವೇ ಜನ್ಮಕಾಲದಲ್ಲೇ ಚೇತನವರ್ಗವು ಸಂಮೋಹವನ್ನು ಹೊಂದುವದರಿಂದ, ಅವರುಗಳು ತನ್ನನ್ನು ತಿಳಿಯುವದೂ ಇಲ್ಲವು, ಆಶ್ರಯಿಸುವದೂ ಇಲ್ಲವೆಂದು ಹೇಳಲ್ಪಡುತ್ತದೆ. ಆದುದರಿಂದ ದೋಷವು ಚೇತನ ವರ್ಗದುದೇ ವಿನಾ ಸರ್ವೇಶ್ವರನದಲ್ಲವು. ಸರ್ವೇಶ್ವರನು ಯಾವುದೋ ಒಂದು ಮಾಯೆಯಿಂದ ಸುತ್ತುವರಿಯಲ್ಪಟ್ಟಿರುವನೆಂದೂ ಅದರಿಂದ ಸರ್ವರಿಗೂ ಗೋಚರನಲ್ಲವೆಂದೂ, ಅದು ತನಗೆ ಬಂಧಕವಲ್ಲವೆಂದೂ ಹೀಗೆಲ್ಲಾ ಹೇಳುವದು ರಸವತ್ತಲ್ಲವು.

**ಭಾಷ್ಯಾರ್ಥವು:**—ಹೀಗೆ ಕೃಷ್ಣಾವತಾರಿಯಾಗಿ, ಲೋಕ ಹಿತಮಾಡುವದಕ್ಕಾಗಿ ಸರ್ವ ಸಮಾಶ್ರಯಣೀಯಕ್ಕಾಗಿ ಸೌಲಭ್ಯ ಕೃಪಾತಿರೇಕಗಳಿಂದ ಪ್ರೇರಿತನಾಗಿದ್ದರೂ ಲೋಕದ ಜನರು ತನ್ನ ದಿವ್ಯಾದ್ಭುತ ಚೇಷ್ಟಿತಗಳನ್ನು ತಿಳಿಯದೇ ಹೋದರೆಂಬುದೇನೋ ಸರಿಯೇ; ಆದರೆ ಹಿಂದಿನ ಅವತಾರಗಳಲ್ಲೂ ಹಾಗೆಯೇ ಎಂದು ಅರ್ಜುನನು ಪ್ರಶ್ನಿಸಬಹುದೆಂದು ಭಾವಿಸಿ ತಾವೇ ಹಿಂದೆಯೂ ಹೀಗೆಯೇ, ಮುಂದಿನ ಅವತಾರ ಕಾಲಗಳಲ್ಲೂ ಹೀಗೆಯೇ ಎಂದು ಹೇಳುತ್ತಾರೆ—ನಾನು ಸರ್ವಜ್ಞನಾದುದರಿಂದ ತ್ರಿಕಾಲವಿಷಯವೆಲ್ಲಾ ನನಗೆ ತಿಳಿಯುವದು ಎಂದು ಹೇಳುತ್ತಾರೆ.

**ಭಾ. ಭೂತೇಷು ಮಾ ಮೇವಂ ವಿಧಂ ವಾಸುದೇವಂ ಸರ್ವಸಮಾಶ್ರಯಣೀಯತ್ವಾಯಾ ವತೀರ್ಣಂ ವಿದಿತ್ವಾ ಮಾಮೇವ ಸಮಾಶ್ರಯನ್ನ ಕಶ್ಚಿನ್ನುಪಲಭ್ಯತ ಇತ್ಯರ್ಥಃ। ಅತೋ ಜ್ಞಾನೀ ಸುದುರ್ಲಭ ಏವ ॥೨೬॥**

**ಭಾ. ಅವ. ತಥಾಹಿ—**

**ಮೂ. ಇಚ್ಛಾದ್ವೇಷ ಸಮುತ್ಥೇನ ದ್ವಂದ್ವಮೋಹೇನ ಭಾರತ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾನ್ತಿ ಪರಂತಪ ॥** ೨೭.

**ಅತೀತಾನಿ** - ಕಳೆದುಹೋದ, **ವರ್ತಮಾನಾನಿ** - ಈಗಿರುವ, **ಅನಾಗತಾನಿ ಚ** - ಇನ್ನೂ ಬಾರದಿರುವ ಎಂದರೆ ಮುಂದೆ ಬರುವ, **ಸರ್ವಾಣಿ ಭೂತಾನಿ**-ಸಮಸ್ತ ಪ್ರಾಣಿಗಳನ್ನೂ, **ಅಹಂ ವೇದ** ಎಂದರೆ **ಜಾನಾಮಿ**-ನಾನು ಸರ್ವಜ್ಞನಾದುದರಿಂದ ಈಕ್ಷಣದಲ್ಲೂ ಕೂಡ ತಿಳಿದಿರುವೆನು, ಅವರ ವಿಷಯದಲ್ಲಿ ಏನನ್ನು ತಿಳಿದಿರುವೆನೆಂದರೆ.—**ಮಾಂತು ವೇದ ನಕಶ್ಚನ**-ಅವರುಗಳಲ್ಲಿ ಯಾರೊಬ್ಬನೂ ಸರ್ವಸಮಾಶ್ರಯಣೀಯತ್ವಾಗಿ ಅವತರಿಸಿರುವ ನನ್ನನ್ನಾದರೋ ತಿಳಿಯದೇ ಇರುವನೆಂಬುವನ್ನು ; ತಾತ್ಪರ್ಯವು ಸ್ವಲ್ಪಗೂಢವಾದುದರಿಂದ ಶ್ಲೋಕಾರ್ಥವನ್ನು ವಿಶದೀಕರಿಸುತ್ತಾರೆ. **ಮಯಾನುಸಂಧೀಯಮಾನೇಷು ಕಾಲತ್ರಯವರ್ತಿಷು ಭೂತೇಷು**-ಸರ್ವಜ್ಞನಾದುದರಿಂದ ಸದಾ ತ್ರೈಕಾಲಿಕರನ್ನೂ ಸಾಕ್ಷಾತ್ಕರಿಸುವ ಶಕ್ತಿಯುಳ್ಳ ನನ್ನಿಂದ; ಮೂರು ಕಾಲದಲ್ಲಿರುವ ಪ್ರಾಣಿಗಳಲ್ಲೂ, **ಮಾಮೇವಂ ವಿಧಂವಾಸುದೇವಂ** - ಹೀಗೆ ಯೋಗಮಾಯಾ ಸಮಾವೃತನಾಗಿ ಅದ್ಭುತವೀರ್ಯಗಳನ್ನು ಪ್ರದರ್ಶಿಸುತ್ತಿರುವ ವಸುದೇವ ಪುತ್ರನಾಗಿರುವ ನನ್ನನ್ನು, ಅಥವಾ ಪರವಾಸುದೇವನಾದ ನನ್ನನ್ನು, ಹೀಗೆ ಎರಡನೆಯ ಅರ್ಥವನ್ನು ಹೇಳದಿದ್ದರೆ, ವಸುದೇವಪುತ್ರನನ್ನು ಹಿಂದಿನವರು ತಿಳಿಯುವದೂ, ಕಲ್ಕ್ಯವತಾರಕಾಲದಲ್ಲಿ ಮುಂದಿರುವರು ತಿಳಿಯುವದೂ ಸಾಮಂಜಸ್ಯವಿಲ್ಲದುದಾಗುತ್ತದೆ. ಅಥವಾ **ಸರ್ವಸಮಾಶ್ರಯಣೀಯತ್ವಾಯ ಅವತೀರ್ಣಂ**-ಎಲ್ಲರೂ ಆಶ್ರಯಿಸಲಿ ಎಂಬ ಕೃಪೌದಾರ್ಯಭಾವಗಳಿಂದ ಕೃಷ್ಣನಾಗಿ ಅವತರಿಸಿರುವದನ್ನು, **ವಿದಿತ್ವಾ**-ನನ್ನ ದಿವ್ಯಾದ್ಭುತ ಚೇಷ್ಟೆಗಳಿಂದ ತಿಳಿದು, **ಮಾಮೇವ ಸಮಾಶ್ರಯನ್**-ಅನ್ಯದೇವತೆಗಳನ್ನು ತ್ಯಜಿಸಿ ನನ್ನನ್ನೇ ಆಶ್ರಯಿಸುವವನು, **ನ ಕಶ್ಚಿ ದುಪಲಭ್ಯತೇ**-ಜ್ಞಾನಿಯ ಹೊರತು ಇನ್ನು ಯಾರೂ ತೋರಿಬರುವದಿಲ್ಲವು. ಇದೀಗ ಶ್ಲೋಕತಾತ್ಪರ್ಯವೆಂದು ವ್ಯಕ್ತಪಡಿಸಿದರು, ಇದರಿಂದ ಫಲಿತಾರ್ಥವೇನು ಎಂದರೆ ಹೇಳುತ್ತಾರೆ. **ಅತಃ** - ಆಕಾರಣದಿಂದ, **ಜ್ಞಾನೀ ಸದುರ್ಲಭ ಏವ**-ನನ್ನನ್ನು ಸಾಕ್ಷಾತ್ಕರಿಸುವ ಜ್ಞಾನಿಯು ದೊರೆಯುವದು ತುಂಬಾ ಕಷ್ಟವೆಂಬ ತಾತ್ಪರ್ಯವು. ಇದೆಲ್ಲಾ ಹೇಳುವದಕ್ಕೆ ಕಾರಣವು ಜ್ಞಾನಿಯ ದೌರ್ಲಭ್ಯದ ಉಪಪಾದನೆಗಾಗಿ ಎಂದು ತಿಳಿಯತಕ್ಕದ್ದು. ಹಿಂದೆ ೨೦ನೆಯ ಶ್ಲೋಕಕ್ಕೆ ಕೊಟ್ಟಿರುವ " **ದುರ್ಲಭತ್ವಮೇವೋಪಪಾದಯತಿ** " ಎಂಬ ಅವತಾರಿಕೆಯು ಈ ಶ್ಲೋಕಾಂತ್ಯದವರೆಗೂ ಅನ್ವಯಿಸುತ್ತದೆಂದು ಭಾವಿಸತಕ್ಕದ್ದು. ಇದನ್ನೇ **ಜ್ಞಾನೀ ಸುದುರ್ಲಭ ಏವ** ಎಂಬುದರಿಂದ ವ್ಯಕ್ತಪಡಿಸುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು :**—ಹಿಂದೆಯೂ, ಈಗಲೂ, ಮುಂದೆಯೂ ಸಹ ಲೋಕದ ಜನರು ತನ್ನನ್ನು ತಿಳಿದು ಆಶ್ರಯಿಸದೇ ಇರುವದಕ್ಕೆ ಕಾರಣವೇನು? ಜ್ಞಾನಿಯ ದೌರ್ಲಭ್ಯವೇತಕ್ಕೆ? ಎಂದು ಅರ್ಜುನನು ಕೇಳಬಹುದೆಂದು ಶ್ರೀಕೃಷ್ಣ ಭಗವಾನರವರು ಕಾರಣವನ್ನು ಸಮರ್ಥನೆ ಮಾಡಿ ಹೇಳುತ್ತಾರೆಂದು ತಿಳಿಸಲು. **ತಥಾಹಿ** ಎಂದೀ ೨೭ನೆಯ ಶ್ಲೋಕಕ್ಕೆ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ, **ತಥಾಹಿ**-ಹಾಗೆಯೇ ಸರಿ ; ಅದಕ್ಕೆ ಕಾರಣವುಂಟು ಹೇಳುವೆನು ಕೇಳು ಎಂಬ ಭಾವವು.

**ಭಾ. ಇಚ್ಛಾದ್ವೇಷಾಭ್ಯಾಂ ಸಮುತ್ಥಿತೇನ ಶೀತೋಷ್ಣದ್ವಂದ್ವಾಖ್ಯೇನ ಮೋಹೇನ ಸರ್ವ ಭೂತಾನಿ, ಸರ್ಗೇ-ಜನ್ಮಕಾಲ ಏವ ಸಂಮೋಹಂ ಯಾನ್ತಿ ; ಏತದುಕ್ತಂಭವತಿ-**

**ಮೂಲಕ್ಕೆ ಅರ್ಥವು :—**ಹಿಂದೆ **ಮಾಂತುವೇದ ನಕಶ್ಚನ** ಎಂದು ಹೇಳಿದರು ; ಹೀಗೆ ತಿಳಿಯದೇ ಆಶ್ರಯಿಸದೇ ಹೋದರಲ್ಲಾ ; ಅದರ ದೋಷ ಯಾರದು ? ಎಂಬ ವಿವೇಚನೆಯಲ್ಲಿ " **ಸೋಽಪರಾಧಃ** "-ಆ ಅಪರಾಧವು, "**ಸ್ವದೋಷಜಃ**" (ವಿ. ಪು. ೬. ೩೦.೨೦) ಈ ಲೋಕದ ಜನರ ಪ್ರಾರಬ್ಧ ಕರ್ಮದ ಮೂಲಕ ಅವರಿಂದಲೇ ಉಂಟಾದುದು, ಅದು ಹುಟ್ಟುವಾಗಲೇ ಬಂದ ಸಂಮೋಹವು, ಆ ಕಾರಣದಿಂದ **ಮಾಂತುವೇದ ನ ಕಶ್ಚನ** ಎಂದು ಹೇಳುತ್ತಾರೆ. ಕ್ಷೇತ್ರಜ್ಞರಿಗೆ ಜನ್ಮಕಾಲದಲ್ಲಿರುವ ಕರ್ಮವಾಸನಾಮೂಲಕ ಪ್ರಾಪ್ತವಾದ ಸಂಮೋಹವೇ ಕಾರಣವೆಂದು ತಿಳಿಸುತ್ತಾರೆ. **ಇಚ್ಛಾದ್ವೇಷ ಸಮುತ್ಥೇನ** - ಪೂರ್ವಜನ್ಮಗಳಲ್ಲಿ ಮಾಡಿದ ಇಚ್ಛಾದ್ವೇಷಗಳಿಗೆ ಅನುಗುಣವಾಗಿ ಅವುಗಳಿಂದ ಉತ್ಪನ್ನವಾದ, **ದ್ವಂದ್ವ ಮೋಹೇನ- ಶೀತೋಷ್ಣ** ಸುಖದುಃಖಾದಿ ದ್ವಂದ್ವಗಳೆಂಬ ಮೋಹಜನಕ ವಸ್ತುವಿನಿಂದ, ಓ **ಭಾರತ-** ಓ-ಭರತ ವಂಶೋತ್ಪನ್ನನೇ, ಮತ್ತು **ಪರಂತಪ** - ಶತ್ರುಗಳನ್ನು ತಪಿಸುವ ಅರ್ಜುನನೇ, ಹೀಗೆ ಎರಡು ಸಂಬೋಧನೆಗಳಿಂದ ತಮ್ಮ ಪೂರ್ಣ ಕೃಪೆಯನ್ನು ತೋರಿಸಿ, ಶ್ರೀಕೃಷ್ಣಭಗವಾನರವರು ಕರ್ಮವಾಸನೆಯು ಇಂತಹ ದುಸ್ಥಿತಿಯನ್ನುಂಟುಮಾಡುತ್ತದೈಯ್ಯಾ ಎಂದು ಪರಿತಾಪವನ್ನು ಸೂಚಿಸುತ್ತಾರೆ.—**ಸರ್ವಭೂತಾನಿ** - ಸರ್ವ ಪ್ರಾಣಿಗಳೂ, **ಸರ್ಗೇ** - ಜನ್ಮ ಕಾಲದಲ್ಲೇ, **ಸಂಮೋಹಂ**-ದ್ವೇಷಿಸಬೇಕಾದುದರಲ್ಲಿ ಇಚ್ಛೆಯೂ, ಇಚ್ಛಿಸಬೇಕಾದುದರಲ್ಲಿ ದ್ವೇಷವೂ ಇಂತಹ ಭ್ರಮೆಯನ್ನು **ಯಾನ್ತಿ**-ಹೊಂದುತ್ತಾರೆ. ಇದೀಗ, ಅವರು ನನ್ನ ಪರತ್ವವನ್ನು ಕಂಡುಹಿಡಿದು ನನ್ನನ್ನು ಆಶ್ರಯಿಸದೇ ಇರುವದಕ್ಕೆ ಕಾರಣವು ಎಂದು ಶ್ರೀಕೃಷ್ಣ ಭಗವಾನರವರು ಉಪದೇಶಿಸುತ್ತಾರೆ. ಪೂರ್ವಜನ್ಮಗಳಲ್ಲಿ ಎಸಗಿದ ಕರ್ಮಗಳಿಗೆ ಅನುಸಾರವಾಗಿ ಪದಾರ್ಥಗಳಲ್ಲಿ ಇಚ್ಛಾದ್ವೇಷಗಳುಂಟಾಗುತ್ತವೆ. ಹೆಂಗಸು, ಹಣ, ಇತರ ಭೋಗ, ಮೊದಲಾದವುಗಳಲ್ಲಿ ವಿಶೇಷ ಪ್ರೀತಿಯುಂಟಾಗಬಹುದು, ಧರ್ಮಾಚರಣೆ ಭಗವದ್ಭಾಗವತ ಸೇವೆಯಲ್ಲಿ ದ್ವೇಷ ಉಂಟಾಗಬಹುದು. ಪೂರ್ವಜನ್ಮದ ದುಷ್ಕೃತಗಳಿಂದ ಇಂತಹ ವಾಸನೆಯೊಡನೆಯೇ ಜನ್ಮವೆತ್ತುತ್ತಾರೆ. ಆದುದರಿಂದ ಅವರುಗಳು ನನ್ನನ್ನು ತಿಳಿಯರು, ನನ್ನನ್ನು ಆಶ್ರಯಿಸರು, ಎಂಬ ಭಾವವು. ಇಲ್ಲಿ **ಮೋಹೇನ ಸಂಮೋಹಂ** ಯಾಂತಿ ಎಂದಿರುವದರಿಂದ ಆತ್ಮಾಶ್ರಯದೋಷವಿಲ್ಲದಿರುವದಕ್ಕಾಗಿ **ಮೋಹೇನ** ಎಂದರೆ ಮೋಹಕ್ಕೆ ಕಾರಣಭೂತವಾದುದು ಎಂದರ್ಥವನ್ನು ಹೇಳತಕ್ಕದ್ದು. ಅಥವಾ ಇಂತಹ ದ್ವಂದ್ವ ರೂಪ ಮೋಹದಿಂದ **ಸಂಮೋಹವು** ಎಂದರೆ ಸಂಪೂರ್ಣ ಮೋಹವು ಉಂಟಾಗುತ್ತದೆ, ಅದು ಯಾವುದೆಂದರೆ, ಇಚ್ಛಿಸಕೂಡದನ್ನು ಇಚ್ಛಿಸೋಣವೂ ದ್ವೇಷಿಸಕೂಡದನ್ನು ದ್ವೇಷಿಸೋಣವೂ ಪ್ರಾಪ್ತವಾಗುತ್ತವೆ. ಆದುದರಿಂದ ಎಲ್ಲರೂ ತಮ್ಮನ್ನು ತಿಳಿಯುವದೂ ಇಲ್ಲವು, ಆಶ್ರಯಿಸುವದೂ ಇಲ್ಲವು ಎಂಬ ಭಾವವು.

**ಭಾಷ್ಯಾರ್ಥವು :—**ಜ್ಞಾನಿಯು ಪರಮ ದುರ್ಲಭವು ; ಏಕೆಂದರೆ ಎಲ್ಲರೂ ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮವಾಸನೆಯಿಂದಲೇ ಹುಟ್ಟುತ್ತಾರೆ; ಇವರಿಗೆ ಕರ್ಮಾನುಗುಣವಾಗಿ ಶರೀರಪ್ರಾಪ್ತಿಯುಂಟಾಗುವಾಗಲೇ ಇಚ್ಛಾದ್ವೇಷರೂಪ ಸಂಮೋಹದಿಂದಲೇ ಜನಿಸುತ್ತಾರೆ. ಆದುದರಿಂದ ಐಹಿಕಗಳಲ್ಲೇ ಇಚ್ಛೆಯು, ನಿರತಿಶಯ ಸುಖವನ್ನುಂಟುಮಾಡುವುಗಳಲ್ಲಿ ದ್ವೇಷವು ಎಂದು ಹೇಳುತ್ತಾರೆ. **ಇಚ್ಛಾದ್ವೇಷಾಭ್ಯಾಂ** - ಕೆಲವು ವಸ್ತುಗಳಲ್ಲಿ ಪ್ರೀತಿಯೂ ಇನ್ನು ಕೆಲವು ವಸ್ತುಗಳಲ್ಲಿ ದ್ವೇಷವೂ, ಇವುಗಳಿಂದ **ಸಮುತ್ಥಿತೇನ** - ಉಂಟಾದ, **ಶೀತೋಷ್ಣ ದ್ವಂದ್ವಾಖ್ಯೇನ ಮೋಹೇನ** - ಇದು ದ್ವಂದ್ವ **ಮೋಹೇನ** ಎಂಬುದರ ವ್ಯಾಖ್ಯಾನವು,

**ಭಾ.** "**ಗುಣಮಯೇಷು ಸುಖದುಃಖಾದಿ ದ್ವಂದ್ವೇಷು ಪೂರ್ವಪೂರ್ವ ಜನ್ಮನಿ ಯದ್ವಿಷಯಾ ವಿಚ್ಛಾದ್ವೇಷಾ ವಭ್ಯಸ್ತೌ, ತದ್ವಾಸನಯಾ ಪುನರಪಿ ಜನ್ಮಕಾಲ ಏವ ತದೇವ ದ್ವಂದ್ವಾಖ್ಯ ಮಿಚ್ಛಾದ್ವೇಷ ವಿಷಯತ್ವೇನ ಸಮುತ್ಥಿತಂ ಭೂತಾನಾಂ ಮೋಹನಂ ಭವತಿ ; ತೇನ ಮೋಹೇನ ಸರ್ವಭೂತಾನಿ ಸಮ್ಮೋಹಂ ಯಾಂತಿ ; ತದ್ವಿಷಯೇಚ್ಛಾ ದ್ವೇಷಸ್ವಭಾವಾನಿ ಭವಂತಿ, ನ ಮತ್ಸಂಶ್ಲೇಷವಿಯೋಗ ಸುಖ ದುಃಖಸ್ವಭಾವಾನಿ. ಜ್ಞಾನೀತು ಮತ್ಸಂಶ್ಲೇಷ ವಿಯೋಗೈಕ ಸುಖದುಃಖ ಸ್ವಭಾವಾನಿ ; ನ ತತ್ಸ್ವಭಾವಂ ಕಿಮಪಿ ಭೂತಂ ಜಾಯತೇ" ಇತಿ || ೨೭ ||**

ಕೆಲವರು ದ್ವಂದ್ವವೇನು ಮೋಹವೇನು ಇವುಗಳ ಸಮಾಹಾರದಿಂದ ಎಂದು ದ್ವಂದ್ವ ಸಮಾಸ ಮಾಡಿ ಅರ್ಥ ಮಾಡಿರುತ್ತಾರೆ, ಮೋಹವೇ ದ್ವಂದ್ವರೂಪವಾದುದರಿಂದ, ಶೀತೋಷ್ಣ ದ್ವಂದ್ವವೆನಿಸುವ, ಮೋಹವನ್ನುಂಟುಮಾಡುವ ವಸ್ತುವಿನಿಂದ, **ಸರ್ವಭೂತಾನಿ** - ಸಮಸ್ತ ಪ್ರಾಣಿಗಳೂ, **ಸರ್ಗೇ** - ಎಂದರೆ **ಜನ್ಮಕಾಲ ಏವ** - ಹುಟ್ಟುವಾಗಲೇ, **ಸಂಮೋಹವನ್ನು, ಯಾಂತಿ** - ಹೊಂದುತ್ತಾರೆ. ಅಭಿಪ್ರಾಯವು ಚನ್ನಾಗಿ ವ್ಯಕ್ತವಾಗುವದಿಲ್ಲವೆಂದು ಭಾವಿಸಿ, ಶ್ಲೋಕತಾತ್ಪರ್ಯವನ್ನು **ಏತದುಕ್ತಂಭವತಿ** ಎಂದಾರಂಭಿಸಿ ಹೇಳುತ್ತಾರೆ—ಇಚ್ಛಾದ್ವೇಷ ಗಳೇ ದ್ವಂದ್ವವಾಗಿರುವಾಗ ಇಚ್ಛಾದ್ವೇಷಗಳಿಂದ ದ್ವಂದ್ವ ಉಂಟಾಯಿತು ಎಂದರೇನು ? ಇನ್ನೂ ಜನ್ಮವೆತ್ತುವದಕ್ಕೆ ಮೊದಲೇ ಇಚ್ಛಾದ್ವೇಷಗಳೆಂದರೇನು ? ಮೋಹದಿಂದ ಸಂಮೋಹ ಉಂಟಾಗುತ್ತದೆ ಎಂದರೇನು ? ದ್ವಂದ್ವಮೋಹೇನ ಎಂಬಲ್ಲಿ ದ್ವಂದ್ವ ನಿಮಿತ್ತವಾದ **ಮೋಹ** ವೆನ್ನದೆ, ದ್ವಂದಾಖ್ಯಮೋಹವೆಂದರೇನು ? ಇವೇ ಮೊದಲಾದ ಶಙ್ಕಾ ನಿವಾರಣೆಗಳನ್ನೂ ಈ **ಏತದುಕ್ತಂಭವತಿ** ಎಂದಾರಂಭಿಸಿದ ವಾಕ್ಯಗಳಿಂದ ಮಾಡುತ್ತಾರೆ. **ಗುಣಮಯೇಷು**- ತ್ರಿಗುಣಾತ್ಮಗಳಾದ ಎಂದರೆ ಪ್ರಕೃತಿ ಸಂಬಂಧಗಳಾದ, **ಸುಖದುಃಖಾದಿ ದ್ವಂದ್ವಗಳಲ್ಲಿ, ಪೂರ್ವ ಪೂರ್ವ ಜನ್ಮನಿ**-ಮೊದಲು ಮೊದಲಿನ ಜನ್ಮಗಳಲ್ಲಿ, **ಯದ್ವಿಷಯಾ ವಿಚ್ಛಾದ್ವೇಷಾ ವಭ್ಯಸ್ತೌ**-ಇಚ್ಛಾದ್ವೇಷ ರೂಪಗಳಾದ ವಿಷಯಗಳು ಅಭ್ಯಾಸ ಮಾಡಲ್ಪಟ್ಟವೋ, **ತದ್ವಾಸನಯಾ**-ಅವುಗಳ ವಾಸನೆಯಿಂದಲೇ, ಪುನರಪಿ **ಜನ್ಮಕಾಲ ಏವ**-ಜನ್ಮಕಾಲದಲ್ಲೀನೇ, **ತದೇವ**-ಅಂತಹ, **ದ್ವಂದ್ವಾಖ್ಯಂ**-ದ್ವಂದ್ವವೆಂದು ಹೇಳಿಸಿಕೊಳ್ಳುವ, **ಇಚ್ಛಾದ್ವೇಷ ವಿಷಯತ್ವೇನಸಮುತ್ಥಿತಂ** - ಇಚ್ಛಾದ್ವೇಷಗಳಿಗೆ ವಿಷಯವಾಗುವವರಿಂದ ಉತ್ಪನ್ನವಾದ, **ಭೂತಾನಾಂ ಮೋಹನಂ ಭವತಿ** - ಪ್ರಾಣಿಗಳಿಗೆ ಮೋಹನವು ಉಂಟಾಗುತ್ತದೆ; **ತೇನ ಮೋಹೇನ** - ಆ ಮೋಹ ಉಂಟಾಗುವ ವಸ್ತುಗಳಿಂದ ಸಮಸ್ತ ಪ್ರಾಣಿಗಳೂ, **ಸಂಮೋಹಂ ಯಾಂತಿ** - ಸಂಮೋಹವನ್ನು ಹೊಂದುವರು ಎಂದರೆ, **ತದ್ವಿಷಯೇಚ್ಛಾದ್ವೇಷಸ್ವಭಾವಾನಿ ಭವಂತಿ** - ಅಂತಹ ವಿಷಯಗಳಲ್ಲೇ ಪ್ರೀತಿ ದ್ವೇಷ ಸ್ವಭಾವವುಳ್ಳವರಾಗುತ್ತಾರೆ, **ಮತ್ತು ನ ಮತ್ಸಂಶ್ಲೇಷ ವಿಯೋಗ ಸುಖದುಃಖ ಸ್ವಭಾವಾನಿ ಭವಂತಿ** - ನನ್ನ ಸಂಶ್ಲೇಷೆಯಲ್ಲಿ ಸುಖವನ್ನೂ ನನ್ನ ವಿಯೋಗದಲ್ಲಿ ದುಃಖವನ್ನೂ ಹೊಂದುವ ಸ್ವಭಾವವುಳ್ಳವರಾಗುವದಿಲ್ಲವು. ಆದರೆ ನನ್ನ ಸಂಶ್ಲೇಷೆ ವಿಶ್ಲೇಷೆಗಳನ್ನು ಸುಖದುಃಖಗಳಾಗಿ ಭಾವಿಸುವವನು ಯಾವನೆಂದರೆ ಜ್ಞಾನಿಯೊಬ್ಬನೇ ಎಂದು ಹೇಳುತ್ತಾರೆ. **ಜ್ಞಾನೀತು** - ಜ್ಞಾನಿಯಾದರೋ **ಮತ್ಸಂಶ್ಲೇಷ ವಿಯೋಗೈಕ ಸುಖದುಃಖ ಸ್ವಭಾವಃ** - ನನ್ನ ಸಂಶ್ಲೇಷ ವಿಯೋಗಗಳಲ್ಲೇ ಮುಖ್ಯ ಸುಖದುಃಖಗಳೆಂದು ಭಾವಿಸುವ ಸ್ವಭಾವವುಳ್ಳವನು. ಈ ಸಂದರ್ಭದಲ್ಲಿ ಯಾಮುನ ಮುನಿಗಳ ಗೀತಾರ್ಥ ಸಂಗ್ರಹದ ೨೯ನೆಯ ಶ್ಲೋಕವಾದ "**ಜ್ಞಾನೀತು ಪರಮೈಕಾಂತೀ ತದಾಯತ್ತಾತ್ಮ ಜೀವನಃ । ತತ್ಸಂಶ್ಲೇಷ ವಿಯೋಗೈಕ ಸುಖದುಃಖ ಸ್ತದೇಕಧೀಃ ||**" ಎಂಬುದು

**ಮೂ. ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯ ಕರ್ಮಣಾಂ ।**
**ತೇ ದ್ವಂದಮೋಹ ನಿರ್ಮುಕ್ತಾಃ ಭಜನ್ತೇ ಮಾಂ ದೃಢವ್ರತಾಃ ॥** ೨೮.

ಇಲ್ಲಿ ಅನುಸಂಧೇಯವು; ಇಂತಹ ಸ್ವಭಾವವು ಸಾಧಾರಣವಾಗಿ ಎಲ್ಲರಲ್ಲೂ ಇರುವದಿಲ್ಲವು. **ನ ತತ್ಸ್ವಭಾವಂ ಕಿಮಪಿ ಭೂತಂ ಜಾಯತೇ** - ಮೇಲೆ ಹೇಳಿದ ಸ್ವಭಾವವುಳ್ಳ ಪ್ರಾಣಿ ವರ್ಗವಾವುದು ಹುಟ್ಟುವದಿಲ್ಲವು, ಇತಿ - ಎಂಬುದೀಗ ಈ ಶ್ಲೋಕ ತಾತ್ಪರ್ಯವು. ಈ ಸಂಮೋಹಕ್ಕೆ ಕಾರಣವೇನೆಂದರೆ ಜನ್ಮಾಂತರಗಳ ಕರ್ಮವಾಸನೆಯು ಎಂದೀಗ ಹೇಳಲ್ಪಟ್ಟಿತು. ಈ ಕರ್ಮ ವಾಸನೆಯಿಂದಲೇ ಪ್ರಾಣಿವರ್ಗವೆಲ್ಲಾ ಜನ್ಮವೆತ್ತುವದರಿಂದ, ಯಾವುದರಲ್ಲಿ ಭೋಗ್ಯತಾ ಬುದ್ಧಿ ಇರಬೇಕೋ ಅದರಲ್ಲಿ ಹಾಗಿಲ್ಲದೆ, ಯಾವುದರಲ್ಲಿ ಭೋಗ್ಯತಾ ಬುದ್ಧಿ ಕೂಡದೋ ಅಲ್ಲಿ ಭೋಗ್ಯತಾ ಬುದ್ಧಿಯನ್ನು ಮಾಡಿ, ಸಂಮೋಹವನ್ನು ಹೀಗೆ ಎಲ್ಲಾ ಪ್ರಾಣಿವರ್ಗವೂ ಹೊಂದುತ್ತದೆ; ಆ ಕರ್ಮವಾಸನೆಯು ಯದ್ರೂಪವೆಂದರೆ ವ್ಯಕ್ತಪಡಿಸಿದರು. ಪೂರ್ವಪೂರ್ವ ಜನ್ಮಗಳಲ್ಲಿ ಯಾವುದರಲ್ಲಿ ಪ್ರೀತಿಯು ಯಾವುದರಲ್ಲಿ ಅಪ್ರೀತಿಯು ಅಭ್ಯಸಿಸಲ್ಪಟ್ಟವೋ ತದನುಗುಣವಾಗಿ ಇಚ್ಛಾದ್ವೇಷಗಳುಂಟಾಗುತ್ತವೆ, ಅಂತಹ ಕರ್ಮವಾಸನೆಯಿಂದಲೇ ಸಮ್ಮೋಹವು. ಆದುದರಿಂದ ಯಾರೊಬ್ಬರೂ ನನ್ನನ್ನು ತಿಳಿದು ಆಶ್ರಯಿಸುವದಿಲ್ಲವು; ಜ್ಞಾನಿಯಾದರೋ ಹಾಗಲ್ಲವು; ಆತನಿಗಾದರೋ ಮತ್ಸಂಶ್ಲೇಷ ವಿಶ್ಲೇಷಗಳಲ್ಲಿ ಆತನಿಗೆ ಯುಕ್ತವಾದ ಸುಖದುಃಖಗಳುಂಟು. ಇಲ್ಲಿ "**ಪರಂತಪ**" ಎಂಬ ಸಂಬೋಧನೆಯೊಂದಿಗೆ **ಭಾರತ** ಎಂಬ ಸಂಬೋಧನೆಯನ್ನೂ ಮಾಡಿರುವದು ಸಾಭಿಪ್ರಾಯವಾದುದಾಗಿ ತೋರಿಬರುತ್ತದೆ. ನಿನ್ನ ಕುಲದ ಆದಿ ಭರತರೇ ಇದಕ್ಕೆ ನಿದರ್ಶನವು, ಅವರಿಗೆ ಮೃಗದಲ್ಲಿ ತುಂಬಾ ಪ್ರೀತಿಯು ಅಭ್ಯಸ್ತವಾದುದರಿಂದಲೇ ಆ ವಾಸನೆಯೇ ಅನುವರ್ತಿಸಿ ಅಂತಹ ಪ್ರೀತಿಯುಂಟಾಗುವದಕ್ಕಾಗಿ ಮೃಗ ಜನ್ಮವೇ ಉಂಟಾಯಿತು, ಈ ಅಭಿಪ್ರಾಯವನ್ನೇನಾದರೂ ಮನಸ್ಸಿನಲ್ಲಿಟ್ಟು **ಹೇ ಭಾರತ** ಎಂದು ಸಂಬೋಧಿಸಿದ್ದರೂ ಇರಬಹುದು. **ಪರಂತಪ** ಎಂಬ ಸಂಬೋಧನೆಯಿಂದ ಇಂತಹ ದ್ವಂದ್ವ ಮೋಹ ರೂಪ ಶತ್ರುವನ್ನು ನಿರಾಕರಿಸಿರುವವನು ನೀನು, ಆದುದರಿಂದ ಪರಂತಪನು. ಎಲ್ಲರೂ ಅಲ್ಲವೆಂಬುದೂ ಸೂಚಿತವು.

**ಮೂಲಕ್ಕೆ ಅರ್ಥವು :**—ಹೀಗೆ ಜನ್ಮಕಾಲದಲ್ಲೇ ಪೂರ್ವ ಜನ್ಮಗಳ ಕರ್ಮವಾಸನೆಯಿಂದಲೇ ಜನಿಸಿ ಸಂಮೋಹವನ್ನು ಸರ್ವರೂ ಹೊಂದಿದರೆ ಭಗವದುಪಾಸನದಲ್ಲಿ ಎಂದಿಗೂ ಯಾರಿಗೂ ಇಚ್ಛೆಯು ಹುಟ್ಟುವದೇ ಇಲ್ಲವೆಂದಾಯಿತು; ಹಾಗಾದರೆ "**ಚತುರ್ವಿಧಾ ಭಜನ್ತೇ ಮಾಂ**" ಎಂದು ಹಿಂದೆ ಹೇಳಿದುದು ಅನುಪಪನ್ನವೆಂದು ಹೇಳಿದಂತಾಗುತ್ತದೆಯಲ್ಲಾ ? ಇದಕ್ಕೇನುತ್ತರವೆಂದು ಕೇಳಿದುದಾದರೆ ಹೇಳುತ್ತಾರೆ.—ಜನ್ಮಕಾಲದಲ್ಲೇ ಸಂಮೋಹ ಉಂಟಾಗುತ್ತದೆ ಎಂದು ಹೇಳಿದರೆ, ಪರಮ ಪುರುಷನನ್ನು ಹಾಗಾದರೆ ಆಶ್ರಯಿಸುವರು ಯಾರು ಎಂಬ ಶಙ್ಕಾ ಉಂಟಾಗುತ್ತದೆ; ಅದರ ಸಮಾಧಾನಾರ್ಥವಾಗಿ ಹೇಳುತ್ತಾರೆ.—**ಯೇಷಾಂತು**-ಯಾವ ಮಹನೀಯರಿಗಾದರೋ ಇಲ್ಲಿ **ತು** ಶಬ್ದವು, ಹಿಂದೆ ಹೇಳಿದವರನ್ನು ವ್ಯಾವರ್ತಿಸಿ ಹೇಳುವದಕ್ಕಾಗೆಂದಾದರೂ ಭಾವಿಸಬಹುದು; ಅಥವಾ ಮೇಲೆ ಅವತಾರಿಕೆಯಲ್ಲಿ ಹೇಳಿರುವ ಶಙ್ಕಾ ಸಮಾಧಾನಾರ್ಥವಾಗಿ ಎಂದಾದರೂ ಭಾವಿಸಬಹುದು. **ಪುಣ್ಯಕರ್ಮಣಾಂ ಜನಾನಾಂ**-ಪುಣ್ಯ ಕರ್ಮಗಳನ್ನು ಮಾಡುತ್ತಾ ಅನೇಕ ಜನ್ಮಗಳೆತ್ತಿರುವ ಜನರ, **ಪಾಪಂ**-ಐಹಿಕಗಳಾದ ನಶ್ವರಗಳಲ್ಲಿ ಪ್ರೀತಿಯೂ ನನ್ನನ್ನಾಶ್ರಯಿಸುವದರಲ್ಲಿ ವೈಮುಖ್ಯವೂ ಈ ರೀತಿ ಸಂಮೋಹವನ್ನುಂಟುಮಾಡುವ ಪಾಪವು, **ಅಂತಗತಂ** - ನನ್ನ ಕೃಪೆಯಿಂದ, ಕ್ಷೀಣವಾಗುತ್ತದೋ, **ತೇ**-ಅಂತಹ ಮಹನೀಯರು, **ದ್ವಂದ್ವಮೋಹ ನಿರ್ಮುಕ್ತಾಃ**-ದ್ವಂದ್ವ ರೂಪವಾದ ಮೋಹದಿಂದ

ಬಿಡಲ್ಪಟ್ಟವರಾಗಿ, ಸಂಮೋಹವಿಲ್ಲದವರಾಗಿ ಎಂಬರ್ಥವು, **ಮಾಂ**-ಅನುಗ್ರಹಿಸಲು ಕಾದಿರುವ ನನ್ನನ್ನು, **ದೃಢವ್ರತಾಃ** - ತಮ್ಮ ಇಷ್ಟಾರ್ಥವನ್ನು ನನ್ನ ಪ್ರೀಣನ ಮುಖೇನ ಹೇಗಾದರೂ ಮಾಡಿ ಸಾಧಿಸಬೇಕೆಂಬ ಸ್ಥಿರಸಙ್ಕಲ್ಪಯುಕ್ತರಾಗಿ, **ಭಜನ್ತೇ**-ಉಪಾಸನೆಯನ್ನು ಮಾಡುವರು. ಹೀಗೆ ಪಾಪಕರ್ಮಗಳ ವಾಸನೆಯೇ ಹುಟ್ಟುವಾಗಲೇ ಇದ್ದುಬಿಟ್ಟರೆ, ಯಾರೊಬ್ಬರೂ ನಿನ್ನನ್ನು ಉಪಾಸಿಸುವದೇ ಇಲ್ಲವು ಎಂಬ ಶಙ್ಕಾನಿವಾರಣಾರ್ಥವಾಗಿ ಅನೇಕ ಜನರಿಗೆ ಅನೇಕ ಜನ್ಮಾರ್ಜಿತ ಪುಣ್ಯವಿಶೇಷವಿರುತ್ತದೆ. ತನ್ಮೂಲಕ ಧರ್ಮಗಳನ್ನು ಆಚರಿಸುತ್ತಾರೆ. **ಧರ್ಮೇಣ ಪಾಪಮಪನುದತಿ** ಎಂಬ ವಾಕ್ಯಾನುಸಾರ ಉಪಾಸನಾರಂಭ ವಿರೋಧಿ ಪಾಪವು ನಶಿಸಿ ಹೋಗುವದರಿಂದ ದೃಢವ್ರತರಾಗಿ ನನ್ನನ್ನು ಉಪಾಸಿಸುತ್ತಾರೆ ಎಂದು ಹೇಳಲ್ಪಟ್ಟರು. ಒಬ್ಬನಿಗೆ, ಪಾಪವು ಉತ್ತರ ಜನ್ಮದಲ್ಲಿ ಲಭಿಸುವದಕ್ಕೆ ಹಿಂದಿನ ಅನೇಕ ಜನ್ಮಗಳ ಪಾಪಕರ್ಮಗಳ ವಾಸನೆಯೂ, ಇನ್ನೊಬ್ಬನಿಗೆ ಪುಣ್ಯವು ಉತ್ತರ ಜನ್ಮದಲ್ಲಿ ಲಭಿಸುವದಕ್ಕೆ ಹಿಂದಿನ ಅನೇಕ ಜನ್ಮಗಳ ಪಾಪಕರ್ಮಗಳ ವಾಸನೆಯೂ, ಕಾರಣವೆಂದು ಹೇಳಿದರೆ ಅನವಸ್ಥಾ ಪ್ರಸಙ್ಗವೂ ಉಂಟಾಗುವದಲ್ಲದೆ ಒಬ್ಬನಿಗೆ ಪಾಪವಾಸನೆಯೇ ಇನ್ನೊಬ್ಬನಿಗೆ ಪುಣ್ಯವಾಸನೆಯೇ ಹೀಗೆ ವ್ಯತ್ಯಾಸವು ಯಾವ ಕಾರಣ ಎಂದುಂಟಾಯಿತು ಎಂಬ ಉಚಿತ ಪ್ರಶ್ನೆಯು ನಿರುತ್ತರವಾಗುತ್ತದೆ. ಪ್ರಾರಬ್ಧ ಕರ್ಮಗಳೇ ಈ ಜನ್ಮದ ಪುಣ್ಯಪಾಪಗಳ ಕರ್ಮಾನುಷ್ಠಾನಕ್ಕೆ ಕಾರಣವಾದುದಾದರೆ, ಒಬ್ಬನು ಯಾವಾಗಲೂ ಅಧೋಗತಿಯನ್ನೇ ಹೊಂದುವನು ; ಇನ್ನೊಬ್ಬನು ಉತ್ತಮ ಸ್ಥಿತಿಯನ್ನೇ ಹೊಂದುವನು ; ಹೀಗಾಗುವದಲ್ಲದೆ, ಅಧೋಗತಿಯನ್ನು ಹೊಂದುವನಿಗೆ ಎಂದಿಗೂ ಮುಕ್ತಿಯೇ ಇಲ್ಲವೆಂದು ಏರ್ಪಡುತ್ತದೆ. ಕೆಲವರು ಹೀಗೆಯೇ ಅಭಿಪ್ರಾಯ ಪಡುವರು. ಹೀಗೆ ಹೇಳಿಬಿಟ್ಟರೆ ಸರ್ವೇಶ್ವರನ ಕೃಪಾ ಪ್ರಭಾವಕ್ಕೆ ನ್ಯೂನತೆಯನ್ನು ಏರ್ಪಡಿಸಿದಂತಾಗುವದು. ಇದೂ ಅಲ್ಲದೆ ಪಾಪವಾಸನಾ, ಪುಣ್ಯವಾಸನಾ ವ್ಯತ್ಯಾಸವು ಪ್ರಥಮತಃ ಉಂಟಾಗಲು ಕಾರಣವೇನು ಎಂಬ ಪ್ರಶ್ನೆಗೆ ಸಮಾಧಾನವೇನು ? ಹೀಗೆ ಕರ್ಮವಾಸನೆಯೇ ನಮ್ಮ ಈ ಜನ್ಮದ ಕರ್ಮಗಳಿಗೆ ಕಾರಣವಾದರೆ, ಗುರೂಪದೇಶ, ಶಾಸ್ತ್ರಜ್ಞಾನ, ಮುಂತಾದವುಗಳು ನಿರರ್ಥಕವೆಂದೂ ಏರ್ಪಡುತ್ತದೆ. ಆದುದರಿಂದ ಜೀವನಿಗೆ ಕರ್ತೃತ್ವ ಉಂಟೆಂದೂ, ಆ ಕರ್ತೃತ್ವವು ಹೀಗೆ ಕರ್ಮವಾಸನಾನುಗುಣವಾಗಿ ಸರ್ವೇಶ್ವರ ಸಂಕಲ್ಪಾಧೀನವಾದುದೆಂದೂ, ಆ ಕರ್ಮಗಳನ್ನು ಮಾಡುವ ವಿಷಯದಲ್ಲಿ ಪ್ರಥಮ ಸಙ್ಕಲ್ಪ ವಿಷಯದಲ್ಲಿ ಕ್ಷೇತ್ರಜ್ಞನಿಗೆ ಸರ್ವ ಸ್ವಾತಂತ್ರ್ಯವನ್ನು ಸರ್ವೇಶ್ವರನು ಕೊಟ್ಟಿದ್ದಾನೆಂದೂ, ಬ್ರಹ್ಮಸೂತ್ರಗಳು ಹೇಳುತ್ತವೆ. (೨. ೩. ೩೩. ೪೦. ೪೧) ಹೀಗೆ ಹೇಳಿದರೆ ಪಾಪಕರ್ಮ ವಾಸನೆಯಿಂದ ಹುಟ್ಟಿದವನೂ ಕೂಡ ಜ್ಞಾನವನ್ನು ಸಂಪಾದಿಸಿ ಸುಕೃತಿಯಾಗಬಹುದು. ಹೀಗೆ ಹೇಳಿದರೇನೆ ಗುರೂಪದೇಶ ಶಾಸ್ತ್ರ ಜ್ಞಾನಗಳಿಗೆ ಸಾರ್ಥಕ್ಯವೂ ಲಭಿಸುತ್ತದೆ. ಬರೀ ಕರ್ಮವಾಸನೆಯೇ ಒಬ್ಬನ ಪ್ರವೃತ್ತಿಗಳಿಗೆ ಸಂಪೂರ್ಣ ಕಾರಣವಾಗುವದಿಲ್ಲವು ; ಇದರಿಂದ ಮೇಲಿನ ಸರ್ವವಿಧ ಆಕ್ಷೇಪಣೆಗಳಿಗೂ ಸಮಾಧಾನವು ದೊರೆಯುತ್ತದೆ. ಇಲ್ಲಿ **ಪುಣ್ಯಕರ್ಮಣಾಂ ಪಾಪಂ ಅನ್ತಗತಮ್** ಎಂದಿರುವದರಿಂದ ಪುಣ್ಯ ಕರ್ಮವು ಪಾಪಕರ್ಮವನ್ನು ಹೋಗಲಾಡಿಸುತ್ತದೆಂಬ ಅಭಿಪ್ರಾಯವನ್ನು ಕೆಲವರು ಹೊಂದಬಹುದು. ಒಬ್ಬನು ಒಂದು ಸುಕೃತವನ್ನು ಮಾಡಿದ್ದರೆ ಅದರ ಬಲದಿಂದ ಒಂದು ಪಾಪವನ್ನು ಮಾಡಿದರೂ ಬಾಧಕವಿಲ್ಲವೆಂದು ಭ್ರಮಿಸಬಹುದು. ನಾಲ್ಕು ಜನರಿಗೆ ಅನ್ನ ಹಾಕಿಬಿಟ್ಟು ಒಬ್ಬನ ಕುತ್ತಿಗೆಯನ್ನು ಕತ್ತರಿಸಿದರೆ ಬಾಧಕವಿಲ್ಲವೆಂದು ಭಾವಿಸಕೂಡದು. ಸುಕೃತಗಳು ಹೇಗೆ ಪಾಪಗಳನ್ನು ಹೋಗಲಾಡಿಸಬಹುದು ಎಂದರೆ, ಅಂತಹ ಸುಕೃತಿಯು ಹುಟ್ಟುವಾಗಲೇ ದೈವಕಟಾಕ್ಷವೀಕ್ಷಣೆಗೆ ಯೋಗ್ಯನಾದರೆ ತನ್ಮೂಲಕ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಲ್ಲಿ ಮಮತೆಯುಂಟಾಗಿ

**ಭಾ. ಯೇಷಾಂ ತ್ವನೇಕ ಜನ್ಮಾರ್ಜಿತೇನೋತ್ಕೃಷ್ಟ ಪುಣ್ಯಸಂಚಯೇನ, ಗುಣಮಯ ದ್ವಂದ್ವೇಚ್ಛಾದ್ವೇಷಹೇತುಭೂತಂ ಮದಾನ್ಮುಖ್ಯವಿರೋಧಿ ಚಾ ನಾದಿಕಾಲ ಪ್ರವೃತ್ತಂ ಪಾಪ ಮಂತಗತಂ - ಕ್ಷೀಣಂ; ತೇ ಪೂರ್ವೋಕ್ತೇನ ಸುಕೃತ ತಾರ ತಮ್ಯೇನ ಮಾಂ ಶರಣ ಮನುಪ್ರಪದ್ಯ ಗುಣಮಯಾ ನ್ಮೋಹಾ ದ್ವಿನಿರ್ಮುಕ್ತಾಃ ಜರಾಮರಣಮೋಕ್ಷಾಯ ಮಹತೇ ಚೈಶ್ವರ್ಯಾಯ ಮತ್ಪ್ರಾಪ್ತಯೇ ಚ ದೃಢ ವ್ರತಾಃ - ದೃಢಸಙ್ಕಲ್ಪಾಃ ಮಾಮೇವ ಭಜನ್ತೇ ॥ ೨೮ ॥**

**ಪರಮಾತ್ಮನನ್ನು ಆಶ್ರಯಿಸುವದರಿಂದ** ಪಾಪಗಳು ತೊಲಗುತ್ತವೇ ವಿನಾ, ಒಂದು ಸುಕೃತವು ಒಂದು ದುಷ್ಕೃತವನ್ನು ಹೋಗಲಾಡಿಸಲಾರದು. ಇದನ್ನೇ ಪ್ರಾಜ್ಞನಾದ ಆಂಜನೇಯನು ರಾವಣನಿಗೆ ಹೇಳುತ್ತಾನೆ. **“ಪ್ರಾಪ್ತಂ ಧರ್ಮಫಲಂ ತಾವತ್ ಭವತಾ ನಾತ್ರಸಂಶಯಃ। ಫಲಮದ್ಯಾಪ್ಯಧರ್ಮಸ್ಯ ಕ್ಷಿಪ್ರಮೇವ ಪ್ರಪತ್ಸ್ಯಸೇ”** ಹಿಂದೆ ಸುಕೃತ ಮಾಡಿ ಅದಕ್ಕನುಗುಣ ವಾದ ಫಲವನ್ನು ಹೊಂದಿದೆ. ಈಗ ಅಧರ್ಮವನ್ನು ಮಾಡಿರುತ್ತೀಯೆ; ಅದರ ಫಲವನ್ನೂ ಕ್ಷಿಪ್ರದಲ್ಲೇ ಹೊಂದುವಿ” ಎಂಬುದು ॥ ೨೮ ॥

**ಭಾಷ್ಯಾರ್ಥವು :—** ಹೀಗೆ ಎಲ್ಲರೂ ಸಮ್ಮೋಹವನ್ನೇ ಹೊಂದಿದರೆ ತನ್ನನ್ನು ಆಶ್ರಯಿಸಿ ಉಪಾಸಿಸುವರೇ ಇಲ್ಲವೆಂದಾಗುತ್ತದೆ. ಹಾಗಾದರೆ ಹಿಂದೆ ನಾಲ್ಕುವಿಧ ಭಕ್ತರು ಉಪಾಸಿಸು ತ್ತಾರೆಂದು ಉಪದೇಶಿಸಿದುದು ಹೇಗೆ? ಎಂಬ ಶಙ್ಕೆಗೆ ಉತ್ತರವನ್ನು ಹೇಳುತ್ತಾರೆ. **ಯೇಷಾಂತು** - ಯಾರಿಗಾದರೋ, **ಅನೇಕ ಜನ್ಮಾರ್ಜಿತೇನ ಉತ್ಕೃಷ್ಟ ಪುಣ್ಯ ಸಂಚಯೇನ**- ಅನೇಕ ಜನ್ಮಗಳಿಂದಲೂ ಸಂಪಾದಿಸಲ್ಪಟ್ಟ, ಉತ್ಕೃಷ್ಟವಾದ ಪುಣ್ಯ ಸಮೂಹದಿಂದ, ಹೇಗೆ ಉತ್ಕೃಷ್ಟವೆಂದರೆ ಭಗವದುಪಾಸನಕ್ಕೆ ಪ್ರತಿಬಂಧಕ ಪಾಪವನ್ನು ಹೋಗಲಾಡಿಸುವಂತಾದ್ದಾದು ದರಿಂದ ಉತ್ಕೃಷ್ಟವು; ಹೀಗೆ ವ್ಯಾಖ್ಯಾನಕ್ಕೆ, ಕಾರಣವೇನೆಂದರೆ ಇದು **ಜನಾನಾಂ ಪುಣ್ಯ ಕರ್ಮಣಾಂ** ಎಂಬ ಶಬ್ದಗಳಿಂದ ತೋರಿಬರುವ ಅರ್ಥವು; **ಜನಾನಾಂ** ಎಂದಿರುವದರಿಂದ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯಸಮೂಹವೆಂಬ ಅರ್ಥವು ತೋರಿಬರುತ್ತದೆಂದು ಹಾಗೆ ವ್ಯಾಖ್ಯಾನವು; ಇದು ಪುಣ್ಯವಾಸನಾರೂಪದಲ್ಲಿ ಹುಟ್ಟುವಾಗಲೇ ಪ್ರಾಪ್ತವಾಗಿದೆ ಎಂಬುದೂ, ಹಿಂದೆ **ಸರ್ಗೇಯಾಂತಿ** ಎಂದು ಪಾಪಿಗಳ ವಿಷಯದಲ್ಲಿ ಹೇಳಿದಹಾಗೆ ತೋರಿಬರುತ್ತದೆಂಬ ತಾತ್ಪರ್ಯವು. ಮುಂದೆ **ಪಾಪಮಂತಗತಂ** ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ— **ಗುಣಮಯ** -ತ್ರಿಗುಣಾತ್ಮಕವಾದ ದೇಹಮೂಲಕ ಬಂದ, **ದ್ವಂದ್ವರೂಪ**ವಾದ, **ಇಚ್ಛಾದ್ವೇಷ**ಗಳಿಗೆ, **ಹೇತುಭೂತಂ**-ಕಾರಣರೂಪವಾದುದಾಗಿಯೂ ಮತ್ತು **ಮದಾನ್ಮುಖ್ಯವಿರೋಧಿ**-ನನಗೆ ಅಭಿಮುಖ ವಾಗಿರುವದಕ್ಕೆ ಎಂದರೆ ಆಶ್ರಯಿಸುವದಕ್ಕೆ ವಿರೋಧಿಯಾಗಿರುವ, **ಅನಾದಿಕಾಲ ಪ್ರವೃತ್ತಂ**- ಅನಾದಿಕಾಲದಿಂದಲೂ ಅನುಸರಿಸಿ ಬರುತ್ತಿರುವ, **ಪಾಪಂ**-ಪಾಪವು, ಮೂಲದಲ್ಲಿ ಹೇಳಲ್ಪಟ್ಟಿವು ಎಂತಾದ್ದೆಂಬುದನ್ನು ವಿವರಿಸಿ ಹೇಳಿದರು, ದ್ವಂದ್ವರೂಪ ಇಚ್ಛಾದ್ವೇಷಗಳಿಗೆ ಕಾರಣಭೂತ ವಾದುದಾಗಿಯೂ ತನ್ನನ್ನುಪಾಸಿಸಲು ಪ್ರತಿಬಂಧಕರೂಪವಾಗಿಯೂ ಬಹು ಜನ್ಮಗಳಿಂದ ಅನು ಸರಿಸಿ ಬಂದಂಥಾ ಪಾಪವೆಂದು ಹೇಳಿದರು; ಇಂತಹ ಪಾಪವು, **ಅಂತಗತಂ** - ಯಾರಿಗೆ ಕ್ಷೀಣ ವಾಗುತ್ತದೋ, **ತೇ**-ಅವರುಗಳು, **ಪೂರ್ವೋಕ್ತೇನ ಸುಕೃತ ತಾರತಮ್ಯೇನ**-ಮೇಲೆ **“ಚತುರ್ವಿಧಾಭಜನ್ತೇಮಾಂ”** ಎಂಬಲ್ಲಿ ಹೇಳಿದ ಸುಕೃತಗಳ ತರತಮ ಭಾವದಿಂದ **ಶರಣಮನುಪ್ರಪದ್ಯ**-ಇದು ಭಜಂತೇ ಎಂಬ ಪದದಲ್ಲಡಗಿರುವ ಅರ್ಥವು, ಉಪಾಸನೆಗೆ ಅಙ್ಗವಾಗಿ ಶರಣಾ ಗತಿಯನ್ನನುಷ್ಠಿಸಿ, **ಗುಣಮಯಾನ್ಮೋಹಾದ್ವಿನಿರ್ಮುಕ್ತಾಃ - ಇದು ದ್ವಂದ್ವಮೋಹ ವಿನಿರ್ಮುಕ್ತಾಃ** ಎಂಬುದರ ವ್ಯಾಖ್ಯಾನವು, ಪ್ರಕೃತಿ ಸಂಬಂಧವಾದ **ಮೋಹ**ದಿಂದ ಬಿಡಲ್ಪಟ್ಟವರಾಗಿ,

ಮುಂದೆ, **ಭಜಂತೇ**-ಉಪಾಸನೆಯನ್ನು ಮಾಡುವರು ಎಂದಿರುತ್ತದೆ. **ಗುಣಮಯಾನ್ಮೋಹಾತ್ ವಿನಿರ್ಮುಕ್ತಾಃ** ಎಂಬುವರಿಂದ ಭಗವತ್ಸಂಶ್ಲೇಷ ವಿಶ್ಲೇಷ ಸುಖದುಃಖಯುಕ್ತರಾಗುತ್ತಾರೆಂಬ ಭಾವವೂ ಸೂಚಿತವು. ಏತಕ್ಕಾಗಿ ಉಪಾಸನೆ ಮಾಡುವರೆಂದರೆ, **ಚತುರ್ವಿಧಾಭಜಂತೇಮಾಂ** ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಫಲಗಳಿಗಾಗಿ ಎಂದು ಜ್ಞಾಪಕಕೊಡುವದಕ್ಕಾಗಿ ಹೇಳುತ್ತಾರೇನೆಂದರೆ **ಜರಾಮರಣ ಮೋಕ್ಷಾಯ**-ಜಿಜ್ಞಾಸುವಿಗೆ ಬೇಕಾದ ಜರಾಮರಣಗಳು ನಿವರ್ತಿಸಿ, ಪರಿಶುದ್ಧಾತ್ಮಾನುಭವಪ್ರಾಪ್ತಿಗಾಗಿಯೂ, **ಮಹತೇ ಐಶ್ವರ್ಯಾಯ**-ಆರ್ತನ ಮತ್ತು ಅರ್ಥಾರ್ಥಿಗಳ ಮಹತ್ತಾದ ಐಶ್ವರ್ಯಗಳಿಗಾಗಿಯೂ, **ಮತ್ಪ್ರಾಪ್ತಯೇಚ**-ಜ್ಞಾನಿಯು ಅಪೇಕ್ಷಿಸುವ ನನ್ನ ಸಾಯುಜ್ಯಪ್ರಾಪ್ತಿಗಾಗಿಯೂ ಸಹ, **ದೃಢವ್ರತಾಃ** - ಎಂದರೆ ದೃಢ ಸಂಕಲ್ಪರಾಗಿ, **ಮಾಮೇವ ಭಜನ್ತೇ**-ಅನ್ಯ ದೇವತೆಗಳನ್ನು ಬಿಟ್ಟು ನನ್ನನ್ನೇ ಉಪಾಸಿಸುತ್ತಾರೆ. ಇಲ್ಲಿ ವ್ಯಾಖ್ಯಾನದಲ್ಲಿ ಪುಣ್ಯ ಸಂಚಯದಿಂದ ಪಾಪವು ಕ್ಷೀಣವಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಹಾಗೆ ವ್ಯಾಖ್ಯಾನಮಾಡಲು ಪ್ರಮಾಣವೇನೆಂಬಪೇಕ್ಷೆಯಲ್ಲಿ **"ಧರ್ಮೇಣ ಪಾಪ ಮಪನುದತಿ"** ಎಂಬ ಪ್ರಮಾಣವನ್ನು ಶ್ರೀ ನಿಗಮಾನ್ತ ಮಹಾದೇಶಿಕರವರು ಉದಾಹರಿಸಿರುತ್ತಾರೆ. ಇಲ್ಲಿ ಧರ್ಮ ಶಬ್ದವು ಅನಭಿಸಂಹಿತ ಫಲದಿಂದ ಮಾಡಲ್ಪಟ್ಟ ಯಜ್ಞಾದಿಗಳನ್ನೂ ಬೋಧಿಸುತ್ತದೆ. ಕೃಛ್ರ ಚಾಂದ್ರಾಯಣರೂಪ ಪ್ರಾಯಶ್ಚಿತ್ತ ಧರ್ಮಗಳು ಮಾತ್ರ ಹೇಳಲ್ಪಟ್ಟವೆಂದು ಏಕೆ ಭಾವಿಸಕೂಡದು ಎಂದರೆ ಬ್ರಹ್ಮವಿದ್ಯಾ ವಿಷಯವಾಗಿ ಮುಮುಕ್ಷುವನ್ನೂ ಕೂಡ ಕುರಿತು ಹೇಳಿದುದಾಗಿ ತೋರುವದರಿಂದ ಕಾಮ್ಯ ಕರ್ಮವೇಯಾಗಲಿ, ಪ್ರಾಯಶ್ಚಿತ್ತ ರೂಪಕರ್ಮಗಳೇ ಮಾತ್ರವೇಯಾಗಲಿ ಹೇಳಲ್ಪಡಲಿಲ್ಲವೆಂದೂ, ಯಜ್ಞದಾನ ತಪಸ್ಸೇ ಮೊದಲಾದವುಗಳೇ ಉದ್ದೇಶಗಳಾಗಿ ಫಲಾಭಿಸಂಧಿರಹಿತವಾಗಿ ಮಾಡಲ್ಪಟ್ಟವೇ ಧರ್ಮಶಬ್ದಾರ್ಥವೆಂದೂ ತಿಳಿಯತಕ್ಕದ್ದು. ಇದು **"ಅನಭಿಭವಂಚ ದರ್ಶಯತಿ"** (ಸೂ. ೩.೪.೩೫) ಎಂಬಲ್ಲಿ ವ್ಯಕ್ತವು. ಫಲಾಭಿಸಂಧಿಯಿಲ್ಲದೆ ಯಜ್ಞಾದಿಗಳ ಅನುಷ್ಠಾನವು, ಬ್ರಹ್ಮವಿದ್ಯೋತ್ಪತ್ತಿಗೆ ಪ್ರತಿಬಂಧಕ ಪಾಪನಿವರ್ತನೆಯನ್ನು ಮಾಡುತ್ತದೆಂದು ಹೇಳಲ್ಪಟ್ಟಿರುತ್ತದೆ. ಯಾವಾಗ ಪ್ರತಿಬಂಧಕ ಪಾಪಗಳು ಕ್ಷೀಣವಾದವೋ, ಆಗ ದ್ವಂದ್ವ ಮೋಹವು ನಿವೃತ್ತಿಯಾಗುತ್ತದೆ. ಆಗ ತಮ್ಮ ತಮ್ಮ ಮನೋರಥಗಳಲ್ಲಿ ದೃಢ ಸಙ್ಕಲ್ಪರಾಗಿ ಮೇಲೆ ಹೇಳಿದ ನಾಲ್ಕುವಿಧ ಸುಕೃತಿಗಳೂ ತನ್ನನ್ನು ಉಪಾಸನೆಯನ್ನು ಮಾಡುವರೆಂದು ಹೇಳಿದರು. ಆ ಅನಾದಿಕಾಲ ಪ್ರವೃತ್ತ ಪಾಪವು, ಎರಡು ಅನರ್ಥಗಳನ್ನುಂಟುಮಾಡುತ್ತೆಂದು, **ದ್ವಂದ್ವೇಚ್ಛಾದ್ವೇಷ ಹೇತುಭೂತಂ** ಎಂದೂ, **ಮದಾನ್ಮುಖ್ಯವಿರೋಧಿಯೂ** ಎಂದೂ ಹೇಳಿ, ಅದು ಕ್ಷೀಣವಾದುದರಿಂದ ಇವೆರಡು ದೋಷಗಳೂ ಕಳೆದವು ಎಂಬದಾಗಿ, ಇಲ್ಲಿ ಅಂತಗತಂ ಪಾಪಂ ಎಂಬುದಕ್ಕೆ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಈಗ ಇವುಗಳು ಕಳೆದು ಈ ಎರಡು ವಿಧ ಫಲಪ್ರಾಪ್ತವಾದುದರಿಂದ ಹಾಗೆ ಬರೆದಿರುತ್ತಾರೆ. **ದ್ವಂದ್ವಮೋಹ ವಿನಿರ್ಮುಕ್ತತೆಯೇ** ಒಂದು ಫಲವು, **ಭಜನ್ತೇ ಮಾಂ** ಎಂಬುದರಿಂದ **ತನ್ನ** ಉಪಾಸನೆಯಲ್ಲಿ ಪ್ರವೃತ್ತಿಯು ಇನ್ನೊಂದು ಫಲವು. ಇಲ್ಲಿ **ಅನ್ತಗತಂ** ಎಂಬ ಶಬ್ದಕ್ಕೆ **ಕ್ಷೀಣಂ** ಎಂಬ ವ್ಯಾಖ್ಯಾನದಿಂದ, ನಿತ್ಯ ನೈಮಿತ್ತಿಕಾದಿಗಳನ್ನು ಭಗವತ್ಪ್ರೀತಿಗಾಗಿ ಫಲ ಮಮತಾದಿಗಳಿಲ್ಲದೆ ಭಗವದಾರಾಧನರೂಪದಲ್ಲಿ ನಡೆಸಿದರೂ, ಹಿಂದೆ ಅನೇಕ ಜನ್ಮಗಳಲ್ಲಿ ಮಾಡಿದ ಸಮಸ್ತ ಪಾಪಗಳೂ ಹೋಗುವದಿಲ್ಲವು. ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳು ಮಾತ್ರ ಹೋಗುತ್ತವೇ ವಿನಾ, ಸಮಸ್ತ ಪಾಪವೂ ಇಲ್ಲವು ಎಂಬುದನ್ನು ಗ್ರಹಿಸತಕ್ಕದ್ದಾಗಿರುತ್ತದೆ. ಮಿಕ್ಕವೆಲ್ಲವೂ ಯಾವಾಗ ನಾಶ ಹೊಂದುವುವು ಎಂದರೆ ಉಪಾಸನ ನಿಷ್ಪತ್ತಿಯುಂಟಾದಾಗ ಎಂದು ತಿಳಿಯತಕ್ಕದ್ದು. ಈ ಅನಾದಿ ಕಾಲ ಪ್ರವೃತ್ತ ಪಾಪವೆಂಬುದರಿಂದ ಪುಣ್ಯವೂ ಕೂಡ ಹಾಗೆಯೇ ಬಂಧಕವಾದುದರಿಂದ ಅದೂ

ಕೂಡ ಪಾಪ ಶಬ್ದದಲ್ಲೇ ಅಂತರ್ಗತವು. ಎರಡೂ ಬೇಡಿಯೇ, ಒಂದು ಕಬ್ಬಿಣದ್ದು, ಇನ್ನೊಂದು ಚಿನ್ನದ್ದು. ಹಿಂದೆಯೇ **"ಚತುರ್ವಿಧಾ ಭಜನ್ತೇ ಮಾಂ"** ಎಂಬಲ್ಲೇ ಇವರೇ ಹೇಳಲ್ಪಟ್ಟರೆಂದು ತೋರಿಸುವದಕ್ಕಾಗಿ, ಮುಂದಿನ ಎರಡು ಶ್ಲೋಕಗಳಲ್ಲೂ ಇವರುಗಳೇ ಹೇಳಲ್ಪಡುವರೆಂದೂ, ಇವರುಗಳು ತಿಳಿಯತಕ್ಕ ಕರ್ತವ್ಯ ವಿಷಯಗಳು ಯಾವುವು ಎಂಬುದು ಮುಂದೆ ಹೇಳಲ್ಪಡುತ್ತದೆಂದೂ, ಅಷ್ಟಮಾಧ್ಯಾಯದಲ್ಲಿ ಇವು ಮುಂದೆ ಹೇಳಲ್ಪಡುತ್ತವೆಂದೂ ತಿಳಿಸುವದಕ್ಕಾಗಿಯೇ, **ಮಾಂ ಭಜನ್ತೇ** ಎಂದು ಇಷ್ಟು ಮಾತ್ರವೇ ಮೂಲದಲ್ಲಿದ್ದರೂ ಏತಕ್ಕಾಗಿ ಉಪಾಸಿಸುವರೆಂದು ಹೇಳುವ ಉದ್ದೇಶದಿಂದ, **ಜರಾಮರಣ ಮೋಕ್ಷಾಯ** ಎಂಬುದರಿಂದ ಜಿಜ್ಞಾಸುವಿಗೆ ಉಂಟಾಗುವ ಫಲವೂ, **ಮಹತೇ ಐಶ್ವರ್ಯಾಯ** ಎಂಬುದರಿಂದ ಆರ್ತನಿಗೂ ಅರ್ಥಾರ್ಥಿಗೂ ಉಂಟಾಗುವ ಫಲವೂ, **ಮತ್ಪ್ರಾಪ್ತಯೇ** ಎಂಬುದರಿಂದ ಜ್ಞಾನಿಗೆ ಉಂಟಾಗುವ ಫಲವೂ ತೋರಿಬರುವದರಿಂದ ಹೀಗೆ ಈ ನಾಲ್ಕು ಜನ ಸುಕೃತಿಗಳೇ ಹೇಳಲ್ಪಟ್ಟರೆಂದು ಸೂಚಿಸಿರುತ್ತಾರೆ. ಇಲ್ಲಿ ಐಶ್ವರ್ಯವೆಲ್ಲಾ ತುಚ್ಛವು, ಪುನಸ್ಸಂಸಾರ ಹೇತುವು, ಇಂತಹ ನಶ್ವರವಾದ ಐಶ್ವರ್ಯವನ್ನು ಯತಿವರ್ಯರು **"ಮಹತೇ ಐಶ್ವರ್ಯಾಯ"** ಎಂದು ಕೊಂಡಾಡಬಹುದೋ ? ಎಂದರೆ ಈ ತುಚ್ಛವಾದ ಐಶ್ವರ್ಯಕ್ಕಾಗಿಯೂ ಅನ್ಯದೇವತೆಗಳನ್ನು ಬಿಟ್ಟು ಪರಮಾತ್ಮನನ್ನು ಉಪಾಸಿಸಿದರೆ, ಕೋರಿದುದಕ್ಕೂ ಹೆಚ್ಚಾದುದನ್ನೂ ಕೊಟ್ಟು, ಕರುಣಾನಿಧಿಯು ತನ್ನನ್ನು ಉಪಾಸಿಸಿದ ಸುಕೃತಕ್ಕೆ ಕಟ್ಟು ಬಿದ್ದು ಕ್ರಮೇಣ ಮೋಕ್ಷವನ್ನೂ ಹೊಂದಿಸುವನಾದುದರಿಂದ **"ಮಹತೇ ಐಶ್ವರ್ಯಾಯ"** ಎಂಬ ವ್ಯಾಖ್ಯಾನವು. ಆದರೆ ಇಲ್ಲಿ ಒಂದು ಶಜ್ಕಾ ಉಂಟಾಗಬಹುದು ; ಆರ್ತನೂ ಅರ್ಥಾರ್ಥಿಯೂ ಐಶ್ವರ್ಯಾರ್ಥಿಗಳಾಗಿರುವಾಗ ಅವರು ದ್ವಂದ್ವಮೋಹವಿನಿರ್ಮುಕ್ತರು ಹೇಗೆ ಎಂದು ಕೇಳಬಹುದು ; ಆರ್ತನೂ ಅರ್ಥಾರ್ಥಿಯೂ ದ್ವಂದ್ವಮೋಹಕ್ಕೆ ವಶರಾಗಿ ಅಧರ್ಮ ಪ್ರವರ್ತನೆಯಿದ್ದುದಾದರೆ, ಮನೋರಥವು ಎಂದಿಗೂ ಸಿದ್ಧಿಸದು. ಅಂತಹ ಅಧರ್ಮಗಳಿಗೆ ಮನಸ್ಸು ವಶವಾಗದಿರಬೇಕೆಂಬುದು **ದ್ವಂದ್ವಮೋಹ ವಿನಿರ್ಮುಕ್ತಾಃ** ಎಂಬ ಪ್ರಯೋಗದಿಂದ ಬೋಧಿಸಲ್ಪಟ್ಟಿತು. **ಮಾಂ ಭಜನ್ತೇ**-ಎಂದು ಮೂಲದಲ್ಲಿದ್ದರೆ ವ್ಯಾಖ್ಯಾನದಲ್ಲಿ **ಮಾಮೇವ ಭಜನ್ತೇ** ಎಂದು ಅವಧಾರಣ ಪೂರ್ವಕ ವ್ಯಾಖ್ಯಾನ ಹೇಗೆಂದರೆ, ಹಿಂದೆ **ನಮಾಂ ದುಷ್ಕೃತಿನೋ ಮೂಢಾಃ** ಎಂಬಲ್ಲಿ ಅನ್ಯದೇವತಾ ಭಜನವು ಭಗವತ್ಪ್ರೀತ್ಯುತ್ಪಾದನಕ್ಕೆ ಪ್ರತಿಬಂಧಕವಾಗಿ ಮನೋರಥ ಸಿದ್ಧಿಗೆ ಪ್ರಬಲ ಪ್ರತಿಬಂಧಕವಾದುದರಿಂದ, ತನ್ನ ಭಜನದೊಂದಿಗೆ ಅನ್ಯದೇವತಾ ಭಜನವನ್ನು ಮಾಡುವದು ಸರ್ವಥಾ ಸರಿಯಲ್ಲವೆಂದು ತಿಳಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು. ಇದರಿಂದ ಅನ್ಯದೇವತಾ ಭಜನೆಯೊಂದಿಗೆ ಪರದೇವತಾ ಭಜನವನ್ನೂ ಮಾಡತಕ್ಕದ್ದೆಂದು ಹೇಳುವ ಕೆಲವರ ಅಭಿಪ್ರಾಯವು ನಿರಸನ ಮಾಡಲ್ಪಟ್ಟಿತು. **ಭಜನ್ತೇ ಮಾಂ** ಎಂಬಲ್ಲಿ ಸಮಸ್ತ ವಾಕ್ಯವೂ ಸಾವಧಾರಣವಾದುದರಿಂದ, ಇಲ್ಲಿ ಪ್ರಸಜ್ಗಾನುಗುಣವಾಗಿ, **ಮಾಮೇವ** ಎಂದೇ ಅರ್ಥವಾಗುತ್ತದೆ. **ಮಾಂ ಭಜನ್ತೇ** ಎಂದು ಇಷ್ಟು ಮಾತ್ರ ಮೂಲದಲ್ಲಿರುವಾಗ **"ಜರಾಮರಣ ಮೋಕ್ಷಾಯ"** ಎಂದಾರಂಭಿಸಿ ಹೇಳಿದ ವ್ಯಾಖ್ಯಾನಕ್ಕೆ ಅವಕಾಶವೆಲ್ಲಿಯದು ? ಎಂದಾಕ್ಷೇಪ ತಂದರೆ, **ಭಜನ್ತೇ** ಎಂಬುದರಿಂದ ನಾಲ್ಕುವಿಧ ಭಕ್ತರೂ ಹೇಳಲ್ಪಟ್ಟರೆಂದು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಇಲ್ಲಿ ಜಿಜ್ಞಾಸುವು ಜರಾಮರಣ ಮೋಕ್ಷಕ್ಕಾಗಿಯೂ, ಆರ್ತನೂ ಅರ್ಥಾರ್ಥಿಯೂ ಐಶ್ವರ್ಯಪ್ರಾಪ್ತಿಗಾಗಿಯೂ, ಜ್ಞಾನಿಯು **ಮತ್ಪ್ರಾಪ್ತಯೇ**—ತನ್ನ ಪ್ರಾಪ್ತಿಗಾಗಿಯೂ **ಭಜನ್ತೇ** ಎಂದು ವ್ಯಾಖ್ಯಾನ ಮಾಡಿದರು. ಆಗಲಿ, ಐಶ್ವರ್ಯಾರ್ಥಿಯು ದ್ವಂದ್ವಮೋಹ ವಿನಿರ್ಮುಕ್ತನೂ ಮತ್ತು ದೃಢವ್ರತನೂ ಹೇಗೆ ಎಂದರೆ ಐಶ್ವರ್ಯಾರ್ಥಿಯೂ ಕ್ಷುದ್ರ ದ್ವಂದ್ವ

**ಭಾ. ಅವ. ಅತ್ರತ್ರಯಾಣಾಂ ಭಗವನ್ತಂ ಭಜಮಾನಾನಾಂ ಜ್ಞಾತವ್ಯ ವಿಶೇಷಾನುಪಾದೇಯಾಂಶ್ಚ ಪ್ರಸ್ತೌತಿ—**

**ಮೂ. ಜರಾ ಮರಣ ಮೋಕ್ಷಾಯ ಮಾ ಮಾಶ್ರಿತ್ಯ ಯತಂತಿ ಯೇ।**
**ತೇ ಬ್ರಹ್ಮ ತದ್ವಿದುಃ ಕೃತ್ಸ ಮಧ್ಯಾತ್ಮಂ ಕರ್ಮಚಾಖಿಲಂ ॥ ೨೯.**

ಗಳಿಂದ ಬಿಡಲ್ಪಟ್ಟವನೇ, ಏಕೆಂದರೆ ಸರ್ವೇಶ್ವರನನ್ನಾಶ್ರಯಿಸಿ, ಸರ್ವೇಶ್ವರನಿಗೆ ಅಭಿಮತವಾದ ಐಶ್ವರ್ಯವನ್ನು ಪ್ರಾರ್ಥಿಸುವನೇ ವಿನಾ ದುರಾಶೆಯಿಂದ ಇತರರ ಸ್ವತ್ತು ಸ್ತ್ರೀ ಕ್ಷೇತ್ರಾದಿಗಳನ್ನು ಪ್ರಾರ್ಥಿಸುವನಲ್ಲವು. ಅಂತಹ ಪ್ರಾರ್ಥನೆಯಿಂದ ನಿಗ್ರಹವೇ ವಿನಾ ಅನುಗ್ರಹವಿಲ್ಲವು. ಆದರೂ ಸಹ ದೃಢವ್ರತರೇ ತಾವು ಅಪೇಕ್ಷಿಸಿದುದನ್ನು ಭಗವದುಪಾಸನದಿಂದ ಸಾಧಿಸಬೇಕೆಂಬ ದೃಢಸಙ್ಕಲ್ಪವುಳ್ಳವರು.

**ಭಾಷ್ಯಾವತಾರಿಕೆಯ ಅರ್ಥವು :—**ಶ್ರೀಕೃಷ್ಣ ಭಗವಾನರವರು ತಮ್ಮ ಶಿಷ್ಯನಿಗೆ **ಈ** ಹಿಂದೆ **ಚತುರ್ವಿಧಾ ಭಜನ್ತೇಮಾಂ** ಎಂಬ ಶ್ಲೋಕದಲ್ಲಿ ಹೇಳಿದ ನಾಲ್ಕು ಜನ ಸುಕೃತಿಗಳ ವಿಷಯದಲ್ಲಿ ಹೆಚ್ಚು ವಿಷಯಗಳನ್ನು ತಿಳಿಸಲಪೇಕ್ಷಿಸಿ, ಅವರುಗಳು ತಿಳಿಯತಕ್ಕ ವಿಷಯಗಳೇನು, ಅನುಷ್ಠಿಸತಕ್ಕವು ಯಾವುವು, ಎಂಬುದನ್ನು ವಿಸ್ತರವಾಗಿ ತಿಳಿಸಬೇಕೆಂಬ ಕುತೂಹಲಯುಕ್ತರಾಗಿ ತಮ್ಮ ಶಿಷ್ಯನೂ ಸಹ ಕುತೂಹಲ ಯುಕ್ತನಾಗಿ ಸಾವಧಾನದಿಂದ ಪ್ರಶ್ನಿಸಿ ತಿಳಿಯಲಿ ಎಂಬ ಆಶಯದಿಂದ ಅವರುಗಳ ಜ್ಞಾತವ್ಯ ಕರ್ತವ್ಯಾಂಶಗಳನ್ನು ಸಂಗ್ರಹಿಸಿ ಗೂಢವಾಗಿ ಈ ಅಧ್ಯಾಯದ ಮುಂದಿನ ಎರಡು ಶ್ಲೋಕಗಳಿಂದ ಹೇಳುತ್ತಾರೆ. ಈ ಮೂಲಕವಾಗಿ ಮುಂದಿನ ಅಧ್ಯಾಯಕ್ಕೆ ಸಂಗತಿಯನ್ನೂ ತೋರಿಸುತ್ತಾರೆ. ಅತ್ರ - ಈ ಸಂದರ್ಭದಲ್ಲಿ, ಈ ಮುಂದಿನ ಎರಡು ಶ್ಲೋಕಗಳಲ್ಲೂ **ಭಗವನ್ತಂ ಭಜ ಮಾನಾನಾಂ** - ಭಗವಂತನನ್ನು ಉಪಾಸನೆ ಪ್ರಪಾದನ ಮೂಲಕ ಆಶ್ರಯಿಸುವ, **ತ್ರಯಾಣಾಂ** - ಮೂರು ವಿಧ ಸುಕೃತಿಗಳಿಗೂ, **ಜ್ಞಾತವ್ಯ ವಿಶೇಷಾನ್**-ಅವರು ತಿಳಿಯತಕ್ಕ ವಿಶೇಷಗಳನ್ನೂ, **ಉಪಾದೇಯಾಂಶ್ಚ** - ಅವರುಗಳಿಗೆ ಯೋಗ್ಯವಾಗಿ ಅನುಷ್ಠಿಸತಕ್ಕವುಗಳನ್ನೂ, **ಪ್ರಸ್ತೌತಿ** - ಪ್ರಸ್ತಾವನೆ ರೂಪದಲ್ಲಿ ಹೇಳುತ್ತಾರೆ, ಮುಂದಿನ ಅಧ್ಯಾಯದಲ್ಲಿ ಹೇಳುವದಕ್ಕೆ ಸಂಗತಿ ರೂಪದಲ್ಲಿ ಸಙ್ಗ್ರಹವಾಗಿ ಹೇಳುತ್ತಾರೆಂಬ ಭಾವವು. ಚತುರ್ವಿಧ ಸುಕೃತಿಗಳನ್ನು ಗೀತಾಚಾರ್ಯನು ಹೇಳಿರುವಾಗ ಇಲ್ಲಿ **ತ್ರಯಾಣಾಂ** ಎಂಬ ವ್ಯಾಖ್ಯಾನವು ಹೇಗೆ? ಎಂದರೆ ಆ ಶ್ಲೋಕ ವಾಖ್ಯಾನದಲ್ಲೇ ಆರ್ತನಿಗೂ ಅರ್ಥಾರ್ಥಿಗೂ ತುಂಬಾ ವ್ಯತ್ಯಾಸ ಏನೂ ಇಲ್ಲವೆಂದು ಹೇಳಿ ಇಬ್ಬರೂ ಐಶ್ವರ್ಯ ಕಾಮಿಗಳೇಯಾದುದರಿಂದ ಶ್ರೀ ಭಾಷ್ಯಕಾರರು ಈ ನಾಲ್ಕು ಪಂಗಡದವರನ್ನು ಮೂರಾಗಿ ಇಟ್ಟುಕೊಂಡರು— (೧) ಐಶ್ವರ್ಯಾರ್ಥಿ (೨) ಜಿಜ್ಞಾಸು (೩) ಜ್ಞಾನೀ ಎಂಬದಾಗಿ.

**ಮೂಲಕ್ಕೆ ಅರ್ಥವು :—**ಈ ಮುಂದಿನ ಎರಡು ಶ್ಲೋಕಗಳಲ್ಲೂ ಈ ನಾಲ್ಕು ಮಂದಿ ಸುಕೃತಿಗಳು ತಿಳಿಯತಕ್ಕ ಮತ್ತು ಅನುಷ್ಠಿಸತಕ್ಕ ವಿಷಯಗಳು ಹೇಳಲ್ಪಡುವವು. ಈ ಹೇಳಲ್ಪಡುವ ಜ್ಞಾತವ್ಯ ಕರ್ತವ್ಯಾಂಶಗಳಲ್ಲಿ ಕೆಲವು ಒಂದು ಪಂಗಡದವರಿಗೆ ಮಾತ್ರವೇ ಅನ್ವಯಿಸಬಹುದು, ಕೆಲವು ಎರಡು ಪಂಗಡದವರಿಗೂ, ಕೆಲವು ಮೂರು ಪಂಗಡದವರಿಗೂ ಅನ್ವಯಿಸಬೇಕಾಗುತ್ತದೆ. ಅನ್ವಯಿಸಬೇಕಾದುದನ್ನು ಪೂರ್ವಾಪರ ವಿರೋಧವಿಲ್ಲದ ಹಾಗೂ ಸಮಂಜಸವಾಗಿಯೂ ಅನ್ವಯಿಸತಕ್ಕದ್ದಾಗಿಯೂ ಇರುತ್ತದೆ. **"ಚತುರ್ವಿಧಾ ಭಜನ್ತೇ ಮಾಂ"** ಎಂಬ ಶ್ಲೋಕದಲ್ಲಿ ಎಲ್ಲಾ ಸುಕೃತಿಗಳಾದ ಭಕ್ತರೂ ಸಮಗ್ರವಾಗಿ ಹೇಳಲ್ಪಟ್ಟಿರುವದರಿಂದ ಈ ಮುಂದಿನ ಎರಡು ಶ್ಲೋಕಗಳಲ್ಲಿರುವ ಭಕ್ತರೂ ಆ ಚತುರ್ವಿಧ ಭಕ್ತರಲ್ಲೇ ಅಡಗಿರಬೇಕೆಂಬುದು ವ್ಯಕ್ತವು. ಹಾಗಲ್ಲದಿದ್ದರೆ, **"ಚತುರ್ವಿಧಾ ಭಜನ್ತೇ ಮಾಂ"** ಎಂದು ಆಗ

ನಾಲ್ಕು ವಿಧವೆಂದು ಹೇಳಿದ ಮಾತು ಸರಿಯಲ್ಲವಾಗುತ್ತದೆ. ಆದುದರಿಂದ ಆ ಭಕ್ತರನ್ನೇ ಅನುವಾದ ಮಾಡಿ ಹೇಳಿ ಅವರುಗಳ ವಿಷಯದಲ್ಲಿ ಇನ್ನೂ ಹೇಳಬೇಕಾದ ಅಪ್ರಾಪ್ತವಾದುದನ್ನು ಹೇಳುತ್ತಾರೆ. ಏಕೆಂದರೆ ಆ ನಾಲ್ಕು ಜನ ಭಕ್ತರ ವಿಷಯದಲ್ಲೇ **ಇನ್ನೂ** ಹೆಚ್ಚು ವಿಷಯಗಳನ್ನು ಅರ್ಜುನನಿಗೆ ತಿಳಿಸುತ್ತಾರೆ. ಈ ವಿಷಯಗಳನ್ನು ಪರಿಗಣಿಸದೆ ವ್ಯಾಖ್ಯಾತೃಗಳು ನಾನಾ ವಿಧವಾಗಿ ಅರ್ಥ ಮಾಡಿರುತ್ತಾರೆ. **ಯೇ** - ಮೇಲೆ ಹೇಳಿದ ನಾಲ್ಕು ಜನ ಭಕ್ತರುಗಳಲ್ಲಿ ಯಾರು, **ಮಾಂ ಆಶ್ರಿತ್ಯ**-ನನ್ನಲ್ಲಿ ಅಜ್ಞರೂಪ ಶರಣಾಗತಿಯನ್ನನುಷ್ಠಿಸಿ, **ಜರಾ ಮರಣ ಮೋಕ್ಷಾಯ** - ಮುಂದಕ್ಕೆ ಜನ್ಮ ಮುಪ್ಪು ಮರಣಗಳಿಂದ ಬಿಡುಗಡೆಗೋಸ್ಕರ, **ಯತಂತಿ**-ಯತಂತೇ, ಉಪಾಸನೆಯ ಮೂಲಕ ಪ್ರಯತ್ನ ಪಡುವರೋ, **ತೇ** - ಆ ಸುಕೃತಿಗಳಾದ ಭಕ್ತರು, **ತತ್ ಬ್ರಹ್ಮವಿದುಃ** - ಆ ಬ್ರಹ್ಮವನ್ನು ತಿಳಿಯುತ್ತಾರೆ; ಇಲ್ಲಿ ಶ್ರೀ ಕೃಷ್ಣನೇ ಪರಬ್ರಹ್ಮವಾಗಿ, **ತದ್ಬ್ರಹ್ಮವಿದುಃ** ಎಂದು ಹೇಳಿದರೆ ಪರಬ್ರಹ್ಮವನ್ನು ತಿಳಿಯುತ್ತಾರೆ ಎಂದರ್ಥ ಮಾಡುವದು ಅಸಂಗತವಲ್ಲವೋ ? ಆಗ **ಮಾಂವಿದುಃ** ಎಂದು ಹೇಳಬೇಕಾಗಿತ್ತು. ಮುಂದಿನ ಶ್ಲೋಕದಲ್ಲಿ **ಸಾಧಿಯಜ್ಞಂ** ಎಂಬಲ್ಲಿ ಜ್ಞಾನಿಯನ್ನೂ ಸೇರಿಸಿ ಹೇಳಿರುವ ಸಂದರ್ಭದಲ್ಲಿ **ಮಾಂ ವಿದುಃ** ಎಂದೇ ಹೇಳಿರುತ್ತಾರೆ, ಆದುದರಿಂದ ಇಲ್ಲಿ ತದ್ಬ್ರಹ್ಮವೆಂದರೆ ಪರಬ್ರಹ್ಮವಲ್ಲವೆಂದು ತಿಳಿದೇ ಅರ್ಜುನನು ಮುಂದೆ ಪ್ರಶ್ನಿಸುತ್ತಾನೆ. ಕಿಂತದ್ಬ್ರಹ್ಮ ಎಂಬುದು ಆತನ ಪ್ರಶ್ನೆಯು, ಅದಕ್ಕೆ ಉತ್ತರವು—**ಅಕ್ಷರಂ ಬ್ರಹ್ಮ ಪರಮಂ** ಎಂಬುದಾಗಿ. ಆಗಲಿ, ಈ ಶಬ್ದಗಳಿಂದ ಪರಬ್ರಹ್ಮವನ್ನು ಹೇಳಬಹುದಲ್ಲಾ, ಅಕ್ಷರಶಬ್ದವಿರುತ್ತದೆ, **ಪರಮ** ಶಬ್ದವಿರುತ್ತದೆ, ಆದುದರಿಂದ ಪರಬ್ರಹ್ಮವೆಂಬುದೇ ಅರ್ಥ ತೋರುತ್ತದೆಯಲ್ಲಾ ಎಂದಾಕ್ಷೇಪ ತಂದರೆ, ಅರ್ಜುನನು ಕೇಳುವದು ಏಳು ಪ್ರಶ್ನೆಗಳು, **ಕಿಂತದ್ಬ್ರಹ್ಮ** ಎಂಬುದೊಂದು. ಇದಲ್ಲದೆ **ಅಧಿಯಜ್ಞಃ ಕಥಂಕೋತ್ರ** ಎಂಬುದು ಬೇರೆ ಪ್ರಶ್ನೆಯು, ಅದಕ್ಕೆ ಉತ್ತರವಾಗಿ, **ಅಧಿ ಯಜ್ಞೋಹ ಮೇವ** ಎಂದು ಹೇಳಲ್ಪಟ್ಟರೆ, ಎರಡು ಕಡೆಯಲ್ಲೂ ಪರಬ್ರಹ್ಮವೇ ಹೇಳಲ್ಪಟ್ಟಿತೆಂದಾಗುವದರಿಂದ ಅಸಂಗತವಾಗುತ್ತದೆ. ಆದುದರಿಂದ ಹಿಂದೆ **ಅಕ್ಷರ** ಬ್ರಹ್ಮ ಶಬ್ದಗಳಿಂದ ಪ್ರಕೃತಿ ವಿಯುಕ್ತವಾದ ಪರಿಶುದ್ಧವಾದ ಜೀವಾತ್ಮ ತತ್ವವು ಹೇಳಲ್ಪಟ್ಟಿರುವದರಿಂದ, **ತದ್ಬ್ರಹ್ಮ**-ತಾನು ಹಿಂದೆ ನಿನಗೆ ಸ್ವರೂಪ ಸ್ವಭಾವಗಳನ್ನು ಚನ್ನಾಗಿ ತಿಳಿಸಿರುವ ಆ ಜೀವಾತ್ಮನನ್ನು ತಿಳಿಯುತ್ತಾರೆ ಎಂಬರ್ಥವೇ ಸಮಂಜಸವಾದುದು. ಇಲ್ಲಿ **ವಿದುಃ** ಎಂದು ಹೇಳಿದ್ದರೂ, ಜರಾ ಮರಣಗಳಿಂದ ಬಿಡುಗಡೆಯನ್ನು ಮಾತ್ರ ಅಪೇಕ್ಷಿಸುವವರು ಜಿಜ್ಞಾಸುಗಳಾಗಿ ಪರಿಶುದ್ಧವಾದ ಪ್ರಕೃತಿ ವಿಯುಕ್ತವಾದ ಆತ್ಮವನ್ನು ಹೊಂದಬೇಕೆಂಬ ಅಪೇಕ್ಷೆಯಿರುವ ಕೈವಲ್ಯಾರ್ಥಿಗಳು. ಇವರುಗಳು **ತದ್ಬ್ರಹ್ಮ ವಿದುಃ**-ಅಂತಹ ಪ್ರಕೃತಿವಿಯುಕ್ತ ಆತ್ಮಸ್ವರೂಪವನ್ನು ತಿಳಿಯುತ್ತಾರೆಂದು ಹೀಗೆ ಹೇಳಿದರೂ ಅವರು ತಿಳಿಯತಕ್ಕದ್ದು ಎಂಬುವೇ ಅರ್ಥವು. ಅವರುಗಳು ಇನ್ನೂ ಏನನ್ನು ತಿಳಿಯಬೇಕೆಂದರೆ—**ಕೃತ್ಸ್ನಮಧ್ಯಾತ್ಮಂ** - ಅಧ್ಯಾತ್ಮವೆಂದರೇನು ಎಂದು ಮುಂದೆ ಅರ್ಜುನನು ಕೇಳುವ ಪ್ರಶ್ನೆಗೆ, "**ಸ್ವಭಾವೋ ಧ್ಯಾತ್ಮಮುಚ್ಯತೇ**" ಎಂದು ಉತ್ತರ ಹೇಳುವದರಿಂದ, ಈ ಆತ್ಮನೊಂದಿಗೇನೆ ಸಂಬಂಧಿಸಿಕೊಂಡಿರುತ್ತದೆಂದು ಪಂಚಾಗ್ನಿ ವಿದ್ಯೆಯಲ್ಲಿ ಹೇಳಲ್ಪಟ್ಟಿರುವ, **ಭೂತ ಸೂಕ್ಷ್ಮ** ಮೊದಲಾದುವು; ಇದನ್ನೂ ಕೂಡ ಜಿಜ್ಞಾಸುವು ತಿಳಿದಿರಬೇಕು; ಇನ್ನೂ ಏನನ್ನು ತಿಳಿಯಬೇಕೆಂದರೆ, **ಕರ್ಮಚಾಖಿಲಂ**-ಇಲ್ಲಿ ಕರ್ಮವೆಂದರೇನೆಂದೂ ಮುಂದಿನ ಅರ್ಜುನ ಪ್ರಶ್ನೆಗೆ ಉತ್ತರವಾಗಿ, "**ಭೂತಭಾವೋದ್ಭವಕರವಾದ ವಿಸರ್ಗವು**" ಎಂದು ಹೇಳಲ್ಪಟ್ಟಿರುತ್ತದೆ. ಅದೇ ಪಂಚಾಗ್ನಿ ವಿದ್ಯೆಯ ವಿಷಯದಲ್ಲಿ ಛಾಂದೋಗ್ಯದ ಐದನೆಯ ಪ್ರಪಾಠಕದಲ್ಲಿ ಹೇಳಲ್ಪಡುವಂತಾದ್ದು; ಈ ಆತ್ಮನು ಹೇಗೆ ಪುರುಷ ರೇತಸ್ಸಿನಲ್ಲಿ

**ಭಾ.** **ಜರಾ ಮರಣ ಮೋಕ್ಷಾಯ - ಪ್ರಕೃತಿ ವಿಯುಕ್ತಾತ್ಮ ಸ್ವರೂಪದರ್ಶನಾಯ, ಮಾಮಾಶ್ರಿತ್ಯ ಯೇ ಯತನ್ತೇ, ತೇ ತದ್ಬ್ರಹ್ಮ ವಿದುಃ ; ಅಧ್ಯಾತ್ಮಂಚ ಕೃತ್ಸ್ನಂ ವಿದುಃ ; ಕರ್ಮಚಾಖಿಲಂ ವಿದುಃ || ೨೯ ||**

**ಮೂ.** **ಸಾಧಿ ಭೂತಾದಿ ದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ |**
**ಪ್ರಯಾಣಕಾಲೇ ಪಿ ಚ ಮಾಂ ತೇ ವಿದು ಯುಕ್ತ ಚೇತಸಃ ||** **೩೦.**

**ಇತಿ ಶ್ರೀ ಭಗವದ್ಗೀತಾ ಸೂಪನಿಷತ್ಸು ಪರಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಜ್ಞಾನ ವಿಜ್ಞಾನ ಯೋಗೋನಾಮ ಸಪ್ತಮೋಽಧ್ಯಾಯಃ**
**ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ**

ಸೇರಿದವನಾಗಿ ಯೋಷಿದ್ಯೋನಿಯಲ್ಲಿ ಉಲ್ಬಾವೃತನಾಗಿ ೯, ೧೦ ಮಾಸಗಳಿದ್ದು, ಹೀಗೆ ಪುರುಷ ವಾಚ್ಯನಾಗಿ, ಪುನರ್ಜನ್ಮ ಉಂಟಾಗುತ್ತದೆಂದು ಉಪಪಾದಿಸಲ್ಪಟ್ಟಿರುತ್ತದೆ. ಇಲ್ಲಿ ಕರ್ಮ ಶಬ್ದದಿಂದ ಪುನರ್ಜನ್ಮವುಂಟಾಗುವ ಕರ್ಮವೆಂದು ಅರ್ಥ ಮಾಡತಕ್ಕದ್ದಾಗಿರುತ್ತದೆ. ಏಕೆಂದರೆ ಜನ್ಮ ಜರಾ ಮರಣಗಳು ಬೇಡವೆಂಬುವನು ತನಗೆ ಜನ್ಮ ಹೇಗೆ ಉಂಟಾಗುತ್ತದೆಂಬುದನ್ನು ಚನ್ನಾಗಿ ತಿಳಿದ ರಲ್ಲವೇ, ಅದರಲ್ಲಿ ಜಿಹಾಸೆ ಹುಟ್ಟಿ, ಅದರಿಂದ ಬಿಡುಗಡೆಯನ್ನು ಹೊಂದುವದಕ್ಕೆ ಪ್ರಯತ್ನ ಮಾಡಬಹುದು. ಆದುದರಿಂದ ಈ **ಕರ್ಮಚಾಖಿಲಂ** - ಈ ಕರ್ಮದ ವಿಷಯವಾದ ಸಮಸ್ತ ವನ್ನೂ ತಿಳಿಯತಕ್ಕದ್ದು. ಈ ಜರಾಮರಣಗಳಿಂದ ಬಿಡುಗಡೆಯು ಹೇಗೆ ಎಂಬುದೂ, ಅಂತಹ ಸ್ಥಿತಿಯು ಬರಬೇಕಾದರೆ ಪ್ರಕೃತಿ ವಿಯುಕ್ತ ಆತ್ಮ ಸ್ವರೂಪವು, ತುಂಬಾ ಪರಿಶುದ್ಧವಾಗಿ ಮಹತ್ತಾಗಿ ಜ್ಞಾನದೀಪ್ತಿಯಿಂದ ವಿರಾಜಿಸುವಂಥಾದ್ದು ಎಂಬ ಜ್ಞಾನವೂ, ಇಂತಹ ಸ್ಥಿತಿಯು ಪ್ರಾಪ್ತವಾಗಬೇಕಾದರೆ ತನಗೆ ಜನ್ಮವು ಹೇಗೆ ಉಂಟಾಯಿತು, ಎಂತಹ ದುಸ್ಸಹ ಕ್ಲೇಶಗಳನ್ನು ತಾನು ಅನುಭವಿಸಿರಬೇಕು, ಅಂತಹ ಕ್ಲೇಶಗಳಿಗೆ ಸಿಕ್ಕದ ಹಾಗೆ ಮಾಡಿಕೊಳ್ಳಬೇಕಾದರೆ ಉಪಾಯಾನುಷ್ಠಾನವು ಆವಶ್ಯಕವೆಂಬ ಜ್ಞಾನವೂ, ಕೇವಲನಾದ ಜಿಜ್ಞಾಸುವಿಗೆ ಆವಶ್ಯಕವು. ಇದು ಕೇವಲನಿಗೆ ಆವಶ್ಯಕವಾದರೆ, ಜ್ಞಾನಿಗೂ ಕೂಡ ಆವಶ್ಯಕವೆಂಬುದು ಕೈಮುತಿಕನ್ಯಾಯ ಸಿದ್ಧವು. ಆದುದರಿಂದ **"ಚತುರ್ವಿಧಾ ಭಜನ್ತೇ"** ಎಂದು ಹೇಳಿದ ನಾಲ್ಕು ಅಧಿಕಾರಿ ಗಳಿಗೆ ಆವೃತ್ತಿಗೆ ವಶರಲ್ಲದ ಎರಡು ಅಧಿಕಾರಿಗಳಾದ ಜಿಜ್ಞಾಸು, ಮತ್ತು ಜ್ಞಾನಿಗಳನ್ನು ಕುರಿತು ಈ ಶ್ಲೋಕದಲ್ಲಿ ಹೇಳಲ್ಪಟ್ಟಿತೆಂದೂ ಭಾವಿಸತಕ್ಕದ್ದು. ಮುಂದಿನ ಶ್ಲೋಕದ **ಸಾಧಿಭೂತಾಧಿ ದೈವಂ** ಎಂಬುದರಿಂದ ಆವೃತ್ತಿಯನ್ನು ಹೊಂದುವ ಮಿಕ್ಕ ಎರಡು ಕಾಮ್ಯ ಫಲಾಪೇಕ್ಷೆಯುಳ್ಳ ಅಧಿಕಾರಿಗಳನ್ನೂ, **ಸಾಧಿಯಜ್ಞಂ** ಎಂಬುದರಿಂದ ನಾಲ್ಕು ವಿಧ ಅಧಿಕಾರಿ ಗಳನ್ನೂ ಕುರಿತು ಹೇಳಲ್ಪಟ್ಟಿತೆಂದು ಭಾವಿಸಬಹುದು.

**ಭಾಷ್ಯಾರ್ಥವು :—ಜರಾಮರಣ ಮೋಕ್ಷಾಯ** - ಜರಾಮರಣದ ಮೋಕ್ಷಕ್ಕೆ ಎಂದರೆ **ಪ್ರಕೃತಿ ವಿಯುಕ್ತಾತ್ಮ ಸ್ವರೂಪ ದರ್ಶನಾಯ** - ಪ್ರಕೃತಿಯಿಂದ ಬಿಡಲ್ಪಟ್ಟ ಜೀವಾತ್ಮದ ಸ್ವರೂಪದ ದರ್ಶನಕ್ಕಾಗಿ, **ಮಾಮಾಶ್ರಿತ್ಯ** - ನನ್ನಲ್ಲಿ ಅಜ್ಞ ಪ್ರಪತ್ತಿಯನ್ನು ಅನುಷ್ಠಿಸಿ, **ಯೇ ಯತನ್ತೇ** - ಯಾರು ಅರಾಧನೆ ಮೂಲಕ ಉಪಾಸನಕ್ಕಾಗಿ ಯತ್ನಿಸುವರೋ, **ತೇ** ಅವರು, **ತದ್ಬ್ರಹ್ಮವಿದುಃ** - ಆ ಸಮಷ್ಟಿರೂಪ ಜೀವಾತ್ಮ ತತ್ವವನ್ನು ತಿಳಿಯುತ್ತಾರೆ. **ಅಧ್ಯಾತ್ಮಂಚ ಕೃತ್ಸ್ನಂ ವಿದುಃ** - ಅಧ್ಯಾತ್ಮವನ್ನು ಸಂಪೂರ್ಣವಾಗಿ ತಿಳಿಯುತ್ತಾರೆ, **ಕರ್ಮಚಾಖಿಲಂ ವಿದುಃ**- ಕರ್ಮ ಸಮಸ್ತವನ್ನೂ ತಿಳಿಯುತ್ತಾರೆ || ೨೯ ||

**ಮೂಲಕ್ಕೆ ಅರ್ಥವು :—**ಹಿಂದಿನ ಶ್ಲೋಕದಲ್ಲಿ ಜಿಜ್ಞಾಸುವಿನ ಜ್ಞಾತವ್ಯೋಪಾದೇಯ

**ಭಾ. ಅತ್ರ ಯ ಇತಿ ಪುನರ್ನಿರ್ದೇಶಾ ತ್ಪೂರ್ವನಿರ್ದಿಷ್ಟೇಭ್ಯೋಽನ್ಯೇ ಅಧಿಕಾರಿಣೋ ಜ್ಞಾಯನ್ತೇ ; ಸಾಧಿಭೂತಂ ಸಾಧಿದೈವಂ ಮಾಂ ಐಶ್ವರ್ಯಾರ್ಥಿನೋ ಯೇ ವಿದುಃ**

ಗಳು ಯಾವುವೆಂದು ಹೇಳಿ, ಈ ಶ್ಲೋಕದಿಂದ ಇತರರಿಗೂ ಯಾವುವೆಂದು ತಿಳಿಸುತ್ತಾರೆ. ಈ ಶ್ಲೋಕದಲ್ಲಿ ಹೇಳಿರುವದು ಹಿಂದಿನ ಅಧಿಕಾರಿಯನ್ನು ಕುರಿತೇ ಅಥವಾ ಇತರರನ್ನು ಕುರಿತೇ, ಎಂಬ ಚರ್ಚೆಯಲ್ಲಿ ಒಂದೇ ವಿಧ ಅಧಿಕಾರಿಯಾದ ಜ್ಞಾನಿ ಮಾತ್ರವೇ ಈ ಎರಡು ಶ್ಲೋಕದಿಂದ ಹೇಳಲ್ಪಟ್ಟನೆಂದು ಕೆಲವರು ಭಾವಿಸುವರು. ಇದು ಸರಿಯಲ್ಲವೆಂದು ತೋರುತ್ತದೆ, ಏಕೆಂದರೆ, ಹಾಗೆ ಅಭಿಪ್ರಾಯವಿದ್ದಲ್ಲಿ **ಯೇ** ಎಂಬುವರು ಯಾವುದನ್ನೆಲ್ಲಾ ತಿಳಿಯಬೇಕೋ ಅದನ್ನೆಲ್ಲಾ ಒಟ್ಟಿಗೆ ಹೇಳಿ ಅನಂತರ **ತೇ** ಎಂದು ಹೇಳಬೇಕಾಗಿತ್ತು ; ಹಾಗಿಲ್ಲದೆ ಹಿಂದಿನ ಶ್ಲೋಕದಲ್ಲೂ **ಯೇ ತೇ** ಎಂದೂ, ಇಲ್ಲಿಯೂ **ಯೇ ತೇ** ಎಂದೂ, ಪೃಥಜ್ನಿರ್ದೇಶವಿರುವದರಿಂದ, ಭಿನ್ನ ಭಿನ್ನಾಧಿಕಾರಿಗಳು ಹೇಳಲ್ಪಟ್ಟರೆಂದೇ ಭಾವಿಸಬೇಕಾಗಿರುತ್ತದೆ. ಐಶ್ವರ್ಯಾರ್ಥಿಗಳಿಗೆ ಜ್ಞಾತವ್ಯಾಂಶಾದಿಗಳು ಯಾವುವೆಂದರೆ ಹೇಳುತ್ತಾರೆ— **ಸಾಧಿಭೂತಾಧಿದೈವಂ ಮಾಂ ವಿದುಃ**- ನಾನು ಅಧಿಭೂತದೊಡನೆಯೂ ಅಧಿದೈವದೊಡನೆಯೂ ಕೂಡಿದವನನ್ನಾಗಿ ತಿಳಿಯುತ್ತಾರೆ ಎಂದರೆ ತಿಳಿಯತಕ್ಕದ್ದು ಎಂಬ ಭಾವವು. ಮುಂದೆ ಅರ್ಜುನನು ಅಧಿಭೂತ, ಅಧಿದೈವ ವೆಂದರೇನೆಂದು ಪ್ರಶ್ನಿಸುವನು, ಅದಕ್ಕೆ ಶ್ರೀಕೃಷ್ಣನು ಉತ್ತರವಾಗಿ **ಅಧಿಭೂತ**ವೆಂದರೆ **ಕ್ಷರೋಭಾವಃ**, ಅಧಿದೈವವೆಂದರೆ ಪುರುಷನೆಂದು ಹೇಳುತ್ತಾರೆ. ಕ್ಷರೋಭಾವವೆಂದರೆ ಭೂತ ಸೂಕ್ಷ್ಮಗಳಲ್ಲಿರುವ ಪರಿಣಾಮ ವಿಶೇಷವು, ಅಧಿದೈವತದಿಂದ ದೇವತಾ ಶರೀರಗಳಲ್ಲಿ ಭೋಕ್ತಾವಾದ ಪುರುಷನು ಹೇಳಲ್ಪಟ್ಟನು. ಈ ವಿಷಯಗಳನ್ನೆಲ್ಲಾ ಐಶ್ವರ್ಯಕಾಮಿಯು ತಿಳಿಯತಕ್ಕದ್ದೆಂಬ ಭಾವವು. ಈ ಕೈವಲ್ಯಾರ್ಥಿಯೂ ಐಶ್ವರ್ಯಾರ್ಥಿಯೂ ಮತ್ತು ಮೋಕ್ಷಾರ್ಥಿ ಯಾದ ಜ್ಞಾನಿಯೂ ಸಹ ತಿಳಿಯತಕ್ಕದ್ದೇನೆಂದರೆ, **ಸಾಧಿ ಯಜ್ಞಂಚ ಮಾಂ ವಿದುಃ**- ಮುಂದೆ ಅರ್ಜುನನ **ಅಧಿಯಜ್ಞವು** ಯಾರು ಮತ್ತು ಹೇಗೆ ಎಂಬ ಪ್ರಶ್ನೆಗಳಿಗೆ ಉತ್ತರವಾಗಿ **ಅಧಿಯಜ್ಞ**ನೆಂದರೆ, ಪರಬ್ರಹ್ಮನಾದ ನಾನೇ ಎಂದರೆ ಸರ್ವ ಕರ್ಮಾರಾಧ್ಯನು ನಾನೇ, ಇವರುಗಳು ಅನುಷ್ಠಿಸಬೇಕಾದ ಸರ್ವ ಕರ್ಮಗಳೂ ಯಜ್ಞರೂಪವಾಗಿ, ಆ ಯಜ್ಞಗಳೂ ನನಗೆ ಶರೀರವಾಗಿ ನಾನೇ ಅವುಗಳಿಗೆ ಆತ್ಮಾವಾಗಿ, ಇಂತಹ ಸರ್ವ ಕರ್ಮಗಳಿಂದಲೂ ನಾನೇ ಆರಾಧಿಸಲ್ಪಡುವನೆಂದು ಅವರುಗಳು ತಿಳಿಯುತ್ತಾರೆ ಎಂದರೆ ತಿಳಿಯತಕ್ಕದ್ದು. ಮತ್ತು ಪ್ರಾಣ ತ್ಯಾಗ ಸಮಯದಲ್ಲಿ ಈ ನಾಲ್ವರ ಜ್ಞಾತವ್ಯಾಂಶವು ಇಲ್ಲಿ ತಿಳಿಸಲ್ಪಡುತ್ತದೆ, ಹೇಗೆಂದರೆ— **ಪ್ರಯಾಣಕಾಲೇಪಿ**-ಜೀವಾತ್ಮನು ಈ ಸ್ಥೂಲಶರೀರವನ್ನು ಬಿಟ್ಟು ಹೋಗುವ ಸಮಯದಲ್ಲೂ, **ಯುಕ್ತ ಚೇತಸಃ ಮಾಂ ವಿದುಃ**-ಅವರವರು ಪ್ರಾರ್ಥಿಸುವ ಮನೋರಥಕ್ಕೆ ಅನುಗುಣವಾದ ಮನಸ್ಸುಳ್ಳವರಾಗಿ ನನ್ನನ್ನು ತಿಳಿಯುತ್ತಾರೆ ಎಂದರೆ ತಿಳಿಯತಕ್ಕ ವಿಷಯವಾಗಿರುತ್ತದೆಂಬ ಭಾವವು. ಹೀಗೆ ಈ ಎರಡು ಶ್ಲೋಕಗಳಿಂದಲೂ ಸಙ್ಗ್ರಹಿಸಲ್ಪಟ್ಟ ವಿಷಯವೇ, ವಿಶದವಾಗಿ ಮುಂದಿನ ಎಂಟನೆಯ ಅಧ್ಯಾಯದಲ್ಲಿ ವಿಸ್ತರವಾಗಿ ಹೇಳಲ್ಪಡುತ್ತದೆಂಬುದು ಇದರಿಂದ ಸೂಚಿತವು. ಈ ಅಧ್ಯಾಯಕ್ಕೆ **ಜ್ಞಾನವಿಜ್ಞಾನಯೋಗ**ವೆಂಬ ಹೆಸರು ಏತಕ್ಕೆಂಬುದನ್ನು ಶ್ರೀ ಕೃಷ್ಣ ಭಗವಾನರವರೇ ತಿಳಿಸಿರುತ್ತಾರೆ. **"ಜ್ಞಾನಂ ತೇ ಹಂ ಸವಿಜ್ಞಾನಂ ಇದಂ ವಕ್ಷ್ಯಾಮ್ಯ ಶೇಷತಃ"** ಎಂಬ ಪ್ರತಿಜ್ಞಾವಾಕ್ಯವನ್ನನುಸರಿಸಿ ಈ ನಾಮಧೇಯವು ಕೊಡಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು :—ಅತ್ರ** - ಈ ಶ್ಲೋಕದಲ್ಲಿ, **ಯೇ ಇತಿ-ಯೇ** ಎಂಬುದಾಗಿ, **ಪುನರ್ನಿರ್ದೇಶಾತ್** - ಪುನಃ ಹೇಳಿರುವದರಿಂದ, **ಪೂರ್ವನಿರ್ದಿಷ್ಟೇಭ್ಯಃ** - ಹಿಂದಿನ ಶ್ಲೋಕದಲ್ಲಿ ಹೇಳಿದ ಅಧಿಕಾರಿಗಳಾದ ಕೈವಲ್ಯಾರ್ಥಿಗಳಿಗಿಂತಲೂ, **ಅನ್ಯೇ ಅಧಿಕಾರಿಣಃ** - ಬೇರೆ ಭಕ್ತರಾದ

**ಭಾ. ಇತ್ಯೇ ತದ ನುವಾದ ಸ್ವರೂಪ ಮಪ್ಯಪ್ರಾಪ್ತಾರ್ಥತ್ವಾದ್ವಿಧಾಯಕ ಮೇವ; ತಥಾಸಾಧಿಯಜ್ಞ ಮಿತ್ಯಪಿ ತ್ರಯಾಣಾ ಮಧಿಕಾರಿಣಾ ಮವಿಶೇಷೇಣ ವಿಧೀಯತೇ, ಅರ್ಥ ಸ್ವಾಭಾವಾತ್ । ತ್ರಯಾಣಾಂ ಹಿ ನಿತ್ಯನೈಮಿತ್ತಿಕ ರೂಪ ಮಹಾಯಜ್ಞಾದ್ಯನು**

ಐಶ್ವರ್ಯಾರ್ಥಿಗಳೇ ಮೊದಲಾದವರು, **ಜ್ಞಾಯನ್ತೇ** - ಹೇಳಲ್ಪಟ್ಟರೆಂದು ತಿಳಿದು ಬರುತ್ತದೆ. ಹಾಗೆ ಇವೂ ಕೂಡ ಅದೇ ಅಧಿಕಾರಿಗಳಿಗೆ ಜ್ಞಾತವ್ಯಾಂಶವೆಂಬ ಅಭಿಪ್ರಾಯವಾದರೆ, ಆಗ ಶ್ಲೋಕವು " **ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ತೇ ವಿದುಃ** " ಎಂದು **ಯೇ ವಿದುಃ** ಎಂಬುದಕ್ಕೆ ಬದಲಾಗಿ **ತೇ ವಿದುಃ** ಎಂದಿರಬೇಕಾಗಿತ್ತೆಂಬ ಭಾವವು; ಹಾಗಿಲ್ಲದೆ **ಯೇ ವಿದುಃ** ಎಂದಿರುವದರಿಂದ ಬೇರೆ ಅಧಿಕಾರಿಗಳೆಂಬುದು ಸ್ಪಷ್ಟವೆಂಬ ಭಾವವು. ಮುಂದಿನ ಪ್ರಶ್ನೋತ್ತರಗಳನ್ನೂ ಜ್ಞಾತವ್ಯಾಂಶಗಳನ್ನೂ ಯೋಚಿಸಿದರೆ, ಭಿನ್ನಾಧಿಕಾರಿಗಳೇ ಹೇಳಲ್ಪಟ್ಟಿರಬೇಕೆಂಬುದು ತೋರಿಬರುತ್ತದೆ. ಹಾಗೆ ಯಾರುಯಾರಿಗೆ ಯಾವು ಯಾವುವು ಜ್ಞಾತವ್ಯಾಂಶಗಳೆಂಬುದನ್ನು ಪರ್ಯಾಲೋಚಿಸಿಯೇ **ಸಾಧಿಭೂತಾಧಿದೈವ** ಜ್ಞಾನವು ಐಶ್ವರ್ಯಾರ್ಥಿಗಳಿಗೂ ಸಾಧಿಯಜ್ಞ ಜ್ಞಾನವು ಎಲ್ಲರಿಗೂ ಎಂದು ವಿವೇಚನೆಯನ್ನು ಮಾಡಿ ಉಪದೇಶಿಸುತ್ತಾರೆ. **ಸಾಧಿಭೂತಂ ಇತ್ಯಾದಿ**-ಸಾಧಿಭೂತ ಸಾಧಿದೈವನಾದ ನನ್ನನ್ನು ಐಶ್ವರ್ಯಾರ್ಥಿಗಳು ಯಾರು ತಿಳಿಯುತ್ತಾರೋ, **ಇತ್ಯೇತತ್** - ಎಂದು ಹೀಗೆ ಹೇಳಿರುವದು, **ಅನುವಾದ ರೂಪಮಪಿ**-ಅನುವಾದ ರೂಪವೆಂದು ತೋರಿದರೂ, **ಅಪ್ರಾಪ್ತಾರ್ಥತ್ವಾತ್** - ಹಿಂದೆ ಹೇಳದೆ ಹೊಸದಾಗಿ ಹೇಳುವ ಅಭಿಪ್ರಾಯವುಳ್ಳದಾದುದರಿಂದ, **ವಿಧಾಯಕಮೇವ** - ವಿಧಿರೂಪವಾದುದೇ ಎಂದು ಭಾವಿಸತಕ್ಕದ್ದು, ವಿಧುಃ ಎಂದು ವರ್ತಮಾನ ರೂಪದಲ್ಲಿ ಹೇಳಿದ್ದರೂ, **ವಿದ್ಯುಃ** - ತಿಳಿಯತಕ್ಕದ್ದು ಎಂಬರ್ಥವು ದ್ಯೋತಿತವೆಂಬ ಭಾವವು, **ತಥಾ** - ಹಾಗೆಯೇ ಎಂದರೆ ಆ ಪ್ರಕಾರವಾಗಿಯೇ, ಮುಂದೆ **ಸಾಧಿಯಜ್ಞಂ ಚ ಯೇ ವಿದುಃ** ಎಂಬುಧಕ್ಕೆ ವ್ಯಾಖ್ಯಾನ ಮಾಡುತ್ತಾರೆ- **ಸಾಧಿಯಜ್ಞ ಮಿತ್ಯಪಿ-ಸಾಧಿಯಜ್ಞಂ** ಎಂಬುದೂ ಕೂಡ, **ತ್ರಯಾಣಾ ಮಧಿಕಾರಿಣಾಂ**- ಈ ಮೇಲೆ ಹೇಳಿದ ಕೈವಲ್ಯಾರ್ಥಿಗಳು, ಐಶ್ವರ್ಯಾರ್ಥಿಗಳು, ಮುಮುಕ್ಷುಗಳು, ಈ ಮೂರು ಅಧಿಕಾರಿಗಳಿಗೂ **ಅವಿಶೇಷೇಣ** - ಏನೊಂದು ವ್ಯತ್ಯಾಸವಿಲ್ಲದೆ, ಅದರಲ್ಲಿ ಹೇಳಿರುವ ಜ್ಞಾತವ್ಯಾಂಶವು ಇವರೆಲ್ಲರಿಗೂ ಆವಶ್ಯಕವಾದುದರಿಂದ ಎಂಬ ಭಾವವು, **ವಿಧೀಯತೇ**- ವಿಧಿಸಲ್ಪಟ್ಟಿರುತ್ತದೆ. ಅದು ಹೇಗೆ ಎಲ್ಲರಿಗೂ ಆವಶ್ಯಕವೆಂಬುದಕ್ಕೆ ಕಾರಣವನ್ನು ಹೇಳುತ್ತಾರೆ- ಮೂಲದಲ್ಲಿ ಕಾರಣವೇನೂ ಹೇಳಲ್ಪಡಲಿಲ್ಲವಲ್ಲಾ ? ಎಂದರೆ, **ಅರ್ಥ ಸ್ವಾಭಾವ್ಯಾತ್** - ಅರ್ಥ ಸ್ವಭಾವದಿಂದ ಹಾಗೆ ಎಲ್ಲಾ ಭಕ್ತರುಗಳಿಗೂ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು, ಅದು ಹೇಗೆ ಅರ್ಥ ಸ್ವಭಾವದಿಂದ ತೋರಿಬರುತ್ತದೆಂಬುದನ್ನು ಉಪಾದಿಸುತ್ತಾರೆ. ಹಿ-ಯಾವ ಕಾರಣದಿಂದೆಂದರೆ, **ತ್ರಯಾಣಾಂ**-ಈ ಕೈವಲ್ಯಾರ್ಥಿ, ಐಶ್ವರ್ಯಾರ್ಥಿ, ಮೋಕ್ಷಾರ್ಥಿ (ಮೂಲದಲ್ಲಿರುವ ನಾಲ್ಕು ಜನ ಭಕ್ತರೂ) ಇವರುಗಳಿಗೆ, ನಿತ್ಯನೈಮಿತ್ತಿಕರೂಪ ಮಹಾ ಯಜ್ಞಗಳ ಅನುಷ್ಠಾನವು, **ಅವರ್ಜನೀಯಂ** - ತಪ್ಪಿದ್ದಲ್ಲವು, ಆವಶ್ಯಕವಾಗಿ ಮಾಡಿಯೇ ತೀರಬೇಕೆಂಬ ಭಾವವು. ಇಲ್ಲಿ ಅಧಿಯಜ್ಞ ಶಬ್ದದಲ್ಲಿ ತೋರಿಬರುವ ನಿತ್ಯ ನೈಮಿತ್ತಿಕಗಳ ಅನುಷ್ಠಾನವು ಎಲ್ಲಾ ಭಕ್ತರುಗಳಿಗೂ ಆವಶ್ಯಕವು. ಏಕೆಂದರೆ ನಿತ್ಯ ನೈಮಿತ್ತಿಕಗಳನ್ನು ಇವರುಗಳು ಯಾರೂ ಬಿಡತಕ್ಕದ್ದಲ್ಲವೆಂಬುದು ಹಿಂದೆಯೇ ೩-೧೯ರಲ್ಲಿ ಉಪಪಾದಿತವು. ಮುಂದೆ ೧೮-೭ರಲ್ಲೂ ಪುನಃ ಜ್ಞಾಪಿಸಲ್ಪಡುತ್ತದೆ. ಯಜ್ಞೋವೈವಿಷ್ಣುಃ ಎಂಬುದು ಅನುಸಂಧೇಯವು. "**ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಸ್ಸರ್ವಕರ್ಮಸು**" ಇವೇ ಮೊದಲಾದ ಪ್ರಮಾಣಗಳಿಂದ ಆಜ್ಞಾ ಕೈಂಕರ್ಯಗಳನ್ನು ಎಂದಿಗೂ ಬಿಡತಕ್ಕದ್ದಲ್ಲವೆಂಬುದು ವ್ಯಕ್ತವು. ಬಿಟ್ಟರೆ "**ಆಜ್ಞಾಚ್ಛೇದೀ**

**ಭಾ. ಮ ವರ್ಣನೀಯಮ್ । ತೇಚ ಪ್ರಯಾಣಕಾಲೇಪಿ ಸ್ವಪ್ರಾಪ್ಯಾನುಗುಣಂ ಮಾಂ ವಿದುಃ । ತೇಚೇತಿ ಚಕಾರಾತ್ ಪೂರ್ವೇ ಜರಾಮರಣ ಮೋಕ್ಷಾಯ ಯತಮಾನಾಶ್ಚ ಪ್ರಯಾಣಕಾಲೇ ವಿದು ರಿತಿ ಸಮುಚ್ಚೀಯನ್ತೇ ; ಅನೇನ ಜ್ಞಾನಿನೋಽಪ್ಯರ್ಥ ಸ್ವಾಭಾವ್ಯಾ ತ್ಸಾಧಿಯಜ್ಞಂ ಮಾಂ ವಿದುಃ ; ಪ್ರಯಾಣಕಾಲೇಪಿ ಸ್ವಪ್ರಾಪ್ಯಾನುಗುಣಂ ಮಾಂ ವಿದು ರಿತ್ಯುಕ್ತಂ ಭವತಿ ॥ ೩೦ ॥**

**ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ಸಪ್ತಮೋಽಧ್ಯಾಯಃ**

**ಶ್ರೀಮತೇ ರಾಮಾನುಜಾಯ ನಮಃ**

**ಮಮದ್ರೋಹೀ** " ಎಂದು ಹೇಳಿರುವದರಿಂದ ಭಗವತ್ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕೆಂದಿರುವ ಮೋಕ್ಷಾರ್ಥಿಯು ಅನುಗ್ರಹಕ್ಕೆ ಬದಲಾಗಿ ಭಗವನ್ನಿಗ್ರಹವನ್ನು ಸಂಪಾದಿಸಿಕೊಳ್ಳುವನು. ಅಜ್ಞವಾದ ಸಂಧ್ಯಾವಂದನಾದಿ ಮಹಾಯಜ್ಞಗಳಿಲ್ಲದಿರುವದರಿಂದ ಉಪಾಸನೆಗೆ ಅರ್ಹತೆಯೇ ಇಲ್ಲವೆಂಬುದು ಸ್ಪಷ್ಟವೆಂಬ ಭಾವವು. ಆದುದರಿಂದ ಅಧಿಯಜ್ಞ ವಿಷಯವನ್ನು ತಿಳಿಯುವ ಅಧಿಕಾರಿಗಳು ಈ ನಾಲ್ಕು ಜನ ಸುಕೃತಿಗಳೂ ಎಂದು ಅರ್ಥ ಮಾಡಲೇಬೇಕಾಗಿರುವದರಿಂದ **ಅರ್ಥಸ್ವಾಭಾವ್ಯಾತ್** ಎಂಬ ಪ್ರಯೋಗವು. ಹಾಗೆಯೇ ಉತ್ತರಾರ್ಧವೂ ಕೂಡ ಅರ್ಥಸ್ವಭಾವದಿಂದ ಈ ನಾಲ್ಕು ವಿಧ ಅಧಿಕಾರಿಗಳಿಗೂ ಅನ್ವಯಿಸಬೇಕಾಗಿರುತ್ತದೆಂದು ಹೇಳುತ್ತಾರೆ. **ತೇಚ** - ಕೈವಲ್ಯಾರ್ಥಿ ಐಶ್ವರ್ಯಾರ್ಥಿ ಮೋಕ್ಷಾರ್ಥಿಗಳಾದ ಈ ಎಲ್ಲಾ ಭಕ್ತರೂ ಕೂಡ, **ಪ್ರಯಾಣ ಕಾಲೇಪಿ** - ದೇಹ ವಿಯೋಗ ಕಾಲದಲ್ಲೂ ಕೂಡ, **ಸ್ವಪ್ರಾಪ್ಯಾನುಗುಣಂ**- ಅವರವರುಗಳ ಪ್ರಾಪ್ಯಕ್ಕೆ ಅನುಗುಣವಾಗಿ, **ಮಾಂ ವಿದುಃ** - ನನ್ನನ್ನು ತಿಳಿಯುತ್ತಾರೆ. ಇಲ್ಲಿ **ತೇಚ**-ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ಕೈವಲ್ಯಾರ್ಥಿಗಳನ್ನು ಸೇರಿಸಲು ಕಾರಣವೇನು ಎಂದು ಪ್ರಶ್ನಿಸಿದರೆ, ಇಲ್ಲಿಯೂ ಅರ್ಥ ಸ್ವಭಾವದಿಂದ ಎಂದು ಹೇಳುತ್ತಾರೆ :—**ತೇ ಚೇತಿ ಚಕಾರಾತ್**-**ತೇಚ** ಎಂಬುದಾಗಿ ಚಕಾರ ಪ್ರಯೋಗವಿರುವದರಿಂದ, **ಪೂರ್ವೇ** ಹಿಂದಿನ ಶ್ಲೋಕದಲ್ಲಿ, **ಜರಾಮರಣ ಮೋಕ್ಷಕ್ಕಾಗಿ, ಯತಮಾನಾಶ್ಚ** - ಪ್ರಯತ್ನಿಸುವ ಕೈವಲ್ಯಾರ್ಥಿಗಳೂ ಕೂಡ, **ಪ್ರಯಾಣಕಾಲೇ ವಿದುಃ** - ದೇಹವನ್ನು ಬಿಟ್ಟುಹೋಗುವಾಗ ತಿಳಿಯುತ್ತಾರೆ. ಎಂಬುದಾಗಿ, **ಸಮುಚ್ಚೀಯಂತೇ**-ಒಟ್ಟು ಕೂಡಿಸಿ ಹೇಳಲ್ಪಟ್ಟಿರುತ್ತಾರೆ. ಮುಂದೆ ಗ್ರಂಥವನ್ನು ಪರಿಶೀಲಿಸಿದರೆ ಈ ಅಧಿಯಜ್ಞ ವಿಷಯವೂ ಅಂತಿಮ ಪ್ರತ್ಯಯ ವಿಷಯವೂ ಈ ಎಲ್ಲಾ ಸುಕೃತಿಗಳ ವಿಷಯದಲ್ಲೂ ಹೇಳಲ್ಪಡುವದರಿಂದಲೂ ಹೀಗೆ ಅರ್ಥಸ್ವಭಾವ ಮೂಲಕ ತಾವು ವ್ಯಾಖ್ಯಾನ ಮಾಡಿರುವದು ಎಂಬ ಭಾವವು. ಹೀಗೆ ಚಕಾರಸಮುಚ್ಚಯಾರ್ಥವಿರುವದರಿಂದಲೂ, ಅರ್ಥ ಸ್ವಭಾವದಿಂದ ತೋರುವದರಿಂದಲೂ, ಜ್ಞಾನಿಗಳೂ ಕೂಡ ಇಲ್ಲಿ ಹೇಳಲ್ಪಟ್ಟಿರುವರೆಂದು ನಿರ್ಧರಿಸುವುವೆಂದು ಭಾಷ್ಯ ಬರೆಯುತ್ತಾರೆ :—**ಅನೇನ** - ಇಂತಹ ಚಕಾರ ಸಮುಚ್ಚಯಾರ್ಥದಿಂದ ಅಥವಾ ಹೀಗೆ ಅಧಿಯಜ್ಞ ವಿಷಯವೂ ಅಂತಿಮ ಪ್ರತ್ಯಯ ವಿಷಯವು ಸಾರ್ವತ್ರಿಕವಾಗಿ ಈ ಎಲ್ಲಾ ಭಕ್ತರಿಗೂ ಸಾಧಾರಣವಾದುದೆಂಬ ಅಭಿಪ್ರಾಯ ಉಂಟಾಗುವದರಿಂದ, **ಜ್ಞಾನಿನೋಽಪಿ**- ಜ್ಞಾನಿಗಳೂ ಕೂಡ, **ಅರ್ಥ ಸ್ವಭಾವದಿಂದ ಸಾಧಿಯಜ್ಞಂ ಮಾಂ ವಿದುಃ** - ನನ್ನನ್ನು ಅಧಿಯಜ್ಞದಿಂದ ಕೂಡಿದವನನ್ನಾಗಿ ತಿಳಿಯುತ್ತಾರೆ ; ಮತ್ತು **ಪ್ರಯಾಣ ಕಾಲೇಪಿ**-ದೇಹಾವಸಾನ ಕಾಲದಲ್ಲಿ ಕೂಡ **ಸ್ವಪ್ರಾಪ್ಯಾನುಗುಣಂ** - ತನ್ನ ಪ್ರಾಪ್ಯಕ್ಕನುಗುಣವಾಗಿಯೂ, **ಮಾಂ ವಿದುಃ** - ನನ್ನನ್ನು ತಿಳಿಯುತ್ತಾರೆ, **ಇತ್ಯುಕ್ತಂ ಭವತಿ** - ಎಂದು ಹೇಳಿದಂತೆಯೂ ಆಯಿತು. ಯಜ್ಞಾದಿಗಳ ವಿಷಯವೂ ಅನ್ತಿಮ ಪ್ರತ್ಯಯ ವಿಷಯವೂ ಈ ಎಲ್ಲಾ ಅಧಿಕಾರಿಗಳಿಗೂ ಸಾಧಾರಣವಾದುದೆಂದು ಹೇಳಿದಂತಾಯಿತು ಎಂಬ ತಾತ್ಪರ್ಯವು.

ಹೀಗೆ ಈ ಎರಡು ಕೊನೆಯ ಶ್ಲೋಕಗಳನ್ನು ಅನ್ವಯಿಸುವದರಲ್ಲಿ ಅರ್ಥಸ್ವಭಾವವನ್ನು ಮುಂದಿಟ್ಟು, ಪೂರ್ವಾಪರ ವಿರೋಧವಿಲ್ಲದೆ ಸಮಂಜಸವಾಗಿ ಯಾವ ಯಾವ ಅಧಿಕಾರಿಗಳಿಗೆ ಅನ್ವಯಿಸಿದರೆ ಸರಿಹೋಗುತ್ತದೋ ಹಾಗೆ ವ್ಯಾಖ್ಯಾನ ಮಾಡತಕ್ಕದ್ದೆಂಬುದು ಶ್ರೀ ಭಾಷ್ಯ ಕಾರರ ಅಭಿಪ್ರಾಯವು. ಇತರ ವ್ಯಾಖ್ಯಾತೃಗಳು, ಹಿಂದಿನ ಶ್ಲೋಕವನ್ನು ಜ್ಞಾನಿಗೆ ಮಾತ್ರ ಅನ್ವಯಿಸಿ, ತದ್ಬ್ರಹ್ಮವೆಂಬರ್ಥವನ್ನು ಎಲ್ಲಿ ಅರ್ಜುನನು ತಿಳಿಯದೆ ಹೋಗುತ್ತಾನೋ ಎಂದು, " **ಸಾಧಿಭೂತಾಧಿದೈವಂ** " ಎಂಬ ಶ್ಲೋಕವನ್ನು ಅನುಗ್ರಹಿಸಿರುತ್ತಾರೆಂದು ಹೇಳು ತ್ತಾರೆ. ಹೀಗೆ ಅರ್ಥ ಮಾಡಿದರೂ, ಅರ್ಜುನನು "**ಕಿಂತದ್ಬ್ರಹ್ಮ**"ವೆಂದು ಏಕೆ ಪ್ರಶ್ನಿಸಿದನು ಎಂದು ಕೇಳಬೇಕಾಗುತ್ತದೆ, **ತದ್ಬ್ರಹ್ಮ**ವೆಂಬ ಪದವೇ **ಪರಬ್ರಹ್ಮ**ವನ್ನು ವ್ಯಾವರ್ತಿಸಿ ಹೇಳು ತ್ತದೆ. ೨೯ನೆಯ ಶ್ಲೋಕದಲ್ಲಿರುವ ಕರ್ಮ ಶಬ್ದಕ್ಕೂ ಪರಬ್ರಹ್ಮವನ್ನು ಹೊಂದುವ ಕರ್ಮ ವೆಂದರ್ಥ ಮಾಡಿರುತ್ತಾರೆ. ಈ ಕರ್ಮ ಶಬ್ದಕ್ಕೆ ಮುಂದೆ ೮-೩ನೆಯ ಶ್ಲೋಕದಲ್ಲಿ **ಭೂತ ಭಾವೋದ್ಭವಕರೋ ವಿಸರ್ಗಃ ಕರ್ಮ ಉಚ್ಯತೇ**-ಮನುಷ್ಯಾದಿ ದೇಹೋತ್ಪತ್ತಿಯನ್ನುಂಟು ಮಾಡುವದೇ ಕರ್ಮವು ಎಂದು ಹೇಳಲ್ಪಡುತ್ತದೆ. ಅದನ್ನನುಸರಿಸಿಯಲ್ಲವೇ ಇಲ್ಲಿ ಕರ್ಮ ಶಬ್ದಕ್ಕೆ ಅರ್ಥ ಹೇಳತಕ್ಕದ್ದು? ಕರ್ಮಯೋಗವನ್ನು ಹೇಳುವ ಸಂದರ್ಭದಲ್ಲಿ ಕರ್ಮ ಶಬ್ದಕ್ಕೆ ಏನು ಅರ್ಥವೆಂಬುದು ೪-೧೬ನೆಯ ಶ್ಲೋಕದಲ್ಲಿ " **ಕಿಂಕರ್ಮ ಕಿಮಕರ್ಮೇತಿ** " ಎಂಬಿವೇ ಮೊದಲಾದ ಶ್ಲೋಕಗಳಲ್ಲಿ ಚನ್ನಾಗಿ ಉಪಪಾದಿಸಲ್ಪಟ್ಟಿರುತ್ತದೆ. " **ತತ್ತೇಕರ್ಮ ಪ್ರವ ಕ್ಷ್ಯಾಮಿ** " ಎಂದು ಪ್ರತಿಜ್ಞಾ ವಾಕ್ಯವನ್ನು ಹೇಳಿ, ಕರ್ಮಶಬ್ದಕ್ಕೆ ಸರಿಯಾಗಿ ಅರ್ಥವನ್ನು ಹೇಳಿರುತ್ತಾರೆ. ಅರ್ಜುನನು ಅಜ್ಞನಲ್ಲವು. ಇಲ್ಲಿ ಹೇಳಿರುವ ಕರ್ಮ ಶಬ್ದಕ್ಕೆ ಆ ಅರ್ಥವಲ್ಲ ವೆಂದು ತಿಳಿದೇ ಮುಂದೆ ೮ನೆಯ ಅಧ್ಯಾಯದ ಪ್ರಥಮ ಶ್ಲೋಕದಲ್ಲಿ **ಕಿಂ ಕರ್ಮಪುರುಷೋ ತ್ತಮ ?** ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಉತ್ತರವನ್ನು ಶ್ರೀಕೃಷ್ಣಭಗವಾನರವರು " **ಭೂತ ಭಾವೋದ್ಭವ ಕರೋವಿಸರ್ಗಃ ಕರ್ಮ ಸಂಜ್ಞಿತಃ** " ಎಂದು ಹೇಳುತ್ತಾರೆ. ಹೀಗಿರುವಾಗ ಇಲ್ಲಿನ ಕರ್ಮಶಬ್ದಕ್ಕೆ **ಉಪಾಯಕ್ಕೆ ಸಾಧನಭೂತವಾದ** ಕರ್ಮವೆಂದೂ, **ಯಜ್ಞ ಯಾಗಾದಿ ಕರ್ಮ**ವೆಂದೂ ಅರ್ಥ ಮಾಡಬಹುದೋ? ಹಿಂದೆ ಹೇಳದೇ ಇರುವ ಅಪ್ರಾಪ್ತ ವಿಷಯವನ್ನಲ್ಲವೇ ಶಾಸ್ತ್ರವು ಬೋಧಿಸತಕ್ಕದ್ದು? **ದೇಹೋತ್ಪತ್ತಿಗೆ ಕಾರಣಭೂತವಾದ ವಿಸರ್ಜನವೇ ಕರ್ಮ**ವೆನಿಸುವದು. ಇದು ಛಾಂದೋಗ್ಯದಲ್ಲಿ ಪಂಚಾಗ್ನಿ ವಿದ್ಯಾ ಸಂದರ್ಭ ದಲ್ಲಿ, ಆತ್ಮನು ಪುರುಷ ರೇತಸ್ಸನ್ನು ಹೊಂದಿ ಅಲ್ಲಿಂದ ಯೋಷಿದ್ಯೋನಿಯಲ್ಲಿ ವಿಸರ್ಜಿಸಲ್ಪಟ್ಟು ಆ ಯೋಷಿದ್ಗರ್ಭದಲ್ಲಿ ೯, ೧೦ ತಿಂಗಳು ವಾಸ ಮಾಡುತ್ತಾನೆಂದು ಹೇಳಲ್ಪಟ್ಟಿರುತ್ತದೆ. ಆಗ ಶಿಶುವಾಗಿ ಆಕುಂಚನ ಪ್ರಸರಣಾದಿಗಳಿಗೆ ಸ್ಥಳವಿಲ್ಲದೆ, ಆ ಕಾಲದಲ್ಲಿ ತಾಯಿಗೆ ಇಷ್ಟವಾದ ಹೆಚ್ಚು ಹುಳಿ ಕಾರಗಳ ಸೇವನೆಯಿಂದ ತುಂಬಾ ಕ್ಲೇಶವನ್ನು ಹೊಂದಿ ತಪಿಸುವನೆಂದೂ, ಜನನ ಕಾಲದಲ್ಲೂ ಬಹು ವಿಧ ಕ್ಲೇಶಗಳೆಂದೂ, ಕೌಮಾರ ಯೌವನಾವಸ್ಥೆಯಲ್ಲೂ ಬೇರೇ ವಿಧ ಕ್ಲೇಶಗಳೆಂದೂ, ಜರಾಮರಣಾವಸ್ಥೆಗಳಲ್ಲಂತೂ ಈತನ ವ್ಯಥೆಗಳನ್ನು ಹೇಳಲು ಸಾಧ್ಯವೇ ಇಲ್ಲವೆಂದೂ, ಇವೆಲ್ಲಾ ಬಹು ನಿಪುಣತರವಾಗಿ, ಶ್ರೀ ವಿಷ್ಣುಪುರಾಣದ ಷಷ್ಠ್ಯಾಂಶ ಪಂಚಮಾಧ್ಯಾಯದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಅಲ್ಲಿ **ಗರ್ಭ ಜನ್ಮ ಜರಾಜ್ಞಾನಮೃತ್ಯು ನಾರಜಕಂ ತಥಾ। ದುಃಖಂ ಸಹಸ್ರಶೋ ಭೇದೈರ್ಭಿದ್ಯತೇ ಮುನಿಸತ್ತಮ**" ಎಂದು ಪ್ರಾರಂಭಿಸಿ, ಗರ್ಭದಲ್ಲೂ, ಜನ್ಮದಲ್ಲೂ, ಮರಣಕಾಲದಲ್ಲೂ ಪ್ರಾಪ್ತವಾಗುವ ಕ್ಲೇಶಗಳ ನ್ನೆಲ್ಲಾ ವಿಸ್ತರಿಸಿ ತಮ್ಮ ಶಿಷ್ಯರಿಗೆ ಶ್ರೀ ಪರಾಶರರು ಬೋಧಿಸಿರುತ್ತಾರೆ. ಹೀಗೆ ಪುನರ್ಜನ್ಮದಲ್ಲಿ ಬಹು ಕ್ಲೇಶವುಂಟೆಂದು ತಿಳಿದರಲ್ಲವೇ ಅವರಲ್ಲಿ ಜಿಹಾಸೆಯುಂಟಾಗಿ, ಜರಾಮರಣ ಮೋಕ್ಷ

ಕ್ಕಾಗಿ ಪ್ರವರ್ತಿಸುವನು ? ಆದುದರಿಂದ **ಕರ್ಮಚಾಖಿಲಂ** ಅಂತಹ ಕರ್ಮವನ್ನೆಲ್ಲಾ ಪಂಚಾಗ್ನಿ ವಿದ್ಯಾನಿಷ್ಠನು ತಿಳಿಯತಕ್ಕದ್ದು. ಅಲ್ಲಿ **ಕರ್ಮಚಾಖಿಲಂ** ಎಂಬಲ್ಲಿರುವ **ಅಖಿಲ** ಶಬ್ದದಿಂದ ದೇಹೋತ್ಪತ್ತಿಯಾಗುವ ಸಮಸ್ತ ಕ್ರಮವೇನು, ಆ ಕಾಲದ ಮತ್ತು ಅನಂತರ ಕ್ಲೇಶವೇನು ಇವೆಲ್ಲಾ ವಿಷಯದ ಜ್ಞಾನವೂ ಬೋಧಿಸಲ್ಪಟ್ಟಿತು. ಈ ಜರಾಮರಣ ಮೋಕ್ಷಾಯ ಪ್ರಯತ್ನಿಸುವ ಅಧಿಕಾರಿಯು ಜಿಜ್ಞಾಸು ಸ್ಥಾನೀಯನು, ಕೈವಲ್ಯಾರ್ಥಿಯು ; ಪ್ರಕೃತಿ ವಿಯುಕ್ತವಾದ ಆತ್ಮಸ್ವರೂಪಾಕಾಂಕ್ಷಿಯಾಗಿ ಜರಾಮರಣಗಳ ಮೋಕ್ಷವನ್ನು ಅಪೇಕ್ಷಿಸುವವನು ; ಇಂತಹ ಜಿಜ್ಞಾಸುವಿಗೆ ಪುನರಾವೃತ್ತಿ ಇಲ್ಲವೆಂದೂ, ಅಲ್ಲಿಂದ ಮುಂದೆ ಪರಮ ಪದಕ್ಕೆ ಹೋಗಿ ಶ್ರೀ ವಾಸುದೇವಸಾಯುಜ್ಯವನ್ನು ಹೊಂದುವನೆಂದೂ, ಪಂಚಾಗ್ನಿ ವಿದ್ಯೆಯಲ್ಲಿ ಹೇಳಲ್ಪಟ್ಟಿರುತ್ತದೆ. ಎಲ್ಲಿ ಎಂದರೆ **"ತದ್ಯ ಇತ್ಥಂ ವಿದು ರ್ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷ ಮಭಿ ಸಂಭವನ್ತಿ"** ಎಂಬ (ಛಾಂ. ೫. ೧೦. ೧೨) ವಾಕ್ಯದಲ್ಲಿ ಹೇಳಿರುತ್ತದೆ. ಇದರ ಅರ್ಥವೇನೆಂದರೆ—**ತತ್**-ಹಿಂದೆ ಪಂಚಾಗ್ನಿ ವಿದ್ಯೆಯಲ್ಲಿ ಹೇಳಲ್ಪಟ್ಟ ರೀತಿಯಲ್ಲಿ ಪುನಃ ಸಂಸಾರ ಹೊಂದುವ ಜೀವಾತ್ಮನ ಸ್ವರೂಪವನ್ನು, **ಇತ್ಥಂ ವಿದುಃ** - ಈ ಪ್ರಕಾರವಾಗಿ ಎಂದರೆ ಜೀವನು ಆಹಾರ ಮೂಲಕವಾಗಿ ಪುರುಷನ ರೇತಸ್ಸನ್ನು ಸೇರಿ, ಸ್ತ್ರೀ ಯೋನಿ ಎಂಬ ಐದನೆಯ ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟರೆ ಪುರುಷವಾಚ್ಯನಾಗುತ್ತಾನೆಂದು ತಿಳಿದು, ಅದರಿಂದ ತಪ್ಪಿಸಿಕೊಳ್ಳುವದಕ್ಕಾಗಿ ಪರಿಶುದ್ಧಾತ್ಮ ಸ್ವರೂಪವನ್ನು ಹೊಂದುವದಕ್ಕಾಗಿ, ಅದು ಪರಮಾತ್ಮನಿಗೆ ಶರೀರವೆಂದು ಭಾವಿಸಿ ಯಾವನು ಉಪಾಸಿಸುತ್ತಾನೋ ಅವನೂ, ಮತ್ತು **ಯೇ ಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ**-ಯಾವನು ಅರಣ್ಯದಲ್ಲಿದ್ದುಕೊಂಡು ಶ್ರದ್ಧೆಯನ್ನು ಪುರಸ್ಕರಿಸಿ ತಪಶ್ಶಬ್ದದಿಂದ ಹೇಳಲ್ಪಟ್ಟ ಪರಬ್ರಹ್ಮವನ್ನು ಉಪಾಸಿಸುವನೋ, ಇವರಿಬ್ಬರೂ **ಅರ್ಚಿಷಂ ಅಭಿಸಂಭವನ್ತಿ** - ಅರ್ಚಿರಾದಿ ಗತಿಯನ್ನು ಹೊಂದುವರು ಎಂದರೆ ಅವರು ದಿವ್ಯ ವೈಕುಂಠದಲ್ಲಿ ಪರಮಾತ್ಮ ಸಾಯುಜ್ಯವನ್ನು ಹೊಂದುವ ಮಾರ್ಗವನ್ನು ಅನುಸರಿಸಿ ಹೋಗುವರು, ಎಂಬರ್ಥವು. ಆದುದರಿಂದ ಈತನಿಗೆ ಜರಾಮರಣ ಮೋಕ್ಷವುಂಟಾಗಿ, ಕೈವಲ್ಯದಲ್ಲಿ ಕೆಲವು ಕಾಲವಿದ್ದು, ಮುಂದಕ್ಕೆ ದಿವ್ಯ ವೈಕುಂಠಕ್ಕೆ ಹೋಗುವನು. ಜ್ಞಾನಿಯಾದರೋ ನೆಟ್ಟಗೆ ವೈಕುಂಠಕ್ಕೆ ಹೋಗುವನು. ಇವರಿಬ್ಬರಿಗೂ ಇಷ್ಟೇ ವ್ಯತ್ಯಾಸವೆಂದು ತಿಳಿಯತಕ್ಕದ್ದು. ಆದರೆ ಈ ಮೇಲೆ ಹೇಳಿದ ಜ್ಞಾನವು ಜ್ಞಾನಿಗೆ ಬೇಡವೋ ಜಿಜ್ಞಾಸುವಿಗೆ ಮಾತ್ರವೇ ಬೇಕಾದುದೋ, ಎಂದಾಕ್ಷೇಪಿಸಿದರೆ, ಜ್ಞಾನಿಯೂ ಐಹಿಕದಲ್ಲಿ ವೈರಾಗ್ಯವುಳ್ಳವನೇ ; **"ಪರಮಾತ್ಮನಿಯೋರಕ್ತಃ ವಿರಕ್ತೋಽಪರಮಾತ್ಮನಿ"** ಪರಮಾತ್ಮನಲ್ಲಿ ಮನಸ್ಸು ಸಕ್ತವಾಗಿ ಮೋಕ್ಷಾಪೇಕ್ಷೆಯುಳ್ಳದುದಾಗಬೇಕಾದರೆ, **ಅಪರಮಾತ್ಮನಿ**-ಪರಮಾತ್ಮ ವ್ಯತಿರಿಕ್ತವಾದ ಐಹಿಕಗಳಲ್ಲಿ ಜಿಹಾಸೆ ಇದ್ದೇ ಇರಬೇಕು. ಆದುದರಿಂದ ಜರಾಮರಣಗಳ ಮೋಕ್ಷಗಳನ್ನು ಅಪೇಕ್ಷಿಸುವ ಜಿಜ್ಞಾಸುವಿಗೆ ಮುಖ್ಯವಾಗಿ ಇದು ಆವಶ್ಯಕವೆಂದು ಇಷ್ಟು ಮಾತ್ರ ಇಲ್ಲಿ ಹೇಳಲ್ಪಟ್ಟಿತು. ಯಾವಾಗ, ಕ್ರಮೇಣ ಮೋಕ್ಷಕ್ಕೆ ಹೋಗುವ ಜಿಜ್ಞಾಸುವಿಗೇನೇ ಬೇಕಾದರೆ, ನೆಟ್ಟಗೆ ಮೋಕ್ಷಕ್ಕೆ ಹೋಗುವವನಿಗೂ ಆವಶ್ಯಕವಾಗಿ ಬೇಕೆಂಬುದು ಕೈಮುತಿಕ ನ್ಯಾಯಸಿದ್ಧವು. ವೈರಾಗ್ಯವು ಇಬ್ಬರಿಗೂ ಬೇಕು. ಆದುದರಿಂದ ಇತರರು ಮಾಡಿರುವ ಇಲ್ಲಿನ, ಕರ್ಮಶಬ್ದಕ್ಕೆ ವ್ಯಾಖ್ಯಾನವು ಸರ್ವಾತ್ಮನಾ ಪ್ರಕರಣಕ್ಕೆ ಕೂಡುವದೇ ಇಲ್ಲವು ; ಅಪ್ರಾಪ್ತ ವಿಷಯವಾಗುವದಿಲ್ಲವು ; ಅರ್ಜುನನನ್ನು ಏನೂ ತಿಳಿಯದ ಅಜ್ಞನೆಂದು ಹೇಳಿದಂತಾಗುತ್ತದೆ. ಆಗ ಶ್ರೀ ಕೃಷ್ಣನ ಉತ್ತರದಲ್ಲಿ ವಿಸರ್ಗ ಎಂದರೆ ವಿಸರ್ಜನವೆಂಬರ್ಥವನ್ನು ಅನ್ವಯಿಸುವದು ಕಷ್ಟವಾಗುತ್ತದೆ ॥ ೩೦ ॥

ಇಂತು ಶ್ರೀ ಭಗವದ್ಗೀತೆಯ ಏಳನೆಯ ಅಧ್ಯಾಯಕ್ಕೂ ಮತ್ತು ಶ್ರೀ ಯತಿವರ್ಯರ ಭಾಷ್ಯಕ್ಕೂ ತಿರುನಾರಾಯಣಪುರಂ **ಸಿ. ಯಂ. ವಿಜಯರಾಘವಶರ್ಮನ, ಆಚಾರ್ಯಹೃದಯಾನ್ವೇಷಿಣೀ** ಎಂಬ ಅರ್ಥ ತಾತ್ಪರ್ಯಗಳೂ ಸಂಪೂರ್ಣವು.

**ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ**

## ಶ್ರೀ ಯಾಮುನಮುನಿ ವಿರಚಿತ

# ಶ್ರೀಮದ್ಗೀತಾರ್ಥ ಸಂಗ್ರಹಃ

**ಸ್ವಯಾಥಾತ್ಮ್ಯಂ, ಪ್ರಕೃತ್ಯಾಸ್ಯ ತಿರೋಧಿ, ಶ್ಶರಣಾಗತಿಃ ।**
**ಭಕ್ತ ಭೇದಃ, ಪ್ರಬುದ್ಧಸ್ಯ ಶ್ರೈಷ್ಠ್ಯಂ, ಸಪ್ತಮೇ ಉಚ್ಯತೇ ॥ ೧೧ ॥**

ಸಙ್ಗ್ರಹವಾಗಿ ಈ ಏಳನೆಯ ಅಧ್ಯಾಯದಲ್ಲಿ ಏನೇನು ಹೇಳಲ್ಪಡುತ್ತದೆಂಬುದು ಬುದ್ಧಿಸ್ಥವಾಗುವದಕ್ಕಾಗಿ ತಿಳಿಸುತ್ತಾರೆ :—

**೧. ಸ್ವಯಾಥಾತ್ಮ್ಯಂ :—** ಸ್ವಶಬ್ದದಿಂದ ಶ್ರೀಕೃಷ್ಣನು ಹೇಳಲ್ಪಟ್ಟನು. ಪರಮಾತ್ಮನಾದ ತನ್ನ ಮಹಾತ್ಮೆಯು. ಸವಿಜ್ಞಾನವಾದ ಜ್ಞಾನವನ್ನು ತಿಳಿಸುವನೆಂದು ೨ನೆಯ ಶ್ಲೋಕದಲ್ಲಿ ಪ್ರತಿಜ್ಞೆಯು ಮಾಡಲ್ಪಟ್ಟು ೧೨ನೆಯ ಶ್ಲೋಕಾಂತ್ಯದವರೆಗೂ ಇದು ಹೇಳಲ್ಪಟ್ಟಿರುತ್ತದೆ. ಯಾವ ಯಾವ ವಿಷಯಗಳು ಹೇಳಲ್ಪಟ್ಟಿವೆ ಎಂದು ಶ್ರೀ ಭಾಷ್ಯಕಾರರು ಬಹುಸ್ವಾರಸ್ಯವಾಗಿ ೭ನೆಯ ಅಧ್ಯಾಯದ ಅವತಾರಿಕೆಯಲ್ಲಿ ಹೇಳುತ್ತಾರೆ. ಶ್ರೀ ದೇಶಿಕರು ಅವುಗಳು ಯಾವ ಶ್ಲೋಕಗಳಲ್ಲಿ ಉಪಪಾದಿತವೆಂಬುದನ್ನೂ ವ್ಯಕ್ತಪಡಿಸುತ್ತಾರಾದುದರಿಂದ ಅವುಗಳು ಅಲ್ಲಿ ಹೇಳಲ್ಪಡುವುವು.

**೨. ಪ್ರಕೃತ್ಯಾಸ್ಯತಿರೋಧಿಃ :—** ಈ ಪರಮಾತ್ಮನ ಯಾಥಾತ್ಮ್ಯವನ್ನು ತಿಳಿಯುವದಕ್ಕೆ ವಿರೋಧಿಯು ಪ್ರಕೃತಿ ಸಂಸರ್ಗವು. ಪ್ರಕೃತಿ ಸಂಬಂಧದಿಂದಲೇ ಈತನ ಸ್ವಯಂಪ್ರಕಾಶವಾಗಿ ವಿಭುವಾದ ಜ್ಞಾನವು ತಿರೋಹಿತವಾಗಿರುತ್ತದೆ. ರತ್ನಕ್ಕೆ ಮಲಪಂಕದಿಂದ ಹೇಗೆ ಪ್ರಕಾಶಶೂನ್ಯತೆಯುಂಟಾಗುತ್ತದೋ, ಹಾಗೆ ಪ್ರಕೃತಿಸಂಬಂಧದಿಂದ ತಿರೋಹಿತವಾಗುತ್ತದೆಂಬ ಭಾವವು; ಪ್ರಕೃತಿ ಸಂಬಂಧ ತಪ್ಪಿಹೋದರೆ ಆಗ ಜ್ಞಾನವು ತನ್ನ ನೈಜ ವಿಕಾಸತೆಯನ್ನು ಹೊಂದುವದರಿಂದ ಪರಮಾತ್ಮ ಯಾಥಾತ್ಮ್ಯವು ಗೋಚರವಾಗುತ್ತದೆ. ಈ ಅಭಿಪ್ರಾಯವು,

**" ಯಥಾನಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾನ್ಮಣೇಃ ।**
**ದೋಷ ಪ್ರಹಾಣಾ ನ್ನ ಜ್ಞಾನ ಮಾತ್ಮನಃ ಕ್ರಿಯತೇ ತಥಾ ॥**

ರತ್ನದ ದೀಪ್ತಿಯು ಮಲದಿಂದ ಪ್ರಕಾಶಶೂನ್ಯವಾಗಿ ತೋರುತ್ತಿದ್ದುದು ಅದನ್ನು ಚನ್ನಾಗಿ ತೊಳೆಯುವದರಿಂದ ಮೊದಲಿದ್ದುದೇ ಪ್ರಕಾಶಿಸುತ್ತದೆ, ಹಾಗೆಯೇ ಜೀವಾತ್ಮನ ಜ್ಞಾನವು ದೇಹದೊಂದಿಗೆ ಬಂದ ಕರ್ಮವಾಸನಾದಿಗಳಿಂದ ಮರೆಸಿ ಹೋಗಿದ್ದುದು, ಪ್ರಕೃತಿ ಸಂಬಂಧವು ತೊಲಗಿದ ಒಡನೆಯೇ ಪ್ರಜ್ವಲಿಸುತ್ತದೆಂಬ ಭಾವವು. ಇದು ೧೩, ೧೪, ೧೫ನೆಯ ಶ್ಲೋಕಗಳಲ್ಲಿ ಉಪಪಾದಿತವು.

**೩. ಶರಣಾಗತಿಃ :—** ಭಕ್ತಿಯೋಗಕ್ಕೆ ಅಙ್ಗವಾಗಿ ಭಗವತ್ಪ್ರಪದನವು ಇಲ್ಲಿ ಹೇಳಲ್ಪಟ್ಟಿರುತ್ತದೆ. ಇದು ೧೪ನೆಯ ಶ್ಲೋಕದ ಅಭಿಪ್ರಾಯವು. ಈ ಶರಣಾಗತಿಯೇ ಇತರ ಸ್ಥಳಗಳಲ್ಲಿ ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲೂ ಭಗವಚ್ಛಾಸ್ತ್ರದಲ್ಲೂ ಸ್ವತಂತ್ರೋಪಾಯವೆಂದೂ ಹೇಳಲ್ಪಟ್ಟಿರುತ್ತದೆ. ಶ್ರೀ ದೇಶಿಕರವರ ಸಾಙ್ಗಪ್ರಪದನಾಧಿಕಾರವನ್ನು ಪರಾಂಬರಿಸಿದರೆ ಸರ್ವ ಸಂಶಯಗಳು ತೊಲಗುವುವು. ಈ ಪ್ರಕರಣದಲ್ಲಿ ಹೇಳಿರುವದು ಅಙ್ಗಪ್ರಪತ್ತಿಯಾದರೂ ಎರಡು ಉಪಾಯಗಳಿಗೂ ಅನ್ವಯಿಸುವ ಹಾಗೆ ಶ್ರೀ ವ್ಯಾಸರು ಪದಗಳನ್ನು ಪ್ರಯೋಗಿಸಿರುತ್ತಾರೆ.

**೪. ಭಕ್ತ ಭೇದಃ :—** ನಾಲ್ಕು ವಿಧ ಸುಕೃತಿಗಳು ತನ್ನನ್ನು ಉಪಾಸಿಸುವರೆಂದು ೧೬ನೆಯ ಶ್ಲೋಕದಲ್ಲಿ ಹೇಳಲ್ಪಟ್ಟು ಪ್ರಾಸಙ್ಗಿಕವಾಗಿ ತನ್ನನ್ನು ಶರಣ ಹೊಂದದ ದುಷ್ಕೃತಿಗಳು ನಾಲ್ಕು ವಿಧವೆಂದು ೧೫ನೆಯ ಶ್ಲೋಕದಲ್ಲಿ ತಿಳಿಸಿರುತ್ತಾರೆ.

**೫. ಪ್ರಬುದ್ಧಸ್ಯಶ್ರೈಷ್ಠ್ಯಂ :—** ಈ ನಾಲ್ಕು ವಿಧ ಭಕ್ತರಲ್ಲಿ ಜ್ಞಾನಿಯೇ ಶ್ರೇಷ್ಠನೆಂದು ೧೭ ಮತ್ತು ೧೮ನೆಯ ಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಯಾವಾಗ ಜ್ಞಾನಿಯು ಶ್ರೇಷ್ಠನು ಎಂದಾಯಿತೋ, ಆವಾಗ ಅಂತವನು ದೊರಕುವದು ದುರ್ಲಭವೆಂದೇ ಆಯಿತು. ಈ ಅಂಶವು ೧೯ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಅದು ದುರ್ಲಭವೆಂದು ಹೇಳಲು ಹೊರಟು ಪ್ರಾಸಙ್ಗಿಕವಾಗಿ ಅನೇಕರು ಅನ್ಯಾ ದೇವತಾ ಭಜನವನ್ನು ಅಜ್ಞಾನದಿಂದವಲಂಬಿಸಿ ತುಚ್ಛ ಫಲಗಳನ್ನು ಹೊಂದಿರುತ್ತಾರೆಂದೂ, (ಶ್ಲೋಕಗಳು ೨೦, ೨೧) ಅಂತಹ ಫಲಗಳನ್ನು ಕೊಡುವವನು ತಾನೇ ಎಂದೂ (ಶ್ಲೋಕ. ೨೨) ಹೇಳಿ, ಅನ್ಯದೇವತಾ ಭಜನಕ್ಕೂ ತನ್ನ ಭಜನಕ್ಕೂ ಇರುವ ವೈಲಕ್ಷಣ್ಯವು ೨೩ನೆಯ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟಿತು. ಸರ್ವರೂ ಆಶ್ರಯಿಸಲೆಂದು ಕೃಪೌದಾರ್ಯದಿಂದ ಅವತರಿಸಿದ್ದರೂ, ಏತಕ್ಕೆ ಆಶ್ರಯಿಸುವದಿಲ್ಲವೆಂಬುದಕ್ಕೆ ಕಾರಣಗಳನ್ನು ಮುಂದಿನ ನಾಲ್ಕು ಶ್ಲೋಕಗಳಿಂದ ತಿಳಿಸಿ, ತನ್ನನ್ನು ಉಪಾಸಿಸುವ ನಾಲ್ಕು ವಿಧ ಭಕ್ತರೂ ತಿಳಿಯತಕ್ಕ ಮತ್ತು ಅನುಷ್ಠಿಸತಕ್ಕ ಉಪನಿಷತ್ಪ್ರತಿಪಾದಿತಗಳಾದ ವಿಷಯಗಳನ್ನು ತಿಳಿಸಿ, ಅವುಗಳು ವಿಸ್ತರವಾಗಿ ಮುಂದಿನ ಅಧ್ಯಾಯದಲ್ಲಿ ಉಪಪಾದಿಸಲ್ಪಡುವದನ್ನು ಸೂಚಿಸಿ, ಅಧ್ಯಾಯವನ್ನು ನಿಗಮನ ಮಾಡಿರುತ್ತಾರೆ.

## ಈ ಏಳನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು

ಪ್ರಥಮ ಷಟ್ಕದಲ್ಲಿ ಉಪಾಯವಾದ ಭಗವದುಪಾಸನೆಗೆ ಅಙ್ಗವಾದ ಕರ್ಮಯೋಗದ ಮಹಾತ್ಮ್ಯಯು ಪ್ರಕಟಿಸಲ್ಪಟ್ಟಿತು. ದ್ವಿತೀಯ ಷಟ್ಕದಲ್ಲಿ ಭಗವಂತನ ಉಪಾಸನದ ಎಂದರೆ ಭಕ್ತಿಯೋಗದ ಮಾಹಾತ್ಮ್ಯೆಯು ತಿಳಿಸಲ್ಪಡುತ್ತದೆ. ಅದಕ್ಕೆ ಬೇಕಾದ ಪರಮಾತ್ಮನನ್ನು ಕುರಿತ ಜ್ಞಾನ ಮತ್ತು ವಿಶೇಷಜ್ಞಾನಗಳೇ ಮೊದಲಾದವು ಪ್ರಥಮತಃ ಬೋಧಿಸಲ್ಪಡುವುವು.

ಶ್ರೀಕೃಷ್ಣ ಭಗವಾನರವರು ಹೇಳುತ್ತಾರೆ:—

೧. ಓ ಕುಂತೀ ಕುಮಾರನೇ, ನಾನು ಮಹತ್ತಾದ ಸ್ವರೂಪರೂಪ ಗುಣವಿಭವೈಶ್ವರ್ಯಾದಿಗಳಿಂದಲೂ, ಮಹತ್ತಾದ ದಿವ್ಯ ಚೇಷ್ಟಿತಗಳಿಂದಲೂ ಯುಕ್ತನಾಗಿ, ಚೇತನರಿಗೆ ಸರ್ವವಿಧ ಉಪಕಾರಕನಾಗಿ ಹಿತಚಿನ್ತಕನಾಗಿರುವ ಒಳ್ಳೇ ಜ್ಞಾನಿಯಿಂದಗಲಿ ಇರಲು ಸಾಧ್ಯವೇ ಇಲ್ಲವೆಂದಿರುವ ನನ್ನಲ್ಲೇ, ನಿರಂತರ ಮನಸ್ಸನ್ನಿಟ್ಟು ನನ್ನಲ್ಲಿ ಉಪಾಸನ ಸಿದ್ಧಿಗಾಗಿ ಶರಣಾಗತಿಯನ್ನನುಷ್ಠಿಸಿ ನನ್ನನ್ನು ಕ್ಷಣಕಾಲವೂ ಅಗಲಿರಲು ಸಾಧ್ಯವಿಲ್ಲದವನಾಗಿ, ಆ ಕಾರಣದಿಂದ ನನ್ನನ್ನು ಆಶ್ರಯಿಸಿ, ನನ್ನ ಉಪಾಸನರೂಪ ಭಕ್ತಿಯೋಗದಲ್ಲಿ ಪ್ರವೃತ್ತಿಸುವವನು ನಿಸ್ಸಂಶಯವಾಗಿ ಆ ಯೋಗಕ್ಕೆ ವಿಷಯನಾದ ನನ್ನನ್ನು ಯಾವ ಜ್ಞಾನದಿಂದ ತಿಳಿಯತಕ್ಕದ್ದೋ ಅದನ್ನು ನಿನಗೆ ಸಂಪೂರ್ಣವಾಗಿ ತಿಳಿಸುವೆನು, ಸಾವಧಾನದಿಂದ ಕೇಳು.

೨. ಪರಮ ಪ್ರಿಯನಾದ ನಾನು ತುಂಬಾ ಪ್ರೀತಿಯುಕ್ತನಾದ ನಿನಗೆ ಅಂತಹ ಜ್ಞಾನವನ್ನು ಅದಕ್ಕೆ ಸಹಕಾರಿಯಾದ ವಿಶೇಷ ಜ್ಞಾನದೊಂದಿಗೆ ಎಂದರೆ ನಾನು ಹೇಗೆ ಚಿದಚಿತ್ತುಗಳಿಂದ ಕೂಡಿದ ಜಗತ್ತಿಗಿಂತ ಹೇಯ ಪ್ರತ್ಯನೀಕನಾಗಿ, ಕಲ್ಯಾಣಗುಣಾಕರನಾಗಿ, ಉಭಯ ವಿಭೂತಿ ನಾಯಕನಾಗಿ, ಹೀಗೆ ಸರ್ವಕ್ಕಿಂತ ವಿಲಕ್ಷಣನೆಂಬ ಜ್ಞಾನದೊಂದಿಗೆ ಸಮಗ್ರವಾಗಿ ತಿಳಿಸುವೆನು. ಅದನ್ನು ನೀನು ಚನ್ನಾಗಿ ಮನಸ್ಸಿನಲ್ಲಿಟ್ಟರೆ ನನ್ನ ವಿಷಯವಾದ ಯೋಗಕೆ, ಬೇಕಾದ ಬೇರೆ ಇನ್ನು ಯಾವ ಜ್ಞಾನವೂ ಉಳಿದಿರುವದಿಲ್ಲವು.

೩. ಇಂತಹ ಉತ್ಕೃಷ್ಟ ಜ್ಞಾನವು ಎಲ್ಲರಿಗೂ ಲಭಿಸುವದಿಲ್ಲವು. ಏಕೆಂದರೆ ಶಾಸ್ತ್ರಾಧಿಕಾರಿಗಳಾದ ಸಾವಿರಾರು ಮನುಷ್ಯರಲ್ಲಿ ಯಾವನೋ ಒಬ್ಬನು ಸುಕೃತ ಮಾಹಾತ್ಮ್ಯೆಯಿಂದ ಸಿದ್ಧಿಗೋಸ್ಕರವಾಗಿ ಪ್ರಯತ್ನಿಸುವನು. ಹೀಗೆ ಸಿದ್ಧಿಗಾಗಿ ಪ್ರಯತ್ನಿಸುವರಲ್ಲಿ ಯಾವನೋ ಒಬ್ಬನು ಸುಕೃತಾಧಿಕ್ಯದಿಂದ ನನ್ನನ್ನು ಯಥಾರ್ಥವಾಗಿ ತಿಳಿದು ಉಪಾಸಿಸುವನು. ಆದುದರಿಂದ ಅಂತಹ ನನ್ನ ವಿಷಯವಾದ ಉತ್ಕೃಷ್ಟ ಜ್ಞಾನ ಉಂಟಾಗುವದು ದುರ್ಲಭವು.

೪. ತನ್ನ ಶರೀರವಾಗಿ, ಆದುದರಿಂದ ತನ್ನದಾಗಿ ತನ್ನಿಂದ ವ್ಯಾಪಿಸಲ್ಪಟ್ಟಿರುವದು ಪರ, ಅಪರವೆಂಬ ಎರಡು ಪ್ರಕೃತಿಗಳು ಎಂದು ಮುಂದೆ ತಿಳಿಸುತ್ತಾರೆ.—ಅಚಿತ್ತೆಂಬುವ ನನ್ನ ಪ್ರಕೃತಿಯು ಎಂಟು ವಿಧವು. ಹೇಗೆಂದರೆ, ಪೃಥಿವಿ, ಅಪ್ಪು, ತೇಜಸ್ಸು, ವಾಯು ಆಕಾಶವೆಂಬ ಪಂಚಭೂತಗಳೂ, ಮನಸ್ಸು, ಬುದ್ಧಿ, ಅಹಂಕಾರ ಎಂಬದಾಗಿ. ಪಂಚಭೂತಗಳಲ್ಲೇ ಪಂಚತನ್ಮಾತ್ರೆಗಳೂ ಅಡಗಿ ಹತ್ತಾದುದರಿಂದಲೂ, ಮನಸ್ಸು ಹನ್ನೊಂದು ಇಂದ್ರಿಯಗಳನ್ನು ಬೋಧಿಸುವದರಿಂದಲೂ, ಬುದ್ಧಿ ಅಹಂಕಾರ ಮೂಲ ಪ್ರಕೃತಿ ಇವು ಮೂರೂ ಸೇರಿ ಹೀಗೆ ೨೪ ತತ್ವಗಳು ಸಾಂಖ್ಯರಿಂದ ಹೇಳಲ್ಪಟ್ಟವು.

೫. ಇದು ಸ್ವರೂಪ ಸ್ವಭಾವ ವಿಕಾರವುಳ್ಳ ಅಚಿತ್ತು. ಸ್ವರೂಪವಿಕಾರವಿಲ್ಲದೆ ಸ್ವಭಾವ ಮಾತ್ರ ವಿಕಾರವಿರುವ, ಆದುದರಿಂದ ಆ ಅಚಿತ್ತಿಗಿಂತ ಶ್ರೇಷ್ಠವಾದ ಇನ್ನೊಂದು ನನ್ನ ಶರೀರವಾಗಿ ನನಗೆ ಸಂಬಂಧಿಸಿದ ಪ್ರಕೃತಿಯುಂಟೆಂದು ಹೇಳುತ್ತಾರೆ—ಈ ಅಚಿತ್ತಿಗಿಂತಲೂ ಬೇರೆಯಾಗಿ ಅದಕ್ಕೂ ಶ್ರೇಷ್ಠವಾಗಿರುವ ಪ್ರಕೃತಿಯುಂಟು. ಅದು ಜೀವಾತ್ಮನೆಂದು ಹೇಳಲ್ಪಡುತ್ತದೆ. ಅಂತಹ ಜೀವವರ್ಗದಿಂದಲೇ ಈ ಅಚಿತ್ತತ್ವವು ಭೋಗ್ಯವಾಗಿ ಧರಿಸಲ್ಪಟ್ಟು ಜಗತ್ತೆಂದು ಹೇಳಿಸಿಕೊಳ್ಳುತ್ತದೆ. ಹೀಗೆ ಇವೆರಡೂ ನನಗೆ ಸೇರಿದವು. ನನಗೆ ಶರೀರವು.

೬. ಹೀಗೆ ಜಗತ್ತು ಎಂದೆನಿಸುವದಕ್ಕೆ ಈ ಎರಡು ತತ್ವಗಳೇ ಕಾರಣಭೂತಗಳಾಗಿ ಸಮಸ್ತ ಭೂತಗಳಲ್ಲೂ ಇವೆ ಎಂದು ತಿಳಿ. ನಾನಾದರೋ ಅವುಗಳ ಸೃಷ್ಟಿ ಲಯಾದಿಗಳಿಗೆಲ್ಲಾ ಕಾರಣಭೂತನಾಗಿ ಅವುಗಳೊಂದಿಗೇ ಇರುವೆನು ಎಂದೂ ತಿಳಿ. ಹೀಗೆ ನಾಮರೂಪಗಳು ಉಂಟಾಗುವುವು.

೬||. ಜಗತ್ತಿಗೆ ಕಾರಣವು ಅವೆರಡಾಗಿಯೂ, ಅವುಗಳ ಉತ್ಪತ್ತಿ ಲಯಗಳಿಗೂ ನಾನೇ ಕಾರಣವಾಗಿ ಹೀಗೆ ಜಗತ್ತನ್ನೆಲ್ಲಾ ನಾನು ವ್ಯಾಪಿಸಿರುವದರಿಂದಲೂ, ನನಗೆ ಕಾರಣವಾಗಿ ಯಾರೂ ಇಲ್ಲವು. ನನಗೆ ಸಮಾನರಾಗಿಯೂ, ಅಧಿಕರಾಗಿಯೂ ಯಾರೂ ಇಲ್ಲವು.

೭. ಹೀಗೆ ನಾನು ಸರ್ವ ಜಗತ್ತಿನ ವಸ್ತುಗಳಿಗೂ ಆತ್ಮವಾಗಿರುವದರಿಂದ, ಅವು ನನ್ನಿಂದಲೇ ಆಧೇಯವು, ಅವಕ್ಕೆಲ್ಲಾ ನಾನೇ ಆಧಾರನು ; ಅವು ನನ್ನನ್ನು ಬಿಟ್ಟಿರಲಾರವು, ಮಣಿಗಳು ಹೇಗೆ ಸೂತ್ರದಲ್ಲಿ ಪೋಣಿಸಲ್ಪಟ್ಟು ಸೂತ್ರದ ಆಧಾರದಲ್ಲಿ ನಿಂತಿವೆಯೋ, ಹಾಗೆಯೇ ಅವುಗಳಿಗೆ ನಾನೇ ಆಧಾರನು.

೮. ಹೀಗೆ ಸರ್ವವೂ ನನಗೆ ಶರೀರವಾಗಿ ನಾನು ಸರ್ವಕ್ಕೂ ಆತ್ಮವಾಗಿ ಆಧಾರವಾಗಿರುವದರಿಂದ, ಸಮಸ್ತ ವಸ್ತುಗಳೂ, ಅವುಗಳಿಗೆ ಸತ್ತಾದಾಯಕಗಳಾದ ಪ್ರಧಾನ ವಿಶೇಷಣಗಳೂ ನಾನೇ ಎಂದು ನಾಲು ಶ್ಲೋಕಗಳಿಂದ ತಿಳಿಸುತ್ತಾರೆ—ಈಗ ಮನುಷ್ಯ ದೇಹದಲ್ಲಿರುವ ಆತ್ಮವಿಗೆ ಮನುಷ್ಯನೆಂದೇ ಹೇಗೆ ವ್ಯವಹಾರವೋ, ಹಾಗೆಯೇ ಅವೆಲ್ಲವೂ ನನಗೆ ಶರೀರವಾಗಿರುವದರಿಂದ ನಾನೇ ಎಂದು ಹೇಳಿಕೊಳ್ಳುತ್ತಾರೆ—ಇದರಿಂದ ಅವುಗಳ ಸ್ವರೂಪ ಸ್ವಭಾವಗಳಿಗೂ ಅವುಗಳ ಪ್ರಧಾನ ವಿಶೇಷಗಳಿಗೂ ತಾನೇ ಕಾರಣನೆಂದು ಹೇಳಿದಂತಾಯಿತು. ಓ ಕುನ್ತೀ ಪುತ್ರನಾದ ಅರ್ಜುನನೇ, ಅಪ್ಪುಗಳೂ, ಅಪ್ಪುಗಳಲ್ಲಿರುವ ಪ್ರಧಾನವಾದ ರಸಭಾಗವೂ ನಾನೇ ; ಸೂರ್ಯಚಂದ್ರರೂ ಅವರಲ್ಲಿರುವ ಪ್ರಧಾನವಾದ ಪ್ರಭೆಗಳೂ ನಾನೇ ;

ಸಮಸ್ತ ವೇದಗಳೂ ಅವುಗಳ ಪೂರ್ವೋತ್ತರ ಭಾಗದದಲ್ಲಿ ಪಠಿಸಲ್ಪಡುವ ಪ್ರಧಾನವಾದ ಓಂಕಾರವೂ ನಾನೇ ; ಆಕಾಶದಲ್ಲಿನ ಶಬ್ದವೂ, ಮನುಷ್ಯರಲ್ಲಿನ ಪೌರುಷವೂ ನಾನೇ.

೯. ಭೂಮಿಯಲ್ಲಿರುವ ಶ್ರೇಷ್ಠವಾದ ಗಂಧವೂ ನಾನೇ ; ಅಗ್ನಿಯಲ್ಲಿರುವ ದಾಹಶಕ್ತಿಯೂ ನಾನೇ ; ಸಮಸ್ತ ಪ್ರಾಣಿಗಳಲ್ಲಿ ಪ್ರಾಣರೂಪನು ನಾನೇ ; ತಪಸ್ವಿಗಳಿಗೆ ಸತ್ತಾದಾಯಕ ತಪಸ್ಸೂ ನಾನೇ.

೧೦. ಸರ್ವ ಭೂತಗಳ ಉತ್ಪತ್ತಿಗೂ ಅನಾದಿಕಾರಣಭೂತನು ನಾನೇ ; ಮೇಧಾಯುಕ್ತರ ನಿಶ್ಚಯ ಜ್ಞಾನವೂ ನಾನೇ ; ಪ್ರತಾಪಶೀಲರಲ್ಲಿರುವ ಪ್ರತಾಪವೂ ನಾನೇ.

೧೧. ಧಾರಣಾದಿ ಶಕ್ತಿಯುಳ್ಳವರಲ್ಲಿರುವ ಧಾರಣಾಶಕ್ತಿಯು ನಾನೇ ; ಓ ಭರತ ಶ್ರೇಷ್ಠನೇ ದುಷ್ಟಾಭಿಲಾಷೆ ವಿಷಯೋಪ ಭೋಗಾಸಕ್ತಿಗಳಿಲ್ಲದಿರುವ, ಸ್ವದಾರ ಸುತಾದಿಗಳಲ್ಲೂ, ಪ್ರಜೆಗಳ ಹಿತಚಿಂತನೆಯಲ್ಲೂ, ಭಗವದ್ಭಾಗವತರಲ್ಲೂ, ಶಾಸ್ತ್ರದಲ್ಲೂ, ಮೋಕ್ಷದಲ್ಲೂ ಹೀಗೆ ಸಾತ್ವಿಕ ಭಾವಗಳಲ್ಲಿರುವ ಪ್ರೀತಿಯೂ ನಾನೇ.

೧೨. ಹೀಗೆ ಇನ್ನು ಹೆಚ್ಚಾಗಿ ಹೇಳುವದೇನು. ಸಮಸ್ತ ವಸ್ತುಗಳ ಸತ್ತಾ ಸ್ಥಿತಿ ಮೊದಲಾದವೂ, ಅವುಗಳಲ್ಲಿ ಸಾರವತ್ತಾದವು ಎಲ್ಲವೂ ನನ್ನಿಂದಲೇ ಎಂದುದರಿಂದ, ಯಾವ ಯಾವ ಸಾತ್ವಿಕ ರಾಜಸ ತಾಮಸ ಭಾವಗಳು ದೇಹೇನ್ದ್ರಿಯ ರೂಪದಲ್ಲೂ, ಭೋಗ್ಯ ರೂಪದಲ್ಲೂ ಜಗತ್ತಿನಲ್ಲಿಂಟೋ, ಅವೆಲ್ಲವೂ ನನ್ನಿಂದಲೇ ಉಂಟಾದವೆಂದು ತಿಳಿ. ಆವುಗಳಿಗೆಲ್ಲಾ ಕಾರಣನಾಗಿಯೂ ಸತ್ತಾದಾಯಕನಾಗಿಯೂ ಆಧಾರನಾಗಿಯೂ ಇರುವವನು ನಾನೇ. ಅವುಗಳು ನನಗೆ ಆಧಾರವಲ್ಲವು. ಅವುಗಳಿಗೆಲ್ಲಾ ಸರ್ವವಿಧ ಉಪಕಾರಕನು ನಾನೇ ; ಅವು ಗಳಿಂದ ನನಗಾಗತಕ್ಕದ್ದು ಲೀಲಾ ಮಾತ್ರವೇ ವಿನಾ, ಇನ್ನು ಯಾವ ಉಪಕಾರವೂ ಇಲ್ಲವು.

೧೩. ಇಂತಹ ಮಹತ್ತಾದ ಪರಮಾತ್ಮ ಯಥಾರ್ಥ ಸ್ವರೂಪವನ್ನು ಎಲ್ಲರೂ ಏಕೆ ತಿಳಿಯ ಲಾರರು ಎಂಬುದಕ್ಕೆ ಕಾರಣವನ್ನು ಹೇಳುತ್ತಾರೆ—ಈಗ ಮೇಲೆ ಹೇಳಿದ ಸಾತ್ವಿಕ ರಾಜಸ ತಾಮಸ ಗುಣ ಪ್ರಾಚುರ್ಯವುಳ್ಳ ವಸ್ತುಗಳಿಂದ ಕೂಡಿದ ದೇಹೇಂದ್ರಿಯಗಳ ಮೂಲಕ ಮೋಹಗೊಳಿಸಲ್ಪಟ್ಟ ಸರ್ವ ಪ್ರಾಣಿವರ್ಗವೂ, ಈ ಚೇತನಾಚೇತನಗಳಿಗಿಂತಲೂ ನಾನು ಯಾವ ವಿಧ ಪರಿಣಾಮವೂ ಇಲ್ಲದುದರಿಂದ ಸದಾ ಏಕರೂಪನಾಗಿ ವಿಲಕ್ಷಣನಾಗಿ ಸರ್ವೋತ್ಕೃಷ್ಟ ನೆಂಬುದನ್ನು ತಿಳಿಯಲಾರರು.

೧೩॥. ಹೀಗೆ ಭ್ರಮಜ್ಞಾನವನ್ನುಂಟುಮಾಡಿ ಐಹಿಕ ಭೋಗಾಸಕ್ತಿಯಲ್ಲಿ ಲಿಪ್ತನಾಗುವ ಹಾಗೆ ಮಾಡಿದ ದೇಹ ಸಂಬಂಧವನ್ನು ಕಳೆದುಕೊಳ್ಳವದು ಸಾಧ್ಯವೋ ಎಂದರೆ ಲೀಲಾ ವಿಭೂತಿಯಲ್ಲಿ ರಸಿಕನಾದ ನನ್ನಿಂದ, ಚೇತನರುಗಳ ಕರ್ಮಾನುಸಾರ ಬಂಧಕ್ಕಾಗಿ ನಿರ್ಮಿಸಲ್ಪಟ್ಟ ಈ ಪ್ರಕೃತಿ (ದೇಹ) ಸಂಬಂಧದಿಂದ ತಪ್ಪಿಸಿಕೊಳ್ಳುವದು ದುರ್ಲಭವು.

೧೪. ಹೀಗೆ ದೇಹೇಂದ್ರಿಯಗಳ ಸಂಬಂಧದಿಂದ ತಪ್ಪಿಸಿಕೊಳ್ಳುವದು ದುರ್ಲಭವಾದರೆ ಎಂದಿಗಾದರೂ ಒಳ್ಳೆಯ ಗತಿಯುಂಟೋ ? ಕರ್ಮಾನುಸಾರವಾಗಿ ಈ ದೇಹಸಂಬಂಧವನ್ನು ಉಂಟುಮಾಡಿದವನನ್ನೇ ಶರಣವನ್ನು ಹೊಂದಿದರೆ, ಭ್ರಮೆಯನ್ನುಂಟುಮಾಡುವ ದೇಹ ಸಂಬಂಧವು ಬಿಟ್ಟುಹೋಗುತ್ತದೆನ್ನುತ್ತಾರೆ.—ಪರಮ ಕಾರುಣಿಕನಾದ ನನ್ನಲ್ಲಿ ಶರಣಾಗತಿ ಯನ್ನು ಯಾರು ಅನುಷ್ಠಿಸುತ್ತಾರೋ, ಅವರು ಈ ಹೇಯರೂಪವಾದ ದೇಹಸಂಬಂಧದಿಂಧ ಬಿಡುಗಡೆಯನ್ನು ಹೊಂದುವದಕ್ಕಾಗಿ, ನನ್ನನ್ನು ಕುರಿತು ಉಪಾಸನೆಯನ್ನು ಮಾಡುವ ಹಾಗೆ ಅನುಗ್ರಹಿಸುವೆನು. ಉಪಾಸನಕ್ಕೆ ಅರ್ಹರಲ್ಲದೆ ಶರಣಾಗತಿಯನ್ನನುಷ್ಠಿಸಿದರೂ ರಕ್ಷಿಸಿಬಿಡುವೆನು.

೧೫. ಹೀಗೆ ಪರಮ ಕಾರುಣಿಕನಾದ ನನ್ನಲ್ಲಿ ಸುಲಭವಾಗಿ ಶರಣಾಗತಿಯನ್ನನುಷ್ಠಿಸಿ ಉಪಾಯಾನುಷ್ಠಾನಕ್ಕೆ ಅನುಗ್ರಹವನ್ನು ಹೊಂದದೇ ಎಲ್ಲರೂ ಬಂಧದಲ್ಲೇ ಏಕೆ ನರಳುತ್ತಾರೆ?

ಎಂಬ ಸಂದರ್ಭದಲ್ಲಿ ಹೇಳುತ್ತಾರೇನೆಂದರೆ—ಹಾಗೆ ಶರಣಾಗತಿಯನ್ನು ಅನುಷ್ಠಿಸದವರು ನಾಲ್ಕು ಮಂದಿಗಳು; ಒಬ್ಬರಿಗಿಂತ ಒಬ್ಬರು ಹೆಚ್ಚು ಪಾಪಿಷ್ಠರೆಂದು ಹೇಳುತ್ತಾರೆ- ಪಾಪ ಕರ್ಮಗಳನ್ನೆಸಗಿದವರು ನನ್ನನ್ನು ಶರಣಹೊಂದುವದಿಲ್ಲವು. ಅವರು ದುಷ್ಕೃತ ತಾರತಮ್ಯ ದಿಂದ ನಾಲ್ಕು ವಿಧವಾಗಿರುವರು.—೧. ತಾನೂ, ಲೋಕದ ಸರ್ವ ವಸ್ತುವೂ, ಭಗವಂತನಾದ ನನ್ನ ಸ್ವತ್ತು ಎಂಬ ಯಥಾರ್ಥ ಜ್ಞಾನವಿಲ್ಲದ ಮೂಢರು. ೨. ನನ್ನ ಸ್ವರೂಪದ ಸಾಮಾನ್ಯ ಜ್ಞಾನವಿದ್ದರೂ ಕೂಡ ನನ್ನನ್ನು ಆಶ್ರಯಿಸದೇ ಇರುವವರು. ೩. ನನ್ನ ವಿಷಯವಾದ ಸಮಸ್ತ ಜ್ಞಾನವಿದ್ದರೂ ಆಸ್ತಿಕ್ಯ ಬುದ್ಧಿಯಿಲ್ಲದೆ ಕುತರ್ಕದಿಂದ ಅಪಹೃತ ಜ್ಞಾನವುಳ್ಳವರು. ೪. ನನ್ನ ವಿಷಯವಾದ ಸಮಸ್ತ ಜ್ಞಾನವೂ ನನ್ನನ್ನು ದ್ವೇಷಿಸುವದಕ್ಕೇ ಕಾರಣಭೂತರಾಗಿರುವ ಆಸುರ ಪ್ರಕೃತಿಗಳು. ಈ ನಾಲ್ವರೂ ನನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸುವದಿಲ್ಲವು.

೧೬. ಹಾಗಾದರೆ ನಿನ್ನಲ್ಲಿ ಶರಣಾಗತಿಯನ್ನನುಷ್ಠಿಸಿ ನಿನ್ನನ್ನು ಉಪಾಸಿಸುವವರು ಯಾರು? ಎಂದರೆ, ಅವರೂ ನಾಲ್ಕು ಮಂದಿಯು. ಅವರೂ ಸುಕೃತ ತಾರತಮ್ಯದಿಂದ ಒಬ್ಬರಿಗಿಂತ ಒಬ್ಬರು ಹೆಚ್ಚು ಉತ್ಕೃಷ್ಟರು. (೧) ಆರ್ತನು ತನಗಿದ್ದ ಐಹಿಕ ಭೋಗವನ್ನು ಹೋಗಲಾಡಿಸಿಕೊಂಡು ತತ್ಪ್ರಾಪ್ತಿಗಾಗಿ ಉಪಾಯಾನುಷ್ಠಾನವನ್ನು ಮಾಡುವವನು. (೨) ಅರ್ಥಾರ್ಥಿಯು-ತನಗೆ ಈಗಿರುವ ದಕ್ಕಿಂತ ಹೆಚ್ಚಾದ ಐಶ್ವರ್ಯವನ್ನು ಪ್ರಾರ್ಥಿಸುವವನು. ಇವರಲ್ಲಿ ಸ್ವರ್ಗಾದಿ ಲೋಕಕಾಮಿಗಳೂ ಸೇರಿ ವರು. (೩) ಇವರಿಗೂ ಹೆಚ್ಚು ಸುಕೃತಿಯು, ತನ್ನ ಆತ್ಮ ಯಾಥಾತ್ಮ್ಯವನ್ನು ತಿಳಿದವನಾಗಿ ಪ್ರಕೃತಿ ವಿಯುಕ್ತವಾದ ಆತ್ಮಪ್ರಾಪ್ತಿಗಾಗಿ ಉಪಾಸಿಸುವ ಪಂಚಾಗ್ನಿ ವಿದ್ಯಾನಿಷ್ಠನೆಂಬ ಜಿಜ್ಞಾಸುವು. (೪) ಎಲ್ಲರಿಗಿಂತ ಹೆಚ್ಚು ಸುಕೃತಿಯು ಜ್ಞಾನಿಯು. ಈತನು ಮೋಕ್ಷಪ್ರಾಪ್ತಿಗಾಗಿ ಉಪಾಸಿಸುವವನು.

೧೭. ನಾಲ್ಕನೆಯ ಉತ್ಕೃಷ್ಟತೆಯನ್ನು ಹೇಳುತ್ತಾರೆ.—ಈ ನಾಲ್ಕು ಜನ ಭಕ್ತರಲ್ಲಿ ಜ್ಞಾನಿಯೇ ಶ್ರೇಷ್ಠನು. ಏಕೆಂದರೆ ಆತನು ನಾನೇ ಉಪಾಸ್ಯನೆಂದೂ ನಾನೇ ಪ್ರಾಪ್ಯನೆಂದೂ ತಿಳಿದು, ನನ್ನೊಬ್ಬನಲ್ಲೇ ಆತನಿಗೆ ಭಕ್ತಿಯು; ಇತರರಿಗಾದರೋ ನನ್ನಲ್ಲಿ ಭಕ್ತಿಯು, ಫಲದಲ್ಲೂ ವಿಶ್ವಾಸವು. ಜ್ಞಾನಿಯು ಸದಾ ನನ್ನನ್ನೇ ಈಗಲೂ ಮತ್ತು ದೇಹಾವಸಾನಾನಂತರವೂ ಧ್ಯಾನಿಸುವಂತವನು. ಆದುದರಿಂದ ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ನಾನು ಆತನಿಗೆ ಪ್ರಿಯನು, ಆ ಕಾರಣದಿಂದ ಆತನೂ ನನಗೆ ಹಾಗೆಯೇ ಪ್ರಿಯನು.

೧೮. ಈ ನಾಲ್ವರು ಭಕ್ತರೂ, ಪ್ರಾರ್ಥಿಸಿದುದನ್ನು ಕೊಡುವ ದಾತಾ ಎಂದು ನನ್ನನ್ನು ಶ್ಲಾಘಿಸುವರಾದುದರಿಂದ ಅವರೆಲ್ಲರೂ ಹೀಗೆ ನನಗೆ ಮಹಿಮೆಯನ್ನು ದಯಪಾಲಿಸುವ ದಾನ ಶೀಲರು. ಅವರಲ್ಲಿ ಜ್ಞಾನಿಯಾದರೋ ನನಗೆ ಆತ್ಮ ಸ್ವರೂಪವನ್ನೇ ದಯಪಾಲಿಸುವನೆಂದು ನನ್ನ ಭಾವನೆಯು. ಏಕೆಂದರೆ ಆ ಜ್ಞಾನಿಯಾದರೋ ನಾನಿಲ್ಲದೆ ಆತನಿಗೆ ಪ್ರಾಣಧಾರಣೆಯೇ ಇಲ್ಲವೆಂದು ಭಾವಿಸಿ, ಸದಾ ನನ್ನನ್ನೇ ಸರ್ವೋತ್ಕೃಷ್ಟ ಪ್ರಾಪ್ಯೋಪಗತಿಯೆಂದು ತಿಳಿದು ಚಿಂತಿಸುತ್ತಿರುವನು. ಆದುದರಿಂದ ಅವನಿಲ್ಲದಿದ್ದರೆ ನನಗೂ ಆಗುವದಿಲ್ಲವು. ಆದುದರಿಂದಲೇ ಆತನು ನನಗೆ ಆತ್ಮಾ.

೧೯. ಇಂತಹ ಜ್ಞಾನಿಯು ದೊರೆಯುವದು ತುಂಬಾ ಅಪರೂಪವೆನ್ನುತ್ತಾರೆ.—ಬಹು ಸುಕೃತ ಜನ್ಮಗಳು ಕಳೆದನಂತರ, ನನ್ನ ವಿಷಯವಾದ ಜ್ಞಾನವನ್ನು ಸಂಪಾದಿಸಿಕೊಂಡು ನನ್ನಲ್ಲಿ ಉಪಾಸನವು ನೆರವೇರುವದಕ್ಕಾಗಿ ಶರಣಾಗತಿಯನ್ನು ಅನುಷ್ಠಿಸುತ್ತಾನೆ. ಹೀಗೆ, ವಾಸುದೇವನೇ ತನಗೆ ಸರ್ವಸ್ವವು, ಸರ್ವವಿಧ ಬಂಧುವು ಎಂದು ಭಾವಿಸುವ ಮಹಾತ್ಮನು ಸಿಕ್ಕುವದು ದುರ್ಲಭವು.

೨೦. ಇಂತಹ ನನ್ನನ್ನು ಉಪಾಸಿಸುವ ಜ್ಞಾನಿಯು ದೊರೆಯುವದು ತುಂಬಾ ದುರ್ಲಭ

ವಾಗಲು ಇನ್ನೂ ಕಾರಣವುಂಟು. ಏನೆಂದರೆ ಲೋಕದಲ್ಲಿ ಸಾಧಾರಣವಾಗಿ ಜನರು ಪೂರ್ವ ಜನ್ಮಕೃತಕರ್ಮ ವಾಸನಾನುಗುಣವಾಗಿ ಪ್ರಾಪ್ತವಾದ ಕಾಮುಗಳಿಂದ ನನ್ನ ಸ್ವರೂಪ ಜ್ಞಾನವೇ ಇಲ್ಲದವರಾಗಿ ತಮ್ಮ ತಮ್ಮ ಇಷ್ಟ ಸಿದ್ಧಿಗಾಗಿ ಕೇವಲ ಅನ್ಯದೇವತೆಗಳನ್ನು ಆಯಾ ದೇವತಾರಾಧನ ನಿಯಮವನ್ನು ಕೈಕೊಂಡು ಶರಣ ಹೊಂದುತ್ತಾರೆ.

೨೧. ಹೀಗೆ ಯಾರು ಯಾರು ನನ್ನ ಶರೀರಗಳಾದ ಈ ಅನ್ಯದೇವತೆಗಳನ್ನು ಶ್ರದ್ಧಾಯುಕ್ತರಾಗಿ ಭಜಿಸಲು ಅಪೇಕ್ಷಿಸುತ್ತಾರೋ, ಅಂತವರಿಗೆ ಅಂತಹ ಶ್ರದ್ಧೆಯು ಸ್ಥಿರವಾಗಿ ನೆಲಿಸುವ ಹಾಗೆ ನಾನೇ ಮಾಡುತ್ತೇನೆ. ಹಾಗೆ ನಾನು ಮಾಡದೇ ಹೋದರೆ ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಕುಮಾರ್ಗಗಳನ್ನು ಅವಲಂಬಿಸಬಹುದು ಎಂಬ ಭಯದಿಂದ ನಾನು ಹಾಗೆ ಮಾಡುವೆನು.

೨೨. ಹಾಗೆ ಅನ್ಯದೇವತಾ ಭಜನವನ್ನು ಮಾಡಿದರೆ ಇಷ್ಟಾರ್ಥ ಸಿದ್ಧಿಯನ್ನುಂಟು ಮಾಡುವರು ಯಾರು ಎನ್ನುತ್ತೀಯೋ ಹೇಳುವೆನು ಕೇಳು.—ಆ ಅನ್ಯದೇವತಾ ಭಕ್ತನು ಅಂತಹ ಅಚಲವಾದ ಶ್ರದ್ಧೆಯಿಂದ ಯುಕ್ತನಾಗಿ ಆ ಅನ್ಯದೇವತಾ ಉಪಾಸನವನ್ನು ಕೈಕೊಂಡುದುದರಿಂದ, ನನ್ನ ಶರೀರವನ್ನೇ ಆತನು ಉಪಾಸಿಸಿದ ಕಾರಣದಿಂದ, ಆ ಇಷ್ಟಾರ್ಥಗಳನ್ನೇ ನನ್ನಿಂದಲೇ ಕೊಡಲ್ಪಟ್ಟವುಗಳನ್ನಾಗಿ, ಹೊಂದುವನು. ಏಕೆಂದರೆ ಆ ಅನ್ಯದೇವತೆಯು ವಸ್ತುಗಳಾಗಿ ಯಾವುವೂ ಇಲ್ಲವು. ಎಲ್ಲವೂ ನನ್ನದಾದುದರಿಂದ ನಾನೇ ಅವರ ಮೂಲಕ ಕೊಡತಕ್ಕವನು.

೨೩. ಅಜ್ಞಾನದಿಂದ ಇಂತಹ ಅಲ್ಪಾಸ್ಥಿರ ಫಲಗಳನ್ನು ಅನ್ಯದೇವತೆಗಳ ಮೂಲಕ ಪಡೆಯುತ್ತಾರೆಯೇ, ನನ್ನನ್ನು ಆಶ್ರಯಿಸಿ ಉಪಾಸಿಸಿದರೆ ತಮ್ಮ ಇಷ್ಟಾರ್ಥಗಳನ್ನೂ ಕೊಟ್ಟು, ನನ್ನನ್ನು ಉಪಾಸಿಸಿದ ಸುಕೃತ ಮಹಾತ್ಮ್ಯೆಯಿಂದ ನಿರತಿಶಯ ಸುಖರೂಪ ಮೋಕ್ಷವನ್ನೂ ಕೊಡುವೆನಲ್ಲಾ; ಅಯ್ಯೋ, ಅವರ ಅಜ್ಞಾನವೇ ಎಂದು ಪರಿತಾಪದಿಂದ ಹೇಳುತ್ತಾರೆ.— ಈ ಅನ್ಯದೇವತಾ ಭಜಕರಾದ ಮೃದು ಪ್ರಜ್ಞರು ಹೊಂದುವ ಫಲಗಳಾದರೋ ಅಲ್ಪಾಸ್ಥಿರಗಳಾದವು. ಏಕೆಂದರೆ ಅನ್ಯದೇವತಾ ಭಜಕರು ಕೊಡುವ ಹೆಚ್ಚಿನ ಫಲವು ತಮ್ಮ ಅಸ್ಥಿರವಾದ ಲೋಕದಲ್ಲಿ ತಮ್ಮ ಸಾಯುಜ್ಯ ಮಾತ್ರವೇ. ನನ್ನನ್ನು ಭಜಿಸುವವರಿಗಾದರೋ ಅವರ ಇಷ್ಟಾರ್ಥಗಳನ್ನು ಸಲ್ಲಿಸಿ, ನನ್ನನ್ನು ಭಜಿಸಿದ ಸುಕೃತ ಮಾಹಾತ್ಮ್ಯೆಯಿಂದ ಕೊನೆಗೆ ನನ್ನ ಸಾಯುಜ್ಯವನ್ನೂ ಸಹ ಹೊಂದುವಹಾಗೆ ಮಾಡುವೆನು. ಹೀಗೆ ಅವರ ಭಜನಕ್ಕೂ ನನ್ನ ಭಜನಕ್ಕೂ ತಾರತಮ್ಯವು ಉಂಟು.

೨೪. ಮೇಲೆ ಹೇಳಿದ ಚತುರ್ವಿಧ ಭಕ್ತರಲ್ಲದ ಇತರರಾದ ಮೂಢರು, ಅಜಹತ್ಸ್ವಸ್ವಭಾವನಾಗಿ, ನಿಸ್ಸಮಾಭ್ಯಧಿಕನಾಗಿ, ನನ್ನ ಪರತ್ವವನ್ನು ಬಿಡದೆ ಅತಿಮಾನುಷ ದಿವ್ಯ ಚೇಷ್ಟಿತಗಳನ್ನು ಪೂತನಾಸಂಹಾರ, ಶಕಟಾಸುರಮರ್ದನ, ಗೋವರ್ಧನೋದ್ಧಾರಣ, ಕಾಳೀಯ ಮರ್ದನಾದಿಗಳಿಂದ ವ್ಯಕ್ತಪಡಿಸಿದರೂ, ಹಿಂದೆಯಿಲ್ಲದ ಯಾವನೋ ಒಬ್ಬನು ವಸುದೇವ ಕುಮಾರನಾಗಿ ಮನುಷ್ಯಜನ್ಮವನ್ನೆತ್ತಿದ್ದಾನೆಂದು ನನ್ನನ್ನು ತಿಳಿಯುವರು. ಅದುದರಿಂದ ಅವರು ನನ್ನನ್ನು ಆಶ್ರಯಿಸುವದೂ ಇಲ್ಲವು, ಆರಾಧಿಸುವದೂ ಇಲ್ಲವು.

೨೫. ಇದು ಯಾವ ಕಾರಣದಿಂದ ಎನ್ನುತ್ತೀಯೋ ? ಕ್ಷೇತ್ರಜ್ಞರಿಗೆ ಮಾತ್ರವೇ ಅಸಾಧಾರಣವಾದ ಅವಯವಗಳುಳ್ಳ ಮಾನುಷರೂಪ ವಿಚಿತ್ರಸೃಷ್ಟಿಶಕ್ತಿಯನ್ನು ನಾನು ತಾಳಿದವನಾಗಿರುವದರಿಂದ ನನ್ನ ಪರಭಾವವು ಎಲ್ಲರಿಗೂ ಪ್ರಕಾಶವಾಗುವದಿಲ್ಲವು. ಆದುದರಿಂದ ಅವರು ಅಜ್ಞರು; ನಾನು ಸಕಲಕ್ಕೂ ಕಾರಣನು, ನನಗೆ ಯಾವುದೂ ಕಾರಣವಲ್ಲವು, ಮತ್ತು ಜನನ ಮರಣಾದಿ ವಿಕಾರ ಶೂನ್ಯನಾದ ಪರಮಪುರುಷನೆಂದು ಅವರವರ ಪ್ರಾರಬ್ಧ ಕರ್ಮವಶಾತ್ ತಿಳಿಯಲಾರರು.

೨೬. ಹೀಗೆ ಕರ್ಮಬದ್ಧರಾದ ಈ ಮೂಢ ಜನರು ನನ್ನ ಪರಂಭಾವವನ್ನು ನನ್ನ ಮಾನುಷ ದಿವ್ಯ ಚೇಷ್ಟಿತಗಳಿಂದ ಗ್ರಹಿಸದೇ ಸಾಧಾರಣ ಮನುಷ್ಯನೆಂದೇ ಭಾವಿಸೋಣವು, ಈ ಕೃಷ್ಣಾವತಾರದಲ್ಲಿ ಮಾತ್ರವೇ ಎಂದು ಭಾವಿಸಬೇಡ; ಹಿಂದೆ ರಾಮಾದಿ ಅವತಾರಗಳ ಕಾಲದಲ್ಲೂ, ಹಾಗೆಯೇ ಮುಂದಿನ ಕಲ್ಕ್ಯಾದ್ಯವತಾರಗಳಲ್ಲೂ ನಡೆಯುತ್ತವೆ. ಇದೆಲ್ಲಾ ನಾನು ಸರ್ವಜ್ಞನಾದ ಪ್ರಯುಕ್ತ ನನಗೆ ತಿಳಿಯುವದು.

೨೭. ಇದಕ್ಕೆಲ್ಲಾ ಕಾರಣವು ಅವರವರ ಪ್ರಾರಬ್ಧ ಕರ್ಮವು. ಹಿಂದಿನ ಕರ್ಮವಾಸನೆಯಿಂದಲೇ ಅವರುಗಳು, ಸೃಷ್ಟಿಕಾಲದಲ್ಲೂ, ಮತ್ತು ಹುಟ್ಟುವಾಗಲೇ ಅಲ್ಪಾಸ್ಥಿರಗಳ ಅನುಭವಗಳಲ್ಲೇ ಇಚ್ಛೆಯೂ, ನಿರತಿಶಯ ಸುಖಪ್ರಾಪ್ತಿಗೆ ಹೇತುವಾದವುಗಳಲ್ಲಿ ದ್ವೇಷವೂ, ಉಳ್ಳವರಾಗಿ, ಇಂತಹ ದ್ವಂದ್ವಗಳಲ್ಲಿ ಹಿಂದಿನ ಜನ್ಮದಲ್ಲಿ ಅವರಿಗೆ ಅಭ್ಯಾಸ ಉಂಟಾದುದರಿಂದ ಹೀಗೆ ಸಂಪೂರ್ಣ ಮೋಹಜ್ಞಾನವನ್ನು ಹೊಂದುತ್ತಾರೆ.

೨೮. ಹೀಗೆ ಎಲ್ಲರೂ ಕರ್ಮವಶಾತ್ ಸಂಮೋಹವನ್ನು ಹೊಂದಿಬಿಟ್ಟರೆ, ನಿನ್ನನ್ನು ಆಶ್ರಯಿಸುವರು ಯಾರಾದರೂ ಉಂಟೋ? ಎಂದು ಕೇಳುತ್ತೀಯೋ, ಹೇಳುವೆನು ಕೇಳು. ಯಾರು ಸುಕೃತ ಕರ್ಮಗಳನ್ನು ಮಾಡುವದರ ಮೂಲಕ ನನ್ನ ಕೃಪೆಯು ಉದಿಸಿ, ಕರ್ಮಯೋಗವನ್ನನುಷ್ಠಿಸುವದರ ಮೂಲಕ ಅವರ ಪಾಪವು ಕ್ಷೀಣವಾಗುತ್ತದೋ, ಅಂತವರೀಗ ಇಂತಹ ದ್ವಂದ್ವಮೋಹದಿಂದ ಬಿಡಲ್ಪಟ್ಟವರಾಗಿ ನನ್ನಲ್ಲಿ ಶರಣಾಗತಿಯನ್ನನುಷ್ಠಿಸಿ, ಉಪಾಯಾನುಷ್ಠಾನ ವಿರೋಧಿ ಪಾಪಗಳಿಂದ ಬಿಡಲ್ಪಟ್ಟವರಾಗಿ, ಅವರುಗಳ ಸುಕೃತ ತಾರತಮ್ಯದಿಂದ, ದೃಢ ಸಂಙ್ಕಲ್ಪರಾಗಿ, ನಾಲ್ಕು ವಿಧ ಉಪಾಸಕರಾಗಿ, ನನ್ನನ್ನು ಸೇವಿಸುವರು. ಇದನ್ನೇ ಹಿಂದೆಯೇ **“ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿ ನೋರ್ಜುನ”** ಎಂದು ಉಪದೇಶಿಸಿದನೆಂಬ ಭಾವವು.

೨೯. ಮುಂದೆ ಈ ನಾಲ್ವರೂ ತಿಳಿಯತಕ್ಕ ಕೆಲವು ವಿಶೇಷಗಳುಂಟು. ಆಯಾ ಅಧಿಕಾರಿಗಳನ್ನು ಕುರಿತು ಅವರಿಗೆ ವೇದ್ಯಾಂಶಗಳನ್ನು ತಿಳಿಸುವೆನು ಕೇಳು ಎಂದು ಮುಂದಿನ ಎರಡು ಶ್ಲೋಕಗಳಿಂದ ಹೇಳುತ್ತಾರೆ.—ಯಾವ ಜಿಜ್ಞಾಸುವು ಜರಾಮರಣಗಳನ್ನು ಹೊಂದುವ ಶರೀರದಿಂದ ಬಿಡುಗಡೆಯನ್ನು ಹೊಂದಿ, ಇಂತಹ ಪರಿಣಾಮಗಳಿಲ್ಲದ ಪರಿಶುದ್ಧಾತ್ಮ ಪ್ರಾಪ್ತಿಗಾಗಿ ಯತ್ನಿಸುವನೋ, ಆತನು ತದ್ಬ್ರಹ್ಮ-ಆ ಬ್ರಹ್ಮವೆಂಬುದರ ವಿಷಯದಲ್ಲೂ ತಿಳಿಯತಕ್ಕದ್ದುಂಟು, ಹಾಗೆಯೇ ಸಮಸ್ತ **ಕೃತ್ಸ್ನ ಮಧ್ಯಾತ್ಮಂ** ಎಂದರೆ ಜೀವಾತ್ಮನಿಗೆ ಈ ಶರೀರ ರೂಪದಲ್ಲಿ ಭೂತಸೂಕ್ಷ್ಮವು ಹೇಗೆ ಅಂಟುತ್ತದೆಂಬ ಸಮಸ್ತ ವಿಷಯದಲ್ಲೂ, ಹಾಗೆಯೇ ಪುನಃ ಪುನಃ ಶರೀರ ಪ್ರಾಪ್ತಿಯನ್ನುಂಟುಮಾಡುವ **ಕರ್ಮದ** ವಿಷಯದಲ್ಲೂ, ತಿಳಿಯತಕ್ಕದ್ದುಂಟು. ಈ ವಿಷಯವೆಲ್ಲಾ ಜ್ಞಾನಿಗೂ ಬೇಕಾದ ವಿಷಯಗಳೇ.

೩೦. ಹಾಗೆಯೇ ಇನ್ನು ಕೆಲವರಾದ ಐಹಿಕ ಪಾರಲೌಕಿಕ ಐಶ್ವರ್ಯಾರ್ಥಿ ಯಾರೋ ಅವರು ನಾನು ಅಧಿಭೂತನಾಗಿ, ಅಧಿದೈವತನಾಗಿ ಅವುಗಳೊಂದಿಗೆ ಕೂಡಿದವನೆಂದು ತಿಳಿತಕ್ಕದ್ದಾಗಿರುತ್ತದೆ. ಈ ನಾಲ್ವರು ಭಕ್ತರು ಯಾರೋ ಅವರೆಲ್ಲರೂ, ನಾನು ಅಧಿಯಜ್ಞನಾಗಿ ಯಜ್ಞದೊಂದಿಗೆ ಕೂಡಿದವನೆಂದು ತಿಳಿಯತಕ್ಕದ್ದು. ಈ ನಾಲ್ವರೂ ಪ್ರಾಣತ್ಯಾಗ ಕಾಲದಲ್ಲಿ ಅವರವರ ಪ್ರಾರ್ಥನಾನುಗುಣವಾಗಿ ದೃಢ ಸಂಙ್ಕಲ್ಪವುಳ್ಳವರಾಗಿ ನನ್ನನ್ನು ತಿಳಿಯತಕ್ಕ ವಿಶೇಷಗಳೂ ಉಂಟು.

**ಎಂಬಲ್ಲಿಗೆ ಏಳನೆಯ ಅಧ್ಯಾಯದ ಸಂಙ್ಗ್ರಹಾರ್ಥವು ಸಂಪೂರ್ಣವು.**

# ಶ್ರೀಮದ್ಭಗವದ್ಗೀತಾಯಾಂ

## ಅಷ್ಟಮೋಽಧ್ಯಾಯಃ

---

**ಭಾ. ಅಥ ಸಪ್ತಮೇ ಪರಸ್ಯ ಬ್ರಹ್ಮಣೋವಾಸುದೇವಸ್ಯೋಪಾಸ್ಯತ್ವಂ, ನಿಖಿಲ ಚೇತನಾಚೇತನ ವಸ್ತು ಶೇಷಿತ್ವಂ, ಕಾರಣತ್ವಂ, ಆಧಾರತ್ವಂ ಸರ್ವಶರೀರತಯಾ**

**ಭಾಷ್ಯಾವತಾರಿಕೆಯ ಅರ್ಥವು :—** ಏಳನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ವಿಷಯ ಗಳನ್ನೆಲ್ಲಾ ಬಹು ಸ್ವಾರಸ್ಯವಾಗಿ ಮನಸ್ಸಿಗೆ ಹಿಡಿಯುವ ಹಾಗೆ ಸಂಗ್ರಹವಾಗಿ ತಿಳಿಸುತ್ತಾರೆ. ಮೂಲದಲ್ಲಿ ಪ್ರತಿಜ್ಞಾರೂಪದಲ್ಲಿ ಹೇಳಲ್ಪಟ್ಟ ವಿಜ್ಞಾನಸಹಿತಜ್ಞಾನವು ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕದಲ್ಲಿ ಸೂಚಿಸಲ್ಪಟ್ಟಿರುವುದು ಯಾವುದೆಂಬುದನ್ನು ವಿಶದವಾಗಿ ತಿಳಿಸುತ್ತಾರೆ. **ಸಪ್ತಮೇ** - ಏಳನೆಯ ಅಧ್ಯಾಯದಲ್ಲಿ, (೧) **ಪರಸ್ಯಬ್ರಹ್ಮಣಃ** – ಪರಬ್ರಹ್ಮನಾದ, **ವಾಸುದೇವಸ್ಯ** – ವಸುದೇವ ಪುತ್ರನಾದ ಶ್ರೀಕೃಷ್ಣನ, **ಆತನೇ** ದಿವ್ಯ ವೈಕುಂಠಪತಿಯಾದ ಪರವಾಸುದೇವನಾದ ಪ್ರಯುಕ್ತ, **ಉಪಾಸ್ಯತ್ವಂ** – ಇದು ಪ್ರಥಮ ಶ್ಲೋಕದಲ್ಲಿ “**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ**” ಎಂಬುದರಿಂದ ಹೇಳಲ್ಪಟ್ಟಿತು. ಇದರಿಂದ ಶ್ರೀಕೃಷ್ಣನಿಗಿಂತ ಬೇರೆಯಾಗಿ ಒಬ್ಬ ನಿರ್ಗುಣ ಪರಬ್ರಹ್ಮನೊಬ್ಬನಿದ್ದಾನೆ. ಆತನು ತದನಂತರ ಉಪಾಸ್ಯನೆಂಬ ಭಾವವು ಸರಿಯಲ್ಲವೆಂದು ಹೇಳಿದಂತಾಯಿತು. ಈ ಸುಗುಣನಾದ ಶ್ರೀಕೃಷ್ಣನೇ ಪರಬ್ರಹ್ಮವೆಂಬ ಭಾವದಿಂದ **ಪರಸ್ಯ ಬ್ರಹ್ಮಣಃ ವಾಸುದೇವಸ್ಯ** ಎಂಬ ಪ್ರಯೋಗವು. **ಕಾಮೈಸ್ತೈಸ್ತೈರ್ಹೃತ ಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ** (೨೦) ಎಂಬ ಶ್ಲೋಕಾರ್ಥವಾದ ಅನ್ಯದೇವತೆಯು ಉಪಾಸ್ಯವಲ್ಲವೆಂಬುದೂ ಇದರಿಂದ ಸೂಚಿತವು.

೨. **ನಿಖಿಲ ಚೇತನಾಚೇತನ ವಸ್ತುಶೇಷಿತ್ವಂ** – ಪರಬ್ರಹ್ಮನು ಸಮಸ್ತ ಚೇತನಾಚೇತನ ವಸ್ತುಗಳಿಗೂ ಶೇಷಿಯಾಗಿರುವ ಭಾವವೂ ಈ ಜಗತ್ತೆಲ್ಲಾ ಚೇತನಾಚೇತನಾತ್ಮಕ ವಾದುದು. ಸರ್ವೇಶ್ವರನು ಅವುಗಳಿಗೆ ಶೇಷಿಯು, ಅವುಗಳು ಈತನಿಗೆ ಶೇಷಭೂತವಾದವು. ಇದು ೪-೫ನೆಯ ಶ್ಲೋಕಗಳಲ್ಲಿ **ಮೇ ಪ್ರಕೃತಿಃ** ಎಂಬ ಮತ್ತು **ಅನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ** ಎಂಬುದರಿಂದ ಬೋಧಿತಾರ್ಥವು ಕಾರಣ ಕಾರ್ಯರೂಪದಲ್ಲಿರುವ ಸರ್ವ ಚಿದಚಿತ್ತಿಗೂ ಶೇಷಿಯು ಎಂಬುದು. ಇದರಿಂದ ಬ್ರಹ್ಮರುದ್ರೇಂದ್ರಾದಿಗಳಿಗೂ ಶೇಷಿ ಎಂಬುದು ವ್ಯಕ್ತವು. “**ಪತಿಂವಿಶ್ವಸ್ಯಾತ್ಮೇಶ್ವರಗ್ಂ**” ಎಂಬ ಪುರುಷಸೂಕ್ತ ವಚನವು ಅನುಸಂಧೇಯವು. ಇದನ್ನು “**ಅಹಂ ಸರ್ವಸ್ಯ ಪ್ರಭವಃ**” (ಗೀ. ೧೦. ೮) “**ವಾಸುದೇವಸ್ಸರ್ವಂ**” (ಗೀ. ೭. ೧೯) ಇತ್ಯಾದಿಗಳಿಂದಲೂ ಗ್ರಹಿಸಬಹುದು.

೩. **ಕಾರಣತ್ವಂ**-ಸಮಸ್ತ ಜಗತ್ತಿಗೂ ಕಾರಣನಾಗಿರುವ ಭಾವವು, ಇದು “**ಏತದ್ಯೋನೀನಿ**” ಎಂಬ ೬ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿದುತ್ತದೆ. ಉಪಾಸ್ಯವು ಯಾವುದು ಎಂದರೆ “**ಕಾರಣಂತು ಧ್ಯೇಯಃ**” ಎಂದರೆ ಯಾವುದು ಜಗತ್ಕಾರಣವೋ, “**ಯತೋವಾ ಇಮಾನಿ ಭೂತಾನಿ ಜಾಯಂತೇ**” ಎಂಬ ಶ್ರುತಿಗಳು ಯಾವನನ್ನು ಬೋಧಿಸುತ್ತವೋ, ಅವನೇ ಉಪಾಸ್ಯನೇ ವಿನಾ, ಇತರರಲ್ಲವು. ಆದುದರಿಂದ ಈ ಷಟ್ಕದಲ್ಲಿ ಭಕ್ತಿಯೋಗರೂಪವಾದ ಉಪಾಸನವನ್ನು ವಿಧಿಸುವದಕ್ಕೆ ಮೊದಲು, ಜಗತ್ಕಾರಣನಾಗಿ ಶ್ರೀಕೃಷ್ಣಭಗವಾನ್ ಆದ ನಾನೇ ಉಪಾಸ್ಯ

**ಭಾ. ಸರ್ವಪ್ರಕಾರತ್ವೇನ ಸರ್ವಶಬ್ದವಾಚ್ಯತ್ವಂ, ಸರ್ವ ನಿಯನ್ತೃತ್ವಂ, ಸರ್ವೈಶ್ಚ ಕಲ್ಯಾಣ ಗುಣಗಣೈ ಸ್ತಸ್ಯೈವ ಪರತರತ್ವಂ, ಸತ್ವರಜಸ್ತಮೋಮಯ್ಯೆ ರ್ದೇಹೇಂದ್ರಿಯ ತ್ವೇನ ಭೋಗ್ಯತ್ವೇನ ಚಾ ವಸ್ಥಿತೈ ರ್ಭಾವೈ ರನಾದಿಕಾಲಪ್ರವೃತ್ತದುಷ್ಕೃತಪ್ರವಾಹ**

ನೆಂದು ಉಪದೇಶಿಸಲ್ಪಟ್ಟಿತೆಂಬ ಭಾವವು. **ಕಾರಣತ್ವಂ** ಎಂಬುದರಿಂದ ಸರ್ವ ಕಾರಣತ್ವವೂ ಹೇಳಲ್ಪಟ್ಟಿತು. ಇದರಿಂದ ನಿಮಿತ್ತ ಕಾರಣನು ಮಾತ್ರವೇ ಎಂಬ ವಾದವು ನಿರಾಕರಿಸಲ್ಪಟ್ಟಿತು. ಸೂಕ್ಷ್ಮ ಚಿದ ಚಿದ್ವಿಶಿಷ್ಟ ಪರಬ್ರಹ್ಮವೇ ಕಾರಣವು; ಸ್ಥೂಲ ಚಿದ ಚಿದ್ವಿಶಿಷ್ಟ ಪರಬ್ರಹ್ಮವೇ ಕಾರ್ಯವು ಎಂದು ತಿಳಿಯತಕ್ಕದ್ದು.

೪. **ಆಧಾರತ್ವಂ**-ಸರ್ವಕ್ಕೂ ಆಧಾರನು ತಾನು, ಮಿಕ್ಕೆಲ್ಲವೂ ಆಧೇಯವು ಎಂಬ ಭಾವವು. ಇದು ೧೭. ೭.೭ನೆಯ ಶ್ಲೋಕದಲ್ಲಿ **"ಮಯಿ ಸರ್ವಮಿದಂ ಪ್ರೋತಂ"** ಎಂಬುದರಿಂದ ಹೇಳಲ್ಪಟ್ಟಿತು. ಇದು ಶರೀರಾತ್ಮ ಭಾವದಿಂದ ಉಂಟಾಗುತ್ತದೆ.

೫. **ಸರ್ವಶರೀರತಯಾ ಸರ್ವಪ್ರಕಾರತ್ವೇನ ಸರ್ವಶಬ್ದವಾಚ್ಯತ್ವಂ** - ಸಮಸ್ತವೂ ತನಗೆ ಶರೀರವಾಗಿ, ಸರ್ವಕ್ಕೂ ತಾನು ಆತ್ಮವಾಗಿ, ಹೀಗೆ ಸಮಸ್ತವೂ ತನಗೆ ಅಪೃಥಕ್ಸಿದ್ಧ ವಿಶೇಷಣವಾಗಿ ತಾನು ವಿಶೇಷ್ಯವಾಗಿಯೂ ಇರುವದರಿಂದಲೇ ತನಗೆ ಸಮಸ್ತ ವ್ಯಾವಹಾರಿಕ ಶಬ್ದಗಳಿಂದಲೂ ತಾನೇ ಹೇಳಲ್ಪಡೋಣವೂ; ನಾಲ್ಕು ಐದನೆಯ ಶ್ಲೋಕಗಳಲ್ಲಿ ಚೇತನಾ ಚೇತನವೆಲ್ಲಾ ತನ್ನ ಪ್ರಕೃತಿಯೆಂದು ಹೇಳಿದುದರಿಂದ ಶೇಷಿತ್ವವೂ ಆ ಕಾರಣದಿಂದ ಶರೀರತ್ವವೂ ಹೇಳಲ್ಪಟ್ಟಿತು. **"ಯಯೇದಂ ಧಾರ್ಯತೇ ಜಗತ್"** (೫) ಎಂಬಲ್ಲಿ ಜೀವನು ಅಚಿತ್ತಿಗೆ ಧಾರಕನೆಂದೂ ತಾನು ಚಿದಚಿತ್ತುಗಳೆರಡಕ್ಕೂ ಧಾರಕನೆಂದೂ ೫.೬ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟವು. **"ರಸೋಹಮಪ್ಸು"** ಎಂದಾರಂಭಿಸಿ (೮ನೆಯ ಶ್ಲೋಕ) ನಾಲ್ಕು ಶ್ಲೋಕಗಳಿಂದ ಸಾಮಾನಾಧಿಕರಣ್ಯವನ್ನುಪಪಾದಿಸಿ ಸರ್ವಶಬ್ದ ವಾಚ್ಯತ್ವವು ಬೋಧಿಸಲ್ಪಟ್ಟಿತು. ಯಾವಾಗ ಎಲ್ಲವೂ ಶರೀರವಾಗಿ, ತಾನು ಎಲ್ಲಕ್ಕೂ ಆತ್ಮನಾದನೋ, ಶರೀರವನ್ನು ಬೋಧಿಸುವ ಶಬ್ದಗಳೆಲ್ಲಾ, **ಮನುಷ್ಯೋಹಂ** ಎಂದು ಹೇಳಿದ ಹಾಗೆ, ಸರ್ವ ಶರೀರಿಯಾದ ತನ್ನನ್ನೇ ಬೋಧಿಸುತ್ತವೆ.

೬. **ಸರ್ವ ನಿಯನ್ತೃತ್ವಂ**-ಸಮಸ್ತವನ್ನು ನಿಯಮಿಸುವ ಶಕ್ತಿಯು; ಯಾವಾಗ ಎಲ್ಲವೂ ಶೇಷಿಯಾಗಿ, ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವಾಯಿತೋ, ಆಗ ಪರಮಾತ್ಮನಿಂದಲೇ ನಿಯಮಿಸಲ್ಪಡಲು ಯೋಗ್ಯವು. ಈತನು ಎಲ್ಲಕ್ಕೂ ನಿಯನ್ತಾ, ಸರ್ವವೂ ನಿಯಾಮ್ಯವೆಂಬ ಭಾವವು. ಯಾವನಿಗೆ ಇವೆಲ್ಲವೂ ಶರೀರವೋ, ಅಂತವನೇ ಇವುಗಳನ್ನೆಲ್ಲಾ ನಿಯಮಿಸುವ ಶಕ್ತಿಯುಳ್ಳವನು. ಇದು ೧೨ನೆಯ ಶ್ಲೋಕದಲ್ಲಿರುವ **"ಮತ್ತ ಏವೇತಿತಾನ್ವಿದ್ಧಿ"** ಎಂಬುದ ರಿಂದುಪದೇಶಿಸಲ್ಪಟ್ಟಿತು.

೭. **ಸರ್ವೈಶ್ಚ ಕಲ್ಯಾಣಗುಣಗಣೈಸ್ತಸ್ಯೈವ ಪರತರತ್ವಂ** - ಸಮಸ್ತಗಳಾದ ಕಲ್ಯಾಣ ಗುಣಗಳ ಸಮೂಹದಿಂದಲೂ ಆತನಿಗೇನೆ ಸರ್ವೋತ್ಕೃಷ್ಟಭಾವವೂ; ಸ್ವರೂಪ ಮತ್ತು ಕಲ್ಯಾಣ ಗುಣಗಳಿಂದಲೂ ತಾನೇ ಸರ್ವೋತ್ಕೃಷ್ಟನು, ನಿಸ್ಸಮಾಭ್ಯಧಿಕನು ಎಂಬುದು, **"ಮತ್ತಃ ಪರತರಂ ನಾನ್ಯತ್"**ಎಂಬ ೭ನೆಯ ಶ್ಲೋಕದ ಪೂರ್ವಾರ್ಧದಿಂದಲೂ, **"ಮಾಮೇಭ್ಯಃ ಪರಮವ್ಯಯಂ"** (೧೩) ಎಂಬುವದರಿಂದಲೂ, ಹೇಳಲ್ಪಟ್ಟಿತು ಇವು ಎಳೂ ಸ್ವಯಾಥಾತ್ಮ್ಯ ವಿಷಯವಾದವು.

೮. **ಸತ್ವರಜಸ್ತಮೋಮಯ್ಯೈ**: ಸತ್ವರಜಸ್ತಮೋಗುಣಗಳ ಸ್ವರೂಪವುಳ್ಳ, **ದೇಹೇಂದ್ರಿಯತ್ವೇನ**-ದೇಹ ಮತ್ತು ಇಂದ್ರಿಯ ರೂಪದಲ್ಲೂ, **ಭೋಗ್ಯತ್ವೇನ ಚ**-ಭೋಗ್ಯ ವಾಗಿರುವ ರೂಪದಲ್ಲೂ ಸಹ, **ಅವಸ್ಥಿತೈಃ**-ಇರುವ, **ಭಾವೈಃ**-ಪದಾರ್ಥಗಳಿಂದ ಎಂದರೆ ಈತನಿಗೆ ಪ್ರಕೃತಿಯ ಸಂಬಂಧವು ಹೀಗೆ ಎರಡು ವಿಧವಾದುದೆಂದು ಹೇಳಲ್ಪಟ್ಟಿತು. **"ತ್ರಿಭಿರ್ಗುಣ**

**ಭಾ. ಹೇತುಕ್ಯೈ ಸ್ತಸ್ಯ ತಿರೋಧಾನಮ್, ಅತ್ಯುತ್ಕೃಷ್ಟ ಸುಕೃತಹೇತುಕ ಭಗವತ್ಪ್ರಪ ತ್ತ್ಯಾ ಚ ತನ್ನಿವರ್ತನಂ, ಸುಕೃತ ತಾರತಮ್ಯೇನ ಚ ಪ್ರತಿಪತ್ತಿವೈಶೇಷ್ಯಾ ದೈಶ್ವರ್ಯಾ ಕ್ಷರಯಾಥಾತ್ಮ್ಯಭಗವತ್ಪ್ರಾಪ್ತ್ಯ ಪೇಕ್ಷಯೋಽಪಾಸಕಭೇದಂ, ಭಗವನ್ತಂ ಪ್ರೇಪ್ಸೋ ಮಯ್ಯೈಃ"** (ಗೀ. ೭. ೧೩) ಎಂಬ ಶ್ಲೋಕಾರ್ಥವು ಇಲ್ಲಿ ಹೇಳಲ್ಪಟ್ಟಿತು. ಸಾತ್ವಿಕ ವಿಶೇಷವಿರುವ ಅವಸ್ಥೆಯು **"ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿತೇ"** (ಗೀ.೭.೧೪) ಎಂಬಲ್ಲಿ ಹೇಳಲ್ಪಟ್ಟಿತು. ಸುಖ ದುಃಖಾನುಭವಕ್ಕಾಗಿಯೂ ಮತ್ತು ಸರ್ವೇಶ್ವರನನ್ನು ಹೊಂದುವ ಸಾಧನಾನುಷ್ಠಾನಕ್ಕಾಗಿಯೂ ಏರ್ಪಟ್ಟ ದೇಹೇಂದ್ರಿಯಗಳೊಂದಿಗೆ ಸಂಬಂಧವೂ, ಇವುಗಳ ಮೂಲಕ ಹೊರಗಿನ ಭೋಗ್ಯವಸ್ತುಗಳ ಸಂಬಂಧವೂ ಕೂಡ, ಉಂಟಾಗುತ್ತದೆ. ಅದರಿಂದುಂಟಾಗುವ ಫಲವೇನೆಂಬುವನ್ನು ತಿಳಿಸುತ್ತಾರೆ. **ಅನಾದಿಕಾಲ ಪ್ರವೃತ್ತ ದುಷ್ಕೃತ ಪ್ರವಾಹ ಹೇತುಕ್ಯೈಃ** ಅನಾದಿಕಾಲದಿಂದಲೂ ಆಚರಿಸಿದ ದುಷ್ಕೃತ ಪ್ರವಾಹಗಳೇ ಕಾರಣವಾಗಿ ವುಳ್ಳ ಇಂತಹ ಪ್ರಕೃತಿ ಸಂಬಂಧದಿಂದ, **ತಸ್ಯತಿರೋಧಾನಮ್**-ಆ ಪರಮಾತ್ಮನ ಪರತತ್ವವನ್ನು ತಿಳಿಯುವ ಜ್ಞಾನದ ಪ್ರಕಾಶಶೂನ್ಯತೆಯು, ಇದು ೧೩ನೇ ಶ್ಲೋಕದ ಉತ್ತರಾರ್ಧ ೧೪ನೆಯ ಪೂರ್ವಾರ್ಧಗಳಲ್ಲಿ ಉಪಪಾದಿತವು. ಎಲ್ಲಿಯವರಿಗೆ ಈ ತ್ರಿಗುಣಾತ್ಮಕವಾದ ಪ್ರಕೃತಿ ಸಂಸರ್ಗವು, ತನ್ಮೂಲಕ ಉಂಟಾಗುವ ಕರ್ಮವಾಸನೆಯೂ, ತದನುಗುಣ ಸುಖ ದುಃಖಾನುಭವಗಳಿಗಾಗಿ, ಜನನಮರಣಾದಿಗಳಿವೆಯೋ, ಅಲ್ಲಿವರೆಗೆ ಈತನ ಜ್ಞಾನವು ಪ್ರಕಾಶಿಸುವದಿಲ್ಲವು. ಇದು **"ನಾಹಂ ಪ್ರಕಾಶಸ್ಸರ್ವಸ್ಯ"** (೨೫) ಎಂಬಲ್ಲಿ ವ್ಯಕ್ತವು. ಇವನು ಸುಕೃತವಿಶೇಷದಿಂದ ಉಪಾ ಯಾನುಷ್ಠಾನಮಾಡಿ, ಅದರಿಂದ ಸರ್ವೇಶ್ವರನು ಸುಪ್ರೀತನಾದರೆ, ಆಗ ದೇಹಾವಸಾನಾನಂತರ ಅರ್ಚಿರಾದಿಗತಿಯು ಲಭಿಸಿ ವಿರಜಾನದಿಯಲ್ಲಿ ಅವಗಾಹನವಾದರೆ, ಆಗ ಪ್ರಕೃತಿ ಸಂಬಂಧವು ತೊಲಗಿ, **ಪರಂಜ್ಯೋತಿ ರುಪಸಂಪದ್ಯ ಸ್ವೇನರೂಪೇಣಾ ಭಿನಿಷ್ಪದ್ಯತೇ,** ಆಗ ಆತನ ಧರ್ಮ ಭೂತಜ್ಞಾನವು ಅದರ ನೈಜಪ್ರಕಾಶದಿಂದ ಕಂಗೊಳಿಸುತ್ತದೆ. ಗುಣಾಷ್ಟಕಗಳಾವಿರ್ಭಾವವು ಉಂಟಾಗುತ್ತದೆ. ಇದನ್ನೇ ಸೂತ್ರವು **"ಸಂಪದ್ಯಾವಿರ್ಭಾವ ಸ್ವೇನಶಬ್ದಾತ್"** ಎಂಬುದರಿಂದ ತಿಳಿಸುತ್ತದೆ. ಇದು ಉಂಟಾಗುವವರೆಗೂ **ತಿರೋಧಾನವೇ.**

೯. **ಅತ್ಯುತ್ಕೃಷ್ಟಸುಕೃತಹೇತುಕ ಭಗವತ್ಪ್ರಪತ್ತ್ಯಾ ಚ ತನ್ನಿವರ್ತನಂ - ಮಮ ಮಾಯಾ ದುರತ್ಯಯಾ** ಎಂಬುದರಿಂದ ಕಷ್ಟಸಾಧ್ಯವಾದ ಅಂತಹ ತಿರೋಧಾನವನ್ನು ಕೂಡ ಕಳೆದುಕೊಳ್ಳುವದು ಸಾಧ್ಯವೆಂದು, ನಿರತಿಶಯವಾದ ಉತ್ಕೃಷ್ಟವಾದ ಸುಕೃತವಾದ ಮೋಕ್ಷ ಪ್ರಾಪ್ತಿಗೆ ಕಾರಣವಾದ ಭಗವಂತನಲ್ಲಿ ಮಾಡುವ ಪ್ರಪದನದಿಂದ ಉಪಾಯಸಿದ್ಧಿಯುಂಟಾಗಿ ಜ್ಞಾನತಿರೋಧಾನದ ನಿವರ್ತನವು, ಎಂದರೆ ತನ್ನ ನೈಜವಾದ ಸ್ವರೂಪಾವಿರ್ಭಾವವು ಎಂದು ಹೇಳಲ್ಪಟ್ಟಿತು. **"ಮಾಯಾ ಮೇತಾಂ ತರನ್ತಿತೇ"** (ಗೀ. ೭.೧೪) ಎಂಬಲ್ಲಿ ಈ ಅಭಿಪ್ರಾಯವು ಬೋಧಿತವು. ಇದನ್ನು ಹೊಂದಬೇಕಾದರೆ ಭಕ್ತಿಯೋಗನಿಷ್ಠನು ಅಂಗಶರಣಾಗತಿಯನ್ನನುಷ್ಠಿಸಿ, ಉಪಾಸನ ನಿಷ್ಪತ್ತಿಗೆ ಪ್ರತಿಬಂಧಕಗಳಾದ ಪಾಪಗಳನ್ನು ಕಳೆದುಕೊಂಡು, ಭಗವತ್ಸಾಕ್ಷಾತ್ಕಾರ ಉಂಟಾಗಿ ಅರ್ಚಿರಾದಿಗತಿಯ ಮೂಲಕ ಲಭಿಸತಕ್ಕದ್ದಾಗಿರುತ್ತದೆ. ಇದು ೧೪ನೆಯ ಉತ್ತ ರಾರ್ಧದಿಂದ ಬೋಧಿತವು. ಇದರಿಂದ ಹೀಗೆ ಮಾಡದವನು ದುಷ್ಕೃತಿಯು ಎಂದು **"ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ"** ಎಂದು ಹೇಳಿರುವದನ್ನು ಊಹಿಸಬಹುದು.

೧೦. **ಸುಕೃತತಾರತಮ್ಯೇನ ಚ ಪ್ರತಿಪತ್ತಿವೈಶೇಷ್ಯಾದೈಶ್ವರ್ಯಾಕ್ಷರ ಯಾಥಾತ್ಮ್ಯ ಭಗವತ್ಪ್ರಾಪ್ತ್ಯಪೇಕ್ಷಯೋಪಾಸಕ ಭೇದಂ** - ಸುಕೃತ ತಾರತಮ್ಯದಿಂದಲಾದರೋ ಆ ಪ್ರಪ ದನದ ಫಲಕಾಮನೆಯ ವ್ಯತ್ಯಾಸದಿಂದ ಐಶ್ವರ್ಯವೇನು (ಇದರಿಂದ ಅರ್ಥಾರ್ಥೀ ಆರ್ತನು,

**ಭಾ. ನಿತ್ಯಯುಕ್ತತಯೈಕಭಕ್ತಿತಯಾಚಾತ್ಯರ್ಥಪರಮಪುರುಷಪ್ರಿಯತ್ವೇನ ಶ್ರೈಷ್ಠ್ಯಂ, ದುರ್ಲಭತ್ವಂಚ ಪ್ರತಿಪಾದ್ಯ ಏಷಾಂ ತ್ರಯಾಣಾಂ ಜ್ಞಾತವ್ಯೋಪಾದೇಯ ಭೇದಾಂಶ್ಚ ಪ್ರಾಸ್ತೌಷೀತ್.**

**ಇದಾನೀ ಮಷ್ಟಮೇ ಪ್ರಸ್ತುತಾನ್ ಜ್ಞಾನವ್ಯೋಪಾದೇಯಭೇದಾನ್ ವಿವಿನಕ್ತಿ.**

---

ಇಬ್ಬರ ಅಪೇಕ್ಷೆಯು) ಅಕ್ಷರ ಯಾಥಾತ್ಮ್ಯ ಎಂದರೆ ಜೀವಾತ್ಮಸ್ವರೂಪದ ಯಾಥಾತ್ಮ್ಯವೇನು (ಇದರಿಂದ ಜಿಜ್ಞಾಸುವಿನ ಅಪೇಕ್ಷೆಯು) ಮತ್ತು ಭಗವತ್ಪ್ರಾಪ್ತಿಯೇನು. (ಇದರಿಂದ ಜ್ಞಾನಿಯ ಅಪೇಕ್ಷೆಯು ಹೇಳಲ್ಪಟ್ಟಿವು) ಇವುಗಳ ಅಪೇಕ್ಷೆಯಿಂದ ಉಪಾಸಕರ ನಾಲ್ಕುವಿಧ ಭೇದವೂ. ಇದು ೧೬ನೆಯ ಶ್ಲೋಕಾರ್ಥವು.

೧೧. **ಭಗವನ್ತಂ ಪ್ರೇಪ್ಸೋಃ** ಇತ್ಯಾದಿ-ಭಗವತ್ಪ್ರಾಪ್ತಿಯನ್ನಪೇಕ್ಷಿಸುವ ಜ್ಞಾನಿಯು, ಸದಾ ನನ್ನಲ್ಲೇ ಸಕ್ತನಾದ ಮನಸ್ಸುಳ್ಳವನಾಗಿಯೂ ಮತ್ತು ಅನ್ಯದೇವತೆಗಳನ್ನು ಭಜಿಸದೇ ನನ್ನೊಬ್ಬನಲ್ಲೇ ಭಕ್ತಿಯುಳ್ಳವನಾಗಿರುವದರಿಂದ ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ಪರಮ ಪುರುಷನಿಗೆ ಪ್ರಿಯನಾಗುವದರಿಂದ, ಅಂತಹ ಜ್ಞಾನಿಯ ಶ್ರೈಷ್ಠ್ಯವೂ; ಅಂತಹ ಜ್ಞಾನಿಯು ದೊರೆಯುವದು ತುಂಬಾ ದುರ್ಲಭವೆಂದೂ ಪ್ರತಿಪಾದಿಸಿ, ಜ್ಞಾನಿಯ ಶ್ರೈಷ್ಠ್ಯವು ೧೭.೧೮ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತದೆ. ಆತನು ಸುದುರ್ಲಭನೆಂದು ೧೯ನೆಯ ಶ್ಲೋಕದಲ್ಲಿ ಉಪಪಾದಿಸಿ, ಅದನ್ನೇ ಸಮರ್ಥಿಸುವದಕ್ಕಾಗಿ ತನ್ನನ್ನು ಬಿಟ್ಟು ಅನ್ಯ ದೇವತೋಪಾಸಕನನ್ನು ೨೦ ರಿಂದ ೨೫ ಶ್ಲೋಕಗಳವರೆಗೂ ನಿಂದಿಸಿ, ಹಾಗೆ ಅವರು ತನ್ನನ್ನು ಆರಾಧಿಸದೇ ಇರುವದಕ್ಕೂ, ತನ್ನ ಉಪಾಸಕರು ತನ್ನನ್ನು ಭಜಿಸುವದಕ್ಕೂ ಕಾರಣಗಳನ್ನು ಮುಂದಿನ ನಾಲ್ಕು ಶ್ಲೋಕಗಳಲ್ಲಿ ಉಪದೇಶಿಸುತ್ತಾರೆ. ಆದುದರಿಂದ ದುರ್ಲಭತ್ವವು, **"ಬಹೂನಾಂ ಜನ್ಮನಾಂ"** ಎಂದಾರಂಭಿಸಿ **"ಸರ್ಗೇಯಾನ್ತಿ ಪರಂತಪ"** ಎಂಬುವವರೆಗೂ ಉಪಪಾದಿತವು.

೧೨. **ಏಷಾಂ ತ್ರಯಾಣಾಂ ಜ್ಞಾತವ್ಯೋಪಾದೇಯಭೇದಾಂಶ್ಚ ಪ್ರಸ್ತೌಷೀತ್**- ಈ ಚತುರ್ವಿಧೋಪಾಸಕರನ್ನು ಆರ್ತನೂ ಐಶ್ವರ್ಯಾರ್ಥಿ ಇಬ್ಬರೂ ಐಶ್ವರ್ಯಾರ್ಥಿಗಳಾದುದರಿಂದ ಮೂರಾಗಿ ವಿಭಾಗಿಸಿಕೊಂಡು ಹೇಳುತ್ತಾರೆ. **ಏಷಾಂ ತ್ರಯಾಣಾಂ** - ಈ ಐಶ್ವರ್ಯಾರ್ಥಿ ಕೈವಲ್ಯಾರ್ಥಿ, ಮೋಕ್ಷಾರ್ಥಿಗಳಿಗೂ, ತಿಳಿಯತಕ್ಕದ್ದೇನು ಅನುಷ್ಠಿಸತಕ್ಕದ್ದೇನು ಎಂಬುದರಲ್ಲಿ ತೋರಿಬರುವ ಭೇದಗಳನ್ನು ಸಙ್ಗ್ರಹವಾಗಿ ಪ್ರಸ್ತಾವನೆ ರೂಪದಲ್ಲಿ ಇಲ್ಲಿ ಸೂಚಿಸಿ ಮುಂದಿನ ಅಧ್ಯಾಯದಲ್ಲಿ ಅವು ವಿಸ್ತಾರವಾಗಿ ಹೇಳಲ್ಪಡುವುವೆಂಬುದನ್ನು ತಿಳಿಸಿರುತ್ತಾರೆ. ಇದು ಕೊನೆಯ ಎರಡು ಶ್ಲೋಕಗಳ ತಾತ್ಪರ್ಯವು. ಹೀಗೆ ಸಙ್ಗ್ರಹವಾಗಿ ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟಿರುದನ್ನು ಅನುವಾದಮಾಡಿ ಮುಂದೆ ಈ ೮ನೆಯ ಅಧ್ಯಾಯದಲ್ಲಿ ಹೇಳಲ್ಪಡುವದನ್ನೂ ಸಙ್ಗ್ರಹವಾಗಿ ತಿಳಿಸುತ್ತಾರೆ.—

**ಇದಾನೀಂ**-ಈಗಲಾದರೋ, **ಅಷ್ಟಮೇ**-ಈ ೮ನೆಯ ಅಧ್ಯಾಯದಲ್ಲಿ **ಪ್ರಸ್ತುತಾನ್**-ಈ ಹೇಳಬೇಕಾಗಿ ಆರಂಭಿಸಿದ, ಜ್ಞಾತವ್ಯಗಳೇನು ಉಪಾದೇಯಗಳೇನು ಇವುಗಳ ಭೇದಗಳನ್ನು, **ವಿವಿನಕ್ತಿ**-ವಿವೇಚನೆಮಾಡಿ ಹೇಳುತ್ತಾರೆ, ಎಂದರೆ ಈ ಉಪಾಸಕರು ಏನನ್ನು ತಿಳಿದು ಹೇಗೆ ಉಪಾಸನೆಯನ್ನು ಮಾಡತಕ್ಕದ್ದೆಂಬುದೂ, ಅವುಗಳಿರುವ ವ್ಯತ್ಯಾಸಗಳೂ ಹೇಳಲ್ಪಡುವುವು ಎಂಬ ತಾತ್ಪರ್ಯವು.

**ಮೂಲಕ್ಕೆ ಅರ್ಥವು:—ಈ** ನಾಲ್ಕು ವಿಧ **ಭಕ್ತರುಗಳ ವಿಷಯದಲ್ಲಿ ಇನ್ನೂ ಕೆಲವು** ವಿಷಯಗಳನ್ನು ತಿಳಿಸಬೇಕೆಂಬ ಕುತೂಹಲದಿಂದಲೇ ಈ ನಾಲ್ಕು ಜನ ಉಪಾಸಕರೂ ತೀವು

**ಅರ್ಜುನ ಉವಾಚ—**

**ಮೂ. ಕಿಂತದ್ಬ್ರಹ್ಮ ? ಕಿಮಧ್ಯಾತ್ಮಂ ? ಕಿಂಕರ್ಮ ಪುರುಷೋತ್ತಮ ? ।**
**ಅಧಿಭೂತಂ ಚ ಕಿಂಪ್ರೋಕ್ತಂ ? ಅಧಿದೈವಂ ಕಿಮುಚ್ಯತೇ ? ॥** ೧.
**ಅಧಿಯಜ್ಞಃ ಕಥಂ ಕೋತ್ರ ದೇಹೇ ಸ್ಮಿನ್ ಮಧುಸೂಧನ ? ॥**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಸಿ ನಿಯತಾತ್ಮಭಿಃ ॥** ೨.

ಉಪಾಸನ ಕ್ರಮವನ್ನು ಹೇಗೆ ಮಾಡತಕ್ಕದ್ದೆಂಬುದನ್ನು ತಿಳಿಸುವದಕ್ಕಾಗಿ ಇವುಗಳನ್ನು ಒಳಗೊಂಡಿರುವ, ಉಪನಿಷತ್ಪ್ರತಿಪಾದ್ಯಗಳಾದ ಕೆಲವು ಪ್ರಯೋಗಗಳನ್ನು ಹಿಂದಿನ ಅಧ್ಯಾಯಾಂತ್ಯದ ಎರಡು ಶ್ಲೋಕಗಳಲ್ಲಿ ಪ್ರಸ್ತಾವಿಸಿ ಹೇಳಿದರು. ಅವುಗಳು ಯಾವುವು ಎಂದು ಅರ್ಜುನನು ಪ್ರಶ್ನಿಸುತ್ತಾನೆ. ಏನೂ ತಿಳಿಯದ ಅಜ್ಞನಾಗಿ ಪ್ರಶ್ನಿಸುವದಿಲ್ಲವು. ಈ ನಾಲ್ವರ ವಿಷಯವಾಗಿ ಒಂದೆಯೇ ಸ್ವಲ್ಪಮಟ್ಟಿಗೆ ಹೇಳಲ್ಪಟ್ಟರೂ, ಪುನಃ ವಿಸ್ತರವಾಗಿ ಅವುಗಳ ವಿಷಯದಲ್ಲಿ ಜ್ಞಾತವ್ಯಾಂಶಗಳು ಯಾವುವು, ಉಪಾದೇಯಾಂಶಗಳು ಯಾವುವು ಎಂಬಭಿಪ್ರಾಯದಿಂದಲೇ ಆತನು ಪ್ರಶ್ನಿಸುತ್ತಾನೆ—(೧) **ಕಿಂತದ್ಬ್ರಹ್ಮ**-ಜಿಜ್ಞಾಸುವು ತಿಳಿಯತಕ್ಕದ್ದಾಗಿ ತದ್ಬ್ರಹ್ಮವೆಂದು ಹೇಳಿದರಲ್ಲಾ, ಅದು ಯಾವುದು ? ಬ್ರಹ್ಮಶಬ್ದದಿಂದ ಪರಮಾತ್ಮನೆಂಬರ್ಥವೆಂಬ ಶಂಕೆ ಅರ್ಜುನನಿಗೆ ಈಷದಪಿ ಇಲ್ಲವು. ಪರಬ್ರಹ್ಮ ಸ್ವರೂಪವೂ ಆತನ ಯಥಾರ್ಥ ಜ್ಞಾನವೂ ಅಷ್ಟು ಸ್ವಾರಸ್ಯವಾಗಿ ಹಿಂದಿನ ಅಧ್ಯಾಯದಲ್ಲಿ ಉಪದೇಶಿಸಲ್ಪಟ್ಟು **"ಯದ್ಜ್ಞಾತ್ವಾ ನೇಹ ಭೂಯೋಽನ್ಯದ್ಜ್ಞಾತವ್ಯ ಮವಶಿಷ್ಯತೇ"** (ಗೀ. ೭.೩) ಎಂದು ತಿಳಿದನಂತರ ಪುನಃ ತಿಳಿಯತಕ್ಕದ್ದು ಇನ್ನೇನೂ ಇಲ್ಲವೆಂದು ಹೇಳಿದ ನಂತರವೂ, ಕಿಂ ತದ್ಬ್ರಹ್ಮ ಎಂದು ಪರಮಾತ್ಮನನ್ನುದ್ದೇಶಿಸಿಯೇ ಕೇಳಿದರೆ ಅರ್ಜುನನು ಏನನ್ನೂ ಗ್ರಹಿಸಲಿಲ್ಲವು, ಅಜ್ಞನೆಂದು ಹೇಳಿದಂತಾಗುತ್ತದೆ. ಬ್ರಹ್ಮಶಬ್ದಕ್ಕೆ ನಾಲ್ಕು ಅರ್ಥಗಳುಂಟೆಂದು ೪. ೨೪ರಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಈ ಭಗವದ್ಗೀತೆಯಲ್ಲೇ ಬ್ರಹ್ಮಶಬ್ದವು ಈ ನಾಲ್ಕು ಅರ್ಥದಲ್ಲೂ ಉಪಯೋಗಿಸಲ್ಪಟ್ಟಿರುತ್ತದೆ. ಈ ೨೪ನೆಯ ಶ್ಲೋಕದಲ್ಲೂ ಬ್ರಹ್ಮಶಬ್ದಕ್ಕೆ ಪರಬ್ರಹ್ಮವೆಂದೇ ಹೇಳಲ್ಪಟ್ಟಿತು. ೪. ೩೦ ಮತ್ತು ೩೨ರಲ್ಲಿ **ಬ್ರಹ್ಮ** ಶಬ್ದವು ಜೀವಾತ್ಮನನ್ನು ಬೋಧಿಸುತ್ತದೆ. **ಮಮ ಯೋನಿರ್ಮಹದ್ಬ್ರಹ್ಮ** (ಗೀ. ೧೪.೩) ಎಂಬಲ್ಲಿ **ಬ್ರಹ್ಮ** ಶಬ್ದವು ಪ್ರಕೃತಿಯನ್ನು ಹೇಳುತ್ತದೆ. ಬ್ರಹ್ಮಶಬ್ದಕ್ಕೆ ವೇದವೆಂಬುದೂ ಅರ್ಥವು **"ಓ ಮಿತ್ಯೇಕಾರಂ ಬ್ರಹ್ಮ"** ಎಂಬಲ್ಲಿ ಇಲ್ಲಿ ಜಿಜ್ಞಾಸುವು ಮುಖ್ಯವಾಗಿ ತಿಳಿಯತಕ್ಕದ್ದು ಜೀವಾತ್ಮ ವಿಷಯವೆಂದು ಹಿಂದೆ ಕರ್ಮಯೋಗ ಪ್ರಶಂಸೆಯಲ್ಲಿ ತೋರಿಬಂದಿರುವದರಿಂದ, ಅದೇ ವಿಷಯದಲ್ಲೇ ಈ ಜಿಜ್ಞಾಸುವಿಗೆ ಜ್ಞಾತವ್ಯಾಂಶವು, ಇನ್ನೂ ಹೆಚ್ಚಾದುದು ಏನು ? ಎಂದೇ **ಕಿಂ ತದ್ಬ್ರಹ್ಮ**ವೆಂಬ ಅರ್ಜುನನ ಪ್ರಶ್ನೆಯೆಂದು ತಿಳಿಯತಕ್ಕದ್ದು. **ಕಿಂ ತದ್ಬ್ರಹ್ಮ** ಎಂಬಲ್ಲಿ ಆ ಬ್ರಹ್ಮ ಯಾವದು ? ಎಂದು ತತ್ ಎಂಬ ಶಬ್ದದೊಂದಿಗೆ ಹೇಳಿರುವದರಿಂದ ೭ನೆಯ ಅಧ್ಯಾಯದ ಪೂರ್ವಭಾಗದಲ್ಲಿ ಚನ್ನಾಗಿ ಉಪದೇಶಿಸಲ್ಪಟ್ಟ ಬ್ರಹ್ಮ ವಿಷಯವನ್ನು ವ್ಯಾವರ್ತಿಸಿ ಹೇಳಲ್ಪಟ್ಟಿತೆಂಬುದನ್ನು ತಚ್ಛಬ್ದವು ಬೋಧಿಸುತ್ತದೆ. (೨) ಹೇ ಪುರುಷೋತ್ತಮನಾದ ಶ್ರೀಕೃಷ್ಣನೇ, **ಕಿಮಧ್ಯಾತ್ಮಂ** - ಆತನಿಗೆ ಜ್ಞಾತವ್ಯಾಂಶವಾದ **ಅಧ್ಯಾತ್ಮವೆಂದರೇನು ?** ಇಲ್ಲಿ ಆತ್ಮ ಶಬ್ದವು ಶರೀರವನ್ನು ಬೋಧಿಸುತ್ತದೆ. ಆದುದರಿಂದ ಅಧ್ಯಾತ್ಮವೆಂದರೆ ಶರೀರದಲ್ಲಿರುವ ಕ್ಷೇತ್ರಜ್ಞ ವಿಷಯವು ಹೇಳಲ್ಪಟ್ಟಿತು. (೩) **ಕಿಂಕರ್ಮ ?** ಆತನು ತಿಳಿಯಬೇಕಾದ ಕರ್ಮವಿಶೇಷ ಯಾವುದು ? ಇಲ್ಲಿ ಕರ್ಮಶಬ್ದಕ್ಕೆ ಭಗವಂತನು ಆರಾಧಿಸಲ್ಪಡುವ ಯಜ್ಞಯಾಗಾದಿ ಕರ್ಮವೆಂಬರ್ಥವಲ್ಲವು ; ನಿತ್ಯನೈಮಿತ್ತಿಕ ಕರ್ಮವೂ ಅಲ್ಲವು. ಕರ್ಮಯೋಗ ಪ್ರಶಂಸೆಯಲ್ಲಿ ಇವುಗಳೆಲ್ಲಾ ವಿಸ್ತರಿಸಿ ಉಪದೇಶಿಸಲ್ಪಟ್ಟವು. ಅದರ ವಿಷಯದಲ್ಲೇ ಪುನಃ

ಪ್ರಶ್ನಿಸಿದರೆ ಅರ್ಜುನನು ಅಜ್ಞನೆಂದು ಹೇಳಬೇಕಾಗುತ್ತದೆ. ಇದು ವಿಜಾತೀಯವಾಗಿ ಪಂಚಾಗ್ನಿ ವಿದ್ಯೆಗೆ ಸಂಬಂಧಿಸಿದುದಾದುದರಿಂದಲೇ ಪ್ರಶ್ನೆಯು (೪) **ಅಧಿ ಭೂತಂ ಚ ಕಿಂ ಪ್ರೋಕ್ತಂ**- ಅಧಿಭೂತ ಶಬ್ದದಿಂದ ಯಾವುದು ಹೇಳಲ್ಪಟ್ಟಿತು ? ಇದು ಐಶ್ವರ್ಯಾರ್ಥಿಗೆ ಬೇಕಾದ ವಿಷಯವು. (೫) **ಅಧಿದೈವಂ ಕಿಮುಚ್ಯತೇ** - ಅಧಿದೈವದಿಂದ ಯಾವುದು ಹೇಳಲ್ಪಡುತ್ತದೆ ? (೬) **ಹೇ ಮಧುಸೂದನನೇ, ಅತ್ರ** - ಈ ಸಂದರ್ಭದಲ್ಲಿ, **ಅಸ್ಮಿನ್ ದೇಹೇ** - ಈ ನಿನ್ನ ದೇಹವಾಗಿರುವ ಅಧಿಕಾರಿಯಲ್ಲಿ, **ಅಧಿಯಜ್ಞಃ ಕಃ**-ಅಧಿಯಜ್ಞನು ಯಾರು ? **ಅತ್ರ**-ಈ ಸಂದರ್ಭದಲ್ಲಿ **ಅಸ್ಮಿನ್ ದೇಹೇ** ಯಜ್ಞಗಳಿಂದ ಆರಾಧಿಸಲ್ಪಟ್ಟ ಇಂತಹ ದೇವತೆಯನ್ನೇ ಶರೀರವಾಗಿ ಉಳ್ಳವನಲ್ಲಿ **ಕಥಂ**-ಈ ಅಧಿಯಜ್ಞಭಾವವು ಆತನಿಗೆ ಹೇಗೆ ? ಯಜ್ಞಗಳಿಂದ ಬ್ರಹ್ಮರುದ್ರೇಂದ್ರಾದಿಗಳು ಆರಾಧಿಸಲ್ಪಟ್ಟರೆ, ಪರಮಾತ್ಮನು ಆರಾಧಿಸಲ್ಪಡುವದು ಹೇಗೆ ? ಎಂಬ ಭಾವವು. ಇದು ಮೂರು ವಿಧ ಎಲ್ಲಾ ಭಕ್ತರಿಗೂ ಬೇಕಾದ ವಿಷಯವು. (೭) **ನಿಯತಾತ್ಮಭಿಃ** - ನಿಯಮಿಸಲ್ಪಟ್ಟ ಮನಸ್ಸುಳ್ಳ ಈ ನಾಲ್ಕು ವಿಧ ಭಕ್ತರುಗಳಿಂದಲೂ, **ಪ್ರಯಾಣಕಾಲೇಚ** - ದೇಹವಿಯೋಗ ಕಾಲದಲ್ಲಿಯಾದರೋ, **ಕಥಂ ಜ್ಞೇಯೋಽಸಿ**-ನೀನು ಹೇಗೆ ತಿಳಿಯಲ್ಪಡುವಿ ? ಇಲ್ಲಿ **ದೇಹೇಽಸ್ಮಿನ್** ಎಂಬುದನ್ನು ಮುಂದೆ ಭಗವಂತನ ಉತ್ತರದಲ್ಲಿ ಅಧಿಯಜ್ಞದೊಂದಿಗೇನೇ ಅನ್ವಯಿಸಿದ್ದರೂ, **ಪ್ರಯಾಣ ಕಾಲೇಚ ಕಥಂ ಜ್ಞೇಯೋಽಸಿ** ಎಂಬುದರೊಂದಿಗೆ ಕೆಲವರು ಅನ್ವಯಿಸಿರುತ್ತಾರೆ. ಹೀಗೆ ಪೂರ್ವಾಪರ ವಿರೋಧಗಳನ್ನು ಪರಿಗಣಿಸದೇನೇ ಅರ್ಥ ಮಾಡುತ್ತಾರೆ. ಈ ಶ್ಲೋಕದಲ್ಲಿ **ನಿಯತಾತ್ಮಭಿಃ** ಎಂಬ ಪ್ರಯೋಗದಿಂದ ನಾಲ್ಕು ಜನ ಭಕ್ತರುಗಳು ಹೇಳಲ್ಪಟ್ಟರೇ ಅಥವಾ ಜ್ಞಾನಿ ಮಾತ್ರವೇ ಹೇಳಲ್ಪಟ್ಟನೇ ಎಂಬ ಸಂದೇಹವು ನ್ಯಾಯವಾಗಿ ಪ್ರಾಪ್ತವಾಗುತ್ತದೆ. ನಾಲ್ಕು ಜನರೂ ಕರ್ಮಯೋಗನಿಷ್ಠರಾಗಿ ಈಗ ಭಕ್ತಿಯೋಗಕ್ಕೆ ಬಂದಿರುತ್ತಾರೆ. ಆದುದರಿಂದ ಅವರುಗಳೆಲ್ಲಾ ಇಂದ್ರಿಯ ನಿಗ್ರಹವನ್ನು ಮಾಡಿದವರಾಗಿ **ನಿಯತಾತ್ಮರೇ** ಎಂದು ಸಮಾಧಾನ ಹೇಳಬಹುದು. ಆದರೆ ಐಶ್ವರ್ಯಾರ್ಥಿಗಳಾಗಿ ಕಾಮ್ಯ ಫಲಾಪೇಕ್ಷೆಯುಳ್ಳವರು ಹೇಗೆ ನಿಯತಾತ್ಮರಾದಾರು? ಐಶ್ವರ್ಯ ಕಾಮನೆಯನ್ನು ತೊರದರಲ್ಲವೇ ನಿಯತಾತ್ಮರು. ಆದುದರಿಂದ ಅರ್ಜುನನಿಗೆ ಮುಖ್ಯವಾಗಿ ಜ್ಞಾನಿಗೆ ಅಂತಿಮ ಸ್ಮೃತಿ ಎಂಥಾದ್ದೆಂದೂ, ಇತರ ಐಶ್ವರ್ಯಾರ್ಥಿಗಳ ವಿಷಯವು ಆತನಿಗೆ ಬೇಕಿಲ್ಲವಾದುದರಿಂದ ಅಂತವರನ್ನು ವ್ಯಾವರ್ತಿಸಿ ಹೇಳುವದಕ್ಕಾಗಿಯೇ ನಿಯತಾತ್ಮಭಿಃ ಎಂಬ ಪ್ರಯೋಗವೆಂದೂ ಕೆಲವರು ಭಾವಿಸುವರು. ಅರ್ಜುನನ ಆಶಯವು ಜ್ಞಾನಿಗೆ ಮಾತ್ರ ಹೇಗೆ ಅಂತಿಮ ಪ್ರತ್ಯಯವೆಂಬುದನ್ನು ತಿಳಿಯಬೇಕು ಎಂದೂ ಭಾವಿಸುವರು. ಇಹಲೋಕೈಶ್ವರ್ಯ ಕಾಮಿಯಾದ ಆರ್ತನೂ, ಉಪಾಸನ ಮೂಲಕ ಫಲವನ್ನು ಇಲ್ಲಿಯೇ ದೇಹಾವಸಾನ ಪೂರ್ವಭಾವಿಯಾಗಿಯೇ ಹೊಂದಬಹುದು. ಅಂತವನಿಗೆ ಅಂತಿಮ ಪ್ರತ್ಯಯ ವಿಷಯವಾಗಿ ಪ್ರಶ್ನೆ ಇರುವದಿಲ್ಲವು. ಹಾಗೆ ಫಲಪ್ರಾಪ್ತಿಯನ್ನು ಹೊಂದದೇ ಅಂತಿಮ ಸ್ಮೃತಿ ಇರುವವನು ಏನನ್ನು ಸ್ಮರಿಸುವನು ಎಂದು ಅರ್ಜುನನು ಕೇಳಲಿಲ್ಲವೆಂದೂ ಭಾವಿಸುವರು. ಇದಕ್ಕೆ ಸಮಾಧಾನವೂ ಮುಂದೆ **ಅನ್ತ ಕಾಲೇ ಚ** ಎಂಬುದರಿಂದ ಅರ್ಜುನ ಪ್ರಶ್ನೆಗೆ ಉತ್ತರ ಹೇಳಿ ಅದರ ಸಮರ್ಥನೆಗಾಗಿಯೇ ಹಾಗೆ ಸರ್ವೇಶ್ವರನನ್ನು " **ಏಕಭಕ್ತಿ** "ಯುಳ್ಳವನಾಗಿ ಸ್ಮರಿಸದೆ, ಫಲವನ್ನೂ ಸ್ಮರಿಸುತ್ತಿದ್ದರೆ, ಅಂತಹ ಕಾಮ್ಯವನ್ನಪೇಕ್ಷಿಸುವ ಭಕ್ತನಿಗೆ ಆವೃತ್ತಿಯುಂಟೆಂದು ಮುಂದಿನ ಶ್ಲೋಕವಾದ " **ಯಂ ಯಂ ವಾಪಿ ಸ್ಮರನ್ ಭಾವಂ** " ಎಂಬುದರಿಂದ ತಿಳಿಸುವದರಿಂದಲೂ, ಮುಂದೆ ಅರ್ಚಿರಾದಿ ಮಾರ್ಗ ಧೂಮಾದಿಮಾರ್ಗವೆರಡೂ ಹೇಳಲ್ಪಡುವದರಿಂದಲೂ, ಮೂರು ವಿಧ ಉಪಾಸಕರಿಗೂ ಅನ್ವಯಿಸತಕ್ಕದ್ದೆಂಬುದು ವ್ಯಕ್ತವು. ಇದೇ ಸರಿಯಾದ ಅಭಿಪ್ರಾಯವೆಂದೇ ಶ್ರೀ ಯತಿವರ್ಯರು ಭಾಷ್ಯವನ್ನು ಬರೆದಿರುತ್ತಾರೆ ॥ ೧, ೨ ॥

**ಭಾ. ಜರಾ ಮರಣಮೋಕ್ಷಾಯ ಭಗವನ್ತ ಮಾಶ್ರಿತ್ಯ ಯತಮಾನಾನಾಂ ಜ್ಞಾತವ್ಯ ತಯೋಕ್ತಂ ತದ್ಬ್ರಹ್ಮಾಧ್ಯಾತ್ಮಂಚ ಕರ್ಮ ಚ ಕಿಮಿತಿ ವಕ್ತವ್ಯಮ್ ? ಐಶ್ವರ್ಯಾರ್ಥಿ ನಾಂ ಜ್ಞಾತವ್ಯ ಮಧಿಭೂತ ಮಧಿ ದೈವಂ ಚ ಕಿಮ್ ? ತ್ರಯಾಣಾಂ ಜ್ಞಾತ ವ್ಯೋಽಧಿಯಜ್ಞ ಶಬ್ದ ನಿರ್ದಿಷ್ಟಶ್ಚ ಕಃ ? ತಸ್ಯ ಚಾ ಧಿಯಜ್ಞಭಾವಃ ಕಥಂ ? ಪ್ರಯಾಣ ಕಾಲೇ ಚೈಭಿ ಸ್ತ್ರಿಭಿ ರ್ನಿಯತಾತ್ಮಭಿಃ ಕಥಂ ಜ್ಞೇಯೋಽಸಿ ||೧, ೨||**

**ಭಾಷ್ಯಾರ್ಥವು:—** ಅರ್ಜುನನು ಯಾವ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟು ಪ್ರಶ್ನಿಸು ತ್ತಾನೆಂಬುದನ್ನು ವ್ಯಕ್ತಪಡಿಸುತ್ತಾರೆ:— **ಜರಾಮರಣ ಮೋಕ್ಷಾಯ**-ವೃದ್ಧಾಪ್ಯ ಮರಣ ಮೊದಲಾದವುಗಳಿಂದ ತಪ್ಪಿಸಿಕೊಳ್ಳುವದಕ್ಕಾಗಿ, **ಯತಮಾನಾನಾಂ** - ಪ್ರಯತ್ನ ಪಡುವ ಜಿಜ್ಞಾಸುಗಳಿಗೆ, **ಜ್ಞಾತವ್ಯತಯಾ**-ತಿಳಿಯತಕ್ಕದ್ದೆಂಬದಾಗಿ, **ಉಕ್ತಂ**-ಹಿಂದೆ ೭ನೇ ಅಧ್ಯಾಯ ೨೯ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ, **ತದ್ಬ್ರಹ್ಮ**- ಎಂಬುದೂ, **ಅಧ್ಯಾತ್ಮ**ವೆಂಬುದೂ ಸಹ ಮತ್ತು **ಕರ್ಮಚ** - ಅದಕ್ಕೆ ಸಂಬಂಧಿಸಿದ ಕರ್ಮವೂ ಸಹ, **ಕಿಮಿತಿ ವಕ್ತವ್ಯಂ** - ಯಾವುದೆಂದು ಹೇಳತಕ್ಕದ್ದು ? ಅರ್ಜುನನಿಗೆ ಕೈವಲ್ಯಾರ್ಥಿಯಾದ ಜಿಜ್ಞಾಸುವಿಗೆ ಆತ್ಮಸಾಕ್ಷಾತ್ಕಾರಕ್ಕೆ ಅನುಕೂಲವಾಗುವ ಹಾಗೆ ಪುನಃ ದೇಹೋತ್ಪತ್ತಿಯಲ್ಲಿ ಜಿಹಾಸೆ ಹುಟ್ಟಿ ಅದು ಲಭಿಸದ ಹಾಗೆ ಪ್ರಯತ್ನ ಪಡಲು ಜ್ಞಾತವ್ಯಾಂಶವಾಗಿ ಕರ್ಮಶಬ್ದ ವಾಚ್ಯವಾದುದು ಯಾವುದು ಎಂಬರ್ಥವು. **ಐಶ್ವರ್ಯಾರ್ಥಿಗಳಿಗೆ ಜ್ಞಾತವ್ಯವಾದ, ಅಧಿಭೂತ**ವೆಂದರೇನು ? ಮತ್ತು **ಅಧಿದೈವ**ವೆಂದರೇನು? ಈ ಅಧಿಭೂತ ವಿಷಯ ಜ್ಞಾತವ್ಯಾಂಶವೂ ಅಧಿದೈವ ವಿಷಯ ಜ್ಞಾತವ್ಯಾಂಶವೂ, ಆರ್ತನು ಮತ್ತು ಅರ್ಥಾರ್ಥಿ ಇಬ್ಬರಿಗೂ ಬೇಕಾದ ವಿಷಯವೆಂದು ಸೂಚಿಸುವದಕ್ಕಾಗಿ **ಐಶ್ವರ್ಯಾರ್ಥಿನಾಂ** ಎಂಬ ಪ್ರಯೋಗವು. **ತ್ರಯಾಣಾಂ ಜ್ಞಾತವ್ಯಃ** - ಈ ಮೂರು ವಿಧ ಭಕ್ತರುಗಳಿಂದಲೂ ಎಂದರೆ ಮೂಲದಲ್ಲಿ ಚತುರ್ವಿಧವೆಂದು ಹೇಳಿದ ಎಲ್ಲಾ ಭಕ್ತರುಗಳಿಗೂ ತಿಳಿಯಬೇಕಾದ ಅಂಶ ವಾಗಿ, ಅಧಿಯಜ್ಞ ಶಬ್ದದಿಂದ **ನಿರ್ದಿಷ್ಟಶ್ಚ** - ಹೇಳಲ್ಪಟ್ಟವನಾದರೋ, **ಕಃ** - ಯಾರು ? **ತಸ್ಯ ಚ** - ಆತನಿಗಾದರೋ **ಅಧಿ ಯಜ್ಞ** ಭಾವವಾದರೋ, **ಕಥಂ** - ಹೇಗೆ ? ಅರ್ಜುನನಿಗೆ, ಯಜ್ಞಗಳಲ್ಲಿ ಆರಾಧಿಸಲ್ಪಡುವವರು ದೇವತೆಗಳು ಎಂಬುದು ತಿಳಿಯುವದು; ಪ್ರಯೋಗವು ಅಧಿಯಜ್ಞವೆಂದಿರುವದರಿಂದ ಪರಮಾತ್ಮನೇ ಇರಬಹುದೆಂಬ ಭಾವವನ್ನು ಮನಸ್ಸಿನಲ್ಲಿಟ್ಟೇ ಪ್ರಶ್ನಿಸುತ್ತಾನೆ. ಮೋಕ್ಷಾರ್ಥಿಯಲ್ಲದೆ, ಐಶ್ವರ್ಯಕಾಮಿಯಾಗಿ ಮಾಡುವ ಅನ್ಯದೇವತಾ ರೂಪವಾದ ಆರಾಧನೆಯಾಗಿರುವಾಗ ಅಧಿಯಜ್ಞನು ಪರಮಾತ್ಮನು ಹೇಗೆ ? ಎಂಬುದು ಪ್ರಶ್ನಾಭಿ ಪ್ರಾಯವೆಂಬ ತಾತ್ಪರ್ಯವು. ಆದುದರಿಂದ **ತಸ್ಯ ಚ ಅಧಿಯಜ್ಞಭಾವಃ ಕಥಂ ?** ಎಂದು ಭಾಷ್ಯ ಬರೆದಿರುತ್ತಾರೆ, **ಪ್ರಯಾಣ ಕಾಲೇಚ** - ದೇಹವಿಯೋಗ ಕಾಲದಲ್ಲೂ ಕೂಡ, **ಏಭಿಸ್ತ್ರಿಭಿಃ** - ಈ ಮೂರು ಪಂಗಡದ ಭಕ್ತರುಗಳಿಂದ ಎಂದರೆ ಎಲ್ಲಾ ನಾಲ್ಕು ವಿಧ ಭಕ್ತರು ಗಳಿಂದಲೂ, ಇವರು ಎಂತವರೆಂದರೆ, **ನಿಯತಾತ್ಮಭಿಃ** - ನಿಯಮಿಸಲ್ಪಟ್ಟ ಮನಸ್ಸುಳ್ಳ ಈ ಭಕ್ತರುಗಳಿಂದಲೂ, **ಕಥಂ**-ಯಾವ ಪ್ರಕಾರವಾಗಿ, **ಜ್ಞೇಯೋಽಸಿ**-ನೀನು ತಿಳಿಯಲ್ಪಡುವಿ ? ಕೆಲವರು ಈ ನಿಯತಾತ್ಮತ್ವವು ಜ್ಞಾನಿಗೆ ಮಾತ್ರವೇ ಆವಶ್ಯಕವೆಂದು ಅಭಿಪ್ರಾಯ ಪಟ್ಟಿರು ತ್ತಾರೆ. ನಿಯತವಾದ ಮನಸ್ಸು ಇಲ್ಲದಿದ್ದರೆ ಭಕ್ತನೇ ಆಗುವದಿಲ್ಲವು, ಆತನಿಗೆ ಕರ್ಮಯೋಗವು ಸಿದ್ಧಿಸಿರಬೇಕು. ನಿಯತಾತ್ಮವಿಲ್ಲದಿದ್ದರೆ ಕರ್ಮಯೋಗವಾದ ಅಙ್ಗವೇ ಇಲ್ಲವು, ಭಕ್ತಿಯೋಗಕ್ಕೆ ಅಧಿಕಾರಿಯೇ ಆಗುವದಿಲ್ಲವು. ಹಿಂದಿನ ಅಧ್ಯಾಯದ ೩೦ನೆಯ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾ ರವರು ಉಪಯೋಗಿಸಿದ, **ಯುಕ್ತಚೇತಸಃ**-ಎಂಬುದಕ್ಕೆ ಏನು ಅರ್ಥವೋ, **ಈ ನಿಯತಾತ್ಮಭಿಃ** ಎಂಬುವದಕ್ಕೂ ಅದೇ ತಾತ್ಪರ್ಯವೆಂದು ಭಾವಿಸಬಹುದು.

**ಶ್ರೀ ಭಗವಾನುವಾಚ—**

**ಮೂ. ಅಕ್ಷರಂ ಬ್ರಹ್ಮಪರಮಂ ಸ್ವಭಾವೋಽಧ್ಯಾತ್ಮ ಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥**

**ಮೂಲಕ್ಕೆ ಅರ್ಥವು :—**ಶ್ರೀ ಕೃಷ್ಣಭಗವಾನ್‌ರವರು ಹಿಂದಿನ ಅಧ್ಯಾಯಾಂತ್ಯದಲ್ಲಿ ಏಳು ಹೊಸ ವಿಷಯಗಳನ್ನು ಒಳಗೊಂಡ ಶಬ್ದ ಪ್ರಯೋಗಗಳನ್ನು ಮಾಡಿದುದರಿಂದ ಅರ್ಜುನನೂ ಸಹ ಹಿಂದಿನ ಎರಡು ಶ್ಲೋಕಗಳಿಂದಲೂ ಏಳು ಪ್ರಶ್ನೆಗಳನ್ನು ಮಾಡಿದನು ; ಅವುಗಳಿಗೆ ಒಡನೆ ಸಜ್ಜ್ಞ್ರಹವಾಗಿ ಉತ್ತರಗಳನ್ನು ದಯಪಾಲಿಸುವವರಾಗಿ, **ಶ್ರೀ ಭಗವಾನ್ ಉವಾಚ—**ರುಕ್ಮಿಣೀ ಪತಿಯಾದ ಶ್ರೀಕೃಷ್ಣಭಗವಾನ್‌ರವರು ಹೇಳುತ್ತಾರೆ. ಆ ಬ್ರಹ್ಮವೆಂದು ಹೇಳಿದೆಯಲ್ಲಾ ಅದು ಯಾವುದು ಎಂದು ಕಿಂತದ್ಬ್ರಹ್ಮ ಎಂದು ಅರ್ಜುನನು ಪ್ರಶ್ನಿಸಿದ್ದನು, ಆತತ್ ಎಂಬ ಶಬ್ದಾರ್ಥ ವಿವರಣವಾಗಿ **ಅಕ್ಷರಂ ಪರಮಂ** ಎಂದು ಹೇಳಿ, ಅದೇ **ಬ್ರಹ್ಮ** ಶಬ್ದ ವಾಚ್ಯವೆಂದು ಹೇಳುತ್ತಾರೆ:—**ಅಕ್ಷರಂ** ಯಾವಾಗಲೂ ವಿಕಾರವಿಲ್ಲದ ಸ್ವರೂಪವುಳ್ಳ, **ಪರಮಂ**-ಹಿಂದೆ ಪರಮಾತ್ಮನ ಪರಾ ಪ್ರಕೃತಿಯೆಂದು ಶ್ಲಾಘಿಸಲ್ಪಟ್ಟ, ಪ್ರಕೃತಿವಿಯುಕ್ತ ದಶೆಯಲ್ಲಿ ನೈಜಪ್ರಕಾಶ ಹೊಂದಿದ ಧರ್ಮಭೂತ ಜ್ಞಾನದಿಂದ ಕಂಗೊಳಿಸುತ್ತಾ, ಸರ್ವಜ್ಞತ್ವ, ಆನಂದತ್ವ, ಅಮಲತ್ವಾದಿ ಗುಣಗಳಿಂದ ವಿರಾಜಿಸುತ್ತಿರುವವನು ಜೀವನು, ಆದುದರಿಂದ ಈ ಎರಡು ವಿಶೇಷಣಗಳು, ಇಂತಹ ದೇವನೇ, **ಬ್ರಹ್ಮ** - ಜೀವ ತತ್ತ್ವಾನಂತ್ಯದಿಂದ ಬ್ರಹ್ಮಶಬ್ದ ವಾಚ್ಯನು. ಈತನು ಅಣುವಾಗಿದ್ದರೂ ಧರ್ಮಭೂತ ಜ್ಞಾನದ ಮೂಲಕ ವ್ಯಾಪಕತ್ವವು ಇರುವುದರಿಂದ **" ಸಚಾನನ್ತ್ಯಾಯ ಕಲ್ಪತೇ "** ಎಂದು ಶ್ರುತಿಯು ಹೇಳಿರುವುದರಿಂದ **ಬ್ರಹ್ಮ** ಶಬ್ದವು ಜೀವನನ್ನು ಬೋಧಿಸುತ್ತದೆ. **" ಏಕೋ ಬಹೂನಾಂ ವಿದಧಾತಿ ಕಾಮಾನ್ "** ಎಂಬ ಶ್ರುತಿಯು ಜೀವಾತ್ಮರ ಅಸಂಖ್ಯೇಯತ್ವವನ್ನು ತಿಳಿಸುತ್ತದೆ. ಅಥವಾ ಜ್ಞಾನತ್ವ, ಅಮಲತ್ವ, ಆನಂದತ್ವಾದಿಗುಣಗಳ ಮೂಲಕ ಪರಮಾತ್ಮನೊಂದಿಗೆ ಜೀವಾತ್ಮನಿಗೆ ಸಾಮ್ಯವಿರುವುದರಿಂದ ಔಪಚಾರಿಕವಾಗಿ ಬ್ರಹ್ಮ ಶಬ್ದದಿಂದ ಪರಮಾತ್ಮನು ಹೇಳಲ್ಪಡಲು ಕಾರಣವಿಲ್ಲವೆಂದು ಸಹೇತುಕವಾಗಿ ಹಿಂದೆಯೇ ತಿಳಿಸಿರುತ್ತೇವೆ. ಅಕ್ಷರ ಶಬ್ದದಿಂದ ಜೀವಾತ್ಮನೇ ಇದೇ ಗೀತೆಯಲ್ಲಿ ಮುಂದೆ ಇದೇ ಅಧ್ಯಾಯದ ೨೧ ನೆಯ ಶ್ಲೋಕದಲ್ಲೂ, ೧೨ನೆಯ ಅಧ್ಯಾಯದ ಪ್ರಥಮಶ್ಲೋಕದಲ್ಲೂ, ಮುಂದೆ ೧೫ನೆಯ ಅಧ್ಯಾಯದ ೧೬ನೆಯ ಶ್ಲೋಕದಲ್ಲೂ, ಹೇಳಲ್ಪಟ್ಟಿರುತಾನೆ. **ಸ್ವಭಾವೋ ಧ್ಯಾತ್ಮಮುಚ್ಯತೇ, ಸ್ವ-** ತನ್ನ ಎಂದರೆ ಜೀವಾತ್ಮನ , **ಭಾವಃ** - ಇದರಿಂದ ನಿಯತವಾಗಿ ಬಂಧಿಸಲ್ಪಟ್ಟಿರೋಣವು, ತಾನು ಇರಲು ಆಶ್ರಯವಾದ ಭೂತಸೂಕ್ಷ್ಮ ಅಥವಾ ಪ್ರಕೃತಿಯು , ಅಧ್ಯಾತ್ಮವೆಂದು, ಹೇಳಲ್ಪಡುತ್ತದೆ. ಈ ಲೀಲಾ ವಿಭೂತಿಯಲ್ಲಿ ಪ್ರಕೃತಿಯೊಂದಿಗೇನೇ ಯಾವಾಗಲೂ ಈ ಜೀವಾತ್ಮನು ಸಂಬಂಧಿಸಿಕೊಂಡಿರುತ್ತಾನೆ. ಇದೇ ಈ ಆತ್ಮನಿಗೆ ವ್ಯತ್ಯರೂಪವು, ಪುನಃ ಪುನಃ ಈತನು ಸಂಸಾರಿಯಾಗಲು ಹೇತುಭೂತವಾದುದು. ಇದು ಈತನು ಪ್ರಾಣಿಯಾಗಿರುವ ದಶೆಯಲ್ಲಿ ಸ್ಥೂಲರೂಪದಲ್ಲಿ ದೇಹವೆಂದು ಹೇಳಲ್ಪಟ್ಟು, ಪ್ರಾಣವಿಯೋಗಕಾಲದಲ್ಲಿ ಸೂಕ್ಷ್ಮ ದಶೆಯಲ್ಲಿ ಸೇರಿಕೊಂಡು ಭೂತಸೂಕ್ಷ್ಮವೆಂದೆನಿಸಿ ಆತ್ಮನಿಗೆ ಅಂಟಿದುವಾದುದರಿಂದ **ಅಧ್ಯಾತ್ಮವೆಂದೆನಿಸುತ್ತದೆ.** ಇದರ ಜ್ಞಾನವು ಮುಖ್ಯವಾಗಿ ಜಿಜ್ಞಾಸುವಿಗೆ ಅವಶ್ಯಕವು. ಯಾವಾಗ ಜಿಜ್ಞಾಸುವಿಗೆ ಅವಶ್ಯಕವೋ, ಜ್ಞಾನಿಗೂ ಅವಶ್ಯಕವೆಂಬುದು ಕೈಮುತಿಕ ನ್ಯಾಯಸಿದ್ಧವು. ಜ್ಞಾನಿಗೂ ಸಹ ಇದು ಆವಶ್ಯಕವೆಂಬ ಭಾವದಿಂದಲೇ ಶ್ರೀ ಯತಿವರ್ಯರು ಈ ಶ್ಲೋಕ ಭಾಷ್ಯದಲ್ಲಿ **" ತದು ಭಯಮ್ ಪ್ರಾಪ್ಯತಯಾ ತ್ಯಾಜ್ಯತಯಾ ಚ ಮುಮುಕ್ಷುಭಿ ಜ್ಞಾತವ್ಯಮ್ "** ಈ ಜ್ಞಾನವು ಮೋಕ್ಷಾರ್ಥಿಗಳಿಂದ **ಜ್ಞಾತವ್ಯಮ್** ಎಂದು ವ್ಯಾಖ್ಯಾನ ಮಾಡಿರು

ತ್ತಾರೆ. ಆದರೆ ಐಶ್ವರ್ಯಾರ್ಥಿಗಳಿಗೆ ಬೇಕಾದುದಲ್ಲವು. ಇದು ಜಿಜ್ಞಾಸುವಿಗೆ **ಏತಕ್ಕೆ** ಆವಶ್ಯಕವೆಂದರೆ, ಈ ಮೃತ್ಯುರೂಪ ಜನ್ಮ ಜರಾಮರಣಗಳಿಗೆ ಹೇತುಭೂತವಾದ ಈ ದರಿದ್ರ ದೇಹದಿಂದ ತನಗೆ ಬಿಡುಗಡೆಯು ಹೇಗೆ ಎಂದು ತಿಳಿಯುವದಕ್ಕಾಗಿ ತನ್ನ ಪ್ರಕೃತಿ ವಿಮುಕ್ತ ದಶೆಯು ಎಷ್ಟು ಅದ್ಭುತವಾದುದೆಂದು ತಿಳಿಯುವದು ಅತ್ಯಾವಶ್ಯಕವು. ಆ ಜುಗುಪ್ಸಿತವಾದ ಕರ್ಮವು ಯಾವುದೆಂಬುದನ್ನು ತಿಳಿಸುತ್ತಾರೆ. " **ಭೂತಭಾವೋದ್ಭವಕರಃ** - ಭೂತವೆಂದರೆ ಅಚಿತ್ಸಂಸೃಷ್ಟಚಿತ್ತಿಗೆ ಹೆಸರು ; ಆದುದರಿಂದ, **ಭೂತಭಾವ**ವೆಂದರೆ ಮನುಷ್ಯ, ತಿರ್ಯಗಾದಿ ಪ್ರಾಣಿಯಾಗುವ ಭಾವವು, ಅದರ **ಉದ್ಭವಕರಃ** - ಉತ್ಪತ್ತಿಯನ್ನುಂಟುಮಾಡುವ, **ವಿಸರ್ಗಃ** - ವಿಸರ್ಜನವು, ಯಾವ ವಿಸರ್ಜನವೆಂದರೆ ಯೋಷಿತ್ತೆಂಬ ಅಗ್ನಿಯಲ್ಲಿ ಪುರುಷನ ರೇತಸ್ಸೆಂಬ ಆಹುತಿಯ ವಿಸರ್ಜನವು, ಇದೀಗ ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವ, **ಕರ್ಮಸಂಜ್ಞಿತಃ** - ಇಲ್ಲಿ ಕರ್ಮವೆಂಬ ಸಂಜ್ಞೆಯುಳ್ಳದು. ಛಾಂದೋಗ್ಯದ ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವದೇನೆಂದರೆ.—ಉಪಾಯಾನುಷ್ಠಾನ ಮಾಡದೇ ಇರುವವನಿಗೆ ಪುನಃ ಜನ್ಮಪ್ರಾಪ್ತಿ ಹೇಗೆ ಎಂಬುದು ಇಲ್ಲಿ ಉಪದೇಶಿಸಲ್ಪಡುತ್ತದೆ ; ಉದ್ದಾಲಕರೆಂಬುವರ ಪುತ್ರರಾಗಿ ಸದ್ವಿದ್ಯಾ ಶಿಷ್ಯರಾದ ಶ್ವೇತಕೇತುವೆಂಬುವರು, ಪಾಂಚಾಲದೇಶದ ರಾಜನಾದ ಪ್ರವಾಹಣನೆಂಬುವನ ಸಭೆಯನ್ನು ಪ್ರವೇಶಿಸಿದರು. ಆ **ಶ್ವೇತಕೇತು**ವನ್ನು ಕುರಿತು ರಾಜನು ಐದು ಪ್ರಶ್ನೆಗಳನ್ನು ಮಾಡಿದನು. ಅದರಲ್ಲಿ ಒಂದು ಪ್ರಶ್ನೆ ಏನೆಂದರೆ.—ಪೃಥಿವ್ಯಾದಿಗಳೊಂದಿಗೆ ಸೇರಿದ ಜಡ ಪ್ರಕೃತಿಯು ಐದನೆಯ ಆಹುತಿಯಲ್ಲಿ ಹೇಗೆ ಪುರುಷಶಬ್ದ ವಾಚ್ಯವಾಗುತ್ತದೆಂಬುದು ನಿಮಗೆ ತಿಳಿಯುವುದೋ ಎಂಬುದು ಪ್ರಶ್ನೆಯು. ಇದು ಶ್ವೇತಕೇತುವಿಗೆ ತಿಳಿಯದೇ ಹೋಯಿತು. ಅನಂತರ ಅವರು ತಮ್ಮ ತಂದೆಯಾದ ಉದ್ದಾಲಕರನ್ನು ಕೇಳಿದರು, ಅವರಿಗೂ ತಿಳಿಯದೇ ಇತ್ತು. ಆಗ ಉದ್ದಾಲಕರು ಆ ಕೇಳಿದ ರಾಜನನ್ನೇ ಪ್ರಾರ್ಥಿಸುತ್ತಾರೆ. ಆತನು ಆಗ ಈ ಪಂಚಾಗ್ನಿ ವಿದ್ಯೆಯನ್ನು ಉಪದೇಶಿಸುತ್ತಾನೆ. ಆದಿತ್ಯರೂಪ ಸಮಿತ್ತೂ, ರಶ್ಮಿಗಳೆಂಬ ಧೂಮಾದಿಗಳೂ, ಇರುವ ಅಗ್ನಿಯಲ್ಲಿ ದೇವತೆಗಳು ಶ್ರದ್ಧಾ ಎಂಬ ಆಹುತಿಯನ್ನು ಹೋಮಮಾಡುವುದರಿಂದ ಸೋಮೋ ರಾಜ ಉಂಟಾಗುತ್ತದೆ. ಅನಂತರ ಪರ್ಜನ್ಯವೆಂಬ ಅಗ್ನಿಯಲ್ಲಿ ದೇವತೆಗಳು ಈ ಸೋಮರಾಜಾ ಆಹುತಿಯನ್ನು ಕೊಡುವುದರಿಂದ ವರ್ಷ ಉಂಟಾಗುತ್ತದೆ. ಅನಂತರ ಭೂಮಿ ಎಂಬ ಅಗ್ನಿಯಲ್ಲಿ ಈ ವರ್ಷವನ್ನು ಹೋಮ ಮಾಡುವದರಿಂದ ಅನ್ನ ಉಂಟಾಗುತ್ತದೆ. ಪುರುಷನೆಂಬ ಅಗ್ನಿಯಲ್ಲಿ ದೇವತೆಗಳು ಅನ್ನವೆಂಬ ಆಹುತಿಯನ್ನು ಸಮರ್ಪಿಸುವರು. ಅದರಿಂದ ರೇತಸ್ಸುಂಟಾಗುತ್ತದೆ. ಅನಂತರ ಯೋಷಿತ್ತೆಂಬ ಅಗ್ನಿಯಲ್ಲಿ ಈ ರೇತಸ್ಸೆಂಬ ಆಹುತಿಯನ್ನು ಕೊಡುವದರಿಂದ ಗರ್ಭ ಉಂಟಾಗುತ್ತದೆ. ಹೀಗೆ ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ರೇತಸ್ಸು ಈ ಐದು ಆಹುತಿಗಳಲ್ಲಿ ಯಾವಾಗ ರೇತೋರೂಪ ಆಹುತಿಯಾಗಿ ಯೋಷಿತ್ತಿನ ಯೋನಿಯನ್ನು ಜೀವಾತ್ಮನು ಸೇರಿದನೋ, ಈ ಭೂತ ಸೂಕ್ಷ್ಮಗಳು ಜೀವನೊಂದಿಗೆ ಸೇರಿ ಪುರುಷ ಶಬ್ದವಾಚ್ಯವಾಗುತ್ತದೆಂಬುದು ಪ್ರಶ್ನೆಗೆ ಉತ್ತರವು. ಹೀಗೆ ಈ ಕರ್ಮವಿಷಯಜ್ಞಾನ ಉಂಟಾದರೆ, ಅಂತಹ ದುರವಸ್ಥೆಯ ಪ್ರಾಪ್ತಿಯು ಸರ್ವಾತ್ಮನಾ ತನಗೆ ಸರಿಯಲ್ಲದೆಂದು ತೋರಿ, ಅವುಗಳಿಂದ ತಪ್ಪಿಸಿಕೊಳ್ಳಲು ವಿಶೇಷ ಪ್ರಯತ್ನವನ್ನು ಮಾಡುವನು ಎಂಬ ಭಾವವು. ಆದಕ್ಕಾಗಿಯೇ ಜನ್ಮ ಜರಾಮರಣಗಳು ಬೇಡವೆಂಬುವನಿಗೆ ಇವುಗಳ ಜ್ಞಾನವು ಆವಶ್ಯಕವಾಗಿ ಬೇಕು. ಆ ಕಾರಣದಿಂದ ಜಿಜ್ಞಾಸುವಿಗೂ ಜ್ಞಾನಿಗೂ ಸಹ ಇವುಗಳಲ್ಲಿ ಜ್ಞಾನವು ಬೇಕಾದುದು.

**ಭಾಷ್ಯಾರ್ಥವು :**—ಅರ್ಜುನ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರವನ್ನು ಹೇಳುತ್ತಾರೆ—**ತದ್ಬ್ರಹ್ಮೇತಿ ನಿರ್ದಿಷ್ಟಂ** - ಓ ಅರ್ಜುನನೇ ನನ್ನಿಂದ ತದ್ಬ್ರಹ್ಮವೆಂದು ಹೇಳಲ್ಪಟ್ಟದುದು

**ಭಾ. ತದ್ಬ್ರಹ್ಮೇತಿ ನಿರ್ದಿಷ್ಟಂ ಪರಮ ಮಕ್ಷರಂ - ನಕ್ಷರತೀತ್ಯಕ್ಷರಮ್, ಕ್ಷೇತ್ರಜ್ಞ ಸಮಷ್ಟಿರೂಪಮ್। ತಥಾ ಚ ಶ್ರುತಿಃ,—(೧) "ಅವ್ಯಕ್ತಮಕ್ಷರೇ ಲೀಯತೇ ಅಕ್ಷರಂ ತಮಸಿ ಲೀಯತೇ" ಇತ್ಯಾದಿಕಾ। ಪರಮಮಕ್ಷರಂ-ಪ್ರಕೃತಿ ವಿನಿರ್ಮುಕಾತ್ಮ ಸ್ವರೂಪಮ್। ಸ್ವಭಾವೋಽಧ್ಯಾತ್ಮಮುಚ್ಯತೇ, ಸ್ವಭಾವಃ-ಪ್ರಕೃತಿಃ, ಅನಾತ್ಮ**

**ಪರಮಂ** - ಉತ್ಕೃಷ್ಟವಾದ, **ಅಕ್ಷರಂ** - ಎಂದರೆ, **ನಕ್ಷರತೀತ್ಯಕ್ಷರಂ** - ಸ್ವರೂಪ ವಿಕಾರವಿಲ್ಲದುದು ಅದು ಯಾವುದೆಂದರೆ, **ಕ್ಷೇತ್ರಜ್ಞ ಸಮಷ್ಟಿರೂಪಮ್** - ಜೀವಾತ್ಮನ ಕಾರ್ಯಾವಸ್ಥೆಯನ್ನು ಹೊಂದುವದಕ್ಕೆ ಪೂರ್ವಭಾವಿಯಾದ ಆಕಾರವು ಆದುದರಿಂದ ಪ್ರಕೃತಿ ಸಂಬಂಧವಿಲ್ಲದ ಆತ್ಮ ಸ್ವರೂಪವು. **ತಥಾಚ ಶ್ರುತಿಃ** - ಹಾಗೆಯೇ ಶ್ರುತಿಯು ಹೇಳುತ್ತದೆ.— "**ಅವ್ಯಕ್ತಂ** - ಇನ್ನೂ ನಾಮರೂಪಾರ್ಹತೆಯನ್ನು ಹೊಂದುವದಕ್ಕೆ ಪೂರ್ವಭಾವಿಯಾಗಿರುವ ಅಚಿನ್ಮಿಶ್ರವಾದ ಚಿತ್ತು, **ಅಕ್ಷರೇ ಲೀಯತೇ** - ಅಕ್ಷರಶಬ್ದವಾಚ್ಯವಾದ ಅಚಿತ್ತಿನಿಂದ ಮಿಶ್ರವಾದ ಚಿತ್ತಾಗಿ ಅಕ್ಷರವೆಂದು ಹೇಳಿಸಿಕೊಳ್ಳುವವರೊಂದಿಗೆ ಏಕೀಭವಿಸುತ್ತದೆ, ತಮಸ್ಸು ಪರಮಾತ್ಮನೊಂದಿಗೆ ಸೇರಿಕೊಳ್ಳುತ್ತದೆಂದು ಇರುತ್ತದೆ, ಇದು ಪ್ರಳಯ ದಶೆಯಲ್ಲಿ ಆಗತಕ್ಕದ್ದು. ಸೃಷ್ಟಿಕಾಲದಲ್ಲಿ ತಮಸ್ಸು ಅಕ್ಷರವಾಗಿ ಪರಿಣಮಿಸುತ್ತದೆ, ಅಕ್ಷರವು ಅವ್ಯಕ್ತವಾಗಿ ಪರಿಣಮಿಸುತ್ತದೆಂಬ ಭಾವವು. ಆದುದರಿಂದ ಅಕ್ಷರ ಶಬ್ದದಿಂದ ಜೀವ ತತ್ವವು ಹೇಳಲ್ಪಟ್ಟಿತೆಂದು ತಿಳಿಯತಕ್ಕದ್ದು. **ಇತ್ಯಾದಿಕಾ** - ಇವೇ ಮೊದಲಾದ ಪ್ರಮಾಣಗಳಿವೆ ಎಂಬ ಭಾವವು. ಆದುದರಿಂದ **ಪರಮ ಮಕ್ಷರಂ** ಎಂದು ಹೇಳಿದುದರಭಿಪ್ರಾಯವೆಂಬುದನ್ನು ತಿಳಿಸುತ್ತಾರೆ.—**ಪ್ರಕೃತಿ ವಿನಿರ್ಮುಕ್ತಾತ್ಮ ಸ್ವರೂಪಮ್** - ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮ ಸ್ವರೂಪವು; **ಅಕ್ಷರವೇನೋ** ಪ್ರಕೃತಿಯೊಂದಿಗೆ ಎಂದರೆ ಭೂತಸೂಕ್ಷ್ಮದೊಂದಿಗೆ ಸೇರಿದ ಸಮಷ್ಟಿ ಜೀವ ತತ್ವವು, ಇಲ್ಲಿ ಜೀವತತ್ವದ ಪ್ರಾಧಾನ್ಯದಿಂದ ಅಕ್ಷರಶಬ್ದ ವಾಚ್ಯತ್ವವು. **ಪರಮಂ** ಎಂಬ ವಿಶೇಷಣದಿಂದ ಕೂಡಿದ, ಅಕ್ಷರ ಶಬ್ದದಿಂದ ತೋರಿಬರುವ ತಾತ್ಪರ್ಯವು; ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮಸ್ವರೂಪವು. ಇದು ಆತ್ಮ ತತ್ವದ ಸರ್ವೋತ್ಕೃಷ್ಟ ದಶೆಯಾದುದರಿಂದ **ಪರಮಂ** ಎಂದು ಹೇಳಲ್ಪಟ್ಟಿತೆಂದು **ಪ್ರಕೃತಿ ವಿನಿರ್ಮುಕ್ತಾತ್ಮ ಸ್ವರೂಪ**ವೆಂಬ ಭಾಷ್ಯವು. ಈ ಆತ್ಮ ಸ್ವರೂಪವು ಮಹತ್ತಾದುದೆಂಬುದು ಹಿಂದೆ ಎರಡನೆಯ ಅಧ್ಯಾಯದಲ್ಲೇ ಹೇಳಲ್ಪಟ್ಟಿರುತ್ತದೆ. ಇಂತಹ ಮಹತ್ತಾದ ಸ್ವರೂಪಕ್ಕೆ ದುರ್ದಶೆಯುಂಟಾಗಿರುವದು ಪ್ರಕೃತಿ ಸಂಬಂಧದಿಂದೆಂಬುದೂ ಏಳನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗಾದರೆ ಇಲ್ಲಿ ತಿಳಿಯತಕ್ಕದ್ದೇನೆಂದರೆ ಈ ಲೀಲಾ ವಿಭೂತಿಯಲ್ಲಿರುವವರೆಗೂ ಈ ಸಂಬಂಧವು ತಪ್ಪದು. ಪ್ರಕೃತಿ ವಿನಿರ್ಮುಕ್ತ ದಶೆಯನ್ನು ಹೊಂದಿ, **ಪರಮಂ ಅಕ್ಷರಂ** ಎಂದು ಹೇಳಿಸಿಕೊಳ್ಳಲು ಏನನ್ನು ಮಾಡತಕ್ಕದ್ದೆಂಬುದು ಜ್ಞಾತವ್ಯಾಂಶವು ಎಂಬ ಭಾವವು. ಮುಂದೆ "**ಸ್ವಭಾವೋಽಧ್ಯಾತ್ಮ ಮುಚ್ಯತೇ**" ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ. **ಸ್ವಭಾವ**ವೆಂದರೆ **ಪ್ರಕೃತಿಯು**, ನಿಯತವಾಗಿ ತನಗೆ ಸಂಬಂಧಿಸಿ ಬಾಧಕವಾಗಿ ಬಂದಿರುವದು ಎಂಬ ತಾತ್ಪರ್ಯವು. ಅದು ಯಾವುದು ಎಂಬ ಅಪೇಕ್ಷೆಯಲ್ಲಿ ತಿಳಿಸುತ್ತಾರೆ. **ಅನಾತ್ಮ ಭೂತಂ** - ಆತ್ಮವಲ್ಲದ, **ಆತ್ಮನಿ ಸಂಬಧ್ಯಮಾನಂ** - ಆತ್ಮನಲ್ಲೇ ಸಂಬಂಧಿಸಿಕೊಂಡಿರುವ, **ಭೂತಸೂಕ್ಷ್ಮ ತದ್ವಾಸನಾದಿಕಂ** - ಭೂತ ಸೂಕ್ಷ್ಮವು ಮತ್ತು ಅದರ ಸಂಬಂಧದಿಂದ ಪ್ರಾಪ್ತವಾಗುವ ಕರ್ಮವಾಸನಾ ಮೊದಲಾದವುಗಳು. ಇಲ್ಲಿ ಆದಿ ಶಬ್ದದಿಂದ ರುಚಿ ಅವಿದ್ಯೆಗಳು ಹೇಳಲ್ಪಟ್ಟವು. ಛಾಂದೋಗ್ಯದಲ್ಲಿ

(೧) ಸುಬಾಲ.

**ಭಾ. ಭೂತವತ್ ಆತ್ಮನಿ ಸಂಬಧ್ಯಮಾನಂ ಭೂತ ಸೂಕ್ಷ್ಮ ತದ್ವಾಸನಾದಿಕಂ ಪಂಚಾಗ್ನಿ ವಿದ್ಯಾಯಾಂ ಜ್ಞಾತವ್ಯತಯೋಽದಿತಂ। ತದುಭಯಂ ಪ್ರಾಪ್ಯತಯಾ ತ್ಯಾಜ್ಯತಯಾಚ ಮುಮುಕ್ಷುಭಿ ಜ್ಞಾತವ್ಯಂ. "ಭೂತಭಾವೋದ್ಭವ ಕರೋ ವಿಸರ್ಗಃ ಕರ್ಮ ಉಚ್ಯತೇ," ಭೂತಭಾವಃ-ಮನುಷ್ಯಾದಿಭಾವಃ, ತದುದ್ಭವಕರೋ ಯೋ ವಿಸರ್ಗಃ, "ಪಂಚಮ್ಯಾ ಮಾಹುತಾ ವಾಪಃ ಪುರುಷ ವಚಸೋ ಭವನ್ತಿ" ಇತಿ ಶ್ರುತಿ ಸಿದ್ಧೋ ಯೋಷಿತ್ಸಂಬಂಧಜಃ, ಸಃ ಕರ್ಮ ಸಂಜ್ಞಿತಃ। ತಚ್ಚಾಖಿಲಂ ಸಾನುಬಂಧಂ**

ಹೇಳಿರುವ ಪಂಚಾಗ್ನಿ ವಿದ್ಯೆಯಲ್ಲಿ, **ಜ್ಞಾತವ್ಯತಯಾ** - ತಿಳಿಯತಕ್ಕ ಅಂಶವೆಂಬದಾಗಿ, **ಉದಿತಂ** - ಹೇಳಲ್ಪಟ್ಟಿರುವದು. ಆದುದರಿಂದ **ಅಧ್ಯಾತ್ಮ**ವೆಂದರೆ ಶರೀರದಲ್ಲಿರುವದು ಎಂಬುದು ಇದರ ತಾತ್ಪರ್ಯವು, ಆತನೊಂದಿಗೇನೇ ಯಾವಾಗಲೂ ಸೇರಿರುವದು ಎಂಬುದು, ಅದು ಪ್ರಕೃತಿಯು. ಜಿಜ್ಞಾಸುವಿಗೆ ಇದು ಏಕೆ ಜ್ಞಾತವ್ಯಾಂಶವೆಂದರೆ ವಿಶದೀಕರಿಸುತ್ತಾರೆ:— **ತದುಭಯಂ**-ಈ ಎರಡೂ, ಎಂದರೆ ಈ ಆತ್ಮನೂ, ಅದರೊಂದಿಗೆ ಸಂಬದ್ಧವಾದ ಪ್ರಕೃತಿಯೂ, ಮೊದಲನೆಯದು, **ಪ್ರಾಪ್ಯತಯಾ**-ಪ್ರಕೃತಿ ವಿಯುಕ್ತದೆಶೆಯೇ ಪ್ರಾಪ್ಯವಾದುದಾಗಿಯೂ, ಎರಡನೆಯದು ಪ್ರಕೃತಿಯಾದರೋ **ತ್ಯಾಜ್ಯತಯಾ** - ಬಿಡತಕ್ಕದ್ದಾಗಿಯೂ, **ಮುಮುಕ್ಷುಭಿಃ**- ಮೋಕ್ಷಾರ್ಥಿಗಳಿಂದ, ಜಿಜ್ಞಾಸು ಜ್ಞಾನಿಗಳಿಂದ, **ಜ್ಞಾತವ್ಯಂ** - ತಿಳಿಯಬೇಕಾದ ವಿಷಯವು. ಇಲ್ಲಿ ಜಿಜ್ಞಾಸುವನ್ನು ಮುಖ್ಯವಾಗಿ ಕುರಿತು ಹೇಳುವ ಸಂದರ್ಭದಲ್ಲಿ **ಮುಮುಕ್ಷುಭಿಃ** ಎಂದು ಏಕೆ ಹೇಳಲ್ಪಟ್ಟಿತೆಂದರೆ, ಪಂಚಾಗ್ನಿ ವಿದ್ಯಾನಿಷ್ಠನು ಕೈವಲ್ಯದಲ್ಲಿ ಕೆಲವು ಕಾಲ ನಿಂತರೂ ಪುನರಾವರ್ತಿಯಿಲ್ಲದೆ, ಮೋಕ್ಷಾರ್ಥಿಯಾಗಿರುವದರಿಂದ ಅಲ್ಲಿಂದ ಮುಂದಕ್ಕೆ ಹೋಗಿ ಪರಮ ಪದವನ್ನು ಸೇರುವನಾದುದರಿಂದ ಎಂದು ಭಾವಿಸಬಹುದು. ಅಥವಾ ಜಿಜ್ಞಾಸುವಿಗೇನೆ ಇದು ಜ್ಞಾತವ್ಯವಾದರೆ, ಕೈಮುತಿಕನ್ಯಾಯದಿಂದ ಜ್ಞಾನಿಗೂ ಆವಶ್ಯಕವು, ಹೀಗೆ ಜಿಜ್ಞಾಸುವೂ ಜ್ಞಾನಿಯೂ ಇಬ್ಬರೂ ಮೋಕ್ಷಾರ್ಥಿಗಳೇಯಾದುದರಿಂದ ಹಾಗೆ ಪ್ರಯೋಗವು. ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೂ ಪರಮಾತ್ಮೋಪಾಸಕನಾದ ಜ್ಞಾನಿಗೂ ಸ್ವಲ್ಪವೇ ವ್ಯತ್ಯಾಸವು. ಏನು ವ್ಯತ್ಯಾಸವು ಎಂದರೆ ಶ್ರೀರಂಗರಾಮಾನುಜ ಮುನಿಗಳು ಹೇಳುತ್ತಾರೆ, ಏನೆಂದರೆ:—"**ಇಯಾಂಸ್ತು ವಿಶೇಷಃ,-ಪಂಚಾಗ್ನಿ ವಿದ್ಯಾ ಬ್ರಹ್ಮಾತ್ಮಕ ಸ್ವಾತ್ಮವಿದ್ಯಾ, ಪರವಿದ್ಯಾಸ್ತು ಪತ್ಯಗಾತ್ಮ ಶರೀರಕ ಪರಮಾತ್ಮ ವಿದ್ಯಾ**" (ಛಾಂ. ೫-೧೦ ೧೦ ಭಾಷ್ಯವು.) ಎಂದರೆ ಪಂಚಾಗ್ನಿ ವಿದ್ಯೆಯು ಪರಬ್ರಹ್ಮಾತ್ಮಕವಾದ ತನ್ನ ಆತ್ಮವನ್ನು ತತ್ಪ್ರಾಪ್ತಿಗಾಗಿ ಉಪಾಸಿಸುವ ವಿದ್ಯೆಯು. ಪರಬ್ರಹ್ಮ ವಿದ್ಯೆಗಳಾದರೋ ತಮ್ಮನ್ನೇ ಶರೀರವಾಗಿ ಉಳ್ಳ ಪರಬ್ರಹ್ಮವನ್ನು ತತ್ಪ್ರಾಪ್ತಿಗಾಗಿ ಉಪಾಸಿಸುವ ವಿದ್ಯೆಗಳು. ಹೀಗೆ ಈ ಎರಡು ವಿದ್ಯಾನಿಷ್ಠರೂ ಮುಮುಕ್ಷುಗಳು. ಮುಂದೆ **ಭೂತಭಾವೋದ್ಭವಕರೋ ವಿಸರ್ಗಃ ಕರ್ಮಉಚ್ಯತೇ** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ.—ಇಲ್ಲಿ **ಭೂತಭಾವ**ವೆಂದರೆ **ಮನುಷ್ಯಾದಿ ಭಾವವು; ತದುದ್ಭವಕರಃ**-ಅಂತಹ ಆಕಾರೋತ್ಪತ್ತಿಗೆ ಕಾರಣಭೂತವಾದುದು, **ಯಃ ವಿಸರ್ಗಃ**-ಯಾವ ರೇತಸ್ಸೋತ್ಸರ್ಜನವೋ, ಎಂದರೆ "**ಪಂಚಮ್ಯಾಂ ಆಹುತೌ**-ಐದನೆಯ ಅಗ್ನಿಯಾದ ಯೋಷಿತ್ತಿನ ಯೋನಿಯಲ್ಲಿ, **ಆಪಃ** - ಐದನೆಯ ರೂಪವನ್ನು ಹೊಂದಿ, ರೇತಸ್ಸೆನಿಸಿಕೊಂಡಿರುವ ಅಪ್ಪು, **ಪುರುಷ ವಚಸೋ ಭವನ್ತಿ** - ಪ್ರಾಣಿ ಎಂಬ ಶಬ್ದವನ್ನು ಹೊಂದುವಂತಾದ್ದು ಆಗುವದು." (ಛಾಂ. ೫. ೯. ೧) **ಇತಿ**-ಎಂಬುದಾಗಿ, **ಶ್ರುತಿಸಿದ್ಧಃ**-ಛಾಂದೋಗ್ಯದ ಐದನೆಯ ಖಂಡದಲ್ಲಿ ಹೇಳಿರುವ, **ಯೋಷಿತ್ಸಂಬಂಧಜಃ** - ಸ್ತ್ರೀ ಸಂಭೋಗವನ್ನುಂಟುಮಾಡುತ್ತದೋ, **ಸಃ**-ಅದು, **ಕರ್ಮಸಂಜ್ಞಿತಃ** - ಕರ್ಮವೆಂಬ ವ್ಯವಹಾರವುಳ್ಳದು. ವ್ಯಕ್ತವಾಗಿ ಹೇಳಲು ಇಷ್ಟ

**ಭಾ. ಉದ್ವೇಜನೀಯತಯಾ ಪರಿಹರಣೀಯತಾಚಾ ನಂತರಮೇವ ವಕ್ಷ್ಯತೇ (೧) "ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ" ಇತಿ ॥೩॥**

ವಿಲ್ಲದೆ ಸ್ವಲ್ಪ ಗಂಭೀರವಾಗಿ **ಕರ್ಮ**ವೆಂಬ ಶಬ್ದದಿಂದ ಅದು ಹೇಳಲ್ಪಟ್ಟಿತು. ಇಲ್ಲಿ ಕರ್ಮವು **ನಿತ್ಯ** ನೈಮಿತ್ತಿಕ ಕರ್ಮವೂ ಅಲ್ಲವು. ಯಜ್ಞಯಾಗಾದಿ ಕರ್ಮವೂ ಅಲ್ಲವು. ಮೋಕ್ಷಾರ್ಥಿಗಳಿಗೆ ತ್ಯಾಜ್ಯವಾದ ಕರ್ಮವು. ತನ್ನ ಆತ್ಮವು ಮುಂದೆ ಪುನಃ ಪುರುಷ ರೇತಸ್ಸಿಗೆ ಸೇರಿ, ಇಂತಹ ಹೇಯ ಕರ್ಮಕ್ಕೆ ಸಿಲುಕಿ, ಪುನಃ ಜನ್ಮ ಜರಾ ಮರಣಕ್ಕೆ ಸಿಕ್ಕದಹಾಗೆ ಹೇಗೆ ಪ್ರವರ್ತಿಸತಕ್ಕದ್ದೆಂಬುದು ಈ ಮುಮುಕ್ಷುಗಳಿಗೆ ಜ್ಞಾತವ್ಯಾಂಶವೆಂಬ ಭಾವವು. ಹಿಂದಿನ ಅಧ್ಯಾಯದ ೨೯ನೆಯ ಶ್ಲೋಕದಲ್ಲಿ, ಜ್ಞಾತವ್ಯಾಂಶವಾಗಿ, **"ಕರ್ಮ ಚಾಖಿಲಂ"** ಎಂದು ಹೇಳಲ್ಪಟ್ಟಿತ್ತು. ಅದನ್ನು ಮನಸ್ಸಿನಲ್ಲಿಟ್ಟವರಾಗಿ ಅಲ್ಲಿ ಹೇಳಿದ ಅಖಿಲ ಶಬ್ದಕ್ಕೂ ಇಲ್ಲಿ ತಾತ್ಪರ್ಯವನ್ನು ಅನುಗ್ರಹಿಸುತ್ತಾರೆ.—**ತಚ್ಚಾಖಿಲಂ ಸಾನುಬಂಧಂ**-ಆ ರೇತಸ್ಸಿನ ವಿಸರ್ಜನಕ್ಕೆ ಸಂಬಂಧಪಟ್ಟ ಸಮಸ್ತವೂ, ಅದರಿಂದಾಗುವ ಗರ್ಭೋತ್ಪತ್ತಿ ಏನು, ಅದು ಬೆಳೆಯುವದೇನು, ಆಗ ಶಿಶುವಾಗಿ ಅನುಭವಿಸುವ ಕ್ಲೇಶಗಳೇನು, ಶಿಶುವಾಗಿ ಜನಿಸುವಾಗ ಉಂಟಾಗುವ ದುಃಖಗಳೇನು ಇವೆಲ್ಲವೂ ಎಂಬ ಭಾವವು, ಇದನ್ನೇ ಮುಂದೆ ವ್ಯಕ್ತಪಡಿಸುತ್ತಾರೆ.—**ಉದ್ವೇಜನೀಯತಯಾ** - ಬಹು ಕ್ಲೇಶಕರವಾಗಿರುವದರಿಂದಲೂ, **ಪರಿಹರಣೀಯತಯಾಚ** - ಇವು ಇವುಗಳಿಂದ ಹೇಗಾದರೂ ಮಾಡಿ ಪರಿಹರಿಸಿಕೊಳ್ಳತಕ್ಕದ್ದಾದುದರಿಂದಲೂ, **ಮುಮುಕ್ಷುಭಿಃ**-ಮೋಕ್ಷಾರ್ಥಿಗಳಿಂದ ಇಲ್ಲಿ ಮುಖ್ಯವಾಗಿ ಜಿಜ್ಞಾಸುವೂ, ಜ್ಞಾನಿಯೂ ಸಹ ಹೇಳಲ್ಪಟ್ಟರು, **ಜ್ಞಾತವ್ಯಂ**-ತಿಳಿಯತಕ್ಕದ್ದಾಗಿರುತ್ತದೆ. ತನಗೆ ಪುನರ್ಜನ್ಮವಿಲ್ಲದ ಉಪಾಯವನ್ನವಲಂಬಿಸಲು ಈ ಪಂಚಾಗ್ನಿ ವಿದ್ಯೆಯಲ್ಲಿ ಹೇಳಿದುದೆಲ್ಲವೂ ತಿಳಿಯತಕ್ಕ ಅಂಶವಾಗಿರುತ್ತದೆಂಬ ಭಾವವು. ಹಿಂದೆ ಪುರುಷ ರೇತಸ್ಸೇ ಐದನೆಯ ಅಪ್ಪುರೂಪವಾದ ಆಹುತಿಯು, ಇದು ಸ್ತ್ರೀಯೋನಿ ಎಂಬ ಅಗ್ನಿಯಲ್ಲಿ ಇಡಲ್ಪಡುತ್ತದೆಂದು ಶ್ರುತಿಯು ಹೇಳಿತು. ಇನ್ನು ನಾಲ್ಕು ಆಹುತಿಗಳು ಯಾವುವು ಎಂಬುದಕ್ಕೆ ೯೦ನೆಯ ಪುಟವನ್ನು ಪರಾಂಬರಿಸಿ. ಇಂತಹ ಕರ್ಮವು ಪರಿಹರಣೀಯವೆಂದು ಎಲ್ಲಿ ಹೇಳಿದೆ ಎಂದರೆ ಮುಂದೆ ೧೧ನೆಯ ಶ್ಲೋಕದಲ್ಲೇ ಹೇಳಲ್ಪಟ್ಟಿದೆ ಎಂದು ತಿಳಿಸುತ್ತಾರೆ. **ಪರಿಹರಣೀಯತಾಚ**-ಇದು ಪರಿಹರಣೀಯವೆಂಬುದಾದರೋ, **ಅನನ್ತರಮೇವ ವಕ್ಷ್ಯತೇ, "ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ"** ಎಂದು ಮುಂದೆಯೇ ಹೇಳಲ್ಪಟ್ಟಿರುತ್ತದೆ; ಯಾರು ಅಕ್ಷರ ಪ್ರಾಪ್ತಿಯನ್ನು ಹೊಂದಬೇಕೆಂದಿದ್ದಾರೋ ಅವರು ಬ್ರಹ್ಮಚರ್ಯವನ್ನು ಆಚರಿಸುತ್ತಾರೆಂದು ಅಲ್ಲಿ ಹೇಳಲ್ಪಟ್ಟಿರುತ್ತದೆ ಎಂಬ ಭಾವವು. ಆ ಕರ್ಮವು ಇಲ್ಲಿ ಪರಿಹರಣೀಯವಾದುದೆಂದು ಏಕೆ ಹೇಳಲ್ಪಟ್ಟಿತು ? ಎಂದರೆ, ಅದು ಉದ್ವೇಜನೀಯವು, ತುಂಬಾ ಕ್ಲೇಶಗಳಿಗೆ ಆಕರವಾದುದೆಂಬುದೂ ಸ್ಪಷ್ಟವು. ಈ ಭಾಷ್ಯದಲ್ಲಿ ಜಿಜ್ಞಾಸುಗಳನ್ನು ಹೇಳುವ ಸಂದರ್ಭದಲ್ಲಿ **ಮುಮುಕ್ಷುಭಿಃ** ಎಂದು ಶ್ರೀ ಭಾಷ್ಯಕಾರರು ಪ್ರಯೋಗಿಸಿರುವದರಿಂದ, ಕೈವಲ್ಯಪ್ರಾಪ್ತಿಯುಂಟಾದ ಜಿಜ್ಞಾಸುವಿಗೂ ಪುನರಾವೃತ್ತಿ ಇಲ್ಲವೆಂಬುದೇ ಶ್ರೀ ಯತಿವರ್ಯರ ಅಭಿಪ್ರಾಯವೆಂಬುದು ವ್ಯಕ್ತವು. ಅದೇ ಮುಂದೆಯೂ ೧೩ನೆಯ ಶ್ಲೋಕದಲ್ಲಿಯೂ ೨೦ ನೆಯ ಶ್ಲೋಕದಲ್ಲೂ ಹೇಳಲ್ಪಡುತ್ತದೆ.

**ಮೂಲಕ್ಕೆ ಅರ್ಥವು :—**ಹಿಂದಿನ ಶ್ಲೋಕದಲ್ಲಿ ತದ್ಬ್ರಹ್ಮ, ಅಧ್ಯಾತ್ಮ, ಕರ್ಮಶಬ್ದಗಳಿಗೆ ಅರ್ಥವನ್ನು ಹೇಳಿ ಇವು ಜಿಜ್ಞಾಸುವಿಗೂ ಆಕಾರಣದಿಂದಲೇ ಜ್ಞಾನಿಗೂ, ಹೀಗೆ ಮುಮುಕ್ಷುಗಳಾದ ಇಬ್ಬರಿಗೂ ಜ್ಞಾತವ್ಯಾಂಶಗಳೆಂದು ಹೇಳಿದರು. ಈ ಶ್ಲೋಕದಲ್ಲಿ ಐಶ್ವರ್ಯಾರ್ಥಿ

(೧) ಗೀ. ೮. ೧೧.

**ಮೂ. ಅದಿಭೂತಂ ಕ್ಷರೋ ಭಾವಃ ಪುರುಷ ಶ್ಚಾಧಿದೈವತಂ ।**
**ಅಧಿಯಜ್ಞೋಽಹಮೇ ವಾತ್ರ ದೇಹೇ ದೇಹಭೃತಾಂ ವರ ॥ ೪.**

ಗಳಾದ ಆರ್ತನಿಗೂ ಮತ್ತು ಅರ್ಥಾರ್ಥಿಗೂ ಜ್ಞಾತವ್ಯಾಂಶಗಳಾದ ಅಧಿಭೂತ ಅಧಿದೈವತ ಶಬ್ದಗಳಿಗೆ ಅರ್ಥವನ್ನು ಪೂರ್ವಾರ್ಧದಿಂದಲೂ, ಎಲ್ಲಾ ಭಕ್ತರಿಗೂ ಜ್ಞಾತವ್ಯಾಂಶವಾದ ಅಧಿಯಜ್ಞ ಶಬ್ದದ ಅರ್ಥವನ್ನು ಉತ್ತರಾರ್ಧದಿಂದಲೂ ತಿಳಿಸುತ್ತಾರೆ. **ಅಧಿಭೂತಂ ಕ್ಷರೋ ಭಾವಃ** - ಅಧಿಭೂತ ಶಬ್ದದಿಂದ ಹೇಳಲ್ಪಡುವದು ಪರಿಣಾಮಾವಸ್ಥೆಯುಳ್ಳವು, ಭಾವಶಬ್ದವು ಜಾತ್ಯೇಕವಚನವು ; **ಪುರುಷಶ್ಚಾಧಿದೈವತಂ** - ಅಧಿ ದೈವತ ಶಬ್ದದಿಂದ ಹೇಳಿಸಿಕೊಳ್ಳುವನು, ಆಯಾದೇವತಾ ಶರೀರದಲ್ಲಿರುವ ಆತ್ಮನು, ಪುರುಷಶಬ್ದ ವ್ಯುತ್ಪತ್ತಿಯಿಂದಲೇ, ಆ ದೇವತಾ ಶರೀರದಲ್ಲಿದ್ದು ಸ್ವಾಮಿದತ್ತ ಐಶ್ವರ್ಯವನ್ನು ಅನುಭವಿಸುತ್ತಾ ಇರುವವನು. ಕೆಲವು ಐಶ್ವರ್ಯಾರ್ಥಿಗಳು ಐಹಿಕೈಶ್ವರ್ಯಗಳನ್ನು ಮಾತ್ರವಲ್ಲದೆ ಸ್ವರ್ಗಾದಿ ಪಾರಲೌಕಿಕೈಶ್ವರ್ಯವನ್ನು ಅಪೇಕ್ಷಿಸುವವರಾಗಬಹುದು. ಅವರುಗಳಿಗೆ ಮುಖ್ಯವಾಗಿ ಅಧಿದೈವತರೂಪ ಜ್ಞಾತವ್ಯಾಂಶವು ಆವಶ್ಯಕವೆಂಬುದು ತೋರಿ ಬರುತ್ತದೆ. ಇಲ್ಲಿ **ಅಧಿದೈವಂ ಕ್ಷರೋಭಾವಃ** ಎಂದು ಹೇಳಿದುದು ಅರ್ಜುನನು ಅಧಿದೈವ ವಾಚ್ಯವಾದುದು ಯಾವುದು ಎಂದು ಪ್ರಶ್ನಿಸಿದನು, ಆತನಿಗೆ ತಿಳಿಯುವದಕ್ಕಾಗಿ ಶಬ್ದ ಸ್ಪರ್ಶರೂಪ ವಿಲಕ್ಷಣೋಪ ಭೋಗಗಳೂ ಅಂತಹ ಉಪಭೋಗಗಳನ್ನೀಯುವ ವಿಷಯಗಳೆಂದು ತಿಳಿಸುವದಕ್ಕಾಗಿ ಕ್ಷರಣ ಸ್ವಭಾವವುಳ್ಳವುಗಳೆಂದು ಹೇಳಲ್ಪಟ್ಟವು. ಐಶ್ವರ್ಯಾರ್ಥಿಗೆ ಕ್ಷರಣ ಸ್ವಭಾವವುಳ್ಳದೆಂಬುದು ಜ್ಞಾತವ್ಯಾಂಶವು. ಹಾಗೆ ಅವನು ತಿಳಿದುದಾದರೆ ಅವನು ಎಂದಿಗೂ ಐಶ್ವರ್ಯಾರ್ಥಿಯೇ ಆಗುವದಿಲ್ಲವು. ಅಂತಹ ಜ್ಞಾನವಿಲ್ಲದವನು ಐಶ್ವರ್ಯಕಾಮಿಯು. ಮುಂದೆ **ಅಧಿಯಜ್ಞ** ಶಬ್ದದಿಂದ ಬೋಧಿತವಾದುದು ಯಾವುದೆಂದು ತಿಳಿಸುತ್ತಾರೆ. **ಹೇ ದೇಹಭೃತಾಂವರ**-ದೇಹವನ್ನು ಧರಿಸಿರುವವರಲ್ಲಿ ಶ್ರೇಷ್ಠನೇ ; ನನ್ನಂಶವನ್ನೂ ಹೊಂದಿದವನಾಗಿ, ನರನಾರಾಯಣಾವತಾರದಲ್ಲಿ ನರನಾಗಿರುವದರಿಂದ **ದೇಹ ಭೃತಾಂವರ** ಎಂದು ಸಂಬೋಧಿಸಿರಬಹುದು. ಅಥವಾ ದೇವತೆಯಾದ ಇಂದ್ರನೇ ಪಿತಾವಾಗಿ ಮನುಷ್ಯರೂಪವನ್ನು ಧರಿಸಿರುವದರಿಂದಾಗಲಿ **ದೇಹ ಭೃತಾಂವರ ;** ಅಥವಾ ನನ್ನನ್ನು ಆಶ್ರಯಿಸುವರು ಪರಮದುರ್ಲಭವೆಂದು ಹೇಳಿದೆನು, ನೀನಾದರೋ ನನ್ನನ್ನೇ ಆಶ್ರಯಸಿ, ಏನೊಂದು ಸೈನ್ಯ ಸಹಾಯವಿಲ್ಲದೆ ನಾನೊಬ್ಬನೇ ಯುದ್ಧದಲ್ಲಿ ಯಾವ ಕೆಲಸವನ್ನೂ ವಹಿಸದೇ ಬೇಕಾದರೆ ಬರುವೆನು ಎಂದರೆ, ಅಗತ್ಯವಾಗಿ ಹಾಗೆಯೇ ಬನ್ನಿ ಎಂದು ಮಲಗಿರುವಾಗ ನನ್ನ ಪಾದದ ಬಳಿ ಕೂತು ಪ್ರಾರ್ಥಿಸಿದ ಪ್ರಾಜ್ಞನಾದುದರಿಂದಲಾಗಲಿ **ದೇಹ ಭೃತಾಂವರ**ವೆಂಬ ಸಂಬೋಧನೆಯು. ಅಥವಾ ತನಗೆ ಅನಿರ್ವಚನೀಯುವಾದ ಕಷ್ಟಗಳನ್ನು ಕೊಟ್ಟು ರಾಜ್ಯಾಪಹಾರಿಯಾಗಿ ಸಭೆಯಲ್ಲಿ ಮಾನಭಂಗ ಮಾಡಿದ ಪರಮ ದುಷ್ಟರನ್ನು ವೀರ ಕ್ಷತ್ರಿಯನಾಗಿ ಕೊಲ್ಲುವ ಪರಾಕ್ರಮವಿದ್ದರೂ ಕೊಲ್ಲಲಾರೆನು ಎಂದು ದಯಾಪ್ರೇರಿತನಾಗಿರುವದರಿಂದಲಾಗಲಿ **ದೇಹಭೃತಾಂವರನು** ಎಂದು ಹೇಳಬಹುದು. ಇಲ್ಲಿ **ದೇಹಭೃತಾಂ** ಎಂಬ ಪ್ರಯೋಗದಿಂದ ಆತ್ಮ ಬಹುತ್ವವು ನಿರೂಪಣೆ ಮಾಡಲ್ಪಟ್ಟಿರುವದರಿಂದ, ಆತ್ಮೈಕ್ಯವಾದಕ್ಕೆ ಅನುಕೂಲವಿಲ್ಲವು. ನೀನು **ದೇಹಭೃತಾಂವರನಾದ** ಮಹಾ ಪ್ರಾಜ್ಞನಾದುದರಿಂದ ಅಧಿಯಜ್ಞಾರ್ಥವು ನಿನಗೆ ವೇದ್ಯವೇ ಎಂಬ ಭಾವವೂ ಸೂಚಿತವು, ಆದರೂ ಹೇಳುತ್ತೇನೆ ಕೇಳು ಎಂಬ ತಾತ್ಪರ್ಯವು. **ಅತ್ರ** ಈ ಸಂದರ್ಭದಲ್ಲಿ, ಈ ಯಜ್ಞಗಳಿಂದ ಆರಾಧಿಸಲ್ಪಡುವ ಸಂದರ್ಭದಲ್ಲಿ, **ದೇಹೇ** - ನನಗೆ ಶರೀರವಾದ ಇಂದ್ರಾದಿ ಶರೀರಗಳಲ್ಲಿ, ಅಂತರ್ಯಾಮಿಯಾಗಿ ಆತ್ಮಾವಾಗಿರುವ, **ಅಹಮೇವ** - ನಾನೇ, **ಅಧಿಯಜ್ಞಃ**- ಅಧಿಯಜ್ಞ ಶಬ್ದದಿಂದ ಬೋಧಿಸಲ್ಪಟ್ಟವನು ; ಸರ್ವ ಯಜ್ಞಗಳಿಂದಲೂ, ಯಜ್ಞರೂಪಗಳಾದ

**ಭಾ. ಐಶ್ವರ್ಯಾರ್ಥಿನಾಂ ಜ್ಞಾತವ್ಯತಯಾ ನಿರ್ದಿಷ್ಟ ಮಧಿಭೂತಂ ಕ್ಷರೋಭಾವಃ - ವಿಯದಾದಿ ಭೂತೇಷು ವರ್ತಮಾನಸ್ತತ್ಪರಿಣಾಮ ವಿಶೇಷಃ, ಕ್ಷರಣಸ್ವಭಾವೋ, ವಿಲಕ್ಷಣ**

ನಿತ್ಯ ನೈಮಿತ್ತಿಕಾನುಷ್ಠಾನಗಳಿಂದಲೂ ಆರಾಧ್ಯನಾದವನು ನಾನೇ ಎಂಬ ಭಾವವು. ಈ ಜ್ಞಾನವು ಎಲ್ಲಾ ಉಪಾಸಕರಿಗೂ ಸಾಧಾರಣವಾದುದು, **"ಯಜ್ಞೋವೈ ವಿಷ್ಣುಃ," "ಅಹಂಕ್ರತು ರಹಂ ಯಜ್ಞಃ"** (೯ - ೧೬) **"ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ"** (೯-೨೪) ಇತ್ಯಾದಿ ಪ್ರಮಾಣಗಳು ಅನುಸಂಧೇಯಗಳು. ಹಿಂದಿನ ಅಧ್ಯಾಯದ ಕೊನೆಯ ಶ್ಲೋಕದಲ್ಲಿ **"ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ"** ಎಂದು ಇದ್ದರೂ, ಅರ್ಜುನ ಪ್ರಶ್ನೆಯು **"ಸ"** ಕಾರವನ್ನು ಬಿಟ್ಟು **ಅಧಿ ಭೂತಂ, ಅಧಿ ದೈವಂ, ಅಧಿ ಯಜ್ಞಃ** ಎಂಬ ಪದಗಳ ಅರ್ಥ ನಿರ್ಣಯಕ್ಕಾಗಿ ಮಾತ್ರವಾಗಿರುತ್ತದೆ. ಇವುಗಳ ಅರ್ಥವು ಉಪದಿಷ್ಟವಾದರೆ, ಅಧಿಭೂತ, ಅಧಿದೈವ, ಅಧಿಯಜ್ಞದಿಂದ ಕೂಡಿದವನೆಂದು ಅರ್ಥಮಾಡಿಕೊಳ್ಳಬಹುದೆಂಬ ಆಶಯದಿಂದ ಹಾಗೆ ಪ್ರಶ್ನಿಸಿರುತ್ತಾನೆ. ಅದರ ಹಿಂದಿನಶ್ಲೋಕದಲ್ಲಿ (೭. ೨೯) **"ಕೃತ್ಸ್ನಮಧ್ಯಾತ್ಮಂ"** ಎಂಬ ಪ್ರಯೋಗವಿರುತ್ತದೆ, ಆದುದರಿಂದ ಅರ್ಜುನ ಪ್ರಶ್ನೆಯು **"ಕಿಮಧ್ಯಾತ್ಮಂ"** ಎಂದೂ, ಶ್ರೀಕೃಷ್ಣೋತ್ತರವು **"ಸ್ವಭಾವೋಽಧ್ಯಾತ್ಮ ಮುಚ್ಯತೇ"** ಎಂದೂ ಇರುತ್ತವೆ. **"ಸಾಧಿಭೂತಂ ಸಾಧಿದೈವಂ"** ಎಂದು ಹೇಳಿದಹಾಗೆ **"ಸಾಧ್ಯಾತ್ಮಂ"** ಎಂದು ಹೇಳಿದ್ದ ಪಕ್ಷದಲ್ಲಿ ಅದೂ ಪರಮಾತ್ಮನನ್ನೇ ಬೋಧಿಸುತ್ತದೆ ಎಂದು ತಿಳಿಯತಕ್ಕದ್ದು, ಏಕೆಂದರೆ ಈ ಅಧ್ಯಾತ್ಮದೊಂದಿಗಿರುವವನೂ ಪರಮಾತ್ಮನೇ. ಈ ವಿಷಯವನ್ನೂ ಪ್ರಯೋಗವನ್ನೂ ಸಹ ಈ ಮುಂದಿನ ಭಾಗವತ ಶ್ಲೋಕದಲ್ಲಿ ಕಾಣಬಹುದು. **"ತ್ವಾಂ ಯೋಗಿನೋ ಯಜನ್ತ್ಯದ್ಧಾ ಮಹಾಪುರುಷಮೀಶ್ವರಮ್ । ಸಾಧ್ಯಾತ್ಮಂ ಸಾಧಿದೈವಂ ಚ ಸಾಧಿಭೂತಂ ಚ ಸಾಧವಃ** ಭಾ. (೧೦. ೪೦. ೪) ಇದು ಪರಮ ಭಾಗವತರಾದ ಅಕ್ರೂರರು ಶ್ರೀಕೃಷ್ಣನಲ್ಲಿ ಶರಣಾಗತಿಯನ್ನನುಷ್ಠಿಸುವಾಗ ಮಾಡಿದ ಸ್ತೋತ್ರದಲ್ಲಿ ಬರುತ್ತದೆ. ಸಾಧಿಯಜ್ಞ ಭಾವವನ್ನು ಪೂರ್ವಾರ್ಧದಲ್ಲಿ ಹೇಳಿ, ಸಾಧ್ಯತ್ಮಾದಿಗಳನ್ನು ಉತ್ತರಾರ್ಧದಲ್ಲಿ ಹೇಳಿರುತ್ತಾರೆ. ಇಲ್ಲಿ ಅಧ್ಯಾತ್ಮವೆಂದರೆ ಶರೀರದಲ್ಲಿ ಎಂಬರ್ಥವು, ಆತ್ಮಾವಿಗೆ ಶರೀರವಾದ ಪ್ರಕೃತಿಯು, ಇದರಿಂದ ಸೇರಿರುವನು **ಸಾಧ್ಯಾತ್ಮಂ.** ಈ ಅಭಿಪ್ರಾಯವು ಹಿಂದೆಯೇ ವ್ಯಕ್ತವಾಗಿ ಹೇಳಲ್ಪಟ್ಟಿರುವದರಿಂದ ಅದನ್ನು ಬಿಟ್ಟು **ಅಧ್ಯಾತ್ಮಂ** ಎಂದು ಇಷ್ಟೇ ಹಿಂದಿನ ಅಧ್ಯಾಯದ ೨೯ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಜಿಜ್ಞಾಸುವು ಶರೀರವನ್ನು ಕಳೆದುಕೊಳ್ಳುವ ಉಪಾಯವನ್ನು ತಿಳಿಯತಕ್ಕದ್ದು ಅವಶ್ಯಕವೆಂದು ಹಾಗೆ ಹೇಳಲ್ಪಟ್ಟಿತು. ॥ ೪ ॥

**ಭಾಷ್ಯಾರ್ಥವು:—ಐಶ್ವರ್ಯಾರ್ಥಿನಾಂ ಜ್ಞಾತವ್ಯತಯಾ** - ಐಶ್ವರ್ಯಾರ್ಥಿಗಳಿಂದ ತಿಳಿಯಲ್ಪಡತಕ್ಕದ್ದೆಂದು, **ನಿರ್ದಿಷ್ಟಂ**-ಹೇಳಲ್ಪಟ್ಟ, **ಅಧಿಭೂತಂ**-ಅಧಿಭೂತಶಬ್ದ ವಾಚ್ಯವಾದುದು ಯಾವುದೆಂದರೆ, **ಕ್ಷರೋಭಾವಃ** - ಪರಿಣಾಮಾವಸ್ಥೆಯುಳ್ಳದುದು ಎಂದರೆ ಅನಿತ್ಯವಾದುದು, ಅದು ಯಾವುದೆಂದರೆ ತಿಳಿಸುತ್ತಾರೆ.—**ವಿಯದಾದಿ ಭೂತೇಷು ವರ್ತಮಾನಃ** - ಆಕಾಶಾದಿ ಪಂಚ ಭೂತಗಳಲ್ಲಿರುವ, **ಪರಿಣಾಮವಿಶೇಷವಾದ, ಕ್ಷರಣಸ್ವಭಾವಃ** - ವಿಕಾರಹೋದುವ ಸ್ವಭಾವವುಳ್ಳವು. ಅವು ಯಾವುವೆಂದರೆ - ಆ ಆಕಾಶಾದಿ ಪಂಚ ಭೂತಗಳಲ್ಲಿರುವ **ತತ್ಪರಿಣಾಮ ವಿಶೇಷಃ**-ಆ ಪಂಚಭೂತಗಳ ಪರಿಣಾಮವನ್ನು ಹೊಂದಿದ ವಿಶೇಷವಾದ, **ಕ್ಷರಣಸ್ವಭಾವಃ** - ಸ್ವರೂಪನಾಶವನ್ನು ಹೊಂದಿ ನಶ್ವರ ಸ್ವಭಾವವುಳ್ಳದ್ದಾಗಿ, **ವಿಲಕ್ಷಣಃ** - ಬೇರೆ ವಿಲಕ್ಷಣವಾದ, **ಶಬ್ದಸ್ಪರ್ಶಾದಿಃ** - ಶಬ್ದ ಸ್ಪರ್ಶ ಗಂಧ ರಸಾದಿಗಳು ಮತ್ತು, **ಸಾಶ್ರಯಃ** - ಅದಕ್ಕೆ ಆಶ್ರಯಗಳಾದ ವಿಷಯಗಳೊಂದಿಗೆ ಸೇರಿದವು. ವಿಲಕ್ಷಣ ಹೇಗೆ? ಎಂದರೆ ಭಕ್ತ

**ಭಾ. ಶಬ್ದಸ್ಪರ್ಶಾದಿ ಸ್ವಾಶ್ರಯಃ। ವಿಲಕ್ಷಣಾಸ್ವಾಶ್ರಯಾ ಶಬ್ದಸ್ಪರ್ಶರೂಪರಸಗಂಧಾಃ ಐಶ್ವರ್ಯಾರ್ಥಿಭಿಃ ಪ್ರಾಪ್ಯತ್ವೈರನುಸಂಧೇಯಾಃ। ಪುರುಷಶ್ಚಾಧಿದೈವತಂ-ಅಧಿದೈವತಶಬ್ದ ನಿರ್ದಿಷ್ಟಃಪುರುಷಃ। ಅಧಿದೈವತಂ-ದೈವತೋಽ ಪರಿವರ್ತಮಾನಃ, ಇಂದ್ರ ಪ್ರಜಾಪತಿ ಪ್ರಭೃತಿ ಕೃತ್ಸ್ನದೈವತೋಽಪರಿವರ್ತಮಾನಃ ಇಂದ್ರಪ್ರಜಾಪತಿ ಪ್ರಭೃತೀನಾಂ ಭೋಗ್ಯಜಾತಾ ದ್ವಿಲಕ್ಷಣ ಶಬ್ದಾದೇ ಭೋಕ್ತಾಪುರುಷಃ ; ಸಾ ಚ ಭೋಕ್ತೃತ್ವಾವಸ್ಥಾ ಐಶ್ವರ್ಯಾರ್ಥಿಭಿಃ ಪ್ರಾಪ್ಯತಯಾನುಸಂಧೇಯಾ। ಅಧಿಯಜ್ಞೋಽಹ**

ಕುಚೇಲರಿಗೆ ದೇಹಯಾತ್ರಾನುಕೂಲವು ಪತ್ನಿಯಿಂದ ಪ್ರಾರ್ಥಿಸಲ್ಪಟ್ಟರೂ, ಕರುಣಾಸಾಗರನು ರಾಜಭೋಗಾದಿಗಳನ್ನುಂಟುಮಾಡಿದುದೂ, ಭಕ್ತಧ್ರುವನು ಐಹಿಕಪ್ರಾರ್ಥನೆಯಿಂದ ಉಪಾಸಿಸಿದರೂ ದಿವ್ಯ ಧ್ರುವಲೋಕ ಪ್ರಾಪ್ತಿಯನ್ನು ಕೊಟ್ಟಿದುದೂ, ವಿಲಕ್ಷಣತ್ವಕ್ಕೆ ನಿದರ್ಶನಗಳೆಂದು ಭಾವಿಸತಕ್ಕದ್ದು. ಈ ಕಾರಣದಿಂದಲೇ ವಿಲಕ್ಷಣವೆಂಬ ಪ್ರಯೋಗವು. ಮುಂದೆ ಇರುವ ವಿಲಕ್ಷಣ ಶಬ್ದಕ್ಕೆ ಅರ್ಥ ಬರೆಯುವಾಗ **"ಇಂದ್ರ ಪ್ರಜಾಪತಿ ಪ್ರಭೃತೀನಾಂ ಭೋಗಜಾತಾತ್ ವಿಲಕ್ಷಣಃ"** ಎಂದು ಹೇಳಿರುವದನ್ನು ಇಲ್ಲಿಗೂ ಅನ್ವಯಿಸಿಕೊಳ್ಳಬಹುದು. ಮೋಕ್ಷವೇ ಕ್ರಮೇಣ ಉಂಟಾಗುವ ಸಂದರ್ಭದಲ್ಲಿ ವಿಲಕ್ಷಣ ಶಬ್ದಕ್ಕೆ ಅರ್ಥಮಾಡುವದೊಂದು ಕಷ್ಟವೇ ? **ವಿಲಕ್ಷಣಾಸಾಶ್ರಯಾ ಶಬ್ದಸ್ಪರ್ಶರೂಪ ರಸಗಂಧಾಃ** – ಹೀಗೆ ವಿಲಕ್ಷಣಗಳಾಗಿ ಪಂಚಭೂತಗಳನ್ನೇ ಆಶ್ರಯವಾಗಿರುವ ಶಬ್ದಸ್ಪರ್ಶರೂಪ ರಸಗಂಧಗಳಾದ ವಿಷಯಗಳು, **ಐಶ್ವರ್ಯಾರ್ಥಿಭಿಃ** – ಐಶ್ವರ್ಯವನ್ನು ಅಪೇಕ್ಷಿಸುವ ಭಕ್ತರುಗಳಿಂದ **ಅನುಸಂಧೇಯಾಃ**–ಅನುಸಂಧಾನಮಾಡತಕ್ಕವುಗಳಾಗಿವೆ. **ಪುರುಷಶ್ಚಾಧಿದೈವತಂ**ಎಂದರೆ **ಅಧಿದೈವತ ಶಬ್ದನಿರ್ದಿಷ್ಟಃ ಪುರುಷಃ**–ಅಧಿದೈವತ ಶಬ್ದದಿಂದ ಹೇಳಲ್ಪಟ್ಟವನು ಪುರುಷನು, ಉಪಾಸಕನಾದ ಜೀವಾತ್ಮನು ಎಂಬರ್ಥವು. **ಅಧಿದೈವತಂ** ಎಂದರೆ **ದೈವತೋಽ ಪರಿವರ್ತಮಾನಂ** – ದೇವತೆಗೆ ಸಂಬಂಧಿಸಿದುದಕ್ಕಿಂತ ಹೆಚ್ಚಾಗಿರುವಂತಾದ್ದು ಎಂಬರ್ಥವು, ಇದರ ಅರ್ಥವನ್ನು ವ್ಯಕ್ತಪಡಿಸುತ್ತಾರೆ, **ಇಂದ್ರ ಪ್ರಜಾಪತಿ ಪ್ರಭೃತಿ ಕೃತ್ಸ್ನ ದೈವತೋಽಪರಿ ವರ್ತಮಾನಃ** – ಇಂದ್ರಚತುರ್ಮುಖ ಬ್ರಹ್ಮ, ಪ್ರಭೃತಿಶಬ್ದದಿಂದ ರುದ್ರನೇ ಮೊದಲಾದ ಸಮಸ್ತ ದೇವತೆಗಳಿಗೂ ಮೇಲಾಗಿರುವವನೂ ಇದರ ತಾತ್ಪರ್ಯವನ್ನು ವ್ಯಕ್ತಪಡಿಸುತ್ತಾರೆ. **ಇನ್ದ್ರ ಪ್ರಜಾಪತಿ ಪ್ರಭೃತೀನಾಂ ಭೋಗ್ಯಜಾತಾದ್ವಿಲಕ್ಷಣ ಶಬ್ದಾದೇಭೋಕ್ತಾ** – ಇಂದ್ರ ಪ್ರಜಾಪತಿಯೇ ಮೊದಲಾದವರುಗಳ ಭೋಗ್ಯರೂಪಗಳಾದವುಗಳಿಗಿಂತಲೂ ವಿಲಕ್ಷಣಗಳಾದ ಶಬ್ದಾದಿ ವಿಷಯುಗಳನ್ನು ಅನುಭವಿಸುವವನಾದ **ಪುರುಷನು; ಸಾಚ ಭೋಕ್ತೃತ್ವಾವಸ್ಥಾ** – ಅಂತಹ ಭೋಕ್ತೃತ್ವಾವಸ್ಥೆ ಈಗ, **ಐಶ್ವರ್ಯಾರ್ಥಿಭಿಃ** – ಸ್ವರ್ಗಾದಿ ಐಶ್ವರ್ಯಕಾಮನೆಯುಳ್ಳವರಿಂದ, **ಪ್ರಾಪ್ಯತಯಾನುಸಂಧೇಯಾ** – ಫಲರೂಪವಾಗಿ ತನಗೆ ಲಭಿಸುತ್ತದೆಂದು ಅನುಸಂಧಾನ ಮಾಡತಕ್ಕದ್ದಾಗಿರುತ್ತದೆ. **ವಿಲಕ್ಷಣ ಶಬ್ದಾದೇಭೋಕ್ತಾ ಪುರುಷಃ** ಎಂಬ ಪಾಠವಾದರೂ ಆಗಬಹುದು. ನಮ್ಮ ಶಬ್ದಾದಿ ಭೋಗಗಳಿಗಿಂತಲೂ ವಿಲಕ್ಷಣವಾದುದರಿಂದ ವಿಲಕ್ಷಣ ಶಬ್ದಪ್ರಯೋಗವೆಂದು ಭಾವಿಸಬಹುದು. ಈ ದೇವ ಜಾತಿಗಳಲ್ಲಿ ಇರುವ ಪುರುಷರೆಲ್ಲಾ ಜ್ಞಾನೈಕಾಕಾರತೆಯಿಂದ ಸಮನಾದರೂ ಆಯಾ ಅವಸ್ಥೆಯಲ್ಲಿ ಸ್ವಾಮಿದತ್ತ ವಿಚಿತ್ರ ಶಕ್ತಿಯುಳ್ಳ ಪುರುಷನು ಅಧಿದೈವತಶಬ್ದದಿಂದ ಹೇಳಲ್ಪಟ್ಟನೆಂಬ ಭಾವವು. ಇಂತಹ ಪುರುಷನಿಗಿರುವ ಐಶ್ವರ್ಯವೀಗ ಐಶ್ವರ್ಯಾರ್ಥಿಗೆ ಜ್ಞಾತವ್ಯಾಂಶವೆಂದು ಬೋಧಿಸಲ್ಪಟ್ಟಿತು. **ಅಧಿದೈವತಂ** – ಎಂಬುದಕ್ಕೆ, **ದೈವತೋಽಪರಿವರ್ತಮಾನಃ** ಎಂಬ ವ್ಯಾಖ್ಯಾನದಲ್ಲಿ **ಉಪರಿ** ಶಬ್ದವು ಮೇಲಿನ ಪ್ರದೇಶವನ್ನೇನೂ ಹೇಳಲಿಲ್ಲವು; ಅವರ ಭೋಗಕ್ಕಿಂತಲೂ ಶ್ರೇಷ್ಠವಾದ ಭೋಗವನ್ನು ಈ **ಅಧಿ** ಶಬ್ದವು ಬೋಧಿಸುತ್ತದೆಂದು ತಿಳಿಸುವದಕ್ಕಾಗಿ ಹಾಗೆ

**ಭಾ. ಮೇವ ಅದಿಯಜ್ಞ ಶಬ್ದನಿರ್ದಿಷ್ಟೋಽಹಮೇವ। ಅಧಿಯಜ್ಞಃ-ಯಜ್ಞೈರಾರಾಧ್ಯ ತಯಾವರ್ತಮಾನಃ। ಅತ್ರ-ಇಂದ್ರಾದೌ ಮಮದೇಹ ಭೂತೇ ಆತ್ಮತಯಾಸ್ಥಿತೋಽ ಹಮೇವ ಯಜ್ಞೈರಾರಾಧ್ಯ ಇತಿ ಮಹಾ ಯಜ್ಞಾದಿ ನಿತ್ಯನೈಮಿತ್ತಿಕಾನುಷ್ಠಾನ ವೇಳಾಯಾಂ ತ್ರಯಾಣಾ ಮಧಿಕಾರಿಣಾ ಮನುಸಂಧೇಯ ಮೇತತ್ ॥ ೪ ॥**

ವ್ಯಾಖ್ಯಾನವು. **ಅಧಿದೈವತವು ಪುರುಷ**ನೆಂದು ಮೂಲದಲ್ಲಿ ಹೇಳಲ್ಪಟ್ಟಿರುವದರಿಂದ, ಎಲ್ಲಾ ಆತ್ಮಸ್ವರೂಪವು ಒಂದೇ ವಿಧವಾಗಿ ವಿಲಕ್ಷಣವಾಗಿರುವಾಗ, ಅಲ್ಲಿ ತಿಳಿಯತಕ್ಕದ್ದೇನಿದೆ ಎಂದು ಕೇಳಬಹುದಾಗಿ ಅಂತಹ ಅವಸ್ಥೆಯು ವಿಲಕ್ಷಣವೆಂದು ತಿಳಿಸುವದಕ್ಕಾಗಿ, **"ಸಾಚಭೋಕ್ತೃತ್ವಾವಸ್ಥಾ"** ಎಂಬ ವಾಕ್ಯದ ಮೂಲಕ ತಿಳಿಸಿ, ಅಂತಹ ಅನುಸಂಧಾನವು ಐಶ್ವರ್ಯಾರ್ಥಿಗೆ ಆವಶ್ಯಕವೆಂದು ಉಪದೇಶಿಸಿರುತ್ತಾರೆ. ಇಲ್ಲಿ ಅಂತಹ ಪುರುಷನು ಜ್ಞಾತವ್ಯವೆಂದು, ಹೇಳುವದರ ಅಭಿಪ್ರಾಯವೇನೆಂದರೆ ಭಾವಪ್ರಧಾನವಾಗಿ ಅರ್ಥಮಾಡಿ, ಅಂತಹ ಐಶ್ವರ್ಯಾರ್ಥಿಯಾದ ತನಗೆ ಅಂತಹ ಅವಸ್ಥೆಯು ಲಭಿಸುತ್ತದೆಂಬ ಅನುಸಂಧಾನವಿರತಕ್ಕದ್ದೆಂಬ ಭಾವವು. ಇಂತಹ ಪ್ರಾಪ್ತವಾಗುವ ಅವಸ್ಥೆಯೇ ಆತನಿಗೆ ಜ್ಞಾತವ್ಯಾಂಶವೆಂಬುದು ಮುಖ್ಯ ತಾತ್ಪರ್ಯವು.

ಮುಂದೆ ಅಧಿಯಜ್ಞ ಶಬ್ದಕ್ಕೆ ಭಾಷ್ಯವನ್ನು ಬರೆಯುವರಾಗಿ ಅದು ಎಲ್ಲಾ ಭಕ್ತರಿಗೂ ಜ್ಞಾತವ್ಯವೆಂದುಪದೇಶಿಸುತ್ತಾರೆ.—**ಅಧಿಯಜ್ಞೋಽಹಮೇವ** ಎಂಬುದರ ತಾತ್ಪರ್ಯವೇನೆಂದರೆ, **ಅಧಿಯಜ್ಞ ಶಬ್ದನಿರ್ದಿಷ್ಟೋಽಹಮೇವ** - ಅಧಿಯಜ್ಞ ಶಬ್ದದಿಂದ ಬೋಧಿಸಲ್ಪಟ್ಟವನು ನಾನೇ ಎಂಬುದು. **ಅಧಿಯಜ್ಞ** ಶಬ್ದದ ನಿರ್ವಚನವು ಹೇಗೆ ಎಂದರೆ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—**ಯಜ್ಞೈರಾರಾಧ್ಯತಯಾ ವರ್ತಮಾನಃ** - ಯಜ್ಞಗಳಿಂದ ಆರಾಧಿಸಲ್ಪಟ್ಟವನಾಗಿರುವವನು; ಅಧಿಯಜ್ಞನೆಂದರೆ ಯಜ್ಞದಲ್ಲಿ ಸಂಬಂಧಿಸಿದವನು ಎಂಬರ್ಥವಾಗುವದರಿಂದ **ಯಜ್ಞೈರಾರಾಧ್ಯತಯಾ ವರ್ತಮಾನಃ** ಎಂದು ಭಾಷ್ಯವು. **ಈ** ಉಪಾಸಕನಿಂದ ಆರಾಧಿಸಲ್ಪಡುವವರು ಇಂದ್ರಾದಿ ದೇವತೆಗಳಾಗಿರುವಾಗ ತಾನು ಹೇಗೆ ಆರಾಧ್ಯನು ಎಂಬುದನ್ನು ವ್ಯಕ್ತಪಡಿಸುವದಕ್ಕಾಗಿ, ಮೂಲದಲ್ಲಿ **ಅತ್ರ ದೇಹೇ** ಎಂಬೆರಡು ಪದಗಳಿಗೆ ವ್ಯಾಖ್ಯಾನ ಬರೆಯುತ್ತಾರೆ.— **ಅತ್ರ** ಎಂದರೆ ಈ ಇಂದ್ರಾದಿಗಳಲ್ಲಿ, ಅವರು ಯಾರೆಂದರೆ, **ಮಮ ದೇಹಭೂತೇ** - ಇದು ಮೂಲದ **ದೇಹೇ** ಎಂಬುದರ ವ್ಯಾಖ್ಯಾನವು, ನನ್ನ ದೇಹರೂಪರಾದ ಈ ದೇವತೆಗಳಲ್ಲಿ, **ಆತ್ಮತಯಾಸ್ಥಿತೋಽಹಮೇವ**-ಆತ್ಮಾವಾಗಿ ಇರುವವನು ನಾನೆಯೇ, ಅಧಿಯಜ್ಞ ಎಂಬಲ್ಲಿ ಅಧಿಶಬ್ದದಿಂದ ಬೋಧಿತ ಸಂಬಂಧವು ಹೇಗೆ ಎಂದರೆ, ಆ ಇಂದ್ರಾದಿಗಳು ನನಗೆ ಶರೀರವು, ಅವರುಗಳಿಗೆ ನಾನು ಆತ್ಮಾ ಹೀಗೆ ಸಂಬಂಧವು. ಶರೀರಕ್ಕೆ ಮಾಡಿದ ಆರಾಧನರೂಪ ಉಪಚಾರಗಳೆಲ್ಲಾ ಶರೀರದಲ್ಲಿರುವ ಆತ್ಮಾವಿಗೆ ಎಂಬುದು ಸ್ಪಷ್ಟವೆಂಬ ಭಾವವು. ನಮ್ಮ ಶರೀರಕ್ಕೆ ಮಾಡಿದ ಸಕಲೋಪಚಾರಗಳಿಂದ ನಮ್ಮಲ್ಲಿರುವ ಆತ್ಮನು ಹೇಗೆ ಆನಂದಿಸುವನೋ ಹಾಗೆ ಎಂಬ ಭಾವವು. ದೇಹಕ್ಕೆ ಹಾಕಿದ ಹಾರವು ಒಳಗಿರುವ ಆತ್ಮನನ್ನು ಹೇಗೆ ಪ್ರೀತಿಗೊಳಿಸುತ್ತದೋ, ಹಾಗೆ ಶರೀರಗಳಾದ ಈ ಇಂದ್ರಾದ್ಯಾರಾಧನೆಗಳಿಂದ ಆತ್ಮಾವಾದ ತಾನೇ ಪ್ರೀತನಾಗುವನೆಂಬ ಭಾವವು. ಈ ಅಭಿಪ್ರಾಯವೇ ಹಿಂದೆಯೂ **"ಯಾಂ ಯಾಂತನುಂ"** ಎಂಬಲ್ಲಿ (ಗೀ. ೭. ೨೧) ಉಪಪಾದಿತವಾಗಿರುತ್ತದೆ; ಅದನ್ನು ಜ್ಞಾಪಿಸುವದಕ್ಕಾಗಿಯೇ, **ಅತ್ರ ದೇಹೇ** ಎಂದು ಮೂಲದಲ್ಲಿ ಹೇಳಿದುದಕ್ಕೆ, **ಮಮ ದೇಹ ಭೂತೇ** ಎಂದು ಭಾಷ್ಯವನ್ನು ಬರೆದಿರುತ್ತಾರೆ. ನಮಗೆ ದೇಹಪ್ರಾಪ್ತಿಯಾದರೋ ಪ್ರಾರಬ್ಧಕರ್ಮಾನುಗುಣವಾಗಿ; ಪರಮಾತ್ಮನಿಗೆ ಈ ಚಿದಚಿತ್ತೆಲ್ಲಾ ಶರೀರವಾಗಿರುವದು ಕರ್ಮಮೂಲಕವಲ್ಲವು, ಸ್ವಸಙ್ಕಲ್ಪಾನುಗುಣವಾಗಿ ಎಲ್ಲಕ್ಕೂ ಆತನು ಆತ್ಮವಾದುದರಿಂದ **ದೇಹ**ವೆಂಬ ಶ್ರೀಕೃಷ್ಣೋಕ್ತಿಗೆ **ದೇಹಭೂತ**, ದೇಹಪ್ರಾಯವಾದುದೆಂಬ ವ್ಯಾಖ್ಯಾನವು.

ಅವರುಗಳಿಗೆ ಕೊಡುವ ಹವಿಸ್ಸೂ ಕೂಡ ನನಗೇನೇ ಎಂಬದಾಗಿ ಚತುರ್ಮುಖನು ದೇವತೆಗಳನ್ನು ಸಮಾಧಾನಮಾಡಿದ ಇತಿಹಾಸಮೂಲಕ ಪ್ರಮಾಣಸಿದ್ಧವು. ಆಗಲಿ, **ಅತ್ರದೇಹೇ** ಎಂಬುದಕ್ಕೆ **ಇನ್ದ್ರಾದೌ ಮಮದೇಹ ಭೂತೇ** ಎಂಬ ವ್ಯಾಖ್ಯಾನವು ಹೇಗೆ ಎಂದರೆ, **ಯಜ ದೇವ ಪೂಜಾಯಾಂ** ಎಂಬ ಅಧಿಯಜ್ಞ ಶಬ್ದದ ವ್ಯುತ್ಪತ್ತಿಮೂಲಕ ದೇವತೆಗಳಾದ ಇಂದ್ರಾದಿಗಳ ಆರಾಧನೆ ಎಂಬರ್ಥವು ತೋರಿಬಂದು ಅಂತಹ ಆರಾಧನೆಯಿಂದ ಆರಾಧ್ಯನು ತಾನೇ ಎಂದು **ಅಧಿಯಜ್ಞೋಽಹಮೇವ** ಎಂದು ಹೇಳಿದರು. ಅವರುಗಳು ಆರಾಧಿಸಲ್ಪಟ್ಟರೂ ತಾನೇ ಆರಾಧಿಸಲ್ಪಟ್ಟವನು ಎಂಬುದು ಅವಧಾರಣದಿಂದ ಸೂಚಿತವು. ಆದುದರಿಂದಲೂ **ಅಹಮೇವ** ಎಂಬ ಅವಧಾರಣವು. ಹಾಗೆಯೇ **"ವಿಷ್ಣುಸ್ಸರ್ವಾ ದೇವತಾಃ"** ಎಂಬ ಶ್ರುತಿ ಪ್ರಮಾಣವೂ ಇರುತ್ತದೆ. ಈ ಅವಧಾರಣಕ್ಕೆ ಇನ್ನೊಂದು ವಿಧವಾಗಿಯೂ ಸ್ವಾರಸ್ಯವನ್ನು ಕಲ್ಪಿಸಬಹುದು, ಹೇಗೆಂದರೆ ಹಿಂದೆ ಅರ್ಜುನನು ಪ್ರಶ್ನಿಸಿದ, **ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ ಅಧಿದೈವತ** ಶಬ್ದಗಳಿಂದ ತಾನಲ್ಲದೆ ಇತರ ವಾದವುಗಳು ಹೇಳಲ್ಪಟ್ಟವು, ಈಗ **ಅಧಿಯಜ್ಞ** ಶಬ್ದದಿಂದ ನಿರ್ದಿಷ್ಟನಾದರೋ ನಾನೇ ಎಂದು ಅವಧಾರಣ ಪ್ರಯೋಗವೆಂದಾದರೂ ಭಾವಿಸಬಹುದು. ಅರ್ಜುನ ಪ್ರಶ್ನೆಯಾದ, **ಅಧಿಯಜ್ಞಃ; ಕಥಂಕೋತ್ರ** ಎಂಬಲ್ಲಿ **ಕಃ ಕಥಂ** ಎಂಬಂಶಗಳಲ್ಲಿ ಇದರಿಂದ ಉತ್ತರವು ಹೇಳಲ್ಪಟ್ಟಿತು, **ಯಜ್ಞೈಃ ಆರಾಧ್ಯತಯಾ, ಅಧಿಯಜ್ಞಃ ಅಹಮೇವ** ಎಂಬುದು **ಕಃ** ಎಂಬುದಕ್ಕೆ ಉತ್ತರವು **ಕಥಮ್** ಎಂಬುದಕ್ಕೆ ಉತ್ತರವು **"ಯಜ್ಞೈ ರಾರಾಧ್ಯತಯಾ"** ಎಂಬುದು; ಏಕೆಂದರೆ ಈ ದೇವತೆಯು, ಪರಮಾತ್ಮನಾದ ತನಗೆ ಶರೀರವಾಗಿರುವದರಿಂದ ತಾನೇ ಆರಾಧ್ಯನು ಎಂಬ ಭಾವವು. ಈ ಅಭಿಪ್ರಾಯವನ್ನೇ **"ವಿಷ್ಣುಸ್ಸರ್ವಾದೇವತಾಃ"** ಎಂಬ ಶ್ರುತಿಯು ಬೋಧಿಸುತ್ತದೆ. ಈ ಅಧಿಯಜ್ಞವಿಷಯ ಜ್ಞಾನವು ಜ್ಞಾನಿಗೆ ಮಾತ್ರವೇ ಅಥವಾ ಅರ್ಥಾರ್ಥಿಗೆ ಮಾತ್ರವೇ ಆವಶ್ಯಕವೆಂದು ಭಾವಿಸತಕ್ಕದ್ದಲ್ಲವು, ಉಪಾಸನ ಸಾಮಾನ್ಯಕ್ಕೆ ಆವಶ್ಯಕವಾಗಿ ನಾಲ್ಕು ಜನ ಭಕ್ತರಿಗೂ ಬೇಕಾದುದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಹೀಗೆ ಇಂದ್ರಾದಿಗಳಾಗಿ ನನ್ನ ಶರೀರಪ್ರಾಯರಾದವರಲ್ಲಿ ಇರುವ ನಾನೇ, **ಯಜ್ಞೈರಾರಾಧ್ಯ ಇತಿ** - ಯಜ್ಞಗಳಿಂದ ಆರಾಧಿಸಲ್ಪಟ್ಟವನು ಎಂಬದಾಗಿ, **ಮಹಾಯಜ್ಞ**ಗಳೇ ಮೊದಲಾದ **ನಿತ್ಯನೈಮಿತ್ತಿಕಗಳನ್ನನುಷ್ಠಿಸುವ ವೇಳೆಯಲ್ಲಿ ತ್ರಯಾಣಾಮಧಿಕಾರಿಣಾಂ, ಆರ್ತ** ಮತ್ತು ಅರ್ಥಾರ್ಥಿಯಾದ ಐಶ್ವರ್ಯಕಾಮಿ, ಜಿಜ್ಞಾಸು, ಜ್ಞಾನಿಗಳಾದ ಮೂರು ಅಧಿಕಾರಿಗಳಿಂದಲೂ, **ಅನುಸಂಧೇಯ ಮೇತತ್**-ಇದು ತಿಳಿಯತಕ್ಕ ವಿಷಯವು. ಇದು ಮುಖ್ಯವಾಗಿ ಎಲ್ಲಾ ಭಕ್ತರುಗಳಿಂದಲೂ ತಿಳಿಯತಕ್ಕ ಅಂಶವು, ಏತಕ್ಕೆಂದರೆ ನಿತ್ಯನೈಮಿತ್ತಿಕಗಳೂ ಮಹಾ ಯಜ್ಞಗಳಲ್ಲೇ ಸೇರಿದವುಗಳಾಗಿ, ಅವುಗಳಲ್ಲಿ ದೇವತೆಗಳನ್ನು ಕುರಿತ ಆರಾಧನೆಯಾಗಿ ತೋರಿಬರುವದರಿಂದ, ಅಂತಹ ಆರಾಧನೆಗಳಲ್ಲಿ ಶ್ರಿಯಃಪತಿಯೇ ಆರಾಧಿಸಲ್ಪಡುವನೆಂಬ, ಅನ್ಯದೇವತಾರಾಧನೆಯು ಎಂದಿಗೂ ಆಗುವದಿಲ್ಲವೆಂಬ, ವಿಷಯವು ಮುಖ್ಯವಾಗಿ ತಿಳಿಯತಕ್ಕದ್ದೆಂಬ ಭಾವವು.

**ಮೂಲಕ್ಕೆ ಅರ್ಥವು:—**ಈ ಶ್ಲೋಕವು **"ಪ್ರಯಾಣ ಕಾಲೇಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ"** ಎಂಬ ಅರ್ಜುನ ಪ್ರಶ್ನೆಗೆ ಉತ್ತರವು.—**ಅನ್ತಕಾಲೇಚ** - ದೇಹಾವಸಾನ ಕಾಲವಲ್ಲಿಯಾದರೋ, **ಮಾಮೇವ** - ನನ್ನನ್ನೇ, **ಸ್ಮರನ್** - ಸ್ಮರಿಸುತ್ತಾ, **ಕಳೇಬರಂ** - ಈ ಸ್ಥೂಲರೂಪ ಶರೀರವನ್ನು, ಇಲ್ಲಿ ಸ್ಥೂಲ ಶರೀರವೆಂದೇ ಅರ್ಥಮಾಡಬೇಕು, ಏಕೆಂದರೆ ದೇಹಾವಸಾನಾನಂತರವೂ ಗಮನವಿರುವದರಿಂದ ಆ ಗಮನಕ್ಕೆ ಸೂಕ್ಷ್ಮ ಶರೀರವು ಆವಶ್ಯಕವಾಗಿ ದೇಹಾವಸಾನಾನಂತರವೂ ಅನುವರ್ತಿಸಿ ಬರುತ್ತದೆಯಾದುದರಿಂದ, **ಮುಕ್ತ್ವಾ** - ಬಿಟ್ಟು

**ಮೂ. ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಳೇಬರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫.**

**ಭಾ. ಇದಮಪಿ ತ್ರಯಾಣಾಂ ಸಾಧಾರಣಮ್ । ಅನ್ತಕಾಲೇ ಚ ಮಾಮೇವ ಸ್ಮರನ್, ಕಳೇಬರಂ ತ್ಯಕ್ತ್ವಾ ಯಃಪ್ರಯಾತಿ, ಸಃ ಮದ್ಭಾವಂ ಯಾತಿ - ಮಮ ಯೋ**

**ಯಃ**-ಯಾವನು, **ಪ್ರಯಾತಿ**-ಹೊರಟುಹೋಗುವನೋ, **ಸಃ**-ಅವನು, **ಮದ್ಭಾವಂ**-ನನ್ನಿಂದ ಭಾವಿತವಾದುದನ್ನು, ಅಥವಾ ನನ್ನ ಸಮಭಾವವನ್ನು, **ಯಾತಿ**-ಹೊಂದುವನು, **ಅತ್ರ**-ಈ ವಿಷಯದಲ್ಲಿ **ಸಂಶಯಃ ನಾಸ್ತಿ** - ಸಂಶಯವು ಇರುವದಿಲ್ಲವು. ಈ ಶ್ಲೋಕದಲ್ಲಿ ಹೇಳಿರುವ ಅಧಿಕಾರಿಯು ಜ್ಞಾನಿಮಾತ್ರವೇ? ಇಲ್ಲವೇ ಎಲ್ಲಾ ಭಕ್ತರಲ್ಲಿ ಯಾರಾದರೂ ಆಗಬಹುದೇ? ಎಂಬ ವಿಚಾರದಲ್ಲಿ ಕೆಲವರು ಜ್ಞಾನಿಗೆ ಅನ್ವಯಿಸಿರುತ್ತಾರೆ; ಹಾಗೆ ಅನ್ವಯಿಸಲು, **ಮಾಮೇವಸ್ಮರನ್**-ನನ್ನನ್ನೇ ಸ್ಮರಿಸುತ್ತಾ ಎಂಬ ಪ್ರಯೋಗದ ಬಲವಿರುತ್ತದೆಂದು ಹೇಳುವರು. ಆದರೆ ಇತರ ಐಶ್ವರ್ಯಾರ್ಥಿಗಳು ತಮ್ಮ ತಮ್ಮ ಮನೋರಥಾವಾಪ್ತಿಗಾಗಿ ಶ್ರೀಕೃಷ್ಣನನ್ನೇ ಸ್ಮರಿಸುವದರಿಂದ ಏವ ಎಂಬ ಅವಧಾರಣದಿಂದ ಅನ್ಯದೇವತೆಗಳನ್ನು ವ್ಯವಚ್ಛೇದಮಾಡಿ ತನ್ನನ್ನೇ ಎಂದು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವೆಂದೂ ಭಾವಿಸಬಹುದು. ಹೀಗೆ ಭಾವಿಸಿ ಶ್ರೀ ಭಾಷ್ಯಕಾರರು ಈ ಶ್ಲೋಕವು ಎಲ್ಲಾ ಭಕ್ತರುಗಳಿಗೂ ಅನ್ವಯಿಸುತ್ತದೆಂದು ಅಭಿಪ್ರಾಯಪಟ್ಟಿರುತ್ತಾರೆ. ಆಗ **ಸಃ ಮದ್ಭಾವ ಯಾತಿ** ಎಂದರೆ ಎಲ್ಲರಿಗೂ ಮದ್ಭಾವ ಹೇಗೆ? ಎಲ್ಲರಿಗೂ ಆಗ ಪರಮಾತ್ಮನ ಸಾಯುಜ್ಯ ಉಂಟಾಗುತ್ತದೆಂದು ಅರ್ಥ ಹೇಳಲಾಗುವದಿಲ್ಲವು. ಜ್ಞಾನಿಯ ವಿಷಯವಲ್ಲಾದರೋ ಹಾಗೆ ಅರ್ಥ ಹೇಳಬಹುದು; ಆಗ ಹೇಗೆ ಅರ್ಥವೆಂದರೆ ಆತನ ಮನೋರಥಾನುಗುಣವಾಗಿ, **ಮದ್ಭಾವಂ** - ನಾನು ಭಾವಿಸಿರುವದನ್ನು, **ಯಾತಿ** - ಹೊಂದುವನು ಎಂಬರ್ಥವನ್ನು ಹೇಳತಕ್ಕದ್ದು. ಕೆಲವರು ಜ್ಞಾನಿಯನ್ನು ಕುರಿತು ಹೇಳಿದುದು ಎಂದರ್ಥ ಮಾಡುವಾಗ **ಮದ್ಭಾವಂ** ಎಂದರೆ ವೈಷ್ಣವ ತತ್ತ್ವವನ್ನು ಹೊಂದುವನು ಎಂದು ಹೇಳಿ ಸ್ವರೂಪೈಕ್ಯವನ್ನು ಬೋಧಿಸಿರುತ್ತಾರೆ. ಮದ್ಭಾವವೂ ನಾನೂ ಎರಡೂ ಹೇಗೆ ಒಂದೇ ಯಾದೀತು? ಆಗ **ಮಾಂ ಯಾತಿ** ಎಂದೇನಾದರೂ ಒಂದು ವೇಳೆ ಇದ್ದುದಾದರೆ, ಹಾಗೆ ಬಲಾತ್ಕರಿಸಿ ಯಾದರೂ ಅರ್ಥಮಾಡಬಹುದಾಗಿತ್ತು. **ಮದ್ಭಾವಂ** ಎಂದಿರುವದರಿಂದ ಅಂತಹ ಸ್ವರೂಪೈಕ್ಯವೆಂದರ್ಥಮಾಡಲು ಸಾಧ್ಯವೇ ಇಲ್ಲವು. ॥ ೫ ॥

**ಭಾಷ್ಯಾರ್ಥವು:—ಪ್ರಯಾಣಕಾಲೇ ಚ ಕಥಂ** ಎಂಬ ಅರ್ಜುನನ ಪ್ರಶ್ನೆಗೆ ಉತ್ತರವಾದುದರಿಂದ, ಈ ಶ್ಲೋಕವು ಮೇಲೆ ಹೇಳಿದ ಮೂರುವಿಧ ಭಕ್ತಾಧಿಕಾರಿಗಳಿಗೂ ಅನ್ವಯಿಸುತ್ತದೆಂದು ಭಾವಿಸಿ ಇದಮಪಿ ಎಂದಾರಂಭಿಸಿ, ಹೇಳುತ್ತಾರೆ. **ಇದಮಪಿ** ಇದೂ ಕೂಡ ಎಂದರೆ ಅಧಿಯಜ್ಞ ಶಬ್ದವು ಹೇಗೆ ಎಲ್ಲಾ ಭಕ್ತರಿಗೂ ಅನ್ವಯಿಸುತ್ತದೋ, ಹಾಗೆಯೇ ಇದೂ ಕೂಡ ಎಂಬರ್ಥವು, ಆದುದರಿಂದಲೇ **ಅಪಿ** ಶಬ್ದದ ಪ್ರಯೋಗವು, **ತ್ರಯಾಣಾಂ** - ಮೂರಾದ ಎಲ್ಲಾವಿಧ ಭಕ್ತಾಧಿಕಾರಿಗಳಿಗೂ, **ಸಾಧಾರಣಂ** - ಸಾಧಾರಣವು, ಎಲ್ಲಾವಿಧ ಭಕ್ತಾಧಿಕಾರಿಗಳಿಗೂ ಅನ್ವಯಿಸತಕ್ಕದ್ದಾಗಿರುತ್ತದೆಂಬ ಭಾವವು. ಶ್ಲೋಕಕ್ಕೆ ಅನ್ವಯವನ್ನು ದಯಪಾಲಿಸುತ್ತಾರೆ.—**ಅನ್ತಕಾಲೇ ಚ ಮಾಮೇವ ಸ್ಮರನ್, ಕಳೇಬರಂ ತ್ಯಕ್ತ್ವಾ** ಎಂದು ಅನ್ವಯವು, ಮೂಲದ **ಮುಕ್ತ್ವಾ** ಎಂಬುದಕ್ಕೆ **ತ್ಯಕ್ತ್ವಾ** ಎಂದು ಅರ್ಥಹೇಳಿದರು, ಅದು ಏಕೆಂದರೆ **ಮುಕ್ತ್ವಾ** ಎಂದರೆ ಪ್ರಾಕೃತ ಶರೀರವು ಸಂಪೂರ್ಣವಾಗಿ ಹೋಗುವದಿಲ್ಲವೆಂದೂ, ಸೂಕ್ಷ್ಮ ಶರೀರವು ಅನುಸರಿಸಿ ಬರುತ್ತದೆಂದೂ, ಅದು ಅರ್ಚಿರಾದಿ ಮಾರ್ಗದಲ್ಲಿ ಹೋಗಿ ಮುಕ್ತಿಹೊಂದು

**ಭಾ. ಭಾವಃ-ಸ್ವಭಾವಃ, ತಂ ಯಾತಿ, ತದಾನೀಂ ಯಥಾ ಮಾ ಮನಸಂಧತ್ತೇ, ತಥಾ ವಿಧಾಕಾರೋ ಭವತೀತ್ಯರ್ಥಃ। ಯಥಾ ಆದಿಭರತಾದಯ ಸ್ತದಾನೀಂ ಸ್ಮರ್ಯ ಮಾಣ ಮೃಗಸಜಾತೀಯಾಕಾರಾ ಸ್ಸಂಭೂತಾಃ ॥ ೫ ॥**

ವವನಿಗೆ ವಿರಜಾವಗಾಹನೆಯಿಂದ ಆ ಸೂಕ್ಷ್ಮ ಶರೀರವೂ ತೊಲಗುತ್ತದೆಂದೂ, ಮುಕ್ತಿ ಇಲ್ಲದೆ ಪುನರ್ಜನ್ಮವೆತ್ತುವವನು ಧೂಮಾದಿಮಾರ್ಗದಲ್ಲಿ ಹೋಗುವವನೆಂದೂ, ಅರ್ಚಿರಾದಿಗತಿಯೋ ಆಗಲಿ, ಧೂಮಾದಿ ಗತಿಯೋ ಆಗಲಿ, ಅಂತೂ ಆತ್ಮನು ದಾರಿ ನಡೆಯಬೇಕಾಗಿರುವದರಿಂದಲೂ ಶರೀರವಿಲ್ಲದೇ ಆಗುವದಿಲ್ಲವಾದುದರಿಂದ ಈ ಸ್ಥೂಲವಾದ ಕಳೇಬರವನ್ನು ಬಿಟ್ಟರೂ, ಸೂಕ್ಷ್ಮ ಶರೀರವು ಅನುಸರಿಸಿ ಬರುವವರಿಂದ **ಮುಕ್ತ್ವಾ** ಎಂದು ಹೇಳಿದರೆ ಎಲ್ಲಾ ಶರೀರವನ್ನು ಬಿಟ್ಟು ಎಂಬರ್ಥವಾಗಬಹುದೆಂದು ಭಾವಿಸಿ ಈ ಸ್ಥೂಲವಾದ ಕಳೇಬರವನ್ನು **ತ್ಯಕ್ತ್ವಾ** ಎಂದು ಅರ್ಥ ಮಾಡಿರುತ್ತಾರೆ. ಇದೇ ಅಧ್ಯಾಯದಲ್ಲೇ ಮುಂದೆ ಈ ಅರ್ಚಿರಾದಿ ಧೂಮಾದಿಗತಿಗಳ ವಿಷಯವು ಉಪದೇಶಿಸಲ್ಪಡುತ್ತದೆ. (೨೪-೨೬) ಹೀಗೆ ಈ ಸ್ಥೂಲ ಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದ ಮೂಲಕ, **ಯಃ ಪ್ರಯಾತಿ**-ಯಾವ ಉಪಾಸಕನು ಹೊರಟುಹೋಗುವನೋ, **ಸಃ**-ಅವನು, **ಮದ್ಭಾವಂ**-ಆತನು ಯಾವ ಪುರುಷಾರ್ಥ ಪ್ರಾಪ್ತಿಗಾಗಿ ನನ್ನನ್ನು ಉಪಾಸಿಸಿದನೋ ಅದಕ್ಕನು ಗುಣವಾದ, **ಮದ್ಭಾವಂ**- ನನ್ನಿಂದ ಭಾವಿತವಾದುದನ್ನು **ಯಾತಿ** - ಹೊಂದುವನು, ಇದಕ್ಕೆ ವ್ಯಾಖ್ಯಾನ ಬರೆಯುತ್ತಾರೆ.—**ಮಮ ಯೋ ಭಾವಃ ತಂ ಯಾತಿ**-ನನಗೆ ಯಾವುದು ಭಾವ ವಾಯಿತೋ ಎಂದರೆ **ಸ್ವಭಾವಃ** - ಸ್ವತಂತ್ರಿಸಿ ಭಾವಿತವಾದುದಾಯಿತೋ **ತಂ** - ಅದನ್ನು **ಯಾತಿ**-ಹೊಂದುವನು, ಎಂದರೆ **ತದಾನೀಂ**-ಆ ಅಂತಕಾಲದಲ್ಲಿ **ಯಥಾ**-ಹೇಗೆ, **ಮಾಂ ಅನು ಸಂಧತ್ತೇ**-ನನ್ನನ್ನು ಅನುಸಂಧಾನಮಾಡುವನೋ ಎಂದರೆ ಯಾವ ಇಷ್ಟಪ್ರಾಪ್ತಿಯನ್ನುದ್ದೇ ಶಿಸಿ ಅನುಸಂಧಾನಮಾಡುವನೋ, **ತಥಾ ವಿಧಾಕಾರೋ ಭವತೀತ್ಯರ್ಥಃ** - ಅದಕ್ಕನುಗುಣ ವಾದ ಆಕಾರವುಳ್ಳವನಾಗುವನು ಎಂಬರ್ಥವು. ಹೇಗೆಂದರೆ ಅದಕ್ಕೆ ನಿದರ್ಶನವಾಗಿ ಒಂದು ಇತಿಹಾಸವನ್ನು ಸೂಚಿಸುತ್ತಾರೆ. **ಯಥಾ ಆದಿ ಭರತಾದಯಃ**-ಹೇಗೆ ಆದಿ ಭರತರೇ ಮೊದ ಲಾದವರು, **ತದಾನೀಂ** - ಆ ಅಂತಕಾಲದಲ್ಲಿ **ಸ್ಮರ್ಯಮಾಣ ಮೃಗ ಸಜಾತೀಯಾ ಕಾರಾ ಸ್ಸಂಭೂತಾಃ**-ಸ್ಮರಿಸುತ್ತಿದ್ದ ಮೃಗಕ್ಕೆ ಸಜಾತೀಯವಾದ ಆಕಾರವುಳ್ಳವರಾಗಿ ಹೇಗೆ ಪುನರ್ಜನ್ಮ ವನ್ನು ಎತ್ತಿದರೋ, ಹಾಗೆ ಎಂಬ ಭಾವವು. ಮಹಾ ಭಾಗವತೋತ್ತಮರಾದ ಈ ಆದಿಭರತರು ರಾಜ್ಯ ಪರಿಪಾಲನ ಮಾಡಿದನಂತರ ಸಾಲಗ್ರಾಮವೆಂಬ ಸ್ಥಳವಲ್ಲಿ ಪುಲಹ ಋಷ್ಯಾಶ್ರಮದಲ್ಲಿ ಚಕ್ರನದೀ ತೀರದಲ್ಲಿ, ವಾಸಮಾಡುತ್ತಿದ್ದುದರಿಂದ, ಆ ದಿವ್ಯಕ್ಷೇತ್ರ ಮಹಿಮೆಯಿಂದ ಶ್ರೀ ವಾಸು ದೇವನಲ್ಲೇ ಸ್ವಸ್ಥಚಿತ್ತರಾದುದರಿಂದ, ಇವರಿಗೆ ಉಪಾಸನಾ ರೂಪೋಪಾಯಾನುಷ್ಠಾನದಲ್ಲಿ ಮನಸ್ಸು ಪ್ರವರ್ತಿಸಿತು. ಹೀಗೆ ಉಪಾಸನದಲ್ಲೇ ನಿರತರಾಗಿರುವಾಗ ಒಂದು ದಿನ ಚಕ್ರತೀರ್ಥ ದಲ್ಲಿ ಸ್ನಾನಕ್ಕಾಗಿ ತೆರಳಿದಾಗ ಪೂರ್ಣಗರ್ಭವನ್ನು ಧರಿಸಿರುವ ಒಂದು ಹರಿಣವಧುವು ನೀರನ್ನು ಕುಡಿಯುತ್ತಿರುವ ಸಮಯದಲ್ಲಿ ಘೋರವಾದ ಸಿಂಹಘರ್ಜನೆಯುಂಟಾಗಲು, ಹರಿಣವು ಅತ್ಯಂತ ಭಯದಿಂದ ಹಾರಿದುದರಿಂದ ಗರ್ಭಪಾತವುಂಟಾಗಿ ಪ್ರಾಣವನ್ನು ಬಿಟ್ಟಿತು. ಆಗ ಇವರು ತುಂಬಾ ಕನಿಕರದಿಂದ ಆ ಮರಿಯನ್ನು ತಮ್ಮ ಆಶ್ರಮಕ್ಕೆ ತೆಗೆದುಕೊಂಡುಹೋಗಿ ರಕ್ಷಿಸುತ್ತಾ ಬಂದುದರಿಂದ "**ಸಙ್ಗೋಹಿ ಸಂಸೃತೇರ್ಹೇತುಃ**" ಎಂದು ಹೇಳಿರುವಹಾಗೆ, ಅದರಲ್ಲೇ ಅತ್ಯಂತ ಮಮತೆಯುಂಟಾದುದರಿಂದ ಉಪಾಸನೆಗೆ ಭಂಗವುಂಟಾಯಿತು. ಹಿಂದಿನ ಜನ್ಮದಲ್ಲಿ ತಮ್ಮ ಔರಸ ಪುತ್ರನನ್ನು ಅಧರ್ಮದಿಂದ ತೊರೆದ ಪ್ರಾರಬ್ಧರೂಪ ದುಷ್ಕರ್ಮವಿದ್ದುದರಿಂದ ಹೀಗೆ ಉಪಾಸನೆಗೆ ಪ್ರತಿಬಂಧಕವು ಬಂತು. ಆದರೆ "**ಅಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ**

**ಮಹತೋ ಭಯಾತ್"** (ಗೀ. ೨-೪೦) ಎಂದೂ **"ನಹಿಕಲ್ಯಾಣ ಕೃತ್ಕಶ್ಚಿತ್ ದುರ್ಗತಿಂ ತಾತಗಚ್ಛತಿ"** ಎಂದೂ **"ನಮೇ ಭಕ್ತಃ ಪ್ರಣಶ್ಯತಿ"** ಎಂದೂ (ಗೀ. ೬. ೪೦) ಹೀಗೆಲ್ಲಾ ಹೇಳಿರುವ ರೀತ್ಯಾ, ಈ ಮಹಾ ಭಾಗವತರು **"ಶುಚೀನಾಂ ಶ್ರೀಮತಾಂಗೇಹೇ ಯೋಗ ಭ್ರಷ್ಟೋಽಭಿಜಾಯತೇ"** (ಗೀ. ೬. ೪೧) ಎಂದು ಹೇಳಿರುವಹಾಗೆ ಮುಂದಿನ ಜನ್ಮದಲ್ಲಿ ಅಂಗಿರಸ್ಸೆಂಬ ಮಹಾ ಬ್ರಹ್ಮವಿತ್ತಿನ ಪುತ್ರರಾಗಿ ಜನಿಸಿ, ಕಡೆಗೆ ಉಪಾಸನ ನಿಷ್ಪತ್ತಿಯುಂಟಾಗಿ ಮೋಕ್ಷವನ್ನು ಹೊಂದಿದರೆಂಬ ಇತಿಹಾಸವುಂಟು. ಇಲ್ಲಿ ಹರಿಣವನ್ನೇ ಸ್ಮರಿಸುತ್ತಾ ಆದಿ ಭರತರು ಪ್ರಾಣ ಬಿಟ್ಟುದುದರಿಂದ ಅಂತಹ ಸಜಾತೀಯ ಹರಿಣಜನ್ಮವೇ ಅವರಿಗೆ ಉಂಟಾಯಿತು. **ಮೃಗ ಸಜಾತಿಯಾಕಾರಾಃ** ಎಂದು ಹೇಳಿದುದರ ಆಶಯವೇನೆಂದರೆ, ತಾದಾತ್ಮ್ಯವನ್ನು ಹೇಳುವ ಅದ್ವೈತಿಗಳ ಅಭಿಪ್ರಾಯಕ್ಕೆ ವಿರುದ್ಧವೆಂದು ತೋರಿಸುವದಕ್ಕಾಗಿ ಆದಿ ಭರತರು ಯಾವ ಮೃಗವನ್ನು ಸ್ಮರಿಸುತ್ತಿದ್ದರೋ ಆ ಮೃಗರೂಪವನ್ನೇ ಹೊಂದಲಿಲ್ಲವು, ಸಜಾತೀಯ ಮೃಗರೂಪವನ್ನು ತಾಳಿದರೆಂದು ಹೇಳುವದಕ್ಕಾಗಿ **ಸಜಾತೀಯ** ಶಬ್ದ ಪ್ರಯೋಗವು. ಇಲ್ಲಿ **ಮದ್ಭಾವಂ ಯಾತಿ** ಎಂಬ ಪ್ರಯೋಗವು ವಿವಿಧಾಭಿಪ್ರಾಯಗಳಿಗೆ ಕಾರಣವಾಗಿರುತ್ತದೆ. ಮುಂದಿನ ಶ್ಲೋಕವು ಯಾರನ್ನು ಕುರಿತು ಹೇಳಿದುದು? ಇದು ಯಾರನ್ನು ಕುರಿತು ಹೇಳಿದುದು? ಎಂಬುದನ್ನೀಗ ಮುಖ್ಯವಾಗಿ ವಿವೇಚನೆಯನ್ನು ಮಾಡಿ ನಿಷ್ಕರ್ಷಿಸಿ ತಿಳಿಯುವದು ಆವಶ್ಯಕವು. ಅರ್ಜುನ ಪ್ರಶ್ನೆಯು **ಕಥಂ ಜ್ಞೇಯೋಽಸಿ ನಿಯತಾತ್ಮಭಿಃ** ಎಂದು ಬಹುವಚನವಿರುವದರಿಂದ ನಾಲ್ವರು ಭಕ್ತರನ್ನು ಕುರಿತೇ ಪ್ರಶ್ನೆಯಾದುದರಿಂದ ತದನುಗುಣವಾಗಿ ಈ ಶ್ಲೋಕದಲ್ಲಿ ನಾಲ್ವರಿಗೂ ಅನ್ವಯಿಸುವಹಾಗೆ ಅರ್ಥ ಹೇಳುವದೇ ಸಮಂಜಸವು. ತನ್ನನ್ನು ಸ್ಮರಿಸುತ್ತಾ ಪ್ರಾಣಬಿಡುವವರಿಗೆ ಸದ್ಗತಿ ಎಂದು ಈ ಶ್ಲೋಕದಲ್ಲಿ ಹೇಳಿ, ಹಾಗಲ್ಲದೆ ಬೇರೆ ಸ್ಮರಣೆಯಿಂದ ಸ್ಥೂಲದೇಹವನ್ನು ತ್ಯಾಗಮಾಡುವವನಿಗೆ ಅದಕ್ಕನುಗುಣವಾದ ಪುನರ್ಜನ್ಮವೆಂದು ಸಾಮಾನ್ಯವಾಗಿ ಹೇಳಿ, ಹಾಗಲ್ಲದೆ ಎಲ್ಲಾ ಕಾಲಕ್ರಮದಲ್ಲೂ ತನ್ನನ್ನೇ ಧ್ಯಾನಿಸುತ್ತಾ ಆತನು ಮಾಡಬೇಕಾದ ವ್ಯಾಪಾರಗಳನ್ನೇ ನಡೆಸಿದರೆ, ಆ ಅಭ್ಯಾಸದಿಂದ ಅನ್ತಿಮಕಾಲದಲ್ಲೂ ತನ್ನ ಧ್ಯಾನವೇ ಉಂಟಾಗುತ್ತದೆಂದು ಹೇಳುವ ಪ್ರಕರಣವು. ತನ್ನನ್ನೇ ಉಪಾಸಿಸುತ್ತಿದ್ದರೂ ಅನ್ತಿಮ ಸ್ಮರಣೆಯು ಅನ್ಯಥಾವಾದುದಾದರೆ ಆಗಲೂ ಕೂಡ ಅದಕ್ಕೆ ಸಮಾನಾಕಾರವಾದ ಜನ್ಮವನ್ನು ಹೊಂದುವನೆಂದು ಆದಿ ಭರತ ದೃಷ್ಟಾಂತವನ್ನು ಹೇಳಿದರು. ಭಕ್ತಿಯೋಗ ನಿಷ್ಠನಿಗೇನೇ ಹೀಗಾದನಂತರ ಅನ್ಯಪುರುಷಾರ್ಥಗಳನ್ನು ಬೇಡುವ ಭಕ್ತರಾದ ಆರ್ತನಿಗೂ ಅರ್ಥಾರ್ಥಿಯೂ ಕೂಡ ಅನ್ತಿಮ ಸ್ಮೃತಿಯು ಅವರವರ ಪ್ರಾರ್ಥನಾನುಸಾರವಾಗಬಹುದಾದುದರಿಂದ ತದನುಗುಣವಾದ ಪುನರ್ಜನ್ಮಪ್ರಾಪ್ತಿ ಎಂಬುದು ಕೈಮುತಿಕನ್ಯಾಯಸಿದ್ಧವು. ಜ್ಞಾನಿಗಾದರೋ ಪರಮಾತ್ಮನೇ ಪ್ರಾಪ್ಯನಾಗಿ, ಆತನನ್ನೇ ಸ್ಮರಿಸುತ್ತಾ ಕಳೇಬರವನ್ನು ತ್ಯಾಗಮಾಡುವದರಿಂದ ಪರಮಾತ್ಮ ಸಾಯುಜ್ಯವು ನಿಸ್ಸಂಶಯವು. ಇಷ್ಟು ಅರ್ಥವು ಈ ಶ್ಲೋಕದಲ್ಲಿರುವ ಹಾಗೆ **ಮದ್ಭಾವ** ಶಬ್ದಕ್ಕೆ ಅರ್ಥಹೇಳದೆ, ಈ ಶ್ಲೋಕವು ಜ್ಞಾನಿಯ ಪರವಾಗಿ ಮಾತ್ರವೇ ಅನ್ವಯಿಸಿಬಿಟ್ಟರೆ, ಅರ್ಜುನನ ಪ್ರಶ್ನೆಯು ನಾಲ್ವರನ್ನು ಕುರಿತು ಮಾಡಲ್ಪಟ್ಟಿರುವಾಗ ಶ್ರೀಕೃಷ್ಣನ ಉತ್ತರವು ಜ್ಞಾನಿಮಾತ್ರ ಕುರಿತುದುದಾಗಿ ಉತ್ತರದಲ್ಲಿ ನ್ಯೂನತೆಯು ಏರ್ಪಡುತ್ತದೆ. ಏಕೆಂದರೆ ಮುಂದೆ ಎಲ್ಲೂ ಇನ್ನು ಮೂವರ ವಿಷಯವು ಹೇಳಲ್ಪಡದೇ ಇರುವದರಿಂದ. ಆಗಲಿ, ಮುಂದಿನ ಶ್ಲೋಕವನ್ನು ಇನ್ನು ಮೂವರಿಗೂ ಅನ್ವಯಿಸಬಹುದಲ್ಲಾ? **ವಾಪಿ** ಎಂಬ ಅವ್ಯಯಗಳು ವ್ಯಾವರ್ತಿಸಿ ಹೇಳುವುವಲ್ಲವೇ? ಎಂದರೆ ಕಷ್ಟಪಟ್ಟಾದರೂ ಆರ್ತನಿಗೂ ಅರ್ಥಾರ್ಥಿಗೂ ಅನ್ವಯಿಸಬಹುದು. ಜಿಜ್ಞಾಸುವಿಗೆ ಅನ್ವಯಿಸುವದು ತುಂಬಾ ಕಷ್ಟವಾಗುತ್ತದೆ. ಅದೇನು ಕಷ್ಟವು?

**ಯಂ ಯಂ ವಾಪಿಸ್ಮರ್ರ್ ಭಾವಂ** ಎಂದಿರುತ್ತದೆ. ಜಿಜ್ಞಾಸುವು ಪರಿಶುದ್ಧಾತ್ಮ ಸ್ವರೂಪವನ್ನು ಸ್ಮರಿಸುತ್ತಾ ಪ್ರಾಣಬಿಡುವನಾದುದರಿಂದ ಅದನ್ನೇ ಹೊಂದುವನೆಂದು ಅರ್ಥಮಾಡಬಹುದಲ್ಲಾ ಎಂದರೆ, ಅದಕ್ಕೆ ಸಮಾಧಾನ ಹೇಗೆಂದರೆ ? - ಆರ್ತನೂ, ಅರ್ಥಾರ್ಥಿಯೂ, ಜಿಜ್ಞಾಸುವೂ ಸಹ ಅವರವರುಗಳಿಗಪೇಕ್ಷಿತವಾದುವುಗಳನ್ನು ಕೊಡು ಎಂದು ಸ್ವಾಮಿಯನ್ನು ಪ್ರಾರ್ಥಿಸುತ್ತಾ ಪ್ರಾಣ ಬಿಡುವರೆಂದು ತಿಳಿಯತಕ್ಕದ್ದು. ಹೇಗೆಂದರೆ ಇದಕ್ಕೆ ನಿದರ್ಶನವಾಗಿ ದ್ರೌಪದಿಯು ಪೂರ್ವ ಜನ್ಮದಲ್ಲಿ ತನ್ನ ಪತಿಯು ಕುಷ್ಟರೋಗದಿಂದ ಮೃತನಾದ ಪ್ರಯುಕ್ತ **ಪತಿಂದೇಹಿ ಪತಿಂದೇಹಿ** ಎಂದು ಐದು ಸಲ ಹೇಳಿ ಪ್ರಾಣಬಿಟ್ಟಳಾದುದರಿಂದ, ಆಕೆಗೆ ಉತ್ತರಜನ್ಮ ಪ್ರಾಪ್ತವಾಗಿ ಐದು ಜನ ಪಾಂಡವರು ಗಂಡಂದರಾದರು ಎಂಬುದನ್ನು ಹೇಳಬಹುದು. ಪರಮಾತ್ಮನನ್ನು ಪ್ರಾರ್ಥಿಸಿರುವದರಿಂದ ಪೂರ್ವಪಕ್ಷಿಯ ಅಭಿಪ್ರಾಯಾನುಸಾರ ಮುಕ್ತಿಯೇ ಉಂಟಾಗಬೇಕಾಗಿ ಬರುತ್ತದೆ ಇದಕ್ಕೆ ಆರನೆಯ ಶ್ಲೋಕದಲ್ಲಿ ಅನುಕೂಲವಿಲ್ಲವು. **ವಾಪಿ** ಎಂಬ ಪ್ರಯೋಗದಿಂದ ಪರಮಾತ್ಮ ಸ್ಮರಣೆಯಿಲ್ಲದ ಅಧಿಕಾರಿಗಳು ಹೇಳಲ್ಪಟ್ಟರೆಂದೇ ಭಾವಿಸಬೇಕೇ ವಿನಾ, ಜ್ಞಾನಿಯಲ್ಲದೆ ಇತರ ಭಕ್ತರೆಂದು ಅರ್ಥಮಾಡಲು ಸಾಧ್ಯವೇ ಇಲ್ಲವು. ಈ ನಾಲ್ವರೂ ಪರಮಾತ್ಮನನ್ನು ಸ್ಮರಿಸುತ್ತಲೇ ಪ್ರಾಣವನ್ನು ಬಿಟ್ಟರೂ ಅವರುಗಳಿಗೆ ಅಪೇಕ್ಷಿತವಾದವುಗಳ ಸ್ಮರಣೆಯೂ ಸಹ ಇರುವದರಿಂದ ಅಂತಹ ಸ್ಮರಣೆಗಳಿಗನುಗುಣವಾದ ಪ್ರಾಪ್ಯಗಳನ್ನು ಹೊಂದುವರೆಂದು ಅರ್ಥಮಾಡುವದೇ ನ್ಯಾಯವಾದುದರಿಂದ ಮದ್ಭಾವ ಶಬ್ದಕ್ಕೆ ತದನುಸಾರವಾಗಿ ನಾಲ್ಕುಜನ ಭಕ್ತರಿಗೂ ಅನ್ವಯಿಸುವ ಹಾಗೆ ವ್ಯಾಖ್ಯಾನವೇ ಸಮಂಜಸವು. ಏಕ ಭಕ್ತಿಯಾಗಿಯೂ ನಿತ್ಯಯುಕ್ತನಾಗಿಯೂ ಇದ್ದುಕೊಂಡು ಅನ್ತಿಮ ಸ್ಮರಣೆಯೂ ಪರಮ ಪ್ರಾಪ್ತಿಗಾಗಿಯಾದರೆ, ತತ್ಪ್ರಾಪ್ತಿಯೂ, ಪರಿಶುದ್ಧಾತ್ಮ ಪ್ರಾಪ್ತಿಗಾಗಿಯಾದರೆ, ತತ್ಪ್ರಾಪ್ತಿಗಾಗಿ ಕೈವಲ್ಯವೂ, ಐಶ್ವರ್ಯಪ್ರಾಪ್ತಿಗಾಗಿಯಾದರೆ, ಅದಕ್ಕನುಗುಣವಾದ ಪುನರ್ಜನ್ಮವೂ ಉಂಟಾಗುತ್ತವೆ ಎಂಬುದೇ ತಾತ್ಪರ್ಯವು. ಇಂತಹ ಪುನರ್ಜನ್ಮವೂ ಸಹ ಪರಮ ಸುಕೃತರೂಪವಾಗಿ ಉತ್ತರೋತ್ತರ ಪರಮ ಶ್ರೇಯಸ್ಸಿಗೆ ಸಾಧಕವಾದುದೇ ಆಗುತ್ತದೆ.

ಹಾಗಾದರೆ ಮುಂದಿನ ಶ್ಲೋಕಕ್ಕೆ ಸಙ್ಗತಿಯು ಹೇಗೆ ಎಂದು ಕೇಳಬಹುದು, ಅರ್ಜುನನ ಏಳು ಪ್ರಶ್ನೆಗಳಿಗೂ ಉತ್ತರವನ್ನು ಹೇಳಿದುದು ಇಲ್ಲಿಗೆ ಮುಗಿಯಿತು. ಪುನರ್ಜನ್ಮ ಪ್ರಾಪ್ತಿಗೆ ಅಂತಿಮ ಸ್ಮರಣೆಯು ಹೇಗೆ ಹೇತುವಾಗಬಹುದೆಂಬುದನ್ನು ಪ್ರಾಸಙ್ಗಿಕವಾಗಿ ಎಲ್ಲರ ವಿಷಯದಲ್ಲೂ ಸಾಧಾರಣವಾಗಿ ಉಪದೇಶಿಸುತ್ತಾರೆಂದು ಭಾವಿಸಬಹುದು. ಅನ್ತಿಮ ದಶೆಯಲ್ಲಿನ ಕೋರಿಕೆಗಳಿಗನುಸಾರ ಕ್ಷೇತ್ರಜ್ಞನಿಗೆ ಪ್ರಾಪ್ತಿಯು ಎಂಬುದು ನಾಲ್ವರಿಗೂ ಜ್ಞಾತವ್ಯಾಂಶವೇ. ಆದುದರಿಂದ ಇದೂ ಸರ್ವ ಸಾಧಾರಣ ವಿಷಯವೇ. ಹಾಗೆಯೇ ಶ್ರೀ ಯತಿವರ್ಯರು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು:—ಅನ್ತ್ಯಪ್ರತ್ಯಯಸ್ಯ ಸ್ವಭಾವಃ**-ಅನ್ತಿಮಕಾಲದಲ್ಲುಂಟಾಗುವ ಜ್ಞಾನದ ಲಕ್ಷಣವೇನೆಂದರೆ, **ಸ್ಮರ್ತುಃ**-ಸ್ಮರಿಸುವ ಅಧಿಕಾರಿಯ, **ಸ್ವವಿಷಯ**-ತನಗೆ ಅಭಿಲಷಿತವಾದುದಾಗಿ ಸ್ಮರಿಸುತ್ತಿರುವ ವಿಷಯಕ್ಕೆ, **ಸಜಾತೀಯಾಕಾರತಾ ಪಾದನಂ**-ಅನುಗುಣವಾಗಿ ಅದೇ ಜಾತೀಯಾಕಾರವನ್ನುಂಟುಮಾಡುವದೇ, **ಇತಿ**-ಎಂಬದಾಗಿ, ಮುಂದಿನ ಶ್ಲೋಕದಲ್ಲಿ, **ಸುಸ್ಪಷ್ಟ**ವಾಗಿ, **ಆಹ**-ಹೇಳುತ್ತಾರೆ. ಹೀಗೆ ಅನ್ತಿಮ ಪ್ರತ್ಯಯದಿಂದ, ಅನ್ತಿಮ ಪ್ರತ್ಯಯಕ್ಕೆ ವಿಷಯವಾದುದಕ್ಕೆ ಸಮಾನಪ್ರಾಪ್ತಿ ಎಂಬುದು ಸರ್ವಸಾಧಾರಣ ವಿಷಯವು, ಪ್ರಪನ್ನರಾಗಿ ಪರಮಾತ್ಮನನ್ನು ಸ್ಮರಿಸುವವರಿಗೆ ಮಾತ್ರವೇ ಎಂದು ಓ ಅರ್ಜುನನೇ ತಿಳಿಯಬೇಡ. ಪ್ರಪನ್ನಾ ಪ್ರಪನ್ನರಾದ ಸಮಸ್ತ ಜನರಿಗೂ ಮುಂದಿನ ಜನ್ಮಾಂತರಾನುಗುಣವಾ

**ಭಾ. ಅ. ಸ್ಮರ್ತು ಸ್ವವಿಷಯಸಜಾತೀಯಾಕಾರತಾಪಾದನ ಮನ್ತ್ಯಪ್ರತ್ಯಯಸ್ಯ ಸ್ವಭಾವ ಇತಿ ಸುಸ್ಪಷ್ಟಮಾಹ :—**

**ಮೂ. ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇಬರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥**

ಗಯೇ, ಅನ್ತಿಮ ಪ್ರತ್ಯಯವೂ, ಆ ಅನ್ತಿಮ ಪ್ರತ್ಯಯಕ್ಕೆ ಸಮಾನಾಕಾರವುಳ್ಳ ಜನ್ಮಾಂತರವೂ ಎಂದು ತಿಳಿಯತಕ್ಕದ್ದೆಂದು ಉಪದೇಶಿಸುತ್ತಾರೆ.—

**ಮೂಲಕ್ಕೆ ಅರ್ಥವು :**—ಹಿಂದಿನ ಶ್ಲೋಕದಲ್ಲಿ ನನ್ನನ್ನೇ ಸ್ಮರಿಸುತ್ತಾ ದೇಹತ್ಯಾಗ ಉಂಟಾದರೆ **ಮದ್ಭಾವಂ ಯಾತಿ** ಎಂದು ಹೇಳಿದರು. ಈ ಮದ್ಭಾವ ಶಬ್ದವು ನಾಲ್ಕಿಂಗೂ ಅನ್ವಯಿಸುತ್ತದೆ. ಹಾಗೆಯೇ ಯಾವುದನ್ನು ಸ್ಮರಿಸುತ್ತಾ ದೇಹತ್ಯಾಗವುಂಟಾಗುತ್ತದೋ, ಸ್ಮರಿಸುತ್ತಿದ್ದುದಕ್ಕೆ ಸಮಾನವಾದ ಆಕಾರವನ್ನು ಹೊಂದುವನೆಂದು ಉಪದೇಶಿಸುತ್ತಾರೆ. ಹಿಂದಿನ ಶ್ಲೋಕದಲ್ಲಿ ನಾಲ್ಕು ಜನ ಭಕ್ತರನ್ನೂ ಕುರಿತು ಹೇಳಿ, ಮದ್ಭಾವ ಶಬ್ದವು ಜ್ಞಾನಿಗೆ ಪರಮಾತ್ಮ ಸಾಯುಜ್ಯವೂ, ಕೇವಲನಿಗೆ ಪ್ರಾಪ್ಯವಾದ ಕೈವಲ್ಯವೂ, ಐಶ್ವರ್ಯಾರ್ಥಿಗಳಿಗೆ ಅವರಿಗೆ ಪ್ರಾಪ್ಯವಾದ ಐಶ್ವರ್ಯಪ್ರಾಪ್ತಿಗಾಗಿ ಪುನರ್ಜನ್ಮಪ್ರಾಪ್ತಿಯೂ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ ಪರಮಾತ್ಮ ಸ್ಮರಣಮಾತ್ರವೇ ಅಲ್ಲದೆ ಸರ್ವಸಾಧಾರಣವಾಗಿ ಇತರಾಭಿಲಾಷೆಗಳನ್ನು ಯಾವಾಗಲೂ ಚಿನ್ತಿಸುತ್ತಾ ಪ್ರಾಣತ್ಯಾಗಮಾಡುವವರನ್ನೂ ಕೂಡ ಕುರಿತು ಹೇಳುವ ವಿಷಯವಾಗಿರುತ್ತದೆ. **ಹೇ ಕೌನ್ತೇಯ**-ಓ ಕುಂತೀ ಪುತ್ರನಾದ ಅರ್ಜುನನೇ, **ಯಂ ಯಂ**-ಯಾವಯಾವ, **ಭಾವಂ**-ಮನಸ್ಸಿನಲ್ಲಿ ಭಾವಿತವಾದುದನ್ನು, ಅಭಿಲಷಿತವಾದುದನ್ನು, **ಸ್ಮರನ್**-ಸ್ಮರಿಸುತ್ತಾ, ಇಲ್ಲಿ **ವಾ** ಶಬ್ದವು ವಿಕಲ್ಪವನ್ನು ಸೂಚಿಸುತ್ತದೆ, ಯಾವುದಾವುದನ್ನೇಯಾಗಲಿ ಎಂಬ ಭಾವವು, **ಅಪಿ** ಶಬ್ದವು ಹಿಂದಿನ ಶ್ಲೋಕದಲ್ಲಿ ಹೇಳಿದ **ಮಾಮೇವ** ಎಂಬುದನ್ನು ವ್ಯಾವರ್ತಿಸಿ ಹೇಳುವದಾಗಿರುತ್ತದೆ; ಈಶ್ವರ ಸ್ಮರಣೆಯಲ್ಲಿ ಮಾತ್ರವೇ ಈಶ್ವರ ಸಮಾನಾಕಾರಾವಾಪ್ತಿಯೆಂಬುದು, ಇತರ ವಿಧ ಸ್ಮರಣೆಯಲ್ಲೂ ತತ್ಸಮಾನಾಕಾರಾವಾಪ್ತಿ ಉಂಟೆಂಬುದನ್ನು ಸೂಚಿಸುತ್ತದೆ, **ಅಂತೇ**-ಹಿಂದಿನ ಶ್ಲೋಕದಲ್ಲಿರುವ **ಅನ್ತಕಾಲೇ** ಎಂಬುದನ್ನು ಮನಸ್ಸಿನಲ್ಲಿಟ್ಟು **ಇಲ್ಲಿಯೂ** ಅಂತೇ ಎಂದು ಹೇಳಲ್ಪಟ್ಟಿತು, **ಕಲೇಬರಂ**-ದೇಹವನ್ನು, **ತ್ಯಜನ್ತಿ**-ತ್ಯಜಿಸುವನೋ, **ತಂ ತಮೇವ**-ಹಾಗೆ ಭಾವಿತವಾದುದಕ್ಕೆ ಸಮಾನಾಕಾರವನ್ನೇ, **ಯಾತಿ**-ಹೊಂದುತ್ತಾನೆ. ಅದೇಕೆ ಹಾಗೆಂದರೆ **ಸದಾ**-ಯಾವಾಗಲೂ, ಆತನು, **ತದ್ಭಾವ ಭಾವಿತಃ**-ಅಭ್ಯಾಸರೂಪದಲ್ಲಿ ತನಗೆ ಅಭಿಲಷಿತವಾದುದನ್ನೇ ಸ್ಮರಿಸುವನಾಗಿ ಇದ್ದುದರಿಂದ ಅಂತಹ ಭಾವವನ್ನೇ ಹೊಂದುತ್ತಾನೆಂಬ ಭಾವವು. ಭಾವವೆಂದರೆ ವಸ್ತುವೆಂದಾಗಲಿ, ಮನಸ್ಸಿನಿಂದ ಭಾವಿತವಾದುದೆಂದಾಗಲಿ ಅರ್ಥವನ್ನು ಹೇಳಬಹುದು, ಅದರಿಂದ ಭಾವಿತನು ಎಂದರೆ ಸದಾ ಅದನ್ನು ಸ್ಮರಿಸುತ್ತಿರುವನು ಎಂಬ ಭಾವವು. **"ಭಾವಭಾವನಾ"** ಎಂಬ ಪ್ರಯೋಗವನ್ನು ವಿಷ್ಣುಪುರಾಣದಲ್ಲೂ ಕಾಣಬಹುದು. (ವಿ. ಪು ೬-೭-೯) ಅನ್ತಿಮ ಪ್ರತ್ಯಯವು ಪುನರಾವೃತ್ತಿಗೆ ಹೇತುವಾದರೆ ಆಗ ಅಧಿಕಾರಿಯು ಅಭಿಲಾಷೆಗೆ ಅನುಗುಣವಾದ ಜನ್ಮವನ್ನು ಹೊಂದಲು ಕಾರಣವಾಗುತ್ತದೆಂಬ ಭಾವವು. ಪರಮಾತ್ಮ ಪ್ರಾಪ್ತಿಗಾಗಿ ಆತನನ್ನೇ ಸದಾ ಸ್ಮರಿಸೋಣದರಿಂದ ಅಭ್ಯಾಸಮುಖೇನ ಅನ್ತಿಮ ಪ್ರತ್ಯಯವೂ ಪರಮಾತ್ಮ ಸ್ಮರಣರೂಪವಾಗುವದರಿಂದ ಪುನರಾವೃತ್ತಿಗೆ ಹೇತುವಾಗುವದಿಲ್ಲವು. ಹಾಗಲ್ಲದೆ ಅನ್ತಿಮ ಪ್ರತ್ಯಯವು ಪರಮಾತ್ಮಪ್ರಾಪ್ತಿಗೆ ವ್ಯತಿರಿಕ್ತ ವಿಷಯವಾದುದಾದರೆ ಪುನರಾವೃತ್ತಿಗೆ ಕಾರಣಭೂತವಾಗುವದೆಂಬುದು ಮುಖ್ಯ ತಾತ್ಪರ್ಯವು. **"ಭಾವೋ ಹಿ ಭವಕಾರಣಂ"** ಪರಮಾತ್ಮನಲ್ಲಿ ಚಿತ್ತವೃತ್ತಿ ಇಲ್ಲದೆ ಅನ್ಯಥಾ ಚಿತ್ತವೃತ್ತಿಯಾದರೆ. ಅದೇ ಪುನಸ್ಸಂಸಾರಕ್ಕೆ ಕಾರಣವೆಂದು (ಭಾಗ

೧೦. ೭೫. ೪೭) ಹೇಳಲ್ಪಟ್ಟಿರುತ್ತದೆ. ಹೀಗೆ ಹಿಂದಿನ ಮತ್ತು ಈ ಎರಡು ಶ್ಲೋಕಗಳಿಂದ ದೇಹತ್ಯಾಗ ಮಾಡಿದನಂತರ ಕೆಲವು ಉಪಾಸಕರಿಗೆ ಆವೃತ್ತಿಯನ್ನೂ ಇನ್ನೂ ಕೆಲವರಿಗೆ ಅನಾವೃತ್ತಿಯನ್ನೂ ಹೇಳಿದರು. ಇವುಗಳ ಮಾರ್ಗ ಮೊದಲಾದವುಗಳು ಮುಂದೆ ಹೇಳಲ್ಪಡುವುವು. ಈ ಶ್ಲೋಕದಲ್ಲಿರುವ ಭಾವಶಬ್ದವೂ ಐದನೆಯ ಶ್ಲೋಕದ **ಮದ್ಭಾವ** ಶಬ್ದದ **ಭಾವ** ಶಬ್ದವೂ ಎರಡೂ ಸಮಾನಾರ್ಥಕಗಳು. ಶ್ರೀ ವ್ಯಾಸಮಹರ್ಷಿಯು ಅನೇಕ ಸಂದರ್ಭಗಳಲ್ಲಿ ಗೂಢವಾಗಿ ಪ್ರಯೋಗಿಸಿ, ಅದನ್ನು ಎಲ್ಲಿ ಸರಿಯಾಗಿ ಅರ್ಥಮಾಡಿಕೊಳ್ಳದೇ ಹೋಗುವರೋ ಎಂಬ ಸಂದೇಹದಿಂದ ಮುಂದೆ ಅದರ ಅರ್ಥವನ್ನೇ ವ್ಯಕ್ತಪಡಿಸಿರುವದಕ್ಕೆ ಅನೇಕ ನಿದರ್ಶನಗಳು ಈ ಗ್ರಂಥದಲ್ಲೂ ಭಾರತದ ಮಿಕ್ಕ ಭಾಗಗಳಲ್ಲೂ ಉಂಟು. ಆದುದರಿಂದ ಮದ್ಭಾವ ಶಬ್ದದಲ್ಲೂ ಇಲ್ಲಿಯೂ ಭಾವಶಬ್ದವು ಸ್ವಭಾವವನ್ನು ಎಂದರೆ ಸ್ವಕೀಯ ಭಾವವನ್ನು ತಿಳಿಸುತ್ತದೆ. ಅಧಿಕಾರಿಯ ಭಾವನೆಯೂ ಅದರೊಂದಿಗೆ ಸೇರಿದ ವಸ್ತುವೂ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಆದುದರಿಂದಲೇ **ತದ್ಭಾವ ಭಾವಿತಃ** ಎಂಬ ಪ್ರಯೋಗವು, ಭಾವ ಶಬ್ದಾಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ಪುನರ್ಜನ್ಮವು ಆತನ ಭಾವನೆಗೆ ಅನುಸಾರವಾಗಿ ಉಂಟಾಗುತ್ತದೆಂದು ಇದರಿಂದ ಸಾಧಾರಣವಾಗಿ ಹೇಳಲ್ಪಟ್ಟಿತು. ಆದುದರಿಂದ ನಶ್ವರಭಾವನೆಗಳನ್ನು ತ್ಯಜಿಸಿ, ನನ್ನನ್ನು ಹೊಂದುವ ಭಾವನೆಯು ಸದಾ ಇದ್ದರೆ ಮರಣಕಾಲದಲ್ಲೂ ಅದರ ಸ್ಮರಣೆಯೇ ಉಂಟಾಗಿ ನನ್ನನ್ನೇ ಹೊಂದುವನಾದುದರಿಂದ ಸದಾಕಾಲವಲ್ಲೂ ನನ್ನ ಸ್ಮರಣೆಯೇ ಇರಲಿ ಎಂದು ಮುಂದಿನ ಶ್ಲೋಕದಲ್ಲಿ ಉಪದೇಶವು. ಈ ಶ್ಲೋಕವು ಮುಂದಿನ ಉಪದೇಶಕ್ಕೆ ಹೇತುವು. ಆದುದರಿಂದಲೇ ತಸ್ಮಾತ್ ಎಂದು ಮುಂದಿನ ಶ್ಲೋಕಾರಂಭವು. ಈ ನಾಲ್ಕುವಿಧ ಭಕ್ತರಲ್ಲಿ ಅನ್ತಿಮ ಸ್ಮರಣೆಯು ಐಶ್ವರ್ಯಕಾಮಿಗಳಿಗೂ ಅದಲ್ಲದೆ ಸಾಧಾರಣವಾಗಿ ಇತರರೆಲ್ಲರಿಗೂ, ಪುನರಾವೃತ್ತಿ ಲಕ್ಷಣವಾದುದೆಂದೂ, ಜಿಜ್ಞಾಸು ಜ್ಞಾನಿಗಳಿಗೆ ಮಾತ್ರ ಅಪುನರಾವೃತ್ತಿ ಲಕ್ಷಣವಾದುದೆಂದೂ, ಭಾವಿಸತಕ್ಕದ್ದಾಗಿರುತ್ತದೆ. ॥ ೬ ॥

**ಭಾಷ್ಯಾರ್ಥವು** :—ಈ ಶ್ಲೋಕದ ಭಾಷ್ಯಾವತಾರಿಕೆಯಿಂದ ಸಾಮಾನ್ಯವಾಗಿ ಎಲ್ಲರಿಗೂ ಅನ್ತಿಮ ಪ್ರತ್ಯಯಕ್ಕೆ ಕಾರಣವೇನೆಂಬುದೂ, ಆ ಅನ್ತಿಮ ಪ್ರತ್ಯಯಾನುಗುಣವಾಗಿ ಪ್ರಾಪ್ತಿಯು ಎಂಬುದೂ, ಇಲ್ಲಿ ಹೇಳಲ್ಪಡುತ್ತದೆ. ಸದಾಭಾವನೆ ಹೇಗೋ, ಹಾಗೆ ಅನ್ತಿಮ ಪ್ರತ್ಯಯವು, ತದನುಗುಣಫಲವುಳ್ಳದ್ದೆಂದು ಉಪದೇಶಿಸುತ್ತಾರೆ-**ಸ್ಮರ್ತು**ಃ ಎಂದೂ, **ಅನ್ತ್ಯಪ್ರತ್ಯಯ**ವೆಂದೂ, ಅವತಾರಿಕೆಯಲ್ಲಿ ಶ್ರೀ ಭಾಷ್ಯಕಾರರು ಪ್ರಯೋಗಿಸಿರುವದರಿಂದಲೂ, ಇದರ ಭಾಷ್ಯದಲ್ಲಿ ತಾತ್ಪರ್ಯಚಂದ್ರಿಕೆಯಲ್ಲಿ **" ನ ಕೇವಲ ಮಿಾಕ್ಷರ ವಿಷಯಾನ್ತಿಮ ಪ್ರತ್ಯಯಸ್ವಭಾವೋಯ ಮಿತಿ ಮಂತವ್ಯಂ; ಕಿನ್ತು ಸರ್ವಸಾಧಾರಣ ಮಿದಮ್;"** ಎಂದು ಹೇಳಿರುವದರಿಂದ ಕೇವಲ ಪರಮಾತ್ಮ ವಿಷಯ ಧ್ಯಾನವಲ್ಲದೆ, ಇತರ ವಿಷಯವಾಗಿಯೂ ಅರ್ಥಮಾಡುವದೂ ಸಾಧ್ಯವಾದುದರಿಂದಲೂ, ಇಲ್ಲಿ ಸರ್ವ ಶಬ್ದವು ಸಕಲರನ್ನೂ ಹೇಳಿತೆಂದು ಭಾವಿಸಬಹುದಾದುದರಿಂದ ಈ ಶ್ಲೋಕವು ಎಲ್ಲರನ್ನೂ ಕುರಿತು ಹೇಳಿದುದೆಂದು ಭಾವಿಸಬಹುದು. **ಅನ್ತೇ** ಎಂದರೆ ಹಿಂದಿನ ಶ್ಲೋಕದಲ್ಲಿರುವ **ಅನ್ತಕಾಲೇ** ಎಂಬರ್ಥವು, **ಯಂ ಯಂ ವಾಪಿ ಸ್ಮರ್ನ ಕಳೇಬರಂ ತ್ಯಜತಿ**-ಯಾವಯಾವುದನ್ನೇಯಾಗಲಿ ಸ್ಮರಿಸುತ್ತಾ ದೇಹವನ್ನು ಬಿಡುವನೋ, **ತಂ ತಂ ಭಾವ ಮೇವ**-ಹಾಗೆ ಸ್ಮರಿಸಿದ ವಿಷಯಕ್ಕನುಗುಣವಾದ ಭಾವವನ್ನೇ **ಮರಣಾನನ್ತರವೂ, ಏತಿ**-ಹೊಂದುತ್ತಾನೆ, ಅದು ಏಕೆಂದರೆ ಹೇಳುತ್ತಾರೆ - ಮೂಲದ **ಸದಾ ತದ್ಭಾವ ಭಾವಿತಃ** ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ—**ಅನ್ತ್ಯಪ್ರತ್ಯಯಶ್ಚ**-ಈತನಿಗೆ ಬರುವ ಅನ್ತಿಮ ಪ್ರತ್ಯಯವಾದರೋ, **ಪೂರ್ವಭಾವಿತ ವಿಷಯ ಏವ ಜಾಯತೇ**-ಹಿಂದೆ ಅಭ್ಯಾಸದಿಂದ ಮನಸ್ಸಿನಲ್ಲಿ ಸ್ಮರಿಸು

**ಭಾ. ಅನ್ತೇ—ಅನ್ತಕಾಲೇ, ಯಂ ಯಂ ವಾಪಿ ಸ್ಮರನ್ ಕಲೇಬರಂ ತ್ಯಜತಿ, ತಂ ತಂ ಭಾವ ಮೇವ ಮರಣಾನನ್ತರ ಮೇತಿ। ಅನ್ತ್ಯಪ್ರತ್ಯಯಶ್ಚ ಪೂರ್ವಭಾವಿತವಿಷಯ ಏವ ಜಾಯತೇ ॥೬॥**

ತ್ತಿದ್ದುದರ ವಿಷಯಕ್ಕನುಗುಣವಾಗಿಯೇ ಹುಟ್ಟುತ್ತದೆಯಷ್ಟೇ. ಆ ಭಾವನಾ ವಾಸನಾನು ಗುಣ ವಾದ ಆಕಾರವನ್ನು ಹೊಂದುತ್ತಾನೆಂಬ ಭಾವವು. ಈ ಶ್ಲೋಕವು ಸಾಧಾರಣವಾಗಿ ಹೇಳಿದುದ ರಿಂದ ಸರ್ವರಿಗೂ ಅನ್ವಯಿಸುತ್ತದೆ ಹೇಗೆಂದರೆ—ಜ್ಞಾನಿಯಾಗಿ ಪರಮಾತ್ಮನನ್ನೇ ಸದಾ ಭಾವಿ ಸುತ್ತಾ ಆತನ ಸಾಯುಜ್ಯವನ್ನು ಹೊಂದಬೇಕೆಂಬ ಭಾವನೆಯು ಇದ್ದುದಾದರೆ, ಅನ್ತಿಮ ಸ್ಮರ ಣೆಯು ಹಾಗೆಯೇ ಉಂಟಾಗಿ, ಆ ಭಾವನೆಗೆ ಅನುರೂಪವಾದ ಫಲವೇ ಉಂಟಾಗುತ್ತದೆ. ಜಿಜ್ಞಾಸುವಾಗಿ ಪರಮಾತ್ಮೋಪಾಸನೆಯನ್ನು ಮಾಡುವವನಿಗೆ ಸದಾ ಪರಿಶುದ್ಧಾತ್ಮಪ್ರಾಪ್ತಿಯನ್ನು ಹೊಂದಬೇಕೆಂಬ ಭಾವನೆಯಿರುವದರಿಂದ ಪರಿಶುದ್ಧಾತ್ಮ ಸ್ವರೂಪವನ್ನೇ ಹೊಂದುವನು. ಐಶ್ವ ರ್ಯಾರ್ಥಿಯು ಪರಮಾತ್ಮನನ್ನು ಉಪಾಸಿಸುವಾಗ ಐಶ್ವರ್ಯಪ್ರಾಪ್ತಿಯ ಭಾವನೆಯೇ ಸದಾ ಇರು ವದರಿಂದ ಮರಣಾನಂತರ ಅಂತಹ ಪ್ರಾಪ್ತಿಗನುಗುಣವಾದ ಜನ್ಮವನ್ನೆತ್ತುವನು. ಪರಮಾತ್ಮ ನನ್ನು ಉಪಾಸಿಸದೇ ಇರುವ ಇತರರೂ ಸಹ ಯಾವಾಗಲೂ ಯಾವ ಮನೋರಥವುಂಟಾಗ ಬೇಕೆಂಬ ಭಾವನೆಯನ್ನು ಇಟ್ಟಿರುತ್ತಾರೋ, ಅದನ್ನೇ ಸ್ಮರಿಸುತ್ತಾ ಪ್ರಾಣವನ್ನು ಬಿಡುವರು. ಆದುದರಿಂದ ಅಂತಹ ಭಾವನೆಗೆ ಅನುಗುಣವಾದ ಜನ್ಮವೆತ್ತುವರು. ಇಷ್ಟು ಅಭಿಪ್ರಾಯವೂ ಈ ಶ್ಲೋಕದಲ್ಲಿ ಗರ್ಭಿತವು. ಆದುದರಿಂದ ಈ ಶ್ಲೋಕವು ಹಿಂದಿನ ಶ್ಲೋಕದ ಅನುವಾದವೂ ಅಲ್ಲದೆ, ಇನ್ನೂ ಹೆಚ್ಚು ಅಭಿಪ್ರಾಯ ಗರ್ಭಿತವಾಗಿ ಸಾಧಾರಣವಾಗಿ ಎಲ್ಲರಿಗೂ ಅನ್ವಯಿಸುವ ಹಾಗೆ ಉಪಪಾದನೆ ಎಂದೂ ಭಾವಿಸತಕ್ಕದ್ದು. ಇದರಿಂದ ಅನ್ತಿಮ ಪ್ರತ್ಯಯವು ತುಂಬಾ ಮುಖ್ಯವೆಂದು ಏರ್ಪಟ್ಟಿತು. ಇತರ ಸುಕೃತಗಳಿದ್ದರೂ ಕೂಡ, ಮುಂದೆ ಒಡನೆಯೇ ಉಂಟಾ ಗುವ ಫಲವಾದರೋ ಅಭ್ಯಸ್ತಭಾವನೆಗನುಗುಣವಾಗಿ ಪ್ರಾಪ್ತವಾಗುವ ಅನ್ತಿಮಸ್ಮೃತಿಗನು ಸಾರವಾಗಿ ಫಲವುಂಟಾಗುತ್ತದೆಂದು ಏರ್ಪಟ್ಟಿತು. ಆದುದರಿಂದಲೇ ಆದಿಭರತರಿಗೆ ಪರಮಾತ್ಮೋ ಪಾಸನರೂಪವಾದ ಮಹತ್ತಾದ ಸುಕೃತವಿದ್ದರೂ ಅನ್ತಿಮ ಸ್ಮೃತಿಯು ಮೃಗದ ವಿಷಯವಾದು ದರಿಂದ ಮೃಗಜನ್ಮವನ್ನು ಹೊಂದಿದರು. ಅನ್ತಿಮ ಸ್ಮೃತಿಯು ಆವಶ್ಯಕವೆಂದು ಭಾವಿಸಿ ಕೊನೆಗೆ ಎಲ್ಲಿ ಬರುವದಿಲ್ಲವೋ ಎಂದು ಆಳ್ವಾರವರು "**ಅಪ್ಪೋದೈಕ್ಕಿಪ್ಪೋದೇ ಶೊಲ್ಲಿವೈತ್ತೇನ್**" (ಪೆರಿ. ತಿರು. ೪. ೧೦. ೧) ಅನ್ತಿಮ ಸ್ಮರಣೆಯು ಬರುತ್ತದೋ ಇಲ್ಲವೋ ಎಂಬುದಕ್ಕಾಗಿ ಈಗಲೇ ನಿನ್ನನ್ನು ಸ್ಮರಿಸುತ್ತಾ ನಾಮೋಚ್ಚಾರಣಾದಿಗಳನ್ನು ಮಾಡಿರುತ್ತೇನೆ" ಎಂಬುದರಿಂದ ಈ ಅಭ್ಯಾಸದಿಂದ ಮುಂದಕ್ಕೆ ಅನ್ತಿಮ ಸ್ಮರಣೆಯು ಉಂಟಾಗುತ್ತದೆಂಬ ಭಾವವೂ ಸೂಚಿತವು. ಯಾವಾಗ ಪ್ರಪನ್ನನಾಗಿ ಪರಮಾತ್ಮನನ್ನು ಆಶ್ರಯಿಸಿದನೋ, ಅಂತವನಿಗೆ ಕೃಪಾಸಾಗರನು ಅನುಗ್ರಹಿಸಿ, ಅನ್ತಿಮ ಸ್ಮರಣೆಯನ್ನುಂಟುಮಾಡಿ, ಪರಮಗತಿಯನ್ನು ಹೊಂದಿಸುವನೆಂದು ಶ್ರೀ ವರಾಹಪುರಾಣ ವಾಕ್ಯವಿರುತ್ತದೆ. **ಸ್ಥಿತೇ ಮನಸಿ ಸುಸ್ವಸ್ಥೇ ಶರೀರೇ ಸತಿ ಯೋ ನರಃ। ಧಾತು ಸಾಮ್ಯೇ ಸ್ಥಿತೇಸ್ಮರ್ತಾ ವಿಶ್ವರೂಪಂಚ ಮಾಮಜಮ್ । ತತಸ್ತಂ ಮ್ರಿಯಮಾ ಣಂತು ಕಾಷ್ಠಪಾಷಾಣ ಸನ್ನಿಭಮ್ । ಅಹಂ ಸ್ಮರಾಮಿ ಮದ್ಭಕ್ತಮ್ ನಯಾಮಿ ಪರಮಾಂಗತಿಮ್** " ಎಂದು ಇರುತ್ತದೆ. ॥ ೬ ॥

**ಮೂಲಕ್ಕೆ ಅರ್ಥವು** :—ಆದುದರಿಂದ ಭವಕಾರಣಭೂತವಾದ ಭಾವಗಳು ಕೂಡದು. ಅವುಗಳಿದ್ದರೆ **ತಂ ತ ಮೇವೇತಿ.** ಆದುದರಿಂದ ಅಭ್ಯಾಸಮಾಡಿ **ಮಾಮೇವಸ್ಮರನ್**-ನನ್ನನ್ನೇ ಸ್ಮರಿಸುತ್ತಾ ದೇಹವನ್ನು ಬಿಡುವಹಾಗೆ ಮಾಡಿಕೊಳ್ಳುವದು ಆವಶ್ಯಕವೆಂದು ಉಪದೇಶಿಸುತ್ತಾರೆ.

**ಮೂ. ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ।**
**ಮಯ್ಯರ್ಪಿತಮನೋಬುದ್ಧಿಃ ಮಾಮೇವೈಷ್ಯಸ್ಯಸಂಶಯಃ ॥ ೭**

ಒಂದೆ ದುಃಖಾಲಯಕ್ಕೆ ಕಾರಣಭೂತವಾದ ಪುನರ್ಜನ್ಮವು ಉಂಟಾಗುವ ಅನ್ತಿಮಸ್ಮೃತಿಯು ಯೋಗ್ಯವಲ್ಲವೆಂದು ಹೇಳಿ, ಈಗ ಅಭ್ಯಾಸಪೂರ್ವಕವಾಗಿ ತನಗೆ, ಉದರ ಪೋಷಣ ಆವಶ್ಯಕವಾಗಿ ಕರ್ತವ್ಯವಾಗಿ ಅದಕ್ಕೆ ಬೇಕಾದ ಕಾಲ ಹೋಗಲಾಗಿ ಮಿಕ್ಕ ಎಲ್ಲಾ ಕಾಲಗಳಲ್ಲೂ ತನ್ನನ್ನೇ ಸ್ಮರಿಸುತ್ತಾ ಬಂದರೆ ಮತ್ತು ಅದಕ್ಕೆ ಸಹಾಯಕಗಳಾದ ಆಜ್ಞಾರೂಪ ಕೈಙ್ಕರ್ಯಗಳನ್ನೂ ಕೂಡ ಮಾಡುತ್ತಾಬಂದರೆ, ಅನ್ತ್ಯಕಾಲದಲ್ಲೂ ನನ್ನನ್ನೇ ಸ್ಮರಿಸುವನಾಗುವದರಿಂದ ನನ್ನ ಪ್ರಾಪ್ತಿಯನ್ನೇ ಹೊಂದುವನು. ಇದರಲ್ಲಿ ಈಷದಪಿ ಸಂದೇಹಬೇಡವೆಂದು ಅನ್ತಿಮ ಪ್ರತ್ಯಯ ವನ್ನು ಹೊಂದುವ ವಿಷಯದಲ್ಲಿ ಅರ್ಜುನನು ಮಾಡಬೇಕಾದುದನ್ನು ಸಮರ್ಥನೆ ಮಾಡಿ ಹೇಳುತ್ತಾರೆ - **ತಸ್ಮಾತ್** - ಯಾವ ಕಾರಣದಿಂದ ಫಲಪ್ರಾಪ್ತಿಯು ಅನ್ತಿಮ ಪ್ರತ್ಯಯಾಧೀನವೋ, ಆ ಅನ್ತಿಮ ಪ್ರತ್ಯಯವಾದರೋ ಪ್ರತಿದಿನವೂ ಮಾಡುವ ಅಭ್ಯಾಸಾನುಗುಣವಾದುದೋ, ಆ ಕಾರಣ ದಿಂದ, ನನ್ನನ್ನೇ ನಿನಗೆ ಸಾಧ್ಯವಾದ ಸಮಸ್ತ ಕಾಲಗಳಲ್ಲೂ ಸ್ಮರಿಸುತ್ತಲೂ ಅದಕ್ಕೆ ಅನುಗ್ರಾಹಕವಾದ ಕರ್ಮಗಳನ್ನೂ ಮಾಡುತ್ತಲೂ ಇರು; ನೀನು ನನ್ನನ್ನೇ ಹೊಂದುವಿ ಎಂಬುದರಲ್ಲಿ ಸಂದೇಹವಿಲ್ಲವೆಂದು ಮುಂದೆ ನಿಗಮನಮಾಡಿ ಹೇಳುತ್ತಾರೆ.—**ಸರ್ವೇಷು ಕಾಲೇಷು**-ನಿನಗೆ ದೇಹಯಾತ್ರಾದಿಗಳಿಗೆಬೇಕಾದ ಕಾಲಗಳನ್ನು ಬಿಟ್ಟು, ನಿನಗೆ ಸಾಧ್ಯವಾದ ಸಮಸ್ತ ಕಾಲಗಳಲ್ಲೂ ಯಾವಾಗ ಸಮಸ್ತ ಕಾಲಗಳಲ್ಲೂ ಎಂದು ಹೇಳಿತೋ, ಆಗ ಪ್ರತಿದಿನವೂ ಅಭ್ಯಾಸರೂಪದಲ್ಲಿ ಸಾಧ್ಯವಾದ ಕಾಲಗಳು ಯಾವುವು ಎಂದು ಕ್ಲಿಪ್ತವಾಗಿ ನಿರ್ಧರಿಸಿಕೊಂಡು ಎಂಬ ಭಾವವು ತೋರಿ ಬರುತ್ತದೆ, **ಅನುಸ್ಮರ**-ಅನುಸರಿಸಿ ಸ್ಮರಿಸತಕ್ಕದ್ದು, ಈ ಉಪಾಸನಾರೂಪ ವಿದ್ಯೆಯು ಅಭ್ಯಾಸ ಸರಣಿಯು ಎಂದು ಹೇಳಿದಂತಾಯಿತು; **ಅನುಸ್ಮರ**-ಪದೇ ಪದೇ ಅನುಸ್ಮರಣೆಯು ಇರತಕ್ಕದ್ದು. ಅಥವಾ ಆ ಸ್ಮರಣೆಯು ತೈಲಧಾರಾ ರೂಪದಲ್ಲಿರಬೇಕೆಂದು ಸೂಚಿಸುವದಕ್ಕಾಗಿಯಾದರೂ, **ಅನುಸ್ಮರ**-ಎಂದು ಪ್ರಯೋಗಿಸಲ್ಪಟ್ಟಿತು, **ಯುಧ್ಯ ಚ**-ಈ ಸ್ಮರಣೆಗೆ ಅನುಗ್ರಾಹಕವಾದ ಕ್ಷತ್ರಿಯನಿಗೆ ಆವಶ್ಯಕವಾಗಿ ಕರ್ತವ್ಯವಾದ ದುಷ್ಟನಿಗ್ರಹರೂಪ ಯುದ್ಧವನ್ನೂ ಮಾಡತಕ್ಕದ್ದು. ಇಲ್ಲಿ ಚಕಾರ ಸ್ವಾರಸ್ಯದಿಂದ ಎರಡನ್ನೂ ಮಾಡತಕ್ಕದ್ದು. ನೀನು ವಿಧಿಸಿದ ಉಪಾಸನರೂಪದಲ್ಲಿ ನಿನ್ನ ಅನವರತ ಸ್ಮರಣೆಯನ್ನು ಮಾಡಿಬಿಟ್ಟಿರುತ್ತೇನೆ ಎಂದು ಹೇಳಿ ಕೃತಕೃತ್ಯನಾದನೆಂದು ತಿಳಿಯಬೇಡ, ನಿನಗೆ ಆಜ್ಞಾರೂಪ ಕೈಂಕರ್ಯಗಳಾದ ನಿತ್ಯ ನೈಮಿತ್ತಿಕಗಳೂ ಇತರ ಇತಿ ಕರ್ತವ್ಯಗಳೂ ಆವಶ್ಯಕವಾದುದರಿಂದಲೂ ನೀನು ಯುದ್ಧವನ್ನು ಮಾಡಿಯೇ ತೀರಬೇಕು, ನಾನು ಮಾಡುವದಿಲ್ಲವೆಂದು ತಟಸ್ಥನಾಗಿರಲು ಸಾಧ್ಯವೇ ಇಲ್ಲವೆಂಬ ಭಾವವು, **ಚ** ಶಬ್ದದಿಂದ ತೋರಿಬರುತ್ತದೆ. ಹಾಗೆ, ಸದಾ ತನ್ನ ಅನುಸ್ಮರಣೆ ಏನು, ನಿತ್ಯ ನೈಮಿತ್ತಿಕಾದಿ ಇತಿಕರ್ತವ್ಯತಾ ರೂಪಗಳಾದ ಯುದ್ಧಾದಿ ಕರ್ಮಾನುಷ್ಠಾನವೇನು, ಹೀಗೆ ಮಾಡುವದರ ಫಲವು ನಿಸ್ಸಂಶಯವಾಗಿ ಏನೆಂದು ಕೇಳುತ್ತೀಯೋ ಹೇಳುತ್ತೇನೆ; ಏನೆಂದರೆ.—ಯಾವಾಗ ನೀನು **ಮಯ್ಯರ್ಪಿತಮನೋಬುದ್ಧಿಃ**-ನನ್ನಲ್ಲೇ ಸಮರ್ಪಿಸಲ್ಪಟ್ಟ ಮನಸ್ಸು ಬುದ್ಧಿಗಳುಳ್ಳವನೋ ಆಗ, **ಮಾಮೇವೈಷ್ಯಸಿ**-ನನ್ನನ್ನೇ ಹೊಂದುವಿ, ಇದು **ಅಸಂಶಯಃ**-ಸಂದೇಹವಿಲ್ಲದುದು, ಈ ವಿಷಯದಲ್ಲಿ ಓ ಅರ್ಜುನನೇ ನಿನಗೆ ಈಷದಪಿ ಸಂದೇಹಬೇಡ. ನನ್ನನ್ನೇ ಹೊಂದಬೇಕೆಂಬ ಅಭಿಪ್ರಾಯವು ಇದ್ದುದಾದರೆ, ಇಂದ್ರಿಯಗಳನ್ನೆಲ್ಲಾ ಮನಸ್ಸಿನ ಅಧೀನಮಾಡಿಕೊಂಡು, ಆ ಮನಸ್ಸನ್ನೂ, ನಿನ್ನ ಬುದ್ಧಿಯನ್ನೂ, ನನ್ನಲ್ಲಿ ಸಮರ್ಪಿಸಿಬಿಡು. **ಮಾಮೇವೈಷ್ಯಸಿ** ಎಂದು ಹೇಳಿದುದರಿಂದ ಯಾವಾಗ ಮನಸ್ಸೂ ಬುದ್ಧಿಯೂ

**ಭಾ. ಯಸ್ಮಾತ್ ಪೂರ್ವಕಾಲಾಭ್ಯಸ್ಥವಿಷಯ ಏವಾಽನ್ತ್ಯಪ್ರತ್ಯಯೋ ಜಾಯತೇ, ತಸ್ಮಾತ್ಸರ್ವೇಷು ಕಾಲೇಷ್ವಾಽಪ್ರಯಾಣಾದ ಹರಹ ರ್ಮಾ ಮನುಸ್ಮರ । ಅಹರಹ**

ನನ್ನನ್ನೇ ಯಾವಾಗಲೂ ಸ್ಮರಿಸುವಂತಾದ್ದಾಯಿತೋ, ಆಗ ಅನ್ತಿಮ ಸ್ಮೃತಿಯೂ ನನ್ನ ವಿಷಯವಾಗುವದರ ಮೂಲಕ ನನ್ನನ್ನೇ ನೀನು ಹೊಂದುತ್ತೀಯೆ, ಅಂತಹ ನಿನಗೆ ಪುನರ್ಜನ್ಮ ಎಲ್ಲಿ ಉಂಟಾಗುತ್ತದೋ ಎಂಬ ಸಂದೇಹವು ಈಷದಪಿ ಬೇಡವು. ಈಗ ನೀನು ನನ್ನನ್ನು ಆಶ್ರಯಿಸಿರುವದು ನನ್ನನ್ನು ಹೊಂದಲು ಸಾಧ್ಯವಾದ ಉಪಾಯವನ್ನು ತಿಳಿಯುವದಕ್ಕಾಗಿ; ಆದುದರಿಂದ ಇದೀಗ ಉಪಾಯವು; ಇದನ್ನು ನಿನಗೆ ಉಪದೇಶಿಸಿರುತ್ತೇನೆ. ನಿನ್ನ ಇಷ್ಟಾನುಸಾರ ಅದನ್ನು ನೀನು ಹೊಂದುವಿ ಎಂಬುದರಲ್ಲಿ ಏನೊಂದು ಸಂದೇಹವೂ ಬೇಡವೆಂಬುದು ತಾತ್ಪರ್ಯವು. ಹಿಂದೆ ೩. ೪೦ನೆಯ ಶ್ಲೋಕದಲ್ಲಿ ಮನಸ್ಸೂ ಬುದ್ಧಿಯೂ ಸಹ ಕಾಮದೊಂದಿಗೆ ಸೇರಿಕೊಂಡು ಈ ಆತ್ಮನಿಗೆ ಪ್ರಬಲ ಶತ್ರುಗಳಾಗಿ ಪರಿಣಮಿಸುತ್ತವೆ ಎಂದು ಹೇಳಲ್ಪಟ್ಟಿತು. ಯಾವಾಗ ಆ ಮನಸ್ಸೂ ಬುದ್ಧಿಯೂ ನನ್ನಲ್ಲೇ ಅರ್ಪಿತಗಳಾದವೋ, ಆಗ ಅವು ಪರಮ ಮಿತ್ರರಾದವುಗಳಾಗಿ ನನ್ನನ್ನೇ ಹೊಂದಿಸುವುವು; ಈ ವಿಷಯದಲ್ಲಿ ಸಂಶಯವು ಬೇಡ; ಅವು ಎಂದಿಗೂ ನಿನಗೆ ಶತ್ರುಗಳಾಗುವದಿಲ್ಲವೆಂಬ ತಾತ್ಪರ್ಯವೂ ಸೂಚಿತವು. ಇಲ್ಲಿ **ಯುಧ್ಯಸ್ವ** ಎಂದು ಕ್ಷತ್ರಿಯನಾದ ಅರ್ಜುನನಿಗೆ ಹೇಳಿದುದನ್ನು ಉಪಲಕ್ಷಣವಾಗಿ ಇತರ ವರ್ಣದವರಿಗೆ ಅನ್ವಯಿಸುವಾಗ ಅವರವರ ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನವೂ ಇತರ ಇತಿ ಕರ್ತವ್ಯಗಳೂ ಸಹ ವಿಧಿಸಲ್ಪಟ್ಟವೆಂದು ಭಾವಿಸತಕ್ಕದ್ದು. ಹಾಗೆಯೇ ಶ್ರೀ ಯತಿವರ್ಯರ ವ್ಯಾಖ್ಯಾನವೂ ಸಹ. **ಯುಧ್ಯ ಚ** ಎಂಬುದರಿಂದ ಇನ್ನೊಂದು ಧ್ವನ್ಯರ್ಥವೂ ತೋರಿಬರುತ್ತದೆ.---ಗೀತಾ ಪ್ರಥಮ ಶ್ಲೋಕದಲ್ಲೇ ಈ ಕ್ಷೇತ್ರಜ್ಞನು ಧರ್ಮವನ್ನು ಮಾಡಿ ಪಾಪ ನಿಬರ್ಹಣವನ್ನು ಹೊಂದುವದಕ್ಕಾಗಿ ಅನುಗ್ರಹಿಸಲ್ಪಟ್ಟ ಪರಮ ಪುರುಷನಿಗೆ ಆಯತನವಾಗಿ ಮಹಾ ಪರಿಶುದ್ಧನಾದ ಕ್ಷೇತ್ರದಲ್ಲೂ ಅಹಂಕಾರ ಮಮಕಾರಗಳಿಗೂ ವಿವೇಕ ಮೊದಲಾದ ಸಾತ್ವಿಕ ಧರ್ಮಗಳಿಗೂ ದೊಡ್ಡ ಯುದ್ಧವು ನಡೆಯುವದರಿಂದ ಅಹಂಕಾರ ಮಮಕಾರಗಳನ್ನು ಜಯಿಸಿ ನನ್ನ ಪ್ರಾಪ್ತಿಯನ್ನು ಹೊಂದಿ, ನನ್ನ ಕೈಙ್ಕರ್ಯ ಸಾಮ್ರಾಜ್ಯವನ್ನು ಹೊಂದುವದಕ್ಕಾಗಿಯೂ **ಯುಧ್ಯಸ್ವ** ಎಂಬ ಪ್ರಯೋಗವೆಂದೂ ಭಾವಿಸಬಹುದು. ಆಗಲೂ ಸಾರ್ವತ್ರಿಕವಾಗಿ ಅನ್ವಯಿಸಬಹುದು. ಮನಸ್ಸು ಬುದ್ಧಿ ಇವುಗಳಿಗಿರುವ ವ್ಯತ್ಯಾಸವು ಹಿಂದೆ ೩.೪೨ರಲ್ಲಿ ಉಪಪಾದಿತವು.

**ಭಾಷ್ಯಾರ್ಥವು :—ಯಸ್ಮಾತ್**-ಯಾವಕಾರಣದಿಂದ, **ಪೂರ್ವಕಾಲಾಭ್ಯಸ್ಥ ವಿಷಯೇ ಏವ**-ಮೊದಲಿನಿಂದಲೂ ಅಭ್ಯಾಸರೀತಿಯಲ್ಲಿ ಸ್ಮರಿಸುತ್ತಿದ್ದ ವಿಷಯದಲ್ಲೇ, **ಅನ್ತ್ಯಪ್ರತ್ಯಯವೂ, ಜಾಯತೇ**-ಉಂಟಾಗುತ್ತದೋ, **ತಸ್ಮಾತ್**-ಆಕಾರಣದಿಂದ, **ಸರ್ವೇಷು ಕಾಲೇಷು**-ಸದಾ, **ಆಪ್ರಯಾಣಾತ್**-ದೇಹವಿಯೋಗ ಉಂಟಾಗುವವರೆಗೂ, **ಅಹರಹಃ**-ಪ್ರತಿ ದಿನದಲ್ಲೂ, ಅದಕ್ಕಾಗಿ ಕ್ಲಿಪ್ತಕಾಲವನ್ನು ಪ್ರತಿದಿನದಲ್ಲೂ ಏರ್ಪಡಿಸಿಕೊಂಡು ಎಂಬ ಭಾವವು. ತಿಂಗಳಲ್ಲೊಂದು ದಿನ, ಪ್ರತಿ ಏಕಾದಶಿಯಲ್ಲೂ, ಒಂದು ಪಕ್ಷದಲ್ಲಿ ಒಂದು ದಿನ, ಶನಿವಾರ ಒಂದು ದಿನ, ಹೀಗೆ ಉಪಾಸನ ಮಾಡಿದರೆ ಉಪಾಸನವಾಗುವದಿಲ್ಲವೆಂದು ಸೂಚಿಸುವದಕ್ಕಾಗಿಯೂ **ಅಹರಹಃ** ಎಂಬ ಪ್ರಯೋಗವು. **ಮಾಮನುಸ್ಮರ**-ನನ್ನನ್ನು ಕುರಿತು ಉಪಾಸನೆಯನ್ನು ಮಾಡು, ಮತ್ತು **ಅಹರಹರನುಸ್ಮೃತಿಕರಂ**-ಅಂತಹ ಪ್ರತಿದಿನವೂ ಅಭ್ಯಾಸರೀತಿಯಲ್ಲಿ ಮಾಡುವ ಉಪಾಸನೆಗೆ ಅನುಗ್ರಾಹಕವಾದ, **ವರ್ಣಾಶ್ರಮಾನುಬಂಧಿ**-ವರ್ಣಾಶ್ರಮಗಳಿಗೆ ಸಂಬಂಧಪಟ್ಟ, **ಶ್ರುತಿಸ್ಮೃತಿ ಚೋದಿತಂ**-ಶ್ರುತಿ ಸ್ಮೃತಿಗಳಲ್ಲಿ ಆಜ್ಞಾ ಕೈಙ್ಕರ್ಯಗಳಾಗಿ ವಿಧಿಸಲ್ಪಟ್ಟ ಕ್ಷತ್ರಿಯನಾದ ನಿನಗೆ ನಿತ್ಯ ನೈಮಿತ್ತಿಕರೂಪವಾದ, **ಯುದ್ಧಾದಿಕಂ**-ಯುದ್ಧವೇ ಮೊದಲಾದವುಗಳನ್ನೂ

**ಭಾ. ರನುಸ್ಮೃತಿಕರಂ ಯುದ್ಧಾದಿಕಂ-ವರ್ಣಾಶ್ರಮಾನುಬಂಧಿ ಶ್ರುತಿ ಸ್ಮೃತಿ ಚೋದಿತಂ ನಿತ್ಯನೈಮಿತ್ತಿಕಂಚ ಕರ್ಮಕುರು। ಏವ ಮುಪಾಯೇನ ಮಯ್ಯರ್ಪಿತಮನೋಬುದ್ಧಿ ರನ್ತಕಾಲೇಚ ಮಾಮೇವ ಸ್ಮರ್ ಯಥಾಭಿಲಷಿತಪ್ರಕಾರಂ ಮಾಂ ಪ್ರಾಪ್ಸ್ಯಸಿ; ನಾತ್ರ ಸಂಶಯಃ ||೭||**

**ಕರ್ಮಚ**-ಕರ್ಮವನ್ನೂ ಸಹ, **ಕುರು**-ಮಾಡು, **ಏವ ಮುಪಾಯೇನ**-ಹೀಗೆ ಉಪಾಯದಿಂದ, ಇಂತಹ ಸಾಧ್ಯೋಪಾಯಾನುಷ್ಠಾನದಿಂದ, **ಮಯ್ಯರ್ಪಿತ ಮನೋಬುದ್ಧಿಃ**-ನನ್ನಲ್ಲೇ ಸಮರ್ಪಿಸಲ್ಪಟ್ಟ ಮನಸ್ಸೂ ಬುದ್ಧಿಯುಳ್ಳವನಾಗಿ, ಇದರಿಂದ ನನ್ನಲ್ಲೇ ಮನಸ್ಸನ್ನಿಟ್ಟು ಉಪಾಸಿಸೋಣವೂ, ಮತ್ತು ಅದರಿಂದ ನಾನೇ ಫಲಪ್ರದನೆಂಬ ಬುದ್ಧಿಯುಳ್ಳವನಾಗಿರೋಣವೂ ಹೇಳಲ್ಪಟ್ಟವು, **ಅನ್ತಕಾಲೇಚ ಮಾ ಮೇವ ಸ್ಮರ್**-ಪ್ರಾಣ ವಿಯೋಗಕಾಲದಲ್ಲೂ ನನ್ನ ಅನುಗ್ರಹದ ಮೂಲಕ ನನ್ನನ್ನೇ ಸ್ಮರಿಸುವವನಾಗಿ, ಇದು ಮೂಲದಲ್ಲಿಲ್ಲದಿದ್ದರೂ ಅರ್ಥವಾಗಿ ತೋರಿಬರುವದರಿಂದ ಹಾಗೆ ಪ್ರಕರಣಾನುಗುಣವಾಗಿ ವ್ಯಾಖ್ಯಾನಮಾಡಿರುತ್ತಾರೆ, **ಯಥಾಭಿಲಷಿತ ಪ್ರಕಾರಂ**-ನಿನ್ನ ಅಭಿಲಾಷೆಗೆ ಅನುಸಾರವಾಗಿ, ಇದರಿಂದ ಅರ್ಜುನನಿಗೆ ಅಭಿಲಷಿತವಾದುದು ಪರಮಾತ್ಮ ಸಾಯುಜ್ಯವೇ ಎಂಬುದು ವ್ಯಕ್ತವು. **ಮಾಂ ಪ್ರಾಪ್ಸ್ಯಸಿ**-ನನ್ನನ್ನು ಹೊಂದುವಿ. ಮಾಮೇವ ಸ್ಮರ್ ಎಂದೂ ಅವಧಾರಣವಿರುವದರಿಂದಲೂ, ಮಾಂ ಪ್ರಾಪ್ಸ್ಯಸಿ ಎಂದು ಮುಂದೆ ಇರುವದರಿಂದಲೂ, ಅಭಿಲಷಿತವಾದುದು ಪರಬ್ರಹ್ಮ ಪ್ರಾಪ್ತಿಯೇ ಎಂಬುದು ಸ್ಪಷ್ಟವಾಗಿರುವ ಹಾಗೆ ತೋರುತ್ತದೆ. **ನಾತ್ರಸಂಶಯಃ**-ಈ ಸಂದರ್ಭದಲ್ಲಿ ಸಂಶಯವಿರುವದಿಲ್ಲವು.

ಈ ಶ್ಲೋಕದಲ್ಲಿ **ಸರ್ವೇಷು ಕಾಲೇಷು** ಎಂದು ಹೇಳಿರುವದರಿಂದ **"ಸಖಲ್ವೇವಂ ವರ್ತಯ‌ನ್ ಯಾವದಾಯುಷಂ ಬ್ರಹ್ಮಲೋಕ ಮಭಿಸಂಪದ್ಯತೇ"** ಎಂಬ ಛಾಂದೋಗ್ಯ (೮.೧೫.೧) ಶ್ರುತಿಯೂ, **"ಪ್ರಾಯಣಾಂತಮೋಂಕಾರ ಮಭಿಧ್ಯಾಯೀತ"** ಎಂಬ ಪ್ರಶ್ನೋಪನಿಷತ್ ಶ್ರುತಿಯೂ ಸ್ಮರಿಸಲ್ಪಟ್ಟವು. ಮೊದಲಿನ ವಾಕ್ಯದಭಿಪ್ರಾಯವೇನೆಂದರೆ.—ಯಾವನು ಹೀಗೆ ಪರಮಾತ್ಮೋಪಾಸನೆಯನ್ನು ಮಾಡುತ್ತಾ ಯಾವಜ್ಜೀವವೂ ಇರುತ್ತಾನೋ, ಅವನು ಪರಬ್ರಹ್ಮ ಸಾಯುಜ್ಯವನ್ನೇ ಹೊಂದುತ್ತಾನೆ ಅಥವಾ ಪರಬ್ರಹ್ಮನ ಲೋಕವನ್ನೇ ಹೊಂದುತ್ತಾನೆ. ಅವನು ಶರೀರ ಗ್ರಹಣಕ್ಕಾಗಿ ಪುನಃ ಬರುವದಿಲ್ಲವೆಂದೂ ಅರ್ಚಿರಾದಿ ಮಾರ್ಗಮೂಲಕ ಪರಬ್ರಹ್ಮನನ್ನೇ ಹೊಂದುವನೆಂದೂ ಮುಂದೆ ಹೇಳಲ್ಪಡುತ್ತದೆ. ಎರಡನೆಯ ವಾಕ್ಯದ ಅರ್ಥವೇನಂದರೆ ಶೈಬರೆಂಬುವರು ತಮ್ಮ ಗುರುಗಳಾದ ಪಿಪ್ಪಲಾದರೆಂಬುವರನ್ನು ಓಂಕಾರವನ್ನು ಯಾವಜ್ಜೀವವೂ ಉಚ್ಚರಿಸುತ್ತಾ ಪರಮಾತ್ಮನನ್ನು ಧ್ಯಾನಿಸುತ್ತಿದ್ದರೆ ಆತನು ಯಾವ ಲೋಕವನ್ನು ಆ ಓಂಕಾರೋಚ್ಚಾರಣೆಯಿಂದ ಜಯಿಸುವನು ಎಂಬುದು. ಇದಕ್ಕೆ ಪಿಪ್ಪಲಾದರ ಉತ್ತರವು.—ಯಾವಾಗ ಆ ಪರಬ್ರಹ್ಮ ವಾಚಕವಾದ ಏಕಮಾತ್ರದಿಂದ ಹ್ರಸ್ವವಾಗಿ ಋಗ್ಮಂತ್ರವಾದ ಓಂಕಾರೋಚ್ಚಾರಣೆಯನ್ನು ಮಾಡುತ್ತಾ ಉಪಾಸನೆಯನ್ನು ಮರಣಾಂತ ಮಾಡುವನೋ ಅವನು ಮನುಷ್ಯಲೋಕವನ್ನೇ ಹೊಂದಿದವನಾಗಿ ಪರಮಾತ್ಮೋಪಾಸನನಿರತನಾಗಿ ಕೊನೆಗೆ ಪರಬ್ರಹ್ಮ ಲೋಕವನ್ನೇ ಹೊಂದುವನು. ದ್ವಿಮಾತ್ರೋಚ್ಚಾರಣೆಯುಕ್ತವಾದ ಯಜುರ್ಮಂತ್ರಾತ್ಮಕವಾದ ಪರಮಾತ್ಮೋಪಾಸನೆಯಿಂದ, ಅಂತರಿಕ್ಷಾಶ್ರಿತವಾದ ಸೋಮಲೋಕವನ್ನು ಹೊಂದಿ, ಅಲ್ಲಿನ ಐಶ್ವರ್ಯವನ್ನನುಭವಿಸಿ, ಪುನರಾವೃತ್ತಿಯನ್ನು ಹೊಂದಿ, ಆತನೂ ಉಪಾಸನೆಯನ್ನು ಕೈಕೊಂಡು ಮೋಕ್ಷವನ್ನು ಹೊಂದುವನು. ಉಚ್ಚಾರಣೆಯು ಸಾಮ ಮಂತ್ರರೂಪವಾಗಿ ಮೂರು ಮಾತ್ರೆಗಳುಳ್ಳದ್ದಾದರೆ, ಆತನು ಸೂರ್ಯಲೋಕವನ್ನು ಸೇರಿದವನಾಗಿ ಭಗವಲ್ಲೋಕವಾದ ವೈಕುಂಠವನ್ನು ಸೇರುವನು ಎಂದು ಹೇಳಲ್ಪಟ್ಟಿರುತ್ತದೆ. ಈ ವಿಷಯ ಪ್ರಶ್ನೋಪನಿಷತ್ತಿನ ವಿಷಯವೆಲ್ಲಾ ಶ್ರೀ ವ್ಯಾಸಾರ್ಯರು

**ಈ ಶ್ರುತಿ ಕರ್ಮಾಧಿಕರಣದಲ್ಲಿ** ಉಪಪಾದಿಸಿರುತ್ತಾರೆ. ಓಂಕಾರೋಚ್ಚಾರಣೆಯಿಂದ ಹೀಗೆ ಉಂಟಾಗುವ **ಪರಮಾಂಗತಿಯು** ಮುಂದೆ ೧೧ನೆಯ ಶ್ಲೋಕದಲ್ಲಿ ಉಪಪಾದಿತವಾಗುವದ ರಿಂದ, **ಆಪ್ರಯಾಣಾತ್** ಎಂಬುದರ ವ್ಯಾಖ್ಯಾನದಲ್ಲಿ ಪ್ರಾಸಙ್ಗಿಕವಾಗಿ ಇಲ್ಲಿ ಹೇಳಲ್ಪಟ್ಟಿರು ತ್ತದೆ. ಎಲ್ಲಾ ಉಪಾಸನವೂ **ಆಪ್ರಯಾಣಾತ್ತಾ**ಗಿಯೇ ಕರ್ತವ್ಯವೆಂದು **"ಆಪ್ರಯಾಣಾ ತ್ತತ್ರಾಪಿ ಹಿ ದೃಷ್ಟಮ್"** ಎಂಬ (೪. ೧, ೧೨) ಬ್ರಹ್ಮ ಸೂತ್ರದಲ್ಲೂ ಉಪಪಾದಿತವು. **ಸಖ ಲ್ವೇವಂ ವರ್ತಯನ್ ಯಾವದಾಯುಷಂ"** ಎಂದು ಶ್ರುತಿಯಲ್ಲಿ ಆಯುಸ್ಸು ಇರುವವರೆಗೂ ಉಪಾಸನೆಯನ್ನು ಮಾಡತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಹೀಗೆಯೇ ಮಹಾ ಭಾಗವತರಾದ ವಿದುರರೂ **"ಯಾವಜ್ಜೀವಂತು ತತ್ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್"** ಎಂದೂ ಉಪದೇಶಿಸಿರುತ್ತಾರೆ. ಇಲ್ಲಿ ಮೂಲದಲ್ಲಿ ಉಪಾಸನ ಪ್ರಕರಣವಾಗಿರುವದರಿಂದ, **ಅನುಸ್ಮರ** ಎಂದು ಶ್ರೀಭಗವಾನವರು ವಿಧಿಸುವದೇನೋ ನ್ಯಾಯವು. ಅಪ್ರಸ್ತುತವಾದ **ಯುಧ್ಯಚ** ಎಂಬ ವಿಧಿಯು ಹೇಗೆ ಎಂದು ಪ್ರಶ್ನಿಸಬಹುದು. ಉಪಾಸನೆಯು ನಿರ್ವಿಘ್ನವಾಗಿ ನಿಷ್ಪತ್ತಿಯಾಗುವ ದಕ್ಕೂ ಪ್ರತಿಬಂಧಕ ಪಾಪಗಳು ತೊಲಗುವದಕ್ಕೂ ವಿಹಿತ ವರ್ಣಾಶ್ರಮ ಧರ್ಮಗಳಾದ ಫಲಾಭಿ ಸಂಧಿ ರಹಿತಗಳಾದ ನಿತ್ಯನೈಮಿತ್ತಿಕಗಳೂ, ಇತಿಕರ್ತ್ತವ್ಯಗಳೂ, ಅನುಗ್ರಾಹಕಗಳು; ಪರಬ್ರಹ್ಮೋ ಪಾಸನೆಯಲ್ಲಿ ನಿರತನಾಗಿ ಕೃತಕೃತ್ಯನಾಗುವವನಿಗೆ ನಿತ್ಯ ನೈಮಿತ್ತಿಕಗಳು ಬಿಡತಕ್ಕವಲ್ಲವು. ಆವಶ್ಯಕವಾಗಿ ಕರ್ತ್ತವ್ಯವೆಂದೇ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ಆದ್ದರಿಂದ ಅವುಗಳು ಅಭಿಪ್ರಾಯ ಪಡುವಹಾಗೆ ಬಿಡತಕ್ಕವುಗಳಲ್ಲವೆಂದು ತಿಳಿಸುವವಕ್ಕಾಗಿಯೇ **ಯುಧ್ಯಚ** ಎಂದು ಚಕಾರದೊಂ ದಿಗೆ ಪ್ರಯೋಗವು: ಇದೂ ಅತ್ಯಾವಶ್ಯಕವೆಂಬ ಭಾವವು. ಆದರೆ ನಿತ್ಯನೈಮಿತ್ತಿಕಗಳೇನೂ ಮೋಕ್ಷಫಲವನ್ನು ಕೊಡುವದಿಲ್ಲವಷ್ಟೇ ಎಂದರೆ ಫಲದೊಂದಿಗೆ ಅಫಲವೂ ಶಾಸ್ತ್ರವಿಹಿತವಾದು ದಾದರೆ, ಅಫಲವು ಫಲಕ್ಕೆ ಅಙ್ಗವೆಂದು ಭಾವಿಸತಕ್ಕದ್ದು. ಬರೀ ಕರ್ಮಯೋಗವು ಸಾಕ್ಷಾ ತ್ತಾಗಿ ಮೋಕ್ಷದಾಯಕವಲ್ಲವು, ಭಕ್ತಿಯೋಗವೇ ಸಾಕ್ಷಾತ್ತಾಗಿ ಮೋಕ್ಷದಾಯಕವು. ಅಫಲ ವಾದ ಕರ್ಮಯೋಗವೂ ಭಕ್ತಿಯೋಗರೂಪ ಫಲದೊಂದಿಗೆ ಹೇಳಲ್ಪಟ್ಟಿರುವದರಿಂದ ಕರ್ಮಯೋ ಗವು ಭಕ್ತಿಯೋಗಕ್ಕೆ ಅಙ್ಗವು. ಸಾಧನಾನುಷ್ಠಾನ ಮಾತ್ರದಿಂದಲೇ ಸರ್ವೇಶ್ವರನು ವಶ್ಯ ನಲ್ಲವು. ಆತನು ಅದರಿಂದ ಪ್ರೀತನಾದರೆ ವಶ್ಯನಾಗುವನು; ಶ್ರುತಿಯು ಹಾಗೆಯೇ ಹೇಳುತ್ತದೆ. ಯಾವಾಗ ಆಜ್ಞಾ ಕೈಂಕರ್ಯಗಳನ್ನು ಬಿಟ್ಟನೋ ಆಗ **ಆಜ್ಞಾ ಛೇದೀ ಮಮದ್ರೋಹೀ** ಎಂದು ಹೇಳಿರುವಹಾಗೆ ಭಗವದನುಗ್ರಹಕ್ಕೆ ಬದಲಾಗಿ ಭಗವನ್ನಿಗ್ರಹವು ಪ್ರಾಪ್ತವಾದೀತೆಂಬಭಿ ಪ್ರಾಯದಿಂದಲೂ **"ಯುಧ್ಯಚ"** ಎಂಬ ಪ್ರಯೋಗವು. **ಮಯ್ಯರ್ಪಿತಮನೋಬುದ್ಧಿ**ಯಾಗಿ ಉಪಾಸನವು ಸಾಧ್ಯೋಪಾಯವಾಗಿ, **"ಏವಂ ಉಪಾಯೇನ"** ಎಂಬ ಪ್ರಯೋಗದಿಂದ ವಿಧಿ ಸಲ್ಪಟ್ಟಿತೋ, ಅಂತಹ ಉಪಾಯಾನುಷ್ಠಾನದಲ್ಲಿ ಮಹಾ ವಿಶ್ವಾಸವೂ ಆವಶ್ಯಕವೆಂದು ತೋರಿ ಸುವದಕ್ಕಾಗಿ, **ನಾತ್ರಸಂಶಯಃ** ಎಂದು ವ್ಯಾಖ್ಯಾನವೆಂದೂ ಭಾವಿಸಬಹುದು. **"ನಿಸ್ಸಂಶ ಯೇಷು ಸರ್ವೇಷು ನಿತ್ಯಂವಸತಿ ವೈಹರಿಃ। ಸಸಂಶಯಾನ್ ಹೇತು ಬಲಾನ್ನಾಧ್ಯಾವಸತಿ ಮಾಧವಃ"** ಎಂಬ (ಮೋಕ್ಷ. ೩೬೯.೭೧) ಭಾರತ ವಚನವು ಇಲ್ಲಿ ಅನುಸಂಧೇಯವು. ಮುಂದಿನ ಶ್ಲೋಕದ ಅವತಾರಿಕೆಯಲ್ಲಿ ಎಲ್ಲಾ ಪ್ರಾಪ್ತಿಯು ಅನ್ತಿಮ ಪ್ರತ್ಯಯಾಧೀನವೆಂದು ಹೇಳಿರುವದ ರಿಂದ, **ಯಥಾಭಿಲಷಿತ ಪ್ರಕಾರಂ** ಎಂಬುದು ಎಲ್ಲಾ ಭಕ್ತರಿಗೂ ಅನ್ವಯಿಸುತ್ತದೆಂದು ಅಭಿ ಪ್ರಾಯಪಟ್ಟಿರುತ್ತಾರೆ. ಶ್ರೀ ಭಾಷ್ಯಕಾರರ **ಏವಂ** ಎಂಬ ಮುಂದಿನ ಶ್ಲೋಕಾವತಾರಿಕೆಯು ಈ ಹಿಂದಿನ ಮೂರು ಶ್ಲೋಕಗಳನ್ನೂ ಮನಸ್ಸಿನಲ್ಲಿಟ್ಟು ಹೇಳಿದುದು ಎಂದೂ ಭಾವಿಸಬಹುದು. ಈ **ಯಥಾಭಿಲಷಿತ ಪ್ರಕಾರಂ** ಎಂಬ ಕ್ರಿಯಾವಿಶೇಷಣವು, **ಪ್ರಾಪ್ಸ್ಯಸಿ** ಎಂದು ಮಧ್ಯಮ

**ಭಾ. ಅ. ಏವಂ ಸಾಮಾನ್ಯೇನ ಸ್ವಪ್ರಾಪ್ಯಾವಾಪ್ತಿ ರನ್ತ್ಯಪ್ರತ್ಯಯಾಧೀನೇತ್ಯುಕ್ತ್ವಾ, ತದರ್ಥಂ ತ್ರಯಾಣಾ ಮುಪಾಸನಪ್ರಕಾರಭೇದಂ ವಕ್ತು ಮುಪಕ್ರಮತೇ; ತತ್ರೈಶ್ವರ್ಯಾರ್ಥಿನಾ ಮುಪಾಸನಪ್ರಕಾರಂ ಯಥೋಪಾಸನ ಮನ್ತ್ಯಪ್ರತ್ಯಯಪ್ರಕಾರಂ ಚಾಹ--**

ಪುರುಷ ಕ್ರಿಯಾಪದಕ್ಕೆ ಸೇರಿರುವುದರಿಂದ ಅರ್ಜುನನನ್ನು ಕುರಿತು ಹೇಳಿದುದೆಂದೇ ಭಾವಿಸಿ, ಆತನು ಮೋಕ್ಷಾರ್ಥಿಯಾದ ಜ್ಞಾನಿಯಾಗಿ ಆಗಬೇಕೆಂಬುದೇ ಶ್ರೀಕೃಷ್ಣನ ಅಭಿಪ್ರಾಯವಾಗಿರುವುದರಿಂದ, ಆತನನ್ನು ಕುರಿತು ಹಾಗೆಯೇ ಹೇಳಿರುವುದು ಎಂದು ಭಾವಿಸುವುದೂ ಯುಕ್ತವೇ. ಮೂಲದಲ್ಲಿ, **ಅಸಂಶಯಃ** ಎಂದು ಹೇಳಿರುವುದು ಛಾಂದೋಗ್ಯದಲ್ಲಿ (೩. ೧೪. ೪) ಹೇಳಿರುವ **"ಏತ ಮಿತಃ ಪ್ರೇತ್ಯಾಭಿಸಂಭವಿತಾಸ್ಮೀತಿ ಯಸ್ಯಸ್ಯಾದದ್ಧಾ ನ ವಿಚಿಕಿತ್ಸಾಸ್ತಿ"** ಇಂತಹ ಗುಣಗಳುಳ್ಳ ಇಂತಹ ದೇಶ ವಿಶಿಷ್ಟನಾದ ಉಪಾಸ್ಯನಾದ ಪರಮಾತ್ಮನನ್ನು ನಾನು ಹೊಂದುವುದು ನಿಶ್ಚಯವೆಂಬ ಅನುಸಂಧಾನವು ಯಾವ ಉಪಾಸಕನಿಗೆ ಇರುತ್ತದೋ, ಅವನು ಅಂತಹ ಪ್ರಾಪ್ಯವನ್ನೇ ಹೊಂದುವನು. ಇದರಲ್ಲಿ **ವಿಚಿಕಿತ್ಸಾ** ಎಂದರೆ ಸಂಶಯವು **ನಾಸ್ತಿ**-ಇಲ್ಲವು ಎಂದು ಹೇಳಿರುವ ಶ್ರುತಿಯನ್ನೇ ಅನುಸರಿಸುತ್ತದೆಂದು ಭಾವಿಸಬಹುದು. ॥ ೭ ॥

**ಭಾಷ್ಯಾವತಾರಿಕೆಯ ಅರ್ಥವು :—ಏವಂ**-ಹೀಗೆ ಎಂದರೆ ಹಿಂದಿನ ಮೂರು ಶ್ಲೋಕಗಳ ಮೂಲಕವಾಗಿ ಹೀಗೆ, ಸಾಮಾನ್ಯವಾಗಿ, **ಸ್ವಪ್ರಾಪ್ಯಾವಾಪ್ತಿಃ**-ತನಗೆ ಪ್ರಾಪ್ಯವಾದುದನ್ನು ಎಂದರೆ ಅಭಿಲಷಿತವಾದುದನ್ನು ಹೊಂದೋಣವು, **ಅಂತ್ಯ ಪ್ರತ್ಯಯಾಧೀನಾ**-ಅಂತಿಮ ಪ್ರತ್ಯಯಕ್ಕೆ ಅಧೀನವಾದುದು, **ಇತ್ಯುಕ್ತ್ವಾ**-ಎಂದು ಹೇಳಿ, **ತದರ್ಥಂ**-ಅದಕ್ಕಾಗಿ, **ತ್ರಯಾಣಾಂ**-ಐಶ್ವರ್ಯಾರ್ಥಿ, ಕೈವಲ್ಯಾರ್ಥಿ, ಮೋಕ್ಷಾರ್ಥಿಗಳು ಎಂದರೆ ಮೂಲದಲ್ಲಿ ಹೇಳಿರುವ ನಾಲ್ಕು ವಿಧ ಭಕ್ತರುಗಳ, **ಉಪಾಸನಾ** ಕ್ರಮದಲ್ಲಿರುವ ಭೇದವನ್ನು, **ವಕ್ತುಮುಪಕ್ರಮತೇ**-ಹೇಳಲು ಪ್ರಾರಂಭಿಸಲ್ಪಡುತ್ತದೆ. **ತತ್ರ**-ಆ ಸಂದರ್ಭದಲ್ಲಿ, ಐಶ್ವರ್ಯಾರ್ಥಿಗಳ ಉಪಾಸನ ಪ್ರಕಾರವನ್ನೂ, **ಯಥೋಪಾಸನಂ**-ಉಪಾಸನಾನುಗುಣವಾದ, **ಅನ್ತ್ಯ ಪ್ರತ್ಯಯ ಪ್ರಕಾರಂಚ** ಅನ್ತಿಮ ಪ್ರತ್ಯಯದ ಪ್ರಕಾರವನ್ನೂ ಸಹ, **ಆಹ**-ಹೇಳುತ್ತಾರೆ. ಈ ಮುಂದಿನ ಶ್ಲೋಕವೂ ಅದರ ಮುಂದಿನ ಎರಡು ಶ್ಲೋಕಗಳೂ ಸಹ ಐಶ್ವರ್ಯಾರ್ಥಿಯನ್ನು ಕುರಿತದ್ದು ಎಂಬಭಿಪ್ರಾಯದಿಂದ, ಉಪಾಸನಪ್ರಕಾರವೂ, ತದನುಗುಣವಾದ ಅನ್ತಿಮ ಪ್ರತ್ಯಯವೂ ಎಂದು ಎರಡನ್ನೂ ಹೇಳಿರುತ್ತಾರೆ. ಆದುದರಿಂದ ಈ ಅವತಾರಿಕೆಯು ಮೂರು ಶ್ಲೋಕಗಳಿಗೂ ಎಂದು ಭಾವಿಸತಕ್ಕದ್ದು. ಆದರೆ ಈ ಮೂರು ಶ್ಲೋಕಗಳಲ್ಲೂ ಐಶ್ವರ್ಯಾರ್ಥಿಯ ವಿಷಯವೆಂಬುದು ಮೂಲದಲ್ಲಿ ವ್ಯಕ್ತವಾಗಿ ತೋರದಿದ್ದರೂ, ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕವನ್ನನುಸರಿಸಿ ಈ ಅಧ್ಯಾಯದಲ್ಲಿ ಮೂರು ವಿಧ ಉಪಾಸಕರ **ವೇದ್ಯೋಪಾದೇಯಭೇದ**ಗಳು ಹೇಳಲ್ಪಟ್ಟಿರುವುದರಿಂದ ಇದು ಐಶ್ವರ್ಯಾರ್ಥಿಗೆ ಅನ್ವಯಿಸತಕ್ಕದ್ದಾಗಿರುತ್ತದೆ. ಹಾಗೆಯೇ ೧೧. ೧೨. ೧೩. ಮೂರು ಶ್ಲೋಕಗಳೂ ಕೈವಲ್ಯಾರ್ಥಿಗಳನ್ನು ಕುರಿತದ್ದು ಎಂದು ಹೇಳಿ, ಅನಂತರ ಮೋಕ್ಷಾರ್ಥಿಯ ಉಪಾಸನ ಪ್ರಕಾರಾದಿಗಳು ಹೇಳಲ್ಪಡುವುವೆಂದು ಉಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :**—ಹಿಂದಿನ ಶ್ಲೋಕದಲ್ಲಿ **ಮಾಮನುಸ್ಮರ** ಎಂಬ ಪ್ರಯೋಗಕ್ಕೆ ಅನುಸಾರವಾಗಿ, **ಅನುಚಿಂತಯನ್**, ಎಂಬ ಪ್ರಯೋಗವೂ, ಮಯ್ಯರ್ಪಿತ ಮನೋಬುದ್ಧಿಃ ಎಂಬುದರ ವಿವರಣವಾಗಿ, **ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ** ಎಂದಿರುವುದರಿಂದಲೂ, **ಮಾಮೇವೈಷ್ಯಸಿ** ಎಂಬುದಕ್ಕೆ ಅನುಗುಣವಾಗಿ, **ಪರಮಪುರುಷಂ ದಿವ್ಯಂ ಯಾತಿ** ಎಂದಿರುವುದರಿಂದಲೂ ಕೆಲವರು ಹಿಂದಿನ ಶ್ಲೋಕದ ಅನುವಾದವು ಅಥವಾ ವಿವರಣವೆಂದು ಭಾವಿಸಬಹುದು. **ಮಯ್ಯರ್ಪಿತಮನೋಬುದ್ಧಿ**ಯಾದರೆ ಅನ್ತಿಮ ಪ್ರತ್ಯಯವೂ

**ಮೂ. ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯರ್ ॥ ೮.**

ನನ್ನನ್ನೇ ಸ್ಮರಿಸುವಹಾಗೆ ಮಾಡುತ್ತದೆಂದೂ, **ಯುಧ್ಯಚ** ಎಂದು ಅರ್ಜುನನ್ನೇ ಕುರಿತ ಮುಖ್ಯೋಪದೇಶವಾದುದರಿಂದಲೂ ಹಾಗೆ ಭಾವಿಸುವರು. ಇದು ಸರಿಯಲ್ಲವು. ಹಿಂದೆ ಸಾಧಾರಣವಾಗಿ ಎಲ್ಲಾ ಭಕ್ತರ ವಿಷಯವಾಗಿ ಹೇಳಲ್ಪಟ್ಟಿತು. ಇಲ್ಲಿಯಾದರೋ ಮುಖ್ಯವಾಗಿ ಐಶ್ವರ್ಯಾರ್ಥಿಯನ್ನು ಕುರಿತೇ ಹೇಳಲ್ಪಟ್ಟಿರುತ್ತದೆ. **ಅಭ್ಯಾಸ ಯೋಗ ಯುಕ್ತೇನ** - ಈ ಸಂದರ್ಭದಲ್ಲಿ ಯೋಗವು ಎಂದರೆ ಉಪಾಸನೆಯು, **ಅಹರಹಃ** ಅಭ್ಯಸ್ತವಾದುದಾಗಿ ಆವಶ್ಯಕವು; ಹೀಗೆ ಇವೆರಡರಿಂದಲೂ ಸೇರಿದ, ಅಥವಾ, ತನಗೆ ಅನುಕೂಲಿಸಿದ ಕಾಲಗಳನ್ನೆಲ್ಲಾ ಪರಮಾತ್ಮನ ದಿವ್ಯ ಮಙ್ಗಳ ವಿಗ್ರಹದ ಧ್ಯಾನವು **ಅಭ್ಯಾಸವು**, ಕ್ಲಿಪ್ತಕಾಲಗಳಲ್ಲಿ ಯಥಾಕ್ರಮ ಯಥಾವಿಧಿ ಉಪಾಸಿಸೋಣವು **ಯೋಗವು**. ಇವೆರಡರಿಂದಲೂ, **ಯುಕ್ತೇನ**- ಕೂಡಿದ **ನಾನ್ಯಗಾಮಿನಾ** - ತನಗೆ ಅಭಿಲಷಿತವಾದ ಪ್ರಾಪ್ಯವು ಯಾವುದೋ ಅದನ್ನೇ ಸ್ಮರಿಸತಕ್ಕದ್ದಾದುದರಿಂದ ಇನ್ನು ಯಾವುದನ್ನೂ ಕುರಿತು ಚಿಂತಿಸದ, **ಚೇತಸಾ**- ಮನಸ್ಸಿನಿಂದ, **ಹೇ ಪಾರ್ಥ**- ಓ ಕುಂತೀ ಕುಮಾರನೇ, **ಪರಮಂ ಪುರುಷಂ ದಿವ್ಯಂ** - ದೇದೀಪ್ಯನಾಗಿರುವ ಪರಮ ಪುರುಷನನ್ನು, **ಅನುಚಿನ್ತಯರ್** - ಪರಮಾತ್ಮ ಚಿನ್ತನವು ಅಭ್ಯಸ್ತವಾದುದರಿಂದ ಅಂತ್ಯಕಾಲದಲ್ಲೂ ದಿವ್ಯನಾದ ಆ ಪರಮ ಪುರುಷನನ್ನೇ ಐಶ್ವರ್ಯಕ್ಕಾಗಿ ಚಿಂತಿಸುತ್ತಾ, **ಯಾತಿ** - ಹೊರಟು ಹೋಗುವನು. ಅಥವಾ ತನ್ನ ಇಷ್ಟಾನುಸಾರ ಪ್ರದಾತಾ ಎಂದು **ನಾಂ ಯಾತಿ** - ನನ್ನನ್ನು ಹೊಂದುವನು, **ದಿವ್ಯಂ** - ಎಂಬುದರಿಂದ ಕೋಟಿ ಸೂರ್ಯಪ್ರಕಾಶನೆಂದೂ ಸರ್ವ ತೇಜಸ್ಸುಳ್ಳ ಪದಾರ್ಥಕ್ಕೂ, **ಜ್ಯೋತಿಷಾಂ ಜ್ಯೋತಿಃ** - ಎಂದೂ **"ಸತ್ಯಭಾಸೌ ಸರ್ವ ಮಿದಂ ವಿಭಾತಿ"** ಆತನ **ಪ್ರ**ಕಾಶದಿಂದಲೇ ಸೂರ್ಯ ಚಂದ್ರಾಗ್ನಿಗಳೆಲ್ಲ ಪ್ರಕಾಶಿಸುತ್ತಾರೆಂದೂ ತನ್ನ ಮಹಿಮೆಯನ್ನು ಪ್ರದರ್ಶಿಸಿದಂತಾಯಿತು. ಅಥವಾ **ದಿವ್ಯಂ** - ದಿವು ಕ್ರೀಡಾದೌ ಎಂಬ ಧಾತು ವ್ಯುತ್ಪತ್ತಿಯಿಂದ ಲೀಲಾ ವಿಭೂತಿಯಲ್ಲಿ ಆಸಕ್ತನಾದ ಎಂದೂ ಅರ್ಥಹೇಳಬಹುದು.

**ಭಾಷ್ಯಾರ್ಥವು:—ಅಭ್ಯಾಸ ಯೋಗ ಯುಕ್ತೇನ**ಎಂಬುದಕ್ಕೆ ವ್ಯಾಖ್ಯಾನಮಾಡುತ್ತಾರೆ. **ಅಹರಹಃ**-ಪ್ರತಿದಿನದಲ್ಲೂ, **ಅಭ್ಯಾಸಯೋಗ** ಗಳಿಂದ, ದ್ವಂದ್ವ ಸಮಾಸಾರ್ಥವನ್ನು ಹೇಳಿರುತ್ತಾರೆ. ಕೆಲವರು ಹೇಳಿರುವ ಅಭ್ಯಾಸವೇ ಯೋಗವೆಂದು ಮಾಡಿರುವ ಅರ್ಥಕ್ಕಿಂತ ದ್ವಂದ್ವ ಸಮಾಸಾರ್ಥವೇ ಸಮಂಜಸವು; ಏಕೆಂದರೆ ಅನ್ತಿಮ ಪ್ರತ್ಯಯಕ್ಕೆ ಪ್ರತಿದಿನವೂ ಪರಮಾತ್ಮನ ದಿವ್ಯ ಮಙ್ಗಳ ವಿಗ್ರಹದ ಚಿನ್ತನರೂಪವಾದ ಅಭ್ಯಾಸವೂ ಇರಬೇಕು, ಉಪಾಸನವೂ ಇರಬೇಕು. ಇವೆರಡನ್ನೂ ತೋರಿಸುತ್ತದೆ. ಯೋಗ ಶಬ್ದಕ್ಕೆ ಉಪಾಸನವೆಂಬರ್ಥವನ್ನು ಹೇಳದೆ ಸಂಬಂಧ ಮಾತ್ರ ಅರ್ಥ ಹೇಳಿದರೆ ಅರ್ಥ ಸ್ವಾರಸ್ಯವು ಕಮ್ಮಿಯಾಗುತ್ತದೆ. ಹೀಗೆ ಧ್ಯಾನ ಮತ್ತು ಉಪಾಸನಗಳಿಂದ, **ಯುಕ್ತತಯಾ** - ಸೇರಿದ, **ನಾನ್ಯಗಾಮಿನಾ** - ಇನ್ನು ಯಾವುದರಲ್ಲೂ ಪ್ರವೇಶಿಸದೇ ಇರುವ ಎಂದರೆ ವಿಷಯಾಂತರದಲ್ಲಿ ಪ್ರವೇಶಿಸದೇ ಇರುವ, **ಚೇತಸಾ** - ಮನಸ್ಸಿನಿಂದ, **ಅನ್ತಕಾಲೇ** - ದೇಹಾವಸಾನ ಕಾಲದಲ್ಲಿ, **ಪರಮಂ ಪುರುಷಂ ದಿವ್ಯಂ** - ತೇಜೋಮಯನಾಗಿ ಪರಮ ಪುರುಷನೆನಿಸುವ, **ವಕ್ಷ್ಯಮಾಣ ಪ್ರಕಾರಂ** - ಮುಂದಿನ ಎರಡು ಶ್ಲೋಕಗಳಲ್ಲಿ ಹೇಳಿರುವಹಾಗೆ ಕಲ್ಯಾಣ ಗುಣಗಳನ್ನುಳ್ಳ. ಅಥವಾ ಉಪಾಸ್ಯವು ಅತ್ಯರ್ಥಪ್ರಿಯವಾದುದಾಗಿ ಸಾಕ್ಷಾತ್ತಾಗಿ ಎದುರಿಗೆ ನಿಂತಿರುವಹಾಗಿರಬೇಕೆಂದು ಹೇಳಲ್ಪಟ್ಟ ಲಕ್ಷಣವುಳ್ಳ ಎಂದಾಗಲಿ

**ಭಾ. ಅಹರಹ ರಭ್ಯಾಸಯೋಗಾಭ್ಯಾಂ ಯುಕ್ತತಯಾ ನಾನ್ಯಗಾಮಿನಾ ಚೇತಸಾ ಅನ್ತ ಕಾಲೇಪರಮಂ ಪುರುಷಂ ದಿವ್ಯಂ ಮಾಂ ವಕ್ಷ್ಯಮಾಣ ಪ್ರಕಾರಂ ಚಿನ್ತಯರ್ನ್, ಮಾಮೇವ ಯಾತಿ. ಆದಿ ಭರತ ಮೃಗತ್ವ ಪ್ರಾಪ್ತಿವ ದೈಶ್ವರ್ಯ ವಿಶಿಷ್ಟತಯಾ ಮತ್ಸ ಮಾನಾಕಾರೋಭವತಿ। ಅಭ್ಯಾಸಃ-ನಿತ್ಯನೈಮಿತ್ತಿಕಾವಿರುದ್ಧೇಷು ಸರ್ವೇಷುಕಾಲೇಷು ಮನಸೋಪಾಸ್ಯ ಸಂಶೀಲನಮ್. ಯೋಗ ಸ್ತ್ವ ಹರಹ ರ್ಯೋಗಕಾಲೇzನುಷ್ಠೀಯ ಮಾನಂ ಯಥೋಕ್ತಲಕ್ಷಣ ಮುಪಾಸನಮ್ ॥ ೮ ॥**

---

ಅರ್ಥಮಾಡಬಹುದು; **ಮಾಂ** - ನನ್ನನ್ನು, **ಚಿನ್ತಯರ್ನ್** - ಚಿನ್ತಿಸುವವನಾಗಿ, ಈ ಅನುಚಿಂತನವು ಅನ್ತಿಮಸ್ಮರಣೆಗೆ ಉಪಯುಕ್ತವಾದುದೆಂದು ತಿಳಿಸುವವಕ್ಕಾಗಿ ಅನ್ತಕಾಲೇ ಚಿಂತಯರ್ನ್ ಎಂದು ವ್ಯಾಖ್ಯಾನಮಾಡುತ್ತಾರೆ. **ಮಾಮೇವಯಾತಿ** - ತನ್ನ ಅಭಿಲಷಿತ ಪ್ರಾಪ್ತಿಗಾಗಿ ನನ್ನನ್ನೇ ಹೊಂದುವನು ಎಂದರೆ, **ಆದಿ ಭರತ ಮೃಗತ್ವ ಪ್ರಾಪ್ತಿವತ್** - ಆದಿ ಭರತರಿಗೆ ಮೃಗರೂಪವು ಪ್ರಾಪ್ತವಾದಹಾಗೆ, **ಐಶ್ವರ್ಯವಿಶಿಷ್ಟತಯಾ** - ಐಶ್ವರ್ಯದಿಂದ ಕೂಡಿಕೊಂಡಿರುವದರಿಂದ, **ಮತ್ಸಮಾನಾಕಾರೋ ಭವತಿ** - ನನಗೆ ಸಮಾನವಾದ ಆಕಾರವುಳ್ಳವನಾಗುವನು. **ಇಲ್ಲಿ ಅಭ್ಯಾಸ** ವೆಂದರೆ, **ನಿತ್ಯ ನೈಮಿತ್ತಿಕಾವಿರುದ್ಧೇಷು** - ನಿತ್ಯ ನೈಮಿತ್ತಿಕ ಕರ್ಮಗಳ ಅನುಷ್ಠಾನಕ್ಕೆ ತೊಂದರೆಯಿಲ್ಲದ, **ಸರ್ವೇಷು ಕಾಲೇಷು** - ಸಮಸ್ತಕಾಲಗಳಲ್ಲೂ ಮನಸ್ಸಿನಿಂದ, **ಉಪಾಸ್ಯ ಸಂಶೀಲನಮ್**-**"ಆರಂಭಣಂ ಸಂಶೀಲನಮ್, ಪುನಃ ಪುನರಭ್ಯಾಸಃ"** ಎಂದು ವೃತ್ತಿ ಗ್ರಂಥಗಳಲ್ಲಿ ಹೇಳಿರುವಹಾಗೆ ಉಪಾಸ್ಯವನ್ನು ಪುನಃಪುನಃ ಅಭ್ಯಾಸದಿಂದ ಧರಿಸೋಣವು, ಇಲ್ಲಿ, ಆರಂಭಣವೆಂದರೆ ಆಲಂಬನವು, ಉಪಾಸಿಸಲ್ಪಟ್ಟಿದುದು, **ಯೋಗಸ್ತು**-ಯೋಗವಾದರೋ, **ಅಹರಹಃ** - ಪ್ರತಿದಿನದಲ್ಲೂ, **ಯೋಗ ಕಾಲೇ** - ಯೋಗಕ್ಕೆಂದು ಕ್ಲಪ್ತಪಡಿಸಿಕೊಂಡಿರುವ ಕಾಲದಲ್ಲಿ, **ಅನುಷ್ಠೀಯಮಾನಂ**-ಅನುಷ್ಠಿಸಲ್ಪಡುವ, **ಯಥೋಕ್ತ ಲಕ್ಷಣಂ**-ಯೋಗಶಾಸ್ತ್ರದಲ್ಲಾಗಲಿ, ಅಥವಾ ಈ ಗೀತಾಶಾಸ್ತ್ರದಲ್ಲೇಯಾಗಲಿ **ಇಂತಹ** ಲಕ್ಷಣವುಳ್ಳದ್ದಾಗಿರಬೇಕೆಂದು ಹೇಳಲ್ಪಟ್ಟ, **ಉಪಾಸನವು**. **ದಿವ್ಯಂ** ಎಂಬುದಕ್ಕೆ ಮೂಲದ ವ್ಯಾಖ್ಯಾನದಲ್ಲಿ ತೋರಿಸಿರುವ ಹಾಗೆ ಅರ್ಥವೇ ವಿನಾ, **ಸೂರ್ಯಮಂಡಲ ವರ್ತಿ** ಎಂಬ ಇತರರ ಅಭಿಪ್ರಾಯಕ್ಕೆ ಕಾರಣವಿಲ್ಲವು. ಪ್ರಕೃತ ಮುಂದಿನ ಶ್ಲೋಕದಲ್ಲಿ ಹೇಳಿರುವ, **"ಆದಿತ್ಯವರ್ಣಂ ತಮಸಃ ಪರಸ್ತಾತ್"** ಎಂಬುವಕ್ಕೆ ಸರಿಹೋಗುವದಿಲ್ಲವೆಂದು ತಿಳಿಸುವವಕ್ಕಾಗಿ, **ಯಥೋಕ್ತ ಲಕ್ಷಣಂ** ಎಂಬ ಪ್ರಯೋಗವು. ಸೂರ್ಯಮಂಡಲವರ್ತಿ ಪರಬ್ರಹ್ಮೋಪಾಸನವು ಇಲ್ಲಿ ವಿಧೇಯವಲ್ಲವೆಂಬ ಭಾವವು. ಆದಿ ಭರತ ದೃಷ್ಟಾಂತವನ್ನು ಕೊಟ್ಟು, **ಐಶ್ವರ್ಯ ವಿಶಿಷ್ಟತಯಾ ಮತ್ಸಮಾನಾಕಾರೋ ಭವತಿ** ಎಂಬುದರಭಿಪ್ರಾಯವೇನೆಂದರೆ, ಉಪಾಸಕನಾಗಿ ಐಶ್ವರ್ಯಾರ್ಥಿಯಾದವನು, ಪರಮಪುರುಷನನ್ನು ಪ್ರಾಪ್ಯವನ್ನಾಗಿ ಪ್ರಾರ್ಥಿಸಲಿಲ್ಲವು; ಆದುದರಿಂದ, **ಐಶ್ವರ್ಯ ವಿಶಿಷ್ಟತಯಾ ಮತ್ಸಮಾನಾಕಾರೋ ಭವತಿ** ಎಂದರೆ ಉಪಾಸಕನು ತನಗೆ ಬೇಕಾದ ಐಶ್ವರ್ಯವನ್ನು ಕೊಡುವ ಶಕ್ತಿಯುಳ್ಳವನೆಂದು ಭಾವಿಸಿ, ಆ ಐಶ್ವರ್ಯವಿಶಿಷ್ಟನಾಗಿರುವ ಪರಮಾತ್ಮನಾದ ನನ್ನನ್ನು ಸ್ಮರಿಸಿ ಅದನ್ನು ಪಡೆಯುವದರಿಂದ, ಉಪಾಸನಕ್ಕೆ ಅನುಗುಣವಾದ ಆಕಾರವುಳ್ಳವನಾಗುವನೆಂಬ ಭಾವವು. ಹೇಗೆ ಉಪಾಸ್ಯವನ್ನು ಭಾವಿಸಿದನೋ ಅದಕ್ಕೆ ಸಾಮ್ಯಾಪತ್ತಿಯೇ ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಇಂತಹ ಭಾವವೇ, **"ಯಂ ಯಂವಾಪಿ ಸ್ಮರರ್ನ್ ಭಾವಂ"** ಎಂಬ ಶ್ಲೋಕದಲ್ಲೂ ಉಪಪಾದಿತವು. ಆದುದರಿಂದ ಆ ಶ್ಲೋಕವು ಐಶ್ವರ್ಯಾರ್ಥಿಯನ್ನೇ ಬೋಧಿಸುತ್ತದೆಂದು ಭಾವಿಸತಕ್ಕದ್ದು. ಹಾಗೆ ಭಾವಿಸಿ ಅಂತಹ ಐಶ್ವರ್ಯಾರ್ಥಿಯ ಉಪಾಸನ ಪರವಾದುದು ಈ ಶ್ಲೋಕವೆಂದೂ, ಮುಂದಿನ ಶ್ಲೋಕವು ಉಪಾಸ್ಯ

ಪರವೆಂದೂ, ಶ್ರೀ ಭಾಷ್ಯಕಾರರವರು ಅನ್ವಯಿಸಿರುತ್ತಾರೆ. **ಅಭ್ಯಾಸ** ಶಬ್ದದಿಂದಲೇ ಪುನಃಪುನಃ ಧ್ಯಾನವು ಬೋಧಿತವಾಗುವದರಿಂದಲೇ, ಈ ಉಪಾಸನೆಗೆ ವ್ಯವಧಾನಕಾಲವುಂಟೆಂದೂ, ಅಂತಹ ವ್ಯವಧಾನ ಕಾಲದಲ್ಲಿ ಆಜ್ಞಾ ಕೈಙ್ಕರ್ಯಗಳಾದುದರಿಂದ ಅವಶ್ಯಕರ್ತವ್ಯಗಳಾಗಿಯೂ, ಉಪಾಸನವು ನಿರ್ವಿಘ್ನವಾಗಿ ನಡೆಯುವದಕ್ಕೆ ಸಹ ಕಾರಿಯಾಗಿಯೂ, ಇರುವ ನಿತ್ಯ ನೈಮಿತ್ತಿಕ ಕರ್ಮಗಳನ್ನು ಫಲಾಭಿಸಂಧಿಯಿಲ್ಲದೆ ಭಗ ತ್ಪ್ರೀತ್ಯರ್ಥವಾಗಿ ನಡೆಸತಕ್ಕದೆಂದು ಭೋಧಿಸುವದಕ್ಕಾಗಿ, **ನಿತ್ಯ ನೈಮಿತ್ತಿಕಾವಿರುದ್ಧೇಷು ಕಾಲೇಷು** ಎಂಬ ಪ್ರಯೋಗವು. ಇದು ಮೂಲದ ಅಭ್ಯಾಸ ಶಬ್ದ ದಿಂದ ಅರ್ಥವಾಗಿ ತೋರುತ್ತದೆ. ನಿತ್ಯ ನೈಮಿತ್ತಿಕಗಳಿಗೆ ಬೇಕಾದ ಕಾಲವನ್ನು ಬಿಟ್ಟು ಮಿಕ್ಕ ಅನುಕೂಲವಾದ ಕಾಲಗಳನ್ನು ವ್ಯರ್ಥವಾಗಿ ಕಳೆಯದೆ, ಆಗೆಲ್ಲಾ ಪರಮಾತ್ಮನ ರೂಪದ ಚಿನ್ತನವನ್ನು ಅಭ್ಯಸಿಸತಕ್ಕದ್ದೆಂಬುದು ಭಾವವು; ಮತ್ತು ಹಿಂದಿನ ಶ್ಲೋಕದ **ಸರ್ವೇಷು ಕಾಲೇಷು** ಎಂಬುದನ್ನು ಮನಸ್ಸಿನಲ್ಲಿಟ್ಟು ಅಪ್ಪಣೆ ಕೊಡಿಸಿದರೆಂದಾಗಲಿ ಭಾವಿಸಬಹುದು.

**ಮೂಲಕ್ಕೆ ಅರ್ಥವು:—**ಐಶ್ವರ್ಯಾರ್ಥಿಯು ಉಪಾಸ್ಯವನ್ನು ಹೇಗೆ ಭಾವಿಸಿ ಉಪಾಸಿಸಬೇಕೋ ಅದನ್ನೂ ಅನ್ತಿಮ ಪ್ರತ್ಯಯ ಪ್ರಕಾರವನ್ನೂ ಉಪದೇಶಿಸುತ್ತಾರೆ. ಮುಂದೆ ೧೪, ೧೫ ನೆಯ ಶ್ಲೋಕಗಳು ಜ್ಞಾನಿಯ ವಿಷಯವಾಗಿ ಹೇಳುವದರಿಂದ ಈ ೮, ೯, ೧೦ ನೆಯ ಶ್ಲೋಕಗಳು ಐಶ್ವರ್ಯಾರ್ಥಿಯ ವಿಷಯವಾಗಿಯೂ ೧೧, ೧೨, ೧೩ ನೆಯ ಶ್ಲೋಕಗಳು ಜಿಜ್ಞಾಸುವನ್ನು ಕುರಿತದ್ದಾಗಿಯೂ ವ್ಯಾಖ್ಯಾನಮಾಡಲ್ಪಟ್ಟಿರುತ್ತದೆ. ಐಶ್ವರ್ಯಾರ್ಥಿಗೆ ಉಪಾಸ್ಯವಾದ ಪರಮಾತ್ಮ ಸ್ವರೂಪವನ್ನು ತಿಳಿಸುತ್ತಾರೆ. ಹಾಗೆ ತಿಳಿಸುವ ಸಂದರ್ಭಗಳಲ್ಲಿ ಅನೇಕ ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಅರ್ಥಗಳನ್ನೆಲ್ಲಾ ಗರ್ಭೀಕರಿಸಿ ಹೇಳುತ್ತಾರೆ. ೯ ನೆಯ ಶ್ಲೋಕದಲ್ಲಿ **ಯಃ** ಎಂದೂ, ೧೦ ನೆಯ ಶ್ಲೋಕದಲ್ಲಿ **ಸಃ** ಎಂದೂ, ಇರುವುದರಿಂದ ಎರಡು ಶ್ಲೋಕಗಳಿಗೂ ಒಟ್ಟಿಗೆ ಅನ್ವಯವು. **ಅಹರಹಃ** ಉಪಾಸನೆ ಮಾಡುವ ಕ್ರಮವೂ ಪ್ರಯಾಣಕಾಲದ **ಕ್ರಮವೂ** ಒಂದೇ ವಿಧವಾಗಿ ಉಪದೇಶಿಸಲ್ಪಟ್ಟಿರುತ್ತದೆ. ಅನ್ವಯ ಕ್ರಮವು ಹೇಗೆಂದರೆ:— **ಕವಿಂ** - ಕವಿ ಎಂದರೆ ಕ್ರಾಂತ ದರ್ಶಿಯು, ಹಿಂದೆ ಕಳೆದುಹೋದುದನ್ನು ತಿಳಿಯುವವನು, ಆದುದರಿಂದ "**ಯಸ್ಸರ್ವಜ್ಞಃ ಸರ್ವವಿತ್**" (ಮುಂ ೨. ೨. ೭) ಎಂಬಲ್ಲಿ ಹೇಳಿರುವಹಾಗೆ ಸರ್ವಜ್ಞನಾದ, **ಪುರಾಣಮ್** - ಅನಾದಿಯಾದ, **ಅನುಶಾಸಿತಾರಂ** - "**ಭೀಷಾಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ**" (ತೈ. ಆ. ೮) ಎಂದೂ. **ಅನ್ತಃ ಪ್ರವಿಷ್ಟಶ್ಶಾಸ್ತಾ ಜನಾನಾಗ್ ಸರ್ವಾತ್ಮಾ**" (ಯಾಜು. ಆರ. ३. ३.) ಎಂದೂ, ಹೇಳಿರುವ ಹಾಗೆ, ಅನ್ತಃ ಪ್ರವೇಶಮೂಲಕವೇ **ಮದ್ಭಯಾದ್ವಾತಿ ವಾತೋಽಯಂ ಸೂರ್ಯಸ್ತಪತಿ ಮದ್ಭಯಾತ್ । ವರ್ಷತೀಂದ್ರೋ ದಹತ್ಯಗ್ನಿಃ ಮೃತ್ಯುಶ್ಚರತಿ ಮದ್ಭಯಾತ್**" (ಭಾಗ. ಕಪಿಲರ ಉಪದೇಶವು.) ಎಂದೂ ಹೇಳಿರುವಹಾಗೆ, ಸರ್ವವನ್ನೂ ನಿಯಮಿಸಿ ಆಜ್ಞಾಪಿಸುವ ಶಕ್ತಿಯುಳ್ಳ, ಹೀಗೆ ಎಲ್ಲವನ್ನೂ ವ್ಯಾಪಿಸಿ ನಿಯಮಿಸುವ ಶಕ್ತಿಯುಳ್ಳವನಾದುದರಿಂದಲೇ, **ಅಣೋರಣೀಯಾಂಸಂ** - ಅಣುವಿಗಿಂತಲೂ ಸೂಕ್ಷ್ಮತರನಾಗಿರುವ ಶಕ್ತಿಯುಳ್ಳ, "**ಅಣೋರಣೀಯಾನ್**" ಎಂದು ಶ್ರುತಿಯೂ ಇರುತ್ತದೆ, **ಸರ್ವಸ್ಯಧಾತಾರಂ** - **ಧಾತಾಯಥಾ ಪೂರ್ವಮಕಲ್ಪಯತ್**" "ಸೃಷ್ಟಿಕರ್ತನು ಹಿಂದಿನ ಕಲ್ಪಗಳಲ್ಲಿ ಹೇಗೋ, ಹಾಗೆಯೇ ಈಗಲೂ ಎಲ್ಲವನ್ನೂ ಸೃಷ್ಟಿಸಿದನು" ಎಂದು ಹೇಳಿರುವ ಹಾಗೆ, ಸರ್ವಕ್ಕೂ ಸೃಷ್ಟಿಕರ್ತಾವಾದ, **ಅಚಿನ್ತ್ಯರೂಪಂ** - ಹೀಗೆ ಸೃಷ್ಟಿಸಿ ಎಲ್ಲದರೊಂದಿಗೆ ಇದ್ದರೂ ಅವೆಲ್ಲಕ್ಕಿಂತಲೂ ವಿಲಕ್ಷಣವಾದ ನಿರ್ವಿಕಾರ ಸ್ವರೂಪವನ್ನುಳ್ಳ, ಹೀಗೆ ಸ್ವರೂಪವನ್ನು **ಕೊಂಡಾಡಿ, ಮುಂದೆ** ಆತನ **ದಿವ್ಯಮಙ್ಗಳ**

**ಮೂ. ಕವಿಂ ಪುರಾಣ ಮನುಶಾಸಿತಾರಂ ಅಣೋರಣೀಯಾಂಸ ಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರ ಮಚಿನ್ತ್ಯರೂಪಂ ಆದಿತ್ಯವರ್ಣಂ ತಮಸಃ ಪರಸ್ತಾತ್ ॥**
**ಪ್ರಯಾಣಕಾಲೇ ಮನಸಾಽಚಲೇನಾ ಭಕ್ತ್ಯಾಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯಸಮ್ಯಕ್ ಸ ತಂಪರಂಪುರುಷಮುಪೈತಿದಿವ್ಯಂ॥**

ವಿಗ್ರಹವಾದ ರೂಪವನ್ನು ಕೊಂಡಾಡುತ್ತಾರೆ—**ತಮಸಃ ಪರಸ್ತಾತ್** - ತಮಶ್ಶಬ್ದ ವಾಚ್ಯವಾದುದು ಪ್ರಕೃತಿಮಂಡಲವು, ಅದಕ್ಕೂ ಸರ್ವೋತ್ಕೃಷ್ಟವಾಗಿ ಅಪ್ರಾಕೃತವಾದ, **ಆದಿತ್ಯವರ್ಣಮ್** ತನ್ನ ಭಕ್ತರಿಗೆ ಹಿತವಾಗಿಯೂ, ರಮಣೀಯವಾಗಿಯೂ, ಇಷ್ಟಾರ್ಥದಾಯಕವಾಗಿಯೂ ತೋರಿಬರುವಹಾಗೆ ದಿವ್ಯಕಲ್ಯಾಣಯುಕ್ತವಾದ ರೂಪವನ್ನು ಹೊಂದಿರುವ, ಈ **"ಆದಿತ್ಯವರ್ಣಂ ತಮಸಃ ಪರಸ್ತಾತ್"** ಎಂಬ ಪ್ರಯೋಗವು ಪುರುಷಸೂಕ್ತದಲ್ಲಿಯೂ ಉಂಟು, ಇಂತಹ ಪರಮ ಪುರುಷನನ್ನು, **ಭಕ್ತ್ಯಾಯುಕ್ತಃ** - ಪ್ರತಿನಿತ್ಯವೂ ಅಭ್ಯಾಸಮಾಡಿದ ಪರಭಕ್ತಿಯಿಂದ ಕೂಡಿದವನಾಗಿ, **ಯೋಗಬಲೇನ** - ಇಂತಹ ಉಪಾಸನೆಯ ಸಂಸ್ಕಾರದಿಂದ ಕೂಡಿದ, **ಅಚಲೇನ ಮನಸಾ** - ಏಕಾಂತ ಮನಸ್ಸಿನಿಂದ, **ಸಮ್ಯಕ್** - ಚನ್ನಾಗಿ, **ಭ್ರುವೋರ್ಮಧ್ಯೇ** - ಹುಬ್ಬುಗಳ ಮಧ್ಯದಲ್ಲಿ, **ಪ್ರಾಣಮಾವೇಶ್ಯ** - **"ಸಏಷ ಪ್ರಾಣಏವ ಪ್ರಜ್ಞಾತ್ಮಾಽನನ್ದೋಽಜರೋಽಮೃತಃ"** (**ಕೌ** ಷೀತಕೀ. ೩. ೧) ಎಂಬಲ್ಲೂ **"ಸರ್ವಾಣಿ ಹವಾ ಭೂತಾನಿ ಪ್ರಾಣಮೇವಾಭ್ಯುಜ್ಜಿ ಹತೇ"** (ಛಾಂ. ೧೧. ೫) ಎಂಬಲ್ಲೂ, ಮತ್ತು **"ಅತಏವ ಪ್ರಾಣಃ"** (ಶಾ. ಸೂ. ೧. ೧. ೨೪). **"ಪ್ರಾಣಸ್ತಥಾನುಗಮಾತ್** ಎಂಬ ಬ್ರಹ್ಮಸೂತ್ರಗಳಲ್ಲೂ (೧. ೧. ೨೯) ಹೇಳಿರುವ ಹಾಗೆ ಪ್ರಾಣ ಶಬ್ದವಾಚ್ಯನಾದ ಪರಮ ಪುರುಷನನ್ನು ಸ್ಥಾಪಿಸಿಕೊಂಡು, **ಯಃ** - ಯಾವನು, **ಅನುಸ್ಮರೇತ್** - ಧ್ಯಾನಿಸುವನೋ, ಹಾಗೆಯೇ **ಪ್ರಯಾಣಕಾಲೇಚ** - ಚಕಾರ ೧೦ ನೆಯ ಪೂರ್ವಾರ್ಧದ ಕೊನೆಯಲ್ಲಿ ಇದೆ, ಪ್ರಯಾಣ ಕಾಲದಲ್ಲೂ ಕೂಡ, ಇದೇ ಪ್ರಕಾರವಾಗಿ ಧ್ಯಾನಿಸುವನೋ, **ಸಃ** - ಅವನು, **ತಂ ಪರಂ ಪುರುಷ ಮುಪೈತಿ.** ಅಂತಹ ಪರಮ ಪುರುಷನನ್ನು ತನ್ನ ಇಷ್ಟಾರ್ಥಸಿದ್ಧಿಗಾಗಿ ಹೊಂದುವನು. ಐದನೆಯ ಶ್ಲೋಕದಲ್ಲಿ **ಮದ್ಭಾವಂಯಾತಿ** ಎಂಬಲ್ಲೂ, ಮತ್ತು ಆರನೆಯ ಶ್ಲೋಕದಲ್ಲಿ, **ಸದಾತದ್ಭಾವಭಾವಿತಃ** ಎಂಬಲ್ಲೂ ಹೇಗೆ ಅರ್ಥವೋ ಇಲ್ಲಿಯೂ ಹಾಗೆಯೇ ಅರ್ಥವು. ಆತನಿಂದ ಭಾವಿತವಾಗಿರುವ ತನ್ನ ಇಷ್ಟಾರ್ಥಸಿದ್ಧಿಗಾಗಿ ಆತನನ್ನು ಹೊಂದುವನು ಎಂಬ ಭಾವವು. ಐಶ್ವರ್ಯಾರ್ಥಿಯ ಉಪಾಸನೆಯ ಕಾಲದಲ್ಲೂ ಪ್ರಯಾಣ ಕಾಲದಲ್ಲೂ ತಿಳಿಯಬೇಕಾದ ಭಗವಂತನ ಸ್ವರೂಪ ರೂಪಗುಣಗಳು ಈ ಎರಡು ಶ್ಲೋಕಗಳಿಂದ ಹೇಳಲ್ಪಟ್ಟವು. ಆತನು ಸರ್ವಜ್ಞನಾಗಿರಬೇಕು, ಇಲ್ಲದಿದ್ದರೆ ಈ ಉಪಾಸಕನ ಪ್ರಾರ್ಥನೆಯನ್ನು ತಿಳಿಯಲಾರನು. ಆತನು ತನಗೂ ಸೃಷ್ಟಿಕರವಾಗಿ, ನಿಯಾಮಕನಾಗಿ, ಧಾರಕನಾಗಿದ್ದಾನೆ, ಆ ಕಾರಣದಿಂದ ಅಣುವಾದ ತನ್ನನ್ನೂ ವ್ಯಾಪಿಸುವ ಅಣೋರಣೀಯಾನ್ ಆಗಿರುವ ಶಕ್ತಿಯುಳ್ಳವನೆಂಬ ಅನುಸಂಧಾನವು ಅವಶ್ಯಕವು. ಅದೂ ಅಲ್ಲದೆ ಉಪಾಸ್ಯನು ಯಾರು ಎಂಬಲ್ಲಿ **"ಕಾರಣಂತುಧ್ಯೇಯಃ"** ಎಂದಿರುವದರಿಂದ, **ಸರ್ವಸ್ಯಧಾತಾ,** ಸರ್ವವನ್ನೂ ಸೃಷ್ಟಿಸಿದವನು ಪರಮ ಪುರುಷನೆಂಬ ಅನುಸಂಧಾನವೂ ಅವಶ್ಯಕವೆಂದು ಹೇಳಲ್ಪಟ್ಟಿತು. ಉಪಾಸಿಸುವವನಿಗೆ ಪರಮ ಪುರುಷರಲ್ಲಿ ಪರಮವಿಶ್ವಾಸವೂ, ತನ್ನ ಇಷ್ಟಾರ್ಥವನ್ನು ಸಾಧಿಸಿಕೊಡುವನೆಂಬ ನಂಬಿಕೆಯೂ ಉಂಟಾಗಬೇಕಾದರೆ ಆತನ ದಿವ್ಯಮಙ್ಗಳ ವಿಗ್ರಹವೂ ಬಹು ಲಾವಣ್ಯಯುಕ್ತವಾಗಿ, ಆತನ **"ಕಪ್ಯಾಸಂ ಪುಂಡರೀಕ ಮಕ್ಷಿಣೀ"** ಎಂದು ಹೇಳಿರುವ ಹಾಗೆ, ಆ ಕಣ್ಣಿನ ಪ್ರೀತಿಯುಕ್ತವಾದ ಸೊಬಗಿನಿಂದ ಕಂಗೊಳಿಸುತ್ತಿರಬೇಕು. ಈ ಅಭಿಪ್ರಾಯವೆಲ್ಲಾ **ಆದಿತ್ಯವರ್ಣಂ ತಮಸಃ ಪರಸ್ತಾತ್** ಎಂಬ ಶ್ರುತಿ ಪ್ರತಿಪಾದ್ಯ

**ಭಾ. ಕವಿಂ-ಸರ್ವಜ್ಞಂ, ಪುರಾಣಂ-ಪುರಾತನಮ್, ಅನುಶಾಸಿತಾರಂ-ವಿಶ್ವಸ್ಯ ಪ್ರಶಾಸಿತಾರಂ, ಅಣೋರಣೀಯಾಂಸಂ-ಜೀವಾದಪಿ ಸೂಕ್ಷ್ಮತರಂ, ಸರ್ವಸ್ಯಧಾತಾರಂ-**

ಪ್ರಯೋಗದಿಂದ ವ್ಯಕ್ತವು. ಆ ಸರ್ವೇಶ್ವರನನ್ನು ಎಲ್ಲಿ ತನ್ನಲ್ಲಿರುವಹಾಗೆ ಭಾವಿಸತಕ್ಕದ್ದು ಎಂದರೆ ಪ್ರಾಣಶಬ್ದವಾಚ್ಯನಾದ ಪರಮ ಪುರುಷನನ್ನು **ಭ್ರುವೋರ್ಮಧ್ಯೇ** ಇರುವ ಹಾಗೆ ಭಾವಿಸತಕ್ಕದ್ದು. ಪ್ರತಿದಿನದಲ್ಲೂ ಏಕಾಂತ ಮನಸ್ಸಿನಿಂದಲೂ ಪರಮ ಪ್ರೀತಿಯಿಂದಲೂ ಉಪಾಸಿಸುವದು ಮಾತ್ರವೇ ಅಲ್ಲದೆ, ಪ್ರಯಾಣ ಕಾಲದಲ್ಲೂ ಐಶ್ವರ್ಯಾರ್ಥಿಯು ಸ್ಮರಿಸತಕ್ಕದ್ದು. ಹೀಗೆ ಮಾಡಿದರೆ ಪರಮ ಪುರುಷನ ಕೃಪೆಯನ್ನು ಹೊಂದುವನು, ಎಂಬುದು ತಾತ್ಪರ್ಯವು. ಈ ಶ್ಲೋಕದಲ್ಲಿ **"ಅಣೋರಣೀಯಾನ್ ಮಹತೋಮಹೀಯಾನ್"** (ಕಠ. ತೈ.) ಎಂಬ ಪ್ರಯೋಗದಿಂದ ಕೆಲವರಿಗೆ ಒಂದು ಶಙ್ಕೆ ಉತ್ಪನ್ನವಾಗಬಹುದು; ಏನೆಂದರೆ—ಅಣುವಿನೊಳಗೆ ಪ್ರದೇಶವಿಲ್ಲವಲ್ಲಾ ಅದಕ್ಕೆ ಅಂತರ್ವ್ಯಾಪ್ತಿ ಹೇಗೆ ಎಂದರೆ, ಅಣು ಎಷ್ಟಿದಯೋ ಅಷ್ಟನ್ನೂ ವ್ಯಾಪಿಸಿದ್ದಾನೆಂಬ ಭಾವವು. ಸ್ವಾಮಿಗೆ ಅದ್ಭುತ ಶಕ್ತಿ ಇರುವದರಿಂದ ಅದನ್ನೂ ಅಂತಃ ವ್ಯಾಪಿಸಿದ್ದಾನೆಂದು ಭಾವಿಸಬಹುದು, ಅಥವಾ ಅಂತಹ ಶಕ್ತಿಯು ಪರಮಾತ್ಮನಿಗೆ ಉಂಟು, ಆವಶ್ಯಕವಿದ್ದರೆ ಉಪಯೋಗಿಸುವನೆಂದಾಗಲಿ ಅರ್ಥ ಹೇಳಬಹುದು. ಹಾಗೆಯೇ ವಿಭು ಪದಾರ್ಥದ ಬಹಿರ್ವ್ಯಾಪ್ತಿಯನ್ನು ಹೇಳಬೇಕಾದುದು ಇಲ್ಲದಿದ್ದರೂ, ಸರ್ವೇಶ್ವರನಿಗೆ ಅಂತಹ ವಿಭು ಪದಾರ್ಥದ ಬಹಿರ್ವ್ಯಾಪ್ತಿಯನ್ನು ಹೊಂದುವ ಶಕ್ತಿಯುಂಟೆಂದು ಭಾವಿಸಬಹುದೆಂಬುದು ಶ್ರುತ್ಯರ್ಥವು.

**ಭಾಷ್ಯಾರ್ಥವು:—**ಉಪಾಸ್ಯ ದೇವತೆಯ ಸ್ವರೂಪ ರೂಪಗಳನ್ನು ಶ್ರುತಿ ಪ್ರತಿಪಾದ್ಯ ರೀತಿಯಲ್ಲಿ ಉಪಾದಿಸುತ್ತಾರೆ. **ಕವಿಂ** ಎಂದರೆ **ಸರ್ವಜ್ಞಂ** - ಸರ್ವಜ್ಞನನ್ನು, ಶ್ರುತಿಯು ಯಸ್ಸರ್ವಜ್ಞ ಸ್ಸರ್ವವಿತ್, ಉಪಾಸಕನ ವಿಷಯವನ್ನೂ ಆತನಿಗೆ ಅಭಿಲಷಿತವಾದುವನ್ನೂ ತಿಳಿಯಲು ಸರ್ವಜ್ಞತೆಯು ಆವಶ್ಯಕವು, **ಪುರಾಣಂ** ಎಂದರೆ **ಪುರಾತನಮ್** - ಅನಾದಿಯಾಗಿರುವವನು, ಸನಾತನನಾದವನನ್ನು, **ಅನುಶಾಸಿತಾರಂ** - ಸರ್ವನಿಯಾಮಕನನ್ನು, **"ಅನ್ತಃ ಪ್ರವಿಷ್ಟಶ್ಶಾಸ್ತಾ ಜನಾನಾಂ"** ಎಂಬ ಶ್ರುತಿಯು ಇದನ್ನು ಭೋಧಿಸುತ್ತದೆ, **ಅಣೋರಣೀಯಾಂಸಂ** ಎಂದರೆ **ಜೀವಾದಪಿ ಸೂಕ್ಷ್ಮತರಂ**- ಮೇಲೆ ಹೇಳಿರುವಹಾಗೆ ಜೀವನು ಅಣುವೆಂದು, **"ಏಷೋಣುರಾತ್ಮಾ"** (ಮುಂ. ೩. ೧. ೯) ಎಂದೂ **"ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಜೀವೋ ಭಾಗಸ್ಸ ವಿಜ್ಞೇಯಃ"** (ಶ್ವೇ. ೫. ೯.) ಎಂಬ ಶ್ರುತಿಯು ಅಣುತ್ವವನ್ನು ಉಪಪಾದಿಸಿರುವದರಿಂದ ಜೀವನೇ ಅಣುವಾಗಿ ಅತಿ ಸೂಕ್ಷ್ಮನು, ಆದುದರಿಂದ **ಜೀವಾದಪಿ ಸೂಕ್ಷ್ಮತರಂ** ಎಂದು ವ್ಯಾಖ್ಯಾನಮಾಡಿದರು, ಏಕೆಂದರೆ ಈ ಜೀವನನ್ನೂ ಅನುಪ್ರವೇಶ ಮಾಡಿ ಸ್ವಾಮಿಯು ನಿಯಮಿಸುತ್ತಾನಾದುದರಿಂದ, **ಅಣೋರಣೀಯಾನ್ ಮಹತೋಮಹೀಯಾನ್** ಎಂಬ ಶ್ರುತ್ಯರ್ಥವು ಇಲ್ಲಿ ಬೋಧಿತವು. **ಸರ್ವಸ್ಯಧಾತಾರಂ** ಎಂದರೆ **ಸರ್ವಸ್ಯ ಸ್ರಷ್ಟಾರಂ** - ಸಮಸ್ತಕ್ಕೂ ಸೃಷ್ಟಿಕರ್ತಾವಾದವನನ್ನು, **"ಧಾತಾಯಥಾ ಪೂರ್ವಮಕಲ್ಪಯತ್** ಎಂದು ಶ್ರುತಿಯಿರುವದರಿಂದ ಹಾಗೆ ವ್ಯಾಖ್ಯಾನವು. ಈ **ಧಾತಾರಂ** ಎಂದೂ **ಅನುಶಾಸಿತಾರಂ** ಎಂದೂ, ಹೇಳಿದ ಎರಡು ಅಭಿಪ್ರಾಯಗಳೂ, **"ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೌ ತಿಷ್ಠತಃ"** ಎಂಬ ಬೃಹದಾರಣ್ಯಕ ವಾಕ್ಯದಲ್ಲಿ (೫. ೮. ೯.) ಉಪಪಾದಿತಗಳು. **ಅಚಿನ್ತ್ಯರೂಪಂ** ಎಂದರೆ **ಸಕಲೇತರ ವಿಸಜಾತೀಯ ಸ್ವರೂಪಂ** - ಸಮಸ್ತಗಳಾದ ಇತರಗಳಾದ ಸರ್ವಚಿದ ಜಿದ್ವಸ್ತುಗಳಿಗಿಂತಲೂ ವಿಲಕ್ಷಣವಾದ

**ಭಾ. ಸರ್ವಸ್ಯಸ್ರಷ್ಟಾರಂ, ಅಚಿನ್ತ್ಯರೂಪಂ - ಸಕಲೇತರ ವಿಸಜಾತೀಯ ಸ್ವರೂಪವನ್ ಆದಿತ್ಯವರ್ಣಂ ತಮಸಃ ಪರಸ್ತಾತ್-ಅಪ್ರಾಕೃತ ಸ್ವಾಸಾಧಾರಣದಿವ್ಯ ರೂಪಂ, ತ ಮೇವಂಭೂತ ಮಹರಹ ರಭ್ಯಸ್ಯಮಾನ ಭಕ್ತಿಯುಕ್ತ ಬಲೇನಾಽರೂಢ ಸಂಸ್ಕಾರ ತಯಾ ಅಚಲೇನ ಮನಸಾ, ಪ್ರಯಾಣಕಾಲೇ ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ-**

ಸ್ವರೂಪವುಳ್ಳವನಾದ, ಯಾವ ವಿಧವಾದ ಪರಿಣಾಮಗಳೂ ಇಲ್ಲದೆ ನಿರ್ವಿಕಾರನು, **"ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ"** ಎಂಬ ಶ್ರೀ ಪರಾಶರರವಾಕ್ಯದಲ್ಲಿ ಬಹು ಸ್ವಾರಸ್ಯವಾಗಿ ಈ ವೈಲಕ್ಷಣವು ಉಪಪಾದಿತವು. ಆತನ ಸ್ವರೂಪವನ್ನು ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದ ತಿಳಿಯಲು ಸಾಧ್ಯವಿಲ್ಲದೆ ಶಬ್ದೈಕ ಪ್ರಮಾಣಗಮ್ಯನನ್ನು, **ಆದಿತ್ಯವರ್ಣಂ ತಮಸಃ ಪರಸ್ತಾತ್** ಎಂಬ ಪುರುಷಸೂಕ್ತ ವಾಕ್ಯದ ಅರ್ಥವೇನೆಂದರೆ **ಅಪ್ರಾಕೃತ ಸ್ವಾಸಾಧಾರಣ ದಿವ್ಯರೂಪಂ** - ಅಪ್ರಾಕೃತವಾದುದಾಗಿ ತನಗೇನೇ ಅಸಾಧಾರಣವಾದ **ತೇಜೋಮ**ಯವಾದ ದಿವ್ಯ ಮಙ್ಗಳ ವಿಗ್ರಹವುಳ್ಳವನನ್ನು, ಇದರಿಂದ ಅಕರ್ಮವಶ್ಯತ್ವವೂ, **ನಿತ್ಯತ್ವ ನಿರ**ವದ್ಯತ್ವಾದಿಗಳೂ ಸೂಚಿಸಲ್ಪಟ್ಟವು; ಆದಿತ್ಯವರ್ಣನೆಂದು ಹೇಳಿದುದರಿಂದ **ಅನುಕೂಲರಾದವ**ರಿಗೆ ಹಿತರಮಣೀಯತ್ವವೂ, ಪ್ರತಿಕೂಲರಿಗೆ ಸೂರ್ಯತೇಜಸ್ಸಿನ ಹಾಗೆ ನೋಡಲಸಾಧ್ಯವಾದ ಕಣ್ಣನ್ನು ಕುಕ್ಕುವಹಾಗೆ ಅತ್ಯಂತ ತೇಜೋರೂಪತ್ವವೂ ಸೂಚಿಸಲ್ಪಟ್ಟವು. ಇದು **ಮುಂದೆ "ದಿವಿ ಸೂರ್ಯ ಸಹಸ್ರಸ್ಯ"** ಎಂಬ (ಗೀ. ೧೧, ೧೨,) ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. **ತಮಸಃ** ಎಂದರೆ ಅಜ್ಞಾನವೆಂದಿತರರು ಅರ್ಥಮಾಡಿರುವದು ಸರಿಯಲ್ಲವೆಂದು, ತಮಶ್ಶಬ್ದವು ಜೀವನೊಂದಿಗೆ ಸೇರಿದ ಪ್ರಕೃತಿ ಎಂಬರ್ಥದಲ್ಲೇ ಶ್ರುತಿಗಳಲ್ಲಿ ಅನೇಕ ಕಡೆಯಲ್ಲೂ **ತಮಸಃ ಪರಸ್ತಾತ್"** ಎಂಬಲ್ಲೂ ಎಂದು ಸೂಚಿಸುವದಕ್ಕಾಗಿಯೇ **ಅಪ್ರಾಕೃತ** ವೆಂದು ವ್ಯಾಖ್ಯಾನ ಮಾಡಿರುತ್ತಾರೆ. **ತಮೇವಂಭೂತಂ** - ಇಂತಹ ಸ್ವರೂಪ ರೂಪಗಳನ್ನುಳ್ಳ ಪರಮ ಪುರುಷನಾದ ಶ್ರೀಮನ್ನಾರಾಯಣನನ್ನು, **ಅಹರಹರಭ್ಯಸ್ಯಮಾನ ಭಕ್ತಿಯುಕ್ತ ಯೋಗಬಲೇನ**-ಪ್ರತಿದಿನವಲ್ಲೂ ಅಭ್ಯಾಸಮಾಡುವ ಭಕ್ತಿಯಿಂದ ಸೇರಿದ ಉಪಾಸನದ ಬಲದಿಂದ, **ಆರೂಢ ಸಂಸ್ಕಾರ ತಯಾ**-ಅವುಗಳಲ್ಲೇ ಸಕ್ತವಾಗುವಹಾಗೆ ಸಂಸ್ಕಾರವನ್ನುಂಟುಮಾಡುವದರಿಂದ, **ಅಚಲೇನ ಮನಸಾ** - ಚಲಿಸದೆ ಸ್ಥಿರವಾಗಿ ಏಕಾಂತವಾದ ಮನಸ್ಸಿನಿಂದ, ಇದು ೧೦ ನೆಯ ಪೂರ್ವಾರ್ಧ ಶ್ಲೋಕದ **ಮನಸಾಽಚಲೇನ ಭಕ್ತ್ಯಾಯುಕ್ತೋ ಯೋಗಬಲೇನಚೈವ** ಎಂಬುವರ ವ್ಯಾಖ್ಯಾನವು, ಇಲ್ಲಿ **ಮನಸಾ, ಭಕ್ತ್ಯಾ ಯೋಗಬಲೇನ** ಎಂದು ಮೂರು ಬೇರೆ ಬೇರೆ ತೃತೀಯೆಗಳಿದ್ದರೂ, **ಭಕ್ತಿಯುಕ್ತ ಯೋಗಬಲೇನ ಆರೂಢ ಸಂಸ್ಕಾರತಯಾ ಅಚಲೇನ ಮನಸಾ** ಎಂಬ ವ್ಯಾಖ್ಯಾನದಿಂದ ಭಕ್ತಿಯು ಉಪಾಸನಕ್ಕೆ ಅತ್ಯಾವಶ್ಯಕವೆಂದೂ, ಆ ಭಕ್ತಿಯುಕ್ತ ಉಪಾಸನದಲ್ಲೇ ಮನಸ್ಸು ನಿಂತು ಸಂಸ್ಕಾರ ಹೊಂದಿದರೆ ಅದಕ್ಕೆ ಅಚಲತ್ವವು ಎಂದರೆ ಎಂತಹ ಪ್ರಬಲವಾದ ವಿಷಯಗಳಿಂದಲೂ ಕೂಡ ಮನಸ್ಸಿನ ನಿಷ್ಕಂಪನೀಯತ್ವವು ಸಿದ್ಧಿಸುತ್ತದೆಂಬುದನ್ನು ಸೂಚಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಭಕ್ತಿಯುಕ್ತ ಧ್ಯಾನವು ಪರಿಪಕ್ವವಾಗದ ಸ್ಥಿತಿಯಲ್ಲಿ ಮನಸ್ಸಿಗೆ ಸಂಸ್ಕಾರ ಸಿದ್ಧಿಸದೆ ಐಹಿಕ ಸುಖ ಕಾಮಿಗಳಾಗಿ ಯೋಗ ಭ್ರಷ್ಟರಾಗುತ್ತಾರೆ, ಇದಕ್ಕೆ ವಿಶ್ವಾಮಿತ್ರಾದಿಗಳೇ ನಿದರ್ಶನವೆಂದು, **"ಮಹರ್ಷಯೋ ಧರ್ಮ ತಪೋಭಿಕಾಮಾಃ"** ಹಾಗೆ ಮನಸ್ಸಿನ ಸಂಸ್ಕಾರವಿಲ್ಲದೆ ಹೋದರೆ **"ಕಾಮಾಭಿಕಾಮಾ ಪ್ರತಿಬದ್ಧಮೋಹಾಃ"** ಆಗುತ್ತಾರೆಂದು ತಾರೆಯು ಲಕ್ಷ್ಮಣನಿಗೆ ಹೇಳುತ್ತಾಳೆ. (ಕಿಷ್ಕಿಂದಾ. ೩೩. ೫೬) ಇಂತಹ ಕದಲಿಸಲಾಗದ ಸ್ಥಿರಮನಸ್ಸಿನಿಂದ **ಪ್ರಯಾಣಕಾಲೇ** ದೇಹವಿಯೋಗವಾ

**ಭಾ. ಸಂಸ್ಥಾಪ್ಯ, ತತ್ರ ಭ್ರೂಮಧ್ಯೇ ದಿವ್ಯಂ ಪುರುಷಂ ಯೋಽನುಸ್ಮರೇತ್, ಸಃ, ತಮೇವೋಪೈತಿ - ತದ್ಭಾವಂ ಯಾತಿ, ತತ್ಸಮಾನೈಶ್ವರೋ ಭವತೀತ್ಯರ್ಥಃ ||೯, ೧೦||**

ಗುವ ಕಾಲದಲ್ಲಿ, **ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ** ಎಂದರೆ ಸಂಸ್ಥಾಪ್ಯ-ಸ್ಥಾಪಿಸಿ, ಎಂದು ಹೇಳಿದುದರಭಿಪ್ರಾಯವೇನೆಂದರೆ ಆ ಭ್ರೂಮಧ್ಯದಲ್ಲೇ ಪ್ರಾಣಶಬ್ದವಾಚ್ಯನಾದ, **ದಿವ್ಯಪುರುಷಂ** - ತೇಜೋಮಯನಾದ ಪರಮ ಪುರುಷನನ್ನೇ ಸ್ಥಾಪಿಸಿ, ಹಾಗೆ ಆತನನ್ನೇ ಉಪಾಸಿಸುತ್ತಾ ಚಿಂತಿಸುತ್ತಾ, **ಯೋಽನುಸ್ಮರೇತ್** - ಯಾವನು ಹೀಗೆ ಅಭ್ಯಾಸ ಯೋಗಗಳ ಮೂಲಕ ಸ್ಮರಿಸುತ್ತಾ ಬರುತ್ತಾನೋ, **ಸತಮೇವೋಪೈತಿ, ಸಃ** - ಅಂತಹ ಉಪಾಸಕನು, **ತಮೇವ** ಎಂದರೆ **ಪರಂಪುರುಷಂದಿವ್ಯಂ** - ಆ ತೇಜೋಮಯನಾದ ಪರಮ ಪುರುಷನಾದ ಶ್ರೀಮನ್ನಾರಾಯಣನನ್ನೇ ಹೊಂದುವನು, ಎಂದರೆ **ತದ್ಭಾವಂ ಯಾತಿ** - ಆತನು ಹೇಗೆ ಭಾವಿಸಿದನೋ ಅಂತಹ ಭಾವವನ್ನೇ ಹೊಂದುವನು, **ತತ್ಸಮಾನೈಶ್ವರೋ ಭವತೀತ್ಯರ್ಥಃ** - ಅಂತಹ ಭಾವನೆಗೆ ಅನುಗುಣವಾದ ಐಶ್ವರ್ಯವುಳ್ಳವನಾಗುವನು ಎಂಬರ್ಥವು. ಇಲ್ಲಿ ಶ್ರೀ ಭಾಷ್ಯಕಾರರಿಗೆ ಪ್ರಾಣಶಬ್ದದಿಂದ ಮೇಲೆ ಉದಾಹರಿಸಿರುವ ಛಾಂದೋಗ್ಯಶ್ರುತಿ ಮತ್ತು **"ಅತಏವ ಪ್ರಾಣಃ"** ಎಂಬ ಸೂತ್ರಗಳಲ್ಲಿ ಉಪಪಾದಿಸಿರುವ ಪರಮಾತ್ಮನೆಂದೇ ಅಭಿಪ್ರಾಯವು, ಆದುದರಿಂದಲೇ **ಭ್ರೂಮಧ್ಯೇ ಪ್ರಾಣಮಾವೇಶ್ಯ** - ಎಂಬುದಕ್ಕೆ ವ್ಯಾಖ್ಯಾನವಾಗಿ, **ಸಂಸ್ಥಾಪ್ಯ ತತ್ರ ಭ್ರೂಮಧ್ಯೇ ದಿವ್ಯಂ ಪುರುಷಂ** ಎಂದು ಬರೆದಿರುತ್ತಾರೆ. **ಪ್ರಾಣ ಕ್ಕೆ** ಪಂಚವೃತ್ತಿಪ್ರಾಣವೆಂದರ್ಥಮಾಡಿದರೆ ಸರಸವಾಗುವದಿಲ್ಲವು, ಅದು ಸಾಧ್ಯವಿಲ್ಲದ ವಿಷಯವು, ಭ್ರೂಮಧ್ಯವು ಪ್ರಾಣವಾಯುವನ್ನು ತೆಗೆದುಕೊಂಡು ಹೋಗಿ ಸಿಕ್ಕಿಸಲು ಸಾಧ್ಯವಿಲ್ಲದ ಸ್ಥಳವು; ಆದುದರಿಂದ ಪ್ರಾಣಶಬ್ದವಾಚ್ಯನಾದ ಪರಮಾತ್ಮನನ್ನು ಭ್ರೂಮಧ್ಯದಲ್ಲಿ ಚಿಂತಿಸತಕ್ಕದೆಂದು ಹೇಳುವದು ಸಮಂಜಸವಾದ ಅರ್ಥವು. ಶ್ರೀ ಭಾಷ್ಯಕಾರರ ವ್ಯಾಖ್ಯಾನವೇ ಹಾಗೆ; ಆದುದರಿಂದಲೇ **ಭ್ರೂಮಧ್ಯೇ** ಎಂಬುದು ವ್ಯಾಖ್ಯಾನವು, **ಭ್ರುವೋರ್ಮಧ್ಯೇ** ಎಂಬುದು ವ್ಯಾಖ್ಯೇಯವು; ಈ ಭ್ರೂಮಧ್ಯವೇ ಹಿಂದೆ ನಾಸಾಗ್ರವೆಂದೂ ಹೇಳಲ್ಪಟ್ಟಿತು. (ಗೀ. ೬, ೧೩). **ಪ್ರಾಣ**ವೆಂಬುದಕ್ಕೆ ಈ ಶ್ಲೋಕದಲ್ಲೇ ಹೇಳಿರುವ **ದಿವ್ಯ ಪುರುಷನೇ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಅದನ್ನೇ ಪುನಃ ಹೇಳಿರುವದೇನೆಂದು **ಸಃ** - ಅಂತಹ ಉಪಾಸಕನು, **ತಮೇವ ಉಪೈತಿ** ಎಂದು ಪ್ರತೀಕವನ್ನು ಹಿಡಿದು ತದ್ಭಾ**ವಂಯಾತಿ** - ಆವನಿಂದ ಭಾವಿತವಾದುದನ್ನು ಹೊಂದುವನು ಎಂದು ಅದಕ್ಕೆ ವ್ಯಾಖ್ಯಾನಮಾಡಿರುತ್ತಾರೆ. ಹಿಂದೆ **ಸದ್ಭಾವಂಯಾತಿ**-ಸನ್ನಿಂದ ಭಾವಿತವಾದುದನ್ನು ಹೊಂದುವನು ಎಂದು ಹೇಳಿದುದೇ ಇಲ್ಲಿಯೂ ಹೇಳಲ್ಪಟ್ಟಿತೆಂಬ ಭಾವನೆಯಿಂದ, **ತದ್ಭಾವಂ ಯಾತಿ** - ಆ ಪರಮ ಪುರುಷನಿಂದ ಭಾವಿತವಾದುದನ್ನು ಹೊಂದುವನು ಎಂದು ವ್ಯಾಖ್ಯಾನವನ್ನು ಇಲ್ಲಿಯೂ ಮಾಡಿರುತ್ತಾರೆ. ಆದರೆ ಕೆಲವರು ಪ್ರಾಣಶಬ್ದಕ್ಕೆ ಪಂಚವೃತ್ತಿ ಪ್ರಾಣವೆಂದೇ ಅರ್ಥಮಾಡಿ ಪ್ರಾಣವನ್ನು ಕ್ರಮಕ್ರಮವಾಗಿ ಕೆಲವು ಸ್ಥಾನಗಳಲ್ಲಿ ಉಪಾಸನ ಕಾಲದಲ್ಲಿ ನಿಲ್ಲಿಸತಕ್ಕದೆಂದೂ ಭ್ರೂಮಧ್ಯವೂ ಅಂತಹ ಚಕ್ರವೊಂದೆಂದೂ ಭಾಗವತದಲ್ಲಿ ಹೇಳಿದೆ ಎಂಬುದಾಗಿ ಅಭಿಪ್ರಾಯ ಪಡುವರು. ಅಭ್ಯಾಸ ಉಪಾಸನಗಳ ರೀತ್ಯಾ ಅನ್ತ್ಯ ಪ್ರತ್ಯಯವೂ ತದನುಗುಣವಾಗಿ ಅಭಿಲಷಿತಾನುಸಾರ ಪ್ರಾಪ್ತಿಯೆಂದೂ ಹೇಳಲ್ಪಟ್ಟವು. ಎಲ್ಲಾ ಭಕ್ತರಿಗೂ ಹೀಗೆಯೇ ಎಂದು ತಿಳಿಯತಕ್ಕದ್ದು. ಈ ಸಂದರ್ಭದಲ್ಲಿ ಮನುಸ್ಮೃತಿಯ ಶ್ಲೋಕವು (೧೨. ೧೨. ೨) ಅನುಸಂಧೇಯವು. **"ಪ್ರಶಾಸಿತಾರಂ ಸರ್ವೇಷಾಮಣೀಯಾಂಸಮಣೀಯಸಾಂ। ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತು ಪುರುಷಂ**

**ಭಾ. ಅ. ಅಥ ಕೈವಲ್ಯಾರ್ಥಿನಾಂ ಸ್ಮರಣ ಪ್ರಕಾರಮಾಹ—**

**ಪರಮ್"** ಎಂಬುದು ೯ ನೆಯ ಶ್ಲೋಕಕ್ಕೆ ಸರಿಹೋಗುತ್ತದೆ. ಇಲ್ಲಿನ **ಅನುಶಾಸಿತಾರಂ** ಎಂಬುದಕ್ಕೆ **ಪ್ರಶಾಸಿತಾರಂ ಸರ್ವೇಷಾಂ** ಎಂದು ಇದೆ, **ಅಣೀಯಾಂಸ ಮಣೀಯಸಾಂ** ಎಂಬುದಕ್ಕೆ ಬದಲಾಗಿ **ಅಣೋರಣೀಯಾಂಸಂ** ಎಂದು ಇದೆ, **ರುಕ್ಮಾಭಂ** ಎಂಬುದಕ್ಕೆ ಬದಲಾಗಿ, **ಆದಿತ್ಯವರ್ಣಂ** ಎಂದು ಇದೆ, ಇಲ್ಲಿ **ಸ್ವಪ್ನಧೀಗಮ್ಯಂ** ಸ್ವಪ್ನದಲ್ಲಿ ಬಾಹ್ಯೇಂದ್ರಿಯಗಳ ಉಪರತಿ ಇದ್ದು ಮನಸ್ಸಿನಿಂದ ಮಾತ್ರವೇ ಹೇಗೆ ವಿಷಯಗ್ರಹಣ ಉಂಟೋ, ಹಾಗೆಯೇ ಇಲ್ಲೂ **"ಮನಸಾತುವಿಶುದ್ಧೇನ ಗೃಹ್ಯತೇ ಸೂಕ್ಷ್ಮದರ್ಶಿಭಿಃ"** ಎಂದು ವ್ಯಾಸ ಸ್ಮೃತಿಯಲ್ಲಿ ಹೇಳಿರುವಹಾಗೆ ಮನಸ್ಸಿನಿಂದಲೇ ಗ್ರಾಹ್ಯನಾದುದರಿಂದ, ಬಾಹ್ಯೇಂದ್ರಿಗಳಿಂದ ಅಚಿಂತ್ಯರೂಪನೆಂದು ಮೂಲದಲ್ಲಿ ಹೇಳಲ್ಪಟ್ಟಿತು. ಮಾನವ ಶ್ಲೋಕದ **ಪುರುಷಂ ಪರಂ** ಎಂಬುದಕ್ಕೆ ಸರಿಯಾಗಿ ಇಲ್ಲಿಯೂ **ಪರಂ ಪುರುಷಂ** ಎಂದೇ ಇರುತ್ತದೆ. ಅಲ್ಲಿನ **ವಿದ್ಯಾತ್** ಎಂಬುದಕ್ಕೆ ಬದಲಾಗಿ ಇಲ್ಲಿ **ಅನುಸ್ಮರೇತ್** ಎಂದು ಇರುತ್ತದೆ. ಇಲ್ಲಿ ಹೇಳಿರುವ ಭಗವಂತನ ಸ್ವರೂಪ ಕಾರಣತ್ವ ಮೊದಲಾದವುಗಳು ಮುಖ್ಯವಾಗಿ ಐಶ್ವರ್ಯಾರ್ಥಿಗಳನ್ನು ಕುರಿತು ಹೇಳಿದ್ದರೂ ಇತರ ಎಲ್ಲಾ ವಿಧ ಉಪಾಸನೆಗಳಲ್ಲೂ ಅತಿದೇಶ ಮೂಲಕ ಅನುಸಂಧಾನಮಾಡತಕ್ಕದೆಂಬುದು ಇದರಿಂದ ತೋರಿಬರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು :—** ಹೀಗೆ ಹಿಂದೆ ಐಶ್ವರ್ಯಾರ್ಥಿಯ ಜ್ಞಾತವ್ಯಾಂಶ ಅನ್ತಿಮ ಪ್ರತ್ಯಯ ವಿಷಯಗಳನ್ನು ತಿಳಿಸಿ, ಮುಂದೆ ಹೇಳುವ ಮೂರು ಶ್ಲೋಕಗಳು ಕೈವಲ್ಯಾರ್ಥಿಯನ್ನು ಕುರಿತದ್ದು ಎಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಅಥ**- ಅನಂತರದಲ್ಲಿ **ಕೈವಲ್ಯಾರ್ಥಿನಾಂ** - ಕೈವಲ್ಯಾರ್ಥಿಯಾದ ಜಿಜ್ಞಾಸುಗಳ, **ಸ್ಮರಣಪ್ರಕಾರಮಾಹ** - ಇಲ್ಲಿ ಸ್ಮರಣಶಬ್ದವು ಉಪಾಸನ ಕ್ರಮವನ್ನೂ ಅನ್ತಿಮ ಪ್ರತ್ಯಯವನ್ನೂ ಬೋಧಿಸುತ್ತದೆ. ಎರಡೂ ಸ್ಮೃತಿರೂಪವಾದುದರಿಂದ ಸ್ಮರಣಪ್ರಕಾರಮಾಹ ಎಂಬ ಪ್ರಯೋಗವು. ಮುಂದೆ ಬರುವ ಮೂರು ಶ್ಲೋಕಗಳೂ ಜ್ಞಾನಿಯನ್ನು ಕುರಿತದ್ದೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಇದು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಮೊದಲು ಆರ್ತನನ್ನೂ ಅರ್ಥಾರ್ಥಿಯನ್ನೂ ಕುರಿತು ೮. ೯. ೧೦ ನೆಯ ಶ್ಲೋಕದಲ್ಲಿ ಹೇಳಿ, ಅಲ್ಲಿಂದ ೧೧, ೧೨, ೧೩ ನೆಯ ಶ್ಲೋಕಗಳಲ್ಲಿ ಜಿಜ್ಞಾಸು ವಿಷಯವಾಗಿ ಹೇಳಿ, ೧೪, ೧೫, ೧೬ ನೆಯ ಶ್ಲೋಕಗಳಲ್ಲಿ ಜ್ಞಾನಿಯ ವಿಷಯವನ್ನು ಹೇಳುತ್ತಾರೆ. ಹೀಗೆ ಅನ್ವಯಿಸದೇ ಇದ್ದರೆ, ಹಿಂದಿನ ಅಧ್ಯಾಯಾಂತ್ಯದಿಂದ ಸೂಚಿತವಾದ ಪ್ರತಿಜ್ಞಾ ವಾಕ್ಯಗಳಿಗೆ ನ್ಯೂನತೆಯುಟಾಗುತ್ತದೆ.

**ಮೂಲಕ್ಕೆ ಅರ್ಥವು:—** ಶ್ರೀ ಯತಿವರ್ಯರು **ಸ್ಮರಣಪ್ರಕಾರಮಾಹ** ಎಂದು ಅವತಾರಿಕೆಯನ್ನು ಕೊಟ್ಟಿರುವುದು ಪ್ರಕೃತಿವಿಯುಕ್ತವಾದ ಆತ್ಮ ಪ್ರಾಪ್ತಿಯನ್ನು ಅಪೇಕ್ಷಿಸುವ ಜಿಜ್ಞಾಸುವಿನ ಧಾರಣಾ ಕ್ರಮವನ್ನು ತಿಳಿಸುತ್ತಾರೆಂದು ಅಭಿಪ್ರಾಯವು. ಅಕ್ಷರ ಶಬ್ದವು ಪರಮಾತ್ಮನನ್ನೂ ಜೀವಾತ್ಮನನ್ನೂ ಬೋಧಿಸುವ ಪ್ರಯೋಗಗಳು ಶ್ರುತಿಯಲ್ಲಿರುವದರಿಂದ ಎರಡು ವಿಧವಾಗಿಯೂ ಅನ್ವಯಿಸಿ ಅರ್ಥವನ್ನು ಹೇಳಬಹುದು; ಎರಡು ಸಂದರ್ಭದಲ್ಲೂ ತಾತ್ಪರ್ಯವು ಒಂದೆಯೇ; ಮೊದಲು ಪರಮಾತ್ಮಪರವಾದ ಅರ್ಥವು ಹೇಗೆಂದರೆ— **ಯತ್** - ಯಾವುದನ್ನು, **ವೇದವಿದಃ** - ವೇದಾರ್ಥಗಳನ್ನು ತಿಳಿದ ಪ್ರಾಜ್ಞರು, **ಅಕ್ಷರಮ್** ಜೀವ ಶರೀರಕ ಪರಮಾತ್ಮನೆಂದು, **ವದನ್ತಿ** - ಹೇಳುತ್ತಾರೋ, ಎಲ್ಲಿ ಹಾಗೆ ಹೇಳಿದೆ ಎಂದರೆ. **"ಸಹೋವಾಚೈತದ್ವೈ**

**ಮೂ. ಯದಕ್ಷರಂ ವೇದವಿದೋ ವದನ್ತಿ, ವಿಶನ್ತಿ ಯದ್ಯತಯೋ ವೀತರಾಗಾಃ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ ತತ್ತೇಪದಂ ಸಙ್ಗ್ರಹೇಣ ಪ್ರವಕ್ಷ್ಯೇ॥ ೧೧.**

**ತದಕ್ಷರಂ ಗಾರ್ಗಿಬ್ರಾಹ್ಮಣಾ ಅಭಿವದನ್ತಿ ಅಸ್ಥೂಲಂ"** ಇತ್ಯಾದಿ ( ಬೃ. ೫. ೮. ೮. ) ಇತ್ಯಾದಿ ಸ್ಥಳಗಳಲ್ಲಿ, ಇಲ್ಲಿ **ಬ್ರಾಹ್ಮಣಾಃ** ಎಂಬುದರರ್ಥವು **ವೇದವಿದಃ** ಎಂಬುದರರ್ಥವೂ ಒಂದೇ, **ಅಭಿವದನ್ತಿ** ಎಂಬುದಕ್ಕೆ ಬದಲಾಗಿ **ವದನ್ತಿ** ಎಂದು ಇಲ್ಲಿ ಇದೆ. **ಯತ್** - ಯಾವ ಅಕ್ಷರ ಶರೀರಕ ಪರಮಾತ್ಮನನ್ನೇ, **ವೀತರಾಗಾಃ** - ಐಹಿಕ ಕಾಮಾದಿಗಳಿಂದ ಬಿಡಲ್ಪಟ್ಟವರಾಗಿ, **ಯತಯಃ** - ಉಪಾಸನದಲ್ಲಿ ಯತನ ಶೀಲರು, ಇವರು ಸನ್ಯಾಸಿಗಳೇ ಆಗಿರಬೇಕೆಂಬ ಆವಶ್ಯಕತೆ ಏನೂ ಇಲ್ಲವು, ಸನ್ಯಾಸಿಗಳು ಯತನ ಶೀಲರಾಗಬಹುದು; **ವಿಶನ್ತಿ** - ಪ್ರಾಪ್ಯವಾಗಿ ಹೊಂದುತ್ತಾರೆಯೋ, **ಯದಿಚ್ಛನ್ತಃ** - ಯಾವ ಪ್ರಾಪ್ಯವನ್ನು ಎಂದರೆ ಪ್ರಕೃತಿ ವಿಯುಕ್ತನಾದ ಆತ್ಮಾವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವರು, ಅದಕ್ಕಾಗಿ **ಬ್ರಹ್ಮಚರ್ಯಂ ಚರನ್ತಿ**- ಸ್ತ್ರೀ ಸಂಭೋಗಾದಿಗಳಲ್ಲಿ ಆಸಕ್ತಿಯನ್ನು ಬಿಟ್ಟು ಬ್ರಹ್ಮಚರ್ಯವನ್ನು ಅನುಷ್ಠಿಸುವರೋ, **ತೇ**- ನಿನಗೆ, **ತತ್ ಪದಮ್** - ಅದನ್ನು ಮನಸ್ಸಿನಲ್ಲಿ ಧಾರಣೆಮಾಡಿ ಸ್ಮರಿಸುವ ಕ್ರಮವನ್ನು, **ಸಙ್ಗ್ರಹೇಣ ಪ್ರವಕ್ಷ್ಯೇ** - ಸಙ್ಗ್ರಹವಾಗಿ ಹೇಳುವೆನು ಕೇಳು, **ಅಕ್ಷರಮ್** ಎಂಬುದಕ್ಕೆ ಪ್ರಕೃತಿ ವಿಯುಕ್ತ ಜೀವಾತ್ಮನೆಂಬರ್ಥವನ್ನು ಇಟ್ಟುಕೊಂಡು ಅರ್ಥವು ಹೇಗೆಂದರೆ—**ಯದಕ್ಷರಂ** - ಯಾವ ಕ್ಷರಣ ಸ್ವರೂಪವಿಲ್ಲದುದರಿಂದ ಅಕ್ಷರನೆಂದು ಹೇಳಿಸಿಕೊಳ್ಳುವ ಪ್ರಕೃತಿ ವಿಯುಕ್ತ ಜೀವಾತ್ಮನೆಂದು, **ವೇದವಿದಃ ವದನ್ತಿ** - **"ಕ್ಷರಂಪ್ರಧಾನಂ ಅಮೃತಾಕ್ಷರಂ ಹರಃ, ಕ್ಷರಾತ್ಮಾನಾ ವೀಶತೇ ದೇವಏಕಃ"** (ಶ್ವೇ. ೧. ೧೯) ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ ಎಂದು, ವೇದ ವಿತ್ತುಗಳು ಹೇಳುತ್ತಾರೋ, **ಯದ್ಯ ತಯೋ ವೀತರಾಗಾಃ ವಿಶನ್ತಿ** - ಯಾವ ಪ್ರಕೃತಿ ವಿಯುಕ್ತ ಅಕ್ಷರಶಬ್ದ ವಾಚ್ಯನಾದ ಜೀವಾತ್ಮನನ್ನೇ ಪ್ರಾಪ್ಯವಾಗಿ ಹೊಂದುತ್ತಾರೆಯೋ, ಅಂತಹ ಯೋಗಿಯ ಚಿತ್ತದಲ್ಲಿದ ಧಾರಣಾಕ್ರಮವನ್ನು ಸಙ್ಗ್ರಹವಾಗಿ ತಿಳಿಸುವೆನು ಎಂದೂ ಅರ್ಥವನ್ನು ಹೇಳಬಹುದು. ಆದರೆ ಮೊದಲಿನ ಅರ್ಥವೇ ಸ್ವಾರಸ್ಯವು. ಏಕೆಂದರೆ ಆ ಅರ್ಥದಲ್ಲಿ ಉಪಾಸ್ಯವು ಯಾವುದು ಎಂಬುದು ವ್ಯಕ್ತವಾಗಿ ತೋರಿಬರುತ್ತದೆ. ಆದರೆ ಉಪಾಸ್ಯನು ಯಾರೆಂಬುದು ಮುಂದಿನ ಶ್ಲೋಕದಲ್ಲೇ **"ಮಾಮನುಸ್ಮರನ್"** ಎಂದು ಹೇಳಿರುವದರಿಂದ ಈ ಅರ್ಥವೂ ಉಪಾದೆಯವೆಂದೇ ಭಾವಿಸಿದರೂ ಭಾವಿಸಬಹುದು. ಅಕ್ಷರ ಶರೀರಕ ಅಕ್ಷರನೇ ಅಕ್ಷರವೆಂದರೇ ಪ್ರಕೃತಿ ವಿಯುಕ್ತವಾದ ಆತ್ಮಪ್ರಾಪ್ತಿಗಾಗಿ ಉಪಾಸ್ಯವೆಂಬುದು ತೋರಿಬರುತ್ತದೆ. **ಸಙ್ಗ್ರಹೇಣ ಪ್ರವಕ್ಷ್ಯೇ** - ಸಙ್ಗ್ರಹವಾಗಿ ಹೇಳುತ್ತೇನೆ ಎಂದು ಹೇಳಿರುವದು ಏಕೆಂದರೆ, ನೀನು ಇದನ್ನು ಸಮಗ್ರವಾಗಿ ತಿಳಿಯುವ ಆವಶ್ಯಕವಿಲ್ಲವು; ನೀನು ಸಮಗ್ರವಾಗಿ ತಿಳಿಯಬೇಕಾದುದು ಜ್ಞಾನಿಯಾಗಿ ನನ್ನ ಉಪಾಸನವೇ; ಆದುದರಿಂದ ಇದರ ವಿಷಯವಾಗಿ ವಿಸ್ತರಿಸಿ ಹೇಳುವೆನೆಂಬ ಭಾವವು ಸೂಚಿತವು. ಮುಂದೆ ೧೨ ನೆಯ ಅಧ್ಯಾಯದಲ್ಲಿ ಅರ್ಜುನನು ಪರಮಾತ್ಮೋಪಾಸನಕ್ಕೆ ಬೇಕಾದ ಚಿತ್ತೈಕಾಗ್ರತೆಯು ಕಷ್ಟವಾಗಿ, ಜಿಜ್ಞಾಸುವಾಗಿ ಉಪಾಸಿಸಲೇ, ಇಲ್ಲವೇ ಜ್ಞಾನಿಯಾಗಿ ಉಪಾಸಿಸಲೇ, ಎಂದು ಪಶ್ನಿಸುತ್ತಾನೆ. ಅದಕ್ಕೆ ಶ್ರೀ ಕೃಷ್ಣ ಭಗವಾನರವರು ನಿನಗೆ ಜಿಜ್ಞಾಸುವಿನ ಉಪಾಸನವು ಬೇಡ, ಜ್ಞಾನಿಯಾಗಿ ಉಪಾಸಿಸುವದೇ ನಿನಗೆ ಒಳ್ಳೆಯದು; ಕ್ಷಿಪ್ರ ಫಲಕಾರಿಯು; ಎಂದು ಉತ್ತರವನ್ನು ಹೇಳುವದರಿಂದ **ಸಙ್ಗ್ರಹೇಣ ಪ್ರವಕ್ಷ್ಯೇ** ಎಂದು ಇಲ್ಲಿ ಹೇಳಲ್ಪಟ್ಟಿತು. ಇದೇ ಗೀತೆಯಲ್ಲೇ ಅಕ್ಷರ ಶಬ್ದವು ಪ್ರಕೃತಿ ವಿಯುಕ್ತ ಜೀವಾತ್ಮನು ಎಂದರೆ ಮುಕ್ತಾತ್ಮನೆಂದು ಮುಂದೆಯೂ ಹೇಳಲ್ಪಡುತ್ತದೆ. **"ಕ್ಷರಸ್ಸರ್ವಾಣಿ ಭೂತಾನಿ, ಕೂಟಸ್ಥೋಽಕ್ಷರ ಉಚ್ಯತೇ"** (ಗೀ. ೧೫. ೧೬).

**ಭಾ. ಯದಕ್ಷರಂ - ಅಸ್ಥೂಲತ್ವಾದಿಗುಣಕಂ, ವೇದವಿದೋ ವದಂತಿ; ವೀತರಾಗಾಶ್ಚ ಯತಯಃ ಯದಕ್ಷರಂ ವಿಶನ್ತಿ; ಯದಕ್ಷರಂ ಪ್ರಾಪ್ತು ಮಿಚ್ಛನ್ತೋ ಬ್ರಹ್ಮ ಚರ್ಯಂ ಚರನ್ತಿ; ತತ್ಪದಂ ಸಙ್ಗ್ರಹೇಣ ತೇ ಪ್ರವಕ್ಷ್ಯೇ. ಪದ್ಯತೇ ಗಮ್ಯತೇ**

**ಭಾಷ್ಯಾರ್ಥವು:—ಯದಕ್ಷರಂ** ಎಂದರೆ ಯಾವ **ಅಸ್ಥೂಲತ್ವಾದಿಗುಣಕಂ,** ಬೃಹದಾರಣ್ಯಕದಲ್ಲಿ (೫. ೮. ೮.) **"ಸಹೋವಾಚೈ ತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತಿ ಅಸ್ಥೂಲ ಮನಣ್ವ ಹ್ರಸ್ವಮದೀರ್ಘ ಮಲೋಹಿತಂ"** ಇತ್ಯಾದಿ ವಾಕ್ಯದಲ್ಲಿ ಹೇಳಿರುವ ಅಕ್ಷರ ಶಬ್ದ ವಾಚ್ಯನಾದ ಪರಮಾತ್ಮನನ್ನು, ಈ ಶ್ರುತಿಯು ಪರಮಾತ್ಮನ ಸ್ವರೂಪವನ್ನು ಬೋಧಿಸುತ್ತದೆ. ಹೇಗೆಂದರೆ—ಓ ಗಾರ್ಗಿಯೇ, **ತದೇತತ್** - ಸಮಸ್ತ ಉಪನಿಷತ್ತುಗಳಲ್ಲಿ ಪ್ರಸಿದ್ಧನಾಗಿರುವ ಪರಬ್ರಹ್ಮವು, **ಅಶ್ನುತೇ** ಎಂದರೆ ವ್ಯಾಪ್ನೋತಿ; ಅಥವಾ **ನಕ್ಷರತೀತಿವಾ** ಎಂಬ ವ್ಯುತ್ಪತ್ತಿಯಿಂದಲಾಗಲಿ, ಅಥವಾ ಕ್ಷರ ಸಂಚಲನೇ ಎಂಬ ಧಾತುಮೂಲಕವಾಗಿ, ಮುಕ್ತರಿಂದ ಎಷ್ಟು ಅನುಭವಿಸಲ್ಪಟ್ಟರೂ ಅತಿಶಯ ಹೊಂದುವನೇ ವಿನಾ ಕಮ್ಮಿಯಾಗುವನಲ್ಲವು; ಇಂತಹ **ಅಕ್ಷರಂ** - ಪರಬ್ರಹ್ಮನನ್ನು, ಅಕ್ಷರಶಬ್ದವಾಚ್ಯನನ್ನಾಗಿ, **ಬ್ರಾಹ್ಮಣಾಃ** - ಬ್ರಹ್ಮವಿತ್ತುಗಳು **ಅಭಿವದನ್ತಿ** - ಹೇಳುತ್ತಾರೆಯೋ, ಬ್ರಹ್ಮವಿತ್ತುಗಳು ಹೇಳುತ್ತಾರೆಂದು ತಿಳಿಸಿದುದರಿಂದ ಯಥಾರ್ಥವಾದ ವಿಷಯವೆಂಬ ಭಾವವು; ಆ ಪರಬ್ರಹ್ಮನು ಎಂತವನೆಂದರೆ, **ಅಸ್ಥೂಲಂ** - ಸ್ಥೂಲವಲ್ಲದವನು, ಹಾಗಾದರೆ ಅಣುವೋ ಎಂದರೆ, **ಅನಣು-ಅಣುವೂ** ಅಲ್ಲದವನು, **ಹ್ರಸ್ವನೂ** ಅಲ್ಲವು, ಹಾಗಾದರೆ **ದೀರ್ಘನೋ** ಎಂದರೆ ಹಾಗೂ ಅಲ್ಲವು ಎಂಬರ್ಥವು, ಇಂತಹ ಪರಬ್ರಹ್ಮನನ್ನು, **ವೇದವಿದಃ** - ವೇದಶಾಸ್ತ್ರಜ್ಞರು, **ವದಂತಿ** - ಹೇಳುತ್ತಾರೋ, ಈ ಮೇಲಿನ ಶ್ರುತಿಯಲ್ಲೇ **ಬ್ರಾಹ್ಮಣಾ ಅಭಿವದನ್ತಿ** ಎಂದು ಹೇಳಿರುವದರಿಂದ ಇಲ್ಲಿಯೂ ಅದಕ್ಕನುಗುಣವಾಗಿ, **ವೇದವಿದೋ ವದಂತಿ,** ಎಂದು ಹೇಳಲ್ಪಟ್ಟಿರುತ್ತದೆ. ಹಾಗಲ್ಲದೆ ವೇದಶಾಸ್ತ್ರ ಜ್ಞಾನವಿಲ್ಲದವರು, **ನಾವೇದವಿನ್ಮನುತೇತಂ ಬೃಹಂತಮ್"** ಎಂದು ಹೇಳಿರುವ ಹಾಗೆ (ಯಾಜುಷಿ ಕಾಠಕೇ ೩, ೫೫. ೯) ವೇದವಿತ್ತುಗಳಲ್ಲದವರು ಆ ಪರಬ್ರಹ್ಮನನ್ನು ತಿಳಿಯಲಾರರು ಎಂಬ ಭಾವವು. ಇತರ ಪ್ರಮಾಣಗಳಿಂದ ತಿಳಿಯಲು ಸಾಧ್ಯವಿಲ್ಲದುದರಿಂದ ಶಾಸ್ತ್ರೈಕಗಮ್ಯನು ಎಂದು ಹೇಳುವದಕ್ಕಾಗಿ, **ವೇದವಿದೋ ವದಂತಿ** ಎಂಬ ಪ್ರಯೋಗವು. **ವೀತರಾಗಾಶ್ಚ** - ಐಹಿಕಾಭಿಲಾಷೆಗಳನ್ನು ತೊರೆದು ವೈರಾಗ್ಯವನ್ನು ಹೊಂದಿದ, **ಯತಯಃ** - ಯೋಗದಲ್ಲಿ ಯತನಶೀಲರು, **ಯದಕ್ಷರಂ** - ಯಾವ ಈ ಅಕ್ಷರಶಬ್ದ ವಾಚ್ಯನಾದ ಪರಬ್ರಹ್ಮನನ್ನು, **ವಿಶನ್ತಿ**- ಪ್ರವೇಶಿಸುವರೋ ಎಂದರೆ ಪ್ರಾಪ್ಯವಾಗಿ ಹೊಂದುವರೋ, ಹೀಗೆ ಹೇಳಿದುದರಿಂದ ರಾಗಯುಕ್ತರು, **"ಸಙ್ಗೋಹಿ ಸಂಸೃತೇರ್ಹೇತುಃ"** ಎಂದು ಹೇಳಿರುವಹಾಗೆ, ಅಕ್ಷರಶಬ್ದ ವಾಚ್ಯನನ್ನು ಪ್ರಾಪ್ಯವನ್ನಾಗಿ ಹೊಂದಲಾರರೆಂಬಭಿಪ್ರಾಯವೂ ಸೂಚಿತವು. **ಯದಕ್ಷರಂ ಪ್ರಾಪ್ತು ಮಿಚ್ಛನ್ತಃ** - ಯಾವ ಅಕ್ಷರಶಬ್ದ ವಾಚ್ಯನಾದ ಪರಮಾತ್ಮನನ್ನು ಮೇಲೆ ಹೇಳಿದಹಾಗೆ ಪ್ರಾಪ್ಯವಾಗಿ ಪಡೆಯಲಪೇಕ್ಷಿಸುವರೋ, ಅಂತಹ **ಯತಯಃ** - ಯತನಶೀಲರಾದ ಉಪಾಸಕರು, ಇದು **ಯದಿಚ್ಛನ್ತಃ** - ಎಂಬುದಕ್ಕೆ ಭಾಷ್ಯವು; **ಬ್ರಹ್ಮಚರ್ಯಂ ಚರನ್ತಿ** - ಸ್ತ್ರೀ ಸಂಗಾದಿಗಳನ್ನು ಬಿಟ್ಟು ಇಂದ್ರಿಯ ನಿಗ್ರಹವನ್ನು ಆಚರಿಸುವರೋ, ಇಲ್ಲಿ ವೀತರಾಗತ್ವವೂ ಬ್ರಹ್ಮಚರ್ಯವೂ ಒಂದೇ ಅಲ್ಲವೋ? ಎಂದರೆ ವೀತರಾಗತ್ವದಿಂದ ಸಾಮಾನ್ಯವಾಗಿ ವೈರಾಗ್ಯವು ಹೇಳಲ್ಪಟ್ಟಿದ್ದರೂ ಉಪಾಸನರೂಪ ಯಜ್ಞದೀಕ್ಷೆಯಲ್ಲಿರುವವರಿಗೆ, ಮುಖ್ಯವಾಗಿ ಊರ್ಧ್ವರೇತಸ್ತ್ವವು ಎಂದರೆ ಸ್ತ್ರೀ ಸಂಭೋಗವಿಲ್ಲದಿರಬೇಕೆಂಬ ನಿಯಮವು, **ಬ್ರಹ್ಮಚರ್ಯಂ ಚರಂತಿ** ಎಂಬು

**ಭಾ. ಚೇತಸೇತಿ ಪದಮ್; ತತ್ ನಿಖಿಲವೇದಾಂತ ವೇದ್ಯಂ, ಮತ್ಸ್ವರೂಪ ಮಕ್ಷರಂ ಯಥೋಪಾಸ್ಯಂ ತಥಾ ಸಂಕ್ಷೇಪೇಣ ಪ್ರವಕ್ಷ್ಯಾಮೀತ್ಯರ್ಥಃ ॥ ೧೧ ॥**

ದರಿಂದ ಉಪದೇಶಿಸಲ್ಪಟ್ಟಿತೆಂದು ಭಾವಿಸತಕ್ಕದ್ದು. ವೀತರಾಗರಾದುದರಿಂದಲೇ ಬ್ರಹ್ಮ ಚರ್ಯಾಚರಣೆಯು ಉಂಟಾಗುತ್ತದೆ ಎಂಬ ಭಾವವು. ಬ್ರಹ್ಮಪ್ರಾಪ್ತಿಗೆ ಬ್ರಹ್ಮಚರ್ಯವು ಆವಶ್ಯಕವೆಂದು (ಛಾಂ. ೮. ೫) **"ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯ ಮೇವ ತತ್"** ಎಂದಾರಂಭಿಸಿ, **ಅಥ ಯದರಣ್ಯಾಯನ ಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವತತ್"** ಎಂದು ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುತ್ತದೆ. ಅಲ್ಲಿ ಹೇಳಿರುವದು ಏನೆಂದರೆ. ಯಜ್ಞದರ್ಶ ಪೂರ್ಣ ಮಾಸಾದಿ ಇಷ್ಟಿ, ಮೌನವ್ರತ, ಅನಾಶಕಾಯನ, ಅರಣ್ಯಾಯನ, ಇತ್ಯಾದಿಗಳು, ಬ್ರಹ್ಮವಿದ್ಯೆ ಯನ್ನು ಸಾಧಿಸಿಕೊಟ್ಟು ಬ್ರಹ್ಮಲೋಕವನ್ನು ಹೊಂದಿಸುವ ಕರ್ಮಗಳು, ಬ್ರಹ್ಮಚರ್ಯದಿಂ ದಲೇ ಸಿದ್ಧಿಸುವೆಂದು ಹೇಳಿ, ಬ್ರಹ್ಮಚರ್ಯಕ್ಕೆ ಪ್ರಾಶಸ್ತ್ಯವನ್ನು ಶ್ರುತಿಯು ಸಾಧಿಸಿರುತ್ತದೆ. ಆದುದರಿಂದ ಬ್ರಹ್ಮಚರ್ಯ ಶಬ್ದದಿಂದ ಬ್ರಹ್ಮಚರ್ಯಾಶ್ರಮದನ್ನಾಗಲಿ ಸನ್ಯಾಸಾಶ್ರಮವನ್ನಾ ಗಲಿ ಹೇಳಲಿಲ್ಲವು. ಮೈಥುನ ನಿವೃತ್ತಿರೂಪವಾದ ಊರ್ಧ್ವರೇತಸ್ತ್ವವು ಹೇಳಲ್ಪಟ್ಟಿತು; ಅಥವಾ, ಬ್ರಹ್ಮಪ್ರಾಪ್ತಿಗಾಗಿ ನಿಯಮದಿಂದ ಮಾಡುವ ಕರ್ಮವನ್ನಾಗಲಿ ಬ್ರಹ್ಮಚರ್ಯವೆಂದು ಹೇಳಬಹುದು. ಈ ಅರ್ಥವು ಇಷ್ಟವಾದುದಾದರೆ. ಭರನ್ಯಾಸ ನಿಷ್ಠ ಪ್ರಪನ್ನನ ಚರ್ಯೆಯೂ ಬ್ರಹ್ಮಚರ್ಯವೆಂದೇ ಭಾವಿಸಬಹುದು. ಏಕೆಂದರೆ ಆತನು ವಿಭೀಷಣನಹಾಗೆ **"ಪರಿತ್ಯಕ್ತಾ ಮಯಾಲಂಕಾ ಮಿತ್ರಾಣಿ ಚ ಧನಾನಿವೈ"** (ಯುದ್ಧ. ೧೯. ೫.) ಎಂದೂ **"ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂ ಗತಃ** ಎಂದೂ (ಯುದ್ಧ. ೧೭. ೧೪) ಹೇಳಿರುವ ಹಾಗೆ, ವೈರಾಗ್ಯಶಿಖಾಮಣಿಯಾದುದರಿಂದ ಅಂತವನ ಪ್ರವೃತ್ತಿಯೂ ಬ್ರಹ್ಮಚರ್ಯರೂಪವಾ ಮದೇ. **ತತ್ಪದಂ - ಅಂತಹ** ಪ್ರಾಪ್ಯವನ್ನು, ಸಙ್ಗ್ರಹವಾಗಿ, **ತೇ** - ನಿನಗಾಗಿ, **ಪ್ರವಕ್ಷ್ಯೇ** - ಹೇಳುತ್ತೇನೆ. **ಪದ** ಶಬ್ದಕ್ಕೆ ಪ್ರಾಪ್ಯವೆಂಬರ್ಥ ಹೇಗೆಂದರೆ ಹೇಳುತ್ತಾರೆ.— **ಪದ್ಯತೇ** ಎಂದರೆ **ಗಮ್ಯತೇ ಚೇತಸೇತಿ ಪದಮ್** - ಮನಸ್ಸಿನಿಂದ ಹೊಂದಲ್ಪಡುತ್ತದೆಯಾ ದುದರಿಂದ **ಪದ** ವೆಂದು ಹೇಳಿಸಿಕೊಳ್ಳುತ್ತದೆ, **ತತ್** - ಅಂತಹ, **ನಿಖಿಲ ವೇದಾಂತವೇದ್ಯಂ**- ಸಮಸ್ತ ವೇದಾಂತಗಳಿಂದಲೂ ತಿಳಿಯಲ್ಪಡತಕ್ಕವನಾಗಿರುವ, **ಮತ್ಸ್ವರೂಪ ಮಕ್ಷರಮ್** ಅಕ್ಷರಶಬ್ದ ವಾಚ್ಯವಾದ ನನ್ನ ಸ್ವರೂಪವನ್ನು ಸರ್ವವ್ಯಾಪ್ಯತ್ವ ಅಥವಾ ವಿಕಾರ ಶೂನ್ಯತ್ವ ವೆಂಬ ಅರ್ಥಗಳು ಅಕ್ಷರ ಶಬ್ದದಿಂದ ಬೋಧಿತವಾಗುವದರಿಂದ, **ಮತ್ಸ್ವರೂಪ ಮಕ್ಷರಮ್** ಎಂದು ವ್ಯಾಖ್ಯಾನಮಾಡಿರುತ್ತಾರೆ. **ಅಕ್ಷರವೆಂದರೆ** ಪ್ರಕೃತಿ ವಿಯುಕ್ತವಾದ ಪರಿಶುದ್ಧಾತ್ಮ ಪ್ರಾಪ್ತಿಗಾಗಿ ಅಕ್ಷರನಾದ ಪರಮಾತ್ಮನ ಉಪಾಸನವು ಎಂಬ ಭಾವವು ಪ್ರದರ್ಶಿಸಲ್ಪಟ್ಟಿತು. ಆದು ದರಿಂದ ಜಿಜ್ಞಾಸುವಿನ ಉಪಾಸನ ಕ್ರಮವನ್ನು ಸಙ್ಗ್ರಹವಾಗಿ ಮುಂದೆ ತಿಳಿಸುವೆನೆಂದು ಹೇಳ ಲ್ಪಟ್ಟಿತು. **ಯಥೋಪಾಸ್ಯಂ** - ಹೇಗೆ ಉಪಾಸ್ಯನೋ, **ತಥಾ** - ಹಾಗೆಯೇ, **ಸಙ್ಗ್ರಹ ವಾಗಿ, ಪ್ರವಕ್ಷ್ಯಾಮೀತ್ಯರ್ಥಃ** - ಸಂಕ್ಷೇಪವಾಗಿ ಹೇಳುವೆನೆಂಬ ತಾತ್ಪರ್ಯವು. ಈ ಶ್ಲೋಕ ದಲ್ಲಿ, **ಯತಯಃ ವೀತರಾಗಾಃ** ಎಂಬುದರಿಂದ ವೈರಾಗ್ಯ ಶಿಖಾಮಣಿಗಳಾದ ಸನ್ಯಾಸಾಶ್ರಮಿ ಗಳು ಮಾತ್ರವೇ ಹೇಳಲ್ಪಟ್ಟರೆಂದು ಭಾವಿಸತಕ್ಕದ್ದಲ್ಲವು, ಉಪಾಸನಪ್ರಕರಣವಾದುದರಿಂದ ಉಪಾಸನಕ್ಕೆ ಸರ್ವಾಶ್ರಮಿಗಳಾದ ತ್ರೈವರ್ಣದವರೂ ಅಧಿಕಾರಿಗಳಾದುದರಿಂದ, **ಯತಯಃ** ಎಂದರೆ **ಯತನ ಶೀಲಾಃ** ಎಂದು ಇಷ್ಟು ಮಾತ್ರವೇ ಅರ್ಥಮಾಡತಕ್ಕದ್ದು ಯುಕ್ತವಾಗಿರು ತ್ತದೆ. ಮೇಲೆ **ವೇದವಿದೋ ವದಂತಿ** ಎಂಬಲ್ಲಿ ಸೂಚಿಸಲ್ಪಟ್ಟ ಅರ್ಥವನ್ನೇ, ಶ್ಲೋಕಾಭಿಪ್ರಾ ಯವನ್ನು ನಿಗಮನಮಾಡಿ ಹೇಳುವ ಸಂದರ್ಭದಲ್ಲೂ, **ನಿಖಿಲ ವೇದಾಂತ ವೇದ್ಯಂ** ಎಂಬುದ

**ಮೂ. ಸರ್ವದ್ವಾರಾಣಿ ಸಂಯಮ್ಯ ಮನೋಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಂ ಆಸ್ಥಿತೋ ಯೋಗಧಾರಣಾಮ್ ॥ ೧೨.**
**ಓ ಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾ ಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥ ೧೩.**

ರಿಂದ ಉಪಪಾದಿಸಿದವರಾಗಿ, ಶಾಸ್ತ್ರೈಕಗಮ್ಯನೆಂಬ ವಿಷಯವನ್ನು **"ಶಾಸ್ತ್ರಯೋನಿತ್ವಾತ್"** ಎಂಬ ಸೂತ್ರದಲ್ಲಿ ಹೇಳಿರುವಹಾಗೆ, ಸ್ಥಾಪಿಸಿರುತ್ತಾರೆ. **ಪದ್ಯತೇ ಗಮ್ಯತೇ ಚೇತಸಾ** ಎಂದು ವ್ಯುತ್ಪತ್ತಿಯನ್ನು ಪ್ರದರ್ಶಿಸಿದುದರಿಂದ ಪ್ರಾಪ್ಯಮಾತ್ರವೇ ಅಲ್ಲದೆ ಜ್ಞಾನದಿಂದ ಪ್ರಾಪ್ಯವಾದುದರಿಂದ, **ಉಪಾಸ್ಯವೂ ಉಪಾಸನಕ್ರಮವೂ** ಸಹ ಸೂಚಿಸಲ್ಪಟ್ಟವೆಂದು ತಿಳಿಯತಕ್ಕದ್ದು ॥೧೧॥

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕದಲ್ಲಿ **"ತತ್ತೇಪದಂ ಸಙ್ಗ್ರಹೇಣ ಪ್ರವಕ್ಷ್ಯೇ"** ಎಂದು ಪ್ರತಿಜ್ಞಾ ರೂಪದಲ್ಲಿ ಹೇಳಿದುದನ್ನೇ ಮುಂದೆ ಹನ್ನೆರಡನೆಯ ಶ್ಲೋಕದಲ್ಲಿ ಯೋಗಧಾರಣೆಯ ಕ್ರಮವನ್ನು ತಿಳಿಯಪಡಿಸಿ, ಈ ಉಪಾಸನಕ್ಕೆ ಪ್ರಣವೋಚ್ಚಾರಣೆಯು ಅಙ್ಗವಾಗಿರಬೇಕೆಂದು ತಿಳಿಸಿ, ದೇಹಾವಸಾನಕಾಲದಲ್ಲೂ ತನ್ನನ್ನು ಸ್ಮರಿಸಿದರೆ, ಪರಿಶುದ್ಧಾತ್ಮಸ್ವರೂಪ ಪ್ರಾಪ್ತಿಯುಂಟಾಗುತ್ತದೆಂದು ಹೇಳುತ್ತಾರೆ.—**ಸರ್ವದ್ವಾರಾಣಿ ಸಂಯಮ್ಯ** - ಇಂದ್ರಿಯಗಳಿಗೂ ವಿಷಯಗಳಿಗೂ ಸಂಬಂಧವುಂಟಾದರೆ ಅನುಭವ ಉಂಟಾಗುತ್ತದೆ. ಆದುದರಿಂದ ವಿಷಯೋಪಭೋಗಗಳಿಗೆ ಇಂದ್ರಿಯಗಳು ದ್ವಾರಗಳು, ಅಂತಹ ಸಮಸ್ತ ಇಂದ್ರಿಯರೂಪ ದ್ವಾರಗಳನ್ನೂ ನಿಗ್ರಹಿಸಿ, ಇಲ್ಲಿ ದ್ವಾರ ಶಬ್ದವು **"ನವದ್ವಾರೇ ಪುರೇ ದೇಹೀ"** ಎಂಬಲ್ಲಿ ಹೇಳಿರುವ ಒಂಭತ್ತು ದ್ವಾರಗಳೂ ಇಲ್ಲಿ ಹೇಳಲ್ಪಡಲಿಲ್ಲವು. ದ್ವಾರಶಬ್ದದಿಂದ ಇಂದ್ರಿಯಗಳು ಹೇಳಲ್ಪಟ್ಟವು; ಹೊರಗಿನ ವಿಷಯಗಳನ್ನು ಗ್ರಹಿಸಿ ಉಪಭೋಗಗಳಿಗೆ ಸಾಧಕಗಳಾಗಿ ಮಾಡುವ ದ್ವಾರಗಳು. ದ್ವಾರವೆಂದರೆ ರಂಧ್ರವೆಂಬರ್ಥವಲ್ಲವು; ವಿಷಯಾನುಭವಕ್ಕೆ ಅವು ದ್ವಾರಗಳು ಎಂಬ ಭಾವವು. ಯಾವಾಗ ಇಂದ್ರಿಯಗಳು ನಿಗ್ರಹಿಸಲ್ಪಟ್ಟವೋ, ಆಗ ಮನೋ ನಿಗ್ರಹವೂ ಉಂಟಾಗುವದು ಸುಲಭವು, ಅದನ್ನೇ ಮುಂದೆ ಹೇಳುತ್ತಾರೆ. ಹೀಗೆ **ಮನಃ** - ಮನಸ್ಸನ್ನು, **ಹೃದಿ** - ಹೃದಯದಲ್ಲಿ ನಿಲ್ಲುವಹಾಗೆ ಎಂದರೆ ಹಾರ್ದನಾದ ಪರಮಾತ್ಮನಲ್ಲೇ ನಿಲ್ಲುವಹಾಗೆ, **ನಿರುಧ್ಯ ಚ**-ತಡದೂ, ಸಮುಚ್ಚಯಾರ್ಥವನ್ನು ಬೋಧಿಸುವ ಚ ಶಬ್ದದಿಂದ ಎರಡೂ ಆವಶ್ಯಕವೆಂದು ಹೇಳಲ್ಪಟ್ಟಿತು, ಮನಸ್ಸು ವಿಷಯ ಪ್ರವಣತೆಯಿಂದ ನಿವೃತ್ತವಾದುದಾಗಿಯೂ ಇರಬೇಕು; ಮತ್ತು ಹಾರ್ದನಾದ ಪರಮಾತ್ಮನಲ್ಲೂ ಸಕ್ತವಾಗಿರಬೇಕು. ಪರಮಾತ್ಮನಲ್ಲಿ ಮನಸ್ಸು ಸಕ್ತವಾಗಬೇಕಾದರೆ, ಬಾಹ್ಯ ವಿಷಯಗಳಿಂದ ನಿವೃತ್ತವಾಗಿರಬೇಕು, **"ಪರಮಾತ್ಮ ನಿಯೋರಕ್ತೋವಿರಕ್ತೋಽ ಪರಮಾತ್ಮನಿ"** ಎಂದು ಹೇಳಲ್ಪಟ್ಟಿರುತ್ತದೆ; ಹೀಗಿದ್ದುಕೊಂಡು. **ಆತ್ಮನಃಪ್ರಾಣಂ**-ತನ್ನ ಪ್ರಾಣವಾಯುವನ್ನು, **ಮೂರ್ಧ್ನ್ಯಾಧಾಯ** - ಶಿರಸ್ಸಿನಕಡೆಗೆ ಸೆಳೆದುಕೊಂಡವನಾಗಿ, ಹೀಗೆ ಶಿರಸ್ಸಿನಕಡೆ ಪ್ರಾಣವಾಯುವನ್ನು ಸೆಳೆಯುವದು ಅನ್ತಿಮಕಾಲದಲ್ಲಿ ಎಂದೂ, ಹೀಗೆ ಆರು ಚಕ್ರಗಳಲ್ಲಿ ಕ್ರಮ ಕ್ರಮವಾಗಿ ವಾಯುವನ್ನು ಮೇಲಕ್ಕೆ ಆಕರ್ಷಿಸತಕ್ಕದೆಂದೂ ಭಾಗವತ ಪ್ರಮಾಣದಿಂದ ವ್ಯಕ್ತಪಡುತ್ತದೆ. ಹೀಗೆ **ಮೂರ್ಧ್ನ್ಯಾಧಾಯ** ಎಂದು ಪ್ರಯೋಗವಿರುವದರಿಂದ, ಇದು ಅಪುನರಾವೃತ್ತಿಪ್ರಕರಣವೆಂಬುದು ಸುಸ್ಪಷ್ಟವು. ಪುನರಾವೃತ್ತಿಯನ್ನುಂಟುಮಾಡುವ ಯೋಗದಲ್ಲಿ ಪ್ರಾಣವು ಅದರೊಂದಿಗೆ ಆತ್ಮನೂ ಮೂರ್ಧನ್ಯನಾಡಿಯನ್ನು ಹೊಂದುವದಿಲ್ಲವು; ಬೇರೆ ಇನ್ನು ನೂರು ನಾಡಿಗಳಲ್ಲಿ ಯಾವುದಾದರೂ ಒಂದನ್ನು ಹೊಂದುತ್ತಾನೆಂಬ

ಭಾವವು. ಇದಕ್ಕೆ ಪ್ರಮಾಣವು **"ಶತಂ ಚೈಕಾಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಭಿನಿಸ್ಸೃತೈಕಾ। ತಯೋರ್ಧ್ವಮಾಯನ್ನಮೃತತ್ವ ಮೇತಿವಿಷ್ವಙ್ಞನ್ಯಾ ಉತ್ಕ್ರಮಣೇ ಭವನ್ತಿ"** ಕಠ. (೨. ೬. ೧೬.) ಮೂರ್ಧನ್ಯಾಡಿಯ ಮೂಲಕ ಪ್ರಾಣೋತ್ಕ್ರಮಣವಾಗಿ ಆತ್ಮನು ಹೊರಟುಹೋದರೆ ಮೋಕ್ಷಪ್ರಾಪ್ತಿ ಎಂದೂ, ಮಿಕ್ಕ ನೂರು ನಾಡಿಗಳ ಮೂಲಕವಾದರೆ ಪುನರಾವೃತ್ತಿ ಎಂದೂ, ಇಲ್ಲಿ ಹೇಳಲ್ಪಟ್ಟಿರುತ್ತದೆ. **ಯೋಗಧಾರಣಾಂ ಆಸ್ಥಿತಃ** - ಯೋಗರೂಪವಾದ ಧಾರಣೆಯನ್ನು ಮನಸಾ ಹೊಂದಿದವನಾಗಿ, **ಓಮಿತೇಕಾಕ್ಷರಂಬ್ರಹ್ಮ** - ಓಂ ಎಂಬ ಒಂದಾದ ಅಕ್ಷರವಾದ, ಮನ್ತ್ರವು ಅದು ಪರಬ್ರಹ್ಮಸ್ವರೂಪವನ್ನು ಬೋಧಿಸುವದರಿಂದ **ಬ್ರಹ್ಮ**ಎಂದರೆ ಪರಬ್ರಹ್ಮವನ್ನು, **ಓಂ ಮಿತ್ಯೇಕಾಕ್ಷರಂ** ಎಂದು ನಾರಾಯಣೋಪನಿಷತ್ತಿನಲ್ಲಿ ಹೇಳಿರುವ ಹಾಗೆ ಒಂದಕ್ಷರರೂಪವಾದ ಎಂದು ಅರ್ಥಮಾಡಬಹುದು. ಓಂ ಎಂಬ ಒಂದು ಅಕ್ಷರವು ಮೂರು ಅಕ್ಷರಗಳಾದ ಅ, ಉ, ಮ. ಕಾರಗಳಿಂದ ಸೇರಿರುವದರಿಂದ ಓಂ ಎಂಬುದು ಚಿದಚಿದ್ವಿಶಿಷ್ಟನಾಗಿ ಅವುಗಳಿಗೆ ಶೇಷಿಯಾಗಿರುವ ಪರಮಾತ್ಮನೇ ಭೋಧಿಸಲ್ಪಟ್ಟಿದುವನಾಗಿರುವದರಿಂದ **ಓಂ** ಎಂಬ ಉಚ್ಚಾರದಿಂದ ಪರಮಾತ್ಮನೇ ವ್ಯವಹರಿಸಲ್ಪಡುವನೆಂಬ ಭಾವವು. ಅಥವಾ **ಓಂ** ಎಂಬುದರಿಂದ ಏಕನಾಗಿ ಅಕ್ಷರಶಬ್ದ ವಾಚ್ಯನಾದ, ಪರಬ್ರಹ್ಮವನ್ನು, **ವ್ಯಾಹರ್ರ** - ಉಚ್ಚರಿಸುವವನಾಗಿ, ಹೀಗೆ ಪ್ರಣವವನ್ನು ಉಚ್ಚರಿಸುತ್ತಾ, **ಮಾಂ ಅನುಸ್ಮರ್ರ** - ನನ್ನನ್ನು ಅಭ್ಯಾಸಪೂರ್ವಕವಾಗಿ ಸ್ಮರಿಸುತ್ತಾ ಎಂದರೆ ಉಪಾಸಿಸುತ್ತಾ, **ಯಃ** - ಯಾವನು, **ದೇಹಂತ್ಯಜರ್** - ದೇಹಾವಸಾನಕಾಲದಲ್ಲಿ ಸ್ಥೂಲದೇಹವನ್ನು ಇಲ್ಲೇ ಬಿಡುವವನಾಗಿ ಎಂದರೆ ಬಿಟ್ಟು, **ಪ್ರಯಾತಿ** - ಸೂಕ್ಷ್ಮಸ್ಥಿತಿಯಲ್ಲಿರುವ ಇಂದ್ರಿಯಪ್ರಾಣ ಮನಸ್ಸುಗಳಿಂದ ಸೇರಿದ ಭೂತಸೂಕ್ಷ್ಮದೊಂದಿಗೆ ಸೇರಿ ಹೊರಟುಹೋಗುತ್ತಾನೋ; ಆತನು ಅಣುವು, ಸೂಕ್ಷ್ಮದಶೆಯಲ್ಲಿಯಾದರೂ ಶರೀರವಿಲ್ಲದಿದ್ದರೆ ಇವನಿಗೆ ಗತಿಯು ಕೊಡುವದಿಲ್ಲವು, ಇಲ್ಲಿ **ಪ್ರಯಾತಿ** ಎಂದು ಹೇಳಿರುವದರಿಂದ ಈತನಿಗೆ ಬಹು ಸೂಕ್ಷ್ಮವಾಗಿ ಆಗಲೂ ಶರೀರವಿದೆ ಎಂದೇ ಭಾವಿಸತಕ್ಕದ್ದು. **ಸಃ** - ಅವನು, **ಪರಮಾಂಗತಿಂ** - ಫಲರೂಪದಲ್ಲಿ ಸರ್ವೋತ್ಕೃಷ್ಟವಾದ ಪ್ರಾಪ್ಯವನ್ನು, **ಯಾತಿ** - ಹೊಂದುತ್ತಾನೆ. ಇಲ್ಲಿರುವ ಶ್ಲೋಕವು ಕಠವಲ್ಲಿಯ ದ್ವಿತೀಯವಲ್ಲಿಯ ೧೫ ನೆಯ ಶ್ಲೋಕದ ಹಾಗೆಯೇ ಇರುತ್ತದೆ, ಅಲ್ಲಿ **"ಸರ್ವೇ ವೇದಾಯತ್ಪದ ಮಾಮನನ್ತಿ ತಪಾಂಸಿಸರ್ವಾಣಿ ಚ ಯದ್ವದಂತಿ । ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ ತತ್ತೇಪದಂ ಸಙ್ಗ್ರಹೇಣ ಬ್ರವೀಮ್ಯೋ ಮಿತ್ಯೇತತ್ ॥"** ಎಂದಿರುತ್ತದೆ. ಸಮಸ್ತ ವೇದಗಳೂ ಯಾವ ಪ್ರಾಪ್ಯವನ್ನು ಕುರಿತು ಹೇಳುತ್ತವೋ, ಸಮಸ್ತ ತಪಸ್ಸುಗಳೂ ಕೂಡ ಯಾವ ಪರಬ್ರಹ್ಮವನ್ನು ಪ್ರಾಪ್ಯವನ್ನಾಗಿ ಹೇಳುತ್ತವೋ, ಯಾವ ಪ್ರಾಪ್ಯವನ್ನು ಹೊಂದಲಪೇಕ್ಷೆಯುಳ್ಳವರು ಕಾಮಸಙ್ಗಾದಿಗಳನ್ನು ತ್ಯಜಿಸಿ ನಿಯತೇಂದ್ರಿಯರಾಗಿರುತ್ತಾರೋ, ಅಂತಹ ಪ್ರಾಪ್ಯವನ್ನು ಓ ನಿಚಕೇತಸ್ಸೇ ನಿನಗೆ ಸಙ್ಗ್ರಹವಾಗಿ ತಿಳಿಸುವೆನು, ಅದೇನೆಂದರೆ:—**ಓ ಮಿತ್ಯೇತತ್** - ಓಂ ಎಂಬ ಅಕ್ಷರವಾಚ್ಯನಾದ ಪರಬ್ರಹ್ಮವು" ಎಂಬುದು ಈ ಉಪನಿಷತ್ತಿನ ಅರ್ಥವು. ನಚಿಕೇತಸ್ಸು, ಪ್ರಾಪ್ಯಸ್ವರೂಪವೂ ಎಂತಾದ್ದೆಂದು ಕೇಳುತ್ತಾನೆ. ಅದಕ್ಕೆ ಮೃತ್ಯುವು, ಮೊದಲು ಪ್ರಾಪ್ಯದ ವೈಭವವನ್ನು ಸೂಕ್ಷ್ಮವಾಗಿ ತಿಳಿಸುವ ಉಪದೇಶವಾದುದು ಈ ಶ್ಲೋಕವು; ಓಂ ಎಂಬ ಪ್ರಣವವು ಪರಬ್ರಹ್ಮವನ್ನು ಭೋಧಿಸುತ್ತದೆಂದು ಹೇಳಿ, ಅದರ ಉಪಾಸನದಿಂದಾಗುವ ಫಲವನ್ನು ಮುಂದಿನ ವಾಕ್ಯದಲ್ಲಿ **"ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಂ । ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೆದಿಚ್ಛತಿ ತಸ್ಯತತ್"** ಈ ಪ್ರಣವೋಪಾಸನದಿಂದ ಆಗುವ ಫಲವು, ಉಪಾಸಕನಿಗೆ ಯಾವುದು ಅಭಿಲಷಿತವೋ, ಅದೇ ಉಂಟಾಗುತ್ತದೆ ಎಂದು ಹೇಳಿರುತ್ತದೆ. ಈ ಅಭಿಪ್ರಾಯವೇ ಈ ಶ್ಲೋಕದಲ್ಲೂ

**ಸಯಾತಿ ಪರಮಾಂಗತಿಂ** ಎಂದು ತನಗೆ ಇಷ್ಟವಾದ ಪ್ರಾಪ್ಯವನ್ನು ಹೊಂದುತ್ತಾನೆಂದು ಹೇಳಲ್ಪಟ್ಟಿರುತ್ತದೆ. ಹಾಗೆ ಉಪಾಸಕನಿಗೆ ಅಭಿಲಷಿತವಾದುದು ಶ್ರೇಷ್ಠವಾದುದೇ ಆಗಿರುತ್ತದೆಯಾದುದರಿಂದ **ಪರಮಾಂಗತಿಂ** ಎಂದು ಹೇಳಲ್ಪಟ್ಟಿರುತ್ತದೆ. ಈ ಪ್ರಣವೋಚ್ಚಾರಣೆಯಿಂದ ಸೇರಿದ ಉಪಾಸನದಿಂದ ಪರಬ್ರಹ್ಮಪ್ರಾಪ್ತಿಯೂ ಉಂಟೆಂದು ಆ ಮುಂದಿನ ಶ್ಲೋಕದಲ್ಲಿ **"ಬ್ರಹ್ಮಲೋಕೇ ಮಹೀಯತೇ"** (ಕಠ. ೧. ೨. ೧) ಎಂದು ಹೇಳಲ್ಪಟ್ಟಿರುತ್ತದೆ. ಉಪಾಸನಕ್ಕೆ ಅಙ್ಗವಾಗಿ ಓಂಕಾರೋಚ್ಚಾರಣೆಯು; **ಇಂತಹ ಪರಮಾಂಗತಿ**ಯನ್ನು ಹೊಂದುವದಕ್ಕೆ ಇದು ಸಾಧನವಾಗಿ ಉಪಪಾದಿತವಾಗಿದೆ ಎಂದು ಹಿಂದೆ ೭ ನೆಯ ಶ್ಲೋಕದಲ್ಲೇ ಪ್ರಶ್ನೋಪನಿಷತ್ತಿನ ಪಂಚಮ ಪ್ರಶ್ನೆಯಲ್ಲಿ ಉಪಪಾದಿತವೆಂದು ತಿಳಿಸಿರುವೆವು. ೯೨೭ ನೆಯ ಪುಟವನ್ನು ಪರಾಂಬರಿಸಿ. ಆ ಉಪನಿಷತ್ತು ನಿಗಮನದಲ್ಲಿ ಹೇಳುತ್ತದೇನೆಂದರೆ:—

**"ಋಗ್ಭಿರೇತಂ ಯಜುರ್ಭಿರಂತರಿಕ್ಷಂ ಸಸಾಮಭಿರ್ಯತ್ತತ್ಕವಯೋ ವೇದಯಂತೇ । ತ ಮೋಙ್ಕಾರೇಣೈವಾ ಯತನೇನಾನ್ವೇತಿ ವಿದ್ವಾನ್ ಯತ್ತಚ್ಛಾನ್ತ ಮಜರ ಮಮೃತ ಮಭಯಂ ಪರಂಚೇತಿ ॥"** ಒಂದು ಮಾತ್ರೆಯುಳ್ಳ ಓಂಕಾರೋಚ್ಚಾರಣೆಯು ಋಗ್ಮಂತ್ರವಾಗುವದರಿಂದ ಅಂತಹ ಪ್ರಣವೋಚ್ಚಾರ ಮೂಲಕ ಮಾಡಿದ ಉಪಾಸನವು ಪುನಃ ಈ ಲೋಕದೈಶ್ವರ್ಯವನ್ನೂ, ದ್ವಿಮಾತ್ರೋಚ್ಚಾರಣಮೂಲಕ ಉಚ್ಚರಿಸಿದ ಉಪಾಸನೆಯು ಯಜುರ್ಮಂತ್ರವಾಗಿ ಅದರಿಂದ ಸ್ವರ್ಗಲೋಕೈಶ್ವರ್ಯಪ್ರಾಪ್ತಿಯನ್ನೂ, ತ್ರಿಮಾತ್ರೋಚ್ಚಾರಣ ಮೂಲಕ ಸಾಮ ಮಂತ್ರವಾಗಿ, ಅದರೊಂದಿಗೆ ಸೇರಿದ ಪರಬ್ರಹ್ಮೋಪಾಸನೆಯಿಂದ ವೈಕುಂಠೈಶ್ವರ್ಯಪ್ರಾಪ್ತಿಯೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ **ಪರಮಾಂಗತಿಂ** ಎಂದು ಮೂಲದಲ್ಲಿ ಪ್ರಯೋಗವೂ ಇರುತ್ತದೆ. ಹೀಗೆ ಏಕಮಾತ್ರೆ, ದ್ವಿಮಾತ್ರೆ, ತ್ರಿಮಾತ್ರೆಗಳ ಉಚ್ಚಾರಣೆಯ ಉಪಾಸನಗಳೆಲ್ಲವೂ ಉತ್ಕೃಷ್ಟ ಸ್ಥಿತಿಯನ್ನು ಉಪಾಸಕನ ಇಷ್ಟಾನುಸಾರ ಹೊಂದಿಸುವದರಿಂದಲೂ, ಮತ್ತು ಅಂತಹ ಏಕಮಾತ್ರೆ ದ್ವಿಮಾತ್ರೆ ತ್ರಿಮಾತ್ರೆಗಳ ಉಚ್ಚಾರಣೆಯಿಂದ ಸೇರಿದ ಉಪಾಸನವೂ ಸುಕೃತವಾಗಿ ಪರಿಣಮಿಸಿ ಕಾಲಕ್ರಮೇಣ ಮೋಕ್ಷಪ್ರಾಪ್ತಿಗೂ ಕೂಡ ಸಹಕಾರಿಯಾಗಬಹುದಾದುದರಿಂದಲೂ ಪ್ರಣವೋಚ್ಚಾರಣೆಯ ಮೂಲಕವಾಗಿ ಪರಮಾತ್ಮನನ್ನು ಉಪಾಸಿಸುವನು ಉತ್ಕೃಷ್ಟದಶೆಯನ್ನೇ ಉತ್ತರೋತ್ತರ ಹೊಂದುವನೆಂದು **ಸಯಾತಿ ಪರಮಾಂಗತಿಂ** ಎಂದು ಸಙ್ಗ್ರಹಿಸಿ ಹೇಳಿದರೆ ವಿನಾ, ಏಕಮಾತ್ರ ದ್ವಿಮಾತ್ರ ತ್ರಿಮಾತ್ರ ವಿವೇಚನೆಯನ್ನು ಮಾಡಿ ಇಲ್ಲಿ ಹೇಳಲಿಲ್ಲವು. ಸಙ್ಗ್ರಹವಾಗಿ ಹೇಳಿರುವದರಿಂದ ಮಿಕ್ಕ ವಿಷಯಗಳನ್ನು ಗುರುಮುಖೇನ ಉಪದೇಶರೀತ್ಯಾ ಗ್ರಹಿಸಬಹುದೆಂಬ ಭಾವವನ್ನೂ ಊಹಿಸತಕ್ಕದ್ದು. ಆಗ **"ಸಯಾತಿ ಪರಮಾಂಗತಿಂ"** ಎಂಬುದಕ್ಕೆ ಅರ್ಥಮಾಡುವದೇನೂ ಕಷ್ಟವಿಲ್ಲವು. ಈತನಿಗೆ ಇಹಲೋಕದ ಐಶ್ವರ್ಯಪ್ರಾಪ್ತಿಯೂ ಸ್ವರ್ಗಾದಿ ಲೋಕಗಳ ಭೋಗವೂ, ದಿವ್ಯ ವೈಕುಂಠಪ್ರಾಪ್ತಿಯೂ ಎಲ್ಲವೂ ಪರಮಾಂಗತಿ ಎಂದು ಹೇಳಿಸಿಕೊಳ್ಳಲುಏನೊಂದೂ ತೊಂದರೆ ಇಲ್ಲವು. ಆದರೆ ಶ್ಲೋಕವು ಮೂರ್ಧ್ನ್ಯಾಧಾಯ ಎಂದು ಹೇಳಿರುವದರಿಂದ ಉತ್ತರೋತ್ತರ ಕೊನೆಯಲ್ಲಿ ಲಭಿಸುವ ಪ್ರಾಪ್ಯಮಾತ್ರವೇ ಅನುವಾದಮಾಡಿ ಇಲ್ಲಿ ಹೇಳಲ್ಪಟ್ಟಿತು. ಈ ಎರಡು ಶ್ಲೋಕಗಳೂ ಜಿಜ್ಞಾಸುವಿನ ಉಪಾಸನ ಪ್ರಕಾರವನ್ನೂ ಆತನಿಗೆ ಉಂಟಾಗುವ ಫಲವನ್ನೂ ಬೋಧಿಸುತ್ತವೆ ಎಂದು ಶ್ರೀ ಭಾಷ್ಯಕಾರರು ಸಹೇತುಕವಾಗಿ ಉಪಪಾದಿಸಿ ಹೇಳಿರುತ್ತಾರೆ. ಇದನ್ನೇ ಶ್ರೀ ದೇಶಿಕವರ್ಯರು ಬಹು ಪ್ರಮಾಣಗಳ ಮೂಲಕ ಸಮರ್ಥಿಸಿರುತ್ತಾರೆ. ಉಪನಿಷತ್ತುಗಳಲ್ಲಿ ಪ್ರಣವೋಪಾಸನವು ಏಕಮಾತ್ರಾದಿ ವ್ಯತ್ಯಾಸಗಳಿಂದ ಎಲ್ಲಾ ಫಲಗಳನ್ನೂ ಕೊಡುತ್ತದೆಂದು ಹೇಳಿರುವದರಿಂದ ಎಲ್ಲಾ ಭಕ್ತರುಗಳಿಗೂ ಪ್ರಣವೋಚ್ಚಾರಣೆಯು ಆವಶ್ಯಕವು.

**ಭಾ. ಸರ್ವಾಣಿ ಶ್ರೋತ್ರಾದೀನೀಂದ್ರಿಯಾಣಿ ಜ್ಞಾನದ್ವಾರಭೂತಾನಿ, ಸಂಯಮ್ಯ-ಸ್ವವ್ಯಾಪಾರೇಭ್ಯೋ ವಿನಿವರ್ತ್ಯ, ಹೃದಯಕಮಲನಿವಿಷ್ಟೇ ಮಯ್ಯಕ್ಷರೇ ಮನೋ ನಿರುಧ್ಯ, ಯೋಗಾಖ್ಯಾಂ ಧಾರಣಾ ಮಾಸ್ಥಿತಃ ಮಯ್ಯೇವ ನಿಶ್ಚಲಾಂ ಸ್ಥಿತಿ ಮಾ**

---

**ಭಾಷ್ಯಾರ್ಥವು:**—ಮೊದಲು **ಸರ್ವದ್ವಾರಾಣಿಸಂಯಮ್ಯ** ವೆಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ—**ಸರ್ವಾಣಿ ಶ್ರೋತ್ರಾದೀನೀಂದ್ರಿಯಾಣಿ** - ಸಮಸ್ತಗಳಾದ ಇಂದ್ರಿಯಗಳನ್ನು, ಎಂತಹ ಇಂದ್ರಿಯಗಳು ಎಂದರೆ, **ಜ್ಞಾನದ್ವಾರಾಣಿ** - ಜ್ಞಾನಗಳಿಗೆಲ್ಲಾ ಕಾರಣಭೂತಗಳಾಗಿರುವ ಇಂದ್ರಿಯಗಳನ್ನು, **ಸಂಯಮ್ಯ** - ಜಯಿಸಿ ಎಂದರೆ **ಸ್ವವ್ಯಾಪಾರೇಭ್ಯೋ ವಿನಿವರ್ತ್ಯ**- ತಮ್ಮ ತಮ್ಮ ವ್ಯಾಪಾರಗಳಿಂದ ಹಿಂತಿರುಗಿಸಿ, ಇಲ್ಲಿ **ದ್ವಾರ** ವೆಂದರೆ **ನವದ್ವಾರೇ ಪುರೇದೇಹೇ** ಎಂದು ಹೇಳಿರುವದರಿಂದ ದೇಹದ ಒಂಭತ್ತು ದ್ವಾರಗಳು ಎಂದು ಇಲ್ಲಿ ಅರ್ಥಮಾಡುತ್ತಾರೋ ಎಂಬ ಸಂದೇಹದಿಂದ **ಜ್ಞಾನದ್ವಾರಭೂತಾನಿ** ಎಂದು ದ್ವಾರಶಬ್ದಕ್ಕೆ ಅರ್ಥಮಾಡಿದರು, ನವದ್ವಾರವೆಂದು ಅರ್ಥಮಾಡಿದರೆ **ಸಂಯಮ್ಯ** ಎಂಬುದಕ್ಕೆ ಆಗ ಅರ್ಥಹೇಳಲು ಸಾಧ್ಯವಿಲ್ಲವಾಗುತ್ತದೆ. ಇಂದ್ರಿಯಗಳ ಶಿಕ್ಷೆ ಅಥವಾ ಜಯವು ಯಾವುದು ಎಂದರೆ **ಸ್ವವ್ಯಾಪಾರೇಭ್ಯೋ ವಿನಿವರ್ತ್ಯ** ಎಂದು ವ್ಯಾಖ್ಯಾನ ಮಾಡಿದರು, ಅವುಗಳ ತಮ್ಮ ತಮ್ಮ ವ್ಯಾಪಾರಗಳಾದ ಅಸತ್ತಾದುದನ್ನು ಕೇಳುವದು, ನೋಡುವದು, ಸ್ಪರ್ಶಿಸುವದು ಇವುಗಳಲ್ಲಿ ಪ್ರವರ್ತಿಸದ ಹಾಗೆ ಮಾಡುವದೆಂಬರ್ಥವು. ಇದು ಯೋಗಶಾಸ್ತ್ರದಲ್ಲಿ ಪ್ರತ್ಯಾಹಾರವೆಂದು ಹೇಳಲ್ಪಡುತ್ತದೆ. **ಹೃದಯ ಕಮಲನಿವಿಷ್ಟೇ ಮಯ್ಯಕ್ಷರೇ ಮನೋ ನಿರುಧ್ಯ** - ಇದು **ಮನೋಹೃದಿ ನಿರುಧ್ಯ** ಎಂಬುದರ ವ್ಯಾಖ್ಯಾನವು, ಮನಸ್ಸನ್ನು ಹೃದಯದಲ್ಲಿರುವಹಾಗೆ ನಿರೋಧಿಸಿ ಎಂದರೆ ಸ್ಪಷ್ಟವಾಗುವದಿಲ್ಲವಾದುದರಿಂದ, ಹೃದಯಕಮಲದಲ್ಲಿರುವ ಅಕ್ಷರಶಬ್ದ ವಾಚ್ಯನಾದ ನನ್ನಲ್ಲಿ ಮನಸ್ಸನ್ನು ತಡೆದು ಎಂದರೆ ಮಿಕ್ಕೆಲ್ಲದರಲ್ಲೂ ಅಭಿಲಾಷೆಯನ್ನು ತೊರೆದು, ಹೀಗೆ ವಿರಕ್ತಿಭಾವವನ್ನು ಹೊಂದಿದವನಾಗಿ ಎಂಬರ್ಥವು. ಕಠವಲ್ಲಿಯಲ್ಲಿ (೨. ೬. ೧೭) ಹೇಳಿರುವ **ಅಙ್ಗುಷ್ಠಮಾತ್ರಃ ಪುರುಷೋಽನ್ತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ....ತಂ ವಿದ್ಯಾಚ್ಛುಕ್ರಮಮೃತಂ" "ಪರಮಾತ್ಮೋಪಾಸನಾರ್ಥ ಮುಪಾಸಕ ಹೃದಯೇ ವರ್ತಮಾನತ್ವಾತ್" ಉಪಾಸಕ ಹೃದಯಸ್ಯಾಂಙ್ಗುಷ್ಠ ಪ್ರಮಾಣತ್ವಾತ್ತದಪೇಕ್ಷಯೇದಂ ಅಙ್ಗುಷ್ಠಪ್ರಮಿತತ್ವಮುಪಪದ್ಯತೇ"** ಶ್ರೀ ಭಾಷ್ಯ (೧. ೩. ೧೪) ಎಂದು ಹೇಳಿರುವ ಹಾಗೆ ಉಪಾಸಕನ ಅನುಗ್ರಹಾರ್ಥವಾಗಿ ಪರಮಾತ್ಮನು ಆತನ ಅಙ್ಗುಷ್ಠಪ್ರಮಿತಿಯಲ್ಲಿ ದಿವ್ಯ ಮಙ್ಗಳ ವಿಗ್ರಹಯುಕ್ತನಾಗಿ ಹಾರ್ದಾವತಾರಿಯಾಗಿರುತ್ತಾನೆಂಬುದು ಇಲ್ಲಿ ಸ್ಮಾರಿತವು. ಆದುದರಿಂದಲೇ **ಹೃದಯಕಮಲ ನಿವಿಷ್ಟೇ** ಎಂಬ ಪ್ರಯೋಗವು. ಹೃದಯವನ್ನು ಒಂದು ಕಮಲವಾಗಿ ಭಾವಿಸೋಣವು ಹಿಂದೆ ಉದಾಹರಿಸಿರುವ ಭಾಗವತ ಶ್ಲೋಕಗಳಿಂದ ವ್ಯಕ್ತವು. **ಯೋಗಾಖ್ಯಾಂ ಧಾರಣಾಮಾಸ್ಥಿತಃ** - ಯೋಗವೆಂಬ ಧಾರಣವನ್ನು ಹೊಂದಿದವನಾಗಿ ಎಂದರೆ **ಮಯ್ಯೇವ ನಿಶ್ಚಲಾ ಸ್ಥಿತಿಂ ಆಸ್ಥಿತಃ** - ನನ್ನಲ್ಲೇ ನಿಶ್ಚಲವಾದ ಸ್ಥಿತಿಯನ್ನು ಹೊಂದಿದವನಾಗಿ, ಇಲ್ಲಿ **ಯೋಗಧಾರಣಾ** ಎಂದರೆ ಯೋಗದ ಅಙ್ಗರೂಪವಾದ ಧಾರಣೆಯಲ್ಲವು, **ನಿಷಾದಸ್ಥಪತಿ** ನ್ಯಾಯದಿಂದ ಕರ್ಮಧಾರಯ ಸಮಾಸವೆಂದು ತೋರಿಸುವದಕ್ಕಾಗಿ **ಯೋಗಾಖ್ಯಾಂ ಧಾರಣಾಂ** ಎಂಬ ಭಾಷ್ಯವು. ಹಿಂದೆಯೇ ಮನಃ ಹೃದಿ ನಿರುಧ್ಯ ಎಂಬುದರಿಂದಲೇ ಧಾರಣವು ಹೇಳಲ್ಪಟ್ಟಿತು. **ಓ ಮಿತ್ಯೇಕಾಕ್ಷರಂ ಬ್ರಹ್ಮ ಮದ್ವಾಚಕಂ ವ್ಯಾಹರನ್** - **"ಓಂ"** ಎಂಬ ಪರಬ್ರಹ್ಮನಾದ ನನ್ನನ್ನು ಬೋಧಿಸುವ ಒಂದಕ್ಷರವನ್ನು (**"ಒತ್ತಿಳಿತ್ತು"**) ಉಚ್ಚರಿಸು

**ಭಾ. ಸ್ಥಿತಃ, ಓ ಮಿತ್ಯೇಕಾಕ್ಷರಂ ಬ್ರಹ್ಮ-ಮದ್ವಾಚಕಂ ವ್ಯಾಹರನ್, ವಾಚ್ಯಂ ಮಾಮನು ಸ್ಮರನ್, ಆತ್ಮನಃ ಪ್ರಾಣಂ ಮೂರ್ಧ್ನ್ಯಾಧಾಯ, ದೇಹಂ ತ್ಯಜನ್ ಯಃಪ್ರಯಾತಿ, ಸ ಯಾತಿ ಪರಮಾಂಗತಿಂ-ಪ್ರಕೃತಿವಿಯುಕ್ತಂ ಮತ್ಸಮಾನಾಕಾರ ಮಪುನರಾ ವೃತ್ತಿ ಮಾತ್ಮಾನಂ ಪ್ರಾಪ್ನೋತೀತ್ಯರ್ಥಃ । (೧) "ಯಸ್ಸಸರ್ವೇಷು ಭೂತೇಷು ನಶ್ಯತ್ಸು ನವಿನಶ್ಯತಿ । ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂಗತಿಂ" ಇತ್ಯ ನಂತರಮೇವ ವಕ್ಷ್ಯತೇ ॥ ೧೨, ೧೩ ॥**

ವವನಾಗಿ, **ವಾಚ್ಯಂ ಮಾಂ ಅನುಸ್ಮರನ್** - ಅದರಿಂದ ವಾಚ್ಯನಾದ ನನ್ನನ್ನೇ ಏಕಾಂತ್ಯ ದಿಂದ ಸ್ಮರಿಸುವವನಾಗಿ, **ಆತ್ಮನಃ ಪ್ರಾಣಂ ಮೂರ್ಧ್ನ್ಯಾಧಾಯ** - ತನ್ನ ಪ್ರಾಣವನ್ನು ಶಿರ ಸ್ಸಿಗೆ ಸೆಳೆದುಕೊಂಡು, **ದೇಹಂತ್ಯಜನ್** - ದೇವನ್ನು ತ್ಯಜಿಸುವವನಾಗಿ, **ಯಃ ಪ್ರಯಾತಿ** - ಯಾವನು ಕಣ್ಣಿಗೆ ಕಾಣಿಸದಹಾಗಿರುವ ಸೂಕ್ಷ್ಮಶರೀರೇಂದ್ರಿಯಗಳಿಂದ ಯುಕ್ತನಾಗಿ ಹೊರಟು ಹೋಗುವನೋ, **ಸಃ** - ಆ ಉಪಾಸಕನು, **ಯಾತಿ ಪರಮಾಂಗತಿಂ** - ಉತ್ಕೃಷ್ಟವಾದ ಗತಿ ಯನ್ನು ಹೊಂದುವನು ಎಂದರೆ **ಪ್ರಕೃತಿವಿಯುಕ್ತಂ ಮತ್ಸಮಾನಾಕಾರಂ ಅಪುನರಾವೃ ತ್ತಿಂ ಆತ್ಮಾನಂ ಪ್ರಾಪ್ನೋತೀತ್ಯರ್ಥಃ** - ಪ್ರಕೃತಿಯಿಂದ ಬಿಡಲ್ಪಟ್ಟು, ಆ ಕಾರಣದಿಂದಲೇ ನನಗೆ ಸಮಾನವಾಗಿರುವ ಗುಣಾಷ್ಟಕಗಳಿಂದ ಕೂಡಿದ ತನ್ನ ನೈಜರೂಪವನ್ನೇ ಹೊಂದುವನು. **ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್** ಎಂಬ ಸೂತ್ರದಲ್ಲಿ ಹೇಳಿರುವ ಸ್ವಸ್ವರೂಪಾವಿರ್ಭಾವ ವುಳ್ಳ ದಶೆಯನ್ನು ಹೊಂದುವನೆಂಬ ತಾತ್ಪರ್ಯವು. ಅಂತವನಿಗೆ ಪುನರಾವೃತ್ತಿಯಿಲ್ಲವು. ಇಲ್ಲಿ **"ಓ ಮಿತ್ಯೇಕಾಕ್ಷರಂ ಬ್ರಹ್ಮ"** ಎಂಬಲ್ಲಿ ಬ್ರಹ್ಮಶಬ್ದದಿಂದ ಪ್ರಣವವು ಹೇಲ್ಪಡಲು ಕಾರಣವೇ ನೆಂದರೆ—ಪ್ರಣವವು ಒಟ್ಟಿನಲ್ಲಿ ಪರಬ್ರಹ್ಮವನ್ನೇ ಭೋಧಿಸುವದರಿಂದ ಹಾಗೆ ಪ್ರಯೋಗವೆಂದು ತಿಳಿಸುವದಕ್ಕಾಗಿ **ಮದ್ವಾಚಕಂ** ಎಂಬ ಭಾಷ್ಯವು. ಅಥವಾ ಬ್ರಹ್ಮಶಬ್ದವು ವೇದವನ್ನೂ ಭೋಧಿಸುವದರಿಂದ ವೇದವಾಕ್ಯಗಳಿಗೆ ಸೇರಿದುದಾಗಿ **ಹರಿಃ ಓಮ್** ಎಂದು ವೇದಾರಂಭ ನಿಗ ಮನಗಳಲ್ಲಿ ಹೇಳಲ್ಪಡುವದರಿಂದ ಒಂದಕ್ಷರದ ಮದ್ವಾಚಕವಾದ ವೇದವಾಕ್ಯವೆಂದೂ ಅರ್ಥ ಮಾಡಬಹುದು. ಇಲ್ಲಿ **ಮೂರ್ಧ್ನ್ಯಾಧಾಯ ಆತ್ಮನಃ ಪ್ರಾಣಮ್** ಎಂದು ಏಕೆ ಹೇಳಲ್ಪ ಟ್ಟಿತು ಎಂದರೆ ಪುನರಾವೃತ್ತಿ ಇಲ್ಲದಿರುವವನು ಇಂದ್ರಿಯ ಪ್ರಾಣಗಳನ್ನು ಸೂಕ್ಷ್ಮರೂಪದಲ್ಲಿ ಹೊಂದಿ ಬ್ರಹ್ಮನಾಡಿಯ ಮೂಲಕ ಶಿರಸ್ಸಿನ ಊರ್ಧ್ವ ಭಾಗದಿಂದ ಹೊರಟು ಹೋಗುವ ನೆಂದೂ, ಈ ಸಂದರ್ಭದಲ್ಲಿ ಪರಮಾತ್ಮನೇ ಸಹಾಯಕನಾಗಿ ಅರ್ಚಿರಾದಿ ಗತಿಯ ಮೂಲಕ ಹೋ ಗುವಹಾಗೆ ಮಾಡುವನೆಂದೂ, ಮುಮುಕ್ಷುವಿನ ನಿರ್ಯಾಣ ಕ್ರಮದಲ್ಲಿ ಹೇಳಲ್ಪಟ್ಟಿರುತ್ತದೆ. ಪರಿ ಶುದ್ಧಾತ್ಮಪ್ರಾಪ್ತಿಕಾಮನಿಗೂ ಅರ್ಚಿರಾದಿ ಮಾರ್ಗವೆಂದೇ ಛಾಂದೋಗ್ಯವು **"ತದ್ಯ ಇತ್ಥಂ ವಿದುಃ ಯೇ ಚೇಮೇ ರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇರ್ಚಿಷಮಭಿ ಸಂಭವನ್ತಿ** ಎಂಬಲ್ಲಿ ಹೇಳಿರುವದರಿಂದ, ಇದನ್ನು ಸೂಚಿಸುವದಕ್ಕಾಗಿ **ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮ್** ಎಂದು ತಿಳಿಯತಕ್ಕದ್ದು. ಆದುದರಿಂದ ಪುನರಾವರ್ತಿಯಿಲ್ಲದ ಅಮೋಘ ದಶೆ ಯನ್ನೇ ಆತನು ಹೊಂದುವನಾದುದರಿಂದ **"ಪರಮಾಂ ಗತಿಮ್** ಎಂದು ಹೇಲ್ಪಟ್ಟಿತು. ಮೋಕ್ಷವು ಒಡನೆಯೇ ಇಲ್ಲದಿದ್ದರೂ, ಅದು ಹಸ್ತಗತವಾದಹಾಗೆಯೇ ಭಾವನೆಯು. ಆದರೆ **ಸಯಾತಿ ಪರಮಾಂಗತಿಂ** ಎಂಬುದಕ್ಕೆ ಪ್ರಕೃತಿ ವಿಯುಕ್ತನಾದ ಆತ್ಮಸ್ವರೂಪವನ್ನು ಹೊಂದುತ್ತಾನೆಂದು ಅರ್ಥಮಾಡಿದರಲ್ಲಾ ಅದು ಹೇಗೆ? ಎಂದು ಯಾರಾದರೂ ಆಕ್ಷೇಪಿಸುವ ರೆಂದು ಭಾವಿಸಿ, ತಾವು ಮಾಡಿರುವ ಅರ್ಥವೇ ಸರ್ವಸಮಂಜಸವೆಂದು ತೋರಿಸುವದಕ್ಕಾಗಿ ಪ್ರಬಲ ಹೇತುವನ್ನು ಹೇಳುತ್ತಾರೆ. ಇದೇ ಅಧ್ಯಾಯದ ೨೦, ನೆಯ ಶ್ಲೋಕಗಳಲ್ಲಿ **ಪರ**

**ಮಾಂಗತಿಂ** ಎಂಬುದರಿಂದ ಪ್ರಕೃತಿ ವಿಯುಕ್ತ ಆತ್ಮಸ್ವರೂಪವೆಂಬುದು ಸುಸ್ಪಷ್ಟವಾಗಿ ಮುಂದೆ ಹೇಳಿರುವದರಿಂದ ಹಾಗೆ ಅರ್ಥಮಾಡಿರುತ್ತೇವೆಂದೂ, ಇದೇ ಸಮಂಜಸವಾದ ಅರ್ಥವೆಂದೂ, ತಿಳಿಸುವದಕ್ಕಾಗಿ ಆ ಶ್ಲೋಕಗಳನ್ನು ಉದಾಹರಿಸುತ್ತಾರೆ. ಅವುಗಳ ಅರ್ಥವೇನೆಂದರೆ. "ಯಾವ ಆತ್ಮನು ಸಮಸ್ತಗಳಾದ ತನ್ನೊಡನೆ ಸೇರಿಕೊಂಡಿರುವ ಪಂಚಭೂತಗಳೂ ಪರಿಣಾಮ ಹೊಂದಿ ತೊಲಗಿದರೂ, ತಾನು ಪರಿಣಾಮಗಳನ್ನು ಹೊಂದದೇ ಇರುವನೋ, ಅವನೇ ಅವ್ಯಕ್ತನೆಂದೂ ಅಕ್ಷರನೆಂದೂ ನನ್ನಿಂದ ಹೇಳಲ್ಪಟ್ಟನು, ಅಂತಹ ಆತ್ಮಸ್ವರೂಪವನ್ನೇ **ಪರಮಾಂಗತಿ** ಎಂದು ವೇದವಿತ್ತುಗಳು ಹೇಳುತ್ತಾರೆ" ಎಂಬುದು ಈ ಶ್ಲೋಕಾಭಿಪ್ರಾಯವು. ಈ ಶ್ಲೋಕದಲ್ಲಿ ಪ್ರಣವ ವಾಚ್ಯನು ಪರಬ್ರಹ್ಮನಾದ ತಾನೇ ಎಂದು ಹೇಳಲ್ಪಟ್ಟಿರುತ್ತದೆ. ಪ್ರಣವವನ್ನು ಕೊಂಡಾಡುವ ಪ್ರಮಾಣಗಳಲ್ಲಿ ಅನೇಕವನ್ನು ಶ್ರೀ ದೇಶಿಕರವರು ಉದಾಹರಿಸುತ್ತಾರೆ. ಅವುಗಳಲ್ಲಿ ಕೆಲವನ್ನು ತಿಳಿಸುವೆವು:—

೧. **"ಸರ್ವೇ ವೇದಾಯತ್ಪದಮಾಮನ್ತಿ"** ಎಂಬ ಈ ಶ್ಲೋಕಗಳ ಹಾಗೆಯೇ ಇರುವ ಕಠವಲ್ಲಿಯ ವಾಕ್ಯಗಳು **"ಓ ಮಿತ್ಯೇತತ್"** ಎಂಬ ಪ್ರಣವವನ್ನು ಉಪಪಾದಿಸುತ್ತವೆಂದು ಒಂದೆಯೇ ಹೇಳಲ್ಪಟ್ಟಿತು.

೨. **ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷಣ ಮುಚ್ಯತೇ। ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್** "(ಮುಂಡಕ. ೨. ೨. ೪) **"ಓಂ"** ಎಂದು ಹೇಳಿ ಈ ಆತ್ಮಾವನ್ನು ಸ್ವಾಮಿ ಪಾದದಲ್ಲಿ ಸಮರ್ಪಿಸತಕ್ಕದೆಂದು **"ಓ ಮಿತ್ಯಾತ್ಮಾನಂ ಯುಂಜೀತ"** ಎಂದು ಹೇಳಲ್ಪಟ್ಟಿತಾದುದರಿಂದ ಯಾವಾಗ ಆತ್ಮನು ಬಾಣವೆಂದು ರೂಪಕ ಮಾಡಲ್ಪಟ್ಟಿತೋ ಆಗ ಆ ಬಾಣವು ಸೇರತಕ್ಕ ಸ್ಥಳವು ಗುರಿಗು ಪರಮಾತ್ಮನೆಂದು ರೂಪಕ ಮಾಡಲ್ಪಟ್ಟಿತು. **ಅಪ್ರಮತ್ತೇನ ವೇದ್ಧವ್ಯಂ** ಎಂಬುವುದರಿಂದ ವಿಷಯಾಂತರ ವೈಮುಖ್ಯದಿಂದ ಏಕಾಗ್ರಚಿತ್ತತೆಯಿಂದ ಆತನ ಧ್ಯಾನವು ವಿಧಿಸಲ್ಪಟ್ಟಿತು. ಇಲ್ಲಿ ತನ್ಮಯತ್ವ ಹೇಗೆ ಎಂದರೆ, ಶರವು ಹೋಗಿ ಲಕ್ಷ್ಯದಲ್ಲೇ ಹೇಗೆ ಮಗ್ನವಾಗುತ್ತದೋ, ಹಾಗೇಯೇ ಪ್ರಣವವನ್ನು ಉಚ್ಚರಿಸಿ ಪರಮಾತ್ಮನಲ್ಲಿ ಸಮರ್ಪಿಸಲ್ಪಟ್ಟ ಆತ್ಮನು ಜ್ಞಾನೈಕಾಕಾರತೆಯಿಂದ ಸಾಮ್ಯವನ್ನು ಹೊಂದಿದಾಗ, ಮನುಷ್ಯತ್ವಾದಿ ಆಕಾರಗಳಿಲ್ಲದೇ ಭೇದವೇ ಇಲ್ಲದಹಾಗೆ ಆಗುವದರಿಂದ ತನ್ಮಯತ್ವವೆಂದು ತಿಳಿಯತಕ್ಕದ್ದು.

೩. **ಆತ್ಮಾನ ಮರಣಿಂಕೃತ್ವಾ ಪ್ರಣವಂ ಚೋತ್ತರಾರಣಿಮ್ ।**
**ಧ್ಯಾನನಿರ್ಮಥನಾಭ್ಯಾಸಾ ತ್ಪಶ್ಯೇದ್ಬ್ರಹ್ಮಾಗ್ನಿ ಗೂಢವತ್"॥** (ಧ್ಯಾನ ಬಿಂದೋಪನಿಷತ್) ಆತ್ಮಾವನ್ನು ಒಂದು ಅರಣಿಯನ್ನಾಗಿ ಮಾಡಿಕೊಂಡು, ಇನ್ನೊಂದು ಅರಣಿಯನ್ನು ಪ್ರಣವವನ್ನಾಗಿ ಭಾವಿಸಿ ಉಪಾಸನವೆಂಬ ಕಡೆಯೋಣದಿಂದ, ಎರಡು ಅರಣಿಗಳ ಮಥನದಿಂದ ಗೂಢವಾಗಿರುವ ಅಗ್ನಿಯು ತೋರಿಬರುವಹಾಗೆ ಅದೃಶ್ಯನಾಗಿದ್ದ ಪರಮಾತ್ಮನು ಸಾಕ್ಷಾತ್ಕರಿಸಲ್ಪಡುವನು.

೪. **"ಅರಾಇವ ರಥನಾಭೌ ಸಂಹತಾ ಯತ್ರನಾಡ್ಯಃಸ ಏಷೋನ್ತಶ್ಚರತೇ ಬಹುಧಾ ಜಾಯಮಾನಃ । ಓ ಮಿತ್ಯೇವಂ ಧ್ಯಾಯತಾತ್ಮಾನಂ ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್ ॥"** ಮುಂ. ೨. ೨. ೬.

**ಯತ್ರ** - ಯಾವ ಹೃದಯದಲ್ಲಿ, **ರಥನಾಭೌ** – ರಥಚಕ್ರದ ಅಚ್ಚಿನಲ್ಲಿ ಆರೇಕಾಲುಗಳು ಹೇಗೆ ಸೇರಿವೆಯೋ ಹಾಗೆ ೧೦೧ ನಾಡಿಗಳು ಸೇರಿರುವ ಹೃದಯದಲ್ಲಿ, **ತತ್ರಮಧ್ಯೇ**– ಅವುಗಳ ಮಧ್ಯದಲ್ಲಿ, **ಸ ಏಷಃ** – **ತದೇ ತತ್ಸತ್ಯಂ ತದಮೃತಂ** ಎಂದು ಹಿಂದೆ ಹೇಳಲ್ಪಟ್ಟ ಪರಮಾತ್ಮನು

**ಬಹುಧಾ ಜಾಯಮಾನಃ** - **"ಅಜಾಯಮಾನೋ ಬಹುಧಾ ವಿಜಾಯತೇ"** (ಪು. ಸೂ) ಎಂದು ಹೇಳಿರುವ ಹಾಗೆ ಚೇತನರ ಅನುಗ್ರಹಾರ್ಥವಾಗಿ ತನ್ನ ನೈಜಸ್ವಭಾವವನ್ನು ಬಿಡದೆ ಅನೇಕ ವಿವಿಧ ದಿವ್ಯಮಙ್ಗಳ ವಿಗ್ರಹಯುಕ್ತನಾಗಿ ಅವತರಿಸುವವನಾಗಿ, **ಚರತೇ**- ವರ್ತಿಸುವನೋ, **ತಮಸಃ ಪರಸ್ತಾತ್** - ಪ್ರಕೃತಿಮಂಡಲಕ್ಕೆ ಆಚೆ ದಿವ್ಯ ವೈಕುಂಠದಲ್ಲಿರುವ, **ವಃ ಪಾರಾಯ** - ನಿಮ್ಮಗಳ ಪ್ರಾಪ್ಯಭೂತವಾದ ಪರಮಾತ್ಮನ ಪ್ರಾಪ್ತಿಗಾಗಿ, **ಓ ಮಿತ್ಯೇವಧ್ಯಾಯ ಆತ್ಮಾನಂ** - ಅಂತಹ ಪರಮಾತ್ಮನನ್ನು ಬೋಧಿಸುವ ಪ್ರಣವವನ್ನು ಉಚ್ಚರಿಸುತ್ತಲೇ ಧ್ಯಾನ ಮಾಡಿರಿ, **ವಃ** - ಹೀಗೆ ಪ್ರವೃತ್ತರಾದ ನಿಮಗೆ, **ಸ್ವಸ್ತಿಭವತು** - ಮಙ್ಗಳ ಉಂಟಾಗಲಿ,

೫. **"ಯಃ ಪುನರೇತಂ ತ್ರಿಮಾತ್ರೇಣೋ ಮಿತ್ಯೇಕೇನೈವಾಕ್ಷರೇಣ ಪರಂ ಪುರುಷ ಮಭಿ ಧ್ಯಾಯೀತ। ಸ ತೇಜಸಿ ಸೂರ್ಯೇ ಸಂಪನ್ನಃ ಯಥಾ ಪಾದೋದರಸ್ತ್ವಚಾವಿನಿ ರ್ಮುಕ್ತ ಏವಂ ಹ್ಯೈವ ಸಪಾಪ್ಮನಾ ವಿನಿರ್ಮುಕ್ತ ಸ್ಸ ಸಾಮಭಿರುನ್ನೀಯತೇ ಬ್ರಹ್ಮ ಲೋಕಂ। ಸ ಏತಸ್ಮಾಜ್ಜೀವ ಘನಾತ್ಪ ರಾತ್ಪರಂ ಪುರಿಶಯಂ ಪುರುಷ ಮೀಕ್ಷತೇ"**

(ಪ್ರಶ್ನೋಪನಿಷದಿ. ೫. ೫.) ಏಕಮಾತ್ರ ದ್ವಿಮಾತ್ರೋಚ್ಚಾರಣೆಯ ಮೂಲಕ ಪ್ರಣವವನ್ನು ಉಚ್ಚರಿಸಿ ಉಪಾಸನಮಾಡುವದರಿಂದ ನಶ್ವರಗಳಾದ ಫಲಪ್ರಾಪ್ತಿಯುಂಟಾಗುವದರಿಂದ ಯಾವ ಉಪಾಸಕನು ತ್ರಿಮಾತ್ರೋಚ್ಚಾರಣೆಯ ಮೂಲಕ ಈ ಒಂದೇ ಅಕ್ಷರವಾದ ಪ್ರಣವವನ್ನು ಉಚ್ಚರಿಸುತ್ತಾ ಪರಮ ಪುರುಷನಿಗೆ ಅಭಿಮುಖನಾಗಿ ಧ್ಯಾನಮಾಡುವನೋ, ಅವನು ತೇಜೋಮಂಡಲವಾದ ಸೂರ್ಯನೊಂದಿಗೆ ಸೇರಿದವನಾಗಿ, ಸರ್ಪವು ಹೇಗೆ ತನ್ನ ಪರೆಯಿಂದ ಬಿಡಲ್ಪಡುತ್ತದೋ, ಹಾಗೆ ಸರ್ವಪಾಪಗಳಿಂದಲೂ ಬಿಡಲ್ಪಟ್ಟವನಾಗಿ, ಪರಬ್ರಹ್ಮ ಲೋಕವಾದ ಶ್ರೀ ವೈಕುಂಠವನ್ನು ಹೊಂದಿ, ಸಾಮಗಾನವನ್ನು ಹೇಳುತ್ತಾ ಆನಂದಿಸುವನು ಎಂಬ ತಾತ್ಪರ್ಯವು. ಆತನು ಕರ್ಮ ಮೂಲಕವಾಗಿ ಬಂದ ಅತಿ ದುಸ್ತರವಾದ ಶರೀರಭಾವವನ್ನು ಕಳೆದುಕೊಂಡು ಹೀಗೆ ಪರಿಶುದ್ಧನಾಗಿ ಅಭ್ಯಂತರ ಸರ್ವ ಶರೀರಿಯಾಗಿ ತನಗೂ ಕೂಡ ಆತ್ಮನಾಗಿರುವ ಪುರುಷಶಬ್ದವಾಚ್ಯನಾದ ಶ್ರೀ ಮನ್ನಾರಾಯಣನನ್ನು ಸಾಕ್ಷಾತ್ತಾಗಿ ನೋಡುವನು.

೬. **"ವಹ್ನೇರ್ಯಥಾ ಯೋನಿಗತಸ್ಯ ಮೂರ್ತಿರ್ನ ದೃಶ್ಯತೇ ನೈವ ಚ ಲಿಙ್ಗನಾಶಃ।**
**ಸ ಭೂಯ ಏವೇನ್ಧನ ಯೋನಿಗೃಹ್ಯ ಸ್ತದ್ವೋಭಯಂ ವೈ ಪ್ರಣವೇನ ದೇಹೇ।**
**ಸ್ವದೇಹ ಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಮ್।**
**ಧ್ಯಾನನಿರ್ಮಥನಾಭ್ಯಾಸಾ ದ್ದೇವಂಪಶ್ಯೇನ್ನಿಗೂಢವತ್** ॥ (ಶ್ವೇತಾಶ್ವ ೧-೧೩.೧೪)

ಇದೂ ೩ನೆಯ ಪ್ರಮಾಣದ ಅಭಿಪ್ರಾಯದಹಾಗೆ ತಾತ್ಪರ್ಯವುಳ್ಳದು ಆದರೆ ಅಲ್ಲಿ ಜೀವಾತ್ಮ ಒಂದು ಅರಣಿಯು, ಇಲ್ಲಿ ಆತನ ದೇಹವು ಅರಣಿ ಎಂದು ಹೇಳಲ್ಪಟ್ಟಿತು. ಇಲ್ಲಿನ **ದೇವಂ ಪಶ್ಯೇನ್ನಿಗೂಢವತ್** ಎಂಬುದಕ್ಕೆ ಬದಲಾಗಿ ಯಾಜ್ಞವಲ್ಕ್ಯ ಪಾಠದಲ್ಲಿ **ವಿಷ್ಣುಂ ಪಶ್ಯೇದ್ಹೃದಿಸ್ಥಿತಮ್** ಎಂದಿರುತ್ತದೆ. ಹೃದಯದಲ್ಲಿ ಹಾರ್ದಾವತಾರಿಯಾಗಿರುವ ವಿಷ್ಣುವನ್ನು ಉಪವಾಸನೆಯ ಮೂಲಕ ಸಾಕ್ಷಾತ್ಕರಿಸತಕ್ಕದ್ದೆಂಬ ಭಾವವು,

೭. **"ಕಾಂಸ್ಯ ಘಂಟಾ ನಿನಾದಸ್ತು ಯಥಾ ಲೀಯತಿ ಶಾನ್ತಯೇ।**
**ಓಂಕಾರಸ್ತು ತಥಾ ಯೋಜ್ಯ ಶ್ಶಾನ್ತಯೇ ಶಾನ್ತಿ ಮಿಚ್ಛತಾ।**
**ಯಸ್ಮಿನ್ ಸ ಲೀಯತೇ ಶಬ್ದಸ್ತತ್ಪರಂ ಬ್ರಹ್ಮಗೀಯತೇ"** ॥

ಕಂಚಿನಿಂದ ಮಾಡಿದ ಘಂಟೆಯ ನಾದವು ಹೇಗೆ ಶಾನ್ತಿಯನ್ನು ಹೊಂದಿ ನಿಶ್ಶಬ್ದವಾಗುತ್ತದೋ, ಹಾಗೆಯೇ ಮೋಕ್ಷರೂಪ ಶಾನ್ತಿಯನ್ನು ಬಯಸುವ ಯೋಗಿಗಳು ಓಂಕಾರವನ್ನು ಪ್ರಯೋಗಿಸ

ಬೇಕು ಎಂದರೆ ತ್ರಿಮಾತ್ರೆಯಿಂದ ಉಚ್ಚರಿಸಿ ಶಬ್ದವು ಲೀನವಾಗುವಹಾಗೆ ಮಾಡತಕ್ಕದ್ದು. ಆಶಬ್ದವು ಎಲ್ಲಿಹೋಗಿ ಲೀನವಾಗುತ್ತದೋ ಅದೇ ಪರಬ್ರಹ್ಮವೆಂದು ಸ್ತುತಿಸಲ್ಪಟ್ಟಿರುತ್ತದೆ.

೮ **ಓಮಿತ್ಯೇತದಕ್ಷರಂಬ್ರಹ್ಮಾ ಸ್ಯ ಪಾದಾಶ್ಚತ್ವಾರೋ ವೇದಾಶ್ಚತುಷ್ಪಾದಿದ ಮಕ್ಷರಂ ಪೂರ್ವಸ್ಯಮಾತ್ರಾ ಪೃಥಿವ್ಯಾಕಾರಃ; ಸ ಋಗ್ಭಿಃ ಋಗ್ವೇದೋ ಬ್ರಹ್ಮಾವಸವೋ ಗಾಯತ್ರೀ ಗಾರ್ಹಪತ್ಯಃ। ದ್ವಿತೀಯಾಂತರಿಕ್ಷಂ ಸ ಉಕಾರ ಸ್ಸಯಜುರ್ಭಿ ಯಜುರ್ವೇದೋ ವಿಷ್ಣುರುದ್ರಾಸ್ತ್ರಿಷ್ಟುಬ್ದಕ್ಷಿಣಾಗ್ನಿಃ। ತೃತಿಯಾ ದ್ಯೌಸ್ಸ ಮಕಾರ ಸ್ಸಸಾಮಭಿ ಸ್ಸಾಮವೇದೋ ರುದ್ರಾಆದಿತ್ಯಾ ಜಗತ್ಯಾ ಹವನೀಯಃ। ಯಾವಸಾನೇಸ್ಯ ಚತುರ್ಥ್ಯರ್ಧಮಾತ್ರಾ ಸ ಸೋಮಲೋಕ ಓಂಕಾರ ಸ್ಸಾಥರ್ವಣ ಮಂತ್ರೈರಥರ್ವ ವೇದ ಸ್ಸಂವರ್ತ ಕೋಗ್ನಿ ಮರುತೋ ವಿರಾಡೇಕರ್ಷಿರ್ಭಾಸ್ವತೀಃ ಸ್ಮೃತಾಃ। ಇತ್ಯಾದಿ** (ಅಥರ್ವ ಶಿರೋಪನಿಷತ್)

೯. **"ಓಮಿತಿ ಬ್ರಹ್ಮ ಓಮಿತೀದಗ್ಂ ಸರ್ವಮ್"** (ತೈ. ಶಿಕ್ಷಾವಲ್ಲೀ)

೧೦. **"ಹೃದಿಸ್ಥಾ ದೇವತಾಸ್ಸರ್ವಾಂಹೃದಿ ಪ್ರಾಣಾಃ ಪ್ರತಿಷ್ಠಿತಾಃ।
ಹೃದಿತ್ವಮಸಿ ಯೋ ನಿತ್ಯನ್ತಿಸ್ರೋ ಮಾತ್ರಾಃ ಪರಸ್ತು ಸಃ।
ತಸ್ಯೋತ್ತರ ತೀಶ್ಶಿರೋ ದಕ್ಷಿಣತಃ ಪಾದೋ ಯ ಉತ್ತರತ ಸ್ಸ ಓಂಕಾರೋ
ಯ ಓಂಕಾರ ಸ್ಸಪ್ರಣವೋ ಯಃಪ್ರಣವ ಸ್ಸ ಸ್ಸರ್ವವ್ಯಾಪೀ
ಸೋನನ್ತೋ ಯೋ ನನ್ತಸ್ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ
ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ತತ್ಪರಂಬ್ರಹ್ಮ"**

ಹೀಗೆ ಜ್ಞಾನಿಯಾದ ಯೋಗಿಗೆ ಉಪಾಸನಕಾಲದಲ್ಲಿ ಓಂಕಾರೋಚ್ಚಾರಣೆಯು ವಿಧಿಸಲ್ಪಟ್ಟಿರುತ್ತದೆ. ಹಾಗೇಯೇ ಉತ್ಕ್ರಮಣಕಾಲದಲ್ಲೂ ಓಂಕಾರೋಚ್ಚಾರಣೆಯೂ ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಎಲ್ಲಿ ಎಂದರೆ :—

೧೧. **"ಅಥ ಯತ್ರೈತದಸ್ಮಾಚ್ಛರೀರಾ ದುತ್ಕ್ರಾಮತಿ, ಅಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ, ಸ ಓ ಮಿತಿ ವಾ ಹೋದ್ವಾಮೀಯತೇ ಸಯಾವತ್ ಕ್ಷಿಪ್ಯೇನ್ಮನಸ್ತಾವ ದಾದಿತ್ಯಂ ಗಚ್ಛತಿ ಏತದ್ವೈಖಲು ಲೋಕದ್ವಾರಂ ವಿದುಷಾಂ ಪ್ರಪದನಂ ನಿರೋಧೋಽವಿದುಷಾಂ ತದೇಷ ಶ್ಲೋಕಃ। ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನ ಮಭಿನಿಸ್ಸೃತೈಕಾ। ತಯೋರ್ಧ್ವ ಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ"** "ಯಾವನು ಪ್ರಣವವನ್ನುಚ್ಚರಿಸುತ್ತಾ ಪ್ರಾಣತ್ಯಾಗವನ್ನು ಮಾಡುವನೋ ಅವನು ಸೂರ್ಯರಶ್ಮಿಗಳ ಮೂಲಕ ಸೂರ್ಯನನ್ನು ಕುರಿತು ಹೋಗುವನು. ಅದೇ ದಿವ್ಯ ವೈಕುಂಠಕ್ಕೆ ದ್ವಾರವು, ಅದೇ ಉಪಾಸಕರು ಸೇರುವ ಸ್ಥಳವು. ಉಪಾಸಕರಲ್ಲದವರಿಗೆ ಅದು ದುಸ್ತರವು. ಉಪಾಸಕನು ೧೦೧ಯನೆ ಮೂರ್ಧನ್ಯ ನಾಡಿಯ ಮೂಲಕ ಹೊರಟು ಅರ್ಚಿರಾದಿಗತಿಯಿಂದ ಮೋಕ್ಷವನ್ನು ಹೊಂದುವನು. ಇತರರು ೧೦೦ ನಾಡಿಗಳಲ್ಲಿ ಒಂದರ ಮೂಲಕವಾಗಿ ಪುನಃ ಸಂಸಾರವನ್ನೇ ಹೊಂದುವರು",

೧೨. ಹಾಗೆಯೇ ಹರಿವಂಶ ವಿಷ್ಣುಪರ್ವದಲ್ಲಿ **ಓ ಮಿತ್ಯೇವಂ ಸದಾ ವಿಪ್ರಾಃ ಪಠಧ್ವಂ ಧ್ಯಾತ ಕೇಶವಂ। ತತೋವಶ್ಶ್ರೇಯಸಃ ಪ್ರಾಪ್ತಿ ರ್ಭವಿಷ್ಯತಿ ನಸಂಶಯಃ** ಎಂದು ಇದೆ. ಓ ಬ್ರಾಹ್ಮಣರಿರಾ ನೀವು ಯಾವಾಗಲೂ ಪ್ರಣವವನ್ನು ಉಚ್ಚರಿಸುತ್ತಾ ಕೇಶವನನ್ನು ಉಪಾಸಿತಕ್ಕದ್ದು, ಅದರಿಂದ ನಿಮಗೆ ಪರಮ ನಿಶ್ರೇಯಸ್ಸಾದ ವೈಕುಂಠಪ್ರಾಪ್ತಿಯುಂಟಾಗುತ್ತದೆ, ಇದರಲ್ಲಿ ಸಂಶಯವಿಲ್ಲವು ಎಂಬ ಮಹೇಶ್ವರನ ವಚನವಿರುತ್ತದೆ.

೧೩. ಯೋಗಯಾಜ್ಞವಲ್ಕ್ಯ ಸ್ಮೃತಿಯಲ್ಲಿ, **"ದೇವತಾಯಾಃ ಪರಾಯಾಶ್ಚ ಹ್ಯಾಲಂಬಃ ಪ್ರಣವಸ್ಸ್ಮೃತಃ । ಕಶ್ಚಿದಾರಾಧನಾಕಾಮೋ ವಿಷ್ಣೋರ್ಭಕ್ತ್ಯಾಕರೋತಿವೈ । ತದಾರಾಧನ ಸಾನ್ನಿಧ್ಯೇ ಪ್ರತಿಮಾಂ ವ್ಯಂಜಿಕಾಂ ಯಥಾ । ಧಾತುದ್ರವ್ಯಾದಿಪಾಷಾಣೈಃ ಕೃತ್ವಾಭ್ಯವಂ ನಿವೇಶಯೇತ್ । ಶ್ರದ್ಧಾಭಕ್ತ್ಯಾದರಾದ್ಯೈಶ್ಚ ತಸ್ಯದೇವಃ ಪ್ರಸೀದತಿ । ಓಂಕಾರೇಣ ತಥಾ ಚಾತ್ಮಾಹ್ಯುಪಾಸ್ತೇ ಸ ಪ್ರಸೀದತಿ । ಸರ್ವದ್ವಾರಾಣಿ ಸಂಯಮ್ಯ ಮನೋಹೃದಿ ನಿರುಧ್ಯ ಚ । ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ ಓಮಿತ್ಯೇ ಕಾಕ್ಷರಂ ಬ್ರಹ್ಮವ್ಯಾಹರನ್ ಮಾ ಮನುಸ್ಮರನ್ । ಯಃ ಪ್ರಯಾತಿ ತ್ಯಜನ್ದೇಹಂ ಸಯಾತಿ ಪರಮಾಂ ಗತಿಂ । ಯ ಏತಂ ಪ್ರಣವೇನಾದ್ಯ ಮಕ್ಷರಂ ಪ್ರತಿಪದ್ಯತೇ । ತತೋಕ್ಷ ರೇಣ ವೇದೇನ ವೇದ್ಯಂ ಬ್ರಹ್ಮಾದಿ ಗಚ್ಛತಿ । ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್। ಏತದಾಲಂಬನಂ ಜ್ಞಾತ್ವಾ ಬ್ರಹ್ಮಭೂಯಾಯ ಕಲ್ಪತೇ। ಅದೃಷ್ಟವಿಗ್ರಹೋ ದೇವೋ ಭಾವಗ್ರಾಹ್ಯೋ ನಿರಾಮಯಃ । ತಸ್ಯೋಙ್ಕಾರಃ ಸ್ಮೃತಂನಾಮ ತೇನಾಹೂತಃ ಪ್ರಸೀದತಿ । ತಸ್ಮಾದೋ ಮಿತಿ ಪೂರ್ವಂತು ಕೃತ್ವಾ ಯುಂಜೀತ ತತ್ಪರಃ । ಬ್ರಹ್ಮೋಙ್ಕಾರ ವಿಧಾನೇನ ತತ್ತ್ವೇನ ಪ್ರತಿಪದ್ಯತೇ ||**

ಮೂಲದಲ್ಲಿನ ಎರಡು ಶ್ಲೋಕಗಳೂ ಈ ಯಾಜ್ಞವಲ್ಕ್ಯ ಸ್ಮೃತಿಯಲ್ಲಿಯೂ ಇರುವದರಿಂದ ಎರಡು ಸಮಾನಾರ್ಥಗಳಿಂದೇ ಭಾವಿಸತಕ್ಕವ್ವೇ ಯುಕ್ತವಾದರೂ ಪ್ರಕರಣಾನುಗುಣವಾಗಿ ಅನ್ವಯಿಸತಕ್ಕದ್ದಾಗಿರುತ್ತದೆ. ಯಾಜ್ಞವಲ್ಕ್ಯಸ್ಮೃತಿಯ ವಿಷಯವು ಪರಬ್ರಹ್ಮೋಪಾಸನ ತತ್ಪ್ರಾಪ್ತಿ ವಿಷಯವೆಂಬುದು ವ್ಯಕ್ತವು. ಈ ಉಪಾಸನೆಗೆ ಏಕಾಂತ್ಯಕ್ಕಾಗಿ ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹದ ಧ್ಯಾನವು ಆವಶ್ಯಕವು. ಹಾಗೆ ಉಪಾಸನೆಯನ್ನು ಮಾಡುವಾಗ ಓಂಕಾರದ ಉಚ್ಚಾರಣೆಯನ್ನು ಮಾಡತಕ್ಕದ್ದೆಂದೂ, ಇದರಿಂದ ವಾಚ್ಯನಾಗಿ ಅದೃಷ್ಟನಾಗಿರುವ ಪರಬ್ರಹ್ಮನು ಪ್ರಸನ್ನನಾಗುವನೆಂದೂ, ಆಗ ಭಾವಗ್ರಾಹ್ಯನಾಗುವನೆಂದೂ, ಅದರಿಂದ ಪರಬ್ರಹ್ಮಪ್ರಾಪ್ತಿಯುಂಟಾಗುವದೆಂದೂ, ಹೇಳಲ್ಪಟ್ಟಿರುತ್ತದೆ. ಗ್ರಂಥವಿಸ್ತರ ಭಯದಿಂದ ಪ್ರತಿಪದಾರ್ಥ ಬರೆಯಲಿಲ್ಲವು. ಈ ಸ್ಮೃತಿಯಲ್ಲಾದರೋ **ಪರಮಾಂಗತಿಂ** ಎಂಬುದು ಮೋಕ್ಷದಾಯಕವೆಂಬರ್ಥವಾಗಿರುವಾಗ ಇಲ್ಲಿ **ಪರಮಾಂ ಗತಿಂ** ಎಂಬುವದರಿಂದ ಕೈವಲ್ಯಪ್ರಾಪ್ತಿ ಎಂದು ಶ್ರೀಯತಿವರ್ಯರ ಭಾಷ್ಯವು ಹೇಗೆ ? ಎಂದರೆ **ಭಾವಗ್ರಾಹ್ಯಃ** ಎಂದಿರುವದರಿಂದ ಈ ಜಿಜ್ಞಾಸುವಿನ ಅಪೇಕ್ಷೆಯು ಪರಿಶುದ್ಧಾತ್ಮಪ್ರಾಪ್ತಿಯಾದುದರಿಂದ ಅದನ್ನೇ ಹೊಂದಿ ಪುನರಾವೃತ್ತಿಯಿಲ್ಲದೆ ಆತನೂ ಮೋಕ್ಷವನ್ನು ಹೊಂದುವನಾದುದರಿಂದ ವಿನೊಂದೂ ವಿರೋಧವಿಲ್ಲವೆಂದು ಭಾವಿಸತಕ್ಕದ್ದು.

೧೪. ಹೈರಣ್ಯಗರ್ಭಸಿದ್ಧಾಂತದಲ್ಲಿ **"ತ್ರಿರಾತ್ಮಾ ತ್ರಿಸ್ಸಭಾವಶ್ಚ ತಥಾ ತ್ರಿವ್ಯೂಹ ಏವ ಚ । ಪಂಚರಾತ್ರೇ ತಥಾಹ್ಯೇಷ ಭಗವದ್ವಾಚಕಃ ಸ್ಮೃತಃ । ಬಲಂ ವೀರ್ಯಂ ತಥಾತೇಜಸ್ತ್ರಿರಾತ್ಮೇತಿ ಚ ಸಂಜ್ಞಿತಃ। ಜ್ಞಾನೈಶ್ವರ್ಯಂ ತಥಾಶಕ್ತಿ ಸ್ತ್ರಿಸ್ಸ್ವಭಾವ ಇತಿ ಸ್ಮೃತಃ। ಸಙ್ಕರ್ಷಣೋಥ ಪ್ರದ್ಯುಮ್ನೋ ಹ್ಯನಿರುದ್ಧಸ್ತಥೈವಚ। ತ್ರಿವ್ಯೂಹ ಇತಿ ನಿರ್ದಿಷ್ಟ ಓಂಕಾರೋವಿಷ್ಣುರವ್ಯಯಃ। ಭಗವದ್ವಾಚಕಃ ಪ್ರೋಕ್ತಃ ಪ್ರಕೃತೇ ರ್ವಾಚಕಸ್ತಥಾ। ವ್ಯಕ್ತಾವ್ಯಕ್ತೋ ವಾಸುದೇವಃ ಪ್ರಭವಃ ಪ್ರಲಯಸ್ತಥಾ ||"** ಎಂದು ಹೇಳಿರುವದರಿಂದ ಓಂಕಾರವು ವಿಷ್ಣುವಾಚಕವಾದುದರಿಂದ ಆತನು ಸುಪ್ರಸನ್ನನಾಗುವದರಲ್ಲಿ ಸಂದೇಹವಿಲ್ಲವು. ಓಙ್ಕಾರವು ತ್ರಿರಾತ್ಮತ್ವ ತ್ರಿಸ್ವಭಾವತ್ವ ತ್ರಿವ್ಯೂಹತ್ವವನ್ನು ಬೋಧಿಸುತ್ತದೆಂದು ಹೇಳಿ ಅವುಗಳನ್ನು ವಿವರಿಸಿ ವಿಷ್ಣುವಾಚತ್ವವು ಬೋಧಿಸಲ್ಪಟ್ಟಿತು.

೧೫. **"ಓಙ್ಕಾರಂ ವಿಪುಲ ಮಚಿನ್ತ್ಯಮಪ್ರಮೇಯಂ ಸೂಕ್ಷ್ಮಾತ್ಸೂಕ್ಷ್ಮಂ ಧ್ರುವ ಮಚ ರಂಚ ಯತ್ಪುರಾಣಂ। ತದಿಷ್ಣೋಃ ಪದಮಪಿ। ಪದ್ಮಜಪ್ರಸೂತಂ ದೇಹಾನ್ತೇ ಮಮ ಮನಸಿ ಸ್ಥಿತಿಂ ಕರೋತು"** ಅಂತ್ಯಕಾಲದಲ್ಲೂ ಈ ವಿಷ್ಣುವಾಚಕವಾದ ಓಂಕಾರಸ್ಮರಣೆಯು ದೃಢವಾಗಿ ನಿಲ್ಲಲಿ ಎಂದು ಪ್ರಾರ್ಥಿಸಿರುವದರಿಂದ **ಓಮಿತ್ಯೇಕಾಕ್ಷರಂಬ್ರಹ್ಮ ವ್ಯಾಹರನ್ ಮಾಮ ನುಸ್ಮರನ್ ಯಃ ಪ್ರಯಾತಿ ತ್ಯಜನ್ ದೇಹಂ"** ಎಂಬದರ ಅಭಿಪ್ರಾಯವು ಸಮರ್ಥಿಸಲ್ಪಟ್ಟಿತು.

೧೬. ದೇವತಾರ್ಚನೆ ಮೊದಲಾದವುಗಳೂ ಕೂಡ ಓಂಕಾರದಿಂದ ಮಾಡಿದರೆ ವಿಷ್ಣುವು ಪೂಜಿಸಲ್ಪಡುವನೆಂದು ಈ ಮುಂದಿನ ವಾಕ್ಯವು ಹೇಳುತ್ತದೆ–**"ಆವಾಹನಾದಿಕಂ ಕರ್ಮ ಯನ್ನ ಸೂಕ್ತಂಮ। ಯಾತ್ಯಿಹ ತತ್ಸರ್ವಂ ಪ್ರಣವೇನೈವ ಕರ್ತ್ತವ್ಯಂ ಚಕ್ರಪಾಣಯೇ"**

೧೭. **"ಘಂಟಾಶಬ್ದವದೋಙ್ಕಾರ ಮುಪಾಸೀತ ಸಮಾಹಿತಃ।**
**ಪುರುಷಂ ನಿರ್ಮಲಂ ಶುಭ್ರಂ ಪಶ್ಯೇದ್ವೈ ನಾತ್ರಸಂಶಯಃ"।**

ಘಂಟಾ ಶಬ್ದದಹಾಗೆ ಓಂಕಾರವನ್ನು ಉಚ್ಚರಿಸುತ್ತಾ ಏಕಾಂತದಿಂದ ಪರಮ ಪುರುಷೋಪಾಸನೆ ವನ್ನು ಮಾಡಿದರೆ, ಪರಮಪುರುಷನ ಸಾಕ್ಷಾತ್ಕಾರವು ಲಭಿಸುತ್ತದೆಂದು ಹೇಳಲ್ಪಟ್ಟಿರುತ್ತದೆ.

೧೮. ಪಾತಂಜಲಿ ಸೂತ್ರದಲ್ಲಿ **"ಕ್ಲೇಶಕರ್ಮ ವಿಪಾಕಾಶಯೈ ರಪರಾಮೃಷ್ಟಃ ಪುರುಷ ವಿಶೇಷ ಈಶ್ವರಃ। ತಸ್ಯ ವಾಚಕಃ ಪ್ರಣವಃ"** ಎಂದು ಹೇಳಲ್ಪಟ್ಟಿರುತ್ತದೆ. ಅವಿದ್ಯಾದಿ ಕ್ಲೇಶಗಳೂ, ಪುಣ್ಯಪಾಪರೂಪ ಕರ್ಮಗಳೂ, ಅವುಗಳ ಫಲವಾದ ಜನ್ಮ ಜರಾ ಮರಣಾದಿ ವಿಪಾಕಗಳೂ ಇವುಗಳಿಂದ ಸಂಪಾದಿಸಲ್ಪಟ್ಟ ವಾಸನಾರೂಪ ಮನೋಭಾವನೆಗಳೂ ಇವುಗಳು ಯಾವುಗಳಿಂದಲೂ ಅಸ್ಪೃಷ್ಟನಾದ ಯಾವ ಪುರುಷವಿಶೇಷನೇ ಈಶ್ವರನೆಂದು ಹೇಳಿಸಿಕೊಳ್ಳು ವನೋ, ಅಂತಹ ಈಶ್ವರವಾಚಕವು ಪ್ರಣವವು. ಹೀಗೆ ಅನೇಕ ಪ್ರಮಾಣಗಳಿರುವದರಿಂದ ಉಪಾಸನೆಯ ಕಾಲದಲ್ಲೂ, ಉತ್ಕ್ರಮಣಕಾಲದಲ್ಲೂ ಭಗವದನುಸ್ಮರಣಕ್ಕೆ ಯೋಗ್ಯವಾದ ಪ್ರಣವವನ್ನು ಮೂರು ಮಾತ್ರೆಯಿಂದ ಘಂಟಾನಾದದ ಹಾಗೆ ಉಚ್ಚರಿಸತಕ್ಕದ್ದು. ಅದಕ್ಕೆ ಸಾಮರ್ಥ್ಯವಿಲ್ಲದಿದ್ದರೆ ಮನಸಾ ಸ್ಮರಣೆಯೂ ವಿಧಾಯಕವೆಂದು ಇಲ್ಲಿ ಹೇಳಲ್ಪಟ್ಟಿತು.

ಜಿಜ್ಞಾಸುವು ಜರಾಮರಣ ಮೋಕ್ಷವನ್ನಪೇಕ್ಷಿಸುವನಾಗಿ, ಪುನರಾವೃತ್ತಿಯನ್ನು ಅಪೇಕ್ಷಿ ಸದವನಾದುದರಿಂದ, ಅಂತಹ ಅಧಿಕಾರಿಯನ್ನು ಕುರಿತು ಹೇಳಿದುದು ಈ ಶ್ಲೋಕವು ಎಂದು ಭಾವಿಸಬಹುದು. **ಮೂರ್ಧ್ನ್ಯಾಧಾಯ ಪ್ರಾಣಂ** ಎಂದಿರುವದರಿಂದ **ಶತಂಚೈಕಾಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನ ಮಭಿನಿಸ್ಸೃತೈಕಾ। ತಯೋರ್ಧ್ವಮಾಯನ್ನ ಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ** ಎಂಬಲ್ಲಿ ಹೇಳಿರುವಹಾಗೆ ಆತ್ಮಾ ೧೦೧ನೆಯ ನಾಡಿಯಾದ ಬ್ರಹ್ಮನಾಡಿಯ ಮೂಲಕವಾಗಿ ಹೊರಟುಹೋಗುವದಕ್ಕಾಗಿ ಪ್ರಾಣವನ್ನು ಶಿರಸ್ಸಿಗೆ ಸೆಳೆದುಕೊಳ್ಳಬೇಕೆಂದು ಹೇಳಲ್ಪಟ್ಟಿತು. ಈ ಸುಷುಮ್ನಾನಾಡಿಯ ಮೂಲಕವಾಗಿ ಹೋಗುವವನು ಅರ್ಚಿರಾದಿ ಮಾರ್ಗವನ್ನು ಸೇರಿ ಮುಂದಕ್ಕೆ ವೈಕುಂಠಕ್ಕೆ ಹೋಗುವನು. ಆತನಿಗೆ ಪುನರಾವರ್ತಿಯಿಲ್ಲವು. ಹಾಗೆಯೇ ಜಿಜ್ಞಾಸುವೂ ಸಹ ಪುನರಾವರ್ತಿ ಇಲ್ಲದವನು. ಆ ಕಾರಣದಿಂದಲೇ **ಸಯಾತಿ ಪರಮಾಂಗತಿಂ** ಎಂಬ ಪ್ರಯೋಗವು. ಈ ಸಂದರ್ಭದಲ್ಲಿ **"ತದ್ಯ ಇತ್ಥಂ ವಿದುಃ ಯೇಚೇಮೇಽರಣ್ಯೆ"** ಎಂಬ (ಛಾಂ. ೫.೧೦.೧) ಶ್ರುತ್ಯರ್ಥವು ಅನು ಸಂಧೇಯವು. ಈ ಶ್ರುತಿಯು, ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವೂ ಜ್ಞಾನಿಯೂ ಇಬ್ಬರೂ ಅರ್ಚಿರಾದಿಗತಿಯನ್ನೇ ಹೊಂದುವರೆಂದು ಹೇಳುತ್ತದೆ. ತನ್ನ ಆತ್ಮವು ಪರಮಾತ್ಮನಿಗೆ ಶರೀರವೆಂದು ಭಾವಿಸಿ ತತ್ಪ್ರಾಪ್ತಿಗಾಗಿ ಪರಮಾತ್ಮನನ್ನು ಉಪಾಸಿಸುದಕ್ಕೆ ಅಪುನರಾವೃತ್ತಿಯೂ ಹೇಗೋ ಹಾಗೆಯೇ ತನ್ನ ಆತ್ಮಾ ಪರಮಾತ್ಮನಿಗೆ ಶರೀರವೆಂದು ಭಾವಿಸಿ, ಅಂತಹ

**ಭಾ. ಅ. ಏವಮೈಶ್ವರ್ಯಾರ್ಥಿನಃಕೈವಲ್ಯಾರ್ಥಿ ನಶ್ಚ ಸ್ವಪ್ರಾಪ್ಯಾನುಗುಣಂ ಭಗವದುಪಾಸನ ಪ್ರಕಾರ ಉಕ್ತಃ; ಅಥ ಜ್ಞಾನಿನೋ ಭಗವದುಪಾಸನಪ್ರಕಾರಂ ಪ್ರಾಪ್ತಿಪ್ರಕಾರಂಚಾಹ—**

**ಮೂ. ಅನನ್ಯಚೇತಾ ಸ್ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾ ಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪.**

ಪರಿಶುದ್ಧಾತ್ಮ ಪ್ರಾಪ್ತಿಗಾಗಿ ತನ್ನ ಆತ್ಮೋಪಾಸನೆಯೂ ಅಪ್ರತೀಕಾಲಂಬನರೂಪೋಪಾಸನ ವಾಗುವದರಿಂದ, ಅಂತವನಿಗೂ ಕೂಡ ಅಪುನರಾವೃತ್ತಿ ಫಲವೆಂದು ಶಾರೀರಕ ಸೂತ್ರ (೪. ೩. ೧೪) ರಲ್ಲಿ ಹೇಳಲ್ಪಟ್ಟಿರುತ್ತದೆ. ಇದೇ ೧೨ನೆಯ ಅಧ್ಯಾಯದ ಪ್ರಥಮಶ್ಲೋಕದಲ್ಲಿರುವ ಅರ್ಜುನ ಪ್ರಶ್ನೆಗೆ ಕಾರಣವು.

**ಭಾಷ್ಯಾವತಾರಿಕೆಯ ಅರ್ಥವು :—ಏವಂ** - ಈ ಮೇಲೆ ಹೇಳಿದ ರೀತಿಯಲ್ಲಿ, ಐಶ್ವ **ರ್ಯಾರ್ಥಿ**ಗಳ ಮತ್ತು ಕೈವಲ್ಯಾರ್ಥಿಗಳ **ಸ್ವಪ್ರಾಪ್ಯಾನುಗುಣಂ** - ಅವರವರುಗಳ ಪ್ರಾಪ್ಯಕ್ಕನು ಗುಣವಾದ, **ಭಗವದುಪಾಸನವು ಉಕ್ತಃ** - ಹೇಳಲ್ಪಟ್ಟಿತು. **ಅಥ** - ಮುಂದೆ, **ಜ್ಞಾನಿನಃ** -ಜ್ಞಾನಿಯ ಭಗವದುಪಾಸನ ಪ್ರಕಾರವೂ, **ಪ್ರಾಪ್ತಿಪ್ರಕಾರಂಚ** - ಪ್ರಾಪ್ಯವನ್ನು ಹೊಂದುವ ಪ್ರಕಾರವೂ ಕೂಡ, **ಆಹ** - ಹೇಳುತ್ತಾರೆ. ಈ ಮುಂದಿನ ಶ್ಲೋಕದಲ್ಲಿ ಹೇಳಿರುವದು ಜ್ಞಾನಿಯೊಬ್ಬನಿಗೆ ಅನ್ವಯಿಸಬಹುದೆಂದು ಹೇಳಿರುವದು, ಇತರಇನ್ನು ಯಾವ ಉಪಾಸಕರಿಗೂ ಅನ್ವಯಿಸಲು ಸಾಧ್ಯವೇ ಇಲ್ಲದುದರಿಂದ, ಹಾಗೆ ಅಭಿಪ್ರಾಯಪಟ್ಟು ಅವತಾರಿಕೆಯನ್ನು ನಯಪಾಲಿಸಿರುತ್ತಾರೆ. ಅದೂ ಅಲ್ಲದೆ ಜ್ಞಾನಿಯಾದ ಮೋಕ್ಷಾರ್ಥಿಯಾದ ಉಪಾಸಕನನ್ನು ಹಿಂದೆ **"ಏಕಭಕ್ತಿಃ"** ಎಂದೂ, **ನಿತ್ಯಯುಕ್ತಃ** ಎಂದೂ, ವಿಶೇಷಿಸಿ ೭-೧೭ನೆಯ ಶ್ಲೋಕದಲ್ಲಿ ಹೇಳಲ್ಪಟ್ಟು, ಇಲ್ಲಿಯೂ **ಅನನ್ಯಚೇತಾಸ್ಸತತಂ** ಎಂಬುವದರಿಂದ ಏಕಭಕ್ತಿ ಶಬ್ದಾಭಿಪ್ರಾಯವೂ ಮತ್ತು **ನಿತ್ಯಯುಕ್ತಸ್ಯ** ಎಂಬ ಸಾಕ್ಷಾತ್ಪ್ರಯೋಗವೂ ಇರುವದರಿಂದ ಜ್ಞಾನಿಯನ್ನು ಕುರಿತು ಹೇಳಿದಶ್ಲೋಕವೆಂಬಭಾವವು.

**ಮೂಲಕ್ಕೆ ಅರ್ಥವು** :—ನಾಲ್ಕು ಜನ ಭಕ್ತರುಗಳಿಗೂ ಉಪಾಸನಕ್ರಮ ಅಂತಿಮ ಪ್ರತ್ಯಯಗಳನ್ನು ಹೇಳಲುಪಕ್ರಮಿಸಿ ಹಿಂದೆ ಮೂರುಮೂರು ಶ್ಲೋಕಗಳಿಂದ ಐಶ್ವರ್ಯಾರ್ಥಿಗಳ ಮತ್ತು ಜಿಜ್ಞಾಸುವಿನ ವಿಷಯದಲ್ಲೂ ಹೇಳಬೇಕಾದುದನ್ನೂ ಉಪಪಾದಿಸಿದರು. ಈ ಶ್ಲೋಕ ಮೊದಲುಗೊಂಡು ಜ್ಞಾನಿಯ ಉಪಾಸನ ಕ್ರಮವು ತಿಳಿಸಲ್ಪಡುತ್ತದೆ. ಈ ಶ್ಲೋಕವು ಜ್ಞಾನಿಯಲ್ಲದೆ ಇನ್ನಯಾರಿಗೂ ಅನ್ವಯಿಸಲು ಸಾಧ್ಯವಿಲ್ಲವು, ಏಕಂದರೆ **ಅನನ್ಯ ಚೇತಾಃ, ನಿತ್ಯಯುಕ್ತಸ್ಯ** ಇತ್ಯಾದಿ ಪ್ರಯೋಗಗಳು ವಿರುದ್ಧವಾಗುತ್ತವೆ, ಈ ೮ನೆಯ ಅಧ್ಯಾಯವು ಈ ನಾಲ್ವರು ಭಕ್ತರಿಗಿರುವ ವೈಲಕ್ಷಣ್ಯವನ್ನೂ ಉಪಪಾದಿಸುವದಕ್ಕಾಗಿಯೇ ಎಂಬುದು ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕದಿಂದ ವ್ಯಕ್ತವು. ಹೀಗೆ ಮೊದಲು ಐಶ್ವರ್ಯಾರ್ಥಿಯ, ಅನಂತರ ಜಿಜ್ಞಾಸುವಿನ, ತದನಂತರ ಜ್ಞಾನಿಯ, **ವೇದ್ಯೋಪಾದೇಯ** ವಿಷಯಗಳನ್ನು ತಿಳಿಸುವದರಿಂದ ಉತ್ತರೋತ್ತರ ಈ ಅಧಿಕಾರಿಗಳ ಉತ್ಕೃಷ್ಟತೆಯು ಉಪಪಾದಿತವೆಂದು ಭಾವಿಸತಕ್ಕದ್ದು. ಹೀಗೆ ಜ್ಞಾನಿಯ ವೇದ್ಯೋಪಾದೇಯಗಳನ್ನು ಹೇಳುವ ಸಂದರ್ಭದಲ್ಲಿ ಅರ್ಜುನನು ತದನುಗುಣವಾದ ಪ್ರವೃತ್ತಿಯು ತುಂಬಾ ಕಷ್ಟತರವಾದುದೆಂದು ಎಲ್ಲಿ ಭಾವಿಸುವನೋ ಎಂದು ಯೋಚಿಸಿ, ಇವೆಲ್ಲಾ ಏನೂ ಕಷ್ಟವಾದ ವಿಷಯವಲ್ಲವು, ತನ್ನನ್ನು ಹೊಂದಲು ಬೇಕಾದುದು ಎರಡೇ ಮುಖ್ಯವಾದ ವಿಷಯಗಳೆಂದೂ, ಅನನ್ಯ ಚೇತಸ್ಕನಾಗಿಯೂ, ನಿತ್ಯಯುಕ್ತನಾಗಿಯೂ ಇದ್ದುಬಿಟ್ಟರೆ ಅಂತವನಿಗೆ ತಾನು ಬಹು ಸುಲಭನಾಗಿ ಪ್ರಾಪ್ಯನೆಂದು ಹೇಳುತ್ತಾರೆ.

**ಭಾ. ನಿತ್ಯಶಃ ಸಾಮುದ್ಯೋಗ ಪ್ರಭೃತಿ, ಸತತಂ – ಸರ್ವಕಾಲಂ, ಅನನ್ಯ ಚೇತಾ ಯಃ ಸ್ಮರತಿ ಅತ್ಯರ್ಥಸುಪ್ರಿಯತ್ವೇನ ಸುತ್ಸ್ಮೃತ್ಯಾವಿನಾ ಆತ್ಮಧಾರಣ ಮುಲಭಮೂ**

**ಯಃ** – ಯಾವ ಮೋಕ್ಷಾರ್ಥಿಯಾದ ಪ್ರಪನ್ನನು **ನಿತ್ಯಶಃ** – ಉಪಾಸನವನ್ನು ಆರಂಭಿಸಿದ ಮೊದಲುಗೊಂಡು ಪ್ರತಿನಿತ್ಯವೂ ಕ್ಲಿಪ್ತ ಕಾಲಗಳಲ್ಲಿ **ಸತತಂ** – ಸದಾ, ಉಪಾಸನಕಾಲದಲ್ಲಂತೂ ಸರಿಯೇ, ಅದಲ್ಲದೆ ಇತರ ಸಾಧ್ಯವಾದ ಕಾಲಗಳಲ್ಲೂ ಸಹ, **ಮಾಂ** – ಅಂತಹ ಜ್ಞಾನಿಗೆ ಸ್ವಸಹಾಯಕರನಾಗಿರಬೇಕೆಂಬ ಆಶೆಯಿಂದಿರುವ ನನ್ನನ್ನು **ಅನನ್ಯ ಚೇತಾಃ** – ಐಶ್ವರ್ಯಕಾಮಿಗಳಹಾಗೆ ಇತರ ವಿಷಯಗಳಲ್ಲಿ ಮನಸ್ಸನ್ನು ಇಡದೇ, ಐಕಾಂತ್ಯದಿಂದ ನನ್ನೊಬ್ಬನಲ್ಲೇ ಮನಸ್ಸನ್ನಿಟ್ಟವರಾಗಿ, **ಪರಮಾತ್ಮನಿಯೋರಕ್ತಃ ವಿರಕ್ತೋಽಪರಮಾತ್ಮನಿ** ಎಂಬಲ್ಲಿ ಹೇಳಿರುವಹಾಗೆ ಪರಮಾತ್ಮನಲ್ಲೇ ಸಕ್ತವಾದ ಮನಸ್ಸಿರಬೇಕಾದರೆ, **ಪರಮಾತ್ಮ ವ್ಯತಿರಿಕ್ತ** ಐಹಿಕಾದಿಗಳಲ್ಲಿ ವಿರಕ್ತನಾಗಿ, **ಸ್ಮರತಿ** – ಸ್ಮರಿಸುತ್ತಾನೋ, ಇಲ್ಲಿ **ಸ್ಮರತಿ** ಎಂದು ಹೇಳಿರುವದರಭಿಪ್ರಾಯವು, ಉಪಾಸನ ಕಾಲಗಳಲ್ಲಿ ಪರಮೈಕಾಂತ್ಯದಿಂದ ಧ್ಯಾನವೂ, ಉಪಾಸನ ಕಾಲಾನಂತರವೂ ಕೂಡ ಸಾಧ್ಯವಾದಹಾಗೆಲ್ಲಾ ಪರಮಾತ್ಮ ಸ್ಮರಣೆಯೂ ಹೇಳಲ್ಪಟ್ಟವು. ಅಂತಹ **ನಿತ್ಯಯುಕ್ತಸ್ಯ ಯೋಗಿನಃ** – ಹಾಗೆ ಸದಾ ಪರಮಾತ್ಮ ಪ್ರಾಪ್ತಿಯುಂಟಾಗುವವರೆಗೂ ತದನಂತರವೂ ತನ್ನನ್ನೇ ಧ್ಯಾನಿಸುತ್ತಿರುವ ಭಕ್ತಿಯೋಗಾಧಿಕಾರಿಗೆ, **ಹೇ ಪಾರ್ಥ** – ಓ ಅರ್ಜುನನೆ, **ಅಹಂ ಸುಲಭಃ** – ನಾನು ಸುಲಭನು, ಸಾಧಾರಣ ಜ್ಞಾನಿಗೇನೇ ಸುಲಭನು, ನೀನಾದರೋ ನನ್ನ ಜ್ಞಾನಿಯಾದ ಸೋದರತ್ತೆಯಾದ ಪೃಥುವಿಗೆ ಪುತ್ರನಾಗಿ ಬಹು ಪ್ರಾಜ್ಞನು, ಇನ್ನು ನಿನಗೆ ಸುಲಭನೆಂದು ಹೇಳತಕ್ಕದ್ದೇನಿದೆ ಎಂಬುದು ಸಂಬೋಧನೆಯಿಂದ ದ್ಯೋತಿತವು. ನಾನು ಹೀಗೆ ಭಕ್ತಿಯೋಗವನ್ನು ಉಪದೇಶಿಸಲು ಹೊರಟಿರುವದನ್ನು ನೋಡಿ ನೀನು ಅಧೈರ್ಯಪಡುವ ಕೆಲಸವಿಲ್ಲವು. ಉಪದೇಶಿಸಿದ ರೀತಿಯಲ್ಲಿ ನೀನು ಅನನ್ಯ ಚೇತಸ್ಕನಾಗಿ ನಿತ್ಯಯುಕ್ತನಾಗಿ ನನ್ನನ್ನು ಉಪಾಸನೆ ಮಾಡಿದರೆ, ನಾನು ಬಹು ಸುಲಭವಾಗಿ ಪ್ರಾಪ್ಯನೆಂದು ಉಪದೇಶಿಸಿರುತ್ತಾರೆ. ಇಲ್ಲಿ **ಸುಲಭಃ** ಎಂದು ಹೇಳಬೇಕಾದರೆ ಶಿಷ್ಯನಾದ ಅರ್ಜುನನಿಗೆ ತಾನು ಪ್ರಾಪ್ಯನಾಗುವದು ದುರ್ಲಭವೆಂದು ತೋರಿರಬೇಕೆಂಬುದು ಸಿದ್ಧವೆಂದು ಊಹಿಸಬೇಕಾಗಿರುತ್ತದೆ. ಕೆಲವರು ಆರ್ತನಿಗೂ ಅರ್ಥಾರ್ಥಿಗೂ ಸುಲಭವಲ್ಲವು, ಜ್ಞಾನಿಗೆ ಮಾತ್ರ ಸುಲಭನೆಂದು ಹೇಳುವದಕ್ಕಾಗಿ ಇಲ್ಲಿ **ಸುಲಭ** ಶಬ್ದವೆಂದು ಅಭಿಪ್ರಾಯ ಪಡಬಹುದು. ಆರ್ತನೂ ಅರ್ಥಾರ್ಥಿಯೂ ಕೂಡ ಪರಮಾತ್ಮನನ್ನು ಪ್ರಾಪ್ಯವಾಗಿಯೇ ವರಿಸದೇ ಪರಮಾತ್ಮಪ್ರಾಪ್ತಿಯೇ ಇಲ್ಲದಿರುವಾಗ ಸುಲಭಶಬ್ದಕ್ಕೆ ಹಾಗೆ ಅರ್ಥಮಾಡುವದು ಹೇಗೆ ಸಮಂಜಸವಾದೀತು? ಜಿಜ್ಞಾಸುವಿಗಿಂತಲೂ ಜ್ಞಾನಿಗೆ ಸುಲಭನೆಂಬುದು ಇಲ್ಲಿ ತೋರಿಬರುತ್ತದೆ. ಆದರೆ ಅರ್ಜುನನಿಗೆ ಹೀಗೆ ಅನನ್ಯ ಚೇತಸ್ಕನಾಗಿ ಉಪಾಸಿಸುವದು ಕಷ್ಟವೆಂದೇ ತೋರಿ, ೧೨ ನೆಯ ಅಧ್ಯಾಯದ ಪ್ರಥಮ ಶ್ಲೋಕದಲ್ಲಿ ಜಿಜ್ಞಾಸುವಾಗಿ ಉಪಾಸಿಸುವದು ಕ್ಷಿಪ್ರವಾಗಿ ಮೋಕ್ಷದಾಯಿಕವೋ, ಜ್ಞಾನಿಯಾಗಿ ಉಪಾಸಿಸುವದು ಕ್ಷಿಪ್ರದಾಯಿಕವೋ, ಎಂದು ಪ್ರಶ್ನಿಸುವನು. ಆಗಲೂ ಜಿಜ್ಞಾಸುವಾಗಿ ಉಪಾಸನೆಯು ಕ್ಲೇಶಕರವಾದುದೆಂದು ಹೇಳಿ, ಜ್ಞಾನಿಯಾಗಿಯೇ ಉಪಾಸಿಸು ಎಂದು ಉತ್ತರವನ್ನು ಹೇಳುತ್ತಾರೆ.

**ಭಾಷ್ಯಾರ್ಥವು:**—ಜ್ಞಾನಿಯಾದರೋ ತನ್ನನ್ನೇ ಸುಲಭವಾಗಿ ಹೊಂದುವನೆಂದು ಉಪದೇಶಿಸುತ್ತಾರೆ.—ಉಪಾಸನದ ಪ್ರಕಾರವು ಹೇಗೆ ಎಂದರೆ ಅನನ್ಯ ಚೇತಸ್ಕನಾಗಿ ಉಪಾಸಿಸತಕ್ಕದ್ದೆಂದು ಹೇಳುತ್ತಾರೆ; ಮತ್ತು ನಿತ್ಯಯುಕ್ತನಾಗಿಯೂ ಆತನಿರತಕ್ಕದ್ದು; ಪ್ರಾಪ್ತಿಪ್ರಕಾರವಾದರೋ ಈತನಿಗೆ ಸುಲಭವಾಗಿ ತಾನೆ ಪ್ರಾಪ್ಯನೆಂದು ಹೇಳುತ್ತಾರೆ. ಮೂಲದಲ್ಲಿ **ನಿತ್ಯಶಃ**

**ಭಾ. ನೋ ನಿರತಿಶಯ ಪ್ರಿಯಾಂ ಸ್ಮೃತಿಂ ಯಃ ಕರೋತಿ; ತಸ್ಯ ನಿತ್ಯಯುಕ್ತಸ್ಯ-ನಿತ್ಯ ಯೋಗಂ ಕಾಂಕ್ಷಮಾಣಸ್ಯ ಯೋಗಿನೋ ಹಂ ಸುಲಭಃ- ಅಹಮೇವ ಪ್ರಾಪ್ಯಃ ನಮದ್ಭಾವ ಐಶ್ವರ್ಯಾದಿಕಃ, ಸುಪ್ರಾಪಶ್ಚ. ತದ್ವಿಯೋಗ ಮಸಹಮಾನೋಽಹ ಮೇವ ತಂ ವೃಣೇ. ಮತ್ಪ್ರಾಪ್ತ್ಯನುಗುಣೋಪಾಸನ ವಿಪಾಕಂ ತದ್ವಿರೋಧಿ ನಿರ**

**ಸತತಂ** ಎಂಬೆರಡು ಪದಗಳಿಂದ ದ್ಯೋತಿತವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ— **ಮಾಂ** - ನನ್ನನ್ನು **ನಿತ್ಯಶಃ** - ಎಂದರೆ **ಉದ್ಯೋಗ ಪ್ರಭೃತಿ** - ಉಪಾಸನ ಮೊದಲು ಗೊಂಡು ಮನಸ್ಸು ಬೇರೇ ವಿಷಯಗಳಲ್ಲಾಗಲಿ ಬೇರೇ ಉಪಾಯಗಳಲ್ಲಿಯಾಗಲಿ ಪ್ರವರ್ತಿಸದೆ ಪ್ರತಿ ನಿತ್ಯದಲ್ಲೂ ಸಾಯುಪತನಕ, **ಸತತಂ** ಎಂದರೆ **ಸರ್ವಕಾಲಂ** - ಸರ್ವಕಾಲದಲ್ಲೂ, **ಅನನ್ಯ ಚೇತಾ ಯಃ ಸ್ಮರತಿ** ಎಂದರೆ **ಅತ್ಯರ್ಥಮತ್ಪ್ರಿಯತ್ವೇನ** - ನನ್ನಲ್ಲಿ ಆತನಿಗಿರುವ ಪ್ರೀತಿಯು ಇಷ್ಟೆಂದು ಹೇಳಲು ಅಸಾಧ್ಯವಾದುದರಿಂದ, **ಮತ್ಸ್ಮೃತ್ಯಾವಿನಾ** - ನನ್ನ ಸ್ಮರಣೆಯಿ ಲ್ಲದೆ, **ಆತ್ಮಧಾರಣ ಮಲಭಮಾನಃ** - ಆತ್ಮಧಾರಣೆಯನ್ನು ಹೊಂದದವನಾಗಿ, ನನ್ನಲ್ಲಿ **ನಿರ ತಿಶಯಪ್ರಿಯವಾದ** ಸ್ಮೃತಿಯನ್ನು, **ಯಃ ಕರೋತಿ** - ಯಾವನು ಮಾಡುತ್ತಾನೋ, **ಅನನ್ಯ ಚೇತಾ ಯಃ ಸ್ಮರತಿ** ಎಂಬುದಕ್ಕೆ ಅಷ್ಟು ತಾತ್ಪರ್ಯವೆಂಬ ಭಾವವು, ಆತನ ಸ್ಮರ ಣೆಯಿಲ್ಲದೆ ತನಗೆ ಆತ್ಮಧಾರಣೆಯೇ ಸಾಧ್ಯವಿಲ್ಲವೆಂದು ಅತ್ಯಂತ ಪ್ರೀತಿಯಿಂದ ಯಾವನು ಸ್ಮರಿ ಸುತ್ತಾನೋ ಎಂದರೆ ಉಪಾಸಿಸುತ್ತಾನೋ, ಇಲ್ಲಿ ಹೇಳಿರುವ ಸ್ಮೃತಿಯು ಭಕ್ತಿರೂಪಾಪನ್ನವಾಗಿ ತೈಲಧಾರೆಯಹಾಗೆ **ಅವಿಚ್ಛಿನ್ನ** ಸ್ಮೃತಿಸಂತಾನವು, **ತಸ್ಯ** - ಅಂತಹ **ನಿತ್ಯಯುಕ್ತಸ್ಯ** ಎಂದರೆ **ನಿತ್ಯಯೋಗಂ ಕಾಂಕ್ಷಮಾಣಸ್ಯ** - ಯಾವಾಗಲೂ ತನ್ನೊಂದಿಗೆ ವೈಕುಂಠದಲ್ಲಿ ಸದಾ ಸೇರಿ ರುವದನ್ನು ಅಪೇಕ್ಷಿಸುವ, **ಯೋಗಿನಃ** - ಭಕ್ತಿಯೋಗನಿಷ್ಠನಿಗೆ, **ಅಹಂ ಸುಲಭಃ** ಎಂದರೆ **ಅಹಮೇವಪ್ರಾಪ್ಯಃ** - ನಾನೇ ಪ್ರಾಪ್ಯನು, **ನಮದ್ಭಾವ ಐಶ್ವರ್ಯಾದಿಕಃ**-ನನ್ನಿಂದ ಭಾವಿಸ ಲ್ಪಟ್ಟ ಎಂದರೆ ಸಂಕಲ್ಪಿಸಲ್ಪಟ್ಟ ಐಶ್ವರ್ಯವೇ ಮೊದಲಾದವುಗಳು ಆತನಿಗೆ ಪ್ರಾಪ್ಯವಲ್ಲವು, ಮತ್ತು **ಸುಪ್ರಾಪಶ್ಚ** - ಬಹು ಸುಲಭವಾಗಿ ಪ್ರಾಪ್ಯನೆಂಬ ಭಾವವು. ಐಶ್ವರ್ಯಾರ್ಥಿಗಳ ಫಲ ಕ್ಕಿಂತಲೂ ತಾನು ಪ್ರಾಪ್ಯನಾಗುವ ಫಲವು ನಿರತಿಶಯವಾದುದು, ಹಾಗಾದರೆ ಪಡೆಯುವದು ಕಷ್ಟವೋ ಏಂದರೆ ಸುಲಭವು ಎಂದು ಹೇಳುವದಕ್ಕಾಗಿ, **ಸುಪ್ರಾಪಶ್ಚ** ಎಂಬ ವ್ಯಾಖ್ಯಾನವು. ಇಲ್ಲಿ **ಅಹಮೇವ** ಎಂದು ಪ್ರಾಪ್ಯನು ನಾನೇ ಎಂದು ಅವಧಾರಣದೊಂದಿಗೆ ವ್ಯಾಖ್ಯಾನವೇ ತಕ್ಕೆ? ಎಂದರೆ ಜ್ಞಾನಿಯ ಪ್ರಾಪ್ಯವು ಹಿಂದೆ ಹೇಳಿದ ಐಶ್ವರ್ಯಾರ್ಥಿ ಜಿಜ್ಞಾಸುಗಳಿಗಿಂತ ವಿಲಕ್ಷ ಣವಾದುದೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಹಿಂದೆ, ಅವರು **ಮದ್ಭಾವಂ ಯಾತಿ** ಎಂದು ಹೇಳಲ್ಪಟ್ಟಿತು. ಇಲ್ಲಿಯಾದರೋ **ಅಹಂ ಸುಲಭಃ** ಎಂದಿರುವದರಿಂದ **ಅಹ ಮೇವ ಪ್ರಾಪ್ಯಃ** ಎಂಬುದು ಅರ್ಥವಾಗಿ ತೋರಿಬರುತ್ತದೆಂಬ ಭಾವವು. ಹೀಗೆ ಐಶ್ವರ್ಯಾ ರ್ಥಿಗಳ ಹಾಗಲ್ಲದೆ ತಾನೇ ಪ್ರಾಪ್ಯನಾಗಬೇಕಾದರೆ ಈ ಜ್ಞಾನಿಗೆ ಏನಾದರೂ ಕಷ್ಟವೋ ಎಂದರೆ ಕಷ್ಟವೇನೂ ಇಲ್ಲವೆಂದು **ಸುಲಭ** ಶಬ್ದಕ್ಕೆ **ಸುಪ್ರಾಪಶ್ಚ** ಎಂಬ ವ್ಯಾಖ್ಯಾನವು. ಇದರಿಂದ ಸರ್ವೇಶ್ವರನ ಆಶ್ರಿತ ವಾತ್ಸಲ್ಯವು ಪ್ರದರ್ಶಿಸಲ್ಪಟ್ಟಿತು. ವಾತ್ಸಲ್ಯದಿಂದ ಸುಲಭನು. ಮೇಲಿ ನವಾಕ್ಯದ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ:— **ತದ್ವಿಯೋಗಂ** - ಅಂತಹ ಭಕ್ತನನ್ನು ಬಿಟ್ಟಿರುವದನ್ನು, **ಅಸಹಮಾನಃ** ಸಹಿಸದವನಾಗಿ, **ಅಹಮೇವ**-ನಾನೇ, **ತಂ**-ಅಂತಹ ಭಕ್ತ ನನ್ನು **ವೃಣೇ**-ವರಿಸುವೆನು, **ವೃಣೇ** ಎಂಬಲ್ಲಿ ತೋರುವ ವರಣವು ಏತಕ್ಕಾಗಿ ಎಂದರೆ ತಿಳಿಸು ತ್ತಾರೆ. **ಮತ್ಪ್ರಾಪ್ತ್ಯನುಗುಣೋಪಾಸನ ವಿಪಾಕಂ**-ನನ್ನ ಪ್ರಾಪ್ತಿಗೆ ಅನುಗುಣವಾದ ಉಪಾ ಸನದ ಪರಿಣಾಮವನ್ನು ಎಂದರೆ ಉಪಾಸನ ನಿಷ್ಪತ್ತಿಯಿಂದುಂಟಾಗುವ ದರ್ಶನ ಸಮಾನಾಕಾರ

**ಭಾ. ಸನ ಮತ್ಯರ್ಥಮತ್ಪ್ರಿಯತ್ವಾದಿಕಂ ಚಾ ಹ ಮೇವ ದದಾಮಿತ್ಯರ್ಥಃ। (೧) "ಯಮೇ ವೈಷ ವೃಣುತೇ ತೇನ ಲಭ್ಯಃ" ಇತಿ ಹಿ ಶ್ರೂಯತೇ. ವಕ್ಷ್ಯ ತಿ ಚ- (೨) "ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ। ದದಾಮಿ ಬುದ್ಧಿ ಯೋಗಂ ತಂ ಯೇನ ಮಾ ಮುಪಯಾನ್ತಿ ತೇ। ತೇಷಾ ಮೇವಾ ನುಕಂಪಾರ್ಥ ಮಹ ಮಜ್ಞಾನಜಂ ತಮಃ। ನಾಶಯಾಮ್ಯಾ ತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ" ಇತಿ ॥ ೧೪ ॥**

---

ಪ್ರಾಪ್ತಿಯನ್ನೂ, ಮತ್ತು **ತದ್ವಿರೋಧಿ ನಿರಸನ ಮತ್ಯರ್ಥ ಮತ್ಪ್ರಿಯ ತ್ವಾದಿಕಂ ಚ** - ಆ ಉಪಾಸನಕ್ಕೆ ವಿರೋಧಿಗಳಾದ ಪುಣ್ಯಪಾಪಗಳ ನಿರಸನವೂ, ನನಗೆ ತುಂಬಾ ಪ್ರಿಯನಾಗಿ ಆಗೋಣವೂ, ಇವೆಲ್ಲವನ್ನೂ, ಇಲ್ಲಿ ಆದಿಶಬ್ದದಿಂದ ಅನ್ತಿಮಸ್ಮೃತಿ ನಿರ್ಯಾಣ ಮೊದಲುಗೊಂಡು ಪರಮಾತ್ಮ ಸಾಯುಜ್ಯಪ್ರಾಪ್ತಿವರೆಗೂ ಬೇಕಾದ ಸಹಾಯವೆಲ್ಲವೂ ಹೇಳಲ್ಪಟ್ಟಿತು, **ಅಹಮೇವ ದದಾಮಿತ್ಯರ್ಥಃ** - ನಾನೇ ಕೊಡುವೆನು ಎಂಬ ತಾತ್ಪರ್ಯವು. ಆತನಲ್ಲಿ ನಿರತಿಶಯ ಪ್ರೀತಿಯೂ ವಾತ್ಸಲ್ಯವೂ ಇರುವುದರಿಂದ ಅದರ ಭಾರವೆಲ್ಲಾ ತನ್ನ ತಲೆಗೆ ಕಟ್ಟಿಮದು ಎಂಬ ಅಭಿಪ್ರಾಯವು. **"ಯಮೇವೈಷ"** ಇತ್ಯಾದಿ "ಈ ಪರಮಾತ್ಮನು ಯಾವ ಚೇತನನನ್ನು ತನ್ನ ಕೃಪೆಗೆ ಯೋಗ್ಯನೆಂದು ಭಾವಿಸಿ ವರಿಸುವನೋ ಅಂತವನಿಂದಲೇ ಲಭ್ಯನು" **ಇತಿ ಹಿಶ್ರೂಯತೇ**. ಎಂದು ಅಲ್ಲವೇ ಶ್ರುತಿಯು ಹೇಳುತ್ತದೆ. ತಾನೇ ಹೀಗೆ ಭಕ್ತನ ವಿಷಯದಲ್ಲಿ ಸರ್ವ ಭಾರವನ್ನೂ ವಹಿಸುತ್ತೇನೆಂದು ಎಲ್ಲಾದರೂ ಹೇಳಿದೆಯೇ? ಎಂದರೆ ಇದೇ ಗೀತೆಯಲ್ಲೇ ಹೇಳಿರುತ್ತದೆಂದು ಎರಡು ಶ್ಲೋಕಗಳನ್ನು ಉದಾಹರಿಸುತ್ತಾರೆ. ಶ್ರುತಿಯಲ್ಲಿ ಹೇಳಲ್ಪಟ್ಟ ಜ್ಞಾನಿಯ ವರಣವು ಯದ್ರೂಪವೆಂಬುದು ಈ ಶ್ಲೋಕಗಳಿಂದ ಹೇಳಲ್ಪಡುತ್ತದೆ. **ತೇಷಾಂ** - ಹಿಂದೆ ಹೇಳಲ್ಪಟ್ಟ, ಅವರು ಎಂತವರೆಂದರೆ ನನ್ನ ವಿಭೂತಿಯೋಗಗಳ ಮಹಾತ್ಮ್ಯಯನ್ನರಿತು, ಮಚ್ಚಿತ್ತರಾಗಿ, ಮದ್ಗತಪ್ರಾಣರಾಗಿ ಮಹಾತ್ಮರಾಗಿ ನನ್ನ ಪ್ರಾಪ್ತಿಗಾಗಿ ಉಪಾಸಿಸುವ ಜ್ಞಾನಿಗಳಾದ **ಸತತಯುಕ್ತಾನಾಂ** - ಯಾವಾಗಲೂ ನನ್ನನ್ನೇ ಸ್ಮರಿಸುತ್ತಿರುವವರಿಗೆ, ಪ್ರೀತಿಪೂರ್ವಕವಾಗಿ, **ತಂಬುದ್ಧಿಯೋಗಂ** - ಅಂತಹ ಬುದ್ಧಿಯೋಗವನ್ನು, **ದದಾಮಿ** - ಕೊಡುವೆನು, ಎಂತಹ ಬುದ್ಧಿಯೋಗವನ್ನು ಎಂದರೆ, **ಯೇನ** - ಯಾವ ಬುದ್ಧಿಯೋಗದಿಂದ **ತೇ** - ಅವರು, **ಉಪಯಾನ್ತಿ** - ನನ್ನನ್ನೇ ಪ್ರಾಪ್ಯವಾಗಿ ಹೊಂದಬಹುದೋ, ಅಂತಹ ಬುದ್ಧಿಯೋಗವನ್ನು ದಯಪಾಲಿಸುವೆನು. ಇಂತಹ ಬುದ್ಧಿಯೋಗವನ್ನು ದಯಪಾಲಿಸುವದರಿಂದ ಉಪಾಸನಾರಂಭ, ತನ್ನಿಷ್ಪತ್ತಿಗಳಿಗೆ ಪ್ರತಿಬಂಧಕಗಳಾಗಿದ್ದ ವಿಷಯ ಪ್ರಾವಣ್ಯರೂಪ ತಮಸ್ಸು ತಾವು ದಯಪಾಲಿಸಿದ ಜ್ಞಾನವೆಂಬ ದೀಪದಿಂದ ತೊಲಗುತ್ತದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ತೇಷಾಂ** - ಹಾಗೆ ಸತತಯುಕ್ತರಾಗಿ ನನ್ನ ಸಾಕ್ಷಾತ್ಕಾರವನ್ನು ಹೊಂದಬೇಕೆಂದು ಸಙ್ಕಲ್ಪಿಸಿದವರಿಗೆ, **ಅನುಕಂಪಾರ್ಥಂ** - ಅನುಗ್ರಹ ಮಾಡುವದಕ್ಕಾಗಿ **ಅಹಂ** - ಪರಮಕೃಪಾಳುವಾಗಿ ಅಂತವರನ್ನು ಬಂಧದಿಂದ ಬಿಡಿಸಬೇಕೆಂಬ ಸ್ಥಿರಸಙ್ಕಲ್ಪನಾದ ನಾನು, **ಆತ್ಮಭಾವಸ್ಥಃ** - ಅವರ ಮನಸ್ಸಿನಲ್ಲೇ ಯಾವಾಗಲೂ ಇರುವವನಾಗಿ, **ಭಾಸ್ವತಾಜ್ಞಾನದೀಪೇನ** ಪ್ರಕಾಶಮಾನವಾದ ಧರ್ಮ ಭೂತಜ್ಞಾನವೆಂಬ ದೀಪದಿಂದ, **ಅಜ್ಞಾನಜಂ ತಮಃ** - ಪ್ರಾಚೀನಕರ್ಮದಿಂದುಂಟಾದ ಜ್ಞಾನಸಂಕೋಚರೂಪವಾದ ಅಜ್ಞಾನವನ್ನು ತನ್ಮೂಲಕ ವಿಷಯಪ್ರಾವಣ್ಯವನ್ನು, **ನಾಶಯಾಮಿ** - ಹೋಗಲಾಡಿಸುವೆನು. ಕೆಲವರು **ಅಹಂ ಸುಲಭಃ** ಎಂದರೆ ಅಂತ್ಯಕಾಲದ ಸ್ಮರಣೆಗೆ ಸುಲಭನಾಗುತ್ತೇನೆ ಎಂದು ಅರ್ಥಮಾಡಿರುತ್ತಾರೆ. ಮುಂದಿನ ಶ್ಲೋ

---

(೧) ಮುಂಡಕ, ೩. ೨. ೩. (೨) ಗೀ. ೧೦-೧೦. ೧೧.

**ಭಾ. ಅ. ಅತಃಪರ ಮಧ್ಯಾಯಶೇಷೇಣ ಜ್ಞಾನಿನಃ ಕೈವಲ್ಯಾರ್ಥಿನಶ್ಚಾಽಪುನರಾವೃತ್ತಿ ಮೈಶ್ವರ್ಯಾರ್ಥಿನಃ ಪುನರಾವೃತ್ತಿಂಚಾಹ—**

**ಮೂ. ಮಾ ಮುಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನೋ ಸಂಸಿದ್ಧಿಂ ಪರಮಾಂ ಗತಾಃ ॥ ೧೫.**

ಕಾದಿಯಲ್ಲಿ ಈ ಶ್ಲೋಕದ ಸಙ್ಗತಿಯನ್ನು ಸೂಚಿಸಿ **ಮಾಮುಪೇತ್ಯ** ಎಂದಿರುವದರಿಂದ ಇಲ್ಲಿ ಸುಲಭನಾಗಿ ಪ್ರಾಪ್ಯನು ಎಂಬರ್ಥವೇ ಸಮಂಜಸವು. ಆದುದರಿಂದ ಶ್ರೀ ಯತಿವರ್ಯರು **ಅಹ ಮೇವ ಪ್ರಾಪ್ಯಃ** ಎಂದು ಭಾಷ್ಯ ಬರೆದಿರುತ್ತಾರೆ. ಸುಲಭ ಶಬ್ದಕ್ಕೆ **ಸುಖೇನಲಭ್ಯಃ** ಎಂಬ ಶ್ರೀ ಶಂಕರಾಚಾರ್ಯರ ಅಭಿಪ್ರಾಯವೂ, ಶ್ರೀ ಯತಿವರ್ಯರ ಅಭಿಪ್ರಾಯವೂ ಒಂದೇಯಾಗಿರು ತ್ತದೆ. ಹೀಗೆ ನಿತ್ಯಯುಕ್ತತೆಯು ಅನನ್ಯ ಚೇತಸ್ಕನಾಗಿರುವದೂ ಎರಡೂ ಇದ್ದುಬಿಟ್ಟರೆ ನಾನು ಸುಲಭನೆಂದೂ, ಯೋಗನಿಷ್ಪತ್ತಿ, ನಿರ್ಯಾಣಕ್ರಮ, ಅರ್ಚಿರಾದಿ ಮಾರ್ಗ, ನನ್ನ ಪ್ರಾಪ್ತಿ, ಇವೆಲ್ಲವೂ ನನಗೇ ಸೇರಿದವು, ಅವುಗಳ ಭಾರವೆಲ್ಲಾ ನನ್ನದು, ಆದುದರಿಂದ ಅನನ್ಯ ಚೇತಸ್ಕ ನಾಗಿ ನಿತ್ಯಯುಕ್ತನಾಗಿ ಯಾವಜ್ಜೀವವೂ ಉಪಾಸನೆ ಮಾಡಿಕೊಂಡು ಸದಾ ನನ್ನನ್ನು ಚಿಂತಿ ಸುತ್ತಿರು ಎಂದು ಉಪದೇಶಿಸಿ, ಇದೇನೂ ಕಷ್ಟವಾದುದಲ್ಲವು, ಅಂತವನಿಗೆ ನಾನು ಸುಲಭನಾಗಿ ಪ್ರಾಪ್ಯನು ಎಂದು ಹೇಳಿದರು. ಹೀಗೆಲ್ಲಾ ವ್ಯಕ್ತವಾಗಿ ತನ್ನ ಪರಮ ಸೌಲಭ್ಯವೂ ಕೃಪೆಯೂ, ಜ್ಞಾನಿಯ ವಿಷಯದಲ್ಲುಂಟು ಎಂದು ಹೇಳಿದ್ದರೂ, **ಅನನ್ಯ ಚೇತಾ ಸ್ಸತತಂ ಯೋ ಮಾಂ ಸ್ಮರತಿ** ಎಂದು ಹೇಳಿರುವದು ಕಷ್ಟವೆಂದೇ ಭಾವಿಸಿ ೧೨ ನೆಯ ಅಧ್ಯಾಯದಲ್ಲಿ ಇದನ್ನು ಜಿಜ್ಞಾ ಸುವಾಗಿ ಉಪಾಸಿಸಲೇ ಎಂದು ಕೇಳುತ್ತಾನೆ. ಅದಕ್ಕೆ ಜ್ಞಾನಿಯಾಗಿಯೇ ಉಪಾಸಿಸು, ಅದೇ ಸುಲಭವೆಂದೂ ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಪುನಃ ಜ್ಞಾಪಿಸುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು:—ಅತಃಪರಂ** - ಇನ್ನು ಮುಂದೆ, **ಅಧ್ಯಾಯ ಶೇ ಷೇಣ** - ಅಧ್ಯಾಯದ ಮಿಕ್ಕ ಭಾಗದಿಂದ ಎಂದರೆ ಇದು ಮೊದಲುಗೊಂಡು ಅಧ್ಯಾಯ ಸಮಾಪ್ತಿಯವರೆಗೂ, **ಜ್ಞಾನಿನಃ ಕೈವಲ್ಯಾರ್ಥಿನಶ್ಚಾ ಪುನರಾವತ್ತಿಂ** - ಜ್ಞಾನಿಗೂ ಮತ್ತು ಕೈವಲ್ಯಾರ್ಥಿಗೂ ಸಹ ಪುನಃ ಹಿಂತಿರುಗದೇ ಇರೋಣವನ್ನೂ, ಎಂದರೆ ಪುನಃ ಸಂಸಾರ ಪ್ರಾಪ್ತಿ ಇಲ್ಲದಿರೋಣವನ್ನೂ, **ಐಶ್ವರ್ಯಾರ್ಥಿಗಳಿಗೆ ಪುನರಾವೃತ್ತಿ**ಯನ್ನೂ ಸಹ, **ಅಹ** - ಹೇಳಿರು ತ್ತಾರೆ.

**ಮೂಲಕ್ಕೆ ಅರ್ಥವು:**—ನಾಲ್ಕು ಜನ ಭಕ್ತರನ್ನು ವಿಭಾಗಿಸಿ ಹೇಳಿದುದರಿಂದ, ಆ ನಾಲ್ವರಲ್ಲಿ ಆರ್ತನೂ ಅರ್ಥಾರ್ಥಿಯೂ ಐಶ್ವರ್ಯ ಕಾಮಿಗಳಾದುದರಿಂದ, ಅವರುಗಳ ಉಪಾಸ ನಾಕ್ರಮದಲ್ಲಿ ಅನನ್ಯ ಚೇತಸ್ಸಿನ ಭಾವವೂ ನಿತ್ಯಯುಕ್ತತೆಯೂ ಇಲ್ಲದುದರಿಂದ ಅವರಿಗೆ ಅನ್ತಿಮ ಸ್ಮೃತಿಯೂ ಬೇರೇ ವಿಧವೆಂದು ಹೇಳಿ, ಅನನ್ಯ ಚೇತಸ್ಕರಾಗಿ ನಿತ್ಯಯುಕ್ತರಾಗಿ ತನ್ನನ್ನೇ ಉಪಾಸಿಸುವವರಿಗೆ ತನ್ನ ಪ್ರಾಪ್ತಿಯು ಸುಲಭವೆಂದು ಹೇಳಿದರು. ತನ್ನ ಪ್ರಾಪ್ತಿ ಯುಂಟಾದವರಿಗೆ ಪುನರಾವೃತ್ತಿ ಇಲ್ಲೆಂದೂ, ಐಶ್ವರ್ಯ ಕಾಮಿಗಳಿಗೆ ಆವೃತ್ತಿಯುಂಟೆಂದು ತಿಳಿಸುವದೇ ಈಗ ಸಙ್ಗತಿಯು. ಹಿಂದೆಯೇ ಹೀಗೆ ಪುನರಾವೃತ್ತಿಯು ಇಬ್ಬರು ಐಶ್ವರ್ಯ ಕಾಮಿಗಳಿಗೂ, ಇನ್ನಿಬ್ಬರಿಗೆ ಅಪುನರಾವೃತ್ತಿಯೂ, ಎಂಬುದನ್ನೇ ಮನಸ್ಸಿನಲ್ಲಿಟ್ಟು, ಅವರುಗ ಳಿಗೆ ಅಂತಿಮ ಪ್ರತ್ಯಯದಲ್ಲಿರುವ ವ್ಯತ್ಯಾಸವನ್ನು ೫-೬ ನೆಯ ಶ್ಲೋಕಗಳಲ್ಲಿ ವ್ಯಕ್ತಪಡಿಸಿದರು. ಜ್ಞಾನಿಗೆ ಅಪುನರಾವೃತ್ತಿ ಸೂಚಕವಾದ ಪರಮಾತ್ಮ ವಿಷಯವಾಗಿಯೇ ಅಂತಿಮ ಸ್ಮರಣೆಯು ಎಂದೂ, ಹಾಗಲ್ಲದೆ ಇತರ ವಿಷಯಗಳನ್ನು ಸ್ಮರಿಸುತ್ತಾ ಪ್ರಾಣತ್ಯಾಗ ಮಾಡುವ ಐಶ್ವರ್ಯಾರ್ಥಿ

**ಭಾ. ಮಾಂ ಪ್ರಾಪ್ಯ ಪುನ ರ್ನಿಖಿಲದುಃಖಾಲಯ ಮಸ್ಥಿರಂ ಜನ್ಮನ ಪ್ರಾಪ್ನುವಂತಿ. ಯತಃ ಏತೇ ಮಹಾತ್ಮಾನಃ-ಮಹಾಮನ ಸಃ, ಯಥಾವಸ್ಥಿ ತಮತ್ಸ್ವರೂಪಜ್ಞಾನಾ**

ಗಳಿಗೆ ಪುನರ್ಜನ್ಮವು ಎಂದೂ, ಹಿಂದೆಯೇ ಸೂಚಿಸಲ್ಪಟ್ಟವು. ಇನ್ನು ಮುಂದೆ ಐಶ್ವರ್ಯಾರ್ಥಿಯಾಗಿ ಒಂದುವೇಳೆ ಚತುರ್ಮುಖಾದಿ ಲೋಕಪ್ರಾಪ್ತಿಯಾದರೂ ಪುನರಾವೃತ್ತಿಯುಂಟೆಂದು ಸಹೇತುಕವಾಗಿಯೂ ಹೇಳಿ, ಜ್ಞಾನೀ ಜಿಜ್ಞಾಸುಗಳಿಗೆ ಮಾತ್ರವೇ ಅಪುನರಾವರ್ತಿಯೆಂದು ಉಪದೇಶಿಸಿ, ದೇಹತ್ಯಾಗಾನಂತರ ಈ ಭಕ್ತರುಗಳಿಗುಂಟಾಗುವ ಗತಿಗಳೂ ಭಿನ್ನವಾದವುಗಳೆಂದೂ, ಹೇಳುತ್ತಾರೆ. ಪ್ರತಮತಃ ತನ್ನನ್ನೇ ಪ್ರಾಪ್ಯವಾಗಿ ಉಪಾಸಿಸುವವರಿಗೆ ಉಂಟಾಗುವ ಫಲ ಪ್ರಾಪ್ತಿಯ ಮಾಹಾತ್ಮ್ಯೆಯನ್ನೂ, ಈ ಶ್ಲೋಕದಲ್ಲಿ ಸ್ತುತಿಸಿ ಐಶ್ವರ್ಯಾರ್ಥಿಗಳಿಗೆ ಉಂಟಾಗುವ ದುರ್ಗತಿಯನ್ನು ಮುಂದಿನ ಶ್ಲೋಕದಲ್ಲಿ ನಿಂದಿಸುತ್ತಾರೆ.

**ಮಾಮುಪೇತ್ಯ** - ಪರಮ ಸುಹೃತ್ತಾದ ನನ್ನನ್ನು ಹೊಂದಿದ ನಂತರ, **ದುಃಖಾಲಯಂ**-ಅನೇಕ ದುಃಖಗಳಿಗೆ ತವರುಮನೆಯಾಗಿಯೂ, **ಅಶಾಶ್ವತಂ** - ಅಸ್ಥಿರವಾಗಿಯೂ ಇರುವ, **ಪುನರ್ಜನ್ಮ** ವನ್ನು, **ನಾಪ್ನುವಂತಿ** - ಹೊಂದುವದಿಲ್ಲವು, ಅದೇನು ಹಾಗೆ ಎಂದು ಕೇಳುವಿಯೋ ? **ಮಹಾತ್ಮಾನಃ** - ಇವರು ನನ್ನನ್ನೇ ಹೊಂದಬೇಕೆಂಬ ಕುತೂಹಲದಿಂದ ಅನನ್ಯ ಚೇತರಾಗಿ ನಿತ್ಯಯುಕ್ತರಾದ ಈ ಮಹಾ ಮನಸ್ಕರಾದ ಜ್ಞಾನಿಗಳು, **ಪರಮಾಂ ಸಂಸಿದ್ಧಿ ಗತಾಃ** - ಪರಮೋತ್ಕೃಷ್ಟವಾಗಿ, ನಿರತಿಶಯವಾದ, ದೋಷ ಸಪ್ತಕಗಳ ಗಂಧವೂ ಇಲ್ಲದುದರಿಂದ ದುಃಖ ಸಂಬಂಧವೇ ಇಲ್ಲದೆ ಆನಂದಮಯವಾದ, ಸಮ್ಯಕ್ಸಿದ್ಧಿಯೆಂದು ಹೇಳಿಸಿಕೊಳ್ಳುವ ನನ್ನ ಸಾಯುಜ್ಯವನ್ನು ಹೊಂದುವರು, ಸಂಸಿದ್ಧಿ ಹೊಂದಿದವನಿಗೆ ದುಃಖಾಲಯವೆಲ್ಲಿಯದು ಎಂಬ ಭಾವವು. ಇಂತಹ ನಿರತಿಶಯ ಸುಖವನ್ನು ಹೊಂದಿದ ನಂತರ ತಾನೇ ಅಂತಹ ಉತ್ಕೃಷ್ಟ ಪದವಿಯನ್ನು ಬಿಟ್ಟು ಹೋಗಲು ಎಂದಿಗೂ ಯತ್ನಿಸನು. ಅದೂ ಅಲ್ಲದೆ ಅಂತಹ ಅತ್ಯರ್ಥ ಪ್ರಿಯನಾದ ಜ್ಞಾನಿಯನ್ನು ನನ್ನ ದಿವ್ಯಸ್ಥಾನಕ್ಕೆ ಬರಮಾಡಿಕೊಂಡು, ಅಂತವನನ್ನುಅಲ್ಲಿಂದನಾನುಕಳುಹಿಸಿಬಿಡುವೆನೋ ? ಅದೂ ಇಲ್ಲವು. ಹೀಗಿರುವ ಸರ್ವೋತ್ಕೃಷ್ಟ ಸಂಸಿದ್ಧಿಯನ್ನು ಪಡೆದು ನನ್ನನ್ನು ಸೇರಿದವರಿಗೆ ಎಂದಿಗಾದರೂ ಪುನರ್ಜನ್ಮವುಂಟೋ ? ನಿತ್ಯವಿಭೂತಿಯಲ್ಲಿ ಪರಿಪೂರ್ಣ ಬ್ರಹ್ಮಾನುಭವವನ್ನು ಅನುಭವಿಸುವವನು ಈ ದುಃಖಾಲಯ ರೂಪವಾದ ಪುನರ್ಜನ್ಮವನ್ನು ಹೊಂದುವದಕ್ಕಾಗಿ ಈ ಲೀಲಾ ವಿಭೂತಿಗೆ ಬಂದಾನೋ ? ಅವನೂ ಬರುವದಿಲ್ಲವು, ನಾನೂ ಕಳುಹಿಸುವಹಾಗಿಲ್ಲವೆಂಬಭಾವವು. ಅದುದರಿಂದ ಅದು ಮಹತ್ತಾದ ಶಾಶ್ವತವಾದ ಸ್ಥಾನವು. ಹಾಗೆಯೇ ಶ್ರೀ ಯತಿವರ್ಯರು ಕೊನೆಯ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ ನಿಪುಣತರವಾಗಿ ಉಪಪಾದಿಸಿರುತ್ತಾರೆ.

**ಭಾಷ್ಯಾರ್ಥವು:—ಮಾಂ ಪ್ರಾಪ್ಯ** - ಇದು ಮೂಲದ, **ಮಾಮುಪೇತ್ಯ** ವೆಂಬುದರ ರ್ಥವು, ನನ್ನನ್ನು ಹೊಂದಿ, ಪುನಃ **ನಿಖಿಲ ದುಃಖಾಲಯಂ** - ಮೂಲದಲ್ಲಿ ದುಃಖಾಲಯಂ ಎಂದಿಷ್ಟೇ ಇರುವಾಗ ನಿಖಿಲ ಶಬ್ದವನ್ನು ಸೇರಿಸಲು ಕಾರಣವೇನೆಂದರೆ, ಸಮಸ್ತ ದುಃಖಗಳೂ ಈ ಲೀಲಾ ವಿಭೂತಿಯಲ್ಲೇ, ಪುನಃ ಪುನಃ ಜನ್ಮಗಳೆತ್ತುವಾಗಲೇ, ಎಂಬ ಭಾವವನ್ನು ತೋರಿಸುವದಕ್ಕಾಗಿ **ನಿಖಿಲ** ಶಬ್ದವು; **ದುಃಖಾಲಯ** ವೆಂಬ ಪ್ರಯೋಗದಿಂದ ದುಃಖಕ್ಕೆಲ್ಲಾ ತವರುಮನೆ ಎಂಬರ್ಥವು ತೋರಿಬರುವದರಿಂದ ಅದನ್ನು ವ್ಯಕ್ತಪಡಿಸುವದಕ್ಕಾಗಿಯೇ **ನಿಖಿಲ ದುಃಖಾಲಯಂ** ಎಂಬ ವ್ಯಾಖ್ಯಾನವು. ಸಮಸ್ತ ದುಃಖಗಳಿಗೆ ಆಶ್ರಯವಾಗಿರುವ, **ಅಸ್ಥಿರಂ** - ಶಾಶ್ವತವಲ್ಲದ, ಜನ್ಮ - ಜನ್ಮವನ್ನು, **ನ ಪ್ರಾಪ್ನುವಂತಿ** - ಹೊಂದುವದಿಲ್ಲವು. **ಅಸ್ಥಿ**

**ಭಾ. ಅತ್ಯರ್ಥ ಮತ್ಪ್ರಿಯತ್ವೇನ ಮಯಾ ವಿನಾ ಆತ್ಮಧಾರಣ ಮಲಭಮಾನಾ ಮಯ್ಯಾಸಕ್ತಮನಸೋ ಮದಾಶ್ರಯಾ ಮಾ ಮುಪಾಸ್ಯ ಪರಮಸಂಸಿದ್ಧಿರೂಪಂ ಮಾಂ ಪ್ರಾಪ್ತಾಃ || ೧೫ ||**

ರವಾದುದು ಜನ್ಮವೆಂದರೆ ಜನ್ಮಕ್ಕೇನೆ ಅಂಟಿದ ದೇಹ, ಭೋಗ, ಭೋಗಸ್ಥಾನ, ಭೋಗೋಪಕರಣಗಳೆಲ್ಲಾ ಅಸ್ಥಿರವಾದವು ಎಂಬ ಭಾವವು; ಅಥವಾ ಜನ್ಮಶಬ್ದದಿಂದ ಅದರಿಂದ ಪ್ರಾಪ್ತವಾದ ಶರೀರವು, ಇದು ಅಸ್ಥಿರವಾದುದೆಂಬ ಭಾವವು. ಜನ್ಮವು ದುಃಖಾಲಯವೆಂಬುದಕ್ಕೆ, **"ಸಂಸಾರಂ ಸಾಗರಂ ಘೋರ ಮನಂತಕ್ಲೇಶಭಾಜನಂ"** "ಸಂಸಾರವು ಘೋರವಾದ ಸಾಗರವು ಎಂಬ ಮತ್ತು ಅನೇಕ ಕ್ಲೇಶಗಳನ್ನುಂಟುಮಾಡುವಂತಾದ್ದು; **"ಅವಿವೇಕ ಘನಾಂಧ ದಿಜ್ಮುಖೇ ಬಹುದಾ ಸಂತತ ದುಃಖವರ್ಷಿಣೀ! ಭಗವನ್ ಭವದುರ್ದಿನೇ ಪಥಸ್ಖಲಿತಂ ಮಾ ಮವಲೋಕಯಾ ಚ್ಯುತ||"** ಎಂದರೆ ಅವಿವೇಕವೆಂಬ ಮೇಘದಿಂದಾವರಿಸಲ್ಪಟ್ಟು ದಿಕ್ಕು ತೋಚದೆ **ಕತ್ತಲಾಗಿ**, ಯಾವಾಗಲೂ ನಾನಾ ವಿಧಗಳಾದ ದುಃಖವೆಂಬ ಮಳೆಯು ಸುರಿಯುತ್ತಿರುವ, ಸೂರ್ಯ ರಶ್ಮಿಯೇ ಇಲ್ಲದಿರುವ, ದುರ್ದಿನ (ಕೆಟ್ಟ ದಿನ)ದಲ್ಲಿ ಕೆಸರಿನಲ್ಲಿ ಕಾಲುಜಾರಿ ಬಿದ್ದಿರುವ ನನ್ನನ್ನು ಓ ಭಗವಂತನೇ ಅಚ್ಯುತನೇ ನೀನು ನಿನ್ನ ದಿವ್ಯ ದೃಷ್ಟಿಯಿಂದ ನೋಡಬೇಕು ಎಂಬ ಪ್ರಾರ್ಥನೆಯು" **ಯಾವಜ್ಜೀವತಿ ತಾವಚ್ಚ ದುಃಖೈರ್ನಾನಾ ವಿಧೈಃ ಪ್ಲುತಃ । ತಂತುಕಾರಣ ಪಕ್ಷ್ಮೋಘೈ ರಾಸ್ತೇ ಕಾರ್ಪಾಸ ಬೀಜವತ್"** ಹತ್ತಿಯ ಬೀಜಕ್ಕೆ ತಂತುಗಳು ಸುತ್ತಿಕೊಂಡಿರುವಹಾಗೆ ನಾನಾವಿಧ ದುಃಖಗಳಿಂದು ಹೇಳಲ್ಪಟ್ಟಿರುತ್ತದೆ. (ವಿ. ಪು. ೬. ೫. ೨೩) ಎಂಬಿವೇ ಮೊದಲಾದ ಸೂಕ್ತಿಗಳು ಅನುಸಂಧೇಯಗಳು. ಮುಂದಿನ ವಾಕ್ಯವು ಹೇತುವನ್ನು ಉಪಪಾದಿಸುವದರಿಂದ **ಯತಃ** ಎಂದು ಮೂಲದಲ್ಲಿಲ್ಲದಿದ್ದರೂ ಉಪಯೋಗಿಸಿರುತ್ತಾರೆ. **ಯತಃ** – ಯಾವ ಕಾರಣದಿಂದ ಎಂದರೆ, **ಏತೇ** – ಈ ಜ್ಞಾನಿಗಳಾದ ಭಕ್ತಿಯೋಗ ನಿಷ್ಠರು, **ಮಹಾತ್ಮಾನಃ** ಎಂದರೆ **ಮಹಾಮನಸಃ** – ಮಹತ್ತಾದ ಮನಸ್ಸುಳ್ಳವರು, ಅದು ಹೇಗೆ ಎಂದರೆ, **ಯಥಾವಸ್ಥಿತಮತ್ಸ್ವರೂಪ ಜ್ಞಾನಾಃ** – ನನ್ನ ಯಥಾರ್ಥವಾದ ಸ್ವರೂಪದ ಜ್ಞಾನವುಳ್ಳವರು, ಅವರ ತಾತ್ಪರ್ಯವೇನೆಂದರೆ— **ಅತ್ಯರ್ಥ ಪ್ರಿಯತ್ವೇನ** – ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ನನ್ನಲ್ಲಿ ಪ್ರೀತ್ಯತಿಶಯವನ್ನು ಇಟ್ಟಿರುವವರಿಂದ, **ಮಯಾವಿನಾ** - ನನ್ನೊಂದಿಗಿಲ್ಲದೆ. **ಆತ್ಮಧಾರಣೆ** ಯನ್ನು, **ಅಲಭಮಾನಾಃ** ಹೊಂದದಿರುವವರಾಗಿ, **ಮಯ್ಯಾಸಕ್ತಮನಸಃ** – ನನ್ನಲ್ಲೇ ಇಡಲ್ಪಟ್ಟ ಮನಸ್ಸುಳ್ಳವರಾಗಿ, **ಮದಾಶ್ರಯಾಃ** – ನನ್ನನ್ನು ಹೀಗೆ ಉಪಾಯಾನುಷ್ಠಾನದ ಮೂಲಕ ಆಶ್ರಯಿಸಿದವರಾಗಿ, **ಪರಮಸಂಸಿದ್ಧಿ ರೂಪಂ** – ನಿರತಿಶಯ ಉತ್ಕೃಷ್ಟರೂಪ ಪ್ರಾಪ್ಯವಾದ, **ಮಾಂ** – ಪರಮ ಸುಹೃತ್ತಾದ ನನ್ನನ್ನು, **ಪ್ರಾಪ್ತಾಃ** – ಹೊಂದಿರುತ್ತಾರೆಯೋ, ಆ ಕಾರಣದಿಂದ ಪುನಸ್ಸಂಸಾರ ಕ್ಲೇಶಗಳನ್ನು ಹೊಂದುವದಿಲ್ಲವೆಂಬ ತಾತ್ಪರ್ಯವು. ಜನ್ಮವನ್ನು ಅಶಾಶ್ವತವೆಂದು ಹೇಳಿದುದರಭಿಪ್ರಾಯವು, ಆ ಜನ್ಮಗಳಿಗೆ ಸಂಬಂಧಿಸಿದ ದೇಹವೊದಲುಗೊಂಡು ಸಕಲ ಉಪಭೋಗಗಳೂ ಭೋಗ್ಯವಸ್ತುಗಳೂ, ಭೋಗಸ್ಥಾನಗಳೂ, ಭೋಗೋಪಕರಣಗಳೂ ಎಲ್ಲವೂ ಅಸ್ಥಿರವೆಂಬ ಭಾವವು. **ಮಹಾತ್ಮಾನಃ** ಎಂದು ಮೂಲದಲ್ಲಿರುವದು ಈ ಮುಕ್ತಿ ಹೊಂದುವ ಜ್ಞಾನಿಗಳ ಸ್ತುತಿಪರವಾದ ಪ್ರಯೋಗವು. ಅವರು ಹೇಗೆ ಮಹಾ ಮನಸ್ಸುಳ್ಳವರೆಂಬುದನ್ನು **"ಯಥಾವಸ್ಥಿತ"** ಎಂದಾರಂಭಿಸಿ **ಮಯ್ಯಾಸಕ್ತಮನಸಃ** ಎಂಬುವವರೆಗೂ ಹಿಂದೆ ಹೇಳಿದುದನ್ನೇ ಅನುವಾದಮಾಡಿ ಉಪಪಾದಿಸಿರುತ್ತಾರೆ. ಜ್ಞಾನಿಗೆ ಅಭಿಲಷಿತ ಫಲವು ಪ್ರಾಪ್ಯನಾದ ಶ್ರೀಮನ್ನಾರಾಯಣನೇ ಆದುದರಿಂದ ಸಂಸಿದ್ಧಿ ಶಬ್ದಕ್ಕೆ **ಪರಮ ಸಂಸಿದ್ಧಿ ರೂಪಂ ಮಾಂ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ಸಂಸಿದ್ಧಿಯು** ಸಮೀಚೀನ ಸಿದ್ಧಿಯು,

**ಭಾ. ಅ. ಐಶ್ವರ್ಯಗತಿಂ ಪ್ರಾಪ್ತಾನಾಂ, ಭಗವಂತಂ ಪ್ರಾಪ್ತಾನಾಂಚ ಪುನರಾವೃತ್ತಾ ವ ಪುನರಾವೃತ್ತಾ ಚ ಹೇತು ಮನನ್ತರಮಾಹ—**

ಅದು ಸರ್ವೋತ್ಕೃಷ್ಟ ಪ್ರಾಪ್ಯವಾದುದರಿಂದ **ಪರಮ** ಎಂದು ವಿಶೇಷಿಸಿ, **ಮಾಂ** ಎಂದು ಅರ್ಥಮಾಡಿದರು. ಇದರಿಂದ ಇತರರಾದ ಐಶ್ವರ್ಯಾರ್ಥಿಗಳು ಹೊಂದುವ ಸಿದ್ಧಿಯು ಪರಮ ಸಿದ್ಧಿಯಲ್ಲವು; ಅವು ಮುಂದಿನ ಶ್ಲೋಕದಲ್ಲಿ ಹೇಳುವಹಾಗೆ ಅಲ್ಪಾ ಸ್ಥಿರಗಳಾದವು ಎಂದು ಸೂಚಿಸುವದಕ್ಕಾಗಿಯೂ ಅವುಗಳಿಂದ ವ್ಯಾವರ್ತಿಸಲ್ಪಟ್ಟವೆಂದು ತಿಳಿಸುವದಕ್ಕಾಗಿಯೂ **"ಪರಮಾಂ"** ಎಂಬ ವಿಶೇಷಣವು. ಪರಮಾತ್ಮ ಸಾಯುಜ್ಯಕ್ಕಿಂತ ಉತ್ಕೃಷ್ಟವಾದ ಸಿದ್ಧಿಯೂ ಬೇರೇ ಇಲ್ಲವೆಂದು ಈ ವಿಶೇಷಣವು ವ್ಯಕ್ತಪಡಿಸುತ್ತದೆ. ಹೀಗೆ ಅವರು ಮಹಾ ಮನಸ್ಕರು, ನನ್ನನ್ನು ಒಂದು ಕ್ಷಣವಾಗಲಿ ಅಗಲಿರಲು ಅಶಕ್ತರು; ಇಂತವರನ್ನು ನಾನು ಅಗಲಿರುವನೇ, ಅದೂ ಇಲ್ಲವು. ಹೀಗಿರುವಾಗ ದುಃಖ ಪರಿಪೂರ್ಣವಾದ ಜನ್ಮವನ್ನು ಪುನಃ ಅವರೇ ಎಂದಿಗಾದರೂ ಅಪೇಕ್ಷಿಸುವರೇ ಅದೂ ಇಲ್ಲವು. ಇದನ್ನೇ ಮುಂದೆಯೂ ವ್ಯಕ್ತಪಡಿಸಿ ಹೇಳುತ್ತಾರೆ.—**"ಇದಂ ಜ್ಞಾನ ಮುಪಾಶ್ರಿತ್ಯ ಮಮ ಸಾಧರ್ಮ್ಯ ಮಾಗತಾಃ। ಸರ್ಗೇಽಪಿ ನೋಽಪ ಜಾಯನ್ತೇ ಪ್ರಳಯೇ ನ ವ್ಯಥನ್ತಿ ಚ ॥"** (ಗೀ. ೧೪. ೨)

ಚನ್ನಾಗಿ ಪರಿಶೀಲಿಸಿ ತಿಳಿಯಬೇಕೆಂಬ ಕುತೂಹಲವಿರುವ ಪ್ರಾಜ್ಞರಿಗೆ ಇಲ್ಲಿ ಒಂದು ಶಜ್ಕಾ ಉಂಟಾಗಬಹುದು. ಇಲ್ಲಿ ಸಂಸಿದ್ಧಿ ಶಬ್ದಕ್ಕೆ ಶ್ರೀ ದೇಶಿಕವರ್ಯರು ಸಮಿಾಚೀನ ಸಿದ್ಧಿ ಎಂದು ಅರ್ಥಮಾಡಿ ಪರಮ ಪುರುಷಾರ್ಥ ಪ್ರಾಪ್ತಿ ಎಂದು ಅರ್ಥಮಾಡಿರುತ್ತಾರೆ. ಶ್ರೀ ಯತಿವರ್ಯರೂ **"ಪರಮ ಸಂಸಿದ್ಧಿರೂಪಂ ಮಾಂ ಪ್ರಾಪ್ತಾಃ"** ಎಂದು ಹಾಗೆಯೇ ಅರ್ಥಮಾಡಿರುತ್ತಾರೆ. ಹೀಗಿರುವಾಗ ಹಿಂದೆ **"ಕರ್ಮಣೈವಹಿಸಂಸಿದ್ಧಿ ಮಾಸ್ಥಿತಾ ಜನಕಾದಯಃ"** (ಗೀ. ೩. ೨೦) ಎಂಬಲ್ಲಿ ಶ್ರೀ ಯತಿವರ್ಯರು **"ಸಂಸಿದ್ಧಿ ಮಾಸ್ಥಿತಾಃ"** ಎಂಬುದಕ್ಕೆ **ಆತ್ಮಾನಂ ಪ್ರಾಪ್ತುವಂತಃ** ಎಂಬ ಭಾಷ್ಯವು ಹೇಗೆ ಸಮಂಜಸವು? ಭಾಷ್ಯಾಧಿಕಾರಿಗಳಿಗೆ ಮುಖ್ಯ ಕರ್ತವ್ಯವೇನು ಎಂದರೆ ಭ್ರಮಜ್ಞಾನವನ್ನು ತಪ್ಪಿಸುವದೇ. ಸಂಸಿದ್ಧಿ ಶಬ್ದಕ್ಕೆ ಪರಬ್ರಹ್ಮ ಪ್ರಾಪ್ತಿಯಲ್ಲೇ ಮುಖ್ಯವೃತ್ತಿ ಇದ್ದರೂ, ಜ್ಞಾನಯೋಗಾಪೇಕ್ಷೆ ಇಲ್ಲದೇನೇ ಕರ್ಮಯೋಗವು ಭಕ್ತಿಯೋಗವನ್ನು ಸಾಧಿಸಿಕೊಟ್ಟು ಮೋಕ್ಷದಾಯಕವಾಗಬಹುದೆಂಬ ಶಾಸ್ತ್ರಾರ್ಥವನ್ನು ತಿಳಿಸುವದಕ್ಕಾಗಿ ಹೊರಟು, ಅಲ್ಲಿ ಮುಖ್ಯಾಜ್ಞಕ್ಕೆ ಫಲವಾಗಿ ಅಜ್ಞಯ ಫಲವನ್ನು ಹೇಳುವದೂ ಶಾಸ್ತ್ರವಿಹಿತವಾದರೂ, ಕೆಲವರು ಆಗ ಕರ್ಮಯೋಗವೇ ಸಾಕ್ಷಾತ್ತಾಗಿ ಉಪಾಯವೆಂದು ಭ್ರಮಿಸಬಹುದೆಂದು ಭಾವಿಸಿ, ಪರಮಪ್ರಾಜ್ಞರಾದ ಯತಿವರ್ಯರು ಕೇವಲ ಕರ್ಮಯೋಗವೇ ಉಪಾಯವಲ್ಲವೆಂದು ಸ್ಫುಟವಾಗಿ ತಿಳಿಸುವದಕ್ಕಾಗಿಯೇ, **ಆತ್ಮಾನಂ ಪ್ರಾಪ್ತುವಂತಃ** ಎಂಬ ಸ್ವಾರಸ್ಯವಾದ ವ್ಯಾಖ್ಯಾನವನ್ನು ದಯಪಾಲಿಸಿದರು. ಈ ವಿಷಯದಲ್ಲಿ ಶ್ರೀ ದೇಶಿಕವರ್ಯರ ನ್ಯಾಯಸಿದ್ಧಾಂಜನ ವಾಕ್ಯವಾದ **"ಕರ್ಮಾಪಿ ನ ಕೇವಲಂ ಜ್ಞಾನ ಸಮುಚ್ಚಿತಂವಾ ಮುಕ್ತಿ ಹೇತುಃ"** ಎಂಬುದು ಅನುಸಂಧೇಯವು. ಕೇವಲ ಕರ್ಮಯೋಗವೇ ಆಗಲಿ, ಜ್ಞಾನಯೋಗದಿಂದ ಸೇರಿದ್ದರೇಯಾಗಲಿ, (ಭಕ್ತಿಯೋಗವಿಲ್ಲದೆ) ಮೋಕ್ಷಹೇತುವಾಗಲಾರದು ಎಂಬ ಭಾವವು. ಶ್ರೀ ಜಯತೀರ್ಥಮುನಿಗಳೂ ಸಹ **"ಕರ್ಮಣ್ಯೈವ ಸಂಸಿದ್ಧಿಂ"** ಎಂಬ ಶ್ಲೋಕಾವತಾರಿಕೆಯಾಗಿ **"ಕರ್ಮಣ ಏವ ಮುಕ್ತಿಸಾಧನತ್ವ ಮುಚ್ಯತ ಇತ್ಯನ್ಯಥಾಪ್ರತೀತಿ ನಿರಾಸಾಯ "ಕರ್ಮಣೈವಹಿ" ಇತ್ಯಸ್ಯ ತಾತ್ಪರ್ಯಾರ್ಥಮಾಹ"** ಎಂದು ಬರೆದಿರುತ್ತಾರೆ. ಆದುದರಿಂದ ಯಾವ ಪ್ರಾಜ್ಞನಾದ ಶಾಸ್ತ್ರಜ್ಞನೂ ಕೇವಲ ಕರ್ಮಯೋಗವೇ ಭಕ್ತಿಯೋಗ ನಿರಪೇಕ್ಷವಾಗಿ ಉಪಾಯವೆಂದು ಭಾವಿಸಲಾರನು. **ಈ ವಿಷಯದಲ್ಲಿ ೩೧೪ ಮತ್ತು ೩೩೧-೨ನೆಯ ಪುಟಗಳನ್ನು ನೋಡಿ.**

**ಮೂ. ಆಬ್ರಹ್ಮಭುವನಾ ಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾ ಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ ॥** ೧೬.

**ಭಾಷ್ಯಾವತಾರಿಕೆಯ ಅರ್ಥವು:—**ಹೀಗೆ **ಐಶ್ವರ್ಯಗತಿಂ ಪ್ರಾಪ್ತಾನಾಂ** - ಐಶ್ವರ ಫಲವನ್ನು ಹೊಂದಿದವರಿಗೆ, **ಭಗವನ್ತಂ ಪ್ರಾಪ್ತಾನಾಂ ಚ** - ಭಗವಂತನನ್ನು ಪ್ರಾಪ್ಯವಾಗಿ ಹೊಂದಿದವರಿಗೂ ಕ್ರಮವಾಗಿ ಪುನರಾವೃತ್ತಿ ಉಂಟಾಗುವದಕ್ಕೂ ಅಪುನರಾವೃತ್ತಿಯುಂಟಾಗು ವದಕ್ಕೂ **ಹೇತುಂ** - ಕಾರಣವನ್ನು, **ಅನಂತರಮಾಹ** - ಒಡನೆಯೇ ಹೇಳುತ್ತಾರೆ. ಐಶ್ವರ್ಯ ಗತಿಯನ್ನು ಹೊಂದಿದವರ ಲೋಕವೆಲ್ಲಾ **ಆಬ್ರಹ್ಮಭುವನಗಳು,** ಅವುಗಳೆಲ್ಲಾ ಅನಿತ್ಯಗಳು, ಆದುದರಿಂದ ಅಲ್ಲಿನ ಭೋಗಗಳೂ ಭೋಗೋಪಕರಣ ಭೋಗಸ್ಥಾನಗಳೆಲ್ಲವೂ ಕೂಡ ಅನಿತ್ಯ ಗಳು; ಆದುದರಿಂದ ಅವರುಗಳಿಗೆ ಪುನರಾವೃತ್ತಿಯುಂಟು. ನನ್ನನ್ನು ಪ್ರಾಪ್ಯವಾಗಿ ಹೊಂದಿ ದವರಿಗೆ ನಿತ್ಯವಿಭೂತಿಯಲ್ಲಿ ನಿತ್ಯವಾಸವೂ, ಅಲ್ಲಿನ ಭೋಗಗಳೂ ಭೋಗೋಪರಣಗಳೂ, ಭೋಗಸ್ಥಾನಗಳೂ ಎಲ್ಲವೂ ಶಾಶ್ವತವಾದುವಾದುದರಿಂದ ಪುನರಾವೃತ್ತಿ ಇಲ್ಲವು. ಅರ್ತ್ತಾರ್ಥಿಗಳಿಗೆ ಪುನರಾವೃತ್ತಿಯೂ ಜಿಜ್ಞಾಸುವಿನ ಅವಸ್ಥೆಯು ಜ್ಞಾನಿಯಾಗುವದರ ಪ್ರಥಮ ಪರ್ವ ವಾಗುವದರಿಂದ ಜಿಜ್ಞಾಸುವೂ ಕೊನೆಗೆ ಜ್ಞಾನಿಯ ಹಾಗೆಯೇ ಆಗುವದರಿಂದ ಅವರಿಬ್ಬರಿಗೂ ಛಾಂದೋಗ್ಯದಲ್ಲಿ ಹೇಳಿರುವಹಾಗೆ ಅಪುನರಾವೃತ್ತಿಯೂ, ಎಂದು ತಿಳಿಯತಕ್ಕದ್ದು.

**ಮೂಲಕ್ಕೆ ಅರ್ಥವು:—**ಅರ್ಜುನನ ಆಶಯವೂ ಮುಕ್ತಿಯಾಗಬೇಕೆಂಬುದಾಗಿಯೇ; ಶ್ರೀ ಕೃಷ್ಣನ ಅನುಗ್ರಹವೂ ಅರ್ಜುನನನ್ನು ಭಕ್ತಿಯೋಗವನ್ನವಲಂಬಿಸುವ ಹಾಗೆ ಮಾಡಿ ಮೋಕ್ಷ ಭಾಕ್ಕಾಗುವ ಹಾಗೆ ಮಾಡಬೇಕೆಂಬುದಾಗಿಯೇ ; ಅದುದರಿಂದ ಐಶ್ವರ್ಯಾರ್ಥಿಯಾಗಿ ಪುನ ರ್ಜನ್ಮವೆತ್ತದೆ ಮೋಕ್ಷಾರ್ಥಿಯೇ ಆಗಬೇಕೆಂದು ಉಪದೇಶಿಸುವದಕ್ಕಾಗಿ, ಐಶ್ವರ್ಯಾರ್ಥಿಗೆ ಪ್ರಾಪ್ತವಾಗುವ ಬ್ರಹ್ಮಲೋಕ ಮೊದಲುಗೊಂಡು ಎಲ್ಲಾ ಲೋಕಗಳೂ ಅನಿತ್ಯವಾದವು ಗಳಾದುದರಿಂದ ಅಲ್ಲಿನ ಭೋಗಗಳೂ ಅನಿತ್ಯಗಳೆಂದೂ, ಆ ಕಾರಣದಿಂದ ಆ ಲೋಕಗಳನ್ನು ಸೇರಿದವರಿಗೆ ಪುನರ್ಜನ್ಮವುಂಟೆಂದೂ, ದಿವ್ಯ ವೈಕುಂಠವನ್ನು ಸೇರಿ ತನ್ನನ್ನು ಹೊಂದಿದವ ರಿಗೆ ಅಂತಹ ಪುನರ್ಜನ್ಮವಿಲ್ಲವೆನ್ನುತ್ತಾರೆ, **ಆಬ್ರಹ್ಮಭುವನಾತ್** - ಐಶ್ವರ್ಯಾರ್ಥಿ ಮೊದ ಲಾದವರುಗಳಿಗೆ ಉಂಟಾಗಬಹುದಾದ ಚತುರ್ಮುಖ ಬ್ರಹ್ಮಲೋಕವಾದ ಸತ್ಯಲೋಕ ಪರ್ಯಂ ಗಳಾದ **ಲೋಕಾಃ** - ಎಲ್ಲಾ ಲೋಕಗಳೂ, **ಪುನರಾವರ್ತಿನಃ** - ಅವೃತ್ತಿಯುಳ್ಳವುಗಳು. ಇದನ್ನೇ ಮುಂದೆ ಮೂರು ಶ್ಲೋಕಗಳಿಂದ ಉಪಪಾದಿಸುತ್ತಾರೆ. ಆ ಲೋಕಗಳಿಗೇನೇ ಪುನರಾ ವೃತ್ತಿಯುಂಟಾದರೆ, ಅಲ್ಲಿನ ಭೋಕ್ತೃಗಳಿಗೂ ಪುನರಾವೃತ್ತಿಯುಂಟೆಂದು ಹೇಳುವದು ಅವಶ್ಯ ಕವಿಲ್ಲವೆಂಬ ಭಾವವು. ಲೋಕಗಳೇ ಅನಿತ್ಯವಾದರೆ, ಇಲ್ಲಿನ ಭೋಗಗಳೂ ಭೋಗ್ಯಸ್ಥಾನ ಗಳೂ, ಭೋಗೋಪರಣಗಳೂ ಸಹ ಅಶಾಶ್ವತವೆಂದು ಹೇಳಲೇ ಕೆಲಸವಿಲ್ಲವೆಂಬ ಭಾವವು. ಆನಂದಮಯನಾದ ತಮ್ಮ ಲೋಕವಾದರೋ ಮುಕ್ತರಿಗೆ ನಿರತಿಶಯಾನಂದವನ್ನು ಕೊಡುವ ಸ್ಥಾನವು. ಅಲ್ಲಿಗೆ, ಮುಂದೆ ಹೇಳುವಹಾಗೆ ಅರ್ಚಿರಾದಿಗತಿಯಿಂದ ಹೋದವರಿಗೆ, ಪುನರಾವೃ ತ್ತಿಯಿಲ್ಲವೆಂದು ಉತ್ತರಾರ್ಧದಿಂದ ತಿಳಿಸುತ್ತಾರೆ, **ಹೇ ಕೌನ್ತೇಯ** - ಓ ಕುಂತೀಪುತ್ರನಾದ ಅರ್ಜುನನೇ, **ಮಾಮುಪೇತ್ಯತು** - ನನ್ನನ್ನು ಹೊಂದಿದನಂತರವಾದರೋ, ಇಲ್ಲಿ **ತು** ಶಬ್ದವು ಮೇಲೆ ಹೇಳಿದುದನ್ನು ವ್ಯಾವರ್ತಿಸಿ ವೈಲಕ್ಷಣ್ಯವನ್ನು ಭೋಧಿಸುತ್ತದೆ; ಏನೆಂದರೆ, ಹಾಗೆ ನನ್ನ ಸಾಯುಜ್ಯವನ್ನು ಹೊಂದಿದ ಅಧಿಕಾರಿಗೆ, **ಪುನರ್ಜನ್ಮ ನವಿದ್ಯತೇ** - ಪುನರ್ಜನ್ಮವಿರುವದಿ ಲ್ಲವು. ಇಲ್ಲಿ **ಮಾಮುಪೇತ್ಯತು** ಎಂದಿರುವದರಿಂದ ಅದಕ್ಕೆ ಪ್ರತಿ ದ್ವಂದ್ವಿಯಾಗಿ **ಆ ಬ್ರಹ್ಮ ಭುವನಾಲ್ಲೋಕಾಃ** ಎಂಬುದಕ್ಕೆ ಬದಲಾಗಿ **ಆ ಬ್ರಹ್ಮಭುವನಾಧಿಕಾರಿಣಂ ಉಪೇತ್ಯ ಪುನ**

**ಭಾ. ಬ್ರಹ್ಮಲೋಕಪರ್ಯನ್ತಾ ಬ್ರಹ್ಮಾಂಡೋದರ ವರ್ತಿನ ಸ್ಸರ್ವೇ ಲೋಕಾ ಭೋಗ್ಯೈಶ್ವರ್ಯಾಲಯಾಃ, ಪುನರಾವರ್ತಿನಃ - ವಿನಾಶಿನಃ; ಅತ ಐಶ್ವರ್ಯ ಗತಿಂ ಪ್ರಾಪ್ತಾನಾಂ**

**ರ್ಜನ್ಮವಿದ್ಯತೇ** ಎಂದಾದರೂ ಇಟ್ಟುಕೊಳ್ಳಬೇಕು; ಅಥವಾ **ಮಮಲೋಕಸ್ತು ಕೌನ್ತೇಯ ಅಪುನರಾವರ್ತೀ** ಎಂದಾದರೂ ಹೇಳಬೇಕಾಗಿತ್ತು. ಹಾಗಲ್ಲದೆ ಪೂರ್ವಾರ್ಧದಲ್ಲಿ ಒಂದು ವಿಧವಾಗಿಯೂ, ಉತ್ತರಾರ್ಧದಲ್ಲಿ ಬೇರೆ ವಿಧವಾಗಿಯೂ ವೈಲಕ್ಷಣ್ಯ ಹೇಳಿದುವದು, ಏಕೆಂದರೆ ಎಲ್ಲಾ ಕಡೆಯಲ್ಲೂ ಉಂಟಾಗತಕ್ಕದ್ದು **ಸಾಯುಜ್ಯವೇ** ಎಂದು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆ ಲೋಕದ ಅಧಿಪತಿಗಳೊಂದಿಗೆ ಸಾಯುಜ್ಯವು ಪುನರಾವೃತ್ತಿರೂಪವಾದುದು. ಅಲ್ಲಿನ ನಿಯತಕಾಲವಾದ ಒಡನೆಯೇ ಮುಂದೆ **ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶನ್ತಿ** (ಗೀ. ೯. ೨೧) ಎಂಬ ಉಪಪಾದಿಸಿರುವಹಾಗೆ ಪುನರ್ಜನ್ಮ ಉಂಟಾಗಬಹುದು. ಅದನ್ನು ತಪ್ಪಿಸಲು ಅಸಮರ್ಥರು ಆ ಲೋಕಾಧಿಪರು. ನಾನಾದರೋ ಹಾಗಲ್ಲವು, ನನ್ನ ಲೋಕವನ್ನು ಸೇರಿದನಂತರ ಪುನರಾವೃತ್ತಿ ಶಂಕೆಗೆ ಕಾರಣವೇ ಇಲ್ಲವು. **ಮಾಂ ಉಪೇತ್ಯ** ಎಂದು ಶ್ರೀ ಕೃಷ್ಣನು ತನ್ನ ಎದೆಯನ್ನು ಮುಟ್ಟಿ ಹೇಳುತ್ತಾನೆ, ಹಿಂದೆ ೭ ನೆಯ ಅಧ್ಯಾಯದಲ್ಲಿ ಹೇಳಿದಹಾಗೆ ಸ್ವರೂಪ ರೂಪ ಗುಣ ವಿಭವೈಶ್ವರ್ಯಗಳಿಂದ ಯುಕ್ತನಾಗಿ ಸರ್ವಸ್ವತಂತ್ರನಾಗಿ ಸರ್ವ ಶಕ್ತನಾಗಿ ದಯಾ ಸೌಲಭ್ಯ ವಾತ್ಸಲ್ಯಾದಿಗಳಿಂದ ಯುಕ್ತನಾಗಿ **ಮಾಮುಪೇತ್ಯ**- ನ್ನನ್ನು ಹೊಂದಿದ ಬಳಿಕ ಪುನರ್ಜನ್ಮವಿಲ್ಲವೆಂಬ ಭಾವವು. ಚತುರ್ಮುಖ ಬ್ರಹ್ಮಾದಿಗಳಾದರೆ ನಿನ್ನ ಹಾಗೆ ಜೀವಕೋಟಿಗೆ ಸೇರಿದವರಾಗಿ ಅಸ್ವತಂತ್ರರು, ಇಂತಹ ನಿರತಿಶಯಾನಂದವನ್ನುಂಟು ಮಾಡುವ ಶಕ್ತಿಯು ಅವರಿಗಿಲ್ಲವು ಎಂಬ ಭಾವವು. ಹಿಂದಿನ ಶ್ಲೋಕದ ಅಭಿಪ್ರಾಯವು ಇಲ್ಲಿಯೂ ತೋರಿಬರುತ್ತದೆ. ಅತ್ಯರ್ಥಪ್ರಿಯನಾದ ಜ್ಞಾನಿಯನ್ನು ಹೊಂದಿದನಂತರ ಸರ್ವಶಕ್ತನಾಗಿ ಸ್ವತಂತ್ರನಾಗಿರುವ ನಾನು ನಿನಗೆ ಪುನರ್ಜನ್ಮವನ್ನು ಕೊಟ್ಟೇನೆ? ಆದುದರಿಂದ **ಪುನರ್ಜನ್ಮ ನವಿದ್ಯತೇ. ದುಃಖಾಲಯ ಮಶಾಶ್ವತಂ** ಇಂಥಾದ್ದನ್ನು ನೀನೇ ಎಂದಿಗೂ ಪ್ರಾರ್ಥಿಸುವದೂ ಇಲ್ಲವು. ಆದುದರಿಂದಲೂ **ಪುನರ್ಜನ್ಮನವಿದ್ಯತೇ** - ಒಂದುವೇಳೆ ನಾನೇ ಅಪೇಕ್ಷಿಸಿ ಹೋದರೋ ಎನ್ನುತ್ತೀಯೋ? ಒಳ್ಳೇ ಅರಮನೆಯ ಪ್ರಾಸಾದವನ್ನು ಸೇರಿದವನು ತಿಪ್ಪೇ ಗುಂಡಿಯ ಮೇಲಿರಲು ಎಂದಿಗೂ ಅಪೇಕ್ಷಿಸುವದಿಲ್ಲವೆಂಬುದು ನನಗೆ ತಿಳಿಯುವದು; ಆ ಕಾರಣದಿಂದಲೂ ಪುನರ್ಜನ್ಮ ನವಿದ್ಯತೇ. ಆಗಲಿ ಈ ಲೋಕದಲ್ಲಿ ಒಂದು ಸರ್ವೋತ್ಕೃಷ್ಟ ಕೆಲಸಕ್ಕಾಗಿ ನೀನೇ ಆಜ್ಞಾಪಿಸಿ ಏನಾದರೂ ಕಳುಹಿಸಿ ಕೊಟ್ಟರೋ? ಎಂದರೆ ಅದು ಪುನರ್ಜನ್ಮವಲ್ಲವೆಂದು ತಿಳಿಸುವದಕ್ಕಾಗಿಯೂ **ಪುನರ್ಜನ್ಮನವಿದ್ಯತೇ** ಎಂದು ಹೇಳಿರುತ್ತಾರೆ. ಆದುದರಿಂದ ಓ ಕೌನ್ತೇಯನೇ ನೀನು ಹೇಗೆ ವಿಕಲ್ಪಿಸಿದರೂ, **ಪುನರ್ಜನ್ಮ ನವಿದ್ಯತೇ** ಎಂದು ಸತ್ಯಸಙ್ಕಲ್ಪನಾದ ನಾನು ಸಙ್ಕಲ್ಪಿಸಿರುವೆನೆಂಬುದು ಸೂಚಿತವು.

**ಭಾಷ್ಯಾರ್ಥವು:—ಬ್ರಹ್ಮಲೋಕ ಪರ್ಯನ್ತಾ ಬ್ರಹ್ಮಾಂಡೋದರವರ್ತಿನಃ ಸರ್ವೇ ಲೋಕಾಃ** ಇದು **ಆಬ್ರಹ್ಮ ಭುವನಾಲ್ಲೋಕಾಃ** ಎಂಬುದರ ವ್ಯಾಖ್ಯಾನವು, ಬ್ರಹ್ಮಾಂಡದೊಳಗಿರುವ ಚತುರ್ಮುಖ ಬ್ರಹ್ಮನ ಲೋಕದವರೆಗೂ ಸಮಸ್ತಗಳಾದ, ಕೈಲಾಸ, ಸ್ವರ್ಗ ಮತ್ತು ಅಗ್ನಿ, ಕುಬೇರಾದಿ ಲೋಕಗಳೆಲ್ಲಾ ಎಂಬ ತಾತ್ಪರ್ಯವು, ಇವುಗಳೆಂತವು ಎಂದರೆ, **ಭೋಗ್ಯೈಶ್ವರ್ಯಾಲಯಾಃ** - ಐಶ್ವರ್ಯಾರ್ಥಿಗಳು ಉಪಾಸನೆಮಾಡಿ ಪಡೆದ ಭೋಗ ಮತ್ತು ಐಶ್ವರ್ಯಗಳಿಗೆ ಆಶ್ರಯವಾದುವು, ಇದರಿಂದ ಐಶ್ವರ್ಯಾರ್ಥಿಗಳಿಗೆ ಪ್ರಾಪ್ಯಸ್ಥಾನಗಳು ಇವು· ಎಂದು ವ್ಯಕ್ತಪಟ್ಟವು, ಇವೆಲ್ಲವೂ ಎಂತವು ಎಂದರೆ **ಪುನರಾವರ್ತಿನಃ** ಎಂದರೆ ಪುನಃ ಬರತಕ್ಕವು ಎಂದರೆ **ವಿನಾಶಿನಃ** ಅಶಾಶ್ವತವಾದವುಗಳು, ಇವುಗಳಲ್ಲಿರುವ ಚೇತನಾಚೇತನ ಭಾಗಗಳು ಅದೃಶ್ಯವಾಗಿ. ಮಾಯ

**ಭಾ. ಪ್ರಾಪ್ಯಸ್ಥಾನ ವಿನಾಶಾ ದ್ವಿನಾಶಿತ್ವ ಮಾವರ್ಜನೀಯಮ್; ಮಾಂ - ಸರ್ವಜ್ಞಂ ಸತ್ಯ ಸಙ್ಕಲ್ಪಂ ನಿಖಿಲಜಗದುತ್ಪತ್ತಿಸ್ಥಿತಿಲಯಲೀಲಂ ಪರಮಕಾರುಣಿಕಂ ಸದೈಕರೂಪಂ ಪ್ರಾಪ್ತಾನಾಂ ವಿನಾಶಪ್ರಸಙ್ಗಾಭಾವಾ ತ್ತೇಷಾಂ ಪುನರ್ಜನ್ಮ ನ ವಿದ್ಯತೇ||೧೬||**

ವಾಗಿ ಇಲ್ಲದೇ ಹೋಗುತ್ತವೆ ಎಂಬಭಿಪ್ರಾಯದಿಂದ ವಿನಾಶಿನಃ ಎಂದು ಇಲ್ಲಿ ಹೇಳಲಿಲ್ಲವು, ಅಶಾಶ್ವತಗಳು ಎಂಬಭಿಪ್ರಾಯದಿಂದ ಹೇಳಲ್ಪಟ್ಟಿತು, **ಅತಃ** - ಆ ಕಾರಣದಿಂದ **ಐಶ್ವರ್ಯಗತಿಂ ಪ್ರಾಪ್ತಾನಾಂ** - ಐಶ್ವರ್ಯ ಫಲವನ್ನು ಉಪಾಸನೆಯ ಮೂಲಕ ಪ್ರಾಪ್ಯವಾಗಿ ಹೊಂದಿದವರಿಗೆ, **ಪ್ರಾಪ್ಯಸ್ಥಾನ ವಿನಾಶಾತ್** - ಪ್ರಾಪ್ಯಸ್ಥಾನವೇ ಪರಿಣಾಮವನ್ನು ಹೊಂದುವದರಿಂದ, **ವಿನಾಶಿತ್ವ ಮವರ್ಜನೀಯಮ್** - ಪರಿಣಾಮದಶೆಯು ತಪ್ಪಿದ್ದಲ್ಲವು, ಆದುದರಿಂದ ಅಂತಹ ಭೋಗಸ್ಥಾನವೇ ಅಶಾಶ್ವತವಾದನಂತರ ಈತನು ಅಲ್ಲಿರುವದು, ಅಲ್ಲಿನ ಭೋಗಗಳೂ ಭೋಗ ದ್ರವ್ಯಗಳೂ ಎಲ್ಲವೂ ಅಶಾಶ್ವತಗಳೇ ಎಂಬ ಭಾವವು. ಮುಂದೆ ಉತ್ತರಾರ್ಧಕ್ಕೆ ಅರ್ಥ ಬರೆಯುವರಾಗಿ, **ಮಾಂ** ಪದದಲ್ಲಿ ತೋರಿಬರುವ ಅರ್ಥವನ್ನು ವ್ಯಕ್ತಪಡಿಸುತ್ತಾರೆ, **ಸರ್ವಜ್ಞಂ** - ಸಮಸ್ತವನ್ನೂ ಏಕಕಾಲದಲ್ಲೇ ಸಾಕ್ಷಾತ್ಕರಿಸಿ ತಿಳಿಯುವ ಶಕ್ತಿಯುಳ್ಳ, ಸತ್ಯಸಙ್ಕಲ್ಪನಾದ ಎಂದರೆ ನನ್ನ ಸಙ್ಕಲ್ಪಕ್ಕೆ ಯಾವದೊಂದೂ ವಿಘಾತವಿಲ್ಲದ, **ನಿಖಿಲ ಜಗದುತ್ಪತ್ತಿಲಯಲೀಲಂ** - ಸಮಸ್ತ ಜಗತ್ತಿನ ಎಂದರೆ ಲೀಲಾವಿಭೂತಿಯ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣಭೂತನಾದ **ಪರಮ ಕಾರುಣಿಕ** ನಾದ, **ಸದೈಕರೂಪಂ** - ಯಾವಾಗಲೂ ಒಂದೇ ವಿಧವಾದ ಸ್ವಭಾವವುಳ್ಳ, ಇಂತಹ **ಮಾಂ** - ನನ್ನನ್ನು, **ಪ್ರಾಪ್ತಾನಾಂ** - ಪ್ರಾಪ್ಯವಾಗಿ ಹೊಂದಿದ ಭಕ್ತಿಯೋಗ ನಿಷ್ಠರಿಗೆ ಎಂದರೆ ಮುಕ್ತರಾದವರಿಗೆ ಎಂಬ ಭಾವವು, **ವಿನಾಶ ಶಙ್ಕಾ ಭಾವಾತ್** - ಮೂಲಕ್ಕೆ ಅರ್ಥ ಬರೆಯುವಾಗ ಕಾಣಿಸಿರುವ, ಯಾವ ಶಙ್ಕೆಗಳು ಇಲ್ಲವಾದುದರಿಂದ, **ತೇಷಾಂ** - ಅಂತಹ ಪುಣ್ಯಶಾಲಿಗಳಿಗೆ, **ಪುನರ್ಜನ್ಮ ನವಿದ್ಯತೇ** - ಪುನರ್ಜನ್ಮವಿಲ್ಲವು. ಆ ಲೋಕಗಳನ್ನೂ ಲೋಕಾಧಿಪತಿಗಳನ್ನೂ ಹೊಂದಿದವರಿಗೆ ಮಾತ್ರ ಪುನರ್ಜನ್ಮವು. ನನ್ನನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲವು, ಎಂದು ವ್ಯಾಖ್ಯಾನಮಾಡುವದರಲ್ಲಿ, ನಿನ್ನಲ್ಲಿ ಅಂತಹ ಮಹಾತ್ಮ್ಯ ಏನು ಎಂದು ಪ್ರಶ್ನೆಯು ಉಂಟಾದೀತಾಗಿ, ಅದಕ್ಕೆ ಉತ್ತರವಾಗಿ, **ಮಾಂ** ಎಂಬ ಪದದಲ್ಲಿ ಸೂಚಿತವಾದ ಅರ್ಥಗಳನ್ನೆಲ್ಲಾ **ಸರ್ವಜ್ಞಂ** ಎಂದಾರಂಭಿಸಿ, **ಸದೈಕರೂಪಂ** ಎಂದು ಮುಗಿಸಿ ಹೇಳಿರುತ್ತಾರೆ. ಈ ಅರ್ಥಗಳೆಲ್ಲಾ **ತು** ಶಬ್ದದಿಂದ ದ್ಯೋತಿತವು. ಅವರುಗಳು ಅಜ್ಞರು; ಉಪಾಸಕರ ಭಕ್ತಿಯು ಎಷ್ಟರಮಟ್ಟಿಗೆ ಎಂಬುದನ್ನು ಅರಿಯರು; ನಾನಾದರೋ ಸರ್ವಜ್ಞನು; ಉಪಾಸಕನ ಭಕ್ತಿಯ ಮಾಹಾತ್ಮ್ಯೆಯನ್ನು ಕಂಡುಹಿಡಿಯಬಲ್ಲೆನು; ಶ್ರುತಿಯು ಹಾಗೆಯೇ ಹೇಳುತ್ತದೆ. **"ಜ್ಞಾಜ್ಞೌ ದ್ವಾವಜಾ ವೀಶನೀಶೌ"** (ಶ್ವೇ. ೧. ೯.) ಅವರಾದರೋ ಅಶಕ್ತರು, ಆದುದರಿಂದ ತಮ್ಮ ಸಙ್ಕಲ್ಪಾನುಗುಣ ನಡೆಸಲು ಶಕ್ತಿಯಿಲ್ಲದವರು, ಅವರು ಲೋಕಾಧೀಶ್ವರರಾದರೂ ಅವರಿಗೆ ಏನನ್ನೂ ಮಾಡಲು ಶಕ್ತಿಯೂ ಇಲ್ಲವು; ಸ್ವಾತಂತ್ರ್ಯವೂ ಇಲ್ಲವು; ನಾನು ಹಾಗಲ್ಲವು; ನಾನು ಸರ್ವಶಕ್ತನು; ನನ್ನ ಸಙ್ಕಲ್ಪವನ್ನು ನಡೆಸಿಕೊಳ್ಳುವ ಸ್ವಾತಂತ್ರ್ಯ ಶಕ್ತಿಗಳೆರಡೂ ಉಂಟು; ರಾಮಾವತಾರದಲ್ಲಿ ಸಮುದ್ರವನ್ನು ಇನ್ನೂ ದಾಟಲಿಲ್ಲವು, ರಾವಣನನ್ನು ಕೊಲ್ಲಲಿಲ್ಲವು, ಅದಕ್ಕೆ ಪೂರ್ವಭಾವಿಯಾಗಿಯೇ ಲಂಕಾರಾಜ್ಯದಲ್ಲಿ ಶರಣಾಗತನಾದ ವಿಭೀಷಣನನ್ನು ಪಟ್ಟಾಭಿಷಕ್ತನನ್ನಾಗಿ ಮಾಡಿ ಅನಂತರ ರಾವಣಾದಿಗಳನ್ನು ಕೊಂದು ನನ್ನ ಸತ್ಯಸಙ್ಕಲ್ಪತೆಯನ್ನು ಕಾಪಾಡಿಕೊಂಡೆನು. ಅವರುಗಳಿಗೆ ಜಗದ್ವ್ಯಾಪಾರದಲ್ಲಿ ಸ್ವತಂತ್ರಿಸಿ ಏನನ್ನೂ ಮಾಡಲೂ ಶಕ್ತಿಯಿಲ್ಲವು. ನಾನಾದರೋ ಹಾಗಲ್ಲವು. ಜಗತ್ಕಾರಣನಾಗಿ, **ಕಾರಣಾಂತುಧ್ಯೇಯಃ** ಎಂದು ಸರ್ವ ಮುಮುಕ್ಷೂಪಾಸ್ಯತ್ವ ಸರ್ವಾಧಾರತ್ವ, ಸರ್ವವ್ಯಾಪಿತ್ವ

ಮೋಕ್ಷಪ್ರದತ್ವಾದಿ ಮಹಿಮೆಗಳೆಲ್ಲಾ ಉಂಟು. ಅವು ಯಾವುವೂ ಅವರಿಗಿಲ್ಲವು. ಇಷ್ಟೇ ಅಲ್ಲದೆ ರಾಜಸ ತಾಮಸಗಳಿರುವದರಿಂದ ಕಾರುಣ್ಯದ ಮಹಿಮೆಯು ಅಲ್ಪವು. ನಾನಾದರೋ ಅಪ್ರಾಕೃತ ಕಲ್ಯಾಣಗುಣಗಣ ಮಹೋದಧಿಯಾಗಿ ಪರಮ ಕಾರುಣ್ಯವೇ ಪ್ರಧಾನಗುಣವಾಗಿರುವನು; ಆದುದರಿಂದ ಆಶ್ರಿತವಾತ್ಸಲ್ಯ, ಸೌಲಭ್ಯ ಸೌಶೀಲ್ಯಾದಿ ಗುಣಗಳ ಪ್ರಭಾವವು ನನ್ನಲ್ಲಿ ಅಪಾರವಾದುದು. ಅವರಿಗಾದರೋ ರಾಜಸ ತಾಮಸಾದಿ ಗುಣಗಳ ಪ್ರಾಚುರ್ಯವಿರುವದರಿಂದ ಸದ್ಯೈಕರೂಪತ್ವವು ಇಲ್ಲವು; ನಾನು ಹಾಗಲ್ಲವು. ಪರಮ ಭಕ್ತನಾಗಿ ನನ್ನನ್ನು ಹೊಂದಿದ ಬಳಿಕ ಅವನ ವಿಷಯದಲ್ಲಿ ಸದಾ ಪರಮಪ್ರೀತಿಯಿಂದಲೇ ಇರುವವನು; ಇಂತಹ **ಮಾಂ** ಎಂದು ಹೇಳುವುದಕ್ಕಾಗಿ ಸರ್ವಜ್ಞಾದಿ ವಿಶೇಷಣಗಳನ್ನು ಕೊಟ್ಟಿರುತ್ತಾರೆ. ಇಂತಹ **ಮಾಂ** ನನ್ನನ್ನು ಪ್ರಾಪ್ಯವನ್ನಾಗಿ ಹೊಂದಿದವರಿಗೆ ಪುನರ್ಜನ್ಮ ಎಂದಿಗೂ ಇಲ್ಲವು. ಆ ವಿಷಯದಲ್ಲಿ ಯಾವವಿಧವಾದ ಶಙ್ಕೆಯೂ ಬೇಕಿಲ್ಲವು. ಇಂತಹ ಯಾವ ಗುಣಗಳೂ ಇಲ್ಲದ ಆಬ್ರಹ್ಮಭುವನಾಧಿಕಾರಿಗಳಲ್ಲಿಗೆ ಹೋದರೆ ಪುನರ್ಜನ್ಮವು ತಪ್ಪಿದ್ದಲ್ಲವು ಎಂಬ ಭಾವವು. **ಆಬ್ರಹ್ಮಭುವನಾತ್** ಎಲ್ಲಾ ಲೋಕಗಳೂ ಪುನರಾವರ್ತಿಯುಳ್ಳವು ಎಂದರೆ, ಇಲ್ಲಿ ವಿಕಲ್ಪಿಸಿ ಪ್ರಶ್ನಿಸಬಹುದು, ಹೇಗೆಂದರೆ— (೧) ಚತುರ್ಮುಖನಿಗೆ ಆವೃತ್ತಿಯುಂಟೇ? (೨) ಇಲ್ಲವೇ **ಲೋಕಾಃ** ಎಂದಿರುವದರಿಂದ ಆ ಲೋಕಗಳನ್ನು ಹೋಗಿ ಸೇರಿದವರಿಗೆ ಆವೃತ್ತಿಯೇ? (೩) ಇಲ್ಲವೇ ಲೋಕಕ್ಕೇ ಆವೃತ್ತಿಯೇ? ಎಂಬುದಾಗಿ. ಮೊದಲನೆಯ ಪ್ರಶ್ನೆಯೇ ಕೂಡುವದಿಲ್ಲವು; ಕಲ್ಪಾಂತದಲ್ಲಿ ಆತನಿಗೆ ಮೋಕ್ಷವೆಂಬುವದು ಪ್ರಮಾಣಗಳಿಂದ ಸಿದ್ಧವು. ಎಲ್ಲಾ ಸೃಷ್ಟಿಗೂ ಮುಖ್ಯಾಧಿಕಾರಿಯಾಗಿ ನಿಯಮಿಸಲ್ಪಟ್ಟು, ತೈತ್ತರೀಯವು ಪರಬ್ರಹ್ಮಾನಂದಕ್ಕೆ ಎರಡನೆಯ ಆನಂದವೇ **ಪ್ರಜಾಪತೇರಾನಂದಃ** ಎಂದು ಹೇಳಿರುವಾಗ ಆತನಿಗೆ ಪುನರಾವೃತ್ತಿ ಇಲ್ಲದ ಪರಮಾತ್ಮ ಸಾಯುಜ್ಯವಿಲ್ಲವೇ? ಆದುದರಿಂದ (೨) ಅಲ್ಲಿಗೆ ಹೋಗಿ ಸೇರುವ ಅಧಿಕಾರಿಗಳಿಗೂ (೩) ಆ ಲೋಕಕ್ಕೂ ಪುನರಾವೃತ್ತಿಯುಂಟೆಂದೇ ಹೇಳತಕ್ಕದ್ದಾಗಿರುತ್ತದೆ. ಇವರುಗಳು ಅಲ್ಲಿಗೆ ಹೋಗಿ ಸೇರಿದನಂತರ ಅಲ್ಲಿ ಉಪಾಯಾನುಷ್ಠಾನಮಾಡಿ ಅರ್ಚಿರಾದಿ ಗತಿಯ ಮೂಲಕ ದಿವ್ಯ ವೈಕುಂಠವನ್ನು ಸೇರಿ ಪರಮಾತ್ಮನ ಸಾಯುಜ್ಯವನ್ನು ಹೊಂದಬಹುದು. ಹಾಗೆ ಅಲ್ಲಿಯೂ ಮೋಕ್ಷಪ್ರಾಪ್ತಿಗಾಗಿ ಉಪಾಯಾನುಷ್ಠಾನವನ್ನು ಮಾಡದೇ ಇದ್ದರೆ, **ಕ್ಷೀಣೇಪುಣ್ಯೇಮರ್ತ್ಯಲೋಕಂ ವಿಶನ್ತಿ** ಎಂದು ಹೇಳಿರುವಹಾಗೆ ಪುನರಾವೃತ್ತಿಯುಂಟು. ಮುಂದೆ ಪ್ರಳಯಕ್ಕೂ ಸಿಕ್ಕುವರು. ಕೆಲವರು ಈ ಶ್ಲೋಕಕ್ಕೆ ವಿರುದ್ಧವಾಗಿ ಚತುರ್ಮುಖಬ್ರಹ್ಮಲೋಕವನ್ನು ಸೇರುವವರಿಗೆ ಆವೃತ್ತಿಯಿಲ್ಲವೆಂದೂ, ಅಂತವರಿಗೆ ಚತುರ್ಮುಖನೊಂದಿಗೆ ಮುಕ್ತಿಯೆಂದೂ ಅಭಿಪ್ರಾಯ ಪಡುವರು. ಮುಕ್ತಿಯುಂಟಾಗಬೇಕಾದರೆ, ಕರ್ಮವೆಲ್ಲಾ ತೊಲಗಿ ಪುಣ್ಯಪಾಪ ಶೇಷವೇ ಇರಕೂಡದು. ಹಾಗೇ ನಿಶ್ಶೇಷವಾಗಿ ಪಾಪಗಳೆಲ್ಲಾ ತೊಲೆದನಂತರವೂ ಕಲ್ಪಾಂತದವರೆಗೂ ಮೋಕ್ಷಕ್ಕೆ ಏತಕ್ಕೆ ಕಾದಿರುವುದು? ಹಾಗಾದರೆ ಅನೇಕ ಇತಿಹಾಸ ಪುರಾಣಗಳಲ್ಲಿ ಅನೇಕ ಭಕ್ತರು ಮುಕ್ತಿಯನ್ನು ಹೊಂದಿದ್ದಾರೆಂದು ಹೇಳಿರುವದು ಸರಿಯಲ್ಲವೆಂದು ಹೇಳಬೇಕಾಗುತ್ತದೆ. **"ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್। ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್"** ಎಂದು ಪಾದ್ಮಪುರಾಣ ವಾಕ್ಯವಿರುತ್ತದೆ. ಆದರೆ ಮುಕ್ತರಾಗುವವರಿಗೆ ಚತುರ್ಮುಖ ಬ್ರಹ್ಮಲೋಕ ಪ್ರಾಪ್ತಿ ಎಂಬ ವಾದಕ್ಕೆ ಪರಬ್ರಹ್ಮನನ್ನು ಹೊಂದುತ್ತಾರೆಂದು ಹೇಳಿರುವ ಶ್ರುತಿವಾಕ್ಯಗಳಲ್ಲಿ ಚತುರ್ಮುಖನನ್ನು ಹೊಂದುತ್ತಾರೆಂದು ಅರ್ಥಮಾಡಿರುವದೇ ಕಾರಣವು. ಹೀಗೆ ಅರ್ಥಮಾಡಲು ಮೂಲಕಾರಣವು ಶ್ರೀ ಬಾದರಿ ಋಷಿಯ ಅಭಿಪ್ರಾಯವು. ಇವರ ಅಭಿಪ್ರಾಯವು **"ಕಾರ್ಯಂ ಬಾದರಿಃ"** ಎಂಬ ಪೂರ್ವಪಕ್ಷ ಸೂತ್ರದಲ್ಲಿ ಉಪಪಾದಿತವು.

**ಭಾ. ಅವ. ಬ್ರಹ್ಮಲೋಕ ಪರ್ಯನ್ತಾನಾಂ ಲೋಕಾನಾಂ ತದಂತರ್ವರ್ತಿನಾಂ ಚ ಪರಮ ಪುರುಷ ಸಙ್ಕಲ್ಪಕೃತಾ ಮುತ್ಪತ್ತಿ ವಿನಾಶಕಾಲ ವ್ಯವಸ್ಥಾಮಾಹ—**

(ಶಾ. ೪. ೫. ೬) **"ಪ್ರಜಾಪತೇ ಸ್ಸಭಾಂವೇಶ್ಮಪ್ರಪದ್ಯೇ"** ಎಂದೂ, **"ತತ್ಪುರು ಷೋzಮಾನವಸ್ಸ ಏನಾನ್ ಬ್ರಹ್ಮ ಗಮಯತಿ"** ಎಂದೂ, ಇರುವದರಿಂದ ಇಲ್ಲೆಲ್ಲಾ ಪ್ರಜಾಪತಿ, ಬ್ರಹ್ಮ, ಇತ್ಯಾದಿ ಶಬ್ದಗಳಿಗೆ ; ಪರಬ್ರಹ್ಮವೆಂದು ಅರ್ಥಮಾಡದೆ ಚತುರ್ಮುಖನೆಂದೇ ಅರ್ಥಮಾಡಿರುತ್ತಾರೆ. ಈ ಬಾದರಿಯವರ ಅಭಿಪ್ರಾಯವನ್ನು ಶ್ರೀ ವ್ಯಾಸರ ಶಿಷ್ಯರಾದ ಜೈಮಿನ್ಯಾ ಚಾರ್ಯರೂ ಶ್ರೀ ವೇದವ್ಯಾಸರೂ, ಇಬ್ಬರೂ **"ಪರಂ ಜೈಮನಿರ್ಮುಖ್ಯತ್ವಾತ್** (೪. ೩. ೧೧) **"ಅಪ್ರತೀಕಾ ಲಂಬನಾರ್ನ ನಯತೀತಿ ಬಾದರಾಯಣಃ"** (೪. ೩. ೧೪) ಎಂಬ ಸೂತ್ರ ದಲ್ಲೂ ಖಂಡಿಸಿರುತ್ತಾರೆ. ಈ ಬಾದರಿ ಮತಾನುಸಾರವಾಗಿ ಇತರರೂ ಸಹ ವ್ಯಾಖ್ಯಾನ ಮಾಡಿರುತ್ತಾರೆ. ಹಾಗೆಯೇ ಛಾಂದೋಗ್ಯದ ಕೊನೆಯ ಶ್ರುತಿವಾಕ್ಯವಾದ **"ಸಖಲ್ವೇವಂ ವರ್ತಯ ನ್ಯಾವದಾಯುಷಂ ಬ್ರಹ್ಮಲೋಕ ಮಭಿಸಂಪದ್ಯತೇ"** ಎಂಬಲ್ಲಿ ಬ್ರಹ್ಮಲೋಕಂ ಎಂಬುದಕ್ಕೆ ಬ್ರಹ್ಮಶಬ್ದಕ್ಕೆ ಮುಖ್ಯ ವೃತ್ತಿಯು ಪರಬ್ರಹ್ಮನಲ್ಲೇಯಾದುದರಿಂದ ಮುಖ್ಯಾ ರ್ಥವನ್ನೇ ಹೇಳಬೇಕೆಂಬ ಶಾಸ್ತ್ರನಿಯಮ ಉಂಟು. ಮುಖ್ಯಾರ್ಥ ಹೇಳಲು ಸಾಧ್ಯವಿಲ್ಲದಿದ್ದರೆ ಗೌಣಾರ್ಥ ಹೇಳತಕ್ಕದ್ದಾಗಿರುತ್ತದೆ. ಇಲ್ಲಿ ಮುಖ್ಯಾರ್ಥ ಹೇಳುವದಕ್ಕೇನೂ ತೊಂದರೆಯಿಲ್ಲವು. ಆಗಲಿ ಬಾದರಿ ಮತಾನುಸಾರಿಗಳ ಹಾಗೆ ಈ ಛಾಂದೋಗ್ಯ ಕೊನೆಯ ವಾಕ್ಯಕ್ಕೆ ಬ್ರಹ್ಮಲೋಕ ವೆಂದರೆ ಚತುರ್ಮುಖಲೋಕವಾದರೆ, ಮುಮುಕ್ಷುವಿನ ಉಪಾಸನ ಗತಿ ಮೊದಲಾದವುಗಳನ್ನು ಸವಿಸ್ತಾರವಾಗಿ ಹೇಳಿದ ಉಪನಿಷತ್ತು ಮುಂದಕ್ಕೆ ಕಲ್ಪಾಂತದಲ್ಲಿ ಪರಬ್ರಹ್ಮವನ್ನು ಈತನು ಹೊಂದುತ್ತಾನೆಂದು ಏಕೆ ಹೇಳಲಿಲ್ಲವು ? **ಬ್ರಹ್ಮಲೋಕ ಮಭೀಸಂಪದ್ಯತೇ** ಎಂದು ನಿಗಮನ ಮಾಡಿ ಹೇಳಿರುವದರಿಂದ ಪರಬ್ರಹ್ಮಲೋಕವೆಂಬುದು ಸ್ಥಾಪಿತವು. ಈ ಶ್ಲೋಕವಾದ **"ಆ ಬ್ರಹ್ಮ ಭುವನ್ನಾಲ್ಲೋಕಾಃ"** ಎಂಬುದು ಮುಕ್ತಿಗೆ ಪ್ರಳಯದವರೆಗೂ ಕಾದಿರಬೇಕೆಂಬ ಅಭಿಪ್ರಾಯಕ್ಕೆ ಪ್ರತ್ಯುತ ವಿರುದ್ಧವು. ಅಥವಾ ಬ್ರಹ್ಮಲೋಕವೆಂದರೆ ಪರಬ್ರಹ್ಮವೇ ಪ್ರಾಪ್ಯವೆಂದು ಅರ್ಥವು.

ಇನ್ನೊಂದು ಅವಗಾಹನೆಗೆ ತರತಕ್ಕ ವಿಷಯ ಉಂಟು ; ಅಲ್ಲಿಗೆ ಹೋದವರೆಲ್ಲರೂ ಪುನ ರಾವರ್ತಿವುಳ್ಳವರೇ ? ಕೆಲವರು ಪುನರಾವರ್ತಿ ಇಲ್ಲದವರೂ ಉಂಟೇ ? ಎಂದರೆ, ಈ ಶ್ಲೋಕದಲ್ಲಿ ಪುನರಾವೃತ್ತಿಯುಳ್ಳವರೆಂದು ಹೇಳಿರುವದರ ಅಭಿಪ್ರಾಯವು ಅಲ್ಲಿ ಏನೂ ಉಪಾಯಾನುಷ್ಠಾನ ವನ್ನು ಮಾಡದೇ ಇರುವವರನ್ನು ಕುರಿತು ಹೇಳಿದುದು. **"ತದು ಪರ್ಯಪಿ ಬಾದಾರಾಯಣ ಸ್ಸಂಭವಾತ್"** (ತಾ. ೧. ೩. ೨೫) ಎಂಬ ಸೂತ್ರದಲ್ಲಿ ದೇವತೆಗಳಿಗೂ ಉಪಾಸನದಲ್ಲಿ ಅಧಿಕಾರ ಉಂಟೆಂದು ಸಿದ್ಧಾನ್ತಿಸಿರುವ ರೀತಿಯಲ್ಲಿ ಪರಮಾತ್ಮೋಪಾಸನವನ್ನು ಮಾಡಿದುದಾದರೆ ಪುನಸ್ಸಂಸಾರವಿಲ್ಲದೆ ಪರಬ್ರಹ್ಮಸಾಯುಜ್ಯವು ಉಂಟೇ ಉಂಟು.

**ಭಾಷ್ಯಾವತಾರಿಕೆಯ ಅರ್ಥವು :—ಆ ಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿನಃ** ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುವದರಿಂದ ಪ್ರಾಸಙ್ಗೀಕವಾಗಿ ಅವು ಹೇಗೆ ಪುನರಾವೃತ್ತಿ ಯುಳ್ಳವೆಂಬುದರ ಉಪಪಾದನೆಯು ಆವಶ್ಯಕವಾದುದರಿಂದ ಅವು ಪರಿಮಿತಕಾಲವರ್ತಿಗಳೆಂಬು ದನ್ನು ತಿಳಿಸುತ್ತಾರೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. **ಬ್ರಹ್ಮಲೋಕ ಪರ್ಯ ನ್ತಾನಾಂ** - ಚತುರ್ಮುಖನ ಸತ್ಯಲೋಕವೂ ಸೇರಿ ಅಲ್ಲಿವರೆಗೂ ಇದುವ, **ಲೋಕಾನಾಂ** - ಲೋಕಗಳಿಗೂ ಮತ್ತು **ತದನ್ತರ್ವರ್ತಿನಾಂಚ** - ಆ ಲೋಕಗಳಲ್ಲಿರುವವರಿಗೂ ಸಹ **ಪರಮ ಪುರುಷಸಂಕಲ್ಪ** ದಿಂದುಂಟು ಮಾಡಲ್ಪಟ್ಟ, ಉತ್ಪತ್ತಿ ವಿನಾಶ **ಕಾಲಗಳ ವ್ಯವಸ್ಥೆಯನ್ನು** ಮುಂದಿನ ಮೂರು ಶ್ಲೋಕಗಳಿಂದ ಹೇಳುತ್ತಾರೆ.—ಆ ಮೂರು ಶ್ಲೋಕಗಳ ಮುಖ್ಯತಾತ್ಪರ್ಯ

**ಮೂ.** **ಸಹಸ್ರಯುಗಪರ್ಯನ್ತ ಮಹ ರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇ ಹೋರಾತ್ರವಿದೋಜನಾಃ ॥** ೧೭.
**ಅವ್ಯಕ್ತಾದ್ವ್ಯಕ್ತ್ಯಯ ಸ್ಸರ್ವಾಃ ಪ್ರಭವನ್ತ್ಯಹ ರಾಗಮೇ ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾ ವ್ಯಕ್ತಸಂಜ್ಞಕೇ ॥** ೧೮.
**ಭೂತಗ್ರಾಮ ಸ್ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯ ಹರಾಗಮೇ ॥** ೧೯.

ವನ್ನು ಈ ಅವತಾರಿಕೆಯ ಮೂಲಕ ಸೂಚಿಸಿದರು. ಈ ಲೀಲಾ ವಿಭೂತಿಯ ಲೋಕಗಳೆಲ್ಲಾ ಪರಮಪುರುಷನ ಸಙ್ಕಲ್ಪದಿಂದಲೇ ಉತ್ಪತ್ತಿ ವಿನಾಶರೂಪಕಾಲ ಕ್ಲಿಪ್ತಿಯುಳ್ಳವು, ಮತ್ತು ಅಸ್ಥಿರವು; ಇವುಗಳ ಉತ್ಪತ್ತಿ ಲಯಗಳು ಪುನಃ ಪುನಃ ಪರಮಪುರುಷ ಸಙ್ಕಲ್ಪಾನುಸಾರ ನಡೆಯುತ್ತವೆ ಎಂದು **"ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂ ಚ ಕೇಶವಃ । ಆತ್ಮಯೋಗೇನ ಭಗವಾನ್ ಪರಿವರ್ತಯತೇಽನಿಶಂ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. (ಭಾರತ ಉದ್ಯೋಗ,೬೭. ೧೨)

**ಮೂಲಕ್ಕೆ ಅರ್ಥವು :—** ಚತುರ್ಮುಖ ಲೋಕವೂ ಸೇರಿ ಎಲ್ಲಾ ಲೋಕಗಳೂ ಎಂದರೆ ಪ್ರಕೃತಿಮಂಡಲಕ್ಕೆ ಸೇರಿದ ಲೀಲಾ ವಿಭೂತಿಯೆಲ್ಲಾ ಅಸ್ಥಿರವೆಂದು ಉಪಪಾದಿಸುತ್ತಾರೆ—ಈ ಅಂಡದ ಚತುರ್ಮುಖ ಲೋಕವನ್ನು ಕುರಿತು ಹೇಳಿದುದು ಬ್ರಹ್ಮಾಂಡದ ಸರ್ವಲೋಕಗಳಿಗೂ ಉಪಲಕ್ಷಣವಾಗಿ ಇಟ್ಟುಕೊಳ್ಳತಕ್ಕದ್ದೆಂಬ ಅಭಿಪ್ರಾಯದಿಂದ ಹೇಳುತ್ತಾರೆ. ಈ ಶ್ಲೋಕಗಳಿಗೂ ಹಿಂದಿನ ಶ್ಲೋಕಕ್ಕೂ ಸಙ್ಗತಿ ಹೇಗೆಂದರೆ:—ಹಿಂದಿನ ಶ್ಲೋಕದಲ್ಲಿ ಆಬ್ರಹ್ಮಭುವನಗಳೆಲ್ಲಾ ಅಸ್ಥಿರವಾದುದರಿಂದ ಐಶ್ವರ್ಯಾರ್ಥಿಯಾಗಿ ನೀನು ಅಂತಹ ಲೋಕಗಳನ್ನು ಸೇರುವದು ಯುಕ್ತವಲ್ಲವು. ಮೋಕ್ಷಾರ್ಥಿಯಾಗಿ ಶಾಶ್ವತವಾದ ನನ್ನಲೋಕವಾದ ದಿವ್ಯ ವೈಕುಂಠವನ್ನು ಸೇರುವ ಉಪಾಯಾನುಷ್ಠಾನವನ್ನು ಮಾಡತಕ್ಕದ್ದು. ಆದುದರಿಂದ ಜ್ಞಾನಿಯಾಗಿ ಭಕ್ತಿಯೋಗವನ್ನು ಅನುಷ್ಠಿಸತಕ್ಕದ್ದು ಯುಕ್ತವು ಎಂದು ಹೇಳುವದಕ್ಕಾಗಿ ಆಬ್ರಹ್ಮಭುವನಗಳೆಲ್ಲಾ ಅಸ್ಥಿರವೆಂದು ಹೇಳಿದರು. ಅವು ಹೇಗೆ ಅಸ್ಥಿರವೆಂಬುದಕ್ಕೆ ಈ ಲೋಕಗಳಿಗೆಲ್ಲಾ ಮೇಲಾದ ಸತ್ಯಲೋಕವೂ ಅದಕ್ಕೆ ಅಧಿಪತಿಯಾದ ಚತುರ್ಮುಖನೂ ಪ್ರಳಯಕ್ಕೆ ಒಳಪಟ್ಟರೆಂದು ಹೇಳುವ ಉದ್ದಿಶ್ಯವಾಗಿ ಹೊರಟ ಶ್ಲೋಕಗಳಾಗಿವೆ. ಪ್ರಳಯಗಳಲ್ಲಿ ಎರಡು ಮುಖ್ಯವಾದುವು, ದೈನಂದಿನ ಪ್ರಳಯವಾಗಿ ಚತುರ್ಮುಖನ ಒಂದು ದಿನದಲ್ಲಿ ಉಂಟಾಗತಕ್ಕದ್ದು, ಇದಕ್ಕೆ ನೈಮಿತ್ತಿಕ ಪ್ರಳಯವೆಂದು ಹೆಸರು. ಇನ್ನೊಂದು ದ್ವಿಪರಾರ್ಧಪ್ರಾಕೃತ ಪ್ರಳಯವು. ಈ ಪ್ರಳಯದಲ್ಲಿ ಸತ್ಯಲೋಕಕ್ಕೂ ಕೂಡ ನಾಶವು. ಅದುವರೆಗೂ ಇದ್ದ ಚತುರ್ಮುಖನಿಗೆ ಮೋಕ್ಷವು. ಪುನಃ ಸೃಷ್ಟಿಯಲ್ಲಿ ಸತ್ಯಲೋಕವು ಏರ್ಪಟ್ಟು ಬೇರೆ ಚತುರ್ಮುಖನು ಆಧಿಪತ್ಯವನ್ನು ಹೊಂದುವನು. ಆದುದರಿಂದ ಈ ಶ್ಲೋಕಗಳಿಂದ ಮೊದಲು ನೈಮಿತ್ತಿಕ ಪ್ರಳಯವನ್ನು ಹೇಳಿ, ಅನಂತರ ಪ್ರಾಕೃತಿಕ ಪ್ರಳಯವನ್ನು ಉಪದೇಶಿಸುತ್ತಾರೆ. ಈ ಪ್ರಾಕೃತಿಕ ಪ್ರಳಯವನ್ನು ಹೇಳುವದು ಆವಶ್ಯಕವು. ಏಕೆಂದರೆ ಆಗತಾನೇ ಚತುರ್ಮುಖಲೋಕಕ್ಕೆ ಪ್ರಳಯವು. ಹಾಗೆ ಚತುರ್ಮುಖನ ಲೋಕಕ್ಕೂ ಅವರೊಂದಿಗೆ ರುದ್ರೇಂದ್ರಾದಿ ಸಮಸ್ತಲೋಕಗಳಿಗೂ ಪ್ರಳಯ ಉಂಟಾಗುತ್ತದೆಂದೇ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇಲ್ಲಿ ಪ್ರಳಯ ಶಬ್ದಕ್ಕೆ ಅರ್ಥವೇನೆಂಬುದನ್ನು ಚನ್ನಾಗಿ ತಿಳಿಯತಕ್ಕದ್ದಾಗಿರುತ್ತದೆ. ಪ್ರಳಯವೆಂದರೆ ಲೋಕಗಳೇ ಶೂನ್ಯವಾಗುವುವು ಎಂಬರ್ಥವಲ್ಲವು. ಹಾಗೇಯೇ ಸೃಷ್ಟಿ ಎಂದರೆ ಇಲ್ಲದೇ ಇರುವುದು ಉತ್ಪನ್ನವಾಯಿತು ಎಂಬರ್ಥವಲ್ಲವು. ಲೋಕಗಳಲ್ಲಿ ಪರಮ ಪುರುಷನೊಂದಿಗೆ ಸೇರಿ ಇರುವುವು ಪ್ರಕೃತಿ, ಪುರುಷವೆಂದು ಎರಡು ತತ್ವಗಳು. ಎರಡಕ್ಕೂ ಅನಂತ್ಯ ಉಂಟು. ಇವೆರಡೂ ಅನಾದಿಸಿದ್ಧವಾದವು

ಗಳೆಂದು **"ಪ್ರಕೃತಿಂ ಪುರುಷಷಂ ಚೈವ ವಿದ್ಧ್ಯನಾದೀ ಉಭಾವಪಿ"** (ಗೀ. ೧೩. ೧೯) ಎಂಬಲ್ಲಿ ಮುಂದೆ ವಿಶದವಾಗಿ ಹೇಳಲ್ಪಡುತ್ತದೆ. ಆದುದರಿಂದ ಸೃಷ್ಟಿ ಎಂದರೆ ನಾಮಾರೂಪಾನರ್ಹವಾದ ಸೂಕ್ಷ್ಮಾವಸ್ಥೆಯಲ್ಲಿ ಇದ್ದುದು ನಾಮರೂಪಾರ್ಹವಾದ ಸ್ಥೂಲಾವಸ್ಥೆಯನ್ನು ಹೊಂದೋಣವು. ಹಾಗೇಯೇ ಪ್ರಳಯವೆಂದರೆ ಸ್ಥೂಲಾವಸ್ಥೆಯಲ್ಲಿ ಇದ್ದುದು ಸೂಕ್ಷ್ಮಾವಸ್ಥೆಯನ್ನು ಹೊಂದೋಣವು. ಹೀಗೆಲ್ಲಾ ನಡೆಯುವದು ಶ್ರಿಯಃಪತಿಯ ಸಙ್ಕಲ್ಪಾನುಸಾರವಾಗಿಯಾದುದರಿಂದ ಆತನೊಬ್ಬನೇ ಸ್ವತಂತ್ರನೇ ವಿನಾ, ಚತುರ್ಮುಖ ರುದ್ರೇಂದ್ರಾದಿ ಸಮಸ್ತರೂ ಅಸ್ವತಂತ್ರರೆಂದು ತಿಳಿಯತಕ್ಕದ್ದು. ಇವರುಗಳೆಲ್ಲಾ ಪರಮಾತ್ಮನ ಆಜ್ಞಾನುವರ್ತಿಗಳು. ಆದುದರಿಂದ ಇಂತಹ ಅಸ್ವತಂತ್ರರಾಗಿ ಅಸ್ಥಿರಲೋಕದಲ್ಲಿರುವವರಲ್ಲಿಗೆ ಹೋಗಿ ಪ್ರಯೋಜನವೇನು ? ಇದರಿಂದ ಐಶ್ವರ್ಯಾರ್ಥಿಗೆ ಪುನರಾವೃತ್ತಿ ಎಂಬುವದು ತಪ್ಪಿದ್ದಲ್ಲವು. ಆದುದರಿಂದ ದಿವ್ಯ ವೈಕುಂಠಲೋಕವನ್ನು ಸೇರುವದೇ ಉತ್ತಮವೆಂಬ ಭಾವದಿಂದ ಹೇಳುತ್ತಾರೆ. ಈ ಶ್ಲೋಕದಲ್ಲಿ **ತೇ** ಎಂಬ ಪದವು **ಯೇ** ಎಂಬ ಪದವನ್ನು ಅಪೇಕ್ಷಿಸುತ್ತದೆ. **ಯೇಜನಾಃ** - ಯಾವ ಪ್ರಾಜ್ಞರಾದ ಜನರು, **ಅಹೋರಾತ್ರಾವಿದಃ** - ಸನ್ನಿಂದ ನಿರ್ಮಿಸಲ್ಪಟ್ಟ ಅಹಸ್ಸು ರಾತ್ರಿಗಳ ಪರಿಮಿತಿಯನ್ನು ತಿಳಿದಿರುತ್ತಾರೋ, **ತೇ** - ಅಂತಹ ಪ್ರಾಜ್ಞರು, **ಬ್ರಹ್ಮಣಃ** - ಚತುರ್ಮುಖನ, **ಅಹಃ** - ಒಂದು ಹಗಲನ್ನು, **ಸಹಸ್ರಯುಗ ಪರ್ಯಂತಂ** - ಒಂದು ಸಾವಿರ ಸಲ ನಾಲ್ಕು ಯುಗಗಳೂ ಪುನಃ ಪುನಃ ಮರಳಿ ಬರುವತನಕವೆಂದೂ, ಇಲ್ಲಿ ಯುಗ ಶಬ್ದವು ಜಾತ್ಯೇಕವಚನವಾಗಿ ನಾಲ್ಕು ಯುಗವನ್ನು ಬೋಧಿಸುತ್ತದೆ, **ವಿದುಃ** - ತಿಳಿದಿರುತ್ತಾರೆ. ಹಾಗೆಯೇ **ರಾತ್ರಿಂ** - ಚತುರ್ಮುಖನಿಗೆ ಒಂದು ರಾತ್ರಿಯು, **ಯುಗ ಸಹಸ್ರಾಂತಾಂ ವಿದುಃ** - ನಾಲ್ಕು ಯುಗಗಳೂ ಸಾವಿರಸಲ ಮರಳಿ ಬರುವತನಕವೆಂದೂ, ತಿಳಿದಿರುತ್ತಾರೆ (ಚತುರ್ಮುಖನಿಗೆ ಇಂತಹ ದಿನಗಳುಳ್ಳ ನೂರು ವರ್ಷವೆಂದು ಭಾವಿಸತಕ್ಕದ್ದು, ಇದು ಬೇರೇ ಮುಂದೆ ಹೇಳುವ ಪ್ರಮಾಣಗಳಿಂದ ಸಿದ್ಧವು.) ವಿಷ್ಣು ಪುರಾಣದಲ್ಲಿ **"ಚತುರ್ಯುಗ ಸಹಸ್ರಂತು ಕಥ್ಯತೇ ಬಹ್ಮಣೋಃ ದಿನಂ"** (೬. ೩. ೧೧) ಎಂಬ ಪರಾಶರೋಕ್ತಿಇರುವದರಿಂದಲೂ, ಇಲ್ಲಿ **ಸಹಸ್ರಯುಗ** ಎಂಬ ಅವರ ಪುತ್ರರ ಉಕ್ತಿಯೂ ಇರುವದರಿಂದಲೂ, ಪರಸ್ಪರ ವಿರೋಧವಿಲ್ಲದೆ ಅನ್ವಯಿಸುವದು ಯುಕ್ತವಾದುದರಿಂದಲೂ, ಇಲ್ಲಿ ಯುಗವೆಂದು ಸಾಮಾನ್ಯೋಕ್ತಿ ಇದ್ದರೂ **ಚತುರ್ಯುಗ** ವೆಂದೇ ಅರ್ಥ ಮಾಡುವದು ನ್ಯಾಯವು. ॥ ೧೭ ॥

**ಅಹರಾಗಮೇ** - ಚತುರ್ಮುಖ ಬ್ರಹ್ಮನಿಗೆ ಹಗಲು ಪ್ರಾಪ್ತವಾದಾಗ, **ಅವ್ಯಕ್ತಾತ್** - ಚತುರ್ಮುಖನ ಶರೀರದಲ್ಲಿರುವ ಅವ್ಯಕ್ತದ ದೆಶೆಯಿಂದ, **ವ್ಯಕ್ತಯಸ್ಸರ್ವಾಃ** - ಸಮಸ್ತ ಕಾರ್ಯರೂಪವಾದ ಸ್ಥೂಲರೂಪಗಳೂ, **ಪ್ರಭವನ್ತಿ** - ಉಂಟಾಗುತ್ತವೆ. **ರಾತ್ರ್ಯಾಗಮೇ** - ಚತುರ್ಮುಖನಿಗೆ ರಾತ್ರಿಯು ಪ್ರಾಪ್ತವಾಗಲು, **ತತ್ರೈವಾ ವ್ಯಕ್ತ ಸಂಜ್ಞಿಕೇ** -ಅವ್ಯಕ್ತವೆಂದು ಹೇಳಿಸಿಕೊಳ್ಳುವ, **ತತ್ರೈವ** - ಆ ಚತುರ್ಮುಖ ಶರೀರದಲ್ಲೇ, **ಪ್ರಲೀಯನ್ತೇ**-ಲಯವನ್ನು ಹೊಂದುತ್ತವೆ. ಇದರಿಂದ ಚತುರ್ಮುಖನಿಗೆ ಹಗಲು ಚತುರ್ಯುಗಕಾಲ ಸಹಸ್ರವೆಂದೂ ರಾತ್ರಿಯೂ ಅಷ್ಟೇಕಾಲ ಪರಿಮಿತಿಯುಳ್ಳದ್ದೆಂದೂ ಹೇಳಲ್ಪಟ್ಟಿತು. ಚತುರ್ಮುಖನ ದಿನದಲ್ಲಿ ಸೃಷ್ಟಿಯೂ ರಾತ್ರಿಯಲ್ಲಿ ಪ್ರಳಯವೂ ಆಗುತ್ತದೆಂದು ಇಲ್ಲಿ ಹೇಳಲ್ಪಟ್ಟಿತು. ಇದಕ್ಕೆ **ದೈನಂದಿನ ಪ್ರಳಯ** ಅಥವಾ **ನೈಮಿತ್ತಿಕ ಪ್ರಳಯ**ವೆಂದೂ ಹೆಸರು. ಚತುರ್ಮುಖನು ಶಯಿನಿಸುದವೇ ನಿಮಿತ್ತವಾಗಿ ಬಂದ ಪ್ರಳಯವಾದುದರಿಂದ ಇದಕ್ಕೆ ನೈಮಿತ್ತಿಕ ಪ್ರಳಯವೆಂದು ಹೆಸರು. **"ಏಷ ನೈಮಿತ್ತಿಕಃ ಪ್ರೋಕ್ತಃ ಪ್ರಲಯೋ ಯತ್ರ ವಿಶ್ವಸೃಕ್। ಶ್ರೇ ತೇ ಽನನ್ತಾಸನೋ ವಿಶ್ವಮಾತ್ಮಸಾತ್ಕೃತ್ಯ ಚಾತ್ಮಭೂಃ"॥** ಎಂದು ಭಾಗವತದಲ್ಲಿರುತ್ತದೆ. (೧೨.೪.೪.) ಈ ದೈನಂದಿನ ಪ್ರಳಯಗಳಲ್ಲಿ **"ತ್ರ**

**ಯೋಲೋಕಾಃ"** ಪ್ರಳಯವನ್ನು ಹೊಂದುತ್ತವೆ. ಚತುರ್ಮುಖನ ಲೋಕಕ್ಕೆ ಪ್ರಳಯವಿಲ್ಲವು. ಈ ಸಂದರ್ಭದಲ್ಲಿ **"ಪದ್ಮಯೋನೇ ರ್ದಿನಂ ಯತ್ತು ಚತುರ್ಯುಗ ಸಹಸ್ರವತ್ । ಏಕಾರ್ಣ ವೀಕೃತೇ ಲೋಕೇ ತಾವತೀ ರಾತ್ರಿ ರಿಷ್ಯತೇ । ತತಃ ಪ್ರಬುದ್ಧೋರಾತ್ರ್ಯಂತೇ ಪುನ ಸ್ಸೃಷ್ಟಿಂ ಕರೋತ್ಯಜಃ । ಬ್ರಹ್ಮಸ್ವರೂಪ ಧೃದ್ವಿಷ್ಣುರ್ಯಥಾ ತೇ ಕಥಿತಂ ಪುರಾ"** ಎಂಬುದು ಅನುಸಂಧೇಯವು. ಈ ಶ್ಲೋಕಗಳಲ್ಲಿ ನೈಮಿತ್ತಿಕ ಪ್ರಳಯ ಸೃಷ್ಟಿಗಳನ್ನು ಚತುರ್ಮುಖನ ಮೂಲಕ ಶ್ರೀಮಹಾವಿಷ್ಣುವು ಮಾಡಿಸುತ್ತಾನೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಪ್ರತಿಯೊಂದು ದೈನಂದಿನ ಅಥವಾ ನೈಮಿತ್ತಿಕ ಸೃಷ್ಟಿಪ್ರಳಯಗಳಿಗೆ ಕಲ್ಪವೆಂದು ಹೆಸರು. ಮುಂದೆ ಪ್ರಾಕೃತ ಪ್ರಳಯ ಕಲ್ಪವಾದ ಮಹಾಕಲ್ಪವೂ ಸಹ ಹೇಳಲ್ಪಡುತ್ತದೆ. **ದ್ವಿಪರಾರ್ಧೇ ತ್ವತಿಕ್ರಾಂತೇ ಬ್ರಹ್ಮಣಃ ಪರಮೇಷ್ಠಿನಃ । ತದಾ ಪ್ರಕೃತಿ ಯಸ್ಸಪ್ತ ಕಲ್ಪನ್ತೇ ಪ್ರಲಯಾಯವೈ ॥** (ಭಾಗ. ೧೨. ೪. ೫.) ಇದರಲ್ಲಿ ಮಹತ್, ಅಹಂಕಾರಗಳೂ, ಭೂತ ಪಂಚಕಗಳೂ ಸೇರಿ ಏಳು ಪ್ರಕೃತಿಗಳಿಗೆ ಪ್ರಳಯವಾದುದರಿಂದ ಇದಕ್ಕೆ ಪ್ರಾಕೃತ ಪ್ರಳಯವೆಂದು ಹೆಸರು. ಇವು ತಮಗೆ ಕಾರಣವಾದ ಅವ್ಯಕ್ತದಲ್ಲಿ ಹೋಗಿ ಸೇರುತ್ತವೆ. ಪರಿಣಾಮ ಹೊಂದಿದ ಇವುಗಳೊಂದಿಗೆ ಪರಿಣಾಮಹೇತುವಿಗೆ ವಶನಾಗದ ಜೀವಾತ್ಮನೂ ಸೇರಿರುತ್ತಾನೆಂದು ಈ ಮುಂದಿನ ಶ್ಲೋಕದಿಂದ ತಿಳಿಸುತ್ತಾರೆ. ಈತನು ಪರಿಣಾಮವನ್ನು ಹೊಂದುವವನಲ್ಲದಿದ್ದರೂ ಪ್ರಳಯಗಳಿಗೆ ವಶನಾಗಿ ಪುನಃ ಸೃಷ್ಟಿಯನ್ನು ಹೊಂದಲೂ ಕಾರಣವೇನೆಂದರೆ ಈತನ ಕರ್ಮಗಳೇ ಕಾರಣವು. ಈ ಕರ್ಮಗಳೆಲ್ಲಾ ಉಪಾಯಾನುಷ್ಠಾನದಿಂದ ಕಳೆದುಹೋದರೆ, ಈ ಪರಿಣಾಮ ಹೊಂದುವ ದೇಹವೇ ಅದರೊಂದಿಗೆ ಇಂದ್ರಿಯಾದಿಗಳೂ ಸಹ ಬಿಟ್ಟು ಹೋಗುತ್ತವೆಯಾದುದರಿಂದ, ಇಂತಹ ವಿನಾಶಕ್ಕೆ ಆತ್ಯಂತಿಕ ಪ್ರಳಯವು ಎಂದು ಹೆಸರು. ಇದೇ ಮೋಕ್ಷಾಖ್ಯವಾದುದು. ಈ ಮೂರು ಶ್ಲೋಕಗಳಲ್ಲಿ ಹೇಳಿರುವದು ಲೋಕಗಳ ಸೃಷ್ಟಿಲಯಗಳು ಮಾತ್ರವೇಯಾದುದರಿದ ನೈಮಿತ್ತಿಕ ಪ್ರಾಕೃತಿಕ ಪ್ರಳಯಗಳು ಮಾತ್ರವೇ ಹೇಳಲ್ಪಟ್ಟವು. ಆದರೆ ಕೆಲವರು ಇಲ್ಲಿ ಒಂದೇಯಾದ ಮಹಾಪ್ರಳಯವು ಹೇಳಲ್ಪಟ್ಟಿತೆಂದು ಅರ್ಥಮಾಡಿರುತ್ತಾರೆ, ಹೀಗೆ ಹೇಳಿದರೆ ಇತರ ಶ್ರುತಿ ಸ್ಮೃತಿಗಳ ಉಪದೇಶಕ್ಕೂ ಈ ಶ್ಲೋಕಾರ್ಥಕ್ಕೂ ಐಕಕಂಠ್ಯವು ಇಲ್ಲವಾಗುತ್ತದೆ. ॥ ೧೮ ॥

**ಭೂತಗ್ರಾಮಃ** – ಹಿಂದಿನ ಶ್ಲೋಕದಲ್ಲಿ ಚತುರ್ಮುಖನ ದಿನದ ಸೃಷ್ಟಿಯಲ್ಲಿ ಕಾರಣವಾದ ಅವ್ಯಕ್ತದಿಂದ ವ್ಯಕ್ತವಾದವುಗಳು ಉತ್ಪನ್ನವಾದುವೆಂದೂ ಪುನಃ ಕಲ್ಪಪ್ರಳಯದಲ್ಲಿ ಕಾರ್ಯವಾದ ವ್ಯಕ್ತವು ಕಾರಣವಾದ ಅವ್ಯಕ್ತವನ್ನು ಸೇರುತ್ತದೆಂದೂ ಹೇಳಲ್ಪಟ್ಟಿತಲ್ಲಾ, ಅದೇ ಭೂತಗ್ರಾಮವೆಂದು ಹೇಳುತ್ತಾರೆ. ಅದು ಬರೀ ಅಚಿತ್ ಮಾತ್ರವೇ ಅಲ್ಲವು, **ಸ ಏವ** – ಅದೇ **ಅಯಂ ಭೂತಗ್ರಾಮಃ**-ಈಗ ನಮಗೆ ತೋರುವ ಸಮಸ್ತ ಪ್ರಾಣಿವರ್ಗವು, ಇಲ್ಲಿ **ಭೂತ** ಶಬ್ದವು **ಅಚಿತ್ತನ್ನೇ** ಶರೀರವಾಗಿ **ಹೊಂದಿರುವ** ಚೇತನನನ್ನು ಬೋಧಿಸುತ್ತದೆ. ಇದು **ಭೂತ್ವಾ ಭೂತ್ವಾ** ಇದು ಪ್ರತಿ ದೈನಂದಿನ ಕಲ್ಪದ ಹಗಲಿನ ಸೃಷ್ಟಿಯಲ್ಲಿ ಉತ್ಪತ್ತಿಯನ್ನು ಪುನಃಪುನಃ ಹೊಂದಿ, ಎಂದರೆ ಸ್ಥೂಲರೂಪವನ್ನು ಹೊಂದಿ, **ರಾತ್ರ್ಯಾಗಮೇ** – ಪ್ರತಿಕಲ್ಪದ ರಾತ್ರಿಯುಂಟಾಗಿ, ಹಾಗೇಯೇ ಚತುರ್ಮುಖನ ಕೊನೆಯ ರಾತ್ರಿಯು ಪ್ರಾಪ್ತವಾಗಿ ಮಹಾಪ್ರಾಕೃತಿಕ ಪ್ರಳಯವು ಉಂಟಾದಾಗ, **ಪ್ರಲೀಯತೇ** – ಲಯವನ್ನು ಹೊಂದುತ್ತದೆ, ಎಂದರೆ ಸೂಕ್ಷ್ಮರೂಪವನ್ನು ಹೊಂದುತ್ತದೆ. ಈ ಪ್ರಾಕೃತಿಕ ಪ್ರಳಯದಲ್ಲಿ, ಪಂಚಭೂತಗಳೂ ಅಹಂಕಾರ ಮಹತ್ತುಗಳೂ ಲಯವನ್ನು ಹೊಂದಿ ಅವ್ಯಕ್ತವೆಂದೆನಿಸುತ್ತವೆ ; ಅವ್ಯಕ್ತವು ಅಕ್ಷರದಲ್ಲೂ. ಅಕ್ಷರವು ತಮಸಿನಲ್ಲೂ ತಮಸ್ಸು ಪರಬ್ರಹ್ಮನಲ್ಲೂ ಸೂಕ್ಷ್ಮರೂಪದಲ್ಲಿ ಏಕೀಭವಿಸುತ್ತದೆಂದು ಶ್ರುತಿಗಳು ಹೇಳುತ್ತವೆ. ಅನಂತರ ಈ ಭೂತಗ್ರಾಮವು **ಅವಶಃ** - ಕರ್ಮವು ನಶಿಸದೆ ಕರ್ಮಾಧೀನವಾಗಿರುವದ

**ಭಾ. ಯೇ ಮನುಷ್ಯಾದಿ ಚತುರ್ಮುಖಾಂತಾನಾಂ ಮತ್ಸಙ್ಕಲ್ಪಕೃತಾಹೋರಾತ್ರ ವ್ಯವಸ್ಥಾ ವಿದೋ ಜನಾಃ, ತೇ ಬ್ರಹ್ಮಣ ಶ್ಚತುರ್ಮುಖಸ್ಯ ಯದಹಃ, ತಚ್ಚತುರ್ಯುಗಸಹ ಸ್ರಾವಸಾನಂ ವಿದುಃ; ರಾತ್ರಿಂ ಚ ತಥಾರೂಪಾಮ್. ತತ್ರ ಬ್ರಹ್ಮಣೋಽಹರಾಗಮ**

ರಿಂದಲೇ, ಮುಂದೆ **ಅಹರಾಗಮೇ** – ಪುನಸ್ಸೃಷ್ಟಿಯಲ್ಲಿ ಅಂಡ ಸೃಷ್ಟಿಯುಂಟಾಗಿ ಪುನಃ ಇನ್ನೊಬ್ಬ ಚತುರ್ಮುಖನಿಗೆ ಹಗಲು ಉಂಟಾದಾಗ, **ಪ್ರಭವತಿ** – ಪುನಃ ಆ ಕರ್ಮಗಳಿಗೆ ಅನುಗುಣವಾದ ಕರಣ ಕಳೇಬರ ಯೋಗವನ್ನು ಹೊಂದುವದರ ಮೂಲಕ ಈ ಭೂತಗ್ರಾಮವು ಸೃಷ್ಟಿಯನ್ನು ಹೊಂದುತ್ತದೆ. ಹೀಗೆ ಕರ್ಮಾನುಗುಣವಾಗಿ, ಕೆಲವರು **"ರಮಣೀಯ ಚರಣಾಃ"** ಇನ್ನು ಕೆಲವರು **"ಕಪೂಯಚರಣಾಃ"** ಎಂದೂ ಹೀಗೆ ಅವರ ಚರಣವೆಂದರೆ ಆಚರಣೆಯ ಮೂಲಕ ಪುಣ್ಯ ಪಾಪಾಂಶಗಳಿಂದ ಸುಕೃತ ದುಷ್ಕೃತಯೋನಿಗಳನ್ನು ಹೊಂದಿ ಉತ್ಪನ್ನರಾಗುವದರಿಂದ ಪರಬ್ರಹ್ಮನಿಗೆ ವೈಷಮ್ಯ ನೈರ್ಘೃಣ್ಯಾದಿಗಳ ಸಂಭವವಿಲ್ಲವು.

**ಭಾಷ್ಯಾರ್ಥವು :—ಮನುಷ್ಯಾದಿ ಚತುರ್ಮುಖಾಂತಾನಾಂ** – ಮನುಷ್ಯನನ್ನು ಮೊದಲು ಮಾಡಿಕೊಂಡು ಚತುರ್ಮುಖನೇ ಕೊನೆಯಾಗಿವುಳ್ಳ ಹೀಗೆ, ಜ್ಞಾನ ವಿವೇಕಾದಿ ಗ್ರಹಣ ಶಕ್ತಿಯುಳ್ಳ ಜನಗಳಲ್ಲಿ, **ಮತ್ಸಙ್ಕಲ್ಪಕೃತಾಹೋರಾತ್ರವ್ಯವಸ್ಥಾ ವಿದೋಜನಾಃ** - ನನ್ನ ಸ್ವತಂತ್ರ ಸಙ್ಕಲ್ಪಾನುಗುಣವಾಗಿ ಮಾಡಲ್ಪಟ್ಟ ಅಹೋರಾತ್ರಿಗಳ ವ್ಯವಸ್ಥೆಯನ್ನು ಚನ್ನಾಗಿ ತಿಳಿದ ಜನರು **ಯೇ** – ಯಾರೋ, **ತೇ** – ಅಂತಹ ಪಾಜ್ಞರು, **ಬ್ರಹ್ಮಣಃ** - ಎಂದರೆ ಇಲ್ಲಿ **ಚತುರ್ಮುಖನ, ಯದಹಃ** – ಯಾವುದು ಒಂದು ಹಗಲೋ, **ತಚ್ಚ** – ಅದನ್ನಾದರೋ, **ಚತುರ್ಯುಗಸಹಸ್ರಾವಸಾನಂ** – ನಾಲ್ಕು ಯುಗಗಳು ಸಹಸ್ರಸಲ ಮರಳಿ ಬರುವ ಅವಧಿಯುಳ್ಳದೆಂದು, **ವಿದುಃ**– ತಿಳಿಯುತ್ತಾರೆ, **ರಾತ್ರಿಂಚ** – ಆ ಚತುರ್ಮುಖನ ಒಂದು ರಾತ್ರಿಯನ್ನೂ ಸಹ, **ತಥಾರೂಪಾಂ** ಆ ರೂಪವಾದುದೇ ಎಂದರೆ ನಾಲ್ಕು ಯುಗಗಳು ಸಹಸ್ರಸಲ ಮರಳಿ ಬಂದ ಪರಿಮಿತಿಯುಳ್ಳ ಕಾಲವೆಂದೂ, **ವಿದುಃ** – ತಿಳಿಯುತ್ತಾರೆ. ಆದುದರಿಂದ ಚತುರ್ಮುಖನ ಒಂದು ದಿನದ ಕಾಲವೆಷ್ಟು ಎಂದರೆ ನಾಲ್ಕು ಯುಗಗಳೂ ಎರಡು ಸಾವಿರಸಲ ಪುನಃ ಪುನಃ ಆವರ್ತಿಸಿದರೆ ಎಷ್ಟು ಕಾಲವೋ, ಅಷ್ಟು ಕಾಲವೆಂಬ ಭಾವವು. ಹೀಗೆ ಹೇಳಿದುದರಿಂದ ಬ್ರಹ್ಮನ ಒಂದು ದಿನದ ಕಾಲವೇ ಬಹುವಾಗಿ ತೋರುತ್ತದೆ. ಬ್ರಹ್ಮನ ಆಯುಸ್ಸು ಇಂತಹ ನೂರು ವರ್ಷವಾದುದರಿಂದ ಬ್ರಹ್ಮನ ಆಯುಸ್ಸಿನ ಕಾಲವು ಊಹಿಸಲು ಕೂಡ ಸಾಧ್ಯವಲ್ಲದಷ್ಟು ಹೆಚ್ಚಾಗಿ ತೋರಿದರೂ ಆತನಿಗೂ ಕೂಡ ಪರಿಚ್ಛಿತ್ತಿಯುಂಟೆಂದೂ, ಪ್ರಳಯಕ್ಕೆ ಸಿಕ್ಕಿದವನೆಂದೂ, ತಿಳಿಸುವುದಕ್ಕಾಗಿಯೇ **"ಆ ಬ್ರಹ್ಮಭುವನಾಲ್ಲೋಕಾಃ"** ಎಂಬ ಪ್ರಯೋಗವು. ಚತುರ್ಮುಖ ಬ್ರಹ್ಮನೂ ಕೊನೆಯ ಪ್ರಾಕೃತಿಕ ಪ್ರಳಯಕ್ಕೆ ಸಿಕ್ಕಿದರೂ, ಆತನು ಇನ್ನೊಂದು ಪ್ರಾಕೃತಿಕ ಸೃಷ್ಟಿಗೆ ಸಿಕ್ಕಿದವನಲ್ಲವು. ಏಕೆಂದರೆ ಆತನಿಗೆ ಆ ಪ್ರಳಯಾಂತದಲ್ಲಿ ಮುಕ್ತಿಯು. ಇದಕ್ಕೆ ಪ್ರಮಾಣವು ಮುಂದೆ ಹೇಳಲ್ಪಡುತ್ತದೆ. ಇಲ್ಲಿ ಮನುಷ್ಯವರ್ಗಕ್ಕಿಂತ ಕೀಳಾದ ತಿರ್ಯಗಾದಿ ಜಂತುಗಳು ಹೇಳಲ್ಪಡದಿರುವದು, ಅವು ಕಾಲವ್ಯವಸ್ಥೆಯನ್ನು ಮಾಡಲಾರವು ಎಂಬ ಭಾವದಿಂದ ; ಕಾಲ ವ್ಯವಸ್ಥೆಯನ್ನು ಪ್ರಾಮಾಣಿಕವಾಗಿ ಮಾಡಲು ಅರ್ಹತೆಯುಳ್ಳವರು ಯಾರೆಂದು ವಿಮರ್ಶಿಸಿ ಹೇಳುವುದಕ್ಕಾಗಿ, **ಮನುಷ್ಯಾದಿ ಚತುರ್ಮುಖಾಂತಾನಾಂ** ಎಂಬ ಪ್ರಯೋಗವು. ಇದರಿಂದ ಮನುಷ್ಯರೂ ದೇವತೆಗಳೂ ಹೇಳಲ್ಪಟ್ಟರು. ಈ ಮನುಷ್ಯರಿಗೆ ಹೇಗೆ ಬದ್ಧಜೀವಕೋಟಿಯಲ್ಲಿ ಸೇರಿರುವದರಿಂದ ಶಾಸ್ತ್ರವಶ್ಯತೆಯೋ ಹಾಗೆಯೇ ಚತುರ್ಮುಖಾದಿ ದೇವತೆಗಳಿಗೂ ಶಾಸ್ತ್ರವಶ್ಯತೆಯುಂಟೆಂದು ಈ ಪ್ರಯೋಗದಿಂದ ಸೂಚಿಸಿದಂತಾಯಿತು. ಆದರೆ ಸೃಷ್ಟಿಲಯಗಳಿಗೆ ಸಿಕ್ಕಿದವು ಬ್ರಹ್ಮಾಂಡವೆಲ್ಲವಾದುದರಿಂದ ಅದರಲ್ಲಿರುವ ಸಮಸ್ತ ಚಿದಚಿದ್ವರ್ಗವೂ ಸೃಷ್ಟಿಲಯಗಳಿಗೆ ಒಳಗಾದವೆಂದು ಹೇಳ

ಭಾ. ಸಮಯೇ ತ್ರೈಲೋಕ್ಯಾನ್ತರ್ವರ್ತಿನ್ಯೋ ದೇಹೇನ್ದ್ರಿಯಭೋಗ್ಯಭೋಗಸ್ಥಾನ ರೂಪಾ ವ್ಯಕ್ತಯ ಶ್ಚತುರ್ಮುಖದೇಹಾವಸ್ಥಾದ ವ್ಯಕ್ತಾತ್ ಪ್ರಭವನ್ತಿ । ತತ್ರೈವಾ ವ್ಯಕ್ತಾವಸ್ಥಾವಿಶೇಷೇ ಚತುರ್ಮುಖದೇಹೇ ರಾತ್ರ್ಯಾಗಮಸಮಯೇ ಪ್ರಲೀಯನ್ತೇ ಸ ಏವಾಯಂ ಕರ್ಮವಶ್ಯೋ ಭೂತಗ್ರಾಮೋಽಹರಾಗಮೇ ಭೂತ್ವಾ ಭೂತ್ವಾ ರಾತ್ರ್ಯಾಗಮೇ ಪ್ರಲೀಯತೇ ಪುನರಪ್ಯಹರಾಗಮೇ ಪ್ರಭವತಿ। ತಥಾವರ್ಷ

ಬೇಕಾದ ಆವಶ್ಯಕತೆಯಿಲ್ಲವು. ಮೂಲದಲ್ಲಿರುವ **ಬ್ರಹ್ಮಣಃ** ಎಂಬ ಪದವು ಪರಮಾತ್ಮನನ್ನು ಬೋಧಿಸುವದಿಲ್ಲವೆಂದು ಸೂಚಿಸುವದಕ್ಕಾಗಿ **ಚತುರ್ಮುಖಸ್ಯ** ಎಂಬ ವ್ಯಾಖ್ಯಾನವು. ೧೮ನೆಯ ಶ್ಲೋಕದಲ್ಲಿ ಚತುರ್ಮುಖನಿಂದ ವ್ಯಷ್ಟಿ ಸೃಷ್ಟಿಕ್ರಮವೂ ಹಾಗೆಯೇ ಪ್ರಳಯಕ್ರಮವೂ ಹೇಗೆ ನಡೆಯುತ್ತವೆಂದು ಮುಂದೆ ತಿಳಿಸುತ್ತಾರೆ.—**ತತ್ರ** ಆ ಸಂದರ್ಭದಲ್ಲಿ **ಬ್ರಹ್ಮಣೋಽಹರಾಗಮ ಸಮಯೇ** – ಚತುರ್ಮುಖನಿಗೆ ಹಗಲು ಉಂಟಾದ ಕಾಲದಲ್ಲಿ, **ತ್ರೈಲೋಕ್ಯಾನ್ತರ್ವರ್ತಿನ್ಯಃ** ಮೂರು ಲೋಕಗಳಲ್ಲಿರುವ, **ದೇಹೇಂದ್ರಿಯ ಭೋಗ್ಯ ಭೋಗಸ್ಥಾನ ರೂಪಾಃ** – ದೇಹ ಗಳೇನು, ಇಂದ್ರಿಯಗಳೇನು, ಭೋಗ್ಯವಸ್ತುಗಳೇನು, ಭೋಗಸ್ಥಾನಗಳೇನು, ಈ ರೂಪಗಳಾದ **ವ್ಯಕ್ತಯಃ** – ಸ್ಥೂಲರೂಪದಲ್ಲಿ ವ್ಯಕ್ತವಾದುವಾಗಿ ಕಾರ್ಯರೂಪದಲ್ಲಿ ತೋರುವ ವಸ್ತುಗಳೆಲ್ಲಾ, **ಚತುರ್ಮುಖ ದೇಹಾವಸ್ಥಾತ್** – ಚತುರ್ಮುಖನ ದೇಹದಲ್ಲಿರುವ, **ಅವ್ಯಕ್ತಾತ್** – ವ್ಯಕ್ತ ವಲ್ಲದ ಕಾರಣರೂಪ ವಸ್ತುವಿನಿಂದ, **ಪ್ರಭವನ್ತಿ** – ಉಂಟಾಗುತ್ತವೆ. ಚತುರ್ಮುಖನ ಹಗಲು ಕಾಲದಲ್ಲಿ ಚತುರ್ಮುಖನು ಸೃಷ್ಟಿಸುವ ಕಾಲದಲ್ಲಿ, ತನ್ನದೇಹದಲ್ಲಿರುವ, ಅವ್ಯಕ್ತವಾದ ಅಂಶ ದಿಂದ ವ್ಯಕ್ತವಾದವುಗಳು ಉತ್ಪನ್ನವಾಗುತ್ತವೆಂಬ ಭಾವವು. ಇಲ್ಲಿ ಅವ್ಯಕ್ತ ಶಬ್ದದಿಂದ ಮೂಲ ಪ್ರಕೃತಿಯ ಪರಿಣಾಮರೂಪವಾದ ಅವ್ಯಕ್ತವು ಹೇಳಲ್ಪಡಲಿಲ್ಲವು. ಮೇಲಿನ ಸ್ವರ್ಗಾದಿಲೋಕ ಗಳೂ, ಈ ಮಧ್ಯಲೋಕವಾದ ಮರ್ತ್ಯಲೋಕವೂ, ಪಾತಾಳಾದಿ ಲೋಕಗಳೂ ಸಹ ಅವುಗಳಲ್ಲಿ ರುವ ಚೇತನರೂ ಅವರಿಗೆ ಬೇಕಾದ ಭೋಗ್ಯ, ಭೋಗಸ್ಥಾನ, ಭೋಗೋಪಕರಣಗಳೆಲ್ಲವೂ ಚತುರ್ಮುಖ ಶರೀರದಿಂದ ಆತನ ಹಗಲು ಕಾಲದಲ್ಲಿ ಪ್ರತಿಕಲ್ಪದಲ್ಲಿಯೂ ಉಂಟಾಗುತ್ತವೆ ಎಂಬ ಭಾವವು. **ತತ್ರೈವ** - ಅಲ್ಲೇ ಎಂದರೆ **ಅವ್ಯಕ್ತಾವಸ್ಥಾವಿಶೇಷೇ ಚತುರ್ಮುಖದೇಹೇ**- ಅವ್ಯಕ್ತಾವಸ್ಥಾ ವಿಶೇಷವನ್ನುಳ್ಳ ಚತುರ್ಮುಖನ ದೇಹದಲ್ಲೇ, **ರಾತ್ರ್ಯಾಗಮಸಮಯೇ** – ಚತುರ್ಮುಖನಿಗೆ ರಾತ್ರಿಯು ಪ್ರಾಪ್ತವಾಗುವ ಸಮಯದಲ್ಲೇ, **ಪ್ರಲೀಯತೇ** – ಲಯವನ್ನು ಹೊಂದುತ್ತವೆ. ಎಂದರೆ ಸೂಕ್ಷ್ಮರೂಪದಲ್ಲಿ ಅಡಗಿಹೋಗುತ್ತವೆ ಎಂಬ ಭಾವವು ; ಯಾವು ವೆಂದರೆ, ಮೇಲೆ ಹೇಳಿದ ಮೂರು ಲೋಕಗಳ ವ್ಯಕ್ತವಾದ ವಸ್ತುಗಳೆಲ್ಲಾ ಎಂಬ ತಾತ್ಪರ್ಯವು. ಇದೇನು ಅಚಿದ್ವಿಷಯ ಮಾತ್ರವೋ ಎಂದರೆ ಹಾಗಲ್ಲವು. ಆ ಅಚಿತ್ತುಗಳೊಂದಿಗೆ ಸೇರಿದ ಚಿತ್ತು ಗಳ ಅವಸ್ಥೆಯೂ ಹಾಗೆಯೇ ಎಂದು ತಿಳಿಸುತ್ತಾರೆ. **ಅಯಂ ಭೂತಗ್ರಾಮಃ** – ಈ ಅಚಿತ್ತೊಂದಿಗೆ ಸೇರಿದ ಚೇತನ ವರ್ಗವೆಲ್ಲಾ, **ಸಏವ** – ಅದೇಎಂದರೆ ಅವ್ಯಕ್ತರೂಪಾವಸ್ಥೆ ಹೊಂದುವಾಗ ಅವ್ಯಕ್ತದೊಂದಿಗೂ, ವ್ಯಕ್ತಾವಸ್ಥೆ ಹೊಂದುವಾಗಅದರೊಂದಿಗೂ ಇರುತ್ತದೆ. ಅದು ಏಕೆ ಹೀಗೆ ಅಚಿತ್ತಿನೊಂದಿಗೆ ಸೇರಿರುತ್ತದೆ ಎಂದರೆ, ಆ ಭೂತಗ್ರಾಮವು **ಕರ್ಮವಶ್ಯಃ**–ಕರ್ಮಾ ಧೀನವಾದುದರಿಂದ, ಅವುಗಳ ಪೂರ್ವಕಲ್ಪದ ಕರ್ಮಗಳಿಗನುಗುಣವಾಗಿ ಅವುಗಳಿಗೆ ವ್ಯಕ್ತಗಳಾದ ಶರೀರಗಳು ಪ್ರಾಪ್ತವಾಗುತ್ತವೆಂಬ ಭಾವವು. ಸರ್ವೇಶ್ವರನು ತನ್ನ ಇಷ್ಟಾನುಸಾರ ಈ ಚೇತರು ಗಳಿಗೆ ಚತುರ್ಮುಖನ ಮೂಲಕ ಶರೀರಗಳುಂಟಾಗುವಹಾಗೆ ಮಾಡುವದಿಲ್ಲವು. ಹಾಗೆ ಮಾಡಿ ದರೆ ಆತನು ವೈಷಮ್ಯ ನೈರ್ಘೃಣ್ಯಾದಿ ದೋಷಗಳಿಗೆ ಗುರಿಯಾಗುವನು. ಅದುದರಿಂದ ಅವರು

**ಭಾ. ಶತಾವಸಾನ ರೂಪಯುಗಸಹಸ್ರಾನ್ತೇ ಬ್ರಹ್ಮಲೋಕಪರ್ಯನ್ತಾ ಲೋಕಾಃ ಬ್ರಹ್ಮಾ ಚ (೧) "ಪೃಥಿವ್ಯಪ್ಸುಪ್ರಲೀಯತೇ, ಆಪಸ್ತೇಜಸಿ ಲೀಯನ್ತೇ" ಇತ್ಯಾದಿ ಕ್ರಮೇಣ ಅವ್ಯಕ್ತಾಕ್ಷರತಮಃಪರ್ಯನ್ತಂ ಮಯ್ಯೇವ ಪ್ರಲೀಯನ್ತೇ । ಏವಂ**

ಗಳಿಗೆ ಅವರುಗಳ ಕರ್ಮಾನುಸಾರ ವ್ಯಕ್ತಗಳಾದ ದೇಹಗಳ ಪ್ರಾಪ್ತಿಯು ಎಂಬ ಭಾವವು. ಹೀಗೆ ಅಚೇತನ ವರ್ಗದೊಂದಿಗೆ ಸೇರಿಯೇ ಚೇತನ ವರ್ಗಕ್ಕೂ ಕೂಡ ಸೃಷ್ಟಿಲಯಗಳೆಂದು ಹೇಳುತ್ತಾರೆ— **ಅಹರಾಗಮೇ** - ಚತುರ್ಮುಖನ ಹಗಲು ಆದಾಗಲೆಲ್ಲಾ, **ಭೂತ್ವಾ ಭೂತ್ವಾ** - ಹೀಗೆ ವ್ಯಕ್ತರೂಪದೊಂದಿಗೆ ಸೇರಿಕೊಂಡು ಎಂದರೆ ಸೃಷ್ಟಿಗೆ ಪದೇ ಪದೇ ಒಳಗಾಗಿ, **ರಾತ್ರ್ಯಾಗಮೇ** ರಾತ್ರಿಯಾದಾಗಲೆಲ್ಲಾ, **ಪ್ರಲೀಯಂತೇ** - ಅವ್ಯಕ್ತಾವಸ್ಥೆಯೊಂದಿಗೆ ಸೇರಿದುದಾಗಿ ಲಯವನ್ನು ಹೊಂದುತ್ತದೆ. **ಅಚಿತ್ತು ಚಿತ್ತುಗಳಿಗೂ** ಒಟ್ಟಿಗೇ ಸೃಷ್ಟಿಲಯವೆಂದು ಇದರಿಂದ ಹೇಳಲ್ಪಟ್ಟಿತು. ಹೀಗೆ ನೈಮಿತ್ತಿಕ ಪ್ರಳಯಗಳು ಚತುರ್ಮುಖನ ಪ್ರತಿರಾತ್ರಿಯಲ್ಲೂ ನಡೆಯುತ್ತವೆ. ಅನಂತರ ಚತುರ್ಮುಖನ, ನೂರು ವರ್ಷಗಳು ಕಳೆದ ಕೊನೆಯ ರಾತ್ರಿಯಲ್ಲಿ ಮಹಾಪ್ರಳಯವು ನಡೆಯುತ್ತದೆಂದೂ ಈಗ ಸತ್ಯಲೋಕಾದಿಗಳೆಲ್ಲಕ್ಕೂ ಪ್ರಳಯವೂ ಅಲ್ಲದೆ, ಪ್ರಕೃತಿಗೂ ಪ್ರಳಯವೆಂದೂ, ಮುಂದೆ ಬೋಧಿಸುತ್ತಾರೆ. ಹಾಗೆ ಪ್ರಾಕೃತಿಕ ಪ್ರಳಯವನ್ನು ಹೇಳದಿದ್ದರೆ, ಆ ಬ್ರಹ್ಮಭುವನಾಲ್ಲೋಕಗಳೂ ವಿನಾಶಿಗಳು ಎಂದು ಉಪಪಾದನೆ ಮಾಡಿದಹಾಗೆ ಆಗುವದಿಲ್ಲವು. ಈ ಪ್ರಾಕೃತಿಕ ಪ್ರಳಯದಲ್ಲೇ ಬ್ರಹ್ಮಲೋಕಕ್ಕೂ ವಿನಾಶವು, ಈ ಮೂರನೆಯ ಶ್ಲೋಕದಲ್ಲಿ ಈ ಪ್ರಾಕೃತಿಕ ಪ್ರಳಯ ಸೃಷ್ಟಿಗಳಿಗೆ ವಶವಾಗಿ ಬ್ರಹ್ಮಲೋಕವೂ ಅದರೊಂದಿಗೆ ಇತರ ಲೋಕಗಳೂ ಪುನರಾವೃತ್ತಿಗೆ ಒಳಗಾದವು ಎಂದು ಹೇಳಲ್ಪಟ್ಟಿರುತ್ತದೆಂದು ತಿಳಿಸುತ್ತಾರೆ. **ತಥಾ** - ಹಾಗೆಯೇ, ಎಂದರೆ ದೈನಂದಿನ ಪ್ರಳಯಗಳು ಹೇಗೋ ಹಾಗೆಯೇ, **ವರ್ಷಶತಾವಸಾನ ರೂಪ ಯುಗ ಸಹಸ್ರಾನ್ತೇ** - ಚತುರ್ಮುಖನ ಆಯುಸ್ಸಾದ ಇಂತಹ ದಿನಗಳುಳ್ಳ ನೂರು ವರ್ಷಗನ್ನೇ ಕೊನೆಯಾಗಿ ಉಳ್ಳ ಚತುರ್ಯುಗಗಳ ಕೊನೆಯ ಸಹಸ್ರಾಂತ್ಯದಲ್ಲಿ, ಇದರಿಂದ ಮೇಲೆ ಹೇಳಿದ ಹಗಲು ರಾತ್ರಿಗಳಿಂದ ಸೇರಿದ ದಿನದಕಾಲ ಪರಿಮಾಣವುಳ್ಳ ನೂರು ವರ್ಷಗಳೂ ಕಳೆದನಂತರ ಮಹಾಪ್ರಳಯವು ಅಥವಾ ಪ್ರಾಕೃತಿಕ ಪ್ರಳಯವು ಪ್ರಾಪ್ತವಾಗುತ್ತದೆಂಬ ಭಾವವು. ಚತುರ್ಮುಖನಿಗೆ ನೂರು ವರ್ಷಗಳು ಆಯುಸ್ಸು ಎಂಬುದಕ್ಕೆ ಪ್ರಮಾಣವು - **"ನಿಜೇನ ತಸ್ಯ ಮಾನೇನ ಆಯುಃ ವರ್ಷಶತಂ ಸ್ಮೃತಮ್"** ಎಂದಿರುತ್ತದೆ, **ಬ್ರಹ್ಮಲೋಕಪರ್ಯನ್ತಾಃ ಲೋಕಾಃ**-ಚತುರ್ಮುಖನ ಲೋಕದವರೆಗೂ ಇರುವ ಸಮಸ್ತ ಲೋಕಗಳೂ, **ಬ್ರಹ್ಮಾಚ**-ಚತುರ್ಮುಖ ಬ್ರಹ್ಮನೂ ಸಹ, **"ಪೃಥಿವ್ಯಪ್ಸುಪ್ರಲೀಯತೆ** - ಭೂಮಿಯು ಜಲದಲ್ಲಿ ಲಯವನ್ನು ಹೊಂದುತ್ತದೆ, **ಆಪಸ್ತೇಜಸಿಲೀಯನ್ತೇ** - ಅಪ್ಪು ತೇಜಸ್ಸಿನಲ್ಲಿ ಲಯಹೊಂದುತ್ತದೆ" **ಇತ್ಯಾದಿ ಕ್ರಮೇಣ** - ಇವೇ ಮೊದಲಾದ ಕ್ರಮದಿಂದ, **ಅವ್ಯಕ್ತಾಕ್ಷರತಮಃ ಪರ್ಯನ್ತಂ** - ಈ ಪಂಚಭೂತಗಳೆಲ್ಲಾ ಅಹಂಕಾರ ತತ್ವದಲ್ಲೂ, ಅಲ್ಲಿಂದ ಮಹತ್ತತ್ವದಲ್ಲೂ, ಅಲ್ಲಿಂದ ಅವ್ಯಕ್ತದಲ್ಲೂ, ಅಲ್ಲಿಂದ ಅಕ್ಷರದಲ್ಲೂ, ಅಲ್ಲಿಂದ ತಮಸ್ಸಿನಲ್ಲೂ, ಲಯವನ್ನು ಹೊಂದಿ ಕೊನೆಗೆ ಈ ತಮಸ್ಸು ರೂಪದಲ್ಲಿರುವ ಎಲ್ಲವೂ, **ಮಯ್ಯೇವ ಪ್ರಲೀಯನ್ತೆ** - ನನ್ನಲ್ಲೇ ಲೀನವಾಗುತ್ತವೆ. ಇದಕ್ಕೆ **"ಅವ್ಯಕ್ತ ಮಕ್ಷರೇಲೀಯತೇ, ಅಕ್ಷರಂ ತಮಸಿ ಲೀಯತೇ, ತಮೋಪರೇ ದೇವೇ ಏಕೀಭವತಿ"** ಎಂಬ ಸುಬಾಲೋಪನಿಷತ್ತಿನ ಪ್ರಮಾಣವುಂಟು. ಇಂತಹ ಪ್ರಾಕೃತಿಕ ಪ್ರಳಯಾವಸ್ಥೆಯನ್ನೇ ಮುಂದೆ ಹೇಳುವ ಅನೇಕ ಶ್ರುತಿಗಳು ಉಪಪಾದಿಸಿ ಹೇಳುತ್ತವೆ. **"ಸದೇವ**

(೧) ಸುಬಾಲ. ೨೩.

**ಭಾ. ಮದ್ವ್ಯತಿರಿಕ್ತಸ್ಯ ಕಾಲನ್ಯವಸ್ಥಯಾ ಮತ್ತ ಉತ್ಪತ್ತಿ ರ್ಮಯಿ ಪ್ರಲಯಾ ಚ್ಚೋತ್ಪತ್ತಿ ವಿನಾಶಯೋಗಿತ್ವ ಮವರ್ಜನೀಯ ಮಿತ್ಯೈಶ್ವರ್ಯಗತಿಂ ಪ್ರಾಪ್ತಾನಾಂ ಪುನರಾವೃತ್ತಿ ರಪರಿಹಾರ್ಯಾ. ಮಾಮುಪೇತ್ಯಾನಾಂತು ನಪುನರಾವೃತ್ತಿ ಪ್ರಸಙ್ಗಃ**

---

**ಸೊಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಮ್"** (ಛಾ. ೬. ೨. ೧)**"ಏಕೋ ಹವೈ ನಾರಾಯಣ ಆಸೀತ್, ನ ಬ್ರಹ್ಮಾ ನೇಶಾನಃ"** (ಮಹೋಪನಿಷತ್ ೧೧) **"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಮ್"** (ಶ್ವೇ. ೬. ೧೮) **"ಆನೀದವಾತಗ್ಂ ಸ್ವಧಯಾ ತದೇಕಂ, ಯಸ್ಮಾಧ್ಧನ್ಯಂ ನಪರಃ ಕಿಂಚನಾಸ। ತಮ ಆಸೀತ್ತ ಮಸಾ ಗೂಢ ಮಗ್ರೇ ಪ್ರಕೇತಮ್** (ಋಗ್ವೇದ ೮. ೭. ೧೦. ೧೧) ಹಾಗೆಯೇ ಮನುವೂ **"ಆಸೀದಿದಂ ತಮೋಭೂತಂ"** ಎಂದಾರಂಭಿಸಿ ಏಳು ಶ್ಲೋಕಗಳಿಂದ ಭಗವಂತನಿಂದುಂಟಾದ ಸಮಷ್ಟಿ ಸೃಷ್ಟಿಯನ್ನೂ ಅನಂತರ ಚತುರ್ಮುಖನ ಮೂಲಕ ಏರ್ಪಡಿಸಿದ ವ್ಯಷ್ಟಿ ಸೃಷ್ಟಿಯನ್ನೂ, ಉಪ ಪಾದಿಸಿ ಹೇಳುತ್ತಾರೆ. ಪ್ರಾಕೃತಿಕ ಪ್ರಳಯ ಸೃಷ್ಟಿಗಳು ಪರಮಾತ್ಮನ ಸಙ್ಕಲ್ಪದಿಂದಲೇ ಎಂದು, ಹಿಂದೆಯೇ **"ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯ ಸ್ತಥಾ"** (ಗೀ. ೭. ೬.) ಹಾಗೆ ಯೇ, ಪುನಃ ಮುಂದೆಯೂ, **"ಅಹಂ ಸರ್ವಸ್ಯ ಪ್ರಭವಃ ಮತ್ತಸ್ಸರ್ವಂ ಪ್ರವರ್ತತೇ"** (ಗೀ, ೧೦. ೮) ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ಪರಾಶರರೂ **"ವಿಷ್ಣೋ ಸ್ಸಕಾಶಾ ದುದ್ಭೂತಂ ಜಗತ್ತತ್ರೈವ ಚ ಸ್ಥಿತಂ। ಸ್ಥಿತಿಸಂಯ ಮಕರ್ತಾ ಸೌ ಜಗತೋ ಸ್ಯ ಜಗಚ್ಚ ಸಃ"** ಎಂಬ ಬಹ್ವರ್ಥ ಗರ್ಭಾಮೋಘ ಶ್ಲೋಕದಲ್ಲಿ ಪ್ರಾಕೃತಿಕ ಸೃಷ್ಟಿ ಸ್ಥಿತಿ ಲಯಾದಿಗ ಳಿಗೆ ಶ್ರೀ ಮಹಾವಿಷ್ಣುವಾದ ಭಗವಂತನೇ ಕಾರಣನೆಂದು ಹೇಳಲ್ಪಟ್ಟಿರುತ್ತದೆ. ದೈನಂದಿನ ಸೃಷ್ಟಿ ಪ್ರಳಯಗಳನ್ನು ಭಗವಂತನು ಚತುರ್ಮುಖ ರುದ್ರರುಗಳ ಮೂಲಕ ನಡೆಸುವನು ಎಂದು ತಿಳಿಯುವದು. **ಏವಂ** – ಈ ಪರಿಯಲ್ಲಿ, **ಮದ್ವ್ಯತಿರಿಕ್ತಸ್ಯ ಕೃತ್ಸ್ನಸ್ಯ** - ನನಗಿಂತ ಬೇರೆ ಯಾದ ಈ ಲೀಲಾ ವಿಭೂತಿಯ ಸಮಸ್ತಕ್ಕೂ, **ಕಾಲನ್ಯವಸ್ಥಯಾ** – ಕಾಲ ನಿಯತಿಯಿಂದ, **ಮತ್ತಃ ಉತ್ಪತ್ತೇಃ ಮಯಿಪ್ರಲಯಾಚ್ಚ** - **"ಯತೋವಾ ಇಮಾನಿ ಭೂತಾನಿ ಜಾಯ ನ್ತೇ"** ಇತ್ಯಾದಿ ಶ್ರುತಿ, **ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ"** ಇತ್ಯಾದಿ ಸ್ಮೃತಿ, **ಜನ್ಮಾದ್ಯಸ್ಯ ಯತಃ** ಎಂಬ ಸೂತ್ರ, ಮತ್ತು ಅನೇಕ ಪುರಾಣೇತಿಹಾಸಗಳಲ್ಲೂ ಹೇ ಳುವಹಾಗೆ, ನನ್ನಿಂದಲೇ ಉತ್ಪನ್ನವಾಗಿ ನನ್ನಲ್ಲೇ ಪ್ರಳಯದಲ್ಲಿ ಅಡಗುವದರಿಂದ, **ಉತ್ಪತ್ತಿ ವಿನಾಶಯೋಗಿತ್ವಂ** - ಈ ಲೋಕಗಳಿಗೆ ಉತ್ಪತ್ತಿ ವಿನಾಶಗಳ ಸಂಬಂಧವು, **ಅವರ್ಜನೀಯ ಮಿತಿ** – ತಪ್ಪಿದ್ದಲ್ಲವಾದುದರಿಂದ, **ಐಶ್ವರ್ಯಗತಿಂ ಪ್ರಾಪ್ತಾನಾಂ** – ಇಂತಹ ಬ್ರಹ್ಮಾದಿ **ಲೋಕ** ಪ್ರಾಪ್ತಿರೂಪ ಐಶ್ವರ್ಯ ಫಲವನ್ನು ಹೊಂದಿದವರಿಗೆ, **ಪುನರಾವೃತ್ತಿಯು, ಅಪರಿ ಹಾರ್ಯಾ** - ತಪ್ಪಿದ್ದಲ್ಲವು, **ಮಾಮುಪೇತ್ಯಾನಾಂತು** – ನನ್ನನ್ನು ಹೊಂದಿದವರಿಗಾದರೋ, **ನಪುನರಾ ವೃತ್ತಿ ಪ್ರಸಙ್ಗಃ** - ಪುನರಾವೃತ್ತಿಯ ಪ್ರಸಙ್ಗವೇ ಇಲ್ಲವು. ಆಗಲಿ, ಈ ಪ್ರಾಕೃತಿಕ ಪ್ರಳ ಯವು ಹೇಳದೆ ಇದ್ದರೆ ಚತುರ್ಮುಖನ ಲೋಕಕ್ಕೆ ವಿನಾಶವನ್ನು ಉಪಪಾದಿಸಿದಹಾಗೆ ಆಗು ವದಿಲ್ಲವೆಂಬುದೇನೋ ನಿಶ್ಚಯವು; ಆದರೆ ಮೂಲದಲ್ಲಿ ಎಲ್ಲಿ ಹೇಳಿದೆ ಎಂದರೆ, ಎರಡನೆಯ ಶ್ಲೋಕದಲ್ಲೇ ನೈಮಿತ್ತಿಕ ಪ್ರಳಯದಲ್ಲಿ **ರಾತ್ರ್ಯಾಗಮೇ ಪ್ರಲೀಯಂತೇ** ಎಂದು ಹೇಳಿದ ನಂತರ ಪುನಃ ಮೂರನೆಯ ಶ್ಲೋಕದಲ್ಲೂ **ಸಏವರಾತ್ರ್ಯಾಗಮೇ ಪ್ರಲೀಯತೇ** ಎಂದು ಯದ್ಯಪಿ ಭೂತಗ್ರಾಮ ವಿಷಯವು ಹೇಳಲ್ಪಟ್ಟರೂ, **ಸಏವ** ಎಂದು ಹೇಳಿರುವದರಿಂದ ಚಿತ್ತಿಗೆ **ಅಚಿತ್ತೊಂದಿಗೆ** ಸೃಷ್ಟಿ ಲಯಗಳಾದ ಪ್ರಯುಕ್ತ, ಎರಡನೆಯ **ರಾತ್ರ್ಯಾಗಮೇ ಪ್ರಲೀಯತೇ**

ಎಂಬುದರಿಂದ ಚತುರ್ಮುಖನ ಆಯುಸ್ಸಿನ ಕೊನೆಯ ರಾತ್ರಿಯು ಪ್ರಳಯವು ಹೇಳಲ್ಪಟ್ಟಿತೆಂದು ಸುಸ್ಪಷ್ಟವಾಗಿ ಊಹಿಸಬಹುದು. ಎರಡನೆಯ ಶ್ಲೋಕದಲ್ಲೂ **ಪ್ರಭವನ್ತ್ಯಹರಾಗಮೇ** ಎಂದು ಹೇಳಿ, ಮೂರನೆಯ ಶ್ಲೋಕಾಂತ್ಯದಲ್ಲೂ ಪುನಃ **ಪ್ರಭವತ್ಯಹರಾಗಮೇ** ಎಂದು ಯದ್ಯಪಿ ಭೂತಗ್ರಾಮದ ವಿಷಯದಲ್ಲಿ ಹೇಳಲ್ಪಟ್ಟಿನೂ, ಸರ್ವ ಚಿದಚಿದ್ವಿಶಿಷ್ಟ ಜಗತ್ತೂ ಸಹ, ಹಾಗೆಯೇ ಸೃಷ್ಟಿ ಹೊಂದುವದರಿಂದಲೂ, ಈ ಸೃಷ್ಟಿಯು ಹಿಂದೆ ಹೇಳಿದ ಪ್ರಾಕೃತಿಕ ಪ್ರಳಯಾ ನಂತರವಾದುದರಿಂದ, ಹೊಸ ಮಹತ್ಸೃಷ್ಟಿಯೆಂದೇ ಭಾವಿಸತಕ್ಕದ್ದಾಗಿರುತ್ತದೆ. ಹೀಗೆ ಹಿಂದಿನ ಪ್ರಾಕೃತಿಕ ಪ್ರಳಯಕ್ಕೆ ಸೇರಿದ ಚೇತನ ವರ್ಗವೆಲ್ಲಾ ಪುನಃ ಪ್ರಾಕೃತಿಕ ಸೃಷ್ಟಿಗೆ ಸಿಕ್ಕಲು ಕಾರಣವೇನೆಂದು ಪ್ರಶ್ನಿಸಬಹುವೆಂದು ಯೋಚಿಸಿ, **ಅವಶಃ** ಎಂದರೆ ಪ್ರಳಯಕ್ಕೆ ಮುಂದೆ ಮಾಡಿದ ಸುಕೃತ ದುಷ್ಕೃತಗಳಿಗನುಸಾರವಾಗಿ ಅಧೀನರಾಗಿ ಸೃಷ್ಟಿ ಎಂದು ಉಪದೇಶಿಸಿದರು. ಈ ಮೇಲಿನ ವಾಕ್ಯದಲ್ಲಿ ಚತುರ್ಮುಖನ ಲೋಕವೂ ಚತುರ್ಮುಖನೂ ಸಹ ಪ್ರಳಯಕ್ಕೆ ವಶರಾಗುತ್ತಾರೆಂದು ಹೇಳಿರುತ್ತಾರೆ. ಆದುದರಿಂದ ಈ ಲೀಲಾ ವಿಭೂತಿಯ ಸಮಸ್ತ ಚಿದಚಿತ್ತಗಳೂ ಈ ಸೃಷ್ಟಿ ಲಯಾದಿಗಳಿಗೆ ಒಳಪಟ್ಟಿವೆಂದು ತಿಳಿಯತಕ್ಕದ್ದು. ಹೀಗೆ ಹೇಳಿದುದರಿಂದ ಅವುಗಳೆಲ್ಲಾ ಇಲ್ಲದೆ ಹೋಗುತ್ತವೆಂದು ತಿಳಿಯಕೂಡದು. ಕೆಲವರ ಅಭಿಪ್ರಾಯದಹಾಗೆ ಇವೆಲ್ಲಾ ಮಿಥ್ಯೆ ಎಂದು ಭಾವಿಸತಕ್ಕದ್ದಲ್ಲವು, ಅವಸ್ಥೆಗಳ ಪರಿಣಾಮಮಾತ್ರವೇ ಎಂಬ ತಾತ್ಪರ್ಯವು. ಸೂಕ್ಷ್ಮವಾಗಿ ನಾಮರೂಪಾದಿ ವ್ಯವಹಾರಕ್ಕೆ ಅನರ್ಹವಾಗಿರುವ ಅವಸ್ಥೆಯನ್ನು ಪ್ರಳಯದಲ್ಲಿ ಹೊಂದುತ್ತವೆ. ಸೃಷ್ಟಿಯಲ್ಲಿ ನಾಮರೂಪಾರ್ಹವಾದ ಸ್ಥೂಲರೂಪವನ್ನು ಹೊಂದುತ್ತವೆ **ಪ್ರವಾಹತಃ** ಈ ಜಗತ್ತೂ ನಿತ್ಯವೇ, ಶ್ರುತಿಗಳು ಈ ಪ್ರಕೃತಿ, ಚೇತನ ವರ್ಗವೆರಡೂ ನಿತ್ಯವೆಂದೇ ಹೇಳುತ್ತವೆ. ಹಾಗಾದರೆ ಅದೇ ಚತುರ್ಮುಖನೇ ಪ್ರಾಕೃತಿಕ ಸೃಷ್ಟಿಯಲ್ಲೂ ಚತುರ್ಮುಖನಾಗುತ್ತಾನೆಯೋ ಅಥವಾ ಪ್ರತಿಯೊಂದು ಇಂತಹ ಸೃಷ್ಟಿಯಲ್ಲೂ ಬೇರೆ ಬೇರೆ ಚತುರ್ಮುಖನೇ ಎಂಬ ಪ್ರಶ್ನೆಯು ನ್ಯಾಯವಾಗಿ ಉಂಟಾಗುತ್ತದೆ. ಈ ಚತುರ್ಮುಖನು ಪ್ರಳಯಕ್ಕೆ ಸಿಕ್ಕಿದರೂ, ಈತನಿಗೆ ಅನಂತರ ಮೋಕ್ಷಪ್ರಾಪ್ತಿಯು ಹೇಳಲ್ಪಟ್ಟಿರುತ್ತದೆ. ಮುಂದೆ ಬರುವವನು ಹೊಸ ಚತುರ್ಮುಖನು. **ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ । ಪರಸ್ಯಾನ್ತೇ ಕೃತಾತ್ಮಾನಃ ಪ್ರವಿಶನ್ತಿ ಪರಂಪದಂ"** ಎಂಬ ಪ್ರಮಾಣವು, ಚತುರ್ಮುಖ ಲೋಕವನ್ನು ಸೇರಿ ಪರಮಾತ್ಮೋಪಾಸಕರಾದ ಕೃತಕೃತ್ಯರಿಗೆ ಚತುರ್ಮುಖನೊಂದಿಗೆ ಪರಮ ಪದ ಪ್ರಾಪ್ತಿಯು ಹೇಳಲ್ಪಟ್ಟಿರುತ್ತದೆ. **"ಏವಂ ಪುರಾಧಾರಣಯಾ"** ಎಂಬುದಕ್ಕೆ ಶ್ರೀ ವೀರರಾಘವೀಯ ವ್ಯಾಖ್ಯಾನದಲ್ಲಿ (ಭಾಗ. ೨. ೨. ೧) ಈ ಮೇಲಿನ ಪ್ರಮಾಣವನ್ನು ದಾಹರಿಸಿ ಹೇಳುತ್ತಾರೆ.—**"ಇತಿ ಮುಕ್ತ್ಯವಗಮೇನ ಪುನರಾವೃತ್ಯಸಂಭವಾತ್ ; ಭಗವತ್ಪೂರ್ಣ ಕೃಪಾ ಪಾತ್ರಸ್ಯ ಪುನಸ್ಸಂಸಾರಾಯೋಗಾಚ್ಚ"** ತಮ್ಮ ಪರಿಪೂರ್ಣಕೃಪೆಗೆ ಪಾತ್ರನಾದ ಸೃಷ್ಟಿಯಲ್ಲಿ ಪ್ರಥಮ ಪುತ್ರನಿಗೆ ಆತನ ಅಧಿಪತ್ಯಾಂತ್ಯದಲ್ಲಿ ಪುನಃ ಸಂಸಾರವೆಂಬುದು ಸಂಭವಿಸಲಾರದು ಎಂದು ಹೇಳಿರುತ್ತಾರೆ. ಇದಕ್ಕೆ ಆಧಾರವೇನು ಎಂದರೆ ಪ್ರಮಾಣವನ್ನು ಉದಾಹರಿಸುತ್ತಾರೆ. **"ಋಷಿಮಾದ್ಯಂ ನಬಧ್ನಾತಿ ಪಾಪೀಯಾಂ ಸ್ತ್ವಾಂ ರಜೋಗುಣಃ । ನಾತ್ಮಾವಸೀದತ್ಯಸ್ಮಿಂ ಸ್ತೇ ವರ್ಷೀಯರ್ಮದನುಗ್ರಹಃ"** ಎಂಬ ಭಗವದುಕ್ತಿಯು ಇರುತ್ತದೆ. ಚತುರ್ಮುಖನನ್ನು ಇಲ್ಲಿ **ಆದ್ಯಂ ಋಷಿಂ** - ಜ್ಞಾನದ ಪಾರವನ್ನು ಹೊಂದಿದ ಪ್ರಥಮ ಜೀವನು ಎಂದು ಹೇಳಿರುತ್ತದೆ. ಅಂತವನಲ್ಲಿರುವ ರಜೋಗುಣವು ಪಾಪವನ್ನುಂಟುಮಾಡುವದಿಲ್ಲವು. ಆದುದರಿಂದ ಬಂಧಕವಲ್ಲವು; ಸತತ ವರ್ಷಿಸುತ್ತಿರುವ ಭಗವದನುಗ್ರಹದಿಂದ ಈತನಿಗೆ ಮೋಕ್ಷವೆಂಬುದು ಸಿದ್ಧವೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಭಾಗ

ವತದಲ್ಲಿ ಇನ್ನೊಂದು ಕಡೆಯಲ್ಲೂ "**ಅವ್ಯಾಕೃತಂ ವಿಶತಿ ಯರ್ಹಿಗುಣತ್ರಯಾತ್ಮಾ ಕಾಲಂ ಪರಾಖ್ಯಮನುಭೂಯ ಪರಂ ಸ್ವಯಂಭೂಃ, ತೇನೈವಸಾಕ ಮವ್ಯೃತಂ ಪುರುಷಂ ಪುರಾಣಂ ಬ್ರಹ್ಮ ಪ್ರಧಾನ ಮುಪಯಾನ್ತಿ ಗತಾಭಿಮಾನಾಃ** (ಭಾಗ. ೩. ೩೨. ೯೧೦) ಚತುರ್ಮುಖನೂ ಅವನನ್ನೊಂದಿಗಿರುವ ತನ್ನ ಹಾಗೆ ಉಪಾಯಾನುಷ್ಠಾನವನ್ನು ಮಾಡಿದವನೂ ಪರಮಾತ್ಮನನ್ನು ಹೊಂದುವರೆಂದು ಹೇಳಲ್ಪಟ್ಟಿರುತ್ತದೆ. ಕೆಲವರು ಭಕ್ತಿಯೋಗನಿಷ್ಪತ್ತಿಯಿಲ್ಲದೆ ಇದ್ದುದರಿಂದ ಈ ಗ್ರಂಥದಲ್ಲಿ ಹೇಳಲ್ಪಡವೇ ಇರುವ ಇನ್ನೊಂದು ಮಾರ್ಗವಾಗಿ ಯೋಗಿಯಾನದ ಮೂಲಕವಾಗಿ ಚತುರ್ಮುಖಲೋಕವನ್ನು ಹೊಂದಿದವರು ಅಲ್ಲಿ ಸಂಪೂರ್ಣ ಭಕ್ತಿಯಿಂದ ಪರಮಾತ್ಮ ಸಾಕ್ಷಾತ್ಕಾರ ಸಿದ್ಧಿಯುಂಟಾದರೆ ಪ್ರಳಯದವರೆಗೂ ಕಾಯಬೇಕಾದ ಆವಶ್ಯಕತೆಯು ಇಲ್ಲವು. ವಿಳಂಬವಿಲ್ಲದೆ ಮೋಕ್ಷವೆಂದು ಭಾವಿಸತಕ್ಕದ್ದು. ಪ್ರಳಯ ಕಾಲಕ್ಕೆ ಭಕ್ತಿಯೋಗ ನಿಷ್ಪತ್ತಿಯುಂಟಾದವರಿಗೆ ಮಾತ್ರ ಚತುರ್ಮುಖನೊಂದಿಗೆ ಮೋಕ್ಷವು. ಈ ಮೂರನೆಯ ಮಾರ್ಗವಾದ ಯೋಗಿಯಾನ ಉಂಟೆಂಬುದಕ್ಕೆ ಪ್ರಮಾಣವೆಲ್ಲಿ? ಎಂದರೆ "**ಉತ್ತರೋದೇವಯಾನಸ್ತು ಯೋಗಿಯಾನಸ್ತು ಮಧ್ಯಮಃ। ದಕ್ಷಿಣಃ ಪಿತೃಯಾಣಸ್ತು ತತ್ರಾನ್ಯಾ ನಾಗವೀಧಿಕಾ ||**" ಎಂಬ ಪ್ರಮಾಣವಿರುತ್ತದೆ.

ಇಷ್ಟು ದೂರ ಮಾಡಿದ ಚರ್ಚೆಯಿಂದ ತೋರಿಬರುವ ಸಿದ್ಧಾನ್ತವೇನೆಂದರೆ :—

೧. ಚತುರ್ಮುಖನು ಉಪಾಯಾನುಷ್ಠಾನ ಮಾಡಿದವನಾಗಿಯೂ ಪರಮಾತ್ಮನ ಅನುಗ್ರಹಕ್ಕೂ ಪಾತ್ರನಾಗಿಯೂ ಇರುವವನಿಂದ ಪ್ರಾಕೃತಪ್ರಳಯಾಂತ್ಯದಲ್ಲಿ ಮೋಕ್ಷವು.

೨. ಅಲ್ಲಿಗೆ ಯೋಗಿಯಾನದಮೂಲಕ ಹೋಗಿ ಸೇರುವವರಲ್ಲಿ ಭಗವದುಪಾಸನೆಯನ್ನು ಮಾಡಿದ ಕೆಲವರಿಗೆ ಪ್ರಳಯದವರೆಗೂ ಕಾಲವಿಳಂಬದ ಆವಶ್ಯಕವಿಲ್ಲದೆ, "**ತದುಪರ್ಯಪಿ**" ಎಂಬ ಬ್ರಹ್ಮಸೂತ್ರದ ಪ್ರಕಾರ ಮೋಕ್ಷವು.

೩. ಪ್ರಳಯಕಾಲದ ವೇಳೆಗೆ ಉಪಾಯ ನಿಷ್ಪತ್ತಿಯುಂಟಾದವರಿಗೆ ಬ್ರಹ್ಮನೊಂದಿಗೆ "**ಬ್ರಹ್ಮಣಾ ಸಹತೇ ಸರ್ವೇ**" ಎಂಬ ಪ್ರಮಾಣಾನುಸಾರವಾಗಿ ಮೋಕ್ಷವು.

೪. ಹಾಗೆ ಉಪಾಯಾನುಷ್ಠಾನನಿಷ್ಪತ್ತಿಗಳಿಲ್ಲದ ಎಲ್ಲರಿಗೂ ಪುನರಾವೃತ್ತಿಯು ಎಂಬುದು. ಆದುದರಿಂದ ಶ್ರೀ ಭಾಷ್ಯಕಾರರು "**ಬ್ರಹ್ಮಲೋಕಪರ್ಯನ್ತಾ ಲೋಕಾ ಬ್ರಹ್ಮಾಚ ಮಯ್ಯೇವ ಪ್ರಲೀಯನ್ತೇ**" ಎಂದು ಹೇಳಿರುವದರಿಂದ, ಚತುರ್ಮುಖನು ಪ್ರಳಯಕ್ಕೆ ಒಳಗಾಗಿ ತನ್ನಲ್ಲಿ **ಪ್ರಥಮತಃ** ಬಂದು ಸೇರುವನು ಎಂದು ಹೇಳಿದುದರಿಂದ ಆತನಿಗೆ ಮುಕ್ತಿಯಿಲ್ಲವು, ಪುನಃ ಮುಂದಿನ ಕಲ್ಪಕ್ಕೂ ಆತನೇ ಚತುರ್ಮುಖನೆಂದು ಹೇಳಿದಂತಾಗಲಿಲ್ಲವು. ಮೂಲದಲ್ಲಿ ಹೇಳದಿದ್ದರೂ ಚತುರ್ಮುಖನ ಆಯುಸ್ಸು ವರ್ಷಶತವೆಂದು ತಿಳಿಸುವದಕ್ಕಾಗಿ, **ವರ್ಷ ಶತಾನುರೂಪ ಯುಗಸಹಸ್ರಾಂತೇ** ಎಂಬ ಪ್ರಯೋಗವು. ಈ ಕಾಲವನ್ನುದ್ದೇಶಿಸಿ ಹೇಳುವದಕ್ಕಾಗಿ ಈ ಪ್ರಳಯವನ್ನು ದ್ವಿಪರಾರ್ಧಪ್ರಳಯವೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತದೆ. ಏಕೆಂದರೆ ತಿಳಿಸುತ್ತಾರೆ.— "**ಸ್ಥಾನಾತ್ಸ್ಥಾನಂ ದಶಗುಣ ಮೇಕಸ್ಮಾದ್ಗಣ್ಯತೇ ದ್ವಿಜಃ। ತತೋಽಷ್ಟಾದಶಮೇ ಭಾಗೇ ಪರಾರ್ಧಮಭಿಧೀಯತೇ। ಪರಾರ್ಧದ್ವಿಗುಣಂ ಯತ್ತು ಪ್ರಾಕೃತ ಸ್ಸಲಯೋದ್ವಿಜ। ತದಾऽವ್ಯಕ್ತೇಽಖಿಲಂ ವ್ಯಕ್ತಂ ಸ್ವಹೇತೌ ಲಯಮೇತಿವೈ**" (ವಿ. ಪು. ೬. ೩. ೪. ೫.) ಎಂದು ಶ್ರೀ ಪರಾಶರರು ತಮ್ಮ ಶಿಷ್ಯರಿಗೆ ಉಪದೇಶಿಸಿರುತ್ತಾರೆ. ಹತ್ತು ಹತ್ತು ನೂರು, ನೂರು ಹತ್ತು ಸಾವಿರ ಹೀಗೆ ೧೮ ಸಲ ಗುಣಿಸಿದರೆ ಬರುವ ಸಂಖ್ಯೆಯು ಪರಾರ್ಧವು ; ಅದರ ಎರಡರಷ್ಟು ದ್ವಿಪರಾರ್ಧವೆಂದು ತಿಳಿಯುವದು. ಇಂತಹ ಲಯವನ್ನು ಸೂಚಿಸುವದಕ್ಕಾಗಿಯೇ "**ಪೃಥಿವ್ಯಪ್ಸು ಪ್ರಲೀಯತೇ ಆಪಸ್ತೇಜಸಿ ಲೀಯನ್ತೇ**" ಎಂಬ ಸುಬಾಲೋಪನಿಷತ್ತನ್ನು

**ಭಾ. ಅವ. ಅಥಕೈವಲ್ಯಂ ಪ್ರಾಪ್ತಾನಾಮಪಿ ಪುನರಾವೃತ್ತಿರ್ನವಿದ್ಯತ ಇತ್ಯಾಹ—**

ಉದಾಹರಿಸಿರುತ್ತಾರೆ. ಹೀಗೆಯೇ ಕ್ರಮವಾಗಿ ಕಾರ್ಯವು ಅವರ ಕಾರಣದಲ್ಲಿ ಲಯವನ್ನು ಹೊಂದುತ್ತದೆ ಎಂಬುದನ್ನು ಉಪದೇಶಿಸುವವಕ್ಕಾಗಿ ಪಂಚಭೂತಗಳು ಅಹಂಕಾರತತ್ವದಲ್ಲೂ, ಅಹಂಕಾರತತ್ವ ಮಹತ್ತತ್ವದಲ್ಲೂ ಮಹತ್ತು ಅವ್ಯಕ್ತನಲ್ಲೂ ಅವ್ಯಕ್ತವು ಅಕ್ಷರದಲ್ಲೂ, ಅಕ್ಷರವು ತಮಸ್ಸಿನಲ್ಲೂ ತಮಸ್ಸು ತನ್ನಲ್ಲೂ ಲಯವನ್ನು ಹೊಂದುತ್ತವೆಂದು **ಮಯ್ಯೇವ ಪ್ರಲೀಯನ್ತೇ** ಎಂದು ಮುಗಿಸಿರುತ್ತಾರೆ. ಹಾಗೆ ಪ್ರಳಯವನ್ನು ಹೊಂದಿದಾಗೂ **ಚಿದಚಿತ್ತು** ಗಳೆಲ್ಲವೂ ತನ್ನಲ್ಲೇ ಸೂಕ್ಷ್ಮದಶೆಯಲ್ಲಿರುತ್ತವೆಂಬುವರಿಂದ ವಿಶಿಷ್ಟಾದ್ವೈತ ಸಿದ್ಧಾಂತವು ಸ್ಥಾಪಿತವು. **"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್** ಎಂಬ ಶ್ರುತಿಯು ಇಲ್ಲಿ ಅನುಸಂಧೇಯವು. ಇವುಗಳನ್ನೆಲ್ಲಾ ತಿಳಿಸುವ ಉದ್ದೇಶವೇನೆಂದರೆ.—ಐಶ್ವರ್ಯಾರ್ಥಿಯಾಗಿ ಇಂತಹ ಬ್ರಹ್ಮಭುವನ ಮೊದಲಾದವುಗಳು ಪ್ರಾಪ್ತವಾದರೆ, ಅವುಗಳು ನಶ್ವರವಾದವು, ಕೊನೆಗೆ ಪ್ರಳಯಕ್ಕಾದರೂ ಸಿಕ್ಕಿ ನಾಶವಾಗತಕ್ಕವುಗಳೇ ; ಅವುಗಳಿಗೆ ಪುನರಾವೃತ್ತಿ ತಪ್ಪದು. ಆದುದರಿಂದ ಜ್ಞಾನಿಯಾಗಿ ನನ್ನನ್ನೇ ಉಪಾಸಿಸುತ್ತಾ, ಬೇರೆ ಯಾವ ಫಲದಲ್ಲೂ ಪ್ರವೃತ್ತಿಯಿಲ್ಲದೆ ಇದ್ದರೆ, ಶಾಶ್ವತವಾದ ಲೋಕವನ್ನೇ ಹೊಂದುವಿ. ನಿನಗೆ ಆಗ ಪುನರಾವೃತ್ತಿಯು ಇಲ್ಲವು. ಯಾವ ದುಃಖಗಳೂ ಇಲ್ಲದ ಮಹತ್ತಾದ ಪದವಿಯನ್ನು ಹೊಂದುವಿ

**ಭಾಷ್ಯಾವತಾರಿಕೆಯ ಅರ್ಥವು:—ಅಥ** - ಅನಂತರ ಎಂದರೆ ಈ ಮುಂದಿನ ಶ್ಲೋಕದಲ್ಲಿ **ಕೈವಲ್ಯ ಪ್ರಾಪ್ತಾನಾಮಪಿ** - ಪಂಚಾಗ್ನಿ ವಿದ್ಯಾನಿಷ್ಠರಾಗಿ ಪ್ರಕೃತಿ ವಿಯುಕ್ತ ಆತ್ಮಸ್ವರೂಪ ಚಿಂತಕರಾದ ಜಿಜ್ಞಾಸುಗಳಿಗೂ, ಪುನರಾವೃತ್ತಿಯು ಇಲ್ಲನೆಂದು ಹೇಳುತ್ತಾರೆ ಇವನ್ನು ಮುಂದಿನ ಎರಡು ಶ್ಲೋಕಗಳಿಗೂ ಅವತಾರಿಕೆಯಾಗಿ ಅನುಗ್ರಹಿಸಿರುತ್ತಾರೆ. ಇಲ್ಲಿ **ಅಪಿ** ಶಬ್ದವು ಸಾಭಿಪ್ರಾಯವಾದುದು, ಜ್ಞಾನಿಗೆ ಪುನರಾವೃತ್ತಿಯು ಇಲ್ಲವೆಂಬುದು ಸ್ವತಸ್ಸಿದ್ಧವು. ಜಿಜ್ಞಾಸುವಿಷಯದಲ್ಲಾದರೋ ಅವನಿಗೂ ಕೂಡ ಪುನರಾವೃತ್ತಿ ಇಲ್ಲವೆಂದು ಹೇಳುವದಕ್ಕಾಗಿ **ಅಪಿ** ಶಬ್ದವು. ಇಲ್ಲಿ **ಕೈವಲ್ಯ ಪ್ರಾಪ್ತಾನಾಂ** ಎಂದು ಹೇಳಿದ್ದರೂ, ಪಂಚಾಗ್ನಿ ವಿದ್ಯಾನಿಷ್ಠರಾಗಿ ಜಿಜ್ಞಾಸುಗಳೆನಿಸಿ, ತನ್ಮೂಲಕ **ಕೈವಲ್ಯ ಪ್ರಾಪ್ತಾನಾಂ** ಎಂಬುದು ಅಭಿಪ್ರಾಯವು. ಈ ಮುಂದಿನ ಶ್ಲೋಕದಲ್ಲಿ **ತು** ಶಬ್ದವಿರುವವರಿಂದ ಹಿಂದಿನ ಶ್ಲೋಕಗಳಿಗಿಂತ ವಿಲಕ್ಷಣನಾಗಿ ಪ್ರಕೃತಿ ಪರಿಣಾಮಗಳಿಗೆ ಸಿಕ್ಕದ ಆತ್ಮಾವನ್ನು ಕುರಿತು ಹೇಳಿದುದು ಎಂಬುದು ವ್ಯಕ್ತಪಡುತ್ತದೆ.

ಆದರೆ ಇಲ್ಲಿ ಜೀವಾತ್ಮನೇ ಪರಮಾತ್ಮನೇ ಹೇಳಲ್ಪಟ್ಟನೆಂಬ ಸಂದೇಹದಲ್ಲಿ ಕೆಲವರು ಪರಮಾತ್ಮನು ಹೇಳಲ್ಪಟ್ಟನೆಂದು ಭಾವಿಸಿದರು. ಮುಂದಿನ ಶ್ಲೋಕದಲ್ಲಿ **ತಮಾಹುಃ ಪರಮಾಂ ಗತಿಂ** ಎಂದಿರುವವರಿಂದ, **ಮಾಮುಪೇತ್ಯ ಪುನರ್ಜನ್ಮ ನಾಪ್ನುವಂತಿ** ಎಂದು ಬಹಳ ಹಿಂದೆಯೇ ಹೇಳಿ ಇಲ್ಲಿ ಪುನಃ ಹೇಳುವದು ಅಯುಕ್ತವಾಗಿ ತೋರುತ್ತದೆಯಾದುದರಿಂದ ಪ್ರಕೃತಿ ವಿಯುಕ್ತ ಜೀವಾತ್ಮ ಪರವೆಂದೇ ಭಾವಿಸತಕ್ಕದ್ದಾಗಿರುತ್ತದೆ. ಆದರೆ ಪ್ರಕೃತಿಗಿಂತ ಜೀವ ಪರತತ್ವವು ಹಿಂದೆ ೭-೫ರಲ್ಲಿ **"ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ"** ಎಂದು ಹಿಂದೆಯೇ ಹೇಳಿರುವಾಗ, ಅಂತಹ ಜೀವ ಪರತತ್ವವನ್ನೇ ಪುನಃ ಉಪಪಾದಿಸಲು ಕಾರಣವೇನೆಂಬ ಆಕ್ಷೇಪ ಉಂಟಾಗಬಹುದು. ಆದರೆ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೆ ತತ್ಕ್ರತು ನ್ಯಾಯದ ಪ್ರಕಾರ, ಪ್ರಕೃತಿ ವಿಯುಕ್ತ ಜೀವಾತ್ಮಸ್ವರೂಪವೇ ಪ್ರಾಪ್ಯವಾದುದರಿಂದ, ಈ ವಿಷಯವು ವಿಧೇಯವಾಗಲು ಕಾರಣವುಂಟೆಂದು ಭಾವಿಸತಕ್ಕದ್ದು. ಪರಮಾತ್ಮ ವಿಷಯವಾಗಿ ಅನ್ವಯಿಸಲು ಹೋದರೆ ಅನನ್ವಯವಾಗುತ್ತದೆ. ಏಕೆಂದರೆ ಆಗ ಭೂತೇಷು ಎಂಬುದರಲ್ಲಿ ಜೀವಾತ್ಮರೂ ಸೇರುವದರಿಂದ ಅಣುವಾಗಿ ನಿತ್ಯನಾಗಿರುವ ಜೀವಾತ್ಮನಿಗೂ ನಶ್ಯತ್ಸು ಎಂಬುವ

**ಮೂ. ಪರಸ್ತಸ್ಮಾತ್ತು ಭಾವೋನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಸ್ಸ ಸರ್ವೇಷು ಭೂತೇಷು ನಶ್ಯತ್ಸು ನವಿನಶ್ಯತಿ ॥** **೨೦.**
**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂಗತಿಮ್ ।**
**ಯಂ ಪ್ರಾಪ್ಯ ನನಿವರ್ತಂತೇ ತದ್ಧಾಮ ಪರಮಂ ಮಮ ॥** **೨೧.**

ರಿಂದ ನಾಶವು ಏರ್ಪಡುತ್ತದೆ. **ತಮಾಹುಃ ಪರಮಾಂಗತಿಂ** ಎಂಬಲ್ಲಿ ಪ್ರಥಮ ಪುರುಷವೂ, **ತದ್ಧಾಮ ಪರಮಂಮಮ** ಎಂಬಲ್ಲಿ ಉತ್ತಮ ಪುರುಷವೂ ಕೂಡುವದಿಲ್ಲವು. ಆದುದರಿಂದ ಜಿಜ್ಞಾಸುವಿನ ಪ್ರಾಪ್ತಿಯನ್ನು ಕುರಿತು ಹೇಳಿದುದು ಎಂದು ಅರ್ಥಮಾಡುವದೇ ನ್ಯಾಯವು.

**ಮೂಲಕ್ಕೆ ಅರ್ಥವು:—ತಸ್ಮಾತ್ತು - ಅವ್ಯಕ್ತಾತ್** ಎಂದರೆ ಅಚೇತನವಾಗಿ **ಸತತ** ಪರಿಣಾಮಗಳಿಗೆ ಗುರಿಯಾದ ಆ ಅವ್ಯಕ್ತ ಶಬ್ದವಾಚ್ಯವಾದ ಜಡವಾದ ಪ್ರಕೃತಿಗಿಂತಲೂ, **ಪರಃ** - ಶ್ರೇಷ್ಠವಾದ, ಹೇಗೆಂದರೆ ಜ್ಞಾನ ಸಙ್ಕಲ್ಪಾದಿ ಗುಣಗಳನ್ನು ಹೊಂದಿ ಚೇತನನಾಗಿರುವದರಿಂದ ಶ್ರೇಷ್ಠವಾದ, **ಅವ್ಯಕ್ತಃ** - ಪ್ರತ್ಯಕ್ಷಾದಿ ಪ್ರಮಾಣಗಳಿಂದ ವ್ಯಕ್ತವಲ್ಲದ, ಹಾಗಾದರೆ ವ್ಯಕ್ತವಲ್ಲದೆ ಇರುವಾಗ ಆತ್ಮಾ ಒಬ್ಬನು ವಿಲಕ್ಷಣನಾಗಿ ಶರೀರವಲ್ಲಿದ್ದಾನೆಂಬುದು ಹೇಗೆ ಗೊತ್ತು ? ಎಂದರೆ **ಅಹಂ ಅಹಂ** ಎಂದು ತನಗೇನೇ ತೋರಿ ಬರುತ್ತದೆಂಬ ಭಾವವು, **ಸನಾತನಃ** - ನಿತ್ಯನಾಗಿ ಅನಾದಿಯಾಗಿರುವವನು, **ಸರ್ವೇಷು ಭೂತೇಷು** - ಎಲ್ಲಾ ಶರೀರದಲ್ಲಿರುವ ಪಂಚಭೂತಗಳಾಗಿರುವ ಜಡಪದಾರ್ಥಗಳೆಲ್ಲಾ, **ನಶ್ಯತ್ಸು** - ಸ್ವರೂಪಹಾನಿಯನ್ನು ಹೊಂದಿದರೂ, **ಯಃ** - ಯಾವ ಆತ್ಮಸ್ವರೂಪವು, **ನವಿನಶ್ಯತಿ** - ನಾಶವೆಂದರೆ, ಸ್ವರೂಪಪರಿಣಾಮವನ್ನು ಹೊಂದುವದಿಲ್ಲವೋ, **ಸಃ** - ಅಂತಹ, **ಅವ್ಯಕ್ತಾಕ್ಷರ ಇತ್ಯುಕ್ತಃ** - ಅವ್ಯಕ್ತನೆಂದೂ ಅಕ್ಷರನೆಂದೂ ಹೇಳಿಸಿಕೊಳ್ಳುವನು **ತಂ** - ಅಂತಹ ಪರಿಶುದ್ಧ ಜೀವಾತ್ಮಸ್ವರೂಪವನ್ನೇ, **ಪರಮಾಂಗತಿಂ** - ಜಿಜ್ಞಾಸುವಿಗೆ ಪರಮ ಪ್ರಾಪ್ಯವನ್ನಾಗಿ, **ಆಹುಃ** - ತತ್ಕ್ರತು ನ್ಯಾಯೇನ ಪ್ರಾಜ್ಞರು ಹೇಳುತ್ತಾರೆ. **ಯಂ** - ಯಾವ ಈಗ ಹೇಳಿದ ಪರಿಶುದ್ಧಾತ್ಮ ಸ್ವರೂಪವನ್ನು, **ಪ್ರಾಪ್ಯ**- ಹೊಂದಿ, **ನನಿವರ್ತಂತೇ** - ಆ ಪಂಚಾಗ್ನಿ ವಿದ್ಯಾನಿಷ್ಠರಿಗೆ ಪುನರಾವೃತ್ತಿಯಿಲ್ಲವೋ, **ತತ್** - ಅದೇ ಎಂದರೆ ನಾನು ಹಿಂದೆ ಹೇಳಿದ, **ಮಮ ಪರಮಂ ಧಾಮ** - ಶ್ರೇಷ್ಠವಾದ ನನ್ನ ನಿಯಮನ ಸ್ಥಾನವು, **ತತ್** ಎಂಬುದರಿಂದ ಹಿಂದೆ ಹೇಳಿದುದರ ಜ್ಞಾಪಕವು, ಹಿಂದೆ ೭-೫ರಲ್ಲಿ "**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ** ಎಂದು ಹೇಳಿರುವರ ಸ್ಮಾರಣವು ; **ಮಮಪರಮಂಧಾಮ**ವೆಂದರೆ ಪ್ರಕೃತಿ ವಿಯುಕ್ತ ದಶೆಯಲ್ಲಿ ಜೀವಾತ್ಮ ಸ್ವರೂಪವು ಸ್ವಯಂಪ್ರಕಾಶವಾಗಿ ಭಾಸಮಾನವಾಗಿರುವದರಿಂದಲಾಗಲಿ ನನ್ನ ಶ್ರೇಷ್ಠವಾದ ಶರೀರವಾದ ಸ್ವಯಂಪ್ರಕಾಶವಸ್ತುವು ಎಂಬುದರಿಂದಾಗಲಿ ಹಾಗೆ ಪ್ರಯೋಗವು. ಶ್ರುತಿಯು **ಸ್ವೇನ ರೂಪೇಣಾ ಭಿನಿಷ್ಪದ್ಯತೇ** ಎಂದು ಹೇಳಿದುತ್ತದೆ. ಇದನ್ನೇ ವಿಷ್ಣು ಧರ್ಮದಲ್ಲಿ

**"ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾ ನ್ಮಣೇಃ ।**
**ದೋಷಪ್ರಹಾಣಾ ನಜ್ಞಾನ ಮಾತ್ಮನಃ ಕ್ರಿಯತೇ ತಥಾ ॥**
**ಸದೇವ ನೀಯತೇ ವ್ಯಕ್ತಿ ಮಸತ ಸ್ಸಂಭವಃ ಕುತಃ ।**
**ತಥಾ ಹೇಯಗುಣಧ್ವಂಸಾ ದವಬೋಧಾದಯೋ ಗುಣಾಃ ।**
**ಪ್ರಕಾಶ್ಯನ್ತೇ ನ ಜನ್ಯನ್ತೇ ನಿತ್ಯಾ ಏವಾತ್ಮನೋಹಿ ತೇ"** (ವಿ. ಧ. ೧೦೪. ೫೫. ೭)

ಪ್ರಕೃತಿಯಿಂದ ಮಾಲಿನ್ಯವನ್ನು ಹೊಂದಿದ್ದ ಸ್ವಾಭಾವಿಕವಾದ ಸರ್ವಜ್ಞತ್ವಾದಿ ಗುಣಾಷ್ಟಕಗಳು, ಪ್ರಕೃತಿಯು ತೊಲಗಿದನಂತರ, ಕೆಸರಿನಲ್ಲಿ ಬಿದ್ದ ರತ್ನವು ಕೆಸರನ್ನು ತೊಳೆಯುವದರಿಂದ ಹೇಗೆ

ದೀಪ್ತಿಯಿಂದ ಬೆಳಗುತ್ತದೋ, ಹಾಗೇಯೇ ಆತ್ಮನೂ ಸಹ ತನ್ನ ಸ್ವೈಜವಾದ ಪ್ರಕಾಶದಿಂದ ವಿರಾಜಿಸುವನು. ಇರತಕ್ಕದ್ದೇ ವ್ಯಕ್ತತೆಯನ್ನು ಹೊಂದುತ್ತದೇ ವಿನಾ ಇಲ್ಲದಿರುವದು ಎಂಬುದಕ್ಕೆ ಉತ್ಪತ್ತಿಯು ಹೇಗೆ ? ಹಾಗೇಯೇ ಪ್ರಕೃತಿಯಿಂದುಂಟಾದ ಹೇಯಗುಣಗಳು ಯಾವಾಗ ಕಳೆದು ಹೋದವೋ, ಮೊದಲೆಯೇ ಇದ್ದ ಸರ್ವಜ್ಞತ್ವಾದಿ ಗುಣಗಳು ಪ್ರಕಾಶಿಸುತ್ತವೇ ವಿನಾ ಹೊಸದಾಗಿ ಉತ್ಪತ್ತಿಯಾಗುವದಿಲ್ಲವು. ಆ ಗುಣಗಳೆಲ್ಲಾ ಪರಿಶುದ್ಧಾತ್ಮನಿಗೆ ಸಹಜವಾದುವಲ್ಲವೇ ಎಂಬುದು ಶ್ಲೋಕಗಳ ಅರ್ಥವು. ಆದುದರಿಂದ ಪ್ರಕೃತಿ ವಿಯುಕ್ತ ಜೀವಾತ್ಮನು **"ತದ್ಧಾಮಪರಮಂ ಮಮ"** ಎಂದು ಹೇಳಲ್ಪಟ್ಟನು. ಈ ಅಭಿಪ್ರಾಯವನ್ನು ತಿಳಿಸುವದಕ್ಕಾಗಿ ಅಂತಹ **ಮಮ ಧಾಮ** – ನನ್ನ ಸಂಬಂಧಿಯಾದ ಜೀವನೆಂಬ ಸ್ವಯಂ ಪ್ರಕಾಶವಸ್ತುವು ಎಂದು ಹೇಳಲ್ಪಟ್ಟಿತು. ಇದೇ **ಧಾಮ** ಶಬ್ದಾರ್ಥವು. ಈ ಆತ್ಮವಸ್ತುವು **ಪರಭಾವ** ವೆಂದೂ ಅಚಿತ್ತು **ಅಪರಭಾವ** ವೆಂದೂ, ಇಲ್ಲಿ ಹೇಳಿರುವದರಿಂದಲೂ, **ಅಸತಸ್ಸಂಭವಃ ಕುತಃ** – ಇಲ್ಲದೇ ಇದ್ದುದು ಹೇಗೆ ಉಂಟಾಗುವದಿಲ್ಲವೋ, ಇರುವದೂ ಇಲ್ಲದೇ ಹೋಗುವದಿಲ್ಲವಾದುದರಿಂದ ಇಲ್ಲಿ "ಭಾವ" ಶಬ್ದವುಮಿಥ್ಯಾವಾದವನ್ನು ನಿರಾಕರಿಸುತ್ತದೆ. ಇಲ್ಲಿ ಎಲ್ಲಾ ಭೂತಗಳಿಗೂ ಪರಿಣಾಮವುಂಟಾದರೂ ಯಾವುದಕ್ಕೆ ನಾಶವಿಲ್ಲವೋ ಎಂದು ಹೇಳಿರುವದರಿಂದಲೂ ಇದು ಶ್ರೀ ಕೃಷ್ಣನಾದ ತನ್ನ ವಿಷಯವಲ್ಲವು. ತನಗಿಂತ ಬೇರೆಯಾದ ಜೀವಾತ್ಮವಿಷಯವೆಂದು ಏರ್ಪಡುತ್ತದೆ. ಇಲ್ಲಿ ಉಪಯೋಗಿಸಿರುವ ಅವ್ಯಕ್ತಾಕ್ಷರ ಶಬ್ದಗಳು ಪ್ರಕೃತಿ, ಪ್ರಕೃತಿಯಿಂದ ಸೇರಿದ ಜೀವಾತ್ಮ, ಪ್ರಕೃತಿವಿಯುಕ್ತ ಜೀವಾತ್ಮ, ಪರಮಾತ್ಮನನ್ನೂ ಸಹ ಶಾಸ್ತ್ರಗಳಲ್ಲಿ ಬೋಧಿಸುವ ಹಾಗೆ ಪ್ರಯೋಗಗಳು ಉಂಟು. ಇಲ್ಲಿ ಪ್ರಕರಣಾನುಗುಣವಾಗಿ ಪರಿಶುದ್ಧಸ್ವರೂಪನಾದ ಜೀವಾತ್ಮನನ್ನು ಬೋಧಿಸುತ್ತದೆ. ಇಲ್ಲಿಯೂ ಇನ್ನೂ ಇದೇ ಗ್ರಂಥದಲ್ಲೇ ಅಕ್ಷರ ಶಬ್ದವನ್ನು ಶ್ರೀ ವೇದವ್ಯಾಸರು ಪ್ರಕೃತಿ ವಿಯುಕ್ತ ಜೀವಾತ್ಮನೆಂಬ ಅರ್ಥದಲ್ಲೇ ತಮ್ಮ ತಂದೆಗಳಾದ ಶ್ರೀ ಪರಾಶರರನ್ನನುಸರಿಸಿಯೇ ಪ್ರಯೋಗಿಸಿರುತ್ತಾರೆ. **ದ್ವೇರೂಪೇ ಬ್ರಹ್ಮಣಸ್ತಸ್ಯ ಮೂರ್ತಂಚಾಮೂರ್ತ ಮೇವ ಚ । ಕ್ಷರಾಕ್ಷರ ಸ್ವರೂಪೇ ತೇ ಸರ್ವಭೂತೇಷು ಚ ಸ್ಥಿತೇ । ಅಕ್ಷರಂ ತತ್ಪರಂ ಬ್ರಹ್ಮ ಕ್ಷರಂ ಸರ್ವ ಮಿದಂ ಜಗತ್ ॥"** (ವಿ. ಪು. ೧. ೨೨. ೫೫) ಎಂಬಲ್ಲಿ ಬ್ರಹ್ಮ ಶಬ್ದದಿಂದ ಜೀವಾತ್ಮ ತತ್ವವನು, ಬೋಧಿಸಿ, **ಅಕ್ಷರಂ ತತ್ಪರಂಬ್ರಹ್ಮ** ಎಂಬುದರಿಂದ ಹೇಯವಾದ ಪ್ರಕೃತಿ ಸಂಬಂಧವಿಲ್ಲದುದರಿಂದ ಪರಿಶುದ್ಧನಾಗಿ ಉತ್ಕೃಷ್ಟನಾದ ಮುಕ್ತಾತ್ಮನೂ, **ಕ್ಷರಂಬ್ರಹ್ಮ** ಎಂಬುದರಿಂದ ಬದ್ಧಾತ್ಮನೂ ಹೇಳಲ್ಪಟ್ಟನು : ಈ ಶ್ಲೋಕಾರ್ಥವೇನೆಂದರೆ, **ತಸ್ಯ** – ಆ ವಿಷ್ಣ್ವಾಖ್ಯನಾದ ಪರಮಾತ್ಮನ ಶರೀರವಾಗಿ, ಆತನಿಗೆ ಸಂಬಂಧಿಸಿದ, **ಬ್ರಹ್ಮಣಃ** – ಜೀವತತ್ವಕ್ಕೆ, **ದ್ವೇರೂಪೇ** – ಎರಡು ಅವಸ್ಥೆಗಳು, ಒಂದು **ಮೂರ್ತಂಚ** – ಬದ್ಧಾತ್ಮನಾಗಿ ಪ್ರಕೃತಿಯಿಂದ ಸೇರಿ ಸಶರೀರಕನಾಗಿ, ಇನ್ನೊಂದು **ಅಮೂರ್ತಂಚ** – ಅಂತಹ ಶರೀರರಹಿತನಾಗಿ, ಇವೆರಡು ಭಾಗಗಳೂ **ಕ್ಷರಾಕ್ಷರ ಸ್ವರೂಪೇತೇ** ಶರೀರವನ್ನೂ ಜ್ಞಾನಸಂಕೋಚವನ್ನೂ ಹೊಂದಿ ಜನ್ಮಮರಣಾದಿಗಳಿಂದ ಬಾಧಿತನಾಗಿ ಕ್ಷರನೆಂದೂ, ಅವುಗಳಿಲ್ಲದವನಾಗಿ ಅಕ್ಷರನೆಂದೂ, ಹೇಳಲ್ಪಡುವನು. ಈ ಪರಿಶುದ್ಧವಾದ ಅಕ್ಷರ ಸ್ವರೂಪವು, **ತತ್ಪರಂಬ್ರಹ್ಮ** ವೆಂದು ಹೇಳಲ್ಪಟ್ಟಿತು. ಏಕೆಂದರೆ ಅದಕ್ಕೆ ಜ್ಞಾನ ಸಂಕೋಚ ಜನನ ಮರಣಾದಿಗಳು ಎಂದರೆ ಪುನರಾವೃತ್ತಿ ಇಲ್ಲದುದರಿಂದ **ತತ್ಪರಬ್ರಹ್ಮ** ಮತ್ತು **ಅಕ್ಷರಂ ಬ್ರಹ್ಮಪರಮಂ** ಎಂಬ ಪ್ರಯೋಗಗಳನ್ನು ಈ ಗ್ರಂಥದಲ್ಲೂ ಕಾಣಬಹುದು. ( ಗೀ. ೮. ೧. ೮.೩.) **"ಸರ್ವಮಿದಂ ಜಗತ್– ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮರೂಪೇ ವ್ಯಾಕರವಾಣಿ"** ಎಂದು ಹೇಳಿರುವಹಾಗೆ ಈ ಜೀವಾತ್ಮ ಸಮೂಹವೇ ಪ್ರಕೃತಿಯೊಂದಿಗೆ ಈ ಸಮಸ್ತ ಜಗತ್ತಾಗಿರುತ್ತದೆ ಎಂಬುದು ಈ ಶ್ಲೋಕಗಳ ಅರ್ಥವು. ಶ್ರೀ ಪರಾಶರರು **ತತ್ಪರಬ್ರಹ್ಮ** ಶಬ್ದವನ್ನು

**ಭಾ. ತಸ್ಮಾದನ್ಯಕ್ತಾತ್- ಅಚೇತನ ಪ್ರಕೃತಿ ರೂಪಾತ್, ಪುರುಷಾರ್ಥತಯಾ ಪರಃ - ಉತ್ಕೃಷ್ಟಃ, ಭಾವೋನ್ಯೋ - ಜ್ಞಾನೈಕಾಕಾರತಯಾ ತಸ್ಮಾದ್ವಿಸಜಾತೀಯಃ, ಅವ್ಯಕ್ತಃ - ಕೇನ ಚಿತ್ಪ್ರಮಾಣೇನ ನ ವ್ಯಜ್ಯತ ಇತ್ಯವ್ಯಕ್ತಃ, ಸ್ವಸಂವೇದ್ಯ ಸ್ವಾಸಾಧಾರಣಾಕಾರ ಇತ್ಯರ್ಥಃ ; ಸನಾತನಃ - ಉತ್ಪತ್ತಿವಿನಾಶನರ್ಹತಯಾ ನಿತ್ಯಃ,**

---

ಪ್ರಕೃತಿ ವಿಯುಕ್ತ ಜೀವಾತ್ಮ ಎಂದರೆ ಮುಕ್ತಾತ್ಮವೆಂಬ ಅರ್ಥದಲ್ಲಿ ಉಪಯೋಗಿಸಿರುವದು ಇಲ್ಲಿ ಮಾತ್ರವೇ ಎಂದು ಭಾವಿಸತಕ್ಕದ್ದಲ್ಲವು, ಅದರ ಹಿಂದಿನ ಶ್ಲೋಕವಾದ, "**ತತ್ಪ್ರಾಪ್ಯ ಪರಮಂ ಯೋಗೀ ಪುನ ರ್ನಾವರ್ತತೇ ಯತಃ**" ಎಂಬಲ್ಲೂ ಹಾಗೆಯೇ, **ಯೋಗಿನೋ ಮುಕ್ತಿಕಾಮಸ್ಯ ಪ್ರಾಣಾಯಾಮಾದಿ ಸಾಧನಮ್ । ಸಾಧ್ಯಂಚ ಪರಮಂ ಬ್ರಹ್ಮ ಪುನ ರ್ನಾವರ್ತತೇ ಯತಃ**" (ವಿ. ಪು. ೧ ೨೨. ೪೫) ಎಂಬಲ್ಲೂ ಪರಮಂ. ಬ್ರಹ್ಮ ಎಂದರೆ ಪ್ರಕೃತಿ ವಿಯುಕ್ತ ಮುಕ್ತಾತ್ಮಸ್ವರೂಪವು. ಹಾಗಲ್ಲದೆ ಪರಬ್ರಹ್ಮವೆಂದು ಅರ್ಥ ಹೇಳಿದರೆ, ಆತನ ವಿಷಯದಲ್ಲಿ, **ನಾವರ್ತತೇ ಯತಃ** ಎಂದು ಹೇಳುವದು ಹಾಸ್ಯಾಸ್ಪದವಾಗುವದಿಲ್ಲವೇ?

**ಭಾಷ್ಯಾರ್ಥವು:—**ಈ ಎರಡು ಶ್ಲೋಕಗಳೂ ಜಿಜ್ಞಾಸುವಿನ ಪ್ರಾಪ್ಯ ಸ್ವರೂಪವನ್ನು ಬೋಧಿಸುತ್ತದೆಂಬ ಅಭಿಪ್ರಾಯ ಪಟ್ಟವರಾಗಿ ಎರಡನ್ನೂ ಒಟ್ಟಿಗೆ ಅನ್ವಯಿಸಿ, ಭಾಷ್ಯವನ್ನು ಬರೆಯುತ್ತಾರೆ. ಭಗವಂತನನ್ನು ಹೊಂದಿದವರಿಗೆ ಪುನರಾವೃತ್ತಿಯಿಲ್ಲವೆಂದು ಹಿಂದೆಯೇ ಹೇಳಲ್ಪಟ್ಟಿರುವದರಿಂದ (೧೫ ೧೬ ನೆಯ ಶ್ಲೋಕಗಳಲ್ಲಿ), ಇಲ್ಲಿ ಅವ್ಯಕ್ತಾಕ್ಷರಪ್ರಯೋಗಗಳಿಂದ ಹೇಳಲ್ಪಟ್ಟವನು ಪರಿಶುದ್ಧ ಜೀವಾತ್ಮನೆಂದೇ ಅರ್ಥ ಹೇಳತಕ್ಕದ್ದು ಉಚಿತವಾಗಿರುವದರಿಂದ ಹಾಗೆಯೇ ಭಾಷ್ಯವನ್ನು ಬರೆಯುತ್ತಾರೆ. **ತಸ್ಮಾದನ್ಯಕ್ತಾತ್** ಎಂದರೆ **ಅಚೇತನ ಪ್ರಕೃತಿ ರೂಪಾತ್** - ಆ ಅಚೇತನವಾದ ಪ್ರಕೃತಿಗಿಂತಲೂ, **ಪುರುಷಾರ್ಥತಯಾ ಪರಃ** - ಜ್ಞಾನ, ಸಙ್ಕಲ್ಪಾದಿ ಗುಣಗಳುಳ್ಳ ಚೇತನಭಾವದಿಂದ ವಿಲಕ್ಷಣವಾಗಿ, ಅಂತಹ ವಿಲಕ್ಷಣಸ್ವರೂಪ ಪ್ರಾಪ್ತಿಯೇ ಈತನಿಗೆ ಪುರುಷಾರ್ಥರೂಪವಾದುದರಿಂದ ತನಗೆ ಬಂಧಕವಾಗಿರುವ ಪ್ರಕೃತಿಗಿಂತಲೂ ವಿಲಕ್ಷಣವಾಗಿ, **ಪರಃ** ಎಂದರೆ, **ಉತ್ಕೃಷ್ಟಃ** ಉತ್ಕೃಷ್ಟನಾದ, **ಭಾವೋನ್ಯಃ** ಎಂದರೆ **ಜ್ಞಾನೈಕಾಕಾರತಯಾ ತಸ್ಮಾತ್ ವಿಸಜಾತೀಯಃ** - ಜ್ಞಾನೈಕಾಕಾರತೆಯಿಂದ ಆ ಪ್ರಕೃತಿಗಿಂತಲೂ ವಿಲಕ್ಷಣನು, **ಅವ್ಯಕ್ತಃ** - ಅವ್ಯಕ್ತಕ್ಕಿಂತ ವಿಲಕ್ಷಣನಾಗಿ ಅವ್ಯಕ್ತನು ಎಂದು ಅಲಂಕಾರಿಕವಾಗಿ ವಿರೋಧ ತೋರುತ್ತದೆ., ತತ್ಪರಿಹಾರಾರ್ಥನಾಗಿ ಹೇಳುತ್ತಾರೆ, ಅವ್ಯಕ್ತವೆಂದರೆ **ಕೇನ ಚಿದ್ಪ್ರಮಾಣೇನ ನವ್ಯಜ್ಯತೇ** - ಪ್ರತ್ಯಕ್ಷಾದಿರೂಪ ಇಂದ್ರಿಯ ಗೋಚರ ಪ್ರಮಾಣಗಳಿಂದ ತೋರುವನಲ್ಲವು; ಹಾಗಾದರೆ ಈತನು ಯಾವ ಪ್ರಮಾಣಗಳಿಂದಲೂ ವೇದ್ಯವಾಗದ ಗಗನ ಕುಸುಮದ ಹಾಗೋ ಎಂದರೆ ಹಾಗಲ್ಲವು. ಇನ್ನು ಹೇಗೆ ವೇದ್ಯವೆಂದರೆ, **ಸ್ವ ಸಂವೇದ್ಯಸ್ವಾಸಾಧಾರಣಾಕಾರ ಇತ್ಯರ್ಥಃ** - **ಅಹಂ ಅಹಂ** ಎಂದು ತನಗೆ ಮಾತ್ರವೇ ತೋರುವ, ಹೀಗೆ ತನಗೇನೇ ತೋರುವ ಅಸಾಧಾರಣವಾದ ಶಕ್ತಿಯುಳ್ಳವನೆಂಬರ್ಥವು. ಇತರರ ಜ್ಞಾನಕ್ಕೆ ತಾನು ವಿಷಯ ನಾಗುವನಲ್ಲವು, ತನ್ನ ಜ್ಞಾನಕ್ಕೆ ಮಾತ್ರವೇ ಗೋಚರನು, ಇಂತಹ ಆತ್ಮಸ್ವಭಾವಕ್ಕೆ ಪ್ರತ್ಯಕ್ತ್ವವೆಂದು ಹೆಸರು, **ಸ್ವಸ್ಮೈಭಾಸಮಾನತ್ವವು.** ಶ್ರೀ ವ್ಯಾಸೋಕ್ತಿಗಳೆಲ್ಲಾ ಬಹು ಶಾಸ್ತ್ರಾರ್ಥ ಗರ್ಭಗಳು, ವಿಮರ್ಶಿಸಿ ತಿಳಿಯತಕ್ಕವುಗಳಾಗಿರುತ್ತವೆ. ಶಾಸ್ತ್ರಪ್ರಮಾಣಗಳಾದರೋ ಈ ಜೀವಾತ್ಮನ ಸ್ವರೂಪ ಸ್ವಭಾವಗಳನ್ನು ನಿರೂಪಿಸಬಲ್ಲದು. ತಾನು ಆತ್ಮಾ ಎಂಬ ಭಾವಹಾದರೋ ಶಾಸ್ತ್ರದಿಂದ **ನಂಬಬಹುದು. ವೇದ್ಯವಾಗುವದಿಲ್ಲವು.** ತನಗೆ ತಾನೇ **ಅಹಂ ಅಹಂ** ನಾನು ನಾನು ಎಂದು **ವೇದ್ಯವು.** ಆದುದರಿಂದ **ಸ್ವ ಸಂವೇದ್ಯ** ವೆಂದು ಹೇಳಲ್ಪಟ್ಟಿತು. **ಅಚಿತ್ತುಗ**

**ಭಾ. ಯಸ್ಸರ್ವೇಷು ವಿಯದಾದಿ ಭೂತೇಷು ಸಕಾರಣೇಷು ಸಕಾರ್ಯೇಷು ವಿನಶ್ಯತ್ಸು, ತತ್ರ ತತ್ರ ಸ್ಥಿತೋಽಪಿ ನವಿನಶ್ಯತಿ; ಸೋಽವ್ಯಕ್ತೋಽಕ್ಷರ ಇತ್ಯುಕ್ತಃ (೧) "ಯೇತ್ವಕ್ಷರ ಮನಿರ್ದೇಶ್ಯ ಮವ್ಯಕ್ತಂ ಪರ್ಯುಪಾಸತೇ" (೨) ಕೂಟಸ್ಥೋಽಕ್ಷರ ಉಚ್ಯತೇ"**

ಳಿಗೆ ಈ ಧರ್ಮವಿಲ್ಲವು; ಅವುಗಳು ಚೇತನರುಗಳಾದ ಇತರರಿಗೆ ವೇದ್ಯವಾಗುವದರಿಂದ ಅವುಗಳಿಗೆ ಪರಾಕ್ತ್ವವೇ ವಿನಾ ಪ್ರತ್ಯಕ್ತ್ವವಿಲ್ಲವು, ಆತ್ಮನು ಹಾಗಲ್ಲವು, ತನಗೆ ತಾನೇ ವೇದ್ಯನು, ಹೀಗೆ ಪ್ರತ್ಯಕ್ತ್ವವಿರುವದರಿಂದ ಸ್ವಸಂವೇದ್ಯನೆಂದು ಹೇಳಲ್ಪಟ್ಟಿತು. **"ಘಟಮಹಂಜಾನಾಮಿ"** ಎಂದೂ **ಸುಪ್ತೋಽಹಂ** ಎಂದೂ ತನಗೆ ವೇದ್ಯವಾಗುತ್ತದೆ. ದೇಹೇಂದ್ರಿಯಾದಿಗಳಿಗಿಂತ ಬೇರೆಯಾದ ಯಾವುದೋ ಒಂದು ವಸ್ತುವು ತಿಳಿಯುವಂತಾದ್ದು ಇರಬೇಕೆಂಬುದು ತನಗೇನೇ ವೇದ್ಯವು, ಹೀಗೆ ಜ್ಞಾತೃತ್ವವಿರುವದರಿಂದಲೇ ಸೂತ್ರವು, **ಜ್ಞೋಽತ ಏವ** (೨. ೩. ೧೯) ಎಂಬಲ್ಲಿ ಹೇಳಿರುತ್ತದೆ. ಇದನ್ನೇ ಶಾಸ್ತ್ರವೂ **"ಅಥಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ"** ಎಂದೂ **"ಏಷಹಿ ದ್ರಷ್ಟಾ ಸ್ಪ್ರಷ್ಟಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ"** ಇತ್ಯಾದಿ ಪ್ರಮಾಣಗಳಿಂದಲೂ ಬೋಧಿಸುತ್ತದೆ. ಆದುದರಿಂದ ಸ್ವಸಂವೇದ್ಯವೂ ಹೌದು. ಪ್ರಮಾಣದಿಂದಲೂ ವೇದ್ಯವು. ಕರ್ಮಯೋಗದ ಮಾಹಾತ್ಮ್ಯೆಯಿಂದ ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಬಹುದು. ಇದೇ ಈ ಗ್ರಂಥದಲ್ಲಿ ಆತ್ಮ ಸಾಕ್ಷಾತ್ಕಾರವನ್ನು ಹೊಂದುವನೆಂದು ಹೇಳಲ್ಪಟ್ಟಿರುತ್ತದೆ, ಇದನ್ನೇ ಶ್ರೀ ಯಾಮುನೇಯರವರು

**"ಏವಮಾತ್ಮಾ ಸ್ವತಸ್ಸಿಧ್ಯನ್ನಾಗಮೇನಾ ನುಮಾನತಃ ।**
**ಯೋಗಾಭ್ಯಾಸಭುವಾ, ಸ್ಪಷ್ಟಂ ಪ್ರತ್ಯಕ್ಷೇಣ ಪ್ರಕಾಶತೇ ॥**

ಎಂಬಲ್ಲಿ ಹೇಳಿರುತ್ತಾರೆ. ಇಲ್ಲಿ **ಸ್ವಸಂವೇದ್ಯ** ವೆಂದು ಶ್ರೀ ಯತಿವರ್ಯರು ಹೇಳಿದ ಅರ್ಥವೇ **ಸ್ವತಸ್ಸಿಧ್ಯನ್** ಎಂಬುದರಿಂದ ವ್ಯಕ್ತವು. ಯೋಗಾಭ್ಯಾಸದಿಂದ ಎಂದರೆ ಕರ್ಮಯೋಗ ಜ್ಞಾನಗಳ ಮೂಲಕವಾಗಿ ಅಥವಾ ಕೇವಲ ಕರ್ಮಯೋಗದಿಂದಲೇ ಆತ್ಮ ಸಾಕ್ಷಾತ್ಕಾರ ಉಂಟಾಗುತ್ತದೆಂದು **"ಪ್ರತ್ಯಕ್ಷೇಣ ಪ್ರಕಾಶತೇ"** ಎಂಬುದರಿಂದ ಹೇಳುತ್ತಾರೆ. **ಯಃ** - ಯಾವ ಈ ಜೀವಾತ್ಮನು, **ಸರ್ವೇಷು ವಿಯದಾದಿಭೂತೇಷು ಸಕಾರಣೇಷು ಸಕಾರ್ಯೇಷು** - ಇದು **ಸರ್ವೇಷು ಭೂತೇಷು** ಎಂಬುದರ ವ್ಯಾಖ್ಯಾನವು. ಸಮಸ್ತಗಳಾದ ಕಾರಣಗಳಿಂದಲೂ ಕಾರ್ಯಗಳಿಂದಲೂ ಕೂಡಿದ ವಿಯತ್ತೇ ಮೊದಲಾದ ಸಮಸ್ತ ಪಂಚಭೂತಗಳೂ ಲಯವನ್ನು ಹೊಂದಿದರೂ ಎಂದರೆ ಸ್ವರೂಪಾಕಾರವನ್ನು ಹೊಂದಿದರೂ, **ತತ್ರ ತತ್ರ ಸ್ಥಿತೋಽಪಿ** - ಆ ಆ ಪಂಚಭೂತಗಳಲ್ಲಿಯೇ ದೇಹಾದಿ ರೂಪದಲ್ಲಿ ಸೇರಿಕೊಂಡಿದ್ದವನಾದರೂ, **ನವಿನಶ್ಯತಿ** - ಸ್ವರೂಪ ಪರಿಣಾಮವನ್ನು ಹೊಂದುವದಿಲ್ಲವು. ಈ ಅಭಿಪ್ರಾಯವು ಹಿಂದೆಯೇ (೨. ೨೦) **"ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋನ ಹನ್ಯತೇ ಹನ್ಯಮಾನೇ ಶರೀರೇ"** ಎಂದು ಹೇಳಲ್ಪಟ್ಟಿದ್ದರೂ, ಜಿಜ್ಞಾಸುವಿಗೆ ಶುದ್ಧಾತ್ಮ ಸ್ವರೂಪವು ಪ್ರಾಪ್ಯವಾಗಿ ವಿಧೇಯವಾದುದರಿಂದ ಇಲ್ಲಿಯೂ ಪ್ರಕರಣಾನುಗುಣವಾಗಿ ಹೇಳಲ್ಪಟ್ಟಿತು. ಈಗ ಎಳ್ಳನ್ನು ಸುಟ್ಟರೆ ಎಳ್ಳಿನಲ್ಲಿರುವ ಎಣ್ಣೆಯೂ ಸುಟ್ಟುಹೋಗುತ್ತದೆ; ಹಾಗೆಯೇ ಈ ಆತ್ಮನಿರುವ ಪಾಂಚಭೌತಿಕ ಶರೀರವು ನಷ್ಟವಾದರೆ, ಆತ್ಮನೂ ನಷ್ಟವಾಗುವನೋ ಎಂದರೆ ಹಾಗಲ್ಲವೆಂದು ತಿಳಿಸುವದಕ್ಕಾಗಿ, **ತತ್ರ ತತ್ರ ಸ್ಥಿತೋಽಪಿ** ಎಂಬ ಪ್ರಯೋಗವು. ಇದೂ ಕೂಡ ಹಿಂದೆಯೇ **ಅಚ್ಛೇದ್ಯೋಽಯಮದಾಹ್ಯೋಽಯಂ** ಎಂದು ಶಿಕ್ಷಿಸಲ್ಪಟ್ಟಿರುತ್ತದೆ. ಅದನ್ನೇ ಇಲ್ಲಿ ಪ್ರಕರಣವಿರುವದರಿಂದ ಮೂಲದಲ್ಲಿ **"ಯಸ್ಸ**

(೧) ಗೀ. ೧೨. ೩. (೨) ಗೀ. ೧೫. ೧೬.

**ಭಾ. ಇತ್ಯಾದಿಷು ; ತಂ ವೇದವಿದಃ ಪರಮಾಂಗತಿ ಮಾಹುಃ ; ಅಯಮೇವ ಸರ್ವೇಷು ಭೂತೇಷು ನಶ್ಯತ್ಸು ನವಿನಶ್ಯತಿ"** ಎಂದು ಅನುವಾದಮಾಡಿ ಹೇಳಲ್ಪಟ್ಟಿತು. **ಸೋऽವ್ಯಕ್ತೋಕ್ಷರ ಇತ್ಯುಕ್ತಃ** - ಇಂತಹ ಪ್ರಕೃತಿ ವಿಯುಕ್ತತೆಯಿಂದ ಮಹಾ ಪರಿಶುದ್ಧನಾಗಿ ನಾಶರಹಿತನಾಗಿರುವ ಜೀವಾತ್ಮನನ್ನೇ, **ಅವ್ಯಕ್ತ**ವೆಂದೂ, **ಅಕ್ಷರ**ವೆಂದೂ ಇಲ್ಲಿ ಹೇಳಿರುತ್ತದೆ. ಇಪ್ಪತ್ತನೆಯ ಶ್ಲೋಕದ ಉತ್ತರಾರ್ಧದ **ಸಃ** ಎಂಬ ಶಬ್ದಕ್ಕೆ ಅಲ್ಲಿಯೇ ಅನ್ವಯವು ಸರಿಹೋಗುವದಿಲ್ಲವಾದುದರಿಂದ ಮುಂದಿನ ಶ್ಲೋಕದೊಂದಿಗೆ ಅನ್ವಯಿಸಿ, **ಸಃ ಅವ್ಯಕ್ತೋಕ್ಷರ ಇತ್ಯುಕ್ತಃ** ಎಂಬುದಾಗಿ ಭಾಷ್ಯವನ್ನು ಬರೆದಿರುತ್ತಾರೆ. **ಹಾಗಲ್ಲದೆ** ಹಿಂದಿನ ಶ್ಲೋಕಕ್ಕೇನೆ ಅನ್ವಯಿಸುವದು ಯುಕ್ತವೆಂದರೆ, ಮುಂದಿನ ಶ್ಲೋಕಾದಿಯಲ್ಲಿ, **ಸಃ** ಎಂದು ಅಧ್ಯಾಹಾರಮಾಡಿಕೊಳ್ಳಬೇಕಾಗುತ್ತದೆ. **ತಂ** ಎಂಬುದು ದ್ವಿತೀಯಯಾದುದರಿಂದ **ಉಕ್ತಃ** ಎಂಬುವ ವಾಕ್ಯದೊಂದಿಗೆ ಸೇರಿಸಲು ಸಾಧ್ಯವಿಲ್ಲದುದರಿಂದ **ಸಃ** ಎಂದು ಇಟ್ಟುಕೊಳ್ಳಬೇಕಾಗುತ್ತದೆ. ಹೀಗೆ ಅವ್ಯಕ್ತಾಕ್ಷರ ಶಬ್ದಗಳು ಇಂತಹ ಜೀವಾತ್ಮನನ್ನು ನಿರ್ದೇಶಿಸಿ ಹೇಳುವ ಪ್ರಮಾಣಗಳುಂಟೋ ಎಂದರೆ ಹಾಗೆ ಪ್ರಯೋಗಗಳು ಇದೇ ಗೀತೆಯಲ್ಲೇ ಉಂಟೆಂದು ತೋರಿಸುತ್ತಾರೆ. ಆ ಪ್ರಕೃತಿ ವಿಯುಕ್ತಾತ್ಮನೇ ಅವ್ಯಕ್ತ, ಅಕ್ಷರಶಬ್ದಗಳಿಂದ ಮುಂದೆ ಹೇಳುವ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತಾನೆ; **ಯೇತ್ವಕ್ಷರ ಮನಿರ್ದೇಶ್ಯಂ ಅವ್ಯಕ್ತಂ** ಎಂಬಲ್ಲಿ ಅಕ್ಷರ ಅವ್ಯಕ್ತಶಬ್ದಗಳಿಂದ ಅಂತಹ ಜೀವಾತ್ಮನೇ ಹೇಳಲ್ಪಟ್ಟಿರುವವನು ಎಂಬ ಭಾವವು. ಹಾಗೆಯೇ **"ಕೂಟಸ್ಥೋऽಕ್ಷರ ಉಚ್ಯತೇ"** ಎಂಬಲ್ಲೂ ಅಕ್ಷರಶಬ್ದವು ಮುಕ್ತಾತ್ಮನನ್ನು ಬೋಧಿಸುತ್ತದೆಂಬ ಅಭಿಪ್ರಾಯವು. ಇದೇ ಅಧ್ಯಾಯದ ಮೂರನೆಯ ಶ್ಲೋಕದಲ್ಲೂ **"ಅಕ್ಷರಂ ಬ್ರಹ್ಮಪರಮಂ"** ಎಂಬ ಪ್ರಯೋಗದಿಂದ ಅಂತಹ ಶುದ್ಧನಾದ ಜೀವಾತ್ಮನೇ ಹೇಳಲ್ಪಟ್ಟಿರುತ್ತಾನೆ. ಅವ್ಯಕ್ತ, ಅಕ್ಷರಶಬ್ದಗಳು ಪರಮಾತ್ಮನನ್ನೇ ಬೋಧಿಸುತ್ತವೆ ಎಂದು ಕೆಲವರು ಅಭಿಪ್ರಾಯಪಡುವರು. - ಹೀಗೆ ಅರ್ಥಮಾಡಲು ಸಾಧ್ಯವೇ ಇಲ್ಲವು. ಏಕೆಂದರೆ ಶ್ರೀ ಕೃಷ್ಣನೇ ಪರಮಾತ್ಮನಾಗಿ **ತಮಾಹುಃ ಪರಮಾಂಗತಿಂ** ಎಂದು ಹೇಳಿ ಪ್ರಥಮ ಪುರುಷನಿರ್ದೇಶಮಾಡಿ ತಚ್ಛಬ್ದವನ್ನುಪಯೋಗಿಸಿ, **ತದ್ಧಾಮ ಪರಮ ಮಮ** ಎಂದು ಅದಕ್ಕಿಂತ ಬೇರೆಯಾಗಿ ಅಸ್ಮಚ್ಛಬ್ದವನ್ನೂ ಉಪಯೋಗಿಸಿರುವದರಿಂದ, ಪರಮಾತ್ಮನು ಅವ್ಯಕ್ತಾಕ್ಷರ ಶಬ್ದಗಳಿಂದ ಇಲ್ಲಿ ಹೇಳಲ್ಪಡಲಿಲ್ಲವೆಂದೂ, ಪ್ರಕೃತಿ ವಿಯುಕ್ತ ಜೀವಾತ್ಮನೇ ಹೇಳಲ್ಪಟ್ಟನೆಂದೂ ಸಿದ್ಧಾಂತಿಸಬಹುದಾಗಿರುತ್ತದೆ. ಆದರೆ ಮುಂದಿನ ಶ್ಲೋಕದಲ್ಲಿ **ಪುರುಷ ಸ್ಸ ಪರಃ** ಎಂಬುದರಿಂದ ಪರಮಪುರುಷನು ಪ್ರಥಮ ಪುರುಷದಲ್ಲಿ ನಿರ್ದೇಶಿಸಿ ಹೇಳಲ್ಪಟ್ಟಿದ್ದಾನಲ್ಲಾ ಎಂದರೆ ಯಚ್ಛಬ್ದಗಳು ಉತ್ತರಾರ್ಧದಲ್ಲಿರುವದರಿಂದ, ಅದಕ್ಕೆ ಪ್ರತಿಸ್ಪಂದಿಯಾಗಿ **ಸಃ** ಎಂಬುದು ಉಪಯೋಗಿಸಲ್ಪಟ್ಟಿತೆಂದೂ ಭಾವಿಸತಕ್ಕದ್ದು; ಮತ್ತು ಮುಂದಿನ ಶ್ಲೋಕದಲ್ಲಿ ಅಸ್ಮಚ್ಛಬ್ದ ಪ್ರಯೋಗವೂ ಇಲ್ಲವು. ಇಲ್ಲಿ **ಉಕ್ತಃ** - ಹೇಳಲ್ಪಟ್ಟಿತು ಎಂದಿರುವಾಗ, ಮುಂದೆ ಬರುವ ಪ್ರಮಾಣಗಳಲ್ಲಿ ಹೇಳಲ್ಪಟ್ಟಿರುತ್ತದೆ ಎಂಬ ಭಾಷ್ಯವು ಹೇಗೆ ಎಂದು ಆಕ್ಷೇಪಿಸಬಹುದು. ಇಲ್ಲಿಯೂ ಮೂರನೆಯ ಶ್ಲೋಕದಲ್ಲಿ ಹೇಳಿದುದೇ ಮುಂದೆಯೂ ಕೂಡ ಸಮರ್ಥಿಸಲ್ಪಟ್ಟಿರುತ್ತದೆ ಎಂಬಭಿಪ್ರಾಯದಿಂದ ಹೇಳಿದುದೆಂದು ಭಾವಿಸತಕ್ಕದ್ದು. ಹಿಂದೆಯೂ ಹೇಳಲ್ಪಟ್ಟಿರುತ್ತದೆ, ಮುಂದೆಯೂ ಹಾಗೆಯೇ ಪ್ರಯೋಗಿಸಲ್ಪಟ್ಟಿರುತ್ತದೆಂಬ ಭಾವದಲ್ಲೂ **ಉಕ್ತಃ** ಎಂದೂ ಉಪಯೋಗಿಸಬಹುದಷ್ಟೇ? **ತಮಾಹುಃ ಪರಮಾಂಗತಿಂ** ಎಂಬ ವಾಕ್ಯದಲ್ಲಿ ಕರ್ತೃಪದವು ಇಲ್ಲದುದರಿಂದ **ವೇದವಿದಃ** ಎಂಬ ಕರ್ತೃಪದವನ್ನಿಟ್ಟುಕೊಳ್ಳತಕ್ಕದ್ದೆಂದು ವ್ಯಾಖ್ಯಾನಮಾಡಿದರು, ಅದೇನು **ವೇದವಿದಃ** ಎಂದಿಟ್ಟುಕೊಳ್ಳತಕ್ಕದ್ದು. **ಶಾಸ್ತ್ರಜ್ಞಾಃ** ಎಂದು ಏಕೆ ಕೂಡದು ? ಎಂದರೆ, ಹಿಂದೆ

**ಭಾ. (೧) "ಯಃಪ್ರಯಾತಿ ತ್ಯಜನ್ ದೇಹಂ ಸಯಾತಿ ಪರಮಾಂಗತಿಂ" ಇತ್ಯತ್ರ ಪರಮ ಗತಿ ಶಬ್ದನಿರ್ದಿಷ್ಟೋಽಕ್ಷರಃ ಪ್ರಕೃತಿ ಸಂಸರ್ಗ ವಿಯುಕ್ತಸ್ವರೂಪೇಣಾವಸ್ಥಿತ ಆತ್ಮೇತ್ಯರ್ಥಃ। ಯಮೇವಂಭೂತಂ ಸ್ವರೂಪೇಣಾವಸ್ಥಿತಂ ಪ್ರಾಪ್ಯನನಿವರ್ತಂತೇ;ತನ್ಮಮ ಪರಮಂಧಾಮ-ಪರಂ ನಿಯಮನಸ್ಥಾನಂ ; ಅಚೇತನಪ್ರಕೃತಿರೇಕಂ ನಿಯಮನ**

೧೧ ನೆಯ ಶ್ಲೋಕದಲ್ಲಿ **ಯದಕ್ಷರಂ ವೇದವಿದೋ** ವದನ್ತಿ ಎಂಬಲ್ಲೂ ಅಕ್ಷರಶಬ್ದವನ್ನು ಜೀವಾತ್ಮಪರವಾಗಿ ಅನ್ವಯಿಸಿರುವದರಿಂದ ಅದರ ಜ್ಞಾಪನಾರ್ಥವಾಗಿ ಇಲ್ಲಿಯೂ **ವೇದವಿದಃ** ಎಂದು ಕರ್ತೃಪದವನ್ನು ಪ್ರಯೋಗಿಸಿರುತ್ತಾರೆ. **ತಂ** - ಅಂತಹ ಪ್ರಕೃತಿವಿಯುಕ್ತ ಜೀವಾತ್ಮನನ್ನೇ, **ಪರಮಾಂಗತಿ ಮಾಹುಃ**-ಶ್ರೇಷ್ಠವಾದ ಪ್ರಾಪ್ಯವನ್ನಾಗಿ ಹೇಳುತ್ತಾರೆ. ಜಿಜ್ಞಾಸುವು, ಜೀವಾತ್ಮನಾದ ತನಗೆ ಪರಮಾತ್ಮನು ಆತ್ಮಾ ಎಂದು ಜೀವಾತ್ಮ ಸ್ವರೂಪವನ್ನು ಉಪಾಸಿಸುವದರಿಂದ ತತ್ಕ್ರತುನ್ಯಾಯದ ಪ್ರಕಾರ ಅಂತಹ ಜೀವಾತ್ಮನೇ ಪ್ರಾಪ್ಯವೆಂದು ಭಾವಿಸುವನೆಂದು ಹೇಳಲ್ಪಟ್ಟಿತೆಂಬ ಭಾವವು. ಮುಂದಿನ ವಾಕ್ಯದಲ್ಲಿಯೂ **ಅಕ್ಷರ** ಶಬ್ದವನ್ನು ಪ್ರಯೋಗಿಸಿ, **ತ ಮಾಹುಃ ಪರಮಾಂಗತಿಂ** ಎಂದು ಹೇಳಿರುವದರಿಂದಲೂ, ಹಾಗೆಯೇ ಹಿಂದೆ ೧೧ ನೆಯ ಶ್ಲೋಕದಲ್ಲಿ **ಅಕ್ಷರ** ಶಬ್ದ ಪ್ರಯೋಗವೂ ೧೩ ನೆಯ ಶ್ಲೋಕದಲ್ಲಿ **ಸಯಾತಿ ಪರಮಾಂಗತಿಂ** ಎಂದೂ ಹೇಳಿರುವದರಿಂದಲೂ, ಎರಡೂ ಸಮಾನಾರ್ಥಕಗಳೆಂದು ಉಪದೇಶಿಸುತ್ತಾರೆ. **"ಯಃ ಪ್ರಯಾತಿ ತ್ಯಜನ್‌ದೇಹಂ ಸಯಾತಿ ಪರಮಾಂಗತಿಂ"** ಇತ್ಯತ್ರ - ಎಂದು ಹಿಂದೆ ೧೩ ನೆಯ ಶ್ಲೋಕದಲ್ಲಿ, **ಅಯಮೇವ** - ಇಂತಹ ಜೀವಾತ್ಮನೇ **ಪರಮಗತಿ ಶಬ್ದ ನಿರ್ದಿಷ್ಟೋಽಕ್ಷರಃ** - ಪರಮಗತಿ ಶಬ್ದದಿಂದ ನಿರ್ದೇಶಿಸಲ್ಪಟ್ಟ ಅಕ್ಷರನು ಎಂದರೆ **ಪ್ರಕೃತಿ ಸಂಸರ್ಗ ವಿಯುಕ್ತ ಸ್ವರೂಪೇಣಾವಸ್ಥಿತಃ ಆತ್ಮೇತ್ಯರ್ಥಃ** - ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟ ಪರಿಶುದ್ಧ ಸ್ವರೂಪದಿಂದ ಇರುವ ಜೀವಾತ್ಮನು ಎಂಬರ್ಥವು. **"ಯಂ ಪ್ರಾಪ್ಯ ನನಿವರ್ತಂತೇ** ಎಂಬ ೨೦ ನೆಯ ಉತ್ತರಾರ್ಧಕ್ಕೆ ವ್ಯಾಖ್ಯಾನ ಬರೆಯುತ್ತಾರೆ,—**ಯಂ** ಎಂದರೆ **ಏವಂ ಭೂತಂ ಸ್ವರೂಪೇಣಾವಸ್ಥಿತಂ** ಇಂತಹ ಪರಿಶುದ್ಧ ಸ್ವರೂಪವನ್ನು, **ಪ್ರಾಪ್ಯ** - ಹೊಂದಿ ತದನಂತರ, **ನ ನಿವರ್ತಂತೇ** - ಹಿಂತಿರುಗಿ ಬರುವದಿಲ್ಲವೋ, ಇದಕ್ಕೆ ಕರ್ತೃಪದವಿಲ್ಲವು, ಅಂತಹ ಜೀವಾತ್ಮೋಪಾಸಕರಾದ ಜಿಜ್ಞಾಸುಗಳು ಎಂದು ಇಟ್ಟುಕೊಳ್ಳತಕ್ಕದ್ದು; ಇದರಿಂದ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೆ ಪುನರಾವೃತ್ತಿಯಿಲ್ಲವೆಂದು ಹೇಳಿದಂತಾಯಿತು. ಏಕೆಂದರೆ ಛಾಂದೋಗ್ಯದ **"ತದ್ಯ ಇತ್ಥಂ ವಿದುಃ"** (೫. ೧೦. ೧೨) ಎಂಬ ವಾಕ್ಯವು ಸ್ಪಷ್ಟವಾಗಿ ಪಂಚಾಗ್ನಿ ವಿದ್ಯಾನಿಷ್ಠನಿಗೆ ಪುನರಾವೃತ್ತಿಯಿಲ್ಲವೆಂದು ತಿಳಿಸುತ್ತದೆ. ಆದುದರಿಂದ **ಚತುರ್ವಿಧಾಭಜನ್ತೇ"** ಎಂದು ನಾಲ್ಕಾಗಿ ವಿಭಾಗಿಸಿ ಹೇಳಿದ ಭಕ್ತರಲ್ಲಿ ಜಿಜ್ಞಾಸುವೂ ಜ್ಞಾನಿಯೂ ಪುನರಾವೃತ್ತಿ ಇಲ್ಲದವರು, ಆರ್ತನೂ ಅರ್ಥಾರ್ಥಿಯೂ ಪುನರಾವೃತ್ತಿಯುಳ್ಳವರು ಎಂದು ಜ್ಞಾಪಕದಲ್ಲಿಡತಕ್ಕದ್ದಾಗಿರುತ್ತದೆ. ಏಕೆಂದರೆ ಇವರುಗಳಿಗೆ ದೇಹಾವಸಾನಾನಂತರ ಗತಿಯಲ್ಲಿಯೂ ವ್ಯತ್ಯಾಸ ಉಂಟೆಂದು ಉಪದೇಶಿಸಲ್ಪಡುತ್ತದೆ. ಮುಂದೆ **ತದ್ಧಾಮ ಪರಮಂ ಮಮ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ. ಹಿಂದೆ ಶ್ಲೋಕದಲ್ಲಿ ಯಚ್ಛಬ್ದದಿಂದ ಪಂಚಾಗ್ನಿ ವಿದ್ಯಾನಿಷ್ಠನ ಪ್ರಾಪ್ಯವಾದ ಅಚಿದ್ವಿಯುಕ್ತಪರಿಶುದ್ಧಾತ್ಮನು ಹೇಳಲ್ಪಟ್ಟಿದುದರಿಂದ, **ತತ್** ಎಂಬ ಶಬ್ದವು ಇಲ್ಲಿ ಅಂತಹ ಆತ್ಮ ಸ್ವರೂಪವನ್ನೇ ಬೋಧಿಸುತ್ತದೆಂದು ವ್ಯಾಖ್ಯಾನಮಾಡುತ್ತಾರೆ.- **ತತ್ ಮಮ ಪರಮಂ ಧಾಮ** ಎಂದರೆ **ತತ್** - ಆ ಪ್ರಕೃತಿ ವಿಯುಕ್ತ ದಿವ್ಯಾತ್ಮಸ್ವರೂಪವೇ,

(೧) ಗೀ. ೮. ೧೩.

**ಭಾ. ಸ್ಥಾನಮ್ ; ತತ್ಸಂಸೃಷ್ಟರೂಪಾ ಜೀವಪ್ರಕೃತಿ ರ್ದ್ವಿತೀಯಂ ನಿಯಮನಸ್ಥಾನಂ; ಅಚಿತ್ಸಂಸರ್ಗವಿಯುಕ್ತಂ ಸ್ವರೂಪೇಣಾವಸ್ಥಿತಂ ಮುಕ್ತಸ್ವರೂಪಮ್ ಪರಮಂನಿಯಮನಸ್ಥಾನ ಮಿತ್ಯರ್ಥಃ। ತಚ್ಚಾಽಪುನರಾವೃತ್ತಿರೂಪಮ್। ಅಥವಾ ಪ್ರಕಾಶ ವಾಚೀ ಧಾಮಶಬ್ದಃ. ಪ್ರಕಾಶಶ್ಚೇಹ ಜ್ಞಾನಮಭಿಪ್ರೇತಮ್ ; ಪ್ರಕೃತಿ ಸಂಸೃಷ್ಟಾತ್ ಪರಿಚ್ಛಿನ್ನ ಜ್ಞಾನಸ್ವರೂಪಾದಾತ್ಮನೋಽಪರಿಚ್ಛಿನ್ನ ಜ್ಞಾನರೂಪತಯಾ ಮುಕ್ತ ಸ್ವರೂಪಂ ಪರಂಧಾಮ ॥ ೨೧ ॥**

---

**ಪರಂ ನಿಯಮನ ಸ್ಥಾನಂ** - ಶ್ರೇಷ್ಠವಾದ ನನ್ನ ನಿಯಮನರೂಪವಾದ ಸ್ಥಾನವು ; ಎಂದರೆ ಅದು ನನ್ನ ನಿಯಾಮ್ಯವರ್ಗದಲ್ಲಿ ಶ್ರೇಷ್ಠವಾದುದು ಎಂಬ ಭಾವವು. ಇದನ್ನೇ ವ್ಯಕ್ತಪಡಿಸುತ್ತಾರೆ:- **ಅಚೇತನ ಪ್ರಕೃತಿಯು, ಏಕಂ ನಿಯಮನ ಸ್ಥಾನಂ**-ನನಗೆ ಅದೊಂದು ನಿಯಮನಸ್ಥಾನವು ಎಂದರೆ ಅಪರಾಪ್ರಕೃತಿ ಎಂದು (ಗೀ ೭.೫) ಹೇಳಿಸಿಕೊಂಡ ಒಂದನೇ ನಿಯಾಮ್ಯ ವರ್ಗವು; **ತತ್ಸಂಸೃಷ್ಟರೂಪಾ** - ಆ ಅಪರಾಪ್ರಕೃತಿಯಾದ ಅಚೇತನದಿಂದ ಸಂಬಂಧಿಸಿಕೊಂಡಿರುವ, ಜ್ಞಾನವಿರುವದರಿಂದ ಶ್ರೇಷ್ಠವಾದ, ಜೀವ **ಪ್ರಕೃತಿಯು, ದ್ವಿತೀಯಂ ನಿಯಮನಸ್ಥಾನಂ**-ಎರಡನೆಯ ನಿಯಾಮ್ಯ ವರ್ಗವು ; **ಅಚಿತ್ಸಂಸರ್ಗ ವಿಯುಕ್ತಂ** - ಅದರೆ ಜ್ಞಾನ ತಿರೋಧಾನವನ್ನುಂಟುಮಾಡಿದ ಈ ಅಚಿತ್ತಿನ ಸಂಬಂಧದಿಂದ ಬಿಡಲ್ಪಟ್ಟ, **ಸ್ವರೂಪೇಣಾವಸ್ಥಿತಂ**-ಜ್ಞಾನ ತಿರೋಧಾನವಿಲ್ಲದ, ಆವಿರ್ಭವಿಸಿದ ಸ್ವಸ್ವರೂಪದಿಂದ ತುಂಬಾ ಜ್ಞಾನವಿಕಾಸಹೊಂದಿದ ಸ್ವರೂಪದಿಂದಿರುವ, **ಮುಕ್ತಸ್ವರೂಪಂ**-ಮುಕ್ತಾತ್ಮನ ಸ್ವರೂಪವು. **ಪರಮಂ ನಿಯಮನ ಸ್ಥಾನಮ್** ಸರ್ವೋತ್ಕೃಷ್ಟವಾದ ನಿಯಾಮ್ಯ ವರ್ಗವು ಎಂಬ ತಾತ್ಪರ್ಯವು. ಅಚಿತ್ತು ಅಪರಾ ಪ್ರಕೃತಿಯು, ಅದರೊಂದಿಗೆ ಸೇರಿದ ಚಿತ್ತು ಪರಾಪ್ರಕೃತಿಯು, ಅದರಿಂದ ಬಿಡಲ್ಪಟ್ಟ ಚಿತ್ತು **ಪರಮಾ ಪ್ರಕೃತಿಯು** ಎಂದು ಹೇಳಲ್ಪಟ್ಟಿತು. ಜಿಜ್ಞಾಸುವಿನ ಪ್ರಾಪ್ಯವು ಈ ಮೂರನೆಯ **ಪರಮಂ ಧಾಮ** - ಸರ್ವೋತ್ಕೃಷ್ಟವಾದ ನನ್ನ ನಿಯಾಮ್ಯ ವರ್ಗಕ್ಕೆ ಸೇರಿದ ವಿಭೂತಿಯು ಎಂಬ ಭಾವವು. **ಧಾಮ** ಎಂದರೆ ಸ್ಥಾನವೆಂದು ಹಿಂದೆ ಭಾಷ್ಯ ಬರೆಯಲ್ಪಟ್ಟಿತು. ಧಾಮ ಶಬ್ದವು ಪ್ರಕಾಶವಾಚಿಯಾದುದರಿಂದ ಹಾಗೂ ಇನ್ನೊಂದು ವಿಧವಾಗಿ ಅರ್ಥಮಾಡಬಹುದೆಂದು ವಿಕಲ್ಪಿಸಿ ಹೇಳುತ್ತಾರೆ. ಅಥವಾ, **ಪ್ರಕಾಶವಾಚೀ ಧಾಮಶಬ್ದಃ**-ಧಾಮಶಬ್ದವು ಪ್ರಕಾಶವನ್ನು ಬೋಧಿಸುವದಾಗಿಯೂ ಭಾವಿಸಬಹುದು, **ಪ್ರಕಾಶಶ್ಚೇಹ ಜ್ಞಾನ ಮಭಿಪ್ರೇತಂ** - ಇಲ್ಲಿ ಪ್ರಕಾಶವಾದರೋ ಜ್ಞಾನವೆಂಬ ಅಭಿಪ್ರಾಯವು. ಪ್ರಕಾಶವೆಂಬರ್ಥವನ್ನು ಹೇಗೆ ಅನ್ವಯಿಸಬಹುದೆಂಬುದನ್ನು ತೋರ್ಪಡಿಸುತ್ತಾರೆ. **ಪ್ರಕೃತಿ ಸಂಸೃಷ್ಟಾತ್** - ಪ್ರಕೃತಿಯೊಂದಿಗೆ ಸಂಬಂಧಿಸಿಕೊಂಡಿರುವ, **ಪರಿಚ್ಛಿನ್ನ ಜ್ಞಾನರೂಪಾತ್** - ಆ ಕಾರಣದಿಂದ ಪರಿಮಿತ ಜ್ಞಾನರೂಪನಾದ ಬದ್ಧ ಜೀವನಿಗಿಂತಲೂ, **ಆತ್ಮನಃ**-ಅಂತಹ ಪ್ರಕೃತಿ ಸಂಬಂಧವಿಲ್ಲದಿರುವ ಆತ್ಮನು, **ಅಪರಿಚ್ಛಿನ್ನ ಜ್ಞಾನ ರೂಪತಯಾ** - ಅಪರಿಮಿತವಾದ ಜ್ಞಾನವುಳ್ಳವನಾದುದರಿಂದಲೂ, ಮುಕ್ತಸ್ವರೂಪವು, **ಪರಮಂಧಾಮ** - ಸರ್ವೋತ್ಕೃಷ್ಟವಾದ ಪ್ರಕಾಶಸ್ವರೂಪವುಳ್ಳದ್ದು. **ಪರಮಂ ಮಮ** ಎಂದು ಮೂಲದಲ್ಲಿರುವ **ಮಮ** ಶಬ್ದಕ್ಕೆ ಹಿಂದೆಯೇ ತನಗೆ ನಿಯಾಮ್ಯವಾದ ಪ್ರಕೃತಿ ಎಂದು ಅರ್ಥಮಾಡಿರುವದರಿಂದ, ಈ ಎರಡನೆಯ ಭಾಷ್ಯದಲ್ಲಿ **ಮಮ** ಶಬ್ದಕ್ಕೆ ವ್ಯಾಖ್ಯಾನ ಮಾಡದಿದ್ದರೂ ಇಲ್ಲಿಯೂ ಆ ಅರ್ಥವನ್ನೇ ಇಟ್ಟುಕೊಳ್ಳತಕ್ಕದ್ದೆಂಬ ಭಾವವು ; **ಮಮ** ಎಂದರೆ ನನಗೆ ಶರೀರವಾಗಿ ನನಗೆ ಶೇಷಭೂತವಾದುದೆಂಬರ್ಥವು

ಈ ಶ್ಲೋಕದಲ್ಲಿ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೆ ಪ್ರಾಪ್ಯವು ಈ ಹೇಯಪ್ರಕೃತಿಯಿಂದ ಬಿಡಲ್ಪಟ್ಟ ಸ್ವಸ್ವರೂಪಾವಿರ್ಭಾವದಿಂದ ವಿರಾಜಿಸುವ ತೇಜೋಮಯನಾದ ತತ್ಕ್ರತು

**ಭಾ. ಅ. ಜ್ಞಾನಿನಃ ಪ್ರಾಪ್ಯಂ ತು ತಸ್ಮಾದತ್ಯಂತ ವಿಭಕ್ತ ಮಿತ್ಯಾಹ—**

ನ್ಯಾಯ ಪ್ರಕಾರ ಪ್ರಾಪ್ಯವಾದ ದಿವ್ಯಾತ್ಮ ಸ್ವರೂಪವೆಂದೂ, ಅಂತಹ ಉಪಾಸಕನಿಗೆ ಪುನರಾವೃತ್ತಿ ಇಲ್ಲವೆಂದೂ ಹೇಳಲ್ಪಟ್ಟಿತು. ಇವನನ್ನೇ ಕೇವಲನೆಂದೂ ಅವನ ಪ್ರಾಪ್ತಿಗೆ ಕೈವಲ್ಯವೆಂದೂ ಹೇಳುತ್ತಾರೆ. ಈ ಕೇವಲನಿಗೂ ಜ್ಞಾನಿಗೂ ಇಬ್ಬರಿಗೂ ಪುನರಾವೃತ್ತಿಯಿಲ್ಲವೆಂಬುದು ಛಾಂದೋಗ್ಯದ **ತದ್ಯ ಇತ್ಥಂ ವಿದುಃ** ಎಂಬ ವಾಕ್ಯದಿಂದ ಸುವ್ಯಕ್ತವು: ಆದರೆ ಇಬ್ಬರಿಗೂ ಏನೂ ವ್ಯತ್ಯಾಸವಿಲ್ಲದ ಮೋಕ್ಷಪ್ರಾಪ್ತಿಯೇ ಎಂದರೆ ಈ ಕೇವಲನು ಜ್ಞಾನಿಗಿಂತ ದರ್ಜೆಯಲ್ಲಿ ಕಮ್ಮಿ ಎಂದೂ, **"ಸರ್ವೇ ಚ್ಯವನ ಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್"** ಎಂಬ ಪ್ರಮಾಣರೀತ್ಯಾ, ಇವನೂ ಚ್ಯವನ ಧರ್ಮಯುಕ್ತನೆಂದೂ ಹೇಳಿರುವದರಿಂದ, ತತ್ಕ್ರತು ನ್ಯಾಯಕ್ಕೆ ವಿರುದ್ಧವಾಗುವದರಿಂದ ಕೊನೆಗೆ ಪುನರಾವರ್ತಿ ಇಲ್ಲದ ಮೋಕ್ಷಪ್ರಾಪ್ತಿಯೂ ಇಬ್ಬರಿಗೂ ಸಮವಾದರೂ ಫಲದಲ್ಲಿ ತಾರತಮ್ಯವನ್ನು ಕಲ್ಪಿಸಬೇಕಾಗಿರುತ್ತದೆ. ಮಧು ವಿದ್ಯಾನಿಷ್ಠನೂ ಬ್ರಹ್ಮವಿದ್ಯಾನಿಷ್ಠನಾದರೂ ಮಧ್ಯೆ ವಸ್ವಾದಿ ಲೋಕಪ್ರಾಪ್ತಿಯುಂಟಾಗಿ ಅನಂತರ ಮೋಕ್ಷವೆಂದು ಹೇಳಿರುವಹಾಗೆ, ಈ ಜಿಜ್ಞಾಸುವಿಗೂ ಪರಿಶುದ್ಧ ಜೀವಾತ್ಮ ಸ್ವರೂಪವು ಪ್ರಾಪ್ಯವಾಗಿ ಅನಂತರ ಮೋಕ್ಷವೆಂದು ಇಲ್ಲಿ ಹೇಳಲ್ಪಟ್ಟಿತು. ಹಾಗೆಯೇ ಜಿಜ್ಞಾಸುವಿಗೆ ಸ್ವಲ್ಪಕಾಲ ಬೇರೆ ಲೋಕಪ್ರಾಪ್ತಿಯುಂಟೇ ಎಂಬ ಸಂದರ್ಭದಲ್ಲಿ ಛಾಂದೋಗ್ಯ ಶ್ರುತಿಯು ಸುಮ್ಮನೆ ಇವನಿಗೂ ಅಪುನರಾವೃತ್ತಿ ರೂಪ ಮೋಕ್ಷಪ್ರಾಪ್ತಿ ಎಂದು ಇಷ್ಟು ಮಾತ್ರ ಹೇಳಿತೇ ವಿನಾ ಸ್ಥಳವನ್ನಾಗಲಿ ಎಷ್ಟು ಕಾಲವೆಂದಾಗಲಿ ನಿರ್ದೇಶಿಸಿ ಹೇಳಲಿಲ್ಲವು. ಇದಕ್ಕೆ ಇನ್ನೂ ಯಾವಸ್ಮೃತಿ ಮೊದಲಾದ ಪ್ರಮಾಣಗಳೂ ಇಲ್ಲವು. ಬಹುಶಃ ಈತನಿಗೆ ಆತ್ಮಾನುಭವವು ಅರ್ಚಿರಾದಿಗತಿಗೆ ಮುಂಚಿತವಾಗಿಯಾಗಲಿ, ಅಥವಾ ಮಧ್ಯದಲ್ಲಿಯಾಗಲಿ ಉಂಟಾಗಬಹುದೆಂದು ಭಾವಿಸತಕ್ಕದ್ದಾಗಿರುತ್ತದೆ; ಆದುದರಿಂದಲೇ ಈ ಶ್ಲೋಕದ **ತದ್ಧಾಮ ಪರಮಂಮಮ** ಎಂಬಲ್ಲಿರುವ **ಧಾಮ** ಶಬ್ದಕ್ಕೆ ಜಿಜ್ಞಾಸುವು ಆತ್ಮಾನುಭವ ಮಾಡುವ ಸ್ಥಳವೆಂದು ಅರ್ಥಮಾಡದೆ, ಒಂದು ಸಂದರ್ಭದಲ್ಲಿ ನಿಯಮನಸ್ಥಾನವೆಂದೂ, ಇದೂ ಅವರಿಗೆ ಪೂರಾ ರುಚಿಸದೆ, **ಧಾಮ** ಶಬ್ದಕ್ಕೆ ತೇಜಸ್ಸೆಂಬ ಸಮಂಜಸವಾದ ಅರ್ಥವನ್ನು ಬರೆದಿರುತ್ತಾರೆಂದು ತಿಳಿಯತಕ್ಕದ್ದಾಗಿರುತ್ತದೆ || ೨೧ ||

**ಭಾಷ್ಯಾವತಾರಿಕೆಯ ಅರ್ಥವು :—**ಹಿಂದಿನ ಶ್ಲೋಕದಲ್ಲಿ ಜಿಜ್ಞಾಸುವಿನ ಪ್ರಾಪ್ಯವನ್ನು ತಿಳಿಸಿ, ಈ ಶ್ಲೋಕದಿಂದ ಜ್ಞಾನಿಯ ಪ್ರಾಪ್ಯವು ಹೇಳಲ್ಪಟ್ಟು, ಆ ಉಪಾಸನೆಗಳಿಗೂ ಈ ಜ್ಞಾನಿಯ ಉಪಾಸನೆಗೂ ವಿಶೇಷ ವೈಲಕ್ಷಣ್ಯ ಉಂಟೆಂದೂ, ಆ ವೈಲಕ್ಷಣ್ಯವು ಯಾವುದು ಎಂದರೆ, ಅವ್ಯಭಿಚರಿತ ಭಕ್ತಿಯೆಂದೂ, ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ.—**ಜ್ಞಾನಿನಃ ಪ್ರಾಪ್ಯಂತು** - ಜ್ಞಾನಿಗಳಾದ ಭಕ್ತರ ಪ್ರಾಪ್ಯವಾದರೋ, ಈ **ತು** ಶಬ್ದದಿಂದ ಹಿಂದೆ ಹೇಳಿದುದಕ್ಕೆ ವೈಲಕ್ಷಣ್ಯವು ಇಲ್ಲಿ ಹೇಳಲ್ಪಡುತ್ತದೆಂದು ಸೂಚಿಸುತ್ತಾರೆ, **ತಸ್ಮಾತ್** - ಹಿಂದೆ ಹೇಳಿದ ಜಿಜ್ಞಾಸುವಿಗಿಂತಲೂ, **ಅತ್ಯಂತ ವಿಭಕ್ತಮಿತ್ಯಾಹ** - ಅತ್ಯಂತ ವಿಲಕ್ಷಣವಾದುದಾಗಿ ಆ ಕಾರಣದಿಂದ ಬೇರೆಯಾದುದೆಂದು ಹೇಳುತ್ತಾರೆ. ಯಾರಿಂದ ಹಾಗೆ **ವಿಭಕ್ತಂ** ಎಂಬ ಅಪೇಕ್ಷೆಯಲ್ಲಿ ಶಾಸ್ತ್ರಜ್ಞರಾಗಿ ವಿವೇಕಿಸಿ ಹೇಳುವ ಪ್ರಾಜ್ಞರಿಂದ ವಿಭಕ್ತವು ಎಂಬ ಭಾವವು; ಆದುದರಿಂದ ಜ್ಞಾನಿಗೆ ಪ್ರಾಪ್ಯವು ಅತಿ ವಿಲಕ್ಷಣವಾದುದು ಎಂದು ತಿಳಿಸುವದಕ್ಕಾಗಿಯೂ ವಿಭಕ್ತಂ ಎಂಬ ಪ್ರಯೋಗವು. ಹೀಗೆ ವೈಲಕ್ಷಣ್ಯವನ್ನು ಕಲ್ಪಿಸಲು ಕಾರಣಗಳೇನೆಂದರೆ.—

(೧) ಅಂತಹ ಪರಮ ಪುರುಷನು ಎಂದು ಆತನ ಮಹಾತ್ಮ್ಯೆಯನ್ನು ವಿಸ್ತರಿಸಿ ಹೇಳಿ ಆತನೇ ಪ್ರಾಪ್ಯವೆಂದು ಹೇಳಿರುವದರಿಂದಲೂ

(೨) ಅಂತವನು ಅವ್ಯಭಿಚರಿತ ಭಕ್ತಿಯೋಗದಿಂದ ಲಭ್ಯನೆಂದು ಹೇಳಿರುವದರಿಂದಲೂ.

**ಮೂ. ಪುರುಷ ಸ್ಸಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾನ್ತಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥** **೨೨.**

(೩) ಆ ಪರಮ ಪುರುಷ ಶಬ್ದವು ಆತನ ಮಾಹಾತ್ಮ್ಯೆಯನ್ನು ವಿಸ್ತರಿಸಿ ಹೇಳುವದಾದುದರಿಂದಲೂ ವಿಲಕ್ಷಣವೆಂಬ ಭಾವವು.

(೪) ಈ ಜ್ಞಾನಿಯ ಭಕ್ತಿಯಾದರೋ **ಅನನ್ಯಯಾ** ಎಂದು **ವಿಶೇಷಿಸಿ** ಹೇಳಲ್ಪಟ್ಟಿರುತ್ತದೆ. ಇತರರ ಭಕ್ತಿಯಾದರೋ ಫಲವಿಶಿಷ್ಟವಾದುದರಿಂದ ಅನನ್ಯವಲ್ಲವು.

ಹೀಗೆ **ವಿಭಕ್ತಂ** ಎಂದು ಯಾರಿಂದ ಹೇಳಲ್ಪಟ್ಟಿತೆಂದರೆ **ವಿವೇಚಕ್ಯೈಃ** - ವಿವೇಕಿಸಿ **ತಿಳಿ**ಯುವ ಪ್ರಾಜ್ಞ**ರಿಂ**ದ ಎಂಬ ಭಾವವು.

**ಮೂಲಕ್ಕೆ ಅರ್ಥವು :**—ಹಿಂದೆ ೨೧ನೆಯ ಶ್ಲೋಕದಲ್ಲಿ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೆ ಪ್ರಾಪ್ಯವು ಯಾವುದೆಂದು ಹೇಳಿ, ಆತನಿಗೆ ಐಶ್ವರ್ಯಾರ್ಥಿ ಮತ್ತು ಆರ್ತರಿಗಿಂತಲೂ ಉತ್ತಮ ಫಲವೆಂದೂ, ಅದೂ ಅಪುನರಾವರ್ತಿರೂಪವಾದುದೇ ಎಂದೂ ಹೇಳಿದರು. ಈಗ ಉಪಾಸಕರಲ್ಲೆಲ್ಲಾ ಸರ್ವಶ್ರೇಷ್ಠನಾದ ಜ್ಞಾನಿಗೆ ಪ್ರಾಪ್ಯವು **ಯಾವುದೆಂಬುದನ್ನು ತಿಳಿಸು**ತ್ತಾರೆ. ಪರಮೈಕಾಂತಿ ಭಕ್ತಿಯಿಂದ ಉಪಾಸಿಸುವನಿಗೀಗ ನಾನು ಲಭ್ಯನು, ಎಂದರೆ ಪ್ರಾಪ್ಯನು, ಎಂದು ಹೇಳಿಕೊಳ್ಳುವದರಿಂದ, ಜ್ಞಾನಿಗೆ ಪ್ರಾಪ್ಯವೇ ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆಂಬುದು ಸುವ್ಯಕ್ತವು. **ಹೇ ಪಾರ್ಥ** - ಓ ಅರ್ಜುನನೇ, **ಭೂತಾನಿ** - ಶರೀರಗಳಾದ ಸರ್ವಪ್ರಾಣಿಗಳೂ, **ಯಸ್ಯ** - ಪುರುಷ ಸೂಕ್ತದಲ್ಲಿ ವಿಶ್ವ ಶರೀರಕನೆಂದು **"ಪುರುಷ ಏವೇದಗ್ಂ ಸರ್ವಂ"** ಎಂದು ಹೇಳಿರುವಹಾಗೂ, ಮತ್ತು ಹಿಂದೆ ಏಳನೆಯ ಅಧ್ಯಾಯದಲ್ಲಿ **ಕೊಂಡಾಡಲ್ಪಟ್ಟ** ಹಾಗೂ, ಯಾವ ಪ್ರಸಿದ್ಧನಾದ ಪರಮಪುರುಷನಿಗೆ, **ಅನ್ತಸ್ಥಾನಿ** - ತನ್ನಲ್ಲಿ ಅಡಗಿವೆಯೋ, **ಯೇನ** - ಯಾವ ಜಗತ್ಕಾರಣನಾದ ಧ್ಯೇಯ ವಸ್ತುವಿನಿಂದ, **ಸರ್ವ ಮಿದಂ ತತಮ್** - **"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್"** ಎಂದೂ, **"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ"** ಎಂದೂ, ಹೇಳಿರುವಹಾಗೆ ಸಮಸ್ತ ಚಿದಚಿತ್ತುಗಳು ವ್ಯಾಪಿಸಲ್ಪಟ್ಟಿವೆಯೋ, **ಸಃ** - ಅಂತಹ, **ಪರಃ ಪುರುಷಃ**-ಪರಮ ಪುರುಷನು, ಜೀವಾತ್ಮನೂ ಪುರುಷನೇ ಏಕೆಂದರೆ ದೇಹವೆಂಬ **ಪುರಿ** - ಪಟ್ಟಣದಲ್ಲಿ **ಶೇತೇ** - ಮಲಗಿರುವವನಾದುದರಿಂದ, ಬದ್ಧಜೀವನು ಅಪವಿತ್ರನಾಗಿಯೂ ಮುಕ್ತ ಜೀವನೂ ಒಂದು ಕಾಲದಲ್ಲಿ ಬದ್ಧಜೀವನಹಾಗೆ ಅಮಂಗಳನಾಗಿಯೂ ಇದ್ದುದರಿಂದ ಇವರಿಬ್ಬರೂ **ಪರಮಪುರುಷರಲ್ಲವು**, ಪರಮಾತ್ಮನೊಬ್ಬನೇ ಇಂತಹ ಅಪವಿತ್ರತೆ ಇಲ್ಲದುದರಿಂದ ಪರಮ ಪುರುಷನು ಎಂದು ಮುಂದೆ ಹೇಳಲ್ಪಡುತ್ತದೆ. **"ಯಸ್ಮಾತ್ಕ್ಷರಮತೀತೋಽಹಂ, ಅಕ್ಷರಾದಪಿ ಚೋತ್ತಮಃ। ಅತೋಽಸ್ಮಿ ವೇದೇ ಲೋಕೇ ಚ ಪ್ರಥಿತಃ ಪುರುಷೋತ್ತಮಃ ॥"** (ಗೀ. ೧೫-೧೮) ಎಂದು ತಮಗೆ ಪುರುಷೋತ್ತಮ ವಾಚ್ಯತ್ವವು ಹೇಗೆ ಕೂಡುತ್ತದೆಂಬುದನ್ನು ಉಪದೇಶಿಸಿರುತ್ತಾರೆ. ಹೀಗೆ ಪುರುಷಶಬ್ದ ವಾಚ್ಯತ್ವಕ್ಕೆ ಅರ್ಹತೆಯು, ತನಗಿರುವ **ಪರಿಪೂರ್ಣ**ತ್ವವೇನು, ಪೂರ್ವದಿಂದಲೂ ಅನಾದಿಯಾಗಿರುವ ಸದ್ಭಾವವೇನು, **ಏಕೋ ಬಹೂನಾಂ ವಿದಧಾತಿ ಕಾಮಾನ್** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ **ಪುರುದಾನಾತ್** - ವಿಶೇಷವಾಗಿ ಸರ್ವಾಭೀಷ್ಟಗಳನ್ನೂ ಕೊಡುವದೇನು, ಇವುಗಳಿಂದ **ಪರಮಪುರುಷನು**, ಇಂತಹ ಮಹತ್ತಾದ ಐಶ್ವರ್ಯಯುಕ್ತನಾದ **ಪರಃ ಪುರುಷಃ** - ಪರಮಪುರುಷನು, **ಅನನ್ಯಯಾ** - ಅವ್ಯಭಿಚರಿತವಾದ ಎಂದರೆ ಪರಮೈಕಾಂತವಾದ, **ಭಕ್ತ್ಯಾತು** - ಭಕ್ತಿಯೋಗದಿಂದಲಾದರೋ **ಲಭ್ಯಃ** - ಪ್ರಾಪ್ಯನು ಇಲ್ಲಿ **ತು** ಶಬ್ದವು ಪರಮಾತ್ಮನಲ್ಲೇ ಮಾಡುವ ಅನನ್ಯ ಭಕ್ತಿಯಲ್ಲದ ಇತರ ಸಾಧನಗಳೂ ವ್ಯಾವರ್ತಿಸಲ್ಪಟ್ಟವು. ಅನ್ಯ ದೇವತೆಯಲ್ಲಿ ಭಕ್ತಿಯೂ, ಭಕ್ತಿಯಲ್ಲದೆ ಕೇವಲ ಕರ್ಮಯೋಗಾದಿ

**ಭಾ.** (೧) "ಮತ್ತಃ ಪರತರಂ ನಾನ್ಯತ್ಕಿಞ್ಚಿದಸ್ತಿ ಧನಂಜಯ ! ಮಯಿ ಸರ್ವ ಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ||" (೨) "ಮಾಮೇಭ್ಯಃ ಪರಮವ್ಯಯಮ್" ಇತ್ಯಾದಿನಾ ನಿರ್ದಿಷ್ಟಸ್ಯ ಯಸ್ಯ ಅನ್ತಸ್ಸ್ಥಾನಿ ಸರ್ವಾಣಿ ಭೂತಾನಿ, ಯೇನ ಚ ಪರೇಣ ಪುರುಷೇಣ ಸರ್ವಮಿದಂ ತತಂ, ಸಃ ಪರಃ ಪುರುಷಃ (೩) "ಅನನ್ಯಚೇತಾ ಸ್ಸತತಂ" ಇತ್ಯನನ್ಯಯಾ ಭಕ್ತ್ಯಾ ಲಭ್ಯಃ || ೨೨ ||

---

ಸಾಧನೆಗಳೂ ವ್ಯಾವರ್ತಿಸಲ್ಪಟ್ಟವು. ಮುಂದೆ ಸ್ಫುಟವಾಗಿ **"ನಾಹಂ ವೇದೈರ್ನತಪಸಾ"** (೧೧. ೫೩) ಎಂಬಲ್ಲಿ ಕರ್ಮಯೋಗಾದಿಗಳನ್ನು ವ್ಯಾವರ್ತಿಸಿ ಹೇಳಿ **"ಭಕ್ತ್ಯಾತ್ವನನ್ಯಯಾ ಶಕ್ಯಃ"** (ಗೀ. ೨೧ ೫೪) ಎಂಬಲ್ಲಿ ಈ ಅಭಿಪ್ರಾಯವನ್ನೇ ಪುನಃ ಹೇಳುತ್ತಾರೆ. ಭಕ್ತಿಯೋಗವೇನೋ ಪರಮಪ್ರಾಪ್ಯ ಸಾಧನವೆಂಬುದೇನೋ ನಿಸ್ಸಂಶಯವು ಭಕ್ತಿಯೋಗವೇ ಸಾಕ್ಷಾತ್ತಾಗಿ ಇದನ್ನು ಸಾಧಿಸಿಕೊಡುತ್ತದೋ ಎಂದರೆ ಹಾಗಲ್ಲವು. ಇದು ಒಂದು ವ್ಯಾಜವು ; ಇದರಿಂದ ಭಗವಂತನು ಪ್ರೀತನಾದರೆ ಆಗೀಗ ಪರಮ ಪುರುಷನು ದಿವ್ಯ ವೈಕುಂಠವಲ್ಲಿ ಪ್ರಾಪ್ಯನಾಗುವನು. ಭಕ್ತಿ ಯೋಗಾನುಷ್ಠಾನ ಮಾಡಿದಮಾತ್ರಕ್ಕೇ ಪ್ರಾಪ್ಯವು ಕರಗತವಾಗುವದಿಲ್ಲವು ಅದರಿಂದ ಪರಮ ಪುರುಷನು ಪ್ರೀತನಾಗಬೇಕು. ಈ ವಿಷಯವು ಮುಂದೆ ಉಪಾದಿಸಲ್ಪಡುತ್ತದೆ. ಅನೇಕರು ಪರೀಕ್ಷೆಗೆ ಹೋಗಬಹುದು. ಪರೀಕ್ಷಕನು ಪ್ರೀತನಾದರೆ ಪ್ಯಾಸಾಗುವನು. ಹಾಗೆಯೇ ಇಲ್ಲಿಯೂ.

**ಭಾಷ್ಯಾರ್ಥವು :—** ಮೂಲದಲ್ಲಿ **ಯಸ್ಯ** ಎಂಬ ಪ್ರಸಿದ್ಧಿಯಿಂದ ಪರಮ ಪುರುಷನು ಹೇಳಲ್ಪಟ್ಟನೆಂದು ಭಾವಿಸಿ, ಪ್ರಸಿದ್ಧಿ ಹೇಗೆ ಎಂದು ಪ್ರದರ್ಶಿಸುವದಕ್ಕಾಗಿ ಹಿಂದಿನ ಗ್ರಂಥವನ್ನು ಉದಾಹರಿಸುತ್ತಾರೆ. (೧) **"ಮತ್ತಃ ಇತ್ಯಾದಿ** "ಎಲ್ಲಾ ಚಿದಚಿದ್ವಸ್ತುಗಳನ್ನೂ ಉಂಟುಮಾಡಿ ಅಚಿತ್ತುಗಳಿಗೆಲ್ಲಾ ಜೀವಾತ್ಮನನ್ನು ಶೇಷಿಯನ್ನಾಗಿ ಮಾಡಿ, ಹೀಗಿರುವದರಿಂದ ಇವೆಲ್ಲಾ ಚಿದ ಚಿತ್ತುಗಳಿಗಿಂತಲೂ ಜ್ಞಾನಶಕ್ತಿ ಮೊದಲಾದ ಗುಣಗಳಿಂದ ನಾನು ಸರ್ವೋತ್ಕೃಷ್ಟನಾಗಿರುವದ ರಿಂದ ನನಗಿಂತ ಉತ್ಕೃಷ್ಟವಸ್ತುವು ಯಾವುದೂ ಇಲ್ಲವು ; ನಾನು ನಿಸ್ಸಮಾಭ್ಯಧಿಕನು ; ಈ ಚಿದ ಚಿತ್ತು ವಸ್ತುಗಳೆಲ್ಲವೂ ನೂಲಿನಲ್ಲಿ ಮಣಿಗಳನ್ನು ಪೋಣಿಸಿರುವ ಹಾಗೆ ನನ್ನೊಂದಿಗೇನೇ ಸಂಬಂಧಿಸಿಕೊಂಡಿರುತ್ತವೆ ; ಎಂದರೆ ಯಾವಗಲೂ ನಾನು ಚಿದಚಿದ್ವಿಶಿಷ್ಟನಾಗಿಯೇ ಇರುತ್ತೇ ನೆಂದೂ" **"ಮಾಮೇಭ್ಯಃ ಪರಮವ್ಯಯಮ್"** ಹೀಗೆ ಎಲ್ಲಾ ಚಿದಚಿತ್ತುಗಳೂ ಹೇಯತ್ರಿಗುಣ ಗಳಿಂದ ಕೂಡಿದವಾಗಿಯೇ ಇರುವದರಿಂದ ಅವುಗಳೆಲ್ಲಕ್ಕಿಂತಲೂ ಕಲ್ಯಾಣ ಗುಣ ಮಹೋದಧಿ ಯಾಗಿಯೂ, ಅವುಗಳ ಸ್ವರೂಪಕ್ಕೂ ಕಾರಣಭೂತನಾಗಿರುವದರಿಂದ ಅವೆಲ್ಲಕ್ಕಿಂತಲೂ ಉತ್ಕೃಷ್ಟ ನಾಗಿಯೂ, ಯಾವವಿಧವಾದ ಪರಿಣಾಮ ರಹಿತನಾಗಿಯೂ" **ಇತ್ಯಾದಿನಾನಿರ್ದಿಷ್ಟಸ್ಯ** - ಹೀಗೆಲ್ಲಾ ಹಿಂದೆ ಹೇಳಲ್ಪಟ್ಟ, **ಯಸ್ಯ** - ಯಾವ ಪರಮಾತ್ಮನ, **ಅನ್ತಸ್ಸ್ಥಾನಿ** - ಒಳಗೆ ಇರುವ ಎಂದರೆ ಪರಮಾತ್ಮನೊಂದಿಗೆ ಸೇರಿಕೊಂಡು, ಆತನಿಂದ ಒಳಗೂ ಹೊರಗೂ ವ್ಯಾಪಿಸಲ್ಪಟ್ಟವು ಗಳಾಗಿ, **ಸರ್ವಾಣಿಭೂತಾನಿ** - ಸಮಸ್ತ ಪ್ರಾಣಿಗಳು ಇವೆಯೋ **ಯೇನ ಚ ಪರಮ ಪುರು ಷೇಣ** - ಯಾವ ಈ ಪ್ರಸಿದ್ಧನಾದ ಪರಮ ಪುರುಷನಿಂದಲೂ, **ಸರ್ವಮಿದಂ ತತಮ್** - ಇವೆ ಲ್ಲವೂ ವ್ಯಾಪಿಸಲ್ಪಟ್ಟವೆಯೋ, **ಸಃ ಪರಃಪುರುಷಃ** - ಅಂತಹ ಸರ್ವೋತ್ಕೃಷ್ಟನಾಗಿರುವ ಪರಮ ಪುರುಷನು **"ಅನನ್ಯ ಚೇತಾಸ್ಸತತಂ"** ಅವ್ಯಭಿಚರಿತ ಪರಮೈಕಾಂತಿ ಭಕ್ತಿಯಿಂದ ಎಂದು ಹಿಂದೆ ಹೇಳಿರುವಹಾಗೆ, **ಅನನ್ಯಯಾಭಕ್ತ್ಯಾ** - ಅನನ್ಯ ಭಕ್ತಿಯಿಂದ, **ಲಭ್ಯಃ** - ಭಕ್ತಿಯೋಗ ನಿಷ್ಠ ರಾದ ಜ್ಞಾನಿಗಳಿಂದ ಪ್ರಾಪ್ಯನು. ಮೂಲದಲ್ಲಿ **ಭಕ್ತ್ಯಾಲಭ್ಯಃ** ಇಷ್ಟು ಮಾತ್ರವೇ ಇದ್ದರೂ, ಹಿಂದೆ ಇದು ಎಂತಹ ಭಕ್ತಿ ಎಂದರೆ **ಆತ್ಮಾರ್ಥಮಪ್ರಿಯತ್ವೇನ ಮತ್ಸ್ಮೃತ್ಯಾ ವಿನಾ ಆತ್ಮಧಾರಣ**

---

(೧) ಗೀ. ೭. ೭. (೨) ಗೀ. ೭. ೧೩. (೩) ಗೀ. ೮. ೧೪.

**ಮಲಭವಸಾನೋ ನಿರತಿಶಯ ಪ್ರಿಯಾಂ ಸ್ಮೃತಿಂ"** ಎಂಬ ಭಾಷ್ಯದಿಂದ ವಿಶದೀಕರಿಸಲ್ಪಟ್ಟಿರುವದನ್ನು ಜ್ಞಾಪಿಸಿಕೊಂಡು ಅನನ್ಯಯಾ ಭಕ್ತ್ಯಾ ಎಂದು ವ್ಯಾಖ್ಯಾನವು. ಅದು ತೈಲಾಧಾರೆಯ ಹಾಗೆ ಅವಿಚ್ಛಿನ್ನ ಸ್ಮೃತಿ ಸಂತಾನರೂಪವಾಗಿ, ಇತರ ಫಲಗಳಲ್ಲಿ ಮಮತೆಯಿಲ್ಲದೆ ಅನ್ಯದೇವತೆಗಳ ಸಂಬಂಧವೂ ಇಲ್ಲದೆ, ಅವ್ಯಭಿಚರಿತಭಕ್ತಿಯಾಗಿರಬೇಕೆಂಬ ತಾತ್ಪರ್ಯವು. ಇಲ್ಲಿ ಹೇಳಿದ **ಪುರುಷ ಸ್ಸಪರಃ ಪಾರ್ಥ** ಎಂಬ ಅನುವಾದವೂ, **ಮತ್ತಃಪರತರಂನಾನ್ಯತ್ ಕಿಂಚಿದಸ್ತಿ ಧನಂಜಯ** ಎಂಬ ಉಪಪಾದನೆಯೂ ಏಕಾರ್ಥವುಳ್ಳವೆಂದು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಅಲ್ಲಿಯಾಗಲಿ ಇಲ್ಲಿಯಾಗಲಿ ಪರಮಾತ್ಮಾ ಒಬ್ಬನೇ ಇನ್ನುಯಾವುದೂ ಇಲ್ಲವು, ಮಿಕ್ಕಿದ್ದೆಲ್ಲವೂ ಮಿಥ್ಯೆಯು ಎಂಬ ಭಾವನೆಯು ಶಾಸ್ತ್ರಸಮ್ಮತವಲ್ಲದುದು ಎಂದು ತೋರಿಸುವದಕ್ಕಾಗಿಯೂ ಹಾಗೆ ವ್ಯಾಖ್ಯಾನವು, ಈ ಪರನಾದ ಆತ್ಮಾ ಒಬ್ಬನೇ ಎಂಬ ಅಭಿಪ್ರಾಯವು ಶ್ವೇತಾಶ್ವತರರ ನಿಸ್ಸಮಾಭ್ಯಧಿಕ ಶ್ರುತಿಗೆ ವಿರೋಧವು, ಆ ಶ್ರುತಿಯು ಯಾವುದೆಂದರೆ **"ಯಸ್ಮಾತ್ಪರಂ ನಾ ಪರನುಸ್ತಿ ಕಿಂಚಿತ್ ಯಸ್ಮಾತ್ ನಾಣೀಯೋ ನ ಜ್ಯಾಯೋಸ್ತಿ ಕಿಂಚಿತ್"** ಪರಮಾತ್ಮನಿಗಿಂತಲೂ ಸಮವಾಗಿ ಅಥವಾ ಅಧಿಕವಾಗಿ ಇರುವದಾಗಲಿ ಯಾವುದೂ ಇಲ್ಲವು. ಹಾಗೆಯೇ **ನ ತತ್ಸ ಮಶ್ಚಾಭ್ಯಧಿಕಶ್ಚ ದೃಶ್ಯತೇ"** (ಶ್ವೇ ೬. ೮.) ಎಂಬಲ್ಲೂ **"ತಮೀಶ್ವರಾಣಾಂ ಪರಮಂ ಮಹೇಶ್ವರಂ"** ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಇತರ ಈಶ್ವರರು ಇದ್ದರಲ್ಲವೇ ಅವರಿಗೂ ಉತ್ಕೃಷ್ಟನಾಗಿ ಪರಮ ಪುರುಷನು **ಪರಮಂ ಮಹೇಶ್ವರಂ** ಎಂದು ಹೇಳಲ್ಪಡುವನು? ಆದುದರಿಂದ **ಪುರುಷಸ್ಸಪರಃ** ಎಂಬ ಪ್ರಯೋಗದಿಂದ ತೋರಿಬರುವ ಅರ್ಥಗಳು ಯಾವುವೆಂದರೆ – **ದ್ವಾಸುಪರ್ಣಾ** ಇತ್ಯಾದಿ ಶ್ರುತಿಗಳಿಂದ ತೋರಿಬರುವ ದೇಹದಲ್ಲಿ ಶಯನಿಸಿಕೊಂಡಿರೋಣವೂ, ಎಲ್ಲರ ಸತ್ತಾಸ್ಥಿತಿ ನಿಯಮನಾದಿಗಳಿಗೂ ಕಾರಣಭೂತನಾಗಿ ಸ್ವತಂತ್ರನಾಗಿ ಆತನೊಬ್ಬನೇ ಪುರುಷನು, ಮಿಕ್ಕ ಜೀವಾತ್ಮರೆಲ್ಲರೂ **"ಸ್ತ್ರೀಪಾಯ ಮಿತರತ್** ಎಂಬ ಪ್ರಯೋಗಾನುಸಾರ ಆತನಿಗೆ ಅಧೀನವಾಗಿರೋಣವೂ, **"ತೇನೇದಂ ಪೂರ್ಣಂ ಪುರುಷೇಣ ಸರ್ವಂ"** ಎಂದು ಹೇಳಿರುವ ಹಾಗೆ ಪರಿಪೂರ್ಣನಾಗಿರೋಣವೂ, ಪೂರ್ವಸದ್ಭಾವವೂ, **ಏಕೋ ಬಹೂನಾಂ ವಿಧದಾತಿ ಕಾಮಾನ್** ಎಂದು ಹೇಳಿರುವ ಹಾಗೆ ಉದಾರಿಯಾಗಿ ಪುರುದಾನ ಮಾಡೋಣವೂ ಇವೆಲ್ಲಾ ಅಭಿಪ್ರಾಯಗಳೂ ವ್ಯಕ್ತಪಡುತ್ತವೆ. ಆದುದರಿಂದ ಈ ಶ್ಲೋಕವು ಅದ್ವೈತವಾದಕ್ಕೆ ಸುತರಾಂ ಕೂಡುವದಿಲ್ಲವು. ಇತರರು ಯಾರೂ ಇಲ್ಲದಿದ್ದರೆ ಈತನು ಯಾರಿಗೆ ಕೊಡುವನು? ಭೂತಗಳು ಸತ್ಯವಾಗಿದ್ದರಲ್ಲವೇ ಅವುಗಳಲ್ಲಿ ಅಂತರ್ಯಾಮಿಯಾಗಿರುವ ಭಾವವು ಸರಿಹೋಗುತ್ತದೆ. ಇದರಿಂದ ಮಿಥ್ಯಾವಾದಕ್ಕೆ ಅನುಕೂಲವಿಲ್ಲವು. ಹಾಗೆಯೇ **ಏನ ಸರ್ವಮಿದಂತತಮ್** ಎಂಬ ಪ್ರಯೋಗದಿಂದ, ಸಮಸ್ತ ಜಗತ್ತು ಸತ್ಯವಾಗಿಯೇ, ಇರಬೇಕೆಂಬುದು ವ್ಯಕ್ತವು. ಹಾಗೆ ಇಲ್ಲದಿದ್ದರೆ ಪರಮಾತ್ಮನಿಗೆ ಸರ್ವವ್ಯಾಪಕತ್ವವೇ ಕೂಡುವದಿಲ್ಲವು, **"ತೇನೇದಂ ಪೂರ್ಣಂ ಪುರುಷೇಣ ಸರ್ವಂ"** ಸರ್ವವೂ ಈ ಪುರುಷನಿಂದ ಪೂರ್ಣವೆಂದರೆ ಸರ್ವವು ಬೇರೆ, ಪರಮಾತ್ಮನೇ ಬೇರೆ ಎಂಬ ಭೇದವು ಸಿದ್ಧಿಸುವಾಗ ಅದ್ವೈತವಾದಕ್ಕೆ ಅನುಕೂಲವಿಲ್ಲವು.

**ಭಾಷ್ಯಾವತಾರಿಕೆಯ ಅರ್ಥವು:**—ಹಿಂದೆ **"ಚತುರ್ವಿಧಾ ಭಜನ್ತೇ ಮಾಂ"** ಎಂದು ಹೇಳಲ್ಪಟ್ಟ ನಾಲ್ಕು ಜನ ಭಕ್ತರಲ್ಲಿ ಆರ್ತನೂ ಅರ್ಥಾರ್ಥೀ ಇಬ್ಬರಿಗೂ ಪುನರಾವೃತ್ತಿಯೂ, ಜಿಜ್ಞಾಸುವಿಗೂ ಜ್ಞಾನಿಗೂ ಅಪುನರಾವೃತ್ತಿಯೂ, ಫಲವೆಂದೂ ಹೇಳಿದರು. ದೇಹಾವಸಾನಾನಂತರ ಇವರುಗಳ ಗತಿಯು ಹೇಗೆ ಎಂಬುವನ್ನು ತಿಳಿಸಲು ಉದ್ಯುಕ್ತರಾಗಿ, ಆ ಆರ್ತನಿಗೂ ಮತ್ತು ಅರ್ಥಾರ್ಥಿಗೂ ಪುನರಾವೃತ್ತಿರೂಪ ಧೂಮಾದಿಮಾರ್ಗವೆಂದೂ, ಜಿಜ್ಞಾಸುವಿಗೂ ಮತ್ತು

**ಭಾ. ಅ. ಅಥ ಆತ್ಮಯಾಥಾತ್ಮ್ಯವಿದಃ ಪರಮಪುರುಷನಿಷ್ಠಸ್ಯ ಚ ಸಾಧಾರಣೀ ಮರ್ಚಿರಾದಿಕಾಂ ಗತಿ ಮಾಹ—ದ್ವಯೋರಪ್ಯ ರ್ಚಿರಾದಿಕಾ ಗತಿ ಶ್ಶ್ರುತೌ ಶ್ರುತಾ; ಸಾ ಚಾ ಪುನರಾವೃತ್ತಿಲಕ್ಷಣಾ; ಯಥಾಪಞ್ಚಾಗ್ನಿ ವಿದ್ಯಾಯಾಂ (೧) "ತದ್ಯ ಇತ್ಥಂ**

ಜ್ಞಾನಿಗೂ ಅಪುನರಾವೃತ್ತಿ ರೂಪಾರ್ಚಿರಾದಿ ಗತಿ ಎಂದೂ, ತಿಳಿಸುತ್ತಾರೆ. ಜಿಜ್ಞಾಸುವೆಂಬ ಅಧಿಕಾರಿ ಯಾರು, ಆತನಿಗೂ ಜ್ಞಾನಿಗೂ ಇರುವ ವೈಲಕ್ಷಣ್ಯವೇನೆಂಬುದನ್ನು ಚನ್ನಾಗಿ ತಿಳಿಯದೇ ಇರುವ ಅನೇಕರು ಮನಬಂದಂತೆ ವ್ಯಾಖ್ಯಾನಮಾಡಿರುವದರಿಂದ ಅವುಗಳನ್ನು ನಿರಾಕರಿಸಿ ಶ್ರುತಿ ಪ್ರತಿಪನ್ನಾರ್ಥವನ್ನು ವ್ಯಕ್ತಪಡಿಸುವದಕ್ಕಾಗಿ ಸ್ವಲ್ಪ ವಿಸ್ತರಿಸಿ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಇದರಿಂದ ಮುಂದಿನ **"ಯತ್ರಕಾಲೇ"** ಎಂಬ ಶ್ಲೋಕ ಮೊದಲುಗೊಂಡು, **"ಯೋಗಯುಕ್ತೋ ಭವಾರ್ಜುನ"** ಎಂಬ ೨೭ ನೆಯ ಶ್ಲೋಕಾಂತ್ಯವವರೆಗೂ ಉಪದೇಶಿಸಲ್ಪಡುವ ಒಟ್ಟು ತಾತ್ಪರ್ಯವನ್ನು ಹೇಳುವದಲ್ಲದೆ, ಮುಂದಿನ ಶ್ಲೋಕದಲ್ಲಿ ಯಾರಿಗೆ ಪುನರಾವೃತ್ತಿಯಿಲ್ಲದ ಅರ್ಚಿರಾದಿ ಮಾರ್ಗವೂ, ಇನ್ನು ಯಾರಿಗೆ ಪುನರಾವೃತ್ತಿರೂಪವಾದ ಧೂಮಾದಿಮಾರ್ಗವೂ, ಎಂಬುದನ್ನು ತಿಳಿಸುವೆನು ಎಂದು ಪ್ರತಿಜ್ಞಾರೂಪವಾಕ್ಯವನ್ನು ಹೇಳಿಅನಂತರ ಎರಡು ಶ್ಲೋಕಗಳಿಂದ ಆ ಮಾರ್ಗಗಳಲ್ಲಿ ಗತಿಯು ಯಾರಿಗೆ ಎಂಬುದನ್ನು ತಿಳಿಸುತ್ತಾರೆ. ನಿರ್ಯಾಣಾನಂತರ ಅರ್ಚಿರಾದಿಮಾರ್ಗದ ಮೂಲಕ ಗಮನವು ಜಿಜ್ಞಾಸುವಿಗೂ ಜ್ಞಾನಿಗೂ ಎಂದು ಹೇಳುವರಾಗಿ, ಅದು ಶ್ರುತಿಸಿದ್ಧವೆಂದು ಪ್ರಮಾಣ ಮೂಲಕ ಉಪಪಾದಿಸುತ್ತಾರೆ. ಜ್ಞಾನಿಗೇನೋ ಅರ್ಚಿರಾದಿ ಗಮನವೂ ಅಪುನರಾವೃತ್ತಿಯೂ ಎಂದರೇನೋ ಒಪ್ಪಬಹುದು. ಅಕ್ಷರನಿಷ್ಠನಾಗಿ ಆತ್ಮ ಯಾಥಾತ್ಮ್ಯವಿತ್ತಾಗಿ ತತ್ಕ್ರತುನ್ಯಾಯದ ಪ್ರಕಾರ ತತ್ಪ್ರಾಪ್ತಿಗಾಗಿ ಉಪಾಸನವನ್ನು ಮಾಡುವ ಜಿಜ್ಞಾಸುವಿಗೆ ಅಪುನರಾವೃತ್ತಿ ಎಂದು ಹೇಳಿದುದು ಹೇಗೆ? ಎಂಬ ವಿಚಾರದಲ್ಲಿ ಶ್ರುತಿಯಲ್ಲಿ ಹಾಗೆ ಹೇಳಿವೆ ಎಂದು ಪ್ರಮಾಣಗಳೊಂದಿಗೆ ಸ್ಥಾಪಿಸುತ್ತಾರೆ. **ಅಥ** - ಅನಂತರದಲ್ಲಿ **ಆತ್ಮಯಾಥಾತ್ಮ್ಯವಿದಃ** - ಆತ್ಮಸ್ವರೂಪ ಸ್ವಭಾವಗಳ ಯಾಥಾತ್ಮ್ಯವನ್ನು ತಿಳಿದವನಾದ ಜಿಜ್ಞಾಸುವಿಗೂ, **ಪರಮ ಪುರುಷ ನಿಷ್ಠಸ್ಯ ಚ** - ಪರಮ ಪುರುಷಪ್ರಾಪ್ತಿಗಾಗಿ ಪರಮ ಪುರುಷನನ್ನು ಉಪಾಸಿಸುವ ಜ್ಞಾನಿಗೂ ಸಹ, **ಸಾಧಾರಣೀಂ** - ಇಬ್ಬರಿಗೂ ಸಮವಾಗಿರುವದರಿಂದ ಸಾಧಾರಣವಾದ, **ಅರ್ಚಿರಾದಿಕಾಂ ಗತಿ ಮಾಹ**-ಅರ್ಚಿರಾದಿ ಮಾರ್ಗವನ್ನು ಉಪದೇಶಿಸುತ್ತಾರೆ. ಇಬ್ಬರಿಗೂ ಹೇಗೆ ಅರ್ಚಿರಾದಿ ಗತಿಯು ಎಂದರೆ ಶ್ರುತಿಪ್ರಮಾಣವುಂಟೆನ್ನುತ್ತಾರೆ. **ದ್ವಯೋರಪಿ** - ಈ ಎರಡು ವಿಧ ಉಪಾಸಕರಿಗೂ, **ಅರ್ಚಿರಾದಿ ಗತಿಯು ಶ್ರುತೌಶ್ರುತಾ** - ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. **ಸಾ ಚ**-ಆ ಇಬ್ಬರ ಗತಿಯಾದರೋ, **ಅಪುನರಾವೃತ್ತಿ ಲಕ್ಷಣಾ** - ಪುನರಾವೃತ್ತಿ ಇಲ್ಲದೆ ಶಾಶ್ವತ ಪದವನ್ನು ಹೊಂದುವ ಲಕ್ಷಣವುಳ್ಳದು. ಅದು ಹೇಗೆಂದರೆ ಶ್ರುತಿಯನ್ನು ಉದಾಹರಿಸಿ, ಉಪಪಾದಿಸಿ ಹೇಳುತ್ತಾರೆ. **ಯಥಾ** - ಹೇಗೆಂದರೆ? **ಪಞ್ಚಾಗ್ನಿ ವಿದ್ಯಾಯಾಂ** - ಪಞ್ಚಾಗ್ನಿ ವಿದ್ಯೆಯಲ್ಲಿ **"ತದ್ಯ ಇತ್ಥಂ ವಿದುಃ ಯೇಚೇಽ ಮೇರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷ ಮಭಿ ಸಂಭವನ್ತ್ಯ ರ್ಚಿಷೋಽಹ ರಹ್ನ ಅಪೂರ್ಯಮಾಣ ಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾಂ ಸ್ತಾನ್, ಮಾಸೇಭ್ಯಸ್ಸಂವತ್ಸರಂ ಸಂವತ್ಸರಾ ದಾದಿತ್ಯ ಮಾದಿತ್ಯಾ ಚ್ಚನ್ದ್ರಮಸಂ ಚನ್ದ್ರಮಸಾ ವಿದ್ಯುತಂ ತತ್ಪುರುಷೋಽಮಾನವಃ, ಸ ಏನಾನ್ ಬ್ರಹ್ಮಗಮಯತಿ ಏಷದೇವ ಯಾನಃ ಪನ್ಥಾ"** ಎಂಬುದು (ಛಾಂ. ೫. ೧೦. ೧) **ಪೂರಾ ವಾಕ್ಯವು.** ಇದರರ್ಥವೇನೆಂದರೆ, **ತತ್** - ಸಂಸಾರಿಯಾದ ಜೀವನು ಪುನಃಪುನಃ ಸಂಸಾರಿಯಾಗಿ ಗರ್ಭವಾಸವೇ ಮೊದಲಾದ ಅಸಂಖ್ಯೇಯ ದುಃಖಗಳನ್ನು ಅನುಭವಿಸುವ ಪ್ರತ್ಯಗಾತ್ಮನ ಸ್ವರೂಪವನ್ನು, **ಯೇ** - ಯಾರು, **ಇತ್ಥಂ ವಿದುಃ** - ಪಂಚಾಗ್ನಿ

**ಭಾ. ಅ. ವಿದು ರ್ಯೇಚೇಮೇರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ, ತೇ ರ್ಚಿಷ ಮಭಿ ಸಮ್ಭವನ್ತಿ ಅರ್ಚಿಷೋಽಹಃ"ಇತ್ಯಾದೌ ಅರ್ಚಿರಾದಿಕಯಾ ಗತಸ್ಯ ಪರಬ್ರಹ್ಮಪ್ರಾಪ್ತಿ ರಪುನರಾವೃತ್ತಿ ಶ್ಚಾ ಮ್ನಾತಾ,"ಸ ಏನಾನ್ ಬ್ರಹ್ಮಗಮಯತಿ ಏತೇನ ಪ್ರತಿಪದ್ಯ ಮಾನಾ ಇಮಂ ಮಾನವ ಮಾವರ್ತಂ ನಾವರ್ತಂತೇ"ಇತಿ. ನ ಚ ಪ್ರಜಾಪತಿ ವಾಕ್ಯಾ**

ವಿದ್ಯೆಯಲ್ಲಿ ಹೇಳಿರುವಹಾಗೆ, ಎಂದರೆ ದ್ಯುಃಪರ್ಜನ್ಯ (ಮಳೆ) ಪೃಥಿವೀ, ಪುರುಷ, ಯೋಷಿತ್ತುಗಳಾದ ಪಂಚಾಗ್ನಿಯಲ್ಲಿ ಕ್ರಮವಾಗಿ ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ರೇತಸ್ಸು ಇವುಗಳ ಆಹುತಿಯಿಂದ ಪುರುಷವಾಚ್ಯನಾಗುವನೆಂಬುದನ್ನು ತಿಳಿದು, ಶರೀರಕ್ಕಿಂತ ಆತ್ಮನು ಆ ಕಾರಣದಿಂದ ವಿಲಕ್ಷಣನು ಎಂದು ತಿಳಿದು, ಯಾರು ಈ ಆತ್ಮನು ಬ್ರಹ್ಮಾತ್ಮಕನೆಂದು ಪರಮಾತ್ಮೋಪಾಸನವನ್ನು ಆತ್ಮಪ್ರಾಪ್ತಿಗಾಗಿ ಮಾಡುತ್ತಾರೋ, ಮತ್ತು **"ಯೇ ಚೇಮೇರಣ್ಯೇ ಶ್ರದ್ಧಾತಪ ಇತ್ಯುಪಾಸತೇ** - ಯಾರು ಅರಣ್ಯದಲ್ಲಿ ಇದ್ದುಕೊಂಡು ಶ್ರದ್ಧೆಯನ್ನು ಪುರಸ್ಕರಿಸಿ, ತಪಶ್ಶಬ್ದ ವಾಚ್ಯನು ಪರಬ್ರಹ್ಮನೆಂದು ಪರಮಾತ್ಮೋಪಾಸನವನ್ನು ಪರಮಾತ್ಮಪ್ರಾಪ್ತಿಗಾಗಿ **ಉಪಾಸಿಸು**ತ್ತಾರೋ, ಇವರಿಬ್ಬರೂ **ಅರ್ಚಿಷ ಮಭಿಸಂಭವನ್ತಿ - ಅರ್ಚಿ** ಎಂಬ ಅತಿವಾಹಕದೇವತೆಯನ್ನೂ ಹೊಂದುವರು. **ಅರ್ಚಿಷೋಽಹಃ** - ಅಲ್ಲಿಂದ ಮುಂದಕ್ಕೆ ಅಹಸ್ಸೆಂಬ ಅತಿವಾಹಕ ದೇವತೆಯನ್ನೂ, ಅಹಸ್ಸಿನಿಂದ ಶುಕ್ಲಪಕ್ಷಾಭಿಮಾನ ದೇವತೆಯನ್ನೂ, ಅಲ್ಲಿಂದ ಉತ್ತರಾಯಣಾಭಿಮಾನ ದೇವತೆಯನ್ನೂ, ಅಲ್ಲಿಂದ ಸಂವತ್ಸರಾಭಿಮಾನ ದೇವತೆಯನ್ನೂ ಅಲ್ಲಿಂದ ಆದಿತ್ಯನನ್ನೂ, ಆದಿತ್ಯನಿಂದ ಚಂದ್ರನನ್ನೂ, ಚಂದ್ರನಿಂದ ವಿದ್ಯುತ್ತನ್ನೂ, ಸೇರುವನು; ಅಲ್ಲಿಂದ ಅಮಾನವನೆಂಬ ಅತಿವಾಹಕನು ಬ್ರಹ್ಮವಿತ್ತಿಗೆ ಮಾರ್ಗವನ್ನು ತೋರಿಸಿ ಪರಬ್ರಹ್ಮನ ಹತ್ತಿರಕ್ಕೆ ಕರೆದುಕೊಂಡು ಹೋಗುವನೆಂದು ಹೇಳಲ್ಪಟ್ಟಿರುತ್ತದೆ. ಈ ಮಾರ್ಗಕ್ಕೆ ದೇವಯಾನವೆಂದು ಹೆಸರು. ಅತಿವಾಹಕರು ಬ್ರಹ್ಮವಿತ್ತನ್ನು ಸತ್ಕರಿಸಿ ತಮ್ಮ ತಮ್ಮ ಎಲ್ಲೆಯ ಮಾರ್ಗವನ್ನು ತೋರಿಸಿ ಕರೆದುಕೊಂಡು ಹೋಗುವವರು ೧೨ ದೇವತೆಗಳು. ಅವರಲ್ಲಿ ಅಮಾನವನು ಪರವಾಸುದೇವನ ಹತ್ತಿರಕ್ಕೆ ಕರೆದುಕೊಂಡು ಹೋಗುವನು. ಹೀಗೆ ಪಂಚಾಗ್ನಿ ವಿದ್ಯೆಯಲ್ಲಿ ಹೇಳಲ್ಪಟ್ಟಿರುತ್ತದೆ" **ಇತ್ಯಾದೌ** - ಇವೇ ಮೊದಲಾದ ಶ್ರುತಿವಾಕ್ಯದಲ್ಲಿ **ಅರ್ಚಿರಾದಿಕತಯಾ ಗತಸ್ಯ** - ಈ ಅರ್ಚಿರಾದಿಗಳ ಮಾರ್ಗವಾಗಿ ದೇವಯಾನದಲ್ಲಿ ಹೋದವನಿಗೆ, **ಪರಬ್ರಹ್ಮಪ್ರಾಪ್ತಿ ರಪುನರಾವೃತ್ತಿಶ್ಚಾ ಮ್ನಾತಾ** - ಪರಬ್ರಹ್ಮಪ್ರಾಪ್ತಿಯೂ ಅಪುನರಾವೃತ್ತಿಯೂ ಎಂದರೆ ಪುನರ್ಜನ್ಮವಿಲ್ಲದಿರೋಣವೂ ಸಹ ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಮುಂದಕ್ಕೆ **"ಸ ಏನಾನ್ ಬ್ರಹ್ಮಗಮಯತಿ, ಏತೇನ ಪ್ರತಿಪದ್ಯಮಾನಾ ಇಮಂ ಮಾನವ ಮಾವರ್ತಂ ನಾವರ್ತನ್ತೇ"** ಎಂದಿರುತ್ತದೆ, **ಸಃ** - ಆ ವೈದ್ಯುತ ಪುರುಷನು, **ಅಮಾನವಃ** - ಸಂಸಾರಿಯಲ್ಲದವನು, **ಏನಾನ್** - ಈ ಎರಡು ವಿಧ ಉಪಾಸಕರನ್ನೂ, **ಬ್ರಹ್ಮಗಮಯತಿ** - ಕರೆದುಕೊಂಡು ಹೋಗಿ ಪರಬ್ರಹ್ಮವನ್ನು ಸೇರಿಸುವನು; ಈ ವೈದ್ಯುತನು ಬಂದು ಎದುರುಗೊಂಡು ಈ ಬ್ರಹ್ಮವಿತ್ತನ್ನು ಕರೆದುಕೊಂಡು ಹೋಗುವನು ಎಂಬ ತಾತ್ಪರ್ಯವು. ಏಕೆಂದರೆ ಇನ್ನೊಂದು ಶ್ರುತಿಯಲ್ಲಿ **ಅಮಾನವಸ್ಸ ಏತ್ಯ ಬ್ರಹ್ಮಲೋಕಾನ್ ಗಮಯತಿ"** ಎಂದು ಹೇಳಲ್ಪಟ್ಟಿರುತ್ತದೆ. (ಬೃ. ೮. ೨. ೧೫.) **ಏತೇನ** - ಈ ದೇವಯಾನ ಮಾರ್ಗದಿಂದ, **ಪ್ರತಿಪದ್ಯಮಾನಾಃ** - ಹೋಗಿ ಸೇರಿದವರು, **ಇಮಂ** - ಈ, **ಮಾನವಂ ಆವರ್ತಂ** - ಮನುಷ್ಯನ ಜನ್ಮವನ್ನು ಪುನಃ ಪುನಃ ಹೊಂದಿ ಸುತ್ತುವದನ್ನು, **ನಾವರ್ತನ್ತೇ** - ಹೊಂದುವದಿಲ್ಲವು, **ಇತಿ** ಎಂದು, ಹೇಳಲ್ಪಟ್ಟಿರುತ್ತದೆ. ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೂ ಜ್ಞಾನಿಯಾದ ಪರಮಾತ್ಮೋಪಾಸಕನಿಗೂ ಹೀಗೆ ಇಬ್ಬರಿಗೂ **ಅರ್ಚಿರಾದಿಗತಿಯೂ ಅಪುನರಾವೃತ್ತಿರೂಪ ಪರಬ್ರಹ್ಮಪ್ರಾಪ್ತಿಯೂ ಛಾಂದೋಗ್ಯಶ್ರುತಿಯು ಹೇಳುತ್ತದೆಂದು**

**ಭಾ. ದೌ ಶ್ರುತ ಪರವಿದ್ಯಾಙ್ಗಭೂತಾತ್ಮಪ್ರಾಪ್ತಿ ವಿಷಯೇಯಂ "ತದ್ಯ ಇತ್ಥಂವಿದುಃ" ಗತಿಶ್ರುತಿಃ, "ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ" ಇತಿ ಪರ ವಿದ್ಯಾಯಾಃ ಪೃಥಕ್ಶ್ರುತಿ ವೈಯರ್ಥ್ಯಾತ್; ಪಂಚಾಗ್ನಿವಿದ್ಯಾಯಾಂ ಚ (೨) "ಇತಿ ತು ಪಂಚ ಮ್ಯಾ ಮಾಹುತಾವಾಪಃ ಪುರುಷ ವಚಸೋ ಭವನ್ತಿ" ಇತಿ (೩) "ರಮ**

ಪ್ರಮಾಣವನ್ನು ಉದಾಹರಿಸಿದರು. ಜಿಜ್ಞಾಸುವು ಆತ್ಮಸ್ವರೂಪ ಪ್ರಾಪ್ತಿಯನ್ನು ಅಪೇಕ್ಷಿಸಿ ಪರಬ್ರಹ್ಮೋಪಾಸನವನ್ನು ಮಾಡುತ್ತಾನೆ. ಆತ್ಮಧ್ಯಾನಿಗೆ ಆತ್ಮಾವಲೋಕನಪ್ರಾಪ್ತಿಯು ಅಙ್ಗವಾಗಿ ಶಾಸ್ತ್ರದಲ್ಲಿ ಅಙ್ಗಿಯಫಲವನ್ನು ಅಙ್ಗಕ್ಕೆ ಹೇಳುವ ಅನೇಕ ನಿದರ್ಶನಗಳಿರುವಹಾಗೆ ಇಲ್ಲಿಯೂ ಹೇಳಿರಬಹುದೆಂದು ಶಂಕಿಸಿ, ಅಂತಹ ಶಙ್ಕಾವಿಗೆ ಕಾರಣವಿಲ್ಲವೆಂದು ಮುಂದಿನವಾಕ್ಯಗಳಿಂದ ತಿಳಿಸುತ್ತಾರೆ. **ನ ಚ ಪ್ರಜಾಪತಿವಾಕ್ಯಾದೌ ಶ್ರುತ ಪರವಿದ್ಯಾಙ್ಗಭೂತಾತ್ಮಪ್ರಾಪ್ತಿ ವಿಷಯೇಯಂ** - ಹಿಂದೆ ಕರ್ಮಯೋಗ ಜ್ಞಾನಯೋಗ ಸಂದರ್ಭಗಳಲ್ಲಿ ಪ್ರಜಾಪತಿ ವಾಕ್ಯವೇ ಮೊದಲಾದವುಗಳಲ್ಲಿ ಪರವಿದ್ಯೆಯಾದ ಪರಮಾತ್ಮೋಪಾಸನವಾದ ಭಕ್ತಿಯೋಗಕ್ಕೆ, ಅಙ್ಗವಾಗಿ ಹಿಂದೆ ಮೊದಲು ಆರು ಅಧ್ಯಾಯಗಳಿಂದ ಹೇಳಲ್ಪಟ್ಟ ಆತ್ಮಾವಲೋಕನ ವಿಷಯವಾದುದಲ್ಲವು. ಇದರಿಂದ ಕರ್ಮಯೋಗದಿಂದಾಗಲಿ, ಕರ್ಮಯೋಗಜ್ಞಾನಯೋಗದಿಂದಾಗಲಿ ಉಂಟಾಗುವ ಆತ್ಮಾವಲೋಕನಕ್ಕೂ ತನ್ನ ಆತ್ಮವು ಪರಮಾತ್ಮನಿಗೆ ಶರೀರವೆಂದು ಭಾವಿಸಿ ಆತ್ಮನನ್ನಾಗಲಿ ಅಥವಾ ಪರಮಾತ್ಮನನ್ನಾಗಲಿ ಉಪಾಸಿಸಿ ಪರಿಶುದ್ಧವಾದ ಆತ್ಮಪ್ರಾಪ್ತಿ ಉಂಟಾಗುವ ಜಿಜ್ಞಾಸುವಿನ ಉಪಾಸನೆಗೂ ವ್ಯತ್ಯಾಸವನ್ನು ವ್ಯಕ್ತಪಡಿಸಿದರು. ಕೇವಲ ಕರ್ಮಯೋಗವಾಗಲಿ ಅಥವಾ ಜ್ಞಾನಯೋಗ ಸಮುಚ್ಚಯವಿರುಪದಾಗಲಿ ಮೋಕ್ಷಹೇತುವಾಗಲಾರದೆಂಬುದು ಇದರಿಂದ ವ್ಯಕ್ತಪಟ್ಟಿತು. ಅಂತಹ ಅಧಿಕಾರಿಗಳಿಗೆ ಅರ್ಚಿರಾದಿಗತಿಯೂ ಇಲ್ಲವು. ಇದನ್ನೇ ಶ್ರೀ ನಿಗಮಾಂತ ಗುರುಗಳು ನ್ಯಾಯ ಸಿದ್ಧಾಂಜನದಲ್ಲಿ "**ಕರ್ಮಾಪಿ ನ ಕೇವಲಂ ಜ್ಞಾನಸಮುಚ್ಚಿತಂ ವಾ ಮೋಕ್ಷಹೇತುಃ**" ಎಂದು ವ್ಯಕ್ತವಾಗಿ ತಿಳಿಸಿರುತ್ತಾರೆ. **ತದ್ಯ ಇತ್ಥಂ ವಿದುಃ** ಎಂದು ಹೇಳಲ್ಪಟ್ಟ, **ಗತಿಶ್ರುತಿಃ** - ಅರ್ಚಿರಾದಿಗತಿಯಿಂದ ಹೇಳುವ ದೇವಯಾನಶ್ರುತಿಯು ಹಾಗೆ ಹೇಳಲು ಕಾರಣವೇನೆಂದರೆ ತಿಳಿಸುತ್ತಾರೆ. **ಯೇಚೇಮೇಽರಣ್ಯೇಶ್ರದ್ಧಾ ತಪ ಇತ್ಯುಪಾಸತೇ ಇತಿ ಪರವಿದ್ಯಾಯಾಃ ಪೃಥಕ್ಶ್ರುತಿ ವೈಯರ್ಥ್ಯಾತ್** - ಯಾರು ಅರಣ್ಯದಲ್ಲಿದ್ದು ಶ್ರದ್ಧಾಪ್ರೇರಿತರಾಗಿ ಪರಬ್ರಹ್ಮೋಪಾಸನೆಯನ್ನು ಮಾಡುವರೋ ಎಂದು ಪರವಿದ್ಯೆಯನ್ನೂ ಸಹ ಪೃಥಕ್ಕರಿಸಿ ಚ ಶಬ್ದದಿಂದ ಶ್ರುತಿ ಹೇಳಿರುವದು ವ್ಯರ್ಥವಾಗುತ್ತದಾದುದರಿಂದ, **ತದ್ಯ ಇತ್ಥಂ ವಿದುಃ** ಎಂದು ಹೇಳಿರುವದು ಪರವಿದ್ಯೆಗೆ ಅಙ್ಗವಾಗಲು ಮಾರ್ಗವಿಲ್ಲವು. ಅಙ್ಗವನ್ನು ಹೇಳಿ ಪರವಿದ್ಯೆಯನ್ನು ಹೇಳಬೇಕಾಗಿತ್ತು, ಹಾಗೆ ಹೇಳದೆ ಆ ಪಂಚಾಗ್ನಿ ವಿದ್ಯಾನಿಷ್ಠರಿಗೂ ಈ ಪರಬ್ರಹ್ಮೋಪಾಸಕರಿಗೂ ಇಬ್ಬರಿಗೂ ಅರ್ಚಿರಾದಿಮಾರ್ಗವೆಂದು ಹೇಳಿರುವದರಿಂದ ಅಙ್ಗವಾಗಲು ಸಾಧ್ಯವಿಲ್ಲವು; ಎರಡೂ ಬ್ರಹ್ಮವಿದ್ಯೆಯಾಗಿ ಎರಡೂ ಅಙ್ಗಿಯಾದುದರಿಂದಲೇ **ತುಲ್ಯಫಲತ್ವೇನ** - ಸಮಾನವಾದ ಮೋಕ್ಷಪ್ರಾಪ್ತಿ ಫಲವುಳ್ಳವಾದುದರಿಂದ **ಚ** ಶಬ್ದಪ್ರಯೋಗವು ಎಂಬ ತಾತ್ಪರ್ಯವು. **ತದ್ಯ ಇತ್ಥಂ ವಿದುಃ** ಎಂದು ಹೇಳಿರುವದು ಪಂಚಾಗ್ನಿವಿದ್ಯಾವಿಷಯವೆಂದು ಮುಂದಿನ ವಾಕ್ಯಗಳಿಂದ ವ್ಯಕ್ತಪಡಿಸುತ್ತಾರೆ. **ಪಂಚಾಗ್ನಿವಿದ್ಯಾಯಾಂ ಚ** - ಪಂಚಾಗ್ನಿ ವಿದ್ಯೆಯಲ್ಲಾದರೋ, **ಇತಿ ತು ಪಂಚಮ್ಯಾ ಮಾಹುತಾ ವಾಪಃ ಪುರುಷವಚಸೋಭವನ್ತಿ" ಇತಿ**, "ಮೇಲೆ ಹೇಳಿದ ಪ್ರಕಾರ ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ಪುರುಷನ ರೇ

(೨) ಛಾಂ. ೫. ೯. ೧. (೩) ಛಾಂ. ೫. ೧೦. ೭.

**ಛಾ. ಣೀಯ ಚರಣಾಃ ಕಪೂಯ ಚರಣಾಃ" ಇತಿ ಪುಣ್ಯಪಾಪಹೇತುಕೋ ಮನು**

ತಸ್ಸ್ ಹೀಗೆ ಐದನೆಯ ಆಹುತಿಯಲ್ಲಿ ಜೀವಾತ್ಮರುಗಳು ಯೋಷಿದ್ಯೋನಿ ಎಂಬ ಅಗ್ನಿಯಲ್ಲಿ ಹೋಮಮಾಡಲ್ಪಟ್ಟನಂತರ, ಗರ್ಭವನ್ನು ಸೇರಿ ಭೂತಸೂಕ್ಷ್ಮವನ್ನು ಶರೀರವಾಗಿ ಹೊಂದಿ, ಪುರುಷ ಶಬ್ದದಿಂದ ಹೇಳಿಸಿಕೊಳ್ಳುವರಾಗುತ್ತಾರೆ. ಗಂಡು ಶಿಶು ಹೆಣ್ಣು ಶಿಶು ಇತ್ಯಾದಿ ವ್ಯವಹಾರವನ್ನು ಹೊಂದುವರಾಗುತ್ತಾರೆಂಬ ಭಾವವು. ಇಲ್ಲಿ **ಆಪಃ** ಎಂಬ ಶಬ್ದದಿಂದ ತ್ರಿವೃತ್ಕೃತವಾದ ಪಂಚಭೂತಗಳಿಂದ ಸೇರಿದ ಪರಿಣಾಮಯುಕ್ತವಾದ ದೇಹವು ಹೇಳಲ್ಪಟ್ಟಿತು. ಅಲ್ಲಿಂದ ಮುಂದಿನ ವಾಕ್ಯದಲ್ಲಿ ಆ ಗರ್ಭದಲ್ಲಿ ಉಲ್ಬಣದಿಂದ ಆವೃತರಾಗಿ, ಒಂಬತ್ತು ತಿಂಗಳು ಗರ್ಭದಲ್ಲಿದ್ದು, ಅನಂತರ ಕಷ್ಟದಿಂದ ಪ್ರಸವ, ಬೆಳೆಯುವದು, ಸಾಯುವದು, ಇಂತಹ ದುರವಸ್ಥೆಗಳನ್ನೆಲ್ಲಾ ಹೊಂದಿ, ನಾನಾವಿಧ ದುಃಖಗಳಿಗೆ ಗುರಿಯಾಗುವರು. ವಿಷ್ಣು ಪುರಾಣದ ಷಷ್ಠಾಂಶ ಪಂಚಮಾಧ್ಯಾಯದಲ್ಲಿ ಮಹರ್ಷಿಯು **ಈ** ನಾನಾವಿಧ ಕ್ಲೇಶಗಳನ್ನು ಬಹು ಸ್ವಾರಸ್ಯವಾಗಿ ವರ್ಣಿಸಿರುತ್ತಾರೆ, ಪರಾಂಬರಿಸಬಹುದು; ಅವುಗಳನ್ನೇ ದಾಸನು ತೆಗೆದು ಅಭೀತಿಸ್ತವ ವ್ಯಾಖ್ಯಾನದಲ್ಲಿ ೫೮ ರಿಂದ ೬೧ ಪುಟಗಳಲ್ಲಿ ಉಪಪಾದಿಸಿರುತ್ತೇನೆ. ಶಿಶುವು ಗರ್ಭಚೀಲದಲ್ಲಿ ಶಿಲುಕಿ, ಕಶ್ಮಲವಾದ ಮಲಮೂತ್ರ ಪಂಕದಲ್ಲಿ ಸೇರಿಕೊಂಡು, ಆ ಕಾಲದಲ್ಲಿ ತಾಯಿಗೆ ವಿಶೇಷವಾಗಿ ಬೇಕಾಗಿರುವ, ಹುಳಿ, ಕಾರ, ಉಪ್ಪುಗಳ ಸೇವನೆಯಿಂದ ಪೀಡಿಸಲ್ಪಟ್ಟು, ಯಾತನೆಯಿಂದ ಕೈಕಾಲು ಅಲ್ಲಾಡಿಸಲು ಕೂಡ ಆಗದೆ, ಶಿಶುವು ತುಂಬಾ ಕ್ಲೇಶಪಡುತ್ತದೆ; ಅನಂತರ ಪ್ರಸವ ದುಃಖವು ವಿಶೇಷವಾದುದು. ತಾಯಿಯು ಸರಿಯಾಗಿ ಮಗುವನ್ನು ನೋಡಿಕೊಳ್ಳಲು ತಿಳಿಯದೆ ಮಗುವು ಅನೇಕ ವ್ಯಾಧಿಪೀಡಿತವಾಗಿ ನರಳುತ್ತದೆ. ಹಾಗೆಯೇ ಬಾಲ್ಯದಲ್ಲೂ, ಯವ್ವನದಲ್ಲೂ, ಇಂದ್ರಿಯಗಳ ಮೂಲಕ ವಿಷಯೋಪಭೋಗಗಳಲ್ಲಿ ಮಿತಿಯಿಲ್ಲದೆ ನಾನಾ ಕ್ಲೇಶಗಳಿಗೆ ಒಳಗಾಗುತ್ತದೆ, ಹಾಗೆಯೇ ಜರಾಮರಣ ಕಾಲಗಳಲ್ಲೂ ಅನೇಕ ದುಃಖಗಳು ಉಂಟಾಗಬಹುದು. ಆದುದರಿಂದಲೇ ಇದೇ ಗೀತೆಯಲ್ಲೇ ಹಿಂದೆ (ಗೀ. ೨೨) **ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖ ಯೋನಯ ಏವ ತೇ। ಆದ್ಯಂತಸಂತಃ ಕೌನ್ತೇಯ ನ ತೇಷು ರಮತೇ ಬುಧಃ"** ಎಂದು ಹೇಳಲ್ಪಟ್ಟಿರುತ್ತದೆ ಹಾಗೆಯೇ ಶ್ರೀ ಪರಾಶರರೂ **(೧) ಯಾವಜ್ಜೀವತಿ ತಾವಚ್ಚ ದುಃಖೈರ್ನಾನಾ ವಿಧೈಃ ಪ್ಲುತಃ। ತಂತುಕಾರಣ ಪಕ್ಷ್ಮೋಘೈ ರಾಸ್ತೇಕಾರ್ಪಾಸಬೀಜವತ್"** ತಾಯಿಯ ಗರ್ಭವನ್ನು ಸೇರಿ ಕೊನೆಗೆ ಸಾಯುವವರೆಗೂ ನಾನಾವಿಧ ಕ್ಲೇಶಗಳು ತುಂಬಿರುತ್ತವೆ, ಹೇಗೆಂದರೆ ಹತ್ತಿಯ ಬೀಜವು ಅನೇಕ ತಂತುಗಳಿಂದ ಹೇಗೆ ಬಂಧಿಸಲ್ಪಟ್ಟಿರುತ್ತದೋ ಹಾಗೆ ಎಂದು ವರ್ಣಿಸಲ್ಪಟ್ಟಿರುತ್ತದೆ, ಹಾಗೆಯೇ ಜನ್ಮ ಜನ್ಮಕ್ಕೂ ಈ ಆತ್ಮನಿಗೆ ಶರೀರಪ್ರಾಪ್ತಿಯುಂಟಾಗುವದರಿಂದ ಅನಾದಿ ಕಾಲದಿಂದಲೂ ವರ್ಣಿಸಲೂ ಕೂಡ ಸಾಧ್ಯವಿಲ್ಲದಹಾಗೆ ಕ್ಲೇಶಗಳನ್ನು ಅನುಭವಿಸುವನು. ಈ ಅಭಿಪ್ರಾಯವನ್ನು ಪ್ರದರ್ಶಿಸಿ ಶಾಸ್ತ್ರವು ಪಂಚಾಗ್ನಿ ವಿದ್ಯಾನಿಷ್ಠನಲ್ಲಿ ವೈರಾಗ್ಯವನ್ನು ಉಂಟುಮಾಡುತ್ತದೆ. ಆದುದರಿಂದ **"ತಸ್ಮಾಜ್ಜುಗುಪ್ಸೇತ"** ಪುನರ್ಜನ್ಮ ವಿಷಯದಲ್ಲಿ ಜುಗುಪ್ಸಿತನಾಗತಕ್ಕದ್ದು; (ಛಾ. ೫. ೧೦. ೮. ) ಈ ಹೇಯವಾದ ಪ್ರಕೃತಿ ಸಂಬಂಧವು ಹೋಗಿ ಸ್ವಸ್ವರೂಪ ಪ್ರಾಪ್ತಿಯು ಬೇಕೆಂದು ಜಿಜ್ಞಾಸುವು ತನ್ನ ಆತ್ಮವು ಪರಬ್ರಹ್ಮಾತ್ಮಕವೆಂದು ತಿಳಿದು ಪರಿಶುದ್ಧಾತ್ಮಪ್ರಾಪ್ತಿಗಾಗಿ ಪರಮ ಪುರುಷನನ್ನು ಉಪಾಸಿಸುವನು" ಇತಿ ಎಂದೂ, ಮತ್ತು **"ರಮಣೀಯಚರಣಾಃ........ಕಪೂಯಚರಣಾಃ" ಇತಿ** - ಇಲ್ಲಿ **ಚರ್ಯತೇ ಇತಿ ಚರಣಂ** ಎಂಬ ವ್ಯುತ್ಪತ್ತಿಯಿಂದ ಚರಣವೆಂದರೆ ಕರ್ಮವು, ಹಿಂದೆ ಸುಕೃತ ಕರ್ಮಮಾಡಿದವರು ಬ್ರಾಹ್ಮಣ

(೧) ವಿ. ಪು. ೬. ೫. ೫೩.

**ಭಾ. ಷ್ಯಾದಿ ಭಾವೋಽಪಾಮೇವ ಭೂತಾನ್ತರ ಸಂಸೃಷ್ಟಾನಾಮ್; ಆತ್ಮನಸ್ತು ತತ್ಪರಿಷ್ವ ಙ್ಗ ಮಾತ್ರ ಮಿತಿ ಚಿದಚಿತೋರ್ವಿವೇಕ ಮಭಿಧಾಯ (೧) "ತದ್ಯ ಇತ್ಥಂ ವಿದುಃ" (೪) "ತೇಽರ್ಚಿಷಮಭಿಸಂಭವನ್ತಿ" (೫) "ಇಮಂ ಮಾನವ ಮಾವರ್ತಂ ನಾವರ್ತಂ ತೇ" ಇತಿ ವಿವಿಕ್ತೇ ಚಿದಚಿದ್ವಸ್ತುನೀ ತ್ಯಾಜ್ಯತಯಾ ಪ್ರಾಪ್ಯತಯಾ ಚ, ಯ ಇತ್ಥಂ ವಿದು ಸ್ತೇಽರ್ಚಿರಾದಿನಾ ಗಚ್ಛನ್ತಿ, ನ ಚ ಪುನರಾವರ್ತನ್ತ ಇತ್ಯುಕ್ತ ಮಿತಿ ಗಮ್ಯತೇ.**

ಯೋನಿ, ಕ್ಷತ್ರಿಯಯೋನಿ, ಅಥವಾ ವೈಶ್ಯಯೋನಿಯಲ್ಲಿ ಜನಿಸುವರೆಂದೂ, ಹಾಗಲ್ಲದೆ **ಕಪೂಯ ಚರಣಾಃ** - ದುಷ್ಕೃತಗಳನ್ನುಮಾಡಿ ಜನಿಸುವವರು ನಾಯಿಯ, ಅಥವಾ ಹಂದಿಯ, ಅಥವಾ ಚಂಡಾಲ ಯೋನಿಯ ಮೂಲಕ ಜನಿಸುವರೆಂದೂ" ಹೇಳಿ, ಹೀಗೆ **ಪುಣ್ಯಪಾಪ ಹೇತುಕಃ** - ಪುಣ್ಯಾಪಾಪಗಳೇ ಕಾರಣವಾಗಿವುಳ್ಳ, **ಮನುಷ್ಯಾದಿ ಭಾವಃ** ಮನುಷ್ಯ ಆದಿ ಪದದಿಂದ ತಿರ್ಯಕ್ಕೇ ಮೊದಲಾದ ರೂಪದಲ್ಲಿ ಉತ್ಪತ್ತಿಯು, **ಅಪಾಮೇವಭೂತಾನ್ತರ ಸಂಸೃಷ್ಟಾನಾಂ** - ಪ್ರಕೃತಿರೂಪವಾದ ಭೂತಾನ್ತರಗಳಿಂದ ಸೇರಿದ ದೇಹಗಳಿಗೇ ಮಾತ್ರವೇ ಸಂಬಂಧಿಸಿದುದು. ಅದು ಪರಿಶುದ್ಧನಾದ ಆತ್ಮಾವಿಗೆ ಸಂಬಂಧಿಸಿದಲ್ಲವು ಎಂದು ಮುಂದೆ ಹೇಳುತ್ತಾರೆ. **ಆತ್ಮನಸ್ತು**-ಜೀವಾತ್ಮನಾದರೋ, **ತತ್ಪರಿಷ್ವಙ್ಗ ಮಾತ್ರ ಮಿತಿ**-ಆ ಭೂತಾನ್ತರದೊಂದಿಗೆ ಸುಮ್ಮನೆ ಸೇರುವದು ಮಾತ್ರವೇ ಎಂಬುದಾಗಿ **ಚಿದ ಚಿತೋರ್ವಿವೇಕ ಮಭಿಧಾಯ**-ಚಿತ್ತಾದ ಜೀವಾತ್ಮರಿಗೂ ಮತ್ತು ಅವರ ದೇಹಗಳಿಗೂ ಇರುವ ವೈಲಕ್ಷಣ್ಯವನ್ನು ತಿಳಿಸಿ, **"ತದ್ಯ ಇತ್ಥಂ ವಿದುಃ"**- ಯಾರು ಹೀಗೆ ಜ್ಞಾನವನ್ನು ಹೊಂದಿ ಪಂಚಾಗ್ನಿ ವಿದ್ಯಾನಿಷ್ಠರಾಗಿ ಪರಿಶುದ್ಧಾತ್ಮಪ್ರಾಪ್ತಿಗಾಗಿ ಪರಮಾತ್ಮೋಪಾಸನವನ್ನು ಮಾಡುತ್ತಾರೋ, **ಶೇಽರ್ಚಿಷ ಮಭಿಸಂಭವಂತಿ**-ಅವರು ಅರ್ಚಿರಾದಿ ಗತಿಯನ್ನು ಹೊಂದುವರು. ಹೀಗೆ ಆತಿವಾಹಕರಿಂದ ಕರೆದುಕೊಂಡು ಹೋಗಲ್ಪಟ್ಟಿರುವದರಿಂದ ದೇವ ಪಥವೆಂದೂ, ಬ್ರಹ್ಮಪ್ರಾಪಕಮಾರ್ಗವಾದುದರಿಂದ ಬ್ರಹ್ಮಪಥವೆಂದೂ ಹೇಳಿಸಿಕೊಳ್ಳುವ ಈ ಅರ್ಚಿರಾದಿಮಾರ್ಗದ ಮೂಲಕ ಹೋಗುವರು; ಮತ್ತು **"ಇಮಂ ಮಾನವ ಮಾವರ್ತಂತೇ", ಇಮಂ** - ಇಂತಹ ಕ್ಲೇಶಗಳಿಂದ ಘೋರವಾದ, **ಮಾನವ ಮಾವರ್ತಂ** - ಘಟೀಯಂತ್ರವೆಂದರೆ ನೀರು ಎತ್ತುವ ಕಪಿಲೆಯು, ಮೇಲಕ್ಕೂ ಕೆಳಕ್ಕೂ ಸುತ್ತುವಹಾಗೆ ಜನನ ಮರಣಗಳನ್ನು ಪುನಃ ಪುನಃ ಹೊಂದಿಸುವ ಮನುಷ್ಯಾದಿ ಶರೀರರೂಪವಾದ ಸಂಸಾರವನ್ನು, **ನಾವರ್ತನ್ತೇ** - ಪುನಃ ಹೊಂದುವದಿಲ್ಲವು, **ಇತಿ** - ಎಂಬುವಾಗಿ, **ವಿವಿಕ್ತೇ** - ಬೇರೆಬೇರೆಯಾಗಿ ವೈಲಕ್ಷಣ್ಯವು ಹೇಳಲ್ಪಟ್ಟು, ಹೇಗೆ ವೈಲಕ್ಷಣ್ಯವೆಂದರೆ - ದೇಹವು ಸತತ ಪರಿಣಾಮಿಯಾಗಿ ಕ್ಲೇಶದಾಯಕವಾಗಿ ಹೇಯವು; ಆತ್ಮಸ್ವರೂಪವು ಜ್ಞಾನರೂಪವಾಗಿ ಹೇಯಗಂಧವಿಲ್ಲದೆ ನಿತ್ಯವಾಗಿರುವದರಿಂದ ಪರಿಶುದ್ಧವಾದುದು ಎಂದು ಹೇಳಲ್ಪಟ್ಟ, **ಚಿದಚಿದ್ವಸ್ತುನೀ** - ಆತ್ಮಾ ಮತ್ತು ದೇಹರೂಪವಾದ ವಸ್ತುಗಳು, **ತ್ಯಾಜ್ಯತಯಾ ಪ್ರಾಪ್ಯತಯಾ ಚ** - ದೇಹವು ಹೇಯವಾಗಿ ತ್ಯಾಜ್ಯವು ಎಂಬ, ಮತ್ತು ಆತ್ಮಾಪರಿಶುದ್ಧವಾಗಿ ಪ್ರಾಪ್ಯವು ಎಂಬ ಭಾವದಿಂದ, **"ಯ ಇತ್ಥಂ ವಿದುಃ"** - ಯಾರು ಹೀಗೆ ತಿಳಿದು ಉಪಾಸಿಸುತ್ತಾರೋ, **ತೇಽರ್ಚಿರಾದಿನಾ ಗಚ್ಛನ್ತಿ** - ಅಂತವರು ಅರ್ಚಿರಾದಿ ಮಾರ್ಗದಿಂದ ಹೋಗುವರು, **ನ ಚ ಪುನರಾವರ್ತನ್ತೇ** - ಪುನಃ ಇಲ್ಲಿಗೆ ಬಂದು ಜನ್ಮವನ್ನು ಎತ್ತುವದಿಲ್ಲವು, **ಇತಿ ಗಮ್ಯತೇ** - ಎಂದು ಶ್ರುತಿಯು ಹೇಳಿರುವಹಾಗೆ ತೋರಿಬರುತ್ತದೆ. ಹೀಗೆ ಪಂಚಾಗ್ನಿ ವಿದ್ಯಾನಿಷ್ಠನು ವೈರಾಗ್ಯವನ್ನು ಹೊಂದಿ ಹೇಯ ಪ್ರಕೃತಿ ಸಂಬಂಧವು ತೊಲಗಿ ಪರಿಶುದ್ಧಾತ್ಮಪ್ರಾಪ್ತಿಗಾಗಿ ತಾನು ಬ್ರಹ್ಮಾತ್ಮಕನೆಂದು ಭಾವಿಸಿ ಪರಬ್ರ

(೩) ಛಾಂ. ೫. ೧೦. ೧. (೪) ಛಾಂ. ೫. ೧೦. ೧. (೫) ಛಾಂ. ೪. ೧೫. ೬.

**ಭಾ: ಆತ್ಮ ಯಾಥಾತ್ಮ್ಯವಿದಃ ಪರಮಪುರುಷ ನಿಷ್ಠಸ್ಯ ಚ (೬) "ಸ ಏನಾನ್ ಬ್ರಹ್ಮಗಮ ಯತಿ"ಇತಿ ಬ್ರಹ್ಮಪ್ರಾಪ್ತಿ ವಚನಾದ ಚಿದ್ವಿಯುಕ್ತ ಮಾತ್ಮವಸ್ತು ಬ್ರಹ್ಮಾತ್ಮಕತ ಯಾ ಬ್ರಹ್ಮಶೇಷತ್ಯೈಕರಸ ಮಿತ್ಯನುಸಂಧೇಯಂ, ತತ್ಕ್ರತುನ್ಯಾಯಾಚ್ಚ । ಪರ ಶೇಷತೈಕ ರಸತ್ವಂಚ (೭) "ಯ ಆತ್ಮನಿ ತಿಷ್ಠ....ಯಸ್ಯಾತ್ಮಾ ಶರೀರಮ್" ಇತ್ಯಾದಿ ಶ್ರುತಿ ಸಿದ್ಧಮ್:—**

ಹ್ಮೋಪಾಸಕನೆಂದು ಸ್ಥಾಪಿಸಿದರು. ಈ ಜಿಜ್ಞಾಸುವಾದ ಕೇವಲನಿಗೂ, ಅವರುಗಳ ಉಪ ಸ್ಥಾನಕ್ಕೂ, ವ್ಯತ್ಯಾಸ ಉಂಟೆಂದು ಬಹು ಸ್ಫುಟವಾಗಿ ಉಪಪಾದಿಸುತ್ತಾರೆ.— ಈ ಕೇವಲ ರಾದ **ಆತ್ಮ ಯಾಥಾತ್ಮ್ಯ ವಿದಃ**-ಈ ಯಥಾರ್ಥವಾದ ಆತ್ಮಪ್ರಾಪ್ತಿಗಾಗಿ ಉಪಾಸಿಸುವರಿಗೂ, **ಪರಮಪುರುಷ ನಿಷ್ಠಸ್ಯ ಚ** - ಪರಮಪುರುಷ ಪ್ರಾಪ್ತಿಗಾಗಿ ಉಪಾಸಿಸುವರಿಗೂ ಸಹ, **"ಸ ಏನಾನ್ ಬ್ರಹ್ಮ ಗಮಯತಿ"** - ಆ ವೈದ್ಯುತ ಪುರುಷನಾದ ಅಮಾನವನು, **ಏನಾನ್** - **ಈ** ಉಪಾಸಕರನ್ನು, **ಬ್ರಹ್ಮ ಗಮಯತಿ** - ಪರಬ್ರಹ್ಮನನ್ನು ಹೊಂದಿಸುವನು" **ಇತಿ** - ಎಂಬ ದಾಗಿ, **ಬ್ರಹ್ಮಪ್ರಾಪ್ತಿವಚನಾತ್** - ಬ್ರಹ್ಮಪ್ರಾಪ್ತಿ ಎಂಬ ಶ್ರುತಿವಾಕ್ಯವಿರುವದರಿಂದ, **ಅಚಿದ್ವಿ ಯುಕ್ತಾತ್ಮವಸ್ತು** - ಅಚಿತ್ತಾದ ಪ್ರಕೃತಿಯಿಂದ ಬಿಡಲ್ಪಟ್ಟ ಪರಿಶುದ್ಧನಾದ ಆತ್ಮವಸ್ತುವು, **ಬ್ರಹ್ಮಾತ್ಮಕತಯಾ** - ಪರಬ್ರಹ್ಮನಿಗೆ ಶರೀರವಾಗಿರುವದರಿಂದ, **ಬ್ರಹ್ಮಶೇಷತ್ವೈಕರಸಂ** - ಪರ ಬ್ರಹ್ಮನಿಗೆ ಶೇಷಭೂತನಾಗಿ ಆತನ ಪ್ರೀತ್ಯರ್ಥವಾಗಿಯೇ ಆತನಿಗೆ ಕೈಙ್ಕರ್ಯ ಮಾಡುವ ಆನಂದ ವುಳ್ಳವಸ್ತುವು, **ಇತ್ಯನುಸಂಧೇಯಮ್** - ಎಂದು ಅನುಸಂಧಾನಮಾಡತಕ್ಕದ್ದು, ಇಷ್ಟುಮಾ ತ್ರವೇ ಅಲ್ಲವು, **ತತ್ಕ್ರತುನ್ಯಾಯಾಚ್ಚ** - ತತ್ಕ್ರತುನ್ಯಾಯದಿಂದಲೂ **ಕೂಡ** ಹಾಗೆಯೇ ಅನು ಸಂಧಾನಮಾಡತಕ್ಕದ್ದು; ಯಾವವಿಧವಾದ ಪ್ರಾಪ್ತಿಯನ್ನು ಮನಸ್ಸಿನಲ್ಲಿಟ್ಟು ಪರಮಾತ್ಮೋ ಪಾಸನೆಯನ್ನು ಭಕ್ತನು ಮಾಡುವನೋ, ಅವನಿಗೆ ಪ್ರಾಪ್ತಿಯೂ ಆ ರೂಪವಾದುದೇ ಇರುತ್ತದೆಂ ಬುದು ತತ್ಕ್ರತುನ್ಯಾಯವು. ಈ ಪಂಚಾಗ್ನಿ ವಿದ್ಯಾನಿಷ್ಠನಿಗೆ ಪರಿಶುದ್ಧಾತ್ಮಸ್ವರೂಪವೇ ಪ್ರಾಪ್ಯ ವಾಗಿರಬೇಕೆಂದು ಪರಮಾತ್ಮನನ್ನು ಉಪಾಸಿಸುವದರಿಂದ, ಆತನಿಗೆ ಪ್ರಾಪ್ಯವು ತದ್ರೂಪವೆ; ಪರಮಾತ್ಮೋಪಾಸಕನು ಪರಮಪುರುಷಪ್ರಾಪ್ತಿಗಾಗಿ ಉಪಾಸಿಸುವದರಿಂದ ಆತನೇ ಪ್ರಾಪ್ಯನು ಎಂಬ ಭಾವವು. ಈ ಪಂಚಾಗ್ನಿ ವಿದ್ಯಾನಿಷ್ಠನು ಕೇವಲ ಆತ್ಮೋಪಾಸಕನಲ್ಲವೆಂದೂ ಬ್ರಹ್ಮಾ ತ್ಮಕವಾದ ಸ್ವಾತ್ಮಾನುಸಂಧಾನವನ್ನು ಮಾಡುತ್ತಾ, ಅಂತಹ ಪ್ರಾಪ್ತಿಗಾಗಿ ಪರಮಾತ್ಮನನ್ನು ಉಪಾಸಿಸುವನು ಎಂದು ಹೇಳಲ್ಪಟ್ಟಿತು. ಆದುದರಿಂದ ಜಿಜ್ಞಾಸುವು ಪ್ರತೀಕಾಲಂಬನನಲ್ಲವು. ಶ್ರೀ ವ್ಯಾಸಮಹರ್ಷಿಯೇ (ಶಾ. ೪. ೩. ೧೪) ಎಂಬ **"ಅಪ್ರತೀಕಾಲಂಬನಾನ್ ನಯತೀತಿ"** ಎಂಬ ಸೂತ್ರದಲ್ಲಿ ಉಪಪಾದಿಸಿರುವಹಾಗೆ, ಜಿಜ್ಞಾಸುವು ಅಪ್ರತೀಕಾಲಂಬನು ಎಂದರೆ ದಿವ್ಯಮ ಙ್ಗಳ ವಿಗ್ರಹದ ಉಪಾಸಕನು. ಹೇಗೆಂದರೆ ತನ್ನ ಆತ್ಮಾ ಪರಮಾತ್ಮನಿಗೆ ಶರೀರವೆಂದು ಉಪಾ ಸನೆಯನ್ನು ಮಾಡುವದರಿಂದ. ಈ ಅಚಿದ್ವಿಯುಕ್ತ ಆತ್ಮವಸ್ತುವು ಬ್ರಹ್ಮಾತ್ಮಕವೆಂದೂ ಬ್ರಹ್ಮಶೇ ಷತ್ವೈಕರಸವೆಂದು ಹೇಳಲ್ಪಟ್ಟಿತಲ್ಲಾ ಅದಕ್ಕೆ ಪ್ರಮಾಣವುಂಟೋ ಎಂದರೆ ಉಂಟು ಎಂದು ಉದಾ ಹರಿಸುತ್ತಾರೆ.—**ಯ ಆತ್ಮನಿ ತಿಷ್ಠನ್ನಾತ್ಮನೋಽನ್ತರೋ ಯ ಮಾತ್ಮಾ ನವೇದ ಯಸ್ಯಾತ್ಮಾ ಶರೀರಂ, ಯ ಆತ್ಮಾನ ಮನ್ತರೋ ಯಮಯತಿ"** ಎಂಬುದು ಈ ಪೂರಾಶ್ರುತಿ ಪ್ರಮಾ ಣವು. ಯಾವ ಪರಮಾತ್ಮನು ಜೀವಾತ್ಮನಲ್ಲೇ ಇರುವವನಾಗಿ ಹಾಗೆ ಒಟ್ಟಿಗೆ ಇದ್ದರೂ ಜೀ ವಾತ್ಮನಿಗಿಂತಲೂ ಬೇರೆಯೋ, ಯಾವ ಪರಮಾತ್ಮನನ್ನು ಹಾಗೆ ತನ್ನಲ್ಲೇ ಇದ್ದರೂ ಈ ಜೀವಾ

(೭) ಶತಪಥ. ಮಾಧ್ಯಂದಿನ ಪಾಠ. ೫. ೫. ೩೦. (೧೪)

ತ್ಮನು ತಿಳಿಯಲಾರನೋ, ಯಾವ ಪರಮಾತ್ಮನಿಗೆ ಈ ಜೀವಾತ್ಮನು ಶರೀರವೋ, ಯಾವ ಪರಮಾತ್ಮನು ಹೀಗೆ ಜೀವಾತ್ಮನಲ್ಲೇ ಇರುತ್ತಾ ಆತನಿಗೆ ನಿಯಾಮಕನಾಗಿದ್ದಾನೋ, ಮುಂದೆ **ವಿಷತ ಆತ್ಮಾ ನ್ತರ್ಯಾಮ್ಯ ಮೃತಃ** ಎಂದು ಹೇಳಿರುವವದರಿಂದ, ಜೀವಾತ್ಮನು ಶರೀರವಾಗಿ ಶೇಷಭೂತನು, ಆತನು ಆತ್ಮಾವಾಗಿ ಶೇಷಿಯು, ಎಂದು **ಪತಿಂ ವಿಶ್ವಸ್ಯ** ಎಂಬಲ್ಲಿ ತೋರುವ ಅರ್ಥವು ಇಲ್ಲಿ ಉಪಪಾದಿಸಲ್ಪಟ್ಟಿದುದರಿಂದ ಪರಶೇಷತ್ವವು ಹೇಳಲ್ಪಟ್ಟಿತೆಂಬ ಭಾವವು." **ಇತ್ಯಾದಿಶ್ರುತಿ ಸಿದ್ಧಂ** - ಇವೇ ಮೊದಲಾದ ಶ್ರುತಿಗಳಿಂದ ಸ್ಥಾಪಿತವು. ಆದಿ ಶಬ್ದದಿಂದ **"ಕರಣಾಧಿಪಾಧಿಪಃ" "ಅನ್ತಃ ಪ್ರವಿಷ್ಟಶ್ಯಾಸ್ತಾ ಜನಾನಾಂ ಸರ್ವಾತ್ಮಾ"** ಇತ್ಯಾದಿ ಶ್ರುತಿಗಳು ಹೇಳಲ್ಪಟ್ಟವು.

ಈ ಗೀತೆಯಲ್ಲೂ, ಹಾಗೆಯೇ ಉಪನಿಷತ್ತುಗಳಲ್ಲೂ, ಬ್ರಹ್ಮಸೂತ್ರ ಭಾಷ್ಯದಲ್ಲೂ, ಇನ್ನೂ ಇತರ ಕಡೆಯಲ್ಲೂ ಕೂಡ, ಈ ಪಂಚಾಗ್ನಿ ವಿದ್ಯಾನಿಷ್ಠನನ್ನು ಕುರಿತು ಹೇಳಿರುವವದಲ್ಲದೆ ಈ ಜೀವಾತ್ಮನು ಪರಮಾತ್ಮನಿಗೆ ಶರೀರವಾಗಿ ಶೇಷಭೂತನೆಂಬ ಅನುಸಂಧಾನವಿರಬೇಕೆಂದು ಹೇಳಲ್ಪಟ್ಟಿರುತ್ತದೆ. ಇತರ ವ್ಯಾಖ್ಯಾತೃಗಳಿಗೆ ಈ ಶ್ರುತಿ ಪ್ರತಿಪಾದಿತ ವಿಷಯವೇ ಈ ಗ್ರಂಥದಲ್ಲೂ ಉಪಪಾದಿಸಲ್ಪಟ್ಟಿತೆಂಬ ವಿಷಯವು ಗಮನಕ್ಕೆ ಬರಲಿಲ್ಲವು. ವೈರಾಗ್ಯವು ಮೋಕ್ಷಾರ್ಥಿಗೆ ಆವಶ್ಯಕವಾಗಿ, ಈ ಪಂಚಾಗ್ನಿ ವಿದ್ಯಾನಿಷ್ಠೆಯಿಂದ ಪ್ರಕೃತಿಯುಕ್ತವಾಗಿರುವ ಆತ್ಮಪ್ರಾಪ್ತಿಯನ್ನು ಪ್ರಾರ್ಥಿಸಿ, ತಾನು ಪರಮಾತ್ಮನಿಗೆ ಶರೀರವೆಂದು ಪರಮಾತ್ಮೋಪಾಸನೆಯನ್ನು ಮಾಡುವವನಿಗೂ ಅಪುನರಾವೃತ್ತಿಯಿಂದ ಮೋಕ್ಷಪ್ರಾಪ್ತಿಯು ನ್ಯಾಯವಾದುದಾಗಿ, **"ತದ್ಯ ಇತ್ಥಂ ವಿದುಃ"** ಎಂಬ ಶ್ರುತಿಯು ಹೇಳುತ್ತದೆ. ಈ ಗ್ರಂಥದಲ್ಲೂ **"ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ"** ಎಂಬಲ್ಲಿ ಈ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೂ, ಪರಬ್ರಹ್ಮೋಪಾಸಕನಾದ ಜ್ಞಾನಿಗೂ, ಅಪುನರಾವೃತ್ತಿಯು ಎಂದು ಮುಂದೆ ೨೪ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಹಿಂದೆಯೂ ೮-೨೧ ನೆಯ ಶ್ಲೋಕದಲ್ಲೂ ಹೇಳಲ್ಪಟ್ಟಿತು. ಪರಮಾತ್ಮೋಪಾಸಕನಾದ ಜ್ಞಾನಿಗೆ ಪರಮಾತ್ಮಸ್ವರೂಪವೇ ಭೋಗ್ಯವು. ಈ ಅಕ್ಷರ ನಿಷ್ಠನಾದ ಜಿಜ್ಞಾಸುವಿಗಾದರೋ ಸ್ವಸ್ವರೂಪಪ್ರಾಪ್ತಿಯೇ ಪ್ರಥಮತಃ ಭೋಗ್ಯವು. ಮಧುವಿದ್ಯಾನಿಷ್ಠನಿಗೆ ವಸ್ವಾದಿ ಪ್ರಾಪ್ತಿಯುಂಟಾಗಿ ಅನಂತರ ಪರಮಾತ್ಮಪ್ರಾಪ್ತಿಯು ಹೇಗೆ ಭೋಗ್ಯವಾಗುತ್ತದೋ, ಹಾಗೆಯೇ ಇಲ್ಲೂ ಈ ಪಂಚಾಗ್ನಿ ವಿದ್ಯಾನಿಷ್ಠನಿಗೂ ಕೊನೆಗೆ ಪರಮಾತ್ಮಪ್ರಾಪ್ತಿಯು ಭೋಗ್ಯವಾದುದಾಗುತ್ತದೆ. ಇಂತಹ ವ್ಯತ್ಯಾಸವು **ಜಿಜ್ಞಾಸುವಿಗೂ ಜ್ಞಾನಿಗೂ** ಏತಕ್ಕೆ? ಎಂದರೆ ಆತನ ಉಪಾಸನೆಯ ಭೇದವೇನು, ಇಷ್ಟವಾದ ಪ್ರಾಪ್ಯದಲ್ಲಿ ಭೇದವೇನು, ಇವುಗಳ ಮೂಲಕ ಉಂಟಾಗುತ್ತದೆಂದು ಹೇಳುವವದಕ್ಕಾಗಿ ಶ್ರೀ ಯತಿವರ್ಯರು ತತ್ಕ್ರತುನ್ಯಾಯವನ್ನು ತಂದಿರುತ್ತಾರೆ. ಹಾಗೆ ಪ್ರಾಪ್ಯ ಭೇದದಲ್ಲಿ ಇಷ್ಟವು ಉಂಟಾಗುವದಕ್ಕೆ ಪ್ರಾಚೀನ ಕರ್ಮದ ರುಚಿಮೂಲಕವಾಗಿ ಎಂದು ತಿಳಿಯತಕ್ಕದ್ದು. ಹಿಂದೆ ಏಳನೆಯ ಅಧ್ಯಾಯದಲ್ಲಿ **"ಚತುರ್ವಿಧಾ ಭಜನ್ತೇ ಮಾಂ"** (ಗೀ. ೭. ೧೬) ಎಂಬಲ್ಲಿ ಹೇಳಿರುವ ನಾಲ್ಕು ಜನ ಭಕ್ತರಿಗೆ ಹೇಳಲ್ಪಟ್ಟಿರುವ ಉಪಾಸನ ಭೇದ, ಪ್ರಾಪ್ತಿ ಭೇದ, ಅವರುಗಳ ನಿರ್ಯಾಣದಲ್ಲಿ ಭೇದ, ಅನಂತರ ಗಮನಭೇದಗಳು ಈ ಅಧ್ಯಾಯದಲ್ಲಿ ಹೇಳಲ್ಪಡುತ್ತದೆಂದು ತಿಳಿಯತಕ್ಕದ್ದು. ಅದರಲ್ಲಿ ಆರ್ತನೂ ಮತ್ತು ಅರ್ಥಾರ್ಥಿಯೂ ನಶ್ವರಫಲವಾದ ಐಶ್ವರ್ಯವನ್ನು ಅಪೇಕ್ಷಿಸುವದರಿಂದ ಅವರಿಗೆ ಪುನರಾವೃತ್ತಿಯೂ, ಇನ್ನು ಇಬ್ಬರಾದ ಜಿಜ್ಞಾಸು ಮತ್ತು ಜ್ಞಾನಿಗಳಿಗೂ ಅಪುನರಾವೃತ್ತಿಯೂ ಹಿಂದೆ ಹೇಳಲ್ಪಟ್ಟು, ಈಗ ಮುಂದಿನ ಶ್ಲೋಕಗಳಲ್ಲಿ ಅವರುಗಳಿಗೆ ನಿರ್ಯಾಣವಾದ ನಂತರ ಪ್ರಾಪ್ತವಾಗುವ ಗತಿ ಭೇದವು ಹೇಳುವ ಪ್ರಕರಣವಾಗಿರುತ್ತದೆ. ಇವರುಗಳಿಗೆ ಉಪಾಸನೆಯ ಭೇದವನ್ನು

ಹೇಳುವ ಸಂದರ್ಭದಲ್ಲಿ ಈ ಅಧ್ಯಾಯದ ಅವತಾರಿಕೆಯಲ್ಲಿ **ಸುಕೃತ ತಾರತಮ್ಯೇನ ಚ ಪ್ರತಿಪತ್ತಿವೈಶೇಷ್ಯಾತ್ ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವತ್ಪ್ರಾಪ್ತ್ಯಪೇಕ್ಷಯಾ ಉಪಾಸಕಭೇದಂ"** ಎಂದು ಶ್ರೀ ಯತಿವರ್ಯರು ವ್ಯಕ್ತಪಡಿಸಿರುತ್ತಾರೆ; ಆರ್ತನೂ ಅರ್ಥಾರ್ಥಿಯೂ ಐಶ್ವರ್ಯಪ್ರಾಪ್ತಿಗಾಗಿಯೂ, ಜಿಜ್ಞಾಸುವು, ಅಕ್ಷರವೆಂದರೆ ಪ್ರಕೃತಿವಿಯುಕ್ತ ಜೀವಾತ್ಮವಾದುದರಿಂದ ಅಕ್ಷರ ಯಾಥಾತ್ಮ್ಯಪ್ರಾಪ್ತಿಗಾಗಿಯೂ, ಜ್ಞಾನಿಯು ಭಗವತ್ಪ್ರಾಪ್ತಿಗಾಗಿಯೂ ಉಪಾಸಿಸುವದರಿಂದ ಉಪಾಸನದಲ್ಲಿ ಭೇದವು, ಆ ಕಾರಣದಿಂದ ಫಲದಲ್ಲೂ ಭೇದವು. ಆದುದರಿಂದ ಈ ಅವತಾರಿಕೆಯಲ್ಲಿ ಶ್ರೀ ಯತಿವರ್ಯರು **ಆತ್ಮ ಯಾಥಾತ್ಮ್ಯವಿದಃ** ಎಂಬುದರಿಂದ ಪಂಚಾಗ್ನಿ ವಿದ್ಯಾನಿಷ್ಠನಾದ **ಜಿಜ್ಞಾಸುವೇ** ಹೇಳಲ್ಪಟ್ಟನೆಂದು ನಿಸ್ಸಂಶಯವಾಗಿ ಹೇಳುತ್ತಾರೆ. ಆತನಿಗೂ ಸಹ ಜ್ಞಾನಿಯಹಾಗೆ ಮೂರ್ಧನ್ಯ ನಾಡಿಯ ಮೂಲಕ ನಿರ್ಯಾಣವೂ, ಅರ್ಚಿರಾದಿಗತಿಯೂ, ಹೇಳಲ್ಪಟ್ಟಿವೆ. **ಆತ್ಮ ಯಾಥಾತ್ಮ್ಯ ವಿದನು, ಅಕ್ಷರ ಯಾಥಾತ್ಮ್ಯವಿದನು, ಆತ್ಮನಿಷ್ಠನು, ಅಕ್ಷರ ನಿಷ್ಠನು, ಜಿಜ್ಞಾಸುವು, ಪಂಚಾಗ್ನಿ ವಿದ್ಯಾನಿಷ್ಠನು** ಇವೆಲ್ಲಾ ಪರ್ಯಾಯ ಶಬ್ದಗಳು. **ಈ** ಅಕ್ಷರ ನಿಷ್ಠನಿಗೂ ಜ್ಞಾನಿಗೂ ಉಪಾಸನದಲ್ಲಿ ಏನು ವ್ಯತ್ಯಾಸವೆಂದರೆ ಅಕ್ಷರ ನಿಷ್ಠನು ಪರಮಾತ್ಮ ಶರೀರ ಭೂತವಾದ ಆತ್ಮೋಪಾಸಕನಾದರೂ ಆಗಬಹುದು; ಅಥವಾ ತನ್ನ ಆತ್ಮಾ ಪರಮಾತ್ಮನಿಗೆ ಶರೀರವೆಂದು ಭಾವಿಸಿ ಪರಮಾತ್ಮೋಪಾಸಕನಾದರೂ ಆಗಬಹುದು. ಇಂತಹ ಜಿಜ್ಞಾಸುವಿಗೆ, ಆತನು ಆತ್ಮ ಯಾಥಾತ್ಮ್ಯ ಪ್ರಾಪ್ತಿಯನ್ನು ಅಪೇಕ್ಷಿಸುವದರಿಂದ **ತತ್ಕ್ರತುನ್ಯಾಯ**ದ ಪ್ರಕಾರ ಅದೇ ಲಭಿಸಿ, ಅನಂತರ ಪುನರಾವೃತ್ತಿಯಿಲ್ಲದೆ ಮೋಕ್ಷವು; ಜ್ಞಾನಿಯಾದರೋ ಪರಮಾತ್ಮ ಪ್ರಾಪ್ತಿಯನ್ನು ಅಪೇಕ್ಷಿಸುವನಾದುದರಿಂದ ತತ್ಕ್ರತುನ್ಯಾಯದ ಪ್ರಕಾರ ಆತನಿಗೆ ಸಾಕ್ಷಾತ್ತಾಗಿ ಪರಮಾತ್ಮಪ್ರಾಪ್ತಿಯೇ; ಇಷ್ಟೇ, ಅವರಿಗೆ ತತ್ಕಾಲದ ಪ್ರಾಪ್ತಿಯಲ್ಲಿ ವ್ಯತ್ಯಾಸವು. ಜಿಜ್ಞಾಸುವಿಗೆ ಕೊನೆಗಾದರೂ ಜ್ಞಾನಿಗೆ ಉಂಟಾಗುವ ಫಲವು ಹೇಗೆ? ಎಂಬಾ ಶಙ್ಕೆಗೆ ಸಮಾಧಾನವಾಗಿ ಶ್ರೀ ಯತಿವರ್ಯರು **"ಅಪ್ರತೀಕಾಲಂಬನಾನ್ ನಯತೀತಿ ಬಾದರಾಯಣಃ"** ಎಂಬ ಬ್ರಹ್ಮ ಸೂತ್ರದ ವೇದಾಂತಸಾರದ ಭಾಷ್ಯದಲ್ಲಿ ಸುವ್ಯಕ್ತವಾಗಿ ಎರಡಕ್ಕೂ ಕೊನೆಗೆ ಒಂದೇ ಫಲ ಉಂಟಾಗುವದರಲ್ಲಿ ಅಸಾಮಂಜಸ್ಯವೇನು ಇಲ್ಲವೆಂದು ತಿಳಿಸಿರುತ್ತಾರೆ.— ಹೇಗೆಂದರೆ **"ಪಂಚಾಗ್ನಿ ವಿದಸ್ತು ಪ್ರಕೃತಿವಿಯುಕ್ತಾತ್ಮಸ್ವರೂಪಂ "ಯಆತ್ಮನಿತಿಷ್ಠನ್" ಇತ್ಯಾದಿನಾಽಗತ ಬ್ರಹ್ಮಾತ್ಮಕತ್ವ ಮುಪಾಸತ ಇತಿ ಹ್ಯಪ್ರತೀಕಾಲಂಬನತ್ವಮ್, ತತ್ಕ್ರತುನ್ಯಾಯಾzವಿರೋಧಶ್ಚ. ಉಭಯೇಽಪಿ ಹಿ ಪರಿಪೂರ್ಣಂ ಬ್ರಹ್ಮೋಪಾಸತೇ ಮುಖಭೇದೇನ; ಸ್ವಾತ್ಮ ಶರೀರಕಂ ಬ್ರಹ್ಮಕೇಚನ! ಬ್ರಹ್ಮಾತ್ಮಕ ಸ್ವಾತ್ಮಾನಮಿತರೇ ಇತಿ"** ಎಂಬುದಾಗಿ. ಆದುದರಿಂದ ಸ್ವಾತ್ಮ ಶರೀರಕವಾದ ಪರಬ್ರಹ್ಮೋಪಾಸಕನಾದ ಜ್ಞಾನಿಯೂ ಮತ್ತು ಪರಬ್ರಹ್ಮಾತ್ಮಕವಾದ ತನ್ನ ಆತ್ಮಾವನ್ನು ಉಪಾಸಿಸುವ ಜಿಜ್ಞಾಸುವೂ ಇಬ್ಬರೂ ಮುಖಭೇದದಿಂದ ಪರಿಪೂರ್ಣ ಬ್ರಹ್ಮನನ್ನೇ ಉಪಾಸಿಸುತ್ತಾರೆಂದೂ, ಹೇಳಲ್ಪಟ್ಟಿತು. ಜ್ಞಾನಿಯು ತಾನು ಪರಮಾತ್ಮನಿಗೆ ಶರೀರವೆಂದು ಭಾವಿಸಿ ಪರಮಾತ್ಮನನ್ನು ಪರಮಾತ್ಮಪ್ರಾಪ್ತಿಗಾಗಿ ಉಪಾಸಿಸುತ್ತಾನೆ; ಪಂಚಾಗ್ನಿ ವಿದ್ಯಾನಿಷ್ಠನಾದರೋ ತನ್ನ ಆತ್ಮಾ ಪರಬ್ರಹ್ಮನಿಗೆ ಶರೀರವಾಗಿ ತಾನು ಜ್ಞಾನೈಕಾಕರನು, ನಿತ್ಯನು, ನಿರ್ವಿಕಾರನು ಎಂಬ ಸ್ವರೂಪವನ್ನೇ ಉಪಾಸಿಸುತ್ತಾನೆ; ಆತ್ಮಪ್ರಾಪ್ತಿಯನ್ನು ತತ್ಕ್ರತುನ್ಯಾಯಪ್ರಕಾರ ಹೊಂದುತ್ತಾನೆ. ಇಬ್ಬರಿಗೂ ಅರ್ಚಿರಾದಿ ಗತಿ ಮತ್ತು ಅಪುನರಾವೃತ್ತಿ ಎಂದು ಶ್ರುತಿಯು **"ತದ್ಯ ಇತ್ಥಂ ವಿದುಃ"** ಎಂಬುದರಿಂದ ಹೇಳಿತು. ಮುಂದೆ ೧೨ ನೆಯ ಅಧ್ಯಾಯದ ಆದಿಯಲ್ಲಿ ಜ್ಞಾನಿಯ ಉಪಾಸನೆಯು ಕ್ಷಿಪ್ರ ಫಲದಾಯಕವೇ? ಜಿಜ್ಞಾಸುವಿನ ಉಪಾಸನೆಯು ಕ್ಷಿಪ್ರಫಲದಾಯಕವೇ? ಎಂದು ಅರ್ಜುನನು ಶ್ರೀ ಕೃಷ್ಣ

ಭಗವಾನ್ ರವರನ್ನು ಕುರಿತು ಪ್ರಶ್ನಿಸುತ್ತಾನೆ. ಜ್ಞಾನಿಯ ಉಪಾಸನವೇ ಕ್ಷಿಪ್ರಫಲದಾಯಕವೆಂದು ಉತ್ತರವನ್ನು ಹೇಳುತ್ತಾರೆ.

ಹೀಗೆ ಇಬ್ಬರಿಗೂ ಅರ್ಚಿರಾದಿಗತಿಯೂ ಅಪುನರಾವರ್ತಿಯೂ ಸಿದ್ಧವಾದನಂತರ, **"ಜ್ಞಾನೀತ್ವಾತ್ಮೈವ ಮೇಮತಂ"** ಎಂಬ ಪ್ರಾಶಸ್ತ್ಯವೂ, ಅನುಗೀತೆಯಲ್ಲಿ **"ಸರ್ವೇಚ್ಯವನಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್"** ಎಂಬಲ್ಲೂ ಕೂಡ, ಜಿಜ್ಞಾಸುವು ಚ್ಯವನ ಧರ್ಮವುಳ್ಳವನೆಂಬ ನಿಕೃಷ್ಟಭಾವವೂ ಹೇಗೆ? ಎಂದರೆ ಜಿಜ್ಞಾಸುವಿಗೆ ಪ್ರಥಮದಲ್ಲಿ ಆತ್ಮಪ್ರಾಪ್ತಿಯುಂಟಾಗಿ, ಅನಂತರ ಮೋಕ್ಷಪ್ರಾಪ್ತಿಯಾಗುವದರಿಂದಲೂ, ಜ್ಞಾನಿಗಾದರೋ ಪರಬ್ರಹ್ಮಪ್ರಾಪ್ತಿಯೇ ಪ್ರಥಮದಲ್ಲೇ ಅವ್ಯವಹಿತವಾಗಿ ಉಂಟಾಗುವದರಿಂದಲೂ, ಎರಡಕ್ಕೂ ಸ್ವಲ್ಪ ವ್ಯತ್ಯಾಸವು, ಚ್ಯವನ ಧರ್ಮತ್ವದಿಂದ ಹೇಳಲ್ಪಟ್ಟಿತು; ಇಷ್ಟೇ ವಿನಾ ಅನ್ಯಥಾ ಇಲ್ಲವು. ಅಥವಾ ಪರಬ್ರಹ್ಮಪ್ರಾಪ್ತಿಗೆ ಸ್ವಲ್ಪಕಾಲ ವಿಚ್ಛೇದ ಉಂಟಾಗುವದರಿಂದಾಗಲಿ **ಚ್ಯವನಧರ್ಮತ್ವವು;** ಅಥವಾ ಉತ್ತಮಲೋಕಕ್ಕೆ ಹೋಗುವವನ್ನು ತ್ಯಜಿಸಿ, ಕೈವಲ್ಯವನ್ನು ಹೊಂದಿದುದರಿಂದಾಗಲಿ ಚ್ಯವನ ಧರ್ಮತ್ವವೆಂದೂ ಭಾವಿಸಬಹುದು. ಇಂದ್ರಲೋಕದಿಂದ ದಿವ್ಯ ವೈಕುಂಠಕ್ಕೆ ಹೋದರೂ **ಇಂದ್ರಲೋಕಾತ್ಪರಿಭ್ರಷ್ಟಃ** ಎಂಬ ಪ್ರಯೋಗವನ್ನು, **ಇಂದ್ರಲೋಕಾತ್ಪರಿಭ್ರಷ್ಟೋ ಮಮ ಲೋಕ ಪರಾಯಣಃ। ಪ್ರಮುಕ್ತ ಸ್ಸರ್ವ ಸಂಸಾರೈರ್ಮಮ ಲೋಕಂಚ ಗಚ್ಛತಿ"** (ಶ್ರೀ ವಾರಹೇ) ಎಂಬ ವಾಕ್ಯದಲ್ಲಿ ಕಾಣಬಹುದು. ಆದರೆ ಕರ್ಮಯೋಗಿ ಜ್ಞಾನಯೋಗಿಗಳ ಆತ್ಮಾನುಸಂಧಾನದಲ್ಲಿ ಬ್ರಹ್ಮಾತ್ಮಕತ್ವಜ್ಞಾನದಿಂದ ಉಪಾಸನವು ನಡೆಯುವದಿಲ್ಲವಾದುದರಿಂದ ಸಾಕ್ಷಾತ್ತಾಗಿ ಮೋಕ್ಷವಿಲ್ಲವು, ಆಗ ಸದ್ವಾರಕವಾಗಿ ಭಕ್ತಿಯೋಗಮೂಲಕ ಮೋಕ್ಷವು. ಇದರಿಂದ ಬ್ರಹ್ಮಾತ್ಮಕತ್ವವಿಲ್ಲದ ಆತ್ಮೋಪಾಸನವಾದ ಪ್ರತೀಕಾಲಂಬನಗಳಾದ ಬ್ರಹ್ಮ ರುದ್ರೇಂದ್ರಾದಿಗಳ ಉಪಾಸನಕ್ಕೆ ಅರ್ಚಿರಾದಿಗತಿಗಳಿಲ್ಲವು, ಧೂಮಾದಿ ಮಾರ್ಗಮೂಲಕ ಪುನರ್ಜನ್ಮವು ಇದೂ ಶ್ರೀ ಭಾಷ್ಯದಲ್ಲಿ ೪. ೩. ೧೪. ರಲ್ಲಿ ವ್ಯಕ್ತವು. ಹಾಗೆಯೇ ಶ್ರೀ ಯತಿವರ್ಯರು ಅವತಾರಿಕೆಯಲ್ಲಿ, **ನ ಚ ಪ್ರಜಾಪತಿವಾಕ್ಯಾದೌ ಶ್ರುತಪರವಿದ್ಯಾಙ್ಗಭೂತಾತ್ಮಪ್ರಾಪ್ತಿವಿಷಯೋಽಯಂ"** ಎಂಬುದರಿಂದ ಹೇಳಿರುತ್ತಾರೆ. ಪರವಿದ್ಯಾಙ್ಗಭೂತವಾದ ಆತ್ಮಪ್ರಾಪ್ತಿ ವಿಷಯವಾದುದು ಯಾವುದು ಎಂದರೆ ಕರ್ಮಯೋಗವಾಗಲಿ ಅಥವಾ ಕರ್ಮಯೋಗಜ್ಞಾನಯೋಗ ಸಮುಚ್ಚಯವಾಗಲಿ; ಇದನ್ನು ಮಾತ್ರವೇ ಅನುಷ್ಠಿಸಿದವರಿಗೆ ಅರ್ಚಿರಾದಿ ಗತಿಯಿಲ್ಲವೆಂದು ವ್ಯಕ್ತವಾಗಿ ಹೇಳುತ್ತಾರೆ. ಹಾಗೆಯೇ ಶ್ರೀ ದೇಶಿಕರವರೂ ವ್ಯಾಖ್ಯಾನದಲ್ಲಿ. **"ಏತೇನ ಪ್ರಥಮ ಷಟ್ಕೋದಿತ ಪ್ರತ್ಯಗಾತ್ಮ ವೇದನಾತ್ ಅತ್ರತ್ಯಕ್ಷರಯಥಾತ್ಮ್ಯಾನುಸಂಧಾನಸ್ಯ ಭೇದೋಹಿ ದರ್ಶಿತಃ"** ಎಂದರೆ ಪ್ರಥಮ ಷಟ್ಕದಲ್ಲಿ ಹೇಳಲ್ಪಟ್ಟ ಆತ್ಮಾವಲೋಕಕ್ಕಿಂತಲೂ ಇಲ್ಲಿ ಹೇಳಲ್ಪಟ್ಟ ಅಕ್ಷರ ಯಾಥಾತ್ಮ್ಯಾನು ಸಂಧಾನರೂಪೋಪಾಸನವು ಬೇರೆ ಎಂಬುದು ವ್ಯಕ್ತಪಡಿಸಲ್ಪಟ್ಟಿತೆಂದು ಉಪಪಾದಿಸಿರುತ್ತಾರೆ.

ಆದುದರಿಂದ ಜಿಜ್ಞಾಸುವಾದ ಪಂಚಾಗ್ನಿ ವಿದ್ಯಾನಿಷ್ಠನಿಗೆ ಒಡನೆಯೇ ಮೋಕ್ಷಪ್ರಾಪ್ತಿಯು ಇಲ್ಲವು, ಆತ್ಮಪ್ರಾಪ್ತಿಯು (ಕೈವಲ್ಯವು) ಲಭಿಸಿ ಅನಂತರ ಮೋಕ್ಷವು ಇದು ಅರ್ಚಿರಾದಿ ಗತಿಯ ಮಧ್ಯದಲ್ಲೋ ಅಥವಾ ಕೊನೆಯಲ್ಲೋ ಎಂಬುದು ಶ್ರುತಿಗಳಲ್ಲಿ ವ್ಯಕ್ತವಿಲ್ಲವು. ದಕ್ಷಿಣಾಯನದಲ್ಲಿ ಮೃತನಾದ ಬ್ರಹ್ಮವಿದ್ಯಾ ನಿಷ್ಠನಿಗೆ **ಚಂದ್ರಮಸಸ್ಸಾಯುಜ್ಯವು** ಸ್ವಲ್ಪಕಾಲ ಉಂಟಾಗುವಹಾಗೆ, ಈ ಅಕ್ಷರ ನಿಷ್ಠನಿಗೂ ಸ್ವಲ್ಪಕಾಲ ಆತ್ಮಪ್ರಾಪ್ತಿಯ ಮೂಲಕ ವಿಳಂಬವು; ಇದೇ ಚ್ಯವನ ಧರ್ಮತ್ವವು; ಅನಂತರ ದಿವ್ಯ ವೈಕುಂಠಪ್ರಾಪ್ತಿಯು. ಮಧುವಿದ್ಯಾನಿಷ್ಠನಿಗೆ ಹೇಗೋ ಹಾಗೆಯೇ ಈ ಪಂಚಾಗ್ನಿ ವಿದ್ಯಾನಿಷ್ಠನಿಗೂ ಸ್ವಲ್ಪ ವಿಳಂಬ ಉಂಟು. ಆದುದರಿಂದ

ಇದೂಕೂಡ ಅಪ್ರತೀಕಾಲಂಬನೋಪಾಸನವೇ ವಿನಾ ಅನ್ಯಥಾ ಅಲ್ಲವು, ಏಕೆಂದರೆ ತಾನು ಪರಮಾತ್ಮನಿಗೆ ಶರೀರವೆಂದು ಭಾವಿಸಿ ಆತ್ಮಪ್ರಾಪ್ತಿಗಾಗಿ ಪರಮಾತ್ಮೋಪಾಸನವನ್ನು ಮಾಡುತ್ತಾನೆ; ಅಥವಾ ತಾನು ಪರಮಾತ್ಮನಿಗೆ ಶರೀರವೆಂದು ಭಾವಿಸಿ ಆತ್ಮಾವನ್ನು ಉಪಾಸಿಸುತ್ತಾನೆ. ಇಂತಹ ಆತ್ಮಾನುಭವಕ್ಕೆ ಸ್ಥಳವು ಯಾವುದು ಎಂಬ ಸಂದರ್ಭದಲ್ಲಿ ಶ್ರೀ ಪರಾಶರು ವಿಷ್ಣು ಪುರಾಣದಲ್ಲಿ (೧. ೬. ೩೮) **"ಯೋಗಿನಾಮಮೃತಂ ಸ್ಥಾನಂ ಸ್ವಾತ್ಮ ಸಂತೋಷ ಕಾರಿಣಾಂ। ಏಕಾನ್ತಿನ ಸ್ಸದಾ ಬ್ರಹ್ಮ ಧ್ಯಾಯಿನೋ ಯೋಗಿನೋಹಿ ಯೇ। ತೇಷಾಂ ತತ್ಪರಮಂ ಸ್ಥಾನಂ ಯದ್ವೈ ಪಶ್ಯನ್ತಿ ಸೂರಯಃ"** ಎಂದು ಇಷ್ಟು ಮಾತ್ರವೇ ಹೇಳಿರುತ್ತಾರೆ. **"ಏಕಾನ್ತಿನಃ"** ಎಂದಾರಂಭಿಸಿ ಹೇಳಿರುವದು ಪರಮಾತ್ಮೋಪಾಸಕರಾದ ಭಕ್ತಿ ಯೋಗ ನಿಷ್ಠರೇ ಹೇಳಲ್ಪಟ್ಟರೆಂದೂ, ಅವರಿಗೆ **ಯದ್ವೈ ಪಶ್ಯನ್ತಿ ಸೂರಯಃ** ಎಂದು ಹೇಳಿರುವ ದರಿಂದ ದಿವ್ಯ ವೈಕುಂಠವೆಂಬುದೇನೋ ವ್ಯಕ್ತವು, ಆದರೆ ಸ್ವಾತ್ಮ ಸಂತೋಷಕಾರಿಗಳಾದ ಯೋಗಿ ಗಳಿಗೆ ಎಂದು ಹೇಳಿರುವದರಿಂದ, ಪಂಚಾಗ್ನಿ ವಿದ್ಯಾನಿಷ್ಠರೇ ಹೇಳಲ್ಪಟ್ಟರೆಂದು ಭಾವಿಸಿದರೂ, ಅವರಿಗೂ **ಅಮೃತಂ ಸ್ಥಾನಂ** ವೆಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ **"ಯೋಗಿನಾಮಮೃತಂ ಸ್ಥಾನಂ ಸ್ವಾತ್ಮ ಸಂತೋಷಕಾರಿಣಾಂ"** ಎಂಬಲ್ಲಿ ಯೋಗಿಶಬ್ದದಿಂದ ಮೋಕ್ಷಾರ್ಥಿಯಾದ ಪರಮಾತ್ಮೋಪಾಸಕನೇ ಹೇಳಲ್ಪಟ್ಟ ಹಾಗೆ ತೋರುತ್ತದೆ. ಎಲ್ಲಾ ಉಪಾಸಕರೂ ತಮ್ಮ ಮನ ಸ್ಸಿಗೆ ಹರ್ಷವನ್ನುಂಟುಮಾಡುವವರೆಂದು **"ಮಾನಸಮಿತಿ ವಿದ್ವಾಂಸ ಸ್ತಸ್ಮಾದ್ವಿದ್ವಾಂಸ ಏವ ಮಾನಸೇ ರಮನ್ತೇ** (ತೈ. ನಾರಾಯಣೀಯ. ೪೯. ಅನು) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಇಲ್ಲಿ ಆತ್ಮವೆಂದರೆ ಮನಸ್ಸೆಂಬ ಅರ್ಥವಾಗಿ, **ಸ್ವಾತ್ಮಸಂತೋಷ ಕಾರಿಣಾಂ** ಎಂಬುದರಿಂದ ಈ ತೃತ್ತ ರೀಯಾರ್ಥವೇ ಉಪಪಾದಿಸಲ್ಪಟ್ಟಿತೋ ಹೇಗೋ ? ಇಲ್ಲಿ ಕೇವಲನೇ ಹೇಳಲ್ಪಟ್ಟನೆಂದು ಹೇಳಲು ವ್ಯಕ್ತವಲ್ಲವು. **ಯೋಗಿನಾಮಮೃತಂ ಸ್ಥಾನಮ್** ಎಂದು ಸಾಧಾರಣವಾಗಿ ಹೇಳಿರುವದ ರಿಂದ ಚತುರ್ವಿಧ ಭಕ್ತರಲ್ಲಿ ಜ್ಞಾನಿಗೆ ಶೀಘ್ರವಾಗಿ ಮೋಕ್ಷವಾದರೂ, **ಇತರ** ಮೂರು ಜನರೂ ಐಶ್ವರ್ಯ ಕೈವಲ್ಯಗಳನ್ನೂ ಅಪೇಕ್ಷಿಸಿದರೂ, ಆ ಭಗವದುಪಾಸನೆಯ ಮಹಿಮೆಯಿಂದ ಸುಕೃತಿಗಳಾ ದುದರಿಂದ ಉತ್ತರೋತ್ತರ **ಅಮೃತಸ್ಥಾನವೇ** ಮೋಕ್ಷಸ್ಥಾನವೇ ಎಂದು ಅರ್ಥಮಾಡಬಹುದು ಇದೇ **ಮದ್ಭಕ್ತಾ ಯಾನ್ತಿ ಮಾಮಪಿ** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಇದರಿಂದ ಕೆಲವರಿಗೆ ಸಾಕ್ಷಾ ತ್ತಾಗಿ ವೈಕುಂಠವಿಲ್ಲವು, ಅದಕ್ಕೆ ಪೂರ್ವಭಾವಿಯಾಗಿ ಯಾವುದೋ ಒಂದು ಸ್ಥಳವಿರಬೇಕೆಂದು ಊಹಿಸತಕ್ಕದ್ದಾಗಿರುತ್ತದೆ. ಇದಕ್ಕೆ ವಿಷ್ಣು ಚಿತ್ತೀಯ ವ್ಯಾಖ್ಯಾನದಲ್ಲಿ ಮಾತ್ರ ಧ್ರುವನ ಸ್ಥಾನಕ್ಕೂ ಮೇಲಿರುವ ಗಂಗೆಯು ಆದಿಯಲ್ಲಿ ಪ್ರವಹಿಸಿದ ವಿಷ್ಣು ಪದಾಖ್ಯಸ್ಥಾನವೆಂದು ಬರೆ ದಿರುತ್ತಾರೆ; ಅದಕ್ಕೆ ಪ್ರಮಾಣವನ್ನು ಉದಾಹರಿಸಲಿಲ್ಲವು. ಆದರೆ ಕೈವಲ್ಯಸ್ಥಾನ ವಿಷಯದಲ್ಲಿ ಶ್ರುತಿಪ್ರಮಾಣವು ಇಲ್ಲದಿದ್ದರೂ ಇತರ ಅನೇಕ ಪುರಾಣಗಳಲ್ಲೂ ಕೈವಲ್ಯ ಸ್ಥಾನವು ಉಪಪಾದಿ ತವು:— (೧) **ಐಹಲೌಕಿಕಮೈಶ್ವರ್ಯಂ ಸ್ವರ್ಗಾದ್ಯಂ ಪಾರಲೌಕಿಕಮ್। ಕೈವಲ್ಯಂ ಭಗ ವನ್ತಂ ಚ ಮನ್ತ್ರೋಯಂ ಸಾಧಯಿಷ್ಯತಿ.** (ನಾರದೀಯ) (೨) **"ಸರ್ವಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್। ಲೋಕವಿಕ್ರಾನ್ತ ಚರಣೌ ಶರಣಂ ತೇಽವ್ರಜಂ ವಿಭೋ"** ಇಲ್ಲಿ **ಸಾಕ್ಷರಾನ್** ಎಂಬುದರಿಂದ ಕೈವಲ್ಯ ಸಾಧನಗಳು ಹೇಳಲ್ಪಟ್ಟವು. (೩) **"ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಚರಣಾರ್ಥಿನಾಂ** (ಗೀತಾರ್ಥ ಸಙ್ಗ್ರಹ. ೧೨) ಎಂದು ಶ್ರೀ ಯಾಮುನೇ ಯರು ಪ್ರಯೋಗಿಸಿರುತ್ತಾರೆ. ಹಾಗೆಯೇ **"ಐಶ್ವರ್ಯ ಮಕ್ಷರಗತಿಂ ಪರಮಂ ಪದಂ ವಾ"** (**ಶ್ರೀ ಗುಣ**) ಎಂದು ಶ್ರೀ ಪರಾಶರಭಟ್ಟರು ಪ್ರಯೋಗಿಸಿರುತ್ತಾರೆ.

**ಈ** ಕೇವಲನಿಗೆ ಕರ್ಮಶೇಷವು ಇನ್ನೂ ಕಳೆಯಲಿಲ್ಲವೆಂದು ಹೇಳಲಾಗುವದಿಲ್ಲವು. ಕರ್ಮ

ಶೇಷವಿದ್ದುದಾದರೆ ಪುನಸ್ಸಂಸಾರವು ತಪ್ಪಿದ್ದಲ್ಲವು, ಆದುದರಿಂದ ಕರ್ಮಶೇಷವಿಲ್ಲವೆಂದೂ ಸ್ವಸ್ವರೂಪಾವಿರ್ಭಾವ ಉಂಟೆಂದೂ ಭಾವಿಸತಕ್ಕದ್ದಾಗಿರುತ್ತದೆ. ಕರ್ಮಶೇಷವಿಲ್ಲವಾದರೆ ಪರಬ್ರಹ್ಮಪ್ರಾಪ್ತಿಯೇ ಉಂಟಾಗಬೇಕು, ಅದು ಲಭಿಸದಿರುವದಕ್ಕೆ ಏನೋ ಪ್ರತಿಬಂಧಕವಿರಬೇಕಲ್ಲವೇ ? ಎಂದರೆ ಆತನು ಆತ್ಮಪ್ರಾಪ್ತಿಗಾಗಿಯೇ ಉಪಾಸಿಸುವದರಿಂದ ತತ್ಕ್ರತುನ್ಯಾಯದ ಪ್ರಕಾರ ಆತ್ಮಾನುಭವವೇ ವಿನಾ ಅನ್ಯಥಾ ಅಲ್ಲವೆಂದು ಭಾವಿಸತಕ್ಕದ್ದು. ಆತನ ಇಚ್ಛೆಯೇ ಪ್ರತಿಬಂಧಕವೇ ವಿನಾ ಅನ್ಯಥಾ ಅಲ್ಲವು. ಮುಂದೆ ತಾನು ಮಾಡಿದುದು ಸರಿಯಲ್ಲವೆಂದು ಆತನಿಗೆ ತೋರಿ, ಮುಂದಕ್ಕೆ ವೈಕುಂಠಕ್ಕೆ ಹೋಗುವನು. ಆತನಿಗೆ ಮುಂದಕ್ಕೆ ಯಾವಾಗಲೂ ಕೈವಲ್ಯವೇ ವಿನಾ ಮೋಕ್ಷವೆಂದಿಗೂ ಇಲ್ಲವೆಂಬುದು ಕೆಲವರ ಅಭಿಪ್ರಾಯವು. ಶ್ರೀ ಭಾಷ್ಯಕಾರರ ಅಭಿಪ್ರಾಯವು, ಈ ಕೇವಲರಿಗೆ ಪರಮಾತ್ಮಪ್ರಾಪ್ತಿಯು ಎಂದಿಗೂ ಇಲ್ಲವೆಂದೂ, ಶ್ರೀ ದೇಶಿಕರವರಿಗೆ, ಶ್ರೀ ಭಾಷ್ಯಕಾರರ ಮತಕ್ಕೆ ವ್ಯತ್ಯಸ್ತವಾಗಿ, ಕೆಲವು ಕಾಲಮಾತ್ರ ಕೈವಲ್ಯವೆಂದೂ ಅನಂತರ ದಿವ್ಯ ವೈಕುಂಠಪ್ರಾಪ್ತಿ ಎಂದೂ ಇವರು ಭಾವಿಸುವರು. ಈ ಅಭಿಪ್ರಾಯಗಳು ಮೇಲಿನ ಉಪಪಾದನೆಗಳಿಂದ ಶ್ರುತಿ, ಸ್ಮೃತಿ, ಸೂತ್ರ, ಭಾಷ್ಯ, ಆಳ್ವಾರಾಚಾರ್ಯಾದಿ ದಿವ್ಯಸೂಕ್ತಿಗಳಿಗೆ ವಿರುದ್ಧವು. ಶ್ರೀ ಯತಿವರ್ಯರು ಅವರುಗಳಿಗೆ ಕೈವಲ್ಯವು ನಿತ್ಯವಾದುದು ಎಂದು ಎಲ್ಲೂ ಹೇಳಿಲ್ಲವು. ಅವರು ೩. ೧. ೭. ನೆಯ ಸೂತ್ರವಾದ **"ಭಾಕ್ತಂವಾ ನಾತ್ಮ ವಿತ್ವಾತ್ತಥಾ ಹಿ ದರ್ಶಯತಿ"** ಎಂಬುದರ ಭಾಷ್ಯದಲ್ಲಿ **ಸ್ಮೃತಿರಪ್ಯಾತ್ಮವಿದಾಂ ಬ್ರಹ್ಮಪ್ರಾಪ್ತಿ ವ ನ್ನಾತ್ಮವಿದಾಂ ಚ ದೇವ ಭೋಗ್ಯತ್ವಂ ದರ್ಶಯತಿ—ದೇವಾನ್ ದೇವಯಜೋಯಾನ್ತಿ ಮದ್ಭಕ್ತಾಯಾನ್ತಿ ಮಾ ಮಪೀತಿ"** (ಗೀ. ೭. ೨೩) ಎಂದು ಅಪ್ಪಣೆ ಕೊಡಿಸಿರುತ್ತಾರೆ. ಇಲ್ಲಿ **ಆತ್ಮವಿದಾಂ** ಎಂಬುವರಿಂದ ಪಂಚಾಗ್ನಿ ವಿದ್ಯಾನಿಷ್ಠರಾದ ಜಿಜ್ಞಾಸುಗಳು ಹೇಳಲ್ಪಟ್ಟರು, ಈ ಜಿಜ್ಞಾಸುಗಳು ಪರಮಾತ್ಮಭಕ್ತರಾದುದರಿಂದ, **"ಮದ್ಭಕ್ತಾ ಯಾನ್ತಿ ಮಾಮಪಿ"** ಎಂಬುವರಲ್ಲೇ ಅಪಿ ಶಬ್ದಸ್ವಾರಸ್ಯದಿಂದ ಸೇರಿದವರೇ. ಹಾಗೆಯೇ ಶ್ರೀ ಯತಿವರ್ಯರು ಆ ಶ್ಲೋಕ ಭಾಷ್ಯದಲ್ಲೂ ವ್ಯಕ್ತಪಡಿಸಿರುತ್ತಾರೆ. ಪಂಚಾಗ್ನಿ ವಿದ್ಯೆಯೂ ಬ್ರಹ್ಮವಿದ್ಯೆಯಲ್ಲೇ ಸೇರಿರುವಾಗ ಆ ಬ್ರಹ್ಮವಿದ್ಯಾನಿಷ್ಠನಿಗೆ ಮಾತ್ರ ಕೈವಲ್ಯವೇ ವಿನಾ ಬ್ರಹ್ಮಪ್ರಾಪ್ತಿ ಇಲ್ಲಾ ಎಂದು ಶ್ರೀ ಯತಿವರ್ಯರು ಎಂದಿಗಾದರೂ ಅಪ್ಪಣೆ ಕೊಡಿಸುವರೇ ? ಹೀಗೆ ಕೈವಲ್ಯ ನಿತ್ಯವೆಂದು ಹೇಳುವವರನ್ನು ಕೇಳುವವು, ಏನೆಂದರೆ, ಇದೇನು ಸೃಷ್ಟಿಲಯಾದಿಗಳಿಗೆ ಸೇರಿದುವೇ ಅಲ್ಲವೇ ? ಎಂಬುದಾಗಿ ; ಸೇರಿದುದು ಎಂದರೆ ನಿತ್ಯತ್ವವಾದಕ್ಕೆ ವಿರುದ್ಧವು. ಸೃಷ್ಟಿಲಯಾದಿಗಳಿಗೆ ಸೇರಿದುದಲ್ಲವೆಂದೇ ಅವರು ಆಗ ಹೇಳಬೇಕಾಗುತ್ತದೆ. ಆಗ ನಿತ್ಯವಿಭೂತಿಗೆ ಸೇರಿದುದು ಎಂದೇ ಹೇಳಬೇಕಾಗುತ್ತದೆ. ಆದುದರಿಂದ ಆತನಿಗೂ ದಿವ್ಯ ವೈಕುಂಠಪ್ರಾಪ್ತಿಯು ಎಂಬವಾಗಿಯೇ ಶ್ರೀ ಯತಿವರ್ಯರ ಮತ್ತು ಶ್ರೀ ದೇಶಿಕವರ್ಯರ ಅಭಿಪ್ರಾಯವು ; ಮತ್ತು ಈ ಅವತಾರಿಕೆಯಲ್ಲಿಯೇ **"ಆತ್ಮ ಯಾಥಾತ್ಮ್ಯವಿದಃ ಪರಮಪುರುಷ ನಿಷ್ಠಸ್ಯ ಚ ಸಾಧಾರಣೀ ಮರ್ಚಿರಾದಿಕಾಂಗತಿ ಮಾಹ ; ದ್ವಯೋರಪಿ ಅರ್ಚಿರಾದಿಕಾಗತಿ ಶ್ಶ್ರುತೌಶ್ರುತಾ ; ಸಾಚಾ ಪುನರಾವೃತ್ತಿ ಲಕ್ಷಣಾ"** ಎಂದು ಹೇಳಿರುವದರಿಂದ ಇಬ್ಬರಿಗೂ ಕೊನೆಗೆ ಬ್ರಹ್ಮಪ್ರಾಪ್ತಿ ಉಂಟೆಂಬುದು ವ್ಯಕ್ತವಲ್ಲವೇ ? ಹಾಗೆಯೇ **"ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣಃ** ಎಂಬ ಸೂತ್ರದ ಭಾಷ್ಯದಲ್ಲೂ ಬಹು ಸ್ಫುಟವು.

**ಮೂಲಕ್ಕೆ ಅರ್ಥವು :—ಚತುರ್ವಿಧಾ ಭಜಂತೇ ಮಾಂ ಜನಾ ಸ್ಸುಕೃತಿನೋರ್ಜುನ** ಎಂದು ಹೇಳಿದವರಲ್ಲಿ ನಾಲ್ಕು ಜನರೂ ಸುಕೃತಿಗಳಾಗಿ ಉದಾರರೆಂದು ಹೇಳಲ್ಪಟ್ಟರು. ಅವರುಗಳಲ್ಲಿ ಆರ್ತನೂ ಅರ್ಥಾರ್ಥಿಯೂ ಅಲ್ಪಾಸ್ಥಿರ ಫಲಗಳನ್ನಪೇಕ್ಷಿಸಿದುದರಿಂದ ಅವರಿಗೆ ಒಡನೆ ಪುನರ್ಜನ್ಮಗಳು ಪ್ರಾಪ್ತವಾಗುತ್ತವೆಂದೂ, ಇನ್ನು ಇಬ್ಬರಾದ ಜಿಜ್ಞಾಸು ಜ್ಞಾನಿಗಳಿಗಾ

**ಮೂ. ಯತ್ರಕಾಲೇ ತ್ವನಾವೃತ್ತಿ ಮಾವೃತ್ತಿಂ ಚೈವಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥** ೨೩.
**ಅಗ್ನಿರ್ಜ್ಯೋತಿ ರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥** ೨೪.

ದರೋ ಪುನರ್ಜನ್ಮವಿಲ್ಲದೆ ಅಪುನರಾವೃತ್ತಿಯನ್ನು ಹೊಂದುವರೆಂದೂ, ಜಿಜ್ಞಾಸುವಿಗಾದರೋ ಸ್ವಲ್ಪ ವಿಳಂಬದಿಂದ ಆತ್ಮಪ್ರಾಪ್ತಿಯಾದನಂತರ ಮೋಕ್ಷವು ಲಭಿಸುತ್ತದೆಂದೂ, ಜ್ಞಾನಿಗಾದರೋ ವಿಳಂಬವಿಲ್ಲದೆ ಲಭಿಸುತ್ತದೆಂದೂ, ಹೇಳಲ್ಪಟ್ಟಿತು. ಇನ್ನು ಮುಂದೆ ಈ ನಾಲ್ವರಿಗೂ ದೇಹ ವಿಯೋಗವಾದನಂತರ ಲಭಿಸುವ ಮಾರ್ಗಗಳು ಹೇಳಲ್ಪಡುವುವು. ಈ ಮುಂದಿನ ೨೩, ೨೪ ನೆಯ ಶ್ಲೋಕಗಳಲ್ಲಿ ಜಿಜ್ಞಾಸುವಿಗೂ ಜ್ಞಾನಿಗೂ ಪ್ರಾಪ್ತವಾಗುವ ಅರ್ಚಿರಾದಿ ಮಾರ್ಗವನ್ನು ಹೇಳಿ, ೨೫ನೆಯ ಶ್ಲೋಕದಲ್ಲಿ ಆರ್ತನಿಗೂ ಅರ್ಥಾರ್ಥಿಗೂ, ಉಂಟಾಗುವ ಧೂಮಾದಿ ಮಾರ್ಗ ವನ್ನು ಉಪದೇಶಿಸುತ್ತಾರೆ. ೨೩ನೆಯ ಶ್ಲೋಕವು ಈ ನಾಲ್ಕು ಭಕ್ತರುಗಳಿಗೂ ಪ್ರಾಪ್ತವಾಗು ವುದು ಎರಡು ಮಾರ್ಗಗಳು; ಅವುಗಳು ಯಾವುವೆಂದು ತಿಳಿಸುವೆನು ಎಂದು ಪ್ರತಿಜ್ಞಾ ವಾಕ್ಯವು. ೨೪ನೆಯ ಶ್ಲೋಕದಲ್ಲಾದರೋ ಜಿಜ್ಞಾಸುವಿಗೂ ಜ್ಞಾನಿಗೂ ದೇಹಾವಸಾನಾನಂತರ ಪ್ರಾಪ್ತ ವಾಗುವ ಮಾರ್ಗವು ದೇವಯಾನವೆಂದು ಹೇಳಿಸಿಕೊಳ್ಳುವ ಅರ್ಚಿರಾದಿ ಮಾರ್ಗವೆಂದು ಹೇಳಿ, ಅಂತಹ ಗತಿ ಎಂತಾದ್ದೆಂದು ತಿಳಿಸುತ್ತಾರೆ. ಮೋಕ್ಷಾರ್ಥಿಗೆ ಈ ಗತಿ ಚಿನ್ತನವೂ ಮುಖ್ಯವಾದು ದರಿಂದ ಅದನ್ನು ಉಪದೇಶಿಸುತ್ತಾರೆ. ಹೇಗೆ ಮುಖ್ಯವೆಂಬುದು ಮುಂದೆ ೨೭ನೆಯ ಶ್ಲೋಕದಲ್ಲಿ ಉಪಪಾದಿತವು. **ಯತ್ರ ಕಾಲೇ** - ಯಾವ ಕಾಲಾಭಿಮಾನಿಗಳು ತೋರಿಸುವ ಮಾರ್ಗದಲ್ಲಿ, **ಪ್ರಯಾತಾಃ** - ದೇಹಾವಸಾನಾನಂತರ ಕಣ್ಣಿಗೆ ಕಾಣದ ಸೂಕ್ಷ್ಮ ಶರೀರೇಂದ್ರಿಯಗಳೊಂದಿಗೆ ಹೋಗುವ, **ಯೋಗಿನಃ** - ಚತುರ್ವಿಧ ಭಕ್ತರು, **ಅನಾವೃತ್ತಿಂ ಆವೃತ್ತಿಂಚ** - ಕೆಲವರು ಹಿಂತಿರುಗದೇ ಮೋಕ್ಷವನ್ನೂ, ಇನ್ನು ಕೆಲವರು ಹಿಂದಕ್ಕೆ ಬಂದು ಪುನಸ್ಸಂಸಾರವನ್ನೂ, **ಯಾನ್ತಿ** ಹೊಂದುವರೋ, **ತಂ ಕಾಲಂ** - ಅಂತಹ ಕಾಲಾಭಿಮಾನಿಗಳ ಮಾರ್ಗವನ್ನು, **ಹೇ ಭರ ತರ್ಷಭ** ಓ ಭರತವಂಶಶ್ರೇಷ್ಠನೇ, **ವಕ್ಷ್ಯಾಮಿ** - ಮೋಕ್ಷಾರ್ಥಿಯಾದ ನೀನು ಮುಖ್ಯವಾಗಿ ತಿಳಿಯತಕ್ಕದ್ದು ಆವಶ್ಯಕವಾದುದರಿಂದ, ಹೇಳುವೆನು ಕೇಳು. ಇಲ್ಲಿ **ಅನಾವೃತ್ತಿಂ ಆವೃತ್ತಿಂ** ಎಂಬ ಶಬ್ದಾರ್ಥಗಳ ವಿಷಯದಲ್ಲಿ, ಹಿಂದೆ **"ಆ ಬ್ರಹ್ಮ ಭುವನಾತ್"** ಎಂಬ ಶ್ಲೋಕವು ಅನುಸಂಧೇಯವು. ಹಿಂದೆ ಹೇಳಿದ ನಾಲ್ಕು ಜನರಲ್ಲಿ ಜಿಜ್ಞಾಸು ಜ್ಞಾನಿಗಳಿಗೆ ಅನಾ ವೃತ್ತಿಯೂ, ಆರ್ತನಿಗೂ ಅರ್ಥಾರ್ಥಿಗೂ ಆವೃತ್ತಿ ಎಂದೂ ತಿಳಿಯತಕ್ಕದ್ದು. ಮುಂದಿನ ಶ್ಲೋಕ ಗಳಿಂದ ಇದನ್ನೇ ಉಪಪಾದಿಸಿ ಹೇಳುತ್ತಾರೆ.—ಯಾವ ಯಾವ ಕಾಲಾಭಿಮಾನಿಗಳಾದ ದೇವತೆ ಗಳ ಮಾರ್ಗದ ಮೂಲಕವಾಗಿ ಜಿಜ್ಞಾಸುವೂ ಜ್ಞಾನಿಯೂ ದೇಹಾವಸಾನಾನಂತರ ಹೋಗುತ್ತಾ ರೆಂಬುದನ್ನು ತಿಳಿಸುತ್ತಾರೆ.—**ಅಗ್ನಿರ್ಜ್ಯೋತಿಃ** - ತೇಜಸ್ಸಿಗೆ ಆಶ್ರಯವಾದ ಅರ್ಚಿಸ್ಸೆಂಬ ದೇವತೆಯು, **ಅಹಃ** - ಅಹಸ್ಸಿಗೆ ಅಭಿಮಾನ ದೇವತೆ, **ಶುಕ್ಲಃ** - ಶುಕ್ಲ ಪಕ್ಷಾಭಿಮಾನ ದೇವತೆ, **ಷಣ್ಮಾಸಾಃ ಉತ್ತರಾಯಣಃ** - ಆರು ತಿಂಗಳಿಂದ ಸೇರಿದ ಉತ್ತರಾಯಣಾಭಿಮಾನ ದೇವತೆ ಯು, **ತತ್ರ ಪ್ರಯಾತಾಃ** - ಹೀಗೆ ಅವರುಗಳ ಮಾರ್ಗವಾಗಿ ದೇಹಾವಸಾನಾನಂತರ ಹೋದ ವರು, **ಬ್ರಹ್ಮವಿದೋಜನಾಃ** - ಪರಮಾತ್ಮನನ್ನು ಸಾಕ್ಷಾತ್ಕರಿಸಿದ ಬಹ್ಮವಿತ್ತಾದ ಪ್ರಪನ್ನರು, **ಬ್ರಹ್ಮಗಚ್ಛನ್ತಿ** - ಪರಬ್ರಹ್ಮನನ್ನು ಕುರಿತು ಹೋಗುವರು ಎಂದರೆ ಪರಮಾತ್ಮ ಸಾಯುಜ್ಯವನ್ನೂ, **"ಬ್ರಹ್ಮವೇದ ಬ್ರಹ್ಮೈವ ಭವತಿ"** ಎಂದು ಹೇಳಿರುಹಾಗೆ ತತ್ಸಾಮ್ಯವನ್ನೂ, ಹೊಂದುವರು

ಎಂಬ ಭಾವವು. ದೇಹಾವಸಾನಕಾಲದಲ್ಲಿ ದಿವ್ಯ ವೈಕುಂಠವನ್ನು ಕುರಿತು ಹೋಗುವ ಬ್ರಹ್ಮ ವಿದ್ಯಾನಿಷ್ಠನು ನಿರ್ಯಾಣಕಾಲದಲ್ಲಿ ಬ್ರಹ್ಮನಾಡಿಯ ಮೂಲಕ ಹೊರಟು ಹೊರಗೆ ಬರುವನು. ಹಾಗೆ ಬಂದವನನ್ನು ೧೨ ಜನ ಆತಿವಾಹಿಕರು ಕ್ರಮವಾಗಿ ಎದರುಗೊಂಡು ಬಂದು ಸತ್ಕರಿಸಿ, ತಮ್ಮ ತಮ್ಮ ಎಲ್ಲೆಯವರೆಗೂ ಕರೆದುಕೊಂಡು ಹೋಗಿ ಮುಂದಿನ ಆತಿವಾಹಿಕ ದೇವತೆಯ ಸಮೀಪದಲ್ಲಿ ಬಿಟ್ಟುಬರುವರು. ಈ ೧೨ ಆತಿವಾಹಿಕರಲ್ಲಿ ಈ ಶ್ಲೋಕದಲ್ಲಿ ಐದು ಮಂದಿಯು ಮಾತ್ರ ಕ್ರಮವಾಗಿ ಹೇಳಲ್ಪಟ್ಟಿರುತ್ತದೆ. ಮಿಕ್ಕ ಏಳು ಮಂದಿಗಳು ಯಾರೆಂಬುದನ್ನು ಶಾಸ್ತ್ರ ದಿಂದ ಗ್ರಹಿಸಲಿ ಎಂದು ಹೇಳಲಿಲ್ಲವು. ಗೀತಾಶಾಸ್ತ್ರವು ತುಂಬಾ ಪ್ರಾಜ್ಞನಾದ ಗುರುವಿನಿಂದ ಉಪದೇಶವನ್ನು ಹೊಂದತಕ್ಕ ರಹಸ್ಯಗ್ರಂಥವಾದುದರಿಂದ ಕೆಲವರು ಮಾತ್ರವೇ ಇಲ್ಲಿ ಹೇಳಲ್ಪ ಟ್ಟಿರುತ್ತಾರೆ. ಇವುಗಳನ್ನು ಬೋಧಿಸುವ ಶ್ರುತಿಗಳು ಯಾವುವೆಂದರೆ. (೧) ಛಾಂದೋಗ್ಯ ೪, ೧೫, ೫-೬ (೨) ಕೌಷೀತಕೀ. ೧, ೩, (೩) ಬೃಹದಾರಣ್ಯಕ. ೮. ೨. ೧೫ ಇವು ಮೂರನ್ನೂ ಒಟ್ಟುಕೂಡಿಸಿ ಅರ್ಥಮಾಡಿದರೆ ೧೨ ಆತಿವಾಹಿಕರು ಉಂಟೆಂಬುದು ಏರ್ಪಡುತ್ತದೆ. ಶ್ರೀ ಭಾಷ್ಯದ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಇದು ಚರ್ಚಿಸಲ್ಪಟ್ಟು ಈ ಆತಿವಾಹಿ ಕರ ಕ್ರಮವು ವ್ಯವಸ್ಥೆ ಮಾಡಲ್ಪಟ್ಟಿರುತ್ತದೆ. ಈ ಕ್ರಮವನ್ನು ಅನುಸರಿಸಿ ಶ್ರೀ ನಿಗಮಾಂತ ದೇಶಿಕ ರವರೂ, ಶ್ರೀ ವಾತ್ಸ್ಯವರದ ದೇಶಿಕರವರೂ, ಶ್ಲೋಕಗಳನ್ನು ದಯಪಾಲಿಸಿರುತ್ತಾರೆ. ಅವು ಯಾವುವೆಂದರೆ.

**"ಜ್ವಲನ ದಿವಸ ಜ್ಯೋತ್ಸ್ನಾ ಪಕ್ಷೋತ್ತರಾಯಣ ವತ್ಸರಾ । ಪವನ ತಪನ ಪ್ರಾಲೇಯಾಂಶೂನ್ಕ್ರಮಾದ ಚಿರದ್ಯುತಿಂ। ಜಲಧರಪತಿಂ ದೇವಾಧೀಶಂ ಪ್ರಜಾಪತಿ ಮಾಗತ ಸ್ತ್ವರತಿ ವಿರಜಾಂ ದೂರೇ ವಾಚ ಸ್ತತಃ ಪರಮದ್ಭುತಂ"** (ರಹಸ್ಯ ತ್ರಯ. ಗತಿ ಚಿಂತನಾಧಿಕಾರಃ) ಇದರರ್ಥವು.—

"ಅಗ್ನಿ, ಅಹಸ್ಸು, ಜ್ಯೋತ್ಸ್ನಪಕ್ಷ - ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಸೂರ್ಯ ಪ್ರಾಲೇಯಾಂಶು ಎಂದರೆ ಚಂದ್ರ, ಅಲ್ಲಿಂದ **ಅಚಿರದ್ಯುತಿ** ಎಂದರೆ **ವಿದ್ಯುತ್** ಈತನಿಗೆ ಅಮಾನವನೆಂದು ಹೆಸರು, ವರುಣ, ಇಂದ್ರ, ಬ್ರಹ್ಮ ಇವರುಗಳು ಈ ಮೋಕ್ಷ ಹೊಂದುವನನ್ನು ಸನ್ಮಾನಿಸಿ ತಮ್ಮ ತಮ್ಮ ಎಲ್ಲೆಯವರೆಗೂ ಕರೆದುಕೊಂಡು ಹೋಗಿ ಮುಂದಿನ ಆತಿವಾಹಿಕನ ವಶಕ್ಕೆ ಒಪ್ಪಿಸುವರು. ಅಮಾನವನೇ ಈತನನ್ನು ವಿರಜಾನದಿಯಲ್ಲಿ ಸ್ನಾನಮಾಡಿಸಿ, ಸೂಕ್ಷ್ಮ ದೆಶೆಯಲ್ಲಿದ್ದ ಪ್ರಾಕೃತ ದೇಹವು ತೊಲಗುವಹಾಗೆಮಾಡಿ, ಚತುರ್ಭುಜದಿಂದ ಕೂಡಿದ ಅಪ್ರಾಕೃತ ಶರೀರವುಂಟಾಗುವಹಾಗೆ ಮಾಡಿ, ಅಲ್ಲಿಂದ ದಿವ್ಯ ವೈಕುಂಠಕ್ಕೆ ಶ್ರೀ ವಾಸುದೇವನ ಸನ್ನಿಧಿಗೆ ವರುಣ ಇಂದ್ರ ಬ್ರಹ್ಮರ ಸಹಾಯದ ಮೂಲಕ ಕರೆದುಕೊಂಡು ಹೋಗುತ್ತಾನೆಂದು ಕೌಷೀತಕೀ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಅರ್ಥವನ್ನು ಈ ಶ್ಲೋಕಮೂಲಕ ತಿಳಿಸುತ್ತಾರೆ. ಹೋಗುವ ಮಾರ್ಗದಲ್ಲಿ ಮೂರು ದಿವ್ಯ ಸರಸ್ಸುಗಳಾದ ಅರ ಎಂದೂ ಅರಣವೆಂದೂ ಐರಂಮದೀಯ ಎಂಬು ವೂ, ಸೋಮಸವನವೆಂಬ ದಿವ್ಯಾಶ್ವತ್ಥವೂ, ಸಿಕ್ಥತ್ತವೆಂದು ಹೇಳಲ್ಪಟ್ಟಿವೆ. ಅಲ್ಲಿಂದ ದಿವ್ಯಾ ಪ್ಸರಸ್ಸುಗಳು ಬಂದು ಹಾರ ಮೊದಲಾದವುಗಳಿಂದ ಅಲಂಕರಿಸಿ, ಪರವಾಸುದೇವನ ದಿವ್ಯ ಸಭಾ ಮಂಟಪಕ್ಕೆ ಹೋಗಲು ಅರ್ಹರನ್ನಾಗಿ ಮಾಡಿ, ಸರ್ವೇಶ್ವರನ ಗೋಪುರ ಬಾಗಲಲ್ಲಿ ಇಂದ್ರ ಪ್ರಜಾ ಪತಿಗಳಿಂದ ಸತ್ಕಾರವನ್ನು ಹೊಂದಿಸಿ, ವೈಮ್ಯತನು ಕರೆದುಕೊಂಡು ಹೋಗಿ ಆನಂದ ಮಂಟಪ ದಲ್ಲಿರುವ ಸರ್ವೇಶ್ವರನ ಎದುರಿಗೆ ನಿಲ್ಲಿಸುವನು. ಹೀಗೆ ಜೀವಾತ್ಮನು ದಿವ್ಯಮಙ್ಗಳವಿಗ್ರಹಯುಕ್ತ ನಾಗಿ ಸ್ವಸ್ವರೂಪಾವಿರ್ಭಾವದಿಂದ ಪರಮಾತ್ಮನೊಂದಿಗೆ ಗುಣಗಳಿಂದ ಸಾಮ್ಯವನ್ನು ಹೊಂದಿ, ಆತನೊಂದಿಗೆ ಸಮಾನ ಭೋಗವನ್ನು ಅನುಭವಿಸುವನು; ಪರಿಪೂರ್ಣ ಬ್ರಹ್ಮಾನುಭವರೂಪ

ಆನಂದವನ್ನು ಹೊಂದುವನು; ತನ್ನ ಸ್ವಾಮಿಗೆ ಸರ್ವವಿಧ ಕೈಂಕರ್ಯಗಳನ್ನು ಮಾಡುವ ಸಾಮ್ರಾಜ್ಯ ಪದವಿಯನ್ನು ಹೊಂದುವನು.

ಶ್ರೀ ವಾತ್ಸ್ಯವರದರವರ ಶ್ಲೋಕವು ಯಾವುದೆಂದರೆ **"ಮುಕ್ತೋಽರ್ಚಿರ್ದಿನ ಪೂರ್ವಪಕ್ಷ ಷಡುದಙ್ಮಾಸಾಬ್ದ ವಾತಾಂಶುಮತ್। ಗ್ಲೌ ವಿದ್ಯುದ್ವರುಣೇಂದ್ರ ಧಾತೃಮಹಿತ ಸ್ಸೀಮಾನ್ತಸಿಂಧ್ವಾಪ್ಲುತ್ । ಶ್ರೀ ವೈಕುಂಠ ಮುಪೇತ್ಯ ನಿತ್ಯಮಜಡಂ ತಸ್ಮಿನ್ಪರ ಬ್ರಹ್ಮಣ । ಸ್ಸಾಯುಜ್ಯಂ ಸಮವಾಪ್ಯ ನನ್ದತಿ ಸಮಂ ತೇನೈವ ಧನ್ಯಃ ಪುಮಾನ್"** ಇದರ ಅರ್ಥವು ಮೇಲಿನ ಶ್ಲೋಕದ ಹಾಗೆಯೇ, **ಶ್ರೀ ವರದ ಮಿತ್ರರೂ** ಒಂದು ಶ್ಲೋಕವನ್ನು ಅನುಗ್ರಹಿಸಿರುತ್ತಾರೆ—**"ಅರ್ಚಿರಹಸ್ಸಿತಪಕ್ಷಾನುದಗಯನಾಬ್ದಮರುದರ್ಕೇಂದೂನ್ । ಅಪಿ ವೈದ್ಯುತವರುಣೇಂದ್ರ ಪ್ರಜಾಪತೀನಾತಿವಾಹಕಾನಾಹುಃ** ಇದೂ ೧೨ ಆತಿವಾಹಿಕರು ಯಾರೆಂಬುದನ್ನು ತಿಳಿಸುತ್ತದೆ. ಗತ್ಯನುಸಂಧಾನಕ್ಕೆ ಅನುಕೂಲವಾಗಿರಲೆಂದು ಶ್ಲೋಕಗಳ ರೂಪದಲ್ಲಿ ಇವರುಗಳು ಅನುಗ್ರಹಿಸಿರುತ್ತಾರೆ. ಇಲ್ಲಿ ಕಾಲಶಬ್ದಕ್ಕೆ ಕಾಲವೆಂಬ ಮುಖ್ಯಾರ್ಥವನ್ನಾಗಲಿ ಅಥವಾ ಕಾಲಾಭಿಮಾನ ದೇವತೆಯ ಎಂಬ ಔಪಚಾರಿಕಾರ್ಥವನ್ನಾಗಲಿ ಹೇಳವೆ, ಎರಡನ್ನೂ ಬಿಟ್ಟು, ಕಾಲಾಭಿಮಾನದೇವತೆಯ ಮಾರ್ಗವೆಂಬರ್ಥ ಹೇಗೆ? ಎಂದು ಆಕ್ಷೇಪಿಸಿದರೆ, **ಯತ್ರ** ಎಂಬ ಪದವು ಕಾಲವನ್ನಾಗಲಿ ಕಾಲಾಭಿಮಾನ ದೇವತೆಯನ್ನಾಗಲಿ ಬೋಧಿಸಲಾರದಾಗಿ, ಉಪನಿಷತ್ತುಗಳಲ್ಲಿ ವ್ಯಕ್ತವಾಗಿ ಹೇಳಲ್ಪಟ್ಟ ಅಪುನರಾವೃತ್ತಿ ಪುನರಾವೃತ್ತಿಯನ್ನುಂಟುಮಾಡುವ ಮಾರ್ಗಗಳು ಈ ಪದದಿಂದ ಬೋಧಿತವಾದುದರಿಂದ ಹಾಗೆ ಕಾಲ ಶಬ್ದಕ್ಕೆ ವ್ಯಾಖ್ಯಾನವು. ಈ ವ್ಯಾಖ್ಯಾನವೇ ಸಮಂಜಸವೆಂಬುದನ್ನು ಮುಂದೆ ೨೬ನೆಯ ಶ್ಲೋಕದಲ್ಲಿ **"ಶುಕ್ಲ ಕೃಷ್ಣೇ ಗತೀ ಹ್ಯೇತೇ"** ಎಂಬ ಮತ್ತು ೨೭ನೆಯ ಶ್ಲೋಕದಲ್ಲಿ **"ನೈತೇ ಸೃತೀ ಪಾರ್ಥ ಜಾನನ್"** ಎಂಬ ಪ್ರಯೋಗದಿಂದಲೂ ಗ್ರಹಿಸಬಹುದು. ಶ್ರೀ ಯತಿವರ್ಯರೂ ಮುಂದೆ ಭಾಷ್ಯದಲ್ಲಿ ಹೀಗೆಯೇ ಅರ್ಥಮಾಡಿರುತ್ತಾರೆ. ಹೀಗೆ ಶ್ರೀ ವ್ಯಾಸರು ಪದಗಳನ್ನು ಗೂಢವಾಗಿ ಪ್ರಯೋಗಿಸಿ ಅನಂತರ ವ್ಯಕ್ತಪಡಿಸುತ್ತಾರೆ. ಉತ್ತರಾಯಣದಲ್ಲಿ ಮೃತನಾದವನಿಗೆ ಅರ್ಚಿರಾದಿ ಗತಿಯೂ, ದಕ್ಷಿಣಾಯನದಲ್ಲಿ ಮೃತನಾದವನಿಗೆ ಧೂಮಾದಿಗತಿಯೂ, ಹೇಳಲ್ಪಟ್ಟಿವೆ ಎಂದಲ್ಲವೇ ಅರ್ಥಮಾಡತಕ್ಕದ್ದು ಎಂದಾಕ್ಷೇಪತಂದರೆ, ಮೋಕ್ಷವನ್ನು ಕುರಿತು ಹೋಗುವವನಿಗೆ ಉತ್ತರಾಯಣದಲ್ಲೇ ಮೃತನಾಗಬೇಕೆಂಬ ನಿಯಮವೇನೂ ಇಲ್ಲವು. ದಕ್ಷಿಣಾಯದಲ್ಲಿ ಮೃತನಾದ ನಿಷ್ಪನ್ನೋಪಾಯನಾದ ಅಧಿಕಾರಿಗೂ ಮೋಕ್ಷವೆಂದು **ಅತಶ್ಚಾಯನೇಪಿ ದಕ್ಷಿಣೇ"** (ಶಾ. ಸೂ. ೪. ೧. ೧೯.) ಎಂಬ ಸೂತ್ರದಲ್ಲಿ ಉಪಪಾದಿತವು. ರಾತ್ರಿ ಮೃತನಾದ ಬ್ರಹ್ಮವಿತ್ತಿಗೂ ಕೂಡ ಹೇಗೆ ಮೋಕ್ಷವೆಂದು ಸ್ಥಾಪಿಸಲ್ಪಟ್ಟಿತೋ, ಹಾಗೆಯೇ ದಕ್ಷಿಣಾಯನದಲ್ಲಿ ಮೃತನಾದ ಬ್ರಹ್ಮವಿತ್ತಿಗೂ ಬ್ರಹ್ಮಪ್ರಾಪ್ತಿಯುಂಟೆಂಬ ಅರ್ಥವು. ಏಕೆಂದರೆ ತೈತ್ತರೀಯದಲ್ಲಿ **"ಅಥಯೋ ದಕ್ಷಿಣೇ ಪ್ರಮೀಯತೇ ಪಿತೄಣಾಮೇವ ಮಹಿಮಾನಂ ಗತ್ವಾ ಚನ್ದ್ರಮಸ ಸ್ಸಾಯುಜ್ಯಂ ಗಚ್ಛತಿ"** ಎಂದು ಹೇಳಿರುವ ಚಂದ್ರಸಾಯುಜ್ಯವು ಬ್ರಹ್ಮವಿತ್ತಿಗೆ ವಿಶ್ರಮ ಸ್ಥಾನವೆಂದು ಭಾವಿಸಲ್ಪಟ್ಟಿರುವದರಿಂದ. ಆಗಲಿ, ಶ್ರೀ ಭೀಷ್ಮರು ಉತ್ತರಾಯಣವನ್ನು ನಿರೀಕ್ಷಿಸಿಕೊಂಡಿದ್ದು ಪ್ರಾಣತ್ಯಾಗಮಾಡಿದರೆಂದು ಹೇಳಲ್ಪಟ್ಟಿದೆಯಲ್ಲಾ ಎಂದರೆ ಅವರು ಪರಮ ಭಾಗವತರಾದುದರಿಂದ ತಮ್ಮ ಸಙ್ಕಲ್ಪಾನುಗುಣವಾಗಿ ಪ್ರಾಣತ್ಯಾಗ ಮಾಡುವ ಶಕ್ತಿಯುಳ್ಳವರಾದುದರಿಂದ ಉತ್ತರಾಯಣ ಪ್ರಾಶಸ್ತ್ಯಕ್ಕಾಗಿ ಹಾಗೆ ಹೇಳಲ್ಪಟ್ಟಿತೇವಿನಾ ದಕ್ಷಿಣಾಯನದಲ್ಲಿ ಮೃತಿಯುಂಟಾದರೆ ಮೋಕ್ಷಪ್ರಾಪ್ತಿ ಇಲ್ಲವೆಂಬ ಅಭಿಪ್ರಾಯದಿಂದಲ್ಲವು. ಮುಂದೆ ತೈತ್ತರೀಯ ವಾಕ್ಯವು, ದಕ್ಷಿಣಾಯನದಲ್ಲಿ ಮೃತನಾದ ವಿದ್ವಾಂಸನಿಗೂ, **ತಸ್ಮಾದ್ಬ್ರಹ್ಮಣೋ ಮಹಿಮಾನ ಮಾಪ್ನೋತಿ"** ಎಂದು ಮುಗಿಸಿರುವದರಿಂದ

**ಭಾ. ಅತ್ರಕಾಲಶಬ್ದೋ ಮಾರ್ಗಸ್ಯಾಹಃ ಪ್ರಭೃತಿ ಸಂವತ್ಸರಾನ್ತಕಾಲಾಭಿಮಾನಿ ದೇವತಾ ಭೂಯಸ್ತ್ವಯಾ ಮಾರ್ಗೋಪಲಕ್ಷಣಾರ್ಥಃ। ಯಸ್ಮಿನ್ಮಾರ್ಗೇ ಪ್ರಯಾತಾ ಯೋಗಿನೋಽನಾವೃತ್ತಿಂ, ಪುಣ್ಯಕರ್ಮಾಣಶ್ಚಾವೃತ್ತಿಂ ಯಾನ್ತಿ ; ತಂ ಮಾರ್ಗಂ**

ವ್ಯಕ್ತವು. ಆದುದರಿಂದ ಇಲ್ಲಿ ಉತ್ತರಾಯಣ ದಕ್ಷಿಣಾಯನ ಶಬ್ದಗಳು **ಕಾಲವಾಚಿ** ಶಬ್ದಗಳಲ್ಲವು.

**ಭಾಷ್ಯಾರ್ಥವು**:—ಈ ಶ್ಲೋಕಾವತಾರಿಕೆಯಲ್ಲಿ ಆತ್ಮ ಯಾಥಾತ್ಮ್ಯನಿಷ್ಠರಿಗೂ ಪರಮ ಪುರುಷನಿಷ್ಠರಿಗೂ ಇಬ್ಬರಿಗೂ ಸಾಧಾರಣವಾದ, **ಅರ್ಚಿರಾದಿಕಾಂಗತಿ ಮಾಹ** - ಎಂದು ಹೇಳ ಲ್ಪಟ್ಟಿರುತ್ತದೆ. ಆದರೆ ಯಾವ ಕಾಲದಲ್ಲಿ ಅವರಿಗೆ ದೇಹಾವಸಾನವೆಂಬರ್ಥವು ತೋರಿ ಬರುವಾಗ **ಈ** ಅವತಾರಿಕೆಯು ಹೇಗೆ ಸಮಂಜಸವು ? ಎಂದರೆ ಇಲ್ಲಿ ಕಾಲಶಬ್ದವು ಮುಖ್ಯಾರ್ಥದಲ್ಲಿ ಹೇಳ ಲ್ಪಡಲಿಲ್ಲವು, ಲಾಕ್ಷಣಿಕಾರ್ಥದಲ್ಲಿ ಪ್ರಯೋಗವೆಂದು ಭಾಷ್ಯವನ್ನು ದಯಪಾಲಿಸಿರುತ್ತಾರೆ.— **ಅತ್ರ** - ಈ ಶ್ಲೋಕದಲ್ಲಿ, **ಕಾಲಶಬ್ದವು, ಮಾರ್ಗಸ್ಯ** - ಈ ಇಬ್ಬರು ಅಧಿಕಾರಿಗಳಿಗೂ ದೇಹಾ ವಸಾನಾನಂತರ ಪ್ರಾಪ್ತವಾಗುವ ಮಾರ್ಗದಲ್ಲಿನ, **ಅಹಃ ಪ್ರಭೃತಿ**-ಅಹಸ್ಸು ಮೊದಲುಗೊಂಡು, **ಸಂವತ್ಸರಾನ್ತ** - ಸಂವತ್ಸರದ ಕೊನೆಯವರೆಗೂ ಇರುವ **ಕಾಲಾಭಿಮಾನ ದೇವತಾ ಭೂಯಸ್ತ್ವಯಾ** - ಕಾಲಾಭಿಮಾನ ದೇವತೆಗಳು ಈ ಮಾರ್ಗದಲ್ಲಿ ಹೆಚ್ಚಾಗಿರುವದರಿಂದ, **ಮಾರ್ಗೋಪಲಕ್ಷಣಾರ್ಥಃ** - ಆ ಕಾಲಾಭಿಮಾನಿಗಳಿರುವ ಮಾರ್ಗವು ಎಂಬ ಉಪಲಕ್ಷಣ ಅರ್ಥವುಳ್ಳದುದು. ಅಗ್ನಿಯು ಕಾಲವಲ್ಲವು ; ಹಾಗೆಯೇ ವೈದ್ಯುತ, ಸೂರ್ಯ, ಚಂದ್ರ ವರುಣಾದಿಗಳೂ ಕಾಲ ವಲ್ಲವು, ಕಾಲಾಭಿಮಾನ ದೇವತೆಗಳೂ ಅಲ್ಲವು ; ಹೀಗಿರುವಾಗ ಕಾಲೇ ಎಂಬಲ್ಲಿ ಕಾಲಾಭಿಮಾನ ದೇವತೆಗಳಿರುವ ಮಾರ್ಗವೆಂಬರ್ಥವು ಹೇಗೆ ? ಎಂಬುದಕ್ಕೆ ಸಮಾಧಾನವಾಗಿ, **ಅಹಸ್ಸು, ಶುಕ್ಲ ಪಕ್ಷ, ಉತ್ತರಾಯಣ, ಸಂವತ್ಸರ** ಹೀಗೆ ಮೊದಲಿನಲ್ಲೇ ಕಾಲಾಭಿಮಾನ ದೇವತೆಗಳು ಹೆಚ್ಚಾ ಗಿರುವದರಿಂದ, ಕಾಲಶಬ್ದ ಪ್ರಯೋಗವು ಅದು ಇವರುಗಳಿರುವ ಮಾರ್ಗವನ್ನೇ ಬೋಧಿಸುತ್ತ ದೆಂಬ ಭಾವವು. ಆದುದರಿಂದಲೇ **"ಕಾಲಾಭಿಮಾನ ದೇವತಾ ಭೂಯಸ್ತ್ವಯಾ"** ಎಂಬ ಪ್ರಯೋಗವು. ಅದೂ ಅಲ್ಲದೆ **ಯತ್ರಕಾಲೇ** ಎಂದು ಯತ್ರ **ತತ್ರ** ಶಬ್ದ ಸಾಹಚರ್ಯದಿಂದಲೂ ಕಾಲಶಬ್ದವು ಕಾಲವನ್ನು ಸೂಚಿಸದೇ ಮಾರ್ಗವನ್ನೇ ಸೂಚಿಸುತ್ತದೆಂಬುದು ವ್ಯಕ್ತವು. **ಯದಾ** ಎಂಬ ಶಬ್ದವಿದ್ದರೆ ಕಾಲಶಬ್ದವು ಮುಖ್ಯಾರ್ಥವನ್ನೇ ಬೋಧಿಸುತ್ತದೆಂದು ಭಾವಿಸಬಹುದಾಗಿತ್ತು. ಆದುದರಿಂದಲೇ ಕಾಲವೆಂದರೆ ಕಾಲಾಭಿಮಾನಿಗಳಿರುವ ಮಾರ್ಗವೆಂದು ಉಪಲಕ್ಷಣಾರ್ಥವನ್ನು ಹೇಳಬೇಕಾಯಿತು ಎಂಬ ತಾತ್ಪರ್ಯವು. ಹೀಗೆ ಅರ್ಥಮಾಡಲು ಮುಂದೆ **"ಶುಕ್ಲ ಕೃಷ್ಣಗತೀ ಹ್ಯೇತೇ"** ಎಂದೂ, **"ನೈತೇಸೃತೀ ಪಾರ್ಥಜಾನನ್"** ಎಂದೂ, **ಗತಿ ಸೃತಿ** ಶಬ್ದಗಳಿರುವದ ರಿಂದಲೂ ಮಾರ್ಗವೆಂಬರ್ಥವೇ ಕೂಡುತ್ತದೆ. ಹಾಗೆ ಅರ್ಥಮಾಡದಿದ್ದರೆ **ಅಗ್ನಿರ್ಜ್ಯೋತಿಃ** ಇತ್ಯಾದಿಗಳು ಮಾರ್ಗ ಪ್ರದರ್ಶಿಸುವ ಶಬ್ದಗಳಾದುದರಿಂದ, ಅವುಗಳೊಂದಿಗೆ ಕಾಲವೆಂಬ ಮುಖ್ಯಾರ್ಥವು ವಿರುದ್ಧವಾದುದಾಗುತ್ತದೆ. ಆದುದರಿಂದ **ಯತ್ರಕಾಲೇ** ಎಂದರೆ **ಯಸ್ಮಿನ್ ಮಾರ್ಗೇ** ಎಂಬರ್ಥವೆಂದು ಪ್ರದರ್ಶಿಸಿ, ಉತ್ತರಾರ್ಧಕ್ಕೆ ಭಾಷ್ಯವನ್ನು ಅನುಗ್ರಹಿಸುತ್ತಾರೆ. ಯಾವ ಮಾರ್ಗವಲ್ಲಿ **ಪ್ರಯಾತಾಃ** - ದೇಹಾವಸಾನದಲ್ಲಿ ಮೂರ್ಧನ್ಯ ನಾಡಿಯ ಮೂಲಕ ಕಣ್ಣಿಗೆ ಕಾಣದಷ್ಟು ಸೂಕ್ಷ್ಮ ಶರೀರೇಂದ್ರಿಯಗಳಿಂದ ಕೂಡಿ ಹೊರಟುಹೋದ, **ಯೋಗಿನಃ**- ಪರಮಸುಕೃತಿಗಳಾದ ಭಕ್ತಿಯೋಗನಿಷ್ಠರು **ಅನಾವೃತ್ತಿಂ** - ಅಪುನರಾವೃತ್ತಿಯನ್ನೂ, **ಪುಣ್ಯ ಕರ್ಮಾಣಃ** - ಪುಣ್ಯಕರ್ಮಗಳನ್ನು ಮಾಡಿದ ಸುಕೃತಿಗಳು, ಇತರ ನಾಡಿಗಳ ಮೂಲಕ **ನಿರ್ಯಾಣ** ವನ್ನು ಹೊಂದಿ **ಆವೃತ್ತಿಯನ್ನೂ, ಯಾನ್ತಿ** - ಹೊಂದುವರೋ, **ತಂ ಮಾರ್ಗಂ** - ಅಂತಹ

**ಭಾ. ವಕ್ಷ್ಯಾಮೀತ್ಯರ್ಥಃ। "ಅಗ್ನಿರ್ಜ್ಯೋತಿ ರಹ ಶ್ಶುಕ್ಲ ಷಣ್ಮಾಸಾ ಉತ್ತರಾಯಣಮ್" ಇತಿ ಸಂವತ್ಸರಾದೀನಾಂ ಪ್ರದರ್ಶನಮ್ ॥ ೨೪ ॥**

ಎರಡು ಮಾರ್ಗವನ್ನೂ. **ವಕ್ಷ್ಯಾಮೀತ್ಯರ್ಥಃ** - ನಿನಗೆ ಈಗ ತಿಳಿಸುವೆನು ಎಂಬ ತಾತ್ಪರ್ಯವು. ಇಲ್ಲಿ **"ಯೋಗಿನಃ ಅನಾವೃತ್ತಿಂ ಆವೃತ್ತಿಂಚೈವ"** ಎಂಬಲ್ಲಿರುವ, **ಯೋಗಿನಃ** ಎಂಬ ಶಬ್ದಕ್ಕೆ, **ಜ್ಞಾನಿನಃ ಪುಣ್ಯ ಕರ್ಮ ಸಂಬಂಧಿನಶ್ಚ** ಎಂದು ಶ್ರೀ ದೇಶಿಕವರ್ಯರು ಅರ್ಥ ಮಾಡಿರುತ್ತಾರೆ. ಇದು ಹೇಗೆ? ಎಂದರೆ ನಾಲ್ವರು ಭಕ್ತರಾದ ಯೋಗಿಗಳಲ್ಲಿ ಆರ್ತನು ಅರ್ಥಾರ್ಥಿಯೂ ಸಹ **ಪುಣ್ಯ ಕರ್ಮ ಸಂಬಂಧಿನಶ್ಚ** ಎಂಬುದರಿಂದ ಹೇಳಲ್ಪಟ್ಟರು. ಮಿಕ್ಕ ಇಬ್ಬರಾದ ಪಂಚಾಗ್ನಿ ವಿದ್ಯಾನಿಷ್ಠನೂ ಪರಬ್ರಹ್ಮೋಪಾಸಕನೂ ಇಬ್ಬರೂ ಹೇಳಲ್ಪಟ್ಟಿರುವಾಗ **ಜ್ಞಾನಿನಃ** ಎಂಬ ವ್ಯಾಖ್ಯಾನವು ಹೇಗೆ ? ಎಂದರೆ ಪಂಚಾಗ್ನಿ ವಿದ್ಯಾನಿಷ್ಠನೂ ಬ್ರಹ್ಮವಿದ್ಯಾನಿಷ್ಠನಾದುದರಿಂದ **ಜ್ಞಾನಿನಃ** ಎಂಬ ಪ್ರಯೋಗವು ಕೂಡುತ್ತದೆ. ಇದರಿಂದ ಪಂಚಾಗ್ನಿ ವಿದ್ಯಾನಿಷ್ಠನಿಗೂ ಕೊನೆಗೆ ಮೋಕ್ಷಪ್ರಾಪ್ತಿಯಾದುದರಿಂದ **ಜ್ಞಾನಿನಃ** ಎಂಬಲ್ಲೇ ಜಿಜ್ಞಾಸುವೂ ಅಂತರ್ಗತನು. ಆದರೆ ಈ ಗ್ರಂಥವಲ್ಲಿ ತಾತ್ಕಾಲಿಕ ಫಲಪ್ರಾಪ್ತ್ಯನುಗುಣವಾಗಿ ಜಿಜ್ಞಾಸುವೂ ಜ್ಞಾನಿಯೂ ಬೇರೆ ಬೇರೆ ಅಧಿಕಾರಿಗಳಾಗಿ ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದಲ್ಲಿ **ಅಹಶ್ಶುಕ್ಲ ಷಣ್ಮಾಸಾ ಉತ್ತರಾಯಣಮ್** ಇಷ್ಟೇ ಇರುತ್ತದೆ, ಆದರೆ ಭಾಷ್ಯದಲ್ಲಿ **ಅಹಃ ಪ್ರಭೃತಿ ಸಂವತ್ಸರಾಂತ** ಎಂಬ ಪ್ರಯೋಗಕ್ಕೆ ಕಾರಣವೇನು ? ಎಂದರೆ ಈ ಪಂಚಾಗ್ನಿ ವಿದ್ಯಾನಿಷ್ಠನಾದ ಆತ್ಮೋಪಾಸಕನಿಗೂ ಪರಮಾತ್ಮೋಪಾಸಕನಿಗೂ ಒಂದೇಯಾದ ಅರ್ಚಿರಾದಿ ಮಾರ್ಗವೆಂದು ಹೇಳಿ, ಅದು ಯಾವುದು ಎಂಬ ಸಂದರ್ಭದಲ್ಲಿ **"ತೇಽರ್ಚಿಷಮಭಿಸಂಭವನ್ತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣ ಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾಗ್‌ಸ್ತಾನ್ । ಮಾಸೇಭ್ಯಸ್ಸಂವತ್ಸರಗ್ ಸಂವತ್ಸರಾದಿತ್ಯ ಮಾದಿತ್ಯಾಚ್ಚಂದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರುಷೋಽಮಾನವಸ್ಸಏನಾನ್ ಬ್ರಹ್ಮಗಮಯತಿ ಏಷ ದೇವಯಾನಃ ಪನ್ಥಾ ಇತಿ"** ಎಂಬ ಛಾಂದೋಗ್ಯ ಶ್ರುತಿಯನ್ನು ಮನಸ್ಸಿನಲ್ಲಿಟ್ಟು, ಸಂವತ್ಸರಾಂತವೆಂಬ ಪ್ರಯೋಗವು. ಮುಂದೆ ಅರ್ಚಿರಾದಿಗತಿ ಎಂದೂ ದೇವಯಾನವೆಂದೂ ಹೇಳಿಸಿಕೊಳ್ಳುವ ಮಾರ್ಗವು ಯಾವುದೆಂದು ಸಙ್ಗ್ರಹವಾಗಿ ತಿಳಿಸುತ್ತಾರೆ ; **ಅಗ್ನಿರ್ಜೋತಿರಹಶ್ಶುಕ್ಲ ಷಣ್ಮಾಸಾ ಉತ್ತರಾಯಣ ಇತಿ ಸಂವತ್ಸರಾದೀನಾಂ ಪ್ರದರ್ಶನಮ್** - **ಅಗ್ನಿರ್ಜೋತಿ** ಎಂದು ಉತ್ತರಾಯಣದವರೆಗೆ ಮಾತ್ರ ಹೇಳಿರುವದು ಮುಂದೆ ಶ್ರುತಿಯಲ್ಲಿ ಸಂವತ್ಸರ, **ಆದಿ** ಶಬ್ದದಿಂದ ಸೂರ್ಯ ಚಂದ್ರಾದಿ ಮೇಲೆ ವಿವರಿಸಿರುವ ಇತರ ಆತಿವಾಹಿಕರಿಗೂ ಉಪಲಕ್ಷಣವಾಗಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಇದನ್ನು ಶ್ರೀ ಯತಿವರ್ಯರು **ಏತಕ್ಕೆ** ವಿಸ್ತರಿಸಿ ಹೇಳಲಿಲ್ಲವೆಂದರೆ, ಶಾರೀರಕ ಸೂತ್ರದಲ್ಲೂ ಅದರ ತಮ್ಮ ಭಾಷ್ಯದಲ್ಲೂ ಬಹು ಸ್ಫುಟವಾಗಿ ಉಪಪಾದಿತವಾಗಿರುವದರಿಂದ ಇಲ್ಲಿ ಉಪಪಾದಿಸಿ ಹೇಳಲಿಲ್ಲವೆಂಬ ಭಾವವು ತೋರಿಬರುತ್ತದೆ. **ಅಗ್ನಿರ್ಜೋತಿಃ** ಎಂಬಲ್ಲಿ ಅಗ್ನಿರೂಪವಾದ ಜ್ಯೋತಿಸ್ಸು ಎಂಬರ್ಥವು ; ಈ ದೇವಯಾನಮಾರ್ಗದಲ್ಲಿ ಅರ್ಚಿಸ್ಸಾದ ಅಗ್ನಿಯೇ ಪ್ರಥಮಾತಿವಾಹಿಕನಾದುದರಿಂದ ಅರ್ಚಿರಾದಿ ಮಾರ್ಗವೆಂದು ಇದಕ್ಕೆ ಹೆಸರು. ಇದರಿಂದ ಅಗ್ನಿ, ಜ್ಯೋತಿಸ್ಸು ಇಬ್ಬರು ಆತಿವಾಹಕರೆಂಬ ವ್ಯಾಖ್ಯಾನವು ಶಾಸ್ತ್ರವಿರುದ್ಧವಾದುದು. ॥ ೨೪ ॥

**ಮೂಲಕ್ಕೆ ಅರ್ಥವು** :—ಹಿಂದಿನ ಶ್ಲೋಕದಲ್ಲಿ ಜಿಜ್ಞಾಸುವೂ ಜ್ಞಾನಿಯೂ ದೇಹಾವಸಾನಾನಂತರ ಹೋಗುವ ಅರ್ಚಿರಾದಿ ಮಾರ್ಗವನ್ನು ಹೇಳಿ, ಈ ಶ್ಲೋಕದಲ್ಲಿ ಇನ್ನಿಬ್ಬರಾದ ಯೋಗಿಗಳಾದ ಆರ್ತನೂ ಅರ್ಥಾರ್ಥಿಯೂ ಹೋಗುವ ಪಿತೃಯಾಣಮಾರ್ಗವನ್ನು ಉಪದೇಶಿಸುತ್ತಾರೆ.— ಇದು ಈ ಇನ್ನೆರಡು ಭಕ್ತರ ವಿಷಯವೆಂದು ಸೂಚಿಸುವದಕ್ಕಾಗಿಯೇ ಶ್ರೀ ಯತಿವರ್ಯರು **"ಅತ್ರ**

**ಮೂ. ಧೂಮೋ ರಾತ್ರಿ ಸ್ತಥಾ ಕೃಷ್ಣಃ ಷಣ್ಮಾಸಾದಕ್ಷಿಣಾಯನಮ್ ।**
**ತತ್ರ ಚನ್ದ್ರಮಸಂ ಜ್ಯೋತಿ ರ್ಯೋಗೀ ಪ್ರಾಪ್ಯ ನಿವರ್ತತೇ** ೨೫.

**ಯೋಗಿಶಬ್ದಃ ಪುಣ್ಯ ಕರ್ಮ ಸಂಬಂಧಿ ವಿಷಯಶ್ಚ"** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇವರುಗಳೂ **"ಜನಾಸ್ಸುಕೃತಿನೋಽರ್ಜುನ"** ಎಂದೂ **"ಉದಾರಾಃ"** ಎಂದೂ ಹೇಳಲ್ಪಟ್ಟಿರುವದರಿಂದ, ಇವರುಗಳೂ ಪುಣ್ಯ ಕರ್ಮ ಸಂಬಂಧಿಗಳು ಎಂಬ ಭಾವವು. ಈ ಪಿತೃಯಾಣವು ಇವರುಗಳಿಗೆ ಮಾತ್ರವೇ ಅಲ್ಲದೆ ಲೋಕಹಿತ ಕರ್ಮಗಳನ್ನೆಸಗಿದ ಸುಕೃತಿಗತಿಗೂ ಕೂಡ ಉಂಟೆಂಬುದೂ ತೋರಿಬರುತ್ತದೆ. ಮುಖ್ಯವಾಗಿ ಯಜ್ಞದಾನ ತಪಸ್ಸುಗಳನ್ನು ಫಲಾಭಿಸಂಧಿಯಿಂದ ಮಾಡುವವರಿಗೆ ಇದೀಗ ಆವೃತ್ತಿ ರೂಪಮಾರ್ಗವು ಇದು ಆವೃತ್ತಿ ಮಾರ್ಗವಾದುದರಿಂದ ಅರ್ಚಿರಾದಿ ಮಾರ್ಗಕ್ಕೆ ಪ್ರತಿ ದ್ವಂದ್ವಿಯಾಗಿ ದೇವತಾ ವಿಶೇಷಗಳು ಹೇಳಲ್ಪಡುವುವು. **ಧೂಮಃ** - ಧೂಮಾಧಿದೇವತೆ, **ರಾತ್ರಿಃ** - ರಾತ್ರ್ಯಭಿಮಾನದೇವತೆಯು, **ಕೃಷ್ಣಃ** - ಕೃಷ್ಣಪಕ್ಷಾಭಿಮಾನದೇವತೆ, **ಷಣ್ಮಾಸಾಃ** - ಮಿಕ್ಕ ಆರು ಮಾಸಗಳಿಂದ ಕೂಡಿದ **ದಕ್ಷಿಣಾಯನಮ್** - ದಕ್ಷಿಣಾಯನಾಭಿಮಾನದೇವತೆಯು, **ಚಂದ್ರಮಸಂ ಜ್ಯೋತಿಃ** - ಚಂದ್ರನ ಜ್ಯೋತಿಸ್ಸಿನ ಅಭಿಮಾನ ದೇವತೆ ಇವರುಗಳ ಮಾರ್ಗವಾಗಿ, **ಯಃ ಯೋಗೀ** - ಯಾವ ಸುಕೃತಿಯಾದ ಭಕ್ತಿಯೋಗನಿಷ್ಠನು, **ಪ್ರಯಾತಃ** - ಎಂದು ಇಟ್ಟುಕೊಳ್ಳಬೇಕು. ದೇಹಾವಸಾನವನ್ನು ಹೊಂದಿ ಹೋಗುವನೋ ಅವನು, **ತತ್ರಪ್ರಾಪ್ಯ** - ಅಂತಹ ಮಾರ್ಗವನ್ನು ಹೊಂದಿದವನಾಗಿ, **ನಿವರ್ತತೇ** - ಪುನಃ ಹಿಂದಕ್ಕೇ ಬರುವನು. ಇಲ್ಲಿಯೂ **ಧೂಮ**ವೆಂದಾರಂಭಿಸಿ **ಚಂದ್ರಮಸಂ** ಎಂಬುವವರೆಗೂ ಹೇಳಿದುದು, ಶ್ರುತಿಯಲ್ಲಿ ಹೇಳಿರುವ ಮಿಕ್ಕವುಗಳಿಗೂ ಹಿಂದಿನ ಶ್ಲೋಕದಹಾಗೆ ಉಪಲಕ್ಷಣವು, ಛಾಂದೋಗ್ಯವು ೫. ೧೦. ೩ ರಿಂದ ೬ರಲ್ಲಿ **"ಅಥಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತ ಮಿತ್ಯುಪಾಸತೇ ಧೂಮ ಮಭಿಸಮ್ಭವನ್ತಿ । ಧೂಮಾದ್ರಾತ್ರಿಗ್, ರಾತ್ರೇರಪರಪಕ್ಷ ಮಪರಪಕ್ಷಾದ್ಯಾನ್ ಷಡ್ದಕ್ಷಿಣೈತಿಮಾಸಾಗ್ ಸ್ತಾನ್ನೈತೇ ಸಂವತ್ಸರ ಮಭಿಪ್ರಾಪ್ನುವನ್ತಿ"** ಎಂದು ಹೇಳುತ್ತಾ ಯೋಗಿ, **"ಯೋ ರೇತ ಸ್ಸಿಂಚತಿ ತದ್ಭೂಯ ಏವ ಭವತಿ"** ಎಂದು ಮುಗಿಸಿ ಹೇಳಲ್ಪಟ್ಟಿರುತ್ತದೆ ಹೀಗೆ ಯಜ್ಞ, ದಾನ, ತಪಸ್ಸು ಮೊದಲಾದ ಸುಕೃತ ಕರ್ಮಗಳನ್ನನುಷ್ಠಿಸಿದವರಿಗೆ ಮಾರ್ಗವು, ಧೂಮ, ರಾತ್ರಿ, ಕೃಷ್ಣಪಕ್ಷ, ಮಿಕ್ಕ ಆರು ತಿಂಗಳಿಂದ ಕೂಡಿದ ದಕ್ಷಿಣಾಯನ, ಇವುಗಳಿಗೆ ಅಭಿಮಾನ ದೇವತೆಗಳಾದ ಆತಿವಾಹಿಕರ ಮಾರ್ಗವಾಗಿ ಹೋಗಿ ಅಲ್ಲಿಂದ ಮುಂದಕ್ಕೆ ಸಂವತ್ಸರಾಭಿಮಾನ ದೇವತೆಯಲ್ಲಿಗೆ ಹೋಗುವದಿಲ್ಲವು. ಮುಂದಕ್ಕೆ ಪಿತೃ ಲೋಕ, ಪಿತೃ ಲೋಕದಿಂದ ಆಕಾಶವು, ಆಕಾಶದಿಂದ ಚಂದ್ರನು, ಇವರುಗಳ ಅಭಿಮಾನ ದೇವತೆಯ ಮೂಲಕ ಹೋಗುತ್ತಾರೆ. ಹಾಗೆ ಬಂದವನನ್ನು ದೇವತೆಗಳು ಸ್ವರ್ಗಲೋಕಕ್ಕೆ ಸೇರಿಸಿಕೊಂಡು ಆತನಿಂದ ತಮಗೆ ಬೇಕಾದ ಕೆಲಸಗಳನ್ನು ಮಾಡಿಸಿಕೊಳ್ಳುತ್ತಾರೆ. ಸ್ವರ್ಗೋಪಭೋಗವು ಕಳೆದನಂತರ, **ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ** ಎಂದು ಹೇಳಿರುವಹಾಗೆ ಅಲ್ಲಿಂದ ಹೊರಟು ಕೆಳಗೆ ಬರುತ್ತಾ ಪುನಃ ಆಕಾಶವನ್ನೂ, ಅನಂತರ ವಾಯುವನ್ನೂ ಅನಂತರ ಧೂಮವನ್ನೂ ಅಲ್ಲಿಂದ ಅಭ್ರವನ್ನೂ, ಅಲ್ಲಿಂದ ವರ್ಷಿಸುವ ಮೇಘವನ್ನೂ, ಅಲ್ಲಿಂದ ವರ್ಷವನ್ನೂ, ಅಲ್ಲಿಂದ ಭತ್ತ, ಗೋಧಿ ಮೊದಲಾದ ಧಾನ್ಯ, ಹಣ್ಣು ಸಸ್ಯ ಮೊದಲಾದವುಗಳಲ್ಲಿ ಸೇರಿಕೊಂಡು, ಅದನ್ನು ಪುರುಷನು ತಿಂದರೆ ಆತನ ರೇತಸ್ಸಿನಲ್ಲಿ ಸೇರಿಕೊಳ್ಳುವನು, ಅನಂತರ ಅದು ಸ್ತ್ರೀಯೋನಿಯನ್ನು ಸೇರಿದನಂತರ ಪುನರ್ಜನ್ಮವು ಪ್ರಾಪ್ತವಾಗುತ್ತದೆ, ಇದೇ ಪಿತೃಯಾಣ ಅಥವಾ ಧೂಮಾದಿ ಮಾರ್ಗವು; ಈತನ ಸುಕೃತ ತಾರತಮ್ಯಾನುಗುಣವಾಗಿ ಸತ್ಕುಲ ಪ್ರಸೂತನಾಗುವನು. ಹೀಗೆ ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಇಲ್ಲಿ ಹೇಳಿರುವ ಎರಡು ಮಾರ್ಗಗಳಲ್ಲದೆ ಭಾಗವತ

**ಭಾ. ಏತಚ್ಚ ಧೂಮಾದಿ ಮಾರ್ಗಸ್ಥ ಪಿತೃಲೋಕಾದೇಃ ಪ್ರದರ್ಶನಮ್ । ಅತ್ರಯೋಗಿ ಶಬ್ದಃ ಪುಣ್ಯಕರ್ಮ ಸಂಬಂಧಿ ವಿಷಯಃ ||೨೫||**

ದಲ್ಲಿ ಯೋಗಿಯಾನವೆಂಬ ಇನ್ನೊಂದು ಮಾರ್ಗ ಉಂಟು. ಇದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. (೯೭೭ನೆಯ ಪುಟ ನೋಡಿ) ಮತ್ತು, ಅನೇಕ ಪ್ರಾಣಿಗಳು **"ಜಾಯಸ್ವಮ್ರಿಯಸ್ವೇತ್ಯೇ ತತ್ತೃತೀಯಗ್ ಸ್ಥಾನಂ"** (ಛಾ. ೫. ೧೦. ೮) ಎಂದು ಮೂರನೇ ಮಾರ್ಗದಲ್ಲಿ ದಂಶಮಶಕ ಕೀಟಾದಿಗಳು ಪುನಃ ಹುಟ್ಟುವದು ಪುನಃ ಸಾಯುವದು-ಹೀಗೆಲ್ಲಾ ಉಂಟೆಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಮುಖ್ಯವಾಗಿ ಹೇಳತಕ್ಕ ಮಾರ್ಗಗಳು ಚತುರ್ವಿಧ ಭಕ್ತರುಗಳಿಗೆ ಮಾತ್ರ ಅನ್ವಯಿಸುವುಗಳಾದುದರಿಂದ ಈ ಎರಡು ಮಾತ್ರವೇ ಹೇಳಲ್ಪಟ್ಟವು. ಇದರಿಂದ ಮುಖ್ಯವಾಗಿ ಪಂಚಾಗ್ನಿ ಬ್ರಹ್ಮ ವಿದ್ಯಾನಿಷ್ಠನಿಂದ ತಿಳಿಯತಕ್ಕದ್ದೇನೆಂದರೆ, ದ್ಯುಃ, ಪರ್ಜನ್ಯ, ಪೃಥಿವೀ, ಪುರುಷ, ಯೋಷಿತ್ತೆಂಬ ಪಂಚಾಗ್ನಿಗಳಲ್ಲಿ ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ರೇತೋರೂಪದಿಂದ ಹೋಮವಾಡಲ್ಪಟ್ಟು, ಐದನೆಯ ಆಹುತಿಯಾದ ಪುರುಷ ರೇತಸ್ಸು ಸ್ತ್ರೀಯೋನಿಯಲ್ಲಿ ಹುತವಾದಾಗ ಪುರುಷರೂಪವನ್ನು, ಈ ಆವೃತ್ತಿಯನ್ನು ಹೊಂದುವ ಆತ್ಮನು, ಧರಿಸುವನಾದುದರಿಂದಲೂ, ಅಲ್ಲಿಂದ ಅನಿರ್ವಚನೀಯಗಳಾದ ಕ್ಲೇಶಗಳಿಗೆ ಒಳಗಾಗುವದರಿಂದಲೂ, ಶ್ರುತಿಯು ಕೊನೆಗೆ ಪಂಚಾಗ್ನಿ ವಿದ್ಯಾನಿಷ್ಠನನ್ನು ಕುರಿತು, **ತಸ್ಮಾ ಜ್ಜುಗುಪ್ಸೇತ ತದೇಷ ಶ್ಲೋಕಃ** - ಇಂತಹ ಪುನರಾವೃತ್ತಿ ರೂಪ ಸಂಸಾರ ವಿಷಯದ ದೆಶೆಯಿಂದ ಜುಗುಪ್ಸೆಯುಂಟಾಗಲಿ, ಎಂದು ಹೇಳಿತು. ಅಂತಹ ಆವೃತ್ತಿಯಿಂದ ತಪ್ಪಿಸಿಕೊಳ್ಳುವದಕ್ಕಾಗಿ ಪ್ರಕೃತಿವಿಯುಕ್ತ ದಶೆಯಲ್ಲಿ ತನ್ನ ಆತ್ಮಾ ಅಪೋಹ ಪಾಪನುದೆಂದೂ, ಅಂಥಾದ್ದನ್ನು ಯತ್ನಿಸುವದಕ್ಕಾಗಿ ಪರಬ್ರಹ್ಮಾತ್ಮಕವಾದ ದಿವ್ಯಾತ್ಮಸ್ವರೂಪವನ್ನು ಉಪಾಸಿಸತಕ್ಕದ್ದೆಂದೂ, ಹೇಳಿ ಶ್ರುತಿಯು ಈ ಪಂಚಾಗ್ನಿ ಬ್ರಹ್ಮವಿದ್ಯೆಯನ್ನು ನಿಗಮನ ಮಾಡಿ ಹೇಳಿತೆಂಬುದು ಇವುಗಳಿಂದ ಗ್ರಹಿಸತಕ್ಕ ಸಾರಭೂತಾರ್ಥವು. ಇನ್ನೊಂದು ಅದಕ್ಕೂ ಮೀರಿದ ಸಾರಭೂತಾರ್ಥವೇನೆಂದರೆ ಪಂಚಾಗ್ನಿ ವಿದ್ಯಾನಿಷ್ಠನಿಗಾದರೂ ತತ್ಕ್ರತು ನ್ಯಾಯದ ಪ್ರಕಾರ ಒಂದು ಸ್ಥಾನ ವಿಶೇಷದಲ್ಲಿ ಕೊಂಚಕಾಲವಿದ್ದು ಅನಂತರ ಪರಬ್ರಹ್ಮನಲ್ಲೇ ಪುನಃಸ್ಸುಂಟಾಗಿ ಮೋಕ್ಷವನ್ನು ಸೇರುವನು; ಇಂತಹ ವಿಳಂಬಾದಿಗಳು ಯಾವುವೂ ಇಲ್ಲದೆ ಪರಮಾತ್ಮೋಪಾಸಕನು ಸಾಕ್ಷಾತ್ತಾಗಿ ಮೋಕ್ಷವನ್ನೇ ಹೊಂದುವನು ಎಂಬುದು. ಆದರೆ ಈ ವಿಷಯವು ಚನ್ನಾಗಿ ಇಲ್ಲಿ ವ್ಯಕ್ತವಲ್ಲದುದರಿಂದ ೧೨ ನೆಯ ಅಧ್ಯಾಯದಲ್ಲಿ ಅಪುನರಾವೃತ್ತಿ ಇರುವ ಇವೆರಡು ಉಪಾಸನೆಗಳಲ್ಲಿ ಯಾವುದು ಕ್ಷಿಪ್ರ ಫಲಕಾರಿಯು ಎಂದು ಅರ್ಜುನನು ಪ್ರಶ್ನಿಸುವನು; ಅದಕ್ಕೆ ಶ್ರೀಕೃಷ್ಣಭಗವಾನರವರು ನನ್ನ ಉಪಾಸನವೇ ಕ್ಷಿಪ್ರ ಫಲದಾಯಕವೆಂದು ಉತ್ತರವನ್ನು ಹೇಳುವರು. ಪಂಚಾಗ್ನಿ ವಿದ್ಯೆಯಲ್ಲಿ ಐದನೆಯ ಆಹುತಿಯಲ್ಲಿ ಆತ್ಮನಿಗೆ ಪುರುಷ ವಚಸ್ತ್ವವು ಉಂಟಾಗುತ್ತದೆಂದು ಹೇಳಿರುವದು, ಸ್ತ್ರೀ ವಾಚ್ಯತ್ವಕ್ಕೂ ಉಪಲಕ್ಷಣವೆಂದು ಭಾವಿಸತಕ್ಕದ್ದು; ಪುರುಷ ಶಬ್ದಕ್ಕೆ ಶರೀರದಲ್ಲಿ ಶಯನಿಸುವದು ಅಥವಾ ಸೇರುವದು ಎಂಬರ್ಥವಾದುದರಿಂದ ಪುರುಷ ಶಬ್ದದಲ್ಲಿ ಸ್ತ್ರೀ ಶಬ್ದವೂ ಸೇರಿದುದೇ. || ೨೫ ||

**ಭಾಷ್ಯಾರ್ಥವು:—** ಹಿಂದೆ ನಾಲ್ಕು ಭಕ್ತರಲ್ಲಿ ಜಿಜ್ಞಾಸು ಜ್ಞಾನಿಗಳಿಗೆ ಅರ್ಚಿರಾದಿಗತಿಯು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಇನ್ನು ಮಿಕ್ಕ ಇಬ್ಬರು ಭಕ್ತರುಗಳಾದ ಆರ್ತನಿಗೂ ಅರ್ಥಾರ್ಥಿಗೂ ಧೂಮಾದಿ ಮಾರ್ಗದ ಮೂಲಕ ಪುನರಾವರ್ತಿಯು ಹೇಳಲ್ಪಡುತ್ತದೆ. **ಏತಚ್ಚ** - ಹೀಗೆ **ಧೂಮೋರಾತ್ರಿಸ್ತಥಾಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ** ಎಂದು ಹೇಳಿದುದೂ ಸಹ, **ಧೂಮಾದಿಮಾರ್ಗಸ್ಥ ಪಿತೃ ಲೋಕಾದೇಃ** - ಧೂಮಾದಿ ಮಾರ್ಗದಲ್ಲೇ ಇರುವ, **ಪಿತೃಲೋಕಾದೇಃ** - ಪಿತೃಲೋಕವೇ ಮೊದಲಾದವುಗಳಿಗೂ, **ಪ್ರದರ್ಶನಮ್** - ಉಪಲಕ್ಷಣವಾಗಿ ಸೂಚಿ

**ಮೂ. ಶುಕ್ಲಕೃಷ್ಣೇ ಗತೀಹ್ಯೇತೇ ಜಗತಶ್ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿ ಮನ್ಯಯಾ ವರ್ತತೇ ಪುನಃ ॥** ೨೬.

ಸುವಂತಾದ್ದು. ಇಲ್ಲಿ **ಆದಿ** ಪದದಿಂದ ಆಕಾಶ ಚಂದ್ರ ಮೊದಲಾದವು ಹೇಳಲ್ಪಟ್ಟವು. **ಅತ್ರ** ಈ ಶ್ಲೋಕದಲ್ಲಿ **ಯೋಗಿಶಬ್ದವು, ಪುಣ್ಯಕರ್ಮಸಂಬಂಧಿವಿಷಯಃ** - **ಪುಣ್ಯಕರ್ಮ** ಸಂಬಂಧವುಳ್ಳವನನ್ನು ಕುರಿತದ್ದು ಎಂದರೆ ಪುಣ್ಯಕರ್ಮ ಸಂಬಂಧವುಳ್ಳ ಸುಕೃತಿಯಾಗಿ, ಎಂದರೆ ಆರ್ತನಾಗಿಯೂ ಅರ್ಥಾರ್ಥಿಯಾಗಿಯೂ ಉಪಾಸನೆಯನ್ನು ಮಾಡಿದವನನ್ನು ಕುರಿತದ್ದು. ಮೂಲದಲ್ಲಿರುವ ಯೋಗಿಶಬ್ದವು ಐಶ್ವರ್ಯಕ್ಕಾಗಿ ಭಕ್ತ್ಯುಪಾಯ ನಿಷ್ಠನನ್ನು ಬೋಧಿಸುತ್ತದೆ, ಕರ್ಮಯೋಗೀ ಎಂಬರ್ಥವಲ್ಲವು. ಧೂಮಾದಿಮಾರ್ಗವು ಯಾವುದೆಂಬುದು ಇಲ್ಲಿ ಹೇಳಲ್ಪಟ್ಟಿದೆ, ಈ ಮಾರ್ಗವು ಪಿತೃಲೋಕದ್ವಾರಾ ಆದುದರಿಂದಲೇ ಪಿತೃಯಾಣವೆಂದು ಕರೆಯಲ್ಪಡುತ್ತದೆ. ಈ ಪಿತೃಯಾಣ ಮಾರ್ಗವನ್ನು ಇಲ್ಲಿ ಹೇಳಿರುವದು ಇನ್ನೊಂದಾದ ಅರ್ಚಿರಾದಿಗತಿಯ ಸ್ತುತ್ಯರ್ಥಕ್ಕಾಗಿ ಮಾತ್ರವೇ, ಎಂದು ಕೆಲವರು ಭಾವಿಸಿರುತ್ತಾರೆ. ಇಷ್ಟುಮಾತ್ರಕ್ಕಾಗಿಯೇ ಅಲ್ಲವು. **ಚತುರ್ವಿಧಾ ಭಜನ್ತೇ ಮಾಂ** ಎಂದು ಹೇಳಲ್ಪಟ್ಟ ನಾಲ್ಕು ವಿಧ ಯೋಗಿಗಳಲ್ಲಿ ಇಬ್ಬರಿಗೆ ಧೂಮಾದಿಮಾರ್ಗದಲ್ಲಿ ಹೋಗಿ ಆವೃತ್ತಿ ಎಂದೂ, ಇನ್ನು ಇಬ್ಬರಾದ ಜಿಜ್ಞಾಸು ಜ್ಞಾನಿಗಳಿಗೆ ಅಪುನರಾವೃತ್ತಿ ಎಂದೂ, **ತಿಳಿಸುವದಕ್ಕಾ**ಗಿ ಎಂದೇ ಭಾವಿಸತಕ್ಕದ್ದು. ಈ ಧೂಮಾದಿ ಮಾರ್ಗವೂ ಒಂದೆಯೇ ವಿಸ್ತರಿಸಿ ಹೇಳಲ್ಪಟ್ಟಿರುತ್ತದೆ.

**ಮೂಲಕ್ಕೆ ಅರ್ಥವು:**—ಹಿಂದೆ ಹೇಳಿದ ಎರಡು ಗತಿಗಳು ಸುಕೃತಿಗಳಿಗುಂಟೆಂದು ಹೇಳುವದು ಶ್ರುತಿ ಪ್ರಸಿದ್ಧಗಳಾದವು ಎಂದು ತಿಳಿಸುತ್ತಾರೆ. ಈ ಎರಡು ಮಾರ್ಗಗಳಲ್ಲಿ ಒಂದು ಶುಕ್ಲಾ ಎಂದೂ, ಇನ್ನೊಂದು ಕೃಷ್ಣಾ ಎಂದೂ. ತಿಳಿಸುತ್ತಾರೆ. **ಶುಕ್ಲ ಕೃಷ್ಣೇ** - ಶುಕ್ಲ ಪಕ್ಷಾಭಿಮಾನದೇವತೆಯ ಮಾರ್ಗವಾದ ದೇವಯಾನವು, ಶುಕ್ಲವೆಂದರೆ ಬಿಳುಪಾದ, ಪ್ರಕಾಶನಾದ, ಪರಿಶುದ್ಧವಾದ ಮಾರ್ಗವು, ಏಕೆಂದರೆ ದುಃಖಕರವಾದ ಆವರ್ತಿ ಇಲ್ಲದುದರಿಂದ, ಕೃಷ್ಣ, ವೆಂದರೆ ಕಪ್ಪಾದ, ಅಪ್ರಕಾಶವಾದ, ಅಪರಿಶುದ್ಧವಾದ ಗತಿಮಾರ್ಗವು, ಏಕೆಂದರೆ ದುಃಖಾದಿಗಳಿಗೆ ವಶವಾದ ಆವರ್ತಿಗೆ ಕಾರಣವಾದ ಮಾರ್ಗವು; ಇವೆರಡಾದ **ಜಗತಃ**- ಜಗತ್ತಿನ, ಸುಕೃತಿಗಳಾದ ಈ ನಾಲ್ಕು ಅಧಿಕಾರಿಗಳಿಗೂ, **ಏತೇಗತೀ** - ಈ ಮಾರ್ಗಗಳೂ ಎಂದು, **ಶಾಶ್ವತೇ ಮತೇ ಹಿ** - ಅನಾದಿಯಾಗಿ ನಿತ್ಯವಾಗಿರುವ ವೈದಿಕಾಭಿಪ್ರಾಯವಷ್ಟೇ; **ಏಕಯಾ** - ಒಂದರಿಂದ ಎಂದರೆ ಮೊದಲು ಹೇಳಿದ ಅರ್ಚಿರಾದಿ ಮಾರ್ಗದಿಂದ, ಹೋದವನು. **ಅನಾವೃತ್ತಿಂ ಯಾತಿ** - ಪಂಚಾಗ್ನಿವಿದ್ಯಾನಿಷ್ಠನಾಗಲಿ, ಜ್ಞಾನಿಯಾಗಲಿ, ಅಪುನರಾವೃತ್ತಿಯನ್ನು ಹೊಂದುವನು, **ಅನ್ಯಯಾ** ಇನ್ನೊಂದಾದ, ಧೂಮಾದಿ ಮಾರ್ಗದಿಂದ, ಹೋದ ನಾನಾ ವಿಧ ಐಶ್ವರ್ಯಾರ್ಥಿಯಾದ ಯೋಗಿಯು, **ಪುನಃ ಆವರ್ತತೇ** - ಸ್ವರ್ಗಾದಿ ಲೋಕಾನುಭವವನ್ನು ಮಾಡಿದರೂ ಪುನಃ ಜನ್ಮವನ್ನು ಎತ್ತುವದಕ್ಕಾಗಿ ಆವರ್ತಿಯನ್ನು ಹೊಂದುವರು. ಇಲ್ಲಿ **ಶುಕ್ಲ ಕೃಷ್ಣೇ** ಎಂದು ಈ ಎರಡು ಗತಿಗಳಿಗೆ ಏಕೆ ಹೆಸರೆಂಬುದಕ್ಕೆ ಶುಕ್ಲಕೃಷ್ಣ ಪಕ್ಷಾಭಿಮಾನದೇವತೆಗಳ ಮಾರ್ಗವೆಂದು ಹೇಳಿದೆವು, ಅಥವಾ **ಅರ್ಚಿಸ್ಸು ಅಗ್ನಿರ್ಜ್ಯೋತಿಃ** ಎಂಬ ಪ್ರಯೋಗಾನುಸಾರವಾಗಿ ಹೇಳಿರುವ ತೇಜಸ್ಸುಳ್ಳದ್ದಾಗಿಯೂ, ಧೂಮಾದಿಗತಿಯಲ್ಲಿ, ಧೂಮವು ಕೃಷ್ಣವರ್ಣವುಳ್ಳದ್ದಾಗಿ ಇರುವದರಿಂದಲೂ, ಹಾಗೆ ಹೆಸರೆಂದೂ, ಭಾವಿಸಬಹುದು; ಅಥವಾ ಜ್ಞಾನಿಗೆ ಮೋಕ್ಷದಾಯಕ ಮಾರ್ಗವಾದುದರಿಂದ ಉಪಾದೇಯವಾಗಿ ಶುಕ್ಲವೆಂದೂ, ಪುನಸ್ಸಂಸಾರದಾಯಕವಾಗಿ ಅನುಪಾದೇಯವಾಗಿ ಕೃಷ್ಣವೆಂದೂ ವ್ಯವಹಾರವೆಂದಾಗಲಿ ಭಾವಿಸಬಹುದು. ಅಥವಾ ಈ ಜೀವಾತ್ಮನಿಗೆ ಈ ಮಾರ್ಗದಲ್ಲಿ ಸ್ವಸ್ವರೂಪಾವಿರ್ಭಾವ ಉಂಟಾಗುವದರಿಂದ ಶುಕ್ಲವೆಂದೂ, ಇನ್ನೊಂದು ಮಾರ್ಗ

ದಲ್ಲಿ ಜ್ಞಾನ ತಿರೋಹಿತತ್ವವು ಇದ್ದೇ ಇರುತ್ತದೆಯಾದುದರಿಂದ ಕೃಷ್ಣವೆಂದೂ, ಪ್ರಯೋಗ ವೆಂದು ಭಾವಿಸಬಹುದು. ಮುಕ್ತಿ ಹೊಂದುವವರಿಕ್ಕೆ ಒಂದು, ಪುನರಾವರ್ತಿಗೆ ಒಂದು. ಹೀಗೆ ಇವೆರಡೇ ಮಾರ್ಗಗಳೇ ಶಾಸ್ತ್ರದಲ್ಲಿ ಹೇಳಿರುವದೆಂದು ಭಾವಿಸತಕ್ಕದ್ದಲ್ಲವು. ಇಲ್ಲಿ ಹೇಳಿರುವ ಸಾಮಾನ್ಯಯೋಗಿ ಜನವರ್ಗಕ್ಕೆ ಇವೆರಡೇ ಮಾರ್ಗಗಳೆಂದು ಹೇಳಲ್ಪಟ್ಟಿತು. ಆದುದರಿಂದ **ಜಗತಃ** ಎಂದರೆ ಭಕ್ತಿಯೋಗನಿಷ್ಠ ಜಗತ್ತಿಗೆ ಎಂದು ಸಂಕುಚಿಸಿ ಅರ್ಥಹೇಳತಕ್ಕದ್ದು. ಇಲ್ಲದಿದ್ದರೆ ಪ್ರಕರಣವಿರೋಧವು, ಪ್ರಕರಣವು ಯಾವುದೆಂದರೆ ಈ ನಾಲ್ಕು ವಿಧ ಭಕ್ತರಿಗೆ ಮಾತ್ರ ಗತಿಯನ್ನು ನಿರ್ದೇಶಿಸಿ ಹೇಳೋಣವು. ಇದರಿಂದ ಇತರ ಪ್ರಮಾಣಗಳಲ್ಲಿ ಹೇಳಿರುವ ಮಾರ್ಗ ಗಳನ್ನೆಲ್ಲಾ ವ್ಯಾವರ್ತಿಸಿ ಈ ಶ್ಲೋಕದಲ್ಲಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದಲ್ಲವು. ಆಗ ಇತರರು ಹೇಳುವಹಾಗೆ ಶಾಸ್ತ್ರ ಯುಕ್ತಿಗಳಿಗೆ ಬಾಧ್ಯ ಬಾಧಕಭಾವವನ್ನು ಕಲ್ಪಿಸಬೇಕಾಗುತ್ತದೆ. ಶ್ರೀ ಯತಿವರ್ಯರು **ಸರ್ವಂ ಸಮಂಜಸಂ** ಎಂದು ಶಾಸ್ತ್ರಪ್ರಮಾಣಗಳಿಗೆ ಸಾಮಂಜಸ್ಯವನ್ನು ಹೇಳುವದಕ್ಕೆ ವಿರುದ್ಧವಾಗಿ ನಾವು ಹೇಳಬೇಕಾಗುತ್ತದೆ. ಆದುದರಿಂದ ಶ್ರೀ ಯತಿವರ್ಯರಾಗಲಿ. ಶ್ರೀ ನಿಗಮಾಂತ ದೇಶಿಕರಾಗಲಿ ಇಲ್ಲಿ ಈ ಸಂದರ್ಭದಲ್ಲಿ ಪ್ರಕರಣವೇ ಇಲ್ಲದುದರಿಂದ ಇತರ ಮಾರ್ಗಗಳನ್ನು ಕುರಿತು ಏನನ್ನೂ ಹೇಳಲಿಲ್ಲವು. ಆದರೆ ಶ್ರೀ ನಿಗಮಾಂತ ದೇಶಿಕರಾದರು, ಪುರಾಣ ಪಾಂಚರಾತ್ರಾದಿಗಳಲ್ಲಿ ಬೇರೆ ಗತಿಗಳೂ ಹೇಳಲ್ಪಟ್ಟಿರುವದರಿಂದ, ಅಧಿಕಾರ ಸಾರಾವಳಿಯಲ್ಲಿ ಅರ್ಚಿರಾದ್ಯಧಿಕರಣದಲ್ಲಿ ಪ್ರಸ್ತಾಪ ಕೊಡಿಸಿರುತ್ತಾರೇನೆಂದರೆ.--

> **"ಚೈದ್ಯಾದೀನಾ ಮಯೋಧ್ಯಾ ಸ್ಥಿರಚರ ಜನುಷಾಂ ಪುಂಡರೀಕಾದಿಕಾನಾಂ।**
> **ಭೀಷ್ಮಾದೀನಾಮುಪಾಸ್ತಿ ಕ್ರಮ ಭವ ವಿಭವ ವ್ಯೂಹಲೋಕ ಸ್ಥಿತಾನಾಂ॥**
> **ಧಾತ್ಯಬ್ಜಾಂ ತನ್ನಿಷ್ಠಿತಾನಾಮಧಿಕೃತಿ ವಿರಮೇ ಬ್ರಹ್ಮ ಸಂಪ್ರಾಪ್ತ್ಯತಾಮು।**
> **ಪ್ಯನ್ಯೇಷಾಂ ಪ್ರಸ್ತುತಿ ಸ್ಸ್ಯಾ ಶಿತಪೃಥುಮತಿಭಿ ಶ್ಚಿಂತನೀಯಾ ಯಥಾರ್ಥಂ॥**

ಇದರರ್ಥವೇನೆಂದರೆ.--ಪರಮ ಪದಕ್ಕೆ ಹೋಗುವ ಮಾರ್ಗವು ಅರ್ಚಿರಾದಿ ಗತಿಯೆಂದು ಸಾಮಾನ್ಯವಾಗಿ ಹೇಳಿದ್ದರೂ, ಇತರ ಪ್ರಮಾಣ ವಾಕ್ಯಗಳಿಂದ ಕೆಲವು ಪ್ರವೃತ್ತಿಗಳಿಗೆ ಬೇರೆ ಗತಿಗಳು ಉಂಟೆಂದು ವಿಶೇಷಿಸಿ ಹೇಳುತ್ತಾರೆ. ಶಿಶುಪಾಲನು ಸಂಹಾರವಾದ ಒಡನೆಯೇ ಶ್ರೀ ಕೃಷ್ಣನ ಪಾದವನ್ನೇ ಹೊಂದಿದನು, ಅಯೋಧ್ಯೆಯಲ್ಲಿದ್ದ ಸ್ಥಾವರ ಜಂಗಮ ಪ್ರಾಣಿಗಳೆಲ್ಲಾ ಅವತಾರ ಪೂರ್ತಿಯಲ್ಲಿ ಶ್ರೀರಾಮನೊಂದಿಗೆ ಪರಬ್ರಹ್ಮಲೋಕವನ್ನು ಕುರಿತು ಹೋದರು. ಪುಂಡರೀಕನು ಪಾದ್ಮಪುರಾಣೋಕ್ತವಾದ ರೀತಿಯಲ್ಲಿ ವೈಕುಂಠವನ್ನು ಸೇರಿದನು, ಭೀಷ್ಮಾದಿಗಳಿಗೆ ವಸ್ವಾದಿ ಲೋಕದ ಮೂಲಕ ವೈಕುಂಠಪ್ರಾಪ್ತಿಯು. ಭಗವಂತನ ವಿಭವ ವ್ಯೂಹ ಲೋಕದಲ್ಲಿರುವವರಿಗೂ ಉಪಾಸನಾ ಭೇದದಿಂದ ಕ್ರಮಭೇದವು ಹೇಳಲ್ಪಟ್ಟಿರುತ್ತದೆ. ಚತುರ್ಮುಖನಿಗೆ ಸತ್ಯಲೋಕದಿಂದ ನೆಟ್ಟಗೆ ಮೋಕ್ಷಪ್ರಾಪ್ತಿಯು ಹೇಳಿರುತ್ತದೆ. ಹೀಗೆ ಮಾರ್ಗಗಳು ಭಿನ್ನಭಿನ್ನವಾಗಿರುತ್ತವೆಂಬ ಶಾಸ್ತ್ರ ಪ್ರಮಾಣಗಳನ್ನು ತಿರಸ್ಕರಿಸತಕ್ಕದ್ದಲ್ಲವು. ಇಲ್ಲಿ ಸಾಮಾನ್ಯಮಾರ್ಗವಮಾತ್ರ ಉಪಾಸಕನಿಗೆ ಹೇಳಲ್ಪಟ್ಟಿತೇ ವಿನಾ ವಿಶೇಷ ಮಾರ್ಗಗಳು ನಿರಾಕರಿಸಲ್ಪಡಲಿಲ್ಲವೆಂದು ತಿಳಿಯತಕ್ಕದ್ದು.

**ಭಾಷ್ಯಾರ್ಥವು:**—ಶ್ರೀಕೃಷ್ಣಭಗವಾನರವರು ತಾವು ಹೇಳಿದ ಅಭಿಪ್ರಾಯವು ಪ್ರಸಿದ್ಧಿ ಪ್ರಸಿದ್ಧಿಯುಳ್ಳದೆಂದು ಉಪದೇಶಿಸುತ್ತಾರೆ. **ಶುಕ್ಲಾಗತಿಯು** ಯಾವುದೆಂದರೆ, **ಅರ್ಚಿರಾದಿ ಮಾರ್ಗವು, ಕೃಷ್ಣಾಚ - ಕೃಷ್ಣಾ** ಎಂಬುವ ಗತಿಯಾದರೋ! **ಧೂಮಾದಿಕಾ** - ಧೂಮಾದಿ ಮಾರ್ಗವು, **ಶುಕ್ಲಯಾ** - ಒಂದಾದ ಅರ್ಚಿರಾದಿ ಮಾರ್ಗದ ಮೂಲಕ, **ಅನಾವೃತ್ತಿಂ ಯಾತಿ** - ಪಂಚಾಗ್ನಿ ವಿದ್ಯಾನಿಷ್ಠನಾಗಲಿ ಜ್ಞಾನಿಯಾಗಲಿ, ಅಪುನರಾವೃತ್ತಿಯನ್ನು ಹೊಂದು

**ಭಾ. ಶುಕ್ಲಾ ಗತಿಃ - ಅರ್ಚಿರಾದಿಕಾ, ಕೃಷ್ಣಾ ಚ - ಧೂಮಾದಿಕಾ । ಶುಕ್ಲಯಾ ಅನಾವೃತ್ತಿಂ ಯಾತಿ; ಕೃಷ್ಣ ಯಾತು ಪುನರಾವರ್ತತೇ । ಏತೇ ಶುಕ್ಲಕೃಷ್ಣೇ ಗತೀ, ಜ್ಞಾನಿನಾಂ ವಿವಿಧಾನಾಂ ಪುಣ್ಯಕರ್ಮಣಾಂ ಚ ಶ್ರುತೌ ಶಾಶ್ವತೇ ಮತೇ:— (೧) ತದ್ಯ ಇತ್ಥಂ ವಿದು ರ್ಯೇಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ, ತೇಽರ್ಚಿಷ ಮಭಿಸಂಭವನ್ತಿ ; (೨) ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತ ಮಿತ್ಯುಪಾಸತೇ ತೇ ಧೂಮ ಮಭಿಸಂಭವನ್ತಿ " ಇತಿ ॥ ೨೬ ॥**

ವನು, ಮೋಕ್ಷವನ್ನು ಹೊಂದುವನು ಎಂಬರ್ಥವು, **ಕೃಷ್ಣಯಾತು** - ಇನ್ನೊಂದಾದ ಧೂಮಾದಿ ಮಾರ್ಗದಲ್ಲಿ ಹೋದವನಾದರೋ, **ಪುನರಾವರ್ತತೇ** - ಪುನಃ ಜನ್ಮವೆತ್ತಿ ಸಂಸಾರಿಯಾಗುವನು, **ಏತೇ** - ಈ ಎರಡು. **ಶುಕ್ಲಕೃಷ್ಣೇಗತೀ** - (ದ್ವಿವಚನವು) ಶುಕ್ಲಕೃಷ್ಣ ಮಾರ್ಗಗಳು **ಜ್ಞಾನಿನಾಂ** - ಜ್ಞಾನಿಗಳಿಗೂ ತತ್ಸಮಾನರಾದ ಪಂಚಾಗ್ನಿ ವಿದ್ಯಾನಿಷ್ಠರಿಗೂ, ಪಂಚಾಗ್ನಿ ವಿದ್ಯೆಯು ಪರಬ್ರಹ್ಮೋಪಾಸಕವಾದ ಬ್ರಹ್ಮವಿದ್ಯೆಯಲ್ಲೇ ಒಂದಾದ ಪ್ರಯುಕ್ತ ಜಿಜ್ಞಾಸುವನ್ನು ಪ್ರತ್ಯೇಕಿಸಿ ಇಲ್ಲಿ ಹೇಳಲಿಲ್ಲವು. ಮತ್ತು **ವಿವಿಧಾನಾಂ ಪುಣ್ಯಕರ್ಮಣಾಂ** - ಯಜ್ಞ, ದಾನ, ತಪಸ್ಸುಗಳನ್ನು ಮಾಡುವ ಮತ್ತು ನಾನಾ ವಿಧಗಳಾದ ಮನೋರಥಗಳಿಗಾಗಿ ನನ್ನನ್ನು ಆಶ್ರಯಿಸಿರುವ ಐಶ್ವರ್ಯಾರ್ಥಿಗಳಿಗೂ ಸಹ, **ಶ್ರುತೌ** - ಶ್ರುತಿಯಲ್ಲಿ, **ಶಾಶ್ವತೇ** - ಯಥಾರ್ಥವಾದ, ಸ್ಥಿರವಾದ, **ಮತೇ** ಅಭಿಪ್ರಾಯವಾಗಿದೆ. ಇಲ್ಲಿ ಶಾಶ್ವತ ಶಬ್ದವು ವೇದವು ತನ್ನಿಂದ ಬಂದ ಶಾಸ್ತ್ರವಾದುದರಿಂದ ಯಥಾರ್ತ್ಯದ ಮೂಲಕ ವೇದಾನಾದಿತ್ವಾ ಪೌರೇಷೇಯತ್ವಾದಿಗಳನ್ನು ಬೋಧಿಸುವ ಧ್ವನ್ಯರ್ಥವೂ ಸೂಚಿತವು. ಇದಕ್ಕೆ ಪ್ರಮಾಣವು. **"ಯೋಬ್ರಹ್ಮಾಣಂ ವಿದಧಾತಿಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ"** ಎಂಬುದು. ಶ್ರುತಿಯಲ್ಲಿ ಎಲ್ಲಿ ಹಾಗೆ ಎರಡು ಗತಿಗಳು ಸುಕೃತಿಗಳಿಗೆ ಹೇಳಿರುತ್ತದೆ ಎಂದರೆ ಉದಾಹರಿಸುತ್ತಾರೆ.----**"ತದ್ಯ ಇತ್ಥಂ ವಿದುಃ"** ಎಂಬ ಈ ಛಾಂದೋಗ್ಯ ವಾಕ್ಯದ ಅರ್ಥಕ್ಕೆ ೧೧೪೫-೫ ನೆಯ ಪುಟವನ್ನು ಪರಾಂಬರಿಸಿ; ಮತ್ತು (೨) **ಅಥ** - ಅನಂತರವಲ್ಲಿ ಎಂದರೆ ಜ್ಞಾನಿಗೂ ಪಂಚಾಗ್ನಿ ವಿದ್ಯಾನಿಷ್ಠನಿಗೂ ಅರ್ಚಿರಾದಿಗತಿಯು ಎಂದು ಹೇಳಿದನಂತರ, **ಯೇ** - ಐಶ್ವರ್ಯಕಾಮಿಗಳಾದ ಪುರುಷರು **ಗ್ರಾಮೇ** - ಗ್ರಾಮದಲ್ಲೇ ಇರುವವರಾಗಿ, ಅರಣ್ಯಕ್ಕೆ ಹೋಗುವ ಆವಶ್ಯಕತೆ ಇವರಿಗಿಲ್ಲವೆಂಬ ಭಾವವು. **ಇಷ್ಟಂ** - ಯಾಗಾದಿಯನ್ನೂ, **ದತ್ತಂ** - ಕೊಳ, ಕೆರೆ, ಕಟ್ಟೆಗಳನ್ನು ಕಟ್ಟಿಸುವದನ್ನು, **ದತ್ತಂ** - ದಾನವನ್ನೂ, **ಇತಿ** - ಎಂಬ ಎಂದರೆ ಇವುಗಳಿಗೆ ಸಜಾತೀಯವಾದವುಗಳನ್ನು. **ಉಪಾಸತೇ** - ಉಪಾಸನಾದಿ ತಪಸ್ಸನ್ನೂ, ಅನುಷ್ಠಿಸುವರೋ, **ತೇ** ಅವರು, **ಧೂಮಂ ಅಭಿಸಂಭವನ್ತಿ** ಧೂಮಾದಿ ಮಾರ್ಗವನ್ನು ಹೊಂದುವರು. ಅವರು ಸ್ವರ್ಗಾದಿ ಭೋಗಗಳನ್ನನುಭವಿಸಿ, ಅದು ಮುಗಿದನಂತರ ಈ ಲೋಕದಲ್ಲೇ ಜನ್ಮವೆತ್ತಲು ಹಿಂತಿರುಗಿ ಬರುವರು ಎಂದು ಹೇಳಿ, ಅವರು ಭೂಮಿಗೆ ಬರುವ ಪ್ರಕಾರವೂ ಸಹ ಹೇಳಲ್ಪಟ್ಟಿರುತ್ತದೆ. ಮೂಲದಲ್ಲಿರುವ **ಹಿ** ಶಬ್ದವು ಶ್ರುತಿ ಪ್ರಸಿದ್ಧಿಯನ್ನು ಪ್ರದರ್ಶಿಸುತ್ತದೆ. ಇಲ್ಲಿ ಹೇಳಿದ ಎರಡು ಗತಿಗಳು ಯಾರಿಗೆ ಎಂದರೆ ಶ್ರೀ ಯತಿವರ್ಯರು ವ್ಯಕ್ತಪಡಿಸಿ, **"ಜ್ಞಾನಿನಾಂ ವಿವಿಧಾನಾಂ ಪುಣ್ಯಕರ್ಮಣಾಂ"** ಎಂದು ಹೇಳಿದರು. ಈ ಪುಣ್ಯ ಕರ್ಮಗಳನ್ನು ಶ್ರುತಿಯು **ರಮಣೀಯ ಚರಣಾಃ** - ಒಳ್ಳೇ ಕರ್ಮಗಳನ್ನು ಮಾಡುವರೆಂದು ಹೇಳಿ ಅವರಿಗೆ ಈ ಧೂಮಾದಿ ಮಾರ್ಗವೆಂದು ಹೇಳಿತು. ಇಲ್ಲಿ **ಶಾಶ್ವತೇ** ಎಂಬ ಪದದಿಂದ ವೈದಿಕ ಪ್ರಮಾಣ್ಯವು ಬೋಧಿತವು. ಹೀಗೆ ವ್ಯಕ್ತವಾಗಿದ್ದರೂ, ಕೆಲವರು ಅದ್ವೈತವಾದವನ್ನು

(೧) ಛಾಂ. ೫. ೧೦. ೧ (೨) ಛಾಂ. ೫. ೧೦. ೩.

**ಮೂ. ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗ ಯುಕ್ತೋ ಭವಾರ್ಜುನ ॥ ೨೭.**

ಬಿಗಿ ಹಿಡಿದು ಹೇಳುವವರು ವೇದಪ್ರಾಮಾಣ್ಯವನ್ನು ಒಪ್ಪಿದರೆ ಅದ್ವೈತವಾದಕ್ಕೆ ಕುಂದಕ ವೆಂದು ಭಾವಿಸುವದು ಆಶ್ಚರ್ಯಕರವಾದುದು. ಮುಕ್ತದಶೆಯಲ್ಲಿ ವೇದಶಾಸ್ತ್ರದ ಆವಶ್ಯಕವಿಲ್ಲ ವೆಂದು ಹೇಳುವದೀಗ ಸಮಂಜಸವಾದ ಉಕ್ತಿಯು. ವೇದೋಕ್ತಿಗೆ ಶಾಶ್ವತತ್ವವೆಂದರೆ ಪ್ರವಾಹ ರೂಪದಿಂದ ಅನಾದ್ಯನಂತತ್ವವೂ ವ್ಯವಸ್ಥಿತತ್ವವೂ ಉಂಟು ಎಂದು ಶ್ರೀ ದೇಶಿಕರವರು ವ್ಯಾಖ್ಯಾನ ಮಾಡಿರುತ್ತಾರೆ. ಇಲ್ಲಿ **ಜಗತಃ** ಎಂಬ ಪ್ರಯೋಗವಿದ್ದರೂ ಸಮಸ್ತ ಜಗತ್ತಿನ ಅಧಿ ಕಾರಿಗಳೂ ಇಲ್ಲಿ ಹೇಳಲ್ಪಡಲಿಲ್ಲವು. ಇಲ್ಲಿ ಪ್ರಕರಣಾನುಗುಣವಾಗಿ ಹೇಳಲ್ಪಡುವ ಜಗತ್ತಿನ ಸುಕೃತಾಧಿಕಾರಿಗಳು ಮಾತ್ರವೇ **"ಚತುರ್ವಿಧಾ ಭಜನ್ತೇ ಮಾಂ ಜನಾ ಸ್ಸುಕೃತಿನೋ ಽರ್ಜುನ"** ಎಂಬಲ್ಲಿ ಹೇಳಲ್ಪಟ್ಟವರು ಮಾತ್ರವೇ **ಜಗತಃ** ಎಂಬ ಶಬ್ದದಿಂದ ಬೋಧಿಸಲ್ಪಟ್ಟರು ಎಂದು ಭಾವಿಸತಕ್ಕದ್ದು. ಹೀಗೆ ಪ್ರಕರಣಕ್ಕೆ ಮಾತ್ರ ಬೇಕಾದ ಎರಡೇ ಮಾರ್ಗಗಳು ಹೇಳ ಲ್ಪಟ್ಟವು. ದಿವ್ಯ ವೈಕುಂಠಪ್ರಾಪ್ತಿಗೆ ಇತರ ಅನೇಕ ಮಾರ್ಗಗಳುಂಟೆಂಬುದು ಹಿಂದೆಯೇ ಸಪ್ರ ಮಾಣವಾಗಿ ಉಪಪಾದಿಸಲ್ಪಟ್ಟಿರುತ್ತದೆಯಷ್ಟೇ. ಇಲ್ಲಿ **ವಿವಿಧಾನಾಂ** ಎಂಬ ವಿಶೇಷಣವು ಪುಣ್ಯ ಕರ್ಮಗಳು ನಾನಾವಿಧಗಳೆಂಬ ಭಾವನೆಯಿಂದ ಪ್ರಯೋಗಿಸಲ್ಪಟ್ಟಿರುತ್ತದೆ. ಕಾಕಾಕ್ಷಿನ್ಯಾಯದ ಪ್ರಕಾರ ಜ್ಞಾನಿನಾಂ ಎಂಬುದಕ್ಕೂ ಅನ್ವಯಿಸಿದರೆ ಏನೂ ಬಾಧಕವಿಲ್ಲವು, ಏಕೆಂದರೆ ಬ್ರಹ್ಮವಿದ್ಯೆಗಳೂ ನಾನಾಭೇದಗಳುಳ್ಳವಾಗಿ ಇರುವದರಿಂದಲೂ, ಇವರಲ್ಲೇ ಪ್ರಕರಣಾನುಗುಣ ವಾಗಿ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವೂ ಸೇರಬೇಕಾದುದರಿಂದಲೂ ವೈವಿಧ್ಯವು ಸ್ವಷ್ಟವು ॥ ೨೬ ॥

**ಮೂಲಕ್ಕೆ ಅರ್ಥವು :—** ಧೂಮಾದಿಮಾರ್ಗದಲ್ಲುಂಟಾಗುವ ಅನಿಷ್ಟಫಲಗಳನ್ನೂ, ಅರ್ಚಿರಾದಿ ಮಾರ್ಗದಲ್ಲುಂಟಾಗುವ ಸರ್ವೋತ್ಕೃಷ್ಟ ಫಲಗಳನ್ನೂ ವಿಮರ್ಶಿಸಿ ತಿಳಿದವನು, ಧೂಮಾದಿ ಮಾರ್ಗದಿಂದ ತಪ್ಪಿಸಿಕೊಳ್ಳತಕ್ಕದ್ದೆಂದೂ, ಅರ್ಚಿರಾದಿ ಮಾರ್ಗಗಮನವೇ ಉಪಾ ದೇಯವೆಂದೂ, ಜ್ಞಾಪಕದಲ್ಲಿಡುವದಕ್ಕಾಗಿ ಅರ್ಚಿರಾದಿ ಗಮನ ಚಿಂತನವನ್ನು ಪ್ರತಿನಿತ್ಯವೂ ಜ್ಞಾನಿಯು ಮಾಡತಕ್ಕದ್ದೆಂದು ಉಪದೇಶಿಸುತ್ತಾರೆ. **ಹೇ ಪಾರ್ಥ** - ಓ ಅರ್ಜುನನೇ, **ಏತೇ ಸೃತೀ** - ಉತ್ಕೃಷ್ಟಾಪಕೃಷ್ಟ ಫಲಗಳನ್ನು ಹೊಂದಿಸುವ ಈ ಎರಡು ಅರ್ಚಿರಾದಿ ಧೂಮಾದಿ ಮಾರ್ಗಗಳನ್ನು, **ಜಾನನ್** - ವಿವೇಕಿಸಿ ತಿಳಿದ, **ಯೋಗೀ ಕಶ್ಚನ** - ಯಾವ ಉಪಾಯ ನಿಷ್ಠನೂ, **ನಮುಹ್ಯತಿ** - ಮೋಹವನ್ನು ಹೊಂದುವದಿಲ್ಲವು, ಮೋಸಹೋಗುವದಿಲ್ಲವು, ಎಂದರೆ ಉತ್ಕೃಷ್ಟ ಫಲದಾಯಕವಾದುದನ್ನು ತ್ಯಜಿಸಿ ಅಪಕೃಷ್ಟಫಲಪ್ರದವಾದುದನ್ನು ಅಙ್ಗೀಕರಿಸುವ ದಿಲ್ಲವು. ಇವೆರಡು ಮಾರ್ಗದಲ್ಲಿರುವ ವ್ಯತ್ಯಾಸವನ್ನು ವಿಮರ್ಶಿಸಿ ತಿಳಿಯದವನೀಗ ಅಜ್ಞಾನ ದಿಂದ ನಿಕೃಷ್ಟಫಲದಾಯಕವಾದುದನ್ನು ಅವಲಂಬಿಸಬಹುದು. ವಿಮರ್ಶಿಸಿ ತಿಳಿದವನೀಗ ಎಂದಿಗೂ ಮೋಸಹೋಗುವದಿಲ್ಲವೆಂಬ ಭಾವವು. **ಹೇ ಅರ್ಜುನ** - ಓ ಅರ್ಜುನನೇ, **ತಸ್ಮಾತ್** - ಆ ಕಾರಣದಿಂದ, **ಸರ್ವೇಷು ಕಾಲೇಷು** - ಸಮಸ್ತದಿನಗಳಲ್ಲೂ ಮಾಡುವ ಧ್ಯಾನ ಕಾಲಗಳಲ್ಲಿ, **ಯೋಗಯುಕ್ತೋಭವ** - ಅರ್ಚಿರಾದಿ ಮಾರ್ಗವಾಗಿ ತನಗೆ ಗತಿಯುಂಟಾಗತಕ್ಕ ದ್ದೆಂಬಗತಿ ಚಿನ್ತನವನ್ನು ಮಾಡುವವನಾಗು. ಈ ಶ್ಲೋಕದಲ್ಲಿ **ಪಾರ್ಥ ಅರ್ಜುನ** ಎಂದು ಎರಡು ಸಂಬೋಧನೆಗಳು, ಈ ಹಿತೋಪದೇಶಕಾಲದಲ್ಲಿ ಪರಮಪುರುಷನಿಗಿರುವ ನಿರುಪಮ ಪ್ರೀತ್ಯತಿಶಯವನ್ನು ಸೂಚಿಸುತ್ತವೆ. ಅಂತಹ ಹಿತೋಪದೇಶಕಾಲದಲ್ಲಿ, **ಹೆ ಅರ್ಜುನ** ಎಂಬ ಸಲಿಗೆಯಿಂದ ಮಾಡಿದ ಸಂಬೋಧನೆಯು ಸ್ವಾಮಿಯ ಸೌಲಭ್ಯ ಸೌಶೀಲ್ಯಾದಿ ಗುಣಗಳನ್ನು

**ಭಾ. ಏತೌ ಮಾರ್ಗೌ ಜಾನನ್ ಯೋಗೀ ಪ್ರಯಾಣಕಾಲೇ ಕಶ್ಚನ ನ ಮುಹ್ಯತಿ ; ಅಪಿತು ಸ್ವೇನೈವ ದೇವಯಾನೇನ ಪಥಾ ಯಾತಿ. ತಸ್ಮಾದಹರಹ ರರ್ಚಿರಾದಿ ಗತಿ ಚಿನ್ತನಾಖ್ಯಯೋಗಯುಕ್ತೋ ಭವ ||೨೭||**

ಪ್ರಕಟಿಸುತ್ತದೆ. ಈ ಎರಡು ಸೃತಿಗಳ ತಾರತಮ್ಯವನ್ನು ತಿಳಿದವನು **ನಮುಹ್ಯತಿ** - ಅಸಾರವಾದ ಮಾರ್ಗವನ್ನು ಅವಲಂಭಿಸುವದಿಲ್ಲವು ಎಂದು ಹೇಳಿದನಂತರ, ಈ ತಾರತಮ್ಯವನ್ನು ಅರಿಯದವರು ಮೋಹವನ್ನು ಹೊಂದಬಹುದೆಂದೂ ಸೂಚಿತವು. **ಸರ್ವೇಷು ಕಾಲೇಷು** ಯೋಗಯುಕ್ತನಾಗಿರು ಎಂದರೆ, ಸದಾಕಾಲದಲ್ಲೂ ಯೋಗನಿಷ್ಠೆಯನ್ನು ಹೊಂದಿರತಕ್ಕದ್ದು ಎಂಬ ಅರ್ಥವಲ್ಲವು, ಹಾಗೆ ಮಾಡುವದೂ ಸಾಧ್ಯವಲ್ಲವು. ಇಲ್ಲಿ ಉಪಾಸಕನ ಕಾಲವು ಯಾವುದೋ ಅಂತಹ ಕಾಲದಲ್ಲೇ ಗತಿಚಿಂತನವನ್ನೂ ಮಾಡುವದು ಆವಶ್ಯಕವೆಂದು ಹೇಳಿರುತ್ತಾರೆ. ಕೆಲವು ಪ್ರಪನ್ನರು ಪ್ರಾತಃಕಾಲದಲ್ಲಿ ಪರಮ ಪುರುಷನನ್ನು ಸ್ತುತಿಸಿದನಂತರನೇ ಗತಿಚಿಂತನವನ್ನು ಮಾಡುತ್ತಾರೆ. ಈ ಗತಿಚಿಂತನ ಶ್ಲೋಕಗಳಿಗೆ ೯೯೬ ನೆಯ ಪುಟವನ್ನು ನೋಡಿ, ಮತ್ತು ಶ್ರೀ ದೇಶಿಕರವರು ಗತಿಚಿಂತನಾಧಿಕಾರವನ್ನೂ, ನಾವು ಅದಕ್ಕೆ ಬರೆದಿರುವ ಉಪಪಾದನವನ್ನೂ ಪರಾಂಬರಿಸಿ.

**ಭಾಷ್ಯಾರ್ಥವು:**—ಮಾರ್ಗ ಚಿಂತನವೂ ಕೂಡ ಉಪಾಸನದಹಾಗೆ ಪರಮ ಪುರುಷ ಪ್ರಾಪ್ತ್ಯುಪಾಯರೂಪವಾದುದೋ ? ಎಂದರೆ, ಮಾರ್ಗಜ್ಞಾನವು ಇದ್ದರೆ ದೇಹಾವಸಾನಾನಂತರ ಪರಮ ಪದವನ್ನು ಕುರಿತುಹೋಗುವವನಿಗೆ ಮೋಹವೂ, ವ್ಯಾಕುಲವೂ. ಇರುವದಿಲ್ಲವು; ಅಷ್ಟುಮಾತ್ರವೇ ಹೊರತು ಉಪಾಯವಲ್ಲವು. ಮುಂದಕ್ಕೆ ತನಗೆ ಗತಿಯಾವುದೋ ಎಂಬ ಚಿಂತೆ ಬರುವದಿಲ್ಲವು. ಆದುದರಿಂದ ಉಪಾಸನದೊಂದಿಗೆ ಗತಿಚಿಂತನವೂ ಆವಶ್ಯಕವೆಂದು ಈ ಶ್ಲೋಕವು ಹೇಳುತ್ತದೆ. **ಏತೌ ಮಾರ್ಗೌ** - ಈ ಎರಡು ಅರ್ಚಿರಾದಿ ಧೂಮಾದಿ ಮಾರ್ಗಗಳಲ್ಲಿರುವ ವ್ಯತ್ಯಾಸಗಳನ್ನು, **ಜಾನನ್** - ಚನ್ನಾಗಿ ಪರಿಶೀಲಿಸಿ ತಾರತಮ್ಯವನ್ನರಿತ, **ಯೋಗೀ** - ಜ್ಞಾನಿಯಾದ ಭಕ್ತಿಯೋಗನಿಷ್ಠನಾದ, **ಕಶ್ಚನ** - ಯಾವನೊಬ್ಬನೂ, **ನಮುಹ್ಯತಿ** - ಮೋಹ ಬುದ್ಧಿಯನ್ನು ಹೊಂದುವದಿಲ್ಲವು ಎಂದರೆ ಉತ್ಕೃಷ್ಟವಾದ ಅರ್ಚಿರಾದಿ ಮಾರ್ಗವನ್ನು ತ್ಯಜಿಸಿ ಹೇಯವಾದ ಧೂಮಾದಿ ಮಾರ್ಗವನ್ನವಲಂಭಿಸುವದಿಲ್ಲವು ಎಂಬ ತಾತ್ಪರ್ಯವು. ಇನ್ನು ಯಾವ ಮಾರ್ಗದಲ್ಲಿ ಹೋಗುವವನನ್ನವಲಂಭಿಸುವನು ಎಂದರೆ ಹೇಳುತ್ತಾರೆ. **ಅಪಿತು** - ಮತ್ತೆ ಯಾವ ಮಾರ್ಗದಿಂದ ಎಂದರೆ, **ಸ್ವೇನೈವ ದೇವಯಾನೇನ ಪಥಾ** - ಜ್ಞಾನಿಯಾದ ತನಗೆ ಹೇಳಲ್ಪಟ್ಟಿರುವ ಅರ್ಚಿರಾದಿ ಮಾರ್ಗದಿಂದಲೇ, **ಯಾತಿ** - ಹೋಗುತ್ತಾನೆ, **ತಸ್ಮಾತ್** - ಆ ಕಾರಣದಿಂದಲೇ, **ಅಹರಹಃ** - ಇದು **ಸರ್ವೇಷು ಕಾಲೇಷು** - ಎಂಬುವದರ ವ್ಯಾಖ್ಯಾನವು, ಪ್ರತಿದಿನದಲ್ಲೂ, **ಅರ್ಚಿರಾದಿ ಗತಿ ಚಿನ್ತನಾಖ್ಯ ಯೋಗಯುಕ್ತೋಭವ** - ಇದು ಯೋಗಯುಕ್ತೋ ಭವ ಎಂದು ಮೂಲದಲ್ಲಿರುವದರ ವಿವರಣವು, ಅರ್ಚಿರಾದಿ ಗತಿ ಚಿಂತನವೆಂಬ ಯೋಗದಿಂದ ಕೂಡಿದವನಾಗು; ಇಲ್ಲಿ ಯೋಗಶಬ್ದಕ್ಕೆ ಧ್ಯಾನಮಾತ್ರವೇ ಅರ್ಥವು. ಪ್ರಕರಣಾನುಗುಣವಾಗಿ ಅದು ಗತಿಚಿಂತನರೂಪವಾದುದರಿಂದ **ಗತಿಚಿಂತನಾಖ್ಯ ಯೋಗಯುಕ್ತಃ** ಎಂಬ ಯತಿವರ್ಯರ ಭಾಷ್ಯವು. ತಾತ್ಪರ್ಯವೇನೆಂದರೆ.—ಉಪಾಸನವನ್ನು ಮಾಡುವವನಲ್ಲದೆ ಪ್ರತಿ ದಿನವೂ ಅರ್ಚಿರಾದಿಗತಿ ಚಿಂತನವೂ ಆವಶ್ಯಕವಾದುದರಿಂದ ಅದನ್ನೂ ಮಾಡು ಎಂಬುದು. ಇಂತಹ ಗತಿಚಿಂತನಕ್ಕೆ ಸಹಾಯವಾಗುವಹಾಗೆ ಶ್ರೀ ದೇಶಿಕವರ್ಯರೂ, ಶ್ರೀ ವಾತ್ಸ್ಯವರದರೂ, ಶ್ರೀ ವರದಮಿಶ್ರರೂ ಶ್ಲೋಕಗಳನ್ನು ಶ್ರುತ್ಯರ್ಥಗಳನ್ನೆಲ್ಲಾ ಒಟ್ಟುಕೂಡಿಸಿ ದಯಪಾಲಿಸಿರುತ್ತಾರೆ. ಯಾವುದಾದರೂ ಒಂದನ್ನು ಜ್ಞಾಪಕದಲ್ಲಿಟ್ಟು, ಪ್ರತಿ ದಿನವೂ ಅನುಸಂಧಾನಮಾಡತಕ್ಕದ್ದಾಗಿರುತ್ತದೆ.

**ಭಾ. ಅವ. ಅಥಾ ಧ್ಯಾಯದ್ವಯೋದಿತಶಾಸ್ತ್ರಾರ್ಥವೇದನ ಫಲಮಾಹ—**

ಭಕ್ತಿಯೋಗನಿಷ್ಠನಿಗೇನೋ ಆವಶ್ಯಕವೆಂದು ಇಲ್ಲಿ ಹೇಳಲ್ಪಟ್ಟಿತು. ಪ್ರಾಸಙ್ಗಿಕವಾಗಿ ಭರನ್ಯಾಸ ನಿಷ್ಠನಿಗೂ **ಅಹರಹ ಅರ್ಚಿರಾದಿಗತಿ** ಚಿಂತನವು ಆವಶ್ಯಕವೇ ? ಎಂದರೆ ಆವಶ್ಯಕವೆಂದು ಶ್ರೀ ನಿಗಮಾಂತ ದೇಶಿಕರವರು ಶ್ರೀಮದ್ರಹಸ್ಯತ್ರಯಸಾರದ ಗತಿ ಚಿನ್ತನಾಧಿಕಾರದಲ್ಲಿ ವ್ಯಕ್ತಪಡಿಸಿರುತ್ತಾರೆ. ॥ ೨೭ ॥

**ಭಾಷ್ಯಾವತಾರಿಕೆಯ ಅರ್ಥವು:—ಅಥ** - ಅನಂತರ, **ಅಧ್ಯಾಯದ್ವಯೋದಿತ** - ಏಳನೆಯ ಮತ್ತು ಈ ಎಂಟನೆಯ ಎರಡು ಅಧ್ಯಾಯಗಳಲ್ಲೂ ಹೇಳಲ್ಪಟ್ಟ, **ಶಾಸ್ತ್ರಾರ್ಥ ವೇದನ ಫಲಮಾಹ** - ಶಾಸ್ತ್ರಾರ್ಥವನ್ನು ತಿಳಿಯುವವರ ಫಲವನ್ನು ಈ ಶ್ಲೋಕದಿಂದ ತಿಳಿಸುತ್ತಾರೆ. ಹೀಗೆ ಫಲವನ್ನು ನಿಗಮನರೂಪದಲ್ಲಿ ಹೇಳುವಾಗ, ಈ ಎಂಟನೆಯ ಅಧ್ಯಾಯವನ್ನು ಮಾತ್ರ ಹೇಳದೆ, ಏಳನೆಯ ಅಧ್ಯಾಯವನ್ನೂ ಸಹ ಸೇರಿಸಿರುವದು ಏತಕ್ಕೆ, ಎಂಬುದು ನ್ಯಾಯವಾದ ಪ್ರಶ್ನೆಯು ; ತನ್ನ ಸ್ವರೂಪಾದಿ ಜ್ಞಾನವಿಲ್ಲದೆ ತನ್ನನ್ನು ಭಜನಮಾಡದ ನಾಲ್ಕು ಜನರನ್ನು ನಿಂದಿಸಿ, ತನ್ನನ್ನು ಆಶ್ರಯಿಸಿದ ನಾಲ್ಕು ಜನರನ್ನೂ ಶ್ಲಾಘಿಸಿ, ಅವರುಗಳಲ್ಲಿ ಜ್ಞಾನಿಯೇ ಸರ್ವಶ್ರೇಷ್ಠನೆಂದು **"ಜ್ಞಾನಿತ್ವಾತ್ಮೈವ ಮೇಮತಮ್"** ಎಂದು ನಿಷ್ಕರ್ಷಿಸಿ ಹೇಳಿ, ಆತನ ಉಪಾಸನವೇ ಸರ್ವೋತ್ಕೃಷ್ಟವಾದುದೆಂದು ಏಳನೆಯ ಅಧ್ಯಾಯದಲ್ಲಿ ತಿಳಿಸಿ, ಈ ಎಂಟನೆಯ ಅಧ್ಯಾಯದಲ್ಲೂ ಆ ನಾಲ್ಕು ಜನ ಭಕ್ತರಿಗೆ ಬೇಕಾದ ಜ್ಞಾನ, ಅವರಿಗುಂಟಾಗುವ ಪ್ರಾಪ್ಯವೂ, ಅದರಲ್ಲಿ ಜ್ಞಾನಿಗೆ ನಿರತಿಶಯವಾದ ಪ್ರಾಪ್ಯವೂ, ಅವರು ನಾಲ್ಕು ಜನರಲ್ಲಿ ಯಾರಿಗೆ ಆವೃತ್ತಿ ಯಾರಿಗೆ ಅಪುನರಾವೃತ್ತಿ ಇದೆಲ್ಲಾ ಹೇಳಿ, ಹೀಗೆ ಎರಡು ಅಧ್ಯಾಯಗಳಲ್ಲೂ ನಾಲ್ಕು ಜನ ಭಕ್ತರ ಅನುಷ್ಠಾನ, ಜ್ಞಾನ, ಪ್ರಾಪ್ಯಾದಿಗಳು ಹೇಳಲ್ಪಟ್ಟಿರುವದರಿಂದ ಪ್ರಕರಣಸಙ್ಗತಿಗಳನ್ನು ಚನ್ನಾಗಿ ಅರಿತ ಮಹಾ ಪ್ರಾಜ್ಞರಾದ ಶ್ರೀ ಯತಿವರ್ಯರು ಎರಡು ಅಧ್ಯಾಯಗಳನ್ನು ಒಟ್ಟುಗೂಡಿಸಿ, ಅವು ಎರಡರಲ್ಲೂ ಸಾರಭೂತವಾಗಿ ಗ್ರಹಿಸತಕ್ಕವಿಷಯ ಯಾವುದು ಎಂದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ.—ಆ ಸಾರಭೂತಾರ್ಥವಾದ ಈ ಉಪದೇಶದ ಫಲವು ಯಾವುದು ಎಂದರೆ ಮುಕ್ತ ಮೂರು ಅಧಿಕಾರಿಗಳ ಮಾರ್ಗವೂ ಅನುಪಾದೇಯವಾದುರಿಂದ ನೀನು ಜ್ಞಾನಿ ಎಂದೆನಿಸಿ ಭಕ್ತಿಯೋಗನಿಷ್ಠನಾಗಿ ನನ್ನನ್ನು ಉಪಾಸಿಸು ಎಂದು ನಿಗಮನಮಾಡಿ ಹೇಳುತ್ತಾರೆಂಬ ಭಾವವು.

**ಮೂಲಕ್ಕೆ ಅರ್ಥವು:—ವೇದೇಷು** - ನಾಲ್ಕು ವೇದಗಳ ಅಧ್ಯಯನ ಮಾಡುವದರಲ್ಲೂ, **ಯಜ್ಞೇಷು** - ಯಜ್ಞಗಳನ್ನು ಶಾಸ್ತ್ರವಿಧಿಗನುಸಾರವಾಗಿ ಅನುಷ್ಠಿಸುವದರಲ್ಲೂ, **ತಪಸ್ಸುಚೈವ** - ಕೃಚ್ಛ್ರ ಚಾಂದ್ರಾಯಣ ತಪೋಽನುಷ್ಠಾನಗಳಲ್ಲೂ ಕೂಡ, ಹಾಗೆಯೇ **ದಾನೇಚ** - ಶಾಸ್ತ್ರರೀತಿಯಲ್ಲಿ ಸತ್ಪಾತ್ರದಲ್ಲಿ ಮಾಡುವ ದಾನದಲ್ಲೂ ಸಹ, ಚ ಶಬ್ದದಿಂದ ಇಂತಹ ಇನ್ನೂ ಇತರ ಪುಣ್ಯ ಕರ್ಮಗಳಾದ ಕೆರೆಕಟ್ಟಿಸುವದು ಕೊಳವನ್ನು ತೋಡಿಸುವದು, ದೇವಾಲಯ, ಮಕ್ಕಳಿಗೆ ಪಾಠಶಾಲೆ ಆಸ್ಪತ್ರೆ ನಿರ್ಮಾಣ ಮೊದಲಾದ ಪುಣ್ಯ ಕರ್ಮಗಳೆಲ್ಲಾ ಸಮುಚ್ಚಯಾರ್ಥದಿಂದ ಹೇಳಲ್ಪಟ್ಟವು. ಶ್ರುತಿಯಲ್ಲಿ **ರಮಣೀಯ ಚರಣಾಃ** ಎಂಬ ಪ್ರಯೋಗದಿಂದ ಹೇಳಲ್ಪಟ್ಟ ಸಕಲ ಸುಕೃತಿಗಳಿಗೂ ಹೇಳಿರುವ ಫಲಗಳೆಲ್ಲಾ ಸಙ್ಗೃಹೀತವು. **ಯತ್ಪುಣ್ಯ ಫಲಂ ಪ್ರದಿಷ್ಟಮ್** - ಯಾವ ಸ್ವರ್ಗಾದಿ ಭೋಗರೂಪವಾದ ಉತ್ಕೃಷ್ಟ ಫಲವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತದೋ, **ಇದಂ ವಿದಿತ್ವಾ** - ಈಗ ಎರಡು ಅಧ್ಯಾಯಗಳಲ್ಲೂ ನಾಲ್ಕು ಜನ ಭಕ್ತರುಗಳ ವಿಷಯವಾಗಿ ಉಪಪಾದಿಸಿ ಜ್ಞಾನಿಗೆ ಪ್ರಾಪ್ಯವಾಗುವ ಫಲವು ನಿರತಿಶಯವಾದುದೆಂದು ತಿಳಿದು ಪರಮಾ

**ಮೂ. ವೇದೇಷು ಯಜ್ಞೇಷು ತಪಸ್ಸು ಚೈವದಾನೇ ಚ ಯತ್ಪುಣ್ಯಫಲಂ ಪ್ರದಿಷ್ಟಂ ।**
**ಅತ್ಯೇತಿ ತತ್ಸರ್ವ ಮಿದಂ ವಿದಿತ್ವಾ ಯೋಗೀಪರಂಸ್ಥಾನ ಮುಪೈತಿಚಾದ್ಯಂ ॥೨೮॥**

**ಇತಿ ಶ್ರೀ ಭಗವದ್ಗೀತಾ ಸೂಪನಿಷತ್ಸು ಪರಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಅಕ್ಷರ ಪರಬ್ರಹ್ಮ ಯೋಗೋನಾಮಾಷ್ಟಮೋಽಧ್ಯಾಯಃ**

**ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.**

ತ್ಮೋಪಾಸನೆಯನ್ನು ಮಾಡಿದುದಾದರೆ, **ತತ್ಸರ್ವಂ** - ಅವೆಲ್ಲವನ್ನೂ, **ಅತ್ಯೇತಿ** - ಅವೆಲ್ಲಾ ಅಲ್ಪಾಸ್ಥಿರ ಫಲಗಳಾಗಿ, ಅವುಗಳಿಗೂ ಅತಿಶಯವಾದ ಮಹತ್ತಾದ ಫಲವನ್ನೇ ಹೊಂದುವನು. ಆತನು ತುಚ್ಛವುಗಳಿಗಾಗಿ ಪ್ರಯತ್ನಮಾಡದೆ. ನಿರತಿಶಯ ಫಲವನ್ನು ಹೊಂದುವದಕ್ಕಾಗಿಯೇ, **ಯೋಗೀ** - ಜ್ಞಾನಿಯಾಗಿ ಪರಮಾತ್ಮನನ್ನು ಉಪಾಸಿಸುವನಾಗಿ, **ಆದ್ಯಂ** ಅನಾದಿಯಾಗಿರುವ. **ದಿವ್ಯಂ** - ಸ್ವಯಂಪ್ರಕಾಶವಾಗಿ ದೇದೀಪ್ಯಮಾನವಾದ ನಿತ್ಯವಿಭೂತಿಯಲ್ಲಿರುವ, **ಪರಂ ಸ್ಥಾನಂ**- ಸರ್ವೋತ್ಕೃಷ್ಟಸ್ಥಾನವಾದ ದಿವ್ಯ ವೈಕುಂಠವನ್ನು, **ಉಪೈತಿ ಚ** - ಹೊಂದಿಯೂ ಹೊಂದುವನು. **ಈ ಪರಂಸ್ಥಾನಂ** ಎಂಬ ಪ್ರಯೋಗವು, ನಿತ್ಯವಿಭೂತಿ ಎಂಬ ಶಾಶ್ವತಸ್ಥಾನವಿಲ್ಲವೆಂಬ ವಾದವನ್ನು ನಿರಾಕರಿಸುತ್ತದೆ. ಇಲ್ಲಿ ವೇದ, ಯಜ್ಞ, ದಾನ, ತಪಸ್ಸುಗಳನ್ನು ಫಲಾಪೇಕ್ಷೆಯಿಂದ ಮಾಡಿದರೂ ನಶ್ವರ ಫಲಗಳನ್ನೇ ಕೊಡುವವು ಎಂದು ಹೇಳಲ್ಪಟ್ಟಿರುತ್ತದೆ. ಫಲಾಪೇಕ್ಷೆಯಿಲ್ಲದೆ ಅಂತಹ ಕರ್ಮಗಳನ್ನು ಪರಮಾತ್ಮನಲ್ಲಿ ಸಮರ್ಪಿಸಿದರೆ ಭಕ್ತಿಯೋಗಕ್ಕೆ ಪ್ರತಿಬಂಧಕಗಳಾದ ಪಾಪಗಳೆಲ್ಲಾ ತೊಲಗಿ ಭಕ್ತಿಯೋಗ ಪ್ರಾರಂಭಕ್ಕೆ ಅನುಕೂಲಿಸುತ್ತದೆ. ಅಂತೂ ಎರಡು ವಿಧದಲ್ಲೂ ಅವುಗಳ ಫಲಕ್ಕೆ ಮೀರಿದ ಫಲವು ಜ್ಞಾನಿಯಾಗಿ ಪರಮಾತ್ಮೋಪಾಸನವನ್ನು ಮಾಡುವವನಿಗೆ ಲಭಿಸುತ್ತದೆ. ಈ ಅಭಿಪ್ರಾಯಗಳು ಮುಂದೆ ೧೧ ನೆಯ ಅಧ್ಯಾಯದ ೫೩-೫೪ ನೆಯ ಶ್ಲೋಕಗಳಲ್ಲೂ ಉಪಪಾದಿತವು.—**ನಾಹಂವೇದೈರ್ನತಪಸಾ** ಎಂಬ ಶ್ಲೋಕದಿಂದ ಕೇವಲ ವೇದ, ಯಜ್ಞ, ದಾನ, ತಪಸ್ಸುಗಳು ನನ್ನ ಸಾಕ್ಷಾತ್ಕಾರವನ್ನುಂಟುಮಾಡಿ ಮೋಕ್ಷವನ್ನು ಕೊಡಲಾರವೆಂದು ಹೇಳಿ, **ಭಕ್ತ್ಯಾತ್ವನನ್ಯಯಾ** ಎಂಬ ಶ್ಲೋಕದಲ್ಲಿ ಭಕ್ತಿಯೋಗನಿಷ್ಠನಾಗಿ ನನ್ನನ್ನು ಉಪಾಸಿಸುವ ಜ್ಞಾನಿಯಾದರೇನೇ ಮೋಕ್ಷಪ್ರಾಪ್ತಿಯೆಂದು ಹೇಳಿರುತ್ತಾರೆ. ಇದರಿಂದ ಭಕ್ತಿಯೋಗವೇ ಅವ್ಯವಹಿತವಾದ ಸಾಕ್ಷಾನ್ಮೋಕ್ಷೋಪಾಯವು; ವೇದ, ಯಜ್ಞ, ದಾನ, ತಪಸ್ಸುಗಳು, ಕರ್ತೃತ್ವ ಫಲತ್ಯಾಗ ಪೂರ್ವಕವಾಗಿ ಅನುಷ್ಠಿಸಿದರೆ ಆ ಭಕ್ತಿಯೋಗಕ್ಕೆ ಸಾಧನಗಳು: ಫಲದಲ್ಲಿ ಆಸೆಯಿಟ್ಟು ನಡೆಸಿದರೆ ನಶ್ವರಫಲದಾಯಕಗಳು ಎಂಬುದು ತಾತ್ಪರ್ಯವು. ಹೀಗೆ ನಾಲ್ಕು ಜನಭಕ್ತರ ಪ್ರವೃತ್ತಿಫಲ ಮೊದಲಾದವುಗಳಲ್ಲಿನ ತಾರತಮ್ಯಜ್ಞಾನವು, ಜ್ಞಾನಿಯಾಗಿ ಪರಮಾತ್ಮೋಪಾಸಕನಾಗುವದಕ್ಕೂ, ತನ್ಮೂಲಕ ದಿವ್ಯವೈಕುಂಠ ಪ್ರಾಪ್ತಿಗೂ, ಹೇತುವಾಗುತ್ತದೆಂದು ಹೇಳಲ್ಪಟ್ಟಿತು ಈ ಶ್ಲೋಕವು ಹಿಂದೆ ಹೇಳಿದ, **ಜ್ಞಾನೀತ್ವಾತ್ಮೈವ ಮೇಮತಂ** ಎಂಬ ವಾಕ್ಯದಲ್ಲಿ ತೋರಿಬರುವ ಜ್ಞಾನಿಯ ಮಾಹಾತ್ಮ್ಯಯನ್ನೇ ಪ್ರಕಟಿಸುತ್ತದೆ. ಹಾಗೆಯೇ ಮುಂದೆಯೂ ೧೨ ನೆಯ ಅಧ್ಯಾಯದ ಎರಡನೆಯ ಶ್ಲೋಕದಲ್ಲೂ ಪರಮಾತ್ಮೋಪಾಸಕರಾದ ಜ್ಞಾನಿಗಳೇ ಪ್ರಶಂಸಿಸಲ್ಪಡುವರು. **"ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ! ಶ್ರದ್ಧಯಾ ಪರಯೋಪೇತಾ ಸ್ತೇಮೇ ಯುಕ್ತತಮಾ ಮತಾಃ"** ಎಂದು ಜ್ಞಾನಿಗಳೇ ಶ್ರೇಷ್ಠರೆಂದು ಸಿದ್ಧಾಂತಿಸಿ ಹೇಳಿರುತ್ತಾರೆ ಅನುಗೀತೆಯಲ್ಲಿ **"ಚತುರ್ವಿಧಾ ಮಮಜನಾ ಭಕ್ತಾ ಏವ ಹಿ ತೇ ಸ್ಮೃತಾಃ । ತೇಷಾಂ ಏಕಾನ್ತಿನ ಶ್ಶ್ರೇಷ್ಠಾ ಸ್ತೇ ಚೈವಾನನ್ಯದೇವತಾಃ । ಅಹ ಮೇವ ಗತಿ ಸ್ತೇಷಾಂ ನಿರಾಶೀಃ ಕರ್ಮಕಾರಿಣಾಂ । ಯೇತಂ**

**ಭಾ. ಋಗ್ಯಜುಸ್ಸಾಮಾಥರ್ವರೂಪವೇದಾಭ್ಯಾಸ ಯಜ್ಞತಪೋದಾನ ಪ್ರಭೃತಿಷು ಸರ್ವೇಷು ಪುಣ್ಯೇಷು ಯತ್ಫಲಂ ನಿರ್ದಿಷ್ಟಂ, ಇದಂ-ಅಧ್ಯಾಯದ್ವಯೋದಿತಂ ಭಗವ**

**ಚ್ಛಿಷ್ಯಾಸ್ತ್ರಯೋಽಭಕ್ತಾಃ ಫಲಕಾಮಾಹಿ ತೇ ಮತಾಃ । ಸರ್ವೇ ಚ್ಯವನಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್"** ಎಂಬೀ ಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟ ಅರ್ಥವೂ ಈ ನಿಗಮನ ಶ್ಲೋಕದ ತಾತ್ಪರ್ಯವೇ ಆಗಿರುತ್ತದೆ. ಈ ಶ್ಲೋಕಗಳ ತಾತ್ಪರ್ಯವೇನೆಂದರೆ "ನನ್ನನ್ನು ಆಶ್ರಯಿಸಿ ನನ್ನ ಪ್ರೀತಿಗೆ ಪಾತ್ರರಾದ ಭಕ್ತರು ನಾಲ್ವರು, ಅವರುಗಳಲ್ಲಿ ನನ್ನ ಭಕ್ತರಾದ ಜ್ಞಾನಿಗಳೇ ಶ್ರೇಷ್ಠರು, ಏಕೆಂದರೆ ಅವರು ನಾನಲ್ಲದೆ ಅನ್ಯದೇವತೆಯಲ್ಲಿ ವಿಶ್ವಾಸವಿಲ್ಲದವರು, ಆದುದರಿಂದ ನನ್ನಲ್ಲೇ ಮನಸ್ಸನ್ನು ಇಟ್ಟಿರುವವರು, ಅವರಿಗೆ ನಾನೇ ಗತಿಯು, ಇನ್ನು ಯಾವ ಫಲದಲ್ಲೂ ಆಶೆಯಿಲ್ಲದವರು, ವಿಹಿತ ಕರ್ಮಗಳನ್ನು ನನ್ನ ಆರಾಧನೆಯ ರೂಪದಲ್ಲಿ ನಡೆಸುವವರು, ಜ್ಞಾನಿಯಲ್ಲದ ಇನ್ನು ಮೂರು ಮಂದಿಗಳಾದ ಆರ್ತನೂ, ಅರ್ಥಾರ್ಥಿ, ಜಿಜ್ಞಾಸುಗಳಾದರೋ ನನ್ನನ್ನೇ ಪ್ರಾಪ್ಯವಾಗಿ ಬಯಸದೆ ಇತರ ಫಲಗಳಾದ ಐಶ್ವರ್ಯಾದಿಪ್ರಾಪ್ತಿ ವಿನು, ಸ್ವರ್ಗಾದಿ ಪ್ರಾಪ್ತಿ ವಿನು, ತನ್ನ ನೈಜಸ್ವರೂಪದ ಪ್ರಾಪ್ತಿ ವಿನು, ಇವುಗಳನ್ನು ಬಯಸುವವರು : ಆದುದರಿಂದ ಇವರು ಮೂವರೂ ನಿರತಿಶಯಪ್ರಾಪ್ಯವಾದ ಸ್ಥಾನದಿಂದ ಜಾರಿಬೀಳುವವರು, ಆದರೆ ಈ ನಾಲ್ಕು ಜನರಲ್ಲಿ ಮಹಾ ಪ್ರಾಜ್ಞನಾದವನಾದರೋ ಮೋಕ್ಷಾರ್ಥಿಯಾದ ಜ್ಞಾನಿಯೇ" ಎಂಬುದು. ಇಲ್ಲಿ ಆರ್ತನೂ, ಅರ್ಥಾರ್ಥಿಯೂ ಚ್ಯವನ ಧರ್ಮವುಳ್ಳವರೆಂದು ಹೇಳಿದುದೇನೋ ಸರಿಹೋಯಿತು. ಜಿಜ್ಞಾಸುವಿಗೆ ಅಪುನರಾವೃತ್ತಿಯು ಸಿದ್ಧವಾಗಿರುವಾಗ, ಆತನೂ **ಚ್ಯವನ ಧರ್ಮನು** ಹೇಗೆ? ಎಂದರೆ **ಮೋಕ್ಷವು** ಒಡನೇ ಪ್ರಾಪ್ತವಾಗದೇ ಇರುವದರಿಂದಾಗಲಿ, ಅಥವಾ ಆತನಿರುವ ಈಗಿನ ಸ್ಥಳವು ಅಶಾಶ್ವತವಾದುದರಿಂದಾಗಲಿ ಚ್ಯವನ ಧರ್ಮನು ಎಂದು ಹೇಳಬಹುದು. ಹೀಗೆ ಹಿಂದೆ ಹೇಳಿದ ಎರಡು ಅಧ್ಯಾಯಗಳ ಜ್ಞಾನದ ಬಲದಿಂದ ಇತರ ಮೂರು ಜನರ ನಿಷ್ಠೆಯನ್ನು ತ್ಯಜಿಸಿ, ಜ್ಞಾನಿಯಾಗಿ ಪರಮೋಪಾಸಕನಾಗಿ ಮೋಕ್ಷವನ್ನು ಹೊಂದತಕ್ಕದ್ದೇ ಸರ್ವೋತ್ಕೃಷ್ಟ ಪ್ರವೃತ್ತಿಯು ಎಂದು ತಿಳಿಯತಕ್ಕದ್ದು. ಇದರಿಂದಲೂ, **"ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್"** ಎಂಬ ಪ್ರಯೋಗದಿಂದಲೂ, ಮುಂದಿನ ಅಧ್ಯಾಯದಲ್ಲಿ ಭಕ್ತಿಯೋಗ ವಿಷಯವೇ ಹೇಳಲ್ಪಡುತ್ತದೆಂಬುದೂ, ಅದೇ ಈ ಲೀಲಾ ಸಾರಥಿಯ ಉಪದೇಶದಲ್ಲಿ ಸಾರವತ್ತಾದ ಭಾಗವೆಂಬುದೂ, ಸೂಚಿತವು. ಆದುದರಿಂದಲೇ ಮುಂದಿನ ಅಧ್ಯಾಯದ ಆದಿಶ್ಲೋಕದಲ್ಲಿ ಗುಹ್ಯತಮನಾಗಿ ರಾಜವಿದ್ಯೆಯಾಗಿಯೂ ರಾಜಗುಹ್ಯವಾಗಿಯೂ ಇರುವದನ್ನು ನಿನಗೆ ತಿಳಿಸುವೆನೆಂಬ ಪ್ರತಿಜ್ಞಾ ವಾಕ್ಯವಿರುತ್ತದೆ.

**ಭಾಷ್ಯಾರ್ಥವು** :—ಯೋಗಿಯಾಗಿ ಭಗವಂತನನ್ನು ಉಪಾಸಿಸಬೇಕೆಂಬ ಇಚ್ಛೆ ಉಂಟಾಗಬೇಕಾದರೆ ಇತರ ಭಕ್ತಿಯೋಗ ನಿಷ್ಠೆಗಳಿಂದ ಉಂಟಾಗತಕ್ಕ ಅಲ್ಪಾಸ್ಥಿರಫಲವೂ, ಜ್ಞಾನಿಯ ಭಕ್ತಿಯೋಗ ನಿಷ್ಠೆಯಿಂದ ಮಹತ್ತಾದ ಶಾಶ್ವತ ಫಲವೂ, ಪ್ರಾಪ್ತವಾಗುವದೆಂಬ ಜ್ಞಾನವು ಆವಶ್ಯಕವು. ಆದುದರಿಂದಲೇ, **ಏವಂ ವಿದಿತ್ವಾ** ಎಂದು ಇಲ್ಲಿ ಹೇಳಿರುವದು. ಇಂತಹ ತಾರತಮ್ಯ ಜ್ಞಾನವು ಹಿಂದಿನ ಎರಡು ಅಧ್ಯಾಯಗಳಲ್ಲೂ ಹೇಳಲ್ಪಟ್ಟಿದುದನ್ನು ಒಟ್ಟುಗೂಡಿಸಿ, ನಿಗಮನವು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆಂಬ ಭಾವದಿಂದ ಅವತಾರಿಕೆಯು ಕೊಡಲ್ಪಟ್ಟಿತು.—**ಋಗ್ಯಜುಸ್ಸಾಮಾಥರ್ವರೂಪ....ಪ್ರಭೃತಿಷು** - ನಾಲ್ಕು ವೇದಗಳ ಅಭ್ಯಾಸವೇನು, ಯಜ್ಞಾನುಷ್ಠಾನವೇನು, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸೇನು, ದಾನವೇನು, ಇವೇ ಮೊದಲಾದ, **ಸರ್ವೇಷು ಪುಣ್ಯೇಷು** - ಸಮಸ್ತಗಳಾದ ಪುಣ್ಯ ಕರ್ಮಗಳಲ್ಲಿ ಎಂದರೆ ಅವುಗಳ ಅನು

**ಭಾ. ನ್ಮಾಹಾತ್ಮ್ಯಂ ವಿದಿತ್ವಾ ತತ್ಸರ್ವಮತ್ಯೇತಿ - ಏತದ್ವೇದನ ಸುಖಾತಿರೇಕೇಣ ತತ್ಸರ್ವಂ ತೃಣವನ್ಮನ್ಯತೇ. ಯೋಗೀ - ಜ್ಞಾನೀ ಚ ಭೂತ್ವಾ, ಜ್ಞಾನಿನಃ ಪ್ರಾಪ್ಯಂ ಪರ ಮಾದ್ಯಂ ಸ್ಥಾನಮುಪೈತಿ. ॥೨೮॥**

**ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ಅಷ್ಟಮೋಧ್ಯಾಯಃ**
**ಶ್ರೀಮತೇ ರಾಮಾನುಜಾಯ ನಮಃ**

ಷ್ಠಾನಗಳಿಗೆ, **ಯತ್ಪುಣ್ಯ ಫಲಂ ನಿರ್ದಿಷ್ಟಂ** - ಯಾವ ಯಾವ ಪುಣ್ಯಫಲವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆಯೋ, **ಇದಂ** ಎಂದರೆ ಅಧ್ಯಾಯ **ದ್ವಯೋದಿತಂ ಭಗವನ್ಮಾಹಾತ್ಮ್ಯಂ** ಹಿಂದಿನ ೭, ೮ನೆಯ ಎರಡು ಅಧ್ಯಾಯಗಳಲ್ಲೂ ಹೇಳಲ್ಪಟ್ಟ ಭಗವಂತನ ಮಾಹಾತ್ಮ್ಯೆಯನ್ನು. **ವಿದಿತ್ವಾ** ಪರಾಮರ್ಶಿಸಿ ತಿಳಿದವನಾಗಿ, **ತತ್ಸರ್ವಮತ್ಯೇತಿ** - ಎಂದರೆ **ಏತದ್ವೇದನ ಸುಖಾತಿರೇಕೇಣ** - ಈ ಪರಮಾತ್ಮೋಪಾಸನದಿಂದುಂಟಾಗುವ ನಿರತಿಶಯ ಸುಖದಿಂದ, **ತತ್ಸರ್ವಂ** - ಆವುಗಳ ಫಲವೆಲ್ಲವನ್ನೂ, **ತೃಣವನ್ಮನ್ಯತೇ** - ಇದು **ಅತ್ಯೇತಿ** ಎಂಬುವದರ ತಾತ್ಪರ್ಯವು, ತೃಣವಾಗಿ ಭಾವಿಸುವನು. ಇಲ್ಲಿ ಯಜ್ಞ, ದಾನ, ತಪಸ್ಸುಗಳೊಂದಿಗೆ ವೇದಗಳನ್ನು ಸೇರಿಸಿರುವದು, ವೇದಾಧ್ಯಯನಕ್ಕೂ ಸಹ ಯಜ್ಞ, ದಾನ, ತಪಸ್ಸುಗಳ ಹಾಗೆ ಸುಕೃತಫಲ ಉಂಟೆಂಬ ಭಾವ ದಿಂದ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಆದುದರಿಂದಲೇ ವೇದೇಷು ಎಂಬುದಕ್ಕೆ **ವೇದಾಭ್ಯಾಸ ಪ್ರಭೃತಿಷು ಯತ್ಫಲಂ ನಿರ್ದಿಷ್ಟಂ** ಎಂಬ ಭಾಷ್ಯವು ವೇದಾಭ್ಯಾಸಕ್ಕೂ ಸಹ ಯಜ್ಞ, ದಾನ, ತಪಸ್ಸುಗಳ ಹಾಗೆ ಪಾಪನಿವಾರಕತ್ವವು ಪ್ರಮಾಣಸಿದ್ಧವು. ಇಲ್ಲಿ ಹೇಳಿರುವ ಚಕಾರವು ಸಮುಚ್ಚಯಾರ್ಥವನ್ನು ತೋರಿಸುತ್ತದೆಂದು ತಿಳಿಸುವದಕ್ಕಾಗಿ ಬೇರೆ ಬೇರೆಯಾಗಿ **ವೇದೇಷು ಯಜ್ಞೇಷು** ಎಂದು ಮೂಲದಲ್ಲಿ ಹೇಳಿದ್ದರೂ ಅವುಗಳನ್ನೂ ಒಟ್ಟು ಸೇರಿಸಿ ಸಮಾಸ ಪದವಾಗಿ ವ್ಯಾಖ್ಯಾನಮಾಡಿ ಪ್ರಭೃತಿಷು ಎಂಬ ಪ್ರಯೋಗವು. ವೇದಾಭ್ಯಾಸವೂ ಸಹ ಬ್ರಹ್ಮಯಜ್ಞದಲ್ಲಿ ಸೇರಿದುದಾಗಿ ನಿತ್ಯದಲ್ಲೇ ಅಂತರ್ಗತವಾದುದರಿಂದ ಅದರ ಸಮುಚ್ಚಯವೂ ಹೇಳಲ್ಪಟ್ಟಿತು. ಅದಕ್ಕೂ ಪಾಪನಿವಾರಕತ್ವವಿರುವದರಿಂದಲೇ ಶ್ರೀ ಯತಿವರ್ಯರು ಪ್ರಥಮಸೂತ್ರ ಭಾಷ್ಯದಲ್ಲಿ **"ಅಧೀತ ವೇದಃ ಪುರುಷಃ"** ಭಕ್ತಿಯೋಗ ನಿಷ್ಠೆಯಲ್ಲಿ **"ಸ್ವಯಮೇವ ಪ್ರವರ್ತತೇ"** ಎಂದು ಅಪ್ಪಣೆ ಕೊಡಿಸಿರುತ್ತಾರೆ. ಇಲ್ಲಿ **ವಿದಿತ್ವಾ** ಎಂಬ ಶಬ್ದವು **"ಪರೀಕ್ಷ್ಯ ಲೋಕಾನ್ ಕರ್ಮಚಿತಾನ್"** ಎಂಬ ಶ್ರುತಿಯಲ್ಲಿ (ಮುಂ. ೧. ೨. ೧೨) ರುವ ಹಾಗೆ ವಿವೇಕಿಸಿ ತಿಳಿದು ಎಂಬ ಅರ್ಥವುಳ್ಳದ್ದು. **ವಿದಿತ್ವಾ** ಎಂಬಲ್ಲಿರುವ ಧಾತುವಿನಿಂದ ವೇದನವು ಉಪಾಸನಾರ್ಥವನ್ನು ಸೂಚಿಸುವದರಿಂದ, ಮುಂದಿನ ಅಧ್ಯಾಯದಲ್ಲಿ ಪರಮಾತ್ಮೋಪಾಸನವಾದ ಭಕ್ತಿಯೋಗವು ಹೇಳಲ್ಪಡುತ್ತದೆಂಬ ಧ್ವನ್ಯರ್ಥವೂ ಸೂಚಿತವು. **ಪುಣ್ಯಫಲಂ** ಎಂಬ ಪ್ರಯೋಗದಿಂದ ವೇದಾಧ್ಯಯನ ಯಜ್ಞ, ದಾನ, ತಪಸ್ಸುಗಳ ಫಲವೇ ನಿತ್ಯಗಳಲ್ಲಿನಾದರೂ ಶ್ರೇಯಸ್ಕರವಾದುವೇ ಎಂದು ಹೇಳಲ್ಪಟ್ಟಿತು. ಆದರೆ ಇವುಗಳು ನಶ್ವರವಾದುವೆಂದು ತಿಳಿದು ಭಕ್ತಿಯೋಗನಿಷ್ಠನಾಗುವದರಿಂದುಂಟಾಗುವ ಶ್ರೇಯಸ್ಸಾದರೋ ನಿರತಿಶಯವಾಗಿ ಶಾಶ್ವತವಾದುದರಿಂದ ಇವೆಲ್ಲಕ್ಕಿಂತ ಸರ್ವೋತ್ಕೃಷ್ಟವಾದುದೆಂದು ಮುಂದೆ ಉಪದೇಶಿಸುತ್ತಾರೆ. ಇವುಗಳು, ನಶ್ವರ ಫಲದಾಯಕಗಳೆಂದು ಬಿಡತಕ್ಕವುಗಳಲ್ಲವು. ಫಲಕರ್ತೃತ್ವ ಮಮತಾತ್ಯಾಗಪೂರ್ವಕವಾಗಿ ಅನುಷ್ಠಿಸತಕ್ಕವೇವಿನಾ ಬಿಡತಕ್ಕವಲ್ಲವೆಂದು ಮುಂದೆ ೧೮-೫ನೆಯ ಶ್ಲೋಕದಲ್ಲಿ ಹೇಳಲ್ಪಡುತ್ತದೆ. **ಇದಂ ವಿದಿತ್ವಾ** ಎಂಬಲ್ಲಿ ಎರಡು ಅಧ್ಯಾಯಗಳಿಂದಲೂ ಭಗವಂತನ ಮಾಹಾತ್ಮ್ಯೆಯನ್ನು **ವಿದಿತ್ವಾ** ಎಂಬ **ಶ್ರೀ ಯತಿವರ್ಯರ** ವ್ಯಾಖ್ಯಾನವು ಸಾಭಿಪ್ರಾಯವಾದುದು ಪ್ರಥಮ ಸೂತ್ರದಲ್ಲಿ **ಹೇಳಿರುವಹಾಗೆ ಕೇವಲ**

ವೇದಾಧ್ಯಯನ, ಯಜ್ಞ, ದಾನ, ತಪಸ್ಸುಗಳ ಫಲವು ಶ್ರೇಯೋರೂಪವಾದರೂ ಅಲ್ಪಾಸ್ಥಿರಗಳಾದವು. ಪರಮಾತ್ಮೋಪಾಸನರೂಪವಾದ ಭಕ್ತಿಯೋಗವು ಅನಂತ ಸ್ಥಿರ ಫಲದಾಯಕವಾದುದೆಂಬ ಜ್ಞಾನವನ್ನೂ ಹೊಂದಿದವನಾಗಿ ಎಂಬ ಪ್ರಥಮ ಸೂತ್ರದಲ್ಲಿ ಹೇಳಿರುವ ಅರ್ಥವು ಸೂಚಿತವು. ಅನಂತರ **ಯೋಗೀ** ಎಂದರೆ **ಜ್ಞಾನೀಚ ಭೂತ್ವಾ** - ಜ್ಞಾನಿಯಾಗಿ ಎಂದರೆ ನನ್ನನ್ನೇ ಉಪಾಸಿಸುವವನಾಗಿ, **ಜ್ಞಾನಿನಃ ಪ್ರಾಪ್ಯಂ** - ಜ್ಞಾನಿಗೆ ಹೇಳಿರುವ ಪ್ರಾಪ್ಯವನ್ನು, ಅದು ಯಾವುದೆಂದರೆ **ಪರಮಾದ್ಯಂ ಸ್ಥಾನಂ** - ಸೃಷ್ಟಿಸ್ಥಿತಿಲಯಾದಿಗಳಿಗೆ ಸಿಕ್ಕದ ಸರ್ವೋತ್ಕೃಷ್ಟವಾದ ಅ ಅನಾದಿಯಾಗಿರುವ ಸ್ಥಾನವಾದ ವೈಕುಂಠವನ್ನು **ಉಪೈತಿ** - ಹೊಂದುವನು ಇಲ್ಲಿ **ಸ್ಥಾನಮುಪೈತಿ** ಎಂಬುದಕ್ಕೆ ಪರಬ್ರಹ್ಮವೇ ಸ್ಥಾನವು, ಅದನ್ನು ಹೊಂದುತ್ತಾನೆಂದು ಅಕ್ಲೃಪ್ತಾರ್ಥವನ್ನು ಉಪಪಾದಿಸಬೇಕೆಂಬ ಆಶೆಯಿಂದ ಹಾಗೆ ಅರ್ಥ ಮಾಡುವದು ಉಚಿತವಾಗಿ ತೋರುವದಿಲ್ಲವು. ಒಂದು ಸ್ಥಾನವಿಶೇಷವೇ ಎಂಬರ್ಥವು ಸ್ಪಷ್ಟವಾಗಿ ತೋರುವಾಗ ಬೇರೆವಿಧವಾಗಿ ಅರ್ಥಮಾಡುವದು ನ್ಯಾಯವಲ್ಲವು. ಇಲ್ಲಿ ಸಗುಣೋಪಾಸನೆಯು ಹೇಳಲ್ಪಟ್ಟು, ಇದಕ್ಕೆ ವ್ಯತಿರಿಕ್ತವಾದ ಒಂದು ನಿರ್ಗುಣೋಪಾಸನೆಯು ಮುಂದೆ ಹೇಳಲ್ಪಡುತ್ತದೆ ಎಂಬ ವ್ಯಾಖ್ಯಾನಕ್ಕೂ ಅವಕಾಶವೇನೂ ಇಲ್ಲಿ ತೋರಲಿಲ್ಲವು. ೧೩ ನೆಯ ಅಧ್ಯಾಯಾದಿಯಲ್ಲಿ ಹೇಳಿರುವದು ನಿರ್ಗುಣಬ್ರಹ್ಮೋಪಾಸನವು ಎಂದು ಹೇಳಲು ಅಲ್ಲಿ ಸಾಧನವೇನೂ ತೋರಿಬರುವದಿಲ್ಲವು. ಏಕೆಂದರೆ ಅಲ್ಲಿರುವ ಅಕ್ಷರ ಅವ್ಯಕ್ತಶಬ್ದಗಳು ಪರಿಶುದ್ಧ ಜೀವಾತ್ಮನನ್ನು ಬೋಧಿಸುತ್ತವೇ ವಿನಾ, ಪರಮಾತ್ಮನನ್ನಲ್ಲವೆಂದು ಹಿಂದೆಯೇ ಉಪಪಾದಿಸಿ ಹೇಳಿದೆವು; ಮುಂದೆಯೂ ಉಪಪಾದಿಸಿ ಹೇಳುವೆವು. ಆದುದರಿಂದ **ಆದ್ಯಂಪರಂ ಸ್ಥಾನಮ್** - ದಿವ್ಯ ವೈಕುಂಠವಾದ ಅನಾದಿಯಾದ ಅಪ್ರಾಕೃತ ಸ್ಥಾನವು, ಇಂತಹ ಸ್ಥಾನ ಒಂದುಂಟೆಂದು **"ರುದ್ರಾದಿತ್ಯವಸೂನಾಂಚ ತಥಾನ್ಯೇಷಾಂ ದಿವೌಕಸಾಮ್ । ಏತೇವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ"** (ಭಾ॥ ಶಾನ್ತಿ. ೧೯೬. ೬.) ಪರಮಾತ್ಮನ ಅಪ್ರಾಕೃತವಾದ ದಿವ್ಯ ಲೋಕಕ್ಕೆ ಈ ಸತ್ಯಲೋಕ ರುದ್ರಲೋಕ ಇಂದ್ರಲೋಕಾದಿಗಳನ್ನು ಹೋಲಿಸಿದರೆ ಇವುಗಳೆಲ್ಲಾ ನರಕಪ್ರಾಯಗಳೆಂದು, ಶ್ರೀ ವ್ಯಾಸಮಹರ್ಷಿಯ ವಾಕ್ಯವಿರುತ್ತದೆ. ಇಲ್ಲಿ **ಪರಮಾತ್ಮನಃ ಸ್ಥಾನಂ** - ಎಂದಿರುವದರಿಂದ ಪರಮಾತ್ಮನೇ ಸ್ಥಾನವೆಂದು ಹೇಳಲು ಸಾಧ್ಯವಿಲ್ಲವು; ಮತ್ತು ಸುಮ್ಮನೆ **ಪರಮಾತ್ಮನಃ** ಎಂದು ಇದೆಯೇ ವಿನಾ **ನಿರ್ಗುಣಸಗುಣ** ವಿಶೇಷಣಗಳಿಲ್ಲವು. ಅಪ್ರಾಕೃತ ನಿತ್ಯವಿಭೂತಿಯುಂಟೆಂಬುದು ಶ್ರುತಿ, ಸ್ಮೃತಿ, ಪುರಾಣಾದಿಗಳಿಂದ ಸಿದ್ಧವು, **"ಪರಮೇವ್ಯೋಮನ್" "ಸೋಽಶ್ನುತೇ ಸರ್ವಾನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತೇತಿ" "ತ್ರಿಪಾದಸ್ಯಾಮೃತಂ ದಿವಿ ತ್ರಿಪಾದೂರ್ಧ್ವ ಉದೈತ್ಪುರುಷಃ" "ತದ್ವಿಷ್ಣೋಃ ಪರಮಂಪದಂ" "ಬ್ರಹ್ಮಲೋಕ ಮಭಿಸಂಪದ್ಯತೇ ನ ಚ ಪುನರಾವರ್ತತೇ" "ಯತ್ರ ಪೂರ್ವೇ ಸಾಧ್ಯಾ ಸ್ಸಂತಿ ದೇವಾಃ" "ತದಕ್ಷರೇ ಪರಮೇವ್ಯೋಮನ್" "ಆದಿತ್ಯವರ್ಣಂ ತಮಸಃ ಪರಸ್ತಾತ್"** (ಪುರುಷ ಸೂಕ್ತ) **"ದಿವ್ಯಂಸ್ಥಾನ ಮಜರಂಚಾ ಪ್ರಮೇಯಮ್ ದುರ್ವಿಜ್ಞೇಯಂಚಾ ಗಮ್ಯ ಗರ್ವ್ಯ ಮಾದ್ಯಮ್ । ಗಚ್ಛ ಪ್ರಭೋ ರಕ್ಷಚಾಸ್ಮಾನ್ ಕಲ್ಪೇ ಕಲ್ಪೇ ಜಾಯಮಾನಾ ಸ್ಸ್ವಮೂರ್ತ್ಯಾ"** (ಭಾ॥ ಮೌಸಲ. ೫. ೨೭) ಇತ್ಯಾದ್ಯನೇಕ ಶ್ರುತಿ ಪ್ರಮಾಣಗಳು ನಿತ್ಯವಿಭೂತಿಯೆಂದುಂಟೆಂಬುದನ್ನು ತಿಳಿಸುತ್ತವೆ. ಆದುದರಿಂದ ಇವೆಲ್ಲಾ ಮಿಥ್ಯೆಯು, ಪರಮಾತ್ಮನೊಬ್ಬನೇ ಇರುವನೆಂಬ ವಾದಕ್ಕೆ ಈ ಶ್ಲೋಕವು ಅನುಕೂಲಿಸುವದಿಲ್ಲವು. ಇಲ್ಲಿ **ಆದ್ಯಮ್ ಸ್ಥಾನಮ್** ಎಂಬುದರಿಂದ ಅನಾದಿಯಾಗಿರುವ ನಿತ್ಯವಾದ ಸ್ಥಾನವೆಂಬ ಸಮಂಜಸಾರ್ಥವನ್ನು ತ್ಯಜಿಸಿ, **ಆದ್ಯಮ್** ಎಂದರೆ **ಆದೌ ಭವಂ ಕಾರಣಂ ಬ್ರಹ್ಮ**ವೆಂದು ಅರ್ಥಮಾಡಿ **ನಿತ್ಯವಿಭೂತಿ** ಎಂಬುದು ಸತ್ಯವಲ್ಲವೆಂಬ ಭಾವನೆಯಿಂದ ಪರಮಾ

ತ್ವಸೊಂದಿಗೆ ಐಕ್ಯವೆಂದು ಅರ್ಥಮಾಡಿರುವುದು ಇಷ್ಟು ಶ್ರುತಿ ಮೊದಲಾದ ಪ್ರಮಾಣಗಳೆಲ್ಲವನ್ನೂ ತ್ಯಾಗಮಾಡಿ ಹೇಳಿರುವ ಅಭಿಪ್ರಾಯವಾಗುತ್ತದೆ. ಕೌಷೀತಕೀ ಬ್ರಾಹ್ಮಣದಲ್ಲಿ ಈ ದಿವ್ಯ ವೈಕುಂಠಲೋಕವು ವಿಸ್ತಾರವಾಗಿ ಉಪಪಾದಿತವಾಗಿರುತ್ತದೆ. ಹಾಗೆಯೇ ವಿಷ್ಣು, ಪಾದ್ಮ ಮೊದಲಾದ ಪುರಾಣಗಳಲ್ಲೂ ವಿಸ್ತರಿಸಿ ಹೇಳಲ್ಪಟ್ಟಿರುತ್ತದೆ. ರಾಮಾಯಣದಲ್ಲೂ ಉಪಪಾದಿತವು. ಜಟಾಯುವನ್ನು ಕುರಿತು ಶ್ರೀರಾಮಚಂದ್ರನ ಪ್ರಭುವು **"ಗಚ್ಛ ಲೋಕಾನನುತ್ತಮಾನ್"** ಎಂದು ದಿವ್ಯ ವೈಕುಂಠಕ್ಕೆ ಹೋಗು ಎಂದು ಹೇಳಿರುತ್ತಾರೆ.

ಈ ಅಧ್ಯಾಯಕ್ಕೆ ಅಕ್ಷರ ಪರಬ್ರಹ್ಮಯೋಗವೆಂಬ ಹೆಸರು ಕೊಡಲ್ಪಟ್ಟಿರುತ್ತದೆ. ಏಕೆಂದರೆ ಅಕ್ಷರಯೋಗ ಮತ್ತು ಪರಬ್ರಹ್ಮಯೋಗವನ್ನು ಉಪಪಾದಿಸುವ ಅಧ್ಯಾಯವು. ಅಕ್ಷರ ಶಬ್ದಕ್ಕೆ ಪ್ರಕೃತಿ ವಿಯುಕ್ತ ಆತ್ಮಸ್ವರೂಪವೆಂಬರ್ಥವಾದುದರಿಂದ, ಅಕ್ಷರಪ್ರಾಪ್ತಿ ಮತ್ತು ಪರಬ್ರಹ್ಮಪ್ರಾಪ್ತಿ ವಿಷಯದಲ್ಲಿ ಜ್ಞಾತವ್ಯಾಂಶಾದಿಗಳು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವದರಿಂದ ಹಾಗೆ ಕರೆಯಲ್ಪಟ್ಟಿರುತ್ತದೆ

ಇಂತು ಶ್ರೀ ಭಗವದ್ಗೀತೆಯ ಎಂಟನೆಯ ಅಧ್ಯಾಯಕ್ಕೂ ಮತ್ತು ಶ್ರೀ ಯತಿವರ್ಯರ ಭಾಷ್ಯಕ್ಕೂ

**ತಿರುನಾರಾಯಣಪುರಂ ಕೆ. ಯಂ. ವಿಜಯರಾಘವ ಶರ್ಮನ**

**ಆಚಾರ್ಯಹೃದಯಾನ್ವೇಷಿಣೀ**

ಎಂಬ ಅರ್ಥ ತಾತ್ಪರ್ಯಗಳೂ ಸಂಪೂರ್ಣವು.

**ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ**

### ಶ್ರೀ ಯಾಮುನಮುನಿ ವಿರಚಿತ

# ಶ್ರೀಮದ್ಗೀತಾರ್ಥಸಙ್ಗ್ರಹಃ

---

**ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಚರಣಾರ್ಥಿನಾಮ್ ।**
**ವೇದ್ಯೋಪಾದೇಯ ಭಾವಾನಾ ಮಷ್ಟಮೇ ಭೇದ ಉಚ್ಯತೇ ॥** ೧೨.

**ಶ್ರೀಮದ್ಯಾಮುನಮುನಯೇ ನಮಃ.**

**ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಚರಣಾರ್ಥಿನಾಮ್** - ಐಹಿಕೈಶ್ವರ್ಯಾದಿಗಳನ್ನು ಕಳೆದುಕೊಂಡು ಅವುಗಳ ಪುನಃಪ್ರಾಪ್ತಿಯನ್ನು ಅಪೇಕ್ಷಿಸುವ ಆರ್ತರೇನು, ಐಹಿಕ ಪಾರಲೌಕಿಕ ಸ್ವರ್ಗಾದಿ ಭೋಗಗಳನ್ನು ಪ್ರಾರ್ಥಿಸುವ ಅರ್ಥಾರ್ಥಿಗಳೇನು. **ಅಕ್ಷರ ಯಾಥಾತ್ಮ್ಯ**ವೆಂದರೆ ಜೀವಾತ್ಮನ ಯಥಾರ್ಥಸ್ವರೂಪ ಪ್ರಾಪ್ತಿ, ಪ್ರಕೃತಿ ವಿಯುಕ್ತ ಆತ್ಮಪ್ರಾಪ್ತಿಯನ್ನು ಅಪೇಕ್ಷಿಸುವ ಜಿಜ್ಞಾಸುವೇನು, ಭಗವಂತನ ಚರಣವನ್ನೇ ಪ್ರಾಪ್ಯವಾಗಿ ಅಪೇಕ್ಷಿಸುವ ಜ್ಞಾನಿಗಳೇನು, ಇವರುಗಳಿಗೆ, **ವೇದ್ಯೋಪಾದೇಯಭಾವಾನಾಂ** ತಿಳಿಯಬೇಕಾದ ಮತ್ತು ಗ್ರಾಹ್ಯವಾದವುಗಳ, **ಭೇದಃ** - ವ್ಯತ್ಯಾಸವು, **ಅಷ್ಟಮೇ** ಎಂಟನೆಯ ಅಧ್ಯಾಯದಲ್ಲಿ, **ಉಚ್ಯತೇ** ಹೇಳಲ್ಪಡುತ್ತದೆ.

ಇಲ್ಲಿನ ಐಶ್ವರ್ಯ ಶಬ್ದಕ್ಕೆ ಸ್ವಾಮಿ ನಿಗಮಾನ್ತ ದೇಶಿಕರವರು **"ಇಂದ್ರಪ್ರಜಾಪತಿ ಪಶುಪತಿ ಭೋಗೇಭ್ಯೋಽತಿಶಯಿತ ಭೋಗಃ"** ಎಂದರೆ ಇಂದ್ರ ಚತುರ್ಮುಖಬ್ರಹ್ಮ ರುದ್ರರ ಭೋಗಕ್ಕಿಂತಲೂ ಅತಿಶಯವಾದ ಭೋಗವೆಂದು ಹೇಳಿರುತ್ತಾರೆ. ಇದರಿಂದ ಕೆಲವರು ಐಹಿಕೈಶ್ವರ್ಯ ಇಂದ್ರಲೋಕದ ಭೋಗಗಳ ಪ್ರಾಪ್ತಿಗಾಗಿ ಉಪಾಸನೆಯು ಈ ಗೀತೆಯಲ್ಲಿ ಹೇಳಲೇ ಇಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಇವರುಗಳ ಲೋಕದ ಭೋಗೈಶ್ವರ್ಯಕ್ಕಿಂತ ಮೇಲಾದ ಲೋಕ ಒಂದು ಉಂಟು, ಅಂತಹ ಲೋಕದ ಭೋಗೈಶ್ವರ್ಯವನ್ನು ಬಯಸುವವರೆಂದು ಹೇಳುವರು. ವೈಕುಂಠಲೋಕ ವಿನಾ ಬಾಕ್ಕಿ ಎಲ್ಲಾ ಬ್ರಹ್ಮಾಂಡ ಲೋಕಗಳನ್ನೂ ಒಟ್ಟು ಕೂಡಿಸಿ ಹೇಳುವಾಗ **ಆಬ್ರಹ್ಮಭುವನಾಲ್ಲೋಕಾಃ** ಎಂಬ ಪ್ರಯೋಗವಿರುವುದರಿಂದ, ಸತ್ಯಲೋಕಕ್ಕೂ ಮೇಲಾಗಿ, ಪುನರಾವೃತ್ತಿಗೆ ಹೇತುವಾಗಿ ಯಾವಲೋಕವು ಇದು, ಎಂದು ಕೇಳಿದರೆ ಪ್ರತ್ಯುತ್ತರವಿಲ್ಲವು. ಇದೂ ಅಲ್ಲದೆ ಗೀತೆಯಲ್ಲಿ ಐಹಿಕೈಶ್ವರ್ಯಾದಿಗಳ ಪ್ರಾಪ್ತಿಗಾಗಿಯೂ, ಸ್ವರ್ಗಾದಿಗಳ ಭೋಗಗಳಿಗಾಗಿಯೂ, ಉಪಾಸನವೇ ವಿಧಿಸಲಿಲ್ಲವು ಎಂದು ಹೀಗೆಲ್ಲಾ ಅನನ್ಯಯವಾಗಿ ವಾದಿಸುವರು ಒಬ್ಬ ರಾಜನು ರಾಜ್ಯವನ್ನು ಕಳೆದುಕೊಂಡು ಆರ್ತನಾಗಿ ಅದರ ಪುನಃ ಪ್ರಾಪ್ತಿಗಾಗಿ ಭಗವದುಪಾಸನೆಯನ್ನು ಮಾಡಕೂಡದೇ? ಐಹಿಕಾದಿಗಳ ಪ್ರಾಪ್ತಿಗಾಗಿಯೂ, ಸ್ವರ್ಗಾದಿ ಭೋಗಗಳಿಗಾಗಿಯೂ ಆತ್ಮ ಯಾಥಾತ್ಮ್ಯ ಪ್ರಾಪ್ತಿಗಾಗಿಯೂ, ಮೋಕ್ಷಪ್ರಾಪ್ತಿಗಾಗಿಯೂ ಉಪಾಸನವನ್ನಾಗಲಿ, ಭರನ್ಯಾಸವನ್ನಾಗಲಿ ಮಾಡಬಹುದೆಂಬ **ಚತುರ್ವಿಧಾ ಭಜನ್ತೇ ಮಾಂ"** ಎಂಬಲ್ಲಿ ತೋರಿಬರುವ ಅಭಿಪ್ರಾಯವನ್ನೇ ಪ್ರಕಟಿಸಿ, ಲಕ್ಷ್ಮಿಗೂ ಸಹ ಇವರುಗಳನ್ನು ಅನುಗ್ರಹಿಸುವದರಲ್ಲಿ ಅಧಿಕಾರ ಉಂಟೆಂದು ಶ್ರೀ ಸ್ತುತಿಯಲ್ಲಿ (೧೬ ರಿಂದ ೨೧) ಐದು ಶ್ಲೋಕಗಳಲ್ಲಿ ಶ್ರೀ ದೇಶಿಕರವರು ಉಪಪಾದಿಸಿರುತ್ತಾರೆ. ಆರ್ತನು, ಅರ್ಥಾರ್ಥಿಯು, ಜಿಜ್ಞಾಸುವು, ಜ್ಞಾನಿಗಳಾದ ನಾಲ್ಕು ವಿಧ ಅಧಿಕಾರಿಗಳಿಗೂ ಪರಮಾತ್ಮನಹಾಗೆ ಲಕ್ಷ್ಮಿಗೂ ಅವರವರುಗಳು ಪ್ರಾರ್ಥಿಸಿದ ಫಲವನ್ನು ಕೊಡುವ ಶಕ್ತಿಯು ಆಕೆಯ ವಾತ್ಸಲ್ಯಾತಿಶಯದಿಂದ ಉಂಟೆಂದು ಉಪಪಾದಿಸಿರುತ್ತಾರೆ. ಭ್ರಷ್ಟೈಶ್ವರ್ಯನಾದ ಅರ್ಜುನನಿಗೆ **ತನ್ವತೇ ಸಂಪದೋಘಾಃ** ಎಂದು ಹೇಳುವದರಿಂದ ಐಹಿಕ ಸಂಪತ್ತೆಂದೇ

ಅರ್ಥವಾಗಬೇಕಾಗಿರುತ್ತದೆ. ಏಕೆಂದರೆ **ಭ್ರಷ್ಟೈಶ್ವರ್ಯ** ಶಬ್ದವೇ ಇಹಲೋಕದ ಐಶ್ವರ್ಯ ವನ್ನು ಕಳೆದುಕೊಂಡವನು ಆರ್ತನು ಎಂಬುದನ್ನು ವ್ಯಕ್ತಪಡಿಸುತ್ತದೆ. ಸ್ವರ್ಗಾದಿ ಲೋಕದ ಐಶ್ವರ್ಯವನ್ನು ಕಳೆದುಕೊಂಡಿದ್ದರೆ ಈಗ ಜನ್ಮವೆತ್ತಿರುವವನಿಗೆ ಅದರ ಸ್ಮರಣೆಯಾಗಲಿ, ಅಂತಹ ಐಶ್ವರ್ಯಕ್ಕಾಗಿ ಉಪಾಸನ ಮಾಡಬೇಕೆಂಬ ಇಚ್ಛೆಯಾಗಲಿ ಉಂಟಾಗಲು ಸಾಧ್ಯವಿಲ್ಲವು. ಐಹಿಕೈಶ್ವರ್ಯವನ್ನು ಕಳೆದುಕೊಂಡು ದೀನನಾಗಿ ಅದನ್ನು ಹೊಂದಬೇಕೆಂದು ಉಪಾಸಿಸುವನೇ ಆರ್ತನು. ಇದ್ದ ಒಬ್ಬ ಪುತ್ರನನ್ನು ಕಳೆದುಕೊಂಡವನು ಪುನಃ ಪುತ್ರಪ್ರಾಪ್ತಿಗಾಗಿ ಉಪಾಸನವನ್ನು ಮಾಡಕೂಡದೇ? ಅರ್ಥಾರ್ಥಿಯು ಐಹಿಕ ಸ್ವರ್ಗಾದಿ ಫಲಗಳೆರಡನ್ನೂ ಪ್ರಾರ್ಥಿಸಬಹುದು. **"ತೇಷಾಂ ಭೂಮೇರ್ಧನಪತಿಗೃಹಾ ದಂಬರಾ ದಂಬುದೇರ್ವಾ ಧಾರಾನಿರ್ವ್ಯಾಸ್ತ್ಯಧಿಕಮಧಿಕಂ ವಾಂಛಿತಾನಾಂ ವಸೂನಾಮ್"** (ಶ್ರೀ ಸ್ತುತಿ. ೧೬) ಎಂದು ಮುಂದಿನ ಈ ಮೇಲಿನ ಶ್ಲೋಕದಲ್ಲಿ ಹೇಳಿರುತ್ತಾರೆ. ಇವೂ ಈ ಲೋಕದ ಐಶ್ವರ್ಯಗಳೇ. ಹಾಗಾದರೆ ಐಶ್ವರ್ಯ ಶಬ್ದಕ್ಕೆ "ಇಂದ್ರ ಪ್ರಜಾಪತಿ ಪಶುಪತಿ ಭೋಗಗಳಿಗಿಂತ ಹೆಚ್ಚಾದ ಐಶ್ವರ್ಯವೆಂಬ ವ್ಯಾಖ್ಯಾನಕ್ಕೆ ತಾತ್ಪರ್ಯವೇನು? ಎಂದು ಕೇಳಿದರೆ ತನ್ನನ್ನು ಕುರಿತು ಈ ಐಶ್ವರ್ಯಕ್ಕಾಗಿಯಾದರೂ ಉಪಾಸಿಸಿದನಲ್ಲಾ ಎಂಬ ಕೃಪೌದಾರ್ಯಗಳಿಂದ, ಆತನು ಕೇಳಿದುದಕ್ಕಿಂತ ಅಧಿಕವಾಗಿ ಧ್ರುವನಿಗೆ ಧ್ರುವಮಂಡಲಾಧಿಪತ್ಯವನ್ನೂ, ಕುಚೇಲ ಪತ್ನಿಯು ಮನಸಾ ಕೋರಿದುದಕ್ಕಿಂತ ಹೆಚ್ಚಾದ ಧನಸಮೃದ್ಧಿಯನ್ನೂ, ಕೊಟ್ಟ ತೆರದಿ ಕೊಟ್ಟು, ಮುಂದಕ್ಕೆ ಹೀಗೆ ಐಶ್ವರ್ಯಕ್ಕಾಗಿಯಾದರೂ ತನ್ನನ್ನು ಉಪಾಸಿಸಿದನಲ್ಲಾ ಎಂಬ ಕೃಪೆಯಿಂದ ಆತನು ಜನ್ಮಾಂತರದಲ್ಲಾದರೂ ಉಪಾಯಾನುಷ್ಠಾನವನ್ನು ಮಾಡುವಹಾಗೆ ಆತನಿಗೆ ಬುದ್ಧಿಯನ್ನಿತ್ತು, **ಮದ್ಭಕ್ತಾ ಯಾನ್ತಿ ಮಾಮಪಿ"** ಎಂಬಲ್ಲಿ ಹೇಳಿರುವಹಾಗೂ, ಮತ್ತು **"ಅಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್"** ಎಂಬಲ್ಲೂ, **"ನಮೇ ಭಕ್ತಃ ಪ್ರಣಶ್ಯತಿ"** ಎಂಬಲ್ಲೂ, ಹೇಳಿರುವಹಾಗೆ, ಕೊನೆಗೆ ಬುದ್ಧಿಯೋಗವನ್ನು ಕೂಡ ಕೊಟ್ಟು, ಕಾಮ್ಯ ಫಲದಲ್ಲಿ ವೈರಾಗ್ಯವನ್ನುಂಟು ಮಾಡಿ, ಹೀಗೆ ಕಡೆಗೆ ಮೋಕ್ಷಕ್ಕೆ ಹೇತುವಾಗುವ ಐಶ್ವರ್ಯವಾದುದರಿಂದಾಗಲಿ **ಇಂದ್ರ ಪ್ರಜಾಪತಿ ಪಶುಪತಿ ಭೋಗೋಭ್ಯೋ ಅತಿಶಯಿತ ಭೋಗವು.** ಈ ಇಂದ್ರಪ್ರಜಾಪತ್ಯಾದಿ ಭೋಗಗಳಿಗಾದರೋ ಮುಕ್ತಿಯನ್ನು ಕೊಡುವ ಶಕ್ತಿ ಇರುವದಿಲ್ಲವು. ಪರಮ ಪುರುಷೋಪಾಸನದಿಂದ ಪ್ರಾಪ್ತವಾಗುವ ಐಶ್ವರ್ಯಕ್ಕಾದರೋ ಕ್ರಮೇಣ ಮೋಕ್ಷವನ್ನು ಹೊಂದಿಸುವ ಶಕ್ತಿಯು ಅದಕ್ಕೆ ಇರುವದರಿಂದ ಹಾಗೆ ಹೇಳಲ್ಪಟ್ಟಿತೆಂದು ಭಾವಿಸಬಹುದು.

**ಚತುರ್ವಿಧಾ ಭಜನ್ತೇ ಮಾಂ** ಎಂಬಲ್ಲಿ ಹೇಳಿರುವ ಭಕ್ತರಲ್ಲಿ, ಆರ್ತನೂ ಅರ್ಥಾರ್ಥಿಗಳಿಬ್ಬರೂ ಐಶ್ವರ್ಯಾರ್ಥಿಗಳಾದುದರಿಂದ ಶ್ರೀ ಯಾಮುನೇಯರು ಇವರುಗಳನ್ನು **ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಚರಣಾರ್ಥಿನಾಂ"** ಎಂಬುದರಿಂದ ಮೂರಾಗಿ ವಿಭಾಗಿಸಿರುತ್ತಾರೆ. ಇದರನ್ನನುಸರಿಸಿಯೇ ಶ್ರೀ ಭಾಷ್ಯಕಾರರೂ ಸಹ ಹೀಗೆಯೇ ಮೂರಾಗಿ ವಿಭಾಗಿಸಿರುತ್ತಾರೆ.

ವೇದ್ಯೋಪಾದೇಯ ಪ್ರಯೋಗದಿಂದ ಅವರುಗಳಿಗಿರುವ ಜ್ಞಾತವ್ಯಾಂಶಗಳಲ್ಲಿ ವ್ಯತ್ಯಾಸಗಳೂ, ಉಪಾಸನಾಕ್ರಮದಲ್ಲಿರುವ ಭೇದಗಳೂ, ಫಲಗಳಲ್ಲಿ ವ್ಯತ್ಯಾಸಗಳೂ, ಮತ್ತು ನಿರ್ಯಾಣ ಮತ್ತು ಗತಿಗಳಲ್ಲಿ ಭೇದವೂ, ಗತಿಗಳಲ್ಲಿರುವ ವೈಲಕ್ಷಣ್ಯಗಳೂ, ಎಲ್ಲವೂ ಸಂಗ್ರಹೀತಗಳು.

ಶ್ರೀ ನಿಗಮಾನ್ತ ಮಹಾದೇಶಿಕಾಯನಮಃ

# ಎಂಟನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು

ಹಿಂದಿನ ಅಧ್ಯಾಯದಲ್ಲಿ ತಾನು ಸಕಲ ನಿತ್ಯಗಳಾದ ಚೇತನಾ ಚೇತನಗಳಿಗೂ ಶೇಷಿಯು, **ಜಗತ್ಕಾರಣನು**, ಸರ್ವಕ್ಕೂ ಆಧಾರಭೂತನು, ತನಗೆ ಸರ್ವವೂ ಶರೀರವು, ತಾನು ಅವಕ್ಕೆಲ್ಲಾ **ಆತ್ಮವು**, ಆದುದರಿಂದ ಸರ್ವನಿಯಂತಾ, ಸರ್ವಾಧಿಕನು, ಸರ್ವಕಲ್ಯಾಣ ಗುಣವಿಶಿಷ್ಟನು, ಕರುಣಾ ಮಯನು, ಹೀಗಿದ್ದರೂ ಚೇತನನು ಆತನಿಗೆ ಪೂರ್ವಕರ್ಮಾನುಸಾರ ಪ್ರಾಪ್ತವಾಗಿರುವ ದೇಹ ಸಂಬಂಧದಿಂದ ತನ್ನನ್ನು ಯಥಾರ್ಥವಾಗಿ ತಿಳಿಯಲಾರನೆಂದೂ, ಇಂತಹ ದುರವಸ್ಥೆಯು ಕಳೆದು ಸುಕೃತವು ತಲೆ ಎತ್ತುವದಕ್ಕೆ ಆತನಲ್ಲಿ ಮಾಡುವ ಅಙ್ಗ ಶರಣಾಗತಿಯೇ ಒಳ್ಳೇ ಉಪಾಯ ವೆಂದು ತಿಳಿಸಿ, ಅಂತಹ ಸುಕೃತಿಗಳು ಸುಕೃತ ತಾರತಮ್ಯದಿಂದ ನಾಲ್ವರೆಂದು ಉಪಪಾದಿಸಿ, ಇವರುಗಳು ತಿಳಿಯಬೇಕಾದ ಇನ್ನೂ ವಿಷಯಗಳುಂಟೆಂದು ಹೇಳಿ. ಈ ಅಧ್ಯಾಯದಲ್ಲಿ ಆ ಜ್ಞಾತ ವ್ಯಾಂಶಗಳು ಯಾವುವು ಎಂಬುವು ವಿಶದವಾಗಿ ತಿಳಿಸಲ್ಪಡುವುವು.

೧-೨. ಅರ್ಜುನನು ಪ್ರಶ್ನಿಸುತ್ತಾನೆ—ಹಿಂದೆ (೩೦ನೆಯ ಶ್ಲೋಕದಲ್ಲಿ) ಓ ಪುರುಷೋತ್ತ ಮನೇ ಜಿಜ್ಞಾಸುವು ಬ್ರಹ್ಮವೆಂಬುವರ ವಿಷಯದಲ್ಲಿ ತಿಳಿಯತಕ್ಕದ್ದುಂಟೆಂದು ಅಪ್ಪಣೆಯಾಯಿ ತಲ್ಲವೇ, **ಆ ಬ್ರಹ್ಮ**ವೆಂಬುದು ಯಾವುದು, ಆತನು ತಿಳಿಯಬೇಕಾದ **ಅಧ್ಯಾತ್ಮ**ವೆಂಬುದು ಯಾವುದು ? ಆತನು ತಿಳಿಯಬೇಕಾದ **ಕರ್ಮವು** ಯಾವುದು ? ಹಾಗೆಯೇ ಓ ಮಧು ಸೂದ ನನೇ, ಐಶ್ವರ್ಯಾರ್ಥಿಗಳು ತಿಳಿಯಬೇಕಾದ **ಅಧಿಭೂತ** ಅಧಿದೈವತ್ವಗಳು ಯಾವುವು ? ಈ ನಾಲ್ವರು ಭಕ್ತರೂ ತಿಳಿಯಬೇಕಾದ **ಅಧಿಯಜ್ಞನು** ಯಾರು ? ಆತನು ಪರಮಾತ್ಮನಾದರೆ ಯಜ್ಞಗಳಿಂದ ಇತರರು ಆರಾಧಿಸಲ್ಪಡುವಾಗ, ಈತನು ಆರಾಧಿಸಲ್ಪಡುವದು ಹೇಗೆ ? ಮನಸ್ಸನ್ನು ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದ ನಿಗ್ರಹಿಸಿದ ಈ ಭಕ್ತರಿಂದ ದೇಹಾವಸಾನಕಾಲದಲ್ಲಿ ನೀನು ಹೇಗೆ ತಿಳಿಯಲ್ಪಡುವಿ ?

೩. ಲಕ್ಷ್ಮೀಯುಕ್ತನಾದ ಶ್ರೀ ಕೃಷ್ಣ ಭಗವಾನರವರು ಈ ಏಳು ಪ್ರಶ್ನೆಗಳಿಗೂ ಉತ್ತರವನ್ನು ದಯಪಾಲಿಸುತ್ತಾರೆ. ಜಿಜ್ಞಾಸುವು ತಿಳಿಯಬೇಕಾದ **ಬ್ರಹ್ಮವು**, ಯಾವಾಗಲೂ ಸ್ವರೂಪ ವಿಕಾರವಿಲ್ಲದ, ನಾನು ನಿನಗೆ ನನ್ನ ಪರಾ ಪ್ರಕೃತಿ ಎಂದು ಹೇಳಿದ ಪರಿಶುದ್ಧವಾದ ಜೀವಾತ್ಮ ಸ್ವರೂಪವು ; **ಅಧ್ಯಾತ್ಮವು** ಯಾವುದೆಂದರೆ ಬದ್ಧ ದಶೆಯಲ್ಲಿ ಜೀವಾತ್ಮನೊಂದಿಗೆ ಸಂಬಂಧಿಸಿ ಕೊಂಡು ಆತನ ಜ್ಞಾನ ತಿರೋಧಾನಕ್ಕೆ ಕಾರಣವಾದ ಶರೀರರೂಪವಾದ ಭೂತಸೂಕ್ಷ್ಮವೆನಿ ಸುವ ಪ್ರಕೃತಿಯು. ಆತನು ತಿಳಿಯಬೇಕಾದ **ಕರ್ಮವು** ಯಾವುದೆಂದರೆ ಈ ಪ್ರಕೃತಿ ಸಂಬಂಧ ವಿರುವ ಮನುಷ್ಯಾದಿ ಭಾವವನ್ನುಂಟುಮಾಡುವ ದಂಪತಿಗಳ ಸಂಯೋಗರೂಪವಾದ ಕರ್ಮವು. ಈ ಜ್ಞಾನಗಳೆಲ್ಲಾ ಜಿಜ್ಞಾಸುವಿಗೆ ವೈರಾಗ್ಯವನ್ನುಂಟುಮಾಡಲು ಬೇಕಾದವು ; ಕೈಮುತಿಕ ನ್ಯಾಯದಿಂದ ಜ್ಞಾನಿಗೂ ಆವಶ್ಯಕವು.

೪. **ಅಧಿಭೂತ**ವೆಂದರೆ ಐಹಿಕ ಸ್ವರ್ಗಾದಿ ಭೋಗಗಳನ್ನಪೇಕ್ಷಿಸುವ ಐಶ್ವರ್ಯಾರ್ಥಿಗಳು ತಿಳಿಯತಕ್ಕ ನಶ್ವರ ಭಾವವು. ಇವೆಲ್ಲಾ ಪರಿಣಾಮವುಳ್ಳವುಗಳಾಗಿ ಅಶಾಶ್ವತವೆಂಬ ಭಾವವು. **ಅಧಿದೈವತ**ವೆಂದರೆ ಬ್ರಹ್ಮ ರುದ್ರೇಂದ್ರಾದಿಗಳ ಭೋಗಕ್ಕಿಂತ ನಿರತಿಶಯವಾದ ಭೋಗಪ್ರಾಪ್ತಿ ಯುಂಟಾಗುವ ಪುರುಷನು. **ಅಧಿಯಜ್ಞನಾದರೋ** ನಾನೇ. ಯಜ್ಞಾದಿಗಳಿಂದ ಆರಾಧಿಸಲ್ಪ ಡುವ ಇಂದ್ರಾದಿ ದೇವತೆಗಳೆಲ್ಲಾ, ನೀನೂ ಹೇಗೆ ನನಗೆ ಶರೀರನಾಗಿರುವ ಪುರುಷಶ್ರೇಷ್ಠನೋ, ಹಾಗೆಯೇ ನನಗೆ ಶರೀರವಾದುದರಿಂದ, ಶರೀರಕ್ಕೆ ಮಾಡುವ ಉಪಚಾರವೆಲ್ಲಾ ಆತ್ಮನಿಗೆ ಹೇಗೆ ಆಪ್ಯಾಯನವೋ, ಹಾಗೆಯೇ ನಿತ್ಯ ನೈಮಿತ್ತಿಕಾದಿ ಸರ್ವ ಯಜ್ಞಗಳಿಂದಲೂ ಆರಾಧ್ಯನು ನಾನೇ.

೫. ಈಗ ನಾನು ಹೇಳಿದ ನಾಲ್ಕು ಜನ ಭಕ್ತರೂ ಈ ಸ್ಥೂಲದೇಹವನ್ನು ಬಿಡುವಕಾಲದಲ್ಲಿ ನನ್ನನ್ನು ಯಾವ ಪ್ರಕಾರದಲ್ಲಿ ಯಾವ ಪುರುಷಾರ್ಥಕ್ಕಾಗಿ ಸ್ಮರಿಸುತ್ತಾರೋ, ಅವರವರ ಮನೋರಥಕ್ಕನುಗುಣವಾಗಿ ನಾನು ಸಙ್ಕಲ್ಪಿಸಿದ ಫಲಗಳನ್ನೀಯುವೆನು.

೬. ಈ ಮೇಲಿನ ವಿಷಯವನ್ನೇ ಸುವ್ಯಕ್ತವಾಗಿ ತಿಳಿಸುತ್ತಾರೆ.—ಯಾವ ಯಾವ ಭಕ್ತನು ಯಾವ ಯಾವುದನ್ನು ಸ್ಮರಿಸಿಕೊಂಡು ದೇಹತ್ಯಾಗವನ್ನು ಮಾಡುತ್ತಾನೋ, ಅದಕ್ಕನುಗುಣವಾಗಿ ಸರ್ವೇಶ್ವರನಿಂದ ಸಙ್ಕಲ್ಪಿಸಲ್ಪಟ್ಟ ಭಾವವನ್ನು ಹೊಂದುವನು. ಮಾಡಿದ ಅಭ್ಯಾಸದಲ್ಲಿ ಪರಮ ಪುರುಷನನ್ನೇ ಹೊಂದಬೇಕೆಂಬ ಕಾಮನೆಯು ಸದಾ ಇದ್ದರೆ ಸಾಯುವಾಗಲೂ ಆ ಭಾವನೆಯೇ ಉಂಟಾಗಿ ಉತ್ತರ ಜನ್ಮದಲ್ಲಿ ಅದನ್ನು ಹೊಂದುವನು ಎಂಬರ್ಥವು.

೭. ಯಾವಾಗಲೂ ಸ್ಮರಿಸುತ್ತಿದ್ದುದಕ್ಕನುಗುಣವಾಗಿ ಅಂತಿಮ ಸ್ಮೃತಿಯುಂಟಾಗುವದರಿಂದ, ನೀನು ನನ್ನಲ್ಲೇ ಸಮರ್ಪಿಸಲ್ಪಟ್ಟ ಮನಸ್ಸು ಬುದ್ಧಿಗಳನ್ನುಳ್ಳನಾಗಿ, ದೇಹಾವಸಾನದವರೆಗೂ ಕ್ಲಿಪ್ತಕಾಲದಲ್ಲಿ ನನ್ನನ್ನು ನೀನು ಉಪಾಸಿಸತಕ್ಕದ್ದು. ಅದೂ ಅಲ್ಲದೆ ಸಮಯ ಸಿಕ್ಕಿದಹಾಗೆಲ್ಲಾ ನನ್ನನ್ನೇ ಸ್ಮರಿಸುವ ಅಭ್ಯಾಸವನ್ನಿಡು. ಆ ಉಪಾಸನೆಗೆ ಸಾಧಕವಾಗಿ ನಿನಗೆ ವಿಹಿತವಾಗಿರುವ ಯಜ್ಞಾದಿ ಕರ್ಮಗಳನ್ನೆಲ್ಲವನ್ನೂ, ಹಾಗೆಯೇ ನಿನಗೆ ವಿಹಿತವಾಗಿರುವ ದುಷ್ಟನಿಗ್ರಹಕ್ಕಾಗಿ ಧರ್ಮಯುದ್ಧವನ್ನೂ, ಮಾಡತಕ್ಕದ್ದು. ಹೀಗೆ ಮಾಡಿದುದಾದರೆ ನನ್ನನ್ನು ಹೊಂದುವಿ, ಇದರಲ್ಲಿ ಸಂಶಯವಿಲ್ಲವು.

೮. ಈ ಶ್ಲೋಕದಲ್ಲಿ ಐಶ್ವರ್ಯಾರ್ಥಿಯ ಉಪಾಸನಪ್ರಕಾರವು ಹೇಳಲ್ಪಡುತ್ತದೆ. ಪರಮಾತ್ಮನ ದಿವ್ಯಮಙ್ಗಳವಿಗ್ರಹವನ್ನು ಸಮಯ ಸಿಕ್ಕಿದಕಾಲಗಳಲ್ಲೆಲ್ಲಾ ಸ್ಮರಿಸುತ್ತಿರುವ ಅಭ್ಯಾಸವೇನು, ಪ್ರತಿದಿನವೂ ಕ್ಲಿಪ್ತಕಾಲಗಳಲ್ಲಿ ಪರಮಾತ್ಮನನ್ನು ಉಪಾಸಿಸೋಣವೇನು, ಇವುಗಳಿಂದ ಕೂಡಿದ ಮನಸ್ಸಿನಿಂದ, ತನಗೆ ಅಭಿಲಷಿತವಾದ ಐಶ್ವರ್ಯವಲ್ಲದೆ ಇನ್ನು ಯಾವುದನ್ನೂ ಅಪೇಕ್ಷಿಸದೆ, ಹೀಗೆ ಆ ಪರಮ ಪುರುಷನನ್ನು ದೇಹಾವಸಾನ ಕಾಲದವರೆಗೂ ಚಿಂತಿಸುತ್ತಾ ಬಂದರೆ ಆತನು ಅಪೇಕ್ಷಿಸುವುದನ್ನೇ ಪರಮ ಪುರುಷ ಕೃಪೆಯಿಂದ ಹೊಂದುವನು.

೯. ೧೦. ಅಂತಹ ಐಶ್ವರ್ಯಾರ್ಥಿಯು ಉಪಾಸಿಸುವ ಪರಮ ಪುರುಷನು ಎಂತವನೆಂದರೆ ತಿಳಿಸುವೆನು ಕೇಳು. ಆತನನ್ನು ಸರ್ವಜ್ಞನನ್ನಾಗಿಯೂ ಸನಾತನನನ್ನಾಗಿಯೂ, ವಿಶ್ವವನ್ನೆಲ್ಲಾ ನಿಯಮಿಸುವವನನ್ನಾಗಿಯೂ, ಸೂಕ್ಷ್ಮಪದಾರ್ಥಗಳಿಗಿಂತಲೂ ಸೂಕ್ಷ್ಮತರನಾಗಿ ಎಲ್ಲವನ್ನೂ ವ್ಯಾಪಿಸುವ ಶಕ್ತಿಯುಳ್ಳವನನ್ನಾಗಿಯೂ, ಸರ್ವ ಸೃಷ್ಟಿ ಕರ್ತಾವನ್ನಾಗಿಯೂ, ಪೃಥಿವಿಯಲ್ಲಿ ತೋರಿಬರುವ ಚಿದಚಿತ್ತುಗಳಿಗಿಂತಲೂ ವಿಲಕ್ಷಣಸ್ವರೂಪವುಳ್ಳವನನ್ನಾಗಿಯೂ, ಪ್ರಕೃತಿಮಂಡಲಕ್ಕಿಂತ ವಿಲಕ್ಷಣವಾದ ಅಪ್ರಾಕೃತನಾಗಿ ತನಗೆ ಮಾತ್ರವೇ ಅಸಾಧಾರಣವಾದ ದಿವ್ಯಮಙ್ಗಳ ವಿಗ್ರಹವನ್ನುಳ್ಳವನನ್ನಾಗಿಯೂ ಭಾವಿಸಿ, ಅಂತಹ ಪುರುಷನನ್ನು ಅನುದಿನವೂ ತುಂಬಾ ಭಕ್ತಿಯಿಂದ ಕೂಡಿದ ಉಪಾಸನಾಬಲದಿಂದ ಚಲಿಸದ ಮನಸ್ಸಿನಿಂದ ಕೂಡಿದವನಾಗಿ, ಪ್ರಾಣವಿಯೋಗಕಾಲದಲ್ಲಿ ಹುಬ್ಬುಗಳ ಮಧ್ಯೆ ಪ್ರಾಣಶಬ್ದಿತ ದಿವ್ಯನಾದ ಆ ಪರಮಪುರುಷನನ್ನು ಧ್ಯಾನಿಸುವವನಾದರೆ, ಆತನ ಕೃಪೆಯಿಂದ ತನಗೆ ಅಭಿಲಷಿತವಾದುದನ್ನು ಹೊಂದುವನು.

೧೧. ಮುಂದೆ ಕೈವಲ್ಯವನ್ನಪೇಕ್ಷಿಸುವವರ ಸ್ಮರಣಪ್ರಕಾರವನ್ನು ತಿಳಿಸುತ್ತೇನೆಂದು ಹೇಳುತ್ತಾರೆ-ವೇದವಿತ್ತುಗಳು ಯಾವ ಈ ಕೇವಲನ ಉಪಾಸ್ಯವನ್ನು ಅಕ್ಷರಶರೀರಕನೆಂದು ಹೇಳುವರೋ ಅಂತಹ ಪರಿಶುದ್ಧಾತ್ಮಪ್ರಾಪ್ತಿಗಾಗಿ ಪ್ರಯತ್ನಪಡುವರು ಐಹಿಕದಲ್ಲಿ ಅನುರಾಗವನ್ನು ತ್ಯಜಿಸಿದವರಾಗಿ ಅಂತಹ ಅಕ್ಷರ ಶರೀರಕ ಪ್ರಾಪ್ಯವನ್ನು ಹೊಂದುತ್ತಾರೋ, ಅಂತಹಪ್ರಾಪ್ಯವನ್ನು ಹೊಂದಬೇಕೆಂಬ ಇಚ್ಛೆಯುಳ್ಳವರು ಸ್ತ್ರೀ ಸಂಭೋಗಾದಿಗಳನ್ನು ಬಿಟ್ಟು ಬ್ರಹ್ಮಚರ್ಯವನ್ನಾಶ್ರಯಿಸುತ್ತಾರೋ, ಅಂತಹ ಪ್ರಾಪ್ಯವನ್ನು ಸಙ್ಗ್ರಹವಾಗಿ ತಿಳಿಸುವೆನು.

೧೨, ೧೩. ಎಂತಹವನು ಅಂತಹ ಪರಿಶುದ್ಧವಾದ ಪ್ರಾಪ್ಯವನ್ನು ಹೊಂದುವನೆಂದರೆ ತಿಳಿಸುತ್ತಾರೆ.—ಯೋಗಧಾರಣಾಕ್ರಮವನ್ನವಲಂಭಿಸಿ, ಪ್ರಣವೋಚ್ಚಾರಣೆಯನ್ನು ಮಾಡಿ, ಉಪಾಸನೆಯನ್ನು ಮಾಡುತ್ತಾ, ದೇಹಾವಸಾನಕಾಲದಲ್ಲೂ ತನ್ನನ್ನು ಸ್ಮರಿಸುವವನು ಪರಿಶುದ್ಧಾತ್ಮಸ್ವರೂಪವನ್ನು ಹೊಂದುವನೆಂದು ಹೇಳುತ್ತಾರೆ.—ಜ್ಞಾನಕ್ಕೆ ಸಾಧನಭೂತಗಳಾದ ಇಂದ್ರಿಯಗಳನ್ನು ಅವುಗಳ ವಿಷಯ ಪ್ರವೃತ್ತಿ ವ್ಯಾಪಾರಗಳಿಂದ ನಿವರ್ತಿಸಿ, ಹೃದಯಕಮಲದಲ್ಲಿರುವ ಅಕ್ಷರಶಬ್ದ ವಾಚ್ಯನಾದ ನನ್ನಲ್ಲಿ ಮನಸ್ಸನ್ನು ತಡೆದಿಟ್ಟು, ಯೋಗರೂಪವಾದ ಧಾರಣೆಯನ್ನು ಹೊಂದಿದವನಾಗಿ ಎಂದರೆ ಮನಸ್ಸನ್ನು ನಿಶ್ಚಲವಾಗಿ ನನ್ನಲ್ಲೇಸಕ್ತನಾಗುವಹಾಗೆ ಮಾಡಿಕೊಂಡು, ನನ್ನನ್ನು ಬೋಧಿಸುವ ಪ್ರಣವವಾದ ಒಂದಕ್ಷರವನ್ನು ಉಚ್ಚರಿಸುತ್ತಾ, ನನ್ನನ್ನೇ ಸ್ಮರಿಸುತ್ತಾ, ಪ್ರಾಣವಾಯುವನ್ನು ಶಿರಸ್ಸಿನ ಕಡೆಗೆ ಸೆಳೆದುಕೊಂಡು, ಸ್ಥೂಲಶರೀರವನ್ನು ತ್ಯಜಿಸಿ, ಸೂಕ್ಷ್ಮಶರೀರದೊಂದಿಗೆ ಯಾರು ಹೋಗುವನೋ, ಅವನು ತನ್ನ ಉತ್ಕೃಷ್ಟಾವಸ್ಥೆಯಾದ ಪರಿಶುದ್ಧಸ್ವರೂಪವನ್ನು ಹೊಂದುವನು.

೧೪. ಹೀಗೆ ಐಶ್ವರ್ಯಾರ್ಥಿಗಳ ಮತ್ತು ಕೈವಲ್ಯಾರ್ಥಿಗಳ ಅಭಿಲಷಿತಗಳಾದ ಪ್ರಾಪ್ಯಗಳಿಗೆ ಅನುಗುಣವಾದ ಭಗವದುಪಾಸನಪ್ರಕಾರವನ್ನು ಹೇಳಿ, ಮುಂದೆ ಜ್ಞಾನಿಯ ಭಗವದುಪಾಸನ ಪ್ರಕಾರವನ್ನೂ ಪ್ರಾಪ್ಯವನ್ನೂ ಉಪದೇಶಿಸುತ್ತಾರೆ.—ಯಾವ ಜ್ಞಾನಿಯಾದ ಭಕ್ತನು, ನನ್ನನ್ನು ನಿರತಿಶಯಪ್ರೀತಿಯಿಂದ ಸತತ ಸ್ಮರಿಸುತ್ತಾ, ಅಂತಹ ಸ್ಮರಣೆಯಿಲ್ಲದೆ ತನಗೆ ಸತ್ತೆಯೇ ಇಲ್ಲವೆಂದು ಭಾವಿಸುವವನಾಗಿ, ಹಾಗೆ ತನ್ನೊಂದಿಗೆ ನಿತ್ಯಯೋಗವನ್ನು ಅಪೇಕ್ಷಿಸುವ ಭಕ್ತಿಯೋಗನಿಷ್ಠನಿಗೆ, ಓ ಪಾರ್ಥನೇ, ನಾನು ಅತ್ಯಂತ ಸುಲಭನು, ಏಕೆಂದರೆ ಅಂತಹವನು ಸಿಕ್ಕುವನೇ ಎಂದು ಅವಸರ ಪ್ರತೀಕ್ಷೆಯಲ್ಲಿರುವೆನು.

೧೫. ಇಂತಹ ಜ್ಞಾನಿಗಳಿಗೆ ಪುನಸ್ಸಂಸಾರಪ್ರಾಪ್ತಿಯು ಇಲ್ಲವೆನ್ನುತ್ತಾರೆ.—ಇಂತಹ ಕೃಪಾ ಸೌಲಭ್ಯಾತಿರೇಕದಿಂದ ಪ್ರೇರಿತನಾಗಿರುವ ನನ್ನನ್ನು ಸದಾ ಸ್ಮರಿಸುತ್ತಾ ಉಪಾಸಿಸುತ್ತಾ ನನ್ನನ್ನು ಪ್ರಾಪ್ಯವಾಗಿ ಹೊಂದಬೇಕೆಂಬ ತ್ವರಾಯುಕ್ತರಾದವರು, ಈ ದುಃಖಕ್ಕೆ ತೌರುಮನೆಯಾಗಿರುವ, ಅಥವಾ ಅಲ್ಪಸುಖವಿದ್ದರೂ ಅಶಾಶ್ವತವಾಗಿರುವ, ಈ ಪುನರ್ಜನ್ಮವನ್ನು ಹೊಂದುವದಿಲ್ಲವು; ಮತ್ತೇನೆಂದರೆ, ಅವರು ನನ್ನ ಯಥಾವಸ್ಥಿತ ಸ್ವರೂಪಜ್ಞಾನದಿಂದ ಅತ್ಯರ್ಥಪ್ರೀತಿಯಿಂದ ಸದಾ ನನ್ನ ಭಜನ, ನಾಮ ಸಂಕೀರ್ತನ, ಉಪಾಸನಾದಿಗಳಲ್ಲೇ ಮಗ್ನರಾಗಿರುವದರಿಂದ ಮಹಾಮನಸ್ಕರಾಗಿ, ಪರಮ ಸಂಸಿದ್ಧಿರೂಪವಾದ ನನ್ನ ಸಾಯುಜ್ಯವನ್ನೇ ಹೊಂದುವರು.

೧೬. ಹಾಗಾದರೆ ಈ ನಾಲ್ವರು ಭಕ್ತರು ಹೋಗಿ ಸೇರುವ ಲೋಕಗಳಲ್ಲಿ ಯಾವುವು ಪುನರಾವೃತ್ತಿಯುಳ್ಳವು, ಯಾವುವು ಪುನರಾವೃತ್ತಿ ಇಲ್ಲದವು ಎನ್ನುತ್ತೀಯೋ, ಹೇಳುವೆನು ಕೇಳು—ಈ ಲೋಕವೂ, ಮಿಕ್ಕ ಎಲ್ಲಾ ಲೋಕಗಳೂ ಚತುರ್ಮುಖನ ಸತ್ಯಲೋಕದವರೆಗೂ ಇರುವ ಲೀಲಾವಿಭೂತಿಗೆ ಸೇರಿದನೆಲ್ಲವೂ, ಓ ಅರ್ಜುನನೇ ಪುನರಾವೃತ್ತಿಯುಳ್ಳವುವು. ಅಂತಹ ಲೋಕವನ್ನು ಸೇರಿದವರಿಗೆ ಅಲ್ಲಿಯಾದರೂ ನನ್ನನ್ನು ಹೊಂದುವ ಉಪಾಯಾನುಷ್ಠಾನ ಮಾಡದಿದ್ದರೆ ಪುನರಾವೃತ್ತಿಯು ತಪ್ಪದು. ನಿತ್ಯವಿಭೂತಿಯಾದ ನನ್ನ ಲೋಕವನ್ನು ಹೊಂದಿದವರಿಗಾದರೋ ಪುನರ್ಜನ್ಮವಿಲ್ಲವು. ಇತರಲೋಕಗಳ ಐಶ್ವರ್ಯ, ಉಪಭೋಗಗಳನ್ನು ನನ್ನನ್ನು ಉಪಾಸಿಸಿ ಪಡೆದವರಿಗೆ ಪುನರಾವೃತ್ತಿ ಎಂಬುದು ಸಿದ್ಧವೆಂಬ ಭಾವವು.

೧೭, ೧೮, ೧೯. ಈ ಬ್ರಹ್ಮಾಂಡಕ್ಕೆ ಸೇರಿದ ಲೋಕಗಳಿಗೂ ಅವುಗಳನ್ನು ಸೇರಿದವರಿಗೂ ನನ್ನ ಸಙ್ಕಲ್ಪರೀತ್ಯಾ ಯಾವಾಗ ಪ್ರಳಯವೂ, ಸೃಷ್ಟಿಗಳ ಮೂಲಕ ಪುನರಾವೃತ್ತಿಯೂ, ಎಂದರೆ ತಿಳಿಸುತ್ತಾರೆ.—ನನ್ನಿಂದ ನಿರ್ಮಿಸಲ್ಪಟ್ಟ ಅಹೋರಾತ್ರಿಗಳ ಪರಿಮಿತಿಯನ್ನು ತಿಳಿದ ಮಹಾ ಪ್ರಾಜ್ಞರು, ಸಾವಿರಸಲ ನಾಲ್ಕುಯುಗಗಳೂ ಹುರಳಿದರೆ ಚತುರ್ಮುಖನಿಗೆ ಒಂದು

ಹಗಲೆಂದೂ, ಆತನ ರಾತ್ರಿಯೂ ಅಷ್ಟೇ ಕಾಲ ಪರಿಮಿತಿಯುಳ್ಳದೆಂದೂ, ಅರಿತಿರುವರು. ಚತುರ್ಮುಖನಿಗೆ ಹಗಲಾದಾಗ ಆತನ ಶರೀರದಿಂದ ಪ್ರಥಮತಃ ಸೃಷ್ಟಿಯುಂಟಾಗಿ ಅನಂತರ ಎಲ್ಲವೂ ಉತ್ಪತ್ತಿಯನ್ನು ಹೊಂದಿ ಆತನಿಗೆ ರಾತ್ರಿಯಾದಾಗ ಅವೆಲ್ಲವೂ ಪ್ರಳಯವನ್ನು ಹೊಂದುತ್ತವೆ. ಆಗ ಚತುರ್ಮುಖನಿಗೆ ಒಂದು ದಿನವಾಗಿ ಚತುರ್ಮುಖನ ಲೋಕ ಒಂದು ವಿನಾ, ಮಿಕ್ಕ ಎಲ್ಲಾ ಲೋಕಗಳಿಗೂ ಪ್ರಳಯವು; ಇಂತಹ ಸೃಷ್ಟಿ ಪ್ರಳಯಗಳಿಗೆ ದೈನಂದಿನ ಅಥವಾ ನೈಮಿತ್ತಿಕ ಸೃಷ್ಟಿ ಪ್ರಳಯಗಳೆಂದು ಹೆಸರು. ಅದರೊಂದಿಗೆ ಎಲ್ಲಾ ಜೀವಾತ್ಮರುಗಳಿಗೆ ಅವರವರ ಪೂರ್ವ ಕರ್ಮಾನುಸಾರ ದೇಹಪ್ರಾಪ್ತಿಯೂ ಸೃಷ್ಟಿಯೂ ಪ್ರಾಪ್ತವಾಗುತ್ತವೆ. ಇಂತಹ ದಿನಗಳುಳ್ಳ ಸೃಷ್ಟಿಲಯಗಳು ನಡೆಯುವ ನೂರುವರ್ಷಗಳ ಕೊನೆಯದಿನದ ರಾತ್ರಿಯಲ್ಲಿ ಚತುರ್ಮುಖನ ಲೋಕಕ್ಕೂ ಆತನಿಗೂ ಪ್ರಳಯವು. ಆವಾಗ ಎಲ್ಲಾ ಅಚಿತ್ಪ್ರಕೃತಿಗೂ ಪ್ರಳಯವಾದುದರಿಂದ, ಅದು ಪ್ರಾಕೃತಿಕ ಪ್ರಳಯವೆಂದು ಹೇಳಲ್ಪಡುತ್ತದೆ. ಈ ಬ್ರಹ್ಮನಿಗೆ ಮೋಕ್ಷ ಉಂಟಾಗಿ, ಬೇರೇ ಚತುರ್ಮುಖನು ಸೃಷ್ಟ್ಯಧಿಕಾರವನ್ನು ವಹಿಸುವನು. ಪರಮ ಪುರುಷನು ಮೊದಲು ಸಮಷ್ಟಿ ಸೃಷ್ಟಿಯನ್ನು ನಡೆಸಿ, ವ್ಯಷ್ಟಿ ಸೃಷ್ಟಿಯನ್ನು ಚತುರ್ಮುಖನ ಮೂಲಕ ನಡೆಸುವನು. ಈ ವಿಷಯವನ್ನೆಲ್ಲಾ ಭಾಗವತ ಮೊದಲಾದ ಗ್ರಂಥಗಳಿಂದ ತಿಳಿಯತಕ್ಕದ್ದಾಗಿರುತ್ತದೆ.

೨೦. ೨೧. ಹೀಗೆ ಐಶ್ವರ್ಯಾರ್ಥಿಗೆ ಪುನರಾವೃತ್ತಿಯುಂಟೆಂದು ತಿಳಿಸಿ, ಜ್ಞಾನಿಗೆ ಹೇಗೆ ಅಪುನರಾವೃತ್ತಿಯೋ, ಹಾಗೆಯೇ ಜಿಜ್ಞಾಸುವಿಗೂ ಅಪುನರಾವೃತ್ತಿ ಎಂದು ಹೇಳುತ್ತಾರೆ— ಅವ್ಯಕ್ತ ಶಬ್ದದಿಂದ ಹೇಳಲ್ಪಡುವ ಜಡಪ್ರಕೃತಿಗಿಂತಲೂ, ಜ್ಞಾನಸ್ವರೂಪ ಗುಣಗಳಿಂದ ಶ್ರೇಷ್ಠನಾಗಿದ್ದಾನೆಂದು ಹಿಂದೆಯೇ ಹೇಳಲ್ಪಟ್ಟ ಪರಾಪ್ರಕೃತಿಯಾದ ಜೀವಾತ್ಮನು, ಆತನೊಂದಿಗೆ ಸೇರಿಕೊಂಡಿರುವ ಶರೀರರೂಪ ಪ್ರಕೃತಿಯು ಸ್ವರೂಪ ಪರಿಣಾಮವನ್ನು ಹೊಂದಿದರೂ, ಸ್ವರೂಪಪರಿಣಾಮವನ್ನು ಹೊಂದದೆ, ನಿತ್ಯವಾಗಿ ಕಣ್ಣಿಗೆ ಕಾಣದಿರುವವರಿಂದ ಅಕ್ಷರ ಅವ್ಯಕ್ತ ಶಬ್ದಗಳಿಂದ ಹೇಳಲ್ಪಟ್ಟು, ತನಗೆ ಮಾತ್ರವೇ **ಅಹಂ ಅಹಂ** ಎಂದು ವೇದ್ಯವಾಗುವ, ಇಂತಹ ಪ್ರಕೃತಿ ವಿಯುಕ್ತ ಪರಿಶುದ್ಧಾತ್ಮ ಸ್ವರೂಪವೇ ಜಿಜ್ಞಾಸುವು ಅಪೇಕ್ಷಿಸುವ ಪ್ರಾಪ್ಯವು; ಅಂತಹ ಅವಸ್ಥೆಯನ್ನು ಹೊಂದಿದ ಕೇವಲನು ಪುನಃ ಪ್ರಕೃತಿ ಸಂಬಂಧವನ್ನು ಹೊಂದುವದಿಲ್ಲವು. ಅಂತಹ ಜ್ಞಾನದೀಪ್ತಿಯುಳ್ಳ ಆತ್ಮ ವರ್ಗವೆಲ್ಲವೂ ನನ್ನ ಶ್ರೇಷ್ಠವಾದ ನಿಯಾಮ್ಯವರ್ಗವು.

೨೨. ಜ್ಞಾನಿಯ ಪ್ರಾಪ್ಯನಾದರೋ ಕೇವಲನ ಪ್ರಾಪ್ಯಕ್ಕಿಂತ ವಿಲಕ್ಷಣವಾದುದು ಎಂದು ತಿಳಿಸುತ್ತಾರೆ.—ಯಾವ ಪುರುಷೋತ್ತಮನೆನಿಸುವ ಸರ್ವೇಶ್ವರನು ಎಲ್ಲಾ ಪ್ರಾಣಿವರ್ಗಕ್ಕೂ ಅಂತರಾತ್ಮನಾಗಿ ಎಲ್ಲಾ ಚಿದಚಿತ್ತುಗಳನ್ನು ವ್ಯಾಪಿಸಿರುವನೋ, ಅಂತವನು, ಓ ಅರ್ಜುನನೇ, ಇತರ ಸಾಧನಗಳನ್ನೂ ಅನ್ಯದೇವತೆಗಳನ್ನೂ ಪರಿಗಣಿಸದೆ ಪರಮೈಕಾಂತಿರೂಪ ಭಕ್ತಿಯಿಂದ ಉಪಾಸಿಸುವ ಜ್ಞಾನಿಯಿಂದ, ಆತನ ಭಕ್ತಿಯಿಂದ ಪ್ರೀತನಾಗಿ, ಲಭ್ಯನಾಗುವನು.

೨೩. ಈ ನಾಲ್ಕುವಿಧ ಅಧಿಕಾರಿಗಳಿಗೂ ದೇಹಾವಸಾನಾನಂತರ ಪ್ರಾಪ್ತವಾಗುವ ಮಾರ್ಗಗಳು ಯಾವುವೆಂದು ಹೇಳಲ್ಪಡುವವು. ಜಿಜ್ಞಾಸು ಜ್ಞಾನಿಗಳಿಗೆ ಅರ್ಚಿರಾದಿ ಅಥವಾ ದೇವಯಾನ ಮಾರ್ಗವೆಂದೂ, ಅರ್ಥಾರ್ಥಿಗಳಿಗೆ ಧೂಮಾದಿಮಾರ್ಗ ಅಥವಾ ಪಿತೃಯಾಣವೆಂದೂ ಹೇಳುತ್ತಾರೆ.—ಈ ನಾಲ್ಕು ವಿಧ ಭಕ್ತಿಯೋಗ ನಿಷ್ಠರಲ್ಲಿ ಯಾರಿಗೆ ಯಾವ ಮಾರ್ಗವಲ್ಲಿ ಹೋಗುವದರಿಂದ ಅಪುನರಾವೃತ್ತಿಯೂ ಎಂದರೆ ಹಿಂತಿರುಗಿ ಬಂದು ಜನ್ಮವೆತ್ತದೆ ಮೋಕ್ಷವೂ, ಇನ್ನು ಯಾರಿಗೆ ಯಾವ ಮಾರ್ಗದಲ್ಲಿ ಹೋಗಿ ಪುನರಾವೃತ್ತಿಯೂ ಎಂದರೆ ಪುನಃ ಈ ಲೋಕಕ್ಕೆ ಬಂದು ಜನ್ಮವೆತ್ತೋಣವು ಎಂಬುವನ್ನೂ ಓ ಭರತಶ್ರೇಷ್ಠನೇ ಹೇಳುವೆನು ಕೇಳು.

೨೪. ತೇಜೋಮಯವಾದ ಅರ್ಚಿಸ್ಸೆಂಬ ದೇವತೆ, ಅಹಸ್ಸಿಗೆ ಅಭಿಮಾನದೇವತೆ, ಶುಕ್ಲ

ಪಕ್ಷಾಭಿಮಾನ ದೇವತೆ, ಆರುತಿಂಗಳಿಂದ ಸೇರಿದ ಉತ್ತರಾಯಣಾಭಿಮಾನ ದೇವತೆ ಇಂತಹ ಕಾಲಾಭಿಮಾನ ದೇವತೆಗಳು ಕಾದಿರುವ ಮಾರ್ಗದಲ್ಲಿ ಹೋಗುವ ಜಿಜ್ಞಾಸುವೂ ಜ್ಞಾನಿಯೂ ಪರಬ್ರಹ್ಮನನ್ನು ಕುರಿತು ದಿವ್ಯ ವೈಕುಂಠಕ್ಕೆ ಹೋಗಿ ಸೇರುವದರಿಂದ ಅವರಿಗೆ ಪುನರಾವೃತ್ತಿ ಇಲ್ಲವು, ಪುನರ್ಜನ್ಮವಿಲ್ಲವು. ಹೀಗೆ ಆ ಮಾರ್ಗ ತೋರಿಸುವ ದೇವತೆಗಳಾದ ಅತಿವಾಹಿಕರ ಮಾರ್ಗವಾಗಿ ಇವರು ಹೋಗುವರು. ಇಲ್ಲಿ ನಾಲ್ಕು ಜನ ಅತಿವಾಹಕರು ಮಾತ್ರ ಉಪಲಕ್ಷಣ ರೂಪದಲ್ಲಿ ಹೇಳಲ್ಪಟ್ಟರು, ಮಿಕ್ಕ ಎಂಟು ದೇವತೆಗಳು ಯಾರೆಂದರೆ,—ಸಂವತ್ಸರ, ವಾಯು, ಸೂರ್ಯ, ಚಂದ್ರ, ಅಮಾನವ, ವರುಣ, ಇಂದ್ರ, ಬ್ರಹ್ಮ; ಇವರುಗಳು ಬರಮಾಡಿಕೊಂಡು ಕಳುಹಿಸಿಕೊಡುವ ಮಾರ್ಗಕ್ಕೆ ದೇವಯಾನವೆಂದು ಹೆಸರು.

೨೫. ಆರ್ತನೂ ಅರ್ಥಾರ್ಥಿಯೂ ಹೋಗುವ ಮಾರ್ಗವು ಯಾವುದೆಂದರೆ.—ಧೂಮಾದಿ ದೇವತೆ, ರಾತ್ರ್ಯಭಿಮಾನದೇವತೆ, ಕೃಷ್ಣಪಕ್ಷಾಭಿಮಾನದೇವತೆ, ಮಿಕ್ಕ ಆರು ಮಾಸಗಳಿಂದ ಕೂಡಿದ ದಕ್ಷಿಣಾಭಿಮಾನ ದೇವತೆಯು, ಇವರುಗಳು ಅಲ್ಲಿಂದ ಚಂದ್ರಿಕೆಯ ಅಭಿಮಾನದೇವತೆಯ ಮೂಲಕ ಹೋಗಿ ಪುನಃ ಜನ್ಮವನ್ನು ಎತ್ತುತ್ತಾರೆಂದು ಸಙ್ಗ್ರಹವಾಗಿ ಹೇಳಲ್ಪಟ್ಟಿತು. ಶ್ರುತಿಯಲ್ಲಿ ವಿಸ್ತರಿಸಿ ಹೇಳಿರುವದು ಹೇಗೆಂದರೆ.—ದಕ್ಷಿಣಾಯನ ದೇವತೆಯಿಂದ ಸಂವತ್ಸರಾಭಿಮಾನದೇವತೆಯಲ್ಲಿಗೆ ಹೋಗದೆ, ಪಿತೃಲೋಕ, ಆಕಾಶಾಭಿಮಾನದೇವತೆಗಳ ಮೂಲಕ ಚಂದ್ರನನ್ನು ಹೊಂದಿ ಸ್ವರ್ಗಾದಿ ಲೋಕಗಳಿಗೆ ಹೋಗುತ್ತಾರೆ. ಅಲ್ಲಿನ ಭೋಗಗಳು ಕಳೆದನಂತರ ಪುನಃ ಕೆಳಕ್ಕೆ ಬರುತ್ತಾ ಆಕಾಶ, ವಾಯು, ಮೇಘ, ವರ್ಷ, ಅಲ್ಲಿಂದ ಭತ್ತ, ಹಣ್ಣು, ಸಸ್ಯ ಮೊದಲಾದವುಗಳ ಮೂಲಕ ಪುರುಷನ ಶರೀರವನ್ನು ಹೊಂದಿ ಆತನ ರೇತಸ್ಸಿನ ಮೂಲಕ ಸ್ತ್ರೀ ಯೋನಿಯನ್ನು ಸೇರಿ, ಅಲ್ಲಿ ಗರ್ಭದಲ್ಲಿ ಬೆಳದು ಜನ್ಮವನ್ನೆತ್ತುತ್ತಾರೆ. ಇದಕ್ಕೆ ಪಿತೃಯಾಣ ಮಾರ್ಗವೆಂದು ಹೆಸರು.

೨೬. ಹೀಗೆ ಶುಕ್ಲಪಕ್ಷಾಭಿಮಾನದೇವತೆಯಮಾರ್ಗ, ಕೃಷ್ಣಪಕ್ಷಾಭಿಮಾನದೇವತೆಯಮಾರ್ಗ, ಹೀಗೆ ಇವೆರಡು ಮಾರ್ಗಗಳು ಈ ನಾಲ್ವರು ಭಕ್ತರಿಗೂ ಉಂಟಾಗುತ್ತದೆಂದು ಅಪೌರುಷೇಯವಾದ ವೇದದಲ್ಲಿ ಸ್ಥಾಪಿತವಾದ ಅಭಿಪ್ರಾಯವು. ದೇವಯಾನದಮೂಲಕ ಪುನರ್ಜನ್ಮ ರಾಹಿತ್ಯದಿಂದ ಮೋಕ್ಷವೂ, ಇನ್ನೊಂದಾದ ಪಿತೃಯಾಣದ ಮೂಲಕ ಪುನರ್ಜನ್ಮಪ್ರಾಪ್ತಿಯೂ, ಲಭಿಸುತ್ತವೆ.

೨೭. ಈ ಎರಡು ಮಾರ್ಗಗಳಿಗೂ ಇಷ್ಟು ವ್ಯತ್ಯಾಸ ಉಂಟೆಂದು ಪ್ರಾಜ್ಞನಾದ ಭಕ್ತಿಯೋಗನಿಷ್ಠನು ತಿಳಿದುದಾದರೆ, ಶಾಶ್ವತ ಸುಖವನ್ನು ಕೊಡುವ ದೇವಯಾನ ಮಾರ್ಗದಲ್ಲಿ ಹೋಗುವ ಹಾಗೆ ಮಾಡಿಕೊಳ್ಳದೆ, ಬಂಧಕವಾದ ಪಿತೃಯಾಣ ಮಾರ್ಗದಲ್ಲಿ ಹೋಗುವಹಾಗೆ ಮೋಹಜ್ಞಾನವನ್ನು ಹೊಂದುವದಿಲ್ಲವು ಆದುದರಿಂದ ಓ ಅರ್ಜುನನೇ, ನಿನಗೆ ಸಾಧ್ಯವಾದ ಕಾಲಗಳಲ್ಲೆಲ್ಲಾ ನನ್ನನ್ನೇ ಧ್ಯಾನಿಸುತ್ತಾ ಉಪಾಸಿಸುತ್ತಾ ಜ್ಞಾನಿಯಾಗಲು ಯತ್ನಿಸು.

೨೮. ಆರ್ತನೂ ಅರ್ಥಾರ್ಥಿಯೂ ಆಗಿ, ಅವರ ಮನೋರಥಾವಾಪ್ತಿಗಾಗಿ ವೇದಾಧ್ಯಯನ ಯಜ್ಞ ದಾನ ತಪಸ್ಸು ಮೊದಲಾದವುಗಳ ಅನುಷ್ಠಾನದಿಂದುಂಟಾಗುವ ಯಾವ ಯಾವ ಶ್ರೇಯಸ್ಸುಗಳುಂಟೋ, ಅವೆಲ್ಲವೂ ಅಲ್ಪಾಸ್ಥಿರಗಳಾದುದರಿಂದ, ಅವುಗಳನ್ನೆಲ್ಲಾ ತ್ಯಜಿಸಿ, ಜ್ಞಾನಿಯಾಗಿ ಭಕ್ತಿಯೋಗವನ್ನನುಷ್ಠಿಸುವದರಿಂದ ಉಂಟಾಗುವ ಶಾಶ್ವತವಾದ ಶ್ರೇಯಸ್ಸಾದರೋ ನಿರತಿಶಯವಾದುದರಿಂದ, ಹಿಂದೆ ಹೇಳಿದ ಶ್ರೇಯಸ್ಸುಗಳಿಗೂ ಮೇಲಾದುದು. ಆದುದರಿಂದ ಆ ಜ್ಞಾನಿಯಾದ ಭಕ್ತಿಯೋಗನಿಷ್ಠನು ಅನಾದಿಯಾಗಿ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಸಿಕ್ಕದೆ ಸರ್ವೋತ್ಕೃಷ್ಟವಾದ ದಿವ್ಯ ವೈಕುಂಠವನ್ನು ದೇವಯಾನದ ಮೂಲಕ ಹೊಂದುವನು.

**ಎಂಬಲ್ಲಿಗೆ ಎಂಟನೆಯ ಅಧ್ಯಾಯದ ಸಙ್ಗ್ರಹಾರ್ಥವು ಸಂಪೂರ್ಣವು.**

# ಶ್ರೀಮದ್ಭಗವದ್ಗೀತಾಯಾಂ

## ನವಮೋಽಧ್ಯಾಯಃ

**ಶ್ರೀ ಭಗವಾನುವಾಚ—**

**ಮೂ. ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧.**

**ಮೂಲಕ್ಕೆ ಅರ್ಥವು:—**ಆರು ಅಧ್ಯಾಯಗಳಿಂದಲೂ ಕರ್ಮಯೋಗದ ಮಾಹಾತ್ಮ್ಯ ಸ್ವರೂಪಾದಿಗಳನ್ನೂ, ಅದಕ್ಕೆ ಅಙ್ಗವಾಗಿ ಪ್ರಕೃತಿವಿಯುಕ್ತ ಜೀವಾತ್ಮೋಪಾಸನೆಯನ್ನು ಮಾಡುವ ಕ್ರಮವಾದ ಅಷ್ಟಾಙ್ಗಯೋಗವನ್ನೂ, ಹೇಳಿ, ಈ ಉಪಾಸನೆಗಿಂತ ಉತ್ಕೃಷ್ಟವಾದ ಉಪಾಸನೆಯು ಒಂದುಂಟು, ಅದನ್ನು ನಾಲ್ಕು ಜನ ಸುಕೃತಿಗಳು ಮಾತ್ರವೇ ಮಾಡುವರೆಂದೂ, ಅವರಲ್ಲಿ ಜ್ಞಾನಿಯೇ ಶ್ರೇಷ್ಠನೆಂದೂ ತಿಳಿಸಿ, ಆತನಿಗೆ ತನ್ನ ಅಂತಿಮ ಸ್ಮೃತಿಯುಂಟಾಗಿ ಅರ್ಚಿರಾದಿ ಮಾರ್ಗದ ಮೂಲಕ ದಿವ್ಯ ವೈಕುಂಠಪ್ರಾಪ್ತಿಮೂಲಕ ತನ್ನನ್ನು ಹೊಂದುವನೆಂದು ಹೇಳಿ, ಅದಕ್ಕಾಗಿ ತನ್ನನ್ನೇ ಉಪಾಸನಮಾಡಿ, ಅದಕ್ಕೆ ಅಙ್ಗವಾದ ಕರ್ಮಯೋಗಕ್ಕೆ ಸೇರಿದ ಯುದ್ಧಾದಿ ಕರ್ಮಗಳನ್ನು ಮಾಡು ಎಂದು **ಮಾಮನುಸ್ಮರ ಯುಧ್ಯ ಚ** (ಗೀ. ೮. ೭.) ಎಂದು ವಿಧಿಸಿದರು. ಹೀಗೆ ನೀನು ಜ್ಞಾನಿಯಾಗಿ ಉಪಾಸನೆ ಮಾಡುವದಕ್ಕೆ ಭಕ್ತಿಶಬ್ದವಾಚ್ಯವಾದ ಉಪಾಸನೆಯ ಸ್ವರೂಪವನ್ನೂ ಅದರ ಮಾಹಾತ್ಮ್ಯೆಯನ್ನೂ, ತಿಳಿಯುವದು ಆವಶ್ಯಕವಾದುದರಿಂದ, ಅವುಗಳನ್ನು ಈ ಅಧ್ಯಾಯದಲ್ಲಿ ಉಪದೇಶಿಸುವದಾಗಿ ಪ್ರತಿಜ್ಞಾ ವಾಕ್ಯವನ್ನು ದಯಪಾಲಿಸುತ್ತಾರೆ. ಯಜ್ಞ, ದಾನ, ತಪಸ್ಸುಗಳ ಅನುಷ್ಠಾನವು ಯಾವ ಪ್ರಧಾನವಾಗಿರುವ ಉಪಾಯಾನುಷ್ಠಾನಕ್ಕೆ ಹೇತುವೋ, ಅಂತಹ ಮುಖ್ಯೋಪಾಯವು ಸಾಧಿಸಿಕೊಡುವ ಶ್ರೇಯಸ್ಸು, ಈ ಯಜ್ಞ, ದಾನ, ತಪಸ್ಸುಗಳು ಕೊಡಬಹುದಾದ ಶ್ರೇಯಸ್ಸಿಗಿಂತಲೂ ನಿರತಿಶಯವಾದ ಶಾಶ್ವತವಾಗಿ ಸರ್ವೋತ್ಕೃಷ್ಟವಾದುದೋ, ಅಂತಹ ಗುಹ್ಯತಮವಾದ ಉಪಾಯವನ್ನು ಕುರಿತ ಸರ್ವವನ್ನೂ ತಿಳಿಸುವೆನು; ಅಂತಹ ಉಪಾಯಾನುಷ್ಠಾನದ ಮಹಿಮೆಯನ್ನರಿತು ಆಚರಿಸಿದರೆ, ಎಲ್ಲಾ ಅಮಙ್ಗಳಗಳಿಂದಲೂ ಬಿಡಲ್ಪಡುವಿ ಎಂದು ಉಪದೇಶಿಸುತ್ತಾರೆ. ರುಕ್ಮಿಣೀ ಸಹಿತನಾದ ಕೃಷ್ಣ ಭಗವಾನರವರು ಹೇಳುತ್ತಾರೇನೆಂದರೆ.—ಓ ಅರ್ಜುನನೇ, **ಅನಸೂಯವೇ** - ಅಸೂಯೆ ಎಂದರೆ ದೋಷವಿಲ್ಲದ ಸ್ಥಳದಲ್ಲಿ ದೋಷಾರೋಪಣವು, ಇದು ಅಹಿತರಲ್ಲಿ ದ್ವೇಷಬುದ್ಧಿಯುಂಟಾಗುವಂತಾದ್ದು; ಈಗ ನನ್ನ ಮಾತಿನಲ್ಲಿ ಈಷದಪಿ ಮಾತ್ಸರ್ಯವಾಗಲಿ ದ್ವೇಷಬುದ್ಧಿಯಾಗಲಿ ಇಲ್ಲವಾಗಿ, ನಾನು ಉಪದೇಶಿಸುವದೆಲ್ಲಾ ಪರಮ ಹಿತವೆಂಬ ನಂಬಿಕೆಯು ನಿನ್ನಲ್ಲಿರುವದರಿಂದ ನೀನು ಅನಸೂಯವು, ಅಂತಹ ಮಾತ್ಸರ್ಯವಿಲ್ಲದ, **ತೇ** - ಪರಮ ಹಿತನಾದ ನಿನಗೆ, ಇಂತಹ ಗುಹ್ಯತಮವಾದ ಉಪದೇಶಕ್ಕೆ ಸರ್ವವಿಧ ಯೋಗ್ಯತೆಯೂ ಇರುವ ನಿನಗೆ, **ಇದಂತು** - ಇನ್ನು ಮುಂದೆ ಈ ಅಧ್ಯಾಯದಲ್ಲಿ ಹೇಳುವದಾವದೋ **ಗುಹ್ಯತಮಂ** - ಅತ್ಯಂತ ಪರಮ ರಹಸ್ಯವಾದುದರಿಂದ ಅದನ್ನು, **ಪ್ರವಕ್ಷ್ಯಾಮಿ** - ಚನ್ನಾಗಿ ಹೇಳುತ್ತೇನೆ, ಎಂದರೆ ಆ ರಹಸ್ಯಕ್ಕೆ ಸಂಬಂಧಪಟ್ಟ ಎಲ್ಲವನ್ನೂ ನೀನು ಚನ್ನಾಗಿ ಗ್ರಹಿಸುವಹಾಗೆ ವ್ಯಕ್ತಪಡಿಸಿ ಹೇಳುತ್ತೇನೆ. ಅದು ಯಾವುದೆಂದರೆ, **ವಿಜ್ಞಾನ ಸಹಿತಂ**-ವಿಶೇಷ ಜ್ಞಾನಗಳಿಂದ ಕೂಡಿದ, **ಜ್ಞಾನಂ** - ಸಾಧ್ಯೋಪಾಯವಾದ **ಭಕ್ತಿ** ಎಂದು ಹೇಳಿಸಿಕೊಳ್ಳುವ ಉಪಾಸನದ ಸ್ವರೂಪವನ್ನು,

**ಪ್ರವಕ್ಷ್ಯಾಮಿ** - ವಿಶೇಷಿಸಿ ಹೇಳುವೆನು. ಮೊದಲು ಆರು ಅಧ್ಯಾಯಗಳಿಂದ ಹೇಳಿದವುಗಳೆಲ್ಲಾ ಈ ಉಪಾಯಕ್ಕೆ ಅಙ್ಗವಾದವುಗಳು, ಇದು ಅಂಗಿಯು; ಆದುದರಿಂದ ಹಿಂದೆ ಹೇಳಿದವೆಲ್ಲಾ, **ಗುಹ್ಯ** ಮತ್ತು **ಗುಹ್ಯತರ** ವೆಂಬುವರಲ್ಲಿ ಸೇರತಕ್ಕವು; ಮುಂದೆ ಹೇಳುವದರ ಜ್ಞಾನವೂ ಅದಕ್ಕೆ ಸಂಬಂಧಪಟ್ಟ ವಿಶೇಷಜ್ಞಾನಗಳೂ ಸಹ, ಪ್ರಧಾನವಾಗಿ ಅಂಗಿಯಾದುದರಿಂದ ಇದು **ಗುಹ್ಯ** ತಮವು. ಈ ಅಭಿಪ್ರಾಯವು, **ಇದಂತು** ಎಂಬಲ್ಲಿರುವ **ತು** ಶಬ್ದದಿಂದ ತೋರಿಬರುತ್ತದೆ. ಇಂತಹ ಗುಹ್ಯತಮವಾದ ಉಪದೇಶವು ಸಮಸ್ತ ಸಾಮಾನ್ಯಜನರಿಗೂ ಈಗಿನವರು ಮಾಡುವ ಲೆಕ್ಚರ್ ಮೂಲಕವಾಗಿ ತಿಳಿಸತಕ್ಕದ್ದಲ್ಲವು. ನೀನು **ಕಾರ್ಪಣ್ಯದೋಷೋಪಹತಸ್ವಭಾವ ನೆಂದು** ಹೇಳಿಕೊಂಡು, **ಯಚ್ಛ್ರೇಯಸ್ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ** - ನನಗೆ ಪರಮಹಿತ ವಾವುದೆಂಬ ನಿಶ್ಚಯವಿಲ್ಲವು, ಇದೀಗ ನಿನಗೆ ಪರಮಹಿತವಾದುದು ಎಂದು ನೀನು ದಯಮಾಡಿ ತಿಳಿಸತಕ್ಕದ್ದು ಎಂದು ಹೇಳಿ, **ಶಿಷ್ಯಸ್ತೇಹಂ ಶಾಧಿಮಾಂ** ಎಂದು ನೀನು ಪ್ರಾರ್ಥಿಸಿದುದರಿಂದ ನೀನು ಶರಣಾಗತನಾಗಿ ಪರಮಶ್ರದ್ಧಾಳುವು, ನೀನು **ಅನುಸೂಯುವು** ಎಂಬ **ಪೂರ್ಣನಂಬಿಕೆ** ಇರುವುದರಿಂದ ನಿನಗೆ ಈ ಪರಮರಹಸ್ಯವನ್ನು ಉಪದೇಶಿಸುತ್ತಿದ್ದೇನೆ; ಹಾಗಿಲ್ಲದಿದ್ದರೆ ನಾನು ಎಂದಿಗೂ ನಿನಗೆ ಉಪದೇಶಿಸುತ್ತಿರಲಿಲ್ಲವೆಂಬ ಭಾವವು ತೋರಿಬರುತ್ತದೆ. ಇಂತಹ ಪರಮಹಿತ ವಾಗಿಯೂ ಗುಹ್ಯತಮವಾಗಿಯೂ ಇರುವ ಸರ್ವೋತ್ಕೃಷ್ಟವಾದ ಉಪದೇಶವನ್ನು ಅಸೂಯಾ ಪರರಾಗಿ ದುಷ್ಟರಾಗಿರುವ ದುರ್ಯೋಧನ ದುಶ್ಶಾಸನಾದಿಗಳಿಗೆ ನಾನು ಹೇಳಲಿಲ್ಲವು. ಅನಸೂ ಯುವಾದ ನಿನಗೆ ಮಾತ್ರ ಉಪದೇಶಿಸಿರುತ್ತೇನೆಂಬ ಅರ್ಥವಾದವೂ ಸೂಚಿತವು. ವಿದುರರು ಪರಮಪ್ರಿಯರಲ್ಲವೋ, ಅವರಿಗೆ ಏಕೆ ಉಪದೇಶಿಸಲಿಲ್ಲವು? ಎಂದರೆ, ಈ ಉಪದೇಶಕ್ಕೆ ಅರ್ಹರ ಲ್ಲವಾದುದರಿಂದ ಉಪದೇಶಿಸಲಿಲ್ಲವು; ಉದ್ಧವರು ಅರ್ಹರಾದುದರಿಂಗ ಅವರಿಗೆ ಪೃಥಕ್ಕಾಗಿ ಉಪದೇಶಿಸಿರುವೆನು, ಇವೇ ಮೊದಲಾದವುಗಳು ಅರ್ಥವಾಗಿ ತೋರುತ್ತವೆ. ನೀನೂ, ಈ ನನ್ನ ಅವತಾರಕ್ಕೆ ಸಂಬಂಧಿಸಿ ನರಾವತಾರಿಯಾಗಿ, ನಾನು ನಾರಾಯಣನಾದುದರಿಂದ ಇತರ ಅನೇಕ ಕುಚೇಲಾದಿ ಬ್ರಾಹ್ಮಣರನ್ನೆಲ್ಲಾ ಬಿಟ್ಟು ನಿನಗೆ ಉಪದೇಶಿಸಿರುತ್ತೇನೆ. ನೀನು **"ಪ್ರಿಯೋಸಿಮೇ"** ಇತ್ಯಾದಿ ಭಾವಗಳು, ಅರ್ಥವಾಗಿ ತೋರಿಬರುತ್ತವೆ. ಈ ಗುಹ್ಯ ಗುಹ್ಯತರ ಗುಹ್ಯತಮೋಪದೇ ಶಗಳಿಗೆ ನೀನೇ ಅರ್ಹನೆಂದು ಭಾವಿಸಿ, ಯದ್ಯಪಿ ಅಕ್ರೂರ ಕುಚೇಲ ಉದ್ಧವಾದಿಗಳು ಯೋಗ್ಯ ರಾಗಿದ್ದರೂ ಈಗ ನಿನಗೆ ಮಾತ್ರವೇ ಉಪದೇಶಿಸಿರುತ್ತೇನೆ. ಆದರೆ ನೀನೂ ನಾನೂ ಸಹ ಅವ ತಾರಪುರುಷರಾದುದರಿಂದ ನಾನು ನಿನಗೆ ಉಪದೇಶಿಸುವದೇ ಯುಕ್ತವು. ನಿನಗೆ ಉಪದೇಶಿಸಿದರೆ, ಅವರೂ, ಇನ್ನೂ ಅನೇಕ ಭಾಗವತೋತ್ತಮರುಗಳೂ, ಪರಿಗ್ರಹಿಸುವರೆಂಬ ನಂಬಿಕೆಯುಂಟಾದು ದರಿಂದ ನಿನಗೇ ಉಪದೇಶಿಸಿರುತ್ತೇನೆಂಬ ಭಾವವೂ ತೋರಿಬರುತ್ತದೆ. ಹಾಗೆಯೇ ಈ ಪರಮ ರಹಸ್ಯವನ್ನುಪದೇಶಿಸುವ ಗುರುಗಳು ತಮ್ಮ ಶಿಷ್ಯರುಗಳು ಅನಸೂಯಗಳೇ ಎಂದು ಚನ್ನಾಗಿ ಪರೀಕ್ಷಿಸಿ ಉಪದೇಶಿಸತಕ್ಕದೆಂಬ ಭಾವವೂ ಇದರಿಂದ ಸೂಚಿತವು. ಇದರಿಂದ ಗುರುವಿನ ಉಪ ದೇಶಕ್ಕೆ ಅರ್ಹತೆಯು ಶಿಷ್ಯನಲ್ಲಿರುವ ಅನಸೂಯತ್ವವೆಂದು ಹೇಳಿದಂತಾಯಿತು, ಉಪದೇಶದ ಔಚಿತ್ಯಕ್ಕೆ ಇದಕ್ಕಿಂತ ಹೆಚ್ಚು ಕಲ್ಯಾಣಗುಣಗಳನ್ನು ಅಪೇಕ್ಷಿಸಿದುದಾದರೆ, ಉಪದೇಶಕ್ಕೆ ಅರ್ಹರೇ ದುರ್ಲಭವಾಗಿ ಪರಿಣಮಿಸೀತು. ಹಾಗೆ ನೋಡಿದರೆ ಅರ್ಜುನಾದಿಗಳೂ ದೋಷಿಗಳೇ; ದ್ಯೂತದಲ್ಲಿ ಪ್ರವರ್ತಿಸಿ, ಪತಿವ್ರತಾಶಿರೋಮಣಿಯನ್ನು ವಿಕ್ರಯಿಸಿ, ಆಕೆಯು ಬಹಿಷ್ಠೆಯಾಗಿರು ವಾಗ ದುರುಳದುಶ್ಶಾಸನನು ಕೇಶಗ್ರಹಣಮೂಲಕ ಸಭೆಗೆ ಎಳೆದುಕೊಂಡುಹೋಗಿ ಮಾನ ಭಂಗವನ್ನು ಮಾಡುವಾಗ, ದುಷ್ಟರಾಗಿ ಅಕ್ರಮವನ್ನು ನಡೆಸುವವರನ್ನು ಶಿಕ್ಷಿಸುವದು ಕ್ಷತ್ರಿಯ ಧರ್ಮವಾಗಿದ್ದರೂ ತಟಸ್ಥರಾಗಿದ್ದ ಅಧರ್ಮಿಗಳೆಂದೇ ಹೇಳಿಸಿಕೊಳ್ಳುತ್ತಾರೆ. ಆದುದರಿಂದ

**ಭಾ. ಉಪಾಸಕ ಭೇದ ನಿಬಂಧನಾ ವಿಶೇಷಾಃ ಪ್ರತಿಪಾದಿತಾಃ । ಇದಾನಿ ಮುಪಾಸ್ಯಸ್ಯ ಪರಮ ಪುರುಷಸ್ಯ ಮಾಹಾತ್ಮ್ಯಂ, ಜ್ಞಾನಿನಾಂಚ ವಿಶೇಷಂ ವಿಶೋಧ್ಯ, ಭಕ್ತಿ**

ಶಿಷ್ಯನಾದವನು ಶ್ರದ್ಧಾಳುವಾಗಿ ಅನಸೂಯುವಾಗಿದ್ದರೆ ಉಪದೇಶಕ್ಕೆ ಅರ್ಹನೆಂದು ಇಷ್ಟು ಮಾತ್ರ ಸೂಚಿಸುವದಕ್ಕಾಗಿ **ಅನಸೂಯವೇ** ಎಂಬ ಪ್ರಯೋಗವು. ಹಾಗೆಯೇ ಮುಂದೆ ೧೮-೬೭ ರಲ್ಲಿ ನನ್ನ ವಿಷಯದಲ್ಲಿ ಅಸೂಯಾಪರನಿಗೆ, ನಾನು ನಿನಗೆ ಉಪದೇಶಿಸಿದ ರಹಸ್ಯವನ್ನು ತಿಳಿಸಕೂಡದೆಂದು ವಿಧಿಸುತ್ತಾರೆ.—**"ಇದಂತೇ ನಾತಪಸ್ಕಾಯ ನಾಭಕ್ತಾಯ ಕದಾಚನ । ನಚಾ ಶುಶ್ರೂಷವೇ ವಾಚ್ಯಂ, ನಚ ಮಾಂ ಯೋಽಭ್ಯಸೂಯತಿ ॥"** ಎಂತಹ ಸಚ್ಛಿಷ್ಯನು ಬಂದು ಪ್ರಾರ್ಥಿಸಿದರೆ ಆಚಾರ್ಯನು ಉಪದೇಶಿಸತಕ್ಕದ್ದೆಂಬುದನ್ನು ಶ್ರೀಮದ್ರಹಸ್ಯತ್ರಯಸಾರದ ಆಚಾರ್ಯಕೃತ್ಯಾಧಿಕಾರದಲ್ಲಿ ಕಾಣಬಹುದು. ಇಂತಹ ಪರಮ ರಹಸ್ಯವಾದ ಜ್ಞಾನಸ್ವರೂಪವನ್ನೂ ಹೇಳುತ್ತೇನೆಂಬುದಾಗಿ ಏನೋ ನಾನು ಪರಮಕೃಪಯಾ ಸಙ್ಕಲ್ಪಿಸಿರುತ್ತೇನೆ. ಆದರೆ ಇದರಿಂದಾಗುವ ಪ್ರಯೋಜನವೇನೆಂಬುದಾಗಿ ಕೇಳುತ್ತೀಯೋ? **ಯಜ್ಞಾತ್ವಾ ಮೋಕ್ಷ್ಯಸೇಽಶುಭಾತ್** - ಯಾವ ಈ ಪರಮರಹಸ್ಯವನ್ನು ನೀನು ತಿಳಿದು ನಾನು ಹೇಳಿದಹಾಗೆ ನೀನು ಈ ಸಾಧ್ಯೋಪಾಯವನ್ನು ಅನುಷ್ಠಿಸಿದುದಾದರೆ, **ಅಶುಭಾತ್** - ಸರ್ವ ಅಮಂಗಳಗಳಿಂದಲೂ ಎಂದರೆ ಅನಿಷ್ಟವಾಗಿರುವ ಈ ಪುಣ್ಯಪಾಪಗಳಿಂದಲೂ, ಅವುಗಳುಂಟುಮಾಡುವ ಜನ್ಮ ಸಂತತಿ ಕ್ಲೇಶ ಮೊದಲಾದವುಗಳಿಂದಲೂ, ಮತ್ತು ಇವಕ್ಕೆಲ್ಲಾ ಕಾರಣಭೂತವಾದ ಹೇಯಶರೀರದಿಂದಲೂ, **ಮೋಕ್ಷ್ಯಸೇ** - ಬಿಡಲ್ಪಡುತ್ತೀಯೆ. ಹೀಗೆ ನಿನಗೆ ನಿರತಿಶಯ ಶ್ರೇಯಸ್ಸುಂಟಾಗುವದರಿಂದ ಇಂತಹ ವಿಜ್ಞಾನಸಹಿತವಾದ ಜ್ಞಾನವು ಪರಮಗುಹ್ಯವಾದುದು, ನಿನಗೆ ಚನ್ನಾಗಿ ಮನಸ್ಸು ಹಿಡಿಯುವಹಾಗೆ ಹೇಳುವೆನು, ಸಾವಧಾನದಿಂದ ಕೇಳು, ಎಂದು ಪರಮಕೃಪಯಾ ಹೇಳುತ್ತಾರೆ.

ಇದು ಗುಹ್ಯತಮವೆಂದು ಹೇಳಿರುವದರಿಂದ ಅನಸೂಯಗಳಾದ ತ್ರೈವರ್ಣಿಕ ಸ್ತ್ರೀಗಳಿಗೆ ಇದರಲ್ಲಿ ಅಧಿಕಾರ ಉಂಟೇ ಇಲ್ಲವೇ ಎಂಬ ಪ್ರಸಂಗದಲ್ಲಿ ಸಾಕ್ಷಾತ್ತಾಗಿ ಮೂಲವನ್ನೂ ಅದರ ಅರ್ಥವನ್ನೂ ಗುರುಮುಖೇನ ಅಧಿಕರಿರಲು ಇದು ಬ್ರಹ್ಮವಿದ್ಯೆಯಾದುದರಿಂದ ಅಧಿಕಾರವಿಲ್ಲದಿದ್ದರೂ, ಮಹಾಭಾರತರೂಪವಾದ ಇತಿಹಾಸದಲ್ಲಿ ಇದು ಅಂತರ್ಗತವಾಗಿ ಪುರಾಣರೂಪದಲ್ಲಿ ಉಪದೇಶಕ್ಕೆ ಸ್ತ್ರೀಯರೂ ಅರ್ಹರಾದುದರಿಂದ ಈ ಗೀತಾರ್ಥಗಳ ಉಪದೇಶಕ್ಕೂ ಕೂಡ ಸ್ತ್ರೀಯರು ಅರ್ಹರೆಂದು ನಿರ್ಧರಿಸುವದಕ್ಕೆ ಏನೊಂದು ಅಭ್ಯಂತರವೂ ತೋರುವದಿಲ್ಲವು. ಅವರು ಅನುಷ್ಠಾನರೂಪ ಉಪಾಸನಕ್ಕೆ ಅನರ್ಹರೇ ವಿನಾ ಗೀತಾಶಾಸ್ತ್ರವು ಏನು ಹೇಳುತ್ತದೆಂದು ತಿಳಿಯಲು ಅನಧಿಕಾರಿಗಳಾಗುವದಿಲ್ಲವು.

**ಭಾಷ್ಯಾರ್ಥವು:—**ಹಿಂದೆ ಏನು ಹೇಳಲ್ಪಟ್ಟಿತು, ಮುಂದೆ ಏನು ಹೇಳಲ್ಪಡುತ್ತದೆ, ಇವೆರಡಕ್ಕೂ ಸಙ್ಗತಿ ಹೇಗೆ ಎಂದು ಒಂದು ವಾಕ್ಯದಿಂದ ವ್ಯಕ್ತಪಡಿಸಿ, ಮುಂದಿನ ವಾಕ್ಯದಿಂದ ಈ ಒಂಬತ್ತನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆ ಎಂಬುದನ್ನು ಸಙ್ಗ್ರಹವಾಗಿ ಸೂಚಿಸುತ್ತಾರೆ. - ಹಿಂದೆ ಎಂಟನೆಯ ಅಧ್ಯಾಯದಲ್ಲಿ, **ಉಪಾಸಕಭೇದ ನಿಬಂಧನಾ ವಿಶೇಷಾಃ** - ಈ ನಾಲ್ಕು ವಿಧ ಉಪಾಸಕರಿಗೂ ಇರುವ ಭೇದಕ್ಕೆ ಕಾರಣಭೂತವಾದ ವಿಶೇಷಗಳು ಎಂದರೆ ಜ್ಞಾತವ್ಯಗಳಾದ ಉಪಾದೇಯಗಳಾದ ವಿಶೇಷಗಳು ಎಂಬ ಭಾವವು, **ಉಪಪಾದಿತಾಃ** - ಉಪಪಾದಿಸಲ್ಪಟ್ಟವು. **ಇದಾನೀಂ**-ಈ ಒಂಬತ್ತನೆಯ ಅಧ್ಯಾಯದಲ್ಲಾದರೋ, (೧) **ಉಪಾಸ್ಯನಾದ ಪರಮಪುರುಷನ ಮಹಾತ್ಮ್ಯೆಯೂ, (೨) ಜ್ಞಾನಿನಾಂಚ ವಿಶೇಷಂ ವಿಶೋಧ್ಯ** - ಜ್ಞಾನಿಗಳ ವೈಲಕ್ಷಣ್ಯವನ್ನೂ ಅನುವಾದ ಮೂಲಕ ವಿವೇಚನೆಮಾಡಿ ಹೇಳಿ (೩) **ಭಕ್ತಿರೂಪಸ್ಯ**

**ಭಾ. ರೂಪಸ್ಯೋಪಾಸನಸ್ಯ ಸ್ವರೂಪ ಮುಚ್ಯತೇ । ಇದಂತು ತೇ ಗುಹ್ಯತಮಂ - ಭಕ್ತಿ ರೂಪ ಮುಪಾಸನಾಖ್ಯಂ, ಜ್ಞಾನಂ ವಿಜ್ಞಾನ ಸಹಿತಂ - ಉಪಾಸನಗತ ವಿಶೇಷ ಜ್ಞಾನ ಸಹಿತಮ್, ಅನಸೂಯವೇ ತೇ ಪ್ರವಕ್ಷ್ಯಾಮಿ । ಮದ್ವಿಷಯಂ ಸಕಲೇ**

**ಉಪಾಸನಸ್ಯ** - ಭಕ್ತಿರೂಪವಾದ ಉಪಾಸನದ, **ಸ್ವರೂಪಮುಚ್ಯತೇ** - ಸ್ವರೂಪವು ಹೇಳಲ್ಪಡುತ್ತದೆ. ಹೀಗೆ ಈ ಮೂರು ವಿಷಯಗಳು ಹೇಳಲ್ಪಟ್ಟರೂ, ಮೊದಲಿನ ಎರಡೂ, ಹೇಳಿದ ವಿಷಯಗಳ ಅನುವಾದವು; ಆದುದರಿಂದ ಈ ಅಧ್ಯಾಯದಲ್ಲಿ ಮುಖ್ಯವಾಗಿ ಹೇಳಲ್ಪಡುವದು **ಭಕ್ತಿಯೋಗದ ಸ್ವರೂಪವು** ಎಂಬ ಭಾವವು. ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕದಲ್ಲಿ ನಾಲ್ಕು ವಿಷಯಗಳು ಹೇಳಲ್ಪಡುತ್ತವೆಂದು ಹೇಳಿರುತ್ತಾರೆ. ಅವು ಯಾವುವೆಂದರೆ—(೧) **ಸ್ವಮಾಹಾತ್ಮ್ಯಮ್**- ತನ್ನ ಮಹಾತ್ಮ್ಯೆಯೂ (೨) **ಮನುಷ್ಯತ್ವೇ ಪರತ್ವಂ ಚ** - ಮನುಷ್ಯಭಾವವಿದ್ದರೂ ಪರತ್ವವೂ, ಇವೆರಡೂ ಇಲ್ಲಿ **ಪರಮಪುರುಷಸ್ಯ ಮಾಹಾತ್ಮ್ಯಮ್** ಎಂದು ಸೇರಿಸಿ ಹೇಳಲ್ಪಟ್ಟವು. **(೩) ಮಹಾತ್ಮನಾಂ ವಿಶೇಷಃ** - ಇದೇ **ಜ್ಞಾನಿನಾಂ ವಿಶೇಷ**ವೆಂದ ಇಲ್ಲಿ ಹೇಳಲ್ಪಟ್ಟಿತು, **(೪) ಯೋಗೋ ಭಕ್ತಿರೂಪಃ ಪ್ರಕೀರ್ತಿತಃ** - ಇದೇ ಭಕ್ತಿರೂಪವಾದ ಉಪಾಸನದ ಸ್ವರೂಪವೆಂದು ಸೂಚಿಸಲ್ಪಟ್ಟಿತು. ಶ್ರುತಿಗಳಲ್ಲಿ ಉಪಾಸನವೇ ಬ್ರಹ್ಮವಿದ್ಯೆಗಳಲ್ಲಿ ಸಾಧ್ಯೋಪಾಯವಾಗಿ ವಿಧಿಸಲ್ಪಟ್ಟಿರುತ್ತದೆ; ಅದೇ ಇಲ್ಲಿ ಭಕ್ತಿ ಶಬ್ದದಿಂದ ವಿಧಿಸಲ್ಪಟ್ಟಿರುತ್ತದೆಂಬ ಭಾವವು. ಭಕ್ತಿಸ್ವರೂಪವೇ ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವದು ಎಂದು ಹೇಗೆ ನಿರ್ಣಯ ವೆಂದರೆ, **"ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ । ಅರ್ಥವಾದೋಪಪತ್ತೀ ಚ ಲಿಙ್ಗಂ ತಾತ್ಪರ್ಯನಿರ್ಣಯೇ"** ಎಂದು ಹೇಳಿರುವ ರೀತಿಗೆ, ಉಪಕ್ರಮದಲ್ಲಿ **ಇದಂ ತು ತೇ ಗುಹ್ಯತಮಂ** ಎಂದು ಈ ಜ್ಞಾನರೂಪವಾದುದನ್ನೇ ಪ್ರಶಂಸಿಸಿ ಹೇಳಿರುವದರಿಂದಲೂ, **ಮನ್ಮನಾಭವ** (೯. ೩೪) ಎಂದು ಉಪಸಂಹಾರವಿರುವದರಿಂದಲೂ, ಅಧ್ಯಾಯಮಧ್ಯದಲ್ಲೂ ಬಹುವಾಗಿ ಭಜನದ ಅಭ್ಯಾಸವೇ ಹೇಳಲ್ಪಟ್ಟಿರುವದರಿಂದಲೂ, ಅದಕ್ಕೆ ಪ್ರತ್ಯಕ್ಷರೂಪತ್ವವೇನು, ನಿರತಿಶಯಪ್ರಿಯತ್ವವೇನು, ಕೀರ್ತನ, ಯತನ, ನಮಸ್ಕಾರಾದಿಗಳೇನು, ಇವುಗಳನ್ನು ಅಪೂರ್ವವಾಗಿ ಇಲ್ಲಿ ಭಕ್ತಿಸ್ವರೂಪಕ್ಕೆ ಸೇರಿದವೆಂದು ಉಪಪಾದಿಸಿರುವದರಿಂದಲೂ, ಇದರ ಸ್ವರೂಪದಿಂದಲೇ ನಿರತಿಶಯವಾದ ಫಲವನ್ನು ಸಾಧಿಸಿಕೊಡುವ ಶಕ್ತಿಯುಂಟೆಂದು ಪ್ರತಿಪಾದಿಸಿರುವದರಿಂದಲೂ, **ರಾಜವಿದ್ಯಾ** ಇತ್ಯಾದಿ ಪ್ರಶಂಸೆಗಳ ಮೂಲಕ ಅರ್ಥವಾದವೂ ಕೂಡ ತೋರಿಬರುವದರಿಂದಲೂ, ಹೀಗೆ ಎಲ್ಲಾ ತಾತ್ಪರ್ಯನಿರ್ಣಯ ಮಾಡುವ ಹೇತುಗಳಿಂದಲೂ, ಈ ಅಧ್ಯಾಯದಲ್ಲಿ ಪ್ರಧಾನವಿಷಯನಾಗಿ ಹೇಳಿರುವದು ಭಕ್ತಿಸ್ವರೂಪದ ನಿಷ್ಕರ್ಷೆಯೇ ಎಂದು ನಿಸ್ಸಂದೇಹವಾಗಿ ಹೇಳಬಹುದೆಂಬ ತಾತ್ಪರ್ಯವು. **ಇದಂತು** ಎಂದು ಪ್ರಾರಂಭಿಸಿರುವದರಿಂದ ಮುಂದೆ ಹೇಳುವ ಭಕ್ತಿಯೋಗದ ಸ್ವರೂಪವು, ಹಿಂದೆ ಹೇಳಿದ ಕರ್ಮಯೋಗ ಜ್ಞಾನಯೋಗಗಳಿಗಿಂತ ಅತಿಶಯವಾಗಿ, ಅವುಗಳೇ ಗುಹ್ಯ ಗುಹ್ಯತರಗಳಾದರೂ, ಇದು ವಿಲಕ್ಷಣವಾಗಿ ಗುಹ್ಯತಮವೆಂದು ಹೇಳಿರುತ್ತಾರೆ **ಇದಂತು ತೇ ಗುಹ್ಯತಮಂ** ಎಂದು ಶ್ರೀ ಕೃಷ್ಣನು ಆರಂಭಿಸಿರುವದನ್ನು ವಿಮರ್ಶಿಸಿ ನೋಡಿದರೆ, ಅರ್ಜುನನನ್ನು ಪ್ರೋತ್ಸಾಹಿಸಿ ಆತನಿಗೆ ತನ್ನ ಉಪದೇಶದಲ್ಲಿ ಅಭಿರುಚಿಯನ್ನುಂಟುಮಾಡಿ, ಅದನ್ನು ಗ್ರಹಿಸಿ ತದನುಸಾರವಾಗಿ ಅನುಷ್ಠಿಸಲೆಂದೂ, ಈ ಮುಂದೆ ಉಪದೇಶಿಸುವದನ್ನು ಗೋಪ್ಯವಾಗಿಟ್ಟುಕೊಂಡು, ಉಪದೇಶಕ್ಕೆ ಅರ್ಹನಾದ ಶಿಷ್ಯನಿಗೆ ಮಾತ್ರವೇ ವಿನಿಯೋಗಿಸತಕ್ಕದ್ದೆಂಬ ಭಾವವನ್ನೂ ಸೂಚಿಸುತ್ತಾರೆ. **ಇದಂ ತು ತೇ ಗುಹ್ಯತಮಂ** - ಈ ಮುಂದೆ ನಿನಗೆ ಉಪದೇಶಿಸುವ ಅತ್ಯಂತ ಗೋಪ್ಯವಾದುದು ಯಾವುದೆಂದರೆ, ಭಕ್ತಿರೂಪವಾದ, **ಉಪಾಸನಾಖ್ಯಂ** - ಉಪಾಸನವೆಂದು ಹೇಳಿಸಿಕೊಳ್ಳುವದು ; ಅದೇ **ಜ್ಞಾನ**

**ಭಾ. ತರ ವಿಸಜಾತೀಯ ಮಪರಿಮಿತ ಪ್ರಕಾರಂ ಮಾಹಾತ್ಮ್ಯಂ ಶ್ರುತ್ವಾ ಏವಮೇವ ಸಂಭವತೀತಿ ಮನ್ವಾನಾಯ ತೇ ಪ್ರವಕ್ಷ್ಯಾಮೀತ್ಯರ್ಥಃ; ಯದ್ಜ್ಞಾನ ಮನುಷ್ಠಾನ ಪರ್ಯನ್ತಂ ಜ್ಞಾತ್ವಾ ಮತ್ಪ್ರಾಪ್ತಿ ವಿರೋಧಿನಃ ಸರ್ವಸ್ಮಾದ ಶುಭಾನ್ಮೋಕ್ಷ್ಯಸೇ ॥೧॥**

**ವಿಜ್ಞಾನಸಹಿತಂ** ಎಂದು ಇಲ್ಲಿ ಹೇಳಲ್ಪಟ್ಟಿರುತ್ತದೆ; ಅದು ಯಾವುದೆಂದರೆ, **ಉಪಾಸನಗತ ವಿಶೇಷಜ್ಞಾನಸಹಿತಮ್** - ಉಪಾಸನವನ್ನು ಹೊಂದಿದ ವಿಶೇಷ ಜ್ಞಾನದಿಂದ ಕೂಡಿದುದು, ಇದನ್ನು **ಅನಸೂಯವೇ** - ಅಸೂಯಾರಹಿತನಾಗಿ ನನ್ನ ಮಾತಿನಲ್ಲಿ ಶ್ರದ್ಧಾಳುವಾದ ನಿನಗೆ **ಪ್ರವಕ್ಷ್ಯಾಮಿ** - ವಿಶದವಾಗಿ ಚನ್ನಾಗಿ ಸಂಪೂರ್ಣವಾಗಿ ಹೇಳುವೆನು ಈ ಸಂದರ್ಭದಲ್ಲಿ ಈ ಮುಂದಿನ ಮನುಸ್ಮೃತಿ ವಾಕ್ಯವು ಅನುಸಂಧೇಯವು—"**ವಿದ್ಯಾಬ್ರಾಹ್ಮಣ ಮೇತ್ಯಾಹ ಶೇವಧಿ ಸ್ತೇಸ್ಮಿ ರಕ್ಷಮಾಂ । ಅಸೂಯಕಾಯ ಮಾಂ ಮಾದಾಃ ತಥಾಸ್ಯಾಂ ವೀರವತ್ತಮಾ**" ಬ್ರಹ್ಮವಿದ್ಯಾ ದೇವತೆಯು ಬ್ರಹ್ಮವಿತ್ತನ್ನು ಕುರಿತು ಹೇಳುತ್ತಾಳೇನೆಂದರೆ—"ನಿನಗೆ ನಾನು ಪರ ತಂತ್ರಳಾಗಿರುವೆನು, ನನ್ನನ್ನು ನೀನು ರಕ್ಷಿಸತಕ್ಕದ್ದು; ಹೇಗೆಂದರೆ ಅಸೂಯಾಪರನಿಗೆ ನನ್ನನ್ನು ಕೊಡಬೇಡ ಎಂದರೆ ಉಪದೇಶಿಸಬೇಡ, ಹಾಗೆ ಮಾತ್ರ ಮಾಡಿದರೆ ನಾನು ವೀರ್ಯ ವತ್ತಮಳಾಗುವೆನು" ಇದರ ಮುಖ್ಯಾಭಿಪ್ರಾಯವೇನೆಂದರೆ ಶ್ರದ್ಧಾಳುವಿಗೇನೇ ಉಪದೇಶಿಸತ ಕ್ಕದ್ದು ಎಂಬುದು. ಹಾಗಲ್ಲದೆ ಅಸೂಯಾಪರನಿಗೆ, ಬಂದು ಪ್ರಾರ್ಥಿಸಿದನಲ್ಲಾ ಎಂದು ಪರೀ ಕ್ಷಿಸಿ ವಿವೇಕಿಸಿ ನೋಡದೆ ಉಪದೇಶಿಸಿದರೆ, ಉಪದೇಶಕನ ಬ್ರಹ್ಮವಿದ್ಯೆಯು ವೀರ್ಯವತ್ತರಾವಾ ಗುವದಿಲ್ಲವು. ಇದಕ್ಕೆ ನಿದರ್ಶನವಾಗಿ ಚತುರ್ಮುಖನು ಶ್ರದ್ಧಾಳುವಲ್ಲದ ಇಂದ್ರನು ಪ್ರಾರ್ಥಿಸಿದ ಮಾತ್ರದಿಂದ ಆತನಿಗೆ ಉಪದೇಶಿಸಿದುದರಿಂದ ಆತನ ಬ್ರಹ್ಮವಿದ್ಯೆಯಲ್ಲಾ ಶೈಥಿಲ್ಯ ಹೊಂದಿತು. ಬಗ ತನ್ನ ಮಗನಾದ ನಾರದನನ್ನು ಪ್ರಾರ್ಥಿಸಿ ಉಪದೇಶವನ್ನು ಹೊಂದಿದನೆಂಬ ಪುರಾಣ ಪ್ರಮಾಣವಿರುತ್ತದೆ.

ಆದರೆ ೭ ನೆಯ ಅಧ್ಯಾಯದ ಎರಡನೆಯ ಶ್ಲೋಕದಲ್ಲೂ, "**ಜ್ಞಾನಂತೇಹಂ ಸವಿಜ್ಞಾನಂ ಇದಂ ವಕ್ಷ್ಯಾಮ್ಯಶೇಷತಃ**" ಇಂತಹ ಪ್ರತಿಜ್ಞಾ ವಾಕ್ಯವೇ ಇರುವಾಗ, ಇಲ್ಲಿ ಪುನಃ ಅಂತಹ ಪ್ರತಿಜ್ಞಾ ವಾಕ್ಯಕ್ಕೆ ಕಾರಣವೇನೆಂಬ ಪ್ರಶ್ನೆಯು ನ್ಯಾಯವಾಗಿ ಉದಿಸುತ್ತದೆ. ಅಲ್ಲಿ ಹೇಳಿರುವ **ಸವಿಜ್ಞಾನಂ ಜ್ಞಾನಂ** ಎಂದು ಹೇಳಿರುವದು, ಪರಮಾತ್ಮನ ಸ್ವರೂಪಜ್ಞಾನವೂ ಮತ್ತು ಆತನು ಯಾವ ಮಹತ್ತಾದ ವಿಶೇಷಣಗಳಿಂದ ಯುಕ್ತನು ಎಂಬ ಜ್ಞಾನವೂ; ಇಲ್ಲಿ ಹೇಳಿರುವ **ವಿಜ್ಞಾನ ಸಹಿತಂ ಜ್ಞಾನಂ** ಎಂಬುದಾದರೋ, ಆ ಪರಮಪುರುಷನ ಉಪಾಸನ ಜ್ಞಾನವೂ, ಅದರ ಪ್ರಕಾರ ವನ್ನು ಬೋಧಿಸುವ ವಿಶೇಷಜ್ಞಾನವೂ, ಹೀಗೆ ಎರಡೂ ಬೇರೆಬೇರೆಯಾದುದರಿಂದ ಶಙ್ಕೆಗೆ ಕಾರಣವೇ ಇಲ್ಲವು. **ಅನಸೂಯವೇ ತೇ** - ಅನಸೂಯುವಾದ ನಿನಗೆ ಎಂದು ಹೇಳಿದುದರ ತಾತ್ಪರ್ಯವೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಮದ್ವಿಷಯಂ** - ನನ್ನ ವಿಷಯ ವಾದ, **ಸಕಲೇತರ ವಿಸಜಾತೀಯಂ**- ಮಿಕ್ಕ ಎಲ್ಲಾ ಚಿದಚಿತ್ತುಗಳಿಗಿಂತಲೂ ವಿಲಕ್ಷಣನಾಗಿ ರುವ, **ಅಪರಿಮಿತಪ್ರಕಾರಂ**-ದೇಶಕಾಲವಸ್ತು ಪರಿಚ್ಛಿತ್ತಿಗಳಿಲ್ಲದೆ ಅನಂತವಾಗಿರುವ, **ಮಾಹಾ ತ್ಮ್ಯ** ಯನ್ನು, **ಶ್ರುತ್ವಾ** - ಕೇಳಿ, **ಏವಮೇವ ಸಂಭವತೀತಿ** - ಹೀಗೆಯೇ ಸಾಮಂಜಸ್ಯವು ಎಂದು **ಮನ್ವಾನಾಯ** - ತಿಳಿದಿರುವ ಎಂದರೆ ನಂಬಿಕೆ ಇರುವ, ಶ್ರದ್ಧಾಳುವಾದ, **ತೇ** - ನಿನಗೆ **ಪ್ರವಕ್ಷ್ಯಾಮೀತ್ಯರ್ಥಃ** - ಚನ್ನಾಗಿ ಉಪದೇಶಿಸುತ್ತೇನೆ ಎಂಬ ತಾತ್ಪರ್ಯವು. ಆ ಉಪದೇಶ ದಿಂದಾಗುವ ಫಲವನ್ನು ತಿಳಿಸುತ್ತಾರೆ ಇಂತಹ ನಿರತಿಶಯ ಪ್ರಯೋಜನವು ಅದರಿಂದುಂಟಾಗುತ್ತ ದೆಂದು ತಿಳಿಸಿದರೆ, ಉಪದೇಶ ಶ್ರವಣದಲ್ಲಿ ತುಂಬಾ ಶ್ರದ್ಧೆಯೂ ಆದರವೂ ಉಂಟಾಗುತ್ತದೆಂದು ಯೋಚಿಸಿ ಉಪಕ್ರಮದಲ್ಲೇ ಫಲವನ್ನು ಬೋಧಿಸುತ್ತಾರೆ ಮೂಲದಲ್ಲಿ **ಯಜ್ಜ್ಞಾತ್ವಾ**

ಎಂದಿರುವದರ ಅಭಿಪ್ರಾಯವನ್ನು ತಿಳಿಸುತ್ತಾರೆ,—**ಯಜ್ಜ್ಞಾನಂ** - ನಾನು ಉಪದೇಶಿಸುವ ಯಾವ ವಿಜ್ಞಾನ ಸಹಿತವಾದ ಈ ಜ್ಞಾನವನ್ನು, **ಅನುಷ್ಠಾನಪರ್ಯನ್ತಂ**-ಅನುಷ್ಠಾನ ಪರ್ಯಂತರವಾಗಿ, **ಜ್ಞಾತ್ವಾ** - ತಿಳಿದವನಾಗಿ, ಇದು ಸಾಧ್ಯೋಽಪಾಯವಾದುದರಿಂದ ಈ ಜ್ಞಾನವು ಅನುಷ್ಠಾನ ರೂಪವಾಗಬೇಕು ; ಮತ್ತು ಆ ಉಪಾಸನವೂ ಸಹ ಜ್ಞಾನರೂಪವಾದುದೇ ಎಂಬ ಅಭಿಪ್ರಾಯವು ; ಆದುದರಿಂದ ಜ್ಞಾನ ಶಬ್ದವೂ, ವೇದನ, ಭಕ್ತಿಶಬ್ದಗಳ ಹಾಗೆ ಉಪಾಸನವನ್ನೇ ಬೋಧಿಸುತ್ತದೆ ಎಂದು ಭಾವಿಸಬಹುದು. **"ಕಷಾಯಪಕ್ತಿಃ ಕರ್ಮಾಣಿ ಜ್ಞಾನಂತು ಪರಮಾಗತಿಃ"** ಎಂಬಲ್ಲಿ ಹೇಳಿರುವಹಾಗೆ, **ಜ್ಞಾನಾನ್ಮೋಕ್ಷಃ** ಎಂದರೆ **ಉಪಾಸನಾನ್ಮೋಕ್ಷಃ** ಎಂಬುದೇ ಅಭಿಪ್ರಾಯವು. ಏಕೆಂದರೆ ಉಪಾಸನವೂ ಜ್ಞಾನರೂಪವಾದುದರಿಂದ ಈ ಜ್ಞಾನವು ಉಪಾಸನಕ್ಕೆ ಹೇತುವಾಗಿ ತದ್ರೂಪವಾದುದರಿಂದ ಉಪಾಸನವನ್ನೇ ಬೋಧಿಸುತ್ತದೆಂದೂ ಭಾವಿಸಬಹುದು. ಆದುದರಿಂದಲೇ **ಅನುಷ್ಠಾನಪರ್ಯಂತಂ** ಎಂಬ ವ್ಯಾಖ್ಯಾನವು. **ಈ ಅನುಷ್ಠಾನಪರ್ಯಂತಂ** ಎಂಬ ಪ್ರಯೋಗದಿಂದ ಅದ್ವೈತಾಭಿಪ್ರಾಯವಾದ **"ತತ್ತ್ವಮಸಿ"** ಇತ್ಯಾದಿ ವಾಕ್ಯಜನ್ಯ ಜ್ಞಾನವೇ ಉಪಾಯವು, ಅದರಿಂದಲೇ ಮೋಕ್ಷವೂ, ಅಂತಹ ಜ್ಞಾನಗಳುಳ್ಳವನು ಜೀವನ್ಮುಕ್ತನೂ ಎಂಬ ಹೇಳಿಕೆಯು ಶಾಸ್ತ್ರ ಸಮ್ಮತ ಅಭಿಪ್ರಾಯವಲ್ಲವೆಂದು ತಿಳಿಸುವುದಕ್ಕಾಗಿ ಎಂದೂ, ಭಾವಿಸತಕ್ಕದ್ದು. ಬರೀ ಅಡಿಗೆಯ ಜ್ಞಾನದಿಂದಅಡಿಗೆಯ ಫಲವಾದ ಕ್ಷುನ್ನಿವಾರಣೆಯು ಉಂಟಾಗುವದಿಲ್ಲವು. ಅಡಿಗೆಯನ್ನು ಮಾಡಿ ಭುಂಜಿಸಿದರೇನೇ ಫಲಸಿದ್ಧಿಯು ಹೇಗೋ, ಹಾಗೆಯೇ ಇಲ್ಲಿಯೂ ಪರಮಾತ್ಮೋಽಪಾಸನವನ್ನು ಅನುಷ್ಠಿಸಿದರೇನೇ ಮೋಕ್ಷವು. ಉಪಾಸನವೇನೋ ಜ್ಞಾನರೂಪವಾದುದೇ, ಅದರಲ್ಲಿ ಸಂಶಯವಿಲ್ಲವು, **ಜ್ಞಾನಾನ್ಮೋಕ್ಷಃ** ಎಂಬುದನ್ನೇನೋ ಒಪ್ಪುವೆವು ಆದರೆ ಆ ಜ್ಞಾನವು ವಾಕ್ಯಜನ್ಯ ರೂಪವಾದುದಲ್ಲವು, ಮನೋಬುದ್ಧಿಗಳ ವ್ಯಾಪಾರರೂಪವಾದ ತೈಲಧಾರೆಯಹಾಗೆ ಸ್ಮೃತಿ ಸಂತಾನರೂಪವಾದುದು. ಆದುದರಿಂದ ಈ ಜ್ಞಾನರೂಪೋಽಪಾಸನೆಯೂ, ಮನೋ ವ್ಯಾಪಾರರೂಪವಾದುದರಿಂದ ಇದನ್ನು ಸಾಧ್ಯೋಽಪಾಯಾನುಷ್ಠಾನವೆಂದು ಹೇಳುವೆವು. ಶ್ರೀ ಯತಿವರ್ಯರೂ ಕಾರಣಗಳನ್ನೆಲ್ಲಾ ಉಪಪಾದಿಸಿ ಪ್ರಥಮ ಸೂತ್ರದ ಶ್ರೀ ಭಾಷ್ಯದಲ್ಲಿ **"ಅತಃ ವಾಕ್ಯಾರ್ಥ ಜ್ಞಾನಾ ದನ್ಯದೇವ ಧ್ಯಾನೋಽಪಾಸನಾದಿ ಶಬ್ದವಾಚ್ಯಂ ಜ್ಞಾನು ವೇದಾನ್ತವಾಕ್ಯೈರ್ವಿಧಿತ್ಸಿತಮ್"** ಎಂದು ಅಪ್ಪಣೆ ಕೊಡಿಸಿರುತ್ತಾರೆ. ಇಲ್ಲಿ ಜ್ಞಾನಶಬ್ದದಿಂದ ಹೇಳಲ್ಪಟ್ಟಿದುದು ವಾಕ್ಯಜನ್ಯ ಜ್ಞಾನಕ್ಕಿಂತ ಬೇರೆಯಾದ ಧ್ಯಾನೋಪಾಸನ ಶಬ್ದಗಳಿಂದ ವೇದಾಂತಶಾಸ್ತ್ರದಲ್ಲಿ **"ಧ್ಯಾಯೀತ, ಉಪಾಸೀತ"** ಇತ್ಯಾದಿ ವಾಕ್ಯಗಳಿಂದ ವಿಧಿಸಲ್ಪಟ್ಟಿರುವದೆಂದು ಹೇಳುತ್ತಾರೆ. ಆದುದರಿಂದ ಬರೀ ಜ್ಞಾನವು ಕಾರ್ಯಕಾರಿಯಲ್ಲವೆಂದು ಅನುಷ್ಠಾನ ಪರ್ಯಂತವಾದುದೂ ಎಂದೂ ತಿಳಿಸಿದರು. **ಮತ್ಪ್ರಾಪ್ತಿ ವಿರೋಧಿನಃ** - ನನ್ನ ಪ್ರಾಪ್ತಿಗೆ ಪ್ರತಿಬಂಧಕಗಳಾಗಿರುವ **ಸರ್ವಸ್ಮಾ ದಶುಭಾತ್** - ಸಮಸ್ತ ಪುಣ್ಯಪಾಪಗಳಿಂದಲೂ, **ಮೋಕ್ಷ್ಯಸೇ** - ಬಿಡಲ್ಪಡುತ್ತೀಯೇ. ಹೀಗೆ ಅನಿಷ್ಟ ನಿವೃತ್ತಿ ಯಾವಾಗ ಆಯಿತೋ, ಆಗ ಇಷ್ಟಪ್ರಾಪ್ತಿಯಾದ ಪರಮಾತ್ಮಪ್ರಾಪ್ತಿಯು ನಿಸ್ಸಂಶಯವೆಂಬ ಭಾವವು. ಪಾಪವು ಹೇಗೆ ಪರಮಾತ್ಮ ಪ್ರಾಪ್ತಿಗೆ ವಿರೋಧವೋ, ಪುಣ್ಯವೂ ಹಾಗೆಯೇ ನಶ್ವರವಾದ ಸ್ವರ್ಗಾದಿ ಇತರ ಲೋಕ ಭೋಗಗಳನ್ನು ಕೊಟ್ಟು ಅನಂತರ ಪುನಸ್ಸಂಸಾರಕ್ಕೆ ಹೇತುವಾಗುವದರಿಂದ ಎರಡೂ ಬಂಧಕವು. ಆದುದರಿಂದ ಸರ್ವಸ್ಮಾತ್ ಎಂಬ ಪ್ರಯೋಗವು. ಪಾಪವು ಕಬ್ಬಿಣದ ಸಂಕೋಲೆಯಾದರೆ, ಪುಣ್ಯವು ಚಿನ್ನದ ಬೇಡಿಯು. ಇಷ್ಟುಮಾತ್ರವೇ ವ್ಯತ್ಯಾಸವು. ಆದುದರಿಂದ ಪುಣ್ಯಪಾಪಗಳೆರಡೂ ಮೋಕ್ಷಪ್ರಾಪ್ತಿಗೆ ಕಳೆಯಬೇಕು ಎಂದು ಶ್ರುತಿಯು, **"ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ"** ಎಂದು ಹೇಳುತ್ತದೆ. ಆದರೆ

**ಮೂ. ರಾಜವಿದ್ಯಾ ರಾಜಗುಹ್ಯಂ ಪವಿತ್ರ ಮಿದಂ ಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತು ಮವ್ಯಯಮ್ ॥** ೨.

ಹಿಂದೆ ಕರ್ಮಯೋಗ ಮಾಹಾತ್ಮ್ಯೆಯನ್ನು ತಿಳಿಸುವಾಗ ಅದೂ ಪಾಪಗಳನ್ನೂ ಹೋಗಲಾಡಿಸುತ್ತದೆಂದು ಹೇಳಲ್ಪಟ್ಟಿತಲ್ಲಾ ಎಂದರೆ, ಅಲ್ಲಿ ಹೇಳಿದ ಪಾಪಗಳು ಆತ್ಮಾವಲೋಕನಕ್ಕೂ, ಭಕ್ತ್ಯುತ್ಪತ್ತಿಗೂ, ಪ್ರತಿಬಂಧಕಗಳಾದ ಪಾಪಗಳ ನಾಶವು ಮಾತ್ರ ಹೇಳಲ್ಪಟ್ಟಿತು; ಇಲ್ಲಿಯಾದರೋ, ಭಗವತ್ಪ್ರಾಪ್ತಿಗೆ ವಿರೋಧಿಗಳಾದ ಸರ್ವಪಾಪಗಳ ನಾಶವು ಉಪದೇಶಿಸಲ್ಪಟ್ಟಿತು, ಹೀಗೆ ಅನಿಷ್ಟ ನಿವೃತ್ತಿಯು ಲಭಿಸಿಯೇ ಇಷ್ಟಪ್ರಾಪ್ತಿಯು ಎಂಬುದು ಮೂಲ ಮನ್ತ್ರಾರ್ಥದಲ್ಲಿ ವ್ಯಕ್ತವು. ಮೂಲಮನ್ತ್ರದ ಮೊದಲನೆಯ ಪದವಾದ ಪ್ರಣವವು ತನ್ನ ಪರಶೇಷತ್ವವನ್ನು ಬೋಧಿಸುತ್ತದೆ. ಎರಡನೆಯ ಶಬ್ದವಾದ ನಮಸ್ಸನ್ನು ಒಂದು ವಾಕ್ಯವಾಗಿ ಭಾವಿಸಿದರೆ, **"ಅಹಂ ನಮಮಸ್ಯಾಮ್" "ನಮಮಕಿಂಚಿತ್ಸ್ಯಾತ್"** ಎಂಬ ಯೋಜನೆಗಳಿಂದ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯೂ ಮುಂದಿನ **ನಾರಾಯಣಾಯ** ಎಂಬ ಪದವೂ **ನಾರಾಯಣಾಯಸ್ಯಾಮ್** ಎಂದಾಗಿ, ಸರ್ವವಿಧ ಕೈಙ್ಕರ್ಯಗಳನ್ನು ನಾನು ಮಾಡುವನಾಗುವೆನು ಎಂಬುದರಿಂದ ಪರಿಪೂರ್ಣ ಬ್ರಹ್ಮಾನುಭವದೊಂದಿಗೆ ನಿತ್ಯಕೈಙ್ಕರ್ಯ ಪ್ರಾಪ್ತಿಯ ಪ್ರಾರ್ಥನೆಯು ತೋರಿಬರುತ್ತದೆ. ಆದುದರಿಂದ ಮೊದಲನೆಯ ಪ್ರಾರ್ಥನೆಯಾದ ಅನಿಷ್ಟ ನಿವೃತ್ತಿಯೇ ಇಲ್ಲಿ ಹೇಳಲ್ಪಟ್ಟಿತು. ಮುಂದೆ ೨೮ನೆಯ ಶ್ಲೋಕದಲ್ಲಿ **"ಶುಭಾಶುಭ ಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ । ಸನ್ಯಾಸ ಯೋಗಯುಕ್ತಾತ್ಮಾವಿಮುಕ್ತೋ ಮಾಮುಪೈಷ್ಯಸಿ"** ಎಂಬಲ್ಲಿ ಇವೆರಡೂ ಹೇಳಲ್ಪಡುತ್ತವೆ. ಪ್ರಕೃತಿ ಸಂಬಂಧವಿಲ್ಲದೆಯೂ ಪರಮಾತ್ಮ ಸಾಯುಜ್ಯವಿಲ್ಲದೆಯೂ ಇಲ್ಲದಿರುವ ಕೈವಲ್ಯರೂಪ ಪ್ರಾಪ್ತಿಯೂ ಇರುವದರಿಂದ, ಎರಡೂ ಆವಶ್ಯಕವು; ಅದರ ಪ್ರಥಮದಲ್ಲಿ ಅನಿಷ್ಟನಿವೃತ್ತಿಯೂ ಆವಶ್ಯಕವೆಂಬ ಭಾವವನ್ನು **ಮೋಕ್ಷ್ಯಸೇಽಶುಭಾತ್"** ಎಂಬ ಪ್ರಯೋಗವು ಸೂಚಿಸುತ್ತದೆ.

**ಮೂಲಕ್ಕೆ ಅರ್ಥವು :—** ಹಿಂದಿನ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನರವರು ಅರ್ಜುನನಿಗೆ ಅಮೋಘವಾದ ತನ್ನ ಪ್ರಾಪ್ತಿಯನ್ನೇ ವಶಮಾಡಿಕೊಡುವ ಜ್ಞಾನವನ್ನೂ ಅದಕ್ಕನುಗುಣವಾದ ತಾವು ಹೇಳುವ ಅನುಷ್ಠಾನವನ್ನೂ ಉಪದೇಶಿಸಿದರು. ಅದರ ಅನುಷ್ಠಾನವು ಬಹು ಕಷ್ಟಸಾಧ್ಯವೆಂದೇನಾದರೂ ತಿಳಿದು, ಎಲ್ಲಿ ಹಿಂತೆಗೆಯುವನೋ ಎಂದು ಯೋಚಿಸಿ, ಅದನ್ನೇ ಇನ್ನೂ ಹೆಚ್ಚಾಗಿ ಕೊಂಡಾಡಿ, ಅನುಷ್ಠಾನವೂ ಸುಸುಖವೆಂದು ಉಪದೇಶಿಸುತ್ತಾರೆ.— ಓ ಅರ್ಜುನನೇ ನಾನು ಈಗ ನಿನಗೆ ಉಪದೇಶಿಸಬೇಕೆಂದಿರುವದು ಇನ್ನೂ ಎಂತಾದ್ದೆಂದು ಕೇಳುವಿಯೋ ? **ರಾಜವಿದ್ಯಾ** - ವಿದ್ಯೆಗಳೆಲ್ಲೆಲ್ಲಾ ರಾಜಾ, ಸರ್ವಶ್ರೇಷ್ಠವಾದ ವಿದ್ಯೆಯು, ಹಾಗೆಯೇ **ರಾಜ ಗುಹ್ಯಂ** - ಎಲ್ಲಾ ಗೋಪ್ಯವಾದ ಉಪದೇಶಗಳಿಗಿಂತಲೂ ಗೋಪ್ಯವಾದುದು, ಬ್ರಹ್ಮವಿದ್ಯೆಯಾದುದರಿಂದ ಅತ್ಯಂತ ಗೋಪ್ಯವಾದುದೆಂಬ ಭಾವವು ; ಇದಕ್ಕೆ ಯೋಗ್ಯರಲ್ಲದ ಅಧಿಕಾರಿಗಳಿಗೆ ಉಪದೇಶಿಸತಕ್ಕದಲ್ಲವೆಂಬುದು ಸೂಚಿತವು ; ಇನ್ನು ಎಂತಾದ್ದೆಂದರೆ, **ಇದಂ ಉತ್ತಮಂ ಪ್ರವಿತ್ರಂ** - ಇದು ಪ್ರವಿತ್ರವಾದವುಗಳಲ್ಲೆಲ್ಲಾ ಸರ್ವಶ್ರೇಷ್ಠವಾದದುದರಿಂದ ಉತ್ತಮವಾಗಿ ಪ್ರವಿತ್ರವಾದುದು, **ಪ್ರತ್ಯಕ್ಷಾವಗಮಂ** - ಇದು ಪರಮಾತ್ಮನಾದ ನನ್ನನ್ನು ಪ್ರತ್ಯಕ್ಷೀಕರಿಸಿಯೇ ತಿಳಿಯತಕ್ಕಂಥಾದುದು, ಎಂದರೆ ಪರಮಾತ್ಮ ಪ್ರತ್ಯಕ್ಷವನ್ನುಂಟುಮಾಡುವದರಿಂದ ಪ್ರತ್ಯಕ್ಷವಾಗಿಯೇ ಗ್ರಾಹ್ಯವಾದ ವಿದ್ಯೆಯು, **ಧರ್ಮ್ಯಂ** - ಧರ್ಮದಿಂದ ಕೂಡಿದುದು, ಧರ್ಮವೆಂದರೆ ಪರಮ ನಿಶ್ಶ್ರೇಯಸ್ಸಿಗೆ ಸಾಧನಭೂತವಾದುದು, ಅಂತಹ ಧರ್ಮದಿಂದ **ಕೂಡಿದುದು** ಎಂದರೆ ನನ್ನ ಪ್ರಾಪ್ತಿಗೆ ಸಾಧನಭೂತವಾದುದು, ಅದೂ ಅಲ್ಲದೆ, **ಕರ್ತುಂ ಸುಸುಖಂ** - ಈ ಉಪಾಸನವು ಅನುಷ್ಠಿಸಲು ತುಂಬಾ ಸುಖಕರವಾದುದು, ಅದು ಹೇಗೆ ? ಎಂದರೆ ಅದರನುಷ್ಠಾ

ನದ ಅಭ್ಯಾಸ ಉಂಟಾದರೆ ಶ್ರಮವೇನೂ **ತೋರುವದಿಲ್ಲವು** ; ಆದುದರಿಂದ ಸ್ವರೂಪದಿಂದಲೂ ಅನುಕೂಲವಾದುದೇ ; ಇನ್ನೂ ಅನುಷ್ಠಾನಕಾಲದಲ್ಲಿ **ಚಿತ್ತಕ್ಕೆ** ಪರಮಾಹ್ಲಾದಕರವಾಗುವದರಿಂದಲೂ ಸುಸುಖವೇ ; ಮನಸ್ಸಿಗೆ ಯಾವಾಗ ಸುಖ ಉಂಟಾಯಿತೋ, ಆಗ ಸುಸುಖವೇ ಎಂಬ ಭಾವವು ; ಮತ್ತು ಅದು ಮತ್ಪ್ರೀಣನವನ್ನುಂಟು ಮಾಡುತ್ತದೆಂಬ ಪೂರ್ಣನಂಬಿಕೆ ನಿನಗುಂಟಾಗುವದರ ಮೂಲಕವೂ ಸುಸುಖವು ; ಹೀಗೆ ಈ ಮೂರುವಿಧವಾಗಿ ನೀನು ಪರ್ಯಾಲೋಚಿಸಿದರೂ ನಿನಗಿದು ಅನುಕೂಲವಾಗಿಯೇ ತೋರುವದರಿಂದ, **ಸುಸುಖಂ**-ಅತ್ಯಂತ ಸುಖಕರವಾದುದು; ಯಾವುದು ಅನುಕೂಲವೋ ಅದೇ ಸುಖವು, ಯಾವುದು ಪ್ರತಿಕೂಲವೋ ಅದೇ ದುಃಖವು, ಉಪಾಸನವು ಸುಖಕರವಾದುದೆಂಬುದಕ್ಕೆ **"ಮಾನಸ ಮಿತಿ ವಿದ್ವಾಂಸ ಸ್ತಸ್ಮಾದ್ವಿದ್ವಾಂಸ ಏವ ಮಾನಸೇ ರಮನ್ತೇ** (ತೈ. ನಾರಾ. ೪. ೪೯) ಎಂಬ ಶ್ರುತಿ ಪ್ರಮಾಣವುಂಟು. ಸುಸುಖವಾದುದರಿಂದಲೇ ಅದನ್ನನುಷ್ಠಿಸಿ ಭಗವದುಪಾಸಕರು ರಮಿಸುವರು ಎಂದು ಹೇಳಲ್ಪಟ್ಟಿರುತ್ತದೆ, ಈ ಪ್ರಕರಣವು ಯಾವುದೆಂದರೆ.—ಯಜ್ಞ, ದಾನ, ತಪಸ್ಸೇ ಮೊದಲಾದವುಗಳ ಮಹಾತ್ಮ್ಯೆಯನ್ನು ತಿಳಿಸುತ್ತಾ, ಇವುಗಳೆಲ್ಲಕಿಂತಲೂ ಉಪಾಸನವು ಶ್ರೇಷ್ಠವೆಂದು ಹೇಳಿ, ಅದು ತುಂಬಾ ಆಹ್ಲಾದಕರವಾದುದೆಂದು ತಿಳಿಸಿ, ಅದಕ್ಕಿಂತಲೂ ಮತ್ತು ಎಲ್ಲದಕಿಂತಲೂ ಶ್ರೇಷ್ಠವಾದುದು ನ್ಯಾಸವಿದ್ಯೆ ಎಂದು **"ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ"** ಎಂದು ಮುಗಿಸಿ, ಆ ನ್ಯಾಸವು ಯಾವುದೆಂದರೆ **"ಓಮಿತ್ಯಾತ್ಮಾನಂ ಯುಂಜೀತ"** ಎಂದು ಆತ್ಮನಿಕ್ಷೇಪವನ್ನು ಹೇಳಿ, ಇದೇ **"ಮಹೋಪನಿಷದಂ ದೇವಾನಾಂ ಗುಹ್ಯಂ"** ಎಂದು ಹೇಳಲ್ಪಟ್ಟಿರುತ್ತದೆ. ಹೀಗೆಯೇ ೧೮ನೆಯ ಅಧ್ಯಾಯದಲ್ಲೂ ಮೊದಲು ಉಪಾಸನವನ್ನು **"ಮನ್ಮನಾಭವ"** ಎಂಬಲ್ಲಿ **ಕೊಂಡಾಡಿ,** ಚರಮಶ್ಲೋಕದಲ್ಲಿ, ಈ ನ್ಯಾಸವಿದ್ಯೆಯೂ ಸಹ ಕೊಂಡಾಡಲ್ಪಟ್ಟಿರುತ್ತದೆ. ಆದುದರಿಂದ ಈ ಭಗವದ್ಗೀತೆಯಲ್ಲಿ ಕೊಂಡಾಡಲ್ಪಟ್ಟಿರುವ ಈ ಉಪಾಸನರೂಪವಿದ್ಯೆಯೂ, ಈ ತೈತ್ತರೀಯಾದಿ ಶ್ರುತಿಗಳಲ್ಲಿ ಕೊಂಡಾಡಲ್ಪಟ್ಟಿರುವ ನ್ಯಾಸವಿದ್ಯೆಯೂ ಇವೆರಡೇ ಪರಮಾತ್ಮ ಪ್ರಾಪ್ತಿಯನ್ನು ಸಾಧಿಸಿಕೊಡುವ ಸಾಧ್ಯೋಪಾಯಗಳು ಎಂದು ತಿಳಿಯತಕ್ಕದ್ದು.

ಈ ಉಪಾಸನರೂಪ ಜ್ಞಾನವು ಇನ್ನೂ ಎಂತಾದ್ದೆಂದರೆ, **ಅವ್ಯಯಂ** - ಕೆಲವು ಕರ್ಮಗಳಾದರೋ, ಅವರ ಫಲವನ್ನು ಸಾಧಿಸಿಕೊಟ್ಟು ಬಿಡುವದರ ಮೂಲಕ, ಆ ಕರ್ಮವು ನಾಶ ಹೊಂದುತ್ತದೆ, ಅದು ವ್ಯಯರೂಪವಾದುದು, ಈ ಉಪಾಸನವಾದರೋ ಭಗವಂತನನ್ನು ಅತ್ಯರ್ಥ ಪ್ರಿಯನನ್ನಾಗಿ ಮಾಡಿ, ಅಕ್ಷಯಫಲಗಳನ್ನುಂಟುಮಾಡುವದಾಗಿ, ಕಡೆಗೆ ಮೋಕ್ಷವನ್ನೂ ಒದಗಿಸಿಕೊಟ್ಟು ಹೀಗೆ ಭಗವಂತನಿಗೆ ಉಪಾಸಕನು ಪರಮ ಪ್ರಿಯನಾಗುವದರಿಂದ ಇಂತವನಿಗೆ ಇನ್ನೂ ಕೊಡಲು ಇನ್ನೇನೂ ಇಲ್ಲವೇ ಎಂಬದಾಗಿ ಆತನ ಪರಮದಾತೃತ್ವವನ್ನು ವೃದ್ಧಿಗೊಳಿಸುವ ಮೂಲಕ ಉಪಾಸನೆಯು **ಅವ್ಯಯವು** - ಅಕ್ಷಯಫಲವನ್ನುಂಟುಮಾಡತಕ್ಕದ್ದೆಂಬ ಭಾವವು. ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲವು. ಅನ್ವಯವು ಹೇಗೆ ಎಂದರೆ, ಒಂದಿನ ಶ್ಲೋಕದಲ್ಲಿ **ಯಜ್ಜ್ಞಾತ್ವಾ** ಎಂದಿರುವದರಿಂದ, ಇಲ್ಲಿ **ತತ್** ಎಂದು ಇಟ್ಟುಕೊಂಡು, **ಸಾ ರಾಜವಿದ್ಯಾ, ರಾಜಗುಹ್ಯಂತತ್** ಎಂದು ಅನ್ವಯಿಸಿಕೊಳ್ಳಬಹುದು. ಹಾಗೆ ಅಂತಹ ವಿದ್ಯೆಯಿಂದ ನೀನು ಅಶುಭಗಳಿಂದ ಮೋಕ್ಷವನ್ನು ಹೊಂದುವದರಿಂದಲೇ, ಅದು, ರಾಜವಿದ್ಯಾ ರಾಜಗುಹ್ಯವು ಎಂಬ ತಾತ್ಪರ್ಯವು.

**ಭಾಷ್ಯಾರ್ಥವು :—**ತಾವು ಈಗ ಮಾಡುವ ಉಪದೇಶದ ಮಾಹಾತ್ಮ್ಯೆಯು ಅಸದೃಶವಾದುದೆಂದೂ ಅದು ಅನುಷ್ಠಾನಕ್ಕೆ ಸುಸುಖವಾದುದೆಂದೂ ಉಪದೇಶಿಸುತ್ತಾರೆ— ಇತರೋಪಾಯಗಳಾದ ಭರನ್ಯಾಸ, ಭಾಗವತ ಸಂಶ್ರಯಣಾದಿಗಳಿಗಿಂತ ಈ ಭಗವದುಪಾಸನದಲ್ಲಿರುವ

**ಭಾ. ರಾಜವಿದ್ಯಾ-ವಿದ್ಯಾನಾಂ ರಾಜಾ, ರಾಜಗುಹ್ಯಂ-ಗುಹ್ಯಾನಾಂ ರಾಜಾ, ರಾಜ್ಞಾಂ ವಿದ್ಯೇತಿವಾ ರಾಜವಿದ್ಯಾ; ರಾಜಾನೋಹಿ ವಿಸ್ತೀರ್ಣಾಗಾಧಮನಸಃ, ಮಹಾಮನಸಾಮಿಯಂ ವಿದ್ಯೇತ್ಯರ್ಥಃ : ಮಹಾಮನಸ ಏವ ಗೋಪನೀಯ ಗೋಪನ ಕುಶಲಾ ಇತಿ ತೇಷಾ ಮೇವ ಗುಹ್ಯಮಿದಮ್ ; ಉತ್ತಮಂ ಪವಿತ್ರಂ-ಮತ್ಪ್ರಾಪ್ತಿವಿರೋಧ್ಯಶೇಷಕಲ್ಮಷಾಪಹಂ, ಪ್ರತ್ಯಕ್ಷಾವಗಮಂ-ಅವಗಮ್ಯತೇ ಇತ್ಯವಗಮೋ ವಿಷಯಃ,**

ನಿರತಿಶಯಾನಂದದ ಮಹಿಮೆಯನ್ನು **"ಭಜನ ಸುಖಮೇಕಸ್ಯವಿಪುಲಂ"** (ಉಪಾಯವಿಭಾಗಾಧಿಕಾರ) ಎಂದು ಹೇಳಿರುವಹಾಗೆ, ಕೊಂಡಾಡುತ್ತಾರೆ. **ರಾಜಾವಿದ್ಯಾ** ಎಂದರೆ **ವಿದ್ಯಾನಾಂ ರಾಜಾ** - ವಿದ್ಯೆಗಳಲೆಲ್ಲಾ ಸರ್ವ ಶ್ರೇಷ್ಠವಾದುದು, **ರಾಜಗುಹ್ಯಂ** ಎಂದರೆ **ಗುಹ್ಯಾನಾಂ ರಾಜಾ** ರಹಸ್ಯವಾದ ವಿದ್ಯೆಗಳಲ್ಲೂ ಅತ್ಯಂತ ರಹಸ್ಯವಾದುದು. ಆದರೆ, **ರಾಜ್ಞಾಂ ವಿದ್ಯಾ** - ರಾಜರುಗಳ ವಿದ್ಯೆ ಎಂದು ಅರ್ಥಮಾಡಬಹುದಲ್ಲಾ ಎಂದರೆ ಹಾಗೆ ಅರ್ಥಮಾಡಿದರೆ ಬ್ರಾಹ್ಮಣವೈಶ್ಯರಾದ ಇತರ ಎರಡು ಅಧಿಕಾರವಿರುವವರಿಗೆ ಇದು ವಿದ್ಯೆಯಲ್ಲವು ಎಂದು ಕ್ಷತ್ರಿಯರಿಗೆ ಮಾತ್ರ ವಿದ್ಯೆಯೆಂಬೂ ಏರ್ಪಡುತ್ತದೆಯಾದುದರಿಂದ, ಹಾಗೆ ಅರ್ಥಮಾಡುವದು ಸರಸವಲ್ಲವು. ಶೂದ್ರರಿಗೇನೋ ಉಪಾಸನದಲ್ಲಿ ಅಧಿಕಾರವಿಲ್ಲವೆಂದು ಅಪಶೂದ್ರಾಧಿಕರಣದಲ್ಲಿ ಉಪಪಾದಿತವು ಮಿಕ್ಕ ಮೂರು ವರ್ಣದವರಿಗೆಲ್ಲಾ ಅಧಿಕಾರ ಉಂಟು, ಅರ್ಜುನನೂ ರಾಜನಾದುದರಿಂದ ಆತನಿಗೂ ಅಧಿಕಾರ ಉಂಟೆಂದು ತಿಳಿಸುವುದಕ್ಕಾಗಿ, ರಾಜರುಗಳಿಗೆ ಅರ್ಹವಾದ ವಿದ್ಯೆಯೆಂದು ಏಕೆ ಅರ್ಥಮಾಡಕೂಡದೆಂದು ಆಕ್ಷೇಪತೇದರೆ, ಅರ್ಥವು ಮೇಲಿನಷ್ಟು ಸ್ವಾರಸ್ಯವಿಲ್ಲದಿದ್ದರೂ ಹಾಗೂ ಅನ್ವಯಿಸಬಹುದು, ಹೇಗೆಂದರೆ ತಿಳಿಸುತ್ತಾರೆ. ಹಾಗೆ ಅನ್ವಯಿಸುವಾಗ ಬ್ರಾಹ್ಮಣಾದಿಗಳು ವ್ಯಾವರ್ತಿಸದಹಾಗೆ ಲಾಕ್ಷಣಿಕಾರ್ಥವನ್ನು ಬೋಧಿಸುತ್ತಾರೆ. ರಾಜಶಬ್ದವು ಶ್ರೇಷ್ಠವಾಚೀಯಾದುದರಿಂದ ರಾಜರು ಹೇಗೆ ಶ್ರೇಷ್ಠರೆಂಬುದನ್ನು ಉಪಪಾದಿಸಿ ಅನ್ವಯಿಸುತ್ತಾರೆ **ರಾಜವಿದ್ಯಾ** ಎಂದರೆ **ರಾಜ್ಞಾಂ ವಿದ್ಯೇತಿವಾ** - ರಾಜರುಗಳಿಗೆ (ಅರ್ಹವಾದ) ವಿದ್ಯೆ ಎಂದಾಗಲಿ ಆಗಬಹುದು, ಹೇಗೆಂದರೆ **ರಾಜಾನೋಹಿ** - ರಾಜರುಗಳಾದರೋ, **ವಿಸ್ತೀರ್ಣಾಗಾಧ ಮನಸಃ** ವಿಸ್ತೀರ್ಣವಾದುದಾಗಿಯೂ ಅಗಾಧವಾಗಿಯೂ ಇರುವ ಮನಸ್ಸುಳ್ಳವರು; ಇಂತವರೇ ಬ್ರಹ್ಮವಿದ್ಯಾಧಿಕಾರಿಯಾಗಿ ಉಪಾಸನಕ್ಕೆ ಅರ್ಹರು ಎಂಬ ಭಾವವು. **ಮಹಾಮನಸಾಂ** - ಇಂತಹ ಮಹತ್ತಾದ ಮನಸ್ಸುಳ್ಳವರಿಗೆ, **ಇಯಂ ವಿದ್ಯೇತ್ಯರ್ಥಃ** - ಇದೀಗ ವಿದ್ಯೆಯೆಂಬ ಭಾವವು. ರಾಜರುಗಳು ಮಹಾ ಮನಸ್ಕರಾಗಿ ಮಹಾಪೂಜ್ಯರಾಗಿ ವಿಷ್ಣ್ವಂಶವಿರುವವರಾಗಿ ಕ್ಷತ್ರಿಯರಾಗಿರುವದರಿಂದ, ಮುಖ್ಯವಾಗಿ ಅವರುಗಳಿಗೂ ಯೋಗ್ಯವಾದ ವಿದ್ಯೆಯೆಂಬುದು ತಾತ್ಪರ್ಯವು. **ಮಹಾಮನಸ ಏವ** - ಇಂತಹ ಮನಸ್ಸುಳ್ಳವರು ತಾನೇ, **ಗೋಪನೀಯ ಗೋಪನ ಕುಶಲಾಃ** - ರಹಸ್ಯವಾದುದನ್ನು ರಹಸ್ಯವಾಗಿ ಇಡುವದರಲ್ಲಿ ಚತುರರು, **ಇತಿ**- ಆದುದರಿಂದ, **ತೇಷಾಮೇವ**- ಅಂತಹ ರಾಜರುಗಳಿಗೇನೆ, **ಗುಹ್ಯಮಿದಮ್** - ನಾನು ಈಗ ಉಪದೇಶಿಸುವದು ರಹಸ್ಯವಾದುದು, ರಾಜರುಗಳು ಭಗವದನುಗ್ರಹವುಳ್ಳವರು. ಅಂತವರು ಇಂತಹ ಸಾಧ್ಯೋಪಾಯಾನುಷ್ಠಾನವನ್ನೂ ಅವಲಂಬಿಸಲು ಅರ್ಹರು. ಈ ವಿಷಯದಲ್ಲೂ ಅವರಿಗೆ ದೈವಾನುಗ್ರಹ ಉಂಟೆಂಬುದು ದ್ಯೋತಿತವು. **ಉತ್ತಮಂಪವಿತ್ರಂ** ಎಂದರೆ **ಮತ್ಪ್ರಾಪ್ತಿ ವಿರೋಧ್ಯ ಶೇಷ ಕಲ್ಮಷಾಪಹಂ** - ನನ್ನ ಪ್ರಾಪ್ತಿಗೆ ಪ್ರತಿಬಂಧಕಗಳಾಗಿರುವ ಪಾಪ ಪುಣ್ಯಗಳಾದ ಸಮಸ್ತಪಾಪಗಳನ್ನು ನಿರಸನಮಾಡುವಂತವು, ಕರ್ಮಯೋಗಾದಿಗಳು ಆತ್ಮಾವಲೋಕನ ಪ್ರತಿಬಂಧಕ ಪಾಪಗಳನ್ನು ಹೋಲಾಡಿಸುವದರಿಂದ **ಪವಿತ್ರಗಳು**, ಇದಾದರೋ ಸರ್ವಪುಣ್ಯ ಪಾಪಗಳನ್ನೂ, **"ಯಥೈಷಿಕಾತೂಲ ಮಗ್ನೌ ಪ್ರದೂಯೇತ ತಥಾಹಾಸ್ಯ ಸರ್ವೇ ಪಾಪ್ಮಾನಃ ಪ್ರದೂ**

**ಭಾ. ಪ್ರತ್ಯಕ್ಷಭೂತೋಽವಗಮೋ ವಿಷಯೋಽಯಸ್ಯ ಜ್ಞಾನಸ್ಯ ತತ್ಪ್ರತ್ಯಕ್ಷಾವಗಮಮ್, ಭಕ್ತಿರೂಪೇಣೋಪಾಸನೇನೋಽಪಾಸ್ಯಮಾನೋಽಹಂ ತದಾನೀಮೇವೋಪಾಸಿತುಃ ಪ್ರತ್ಯಕ್ಷತಾ ಮುಪಗತೋ ಭವಾಮಿತ್ಯರ್ಥಃ। ಅಥಾಪಿ, ಧರ್ಮ್ಯಂ-ಧರ್ಮಾದನಪೇತಂ, ಧರ್ಮತ್ವಂ ಹಿ ನಿಶ್ಶ್ರೇಯಸ ಸಾಧನತ್ವಮ್ ; ಸ್ವರೂಪೇಣೈವಾತ್ಯರ್ಥಪ್ರಿಯತ್ವೇನ ತದಾನೀಮೇವ ಮದ್ದರ್ಶನಾಪಾದನತಯಾ ಚ ಸ್ವಯಂ ನಿಶ್ಶ್ರೇಯಸ ರೂಪಮಪಿ ನಿರತಿಶಯ ನಿಶ್ಶ್ರೇಯಸ ರೂಪಾತ್ಯನ್ತಿಕ ಮತ್ಪ್ರಾಪ್ತಿ ಸಾಧನಯಂತೇ"** "ಶಣಬಿನ ಹತ್ತಿಯು ಅಗ್ನಿಯಲ್ಲಿ ಬಿದ್ದರೆ ಹೇಗೆ ಭಗ್ಗೆಂದು ಹತ್ತಿ ಉರಿದು ಹೋಗುತ್ತದೆಯೋ, ಹಾಗೇಯೇ ಈ ಬ್ರಹ್ಮೋಪಾಸಕನ ಸಮಸ್ತ ಪುಣ್ಯಪಾಪಗಳೂ ಉರಿದು ಹೋಗುತ್ತವೆ" ಎಂದು ಹೇಳಿರುವಹಾಗೆ ನಾಶಮಾಡುವುದರಿಂದ **ಉತ್ತಮ ಪವಿತ್ರವು. ಪ್ರತ್ಯಕ್ಷಾವಗಮಂ** ಎಂಬುದರ ಅರ್ಥವನ್ನು ತಿಳಿಸುತ್ತಾರೆ.—**ಅವಗಮ್ಯತೇ ಇತಿ ಅವಗಮೋ ವಿಷಯಃ**- ಯಾವುದು ತಿಳಿಯಲ್ಪಡುತ್ತದೋ, ಅದು ಅವಗಮವೆಂದು ಹೇಳಲ್ಪಡುತ್ತದೆ ; ಅದು ಯಾವುದೆಂದರೆ ವಿಷಯವು ; **ಪ್ರತ್ಯಕ್ಷಭೂತೋಽವಗಮೋ ವಿಷಯೋ ಯಸ್ಯಜ್ಞಾನಸ್ಯ** - ಯಾವ ಜ್ಞಾನಕ್ಕೆ, ಪ್ರತ್ಯಕ್ಷವಾದ ವಿಷಯ ಉಂಟೋ ಎಂದರೆ, **ತತ್** - ಅದು ಪ್ರತ್ಯಕ್ಷಾವಗಮವೆಂದು ಹೇಳಿಸಿಕೊಳ್ಳುತ್ತದೆ, ಎಂದರೆ ಈ ಉಪಾಸನರೂಪ ಜ್ಞಾನಕ್ಕೆ ಪರಮ ಪುರುಷ ಸಾಕ್ಷಾತ್ಕಾರವು ವಿಷಯವಾಗುತ್ತದೆಂಬ ಭಾವವು. ಅದನ್ನೇ ವ್ಯಕ್ತಪಡಿಸುತ್ತಾರೆ. **ಭಕ್ತಿರೂಪೇಣೋಪಾಸನೇನ** - ಈಗ ನಾನು ಉಪದೇಶಿಸುವ ಈ ಭಕ್ತಿರೂಪವಾದ ಉಪಾಸನದಿಂದ, **ಉಪಾಸ್ಯಮಾನೋಽಹಂ** - ಉಪಾಸಿಸಲ್ಪಡುವ ನಾನು, **ತದಾನೀಮೇವ** - ಆ ಉಪಾಸನಾನುಷ್ಠಾನ ಕಾಲದಲ್ಲೇ, **ಉಪಾಸಿತುಃ** - ಉಪಾಸಕನಿಗೆ, **ಪ್ರತ್ಯಕ್ಷತಾ ಮುಪಗತೋ ಭವಮಿತ್ಯರ್ಥಃ** ಪ್ರತ್ಯಕ್ಷವನ್ನು ಹೊಂದಿದವನಾಗುವೆನು ಎಂದರೆ ಪ್ರತ್ಯಕ್ಷನಾಗುವನೆಂಬ ತಾತ್ಪರ್ಯವು. ಮುಂದೆ ೧೧-೫೪ ರಲ್ಲಿ ಹಾಗೆಯೇ **"ಭಕ್ತ್ಯಾತ್ವನನ್ಯಯಾಶಕ್ಯಃ"** ಎಂದು ಸಮರ್ಥನೆಮಾಡಿ ಹೇಳಿರುತ್ತಾರೆಯಾದುದರಿಂದ ಈ ವಿಷಯ ಭಾವನೆಯಲ್ಲಿ ಸ್ವಲ್ಪವೂ ಸಂದೇಹವಿಲ್ಲವು. ಹೀಗೆ ಪರಬ್ರಹ್ಮ ಸಾಕ್ಷಾತ್ಕಾರವು ಉಪಾಸನಕಾಲದಲ್ಲೇ ಉಂಟಾಗುತ್ತದೆ ಎಂದು **ಪ್ರತ್ಯಕ್ಷಾವಗಮಂ** ಎಂದು ಹೇಳಿರುವುದು ಅರ್ಜುನನಿಗೆ ಈ ಸಾಧ್ಯೋಪಾಯದಲ್ಲಿ ಮಹಾ ವಿಶ್ವಾಸವನ್ನು ಹುಟ್ಟಿಸುವುದಕ್ಕಾಗಿ ಹೇಳಿದ ಮಾತಾಗಿದೆ. ಹೀಗೆ ಪರಮಾತ್ಮಸಾಕ್ಷಾತ್ಕಾರವನ್ನುಂಟು ಮಾಡುವ ಫಲವೇನೋ ಈ ಉಪಾಸನಕ್ಕೆ ಉಂಟು ; ಇನ್ನೇನೂ ಇಲ್ಲವೋ ಎಂದರೆ, **ಧರ್ಮ್ಯಂ** ಎಂದು ಹೇಳಲ್ಪಟ್ಟಿತು, **ಅಥಾಪಿ** - ಹಾಗಾದರೂ, ಎಂದರೆ ಉಪಾಸನಕಾಲದಲ್ಲೇ ಸಾಕ್ಷಾತ್ಕಾರರೂಪ ಫಲದಾಯಕವಾಗಿದ್ದರೂ ಕೂಡ, ಕೊನೆಗೆ ಇನ್ನೂ ನಿರತಿಶಯ ಫಲವನ್ನುಂಟುಮಾಡುವ ಶಕ್ತಿಯು ಅದಕ್ಕುಂಟು ಎಂದು ತಿಳಿಸುವುದಕ್ಕಾಗಿ, **ಧರ್ಮ್ಯಂ** ಎಂದು ಹೇಳಲ್ಪಟ್ಟಿತು ; **ಧರ್ಮ್ಯಂ** ಎಂದರೆ **ಧರ್ಮಾದನಪೇತಂ** - ಧರ್ಮದಿಂದ ಬಿಡಲ್ಪಡದೇ ಇರುವಂಥಾದ್ದು ; ಧರ್ಮದಿಂದಲೇ ಕೂಡಿದುದು ಎಂಬ ತಾತ್ಪರ್ಯವು; **ಧರ್ಮತ್ವಂ ಹಿ** - ಧರ್ಮಸ್ವಭಾವವಾದರೋ, **ನಿಶ್ಶ್ರೇಯಸ ಸಾಧನತ್ವಂ** - ಪರಮ ಶ್ರೇಯಸ್ಸಾದ ಪರಬ್ರಹ್ಮ ಪ್ರಾಪ್ತಿಯನ್ನು ಸಾಧಿಸಿಕೊಡೋಣವು ; ಈ ನಾನು ಹೇಳುವ ಉಪಾಸನೆಯು, **ಸ್ವರೂಪೇಣೈವ ಅತ್ಯರ್ಥಪ್ರಿಯತ್ವೇನ** - ಸ್ವರೂಪದಿಂದಲೇ ಇಷ್ಟೆಂದು ಹೇಳಲಸಾಧ್ಯವಿಲ್ಲದಷ್ಟು ಅದೇ ಪ್ರಿಯವಾಗಿರುವದರಿಂದ, **ತದಾನಿ ಮೇವ** - ಆ ಉಪಾಸನಕಾಲದಲ್ಲೇ, **ಮದ್ದರ್ಶನಾಪಾದನತಯಾ ಚ** - ನನ್ನ ದರ್ಶನವನ್ನುಂಟುಮಾಡುವದರಿಂದಲೂ, **ಸ್ವಯಂ ನಿಶ್ಶ್ರೇಯಸರೂಪಮಪಿ** - ಅದು ತಾನೇ ಹೀಗೆ ಪರಮಾತ್ಮ ಸಾಕ್ಷಾತ್ಕಾರ ರೂಪ ಪರಮ ಪುರುಷಾರ್ಥರೂಪವಾಗಿದ್ದರೂ ಕೂಡ, **ನಿರತಿಶಯನಿಶ್ಶ್ರೇಯಸ**

**ಭಾ. ಮಿತ್ಯರ್ಥಃ। ಅತ ಏವ, ಸುಸುಖಂ ಕರ್ತುಂ-ಸುಸುಖೋಪಾದನಮ್, ಅತ್ಯರ್ಥ ಪ್ರಿಯತ್ವೇನೋಪಾದೇಯಮ್ ; ಅವ್ಯಯಂ, - ಮತ್ಪ್ರಾಪ್ತಿಂ ಸಾಧಯಿತ್ವಾಪಿ ಸ್ವಯಂ ನಕ್ಷೀಯತೇ। ಏವಂ ರೂಪ ಮುಪಾಸನಂ ಕುರ್ವತೋ ಮತ್ಪ್ರದಾನೇ ಕೃತೇಽಪಿ, ನ ಕಿಂಚಿತ್ಕೃತಂ ಮಯಾಸ್ಯೇತಿ ಮೇ ಪ್ರತಿಭಾತೀತ್ಯರ್ಥಃ ॥ ೨ ॥**

**ರೂಪ** ವಾದ, **ಅತ್ಯಂತಿಕ ಮತ್ಪ್ರಾಪ್ತಿ ಸಾಧನಮಿತ್ಯರ್ಥಃ**- ಪರಿಪೂರ್ಣವಾಗಿ, ಎಂದಿಗೂ ಚ್ಯುತಿ ಇಲ್ಲದ ನನ್ನ ಪ್ರಾಪ್ತಿಗೆ ಸಾಧನವು ಎಂಬ ತಾತ್ಪರ್ಯವು. ಧರ್ಮವೆಂದು ಹೇಳಿಸಿಕೊಳ್ಳುವುದು ಶ್ರೇಯಸ್ಸಾಧನವಾಗಿರತಕ್ಕದ್ದು ; ವಿಲಕ್ಷಣ ಧರ್ಮವಾದ ಸಾಧ್ಯೋಪಾಯವಾದರೋ, ಇತರ ಧರ್ಮಗಳ ಹಾಗೆ ಆಯಾಸಯುಕ್ತವಾದುದಲ್ಲವು, ಅತ್ಯರ್ಥಪ್ರಿಯವಾದುದು, ಇತರ ಧರ್ಮಗಳ ಅನುಷ್ಠಾನೋತ್ತರಕಾಲದಲ್ಲಿ ಫಲನಿರೀಕ್ಷಣೆಯುಳ್ಳದ್ದಲ್ಲದೆ, **ತದಾನೀ** - ಅನುಷ್ಠಾನಕಾಲದಲ್ಲೇ ಪರಮಾತ್ಮ ಸಾಕ್ಷಾತ್ಕಾರ ರೂಪ ಫಲವನ್ನುಂಟುಮಾಡುತ್ತದೆ. ಅದೂ ಅಲ್ಲದೆ ಪರ್ಯವಸಾನ ದಲ್ಲಿ ನಿರತಿಶಯ ನಿಶ್ಶ್ರೇಯಸ್ಸಾದ ಪರಮಾತ್ಮಪ್ರಾಪ್ತಿಯನ್ನುಂಟುಮಾಡುತ್ತದೆ. ಆದುದರಿಂದ **ಧರ್ಮ್ಯಂ** ಎಂದು ಹೇಳಲ್ಪಟ್ಟಿತು. ಭಕ್ತಿಯೋಗಿಗೆ ಇರುವ ಚಿತ್ತಾಹ್ಲಾದತೆಯು ಅಸದೃಶವಾ ದುದು ಎಂಬುದಕ್ಕೆ ಮುಂದೆ ೧೨ನೇ ಅಧ್ಯಾಯದಲ್ಲಿ (೧೪) **"ಸಂತುಷ್ಟಸ್ಸತತಂ ಯೋಗಿ"** ಎಂಬ ಪ್ರಮಾಣವಿರುತ್ತದೆ. ಅಥವಾ **ಧರ್ಮ್ಯಂ** - ಎಂದರೆ ಧರ್ಮಾದನಪೇತಂ ಎಂದಾಗುವದ ರಿಂದ, **"ಕೃಷ್ಣಂ ಧರ್ಮಸನಾತನಂ"** ಎಂಬ ಪ್ರಮಾಣರೀತ್ಯಾ ಈ ಸಾಧ್ಯೋಪಾಯವು ಈ ಸಿದ್ಧೋಪಾಯನಾದ ಶ್ರೀ ಕೃಷ್ಣನ ಕೃಪೆ ಇಲ್ಲದೆ ಹೋದರೆ ಸಿದ್ಧಿಸದು ಎಂಬ ಅಭಿಪ್ರಾಯ ವಾದರೂ ಆಗಬಹುದು. ಉಪಾಸನವು ಹಿತವಾಗಿಯೂ, ಚಿತ್ತಾಹ್ಲಾದವನ್ನು ಉಂಟು ಮಾಡುವದಾಗಿಯೂ, ಇರುವದರಿಂದ ಅಂತ್ಯದಲ್ಲಿ ನಿರತಿಶಯ ಫಲವಾದ ನಿಶ್ಶ್ರೇಯಸ್ಸನ್ನು ಸಾಧಿಸಿಕೊಡುವದರಿಂದ, ಅನುಷ್ಠಾನವನ್ನೇ ಸುಖವುಳ್ಳದೆಂದು ಹೇಳುತ್ತಾರೆ. **ಅತ ಏವ** - ಆ ಕಾರಣದಿಂದಲೇ, ಯಾವಕಾರಣದಿಂದ, ಉಪಾಸನವು ಸ್ವರೂಪತಃ ಅನುಷ್ಠಾನಕಾಲದಲ್ಲೇ ನಿರತಿಶಯ ಸುಖರೂಪವಾಗಿದ್ದುಕೊಂಡು, ನಿರತಿಶಯಾನಂದವನ್ನು ಸಾಧಿಸಿಕೊಡುವದರಿಂದ, ಕರ್ತುಂಸುಸುಖಂ ಎಂದರೆ **ಸುಸುಖೋಪಾದಾನಮ್** - ತುಂಬಾ ಸುಖದಿಂದ ಅಂಗೀಕರಿಸು ವಂತಾದ್ದು ; ಇದರ ತಾತ್ಪರ್ಯವೇನೆಂದರೆ, **ಅತ್ಯರ್ಥಪ್ರಿಯತ್ವೇನೋಪಾದೇಯಮ್** - ಇಷ್ಟೆಂದು ಹೇಳಲು ಸಾಧ್ಯವಲ್ಲದಷ್ಟು ಪ್ರಿಯವಾಗಿರುವದರಿಂದ ಪರಮ ಗ್ರಾಹ್ಯವಾದುದು ; ಅದರ ಸ್ವರೂಪವೇ : ಸುಖರೂಪವಾದುದು ; ಅದೂ ಅಲ್ಲದೆ ಆ ಉಪಾಸನಕ್ಕೆ ವಿಷಯವಾದುದೂ ಸುಖ ರೂಪವಾದುದು ; ಹೀಗೆ ಸರ್ವವು ಅನುಕೂಲವಾದುದೇಯಾದುದರಿಂದ ತುಂಬಾ ಪ್ರೀತಿಯಿಂದ ಅನುಷ್ಠಿಸತಕ್ಕದ್ದಾಗಿದೆ ಎಂಬ ಭಾವವು. ಇದನ್ನೇ ಮುಂದೆ ೧೪ನೆಯ ಶ್ಲೋಕದಲ್ಲಿ ವ್ಯಕ್ತಪಡಿ ಸಿರುತ್ತಾರೆ.

**"ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ।**
**ನಮಸ್ಯಂತ ಶ್ಚಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥**

ಇಲ್ಲಿ ಉಪಾಸಕನಿಗೆ ಅತ್ಯರ್ಥಪ್ರಿಯತ್ವೇನ ಉಪಾದೇಯವೆಂಬುದು ಸಮರ್ಥಿಸಲ್ಪಟ್ಟಿತು. **ಅವ್ಯಯಂ** ಎಂದರೆ **ಅಕ್ಷಯಂ** - ಕ್ಷಯವನ್ನು ಹೊಂದುವದಲ್ಲವು, ಅದರಭಿಪ್ರಾಯನ್ನು ತಿಳಿಸುತ್ತಾರೆ. **ಮತ್ಪ್ರಾಪ್ತಿಂ ಸಾಧಯಿತ್ವಾಪಿ** - ನನ್ನ ಪ್ರಾಪ್ತಿಯನ್ನು ಸಾಧಿಸಿಕೊಟ್ಟು ಸಹ, **ಸ್ವಯಂ ನಕ್ಷೀಯತೇ** - ಇತರ ಅನುಷ್ಠಾನಗಳ ಹಾಗೆ ತಾನು ಕ್ಷಯಿಸಿಹೋಗುವದಿಲ್ಲವು. ಆ ಭಕ್ತಿರೂಪಾನುಸಂಧಾನವು ನನ್ನ ಪ್ರಾಪ್ತಿಯನ್ನುಂಟುಮಾಡಿದನಂತರವೂ, ಇತರ ಕರ್ಮಗಳ ಹಾಗೆ ಕ್ಷಯಿಸಿ ಹೋಗದೆ ಪ್ರೀತಿರೂಪ ಭಕ್ತಿಯು ತದನಂತರವೂ ಅನುವರ್ತಿಸಿಕೊಡು ಒಂದು

ಪರೀವಾಹದಹಾಗೆ ವೃದ್ಧಿ ಹೊಂದುತ್ತಾ ಹೋಗುತ್ತದೆಂಬ ಭಾವವು ; ಆ ಕಾರಣದಿಂದ ನನ್ನಲ್ಲಿ ಎಂತಹ ಪ್ರೀತಿಯನ್ನು ಆ ಭಕ್ತಿಯು ಹುಟ್ಟಿಸುತ್ತದೆ ಎಂದರೆ.—**ಏವ ರೂಪಮುಪಾಸನಂ ಕುರ್ವತೋ ಮತ್ಪ್ರದಾನೇ ಕೃತೇಽಪಿ** - ಹೀಗೆ ಇಷ್ಟು ಪ್ರೀತ್ಯತಿಶಯದಿಂದ ಉಪಾಸನೆಯನ್ನು ಮಾಡುವವನಿಗೆ ನನ್ನನ್ನೇ ಕೊಟ್ಟರೂಕೂಡ, **ನ ಕಿಂಚಿತ್ಕೃತಮಸ್ಮೀತಿ** - ಆ ಭಕ್ತ್ಯತಿಶಯಕ್ಕೆ ಉಚಿತವಾದುದಾಗಿ ಏನೊಂದೂ ಆತನಿಗೆ ಕೊಡಲಿಲ್ಲವೆಂಬುದಾಗಿ, **ಮೇ ಪ್ರತಿಭಾತೀತ್ಯರ್ಥಃ** - ನನಗೆ ತೋರಿಬರುತ್ತದೆಂಬ ಭಾವವು. ಆತನು ಪ್ರಾರ್ಥಿಸಿದ ತನ್ನ ಪ್ರಾಪ್ತಿಯನ್ನು ಕೊಟ್ಟು ಬಿಟ್ಟು, ಆತನ ನಿರತಿಶಯ ಪ್ರೀತಿಗೆ ಯೋಗ್ಯವಾಗಿ ಏನನ್ನೂ ಕೊಡಲಿಲ್ಲವೇ ? ನನ್ನ ಪ್ರಾಪ್ತಿಯನ್ನು ಕೊಟ್ಟದ್ದು ಆತನ ಉಪಾಸನೆಗಾಗಿ, ಆತನು ನನ್ನಲ್ಲಿ ತೋರಿಸಿದ ನಿರತಿಶಯ ಪ್ರೀತಿಗೆ ಉಚಿತವಾಗಿ ಇನ್ನೇನೂ ಅದಕ್ಕಿಂತ ಅತಿಶಯವಾದುದಿಲ್ಲವೇ ? ಎಂಬ ಕೊರತೆಯು ನನಗೆ ಬಾಧಿಸುತ್ತದೆ ಎಂಬ ಭಾವವು ಶ್ರೀ ಪರಾಶರ ಭಟ್ಟರು ಲಕ್ಷ್ಮಿಯ ವಿಷಯದಲ್ಲೂ ಹಾಗೆಯೇ ಹೇಳಿರುತ್ತಾರೆ.—"**ಐಶ್ವರ್ಯಮಕ್ಷರಗತಿಂ ಪರಮಂ ಪದಂ ವಾ ಕಸ್ಮೈಚಿದಂಜಲಿಭರಂ ವಹತೇ ವಿತೀರ್ಯ । ಅಸ್ಮೈ ನ ಕಿಂಚಿದುಚಿತಂ ಕೃತ ಮಿತ್ಯಥಾಂಬ ತ್ವಂ ಲಜ್ಜಸೇ ಕಥಯ ಕೋಽಯ ಮುದಾರ ಭಾವಃ**" ಪ್ರಪನ್ನನು ಕೇಳಿದ ಮುಕ್ತಿಯನ್ನೂ ಕೊಟ್ಟು ಬಿಟ್ಟು ನಾನೇನನ್ನೂ ಉಚಿತವಾಗಿ ಅಂತಹ ಭಕ್ತನಾಗಿ ನನ್ನನ್ನು ಆಶ್ರಯಿಸಿದವನಿಗೆ ಕೊಡಲಿಲ್ಲವೇ ಎಂದು ಲಜ್ಜೆಯಿಂದ ತಲೆಬಾಗಿ ನಿಂತಿರುವ ಹಾಗೆ ತೋರುತ್ತೀಯೇ, ಎಂದು "**ದೇವಜುಷ್ಟಾಮುದಾರಾಂ**" ಎಂಬ **ಶ್ರುತಿ** ಪ್ರತಿಪಾದ್ಯವಾದ ಉದಾರಭಾವದ ಮಹಿಮೆ ಎಂತಾದ್ದೋ ಎಂದು ಶ್ರೀರಂಗ ನಾಯಿಕಿಯನ್ನು ಕುರಿತು ಸ್ತೋತ್ರ ಮಾಡಿರುತ್ತಾರೆ. ಶ್ರೀರಾಮನು ಆಂಜನೇಯನ ಅತ್ಯದ್ಭುತಕಾರ್ಯಕ್ಕನುಗುಣವಾದುದು ಯಾವುದೂ ಇಲ್ಲವೇ ಎಂದು ನೊಂದುಕೊಂಡು, ಆತನಿಗೆ ಗಾಢಾಲಿಂಗನವನ್ನು ಇದೇ ನಾನು ಕೊಡತಕ್ಕ ಸರ್ವಸ್ವವೆಂಬ ಭಾವನೆಯಿಂದ ಕೊಟ್ಟಿರುತ್ತಾರೆ.—"**ಏಷ ಸರ್ವಸ್ವ ಭೂತಸ್ತು ಪರಿಷ್ವಂಗೋ ಹನೂಮತಃ** (ರಾ. ಯುದ್ಧ. ೧. ೧೩) ಇದೇ ಸಮಸ್ತವು ಎಂದರೆ ಇದು ಸಾಲದು, ಇದಕ್ಕಿಂತ ಹೆಚ್ಚಿನದು ಇಲ್ಲವೇ ಎಂಬ ದೈನ್ಯವು ಪ್ರದರ್ಶಿಸಲ್ಪಟ್ಟಿತು. ಆದುದರಿಂದ ಹೀಗೆ ಸರ್ವೇಶ್ವರನನ್ನು ಸಂಪೂರ್ಣವಾಗಿ ವಶಮಾಡಿಕೊಳ್ಳುವ ಮಾಹಾತ್ಮ್ಯಯುಳ್ಳದಾದುದರಿಂದ, **ರಾಜವಿದ್ಯಾ ರಾಜಗುಹ್ಯಂ** ಎಂದು ಪ್ರಶಂಸಿಸಿರುತ್ತಾರೆ.

**ಅವ. ಮತ್ತು ಮೂಲಕ್ಕೆ ಅರ್ಥವು:**—ಇಂತಹ ಮಾಹಾತ್ಮ್ಯಯುಳ್ಳ ಉಪಾಸನವನ್ನು ಅನುಷ್ಠಿಸಿದುದಾದರೆ ನೀನು "**ಮೋಕ್ಷ್ಯಸೇಽಶುಭಾತ್**" ಎಂದು ನಿನಗೆ ಅಮಙ್ಗಳಗಳ ಪರಂಪರೆಯು ತಪ್ಪಿ, ಪರಮ ನಿಶ್ಶ್ರೇಯಸ್ಸಿನ ಪ್ರಾಪ್ತಿಯನ್ನು ಹೊಂದುವಿ ಎಂದು ಬೋಧಿಸಿದರು. ಹೀಗೆ ಅನ್ವಯರೂಪದಲ್ಲಿ ಉಪದೇಶಿಸಿದುದನ್ನು ವ್ಯತಿರೇಕದಲ್ಲೂ ಉಪದೇಶಿಸುವದರಿಂದ ಅದಕ್ಕೆ ಇನ್ನೂ ಪ್ರಾಧಾನ್ಯವನ್ನು ಹೇಳಿದಂತಾಗುತ್ತದೆಂದು ಭಾವಿಸಿ, ಹೀಗೆ ಈ ಅನುಷ್ಠಾನವನ್ನು ನೀನು ಸ್ವೀಕರಿಸದೇ ಹೋದರೆ ಮತ್ಪ್ರಾಪ್ತಿಯು ನಿನಗೆ ಎಂದಿಗೂ ಇಲ್ಲವೆಂದು ಹೇಳುವದು ಸಂಗತವು. ಆದರೆ ಅರ್ಜುನನ್ನು **ಅನಸೂಯವೇ** ಎಂದು ಹಿಂದೆ ಹೇಳಿ, ಅಂತಹ ನಿನಗೆ ಪರಮಕೃಪಯಾ ನಾನು ಉಪದೇಶಿಸುತ್ತೇನೆಂದು ಪ್ರತಿಜ್ಞೆಮಾಡಿ ಹೇಳಿ, ಈಗ ನಿನಗೆ ಉಪದೇಶಿಸಿದ ಅನುಷ್ಠಾನದಲ್ಲಿ ಶ್ರದ್ಧೆ ಇಲ್ಲದೇ ಉಪಾಸನದಿಂದ ನಿವೃತ್ತನಾದರೆ ಮೃತ್ಯುರೂಪವಾದ ಈ ಸಂಸಾರಬಂಧವು ತಪ್ಪಿದ್ದಲ್ಲವೆಂದು ಹೇಳಲು ಇಷ್ಟವಿಲ್ಲದೆ, ಸಾರ್ವತ್ರಿಕವಾಗಿ ಇಂತಹ ರಾಜವಿದ್ಯಾ ರಾಜಗುಹ್ಯವಾದ ಉಪಾಸನರೂಪ ಧರ್ಮದಲ್ಲಿ ಶ್ರದ್ಧೆ ಇಲ್ಲದವರು ನನ್ನನ್ನು ಹೊಂದದೆ ಸಂಸಾರ ಬಂಧಕ್ಕೆ ಸಿಲುಕಿ ನರಳುತ್ತಾರೆಂದು ಹೇಳುತ್ತಾರೆ. ಬಂಧದಿಂದ ತಪ್ಪಿಸಿ

**ಮೂ. ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯುಸಂಸಾರವರ್ತ್ಮನಿ ॥**

**ಭಾ. ಅಸ್ಯೋಽಪಾಸನಾಖ್ಯಸ್ಯ ಧರ್ಮಸ್ಯ ನಿರತಿಶಯಪ್ರಿಯಮದ್ವಿಷಯತಯಾ ಸ್ವಯಂ ನಿರತಿಶಯಪ್ರಿಯರೂಪಸ್ಯ ಪರಮನಿಶ್ಶ್ರೇಯಸರೂಪಮತ್ಪ್ರಾಪ್ತಿಸಾಧನಸ್ಯಾ**

ಕೋಡು ನನ್ನನ್ನು ಬಂದು ಸೇರಬೇಕಾದರೆ ಇದೀಗ ಅಮೋಘೋಪಾಯವು ಎಂದು ತಿಳಿಸುತ್ತಾರೆ. ಕೊನೆಯವರೆಗೂ ಈ ಸಾಧ್ಯೋಪಾಯದಲ್ಲಿ ವಿಶ್ವಾಸವು ಮುಖ್ಯವಾಗಿ ಬೇಕು. ಹಾಗೆ ವಿಶ್ವಾಸ ರಹಿತರಾಗಿ ನನ್ನನ್ನು ಹೊಂದುವದಕ್ಕೆ ಯತ್ನಿಸದವರು, ನನ್ನನ್ನು ಬಿಟ್ಟು ಹಿಂತಿರುಗಿದವರಾಗಿ ಸಂಸಾರ ಬಂಧದಲ್ಲೇ ನರಳುವರು ಎಂದು ಹೇಳುತ್ತಾರೆ.

**ಹೇ ಪರಂತಪ** - ಓ ಶತ್ರುಗಳನ್ನು ತಪಿಸುವಹಾಗೆ ಮಾಡುವ ಅರ್ಜುನನೇ, **ಅಸ್ಯ** - ನಾನು ಹಿಂದೆ ತಿಳಿಸಿದ ಅತಿಶಯ ಮಹಿಮೆಯುಳ್ಳ, **ಧರ್ಮಸ್ಯ** - ನಿಶ್ಶ್ರೇಯಸ ಸಾಧನಭೂತವಾದ ಉಪಾಸನದ ವಿಷಯದ, **ಅಶ್ರದ್ಧಾ ಧಾನಾ ಪುರುಷಾಃ** - ಶ್ರದ್ಧೆ ಇಲ್ಲದ ಉಪಾಸಕರು, **ಮಾಂ** ನನ್ನನ್ನು, **ಅಪ್ರಾಪ್ಯ** - ಹೊಂದದೆ, **ಮೃತ್ಯುಸಂಸಾರ ವರ್ತ್ಮನಿ** - ಮೃತ್ಯುರೂಪವಾಗಿ ಸರ್ವವಿಧ ಕ್ಲೇಶಗಳಿಗೆ ಆಕರವಾದ ಸಂಸಾರ ಮಾರ್ಗದಲ್ಲಿ, **ನಿವರ್ತನ್ತೇ** - ಹಿಂತಿರುಗುತ್ತಾರೆ, ಎಂದರೆ ನನ್ನನ್ನು ಹೊಂದಬೇಕೆಂದು ಯತ್ನಿಸಿದರೂ, ನನ್ನನ್ನು ಹೊಂದುವದನ್ನು ಬಿಟ್ಟು, ಪುನಃ ಸಂಸಾರದಲ್ಲೇ ಬಿದ್ದು ನರಳುವಹಾಗೆ ಮಾಡಿಕೊಳ್ಳುತ್ತಾರೆಂಬ ಭಾವವು. ಈ ಸಾಧ್ಯೋಪಾಯವೇನೋ ಮಹತ್ತಾದುದು ಎಂಬುದು ನಿನಗೆ ತಿಳಿಯುವದು, ಆದರೆ ಅದರಲ್ಲಿ ಶ್ರದ್ಧೆಯನ್ನು ಮಾತ್ರ ತ್ಯಜಿಸಬೇಡವೆಂದು ಪರಮ ಕೃಪಯಾ ಹೇಳಿದಂತಾಯಿತು. ಬೇಕಾದ ಜ್ಞಾನವನ್ನು ಹೊಂದಿ, ಕರ್ಮಯೋಗಾದಿಗಳನ್ನನುಷ್ಠಿಸಿ, ಪರಭಕ್ತಿಯಿಂದ ಕೂಡಿದ ಉಪಾಸನವನ್ನು ಕೈಕೊಂಡು, ನಿರತಿಶಯ ಸುಖವನ್ನು ಹೊಂದುವ ಯೋಗ್ಯತೆಯನ್ನು ಹೊಂದಿದ್ದರೂ, ಶ್ರದ್ಧೆಯೊಂದಿಲ್ಲದೆ ಹಿಡಿದುದನ್ನು ಬಿಟ್ಟು ಹಿಂತಿರುಗಿ ಪುನಃ ದುಃಖಗಳಿಂದ ಕ್ಲೇಶಪಡುವ ಬಂಧಕವಾದ ಸಂಸಾರ ಪಥಕ್ಕೇನೆ ಬಂದು ಬೀಳುವದು ತುಂಬಾ ಶೋಚನೀಯವಿಷಯವೆಂಬ ಭಾವವು. ನೀನು **ಪರಂತಪನು** ಬಹಿಶ್ಶತ್ರುಗಳನೆಲ್ಲಾ ನಿಗ್ರಹಿಸುವ ಸಾಮರ್ಥ್ಯವುಳ್ಳವನು. ಆದರೆ ಈಗ ಬೇಕಾಗಿರುವ ಶ್ರದ್ಧಾ ವಿರೋಧಿಗಳಾದ ಅಂತಶ್ಶತ್ರುಗಳನ್ನು ನಿಗ್ರಹಿಸುವದು ಅತ್ಯಾವಶ್ಯಕವೆಂಬ ಅಭಿಪ್ರಾಯದಿಂದ **ಹೇ ಪರಂತಪ** ವೆಂಬ ಸಂಬೋಧನೆಯು.

**ಭಾಷ್ಯಾರ್ಥವು:—ಈ** ಪರಮ ಧರ್ಮರೂಪವಾದ ಜ್ಞಾನಾನುಷ್ಠಾನವಿಲ್ಲದೆ ಹೋದರೆ, ನಿರತಿಶಯ ಸುಖರೂಪ ಮೋಕ್ಷವು ಎಂದಿಗೂ ಲಭಿಸುವದಿಲ್ಲವೆಂದು ಹೇಳಲು ಹೊರಟು, **"ನಾನ್ಯಃ ಪಂಥಾ ವಿದ್ಯತೇ ಅಯನಾಯ"** ಎಂಬ ಶ್ರುತಿಯ ಉಪಬ್ರಹ್ಮಣವನ್ನು ಈ ಶ್ಲೋಕದಲ್ಲಿ ಮಾಡುತ್ತಾರೆ. **ಅಸ್ಯಧರ್ಮಸ್ಯ** - ಎಂಬುದಕ್ಕೆ ವ್ಯಾಖ್ಯಾನ ಮಾಡಲು ಹೊರಟು ಅಸ್ಯ ಎಂಬ ಶಬ್ದದಲ್ಲಿ ತೋರುವ ಪರಮಾತ್ಮೋಪಾಸನೆಯ ಮಾಹಾತ್ಮ್ಯೆಯನ್ನು ಅನುವಾದ ಮಾಡಿ ಹೇಳುತ್ತಾರೆ.—**ಅಸ್ಯ ಉಪಾಸನಾಖ್ಯಸ್ಯ ಧರ್ಮಸ್ಯ** - ಈ ಉಪಾಸನವೆಂದು ಕರೆಯಲ್ಪಡುವ ಧರ್ಮದ, ಅದು ಎಷ್ಟು ಮಹತ್ತಾದುದು ಎಂದರೆ, **ನಿರತಿಶಯಪ್ರಿಯಮದ್ವಿಷಯತಯಾ** - ಅದು ನಿರತಿಶಯ ಪ್ರಿಯನಾಗಿರುವ ನನ್ನ ವಿಷಯವಾಗಿರುವದರಿಂದ, **ಸ್ವಯಂ ನಿರತಿಶಯಪ್ರಿಯರೂಪಸ್ಯ** - ಅದೇ ನಿರತಿಶಯ ಸುಖರೂಪವಾಗಿರುವ ಪರಮ ನಿಶ್ಶ್ರೇಯಸ್ಸಾದ ಮತ್ಪ್ರಾಪ್ತಿಯನ್ನು ಸಾಧಿಸುವ ಸಾಧ್ಯೋಪಾಯವಾಗಿರುವ, **ಅವ್ಯಯಸ್ಯ** - ಎಂದಿಗೂ ಕ್ಷಯವನ್ನು ಹೊಂದದೇ ಇಂತಹ ಮಾಹಾತ್ಮ್ಯೆಯುಳ್ಳ, ಉಪಾಸನೆಯನ್ನು, **ಉಪಾದಾನದಶಾಂ ಪ್ರಾಪ್ಯ** - ಸ್ವೀಕರಿ

**ಭಾ. ವ್ಯಯಸ್ಯೋಪಾದಾನಯೋಗ್ಯ ದಶಾಂ ಪ್ರಾಪ್ಯ, ಅಶ್ರದ್ದಧಾನಾಃ ವಿಶ್ವಾಸಪೂರ್ವಕತ್ವ ರಹಿತಾಃ ಪುರುಷಾಃ, ಮಾಮಪ್ರಾಪ್ಯ ಮೃತ್ಯುರೂಪೇ ಸಂಸಾರ ವರ್ತ್ಮನಿ, ನಿತರಾಂ ವರ್ತನ್ತೇ ; ಅಹೋ ಮಹದಿದ ಮಾಶ್ಚರ್ಯ ಮಿತ್ಯರ್ಥಃ ॥ ೩ ॥**

ಸುವ, ಅನುಷ್ಠಿಸುವ, ಯೋಗ್ಯತೆಯುಳ್ಳ ಅವಸ್ಥೆಯನ್ನು ಹೊಂದಿಯೂ ಕೂಡ, **ಅಶ್ರದ್ದಧಾನಾಃ** ಎಂದರೆ **ವಿಶ್ವಾಸಪೂರ್ವಕತ್ವರಹಿತಾಃ** - ವಿಶ್ವಾಸಪೂರ್ವಕವಾಗಿರುವ ಆ ಅನುಷ್ಠಾನವಿಲ್ಲದವರಾದ, **ಪುರುಷರು, ಮಾಮಪ್ರಾಪ್ಯ** - ನನ್ನನ್ನು ಹೊಂದದೇ, **ಮೃತ್ಯುರೂಪೇ** - ಬಹುದುಃಖಪೂರ್ಣವಾಗಿರುವ, ಅಥವಾ ಮರಣಾದಿ ಪರಿಣಾಮಗಳುಳ್ಳ, **ಸಂಸಾರವರ್ತ್ಮನಿ** - ಸಂಸಾರಮಾರ್ಗದಲ್ಲಿ, **ನಿವರ್ತಂತೇ - ನಿತರಾಂ ವರ್ತನ್ತೇ** - ಸಂಪೂರ್ಣವಾಗಿ ಇರುತ್ತಾರೆ ಇಲ್ಲಿ **ಧರ್ಮಸ್ಯ ಅಶ್ರದ್ದಧಾನಾಃ** ಎಂದು ಪ್ರಯೋಗಿಸಿರುವದರಿಂದ, ಶ್ರದ್ಧೆಯೊಂದು ಮಾತ್ರ ಇದ್ದುದಾದರೆ, ಇವರು ಉಪಾಸನಾನುಷ್ಠಾನವನ್ನು ಪರಿಗ್ರಹಿಸಲು ಸರ್ವವಿಧ ಯೋಗ್ಯತೆಯೂ ಇವರುಗಳಲ್ಲಿ ಇದೆ ಎಂಬ ಭಾವವು ತೋರಿಬರುವದರಿಂದ, **ಉಪಾದಾನದಶಾಂ ಪ್ರಾಪ್ಯ** ಎಂಬ ಭಾಷ್ಯವು ಇದರಿಂದ ಉಪಾಸನವನ್ನು ಅಙ್ಗೀಕರಿಸಿ ಶ್ರದ್ಧೆಯಿಲ್ಲದೆ ಕೈ ಬಿಡುವರೆಂಬ ಭಾವವು. ಆದುದರಿಂದಲೇ ಅದರಿಂದ ಹಿಂತಿರುಗಿ ಪುನಃ ಸಂಸಾರ ಪಥಕ್ಕೇನೆ ಬಂದು ಸೇರಿಕೊಳ್ಳುವರೆಂಬ ತಾತ್ಪರ್ಯವು. ನಿವರ್ತಂತೇ ಎಂದರೆ **ನಿತರಾಂ ವರ್ತನ್ತೇ** ಎಂದು ಭಾಷ್ಯದ ಅಭಿಪ್ರಾಯವೇನೆಂದರೆ. -ಇಂತಹ ಸುಸಮಯವನ್ನು, ಶ್ರದ್ಧೆಯೊಂದಿಲ್ಲದೆ ಯಾವಾಗ ಕಳೆದುಕೊಂಡರೋ, ಆಗ ಪುನಃ ಅಂತಹ ಸುಸಮಯವು ದುರ್ಲಭವೇ ಎಂಬುದನ್ನು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಒಳ್ಳೇ ಸುಸಮಯವು ದೊರೆತಿದ್ದರೂ, ಸ್ವರೂಪತಃ ಮತ್ತು ಫಲತಃ ಕೂಡ ಇಂತಹ ನಿರತಿಶಯ ಪ್ರಿಯರೂಪ ಪುರುಷಾರ್ಥ ಪ್ರಾಪ್ತಿಯನ್ನು ಈ ಉಪಾಸನವು ಲಭಿಸುವಹಾಗೆ ಮಾಡುವುದೆಂಬ ಜ್ಞಾನವಿದ್ದರೂ, ಶ್ರದ್ಧಾ ಮಾತ್ರ ವಿಲ್ಲದೆ ಅದನ್ನು ಕಳೆದುಕೊಳ್ಳುತ್ತಾರಲ್ಲಾ, ಪ್ರಾರಬ್ಧವು ಎಷ್ಟು ಬಲಿಷ್ಠವು? **ವಿಧಿರ್ನೂನ ಮಸಂಹಾರ್ಯಃ** (ರಾ. ಸುಂ.) ವೆಂದು ಆಶ್ಚರ್ಯ ಪಟ್ಟು ತಿಳಿಸುತ್ತಾರೆ. **ಲಬ್ಧ್ವಾಜನೋ ದುರ್ಲಭ ಮತ್ರ ಮಾನುಷಂ ಕಥಂಚಿದವ್ಯಂಗ ಮಯತ್ನತ ಸ್ತವ । ಪಾದಾರವಿಂದಂ ನ ಭಜತ್ಯ ಸನ್ಮತಿಃ ಗೃಹಾನ್ಧಕೂಪೇ ಪತಿತೋ ಯಥಾ ಪಶುಃ"** (ಭಾಗ. ೧೦.) ಒಳ್ಳೇ ಜ್ಞಾನವನ್ನು ಹೊಂದಿದ ಈ ದುರ್ಲಭವಾದ ಮಾನುಷ ದೇಹವು ಪ್ರಾಪ್ತವಾಗಿದ್ದರೂ ಸ್ವಾಮಿಯ ಪಾದಾರವಿಂದದಲ್ಲಿ ಭಕ್ತಿಯನ್ನು ಮಾಡಿ ಉಪಾಯಾನುಷ್ಠಾನವನ್ನು ಈ ಬುದ್ಧಿಹೀನನು ಮಾಡುವದಿಲ್ಲವೇ ಎಂಬ ಪರಿತಾಪವನ್ನು ಈ ಶ್ಲೋಕವು ಸೂಚಿಸುತ್ತದೆ. ಹಾಗೆಯೇ **"ನೃದೇಹಮಾದ್ಯಂ ಸುಲಭಂ ಸುದುರ್ಲಭಂ ಪ್ಲವಂ ಸುಕಲ್ಪಂ ಗುರುಕರ್ಣಧಾರಂ । ಮಯಾ ನುಕೂಲೇನ ನಭಸ್ವತೇ ರಿತಂ ಪುಮಾನ್ ಭವಾಬ್ಧಿಂ ನತರೇತ ಸ ಆತ್ಮಹಾ"** (ಭಾಗ. ೧೧. ೨೦. ೧೭) ಈ ಮನುಷ್ಯ ದೇಹವು ನಿರತಿಶಯ ಶ್ರೇಯಸ್ಸಾಧನಕ್ಕೆ ಉಪಯುಕ್ತವಾಗಿ, ಅಂತಹ ಶ್ರೇಯಸ್ಸಾಧನ ಮಾಡಿಕೊಳ್ಳುವವನಿಗೆ ಸಹಾಯಮಾಡಬೇಕೆಂದು ಅವಸರ ಪ್ರತೀಕ್ಷೆಯನ್ನು ಮಾಡುತ್ತಾ ನಾನು ಅನುಕೂಲನಾಗಿ ಕೂತಿದ್ದರೂ, ಈ ಸಂಸಾರ ಸಾಗರವನ್ನು ದಾಟಲು ಶ್ರದ್ಧೆಯಿಲ್ಲದೆ ತಟಸ್ಥನಾಗಿರುವವನು ಎಂತಹ ನಿರ್ಭಾಗ್ಯನು, ಅವನೇ ತನ್ನ **ಆತ್ಮಾವನ್ನು** ನಾಶಮಾಡಿಕೊಳ್ಳುತ್ತಾನೆಂದು ಹೇಳುತ್ತಾರೆ. ಈ ದೇಹವೆಂತಾದ್ದೆಂದರೆ— **ಆದ್ಯಂ** ಸಮಸ್ತ ಪುರುಷಾರ್ಥಕ್ಕೂ ಸಾಧನಮುಖೇನ ಆದಿಕಾರಣವಾದುದು, **ಸುದುರ್ಲಭಂ** - ಸುಕೃತಗಳಿಲ್ಲದೆ ಸುಲಭವಾಗಿ ಲಭಿಸತಕ್ಕದ್ದಲ್ಲ. **ಸುಕಲ್ಪಂ** - ಸರ್ವ ಸಾಧನೆಗೂ ಯೋಗ್ಯವಾಗಿ ಮಾಡಲ್ಪಟ್ಟಿರುವದು, **ಗುರು ಕರ್ಣಧಾರಂ** - ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದ, ಶೋಭಿಸುವ ಸದಾಚಾರ್ಯನೆಂಬ ನಾವಿಕನಿಂದ ನಡೆಸಲ್ಪಟ್ಟ, **ನೃದೇಹಂ ಪ್ಲವಂ** - ಈ ಮನುಷ್ಯ ಶರೀರವೆಂಬ

**ಭಾ. ಅವ. ಶೃಣು ತಾವತ್ಪ್ರಾಪ್ಯ ಭೂತಸ್ಯ ಮಮಾ ಚಿನ್ತ್ಯಮಹಿಮಾನಂ:—**

ನಾವೆಯು, ಈ ನಾವೆಯು ಸಿಕ್ಕಿದಕಡೆಗೆ ಈ ಸಂಸಾರ ಸಮುದ್ರದಲ್ಲಿ ಹೊಡೆದುಕೊಂಡು ಹೋಗಿ ಈ ಒಳಗಿರುವ ಆತ್ಮನನ್ನು ಎಲ್ಲಿ ನಾಶಮಾಡುತ್ತದೋ ಎಂದು ಗುರುವೆಂಬ ಒಳ್ಳೇ, ನಾವೆಯನ್ನು ನಡೆಸುವನಿದ್ದಾನೆಂದು ಹೇಳಿದರು, ಅಷ್ಟೇ ಅಲ್ಲದೆ, **ಮಯಾನುಕೂಲೇನ ನಭಸ್ವತೇ ರಿತಂ** - ಅನುಕೂಲವಾದ ಗಾಳಿಯ ರೂಪದಲ್ಲಿರುವ ನನ್ನಿಂದ ಪ್ರೇರಿತವಾದುದು; ಇಂತಹ ಶರೀರವೆಂಬ ನಾವೆಯನ್ನು ಕೊಟ್ಟಿದ್ದರೂ, ಈ ಸಂಸಾರವೆಂಬ ಸಮುದ್ರವನ್ನು, ಯಾವನು **ನತರೇತ** - ದಾಟುವದಿಲ್ಲವೋ, **ಸ ಆತ್ಮಹಾ** - ಅಂತವನು ತನ್ನ ಆತ್ಮಾವನ್ನು ತಾನೇ ನಾಶಮಾಡಿಕೊಳ್ಳು ವನು. ಹೀಗಿದ್ದರೂಕೂಡ ಈ ಸುಸಮಯದಲ್ಲಿ ತನ್ನನ್ನು ಭಜಿಸಿದವನು ನಿರ್ಭಾಗ್ಯನು, ತನ್ನ ಆತ್ಮಾವನ್ನು ತಾನೇ ಹಾಳುಮಾಡಿಕೊಳ್ಳುವವನೆಂದು ಹೇಳಲ್ಪಟ್ಟಿತು. ಇದು ತುಂಬಾ ಆಶ್ಚರ್ಯ ವಾದುದು ಎಂಬ ಭಾವವು. **ಅಹೋ** ಆಹಹ, **ಇದಂ** - ಹೀಗೆ ಪರಮ ಪುರುಷಾರ್ಥದಿಂದ ಹಿಂತಿರುಗುವದು, **ಮಹದಾಶ್ಚರ್ಯಮಿತ್ಯರ್ಥಃ** - ಮಹತ್ತಾದ ಆಶ್ಚರ್ಯಯುಕ್ತವಾದುದೆಂಬ ಭಾವವು ಇಲ್ಲಿ ಆಶ್ಚರ್ಯವು ಯಾವುದು ? ಎಂದರೆ ಸುಕೃತವನ್ನು ಅನುಷ್ಠಿಸುವ ವೇಳೆಯಲ್ಲಿ ವಿಘ್ನವಾಗಿ ಪ್ರಾರಬ್ಧ ಕರ್ಮವು ತಲೆದೋರುವದು; ಅಥವಾ, ನಿರತಿಶಯ ಸುಖದ ಜ್ಞಾನವಿದ್ದೂ, ತತ್ಪ್ರಾಪ್ತಿಯು ನನ್ನ ಅನುಗ್ರಹದಿಂದ ಸುಲಭವಾಗಿದ್ದರೂ, ಶ್ರದ್ಧೆ ಇಲ್ಲದೆ ಸಾಧನಾನುಷ್ಠಾನ ಮಾಡದಿರುವದು ಪ್ರಾರಬ್ಧ ಕರ್ಮವಾಸನಾ ಜನಿತ ಪ್ರತಿಬಂಧಕರೂಪ ಅಂತಶ್ಶತ್ರುಗಳನ್ನು ನೀನು ಆ ಕಾರಣದಿಂದ ಜಯಿಸತಕ್ಕದ್ದೆಂಬ ಭಾವದಿಂದ **ಪರಂತಪ** ಎಂಬ ಸಂಬೋಧನೆಯು

**ಭಾಷ್ಯಾವತಾರಿಕೆಯ ಅರ್ಥವು:—ಪ್ರಾಪ್ಯ ಭೂತಸ್ಯ ಮಮ** - ಉಪಾಸನವು ಎಷ್ಟು ಮಹಿಮೆಯುಳ್ಳದ್ದು, ಅಂಥಾದ್ದರಲ್ಲಿ ಶ್ರದ್ಧಾ ಇಲ್ಲದಿರಲು ಕಾರಣವೇ ಇಲ್ಲವು; ಏಕೆಂದರೆ ಆ ಉಪಾಸನಕ್ಕೆ ವಿಷಯನಾದ ಪ್ರಾಪ್ಯನಾದ ನನ್ನ, **ಅಚಿನ್ತ್ಯಮಹಿಮಾನಂ** - **" ಅಪ್ರಾಪ್ಯ ಮನಸಾ ಸಹ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಚಿನ್ತಿಸುವದಕ್ಕೂ ಕೂಡ ಅಸಾಧ್ಯನಾ ಗಿರುವ ಮಹಿಮೆಯನ್ನು, **ಶೃಣು ತಾವತ್** - ಹಾಗಾದರೆ ಸ್ವಲ್ಪ ಹೇಳುತ್ತೇನೆ ಕೇಳು; ನಾನು ಹಿಂದೆಯೇ ನನ್ನ ಮಾಹಾತ್ಮ್ಯೆಯನ್ನು ತಿಳಿಸಿದನು, ಇನ್ನೂ, ಸ್ವಲ್ಪ ಹೇಳುತ್ತೇನೆ ಕೇಳು; ಇಂತಹ ಆತ್ಯಾಶ್ಚರ್ಯಕರವಾದ ಮಹಿಮೆಯುಳ್ಳವನೇ ಉಪಾಸ್ಯನೂ ಪ್ರಾಪ್ಯನೂ ಆದನಂತರ ನಿನಗೆ ಶ್ರದ್ಧೆ ಇಲ್ಲದೇ ಇರಲು ಕಾರಣವೇ ಇಲ್ಲವೆಂಬ ಭಾವವು ದ್ಯೋತಿತವು. ಇಂತಹ ಉಪಾ ಸ್ಯನಾಗಿಯೂ ಪ್ರಾಪ್ಯನಾಗಿಯೂ ಇರುವ ಈ ಮುಂದೆ ಉಪದೇಶಿಸುವ ಅಚಿಂತ್ಯ ಮಹಿಮೆ ಯನ್ನು ಮನಸ್ಸಿನಲ್ಲಿಟ್ಟರೆ, ನಿನಗೆ ಶ್ರದ್ಧೆಯೂ ಕೂಡ ವೃದ್ಧಿಹೊಂದುತ್ತದೆಂಬ ಭಾವವೂ ಸೂಚಿತವು. ಅಂತಹ ಶ್ರದ್ಧೆಯು ಸ್ಥಿರಪಡುವದಕ್ಕಾಗಿಯೇ ಹಿಂದೆ ಉಪಾಸನದ ಮಾಹಾ ತ್ಮ್ಯೆಯು ಉಪದೇಶಿಸಲ್ಪಟ್ಟಿತು. ಹಾಗೆಯೇ ಈಗ ಉಪಾಸ್ಯದ ಮಾಹಾತ್ಮ್ಯೆಯೂ ಅಚಿಂತ್ಯ ವೆಂದು ತಿಳಿ.

**ಮೂಲಕ್ಕೆ ಅರ್ಥವು:—**ಈ ಸಾಧ್ಯೋಪಾಯದಲ್ಲಿ ಶ್ರದ್ಧೆಯು ಸಂಪೂರ್ಣವಾಗಿರುವದ ಕ್ಕಾಗಿ, ಅದರ ಮಾಹಾತ್ಮ್ಯೆಯೊಂದಿಗೆ ತನ್ನ ಮಾಹಾತ್ಮ್ಯೆಯು ಅತ್ಯದ್ಭುತವಾದುದೆಂದು ಉಪ ದೇಶಿಸುತ್ತಾರೆ. **ಇದಂ ಸರ್ವಂ ಜಗತ್** - ಈ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪರಿದೃಶ್ಯಮಾನ ವಾದ ಜಗತ್ತು, **ಇದಂ** ಎಂದು ಕೈಯಿಂದ ತೋರಿಸಿ ಹೇಳುವ ಸಂದರ್ಭದ ಹಾಗೆ ತೋರುತ್ತದೆ, **ಸರ್ವಂ ಜಗತ್** - ಸಮಸ್ತ ಜಗತ್ತೂ, ಇದರಿಂದ ಸಮಸ್ತ ಚೇತನಾಚೇತನಗಳು ಹೇಳಲ್ಪಟ್ಟವು. **ಅವ್ಯಕ್ತ ಮೂರ್ತಿನಾ**-ದಿವ್ಯಮಙ್ಗಳವಿಗ್ರಹರೂಪವಿಲ್ಲದೆ ಕಾಣದಿರುವ ಸ್ವರೂಪಮಾತ್ರವುಳ್ಳ,

**ಮೂ. ಮಯಾ ತತ ಮಿದಂ ಸರ್ವಂ ಜಗದ ವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನಚಾಹಂ ತೇಷ್ವ ವಸ್ಥಿತಃ ॥** ೪.
**ನಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗ ಮೈಶ್ವರವ್ ।**
**ಭೂತ ಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥** ೫.

**ಮಯಾ** – ನನ್ನಿಂದ, **ತತಂ** ವ್ಯಾಪಿಸಲ್ಪಟ್ಟಿರುತ್ತದೆ. ಅವುಗಳಿಗೆ ಅಂತರ್ಯಾಮಿಯಾಗಿ ದಿವ್ಯ ಮಙ್ಗಳರೂಪವಿಲ್ಲದೆ, ಅವುಗಳ ಸತ್ತಾಸ್ಥಿತಿ ಪ್ರವೃತ್ತಿಗಳಿಗೆ ಕಾರಣಭೂತನಾಗಿದ್ದೇನೆಂಬ ಭಾವವು. ಈ ವ್ಯಾಪನೆಯು ವಿಜಾತೀಯವಾದುದೆಂದು ಭಾವಿಸತಕ್ಕದ್ದು. ಈಗ ನೀರಿರುವ ಸ್ಥಳವನ್ನು ಕಲ್ಲು ಆಕ್ರಮಿಸಿದರೆ ಕಲ್ಲಿನಷ್ಟು ನೀರನ್ನು ಹೊರಗೆ ಹಾಕುತ್ತದೆ. ಪರಬ್ರಹ್ಮನ ವ್ಯಾಪನಶಕ್ತಿಯು ಹಾಗಲ್ಲವು ; ತಾನು ವ್ಯಾಪಿಸುವ ದ್ರವ್ಯವನ್ನು ಹೊರಗೆ ಹಾಕದೆ ವ್ಯಾಪಿಸುವ ಶಕ್ತಿಯುಂಟು. ಈ ಶಕ್ತಿಯಿಂದ ಅಂತರ್ವ್ಯಾಪ್ತಿ ಮಾತ್ರವೇ ಅಲ್ಲದೆ ದ್ರವ್ಯದ ಬಹಿಃಕೂಡ ವ್ಯಾಪಿಸುತ್ತಾನೆ. ಆದುದರಿಂದಲೇ ಶ್ರುತಿಯು **"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ"** (ಪುರುಷ) ಎಂದು ಹೇಳಿರುತ್ತದೆ. ಜೀತನನು ಅಣುವೆಂದು **"ಏಷೋಽಣುರಾತ್ಮಾ",** (ಮುಂ. ೩. ೧.) **"ವಾಲಾಗ್ರ ಶತಭಾಗಸ್ಯ"** (ಶ್ವೇ. ೧. ೯) ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟಿರುತ್ತದೆಂದು ಹಿಂದೆಯೇ ಉಪಪಾದಿತವು. ಹೀಗಿರುವಾಗ, **ಮಯಾತತಮಿದಂ** ಎಂಬಲ್ಲಿ ಜೀವಾತ್ಮನ ವಿಷಯದಲ್ಲಿ ವ್ಯಾಪ್ತಿಯು ಹೇಗೆ? ಅಣುವಿನಲ್ಲಿ ಒಳಗೆ ಪ್ರದೇಶವಿಲ್ಲವಲ್ಲಾ ಎಂದರೆ ಅಣುವು ಎಷ್ಟಿದೆಯೋ ಅಷ್ಟನ್ನೂ ವ್ಯಾಪಿಸುವ ಶಕ್ತಿಯುಂಟೆಂದು ಭಾವಿಸತಕ್ಕದ್ದು. ಅಣುವು ಈಗ ಇರುವದಕ್ಕಿಂತ ಸೂಕ್ಷ್ಮವಾಗಿದ್ದರೂ ಆವಾಗಲೂ ವ್ಯಾಪಿಸುವ ಶಕ್ತಿಯುಂಟೆಂದು **"ಅಣೋರಣೀಯಾನ್ ಮಹತೋ ಮಹೀಯಾನ್"** ಎಂಬಲ್ಲಿ (ಕಠ. ೧೨-೨೦ ಶ್ವೇ. ತೈ. ನಾ) ಹೇಳಲ್ಪಟ್ಟಿರುತ್ತದೆ. ಇದನ್ನೇ ವ್ಯಕ್ತಪಡಿಸುತ್ತಾರೆ.—ಆದುದರಿಂದ **ಸರ್ವಭೂತಾನಿ** – ಸಮಸ್ತ ಚಿದಚಿತ್ತುಗಳು, **ಮತ್ಸ್ಥಾನಿ** – ನನ್ನಲ್ಲೇ ಇರುವಂತಾವುಗಳು ಎಂದರೆ ನನ್ನನ್ನು ಬಿಟ್ಟರೆ ಅವುಗಳಿಗೆ ಸ್ವರೂಪಾದಿಗಳೇ ಇಲ್ಲವು, ನಾನೇ ಅವುಗಳಿಗೆ ಧಾರಕನು, ಪೋಷಕನು, ಭೋಗ್ಯತ್ವದಾಯಕನು ಎಂಬ ಭಾವವು, ಇದರಿಂದ ತಾನು ಆಧಾರವು, ಚಿದಚಿತ್ತುಗಳು ಆಧೇಯವು, ತಾನು ನಿಯಾಮಕನು ಚಿದಚಿತ್ತುಗಳು ನಿಯಾಮ್ಯವು, ತಾನು ಶೇಷಿಯು, ಚಿದಚಿತ್ತುಗಳು ಶೇಷಗಳು ಎಂದು ಹೇಳಿದಂತಾಯಿತು. **ನ ಚಾಹಂ ತೇಷ್ವವಸ್ಥಿತಃ** – ನಾನೇನೂ ಅವುಗಳಿಗೆ ಅಧೀನನಾಗಿಲ್ಲವು ಎಂದರೆ ಅವುಗಳು ನನಗೆ ಎಂದಿಗೂ ಧಾರಕ ಪೋಷಕಶೇಷಿಗಳಾಗುವದಿಲ್ಲವು ; ಅಥವಾ ಅವುಗಳು ನನ್ನ ಸತ್ತಾಸ್ಥಿತಿ ಪ್ರವೃತ್ತಿಗಳಿಗೆ ಏನೊಂದೂ ಸಾಧಕವಲ್ಲವು. ಹಿಂದೆ **ಮತ್ಸ್ಥಾನಿ ಸರ್ವಭೂತಾನಿ** ಎಂದು ಹೇಳಿ, ಈಗ **ನಚ ಮತ್ಸ್ಥಾನಿ ಭೂತಾನಿ** ಎಂದು ಹೇಳುವದು ಶಬ್ದರೀತ್ಯಾ ವಿರೋಧವುಳ್ಳವುಗಳಾಗಿ ತೋರುತ್ತದೆ ; ಇದರಿಂದಲೇ, ವ್ಯಾಸೋಕ್ತಿಗಳಿಗೆ ಅರ್ಥಮಾಡುವದು ಸುಲಭವಲ್ಲವೆಂಬುದು ವ್ಯಕ್ತವು. ಹಾಗೆಯೇ, ಹಿಂದೆ **ಮಯಾ ತತಮಿದಂ ಸರ್ವಂ** ಎಂದು ಹೇಳಿಬಿಟ್ಟು, **ನ ಚಾಹಂ ತೇಷ್ವವಸ್ಥಿತಃ** ಎಂದು ಹೇಳಿದರೆ ಸರ್ವದಾ ಪರಸ್ಪರ ವಿರೋಧವಾಕ್ಯಗಳ ಹಾಗೆಯೇ ತೋರುತ್ತವೆ. ಆದುದರಿಂದ ಪ್ರಕರಣಾನುಗುಣವಾಗಿ ವಿರೋಧವಿಲ್ಲದೆ ಅನ್ವಯಿಸತಕ್ಕದ್ದಾಗಿರುತ್ತದೆ. **ನ ಚ ಮತ್ಸ್ಥಾನಿಭೂತಾನಿ** – ಆಧೇಯವಾಗಲು ಭೂತಗಳು ನನ್ನಲ್ಲೇ ಇರಬೇಕೆಂಬ ನಿಯಮವಿಲ್ಲವು, **"ದ್ಯೌಸ್ಸ ಚಂದ್ರಾರ್ಕನಕ್ಷತ್ರಂ ಖಂ ದಿಶೋಭೂ ರ್ಮಹೋದಧಿಃ । ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ"** ಎಂದು ಹೇಳಿರುವ ಮೇರೆಗೆ ಸಙ್ಕಲ್ಪಮಾತ್ರದಿಂದಲೇ ಧರಿಸಲ್ಪಟ್ಟಿರುವುವೆಂಬ ಭಾವವು. ಹೀಗಿರುವದರಿಂದ **ಮೇ** – ನನ್ನ, **ಐಶ್ವರಂ ಯೋಗಂ**- ಈಶ್ವರ ಸಂಬಂಧವಾದ, ಸರ್ವವನ್ನು ಧರಿಸಿ ನಿಯಮನಮಾಡುವ **ಅತ್ಯದ್ಭುತ ಸಙ್ಕಲ್ಪರೂಪ**

**ಭಾ. ಇದಂ - ಚೇತನಾ ಚೇತನಾತ್ಮಕಂ ಕೃತ್ಸ್ನಂ ಜಗತ್, ಅವ್ಯಕ್ತಮೂರ್ತಿನಾ - ಅಪ್ರಕಾಶಿತ ಸ್ವರೂಪೇಣ, ಮಯಾ - ಅನ್ತರ್ಯಾಮಿಣಾ, ತತಮ್ - ಅಸ್ಯ ಜಗತಃ ಧಾರಣಾರ್ಥಂ ನಿಯಮನಾರ್ಥಂಚ ಶ್ರೇಷಿತ್ವೇನ ವ್ಯಾಪ್ತ ಮಿತ್ಯರ್ಥಃ॥ ಯಥಾ ಅನ್ತರ್ಯಾಮಿ ಬ್ರಾಹ್ಮಣೇ(೧) "ಯಃ ಪೃಥಿವ್ಯಾಂ ತಿಷ್ಠ᳚....ಯಂ ಪೃಥಿವೀನ ವೇದ" "ಯಆತ್ಮನಿ**

ಶಕ್ತಿಯನ್ನು **ಪಶ್ಯ** - ನೋಡು; ಈ ಮಾಹಾತ್ಮ್ಯೆಯನ್ನು ವಿಮರ್ಶಿಸಿ ನೋಡಿದರೆ ನಿನಗೆ ಆಶ್ಚರ್ಯವನ್ನುಂಟುಮಾಡದ ಇರಲಾರದೆಂಬ ಭಾವವು. **ಭೂತಭೃತ್** - ಹೀಗೆ ನಾನು ಚಿದಚಿದಾತ್ಮಕ ಭೂತಗಳನ್ನು ಧರಿಸಿರುವನು, **ನ ಚ ಭೂತಸ್ಥಃ** - ಆ ಭೂತಗಳಿಂದೇನೂ ನಾನು ಇರುವವನಲ್ಲವು, ಎಂದರೆ **ಭೂತ**ಗಳಿಂದೇನೂ ನನಗೆ ಪ್ರಯೋಜನವಿಲ್ಲವು. ಹೀಗೆ ಅರ್ಜುನನಿಗೆ ಉಪಾಸನದಲ್ಲಿ ಶ್ರದ್ಧಾ ಉಂಟಾಗುವದಕ್ಕಾಗಿ ಹಿಂದೆ ಉಪಾಸನದ ಮಹಿಮೆಯನ್ನು ಕೊಂಡಾಡಿ ಈ ಶ್ಲೋಕಗಳಿಂದ ತನಗಿರುವ ವ್ಯಾಪ್ತಿಮೂಲಕ ಆಧೇಯತ್ವ ನಿಯಮನತ್ವ ಶೇಷಿತ್ವಾದಿ ಅತ್ಯದ್ಭುತ ಶಕ್ತಿಗಳುಂಟೆಂದು ತನ್ನ ಮಹಿಮೆಯನ್ನು ಉಪದೇಶಿಸಿದರು.

**ಭಾಷ್ಯಾರ್ಥವು** :—ಈ ಅಧ್ಯಾಯದಲ್ಲಿ ಮುಖ್ಯವಾಗಿ ಪ್ರಾಪಕವಾಗಿರುವ ಉಪಾಸನದ ಮಾಹಾತ್ಮ್ಯೆಯು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಪ್ರಾಪ್ಯನಾಗಿರುವ ತನ್ನ ಮಾಹಾತ್ಮ್ಯೆಯನ್ನು ತಿಳಿಸುವದರ ಮೂಲಕ ತನ್ನ ಮಾಹಾತ್ಮ್ಯೆಯನ್ನೂ ಇನ್ನೂ ಸ್ಥಿರಪಡಿಸುವವರಾಗಿಯೂ, ಸಾಧ್ಯೋಪಾಯವಾದ ಉಪಾಸನದ ಮಾಹಾತ್ಮೆಯನ್ನೂ ದೃಢಪಡಿಸುವವರಾಗಿಯೂ, ಹೇಳಲಾರಂಭಿಸುತ್ತಾರೆ - ಇದರಿಂದ ಅರ್ಜುನನು ಈ ಉಪಾಸದಲ್ಲಿ ಶ್ರದ್ಧೆಯನ್ನು ಹೊಂದುವನು ಎಂಬ ಭಾವದಿಂದ ತನ್ನ ಅತ್ಯದ್ಭುತ ಶಕ್ತಿಯನ್ನು ಪ್ರಕಟಿಸುತ್ತಾರೆ.—**ಇದಂ ಜಗತ್** - ಈ ಪ್ರತ್ಯಕ್ಷ ಸಿದ್ಧವಾದ ಜಗತ್ತು ಅದು ಎಂತಾದ್ದೆಂದರೆ, **ಚೇತನಾಚೇತನಾತ್ಮಕಂ ಕೃತ್ಸ್ನಂಜಗತ್** - ಚಿದಚಿದ್ರೂಪವಾಗಿರುವ ಈ ಸಮಸ್ತ ಜಗತ್ತು, **ಅವ್ಯಕ್ತಮೂರ್ತಿನಾ** ಎಂದರೆ **ಅಪ್ರಕಾಶಿತ ಸ್ವರೂಪೇಣ**- ಪ್ರಕಾಶಿಸಲ್ಪಡದೇ ಇರುವ ಎಂದರೆ ವ್ಯಕ್ತವಲ್ಲದ ಸ್ವರೂಪವುಳ್ಳ, ಮಯಾ ಎಂದರೆ **ಅನ್ತರ್ಯಾಮಿಣಾ** - ಅಂತರ್ಯಾಮಿಯಾಗಿರುವ ನನ್ನಿಂದ, **ತತಂ** ಎಂದರೆ **ವ್ಯಾಪ್ತಮಿತ್ಯರ್ಥಃ** - ವ್ಯಾಪಿಸಲ್ಪಟ್ಟಿರುತ್ತದೆ. ನಿರರ್ಥಕ ವ್ಯಾಪನೆಯೋ ? ಈಗ ಆಕಾಶ, ವಾಯು, ಮೊದಲಾದವುಗಳಿಗೂ ವ್ಯಾಪಕ ಶಕ್ತಿಯುಂಟು, ಹಾಗೆಯೋ ? ಎಂದರೆ ತನ್ನ ವ್ಯಾಪನೆಯಿಂದ ಜಗತ್ತಿನ ಸರ್ವವ್ಯಾಪಾರಗಳನ್ನು ನಡೆಸುತ್ತೇನೆಂಬ ಭಾವನೆಯಿಂದ **ತತಂ** ಎಂದು ಹೇಳಿದರೆಂದು ತಿಳಿಸುತ್ತಾರೆ. **ಅಸ್ಯ ಜಗತಃ** - ಈ ಜಗತ್ತನ್ನು, **ಧಾರಣಾರ್ಥಂ** - ಧರಿಸುವದಕ್ಕಾಗಿಯೂ, **ನಿಯಮನಾರ್ಥಂ** - ಪ್ರವೃತ್ತಿಗಳುಂಟಾಗುವ ಹಾಗೆ ನಿಯಮಿಸುವದಕ್ಕಾಗಿಯೂ, **ಶೇಷಿತ್ವೇನ** - ಅವುಗಳಿಗೆ ಶೇಷಿಯಾಗಿರುದದಕ್ಕಾಗಿಯೂ, **ವ್ಯಾಪ್ತಮಿತ್ಯರ್ಥಃ** - ವ್ಯಾಪ್ತಿಸಿರುತ್ತೇನೆಂಬ ಅರ್ಥವು. ಹೀಗೆ ಲೋಕದ ಎಲ್ಲಾ ಸತ್ತಾ ಸ್ಥಿತಿ ಪ್ರವೃತ್ತಿಗಳಿಗೆಲ್ಲಾ ಆತನ ವ್ಯಾಪ್ತಿಯೇ ಮುಖ್ಯಕಾರಣವು. ಇಂತಹ ಪ್ರಯೋಜನಗಳನ್ನು ಲೋಕಕ್ಕೆ ಉಂಟುಮಾಡುವದಕ್ಕಾಗಿಯೇ ಆತನು ಸರ್ವಕ್ಕೂ ಅಂತರ್ಯಾಮಿಯಾಗಿ ಎಲ್ಲವನ್ನೂ ವ್ಯಾಪಿಸಿರುವದು ಎಂಬ ಭಾವವು. **"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್"** ಎಂದು ಶ್ರುತಿಯು ಹೇಳುತ್ತದೆ. ಹೀಗೆ **ಅಪ್ರಕಾಶಿತ** ಸ್ವರೂಪನಾಗಿ ವ್ಯಾಪಿಸಿರುವದಕ್ಕೆ ಪ್ರಮಾಣವುಂಟೋ ಎಂದರೆ, ಪ್ರಮಾಣವನ್ನು ಉದಾಹರಿಸುತ್ತಾರೆ. **ಯಥಾನ್ತರ್ಯಾಮಿ ಬ್ರಾಹ್ಮಣೇ** - ಹಾಗೆಯೇ ಅಂತರ್ಯಾಮಿ ಬ್ರಾಹ್ಮಣದಲ್ಲಿ ಹೇಳಲ್ಪಟ್ಟಿರುತ್ತದೆ. **"ಯಃಪೃಥಿವ್ಯಾಂತಿಷ್ಠ᳚....ಯಂ ಪೃಥಿವೀನವೇದ"** "ಯಾವ

(೧) ಬೃ. ೫. ೭. ೩.

**ಭಾ. ತಿಷ್ಠನ್‌....ಯ ಮಾತ್ಮಾ ನ ವೇದ" ಇತಿ ಚೇತನಾಚೇತನ ವಸ್ತು ಜಾತೈ ರದೃಷ್ಟೇನಾಽನ್ತರ್ಯಾಮಿಣಾ ತತ್ರ ತತ್ರ ವ್ಯಾಪ್ತಿರುಕ್ತಾ। ತತೋಮತ್ಸ್ಥಾನಿ ಸರ್ವಭೂತಾನಿ ಸರ್ವಾಣಿ ಭೂತಾನಿ ಮಯ್ಯನ್ತರ್ಯಾಮಿಣಿ ಸ್ಥಿತಾನಿ। ತತ್ರೈವ ಬ್ರಾಹ್ಮಣೇ - "ಯಸ್ಯ ಪೃಥಿವೀ ಶರೀರಂ....ಯಃ ಪೃಥಿವೀ ಮನ್ತರೋ ಯಮಯತಿ" "ಯಸ್ಯಾತ್ಮಾ ಶರೀರಂ.... ಯ ಆತ್ಮಾನ ಮನ್ತರೋಯಮಯತಿ" ಇತಿ ಶರೀರತ್ವೇನ ನಿಯಾಮತ್ವ ಪ್ರತಿಪಾದನಾ ತ್ತದಾಯತ್ತೇ ಸ್ಥಿತಿನಿಯಮನೇ ಪ್ರತಿಪಾದಿತೇ, ಶೇಷಿ ತ್ವಂಚ.**

ಪರಬ್ರಹ್ಮನು, ಪೃಥಿವಿಯಲ್ಲಿ ಅದನ್ನು ವ್ಯಾಪಿಸಿಕೊಂಡಿದ್ದರೂ ಪೃಥಿವಿಯು ಯಾವ ಪರಬ್ರಹ್ಮ, ನನ್ನು ಅರಿಯದೋ" ಮತ್ತು **ಯ ಆತ್ಮನಿ ತಿಷ್ಠನ್ ಯಮಾತ್ಮಾನವೇದ'** -ಯಾವ ಪರಬ್ರಹ್ಮವು ಈ ಚೇತನನಲ್ಲೂ ಇದ್ದುಕೊಂಡಿದ್ದರೂ, ಯಾವ ಪರಮಾತ್ಮನನ್ನು ಈ ಜೀವಾತ್ಮನು ಅರಿಯನೋ" ಇತಿ ಎಂಬದಾಗಿ **ಚೇತನಾ ಚೇತನ ರೂಪ** ಗಳಾದ **ವಸ್ತು ಜಾತೈಃ** - ವಸ್ತುಗಳ ಸಮೂಹದಿಂದ, **ಅದೃಷ್ಟೇನ** - ಕಾಣಲ್ಪಡದೇ ಇರುವ, **ಅಂತರ್ಯಾಮಿಣಾ** - ಅಂತರ್ಯಾಮಿಯಾದ ಪರಮಾತ್ಮನಿಂದ, **ತತ್ರ ತತ್ರ** - ಅಲ್ಲಲ್ಲಾ, **ವ್ಯಾಪ್ತಿರುಕ್ತಾ**-ವ್ಯಾಪ್ತಿಯು ಹೇಳಲ್ಪಟ್ಟಿತು. ಇಲ್ಲಿ ಸರ್ವಚೇತನಾಚೇತನ ವ್ಯಾಪ್ತಿಗೆ ಪ್ರಮಾಣ ಪ್ರದರ್ಶನಕ್ಕಾಗಿ, ಒಂದು ವಾಕ್ಯವು ಅಚೇತನ ವ್ಯಾಪ್ತಿಯನ್ನೂ ಇನ್ನೊಂದು ವಾಕ್ಯವು ಚೇತನ ವ್ಯಾಪ್ತಿಯನ್ನು, ಬೋಧಿಸುವ ಬೃಹದಾರಣ್ಯಕೋಪನಿಷತ್ತನ್ನು ಉದಾಹರಿಸಿರುತ್ತಾರೆ. ಹೀಗೆ ಆತನು ವ್ಯಾಪಿಸಿದ್ದರೂ, ಚೇತನನು **"ಯಂ ಆತ್ಮಾ ನವೇದ"** ಎಂಬ ಶ್ರುತ್ಯರ್ಥವನ್ನು ವ್ಯಕ್ತಪಡಿಸುವದಕ್ಕಾಗಿ **ಅದೃಷ್ಟೇನಾಂತರ್ಯಾಮಿಣಾ** ಎಂಬ ಪ್ರಯೋಗವು, ಇದನ್ನೇ ಮೂಲವೂ **ಅವ್ಯಕ್ತಮೂರ್ತಿನಾ** ಎಂದು ಬೋಧಿಸುತ್ತದೆ. ಮುಂದೆ ಮೂಲದ **ಮತ್ಸ್ಥಾನಿ ಸರ್ವಭೂತಾನಿ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ.—

**ತತಃ** - ಆ ಕಾರಣದಿಂದ ಎಂದರೆ ನಾನು ಸರ್ವಚೇತನಾ ಚೇತನವನ್ನು ವ್ಯಾಪಿಸಿರುವದರಿಂದ, **ಮತ್ಸ್ಥಾನಿ ಸರ್ವಭೂತಾನಿ** ಎಂದರೆ **ಸರ್ವಾಣಿ ಭೂತಾನಿ ಮಯ್ಯಂತರ್ಯಾಮಿಣಿ ಸ್ಥಿತಾನಿ** - ಸಮಸ್ತ ಚಿದಚಿತ್ತುಗಳು ಅಂತರ್ಯಾಮಿಯಾದ ನನ್ನಲೇ ಇರುವಂತಾವುಗಳು ; ಎಂದರೆ ನನ್ನನ್ನು ಬಿಟ್ಟು ಇರುವವುಗಳಲ್ಲವು ; ನನಗೆ ಅಪೃಥಕ್ಸಿದ್ಧ ವಿಶೇಷಣಗಳಾಗಿ, ನನ್ನಿಂದಲೇ ಸತ್ತಾ ಸ್ಥಿತಿ ನಿಯಮನಾದಿಗಳನ್ನು ಹೊಂದಿವೆ ಎಂಬ ತಾತ್ಪರ್ಯವು. ಹೀಗೆ ಅಪೃಥಕ್ಸಿದ್ಧ ವಿಶೇಷಣವಾಗಿರುವದರಿಂದಲೇ ಚಿದಚಿತ್ತುಗಳೆಲ್ಲಾ ಪರಮಾತ್ಮನಿಗೆ ಶರೀರವು, ಅವುಗಳಿಗೆಲ್ಲಾ ಆತ್ಮಾವಾಗಿ, ಆಧಾರನಾಗಿ, ನಿಯಾಮಕನಾಗಿ, ಶೇಷಿಯಾಗಿರುವನೆಂಬ ತಾತ್ಪರ್ಯವು. ಈ ಮುಂದೆ ಉದಾಹರಿಸುವ ಶ್ರುತಿಗಳಿಂದ ವಿಶಿಷ್ಟಾದ್ವೈತ ಸಿದ್ಧಾನ್ತವೇ ಸರ್ವ ಸಮಂಜಸವಾದ ಸಿದ್ಧಾನ್ತವೆಂಬುದನ್ನು ವ್ಯಕ್ತಪಡಿಸುತ್ತಾರೆ. ಇದನ್ನು ವ್ಯಕ್ತಪಡಿಸುವದಕ್ಕೆ ಈ ಮೇಲಿನ ಶ್ರುತಿ ವಾಕ್ಯ ಖಂಡವನ್ನೇ ಉದಾಹರಿಸುತ್ತಾರೆ. **ತತ್ರೈವ ಬ್ರಾಹ್ಮಣೇ** - ಅದೇ ಅಂತರ್ಯಾಮಿ ಬ್ರಾಹ್ಮಣದಲ್ಲೇ, **"ಯಸ್ಯ ಪೃಥಿವೀ ಶರೀರಂ....ಯಃ ಪೃಥಿವೀ ಮನ್ತರೋ ಯಮಯತಿ"** "ಯಾವ ಪರಮಾತ್ಮನಿಗೆ ಈ ಪೃಥಿವಿಯು ಶರೀರವೋ, ಯಾವ ಪರಮಾತ್ಮನು ಒಳಗಿರುವನಾಗಿ ಈ ಪೃಥಿವಿಯನ್ನು ನಿಯಮಿಸುವನೋ, ಅವನೇ ನಿನಗೆ ಆತ್ಮಾ ಎಂದು ಯಾಜ್ಞವಲ್ಕ್ಯರು ಶಿಷ್ಯನಾದ ಉದ್ದಾಲಕರಿಗೆ ಉಪದೇಶಿಸಿರುತ್ತಾರೆ ; ಅನಂತರ ಶ್ರುತಿಯು ಹಾಗೆಯೇ ಪರಮಾತ್ಮನು ತನಗೆ ಶರೀರವಾದ ಅಪ್ಪು, ಅಗ್ನಿ, ಅಂತರಿಕ್ಷ, ವಾಯು, ಮೊದಲಾದವುಗಳಲ್ಲಿದ್ದಾನೆ ಎಂದೂ, ಸಮಸ್ತ ಅಚೇತನಕ್ಕೂ ಆತನೇ ಆತ್ಮನು, ಎಂದೂ, ಇವೆಲ್ಲಾ ಆತನಿಗೆ ನಿಯಾಮ್ಯವಾದ ಶರೀರವೆಂದೂ, ಹೇಳುತ್ತದೆ. ಹಾಗೆಯೇ ಮಾಧ್ಯಂದಿನ ಪಾಠದಲ್ಲಿ **"ಯಸ್ಯಾತ್ಮಾ ಶರೀರಂ ಯ ಆತ್ಮಾನ ಮನ್ತರೋ ಯಮಯತಿ"** - ಯಾವ ಪರಮಾತ್ಮನಿಗೆ ಜೀವವರ್ಗವೆಲ್ಲಾ ಶರೀರವೋ, ಯಾವ

ಪರಮಾತ್ಮನು ಒಳಗಿರುವವನಾಗಿ, ಈ ಜೀವಕೋಟಿಯನ್ನೆಲ್ಲಾ ನಿಯಮಿಸುವನೋ, ಅಂತವನೇ ನಿನಗೂ ಆತ್ಮನು. **ಇತಿ** - ಎಂದು, **ಶರೀರತ್ವೇನ** - ಈ ಚೇತನಾಚೇತನವೆಲ್ಲಾ ಶರೀರವೆಂದು ಹೇಳಿ, **ನಿಯಾಮ್ಯತ್ವಪ್ರತಿಪಾದನಾತ್** - ಆ ಶರೀರಗಳ ನಿಯಮನವು ಪ್ರತಿಪಾದಿಸಲ್ಪಟ್ಟಿರುವದರಿಂದ, **ತದಾಯತ್ತೇ** - ಆ ಪರಮಾತ್ಮನಿಗೇನೇ ಅಧೀನವಾದ, **ಸ್ಥಿತಿ ನಿಯಮನೇ** - ಸ್ಥಿತಿ ನಿಯಮನಗಳೆರಡೂ, **ಪ್ರತಿಪಾದಿತೇ** - ಪ್ರತಿಪಾದಿಸಲ್ಪಟ್ಟವು ; **ಶೇಷಿತ್ವಂಚ** - ತನ್ಮೂಲಕವಾಗಿ ಅವುಗಳಿಗೆಲ್ಲಾ ತಾನು ಪತಿಯು ಶೇಷಿಯು ಎಂಬುದೂ ಸಹ ಉಪಪಾದಿಸಲ್ಪಟ್ಟಿತು. ಈ ಶ್ರುತಿಯು ಸ್ಥಿತಿನಿಯಮಗಳನ್ನು ಯಾವಾಗ ವ್ಯಕ್ತವಾಗಿ ಹೇಳಿತೋ, ಆಗ ನಿಯಮನಕ್ಕೆ ಈತನು ಅವುಗಳಿಗೆ ಸ್ವಾಮಿಯಾಗಿ ಶೇಷಿಯೆಂದು ಭಾವಿಸಬಹುದು. ಭಾವನೆ ಏತಕ್ಕೆನ್ನುವವರಿಗೆ ಬೇರೆ ಶ್ರುತಿಯೇ, **"ಪತಿಂ ವಿಶ್ವಸ್ಯಾತ್ಮಾ"** (ಪುರುಷಸೂಕ್ತ) ಎಂದು ಶೇಷಿತ್ವವನ್ನು ಉದ್ಘೋಷಿಸುತ್ತದೆ. ಹಿಂದೆ ಇದೇ ಗ್ರಂಥದ ೭ನೆಯ ಅಧ್ಯಾಯದಲ್ಲಿ, ಮೇ - ನನ್ನ, **ಅಪರಾ ಪರಾ** ಪ್ರಕೃತಿ ಎಂದು ಅಚಿತ್ತು ಚಿತ್ತುಗಳನ್ನು ಹೇಳಿ, **ಮಯಿ ಸರ್ವಮಿದಂ ಪ್ರೋತಂ** ಎಂದೂ ಹೇಳಲ್ಪಟ್ಟಿರುವದರಿಂದ ಶರೀರಿ ಶರೀರ ಭಾವವೂ, ಶೇಷೀ ಶೇಷಭಾವವೂ, ಎಲ್ಲವೂ ವ್ಯಕ್ತವು. ಈ ಪೂರಾ ಶ್ರುತಿಯು ಯಾವುದೆಂದರೆ **ಯಃ ಪೃಥಿವ್ಯಾಂ ತಿಷ್ಠನ್, ಪೃಥಿವ್ಯಾ ಅನ್ತರೋಯಂ ಪೃಥಿವೀನ ವೇದ, ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀ ಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯ ಮೃತಃ"** || ಈ ವಾಕ್ಯವು ಅದ್ವೈತಕ್ಕೆ ಸಾಕ್ಷಾತ್ತಾಗಿ ವಿರೋಧವು, ಸಮಸ್ತ ಚಿದಚಿತ್ತುಗಳೂ ಪರಮಾತ್ಮನಿಗೆ ಶರೀರವು, ಅವುಗಳಿಗೆಲ್ಲಾ ಈತನು ಆತ್ಮಾ, ಎಂದು ಸುಮಾರು ೨೦ ವಾಕ್ಯಗಳಿಂದ ಹೇಳಿರುವದರಿಂದ ಚಿದಚಿತ್ತುಗಳಿಗಿಂತ ಪರಮಾತ್ಮನು ಬೇರೆ ಎಂಬುದನ್ನೇ ಉಪಪಾದಿಸಿರುತ್ತದೆ. ಕಲ್ಕತ್ತೆಯ ಯೂನಿವರ್ಸಿಟಿ ಸಂಸ್ಕೃತ ಪ್ರೊಫಸರಾದ ಮಹನೀಯರಾದ ಅದ್ವೈತ ಸಿದ್ಧಾನ್ತಶಿಖಾಮಣಿಗಳಾದ ಕೋಕಿಲೇಶ್ವರಶಾಸ್ತ್ರಿಗಳವರು ಶ್ರೀ ಶಂಕರಾಚಾರ್ಯರವರ ಮಿಥ್ಯಾವಾದಭಿಪ್ರಾಯವು ಅವರ ಶಿಷ್ಯರಿಗೇನೆ ವೇದ್ಯವಿಲ್ಲವು ಎಂದು ಹೇಳಿ, "Sankara does not deny the existence of the world as such, he only wants us to treat it, not as ಅನ್ಯ from Brahman or something self existent and independent. This is Shankara's view of unreality ಮಿಥ್ಯಾ (page 137). The world is entirely *dependent* on Bramhan, and inseparable from it. (Page 140 Advitha philosophy.) ಎಂದು ಸರಿಯಾದ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ನಾವೂ ಇವರ ಹಾಗೆಯೇ ಪರಬ್ರಹ್ಮನಿಗೆ ಜಗತ್ತು ಅಪೃಥಗ್ವಿಶೇಷಣವೆಂದೂ ಅಧೀನವಾದುದೆಂದೂ ಹೇಳುವೆವು. ಈ ಶ್ರುತಿಗಳು ತತ್ವತ್ರಯಗಳ ಯಾಥಾತ್ಮ್ಯವನ್ನೇ ಉಪಪಾದಿಸಿರುತ್ತವೆ. ಉದ್ದಾಲಕ ಪ್ರಶ್ನೆಯೇ **"ಯ ಇಮಂಚ ಲೋಕಂ ಪರಂಚ ಲೋಕಗ್ ಸರ್ವಾಣಿ ಚ ಭೂತಾನಿಯೋನ್ತರೋ ಯಮಯತಿ"** ಎಂದು ಯಾವನೋ ಒಬ್ಬನೇ ಇವೆಲ್ಲಕ್ಕೂ ಅಂತರ್ಯಾಮಿಯಾಗಿದ್ದಾನೆಂದು ಪ್ರಾಜ್ಞರು ಹೇಳುವರು, ಅವನು ಯಾರು ಎಂದು ಕೇಳುವದರಿಂದಲೂ, ಇವೆಲ್ಲಕ್ಕೂ ಯಾವನು ಅಂತರ್ಯಾಮಿಯೋ, ಅವನೇ ನಿನಗೂ ಅಂತರ್ಯಾಮಿಯು ಎಂದು ಉತ್ತರವನ್ನು ಹೇಳಿದರೆ, ಅದ್ವೈತವು ಹೇಗೆ ಕೂಡುತ್ತದೆ ? **ತೇ ಆತ್ಮಾ ಅಮೃತಃ** ಎಂದು ವ್ಯಧಿಕರಣ ನಿರ್ದೇಶವೂ, ಆತನು ನಿನಗೆ ನಿರುಪಾಧಿಕ ಅಮೃತತತ್ವಶಾಲೀ ಎಂಬರ್ಥವೂ ಆಗುವಾಗ, **ತೇ ಆತ್ಮಾ ಅಮೃತಃ** ಎಂಬಲ್ಲಿ ಎರಡಕ್ಕೂ ಸ್ವರೂಪತಃ ಐಕ್ಯ ಹೇಳುವದು ಹೇಗೆ ಸಾಧ್ಯವೋ ಪ್ರಾಜ್ಞರು ವಿಮರ್ಶಿಸಬಹುದು. ಹೀಗೆ ಸಮಸ್ತಚೇತನಾಚೇತನಗಳ ಸತ್ತಾಸ್ಥಿತಿ ನಿಯಮನಗಳಿಗೆ ಕಾರಣನಾಗಿರುವದು, ಪರಮಾತ್ಮನು, ಅವುಗಳಿಗೆ ಆತ್ಮಾ

**ಭಾ. ನ ಚಾಹಂ ತೇಷ್ವವಸ್ಥಿತಃ-ಅಹಂತು ನ ತದಾಯತ್ತಸ್ಥಿತಿಃ, ಮತ್ಸ್ಥಿತೌ ತೈರ್ನಕಶ್ಚಿದುಪಕಾರ ಇತ್ಯರ್ಥಃ। ನಚ ಮತ್ಸ್ಥಾನಿ ಭೂತಾನಿ ನ ಘಟಾದೀನಾಂ ಜಲದೇ ರಿವ**

ನಾಗಿರುವದರಿಂದಲೇ ಎಂದು ಹೇಳಲ್ಪಟ್ಟಿತು. ಶರೀರ ಶರೀರಿ ಭಾವಗಳು ಕೂಡಲು, ಅವುಗಳಿಗೆ ಆಧೇಯಾಧಾರ ಭಾವವೂ, ನಿಯಾಮ್ಯ ನಿಯಮನ ಭಾವವೂ, ಶೇಷ ಶೇಷಿಭಾವವೂ ಇರಬೇಕು. ಹೀಗೆ ಸಂಭವಿಸುವದಕ್ಕೆ ಈ ಚೇತನಾಚೇತನಗಳಿಗೆಲ್ಲಾ ಪರಮಾತ್ಮನು ಆತ್ಮಾವಾಗಿರುವದೇ ಕಾರಣವು. ಹೀಗೆ ಅವುಗಳಿಗೆ ಸರ್ವವಿಧ ಪ್ರಯೋಜನವೂ ನನ್ನಿಂದಲೇ ಎಂದು ಹೇಳಲ್ಪಟ್ಟಿತು. ಆದರೆ ಅವುಗಳು ನನಗೆ ಶರೀರವಾಗಿರುವದರಿಂದ ನನಗೇನಾದರೂ ಅವುಗಳಿಂದ ಪ್ರಯೋಜನವೋ ಎಂದರೆ ಏನೊಂದೂ ಇಲ್ಲವು ಎಂದು ಹೇಳುತ್ತಾರೆ. **ನ ಚಾಹಂ ತೇಷ್ವವಸ್ಥಿತಃ** ನಾನು ಅವುಗಳಿಗೆ ಅಧೀನನಾಗಿ ಏನೂ ಇರುವದಿಲ್ಲವು, ಎಂದರೆ **ಅಹಂತು ನತದಾಯತ್ತಸ್ಥಿತಿಃ**- ನಾನಾದರೋ ಅವುಗಳಿಗೆ ಅಧೀನವಾದ ಸ್ಥಿತಿ ಸ್ವರೂಪಗಳನ್ನುಳ್ಳವನಲ್ಲವು, ನಾನು ಸ್ವತಂತ್ರನು ಎಂಬರ್ಥವು. ಯಾವಾಗ ಶ್ರುತಿಯು **"ಯಃ ಪೃಥಿವ್ಯಾಂತಿಷ್ಠನ್" "ಯ ಆತ್ಮನಿ ತಿಷ್ಠನ್"** ಎಂದು ಹೇಳಿತೋ, ಆಗಲೇ **ಅಹಂತು ನತದಾಯತ್ತಸ್ಥಿತಿಃ** ಎಂಬುದು ಸುವ್ಯಕ್ತವೆಂಬ ಅಭಿಪ್ರಾಯವು. ಹಾಗಾದರೆ ಅವುಗಳನ್ನು ಅನುಪ್ರವೇಶಮಾಡಿ, ಅವುಗಳಿಗೆ ಅಂತರ್ಯಾಮಿಯಾಗಿ ಸರ್ವೇಶ್ವರನು ಸತ್ತಾಸ್ಥಿತಿ ಪ್ರವೃತ್ತಿಗಳನ್ನುಂಟುಮಾಡುವದು ಏತಕ್ಕೆ ? **"ಪ್ರಯೋಜನ ಮನುದ್ದಿಶ್ಯ ನಮಂದೋಽಪಿ ಪ್ರವರ್ತತೇ"** ಏನೊಂದೂ ಪ್ರಯೋಜನವನ್ನು ಉದ್ದೇಶಿಸದೆ, ಯಾವ ಮಂದ ಪ್ರಜ್ಞೆಯುಳ್ಳವನೂ ಕೂಡ ಪ್ರವರ್ತಿಸುವದಿಲ್ಲವಲ್ಲಾ ಎಂದರೆ, **"ಲೋಕವತ್ತು ಲೀಲಾ ಕೈವಲ್ಯಂ"** ಎಂಬ ಬ್ರಹ್ಮಸೂತ್ರದಲ್ಲಿ, ಇವೆಲ್ಲವೂ ಭಗವಂತನಿಗೆ ಲೀಲೆ ಎಂದೂ, **"ಸಮ್ರಾಡಿವಾ ತ್ಮಸಮಯಾ ಸಹ ಮೋದಸೇ ತ್ವಂ"** (ಶರಣಾಗತಿ ದೀಪಿಕಾ) ರಾಜನ ಹಾಗೆ ತನಗೆ ಸಮಳಾದ ಪ್ರಿಯಪತ್ನಿಯಾದ ಲಕ್ಷ್ಮಿಯೊಂದಿಗೆ ಆನಂದಪಡುತ್ತೀಯೇ" ಎಂದೂ, ಹೇಳಿರುವಹಾಗೆ ಉಪದೇಶಿಸಲ್ಪಟ್ಟಿರುತ್ತದೆ. ಹೀಗೆ ಲೀಲೆಯಲ್ಲದೆ ಇನ್ನು ಯಾವ ಮಹತ್ತಾದ ಪ್ರಯೋಜನವೂ ಇಲ್ಲವೆಂದು ತಿಳಿಯುವದಕ್ಕಾಗಿಯೇ **"ತೈರ್ನಕಶ್ಚಿ ದುಪಕಾರಃ** ಎಂದು ಭಾಷ್ಯವು. ಹೀಗೆ ಪರಮಾತ್ಮನಿಗೆ ಲೋಕದ ವಸ್ತುಗಳಹಾಗೆ ಯಾವ ಆಧಾರವೂ ಬೇಕಿಲ್ಲವೆಂದು ಛಾಂದೋಗ್ಯದಲ್ಲಿ (೭. ೨೪. ೧) ಹೇಳಿರುತ್ತದೆ. ಅಲ್ಲಿ **"ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ?"** ವೆಂಬುದು ಪ್ರಶ್ನೆಯು, ಅದಕ್ಕೆ ಉತ್ತರವು, **ಸ್ವೇ ಮಹಿಮ್ನಿ ಪ್ರತಿಷ್ಠಿತಃ** ಎಂಬುದಾಗಿ. ಲೋಕದಲ್ಲಿ ಒಬ್ಬ ಚಕ್ರವರ್ತಿಗೆ ಇರುವ ನಿಯಾಮ್ಯ ವರ್ಗದ ಅತಿಶಯದ ಮೂಲಕ ಅತಿಶಯ ಉಂಟಾಗುವಹಾಗೆ, ಸರ್ವೇಶ್ವರನಿಗೆ **ಸ್ವೇ ಮಹಿಮ್ನಿ** - ತನ್ನ ಉಭಯ ವಿಭೂತಿಗಳಿಂದ ತನಗೆ ಮಹಿಮೆಯೇ ? ಅಥವಾ ಸ್ವ ಎಂದರೆ ಆತ್ಮಾ ಎಂದರ್ಥಮಾಡಿ ತನ್ನಾತ್ಮಿಕ ಮಹಿಮೆಯೇ ? ಎಂಬ ಸಂದೇಹದಲ್ಲಿ, ಎರಡರಿಂದಲೂ ಅಲ್ಲವು, **ಸ್ವರೂಪತಃ** ಮಹಿಮೆಯು ಎಂಬ ಭಾವವು. ಸ್ವರೂಪದ ಮಹಿಮೆಯೇ ಇರುವದರಿಂದ ವಿಭೂತಿಗುಣ ಮೊದಲಾದವುಗಳೂ ಮಹಿಮೆಯುಳ್ಳವು, ಅವುಗಳಿಂದಲೂ ಕೂಡ ಮಹಿಮೆಯು ಎಂದು ಶ್ರುತ್ಯಂತರಗಳಲ್ಲಿ ಹೇಳಲ್ಪಟ್ಟಿರುತ್ತದೆ.

ಹಿಂದೆ **ಮತ್ಸ್ಥಾನಿ ಸರ್ವಭೂತಾನಿ** ಎಂದು ಹೇಳಿ, ಪುನಃ **ನ ಚ ಮತ್ಸ್ಥಾನಿ ಭೂತಾನಿ** ಎಂದು ಹೇಳಿರುವದರಿಂದ ಈ ವಾಕ್ಯಕ್ಕೆ ಹಿಂದಿನ ವಾಕ್ಯಾರ್ಥದ ಅವಿರೋಧೇನ ಅನ್ವಯಿಸಬೇಕಾಗಿರುವದರಿಂದ ಹೇಳುತ್ತಾರೆ — **ನ ಚ ಮತ್ಸ್ಥಾನಿ ಭೂತಾನಿ** - ಇದರರ್ಥವು **ಮಯಾ ತತಮಿದಂ ಸರ್ವಮ್** ಎಂಬ ಭಾವದಿಂದಲೇ ವ್ಯಕ್ತವು, ಅವುಗಳು ನನ್ನನ್ನೇನೂ ವ್ಯಾಪಿಸಿಲ್ಲವು; ನಾನು ಅವುಗಳಿಗೆ ಆಧಾರವಾಗಿ, ನಿಯಾಮಕನಾಗಿ ಶೇಷಿಯಾಗಿರುವಹಾಗೆ ಅವುಗಳು ನನಗೆ

**ಭಾ. ಮಮ ಧಾರಕತ್ವಮ್; ಕಥಮ್? ಮತ್ಸಂಕಲ್ಪೇನ. ಪಶ್ಯ ಮಮೈಶ್ವರಂ ಯೋಗಂ ಅನ್ಯತ್ರ ಕುತ್ರ ಚಿದಸಂಭಾವನೀಯಂ ಮದಾಸಾಧಾರಣ ಮಾಶ್ಚರ್ಯಂಯೋಗಂಪಶ್ಯ। ಕೋಽಸೌಯೋಗಃ? ಭೂತಭೃನ್ನ ಚ ಭೂತಸ್ಥೋ ಮಮಾತ್ಮಾಭೂತ ಭಾವನಃ -**

ಆಧಾರವಲ್ಲವು, ನಿಯಾಮಕವೂ ಅಲ್ಲವು, ಶೇಷಿಯೂ ಅಲ್ಲವು, ಎಂಬ ಭಾವದಿಂದ ವ್ಯಾಖ್ಯಾನ ಮಾಡುತ್ತಾರೆ.—"**ಅಹಂತು ನತದಾಯತ್ತಸ್ಥಿತಿಃ** - ನಾನು ಆ ಚೇತನಾಚೇತನಗಳಿಗೆ ಅಧೀನ ವಾದ ಸ್ವರೂಪ **ಸ್ಥಿತಿ**ಗಳನ್ನುಳ್ಳವನಲ್ಲವು. ಅದನ್ನೇ ವ್ಯಕ್ತಪಡಿಸಿ ಹೇಳುತ್ತಾರೆ—**ಮತ್ಸಿಂತೌತ್ಯೈರ್ನ ಕಶ್ಚಿದುಪಕಾರ ಇತ್ಯರ್ಥಃ** - ನನ್ನೊಂದಿಗೆ ಅವುಗಳು ಸೇರಿ ಇದ್ದರೂ ಅವುಗಳಿಂದ ನನಗೇನೂ ಪ್ರಯೋಜನವಿಲ್ಲವು. ಅವುಗಳಿಗೆ ನಾನು ಆಧಾರನಾಗಿ ನಿಯಾಮಕನಾಗಿ ಶೇಷಿಯಾಗಿರುವದರಿಂದ ಸರ್ವವಿಧದಲ್ಲೂ ನಾನು ಉಪಕಾರಿಯು; ಅವರಿಂದ ನನಗೇನೂ ಪ್ರಯೋಜನವಿಲ್ಲವೆಂಬ ತಾತ್ಪರ್ಯವು. **ನ ಚ ಮತ್ಸ್ಥಾನಿಭೂತಾನಿ** ಎಂದರೆ **ನ ಘಟಾದೀನಾಂ ಜಲಾದೇರಿವ ಮಮ ಧಾರಕತ್ವಂ** - ಜಲ ಮೊದಲಾದವುಗಳಿಗೆ ಘಟಮೊದಲಾದವುಗಳು ಆಧಾರವಾಗಿರುವ ಹಾಗೆ ನಾನು ಜಗತ್ತಿನ ಎಲ್ಲಾ ವಸ್ತುಗಳಿಗೂ ಆಧಾರವಾಗಿರುವ ಧಾರಕತ್ವವಲ್ಲವು, ನನ್ನ ಧಾರಕತ್ವವು ವಿಜಾತೀಯವಾದುದು ಎಂಬ ಭಾವವು, **ಕಥಂ** - ಹಾಗಾದರೆ ಆ ಧಾರಕತ್ವವು ಹೇಗೆ? ಎಂದರೆ, **ಮತ್ಸಙ್ಕಲ್ಪೇನ** - ನನ್ನ ಸಙ್ಕಲ್ಪಮಾತ್ರದಿಂದಲೇ ನಾನು ಧಾರಕನು, ಚಂದ್ರ, ಸೂರ್ಯರು, ನಕ್ಷತ್ರ, ಈ ಭೂಮಿ, ಇವುಗಳ ವ್ಯಾಪಾರಗಳೆಲ್ಲಾ ನಡೆಯುತ್ತವೆ. ಅವುಗಳಿಗೆಲ್ಲಾ ಆಧಾರ ರೂಪನಾಗಿ ಅವುಗಳನ್ನು ಹೊತ್ತುಕೊಂಡು ದ್ರವ್ಯರೂಪವಾಗಿ ಕೂತು ಅವುಗಳನ್ನು ಧರಿಸಿಲ್ಲವು, ನನ್ನ ಸಙ್ಕಲ್ಪಮಾತ್ರದಿಂದಲೇ ಅವುಗಳೆಲ್ಲಾ ತಮ್ಮ ತಮ್ಮ ಸ್ಥಾನದಲ್ಲಿ ನಿಂತು, ಸಂಚರಿಸಿ ತಮ್ಮ ವ್ಯಾಪಾರಗಳನ್ನು ಮಾಡುತ್ತಿವೆ ಎಂಬ ಭಾವವು. ಇವನ್ನೇ "**ದ್ಯೌಸ್ಸ ಚನ್ದ್ರಾರ್ಕ ನಕ್ಷತ್ರಂ**" ಎಂಬ ಮತ್ತು "**ಭೀಷಾಸ್ಮಾದ್ವಾತಃ ಪವತೇ**" ಎಂಬ ಪ್ರಮಾಣಗಳು ಬೋಧಿಸುತ್ತವೆ. ಹೀಗೆ ಸಙ್ಕಲ್ಪಮಾತ್ರದಿಂದಲೇ ಧಾರಕತ್ವವು ಅತ್ಯಾಶ್ಚರ್ಯಕರವಿಷಯ ವಾದುದರಿಂದ **ಪಶ್ಯ ಮಮೈಶ್ವರಂ ಯೋಗಂ** ಎಂದು ಅರ್ಜುನನಿಗೆ ಹೇಳುತ್ತಾರೆ. ಇದಕ್ಕೆ ವ್ಯಾಖ್ಯಾನವು **ಅನ್ಯತ್ರ ಕುತ್ರಚಿತ್ ಅಸಂಭಾವನೀಯಂ ಮದ ಸಾಧಾರಣ ಮಾಶ್ಚರ್ಯಂ ಯೋಗಂ ಪಶ್ಯ** ಎಂದರೆ ಇಂತಹ ಸಙ್ಕಲ್ಪ ಮಾತ್ರದಿಂದಲೇ ಧಾರಕತ್ವವೆಂಬುದು, ಇನ್ನೆಲ್ಲಿಯಾಗಲಿ ಅಸಂಭವವಾದುದು. ನನಗೆ ಮಾತ್ರವೇ ಸಲ್ಲತಕ್ಕ ಅಸ್ಸಾಧಾರಣವಾದ ಯೋಗವೆಂದು ತಿಳಿಯುವನಾಗು. ಅನೇಕ ವಸ್ತುಗಳಿಗೆ ಧಾರಕತ್ವ ಉಂಟು. ಅಯಸ್ಕಾಂತ, ಚಕ್ರವರ್ತಿ ಮೊದಲಾದವರಿಗೆ ಧಾರಕತ್ವವೇನೋ ಉಂಟು. ಆ ಧಾರಕತ್ವವು ಅಸ್ವತಂತ್ರವಾದುದು. ಚಕ್ರವರ್ತಿಗೆ ಸಙ್ಕಲ್ಪದಿಂದಲೂ ಧಾರಕತ್ವವಿರಬಹುದು. ಆದರೆ ಅದೂ ಪರತಂತ್ರವೇ. ಸ್ವತಂತ್ರ ಸಙ್ಕಲ್ಪದಿಂದಲೇ ಧಾರಕತ್ವವು ಪರಮಾತ್ಮನೊಬ್ಬನಿಗೇನೇ ಅಸಾಧಾರಣವಾದುದು. ಇಲ್ಲಿ **ಯೋಗ** ಶಬ್ದವು ನಿಘಂಟುವಿನಪ್ರಕಾರ ಮನೋ ವ್ಯಾಪಾರವಾದ ಧ್ಯಾನಾರ್ಥದಿಂದ ಭಗವಂತನ ಸಙ್ಕಲ್ಪವನ್ನು ಬೋಧಿಸುತ್ತವೆ. ಅಥವಾ ಸಂಬಂಧಿಸಿರುವ ಸ್ವಭಾವವೆಂದಾಗಲಿ ಯೋಗ ಶಬ್ದಕ್ಕೆ ಅರ್ಥ ಹೇಳಬಹುದು. ಲೋಕದಲ್ಲಿ ಆತನಿಗೆ ಎಂತಹ ಯೋಗವು! ಎಂಬುದರಿಂದ ಆತನ ಮಹಿಮೆಯು ಬೋಧಿತವಾಗುವದರಿಂದ, ಯೋಗಶಬ್ದದಿಂದ ತನ್ನನ್ನು ಸಂಬಂಧಿಸಿರುವ ಮಹಿಮೆ ಎಂದಾಗಲಿ ಅರ್ಥಮಾಡಬಹುದು.

ಯಾವಾಗ **ಪಶ್ಯಮೇ ಯೋಗಮೈಶ್ವರಂ** ಎಂದು ಈ ಈಶ್ವರ ಸಂಬಂಧರೂಪ ಯೋಗವು ಅತ್ಯಾಶ್ಚರ್ಯಕರವಾಗಿಯೂ ಅದ್ಭುತವಾಗಿಯೂ ಇರುವದನ್ನು ನೋಡು ಎಂದು ಹೇಳಿದ ಬಳಿಕ,

**ಭಾ. ಸರ್ವೇಷಾಂ ಭೂತಾನಾಂ ಭರ್ತಾಽಹಮ್, ನ ಚ ತೈಃ ಕಶ್ಚಿದಪಿ ಮಮೋಪಕಾರಃ। ಮಮಾತ್ಮೈವ ಭೂತಭಾವನಃ-ಮಮ ಮನೋಮಯಸಙ್ಕಲ್ಪ ಏವ ಭೂತಾನಾಂ ಭಾವಯಿತಾ ಧಾರಯಿತಾ ನಿಯನ್ತಾ ಚ ॥೫॥**

ಅದನ್ನು ವ್ಯಕ್ತಪಡಿಸುವದು ಆವಶ್ಯಕವೆಂದು ಭಾವಿಸಿ, **ಕೋಽಸೌ** ಎಂಬ ಪ್ರಶ್ನೆಯ ಮೂಲಕ ವಾಗಿ, ಹೇಳುತ್ತಾರೆ.— **ಕೋಽಸೌ ಯೋಗಃ**-ಈ ಯೋಗವೆಂಬುದು ಎಂಥಾದ್ದೆಂದರೆ ಅದಕ್ಕೆ ಉತ್ತರವು, **ಭೂತ ಭೃತ್, ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ,** ಇದಕ್ಕೆ ವ್ಯಾಖ್ಯಾನವು—**ಸರ್ವೇಷಾಂ ಭೂತಾನಾಂ ಭರ್ತಾಹಂ** - ಸಕಲ ಚಿದಚಿದಾತ್ಮಕ ಭೂತಗಳಿಗೂ ಸ್ವಾಮಿಯಾಗಿ ಭರಿಸುವವನು ನಾನೇ, ಭರಣವೆಂದರೆ ಅವುಗಳಿಗೆ ಸತ್ತೆಯನ್ನು ಕೊಟ್ಟು ವೃದ್ಧಿ ಹೊಂದಿಸೋಣವು, **ನ ಚ ತೈಃ ಕಶ್ಚಿದಪಿ ಮಮೋಪಕಾರಃ** - ಪರಿಪೂರ್ಣ ಕಾಮನಾದ ನನಗೆ ಅವುಗಳಿಂದಾಗತಕ್ಕ ಉಪಕಾರವೇನೂ ಇಲ್ಲವು. **ಮಮಾತ್ಮೈವ ಭೂತಭಾವನಃ** ಎಂದರೆ **ಮಮ ಮನೋಮಯ ಸ್ಸಙ್ಕಲ್ಪ ಏವ ಭೂತಾನಾಂ ಭಾವಯಿತಾ ಧಾರಯಿತಾ ನಿಯನ್ತಾ ಚ** - ನನ್ನ ಮನೋ ರೂಪವಾದ ಸಙ್ಕಲ್ಪವೇ ಸರ್ವ ಭೂತಗಳಿಗೂ ಸತ್ತೆಯನ್ನು ಕೊಡುವಂತಾದ್ದು; ಆಧಾರವಾಗಿರುವಂತಾದ್ದು; ನಿಯಮಿಸುವಂತಾದ್ದು ಸಹ. ಇಲ್ಲಿ **ಮಮಾತ್ಮಾ** ಎಂಬುದಕ್ಕೆ ನನ್ನ ಮನಸ್ಸೆಂಬ ಅರ್ಥಮಾಡಿ, ಮನಸ್ಸಿನ ಕಾರ್ಯವಾದ ಸಙ್ಕಲ್ಪವು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು, ಅಥವಾ **ಆತ್ಮ** ಶಬ್ದಕ್ಕೆ ಸಙ್ಕಲ್ಪರೂಪ ಮನಸ್ಸು ಎಂದಾದರೂ ಅರ್ಥಮಾಡಬಹುದು **"ಮನಸ್ಯೈವ ಜಗತ್ಸೃಷ್ಟಿಂ ಸಂಹಾರಂಚ ಕರೋತಿ ಯಃ। ತಸ್ಯಾರಿಪಕ್ಷಕ್ಷಪಣೇ ಕಿಯಾ ನುದ್ಯಮವಿಸ್ತರಃ"** ಎಂಬ ಶ್ರೀ ಪರಾಶರೋಕ್ತಿ ಇರುತ್ತದೆ. (ವಿ. ಪು. ೫ ೨೨. ೧೫.) **"ಮನೋ ಕುರತಾತ್ಮನ್ಯೀ ಸ್ವಾಮಿತಿ"** ಎಂಬ ಬೃಹದಾರಣ್ಯಕ ವಾಕ್ಯವೂ ಉಂಟು. (೧. ೩. ೧.) **ತತ್** - ಆ ಮೃತ್ಯು ಶಬ್ದ ವಾಚ್ಯನಾದ ತಮಶ್ಶರೀರಕ ಪರಮಾತ್ಮನು, **ಅಹಂ ಆತ್ಮನ್ವೀ** - ನಾನು ಚೇತನಾಚೇತನ ಶರೀರಕನಾಗಿ, **ಸ್ವಾಮಿತಿ** - ಆಗುವನೆಂದು, **ಮನೋಕುರತ** - ಸಙ್ಕಲ್ಪರೂಪ ಮನಸ್ಸನ್ನು ಮಾಡಿದನು. **ಮಮಾತ್ಮಾ** ಎಂದು ಮಧ್ಯೆ ಇರುವದರಿಂದ, **ಭೂತಭೃತ್** ಎಂಬುದಕ್ಕೂ ಅನ್ವಯಿಸಬಹುದೆಂದು ಭಾವಿಸಿ, ಆ ಭೂತ ಭೃಚ್ಛಬ್ದದಿಂದ **"ತಾನಿ ಭೂತಾನಿ ಬಿಭರ್ತಿ ಭರತಿವಾ ಧಾರಯತೀತಿ ಭೂತಭೃತ್"** ಎಂಬ ನಿರ್ವಚನಪ್ರಕಾರ. ಸಙ್ಕಲ್ಪ ಮಾತ್ರದಿಂದಲೇ **ಧಾರಯಿತಾ ನಿಯನ್ತಾ ಚ** ಎಂದು ವ್ಯಾಖ್ಯಾನ ಮಾಡಲ್ಪಟ್ಟಿತು. **ಭೂತಭಾವನಃ** ಎಂದರೆ **ಭೂತಾನ್ ಭಾವಯತಿ** ಎಂಬ ವ್ಯುತ್ಪತ್ತಿಗನುಸಾರವಾಗಿ **ಭಾವಯಿತಾ** ಎಂದು ವ್ಯಾಖ್ಯಾನ ಮಾಡಲ್ಪಟ್ಟಿತು. ಆದುದರಿಂದ ತನ್ನ ಸಙ್ಕಲ್ಪವೇ **ಭಾವಯಿತಾ, ಧಾರಯಿತಾ ನಿಯನ್ತಾ ಚ** ಎಂಬ ಭಾಷ್ಯವು. ಹೀಗೆ ಸಙ್ಕಲ್ಪ ಮಾತ್ರದಿಂದಲೇ ಸಕಲ ಜಗತ್ತಿನ ವ್ಯಾಪಾರಗಳನ್ನೆಲ್ಲಾ ನಡೆಸುವದೆಂಬುದು ಅತ್ಯದ್ಭುತಾಶ್ಚರ್ಯಕರವಾದ ವಿಷಯವೆಂದು ಶ್ರೀಕೃಷ್ಣ ಭಗವಾನವರು **"ಪಶ್ಯಯೋಗಮೈಶ್ವರಂ"** ಎಂದುಪದೇಶಿಸಿರುತ್ತಾರೆ. **ಧಾರಯಿತಾ ನಿಯನ್ತಾ ಚ** ಎಂಬಲ್ಲಿ ತೋರುವ ಅಭಿಪ್ರಾಯಗಳು ಮುಂದಿನ ಶ್ಲೋಕಗಳಲ್ಲಿ ವ್ಯಕ್ತಪಡುವದರಿಂದ, **ಭೂತಭಾವನಃ** ಎಂಬಲ್ಲಿಯೂ ಅವೂ ಕೂಡ ಸೂಚಿತವೆಂದು ತಿಳಿಸುವದಕ್ಕಾಗಿಯೂ ಹಾಗೆ ವ್ಯಾಖ್ಯಾನವು. ಆದರೆ **ನ ಚ ಮತ್ಸ್ಥಾನಿ ಭೂತಾನಿ** ಎಂದು ಪೂರ್ವಾರ್ಧದಲ್ಲಿ ಹೇಳಿ, ಉತ್ತರಾರ್ಧದಲ್ಲಿ ಪುನಃ **ನ ಚ ಭೂತಸ್ಥಃ** ಎಂದು ಹೇಳಬಹುದೇ ಎಂಬಾಕ್ಷೇಪವನ್ನು ತರಬಹುದು; ಭೂತಗಳು ನನ್ನಲ್ಲಿ ಇಲ್ಲವೆಂದರೇನೇ ಭೂತಗಳಲ್ಲಿ ನಾನಿಲ್ಲವೆಂಬರ್ಥ ದ್ಯೋತಿತವಾಗುವದರಿಂದ ಪುನರುಕ್ತಿಯು ಏಕೆ ಎಂದು ಪ್ರಶ್ನಿಸಬಹುದು; **ಮೊದಲಿನ ವಾಕ್ಯತಾತ್ಪರ್ಯವು,** ಸರ್ವ **ಭೂತ**ಗಳು ನನ್ನಲ್ಲಿದ್ದು ನಾನು ಆಧಾರವಾಗಬೇಕೆಂ

**ಭಾ. ಅ. ಸರ್ವಸ್ಯಾಸ್ಯ ಸ್ವಸಙ್ಕಲ್ಪಾಯತ್ತ ಸ್ಥಿತಿ ಪ್ರವೃತ್ತಿತ್ವೇ ನಿದರ್ಶನಮಾಹ—**

**ಮೂ. ಯಥಾಕಾಶಸ್ಥಿತೋ ನಿತ್ಯಂ ವಾಯು ಸ್ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬.**

ಒಡು ಇಲ್ಲವು, ಸ್ವಸಙ್ಕಲ್ಪದಿಂದಲೇ ಸರ್ವವೂ ವಿಧೃತವೆಂದು ಹೇಳಲ್ಪಟ್ಟಿತು. ಈ ಉತ್ತರಾರ್ಧ ವಾಕ್ಯದಲ್ಲಾದರೋ ನಾನು ಸರ್ವಕ್ಕೂ ಭರ್ತಾವಾಗಿ ಪೋಷಕನು; ಅವುಗಳು ನನಗಲ್ಲವು, ಆದು ದರಿಂದ ಅವುಗಳಿಂದ ನನಗೇನೂ ಪ್ರಯೋಜನವಿಲ್ಲವೆಂದು ವ್ಯಾಖ್ಯಾನಮಾಡಲ್ಪಟ್ಟಿತು. ॥ ೫ ॥

**ಭಾಷ್ಯಾವತಾರಿಕೆಯ ಅರ್ಥವು:—** ಹಿಂದೆ **ಪಶ್ಯ ಮೇ ಯೋಗ ಮೈಶ್ವರಂ** ಎಂದು ಅರ್ಜುನನಿಗೆ ಉಪಾಸ್ಯದಲ್ಲಿ ತುಂಬಾ ಶ್ರದ್ಧೆಯುಂಟಾಗುವದಕ್ಕಾಗಿ, ತನ್ನ ಅತ್ಯದ್ಭುತ ಮಹಿಮೆ ಯನ್ನು ಹೇಳಿದನು; ಅದು ಅರ್ಜುನನ ಮನಸ್ಸಿಗೆ ಚನ್ನಾಗಿ ಹಿಡಿಯಬೇಕೆಂಬ ಆಶಯದಿಂದ ತಾನು ಹೇಳಿದುದನ್ನೇ ಒಂದು ನಿದರ್ಶನಮೂಲಕ ವ್ಯಕ್ತಪಡಿಸುತ್ತಾರೆಂದು ತಿಳಿಸುವದಕ್ಕಾಗಿ ಮುಂದಿನ ಶ್ಲೋಕದ ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಸರ್ವಸ್ಯಾಸ್ಯ** - ಈ ಸಮಸ್ತ ಚಿದಚಿದಾತ್ಮಕ ಜಗತ್ತಿಗೂ, **ಸ್ವಸಙ್ಕಲ್ಪಾಯತ್ತ ಸ್ಥಿತ ಪ್ರವೃತ್ತಿತ್ವೇ** - ಸರ್ವೇಶ್ವರನಾದ ತನ್ನ ಸಙ್ಕಲ್ಪಕ್ಕೆ ಅಧೀನವಾದ ಸ್ಥಿತಿ ಪ್ರವೃತ್ತಿಯುಂಟೆಂಬ ಸಂದರ್ಭದಲ್ಲಿ, **ನಿದರ್ಶನಮಾಹ** - ಒಂದು ಉದಾಹರಣೆಯ ಮೂಲಕ **ವ್ಯಕ್ತ**ಪಡಿಸಿ ಹೇಳುತ್ತಾರೆ. ಮುಂದಿನ ಶ್ಲೋಕದಲ್ಲಿ **ಆಕಾಶದಲ್ಲಿ** ವಾಯುವಿನ ಸಂಚಾರವನ್ನು ಯಥಾ ತಥಾ ಎಂಬ ಪದಗಳಿಂದ ದೃಷ್ಟಾಂತವಾಗಿ ಹೇಳಿ ದುದು ಪರಮಾತ್ಮನ ಜಗತ್ಪ್ರವೃತ್ತ್ಯಾದಿಗಳಿಗೆ ಉಪಮಾರೂಪ ದೃಷ್ಟಾಂತವೆಂದು ಕೆಲವರು ಭಾವಿಸಿರುತ್ತಾರೆ, ಇದು ಅಸಂಗತವು. ಏಕೆಂದರೆ ಆಕಾಶಕ್ಕೆ ವಾಯುವನ್ನು ಧರಿಸಿ ನಿಯಮಿ ಸುವ ಶಕ್ತಿಯಿಲ್ಲವು, ಸರ್ವೇಶ್ವರನು ಹೇಗೆ ಸ್ವಸಙ್ಕಲ್ಪದಿಂದಲೇ ಸರ್ವವನ್ನು ಧರಿಸಿ ನಿಯಮಿಸು ವನು ಎಂಬುದಕ್ಕೆ ಒಂದು ಉದಾಹರಣೆಯಾಗಿ ನಿರಾಲಂಬವಾದ ಆಕಾಶದಲ್ಲಿ ವಾಯುವಿಗೆ ಹೇಗೆ ಸಂಚಾರಾದಿ ಪ್ರವೃತ್ತಿಗಳೆಲ್ಲಾ ಪರಮಾತ್ಮನ ಸಙ್ಕಲ್ಪಾನುಸಾರ ನಡೆದಿರಬೇಕೆಂದು ಆವಶ್ಯಕ ವಾಗಿ ಅಙ್ಗೀಕರಿಸತಕ್ಕದ್ದೋ, ಹಾಗೆಯೇ ಇತರ ಸಮಸ್ತ ಜಗತ್ತಿನ ಚಿದಚಿದ್ವಸ್ತುಗಳ ವಿಷಯ ದಲ್ಲೂ ಊಹಿಸತಕ್ಕದ್ದೆಂಬ ಭಾವನೆಯಿಂದ ಆಕಾಶವಾಯುಗಳನ್ನೂ ವ್ಯಾವರ್ತಿಸಿ ಹೇಳದೆ **ಸರ್ವಸ್ಯಾಸ್ಯ** - ಎಂದು ಅವತಾರಿಕೆಯನ್ನು ಪ್ರಾರಂಭಿಸಿರುತ್ತಾರೆ. ಇದನ್ನು ಹೇಗೆ ತಿಳಿಯು ತ್ತೀಯೋ, ಹಾಗೆಯೇ ಮಿಕ್ಕ ಎಲ್ಲಾ ಸಂದರ್ಭಗಳಲ್ಲೂ ತಿಳಿ, ಎಂದು **ಯಥಾ ತಥಾ** ಶಬ್ದಗಳು ಮೂಲದಲ್ಲಿ ಪ್ರಯೋಗಿಸಲ್ಪಟ್ಟಿವೆ ಎಂಬ ಭಾವವು. ದೃಷ್ಟಾಂತ ದಾರ್ಷ್ಟಾಂತ ಸಂಬಂಧವಿದ್ದು ದಾದರೆ ಪೂರ್ವಾರ್ಧ ವಿದುವಹಾಗೆಯೇ ಉತ್ತರಾರ್ಧವಾಕ್ಯವೂ ಇರುತ್ತಿತ್ತು. ಹಾಗಲ್ಲದೆ ಉದಾ ಹರಣೆಯ ಮೂಲಕ ಉಪಪಾದನೆಯಾಗಿರುವದರಿಂದಲೇ ಪೂರ್ವಾರ್ಧವಾಕ್ಯ ಕ್ರಮವೂ ಉತ್ತ ರಾರ್ಧದ ವಾಕ್ಯಕ್ರಮವೂ ವ್ಯತ್ಯಸ್ತವಾಗಿರುತ್ತವೆ. ॥ ೫ ॥

**ಮೂಲಕ್ಕೆ ಅರ್ಥವು:—ಯಥಾ** ಹೇಗೆ, **ಮಹಾನ್** - ಮಹತ್ತಾದ ಎಂದರೆ ಮರ ಮೊದಲಾದವುಗಳನ್ನೂ ಕೂಡ, ಕೆಳಕ್ಕೆ ಉರುಳಿಸಿಬಿಡುವಷ್ಟು ಅಗಾಧ ಶಕ್ತಿಯುಳ್ಳ, ಅದರ ವೇಗವನ್ನು ತಡೆಯಲು ಯಾರಿಗೂ ಶಕ್ತಿ ಇಲ್ಲದುದರಿಂದ **ಮಹಾನ್** ಎಂಬ ಪ್ರಯೋಗವು, **ವಾಯುವು, ನಿತ್ಯಂ** ಸದಾ, **ಆಕಾಶೇ ಸ್ಥಿತಃ** - ನಿರಾಲಂಬವಾಗಿರುವ ಆಕಾಶದಲ್ಲಿ ಪರಮಾ ತ್ಮನ ಸಙ್ಕಲ್ಪದಿಂದಲೇ ಇರುವದಾಗಿ, **ಸರ್ವತ್ರಗಃ** - ಆತನ ಸಙ್ಕಲ್ಪದಿಂದಲೇ ಎಲ್ಲಾ ಕಡೆಯಲ್ಲೂ ಸಂಚರಿಸುತ್ತದೋ ಎಂದರೆ ಸಂಚರಿಸುತ್ತದೆ ಎಂದು ನೀನು ಊಹಿಸಲೇ ಬೇಕೋ, ಎಂಬ ತಾತ್ಪ ರ್ಯವು, ಯಥಾ ಮತ್ಸಙ್ಕಲ್ಪ ಇತಿ ಉಪಧಾರಯಿಸಿ ಎಂಬ ಭಾವವು. **ತಥಾ** - ಹಾಗೆಯೇ

**ಭಾ. ಯಥಾಕಾಶೇ ಅನಾಲಂಬನೇ ಮಹಾ ವಾಯು ಸ್ಸ್ಥಿತ ಸ್ಸರ್ವತ್ರ ಗಚ್ಛತಿ, ಸತು ವಾಯುರ್ನಿರಾಲಂಬನೋ ಮದಾಯತ್ತಸ್ಥಿತಿ ರಿತ್ಯವಶ್ಯಾ ಭ್ಯುಪಗಮನಿಯೋ ಮಯ್ಯೈವ ಧೃತ ಇತಿ ವಿಜ್ಞಾಯತೇ ; ಏವ ಮೇವ ಸರ್ವಾಣಿ ಭೂತಾನಿ ತ್ತೈರದೃಷ್ಟೇ ಮಯಿ ಸ್ಥಿತಾನಿ ಮಯ್ಯೈವ ಧೃತಾನೀ ತ್ಯುಪಧಾರಯ. ಯಥಾಹುರ್ವೇದವಿದಃ -**

**ಸರ್ವಾಣಿ ಭೂತಾನಿ** - ಸಮಸ್ತ ಭೂತಗಳೂ, **ಮತ್ಸ್ಥಾನೀತಿ** - ನನ್ನ ಸಙ್ಕಲ್ಪಮೂಲಕವಾಗಿಯೇ ಸತ್ತಾ ಸ್ಥಿತಿ ನಿಯಮನಾದಿಗಳನ್ನು ಹೊಂದಿ ನನಗೆ ಅಧೀನವಾಗಿವೆ ಎಂದು, **ಉಪಧಾರಯ** - ತಿಳಿ; ಅಲ್ಲಾಡದಹಾಗೆ ಆಕಾಶದಲ್ಲಿದ್ದ ವಾಯುವು, ಬಹು ವೇಗವಾಗಿ ತುಂಬಾ ರಭಸದಿಂದ ದೇಶಕ್ಕೆ ಕ್ಷೋಭೆಯನ್ನುಂಟುಮಾಡುವಹಾಗೆ ಬೀಸಬೇಕಾದರೆ ದೈವಸಙ್ಕಲ್ಪವಿಲ್ಲದೆ ನಡೆಯುವದಿಲ್ಲವೆಂದು ಹೇಗೆ ತಿಳಿಯುವೆಯೋ, ಅದೇ ರೀತಿಯಲ್ಲೇ ವಿಚಿತ್ರಗಳಾದ ಸಮಸ್ತ ಭೂತಗಳ ಸತ್ತಾ ಸ್ಥಿತಿ ಪ್ರವೃತ್ತಿಗಳಿಗೂ ನನ್ನ ಸಙ್ಕಲ್ಪವೇ ಕಾರಣವೆಂದು ತಿಳಿ ಎಂಬ ಭಾವವು.

**ಭಾಷ್ಯಾರ್ಥವು:—**ಈ ಶ್ಲೋಕದಲ್ಲಿ ಆಕಾಶ ವಾಯುಗಳ ದೃಷ್ಟಾಂತದಿಂದ ಪರಮಾತ್ಮನಿಗೂ ಭೂತಗಳಿಗೂ ಇರುವ ಸಂಬಂಧವು ಯಥಾತಥಾ ಶಬ್ದಗಳಿಂದ ಹೇಳಲ್ಪಡುತ್ತದೆಂಬ ಭಾವವು ಸರಿಯಲ್ಲವು. ಏಕೆಂದರೆ ಆಕಾಶಕ್ಕೆ ವಾಯುವನ್ನು ನಿಯಮಿಸೋಣವೇ ಮೊದಲಾದ ಶಕ್ತಿ ಇಲ್ಲವಾದುದರಿಂದ. ಶ್ರೀ ವ್ಯಾಸೋಕ್ತಿಯು ಬಹು ಗೂಢವಾದುದರಿಂದ ಈ ಶ್ಲೋಕಕ್ಕೆ ಸಮಂಜಸಾರ್ಥವು ಹೇಗೆ ? ಎಂದರೆ, ವಾಯ್ವಾಕಾಶ ದೃಷ್ಟಾಂತದಲ್ಲಿ ಪರಮಾತ್ಮನ ಸಙ್ಕಲ್ಪಾನುಸಾರ ಹೇಗೆ ಆಕಾಶದಲ್ಲಿರುವ ವಾಯುವಿನ ಪ್ರವೃತ್ತಿಯನ್ನು ಊಹಿಸಬಹುದೋ, ಹಾಗೆಯೇ ಸಮಸ್ತ ಭೂತಗಳ ಸ್ಥಿತಿ ಪ್ರವೃತ್ತಿಗಳೂ ಪರಮ ಪುರುಷಾಧೀನವೆಂಬುದನ್ನು ಸುಲಭವಾಗಿ ಗ್ರಹಿಸಬಹುದು, ಎಂಬ ತಾತ್ಪರ್ಯವನ್ನು ಈ ದೃಷ್ಟಾಂತ ಮೂಲಕ ಸೂಚಿಸುತ್ತಾರೆ. **ಅನಾಲಂಬನೇ ಆಕಾಶೇ**-ಆಧಾರವೇ ಕಾಣದಿರುವ ಆಕಾಶದಲ್ಲಿ, **ಮಹಾ ವಾಯುಃ**-ಮಹತ್ತಾದ ವೇಗವುಳ್ಳ ವಾಯುವು, **ಯಥಾ** - ಹೇಗೆ, **ಸ್ಥಿತಿಃ** - ಇರುವದಾಗಿ, **ಸರ್ವತ್ರ ಗಚ್ಛತಿ** - ಎಲ್ಲಾ ಕಡೆಯಲ್ಲೂ ಹೋಗುತ್ತದೋ, ಬೀಸುತ್ತದೋ, ಇದು, **ಸರ್ವತ್ರಗಃ**-ಎಂಬುದರ ವ್ಯಾಖ್ಯಾನವು, ವಾಯುದೃಷ್ಟಾಂತಾಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.—**ಸತು ವಾಯುರ್ನಿರಾಲಂಬನಃ** - ಆ ವಾಯುವಾದರೋ ಹೀಗೆ ಆಕಾಶದಲ್ಲಿ ಆಧಾರವೇ ಇಲ್ಲದಿರುವಿಕೆಯನ್ನುಳ್ಳದ್ದಾಗಿ, **ಮದಾಯತ್ತಸ್ಥಿತಿಃ**-ಹೀಗೆ ಅಧೀನವಾದ ಸ್ಥಿತಿಯುಳ್ಳದೆಂದು, **ಅವಶ್ಯಾಭ್ಯುಪಗಮನೀಯಃ** - ಆವಶ್ಯಕವಾಗಿ ಒಪ್ಪಲೇ ಬೇಕಾಗಿ, **ಮಯ್ಯೈವ ಧೃತ ಇತಿ** - ನನ್ನಿಂದಲೇ ಎಂದರೆ ನನ್ನ ಸಙ್ಕಲ್ಪದಿಂದಲೇ ಧರಿಸಲ್ಪಟ್ಟಿರುತ್ತದೆಂದು ತೋರಿಬರುತ್ತದೋ, **ಏವ ಮೇವ** - ಅದೇ ರೀತಿಯಲ್ಲೇ, **ಸರ್ವಾಣಿ ಭೂತಾನಿ** - ಸಮಸ್ತ ಭೂತಗಳೂ, **ತ್ತೈರದೃಷ್ಟೇ ಮಯಿ** - ಅವುಗಳಿಂದ ಕಾಣಲ್ಪಡದೇ ಇರುವ ನನ್ನಲ್ಲಿ ಎಂದರೆ ವಾಯುವಿನ ಪ್ರವೃತ್ತಿಯಲ್ಲಿ ನಾನು ಹೇಗೆ ಅದೃಷ್ಟನಾಗಿದ್ದರೂ ಅದರ ಕಾರ್ಯವು ಆಶ್ಚರ್ಯವಾಗಿ ನಡೆಯುತ್ತದೋ, ಹಾಗೆಯೇ ಅದೃಷ್ಟನಾಗಿ, **ಸ್ಥಿತಾನಿ** - ಸಙ್ಕಲ್ಪಾಧೀನವಾಗಿರುವವುಗಳಾಗಿ, **ಮಯ್ಯೈವ ಧೃತಾ ನೀತ್ಯುಪ ಧಾರಯ** - ನನ್ನಿಂದಲೇ ಧರಿಸಲ್ಪಡುವವು ಎಂದು ತಿಳಿಯುವನಾಗು. ಆಕಾಶಸ್ಥಿತವಾಯುವು ನಿರಾಲಂಬವಾಗಿರುವಹಾಗೆ ತೋರಿ, ಪ್ರಬಲ ಕಾರ್ಯಗಳನ್ನು ಮಾಡುತ್ತಿರುವದನ್ನು ಕಂಡು ಸರ್ವೇಶ್ವರ ಸಙ್ಕಲ್ಪಾಯತ್ತವಾಗಲ್ಲವೇ ವಾಯು ಪ್ರವೃತ್ತಿಯು ಎಂದು ಹೇಗೆ ಊಹಿಸಲ್ಪಡುತ್ತದೋ ಹಾಗೆಯೇ ಇನ್ನೂ ಇತರ ನಿದರ್ಶನಗಳಲ್ಲೂ ಅವಶ್ಯ ಊಹಿಸತಕ್ಕದ್ದೆಂಬುದನ್ನು ವ್ಯಕ್ತಪಡಿಸುತ್ತಾರೆ. ಮೂಲದಲ್ಲಿಲ್ಲದಿದ್ದರೂ **ಅನಾಲಂಬನೇ ಆಕಾಶೇ** ಎಂಬ ಪ್ರಯೋಗದಿಂದ ವಾಯು ಪ್ರವೃತ್ತಿಗೆಲ್ಲಾ ಕಾರಣನು, ಸರ್ವ **ಕಾರಣನಾದ ತಾನೇ ವಿನಾ ಇನ್ನು ಯಾವುದೂ ಕಾರಣವಲ್ಲವೆಂದು** ತಿಳಿಸುವದಕ್ಕಾಗಿ ಎಂದು

**ಭಾ. "ಮೇಘೋದಯ ಸ್ಸಾಗರ ಸನ್ನಿವೃತ್ತಿರಿಂದೋ ರ್ವಿಭಾಗಃಸ್ಫುರಿತಾನಿ ವಾಯೋಃ ।
ವಿದ್ಯುದ್ವಿ ಭಂಗೋ ಗತಿ ರುಷ್ಣರಶ್ಮೇ ರ್ವಿಷ್ಣೋ ರ್ವಿಚಿತ್ರಾ ಪ್ರಭವಂತಿ ಮಾಯಾಃ"
ಇತಿ ; ವಿಷ್ಣೋರನನ್ಯಸಾಧಾರಣಾನಿ ಮಹಾಶ್ಚರ್ಯಾಣೀತ್ಯರ್ಥಃ । ಶ್ರುತಿರಪಿ**

ಭಾವಿಸತಕ್ಕದ್ದು. **ಮಹಾನ್** ಎಂಬಲ್ಲಿ ಹೇಳಲ್ಪಟ್ಟ ವಾಯುವಿನ ಮಹತ್ತ್ವಕ್ಕೂ ಕೂಡ ಸ್ವಾಮಿ ಸಙ್ಕಲ್ಪವೇ ಕಾರಣವೆಂದೂ ಭಾವಿಸತಕ್ಕದ್ದಾಗಿರುತ್ತದೆ. ವಾಯುವೇ ವೃಕ್ಷ ಗೃಹಾದಿಗಳನ್ನೇ ಉರುಳಿಸಿ ಬಿಡುವ ಅತ್ಯಾಶ್ಚರ್ಯವಾದ ಪ್ರವೃತ್ತಿಯನ್ನು ಹೊಂದಿರುವಾಗ ಪಕ್ಷಿಮೊದಲಾದವು ಗಳು ಚೇತನಗಳಾಗಿ ಆಕಾಶದಲ್ಲಿ ಸಂಚರಿಸುವ ಆಶ್ಚರ್ಯಕರವಾದ ಪ್ರವೃತ್ತಿಯುಳ್ಳೋಣವೂ **ಕೂಡ** ನನ್ನ ಸಙ್ಕಲ್ಪದಿಂದಲೇ ಎಂದೂ ಊಹಿಸಬಹುದೆಂಬ ಭಾವವು. **ಯಥಾ ಹು ರ್ವೇದ ವಿದಃ** - ವೇದವಿತ್ತುಗಳು ಹೇಗೆ ಹೇಳುತ್ತಾರೆಂದರೆ?—ಇಲ್ಲಿ ವೇದವಿತ್ತುಗಳು ಎಂದು ಹೇಳಿರುವ ದರಿಂದ ಆಸ್ತಿಕರಾಗಿ ವೇದಪ್ರಾಮಾಣ್ಯವನ್ನಂಗೀಕರಿಸಿ ಪರಮಾತ್ಮ ಮಾಹಾತ್ಮ್ಯೆಯನ್ನು ವೇದ ಮೂಲಕ ತಿಳಿದವರೆಂಬ ಭಾವವು ; ಬರೀ ವೇದಾಧ್ಯಯನವನ್ನು ಮಾತ್ರ ಮಾಡುವ ಶಕ್ತಿಯುಳ್ಳ ವರು ವೇದವಿತ್ತುಗಳಲ್ಲವು; ಸುಮ್ಮನೇ ವೇದಭಾರವನ್ನು ಹೊತ್ತವರು ಮಾತ್ರವೇ ಅವರು. **ವೇದ**ವಿತ್ತೆಂದರೆ ವೇದಾರ್ಥವಿತ್ತುಗಳು, ವೇದಗಳ ಅರ್ಥಗಳನ್ನು ಸರ್ವ ಸಮಂಜಸವಾಗಿ ಯಥಾರ್ಥವಾಗಿ ತಿಳಿದವರು, ಹಾಗೆಯೇ ಅನುಷ್ಠಾನಪರರೂ ಸಹ. **"ಮೇಘೋದಯಃ** - ಆಕಾಶವು ನಿರ್ಮಲವಾಗಿಯೇ ಇರುವಾಗ ಏಕಾಏಕೀ ಥಳಿಯೊಂದಿಗೆ ಮೇಘಗಳ ಪ್ರಾದುರ್ಭಾ ವವೂ, **ಸಾಗರಸನ್ನಿವೃತ್ತಿಃ** - ಈ ಭೂಮಿಯನ್ನೆಲ್ಲಾ ಮುಳುಗಿಸಿ ಬಿಡುವಷ್ಟು ಉದಕವು ಸಮು ದ್ರದಲ್ಲಿದ್ದು ಬಹು ಎತ್ತರವಾದ ತರಂಗಗಳಿಂದ ಘೋಷಿಸುತ್ತಾ ಬಂದು ಸಮುದ್ರದ ದಡವನ್ನು ಬಂದು ಸೇರಿದನಂತರ ವೇಲಾತಿಕ್ರಮವನ್ನು ಮಾಡದೇ ಹಿಂತಿರುಗಿ ಹೋಗೋಣವೂ, **ಇಂ ದೋರ್ವಿಭಾಗಃ** - ಚಂದ್ರನ ಕ್ಲಿಪ್ತವಾದ, ಕ್ರಮವಾಗಿ ೧೫ ದಿನಗಳಿಗೆ ಒಂದಾವರ್ತಿ ಕಲಾ ಕ್ಷೀ ಣದಶೆ ವೃದ್ಧಿ ದಶೆಗಳೂ, **ಸ್ಫುರಿತಾನಿವಾಯೋಃ** - ಮರಮನೆ ಮೊದಲಾದವುಗಳನ್ನೆಲ್ಲಾ ನೆಲಸಮ ಮಾಡುವಹಾಗೆ ಶಕ್ತಿಯುಳ್ಳ ಚಂಡಮಾರುತದ ಘೋಷವೂ, (ಈ ಅಭಿಪ್ರಾಯವೇ ಈ ಶ್ಲೋಕದಲ್ಲೂ ಉಪಪಾದಿತವಾಗಿರುವದು) **ವಿದ್ಯುದ್ವಿಭಂಗಃ**-ವಿಪರೀತ ತಂಡಿಯಾಗಿರುವ ರಾತ್ರಿ ವೇಳೆಯಲ್ಲೂ ಪ್ರವಾಹರೂಪದಲ್ಲಿ ಮಳೆ ಸುರಿಯುತ್ತಿರುವಾಗ ಏಕಾಏಕಿ ಬಹಳ ದಹನ ಶಕ್ತಿ ಮತ್ತು ಗರ್ಜನೆಯಿಂದ ಅನೇಕ ಅನಾಹುತಗಳನ್ನುಂಟುಮಾಡುವ ಸಿಡಲಿನ ಹೊಡತವೂ, **ಉಷ್ಣರಶ್ಮೇ ರ್ಗತಿಃ** - ಸೂರ್ಯನಗತಿಯೂ ಹಾಗೆಯೇ ಅನೇಕ ಅನಾಹುತವನ್ನುಂಟುಮಾಡುವ ಭೂಕಂ ಪವೂ, ಅಗ್ನಿಪರ್ವತಾದಿಗಳೂ, ಕಾಮನಬಿಲ್ಲು, ಗ್ರಹಣಗಳೂ, ಇವೆಲ್ಲವೂ, **ವಿಷ್ಣೋ** - ಸರ್ವ ವ್ಯಾಪಿಯಾದ ಸರ್ವಶಕ್ತನಾದ ಶ್ರೀಮಹಾವಿಷ್ಣುವಿನ, **ವಿಚಿತ್ರಾಃ ಮಾಯಾಃ** - ವಿಚಿತ್ರ ಸೃಷ್ಟಿ ಶಕ್ತಿಯೇ ಮೂಲವಾದ ಸಂಕಲ್ಪವುಳ್ಳವುಗಳು, **ಪ್ರಭವಂತಿ**-ಆಗಲು ಯೋಗ್ಯಗಳು, ಇಲ್ಲಿ **ವಿಷ್ಣೋ ರ್ಮಾಯಾಃ** - ಎಂಬುದಕ್ಕೆ ವಿಷ್ಣುವಿನ ಮಿಥ್ಯಾರೂಪ ವ್ಯಾಪಾರಗಳೆಂದು ಅರ್ಥಹೇಳಲು ಸಾಧ್ಯವಿಲ್ಲವು. ವಿಷ್ಣುವಿನ ಅತ್ಯದ್ಭುತ ಚೇಷ್ಟೆಗಳು ಮಿಥ್ಯೆಗಳು ಎಂದು ಹೇಳಿದರೆ, ವಿಷ್ಣುವು ದೋಷಯುಕ್ತನೆಂದು ಹೇಳಿದಂತಾಗುವದು. ಸತ್ಯ ಸಙ್ಕಲ್ಪನ ಪ್ರವೃತ್ತಿಗಳೆಲ್ಲಾ ಸತ್ಯವಾದವು ಗಳೇ, ಮಿಥ್ಯೆಯಲ್ಲವು. ಆಗ ಆತನ ದಿವ್ಯ ಚೇಷ್ಟೆಗಳನ್ನು ಬೋಧಿಸುವ ಪುರಾಣೇತಿಹಾಸಗ ಳೆಲ್ಲಾ ಮಿಥ್ಯೆಯಾದವುಗಳೆಂದು ಹೇಳಬೇಕಾದದರಿಂದ, ಅವುಗಳು ಉಪಾದೇಯವಲ್ಲವೆಂದಾಗುತ್ತದೆ. ಸರ್ವವ್ಯಾಪಿಯಾಗಿ ಸರ್ವಶಕ್ತನಾದ ಸರ್ವೇಶ್ವರನ ಸಙ್ಕಲ್ಪದಿಂದಲೇ ಎಲ್ಲಾ ಪ್ರವೃತ್ತಿಗಳು ಎಂಬುದಕ್ಕೆ ಮುಂದೆ ಶ್ರುತಿ ಪ್ರಮಾಣಗಳನ್ನು ದಾಹರಿಸುತ್ತಾರೆ.—ಹೀಗೆ ಶ್ರುತಿಯ ಉದಾಹರ ಣೆಯಿಂದ ಮುಂದಿನ ಎರಡು ಎರಡು ಶ್ಲೋಕಗಳಲ್ಲೂ ಉಪಪಾದಿಸುವ ಅಭಿಪ್ರಾಯವನ್ನೂ

**ಭಾ. (೧)"ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಚಂದ್ರಮಸೌ ವಿಧೃತೌ ತಿಷ್ಠತಃ" (೨) "ಭೀಷಾಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ, ಭೀಷಾಸ್ಮಾದಗ್ನಿಶ್ಚೇಂದ್ರಶ್ಚ" ಇತ್ಯಾದಿಕಾ ॥ ೬ ॥**

**ಭಾ. ಅ. ಸಕಲೇತರ ನಿರಪೇಕ್ಷಸ್ಯ ಭಗವತಸ್ಸಙ್ಕಲ್ಪಾತ್ಸರ್ವೇಷಾಂ ಸ್ಥಿತಿಃ ಪ್ರವೃತ್ತಿಶ್ಚೋಕ್ತಾ ; ತಥಾ ತತ್ಸಙ್ಕಲ್ಪಾದೇವ ಸರ್ವೇಷಾ ಮುತ್ಪತ್ತಿ ಪ್ರಲಯಾವಪೀತ್ಯಾಹ—**

ಸೂಚಿಸುತ್ತಾರೆ. **ಶ್ರುತಿರಪಿ** - ಶ್ರುತಿಯೂ ಕೂಡ ಈ ಅಭಿಪ್ರಾಯವನ್ನೇ ಉಪಪಾದಿಸುತ್ತದೆ. ಹೇಗೆಂದರೆ. "ಓ ಗಾರ್ಗಿಯೇ ಎಂದು ಸಂಬೋಧಿಸಿ ಯಾಜ್ಞವಲ್ಕ್ಯರು ಉಪದೇಶಿಸುತ್ತಾರೆ. **ಏತಸ್ಯವಾ ಅಕ್ಷರಸ್ಯ** - ಈ ನಾಶರಹಿತನಾದ ಪರಮಾತ್ಮನ, **ಪ್ರಶಾಸನೇ** - ಪ್ರಕೃಷ್ಟವಾದ ಆಜ್ಞೆಯಿಂದಲೇ, ಇದರಿಂದ ಆತನ ಸಙ್ಕಲ್ಪಾನುಸಾರ ನಿಯಮನವೇ ಹೇಳಲ್ಪಟ್ಟಿತು, **ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ** - ಸೂರ್ಯ ಚಂದ್ರರು ಈ ಅಪ್ರತಿಹತ ಸಂಙ್ಕಲ್ಪಕ್ಕೆ ಅಧೀನರಾಗಿ, **ವಿಧೃತೌ ತಿಷ್ಠತಃ**, ವಿಶೇಷವಾಗಿ ಧರಿಸಲ್ಪಟ್ಟವರಾಗಿದ್ದಾರೆ. ಎಂದರೆ ಆತನಿಂದ ನಿಯಮಿಸಲ್ಪಟ್ಟವರಾಗಿ ತಮಗೆ ವಹಿಸಲ್ಪಟ್ಟ ಕಾರ್ಯಗಳನ್ನು ನಡೆಸುತ್ತಾರೆಂಬ ಭಾವವು. ಹಾಗೆಯೇ ಮುಂದೆ ಶ್ರುತಿಯು ದ್ಯಾವಾಪೃಥಿವಿಗಳು, ನಿಮಿಷ ಮೊದಲುಗೊಂಡು ಸಂವತ್ಸರಾದಿ ಕಾಲವಿಶೇಷಗಳೂ, ಪರ್ವತಗಳಿಂದ ನದಿಗಳು ಪ್ರವಹಿಸೋಣವೂ, ಮನುಷ್ಯರು ಮಾಡುವ ದಾನ ಯಜ್ಞಾದಿಗಳೂ ಅವುಗಳಲ್ಲಿ ನಡೆಯುವ ದೇವ ಪಿತೃ ಪ್ರಶಂಸೆಗಳೂ ಸರ್ವವೂ ಆತನ ಸಙ್ಕಲ್ಪಾಧೀನವೆಂದು ಉಪದೇಶಿಸುತ್ತದೆ. ಹಾಗೆಯೇ ತೈತ್ತರೀಯ ಶ್ರುತಿಯನ್ನು ಉದಾಹರಿಸುತ್ತಾರೆ. **"ಭೀಷಾ ಸ್ಮಾದ್ವಾತಃ ಪವತೇ** - ವಾಯುದೇವತೆಯು ಈ ಸರ್ವೇಶ್ವರನ ಭಯದಿಂದಲೇ ಬೀಸುತ್ತಾನೆ., **ಭೀಷೋದೇತೀ ಸೂರ್ಯಃ** - ಸೂರ್ಯನು ಆತನ ಭಯದಿಂದಲೇ ಉದಯಿಸುತ್ತಾನೆ. **ಭೀಷಾಸ್ಮಾ ದಗ್ನಿಶ್ಚೇಂದ್ರಶ್ಚ** - ಈತನ ಭಯದಿಂದಲೇ ಅಗ್ನಿಯು ಸುಡುತ್ತಾನೆ, ಇಂದ್ರನು ಮಳೆಯನ್ನು ವರ್ಷಿಸುತ್ತಾನೆ, **ಮೃತ್ಯುರ್ಧಾವತಿ ಪಂಚಮಃ** ಎಂದು ಮುಂದೆ ಶ್ರುತಿವಾಕ್ಯವಿರುತ್ತದೆ. **ಇತ್ಯಾದಿಕಾ** - ಇವೇ ಮೊದಲಾದ ಪ್ರಮಾಣಗಳುಂಟು. ಇಲ್ಲಿ ಭಯವೇತಕ್ಕೆಂದರೆ, ಆತನ ಸಙ್ಕಲ್ಪಾನುಸಾರ ನಡೆಯದೇ ಹೋದರೆ ಭಗವನ್ನಿಗ್ರಹಕ್ಕೆ ಆಯಾದೇವತೆಗಳು ಗುರಿಯಾಗುವುವು ಎಂಬುದಾಗಿ ಭಯವು ಈ ಅಭಿಪ್ರಾಯವನ್ನೇ ಸ್ವಾಮಿ ನಿಗಮಾಂತದೇಶಿಕರವರು ಅಭೀತಿಸ್ತವದಲ್ಲಿ **"ಮರುತ್ತರಣಿ ಪಾವಕ ತ್ರಿದಿಶ ನಾಥಕಾಲಾದಯ ಸ್ಸ್ವಕೃತ್ಯಮಧಿಕುರ್ವತೇ ತ್ವದಪರಾಧತೋ ಬಿಭ್ಯತಃ"** ಎಂದು ಉಪಪಾದಿಸಿರುತ್ತಾರೆ. ಹಾಗೆಯೇ **"ತಚ್ಛಾಸನಾತಿ ವೃತ್ತೌ ಕಿಂ ಭವಿಷ್ಯತೀತಿ ಯತೋಽಮುತೋ ಭಯಾದ್ವಜ್ರ ಮಿವೋತ್ಥಿತಾತ್ಕೃತ್ಸ್ನಂ ಜಗತ್ಕಂಪತೇ"** ಎಂದು ಉಪಪಾದಿಸಲ್ಪಟ್ಟಿರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು:— ಸಕಲೇತರ ನಿರಪೇಕ್ಷಸ್ಯ** - ತನಗಿಂತ ಬೇರೆಯಾದ ಎಲ್ಲಾವಸ್ತುಗಳ ಅಪೇಕ್ಷೆ ಏನೊಂದೂ ಇಲ್ಲದೆ, ಎಂದರೆ ಅವುಗಳಿಂದ ತನಗೆ ಆಗಬೇಕಾದುದು ಏನೊಂದೂ ಇಲ್ಲದೆ, ಪರಿಪೂರ್ಣಕಾಮನಾಗಿ ಲೀಲೆಯಲ್ಲಿ ಮಾತ್ರವೇ ಇಷ್ಟವಿರುವ ಎಂಬ ಭಾವವು, ಅಂತಹ **ಭಗವತಃ** - ಭಗವಂತನ, **ಸಙ್ಕಲ್ಪಾತ್** - ಸಙ್ಕಲ್ಪದಿಂದಲೇ, **ಸರ್ವೇಷಾಂ** - ಸಮಸ್ತ ಚಿದಚಿತ್ತುಗಳ, ಸ್ಥಿತಿಯೂ, ಪ್ರವೃತ್ತಿಯೂ ಸಹ, **ಉಕ್ತಾ** - ಹೇಳಲ್ಪಟ್ಟಿತು. ಧಾರಣ ನಿಯಮನಗಳು ಹೇಳಲ್ಪಟ್ಟದ್ದರಿಂದ, ನಿಯಮನಕ್ಕೆ ಒಳಪಟ್ಟ ಪ್ರವೃತ್ತಿಯೂ ಹೇಳಲ್ಪಟ್ಟಿತು, **ತಥಾ** - ಹಾಗೆಯೇ, **ತತ್ಸಙ್ಕಲ್ಪಾದೇವ** - ಆ ಭಗವಂತನ ಸಙ್ಕಲ್ಪದಿಂದಲೇ, ಏವ ಎಂಬ ಅವಧಾರಣದಿಂದ ಇನ್ನು ಯಾವವಿಧವಾದ ಸಹಾಯವನ್ನೂ ಆತನು ಅಪೇಕ್ಷಿಸುವದಿಲ್ಲವೆಂಬ

**ಮೂ. ಸರ್ವ ಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನ ಸ್ತಾನಿ ಕಲ್ಪಾದೌ ವಿಸೃಜಾಮ್ಯ ಹಮ್ ॥ ೭.**

ಭಾವವು; **ಸರ್ವೇಷಾಂ** - ಸಮಸ್ತ ವಿಶ್ವದ ಚಿದಚಿತ್ತುಗಳ, **ಉತ್ಪತ್ತಿ ಪ್ರಲಯಾವಪಿ** - ಸೃಷ್ಟಿ ಲಯಗಳೂ ಕೂಡ ಉಂಟಾಗುತ್ತವೆ, **ಇತ್ಯಾಹ** - ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆಂಬ ಭಾವವು. ಕೆಲವರು ಇಲ್ಲಿ ಸೃಷ್ಟಿ ಲಯಗಳ ವಿಷಯವು ಹಿಂದೆ ೭. ೬ ರಲ್ಲಿ **"ಅಹಂಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯ ಸ್ತಥಾ"** ಎಂದು ಹೇಳಲ್ಪಟ್ಟು ಈಗ ಪುನಃ ಉಪದೇಶಿಸಲು ಕಾರಣವೇನೆಂಬುದನ್ನು ಗ್ರಹಿಸದೆ, ಆದುದರಿಂದ ಹಿಂದೆ ಹೇಳಿದುದಕ್ಕೂ, ಇವೇ ಮೊದಲಾದ ಶ್ಲೋಕಗಳಿಗೂ ಸಙ್ಗತಿ ಏನೆಂದು ತಿಳಿಯದೆ ನಾನಾವಿಧವಾಗಿ ಕ್ಲೇಶಪಟ್ಟಿರುತ್ತಾರೆ. ಕೆಲವರು ಜ್ಞಾನ ವಿಜ್ಞಾನವನ್ನು ಉಪದೇಶಿಸುವದಕ್ಕೆ ಉಪಕ್ರಮಿಸಲು ಆರಂಭಿಸಿದರು ಎಂದು ಅಭಿಪ್ರಾಯಪಡುವರು, ಆದರೆ ಈಗ ಹೇಳಬೇಕಾದುದು ಏನೆಂದರೆ—ಅರ್ಜುನನಿಗೆ ಉಪಾಸ್ಯದಲ್ಲಿ ಶ್ರದ್ಧಾ ಉಂಟಾಗಲು ಉಪಾಸ್ಯದ ಮಹಿಮೆಯನ್ನು ಹೇಳಬೇಕಾದುದು ಪ್ರಕೃತವಾಯಿತು. ತನ್ನ ಸಙ್ಕಲ್ಪಮಾತ್ರದಿಂದಲೇ ವಾಯುವು ಹೇಗೆ ನಿರಾಲಂಬವಾದ ಆಕಾಶದಲ್ಲಿ ಸಂಚರಿಸುವ ಶಕ್ತಿಯನ್ನು ಹೊಂದಿತೋ, ಹಾಗೆಯೇ ವಿಶ್ವದ ಸ್ಥಿತಿಕಾಲದಲ್ಲಿ ಸರ್ವಭೂತಗಳ ಧಾರಣ ನಿಯಮನಾದಿಗಳು ತನ್ನ ಸಙ್ಕಲ್ಪ ಮಾತ್ರದಿಂದಲೇ ಎಂದು ಹೇಳಿದರು. ಇಷ್ಟೇ ಅಲ್ಲವು, ಇನ್ನೂ ಪರಮಾಶ್ಚರ್ಯವಾದ ಅದ್ಭುತ ವಿಷಯವೂ, ಉಂಟು; ಸ್ಥಿತಿ ಪ್ರವೃತ್ತಿಗಳು ಹೇಗೆ ನನ್ನ ಸಙ್ಕಲ್ಪಾಯತ್ತವೋ, ಹಾಗೆಯೇ ವಿಶ್ವದ ಸೃಷ್ಟಿಲಯಗಳೂ ಸಹ ನನ್ನ ಸಙ್ಕಲ್ಪಾಧೀನವೆಂದು ಹೇಳುವದು ಆವಶ್ಯಕವು. ಇದನ್ನು ತಿಳಿಸುವದಕ್ಕಾಗಿ ಈ ಮೇಲಿನ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ.

**ಮೂಲಕ್ಕೆ ಅರ್ಥವು:—ಹೇ ಕೌನ್ತೇಯ** - ಓ ಕುನ್ತೀ ಪುತ್ರನಾದ ಅರ್ಜುನನೇ, **ಸರ್ವ ಭೂತಾನಿ** - ಶರೀರವನ್ನು ಧರಿಸಿರುವ ಸರ್ವಪ್ರಾಣಿಗಳೂ, **ಕಲ್ಪಕ್ಷಯೇ** - ಚತುರ್ಮುಖನ ಆಯುಸ್ಸಿನ ಕೊನೆಯ ಕಲ್ಪಾಂತ್ಯದಲ್ಲಿ, **ಮಾಮಿಕಾಂ** - ನನ್ನ ಸಂಬಂಧಿಯಾದ ಎಂದರೆ ನನಗೆ ಶರೀರವಾಗಿರುವ, ಇದರಿಂದ ೭ ನೆಯ ಅಧ್ಯಾಯದ ೫-೭ ನೆಯ ಶ್ಲೋಕಾರ್ಥಗಳು **ಮಾಮಿಕಾಂ** ಎಂಬ ಪದದಿಂದ ಅನುಸಂಧಾನ ಮಾಡಲ್ಪಟ್ಟವು, **ಪ್ರಕೃತಿಂ** - ಕ್ರಮವಾಗಿ ತಮಶ್ಶಬ್ದ ವಾಚ್ಯವಾಗಿ ನನ್ನಲ್ಲೇ ಸೂಕ್ಷ್ಮದಶೆಯನ್ನು ಹೊಂದಿರುವ ಪ್ರಕೃತಿರೂಪ ಅವಸ್ಥೆಯನ್ನು, **ಯಾನ್ತಿ** - ಹೊಂದುವುವು ಎಂದರೆ ನಾನೇ ನನ್ನ ಸಙ್ಕಲ್ಪಮಾತ್ರದಿಂದಲೇ ಹೊಂದಿಸುವೆನು ಎಂಬ ತಾತ್ಪರ್ಯವು. ಮೇಲೆ ಹೇಳಿದ ೨೪ ತತ್ವಗಳೂ, ಕಾರಣದಿಂದ ಹೇಗೆ ಕಾರ್ಯವಾಗಿ ಸೃಷ್ಟಿಸಲ್ಪಟ್ಟವೋ, ಆ ಮೇರಿಗೇನೆ ಕಾರ್ಯವು ಕಾರಣದಲ್ಲಿ ಲಯವನ್ನು ಹೊಂದುತ್ತದೆ. ಹೀಗೆ ಅಚಿತ್ಪರಿಣಾಮಗಳು ಜರಗುವಾಗ, ಅಣುರೂಪಿಗಳಾದ ಚೇತನರೂ ಈ ಅಚಿತ್ತುಗಳೊಂದಿಗೇನೇ ಸೇರಿಕೊಂಡಿರುತ್ತಾರೆ. ಹೀಗೆ ಅವುಗಳು ಕೊನೆಗೆ ಅವ್ಯಕ್ತವೆಂದೆನಿಸಿ, ಅದು ಅಕ್ಷರ ತಮಸ್ಸುಗಳಾಗಿ ಲಯಕಾಲದಲ್ಲಿ ಸೂಕ್ಷ್ಮದಶೆಯನ್ನು ಹೊಂದುತ್ತವೆ. **"ಅವ್ಯಕ್ತಂ ಅಕ್ಷರೇಲೀಯತೇ, ಅಕ್ಷರಂ ತಮಸಿ ಲೀಯತೇ, ತಮೋದೇವೇ ಪರೇ ಏಕೀ ಭವತಿ"** ಎಂಬ ಶ್ರುತಿವಾಕ್ಯಗಳಿಗನುಸಾರವಾಗಿ, ಇವೆಲ್ಲವೂ ಸೂಕ್ಷ್ಮದಶೆಯನ್ನು ಹೊಂದಿದಾಗಿ ಪರಮಾತ್ಮನಲ್ಲಿ ಏಕೀಭವಿಸುತ್ತವೆ ಎಂಬ ಭಾವವು. **"ಪರೇ ದೇವೇ ಏಕೀಭವತಿ"** ಎಂಬ ಶ್ರುತಿ ವಾಕ್ಯಾನುಸಾರ **ಏಕೀ ಭವತಿ** ಎಂಬುವರಿಂದಲೇ ಏಕವಲ್ಲದ್ದು ಒಟ್ಟಿಗೆ ಸೇರಿರುತ್ತವೆ ಎಂಬ **ರ್ಥವೇವಿನಾ, ಪರಮಾತ್ಮನೊಬ್ಬನೇ ಇರುತ್ತಾನೆ, ಇನ್ನು ಯಾವುದೂ ಇರುವದಿಲ್ಲವೆಂದು ಕೆಲ**

**ಭಾ. ಸ್ಥಾವರ ಜಙ್ಗಮಾತ್ಮಕಾನಿ ಸರ್ವಾಣಿ ಭೂತಾನಿ, ಮಾಮಿಕಾಂ-ಮಚ್ಛರೀರ ಭೂತಾಂ, ಪ್ರಕೃತಿಂ - ತಮಶ್ಶಬ್ದವಾಚ್ಯಾಮ್ ನಾಮರೂಪವಿಭಾಗಾನರ್ಹಾಂ, ಕಲ್ಪಕ್ಷಯೇ-**

ವರು ಹೇಳುವ ಅಭಿಪ್ರಾಯವು ಕೂಡುವದಿಲ್ಲವು. **ತಾನಿ** - ಹಾಗೆ ನಿನ್ನಲ್ಲಿ ಏಕೀಭವಿಸಿದವುಗಳನ್ನೇ, **ಕಲ್ಪಾದೌ -** ಪುನಃಪ್ರಾಕೃತ ಕಲ್ಪದ ಪ್ರಾರಂಭದಲ್ಲಿ, **ಅಹಂ** - ಭಗವಂತನಾದ ನಾನು **ವಿಸೃಜಾಮಿ** - ಸಮಷ್ಟಿ ವ್ಯಷ್ಟಿ ಸೃಷ್ಟಿಗಳ ಮೂಲಕ ವಿವಿಧ ವಿಚಿತ್ರಗಳಾದ ಉತ್ಪತ್ತಿಯನ್ನು ಹೊಂದುವಹಾಗೆ ಮಾಡುವೆನು, ಎಂಬ ತಾತ್ಪರ್ಯವು. ಹೀಗೆ ಲಯಸೃಷ್ಟಿಗಳನ್ನುಂಟು ಮಾಡವವರಲ್ಲಿ ವೈವಿಧ್ಯವೂ, ಆಶ್ಚರ್ಯವೂ ಇದ್ದರೂ, ನನಗೇನೂ ಕ್ಲೇಶಕರಗಳಲ್ಲವು. ಏಕೆಂದರೆ ನನ್ನ ಸಙ್ಕಲ್ಪಮೂಲಕವೇ ಇವೆಲ್ಲವೂ ಸುಲಭವಾಗಿಯೇ ನಡೆದು ಹೋಗುತ್ತವೆಂಬುದು ಇಲ್ಲಿ ಮುಖ್ಯವಾಗಿ ಗ್ರಹಿಸತಕ್ಕ ವಿಷಯವು. ಇನ್ನೊಂದು ಮುಖ್ಯವಾದ ವಿಷಯವೇನೆಂದರೆ ? ಪ್ರಳಯದಲ್ಲಿ ಸೂಕ್ಷ್ಮದಶೆಯಲ್ಲಿ ತನ್ನೊಂದಿಗೇನೆ ಈ ಚಿದಚಿತ್ತುಗಳು ಇರುತ್ತವೆಂದೂ ಪುನಃ ಸೃಷ್ಟಿಯಲ್ಲಿ ಅವೇ ಸ್ಥೂಲರೂಪವನ್ನೂ ಹೊಂದಿ ತನ್ನಲ್ಲೇ ಇರುತ್ತವೆಂದೂ ಹೀಗೆ ಸೃಷ್ಟಿ ಸ್ಥಿತಿ ಲಯಗಳಲ್ಲೂ ಸ್ವಾಮಿ ಸಙ್ಕಲ್ಪ ನಿಯಮನಗಳಿಗೆ ಅಧೀನವಾಗಿ ಅಪೃಥಕ್ಸಿದ್ಧವಾಗಿ ಈ ಮೂರು ತತ್ವಗಳೂ ಒಟ್ಟಿಗೆ ಸೇರಿವೆ ಎಂಬುದು. ಒಂದೇ ತತ್ವವು ಎಂಬವಾದವು **"ಭೋಕ್ತಾ ಭೋಗ್ಯಂ ಪ್ರೇರಿತಾರಂಚಮತ್ವಾ"** (ಶ್ವೇ. ೧. ೧೨) **"ಕ್ಷರಾತ್ಮಾನೌ ಈಶತೇ ದೇವಏಕಃ"** (ಶ್ವೇ. ೧. ೧೦) ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಹಾಗೆ ನಿರಸ್ತವು. ಒಂದೇ ತತ್ವವೆಂಬ ವಾದವು ಅವರುಗಳೇ ಒಪ್ಪಿಕೊಂಡಿರುವ **ಸತ್** ಖ್ಯಾತಿ ವಾದಕ್ಕೂ ಪರಮ ವಿರುದ್ಧವು. ಏಕೆಂದರೆ ಒಂದೇ ತತ್ವವಾದ ಆತ್ಮಾವಾದ ಅಜಡಪ್ರಕೃತಿಯು ಮಿಥ್ಯೆಯಾದ ಜಡಪ್ರಕೃತಿಯಾಗಿ ಹೇಗಾಯಿತು ? ಎಂಬ ಪ್ರಶ್ನೆಯು ನಿರುತ್ತರವಾಗುತ್ತದೆ.

**ಭಾಷ್ಯಾರ್ಥವು** :—**ಸರ್ವಭೂತಾನಿ** ಎಂದರೆ **ಸ್ಥಾವರ ಜಙ್ಗಮಾತ್ಮಕಾನಿ** - ವೃಕ್ಷಾದಿಗಳೇನು, ಓಡ್ಯಾಡುವ ಪ್ರಾಣಿಗಳೇನು, ಇವೇ ಮೊದಲಾದ ಸಮಸ್ತ ದೇಹಯುಕ್ತ ಚೇತನ ವರ್ಗವೂ, **ಮಾಮಿಕಾಂ** - ನನ್ನ ಸಂಬಂಧವಾದ ಎಂದರೆ **ಮಚ್ಛರೀರಭೂತಾಂ "ಯಸ್ಯ ತಮಶ್ಶರೀರ"** ಎಂದು (ಬೃಹ. ೫. ೭. ೧೩) ಶ್ರುತಿಯಲ್ಲಿ ಹೇಳಿರುವ ಹಾಗೇ, ನನಗೆ ಶರೀರವಾಗಿರುವ, **ಪ್ರಕೃತಿಂ -** ಇದು ಜಡಪ್ರಕೃತಿಯ ಆದಿರೂಪವು, ಇದು ಬರೀ ಜಡಪ್ರಕೃತಿಯೇ ಅಲ್ಲವು, ಅನೇಕ ಆತ್ಮರುಗಳಿಂದ ಸೇರಿದ ಸಂಘಾತರೂಪವು ; ಆದುದರಿಂದಲೇ **ತಮಶ್ಶಬ್ದವಾಚ್ಯಾಂ** - ತಮಶ್ಶಬ್ದದಿಂದ ಹೇಳಲ್ಪಡುವ, **ನಾಮರೂಪವಿಭಾಗಾನರ್ಹಾಂ** - ನಾಮರೂಪಗಳನ್ನು ಹೊಂದಲು ಅನರ್ಹವಾದ ಸ್ಥಿತಿಯನ್ನು, **ಕಲ್ಪಕ್ಷಯೇ** - ಪ್ರಾಕೃತಿಕ ಪ್ರಳಯದಲ್ಲಿ ಎಂದರೆ **ಚತುರ್ಮುಖಾವಸಾನ ಸಮಯೇ -** ಚತುರ್ಮುಖನ ಆಯುಸ್ಸು ಮುಗಿದು ಹೋಗುವ ಸಮಯದಲ್ಲಿ, **ಮತ್ಸಙ್ಕಲ್ಪಾದ್ಯಾಂತಿ -** ನನ್ನ ಸಙ್ಕಲ್ಪದಿಂದಲೇ ಹೊಂದುತ್ತವೆ. ಇಲ್ಲಿ ಕಲ್ಪಕ್ಷಯೇ ಎಂಬುದರಿಂದ ಚತುರ್ಮುಖನ ದೈನಂದಿನ ಪ್ರಳಯವಲ್ಲವೆಂದೂ, ಚತುರ್ಮುಖನ ಕೊನೆಯರಾತ್ರಿಯ ಪ್ರಳಯವಾದ ದ್ವಿಪರಾರ್ಧಪ್ರಳಯವೆಂದೂ ತಿಳಿಸುವದಕ್ಕಾಗಿ **ಚತುರ್ಮುಖಾವಸಾನ ಸಮಯೇ -** ಎಂದು ವ್ಯಾಖ್ಯಾನಮಾಡಿರುತ್ತಾರೆ. ಆ ಪ್ರಳಯದಲ್ಲೇ ಪಂಚಭೂತ ಮಹದಹಂಕಾರಗಳಿಗೂ ಪ್ರಳಯ ಉಂಟು. ಕೊನೆಗೆ **ಅಕ್ಷರ, ಅವ್ಯಕ್ತ, ತಮಸ್ಸು,** - ಹೀಗೆ ಕ್ರಮವಾಗಿ ಪರಿಣಮಿಸಿ, ತಮಸ್ಸು, **"ಪರೇ ದೇವೇ ಏಕೀ ಭವತಿ"** ಎಂಬ ಶ್ರುತ್ಯನುಸಾರವಾಗಿ ಪರಮಾತ್ಮನಲ್ಲಿ ಲಯಹೊಂದುವದರಿಂದ, ಆಗ ಅತ್ಯಂತ ಸೂಕ್ಷ್ಮದಶೆಯನ್ನು ಹೊಂದಿ ನಾಮರೂಪಗಳನ್ನು ಕೂಡ ಹೊಂದಲನರ್ಹವಾದ ದಶೆಯೆಂದು ಅರ್ಥಮಾಡಿರುತ್ತಾರೆ. ಇಲ್ಲಿ ಮುಖ್ಯವಾಗಿ ಮಹಾ ಪ್ರಳಯಕ್ಕೂ ತದನಂತರ ಆಗುವ ಸಮಷ್ಟಿ ವ್ಯಷ್ಟಿರೂಪ ಸೃಷ್ಟಿಗೂ, ನಾನೇ

**ಭಾ. ಚತುರ್ಮುಖಾವಸಾನ ಸಮಯೇ, ಮತ್ಸಙ್ಕಲ್ಪಾದ್ಯಾನ್ತಿ ; ತಾನ್ಯೇವ ಭೂತಾನಿ ಕಲ್ಪಾದೌ ಪುನರ್ವಿಸೃಜಾಮ್ಯಹಮ್ ; ಯಥಾಹ ಮನುಃ (೧)"ಆಸೀದಿದಂ ತಮೋಭೂತಂ" ಸೋಽಭಿಧ್ಯಾಯ ಶರೀರಾತ್ಸ್ವಾತ್" ಇತಿ. ಶ್ರುತಿರಪಿ (೨) "ಯಸ್ಯಾವ್ಯಕ್ತಂ**

ಕಾರಣನು ಎಂದು ಹೇಳುವದು ಪ್ರಸ್ತುತವಾದುದರಿಂದ, ಹಾಗೆ ವ್ಯಾಖ್ಯಾನಮಾಡಿರುತ್ತಾರೆ. ಹೀಗೆ ಮಹಾಪ್ರಳಯವೂ, ತದನಂತರ ಸೃಷ್ಟಿಯೂ ಸಹ, ತನ್ನ ಸಙ್ಕಲ್ಪಮಾತ್ರದಿಂದಲೇ ನಡೆಯುತ್ತವೆ ಎಂದು ಹೇಳಬೇಕಾಗಿರುವದರಿಂದ, **ಯಾನ್ತಿ** - ಹೇಗೆ ಯಾನ್ತಿ ಎಂದರೆ **ಮತ್ಸಙ್ಕಲ್ಪಾ ದೇವಯಾನ್ತಿ** ಎಂದು ವ್ಯಾಖ್ಯಾನಮಾಡಿರುತ್ತಾರೆ. **ಪಶ್ಯಮೇ ಯೋಗಮೈಶ್ವರಂ** ಎಂದು ಹೇಳಿರುವದನ್ನು ವ್ಯಕ್ತಪಡಿಸುವದಕ್ಕಾಗಿಯೇ, ಈ ಶ್ಲೋಕಗಳು ಪ್ರಸ್ತುತವಾದುದರಿಂದಲೂ, **ಮತ್ಸಙ್ಕಲ್ಪಾದೇವ** ಎಂಬ ಪ್ರಯೋಗವು. **ತಾನ್ಯೇವಭೂತಾನಿ** - ಅಂತಹ ಸ್ಥಾವರ ಜಙ್ಗಮಾತ್ಮಕಗಳಾದ ಸಮಸ್ತ ಭೂತಗಳನ್ನೂ, **ಕಲ್ಪಾದೌ** - ಮುಂದಿನ ಕಲ್ಪದ ಆದಿಯಲ್ಲಿ ಎಂದರೆ ಮುಂದಿನ ಪ್ರಾಕೃತಿಕ ಸೃಷ್ಟಿಯಲ್ಲಿ, **ವಿಸೃಜಾಮ್ಯಹಂ** - ವಿವಿಧ ವಿಚಿತ್ರ ರೂಪದಲ್ಲಿ ಸೃಷ್ಟಿಮಾಡುವೆನು, ಇದರಿಂದ ಸಮಷ್ಟಿ ವ್ಯಷ್ಟಿರೂಪ ಎರಡು ಸೃಷ್ಟಿಗಳೂ ಹೇಳಲ್ಪಟ್ಟವು. ಸರ್ವೇಶ್ವರನಲ್ಲಿ ಏಕೀಭವಿಸಿದ್ದ ಪ್ರಕೃತಿಯು, ತಮಸ್ಸು, ಅಕ್ಷರ, ಅವ್ಯಕ್ತಗಳೂ, ಮಹದಹಂಕಾರ, ಇವುಗಳ ಪಂಚತನ್ಮಾತ್ರೆಗಳೂ, ಪಂಚಭೂತಗಳು ಏಕಾದಶೇಂದ್ರಿಯಗಳೂ ಹೀಗೆ ೨೪ ತತ್ವಗಳೂ ಎಲ್ಲಾ ಅವಸ್ಥೆಯಲ್ಲೂ ಜೀವನೊಂದಿಗೆ ಸೇರಿ ೨೫ ತತ್ವಗಳೂ, ಉಂಟಾಗುತ್ತವೆ. ಅನಂತರ ಪಂಚೀಕರಣಾದಿಗಳಿಂದ ಅಂಡ ಸೃಷ್ಟಿಯುಂಟಾಗಿ ವಿಷ್ಣುವಿನ ನಾಭಿಕಮಲದಿಂದ ಚತುರ್ಮುಖನು ಉಂಟಾಗುವನು, ಇದಕ್ಕೆಲ್ಲಾ ಸಮಷ್ಟಿ ಸೃಷ್ಟಿ ಎಂದು ಹೆಸರು. ಇವುಗಳನ್ನೆಲ್ಲಾ ಸಾಕ್ಷಾತ್ತಾಗಿ ಪರಮಾತ್ಮನೇ ತನ್ನ ಸಙ್ಕಲ್ಪ ಮೂಲಕವಾಗಿಯೇ ನಡೆಸುತ್ತಾನೆ. ಅನಂತರ ಚತುರ್ಮುಖನ ಮೂಲಕವಾಗಿ ವ್ಯಷ್ಟಿ ಸೃಷ್ಟಿಕ್ರಮವನ್ನೆಲ್ಲಾ ನಡೆಸುವನು. ಸುಬಾಲೋಪನಿಷತ್ತಿನ ವಾಕ್ಯಗಳನ್ನನುಸರಿಸಿ ಸರ್ವಸಮಂಜಸಾರ್ಥಗಳನ್ನು ಮನುವು ಉಪಪಾದಿಸಿ ಬರೆದಿರುವದರಿಂದ **"ಯದ್ವೈ ಕಿಂಚನ ಮನುರಬ್ರವೀತ್ತದ್ಭೇಷಜಂ"** ಯಾವ ಸ್ವಲ್ಪವನ್ನು ಮನುವು ಹೇಳಿರುವನೋ ಅದು ಪರಮೌಷಧವು ಎಂದು ಹೇಳಲ್ಪಟ್ಟಿರುವದರಿಂದ, ಮನುವು ಏಳು ಶ್ಲೋಕಗಳಿಂದ ಸೃಷ್ಟಿಕ್ರಮವನ್ನು ಸ್ಪಷ್ಟವಾಗಿ ಹೇಳಿರುವದನ್ನು ಮುಂದೆ ಉದಾಹರಿಸುತ್ತಾರೆ—**"ಯಥಾಹ ಮನುಃ"** ಮನುವು ಹೇಳಿರುತ್ತಾರೆ ಏನೆಂದರೆ ? ಯಾವ ಶ್ಲೋಕಗಳಲ್ಲಿ ? ಎಂದರೆ **"ಆಸೀದಿದಂ ತಮೋಭೂತಂ"** ಎಂಬ ಶ್ಲೋಕ ಮೊದಲು **"ಸೋಽಭಿಧ್ಯಾಯ ಶರೀರಾತ್ಸ್ವಾತ್"** ಎಂಬ ಶ್ಲೋಕಗಳಲ್ಲಿ. ಆ ಏಳು ಶ್ಲೋಕಗಳು ಯಾವುವೆಂದರೆ.—

**೧. ಆಸೀದಿದಂ ತಮೋ ಭೂತ ಮಪ್ರಜ್ಞಾತ ಮಲಕ್ಷಣಂ ।**
**ಅಪ್ರತರ್ಕ್ಯ ಮವಿಜ್ಞೇಯಂ ಪ್ರಸುಪ್ತ ಮಿವ ಸರ್ವತಃ ॥**

**ಇದಂ** - ಪರಿದೃಶ್ಯವಾದ ಜಗತ್ತು, ಮಹಾಪ್ರಳಯದಲ್ಲಿ **ತಮೋಭೂತ ಮಾಸೀತ್** - ತಮೋರೂಪಾವಸ್ಥೆಯುಳ್ಳದ್ದಾಗಿತ್ತು, ಅಚಿದಂಶವೂ ಸೂಕ್ಷ್ಮವಾಗಿ ಚಿತ್ತೊಂದಿಗೆ ನಾಮರೂಪಾನರ್ಹ ಸ್ಥಿತಿಯಲ್ಲಿರುವದಕ್ಕೆ ತಮಸ್ಸೆಂದು ಹೆಸರು; ಹೀಗೆ ರೂಪಾದಿಗಳಿಲ್ಲವಾದುದರಿಂದ **ಅಪ್ರಜ್ಞಾತಂ** - ಪ್ರತ್ಯಕ್ಷಪ್ರಮಾಣದಿಂದ ತಿಳಿಯಲು ಸಾಧ್ಯವಲ್ಲವು. ಅದು ಏಕೆ ಸಾಧ್ಯವಿಲ್ಲವೆಂದರೆ, **ಅಲಕ್ಷಣಂ** ಶಬ್ದಸ್ಪರ್ಶಾದಿಗಳಿಲ್ಲದ ಸ್ವರೂಪವನ್ನು ಹೊಂದಿತ್ತು. ಹಾಗಾದರೆ ಊಹಿಸಿ ತಿಳಿಯ

(೧) ಮನು. ೧. ೫. (೨) ಸುಬಾಲ. ೬. ೩೦.

**ಭಾ. ಶರೀರಮ್" (೩) "ಅವ್ಯಕ್ತ ಮಕ್ಷರೇ ಲೀಯತೇ, ಅಕ್ಷರಂ ತಮಸಿಲೀಯತೇ"(೪)**
**"ತಮ ಆಸೀ ತ್ತ ಮಸಾ ಗೂಢ ಮಗ್ರೇ ಪ್ರಕೇತಮ್" ಇತಿ ಚ ||೭||**

ಬಹುದೋ ? ಎಂದರೆ ಅದೂ ಸಾಧ್ಯವಲ್ಲವು, **ಅಪ್ರತರ್ಕ್ಯಂ** - ಅನುಮಾನಪ್ರಮಾಣದಿಂದಲೂ ತಿಳಿಯಲು ಸಾಧ್ಯವಿಲ್ಲವು. ಹಾಗೆ ಪ್ರತ್ಯಕ್ಷಾನುಮಾನಗಳಿಂದ ಜ್ಞೇಯವಲ್ಲದಿದ್ದರೆ, ಪರಮಾತ್ಮ ನೊಂದಿಗೆ ಸ್ವರೂಪೈಕ್ಯವನ್ನು ಹೊಂದಿತ್ತೋ ಎಂದರೆ ಹಾಗಲ್ಲವು, **ಅವಿಜ್ಞೇಯಂ** - ತಿಳಿಯಲ ಸಾಧ್ಯಸ್ಥಿತಿಯಲ್ಲಿತ್ತು, ನೀರು ಹಾಲಿನಲ್ಲಿ ಸೇರಿದಹಾಗೆ ಇತ್ತೆಂಬಭಾವವು. **ಶ್ರುತಿಯೂ ಮುಂದೆ ತಮೋ ಪರೇ ದೇವೇ ಏಕೀಭವತಿ** ಎಂದು ಹೇಳುತ್ತದೆ. ಏಕವಲ್ಲದೇ ಇದ್ದದು ಅದರೊಂ ದಿಗೆ ಏಕವಾಗಿದೆ ಎಂದರೆ ಅವರೊಂದಿಗೆ ಸೇರಿದೆ ಎಂಬುದೇ ಅರ್ಥವು. ಸ್ವರೂಪೈಕ್ಯವಲ್ಲವೆಂದು ಇನ್ನೂ ವಿಶದೀಕರಿಸುವದಕ್ಕಾಗಿ ಎಂದೂ, **ಪ್ರಸುಪ್ತಮಿವ ಸರ್ವತಃ**-ಸುಷುಪ್ತಿಯಲ್ಲಿ ಜೀವಾತ್ಮನು ಪರಮಾತ್ಮನಲ್ಲಿ ಏಕೀಭವಿಸಿರುವದರೋಪಾದಿಯಲ್ಲಿ, ಅಥವಾ ಹಿಂದಿನ ವಾಕ್ಯಗಳಿಂದ **ಅಚಿತ್ಪ್ರಳ** ಯವೂ, ಪ್ರಸುಪ್ತಂ ಎಂಬುದರಿಂದ ಚಿದಂಶಪ್ರಳಯವೂ ಹೇಳಲ್ಪಟ್ಟವೆಂದೂ ಗ್ರಹಿಸಬಹುದು.

**೨. ತತಸ್ಸ್ವಯಂಭೂ ರ್ಭಗವಾ ನವ್ಯಕ್ತೋ ವ್ಯಂಜಯನ್ನಿ ದಮ್ ।**
**ಮಹಾಭೂತಾದಿ ವೃತ್ತೌ ಜಾಃ ಪ್ರಾದುರಾಸೀ ತ್ತಮೋನುದಃ ॥**

**ತತಃ** - ಅನಂತರ ಸೃಷ್ಟಿಕಾಲವು ಪ್ರಾಪ್ತವಾದಾಗ, **ಭಗವಾನ್ ಸ್ವಯಂಭೂಃ** - ಹೇಯ ಪ್ರತ್ಯನೀಕನಾಗಿ ಷಾಡ್ಗುಣ್ಯ ಪರಿಪೂರ್ಣನಾದ ಶ್ರೀಮನ್ನಾರಾಯಣನು, **ಇದಂ ವ್ಯಂಜಯನ್**- ಈ ಜಗತ್ತನ್ನು ವ್ಯಷ್ಟಿರೂಪಕಾರ್ಯವಾಗಿ ಪ್ರದರ್ಶಿಸುವದಕ್ಕಾಗಿ, **ಮಹಾ ಭೂತಾದಿ ವೃತ್ತೌ ಜಾಃ** - ವ್ಯಷ್ಟಿ ಸೃಷ್ಟಿಗೆ ಕಾರಣಗಳಾದ ಪೃಥಿವ್ಯಾದಿಮಹಾಭೂತಗಳನ್ನು, ಇಲ್ಲಿ ಅದಿ ಪದದಿಂದ ಅವುಗಳಿಗೆ ಕಾರಣಗಳಾದ ಮಹದಹಂಕಾರಗಳು ಹೇಳಲ್ಪಟ್ಟವು ; ಅವುಗಳಲ್ಲಿ ಪ್ರವರ್ತಿಸಿದ ಸಙ್ಕಲ್ಪಜ್ಞಾನರೂಪತೇಜಸ್ಸುಳ್ಳವನಾಗಿ, ಅದಕ್ಕಾಗಿ **ತಮೋನುದಃ**-ತಮಸ್ಸನ್ನು ಎಂದರೆ ಚಿದಚಿತ್ತುಗಳನ್ನು ತನ್ನ ಸಙ್ಕಲ್ಪದಿಂದ ವಿಭಾಗವನ್ನು ಹೊಂದುವಹಾಗೆ ಪ್ರೇರಿಸಿದವನಾಗಿ, **ಅವ್ಯಕ್ತಃ ಪ್ರಾದುರಾಸೀತ್** - ಅವ್ಯಕ್ತಶರೀರಕನಾಗಿ ಎಂದರೆ ಚಿದಚಿಚ್ಛರೀರಕನಾಗಿ ಆವಿರ್ಭವಿಸಿದನು.

**೩. ಯೋ ಸಾ ವತೀಂದ್ರಿಯ ಗ್ರಾಹ್ಯ ಸ್ಸೂಕ್ಷ್ಮೋಽವ್ಯಕ್ತ ಸ್ಸನಾತನಃ ।**
**ಸರ್ವಭೂತಮಯೋ ಚಿನ್ತ್ಯ ಸ್ಸ ಏಷ ಸ್ಸ್ವಯ ಮುದ್ಬಭೌ ॥**

**ಯೋಽಸೌ**-ಯಾವ ಈ ಪರಮಾತ್ಮನು, **ಅತೀಂದ್ರಿಯ ಗ್ರಾಹ್ಯಃ**-ಇಂದ್ರಿಯಗಳಿಂದ ಗ್ರಹಿಸಲು ಸಾಧ್ಯವಿಲ್ಲದವನಾಗಿ ಎಂದರೆ ಶಾಸ್ತ್ರೈಕಗಮ್ಯನಾಗಿ, ಅತೀಂದ್ರಿಯಗ್ರಾಹ್ಯತ್ವವು ಗಗನ ಕುಸುಮಾದಿ ತುಚ್ಛವಾದವುಗಳಿಗೂ ವುಂಟು, ಹಾಗೋ ಎಂದರೆ, **ಸೂಕ್ಷ್ಮಃ** - ಸೂಕ್ಷ್ಮವಾಗಿ ಅವ್ಯಕ್ತ ಶರೀರಕನಾಗಿ, ಅವ್ಯಕ್ತದಿಂದ ಸೇರಿದನಂತರ ವಿಕಾರಹೊಂದುವನೋ ಎಂದರೆ, **ಸನಾತನಃ** - ಎಂದಿಗೂ ಸ್ವಭಾವ ವ್ಯತ್ಯಾಸವಿಲ್ಲದೇ ಇರುವವನಾಗಿ, **ಅಚಿನ್ತ್ಯಃ** - ಊಹಿಸಲಸಾಧ್ಯನಾದ, **ಸರ್ವಭೂತಮಯಃ** - ಸಮಸ್ತ ಭೂತಗಳಿಂದಲೂಯುಕ್ತನಾಗಿರುವ, ಪರಮಾತ್ಮನು ಯಾವನೋ, **ಸ್ಸ ಏಷಃ** - ಅಂತಹ ಪರಮಾತ್ಮನೇ, **ಸ್ವಯಂ** - ತಾನಾಗಿಯೇ, **ಉದ್ಬಭೌ** - ಆವಿರ್ಭವಿಸಿದನು, ಇಲ್ಲಿ **ಸ್ವಯಂ** ಎಂದಿರುವದರಿಂದ **ಸರ್ವೇಶ್ವರನೇ** ಕಾರಣವೂ ಕಾರ್ಯವೂ ಸಹ ಎಂದು **"ತದನನ್ಯತ್ವಂ"** ಎಂಬ ಬ್ರಹ್ಮಸೂತ್ರದ ಶಾಸ್ತ್ರಮರ್ಯಾದೆಯು ಉಪದೇಶಿಸಲ್ಪಟ್ಟಿತು

**೪. "ಸೋಽಭಿಧ್ಯಾಯ ಶರೀರಾತ್ಸ್ವಾತ್ ಸಿಸೃಕ್ಷು ರ್ವಿವಿಧಾಃ ಪ್ರಜಾಃ ।**
**ಅಪ ಏವ ಸಸರ್ಜಾದೌ ತಾಸುವೀರ್ಯ ಮಪಾಸೃಜತ್ ॥**

(೩) ಸುಬಾಲ. ೨ ಖಂ. (೪) ೨ ಅಷ್ಟ. ೮. ಪ್ರ. ೯ ಅನು.

ಒಂದೆ ಸಮಷ್ಟಿ ವ್ಯಷ್ಟಿ ಸೃಷ್ಟಿಗಳನ್ನು ಒಟ್ಟಿಗೆ ಹೇಳಿದವರಾಗಿ ಈ ಶ್ಲೋಕದಿಂದ ಸಮಷ್ಟಿ ಸೃಷ್ಟಿಯನ್ನು ಮಾತ್ರ ಪ್ರತ್ಯೇಕಿಸಿ ಹೇಳುತ್ತಾರೆ. **ಸಃ** ಆ ಪರಬ್ರಹ್ಮನು, **ಸ್ವಾತ್ ಶರೀರಾತ್** - ಸ್ವಕೀಯವಾದ ಶರೀರವಾದ **ತಮಸ್ಸು** ಅವ್ಯಕ್ತಾವಸ್ಥೆಯಲ್ಲಿದ್ದ ಚಿದಚಿನ್ಮಿಶ್ರದಿಂದ, **ವಿವಿಧಾಃ ಪ್ರಜಾಃ** - ವ್ಯಷ್ಟಿ ಸೃಷ್ಟಿರೂಪದಲ್ಲಿ ಅನೇಕ ಪ್ರಾಣಿಗಳನ್ನು, **ಸಿಸೃಕ್ಷುಃ** ಸೃಷ್ಟಿಸಲು ಅಪೇಕ್ಷಿಸಿದವನಾಗಿ, **ಅಭಿಧ್ಯಾಯ** - ಸಙ್ಕಲ್ಪಿಸಿ, **ಅಪ ಏವ ಸಸರ್ಜಾದೌ** - ಅಂಡೋತ್ಪತ್ತಿಗೆ ಕಾರಣಭೂತವಾದ ಸಮಸ್ತ ತತ್ವಗಳನ್ನೂ ಪ್ರಥಮತಃ ಸೃಷ್ಟಿಸಿದನು, ಅಂಡ ಸೃಷ್ಟಿಗೆ ಬೇಕಾದ ಪೃಥಿವಿಗೆ ಅಪ್ಪು ಕಾರಣವಾದುದರಿಂದ **ಅಪಏವ ಸಸರ್ಜ** - ಎಂದು ಹೇಳಲ್ಪಟ್ಟಿತು. **ತಾಸುವೀರ್ಯಮಪಾಸೃಜತ್, ತಾಸು** - ಆ ತ್ರಿವೃತ್ಕರಣವಿಲ್ಲದ ಅಪ್ಪುಗಳಲ್ಲಿ, **ವೀರ್ಯಂ** - ತ್ರಿವೃತ್ಕರಣದಿಂದ ಹುಟ್ಟಿದ ಅಂಡೋತ್ಪಾದನ ಶಕ್ತಿಯನ್ನು, **ಅಪಾಸೃಜತ್** - ಉಂಟುಮಾಡಿದನು.

**೫. ತದಂಡ ಮಭವದ್ಧೈಮಂ ಸಹಸ್ರಾಂಶುಸಮಪ್ರಭಂ ।**
**ತಸ್ಮಿಞ್ಜಜ್ಞೇ ಸ್ವಯಂಬ್ರಹ್ಮಾ ಸರ್ವ ಲೋಕಪಿತಾಮಹಃ ॥**

ಹಿಂದಿನ ಶ್ಲೋಕದಲ್ಲಿ ಸಮಷ್ಟಿ ಸೃಷ್ಟಿಯನ್ನು ಹೇಳಿ, ಈ ಶ್ಲೋಕದಿಂದ ವ್ಯಷ್ಟಿ ಸೃಷ್ಟಿಯನ್ನು ಹೇಳುತ್ತಾರೆ.—**ತತ್** - ಆ ಪೃಥಿವೀ ಮೊದಲಾದ, ಅಂಡಕ್ಕೆ ಕಾರಣಭೂತವಾದ ತತ್ವವೇ, **ಸಹಸ್ರಾಂಶು** ಸಮಪ್ರಭೆಯುಳ್ಳ, **ಹೈಮಂ** - ಸುವರ್ಣ ಸದೃಶವಾದ ಕಾಂತಿಯುಳ್ಳ, **ಅಂಡಮಭವತ್** - ಅಂಡವಾಯಿತು. **ತಸ್ಮಿನ್** - ಆ ಅಂಡದಲ್ಲಿ, ಸರ್ವಲೋಕಕ್ಕೂ ಪಿತಾಮಹನಾದ ಅದು ಹೇಗೆಂದರೆ ದೇವ ಮನುಷ್ಯಾದಿಗಳಿಗೆ ತಂದೆಗಳು ದಕ್ಷಾದಿಗಳು, ಅವರುಗಳಿಗೆಲ್ಲಾ ತಂದೆಯಾಗಿ ಚತುರ್ಮುಖನು ಎಂಬ ಭಾವವು; ಚತುರ್ಮುಖನಾಗಿ, **ಸ್ವಯಂ** - ತಾನೇ, **ಜಜ್ಞೇ** ಹುಟ್ಟಿದನು. ಅದು ಹೇಗೆಂದರೆ ತಾನೇ ಚತುರ್ಮುಖ ಶರೀರಕನಾಗಿ ಹುಟ್ಟಿದನು ಎಂಬ ಭಾವವು. ಮುಂದೆ ನಾರಾಯಣ ಶಬ್ದವಾಚ್ಯವೇ ಪರಬ್ರಹ್ಮನೆಂದು ಹೇಳಲ್ಪಡುತ್ತದೆ.

ಹೀಗೆ ಸಮಷ್ಟಿ ವ್ಯಷ್ಟಿ ಸೃಷ್ಟಿಗಳು ಈ ಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟಿರುವದರಿಂದ, **ಯಥಾಹಮನುಃ** ಎಂದು ಹೇಳಿ ಈ ಶ್ಲೋಕಗಳನ್ನು ಉದಾಹರಿಸಿದರು. ಈ ಶ್ಲೋಕಗಳಿಗೆ ಆಧಾರವು ಸುಬಾಲೋಪನಿಷತ್ತು; ಆದುದರಿಂದ ಮುಂದೆ **"ಶ್ರುತಿರಪಿ"** ಎಂದು ಹೇಳಿ, ಆ ವಾಕ್ಯಗಳನ್ನು ಉದಾಹರಿಸುತ್ತಾರೆ. **"ಯಸ್ಯ ಅವ್ಯಕ್ತಂ ಶರೀರಂ"** "ಯಾವ ಸೃಷ್ಟ್ಯುನ್ಮುಖನಾದ ಪರಮಾತ್ಮನಿಗೆ ಅವ್ಯಕ್ತವೆಂದು ಹೇಳಿಸಿಕೊಳ್ಳುವ ಅಚಿತ್ಸಂಸೃಷ್ಟವಾದ ಚಿತ್ತು, ಇನ್ನೂ ನಾಮರೂಪ ವಿಭಾಗಾನರ್ಹದಶೆಯಲ್ಲಿರುವಂತಾದ್ದು ಶರೀರವೋ" **"ಅವ್ಯಕ್ತಮಕ್ಷರೇ ಲೀಯತೇ"** ಈ ಅವ್ಯಕ್ತವು ಅಕ್ಷರಶಬ್ದ ವಾಚ್ಯವಾದುದರಲ್ಲಿ ಲಯವನ್ನು ಹೊಂದುತ್ತದೆ, **"ಅಕ್ಷರಂ ತಮಸಿ ಲೀಯತೇ"** "ಹಾಗೆಯೇ ಅಕ್ಷರವೂ ಬಹು ಸೂಕ್ಷ್ಮವಾದ ತಮಸ್ಸಿನಲ್ಲಿ ಅಡಗುತ್ತದೆ" **ಇತ್ಯಾದಿಕಾಃ** - ಎಂಬಿವೇ ಮೊದಲಾದ ಪ್ರಮಾಣಗಳು. **"ತಮ ಆಸೀತ್ತ ಮಸಾ ಗೂಢ ಮಗ್ರೇ ಪ್ರಕೇತಮ್"** ಅಚಿತ್ಸಂಸೃಷ್ಟ ಚಿತ್ತು ತಮಶ್ಶಬ್ದ ವಾಚ್ಯವಾಗಿದ್ದುಕೊಂಡಿತ್ತು, ಅಂತಹ ತಮಸ್ಸಿನೊಂದಿಗೆ, **ಅಗ್ರೇ** - ಸೃಷ್ಟಿಗೆಮೊದಲು ಪ್ರಳಯಾವಸ್ಥೆಯಲ್ಲಿ, **ಗೂಢಂ ಪ್ರಕೇತಮ್** - ಅತಿಸೂಕ್ಷ್ಮವಾಗಿ ನಾಮರೂಪಕ್ಕೆ ಅನರ್ಹವಾದ ವಿಭಾಗವಿಲ್ಲದಿರುವ ಪರಬ್ರಹ್ಮವಾಗಿ ಎಂಬರ್ಥವು. ಈಗ ಅಚಿತ್ಪರಿಣಾಮದಲ್ಲಿ ಪೃಥಿವೀತ್ವ ಬಿಟ್ಟು ಅಪ್ಪಿನ ಅವಸ್ಥೆಯನ್ನು ಹೊಂದುತ್ತವೆ. ಹೀಗೆ ಪೂರ್ವಾವಸ್ಥೆಯಾದ ಕಾರ್ಯಾವಸ್ಥೆಯನ್ನು ಬಿಟ್ಟು ಅವಕ್ಕೆ ಕಾರಣರೂಪವಾದ ಅವಸ್ಥೆಯಲ್ಲಿ ಲಯಹೊಂದಿ, ಹೀಗೆಯೇ ಅವ್ಯಕ್ತ, ಅಕ್ಷರ, ತಮಸ್ಸು ಅವಸ್ಥೆಗಳು ಕ್ರಮವಾಗಿ ಉಂಟಾಗುತ್ತವೆ ಎಂದು ಹೇಳಿದಂತಾಯಿತು. ಹಾಗೆ ತಮಸ್ಸೂ ಪರಮಾತ್ಮನಲ್ಲಿ ಲಯಹೊಂದುತ್ತದೆಂದು ಶ್ರುತಿಯು **"ತಮಃ ಪರೇ ಲೀಯತೇ"** ಎಂಬಲ್ಲಿ ಹೇಳಿದ್ದರೆ ಸುಲಭವಾಗಿ ಸ್ವರೂಪೈಕ್ಯವನ್ನು ಹೇಳಬಹು

ದಾಗಿತ್ತು ; ಹಾಗೆ ಹೇಳದೆ ಶ್ರುತಿಯು ಭ್ರಮನಿವಾರಣಕ್ಕಾಗಿ, ಒದಲಾಯಿಸಿ, **ತಮೋ ಪರೇ ದೇವೇ ಏಕೀಭವತಿ** ಎಂದು ಹೇಳಿರುವವರಿಂದ ಸ್ವರೂಪೈಕ್ಯವನ್ನು ಹೇಳಲು ಸಾಧ್ಯವೇ ಇಲ್ಲ ವಾಯಿತು. ಆ ಅಭಿಪ್ರಾಯವನ್ನೇ **ತಮ ಆಸೀತ್, ತಮಸಾ ಗೂಢ ಮಗ್ರೇ ಪ್ರಕೇತಮ್**-ತಮಸ್ಸು ಪ್ರಳಯದಲ್ಲೂ ಮತ್ತು ಸೃಷ್ಟಿಗೆ ಮುಂದೆಯೂ ಇತ್ತು ; ಪರಬ್ರಹ್ಮವು ಅತಿಸೂಕ್ಷ್ಮ ವಾಗಿದ್ದ ಅದರೊಂದಿಗೆ ಸೇರಿಕೊಂಡು ಇದ್ದನು ಎಂದು ಹೇಳಿತು. ಆದರೆ ಮೊದಲು ತಮಶ್ಶರೀರಕನಾಗಿಯೇ ಇದ್ದನು, ಈಗಲೂ ತಮಶ್ಶರೀರಕನಾಗಿಯೇ ಇದ್ದಾನೆ. ಹಾಗಾದರೆ ಈ ಪ್ರಳಯದಲ್ಲಿ ಏನನ್ನು ಹೇಳಿದಂತಾಯಿತು ಎಂದು ಪ್ರಶ್ನಿಸಿದರೆ, ಮೊದಲು ತಮಸ್ಸಾಗಿದ್ದುದು ಇನ್ನೂ ಅತಿಸೂಕ್ಷ್ಮಾವಸ್ಥೆಯನ್ನು ಹೊಂದಿತು ಎಂದು ಶ್ರುತಿಯು ತಿಳಿಸುತ್ತದೆ. ಪ್ರಳಯದಲ್ಲಿ ಪರಮಾತ್ಮನೊಂದಿಗೆ ಸೇರುವದಕ್ಕಿಂತ ಮುಂದೆ ಬೇರೆಯಾಗಿತ್ತು, ಈಗ ಒಟ್ಟಿಗೆ ಸೇರಿತು ಎಂಬರ್ಥ ವಲ್ಲವು. ಯಾವಾಗಲೂ ಒಟ್ಟಿಗೇನೇ ಇರುವಂಥಾದ್ದು ; ಯಾವಾಗಲೂ ಆತನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವೇ ; ಈಗ ಪ್ರಳಯದಶೆಯಲ್ಲಾದುದೇನು ಎಂದರೆ ಅತ್ಯಂತ ಸೂಕ್ಷ್ಮತಾಪತ್ತಿಯು ಎಂದು ತಿಳಿಯತಕ್ಕದ್ದು. ಈ ಭಾವವು ಈ ಶ್ರುತಿಯಿಂದ, **ತಮಸಾ ಗೂಢ ಮಗ್ರೇ ಪ್ರಕೇತಂ** ಎಂಬುದರಿಂದ ಸುವ್ಯಕ್ತವು. ಹೀಗೆ ಅತ್ಯಂತ ಸೂಕ್ಷ್ಮದಶೆಯನ್ನು ಹೊಂದುವದಕ್ಕೆ ಶಾಸ್ತ್ರದಲ್ಲಿ ಅವಿಭಾಗವೆಂದು ಹೆಸರು ; ಪುನಃ ಸೃಷ್ಟಿಕಾಲದಲ್ಲಿ **ವಿಭಾಗವೆಂದರೆ** ಸ್ಥೂಲದಶೆಯನ್ನು ಹೊಂದುವಿಕೆ ಎಂಬರ್ಥವು.

ಈ ಪ್ರಾಕೃತಿಕ ಪ್ರಳಯವೂ, ಪುನಃ ಸಮಷ್ಟಿ ವ್ಯಷ್ಟಿ ಸೃಷ್ಟಿಗಳೂ, ಇವೆಲ್ಲವೂ ಹೇಗೆ ನಡೆಸುತ್ತೇನೆಂದರೆ, ಸಙ್ಕಲ್ಪಮಾತ್ರದಿಂದಲೇ ನಡೆಸುತ್ತೇನೆ ಎಂದು ಹೇಳುವವೇ ಮುಖ್ಯವಾದುದು. ಅದನ್ನೆ ಈ ಶ್ಲೋಕದಲ್ಲಿ **ಪಶ್ಯಮೇ ಯೋಗಮೈಶ್ವರಂ** ಎಂದು ಹಿಂದೆ ಹೇಳಿದುದನ್ನೇ ವಿಸ್ತರಿಸಿ ಹೇಳಿರುತ್ತಾರೆ. ಶ್ರೀ ಪರಾಶರರೂ ಈ ಅಭಿಪ್ರಾಯವನ್ನೇ ಸಮರ್ಥಿಸಿ ಹೇಳಿರುತ್ತಾರೆ. ಹೇಗೆಂದರೆ **"ಮನಸ್ಯೆವ ಜಗತ್ಸೃಷ್ಟಿಂ ಸಂಹಾರಂಚ ಕರೋತಿ ಯಃ। ತಸ್ಯಾರಿ ಪಕ್ಷಕ್ಷಪಣೇ ಕಿಯಾ ನುದ್ಯಮವಿಸ್ತರಃ"** (ವಿ. ಪು. ೫. ೨೨. ೫೫) ಸಙ್ಕಲ್ಪರೂಪ ಮನಸ್ಸಿನಿಂದಲೇ ಸೃಷ್ಟಿಸಂಹಾರಗಳನ್ನು ನಡೆಸುವವನಿಗೆ ಶತ್ರುಪಕ್ಷ ವಿನಾಶಕ್ಕಾಗಿ ವಿಸ್ತಾರವಾಗಿ ಮಹತ್ಪ್ರಯತ್ನ ಬೇಕೇ ಎಂ. ತಾತ್ಪರ್ಯವು. ಇಲ್ಲಿ ಕೌನ್ತೇಯ ಎಂಬ ಸಂಬೋಧನೆಯು ಸಾಭಿಪ್ರಾಯವುಳ್ಳದಾಗಿರುತ್ತದೆ. ನೀನು ಕುಂತೀಪುತ್ರನಾಗಿರುವದನ್ನು ಆಪ್ತವಾಕ್ಯದಿಂದ ಹೇಗೆ ತಿಳಿದು ನಂಬಿರುವೆಯೋ, ಹಾಗೆಯೇ ಈ ವಿಶ್ವವೆಲ್ಲಾ ನನ್ನ ಗರ್ಭದಲ್ಲಿದ್ದುದು ನನ್ನಿಂದಲೇ ಸೃಷ್ಟಿಕಾಲದಲ್ಲಿ ಉತ್ಪನ್ನವಾದವೆಂಬುದನ್ನು ನಿನಗೆ ಪರಮಾಪ್ತವಾದ ನನ್ನ ವಾಕ್ಯದಿಂದಲೇ ನಿಸ್ಸಂಶಯವಾಗಿ ನಂಬತಕ್ಕದ್ದಾಗಿರುತ್ತದೆಂಬ ಭಾವವು ತೋರಿಬರುತ್ತದೆ. ಆದರೆ ಈ ಉಪದೇಶವು ಶ್ರೋತೃಗಳಲ್ಲಿ ನಂಬಿಕೆಯು ಕಮ್ಮಿಯಾಗಿದ್ದ ಪಕ್ಷದಲ್ಲಿ, ಮನುವಿನ ವಾಕ್ಯವು ಪರಮಭೇಷಜವೆಂಬ ಶಾಸ್ತ್ರದಲ್ಲಿನ ಪ್ರತೀತಿಯೇ ಇರುವದರಿಂದ ಆ ವಾಕ್ಯಗಳನ್ನು ಉದಾಹರಿಸಿ ಅವರೂ ಕೂಡ ಶ್ರುತಿ ಪ್ರತಿಪನ್ನವಾಕ್ಯಗಳನ್ನೇ ಹೇಳಿರುತ್ತಾರೆಂದು ಸುಬಾಲೋಪನಿಷದ್ವಾಕ್ಯಗಳನ್ನು ಉದಾಹರಿಸುತ್ತಾರೆ. ಆ ಶ್ಲೋಕಗಳಲ್ಲಿ ಉಪಪಾದಿತವಾಗಿರುವದೇನೆಂದರೆ.— (೧) ಪರತತ್ತ್ವವು ಶ್ರೀಮನ್ನಾರಾಯಣನೇ ಎಂದೂ (೨) ಆತನೇ ಸಮಸ್ತಕ್ಕೂ, ಅಂಡಸೃಷ್ಟಿವರಿಗಿನ ಸಮಷ್ಟಿ ಸೃಷ್ಟಿಗೂ ಮತ್ತು ಚತುರ್ಮುಖನ ಮೂಲಕ ನಡೆಯುವ ಸರ್ವವಿಧ ವ್ಯಷ್ಟಿಸೃಷ್ಟಿಗೂ ಸಹ ಕಾರಣನೂ ಎಂದೂ, (೩) ಇವುಗಳನ್ನೆಲ್ಲಾ ತನ್ನ ಸಙ್ಕಲ್ಪದಿಂದಲೇ ನಡೆಸುವನೆಂದೂ, (೪) ನಾನಾವಿಧವಾದ ವ್ಯಷ್ಟಿಸೃಷ್ಟಿ ಲಯಗಳನ್ನೂ ಚತುರ್ಮುಖ ರುದ್ರಶರೀರಕನಾಗಿ ನಡೆಸುವನೆಂದೂ ಹೇಳಲ್ಪಟ್ಟಿತು.

**ಮೂ. ಪ್ರಕೃತಿಂ ಸ್ವಾ ಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮ ಮಿಮಂ ಕೃತ್ಸ್ನ ಮವಶಂ ಪ್ರಕೃತೇ ರ್ವಶಾತ್ ॥ ೮.**

**ಮೂಲಕ್ಕೆ ಅರ್ಥವು :—** ಸಙ್ಕಲ್ಪಮಾತ್ರದಿಂದಲೇ ಸೃಷ್ಟಿಸುವೆನೆಂದು ಉಪಾಸ್ಯ ಮಾಹಾತ್ಮ್ಯೆಯು ಪ್ರದರ್ಶಿಸಲ್ಪಟ್ಟಿತು. ಸೃಷ್ಟಿಯೇನೋ ವಿವಿಧ ವಿಚಿತ್ರ ಸೃಷ್ಟಿಯು. ಈ ಸೃಷ್ಟಿ ಪ್ರಕಾರದಲ್ಲಿ ಮನಬಂದಂತೆ ಸೃಷ್ಟಿಯೇ ? ಇಲ್ಲವೇ ಏನಾದರೂ ಒಂದು ನಿಯಮ ಉಂಟೋ ? ಎಂಬ ಪ್ರಶ್ನೆಗೆ ಉತ್ತರವು ಇಲ್ಲಿ ಹೇಳಲ್ಪಡುತ್ತದೆ. ಅಥವಾ ಸೃಷ್ಟಿತಾನೇ ಏಕೆ ? ಅದೇನು ಕೇವಲ ತನಗಾಗಿಮಾತ್ರ ಲೀಲೆಯೋ ಅಥವಾ ಚೇತನರ ಪ್ರಯೋಜನಕ್ಕಾಗಿಯೂ ಸೃಷ್ಟಿಯೇ ? ಎಂಬುವದಕ್ಕೂ ಉತ್ತರವನ್ನೂ ದಯಪಾಲಿಸುತ್ತಾರೆ. **ಸ್ವಾಂ** - ಸ್ವಕೀಯವಾದ ಎಂದರೆ ನನ್ನ ಶರೀರವಾದ, **ಪ್ರಕೃತಿಂ** - ಜಡಪ್ರಕೃತಿಯನ್ನು, **ಅವಷ್ಟಭ್ಯ** - ಸೃಷ್ಟಿಗೆ ಅಧಿಷ್ಠಾನವಾಗಿ ಮಾಡಿಕೊಂಡು, ಎಂದರೆ ಭೋಕ್ತೃಗಳಾದ ಜೀವಾತ್ಮವರ್ಗದ ಸಂಬಂಧವನ್ನು ಅದಕ್ಕುಂಟುಮಾಡಿ ಅವುಗಳಿಗೆ ಅಂತರಾತ್ಮಾವಾಗಿ, **ಇಮಂ ಕೃತ್ಸ್ನಂ** - ಈ ಸಮಸ್ತವಾದ ಎಂದರೆ ದೇವ ಮನುಷ್ಯ ತಿರ್ಯಕ್ಸ್ಥಾವರ ರೂಪವಾದ ಸಮಸ್ತಗಳಾದ, **ಭೂತಗ್ರಾಮ** - ಶರೀರಹೊಂದಿದ ಪ್ರಾಣಿವರ್ಗವನ್ನು, **ಪುನಃ ಪುನಃ** ಕಲ್ಪಾಂತದಲ್ಲಿ ಮೊದಲುಗೊಂಡು, ಪುನಃ ಪುನಃ, **ವಿಸೃಜಾಮಿ** - ವಿವಿಧ ವಿಚಿತ್ರಗಳಾದ ಜನ್ಮಗಳನ್ನು ಹೊಂದುವಹಾಗೆ ಮಾಡುವೆನು ; ಹಾಗೆ ಮಾಡಲು ಕಾರಣವೇನೆಂದರೆ, ಈ ಭೂತಗ್ರಾಮವು **ಪ್ರಕೃತೇರ್ವಶಾತ್** - ಪ್ರಕೃತಿಗೆ ಎಂದರೆ ತನ್ಮೂಲಕ ಸಂಚಿತ ಕರ್ಮಕ್ಕೆ ವಶವಾಗಿರುವವರಿಂದ, **ಅವಶಂ** - ಅಸ್ವತಂತ್ರವಾದುದು. ಆದುದರಿಂದ ಅವರುಗಳ ಕರ್ಮಾನುಗುಣವಾಗಿ ಕಲ್ಪಾದಿಯಲ್ಲಿ ಸೃಷ್ಟಿಸುವೆನು. ಸೃಷ್ಟಿಗೆ ಮೊದಲೇ ಕಲ್ಪಾದಿಯಲ್ಲಿ ಕರ್ಮವೆಲ್ಲಿತ್ತು ? ಎಂದು ಪ್ರಶ್ನಿಸಿದರೆ, ಪ್ರಳಯಕ್ಕೆ ಮುಂಚೆಯಿದ್ದ ಸಂಚಿತ ಕರ್ಮಾನುಗುಣವಾಗಿ ಜೀವಾತ್ಮರುಗಳಿಗೆ ವ್ಯಷ್ಟಿ ಸೃಷ್ಟಿಯಲ್ಲಿ ಕರಣ ಕಳೇಬರಯೋಗವೆಂದು ತಿಳಿಯತಕ್ಕದ್ದು. ಇಂತಹ ಅನೇಕ ಪ್ರಾಕೃತಿಕ ಪ್ರಳಯಗಳು. ಇದಕ್ಕೆ ಹಿಂದೆಯೂ ಕಳೆದುಹೋಗಿರುವದರಿಂದ ಪ್ರಾರಬ್ಧವು ಉಂಟೇ ಉಂಟೆಂಬ ಭಾವವು, **ಪ್ರಕೃತೇ ರ್ವಶಾತ್** ಎಂಬಲ್ಲಿನ **ವಶ** ಶಬ್ದದಿಂದ ಅಸ್ವಂತ್ರವು ಹೇಳಲ್ಪಟ್ಟು, **ಅವಶ** ಶಬ್ದಕ್ಕೂ ಅಸ್ವತಂತ್ರವೆಂಬರ್ಥವನ್ನು ಹೇಳಿ **ವಶ ಅವಶ** ಶಬ್ದಗಳಿಗೂ ಏಕಾರ್ಥವೇ ಎಂಬೀ ಆಕ್ಷೇಪವನ್ನು ತಂದರೆ ಆಗ ಹೇಗೆ ಅನ್ವಯಿಸಬಹುದು ಎಂದರೆ **ಇಮಂ ಕೃತ್ಸ್ನಂ ಭೂತಗ್ರಾಮ ವಿಸೃಜಾಮಿ** - ಈ ಸಮಸ್ತ ಚೇತನವರ್ಗವನ್ನೂ, **ಪ್ರಕೃತಿಂ ಸ್ವಾಂ ಅವಷ್ಟಭ್ಯ ವಿಸೃಜಾಮಿ** - ಕರಣಕಳೇಬರಗಳನ್ನು ಕೊಟ್ಟು ವಿಧವಿಧವಾಗಿ ವಿಚಿತ್ರವಾಗಿ ಸೃಷ್ಟಿಸುತ್ತೇನೆ. ಹೀಗೆ ಸೃಷ್ಟಿಸಲು ಕಾರಣವೇನೆಂದರೆ ಆ ಭೂತಗ್ರಾಮವು, **ಪ್ರಕೃತೇರ್ವಶಾತ್** - ಪೂರ್ವಾರ್ಜಿತ ಕರ್ಮಗಳ ಮೂಲಕ ಪ್ರಕೃತಿಗೆ ವಶವಾಗಿರುವವರಿಂದ ; ಸೃಷ್ಟಿಯು **"ಲೀಲಾಜಗತ್ಪತೇ ಸ್ತಸ್ಯ ಛಂಧತ ಸ್ಸಂಪ್ರವರ್ತತೇ" "ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈ ರಿವ"** (ಭಾರ. ಸಭಾ.) **"ಕ್ರೀಡಾ ಹರೇ ರಿದಂ ಸರ್ವಂ"** (ಭಾರ. ಶಾಂತಿ) **"ಕ್ರೀಡತೋ ಬಾಲಕಸ್ಯೇವ ಚೇಷ್ಟಾಂತಸ್ಯ ನಿಶಾಮಯ"** (ವಿ. ಪು. ೧. ೨. ೧೮) ಇತ್ಯಾದ್ಯನೇಕಪ್ರಮಾಣಗಳಲ್ಲಿ ತೋರಿಬರುವಹಾಗೆ ಲೀಲೆ ಮಾತ್ರವೇ ಅಲ್ಲದೆ ಸರ್ವೇಶ್ವರನ **ನಿರ್ಹೇತುಕ** ಕೃಪೆಯೂ ಹೇತುವೆಂದು ಇದರಿಂದ ನಿರೂಪಿಸಿದಂತಾಯಿತು. ಈ ಭೂತಗ್ರಾಮವೆಲ್ಲಾ ಹೀಗೆ ಕರ್ಮಬದ್ಧರಾಗಿ ಪ್ರಳಯದಲ್ಲಿ ಸಿಕ್ಕಿಹೋದರಲ್ಲಾ, ಇವರಿಗೆ ಕರಣಕಳೇಬರಯೋಗವನ್ನುಂಟು ಮಾಡಿದರೆ, ಅವರಲ್ಲಿ ಕೆಲವರಾದರೂ ಉಪಾಯಾನುಷ್ಠಾನವನ್ನು ಮಾಡಿ ದಿವ್ಯ ವೈಕುಂಠವನ್ನು ಸೇರಲಿ ಎಂಬ ಕೃಪೌದಾರ್ಯಗಳಿಂದ ಪ್ರೇರಿತನಾಗಿ ಸೃಷ್ಟಿಮಾಡುತ್ತಾನೆಂಬುದು **ಈ ಪ್ರಕೃತೇರ್ವಶಾತ್ ಎಂಬ ಪರಿತಾಪ ಸೂಚಕ ಹೇತುವಿನಿಂದ ವ್ಯಕ್ತವು.** ಆಗ **ಅವಶಂ** ಎಂಬ ಪದವನ್ನು

ಕ್ರಿಯಾವಿಶೇಷಣಮಾಡಿ, **ಅವಶಂ ಯಥಾ ತಥಾ ವಿಸೃಜಾಮಿ** - ನಾನು ಮಾತ್ರ ಅದಕ್ಕೆಲ್ಲಾ ವಶನಾಗದೆ ಸ್ವತಂತ್ರನೇ ಸೃಷ್ಟಿಸುವೆನು ಎಂಬರ್ಥವು. ನಾನು ಹೀಗೆ ಕ್ರಮಬದ್ಧನಲ್ಲವು; ಆದುದರಿಂದ ಸ್ವತಂತ್ರನಿ ಸೃಷ್ಟಿಸುವೆನು. ಆದರೆ ಮನಬಂದಂತೆ ಸೃಷ್ಟಿಯೋ ? ಎಂದರೆ ನಾನು ಸ್ವತಂತ್ರನೆಂದು ಮನಬಂದಹಾಗೆ ಸೃಷ್ಟಿಸುವದಿಲ್ಲವು. ಅವರವರುಗಳ ಕರ್ಮಾನುಸಾರ ಶರೀರೇಂದ್ರಿಯಾದಿಗಳನ್ನೂ ಪ್ರವೃತ್ತಿಗಳನ್ನೂ ಉಂಟುಮಾಡುವದರಿಂದ ನಾನು ವೈಷಮ್ಯ ನೈರ್ಘೃಣ್ಯರೂಪ ನಿಂದೆಗೆ ಸಿಕ್ಕುವನಲ್ಲವು. ಹೀಗೆ **ಅವಶಂ ಯಥಾ ತಥಾ** ಸೃಷ್ಟಿಸುವೆನು ಎಂಬ ತಾತ್ಪರ್ಯವು. ಜೀವಾತ್ಮರಾದರೋ ಕರ್ಮಕ್ಕೆ ಅಧೀನರು, ನಾನಾದರೋ ಯಾವಯಾವುದಕ್ಕೂ ಯಾರಿಗೂ ಅಧೀನನಲ್ಲವು. ಸ್ವತಂತ್ರನಾಗಿಯೇ ಈ ಜೀವ ಸಮೂಹದ ಉದ್ಧಾರಕ್ಕಾಗಿಯೇ ನಾನು ಅವರವರ ಕರ್ಮಾನುಗುಣವಾಗಿ ಸೃಷ್ಟಿಸುವೆನು. ಆಗ **ಪುನಃ ಪುನಃ** ಎಂಬುದು ಬಾಧಿಸುವದಿಲ್ಲವೋ ? ಎಂದರೆ **ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್** - ನನ್ನನ್ನು ಆಶ್ರಯಿಸಿ ಸದ್ಗತಿಹೊಂದಲಿ ಎಂದೇ **ಪುನಃ ಪುನಃವಿಸೃಜಾಮಿ** ಎಂದು ಹೇಳಬಹುದು. **"ಅಚಿದವಿಶಿಷ್ಟಾನ್ ಪ್ರಳಯೇ ಜಂತೂ ನವಲೋಕ್ಯ ಜಾತನಿರ್ವೇದಾ। ಕರಣಕಳೇಬರ ಯೋಗಂ ವಿತರಸಿ ವೃಷಶೈಲನಾಥ ಕರುಣೇ ತ್ವಮ್"** (ದಯಾ ಶತಕ ೧೬) ಎಂಬ ಶ್ರೀ ನಿಗಮಾಂತ ದೇಶಿಕೋಕ್ತಿಯು ಇಲ್ಲಿ ಅನುಸಂಧೇಯವು. ಸೃಷ್ಟಿಕ್ರಮವು ಲೀಲಾ ಮತ್ತು ದಯೆಗಳಿಂದ ಪ್ರೇರಿತನಾದ ಮಹಾನುಭಾವನ ಸುಸಙ್ಕಲ್ಪಾಯತ್ತವಾದುದೆಂದು ತಿಳಿಯತಕ್ಕದ್ದು. ಸೃಷ್ಟಿಗೆ ಪೂರ್ವವೂ ಚೇತನವರ್ಗವು ನಾಮರೂಪಾನರ್ಹ ಸ್ಥಿತಿಯಲ್ಲಿದ್ದರೂ ಪೂರ್ವಕಲ್ಪಕೃತ ಪುಣ್ಯಪಾಪಗಳು ಇದ್ದವೆಂದೂ ತದನುಗುಣವಾಗಿ ಸೃಷ್ಟಿ ಎಂಬುದೂ, ಮುಂದಿನ ಶ್ಲೋಕದಲ್ಲಿ ಚನ್ನಾಗಿ ಉಪಪಾದಿತವು. **ವಿಸೃಜಾಮಿ** ಎಂಬಲ್ಲಿ ತೋರುವ **ವಿಷಮ** ಸೃಷ್ಟಿಗೆ ಕರ್ಮವಶವಾದ ಭೂತಗ್ರಾಮದ ಕರ್ಮತಾರತಮ್ಯವೇ ಕಾರಣವೆಂಬುದೂ ಸಹ ಸೂಚಿತವು. ತಾನು ಸ್ವತಂತ್ರನಾಗಿ ಸಙ್ಕಲ್ಪಾನುಸಾರ ಸೃಷ್ಟಿಮಾಡಿದರೂ ಸಿಕ್ಕಿದಹಾಗೆಮಾಡಿ ದೋಷಕ್ಕೆ ಗುರಿಯಾಗುವದಿಲ್ಲವೆಂಬ **ಭಾವವೂ** ಕೂಡ **ಕರ್ಮವಶಾತ್** ಎಂಬುದರಿಂದ ಸೂಚಿತವು. ಇದೇ ಮುಂದೆ ವಿಸ್ತರಿಸಲ್ಪಡುತ್ತದೆ.

**ಭಾಷ್ಯಾರ್ಥವು :—** ಈ ಶ್ಲೋಕವು ಮಾಂತ್ರಿಕೋಪನಿಷತ್ತಿನಲ್ಲಿ ಹೇಳಿರುವದರ ಉಪಪಾದನೆಯೆಂದು ಭಾವಿಸಿದವರಾಗಿ ತದನುಗುಣವಾಗಿ ಸೃಷ್ಟಿಪ್ರಕಾರವು ಪ್ರದರ್ಶಿಸಲ್ಪಡುವದೆಂಬ ಅಭಿಪ್ರಾಯದಿಂದ ವ್ಯಾಖ್ಯಾನಮಾಡಿರುತ್ತಾರೆ. ಅಲ್ಲಿ ಹೇಳಿರುವದೇನೆಂದರೆ **"ವಿಕಾರ ಜನನೀಮಜ್ಞಾ ಮಷ್ಟರೂಪಾ ಮಜಾಂ ಧ್ರುವಾಂ। ಧ್ಯಾಯತೇಽಧ್ಯಾಸಿತಾ ತೇನ ತನ್ಯತೇ ಪ್ರೇರ್ಯತೇ ಪುನಃ। ಸೂಯತೇ ಪುರುಷಾರ್ಥಂಚ ತೇನೈವಾ ಧಿಷ್ಠಿತಾ ಜಗತ್। ಗೌರನಾದ್ಯನ್ತವತೀ ಸಾ ಜನಿತ್ರೀ ಭೂತಭಾವಿನೀ"** ಇದರಿಂದ ಪ್ರಕೃತಿಯ ಪರಿಣಾಮಾದಿ ಸ್ವಭಾವಗಳು ಹೇಳಲ್ಪಟ್ಟವು. ಈ ಪ್ರಕೃತಿಯು ವಿಕಾರವೆಂದರೆ ಪರಿಣಾಮವನ್ನುಂಟು **ಮಾಡುವಂತಾದ್ದು.** **ಅಜ್ಞಾ** - ಜಡವು, ಅಷ್ಟರೂಪವೆಂಬುದರಿಂದ ಹಿಂದೆ ಹೇಳಿದ, **"ಭೂಮಿರಾಪೋಽನಿಲ"** (ಗೀ. ೭. ೭.) ಎಂಬ ಶ್ಲೋಕದಲ್ಲಿ ಹೇಳಿದ ಎಂಟುವಿಧ ವಿಕಾರಾವಸ್ಥೆಗಳು ಹೇಳಲ್ಪಟ್ಟವು, **ತೇನ ಧ್ಯಾಯತೇ** ಎಂಬುದರಿಂದ ಅಧಿಷ್ಠಾನವೆಂದೂ, **ತನ್ಯತೇ** ಎಂಬುದರಿಂದ ಸಮಷ್ಟಿ ಸೃಷ್ಟಿಕ್ರಮವೂ, **ಪ್ರೇರ್ಯತೇ** ಎಂಬುದರಿಂದ ವ್ಯಷ್ಟಿ ಸೃಷ್ಟಿಗಾಗಿ ಪ್ರೇರಣೆಯೂ ಬೋಧಿಸಲ್ಪಟ್ಟವು, ಮುಂದೆ **ಜನಿತ್ರೀ ಭೂತಭಾವಿನೀ** ಎಂಬುದರಿಂದಲೂ ಈ ಅಭಿಪ್ರಾಯಗಳೇ ಹೇಳಲ್ಪಟ್ಟವು.

**ಸ್ವಕೀಯಾಂ - "ಅಪರೇಯಂ"** (ಗೀ. ೭. ೫.) ಎಂದು ಹಿಂದೆ ಹೇಳಲ್ಪಟ್ಟಹಾಗೆ ತನಗೆ ಶರೀರವಾಗಿ ಸಂಬಂಧಿಸಿದ, **ವಿಚಿತ್ರ ಪರಿಣಾಮಿನೀ - "ಸತತವಿಕ್ರಿಯಾ"** ಎಂದು **ಹೇಳಿರುವ**

**ಭಾ. ಸ್ವಕೀಯಾಂ ವಿಚಿತ್ರ ಪರಿಣಾಮಿನೀಂ ಪ್ರಕೃತಿ ಮವಷ್ಟಭ್ಯಾಷ್ಟಧಾ ಪರಿಣಮಯ್ಯೇಮಂ - ಚತುರ್ವಿಧಂ ದೇವತಿರ್ಯಙ್ಮನುಷ್ಯ ಸ್ಥಾವರಾತ್ಮಕಂ, ಭೂತಗ್ರಾಮಂ ಮದೀಯಾಯಾ ಮೋಹಿನ್ಯಾ ಗುಣಮಯ್ಯಾಃ ಪ್ರಕೃತೇರ್ವಶಾದ ವಶಂ ಪುನಃ ಪುನಃ - ಕಾಲೇ ಕಾಲೇ ವಿಸೃಜಾಮಿ || ೮ ||**

**ಭಾ. ಅ. ಏವಂ ತರ್ಹಿ, ವಿಷಮ ಸೃಷ್ಟ್ಯಾದೀನಿ ಕರ್ಮಾಣಿ ನೈರ್ಘೃಣ್ಯಾದ್ಯಾ ಪಾದನೇನ ಭಗವಂತಂ ಬಧ್ನಾತೀತ್ಯತ್ರಾಹ :—**

ಹಾಗೆ ವಿಚಿತ್ರವಾಗಿ ಪರಿಣಾಮವನ್ನು ಹೊಂದುವ ಪ್ರಕೃತಿಯನ್ನು, **ಅವಷ್ಟಭ್ಯ** ಎಂದರೆ ಹಿಂದೆ (೭. ೭) ಹೇಳಿರುವಹಾಗೆ ಎಂಟು ವಿಧವಾಗಿ ಪರಿಣಾಮವನ್ನು ಹೊಂದುವಹಾಗೆ ಅದನ್ನು ನಿಯಮಿಸಿ, **ಇಮಂ** - ಈ ಎಂದರೆ ದೇವ, ಮನುಷ್ಯ, ಜಂತು, ವೃಕ್ಷರೂಪವಾದ, **ಭೂತಗ್ರಾಮಂ** - ಪ್ರಾಣಿವರ್ಗವನ್ನು, **ಮದೀಯಾಯಾಃ** - ನನ್ನ ಶರೀರವಾಗಿರುವದರಿಂದ ನನಗೆ ಸಂಬಂಧಿಸಿರುವ, **ಮೋಹಿನ್ಯಾಃ - "ಪ್ರಕೃತಿಂ ಮೋಹಿನೀಂ ಶ್ರಿತಾಃ"** ಎಂದು ಹೇಳಿರುವಹಾಗೆ, **ಚೇತನವನ್ನು** ದೇಹದೊಂದಿಗೆ ಏಕೀಭವಿಸುವಹಾಗೆ ಮಾಡುವ, ಹೀಗೆ ಮೋಹವುಂಟಾಗಲು ಕಾರಣವೇನೆಂದರೆ **ಗುಣಮಯ್ಯಾಃ** - ಸತ್ವರಜಸ್ತಮೋಗುಣಗಳ ಪ್ರಾಚುರ್ಯವುಳ್ಳ, **ಪ್ರಕೃತೇಃ** - ಇಂತಹ ಪ್ರಕೃತಿಗೆ, **ವಶಾತ್** - ಅಧೀನವಾಗಿರುವದರಿಂದ, **ಅವಶಂ** - ಅಸ್ವತಂತ್ರವಾಗಿ **ಪುನಃ ಪುನಃ** ಎಂದರೆ **ಕಾಲೇಕಾಲೇ** - ಕಲ್ಪಾದಿ ಮೊದಲಗೊಂಡು ಕಲ್ಪಾಂತದವರಿಗೂ ಆಯಾಕಾಲಗಳಲ್ಲಿ, **ವಿಸೃಜಾಮಿ**-ವಿವಿಧವಾಗಿ ವಿಚಿತ್ರವಾಗಿ ಸೃಷ್ಟಿಸುತ್ತೇನೆ ಎಂದರೆ ವಿಚಿತ್ರವಾಗಿ ವ್ಯತ್ಯಸ್ತವಾಗಿ ನಾಮರೂಪಗಳನ್ನು ದೇಶಕಾಲಾನುಗುಣವಾಗಿ ಹೊಂದುವಹಾಗೆ ಮಾಡುತ್ತೇನೆ; ಇಲ್ಲಿ **ಮೋಹಿನ್ಯಾಃ** - ಎಂದು ಹೇಳಿರುವದರ ಅಭಿಪ್ರಾಯವೂ, **ಗುಣಮಯ್ಯಾಃ** - ಎಂಬ ಪ್ರಯೋಗವೂ ಸಹ **"ತ್ರಿಭಿರ್ಗುಣಮಯೈರ್ಭಾವೈಃ"** ಎಂದು ಹಿಂದೆ (೭-೧೩)ರಲ್ಲಿ ಹೇಳಿದಭಿಪ್ರಾಯವನ್ನು ಜ್ಞಾಪಕಕ್ಕೆ ಕೊಡುವದಕ್ಕಾಗಿ ಎಂದು ಭಾವಿಸತಕ್ಕದ್ದು. **ವಿಸೃಜಾಮಿ** ಎಂಬ ಪ್ರಯೋಗದಿಂದ ಸೃಷ್ಟಿಯಲ್ಲಿ ವೈವಿಧ್ಯ ಎಂದರೆ ವೈಷಮ್ಯವೇ ಉಂಟೇ ವಿನಾ, ಸಮತ್ವವು ಇಲ್ಲವು. ಕರ್ಮಭೇದದಿಂದ ಎಲ್ಲಾ ಪ್ರಜೆಗಳೂ ಭಿನ್ನ ಭಿನ್ನರಾಗಿರುವಾಗ ಸಮತ್ವ ಉಂಟೆಂದು ಭ್ರಮಿಸುವ ಲೋಕದ ಜನರು ತಮಗಿರುವ ಶಾಸ್ತ್ರಜ್ಞಾನದ ಅಭಾವದ ವಿಜೃಂಭಣೆಯನ್ನು ತಾವೇ ಪ್ರಕಟಿಸಿಕೊಳ್ಳುತ್ತಾರೆ. ಅವರವರ ಭಿನ್ನವಾದ ಕರ್ಮಗಳಿಗೆ ಅನುಗುಣವಾಗಿ ವೇಷಗಳು ಪ್ರಾಪ್ತವಾಗಿವೆ. ಇದರಿಂದ ಎಲ್ಲರೂ ಭಿನ್ನವೇಷಧಾರಿಗಳೇ ; ವೇಷದೊಂದಿಗಿರುವಾಗ ಭಿನ್ನತ್ವವೇ ; ವೇಷವು ತೊಲಗುವಹಾಗೆ ಮಾಡಿಕೊಂಡರೆ ಆಗ ಸಮತ್ವವು ; ಅದು ಮುಕ್ತದಶೆಯಲ್ಲಿ ಮಾತ್ರವೇ.

**ಭಾಷ್ಯಾವತಾರಿಕೆಯ ಅರ್ಥವು :—**ಹೀಗೆ ಸಙ್ಕಲ್ಪಿಸಿ ವಿವಿಧ ವಿಷಮ ಸೃಷ್ಟಿ ಕರ್ಮದಿಂದ ಒಬ್ಬ ಪ್ರಾಣಿಯನ್ನು ತುಂಬಾ ಸುಖಿಯನ್ನಾಗಿಯೂ ಇನ್ನೊಬ್ಬನನ್ನು ದುಃಖಿಯನ್ನಾಗಿಯೂ, ಒಬ್ಬನನ್ನು ಧನಿಕನನ್ನಾಗಿಯೂ ಇನ್ನೊಬ್ಬನನ್ನು ದರಿದ್ರನಾಗಿಯೂ, ಸೃಷ್ಟಿಸುವದರಿಂದ ಪಕ್ಷಪಾತ, ಕೃಪಾಶೂನ್ಯತೆ ಮೊದಲಾದ ದೋಷಗಳಿಗೆ ಗುರಿಯಾಗುವದಿಲ್ಲವೋ ಎಂದರೆ ಇಲ್ಲವೆಂದು ಸಹೇತುಕವಾಗಿ ತಿಳಿಸುತ್ತಾರೆಂಬ ಅಭಿಪ್ರಾಯದಿಂದ ಅವತಾರಿಕೆಯನ್ನು ದಯಪಾಲಿಸುತ್ತಾರೆ.— **ಏವಂತರ್ಹಿ**-ಹಾಗಾದ ಪಕ್ಷದಲ್ಲಿ ಎಂದರೆ ನಿನ್ನ ಸಙ್ಕಲ್ಪಾನುಸಾರ ಸ್ವತಂತ್ರಿಸಿ ಸೃಷ್ಟಿಸಿದ ಪಕ್ಷದಲ್ಲಿ, **ವಿಷಮ ಸೃಷ್ಟ್ಯಾದೀನಿ ಕರ್ಮಾಣಿ** - ಇಂತಹ ವ್ಯತ್ಯಸ್ತವುಳ್ಳ ವಿವಿಧ ಸೃಷ್ಟಿಯೇ ಮೊದಲಾದ ಕರ್ಮಗಳನ್ನು, ಇಲ್ಲಿ ಕರ್ಮಶಬ್ದದಿಂದ ಪುಣ್ಯಪಾಪ ಕರ್ಮಗಳು ಹೇಳಲ್ಪಡಲಿಲ್ಲವು, ಸರ್ವೇಶ್ವರನಿಗೆ ಪುಣ್ಯಪಾಪ ಕರ್ಮಗಳ ಗಂಧವೇ ಇಲ್ಲವು, ಇಲ್ಲಿ ಸೃಷ್ಟಿ, ಲಯ, ನಿಗ್ರಹಾನುಗ್ರ

**ಮೂ. ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾ ಸೀನ ಮಸಕ್ತಂ ತೇಷು ಕರ್ಮಸು ॥　　　　　　　　　　೯.**

ಹಾದಿ ಕರ್ಮಗಳೇ ಮುಂದಿನ ಶ್ಲೋಕದಲ್ಲಿ ಹೇಳಲ್ಪಡತಕ್ಕವುಗಳೆಂದು ತಿಳಿಯತಕ್ಕದ್ದು. **ಆದಿ** ಶಬ್ದದಿಂದ ಸ್ಥಿತಿ ಸಂಹಾರ ನಿಗ್ರಹಾನುಗ್ರಹಗಳು ಹೇಳಲ್ಪಟ್ಟವು, **ನೈರ್ಘೃಣ್ಯಾದ್ಯಾಪಾದನೇನ**-ಕರುಣಾರಾಹಿತ್ಯವೇ ಮೊದಲಾದ ದೋಷಗಳ ಆರೋಪಣೆಯ ಮೂಲಕವಾಗಿ, **ಭಗವಂತಂ ಬಧ್ನಂತಿ** - ಸರ್ವೇಶ್ವರನನ್ನು ಬಂಧಿಸುತ್ತವೆಯೋ, **ಇತ್ಯತ್ರಾಹ** - ಎಂಬೀ ಶಜ್ಕಾ ಸಂದರ್ಭ ದಲ್ಲಿ ಸಮಾಧಾನವನ್ನು ಹೇಳುತ್ತಾರೆ, **ನೈರ್ಘೃಣ್ಯಾದಿ** - ಎಂಬಲ್ಲಿನ ಆದಿ ಪದದಿಂದ ವೈಷ ಮ್ಯವೂ, ಪಕ್ಷಪಾತವೂ ಅವ್ಯವಸ್ಥಿತೆಯೂ ಹೇಳಲ್ಪಟ್ಟವು. ಪ್ರಾಣಿವರ್ಗದ ಕರ್ಮಾನುಗುಣವಾ ಗಿಯೇ ನಡೆಸಿದರೂ, ಸೃಷ್ಟಿಮಾಡಿದ ಕರ್ತಾ ನೀನುತಾನೇ, ಆದುದರಿಂದ ನೀನು ದೋಷಿಯ ಅಲ್ಲವೋ ? ಹೇಗೆಂದರೆ ಇನ್ನೊಬ್ಬರ ಕರ್ಮ ಪ್ರಕಾರ ನಡೆಸಿದರೂ, ಕೆಲಸಮಾಡಿದವನು ನೀನೇ ತಾನೇ, ಆದುದರಿಂದ ನೀನು ದೋಷಿಯೇ ಎಂದರೆ ಹಾಗಲ್ಲವೆಂದು ಹೇಳುತ್ತಾರೆಂಬ ಭಾವವು.

**ಮೂಲಕ್ಕೆ ಅರ್ಥವು:**—ಹೀಗೆ ಸೃಷ್ಟ್ಯಾದಿ ಕರ್ಮಗಳನ್ನು ವಿಷಮವಾಗಿ ನಡೆಸುವದ ರಿಂದ ನೀನು ದೋಷಿಯಲ್ಲವೋ ಎಂದರೆ ದೋಷಕ್ಕೆ ಕಾರಣವೇ ಇಲ್ಲವೆಂದು ಹೇಳುತ್ತಾರೆ. **ಹೇ ಧನಂಜಯ** - ಓ ಅರ್ಜುನನೇ, **ತಾನಿ ಕರ್ಮಾಣಿ** - ವಿವಿಧ ವೈಚಿತ್ರ್ಯಗಳುಳ್ಳ ಈ ವಿಷಮ ಸೃಷ್ಟ್ಯಾದಿ ಕರ್ಮಗಳು, **ಮಾಂಚ ನನಿಬಧ್ನಂತಿ** - ನನ್ನನ್ನಾದರೋ ಅಂತಹ ದೋಷಿಯು ಎಂಬ ಅಪವಾದಕ್ಕೂ ಬಂಧಕ್ಕೂ ಗುರಿಮಾಡಲಾರವು. ಅಪವಾದಗಳು ಯಾವುವೆಂದರೆ ಒಬ್ಬ ನನ್ನು ದೇವತೆಯನ್ನಾಗಿ, ಇನ್ನೊಬ್ಬನನ್ನು ಮನುಷ್ಯನನ್ನಾಗಿ ಮತ್ತೊಬ್ಬನನ್ನು ನಾಯಿಯ ನ್ನಾಗಿ ಅಥವಾ ವೃಕ್ಷವನ್ನಾಗಿ, ಮತ್ತು ಒಬ್ಬನನ್ನು ರಾಜನನ್ನಾಗಿ, ಇನ್ನೊಬ್ಬನನ್ನು ದಾಸ ನನ್ನಾಗಿ ಮಾಡಿದರೆ, ಈತನಿಗೆ ಪಕ್ಷಪಾತ ಮಾಡಿದನೆಂಬ ದೋಷವೂ, ಹೊಟ್ಟೆಗಿಲ್ಲದೆಯಾಗಲಿ ತುಂಬಾ ರೋಗಿಯಾಗಿಯಾಗಲಿ ತುಂಬಾ ದುಃಖಭಾಕ್ಕಾಗಿಯಾಗಲಿ ಸೃಷ್ಟಿಸಿದರೆ, ನಿರ್ಘೃಣನೆಂಬ ಅಪವಾದವೂ, ಇಂತವುಗಳು. ಇಂತಹ ದೋಷಗಳು ನನಗೆ ಸಂಬಂಧಿಸುವದಿಲ್ಲವು. ಇಲ್ಲಿ **ನಿಬಧ್ನಂತಿ** ಎಂದರೆ ಸಂಸಾರವನ್ನುಂಟುಮಾಡುವದೆಂಬರ್ಥವಲ್ಲವು ; ಮತ್ತು ಇತರರು ಮಾಡಿ ರುವ ಅರ್ಥದ ಹಾಗೆ ಧರ್ಮಾಧರ್ಮ ಶಂಕೆಯೂ ಅಲ್ಲವು. ವಿಷಮಸೃಷ್ಟಿಯಿಂದ ತನಗೆ ಯಾವ ದೋಷವು ಇಲ್ಲವು ಎಂಬರ್ಥವು. ಹೇಗೆ ಇಲ್ಲವು ಎಂದರೆ **ಮಾಂ** - ನನ್ನನ್ನು ನಾನು ಎಂತವ ನೆಂದರೆ, **ಉದಾಸೀನವದಾ ಸೀನಂ** - ಉದಾಸೀನನಹಾಗೆ ಇರುವವನು, ಆ ವಿವಿಧ ಸೃಷ್ಟಿಗೆ, ಅವರುಗಳ ಕರ್ಮಗಳ ವೈವಿಧ್ಯವೇಕಾರಣವು, ಆ ಕರ್ಮಗಳ ಕರ್ತೃತ್ವವೂ ಅವರನ್ನೇ ಸೇರಿ ದುದು, ಅವುಗಳ ಫಲಭೋಕ್ತೃತ್ವವೂ ಅವರಿಗೇ ಸೇರಿದುದು, ಆ ಕರ್ಮಗಳ ಫಲಾನುಗುಣವಾ ಗಿಯೇ ಸೃಷ್ಟಿಯು, ಆದುದರಿಂದ ಆ ವಿಷಯದಲ್ಲಿ ಅವರುಗಳ ಕರ್ತೃತ್ವ ಭೋಕ್ತೃತ್ವಗಳಲ್ಲಿ ನಾನು ಉದಾಸೀನನಹಾಗೆ ಇರುವವನು ; ಆ ಕಾರಣದಿಂದಲೇ **ಅಸಕ್ತಂ ತೇಷು ಕರ್ಮಸು** - ತಾನು ಮಾಡುವ ಈ ವಿಷಮ ಸೃಷ್ಟಿಗೆ ತಾನು ಕಾರಣವಲ್ಲವು, ವೈಷಮ್ಯ ನೈರ್ಘೃಣ್ಯಾದಿ ದೋಷಗಳು ನನಗೆ ಉಂಟಾಗುವದಿಲ್ಲವೆಂಬ ಭಾವವು. **ಉದಾಸೀನವತ್** - ಉದಾಸೀನನಾ ಗಿರುವಹಾಗೆ ಇರುತ್ತೇನೆ. ಔದಾಸೀನ್ಯವು ಯಾವ ಭಾಗದಲ್ಲಿ ಎಂದರೆ ಅವರೇ **"ಅಸಕ್ತಂ ತೇಷು ಕರ್ಮಸು** - ಆ ಕರ್ಮಗಳಲ್ಲಿ ಮಾತ್ರ ಅಸಕ್ತನು, ವಿಷಮ ಸೃಷ್ಟ್ಯಾದಿಗಳಲ್ಲಿ (ಇದು ಪ್ರಳಯ ಕರ್ಮಕ್ಕೂ ಉಪಲಕ್ಷಣವು) ಮಾತ್ರ ಅಸಕ್ತನು. ಪ್ರಾಣಿವರ್ಗಕ್ಕೆ ಕ್ಷೇಮ ಮಾಡಬೇ ಕೆಂಬ ನಿರ್ಹೇತಕಕೃಪೆಯಿಂದ ಯಾವಾಗಲೂ ಆಸಕ್ತನಾಗಿಯೇ ಇರುವೆನು. ಅಲ್ಲಿ ಉದಾಸೀನ ನೆಂದರೆ ಏನನ್ನೂ ಮಾಡದೆ ತಟಸ್ಥನಾಗಿರುವೆನೆಂಬರ್ಥವಲ್ಲವು. ಅವಸರ ಪ್ರತೀಕ್ಷೆಯಲ್ಲೇ

**ಭಾ. ನ ಚ ತಾನಿ ವಿಷಮಸೃಷ್ಟ್ಯಾದೀನಿ ಕರ್ಮಾಣಿ ಮಾಂ ನಿಬಧ್ನಂತಿ-ಮಯಿ ನೈರ್ಘೃಣ್ಯಾದಿಕಂ ನಾಪಾದಯನ್ತಿ, ಯತಃ ಕ್ಷೇತ್ರಜ್ಞಾನಾಂ ಪೂರ್ವಕೃತಾನ್ಯೇವ ಕರ್ಮಾಣಿ ದೇವಾದಿ ವಿಷಮಭಾವ ಹೇತವಃ ; ಅಹಂ ತು ತತ್ರ ವೈಷಮ್ಯೇ ಅಸಕ್ತಃ, ತತ್ರ**

ಇರುವೆನು. ಒಂದೆ ಮಾಡಿದ ಸುಕೃತ ದುಷ್ಕೃತಗಳಿಗನುಗುಣವಾಗಿ ದೇಹಗಳನ್ನುಂಟುಮಾಡುವ ಸಂದರ್ಭದಲ್ಲಿ ಮಾತ್ರ ಅದು ನ್ಯಾಯಾನುಗುಣವಾಗಿ ಉಂಟಾಗುತಕ್ಕದ್ದಾದುದರಿಂದ ತಾನು ತಟಸ್ಥನೆಂಬಭಾವವು. **ಉದಾಸೀನವತ್** ಎಂದು ಹೇಳಿರುವದರಿಂದ ಸಂಪೂರ್ಣವಾಗಿ ಉದಾಸೀನನಲ್ಲವೆಂಬುದು ವ್ಯಕ್ತವು. ಇದು ಗಜದಹಾಗೆ ತೋರುತ್ತದೆ ಎಂದರೆ ಗಜವಲ್ಲವೆಂಬುದು ಹೇಗೆ ವ್ಯಕ್ತವೋ, ಹಾಗೆಯೇ ಭಗವಂತನು ಈ ವಿಷಯದಲ್ಲಿ ಮಾತ್ರ **ಉದಾಸೀನವತ್ ಇರುತ್ತಾನೆಂದರೆ**, ಮಿಕ್ಕ ವಿಷಯಗಳಲ್ಲಿ ಉದಾಸೀನನಲ್ಲದೆ ಚೇತನರನುಗ್ರಹಾರ್ಥವಾಗಿಯೇ ಸರ್ವವಿಧ ಪ್ರವೃತ್ತಿಗಳುಳ್ಳವನೆಂದು **"ವರ್ತ ಏವಚ ಕರ್ಮಣಿ"** ಎಂದು ಹಿಂದೆಯೇ (೩. ೨೨) **ಹೇಳಿಕೊಂಡಿರುತ್ತಾನೆ.** ಅವರುಗಳನುಗ್ರಹಾರ್ಥವಾಗಿಯೇ ಸೃಷ್ಟ್ಯಾರಂಭದಲ್ಲಿ ಕರಣ ಕಳೇಬರಯೋಗ, ಶಾಸ್ತ್ರಪ್ರದೀಪಪ್ರದಾನ, ಸದ್ದೇಶಿಕ ಮುಖೇನ ಸದುಪದೇಶ ಪ್ರಾಪಣ, ಇವೇ ಮೊದಲಾದ ಮತ್ತು ಸಾಧುಪರಿತ್ರಾಣ, ದುಷ್ಕೃತಿ ವಿನಾಶ, ಧರ್ಮಸಂಸ್ಥಾಪನಾದಿ ಅನೇಕ ದಿವ್ಯ ಪ್ರವೃತ್ತಿಗಳಲ್ಲಿ ಜಾಗರೂಕನಾಗಿ ಆಸಕ್ತನಾಗಿಯೇ ಇದ್ದೇನೆ. ಈ ವಿಷಯಗಳಲ್ಲಿ ಉದಾಸೀನನಲ್ಲವೆಂಬ ಭಾವವೂ **ಉದಾಸೀನವತ್** ಎಂಬುದರಿಂದ ದ್ಯೋತಿತವು.

**ಭಾಷ್ಯಾರ್ಥವು**:--ಈ ವಿಷಮ ಸೃಷ್ಟ್ಯಾದಿಗಳಿಂದ ತನಗೆ ಯಾವದೋಷವೂ ಪ್ರಾಪ್ತವಾಗುವದಿಲ್ಲವೆಂದು ಹೇಳುತ್ತಾರೆ.—ಇಲ್ಲಿ **ಚ** ಶಬ್ದದಿಂದ ದೋಷಪ್ರಾಪ್ತಿರೂಪ ಶಂಕಾ ನಿವಾರಣಾರ್ಥವು ಸೂಚಿತವು. **ವಿಷಮಸೃಷ್ಟಿಯೇ** ಮೊದಲಾದ ಕರ್ಮಗಳು **ಮಾಂ ನನಿಬಧ್ನಂತಿ** ಎಂದರೆ **ಮಯಿ ನೈರ್ಘೃಣ್ಯಾದಿಕಂ ನಾಪಾದಯನ್ತಿ** - ನನ್ನಲ್ಲಿ ನೈರ್ಘೃಣ್ಯವೇ **ಮೊದಲಾದ** ದೋಷಗಳ ಆರೋಪವಿಲ್ಲವು ; ನೈರ್ಘೃಣ್ಯವೆಂದರೆ ಕೃಪಾಶೂನ್ಯವಾದ ಕಠಿಣಸ್ವಭಾವವು. ಇಲ್ಲಿ ಆದಿಪದದಿಂದ ಪಕ್ಷಪಾತತ್ವ ಅವ್ಯವಸ್ಥೆ ಮೊದಲಾದ ದೋಷಗಳು ಹೇಳಲ್ಪಟ್ಟವು ಅದು ಹೇಗೆ ? ಹಾಗಾದರೆ ವೈಷಮ್ಯ ಸೃಷ್ಟಿಗೆ ಕಾರಣವೇನು ? ಎಂದರೆ ತಿಳಿಸುತ್ತಾರೆ; ;**ಯತಃ**- ಯಾವ ಕಾರಣದಿಂದ, **ಪೂರ್ವ ಕೃತಾನ್ಯೇವಕರ್ಮಾಣಿ** - ಜೀವರಾಶಿಯಿಂದ ಈ ಪ್ರಳಯ ಸೃಷ್ಟಿಗಳಿಗೆ ಮೊದಲು ಮಾಡಲ್ಪಟ್ಟ ಕರ್ಮಗಳೇ, **ದೇವಾದಿ ವಿಷಮ ಭಾವ ಹೇತವಃ** - ದೇವ ಮನುಷ್ಯ ತಿರ್ಯಕ್ ಸ್ಥಾವರರೂಪ ಸೃಷ್ಟಿಗೆ ಕಾರಣಗಳೋ, ಆ ಕಾರಣದಿಂದ ನಾನು ದೋಷಿಯಲ್ಲವೆಂಬ ಭಾವವು ; ಅದನ್ನೇ ವ್ಯಕ್ತಪಡಿಸುತ್ತಾರೆ.---**ಅಹಂತು** ನಾನಾದರೋ, **ತತ್ರ ವೈಷಮ್ಯೇ**- ಆ ಸೃಷ್ಟಿಯ ವ್ಯತ್ಯಾಸದಲ್ಲಿ, **ಅಸಕ್ತಃ**-ಸಂಬಂಧಪಟ್ಟವನಲ್ಲವು, ಎಂದರೆ ಪ್ರಯೋಜನ ರೂಪ ಸಂಬಂಧವಿಲ್ಲದವನೆಂಬ **ಭಾ**ವವು. **ತತ್ರ** - ಆ ವಿಷಮ ಸೃಷ್ಟ್ಯಾದಿ ಸಂದರ್ಭದಲ್ಲಿ, **ಉದಾಸೀನವದಾಸೀನಃ** - ಉದಾಸೀನನಹಾಗೆ ಸುಮ್ಮನಿರುವವನು, ಮುಂದೆ **ಅಸಕ್ತಂ ತೇಷು ಕರ್ಮಸು** ಅವುಗಳಲ್ಲಿ ಆಸಕ್ತನಾಗಿ ಉದಾಸೀನನಹಾಗೆ ಇದ್ದೇನೆ ಎಂದು ಹೇಳುವದರಿಂದ ತನಗೆ **ಕರ್ತೃತ್ವದ ಸಂಬಂಧವೇ ಇಲ್ಲವೆಂಬ** ಭ್ರಮೆಯುಂಟಾದೀತೆಂದು ಭಾವಿಸಿ, ತನ್ನಿವಾರಣಾರ್ಥವಾಗಿ ಔದಾಸೀನ್ಯ ಏತರಲ್ಲಿ ಎಂದರೆ **ತತ್ರ ವೈಷಮ್ಯೇ** - ಆ ಸೃಷ್ಟಿಯ ವೈಷಮ್ಯಕ್ಕೆ ಮಾತ್ರ ತಾನು ಕಾರಣನಲ್ಲವೆಂದು **ಹೇಳಿಕೊಂಡದು.** ಜೀವಾತ್ಮರ ಕರ್ಮಫಲಗಳೆಲ್ಲಾ ಭಿನ್ನ ಕರ್ಮಾನುಸಾರವಾಗಿ ಭಿನ್ನವಾದುದರಿಂದ ತಾರತಮ್ಯವು ಅವರುಗಳಲ್ಲಿ ತಪ್ಪಿದ್ದಲ್ಲವು. **ಈ ವಿಷಯ ಭಾಗವತ ತೃತೀಯಸ್ಕಂಧ ೨೯ ನೆಯ ಅಧ್ಯಾಯದಲ್ಲಿ ಸುಸ್ಪಷ್ಟವು. ೨೮ ರಿಂದ ೩೪ ನೆಯ ಶ್ಲೋಕಗ**

**ಭಾ. ಉದಾಸೀನ ವದಾಸೀನಃ; ಯಥಾಹ ಸೂತ್ರಕಾರಃ (೧) "ವೈಷಮ್ಯ ನೈರ್ಘೃಣ್ಯೇನ, ಸಾಪೇಕ್ಷತ್ವಾತ್" (೨) "ನಕರ್ಮಾ ವಿಭಾಗಾದಿತಿಚೇನ್ನಾ ನಾದಿತ್ವಾತ್" ಇತಿ ||೯||**

ಳನ್ನು ಪರಾಂಬರಿಸಬಹುದು. **ಜೀವಾಶ್ಶ್ರೇಷ್ಠಾ ಹ್ಯಜೀವಾನಾಂ ತತಃಪ್ರಾಣಭೃತಶ್ಶುಭೇ । ತತಸ್ಸಚಿತ್ತಾಃ ಪ್ರವರಾಸ್ತತಶ್ಚೇನ್ದ್ರಿಯವೃತ್ತಯಃ । ತತ್ರಾಪಿಸ್ಪರ್ಶವೇದಿಭ್ಯಃ ಪ್ರವರಾರಸ ವೇದಿನಃ । ತೇಭ್ಯೋ ಗಂಧವಿದಶ್ಶ್ರೇಷ್ಠಾ ಸ್ತತಶ್ಶಬ್ದವಿದೋ ವರಾಃ । ರೂಪಭೇದವಿದ ಸ್ತತ್ರ ತತಶ್ಚೋಭಯವೇದಿನಃ । ತೇಷಾಂ ಬಹುಪದಾಶ್ಶ್ರೇಷ್ಠಾ ಶ್ಚತುಷ್ಪಾದಾಸ್ತತೋದ್ವಿ ಪಾತ್ । ತತೋವರ್ಣಾಶ್ಚ ಚತ್ವಾರಸ್ತೇಷಾಂ ಬ್ರಾಹ್ಮಣ ಉತ್ತಮಃ । ಬ್ರಾಹ್ಮಣೇಷ್ವಪಿ ವೇದಜ್ಞೋಽಹ್ಯರ್ಥಜ್ಞೋಽಧಿಕಸ್ತತಃ । ಅರ್ಥಜ್ಞಾತ್ಸಂಶಯಚ್ಛೇತ್ತಾ ತತಃ ಶ್ರೇಯಾನ್ ಸ್ವಕರ್ಮಕೃತ್ । ಮುಕ್ತಸಙ್ಗ ಸ್ತತೋ ಭೂಯಾನ್ ಅದೋಗ್ಧಾ ಧರ್ಮಮಾತ್ಮನಃ । ತಸ್ಮಾನ್ಮಯ್ಯರ್ಪಿತಾಶೇಷಕ್ರಿಯಾರ್ಥಾತ್ಮಾ ನಿರಂತರಃ । ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂನ್ಯಸ್ತ ಕರ್ಮಣಃ । ನಪಶ್ಯಾಮಿ ಪರಂ ಭೂತಂ ಅಕರ್ತು ಸ್ಸಮದರ್ಶನಾತ್"** ಈ ಶ್ಲೋಕಗಳಲ್ಲಿ ಎಲ್ಲೆಲ್ಲೂ ತಾರತಮ್ಯವೇಪಿನಾ ಸಮತ್ವವಿಲ್ಲವೆಂದೂ ಉತ್ತರೋತ್ತರಾಧಿಕಾರಿಗಳು ಪೂರ್ವ ಪೂರ್ವೋಕ್ತರುಗಳಿಗಿಂತ ಶ್ರೇಷ್ಠರೆಂದು ಹೇಳಲ್ಪಟ್ಟಿರುತ್ತದೆ. ಸೃಷ್ಟಿಯನ್ನೆಲ್ಲಾ ನಡೆಸುವವನು ಪ್ರಧಾನಕಾರಣನಾಗಿ ಪರಮಾತ್ಮನೇ. ಆತನಿಲ್ಲದಿದ್ದರೆ ಸೃಷ್ಟಿ ಎಲ್ಲಿಯದು? ಮೂಲದ ಉತ್ತರಾರ್ಧಕ್ಕೆ ಅದ್ವೈತ ಸಿದ್ಧಾನ್ತಿಗಳು ಅರ್ಥ ಹೇಳುವದು ಕಷ್ಟವು. ಲೋಕದಲ್ಲೆಲ್ಲಾ ಆತ್ಮಾ ಒಂದೇಯಾಗಿ ಅವಿದ್ಯಾವೇಷ್ಟಿತತ್ವವು ಉಂಟಾಗುವಾಗ ಉದಾಸೀನನಹಾಗೆ ನಾನು ಇರುತ್ತೇನೆಂದೂ, **ಅಸಕ್ತಂ ತೇಷು ಕರ್ಮಸು** ಎಂದೂ, ಹೇಳುವದು ಹೇಗೆ? ತನಗೇನೇ ಅವಿದ್ಯಾಸಂಬಂಧ ರೀತ್ಯಾ ಸೃಷ್ಟಿ ಯಾವಾಗ, ಆಯಿತೋ ಆಗ ಅಸಕ್ತನು ಹೇಗೆ? ಎಂದು ಕೇಳಬೇಕಾಗುತ್ತದೆ? ನಮ್ಮ ಸಿದ್ಧಾನ್ತಕ್ಕಾದರೋ ಜೀವಾತ್ಮರು ಬೇರೆ, ಅವರ ಕರ್ಮವು ಅನಾದಿಯು,ಆದುದರಿಂದ ಆ ವಿಷಮ ಸೃಷ್ಟಿಯಲ್ಲಿ, ಔದಾಸೀನ್ಯವೂ ನಮಗೆ ಉಪಪನ್ನವೇ; ಅಸಕ್ತನಾಗಿರುವದೂ ಸಮಂಜಸವೇ. ಇದೂ ಅಲ್ಲದೆ ತನಗೇನೇ ಅವಿದ್ಯಾಗ್ರಹಣವಿರುವ ವಿಷಯದಲ್ಲಿ ವೈಷಮ್ಯ ನೈರ್ಘೃಣ್ಯಶಙ್ಕಾಗಳಿಗೆ ಅವಕಾಶವೆಲ್ಲಿಯದು? ಈ ಸೂತ್ರಗಳೇ ಆಗ ಅನಾವಶ್ಯಕವಾದುವಲ್ಲವೇ?

**ಯಥಾಹ ಸೂತ್ರಕಾರಃ** - ಹಾಗೆತಾನೇ ಸೂತ್ರಕಾರರು ಹೇಳಿರುತ್ತಾರೆ. ಆ ಸೂತ್ರಗಳು ಯಾವುವೆಂದರೆ—**ವೈಷಮ್ಯ ನೈರ್ಘೃಣ್ಯೇ ನ, ಸಾಪೇಕ್ಷತ್ವಾತ್" "ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್"**. ಈ ಸೂತ್ರಗಳ ತಾತ್ಪರ್ಯವೇನೆಂದರೆ. **"ವೈಷಮ್ಯ ನೈರ್ಘೃಣ್ಯೇ ನ, ಸಾಪೇಕ್ಷತ್ವಾತ್"** ಹಿಂದಿನ ಸೂತ್ರದಲ್ಲಿ ಪರಮ ಪುರುಷನಿಗೆ ಜಗತ್ಸೃಷ್ಟ್ಯಾದಿಗಳಲ್ಲಿ ಲೀಲೆಯೇ ಪ್ರಯೋಜನವಾದುದರಿಂದ ಜಗತ್ಕಾರಣತ್ವವು ಕೂಡುತ್ತದೆಂದು ಹೇಳಲ್ಪಟ್ಟಿತು. ಆದರೆ ಸರ್ವಚೇತನರ ವಿಷಯದಲ್ಲೂ ಸಮನಾಗಿ, ಪರಮಕಾರುಣಿಕನಾದ ಪರಮಪುರುಷನು ದೇವಮನುಷ್ಯಾದಿವಿಷಮ ಸೃಷ್ಟಿಯನ್ನು ಮಾಡಿದರೆ ವೈಷಮ್ಯವೂ, ದುಃಖ ಭೂಯಿಷ್ಠವಾಗಿ ಈ ಜಗತ್ತನ್ನು ಹೀಗೆ ನಿರ್ಮಿಸೋಣದರಿಂದ ನೈರ್ಘೃಣ್ಯವೂ ಉಂಟಾಗುವದಿಲ್ಲವೇ ಎಂಬ ಶಙ್ಕಾವನ್ನು ಈ ಸೂತ್ರದಲ್ಲಿ ಪರಿಹರಿಸುತ್ತಾರೆ. **ವೈಷಮ್ಯ ನೈರ್ಘೃಣ್ಯೇ** - ಪರಮ ಪುರುಷನಿಗೆ ಈ ಎರಡು ದೋಷಗಳೂ, **ನ** - ಉಂಟಾಗುವದಿಲ್ಲವು, ಏಕೆಂದರೆ **ಸಾಪೇಕ್ಷತ್ವಾತ್** - ದೇವಾದಿ ವಿಷಮ ಸೃಷ್ಟಿಯಲ್ಲೂ, ದುಃಖಾದಿ ಸಮಸ್ತ ಕ್ಲೇಶಗಳಿಗೂ ಆಯಾಯಾ ಜೀವಾತ್ಮರುಗಳ ಪೂರ್ವಕರ್ಮ

(೧) ಶಾ ಸೂ. ೨. ೧. ೩೪. (೨) ಶಾ. ಸೂ ೨. ೧. ೩೫.

ಗಳ ಅಪೇಕ್ಷೆಯು ಈ ಸೃಷ್ಟಿಗೆ ಇರುವದರಿಂದ ಎಂದರೆ ಆ ಕರ್ಮಗಳಿಗನುಸಾರವಾಗಿಯೇ ಸೃಷ್ಟಿ ಕ್ರಮವು ನಡೆಯುವದರಿಂದ; **ತಥಾಹಿ ದರ್ಶಯತಿ** ಹಾಗೆಯೇ ಪ್ರಮಾಣಗಳುಂಟು. **"ಸಾಧುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋ ಭವತಿ" "ಪುಣ್ಯಃ ಪುಣ್ಯೇನ ಕರ್ಮಣಾ ಭವತಿ, ಪಾಪಃ ಪಾಪೇನ ಕರ್ಮಣಾ"** (ಬೃ. ೬. ೪. ೫) **"ನಿಮಿತ್ತಮಾತ್ರಂ ಮುಕ್ತ್ವೈವಂ ನಾನ್ಯತ್ಕಿಂಚಿದಪೇಕ್ಷತೇ। ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತು ವಸ್ತುತಾಂ"** (ವಿ. ಪು. ೧. ೪. ೫೨) ಸರ್ವೇಶ್ವರನು ಸುಮ್ಮನೆ ವ್ಯಾಜರೂಪ ಮಾತ್ರವೇವಿನಾ ಬೇರೆಯಲ್ಲವು, **ವಸ್ತು ವಸ್ತುತಾಂ** - ದೇವ ಮನುಷ್ಯಾದಿ ರೂಪದಲ್ಲಿ ತೋರುವ ವಸ್ತುವೆಲ್ಲಾ ಆಯಾಯಾ ರೂಪಗಳನ್ನು ಹೊಂದುವ ಅವಸ್ಥೆಯನ್ನು, **ಸ್ವಶಕ್ತ್ಯಾ ನೀಯತೇ** - ಪೂರ್ವಾರ್ಜಿತ ಕರ್ಮ ಶಕ್ತಿಯಿಂದಲೇ ಹೊಂದುತ್ತದೆ, ಆದುದರಿಂದ ಪರಮಾತ್ಮನು ಪ್ರಧಾನ ಕರ್ತಾ ಎಂದು ಹೇಳುವದು ಈ ಸಂದರ್ಭದಲ್ಲಿ ಸ್ವಲ್ಪಮಟ್ಟಿಗೆ ಔಪಚಾರಿಕವೆಂಬ ಭಾವವು. ಹಾಗೆಯೇ **ಅವಿದ್ಯಾ ಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ। ಯಯಾ ಕ್ಷೇತ್ರಜ್ಞಶಕ್ತಿಸ್ಸಾ ವೇಷ್ಟಿತಾ ನೃಪ ಸರ್ವಗಾ। ಸಂಸಾರತಾಪಾನಖಿಲಾನವಾಪ್ನೋತ್ಯತಿ ಸಂತತಾನ್। ತಯಾ ತಿರೋಹಿತತ್ವಾಚ್ಚ ಶಕ್ತಿಃ ಕ್ಷೇತ್ರಜ್ಞಸಂಜ್ಞಿತಾ। ಸರ್ವಭೂತೇಷು ಭೂಪಾಲ ತಾರತಮ್ಯೇನ ವರ್ತತೇ** (ವಿ. ಪು. ೬. ೭. ೬೨, ೬೩) ಎಂಬುದೂ ಅನುಸಂಧೇಯವು.

ಪೂರ್ವಾರ್ಜಿತ ಕರ್ಮಾನುಗುಣವಾಗಿಯೇ ಈ ವಿಷಮ ಸೃಷ್ಟಿ ಎಂದರೆ, ಸೃಷ್ಟಿಗೆ ಮುಂದೆ ಕ್ಷೇತ್ರಜ್ಞರೇ ಇರಲಿಲ್ಲವಲ್ಲಾ, ಇನ್ನು ಕರ್ಮ ಎಲ್ಲಿಯದು? ಶ್ರುತಿಯು, ಸೃಷ್ಟಿಗೆ ಪೂರ್ವದಲ್ಲಿ **ಸದೇವ ಸೌಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಂ"** ಸಚ್ಛಬ್ದವಾಚ್ಯನಾದ ಪರಮಾತ್ಮನೊಬ್ಬನೇ ಇದ್ದನು, ಇನ್ನು ಎರಡನೆಯವನೇ ಇರಲಿಲ್ಲವೆಂದು ಕಂಠೋಕ್ತವಾಗಿ ಹೇಳುತ್ತದೆ. ಇದರಿಂದ ಜೀವಾತ್ಮರೇ ಇರಲಿಲ್ಲವೆಂದು ತೋರುತ್ತದಲ್ಲಾ ಎಂದು ಆಕ್ಷೇಪ ತಂದರೆ, ಮುಂದಿನ ಸೂತ್ರವು **ಖಂ**ಡಿಸುತ್ತದೆ. ಸೃಷ್ಟಿಗೆ ಮೊದಲು **ನ ಕರ್ಮ** - ಕರ್ಮ ವಿಲ್ಲವು, ಏಕೆಂದರೆ ಕ್ಷೇತ್ರಜ್ಞರು ಸೃಷ್ಟಿಗೆ ಮೊದಲು ಇಲ್ಲವೇ ಇಲ್ಲವು, ಕ್ಷೇತ್ರಜ್ಞರೇ ಇಲ್ಲದಿರುವಾಗ ಕರ್ಮವೆಲ್ಲಿಯದು? ಕಾರಣವೇನೆಂದರೆ.—**ಅವಿಭಾಗಾದಿತಿ ಚೇತ್ - "ಸದೇವಸೋಮ್ಯೇದಂ"** ಎಂದು ಹಿಂದೆ ಉದಾಹರಿಸಿರುವ ಶ್ರುತಿಯಲ್ಲಿ ಪರಮಾತ್ಮನಿಲ್ಲದೆ ಬೇರೆ ಯಾವುದು ಇರಲಿಲ್ಲವೆಂದು ಹೇಳಿ, ಅವಧಾರಣದಿಂದ ಅದನ್ನು ಸಮರ್ಥಿಸಿರುವದರಿಂದ ಕ್ಷೇತ್ರಜ್ಞರೇ ಇಲ್ಲದಿರುವಾಗ ಕರ್ಮ ಎಲ್ಲಿಯದು ಎಂದಾಕ್ಷೇಪಿಸಿದರೆ, **ನ** - ಹಾಗಲ್ಲವು, ಇದಕ್ಕೆ ಕಾರಣಗಳು ಯಾವುವು ಎಂದರೆ, **ಅನಾದಿತ್ವಾತ್** - ಕ್ಷೇತ್ರಜ್ಞರು ಅವರ ಕರ್ಮಗಳೂ ಸಹ ಅನಾದಿಯಾಗಿ ಉಂಟೇ ಉಂಟು, **ಉಪಪದ್ಯತೇ ಚ** - ಪೃಥಕ್ತ್ವಾಗಿ ನಿರ್ದೇಶಕ್ಕೆ ಅರ್ಹತೆ ಇಲ್ಲದೆ ನಾಮರೂಪಾದಿಗಳಿಲ್ಲದೆ ಅತಿ ಸೂಕ್ಷ್ಮದಶೆಯಲ್ಲಿ ಪರಬ್ರಹ್ಮ ಶರೀರವಾಗಿದ್ದುದರಿಂದ **ಸದೇವ** ಎಂಬ ಶ್ರುತಿಯು ಉಪಪನ್ನವೇ. ಹಾಗೆ ಒಪ್ಪಿಕೊಳ್ಳದಿದ್ದರೆ ಅಸತ್ಕಾರ್ಯತೆಯನ್ನು ಒಪ್ಪಿಕೊಂಡು ಇಲ್ಲದೇ ಇದ್ದುದು ಹೊಸದಾಗಿ ಉಂಟಾಯಿತು ಎಂದು ಹೇಳಬೇಕಾಗುತ್ತದೆ, ಆಗ ಕಾರಣ ಕಾರ್ಯಗಳಿಗೆ ಅನನ್ಯತ್ವ ಹೇಳುವ **ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ** ಎಂಬ ಸೂತ್ರಕ್ಕೆ ವಿರೋಧ ಉಂಟಾಗುತ್ತದೆ. **ಉಪಲಭ್ಯತೇ ಚ**-ಕ್ಷೇತ್ರಜ್ಞರ ಅನಾದಿತ್ವಕ್ಕೆ ಪ್ರಮಾಣಗಳೂ ಇವೆಯಷ್ಟೆ **"ಜ್ಞಾಜ್ಞೌ ದ್ವಾವಜಾವೀಶನೀಶೌ"** (ಶ್ವೇ. ೧. ೯.)**"ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್"** ಶ್ವೇ. ೬. ೧೩)**"ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ"** (ಗೀ. ೩. ೧೯) **"ಆಬ್ರಹ್ಮಸ್ತಂಬಪರ್ಯನ್ತಾ ಜಗದಂತರ್ವ್ಯವಸ್ಥಿತಾಃ। ಪ್ರಾಣಿನಃ ಕರ್ಮಜನಿತಸಂಸಾರವಶವರ್ತಿನಃ"** (ವಿ. ಧರ್ಮ ೧೦೪ ಅ. ೩೬) **ಚತುರ್ಮುಖ ಮೊದಲುಗೊಂಡು**

ಜಗತ್ತಿನ ಸರ್ವಪ್ರಾಣಿಗಳೂ ಕರ್ಮದಿಂದುಂಟಾದ ದೇಹಕ್ಕೆ ವಶವಾಗಿರುವವರೇ. ಇವರುಗಳಿಗೆ ಶುಭಾಶ್ರಯರೂಪ ದಿವ್ಯಮಙ್ಗಳ ವಿಗ್ರಹವಿಲ್ಲವೆಂದು ಮುಂದೆ ಹೇಳಲ್ಪಡುತ್ತದೆ. ನಿತ್ಯತ್ವವೇನೋ ಕ್ಷೇತ್ರಜ್ಞರಿಗೆ ಒಪ್ಪಿಕೊಳ್ಳುತ್ತೇವೆ, ಆದರೆ ಸೃಷ್ಟಿಯಲ್ಲೇ ಅವರುಂಟಾಗುತ್ತಾರೆ ಎಂದು ಹೇಳುವೆವು ಎಂಬ ವಾದವನ್ನು ತಂದರೆ, ಅಸತ್ಖ್ಯಾತಿ ಹೇಳಲು ಸಾಧ್ಯವಿಲ್ಲದುದರಿಂದ ಮುಕ್ತರಿಗೆ ಪುನರಾವೃತ್ತಿಯುಂಟಾಗಿ ಸೃಷ್ಟಿಯು ಎಂದು ಒಪ್ಪಿಕೊಳ್ಳಬೇಕಾಗುತ್ತದೆಯಾದುದರಿಂದ ಬದ್ಧಜೀವರೇ ಅನಾದಿಯಾಗಿದ್ದರು, ಅವರಿಗೆ ಪೂರ್ವಾರ್ಜಿತ ಕರ್ಮಪ್ರವಾಹವೂ ಅನಾದಿಯಾಗಿತ್ತು, ಎಂದು ಒಪ್ಪತಕ್ಕದ್ದಾಗಿರುತ್ತದೆ. ಇದರಿಂದ ಪ್ರಳಯದಶೆಯಲ್ಲೂ, ಪುನಃ ಸೃಷ್ಟಿಕಾಲದಲ್ಲೂ ಸಹ ಕರ್ಮಪ್ರವಾಹವು ಅನಾದಿಯಾಗಿಟ್ಟುಕೊಂಡು ವಿಷಮಸೃಷ್ಟಿಗೆ ಹೇತುವಾಗುತ್ತದೆಂದು ಒಪ್ಪಲೇಬೇಕು.

ಪೂರ್ವಾರ್ಜಿತಕರ್ಮಪ್ರವಾಹವು ಅನಾದಿಯಾಗಿ ಇತ್ತು ಎಂಬುವರ ಅಭಿಪ್ರಾಯವನ್ನು ಸರಿಯಾಗಿ ತಿಳಿಯತಕ್ಕದ್ದಾಗಿರುತ್ತದೆ. ಕರ್ಮಮಾಡಿದರೆ ಕರ್ಮವು ಗತಿಸಿಹೋಗುತ್ತದೆ. ಅದೇನೂ ಉಳಿದು ಹೊರೆಯುವುದಿಲ್ಲ. ಅದರ ಫಲವನ್ನು ಮಾತ್ರ ಅನುಭವಿಸತಕ್ಕದ್ದಾಗಿರುತ್ತದೆ. ಆ ಫಲವು ಯದ್ರೂಪವೆಂದರೆ ಪುಣ್ಯವಾಗಿದ್ದರೆ ಭಗವದನುಗ್ರಹರೂಪವು, ಪಾಪವಾಗಿದ್ದರೆ ನಿಗ್ರಹರೂಪವು ಎಂದು ತಿಳಿಯತಕ್ಕದ್ದು.

**ಮೂಲಕ್ಕೆ ಅವತಾರಿಕೆಯು** :—ಹಿಂದೆ ಈ ವಿವಿಧ ವಿಚಿತ್ರ ಸೃಷ್ಟಿಗೆ ತಾನು ಕಾರಣವಲ್ಲವೆಂದೂ, ತಾನೂ ಉದಾಸೀನನಹಾಗೆ ಇರುವವನೆಂದೂ, ಹೇಳಲ್ಪಟ್ಟಿತು. ಹಾಗಾದರೆ ಈ ಸೃಷ್ಟಿಯಲ್ಲಿ ನಿನಗೆ ಅನ್ವಯವೇ ಇಲ್ಲವೋ? ನೀನು ಉದಾಸೀನನಾದರೆ ಯಾರಿಗೂ ನಿನ್ನಿಂದ ಪ್ರಯೋಜನವಿಲ್ಲವೋ? ಹಾಗೆ ಉದಾಸೀನನಾದರೆ ನಿನ್ನನ್ನು **"ಮಗ್ನಾನಾಂ ಭವಿನಾಂ ಸಮುತ್ತಾರಾಯ ನಾರಾಯಣಃ"** ಎಂದು ಸಂಸಾರ ಸಾಗರದಲ್ಲಿ ಬಿದ್ದ ಈ ಚೇತನರನ್ನು ಕೈಹಿಡಿದು ಎತ್ತುತ್ತೀ ಎಂದು ಹೇಳುತ್ತಾರಲ್ಲಾ ಅದು ಹೇಗೆ? ಉದಾಸೀನನಾದರೆ, ಈಗ ನೀನು ಅವತರಿಸಿರುವದು ಏತಕ್ಕೆ? ಇತ್ಯಾದ್ಯನೇಕ ಶಙ್ಕೆಗಳಿಗೆಲ್ಲಾ ಸಮಾಧಾನವಾಗಿ ಈ ಶ್ಲೋಕವನ್ನು ಹೇಳುತ್ತಾರೆ. ಲೋಕದ ಸೃಷ್ಟಿ ಸ್ಥಿತಿ ಸಕಲವಿಧ ಪ್ರವೃತ್ತಿಗಳು, ಲಯ, ಹೀಗೆ ಎಲ್ಲಕ್ಕೂ ನಾನೇ ಪ್ರಧಾನ ಹೇತುವು, ನಾನಿಲ್ಲದೆ ಲೋಕವ್ಯಾಪಾರಗಳು ನಡೆಯುವದಿಲ್ಲವು. ಈ ಮೇಲೆ ಹೇಳಿದ ಎಲ್ಲವೂ ನನ್ನಿಂದಲೇ ನಡೆಯುತ್ತವೆ. ಆದರೆ ಸೃಷ್ಟಿಯ ವೈಷಮ್ಯಕ್ಕೆ ಮಾತ್ರ ನಾನು ಕಾರಣವಲ್ಲವು ಎಂದು **ಉದಾಸೀನವತ್** ಎಂದು ಹೇಳಿದನೇ ವಿನಾ ಬೇರೆಯಲ್ಲವೆಂದು ಉಪದೇಶಿಸುತ್ತಾರೆ. ತಾನು ಆ ಸೃಷ್ಟಿಯಲ್ಲಿನ ವೈಷಮ್ಯಕ್ಕೆ ಮಾತ್ರ ಕಾರಣವಲ್ಲವೇವಿನಾ, ಸೃಷ್ಟಿ ಸ್ಥಿತಿ ಲಯಾದಿಗಳಿಗೆಲ್ಲಾ **ಸರ್ವಂ ಖಲ್ವಿದಂ ಬ್ರಹ್ಮತಜ್ಜಲಾನ್ ಇತಿ ಶಾಂತ ಉಪಾಸೀತ" "ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯನ್ತ್ಯಭಿಸಂವಿಶನ್ತಿ ತದ್ವಿಜಿಜ್ಞಾಸಸ್ವತದ್ಬ್ರಹ್ಮೇತಿ"** ಎಂದು ಶ್ರುತಿಗಳು ಉದ್ಘೋಷಿಸುವ ಹಾಗೆ ಸರ್ವವಿಧ ಕಾರಣನೂ ತಾನೇ ಎಂದು ಹೇಳುತ್ತಾರೆ. ಕೆಲವರು, ಪರಬ್ರಹ್ಮನು ಸಙ್ಕಲ್ಪಿಸುವ ಮೂಲಕಮಾತ್ರವೇ ಕಾರಣನಾದುದರಿಂದ ನಿಮಿತ್ತಕಾರಣನೂ, ಪ್ರಕೃತಿಯು ಉಪದಾನವೆಂದೂ, ಹೇಳುವರು. ಹಾಗೆ ಹೇಳುವವರ ಶಙ್ಕೆಗೆ ಈ ಶ್ಲೋಕವು ಸಮಾಧಾನವನ್ನು ಹೇಳುತ್ತದೆ. ಅವರುಗಳು ಕುಲಾಲ ಮತ್ತು ಘಟದೃಷ್ಟಾಂತವನ್ನು ನೋಡಿ ಹಾಗೆ ವಾದಿಸುವರು. ಕುಲಾಲನಿಗೂ ಮೃತ್ತಿಗೂ ಏನೊಂದೂ ಇತರ ಸಂಬಂಧವಿಲ್ಲದುದರಿಂದ ಅಲ್ಲಿ ನಿಮಿತ್ತಕಾರಣವೇ ಬೇರೆ, ಉಪಾದಾನವೇ ಬೇರೆ; ಇಲ್ಲಿಯಾದರೋ ಹಾಗಲ್ಲವು. ಪರಮಾತ್ಮನು ಚರಾಚರಗಳ ಸಮ್ಮೇಳನವಾದ ಪರಾಪರಾಪ್ರಕೃತಿಗಳಾದ ಎರಡು ದ್ರವ್ಯಗಳಿಗೂ ಒಟ್ಟಿಗೆ ಆತ್ಮಾವಾಗಿ, ಅವು ತನಗೆ ಅಪೃಥಕ್ಸಿದ್ಧ ವಿಶೇಷಣವಾಗಿರುವದರಿಂದ, ನಿಮಿತ್ತೋಪಾದಾನಾದಿಕಾರಣಗಳು ಪರ

**ಮೂ. ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌನ್ತೇಯ ಜಗದ್ಧಿ ಪರಿವರ್ತತೇ ॥** ೧೦.

ಮಾತ್ಮನೊಬ್ಬನಲ್ಲೇ ಅನ್ವಯಿಸುತ್ತವೆ. ಹಾಗೆಯೇ ಶ್ರುತಿಯೂ ಕೂಡ **"ಯಥೋರ್ಣನಾಭಿಸ್ಸೃಜತೇ ಗೃಹ್ಣತೇಚ"** (ಮು. ೧. ೧. ೭.) ಎಂದು ಕೊಟ್ಟಿರುವ ದೃಷ್ಟಾಂತದಲ್ಲಿ ಒಂದು ಜಾಡರ ಹುಳುವೇ ತನ್ನ ಗೂಡನ್ನು ಕಟ್ಟಲು ತಾನೇ ಸಂಕಲ್ಪಿಸಿ ಸಾಮಗ್ರಿಯನ್ನು ತಾನೇ ಒದಗಿಸಿಕೊಳ್ಳುವದರಿಂದ ಸರ್ವವಿಧಕಾರಣವೂ ಆ ಹುಳುವೇ ಆಗಿರುತ್ತದೆ. ಹಾಗೆಯೇ ಈ ಪರಮಾತ್ಮನೂ ಕೂಡ ನಿಮಿತ್ತೋಪಾದಾನಾದಿ ಸರ್ವಕಾರಣನೂ ತಾನೇ. ಜಗತ್ಸೃಷ್ಟಿಯಲ್ಲಿರುವ ಒಂದು ಕೀಟಕ್ಕೇನೆ ನಿಮಿತ್ತೋಪಾದಾನ ಕಾರಣವಾಗಿರುವ ಶಕ್ತಿಯಿರುವಾಗ ಅದನ್ನುಂಟು ಮಾಡಿದ ಪರಮಾತ್ಮನಿಗೆ ಆ ಶಕ್ತಿ ಇಲ್ಲವೇ ? ಹಾಗೆ ಹೇಳದಿದ್ದರೆ **"ಬ್ರಹ್ಮವನಂ ಬ್ರಹ್ಮಸವೃಕ್ಷ ಆಸೀತ್ ಯತೋದ್ಯಾ ವಾ ಪೃಥಿವೀ ನಿಷ್ಟತಕ್ಷುಃ"** **"ಜ್ಯೋತೀಂಷಿವಿಷ್ಣು ರ್ಭುವನಾನಿ ವಿಷ್ಣುಃ"** (ವಿ. ಪು ೨-೧೨-೩೮) **"ಜಗಚ್ಚ ಸಃ"** (ವಿ. ಪು. ೧-೧-೩೧) ಇತ್ಯಾದಿಗಳಲ್ಲಿ ತೋರುವ ಸಾಮಾನಾಧಿಕರಣ್ಯವನ್ನು ಹೇಳಲು ಸಾಧ್ಯವಿಲ್ಲವಾಗುತ್ತದೆ. ಕಾರ್ಯಕಾರಣಗಳಿಗೆ ಅನನ್ಯತ್ವವೂ ಆಗ ಕೂಡುವದಿಲ್ಲವು. ಉದಾಸೀನನಾಗಿದ್ದೇನೆಂಬುದರಿಂದ ತನಗೆ ಕಾರಣತ್ವವಿಲ್ಲವೆಂದು ಭಾವಿಸತಕ್ಕದ್ದಲ್ಲವು. ಸರ್ವವಿಧ ಕಾರಣನೂ ತಾನೇ. ಆದರೆ ಅದರ ವೈಷಮ್ಯಕ್ಕೆ ಮಾತ್ರ ತಾನು ಹೇತುವಲ್ಲವು ಎಂದು ಹೇಳಿದರು, ಚೇತನರ ಅನಾದಿಯಾಗಿರುವ ವಿಚಿತ್ರಕರ್ಮ ಪ್ರವಾಹವೇ ಕಾರಣವೆಂಬುದು ಈಗ ಪ್ರಕೃತವಾಗಿರುವ ಉಪದೇಶವು.

**ಮೂಲಕ್ಕೆ ಅರ್ಥವು :—ಅಧ್ಯಕ್ಷೇಣ** - ತನಗೆ ಪ್ರಕೃತಿಯು ಶರೀರವಾಗಿರುವದರಿಂದಲೇ ಅದನ್ನು ಯಾವಾಗಲೂ ನೋಡುತ್ತಿರಲು ಯೋಗ್ಯನಾದ ಎಂದರೆ ನಿಯಮಿಸಲು ಯೋಗ್ಯನಾದ ಅಥವಾ ಅದು ತನಗೆ ಶರೀರವಾಗಿ ಭೂತವಾಗಿರುವದರಿಂದ, ಶೇಷಿಯಾಗಿ ನಿಯಮಿಸಲು ಯೋಗ್ಯನಾದ, **ಮಯಾ** - ನನ್ನಿಂದ, **ಪ್ರಕೃತಿಃ** - ಚೇತನ ಸಂಸೃಷ್ಟ ಅಚಿತ್ತು, **ಸಚರಾಚರಮ್** - ಚರಾಚರಗಳಿಂದ ಎಂದರೆ ಜಂಗಮಸ್ಥಾವರುಗಳಿಂದ ಕೂಡಿದ, **ಜಗತ್** - ಜಗತ್ತನ್ನು, **ಸೂಯತೇ** - ಹೆರುತ್ತದೆ ಎಂದರೆ ಉಂಟುಮಾಡುತ್ತದೆ. ಇದು ಹಿಂದೆ ಹೇಳಿರುವ **"ಪ್ರಕೃತಿಂ ಸ್ವಾಂ ಅವಷ್ಟಭ್ಯ ವಿಸೃಜಾಮಿ"** ಎಂಬುದರ ಅನುವಾದವೇ ; **ಮಯಾಧ್ಯಕ್ಷೇಣ** ಎಂಬಲ್ಲಿ ಕರ್ತೃಕರಣ ತೃತೀಯೆ ಯಲ್ಲವಾದುದರಿಂದ ಹೇತು ತೃತೀಯವೇ. ಹೀಗಿರುವಾಗ ಸರ್ವಹೇತುವೆಂದು ಹೇಳದೆ ನಿಮಿತ್ತ ಮಾತ್ರವೆಂದು ಹೇಳಲು ಕಾರಣವಿಲ್ಲವು. **"ಸೂಯತೇ ಪುರುಷಾರ್ಥಂ ಚ ತೇನೈವಾ ಧಿಷ್ಠಿತಾಜಗತ್"** ಎಂಬ ಮಾಂತ್ರಿಕೋಪನಿಷದ್ವಾಕ್ಯವನ್ನು ಮೂಲದ ಪೂರ್ವಾರ್ಧವನ್ನು ಸೂಚಿಸುತ್ತದೆ. ಪ್ರಜಾ ಸೃಷ್ಟಿಗೆ ಒಬ್ಬ ಪುರುಷನೂ ಒಬ್ಬ ಸ್ತ್ರೀಯೂ ಸಹ ಹೇಗೆ ಹೇತುವೋ, ಹಾಗೆಯೇ ಅಧ್ಯಕ್ಷನಾದ ನಾನೂ ಚರಾಚರಯುಕ್ತವಾದ ಪ್ರಕೃತಿಯೂ ಇಬ್ಬರೂ ಸೇರಿಯೇ ಜಗತ್ತು ಉಂಟಾಗುತ್ತದೆಂಬ ಭಾವವು, ಇಲ್ಲಿ ಅಧ್ಯಕ್ಷಶಬ್ದವು ಪುಲ್ಲಿಂಗವಾಗಿಯೂ, ಪ್ರಕೃತಿ ಸ್ತ್ರೀಲಿಂಗವಾಗಿಯೂ ಇರುವದರಿಂದ ಅಂತಹ ಭಾವವು ಆಲಂಕಾರಿಕವಾಗಿ ತೋರಿಬರುತ್ತದೆ. ಅದೂ ಅಲ್ಲದೆ ಶ್ರುತಿಗಳಲ್ಲಿ ಆತನನೊಬ್ಬನನ್ನೇ ಪುರುಷನನ್ನಾಗಿಯೂ, ಮಿಕ್ಕದ್ದೆಲ್ಲವನ್ನೂ ಸ್ತ್ರೀಯನ್ನಾಗಿಯೂ ಶಾಸ್ತ್ರವೂ **"ಸ್ತ್ರೀಪ್ರಾಯಮಿತರತ್"** ಎಂಬಲ್ಲಿ ಬೋಧಿಸುವದರಿಂದಲೂ, **"ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ"** ಎಂದು **"ಗೌರನಾದ್ಯಂತವತೀ ಜನಿತ್ರೀ ಭೂತಭಾವಿನೀ"** ಎಂದೂ ಪ್ರಕೃತಿಸ್ತ್ರೀಯಾಗಿ ರೂಪಣವಿರುವದರಿಂದಲೂ, ಪುರುಷ, ಸ್ತ್ರೀ ಇಬ್ಬರು ಹೇತುವು ಈ ಜಗತ್ತಿಗೆ ಎಂಬುದು ವ್ಯಕ್ತ ಪಡುತ್ತದೆ. ನಮ್ಮ ಸಿದ್ಧಾಂತರೀತ್ಯಾ ಸೂಕ್ಷ್ಮಚಿದಚಿಚ್ಛರೀರಕ

**ಭಾ. ತಸ್ಮಾತ್ ಕ್ಷೇತ್ರಜ್ಞ ಕರ್ಮಾನುಗುಣಂ ಮದೀಯಾ ಪ್ರಕೃತಿ ಸ್ವಸಙ್ಕಲ್ಪೇನ ಮಯಾಽಧ್ಯಕ್ಷೇಣೇ ಕ್ಷಿತಾ ಸಚರಾಚರಂ ಜಗತ್ಸೂಯತೇ ; ಅನೇನ - ಕ್ಷೇತ್ರಜ್ಞ**

ಪರಮಾತ್ಮನೇ ಕಾರಣನು ಸ್ಥೂಲ ಚಿದಚಿಚ್ಛರೀರಕ ಪರಮಾತ್ಮನೇ ಕಾರ್ಯವು, ಹೀಗೆ ಹೇಳು ವದರಿಂದ ನಮ್ಮ ಸಿದ್ಧಾಂತಕ್ಕೆ ನಿಮಿತ್ತೋಪಾದಾನಾದಿ ಕಾರಣಗಳೂ, ಕಾರ್ಯಕಾರಣಗಳಿಗೆ ಅನನ್ಯತ್ವವೂ, ಸಾಮಾನಾಧಿಕರಣ್ಯವೂ, ಸತ್ಕಾರ್ಯಪ್ರತಿಪಾದವೂ ಎಲ್ಲವೂ ಬಹು ಸಮಂಜಸವಾಗಿ ಕೂಡುತ್ತವೆ. ಇತರ ವಾದಗಳಿಗೆ ಕೂಡುವದಿಲ್ಲವು. **ಅನೇನ ಹೇತುನಾ** - ಈ ಮೇಲಿನ ಕಾರಣದಿಂದಲೇ ಎಂದರೆ ಸೃಷ್ಟಿಗೆ ಹೇಗೆ ನಾನು ಸರ್ವವಿಧಕಾರಣನು ಎಂದು ಹೇಗಾಯಿತೋ, ಅದೇ ಕಾರಣದಿಂದಲೇ **ಹೇ ಕೌನ್ತೇಯ** - ಓ ಕುನ್ತೀಪುತ್ರನಾದ ಅರ್ಜುನನೇ, **ಜಗತ್** - ಈ ಸಚರಾಚರವಾದ ಜಗತ್ತು, **ಪರಿವರ್ತತೇ ಹಿ** - ಪ್ರಳಯವನ್ನು ಹೊಂದುತ್ತದೆಯಷ್ಟೇ ? ಮತ್ತು ಪುನಃ ಸೃಷ್ಟಿಯನ್ನು ಹೊಂದುತ್ತದೆಯಷ್ಟೇ ? ಅಥವಾ ಸೃಷ್ಟಿ ಸ್ಥಿತಿಪ್ರಳಯಗಳು ಚಕ್ರದೋಪಾದಿ ಯಲ್ಲಿ ತಿರುಗುತ್ತವೆಯಷ್ಟೇ? ಎಂಬ ತಾತ್ಪರ್ಯವು. ಕೆಲವರು **ವಿಪರಿವರ್ತತೇ** ಎಂಬ ಪಾಠಾಂತರ ವೆಂದು ಹೇಳುತ್ತಾರೆ.

**ಭಾಷ್ಯಾರ್ಥವು :**—ಹಿಂದೆ ಹೇಳಿದ ಅಭಿಪ್ರಾಯವಾದ ಕ್ಷೇತ್ರಜ್ಞ ಕರ್ಮಾನುಗುಣವಾಗಿ ವಿಷಮಸೃಷ್ಟಿ ಎಂದು ಹೇಳಿದುದಕ್ಕೂ, ಈ ಶ್ಲೋಕದಲ್ಲಿ ಹೇಳುವದಕ್ಕೂ, ಏನೂ ವಿರೋಧವಿಲ್ಲ ವೆಂದು ತಿಳಿಸುವದಕ್ಕಾಗಿಯೂ, ಹಿಂದೆ ಹೇಳಿದುದೇ ತಮ್ಮ ಸ್ವಾತನ್ತ್ರ್ಯಾದಿಗಳಿಗೆ ಹೇತುವೆಂದೂ ತಿಳಿಸುವದಕ್ಕಾಗಿಯೂ, **ತಸ್ಮಾತ್** - ಎಂದು ಉಪಕ್ರಮಿಸಿ ವ್ಯಾಖ್ಯಾನ ಮಾಡಿರುತ್ತಾರೆ. **ತಸ್ಮಾತ್** -ಆ ಕಾರಣದಿಂದಲೇ, **ಕ್ಷೇತ್ರಜ್ಞ ಕರ್ಮಾನುಗುಣಂ**-ಬದ್ಧರಾದವರ ಶರೀರಗಳ ಕರ್ಮ ಗಳಿಗೆ ಅನುಗುಣವಾಗಿ, **ಮದೀಯಾಪ್ರಕೃತಿಃ** - ನನ್ನ ಶರೀರವಾಗಿ ನನ್ನಿಂದಲೇ ನಿಯಮಿಸು ವದಕ್ಕೆ ಯೋಗ್ಯವಾದ ಪ್ರಕೃತಿಯು, ಇಲ್ಲಿ ಪ್ರಕೃತಿ ಶಬ್ದವು **ಚಿತ್ತೊಂದಿಗೆ** ಸೇರಿರುವ **ಅಚಿತ್ತು. ಸ್ವಸಙ್ಕಲ್ಪೇನ** - ನನ್ನ ಸ್ವಕೀಯವಾದ ಸಙ್ಕಲ್ಪ ಮೂಲಕವಾಗಿ, **ಮಯಾಧ್ಯಕ್ಷೇಣ** - ಶೇಷಿ ಯಾಗಿ ಈಶ್ವರನಾಗಿ ನಿಯಂತಾವಾದ ನನ್ನಿಂದ, ಅಥವಾ ಸಮಸ್ತವನ್ನೂ ಸಾಕ್ಷಾತ್ಕರಿಸಲು ಯೋಗ್ಯನಾದ ನನ್ನಿಂದ, **ಈಕ್ಷಿತಾ** - ನೋಡಲ್ಪಟ್ಟುದುವಾಗಿ ಎಂದರೆ ಸಙ್ಕಲ್ಪಿಸಲ್ಪಟ್ಟದುದಾಗಿ, **ಸಚರಾಚರಂ** - ಸ್ಥಾವರ ಜಂಗಮಗಳಿಂದ ಕೂಡಿದ ಈ ಜಗತ್ತನ್ನು, **ಸೂಯತೇ** - ಹೆರುತ್ತದೆ. ಇಲ್ಲಿನ **ಅಧ್ಯಕ್ಷ** ಶಬ್ದವು **"ಯೋಸ್ಯಾಧ್ಯಕ್ಷಃ ಪರಮೇ ವ್ಯೋಮನ್"** ಎಂಬ ಋಗ್ವೇದ ವಾಕ್ಯ ವನ್ನೂ ಮಾಂತ್ರಿಕೋಪನಿಷದ್ವಾಕ್ಯವನ್ನೂ ಜ್ಞಾಪಿಸುತ್ತದೆ. ಇದರಿಂದ ಸರ್ವವಿಧ ಕಾರಣನೂ ತಾನೇ ಎಂದು ಹೇಳಲ್ಪಟ್ಟಿತು. ಸೃಷ್ಟಿ ಎಂದರೆ ಅವ್ಯಕ್ತವಾಗಿ ನಾಮರೂಪಾನರ್ಹಸ್ಥಿತಿಯಲ್ಲಿ ರುವ ಸೂಕ್ಷ್ಮಚಿದಚಿಚ್ಛರೀರಕ ಪರಮಾತ್ಮನು ತನ್ನ ಸಙ್ಕಲ್ಪಮೂಲಕ **"ಬಹುಸ್ಯಾಂ ಪ್ರಜಾ ಯೇಯ"** ಎಂದು ಸಙ್ಕಲ್ಪಿಸಿ, ಸ್ಥೂಲ ಚಿದಚಿಚ್ಛರೀರಕನಾಗುವನು ಎಂಬ ಭಾವವು. ಇಲ್ಲಿ ಅಧ್ಯಕ್ಷಶಬ್ದದಿಂದ ವಿಕಾರ ರಹಿತವಾದ ದೃಕಿ (ಜ್ಞಾನ) ಮಾತ್ರ ಪರನೆಂದು ಕೆಲವರು ಅರ್ಥ ಮಾಡಿರುವುದು ಸಮಂಜಸವಲ್ಲವೆಂದು ಇದರಿಂದ ವ್ಯಕ್ತಪಡುತ್ತದೆ. **"ಘಟಮಹಂ ಜಾನಾಮಿ"** ಎಂಬಲ್ಲಿ ಜ್ಞಾನಕ್ಕೆ ಜ್ಞಾತಾ ಜ್ಞೇಯಗಳಾವಶ್ಯಕವೆಂಬುದು ವ್ಯಕ್ತವು. ಸರ್ವೇಶ್ವರನು ಸಙ್ಕಲ್ಪಿಸಿ ಸೃಷ್ಟಿಮಾಡುವದರಿಂದ ಜ್ಞಾತೃತ್ವವೂ ಕರ್ತೃತ್ವವೂ ಉಂಟು. ಜ್ಞಾತಾವಾದ ಸರ್ವೇಶ್ವರನ ಜ್ಞಾನಕ್ಕೆ ವಿಷಯವಾದ ಈ ಲೋಕವೂ ಸತ್ಯವಾದುದು. ಮಿಥ್ಯೆಯಾಗಲಾರದು. ಹಾಗೆ ಮಿಥ್ಯೆ ಯಾದರೆ ಈತನು ಹೇಗೆ ಅಧ್ಯಕ್ಷನು ? ಸ್ವಂ ಇಲ್ಲದ ಸ್ವಾಮಿಯಾಗುವನು. **"ಪತಿಂವಿಶ್ವಸ್ಯ"** ಇತ್ಯಾದಿಗಳೆಲ್ಲಾ ಮುಖ್ಯಾರ್ಥವಿಲ್ಲದೆ ಔಪಚಾರಿಕ ಪ್ರಯೋಗಗಳಾಗುವದಿಲ್ಲವೇ ? ಸರ್ವಶೇಷಿತ್ವ ಸರ್ವ ಪತಿತ್ವ ಕೂಡಬೇಕಾದರೆ ಜ್ಞೇಯ ವಸ್ತುವು ಸತ್ಯವಾಗಿರಬೇಕು. ಗಗನ ಕುಸುಮದಂತೇ

ಭಾ. **ಕರ್ಮಾನುಗುಣ ಮದೀಕ್ಷಿತೇನ ಹೇತುನಾ, ಜಗತ್ಪರಿವರ್ತತ ಇತಿಮತ್ಸ್ವಾಮ್ಯಂ ಸತ್ಯ ಸಙ್ಕಲ್ಪತ್ವಂ, ನೈರ್ಘೃಣ್ಯಾದಿ ದೋಷರಹಿತತ್ವ ಮಿತ್ಯೇವಮಾದಿಕಂ ಮಮ ವಸುದೇವಸೂನೋ ರೈಶ್ವರಂ ಯೋಗಂ ಪಶ್ಯ ; ಯಥಾಹಶ್ರುತಿಃ (೧) "ಅಸ್ಮಾನ್ಮಾಯೀ ಸೃಜತೇ ವಿಶ್ವಮೇ ತತ್ತಸ್ಮಿಂ ಶ್ಚಾನ್ಯೋಮಾಯಯಾ ಸನ್ನಿರುದ್ಧಃ। ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಮ್" ಇತಿ ||೧೦||**

ಯಾದರೆ ಆಗ **ವಿಶ್ವಪತಿ** ಎಂಬುದು, ಆ ಭಿಕ್ಷುಕನ ಹೆಸರೇನು ಎಂದರೆ ಚಕ್ರವರ್ತಿ ಎಂದು ಹೇಳಿದಂತಾಗುವದಿಲ್ಲವೇ ? ಇನ್ನು ಮುಂದೆ ಹಾಗೆಯೇ ತಾನು ಪ್ರಳಯಕ್ಕೂ ಕೂಡ ಕಾರಣನೆಂದು ಹೇಳಿ, **ಜಗದ್ಧಿ ಪರಿವರ್ತತೇ** ಎಂಬುದರಿಂದ ಸಕಲಲೋಕದ ಪ್ರವೃತ್ತಿಗಳಿಗೂ, ತಾನೇ ಕಾರಣನೆಂದು ಉತ್ತರಾರ್ಧದಿಂದ ಹೇಳಲ್ಪಡುತ್ತದೆಂದು ವ್ಯಾಖ್ಯಾನವನ್ನು ಬರೆಯುತ್ತಾರೆ. **ಅನೇನ** ಎಂದರೆ ಕ್ಷೇತ್ರಜ್ಞರ ಕರ್ಮಗಳಿಗೆ ಅನುಗುಣವಾಗಿ, **ಮದೀಕ್ಷಿತೇನ** - ನಾನು ಸಙ್ಕಲ್ಪಿಸುವನೆಂಬ, **ಹೇತುನಾ** - ಕಾರಣದಿಂದ, **ಜಗತ್ಪರಿವರ್ತತೇ** - ಜಗತ್ತು ಪ್ರಳಯವನ್ನು ಹೊಂದುತ್ತದೆ, (ಇದು ಜಗತ್ತಿನ ಸ್ಥಿತಿಗೂ ಉಪಲಕ್ಷಣವು) **ಇತಿ** ಎಂಬುದಾಗಿ, **ಮತ್ಸ್ವಾಮ್ಯಂ** - ನಾನು ಎಲ್ಲಕ್ಕೂ ಈಶ್ವರನಾಗಿರುವ ಭಾವವೂ, **ಸತ್ಯ ಸಂಕಲ್ಪತ್ವಂ**-ನಾನು ಅಮೋಘವಾಗಿ ಅಪ್ರತಿಹತವಾಗಿ ಸಙ್ಕಲ್ಪಿಸುವ ಪ್ರಕಾರವೂ, ನೈರ್ಘೃಣ್ಯಾದಿ ದೋಷಗಳೂ, ನನಗೆ ಸಂಭವಿಸದಿರೋಣವೂ, **ಇತ್ಯೇವ ಮಾದಿಕಂ** - ಇವೇ ಮೊದಲಾದ ಮಹತ್ತ್ವಗಳುಳ್ಳ, **ಮಮ ವಸುದೇವ ಸೂನೋಃ**- ವಸುದೇವ ಪುತ್ರನಾಗಿ ಅವತರಿಸಿರುವ ನನ್ನ, - **ಐಶ್ವರಂ ಯೋಗಂ ಪಶ್ಯ** - ಮಹತ್ತಾದ ಈಶ್ವರಭಾವವನ್ನು ಹೊಂದಿರುವಿಕೆಯನ್ನು ನೋಡು ಎಂದರೆ ತಿಳಿದುಕೋ. ಆದರೆ ಇವೆಲ್ಲಾ ಮೂಲದಲ್ಲಿಲ್ಲದೆ ಅನುವಾದ ಏಕೆ ಎಂದರೆ, ಹಿಂದೆ ಐದನೇಯ ಶ್ಲೋಕದಲ್ಲಿ ಅರ್ಜುನನಿಗೆ ಉಪಾಸ್ಯ ದೇವತೆಯಲ್ಲಿ ಶ್ರದ್ಧೆಯನ್ನುಂಟುಮಾಡುವದು ಆವಶ್ಯಕವೆಂದು ತಿಳಿದು ಸ್ವಮಾಹಾತ್ಮ್ಯೆಯನ್ನು **ಪಶ್ಯಮೇ ಯೋಗಮೈಶ್ವರಂ** ಎಂದು ಹೇಳಿದುದನ್ನು ಸ್ಮರಿಸಿ, ಇಲ್ಲಿವರೆಗೂ ಆ ಮಾಹಾತ್ಮ್ಯೆಯು ಉಪದೇಶಿಸಲ್ಪಟ್ಟಿತ್ತೆಂದು ತಿಳಿಸುವದಕ್ಕಾಗಿಯೇ ಎಂದು ಭಾವಿಸತಕ್ಕದ್ದು. ಮುಂದೆ ಈಗ ತಾವು ಉಪಪಾದಿಸಿದುದರ ಸಮರ್ಥನೆಗಾಗಿ, ಶ್ವೇತಾಶ್ವತರ (೪. ೯) ವಾಕ್ಯವನ್ನು ಉಪಪಾದಿಸುತ್ತಾರೆ.— **ಯಥಾಹ ಶ್ರುತಿಃ** - ಈ ವಿಷಯವನ್ನೇ ಶ್ರುತಿಯೂ ಹೇಗೆ ಹೇಳುತ್ತದೆ ಎಂದರೆ — "**ಅಸ್ಮಾತ್** - ತನಗೆ ಶರೀರಭೂತವಾದ, ತನ್ನಿಂದ ವಿಭಕ್ತವಾಗದೇ ಇರುವ, ಸೂಕ್ಷ್ಮಾವಸ್ಥೆಯಲ್ಲಿರುವ, ಪ್ರಕೃತಿಯಿಂದ, **ಮಾಯೀ** - ಈ ಪ್ರಕೃತಿಗೂ ನಿಯಾಮಕನಾದ ಸರ್ವೇಶ್ವರನು, **ವಿಶ್ವಮೇತತ್** - ಈ ಸಮಸ್ತ ಜಗತ್ತನ್ನೂ, **ಸೃಜತಿ** - ಸೃಷ್ಟಿಸುತ್ತಾನೆ, **ತಸ್ಮಿನ್** - ಅಂತಹ ಪ್ರಕೃತಿಯಲ್ಲಿ, **ಅನ್ಯಃ** - ಇನ್ನೊಬ್ಬನಾದ ಜೀವಾತ್ಮನು (ಜಾತ್ಯೇಕವಚನವು) **ಮಾಯಯಾ** - ಆ ಪ್ರಕೃತಿಯಿಂದಲೇ ಎಂದರೆ ಅದಕ್ಕೆ ಸಂಬಂಧಪಟ್ಟ ಕರ್ಮ, ಅವಿದ್ಯಾದಿಗಳಿಂದ, **ಸನ್ನಿರುದ್ಧಃ** - ಬದ್ಧನಾಗಿರುವನು". ಆಗಲಿ ಇಲ್ಲಿ ಮಾಯಾ ಮಾಯೀ ಶಬ್ದಗಳಿಗೆ ಪ್ರಕೃತಿ ಎಂದೂ ಪ್ರಕೃತಿ ಶರೀರಕನಾಗಿ ತನ್ನಿಯಾಮಕನೆಂದೂ ಅರ್ಥಮಾಡಲ್ಪಟ್ಟಿತಲ್ಲಾ ಅದು ಹೇಗೆ ? ಮಾಯಾಶಬ್ದಕ್ಕೆ ಇಂದ್ರಜಾಲಾದಿ ಕಣ್ಣುಕಟ್ಟು ಮಾಯೆ ಎಂಬ ಅರ್ಥವಲ್ಲವೋ ? ಮಿಥ್ಯಾತ್ವವನ್ನು ಬೋಧಿಸುವ ಶಬ್ದಗಳಲ್ಲವೋ ? ಎಂದರೆ ಹಾಗಲ್ಲವು. ಮಾಯಾ ಎಂದರೆ ಪ್ರಕೃತಿ ಎಂಬ, **ಮಾಯೀ** ಎಂದರೆ ಪ್ರಕೃತಿಯನ್ನು ಅಪೃಥಕ್ಸಿದ್ಧ ವಿಶೇಷಣವಾಗಿವುಳ್ಳ ಸರ್ವೇಶ್ವರನೆಂಬ ಅರ್ಥವೆಂದು ತೋರಿಸುವದಕ್ಕಾಗಿ ಆ ಶ್ರುತಿಯನ್ನೇ ಮುಂದೆ ಉದಾಹರಿಸುತ್ತಾರೆ. "**ಮಾಯಾಂತು ಪ್ರಕೃತಿಂ ವಿದ್ಯಾತ್**" ಇಲ್ಲಿ **ತು** ಶಬ್ದವು,

ಶ್ವೇ, ೪ - ೯, ೧೦.

ಇತರರು ಭಾವಿಸುವ ಸರ್ವಶಜ್ಞಾ ಮತ್ತು ಭ್ರಮ ನಿವಾರಣಕ್ಕಾಗಿ ಎಂದು ಭಾವಿಸತಕ್ಕದ್ದು. ಮಾಯೆ ಎಂದರೋ ಪ್ರಕೃತಿ ಎಂದು ತಿಳಿಯತಕ್ಕದ್ದು. **ಮಾಯಿನಂತು ಮಹೇಶ್ವರಂ**- ಪಶ್ಯಮೇ ಯೋಗಮೈಶ್ವರಂ ಎಂಬಲ್ಲಿ ತೋರಿಬರುವ ಮಹದೈಶ್ವರ್ಯಯುಕ್ತನಾಗಿ, ಲೀಲಾ ವಿಭೂತಿಗೆಲ್ಲಾ ನಾಯಕನಾಗಿ ಪ್ರಕೃತಿ ಶರೀರಕನಾದ ಪರಮಾತ್ಮನೆಂದು ತಿಳಿಯುವವು. ಇಲ್ಲಿ ಸ್ವಾಮ್ಯಂ ಎಂಬುದರಿಂದ ಚಿದಚಿದೆಲ್ಲವೂ ತನ್ನ ಸ್ವತ್ತು, ತಾನು ಸ್ವಾಮಿಯು; ಸರ್ವ ಚಿದಚಿತ್ತುಗಳನ್ನು ನಿಯಮಿಸುವ ಶಕ್ತಿಯನ್ನೂ, ಸತ್ಯ ಸಜ್ಕಲ್ಪವೆಂಬುದರಿಂದ ಆ ನಿಯಮನದಲ್ಲಿ ರಾಜರ ನಿಯಮನಾದಿಗಳಲ್ಲಿರುವ ಕ್ಲೇಶವು ಯಾವುದೂ ಇಲ್ಲವೆ, **"ಅಜ್ಗುಳ್ಯಗ್ರೇಣ ತಾನ್ ಹನ್ಯಾಂ ಇಚ್ಛನ್ ಹರಿಗಣೇಶ್ವರ"** ಎಂಬಲ್ಲಿ ತೋರುವ ಲೀಲಾರೂಪ ಸಜ್ಕಲ್ಪಮಾತ್ರದಿಂದಲೇ ನಿಯಮಿಸುವ ಶಕ್ತಿಯನ್ನೂ ಹೇಳಿರುವವರಿಂದ, ಲೋಕದ ಸಕಲ ಪ್ರವೃತ್ತಿಗಳು ತನ್ನಧೀನವೆಂದೂ ಅವುಗಳಿಗೆಲ್ಲಾ ಸರ್ವವಿಧ ಹೇತುವೂ ತಾನೇ ಎಂದೂ ಹೇಳಲ್ಪಟ್ಟಿತು. **ಉದಾಸೀನವತ್** - ಎಂದು ಹೇಳಿರುವದರಿಂದ ಚೇತನರ ವಿಷಯದಲ್ಲಿ ತಟಸ್ಥನೆಂದು ಭಾವಿಸತಕ್ಕದ್ದಲ್ಲವು. ಸೌಲಭ್ಯ ಸೌಶೀಲ್ಯ, ವಾತ್ಸಲ್ಯ ಕೃಪೌದಾರ್ಯಾದಿ ಆಶ್ರಿತೋಪಯುಕ್ತ ಗುಣಗಳಿಂದ ಶೋಭಿಸುವವನಾಗಿ ಲೋಕೋಪಕಾರಕ್ಕಾಗಿಯೇ ಶ್ರೀಕೃಷ್ಣನಾಗಿ ಅವತರಿಸಿರುತ್ತೇನೆಂದು **ವಸುದೇವ ಸೂನೋಃ ಐಶ್ವರಂ ಯೋಗಂ** ಎಂದು ಪ್ರಯೋಗಿಸಿರುತ್ತಾರೆ. ಆದರೆ ವಸುದೇವಸೂನುವಾಗಿ **ಐಶ್ವರ್ಯಯೋಗ** ವನ್ನು ಪ್ರದರ್ಶಿಸಿರುವ ದಿವ್ಯಗಳಾದ ಅತಿಮಾನುಷ ಚೇಷ್ಟೆಗಳು ಪ್ರದರ್ಶಿಸಲ್ಪಟ್ಟಿವೆಯೋ ? ಎಂದರೆ, ಪ್ರತಿಯೊಂದನ್ನೂ ವಿಮರ್ಶಿಸಿ ನೋಡಿದರೆ, ಅತಿಮಾನುಷ ಚೇಷ್ಟೆಯೇ- ಅನೇಕ ಅತಿಮಾನುಷ ಚೇಷ್ಟೆಗಳನ್ನೆಲ್ಲಾ ಶ್ರೀ ಭಾಷ್ಯಕಾರರು ಗೀತೆಯ ಪ್ರಥಮಾವತಾರಿಕೆಯಲ್ಲೇ ವ್ಯಕ್ತಪಡಿಸಿರುತ್ತಾರೆ. ಗೋವರ್ಧನೋದ್ಧರಣವು, ದ್ರೌಪದಿಯ ಮಾನ ಸಂರಕ್ಷಣೆಯು, ಬ್ರಹ್ಮನ ವತ್ಸಾಪಹರಣ ಸಜ್ಕಲ್ಪ ಭಂಗವು, ತನ್ನ ವಕ್ತ್ರಾರವಿಂದದಲ್ಲಿ ವಿಶ್ವ ಪ್ರದರ್ಶನವು, ಬ್ರಾಹ್ಮಣನ ಮೃತ ಪುತ್ರರನ್ನು ತಂದುಕೊಡುವದು, ಕಾಳಿಂಗ ಮರ್ದನವು ಇವೇ ಮೊದಲಾದ ಸಹಸ್ರ ದಿವ್ಯ ಚೇಷ್ಟಿತಗಳನ್ನು ನಿದರ್ಶನಕ್ಕೆ ತರಬಹುದು. ಹೀಗೆ ಮನುಷ್ಯನಾಗಿ ಅವತರಿಸಿದರೂ ಪರತ್ವ ಸೌಲಭ್ಯಾದಿ ಗುಣಗಳನ್ನೂ, ಇನ್ನೂ ಅವತಾರ ರಹಸ್ಯವನ್ನು ಹಿಂದೆ ಐದು ಶ್ಲೋಕಗಳಿಂದ ಬೋಧಿಸಿದ ಸರ್ವ ಮಹಿಮೆಯನ್ನೂ, ಹೊಂದಿದವನೆಂದು ಸೂಚಿಸುವದಕ್ಕಾಗಿ, **"ವಸುದೇವ ಸೂನೋಃ ಐಶ್ವರಂಪಶ್ಯ"** ಎಂಬ ಪ್ರಯೋಗವು. ಈ ಮಹಿಮೆಗಳೆಲ್ಲಾ ದಶಮಸ್ಕಂಧ ಭಾಗವತದಲ್ಲೂ, ಪಂಚಮಾಂಶ ವಿಷ್ಣುಪುರಾಣದಲ್ಲೂ ಮಹರ್ಷಿಗಳ ಮೂಲಕ ವ್ಯಕ್ತವು. ಮುಂದೆ ವಿಶ್ವರೂಪ ಪ್ರದರ್ಶನದಲ್ಲೇ ನನ್ನ ಐಶ್ವರ ಯೋಗವು ವ್ಯಕ್ತಪಡುತ್ತದೆಂಬುದೂ ದ್ಯೋತಿತವು. ಈ ಶ್ಲೋಕವು ಮುಖ್ಯವಾಗಿ ಏಕತತ್ವ ವಾದವನ್ನು ನಿರಾಕರಿಸಿ, ಮೂರು ತತ್ವಗಳು **"ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ"** ಎಂಬ ಶ್ರುತಿವಾಕ್ಯದಲ್ಲಿ (ಶ್ವೆ. ೧. ೧೨) ಉಪಪಾದಿತವಾದ ಹಾಗೆ, ಅಧ್ಯಕ್ಷನಾದ ತಾನು, ಚರಾಚರಗಳು, ಹೀಗೆ ಮೂರು ಉಂಟೆಂಬುದನ್ನು ಬೋಧಿಸುತ್ತತ್ತದೆ, ಅಚರ ಶಬ್ದದಲ್ಲಿ ಅಡಗಿರುವ ಅಚೇತನ ವಸ್ತುವು ಏಕತತ್ವವಾದ ಚೇತನದಿಂದ ಕಾರಣ ಕಾರ್ಯಭಾವದಿಂದ ಹೇಗೆ ಉಂಟಾದೀತು ? ಎಂದು ಕೇಳಬೇಕಾಗುತ್ತದೆ. ಚೇತನವು ಎಂದಿಗೂ ಕಾರ್ಯರೂಪವಲ್ಲ ಅಚೇತನವಾಗಲಾರದು. ಆಗ ಸತ್ಕಾರ್ಯವಾದವು ಕೂಡುವದಿಲ್ಲವು. **"ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ"** ಎಂಬ ಬ್ರಹ್ಮಸೂತ್ರಾರ್ಥವೂ ಸಮರ್ಪಕವಾಗಲಾರದು. ಅಚೇತನವು ಮಿಥ್ಯಾ ಎಂದು ಸಮಾಧಾನವನ್ನು ಹೇಳಿದರೆ ಅಂತಹ ಮಿಥ್ಯೆಯಾದುದು ಮಹಾವಿಭೂತಿಯಲ್ಲಿ ಸೇರಿ **"ಪಶ್ಯಮೇ ಯೋಗಮೈಶ್ವರಮ್"** ಎಂದು ಹೇಳಿಸಿಕೊಳ್ಳಲು ಹೇಗೆ ಅರ್ಹವು ? **ಮಿಥ್ಯಾ** ಶಬ್ದಕ್ಕೆ ಶ್ರೀಮದ್ ಅದ್ವೈತ ಶಿಖಾಮಣಿ

**ಮೂ. ಅವಜಾನಂತಿ ಮಾಂ ಮೂಢಾ ಮಾನುಷೀಂ ತನು ಮಾಶ್ರಿತಮ್ ।**
**ಪರಂ ಭಾವ ಮಜಾನಂತೋ ಮಮ ಭೂತ ಮಹೇಶ್ವರಮ್ ॥ ೧೧.**

ಗಳಾದ ಕಲ್ಕತ್ತೆಯ ಕೋಕಿಲೇಶ್ವರಶಾಸ್ತ್ರಿಗಳು ಹೇಳುವಹಾಗೆ "Incapable of independent existence" **ಅಪೃಥ ಕ್ಸಿದ್ಧ** ವಿಶೇಷಣವಾಗಿ ಭಾವಿಸಿದುದಾದರೆ ಶಾಸ್ತ್ರಸಮ್ಮತವಾದ ಅಭಿಪ್ರಾಯವಾಗುತ್ತದೆ ಹೀಗೆ **ಅರ್ಥ ಹೇಳಿದರೆ**. ಮೂರು ತತ್ವಗಳನ್ನು ಒಪ್ಪಬೇಕಾಗುತ್ತದೆ. ಆದರೆ ಆ ಮಹನೀಯರು ಮೂರು ತತ್ವಗಳುಂಟೆಂದು ಹೇಳಲಿಲ್ಲವು. ಮೂರು ತತ್ವವೇ ಯಥಾರ್ಥವು. ಆದುದರಿಂದ ಚರಾಚರಗಳೆಲ್ಲಾ ಆತನ ನಿಯಾಮ್ಯವರ್ಗವಾಗಿ ವಿಭೂತಿಯಲ್ಲಿ ಸೇರಿದವು. ಅಧ್ಯಕ್ಷನಾದ ತಾನು ಅವಕ್ಕೆಲ್ಲಾ ನಿಯಾಮಕನೆಂಬ ಶಾಸ್ತ್ರಾರ್ಥವು ಈ ಶ್ಲೋಕದಲ್ಲಿ ಉಪದಿಷ್ಟವು. ॥ ೧೦ ॥

**ಮೂಲಕ್ಕೆ ಅರ್ಥವು:—"ಯೋಗಮೈಶ್ವರಂ"** ಎಂದು ಹೇಳಲ್ಪಟ್ಟ ನನ್ನ ಮಾಹಾತ್ಮ್ಯೆಯಾದರೋ, ಭೀಷ್ಮ, ದ್ರೋಣ, ಅಕ್ರೂರ, ಉದ್ಧವ, ಸಂಜಯ, **ಕುಚೇಲ, ಮುಚುಕುಂದ** ಮೊದಲಾದ ಮಹಾನುಭಾವರುಗಳಿಗೆ ಮಾತ್ರವೇ ವಿದಿತವೇ ವಿನಾ ದುರ್ಯೋಧನ, ದುಶ್ಯಾಸನ, ಕಂಸ, ಜರಾಸಂಧ, ಮೊದಲಾದವರು ತನ್ನ ಪರತ್ವ ಸೌಲಭ್ಯಾದಿಗಳನ್ನು ಅರಿಯದ ಮೂಢರೆಂದು ಹೇಳುತ್ತಾರೆ.—ಪ್ರಥಮತಃ ಅಂತಹ ಮೂಢರನ್ನು ನಿಂದಿಸಿ, ಮುಂದಿನ ಎರಡು ಶ್ಲೋಕಗಳಿಂದ ಸುಕೃತಿಗಳಾದ ಮಹಾನುಭಾವರನ್ನು ೧೩ ನೆಯ ಶ್ಲೋಕದಲ್ಲಿ ಶ್ಲಾಘಿಸುತ್ತಾರೆ. **ಭೂತಮಹೇಶ್ವರಂ** - ಬ್ರಹ್ಮರುದ್ರೇಂದ್ರ ಮೊದಲುಗೊಂಡು ಕ್ರಿಮಿ ಕೀಟಾದಿಗಳವರೆಗೂ ಮತ್ತು ಸ್ಥಾವರಗಳಾಗಿ ಇವರುಗಳಿಗೆಲ್ಲಾ ನಿಯಾಮಕನಾಗಿರುವ, **ಮಮ** - ಶ್ರೀ ಕೃಷ್ಣನಾಗಿ ಅವತರಿಸಿರುವ ನನ್ನ, **ಪರಂಭಾವಂ - "ಅಜೋಽಪಿಸರ್ ಅವ್ಯಯಾತ್ಮಾ"** ಎಂಬ (೪-೬) ಶ್ಲೋಕದಲ್ಲಿ ಉಪಪಾದಿಸಿರುವಹಾಗೆ ಅವತಾರ ದಶೆಯಲ್ಲಿಯೂ ಬಿಡದೆ ಹೊಂದಿರುವ ನಾನು ಪಾರಮೈಶ್ವರ ಸ್ವಭಾವವನ್ನು ಹೊಂದಿರುವ ಪರತ್ವವನ್ನು, **ಅಜಾನಂತಃ** - ಜ್ಞಾನ ತಿರೋಧಾನದಿಂದ ತಿಳಿಯದವರಾಗಿ, ನನ್ನನ್ನು ಸ್ವಲ್ಪವಾದರೂ ಸ್ಮರಿಸಿದ್ದರೆ, ಆ ಸುಕೃತದಿಂದ ಜ್ಞಾನತಿರೋಧಾನವು ಕಮ್ಮಿಯಾಗುತ್ತಿತ್ತು; ಹಾಗೆ ಮಾಡದಿರುವದರಿಂದ, **ಅಜಾನಂತಃ** - ತಿಳಿಯದವರಾಗಿ, ಆ ಕಾರಣದಿಂದಲೇ **ಮೂಢಾಃ** - ಜ್ಞಾನಶೂನ್ಯರಾದ ದುರ್ಯೋಧನಾದಿಗಳು ಎಂಬ ಭಾವವು. **ಮಾಂ** - ಆಶ್ರಿತರ ಉದ್ಧಾರಕ್ಕಾಗಿಯೇ ಅವತರಿಸುವ ಪರಮಕಾರುಣಿಕನಾಗಿ ಸೌಲಭ್ಯ ಸೌಶೀಲ್ಯ ವಾತ್ಸಲ್ಯ ಔದಾರ್ಯವೇ ಮೊದಲಾದ ಆಶ್ರಯೋಪಯುಕ್ತಕಲ್ಯಾಣ ಮಹೋದಧಿಯಾಗಿ, ಹೀಗೆ ಪರತ್ವ ಸೌಲಭ್ಯಾದಿಗಳಿಂದ ಕಂಗೊಳಿಸುವ ನನ್ನನ್ನು, ಕೇವಲ **ಮಾನುಷಿಂ ತನುಮಾಶ್ರಿತಂ**- ಸಾಧಾರಣ ಮಾನುಷ ಶರೀರವನ್ನು ಆಶ್ರಯಿಸಿದವನನ್ನಾಗಿ ಎಂದರೆ ಸಾಧಾರಣ ಮನುಷ್ಯನನ್ನಾಗಿ, **ಅವಜಾನಂತಿ** - ತಪ್ಪಾಗಿ ತಿಳಿದು ನನ್ನನ್ನು ತಿರಸ್ಕರಿಸುವರು. ಈ ಅಭಿಪ್ರಾಯವೇ ಹಿಂದೆ ೭-೨೫ ರಲ್ಲಿ, **ಮೂಢೋಽಯಂ ನಾಭಿಜಾನಾತಿ ಲೋಕೋ ಮಾ ಮಜ ಮವ್ಯಯಂ** ಎಂದು ಹೇಳಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು;—**ಮಹಾತ್ಮರ ಪ್ರಶಂಸೆಗಾಗಿ ಮೊದಲು ಮೂಢರ ಸ್ವಭಾವವೆಂತಾದ್ದೆಂಬುವನ್ನು ಮುಂದಿನ ಎರಡು ಶ್ಲೋಕಗಳಿಂದ ತಿಳಿಸುತ್ತಾರೆ. **ಏವಂ** - ಹೀಗೆ ಪರತ್ವ ಸೌಲಭ್ಯಾದಿ ಗುಣಗಳಿಂದ ಯುಕ್ತನಾಗಿ ಸಾಧುಪರಿತ್ರಾಣ, ದುಷ್ಟನಿಗ್ರಹ, ಧರ್ಮ ಸಂಸ್ಥಾಪನಕ್ಕಾಗಿ ಅವತರಿಸಿರುವ, **ಭೂತಮಹೇಶ್ವರಂ** - ಸರ್ವ ಭೂತಗಳಿಗೂ ಪರಮ ನಿಯಾಮಕನಾಗಿರುವ, ಸರ್ವಜ್ಞನಾಗಿ, ಸತ್ಯ ಸಙ್ಕಲ್ಪನಾಗಿ, **ನಿಖಿಲ ಜಗದೇಕ ಕಾರಣಂ** - ಸಮಸ್ತ ಜಗತ್ತಿಗೂ ಆದಿಕಾರಣನಾಗಿ, ಪರಮಕಾರುಣ್ಯದಿಂದ ಎಲ್ಲರೂ ನನ್ನನ್ನಾಶ್ರಯಿಸಲೆಂದು ಉದಾರಭಾವದಿಂದಿರುವ,

ಭಾ. ಏವಂ ಮಾಂ ಭೂತಮಹೇಶ್ವರಂ ಸರ್ವಜ್ಞಂ ಸತ್ಯ ಸಙ್ಕಲ್ಪಂ ನಿಖಿಲ ಜಗದೇಕ ಕಾರಣಂ ಪರಮ ಕಾರುಣಿಕತಯಾ ಸರ್ವಸಮಾಶ್ರಯಣೀಯತ್ವಾಯ ಮಾನುಷೀಂ ತನು ಮಾಶ್ರಿತಂ ಸ್ವಕೃತೈಃ ಪಾಪಕರ್ಮಭಿ ರ್ಮೂಢಾ ಅವಜಾನಂತಿ-ಪ್ರಾಕೃತಮನುಷ್ಯ ಸಮಂ ಮನ್ಯಂತೇ; ಭೂತಮಹೇಶ್ವರಸ್ಯ ಮಮಾ ಪಾರಕಾರುಣ್ಯೌದಾರ್ಯ ಸೌಶೀಲ್ಯ ವಾತ್ಸಲ್ಯ ನಿಬಂಧನಂ ಮನುಷ್ಯತ್ವಸಮಾಶ್ರಯಣಲಕ್ಷಣ ಮಿಮಂ ಪರಂ ಭಾವ ಮಜಾನನ್ತೋ ಮನುಷ್ಯತ್ವ ಸಮಾಶ್ರಯಣ ಮಾತ್ರೇಣ ಮಾಮಿತರ ಸಜಾತೀಯಂ ಮತ್ವಾ ತಿರಸ್ಕುರ್ವನ್ತೀತ್ಯರ್ಥಃ ॥ ೧೧ ॥

**ಮಾನುಷೀಂ ತನುಮಾಶ್ರಿತಂ** - ಮನುಷ್ಯ ಶರೀರವನ್ನು ಸ್ವೀಕರಿಸಿರುವ, **ಮಾಂ**-ನನ್ನನ್ನು, (ಇದೆಲ್ಲಾ **ಮಾಂ** ಎಂಬ ಶಬ್ದದಲ್ಲಿ ತೋರಿಬರುವ ಅರ್ಥವು, ನನ್ನನ್ನು, ಎಂತಹ ನನ್ನನ್ನು ಎಂದರೆ ವಿವರಿಸಿ ಹೇಳಿದರು), **ಪರಂಭಾವಂ** ಎಂಬ ಪದವು **ಭೂತ ಮಹೇಶ್ವರಂ** ಎಂಬುದಕ್ಕೆ ಹತ್ತಿರ ವಿದ್ದರೂ ಭಾವಾರ್ಥಕ್ಕೆ ಈ ವಿಶೇಷಣವು ಸರಿಹೋಗುವದಿಲ್ಲವಾದುದರಿಂದ **ಮಾಂ** ಎಂಬ ಪದದೊಂದಿಗೆ ಅನ್ವಯಿಸಿ, ಅರ್ಥವಾಗಿ ತೋರಿಬರುವ ಅಭಿಪ್ರಾಯಗಳನ್ನು, **"ಸರ್ವಜ್ಞಂ ಸತ್ಯಸಙ್ಕಲ್ಪಂ"** ಇತ್ಯಾದಿಗಳಿಂದ ವ್ಯಕ್ತಪಡಿಸಿರುತ್ತಾರೆ. ಇಲ್ಲಿ ಮೂಢಾಃ ಎಂಬಲ್ಲಿ ತೋರುವ ಮೌಢ್ಯವು, ಜ್ಞಾನಸ್ವರೂಪವಾಗಿ ಜ್ಞಾನಗುಣಕನಾಗಿರುವ ಚೇತನನಿಗೆ ಏತಕ್ಕೆ? ಎಂದರೆ **ಸ್ವಕೃತೈರ್ಪಾಪಕರ್ಮಭಿಃ ಮೂಢಾಃ** - ತಾವು ಹಿಂದೆ ಮಾಡಿದ ಪಾಪಕರ್ಮಗಳೇ ಈ ಮೌಢ್ಯಕ್ಕೆ ಕಾರಣವೆಂದು ವ್ಯಕ್ತಪಡಿಸಿರುತ್ತಾರೆ. ಈ ಮೌಢ್ಯದ ಫಲವೇನೆಂದರೆ ಶ್ರೀ ಕೃಷ್ಣ ಭಗವಾನರವರ ಪರತ್ವವನ್ನು ವಿವೇಕಿಸಿ ತಿಳಿಯದೇ ಇರುವದೇ ಎಂಬ ಭಾವವು. ಅದರಿಂದ ಪ್ರಾಕೃತ ಮನಷ್ಯನೆಂದೇ ಭಾವಿಸುವರು. **ಸ್ವಕೃತೈಃ ಪಾಪಕರ್ಮಭಿಃ** - ತಮ್ಮಿಂದ ಹಿಂದೆ ಮಾಡಲ್ಪಟ್ಟ ಪಾಪಕರ್ಮಗಳಿಂದ, **ಮೂಢಾಃ** - ಅಜ್ಞರಾದವರಾಗಿ, **ಅವಜಾನಂತಿ** - ವ್ಯತ್ಯಸ್ತವಾಗಿ ತಿಳಿಯುವರು ಎಂದರೆ, **ಪ್ರಾಕೃತ ಮನುಷ್ಯ ಸಮಂ ಮನ್ಯಂತೇ** - ಸಾಧಾರಣ ಮನುಷ್ಯನಿಗೆ ಸಮಾನನಾದವನನ್ನಾಗಿ ತಿಳಿಯುವರು. ಮುಂದೆ **ಪರಂಭಾವ ಮಜಾನಂತಃ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ. **ಭೂತಮಹೇಶ್ವರಸ್ಯ** - ಸರ್ವ ಪ್ರಾಣಿಗಳಿಗೂ, ಎಂದರೆ ಚತುರ್ಮುಖ ಬ್ರಹ್ಮಾದಿ ಸ್ತಂಬಪರ್ಯಂತದವರೆಗೂ ಇರುವ ಜೀವ ಕೋಟಿಗೆಲ್ಲಾ ನಿಯಾಮಕನಾಗಿರುವ, **ಮಮ** ನನ್ನ, **ಅಪಾರಕಾರುಣ್ಯೌದಾರ್ಯ ಸೌಶೀಲ್ಯವಾತ್ಸಲ್ಯ ನಿಬಂಧನಂ** - ಎಲ್ಲೆ ಇಲ್ಲದ ಕಾರುಣ್ಯವೇನು, ಔದಾರ್ಯವೇನು, **ಸೌಶೀಲ್ಯ** ವೆಂದರೆ ಮಹತ್ವದವಿಯಲ್ಲಿರುವವನು ಬಹಳ ನೀಚಾವಸ್ಥೆಯಲ್ಲಿರುವವನೊಂದಿಗೆ, ಪ್ರೀತಿಯನ್ನು ತೋರಿಸಿ ಆತನೊಂದಿಗೆ ಸೇರುವದು, ಒಬ್ಬ ರಾಕ್ಷಸಪುತ್ರ. ಒಬ್ಬ ರಾಕ್ಷಸ ಭ್ರಾತಾ, ಒಬ್ಬ ಬೇಡರ ಅಧಿಪತಿ, ಒಬ್ಬ ವಾನರಾಧಿಪತಿ, ಅಷ್ಟಾಂಗ ವಕ್ರಳು, ಹರಕು ಗಂಟುಗಳುಳ್ಳ ವಸ್ತ್ರ ಹೊದ್ದಿರುವವನು, ಇಂತವರೊಂದಿಗೆ ಸಖ್ಯವನ್ನು ಬೆಳೆಸಿ ಅವರಲ್ಲಿ ವಿಶೇಷ ಪ್ರೀತಿ ತೋರಿಸುವದು, **ವಾತ್ಸಲ್ಯ** - ವೆಂದರೆ ಭಕ್ತದೋಷಾದರ್ಶನದೊಂದಿಗೆ **ಪ್ರೀತಿ**ಸೋಣವು, ಇಂತಹ ಆಶ್ರಯೋಪಯುಕ್ತಗುಣಗಳುಳ್ಳೋಣವೇ, **ನಿಬಂಧನಂ** - ಧರ್ಮವಾಗಿವುಳ್ಳ, **ಮನುಷ್ಯತ್ವ ಸಮಾಶ್ರಯಣ ಲಕ್ಷಣಂ** - ಮನುಷ್ಯ ಜಾತಿಯನ್ನು ಆಶ್ರಯಿಸಿರೋಣವೇ ಲಕ್ಷಣವಾಗಿವುಳ್ಳ, **ಇಮಂ ಪರಂ ಭಾವಂ** - ಇಂತಹ ನನ್ನ ಪರತ್ವವನ್ನು, **ಅಜಾನಂತಃ** - ತಿಳಿಯದವರಾಗಿ; **ಮನುಷ್ಯತ್ವ ಸಮಾಶ್ರಯಣಮಾತ್ರೇಣ** - ಅಜಹತ್ಸ್ವಸ್ವಭಾವನಾಗಿದ್ದರೂ ಅದನ್ನು ತಿಳಿಯದೇ ಮನುಷ್ಯ ರೂಪವನ್ನು ಆಶ್ರಯಿಸಿರುವಮಾತ್ರದಿಂದಲೇ, **ಮಾಂ** - ಇಂತಹ ಪರತ್ವ ಸೌಲಭ್ಯಾದಿಗಳಿಂದ ಸರ್ವೋತ್ಕೃಷ್ಟ ಮಹಿಮೆಯನ್ನು ಹೊಂದಿರುವ ನನ್ನನ್ನು, **ಇತರ ಸಜಾತೀಯಂ** - ಸಜಾತೀಯರಾದ ಎಂದರೆ ಸಾಧಾರಣ ಇತರ ಮನುಷ್ಯನನ್ನಾಗಿ, **ಮತ್ವಾ** -

**ಮೂ. ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀ ಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥** ೧೨.

ಭಾವಿಸಿ, **ತಿರಸ್ಕುರ್ವಂತೀತ್ಯರ್ಥಃ** - ತಿರಸ್ಕಾರಮಾಡುತ್ತಾರೆಂಬ ತಾತ್ಪರ್ಯವು. ಮಹಿಮೆಗೆ ಸರಿಯಾದ ಭಾವನೆ ಇಲ್ಲದಿರೋಣವೇ ತಿರಸ್ಕಾರವು. ಮಾನುಷಾವತಾರವನ್ನೆತ್ತಿದ್ದರೂ, ಶ್ರೀಕೃಷ್ಣನು ಪರತ್ವ ಸೌಲಭ್ಯಾದಿಗಳಿಂದ ಯುಕ್ತನಾಗಿದ್ದೇನೆಂದು ತನ್ನ ದಿವ್ಯಗಳಾದ ಅತಿಮಾನುಷ ಚೇಷ್ಟೆಗಳಿಂದ ಚನ್ನಾಗಿ ವ್ಯಕ್ತಪಡಿಸಿದ್ದರೂ, ತಾನು ಪರಮಕಾರುಣಿಕನು ತನ್ನನ್ನು ಆಶ್ರಯಿಸಿ ನಿರತಿಶಯ ಸುಖವನ್ನು ಹೊಂದಲಿ ಎಂಬ ಉದಾರಭಾವದಿಂದಲೇ ಮನುಷ್ಯನಾಗಿ ಅವತರಿಸಿದ್ದರೂ, ತಮ್ಮ ಪ್ರಾರಬ್ಧಕರ್ಮಗಳಿಂದ ತಿರೋಹಿತ ಜ್ಞಾನವುಳ್ಳ ಅಜ್ಞರು ಇದನ್ನು ತಿಳಿಯದೆ, ಸಾಮಾನ್ಯ ಮನುಷ್ಯನೆಂದೇ ಭಾವಿಸಿ ತಿರಸ್ಕರಿಸುವರಲ್ಲಾ ಎಂಬ ಪರಿತಾಪದಿಂದ, **ಅವಜಾನಂತಿ ಮಾಂ ಮೂಢಾಃ** ಎಂದು ಹೇಳಿದರು. ಇಲ್ಲಿ **ತಿರಸ್ಕುರ್ವಂತಿ** ಎಂಬ ವ್ಯಾಖ್ಯಾನಕ್ಕೆ ಮೂಲದಲ್ಲಿ ಅವಕಾಶ ಉಂಟೋ ಎಂದರೆ, ಭೂತಮಹೇಶ್ವರನಾದ ತನ್ನ ಪರಭಾವವನ್ನು ಯಾವಾಗ ತಿಳಿಯದೇ ಹೋದರೋ, ಆಗ ತನ್ನ ಮಹಾತ್ಮ್ಯಗೆ ಸರಿಯಾದ ಆದರಲ್ಲಿ ಪ್ರವೃತ್ತಿ ಇಲ್ಲದಿರುವದೇ ತಿರಸ್ಕಾರವು ಎಂಬ ಭಾವವು. ಇಲ್ಲಿ **ಮಾನುಷೀಂ ತನುಮಾಶ್ರಿತಮ್** ಎಂದು ಹೇಳಿರುವದು, ಯಾವಾಗಲೂ ಶ್ರೀ ಕೃಷ್ಣಭಗವಾನರವರು ಚತುರ್ಭುಜರಾಗಿ ತೋರುತ್ತಿದ್ದರು ಎಂಬ ಕೆಲವರು ಹೇಳಿಕೆಯು ಯುಕ್ತವಾಗಿ ತೋರುವದಿಲ್ಲವು. ಇನ್ನು ಕೆಲವರು, ಯಾವಾಗಲೂ ಚತುರ್ಭುಜತ್ವೇನವೇ ಇದ್ದರೂ ಸಾಧಾರಣವಾಗಿ ಅಪ್ರಪನ್ನರಿಗೆಲ್ಲಾ ದ್ವಿಭುಜತ್ವೇನವೇ ತೋರುತ್ತಿದ್ದರೆಂದೂ ಹೇಳುವರು. ಹೀಗೆ ಹೇಳುವದಕ್ಕೆ ಬದಲಾಗಿ ಯಾವ ಮಹಾನುಭಾವರಿಗೆ ಚತುರ್ಭುಜತ್ವೇನ ತಾವು ಪ್ರಸನ್ನರಾಗಬೇಕೋ ಅಂತವರಿಗೆ ಹಾಗೆ ತೋರುತ್ತಿದ್ದರೆಂದೂ, ಮಿಕ್ಕ ಕಾಲಗಳೆಲ್ಲಾ ಈ "**ಅಲೌಕಿಕ**" ರೂಪದಿಂದ ಅಲ್ಲದೆ ಎಲ್ಲಾ ಮನುಷ್ಯರ ಹಾಗೆಯೇ ದ್ವಿಭುಜತ್ವೇನ ಇರುತ್ತಿದ್ದರೆಂಬ ಹೇಳಿಕೆಯು ಯುಕ್ತವಲ್ಲವೇ ಎಂದು ಕೇಳಬೇಕಾಗುತ್ತದೆ. ಆದುದರಿಂದಲೇ ಶ್ರೀ ದೇಶಿಕರವರು ತಾತ್ಪರ್ಯಚಂದ್ರಿಕೆಯಲ್ಲಿ **ಮಾನುಷೀಂ** ಎಂದರೆ "**ಮನುಷ್ಯಜಾತೀಯ ಸನ್ನಿವೇಶವತೀಮ್** ಎಂದು ಭಾಷ್ಯವನ್ನು ಬರೆದಿರುತ್ತಾರೆ. ಮನುಷ್ಯನ ಅವಯವ ಸಂಘಾತವು ಹೇಗೋ ಹಾಗೆ ಎಂಬ ಭಾವದಿಂದ "**ಮಾನುಷೀಂತನುಂ**" ಎಂಬ ಭಾವವು. ಆಗಿದ್ದರೂ ಹಿಂದೆ ಅವತಾರರಹಸ್ಯವನ್ನು ಉಪಪಾದಿಸಿರುವ ವೈಲಕ್ಷಣ್ಯವನ್ನುಳ್ಳದ್ದೆಂದೂ ಭಾವಿಸತಕ್ಕದ್ದು. ಹೇಗೆಂದರೆ ಸುವರ್ಣದ ಮತ್ತು ಕಬ್ಬಿಣದ ಘಟಗಳೆರಡಕ್ಕೂ ಆಕಾರದಲ್ಲಿ ಸಾಮ್ಯವಿದ್ದರೂ, ಸುವರ್ಣಕ್ಕೆ ಉತ್ಕೃಷ್ಟತೆಯೂ ಅಯಸ್ಸಿಗೆ ನಿಕೃಷ್ಟತೆಯೂ, ಹೇಗೆ ತಪ್ಪಿದ್ದಲ್ಲವೋ, ಹಾಗೆಯೇ ಇಲ್ಲಿಯೂ ಎಂದು ಭಾವಿಸತಕ್ಕದ್ದು. ॥೧೧॥

**ಮೂಲಕ್ಕೆ ಅರ್ಥವು:**—ಹಿಂದೆ ಮೂಢರು ತನ್ನ ಪರತ್ವವನ್ನು ತಿಳಿಯಲಾರರೆಂದು ಕೇವಲಮನುಷ್ಯನೆಂದೇ ಭಾವಿಸುವರು ಎಂದು ಹೇಳಿದರು. ಇದಕ್ಕೆ ಕಾರಣವೇನೆಂಬುದನ್ನೂ ಮತ್ತು ಅದರಿಂದುಂಟಾಗುವ ಅನರ್ಥವನ್ನೂ ಇಲ್ಲಿ ತಿಳಿಸುತ್ತಾರೆ. ಸತ್ವಗುಣದ ನ್ಯೂನತೆಯುಂಟಾಗಿ ರಜೋಗುಣ ತಮೋಗುಣಗಳ ಆಧಿಕ್ಯದ ವಿಜೃಂಭಣೆಯಿಂದ ಮೌಢ್ಯ ಉಂಟಾಗುತ್ತದೆಂದು ಹೇಳಿ, ಆ ಕಾರಣದಿಂದ ಅವರ ವಾಂಛಾ, ಕರ್ಮ, ಜ್ಞಾನಗಳೆಲ್ಲಾ ದೈವ ಸಹಾಯವಿಲ್ಲದೆ ನಿರರ್ಥಕಗಳಾಗುವುವೆಂದು ಈಗ ತಿಳಿಸುತ್ತಾರೆ.—**ರಾಕ್ಷಸೀಂ**-ರಾಕ್ಷಸ ಸಂಬಂಧವಾದ, ರಾಕ್ಷಸ ಶಬ್ದಕ್ಕೆ ಇತರರಿಗೆ ಉಂಟಾಗುವ ದುಃಖಗಳನ್ನು ಪರಿಗಣಿಸದೇ ತನ್ನನ್ನು ಮಾತ್ರವೇ ಕಾಪಾಡಿಕೊಳ್ಳುವ ಸ್ವಾರ್ಥತೆಯುಳ್ಳವರೆಂಬರ್ಥವು, ಇದು ರಜೋಗುಣದ ವಿಜೃಂಭಣೆಯು, **ಆಸುರೀಂಚ**-ಅಸುರ

**ಭಾ. ಮಮ ಮನುಷ್ಯತ್ವೇ ಪರಮ ಕಾರುಣ್ಯಾದಿ ಪರತ್ವ ತಿರೋಧಾನಕರೀಂ ರಾಕ್ಷಸೀ ಮಾಸುರೀಂಚ ಮೋಹಿನೀಂಪ್ರಕೃತಿಮಾಶ್ರಿತಾಃ,ಮೋಘಾಶಾಃ-ಮೋಘುವಾಂಛಿತಾಃ ನಿಷ್ಫಲವಾಂಛಿತಾಃ, ಮೋಘಕರ್ಮಾಣಃ-ಮೋಘಾರಂಭಾಃ, ಮೋಘ ಜ್ಞಾನಾಃ**

ಸಂಬಂಧವಾದ, ಇವರಿಂದ ಇತರರಿಗೆ ಅನರ್ಥವನ್ನುಂಟುಮಾಡುವ ಸ್ವಭಾವವು ಹೇಳಲ್ಪಟ್ಟಿತು. **ಅಸೂನ್ ರಾಂತಿ** ಎಂಬ ವ್ಯುತ್ಪತ್ತಿಯಿಂದ ಇತರರ ಪ್ರಾಣಗಳನ್ನು ಸೆಗೆಯುವರೆಂಬರ್ಥ ಬರುತ್ತದೆ. ಇದು ರಾಜಸ ತಾಮಸ ಎರಡು ಗುಣಗಳ ವಿಜೃಂಭಣೆಯಿಂದುಂಟಾಗಿ, ಆ ಕಾರಣದಿಂದ **ಮೋಹಿನೀಂ** - ಮೋಹವನ್ನುಂಟುಮಾಡುವ, **ಪ್ರಕೃತಿಂಶ್ರಿತಾಃ** - ಸ್ವಭಾವವನ್ನು ಆಶ್ರಯಿಸಿರುವರಾದುದರಿಂದಲೇ, ಮೋಹಪಡುವದು ರಾಕ್ಷಸ ತಾಮಸ ಸ್ವಭಾವದಿಂದುಂಟಾದುದೆಂದು ಭಾವಿಸಬಹುದು; ರಾಕ್ಷಸೀ ಮತ್ತು ಆಸುರೀ ಸ್ವಭಾವಗಳಿಗೆ ತುಂಬಾ ವ್ಯತ್ಯಾಸವಿಲ್ಲವು; ರಾಕ್ಷಸೀ ಪ್ರಕೃತಿಯಲ್ಲಿ ಇತರರ ಸುಖದುಃಖಗಳೊಂದನ್ನೂ ನೋಡದೆ ಸ್ವಾರ್ಥಪರತೆಯೂ, ಆಸುರೀ ಸ್ವಭಾವದಲ್ಲಿ ಇತರ ದುಃಖಮೂಲಕ ಸ್ವಾರ್ಥಪರತೆಯೂ, ಹೇಳಲ್ಪಟ್ಟವೆಂದು ಭಾವಿಸಬಹುದು. **ಚೈವ** ಎಂಬಲ್ಲಿ **ಏವ** ಕಾರದಿಂದ ಕೇವಲ ರಾಜಸ ತಾಮಸ ಗುಣಗಳ ವಿಜೃಂಭಣೆಯೇ ವಿನಾ ಸಾತ್ವಿಕವು ಅತ್ಯಲ್ಪವೆಂದು ತೋರಿಬರುತ್ತದೆ. ಹೀಗೆ ಈ ಮೂಢರು ರಾಜಸ ತಾಮಸ ಸ್ವಭಾವಾಧಿಕ್ಯವಿರುವದರಿಂದಲೇ ಅವರು, **ಮೋಘಾಶಾಃ** - ನಿರರ್ಥಕಗಳಾದ ಕಾಮನೆಯುಳ್ಳವರು, **ಮೋಘಕರ್ಮಾಃ** - ನಿಷ್ಫಲಗಳಾದ ಕರ್ಮಾರಂಭವುಳ್ಳವರು, **ಮೋಘಜ್ಞಾನಾಃ** ನಿರರ್ಥಕಗಳಾದ ಜ್ಞಾನಗಳನ್ನುಳ್ಳವರು, ಮತ್ತು **ವಿಚೇತಸಃ** - ವಿಗತವೆಂದರೆ ನಾಶಹೊಂದಿದ ಚಿತ್ತವೃತ್ತಿಯುಳ್ಳವರು.

**ಭಾಷ್ಯಾರ್ಥವು:—**ಹೀಗೆ ಮೂಢರಾಗಿ ಪರತ್ವವನ್ನು ತಿಳಿಯದೆ ಕೇವಲ ಮನುಷ್ಯನೆಂಬ ಭಾವನೆಗೆ ಕಾರಣವೂ ಅದರಿಂದುಂಟಾಗುವ ಫಲವೂ ಎರಡೂ ಈ ಶ್ಲೋಕದಲ್ಲಿ ಹೇಳಲ್ಪಡುವುವು. **ಮಮ ಮನುಷ್ಯತ್ವೇ** - ನಾನು ಮನುಷ್ಯನಾಗಿ ಅವತರಿಸಿರುವದರಲ್ಲಿ, **ಪರಮ ಕಾರುಣ್ಯಾದಿ ಪರತ್ವ ತಿರೋಧಾನಕರೀಂ** - ಪರಮ ಕಾರುಣ್ಯವೇ ಮೊದಲಾದ ಮತ್ತು ಪರತ್ವ ಸೂಚಕಗಳಾದ ಧರ್ಮಗಳನ್ನು ಮರೆಸುವ, **ರಾಕ್ಷಸೀಂ** ಮತ್ತು **ಆಸುರಿ** ಗಳಾದುದರಿಂದಲೇ, **ಮೋಹಿನೀಂ ಪ್ರಕೃತಿ ಮಾಶ್ರಿತಾಃ** - ಮೋಹವನ್ನುಂಟುಮಾಡುವ ಸ್ವಭಾವವನ್ನು ಆಶ್ರಯಿಸಿದವರಾಗಿ, ಇಲ್ಲಿ ಪ್ರಕೃತಿ ಶಬ್ದಕ್ಕೆ ಸ್ವಭಾವವೆಂದು ಅರ್ಥಮಾಡಿರುತ್ತಾರೆ, ಮೋಹಗೊಂಡವರು ಏತಕ್ಕೆಂದರೆ ಶ್ರೀ ಕೃಷ್ಣನ ಪರತ್ವವನ್ನು ಗ್ರಹಿಸಲು ಶಕ್ತಿಯಿಲ್ಲದ ಜ್ಞಾನತಿರೋಧಾನವುಳ್ಳ ಮೂಢರಾಗಿರುವದರಿಂದ ಎಂಬ ತಾತ್ಪರ್ಯವು. ಆ ಕಾರಣದಿಂದಲೇ **ಮೋಘಾಶಾಃ** ಎಂದರೆ **ಮೋಘವಾಂಛಿತಾಃ ನಿಷ್ಫಲವಾಂಛಿತಾಃ** - ನಿಷ್ಫಲವಾದ ಅಪೇಕ್ಷೆಯುಳ್ಳವರಾಗುವರು, **ಮೋಘಕರ್ಮಾಣಃ** ಎಂದರೆ **ಮೋಘಾರಂಭಾಃ** - ನಿಷ್ಫಲಗಳಾಗುವ ಕರ್ಮಗಳನ್ನಾರಂಭಿಸಿದವರಾಗುವರು, ಫಲವು ನಿರರ್ಥಕವಾಗುವ ದಶೆಯು ಹಾಗಿರಲಿ, ಕರ್ಮಾರಂಭವೇ ನಿಷ್ಫಲವಾಗುತ್ತದೆಂಬ ಭಾವವು, ಅಥವಾ ಆರಂಭ ಮೊದಲು ಫಲಸಿದ್ಧಿವರೆಗೂ ಎಲ್ಲವೂ ನಿಷ್ಫಲವೆಂಬರ್ಥವಾದರೂ ಆಗಬಹುದು. **ಮೋಘಜ್ಞಾನಾಃ** ಎಂದರೆ **ಸರ್ವೇಷು ಮದೀಯೇಷು ಚರಾಚರೇಷ್ವರ್ಥೇಷು ವಿಪರೀತ ಜ್ಞಾನತಯಾ ನಿಷ್ಫಲ ಜ್ಞಾನಾಃ** ನಿಷ್ಫಲ ಜ್ಞಾನವುಳ್ಳವರು; ಅದು ಹೇಗೆಂದರೆ ನನ್ನವಾಗಿರುವ ಸಮಸ್ತ ಚರಾಚರ ವಸ್ತುಗಳಲ್ಲೂ ವ್ಯತ್ಯಸ್ತವಾದ ಜ್ಞಾನವನ್ನು ಹೊಂದಿರುವದರಿಂದ ನಿಷ್ಫಲವಾದ ಜ್ಞಾನವುಳ್ಳವರು; ವ್ಯತ್ಯಸ್ತಜ್ಞಾನವು ಹೇಗೆಂದರೆ, ಅಸ್ವತಂತ್ರವಾಗಿರುವುದನ್ನು ಸ್ವತಂತ್ರವೆಂದೂ, ಭಗವಂತನ ಸ್ವತ್ತನ್ನು ತನ್ನದೆಂದೂ, ಅಸ್ಥಿರವಾದುದನ್ನು ಸ್ಥಿರವೆಂದೂ, ಸತ್ಯವಾದುದನ್ನು ಮಿಥ್ಯೆ ಎಂದೂ, ಭಾವಿಸೋಣವು, ಇವೆಲ್ಲಾ ವ್ಯತ್ಯಸ್ತಜ್ಞಾನದ ನಿಷ್ಫಲ

**ಭಾ. ಸರ್ವೇಷು ಮದೀಯೇಷು ಚರಾಚರೇಷ್ವರ್ಥೇಷು ವಿಪರೀತಜ್ಞಾನತಯಾ ನಿಷ್ಫಲ ಜ್ಞಾನಾಃ, ವಿಚೇತಸಃ - ತಥಾ ಸರ್ವತ್ರ ವಿಗತಯಾಥಾತ್ಮ್ಯಜ್ಞಾನಾಃ, ಮಾಂ ಸರ್ವೇಶ್ವರ ಮಿತರಸಮಂ ಮತ್ವಾ, ಮಯಿಯತ್ಕರ್ತು ಮಿಚ್ಛಂತಿ, ಯದುದ್ದಿಶ್ಯಾರಂಭಾರ್ ಕುರ್ವತೇ, ತತ್ಸರ್ವಂ ಮೋಘಂ ಭವತೀತ್ಯರ್ಥಃ || ೧೨ ||**

ಣೆಯು, ಹೀಗೆಲ್ಲಾ ನಿಷ್ಫಲ ಜ್ಞಾನವುಳ್ಳವರು ಆಗುತ್ತಾರೆ. ಇದರ ತಾತ್ಪರ್ಯವೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಮಾಂ ಸರ್ವೇಶ್ವರಂ** - ಸರ್ವೇಶ್ವರನಾದ ನನ್ನನ್ನು, ಎಂತಹ ನನ್ನನ್ನು ಎಂದರೆ ಮನುಷ್ಯನಾಗಿ ಅವತರಿಸಿದರೂ ನನ್ನ ಪರತ್ವ ಸೌಲಭ್ಯ ಕಾರುಣ್ಯಾದಿಗಳನ್ನು ಬಿಡದೇ ಹೊಂದಿ ಅದನ್ನು ಅನೇಕಸಲ ಪ್ರದರ್ಶಿಸಿರುವ ನನ್ನನ್ನು, **ಇತರ ಸಮಂ ಮತ್ವಾ** - ಅವುಗಳನ್ನು ಕಣ್ಣೆತ್ತಿ ನೋಡದೆ, ತಿಳಿಯಲು ಜ್ಞಾನವೂ ಇಲ್ಲದೆ ಆ ಕಾರಣದಿಂದ ಇತರ ಮನುಷ್ಯರಿಗೆ ಸಮನೆಂದು ಭಾವಿಸಿ, ಎಲ್ಲಾ ಮನುಷ್ಯರ ಹಾಗೆ ಈತನೂ ಒಬ್ಬನೆಂದು ಭಾವಿಸಿ, **ಮಯಿ** - ನನ್ನ ವಿಷಯದಲ್ಲಿ, **ಯತ್ಕರ್ತುಂ ಮಿಚ್ಛಂತಿ** - ಯಾವುದನ್ನು ಮಾಡಬೇಕೆಂದಪೇಕ್ಷಿಸುವರೋ, **ಯದುದ್ದಿಶ್ಯಾರಂಭಾರ್ ಕುರ್ವತೇ** - ಯಾವುದನ್ನುದ್ದೇಶಿಸಿ ಕರ್ಮಾರಂಭವನ್ನು ಮಾಡುತ್ತಾರೋ, **ತತ್ಸರ್ವಂ** - ಅವೆಲ್ಲವೂ, **ಮೋಘಂಭವತೀತ್ಯರ್ಥಃ** - ನಿರರ್ಥಕಗಳಾಗುವುವು ಎಂಬ ಭಾವವು. ಈ ಶ್ಲೋಕದಲ್ಲಿ ಪೂರ್ವಾರ್ಧದಿಂದ ಅಂತಹ ನನ್ನ ಪರತ್ವ ಸೌಲಭ್ಯಾತಿಶಯಗಳನ್ನು ತಿಳಿಯದ ಮೂಢರಿಗೆ ಪ್ರಾಪ್ತವಾಗುವ ಫಲವನ್ನು ಹೇಳಿ, ಹಾಗೆ ನಿಷ್ಫಲವಾಗಲು ಕಾರಣವೇನೆಂಬುದನ್ನು ಉತ್ತರಾರ್ಧದಲ್ಲಿ ಹೇಳಿರುತ್ತಾರೆ. ದುರ್ಯೋಧನ, ದುಶ್ಶಾಸನ, ಪೌಂಡ್ರಕ ವಾಸುದೇವ ಮೊದಲಾದವರೆಲ್ಲಾ ಶ್ರೀ ಕೃಷ್ಣನ ಪರತ್ವ ಸೌಲಭ್ಯಾತಿಶಯಗಳನ್ನು ತಿಳಿಯದೆ ಕೆಟ್ಟು ಹೋದವರಿಗೆ ನಿದರ್ಶನಗಳನ್ನಾಗಿ ಭಾವಿಸಬಹುದು. ಇಲ್ಲಿ **ಮೋಘ ಜ್ಞಾನಾಃ ವಿಚೇತಸಃ** ಆಗಿರುವವರಿಂದಲೇ ಎಂದರೆ ಯಥಾರ್ಥ ಜ್ಞಾನವಿಲ್ಲದೆ ವಿಪರೀತಜ್ಞಾನವುಳ್ಳವರಾಗಿರುವವರಿಂದಲೇ ಅವರು ಮೋಘವಾಂಛಿತರಾಗಿಯೂ, ಮೋಘ ಕರ್ಮಾರಂಭವುಳ್ಳವರಾಗಿಯೂ ಆಗುವರು ಎಂಬುದೀಗ ಕ್ರಮವು. **"ಯಜನ್ತೇಸಾತ್ತ್ವಿಕಾ ದೇವಾರ್ ಯಕ್ಷರಕ್ಷಾಂಸಿ ರಾಜಸಾಃ ।"** ಇದರಿಂದ ರಾಕ್ಷಸೀಂ ಎಂಬುದು ರಾಜಸ ಸ್ವಭಾವವನ್ನು ಪ್ರದರ್ಶಿಸುತ್ತದೆ, ಮುಂದೆ **"ಭೂತಾರ್ ಪ್ರೇತಗಣಾಂ ಶ್ಚಾನ್ಯೇ ತಾಮಸಾ ಜನಾಃ"** ಎಂದಿರುವದರಿಂದ ಆಸುರೀಂ ಎಂಬುದು ತಾಮಸ ಸ್ವಭಾವ ಪ್ರದರ್ಶಕವೆಂದು ಭಾವಿಸಬಹುದು. (ಗೀ. ೧೭. ೪) ಹಾಗೆಯೇ **"ಮನ್ಯೇ ತ್ವಾಂ ರಾಕ್ಷಸಂಕ್ರೂರಂ ಅಥವಾ ತಾಮಸಾತ್ಮಕಮ್ । ಯಸ್ಮಾತ್ ಕ್ಷಿಪಸಿ ಗೋವಿನ್ದಂ ಪಾಣ್ಡವಂಚ ಧನಂಜಯಮ್"** ಇದರಿಂದಲೂ **ರಾಕ್ಷಸಂ** ಎಂಬುದು ರಜೋಗುಣ ವಿಶಿಷ್ಟತೆಯನ್ನು ಪ್ರದರ್ಶಿಸುತ್ತದೆ, ಹೀಗೆ ಲೋಕದ ಜನರೆಲ್ಲಾ ಮೂಢರಾಗಿರುವ ಸಂದರ್ಭದಲ್ಲಿ ನಿಮ್ಮ ಅವತಾರಗಳಿಂದ ಆಗತಕ್ಕ ಪ್ರಯೋಜನವೇನು ? ಎಂಬಾಕ್ಷೇಪವು ತಲೆ ಎತ್ತುತ್ತದೆ. ಹಾಗಲ್ಲವು, ಅನೇಕ ಮಹಾತ್ಮರು ನನ್ನನ್ನು ಎದುರು ನೋಡುತ್ತಿರುವರು, ಅವರಿಗಾಗಿಯಲ್ಲವೇ ನನ್ನ ಅವತಾರವು ಎಂದು ಹೇಳುವ ನೆಪದಿಂದ ಭಕ್ತಿಯೋಗಪ್ರಶಂಸೆಯನ್ನು ಮುಂದಿನ ಶ್ಲೋಕದಲ್ಲಿ ಮಾಡುತ್ತಾರೆ.

**ಮೂಲಕ್ಕೆ ಅರ್ಥವು:**—ಹೀಗೆ ಪರತ್ವ ಸೌಲಭ್ಯಾತಿಶಗಳುಳ್ಳವನೆಂದು ತಿಳಿಯದ ಅಜ್ಞಾನು ನಷ್ಟನಾಗುವನೆಂದು ಹೇಳಿ, ಪರತ್ವ ಸೌಲಭ್ಯಗಳನ್ನರಿತ ಸುಕೃತಿಯಾಗಿ ದೈವೀ ಸ್ವಭಾವದಲ್ಲಿರುವವನಾವನೋ ತನ್ನನ್ನು ಅರಿತು ಏಕಾಗ್ರ ಚಿತ್ತತೆಯಿಂದ ತನ್ನನ್ನು ಭಜಿಸುವನೆಂದು ಹೇಳುತ್ತಾರೆ.—ಅಕ್ರೂರ, ಉದ್ಧವ, ಸಂಜಯ, ಕುಚೇಲ, ಭೀಷ್ಮಾದಿಗಳು ನಿದರ್ಶನವೆಂಬ ಭಾವವು. **ಮಹಾತ್ಮಾನಸ್ತು** - ಮಹಾ ಮನಸ್ಸುಳ್ಳವರಾದರೋ, ತನ್ನನ್ನು ಭಜಿಸುವದರಿಂದ ಪರಿಶುದ್ಧ

**ಮೂ. ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿ ಮಾಶ್ರಿತಾಃ |**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿ ಮವ್ಯಯಮ್ ||** 　　೧೩.

**ಭಾ. ಯೇತು ಸ್ವಕೃತ್ಯೈಃ ಪುಣ್ಯಸಂಚಯ್ಯೈಃ ಮಾಂ ಶರಣ ಮುಪಗಮ್ಯ ವಿಧ್ವಸ್ತ ಸಮಸ್ತ ಪಾಪಬಂಧಾ ದೈವೀಂಪ್ರಕೃತಿ ಮಾಶ್ರಿತಾ ಮಹಾತ್ಮಾನ, ಸ್ತೇಭೂತಾದಿ ಮವ್ಯಯಂ-**

ಮನಸ್ಸುಳ್ಳವರೆಂದು ಹೇಳಲ್ಪಟ್ಟರು, ಹಾಗೆ ಆತನನ್ನು ಧ್ಯಾನಿಸಬೇಕಾದರೆ ಹಿಂದಿನ ಸುಕೃತ ಪರಿಪಾಕವಿರಬೇಕೆಂಬ ಭಾವವು, **ದೈವೀಂಪ್ರಕೃತಿ ಮಾಶ್ರಿತಾಃ** - ನನ್ನನ್ನು ಹೊಂದಲು ಸಹ ಕಾರಿಯಾದ ಸತ್ವೋದ್ರೇಕವುಳ್ಳ ಸ್ವಭಾವವನ್ನು ಆಶ್ರಯಿಸಿದವರಾಗಿ, **ಮಾಂ**-ಮನುಷ್ಯನಾಗಿ ಅವತರಿಸಿದ್ದರೂ ಕೂಡ ನನ್ನನ್ನು, **ಭೂತಾದಿಂ** - ಸರ್ವಭೂತಗಳಿಗೂ ಎಂದರೆ ಸಕಲ ಚಿದ ಚಿನ್ಮಯವಾದ **ಈ** ಜಗತ್ತಿಗೆ ಮೂಲಕಾರಣನೆಂದೂ, ಇದರಿಂದ ಪರತ್ವವು ಹೇಳಲ್ಪಟ್ಟಿತು, ಅದೂ ಅಲ್ಲದೆ **ಕಾರಣಂತು ಧ್ಯೇಯಃ** ಎಂದು ಹೇಳಿರುವದರಿಂದ ಭಜನಕ್ಕೆ ಜಗತ್ಕಾರಣನಾದ ನಾರಾ ಯಣನೇ ಧ್ಯೇಯವಸ್ತುವೆಂದು ಹೇಳಲ್ಪಟ್ಟಿರುತ್ತದೆ, ಆದರೆ ಭೂತಾದಿಯಾಗಿ ಪರತ್ವವಿದ್ದರೂ ಈಗ ಮನುಷ್ಯಾವತಾರಿಯಾದುದರಿಂದ ಈಗ ಅದು ವ್ಯಯಭಾವವನ್ನು ಹೊಂದಿತೋ ಎಂದರೆ, **ಅವ್ಯಯಂ** - ಅಜಹತ್ಸ್ವಸ್ವಭಾವನಾಗಿ ಸೌಲಭ್ಯ, ಸೌಶೀಲ್ಯ, ಕಾರುಣ್ಯಾದಿ ಆಶ್ರಯೋಪಯುಕ್ತ ಮಹಾ ಗುಣಗಳುಳ್ಳ ನನ್ನನ್ನು, **ಜ್ಞಾತ್ವಾ** - ತಿಳಿದವರಾಗಿ, **ಅನನ್ಯಮನಸಃ** - ಇಂದ್ರಿಯಗ ಳಿಗೆ ವಶವಾಗದೆ ಐಹಿಕ ವಿಷಯಗಳಿಗೆ ಮನಗೊಡದೇ ನನ್ನಲ್ಲೇ ಸಕ್ತವಾದ ಮನಸ್ಸನ್ನುಳ್ಳವ ರಾಗಿ, **ಭಜನ್ತೇ** - ಉಪಾಸಿಸುತ್ತಾರೆ. ಇಲ್ಲಿ ಜ್ಞಾನಿಗಳಾದ ಭಕ್ತರ ಪ್ರಶಂಸೆಯು ಮಾಡಲ್ಪಟ್ಟಿ ರುತ್ತದೆ. ಹೀಗೆ ದೈವೀ ಪ್ರಕೃತಿಯುಳ್ಳವರಾಗಿ ತನ್ನನ್ನು ಧ್ಯಾನಿಸುವವರನ್ನು ಸ್ವಾಮಿಯು ಮಹಾತ್ಮರೆಂದು ಕೊಂಡಾಡಿರುತ್ತಾರೆ. ಆಂಜನೇಯನನ್ನು ಪಂಡಿತನೆಂದೂ ಮಹಾ ಪ್ರಾಜ್ಞ ನೆಂದೂ, ಸುಗ್ರೀವನನ್ನು ಪರಮ ಸುಹೃತ್ತೆಂದೂ, ವಿಭೀಷಣನನ್ನು ಮಹಾ ಪ್ರಾಜ್ಞನೆಂದೂ, ಹಾಗೆಯೇ ಕುಚೇಲರನ್ನು ಬ್ರಹ್ಮವಿತ್ತೆಂದೂ, ಕೊಂಡಾಡಿರುತ್ತಾರೆ.

**ಭಾಷ್ಯಾರ್ಥವು:**—ಹಿಂದಿನ ಶ್ಲೋಕದಲ್ಲಿ ಹೇಳಿದ ಮೂಢರಿಗಿಂತ ತನ್ನ ಮಾಹಾತ್ಮ್ಯೆ ಯನ್ನು ತಿಳಿದ ಮಹಾತ್ಮರು ವಿಲಕ್ಷಣರೆಂದು ಅವರನ್ನು ಶ್ಲಾಘಿಸುವವರಾಗಿ, ಅವರುಗಳು ಅತ್ಯರ್ಥ ಭಕ್ತಿಯಿಂದಲೂ ಏಕಾಗ್ರ ಚಿತ್ತತೆಯಿಂದಲೂ ಉಪಾಸಿಸುತ್ತಾರೆಂದು ಹೇಳುತ್ತಾರೆ. ಈ ಜ್ಞಾನಿಗಳಾದರೋ **ಮಹಾತ್ಮಾನಸ್ತು** ಎಂದು ಹೇಳಲ್ಪಟ್ಟಿರುವದರಿಂದ ಹೇಗೆ ಅವರು ಮಹಾಮ ನಸ್ಕರೆಂಬುದನ್ನು ಉಪಪಾದಿಸುತ್ತಾರೆ. **ಯೇತು** - ಯಾರಾದರೋ, **ಸ್ವಕೃತ್ಯೈಃ** - ತಮ್ಮಿಂದ ಪೂರ್ವದಲ್ಲಿ ಮಾಡಲ್ಪಟ್ಟ, **ಪುಣ್ಯಸಂಚಯ್ಯೈಃ** - ಸುಕೃತ ಸಮೂಹಗಳಿಂದ, ಹೀಗೆ ತನ್ನನ್ನು ಆಶ್ರಯಿಸಲು ತುಂಬಾ ಪುಣ್ಯಗಳನ್ನು ಮಾಡಿರಬೇಕು, ಅಲ್ಪಸ್ವಲ್ಪ ಪುಣ್ಯವು ಸಾಲದೆಂಬಭಿಪ್ರಾ ಯದಿಂದ **ಪುಣ್ಯಸಂಚಯ್ಯೈಃ** ಎಂಬ ಪ್ರಯೋಗವು, **ಶರಣಮುಪಗಮ್ಯ** - ಉಪಾಸನಕ್ಕೆ ಅಙ್ಗವಾದ ಶರಣಾಗತಿಯನ್ನು (೭. ೧೪ ರಲ್ಲಿ) **"ಮಾ ಮೇವ ಯೇ ಪ್ರಪದ್ಯನ್ತೇ"** ಎಂಬಲ್ಲಿ ಉಪಪಾದಿಸಿರುವ ಹಾಗೆ ಅನುಷ್ಠಿಸಿ, **ವಿಧ್ವಸ್ತಸಮಸ್ತ ಪಾಪಬಂಧಾಃ** - ಉಪಾಸನೆಗೆ ಪ್ರತಿ ಬಂಧಕಗಳಾದ ಸಮಸ್ತ ಪಾಪಗಳನ್ನು ಕಳೆದುಕೊಂಡವರಾಗಿ, ( ಈ ಅಭಿಪ್ರಾಯಕ್ಕೆ ೭-೨೮ ನೆಯ ಶ್ಲೋಕವನ್ನು ನೋಡಿ) **ಯೇತು** ಎಂದು ಆರಂಭಿಸಿದ ಭಾಷ್ಯದಿಂದ ಇವರುಗಳು ಹೇಗೆ ಮಹಾತ್ಮರು ಎಂಬುದನ್ನು ವಿವರಿಸಿ ಹೇಳಿದರು. ತಮ್ಮಿಂದ ಮಾಡಲ್ಪಟ್ಟ ಸುಕೃತ ಸಂಚಯ ದಿಂದ ಪರಮ ಪುರುಷನಾದ ನನ್ನನ್ನು ಶರಣಹೊಂದಿ, ಕರ್ಮಯೋಗಾನುಷ್ಠಾನದಿಂದ ಪಾಪಗ ಳನ್ನು ಕಳೆದುಕೊಂಡು ಉಪಾಯಾನುಷ್ಠಾನವನ್ನು ಮಾಡಬೇಕೆಂಬ ಕುತೂಹಲವುಳ್ಳವರಾಗಿ

**ಭಾ. ವಾಙ್ಮನಸಾಗೋಚರ ನಾಮ ಕರ್ಮಸ್ವರೂಪಂ ಪರಮಕಾರುಣಿಕತಯಾ ಸಾಧುಪರಿತ್ರಾಣಾಯ ಮನುಷ್ಯತ್ವೇನಾವತೀರ್ಣಂ ಮಾಂ ಜ್ಞಾತ್ವಾಽನನ್ಯಮನಸೋ ಮಾಂ ಭಜನ್ತೇ; ಮತ್ಪ್ರಿಯತ್ವಾತಿರೇಕೇಣ ಮದ್ಭಜನೇನವಿನಾ ಮನಸಶ್ಚಾತ್ಮನಶ್ಚ ಬಾಹ್ಯಕರಣಾನಾಂಚ ಧಾರಣ ಮಲಭಮಾನಾ ಮದ್ಭಜನೈಕ ಪ್ರಯೋಜನಾ ಭಜನ್ತೇ ||**

ನರಿಂದ ಮಹಾತ್ಮರು. **ತು** ಶಬ್ದವು ಹಿಂದಿನ ಮೂಢರಿಗಿಂತ ಇವರ ವೈಲಕ್ಷಣ್ಯವನ್ನು ತಿಳಿಸುತ್ತದೆ. **ಸ್ವಕೃತೈಃ ಪುಣ್ಯಸಂಚಯೈಃ** ಎಂಬ ಪ್ರಯೋಗಕ್ಕೆ ಕಾರಣವೇನೆಂದರೆ, ಉಪಾಯವಾದ ಭಕ್ತಿಯೋಗವನ್ನವಲಂಭಿಸಬೇಕೆಂಬ ಇಚ್ಛೆಯುಂಟಾಗಬೇಕಾದರೆ ತುಂಬಾ ಸುಕೃತವಿರಬೇಕೆಂದು ಒಂದೆ ೭-೧೬ ರಲ್ಲಿ **"ಚತುರ್ವಿಧಾ ಭಜನ್ತೇ ಮಾಂ ಜನಾಸ್ಸುಕೃತಿನೋಽರ್ಜುನ"** ಎಂಬುದನ್ನು ಜ್ಞಾಪಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. **ದೈವೀಂ ಪ್ರಕೃತಿಮಾಶ್ರಿತಾಃ**-ಮೋಕ್ಷಸಾಧಕವಾದ ಸತ್ವೋದ್ರೇಕವುಳ್ಳ ಸ್ವಭಾವವನ್ನು ಆಶ್ರಯಿಸಿದವರಾಗಿ, ಆ ಕಾರಣದಿಂದ, **ಮಹಾತ್ಮಾನಃ** - ಮಹಾಮನಸ್ಕರೆಂದು ಹೇಳಲ್ಪಡುವರೋ. ದೈವೀ ಆಸುರಪ್ರಕೃತಿಗಳಿಗಿರುವ ವ್ಯತ್ಯಾಸವೆಲ್ಲಾ ಮುಂದೆ ದೇವಾಸುರ ವಿಭಾಗಾಧ್ಯಾಯವಾದ ೧೬ ರಲ್ಲಿ ವಿಸ್ತರಿಸಿ ಹೇಳಲ್ಪಡುತ್ತದೆ. **ತೇ** - ಅಂತವರುಗಳು, **ಭೂತಾದಿಮವ್ಯಯಂ** ಎಂಬ ಪದಗಳಲ್ಲಿ ತೋರುವ ಪರತ್ವವೇನು, ಆಶ್ರಯೋಪಯುಕ್ತ ಗುಣಗಣಗಳೇನು ಇವುಗಳುಳ್ಳವನೆಂದು ವ್ಯಾಖ್ಯಾನ ಮಾಡುತ್ತಾರೆ—**ವಾಙ್ಮನಸಾಗೋಚರನಾಮ ಕರ್ಮಸ್ವರೂಪಂ** - ವಾಕ್ಕಿಗೂ ಮನಸ್ಸಿಗೂ ಸಹ ಗೋಚರವಾಗದ ತನ್ನ ದಿವ್ಯಾದ್ಭುತಾರ್ಥಗಳುಳ್ಳ ನಾಮವೇನು, ತನ್ನ ಅತಿಮಾನುಷ ದಿವ್ಯ ಚೇಷ್ಟಿತಗಳೇನು, ಇವುಗಳ ಮಾಹಾತ್ಮ್ಯೆಯನ್ನು ಪ್ರದರ್ಶಿಸುವ ಸ್ವರೂಪವುಳ್ಳ, ಇದು **ಭೂತಾದಿ** ಶಬ್ದದ ಪರತ್ವಸೂಚಕವಾದ ಅನುವಾದವು; ಹೀಗೆ **ವಾಙ್ಮನಸಾಗೋಚರವಾದರೆ** ಉಪಾಸನೆಯು ಹೇಗೆ ಎಂದರೆ, ಈ ಉಪಾಸನೆಯು ಸುಲಭವಾದ ಅನುಷ್ಠಾನಕ್ಕಾಗಿಯೇ ತಾನು ಅಜಹತ್ಸ್ವಸ್ವಭಾವನಾಗಿ ಅವತರಿಸಿರುತ್ತೇನೆಂದು ಸೂಚಿಸುವದಕ್ಕಾಗಿ **ಅವ್ಯಯಂ** ಎಂಬ ಪ್ರಯೋಗವು. ಇಂತಹ ದಿವ್ಯ ಮಙ್ಗಳವಿಗ್ರಹವನ್ನು ಬಹು ಸುಲಭವಾಗಿ ಉಪಾಸಿಸಬಹುದೆಂಬ ಭಾವವು ದ್ಯೋತಿತವು. ತನಗೆ ಮನುಷ್ಯತ್ವದ ಮೂಲಕ ಸರ್ವಜ್ಞತ್ವಾದಿಗಳಿಗೆ ನ್ಯೂನತೆಯಿಲ್ಲವು, ಕರ್ಮಮೂಲಕವಾಗಿ ಜ್ಞಾನತಿರೋಧಾನವಾಗಲಿ, ಕ್ಲೇಶಾದಿಗಳಾಗಲಿ ಯಾವುವೂ ಇಲ್ಲವೆಂಬುದೂ ತೋರಿಬರುತ್ತದೆ. ತಾನು ದಯಾರ್ದ್ರಹೃದಯನಾಗಿಯೇ ಅವತರಿಸಿರುವದರಿಂದ ಮುಖ್ಯವಾಗಿ ಸಾಧು ಪರಿತ್ರಾಣವೇ ತನಗೆ ಮುಖ್ಯ ಪ್ರಯೋಜನವೆಂಬುದೂ ಪ್ರದರ್ಶಿಸಲ್ಪಟ್ಟಿತು. **ಪರಮಕಾರುಣಿಕತಯಾ**-ಪರಮ ಕಾರುಣ್ಯದಿಂದ, ಸಾಧುಪರಿತ್ರಾಣಕ್ಕಾಗಿ, **ಮನುಷ್ಯತ್ವೇನಾವತೀರ್ಣಂ** - ಮನುಷ್ಯನಾಗಿ ಅವತರಿಸಿರುವ, **ಮಾಂ** ನನ್ನನ್ನು, ಇಮು **ಅವ್ಯಯ** ಶಬ್ದದಿಂದ ತೋರಿಬರುವ ಅರ್ಥವು, ತಾನು ಮನುಷ್ಯಾವತಾರಿಯಾಗಿದ್ದರೂ, ತನಗೆ ಸಹಜಗಳಾದ ಪರತ್ವಸೌಲಭ್ಯಾದಿಗಳು ಯಾವುವೂ ಈ ಮನುಷ್ಯರೂಪದಿಂದ ವ್ಯಯವನ್ನು ಹೊಂದದೆ ಅಜಹತ್ಸ್ವಸ್ವಭಾವನಾಗಿಯೇ ಇರುವೆನೆಂಬ ಭಾವವೂ ದ್ಯೋತಿತವು, ಇಂತಹ **ಮಾಂ** ನನ್ನನ್ನು, **ಜ್ಞಾತ್ವಾ**-ಯಥಾರ್ಥವಾಗಿ ತಿಳಿದವರಾಗಿ, **ಅನನ್ಯಮನಸಃ** - ಬೇರೆ ಇನ್ನು ಯಾವುದರಲ್ಲೂ ಮನಸ್ಸನ್ನು ಬಿಡದೇ ನನ್ನಲ್ಲೇ ಮನಸ್ಸನ್ನಿಟ್ಟವರಾಗಿ, ಏಕಾಗ್ರ ಚಿತ್ತರಾಗಿ ಎಂಬ ಭಾವವು, **ಭಜನ್ತೇ** - ಉಪಾಸಿಸುತ್ತಾರೆ, **ಅನನ್ಯಮನಸಃ ಭಜನ್ತೇ** ಎಂಬ ಪ್ರಯೋಗದಿಂದ ತೋರಿಬರುವ ತಾತ್ಪರ್ಯವನ್ನು ಮುಂದಿನ ವಾಕ್ಯದಿಂದ ವಿವರಿಸುತ್ತಾರೆ. **ಮತ್ಪ್ರಿಯತ್ವಾತಿರೇಕೇಣ** - ನಾನು ಅವರಿಗೆ ನಿರತಿಶಯಪ್ರಿಯನಾಗುವದರಿಂದ, **ಮದ್ಭಜನೇನ ವಿನಾ** - ನನ್ನ ಉಪಾಸನವಿಲ್ಲದಿದ್ದರೆ, **ಮನಸಶ್ಚಾತ್ಮನಶ್ಚ ಬಾಹ್ಯ ಕರಣಾನಾಂಚಧಾರಣಂ** - ಮನಸ್ಸೂ, ಆ ಕಾರಣದಿಂದ ಅವರ ಆತ್ಮಾ-

**ಮೂ. ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ ।**
**ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥** ೧೪.

ದೇಹ ಬಾಹ್ಯೇಂದ್ರಿಯಗಳು, ಇವುಗಳ ಧಾರಣವನ್ನು, **ಅಲಭಮಾನಾಃ** - ಹೊಂದಲಶಕ್ತರಾಗಿ, **ಮದ್ಭಜನೈಕಪ್ರಯೋಜನಾಃ** - ಇದು **ಅನನ್ಯ ಮನಸಃ** ಎಂಬುದರ ಭಾಷ್ಯವು, ನನ್ನ ಧ್ಯಾನವೇ ಮುಖ್ಯ ಪ್ರಯೋಜನವುಳ್ಳವರಾಗಿ, **ಭಜನ್ತೇ** - ಉಪಾಸನೆಯನ್ನು ಮಾಡುತ್ತಾರೆ. ನೀನು ಪಾರ್ಥನಾಗಿ ಇಂದ್ರನ ಮಗನಾಗಿರುವದರಿಂದ ನೀನೂ ದೈವೀ ಪ್ರಕೃತಿಯುಳ್ಳವನಾಗಿ ಜ್ಞಾನಿಯಾಗಿ ಉಪಾಸನಾನುಷ್ಠಾನಮಾಡಲು ಯೋಗ್ಯನೆಂಬುದೂ ಸೂಚಿತವು. ಈ ಶ್ಲೋಕದಲ್ಲಿ ಜ್ಞಾನಿಯು ಆರ್ತನಿಗಿಂತಲೂ ಮತ್ತು ಅರ್ಥಾರ್ಥಿಗಿಂತಲೂ ವಿಲಕ್ಷಣನು ಎಂಬುದು **ಮಹಾತ್ಮಾನಃ** ಮತ್ತು **ಅನನ್ಯ ಮನಸಃ** ಎಂಬೆರಡು ಶಬ್ದಗಳಿಂದ ವ್ಯಕ್ತಪಡುತ್ತದೆ. ಈ ವೈಲಕ್ಷಣ್ಯವನ್ನು ತಿಳಿಸುವ ಉದ್ದೇಶ್ಯದಿಂದ **ಮದ್ಭಜನೇನ ವಿನಾ ಮನಸಶ್ಚಾತ್ಮನಶ್ಚ ಬಾಹ್ಯ ಕರಣಾನಾಂಚ ಧಾರಣ ಮಲಭಮಾನಾಃ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಆರ್ತನೂ ಅರ್ಥಾರ್ಥಿಗಳೂ ಸಹ **ಮದ್ಭಜನೈಕ** ಪ್ರಯೋಜನರಲ್ಲರೆಂಬ ಭಾವವೂ ಸಹ **ತೋರಿಬರುತ್ತದೆ.** ಏಕೆಂದರೆ ಭಜನದೊಂದಿಗೆ ಅವರಿಗೆ ಬೇಕಾದ ನಶ್ವರ ಪುರುಷಾರ್ಥವನ್ನೂ ಅಪೇಕ್ಷಿಸುವದರಿಂದ ಹಿಂದೆ **ಹೇಳಿದ ಏಕಭಕ್ತಿಯು ಅವರಲ್ಲಿಲ್ಲವು.** (ಗೀ. ೭. ೧೭).

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ **ಭಜನ್ತ್ಯನನ್ಯ ಮನಸಃ** ಎಂದು ಹೇಳಲ್ಪಟ್ಟಿತು. **ಅಂತಹ** ಅನನ್ಯ ಮನಸ್ಕರ ಪ್ರವೃತ್ತಿಗಳೆಲ್ಲಾ ಯದ್ರೂಪವೆಂಬ ಸಂದರ್ಭದಲ್ಲಿ ಹೇಳುತ್ತಾರೆ. ಭಾಷ್ಯದಲ್ಲಿ **ಮತ್ಪ್ರಿಯತ್ವಾತಿರೇಕವು** ಆ ಮಹಾತ್ಮರಿಗೆ ಉಂಟೆಂದು ಹೇಳಿತಲ್ಲಾ, ಆಪ್ರಿಯತ್ವಾತಿರೇಕದ ಚೇಷ್ಟೆಗಳಾಗಿ ನಿರತಿಶಯ ಭಕ್ತಿಸೂಚಕ ಪ್ರವೃತ್ತಿಗಳು ಯಾವುವು? ಎಂದರೆ ಉಪದೇಶಿಸುತ್ತಾರೆ.—**ಮಾಂ-ಭೂತಾದಿಮವ್ಯಯಂ** ಎಂಬ ಪದಗಳಿಂದ ದ್ಯೋತಿತವಾದ ಪರತ್ವ ಸೌಲಭ್ಯಾತಿಶಯಗಳಿಂದ ಯುಕ್ತನಾದ ನನ್ನನ್ನು, **ಸತತಂ ಕೀರ್ತಯನ್ತಃ** - ಯಾವಾಗಲೂ ಸ್ತುತಿಸುವವರಾಗಿ ಅಥವಾ ಹೊಗಳುವವರಾಗಿ, ನನ್ನ ಸಂಬಂಧವಾದ ಯಾವುದನ್ನು ಹೊಗಳುವರೆಂಬುದನ್ನು ಹೇಳದೆ ಇರುವದರಿಂದ, ನಾಮಸಂಕೀರ್ತನ, ಅಥವಾ ರೂಪಲಾವಣ್ಯಗಳ, ದಿವ್ಯ ಚೇಷ್ಟಿತಗಳ, ಕಾರುಣ್ಯವಾತ್ಸಲ್ಯಾದಿ ಕಲ್ಯಾಣಗುಣಗಳ, ಅಥವಾ ವಿಭವೈಶ್ವರ್ಯಾದಿಗಳ, ಕೀರ್ತನವಾಗಲಿ, ಅಥವಾ ಅವತಾರಕಾಲಗಳಲ್ಲಿ ನಾನು ಮಾಡಿರುವ ಅಮೋಘೋಪದೇಶಗಳ ಕೀರ್ತನವಾಗಲಿ, ಆಗಬಹುದು, **ಸತತಂ** ಎಂಬುದನ್ನು ಎಲ್ಲಾ ಅವರ ಪ್ರವೃತ್ತಿಗಳಿಗೂ ಅನ್ವಯಿಸತಕ್ಕದ್ದಾಗಿದೆ, **ಸತತಂ ಯತಂತಶ್ಚ ದೃಢವ್ರತಾಃ** - ಹೇಗಾದರೂ ಸ್ವಾಮಿಯು ಪ್ರೀತನಾಗುವ ಹಾಗೆ ಆತನಿಗೆ ನಾನಾರೂಪ ಆರಾಧನೆ, ಕೈಙ್ಕರ್ಯ ಮೊದಲಾದವುಗಳನ್ನೆಸಗಬೇಕೆಂದು ದೃಢಸಂಙ್ಕಲ್ಪರಾಗಿ, ಅದಕ್ಕಾಗಿ ಯಾವಾಗಲೂ ಪ್ರಯತ್ನವನ್ನು ಮಾಡುವವರಾಗಿ, ಹಾಗೆಯೇ ನನ್ನನ್ನು ಪರಮೋಪಕಾರನೆಂದೂ ಲೋಕಗುರುವೆಂದೂ ಭಾವಿಸಿ, ಮನವಣಿಯುವ ಹಾಗೆ **ಸತತಂ ನಮಸ್ಯಂತಶ್ಚ** - ಯಾವಾಗಲೂ ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಸಾಷ್ಟಾಂಗರೂಪದಲ್ಲಿ ಕಾಯದಿಂದಲೂ ನಮಸ್ಕರಿಸುವವರಾಗಿ, **ನಿತ್ಯಯುಕ್ತಾಃ** - ನನ್ನೊಂದಿಗೆ ನಿತ್ಯಯೋಗವನ್ನು ಯಾವಾಗಲೂ ಅಪೇಕ್ಷಿಸುವವರಾಗಿ, **ಭಕ್ತ್ಯಾ ಉಪಾಸತೇ** - ತೈಲಧಾರಾವಚ್ಛಿನ್ನವಾದ ಪ್ರೀತ್ಯತಿಶಯವುಳ್ಳ ಭಕ್ತಿಯೋಗರೂಪವಾದ ಉಪಾಸನಾನುಷ್ಠಾನವನ್ನು ಮಾಡುತ್ತಾರೆ. ಉಪಾಸನವು ಕ್ಲಿಪ್ತಕಾಲಗಳಲ್ಲಿ ನಡೆಯುವದರಿಂದ, ಈ ಪ್ರವೃತ್ತಿಗಳೆಲ್ಲಾ ಆ ಉಪಾಸನಕ್ಕೆ ಸಹಕಾರಿಗಳಾಗಿ, ಇವುಗಳಿಂದ ಉಪಾಸನವು ವೀರ್ಯವತ್ತಾಗುತ್ತದೆಯಾಗಿ ಉಪಾಸನೇತರಕಾಲಗಳಲ್ಲಿ, **ಸತತಂ** ಪ್ರವೃತ್ತಿಯುಳ್ಳವರು ಈ ಮಹಾತ್ಮರು ಎಂದು ಭಾವಿಸಬಹುದು. ಈ ಕೀರ್ತನ,

ಯತನ, ನಮಸ್ಕಾರಗಳು ಸ್ವತಃ ಸಾಕ್ಷಾತ್ತಾಗಿ ಮೋಕ್ಷವನ್ನುಂಟುಮಾಡಲಾರವು, ಆದರೆ ನಾಮ ಸಂಕೀರ್ತನ, ಭಗವದರ್ಚನ, ಭಗವತ್ಕೈಂಕರ್ಯ, ನಮಸ್ಕಾರಾದಿಗಳು ಮೋಕ್ಷಪ್ರಾಪ್ತಿಗೆ ಪ್ರಬಲ ಸಹಕಾರಿಗಳೆಂಬ, ಸಾಕ್ಷಾತ್ತಾಗಿ ಮೋಕ್ಷಸಾಧನವು ಉಪಾಸನವೇ ಎಂಬ, ಎರಡು ಅಭಿಪ್ರಾಯ ಗಳನ್ನೂ ವಿಶದವಾಗಿ ಈ ಶ್ಲೋಕದಿಂದ ವ್ಯಕ್ತಪಡಿಸುವವರಾಗಿ, **ನಮಸ್ಯಂತಶ್ಚ ಭಕ್ತ್ಯಾ ನಿತ್ಯ ಯುಕ್ತಾ ಉಪಾಸತೇ** - ಎಂದು ಹೇಳಿ, ಉಪಾಸನವೇ ಪ್ರಧಾನ ಸಾಧನೋಪಾಯವೆಂದು **ನಾನ್ಯಃ ಪನ್ಥಾ ವಿದ್ಯತೇ ಅಯನಾಯ** ವೆಂಬ ಪ್ರತ್ಯರ್ಥವನ್ನು ಸಮರ್ಥಿಸಿ ಹೇಳಿದರು. **ಈ** ಅಭಿಪ್ರಾಯಗಳು **ಅಜಾಮಿಳೋಪಾಖ್ಯಾನ** ದಲ್ಲಿ ಬಹು ಸ್ವಾರಸ್ಯವಾಗಿ ಉಪಬೃಂಹಿ ತಗಳು. **ಶೃಣ್ವನ್ತಿ ಗಾಯನ್ತಿ ಗೃಣನ್ತ್ಯ ಭೀಕ್ಷ್ಣಶಃ ಸ್ಮರನ್ತಿ ನಂದಂತಿ ತವೇಹಿತಂ ಜನಾಃ । ತ ಏವ ಪಶ್ಯಂತ್ಯಚಿರೇಣ ತಾವಕಂ ಭವ ಪ್ರವಾಹೋ ಪರಮಂ ಪದಾಂಬುಜಂ**" (ಭಾಗ. ೧. ೮. ೩೬.) ಎಂಬ ಶ್ಲೋಕದಲ್ಲಿ ದಿವ್ಯ ಚೇಷ್ಟಿತಗಳನ್ನು ಕೇಳೋಣ, ಕೀರ್ತನ, ಗಾನ, ನರ್ತನ ಮೊದಲಾದ ಪ್ರವೃತ್ತಿಗಳೆಲ್ಲಾ ಭಗವಚ್ಚರಣಾರವಿಂದ ಸಾಕ್ಷಾತ್ಕಾರವನ್ನುಂಟುಮಾಡುವ ಭಕ್ತಿಯೋಗ ನಿಷ್ಪಾದನದ್ವಾರಾ ಸಂಸಾರ ಪ್ರವಾಹ ಶಾಂತಿ ಯನ್ನುಂಟುಮಾಡುತ್ತದೆಂಬುದು, ಉಪಪಾದಿತವು ಹಾಗಾದರೆ ಅಜಾಮಿಳೋಪಾಖ್ಯಾನದಲ್ಲಿ "**ಏತಾವತಾಲ ಮಘನಿರ್ಹರಣಾಯ ಪುಂಸಾಂ ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ । ಆಕೃಶ್ಯಪುತ್ರ ಮಘವಾ ಯದಜಾಮಿಳೋಪಿ ನಾರಾಯಣೇತಿ ಮ್ರಿಯಮಾಣ ಉಪೈತಿ ಮುಕ್ತಿಮ್**" ಇಲ್ಲಿ ನಾರಾಯಣಾ ಎಂದು ಅಜಾಮಿಳನು ಮರಣ ಪ್ರಾಪ್ತವಾದಾಗ ತನ್ನ ಮಗನನ್ನು ಕರೆದರೂ, ವಿಷ್ಣು ಭಕ್ತರು ನಾರಾಯಣನೆಂದು ಹೇಳಿರುವದರಿಂದ ಯಮ ಭಟರಿಗೆ ಅಲ್ಲಿ ಅಧಿಕಾರವಿಲ್ಲವೆಂದು ಸಾಧಿಸಿ ಕಳುಹಿಸಿ ಬಿಟ್ಟರೆಂದು ಹೇಳಿದುದು ಹೇಗೆ ? ಎಂದರೆ—ಅಜಾಮಿಳನು ಹೀಗೆ ಯಮ ಭಟರ ಪಾಶದಿಂದ ಬಿಡಲ್ಪಟ್ಟವನಾಗಿ ವಿಷ್ಣುಭಟರ ಸಂದರ್ಶನದ ಸುಕೃತವನ್ನು ಹೊಂದಿದವನಾಗಿ, ಅವರುಗಳು ಯಮಭಟರೊಂದಿಗೆ ಮಾಡಿದ ವಾದದೊಂದಿಗೆ ವಿಷ್ಣು ಮಾಹಾತ್ಮ್ಯೆಯನ್ನು ಗ್ರಹಿಸಿದವನಾಗಿ, ಅಂತಹ ಸಾಧುಗಳೊಂದಿಗೆ ಅಲ್ಪಕಾಲ ಸಙ್ಗ ದೊರೆತುದರಿಂದ, ನಾರಾಯಣನಲ್ಲೇ ಸಕ್ತ ಮನಸ್ಕನಾಗಿ ಐಹಿಕವನ್ನೆಲ್ಲಾ ತೊರೆದು ಗಂಗಾ ತೀರಕ್ಕೆ ತೆರಳಿ ಪರಮಾತ್ಮೋಪಾಸನದಲ್ಲಿ ನಿರತನಾಗಿ, "**ಯಯೌ ಯತ್ರ ಶ್ರಿಯಃ ಪತಿಃ**" ಶ್ರಿಯಃ ಪತಿಯು ಇರುವ ದಿವ್ಯ ವೈಕುಂಠವನ್ನು ಸೇರಿದನು. "**ಮ್ರಿಯಮಾಣೋ ಹರೇರ್ನಾಮ ಗೃಣನ್ ಪುತ್ರೋ ಪಚಾರಿತಮ್ । ಅಜಾಮಿಳೋಪ್ಯಗಾನ್ಮುಕ್ತಿಂ ಕಿಮುತ ಶ್ರದ್ಧಯಾಗೃಣನ್** ॥ ಹೀಗೆ ಪುತ್ರನನ್ನು ಕರೆಯುವ ನೆಪದಿಂದ **ಸಾಯು**ವಾಗ ನಾರಾಯಣ ಶಬ್ದವನ್ನುಚ್ಚರಿಸಿದುದರಿಂದ ಮುಕ್ತಿಯನ್ನು ಅಜಾಮಿಳನು ಹೊಂದಿದನು ಎಂದು ಹೇಳಿರುವದು ಅದು ಸಾಕ್ಷಾತ್ತಾಗಿ ಮುಕ್ತಿದಾಯಕವೆಂಬ ಅಭಿಪ್ರಾಯದಿಂದಲ್ಲವು. ಅದು ಉಪಾಯಾನುಷ್ಠಾನಕ್ಕೆ ಸಹಕಾರಿ ಎಂಬ ಭಾವದಿಂದ ಎಂದು ತಿಳಿಯತಕ್ಕದ್ದು. ಅಜಾಮಿಳನೂ ಕೂಡ ಕೊನೆಗೆ ಉಪಾಸನವನ್ನು ಮಾಡಿಯೇ ಮುಕ್ತಿಹೊಂದಿದನೇ ವಿನಾ, ಬರೀ ನಾಮೋಚ್ಚಾರಣೆಯಿಂದಲ್ಲವು. ಯುಧಿಷ್ಠಿರರು "**ಕಿಂ ಜಪನ್ಮುಚ್ಯತೇ ಜಂತು ರ್ಜನ್ಮಸಂಸಾರಬಂಧನಾತ್**" ಎಂದು ಶ್ರೀ ಭೀಷ್ಮರನ್ನು ಪ್ರಶ್ನಿಸುದುದಕ್ಕೆ ವಿಷ್ಣು ಸಹಸ್ರನಾಮ ಪಠನವು ಸರ್ವದುಃಖಾತಿಗವೆಂದು ತಿಳಿಸಿ, ಫಲಶ್ರುತಿಯಲ್ಲಿ "**ಯಾತಿ ಬ್ರಹ್ಮಸನಾತನಂ**" ಎಂದು ಹೇಳಿರುತ್ತಾರೆ. ಇಲ್ಲಿಯೂ ಕೂಡ ಬ್ರಹ್ಮಪ್ರಾಪ್ತಿಗೆ ಸಾಧನವಾದ ಭಕ್ತಿಯೋಗಕ್ಕೆ ಸಹಕಾರಿ ಎಂದೇ ಭಾವಿಸತಕ್ಕದ್ದು. **ಹಾಗೆಯೇ ಇನ್ನೂ** ಅನೇಕ ಪ್ರಮಾಣಗಳಲ್ಲೂ ನಾಮಸಂಕೀರ್ತನದಿಂದ ಮೋಕ್ಷಪ್ರಾಪ್ತಿಯೆಂದು ಹೇಳಲ್ಪಟ್ಟಿರುತ್ತದೆ. ಅಲ್ಲೆಲ್ಲಾ ಉಪಾಯಾನುಷ್ಠಾನಕ್ಕೆ ಸಹಕಾರಿಯಾಗಿ ಮೋಕ್ಷಪ್ರಾಪ್ತಿಗೆ ಹೇತುವೆಂದೇ

ಭಾವಿಸತಕ್ಕದ್ದು. ಅಂತಹ ಕೆಲವು ಪ್ರಮಾಣಗಳನ್ನು ಉದಾಹರಿಸುವೆವು. **"ಯಸ್ಯನಾಮ್ನಿ ಸ್ಮೃತೇ ಮರ್ತ್ಯ ಸ್ಸ ಮುತ್ಕ್ರಾಂತೇ ರನಂತರಂ । ಪ್ರಾಪ್ನೋತಿ ವೈಷ್ಣವಂ ಸ್ಥಾನಂ ಪುನ ರಾವೃತ್ತಿ ವರ್ಜಿತಂ"** (ವಿ. ಧ.) **೨. ಉದ್ಘೋಷಿತಃ ಪೂಜಿತೋವಾ ದೃಷ್ಟೋವಾ ನಮಿ ತೋಽಪಿವಾ । ಪ್ರಸಹ್ಯ ಹರತೇಪಾಪಂ ಕೋ ನ ಸೇವೇದ್ಧರಿಂ ತತಃ ॥** (ವಿ ಧ.) **೩ ಯನ್ನಾಮ ಕೀರ್ತನಂ ಭಕ್ತ್ಯಾ ವಿಲಾಪನ ಮನುತ್ತಮಂ । ಮೈತ್ರೇಯಾ ಶೇಷಪಾಪಾ ನಾಂ ಧಾತೂನಾ ಮಿವ ಪಾವಕಃ ॥ (ವಿ. ಪು.) ೪ ಹರಿರ್ಹರತಿ ಪಾಪಾನಿ ದುಷ್ಟಚಿತ್ತೈ ರಪಿ ಸ್ಮೃತಃ । ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇ ವ ಹಿ ಪಾವಕಃ ॥ ೫ ಸಂಸಾರ ಸರ್ಪಸಂದಷ್ಟ ನಷ್ಟ ಚೇಷ್ಟೈ ಕಭೇಷಜಂ । ಕೃಷ್ಣೇತಿ ವೈಷ್ಣವಂ ಮಂತ್ರಂ ಶ್ರುತ್ವಾ ಮುಕ್ತೋ ಭವೇನ್ನರಃ ॥ ೬ ಹರೇರ್ನಾಮೈವ ನಾಮೈವ ನಾಮೈವ ಮಮಜೀವನಮ್। ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿ ರನ್ಯಥಾ ॥ ೭ ಗಂಗಾಸ್ನಾನಸಹಸ್ರೇಷು ಪುಷ್ಕರಸ್ನಾನ ಕೋಟಿಷು । ಯತ್ಪಾಪಂ ವಿಲಯಂ ಯಾತಿ ಸ್ಮೃತೇ ನಶ್ಯತಿ ತದ್ಧರೌ ॥ ೮ ಸಕೃತ್ಸ್ಮೃತೋಽಪಿ ಗೋವಿಂದೋ ನೃಣಾಂ ಜನ್ಮಶತೈಃ ಕೃತಮ್ । ಪಾಪರಾಶಿಂ ದಹ ತ್ಯಾಶು ತೂಲರಾಶಿ ಮಿವಾನಲಃ ॥ ೯ ಸ್ತುವನ್ ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ । ವಾಸುದೇವಾಶ್ರಯೋ ಮರ್ತ್ಯೋ ವಾಸುದೇವ ಪರಾಯಣಃ । ಸರ್ವಪಾಪ ವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಮ್ ॥**

ಇವೆಲ್ಲಾ ಉಪಾಯಾನುಷ್ಠಾನಪೂರ್ವಕ ಮೋಕ್ಷಪ್ರಾಪ್ತಿಗೆ ಸಹಕಾರಿ ಎಂದರಿಯ ತಕ್ಕದ್ದು. ಇದರಿಂದ ಭಕ್ತಿಯೋಗಮೂಲಕ ವಾಸುದೇವನನ್ನು ಆಶ್ರಯಿಸಿ ಮೋಕ್ಷಹೊಂದು ವನೆಂಬ ಭಾವವು. **"ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂಪ್ರತಿ"** ಮೋಕ್ಷವನ್ನು ಕುರಿತು ಉಪಾಯಾನುಷ್ಠಾನಮೂಲಕ ಹೊರಡಲು ಈ ನಾಮೋಚ್ಚಾರಣಮೂಲಕ ಸೊಂಟಕಟ್ಟಿ ನಿಂತನು ಎಂಬ ಭಾವವು. ಈ ನಾಮೋಚ್ಚಾರಣವು ಹೇಗೆ ಉಪಾಯಾನುಷ್ಠಾನಕ್ಕೆ ಸಹ ಕಾರಿಯೋ ಹಾಗೆಯೇ ಶ್ರವಣವೂ, ಕೀರ್ತನವೂ, ಸ್ಮರಣವೂ, ಅರ್ಚನವೂ, ಕೈಂಕರ್ಯವೂ, ಪುಣ್ಯತೀರ್ಥಗಳಲ್ಲಿ ಅವಗಾಹನೆಯೂ, ಪುಣ್ಯಸ್ಥಳಗಳ ಯಾತ್ರೆಯೂ, ಎಲ್ಲವೂ ಸಾಕ್ಷಾತ್ತಾಗಿ ಮೋಕ್ಷದಾಯಕಗಳಲ್ಲವು; ಸದ್ವಾರಕಗಳಾಗಿ ಉಪಾಯಾನುಷ್ಠಾನದ್ವಾರಾ ಮೋಕ್ಷದಾಯಕಗಳು. ಆದರೆ ಈ ಶ್ಲೋಕದಲ್ಲಿ ತೋರಿಬರುವ ಶ್ರೀ ಭಾಷ್ಯಕಾರರ ಮತ್ತು ಶ್ರೀ ನಿಗಮಾಂತದೇಶಿಕರವರ ಅಭಿಪ್ರಾಯವು ಭಕ್ತಿಯೋಗದಲ್ಲಿಳಿದು ಭಗವದನುಭವದಲ್ಲೇ ಮಗ್ನನಾಗಿರುವವನ ಸದಾಪ್ರ ವೃತ್ತಿಯು ಈ ನಾಮಸಂಕೀರ್ತನ, ಯತನ, ನಮಸ್ಕಾರಾದಿರೂಪವಾದುದು ಎಂಬುದು. ಅಥವಾ ಹೀಗೆ ಅತ್ಯಂತ ಭಕ್ತಿಯಿಂದ ತನ್ನನ್ನು ಉಪಾಸನೆಮಾಡುವವರು ತನ್ನಲ್ಲಿರುವ ಅತ್ಯರ್ಥಪ್ರೀತ್ಯ ತಿಶಯವನ್ನು ಈ ಮೇಲೆ ಹೇಳಿದ ವಾಙ್ಮನಃಕಾಯ ವ್ಯಾಪಾರಗಳ ಮೂಲಕ ನಿರ್ಲಜ್ಜರಾಗಿ ವ್ಯಕ್ತಗೊಳಿಸುತ್ತಾರೆಂದು ತಿಳಿಸುತ್ತಾರೆಂಬುದಾಗಿಯೂ ಭಾವಿಸಬಹುದು. ಅಥವಾ ಇವೆರಡೂ ಪರಸ್ಪರ ಉಂಟಾಗುತ್ತದೆಂದೂ ಭಾವಿಸಬಹುದು, ಹೇಗೆಂದರೆ ಈ ಕೀರ್ತನ ಯತನ ನಮಸ್ಕಾರಾ ದಿಗಳು ಉಪಾಸನವು ನಿರ್ವಿಘ್ನವಾಗಿ ನಡೆಯಲು ಸಹಕಾರಿಗಳಾಗಬಹುದು, ಆ ಉಪಾಸನದಿಂದ ಉಂಟಾದ ಹರ್ಷೋದ್ರೇಕದಿಂದ ಇಂತಹ ಪ್ರವೃತ್ತಿಗಳೆಲ್ಲಾ ಲಭಿಸಬಹುದೆಂದೂ ಅಭಿಪ್ರಾಯ ಪಡಬಹುದು. ಹೀಗೆ ಪರಸ್ಪರ ಪ್ರಾಪ್ತವಾಗುತ್ತವೆಂಬುದು ಅನ್ಯೋನ್ಯಾಶ್ರಯ ದೋಷಕ್ಕೆ ಗುರಿ ಯಾಗುವದಿಲ್ಲವೇ ಎಂದರೆ ಪರಸ್ಪರ ಪ್ರೇರಕ ರೂಪದಲ್ಲಿ ಸಹಾಯಗಳೆಂಬುದರಿಂದ ಅಂತಹ ದೋಷವು ಎಂದಿಗೂ ಉಂಟಾಗುವದಿಲ್ಲವು.

**ಭಾ. ಅತ್ಯರ್ಥ ಮತ್ಪ್ರಿಯತ್ವೇನ ಮತ್ಕೀರ್ತನ ಯತನ ನಮಸ್ಕಾರೈ ರ್ವಿನಾ ಕ್ಷಣಾಣು ಮಾತ್ರೇಽಪ್ಯಾತ್ಮಧಾರಣ ಮಲಭಮಾನಾಃ ಮದ್ಗುಣವಿಶೇಷವಾಚೀನಿ ಮನ್ನಾಮಾನಿ ಸ್ಮೃತ್ವಾ ಪುಲಕಾಂಚಿತಸರ್ವಾಂಗಾ ಹರ್ಷಗದ್ಗದಕಂಠಾ ನಾರಾಯಣಕೃಷ್ಣ ವಾಸುದೇವೇತ್ಯೇವ ಮಾದೀನಿ ಸತತಂ ಕೀರ್ತಯನ್ತಃ ತಥೈವ ಯತಂತಃ-ಮತ್ಕರ್ಮ**

**ಭಾಷ್ಯಾರ್ಥವು:—"ಭಜನ್ತ್ಯನನ್ಯಮನಸಃ"** ಎಂಬುದರಿಂದ ಅನನ್ಯ ಮನಸ್ಕರಾಗಿ ನನ್ನನ್ನು ಉಪಾಸಿಸುತ್ತಾರೆಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇಂತಹ ಅತ್ಯರ್ಥ ಪ್ರೀತ್ಯತಿಶಯ ಲಕ್ಷಣೆಯುಳ್ಳ ಅವಸ್ಥೆಯಿಂದ ಪ್ರೇರಿತವಾದವು ಯಾವುವೆಂದರೆ.—ಕೀರ್ತನ, ಶ್ರವಣ, ನಮಸ್ಕಾರಾದಿಗಳೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಮೊದಲು **ಸತತಂ ಕೀರ್ತಯನ್ತಃ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ. **ಅತ್ಯರ್ಥಪ್ರಿಯತ್ವೇನ** - ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ನಾನು ಆ ಮಹಾತ್ಮರಿಗೆ ಪ್ರಿಯನಾಗಿರುವದರಿಂದ ಏತರಿಂದ ಎಂದರೆ, ಆತನು ಮಾಡುವ ಏಕಾಂತ ಭಕ್ತಿಯಿಂದ ಎಂಬ ಭಾವವು, **ಮತ್ಕೀರ್ತನ ಯತನ ನಮಸ್ಕಾರೈರ್ವಿನಾ** - ಇವುಗಳು ಕ್ರಮವಾಗಿ ವಾಚಿಕ, ಮಾನಸಿಕ, ಕಾಯಿಕ ಕೈಙ್ಕರ್ಯಗಳು, ನನ್ನ ಕೀರ್ತನೆ, ಆರಾಧನೆ ನಮಸ್ಕಾರಗಳಿಲ್ಲದೆ, **ಕ್ಷಣಾಣುಮಾತ್ರೇಽಪಿ** ಒಂದು ಕ್ಷಣಕಾಲದ ಅಲ್ಪಭಾಗ ಕೂಡ ಆತ್ಮಧಾರಣವನ್ನು, **ಅಲಭಮಾನಃ** - ಹೊಂದದವರಾಗಿ, **ಮದ್ಗುಣವಿಶೇಷ ವಾಚೀನಿ**- ನನ್ನ ಕಲ್ಯಾಣ ಗುಣವಿಶೇಷಗಳನ್ನು ಬೋಧಿಸುವ, **ಮನ್ನಾ ಮಾನಿ** - ನನ್ನ ಹೆಸರುಗಳನ್ನು, **ಸ್ಮೃತ್ವಾ** - ಸ್ಮರಿಸುವವರಾಗಿ, ಅದರಿಂದ **ಪುಲಕಾಂಚಿತ ಸರ್ವಾಙ್ಗಾಃ**-**"ಬದ್ಧೇನಾಂಜಲಿನಾ ನತೇನಶಿರಸಾ ಗಾತ್ರೈಸ್ಸರೋಮೋದ್ಗಮೈಃ ಕಂಠೇನ ಸ್ವರಗದ್ಗದೇನ ನಯನೇನೋ ದ್ಗೀರ್ಣಭಾಷ್ಪಾಂ ಬುನಾ |** (ಮುಕುಂದಮಾಲಾ) ಎಂದು ಹೇಳಿರುವಹಾಗೆ ಸಮಸ್ತಾವಯಗ ಳಲ್ಲೂ ರೋಮಾಂಚವುಳ್ಳವರಾಗಿ, **ಹರ್ಷಗದ್ಗದಕಂಠಾಃ** - ಹರ್ಷದಿಂದ ಗದ್ಗದ ಸ್ವರವುಳ್ಳವ ರಾಗಿ, (ಇವುಗಳು ಕಣ್ಣಿನಲ್ಲಿ ಆನಂದಾಶ್ರುವನ್ನು ಸುರಿಸುವವರಾಗಿರುವದು ಮುಂತಾದ್ದಕ್ಕೂ ಉಪಲಕ್ಷಣವು), **ನಾರಾಯಣ, ಕೃಷ್ಣವಾಸುದೇವೇತ್ಯಾದೀನಿ** - ಇಂತಹ ನಾಮಗಳೇ ಮೊದ ಲಾದವುಗಳನ್ನು, **ಸತತಂ ಕೀರ್ತ ಯನ್ತಃ** - ಯಾವಾಗಲೂ ಹೊಗಳುವವರಾಗಿ, ಎಲ್ಲಾ ಭಗ ವನ್ನಾಮಗಳಿಗಿಂತಲೂ ನಾರಾಯಣಶಬ್ದವು ವಿಶೇಷಾರ್ಥಯುಕ್ತವಾದುದರಿಂದಲೇ ಶ್ರೀ ಪುರುಷ ಸೂಕ್ತದಲ್ಲಿ ಎಲ್ಲಾ ನಾಮಗಳೂ ಶ್ರೀಮನ್ನಾರಯಣನನ್ನೇ ಬೋಧಿಸುತ್ತವೆ ಎಂದು ಹೇಳಿ ಸಾಮಾನಾಧಿಕರಣ್ಯದಿಂದ ಸರ್ವಜಗತ್ತು ನಾರಾಯಣನೇ ಎಂದು ಉಪದೇಶಿಸಲ್ಪಟ್ಟಿರುತ್ತದೆ. | **ರಾಃ ನಭವಂತಿನರಾಃ** ಎಂಬ ವ್ಯುತ್ಪತ್ತಿಯಿಂದ **ನರಾಃ** - ನಾಶವಿಲ್ಲದ ನಿತ್ಯವಸ್ತುಗಳು. ಇವು ಗಳಲ್ಲಿ ಬ್ರಹ್ಮಾಂಡಗಳೂ ಅವುಗಳಲ್ಲಿರುವ ನಿತ್ಯರಾದ ಚೇತನರೂ ಸಹ **ಹೇಳಲ್ಪಟ್ಟ**ರು. ಇಂತಹ ನಿತ್ಯವಸ್ತುಗಳಿಗೆ ಪ್ರಾಪ್ಯ, ಪ್ರಾಪಕ, ಆಧಾರ ಭೂತನು (ಇದು ತತ್ಪುರುಷ ಸಮಾಸಾರ್ಥವು.) ಇನ್ನೊಂದರ್ಥವು ಇಂತಹ ನಿತ್ಯವಸ್ತುಗಳನ್ನೇ ಆಧಾರವಾಗಿ ಉಳ್ಳವನು, ಎಂದರೆ ಅವುಗಳಲ್ಲಿ ಅಂತರ್ಯಾಮಿತ್ವೇನ ಇರುವವನು (ಇದು ಬಹುವ್ರೀಹಿಯ ಅರ್ಥವು). ಮನುವು **"ಆಪೋನಾರಾ ಇತಿ ಪ್ರೋಕ್ತಾ ಆಪೋವೈ ನರಸೂನವಃ | ಅಯನಂ ತಸ್ಯತಾಃಪೂರ್ವಂ ತೇನ ನಾರಾ ಯಣಸ್ಸ್ಮೃತಃ"** ಎಂದು ಹೇಳಿರುತ್ತಾರೆ. ಹಾಗೆಯೇ **"ನರಾಜ್ಜಾತಾನಿತತ್ತ್ವಾನಿ ನಾರಾಣೀ ತತೋವಿದುಃ | ತಾನ್ಯೇವಚಾಯನಂ ತಸ್ಯ ತೇನ ನಾರಾಯಣಸ್ಸ್ಮೃತಃ"** ಎಂಬ ಪ್ರಮಾ ಣವೂ ಉಂಟು. ಇಲ್ಲಿ ನರನೆಂದು ಹೇಳಲ್ಪಟ್ಟಿರುವವನು ಸರ್ವೇಶ್ವರನು, ಅವನಿಂದ ಸೃಷ್ಟಿಸಲ್ಪಟ್ಟ **ಚಿದಚಿತ್ತುಗಳು ನಾರಗಳು, ಅವುಗಳಿಗೆ ಆತ್ಮಾವಾಗಿ ಅವುಗಳನ್ನು ಶರೀರವಾಗಿ ಉಳ್ಳವನು** ನಾರಾಯಣನು. **ಕೃಷ್ಣ** ನೆಂಬ ನಾಮಕ್ಕೆ ನಿಷ್ಪತ್ತಿಯು, **"ಕೃಷಿರ್ಭೂ ವಾಚಕಶಬ್ದೋಣಶ್ಚ**

**ಭಾ. ಸ್ವರ್ಚನಾದಿಕೇಷು ಚ ದೃಢಸಙ್ಕಲ್ಪಾ ಯತಮಾನಾಃ ಭಕ್ತಿಭಾರಾವನಮಿತ ಮನೋಬುದ್ಧ್ಯಭಿಮಾನ ಪದದ್ವಯ ಕರದ್ವಯ ಶಿರೋಭಿರಷ್ಟಾಙ್ಗೈ ರಚಿನ್ತಿತ ಪಾಂಸು ಕರ್ದಮ ಶರ್ಕರಾದಿಕೇ ಧರಾತಲೇ ದಂಡವತ್ಪ್ರಣಿಪತಂತಃ, ಸತತಂ ಮಾಂ ನಿತ್ಯಯುಕ್ತಾಃ- ನಿತ್ಯಯೋಗಂ ಕಾಂಕ್ಷಮಾಣಾ ಆತ್ಮಾಂತಂ ಮದ್ದಾಸ್ಯ ವ್ಯವಸಾಯಿನಃ ಉಪಾಸತೇ ॥ ೧೪ ॥**

**ನಿರ್ವೃತಿವಾಚಕಃ। ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋಭವತಿ ಶಾಶ್ವತಃ"** (ಭಾರ ಉದ್ಯೋಗ. ೬೯. ೫.) ಅಲ್ಲೇ **"ವಸನಾತ್ಸರ್ವಭೂತಾನಾಂ ವಸುತ್ವಾದ್ದೇವ ಯೋನಿತಃ। ವಾಸುದೇವಸ್ತ ತೋಜ್ಞೇಯಃ"** ಎಂದು ವಾಸುದೇವ ಶಬ್ದ ನಿರ್ವಚನವು ಮಾಡಲ್ಪಟ್ಟಿದುತ್ತದೆ. ಮೋಕ್ಷಧರ್ಮ ೧೬೬ ರಲ್ಲಿ **"ಛಾದಯಾಮಿ ಜಗತ್ಸರ್ವಂ ಭೂತ್ವಾಸೂರ್ಯ ಇವಾಂಶುಭಿಃ। ಸರ್ವಭೂತಾದಿ ವಾಸಶ್ಚ ವಾಸುದೇವ ಸ್ತತಸ್ಸ್ಮೃತಃ"** ಎಂದಿರುತ್ತದೆ. ಸೂರ್ಯನು ಹೇಗೆ ಈ ಜಗತ್ತನ್ನೂ ತನ್ನ ಕಿರಣಗಳಿಂದ ಹೊದ್ದಿಸಿ ರಕ್ಷಿಸುತ್ತಾನೋ ಹಾಗೆ ವಿಶ್ವಕ್ಕೆಲ್ಲಾ ಸತ್ತೆಯನ್ನು ಕೊಟ್ಟು ರಕ್ಷಿಸುವನೂ ಅಲ್ಲದೆ, ಆ ಎಲ್ಲಾ ವಿಶ್ವದ ಭೂತಗಳಲ್ಲೂ ವಾಸಮಾಡುವದರಿಂದ ವಾಸುವೆನಿಸುವನು. ಹಾಗೆಯೇ ದೇವಶ್ಚ ಆ ವಿಶ್ವದಲ್ಲೇ ಕ್ರೀಡಿಸುವವನು ಅಥವಾ ಪ್ರಕಾಶಿಸುತ್ತಿರುವವನು, ಅಥವಾ ಸ್ತೋತ್ರಮಾಡಲ್ಪಡುವವನು, ವಿಷ್ಣು ಪುರಾಣದಲ್ಲಿ (೧. ೨. ೧೨.) **"ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇತಿ ವೈಯತಃ। ತತಸ್ಸ ವಾಸುದೇವೇತಿ ವಿದ್ವದ್ಭಿಃ ಪರಿ ಪಠ್ಯತೇ"** ಈತನು ಸಮಸ್ತ ಸ್ಥಳದಲ್ಲೂ ಇರುವದರಿಂದಲೂ ಸಮಸ್ತವೂ ಈತನಲ್ಲಿರುವದರಿಂದಲೂ ವಾಸುದೇವನು ಎಂದು ಹೇಳಲ್ಪಟ್ಟಿರುತ್ತದೆ. **"ವಾಸನಾದ್ವಾಸುದೇವಸ್ಯ ವಾಸಿತಂತೇ ಜಗತ್ತ್ರಯಂ। ಸರ್ವಭೂತಾನಿವಾಸೋಽಸಿ ವಾಸುದೇವ ನಮೋಽಸ್ತುತೇ"** ಎಂಬ ವ್ಯಾಸೋಕ್ತಿಯೂ ವಾಸುದೇವ ಶಬ್ದದ ನಿರ್ವಚನವನ್ನು ಬೋಧಿಸುತ್ತದೆ. ಹೀಗೆ ಭಗವನ್ನಾಮಗಳು ಅಮೋಘಾರ್ಥಗಳುಳ್ಳದ್ದಾಗಿ ಸರ್ವೇಶ್ವರನ ಸ್ವರೂಪ ರೂಪಗುಣ ಚೇಷ್ಟಿತಗಳನ್ನು ಹೊಗಳುತ್ತವೆ. ಇಂತಹ ಭಗವನ್ನಾಮಗಳ ಅಮೋಘಾರ್ಥಗಳನ್ನು ಗ್ರಹಿಸುವ ಆಶೆಯುಳ್ಳವರು ವಿಷ್ಣು ಸಹಸ್ರನಾಮವನ್ನು ಭಾಷ್ಯದೊಂದಿಗೆ ಸೇವಿಸತಕ್ಕದ್ದು. **ತಥೈವ** - ಹಾಗೆಯೇ ಎಂದರೆ ಯಾವಾಗಲೂ ಅದನ್ನನುಸರಿಸಿಯೇ, ಎಂದರೆ ಯಾವಾಗಲೂ ಏಕಾಂತಭಕ್ತಿಯಿಂದಲೇ **ಮತ್ಕರ್ಮಸ್ವರ್ಚನಾದಿ ಕೇಷು** - ಎಲ್ಲಾ ಕರ್ಮಗಳಾದ ನನ್ನ ಆರಾಧನೆ ಮೊದಲಾದವುಗಳಲ್ಲೂ, **ತದುಪಕಾರಕೇಷು** - ಆ ಆರಾಧನೆಗಳಿಗೆ ಉಪಕಾರಕಗಳಾದ, **ಭವನನಂದನವನಕರಣಾದಿ ಕೇಷು ಚ** - ದೇವಾಲಯ, ಹೂತೋಟ ಮೊದಲಾದವುಗಳನ್ನು ನಿರ್ಮಿಸುವದರಲ್ಲೂ ಸಹ **ದೃಢವ್ರತಾಃ ಯತಮಾನಾಃ** - ದೃಢಸಙ್ಕಲ್ಪಯುಕ್ತರಾಗಿ ಯತ್ನಿಸುವ, **ಭಕ್ತಿಭಾರಾವನಮಿತಮನೋ ಬುದ್ಧ್ಯಭಿಮಾನ ಪದದ್ವಯಕರದ್ವಯಶಿರೋಭಿ ರಷ್ಟಾಂಗೈಃ** - ಮೂಲದ **ಭಕ್ತ್ಯಾ ನಮಸ್ಯಂತಶ್ಚ** ಎಂಬುದಕ್ಕೆ ಇದು ವ್ಯಾಖ್ಯಾನವು, ನಮಸ್ಕಾರವು, ಅಷ್ಟಾಂಗಯುಕ್ತವಾಗಿಯೂ ಭಕ್ತಿಯು ನಿರತಿಶಯವಾದುದರಿಂದ ಅದರ ಭಾರದಿಂದ ದೇಹವೆಲ್ಲಾ ನಮ್ರವಾಗಿರಬೇಕೆಂದು ತಿಳಿಸುತ್ತಾರೆ. ಭಕ್ತಿಯ ಭಾರದಿಂದ ಬಗ್ಗಿದ; ಮನಸ್ಸೂ, ಬುದ್ಧಿ,- ಅಭಿಮಾನ, ಎರಡು ಕಾಲುಗಳು, ಎರಡು ಕೈಗಳು, ಶಿರಸ್ಸು ಹೀಗೆ ಎಂಟು ಅಙ್ಗಗಳುಳ್ಳವನಾಗಿ, ಹೀಗೆ ದಂಡವತ್ಪ್ರಣಾಮವನ್ನು ಮಾಡಬೇಕೆಂದೂ, ಭೂಮಿಯು ಅಂತಹ ಭಕ್ತಿಪಾರವಶ್ಯದಿಂದ ಪ್ರಣಾಮಕ್ಕೆ ಉಚಿತವೇ ಎಂದು ಕೂಡ ಪರ್ಯಾಲೋಚಿಸದೆ ನಮಸ್ಕಾರಮಾಡಬೇಕೆಂದು ಮುಂದೆ ತಿಳಿಸುತ್ತಾರೆ.—**ಅಚಿನ್ತಿತ ಪಾಂಸು ಕರ್ದಮ ಶರ್ಕರಾದಿಕೇ ಧರಾತಲೇ ದಂಡವತ್ಪ್ರಣಿಪತಂತಃ** ಮರಳು ಕೆಸರು ಚುಚ್ಚುವ ಸಣ್ಣ ಬೆಣಚುಕಲ್ಲು **ಮೊದಲಾದವುಗಳುಳ್ಳದ್ದೆಂದೂ ಪರ್ಯಾ**

ಲೋಚನೆಯಿಲ್ಲದೆ ಭೂಮಿಯಲ್ಲಿ ಒಂದು ದಂಡದಹಾಗೆ ಬಿದ್ದು ಪ್ರಣಾಮ ಮಾಡುವವರಾಗಿ, **ಸತತಂ ಮಾಂ** – ಯಾವಾಗಲೂ ನನ್ನನ್ನು ಹೀಗೆ **ಸತತಂ** ಎಂಬುದನ್ನು ಎಲ್ಲದಕ್ಕೂ ಅನ್ವಯಸತಕ್ಕದ್ದೆಂಬ ಭಾವವು ಇದು **"ಕ್ಷಣಾಣುಮಾತ್ರೋಽಪಿ"** ಎಂಬ ಪ್ರಯೋಗದಿಂದ ಈ ಅನ್ವಯವು ವ್ಯಕ್ತಪಡುತ್ತದೆ. **ನಿತ್ಯಯುಕ್ತಾಃ** ಎಂದರೆ **ನಿತ್ಯಯೋಗಂ ಕಾಂಕ್ಷಮಾಣಾಃ** – ಶ್ರೀಯಃಪ್ರತಿಯೊಂದಿಗೆ ದಿವ್ಯ ವೈಕುಂಠದಲ್ಲಿ ನಿತ್ಯಯೋಗವನ್ನು ಅಪೇಕ್ಷಿಸುವವರಾಗಿ, **ಆತ್ಮಾಂತಂ** – ತಮ್ಮ ಆತ್ಮ ಇರುವವರೆಗೂ ಎಂದರೆ ಆತ್ಮನು ಹೇಗೆ ನಿತ್ಯವೋ ಹಾಗೆ ಸದಾ, **ಮದ್ದಾಸ್ಯ ವ್ಯವಸಾಯಿನೀ**- ನನ್ನಲ್ಲಿ ಅವರಿಗಿರುವ ಸ್ವಾಭಾವಿಕ ದಾಸ್ಯ ಕೃಷಿಯನ್ನು ಮಾಡುತ್ತಾ, ಎಂದರೆ ದಾಸ್ಯ ವ್ಯವಸಾಯವು ಕೈಙ್ಕರ್ಯಾಭಿವೃದ್ಧಿಯಲ್ಲಿ ಪರಿಣತಿಯನ್ನು ಹೊಂದುವದರಿಂದ ಕೈಙ್ಕರ್ಯಾಭಿವೃದ್ಧಿಯನ್ನೆಸಗುವರಾಗಿ, ಅಥವಾ **ಆತ್ಮಾಂತಂ** – ದೇಹವಿರುವವರೆಗೂ, **ಉಪಾಸತೇ** – ಉಪಾಸನೆಯನ್ನು ಮಾಡುತ್ತಾರೆ. ನಮಸ್ಕಾರವು ಭಕ್ತ್ಯತಿಶಯವನ್ನೂ ತಾನು ಸ್ವಾಮಿಗೆ ನಿರುಪಾಧಿಕದಾಸಭೂತನೆಂದೂ ಸೂಚಿಸುವದಲ್ಲದೆ, ತಾನು ಸರ್ವೇಶ್ವರನಿಂದ ಪಡೆದಿರುವ ನಾನಾವಿಧ ಉಪಕಾರಗಳಿಗೆ ಪ್ರತಿಯಾಗಿ ಕೃತಜ್ಞತಾ ಸೂಚಿಸುವದಕ್ಕೆ ಏನೊಂದೂ ಮಾರ್ಗವಿಲ್ಲದೆ ಇರುವದರಿಂದ **ಕೃತೇಚ ಪ್ರತಿಕರ್ತವ್ಯಂ ಏಷಧರ್ಮ ಸ್ಸನಾತನಃ** ಎಂದು **ಶಾಸ್ತ್ರ**ವೂ ಇರುವದರಿಂದ, ತನ್ನ ಶಕ್ತ್ಯನುಸಾರ ಭಗವತ್ಪ್ರೀತ್ಯರ್ಥವಾಗಿ ದಂಡವತ್ಪ್ರಣಾಮ ಮೂಲಕ ತಾನು ಕೃತಜ್ಞತಾಭಾವವುಳ್ಳವನೆಂದೂ ಪ್ರದರ್ಶಿಸುತ್ತದೆ. ಈ ನಮಸ್ಕಾರವು ವಾಚಿಕ, ಮಾನಸಿಕ, ಕಾಯಿಕವಾಗಿಯೂ ಇರಬಹುದು ಕಾಯಿಕವು ಸರ್ವೋತ್ಕೃಷ್ಟವಾದುದರಿಂದ ಅದು ಇಲ್ಲಿ ಉಪಪಾದಿತವು. **ದಾಸಭೂತಾಸ್ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ** ಎಂಬ ರುದ್ರ ವಾಕ್ಯವು ಈತನಿಗೆ ದಾಸತ್ವವು ಶಾಶ್ವತವಾಗಿಯೂ, ನಿರುಪಾಧಿಕವಾಗಿಯೂ ತನಗೆ ಅಸಾಧಾರಣವಾಗಿಯೂ ಇರುವದರಿಂದ, **ಆತ್ಮಾಂತಂ ಮದ್ದಾಸ್ಯ ವ್ಯವಸಾಯಿನಃ** ಮುಕ್ತ ದಶೆಯಲ್ಲಿ ತನ್ನ ನೈಜದಶೆಯನ್ನರಿತವನಾಗಿ ಶ್ರಿಯಃಪತಿಗೆ ಕೈಙ್ಕರ್ಯಮಾಡುವ ಸರ್ವೋತ್ಕೃಷ್ಟಾವಸ್ಥೆಯು ಉಂಟಾಗುವದರಿಂದ ಶ್ರೀ ನಿಗಮಾಂತ ದೇಶಿಕರವರು ಅದನ್ನು **ಕಿಂಕರತ್ವಾಧಿರಾಜ್ಯಂ** ಎಂದು **ಕೊಂಡಾಡಿ**ರುತ್ತಾರೆ, ಇಂತಹ ಅಮೋಘಾವಸ್ಥೆಯನ್ನು ಐಹಿಕ ದಶೆಯಲ್ಲಿ ಮಂದ ಬುದ್ಧಿಯು ತಿಳಿಯದೆ ಇರುತ್ತಾನೆಯೇ ಎಂಬ ಪರಿತಾಪದಿಂದ ಆತನನ್ನು **ಕಲುಷದುತಿಃ** ಎಂದು ನಿಂದಿಸಿರುತ್ತಾರೆ. ಹೀಗೆ ಅನನ್ಯ ಮನಸ್ಕನಾಗಿರುವ ಉಪಾಸಕನು ತನ್ನ ಅತ್ಯರ್ಥ ಭಕ್ತಿಯನ್ನು ಕೀರ್ತನ, ಯತನ, ನಮಸ್ಕಾರಾದಿಗಳ ಮೂಲಕ ತೋರಿಸಿ, ತಾನೂ ಅದರಿಂದ ತೃಪ್ತನಾಗಿ, ಪರಮಾತ್ಮನನ್ನು ತೃಪ್ತಿಗೊಳಿಸುವನೆಂಬ ಭಾವವು. ಹೀಗೆ ಕೀರ್ತನ ಮೊದಲಾದವುಗಳನ್ನು ಈತನು ಗೋಪ್ಯವಾಗಿ ನಡೆಸುವನೂ ಅಲ್ಲವು. ಯಾವಾಗ ಆತನಲ್ಲೇ **ಸತತಂ** ಸರ್ವಪಾಮನನ್ನು ಸಕ್ತವಾಯಿತೋ ಆಗ ಆತನು ನಿರ್ಲಜ್ಜನಾಗಿ ಆತನ ನಾಮಗಳನ್ನು ಘಟ್ಟಿಯಾಗಿ ಉಚ್ಚರಿಸುವನು, ಹುಚ್ಚನಹಾಗೆ ಲಜ್ಜೆಯಿಲ್ಲದೆ ಗಾನಮಾಡುವನು, ಬಾಲನಹಾಗೆ ನರ್ತನಮಾಡುವನು, ಇಂತಹ ಅವಸ್ಥೆಗಳೂ ಸಹ ಪ್ರಾಪ್ತವಾಗುತ್ತವೆಂಬುದೂ ಸೂಚಿತವು.

**ಮೂಲಕ್ಕೆ ಅರ್ಥವು:—**ಹಿಂದೆ ಅನನ್ಯ ಮನಸ್ಕರಾಗಿ ತಮ್ಮ ಭಕ್ತರು ಮಾಡುವ ಉಪಾಸನವನ್ನು ಶ್ಲಾಘಿಸಿದರು. ಅದರಿಂದುಂಟಾದ ಪ್ರಯೋಜನವಾಗಿ ನಾಮಸಂಕೀರ್ತನ ದೇವತಾರ್ಚನ, ನಮಸ್ಕಾರವೇ ಮೊದಲಾದವುಗಳನ್ನು ಮಾಡುವರೆಂದು ಅನಂತರ ಹೇಳಿದರು. ಈ ಶ್ಲೋಕದಲ್ಲಿ ಇನ್ನೂ ಕೆಲವರು ತನ್ನ ವಿಷಯಕವಾದ ಯಥಾರ್ಥಜ್ಞಾನವುಳ್ಳವರಾಗಿಯೂ ಉಪಾಸಿಸುತ್ತಾರೆಂದು ಹೇಳಿ, ಮುಂದಿನ ನಾಲ್ಕು ಶ್ಲೋಕಗಳಿಂದ ಆ ಜ್ಞಾನವು ಯದ್ರೂಪವಾದುದೆಂದು ವಿಸ್ತರಿಸಿ ಹೇಳುತ್ತಾರೆ. ಇಲ್ಲಿ **ಜ್ಞಾನ ಯಜ್ಞೇನ** ಎಂದು ವ್ಯಾವರ್ತಿಸಿ ಹೇಳಿದುದರಿಂದ ಹಿಂದಿನ

**ಮೂ. ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾ ಮುಪಾಸತೇ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥** ೧೫.

ಶ್ಲೋಕದಲ್ಲಿ ಹೇಳಿದುದು ಜ್ಞಾನರೂಪ ಯಜ್ಞವಲ್ಲವು, ಕರ್ಮರೂಪ ಯಜ್ಞವೆಂಬುದು ದ್ಯೋತಿತವು. **ಜ್ಞಾನಯಜ್ಞೇನ ಚ** ಎಂದು ಚಕಾರವಿರುವದರಿಂದ ಹಿಂದೆ ಹೇಳಿದ ಕರ್ಮರೂಪ ಯಜ್ಞದೊಂದಿಗೆ ಕೆಲವರೂ, ಇನ್ನೂ ಕೆಲವರು ಆ ಕರ್ಮರೂಪ ಯಜ್ಞದೊಂದಿಗೇ ಈ ಜ್ಞಾನರೂಪ ಯಜ್ಞವನ್ನೂ ಸಹ ನಡೆಸಿ ಉಪಾಸನೆಯನ್ನು ಮಾಡುತ್ತಾರೆಂದು ತೋರಿಬರುತ್ತದೆ. **ಅನ್ಯೇಪಿ** - ಇತರ ಭಕ್ತಿಯೋಗ ನಿಷ್ಠರಾದರೋ **ಜ್ಞಾನ ಯಜ್ಞೇನ ಚ** - ಹಿಂದೆ ಹೇಳಿದ ಕೀರ್ತನ, ಯಜನ, ನಮಸ್ಕಾರಾದಿಗಳೊಂದಿಗೆ ಈ ಮುಂದೆ ವಿಸ್ತರಿಸಿ ಹೇಳುವ ಜ್ಞಾನ ಯಜ್ಞದಿಂದಲೂ ಸಹ, **ಯಜನ್ತಃ** - (ನನ್ನನ್ನು) ಆರಾಧಿಸುವವರಾಗಿ, **ಮಾಂ** - ನನ್ನನ್ನು, **ಉಪಾಸತೇ** - ಉಪಾಸಿಸುತ್ತಾರೆ. ಯಾವ ಜ್ಞಾನದೊಂದಿಗೆ ನನ್ನನ್ನು ಉಪಾಸನೆಯನ್ನು ಮಾಡುತ್ತಾರೆ ಎಂಬುದು ಉತ್ತರಾರ್ಧದಿಂದ ಹೇಳಲ್ಪಡುತ್ತದೆ. ನಾನು ಎಂತವನೆಂದರೆ **ಪೃಥಕ್ತ್ವೇನ** - ಎಲ್ಲವೂ ಪರಸ್ಪರ ಬೇರೆಯಾದವಾಗಿ, **ಬಹುಧಾ** - ಲೋಕದಲ್ಲಿ ಸೃಷ್ಟಿಯ ವೈವಿಧ್ಯೆಯೇ ಏರ್ಪಟ್ಟಿರುವದರಿಂದ ಬಹುವಾಗಿ, **ವಿಶ್ವತೋಮುಖಂ** - ವಿಶ್ವಪ್ರಕಾರನಾಗಿರುವ, **ಮಾಂ** - ನನ್ನನ್ನು, ಎಲ್ಲಾ ಚಿದಚಿದ್ರೂಪವಾದ ಸಮಸ್ತ ವಿಶ್ವಕ್ಕೂ ಅಂತರಾತ್ಮವಾಗಿ ಹೀಗೆ ಸ್ಥೂಲ ಚಿದಚಿದ್ವಿಶಿಷ್ಟನಾದ ನನ್ನನ್ನು, **ಏಕತ್ವೇನ** - ವಿಶ್ವಪ್ರಕಾರಿಯಾದ ನಾನು ಒಬ್ಬನೇ ಎಂಬ ಭಾವದಿಂದ, **ಉಪಾಸತೇ** - ಉಪಾಸನೆಯನ್ನು ಮಾಡುತ್ತಾರೆ. ಹಿಂದೆ ಹೇಳಿದ ಉಪಾಸಕರಿಗೆ ಇಂತಹ ಜ್ಞಾನವಿಲ್ಲವು. ಇವರುಗಳಿಗಾದರೋ ಅವರುಮಾಡುವ ಕೀರ್ತನ ನಮಸ್ಕಾರಾದಿ ಕೈಙ್ಕರ್ಯಗಳೊಂದಿಗೆ ಯಥಾರ್ಥ ತತ್ವಜ್ಞಾನವುಂಟು. ಸೃಷ್ಟಿಗೆ ಮುಂಚೆ ಈ ವಿಶ್ವದ ಸಕಲ ಚಿದಚಿತ್ತನ್ನೂ ನಾಮರೂಪಾನರ್ಹಸ್ಥಿತಿಯಲ್ಲಿ ಸೂಕ್ಷ್ಮಾವಸ್ಥೆಯಲ್ಲಿ ಶರೀರವಾಗಿ ಹೊಂದಿದವನಾಗಿ ಸೃಷ್ಟಿಕಾಲದಲ್ಲಿ ನಾಮರೂಪಾರ್ಹ ಸ್ಥೂಲಾವಸ್ಥೆಯಲ್ಲಿ ಅವುಗಳನ್ನು ಶರೀರವಾಗಿ ಹೊಂದಿ ಅವುಗಳಿಗೆಲ್ಲಾ ಆತ್ಮಾವಾಗಿರುತ್ತೇನೆ. **"ಬಹುಸ್ಯಾಂ"** ಎಂಬ ಸಂಕಲ್ಪಾನುಗುಣವಾಗಿ • ವಿಶ್ವಪ್ರಕಾರಕನಾಗಿ ಆಗುತ್ತೇನೆ. ಆದುದರಿಂದ ನಾನು ವಿಶ್ವತೋಮುಖನು; ವಿಶ್ವವೆಲ್ಲಾದಕ್ಕೂ ನಾನೊಬ್ಬನೇ ಆತ್ಮಾವಾದುದರಿಂದ ಈ ಬಹುವಾಗಿತೋರುವ ವಿಶ್ವದಲ್ಲಿ ಏಕತ್ವವು ಸಿದ್ಧಿಸಿತು. ಇಲ್ಲಿ ಏಕತ್ವ ಬಹುತ್ವ ಉಪಪಾದನೆಯನ್ನು, ಒಬ್ಬ ಪರಮಾತ್ಮನೇ, ಪರರೂಪ, ವ್ಯೂಹರೂಪ, ವಿಭವ, ಹಾರ್ದ, ಅರ್ಚಾವತಾರ ರೂಪಗಳಾಗಿ ಬಹುವಾಗಿ ಆಗುವನೆಂಬುದಾಗಿ, ಮಾಡಬಹುದು; ಇದರಲ್ಲಿ ಪ್ರಮಾಣವಿರುದ್ಧವಾದ ಅರ್ಥವೇನೂ ಇಲ್ಲದಿದ್ದರೂ, ಪ್ರಕರಣಕ್ಕೆ ಸರಿಹೋಗುವದಿಲ್ಲವಾದುದರಿಂದಲೂ, ಮತ್ತು **ಬಹುಧಾ ವಿಶ್ವತೋಮುಖಂ** ಎಂಬರ್ಥಕ್ಕೆ ಅನುಗುಣವಾಗುವದಿಲ್ಲವಾದುದರಿಂಲೂ ಗ್ರಾಹ್ಯವಲ್ಲವು. ಸ್ವರೂಪೈಕ್ಯವನ್ನು, ಆತ್ಮಾ ಒಂದೇ ಇರುವದೆಂದು ಹೇಳುವವರಿಗೆ ಈ ಉತ್ತರಾರ್ಧಕ್ಕೆ ಅರ್ಥಮಾಡುವದು ತುಂಬಾ ಕಷ್ಟವು. ಏಕತ್ವವು ಯಥಾರ್ಥವಾದರೆ **ಬಹುಧಾ ವಿಶ್ವತೋಮುಖ** ವಾಗಿರುವದಕ್ಕೆ ಮಿಥ್ಯಾತ್ವವನ್ನು ಆರೋಪಣೆಮಾಡಿ, ಅದು ಅಯಥಾರ್ಥ ಭಾವವೆಂದು ಹೇಳಬೇಕಾಗುತ್ತದೆ. ಶರೀರಾತ್ಮ ಭಾವವನ್ನು ವಿಶ್ವಕ್ಕೂ ಪರಮಾತ್ಮನಿಗೂ ಹೇಳುವದರಿಂದ, **ವಿಶ್ವತೋಮುಖ** ವಾಗಿರುವದು ವಿಶಿಷ್ಟಾದ್ವೈತಿಗಳಿಗೆ ಸತ್ಯವು, ಮಿಥ್ಯೆಯಲ್ಲವು; ಏಕತ್ವವೂ ಬಹುಧಾ ವಿಶ್ವತೋ ಮುಖತ್ವವೂ ಎರಡೂ ಯಥಾರ್ಥಗಳಾಗಿ ಸರ್ವಸಮಂಜಸವಾದವು. ಇಲ್ಲಿ **ಏಕತ್ವೇನ ಉಪಾಸತೇ** ಎಂದು ತೃತೀಯೆಯು ಇರುವದರಿಂದ, **ಪೃಥಕ್ತ್ವೇನ** ಎಂಬುದೂ ತೃತೀಯೆಯಾದುದರಿಂದ, ಅದಕ್ಕೆ ಪ್ರತಿದ್ವಂದಿಯಾಗಿ **ಪೃಥಕ್ತ್ವೇನ ಉಪಾಸತೇ** ಎಂದೇ ಅನ್ವಯಿಸಬೇಕೆಂದು ನಿರ್ಬಂಧಿಸಿದರೆ, ಆಗ ಅರ್ಥವೇನೆಂದರೆ ಹೀಗೆ

**ಬಹುಧಾಪಿಶ್ವತೋ** ಮುಖನಾದ ನನ್ನನ್ನು, ಅವುಗಳೊಂದಿಗೆ ಸೇರಿ ಅವುಗಳಿಗೆ ಆತ್ಮಾವಾಗಿರುವದರಿಂದ **ಏಕತ್ವೇನವೂ** ಉಪಾಸನೆಮಾಡುತ್ತಾರೆ; ಮತ್ತು ಹೀಗೆ ನಾನು ಹೇಯವಾದ ವಿಶ್ವದೊಂದಿಗೆ ಇದ್ದರೂ, ಅವುಗಳ ಯಾವ ಹೇಯಗುಣಗಳೂ ಇಲ್ಲದ ಅವುಗಳಿಂದ ಪೃಥಕ್ಕಾದವನು, ವಿಲಕ್ಷಣನಾದವನು ಎಂದೂ **ಪೃಥಕ್ತ್ವೇನ ಉಪಾಸತೇ** ಎಂಬುದಾಗಿ ಅರ್ಥಮಾಡಬಹುದು. ನಾನು ಅವುಗಳೊಂದಿಗೆ ಒಟ್ಟಿಗೆ ಇದ್ದರೂ ಅವುಗಳಿಗಿಂತ ಬೇರೆಯಾಗಿಯೂ ಅವುಗಳಿಗಿಂತ ವಿಲಕ್ಷಣನೆಂಬ ಜ್ಞಾನದಿಂದ ಉಪಾಸನೆಮಾಡುತ್ತಾರೆಂಬ ಭಾವವು. ಹಿಂದಿನ ಮಹಾತ್ಮರುಗಳಿಗಿಂತ ಈ ಜ್ಞಾನದೊಂದಿಗೆ ಉಪಾಸನೆಯನ್ನು ಮಾಡುವವರು ಇನ್ನೂ ಮಹನೀಯರು ಎಂಬ ಭಾವವು. ಈ ಅಭಿಪ್ರಾಯವು **ಏಕ ಏವಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾಚೈವ ದೃಶ್ಯತೇ ಜಲಚಂದ್ರವತ್"** ಎಂಬುದರಿಂದ ತೋರಿಬರುತ್ತದೆ. ಇಲ್ಲಿ ಜಲಚಂದ್ರ ಸಾಮ್ಯವನ್ನು ಕೊಟ್ಟಿರುವದರಿಂದ ಒಬ್ಬನೇ ಚಂದ್ರನು ಅನೇಕ ಜಲಾಶಯಗಳಲ್ಲಿ ಪ್ರತಿಫಲಿಸಿ ಅನೇಕ ಚಂದ್ರರೆಂಬುದು ಹೇಗೆ ಭ್ರಮವೋ ಹಾಗೆಯೇ ಆತ್ಮಾ ಒಬ್ಬನೇ ಭ್ರಮದಿಂದ ಬಹುವಾಗಿ ತೋರುವನು ಎಂದು ಅದ್ವೈತಿಯು ಅರ್ಥವನ್ನು ಹೇಳಿ, ಆಕ್ಷೇಪಿಸಿದರೆ, ಅವರಿಗೆ ಉತ್ತರವು **"ಜಲದರ್ಪಣಾದಿ ಪ್ರತಿ ಬಿಂಬಿತ ಸೂರ್ಯಚಂದ್ರಾದಿವತ್ ಪರಮಾತ್ಮಾ ತತ್ರ ತತ್ರಾವಸ್ಥಿತೋಪಿ ನಿರ್ದೋಷ ಇತಿ"** ಹೀಗೆ ಪರಮಾತ್ಮನು ಅವುಗಳಲ್ಲೆಲ್ಲಾ ಅಂತರ್ಯಾಮಿಯಾಗಿದ್ದರೂ ಅವುಗಳ ಹೇಯ ಗುಣಗಳು ಈತನನ್ನು ಸ್ಪರ್ಶಿಸುವದಿಲ್ಲವು ಎಂಬ ಭಾವದಲ್ಲಿ ಉಪಮೆಯು. ಇದರ ಮೇಲೆ ಅದ್ವೈತಿಯು ಪೂರ್ವಪಕ್ಷವನ್ನು ತರಬಹುದು, ಹೇಗೆಂದರೆ ಚಂದ್ರ ಸೂರ್ಯಾದಿಗಳಿಗೂ ಮಲಿನವಾದ ಉದಕಕ್ಕೂ ಸ್ಪರ್ಶವೇ ಇಲ್ಲವು, ಕಿರಣಗಳ ಮೂಲಕ ಮಾತ್ರ ಸ್ಪರ್ಶವು, ಆದುದರಿಂದ ನಿಮ್ಮ ಅಭಿಪ್ರಾಯವು ಹೇಗೆ ಸರಿಹೋಗುತ್ತದೆ? ಎಂದರೆ ಕಿರಣಗಳೂ ಚಂದ್ರ ಸೂರ್ಯರಿಗೆ ಸಂಬಂಧಿಸಿದ ದ್ರವ್ಯಗಳೇ; ಆದರೂ ಸಾಕ್ಷಾತ್ತಾಗಿ ಸ್ಪರ್ಶವೇ ಇರುವ ಸಾಮ್ಯವನ್ನೂ ಕೊಟ್ಟಿರುವ ಮಹರ್ಷಿಯ ದಿವ್ಯ ಸೂಕ್ತಿಯುಂಟು, ಹೇಗೆಂದರೆ **"ಆಕಾಶ ಮೇಕಂಹಿ ಯಥಾ ಘಟಾದಿಷು ಪೃಥಗ್ಭವೇತ್ । ತಥಾತ್ಮೈಕೋಹ್ಯನೇಕಸ್ಥೋ ಜಲಾಧಾರೇಷ್ವಿವಾಂ ಶುಮಾನ್"** (ಭಾಗ. ೧. ೯. ೪೨.) ಘಟಾದಿಗಳಲ್ಲಿರುವ ವೃದ್ಧಿ ಹ್ರಾಸಾದಿ ದೋಷಗಳು, ಅವುಗಳೊಂದಿಗೆ ಸೇರಿ ಇರುವ ಆಕಾಶಕ್ಕೆ ಹೇಗೆ ಸಂಬಂಧಿಸುವದಿಲ್ಲವೋ, ಹಾಗೆ ಪರಮಾತ್ಮನು ಪೃಥಿವ್ಯಾದಿಗಳಲ್ಲಿ ನಾನಾಕಾರದಲ್ಲಿರುವ ಚೇತನಾ ಚೇತನಾದಿಗಳಲ್ಲಿದ್ದರೂ ಅವುಗಳ ಹೇಯತ್ವದಿಂದ ಸ್ಪರ್ಶಿಸಲ್ಪಡದೇ ಇದ್ದಾನೆಂದು **"ವೃದ್ಧಿಹ್ರಾಸ ಭಾಕ್ತ್ವಮಂತರ್ಭಾವಾತ್ ಉಭಯ ದೃಷ್ಟಾಂತ ಸಾಮಂಜಸ್ಯಾ ದೇವಂದರ್ಶನಾಚ್ಚ"** ಎಂಬ ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ ಇಲ್ಲಿ **ಜ್ಞಾನಯಜ್ಞೇನ ಯಜನ್ತಃ** ಎಂಬ ಪ್ರಯೋಗವು, ಇಂತಹ ಜ್ಞಾನದಿಂದ ತನ್ನ ಯಥಾರ್ಥ ಸ್ವರೂಪವನ್ನು ಅರಿತವರು ಈ ಮಹನೀಯರು ಎಂದು ಶ್ರೀಮ ಸುಪ್ರೀತನಾಗಿ ಭಗವಂತನು ತಾನು ಆರಾಧಿಸಲ್ಪಟ್ಟೆನು ಎಂದು ಭಾವಿಸುವನು ಎಂಬ ಅಭಿಪ್ರಾಯವನ್ನು, ಸೂಚಿಸುತ್ತದೆ. **ವಿಶ್ವತೋಮುಖಂ** ಎಂದಿರುವದರಿಂದ, **ಸಹಸ್ರಶೀರ್ಷಾ ಪುರುಷಃ** ಎಂದು ಹೇಳಿರುವಲ್ಲಿ ವಿಶ್ವದಲ್ಲಿ ಅನೇಕ ಮುಖಗಳುಳ್ಳ ಒಬ್ಬ ದಿವ್ಯ ಮಙ್ಗಳವಿಗ್ರಹಯುಕ್ತನೆಂದೂ, ಅಂತವನೇ ಉಪಾಸ್ಯನೇ ವಿನಾ ನಿರ್ಗುಣನಲ್ಲವೆಂದೂ, ಭಾವಿಸಬಹುದು.

**ಭಾಷ್ಯಾರ್ಥವು:—**ಹಿಂದೆ **ಭಜನ್ತ್ಯನನ್ಯ ಮನಸಃ** ಎಂದು ಹೇಳಿ, ಅನಂತರ ಅವರು ಆ ಚಿತ್ತವೃತ್ತಿಯ ಮೂಲಕ ನಡೆಸುವ ಪ್ರವೃತ್ತಿಗಳು ಯಾವುವು ಎಂದು ಹೇಳಿದರು. ಇನ್ನು ಕೆಲವರು ಹೀಗೆ ಉಪಾಸನೆಯನ್ನು ಅನುಷ್ಠಿಸುವಾಗ ತನ್ನ ಯಥಾರ್ಥವಾದ ಸ್ವರೂಪಾದಿಗಳ ಜ್ಞಾನವನ್ನು ಹೊಂದಿದವರಾಗಿ ಉಪಾಸಿಸುತ್ತಾರೆಂದು ಈ ಶ್ಲೋಕದಲ್ಲಿ ಹೇಳಿ, ಆ ಜ್ಞಾನವನ್ನೇ

**ಭಾ. ಅನ್ಯೇಽಪಿ ಮಹಾತ್ಮಾನಃ ಪೂರ್ವೋಕ್ತೈಃ ಕೀರ್ತನಾದಿಭಿಃ ಜ್ಞಾನಾಖ್ಯೇನ ಯಜ್ಞೇನ ಯಜನ್ತೋ ಮಾ ಮುಪಾಸತೇ; ಬಹುಧಾ ಪೃಥಕ್ತ್ವೇನ ಜಗದಾಕಾರೇಣ ವಿಶ್ವ ತೋಮುಖಂ-ವಿಶ್ವಪ್ರಕಾರ ಮವಸ್ಥಿತಂ, ಮಾಮೇಕತ್ವೇನೋ ಪಾಸತೇ ಏತದು ಕ್ತಂ ಭವತಿ - ಭಗವಾನ್ ವಾಸುದೇವ ಏವ ನಾಮರೂಪವಿಭಾಗಾನರ್ಹಾತಿಸೂಕ್ಷ್ಮ**

ಮುಂದೆ ನಾಲ್ಕು ಶ್ಲೋಕಗಳ ಮೂಲಕ, **ಸದಸಚ್ಚಾ ಹಮರ್ಜುನ** ಎಂದು ಹೇಳಿರುವವರೆಗೂ, ವಿಸ್ತರಿಸಿ ಹೇಳುತ್ತಾರೆ. **ಅನ್ಯೇಽಪಿ ಮಹಾತ್ಮಾನಃ** - ಇತರರಾದ ಮಹಾಮನಸ್ಕರಾದ ಉಪಾಸಕರಾದರೋ, **ಪೂರ್ವೋಕ್ತೈಃ ಕೀರ್ತನಾದಿಭಿಃ** - ಮೇಲಿನ ಶ್ಲೋಕದಲ್ಲಿ ಹೇಳಲ್ಪಟ್ಟ ನಾಮ ಸಂಕೀರ್ತನಾದಿಗಳಿಂದಲೂ, **ಜ್ಞಾನಾಖ್ಯೇನ ಯಜ್ಞೇನ ಚ**-ಜ್ಞಾನರೂಪವಾದ ಯಜ್ಞದಿಂದಲೂ ಕೂಡ, ಮೂಲದಲ್ಲಿ ಚ ಕಾರವಿರುವದರಿಂದ, ಹಿಂದಿನ ಪ್ರವೃತ್ತಿಗಳೆಲ್ಲಾ ಈ ಮಹನೀಯರಲ್ಲೂ ಉಂಟೆಂಬ ಅಭಿಪ್ರಾಯವು ತೋರಿಬರುವದರಿಂದ, **ಪೂರ್ವೋಕ್ತೈಃ ಕೀರ್ತನಾದಿಭಿಃ** ಎಂಬ ಪ್ರಯೋಗವು. ಮೂಲದ **ಅಪಿ** ಶಬ್ದವನ್ನು **ಅನ್ಯೇ** ಎಂಬುದಕ್ಕೆ ಅನ್ವಯಿಸಿ **ಅನ್ಯೇಽಪಿ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದುದರಿಂದ **ಅಪಿ** ಶಬ್ದವು ವೈಲಕ್ಷಣ್ಯವನ್ನು ತೋರಿಸುತ್ತದೆ. ಹಿಂದಿನ ಉಪಾಸಕರಿಗಿಂತ ಇವರುಗಳು ಜ್ಞಾನಮೂಲಕ ಶ್ರೇಷ್ಠರೆಂಬುದು ತೋರಿಬರುತ್ತದೆ. **ಯಜನ್ತಃ** - ನನ್ನನ್ನು ಆರಾಧಿಸುವವರಾಗಿ, ಅದರಿಂದ ನನ್ನನ್ನು ಪ್ರೀತಿಗೊಳಿಸುವವರಾಗಿ, **ಮಾಮುಪಾಸತೇ** - ನನ್ನನ್ನು ಉಪಾಸಿಸುತ್ತಾರೆ. **ಕಥಂ** - ಹೇಗೆ ಉಪಾಸಿಸುತ್ತಾರೆಂದರೆ ಹೇಳುತ್ತಾರೆ. ನನ್ನಲ್ಲಿ ಏನು ಅಭಿಪ್ರಾಯವನ್ನಿಟ್ಟು ಉಪಾಸಿಸುತ್ತಾರೆ? ಉಪಾಸ್ಯ ದೇವತೆ ಯಲ್ಲಿ ಭಾವನೆಯು ಹೇಗೆ? ಎಂಬ ಭಾವವು. **ಬಹುಧಾ ಪೃಥಕ್ತ್ವೇನ** - **ಜಗದಾಕಾರೇಣ** - ಬಹುವಾಗಿ ಬೇರೆಯಾಗಿ ತೋರುವ ಜಗತ್ತಿನರೂಪದಿಂದ, **ವಿಶ್ವತೋಮುಖಂ** ಎಂದರೆ **ವಿಶ್ವ ಪ್ರಕಾರಮವಸ್ಥಿತಮ್** - ವಿಶ್ವರೂಪವಾಗಿ, ಅದನ್ನೇ ಶರೀರವಾಗಿ ಧರಿಸಿ ಅದಕ್ಕೆ ಆತ್ಮಾವಾಗಿ ರುವ, **ಮಾಂ** - ನನ್ನನ್ನೇ, **ಏಕತ್ವೇನ** - ವಿಶ್ವ ವಿಶಿಷ್ಟನಾಗಿ ಎಂದರೆ ವಿಶ್ವ ಶರೀರಕನಾಗಿ ವಿಶ್ವಾತ್ಮನಾಗಿ ಒಬ್ಬನೇ ಎಂದು, **ಉಪಾಸತೇ** - ಉಪಾಸಿಸುತ್ತಾರೆ. ಆದರೆ ಏಕತ್ವೇನ ಉಪಾಸತೇ ಮತ್ತು ಪೃಥಕ್ತ್ವೇನ **ಉಪಾಸತೇ** ಎಂದಲ್ಲವೇ ಅರ್ಥಮಾಡತಕ್ಕದ್ದು ಎಂದರೆ ಏಕತ್ವವೂ, ಬಹುಧಾ ಪೃಥಕ್ತ್ವವೂ ಈ ಎರಡು ಭಾವವು ಪರಸ್ಪರ ವಿರೋಧವಾದುವಾಗಿ ಭ್ರಮೆಗೆ ಕಾರಣ ವಾಗುತ್ತದೆಂದು ಭಾವಿಸಿ, **ಪೃಥಕ್ತ್ವೇನ** ಎಂಬುದನ್ನು ಬಹುಧಾ ಎಂಬುದರೊಂದಿಗೆ ಅನ್ವಯಿಸಿ ರುತ್ತಾರೆ ಇಲ್ಲಿ ಹೇಳಿದ ಅಭಿಪ್ರಾಯವು ಚನ್ನಾಗಿ ವ್ಯಕ್ತಪಡಲಿ ಎಂಬ ಭಾವದಿಂದ ಅದರ ತಾತ್ಪರ್ಯವೇನೆಂಬುದನ್ನು ಉಪದೇಶಿಸುತ್ತಾರೆ. **ಭಗವಾನ್** ಷಾಡ್ಗುಣ್ಯ ಪರಿಪೂರ್ಣತೆಯಿಂದ ಕಲ್ಯಾಣಗುಣಾಕರನಾಗಿಯೂ ಹೇಯ ಪ್ರತ್ಯನೀಕನಾಗಿಯೂ ಇರುವ, **ವಾಸುದೇವ ಏವ** - ಈ ವಾಸುದೇವನೇ, ಇಲ್ಲಿ ವಾಸುದೇವ ಶಬ್ದ ಪ್ರಯೋಗಕ್ಕೆ ಎರಡು ಕಾರಣಗಳನ್ನು ಊಹಿಸ ಬಹುದು. ವಾಸುದೇವ ಶಬ್ದ ನಿರ್ವಚನಪ್ರಕಾರ, **"ವಾಸನಾತ್ ವಾಸುದೇವಸ್ಯ ವಾಸಿತಂತೇ ಜಗತ್ತ್ರಯಮ್ । ಸರ್ವಭೂತಾನಿವಾಸೋಽಸಿ ವಾಸುದೇವನಮೋಽಸ್ತುತೇ"** ಎಂದು ಹೇಳಿರು ವದರಿಂದ ಈ ಅಭಿಪ್ರಾಯವು ಪ್ರಕೃತವಾದುದರಿಂದಾಗಲಿ, ಅಥವಾ ಈ ವಸುದೇವಪುತ್ರನಾದ ಶ್ರೀ ಕೃಷ್ಣನೇ ಅಂತಹ ಪರತತ್ವವೆಂದು ಹೇಳುವದಕ್ಕಾಗಲಿ ಹಾಗೆ ಪ್ರಯೋಗವು. ವಾಸುದೇವ ಶಬ್ದದ ಪ್ರಥಮ ಪದದಿಂದ ಸರ್ವೇಶ್ವರನು ಸರ್ವ ಶರೀರಕನಾಗಿ ಸರ್ವಕ್ಕೂ ಆತ್ಮಾವಾಗಿರುವ ಭಾವವೂ ದ್ವಿತೀಯ ಪದದಿಂದ ಕ್ರೀಡೆಯೇ ಪ್ರಯೋಜನವಾಗಿ ಸೃಷ್ಟಿಗೆ ಮೊದಲು ಸೂಕ್ಷ್ಮ ಚಿದ ಚಿದ್ವಸ್ತು ಶರೀರಕನು, **ಬಹುಸ್ಯಾಂ** ಎಂದು ಸಙ್ಕಲ್ಪಿಸಿ ಸ್ಥೂಲ ಚಿದಚಿದ್ವಸ್ತು ಶರೀರಕನಾಗುವ ನೆಂಬುದು ಸೂಚಿತವು. ಭಗವಾನ್ ಎಂಬ ಶಬ್ದದಿಂದ ಹೀಗೆ ಸರ್ವವನ್ನೂ ಪ್ರವೇಶಿಸಿ ಆತ್ಮಾವಾ

**ಭಾ. ಚಿದಚಿದ್ವಸ್ತು ಶರೀರಸ್ಸರ್ವ ಸತ್ಯಸಙ್ಕಲ್ಪೋ ವಿವಿಧವಿಭಕ್ತನಾಮರೂಪಸ್ಥೂಲಚಿದ ಚಿದ್ವಸ್ತುಶರೀರಸ್ಸ್ಯಾಮಿತಿ ಸಙ್ಕಲ್ಪ್ಯ, ಸ ಏಕ ಏವ ದೇವ ತಿರ್ಯಙ್ಮನುಷ್ಯಸ್ಥಾವ ರಾಖ್ಯ ವಿಚಿತ್ರ ಜಗಚ್ಛರೀರೋಽವತಿಷ್ಠತ ಇತ್ಯನುಸನ್ಧಾನಾಶ್ಚ ಮಾಂ ಮುಪಾ ಸತೇ ಇತಿ || ೧೫ ||**

ಗಿದ್ದರೂ ಅವುಗಳ ಹೇಯಗುಣಗಳಿಂದ ಸ್ಪರ್ಶಿಸಲ್ಪಡದೇ ಕಲ್ಯಾಣಗುಣಗಣಾಕರನಾಗಿಯೇ ಇರುವನೆಂಬುದು ಸೂಚಿತವು. ಇಲ್ಲಿ ಉಪಾಸನೆಯ ಸಂದರ್ಭದಲ್ಲಿ ಇರಬೇಕಾದ ಜ್ಞಾನವು ವಾಸುದೇವ ಶಬ್ದದಿಂದ ಬೋಧಿತವಾಗುವದರಿಂದ ಅಮೋಘವಾದ ದ್ವಾದಶಾಕ್ಷರ ವಾಸುದೇವ ಮಂತ್ರ ಜಪದೊಂದಿಗೆ ಉಪಾಸನೆಯೂ ಕೂಡ ಉಪಾಸನೆಯ ನಿಷ್ಪತ್ತಿಗೆ ಪರಮ ಸಾಧನವೆಂಬ ಭಾವವೂ ಸೂಚಿತವು. ನಾಮರೂಪ ವಿಭಾಗಕ್ಕೆ ಅನರ್ಹವಾದ ಅತಿಸೂಕ್ಷ್ಮವಾಗಿರುವ ಚಿದ ಚಿತ್ತುಗಳನ್ನೆಲ್ಲಾ ಶರೀರವಾಗಿ ವುಳ್ಳವನಾಗಿ, ಸತ್ಯ ಸಙ್ಕಲ್ಪನಾದುದರಿಂದ **"ಬಹುಸ್ಯಾಂ"** ಎಂಬ ತನ್ನ ಸಙ್ಕಲ್ಪಾನುಸಾರವಾಗಿ, **ವಿವಿಧ....ಶರೀರಸ್ಸ್ಯಾಮ್** - ಪರಸ್ಪರ ವಿವಿಧಗಳಾಗಿ ವಿಭಕ್ತಗಳಾದ ನಾಮರೂಪಗಳುಳ್ಳ ಸ್ಥೂಲ ಚಿದಚಿದ್ವಸ್ತುಗಳನ್ನೇ ಶರೀರವಾಗಿವುಳ್ಳವನಾಗುವೆ ನೆಂದು, **ಸಙ್ಕಲ್ಪ್ಯ** - ಸಙ್ಕಲ್ಪಿಸಿ, ಇದು **"ಬಹುಸ್ಯಾಂ ಪ್ರಜಾಯೇಯ"** ಎಂಬ ಶ್ರುತಿಯ ವ್ಯಾಖ್ಯಾನವು, **ಸ ಏಕ ಏವ** - ಆ ಒಬ್ಬನೇ, ಹೇಗೆಂದರೆ ಇವುಗಳನ್ನೆಲ್ಲಾ ಶರೀರವಾಗಿ ಹೊಂದುವ ಶರೀರಿಯು ಒಬ್ಬನೇ ಎಂಬ ಭಾವವು, ದೇವತೆ ಏನು, ಮೃಗವೇನು, ಮನುಷ್ಯ ನೇನು, ಸ್ಥಾವರವಾದ ವೃಕ್ಷಾದಿಗಳೇನು, ಎಂದು ಹೇಳಿಸಿಕೊಳ್ಳುವ, **ವಿಚಿತ್ರ ಜಗಚ್ಛರೀರಃ** - ಹೀಗೆ ವಿಚಿತ್ರವಾದ ಜಗತ್ತನ್ನೇ ಶರೀರವಾಗಿವುಳ್ಳವನಾಗಿ, **ಅವತಿಷ್ಠತೇ** - ಇರುತ್ತಾನೆ, **ಇತ್ಯನು ಸಂದಧಾನಾಶ್ಚ** - ಎಂದು ಅನುಸಂಧಾನಮಾಡುವವರಾಗಿ, **ಮಾಂ ಉಪಾಸತೇ ಇತಿ** - ನನ್ನನ್ನು ಉಪಾಸಿಸುತ್ತಾರೆ ಎಂಬುದು ಮುಖ್ಯತಾತ್ಪರ್ಯವು. ಶ್ರುತಿ ಸ್ಮೃತಿ ಪುರಾಣೇತಿಹಾಸಗಳ ಲ್ಲೆಲ್ಲಾ ಸರ್ವೇಶ್ವರನು ಸದಾ ವಿಶ್ವಶರೀರಕನಾಗಿದ್ದಾನೆಂದೂ, ಈ ಜಗತ್ತೆಲ್ಲಾ ಸತ್ಯವಾದ ಅಚಿತ್ತು ಸತ್ಯವಾದ ಚಿತ್ತೂ ಇವುಗಳಿಂದ ಸೇರಿರುವನೆಂದೂ, ಹೇಳುವಾಗ ಜಗತ್ತು ಮಿಥ್ಯಾ ಎಂಬ ವಾದವು ಹೇಗೆ ಸಮಂಜಸವೋ ತಿಳಿಯದು. ಮಿಥ್ಯೆಯಾದದು ಪರಿಪೂರ್ಣ ಬ್ರಹ್ಮನಿಗೆ ಶರೀರ ವೆಂದು ಹೇಳುವದು ಶಾಸ್ತ್ರವಾಗುತ್ತದೆಯೇ? ಇಂತಹ ಭ್ರಮಜ್ಞಾನವನ್ನು ಬೋಧಿಸುವದನ್ನು ಶಾಸ್ತ್ರವೆಂದು ಕರೆಯಬಹುದೋ? ಹೀಗೆ ಎಲ್ಲವೂ ಸರ್ವೇಶ್ವರನಿಗೆ ಸತ್ಯವಾದ ಶರೀರವಾಗಿ, ಆತನು ಇದಕ್ಕೆಲ್ಲಾ ಆತ್ಮನಾಗಿರುವದರಿಂದಲೇ **ಮನುಷ್ಯೋಽಹಂ** ಎಂಬಲ್ಲಿ ಹೇಗೆ ಆತ್ಮನಿಗೆ ಮನುಷ್ಯತ್ವದೊಂದಿಗೆ ಸಾಮಾನಾಧಿಕರಣ್ಯವು ಸಮಂಜಸವೋ, ಹಾಗೆಯೇ ಸರ್ವೇಶ್ವರನಿಗೆ ಈ ಜಗತ್ತಿನೊಂದಿಗೆ **ಏಕತ್ವವೂ** ಸಾಮಾನಾಧಿಕರಣ್ಯವೂ ನಮಗೆ ಸಮಂಜಸವು. ಇತರ ಸಿದ್ಧಾಂತ ಗಳಿಗೆ ಹೇಗೆ ಸಮಂಜಸವೋ ತಿಳಿಯದು. ವಿಷ್ಣು ಪುರಾಣದಲ್ಲಿ ಶ್ರೀ ಪರಾಶರರು ತಮ್ಮ ಪ್ರಿಯ ಶಿಷ್ಯರಿಗೆ ಮೊದಲು **"ಯಾನಿ ಮೂರ್ತಾನ್ಯಮೂರ್ತಾನಿ ಯಾನ್ಯತ್ರಾನ್ಯತ್ರ ವಾ ಕ್ವಚಿತ್ । ಸಂತಿವೈ ವಸ್ತುಜಾತಾನಿ ತಾನಿಸರ್ವಾಣಿ ತದ್ವಪುಃ"** ಹೀಗೆ ಜಗತ್ತಿನ ವಸ್ತುಜಾತವೆಲ್ಲಾ ಸರ್ವೇಶ್ವರ ಶರೀರವೆಂದು ಹೇಳಿ, ಉತ್ತರಶ್ಲೋಕದಲ್ಲೇ **"ಅಹಂ ಹರಿ ಸ್ಸರ್ವಮಿದು ಜನಾ ರ್ದನಃ" ನಾನೂ ಭಗವಂತನೇ ಈ ಸಮಸ್ತ ಜಗತ್ತೂ ಅವನೇ** ಎಂದು ಸಾಮಾ ನಾಧಿಕರಣ್ಯವನ್ನು ಉಪದೇಶಿಸಿರುತ್ತಾರೆ. ಶರೀರವನ್ನು ಬೋಧಿಸುವ ಶಬ್ದವು ಶರೀರಿ ಯನ್ನೂ ಬೋಧಿಸುತ್ತವೆ. **ಅಹಂ ಹರಿಃ** ಎಂದರೆ ನನ್ನನ್ನು ಶರೀರವಾಗಿ ಹೊಂದಿ, ನನಗೆ ಆತ್ಮನಾಗಿರುವವನು ಹರಿಯು ಎಂಬರ್ಥವು. ಆದುದರಿಂದ ಸರ್ವವಸ್ತುವಾಚ್ಯಶಬ್ದ ಗಳೂ ತತ್ತಚ್ಛರೀರಕ ಪರಮಾತ್ಮನನ್ನು ಬೋಧಿಸುತ್ತವೆ. ಆದುದರಿಂದ ನಮಗೆ ಸರ್ವವೂ

ಪರಮಾತ್ಮನೇ ಎಂಬ ಹೇಳಿಕೆಯು ಸಾರ್ಥವತ್ತಾದುದು. ಹೀಗೆ ಹೇಳಿದರೆ ಸರ್ವಶಬ್ದ ವಾಚ್ಯತ್ವವೂ ಪರಮೇಶ್ವರನಿಗೆ ಸಿದ್ಧಿಸುತ್ತದೆ. ಹಾಗೆಯೇ ಇನ್ನೊಂದು ಕಡೆಯಲ್ಲೂ ಶ್ರೀ ಪರಾಶರರು (ವಿ. ಪು. ೩. ೧೨. ೩೭. ೮) ವಿಷ್ಣುವು ಸಮಸ್ತಕ್ಕೂ ಆತ್ಮಾ ಎಂದು ಹೇಳಿಯೇ, ಸಕಲ ಬ್ರಹ್ಮಾಂಡವೂ, ಅದರಲ್ಲಿರುವ ಈ ಜಗತ್ತೂ ಇವುಗಳೊಂದಿಗೆ ಆತನಿಗೆ ಸಾಮಾನಾಧಿಕರಣ್ಯವನ್ನು ಸಕಲ ಶ್ರುತಿಗಳೂ ಬೋಧಿಸುತ್ತವೆ ಎಂದೂ, ಹೀಗೆ ಸಾಮಾನಾಧಿಕರಣ್ಯೋಪದೇಶಕ್ಕೆ ವಿಶ್ವದ ಶರೀರಾತ್ಮಭಾವವೇ ನಿಬಂಧನವೆಂದೂ, ಹೇಳುವದಕ್ಕೆ ಹೊರಟು, **ಯದಂಬು ವೈಷ್ಣವಃ ಕಾಯಃ** ಎಂದು ಶರೀರಾತ್ಮಭಾವವನ್ನುಪದೇಶಿಸಿ, ಮುಂದಿನ ಶ್ಲೋಕದಲ್ಲಿ, "**ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋದಿಶಶ್ಚ । ನದ್ಯಸ್ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರ ವರ್ಯ** (ವಿ. ಪು.)" ವಿಶ್ವದ ಸಮಸ್ತ ಜ್ಯೋತಿಸ್ಸೂ ಭುವನಗಳೂ ವನಗಳೂ ಪರ್ವತಗಳೂ ಹೀಗೆ ಎಲ್ಲವೂ ವಿಷ್ಣುವು, ತುಂಬಾ ಹೇಳುವದೇನು? **ಯದಸ್ತಿ** - ಸ್ವರೂಪನಾಶವಿಲ್ಲದೆ ಅಸ್ತಿಶಬ್ದ ವಾಚ್ಯವಾದ ಚಿತ್ಸಮೂಹವೆಲ್ಲವೂ, ಸ್ವರೂಪನಾಶದಿಂದ **ನಾಸ್ತಿ** - ಶಬ್ದ ವಾಚ್ಯವಾದ ಅಚಿತ್ಸಮೂಹವೆಲ್ಲವೂ ವಿಷ್ಣುವೇ ಎಂದು ತಮ್ಮ ಶಿಷ್ಯರಿಗೆ ಉಪದೇಶಿಸಿರುತ್ತಾರೆ. ಹೀಗೆ ಬಹುಧಾ ಪೃಥಕ್ತ್ವಾಗಿ ವಿಶ್ವತೋ ಮುಖವಾಗಿರುವದಕ್ಕೆ ಏಕತ್ವವು ಶರೀರಾತ್ಮಭಾವದಿಂದ ಬಹುಸ್ವಾರಸ್ಯವಾಗಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಸಿದ್ಧಿಸುತ್ತದೇ ವಿನಾ ಇತರ ಸಿದ್ಧಾಂತಗಳಿಗಿಲ್ಲವು; ಈ ಅಭಿಪ್ರಾಯವನ್ನೇ ಸಙ್ಗ್ರಹವಾಗಿ, **ಏತದುಕ್ತಂ ಭವತಿ** ಎಂದಾರಂಭಿಸಿ ಹೇಳಿರುತ್ತಾರೆ. ಇಂತಹ ಜ್ಞಾನದ ಅನುಸಂಧಾನವು ಅನೇಕರಿಗೆ ತೋರುವದು ದುರ್ಲಭವಾದುದರಿಂದ, ಹೀಗೆ ಉಪಾಸನೆ ಮಾಡುವ ಮಹಾನುಭಾವರನ್ನು ಶ್ಲಾಘಿಸಿ, **ಜ್ಞಾನಯಜ್ಞೇನ ಚಾಪ್ಯನ್ಯೇ** ಎಂದು ಪ್ರಶಂಸಿರುತ್ತಾರೆ. ಇಲ್ಲಿ **ಏಕತ್ವೇನ ಪೃಥಕ್ತ್ವೇನ** ಎಂದು ಹೇಳಿರುವದರಿಂದ ಕೇವಲ ಭೇದವಾದಿಗಳು ತಮ್ಮ ಸಿದ್ಧಾಂತಕ್ಕನುಗುಣವೆಂದು ಭಾವಿಸಬಹುದು. ಆಗ ಏಕತ್ವವೂ ಪೃಥಕ್ತ್ವವೂ ಎರಡೂ ಕೂಡುವದಿಲ್ಲವು. ನಮಗೆ ಶರೀರ ಶರೀರಿಭಾವದಿಂದ ವಿಶ್ವಪ್ರಕಾರತ್ವವು ಕೂಡುತ್ತದೆ. ವಿಶ್ವದೊಂದಿಗೆ ಏಕತ್ವವೂ ವಿಶ್ವವೈಲಕ್ಷಣ್ಯದಿಂದ ಪೃಥಕ್ತ್ವವೂ ಕೂಡುತ್ತವೆ. ಕೇವಲ ಭೇದವಾದಿಗಳಿಗಾದರೋ ತಾದಾತ್ಮ್ಯವನ್ನು ವೈಯಧಿಕರಣ್ಯದಿಂದಾಗಲಿ, ಸಾಮಾನಾಧಿಕರಣ್ಯದಿಂದಾಗಲಿ ಬೋಧಿಸುವ ವೇದಾಂತವಾಕ್ಯಗಳಿಗೆ ಸಮಂಜಸಾರ್ಥಗಳನ್ನು ಹೇಳಲು ಸಾಧ್ಯವಿಲ್ಲವು. ಆದುದರಿಂದ **ವಿಶ್ವತೋಮುಖಂ** ಎಂದರೆ ವಿಶ್ವಶರೀರಕನಾಗಿ ವಿಶ್ವಾತ್ಮಕನಾಗಿ ಹೀಗೆ ವಿಶ್ವಪ್ರಕಾರಕನಾಗಿರುವನು ಎಂದು, ನಾವು ನಿರ್ಭಯವಾಗಿ ಅರ್ಥ ಹೇಳುವಹಾಗೆ, ಸುಮ್ಮನೆ ವಿಶ್ವರೂಪನೆಂದು ಕೆಲವರು ಅರ್ಥಮಾಡಿರುತ್ತಾರೆ. ಈ ಅರ್ಥವು ಶಾಸ್ತ್ರವಿರುದ್ಧವಾದುದಲ್ಲದಿದ್ದರೂ, ಮುಂದಿನ **ಅಹಂ ಕ್ರತು ರಹಂ ಯಜ್ಞಃ** ಎಂದು ಸಾಮಾನಾಧಿಕರಣ್ಯದಿಂದ ವಿಶ್ವತೋಮುಖತ್ವವಿವರಣೆಗೆ ಸರಿಹೋಗುವದಿಲ್ಲವು. ಶರೀರಾತ್ಮಭಾವವನ್ನು ಗ್ರಹಿಸಿದರೇನೇ ಸಾಮಂಜಸ್ಯವು ಕೂಡುತ್ತದೆ. ಯಜ್ಞಭೋಕ್ತಾವಾದುದರಿಂದ ಕೂಡುತ್ತದೆ. ಸಾಮಾನಾಧಿಕರಣ್ಯವೆಂದರೆ ಭಿನ್ನಪದಾರ್ಥಗಳಿಗೆ ಪ್ರಕಾರ ಪ್ರಕಾರಿರೂಪದಲ್ಲಿ ಏಕತ್ವ ಸ್ಥಾಪನೆಯು. ಕೆಲವರು ಭೋಕ್ತೃತ್ವದಿಂದ ಏಕತ್ವವು ಎಂದು ಹೇಳುವದು ಹೇಗೋ ತಿಳಿಯದು. ಇಲ್ಲಿ **ಏಕತ್ವೇನ ಪೃಥಕ್ತ್ವೇನ** ಎಂದು ಹೇಳಿರುವದು ಅದ್ವೈತ ಸಿದ್ಧಾಂತಕ್ಕೂ ಸರಿಹೋಗುವದಿಲ್ಲವು. **ಏಕತ್ವೇನ** ವೆಂಬುದೇನೋ ಸರಿಹೋಯಿತು. **ಪೃಥಕ್ತ್ವೇನ** ಎಂಬುದು ಹೇಗೆ? ಎಂದು ಕೇಳಬೇಕಾಗುತ್ತದೆ. "**ಆಕಾಶಮೇಕಂ ಹಿ ಯಥಾ ಘಟಾದಿಷು ಪೃಥಗ್ಭವೇತ್ । ತಥಾತ್ಮೈಕೋಹ್ಯನೇಕಸ್ಥೋ ಜಲಾಧಾರೇಷ್ವಿವಾಂಶುಮಾನ್ ॥**" "**ಏಕ ಏವಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾಚೈವ ದೃಶ್ಯತೇ ಜಲ**

**ಭಾ. ಅವ. ತಥಾऽಹಿ ವಿಶ್ವಶರೀರೋऽಹಮೇವಾ ವಸ್ಥಿತ ಇತ್ಯಾಹ—**

**ಚನ್ದ್ರವತ್"** ಎಂಬಲ್ಲಿ ನಮ್ಮ ಅದ್ವೈತಾಭಿಪ್ರಾಯವನ್ನು ಈ ವ್ಯಾಸ ಮಹರ್ಷಿಯೇ ಉಪಪಾದಿಸಿರುತ್ತಾರಲ್ಲಾ ಎಂದರೆ, ಈ ಘಟಾಕಾಶ ಮತ್ತು ಜಲಸೂರ್ಯ ದೃಷ್ಟಾಂತಗಳು ಅದ್ವೈತಸ್ಥಾಪನೆಗಾಗಲ್ಲವು; ಉಭಯಲಿಙ್ಗಾಧಿಕರಣದಲ್ಲಿ ಪರಮಾತ್ಮನಿಗೆ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವ ಸ್ಥಾಪನೆಗಾಗಿ ಕೊಟ್ಟ ದೃಷ್ಟಾಂತಗಳು; **ಸಿಂಹ ಇವ ಮಾಣವಕಃ** - ಬಾಲನು ಸಿಂಹದ ಹಾಗೆ ಇದ್ದಾನೆ ಎಂಬುದು ಪರಾಕ್ರಮದಲ್ಲಿ ಮಾತ್ರ ಸಾಮ್ಯವು ಹೇಗೋ, ಹಾಗೆ ಪರಮಾತ್ಮನು ಪೃಥಿವ್ಯಾದಿ ಅಚೇತನಗಳಲ್ಲೂ ಮತ್ತು ಮನುಷ್ಯಮೊದಲಾದ ಪ್ರಾಣಿವರ್ಗದಲ್ಲೂ ಇದ್ದರೂ, ಅವುಗಳ ದೋಷಗಳ ಲೇಶವೂ ಇಲ್ಲದೆ ಇರುವನು ಎಂಬುದನ್ನು ಸ್ಥಾಪಿಸುವದಕ್ಕಾಗಿ ಈ ಘಟಾಕಾಶ ಜಲಸೂರ್ಯ ದೃಷ್ಟಾನ್ತಗಳು. ಸೂರ್ಯನು ಅನೇಕ ಜಲಗಳಲ್ಲಿ ಪ್ರತಿಬಿಂಬಿಸಿದ್ದರೂ ಆಯಾ ಜಲಾಶಯಗಳ ದೋಷಗಳ ಸಂಬಂಧವು ದೇಶವಿಪ್ರಕರ್ಷದಿಂದ ಹೇಗೆ ಇಲ್ಲವೋ, ಹಾಗೆಯೇ ಪರಮಾತ್ಮನು ಜಗತ್ತಿಗೆ ಅಂತರಾತ್ಮವಾಗಿದ್ದರೂ ದೋಷರಹಿತನು. ಪರಮಾತ್ಮನು ಈ ಜಗತ್ತಿನೊಂದಿಗೇನೆ ಸೇರಿ ಇದ್ದು ವಿಪ್ರಕರ್ಷವಿಲ್ಲದೆ ಎಂದರೆ ದೂರದಲ್ಲಿಲ್ಲದೆ ಸನ್ನಿಕರ್ಷವಿರುವಾಗ ಎಂದರೆ ಹತ್ತಿರಿರುವಾಗ, ದೋಷರಾಹಿತ್ಯವಿಲ್ಲವೆಂಬುದನ್ನು ಹೇಗೆ ಒಪ್ಪಬಹುದು? ಎಂದಾಕ್ಷೇಪಿಸಿದರೆ, ತನ್ನಿವಾರಣಾರ್ಥವಾಗಿ ಘಟಾಕಾಶ ದೃಷ್ಟಾಂತವು. ಘಟಾದಿಗಳ ವೃದ್ಧಿಹ್ರಾಸಗಳು ಎಂದರೆ ದೊಡ್ಡದು ಚಿಕ್ಕದು ಆಗಿರೋಣವು, ಹೇಗೆ ಆಕಾಶವು ಘಟಾದಿಗಳೊಂದಿಗೆ ಸೇರಿದ್ದರೂ ಆಕಾಶಕ್ಕೆ ಸೇರಿದುದಲ್ಲವೋ, ಹಾಗೆಯೇ ಪರಮಾತ್ಮನು ಈ ಜಗತ್ತಿನೊಂದಿಗೆ ಸೇರಿ, ದೇಶಕಾಲ ಸನ್ನಿಕರ್ಷವಿದ್ದರೂ ಸ್ವಭಾವ ವಿಪ್ರಕರ್ಷವಿರುವದರಿಂದ ಎಂದರೆ ಜಗತ್ತಿನ ಚಿದಚಿತ್ತುಗಳಿಗಿಂತ ಸ್ವಭಾವತಃ ವಿಲಕ್ಷಣನಾದುದರಿಂದ, ಅವುಗಳ ದೋಷಗಳು ಪರಮಾತ್ಮನಿಗೆ ಅಂಟುವದಿಲ್ಲವೆಂಬ ಭಾವವು. ಈ ಎರಡು ದೃಷ್ಟಾಂತಗಳಿಂದ ಪರಮಾತ್ಮನ ಹೇಯ ಪ್ರತ್ಯನೀಕತ್ವವು ಸ್ಥಾಪಿತವು. ಅದ್ವೈತಿಗಳು ಹೇಳುವಹಾಗೆ, ಏಕತ್ವ ಮತ್ತು ಅವಿದ್ಯಾ ಗೃಹೀತತ್ವ ಸ್ಥಾಪನೆಗಾಗಿ ಅಲ್ಲವು. ಸನ್ನಿಕರ್ಷವಿಪ್ರಕರ್ಷಗಳು ಎಂದರೆ ಹತ್ತಿರ ಸೇರಿರುವಿಕೆ ದೂರದಲ್ಲಿರುವಿಕೆ, ಇವು ಮೂರು ವಿಧಗಳು:—ದೇಶಕಾಲ ಸ್ವಭಾವ ಸನ್ನಿಕರ್ಷವಿಪ್ರಕರ್ಷಗಳು. ದೋಷಗಳ ಸಂಬಂಧ ಉಂಟಾಗುವದಕ್ಕೆ ದೇಶಕಾಲ ಸ್ವಭಾವ ಸನ್ನಿಕರ್ಷಗಳೂ ಮೂರು ಆವಶ್ಯಕವು. ದೋಷಸಂಬಂಧ ರಾಹಿತ್ಯಕ್ಕೆ ಯಾವುದಾದರೂ ಒಂದರ ವಿಪ್ರಕರ್ಷವಿದ್ದರೂ ಸಾಕು. ಪರಮಾತ್ಮನಿಗೂ ಜಗತ್ತಿಗೂ ದೇಶಕಾಲ ಸನ್ನಿಕರ್ಷವಿದ್ದರೂ, ಸ್ವಭಾವತಃ ಸನ್ನಿಕರ್ಷವಿಲ್ಲದೆ ವಿಪ್ರಕರ್ಷವಿರುವದರಿಂದ ಜಗತ್ತಿನ ದೋಷಗಳಿಂದ ಪರಮಾತ್ಮನು ಅಸ್ಪೃಷ್ಟನು. ಹಾಗೆಯೇ ಸುಕೃತಪರಿಪಾಕವುಳ್ಳ ಸನ್ಮಾರ್ಗಿಯು, ಎಷ್ಟು ಜನ ದುರ್ಮಾರ್ಗಿಗಳ ಮಧ್ಯದಲ್ಲಿದ್ದರೂ ದೋಷಯುಕ್ತನಾಗುವದಿಲ್ಲವು. ಪರಮ ಭಾಗವತರಾದ ವಿದುರ, ಸಂಜಯರು, ವಿಶೇಷ ದುರ್ಮಾರ್ಗಿಗಳಾದ ದುರ್ಯೋಧನ, ದುಶ್ಶಾಸನಾದಿಗಳ ಮಧ್ಯದಲ್ಲಿದ್ದರೂ, ಇವರುಗಳ ದೋಷಗಳಿಂದ ಅಸ್ಪೃಷ್ಟರಾಗಿಯೇ ಇದ್ದರು. ಇದಕ್ಕಿಂತ ಬೇರೆ ದೃಷ್ಟಾಂತ ಬೇಕಿಲ್ಲವು. ಆದುದರಿಂದ ಶ್ರೀ ವ್ಯಾಸ ಮಹರ್ಷಿಯು ಪರಸ್ಪರ ವಿರುದ್ಧಾಭಿಪ್ರಾಯವನ್ನು ಬರೆಯಲಿಲ್ಲವು. ಭಾಗವತದಲ್ಲೂ, ಭಗವದ್ಗೀತೆಯಲ್ಲೂ ಮೂರು ತತ್ವಗಳುಂಟೆಂದೇ ಸ್ಥಾಪಿಸಿರುತ್ತಾರೇ ವಿನಾ ಏಕತತ್ವವೇ ಇರುವದು ಎಂದು ಎಲ್ಲಿಯೂ ಹೇಳಲಿಲ್ಲವು. ೭ ನೆಯ ಅಧ್ಯಾಯದ ೪, ೫ ನೆಯ ಶ್ಲೋಕಗಳನ್ನೂ ಪರಾಂಬರಿಸಿ. ತಾನು ಹೀಗೆ ಅಸ್ಪೃಷ್ಟ ದೋಷರಹಿತನಾಗಿಯೇ, ತಾನು ವಿಶ್ವಶರೀರಕನೆಂಬ ಭಾವವೇ ಮುಂದೆ ಉಪಪಾದಿಸಲ್ಪಡುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು:—ತಥಾಹಿ** - ಹಾಗೆತಾನೇ ಎಂದರೆ ಹಿಂದಿನ ಶ್ಲೋಕ

**ಮೂ. ಅಹಂ ಕ್ರತು ರಹಂ ಯಜ್ಞಃ ಸ್ವಧಾಹ ಮಹ ಮೌಷಧಮ್ ।**
**ಮನ್ತ್ರೋಽಹ ಮಹಮೇರಜಾಜ್ಯ ಮಹಮಗ್ನಿ ರಹಂ ಹುತಮ್ ॥** **೧೬.**

ದಲ್ಲಿ ಬಹುಧಾ ವಿಶ್ವತೋಮುಖನಾಗಿರುವ ನಾನು, ಸರ್ವಕ್ಕೂ ಆತ್ಮಾವಾಗಿ, **ಏಕತ್ವೇನ** ಜಗತ್ತಿನೊಂದಿಗೆ ಏಕೀಭವಿಸಿರುವ ನನ್ನ ಜ್ಞಾನದಿಂದ ಉಪಾಸನೆಯು ಹೇಳಲ್ಪಟ್ಟಿರುವಹಾಗೆಯೇ ಎಂಬರ್ಥವು, **ವಿಶ್ವಶರೀರಃ ಅಹಮೇವಾವಸ್ಥಿತಃ** - ಸಮಸ್ತ ವಿಶ್ವವನ್ನು ಶರೀರವಾಗಿ ವುಳ್ಳವನಾಗಿ ನಾನೇ ಇರುತ್ತೇನೆ, **ಇತ್ಯಾಹ** - ಎಂದು ಮುಂದೆ ಹೇಳುತ್ತಾರೆ. ಮುಂದಿನ ಶ್ಲೋಕಗಳಿಂದ ಈ ಸಾಮಾನಾಧಿಕರಣ್ಯವು ಹೇಳಲ್ಪಡುವದರಿಂದ ಇದು ಮುಂದಿನ ನಾಲ್ಕು ಶ್ಲೋಕಗಳಿಗೂ ಅವತಾರಿಕೆಯು ಎಂದು ಭಾವಿಸತಕ್ಕದ್ದು. ಹಿಂದಿನ ಶ್ಲೋಕದಲ್ಲಿ ಜಗತ್ತಿಗೂ ಪರಮಾತ್ಮನಾದ ತನಗೂ ಶರೀರಾತ್ಮಭಾವವನ್ನು ಉಪಪಾದಿಸಿ, ಅದರಿಂದುಂಟಾದ ಸಾಮಾನಾಧಿಕರಣ್ಯಭಾವವು ಮುಂದಿನ ಶ್ಲೋಕಗಳಲ್ಲೂ, ಹೇಳಲ್ಪಡುತ್ತದೆ.

**ಮೂಲಕ್ಕೆ ಅರ್ಥವು:—** ಹಿಂದೆ ಅಧಿಯಜ್ಞ ಜ್ಞಾನವು ಸರ್ವೋಪಾಸಕರಿಗೂ ನಿತ್ಯನೈಮಿತ್ತಿಕರೂಪ ಯಜ್ಞಾನುಷ್ಠಾನಗಳಲ್ಲಿ ಆವಶ್ಯಕವೆಂದು ಹೇಳಿದುದು, ಭಕ್ತಿಯೋಗನಿಷ್ಠನಿಗೂ ಅತ್ಯಾವಶ್ಯಕವಾದುದರಿಂದ, ಆ ಜ್ಞಾನದ ಅನುಸಂಧಾನವನ್ನೇ ಇಲ್ಲಿ ಉಪದೇಶಿಸುತ್ತಾರೆ. ಸಮಸ್ತ ನಿತ್ಯನೈಮಿತ್ತಿಕಾನುಷ್ಠಾನಗಳೂ, ಅವುಗಳಿಗೆ ಬೇಕಾದ ಸಮಸ್ತ ಪರಿಕರಗಳೂ, ಮಂತ್ರಗಳೂ ಎಲ್ಲವೂ ತಾನೇ ಎಂದು ಸಾಮಾನಾಧಿಕರಣ್ಯದಿಂದ ಬೋಧಿಸುತ್ತಾರೆ. ಹೀಗೆ ತನಗೆ ವಿಶ್ವಶರೀರಕತ್ವ ಮತ್ತು ವಿಶ್ವಾತ್ಮಕತ್ವವಿರುವದರಿಂದ ತಾನು ಹಿಂದೆ **ವಿಶ್ವತೋಮುಖನೆಂದು ಹೇಳಿಕೊಂಡುದು**ದನ್ನು ಸ್ಥಾಪಿಸುತ್ತಾರೆ:- **ಅಹಂ ಕ್ರತುಃ** - ಜ್ಯೋತಿಷ್ಟೋಮಾದಿಕ್ರತುಗಳೂ ನಾನೇ, **ಅಹಂ ಯಜ್ಞಃ** - ಪ್ರಪನ್ನನು ಅನುಷ್ಠಿಸುವ ಪಂಚಮಹಾಯಜ್ಞಗಳೂ ನಾನೇ, **ಸ್ವಧಾಹಂ** - ಪಿತೃಗಣಕ್ಕೆ ಕೊಡುವ ಹವಿಸ್ಸೂ ನಾನೇ, ಇಲ್ಲಿ **ಸ್ವಧಾ** ಶಬ್ದಕ್ಕೆ **ಅಧಿಯಜ್ಞ**ನೆಂದು ಉಪಪಾದಿಸುವದಕ್ಕೆ ಬೇಕಾದ ಯಜ್ಞವಿಷಯವಾದ ಅರ್ಥವೇ ಪ್ರಸ್ತುತವೇ ವಿನಾ ಲಕ್ಷ್ಮೀ, ಅನ್ನ ಮೊದಲಾದ ಅರ್ಥಗಳು ಸರಿಹೋಗುವದಿಲ್ಲವು. **ಅಹಂ ಔಷಧಂ-ಓಷಧ್ಯಃ ಫಲಪಾಕಾಂತಾಃ**- ಎಂದು ಅಮರದಲ್ಲಿ ಹೇಳಿರುವಹಾಗೆ ಫಲವನ್ನು ಕೊಟ್ಟು ನಶಿಸಿಹೋಗುವ ಯವ ವ್ರೀಹಿ ಮೊದಲಾದ ರೂಪದಲ್ಲಿನ ಹವಿಸ್ಸೂ ಸಹ ನಾನೇ, **ಮನ್ತ್ರೋಽಹಂ** - ಯಜ್ಞಗಳಲ್ಲಿ ಉಚ್ಚರಿಸುವ ಮಂತ್ರವೂ ನಾನೇ, **ಅಹಮೇವ ಆಜ್ಯಂ** - ಯಜ್ಞಗಳಲ್ಲಿ ಮುಖ್ಯ ಹವಿಸ್ಸಾದ ತುಪ್ಪವೂ ನಾನೇ, **ಅಹಂ ಅಗ್ನಿಃ** - ಆ ಆಜ್ಯವನ್ನು ಹುತಮಾಡಿಸಿಕೊಳ್ಳುವ ಅಗ್ನಿಯೂ ನಾನೇ, ಇಲ್ಲಿ ಅಗ್ನಿ ಶಬ್ದವು ಪಂಚಭೂತಗಳಲ್ಲಿ ಒಂದಾದ ಅಗ್ನಿ ಎಂಬರ್ಥವೂ ಅಲ್ಲವು. **ಅಹಂ ಹುತಂ** - ಇನ್ನು ಯಾವು ಯಾವುವು ಹೋಮಮಾಡಲ್ಪಡುವವೋ, ಸಮಿತ್ತು, ಲಾಜ, ಕುಶ ಮೊದಲಾದವುಗಳು ಎಲ್ಲವೂ ನಾನೇ ಅಥವಾ **ಹುತ** ಶಬ್ದದಿಂದ ಹೋಮವೇ ಹೇಳಲ್ಪಟ್ಟಿತೆಂದೂ ಭಾವಿಸಬಹುದು. ಅಧಿಯಜ್ಞನೇ ತಾನೇಯಾದುದರಿಂದ ಯಜ್ಞ ಸಂಬಂಧವಾದ ಸಕಲ ಪರಿಕರಗಳಿಗೂ ತಾನೇ ಆತ್ಮನೆಂದೂ ಅವೆಲ್ಲಾ ತನಗೆ ಶರೀರವೆಂದೂ, ಹೀಗೆ **ವಿಶ್ವತೋಮುಖಂ** - ಎಂಬುದರಿಂದ ಹೇಳಲ್ಪಟ್ಟ ವಿಶ್ವಪ್ರಕಾರಿತ್ವವು ಸ್ಥಾಪಿಸಲ್ಪಟ್ಟಿತು.

ಆದರೆ ಇಲ್ಲಿ ಒಂದು ಆಕ್ಷೇಪವನ್ನು ತರಬಹುದು. ಹಿಂದೆಯೇ **"ರಸೋಹಮಪ್ಸುಕೌಂತೇಯ"** ಎಂದಾರಂಭಿಸಿ ಹೇಳಿದ (೭ ಅ. ೧೨) ಐದು ಶ್ಲೋಕಗಳಿಂದಲೇ ಶರೀರಾತ್ಮಭಾವದ ಉಪದೇಶವೂ ಆಗಿರುವಾಗ ಪುನಃ ಶರೀರಾತ್ಮಭಾವದಿಂದ **ಅಹಂ ಕ್ರತುಃ** ಇತ್ಯಾದ್ಯುಪದೇಶವು ಹೇಗೆ ಪ್ರಸ್ತುತವು? ಪುನರುಕ್ತಿಯಾಗುವದಿಲ್ಲವೇ? ಎಂದು ಆಕ್ಷೇಪಿಸಿದರೆ ಅಲ್ಲಿ ಪ್ರಸ್ತುತವಾಮದು, ತನಗೆ ಶರೀರವಾಗಿ ಅಪೃಥಕ್ಸಿದ್ಧ ವಿಶೇಷಣಗಳಾಗಿರುವದು ಪರಾಪರಾಪ್ರಕೃತಿಗಳಾದ ಈ ಜಗತ್ತಿನ

**ಭಾ. ಅಹಂಕ್ರತುಃ - ಅಹಂ ಜ್ಯೋತಿಷ್ಟೋಮಾದಿಕಕ್ರತುಃ ; ಅಹಮೇವ ಮಹಾಯಜ್ಞಃ ; ಅಹಮೇವ ಪಿತೃಗಣಪುಷ್ಟಿದಾ - ಸ್ವಧಾ ; ಔಷಧಂ-ಹವಿಶ್ಚಾಹಮೇವ ; ಅಹಮೇವ ಚ ಮನ್ತ್ರಃ; ಅಹಮೇವಚಾಜ್ಯಂ; ಪ್ರದರ್ಶನಾರ್ಥಮಿದಂ; ಸೋಮಾ**

ಎಲ್ಲಾ ಚಿದಚಿತ್ತುಗಳೆಂದೂ, ಅವುಗಳ ಸತ್ತಾಸ್ಥಿತಿ ಪ್ರವೃತ್ತಿಗಳೆಲ್ಲಾ ತನಗೆ ಅಧೀನವಾದುವೆಂದೂ, ಹೀಗೆ ತಾನು ಅವುಗಳಿಗಿಂತ ವಿಲಕ್ಷಣನಾಗಿ ಅವುಗಳ ದೋಷಗಳಿಂದ ಅಸ್ಪೃಷ್ಟನು ಎಂದು ಹೇಳಲು ಪ್ರವೃತ್ತವಾದ ಪ್ರಕರಣವು ಇಲ್ಲಿ ಜ್ಞಾನಿಯಾದ ಭಕ್ತಿಯೋಗನಿಷ್ಠನ ಅಧಿಯಜ್ಞರೂಪಜ್ಞಾನಕ್ಕೆ ಪ್ರಕೃತವಾದ ವಿಶ್ವತೋಮುಖತ್ವವು ಮುಖ್ಯವಾದುದರಿಂದ ಅಹಂಕ್ರತುರಿತ್ಯಾದಿ ಸಾಮಾನಾಧಿಕರಣ್ಯರೂಪೋಪದೇಶವು. ಆಗಲಿ ಸಾಮಾನಾಧಿಕರಣ್ಯಕ್ಕೆ ಸಮಸ್ತ ಜಗತ್ತೇ ಇರುತ್ತದೆ, **"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ"** ಎಂದು ಹೇಳಬಹುದಲ್ಲಾ **"ಅಹಂಕ್ರತುರಹಂ ಯಜ್ಞಃ"** ಎಂದು ಮುಖ್ಯವಾಗಿ ಇವುಗಳನ್ನು ಕುರಿತು ಸಾಮಾನಾಧಿಕರಣ್ಯವು ಏಕೆ ಹೇಳಲ್ಪಟ್ಟಿತೆಂಬುದು ಸರಿಯಾದ ಪ್ರಶ್ನೆಯು. ಹಿಂದೆ ಅಧಿಯಜ್ಞವು ನಾನೇ ಎಂದು (ಗೀ. ೮ ರಲ್ಲಿ) ತಿಳಿಸಿದ ಸಂದರ್ಭದಲ್ಲಿ ಇದು ನಾಲ್ಕುಜನ ಭಕ್ತರಿಗೂ ಆವಶ್ಯಕವೆಂದು ಹೇಳಲ್ಪಟ್ಟಿತು. ಐಶ್ವರ್ಯಾರ್ಥಿಯೂ ಮೋಕ್ಷಾರ್ಥಿಗಳಿಬ್ಬರೂ ಯಜ್ಞಗಳನ್ನು ಅಜ್ಗವಾಗಿ ಅನುಷ್ಠಿಸುತ್ತಾರೆ. ಐಶ್ವರ್ಯಾರ್ಥಿಯಾದರೋ ಅಜ್ಗವಾಗಿ ಯಜ್ಞಗಳನ್ನು ಅನುಷ್ಠಿಸುತ್ತಾನೆಯೇ ವಿನಾ ಆತನಿಗೆ ಜ್ಞಾನಿಯಹಾಗೆ ವಿಶ್ವತೋಮುಖತ್ವ ಜ್ಞಾನವಿಲ್ಲವು. ಆದುದರಿಂದಲೇ ಇಬ್ಬರೂ ಯಜ್ಞಾನುಷ್ಠಾನಗಳನ್ನು ಅಂಗವಾಗಿ ಅನುಷ್ಠಿಸಿದರೂ, ಆ ಅನುಷ್ಠಾನಗಳಲ್ಲಿ ಅನುಸಂಧಾನವು ಇಲ್ಲಿ ಹೇಳಿದಹಾಗೆ ವ್ಯತ್ಯಸ್ತವಾದುದು. ಇದನ್ನು ಮುಖ್ಯವಾಗಿ ತಿಳಿಸಲು ಹೊರಟು ಮುಂದೆ ತಿಳಿಸುತ್ತಾರೆ. ಮುಖ್ಯವಾಗಿ ತಿಳಿಸಬೇಕಾದುದು ಅಧಿಯಜ್ಞ ಜ್ಞಾನವನ್ನು ಯಥಾರ್ಥವಾಗಿ ತಿಳಿದಿರುವವನು ಜ್ಞಾನಿಮಾತ್ರವೇ, ಕೇವಲ ಅಥವಾ ಭಕ್ತನಾದ ಐಶ್ವರ್ಯ ಕಾಮಿಗಳಲ್ಲವು. ಆದುದರಿಂದ ಪುನರುಕ್ತಿ ಎಂದು ದೋಷ ಕಲ್ಪಿಸಲು ಸಾಧ್ಯವಿಲ್ಲವು. ಇಲ್ಲಿ **ಅಹಂ** ಶಬ್ದವನ್ನು ಅನೇಕಸಲ ಪ್ರತಿಯೊಂದು ಯಜ್ಞಪರಿಕರಣಗಳೊಂದಿಗೂ ಉಪಯೋಗಿಸಿರುವುದರಿಂದ, **ಅಹಮೇವ** ಎಂಬ ಅವಧಾರಣಾರ್ಥವನ್ನು ಸೂಚಿಸುತ್ತದೆ ಎಂಬಭಿಪ್ರಾಯದಿಂದ ಹಾಗೆ ಭಾಷ್ಯ ಬರೆದಿರುತ್ತಾರೆ. ವಿಶ್ವಕ್ಕೂ ತನಗೂ ಸಾಮಾನಾಧಿಕರಣ್ಯದ ಸಮರ್ಥನೆಗಾಗಿ **ಅಹಂ** ಎಂಬುದರ ಪುನಃ ಪುನಃ ಪ್ರಯೋಗವು. ಎಲ್ಲಾ ಕಡೆಯಲ್ಲೂ ಸಾಮಾನಾಧಿಕರಣ್ಯದ ಪ್ರಯೋಗವೇ ಹಾಗೆ.

**ಭಾಷ್ಯಾರ್ಥವು:—ಏಕತ್ವ ಪೃಥಕ್ತ್ವ** ಶಬ್ದಗಳನ್ನು ಪರವ್ಯೂಹಾದಿ ರೂಪಗಳ ಮೂಲಕವಾಗಿ ಉಪಪಾದಿಸಿ ಹೇಳಬಹುದು. ಆದರೆ ಈ ಅರ್ಥವು ಅಪ್ರಸ್ತುತವು. ಆದುದರಿಂದ ಈ **"ಅಹಂ ಕ್ರತುಃ"** ಎಂದಾರಂಭಿಸಿದ ನಾಲ್ಕು ಶ್ಲೋಕಗಳಿಗೂ ಸಙ್ಗತಿಯು ಸರಿಹೋಗುವದಕ್ಕಾಗಿ ಹಿಂದಿನ ಶ್ಲೋಕದಲ್ಲಿ ಹೇಳಿದ ವಿಶ್ವತೋಮುಖತ್ವವನ್ನೇ ಈ ಮುಂದಿನ ಶ್ಲೋಕದಲ್ಲಿ ಸಮರ್ಥಿಸಿ ಹೇಳುತ್ತಾರೆಂದು ಹಿಂದೆ ಅವತಾರಿಕೆಯನ್ನು ದಯಪಾಲಿಸಿದರು. **ಅಹಂ ಕ್ರತುಃ** ಎಂದರೆ **ಅಹಂ ಜ್ಯೋತಿಷ್ಟೋಮಾದಿಕಕ್ರತುಃ** - ಅಂತಹ ಕ್ರತುರೂಪನೂ ನಾನೇ ; **ಅಹಮೇವ ಮಹಾಯಜ್ಞಃ** - ಪಿಣ್ಡಾಲಂಬನಾದಿಗಳುಳ್ಳ ಯಜ್ಞಗಳೂ, ಪಂಚಮಹಾಯಜ್ಞಗಳೂ ಎಲ್ಲವೂ ನಾನೇ ; **ಕ್ರತುಃ, ಯಜ್ಞಃ** ಎಂಬ ಶಬ್ದಗಳಿಗೆ ಪುನರುಕ್ತಿಯನ್ನು ತಪ್ಪಿಸುವದಕ್ಕಾಗಿ ಹಾಗೆ ಭಾಷ್ಯವೆಂದು ಭಾವಿಸತಕ್ಕದ್ದು. **ಅಹಮೇವ ಪಿತೃ ಗಣಪುಷ್ಟಿದಾಸ್ವಧಾ** - ಪಿತೃಗಣಕ್ಕೆ ತೃಪ್ತಿಯನ್ನುಂಟುಮಾಡುವ ಹವಿಸ್ಸಿನ ರೂಪನೂ ನಾನೇ ; **ಔಷದಂ ಎಂದರೆ ಹವಿಶ್ಚಾಹಮೇವ** - ಔಷಧಿ ಸಂಬಂಧವಾದ ಯವವ್ರೀಹಿರೂಪಹವಿಸ್ಸೂ ನಾನೇ ; ಇಲ್ಲಿ ಕೆಲವರು ಸ್ವಧಾ ಎಂದರೆ ಅನ್ನವೆಂದೂ, ಔಷಧವೆಂದರೆ ರೋಗನಿವಾರಕ ಭೇಷಜವೆಂದೂ, ಅರ್ಥ ಮಾಡಿರುವರು

**ಭಾ. ದಿಕಂ ಚ ಹವಿ ರಹಮೇವೇತ್ಯರ್ಥಃ ; ಅಹ ಮಾಹವನೀಯಾದಿಕೋಽಗ್ನಿಃ ; ಹೋ ಮಶ್ಚಾಹಮೇವ ॥ ೧೬ ॥**

ಅಪ್ರಸ್ತುತವಾದುದು ಎಂದು ಇದರಿಂದ ಹೇಳಿದಂತಾಯಿತು ; **ಅಹಮೇವ ಚ ಮಂತ್ರಃ** - ಯಜ್ಞಸಾಧಕಗಳಾದ ಮಂತ್ರವೂ ಕೂಡ ನಾನೇ ; ಯಜ್ಞವೂ, ಯಜ್ಞಪರಿಕರ ದ್ರವ್ಯಗಳೂ ತಾನೇ ಎಂದು ಹೇಳಿದುದನ್ನು ಅರ್ಥಮಾಡಿಕೊಳ್ಳಬಹುದು ; **ಅಹಮೇವಮನ್ತ್ರಃ** ಹೇಗೆ ಎಂದಾ ಕ್ಷೇಪಣೆ ಬರಬಹುದೆಂದು ಯೋಚಿಸಿ, ಅದರ ಸಮಾಧಾನಕ್ಕಾಗಿ **ಚ** ಶಬ್ದನೆಂದು ಭಾವಿಸತ ಕ್ಕದ್ದು; ಯಜ್ಞಸಾಧಕವಾದ ಮಂತ್ರವೂ ನಾನೇ ಎಂಬ ಭಾವವು ; ಆ ಮಂತ್ರವು ಯಜ್ಞನಿಷ್ಪ ತ್ತಿಯನ್ನುಂಟುಮಾಡುವದೂ ಕೂಡ ತನ್ನ ಮಾಹಾತ್ಮ್ಯಯಿಂದಲೇ ಎಂಬ ಭಾವವು. **ಅಹಮೇ ವಾಜ್ಯಮ್** - ತುಪ್ಪರೂಪವಾದ ಹವಿಸ್ಸೂ ನಾನೇ ; ಮುಂದೆ ಅಗ್ನಿಯು ನಾನೇ ಎಂದು ಹೇಳ ಲ್ಪಡುತ್ತದೆ. ಇಲ್ಲಿರುವ **ಏವ** ಎಂಬ ಪದವನ್ನು **ಅಹಂ** ಎಂಬ ಎಲ್ಲಾ ಪದಗಳೊಂದಿಗೆ ಅನ್ವಯಿ ಸತಕ್ಕದ್ದು. ಅನೇಕ ನಿತ್ಯನೈಮಿತ್ತಿಕ ಕರ್ಮಗಳಲ್ಲಿ ಅಗ್ನಿಯೂ ಆಜ್ಯವೂ ಆವಶ್ಯಕವು; ಇವು ಗಳು ಮಾತ್ರ ಹೇಳಿರುವದು, ಕುಶ, ಸಮಿತ್ತು, ಪರಿಸ್ತರಣ, ದರ್ವಿ ಮೊದಲಾದ ಯಜ್ಞಸಾಮಗ್ರಿ ಗಳಿಗೂ ಉಪಲಕ್ಷಣವು, ಎಂದು ತಿಳಿಸುವವಕ್ಕಾಗಿ ಮುಂದೆ **ಪ್ರದರ್ಶನಾರ್ಥಮಿದಂ** ಎಂದರೆ ಇದು ಮಿಕ್ಕ ಎಲ್ಲಾ ಯಜ್ಞ ಸಾಮಗ್ರಿಗಳಿಗೂ **ಈ ಆಜ್ಯ** ಶಬ್ದವನ್ನು ಉಪಲಕ್ಷಣವಾಗಿ ಇಟ್ಟು **ಕೊಳ್ಳತಕ್ಕದ್ದೆಂ**ಬ ಅಭಿಪ್ರಾಯವು. ಆಜ್ಯಮಾತ್ರ ಹೇಳಿದುದು, **ವಿಶೇಷ ವಿಧಿಶ್ಶೇಷ ನಿಷೇ ಧಾರ್ಥಃ** ಎಂಬ ನ್ಯಾಯದ ಪ್ರಕಾರ, ಮಿಕ್ಕ ಎಲ್ಲಾ ಯಜ್ಞ ಪರಿಕರಣಗಳನ್ನು ವ್ಯಾವರ್ತಿಸಿ ಹೇಳಿತೆಂದು ಭಾವಿಸತಕ್ಕದ್ದಲ್ಲವು ಎಂದು ತಿಳಿಸುವದಕ್ಕಾಗಿ, **ಪ್ರದರ್ಶನಾರ್ಥಮಿದಂ** ಎಂಬ ಪ್ರಯೋಗವು. ತಮ್ಮ ಅಭಿಪ್ರಾಯವನ್ನು ಮುಂದೆ ವ್ಯಕ್ತಪಡಿಸುತ್ತಾರೆ, **ಸೋಮಾದಿಕಂಚ ಹವಿರಹ ಮೇವೇತ್ಯರ್ಥಃ** - ಸೋಮಲತಾರಸ ಮೊದಲಾದ ಹವಿಸ್ಸೂ ಕೂಡಾ ನಾನೇ ಎಂಬ ತಾತ್ಪರ್ಯವು; **ಅಹ ಮಾಹವನೀಯಾದಿಕೋಽಗ್ನಿಃ** - ನಾನೇ ಆಹವನೀಯವೇ ಮೊದಲಾದ ಅಗ್ನಿಯು, ಹೋಮಾಗ್ನಿಯು ಮೂರು ವಿಧವಾದುದರಿಂದ ಆದಿಶಬ್ದವು, ಇನ್ನು ಎರಡು ಅಗ್ನಿಗಳು ಗಾರ್ಹಪತ್ಯ, ದಕ್ಷಿಣ, ಎಂಬುದಾಗಿ; ಎಲ್ಲಾ ಅಗ್ನಿಗಳಾದ ಬಡಬಾಗ್ನಿ, ವೈದ್ಯುತಾಗ್ನಿ, ಜಾಠರಾಗ್ನಿ ಮತ್ತು ಪಂಚಭೂತದಲ್ಲಿ ಒಂದಾದ ಅಗ್ನಿಯೂ ಎಲ್ಲವೂ ಆತನಿಗೆ ಶರೀರವಾದರೂ ಯಜ್ಞಪ್ರಕಾ ರಣಾನುಗುಣವಾಗಿ ಹೋಮಾಗ್ನಿಯೆಂದು ವ್ಯಾಖ್ಯಾನ ಮಾಡಲ್ಪಟ್ಟಿತು, **ಹೋಮಶ್ಚಾಹಮೇವ**- ಇದು **ಹುತ** ಶಬ್ದದ ಅರ್ಥವು, **ಹೋಮಮಾಡೋಣವೂ ಕೂಡ** ನಾನೇ, **ಹುತ** ವೆಂದರೆ ಹವಿಸ್ಸೂ ಎಂದು ಅರ್ಥಮಾಡಬಹುದು, ಹವಿಸ್ಸೂ ಹಿಂದೆಯೇ ಹೇಳಲ್ಪಟ್ಟಿರುವದರಿಂದ ಇಲ್ಲಿ ಹುತವೆಂದರೆ ಹೋಮಮಾಡುವದು ಎಂದು ಅರ್ಥಮಾಡಿರುತ್ತಾರೆ. ಹೀಗೆ ಅಧಿಯಜ್ಞನು ಹಿಂದೆ ತಾನೇ ಎಂದು ಹೇಳಿದುದನ್ನು ಇಲ್ಲಿ ಸಮರ್ಥನೆ ಮಾಡಿರುತ್ತಾರೆ. ಯಜ್ಞಕ್ಕೂ ಯಜ್ಞ ಪರಿಕರಗಳಿಗೂ ಸಾಧನ ಗಳಿಗೂ ಹೀಗೆ ಎಲ್ಲಕ್ಕೂ ತಾನೇ-ಆತ್ಮನೆಂದೂ, ತನ್ನಿಂದಲೇ ಯಜ್ಞನಿಷ್ಪತ್ತಿಯೂ, ಯಜ್ಞ ಭೋಕ್ತಾವೂ ತಾನೇ, ಅದರಿಂದ ತೃಪ್ತನಾಗುವನೂ ತಾನೇ ಎಂಬುದು ಅಧಿಯಜ್ಞದಲ್ಲಿ ಜ್ಞಾತ ವ್ಯಾಂಶವು. ಇಂತಹ ಜ್ಞಾನವು ಭಕ್ತಿಯೋಗನಿಷ್ಠನಿಗೆ ಆವಶ್ಯಕವು. ಇಂತಹ ಜ್ಞಾನವುಂಟಾಗ ಬೇಕಾದರೆ ವಿಶ್ವಶರೀರಕತ್ವ, ವಿಶ್ವಾತ್ಮಕತ್ವ ಜ್ಞಾನವಿದ್ದರೆ ಎಂದರೆ **ವಿಶ್ವತೋಮುಖಜ್ಞಾನ** ವಿದ್ದರೆ ಅದು ಲಭಿಸುತ್ತದೆಂಬ ಭಾವವು ॥ ೧೬ ॥

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ ವಿಶ್ವಶರೀರಕತ್ವ ವಿಶ್ವಾತ್ಮಕತ್ವಗಳನ್ನು ವಿವರಿಸುವ ನೆಪದಿಂದ ಅಧಿಯಜ್ಞ ಶಬ್ದಾರ್ಥವನ್ನು ಉಪಪಾದಿಸಿ, ಈ ಶ್ಲೋಕದಲ್ಲಿ ಭಕ್ತಿಯೋಗ ನಿಷ್ಠನಿಗೆ ಸುಕೃತ ಪರಿಪಾಕದಿಂದುಂಟಾಗಿರುವ ಜಗತ್ಸ್ಥಿತಿ ಅನುಭವಕ್ಕೆ ಕಾರಣಭೂತರಾದವ

**ಮೂ. ಪಿತಾಹಮಸ್ಯ ಜಗತೋ ಮಾತಾಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರ ಮೋಙ್ಕಾರ ಋಕ್ಸಾಮಯಜು ರೇವ ಚ ॥** ೧೭.

**ಭಾ. ಅಸ್ಯ - ಸ್ಥಾವರ ಜಙ್ಗ ಮಾತ್ಮಕಸ್ಯ ಜಗತಃ, ತತ್ರ ತತ್ರ ಪಿತೃತ್ವೇನ ಮಾತೃತ್ವೇನ, ಧಾತೃತ್ವೇನ, ಪಿತಾಮಹತ್ವೇನ, ಚ ವರ್ತಮಾನೋ ಹಮೇವ. ಅತ್ರಧಾತೃಶಬ್ದೋ ಮಾತಾ ಪಿತೃ ವ್ಯತಿರಿಕ್ತೇ ಉತ್ಪತ್ತಿ ಪ್ರಯೋಜಕೇ ಚೇತನ ವಿಶೇಷೇ ವರ್ತತೇ ।**

ರೆಲ್ಲಾ ತಾನೇ ಎಂದೂ, ಆ ಮಹಾತ್ಮನಿಗೆ ಸಾಧನಭೂತವಾಗಿರುವ ಶಾಸ್ತ್ರಾದಿಗಳೂ ಕೂಡ ತಾನೇ ಎಂದೂ, ವಿಶ್ವತೋಮುಖತ್ವವನ್ನೇ ವ್ಯಕ್ತಪಡಿಸುತ್ತಾರೆ.---**ಅಸ್ಯಜಗತಃ** - ಈ ಲೋಕಕ್ಕೆ ಎಂದರೆ ಲೋಕದ ಜನರಿಗೂ, **ಪಿತಾಹಂ** - ನಾನೇ ಹಿತ ಪ್ರವರ್ತನೆಮಾಡುವ ತಂದೆಯು; ಇಂತಹ ಒಳ್ಳೇ ಜನ್ಮವನ್ನಿತ್ತು ಹಿತಪ್ರವರ್ತನೆಯನ್ನು ಮಾಡುವ ತಂದೆಯಾದವನು ನಾನೇ, **ಮಾತಾ** - ಒಂಭತ್ತು ತಿಂಗಳು ಗರ್ಭದಲ್ಲಿ ಧರಿಸಿ, ಹೆತ್ತು, ಅನಂತರ ಪ್ರೀತಿಯಿಂದ ಲಾಲಿಸಿ ಪೋಷಿಸುವ, ತಾಯಿಯಾದವಳೂ ನಾನೇ, **ಧಾತಾ** - ಧಾರಕ ಪೋಷಕನಾಗಿ ಜೀವನಾದಿಗಳನ್ನು ಒದಗಿಸಿಕೊಟ್ಟು ಉಪಕರಿಸುವವನೂ ನಾನೇ, **ಪಿತಾಮಹಃ** - ದ್ರವ್ಯಾದಿಗಳನ್ನು ಮೊಮ್ಮಗನಿಗಾಗಿ ಕೂಡಿಹಾಕುವದೇ ಮೊದಲಾದ ಉಪಕಾರಗಳನ್ನೆಸಗುವ ಪಿತಾಮಹನೂ ನಾನೇ, ಹೀಗೆ ಐಹಿಕ ವ್ಯಾಪಾರಗಳಾದ ಸುಖೋಪ ಭೋಗಾದಿಗಳಿಗೆಲ್ಲಾ ಕಾರಣನು ತಾನೇ ಎಂದರೆ ಅವರಿಗೆಲ್ಲಾ ಅಂತರಾತ್ಮನು ನಾನೇ ಎಂದು ಹೇಳಿ, ಮುಂದೆ ಶಾಸ್ತ್ರಜ್ಞಾನಕ್ಕೆ ಸಾಧನಭೂತನೂ ತಾನೇ ಎಂದು ಉತ್ತರಾರ್ಧದಿಂದ ತಿಳಿಸುತ್ತಾರೆ **ವೇದ್ಯಂ ಪವಿತ್ರಮಹಮೇವ** - ವೇದಗಳಿಂದುಂಟಾಗುವ ಪಾವನತರವಾದ ಜ್ಞಾನವೂ ಕೂಡಾ ನಾನೇ ಅಥವಾ ವೇದಗಳಿಂದ ತಿಳಿಯಲ್ಪಡುವವನೂ ನಾನೇ, **ಓಙ್ಕಾರ** - ವೇದ ವಾಕ್ಯಗಳ ಆದ್ಯಂತಗಳಲ್ಲಿ ಉಚ್ಚರಿಸಲ್ಪಡುವ ನನ್ನ ಸ್ವರೂಪ ಮಾಹಾತ್ಮ್ಯೆಯನ್ನು ತಿಳಿಸುವ ಪ್ರಣವವೂ ನಾನೇ, **ಋಕ್**, ಸಾಮ ಯಜುರ್ವೇದಗಳೂ ಸಹ ನಾನೇ.

**ಭಾಷ್ಯಾರ್ಥವು:—ಅಸ್ಯ** - ಎಂದರೆ ಈ ಸ್ಥಾವರ ಜಙ್ಗ ಮಾತ್ಮಕವಾದ, **ಜಗತಃ** - ಜಗತ್ತಿಗೆ ಎಂದರೆ ಜಗತ್ತಿನ ಪ್ರಾಣಿವರ್ಗಕ್ಕೆ, **ತತ್ರ ತತ್ರ** - ಆಯಾ ಸಂದರ್ಭದಲ್ಲಿ ಎಂದರೆ ಆಯಾ ಭಕ್ತನ ಸಂದರ್ಭದಲ್ಲಿ **ಪಿತೃತ್ವೇನ** - ಪಿತೃರೂಪದಲ್ಲೂ, ಮಾತೃರೂಪದಲ್ಲೂ, ಧಾತೃರೂಪದಲ್ಲೂ, ಪಿತಾಮಹರೂಪದಲ್ಲೂ ಸಹ, **ವರ್ತಮಾನೋಹಮೇವ** - ಇರುವವನು ನಾನೇ, ಎಂದರೆ **ಪಿತಾ**, ಮಾತಾ, ಧಾತಾ, ಪಿತಾಮಹರೂಪದಲ್ಲಿರುವ ಆತ್ಮಾಸ್ವರೂಪತಃ ನಾನೇ ಎಂದು ಹೇಳಲ್ಪಡಲಿಲ್ಲವು, ಹಾಗೆ ಹೇಳಿದರೆ ಪ್ರಕರಣಕ್ಕೆ ವಿರೋಧವು; ವಿಶ್ವಪ್ರಕಾರತೆಯನ್ನು ಹೇಳಿದಂತಾಗಲಿಲ್ಲವು. ವಿಶೇಷಣ ವಿಶೇಷ್ಯಭಾವವೇ ಇಲ್ಲಿ ಉಪಪಾದಿತವು, ಆದುದರಿಂದ ಪ್ರತಿಯೊಬ್ಬ ಭಕ್ತನ ಪಿತಾ, ಮಾತಾ, ಧಾತೃಶರೀರಕನಾಗಿ ಅವರಿಗೆ ಆತ್ಮಾವಾಗಿರುವವನೂ ನಾನೇ ಎಂಬರ್ಥವು. ಪಿತಾ, ಮಾತಾ, ಧಾತಾ ಇವರೆಲ್ಲಾ ಈ ಭಕ್ತನಿಗೆ ಸರ್ವವಿಧ ಉಪಕಾರಕರಾದುದರಿಂದ ಅವರಿಗೆಲ್ಲಾ ಅಂತರಾತ್ಮವಾಗಿರುವವನು ನಾನೇ ಎಂದು ಇಲ್ಲಿ ಹೇಳಲ್ಪಟ್ಟಿತು. ಆಗಲಿ, **"ಪಿತಾತ್ವಂ ಮಾತಾತ್ವಂ"** ಎಂದು ಶ್ರೀಯಾಮುನೇಯರು ಹೇಳಿರುವಹಾಗೆ ಸರ್ವವಿಧ ಬಂಧುವೂ ನಾನೇ ಎಂದು ಏಕೆ ಅರ್ಥ ಮಾಡಕೂಡದು ಎಂದರೆ ಅರ್ಥವೇನೋ ಸ್ವಾರಸ್ಯವಾಗಿದ್ದರೂ ಪ್ರಕರಣಕ್ಕೆ ಯೋಗ್ಯವಿಲ್ಲವು; ಯಾಮುನಮುನಿಗಳ ಶ್ಲೋಕದ ಅರ್ಥವು, ಭಕ್ತನ ಭಾವನೆಯನ್ನು ತಿಳಿಸುತ್ತದೆ. ಈಗ ಪರಮಪುರುಷನು ತಾನು ಉಪಪಾದಿಸಿ ಹೇಳುವ **ವಿಶ್ವತೋಮುಖ**ದ ವಿವರಣೆಯಾದುದರಿಂದ, ಇದಕ್ಕನುಗುಣವಾಗಿ ಶ್ರೀ ಯತಿವರ್ಯರ ಭಾಷ್ಯವು. **ಅತ್ರ ಧಾತೃಶಬ್ದೋ ಮಾತಾಪಿತೃವ್ಯತಿರಿಕ್ತೇ ಉತ್ಪತ್ತಿಪ್ರಯೋಜಕೇ ಚೇತನವಿಶೇಷೇ ವರ್ತತೇ**- ಇಲ್ಲಿ ಧಾತೃಶಬ್ದವು ಮಾತಾಪಿತರಿಗಿಂತ ಬೇರೆಯಾಗಿ ಈತನ

**ಭಾ. ಯತ್ಕಿಂಚಿ ದ್ವೇದವೇದ್ಯಂ ಪವಿತ್ರಂ-ಪಾವನಂ, ತದಹಮೇವ। ವೇದಕಶ್ಚ ವೇದ ಬೀಜ ಭೂತಃ ಪ್ರಣವೋಽಹಮೇವ। ಋಕ್ಸಾಮ ಯಜುರಾತ್ಮಕೋವೇದಶ್ಚಾಹಮೇವ**

**ಮೂ. ಗತಿರ್ಭರ್ತಾ ಪ್ರಭು ಸ್ಸಾಕ್ಷೀ ನಿವಾಸ ಶ್ಶರಣಂ ಸುಹೃತ್ ।**
**ಪ್ರಭವಪ್ರಲಯಸ್ಸ್ಥಾನಂ ನಿಧಾನಂ ಬೀಜ ಮವ್ಯಯಮ್ ॥** ೧೮.

ಉತ್ಪತ್ತಿಗೆ ಸಾಧಕವಾಗಿರುವ ಚೇತನವಿಶೇಷವನ್ನು ಭೋಧಿಸುತ್ತದೆ; ಈ ಧಾತೃಶಬ್ದವು ಮುಂದೆ ಪಿತಾಮಹ ಶಬ್ದದೊಂದಿಗೆ ಸೇರಿದ್ದರೂ ಚತುರ್ಮುಖನನ್ನು ಭೋಧಿಸುತ್ತದೆಂದು ಅರ್ಥ ಮಾಡುವದು ಅಪ್ರಸ್ತುತವೆಂದು ತಿಳಿಸುವದಕ್ಕಾಗಿ, **ತತ್ರ ತತ್ರ ಧಾತೃತ್ವೇನ** ಇರುವವರು ಎಂದು ಸಾಕ್ಷಾತ್ ತನ್ನ ಉತ್ಪತ್ತಿಗೆ ಮಾತಾಪಿತೃಗಳು ಹೇಳಿರುವದರಿಂದ ಗೋಬಲಿವರ್ದನ್ಯಾಯಪ್ರಕಾರ ಇತರ ಪ್ರಯೋಜಕರು ಸೂಚಿಸಲ್ಪಟ್ಟರೆಂದು ವ್ಯಾಖ್ಯಾನ ಮಾಡಿರುತ್ತಾರೆ ರುದ್ರೇಂದ್ರಾದಿಗಳು ಒಂದು ವೇಳೆ ಹೇಳಲ್ಪಟ್ಟಿದ್ದರಾದರೂ ಹಾಗೆ ಅರ್ಥಮಾಡಬಹುದಾಗಿತ್ತು. ಈ ಅರ್ಥಗಳೇ ಪ್ರಸ್ತುತ ವಿಷಯಕ್ಕೆ ಉಚಿತವಾದುವು. ಧಾತೃಶಬ್ದದ ಧಾತ್ವರ್ಥವು ಧಾರಣಪೋಷಣೆಗಳನ್ನು ಭೋಧಿಸುತ್ತದೆ. ತತ್ಪ್ರಯೋಜಕರು ಹೇಳಲ್ಪಟ್ಟರೆಂದು ಅರ್ಥಮಾಡಬಹುದು. **ಯತ್ಕಿಂಚಿ ದ್ವೇದವೇದ್ಯಂ ಪವಿತ್ರಂ-ಪಾವನಂ ತದಹಮೇವ**- ವೇದಗಳಿಂದ ಪಾವನವಾಗಿ ಶ್ರೇಷ್ಠವಾದುದು ಯಾವ ಸ್ವಲ್ಪವಾಗಲಿ ತಿಳಿಯತಕ್ಕದ್ದು ಯಾವುದುಂಟೋ ಅದೂ ನಾನೇಯೇ. ಹಾಗಾದರೆ ಪಾವನವಲ್ಲದ್ದು ತಾನಲ್ಲವೋ ಎಂಬಾಕ್ಷೇಪಣೆಗೆ ಇಲ್ಲಿ ಕಾರಣವಿಲ್ಲವು. ಇಲ್ಲಿ ಭಕ್ತಿ ಯೋಗನಿಷ್ಠನಾದ ಮಹಾತ್ಮನಿಗೆ ಬೇಕಾದುದು ಪಾವನವಾದ ವೇದವೇದ್ಯವಿಷಯವಾದುದರಿಂದ ಹಾಗೆ ಹೇಳಲ್ಪಟ್ಟಿತು ; ಸರ್ವವೇದವೇದ್ಯವೂ ಅವನೇ ; ಅದರಲ್ಲಿ ಸಂದೇಹವಿಲ್ಲವು. ಹಾಗಾದರೆ ಪಾವನವಲ್ಲದ್ದೂ ಅವನೆಯೋ ? ಎಂದರೆ, ಮುಂದೆ ೧೯ನಯ ಶ್ಲೋಕದಲ್ಲಿ ಮೃತ್ಯುವೂ ನಾನೇ ಎಂದು ಶ್ರೀ ಕೃಷ್ಣಭಗವಾನರವರು ಹೇಳಿಕೊಳ್ಳುತ್ತಾರೆ. ಕೆಲವರು **ಪವಿತ್ರಂ** ಎಂಬುದನ್ನು **ಓಙ್ಕಾರಃ** ಎಂಬುದಕ್ಕೆ ವಿಶೇಷಣವಾಗಿ ಮಾಡಿರುತ್ತಾರೆ. ನಪುಂಸಕ ಲಿಂಗವಾದುದರಿಂದ **ವೇದ ವೇದ್ಯಂ** ಎಂಬುದಕ್ಕೆ ವಿಶೇಷಣವೆಂದು ಭಾವಿಸುವದೇ ಉಚಿತವು; ವೇದವೇದ್ಯನು ನಾನು ಎಂದು ಹೇಳಲ್ಪಟ್ಟಿತು, ಇದಕ್ಕೆ ಸಾಧಕವು ನಾನೇ ಮತ್ತು ಸಾಕ್ಷಾದ್ವೇದಗಳೂ ನಾನೇ ಎಂದು ಮುಂದೆ ಹೇಳಲ್ಪಡುತ್ತವೆ. **ವೇದಕಶ್ಚ ವೇದಬೀಜಭೂತಃ ಪ್ರಣವೋಽಹಮೇವ** – ವೇದ್ಯವನ್ನು ತಿಳಿಸತಕ್ಕ ವೇದಕ್ಕೆ ಬೀಜರೂಪವಾಗಿರುವ ಪ್ರಣವವೂ ನಾನೇ, **ಋಕ್ಸಾಮ ಯಜುರಾತ್ಮಕೋ ವೇದಶ್ಚಾಹಮೇವ**-ಋಗಾದಿ ಮೂರು ವೇದಗಳೂ ನಾನೇ; ನಾಲ್ಕು ವೇದಗಳಿರುವಾಗ ಮೂರೇ ವೇದಗಳು ಹೇಳಲ್ಪಡಲು ಕಾರಣವೇನೆಂದರೆ, ಅಥರ್ವಣವೇದವು ಸಾಮವೇದದಲ್ಲೇ ಸೇರಿದುದು ಎಂಬ ಭಾವದಿಂದ. ಆದುದರಿಂದಲೇ ವೇದಗಳಿಗೆ ತ್ರಯಿೀ ಎಂದೂ, ವೇದಾಂತಕ್ಕೆ ತ್ರಯ್ಯಂತ ವೆಂದೂ, ಹೆಸರು ಉಂಟು ; ಆದುದರಿಂದ ಈ ಶ್ಲೋಕವು ತಾನೇ ಸರ್ವರಿಗೂ ಸ್ವರೂಪತಃ ಪಿತಾ, ಮಾತಾ, ಪಿತಾಮಹನೆಂದು ಹೇಳ್ಪಡಲಿಲ್ಲವು. ಪ್ರತಿಭಕ್ತನ ಪಿತಾ ಮಾತಾ ಪಿತಾಮಹಾದಿಗಳಿಗಿಲ್ಲಾ ತಾನೇ ಅಂತರಾತ್ಮನಾಗಿ ವಿಶ್ವತೋಮುಖನೆಂದು ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು :—**ಹಾಗೆಯೇ ವಿಶ್ವಪ್ರಕಾರತ್ವವನ್ನು ಇನ್ನೂ ಉಪಪಾದಿಸುತ್ತಾರೆ. **ಗತಿಃ** – ಯಾವ ಯಾವ ಭಕ್ತನಿಗೆ ಪ್ರಾಪ್ಯವಾಗಿ ದೊರಕುತ್ತದೋ ಅದೆಲ್ಲಾ ನಾನೇ ; **ಭರ್ತಾ** – ಆತನನ್ನು ಭರಿಸುವವನೆಲ್ಲಾ ಎಂದರೆ ರಕ್ಷಿಸುವವನೆಲ್ಲಾ ನಾನೇ ; **ಪ್ರಭುಃ** – ಆತನಿಗೆ ಸ್ವಾಮಿಯಾಗಿ ನಿಯಾಮಕನಾಗಿ ಶಾಸಿತಾವಾಗಿ ಇರುವವನೆಲ್ಲಾ ನಾನೇ ; **ನಿವಾಸಃ** – ಆತನಿಗೆ ವಾಸಸ್ಥಾನವಾಗಿರುವದೂ ನಾನೇ ; **ಶರಣಂ** – ಆತನು ಇಷ್ಟವಾದುದನ್ನು ಹೊಂದಲು ಮತ್ತು

**ಭಾ. ಗಮ್ಯತ ಇತಿಗತಿಃ - ತತ್ರ ತತ್ರ ಪ್ರಾಪ್ಯಸ್ಥಾನಮಿತ್ಯರ್ಥಃ, ಭರ್ತಾ - ಧಾರಯಿತಾ; ಪ್ರಭುಃ - ಶಾಸಿತಾ, ಸಾಕ್ಷೀ - ಸಾಕ್ಷಾದ್ದ್ರಷ್ಟಾ, ನಿವಾಸಃ-ವಾಸಸ್ಥಾನಂ ವೇಶ್ಮಾದಿ, ಶರಣಂ - ಇಷ್ಟಸ್ಯ ಪ್ರಾಪಕತಯಾಽನಿಷ್ಟಸ್ಯ ನಿವಾರಣತಯಾ ಚ ಸಮಾಶ್ರಯಣೀಯ ಶ್ಚೇತನಶ್ಶರಣಮ್, ಸಚಾಹಮೇವ ; ಸುಹೃತ್ - ಹಿತೈಷೀ, ಪ್ರಭವಪ್ರಲಯಸ್ಥಾನಂ ಯಸ್ಯಕಸ್ಯ ಚಿದುತ್ಪತ್ತಿ ಪ್ರಲಯಯೋರ್ಯತ್ ಸ್ಥಾನಂ, ತದಹಮೇವ;**

ಅನಿಷ್ಟವಾದುದನ್ನು ಹೋಗಲಾಡಿಸಿಕೊಳ್ಳಲು ಸಾಧನವಾಗಿರುವವನೂ ನಾನೇ ; **ಸುಹೃತ್** - ಆತನಿಗೆ ಪ್ರಿಯವಾಗಿರುವ ಸ್ನೇಹಿತನೂ ನಾನೇ, **ಪ್ರಭವ ಪ್ರಲಯಸ್ಥಾನಂ** - ಇಲ್ಲಿ ಜಗತ್ತಿನ ಸೃಷ್ಟಿ ಲಯಾದಿಗಳು, ವಿಧೇಯವಲ್ಲವು, ಹಿಂದೆಯೇ ಅವೆಲ್ಲಾ ಹೇಳಲ್ಪಟ್ಟಿವೆಯಾದುದರಿಂದ, ಆತನಿಗೆ ಬೇಕಾದುದರ ಉತ್ಪತ್ತಿಗೂ ನಾಶಕ್ಕೂ ಸ್ಥಿತಿಗೂ ಕಾರಣನಾಗಿರುವವನೂ ನಾನೇ ; **ನಿಧಾನಂ** - ಸಂಚಿತವಾಗಿ ಮುಂದೆ ಉಪಭೋಗಕ್ಕಾಗಿ ಇಡಲ್ಪಡುವದೆಲ್ಲಾ ಎಂದರೆ ನಿಕ್ಷೇಪಾದಿಗಳೆಲ್ಲಾ ನಾನೇ ; **ಬೀಜಂ**-ಸರ್ವಾನುಕೂಲಾದಿಗಳಿಗೂ ಕಾರಣನು ನಾನೇ ; **ಅವ್ಯಯಂ**-ನಾಶರಹಿತವಾಗಿರುವದಕ್ಕೂ ಕಾರಣನು ನಾನೇ, ಎಂದರೆ **ಇವಕ್ಕೆಲ್ಲಾ ಅಂತರಾತ್ಮವಾಗಿರುವವನು ನಾನೇ** ಎಂಬ ಭಾವವು.

**ಭಾಷ್ಯಾರ್ಥವು :—ಗಮ್ಯತ ಇತಿ** - ಹೊಂದಲ್ಪಡುವದರಿಂದ ಗತಿಯು ಎಂದರೆ **ತತ್ರ ತತ್ರ ಪ್ರಾಪ್ಯಸ್ಥಾನ ಮಿತ್ಯರ್ಥಃ** - ಆಯಾ ಭಕ್ತರ ಸಂದರ್ಭದಲ್ಲಿ ಯಾವುಯಾವುದು ಪ್ರಾಪ್ಯವೊ ಅವೆಲ್ಲಾ ಎಂಬಭಿಪ್ರಾಯವು ; ಇದರಿಂದ ನಾಲ್ಕು ಜನ ಭಕ್ತರಿಗೂ ಇಲ್ಲೇ ಯಾವ ಯಾವ ಪ್ರಾಪ್ಯವೋ, ಅಥವಾ ಸ್ವರ್ಗಾದಿಗಳೋ, ಅಥವಾ ದಿವ್ಯ ವೈಕುಂಠವೋ ಅವೆಲ್ಲವೂ ನಾನೇ ಎಂಬ ಭಾವವು ; **ಭರ್ತಾ** ಎಂದರೆ **ಬಿಭರ್ತಿ** ಎಂಬ ಕ್ರಿಯಾಪದದ ಮೂಲಕ **ಧಾರಯಿತಾ** - ಧರಿಸಿ, **ಪುಷ್ಣಾತಿ** - ಅಭಿವೃದ್ಧಿಯನ್ನು ಹೊಂದಿಸುವವನೂ ನಾನೇ ; **ಭರ್ತಾ** ಎಂದರೆ ಸ್ತ್ರೀಗೆ ಗಂಡನೆಂಬರ್ಥವು ಸಮಂಜಸವಲ್ಲವು, ಆದುದರಿಂದ **ಭಿಬರ್ತಿ** ಎಂಬ ಧಾತುವಿನಿಂದ ಧಾರಯಿತಾ ಎಂಬ ವ್ಯಾಖ್ಯಾನವು ; **ಪ್ರಭುಃ** ಎಂದರೆ **ಶಾಸಿತಾ** - ಆಜ್ಞೆ ಮಾಡುವವನೆಲ್ಲಾ ನಾನೇ ; **ಸಾಕ್ಷೀ** ಎಂದರೆ **ಸಾಕ್ಷಾದ್ದ್ರಷ್ಟಾ** - **ಲೋಕದಲ್ಲಿ** ನಡೆಯುವುದನ್ನೆಲ್ಲಾ ಸಾಕ್ಷಾತ್ತಾಗಿಯೇ ನೋಡುವವನೂ ನಾನೇ ; **ನಿವಾಸಃ** ಎಂದರೆ ವಾಸಸ್ಥಾನವು, **ವೇಶ್ಮಾದಿ** - ಮನೆ ಮೊದಲಾದುವು ನಾನೇ ; **ಗತಿಃ** ಎಂಬ ಶಬ್ದದೊಂದಿಗೆ ಪುನರುಕ್ತಿ ದೋಷವನ್ನು ತಪ್ಪಿಸುವದಕ್ಕಾಗಿ ಹೀಗೆ ವ್ಯಾಖ್ಯಾನವು ; **ಶರಣಂ** ಎಂದರೆ **ಇಷ್ಟಸ್ಯ ಪ್ರಾಪಕತಯಾಽನಿಷ್ಟಸ್ಯನಿವಾರಕತಯಾ ಚ ಸಮಾಶ್ರಯಣೀಯಶ್ಚೇತನಶ್ಶರಣಂ** ಅಭಿಮತವಾದುದನ್ನು ಹೊಂದಿಸುವದರಿಂದಲೂ ಅನಭಿಮತವಾದುದನ್ನು ಹೋಗಲಾಡಿಸುವದರಿಂದಲೂ ಸಹ ಆಶ್ರಯಿಸಲು ಯೋಗ್ಯನಾದ ಚೇತನನು ಯಾರೋ, ಆತನು **ಶರಣನು, ಸಚಾಹಮೇವ** ಅವನೂ ಸಹ ನಾನೇ ; ನಿವಾಸ ಶಬ್ದವೂ ಶರಣ ಶಬ್ದವೂ ಇರುವದರಿಂದ, ನಿವಾಸಶಬ್ದಕ್ಕೆ ವೇಶ್ಮಾದಿ ಎಂದು ಅರ್ಥಹೇಳಿ, **ಶರಣಂ ಗೃಹ ರಕ್ಷಿತ್ರೋಃ** ಎಂಬ ನಿಘಂಟನ್ನನುಸರಿಸಿ, ಇಷ್ಟಪ್ರಾಪಕನಾಗಿಯಾಗಲಿ ಅನಿಷ್ಟನಿವಾರಕನಾದ ಒಬ್ಬ ಚೇತನನನ್ನು ಬೋಧಿಸುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ. ಇಲ್ಲಿ ಶರಣಶಬ್ದಕ್ಕೆ ಅಂತಹ ರಕ್ಷಕನೆಂಬ ಅರ್ಥವು. **ಸುಹೃತ್**-ಸುಹೃಚ್ಛಬ್ದವು ಶೋಭನವಾದ ಹೃದಯವುಳ್ಳವನನ್ನು ಬೋಧಿಸುವದರಿಂದ ಹಿತೈಷಿಯು; **ಪ್ರಭವ ಪ್ರಲಯ ಸ್ಥಾನಂ** ಎಂದರೆ **ಯಸ್ಯಕಸ್ಯ ಚಿದುತ್ಪತ್ತಿ ಪ್ರಲಯಯೋರ್ಯತ್ ಸ್ಥಾನಂ, ತದಹಮೇವ**-ಯಾರಿಗೇಯಾಗಲಿ ಯಾವುಯಾವುದರ ಉತ್ಪತ್ತಿ ನಾಶಗಳಿಗೆಯಾವುದು ಸ್ಥಾನವೋ, ಅದೂನಾನೆಯೇ **ಯಾರಿಗಾಗಲಿಪ್ರಾಪ್ತವಾಗುವ ನಷ್ಟವಾಗುವ**

**ಭಾ. ನಿಧಾನಂ - ನಿಧೀಯತ ಇತಿ ನಿಧಾನವ್ ; ಉತ್ಪಾದ್ಯುಪಸಂಹಾರ್ಯಂ ಚಾ ಹಮೇ ವೇತ್ಯರ್ಥಃ ; ಅವ್ಯಯಂ ಬೀಜಂ - ತತ್ರ ತತ್ರ ವ್ಯಯರಹಿತಂ ಯತ್ಕಾರಣಂ, ತದಹಮೇವ ॥ ೧೮ ॥**

**ಮೂ. ತಪಾಮ್ಯಹ ಮಹಂ ವರ್ಷಂ ನಿಗೃಹ್ಣಾ ಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹ ಮರ್ಜುನ ॥ ೧೯.**

ಸ್ಥಾನವು ಯಾವುದಾದರೂ ಇದ್ದರೆ ಅದೂ ನಾನೇ ಎಂಬ ತಾತ್ಪರ್ಯವು ; **ನಿಧಾನಂ** ಎಂಬುದರ ಅರ್ಥವು, **ನಿಧೀಯತೇ ಇತಿ ನಿಧಾನಂ** - ಯಾವುದು ಕೂಡಿಹಾಕಿ ಇಡಲ್ಪಡುತ್ತದೋ ಅದು ನಿಧಾನವೆನಿಸುತ್ತದೆ. ಅದೂ ನಾನೇ ಎಂಬ ಭಾವವು ; ಅದರ ತಾತ್ಪರ್ಯವನ್ನು ಒರೆಯುತ್ತಾರೆ, **ಉತ್ಪಾದ್ಯಮುಪಸಂಹಾರ್ಯಂ ಚಾಹಮೇವೇತ್ಯರ್ಥಃ** - ಉಂಟಾಗುವದಕ್ಕೂ ನಷ್ಟವಾಗುವದಕ್ಕೂ ಕಾರಣವಾದುದು ಯಾವುದೋ ಅದು ಸಹ ನಾನೇ ; ಎಂಬರ್ಥವು ; **ಅವ್ಯಯಂಬೀಜಂ** ಎಂದರೆ **ತತ್ರ ತತ್ರ ವ್ಯಯರಹಿತಂ ಯತ್ಕಾರಣಂ ತದಹಮೇವ** - ಅಲ್ಲಲ್ಲಿ ನಾಶರಹಿತವಾಗಿ ಯಾವ ಕಾರಣವುಂಟೋ, ಅದೂ ನಾನೇ, ಹೀಗೆ ಭಕ್ತರೇ ಮೊದಲಾದವರುಗಳಿಗೆ ಉಂಟಾಗುವ ಸರ್ವವಿಧಪ್ರವೃತ್ತಿ ಭೋಗ ಮುಂತಾದವುಗಳಿಗೆ ಯಾವು ಯಾವುವು ಕಾರಣ ಭೂತಗಳೋ, ಅವೆಲ್ಲವೂ ನಾನೇ, ಎಂದು ಉಪದೇಶಿಸಿರುತ್ತಾರೆ. ಹೀಗೆ ನಾನು ವಿಶ್ವಾತ್ಮಕನೆಂಬ ಜ್ಞಾನ ಯಜ್ಞದಿಂದ, ಮಹಾತ್ಮರಾದ ಭಕ್ತರು ನನ್ನನ್ನು ಅನನ್ಯ ಮನಸ್ಕರಾಗಿ ಉಪಾಸನೆ ಮಾಡುತ್ತಾರೆಂಬ ತಾತ್ಪರ್ಯವು.

**ಮೂಲಕ್ಕೆ ಅರ್ಥವು :—** ಹಾಗೆಯೇ ಇನ್ನೂ ಅನುಕೂಲ ಪ್ರತಿಕೂಲ ರೂಪದಲ್ಲಿ ದೈವಿಕವಾಗಿ ಪ್ರಾಪ್ತವಾಗುವದೇ ಮೊದಲಾದನೆಲ್ಲಾ ನಾನೇ ಎಂದು ವಿಶ್ವಾತ್ಮಕ ಜ್ಞಾನವು ಈ ಜ್ಞಾನಿಗೆ ಉಂಟೆಂದು ಹೇಳುತ್ತಾರೆ. **ಅಹಂ** - ನಾನು, **ತಪಾಮಿ** - ಸೂರ್ಯಾಗ್ನಿಯೇ ಮೊದಲಾದರೂಪವಲ್ಲಿ ತಪಿಸುವೆನು, **ಅಹಂ** - ನಾನೇ, **ವರ್ಷಂ** - ಮಳೆಯನ್ನು, **ನಿಗೃಹ್ಣಾಮಿ** - ಬಿಸಲುಕಾಲದಲ್ಲಿ ತಡೆಯುವೆನು ; ಮತ್ತು ಮಳೆಗಾಲದಲ್ಲಿ, **ಉತ್ಸೃಜಾಮಿಚ** - ಬಿಡುವೆನು, **ಅಮೃತಂ** - ಯಾವುದು ಇವನ ಜೀವಿಕೆಗೆ ಹೇತುವೋ, ಮತ್ತು **ಮೃತ್ಯುಶ್ಚ** - ಮರಣಕ್ಕೆ ಯಾವುದು ಹೇತುವೋ, ಅವೆಲ್ಲವೂ ನಾನೇ ; ಓ ಅರ್ಜುನನೇ ತುಂಬಾ ಹೇಳುವದೇನು, **ಸತ್** - ಈ ಇರುವದು ಯಾವುದೋ **ಅಸತ್** - ಈಗ ಇಲ್ಲದೆ ಹಿಂದೆ ಇದ್ದುದ್ದಾಗಲಿ, ಮುಂದೆ ಇರುವದಾಗಲಿ ಯಾವುದೋ ಅದೂ ಸಹ ನಾನೇ, ಯಾವುದು ಒಳ್ಳೇದೊ ಯಾವುದು ಕೆಟ್ಟದ್ದೋ ಅವೆಲ್ಲವೂ ನಾನೇ. ಬಿಸಲು ಕಾಯುವದೂ, ವರ್ಷಿಸುವದೂ, ಕಾಲ ಕಾಲಗಳಲ್ಲಿ ಈತನಿಗೆ ಒಳ್ಳೇದು ಕೆಟ್ಟದ್ದು ಉಂಟಾಗಬಹುದು, ಅವೆಲ್ಲವೂ ನಾನೇ ಎಂದರೆ ಅವಕ್ಕೆಲ್ಲಾ ಆತ್ಮಾವಾಗಿ ವಿಶ್ವಶರೀರಕನಾಗಿ ನಾನೇ ನಡೆಸತಕ್ಕವನೆಂಬ ಭಾವವು.

**ಭಾಷ್ಯಾರ್ಥವು :—** ಮುಂದೆ ೧೦-೧೯ರಲ್ಲಿ **ಪ್ರಾಧಾನ್ಯತಃ** ಎಂದು ತನ್ನ ವಿಭೂತಿಗಳಲ್ಲಿ ಪ್ರಧಾನವಾದುದನ್ನು ಹೇಳುವೆನು ಎಂದು ಮುಂದೆ ಉಪಪಾದಿಸಿ ಹೇಳುವಹಾಗೆ, ಹಿಂದೆಯೂ ಪ್ರಧಾನವಾದುವುಗಳ ಸತ್ತೆಯಲ್ಲಾ ತನ್ನ ಅಧೀನವಾದುದೆಂದು ಹೇಳಿದರು. ಅದು ಹೇಗೆ ಎಂದರೆ ಅವುಗಳಿಗೆಲ್ಲಾ ತಾನೂ ಆತ್ಮವಾಗಿರುವ ವಿಶ್ವತೋಮುಖತ್ವದಿಂದ ಎಂದು ತಿಳಿಸಿದರು. ಈಶ್ಲೋಕದಲ್ಲಿಯಾದರೋ ಸರ್ವಪ್ರವೃತಿಗಳೂ ಅನುಕೂಲ ಪ್ರತಿಕೂಲ ರೂಪದಲ್ಲಿರುವುವುಗಳೆಲ್ಲಾ ತನ್ನ ಅಧೀನವೇ ಎಂದು ತಿಳಿಸುತ್ತಾರೆ. **ಅಗ್ನ್ಯಾದಿತ್ಯಾದಿ ರೂಪೇಣಾಹಮೇವ ತಪಾಮಿ** - ಅಗ್ನಿ ಸೂರ್ಯರೇ ಮೊದಲಾದ ರೂಪದಿಂದ ನಾನೇ ತಾಪವನ್ನುಂಟುಮಾಡುವವನು, ಎಂದರೆ ಅಗ್ನಿಯಿಂದಲೂ ಸೂರ್ಯಾದಿಗಳಿಂದಲೂ ಅನುಕೂಲ ಪ್ರತಿಕೂಲವೆಲ್ಲವೂ ಉಂಟಾಗಲು ಕಾರಣ

**ಭಾ. ಅಗ್ನ್ಯಾದಿತ್ಯಾದಿರೂಪೇಣಾಹಮೇವ ತಪಾಮಿ ; ಗ್ರೀಷ್ಮಾದಾವಹಮೇವ ವರ್ಷಂ ನಿಗೃಹ್ಣಾಮಿ; ತಥಾವರ್ಷಾಸು ಚಾ ಹಮೇವೋ ತ್ಸೃಜಾಮಿ; ಅಮೃತಂಚೈವ ಮೃತ್ಯುಶ್ಚ - ಏನಜೀವತಿ ಲೋಕೇ ಯೇನ ಚ ಮ್ರಿಯತೇ, ತದುಭಯ ಮಹಮೇವ; ಕಿಮತ್ರ ಬಹುನೋಕ್ತೇನ ; ಸದಸಚ್ಚಾಹಮೇವ - ಸದ್ಯದ್ವರ್ತತೇ, ಅಸದ್ಯದತೀತ ಮನಾಗತಂಚ ಸರ್ವಾವಸ್ಥಾವಸ್ಥಿತ ಚಿದಚಿದ್ವಸ್ತು ಶರೀರತಯಾ ತತ್ತತ್ಪ್ರಕಾರೋಽಹ ಮೇವ, ಏವಂಬಹುಧಾ ಪೃಥಕ್ತ್ವೇನ ವಿಭಕ್ತ ನಾಮರೂಪಾವಸ್ಥಿತ ಕೃತ್ಸ್ನ ಜಗಚ್ಛರೀರತಯಾ ತತ್ಪ್ರಕಾರೋಽಹಮೇವಾವಸ್ಥಿತ ಇತ್ಯೇಕತ್ವ ಜ್ಞಾನೇನಾನುಸಂದ ಧಾನಾಶ್ಚ ಮಾ ಮುಪಾಸತೇ ॥ ೧೯ ॥**

ಭೂತನು ನಾನು, ಅವುಗಳಿಗೆಲ್ಲಾ ಆತ್ಮಾವಾಗಿ ನಾನೇ ಅವೆಲ್ಲಾ ಮಾಡಿಸುವವನು ಎಂಬಭಾವವು; **ತಥಾ** - ಹಾಗೆಯೇ ; **ವರ್ಷಾಸುಚ** - ವರ್ಷಾಕಾಲಗಳಲ್ಲೂ ಸಹ, **ಅಹಮೇವ** - ನಾನೇ, **ಉತ್ಸೃಜಾಮಿ** - ವರ್ಷವನ್ನು ಬಿಡುವವನೂ ನಾನೇ ; **ಅಮೃತಂ ಚೈವ ಮೃತ್ಯುಶ್ಚ** ಎಂದರೆ **ಏನ ಜೀವತಿ ಲೋಕೋ, ಯೇನ ಚ ಮ್ರಿಯತೇ, ತದುಭಯ ಮಹಮೇವ** - ಯಾವುದರಿಂದ ಲೋಕದ ಜನವು ಜೀವಿಸುತ್ತದೋ, ಯಾವುದರಿಂದ ಸಾಯುತ್ತದೋ, ಆ ಎರಡೂ ನಾನೇ ; **ಕಿಮತ್ರ ಬಹುನೋಕ್ತೇನ** - ಈಗ ತುಂಬಾ ಹೇಳುವದರಿಂದೇನು ? **ಸದಸಚ್ಚಾಹಮೇವ** - ಸತ್ ಅಸತ್ ಎರಡೂ ನಾನೇ, ಎಂದರೆ **ಸದ್ಯದ್ವರ್ತತೇ** - ಈ ವರ್ತಮಾನಕಾಲದಲ್ಲಿ ಯಾವುದು ಇರುತ್ತದೋ ಅಥವಾ **ಅಸದ್ಯತತೀತಮನಾಗತಂಚ** - ಯಾವುದು ಈಗಿಲ್ಲದೆ ಭೂತಕಾಲದಲ್ಲಾಗಲಿ ಇದ್ದ, ಭವಿಷ್ಯತ್ಕಾಲದಲ್ಲಾಗಲಿ ಇರುವ. **ಸರ್ವಾವಸ್ಥಾವಸ್ಥಿತ ಚಿದ ಚಿದ್ವಸ್ತು ಶರೀರತಯಾ** - ಸಮಸ್ತಗಳಾದ ಅವಸ್ಥೆಗಳಲ್ಲೂ ಇರುವ ಸಮಸ್ತ ಚಿದ ಚಿದ್ವಸ್ತುಗಳನ್ನೂ ಶರೀರವಾಗಿ ಹೊಂದಿರುವದರಿಂದ, **ತತ್ತತ್ಪ್ರಕಾರೋಹಮೇವ** - ಆಯಾಪ್ರಕಾರವಾಗಿರುವನು ನಾನೇ ; ಶ್ರೀ ಪರಾಶರು, **"ಯದಸ್ತಿಯನ್ನಾಸ್ತಿ ಚ ವಿಪ್ರವರ್ಯ"** ಎಂಬಲ್ಲಿ (ವಿ. ಪು ೨-೧೨-೩೮) **"ಅಸ್ತಿನಾಸ್ತಿ"** ಶಬ್ದಗಳಲ್ಲಿ ಅಸ್ತಿ ಶಬ್ದದಿಂದ ಹೇಳಲ್ಪಡುವ ಸ್ವರೂಪ ವಿಕಾರವಿಲ್ಲದಿರುವ ಚಿದ್ವರ್ಗವೆಲ್ಲವೂ, ನಾಸ್ತಿಶಬ್ದವಾಚ್ಯವಾದ ಸಮಸ್ತ ಅಚೇತನವರ್ಗವೂ ಶ್ರೀ ಮಹಾವಿಷ್ಣುವೇ ಎಂದು ತಮ್ಮ ಪ್ರಿಯ ಶಿಷ್ಯರಾದ ಮೈತ್ರೇಯರಿಗೆ ಉಪದೇಶಿಸಿರುತ್ತಾರೆ; ಇದೂ ಏತರಿಂದ ಎಂದರೆ ವಿಷ್ಣುವು ಸರ್ವ ವಿಶ್ವಕ್ಕೂ ಆತ್ಮಾವಾದುದರಿಂದ. ಹೀಗೆ ವಿಶ್ವತೋಮುಖತ್ವವು ಅಲ್ಲಿಯೂ ಉಪಪಾದಿತವು. **ಕಿಮತ್ರಬಹುನೋಕ್ತೇನ** ಎಂಬುದರಿಂದ, **ಸದಸಚ್ಚಾಹಮೇವ** ಎಂದು ಸಾಮಾನಾಧಿಕರಣ್ಯೋಕ್ತಿಯು ನಿಗಮನ ಮಾಡಲ್ಪಟ್ಟಿತೆಂದು ತಿಳಿಸುವ ಸಂದರ್ಭದಲ್ಲಿ, **ಅಹಂಕ್ರತುಃ** ಎಂದಾರಂಭಿಸಿ, **ಸದಸಚ್ಚಾಹಂ** ಎಂದು ಪೂರೈಸಿದುದರ ಅಭಿಪ್ರಾಯವೇನೆಂಬುದನ್ನು ಮುಂದಿನ ವಾಕ್ಯದಿಂದ ಸ್ಪಷ್ಟಪಡಿಸುತ್ತಾರೆ.— **ಏವಂ** - ಈ ಪ್ರಕಾರವಾಗಿ ಎಂದರೆ ಮೇಲೆ ಶರೀರಾತ್ಮಭಾವ ನಿಮಿತ್ತವಾದ ಸಾಮಾನಾಧಿಕರಣ್ಯದಿಂದ ಹೇಳಿರುವ ಮೇರಿಗೆ **ಬಹುಧಾ** - ಬಹುವಿಧವಾಗಿ, **ಪೃಥಕ್ತ್ವೇನ** - ಬೇರೆಯಾಗಿ ತೋರುವಹಾಗೆ, **ವಿಭಕ್ತನಾಮರೂಪಾವಸ್ಥಿತಕೃತ್ಸ್ನ ಜಗಚ್ಛರೀರತಯಾ** - ವಿಭಾಗಿಸಲ್ಪಟ್ಟು ವ್ಯವಹಾರಕ್ಕೆಯೋಗ್ಯವಾದ ನಾಮರೂಪಗಳಿಂದ ಇರುವ ಸಮಸ್ತಜಗತ್ತನ್ನೂ ಶರೀರವಾಗಿ ಹೊಂದಿರುವದರಿಂದ, **ತತ್ಪ್ರಕಾರಃ** ಆ ಜಗದ್ರೂಪವಾಗಿರುವವನು ಎಂದರೆ ಸಮಸ್ತ ಜಗತ್ತೂ ಅಪೃಥಕ್ಸಿದ್ಧವಿಶೇಷಣವಾಗಿ, **ಅಹಮೇವಾವಸ್ಥಿತಃ**-ನಾನೇ ಇರುವವನು, **ಇತಿ**-ಎಂದು, **ಏಕತ್ವಜ್ಞಾನೇನ**-ಒಂದೇ ಎಂಬ ಜ್ಞಾನದಿಂದ, ಎಂದರೆ ಜಗದ್ವಿಶಿಷ್ಟನಾಗಿ ಒಬ್ಬನೇ ಎಂಬ ವಿಶಿಷ್ಟಾದ್ವೈತಜ್ಞಾನದಿಂದ **ಅನುಸಂದಧಾನಾಶ್ಚ**-

ಭಾ. ಅ. ಏವಂ ಮಹಾತ್ಮನಾಂ ಜ್ಞಾನಿನಾಂ ಭಗವದನುಭವೈಕ ಭೋಗಾನಾಂ ವೃತ್ತ ಮುಕ್ತ್ವಾ, ತೇಷಾ ಮೇವ ವಿಶೇಷಂ ದರ್ಶಯಿತು ಮಜ್ಞಾನಾಂ ಕಾಮಕಾಮಾನಾಂ ವೃತ್ತಮಾಹ—

ಅನುಸಂಧಾನಮಾಡುವವರಾಗಿ, **ಮಾಮುಪಾಸತೇ** - ಆ ಮಹಾತ್ಮರಾದ ಜ್ಞಾನಿಗಳು ನನ್ನನ್ನು ಉಪಾಸನೆಯನ್ನು ಮಾಡುತ್ತಾರೆ. ಆದುದರಿಂದ ಶರೀರಾತ್ಮಭಾವದಿಂದ ಐಕ್ಯಾನುಸಂಧಾನವೇ ಸಮಂಜಸವಾದ ಏಕತ್ವವೇವಿನಾ ಸ್ವರೂಪೈಕ್ಯರೂಪ ಏಕತ್ವದಿಂದ ಸಾಮಾನಾಧಿಕರಣ್ಯವು ಸಿದ್ಧಿ ಸುವದಿಲ್ಲವು. ವಿಶಿಷ್ಟಾದ್ವೈತ ಭಾವಕ್ಕೆ ಮಾತ್ರವೇ ಗೀತಾ ವಾಕ್ಯಗಳು ಸರ್ವಸಮಂಜಸವಾ ಗುತ್ತವೆಂಬುದನ್ನು ಇಲ್ಲಿಯೂ ಇನ್ನೂ ಅನೇಕ ಕಡೆಗಳಲ್ಲೂ ಊಹಿಸಬಹುದು. ಸಾಕ್ಷಾತ್ತಾಗಿ ಸ್ವರೂಪೈಕ್ಯವು ಎಲ್ಲಿಯೂ ಬೋಧಿಸಲ್ಪಡಲಿಲ್ಲವು. ಭೇದವು ಗ್ರಂಥಾದಿಯಲ್ಲೂ ಗ್ರಂಥ ಮಧ್ಯ ದಲ್ಲಿ ಅನೇಕ ಕಡೆಗಳಲ್ಲೂ ಉಪಸಂಹಾರದಲ್ಲೂ ಉಪಪಾದಿತವೆಂದು ಹಿಂದೆಯೇ ಪ್ರದರ್ಶಿಸಿರು ತ್ತೇವೆ. ಹಾಗಾದರೆ ಐಕ್ಯ ಹೇಗೆ ಎಂದರೆ ಶರೀರಾತ್ಮಭಾವದಿಂದುಂಟಾಗುವ ವಿಶಿಷ್ಟತೆಯಿಂದ ಐಕ್ಯವು. ಇದೀಗ ೧೫ ನೆಯ ಶ್ಲೋಕದ **ಏಕತ್ವೇನ ಪೃಥಕ್ತ್ವೇನ** ಎಂಬ ಪದಗಳ ಅರ್ಥವೆಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು:**— ಮುಂದಿನ ಎರಡು ಶ್ಲೋಕಕ್ಕೂ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಹಿಂದೆ ಜ್ಞಾನಿಯು ಅತ್ಯರ್ಥಪ್ರಿಯನೆಂದೂ, ಮಹಾತ್ಮನೆಂದೂ, ಅನನ್ಯ ಮನಸ್ಕನೆಂದೂ, ತಾನು ವಿಶ್ವಾತ್ಮನೆಂಬ ಜ್ಞಾನಯಜ್ಞದಿಂದ ಉಪಾಸನೆ ಮಾಡುವನೆಂದೂ, ಶ್ಲಾಘಿಸಿದರು. ಇದಕ್ಕೆ ಪ್ರತಿದ್ವಂದಿಯಾಗಿ, ಸ್ವಾಮಿದತ್ತ ಶಾಸ್ತ್ರವಿದ್ದರೂ ಅದನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಮಂದ ಬುದ್ಧಿಯಾಗಿ ಐಶ್ವರ್ಯಾರ್ಥಿಯಾಗಿ ಕರ್ಮಯಜ್ಞಾನುಷ್ಠಾನ ಮಾಡುವವನಿಗೆ ಉಂಟಾಗುವ ಫಲವು ಅಲ್ಪಾಸ್ಥಿರವಾದುದೆಂದು ಚನ್ನಾಗಿ ಪ್ರದರ್ಶಿಸುವದಕ್ಕಾಗಿ ತನ್ಮೂಲಕ ಜ್ಞಾನಿಯ ಉಪಾಸನೆಯೇ ಅಮೋಘ ಫಲವುಳ್ಳದ್ದೆಂದು ತಿಳಿಸುವದಕ್ಕಾಗಿಯೂ ಮುಂದಿನ ಎರಡು ಶ್ಲೋಕಗಳಿಂದ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ.— **ಏವಂ** - ಈ ವಿಧವಾಗಿ ಎಂದರೆ ಮಹಾತ್ಮನಸ್ತು ಎಂದಾರಂಭಿಸಿ ಹೇಳಿದ ಈ ಆರು ಶ್ಲೋಕಗಳಲ್ಲಿ ಹೇಳಿರುವ ಮೇರಿಗೆ, ಅಲ್ಲಿ ಏನು ಹೇಳಲ್ಪಟ್ಟಿತೆಂಬುದನ್ನು ತಾವೇ ಸೂಕ್ಷ್ಮವಾಗಿ ತಿಳಿಸುತ್ತಾರೆ.— **ಮಹಾತ್ಮನಾಂ ಜ್ಞಾನಿನಾಂ ಭಗವದನುಭವೈಕ ಭೋಗಾನಾಂ** - ಮಹಾತ್ಮರುಗಳಾಗಿ ಜ್ಞಾನಿಗಳಾಗಿ ಭಗವದನುಭವ ಮಾತ್ರವೇ ಮುಖ್ಯವಾದ ಭೋಗವೆಂದೆನಿಸುವವರಾಗಿರುವವರ, **ವೃತ್ತ ಮುಕ್ತ್ವಾ** - ನಾಮ ಸಂಕೀರ್ತನ, ಯತನ ನಮಸ್ಕಾರಾದಿ ರೂಪಪ್ರವೃತ್ತಿಯನ್ನೂ, ಅವರು ಎಂತಹ ಜ್ಞಾನದಿಂದ ಉಪಾಸಿಸುತ್ತಾರೆಂಬುದನ್ನೂ ಹೇಳಿ, **ತೇಷಾಮೇವ** - ಆ ಮಹಾತ್ಮರಾದ ಜ್ಞಾನಿಗಳಿಗೇನೆ, **ವಿಶೇಷಂ ದರ್ಶಯಿತುಂ** - ಮಾಹಾತ್ಮ್ಯರೂಪ ವಿಶೇಷವನ್ನು ತೋರಿಸುವದಕ್ಕಾಗಿ, **ಅಜ್ಞಾನಾಂ** - ತಿಳಿವಳಿಕೆಯಿಲ್ಲದಿರುವ, ಹಿಂದೆ ೯-೧೧ರಲ್ಲಿ ಅವರು "**ಪರಂಭಾವ ಮಜಾನನ್ತಃ**" ಎಂದು ಹೇಳಿರುವದರಿಂದ ಅವರು ಅಜ್ಞರೆಂದು ಹೇಳಿರುತ್ತಾರೆ. ಅಜ್ಞರೆಂಬುದರಿಂದ ಪಶುಗಳಹಾಗೆ ಏನೂ ತಿಳಿಯದು ಎಂಬರ್ಥವಲ್ಲವು. ಅವರು **ತ್ರೈವಿದ್ಯ** ರೆಂದು ವೇದವನ್ನು ತಿಳಿದವರೆಂದು ಹೇಳಲ್ಪಡುತ್ತದೆ. ಆದರೂ ಆ ಯಜ್ಞಗಳಿಂದ ಆರಾಧಿಸಲ್ಪಡುವವನು ಭಗವಂತನು, ಫಲಗಳನ್ನು ಕೊಡುವವನೂ ಭಗವಂತನು ಎಂದು ತಿಳಿಯದಿರುವದರಿಂದ ಅಜ್ಞರು ; **ಕಾಮಕಾಮಾನಾಂ** - ಐಶ್ವರ್ಯಾದಿ ವಿಷಯೋಪಭೋಗಗಳಲ್ಲಿ ಅಪೇಕ್ಷೆ ಇರುವವರ **ವೃತ್ತಮಾಹ** - ಪ್ರವೃತ್ತಿಗಳನ್ನು ಕುರಿತು ಹೇಳುತ್ತಾರೆ. ಹಿಂದೆ ೧೫ ನೆಯ ಶ್ಲೋಕದಲ್ಲಿ, **ಮಹಾತ್ಮಾನಃ ಅನನ್ಯ**

ಮೂ. **ತ್ರೈವಿದ್ಯಾಮಾಂಸೋಮಪಾಃಪೂತಪಾಪಾಃಯಜ್ಞೈರಿಷ್ಟ್ವಾಸ್ವರ್ಗತಿಂ ಪ್ರಾರ್ಥಯನ್ತೇ। ತೇಪುಣ್ಯಮಾಸಾದ್ಯ ಸುರೇಂದ್ರ ಲೋಕಮಶ್ನಂತಿ ದಿವ್ಯಾನ್ದಿವಿದೇವಭೋಗಾನ್ ॥ ೨೦ ॥ ತೇ ತಂ ಭುಕ್ತ್ವಾಸ್ವರ್ಗ ಲೋಕಂ ವಿಶಾಲಂ ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶನ್ತಿ। ಏವಂ ತ್ರಯೀಧರ್ಮ ಮನುಪ್ರಪನ್ನಾಃ ಗತಾಗತಂ ಕಾಮಕಾಮಾ ಲಭನ್ತೇ ॥ ೨೧.**

**ಚೇತಸಃ** ಎಂಬುದನ್ನೇ ಇಲ್ಲಿ **ಮಹಾತ್ಮನಾಂ ಭಗವದನುಭವೈಕ ಭೋಗಾನಾಂ** ಎಂದು ಹೇಳಿ, ೧೫ ನೆಯ ಶ್ಲೋಕದಲ್ಲಿರುವ **ಜ್ಞಾನಯಜ್ಞೇನ** ಎಂಬುದರ ಅಭಿಪ್ರಾಯವನ್ನು, **ಜ್ಞಾನಿನಾಂ** ಎಂಬುದರಿಂದ ಸೂಚಿಸಿ, **ವೃತ್ತಮುಕ್ತ್ವಾ** ಎಂಬುದರಿಂದ ೧೯ನೆಯ ಶ್ಲೋಕಾಭಿಪ್ರಾಯವನ್ನೂ ಅನುವಾದಮಾಡಿ ಹೇಳಿರುತ್ತಾರೆ.

**ಮೂಲಕ್ಕೆ ಅರ್ಥವು:—**ಇಲ್ಲಿ **ಮಾಂ ಇಷ್ಟ್ವಾ ಮಾಂ ಸ್ವರ್ಗತಿಂ ಪ್ರಾರ್ಥಯನ್ತೇ** ಎಂದು ಹೇಳಿರುವವರಿಂದ ಮಹಾತ್ಮರಾಗಿ ಮೋಕ್ಷಾರ್ಥಿಗಳಾಗಿ ಜ್ಞಾನಯಜ್ಞವನ್ನವಲಂಬಿಸಿ ಇಂತಹ ಕರ್ಮಯಜ್ಞಗಳನ್ನು ಅಙ್ಗವಾಗಿ ಅನುಷ್ಠಿಸಿ ಆ ಯಜ್ಞ ದೇವತೆಗಳನ್ನೇ ಶರೀರವಾಗಿ ಉಳ್ಳ ಪರಮಾತ್ಮನೇ ಪ್ರೀತನಾಗುವನೆಂದು ಭಾವಿಸಿ, ಯಜ್ಞಫಲಗಳನ್ನು ಕೋರದೇ ಇರುತ್ತಾರೋ ಅವರುಗಳ ಮಾಹಾತ್ಮ್ಯೆಯನ್ನು ಓಂದೆ ಹೇಳಿದವರಾಗಿ, ಮುಂದೆ ೨೨ ನೆಯ ಶ್ಲೋಕದಲ್ಲೂ ಪುನಃ ವೈಲಕ್ಷಣ್ಯವನ್ನು ಪ್ರದರ್ಶಿಸುವವರಾಗಿ, ಅವರಿಗೂ ಕಾಮಕಾಮನೆಯುಳ್ಳ ಐಶ್ವರ್ಯಾರ್ಥಿಗಳಿಗೂ ಉಂಟಾಗುವ ಫಲದಲ್ಲಿರುವ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತಾರೆ. ಈ ಐಶ್ವರ್ಯಾರ್ಥಿಗಳಾದರೋ ಋಗ್ವೇದಶಾಸ್ತ್ರ ಜ್ಞಾನದಮೂಲಕ ಕರ್ಮರೂಪ ಯಜ್ಞಗಳನ್ನು ಅನುಷ್ಠಿಸುವ ಪ್ರಕಾರವನ್ನು ತಿಳಿದವರಾಗಿ ಹಾಗೆ ಯಜ್ಞಾನುಷ್ಠಾನವನ್ನು ಮಾಡಿ ನನ್ನನ್ನು ಪ್ರೀತಿಗೊಳಿಸಿ, ಸ್ವರ್ಗಾದಿ ಭೋಗಗಳನ್ನು ಅಪೇಕ್ಷಿಸುತ್ತಾರೆ. ಅವು ಅಲ್ಪಾಸ್ಥಿರಗಳೆಂದು ತಿಳಿಯದೆ ಅವುಗಳನ್ನು ಪ್ರಾರ್ಥಿಸಿ ಅಂತಹ ಭೋಗಗಳನ್ನು ಅನುಭವಿಸಿ ಅವು ಮುಗಿದನಂತರ ಪುನರಾವೃತ್ತಿಯನ್ನು ಹೊಂದುತ್ತಾರೆಂದು ಹೇಳುತ್ತಾರೆ. ಅವರು ಏನು ಮಾಡುತ್ತಾರೆ ಎಂದರೆ, **ತ್ರೈವಿದ್ಯಾಃ**-ಋಗ್ಯಜುಸ್ಸಾಮವೇದಗಳನ್ನು ತಿಳಿದವರಾಗಿ, ಅವುಗಳಲ್ಲಿ ವಿಧಿಸಿರುವ, **ಯಜ್ಞೈಃ** - ಯಜ್ಞಗಳಿಂದ, **ಮಾಂ ಇಷ್ಟ್ವಾ**-ನನ್ನನ್ನು ಯಜ್ಞದಿಂದ ಆರಾಧಿಸಿದವರಾಗಿ, **ಸೋಮಪಾಃ**-ಯಜ್ಞಶಿಷ್ಟವಾದ ಸೋಮಪಾನವನ್ನು ಮಾಡುವವರಾಗಿ, ಅದರಿಂದ **ಪೂತ ಪಾಪಾಃ**-ಸ್ವರ್ಗಪ್ರಾಪ್ತಿಗೆ ಪ್ರತಿಬಂಧಕಗಳಾಗಿದ್ದ ಪಾಪಗಳನ್ನು ಕಳೆದುಕೊಂಡು ಪರಿಶುದ್ಧರಾಗಿ, **ಸ್ವರ್ಗತಿಂಪ್ರಾರ್ಥಯನ್ತೇ** ಸ್ವರ್ಗಲೋಕ ಪ್ರಾಪ್ತಿಯನ್ನು ಪ್ರಾರ್ಥಿಸುತ್ತಾರೆ. **ತೇ** ಅವರು, **ಪುಣ್ಯಂ** - ಪುಣ್ಯರೂಪವಾದ, **ಸುರೇಂದ್ರಲೋಕಂ** - ಇಂದ್ರನ ಲೋಕವಾದ ಸ್ವರ್ಗವನ್ನು, ಅದು ಪುಣ್ಯರೂಪ ಹೇಗೆಂದರೆ ಇಲ್ಲಿನಹಾಗೆ ಅಲ್ಲಿನ ಭೋಗವು ದುಃಖ ಮಿಶ್ರವಾದುದಲ್ಲವು. ಇಲ್ಲಿನ ಸುಖವಾದರೋ, "**ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ, ಸುಖಾನ್ತ ಪ್ರಭವಂ ದುಃಖಂ ದುಃಖಾನ್ತ ಪ್ರಭವಂ ಸುಖಂ, ಸುಖಾತ್ಸಂಜಾಯತೇ ದುಃಖಂ ದುಃಖಾತ್ಸಂಜಾಯತೇ ಸುಖಂ, ಸುಖದುಃಖೇ ಮನುಷ್ಯಾಣಾಂ ಚಕ್ರವತ್ಪರಿವರ್ತತಃ**" ಎಂದು ಹೇಳಿರುವಹಾಗೆ ದುಃಖ ಮಿಶ್ರವಾದುದು. ಹಾಗಲ್ಲವೆಂದು ತಿಳಿಸುವದಕ್ಕಾಗಿ **ಪುಣ್ಯಂ** ಎಂಬ ಪ್ರಯೋಗವು. ಇಂತಹ ಪುಣ್ಯರೂಪವಾದ ಸ್ವರ್ಗಲೋಕವನ್ನು, **ಆಸಾದ್ಯ** - ಹೊಂದಿ, **ದಿವಿ** - ಆ ಸ್ವರ್ಗಲೋಕದ ನಾನಾಭಾಗಗಳಲ್ಲಿ, **ದಿವ್ಯಾನ್** - ಸ್ವರ್ಗಲೋಕಕ್ಕೆ ಉಚಿತಗಳಾದ ಎಂದರೆ ನಮ್ಮ ಲೋಕಗಳಿಗಿಂತ ವಿಲಕ್ಷಣಗಳಾದ, **ದೇವಭೋಗಾನ್** - ದೇವತೆಗಳ ಭೋಗಗಳನ್ನು, **ಅಶ್ನಂತಿ** - ಅನುಭವಿಸುತ್ತಾರೆ. ಅವರಿಂದವರಿಗಾಗುವ ಪ್ರಯೋಜನವನ್ನು ಮುಂದಿನ ಶ್ಲೋಕದಿಂದ ತಿಳಿ

ಸುತ್ತಾರೆ. **ತೇ** - ಅವರು, **ತಂ** - ಅವರ ಪ್ರಾರ್ಥನೆಗೆ ಅನುಗುಣವಾದ, ಅವರಿಗೆ ಇಷ್ಟವಾದ ಅಂತಹ, **ವಿಶಾಲಂ** ವಿಶಾಲವಾದ, ಹೇಗೆ ವಿಶಾಲವೆಂದರೆ ಆ ಸ್ವರ್ಗಲೋಕವಲ್ಲೂ, ೩೩ ಮುಖ್ಯ ದೇವತೆಗಳ ಭೋಗಸ್ಥಾನವೂ, ಇಂದ್ರನಿಗೆ ಭೋಗಸ್ಥಾನವಾದ ಅಮರಾವತೀ ಇವೆಲ್ಲಾ ಒಂದಕ್ಕಿಂತ ಒಂದು ಅತಿಶಯ ಭೋಗಭೂತವಾಗಿ ಇರುವವರಿಂದ **ವಿಶಾಲ**ವೆಂದು ಹೇಳಲ್ಪಟ್ಟಿತು ; ಇವೆಲ್ಲವೂ ಇರುವವರಿಂದ, ವಿಶಾಲವಾದ ಸ್ವರ್ಗಲೋಕವನ್ನು, **ಭುಕ್ತ್ವಾ** - ಅನುಭವಿಸಿ, **ಕ್ಷೀಣೇಪುಣ್ಯೇ** - ಸ್ವರ್ಗಪ್ರಾಪ್ತಿಗೆ ಹೇತುವಾದ ಸುಕೃತವು ಕ್ಷಯಿಸಿ ಹೋದನಂತರ, ಇದರಿಂದ ಸ್ವರ್ಗಲೋಕ ಪ್ರಾಪ್ತಿಯು ಪರಿಚ್ಛಿನ್ನಕಾಲನಿಯತವೆಂದೂ, ಆ ಕಾರಣದಿಂದ ಅಸ್ಥಿರವೆಂದೂ ಹೇಳಲ್ಪಟ್ಟಿತು, **ಮರ್ತ್ಯಲೋಕಂ ವಿಶನ್ತಿ** - ಮನುಷ್ಯರ ಲೋಕವಾದ ಈ ಭೂಲೋಕವನ್ನು ಪ್ರವೇಶಿಸುತ್ತಾರೆ. ಹೀಗೆ ಪುನರಾವೃತ್ತಿ ಲಕ್ಷಣವುಳ್ಳ ಸ್ವರ್ಗಲೋಕ ಪ್ರಾಪ್ತಿಯನ್ನು ಪುನರಾವೃತ್ತಿಯಿಲ್ಲದೆ ಮೋಕ್ಷ ಸುಖಕ್ಕೆ ಹೋಲಿಸಿನರೆ ಅತ್ಯಲ್ಪವಾದುದೆಂಬುದು ವ್ಯಕ್ತವು. ಆದುದರಿಂದ ಅಂತವರುಗಳು ಹೊಂದುವ ಫಲವು ಅಲ್ಪಾಸ್ಥಿರವಾದುದು ಎಂದೂ, ಮೋಕ್ಷಪ್ರಾಪ್ತಿಯು ನಿರತಿಶಯವಾಗಿ ಶಾಶ್ವತವೆಂದೂ, ಈ ಶ್ಲೋಕಗಳಿಂದ ಉಪದೇಶಿಸಲ್ಪಟ್ಟವು. ಸ್ವರ್ಗವು ವಿಶಾಲವಾಗಿ ಅನೇಕ ಭೋಗ ತಾರತಮ್ಯವುಳ್ಳ ಪ್ರದೇಶಗಳುಂಟೆಂಬುದಕ್ಕೆ **"ಸ್ವರ್ಗೋಽಯಂ ದೇವಲೋಕೋಽಯ ಮಿಂದ್ರಸ್ಯೇಯಂ ಪುರೀಭವೇತ್"** ಎಂದು ಆಂಜನೇಯನು ಶ್ಲಾಘಿಸಿರುತ್ತಾನೆ, ಇಲ್ಲಿ ಸ್ವರ್ಗ, ದೇವ ಲೋಕ, ಇಂದ್ರಪುರೀ ಎಂದು ಒಂದಕ್ಕೇ ಹೆಸರು ಎಂದರೆ ಇಂದ್ರಪುರಿಗೆ ವಿಶೇಷಣಗಳಾಗಿ ಮಾಡುವದು ಮಂದವು ಸ್ವರ್ಗವು ತುಂಬಾ ವಿಶಾಲವಾದ ದೇಶ ವಿಶೇಷಣವು. ಅದರಲ್ಲಿ ಉತ್ಕೃಷ್ಟಭೋಗಗಳುಳ್ಳ ೩೩ ದೇವತೆಗಳ ಲೋಕಗಳೂ, ಅದಕ್ಕೂ ಉತ್ಕೃಷ್ಟಭೋಗಗಳುಳ್ಳ ಅಮರಾವತಿಯು, ಹೀಗೆ ಅರ್ಥಮಾಡುವದೇ ಸರಸವು. **ಏವಂ** - ಈ ವಿಧವಾಗಿ, ಎಂದರೆ ಈ ಮೇಲೆ ಉಪಪಾದಿಸಿದ ರೀತಿಯಲ್ಲಿ, **ತ್ರಯೀ ಧರ್ಮಮನುಪ್ರಪನ್ನಾಃ** - ಮೂರು ವೇದಗಳಲ್ಲೂ ಹೇಳಿರುವ ಯಜ್ಞಾದಿ ಧರ್ಮಗಳನ್ನು ಅನುಷ್ಠಿಸುವವರಾಗಿ, **ಕಾಮಕಾಮಾಃ** - ಮೋಕ್ಷೇತರ ಫಲಗಳಾದ ಸ್ವರ್ಗಾದ್ಯುಪಭೋಗಗಳಲ್ಲಿ ಆಶೆಯುಳ್ಳ, ಐಶ್ವರ್ಯಾರ್ಥಿಗಳು, **ಗತಾಗತಂ** - ಹೋಗೋಣ ಬರೋಣ ಎಂದರೆ ಪುನರಾವೃತ್ತಿರೂಪ ಫಲವನ್ನು, **ಲಭನ್ತೇ** - ಹೊಂದುತ್ತಾರೆ. ಕಾಮ್ಯಫಲಗಳನ್ನು ಅಪೇಕ್ಷಿಸುವವರು ನನ್ನನ್ನು ಕುರಿತು ವೇದಪ್ರೋಕ್ತ ಕ್ರಮಗಳಲ್ಲಿ ಯಜ್ಞಗಳನ್ನು ಮಾಡಿ ಸ್ವರ್ಗಾದಿ ಭೋಗಗಳನ್ನು ಅಪೇಕ್ಷಿಸಿದರೆ, ಅವುಗಳನ್ನೂ ಹೊಂದುವರು. ಆದರೆ ಅವು ಅಲ್ಪಾಸ್ಥಿರ ಫಲಗಳಾದುದರಿಂದ ಆ ಭೋಗಗಳು ಮುಗಿದ ನಂತರ ಪುನಃ **ಈ ಲೋಕಕ್ಕೆ** ಬರುತ್ತಾರೆ. ಆದುದರಿಂದ ಐಶ್ವರ್ಯಾರ್ಥಿಯಾದರೆ ಪುನರಾವೃತ್ತಿಯು. ಆದರೆ ಜ್ಞಾನಿಯಾದರೋ ಹೀಗೆ ಕರ್ಮಯಜ್ಞದಿಂದ ನನ್ನನ್ನಾರಾಧಿಸಿದರೂ, ಫಲವನ್ನಪೇಕ್ಷಿಸದ ಜ್ಞಾನಯಜ್ಞದಿಂದ, ಎಂದರೆ ಎಲ್ಲವೂ ನನಗೆ ಶರೀರವೆಂದೂ ಎಲ್ಲಕ್ಕೂ ನಾನು ಆತ್ಮನೆಂದೂ ಭಾವಿಸಿ, ನನ್ನ ಧ್ಯಾನವನ್ನು ಹೊರತು ಇನ್ನು ಯಾವುದನ್ನೂ ಚಿಂತಿಸದೆ, ನನ್ನ ನಾಮ ಸಂಕೀರ್ತನೆ, ಯತನ ನಮಸ್ಕಾರಾದಿಗಳಲ್ಲೇ ಪ್ರವರ್ತನಾಗಿರುವದು, ಆತನಿಗೆ ಪುನರಾವರ್ತಿ ಇಲ್ಲದ ಶಾಶ್ವತ ನಿರತಿಶಯ ಸುಖರೂಪವಾದ ಸರ್ವೋತ್ಕೃಷ್ಟಪದವಿಗೆ ಹೇತುವಾಗುತ್ತದೆ. ಹೀಗೆ ಜ್ಞಾನಿಯ ಪ್ರಾಪ್ಯದ ಶ್ಲಾಘನೆಗಾಗಿ ಐಶ್ವರ್ಯಾರ್ಥಿಯಾದ ಕಾಮಕಾಮಿಗೆ ಉಂಟಾಗುವ ಗತಾಗತರೂಪ ದುರವಸ್ಥೆಯನ್ನು ತೋರಿಸಿದರು. ೨೦ ನೆಯ ಶ್ಲೋಕದಲ್ಲಿ **ಮಾಂ ಇಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ** ಎಂಬುದಕ್ಕೆ ಎರಡು ವಿಧವಾಗಿ ಅರ್ಥಮಾಡಬಹುದು. (೧) ವೇದಗಳಲ್ಲಿ ಹೇಳಿರುವ ಕ್ರಮಗಳನ್ನನುಸರಿಸಿ ಯಜ್ಞಗಳಿಂದ ನನ್ನನ್ನೇ ಆರಾಧಿಸಿ, ನನ್ನನ್ನೇ ಪ್ರಾರ್ಥಿಸುತ್ತಾರೆಂದು ಹೇಳಬಹುದು ; ಅಂತಹ ಐಶ್ವರ್ಯಾರ್ಥಿಗಳಿಗೂ ಗತಾಗತವು ತಪ್ಪದು ಎಂದು ಅರ್ಥಮಾಡಬಹುದು. (೨) ಆ ವೇದಗಳಲ್ಲಿ

**ಭಾ.** **ಋಗ್ಯಜುಸ್ಸಾಮರೂಪಾಸ್ತಿಸ್ರೋ ವಿದ್ಯಾ ಸ್ತ್ರಿವಿದ್ಯಮ್, ಕೇವಲಂ ತ್ರಿವಿದ್ಯ ನಿಷ್ಠಾ ಸ್ತ್ರೈವಿದ್ಯಾಃ, ನತು ತ್ರಯ್ಯಂತ ನಿಷ್ಠಾಃ, ತ್ರಯ್ಯನ್ತ ನಿಷ್ಠಾ ಹಿ ಮಹಾತ್ಮಾನಃ ಪೂರ್ವೋಕ್ತ ಪ್ರಕಾರೇಣ ನಿಖಿಲವೇದ ವೇದ್ಯಮ್ ಮಾಮೇವ ಜ್ಞಾತ್ವಾತಿಮಾತ್ರ ಮದ್ಭಕ್ತಿಕಾರಿತಕೀರ್ತನಾದಿಭಿ ರ್ಜ್ಞಾನಯಜ್ಞೇನ ಚ ಮದೇಕಪ್ರಾಪ್ಯಾ ಮಾಮೇ**

ಹೇಳಿರುವ ಹಾಗೆ ಅನ್ಯದೇವತಾರಾಧನವಾದರೂ, **ಮಾಮಿಷ್ಟ್ವಾ** - ಅವರಿಗೆ ಹಾಗೆ ಭಾವನೆ ಇಲ್ಲದಿದ್ದರೂ ನನ್ನನ್ನೇ ಅವರು ಆರಾಧಿಸಿ ಪ್ರಾರ್ಥಿಸುವದರಿಂದ ಗತಾಗತವು ಪ್ರಾಪ್ತವಾಗುತ್ತ ದೆಂದೂ ಅರ್ಥಮಾಡಬಹುದು. ಶ್ರೀ ಭಾಷ್ಯಕಾರರಿಗೆ ಈ ಅರ್ಥವೇ ಉಪಾದೇಯವು. ಇಲ್ಲಿ ಸ್ವರ್ಗಲೋಕಪ್ರಾಪ್ತಿಯೂ, ಅಲ್ಲಿನ ಭೋಗವೂ, ಅದು ಕಳೆದನಂತರ ಪುನರಾವೃತ್ತಿಯೂ, ಇವೆ ಲ್ಲವೂ ಇತರ ಲೋಕಪ್ರಾಪ್ತಿ ಭೋಗ ಪುನರಾವೃತ್ತಿಗಳಿಗೂ ಉಪಲಕ್ಷಣವಾಗಿ ಇಟ್ಟುಕೊಳ್ಳತ ಕ್ಕದ್ದು. **ಮಾಂ ಇಷ್ಟ್ವಾ ಪ್ರಾರ್ಥಯನ್ತೇ** ಎಂದು ಇರುವಾಗ ಈ ಎರಡನೆಯ ಅರ್ಥವು ಹೇಗೆ ಕೂಡುತ್ತದೆ ಎಂದರೆ ಅವರು ತ್ರೈವಿದ್ಯರಾಗಿ ಪ್ರಾರ್ಥಿಸುವದು ಅನ್ಯ ದೇವತೆಗಳನ್ನು ಕುರಿತದ್ದೇ ಆಗಿ ಅವರೇ ಆರಾಧಿಸಲ್ಪಟ್ಟರೂ, ತಚ್ಛರೀರಕನಾದ ನಾನೇ ಆರಾಧಿಸಲ್ಪಡುವೆನು ಎಂಬುದು ವಾಸ್ತವವಾದ ವಿಷಯವಾದುದರಿಂದ, **ಮಾಂ ಇಷ್ಟ್ವಾ ಪ್ರಾರ್ಥಯನ್ತೇ** ಎಂಬ ಪ್ರಯೋಗವು ಸಮಂಜಸವೇ. ಅವರು ಮಾತ್ರ ಇದನ್ನು ತಿಳಿಯದ ಅಜ್ಞರು, **ಮಾಂ ಇಷ್ಟ್ವಾ** - ವಾಸ್ತವವಾ ಗಿಯೂ ನನ್ನನ್ನೇ ಆರಾಧಿಸದವರಾಗಿ, ಸ್ವರ್ಗ ಗತಿಯನ್ನು ಆ ಅನ್ಯ ದೇವತೆಗಳನ್ನು ಕುರಿತು ಪ್ರಾರ್ಥಿಸುತ್ತಾರೆಂದು ಅರ್ಥಮಾಡುವದರಲ್ಲಿ ಸಾಮಂಜಸ್ಯವೇ ಇರುತ್ತದೆ. ಹಿಂದೆ ಅಧಿದೈವತ ವನ್ನು ಐಶ್ವರ್ಯಕಾಮಿಗಳು ತಿಳಿಯತಕ್ಕದ್ದೆಂದು ಹೇಳಿದುದಕ್ಕನುಗುಣವಾಗಿ ಅನ್ಯದೇವತಾ ಸಂಬಂಧಗಳಾದ ಯಜ್ಞಗಳನ್ನನುಷ್ಠಿಸಿ ತನ್ನಲ್ಲಿ ಫಲಪ್ರಾರ್ಥನೆಯನ್ನು ಮಾಡಿದವರೆಂದು ಅರ್ಥ ಮಾಡಬಹುದು. ಜ್ಞಾನ ಯಜ್ಞರಾದರೋ ಎಂದರೆ ಉಪನಿಷತ್ತುಗಳಲ್ಲಿ ಉಪಪಾದಿತವಾಗಿರುವ ಜ್ಞಾನವುಳ್ಳ ವೇದಾಂತಿಗಳಾದರೋ, ಇಂತಹ ಕಾಮ್ಯ ಫಲಗಳೆಲ್ಲಾ ಅಲ್ಪಾಸ್ಥಿರಗಳಾದವೆಂದು ಚೆನ್ನಾಗಿ ತಿಳಿದು ಅವುಗಳನ್ನು ಕಣ್ಣೆತ್ತಿ ನೋಡದೆ, ಚಾತಕಪಕ್ಷಿಗಳಂತೆ, ಪರಮೈಕಾಂತಿಗಳಾಗಿ ಭಗವತ್ಪ್ರಾಪ್ತಿಯಲ್ಲೇ ಸದಾ ಚಿತ್ತವೃತ್ತಿಯುಳ್ಳವರಾಗಿರುವರು ಎಂಬ ಭಾವವು.

**ಭಾಷ್ಯಾರ್ಥವು:—** ಮೊದಲು **ತ್ರೈವಿದ್ಯಾಃ** ಎಂಬುದಕ್ಕೆ ಭಾಷ್ಯ ಬರೆಯುತ್ತಾರೆ. ಋಗ್ಯಜು ಸ್ಸಾಮರೂಪವಾದ, **ತಿಸ್ರೋ ವಿದ್ಯಾಃ**- ಎಂಬ ಮೂರು ವಿದ್ಯೆಗಳು **ತ್ರಿವಿದ್ಯಂ** ಎಂದೆನಿಸಿಕೊಳ್ಳು ತ್ತದೆ. ಕೇವಲ ತ್ರಿವಿದ್ಯ ನಿಷ್ಠರು ಯಾರೋ, ಅವರು ತ್ರೈವಿದ್ಯರೆನಿಸುವರು ಎಂದರೆ ಮೂರು ವೇದಗಳಲ್ಲಿ ವಿಧಿಸಿರುವ ಯಜ್ಞಾದಿಗಳನ್ನು ಮಾತ್ರ ಅನುಷ್ಠಿಸುವವರು ಎಂಬರ್ಥವು. ಕೇವಲ ತ್ರೈವಿದ್ಯನಿಷ್ಠರು ಎಂದು ವ್ಯಾಖ್ಯಾನಮಾಡಿದುದರಭಿಪ್ರಾಯವನ್ನು ಸೂಚಿಸುತ್ತಾರೆ, **ನತುತ್ರ ಯ್ಯಂತ ನಿಷ್ಠಾಃ** - ಅವರು ಉಪನಿಷತ್ತುಗಳಲ್ಲಿ ಹೇಳಿರುವ ಜ್ಞಾನ ನಿಷ್ಠರಲ್ಲವು. ಹಾಗಾದರೆ ತ್ರಯ್ಯಂತನಿಷ್ಠರು ಯಾರೆಂದರೆ, ಪ್ರಪನ್ನರಾಗಿ ಮಹಾತ್ಮರಾದ ಜ್ಞಾನಿಗಳೆಂದು ಹೇಳುತ್ತಾರೆ. **ತ್ರಯ್ಯಂತನಿಷ್ಠರಾದರೋ ಮಹಾತ್ಮರುಗಳು,** ಪೂರ್ವೋಕ್ತಪ್ರಕಾರದಿಂದ, **ನಿಖಿಲ ವೇದ ವೇದ್ಯಮ್** - ಸಕಲ ವೇದಗಳಿಂದಲೂ ತಿಳಿಯತಕ್ಕವನು, **ಮಾಮೇವ ಜ್ಞಾತ್ವಾ** - ನಾನೇ ಎಂದು ತಿಳಿದವರಾಗಿ, ಯಾರನ್ನು ಆರಾಧಿಸಿದರೂ ತಚ್ಛರೀರಕನಾದ ನಾನೇ ಆರಾಧಿಸಲ್ಪಡುವ ನೆಂಬ ಒಳ್ಳೇ ಜ್ಞಾನವನ್ನು ಹೊಂದಿದವರಾಗಿ, **ಅತಿಮಾತ್ರ ಮದ್ಭಕ್ತಿಕಾರಿತಕೀರ್ತನಾದಿಭಿಃ** - ನನ್ನಲ್ಲಿ ಅವರಿಗಿರುವ ಅತ್ಯರ್ಥ ಭಕ್ತಿಯಿಂದ ಮಾಡಲ್ಪಟ್ಟ ಕೀರ್ತನ, ಯತನ, ನಮ ಸ್ಕಾರಾದಿಗಳಿಂದಲೂ ಮತ್ತು **ಜ್ಞಾನ ಯಜ್ಞೇನ ಚ** - ನನ್ನ ವಿಶ್ವತೋಮುಖತ್ವ ಜ್ಞಾನ

**ಭಾ.** **ಪೋಪಾಸತೇ । ತ್ರೈವಿದ್ಯಾಸ್ತು ವೇದಪ್ರತಿಪಾದ್ಯ ಕೇವಲೇಂದ್ರಾದಿ ಯಾಗ ಶಿಷ್ಟ ಸೋಮಾ ಪಿಬನ್ತಃ ಪೂತಪಾಪಾಃ-ಸ್ವರ್ಗಾದಿ ಪ್ರಾಪ್ತಿ ವಿರೋಧಿಪಾಪಾ ತ್ಪೂತಾಸ್ತೈಃ ಕೇವಲೇಂದ್ರಾದಿ ದೈವತ್ಯತಯಾಽನುಸಂಹಿತೈರ್ಯಜ್ಞೈ ರ್ವಸ್ತುತ ಸ್ತದ್ರೂಪಂಮಾಮಿಷ್ಟ್ವಾ ತಥಾವಸ್ಥಿತಂ ಮಾಮಜಾನಂತಃ, ಸ್ವರ್ಗಗತಿಂ ಪ್ರಾರ್ಥಯನ್ತೇ,**

ಯಜ್ಞಗಳಿಂದಲೂ ಕೂಡ, **ಮದೇಕ ಪ್ರಾಪ್ಯಾಃ** - ನಾನೇ ಪರಮ ಪ್ರಾಪ್ಯನೆಂಬ ಭಾವವುಳ್ಳವರಾಗಿ, **ಮಾಮೇವೋಪಾಸತೇ** - ನನ್ನನ್ನೇ ಉಪಾಸನೆಮಾಡುತ್ತಾರೆ. ಹಿಂದೆ ೧೩ರಲ್ಲಿರುವ **"ಮಹಾತ್ಮಾನಸ್ತು" "ಜ್ಞಾತ್ವಾ" "ಅನನ್ಯ ಮನಸಃ"** ಎಂಬ ಪ್ರಯೋಗಗಳನ್ನು ಮನಸ್ಸಿನಲ್ಲಿಟ್ಟು ಹೀಗೆ ವ್ಯಾಖ್ಯಾನಮಾಡಿರುತ್ತಾರೆ. ಹೀಗೆ ತ್ರೈವಿದ್ಯಾಃ ಎಂಬುದಕ್ಕೆ ಭಾಷ್ಯಬರೆದುದರಿಂದ ಎಲ್ಲಾ ವೇದಭಾಗಗಳೂ ಮೋಕ್ಷಾರ್ಥಿಯಾದ ಪ್ರಪನ್ನನಿಗೆ ಆದರಣೀಯವಲ್ಲವು. ಹಿಂದೆ **"ತ್ರೈಗುಣ್ಯ ವಿಷಯಾವೇದಾಃ ನಿಸ್ತ್ರೈಗುಣ್ಯೋಭವಾರ್ಜುನ"** (ಗೀ. ೨. ೪೫.) ಎಂದು ಹೇಳಲ್ಪಟ್ಟಿರುದು ಅನುಸಂಧೇಯವು. ಬ್ರಹ್ಮಜ್ಞಾನಪ್ರದವಾದ ಉಪನಿಷತ್ತುಗಳೇ ಸಾರಭೂತವಾಗಿ ಅವೇ ಆದರಣೀಯವೆಂಬುದು ಶ್ರೀ ಮದ್ರಹಸ್ಯತ್ರಯಸಾರದ ಸಾರನಿಷ್ಕರ್ಷಾಧಿಕಾರದಲ್ಲಿ ಉಪಪಾದಿತವು. ಆ ಅಧಿಕಾರದ ಪ್ರಥಮಶ್ಲೋಕವನ್ನೂ ಪುರುಷಾರ್ಥಕಾಷ್ಠಾಧಿಕಾರದ ಪ್ರಥಮಶ್ಲೋಕವನ್ನೂ ಪರಾಂಬರಿಸಬಹುದು. **ತ್ರೈವಿದ್ಯಾಸ್ತು** - ವೇದಾಂತಾರ್ಥಗಳಲ್ಲದೆ ಬರೀ ಮೂರು ವೇದಗಳನ್ನು ಮಾತ್ರ ತಿಳಿದವರು, **ವೇದ ಪ್ರತಿಪಾದ್ಯ** - ಆ ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ, ಕೇವಲೇಂದ್ರಾದಿಗಳನ್ನು ಕುರಿತು ಮಾಡಿದ, **ಯಾಗಶಿಷ್ಟಸೋಮಾಪಿಬನ್ತಃ** - ಯಾಗಶೇಷವಾದ ಸೋಮಪಾನಮಾಡುವವರಾಗಿ, ಅದರಿಂದ **ಪೂತ ಪಾಪಾಃ** ಎಂದರೆ **ಸ್ವರ್ಗಾದಿಪ್ರಾಪ್ತಿ ವಿರೋಧಿ ಪಾಪಾತ್ಪೂತಾಃ**-ಸ್ವರ್ಗವೇ ಮೊದಲಾದವುಗಳ ಪ್ರಾಪ್ತಿಗೆ ವಿರೋಧಿಯಾದ ಪಾಪಗಳಿಂದ ಬಿಡುಗಡೆಯನ್ನು ಹೊಂದಿದರಿಂದ ಪರಿಶುದ್ಧರಾಗಿ, ಇದರಿಂದ ಸರ್ವಪಾಪಗಳೂ ತೊಲಗುವದಿಲ್ಲವೆಂಬ ಭಾವವು, ಮೋಕ್ಷಪ್ರಾಪ್ತಿಯಲ್ಲಿ ಮಾತ್ರವೇ ಸರ್ವಪಾಪಗಳ ನಿಶ್ಶೇಷನಾಶವು. **ಕೇವಲೇಂದ್ರಾದಿದೈವತ್ಯತಯಾ** - ಕೇವಲ ಇಂದ್ರಾದಿ ದೇವತಾರಾಧನವೆಂದು, ಈ ಯಜ್ಞಾದಿಗಳನ್ನು ಮೋಕ್ಷಾರ್ಥಿಯು ಅಙ್ಗವಾಗಿ ಅನುಷ್ಠಿಸುವನು, ಅದನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಇಲ್ಲಿ ಕೇವಲ ಶಬ್ದವು, ಇದಕ್ಕಾಗಿಯೇ ಹಿಂದೆ **"ನತುತ್ರಯ್ಯನ್ತನಿಷ್ಠಾಃ** ಎಂಬ ಪ್ರಯೋಗವು, **ಅನುಸಂಹಿತೈಃ** - ಊಹಿಸಲ್ಪಟ್ಟುಮಾಡಿದ, **ತೈಯಜ್ಞೈಃ** - ಆ ಯಜ್ಞಗಳಿಂದ, **ವಸ್ತುತಃ** - ನಿಶ್ಚಯವಾಗಿಯೂ, **ತದ್ರೂಪಂ** - ತಚ್ಛರೀರಕನಾದ, ಇಷ್ಟೆಲ್ಲಾ ಮೂಲದಲ್ಲಿರುವ **ಮಾಂ ಇಷ್ಟ್ವಾ** ಎಂಬ ಪ್ರಯೋಗದಿಂದ ತೋರಿಬರುವ ಅರ್ಥವೆಂದು ವಿವರಿಸಿರುತ್ತಾರೆ, ಆ ಇಂದ್ರಾದಿಗಳನ್ನೇ ಶರೀರವಾಗಿವುಳ್ಳ ನನ್ನನ್ನು ಆರಾಧಿಸಿ, **ತಥಾವಸ್ಥಿತಂ ಮಾಂ ಅಜಾನನ್ತಃ** - ತಚ್ಛರೀರಕನಾಗಿ ನಾನೇ ಆರಾಧಿಸಲ್ಪಡುವನೆಂಬುದನ್ನು ತಿಳಿಯದವರಾಗಿ, **ಸ್ವರ್ಗಗತಿಂ ಪ್ರಾರ್ಥಯಂತೇ** - ಸ್ವರ್ಗಪ್ರಾಪ್ತಿಯನ್ನು ಅಪೇಕ್ಷಿಸುತ್ತಾರೆ. ಯಾರನ್ನು ಪ್ರಾರ್ಥಿಸುತ್ತಾರೆಂದರೆ ಆ ದೇವತೆಗಳನ್ನೇ ಪ್ರಾರ್ಥಿಸುತ್ತಾರೆಂಬರ್ಥವು. ಉತ್ತರಾರ್ಧಕ್ಕೆ ಭಾಷ್ಯವನ್ನು ಬರೆಯುತ್ತಾರೆ **ತೇ** - ಹಾಗೆ ಯಜ್ಞಗಳ ಕರ್ಮನಿಷ್ಠೆಯುಳ್ಳವರು, **ಪುಣ್ಯಂ** ಎಂದರೆ **ದುಃಖಾಸಂಭಿನ್ನಂ** - ಇಲ್ಲಿನ ಹಾಗಲ್ಲದೆ ದುಃಖಮಿಶ್ರವಲ್ಲದ, ಅದರಿಂದ ಪುಣ್ಯಂ ಎಂದು ಹೇಳಲ್ಪಟ್ಟಿತು ; ಇಲ್ಲಿನ ಸುಖಾನುಭವಗಳಾದರೋ ಯಾವಾಗಲೂ ದುಃಖಸಂಬಂಧವುಳ್ಳವುಗಳೇ ಎಂಬ ಭಾವವು ; ಇಂತಹ **ಸುರೇಂದ್ರಲೋಕಂ** - ಇಂದ್ರನ ಲೋಕವನ್ನು, **ಪ್ರಾಪ್ಯ** ಹೊಂದಿ, **ತತ್ರ ತತ್ರ** - ಸ್ವರ್ಗಲೋಕವು **ವಿಶಾಲವೆಂದು** ಹೇಳಿರುವದರಿಂದ ಅಲ್ಲಲ್ಲಿರುವ, ಸ್ವರ್ಗಲೋಕದ

ಭಾ. **ತೇ ಪುಣ್ಯಂ-ದುಃಖಾಸಂಭಿನ್ನಂ ಸುರೇಂದ್ರಲೋಕಂ ಪ್ರಾಪ್ಯ, ತತ್ರ ತತ್ರ ದಿವ್ಯಾನ್ ದೇವಭೋಗಾನ ಶ್ನಂತಿ ; ತೇ ತಂ ವಿಶಾಲಂ ಸ್ವರ್ಗಲೋಕಂ ಭುಕ್ತ್ವಾ ತದನುಭವ ಹೇತುಭೂತೇ ಪುಣ್ಯೇ ಕ್ಷೀಣೇ, ಪುನರಪಿ ಮರ್ತ್ಯಲೋಕಂವಿಶನ್ತಿ । ಏವಂ ತ್ರಯ್ಯನ್ತಃ ಸಿದ್ಧಜ್ಞಾನವಿಧುರಾಃ ಕಾಮ್ಯಸ್ವರ್ಗಾದಿ ಕಾಮಾಃ ಕೇವಲಂ ತ್ರಯಿಾ ಧರ್ಮಮನುಪ್ರಪನ್ನಾಃಗತಾಗತಂ ಲಭನ್ತೇ - ಅಲ್ಪಾಸ್ಥಿರಸ್ವರ್ಗಾದೀನ್ ನನುಭೂಯಪುನಃಪುನಃನಿವರ್ತನ್ತ ಇತ್ಯರ್ಥಃ || ೨೦, ೨೧ ||**

ವಿಚಿತ್ರ ಪ್ರದೇಶಗಳಲ್ಲಿ, **ದಿವ್ಯಾನ್‌ದೇವಭೋಗಾನ್** - ಇಲ್ಲಿನ ಭೋಗಗಳಿಗಿಂತ ವಿಲಕ್ಷಣಗಳಾಗಿ ದೇವತೆಗಳಿಗೆ ಮಾತ್ರವೇ ಸಾಧ್ಯವಾದ, ಆದುದರಿಂದ ವಿಚಿತ್ರಗಳಾಗಿ ಮನೋಹರಗಳಾದ ಭೋಗಗಳನ್ನು, **ಅಶ್ನಂತಿ** - ಅನುಭವಿಸುತ್ತಾರೆ. ಅಂತಹ ಪ್ರಾಪ್ತಿಯು ಅಲ್ಪಾಸ್ಥಿರವಾದುದೆಂದು ಮುಂದೆ ಹೇಳುತ್ತಾರೆ. ಇಲ್ಲಿನ ಸುಖಗಳಿಗಿಂತ ಉತ್ಕೃಷ್ಟವಾದ ಸುಖಗಳು ದೊರೆಯುವದರಿಂದ **ದಿವ್ಯಾನ್** ಎಂಬ ಪ್ರಯೋಗವು-ಇವರಿಂದ ನಶ್ವರತ್ವವಿಲ್ಲವೆಂದು ಊಹಿಸತಕ್ಕದ್ದಲ್ಲವು. **ತಂ ವಿಶಾಲಂ ಸ್ವರ್ಗಲೋಕಂ ಭುಕ್ತ್ವಾ** ಅಂತಹವಿಶಾಲವಾದ ಸ್ವರ್ಗಲೋಕವನ್ನು ಅನುಭವಿಸಿ ಎಂದರೆ ಅಲ್ಲಿನ ಭೋಗಗಳನ್ನೆಲ್ಲಾ ಅನುಭವಿಸಿ, ಇಲ್ಲಿ **ವಿಶಾಲ** ವೆಂದು ಹೇಳಿರುವದರಿಂದ ಈ ಮರ್ತ್ಯಲೋಕಕ್ಕಿಂತಲೂ ತುಂಬಾ ವಿಸ್ತಾರವಾಗಿ ವಿವಿಧಾನೇಕ ಭೋಗಸ್ಥಾನಗಳುಳ್ಳದ್ದು ಸ್ವರ್ಗಲೋಕವೆಂದಾಗಲಿ ಭಾವಿಸಬಹುದು ; ಅಥವಾ ಇಲ್ಲಿನ ಸುಖಗಳಿಗಿಂತಲೂ ವಿಪುಲವಾದ ಸುಖಗಳು ದೊರೆಯುವದರಿಂದ ವಿಶಾಲವು. **ತದನುಭವ ಹೇತುಭೂತ** - ಆ ಉಪಭೋಗಗಳಿಗೆ ಕಾರಣಭೂತವಾದ, **ಪುಣ್ಯೇ** - ಸುಕೃತವು, **ಕ್ಷೀಣೇ** - ಗತಿಸಿಹೋಗಲಾಗಿ, **ಪುನರಪಿ ಮರ್ತ್ಯಲೋಕಂವಿಶನ್ತಿ** - ಪುನಃ ಈ ಮನುಷ್ಯಲೋಕವನ್ನು ಪ್ರವೇಶಿಸುತ್ತಾರೆ. ಅಭಿಪ್ರಾಯವೇನೆಂದರೆ ಆ ಸ್ವರ್ಗಲೋಕಭೋಗಗಳು ಪರಿಮಿತಿಕಾಲವುಳ್ಳವು, ಆ ಅನುಭವವು ಮುಗಿದನಂತರ ಇನ್ನು ಬೇರೇ ಕರ್ಮಶೇಷವಿರುವದರಿಂದ ಅದರ ಭೋಗಕ್ಕಾಗಿ ಈ ಭೂಲೋಕದಲ್ಲಿ ಪುನರ್ಜನ್ಮವನ್ನು ಹೊಂದುವರು ಎಂಬ ಭಾವವು. ಪರಬ್ರಹ್ಮ ಪ್ರಾಪ್ತಿಯನ್ನೂ ತತ್ಸಾಧನವನ್ನೂ ಬೋಧಿಸುವ ತ್ರಯ್ಯಂತವಿದ್ಯಾನಿಷ್ಠರಾದರೋ ಸಾಧನಾನುಷ್ಠಾನದಿಂದ ಕರ್ಮಶೇಷವಿಲ್ಲದಹಾಗೆ ಸರ್ವ ಪಾಪಗಳನ್ನೂ ಕಳೆದುಕೊಳ್ಳುವರು, ಬ್ರಹ್ಮವಿದ್ಯಾನಿಷ್ಠರಲ್ಲದೆ ಬರೀ ತ್ರಯೀಧರ್ಮವನ್ನು ಮಾತ್ರ ತಿಳಿದು ಅನುಷ್ಠಿಸಿ ಕಾಮ್ಯಫಲಾಭಿಲಾಷಿಯಾದವರಿಗೆ ಇಂತಹ ಪುನರಾವೃತ್ತಿಯು ತಪ್ಪಿದಲ್ಲವೆಂದು ಮುಂದೆ ತಿಳಿಸುತ್ತಾರೆ. **ಏವಂ** ಎಂಬುದರ ಅರ್ಥವನ್ನು ಉಪಪಾದಿಸುತ್ತಾರೆ.—**ಏವಂ** ಹೀಗೆ ಎಂದರೆ **ತ್ರಯ್ಯನ್ತಸಿದ್ಧಜ್ಞಾನ ವಿಧುರಾಃ** - ವೇದಾಂತವಾದ ಉಪನಿಷತ್ತುಗಳಲ್ಲಿ ಸ್ಥಾಪಿತವಾದ ಪರಬ್ರಹ್ಮ ಜ್ಞಾನಶೂನ್ಯರಾದ, **ಕಾಮ್ಯ ಸ್ವರ್ಗಾದಿಕಾಮಾಃ** ಇದು ಕಾಮಕಾಮಾಃ ಎಂಬುದರರ್ಥವು, ಅಭಿಲಷಿತಗಳಾದ ಸ್ವರ್ಗವೇ ಮೊದಲಾದವುಗಳಲ್ಲಿ ಅಪೇಕ್ಷೆಯುಳ್ಳವರು, ಇಲ್ಲಿ ಸ್ವರ್ಗೋಪಭೋಗವನ್ನು ಹೇಳಿರುವುದು, ಇತರ ಲೋಕೋಪಭೋಗಗಳಿಗೂ ಉಪಲಕ್ಷಣವೆಂದು ಭಾವಿಸುವದಕ್ಕಾಗಿ ಆದಿಶಬ್ದವು. ಆಗಲಿ ಮೋಕ್ಷವೂ ಫಲವಾಗಿ ಅದೂ ಅಪೇಕ್ಷಿಸಲ್ಪಡುವದರಿಂದ ಅದೂ **ಕಾಮ ಕಾಮಾಃ** ಎಂಬಲ್ಲಿರುವ ಮೊದಲನೆಯ ಕಾಮಶಬ್ದದಲ್ಲಿ ಸೇರಲಿಲ್ಲವೋ ? ಎಂದರೆ ಈ ಶ್ಲೋಕದಲ್ಲಿ ಅದು ಅಭಿಪ್ರೇತವಲ್ಲವೆಂದು ತಿಳಿಸುವದಕ್ಕಾಗಿಯೇ **ಕಾಮ್ಯ ಸ್ವರ್ಗಾದಿ ಕಾಮಾಃ** ಎಂಬ ಭಾಷ್ಯವು. **ಕೇವಲಂ ತ್ರಯಿಾ ಧರ್ಮಮನು ಪ್ರಪನ್ನಾಃ** - ಬರೀವೇದಗಳಲ್ಲಿ ಹೇಳಿರುವ ಧರ್ಮಗಳನ್ನು ಮಾತ್ರ ಅನುಷ್ಠಿಸುವವರು, **ಗತಾಗತಂ ಲಭನ್ತೇ** - ಹೋಗಿಬರುವ ಪುನರಾವೃತ್ತಿಯನ್ನು ಹೊಂದುತ್ತಾರೆ, ಎಂದರೆ **ಅಲ್ಪಾಸ್ಥಿರಸ್ವರ್ಗಾದೀನ್ ಅನುಭೂಯ ಪುನಃಪುನರ್ನಿವರ್ತನ್ತೇ ಇತ್ಯರ್ಥಃ**-ಅಲ್ಪಾಸ್ಥಿರಗಳಾದ

ಸ್ವರ್ಗಾದಿ ಭೋಗಗಳನ್ನನುಭವಿಸಿ ಪುನಃಪುನಃ ಹಿಂತಿರುಗಿ ಇಲ್ಲಿಗೆ ಬರುತ್ತಾರೆ ಎಂಬರ್ಥವು. ಸ್ವರ್ಗಾದಿಗಳಿಗೆ ಹೋಗುವದು ಅಲ್ಲಿಂದ ಇಲ್ಲಿಗೆ ಬರುವದೇ ಗತಾಗತವು. ಘಟೀಯಂತ್ರದ ಹಾಗೆ ಎಂದರೆ ಕಪಿಲೆ ಬಾನಿಯಹಾಗೆ ಮೇಲಕ್ಕೆ ಹತ್ತುವದು, ಕೆಳಕ್ಕೆ ಇಳಿಯುವದು ಎಂಬ ಭಾವವು. ಹೀಗೆ ಸ್ವರ್ಗಪ್ರಾಪ್ತಿಯುಂಟಾದವರಿಗೆ ಭೋಗವು ಪರಿಮಿತ ಕಾಲವಾದುದು ಎಂದು ಶ್ರೀ ವಿಷ್ಣು ಪುರಾಣದಲ್ಲಿ, **"ಸ್ವರ್ಗೇಽಪಿ ಪಾತಭೀತಸ್ಯ ಕ್ಷಯಿಷ್ಣೋರ್ನಾಸ್ತಿ ನಿರ್ವೃತಿಃ"** ಎಂದು (೬. ೫. ೫೦.) ಹೇಳಲ್ಪಟ್ಟಿರುತ್ತದೆ. ಈ ಸ್ವರ್ಗೋಪಭೋಗ ಕಳೆದು ಯಾವಾಗ ಈ ಭೂಮಿಗೆ ಬೀಳುತ್ತೇನೋ ಎಂಬ ಭಯದಿಂದ, ಅಲ್ಲಿಯೂ ಪೂರಾ ಸುಖವಿಲ್ಲವೆಂದು ಹೇಳಿರುತ್ತಾರೆ. ಅಲ್ಲಿಯೂ ಕೂಡ ಸ್ವರ್ಗಾನುಭವಕ್ಕಿಂತ ಬ್ರಹ್ಮಾದಿಗಳ ಉತ್ಕೃಷ್ಟ ಸುಖವಿಲ್ಲವೇ ಎಂಬ ಭಾವ ದಿಂದ ದುಃಖವೂ ಉಂಟು. ಆ ಸುಖವೂ ಅಲ್ಪ ಕಾಲಿಕವೇ ಎಂಬ ಭಾವನೆಯಿಂದ ಅತಿ ದುಃಖವೂ, ಪೂರಾ ಮುಗಿದುಹೋದಾಗ ಅತ್ಯಂತ ದುಃಖವೂ, ಅಲ್ಲಿಯೂ ಉಂಟೆಂದೂ, ಮರ್ತ್ಯ ಲೋಕಕ್ಕೆ ಹೋದನಂತರ ಮುಂದಕ್ಕೆ ಇನ್ನು ಯಾವ ದುರ್ಗತಿಗಳೋ ಎಂಬ ಭಯ ಉಂಟಾದರೆ ಆ ದುಃಖದ ದುಸ್ಸಹತ್ವವನ್ನು ಹೇಳಲೇ ಕೆಲಸವಿಲ್ಲವು. ಈ ೨೦-೨೧ ರಲ್ಲಿ **ತ್ರಯೀಧರ್ಮ ಮನು ಪ್ರಪನ್ನಾಃ ಕಾಮಕಾಮಾಃ** ಎಂದು ಹೇಳಲ್ಪಟ್ಟಿರುವವರು **ಅರ್ಥಾರ್ಥಿ** ಶಬ್ದಗಳಿಂದ ಹೇಳ ಲ್ಪಟ್ಟ ಭಗವದ್ಭಕ್ತರೇ ? ಅಲ್ಲವೇ, ಕೇವಲ ಕಾಮ್ಯ ಫಲಗಳನ್ನು ಕೋರುವ ಅನ್ಯದೇವತಾ ಭಜನ ಮಾಡುವವರೇ ? ಎಂಬ ಶಙ್ಕೆಯಲ್ಲಿ, ಇಲ್ಲಿ ಅರ್ಥಾರ್ಥಿಗಳಾದ ಭಗವದ್ಭಕ್ತರು ಹೇಳಲ್ಪಡ ಲಿಲ್ಲವೆಂದೂ, ಕೇವಲ ಸ್ವರ್ಗಾದಿ ಭೋಗಕ್ಕಾಗಿ ಯಜ್ಞ ಯಾಗಾದಿ ಕರ್ಮಗಳನ್ನು ಫಲಕಾಂಕ್ಷೆ ಯಿಂದ ಮಾಡಿದವರೆಂದೂ, ಊಹಿಸತಕ್ಕದ್ದಾಗಿರುತ್ತದೆ. ಏಕೆಂದರೆ, ಶ್ರೀ ಯತಿವರ್ಯರು ವ್ಯಾಖ್ಯಾನದಲ್ಲಿ **ಕೇವಲ ಇಂದ್ರಾದಿ ದೈವತ್ಯತಯಾನು ಸಂಹಿತೈರ್ಯಜ್ಞೈಃ"** ಎಂದು ಕೇವಲ ಶಬ್ದವಿರುವದರಿಂದ ಪರಮಾತ್ಮ ಭಜನೆ ಇಲ್ಲವೆಂಬುದು ತೋರಿಬರುತ್ತದೆ. ಆದರೆ **ಮಾಂ ಯಜ್ಞೈ ರಿಷ್ಟ್ವಾ** ಎಂದು ಇರುವದರಿಂದಲೂ, ಜ್ಞಾನಿಯ ಮಾಹಾತ್ಮ್ಯವು ಇತರ ಅರ್ಥಾರ್ಥಿಗಳ ಪ್ರಾಪ್ಯಕ್ಕಿಂತ ವಿಲಕ್ಷಣವಾದುದೆಂದು ತಿಳಿಸುವದು ಪ್ರಕರಣಕ್ಕೂ, ಸಙ್ಗತಿಗೂ ಯುಕ್ತವಾದುದ ಲ್ಲವೋ ಎಂದರೆ ಶ್ರೀ ನಿಗಮಾಸ್ತ್ರರವರು ಶ್ರೀ ಯತಿವರ್ಯರ ವ್ಯಾಖ್ಯಾನವನ್ನನುಸರಿಸಿ ಹೇಳಿರುತ್ತಾ ರೇನೆಂದರೆ, **ಸಾಕ್ಷಾದ್ಭಗವದ್ಯಾಜಿ** ಯಾಗಿದ್ದ ಪಕ್ಷದಲ್ಲಿ ಭಗವತ್ಪ್ರಾಪ್ತಿಯು ಸಿದ್ಧವು, ಆದುದ ರಿಂದ ಇವರು ಹಿಂದೆ ಗೀ. ೯-೨೩. ೨೪. ೨೫ ನೆಯ ಶ್ಲೋಕಗಳಲ್ಲಿ ಹೇಳಲ್ಪಡುವ **ಅನ್ಯದೇವತಾ ಭಕ್ತರು** ಎಂದು ಅರ್ಥಮಾಡಿರುತ್ತಾರೆ. ಆದುದರಿಂದ **ಮಾಂ ಯಜ್ಞೈರಿಷ್ಟ್ವಾ** ಎಂಬುದಕ್ಕೆ **ತಥಾವಸ್ಥಿತಂ ಮಾ ಮಜಾನಂತಃ** ಎಂದು ವ್ಯಾಖ್ಯಾನವನ್ನನುಸರಿಸಿ, ಶ್ರೀ ದೇಶಿಕರವರು ಸಹ **ಮಾಂ** ಎಂಬ ಪ್ರಯೋಗವು ಪರಮಪುರುಷನೆನಿಸುವ ಶ್ರೀ ಕೃಷ್ಣಭಗವಾನರವರ ಹೇಳಿ ಕೆಮಾತ್ರವೇ ವಿನಾ, ಆ ಕಾಮಕಾಮರಿಗೆ ಅಂತಹ ಅನುಸಂಧಾನ ಜ್ಞಾನವಿಲ್ಲವೆಂದು ತೋರಿಸು ದಕ್ಕಾಗಿ ಎಂದು ಉಪಪಾದಿಸಿರುತ್ತಾರೆ. ಯಾರನ್ನು ಕುರಿತು ಯಜ್ಞಗಳನ್ನು ಅನುಷ್ಠಿಸಿದರೋ ಅಂತಹ ದೇವತೆಗಳನ್ನೇ ಅವರು **ಪ್ರಾರ್ಥಯನ್ತೇ** ಎಂದು ತೋರಿಬರುತ್ತದೆ. ಈ ಶ್ಲೋಕ ತಾವು ಮುಖ್ಯವಾಗಿ ಗ್ರಹಿಸತಕ್ಕ ವಿಷಯಗಳು ಯಾವುವೆಂದರೆ:—(೧) ವೇದಗಳ ಕರ್ಮಕಾ ಗಳೆಲ್ಲಾ ಅಲ್ಪಾಸ್ಥಿರಗಳಾದ ಸ್ವರ್ಗ ಭೋಗಾದಿಗಳನ್ನು ಹೇಳುವದರಿಂದ ಅಂತಹ ಕಾ ಕರ್ಮಗಳನ್ನೆಲ್ಲಾ ತ್ಯಜಿಸಿ, ಉಪರಿತನ ಭಾಗವಾದ ಜ್ಞಾನಕಾಂಡದಲ್ಲಿ ಉಪನಿಷತ್ತುಗಳಲ್ಲಿ ರುವ ಮಹತ್ತಾದ ಶಾಶ್ವತವಾದ ಮೋಕ್ಷದಾಯಕ ಅನುಷ್ಠಾನಗಳೇ ಗ್ರಾಹ್ಯಗಳು. ಇದ ಕಂಠಶ್ರುತಿಯು ಹೇಳುತ್ತದೆ. **ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾಯೇಸ್ಯ ಹೃದಿಸ್ಥಿತ ಅಥಮರ್ತ್ಯೋಽಮೃತೋ ಭವ ತ್ಯತ್ರ ಬ್ರಹ್ಮ ಸಮಶ್ನುತೇ"** (ಕಠ. ೨. ೩. ೧೪) ಹೃ

**ಭಾ. ಅವ. ಮಹಾತ್ಮಾನಸ್ತು ನಿರತಿಶಯ ಪ್ರಿಯರೂಪ ಮಚ್ಚಿಂತನಂ ಕೃತ್ವಾ, ಮಾಮನವಧಿಕಾತಿಶಯಾನಂದಂ ಪ್ರಾಪ್ಯ ನಪುನರಾವರ್ತನ್ತೇ ಇತಿ, ತೇಷಾಂ ವಿಶೇಷಂ ದರ್ಶಯತಿ—**

**ಮೂ. ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥ ೨೨.**

ದಲ್ಲಿರುವ ಎಲ್ಲಾ ಕಾಮ್ಯಗಳಲ್ಲಿ ಕಾಮವು ಯಾವಾಗ ಬಿಟ್ಟು ಹೋಗುವವೋ ಆಗ ಆತನು ಇಲ್ಲಿಯೂ ಪರಬ್ರಹ್ಮೋಪಾಸನದಿಂದ ನಿರತಿಶಯಾನಂದವನ್ನು ಹೊಂದುವನು, ಎಂಬರ್ಥವು. (೨) ಇಂತಹ ಯಜ್ಞಗಳನ್ನನುಷ್ಠಿಸುವಾಗ ಪರಮಾತ್ಮನೇ ಆರಾಧ್ಯನೆಂದು ಭಾವಿಸಿ, ಅವುಗಳ ಫಲಗಳನ್ನು ಕೋರದೆ, ಉಪಾಯಾನುಷ್ಠಾನವನ್ನು ಮಾಡುವ ಜ್ಞಾನಿಯೇ ಸರ್ವಶ್ರೇಷ್ಠನು ಎಂಬುದು.

**ಭಾಷ್ಯಾವತಾರಿಕೆಯ ಅರ್ಥವು:—**ಹಿಂದಿನವರಿಗಿಂತ ವಿಲಕ್ಷಣರಾದ ಮಹಾತ್ಮರಾದ ಜ್ಞಾನಿಗಳಾದರೋ, ಇಲ್ಲಿಯೂ ಕೂಡ ನಿರತಿಶಯಾನಂದಪ್ರದವಾದ ನನ್ನನ್ನು ಉಪಾಸಿಸುವ ಪ್ರವೃತ್ತಿಯುಳ್ಳವರಾದುದರಿಂದ, ಅವರಿಗೆ ಪುನರಾವೃತ್ತಿಯಿಲ್ಲದೆ ಕೊನೆಗೂ ನಿರತಿಶಯಾನಂದವನ್ನುಂಟುಮಾಡುವ ಸರ್ವಭರವೂ ತನಗೆ ಸೇರಿದುದು ಎಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. **ಮಹಾತ್ಮಾನಸ್ತು** - ಅನನ್ಯ ಮನಸ್ಕರಾಗಿ ಮೋಕ್ಷಾರ್ಥಿಗಳಾಗಿ ನನ್ನನ್ನೇ ಉಪಾಸಿಸುವ ಭಕ್ತಿಯೋಗನಿಷ್ಠರಾದರೋ, ನಿರತಿಶಯ ಪ್ರಿಯರೂಪವಾದ, **ಮಚ್ಚಿಂತನಂ ಕೃತ್ವಾ** - ನನ್ನನ್ನು ಧ್ಯಾನಿಸುವವರಾಗಿ, **ಅನವಧಿಕಾತಿಶಯಾನಂದಂ** - ಅವಧಿಯಿಲ್ಲದ ಅತಿಶಯವುಳ್ಳ, ಆನಂದಸ್ವರೂಪನಾಗಿ ಆನಂದ ಗುಣಕನೂ ಆದ, **ಮಾಂ** ನನ್ನನ್ನು, **ಪ್ರಾಪ್ಯ** - ಹೊಂದಿ, **ನಪುನರಾವರ್ತನ್ತೇ** – ಪುನಃ ಇಲ್ಲಿಗೆ ಹಿಂತಿರುಗಿ ಬಂದು ಜನ್ಮವನ್ನು ಎತ್ತುವದಿಲ್ಲವು, **ಇತಿ** – ಎಂದು, **ತೇಷಾಂ** - ಅಂತಹ ಭಕ್ತಿಯೋಗ ನಿಷ್ಠರ, **ವಿಶೇಷಂ ದರ್ಶಯತಿ** – ವೈಲಕ್ಷಣ್ಯವನ್ನು ಪ್ರದರ್ಶಿಸುತ್ತಾರೆ. ಉಪಾಸನವು ಸುಖರೂಪವಾಗಿಯೂ, ಉಪಾಸ್ಯನು ಆನಂದಮಯನಾಗಿಯೂ, ಫಲವಾದರೋ ಪರಿಪೂರ್ಣ ಬ್ರಹ್ಮಾನುಭವರೂಪ ಆನಂದಮಯವಾಗಿಯೂ, ಇರುವದರಿಂದ, ಭಕ್ತಿಯೋಗನಿಷ್ಠನ ಪ್ರವೃತ್ತಿಯು ವಿಲಕ್ಷಣವಾಗಿ ತನಗೆ **ಅತ್ಯರ್ಥ**ಪ್ರಿಯವಾಗಿರುವದರಿಂದ, ಅಂತವರ ಯೋಗಕ್ಷೇಮದ ಭಾರವು ತನಗೆ ಸೇರಿದುದು ಎಂದು ಹೇಳುತ್ತಾರೆಂಬ ಭಾವವು. ಭಗವಚ್ಚಿಂತನವು **ನಿರತಿಶಯಪ್ರಿಯರೂಪ** ವೆಂದೇ, ಶ್ರುತಿಯು **"ವಿದ್ವಾಂಸ ಏವಮಾನಸೇ ರಮನ್ತೇ"** ಎಂದೂ, **"ತಮೇವಂ ವಿದ್ವಾನ್ ಅಮೃತ ಇಹಭವತಿ"** ಎಂದೂ ಹೇಳಿರುತ್ತದೆ.

**ಮೂಲಕ್ಕೆ ಅರ್ಥವು:—ಅನನ್ಯಾಃ** - ನನ್ನ ಚಿಂತನವಲ್ಲದ ಬೇರೆಯಾವ ಪ್ರಯೋಜನವನ್ನೂ ಅಪೇಕ್ಷಿಸದವರಾಗಿ, **ಮಾಂ ಚಿನ್ತಯನ್ತಃ** - ಯಾವಾಗಲೂ ನನ್ನನ್ನೇ ಧ್ಯಾನಿಸುವವರಾಗಿ, **ಯೇ ಜನಾಃ** - ಯಾವ **ಮಹಾತ್ಮಾನಃ** ಎಂದು ಹಿಂದೆ ೧೩ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಮಹಾತ್ಮರಾದ ಜನರು ಎಂದರೆ ಭಕ್ತಿಯೋಗನಿಷ್ಠರು, **ಪರ್ಯುಪಾಸತೇ** - ಏನೊಂದೂ ನ್ಯೂನತೆಯಿಲ್ಲದ ಮಹತ್ತಾದ ಸ್ವರೂಪ ರೂಪಗಳನ್ನು ಹೊಂದಿ ಪರಿಪೂರ್ಣಗುಣ ವಿಭವೈಶ್ವರಾದಿಗಳುಳ್ಳವನನ್ನಾಗಿ ನನ್ನನ್ನು ಭಾವಿಸಿ ಉಪಾಸಿಸುತ್ತಾರೋ, **ಪರಿ** ಎಂಬುವ ಉಪಸರ್ಗದಿಂದ, ಪರಿಪೂರ್ಣಬ್ರಹ್ಮಾನುಭವಪ್ರಾಪ್ತಿಯುಳ್ಳದ್ದು ಪರ್ಯುಪಾಸನವು ತತ್ಕ್ರತುನ್ಯಾಯಪ್ರಕಾರವಾಗಿ, ಎಂದು ತೋರಿಬರುತ್ತದೆ; **ತೇಷಾಂ** - ಅಂತಹ ಯೋಗನಿಷ್ಠರಾಗಿ, **ನಿತ್ಯಾಭಿಯುಕ್ತಾನಾಂ** - ನನ್ನೊಂದಿಗೆ ನಿತ್ಯಯೋಗವನ್ನು ಅಪೇಕ್ಷಿಸುವವರ, **ಯೋಗಕ್ಷೇಮಂ** - ಇಲ್ಲದಿರುವದರ ಪ್ರಾಪ್ತಿಗೆ **ಯೋಗ ವೆಂದು** ಹೆಸರು, ಅದು ಪರಮ ಪದಪ್ರಾಪ್ತಿಯೂ; ಕ್ಷೇಮವೆಂದರೆ **ಅಂತಹ**

**ಭಾ. ಅನನ್ಯಾಃ - ಅನನ್ಯಪ್ರಯೋಜನಾಃ, ಮಚ್ಚಿನ್ತನೇನ ವಿನಾತ್ಮಧಾರಣಾ ಲಾಭಾ ನ್ಮಚ್ಚಿನ್ತ ನೈಕಪ್ರಯೋಜನಾಃ ಮಾಂ ಚಿನ್ತಯನ್ತೋ ಯೇ ಮಹಾತ್ಮಾನೋ**

ಪ್ರಾಪ್ತಿಗೆ ತೊಂದರೆ ಇಲ್ಲದಹಾಗೆ ಪಾಲನವು ಎಂದರೆ ಅಂತಹ ಪ್ರಾಪ್ತಿ ಉಂಟಾದನಂತರ ಪುನ ರಾವೃತ್ತಿ ಇಲ್ಲದಹಾಗೆ ನೋಡಿಕೊಳ್ಳೋಣವೂ, ಇವೆರಡನ್ನೂ, **ಅಹಂ - ನಾನೇ, ವಹಾಮಿ** - ವಹಿಸುವೆನು, ಅವುಗಳ ಭಾರವು ನನ್ನನ್ನು ಸೇರಿದುದು ಎಂಬ ಭಾವವು. ಇಲ್ಲಿ **ಅನನ್ಯಾಃ** ಇತ್ಯಾದಿಗಳಿಂದ, **"ಸತತಂ ಕೀರ್ತಯಂತೋ ಮಾಂ"** ಎಂಬ ೧೪ ನೆಯ ಶ್ಲೋಕಾಭಿಪ್ರಾಯವೇ ಅನುವಾದ ಮಾಡಲ್ಪಟ್ಟು, ಯಾವಾಗಲೂ ನಾಮ ಸಂಕೀರ್ತನ ಯತನ ನಮಸ್ಕಾರಗಳುಳ್ಳದ್ದಾಗಿ, ಇಂತಹ ಪ್ರವೃತ್ತಿಗಳಿಂದ ಸೇರಿದ ಉಪಾಸನವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಹೀಗೆ ಚಿನ್ತಯಂತಃ ಎಂದು ಹೇಳಿ ಅನಂತರ **ಉಪಾಸತೇ** ಎಂದಿರುವದರಿಂದ. **ಈ ಸತತ ಕೀರ್ತನ** ಯತನ ನಮಸ್ಕಾರಗಳಿಂದ ಕೂಡಿದ ಉಪಾಸನವೇ ಉಪಾಯವೆಂಬುದು **ದ್ಯೋತಿತವು**. ಇಲ್ಲಿ **ಯೇ ಜನಾಃ** ಎಂದು ಜನಶಬ್ದವಿರುವದರಿಂದ ಎಲ್ಲಾ ಜನರೂ ವರ್ಣ ವ್ಯವಸ್ಥೆಯಿಲ್ಲದೆ ಉಪಾಸನೆಯನ್ನು ಮಾಡಬಹುದೆಂದು ಹೇಳಲಿಲ್ಲವು. ಬ್ರಹ್ಮವಿದ್ಯೆಯಾದ ಉಪಾಸನದಲ್ಲಿ ತ್ರೈವರ್ಣಿಕರಿಗೆ ಮಾತ್ರವೇ ಅಧಿಕಾರವೆಂದು ಸೂತ್ರಗಳ ಅಪಶೂದ್ರಾಧಿಕರಣದಲ್ಲಿ ವ್ಯವಸ್ಥಿತವಾಗಿರುವದರಿಂದ ಎಲ್ಲರಿಗೂ ಅಧಿಕಾರವಿಲ್ಲವು. ತ್ರೈವರ್ಣಿಕರ ಸ್ತ್ರೀಯರಿಗೂ ಸಹ **ಅಧಿಕಾರವಿಲ್ಲವು. ಆದುದರಿಂದ ಅಧಿಕಾರವುಳ್ಳ ಯೇ ಜನಾಃ** ಎಂದೇ ಅರ್ಥಮಾಡತಕ್ಕದ್ದಾಗಿರುತ್ತದೆ. ಹಾಗಾದರೆ **ಜನಾಃ** ಎಂಬ ಪ್ರಯೋಗದ ಸಾರ್ಥಕ್ಯವೇನೆಂದರೆ, ಶ್ರೀ ದೇಶಿಕರವರು ಅಂತವರೀಗ ಜನ್ಮ ಸಾರ್ಥಕ್ಯದಿಂದ ಜನರೆಂದು ಹೇಳಿಸಿಕೊಳ್ಳಲು ಯೋಗ್ಯರೆಂದು ಸ್ವಾರಸ್ಯವನ್ನು ತೋರಿಸಿರುತ್ತಾರೆ. ಹಿಂದೆ ಐಶ್ವರ್ಯಾರ್ಥಿಗಳಾದ ಕಾಮ ಕಾಮಿಗಳ ವಿಷಯದಲ್ಲಿ **ಗತಾಗತಂ ಲಭನ್ತೇ** ಎಂದು ಹೇಳಿಬಿಟ್ಟು, ಇಲ್ಲಿ ಜ್ಞಾನಿಯ ವಿಷಯವಲ್ಲಿ ಆತನ **ಯೋಗಕ್ಷೇಮವೇ** ತನಗೆ ಸೇರಿದುದೆಂದು ಹೇಳಿರುವದರಿಂದ, **"ಪ್ರಿಯೋಹಿ ಜ್ಞಾನಿನೋತ್ಯರ್ಥ ಮಹಂ ಸಚ ಮಮ ಪ್ರಿಯಃ"** ಎಂದೂ, **"ಜ್ಞಾನೀತ್ವಾತ್ಮೈವ ಮೇ ಮತಂ"** ಎಂದೂ (ಗೀ. ೭. ೧೭. ೧೮) ಹೇಳಿರುವ ಜ್ಞಾನಿಯ ವಿಷಯದಲ್ಲಿ ಅತ್ಯರ್ಥ ಪ್ರಿಯತ್ವವು ಇಲ್ಲಿಯೂ ಸೂಚಿತವು. **ಅನನ್ಯಾಶ್ಚಿಂತಯನ್ತೋ ಮಾಂ** ಎಂಬುದರಿಂದ ಎರಡು ವಿಷಯಗಳು ಮುಖ್ಯವಾಗಿ ಏರ್ಪಟ್ಟವು—ಅನ್ಯ ಪ್ರಯೋಜನವಿಲ್ಲದವರು ಎಂದು ಹೇಳಿದುದರಿಂದ (೧) ಅಶಾಶ್ವತಗಳಾದ ಐಶ್ವರ್ಯ ಕಾಮಿಗಳಲ್ಲವೆಂದೂ, ಪರಮಾತ್ಮನಲ್ಲಿ ಮನಸ್ಸು ಸಕ್ತವಾಗಬೇಕಾದರೆ **ಅಪರಮಾತ್ಮನಿ** ಪರಮಾತ್ಮ ವ್ಯತಿರಿಕ್ತ ವಿಷಯಗಳಲ್ಲಿ ವಿರಕ್ತಿ ಇರಬೇಕೆಂದೂ, (೨) **ಚಿನ್ತಯನ್ತೋಮಾಂ** ಎಂಬುದರಿಂದ ಅನ್ಯ ದೇವತಾ ಚಿಂತನವು ಸರ್ವಾತ್ಮನಾ ತ್ಯಾಜ್ಯವೆಂದೂ ಹೀಗೆ ಇವೆರಡೂ ಸ್ಥಾಪಿತವು.

**ಭಾಷ್ಯಾರ್ಥವು:**— ಕಾಮಕಾಮಿಗಿಂತ ಭಕ್ತಿಯೋಗನಿಷ್ಠರಾದ ಜ್ಞಾನಿಗಳಿಗಿರುವ ವೈಲಕ್ಷಣ್ಯವು ಹೇಳಲ್ಪಡುತ್ತದೆ. ಐಶ್ವರ್ಯಕಾಮಿಗಳ ಭೋಗಗಳು ಅಲ್ಪಾಸ್ಥಿರಗಳೆಂದು ಹಿಂದೆ ಹೇಳಿ, ಈಗ ಜ್ಞಾನಿಗೆ ಪ್ರಾಪ್ತವಾಗುವ ಫಲವು ನಿರತಿಶಯವಾದುದಾಗಿಯೂ, ಶಾಶ್ವತವಾದುದಾಗಿಯೂ ಇರುತ್ತದೆಂದೂ, ಅಂತಹ ಫಲಪ್ರಾಪ್ತಿಯ ಭಾರವನ್ನೆಲ್ಲಾ ಸರ್ವೇಶ್ವರನೇ ವಹಿಸುತ್ತಾನೆಂದು ಹೇಳಲ್ಪಡುತ್ತದೆ. **ಅನನ್ಯಾಃ** ಎಂದರೆ **ಅನನ್ಯಪ್ರಯೋಜನಾಃ** - ಬೇರೆ ಇನ್ನು ಯಾವ ಪ್ರಯೋಜನವೂ ಇಲ್ಲದವರು, ಹಾಗಾದರೆ ಯಾವ ಒಂದೇ ಪ್ರಯೋಜನವುಳ್ಳವರೆಂದರೆ, **ಮಚ್ಚಿನ್ತನೈಕ ಪ್ರಯೋಜನಾಃ** ಎಂದು ಮುಂದೆ ಹೇಳುತ್ತಾರೆ. ಇದು ಏತಕ್ಕೆಂದರೆ ಇದರಲ್ಲಿ ಸಕ್ತವಾದ ಮನಸ್ಸಿನ ದ್ವಾರಾ ಆತ್ಮವು ಅನುಭವಿಸುವ ಆನಂದವು ನಿರತಿಶಯವಾದುದಾದುದರಿಂದ ; ಹಾಗೆಯೇ ಶ್ರುತಿ ಸ್ಮೃತೀತಿಹಾಸ ಪುರಾಣಗಳೆಲ್ಲಾ ಹೇಳುತ್ತವೆ ; **ಮಚ್ಚಿನ್ತನೇನ ವಿನಾಽತ್ಮ ಧಾರಣಾ**

**ಭಾ. ಜನಾಃ ಪರ್ಯುಪಾಸತೇ-ಸರ್ವಕಲ್ಯಾಣ ಗುಣಾನ್ವಿತಂ ಸರ್ವ ವಿಭೂತಿಯುಕ್ತಂ ಮಾಂ ಪರಿತ ಉಪಾಸತೇ-ಅನ್ಯೂನಮುಪಾಸತೇ-ತೇಷಾಂ ನಿತ್ಯಾಭಿಯುಕ್ತಾನಾಂ-ಮಯಿ ನಿತ್ಯಾಭಿಯೋಗಂ ಕಾಂಕ್ಷಮಾಣಾನಾಂ ಅಹಂ-ಮತ್ಪ್ರಾಪ್ತಿ ಲಕ್ಷಣಂ-ಯೋಗಮ್ ಅಪುನರಾವೃತ್ತಿರೂಪಂ-ಕ್ಷೇಮಂಚ, ವಹಾಮಿ ॥ ೨೨ ॥**

**ಲಾಭಾನ್ಮಚ್ಚಿನ್ತನೈಕ ಪ್ರಯೋಜನಾಃ** - ನನ್ನ ಧ್ಯಾನವಿಲ್ಲದೆ ಅವರಿಗೆ ಆತ್ಮಧಾರಣವೇ ಆಗುವದಿಲ್ಲವೆಂದೆಣಿಸಿ ನನ್ನ ಧ್ಯಾನ ಒಂದನ್ನೇ ಸದಾ ಮಾಡುವವರಾದ, **ಮಾಂ ಚಿನ್ತಯನ್ತಃ**- ಹೀಗೆ ನನ್ನನ್ನೇ ಸದಾ ಧ್ಯಾನಿಸುವವರಾದ, **ಯೇ ಮಹಾತ್ಮಾನೋ ಜನಾಃ** - ಯಾವ ಈ ಮಹಾತ್ಮರಾದ ಭಕ್ತಿಯೋಗನಿಷ್ಠರು, ಇಲ್ಲಿ **ಜನಾಃ** ಎಂಬುದರಿಂದ ಎಲ್ಲಾ ಜನರೂ ಸಾಮಾನ್ಯ ವಾಗಿ ಹೇಳಲ್ಪಡಲಿಲ್ಲವು ; ಭಕ್ತಿಯೋಗನಿಷ್ಠರಾದ ಮಹಾತ್ಮರೇ ಹೇಳಲ್ಪಟ್ಟರೆಂದು ತಿಳಿಸುವದ ಕ್ಕಾಗಿ **ಮಹಾತ್ಮಾನೋಜನಾಃ** ಎಂದು ವ್ಯಾಖ್ಯಾನವು ; ಕೆಲವರು ಇಲ್ಲಿ **ಜನಾಃ** ಎಂಬುದರಿಂದ ಸನ್ಯಾಸಿಗಳೇ ಹೇಳಲ್ಪಟ್ಟರೆಂದು ಭಾವಿಸುವರು. ಇತರಾಶ್ರಮಿಗಳಿಗೂ ಉಪಾಸನದಲ್ಲಿ ಅಧಿಕಾರ ವಿರುವದರಿಂದ ಈ ಅರ್ಥವು ಸಮರ್ಪಕವಲ್ಲವು. ಹೀಗೆ ಅನನ್ಯರಾಗಿಯೂ ತನ್ನನ್ನೇ ಚಿನ್ತನ ಮಾಡುವದರಿಂದಲೇ ಅವರನ್ನು **ಮಹಾತ್ಮಾನಃ** ಎಂದು ಶ್ರೀ ಯತಿವರ್ಯರು ಹೇಳಿರುತ್ತಾರೆ. ಹಿಂದೆ ೧೩ ನೆಯ ಶ್ಲೋಕದಲ್ಲಿ **ಮಹಾತ್ಮಾನಸ್ತು ಮಾಂ ಪಾರ್ಥ** ಎಂದು ಶ್ಲಾಘಿಸಿರುವದನ್ನು ಜ್ಞಾಪಕ ಕೊಡುವದಕ್ಕಾಗಿಯೂ ಹಾಗೆ ವ್ಯಾಖ್ಯಾನವೆಂದು ಭಾವಿಸತಕ್ಕದ್ದು. ಎಂತಹ **ಜನಾಃ** ಎಂದರೆ ಸಾಧಾರಣ ಜನರಲ್ಲವು, ಮಹಾತ್ಮರಾದ ಜನರು ಎಂಬರ್ಥವು. ಇದರಿಂದ ಪರಮಾತ್ಮನ ಉಪಾಸನೆಯು ನಿರತಿಶಯಸುಖರೂಪವಾದುದೆಂಬುದೂ ಸೂಚಿತವು. **ಪರ್ಯುಪಾಸತೇ** - ಪರಿ ಎಂಬ ಉಪಸರ್ಗದಿಂದ ದ್ಯೋತಿತಾರ್ಥವನ್ನು ವಿವರಿಸುತ್ತಾರೆ. **ಸರ್ವಕಲ್ಯಾಣಗುಣ**ಗಳಿಂದ **ಅನ್ವಿತಂ** - ಕೂಡಿಕೊಂಡಿರುವ, **ಸರ್ವವಿಭೂತಿಯುಕ್ತಂ** - ಸಮಸ್ತ ನಿತ್ಯವಿಭೂತಿ ಲೀಲಾವಿಭೂ ತಿಗಳಾದ ನಿಯಾಮ್ಯವರ್ಗದಿಂದ ಸೇರಿರುವ, **ಮಾಂ** - ಹೀಗೆ ಪರಿಪೂರ್ಣನಾಗಿರುವ ನನ್ನನ್ನು, **ಪರಿತ ಉಪಾಸತೇ**-ಎಂದರೆ **ಅನ್ಯೂನಮುಪಾಸತೇ**-ಏನೊಂದೂ ನ್ಯೂನತೆ ಇಲ್ಲದ ಪರಿಪೂರ್ಣ ಬ್ರಹ್ಮಭಾವದಿಂದ ಉಪಾಸಿಸುತ್ತಾರೋ, ಪರಿಪೂರ್ಣನಾದ ಪರಬ್ರಹ್ಮವನ್ನು ಉಪಾಸತೇ ಎಂಬರ್ಥವು; **ಅನ್ಯೂನಂ** ಎಂಬುದಕ್ಕೆ ಶ್ರೀ ದೇಶಿಕರು **ಅಖಂಡಿತ ಗುಣವಿಭೂತಿಯುಕ್ತಂ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ಪರ್ಯುಪಾಸತೇ** ಎಂಬುದರಿಂದ ಶಾಸ್ತ್ರವಿಹಿತವಾದ ಅಪ್ರ ತೀಕಾಲಂಬನವೆಂದು ಹೇಳಿಸಿಕೊಳ್ಳುವ ಪರಿಪೂರ್ಣ ದಿವ್ಯ ಮಙ್ಗಳ ವಿಗ್ರಹವನ್ನೇ ಉಪಾಸಿಸು ತ್ತಾರೇ ವಿನಾ ಮೋಕ್ಷದಾಯಕವಲ್ಲದ ಪ್ರತೀಕಾಲಂಬನವನ್ನು ಮಾಡುವರಲ್ಲವೆಂಬ ಭಾವವೂ ಸೂಚಿತವು. ಅಲ್ಲಿ **ಮಾಂ** ಎಂಬ ಪದಕ್ಕೆ **"ಸರ್ವ ಕಲ್ಯಾಣಗುಣಾನ್ವಿತಂ" "ಸರ್ವ ವಿಭೂತಿ ಯುಕ್ತಂ"** ಎಂಬೀ ಎರಡು ವಿಶೇಷಣಗಳನ್ನು ಕೊಟ್ಟಿರುವದು ಈತನಿಗೆ ಮುಕ್ತದಶೆಯಲ್ಲಿ ಇಂತಹ ಬ್ರಹ್ಮವೇ ಪ್ರಾಪ್ಯವಾದುದರಿಂದ ಅಂತಹ ವಿಶೇಷಣಗಳುಳ್ಳವನೇ ಉಪಾಸ್ಯವೆಂಬ ಭಾವ ವನ್ನು ಸೂಚಿಸುವದಕ್ಕಾಗಿಯೂ, ಪ್ರತೀಕೋಪಾಸನದಿಂದ ಇಂತಹ ಪ್ರಾಪ್ಯದ ಪ್ರಾಪ್ತಿ ಇಲ್ಲ ವೆಂದು ತಿಳಿಸುವದಕ್ಕಾಗಿಯೂ, ಹಾಗೆ ಪ್ರಯೋಗವು. ಅದೂ ಅಲ್ಲದೆ ವಿಶಿಷ್ಟಾದ್ವೈತಿಗಳಿಗೆ ಪ್ರಾಪ್ಯವು ಇಂತಹ ವಿಶೇಷಗಳಿಂದ ಯುಕ್ತನಾಗಿರುವ ಪರಿಪೂರ್ಣ ಪರಬ್ರಹ್ಮವೇ ವಿನಾ, ಅದ್ವೈ ತಿಗಳು ಹೇಳುವಹಾಗೆ ನಿರ್ಗುಣಬ್ರಹ್ಮವು ಪ್ರಾಪ್ಯವಲ್ಲವೆಂದೂ, ಆತನ ವಿಭೂತಿಯು ಸತ್ಯವೇ ವಿನಾ ಮಿಥ್ಯೆಯಲ್ಲವೆಂದು ತಿಳಿಸುವದಕ್ಕಾಗಿಯೂ, ಹಾಗೆ ಪ್ರಯೋಗವು. **ತೇಷಾಂ** - ಅಂತಹ, **ನಿತ್ಯಾಭಿಯುಕ್ತಾನಾಂ** ಎಂದರೆ **ಮಯಿ ನಿತ್ಯಾಭಿಯೋಗಂ ಕಾಂಕ್ಷಮಾಣಾನಾಂ** - ನನ್ನಲ್ಲಿ ಯಾವಾಗಲೂ ಸೇರಿರುವ ಸಾಯುಜ್ಯವನ್ನು ಹೊಂದಬೇಕೆಂದು ಅಪೇಕ್ಷಿಸುವವರಿಗೆ **ಮತ್ಪ್ರಾಪ್ತಿ**

**ಲಕ್ಷಣಂ ಯೋಗಂ** - ನನ್ನ ಪ್ರಾಪ್ತಿರೂಪವಾದ ಯೋಗವನ್ನೂ, **ಅಪುನರಾವೃತ್ತಿರೂಪಂ ಕ್ಷೇಮಂಚ** - ಪುನರಾವೃತ್ತಿ ಇಲ್ಲದಿರುವಂತಹ ಕ್ಷೇಮವನ್ನೂ ಸಹ, **ಅಹಂ ವಹಾಮಿ** - ನಾನೇ ವಹಿಸುತ್ತೇನೆ. ಇಲ್ಲಿ **ವಹಾಮಿ** ಎಂದರೇನೆ ಉತ್ತಮ ಪುರುಷವಾಗಿ, **ಅಹಂ** ಎಂಬುದು ದ್ಯೋತಿತವು; ಹೀಗಿರುವಾಗ ವಹಾಮ್ಯಹಂ ಎಂದು ಅಸ್ಮಚ್ಛಬ್ದವನ್ನೂ ಕೂಡ ಪ್ರಯೋಗಿಸಿರುವದು ಏತಕ್ಕೆಂದರೆ, ಎದೆಯನ್ನು ಮುಟ್ಟಿ ನಾನು ವಹಿಸುತ್ತೇನೆ, ಎಂದು ಹೇಳಿರುವದರಿಂದ, ಇದರಲ್ಲಿ ನಿನಗೆ ಪೂರ್ಣ ವಿಶ್ವಾಸವಿರಬೇಕು, ಏತಕ್ಕೆಂದರೆ ಪರಮೋದಾರತ್ವ, ಸರ್ವ ಶಕ್ತಿತ್ವ, ಕಾರುಣಿಕತ್ವ, ಸೌಲಭ್ಯ ಸೌಶೀಲ್ಯವೇ ಮೊದಲಾದ ಭಕ್ತಾನುಗ್ರಹಕಾರಿಗಳಾದ ಕಲ್ಯಾಣಗುಣಗಳ ಮಹೋದಧಿಯು ನಾನು ಎಂಬುದು ನೀನೇ ಬಲ್ಲೆ ಎಂದು ಹೇಳಿದಂತಾಯಿತು. ನಿಮ್ಮಗಳ ವಿಷಯದಲ್ಲೇ ಎಷ್ಟು ಸಲ ಐಹಿಕ ವಿಷಯಗಳಲ್ಲೂ ಕೂಡ ಅನುಗ್ರಹ ಮಾಡಿರುತ್ತೇನೆಂಬುದನ್ನು ನೀನೇ ಬಲ್ಲೇ ಎಂಬ ತಾತ್ಪರ್ಯಗಳೆಲ್ಲಾ ಈ **ಅಹಂ** ಎಂಬ ಶಬ್ದದಿಂದ ಸ್ಫೂರ್ತಿಗೆ ಬರುತ್ತದೆ. ಜ್ಞಾನಿಯಾಗಿ ಇನ್ನೂ ನನ್ನ ಉಪಾಸಕನಾಗಿ ಇರುವದಕ್ಕೆ ಮುಂಚೆಯೇ ಸಾಧಾರಣ ಭಕ್ತಿಯನ್ನು ತೋರಿದುದಕ್ಕೆ ಅನುಗ್ರಹ ಪರಂಪರೆಗಳನ್ನು ನಾನೇ ವರ್ಷಿಸಿರುವಾಗ, ಇನ್ನೂ ಪೂರಾ ಜ್ಞಾನಿಯಾಗಿ ಸತತ ಧ್ಯಾನಿಸುತ್ತಾ ಉಪಾಸನೆಯನ್ನು ಮಾಡುತ್ತಾ ಇದ್ದರೆ, **ಅಹಂ** - ಇಂತಹ ಕಲ್ಯಾಣ ಮಹೋದಧಿಯಾದ ನಾನು, ನಿನ್ನ ಯೋಗಕ್ಷೇಮವನ್ನು ವಹಿಸದೇ ಇರುವನೇ ಎಂಬ ತಾತ್ಪರ್ಯವು. **ವಹಾಮಿ** ಎಂಬುದರಿಂದ ಅಧಿಕಾರಿಯು ನನ್ನನ್ನು ಆ ವಿಷಯದಲ್ಲಿ ಪ್ರಾರ್ಥಿಸಬೇಕೆಂಬ ಆವಶ್ಯಕತೆಯೂ ಇಲ್ಲವೆಂಬುದೂ ತೋರಿಬರುತ್ತದೆ. **ಬ್ರಾಹ್ಮಣೇಭ್ಯೋವಿಶೇಷತಃ** (ರಾ. ಆರ. ೧೧. ೧೯) ಎಂಬಲ್ಲಿರುವ ಕೈಮುತಿಕ ನ್ಯಾಯವು ಜ್ಞಾನಿಯಲ್ಲಿ ಉಂಟು ಎಂಬುವನ್ನು ಸೂಚಿಸುವದಕ್ಕಾಗಿಯೇ **ವಹಾಮಿ** ಎಂಬ ಪ್ರಯೋಗವು. ಅಂತವನು ತನ್ನನ್ನು ಉಪಾಸಿಸಲು ಬೇಕಾದ ಮನಸ್ಥೈರ್ಯವನ್ನು ಕೊಡುವವನೂ ನಾನೇ; ಆತನ ಬುದ್ಧಿಯು ಸತತ ನನ್ನಲ್ಲೇ ನೆಲಸಿರುವಹಾಗೆ ಮಾಡುವವನೂ ನಾನೇ; ಯೋಗವು ನಿಷ್ಪನ್ನವಾಗಿ ಪರಜ್ಞಾನಾವಸ್ಥೆಯನ್ನುಂಟುಮಾಡುವವನೂ ನಾನೇ; ಅಂತಹ ನಿಷ್ಪತ್ತಿಗೆ ವಿಘ್ನರೂಪಗಳಾದ ಪಾಪಗಳನ್ನೆಲ್ಲಾ ಹೋಗಲಾಡಿಸುವವನೂ ನಾನೇ; ನಿರತಿಶಯಾನಂದರೂಪ ಮೋಕ್ಷಸಾಮ್ರಾಜ್ಯವನ್ನು ಕೊಟ್ಟು ಕಾಪಾಡುವವನೂ ನಾನೇ; ಇಂತಹ ಅನುಗ್ರಹ ಪರಪರೆಗಳನ್ನೆಲ್ಲಾ **ವಹಾಮಿ** ಎಂಬುದರಿಂದ ತೋರಿಬರುತ್ತದೆ. ಐಹಿಕಾದಿಗಳಲ್ಲೂ ತನ್ನನ್ನು ಭಜಿಸುವ ಭಕ್ತನಿಗೆ ಯೋಗಕ್ಷೇಮವನ್ನು ವಹಿಸಿರುವದು ಆ ಆ ಭಕ್ತರಿಗೇ ವೇದ್ಯವು. ಹಾಗಲ್ಲದಿದ್ದರೆ ಶ್ರೀ ತಿರುಮಲೆಯಲ್ಲಿ ಪ್ರತಿದಿನದಲ್ಲೂ ಭಕ್ತರು ಬಂದು ಸೇರಿ ತಮ್ಮ ಕೃತಜ್ಞತಾಸೂಚಕವಾದ ಕೈಙ್ಕರ್ಯಗಳನ್ನು ಅರ್ಪಿಸುವ ಗಲಾಟೆಯು ಇರುತ್ತಿತ್ತೇ? ಅಂಬರೀಷಾದಿ ಇತಿಹಾಸಗಳಲ್ಲೂ ವಿಶೇಷವಾಗಿ ಇದು ವ್ಯಕ್ತವಾದುದರಿಂದ ಇಂತಹ ಅನೇಕ ನಿದರ್ಶನಗಳು ವಾಚಕರ ಸ್ಮೃತಿಪಥಕ್ಕೆ ಬರಬಹುದು. ಜ್ಞಾನಿಗೆ ಪ್ರಾಪ್ಯದ ಪ್ರಾಪ್ತಿಯುಂಟಾದನಂತರ ಪುನರಾವೃತ್ತಿ ಇಲ್ಲವೆಂಬುದು ಹಿಂದೆ ಅ. ೧೫ **"ಮಾಮುಪೇತ್ಯ ಪುನರ್ಜನ್ಮ"** ಹಿಂದೆ ಹೇಳಲ್ಪಟ್ಟಿತು. ಇಂತಹ ವೈಲಕ್ಷಣ್ಯ ಪ್ರದರ್ಶನಾರ್ಥವಾಗಿ ಇಲ್ಲಿ ಪುನಃ ಅನುವಾದಮಾಡಿ ಹೇಳಲ್ಪಟ್ಟಿತು. ಇಲ್ಲಿ **ಯೋಗಕ್ಷೇಮ** ಶಬ್ದಕ್ಕೆ ಮೋಕ್ಷಪ್ರಾಪ್ತಿ ಮತ್ತು ಅಪುನರಾವೃತ್ತಿರೂಪ ವಿಲಕ್ಷಣಾರ್ಥವೆಂದು ಹೇಳಲು ಕಾರಣವೇನೆಂದರೆ ಐಶ್ವರ್ಯಾರ್ಥಿಗಳು ಕಾಮ ಕಾಮರಾದುದರಿಂದ ಅವರಿಗೆ ಬೇಕಾದುದರ ವಿಷಯದಲ್ಲಿ ನಾನು ವಹಿಸತಕ್ಕದ್ದೇನೂ ಇಲ್ಲವು. ಅವರುಗಳು ಅನುಷ್ಠಿಸುವ ಯಜ್ಞಾದಿ ಕರ್ಮಗಳಿಗನುಗುಣವಾಗಿ ಫಲಗಳು ನಿಯತವಾದುವು ಕೊಡಲ್ಪಡುತ್ತವೆ. ಈ ಜ್ಞಾನಿ ಮಾತ್ರ ಅಂತಹ ಯಜ್ಞಗಳನ್ನು ನನ್ನ ಪ್ರೀಣನಾರ್ಥವಾಗಿ ಅನುಷ್ಠಿಸುತ್ತಾ, ಫಲಕಾಮನೆ ಇಲ್ಲದೆ ನನ್ನ ಪ್ರಾಪ್ತಿಯನ್ನು ಅಪೇಕ್ಷಿಸಿ ಉಪಾಸಿಸುವದ

**ಮೂ. ಯೇಽಪ್ಯನ್ಯ ದೇವತಾ ಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯ ವಿಧಿಪೂರ್ವಕಮ್ ॥ ೨೩.**

ರಿಂದ, ಅವನ ಯೋಗಕ್ಷೇಮವನ್ನು ನಾನೇ ವಹಿಸುವೆನು, **ಯೋಗ** ಶಬ್ದಕ್ಕೆ ಮೋಕ್ಷಪ್ರಾಪ್ತಿಯೆಂದೇ, ಕ್ಷೇಮವೆಂದರೆ ಅಂತಹ ಪ್ರಾಪ್ತಿಯಾದ ನಂತರ ಅದರ ರಕ್ಷಣವೆಂದೇ ಅರ್ಥಮಾಡತಕ್ಕದ್ದು ನ್ಯಾಯವು. ಐಹಿಕಾದಿಗಳ ಯೋಗಕ್ಷೇಮವು ಇಲ್ಲಿ ಹೇಳಲ್ಪಡಲಿಲ್ಲವು. ಅದು ಜ್ಞಾನಿಗೆ ಕುಚೇಲರಹಾಗೆ ಬೇಕಿಲ್ಲವು. ಆದರೆ **"ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ"** (ವಿ. ಪು.) ಆ ಕೃಪಾ ಮಹೋದಧಿಯು ಪ್ರಸನ್ನನಾದರೆ ಇಲ್ಲಿಯೂ ಕೂಡ ಅಲಭ್ಯವಾದುದು ಯಾವುದು ತಾನೇ ಇದೆ ಎಂದು ಹೇಳಿದಹಾಗೆ, ತಾನೇ ಕರುಣಿಸಿ ಐಹಿಕಾನು ಕೂಲಗಳನ್ನೂ ಆತನೇ ಒದಗಿಸಿ ಕೊಡುವನು. ಇದಕ್ಕೂ ಕುಚೇಲರನ್ನೇ ನಿದರ್ಶನವಾಗಿಟ್ಟುಕೊಳ್ಳಬಹುದು. ಅರ್ಜುನನೇ ಸಾಕ್ಷಿಯಾಗಿರುವಾಗ ಬೇರೇ ನಿದರ್ಶನವೂ ಬೇಕಿಲ್ಲವು. ಇಲ್ಲಿ **ಅನನ್ಯಾಶ್ಚಿನ್ತಯನ್ತೋಮಾಂ** ಎಂಬಲ್ಲಿರುವ ಅಭಿಪ್ರಾಯವೇ, **ತೇಷಾಂ ನಿತ್ಯಾಭಿಯುಕ್ತಾನಾಂ** ಎಂಬುದರಿಂದ ಹೇಳಲ್ಪಟ್ಟಿತೆಂದು ಅರ್ಥಮಾಡಿದರೆ, ಪುನರುಕ್ತಿದೋಷ ಉಂಟಾಗುತ್ತದೆಯಾದುದರಿಂದ ತನ್ನ ವರಣಾರ್ಥವಾಗಿ, **ನಿತ್ಯಾಭಿಯೋಗಂ ಕಾಂಕ್ಷಮಾಣಾನಾಂ** ಎಂಬ ವ್ಯಾಖ್ಯಾನವು. **ಯೋಗಕ್ಷೇಮ** ಶಬ್ದಗಳಿಗೆ ಮೇಲೆ ಹೇಳಿದ ಅರ್ಥಗಳೇ ಲೌಕಿಕ ಪ್ರಯೋಗಗಳಲ್ಲೂ, ಎಂಬುದನ್ನೂ ಗ್ರಹಿಸತಕ್ಕದ್ದು. ಮೋಕ್ಷವಿಷಯದಲ್ಲಿ ತತ್ಪ್ರಾಪ್ತಿ, ತದ್ರಕ್ಷಣವು ಹೇಗೋ, ಹಾಗೆಯೇ ಲೌಕಿಕದಲ್ಲೂ "ತಮ್ಮ ಯೋಗಕ್ಷೇಮಗಳಿಗೆ ಬರೆಸುವದು" ಎಂಬಲ್ಲೂ ಐಹಿಕೈಶ್ವರ್ಯಾ ರೋಗ್ಯಾದಿಗಳ ಪ್ರಾಪ್ತಿ ಅವುಗಳ ರಕ್ಷಣವೂ ಹೇಳಲ್ಪಟ್ಟವೆಂದೇ ತಿಳಿಯತಕ್ಕದ್ದು. **ಅನನ್ಯಾಃ** ಎಂಬುದರಿಂದ ತಾನು ಪರಮಾತ್ಮನಿಗಿಂತ ಬೇರೆಯಲ್ಲವೆಂಬ ಏಕತ್ವವು ಇಲ್ಲಿ ಹೇಳಲ್ಪಟ್ಟಿತೆಂಬ ಅದ್ವೈತಾರ್ಥವು ಸರ್ವಾತ್ಮನಾ ಸರಿಹೋಗುವದಿಲ್ಲವು. **ಚಿನ್ತಯನ್ತೋಮಾಂ** ಎಂಬ ಪ್ರಯೋಗಕ್ಕೂ, **ಯೋಗಕ್ಷೇಮಂ ವಹಾಮ್ಯಹಂ** ಎಂಬ ಪ್ರಯೋಗಕ್ಕೂ, ಸರಿಹೋಗುವದಿಲ್ಲವು. ಆದುದರಿಂದಲೇ ಶ್ರೀ ಮಚ್ಛಂಕರಾಚಾರ್ಯರೂ ಸಹ **"ಅನನ್ಯಾಃ-ಅಪೃಥಗ್ಭೂತಾಃ ಪರಂ ದೇವಂ ನಾರಾಯಣಂ ಆತ್ಮತ್ವೇನ ಗತಾಃ"** ಎಂದು ಅರ್ಥಮಾಡಿರುತ್ತಾರೆ. ಪ್ರಥಮ ಪುರುಷ ಉತ್ತಮ ಪುರುಷ ಪ್ರಯೋಗಗಳಿಂದ, ವಿಶಿಷ್ಟವಾದ ದ್ವೈತಾರ್ಥವೇ ಸಮಂಜಸವು. **ಯೋಗ** ಶಬ್ದ ಮೂಲಕ ಸ್ವರೂಪೈಕ್ಯವೆಂಬರ್ಥವನ್ನು ಹೇಳಿದರೆ, ಅನಂತರ **ಕ್ಷೇಮ** ವೆಂದರೆ ತದ್ರಕ್ಷಣವೇನಿರುತ್ತದೆ? ಆದುದರಿಂದಲೇ ಶ್ರೀ ಯತಿವರ್ಯರು **ಅನನ್ಯಾಃ** ಎಂಬುದಕ್ಕೆ ಸಙ್ಗತವಾಗಿ **ಅನನ್ಯ ಪ್ರಯೋಜನಾಃ** ಎಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ.

**ಮೂಲಕ್ಕೆ ಅರ್ಥವು:—** ಈ ಶ್ಲೋಕಕ್ಕೂ ಹಿಂದಿನ ಶ್ಲೋಕಕ್ಕೂ ಸಙ್ಗತಿ ಏನು ಎಂಬುವ ಸಂದರ್ಭದಲ್ಲಿ **ತು** ಶಬ್ದವು ಅಂತಹ ಸಙ್ಗತಿಯನ್ನು ಸೂಚಿಸುತ್ತದೆ. ಹಿಂದೆ ಹೇಳಿದುದನ್ನು ವ್ಯಾವರ್ತಿಸಿಯಾಗಲಿ ಅಥವಾ ಹಿಂದೆ ಹೇಳಿದುದರಿಂದುಂಟಾಗಬಹುದಾದ ಶಙ್ಕಾ ನಿವರ್ತ್ಯರ್ಥವಾಗಿಯಾಗಲಿ ಈ ಶ್ಲೋಕವು ಹೇಳಲ್ಪಟ್ಟಿತೆಂದು ಭಾವಿಸಬಹುದು. ಅನನ್ಯ ಪ್ರಯೋಜನರಾಗಿ ಮಚ್ಚಿನ್ತನವೇ ಪರಮಪುರುಷಾರ್ಥವಾಗಿ ಭಾವಿಸುವ ಜ್ಞಾನಿಯಾದ ಭಕ್ತಿಯೋಗ ನಿಷ್ಠರಿಗೆ ಮೋಕ್ಷಪ್ರಾಪ್ತಿಯೂ, ಶಾಶ್ವತವಾಗಿರುವಹಾಗೆ ತದ್ರಕ್ಷಣವೂ ಹೇಳಲ್ಪಟ್ಟಿತು. ಐಶ್ವರ್ಯಾರ್ಥಿಗಳಾದ ಕಾಮಕಾಮಿಗಳು ಸ್ವರ್ಗಾದಿ ಭೋಗ ಪ್ರಾಪ್ತಿಯಲ್ಲಿ ಅಭಿಲಾಷೆಯುಳ್ಳವರಾಗಿ ತತ್ಪ್ರಾಪ್ತಿಗಳಿಗಾಗಿ ವೇದಗಳಲ್ಲಿ ಹೇಳಲ್ಪಟ್ಟಿರುವ ಯಜ್ಞಯಾಗಾದಿಕರ್ಮಗಳನ್ನೆಸಗುವವರ ಯೋಗಕ್ಷೇಮವನ್ನು ಏಕೆ ವಹಿಸುವದಿಲ್ಲವು? ಇಬ್ಬರೂ ನಿನ್ನನ್ನೇ ಆರಾಧಿಸುವದಿಲ್ಲವೋ? ಐಶ್ವರ್ಯಕಾಮಿಗಳು ಇಂದ್ರಾದಿಗಳನ್ನು ಆರಾಧಿಸಿದರೂ, ತಚ್ಛರೀರಕನಾಗಿ ನೀನೇ ಆರಾಧಿಸಲ್ಪಡುತ್ತೀಯೇ; ಜ್ಞಾನಿ

**ಭಾ. ಯೇಽಪ್ಯನ್ಯದೇವತಾ ಭಕ್ತಾ ಕೇವಲ ತ್ರಯೀ ನಿಷ್ಠಾಃ ಶ್ರದ್ಧಯಾನ್ವಿತಾಃ ಇಂದ್ರಾದೀನ್ ಯಜನ್ತೇ, ತೇಽಪಿ ಪೂರ್ವೋಕ್ತೇನ ನ್ಯಾಯೇನ ಸರ್ವಸ್ಯ ಮಚ್ಛರೀರ**

ಗಳು ಅಜ್ಞವಾಗಿ ಅನುಷ್ಠಿಸುವ ಯಜ್ಞಗಳಲ್ಲೂ ನೀನೇ ಆರಾಧಿಸಲ್ಪಡುತ್ತೀಯೇ. ಹೀಗಿದ್ದರೂ ಆ ಐಶ್ವರ್ಯಾರ್ಥಿಗಳ ವಿಷಯದಲ್ಲಿ ನೀನು ಏಕೆ ಯೋಗಕ್ಷೇಮವನ್ನು ವಹಿಸಕೂಡದು ? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ. **ಯೇಽಪಿ** - ಯಾವ ಐಶ್ವರ್ಯಕಾಮಿಗಳಾದರೋ **ಅನ್ಯದೇವತಾ ಭಕ್ತಾಃ** - ಅನ್ಯದೇವತೆಗಳಾದ ಇಂದ್ರಾದಿಗಳನ್ನು ಪ್ರೀತಿಯಿಂದ ಭಜಿಸುವವ ರಾಗಿ, ಶ್ರದ್ಧಾಯಾನ್ವಿತರಾಗಿ, ಇವರಲ್ಲೂ ಶ್ರದ್ಧೆ ಇಲ್ಲವೆಂಬ ಭಾವವಲ್ಲವು, ಇವರೂ ಕೂಡ ತಮ್ಮ ವೃತ್ತಿಗಳಲ್ಲಿ ಶ್ರದ್ಧಾನ್ವಿತರಾಗಿಯೇ, **ಯಜನ್ತೇ** - ಅವರ ಅಭಿಲಾಷೆಗೆ ಅನುಗುಣವಾಗಿ ವೇದ ಗಳಲ್ಲಿ ವಿಧಿಸಿರುವ ಯಜ್ಞಾನುಷ್ಠಾನಗಳನ್ನು ಮಾಡುತ್ತಾರೋ, **ತೇಽಪಿ** - ಅವರೂ ಕೂಡ, **ಹೇ ಕೌನ್ತೇಯ** - ಓ ಅರ್ಜುನನೇ, **ಮಾಮೇವ ಯಜನ್ತಿ** - ನನ್ನನ್ನೇ ಆರಾಧಿಸುತ್ತಾರೆ ; ಅದು ಹೇಗೆಂದರೆ ಇಂದ್ರಾದಿಗಳಲ್ಲಿ ವಿಶ್ವಾಸವಿಟ್ಟು ಅವರನ್ನೇ ಆರಾಧಿಸಿದರೂ, ಆ ಆರಾಧನೆಯು ತಚ್ಛ ರೀರಕನಾದ ನನಗೆ ಸೇರುವದರಿಂದ ನಾನೇ ಆರಾಧಿಸಲ್ಪಡುವೆನು ಎಂಬ ಭಾವವು. ಹೀಗೆ ಇಬ್ಬರೂ ನನ್ನನ್ನೇ ಆರಾಧಿಸಿದರೂ, ಈ ಐಶ್ವರ್ಯಕಾಮಿಗಳ ಆರಾಧನೆಯಲ್ಲಿ ಒಂದು ಅವಗುಣ ವುಂಟು ; ಆ ಕಾರಣದಿಂದ ಅವರುಗಳಿಗೆ ಯೋಗಕ್ಷೇಮರೂಪಫಲವಿಲ್ಲವೆಂದು ಹೇಳುತ್ತಾರೆ. ಏಕೆಂದರೆ ತೇ - ಅವರು ಅಪಿತು **ಅವಿಧಿಪೂರ್ವಕಂಯಜನ್ತಿ** - ಆದರೆ ವೇದಗಳಲ್ಲಿ ವಿಧಿಸಿರುವ ಹಾಗೆ ಆರಾಧಿಸುವದಿಲ್ಲವು, ಅದಕ್ಕೆ ವಿರೋಧವಾಗಿ ಆರಾಧಿಸುತ್ತಾರೆ. ವಿಧಿಸಿರುವದೇನೆಂದರೆ ಇಂದ್ರಾದಿ ದೇವತೆಗಳೆಲ್ಲಾ ನನಗೆ ಶರೀರವು, ಅವರ ಆರಾಧನೆಯಲ್ಲಿ ನಾನೇ ಆರಾಧಿಸಲ್ಪಡುವ ನೆಂಬ ಜ್ಞಾನವಿರತಕ್ಕದ್ದೆಂಬದಾಗಿ. ಅಂತಹ ಜ್ಞಾನವಿಲ್ಲದೆ ಇಂದ್ರಾದಿದೇವತೆಗಳನ್ನೇ ಆರಾಧಿ ಸುವದರಿಂದ ಅವಿಧಿಪೂರ್ವಕವಾದ ಯಜನವಾಯಿತು. ಆದುದರಿಂವಲೇ ಅವರಿಗೆ ಪುನಾರಾ ವೃತ್ತಿಯು. ಜ್ಞಾನಿಗಾದರೋ, ಇಂತಹ ವಿಲಕ್ಷಣ ಜ್ಞಾನಯುಕ್ತನಾಗಿ ಯಜ್ಞಾನುಷ್ಠಾನಮಾಡು ವದರಿಂದ, ಪುನರಾವೃತ್ತಿ ಇಲ್ಲವು. ಅವರ ಯೋಗಕ್ಷೇಮವನ್ನು ನಾನೇ ವಹಿಸಿರುವೆನು. ಈ ಶ್ಲೋಕದಲ್ಲಿ ಅಧಿದೈವತ ಅಧಿಯಜ್ಞ ಶಬ್ದಗಳಿಗಿರುವ ವೈಲಕ್ಷಣ್ಯವು ತಿಳಿಸಲ್ಪಟ್ಟಿತೆಂದು ತಿಳಿಯ ತಕ್ಕದ್ದು. ಯಜ್ಞಾದಿಗಳು ದೇವತೆಗಳನ್ನುದ್ದೇಶಿಸಿ ಮಾಡಲ್ಪಟ್ಟರೂ ಅದರಿಂದ ಆರಾಧ್ಯನು ಶ್ರೀ ಮಹಾವಿಷ್ಣುವೇ ಎಂಬ ಅಧಿಯಜ್ಞಾರ್ಥವು ಗ್ರಹಿಸತಕ್ಕದ್ದೆಂಬುದು ಮುಖ್ಯವಾಗಿ ಉಪದೇಶಿ ಸಲ್ಪಟ್ಟಿತು. ಇಂತಹ ಜ್ಞಾನದಿಂದಲೇ ಸರ್ವಕರ್ಮಾನುಷ್ಠಾನಗಳೂ ನಡೆಯತಕ್ಕದ್ದು ಎಂಬ ಭಾವವು. ಹಿಂದೆ **ಬ್ರಹ್ಮಾರ್ಪಣಂ ಬ್ರಹ್ಮಹವಿಃ** (ಗೀ. ४. ೨೪) ಎಂಬಲ್ಲಿ ಹೇಳಿದುದು ಪ್ರಕರ ಣಾನುಗುಣವಾಗಿ ಅನುವಾದ ಮಾಡಿ ಹೇಳಲ್ಪಟ್ಟಿತು.

**ಭಾಷ್ಯಾರ್ಥವು**:—ಎಲ್ಲಾ ದೇವತೆಗಳೂ ಭಗವಚ್ಛರೀರವೇ, ಕಾಮುಕಾಮಿಗಳೂ ವೇದೋ ಕ್ತಪ್ರಕಾರವೇ ಯಜ್ಞಾದಿಗಳನ್ನು ಅನುಷ್ಠಿಸುತ್ತಾರೆ, ಅದರಿಂದ ನೀನೇ ಆರಾಧಿಸಲ್ಪಡುತ್ತೀ ಎಂದು ನೀನೇ ಉಪದೇಶಿಸಿರುತ್ತೀಯೇ, ಹೀಗಿರುವಾಗ ಜ್ಞಾನಿಯವಿಷಯದಲ್ಲಿ ಯೋಗಕ್ಷೇಮ ವನ್ನು ವಹಿಸಿ ಮೋಕ್ಷವನ್ನು ಕೊಡುವದೇನು ? ಈ ಕಾಮುಕಾಮಿಗಳಿಗೆ ಏಕೆ ಕೊಡದೇ ಇರು ವದು ? ಎಂದು ಆಕ್ಷೇಪ ತಂದರೆ ಅದಕ್ಕೆ ಸಮಾಧಾನವನ್ನು ಹೇಳುವ ಸಂದರ್ಭದಲ್ಲಿ ಎರಡರಲ್ಲೂ ಇರುವ ವ್ಯತ್ಯಾಸವನ್ನು ಪ್ರದರ್ಶಿಸುತ್ತಾರೆ.—**ಯೇಽಪಿ** - ಯಾರಾದರೋ, **ಇಂದ್ರಾದಿದೇವತೆ ಗಳ ಭಕ್ತರಾಗಿ** ಆದುದರಿಂದ **ಕೇವಲತ್ರಯೀನಿಷ್ಠಾಃ**-ಕೇವಲ ವೇದ ವಿಧಿಗಳನ್ನು ಮಾತ್ರವೇ ಅನುಸರಿಸಿ ನಡೆಯುವರಾಗಿ, ಇದು **ಅನ್ಯ ದೇವತಾ ಭಕ್ತಾಃ** ಎಂಬುದಕ್ಕೆ ವ್ಯಾಖ್ಯಾನವು, ಶ್ರದ್ಧೆ ಯಿಂದ ಕೂಡಿದವರಾಗಿ, **ಇಂದ್ರಾದೀನ್ ಯಜನ್ತೇ** - ಇಂದ್ರಾದಿಗಳನ್ನು ಯಜ್ಞಗಳ ಮೂಲಕ

**ಭಾ. ತಯಾ ಮದಾತ್ಮಕತ್ವೇನೇಂದ್ರಾದಿ ಶಬ್ದಾನಾಂಚ ಮದ್ವಾಚಿತ್ವಾದ್ವಸ್ತುತೋ ಮಾ ಮೇವ ಯಜನ್ತೇ; ಅಪಿತ್ವವಿಧಿಪೂರ್ವಕಂ ಯಜನ್ತೇ; ಇಂದ್ರಾದೀನಾಂ ದೇವತಾನಾಂ**

ಆರಾಧಿಸುತ್ತಾರೋ, ಇಲ್ಲಿ **ಬ್ರಹ್ಮರುದ್ರೇಂದ್ರಾದಿ ದೇವತಾಭಕ್ತಾಃ** ಎಂದು ಹೇಳದೆ **ಇಂದ್ರಾದಿದೇವತಾಭಕ್ತಾಃ** ಎಂದು ಏಕೆ ವ್ಯಾಖ್ಯಾನವು ? ಎಂಬುದು ನ್ಯಾಯವಾದ ಪ್ರಶ್ನೆಯು. ಪ್ರತರ್ದನ ವಿದ್ಯೆಯಲ್ಲಿ "ಶಾಸ್ತ್ರ ದೃಷ್ಟ್ಯಾ" (ಶಾ. ಸೂ. ೧. ೧. ೩೧) ಇಂದ್ರೋಪಾಸನವೂ ಮೋಕ್ಷದಾಯಕವೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ಹಾಗೆ ಶಾಸ್ತ್ರದೃಷ್ಟಿ ಇಲ್ಲದ ಅವಿಧಿಪೂರ್ವಕವಾದ ಯಜನವು ಪುನರಾವೃತ್ತಿಗೆ ಹೇತುವಾಗುತ್ತದೆ ಎಂಬ ಅಭಿಪ್ರಾಯವನ್ನು ಸ್ಥಾಪಿಸುವದಕ್ಕಾಗಿ ಉತ್ತರಾರ್ಧದಲ್ಲಿ **ಯಜನ್ತ್ಯ ವಿಧಿಪೂರ್ವಕಂ** ಎಂದು ಹೇಳಲ್ಪಡುವದರಿಂದ ಹಾಗೆ ವ್ಯಾಖ್ಯಾನವು. **ತೇಪಿ** - ಅವರೂ ಕೂಡ, **ಪೂರ್ವೋಕ್ತೇನನ್ಯಾಯೇನ** - ಹಿಂದೆ ಉಪದೇಶಿಸಲ್ಪಟ್ಟ ನ್ಯಾಯದಿಂದ, ಅದು ಯಾವುದೆಂದರೆ ಅವರೇ ತಿಳಿಸುತ್ತಾರೆ. **ಸರ್ವಸ್ಯ ಮಚ್ಛರೀರ ತಯಾ** - ಸಮಸ್ತವೂ ನನಗೆ ಶರೀರವಾಗಿರುವದರಿಂದ, **ಮದಾತ್ಮಕತ್ವೇನ** - ಸಮಸ್ತಕ್ಕೂ ನಾನೇ ಆತ್ಮಾವಾಗಿರುವದರಿಂದಲೂ, **ಇಂದ್ರಾದಿ ಶಬ್ದಾನಾಂಚ ಮದ್ವಾಚಿತ್ವಾತ್** - ಇಂದ್ರಾದಿ ಶಬ್ದಗಳೆಲ್ಲವೂ ತತ್ತಚ್ಛರೀರಕ ಪರಮಾತ್ಮ ಭಾವದಿಂದ ನನ್ನನ್ನೇ ಬೋಧಿಸುವದರಿಂದ, **ವಸ್ತುತಃ** - ವಾಸ್ತವಾಗಿಯೂ, **ಮಾ ಮೇವ ಯಜನ್ತೇ** - ನನ್ನನ್ನೇ ಆರಾಧಿಸುತ್ತಾರೆ. ಇಲ್ಲಿವರೆಗೂ ಶಙ್ಕಾವಿನ ಅನುವಾದವು. ಮುಂದೆ **ಅಪಿತ್ವವಿಧಿಪೂರ್ವಕಂ ಯಜನ್ತೇ"** ಎಂಬ ವಾಕ್ಯವು ಶಙ್ಕಾವಿಗೆ ಸಮಾಧಾನವನ್ನು ಹೇಳುತ್ತದೆ. ರಾಜನ ಕೊರಳಿಗೆ ಹೂವಿನಹಾರವನ್ನು ಹಾಕಿದರೆ, ಅದರಿಂದ ಆತನ ದೇಹವು ಭೂಷಿಸಲ್ಪಟ್ಟರೂ, ಆತನ ಆತ್ಮವೇ ಹೇಗೆ ತೃಪ್ತಿಹೊಂದುತ್ತದೋ ಹಾಗೇ ಇಂದ್ರಾದಿ ಶರೀರಗಳ ಆರಾಧನದಿಂದ, ಅವರುಗಳಿಗೆ ಆತ್ಮಾವಾದ ಪರಮಪುರುಷನೇ ಆರಾಧಿಸಲ್ಪಡುವನು ಎಂಬ ಭಾವವು. ಇಂತಹ ಜ್ಞಾನವಿಲ್ಲದೆ ಅನ್ಯದೇವತಾಭಕ್ತರು ಆರಾಧಿಸುವರೆಂಬ ತಾತ್ಪರ್ಯವು. ಹೀಗೆ ಶರೀರಾತ್ಮಭಾವ ಸಂಬಂಧವು ಇಂದ್ರಾದಿಗಳಿಗೂ ಪರಮಾತ್ಮನಿಗೂ ಇರುವದರಿಂದಲೇ ಇಂದ್ರಾದಿಶಬ್ದಗಳು ಪರಮಾತ್ಮವಾಚಿಕಗಳೇ ಆಗಿ ಪರಮಾತ್ಮನಿಗೆ ಅವುಗಳೊಂದಿಗೆ ಸಾಮಾನಾಧಿಕರಣ್ಯವು ಕೂಡುತ್ತದೆ. **"ಬ್ರಹ್ಮಾನಾರಾಯಣಃ, ಶಿವಶ್ಚ ನಾರಾಯಣಃ, ಶಕ್ರಶ್ಚ ನಾರಾಯಣಃ, ನಾರಾಯಣ ಏವೇದಂಗ್ ಸರ್ವಂ"** ಎಂಬ **"ಸಬ್ರಹ್ಮಾಸಶಿವಸ್ಸೇಂದ್ರಃ ಸೋಕ್ಷರಃ ಪರಮ ಸ್ವರಾಟ್"** ಎಂಬಿವೇ ಮೊದಲಾದ ಸಾಮಾನಾಧಿಕರಣ್ಯವು ಇರುವದರಿಂದ **ಇಂದ್ರಾದಿ ಶಬ್ದಾನಾಂ ಮದ್ವಾಚಿಕತ್ವಾತ್** - ಎಂದು ತಿಳಿಸಲ್ಪಟ್ಟಿತು, ಈ ಅಭಿಪ್ರಾಯಗಳನ್ನೇ ಬಹು ಸ್ವಾರಸ್ಯವಾಗಿ ಶರಣಾಗತಿ ದೀಪಿಕೆಯಲ್ಲಿ ಶ್ರೀ ದೇಶಿಕರವರು **"ವಿಶ್ವಂ ಶುಭಾಶ್ರಯವ ದೀಶ ವಪುಸ್ತ್ವದೀಯಂ ಸರ್ವಾಗಿರ ಸ್ತ್ವಯಿ ಪತಂತಿ ತತೋಸಿ ಸರ್ವಃ । ಸರ್ವೇಚ ವೇದವಿಧಯ ಸ್ತ್ವದ ನುಗ್ರಹಾರ್ಥಾಃ** ಎಂದು ಉಪಪಾದಿಸಿರುತ್ತಾರೆ.—ಓ ಸ್ವಾಮಿಯೇ, ನಿನ್ನ ದಿವ್ಯ ಮಙ್ಗಳ ವಿಗ್ರಹವು ನಿನಗೆ ಹೇಗೆ ಶರೀರವೋ, ಹಾಗೆಯೇ ಈ ವಿಶ್ವವೆಲ್ಲಾ ನಿನಗೆ ಶರೀರವು, ಎಲ್ಲಕ್ಕೂ ನೀನು ಆತ್ಮನು, ಆದುದರಿಂದ ಬ್ರಹ್ಮರುದ್ರೇಂದ್ರಾದಿಗಳನ್ನು ಬೋಧಿಸುವ **ಸರ್ವಾಗಿರಃ** - ಸಮಸ್ತ ಶಬ್ದಗಳೂ, **ತ್ವಯಿ ಪತಂತಿ** ನಿನ್ನನ್ನೇ ಬೋಧಿಸುತ್ತವೆ, ಆದುದರಿಂದಲೇ, **ತತೋಸಿ ಸರ್ವಃ** - ಎಲ್ಲವೂ ನೀನೇ ಎಂಬ ಸಾಮಾನಾಧಿಕರಣ್ಯೋಕ್ತಿಯು ಕೂಡುತ್ತದೆ ಎಂಬ ತಾತ್ಪರ್ಯವು ; ಮತ್ತು **ಸರ್ವೇಚ ವೇದವಿಧಯಃ** - ಕೇವಲ ತ್ರಯಿಯಾಯಿಲ್ಲಿ ಹೇಳಿರುವ ಯಜ್ಞಾನುಷ್ಠಾನ ವಿಧಿಗಳೆಲ್ಲಾ, **ತ್ವದನುಗ್ರ** [illegible]ಡುವದರಿಂದ ನಿನ್ನ ಅನುಗ್ರಹವೇ ಪ್ರಯೋಜನವಾಗಿವುಳ್ಳ [illegible]ಯಕನೂ ನೀನೇ।

**ಭಾ. ಕರ್ಮಸ್ವಾರಾಧ್ಯತಯಾ ಅನ್ವಯಂ, ಯಥಾ ವೇದಾನ್ತ ವಾಕ್ಯಾನಿ "ಚತುರ್ಹೋತಾರೋ ಯತ್ರ ಸಂಪದಂ ಗಚ್ಛಂತಿ ದೇವೈಃ" ಇತ್ಯಾದೀನಿ ವಿದಧಾತಿ, ನತತ್ಪೂರ್ವಕಂ ಯಜನ್ತೇ। ವೇದಾಂತವಾಕ್ಯಜಾತಂ ಹಿ ಪರಮ ಪುರುಷಶರೀರತಯಾ ವಸ್ಥಿತಾನಾಮಿಂದ್ರಾದೀನಾ ಮಾರಾಧ್ಯತ್ವಂ ವಿದಧತಾ ತ್ಮಭೂತಸ್ಯ ಪರಮಪುರುಷಸ್ಯೈವ ಸಾಕ್ಷಾ ದಾರಾಧ್ಯತ್ವಂ ವಿದಧಾತಿ। ಚತುರ್ಹೋತಾರಃ- ಅಗ್ನಿಹೋತ್ರ ದರ್ಶ ಪೂರ್ಣ**

ಎಂದು ಹೇಳಲ್ಪಟ್ಟಿರುತ್ತದೆ. **ಪೂರ್ವೋಕ್ತೇನ ನ್ಯಾಯೇನ** ಎಂಬುದರಿಂದ ಸಮಸ್ತವೂ ತಮಗೆ ಶರೀರವೆಂದು ಹಿಂದೆಯೇ ಎಲ್ಲಿ ಹೇಳಲ್ಪಟ್ಟಿರುತ್ತದೆ ? ಎಂದರೆ **"ಮಯಿಸರ್ವಮಿದಂ ಪ್ರೋತಂ"** (ಗೀ. ೭. ೭.) **"ಮಯಾ ತತ ಮಿದಂ ಸರ್ವಂ"** (ಗೀ. ೯. ೪.) **"ಭೂಮಿರಾಪೋ.... ಮೇಭಿನ್ನಾ ಪ್ರಕೃತಿರಷ್ಟಧಾ। ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ"** (ಗೀ. ೭. ೪-೫) ಇವುಗಳಲ್ಲೆಲ್ಲಾ ಶರೀರಾತ್ಮಭಾವವು ಹೇಳಲ್ಪಟ್ಟಿವೆ. ಮುಂದೆ ಇವರುಗಳು ಯಜ್ಞ ಮೂಲಕ ಆರಾಧಿಸುವದು ಹೇಗೆ **ಅವಿಧಿ ಪೂರ್ವಕ** ವೆಂಬುದನ್ನು ಉಪಪಾದಿಸಿ, ಆ ಶಬ್ದಕ್ಕೆ ಭಾಷ್ಯವನ್ನು ಬರೆಯುತ್ತಾರೆ. **ಅಪಿತು ಅವಿಧಿಪೂರ್ವಕಂ ಯಜನ್ತೇ** - ಅವರ ಆರಾಧನೆಯು ನನ್ನನ್ನೇ ಬಂದು ಸೇರುವದೇನೋ ನಿಶ್ಚಯವು ; ಆದರೆ ಅವರ ಅನುಷ್ಠಾನವು ಅವಿಧಿಪೂರ್ವಕವಾದುದು ; ವೇದಾಂತಗಳಲ್ಲಿ ವಿಧಿಸಿರುವ ಜ್ಞಾನರೀತ್ಯಾ ಅಲ್ಲವೆಂದು ಹೇಳುತ್ತಾರೆ. ಆ ದೇವತೆಗಳಿಗೆಲ್ಲಾ ಶರೀರವಾಗಿ ನಾನು ಇದ್ದೇನೆಂಬ ಜ್ಞಾನದಿಂದ ಆರಾಧನೆಯೇ ವಿಧಿಪೂರ್ವಕ ಆರಾಧನೆಯು ; ಅಂತಹ ವೇದಾಂತ ಜ್ಞಾನವಿಲ್ಲದ ಆರಾಧನೆಯು ಅವಿಧಿಪೂರ್ವಕವಾದ ಆರಾಧನೆಯು ಎಂಬ ಭಾವವು. ಇದನ್ನೇ ಮುಂದೆ ವ್ಯಕ್ತಪಡಿಸುತ್ತಾರೆ. ಅವಿಧಿಪೂರ್ವಕಾರಾಧನೆಯು ಅಲ್ಪಾಸ್ಥಿರ ಫಲದಾಯಕವೆಂದು ಕರ್ಮಕಾಂಡದಲ್ಲಿ ಹೇಳಲ್ಪಟ್ಟಿತು. ವೇದಾಂತವಾದ ಜ್ಞಾನಕಾಂಡದಲ್ಲಿ ಎಲ್ಲಾ ಕರ್ಮಗಳಿಂದಲೂ ಆ ಕರ್ಮ ಮತ್ತು ದೇವತೆ ಮೊದಲಾದವುಗಳಿಗೆಲ್ಲಾ ಆತ್ಮಾವಾದ ಪರಮ ಪುರುಷನೇ ಆರಾಧಿಸಲ್ಪಡುವನು ಎಂಬುದು. ಇದೇ ವಿಧಿಪೂರ್ವಕ ಆರಾಧನೆಯು ಎಂದು ಹೇಳಲ್ಪಟ್ಟಿತು. **ಇದ್ರಾದೀನಾಂ ದೇವತಾನಾಂ ಕರ್ಮಸು ಆರಾಧ್ಯತಯಾ ಅನ್ವಯಂ** - ಇಂದ್ರಾದಿ ದೇವತೆಗಳಿಗೆ ಕರ್ಮಗಳಲ್ಲಿ ಆರಾಧ್ಯರೂಪದಲ್ಲಿ ಸಂಬಂಧವು, **ಯಥಾವೇದಾನ್ತ ವಾಕ್ಯಾನಿ "ಚತುರ್ಹೋತಾರೋ ಯತ್ರಸಂಪದಂ ಗಚ್ಛನ್ತಿದೇವೈಃ"** - ಹೇಗೆ ವೇದಾಂತ ವಾಕ್ಯಗಳು ಅವು ಯಾವುವೆಂದರೆ **"ಚತುರ್ಹೋತಾರೋ"** ಎಂಬ **ಇತ್ಯಾದೀನಿ** - ಇವೇ ಮೊದಲಾದ ಪ್ರಮಾಣಗಳು, **ವಿದಧಾತಿ** - ವಿಧಿಸಲ್ಪಟ್ಟಿರುತ್ತದೋ ಹಾಗೆ, **ನ ತತ್ಪೂರ್ವಕಂ ಯಜನ್ತೇ** - ಅದಕ್ಕನುಸಾರವಾಗಿ ಅವರುಗಳು ಯಜ್ಞಾನುಷ್ಠಾನವನ್ನುಂಟುಮಾಡುವದಿಲ್ಲವು. ವೇದಾಂತಗಳು ಇವೇ ಮೊದಲಾದ ಪ್ರಮಾಣಗಳಲ್ಲಿ ಬೋಧಿಸುವ ಜ್ಞಾನದಿಂದ ಅವರು ಅನುಷ್ಠಿಸುವದಿಲ್ಲವು ಎಂಬ ತಾತ್ಪರ್ಯವು. ಮುಂದೆ ವೇದಾಂತ ವಾಕ್ಯಗಳೆಲ್ಲಾ ಈ ವಿಷಯದಲ್ಲಿ ಏನನ್ನು ಬೋಧಿಸುತ್ತವೆಂಬುದನ್ನೂ ಮೇಲಿನ **ಚತುರ್ಹೋತಾರಂ** ಎಂಬ ಪ್ರಮಾಣದ **ಅರ್ಥ**ವನ್ನೂ ವಿಶದೀಕರಿಸುತ್ತಾರೆ.—**ವೇದಾನ್ತ ವಾಕ್ಯಜಾತಂಹಿ** - ವೇದಾಂತವಾಕ್ಯ ಸಮುದಾಯವೆಲ್ಲಾ ಪರಮ ಪುರುಷನ ಶರೀರವಾಗಿರುವ ಇಂದ್ರಾದಿ ದೇವತೆಗಳಿಗೆ ಆರಾಧ್ಯತ್ವವನ್ನು ಹೇಳುವದರೊಂದಿಗೆ, **ಆತ್ಮಭೂತಸ್ಯ ಪರಮ ಪುರುಷಸ್ಯೇವ** - ಆ ಇಂದ್ರಾದಿ ದೇವತೆಗಳಿಗೆ ಆತ್ಮಾವಾಗಿರುವ ಪರಮ ಪುರುಷನಿಗೇನೆ, **ಸಾಕ್ಷಾ ದಾರಾಧ್ಯತ್ವಂ** - ನಿರುಪಾಧಿಕವಾದ ಮುಖ್ಯ ಆರಾಧ್ಯತೆಯನ್ನು, **ವಿದಧಾತಿ** - ಬೋಧಿಸುತ್ತವೆ. ಆ ಯಜ್ಞಗಳಿಗೆ ಈ ಇಂದ್ರಾದಿ ದೇವತೆಗಳು ಉಪಾಧಿಯಿಂತ ಉದ್ದೇಶ್ಯರಾದರೂ, ಅವರುಗಳಿಗೆ ನಿರುಪಾಧಿಕ ಆತ್ಮಾವಾಗಿರುವ ಪರಮ ಪುರುಷನೇ ಆರಾಧಿಸಲ್ಪಡುವನೆಂದು ಅನೇಕ ವೇದಾಂತ ವಾಕ್ಯಗಳುಪದೇಶಿಸುತ್ತವೆ ಎಂದು ಹೇಳಿ

**ಭಾ. ಮಾಸಾ ದೀನಿ ಕರ್ಮಾಣಿ, ಯತ್ರ - ಪರಮಾತ್ಮಾನ್ಯಾ ತ್ಮತಯಾ ವಸ್ಥಿತೇ ಸತ್ಯೇವ, ತಚ್ಛರೀರ ಭೂತೈ ರಿಂದ್ರಾದಿ ದೇವೈಃ, ಸಂಪದಂ ಗಚ್ಛನ್ತಿ-ಇಂದ್ರಾದಿ ದೇವಾನಾ ಮಾರಾಧನಾ ನ್ಯೇತಾನಿ ಕರ್ಮಾಣೀ ತೀ ಮಾಂ ಸಂಪದಂ ಗಚ್ಛನ್ತೀತ್ಯರ್ಥಃ ||೨೩||**

ದರು. ಮುಂದೆ ಮೇಲಿನ ಪ್ರಮಾಣವಾಕ್ಯದ ಅರ್ಥವು ಕ್ಲಿಷ್ಟವಾದುದರಿಂದ ಎಲ್ಲರೂ ಅರ್ಥ ಮಾಡಿಕೊಳ್ಳಲಾರರಾಗಿ ಅದನ್ನು ತಾವೇ ವ್ಯಕ್ತಪಡಿಸುತ್ತಾರೆ. **ಚತುರ್ಹೋತಾರಃ** - ನಾಲ್ಕು ಹೋತೃಗಳುಳ್ಳ ಕರ್ಮಗಳು ಅವು ಯಾವುವೆಂದರೆ, ಅಗ್ನಿಹೋತ್ರ ದರ್ಶಪೂರ್ಣಮಾಸವೇ ಮೊದಲಾದ ಕರ್ಮಗಳು, **ಯತ್ರ** ಎಂಬುದಕ್ಕೆ ಸತಿಸಪ್ತಮಿ ಅರ್ಥವೆಂದು, **ಪರಮಾತ್ಮನ್ಯಾತ್ಮತಯಾ ವಸ್ಥಿತೇ ಸತ್ಯೇವ** - ಯಾವ ಪರಮಾತ್ಮನನ್ನೇ ಆತ್ಮಾವಾಗಿ ವುಳ್ಳವುಗಳಾಗಿರುವುವೋ ಆ ಕಾರಣದಿಂದ ಎಂಬ ಭಾವವು, **ತಚ್ಛರೀರಭೂತೈ ರಿಂದ್ರಾದಿದೇವೈಃ** - ಆ ಪರಮ ಪುರುಷನಿಗೆ ಶರೀರಭೂತವಾದ ಇಂದ್ರಾದಿ ದೇವತೆಗಳಿಂದ, **ಇಮಾಂಸಂಪದಂ ಗಚ್ಛನ್ತಿ**-ಈ ಕರ್ಮಗಳು ಇಂದ್ರಾದಿ ದೇವತೆಗಳ ಆರಾಧನರೂಪವಾಗಿ, ಇಂತಹ ಶ್ರೇಯಸ್ಸನ್ನು ಹೊಂದಿವೆ ಎಂಬ ತಾತ್ಪರ್ಯವು. **ಯತ್ರ** ಎಂದು **"ಅನ್ತಃ ಪ್ರವಿಷ್ಟ ಶ್ಯಾಸ್ತಾ ಜನಾನಾಂ ಸರ್ವಾತ್ಮಾ"** (ಯಜು. ಆರ. ೩. ೧೧. ೨) ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿ ಹೇಳಿದ ಪದದಲ್ಲಿ ಸರ್ವಾಭಿಪ್ರಾಯವೂ ಅಡಗಿವೆ ಎಂಬ ಭಾವವು. ಆದುದರಿಂದಲೇ ಶ್ರುತಿಯು **ಯತ್ರ** ಆದ ಒಡನೆಯೇ **ಸಂಪದಂ ಗಚ್ಛನ್ತಿ** ಎಂದು ಹೇಳಿ, ಅಪ್ರಧಾನವಾಗಿ **ದೇವೈಃ** ಎಂದು ಕೊನೆಯಲ್ಲಿ ಹೇಳಿರುತ್ತದೆ. ಈ ಅಭಿಪ್ರಾಯಗಳೆಲ್ಲಾ ಪ್ರತರ್ದನಾದಿ ವಿದ್ಯೆಗಳಲ್ಲಿ ಸುವ್ಯಕ್ತವು. ಪ್ರತರ್ದನರು ಇಂದ್ರನನ್ನು ಕುರಿತು ಹೇಳುತ್ತಾರೇನೆಂದರೆ, ಯಾವುದು ಹಿತತಮವೆಂಬುದು ನಿನಗೆ ಚನ್ನಾಗಿ ತಿಳಿಯುವದು, ಪರಮ ಪುರುಷಾರ್ಥಕ್ಕಾಗಿ ಯಾರನ್ನು ಉಪಾಸಿಸಲಿ ಎಂಬುದಾಗಿ ಪ್ರಶ್ನೆಯು; ಇದಕ್ಕೆ ಇಂದ್ರನು **"ಮಾಮುಪಾಸ್ವ"** ನನ್ನನ್ನೇ ಉಪಾಸಿಸು ಎಂದು ಉತ್ತರ ಕೊಟ್ಟನು. ಇದು ಹೇಗೆ ಸಮಂಜಸವು ? ಎಂಬುದು, **ಶಾಸ್ತ್ರದೃಷ್ಟ್ಯಾತು ಉಪದೇಶಃ ವಾಮದೇವವತ್"** ಎಂಬ ಬ್ರಹ್ಮ ಸೂತ್ರದಲ್ಲಿ (೧. ೧. ೦೧) ಉಪಪಾದಿತವು. ಇಂದ್ರನನ್ನು ಉಪಾಸಿಸಿದರೆ ಪ್ರತೀಕಾಲಂಬನವಾಗುವದರಿಂದ ಅಧಿಕಾರಿಗೆ ಮೋಕ್ಷವಿಲ್ಲವು. ಪ್ರತರ್ದನ ವಿದ್ಯೆಯು ಮೋಕ್ಷ ಪ್ರಾಪಕವು. ಹಾಗಾದರೆ ಉಪದೇಶ ಹೇಗೆ ಎಂದರೆ **"ಶಾಸ್ತ್ರದೃಷ್ಟ್ಯಾತು ಉಪದೇಶಃ"** - (ಶಾ.ಸೂ.೧ ೧.೩೧) ವೇದಾಂತ ಶಾಸ್ತ್ರದ ಪ್ರಕಾರ ಸಮಂಜಸವೇ; ಅದು ಬೋಧಿಸುತ್ತದೇನೆಂದರೆ **"ಐದದಾತ್ಮ್ಯಮಿದಂ ಸರ್ವಂ" "ಅನ್ತಃ ಪ್ರವಿಷ್ಟಶ್ಯಾಸ್ತಾ ಜನಾನಾಂ ಸರ್ವಾತ್ಮಾ" "ಯಆತ್ಮನಿ ತಿಷ್ಠ್ಯ" "ಏಷ ಸರ್ವ ಭೂತಾಂತರಾತ್ಮಾ"** ಇತ್ಯಾದ್ಯನೇಕ ಪ್ರಮಾಣಗಳ ರೀತ್ಯಾ ಶಾಸ್ತ್ರದೃಷ್ಟಿಯಿಂದಲೇ **ಮಾಂ ಉಪಾಸ್ವ** ಎಂದು ಇಂದ್ರನು ಹೇಳಿದುದು; ಆದುದರಿಂದ ಇಂದ್ರನಿಗೆ ಆತ್ಮಾವಾದ ಪರಮ ಪುರುಷನೇ ಉಪಾಸ್ಯನೆಂದು ಇಂದ್ರನ ಉಪದೇಶವು ವಾಮದೇವರು ಹಾಗೆಯೇ ಉಪದೇಶಿಸಿರುತ್ತಾರೆಂದು **ವಾಮದೇವವತ್** ಎಂದು ಹೇಳಲ್ಪಟ್ಟಿತು. ಪ್ರತರ್ದನವಿದ್ಯೆಯಲ್ಲಿ ಹೇಳಿರುವದು ಉಪಾಸನವು. ಇಲ್ಲಿ ಹೇಳಿರುವದಾದರೋ ಯಜ್ಞದಿಂದ ಆರಾಧ್ಯನಾಗುವ ವಿಷಯವು. ಅಭಿಪ್ರಾಯವು ಎರಡರಲ್ಲೂ ಒಂದೆಯೇ. ಪ್ರಹ್ಲಾದರೂ ಕೂಡ ಹಾಗೆಯೇ ಉಪದೇಶಿಸಿರುತ್ತಾರೇನೆಂದರೆ-**"ಸರ್ವಗತತ್ವಾದನನ್ತಸ್ಯ ಸಏವಾಹ ಮವಸ್ಥಿತಃ। ಮತ್ತಸ್ಸರ್ವಂ ಅಹಂ ಸರ್ವಂ ಮಯಿ ಸರ್ವಂ ಸನಾತನೇ"** (ವಿ.ಪು.೧.೧೯.೮೫.) ಪ್ರಹ್ಲಾದರೂ, **ನನ್ನಿಂದಲೇ ಸರ್ವವೂ**, ನಾನೇ ಸರ್ವವು, ನನ್ನಲ್ಲೇ ಸರ್ವವೂ, ಎಂದು ಇತರ ರಾಕ್ಷಸ ಕುಮಾರರಿಗೆಲ್ಲಾ ಉಪದೇಶಿಸಿದರು; ಇದು ಹೇಗೆ ಎಂದರೆ ಕಾರಣವನ್ನು ಹೇಳುತ್ತಾರೆ. ಆ ಅನಂತನಾದ ಪರಮಪುರುಷನುಎಲ್ಲವನ್ನೂ ವ್ಯಾಪಿಸಿ ನನ್ನಲ್ಲೂಇರುವದರಿಂದ ನನ್ನಿಂದಲೇ ಸರ್ವವೂ ಎಂದರೆ, ನನ್ನಲ್ಲಿರುವಪರಮಾತ್ಮನಿಂದಲೇ ಸರ್ವವು.

**ಭಾ. ಅವ. ಅತಸ್ತ್ರೈವಿದ್ಯಾ ಇಂದ್ರಾದಿಶರೀರಸ್ಯ ಪರಮ ಪುರುಷಸ್ಯಾರಾಧನಾ ನ್ಯೇತಾನಿ ಕರ್ಮಾಣಿ ; ಆರಾಧ್ಯಶ್ಚ ಸ ಏವೇತಿ ನಜಾನನ್ತಿ ; ತೇಚ ಪರಿಮಿತ ಫಲಭಾಗಿನಶ್ಚ, ಚ್ಯವನ ಸ್ವಭಾವಾಶ್ಚ ಭವನ್ತಿ ; ತದಾಹ—**

ನಾನೇ ಸರ್ವವು ಎಂದರೆ ನನ್ನಲ್ಲಿರುವ ಪರಮಾತ್ಮನೇ ಸರ್ವವು, ನನ್ನಲ್ಲೇ ಸರ್ವವು ಎಂದರೆ ನನಗೆ ಆತ್ಮನಾದ ಪರಮ ಪುರುಷನಲ್ಲೇ ಸರ್ವವೂ ಅಡಗಿವೆ ಎಂಬ ಭಾವವನ್ನು ಆ ಪರಮಭಾಗವತ ರಾದ ಬಾಲರು ಉಪದೇಶಿಸಿದರು. ಇಂತಹ ಭಾವನೆಯು **ಶಾಸ್ತ್ರದೃಷ್ಟ್ಯಾ** ಎಂದರೆ ವಿಧಿಪೂರ್ವಕ ವಾದುದು. ಶಾಸ್ತ್ರಪೂರ್ವಕವಾದುದು ಇಂತಹ ಭಾವನೆಯಿಲ್ಲದ, **ಕಾಮಕಾಮರ** ಅನ್ಯದೇವತಾ ಯಜನವು ಅಶಾಸ್ತ್ರದೃಷ್ಟಿಯಿಂದಯುಂಟಾದುದು, ಆದುದರಿಂದಲೇ **ಅವಿಧಿ ಪೂರ್ವಕಮ್** ಎಂದು ಹೇಳಲ್ಪಟ್ಟಿತು. ಈ ಬ್ರಹ್ಮಸೂತ್ರದಲ್ಲಿ ತೋರುವ ಅಭಿಪ್ರಾಯವನ್ನೇ ಮನಸ್ಸಿನಲ್ಲಿಟ್ಟು ಈ ಶ್ಲೋಕದ ಲ್ಲಿ **ಅವಿಧಿ ಪೂರ್ವಕಂ** ಎಂಬ ಪ್ರಯೋಗವು. ಈ ಎರಡೂ ಒಬ್ಬ ಮಹರ್ಷಿಯ ಉಕ್ತಿಗಳೇ ಕಾಮಕಾಮಿಗಳ ಅನ್ಯದೇವತೆಯ ಭಜನವು ವಿಧಿಪೂರ್ವಕವಾಗಿ ಇಲ್ಲದೆ, ಎಂದರೆ ಈ ಅಂತರ್ಯಾ ಮಿತ್ವ ಭಾವನೆಯಿಲ್ಲದೆ, ನಡೆಯುವದರಿಂದ ಅವಿಧಿಪೂರ್ವಕವಾದುದರಿಂದ ಪುನರಾವೃತ್ತಿಯು ಳ್ಳದು. ಅದೇ ವಿಧಿಪೂರ್ವಕವಾದರೆ ಮೋಕ್ಷದಾಯಕವೇ ಎಂಬ ತಾತ್ಪರ್ಯವು. ಈ ಅಭಿಪ್ರಾಯ ವೇ ಮುಂದಿನ ಶ್ಲೋಕದಲ್ಲಿ ವ್ಯಕ್ತಪಡಿಸಲ್ಪಡುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು** :—**ಅತಃ** ಹೀಗೆ ಐಶ್ವರ್ಯಕಾಮಿಗಳು ಅವಿಧಿಪೂರ್ವಕ ವಾಗಿ ನನ್ನನ್ನು ಆರಾಧಿಸುವದರಿಂದ, **ತ್ರೈವಿದ್ಯಾಃ** - ವೇದಾನ್ತಜ್ಞಾನಶೂನ್ಯರಾಗಿ ವೇದವಿಧಿ ಗಳನ್ನು ಮಾತ್ರ ಅನುಷ್ಠಿಸುವವರು, **ಏತಾನಿ ಕರ್ಮಾಣಿ** - ಈ ಯಜ್ಞಯಾಗಾದಿಕರ್ಮಗಳು, ಇಂದ್ರಾದಿಗಳನ್ನೇ ಶರೀರವಾಗಿವುಳ್ಳ ಪರಮಪುರುಷನ ಆರಾಧನಾ ರೂಪಗಳೆಂದು, ಈ ಯಜ್ಞ ಯಾಗಾದಿಗಳಿಂದ, **ಆರಾಧ್ಯಶ್ಚ** - ಆರಾಧಿಸಲ್ಪಟ್ಟವನೂ, **ಸಏವೇತಿ** - ಆ ಪರಮ ಪುರುಷನೇ ಎಂದೂ, **ನಜಾನನ್ತಿ** ಹೀಗೆ ಇವೆರಡನ್ನೂ ತಿಳಿಯಲಾರರು. ಏತಕ್ಕೆಂದರೆ ಅವರಿಗೆ ಅಧ್ಯಾತ್ಮ ಶಾಸ್ತ್ರಜ್ಞಾನವು ಎಂದರೆ ವೇದಾಂತಜ್ಞಾನವು ಇಲ್ಲವೆಂಬ ಭಾವವು. ಪ್ರತರ್ದನ ವಿದ್ಯೆಯಜ್ಞಾನವು ಅವರಿಗೆ ಇಲ್ಲವು. **ತೇಚ** - ಐಶ್ವರ್ಯಾದಿ ಭೋಗಗಳನ್ನಪೇಕ್ಷಿಸುವವರಾದರೋ, **ಪರಿಮಿತ ಫಲಭಾಗಿನಶ್ಚ** - ಪರಿಮಿತಿಗಳಾದ ಫಲಗಳನ್ನು ಅನುಭವಿಸುವವರು, ದೇಶಕಾಲ ಸ್ವರೂಪದಿಂದ ಪರಿಮಿತಗಳಾದ ಫಲಗಳನ್ನು ಹೊಂದುವವರು. ಆದುದರಿಂದ **ಚ್ಯವನಸ್ವಭಾವಾಶ್ಚ ಭವನ್ತಿ** - ಐಶ್ವರ್ಯಕಾಮಿಗಳಿಗೆ ಪುನರಾವೃತ್ತಿಯುಂಟಾಗುವದರಿಂದ ಜಾರಿಬೀಳುವ ಸ್ವಭಾವವುಳ್ಳವರಾಗು ವರು. **ತದಾಹ** - ಅದನ್ನೇ ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. ಯಜ್ಞಗಳಲ್ಲಿ ಬ್ರಹ್ಮ ರುದ್ರಾದಿಗಳಿಗೂ ಹವಿಸ್ಸಮರ್ಪಣೆ ಇದ್ದರೂ, **ಬ್ರಹ್ಮ ರುದ್ರಾದಿಶರೀರಸ್ಯ** - ಎಂದು ಹೇಳದೆ **ಇನ್ದ್ರಾದಿಶರೀರಸ್ಯ** ಎಂಬ ಪ್ರಯೋಗವು ಏತಕ್ಕೆಂದರೆ, ಇಂದ್ರ ಶರೀರಕ ಪರಮಾತ್ಮನೇ ಉಪಾಸ್ಯನಾಗಿ ಪ್ರತರ್ದನ ವಿದ್ಯೆಯಲ್ಲಿ ಹೇಳಲ್ಪಟ್ಟಿರುವದರಿಂದ. ಅದನ್ನೇ ಮನಸ್ಸಿನಲ್ಲಿಟ್ಟು ಹಾಗೆ ಶ್ರೀ ಯತಿವರ್ಯರು ಪ್ರಯೋಗಿಸಿರುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆಯೇ **ಇನ್ದ್ರಾದಿಶರೀರಸ್ಯ** ಎಂದು ಪ್ರಯೋಗಿಸಿದರೇ ವಿನಾ, **ಬ್ರಹ್ಮರುದ್ರೇಂದ್ರಾದಿಶರೀರಸ್ಯ** ಎಂದು ಹೇಳಲಿಲ್ಲವು. ಇದರಿಂದ ಬ್ರಹ್ಮರುದ್ರಶರೀರಕನು ಪರಮಾತ್ಮನಲ್ಲವೆಂಬ ಭ್ರಮವು ಕೂಡದು.

**ಮೂಲಕ್ಕೆ ಅರ್ಥವು** :—ಈ ಶ್ಲೋಕದಲ್ಲಿ ಜ್ಞಾನಿಗಿರುವ ಅಧಿಯಜ್ಞ ಜ್ಞಾನವು ಕಾಮ ಕಾಮಿಯಾಗಿರುವ ಐಶ್ವರ್ಯಾರ್ಥಿಗಳಿಗೆ ಇಲ್ಲವಾದುದರಿಂದ ಆತನಿಗೆ ಪುನರಾವೃತ್ತಿರೂಪಚ್ಯವನ ಧರ್ಮವುಳ್ಳವರೆಂದು ಉಪದೇಶಿಸುತ್ತಾರೆ. **ಸರ್ವ ಯಜ್ಞಾನಾಂ** - ಇಂದ್ರಾದಿಗಳನ್ನುದ್ದೇಶಿಸಿ

**ಮೂ. ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ।**
**ನತು ಮಾ ಮಭಿಜಾನನ್ತಿ ತತ್ತ್ವೇನಾ ತ ಶ್ಚ್ಯವನ್ತಿ ತೇ ॥** **೨೪.**

**ಭಾ. ಪ್ರಭುರೇವಚ - ತತ್ರ ಫಲಪ್ರದಾತಾಚಾ ಹಮೇವೇತ್ಯರ್ಥಃ ॥ ೨೪ ॥**

ಮಾಡುವ ಸಮಸ್ತ ಯಜ್ಞಗಳಿಗೂ, **ಭೋಕ್ತಾಚ** - ಭೋಕ್ತೃವೂ ಸಹ, ಭೋಕ್ತೃವು ಎಂದು ಹೇಳಿದುದರಭಿಪ್ರಾಯವು ಅವುಗಳಿಂದ ಆರಾಧ್ಯನು ಎಂಬ ಅಭಿಪ್ರಾಯವೇ, **ಪ್ರಭುರೇವ ಚ** - ಆ ಯಜ್ಞಗಳು ಸಾಙ್ಗವಾಗಿ ವೀರ್ಯವತ್ತರವಾಗಿ ನಡೆದು ಫಲಪ್ರದವಾಗಿ ಆಗುವಹಾಗೆಮಾಡುವ ಸರ್ವಶಕ್ತನಾದವನೂ, ಸಹ **ಅಹಂಹಿ-ನಾನೇಯಷ್ಟೆ.** **ಹಿ** ಶಬ್ದದಿಂದ ಇನ್ಯಾರಿಗೂ ಭೋಕ್ತಾ ವಾಗಿಯೂ, ಪ್ರಭುವಾಗಿಯೂ ಇರಲು ಸಾಧ್ಯವೇ ಇಲ್ಲವೆಂಬುದು ನಿರ್ವಿವಾದವೆಂಬ ಭಾವವೂ ಸೂಚಿತವು. ಹೀಗಲ್ಲವೇ ನನ್ನನ್ನು ತಿಳಿಯತಕ್ಕದ್ದು. ಆದರೆ **ತೇತು** - ಆ ಐಶ್ವರ್ಯಕಾಮಿಗ ಳಾದರೋ, **ತತ್ತ್ವೇನ** - ಇಂತಹ ಯಥಾರ್ಥಜ್ಞಾನದಿಂದ **ಮಾಂ** - ಸರ್ವ ಯಜ್ಞ ನಿರ್ವಾಹಕ ನಾಗಿ ಫಲದಾತಾವಾದ ನನ್ನನ್ನು, **ನಾಭಿಜಾನಂತಿ** - ಚನ್ನಾಗಿ ತಿಳಿಯುವದಿಲ್ಲವು, **ಅತಃ** - ಆ ಕಾರಣದಿಂದಲೇ, ಅವರು **ಚ್ಯವಂತಿ** - ಮೋಕ್ಷಪದವಿಯನ್ನು ಹೊಂದದೆ ಬೀಳುತ್ತಾರೆ ಎಂದರೆ ಪುನಃ ಪುನಃ ಜನ್ಮವೆತ್ತುತ್ತಾರೆಂಬ ಭಾವವು. ಜಾರುತ್ತಾರೆ ಎಂದರೆ ಎಲ್ಲಿಂದ ಎಂದು ಪ್ರಶ್ನಿಸಿ, ಅವರು ಸ್ವರ್ಗಾದಿಲೋಕಗಳಲ್ಲಿ ಅನುಭವಿಸುತ್ತಿದ್ದ ಪದವಿಯಿಂದ ಎಂದು ಹೇಳ ಬಹುದು. ಮುಂದಿನ ಶ್ಲೋಕದಲ್ಲಿ **ಯಾನ್ತಿ** ಎಂಬ ಶಬ್ದದಿಂದ ಸೂಚಿತವಾದ ದೇವಾದಿ ಲೋಕ ಗಳಿಂದ ಎಂದು ಹೇಳಬಹುದು. ಇಲ್ಲಿರುವ **ಚ್ಯವನ್ತಿ** ಎಂಬ ಶಬ್ದವು **"ಯೇತುಶಿಷ್ಟಾಸ್ತ್ರಯೋ ಭಕ್ತಾ ಫಲಕಾಮಾಹಿ ತೇ ಮತಾಃ। ಸರ್ವೇ ಚ್ಯವನಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷ ಭಾಕ್"** ಎಂಬ ಪ್ರಮಾಣವನ್ನು ಸ್ಮರಿಸುವಹಾಗೆ ಮಾಡುತ್ತದೆ ; ಅಲ್ಲಿ **ಚ್ಯವನ** ಶಬ್ದಕ್ಕೆ ಯಾವ ಅರ್ಥವೋ ಆ ಅರ್ಥವನ್ನೇ ಇಲ್ಲಿಯೂ ಇಟ್ಟುಕೊಳ್ಳತಕ್ಕದ್ದು. ಜ್ಞಾನಿಗಳಿಗೆ ನಾನು ಸರ್ವ ಶರೀರಕನಾಗಿ ಸರ್ವಕ್ಕೂ ಆತ್ಮನೆಂಬ ಜ್ಞಾನವಿರುವದರಿಂದ ಅವರುಗಳ ಮೋಕ್ಷಪ್ರಾಪ್ತಿಯು ನನ್ನನ್ನು ಸೇರಿತು. ಐಶ್ವರ್ಯಕಾಮಿಗಳಿಗೆ ಈ ಜ್ಞಾನವಿಲ್ಲದಿರುವದರಿಂದ ಚ್ಯವನಧರ್ಮವುಳ್ಳ ವರು. ಹೀಗೆ ನಾಲ್ಕುಜನ ಉಪಾಸಕರಲ್ಲಿ ಜಿಜ್ಞಾಸು ಮತ್ತು ಜ್ಞಾನಿ ಇಬ್ಬರೂ ಈ ಆತ್ಮನು ಪರ ಮಾತ್ಮನಿಗೆ ಶರೀರವು, ಆತನು ತಮಗೆ ಆತ್ಮಾ ಎಂಬ ಜ್ಞಾನಜ್ಞಾನವುಳ್ಳವರಾದುದರಿಂದ ಅವರು ಅಪುನರಾವೃತ್ತಿಯುಳ್ಳವರೆಂದೂ, ಮಿಕ್ಕತ್ರೈವಿದ್ಯ ನಿಷ್ಠರಾದ ಕಾಮುಕಾಮಿಗಳು ಚ್ಯವನ ಧರ್ಮ ವುಳ್ಳವರೆಂದೂ ಹೇಳಿದಂತಾಯಿತು ॥ ೨೪ ॥

**ಭಾಷ್ಯಾರ್ಥವು:—**ಕಾಮ್ಯಕರ್ಮನಿಷ್ಠರು ವೇದಪ್ರಕ್ರಿಯಗಳನ್ನೂ ವಿಧಿಗಳನ್ನೂ ಚೆನ್ನಾಗಿ ಅನುಸರಿಸಿ ಶ್ರದ್ಧಯಾನ್ವಿತರಾಗಿ ಮಾಡಿದರೂ, ಅವರು ಅವಿಧಿಪೂರ್ವಕವಾಗಿ ಅನುಷ್ಠಿಸುವಂತ ವರು ಎಂದರೆ ಪರಸ್ಪರ ವಿರೋಧವಾಗಿ ತೋರಬಹುದು. ಅಭಿಪ್ರಾಯವೇನೆಂದರೆ ಅಧ್ಯಾತ್ಮ ಶಾಸ್ತ್ರದೃಷ್ಟ್ಯಾ ಅನುಷ್ಠಿಸುವದಿಲ್ಲವೆಂದು ಹಿಂದೆ ಹೇಳಲ್ಪಟ್ಟಿತು. ಅದೇ ಇಲ್ಲಿ ಪುನಃ ಸ್ಪಷ್ಟಪಡಿಸಿ ವಿವರಿಸುತ್ತಾರೆ. ಹೀಗೆ ವಿವರಿಸುವದರಿಂದ ಅಂತಹ ಅನುಷ್ಠಾನವು ಅಲ್ಪಾಸ್ಥಿರಫಲಹೇತುವಾಗು ವದರಿಂದ, ಅದು ಉಪಾದೇಯವಲ್ಲವೆಂದು ತಿಳಿಸುತ್ತಾರೆ. ಇಲ್ಲಿ ಮಿಕ್ಕಿದ್ದೆಲ್ಲವೂ ಸ್ಪಷ್ಟವೆಂಬ ಭಾವದಿಂದಲೂ, ಮೇಲಿನ ಅವತಾರಿಕೆಯಿಂದಲೇ ಶ್ಲೋಕತಾತ್ಪರ್ಯವು ವ್ಯಕ್ತವೆಂಬುದರಿಂದಲೂ **ಪ್ರಭು ರೇವ ಚ** ಎಂಬುದಕ್ಕೆ ಮಾತ್ರ ವ್ಯಾಖ್ಯಾನ ಬರೆದಿರುತ್ತಾರೆ. **ತತ್ರ ತತ್ರ** - ಅಯಾ ಸಂದರ್ಭದಲ್ಲಿ ಅಥವಾ ಸ್ವರ್ಗಾದಿ ಪ್ರಾರ್ಥಿತ ಲೋಕಗಳಲ್ಲಿ, **ಫಲಪ್ರದಾತಾ ಚ** - ಫಲವನ್ನು ಕೊಡುವವನೂ ಸಹ, **ಅಹಮೇವೇತ್ಯರ್ಥಃ** - ನಾನೇ ಎಂಬ ಭಾವವು. **ತಾನೇ** ಯಜ್ಞಾದಿ

**ಭಾ. ಅವ. ಅಹೋ ಮಹದಿದಂ ವೈಚಿತ್ರ್ಯಮ್ ; ಯದೇಕಸ್ಮಿನ್ನೇವ ಕರ್ಮಣಿ ವರ್ತಮಾನಾ ಸ್ಸಙ್ಕಲ್ಪ ಮಾತ್ರಭೇದೇನ ಕೇಚಿದ ತ್ಯಲ್ಪ ಫಲಭಾಗಿನ ಶ್ಚ್ಯವನ ಸ್ವಭಾವಾಶ್ಚ ಭವನ್ತಿ - ಕೇಚನಾ ನವಧಿಕಾತಿಶಯಾನನ್ದ ಪರಮ ಪುರುಷಪ್ರಾಪ್ತಿರೂಪ ಫಲ ಭಾಗಿನೋಽ ಪುನರಾವರ್ತಿನಶ್ಚ ಭವನ್ತೀತ್ಯಾಹ—**

ಗಳಿಗೆ ಭೋಕ್ತಾ ಎಂದು ಹಿಂದೆ "**ಭೋಕ್ತಾರಂ ಯಜ್ಞತಪಸಾಂ**" ಎಂಬ (ಗೀ ೫ ೨೯) ಶ್ಲೋಕದಲ್ಲೂ ಉಪಪಾದಿತವು ; ಮತ್ತು ತಾನೇ **ಫಲಪ್ರದಾತಾ** ಎಂಬುದೂ ಸಹ ಹಿಂದೆ "**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್**" ಎಂಬ (ಗೀ. ೭. ೨೨) ಶ್ಲೋಕದಲ್ಲೂ ಉಪಪಾದಿತವು. ಇಲ್ಲಿ **ಪ್ರಭುಶಬ್ದವು** ಸಮರ್ಥನು ಎಂಬರ್ಥದಲ್ಲಿ ಉಪಯೋಗಿಸಿರುವದರಿಂದ ಫಲವನ್ನುಂಟುಮಾಡುವದರಲ್ಲಿ ಸಮರ್ಥನು. ಆತನ ಸತ್ಯ ಸಂಕಲ್ಪತೆಯ ಮಾಹಾತ್ಮ್ಯ ಅಂಥಾದ್ದೆಂಬ ಭಾವವು. ಇಂದ್ರಾದಿಗಳನ್ನು ಕುರಿತು ಕಾಮ್ಯ ಫಲಾರ್ಥಿಯು ಯಜ್ಞಗಳನ್ನು ಅನುಷ್ಠಿಸಿದರೂ ಫಲ ಕೊಡುವವನು ಪರಮ ಪುರುಷನೇ ; ಏಕೆಂದರೆ ಇಂದ್ರಾದಿಗಳ ಸ್ವಂತಸ್ವತ್ತಾಗಿ ಯಾವುವೂ ಇಲ್ಲವು, ಸರ್ವವೂ ಸರ್ವೇಶ್ವರನ ವಿಭೂತಿಯಾದುದರಿಂದ ಸರ್ವೇಶ್ವರನೇ ಕೊಡುವವನು, ಎಂದು ಹೇಳಿದಂತಾಯಿತು. ಆಗಲಿ ಯಜ್ಞಾದಿಗಳು ನಡೆಯುವದರಿಂದಲ್ಲವೇ ಫಲವು? ಕೃಷಿಯಿಂದಲ್ಲವೇ ಧಾನ್ಯ ಪ್ರಾಪ್ತಿಯು ? ಹೀಗಿರುವಾಗ ಯಜ್ಞಾದಿಗಳೇ ಫಲಪ್ರದವಲ್ಲವೋ ? ಒಂದುವೇಳೆ ಯಜ್ಞವು ಭೂತಕಾಲದಲ್ಲಿ ನಡೆದು ಒಡನೇ ಫಲವಿಲ್ಲದಿದ್ದರೂ ಅಪೂರ್ವ ಅಥವಾ ಅದೃಷ್ಟವೆಂಬುದುಂಟಾಗಿ ಫಲಪ್ರಾಪ್ತಿಯಲ್ಲವೋ ? ಎಂದರೆ **ಫಲಮತ ಉಪಪತ್ತೇಃ** ಎಂಬ ಬ್ರಹ್ಮಸೂತ್ರದಲ್ಲಿ ಈ ಅಚೇತನಗಳಾದ ಯಜ್ಞಗಳಿಂದ ಯಾವ ಫಲವೂ ದೊರೆಯಲಾರದು. ಅಪೂರ್ವಕಲ್ಪನೆಯು ಅನಾವಶ್ಯಕವು, ಫಲವನ್ನು ಕೊಡುವವನು ಸಕಲ ಕರ್ಮಾರಾಧ್ಯನಾದ ಭಗವಂತನೇ ಎಂದು ತಿಳಿಯುವದು.

**ಭಾಷ್ಯಾವತಾರಿಕೆಯ ಅರ್ಥವು** :—ಜ್ಞಾನಿಗಳೂ ಐಶ್ವರ್ಯಕಾಮಿಗಳೂ ಇಬ್ಬರೂ ಒಂದೇ ವಿಧವಾದ ಯಜ್ಞಗಳನ್ನು ಅನುಷ್ಠಿಸಿದರೂ, ಅವರುಗಳ ಅಭಿಲಷಿತಗಳಿಗನುಸಾರವಾಗಿ ಮಾಡಿದ ಸಙ್ಕಲ್ಪಗಳಿಗನುಗುಣವಾಗಿ ಫಲಗಳು ದೊರೆಯುತ್ತವೆಂದು ಹೇಳಿ, ಅವರುಗಳ ಅಭಿಲಾಷೆ ಸಙ್ಕಲ್ಪಗಳಿಗೆ ಅನುಗುಣವಾಗಿ ಫಲದಲ್ಲಿ ವ್ಯತ್ಯಾಸವು ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಅಹೋ** - ಅತ್ಯಾಶ್ಚರ್ಯವು, **ಇದಂ** - ಇದು, **ಮಹತ್ ವೈಚಿತ್ರ್ಯಮ್** - ಮಹತ್ತಾದ ವಿಚಿತ್ರವಾದುದು. ಶಾಸ್ತ್ರವು ಸ್ವೇಚ್ಛಾನುಸಾರ ವಿಧಿಸಿರುತ್ತದೆಂದೇನೂ ಆಶ್ಚರ್ಯವಲ್ಲವು. ಸರ್ವೇಶ್ವರನ ಮನಬಂದಹಾಗೆ ಪ್ರವರ್ತನೆ ಎಂದೂ ಆಶ್ಚರ್ಯವಲ್ಲವು. ಹಾಗಾದರೆ ಆಶ್ಚರ್ಯವೆಲ್ಲಿ ? ಎಂದರೆ, ಒಂದೇ ಕರ್ಮವು ಭಗವಂತನಿಗೆ ಭೋಗ್ಯವಾಗಿ ಕರ್ಮಾಧಿಕಾರಿಯ ಕಾಮನಾ ಸಙ್ಕಲ್ಪಗಳ ಮೂಲಕ ಫಲವು ವ್ಯತ್ಯಸ್ತವಾಗಿ ಆಗುವದು ತುಂಬಾ ಆಶ್ಚರ್ಯವೆಂದು ಹೇಳುತ್ತಾರೆ.-**ಯತ್**-ಯಾವ ಕಾರಣದಿಂದ, **ಏಕಸ್ಮಿನ್ನೇವ ಕರ್ಮಣಿ ವರ್ತಮಾನಾಃ**-ಒಂದೇ ವಿಧವಾದ ಯಜ್ಞಾದಿಗಳ ಅನುಷ್ಠಾನದಲ್ಲಿ ಇರುವವರಾಗಿ, ಸಙ್ಕಲ್ಪಮಾತ್ರ ಭೇದದಿಂದ, **ಕೇಚಿತ್** - ಕೆಲವರಾದರೋ ಎಂದರೆ ಐಶ್ವರ್ಯಕಾಮಿಗಳಾದರೊ, ಅತ್ಯಲ್ಪಫಲಭಾಕ್ಕುಗಳಾಗಿ **ಚ್ಯವನ ಸ್ವಭಾವಾಶ್ಚ ಭವಂತಿ** - ತಮಗೆ ಪ್ರಾಪ್ಯಸ್ಥಾನವಾಗಿದ್ದುದರಿಂದ ಜಾರಿ ಕೆಳಗೆ ಬೀಳುತ್ತಾರೋ, **ಕೇಚನ** - ಇನ್ನು ಕೆಲವರಾದ ಜ್ಞಾನಿಗಳಾದ ಭಕ್ತಿಯೋಗನಿಷ್ಠರು, ಅವರು ಎಂತವರೆಂದರೆ, **ಅನವಧಿಕಾತಿಶಯಾನಂದ** - ಅವಧಿ ಇಲ್ಲದ ಅತಿಶಯವುಳ್ಳ ಆನಂದಸ್ವರೂಪಗುಣಗಳುಳ್ಳ, **ಪರಮಪುರುಷನ ಪ್ರಾಪ್ತಿರೂಪ**ವಾದ ಫಲಭಾಗಿಗಳಾಗಿ, **ಅಪುನರಾವರ್ತಿನಶ್ಚ** - ಪುನರಾವೃತ್ತಿಯಿಲ್ಲದವರಾಗಿಯೂ ಸಹ, ಶಾಶ್ವತವಾದ ಆನಂದವನ್ನು ಅನುಭವಿಸುವವರಾಗಿಯೂ

**ಮೂ. ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾಃ ಯಾನ್ತಿ ಮದ್ಯಾಜಿನೋಽಪಿ ಮಾಂ ॥ ೨೫.**

**ಭವನ್ತಿ** - ಆಗುತ್ತಾರೋ, ಆ ಕಾರಣದಿಂದ ಆಶ್ಚರ್ಯವು, **ಇತ್ಯಾಹ** - ಎಂದು ಮುಂದಿನ ಶ್ಲೋಕ ದಲ್ಲಿ ಉಪದೇಶಿಸುತ್ತಾರೆ. ಒಂದೇ ಕರ್ಮವು ಯಥಾಶಾಸ್ತ್ರವಾಗಿ ಅನುಷ್ಠಿಸಲ್ಪಟ್ಟು ಭಗವಂತನು ಆರಾಧಿಸಲ್ಪಟ್ಟರೂ, ಒಂದು ಸಂದರ್ಭದಲ್ಲಿ ಅಶಾಶ್ವತವಾದ ಭೋಗವೂ, ಇನ್ನೊಂದು ಸಂದರ್ಭ ದಲ್ಲಿ ಶಾಶ್ವತವಾದ ಮೋಕ್ಷವೂ ಲಭಿಸುವದು ಪರಮಾಶ್ಚರ್ಯವಾಗಿ ತೋರುತ್ತದೆ. ಆದರೆ ಹಾಗೆ ಲಭಿಸೋಣವು ಅಧಿಕಾರಿಗಳ ಕಾಮನಾನುಗುಣವಾಗಿ ಸಙ್ಕಲ್ಪ ಭೇದದಿಂದಎಂದು ಹೇಳಲ್ಪಡು ತ್ತದೆ. ರಾಜನಿಗೆ ಎರಡು ನಿಂಬೇಹಣ್ಣುಗಳ ಸಮರ್ಪಣೆಯಿಂದ ಭಿನ್ನಾಧಿಕಾರಗಳು ಭಿನ್ನ ಭಿನ್ನ ಫಲಗಳನ್ನು, ತಮ್ಮ ತಮ್ಮ ಕಾಮನಾನುಸಾರವಾಗಿ ಮಾಡಿದ ರಾಜನನ್ನು ಪ್ರಾರ್ಥಿಸುವ ಸಙ್ಕಲ್ಪ ಮೂಲಕ ಹೇಗೆ ಪಡೆಯುತ್ತಾರೋ. ಅದರ ಹಾಗೆ ಎಂಬ ಭಾವವು. ಅಥವಾ ಮೋಟಾರ್ ಪ್ರಯಾಣವು ಸಙ್ಕಲ್ಪಾನುಸಾರವಾಗಿ ಉಡುಪಿಯನ್ನಾಗಲಿ ಅಥವಾ ಮದ್ರಾಸನ್ನಾಲಿ ಹೇಗೆ ಹೊಂದಿಸುತ್ತದೋ ಹಾಗೆ ಎಂದಾಗಲಿ ಹೇಳಬಹುದು. ಹೀಗೆ ಅವರವರ ಸಙ್ಕಲ್ಪಕಾಮನೆ ಯಪ್ರಕಾರ ಅವರವರಿಗೆ ವ್ಯತ್ಯಸ್ತಫಲವೆಂಬುದು ಅವರವರುಗಳಿಗೆ ಇರುವ ಅಧ್ಯಾತ್ಮಶಾಸ್ತ್ರ ಜ್ಞಾನದ ಅಭಾವ ಭಾವಗಳಿಂದ ಪ್ರಾಪ್ತವಾಗುತ್ತದೆಂಬುದನ್ನು ಚನ್ನಾಗಿ ಪ್ರದರ್ಶಿಸುತ್ತಾರೆ. ಅದರೊಂದಿಗೆ ಕೇವಲ ಇಂದ್ರಾದಿ ದೇವತೆಗಳನ್ನು ಕುರಿತ ಫಲದಹಾಗೆಯೇ ಕೇವಲ ಪಂಚ ಮಹಾದಿಯಜ್ಞಗಳಲ್ಲಿ ದೇವ ಪಿತೃಭೂತಾದಿ ಯಜ್ಞಾನುಷ್ಠಾನ ಮಾಡುವವರಿಗೂ ಪರಿಮಿತ ಫಲ ವೆಂದು ಹೇಳಿ, ಅವುಗಳಿಂದ ಅವುಗಳಿಗೆಲ್ಲಾ ಅಂತರಾತ್ಮವಾದ ನಾನೇ ಆರಾಧ್ಯನು ಎಂಬ ಜ್ಞಾನ ವುಳ್ಳ ಜ್ಞಾನಿಗೆ ನಿರತಿಶಯ ಫಲವೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಸಙ್ಕಲ್ಪ ಭೇದದಿಂದ ಫಲಭೇದವೆಂಬುದು ಜ್ಯೋತಿಷ್ಟೋಮಾದಿಗಳಲ್ಲಿ ಸಿದ್ಧವು.

**ಮೂಲಕ್ಕೆ ಅರ್ಥವು :—** ಹಿಂದೆ ೧೫ನೆಯ ಶ್ಲೋಕ ಮೊದಲುಗೊಂಡು ಈ ೨೫ನೆಯ ಶ್ಲೋಕಗಳವರೆಗೂ, ಅಧಿಯಜ್ಞಾರ್ಥವಿವರಣೆಯು ಎಂದು ಭಾವಿಸತಕ್ಕದ್ದು. ೧೫ನೆಯ ಶ್ಲೋಕ ದಲ್ಲಿ ಮಹಾತ್ಮಾವಾದ ಜ್ಞಾನಿಯಲ್ಲಿ, ಅಧಿಯಜ್ಞಭಾವವು ಜ್ಞಾನಯಜ್ಞರೂಪವಾದುದು, **ಅಧಿ ಯಜ್ಞೋಽಹಮೇವ** ಎಂದು ಹಿಂದೆ ಹೇಳಿದ್ದನ್ನು ಇಲ್ಲಿ ಅನುವಾದಮಾಡಿ ಹೇಳಿದರು. ಇಂತಹ ಜ್ಞಾನವು ಕೇವಲ ವೇದಪ್ರೋಕ್ತವಿಧಿಗಳಿಂದ ಯಜ್ಞಾನುಷ್ಠಾನಮಾಡುವ ಕಾಮ್ಯಫಲಾಭಿಲಾಷಿ ಗಳಿಗಿಲ್ಲವೆಂದು ಹೇಳಿ, ಅಂತವರಿಗೆ ಆವೃತ್ತಿಯೇ ವಿನಾ, ಜ್ಞಾನಿಯಹಾಗೆ ಮೋಕ್ಷವಿಲ್ಲವೆಂದೂ ಹೇಳಿದರು. ಹೀಗೆ ಅದೇ ಯಜ್ಞಗಳೇ ಇಬ್ಬರಿಂದಲೂ ಅನುಷ್ಠಿಸಲ್ಪಟ್ಟರೂ ಆರಾಧ್ಯನು ಎರಡು ಸಂದರ್ಭಗಳಲ್ಲೂ ತಾನೇ ಎಂದೂ, ಅವುಗಳಿಂದ ಪ್ರೀತನಾಗುವನೂ ತಾನೇ ಎಂದೂ ಅವರುಗಳ ಫಲಕಾಮನೆಯಿಂದ ಬೇರೆ ಬೇರೆ ಫಲ ಕೊಡುವವನೂ ತಾನೇ ಎಂದೂ, ಹೇಳಿದರು. ಅವರ ಕಾಮನೆಗಳು ಹೇಗಾದರೂ ಇರಲಿ; ತಾನು ಕರುಣಾಸಾಗರನಲ್ಲವೋ ? ಹೀಗೆ ವ್ಯತ್ಯಾಸಗಳನ್ನು ಫಲದಲ್ಲಿ ಉಂಟುಮಾಡಬಹುದೋ ? ಎಂದರೆ ಅವರವರುಗಳ ಕರ್ಮಾನುಸಾರವಾಗಿ ಅವರ ಕಾಮನೆಯು ; ಒಂದು ಸಂದರ್ಭದಲ್ಲಿ ಶಾಸ್ತ್ರದೃಷ್ಟ್ಯಾ - ವಿಧಿಪೂರ್ವಕವಾದುದರಿಂದ ನಿರತಿಶಯ ಫಲವಾದ ಅಪುನರಾವರ್ತಿಯೂ, ಇನ್ನೊಂದು ಸಂದರ್ಭದಲ್ಲಿ ಶಾಸ್ತ್ರದೃಷ್ಟಿಯಿಲ್ಲದೆ ಅವಿಧಿಪೂರ್ವ ಕವಾಗಿ ನಡೆಸುವದರಿಂದ ಚ್ಯವನಧರ್ಮವು ; ಹೀಗೆ ವ್ಯತ್ಯಸ್ತ ಫಲವು ; ತನ್ನ ದೋಷವೇನೂ ಇರುವದಿಲ್ಲವೆಂಬ ಭಾವವನ್ನೂ ಸೂಚಿಸಿದರು. **ದೇವವ್ರತಾಃ** - ಬ್ರಹ್ಮರುದ್ರೇಂದ್ರಾದಿ ದೇವಲೋಕಗಳನ್ನು ಹೊಂದಬೇಕೆಂಬ ಕಾಮನೆಯಿಂದ ಸಙ್ಕಲ್ಪಿಸಿ ಅವರನ್ನುದ್ದೇಶಿಸಿ

ಯಜ್ಞಾನುಷ್ಠಾನಮಾಡುವವರು, **ದೇವಾನ್ ಯಾನ್ತಿ** - ಆಯಾ ದೇವತೆಗಳನ್ನು ಅವರುಗಳ ಲೋಕಗಳಲ್ಲಿ ಹೊಂದುವರು, ಇವೇ ಅವರುಗಳು ಹೆಚ್ಚಾಗಿ ಕೊಡುವ ಫಲವು, ಅದನ್ನೂ ನನ್ನ ಮೂಲಕವಾಗಿಯೇ ಕೊಡುವರು ಎಂಬರ್ಥವು. ಹಾಗೆಯೇ **ಪಿತೃವ್ರತಾಃ** - ಸೋಮ, ಅಗ್ನಿ ಮೊದಲಾದ ಪಿತೃಗಳ ಲೋಕಗಳನ್ನು ಹೊಂದಬೇಕೆಂಬಪೇಕ್ಷೆಯಿಂದ ಸಙ್ಕಲ್ಪಿಸಿ ಯಜ್ಞಮಾಡುವರು, **ಪಿತೄನ್ಯಾನ್ತಿ**-ಸೋಮ ಅಗ್ನಿ ಮೊದಲಾದವರನ್ನು ಅವರುಗಳ ಲೋಕಗಳಲ್ಲಿ ಪಡೆಯುವರು, **ಭೂತೇಜ್ಯಾಃ** - ಹಾಗೆಯೇ ಭೂತಗಣಗಳನ್ನು ಆರಾಧಿಸುವೆನೆಂದು ಭೂತ ಯಜ್ಞವನ್ನು ಮಾಡುವವರು **ಭೂತಾನಿ ಯಾನ್ತಿ** - ಭೂತಗಣ ಲೋಕಗಳನ್ನು ಹೊಂದುವರು; ದೇವಲೋಕ ಪಿತೃಲೋಕಗಳನ್ನು ಹೊಂದಬೇಕೆಂಬ ಸಙ್ಕಲ್ಪದಿಂದ ಯಜ್ಞಾನುಷ್ಠಾನಮಾಡಿದರೆ ಆಯಾ ಲೋಕಪ್ರಾಪ್ತಿಯು ಎಂಬ ಭಾವವು. ಇವರುಗಳಿಗೆಲ್ಲಾ ಕೊನೆಗೆ ಪುನರಾವೃತ್ತಿಯೇ ಎಂಬ ಭಾವವು. ಹಾಗೆಯೇ, **ಮದ್ಯಾಜಿನೋಽಪಿ** - ಮುಮುಕ್ಷುಗಳಾಗಿ ಇತರ ಫಲಾಪೇಕ್ಷೆಯಿಲ್ಲದೆ, ಅದೇ ಯಜ್ಞಗಳಿಂದ ಆ ದೇವಾದಿಗಳಿಗೆ ಆತ್ಮನಾಗಿರುವ ನಾನೇ ಪ್ರೀತನಾಗಬೇಕೆಂಬ ಸಙ್ಕಲ್ಪದಿಂದ ಆ ಯಜ್ಞಗಳನ್ನನುಷ್ಠಿಸಿ, ಉಪಾಸಿಸುವವರಾದರೋ, **ಮಾಂ ಯಾನ್ತಿ** - ನನ್ನನ್ನೇ ನಿತ್ಯವಿಭೂತಿಯಲ್ಲಿ ಹೊಂದುವರು, ಇವರಿಗೆ ಪುನರಾವೃತ್ತಿ ಇಲ್ಲವು. ಈ ಶ್ಲೋಕಾಭಿಪ್ರಾಯದ ವಿಷಯದಲ್ಲಿ ಹಸ್ತಿಗಿರಿ ಮಾಹಾತ್ಮ್ಯೆಯಲ್ಲಿ ಉಪಪಾದಿತಾಂಶವು ಅವಶ್ಯಾನುಸಂಧಾನಾರ್ಹವು. ಚತುರ್ಮುಖನು ಸತ್ಯವ್ರತ ಕ್ಷೇತ್ರದಲ್ಲಿ ಅಶ್ವಮೇಧಯಾಗವನ್ನು ಮಾಡಿದನು. ಆಗ ಅಗ್ನಿ ಮಧ್ಯದಲ್ಲಿ ಶ್ರೀ ವರದರಾಜನನ್ನು ಆವಾಹನೆಯನ್ನು ಮಾಡಿ ಧ್ಯಾನಿಸಿ, ಇಂದ್ರಾದಿ ದೇವತೆಗಳ ಹೆಸರನ್ನೇ ಹೇಳಿ, ತಚ್ಛರೀರಕನಾದ ಪರಮಾತ್ಮನಿಗೇನೆ ಎಲ್ಲಾ ಹವಿಸ್ಸನ್ನು ಭಗವತ್ಪ್ರೀತ್ಯರ್ಥವಾಗಿ ಸಮರ್ಪಿಸಿದನು. ಆಗ ದೇವತೆಗಳೆಲ್ಲಾ ಪರಸ್ಪರ ಮುಖವನ್ನು ನೋಡುವವರಾಗಿ ಓ ಚತುರ್ಮುಖ ಬ್ರಹ್ಮರೇ ಇದೇನು ವಿಚಿತ್ರವು, ನಮ್ಮಗಳ ಹೆಸರುಗಳನ್ನು ಹೇಳುವದೇನು ? ಅವುಗಳನ್ನು ಪರಮಾತ್ಮನಿಗೆ ಸಮರ್ಪಿಸುವದೇನು ? ಎಂದು ಕೋಪದಿಂದ ಪ್ರಶ್ನಿಸಲು ಅದಕ್ಕೆ ಚತುರ್ಮುಖನು ಸಮಾಧಾನವನ್ನು ಹೇಳುತ್ತಾನೆ. ಯಜ್ಞ ಹವಿಸ್ಸೆಲ್ಲಾ, ನಿಮ್ಮಗಳ ಹೆಸರನ್ನು ಹೇಳಿದರೂ ಶ್ರೀ ಜನಾರ್ದನನಿಗೆ ಸಲ್ಲತಕ್ಕದ್ದು. ಇದಕ್ಕೆ ನಿಮ್ಮ ಆಕ್ಷೇಪವು ಯುಕ್ತವಲ್ಲವು. **"ದತ್ತಂ ಯುಷ್ಮನ್ಮುಖಾದ್ಭುಙ್ಕ್ತೇ ಹವಿಃ ಸ್ವರ್ಗಾರ್ಥಿಭಿ ರ್ಹರಿಃ। ಮುಮುಕ್ಷುಭಿಸ್ತಥಾ ಭುಙ್ಕ್ತೇ ಸ್ವಯಮೇವ ಜನಾರ್ದನಃ। ಫಲಂ ದದಾತಿ ಸರ್ವೇಷಾಂ ಸ ಏವ ಪರಮಃ ಪುಮಾನ್"** ಸ್ವರ್ಗಭೋಗಾಪೇಕ್ಷೆಯುಳ್ಳವರು ನಿಮ್ಮ ಮೂಲಕವಾಗಿ ಕೊಟ್ಟ ಹವಿಸ್ಸನ್ನೂ ಶ್ರೀ ಹರಿಯು ನಿಮ್ಮ ಮೂಲಕವಾಗಿ ಪರಿಗ್ರಹಿಸುವನು. ಮೋಕ್ಷಾರ್ಥಿಗಳು ನಿಮ್ಮ ಹೆಸರನ್ನು ಹೇಳಿ ಸಮರ್ಪಿಸಿದುದನ್ನು ಶ್ರೀ ಜನಾರ್ದನನು ನಿಮ್ಮಗಳ ಸಂಬಂಧವಿಲ್ಲದೆ ತಾನೇ ಪರಿಗ್ರಹಿಸುವನು. ಇಲ್ಲಿಯೂ ನಿಮ್ಮಗಳ ಹೆಸರನ್ನು ಹೇಳಿದರೂ ಶ್ರೀ ವರದರಾಜನು ತಾನೇ ಪರಿಗ್ರಹಿಸುವನು, ಏಕೆಂದರೆ ನಾನೂ ಮೋಕ್ಷಾರ್ಥಿಯಾದ ಅಧಿಕಾರಿಯಾದುದರಿಂದ ಎಂಬ ಭಾವವು. ಸ್ವರ್ಗಕಾಮಿಗಳಿಗೂ ಮೋಕ್ಷಾರ್ಥಿಗಳಿಗೂ ಹೀಗೆ ಸರ್ವ ಅಧಿಕಾರಿಗಳಿಗೂ ಫಲಕೊಡುವವನು ಆ ಪರಮ ಪುರುಷನಾದ ಸರ್ವೇಶ್ವರನೇ. ಏಕೆಂದರೆ ಎಲ್ಲವೂ ಪರಮಾತ್ಮನದೇ. ಇವರುಗಳಿಗೆ ಸೇರಿದುದಾಗಿ ಯಾವುವೂ ಇಲ್ಲವು, ಆದುದರಿಂದ ಎಲ್ಲಾ ಸಂದರ್ಭದಲ್ಲೂ ಆತನೇ ಯಜ್ಞ ಹವಿಸ್ಸನ್ನು ಪರಿಗ್ರಹಿಸತಕ್ಕದ್ದೆಷ್ಟೇ ಎಂಬ ತಾತ್ಪರ್ಯವು. ಅನಂತರ ದೇವತೆಗಳು ಚತುರ್ಮುಖನನ್ನು ಕುರಿತು ಪುನಃ ಪ್ರಶ್ನಿಸುತ್ತಾರೆ. **ಏಕಕ್ರಿಯಾ ದ್ವಿಧಾ ಬ್ರಹ್ಮನ್ ಕಥಂ ಸ್ವರ್ಗಾಪವರ್ಗತಃ। ಭವೇದಿತಿ ಮಹಾನೇಷ ಸಂಶಯೋ ನಃ ಪ್ರಜಾಯತೇ"** ಒಂದೇ ಕ್ರಿಯೆಯು ಅನುಷ್ಠಿಸಲ್ಪಡಲಾಗಿ ಒಬ್ಬ ಅಧಿಕಾರಿಗೆ ಸ್ವರ್ಗವೂ, ಇನ್ನೊಬ್ಬನಿಗೆ ಮೋಕ್ಷವೂ,

ಸಾಧಿಸಲ್ಪಡುವದು ಹೇಗೆ? ಎಂಬುದು ದೊಡ್ಡ ಸಂಶಯವು; ದಯಮಾಡಿ ಚತುರ್ಮುಖರೇ ಇದನ್ನು ಹೋಗಲಾಡಿಸಿ ಎಂದು ದೇವತೆಗಳು ಬೇಡುತ್ತಾರೆ. ಅದಕ್ಕೆ ಚತುರ್ಮುಖನು ಬಹು ಸ್ವಾರಸ್ಯವಾದ ಉತ್ತರವನ್ನು ದಯಪಾಲಿಸುತ್ತಾನೆ.—

**ವಿದ್ಯಾಜ್ಞಾನ ಮವಿದ್ಯಾ ತು ಕರ್ಮ ಕೇವಲ ಮುಚ್ಯತೇ । ಯತ್ಕರ್ಮ ವಿದ್ಯಯಾ ಸಾರ್ಧಂ ಕ್ರಿಯತೇ ತದ್ವಿಮುಕ್ತಿದಂ । ತಯಾ ವಿರಹಿತಂ ಯತ್ತು ತತ್ಸಂಸಾರ ಫಲ ಪ್ರದಂ । ತಮೇವೋದ್ದಿಶ್ಯ ಯತ್ಕರ್ಮ ಕ್ರಿಯತೇ ವೈದಿಕಂ ನರೈಃ । ತದೇವ ವಿದ್ಯಾಸಹಿತಂ ಕೀರ್ತಿತಂ ಬ್ರಹ್ಮವಾದಿಭಿಃ । ಅತೋ ಯತ್ಕ್ರಿಯತೇ ಕರ್ಮ ಯುಷ್ಮದಾರಾಧನಾತ್ಮಕಂ । ಸ್ವರ್ಗಾದಿ ಫಲದಂ ತಸ್ಮಾತ್ ಕೇವಲಂ ನಾತ್ರ ಸಂಶಯಃ ।**

ಬ್ರಹ್ಮಜ್ಞಾನದೊಂದಿಗೆ ಉಪಾಸನೆಗೆ ಅಂಗವಾಗಿಮಾಡಿದ ಇಂತಹ ಕರ್ಮವು ಮೋಕ್ಷದಾಯಕ ವಾಗುತ್ತದೆ. ಆದುದರಿಂದ ಬ್ರಹ್ಮವಿತ್ತುಗಳೆಲ್ಲಾ ಯಜ್ಞವನ್ನು ಹೀಗೆಯೇ ಅನುಷ್ಠಿಸತಕ್ಕದ್ದೆಂದು ಹೇಳುವರು. ಅಂತಹ ಜ್ಞಾನವಿಲ್ಲದ ಕರ್ಮವು ಕೇವಲ ಕರ್ಮವೆನಿಸುತ್ತದೆ. ಅದು ನಿಮ್ಮಗಳ ನ್ನುದ್ದೇಶಿಸಿ ಮಾಡುವ ಕರ್ಮವು, ಆದುದರಿಂದಲೇ ಅದು ಸ್ವರ್ಗಾದಿ ಫಲಗಳನ್ನು ಕೊಡುತ್ತದೆ. ಆದುದರಿಂದ ಶ್ರೀ ವರದರಾಜನನ್ನು ಸಾಕ್ಷಾತ್ಕರಿಸುವದಕ್ಕಾಗಿ ಮಾಡಿದ ಯಜ್ಞವಾದುದರಿಂದ, ಆತನೇ ಸ್ವತಃ ಪರಿಗ್ರಹಿಸಿರುತ್ತಾನೆ. ಈ ವಿಷಯದಲ್ಲಿ ನಿಮಗೆ ಅಸಮಾಧಾನಕ್ಕೆ ಕಾರಣವಿಲ್ಲ ವೆಂದುಪದೇಶಿಸಿದನು. ಈ ಇತಿಹಾಸವು ಈ ಶ್ಲೋಕಾಭಿಪ್ರಾಯವನ್ನು ಬಹು ಚನ್ನಾಗಿ ಉಪ ದೇಶಿಸುತ್ತದೆ. ಪಂಚಮಹಾಯಜ್ಞಗಳನ್ನು ಪ್ರತಿದಿನವೂ ಪ್ರತಿಯೊಬ್ಬ ಪತ್ನೀ ಸಹಿತನಾದ ಗ್ರಹಸ್ಥನೂ ಅನುಷ್ಠಿಸತಕ್ಕದ್ದಾಗಿರುತ್ತದೆ. ಈಗ ಮೇಲೆ ಹೇಳಿದ ಕ್ರಮದಲ್ಲಿ ಕೇವಲ ಕರ್ಮ ರೂಪದಲ್ಲಿ ಅನುಷ್ಠಿಸಿದರೆ ಸ್ವರ್ಗಾದಿ ಫಲದಾಯಕವಾಗುವದರಿಂದ, ಮೋಕ್ಷಾರ್ಥಿಯಾದವನು ದೇವಾದಿ ಶರೀರಕನಾದ ಪರಮಾತ್ಮನೇ ಸುಪ್ರೀತನಾಗುವನೆಂದು ಸಙ್ಕಲ್ಪಿಸಿ ಈ ಪಂಚಮಹಾ ಯಜ್ಞದಿಂದ **"ಭಗವಂತಂ ವಾಸುದೇವಂ ಅರ್ಚಯಿಷ್ಯಾಮಿ"** ಎಂದು ಸಙ್ಕಲ್ಪಿಸಿ, ಕೊನೆಗೆ **"ಅನೇನ ಕರ್ಮಣಾಭಗವಾನ್ ಪ್ರಿಯತಾಂವಾಸುದೇವಃ"** ಎಂದು ಸಾತ್ವಿಕ ತ್ಯಾಗವನ್ನು ಹೇಳಿ ದರೆ, ಉಪಾಸಕನಿಗೆ ಅದು ವಿದ್ಯಾಙ್ಗವಾಗಿ ಮೋಕ್ಷದಾಯಕವಾಗುತ್ತದೆಂಬುದು ಮುಖ್ಯ ತಾತ್ಪ ರ್ಯವು. ಐಶ್ವರ್ಯಕಾಮಿಗಳಾದರೋ ಇಂತಹ ಜ್ಞಾನದಿಂದನುಷ್ಠಿಸದೆ ಇಂದ್ರಾದಿಗಳನ್ನೇ ಆರಾಧಿಸುವ ದರಿಂದ, ಅಂತಹ ಅನುಷ್ಠಾನವು ಸ್ವರ್ಗಾದಿ ಭೋಗದಾಯಕವಾಗುತ್ತದೆ. ಆದರೆ ಐಶ್ವರ್ಯಕಾಮಿ ಗಳಾಗಿ ಪರಮಾತ್ಮನನ್ನೇ ಉಪಾಸಿಸುವ ಭಕ್ತಿಯೋಗನಿಷ್ಠರು ಈ ಶ್ಲೋಕದಲ್ಲಿ ಹೇಳಲ್ಪಡಲಿ ಲ್ಲವೇ? ಎಂದರೆ ಜ್ಞಾನಿಯಾಗಿ ಮುಮುಕ್ಷುವಾದವನಿಗೆ ಅಧಿಯಜ್ಞ ವಿಷಯದಲ್ಲಿ ಕರ್ತವ್ಯಾಂಶವು ಪ್ರಸ್ತುತವಾದುದರಿಂದ ಅದೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಫಲಕಾಮಿಗಳಾಗಿ ದೇವ ಪಿತೃ ಭೂತ ಯಜ್ಞ ಕರ್ತೃಗಳನ್ನು ಹೇಳಿ, ಐಶ್ವರ್ಯಾರ್ಥಿಗಳಾದ ಭಕ್ತಿಯೋಗ ನಿಷ್ಠರು ಹೇಗೆ ಅನುಷ್ಠಿ ಸುವರೆಂಬುದು ಹೇಳದಿರುವದು ಲೋಪವಾಗುವದಿಲ್ಲವೇ ಎಂದಾಕ್ಷೇಪಿಸಿದರೆ, ಆಗ ನಾಲ್ಕು ವಿಧ ಭಕ್ತರಿಗೂ ಅನ್ವಯಿಸುವಹಾಗೂ ಅರ್ಥಮಾಡಬಹುದು, ಹೇಗೆಂದರೆ **ಮದ್ಯಾಜಿನೋಽಪಿ** - ನನ್ನ ಭಕ್ತರಾದ ನಾಲ್ಕು ಜನರೂ ಅದಕ್ಕೆ ಅಙ್ಗವಾಗಿ ನಿತ್ಯ ನೈಮಿತ್ತಿಕರೂಪ ಯಜ್ಞ ಮಾಡುವವರೂ ಕೂಡ ಆಯಾ ಯಜ್ಞಗಳಿಂದ ನಾನೇ ಆರಾಧಿಸಲ್ಪಡುವ ಜ್ಞಾನವುಳ್ಳವರಾಗಿರುವದರಿಂದಲೇ **ಮಾಂ ಯಾನ್ತಿ** - ಕ್ರಮೇಣ ನನ್ನನ್ನೇ ಹೊಂದುತ್ತಾರೆ. ಜ್ಞಾನಿಯಾದರೋ ಈ ಉಪಾಸನ ದಿಂದಲೇ ನನ್ನನ್ನು ಹೊಂದುತ್ತಾನೆ, ಇತರರಾದ ಐಶ್ವರ್ಯಾರ್ಥಿಗಳಾದರೋ ಈಗ ಐಶ್ವರ್ಯಕಾಮಿ ಗಳಾಗಿ ಜನ್ಮಾಂತರವನ್ನು ಹೊಂದಿದರೂ, ನನ್ನನ್ನು ಕುರಿತು ಮಾಡಿದ ಉಪಾಸನೆಯ ಬಲದಿಂದ **ನಮೇ ಭಕ್ತಃ ಪ್ರಣಶ್ಯತಿ** ಎಂದು ಮುಂದೆ ಹೇಳುವ ಹಾಗೆ ಭಗವತ್ಕೃಪೆಯಿಂದ, ತಾನು

ಭಾ. ವ್ರತ ಶಬ್ದ ಸ್ಸಙ್ಕಲ್ಪವಾಚೀ ; ದೇವವ್ರತಾ-ದರ್ಶಪೂರ್ಣಮಾಸಾದಿಭಿ ಕರ್ಮಭಿಃ "ಇಂದ್ರಾದೀನ್ ಯಜಾಮಹೇ" ಇತಿ ಇಂದ್ರಾದಿಯಜನಸಙ್ಕಲ್ಪಾ ಯೇ, ತ ಇಂದ್ರಾದೀನ್ ದೇವಾನ್ ಯಾನ್ತಿ ; ಯೇ ಚ ಪಿತೃಯಜ್ಞಾದಿಭಿಃ "ಪಿತೄನ್ ಯಜಾಮಹೇ" ಇತಿ ಪಿತೃ ಯಜನಸಙ್ಕಲ್ಪಾ , ತೇ ಪಿತೄನ್ಯಾನ್ತಿ; ಯೇ ಚ "ಯಕ್ಷರಕ್ಷಃ

ಕೋರಿದ ಫಲವು ಅಸ್ಥಿರವಾದುದೆಂದು ತಿಳಿದವನಾಗಿ, ಅದರಲ್ಲಿ ಆಸೆಯನ್ನು ತೊರೆದು, ಮೋಕ್ಷಾರ್ಥಿಯಾಗಿ ಪುನಃ ಭಕ್ತಿಯೋಗದಲ್ಲಿಯೂ ನನ್ನನ್ನು ಹೊಂದುವನೆಂಬ ಭಾವವೂ ದ್ಯೋತಿತವು. ಹಿಂದೆ ಮದ್ಭಕ್ತಾ ಯಾನ್ತಿ ಮಾಮಪಿ ಎಂಬುದನ್ನೂ ಹೇಗೆ ನಾಲ್ಕು ಜನ ಭಕ್ತರಿಗೂ ಅನ್ವಯಿಸಬಹುದೋ, ಹಾಗೆಯೇ ಯಾನ್ತಿ ಮದ್ಯಾಜಿನೋಽಪಿ ಮಾಂ ಎಂಬುದನ್ನೂ ಸಹ ಅಪಿ ಶಬ್ದ ಸ್ವಾರಸ್ಯದಿಂದ ಮಾ ಮಪಿ ಯಾನ್ತಿ ಎಂದು ಇಟ್ಟುಕೊಂಡರೆ ನಾಲ್ವರಿಗೂ ಅನ್ವಯಿಸಿ ಅರ್ಥ ಹೇಳಬಹುದು ಹಾಗಾದರೆ ಇದು "ಮದ್ಭಕ್ತಾ ಯಾನ್ತಿ ಮಾಮಪಿ" ಎಂಬುದರ ಪುನರುಕ್ತಿಯೋ ? ಎಂದರೆ, ಅದು ಉಪಾಸನಾ ವಿಷಯವು ಇದು ಅದಕ್ಕೆ ಅಙ್ಗವಾದ ನಿತ್ಯನೈಮಿತ್ತಿಕಾದಿ ಯಜ್ಞರೂಪ ಕರ್ಮವಿಷಯವು ಆದುದರಿಂದ ಪುನರುಕ್ತಿ ಯಾಗುವುದಿಲ್ಲವು ಇಲ್ಲಿ ಹೇಳಲ್ಪಟ್ಟ ಉಪದೇಶವೇನು ಎಂಬುದನ್ನು, "ಇಯಾಜಸೋಽಪಿ ಸುಬಹೂನ್ ಯಜ್ಞಾನ್ ಜ್ಞಾನವ್ಯಪಾಶ್ರಯ ! ಬ್ರಹ್ಮವಿದ್ಯಾ ಮಧಿಷ್ಠಾಯ ತರ್ತುಂ ಮೃತ್ಯುಮವಿದ್ಯಯಾ" ಎಂಬ (ವಿ. ಪು. ೬. ೬. ೧೨) ಶ್ಲೋಕದಿಂದ ಗ್ರಹಿಸಬಹುದು ಈ ಭಕ್ತಿಯೋಗನಿಷ್ಠನು ಆತ್ಮಜ್ಞಾನವಾನ್ ಆಗಿ ಪರಮಪುರುಷಾರಾಧನೆಯ ರೂಪದಲ್ಲಿ ಫಲಾಭಿಸಂಧಿಯಿಲ್ಲದೆ ಪಂಚಮಹಾಯಜ್ಞಾದಿಗಳನ್ನು ಅನುಷ್ಠಿಸುವನು. ಏಕೆಂದರೆ ಅಂತಹ ನಿತ್ಯನೈಮಿತ್ತಿಕರೂಪ ಯಜ್ಞಾನುಷ್ಠಾನದಿಂದ ಉಪಾಸನೆಗೆ ವಿಘ್ನಗಳಾದ ಪಾಪಗಳು ತೊಲಗಿ ನಿರ್ವಿಘ್ನವಾಗಿ ಉಪಾಸನವು ನಿಷ್ಪನ್ನವಾಗಿ "ಬ್ರಹ್ಮವಿದಾಪ್ನೋತಿ ಪರಂ" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಜ್ಞಾನಿಯಾದರೆ ಮೋಕ್ಷವನ್ನು ಹೊಂದುವನು. ಮದ್ಯಾಜಿನೋಽಮಾಂ ಯಾಂತಿ ಎಂಬುದರಿಂದ ಯಜ್ಞಾನುಷ್ಠಾನವೇ ಪರಮ ಪುರುಷಾರ್ಥದಾಯಕವೆಂಬ ಭ್ರಮೆಯು ಕೂಡದು. "ಕರ್ಮಣ್ಯೈವಹಿ ಸಂಸಿದ್ಧಿಂ" ಎಂಬಲ್ಲಿಯೂ ಹೀಗೆಯೇ ಭ್ರಮದಿಂದ ಅಪಾರ್ಥವನ್ನು ಕಲ್ಪಿಸಿ ಬ್ರಹ್ಮವಿದ್ಯೆಯು ಕರ್ಮಕ್ಕೆ ಅಙ್ಗವೆಂದು ಹೇಳುವರು; ಅಥವಾ ಕರ್ಮವೂ ಸಾಕ್ಷಾದುಪಾಯವೆಂದೂ ಹೇಳುವರು. ಕರ್ಮವೇ ಬ್ರಹ್ಮವಿದ್ಯೆಗೆ ಅಙ್ಗವೆಂಬುದು, "ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ" (೩. ೪. ೧) ಎಂಬ ಬ್ರಹ್ಮಸೂತ್ರದಲ್ಲಿ ನ್ಯಾಯಿತವು ಯಜ್ಞಾದಿ ಕರ್ಮಗಳಿಂದಲೇ ಮೋಕ್ಷವೇ ? ಅಥವಾ ಉಪಾಸನದಿಂದ ಮೋಕ್ಷವೇ ? ಎಂದರೆ, ಶ್ರುತಿಗಳು ಉಪಾಸನದಿಂದಲೇ ಮೋಕ್ಷವೆಂದು ಉದ್ಘೋಷಿಸುತ್ತವೆ. (೧) "ತಮೇವಂ ವಿದ್ವಾನ್ ಅಮೃತ ಇಹ ಭವತಿ, ನಾನ್ಯಃಪನ್ಥಾ ವಿದ್ಯತೇ ಅಯನಾಯ" (೨) "ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್" (೩) "ಬ್ರಹ್ಮವಿದಾ ಪ್ನೋತಿ ಪರಮ್" ಇತ್ಯಾದಿಗಳು.

ಭಾಷ್ಯಾರ್ಥವು—ಇಲ್ಲಿ ವ್ರತಶಬ್ದವು ಸಙ್ಕಲ್ಪವಾಚೀ ಸಙ್ಕಲ್ಪವನ್ನು ತಿಳಿಸುತ್ತದೆ. ಆದುದರಿಂದ ದೇವವ್ರತಾಃ ಎಂದರೆ ದರ್ಶಪೂರ್ಣಮಾಸಾದಿಕರ್ಮ ಗಳಿಂದ "ಇಂದ್ರಾದಿಗಳನ್ನು ಕುರಿತು ಯಜಾಮಹೇ-ಯಜ್ಞವನ್ನು ಮಾಡುತ್ತೇನೆ," ಇತಿ ಯೇ ಇಂದ್ರಾದಿ ಯಜನ ಸಙ್ಕಲ್ಪಾ - ಎಂದು ಹೀಗೆ ಯಾರು ಇಂದ್ರಾದಿಗಳನ್ನು ಆರಾಧಿಸುವ ಸಙ್ಕಲ್ಪವುಳ್ಳವರೋ, ತೇ - ಅಂತಹ ಕೇವಲ ಕರ್ಮಾನುಷ್ಠಾನ ಮಾಡುವವರು, ಇಂದ್ರಾದಿದೇವತೆಗಳನ್ನು ಯಾಂತಿ-ಹೊಂದುವರು ಯೇಚ - ಯಾರಾದರೆ, ಪಿತೃಯಜ್ಞಾದಿಗಳಿಂದ, ಪಿತೄನ್ಯಜಾಮಹೇ -

**ಭಾ. ಪಿಶಾಚಾದೀನಿ ಭೂತಾನಿ ಯಜಾಮಹೇ" ಇತಿ ಭೂತ ಯಜನ ಸಙ್ಕಲ್ಪಾಃ, ತೇ ಭೂತಾನಿ ಯಾನ್ತಿ; ಯೇತು ತೈರೇವ ಯಜ್ಞೈಃ "ದೇವ ಪಿತೃ ಭೂತ ಶರೀರಕಂ ಪರಮಾತ್ಮಾನಂ ಭಗವನ್ತಂ ವಾಸುದೇವಂ ಯಜಾಮಹೇ"ಇತಿ ಮಾಂ ಯಜನ್ತೇ, ತೇ ಮದ್ಯಾಜಿನೋ ಮಾಮೇವ ಯಾನ್ತಿ; ದೇವಾದಿ ವ್ರತಾಃ ದೇವಾದೀನ್ ಪ್ರಾಪ್ಯ ತೈಸ್ಸಹಪರಿಮಿತಂ ಭೋಗಂ ಭುಕ್ತ್ವಾ ತೇಷಾಂ ವಿನಾಶಕಾಲೇ ತೈಸ್ಸಹ ವಿನಷ್ಟಾಭವಂತಿ;**

ಪಿತೃಗಳನ್ನು ಆರಾಧಿಸುವೆವು, **ಇತಿ ಪಿತೃಯಜನಸಙ್ಕಲ್ಪಾಃ** - ಎಂದು ಪಿತೃಗಳನ್ನಾರಾಧಿಸುವ ಸಙ್ಕಲ್ಪವುಳ್ಳವರೋ, **ತೇ ಪಿತೄನ್ ಯಾಂತಿ** - ಅವರು ಪಿತೃಗಳನ್ನು ಹೊಂದುವರು; **ಯೇಚ** - ಯಾರಾದರೆ, ರಾಜಸತಾಮಸರಾದ ಯಕ್ಷರು, ರಾಕ್ಷಸರು, ಪಿಶಾಚರೇ ಮೊದಲಾದ ಭೂತಗಳನ್ನು, **ಯಜಾಮಹೇ** - ಆರಾಧಿಸುವೆವು, **ಇತಿ ಭೂತ ಯಜನ ಸಙ್ಕಲ್ಪಾಃ** - ಎಂಬುದಾಗಿ ಭೂತಗಳನ್ನು ಆರಾಧಿಸುವ ಸಙ್ಕಲ್ಪವನ್ನುಳ್ಳವರೋ, **ತೇ ಭೂತಾನಿ ಯಾಂತಿ** - ಅವರು ಭೂತಗಳನ್ನು ಸೇರುವರು ಮುಂದೆ, ಯಜ್ಞಕ್ರಿಯಾನುಸಾರ ಫಲವಲ್ಲವು, ಅದೇ ಯಜ್ಞವೇ ಸಙ್ಕಲ್ಪಭೇದದಿಂದ ಭಿನ್ನಫಲಗಳನ್ನೀಯುವುವೆಂದು ತಿಳಿಸುತ್ತಾರೆ.-**ಯೇ ತು**-ಯಾರಾದರೋ, **ತೈರೇವ ಯಜ್ಞೈಃ** - ಅದೇ ದೇವಯಜ್ಞ ಪಿತೃಯಜ್ಞ ಭೂತಯಜ್ಞಗಳಿಂದ, **"ದೇವ ಪಿತೃ ಭೂತ ಶರೀರಕನಾದ ಪರಮಾತ್ಮನಾದ ಭಗವಂತನಾದ ವಾಸುದೇವನನ್ನು ಯಜಾಮಹೇ** - ಆರಾಧಿಸುವೆವು, **ಇತಿ** - ಎಂದು **ಮಾಂ ಯಜನ್ತೇ** - ನನ್ನನ್ನು ಆರಾಧಿಸುತ್ತಾರೋ, **ತೇ** ಅವರು, **ಮದ್ಯಾಜಿನಃ** ಎಂದರೆ ನನ್ನನ್ನುದ್ದೇಶಿಸಿ ಯಜ್ಞಮಾಡಿದವರಾಗುತ್ತಾರೆ, ಆದುದರಿಂದ ಅವರು **ಮಾಂ ಯಾನ್ತಿ** - ನನ್ನನ್ನೇ ಹೊಂದುತ್ತಾರೆ; ಹೀಗೆ ಹೇಳಿದುದರ ಅಭಿಪ್ರಾಯವೇನೆಂಬುದನ್ನು ಮುಂದೆ ವ್ಯಕ್ತಪಡಿಸುತ್ತಾರೆ. — **ದೇವಾದಿವ್ರತಾಃ**-ದೇವಾದಿಗಳನ್ನು ಆರಾಧಿಸುವ ಸಙ್ಕಲ್ಪದಿಂದ ಯಜ್ಞಾದಿಗಳನ್ನನುಷ್ಠಿಸಿದವರು, ದೇವಾದಿಗಳನ್ನು, **ಪ್ರಾಪ್ಯ** - ಹೊಂದಿ, **ತೈಸ್ಸಹ** ಅವರುಗಳೊಂದಿಗೆ, ಪರಿಮಿತವಾದ ಭೋಗವನ್ನು, **ಭುಕ್ತ್ವಾ**-ಅನುಭವಿಸಿ, **ತೇಷಾಂ ವಿನಾಶ ಕಾಲೇ** - ಅವರುಗಳಿಗೆ ವಿನಾಶ ಉಂಟಾಗುವ ಕಾಲದಲ್ಲಿ ಎಂದರೆ ಪ್ರಳಯದಲ್ಲಿ, **ತೈಸ್ಸಹ ವಿನಷ್ಟಾಭವಂತಿ** - ಅವರೊಂದಿಗೆ ಇವರೂ ನಾಶವಾಗುತ್ತಾರೆ ಎಂದರೆ ಪ್ರಳಯಕ್ಕೆ ಸಿಕ್ಕಿ ಪುನಃ ಸೃಷ್ಟಿಕ್ರಮವಾಗುವಾಗ ಪುನರ್ಜನ್ಮವನ್ನು ಎತ್ತುತ್ತಾರೆ ಎಂಬ ಭಾವವು; ಆತ್ಮನು ನಷ್ಟವಾಗುವದು ಎಂದರೆ ಪುನರ್ಜನ್ಮ ಅಥವಾ ನರಕವು. ಇಲ್ಲಿ ಪುನರ್ಜನ್ಮವೇ ಇಲ್ಲಿ ಒಂದು ಪ್ರಶ್ನೆಗೆ ಅವಕಾಶವಿರುತ್ತದೆ;ಹೇಗೆಂದರೆ,ಹೀಗೆ ದೇವಪಿತೃಭೂತ ಯಜ್ಞಾನುಷ್ಠಾನಮಾಡಿದವರಿಗೆಲ್ಲಾ ಅವರುಗಳೊಂದಿಗೆ ಸಾಯುಜ್ಯವು ಉಂಟಾಗಿ ಅವರು ಲಯ ಹೊಂದುವಾಗ ಲಯವೇ? ಭಿನ್ನಭಿನ್ನಾಭಿಲಾಷೆಯುಳ್ಳವರಿಗೂ ಒಂದೇ ಫಲವೇ? ಎಂದರೆ, ಅವರುಗಳು ಕೊಡುವ ಪೆಚ್ಚಾದ ಫಲವು, ಅವರುಗಳು ಇರುವವರಿಗೂ ಅವರ ಲೋಕದಲ್ಲಿ ಇದ್ದು, ಭೋಗಗಳನ್ನನುಭವಿಸಿ, ಅವರುಗಳು ಲಯಹೊಂದುವಾಗ, ಲಯವೆಂದು ಹೇಳಲ್ಪಟ್ಟಿತು ಅವರು ದೇವಾದಿಗಳ ಸಾಯುಜ್ಯವನ್ನಪೇಕ್ಷಿಸಿದ ಪಕ್ಷದಲ್ಲಿ ಅದನ್ನು ಹೊಂದಿ ಪ್ರಳಯವಾದನಂತರ ಆ ದೇವತೆಗಳೊಂದಿಗೆ ಸ್ಥಾನಭ್ರಷ್ಟತೆಯೆಂದೂ, ಇತರಫಲಗಳನ್ನು ಕೋರಿದವರಿಗೆ ಆಫಲಗಳ ಭೋಗಉಂಟಾಗಿ ಅಲ್ಲಿಂದ ಪುನಃ ಜನ್ಮವನ್ನು ಎತ್ತುವರೆಂದೂ,ಭಾವಿಸತಕ್ಕದ್ದು. ಪ್ರಳಯದವರೆಗೂ ನಿರೀಕ್ಷಣೆ ಇಲ್ಲದೆ ಅಲ್ಪ ಕಾಲಿಕವಾಗಿ ಫಲವು ಪ್ರಾಪ್ತವಾಗಿ, ಆಯಾ ಲೋಕಗಳಿಂದಲೇ ಈಮರ್ತ್ಯಲೋಕಕ್ಕೆ ಆವೃತ್ತಿಯು ಇದರಿಂದ ನಿಷೇಧಿಸಲ್ಪಡಲಿಲ್ಲವೆಂದೂಭಾವಿಸತಕ್ಕದ್ದು. ಇದರಿಂದ ಆ ದೇವತೆಗಳು ಪಿತೃಗಳು ಮುಂತಾದವರಿಗೆಲ್ಲಾ ಪುನರಾವೃತ್ತಿಯು ಲಯಕಾಲದಲ್ಲಿ ಮಾತ್ರವೇ ಎಂದೂ, ಭಾವಿಸತಕ್ಕದ್ದಲ್ಲವು, ಇನ್ನೂ ಏನೆಂದರೆ ಎಲ್ಲರಿಗೂ ಪುನರಾವೃತ್ತಿ

**ಭಾ. ಮದ್ಯಾಜಿನಸ್ತು ಮಾ ಮನಾದಿನಿಧನಂ ಸರ್ವಜ್ಞಂಸತ್ಯಸಙ್ಕಲ್ಪಂಅನವಧಿಕಾತಿಶಯಾಸಂಖ್ಯೇಯ ಕಲ್ಯಾಣಗುಣಗಣಮಹೋದಧಿ ಮನವಧಿಕಾತಿಶಯಾನಂದಂ ಪ್ರಾಪ್ಯನ ಪುನ ರ್ನಿವರ್ತನ್ತ ಇತ್ಯರ್ಥಃ** || ೨೫ ||

ಎಂದೂ, ಭಾವಿಸತಕ್ಕದ್ದಲ್ಲವು. ಇವರುಗಳಿಗೂ ಕೂಡ ಉಪಾಸನನಾದಿ ಉಪಾಯಾನುಷ್ಠಾನವುಂಟು. ಇದು ಬ್ರಹ್ಮಸೂತ್ರದಲ್ಲಿ ಉಪಪಾದಿತವು. (ಶಾ. ೧. ೩. ೨೫) **ಮದ್ಯಾಜಿನಸ್ತು**-ಫಲಾಭಿಸಂಧಿಯಿಲ್ಲದೆ ಈ ದೇವಪಿತೃಭೂತೇಜ್ಯೆಗಳಲ್ಲಿ ತಚ್ಛರೀರಕ ಪರಮಾತ್ಮನೇ ಆರಾಧಿಸಲ್ಪಡುವನೆಂಬ ಅಭಿಸಂಧಿಯಿಂದ ವಿದ್ಯಾಂಗವಾಗಿ ಅವುಗಳನ್ನು ಅನುಷ್ಠಿಸುವ ಮದ್ಭಕ್ತನಾದವರೋ, **ಅನಾದಿ ನಿಧನಂ**-ಉತ್ಪತ್ತಿ ನಾಶಗಳಿಲ್ಲದೆ ಶಾಶ್ವತನಾದ, **ಸರ್ವಜ್ಞಂ**-ಆರಾಧಿಸುವವನ ಮನೋಭಿಪ್ರಾಯವನ್ನೂ ಸಙ್ಕಲ್ಪವನ್ನೂ ತಿಳಿಯುವ ಸರ್ವಜ್ಞತೆಯುಳ್ಳ **ಸತ್ಯಸಙ್ಕಲ್ಪಂ**-ಭಕ್ತಾನುಗ್ರಹದಲ್ಲಿ ಮಾಡಿದ ಸಙ್ಕಲ್ಪವನ್ನೂ ನೆರವೇರಿಸಿಕೊಡುವ ಶಕ್ತಿಯುಳ್ಳ, ಮಾಡಿದ ಸಙ್ಕಲ್ಪವು ಯಾವಾಗಲೂ ಸತ್ಯವು ಯಾರಿಗೋ, ಆತನು ಸತ್ಯಸಙ್ಕಲ್ಪನು, ಅವಧಿಯಿಲ್ಲದ ಅತಿಶಯವುಳ್ಳ ಲೆಖ್ಖವಿಲ್ಲದ ಹಾಗೆ ಅನೇಕಗಳಾದ **ಕಲ್ಯಾಣಗುಣಗಳ ಸಮೂಹಕ್ಕೆ ರತ್ನಾಕರನೋಪಾದಿ**ಯಾಗಿ ಇರುವ, ಅವಧಿಯಿಲ್ಲದ **ಅತಿಶಯವುಳ್ಳ ಆನಂದಸ್ವರೂಪನನ್ನು, ಪ್ರಾಪ್ಯ - ಹೊಂದಿ, ನಪುನರ್ನಿವರ್ತ್ತಂತೇ ಇತ್ಯರ್ಥಃ** - ಪುನಃ ನಿವರ್ತಿಸುವದಿಲ್ಲವೆಂಬ ಭಾವವು. ಕಲ್ಯಾಣಗುಣಮಹೋದಧಿಯಾಗಿ ಸತ್ಯಸಙ್ಕಲ್ಪನಾದುದರಿಂದ ಪರಬ್ರಹ್ಮಪ್ರಾಪ್ತಿಯುಂಟಾದ ನಂತರ ಇಂತಹ ಕೃಪಾಮಹೋದಧಿಯು ಅತ್ಯರ್ಥ ಪ್ರಿಯನಾದ ಜ್ಞಾನಿಯನ್ನು ಹೊಂದಿ, ಎಂದಿಗೂ ಪುನರಾವರ್ತಿಸುವಹಾಗೆ ಮಾಡುವದಿಲ್ಲವೆಂಬುದೂ, ಹೇಳಲ್ಪಟ್ಟಿತು. ಹೋಗಲಿ, ತಾನೇ ಏನಾದರೂ ಇಷ್ಟಪಟ್ಟು ಅಲ್ಲಿಂದ ಹೊರಟುಹೋದಾನೋ ಎಂದರೆ **ನಿರವಧಿಕಾತಿಶಯಾನಂದ**ನಾಗಿರುವ ಇಂತಹ ನಿರತಿಶಯ ಪರಮಪುರುಷನನ್ನು ತ್ಯಜಿಸಿ ದುಃಖಭಾಕ್ಕಾಗಿರಲು ಇಲ್ಲಿಗೆ ಬರಲು ಸಮ್ಮತಿಸಿ, ಆವೃತ್ತಿಯನ್ನು ಎಂದಿಗೂ ಅಪೇಕ್ಷಿಸುವದಿಲ್ಲವು. ಈ ಭಾವವನ್ನುತೋರಿಸುವದಕ್ಕಾಗಿಯೇ **ಕಲ್ಯಾಣಗುಣಗಣ ಮಹೋದಧಿಂ ಅನವಧಿಕಾತಿಶಯಾನಂದಂ** ಎಂಬ ಎರಡು ವಿಶೇಷಣಗಳಿಂದು ಊಹಿಸತಕ್ಕದ್ದು. **ಅನಾಧಿ ನಿಧನಂ** ಎಂಬ ವಿಶೇಷಣವು, ಶಾಶ್ವತನಾದವನ ಪ್ರಾಪ್ತಿಯನ್ನು ಹೊಂದಿದರೆ, ಎಂದಿಗೂ ಶಾಶ್ವತಪದವಿಯೇ ಎಂಬುವನ್ನು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆ ಶಾಶ್ವತಪದವಿಯ ಪ್ರಾಪ್ತಿಯಲ್ಲಿ ಶಙ್ಕಾನಿಗೆ ಅವಕಾಶವೇ ಇಲ್ಲವೆಂಬುದು ಸರ್ವಜ್ಞತೆ ಸತ್ಯ ಸಙ್ಕಲ್ಪತೆಗಳಿಂದ ಸಿದ್ಧವು. ಸತ್ಯ ಸಙ್ಕಲ್ಪಕ್ಕೆ ವಿರೋಧಿ ನಿರಸನ ರೂಪ ಸರ್ವಶಕ್ತಿತ್ವವೂ ಆವಶ್ಯಕವಾದುದರಿಂದ ಅದೂ ದ್ಯೋತಿತವು. ಈ ಶ್ಲೋಕಾಭಿಪ್ರಾಯವು ಹಿಂದೆಯೂ ಉಪಪಾದಿಸಲ್ಪಟ್ಟಿರುತ್ತದೆ. **"ಅಂತವತ್ತುಫಲಂ ತೇಷಾಂ ತದ್ಭವತ್ಯಲ್ಪ ಮೇಧಸಾಂ। ದೇವಾ೯ ದೇವಯಜೋಯಾನ್ತಿ ಮದ್ಭಕ್ತಾಯಾಂತಿ ಮಾಮಪಿ"** (೭-೨೩) ಆದರೆ ಆ ಪ್ರಕರಣಕ್ಕೂ ಈ ಪ್ರಕರಣಕ್ಕೂ ಅಧಿಕಾರಿಭೇದವುಂಟು. ಅದು ಅನ್ಯದೇವತೆಯ ಭಕ್ತನನ್ನು ಕುರಿತು ಹೇಳಿದುದು. ಇದು ಪರಮಾತ್ಮಭಕ್ತನಾಗಿ ಫಲಕಾಮನೆಯುಳ್ಳ ಮತ್ತು ಸರ್ವಯಜ್ಞಗಳಿಂದಲೂ ಪರಮಾತ್ಮನೇ ಆರಾಧ್ಯನೆಂಬ ಜ್ಞಾನವಿಲ್ಲದ ಅಧಿಕಾರಿಯನ್ನು ಕುರಿತದ್ದು. ಇಷ್ಟು ಮಾತ್ರವೇ ವ್ಯತ್ಯಾಸವು, ಇವರುಗಳು ಸುಕೃತಿಗಳೇಯಾದುದರಿಂದ ಸ್ವಾಮಿಯ ಅನುಗ್ರಹವು ಯಾವತ್ತಾದರೂ ಉಂಟೆಂಬುದು **"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇಮಹತೋಭಯಾತ್"** ಎಂಬುದರಿಂದ ಊಹಿಸಬಹುದು. ಇಲ್ಲಿ **ಮದ್ಯಾಜಿನಃ ಮಾ ಮಪಿ ಯಾನ್ತಿ** ಎಂಬಲ್ಲಿ ಯಜಧಾತುವನ್ನು ಉಪಯೋಗಿಸಿರುವದು ಉಪಾಸನಾಂಗಕರ್ಮಯೋಗವಿಷಯವೇ ಇಲ್ಲವೇ ಅಂಗಿ

**ಭಾ. ಅವ. ಮದ್ಯಾಜಿನಾ ಮಯಮಪಿ ವಿಶೇಷೋಽಸ್ತೀತ್ಯಾಹ—**

**ಮೂ. ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬.**

ಯಾದ ಭಕ್ತಿಯೋಗ ವಿಷಯವೇ ಎಂಬ ಸಂದೇಹವು ಉಂಟಾಗಬಹುದು. ಹಿಂದೆ ೨೨ನೆಯ ಶ್ಲೋಕದಲ್ಲಿ **ಯೇ ಜನಾಃ ಪರ್ಯುಪಾಸತೇ** ಎಂದು ಹೇಳಿ, ೨೩ನೆಯ ಶ್ಲೋಕದಲ್ಲಿ ಅವರನ್ನು **ತು** ಶಬ್ದದಿಂದ ವ್ಯಾವರ್ತಿಸಿ **"ಯೇತ್ವನ್ಯದೇವತಾ ಭಕ್ತಾ ಯಜನ್ತೇ"** ಎಂದು ಹೇಳಲ್ಪಟ್ಟಿರುವದರಿಂದ ಪ್ರಕರಣವು ಪರಮಾತ್ಮೋಪಾಸನವು ದಿವ್ಯಮಙ್ಗಳ ವಿಗ್ರಹಯುಕ್ತನ ಉಪಾಸನವಾಗಿ ಅಪ್ರತೀಕಾಲಂಬನನಾಗುವದರಿಂದ ಮೋಕ್ಷವು (ಶಾ. ೪. ೩ ೧೫) ಅನ್ಯದೇವತೋಪಾಸನವು ದಿವ್ಯಮಙ್ಗಳ ವಿಗ್ರಹದ ಉಪಾಸನೆಯಾಗದೆ ಪ್ರತೀಕಾಲಂಬನನಾಗುವದರಿಂದ ಮೋಕ್ಷವಿಲ್ಲವು, ಪುನರಾವರ್ತಿಯುಂಟು. ಅಲ್ಲಿ ೨೨ರಲ್ಲಿ ಉಪಾಸನವೂ, ೨೩ರಲ್ಲಿ ಯಜನವೂ ಹೇಳಲ್ಪಟ್ಟು ಈ ೨೫ರಲ್ಲಿ **ಮದ್ಯಾಜಿನೋಽಪಿ** ಎಂಬಲ್ಲಿ ಯಜನವೂ ಹೇಳಲ್ಪಟ್ಟಿರುವದರಿಂದ, ಎರಡು ಸಂದರ್ಭದಲ್ಲೂ ಉಪಾಸಕನು ಅನುಷ್ಠಿಸುವ ಯಜ್ಞಗಳಿಂದೇ ಅರ್ಥಮಾಡತಕ್ಕದ್ದಾಗಿರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು:—ಮದ್ಯಾಜಿನಾಂ** - ಉಪಾಸನಾಙ್ಗವಾಗಿ ಮಾಡುವ ನಿತ್ಯನೈಮಿತ್ತಿಕಾದಿ ಯಜ್ಞಗಳನ್ನನುಷ್ಠಿಸುವ ಶೀಲವುಳ್ಳವನಿಗೆ, **ಅಯಮಪಿ** - ಈ ಶ್ಲೋಕದಲ್ಲಿ ಹೇಳುವ, **ವಿಶೇಷೋಽಸ್ತೀತ್ಯಾಹ** - ಮಾಹಾತ್ಮ್ಯರೂಪವಿಶೇಷವೂ ಉಂಟೆಂದು ಹೇಳುತ್ತಾರೆ. ಹೀಗೆ ಕರ್ಮಾನುಷ್ಠಾನದಲ್ಲಿ ಫಲಾಭಿಲಾಷಿಗೂ ಫಲಾಭಿಸಂಧಿರಹಿತನಿಗೂ ಇರುವ ಪ್ರಾಪ್ಯದಲ್ಲಿರುವ ವ್ಯತ್ಯಾಸವನ್ನು ಹಿಂದೆ ಹೇಳಿ, ಈಗ ಆ ಪ್ರಾಪ್ಯವನ್ನು ಹೊಂದುವ ಸಾಧನದಲ್ಲಿರುವ ವ್ಯತ್ಯಾಸವನ್ನು ತಿಳಿಸುತ್ತಾರೆ. ಫಲಾಭಿಲಾಷಿಯಾದವನಾದರೋ ಯಾವ ಯಾವುದನ್ನು ಸಮರ್ಪಿಸಬೇಕೆಂದೂ, ಹೇಗೆ ಹೇಗೆ ಆರಾಧಿಸಬೇಕೆಂದೂ, ಶಾಸ್ತ್ರವಿಹಿತವೋ, ಹಾಗೆಯೇ ಅನುಷ್ಠಿಸಬೇಕಾಗಿರುತ್ತದೆ. ಮದ್ಯಾಜಿಯಾದವನಿಗಾದರೋ ಬಹು ಸುಲಭನಾಗಿ ಆರಾಧ್ಯನಾಗಿ ನಾನು ಸುಪ್ರೀತನಾಗುವೆನು. ಆತನಿಗೆ ಅಲ್ಪಗಳಾಗಿಯೂ ಸುಲಭವಾಗಿ ದೊರಕುವ ಪತ್ರಪುಷ್ಪಫಲಾದಿಗಳಿಂದಲೇ ಸುಪ್ರೀತನಾಗುವೆನು ; ಇದೀಗ ಎರಡಕ್ಕೂ ಇರುವ ವೈಲಕ್ಷಣ್ಯವೆಂದು ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು :—ಪತ್ರಂ** - ಶಾಸ್ತ್ರರೀತ್ಯಾ ನಿಷಿದ್ಧದಿನಗಳನ್ನು ತ್ಯಜಿಸಿ ಕೊಯಿದ ತುಳಸೀದಳ ಮರುಗ ಮೊದಲಾದ ಪತ್ರವನ್ನಾಗಲಿ, ಅಥವಾ ವರ್ಷಾರಂಭದಲ್ಲಿ ಸಮರ್ಪಿಸಿದ ಕಹಿಯಾದ ನಿಂಬದಳವನ್ನಾಗಲಿ, **ಪುಷ್ಪಂ** - ತಾನು ಬೆಳಿಸಿದ ಪುಷ್ಪವನ್ನಾಗಲಿ, ಬೆಲೆ ಕೊಟ್ಟು ಕೊಳ್ಳುವ ಆಯಾಸಕೂಡ ಬೇಡವೆಂಬ ಭಾವವು, ಹಾಗೆ ಕ್ರಯಕೊಟ್ಟು ತಂದುದು ಶಾಸ್ತ್ರದಲ್ಲಿ ಅಧಮವೆಂದು ಹೇಳಿರುತ್ತದೆ. ತಾನು ಬೆಳಿಸಿದುದು ಉತ್ತಮವು. **"ಉತ್ತಮಂ ಸ್ವಾರ್ಜಿತಂ ಪುಷ್ಪಂ ಮಧ್ಯಮಂ ವನ್ಯಮುಚ್ಯತೇ। ಅಧಮಂ ತು ಕ್ರಯಕ್ರೀತಂ ಪಾರಕ್ಯಮಧಮಾಧಮಂ"** ಇತರರ ಮನೆಯ ಹೂವು ಅಧಮಾಧಮವು ಎಂದೂ ಹೇಳಲ್ಪಟ್ಟಿರುತ್ತದೆ; **ಫಲಂ** - ಬಾಳೇಹಣ್ಣು ತೆಂಗಿನಕಾಯಿ ಮೊದಲಾದ ಫಲವನ್ನೇಯಾಗಲಿ, ಇದು ಯಾವುದಕ್ಕೂ ಅವಕಾಶವಿಲ್ಲದೆ ಹೋದರೆ, **ತೋಯಂ** - ಶುದ್ಧೋದಕದ ಮೂಲಕ ಅರ್ಘ್ಯಪಾದ್ಯಾಚಮನವನ್ನೇಯಾಗಲಿ, **ಯಃ** - ಯಾವ ನನ್ನ ಆರಾಧಕನು, **ಭಕ್ತ್ಯಾ** - ತುಂಬಾ ಪ್ರೀತಿಯಿಂದ, **ಪ್ರಯಚ್ಛತಿ** - ಸಮರ್ಪಿಸುವನು ಹೆಚ್ಚಲ್ಲವು; ತಾನೇಯಾಗಲಿ ಅಥವಾ ಇತರರ ಮೂಲಕ ಸಮ್ಮಾನ ಸಮರ್ಪಿಸಿದರೆ ಪರಿಗ್ರಾಹ್ಯವಲ್ಲವೆಂದೂ, ಶ್ರದ್ಧಾ ವಿಶ್ವಾಸಮೂಲಕ ತಾವೇ ಸಮರ್ಪಿಸಿದರೇ ಗ್ರಾಹ್ಯವೆಂಬುದೂ ಸೂಚಿತವು; ಇಲ್ಲಿ **ಪತ್ರಂ ಪುಷ್ಪಂ** ಎಂದು ಹೇಳಿರುವದು, ಇವೆಲ್ಲವೂ

ಒಪ್ಪಿಗೆ ಬೇಕೆಂದು ಹೇಳಲಿಲ್ಲವು, **ಪತ್ರಂ ವಾ ಪುಷ್ಪಂ ವಾ** ಎಂದು ವಿಕಲ್ಪಿಸಿ ಯಾವುದಾದರೂ ಒಂದರಿಂದ ತೃಪ್ತನಾಗುವೆನೆಂಬ ಭಾವವು. ಇಲ್ಲಿ **ಪತ್ರಂ ಪುಷ್ಪಂ** ಎಂದು ಹೇಳಿರುವುದು ಆರಾಧನೆಯ ರೂಪದಲ್ಲಿ ನಾಮಸಂಕೀರ್ತನ, ಸ್ತೋತ್ರ, ಮೊದಲಾದವುಗಳಿಗೂ, ಪ್ರದಕ್ಷಿಣೆ, ಅಂಜಲಿ, ಮೊದಲಾದವುಗಳಿಗೂ ಉಪಲಕ್ಷಣವು **"ಸಕೃತ್ಕೃತೋಂಜಲಿಃ । ತದ್ವೈವಮುಷ್ಣಾತ್ಯಶುಭಾನ್ಯಶೇಷತಃ ಶುಭಾನಿ ಪುಷ್ಣಾತಿ ನಜಾತುಹೀಯತೇ"** ಎಂದೂ (ಯಾ. ಸ್ತೋ. ೨೮) **"ಅಂಜಲಿಃ ಪರಮಾ ಮುದ್ರಾ ಕ್ಷಿಪ್ರಂ ದೇವಪ್ರಸಾದಿನೀ"** ಎಂದೂ ಹೇಳಲ್ಪಟ್ಟಿರುತ್ತದೆ. ಹೀಗೆ ಇವೆಲ್ಲಾ ಉಪಾಯಾನುಷ್ಠಾನಕ್ಕೆ ಸಹಕಾರಿಯು. **ಪ್ರಯತಾತ್ಮನಃ** - ಪರಮಾತ್ಮನಲ್ಲೇ ನಿರತಿಶಯ ಪ್ರೀತಿ ಇರುವ ಅಂತಹ ಮಹಾಪರಿಶುದ್ಧ ಮನಸ್ಸಿನ, **ಭಕ್ತ್ಯುಪಹೃತಂ** - ಭಕ್ತಿಯಿಂದ ಸಮರ್ಪಿಸಲ್ಪಟ್ಟಿದುದು, ಆದುದರಿಂದಲೇ **ತತ್** - ಅಂತಹ ಅಲ್ಪವಾದ ಪತ್ರ, ಪುಷ್ಪ, ಫಲ, ತೋಯಗಳಲ್ಲಿ ಯಾವುದನ್ನೇ ಆಗಲಿ, **ಅಹಂ** - ಭಕ್ತರಲ್ಲಿ ಅಪಪ್ರಶನಾದ ಮಮತೆಯನ್ನಿಟ್ಟಿರುವ ನಾನು, **ಜ್ಞಾನೀತ್ವಾತ್ಮೈವ ಮೇಮತಂ** ಎಂದೂ, **ಸಚ ಮಮಪ್ರಿಯಃ** ಎಂದೂ ಹಿಂದೆಯೇ ಹೇಳಿರುವ ನಾನು, **ಅಶ್ನಾಮಿ**-ಅತ್ಯಾದರದಿಂದ ಪರಿಗ್ರಹಿಸುವೆನು. ಮಹಾಭಾಗವತರಾದ ಕುಚೇಲರ ಅವಲಕ್ಕಿಯನ್ನು ಅವರೇ ನಾಚಿಕೆಯಿಂದ ಕೊಡದೇ ಇದ್ದರೂ ನಾನೇ ಕೇಳಿ ತೆಗೆದುಕೊಂಡು ಎಷ್ಟು ಆದರದಿಂದಲೂ ಪ್ರೀತಿಯಿಂದಲೂ ಭುಜಿಸಿದೆನೋ ಹಾಗೆ ಎಂಬ ಭಾವವೂ ದ್ಯೋತಿತವು. ಹೇಗೆ **ಅಶ್ನಾಮಿ** ಎಂದರೆ **"ತರ್ಪಯನ್ತ್ಯಙ್ಗಮಾಂ ವಿಶ್ವಮೇತೇ ಪೃಥುಕ ತಂಡುಲಾಃ"** ಕುಚೇಲನ ಅವಲಕ್ಕಿಯು ವಿಶ್ವಶರೀರಕನಾಗಿರುವ ನನಗೆ ಹೇಗೆ ಪರಮ ಸಂತುಷ್ಟಿಯನ್ನುಂಟುಮಾಡಿತೋ, ಹಾಗೆ ಪರಿಗ್ರಹಿಸುವೆನೆಂಬ ತಾತ್ಪರ್ಯವು. ಪತ್ರವು ಸಂತುಷ್ಟಿಯನ್ನುಂಟುಮಾಡಿದುದಕ್ಕೆ ಕೃಷ್ಣತುಲಾಭಾರದಲ್ಲಿ ಸುವರ್ಣಕ್ಕಿಂತ ತುಳಸೀದಳವು ಪ್ರಿಯವಾದುದನ್ನು ನಿದರ್ಶನವಾಗಿ ಭಾವಿಸಬಹುದು. ಪುಷ್ಪಮಾಲಾಕಾರನಾದ ಸುಧಾಮನ ಹಾರವಾಗಲಿ, ಗಜೇಂದ್ರನ ಕಮಲಪುಷ್ಪವಾಗಲಿ, ಗೋದಾ ಸಮರ್ಪಿಸಿದ ಪುಷ್ಪಹಾರಗಳಾಗಲಿ, ನಿದರ್ಶನಗಳು. ಶಬರಿಯಿಂದ **"ಮಯಾತು ವಿವಿಧಂವನ್ಯಂ ಸಂಚಿತಂ ಪುರುಷರ್ಷಭ"** (ರಾ ಅರ. ೭೪. ೧೭.) ಎಂದು ಹೇಳಿ ಶ್ರೀ ರಾಮಚಂದ್ರ ಪ್ರಭುವಿಗೆ ಸಮರ್ಪಿಸಲ್ಪಟ್ಟ ಫಲಗಳು ನಿದರ್ಶನವು. ಇದರಿಂದ ಶ್ರೀ ರಾಮಚಂದ್ರ ಪ್ರಭುವು **ಫಲಾನ್ಯಾಸ್ವಾದ್ಯಕಾಕುತ್ಸ್ಥಸ್ತಸ್ಯೈ ಮುಕ್ತಿಂ ಪರಾಂದದೌ"** ಎಂದು ಪ್ರೀತರಾಗಿ ಮುಕ್ತಿಯನ್ನಿತ್ತರೆಂಬ ಪಾದ್ಮವಾಕ್ಯವಿರುತ್ತದೆ. ಆದುದರಿಂದ ನಾವುಗಳೂ ಆರಾಧನೆಯ ಕಾಲದಲ್ಲಿ **"ಕೌಸಲ್ಯಾ ಕಲ್ಪಿತಂ ಗೇಹೇಕಾನನೇ ಲಕ್ಷ್ಮಣಾರ್ಪಿತಂ । ಪಂಪಾಯಾಂ ಶಬರೀ ದತ್ತಂ ಯದ್ಭರದ್ವಾಜಕಲ್ಪಿತಂ । ಯದರ್ಪಿತಂ ಕುಚೇಲೇನ ಯದ್ವೈವಿದುರ ಕಲ್ಪಿತಂ"** ಎಂದು ಹೇಳಿ, **"ಸ್ವೀಕುರುಷ್ವ"** ಎಂದು ಪ್ರಾರ್ಥಿಸುವುದು ಈ ಸಂದರ್ಭದಲ್ಲಿ ಅನುಸಂಧೇಯವು. ತೋಯಕ್ಕೆ ಲಕ್ಷ್ಮಣನು ವನವಾಸಾರಂಭ ಪ್ರಥಮದಿನ ರಾತ್ರಿಯಲ್ಲಿ ತಂದುಕೊಟ್ಟ ಉದಕವು ನಿದರ್ಶನವು. ಕಾಂಚೀ ಶ್ರೀ ವರದರಾಜರಿಗೂ ಪೆರಂದೇವಿತಾಯಾರಿಗೂ ನಮ್ಮ ಯತಿವರ್ಯರು ಸಮರ್ಪಿಸಿದ ಉದಕವೂ ಸಹ ನಿದರ್ಶನವೇ. ಇಲ್ಲಿ **ಪತ್ರಂ ಪುಷ್ಪಂ ಫಲಂ ತೋಯಮ್** ಎಂಬಲ್ಲಿ ಯಾವ ಪತ್ರವನ್ನೇ ಆಗಲಿ ಪುಷ್ಪವನ್ನೇ ಆಗಲಿ ವಿವೇಚನೆಯಿಲ್ಲದೆ ಭಕ್ತನು ಸಮರ್ಪಿಸಲು ಅನುಮತಿಯನ್ನಿತ್ತರೆಂದು ವಿಪರೀತಾರ್ಥವನ್ನು ಕಲ್ಪಿಸತಕ್ಕದ್ದಲ್ಲವು. ಅವು ಶಾಸ್ತ್ರವಿಹಿತವಾಗಿ ದೋಷವರ್ಜಿತಗಳಾಗಿಯೇ ಸಮರ್ಪಣೀಯವಾಗಿ ಇರತಕ್ಕದ್ದು ಆವಶ್ಯಕವು. ಶ್ರೀರಾಮಚಂದ್ರನು ಶಬರಿಯ ಎಂಜಲನ್ನು ತಿಂದನೆಂದು ಹೇಳುವುದೂ, ವಿದುರನು ಸ್ಪರ್ಶಿಸಿದ ಅನ್ನವನ್ನು ಶ್ರೀ ಕೃಷ್ಣನು ಭುಂಜಿಸಿದನೆಂದು ಹೇಳುವುದೂ, ಶಾಸ್ತ್ರನಿಬಂಧನೆಗಳಿಗೆ ಒಳಪಡದವರ ಮಾತುಗಳಾದುದರಿಂದ ಅನಾದರಣೀಯಗಳು. ದುರ್ಯೋಧನನಲ್ಲಿ ಶ್ರೀ

**ಭಾ. ಸರ್ವ ಸುಲಭಂ ಪತ್ರಂ ವಾ, ಫಲಂ ವಾ, ತೋಯಂವಾ ಯೋ**

ಕೃಷ್ಣಭಗವಾನರವರು ಎಳ್ಳಷ್ಟು ಕೂಡ ಶಾಸ್ತ್ರಾತಿಕ್ರಮವನ್ನು ತಾವು ಮಾಡುವದಿಲ್ಲವು, "**ನಾಹಂ ಕಾಮಾನ್ನ ಸಂರಂಭಾನ್ನ ದ್ವೇಷಾನ್ನಾರ್ಥ ಕಾರಣಾತ್ | ನಹೇತುವಾದಾಲ್ಲೋಭಾದ್ವಾ ಧರ್ಮಂ ಜಹ್ಯಾಂಕಥಂಚನ**" ಎಂದು ಪ್ರತಿಜ್ಞೆ ಮಾಡಿರುತ್ತಾರೆ. ಹಿಂದೆ ಭಕ್ತ್ಯಾಪ್ರಯಚ್ಛತಿ ಎಂದು ಪೂರ್ವಾರ್ಧದಲ್ಲಿ ಹೇಳಿದ್ದರೂ, **ಪ್ರಯತಾತ್ಮನಃ ಭಕ್ತ್ಯುಪಹೃತಂ** ಎಂದು ಉತ್ತರಾರ್ಧದಲ್ಲಿ ಪುನಃ ಭಕ್ತಿ ಶಬ್ದಪ್ರಯೋಗವು, ಅದು ತನಗೆ ಪ್ರಿಯವಾಗುವದಕ್ಕೆ ಭಕ್ತಿಯೇ ಪ್ರಾಧಾನ್ಯವೇ ವಿನಾ, ಸಮರ್ಪಿಸಿದ ಪದಾರ್ಥದ ಗೌರವಲಾಘವಗಳು ಕಾರ್ಯ ಕಾರಿಯಲ್ಲವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಅಥವಾ ಒಬ್ಬ ಅಧಿಕಾರಿಯು ಭಕ್ತಿಯಿಂದ ಏನೋ ಸಮರ್ಪಿಸಬಹುದು. ಆ ಸಮರ್ಪಣೆಯು ದುಷ್ಟನಾದ ದುರ್ಯೋಧನನ ರಾಜನ ಔತಣದ ಹಾಗೆ, ಲೋಕಹಿಂಸಕನಾಗಿರುವನಿಂದಾಗಲಿ ಅಥವಾ ವ್ಯಭಿಚಾರಸ್ತ್ರೀಯಿಂದಾಲಾಗಲಿ ಬಹು ಶ್ರದ್ಧೆಯಿಂದಲೇ ಮಾಡಲ್ಪಟ್ಟರೂ ತನಗೆ ಅಂತವು ಗ್ರಾಹ್ಯವಲ್ಲವೆಂದು ತಿಳಿಸುವದಕ್ಕಾಗಿ, ಆ ಸಮರ್ಪಿಸಿದವನು **ಪ್ರಯತಾತ್ಮಾ** ಮಹಾಪರಿಶುದ್ಧಾತ್ಮನಾಗಿ, ಅದು ಭಕ್ತಿಯಿಂದ ಸಮರ್ಪಿಸಲ್ಪಟ್ಟಿತು ಎಂದು ನನಗೆ ಒಪ್ಪಿಗೆಯಾದರೆ ಆಗ ಗ್ರಾಹ್ಯವಾಗುತ್ತದೆಂದು ತೋರಿಸುವದಕ್ಕಾಗಿ, **ಪ್ರಯತಾತ್ಮನಃ ಭಕ್ತ್ಯುಪಹೃತಂ** ಎಂಬಲ್ಲಿ ಭಕ್ತಿ ಶಬ್ದವನ್ನು ಇನ್ನೊಂದು ಸಲ ಪ್ರಯೋಗಿಸಿರುತ್ತಾರೆ. ಎಲ್ಲರೂ ಭಕ್ತಿಯಿಂದ ಸಮರ್ಪಿಸಿದುದೂ ಗ್ರಾಹ್ಯವಾಗುವದಿಲ್ಲವು. ಅವರು ಪರಿಶುದ್ಧಾತ್ಮರಾಗಿ ನನ್ನ ಭಕ್ತರಾಗಿದ್ದರೆ, ಸಮರ್ಪಿಸಿದುದು ಆಗ ಗ್ರಾಹ್ಯವು ; ಅದರಲ್ಲೂ ನಿತ್ಯಯುಕ್ತನಾದ ಮಹಾತ್ಮನಾದ ಜ್ಞಾನಿಯು ಸಮರ್ಪಿಸಿದುದು ಪರಮಗ್ರಾಹ್ಯವು ಆತನು ಸಮರ್ಪಿಸಿದರೆ ಸಾಕು ಎಂದು ಕಾದಿದ್ದು ಪರಿಗ್ರಹಿಸುವೆನೆಂಬ ಭಾವವು. **ಯೋಮೇ ಭಕ್ತ್ಯಾ ಪ್ರಯಚ್ಛತಿ** ಎಂದಿರುವದರಿಂದ ಇನ್ನೊಂದು ಸ್ವಾರಸ್ಯವನ್ನೂ ಗ್ರಹಿಸಬಹುದು. ಭಗವದಾರಾಧನೆಯು ನಿತ್ಯನೈಮಿತ್ತಿಕಗಳಲ್ಲಿ ಸೇರಿರುವ ಆಜ್ಞಾಕೈಂಕರ್ಯವಾದುದರಿಂದ ಅದನ್ನು ತಾನೇ ಮಾಡಬೇಕೆಂಬುದು **ಪ್ರಯಚ್ಛತಿ** ಎಂಬ ಪ್ರಯೋಗದಿಂದ ತೋರಿಬರುತ್ತದೆ. ಈಗಿನ ದೊಡ್ಡ ಮನುಷ್ಯರು ತಮಗೆ ಅವಕಾಶವಿಲ್ಲವೆಂದು ಹೇಳಿಕೊಂಡು ದೇವರ ಪೂಜೆಯನ್ನು ಇತರರ ಮೂಲಕವಾಗಿ ನಡೆಸುವದು ಸುತರಾಂ ಸರಿಯಲ್ಲವೆಂಬುದೂ, ಸೂಚಿತವು. ಇವನೇ ಸ್ವತಃ ಕೈಯಿಂದ ಸಮರ್ಪಿಸದಿದ್ದರೆ **ಭಕ್ತ್ಯಾ ಪ್ರಯಚ್ಛತಿ** ಹೇಗಾದೀತು ? ಅಂತಾದ್ದನ್ನು ಸರ್ವೇಶ್ವರನು ಹೇಗೆ ಪರಿಗ್ರಹಿಸುವನು ? ಲೋಕ ದೃಷ್ಟಾಂತದಲ್ಲೇ, ಸಾರ್ವಭೌಮನಿಗೆ ತಾನು ಮಾಡತಕ್ಕ ಕೈಂಕರ್ಯವನ್ನು ತ್ಯಜಿಸಿ, ಇನ್ನೊಬ್ಬರಿಂದ ಮಾಡಿಸಿದರೆ, ಸಾರ್ವಭೌಮ ಪ್ರೀತಿಯು ಹೇಗೆ ದೊರಕದೋ, ಹಾಗೆಯೇ ಇಲ್ಲಿಯೂ ಎಂದು ಭಾವಿಸತಕ್ಕದ್ದು. ಆದುದರಿಂದ ಅಂತಹ ಸಾರ್ವಭೌಮನಿಗೂ ಸಾರ್ವಭೌಮನಾದವನ ಆರಾಧನೆಯನ್ನು ಸ್ವಯಂ ಮಾಡತಕ್ಕದ್ದೇ ವಿನಾ ಅನ್ಯರಿಂದ ಮಾಡಿಸತಕ್ಕದ್ದಲ್ಲವು. ಸಾರ್ವಭೌಮರಾದರೂ ತಾವೇ ಯಥಾಶಕ್ತ್ಯಾ ಮಾಡತಕ್ಕದ್ದಾಗಿರುತ್ತದೆ. ಮಹಾರಾಜರಿಗೆ ತಮ್ಮ ಆಳಿನಮೂಲಕ ನಜರು ಸಮರ್ಪಿಸುವದು ಹೇಗೆ ಅಸಂಗತವೋ ? ಹಾಗೆಯೇ ಇತರರಿಂದ ಮಾಡಿಸಿದ ಗೃಹಾರಾಧನೆಯು ಅಸಂಗತವು ಎಂಬ ಭಾವವು. ದೇವಾಲಯದಲ್ಲಿ ತಾನು ಮಾಡತಕ್ಕದ್ದಲ್ಲವಾದುದರಿಂದ ಅರ್ಚಕನ ಮೂಲಕ ಆರಾಧನೆಯು ನ್ಯಾಯವು.

**ಭಾಷ್ಯಾರ್ಥವು** :— ಹಿಂದೆ ಮದ್ಯಾಜಿಗೂ ಅನ್ಯ ದೇವತಾಯಾಜಿಗೂ ಶ್ರಮವು ಒಂದೇ ರೀತಿಯಾದರೂ, ಫಲದಲ್ಲಿ ವ್ಯತ್ಯಾಸ ಉಂಟೆಂದು ಹೇಳಿದರು. ಮದ್ಯಾಜಿಯ ವಿಷಯದಲ್ಲಿ ಬಹು

**ಭಾ. ಭಕ್ತ್ಯಾ ಮೇ ಪ್ರಯಚ್ಛತಿ-ಅತ್ಯರ್ಥ ಮತ್ಪ್ರಿಯತ್ವೇನ ತತ್ಪ್ರದಾನೇನ ವಿನಾತ್ಮ ಧಾರಣ ಮಲಭಮಾನತಯಾ ತದೇಕ ಪ್ರಯೋಜನೋ ಯೋ ಮೇ ಪತ್ರಾದಿಕಂ ದದಾತಿ, ತಸ್ಯ ಪ್ರಯತಾತ್ಮನಃ ತತ್ಪ್ರದಾನೈಕಪ್ರಯೋಜನತ್ವರೂಪ ಶುದ್ಧಿಯುಕ್ತ**

ಸುಲಭನಾಗಿ ಪ್ರೀತನಾಗುವೆನೆಂದು ಈಗ ಹೇಳುತ್ತಾರೆ—ಮಹ್ಯಾಜಯು ನನ್ನ ಪ್ರೀತಿಯನ್ನು ಸಂಪಾದಿಸಿಕೊಳ್ಳುವಹಾಗೆ ಆರಾಧಿಸುವದು ಅತಿಸುಲಭವು. ಆ ಸೌಲಭ್ಯವು ನನ್ನ ಸರ್ವಾಂತರ್ಯಾಮಿತ್ವ ಜ್ಞಾನವಿಲ್ಲದ ದೇವ ಪಿತೃ ಭೂತ ಯಾಜಿಗಳಿಗೆ ದೊರಕುವದಿಲ್ಲವು. ಅವರುಗಳು ಶಾಸ್ತ್ರವಿಹಿತ ರೀತಿಯಲ್ಲಿ ತುಂಬಾ ಆಯಾಸಪಟ್ಟು ಆಯಾ ದೇವತೆಗಳನ್ನು ಆರಾಧಿಸಿ ತೃಪ್ತಿಪಡಿಸಬೇಕಾಗುತ್ತದೆಂಬುದೂ ಸೂಚಿತವು **ಸರ್ವಸುಲಭಂ** ಎಲ್ಲಾದಕ್ಕಿಂತಲೂ ಸುಲಭವಾದ ಎಂದರೆ ಅವುಗಳ ಆರ್ಜನೆಯಲ್ಲಿ ತುಂಬಾ ಪ್ರಯಾಸವು ಬೇಕಿಲ್ಲವೆಂಬುದು ಅಭಿಪ್ರಾಯವು. **ಪತ್ರಂ ವಾ**-ಪತ್ರವನ್ನೇಯಾಗಲಿ, ಪುಷ್ಪವನ್ನೇಯಾಗಲಿ, ಫಲವನ್ನೇಯಾಗಲಿ, **ತೋಯಂ ವಾ** ಉದಕವನ್ನೇಯಾಗಲಿ, ಮೂಲದಲ್ಲಿ ಇಲ್ಲದಿರುವ **ವಾ** ಎಂದು ವಿಕಲ್ಪಿಸಿ ಯಾವುದಾದರೂ ಒಂದನ್ನೇ ಸಮರ್ಪಿಸಿದರೆ ಸಾಕೆಂಬ ಅರ್ಥವನ್ನು ಹೇಳಲು ಕಾರಣವೇನೆಂದರೆ, ಸಮಾಸಪದವಲ್ಲದೆ ಪ್ರತ್ಯೇಕವಾಗಿ ವಿಭಕ್ತಿಯೊಂದಿಗೆ ಪ್ರತಿಯೊಂದೂ ಹೇಳಿರುವದರಿಂದ ಎಂದು ಊಹಿಸತಕ್ಕದ್ದು ; ಒಂದು ಮರದಲ್ಲಿ ಮೊದಲು ಎಲೆಯೂ ಅನಂತರ ಪುಷ್ಪವೂ ಕೊನೆಗೆ ಫಲವೂ ಉತ್ಪತ್ತಿಯಾಗುವದರಿಂದ ಆ ಕ್ರಮವೇ ಇಲ್ಲಿಯೂ ಅನುಸರಿಸಲ್ಪಟ್ಟಿತು. ಇವೆಲ್ಲಾ ಹೇಳಿ ಕೊನೆಗೆ **ತೋಯ** ಎಂದರೆ ಉದಕವನ್ನು ಹೇಳಿದುದರಭಿಪ್ರಾಯವೇನೆಂದರೆ, ಪತ್ರ ಪುಷ್ಪ ಫಲಗಳ ಸಂಪಾದನೆಯೇ ಸುಲಭವು; ಆದರೆ ಅವುಗಳಿಗೂ ಒಂದು ವೇಳೆ ಅವಕಾಶವಿಲ್ಲದಿದ್ದರೆ, ಉದಕವೇ ಸಾಕು, ಅರ್ಘ್ಯಪಾದ್ಯಾಚಮನಗಳನ್ನು ಸಮರ್ಪಿಸಿದರೆ ಸಾಕೆಂಬ ಭಾವವು. ಅವತರಿಸಿರುವ ಶ್ರೀ ಕೃಷ್ಣನಾದ ತಾನು ಹೇಗೆ ತೋಯದಿಂದ ಪ್ರೀತನಾಗುವನೆಂಬುದು ಶ್ರೀ ವಿದುರರಿಂದ ಧೃತರಾಷ್ಟ್ರನಿಗೆ ಉಪದೇಶಿಸಲ್ಪಟ್ಟಿರುತ್ತದೆ. ಹೇಗೆಂದರೆ, **ಅನ್ಯತ್ಕುಂಭಾ ದಪಾಂಪೂರ್ಣಾ ದನ್ಯತ್ಪಾದಾವಸೇಚನಾತ್ । ಅನ್ಯತ್ಕುಶಲಸಂಪ್ರಶ್ನಾ ನ್ನ ಚೇಚ್ಛತಿ ಜನಾರ್ದನಃ"** (ಭಾರ. ಉದ್ಯೋಗ. ೮೭. ೧೩.) ಭಕ್ತಿಯಿಂದ ಪಾದ್ಯಾದ್ಯರ್ಘ್ಯಪೂರ್ಣ ಉದಕುಂಭವನ್ನಲ್ಲದೆ ಇನ್ನಾವುದನ್ನೂ, ಅಥವಾ ಉದಕದಿಂದ ಪಾದಗಳನ್ನು ತೊಳೆಯುವದಲ್ಲದೆ ಇನ್ನಾವುದನ್ನೂ ಅಥವಾ ಪ್ರೀತಿಯಿಂದ ಕುಶಲಪ್ರಶ್ನೆಯನ್ನಲ್ಲದೆ ಇನ್ನು ಯಾವುದನ್ನಾಗಲಿ ಶ್ರೀ ಕೃಷ್ಣನು ಅಪೇಕ್ಷಿಸುವದಿಲ್ಲವು. ಹೀಗೆ ಅತಿ ಸುಲಭನಾಗಿ ಸನ್ನಾನಿಸಲ್ಪಟ್ಟೆನೆಂದು ಭಾವಿಸುವನೆಂಬ ಭಾವವು. ಈ ಅಭಿಪ್ರಾಯವೇ ಪಾಂಚರಾತ್ರದಲ್ಲಿ **"ಅಣ್ವಪ್ಯುಪಾಹೃತಂ ಭಕ್ತ್ಯೈಃ ರ್ಮಮಭೋಗಾಯ ಜಾಯತೇ। ಭೂರ್ಯಪ್ಯಭಕ್ತ್ಯೋಪಹೃತಂ ನಮೇ ಭೋಗಾಯ ಜಾಯತೇ"** ಎಂದೂ, ಭಾಗವತದಲ್ಲಿ ಕುಚೇಲೋಪಾಖ್ಯಾನದಲ್ಲಿ, **"ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್। ಭೂರ್ಯಪ್ಯ ಭಕ್ತೋಪಹೃತಂ ನಮೇ ತೋಷಾಯ ಕಲ್ಪತೇ॥** ಎಂದೂ ಹೇಳಲ್ಪಟ್ಟಿರುತ್ತದೆ. ಪೂರ್ವಾರ್ಧಕ್ಕೆ ಕುಚೇಲರ ಪೃಥಕ ತಂಡುಲವು ನಿದರ್ಶನವು, ಉತ್ತರಾರ್ಧಕ್ಕೆ ದುರ್ಯೋಧನನ ಮಹಾಸಮೃದ್ಧಿಯುಳ್ಳ ಔತಣದ ನಿರಾಕರಣೆಯು ನಿದರ್ಶನವು ; **ಮೇ ಪ್ರಯಚ್ಛತಿ -** ನನಗೆ ಭಕ್ತಿಯಿಂದ ಸಮರ್ಪಿಸುತ್ತಾನೋ, ಈ ಪ್ರದಾನದ ಅಭಿಪ್ರಾಯವೇನೆಂಬುದನ್ನು ವ್ಯಕ್ತಪಡಿಸುತ್ತಾರೆ, **ಅತ್ಯರ್ಥ ಮತ್ಪ್ರಿಯತ್ವೇನ -** ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ನನಗೆ ಪ್ರಿಯನಾದುದು ಎಂಬ ಭಾವನೆಯಿಂದ, ಇದು **ಭಕ್ತ್ಯಾ** ಎಂಬ ಪದದಿಂದ ತೋರಿಬರುವ ಅರ್ಥವು, **ತತ್ಪ್ರದಾನೇನ ವಿನಾ - ಪತ್ರ** ಪುಷ್ಪಾದಿಗಳಲ್ಲಿ ಯಾವುದಾದರೂ ಒಂದನ್ನು ಸಮರ್ಪಿಸದೇ ಇದ್ದ ಪಕ್ಷದಲ್ಲಿ, ಆತ್ಮಧಾರಣ

**ಭಾ. ಮನಸಃ, ತತ್-ತಥಾ ವಿಧ ಭಕ್ತ್ಯುಪಹೃತಂ ಅಹಂ ಸರ್ವೇಶ್ವರೋ ನಿಖಿಲ ಜಗದುದಯ ವಿಭವಲಯ ಲೀಲೋऽವಾಪ್ತಸಮಸ್ತಕಾಮ ಸ್ಸತ್ಯಸಙ್ಕಲ್ಪೋऽ ನವಧಿಕಾತಿಶಯಾಸಂಖ್ಯೇಯ ಕಲ್ಯಾಣಗುಣಗಣ ಸ್ಸ್ವಾಭಾವಿಕಾನವಧಿಕಾತಿಶಯಾನಂದ ಸ್ವಾನುಭವೇ ವರ್ತಮಾನೋऽಪಿ, ಮನೋರಥಪಥ ದೂರವರ್ತಿಪ್ರಿಯಂ ಪ್ರಾಪ್ಯೇ**

ವನ್ನು, **ಅಲಭಮಾನತಯಾ** - ಹೊಂದದೇ ಇರುವದರಿಂದ, **ತದೇಕ ಪ್ರಯೋಜನಃ** - ಆ ಸಮರ್ಪಣೆಯೇ ಸ್ವಯಂ ಪ್ರಯೋಜನವಾಗಿ, ಎಂದರೆ ಇನ್ನು ಯಾವ ಫಲವನ್ನೂ ಕೋರದೆ ಎಂಬ ಭಾವವು, **ಯಃ** - ಯಾವ ಮಹಾತ್ಮನು, **ಮೇ** - ನನಗೆ, ಪತ್ರಾದಿಗಳನ್ನು, **ದದಾತಿ**- ಕೊಡುತ್ತಾನೋ, **ತಸ್ಯ** - ಅಂತಹ, **ಪ್ರಯತಾತ್ಮನಃ** - ಪರಿಶುದ್ಧಾತ್ಮನಾದ, ಹೇಗೆ ಪರಿಶುದ್ಧನೆಂದರೆ, **ತತ್ಪ್ರದಾನೈಕ ಪ್ರಯೋಜನತ್ವ ರೂಪಶುದ್ಧಯುಕ್ತ ಮನಸಃ** - ಆ ಪತ್ರಾದಿಯನ್ನು ಸಮರ್ಪಿಸುವದೇ ಪರಮ ಪ್ರಯೋಜನವೆಂದು ಭಾವಿಸಿರುವದರಿಂದ ಪರಿಶುದ್ಧ ಮನಸ್ಕನ, **ತತ್** - ಅದನ್ನು, **ಭಕ್ತ್ಯುಪಹೃತಂ** - ಭಕ್ತಿಯಿಂದ ಸಮರ್ಪಿಸಲ್ಪಟ್ಟುದರಿಂದಲೇ, **ಅಹಂ** - ನಾನು, **ಅಶ್ನಾಮಿ**-ಭುಜಿಸುವೆನು, ಅಙ್ಗೀಕರಿಸುವೆನು, **"ಪತ್ರೇಷು ಪುಷ್ಪೇಷು ಫಲೇಷು ತೋಯೇಷ್ವಕ್ರೀತಲಭ್ಯೇಷು ಸದೈವ ಸತ್ಸು। ಭಕ್ತ್ಯೈಕಲಭ್ಯೇ ಪುರುಷೇಪುರಾಣೇ ಮುಕ್ತ್ಯೈ ಕಿಮರ್ಥಂಕ್ರಿಯತೇ ನಯತ್ನಃ?"** ಎಂಬ ನಾರಸಿಂಹ ಪುರಾಣ ಶ್ಲೋಕವು ಅನುಸಂಧೇಯವು ಸುಲಭಸಾಧ್ಯವಾದ ಪತ್ರಪುಷ್ಪಾದಿಗಳೂ ಯಾವಾಗಲೂ ಇವೆ, ಇವುಗಳನ್ನು ತುಂಬಾ ಭಕ್ತಿಯಿಂದ ಸಮರ್ಪಿಸಿದರೆ ಪುರಾಣಪುರುಷನು ಸುಲಭದಿಂದ ಲಭ್ಯನು, ಹೀಗಿದ್ದರೂ ಮುಕ್ತಿಗಾಗಿ ಏಕೆ ಯತ್ನಿಸುವದಿಲ್ಲವೋ ತಿಳಿಯದು ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ **ಅಶ್ನಾಮಿ** ಎಂಬುದು ಉತ್ತಮ ಪುರುಷವಾಗಿರುವದರಿಂದ, **ಅಹಂ** ಎಂಬುದು ಸ್ಪಷ್ಟವು ಆದರೂ **ಅಹಂ ಅಶ್ನಾಮಿ,** ನಾನು ಸ್ವೀಕರಿಸುವೆನು ಎಂದು ಎದೆ ಮುಟ್ಟಿ ಹೇಳುವದರಿಂದ, ಅಸ್ಮಚ್ಛಬ್ದದಿಂದ ಪ್ರತಿಪಾದಿತಾರ್ಥವನ್ನು ವ್ಯಕ್ತಪಡಿಸುತ್ತಾರೆ—ನಾನು ಸಮಸ್ತರ ಹೃದಯಭಾವವನ್ನುಗ್ರಹಿಸುವ ಶಕ್ತಿಯುಳ್ಳವನು. ಸಮರ್ಪಿಸುವವನ ಭಕ್ತಿಯ ಅತಿಶಯವನ್ನು ತಿಳಿಯುವವನು; ಇತರ ದೇವತೆಗಳಿಗೆ ಆ ಶಕ್ತಿ ಇಲ್ಲವು. ರುದ್ರನಿಗೆ ಪರಮಾತ್ಮನಷ್ಟು ಸರ್ವಜ್ಞತೆ ಇಲ್ಲದುದರಿಂದ ಭಸ್ಮಾಸುರನಿಗೆ ತಲೆಯಮೇಲೆ ಕೈಯಿಟ್ಟರೆ ಭಸ್ಮನಾಗುವಹಾಗೆ ವರವನ್ನು ಕೊಟ್ಟುಬಿಟ್ಟು, ಕ್ಲೇಶವನ್ನು ಹೊಂದಿ ಶ್ರೀ ಮಹಾವಿಷ್ಣುವಿನ ಕೃಪೆಯಿಂದ ವಿಪತ್ತಿನಿಂದ ತಪ್ಪಿಸಿಕೊಂಡನು, **ಅಹಂ** ನಾನು ಎಂತವನೆಂದರೆ, **ಸರ್ವೇಶ್ವರನು** - ಸಮಸ್ತಕ್ಕೂ ಸ್ವಾಮಿಯಾಗಿ ಸಮಸ್ತವನ್ನೂ ವ್ಯಾಪಿಸಿ ಸಮಸ್ತವನ್ನು ನಿಯಮಿಸುವ ಶಕ್ತಿಯುಳ್ಳವನು, ಸಮಸ್ತರ ಹೃದಯ ಭಾವವನ್ನು ಗ್ರಹಿಸುವ ಶಕ್ತಿಯುಳ್ಳವನು. ಸಮರ್ಪಿಸುವವನ ಭಕ್ತಿಯ ಪರಿಮಿತಿಯನ್ನು ತಿಳಿಯುವ ಯೋಗ್ಯತೆಯುಳ್ಳವನು; ಅನ್ಯ ದೇವತೆಗಳಾದ ಬ್ರಹ್ಮರುದ್ರೇಂದ್ರಾದಿಗಳಿಗೆ ಈ ಶಕ್ತಿಯು ಇಲ್ಲವು. ಬ್ರಹ್ಮನು ಹಿರಣ್ಯಕಶಿಪು, ರಾವಣಾದಿಗಳ ಹೃದಯವನ್ನು ತಿಳಿಯದೆ ಕೋರಿದ ವರಗಳನ್ನು ಕೊಟ್ಟು ಲೋಕಕ್ಕೆ ದುಃಖವನ್ನುಂಟು ಮಾಡಿದನು. **ನಿಖಿಲ ಜಗದುದಯವಿಭವಲಯಲೀಲಃ** - ಸಮಸ್ತ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳೇ ಲೀಲೆಯಾಗಿವುಳ್ಳ, ಅವಾಪ್ತ ಸಮಸ್ತ ಕಾಮನು, ಆದುದರಿಂದ ಈ ಪತ್ರ ಪುಷ್ಪ ಫಲಾದಿಗಳಿಂದ ನನಗೇನೂ ಪ್ರಯೋಜನವಿಲ್ಲದಿದ್ದರೂ ಎಂಬ ಭಾವವು; ಅಥವಾ ಒಂದು ವೇಳೆ ಬೇಕಾದರೂ ಒದಗಿಸಿಕೊಳ್ಳುವ ಶಕ್ತಿಯುಳ್ಳವನೆಂದು, ಸತ್ಯಸಙ್ಕಲ್ಪನು ಎಂದು ಹೇಳಲ್ಪಟ್ಟಿತು; ಹಾಗಾದರೆ ಅದೇನು ಪರಿಗ್ರಹಿಸುತ್ತೀ ಎಂದರೆ, **ಅಸಂಖ್ಯೇಯ ಕಲ್ಯಾಣ ಗುಣ ಗಣಃ** - ಅಸಂಖ್ಯೇಯಗಳಾದ ದಯಾ ವಾತ್ಸಲ್ಯ ಸೌಲಭ್ಯ ಔದಾರ್ಯಾದಿ ಮಹತ್ತಾದ ಕಲ್ಯಾಣ

ಗುಣಗಳ ಸಮೂಹಗಳುಳ್ಳವನು, **ಅನವಧಿಕಾ....ವರ್ತಮಾನೋಽಪಿ** - ಅವಧಿಯಿಲ್ಲದ ಅತಿಶಯವಾದ ಆನಂದದ ಸ್ವಾನುಭವದಲ್ಲಿದ್ದರೂ ಕೂಡ, **ಮನೋರಥಪಥದೂರವರ್ತಿ ಪ್ರಿಯಂ ಪ್ರಾಪ್ಯೇವಾ ಶ್ನಾಮಿ** - ತನಗೆ ಅಭಿಲಷಿತವಾದುದಕ್ಕೆ ತುಂಬಾ ದೂರವಾಗಿದ್ದ ಪ್ರಿಯವಸ್ತುವನ್ನು ಹೊಂದಿದ ರೀತಿ ಪರಿಗ್ರಹಿಸುವೆನು. ಇಲ್ಲಿ **ಫಲಂವಾ ತೋಯಂವಾ** ಅಶ್ನಾಮಿ ಎಂದರೆ ಸರಿಹೋಗುತ್ತದೆ. ಆದರೆ **ಪತ್ರಂವಾ ಪುಷ್ಪಂವಾ ಅಶ್ನಾಮಿ** ಎಂದು ಹೇಳಿರುವದು ಹೇಗೆ? ಎಂದರೆ ದಾರಿದ್ರ್ಯದಿಂದಲೋ, ಮಾಡುವ ಕಷ್ಟದಿಂದಲೋ, ಭಗವನ್ನಿವೇದನಕ್ಕೆ ಯೋಗ್ಯವಾದ ಭಕ್ಷ್ಯ ಭೋಜ್ಯಾನ್ನಾದಿಗಳ ಅಭಾವವಿದ್ದರೂ ಭಕ್ತನು ನಿರತಿಶಯ ಪ್ರೀತಿಯಿಂದ ಸಮರ್ಪಿಸಿದ ಪತ್ರ ಪುಷ್ಪಗಳನ್ನೇ ನಿವೇದನವಾಗಿ ಭಾವಿಸುವೆನೆಂಬ ತಾತ್ಪರ್ಯವು. **ನಿವೇದನಾರ್ಥಂ ತುಳಸೀದಳಂ ಸಮರ್ಪಯಾಮಿ** ಎಂದು ಭಕ್ತನು ಹೇಳಿದರೆ, ಅದನ್ನೇ ನಿವೇದನವನ್ನಾಗಿ ಭಾವಿಸಿ ಅಶ್ನಾಮಿ ಎಂದು ಹೇಳಲ್ಪಟ್ಟಿತು. ಅಂತಹ ನಿರತಿಶಯ ಪ್ರೀತಿಯಿಂದ ಸಮರ್ಪಿಸಿದನ್ನೇ ಫಲಾಂತರಾಕಾಂಕ್ಷೆಯಿಂದ ಸಮರ್ಪಿಸಿದರೆ, ಕೇವಲ ಅವರ ಪಾದದಲ್ಲಿ ಈ ಪತ್ರ, ಪುಷ್ಪಗಳು ಸುಮ್ಮನೇ ಬೀಳುತ್ತವೇ ವಿನಾ, ಸ್ವಾಮಿಯ ಪ್ರೀತಿ ಸಂಪಾದಕಗಳಾಗುವದಿಲ್ಲವು. ನಿರತಿಶಯ ಭಕ್ತಿಯಿಂದ ಅವೇ ಸಮರ್ಪಿಸಲ್ಪಟ್ಟರೇನೇ ಆತನು ಬಹು ಪ್ರೀತನಾಗಿ **"ತತ್ಸರ್ವಂ ಶಿರಸಾ ಪ್ರತಿಗೃಹ್ಣಾತಿ"** ಅದನ್ನು ಶಿರಸಾ ಪರಿಗ್ರಹಿಸುವನು. ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ **ಯಃ** ಎಂದು ಉದ್ದೇಶಿಸಿ ಹೇಳಲ್ಪಟ್ಟ ಅಧಿಕಾರಿಯು ಭಕ್ತಿಯೋಗನಿಷ್ಠನಾದ ಜ್ಞಾನಿಯೇ ಆದರೂ, **ಯಃ** ಎಂಬುದರಿಂದ, ಸಾರ್ವತ್ರಿಕನಾಗಿಯೂ ಅನ್ವಯಿಸುತ್ತದೆಂಬ ಭಾವವೂ ತೋರುತ್ತದೆ. ಏಕೆಂದರೆ ಮುಂದೆ ೩೨ ನೆಯ ಶ್ಲೋಕದಲ್ಲಿ **"ಮಾಂ ಹಿ ಪಾರ್ಥವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ। ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ ಸ್ತೇಽಪಿಯಾನ್ತಿ ಪರಾಂ ಗತಿಂ॥** ಎಂದು ಹೇಳಿರುವದರಿಂದ ಯಾರೇ ಆಗಲಿ, ಅವರು ಎಷ್ಟೇ ಪಾಪಿಷ್ಠರಾಗಲಿ, ಹೀಗೆ ಪತ್ರಪುಷ್ಪಾದಿಗಳಿಂದ ಆರಾಧಿಸಿ ನನ್ನನ್ನು ಆಶ್ರಯಿಸಿದುದಾದರೆ, ಕ್ರಮೇಣ ಮುಕ್ತಿಯನ್ನು ಹೊಂದುವರೆಂಬ ಅಭಿಪ್ರಾಯವು ಇದೇ **"ನಹಿ ಕಲ್ಯಾಣಕೃತ್ಕಶ್ಚಿತ್"** ಮತ್ತು **"ಸ್ವಲ್ಪ ಮಪ್ಯಸ್ಯ ಧರ್ಮಸ್ಯ"** ಎಂಬಲ್ಲಿ, ಹೇಳಲ್ಪಟ್ಟಿರುತ್ತದೆ. ಇಂತಹ ಆರಾಧನೆಯನ್ನೂ ಉಪಕಾರವೆಂದೇ ಭಾವಿಸಿ **"ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ"** ಸಮರ್ಪಿಸಿದವುಗಳನ್ನೆಲ್ಲಾ ಪರಿಗ್ರಹಿಸಿ ಅನುಗ್ರಹಿಸುತ್ತಾನೆಂದು ಮಹರ್ಷಿಯೂ ವ್ಯಕ್ತಪಡಿಸಿರುತ್ತಾರೆ. ಇಲ್ಲಿ **ಪ್ರಯತಾತ್ಮನಃ** ಎಂಬುದರ ವ್ಯಾಖ್ಯಾನದಲ್ಲಿ **"ತತ್ಪ್ರದಾನೈಕಪ್ರಯೋಜನ"** ರೂಪವಾದುದೆಂದು ಹೇಳಿರುವದರಿಂದ, ಪರಮೈಕಾಂತಿಗೆ ಈ ವಿಧವಾದ ಪರಮಾತ್ಮ ಕೈಂಕರ್ಯವು ಸ್ವಯಂ ಪ್ರಯೋಜನವೆಂಬ, ಇನ್ನು ಯಾವ ದರಿದ್ರ ಫಲದಲ್ಲೂ ಸಕ್ತವಾಗದೇ ಇರುವದೇ ಮನೋ ಪಾರಿಶುದ್ಧ್ಯಕ್ಕೆ ಹೇತುವೆಂದು ಭಾವನೆಯಿಂದ ಹಾಗೆ **ಭಾಷ್ಯವನ್ನು** ಬರೆದಿರುತ್ತಾರೆ. ಇವುಗಳು ಪುಣ್ಯಕರ್ಮಗಳಾಗುತ್ತವೆಯಲ್ಲಾ, ಮನಸ್ಸು ಫಲದಲ್ಲಿ ಸಕ್ತನಾದರೆ ತಾನೇ ದೋಷವೇನು ಎಂದರೆ ಪುಣ್ಯಾಫಲವೂ ಬಂಧಕವಾಗಿ ಮನಸ್ಸಿಗೆ ಅಶುದ್ಧಿಯೇ, ಹೇಗೆಂದರೆ **"ತಪೋ ನಕಲ್ಕೋಽಧ್ಯಯನಂ ನಕಲ್ಕಃ ಸ್ವಾಭಾವಿಕೋವೇದ ವಿಧಿ ರ್ನಕಲ್ಕಃ। ಪ್ರಸಹ್ಯ ವಿತ್ತಾಹರಣಂ ನ ಕಲ್ಕಸ್ತಾನ್ಯೇವ ಭಾವೋಪಹತಾನಿ ಕಲ್ಕಃ"** (ಆದಿಪರ್ವ. ೧. ೩೦೧.) ಕೃಚ್ಛ್ರ ಚಾಂದ್ರಾಯಣಾದಿ ತಪಗಳಾಗಲಿ, ವೇದಾಧ್ಯಯನವಾಗಲಿ, ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮಗಳಾದ ವೇದವಿಧಿಗಳಾಗಲಿ, ಅನೇಕ ಕಷ್ಟಗಳನ್ನು ಸಹಿಸಿಕೊಂಡು ಧರ್ಮದಿಂದ ವಿತ್ತವನ್ನು ಸಂಗ್ರಹಿಸುವದಾಗಲಿ, ಪರಮ ಪುರುಷಾರಾಧನರೂಪವೆಂಬ ಭಾವದಿಂದ ಕೂಡಿದುದಾದರೆ ದೋಷವಾದುವಲ್ಲವು; ಆ ಭಾವನೆ ಇಲ್ಲದೇ ಹೋದರೆ ಅಗೀಗ ದೋಷವು ಎಂಬ ಭಾವವು. **ಭಕ್ತ್ಯಾ ಪ್ರಯಚ್ಛತಿ**

**ಭಾ. ವಾಶ್ನಾಮಿ ; ಯಥೋಕ್ತಂ ಮೋಕ್ಷಧರ್ಮೇ (೧) "ಯಾಃ ಕ್ರಿಯಾ ಸ್ಸಂಪ್ರಯುಕ್ತಾ ಸ್ಸ್ಯುರೇಕಾಂತಗತಬುದ್ಧಿಭಿಃ। ತಾಸ್ಸರ್ವಾಶ್ಶಿರಸಾದೇವಃಪ್ರತಿಗೃಹ್ಣಾತಿವೈಸ್ವಯಂ"ಇತಿ॥**

ಎಂದು ಮೊದಲುಹೇಳಿ, **ಭಕ್ತ್ಯುಪಹೃತಂ** ಎಂದು ಪುನಃ ಹೇಳಿರುವದು, ಭಗವಂತನ ಅನುಗ್ರಹಕ್ಕೆ ಭಕ್ತಿಯೇ ಮುಖ್ಯಕಾರಣವೆಂದು ತಿಳಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು. ಈ **ಭಕ್ತ್ಯುಪಹೃತಂ** ಎಂಬ ವಿಶೇಷಣಕ್ಕೆ **ತಥಾವಿಧ** ವೆಂಬ ಭಾಷ್ಯದ ಅಭಿಪ್ರಾಯವು, ಫಲಾಭಿಲಾಷೆಯುಳ್ಳವನು ಸಮರ್ಪಿಸುವದು ಭಕ್ತಿಯಿಂದಲೇ ಇರಬಹುದು, ಈ ಮಹಾತ್ಮನ ಭಕ್ತಿಯು ಅಂತಾದ್ದಲ್ಲವು, ಅತ್ಯರ್ಥ ಪ್ರೀತಿಯುಕ್ತವಾದುದು ಎಂದು ತಿಳಿಸುವದಕ್ಕಾಗಿ **ತಥಾವಿಧ** ವೆಂಬ ಪ್ರಯೋಗವು, ಈ **ತಥಾವಿಧ** ಪ್ರಯೋಗದಿಂದ, ನಾನೇನೂ ಪಕ್ಷಪಾತಿಯಲ್ಲವು, ಪಕ್ಷಪಾತದಿಂದ ಒಬ್ಬನನ್ನು ಹೆಚ್ಚಾಗಿಯೂ ಇನ್ನೊಬ್ಬನನ್ನು ಕಮ್ಮಿಯಾಗಿಯೂ ಪ್ರೀತಿಸುವ ದೋಷವು ನನ್ನಲ್ಲಿಲ್ಲವು; ಆದುದರಿಂದ ಅನುಗ್ರಹ ತಾರತಮ್ಯಕ್ಕೆ ಚೇತನನೇ ಕಾರಣವೇ ವಿನಾ ನಾನಲ್ಲವೆಂದು ಹೇಳಿಕೊಂಡರು. ಇದು ಮುಂದೆ ೨೯ ನೆಯ ಶ್ಲೋಕದಲ್ಲಿ ಉಪಪಾದಿತವು. ಇಲ್ಲಿ **ತಥಾವಿಧ ಭಕ್ತ್ಯುಪಹೃತಂ** ಎಂಬುದರಿಂದ ಇನ್ನೊಂದು ಸ್ವಾರಸ್ಯಾರ್ಥವೂ ಸೂಚಿತವು. ಇಲ್ಲಿ ಅಲ್ಪಗಳಾದ ಪತ್ರ ಪುಷ್ಪ ಫಲ ತೋಯಗಳೇಯಾಗಲಿ ಅಥವಾ ಮಹತ್ತಾದ ಭಂಗಾರ ವಜ್ರಗಳ ಆಭರಣ, ಪೀತಾಂಬರ, ಮೃಷ್ಟಾನ್ನ ಮೊದಲಾದವುಗಳೇ ಆಗಲಿ, ಯಾವುದೂ ಈ ಸಮರ್ಪಿಸುವ ಅಧಿಕಾರಿಯದಲ್ಲವು ಎಲ್ಲವೂ ಅಲ್ಪವಾಗಲಿ ಮಹತ್ತಾದುದೇ ಆಗಲಿ, ಕ್ರಯಬಾಳುವ ಉತ್ಕೃಷ್ಟವಾದುದೇ ಆಗಲಿ, ಕ್ರಯಬಾಳದೇ ಇರುವದೇ ಆಗಲಿ, ಎಲ್ಲವೂ ಸರ್ವೇಶ್ವರನದೇ. ರಾಜನಿಗೆ ನಿಜಭಕ್ತನಾದ ರಾಜಸೇವಕನು ಬಹು ಭಕ್ತಿಯಿಂದ ಇವು ರಾಜನಿಗೆ ಇಷ್ಟವಾದುವೆಂದು ಭಾವಿಸಿ, ಆತನ ಪದಾರ್ಥಗಳನ್ನೇ ಆತನಿಗೆ ಸಮರ್ಪಿಸಿ, ತಾನು ರಾಜಾನುಗ್ರಹಕ್ಕೆ ಪಾತ್ರನಾಗುವ ತೆರದಿ, ನಾವೂ ನಿಜಭಕ್ತಿಯಿಂದ ಸ್ವಾಮಿಯ ವಸ್ತುವನ್ನೇ ಸ್ವಾಮಿಗೆ ಸಮರ್ಪಿಸಿದರೆ, ಸರ್ವೇಶ್ವರಾನುಗ್ರಹವು ದೊರೆಯುವದರಲ್ಲಿ ಸಂದೇಹವಿಲ್ಲವು. ಆ ಅನುಗ್ರಹದ ಮಹಿಮೆಯು ಈತನು ಸಮರ್ಪಿಸಿದ ಭಕ್ತ್ಯನುಸಾರವೆಂಬುದು ಸಿದ್ಧವು. ಆದುದರಿಂದಲೇ **ತಥಾವಿಧ ಭಕ್ತ್ಯುಪಹೃತಂ** ಎಂದು ಹೇಳಲ್ಪಟ್ಟಿತು. ಸರ್ವವೂ ಈ ಪತ್ರಾದಿಗಳೆಲ್ಲವೂ ಆತನದೇ ಎಂಬಭಿಪ್ರಾಯವು, **ನಿಖಿಲ ಜಗದುದಯ ವಿಭವ ಲಯಲೀಲ**ವೆಂಬ ಪ್ರಯೋಗದಿಂದಲೂ ತೋರಿಬರುತ್ತದೆ. **ನಿರತಿಶಯಾನಂದಸ್ವಾನುಭವೇ ವರ್ತಮಾನೋಽಪಿ** ಎಂದು ಹೇಳಿರುವದರಿಂದ ಆನಂದಮಯಾಧಿಕರಣದಿಂದ ತೋರಿಬರುವ **ಸ್ವರೂಪತಃ ಗುಣತಶ್ಚ** ಆನಂದಮಯನು ಸರ್ವೇಶ್ವರನೆಂಬುದು ಸೂಚಿಸಲ್ಪಟ್ಟಿತು. **ಮನೋರಥ ದೂರವರ್ತಿಪ್ರಿಯಂ ಪ್ರಾಪ್ಯೇವ** ಎಂಬ ದೃಷ್ಟಾಂತದಿಂದ, ತುಂಬಾ ಆಸೆಯಿಂದ ಪದಾರ್ಥವು ಲಭಿಸಿದಂತೆ ಪರಿಗ್ರಹಿಸುವೆನು ಎಂದು ಕುಚೇಲರ ಪೃಥಕ ತಂಡುಲದಲ್ಲಿ ತಾನೇ ತೋರಿದ ಪರಮಾದರವು ಸೂಚಿಸಲ್ಪಟ್ಟಿತು. ಮೋಕ್ಷಧರ್ಮದಲ್ಲಿ (೩೫೩. ೬೪) "**ಪರಿಪೂರ್ಣೋಽಪಿ ಭಗವಾನ್ ಭಕ್ತೈರ್ಯತ್ಕಿಂಚಿದೀರಿತಂ । ಸಾಪೇಕ್ಷವತ್ತದಾದತ್ತೇ ತೇನ ಪ್ರೀತೋದದಾತ್ಯಲಮ್**" ಭಕ್ತನು ಸಮರ್ಪಿಸಿದುದನ್ನು, **ಸಾಪೇಕ್ಷವತ್** - ತನಗೆ ಅಪೇಕ್ಷಿತವಾದಹಾಗೆ ಭಾವಿಸಿ ಪರಿಗ್ರಹಿಸುವನೆಂದೂ, ಅದರಿಂದ ಪ್ರೀತನಾದ ಪರಿಪೂರ್ಣಕಾಮನು ಈತನಿಗೆ ತೃಪ್ತಿಯುಂಟಾಗುವಹಾಗೆ ಅದಕ್ಕೆ ಪ್ರತಿಯಾಗಿ ಕೊಡುವನು. ಅಲ್ಪಕ್ಕೆ ಬದಲಾಗಿ ಬಹುವಾಗಿ ಕೊಡುವನು. ಹೀಗೆ **ಅತ್ಯರ್ಥ ಪ್ರಿಯತ್ವ** ದಿಂದ ಸಮರ್ಪಿಸಿದುದನ್ನು ಸರ್ವೇಶ್ವರನು ಅತ್ಯರ್ಥಪ್ರಿಯಭಾವದಿಂದಲೇ ತಾನು ಪರಿಗ್ರಹಿಸುವನೆಂಬುದಕ್ಕೆ ಪ್ರಮಾಣವಾಗಿ ಶ್ರೀ ಯತಿವರ್ಯರು ಮೋಕ್ಷ

(೧) ಭಾರ. ಮೋಕ್ಷ. ೩೫೩. ೬೪.

**ಭಾ. ಅವ. ಯಸ್ಮಾತ್ ಜ್ಞಾನಿನಾಂ ಮಹಾತ್ಮನಾಂ ವಾಙ್ಮನಸಾ ಗೋಚರೋಽಯಂ ವಿಶೇಷಃ; ತಸ್ಮಾತ್ ತ್ವಂಚ ಜ್ಞಾನೀಭೂತ್ವೋಕ್ತಲಕ್ಷಣ ಭಕ್ತಿಭಾರಾವನಮಿತಾತ್ಮಾ ತ್ಮೀಯಃ ಕೀರ್ತನ ಯತನಾರ್ಚನ ಪ್ರಣಾಮಾದಿಕಂ ಸತತಂ ಕುರ್ವಾಣೋ ಲೌಕಿಕ ವೈದಿಕಂಚ ನಿತ್ಯನೈಮಿತ್ತಿಕಂ ಕರ್ಮಚೇತ್ಥಂ ಕುರ್ವಿತ್ಯಾಹ**—

ಧರ್ಮ ಪ್ರಮಾಣವನ್ನು ಮುಂದೆ ಉದಾಹರಿಸುತ್ತಾರೆ.—"**ಏಕಾನ್ತಗತಬುದ್ಧಿಭಿಃ** - ಏಕಾನ್ತವನ್ನು ಹೊಂದಿದ ಮನಸ್ಸಿನಿಂದ, ಪರಮಾತ್ಮಧ್ಯಾನ ಒಂದರಲ್ಲೇ ಸಕ್ತನಾದ ಬುದ್ಧಿಯುಳ್ಳವರಿಂದ, ಇದರಿಂದ ಅತ್ಯರ್ಥ ಭಕ್ತಿಯೇ ಮುಖ್ಯವಾದುದೆಂದೂ ಬೋಧಿಸಲ್ಪಟ್ಟಿತು, **ಯಾಃಕ್ರಿಯಾಃ** -ಯಾವ ಆರಾಧನ ರೂಪಕ್ರಿಯೆಗಳು, **ಸಂಪ್ರಯುಕ್ತಾಸ್ಸ್ಯುಃ** - ಚನ್ನಾಗಿ ಅನುಷ್ಠಿಸಲ್ಪಟ್ಟವೋ, **ತಾಃ ಸರ್ವಾಃ** - ಅವೆಲ್ಲವನ್ನೂ, **ದೇವಃ** - ಪರಮ ಮಹಾತ್ಮ್ಯೆಯಿಂದ ಪ್ರಕಾಶಿಸುವ ಭಗವಂತನು, ಅಥವಾ ಪರಿಪೂರ್ಣಕಾಮನಾಗಿ ಇವೆಲ್ಲವೂ ಒರೀ ಲೀಲೆಯಾಗಿರುವವನು, **ಸ್ವಯಮ್** - ತಾನೇ, ರಾಜನಿಗೆ ಯಾರಾದರೂ ದಾನ ನಿಂಬೆಹಣ್ಣುಗಳನ್ನು ಸಮರ್ಪಿಸಿದರೆ ಹತ್ತಿರವಿರುವ ಪರಿವಾರದಲ್ಲಿ ಯಾರನ್ನಾದರೂ ತೆಗೆದುಕೊಳ್ಳುವ ದಾನಮಾಡಬಹುದು, ಈತನಾದರೋ, ತಾನೇ ಸ್ವತಃ "**ಶಿರಸಾಪ್ರತಿಗೃಹ್ಣಾತಿ**" ಇತಿ-ಪರಮಾದರದಿಂದ ಶಿರಸಾ ವಹಿಸುವನೆಂದು **ಹೇಳಲ್ಪಟ್ಟಿ**ರುತ್ತದೆ. ಈತನು ಯಾವಾಗ ಏಕಾಂತ ಭಕ್ತಿಯಿಂದ ಸಮರ್ಪಿಸಿದನೋ, ಆಗ ಅದು ಪರಮ ಗ್ರಾಹ್ಯನಾಗಿ ಅದನ್ನು ತಾನೇ ಶಿರಸಾ ಪರಿಗ್ರಹಿಸುವನು ಎಂಬುದು ತಾತ್ಪರ್ಯವು. ಫಲಾಂತರದಲ್ಲಿ ಅಪೇಕ್ಷೆಯುಳ್ಳ ಅಧಿಕಾರಿಗಳು ಸಮರ್ಪಿಸಿದ್ದೆಲ್ಲಾ **ಸ್ವಯಂಶಿರಸಾ** ಗ್ರಾಹ್ಯನಾಗುವದಿಲ್ಲವು. ಇವೆಲ್ಲಾ ಸ್ವಾಮಿಯ ಚರಣಾರವಿಂದದಲ್ಲಿ ಸುಮ್ಮನೆ ಬೀಳುವುವು ಎಂದು (೧) **ತತ್ಸರ್ವಂ ದೇವದೇವಸ್ಯ ಚರಣಾವುಪತಿಷ್ಠತೇ**" ಎಂದು ಅದೇ ಪ್ರಕರಣದಲ್ಲೇ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು :**—ಮುಂದಿನ ಶ್ಲೋಕಕ್ಕೆ ಅವತಾರಿಕೆಯನ್ನು ದಯಪಾಲಿಸುವ ಸಂದರ್ಭದಲ್ಲಿ ಸಙ್ಗತಿಯು ಚನ್ನಾಗಿ ವ್ಯಕ್ತಪಡುವದಕ್ಕಾಗಿ, ಹಿಂದೆ ಹೇಳಿದುದನ್ನು ಅನುವಾದಮಾಡಿ ಹೇಳಿ, ಈ ಶ್ಲೋಕದಲ್ಲಿ ಹೇಳಲ್ಪಡುವದೇನೆಂಬುದನ್ನು ತಿಳಿಸುತ್ತಾರೆ. ಏಕಾಂತ ಭಕ್ತಿಯಿಂದ ಸತತಕೀರ್ತನಯತನಾರ್ಚನ ಪ್ರಣಾಮಾದಿಗಳನ್ನು ಮಾಡುತ್ತಿರುವ ಮಹಾತ್ಮನಲ್ಲಿ ತನಗಿರುವ ವಿಶೇಷವಾದ ಆದರವು ಹೇಳಲ್ಪಟ್ಟಿತು. ಇಂತಹ ಅಭಿಸಂಧಿಯೇ ಆತನಿಗಿರುವದರಿಂದ, ನೀನೂ ಸಹ, ಇಂತಹ ಭಕ್ತಿಯೋಗನಿಷ್ಠನಾಗಿ, ಎಲ್ಲಾ ಲೌಕಿಕ ವೈದಿಕ ಕರ್ಮಗಳನ್ನೂ ನನ್ನ ಪ್ರೀತ್ಯರ್ಥವಾಗಿಯೇ ಮಾಡುತ್ತಾ, ಅವುಗಳನ್ನೆಲ್ಲಾ ನನ್ನಲ್ಲೇ ಸಮರ್ಪಿಸು ಎಂದು ಉಪದೇಶಿಸುತ್ತಾರೆ. ಕರ್ಮ ಸನ್ಯಾಸ ಶಬ್ದದಿಂದ ಹೇಳಲ್ಪಟ್ಟ ತ್ಯಾಗವನ್ನೂ ಹೇಳಿ, ಸಮಸ್ತವನ್ನೂ ಭಗವಂತನಲ್ಲಿ ಸಮರ್ಪಿಸೋಣವು. ಈ ಶ್ಲೋಕದಲ್ಲಿ ಉಪದೇಶಿಸಲ್ಪಡುತ್ತದೆಂದು, ಅವತಾರಿಕೆಯನ್ನು ದಯಪಾಲಿಸಿರುತ್ತಾರೆ—**ಯಸ್ಮಾತ್** - ಯಾವಕಾರಣದಿಂದ, **ಜ್ಞಾನಿನಾಂ ಮಹಾತ್ಮನಾಂ** - ಜ್ಞಾನಿಗಳಾದ ಮಹಾತ್ಮರುಗಳಿಗೆ, **ವಾಙ್ಮನಸಾಗೋಚರಃ** - ವಾಕ್ಕಿಗೂ ಮನಸ್ಸಿಗೂ ಸಹ ಗೋಚರವಲ್ಲದಿರುವ, **ಅಯಂ** ವಿ**ಶೇಷಃ** - ಪರಮಾತ್ಮನು ಪರಮಾದರದಿಂದ ಸ್ವತಃ ಪರಿಗ್ರಹಿಸುವನೆಂಬ ಈ ವಿಶೇಷವಿರುತ್ತದೋ, **ತಸ್ಮಾತ್** - ಆ ಕಾರಣದಿಂದ, **ತ್ವಂಚ ಜ್ಞಾನೀಭೂತ್ವಾ**-ನೀನೂ ಸಹ ಮೋಕ್ಷಾರ್ಥಿಯಾದ ಜ್ಞಾನಿಯೇ ಆಗಿ, ಪರಮೈಕಾಂತಿ ಭಕ್ತಿಯೋಗನಿಷ್ಠನಾಗಿ ಎಂಬ ಭಾವವು; ಅದನ್ನೇ ವಿಶದೀಕರಿಸುತ್ತಾರೆ.- **ಉಕ್ತಲಕ್ಷಣ ಭಕ್ತಿಭಾರಾವನಮಿತಾ**

(೧) ಭಾರ. ಮೋಕ್ಷ. ೩೩೩. ೬೩.

**ತ್ಮೀಯಃ** - ಈಗ ನಿನಗೆ ಉಪದೇಶಿಸಿರುವ ಲಕ್ಷಣವುಳ್ಳ ಭಕ್ತಿಯೋಗನಿಷ್ಠೆಗೆ ಬೇಕಾದ ಭಕ್ತಿಯ ಭಾರದಿಂದ ಬಗ್ಗಿದ, ಭಗವಂತನಾದ ನನ್ನಲ್ಲಿ ಸಮರ್ಪಿಸಿದ ತನ್ನ ಆತ್ಮಾ ಮತ್ತು ತನಗೆ ಸಂಬಂಧಿಸಿದ ಎಲ್ಲವನ್ನೂ ಉಳ್ಳವನಾಗಿ ಎಂಬ ಭಾವವು; ಇದರಿಂದ ತಾನೂ, ತನಗೆ ಸಂಬಂಧಪಟ್ಟ ದಾರ ಸುತ ಗೇಹಕ್ಷೇತ್ರ ದ್ರವ್ಯಾದಿ ಸಮಸ್ತಗಳೂ ಭಗವಂತನಾದ ನನ್ನ ಸ್ವತ್ತೇ ಎಂಬ ಪ್ರಾಜ್ಞತೆಯನ್ನು ಹೊಂದಿ, ನನ್ನಲ್ಲಿ ಅವುಗಳನ್ನೆಲ್ಲಾ ಸಮರ್ಪಿಸಿದವನಾಗಿ, ಎಂಬರ್ಥವು ತೋರುವುದರಿಂದ, ಆತ್ಮಾತ್ಮೀಯ ಸಮರ್ಪಣ ರೂಪ ಶರಣಾಗತಿಯನ್ನು ಊಹಿಸಬಹುದು; ಕೀರ್ತನ, ಯತನ, ಅರ್ಚನ ಪ್ರಣಾಮ ಮೊದಲಾದವುಗಳನ್ನು **ಸತತಂ ಕುರ್ವಾಣಃ** - ಯಾವಾಗಲೂ ಐಕಾಂತ್ಯದಿಂದ ಮಾಡುವವನಾಗಿ, **ಲೌಕಿಕಂ ವೈದಿಕಂಚ** - ಸಮಸ್ತ ಲೌಕಿಕ ವೈದಿಕ ಕರ್ಮಗಳನ್ನೂ, **ನಿತ್ಯ ನೈಮಿತ್ತಿಕ** ಕರ್ಮಗಳನ್ನೂ ಸಹ, **ಇತ್ಥಂ** - ಈ ಪ್ರಕಾರವಾಗಿ ಎಂದರೆ ಮುಂದಿನ ಶ್ಲೋಕದಲ್ಲಿ ಹೇಳಿರುವ ರೀತಿಯಲ್ಲಿ, **ಕುರು** - ಮಾಡು **ಇತ್ಯಾಹ** - ಎಂದು ಹೇಳುತ್ತಾರೆ. ಇಲ್ಲಿ **ವೈದಿಕಂಚ ನಿತ್ಯ ನೈಮಿತ್ತಿಕ ಕರ್ಮ ಚ** ಎಂಬ ಪ್ರಯೋಗದಲ್ಲಿ, ನಿತ್ಯನೈಮಿತ್ತಿಕ ಕರ್ಮಗಳೂ ವೈದಿಕಗಳಾಗಿರುವಾಗ, **ವೈದಿಕಂಚ** ಎಂದು ಪೃಥಕ್ಕಾಗಿ ಹೇಳಿರುವುದು, ಏತಕ್ಕೆಂದರೆ ನಿತ್ಯ ನೈಮಿತ್ತಿಕ ಕರ್ಮಗಳನ್ನಂತೂ ಆಜ್ಞಾ ಕೈಂಕರ್ಯನಾಗಿ ಮಾಡಿಯೇ ತೀರಬೇಕೆಂಬುದನ್ನೂ ಜ್ಞಾಪಿಸುವುದಕ್ಕಾಗಿಯೂ, ಕರ್ಮಯೋಗಕ್ಕೆ ಸಂಬಂಧಿಸಿದುದಾಗಿ ಇತರ ವೈದಿಕ ಕರ್ಮಗಳನ್ನೂ ನಡೆಸಬೇಕಾಗುತ್ತದಲ್ಲಾ, ಅವುಗಳನ್ನು ತಿಳಿಸುವುದಕ್ಕಾಗಿಯೂ, ಹಾಗೆ ಪ್ರಯೋಗವು. ಗೋಬಲೀವರ್ದನ್ಯಾಯರೀತ್ಯಾ **ವೈದಿಕಂಚ** ಎಂಬುದರಿಂದ ನಿತ್ಯ ನೈಮಿತ್ತಿಕಗಳಲ್ಲದ ಇತರ ವೈದಿಕ ಕರ್ಮಗಳೆಂದು ಭಾವಿಸತಕ್ಕದ್ದು. **ಭಕ್ತಿಭಾರಾವನಮಿತ ಆತ್ಮಾತ್ಮೀಯಃ** - ಎಂಬ ಪ್ರಯೋಗವು, ಹಿಂದೆ ಅನೇಯ ಶ್ಲೋಕದಲ್ಲಿ ಉಪದೇಶಿಸಿದ ನಿರ್ವತೋಮುಖತ್ವ ಜ್ಞಾಪನಾರ್ಥವಾಗಿ ಎಂದು ತಿಳಿಯತಕ್ಕದ್ದು. ಭಕ್ತಿಯೋಗದ ಉಪಾಸನೆಗೆ ಬೇಕಾದ ಜ್ಞಾನವು ಯಾವುದೆಂದರೆ—ಸರ್ವೇಶ್ವರನು ಎಲ್ಲಕ್ಕೂ ಆತ್ಮನಾಗಿದ್ದಾನೆ, ಎಲ್ಲವೂ ಆತನ ಸ್ವತ್ತೇ, ಆದುದರಿಂದ ತಾನೂ ತನಗೆ ಸಂಬಂಧಿಸಿದ ಸಮಸ್ತವೂ ಆತನಿಗೆ ಸೇರಿದವೇ. ಪತ್ರ ಪುಷ್ಪ ಫಲ ತೋಯಗಳನ್ನೂ ಸಮರ್ಪಿಸುವಾಗ ಇವು ನನ್ನವು, ನಾನು ಸಮರ್ಪಿಸುತ್ತೇನೆಂಬ ಅಹಂಕಾರ ಮಮಕಾರಗಳು ಕೂಡದು; ಇವೆಲ್ಲವೂ ಸರ್ವೇಶ್ವರನವೇ, ಆತನು ಪ್ರೀತನಾಗಲಿ ಎಂಬ ಭಾವದಿಂದ ಭಕ್ತಿಪುರಸ್ಸರವಾಗಿ ಸಮರ್ಪಿಸುತ್ತೇನೆಂಬ ಭಾವನೆಯು ಆವಶ್ಯಕವೆಂದು ತೋರಿಸಿರುತ್ತಾರೆ. ಶ್ರೀ ಯಾಮುನೇಯರು ಹೇಳಿರುತ್ತಾರೇನೆಂದರೆ.—"**ಮಮ ನಾಥ ಯದಸ್ತಿ ಯೋಽಸ್ಮ್ಯಹಂ ಸಕಲ ತದ್ಧಿ ತವೈವ ಮಾಧವ। ನಿಯತ ಸ್ವಮಿತಿ ಪ್ರಬುದ್ಧಧೀ ರಥವಾ ಕಿನ್ನು ಸಮರ್ಪಯಾಮಿ ತೇ**" (ಸ್ತೋ. ೫೩.) ಇಲ್ಲಿ **ಮಮ ನಾಥ** ಎಂಬ ಪ್ರಯೋಗದಿಂದಲೇ ಆತನು ಸ್ವಾಮಿಯು, ನಾವೆಲ್ಲಾ ಆತನ ಸ್ವತ್ತು ಎಂದು ಹೇಳಿದಂತಾಯಿತು; ತಂದೆಗೆ ಸೇರಿದ ಸ್ವತ್ತನ್ನು ಮಗನ ಹೆಸರಿಗೆ ಮಾಡುವ ಹಾಗೆ ನನ್ನನಾಗಿ, 'ಇವಳು ನಿನ್ನ ಹೆಂಡತಿ ಇವು ಮಕ್ಕಳು, ಇದು ಕ್ಷೇತ್ರ, ಇದು ನಿನ್ನ ಗೃಹ, ಇದು ನಿನ್ನ ಧನ,' ಎಂದು ಹೇಳಿಕೊಟ್ಟರುತ್ತೀಯೇ. ಹೀಗೆ ನಾನೂ, ನನಗೆ ಸೇರಿದ ಇವೆಲ್ಲವೂ, ನಿನ್ನ ಸ್ವತ್ತು ಎಂಬಜ್ಞಾನವು, **ದದಾಮಿ ಬುದ್ಧಿಯೋಗಂ** ಎಂದು ಹೇಳಿರುವಹಾಗೆ ನೀನೇ ದಯಪಾಲಿಸಿದುದೋ, ಅಥವಾ ನೀನು ಕೃಪೆಗೈದು ಕೊಟ್ಟಿರುವ ಶಾಸ್ತ್ರಮೂಲಕವಾಗಿ ಉಂಟಾದುದೋ ಅಥವಾ ನೀನು ಒದಗಿಸಿಕೊಟ್ಟ ಗುರೂಪದೇಶ ಮೂಲಕವಾಗಿಯೋ, ಹೇಗೋ **ಪ್ರಬುದ್ಧಧೀಃ** - ಇಂತಹ ಸರ್ವೋತ್ಕೃಷ್ಟ ಜ್ಞಾನವುಳ್ಳವನಾಗಿದ್ದೇನೆ. ಹೀಗಿರುವಾಗ ನನ್ನದಾಗಿ ಸಮರ್ಪಿಸತಕ್ಕದ್ದೇನಿದೆ ಮಹಾನುಭಾವನೇ? ಎಂದು ಹೇಳಿಕೊಂಡಿರುತ್ತಾರೆ. ಈ ಅಭಿಪ್ರಾಯವು ಮುಖ್ಯವಾಗಿ ಜ್ಞಾನಿಯಾಗಿ ಭಕ್ತಿಯೋಗನಿಷ್ಠನಿಗೆ ಆವಶ್ಯಕವೆಂದು ತಿಳಿಸುವುದಕ್ಕಾಗಿ,

**ಮೂ. ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।**
**ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥** ೨೭.

**ಭಾರಾವನಮಿತ ಆತ್ಮಾತ್ಮೀಯಃ** ಎಂಬ ಪ್ರಯೋಗವು. **ಕೀರ್ತನ ಯತನಾರ್ಚನಾದಿ**ಗಳನ್ನು ಇಲ್ಲಿ ಅನುವಾದ ಮಾಡಿರುವದು ಹಿಂದೆ ೧೪ನೆಯ ಶ್ಲೋಕದಲ್ಲಿ ಈ ಜ್ಞಾನಿಗಳಾದ ಮಹಾತ್ಮರು ಗಳು ಸದಾ ಮಾಡುವ ವ್ಯಾಪಾರಗಳನ್ನು ಜ್ಞಾಪಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು. ಆದುದ ರಿಂದ ಎಲ್ಲವನ್ನೂ ಶ್ರೀ ಕೃಷ್ಣಾರ್ಪಣಮಸ್ತು ಎಂದು ನನ್ನಲ್ಲಿ ಸಮರ್ಪಿಸಿಬಿಡು ಎಂದು ಉಪ ದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :--ಯತ್ಕರೋಷಿ** - ನೀನು ದೇಹಯಾತ್ರಾದಿಗಳಿಗಾಗಿ ಯಾವ ವಿಹಿತ ಲೌಕಿಕ ಕರ್ಮವನ್ನು ಮಾಡುತ್ತೀಯೊ, ಇದು ಸಮಸ್ತಗಳಾದ ಶಾಸ್ತ್ರವಿಹಿತಗಳಾಗಿ ಅನು ಕೂಲಗಳಾಗಿ ಪ್ರಾಣಿಹಿತಕರಗಳಾದ ಲೌಕಿಕಕರ್ಮಗಳಿಗೂ ಉಪಲಕ್ಷಣವು. ಆದರೆ **ಇವೆಲ್ಲಾ** ಜ್ಞಾನಿಗೆ ಬೇಕಾದುವಲ್ಲವಾದುದರಿಂದ ಶ್ರೀ ಭಾಷ್ಯಕಾರರು ಇವುಗಳನ್ನು ಸೇರಿಸಿ ಭಾಷ್ಯ ಬರೆಯ ಲಿಲ್ಲವು. ಆದರೆ ಅರ್ಜುನನ ಮೂಲಕ ದುರ್ಯೋಧನಾದಿ ದುಷ್ಟರ ಸಂಹಾರಮಾಡಿಸುವದೂ ಲೋಕಸುಖಕರವಾಗಿರುವ ಕರ್ಮವಾದುದರಿಂದ ಅದನ್ನೂ ಕೂಡ ಸೇರಿಸಿಯೇ **ಯತ್ಕರೋಷಿ** ಎಂಬುದರಿಂದ ಹೇಳಲ್ಪಟ್ಟಿತೆಂದು ಭಾವಿಸಿದರೂ, ಶ್ರೀ ಭಾಷ್ಯಕಾರಾಭಿಪ್ರಾಯಕ್ಕೆ ವಿರೋಧ ವೇನೂ ಇಲ್ಲವು. **ಯದಶ್ನಾಸಿ** - ದೇಹಧಾರಣೆಗಾಗಿ ಶಾಸ್ತ್ರವಿಹಿತವಾದ **ಅ**ನ್ನವನ್ನು ತಿನ್ನುತ್ತೀ ಯೋ, ಇಲ್ಲಿ **ಅಶ್ನಾಸಿ -** ಎಂಬುದರಿಂದ ಉಪಭೋಗವಾಗಿ ಯಾವುದೂ ಹೇಳಲ್ಪಡಲಿಲ್ಲವು. ಏಕೆಂದರೆ ಭಕ್ತಿಯೋಗನಿಷ್ಠನಿಗೆ ಯಾವ ವಿಧ ಉಪಭೋಗವೂ ಬೇಕಿಲ್ಲವಷ್ಟೇ? ಅಪಹರಿಸಿದ ಧನದ ಮೂಲಕ ಬಂದ ಅನ್ನವಾಗಲಿ ಅಥವಾ ಶಾಸ್ತ್ರದುಷ್ಟವಾದ ಮದ್ಯ ಮೊದಲಾದವುಗಳನ್ನಾ ಗಲಿ ಸಮರ್ಪಿಸಲು ಅರ್ಹವಲ್ಲವಷ್ಟೇ? ಆದುದರಿಂದ **ಅಶ್ನಾಸಿ** ಎಂಬುದ ಸಂದರ್ಭದಲ್ಲಿ ಇವೆಲ್ಲಾ ವ್ಯಾವರ್ತಿಸಲ್ಪಟ್ಟವು. **ಯಜ್ಜುಹೋಷಿ -** ಯಾವ ಹೋಮವನ್ನೂ ಮಾಡುತ್ತೀಯೋ, **ದದಾಸಿಯತ್** - ಯಾವುದನ್ನು ಶಾಸ್ತ್ರರೀತ್ಯಾ ದಾನಮಾಡುತ್ತೀಯೋ, **ಯತ್ತಪಸ್ಯಸಿ** - ಯಾವ ತಪಸ್ಸನ್ನು ಮಾಡುತ್ತೀಯೋ, **ತತ್** - ಅದನ್ನು, **ಮದರ್ಪಣಂ** - ನನಗೆ ಸಮರ್ಪಿಸ ಲ್ಪಟ್ಟಿದುದಾಗಿ, **ಕುರುಷ್ವ** - ಮಾಡು. ಭಗವದರ್ಪಣವಾಗಬೇಕಾದರೆ ಪ್ರವೃತ್ತಿಯೆಲ್ಲಾ ಶಾಸ್ತ್ರ ವಿಹಿತವಾಗಿರಬೇಕು ಇಲ್ಲಿ ಹೇಳಿರುವ ಐದು ಕ್ರಿಯೆಗಳಲ್ಲಿ ಮೊದಲಿನ ಎರಡೂ ಲೌಕಿಕವ್ಯಾಪಾರ ಗಳಿಗೆ ಸಂಬಂಧಿಸಿದವು. ಅನಂತರವಿರುವ ಮೂರೂ ವೈದಿಕವ್ಯಾಪಾರಗಳಿಗೆ ಸಂಬಂಧಿಸಿದವಾಗಿ ರುತ್ತವೆ. ಇಲ್ಲಿ ಹೇಳಿರುವದು ಮುಖ್ಯವಾಗಿ ಜ್ಞಾನಿಯಾದ ಮಹಾತ್ಮನಿಗೆ ಪ್ರಕರಣಾನುಗುಣ ವಾಗಿ ಅನ್ವಯಿಸುವದಾಗಿದ್ದರೂ, ಎಲ್ಲಾ ಶ್ರೇಯಸ್ಕಾಮಿಗಳಿಗೂ ಇದು ಹಿತವಾದ ಉಪದೇಶ ವಾಗಿರುತ್ತದೆ. ಇಲ್ಲಿ **ಯತ್ಕರೋಷಿ** - ಎಂಬುದರಿಂದ ಭಗವಂತನ ಮುಖೋಲ್ಲಾಸರೂಪಗಳಾದ ವಿಹಿತ ಶುಭ ಕರ್ಮಗಳು ಹೇಳಲ್ಪಟ್ಟವೇ ಹೊರತು ಅಶುಭಗಳಾದ ಅಧರ್ಮಗಳಾದ ನಿಷಿದ್ಧಕರ್ಮಗಳು ಹೇಳಲ್ಪಡಲಿಲ್ಲವು. ಇಲ್ಲಿ **ಜುಹೋಷಿ** ಮೊದಲಾದವುಗಳಿಂದ ನಿತ್ಯ ನೈಮಿತ್ತಿಕ ಕರ್ಮಗಳೂ ಸಹ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಇಲ್ಲಿ **ಕುರುಷ್ವ ಮದರ್ಪಣಂ** ಎಂದು ಹೇಳಿರುವದರ ಅಭಿ ಪ್ರಾಯವೇನೆಂದರೆ ? ನನ್ನ ಪ್ರೀತ್ಯರ್ಥವಾಗಿ ಸಾತ್ವಿಕತ್ಯಾಗವನ್ನು ಹೇಳಿ ನನ್ನಲ್ಲಿ ಸಮರ್ಪಿಸ ತಕ್ಕದ್ದು ಎಂಬ ಭಾವವು. ಈ ಸಂದರ್ಭದಲ್ಲಿ ಮಂತ್ರರೂಪದಲ್ಲಿ ಹೇಳಲ್ಪಟ್ಟಿರುವ ಶ್ಲೋಕವು ಅನುಸಂಧೇಯವು. **"ಯತ್ಕರೋಮಿ ಯದಶ್ನಾಮಿ ಯಜ್ಜುಹೋಮಿ ದದಾಮಿಯತ್ । ಯತ್ತಪಸ್ಯಾಮಿ ಭಗವನ್ ತತ್ಕರೋಮಿ ತ್ವದರ್ಪಣಂ".** ಉಪಾಯಾನುಷ್ಠಾನ ಮಾಡುವವ ನಿಗೆ ಕರ್ಮ ಸನ್ಯಾಸರೂಪವಾದ ತ್ಯಾಗವು ಆವಶ್ಯಕವು. ಇದನ್ನು ಕೆಲವರು **"ಕಾಯೇನವಾಚಾ"**

**ಭಾ. ಯತ್-ದೇಹಯಾತ್ರಾಶೇಷಭೂತಂ ಲೌಕಿಕಂ ಕರ್ಮಕರೋಷಿ, ಯಚ್ಚ ದೇಹ ಧಾರಣಾಯಾ ಶ್ನಾಸಿ, ಯಚ್ಚ ವೈದಿಕಂ ಹೋಮ ದಾನ ತಪಃ ಪ್ರಭೃತಿ ನಿತ್ಯನೈಮಿತ್ತಿಕಂ ಕರ್ಮ ಕರೋಷಿ, ತತ್ಸರ್ವಂ ಮದರ್ಪಣಂ ಕುರುಷ್ವ; ಅರ್ಪ್ಯತೇ ಇತ್ಯರ್ಪಣಂ;**

ಎಂಬ ಸಷ್ಟ ವಿದಿತವಾದ ಭಗವಚ್ಛಾಸ್ತ್ರದ ಶ್ಲೋಕದಿಂದಲೂ, ಇನ್ನು ಕೆಲವರು "**ಭಗವಾನೇವ ಸ್ವನಿಯಾಮ್ಯ ಸ್ವರೂಪ ಸ್ಥಿತಿ ಪ್ರವೃತ್ತಿ ಸ್ವಶೇಷತೈಕರಸೇನ ಮಯಾಸ್ವಕೀಯೈ ಶ್ಚೋಪಕರಣೈಸ್ಸ್ವಾರಾಧನೈಕ ಪ್ರಯೋಜನಾಯ ಪರಮ ಪುರುಷಸ್ಸರ್ವಶೇಷೀ ಸ್ವಶೇಷಭೂತಮಿದಂಕರ್ಮಸ್ವಸ್ಮೈ ಸ್ವಪ್ರೀತಯೇ ಸ್ವಯಮೇವಕಾರಿತವಾನ್**" ಎಂದು ಕರ್ತೃತ್ವ ಫಲಾದಿಗಳ ತ್ಯಾಗವನ್ನು ಹೇಳುವರು. ಕರ್ತೃತ್ವತ್ಯಾಗವನ್ನು ಹೇಳುವದೇನೋ **ಸರಿಯೇ**, ಆದರೆ ಸರ್ವೇಶ್ವರನು ಕರ್ತೃತ್ವವನ್ನು ಈ ಮನುಷ್ಯನಿಗೆ ಕೊಟ್ಟಿದ್ದಾನೆಯೋ ಇಲ್ಲವೇ ಎಂಬ ವಿಷಯದಲ್ಲಿ ಕರ್ತೃತ್ವವನ್ನು ಕೊಟ್ಟಿದ್ದಾನೆಂದು **ಕರ್ತಾ ಶಾಸ್ತ್ರಾರ್ಥವತ್ವಾತ್** ಸೂತ್ರದಲ್ಲಿ ಉಪಪಾದಿತವು. ಹೀಗೆ ಹೇಳಿವರೇನೇ ಶಾಸ್ತ್ರಗುರೂಪದೇಶಗಳ ವೈಯರ್ಥ್ಯವಿಲ್ಲನಾಗುತ್ತದೆ. ಆದರೆ ಈ ಕರ್ತೃತ್ವವು ಈಶ್ವರಸಙ್ಕಲ್ಪಾಯತ್ತನಾದುದೆಂದು "**ಪರಾತ್ತುತಚ್ಛ್ರುತೇಃ**" ಎಂಬ ಸೂತ್ರದಲ್ಲಿ ಉಪಪಾದಿತವು. ಹೀಗೆ ಪರಾಧೀನ ಕರ್ತೃವಾದರೆ ಈತನ ಸಙ್ಕಲ್ಪ ಪ್ರಯತ್ನ ಮೊದಲಾದವುಗಳೆಲ್ಲಾ ನಿರರ್ಥಕವೆಂದು ತೋರುವದಿಲ್ಲವೇ ಎಂಬಾಕ್ಷೇಪ ತಂದರೆ, ಇದಕ್ಕೆ ಸಮಾಧಾನವಾಗಿ ಮುಂದಿನ "**ಕೃತಪ್ರಯತ್ನಾ ಪೇಕ್ಷಸ್ತು**" ಎಂಬ ಸೂತ್ರದಲ್ಲಿ ಪ್ರಥಮ ಸಙ್ಕಲ್ಪದಲ್ಲಿ ಸರ್ವೇಶ್ವರನು ಈತನಿಗೆ ಜ್ಞಾನ, ಮನಸ್ಸು ಇಂದ್ರಿಯಾದಿಗಳನ್ನು ಕೊಟ್ಟಿರುವದರಿಂದ ಸರ್ವ ಸ್ವಾತಂತ್ರ್ಯವನ್ನೂ ದಯಪಾಲಿಸಿರುತ್ತಾನೆಂಬುದರಿಂದ ಸರ್ವವೂ ಸಮಂಜಸವು. **ಯತ್ಕರೋಷಿ** ಎಂದು ಆರಂಭಿಸಿ ಹೇಳಿದ ಪ್ರವೃತ್ತಿಗಳಲ್ಲಿ ಕರ್ತೃತ್ವವೂ ಉಂಟು, ಅದು ಪರಮಾತ್ಮಾಧೀನವಾದುದು. ಆದರೆ ಪ್ರಥಮ ಸಙ್ಕಲ್ಪದಲ್ಲಿ ಮಾತ್ರ ಈತನಿಗೆ ಸರ್ವ ಸ್ವಾತಂತ್ರ್ಯವನ್ನು ದಯಪಾಲಿಸಿರುವದರಿಂದ **ತತ್ಕುರುಷ್ವಮದರ್ಪಣಮ್** ಎಂಬ ಉಪದೇಶವು ಸರ್ವಸಮಂಜಸವೇ; ಹಾಗಲ್ಲದೆ, ಎಲ್ಲವೂ ಹಿಂದಿನ ಕರ್ಮಗಳಿಗೆ ಅಧೀನಗಳಾಗಿಯೂ, ಆ ಕರ್ಮಾಧೀನವಾಗಿಯೇ ಪರಮಾತ್ಮನ ಪ್ರೇರಣೆಯೂ ಸಹ ಆದ ಪಕ್ಷದಲ್ಲಿ, ಈ ಉಪದೇಶಕ್ಕೆ ಸಾಮಂಜಸ್ಯವೇ ಇಲ್ಲವು. ಪ್ರಥಮ ಸಙ್ಕಲ್ಪವಾದನಂತರ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಹಿಂದಿನ ಕರ್ಮಾಧೀನತೆಯೂ ಪರಮಾತ್ಮಪ್ರೇರಣೆಯೂ ಉಂಟು.

**ಭಾಷ್ಯಾರ್ಥವು:**—ಜ್ಞಾನಿಗಳಾದ ಮಹಾತ್ಮರುಗಳ ವೈಲಕ್ಷಣ್ಯವನ್ನು ಶ್ಲಾಘಿಸಿ ತಿಳಿಸಿದವರಾಗಿ ಅವರುಗಳು ಅವಲಂಬಿಸಿದ ಭಕ್ತಿಯೋಗದ ವಿಷಯವನ್ನು ತಿಳಿಸುವದಕ್ಕಾಗಿ ಅದಕ್ಕೆ ಅಙ್ಗಭೂತವಾದ ಬುದ್ಧಿ ವಿಶೇಷವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ; ಆದುದರಿಂದಲೇ ಅವತಾರಿಕೆಯಲ್ಲಿ **ಇತ್ಥಂ ಕುರು** ಎಂದೂ, ಮೂಲದಲ್ಲಿ **ಕುರುಷ್ವಮದರ್ಪಣಮ್** ಎಂದೂ ಪ್ರಯೋಗಗಳನ್ನು ಕಾಣಬಹುದು. ಕರ್ಮಗಳನ್ನೆಲ್ಲಾ ಭಗವಂತನಲ್ಲಿ ಸಮರ್ಪಿಸಲು ಯೋಗ್ಯವಾಗಿ ಸಾಧುವಾಗಿ ಶಾಸ್ತ್ರಸಮ್ಮತವಾಗಿರಬೇಕೆಂದೂ, ಅವುಗಳನ್ನೆಲ್ಲಾ ಭಗವಂತನಲ್ಲೇ ಸಮರ್ಪಿಸಿಬಿಡಬೇಕೇ ವಿನಾ, ತನ್ನದೆಂಬ ಬುದ್ಧಿಯೂ, ಭೋಗ್ಯತಾಬುದ್ಧಿಯೂ ಫಲಾಕಾಂಕ್ಷಾ ಬುದ್ಧಿಯೂ ಸರ್ವಾತ್ಮನಾ ಜ್ಞಾನಿಯಾಗಬೇಕೆಂದಿರುವ ನಿನಗೆ ಕೂಡದೆಂದು ಉಪದೇಶಿಸುತ್ತಾರೆ.—**ಯತ್** - ಯಾವ ಎಂದರೆ ದೇಹಯಾತ್ರೆಗೆ, **ಶೇಷಭೂತಂ** - ಬೇಕಾದ, ಅಧೀನವಾದ, ಲೌಕಿಕ ಕರ್ಮವನ್ನು, **ಕರೋಷಿ** - ಮಾಡುತ್ತೀಯೋ, ಇದರಲ್ಲೇ ಇತಿಕರ್ತವ್ಯತಾರೂಪಗಳಾದ ತನ್ನ ಪತ್ನೀಪುತ್ರರ ಭರಣವೂ, ವೃದ್ಧ ಮಾತಾಪಿತೃಗಳ ಸಂರಕ್ಷಣೆಯೂ, ಲೋಕಹಿತಾರ್ಥಕ್ಕಾಗಿ ತನ್ನಿಂದ ಶಕ್ಯವಾದ ಪ್ರವೃತ್ತಿಗಳೂ, ಎಲ್ಲವೂ ಅಂತರ್ಗತಗಳು. **ಯಚ್ಚ**-ಮತ್ತು ಯಾವ ದೇಹಧಾರಣೆಗಾಗಿ **ಅಶ್ನಾಸಿ-**

**ಭಾ. ಸರ್ವಸ್ಯ ಲೌಕಿಕಸ್ಯ ವೈದಿಕಸ್ಯ ಚ ಕರ್ಮಣಃ ಕರ್ತೃತ್ವಂ ಭೋಕ್ತೃತ್ವಂ ಆರಾಧ್ಯತ್ವಂಚ ಯಥಾಮಯಿ ಸಮರ್ಪಿತಂ ಭವತಿ, ತಥಾಕುರು. ಏತದುಕ್ತಂ ಭವತಿ-ಯಾಗದಾನಾದಿಷು ಆರಾಧ್ಯತಯಾ ಪ್ರತೀಯಮಾನಾನಾಂ ದೇವಾದೀನಾಂ, ಕರ್ಮ**

ಊಟಮಾಡುತ್ತೀಯೋ, **ಯಜ್ಜ** - ಮತ್ತು ಯಾವ ವೈದಿಕವಾದ ಹೋಮ ದಾನ ತಪಸ್ಸೇ ಮೊದಲಾದ ನಿತ್ಯನೈಮಿತ್ತಿಕ ಕರ್ಮಗಳನ್ನೂ ಸಹ ಮಾಡುತ್ತೀಯೋ, **ತತ್ಸರ್ವಂ** - ಅವೆಲ್ಲವನ್ನೂ **ಮದರ್ಪಣಂ** - ನನಗೆ ಯಾವುದು ಸಮರ್ಪಿಸಲ್ಪಡುತ್ತದೋ ಅದು ಅರ್ಪಣವೆಂದು ಹೇಳಿಸಿ ಕೊಳ್ಳುತ್ತದೋ; ಒಂದು ಕಡೆಯಲ್ಲಿದ್ದುದನ್ನು ಇನ್ನೊಂದು ಕಡೆಗೆ ಸೇರಿಸುವದೇ ಸಮರ್ಪಣವು. ಒಬ್ಬನ ಪದಾರ್ಥವನ್ನು ಇನ್ನೊಬ್ಬನಿಗೆ ಕೊಡುವದು ಎಂಬರ್ಥವಲ್ಲವು. ಏಕೆಂದರೆ ಸರ್ವವೂ ಸರ್ವೇಶ್ವರನದೇ; ಎಲ್ಲೋ ಇದ್ದುದನ್ನು ಸ್ವಾಮಿಯ ಪಾದಾರವಿಂದದಲ್ಲಿಡುವದೇ ಸಮರ್ಪಣವು. ಅಂಗಡಿಯಲ್ಲಿದ್ದ ತೆಂಗಿನಕಾಯಿ ಬಾಳೇ ಹಣ್ಣನ್ನೂ ತಂದು ಸ್ವಾಮಿಯ ಪಾದದಲ್ಲಿ ಸಮರ್ಪಿಸಿದ ಹಾಗೆ ಎಂದು ಭಾವಿಸತಕ್ಕದ್ದು. ಈ ಮಹಾತ್ಮನಾದ ಜ್ಞಾನಿಯು ಸಮಸ್ತ ಲೌಕಿಕ ಪ್ರವೃತ್ತಿಗಳಲ್ಲೂ ವೈರಾಗ್ಯ ಹೊಂದಿದವನಾದ ಪ್ರಯುಕ್ತ ದೇಹಯಾತ್ರೆಗೂ ದೇಹಧಾರಣೆಗೂ ಬೇಕಾದ ಕರ್ಮಗಳು ಮಾತ್ರ ತಪ್ಪಿದ್ದಲ್ಲವಾದುದರಿಂದ **ಯತ್ಕರೋಷಿ ಯದಶ್ನಾಸಿ** ಎಂಬುದಕ್ಕೆ ಹಾಗೆ ವ್ಯಾಖ್ಯಾನಮಾಡಿರುತ್ತಾರೆ. ದೇಹ ಯಾತ್ರೆಗಾಗಿ ಎಷ್ಟು ಮಾಡಬೇಕೋ ಅದು ತಪ್ಪಿದ್ದಲ್ಲವು; ಈತನು ಊಟ ಮಾಡುವದು ರುಚಿ ಮೊದಲಾದ ಉಪಭೋಗಕ್ಕಾಗಿ ಅಲ್ಲವು, ದೇಹಧಾರಣೆಯಾಗಬೇಕಲ್ಲಾ ಎಂಬುದಾಗಿ ಊಟವು, ಎಂದು ಭಾವಿಸತಕ್ಕದ್ದು. **ಯಜ್ಜುಹೋಷಿ** ಇತ್ಯಾದಿಗಳು ಮಾತ್ರ ಹೇಳಲ್ಪಟ್ಟರೂ, ನಿತ್ಯನೈಮಿತ್ತಿಕಗಳಾದ ಅಜ್ಞಾಕೈಂಕರ್ಯಗಳು ಎಂದಿಗೂ **ಬಿಡತ** ಕ್ಕದ್ದಲ್ಲವೆಂದೂ, ಕೆಲವರು ವಾಕ್ಯಜನ್ಯಜ್ಞಾನ ಪ್ರಾಪ್ತನಾದ ನಂತರ ಈ ನಿತ್ಯನೈಮಿತ್ತಿಕ ಕರ್ಮಗಳು ಅನಾವಶ್ಯಕವೆಂದು ಅಭಿಪ್ರಾಯಪಡುವದು ಶಾಸ್ತ್ರಸಮ್ಮತವಲ್ಲವೆಂದೂ ತಿಳಿಸುವದಕ್ಕೂ ಈ ಹೋಮದಾನ ತಪಸ್ಸುಗಳೊಂದಿಗೆ ನಿತ್ಯನೈಮಿತ್ತಿಕಗಳನ್ನೂ ಸೇರಿಸಿ ವ್ಯಾಖ್ಯಾನಮಾಡಿರುತ್ತಾರೆ. ಈ ಹೋಮ, ದಾನ, ತಪಸ್ಸುಗಳು ಈ ನಿತ್ಯನೈಮಿತ್ತಿಕಗಳಿಗೂ ಉಪಲಕ್ಷಣವೆಂದು ಭಾವಿಸತಕ್ಕದ್ದೆಂಬುದು ಉಪದೇಶವು.

ಮುಂದೆ ಇವರ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ- **ಸಮಸ್ತ ಲೌಕಿಕ ವೈದಿಕ ಕರ್ಮಗಳ, ಕರ್ತೃತ್ವವೂ, ಭೋಕ್ತೃತ್ವವೂ, ಆರಾಧ್ಯತ್ವವೂ** ಸಹ, **ಯಥಾಮಯಿಸಮರ್ಪಿತಂ ಭವತಿ** - ನನ್ನಲ್ಲಿ ಹೇಗೆ ಸಮರ್ಪಿಸಲ್ಪಟ್ಟವು ಆಗುತ್ತವೋ, **ತಥಾಕುರು** ಹಾಗೆ ಮಾಡು, ಎಂಬ ಭಾವವು. **"ಯತ್ಕರೋಷಿ"** ಎಂಬುದರಿಂದ ಲೌಕಿಕ ಕರ್ಮ ಕರ್ತೃತ್ವವು ಹೇಳಲ್ಪಟ್ಟಿತೆಂದೂ, **"ಯದಶ್ನಾಸಿ"** ಎಂಬುದರಿಂದ ಲೌಕಿಕ ಕರ್ಮ ಭೋಕ್ತೃತ್ವವೂ, **"ಯಜ್ಜುಹೋಷಿ** ಇತ್ಯಾದಿಗಳಿಂದ ವೈದಿಕ ಕರ್ಮಗಳ ಕರ್ತೃತ್ವಭೋಕ್ತೃತ್ವ ಆರಾಧ್ಯತ್ವಗಳೂ ಹೇಳಲ್ಪಟ್ಟವೆಂಬ ಭಾವವು. ಇದರಿಂದ ಎಲ್ಲಾ ಪ್ರವೃತ್ತಿ ಧರ್ಮಗಳನ್ನೂ ಸರ್ವೇಶ್ವರನಲ್ಲಿ ಸಮರ್ಪಿಸಿ ಬಿಟ್ಟು ಅವರಲ್ಲಿ ಕರ್ತೃತ್ವ ಭೋಕ್ತೃತ್ವಗಳನ್ನು ತ್ಯಾಗಮಾಡಿ ಫಲಾಭಿಸಂಧಿ ರಹಿತನಾದರೆ ಅವೇ ನಿವೃತ್ತಿ ಧರ್ಮಗಳಾಗಿ ಮೋಕ್ಷಪ್ರಾಪ್ತಿಗೆ ಅನುಕೂಲಿಸುತ್ತವೆ ಎಂಬುದು ತಾತ್ಪರ್ಯವು. ಹಾಗಾದರೆ ಒಂದೇ ಕರ್ಮವು ಪ್ರವೃತ್ತಿ ನಿವೃತ್ತಿ ಧರ್ಮಗಳಾಗಿ ಪರಿಣಮಿಸಬಹುದೋ ? ಎಂದರೆ ಫಲಕಾಮನೆಯಿಂದ ಮಾಡಿದ ಕರ್ಮವು ಪ್ರವೃತ್ತಿ ಧರ್ಮವಾಗಿ ಬಂಧಕ್ಕೆ ಹೇತುವಾಗುತ್ತದೆ. ಫಲಾಭಿಸಂಧಿಯಿಲ್ಲದೆ ಮಾಡಿದ ಆ ಕರ್ಮವೇ ನಿವೃತ್ತಿ ಧರ್ಮವಾಗಿ ಮೋಕ್ಷಕ್ಕೆ ಸಹಕಾರಿಯಾಗುತ್ತದೆ. ಐಶ್ವರ್ಯಾರ್ಥಿಗಳೂ ಜ್ಞಾನಿಗಳೂ ಇಬ್ಬರೂ ಮಾಡುವದೂ ಭಕ್ತಿಯೋಗರೂಪ ಉಪಾಸನೆಯು. ಫಲಕಾಮನೆಯಿಂದ ಐಶ್ವರ್ಯಾರ್ಥಿಗಳ ಉಪಾಸನಾದಿಗಳು ಪ್ರವೃತ್ತಿ ಧರ್ಮಗಳಾಗಿ ಅವರು ಆವರ್ತಿಯುಳ್ಳವ

**ಭಾ. ಕರ್ತುರ್ಭೋಕ್ತುಃ ತವಚ ಮದೀಯತಯಾ, ಮತ್ಸಙ್ಕಲ್ಪಾಯತ್ತಸ್ವರೂಪ ಸ್ಥಿತಿ ಪ್ರವೃತ್ತಿತಯಾಚ, ಮಯ್ಯೇವ ಪರಮಶೇಷಿಣಿ ಪರಮಕರ್ತರಿ, (೧) ತ್ವಾಂಚ ಕರ್ತಾರಂಭೋಕ್ತಾರಂ ಆರಾಧಕಂ, (೨) ಆರಾಧ್ಯಂಚ ದೇವತಾ ಜಾತಂ (೩)ಆರಾಧನಂ ಚ ಕ್ರಿಯಾ ಜಾತಂ, ಸರ್ವಂ ಸಮರ್ಪಯ। (೧) ತವಮನ್ನಿಯಾಮ್ಯತಾ ಪೂರ್ವಕಮಚ್ಛೇಷತ್ವೈಕರಸತಾಂ (೨) ಆರಾಧ್ಯಾದೇಶ್ಚೈ ತತ್ಸ್ವಭಾವಗರ್ಭತಾಂ ಅತ್ಯರ್ಥಪ್ರೀತಿಯುಕ್ತೋಽನುಸಂಧತ್ಸ್ವ ಇತಿ ॥೨೭॥**

ರಾಗುವರು. ಫಲಕಾಮನೆಯಿಲ್ಲದ ಮೋಕ್ಷಾರ್ಥಿಗಳಿಗೆ ಆ ಉಪಾಸನಾದಿಗಳೇ ನಿವೃತ್ತಿಧರ್ಮಗಳಾದುದರಿಂದ ಅವರಿಗೆ ಪುನರಾವೃತ್ತಿ ಇಲ್ಲವು.

ಈ ತ್ಯಾಗದಲ್ಲಿ ಅನುಸಂಧಾನವು ಯಾವ ರೀತಿಯಲ್ಲಿರತಕ್ಕದ್ದೆಂಬುದು ದಯಾಳುಗಳಾದ ಮಹಾದೇಶಿಕರುಗಳುಪದೇಶದಿಂದ ಲಭಿಸತಕ್ಕದ್ದಾದುದರಿಂದ ಪರಮಕೃಪಯಾ ಆ ಅನುಸಂಧಾನದ ರೀತಿಯನ್ನು ವ್ಯಕ್ತಪಡಿಸುತ್ತಾರೆ ಇದೀಗ **"ಮದರ್ಪಣ"** ಶಬ್ದಾರ್ಥ ನಿರೂಪಣೆಯೆಂದು ಭಾವಿಸತಕ್ಕದ್ದು. **ಏತದುಕ್ತಂ ಭವತಿ** - ಈ ಸಮರ್ಪಣೆಯ ತಾತ್ಪರ್ಯವು ಹೀಗೆಂದು ಅನುಸಂಧಾನಮಾಡತಕ್ಕದ್ದು--**ಯಾಗದಾನಾದಿ**ಗಳಲ್ಲಿ **ಆರಾಧ್ಯತಯಾ ಪ್ರತೀಯಮಾನಾನಾಂ ದೇವಾದೀನಾಂ** - ಆರಾಧಿಸಲ್ಪಡತಕ್ಕವರೆಂದು ತೋರಿಬರುವ ದೇವತೆಗಳೇ ಮೊದಲಾದವರೂ, ಇಲ್ಲಿ ಆದಿ ಶಬ್ದದಿಂದ ಗಂಧರ್ವ ಯಕ್ಷರೇ ಮೊದಲಾದವರು ಹೇಳಲ್ಪಟ್ಟರು. **ಕರ್ಮಕರ್ತುರ್ಭೋಕ್ತುಃ ತವಚ** - ಆ ಕರ್ಮಗಳ ಕರ್ತಾ ಭೋಕ್ತನಾದ ನೀನೂ ಸಹ, **ಮದೀಯತಯಾ** ನನ್ನ ಶರೀರವಾಗಿ, ನನ್ನ ಸ್ವತ್ತಾಗಿ ನನಗೆ ಶೇಷಭೂತರಾಗಿರುವುದರಿಂದ, **ಮಯ್ಯೇವ ಪರಮಶೇಷಿಣಿ ಪರಮಕರ್ತರಿ** - ಸರ್ವೋತ್ಕೃಷ್ಟಶೇಷಿಯಾಗಿ ಪ್ರಧಾನ ಕರ್ತೃವಾಗಿರುವ ನನ್ನಲ್ಲೇ, **ಸರ್ವಂ ಸಮರ್ಪಯ** - ಎಲ್ಲವನ್ನೂ ಸಮರ್ಪಿಸಿಬಿಡು ಎಂದು ಹೇಳುತ್ತಾರೆ. ಯಾವ ಎಲ್ಲವನ್ನೂ ಎಂದರೆ ಮೂರನ್ನೂ ಸಮರ್ಪಿಸು ಎಂದು ಆ ಮೂರನ್ನೂ ತಿಳಿಸುತ್ತಾರೆ.—(೧) **ತ್ವಾಂಚ ಕರ್ತಾರಂ ಭೋಕ್ತಾರಂ ಆರಾಧಕಂ** - ಕರ್ತೃವಾಗಿಯೂ ಭೋಕ್ತೃವಾಗಿಯೂ ಆರಾಧಕನಾಗಿಯೂ ಇರುವ ನಿನ್ನನ್ನೂ (೨) ಆರಾಧ್ಯ ದೇವತಾ ಸಮೂಹವೆಲ್ಲವನ್ನೂ, (೩) ಆರಾಧನರೂಪನಾದ ಕ್ರಿಯಾ ಸಮೂಹವನ್ನೂ, **ಸರ್ವಂ ಸಮರ್ಪಯ** - ಇವೆಲ್ಲವನ್ನೂ ಸಮರ್ಪಿಸು. ಹೀಗೆ ಸಮರ್ಪಿಸುವಾಗ ಅನುಸಂಧಾನವು ಹೇಗೆ ಇರಬೇಕೆಂದರೆ ತಿಳಿಸುತ್ತಾರೆ-- **ತವ ಮನ್ನಿಯಾಮ್ಯತಾ ಪೂರ್ವಕಮಚ್ಛೇಷತ್ವೈಕರಸತಾಂ** - ನಾನು ನಿನಗೆ ನಿಯಾಮ್ಯನಾಗಿರುವುದರ ಪೂರ್ವಕವಾಗಿ ನೀನು ನನಗೆ ಶೇಷತ್ವವನ್ನು ವಹಿಸಿರುವುದೇ ನಿನಗೆ ಮುಖ್ಯಾನಂದವೆಂಬುದನ್ನೂ, **ಆರಾಧ್ಯಾದೇಶ್ಚೈ ತತ್ಸ್ವಭಾವಗರ್ಭತಾಂ** - ಆರಾಧ್ಯದೇವತೆಗಳೂ ಕೂಡ ಇಂತಹ ಶೇಷತ್ವಸ್ವಭಾವದಿಂದ ಕೂಡಿದವರೆಂಬುದನ್ನೂ ಸಹ, **ಅತ್ಯರ್ಥಪ್ರೀತಿಯುಕ್ತಃ** - ಹೇಳಲು ಸಾಧ್ಯವಿಲ್ಲದಷ್ಟು ಭಕ್ತಿ ವಿಶ್ವಾಸಗಳಿಂದ ಕೂಡಿದವನಾಗಿ, **ಅನುಸಂಧತ್ಸ್ವ ಇತಿ** - ನೀನು ಅನುಸಂಧಾನ ಮಾಡತಕ್ಕದ್ದೆಂಬುದು ಮುಖ್ಯಾಭಿಪ್ರಾಯವು. ಇದು ಭಕ್ತಿಯೋಗ ಪ್ರಕರಣವಾದುದರಿಂದ ಪರಾಭಕ್ತಿಯು ಮುಖ್ಯವಾಗಿ ಆವಶ್ಯಕವಾದುದರಿಂದ ಅತ್ಯರ್ಥಪ್ರೀತಿಯುಕ್ತನಾಗಿ ಅನುಸಂಧಾನ ಮಾಡೆಂದು ಹೇಳಲ್ಪಟ್ಟಿತು. ಭಗವಂತನಲ್ಲಿ ಸಮರ್ಪಿಸತಕ್ಕವು ಯಾವುವೆಂದರೆ. (೧) ಕರ್ತೃವಾಗಿ ಭೋಕ್ತೃವಾಗಿ ಆರಾಧಕನಾದ ನಿನ್ನನ್ನೂ ಸಮರ್ಪಿಸತಕ್ಕದ್ದು. ಇದರಿಂದ ಚೇತನಕರ್ತೃತ್ವವೂ ಭೋಕ್ತೃತ್ವವೂ, ಆರಾಧಕತ್ವವೂ ಸರ್ವೇಶ್ವರನಿಗಾಗಿಯೇ ಎಂಬ ಜ್ಞಾನವಿರಬೇಕೆಂಬ ತಾತ್ಪರ್ಯವು. (೨) ಈ ಕರ್ಮಗಳಿಂದ ಆರಾಧ್ಯರಾದ ದೇವತಾ ಸಮೂಹವನ್ನೂ ಸಮರ್ಪಿಸತಕ್ಕದ್ದು, ಎಂದರೆ ಇವರುಗಳು ಆರಾಧಿಸಲ್ಪಟ್ಟರೂ, ಇವರಿಗೆ ಪರಮ ಶೇಷಿಯಾದ ಸರ್ವ ಕರ್ಮಾ

**ಮೂ. ಶುಭಾಶುಭ ಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸನ್ನ್ಯಾಸಯೋಗಯುಕ್ತಾತ್ಮಾ, ವಿಮುಕ್ತೋ ಮಾಮುಪೈಷ್ಯಸಿ ॥ ೨೮.**

ರಾಧ್ಯನಾದ ಸರ್ವೇಶ್ವರನೇ ಆರಾಧಿಸಲ್ಪಟ್ಟನೆಂಬ ಭಾವನೆ ಇರಬೇಕು. (೩) ಆರಾಧನ ರೂಪಗಳಾದ ಸರ್ವಕರ್ಮಗಳನ್ನೂ ಸಮರ್ಪಿಸತಕ್ಕದ್ದು ಎಂದರೆ ಫಲಾಭಿಸಂಧಿಯಿಲ್ಲದೆ ಈ ಕರ್ಮಗಳೆಲ್ಲಾ ಸರ್ವೇಶ್ವರನಿಗಾದುದರಿಂದ ಆತನೇ ನಡೆಸಿದನೆಂಬ ಭಾವನೆ ಇರಬೇಕು ತಾನೂ, ತಾನು ಆರಾಧಿಸುವ ದೇವತೆಗಳೂ ಸಹ, ಪರಮ ಶೇಷಿಯಾದ ಪರಮಾತ್ಮನಿಗೆ ಶೇಷಭೂತರೆಂಬ ಜ್ಞಾನವು ಮುಖ್ಯವಾಗಿರಬೇಕೆಂದು ಹೇಳಲ್ಪಟ್ಟಿತು. ॥ ೨೭ ॥

**ಮೂಲಕ್ಕೆ ಅರ್ಥವು :—**ಹಿಂದೆ ಜ್ಞಾನಿಯನ್ನು ಕುರಿತು ವಿಹಿತ ಲೌಕಿಕ ವೈದಿಕ ಕರ್ಮಗಳನ್ನು ಮಾಡು; ಅವುಗಳನ್ನು ಮಾತ್ರ ನನ್ನಲ್ಲಿ ಸಮರ್ಪಿಸಿಬಿಡು ಎಂದು ಉಪದೇಶಿಸಿದರು. ಹೀಗೆ ಮಾಡಿದರೆ ಅವುಗಳು ಪ್ರವೃತ್ತಿಧರ್ಮಗಳಾಗಿ, ಬಂಧಕಗಳಾಗಿ, **"ಪ್ರವೃತ್ತಿಃ ಪುನರಾವೃತ್ತಿಃ"** (ಶಾಂತಿ. ೨೧೯. ೪) ಎಂದು ಹೇಳಿರುವಹಾಗೆ ಪುನರ್ಜನ್ಮಕ್ಕೆ ಕಾರಣವಾಗುವದಿಲ್ಲವೇ ? ಎಂದರೆ, ಅವು ಫಲಾಭಿಸಂಧಿಯಿಲ್ಲದೆ ಎಲ್ಲವೂ ಭಗವತ್ಪ್ರೀಣನಾರ್ಥವಾಗಿ ಭಗವಂತನಲ್ಲಿ ಸಮರ್ಪಿಸಲ್ಪಡುವದರಿಂದ, ನಿವೃತ್ತಿಧರ್ಮಗಳಾಗಿ **"ನಿವೃತ್ತಿಃ ಪರಮಾಗತಿಃ"** ಎಂದು ಹೇಳಿರುವ ಹಾಗೆ ಅವುಗಳು ಬಂಧಕಗಳಾಗುವುದಿಲ್ಲವು, ಅದೂ ಅಲ್ಲದೆ ಸಂಚಿತ ಪುಣ್ಯಪಾಪ ಫಲಗಳೂ ನಾಶವಾಗಿ ಪುನಸ್ಸಂಸಾರವಿಲ್ಲದಹಾಗೆ ಮಾಡುತ್ತವೆಂದು ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ. ಸರ್ವ ಲೌಕಿಕ ವೈದಿಕ ಕರ್ಮಗಳನ್ನು, ಕರ್ತೃತ್ವ ಭೋಕ್ತೃತ್ವಾಭಿಮಾನಗಳನ್ನು ಬಿಟ್ಟು, ಫಲಾಭಿಸಂಧಿಯಿಲ್ಲದೆ ನನ್ನಲ್ಲಿ ಸಮರ್ಪಿಸಿದರೆ, ಆಗುವ ಪ್ರಯೋಜನವೇನೆಂದರೆ ಹೇಳುತ್ತಾರೆ. **ಏವಂ** – ಈ ಪ್ರಕಾರವಾಗಿ ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿರುವ ಹಾಗೆ, ಅದನ್ನೇ ಅನುವಾದಮಾಡಿ ಹೇಳುತ್ತಾರೆ, **ಸನ್ನ್ಯಾಸಯೋಗಯುಕ್ತಾತ್ಮಾ** - ಕರ್ತೃತ್ವ ಭೋಕ್ತೃತ್ವಾದಿ ಅಭಿಮಾನಗಳನ್ನೆಲ್ಲಾ ತೊರೆದು ಭಕ್ತಿಯಿಂದ ನನ್ನಲ್ಲಿ ಸಮರ್ಪಿಸುವದೆಂಬ ಯೋಗದಿಂದ ಸೇರಿದ ಮನಸ್ಸುಳ್ಳ ಮಹಾತ್ಮನಾದ ಜ್ಞಾನಿಯು, ಎಂದರೆ ಮಹಾ ವೈರಾಗ್ಯ ನಿಧಿಯಾಗಿ ಮಹಾತ್ಮನಾಗಿ, **ಶುಭಾಶುಭ ಫಲೈಃ** – ಶುಭಾಶುಭ ಫಲಗಳನ್ನುಳ್ಳ, **ಕರ್ಮಬಂಧನೈಃ** ಕರ್ಮಗಳ ಬಂಧಗಳಿಂದ, ಪುನಃಪುನಃ ಜನ್ಮಗಳನ್ನೆತ್ತುವದರಿಂದ **ಮೋಕ್ಷ್ಯಸೇ** - ಬಿಡಲ್ಪಡುತ್ತೀಯೇ, ಉಪಾಸನೆಗೆ ವಿರೋಧಿಗಳಾದ ಕರ್ಮಗಳೂ ನಾಶವಾಗುತ್ತವೆ ; ಆದರಿಂದ ಉಪಾಸನ ನಿಷ್ಪತ್ತಿಯುಂಟಾಗುತ್ತದೆ. ಯಾವಾಗ ಉಪಾಸನ ನಿಷ್ಪತ್ತಿಯಾಯಿತೋ, ಆಗ ಸಮಸ್ತ ಪ್ರಾಚೀನ ಪುಣ್ಯಪಾಪರೂಪ ಕರ್ಮಗಳೂ ನಾಶವಾಗುತ್ತವೆ ಆಗ **ಪುಣ್ಯಪಾಪೇ ವಿಧೂಯನಿರಂಜನಃ ಪರಮಂ ಸಾಮ್ಯಮುಪೈತಿ** ಎಂದು ಶ್ರುತಿಯಲ್ಲಿ (ಮುಂ. ೩. ೧. ೩.) ಹೇಳಿರುವ ಹಾಗೆ, **ವಿಮುಕ್ತಃ** - ಹೀಗೆ ಸರ್ವಕರ್ಮಗಳಿಂದ ನಿಶ್ಶೇಷವಾಗಿ ಬಿಡಲ್ಪಟ್ಟವನಾಗಿ, **ಮಾಂ** - ಪರಮ ಪ್ರಾಪ್ಯನಾಗಿ ಶ್ರೀಯಃಪತಿಯಾದ ನನ್ನನ್ನು, **ಉಪೈಷ್ಯಸಿ** – ಹೊಂದುತ್ತೀಯೇ. ಹೀಗೆ ಸರ್ವಲೌಕಿಕ ವೈದಿಕ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸುವದರಿಂದ ಮಾತ್ರವೇ ಸಾಕ್ಷಾತ್ತಾಗಿ **ಮಾಮುಪೈಷ್ಯಸಿ** ಎಂಬುದರಿಂದ ಭಗವತ್ಪ್ರಾಪ್ತಿಯುಂಟಾಗುತ್ತದೆಂದು ಭಾವಿಸತಕ್ಕದ್ದಲ್ಲವು. ಈ ಅಭಿಪ್ರಾಯವು ಹಿಂದೆ ೨೫ ನೆಯ ಶ್ಲೋಕ ವ್ಯಾಖ್ಯಾನದಲ್ಲಿ ನಿರಸ್ತವು. ಬ್ರ. ಸೂ. ೩. ೪. ೧ ರಲ್ಲಿ ಇಲ್ಲಿನ ಅಭಿಪ್ರಾಯವನ್ನೇ ಸ್ಥಾಪಿಸಿ, ಅನಂತರ ಪೂರ್ವಪಕ್ಷವನ್ನು ಖಂಡಿಸಿರುತ್ತಾರೆ. (೧೧೧೩ ನೆಯ ಪುಟ ನೋಡಿ.) ಇಂತಹ ಸಮರ್ಪಣೆಯಿಂದ ಉಪಾಸನೆಗೆ ವಿರೋಧಿಯಾದ ಪಾಪವೆಲ್ಲಾ ನಶಿಸಿ, ಉಪಾಸನೆಯ ನಿಷ್ಪತ್ತಿಯಿಂದ ಸರ್ವಪಾಪ ವಿಮೋಚನೆಯುಂಟಾಗುತ್ತದೆಂದು ಭಾವಿಸ

**ಭಾ. ಏವಂ ಸನ್ನ್ಯಾಸಾಖ್ಯ ಯೋಗ ಯುಕ್ತಮನಾಃ - ಆತ್ಮಾನಂ ಮಚ್ಛೇಷತಾ ಮನ್ನಿಯಾಮ್ಯ ತ್ವೈಕರಸಂ ಕರ್ಮಚ ಸರ್ವಂ ಮಧಾರಾಧನ ಮನುಸಂದಧಾನೋ ಲೌಕಿಕಂ ವೈದಿಕಂಚ ಕರ್ಮಕುರ್ವನ್, ಶುಭಾಶುಭ ಫಲೈ ರನನ್ತೈಃ ಪ್ರಾಚೀನ ಕರ್ಮಾಖ್ಯೈರ್ಬನ್ಧನೈ ರ್ಮತ್ಪ್ರಾಪ್ತಿ ವಿರೋಧಿಭಿ ಸರ್ವೈರ್ಮೋಕ್ಷ್ಯಸೇ ; ತೈರ್ವಿಮುಕ್ತೋ ಮಾಮೇವೋ ಪೈಷ್ಯಸಿ ||೨೮||**

ತಕ್ಕದ್ದು. ಭಗವತ್ಪ್ರಾಪ್ತಿಗೆ ಸಾಕ್ಷಾತ್ಕಾರಣವು ಉಪಾಸನೆಯೇ, ಅದರಿಂದಲೇ ಸರ್ವಕರ್ಮಬಂಧಗಳಿಂದ ಮೋಕ್ಷವು. ಆದುದರಿಂದ **ಮೋಕ್ಷ್ಯಸೇ ವಿಮುಕ್ತೋ ಮಾಮುಪೈಷ್ಯಸಿ** ಎಂದು ವ್ಯಾಖ್ಯಾನ ಮಾಡುವಾಗ ಈ ಸಮರ್ಪಣೆಯು ಉಪಾಸನ ನಿಷ್ಪತ್ತಿಗೆ ಸಹಕಾರಿ ಎಂದು ಭಾವಿಸಿ, ಕ್ರಮೇಣ **ಮೋಕ್ಷ್ಯಸೇ, ಮಾಮುಪೈಷ್ಯಸಿ** ಎಂದು ಅರ್ಥಮಾಡತಕ್ಕದ್ದು. ಈ ಶ್ಲೋಕದಿಂದಲೇ ಈ ಎಲ್ಲಾ ತಾತ್ಪರ್ಯವೂ ಬರುವಹಾಗೆಯೇ ಅರ್ಥಮಾಡಬೇಕೆಂದು ನಿರ್ಬಂಧಿಸಿದರೆ, ಆಗ **ಏವಂ ಸನ್ನ್ಯಾಸಯೋಗಯುಕ್ತಾತ್ಮಾ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು, ಹೇಗೆಂದರೆ **ಏವಂ** - ಹಿಂದಿನ ಶ್ಲೋಕದಲ್ಲಿ ಹೇಳಿರುವಹಾಗೆ ಸರ್ವ ಲೌಕಿಕ ವೈದಿಕ ಕರ್ಮಗಳ ಕರ್ತೃತ್ವ ಭೋಕ್ತೃತ್ವ ಆರಾಧನೆ ಮೊದಲಾದವುಗಳನ್ನು ನನ್ನಲ್ಲಿ ಸಮರ್ಪಿಸಿ, **ಸನ್ನ್ಯಾಸಯೋಗಯುಕ್ತಾತ್ಮಾ** - ಹೀಗೆ ಕರ್ಮಸನ್ನ್ಯಾಸವೇನು, **ಯೋಗ** - ಪ್ರಕರಣವು ಭಕ್ತಿಯೋಗವಾದುದರಿಂದ, ಉಪಾಸನವೇನು ಇವುಗಳಿಂದ **ಯುಕ್ತಾತ್ಮಾ** - ಕೂಡಿದ ಮನಸ್ಸುಳ್ಳ ಭಕ್ತಿಯೋಗನಿಷ್ಠನು, ಎಂದು ಅರ್ಥವನ್ನು ಹೇಳಬಹುದು. ಇಲ್ಲಿ **ವಿಮುಕ್ತೋಮಾಮುಪೈಷ್ಯಸಿ** ಎಂದು ಹೇಳಿರುವದರಿಂದ ಅನಿಷ್ಟ ನಿವೃತ್ತಿಯೂ ಇಷ್ಟ ಪ್ರಾಪ್ತಿಯೂ ಎರಡೂ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. || ೨೮ ||

**ಭಾಷ್ಯಾರ್ಥವು:**—**ಏವಂ....ಯುಕ್ತ ಮನಾಃ**-ಮೊದಲು **ಏವಂಸನ್ನ್ಯಾಸಯೋಗಯುಕ್ತಾತ್ಮಾ** ಎಂಬುದಕ್ಕೆ ಭಾಷ್ಯ ಬರೆಯುತ್ತಾರೆ, ಈ ಪರಿಯಲ್ಲಿ ಸನ್ನ್ಯಾಸರೂಪವಾದಯೋಗದಿಂದ ಕೂಡಿದ ಮನಸ್ಸುಳ್ಳ ಜ್ಞಾನಿಗಳು, ಇಲ್ಲಿ ಯೋಗ ಶಬ್ದವು ಅನುಸಂಧಾನಪರವು, ಇದರ ತಾತ್ಪರ್ಯವನ್ನು ವಿವರಿಸುತ್ತಾರೆ. **ಆತ್ಮಾನಂ....ಕರ್ಮಕುರ್ವನ್** ಎಂಬುದರವರೆಗೂ, **ಆತ್ಮಾನಂ**-ತನ್ನನ್ನು ಹೇಗೆ ಅನುಸಂಧಾನಮಾಡಬೇಕೆಂದರೆ, ಹಿಂದೆ ಹೇಳಿದುದನ್ನೇ ಅನುವಾದಮಾಡಿ ತಿಳಿಸುತ್ತಾರೆ. **ಮಚ್ಛೇಷತಾ ಮನ್ನಿಯಾಮ್ಯ ತ್ವೈಕರಸಂ** - ನನಗೆ ಶೇಷಭೂತನಾಗಿ ನನ್ನಿಂದ ನಿಯಮಿಸಲ್ಪಡುವದೇ ಮುಖ್ಯವಾದ ಆನಂದವೆಂದೂ, ಮತ್ತು **ಕರ್ಮಚಸರ್ವಂ** - ಸಮಸ್ತ ನೀನು ಮಾಡುವ ಲೌಕಿಕ ವೈದಿಕ ಕರ್ಮವೂ, **ಮದಾರಾಧನ ಮನುಸಂದಧಾನಃ** - ನನ್ನ ಆರಾಧನವೆಂದೂ, ಅನುಸಂಧಾನ ಮಾಡುವವನಾಗಿ, ಹೀಗೆ ಈ ಲೌಕಿಕ ವೈದಿಕ ಕರ್ಮವನ್ನು, **ಕುರ್ವನ್**-ಮಾಡುವವನಾಗಿ, **ಶುಭಾಶುಭ ಫಲೈಃ** - ಶುಭಾಶುಭ ಫಲಗಳುಳ್ಳ, **ಅನನ್ತೈಃ ಪ್ರಾಚೀನ ಕರ್ಮಾಖ್ಯೈರ್ಬನ್ಧನೈಃ** - ಅನಂತಗಳಾದ ಪ್ರಾಚೀನ ಪುಣ್ಯಪಾಪರೂಪ ಕರ್ಮಗಳೆಂಬ ಬಂಧಗಳಿಂದ, **ಮತ್ಪ್ರಾಪ್ತಿ ವಿರೋಧಿಭಿಃ** - ನನ್ನ ಪ್ರಾಪ್ತಿಗೆ ಪ್ರತಿ ಬಂಧಕಗಳಾಗಿರುವ, **ಸರ್ವೈಃ** - ಸಮಸ್ತ ಪುಣ್ಯಪಾಪಗಳಿಂದಲೂ. **ಮೋಕ್ಷ್ಯಸೇ** - ಬಿಡಲ್ಪಡುತ್ತೀಯೇ ; **ತೈರ್ವಿಮುಕ್ತಃ** - ಹೀಗೆ ಎಲ್ಲಾ ಪಾಪಗಳಿಂದಲೂ ಈ ಭಕ್ತಿಯೋಗ ಮಾಹಾತ್ಮ್ಯೆಯಿಂದ ಬಿಡಲ್ಪಟ್ಟವನಾಗಿ, **ಮಾಮೇವೋಪೈಷ್ಯಸಿ** - ನನ್ನನ್ನೇ ಹೊಂದುವಿ ; ಇತರ ಫಲಕಾಮಿಗಳಾದ ಐಶ್ವರ್ಯಾರ್ಥಿಗಳ ಹಾಗಲ್ಲದೆ ನನ್ನನ್ನೇ ಹೊಂದುವಿ ಎಂಬ ಭಾವವು ಏವಕಾರದಿಂದ ಸೂಚಿತವು. ಇಲ್ಲಿ **ಸನ್ನ್ಯಾಸಯೋಗ ಯುಕ್ತಾತ್ಮಾ** ಎಂಬಲ್ಲಿ **ಸನ್ನ್ಯಾಸಾಖ್ಯಯೋಗ**ವೆಂದು ಕರ್ಮಧಾರಯ ಮಾಡಿರುತ್ತಾರೆ. ಹಾಗಲ್ಲದೆ, ಯೋಗವೆಂದರೆ ಭಕ್ತಿಯೋಗವೆಂದು ದ್ವಂದ್ವ ಮಾಡಿದರೆ, ಈಗ ಅಪ್ರಸ್ತುತ

ವಾದ ಕರ್ಮಯೋಗ ಜ್ಞಾನಯೋಗವೆಂದೂ ಏಕೆ ಅರ್ಥ ಮಾಡಕೂಡದೆಂಬ ಆಕ್ಷೇಪಣೆ ಬಂದೀತು. ಆದುದರಿಂದ ಹಿಂದಿನ ಶ್ಲೋಕದ ಪ್ರಕೃತಾರ್ಥದ ಅನುವಾದವೆಂದು ತಿಳಿಸುವುದಕ್ಕಾಗಿ ಹಾಗೆ ಭಾಷ್ಯವು. ಯೋಗ ಶಬ್ದಕ್ಕೆ ಇಲ್ಲಿ **ಅನುವಾದ** ಅಥವಾ ಜ್ಞಾನವೆಂಬರ್ಥವು ಮುಖ್ಯವಾಗಿ ಜ್ಞಾನಿಯಾದ ಭಕ್ತಿಯೋಗನಿಷ್ಠನಿಗೆ ಲೌಕಿಕ ವೈದಿಕ ಕರ್ಮಗಳನ್ನೆಸಗುವುದರಲ್ಲಿ ಎರಡು ಅನುಸಂಧಾನವು ಮುಖ್ಯವೆಂದು ತಿಳಿಸಿರುತ್ತಾರೆ. (೧) ತಾನು ಪರಮಾತ್ಮನಿಗೆ ಶೇಷಭೂತನಾಗಿ, ಅವನಿಂದ ನಿಯಾಮ್ಯನು, ಅಂತಹ ಜ್ಞಾನದಿಂದ ತಾನು ಪರಮಾನಂದ ಭರಿತನಾಗಿರುವಿಕೆಯು. (೨) ತಾನು ಮಾಡುವ ಸಮಸ್ತ ದೇಹ ಧಾರಣಾದಿರೂಪ ಲೌಕಿಕ ಕರ್ಮಗಳೂ ನಿತ್ಯ ನೈಮಿತ್ತಿಕ ಕರ್ಮಗಳೂ ಆತನಿಗಾಗಿಯೇ; ಆದ್ದರಿಂದ ಅದು ಭಗವದಾರಾಧನೆಯ ರೂಪವು. ಹೀಗೆ ಅನುಸಂಧಾನವು ಅತ್ಯಾವಶ್ಯಕವು. ಇದು ಭಕ್ತಿಯೋಗ ನಿಷ್ಪತ್ತಿಗೆ ಪರಮೋಪಕಾರವಾಗಿ ಕೊನೆಗೆ ಮೋಕ್ಷಪ್ರಾಪ್ತಿಯುಂಟಾಗುತ್ತದೆಂಬ ಭಾವವು. **ಸರ್ವೈಃ ಮೋಕ್ಷ್ಯಸೇ** ಎಂದು ಮೂಲದಲ್ಲಿ ಇಲ್ಲದಿರುವ ಸರ್ವ ಶಬ್ದಪ್ರಯೋಗದಿಂದ ಭಗವತ್ಪ್ರಾಪ್ತಿಯು ದೊರೆಯಬೇಕಾದರೆ, ಸಮಸ್ತ ಪುಣ್ಯ ಪಾಪಗಳೂ ನಾಶವಾಗಬೇಕೆಂದು ವಿಶದವಾಗಿ ಉಪದೇಶಿಸುವುದಕ್ಕಾಗಿ ಎಂದು ತಿಳಿಯತಕ್ಕದ್ದು. ಶ್ರೀಮಚ್ಛಂಕರಾಚಾರ್ಯರು, **ವಿಮುಕ್ತಃ ಬಂಧನೈಃ** ಎಂಬುದಕ್ಕೆ ಮೂಲದಲ್ಲಿಲ್ಲದಿರುವ **ಜೀವನ್ನೇವ** ಎಂಬುದನ್ನು ಸೇರಿಸಿ, ಜೀವನ್ಮುಕ್ತಿಯುಂಟಾಗುತ್ತದೆಂದು ವ್ಯಾಖ್ಯಾನ ಬರೆದಿರುತ್ತಾರೆ. ಪುಣ್ಯಪಾಪಗಳೆಲ್ಲಾ ಜೀವವಿರುವಾಗಲೇ ತೊಲಗಿದ ಪಕ್ಷದಲ್ಲಿ ಹಾಗೆ ವ್ಯಾಖ್ಯಾನ ಮಾಡಿ ಜೀವನ್ಮುಕ್ತನಾಗುವನೆಂದು ಒಪ್ಪಿಕೊಳ್ಳಬಹುದು. ಪುಣ್ಯಪಾಪಗಳು ಬ್ರಹ್ಮವಿತ್ತಿಗೆ ಯಾವಾಗ ಕ್ಷಯ ಹೊಂದುತ್ತವೆ ಎಂಬ ಸಂದರ್ಭದಲ್ಲಿ **"ಭೋಗೇನತ್ವಿ ತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ"** (ಶಾರೀ. ೪. ೧. ಕೊನೆಯ ಸೂತ್ರ.) ಆರಬ್ಧ ಕಾರ್ಯಗಳಾದ ಪುಣ್ಯಪಾಪಗಳನ್ನು, **ಭೋಗೇನ** – ಫಲಾನುಭವದಿಂದ, **ಕ್ಷಪಯಿತ್ವಾ** - ಕಳೆದುಕೊಂಡು, **ಅಥ** - ಪ್ರಾರಬ್ಧ ಕರ್ಮಾವಸಾನದಲ್ಲಿ, **ಸಮ್ಪತ್ಸ್ಯತೇ** – ಪರಬ್ರಹ್ಮವನ್ನು ಹೊಂದುತ್ತಾನೆ. ಪ್ರಾರಬ್ಧ ಫಲಗಳನ್ನು ಎಷ್ಟು ಶರೀರಗಳನ್ನೆತ್ತಿ ಕಳೆದುಕೊಳ್ಳಬೇಕೋ, ಅಷ್ಟು ಶರೀರಗಳನ್ನೆತ್ತಿದನಂತರವೇ ಪರಬ್ರಹ್ಮ ಪ್ರಾಪ್ತಿ ಎಂದು ಹೇಳಿರುವುದರಿಂದ, ಜೀವವಿರುವಾಗಲೇ ಪ್ರಾರಬ್ಧಗಳು ಕಳೆಯುವೇ ಇರುವುದರಿಂದ ಜೀವನ್ಮುಕ್ತಿಯೆಂಬುದು ಶಾಸ್ತ್ರ ಸಮ್ಮತವಾದುದಲ್ಲವು. ಈ ಜನ್ಮದಲ್ಲೇ ಖಂಡಿತವಾಗಿಯೂ ಪರಬ್ರಹ್ಮಪ್ರಾಪ್ತಿಯೇ ನಿಯತವಿಲ್ಲದಿರುವಾಗ ಜೀವನ್ಮುಕ್ತಿಯು ಹೇಗೆ? ಪಾಪರೂಪವಾದ ದೇಹ ಸಂಬಂಧವು ಸಾಯುವವರೆಗೂ ಅನುಸರಿಸಿ ಬರುವಾಗ ಜೀವನ್ಮುಕ್ತಿ ಎಂಬ ಪ್ರಯೋಗವೇ ಪರಸ್ಪರ ವಿರುದ್ಧವಾಗಿ ರಾತ್ರಿಯ ಸೂರ್ಯ, ಕತ್ತಲೆಯ ಬೆಳಕು ಇತ್ಯಾದಿ ಪ್ರಯೋಗಗಳಿಗೆ ತುಲ್ಯವಾದುದಾಗಿರುತ್ತದೆ. ಜೀವನ್ಮುಕ್ತಿಯು **"ಅಮೃತ ಇಹಭವತಿ"** ಮತ್ತು **"ಅಥಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮಸಮಶ್ನುತೆ"** ಎಂಬೀ ಶ್ರುತಿಗಳಿಂದ ಹೇಳಲ್ಪಟ್ಟಿತೆಂದು ಜೀವನ್ಮುಕ್ತಿವಾದದವರು ಭಾವಿಸುವರು. ಈ ಶ್ರುತಿಗಳು ಪರಬ್ರಹ್ಮೋಪಾಸನಕಾಲದಲ್ಲಿ ಉಂಟಾಗುವ ಆನಂದವು ಮೋಕ್ಷಕ್ಕೆ ತುಲ್ಯವಾದುದು ಎಂದು ಬೋಧಿಸುತ್ತವೆ. ಆಪಸ್ತಂಬರು ಈ ಜೀವನ್ಮುಕ್ತಿವಾದವನ್ನು ನಿರಾಕರಿಸಿರುತ್ತಾರೆ. ಹೇಯಶರೀರವಿಲ್ಲದಿರುವ ಅವಸ್ಥೆಯೇ ಮೋಕ್ಷವು. ಅದು ಅಂತಹ ಶರೀರವಿರುವಾಗಲೇ ಹೇಗೆ ಉಂಟಾದೀತು? **ನಹವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋ ರಪಹತಿರಸ್ತಿ, ಅಶರೀರಂ ವಾ ವಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ"** (ಛಾಂ. ೮. ೧೨. ೧) ಎಂಬ ಶ್ರುತಿಗೂ ವಿರುದ್ಧಾಭಿಪ್ರಾಯವಾಗುತ್ತದೆ. ಸಮಾಧಿಯುಳ್ಳಿರುವ ಕಾಲದಲ್ಲೇನೋ ಸುಖದುಃಖಗಳ ಜ್ಞಾನವಿಲ್ಲವೆಂಬುದು ಒಪ್ಪತಕ್ಕ ವಿಷಯವೇ. ಇದನ್ನು ಕುರಿತೇ ಶ್ರುತಿಯು **"ಅಮೃತಇಹಭವತಿ"** ಎಂದು ಹೇಳಿತು. ಆ ಸಮಾಧಿಕಾಲವು ಕಳೆದು

**ಭಾ. ಅ. ಮಮೇಮಂ ಪರಮ ಮತಿಲೋಕಂ ಸ್ವಭಾವಂ ಶೃಣು—**

ಹೋದರೆ ಮುಮುಕ್ಷು ಭಾಕ್ತ್ಯತ್ವವು ತಪ್ಪಿದ್ದಲ್ಲವು. ಆದುದರಿಂದ ಜೀವನ್ಮುಕ್ತಿವಾದದಲ್ಲಿ ಸಾಮಂಜಸ್ಯವಿಲ್ಲವು. ||೨೮||

**ಭಾಷ್ಯಾವತಾರಿಕೆಯ ಅರ್ಥವು:**—**ಮಮ** ನಿರ್ಹೇತುಕ ಕೃಪಾಶಾಲಿಯಾದ ನನ್ನ, **ಇಮಂ** – ಈ ಮುಂದೆ ಹೇಳುವ, **ಪರಮಂ** – ಸರ್ವೋತ್ಕೃಷ್ಟವಾಗಿ, **ಅತಿಲೋಕಂ** – ಈ ಲೋಕದ ವ್ಯಾಪಾರಗಳಿಗೆ ಮೀರಿದ, **ಸ್ವಭಾವಂ** – ಸ್ವಭಾವವನ್ನು, **ಶೃಣು** – ಕೇಳು. ಹಿಂದೆ ನನ್ನನ್ನು ಕುರಿತು ಫಲಕಾಮಿಗಳಾಗಿ ಭಕ್ತಿಯನ್ನುಮಾಡಿ ಉಪಾಸಿಸುವರು ಧರ್ಮಾಚರಣೆಯನ್ನು ಯಥಾವಿಧಿ ನಡೆಸಬೇಕೆಂದೂ, ಅದರಿಂದ ಅವರ ಕಾಮನೆಯು ಪೂರ್ಣವಾದರೂ ಅವರಿಗೆ ಪುನಸ್ಸಂಸಾರವೇ ಗತಿ ಎಂದೂ, ಮಹಾತ್ಮರಾದ ಜ್ಞಾನಿಗಳು ಅರ್ಪಿಸಿದ ಅಲ್ಪಗಳಾದ ಪತ್ರಪುಷ್ಪ ಫಲಾದಿಗಳಿಂದಲೇ ತಾನು ತೃಪ್ತನೆಂದೂ, ಅವರ ವಿಷಯದಲ್ಲಿ ತಾನು ಪರಮ ಸುಲಭನೆಂದೂ, ಅವರಿಗೆ ಪುನರಾವೃತ್ತಿಯಿಲ್ಲವೆಂದೂ, ಹೇಳಿದರು. ಆದರೆ ಹೀಗೆ ಅನುಗ್ರಹದಲ್ಲಿ ವ್ಯತ್ಯಾಸ ಮಾಡಬಹುದೋ? ಇದು ನ್ಯಾಯವೋ? ಎಂದು ಅರ್ಜುನನು ಎಲ್ಲಿ ಕೇಳಿಯಾನೋ ಎಂದು ಭಾವಿಸಿ, ಲೋಕದಲ್ಲೆಲ್ಲೂ ಸಿಕ್ಕದ ನ್ಯಾಯವಿಮರ್ಶೆಯು ತನ್ನಲ್ಲಿ ಉಂಟು, ಎಲ್ಲರನ್ನೂ ಪರಮ ವಾತ್ಸಲ್ಯ ಸೌಶೀಲ್ಯಗಳಿಂದ ನೋಡುವ ಸ್ವಭಾವ ತನಗುಂಟು. ಪಕ್ಷಪಾತಿ ಎಂಬ ದೋಷಾರೋಪಣೆಗೆ ತಾನು ಸಿಕ್ಕುವನಲ್ಲವು ಇಂತಹ ಸ್ವಭಾವವುಳ್ಳವನೆಂದು ತಿಳಿಸುತ್ತಾರೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಈ ಲೋಕದಲ್ಲಾದರೋ ಇಂತಹ ನಿಷ್ಪಕ್ಷಪಾತವಾಗಿ ನಡೆಯೋಣವು ದುರ್ಲಭವೆಂಬ ಭಾವವು. **"ಪತ್ರಂ ಪುಷ್ಪಂ"** ಎಂಬಿವೇ ಮೊದಲಾದ ಶ್ಲೋಕಗಳಿಂದ ಸರ್ವೇಶ್ವರನು ತನ್ನ ಸೌಲಭ್ಯಾತಿಶಯವನ್ನು ಪ್ರದರ್ಶಿಸಿದರು. ಈ ಶ್ಲೋಕದಿಂದ ತನ್ನ ಸೌಶೀಲ್ಯಾತಿಶಯವನ್ನು ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು:—**ಭಗವತ್ಪ್ರೀತಿಯುಂಟಾಗಲಿ ಎಂದು ತನ್ನನ್ನೂ, ತಾನು ಆರಾಧಿಸುವ ದೇವತೆಯನ್ನೂ, ಆರಾಧನರೂಪ ಕರ್ಮವನ್ನೂ, ಭಗವಂತನಲ್ಲಿ ಸಮರ್ಪಿಸಿದರೆ, ಪುಣ್ಯಪಾಪಗಳೆಲ್ಲಾ ತೊಲಗಿ, ಕೊನೆಗೆ ಮೋಕ್ಷವನ್ನು ಹೊಂದುವನು; ಇದರಿಂದ ಜ್ಞಾನಿಗೆ ಮಹತ್ತಾದ ಪ್ರಯೋಜನವು. ಜ್ಞಾನಿಯ ವಿಷಯದಲ್ಲಿ ನನ್ನ ಪರಮ ಸೌಲಭ್ಯವನ್ನು ನೋಡು; ಈ ಸುಕೃತವು ಫಲಕಾಮನೆಯಿಂದ ನನ್ನನ್ನಾರಾಧಿಸುವ ಐಶ್ವರ್ಯಾರ್ಥಿಗಳಿಗೆ ಇಲ್ಲವೆಂದು ಉಪದೇಶಿಸಿದರು. ಹೀಗೆ ಅನುಗ್ರಹದಲ್ಲಿ ವ್ಯತ್ಯಾಸಮಾಡಿದರೆ ನಿಮಗೆ ವೈಷಮ್ಯ ನೈರ್ಘೃಣ್ಯ ದೋಷಗಳು ಪ್ರಾಪ್ತವಾಗುವದಿಲ್ಲವೋ? ಎಂದರೆ ಎಂದಿಗೂ ಇಲ್ಲವೆಂದು ಈ ಶ್ಲೋಕದಿಂದ ಉಪದೇಶಿಸುತ್ತಾರೆ. – **ಸರ್ವಭೂತೇಷು** – ಜಾತಿ, ಗುಣ, ವೃತ್ತಿ ಅಧಿಕಾರಿಗಳಿಂದ ವ್ಯತ್ಯಸ್ತವಾಗಿ ಕಾಣುವ ಸರ್ವಪ್ರಾಣಿಗಳಲ್ಲೂ, **ಸಮೋಹಂ** – ನಾನು ಸಮನಾಗಿ ಇದ್ದೇನೆ ಎಂದರೆ ಅವರುಗಳೆಲ್ಲರೂ ಆಶ್ರಯಿಸಿದರೆ ಸಾಕು ಸಮ ಫಲವನ್ನು ಕೊಡಲು ಕಾದಿದ್ದೇನೆ. ಅವರ ಜಾತಿ, ಆಕಾರ, ಗುಣ, ಪೂರ್ವವೃತ್ತಿ ಮೊದಲಾಗಿ ಯಾವುದನ್ನು ನೋಡುವದಿಲ್ಲವು. ಹೀಗೆ ಸಮಭಾವದಿಂದ. ವಾತ್ಸಲ್ಯಾತಿರೇಕದಿಂದ ಎಲ್ಲರೂ ನನ್ನ ಪ್ರಜೆಗಳು, ನನ್ನನ್ನಾಶ್ರಯಿಸಿ ನಿರುಪಮ ಶ್ರೇಯಸ್ಸನ್ನು ಪಡೆಯಲಿ ಎಂದು ಕಾದಿರುವೆನು. ಇನ್ನೂ ಅವರಿಗೆ ಕೊಟ್ಟಿರುವ ಫಲದಲ್ಲೂ ಸಹ ಸಮನಾಗಿ ನ್ಯಾಯಪರನಾಗಿದ್ದೇನೆ ಎಂಬ ಭಾವವು. ಆಗಲಿ, ಕಂಸ, ದುರ್ಯೋಧನ ಶಿಶುಪಾಲಾದಿಗಳನ್ನು ನಿಗ್ರಹಿಸಿರುತ್ತೀಯೇ, ಅಕ್ರೂರ, ಉದ್ಧವ, ವಿದುರ ಮೊದಲಾದವರನ್ನು ಅನುಗ್ರಹಿಸಿರುತ್ತೀಯೇ; ಹೀಗಿದ್ದರೂ **ಸಮೋಹಮ್** ಎಂದು ಹೇಳಿಕೊಳ್ಳುತ್ತೀಯಲ್ಲಾ ಯಾವ ನ್ಯಾಯವು? ಎಂದರೆ ಅವರವರುಗಳ

**ಮೂ. ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜನ್ತಿತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥ ೨೯.**

ದುಷ್ಕೃತ ಸುಕೃತಗಳಿಗನುಗುಣವಾಗಿ ನ್ಯಾಯವಾಗಿ ನಿಗ್ರಹಾನುಗ್ರಹವನ್ನು ತೋರಿಸುವುದೇ ಸಮತ್ವವು. ಪಾಪಿಗೆ ಅನುಗ್ರಹವನ್ನೂ, ಸುಕೃತಿಗೆ ನಿಗ್ರಹವನ್ನೂ ತೋರಿಸಿದರೆ ಆಗ ಸಮತ್ವವಿಲ್ಲವು, ಪಕ್ಷಪಾತವು ಎಂಬಭಾವವು. ಆಗೂ ಅಲ್ಲದೆ ಸುಕೃತಿಯ ಜಾತಿ ಗುಣ ವೃತ್ತಿ ಮೊದಲಾದ ತಾರತಮ್ಯಗಳನ್ನು ಪರಿಗಣಿಸದೇ ಎಲ್ಲಾ ಆಶ್ರಿತರಿಗೂ ಸಮಾನುಗ್ರಹನೇ ಸಮತ್ವವು ಎಂಬ ಭಾವವು. ಅವರವರ ಕರ್ಮಾನುಗುಣವಾಗಿಯೇ ನ್ಯಾಯವಾಗಿ ಫಲವನ್ನು ಕೊಡುವನಾಗಿದ್ದೇನೆ, ನಾನು ಯಾರಿಗೂ ಪಕ್ಷಪಾತಮಾಡುವುದಿಲ್ಲವು ಹೀಗೆ ನ್ಯಾಯವಾಗಿರುವ ಸ್ವಭಾವವು ತನ್ನೊಬ್ಬನಲ್ಲೇ ಉಂಟು ಎಂಬ ಭಾವವು **ಅಹಂ** ಎಂಬ ಶಬ್ದದಿಂದ ತೋರಿಬರುತ್ತವೆ. ಆದುದರಿಂದ ಈ ಮೇಲಿನ ಭಾಷ್ಯಾವತಾರಿಕೆಯಿಂದ **ಅತಿಲೋಕಂ** ಎಂಬ ಪ್ರಯೋಗವು. ಹೀಗೆ ಉತ್ಕೃಷ್ಟಾಪಕೃಷ್ಟತೆಯನ್ನು ಪರಿಗಣಿಸದೆ ಸರ್ವರಿಗೂ ಸಮನಾಗಿ ಸಮಾಶ್ರಯಣೀಯತ್ವವೂ, ಅವರವರುಗಳು ಆಶ್ರಯಿಸಿದುದಕ್ಕೆ ಸರಿಯಾಗಿ ಫಲಪ್ರದತ್ವವೂ ಈ ಲೋಕದಲ್ಲಿ ದುರ್ಲಭವಾದುದರಿಂದ **ಅತಿಲೋಕಂ** ಎಂಬ ಪ್ರಯೋಗವು. **ನಮೇದ್ವೇಷ್ಯೋಽಸ್ತಿ** – ನನಗೆ ಯಾರೂ ದ್ವೇಷಿಗಳಲ್ಲ, **ನಪ್ರಿಯಃ** – ನನಗೆ ಯಾರೂ ಪ್ರಿಯರಾದವರಿಲ್ಲವು, ಎಂದರೆ ಪ್ರಾಣಿವರ್ಗದಲ್ಲಿ ನಿಕೃಷ್ಟನೆಂದೂ, ಜಾತಿಯಲ್ಲಿ ನಿಕೃಷ್ಟನೆಂದೂ, ಗುಣಪ್ರವೃತ್ತಿಗಳಿಂದ ಹಿಂದೆ ನಿಕೃಷ್ಟವಾದನೆಂದೂ ಹೀಗೆ ದ್ವೇಷಪಡುವನಲ್ಲವು, ಇವನು ಪ್ರಾಣಿವರ್ಗದಲ್ಲಿ ಉತ್ಕೃಷ್ಟನೆಂದೂ, ಜಾತಿಯಲ್ಲಿ ಉತ್ಕೃಷ್ಟನೆಂದೂ, ಗುಣಪ್ರವೃತ್ತಿಗಳಿಂದ ಹಿಂದೆ ಉತ್ಕೃಷ್ಟನಾಗಿದ್ದನೆಂದೂ ಆತನ ವಿಷಯದಲ್ಲಿ ಹೆಚ್ಚು ಪ್ರೀತಿಯಿಲ್ಲವು. ಇವರಿಬ್ಬರು ಆಶ್ರಯಿಸಿದರೂ ಇವರುಗಳನ್ನು ಒಂದೇವಿಧವಾಗಿ ನೋಡತಕ್ಕವನು. ಆದರೆ ನಿಕೃಷ್ಟ ಉತ್ಕೃಷ್ಟಾವಸ್ಥೆಗಳಲ್ಲಿ ಅವರನ್ನು ಈಗ ಇಟ್ಟಿರುತ್ತೀಯೇ, **ಸಮೋಽಹಂ**ಎಂದು ಹೇಳಿಕೊಳ್ಳುತ್ತೀಯಲ್ಲಾ ಎಂದರೆ, ಅವರವರ ಹಿಂದಿನ ಕರ್ಮಾನುಗುಣವಾಗಿ ಆ ಅವಸ್ಥೆಗಳು ಉಂಟಾಗಿರುವದರಿಂದ, ನಾನು **ಸಮೋಽಹಂ** ಎಂಬುದರಲ್ಲಿ ಆಕ್ಷೇಪವಿಲ್ಲವು ದುರ್ಯೋಧನ ಅನ್ನವನ್ನು **ದ್ವೇಷ್ಯ** ಅನ್ನವೆಂದೂ, ಕಂಸನು ಶತ್ರುವೆಂದೂ, ವಿದುರನು ಧರ್ಮಾತ್ಮನೆಂದೂ ಪಾಂಡವರು **ಮಮ ಪ್ರಾಣಾಹಿ** ಎಂದು ಅತ್ಯಂತ ಪ್ರಿಯರೆಂದೂ, ಹೇಳಿಕೊಂಡಿರುವೆಯಲ್ಲಾ, ಅದು ಹೇಗೆ ಎಂದರೆ ಕಂಸ ದುರ್ಯೋಧನರೂ, ತನ್ನನ್ನು ವಿದುರರೂ ಪಾಂಡವರೂ ಆಶ್ರಯಿಸಿದ ಹಾಗೆ ಆಶ್ರಯಿಸಬಹುದಾಗಿತ್ತು; ರಾವಣನೂ ಸಹ ಆಶ್ರಯಿಸಿದ್ದ ಪಕ್ಷದಲ್ಲಿ ಆತನೂ ಮಾನ್ಯನೇ ವಧ್ಯನಲ್ಲವೆಂದೂ, ಗುಣತೋ ಮಹಾಪ್ರಾಜ್ಞನಾಗಿ ಗರಿಷ್ಠನಾಗಿರುವ ವಿಭೀಷಣನೂ, ಲೋಕರಾವಣನಾಗಿ ದುರ್ವೃತ್ತನಾಗಿರುವ ರಾವಣನೂ ಸಹ ಸಮರಾಗಿ ಅಭಯಕ್ಕೆ ಅರ್ಹರೆಂದು **"ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ । ವಿಭೀಷಣೋವಾ ಸುಗ್ರೀವ ಯದಿವಾ ರಾವಣಸ್ಸ್ವಯಮ್"** (ರಾಮಾ. ಯುದ್ಧ.), ಎಂಬ ಶ್ಲೋಕದ ಉತ್ತರಾರ್ಧದಲ್ಲೇ ನಾನೇ ಈ ಸಮತ್ವರೂಪ ಭಾವನೆಯನ್ನು ವ್ಯಕ್ತಪಡಿಸಿರುತ್ತೇನೆ. ನನ್ನ ಸಮಭಾವವು ವ್ಯಕ್ತವಡಬೇಕಾದರೆ ಅಧಿಕಾರಿಯು ಯಾವನೇ ಆಗಲಿ ಏನು ಮಾಡತಕ್ಕದ್ದೆಂದರೆ ತಿಳಿಸುತ್ತಾರೆ.— **ಯೇತು** – ಯಾರಾದರೇ ಆಗಲಿ ಜಾತಿ ಗುಣ ಪ್ರವೃತ್ತಿಗಳಿಂದ ಉತ್ಕೃಷ್ಟನೇ ಆಗಲಿ ಅಥವಾ ನಿಕೃಷ್ಟನೇ ಆಗಲಿ, **ಮಾಂ** – ಹೀಗೆ ಸೌಲಭ್ಯ, ವಾತ್ಸಲ್ಯ ಸೌಶೀಲ್ಯಾದಿ ಅತ್ಯರ್ಥ ಆಶ್ರಯಣೋಚಿತ ಕಲ್ಯಾಣಗುಣಗಳುಳ್ಳ ನನ್ನನ್ನು, **ಭಕ್ತ್ಯಾ** – ಅತ್ಯರ್ಥ ಪ್ರೀತ್ಯತಿಶಯದಿಂದ, **ಭಜನ್ತೇ** – ಉಪಾಯಾನುಷ್ಠಾನವನ್ನು ಮಾಡಿ ಸೇವಿಸುವರೋ, **ತೇ** – ಅವರು, **ಮಯಿ** – ನನ್ನಲ್ಲಿ,

(**ವರ್ತಂತೇ** ಇರುತ್ತಾರೆ) ಎಂದರೆ ಅವರಿಗೆ ನಾನೇ ಸರ್ವಸ್ವವು ಎಂಬ ಭಾವನೆಯು ಇರುತ್ತದೆ. ಆ ಕಾರಣದಿಂದಲೇ **ತೇಷು ಚಾಪ್ಯಹಂ** - ಅವರುಗಳಲ್ಲೂ ಸಹ **ಅಹಂ** - ನಾನು, (**ವರ್ತೇ** - ಇರುವೆನು,) ಎಂದರೆ ಅವರುಗಳಿಗೆ ಅಧೀನನಾಗಿ ಅವರ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ ಎಂಬ ತಾತ್ಪರ್ಯವು. ನನಗೆ ದ್ವೇಷ್ಯಿಯೂ ಇಲ್ಲವು ಪ್ರಿಯನೂ ಇಲ್ಲವು, ಎಲ್ಲರೂ ಸಮವು ಎಂದು ಹೇಳಿರುವ ಈ ಶ್ಲೋಕಕ್ಕೂ ಹಿಂದೆ **"ಪ್ರಿಯೋಹಿ ಜ್ಞಾನಿನೋತ್ಯರ್ಥಮಹಂ ಸ ಚ ಮಮಪ್ರಿಯಃ"** ಎಂದೂ, **ಜ್ಞಾನಿತ್ವಾತ್ಮೈವಮೇಮತಂ"** ಎಂದೂ **"ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವಯೋನಿಷು"** ಎಂದೂ ಹೇಳಿರುವ ಶ್ಲೋಕಗಳಿಗೂ ಪರಸ್ಪರ ವಿರೋಧವು ತೋರಿಬರುವದಿಲ್ಲವೇ ಎಂದರೆ ಇಲ್ಲವು. ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಸಮತ್ವವು ಏತರಲ್ಲಿ ಎಂದರೆ ತನ್ನನ್ನು ಆಶ್ರಯಿಸುವದರಲ್ಲಿ, ಈತನು ಜಾತ್ಯಾಕಾರ ಗುಣವೃತ್ತಿಗಳಲ್ಲಿ ನಿಕೃಷ್ಟನಾದುದರಿಂದ ದ್ವೇಷ್ಯಿಯಾಗಿ ತ್ಯಾಜ್ಯನಲ್ಲವು, ಇನ್ನೊಬ್ಬನು ಜಾತ್ಯಾಕಾರ ಗುಣವೃತ್ತಿಗಳಿಂದ ಉತ್ಕೃಷ್ಟನಾದುದರಿಂದ ಪ್ರಿಯನಾಗಿ ಉಪಾದೇಯನೆಂದಲ್ಲವು. ಯಾವಾಗ ಯಾರೇ ಆಗಲಿ ನನ್ನನ್ನು ಆಶ್ರಯಿಸಿದರೋ, ಆಗ ಎಲ್ಲರನ್ನೂ ಸಮದೃಷ್ಟಿಯಿಂದ ನೋಡಿ ಅನುಗ್ರಹಿಸುವೆನು. ನನ್ನನ್ನು ಆಶ್ರಯಿಸಿದವರೆಲ್ಲಾ ನನಗೆ ಸಮರೇ ವಿನಾ, ಅದರಲ್ಲಿ ಒಬ್ಬನು ಉತ್ಕೃಷ್ಟನು ಇನ್ನೊಬ್ಬನು ನಿಕೃಷ್ಟವೆಂಬುವದಿಲ್ಲವು. ಪಾಪಿಷ್ಠನಾದ ಕ್ಷತ್ರಬಂಧುವೂ, ಪುಣ್ಯವಂತನಾದ ಪುಂಡರೀಕರೂ ಇಬ್ಬರೂ ನನ್ನನ್ನು ಆಶ್ರಯಿಸಿದುದರಿಂದ ಇಬ್ಬರನ್ನೂ ಸಮಭಾವದಿಂದ ನೋಡಿದೆನು ಎಂಬ ಭಾವವು. ಈ ಅಭಿಪ್ರಾಯವು **"ಜ್ಞಾನೀತ್ವಾತ್ಮೈವ ಮೇಮತಂ",** ಆತನು ಅತ್ಯರ್ಥಪ್ರಿಯನು ಇತ್ಯಾದಿಗಳಿಗೆ ಎಂದಿಗೂ ವಿರೋಧವಿಲ್ಲವು ಈ ಮೇಲಿನ ಹೇಳಿಕೆಗಳು ಭಕ್ತರಿಗೂ ಅಭಕ್ತರಿಗೂ ಇರುವ ವ್ಯತ್ಯಾಸಗಳನ್ನು ಬೋಧಿಸುತ್ತವೆ. ಈ ಶ್ಲೋಕದ ಹೇಳಿಕೆಯಾದರೋ ಇಂತಹ ಭಕ್ತರಲ್ಲಿ ಏನೊಂದೂ ವ್ಯತ್ಯಾಸವಿಲ್ಲವು. ಉತ್ಕೃಷ್ಟ ನಿಕೃಷ್ಟ ಭಾವಗಳಿದ್ದರೂ ಉಪಾದೇಯರೇ ವಿನಾ ತ್ಯಾಜ್ಯರಲ್ಲವೆಂಬ ಭಾವವು. ಸಮಾನ ಫಲವಾದ ಮುಕ್ತಿಯನ್ನು ಹೊಂದಿ ಸಮಾನಾನಂದವನ್ನು ಹೊಂದುವರು. ಆಶ್ರಿತರಿಗೆ ಅನುಗ್ರಹಮಾಡಿ ಮುಕ್ತಿಹೊಂದಿಸುವದರಲ್ಲೂ ಸಮನೆಂಬ ಭಾವವೂ ತೋರಿಬರುವದರಿಂದ ಆನಂದ ತಾರತಮ್ಯ ಉಂಟೆಂದು ಹೇಳಿದರೆ, **ಸಮೋಹಂ** ಎಂಬ ಪ್ರಯೋಗವು ಕೂಡುವದಿಲ್ಲವು. ವೈಷಮ್ಯ ನೈರ್ಘೃಣ್ಯಾದಿ ದೋಷಗಳನ್ನು ಸರ್ವೇಶ್ವರನಲ್ಲಿ ಆಗ ಆರೋಪಿಸಿದಂತಾಗುವದು. ಕೆಲವರು, ಚೇತನರ ದ್ವೇಷ ಪ್ರೀತಿಗಳಿಗನುಸಾರವಾಗಿ ತಾನು ಫಲಪ್ರದನೆಂದು ಹೇಳಿಕೊಂಡಿರುತ್ತಾನೆಂದು ಅಭಿಪ್ರಾಯಪಡುವರು. ಇಲ್ಲಿ ಹೇಳಿರುವದೇನೆಂದರೆ, ಯಾವಾಗ ನನ್ನನ್ನು ಉಪಾಸನಕ್ಕೆ ಹೇಳಿರುವ ಅಙ್ಗಶರಣಾಗತಿಯಿಂದಾಗಲಿ ಭರನ್ಯಾಸದ ಅಙ್ಗಿ ಶರಣಾಗತಿಯಿಂದಾಗಲಿ ಯಾವನೇ ಆಗಲಿ, ಯಾವಾಗ ಆಶ್ರಯಿಸಿ ಪ್ರಪನ್ನಾದನೋ, ಆಗ ಹಿಂದೆ ಈತನು ದ್ವೇಷ್ಯಿಯಾಗಿದ್ದನು, ಪ್ರಿಯವಾಗಿದ್ದನೆಂಬುದನ್ನು ಮರೆತು ಸುಕೃತಿಯನ್ನೂ ದುಷ್ಕೃತಿಯನ್ನೂ ಸಮನಾಗಿಯೇ ಭಾವಿಸಿ, ಅಭಯವನ್ನಿತ್ತು ರಕ್ಷಿಸತಕ್ಕವನು **ಎಂಬುದು**. ಇದರಿಂದ ಕೆಲವು ಆತ್ಮರುಗಳಿಗೆ ಎಂದಿಗೂ ಮೋಕ್ಷವೇ ಇಲ್ಲವೆಂದು ಪರಮಾತ್ಮನೇ ಸಙ್ಕಲ್ಪಿಸಿ ಬಿಟ್ಟಿರುತ್ತಾನೆಂದೂ, ಈ ಅಭಿಪ್ರಾಯವೇ **"ಕ್ಷಿಪಾಮ್ಯಜಸ್ರಂ"** (ಗೀ. ೧೬. ೧೯.) ಎಂಬಲ್ಲಿ ಹೇಳಲ್ಪಟ್ಟಿತೆಂದೂ, ಹೇಳುವ ಅಭಿಪ್ರಾಯವೂ ಸರಿಯಲ್ಲವೆಂಬುದು ಈ ಶ್ಲೋಕದಿಂದ ಏರ್ಪಡುತ್ತದೆ. ಕರುಣಾಸಾಗರನ ಉದಾರಭಾವಕ್ಕೆ ಅನ್ಯಾಯವಾಗಿ ಇಂತಹ ಪಕ್ಷಪಾತರೂಪದೋಷವನ್ನು ಕಲ್ಪಿಸುವದು ಸರಿಯಲ್ಲವು. ಈ ಶ್ಲೋಕದ ಮುಖ್ಯ ತಾತ್ಪರ್ಯವು ಇಷ್ಟೇ. **- ಯೇಭಜನ್ತಿ** - ಯಾರು ನನ್ನನ್ನು ಅಂಗ ಶರಣಾಗತಿಯನ್ನು ಮಾಡಿ ಉಪಾಸಿಸುತ್ತಾರೋ ಅಥವಾ ಇದಕ್ಕೆ ಅಶಕ್ತರಾಗಿ ನನ್ನಲ್ಲಿ ಅಂಗಿಶರಣಾಗತಿಯನ್ನು ಅನುಷ್ಠಿಸುತ್ತಾರೋ, ಹೀಗೆ ಇವರೆಲ್ಲರೂ ಜಾತಿ,

**ಭಾ. ದೇವತಿರಙ್ಮನುಷ್ಯ ಸ್ಥಾವರಾತ್ಮನಾ ವಸ್ಥಿತೇಷು ಜಾತಿತಶ್ಚಾ ಕಾರತ ಸ್ಸ್ವಭಾವತೋ ಜ್ಞಾನತ ಶ್ಚಾತ್ಯನ್ತೋತ್ಕೃಷ್ಟಾಪಕೃಷ್ಟರೂಪೇಣ ವರ್ತಮಾನೇಷು ಸರ್ವೇಷು ಭೂತೇಷು ಸಮಾಶ್ರಯಣೀಯತ್ವೇ ಸಮೋಽಹಮ್ ; ಅಯಂ ಜಾತ್ಯಾಕಾರಸ್ವಭಾವ ಜ್ಞಾನಾದಿಭಿ ರ್ನಿಕೃಷ್ಟ ಇತಿ ಸಮಾಶ್ರಯಣೇ ನಮೇ ದ್ವೇಷ್ಯೋಽಸ್ತಿ ಉದ್ವೇಜನೀ**

ಗುಣ, ವೃತ್ತಿಗಳಿಂದ ಎಷ್ಟು ವ್ಯತ್ಯಸ್ತರಾಗಿದ್ದರೂ, ಅವರೆಲ್ಲರೂ ಪ್ರಸನ್ನರಾಗುವವರಿಂದ ತನ್ನ ಸಮಭಾವಕ್ಕೆ ಅರ್ಹರು ಎಂಬುದು

**ಭಾಷ್ಯಾರ್ಥವು:—** ಮೊದಲು **ಸರ್ವಭೂತೇಷು** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ—ಇಲ್ಲಿ ಸರ್ವಭೂತೇಷು ಎಂಬುದಕ್ಕೆ ಅರ್ಥಮಾಡುವಾಗ ಉತ್ತರಾರ್ಧದಲ್ಲಿರುವ **"ಯೇ ಭಜಂತಿತು ಮಾಂ ಭಕ್ತ್ಯಾ"** ಎಂಬುದನ್ನು ಅನುಸರಿಸಿ ಅರ್ಥಮಾಡುವದು ಯುಕ್ತವು ಆದುದರಿಂದ, **ದೇವ ತಿರ್ಯಕ್** ಮನುಷ್ಯ ಸ್ಥಾವರ ಶರೀರಕರಾಗಿ, **ಅವಸ್ಥಿತೇಷು** ಇರುವ, ಜಾತಿ, ಆಕಾರ, ಸ್ವಭಾವ, ಜ್ಞಾನ, ವೃತ್ತಿ, ಇವುಗಳಿಂದ, **ಅತ್ಯಂತೋತ್ಕೃಷ್ಟಾಪಕೃಷ್ಟರೂಪೇಣ ವರ್ತಮಾನೇಷು** - ಅತ್ಯಂತ ಉತ್ಕೃಷ್ಟ ಮತ್ತು ನಿಕೃಷ್ಟರೂಪದಿಂದಿರುವ, **ಸರ್ವೇಷು ಭೂತೇಷು** - ಸಮಸ್ತ ಭೂತಗಳಲ್ಲೂ, **ಸಮಾಶ್ರಯಣೀಯತ್ವೇ** - ಅವರು ನನ್ನನ್ನು ಭಕ್ತಿಯಿಂದ ಆಶ್ರಯಿಸುವ ಸಂದರ್ಭದಲ್ಲಿ, **ಸಮೋಽಹಂ** – ನಾನು ಸಮನಾಗಿರುವೆನು. ಹಾಗೆಂಬುದನ್ನು ವ್ಯಕ್ತಪಡಿಸುತ್ತಾರೆ.—**ಅಯಂ** – ಈತನು, ಜಾತ್ಯಾಕಾರ ಸ್ವಭಾವ ಜ್ಞಾನವೇ ಮೊದಲಾದವುಗಳಿಂದ, **ನಿಕೃಷ್ಟಇತಿ** – ನಿಕೃಷ್ಟನೆಂಬುದಾಗಿ, **ಸಮಾಶ್ರಯಣೇ ನಮೇದ್ವೇಷ್ಯೋಽಸ್ತಿ** - ನನ್ನನ್ನಾಶ್ರಯಿಸಿದರೆ ಅವರಲ್ಲಿ ನನಗೇನೂ ದ್ವೇಷವಿಲ್ಲವು, ಎಂದರೆ **ಉದ್ವೇಜನೀಯತಯಾ ನ ತ್ಯಾಜ್ಯೋಽಸ್ತಿ** – ಮನಸ್ಸಿಗೆ ಅಹಿತನಾದವನಾಗಿ, ತ್ಯಾಜ್ಯನಾಗುವದಿಲ್ಲವು, **ತಥಾ** - ಅವರ ಹಾಗೆಯೇ, **ಸಮಾಶ್ರಯತ್ವಾತಿರೇಕೇಣ** - ನನ್ನನ್ನು ಆಶ್ರಯಿಸಿದೊಂದು ವಿಷಯವನ್ನು ಬಿಟ್ಟು, **ಜಾತ್ಯಾದಿಭಿರತ್ಯನ್ತೋತ್ಕೃಷ್ಟೋಽಯಮಿತಿ** - ಜಾತ್ಯಾದಿಗಳಲ್ಲಿ ಈತನು ಉತ್ಕೃಷ್ಟನೆಂದು, **ತದ್ಯುಕ್ತತಯಾ** – ಅವುಗಳನ್ನು ಹೊಂದಿರುವದರಿಂದ, **ಸಮಾಶ್ರಯಣೇ ನ ಕಶ್ಚಿತ್ಪ್ರಿಯೋಽಸ್ತಿ** - ನನ್ನನ್ನು ಆಶ್ರಯಿಸುವ ವಿಷಯದಲ್ಲಿ ಯಾವನೊಬ್ಬನೂ ಪ್ರಿಯನಲ್ಲವು, ಎಂದರೆ **ನಸಙ್ಗ್ರಾಹ್ಯೋಽಸ್ತಿ** - ಇಂತವನೇ ಸ್ವೀಕರಿಸಲು ಯೋಗ್ಯನು ಎಂಬುದಿಲ್ಲವು ; ಪ್ರಿಯತ್ವಕ್ಕೆ ಆಶ್ರಯಣ ಮಾತ್ರವೇ ವಿನಾ ಜಾತ್ಯಾದಿಗಳಲ್ಲವೆಂಬ ತಾತ್ಪರ್ಯವು. ಉಪಾಯಾನುಷ್ಠಾನಮಾಡಿ ನನ್ನನ್ನು ಆಶ್ರಯಿಸಿದವರ ವಿಷಯದಲ್ಲಿ ತನಗೆ ತಾರತಮ್ಯ, ಪಕ್ಷಪಾತವಿಲ್ಲವು ; ಆಶ್ರಯಿಸದವರಲ್ಲೆಲ್ಲಾ ತನಗೆ ಸಮಭಾವನೆಯು ಎಂಬುದು ತಾತ್ಪರ್ಯವು. ಇದು ಭಕ್ತಿಯೋಗ ಪ್ರಕರಣವಾಗಿ ಅದರ ಪ್ರಶಂಸೆಯಲ್ಲಿ ಅನ್ವಯಿಸಿದ ಶ್ಲೋಕವಾಗಿರುವಾಗ, **ಸರ್ವ ಭೂತೇಷು** ಎಂಬ ಪ್ರಯೋಗವು ಹೇಗೆ ? ಅದಕ್ಕೆ ವ್ಯಾಖ್ಯಾನವು **"ದೇವತಿರ್ಯಙ್ಮನುಷ್ಯಸ್ಥಾವರಾತ್ಮನಾ ಅವಸ್ಥಿತೇಷು"** ಎಂಬುದು ಹೇಗೆ? ತಿರ್ಯಕ್, ಸ್ಥಾವರಗಳು ಭಕ್ತಿಯೋಗದಲ್ಲಿ ಇಳಿಯುವುದು ಎಂದರೇನು? ಎಂಬ ಶಙ್ಕಾ ನ್ಯಾಯವಾಗಿ ಉಂಟಾಗತಕ್ಕದ್ದೇ ಮುಂದೆ ೩೯ ನೆಯ ಶ್ಲೋಕದಲ್ಲಿ ಇದೇ ಪ್ರಕರಣದಲ್ಲಿ, **ಯೇಽಪಿ ಸ್ಯುಃ ಪಾಪಯೋನಯಃ। ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾಃ** ಎಂಬ ಪ್ರಯೋಗವಿರುವದರಿಂದ, ಅಲ್ಲಿನ ಶೂದ್ರ ಶಬ್ದವು ವಿದುರಾದಿಗಳಿಗೂ, ಸ್ತ್ರೀ ಶಬ್ದವೂ ಶಬರೀ ಮೊದಲಾದವರಿಗೂ, ಅನ್ವಯಿಸುವದರಿಂದ, ಹಿಂದೆ ಉಪಾಸನದಲ್ಲಿದ್ದು ಉಪಾಸನ ವಿಘ್ನ ಬಂದವರಾಗಲಿ ಅಥವಾ ಪ್ರಾರಬ್ಧವು ಪೂರಾ ನಶಿಸಿಯೋಗದೆ, ಅದಕ್ಕಾಗಿ ಇಂತಹ ಜನ್ಮ ಪ್ರಾಪ್ತವಾಗಿದೆ ಎಂದಾಗಲಿ, ಇಟ್ಟುಕೊಳ್ಳಬೇಕಾಗುತ್ತದೆ. ದೇವತೆಗಳೂ, ಮತ್ತು ಉಪಾಸನೆಗೆ

**ಭಾ. ಯತಯಾ ನಶ್ಕ್ಯಾಚ್ಯೋऽಸ್ತಿ ; ತಥಾ ಸಮಾತ್ರಿ ತತ್ವಾತಿರೇಕೇಣ, ಜಾತ್ಯಾದಿಭಿ ರನ್ತ್ಯೈ ನ್ತೋऽತ್ಯಷ್ಟೋऽಯ ಮಿತಿತದ್ಯುಕ್ತತಯಾ ಸಮಾಶ್ರಯಣೇನ ಕಶ್ಚಿತ್ರಿಯೋऽಸ್ತಿ-ನಸಜ್ಞ್ಯಾಹ್ಯೋऽಸ್ತಿ;ಅಪಿತ್ವತ್ಯರ್ಥಪ್ರಿಯತ್ವೇನ ಮದ್ಭಜನೇನವಿನಾ ತ್ಮಧಾರಣಾZ**

ಯೋಗ್ಯರಾದ ಈ ಜನ್ಮದಲ್ಲೇ ಭಕ್ತಿಮಾರ್ಗದಲ್ಲಿ ಪ್ರವೇಶಿಸಿದ ದ್ವಿಜರೂ ಎಂದೂ, ಇಟ್ಟುಕೊಳ್ಳಬಹುದು ; ಹಾಗಲ್ಲದೆ ಉಪಾಸನೆಗೆ ಅನರ್ಹರಾದ ಸ್ತ್ರೀಯರು, ಶೂದ್ರಾದಿಗಳ ವಿಷಯದಲ್ಲೂ, ತಿರ್ಯಕ್, ಸ್ಥಾವರಗಳ ವಿಷಯದಲ್ಲೂ, ಹಿಂದಿನ ಜನ್ಮದಲ್ಲಿ ಉಪಾಸನವು ಕೈಗೂಡದೆ ಭಂಗವುಂಟಾಗಿ ಈಗ ಅಂತಹ ಜನ್ಮಗಳು ಪ್ರಾಪ್ತವಾಗಿವೆ ಎಂದು ಊಹಿಸಬಹುದು. ಆದುದರಿಂದ **ಸರ್ವಭೂತೇಷು** ಎಂಬಲ್ಲಿ ಸರ್ವ ಶಬ್ದವೂ ಲೋಕದಲ್ಲಿರುವ ಸರ್ವ ಭೂತಗಳನ್ನೂ ಬೋಧಿಸುವದಿಲ್ಲವು. ಒಂದಾನೊಂದು ಕಾಲದಲ್ಲಾಗಲಿ, ಈಗಲಾಗಲಿ ಭಕ್ತಿಯೋಗ ಅಥವಾ ಪ್ರಪತ್ತಿ ಸಂಬಂಧವಿರಬೇಕೆಂಬುದು ವ್ಯಕ್ತವು ; ಏಕೆಂದರೆ, ಅದರ ವಿವರಣವಾಗಿ ಉತ್ತರಾರ್ಧದಲ್ಲಿ **"ಯೇ ಭಜನ್ತಿತು ಮಾಂ ಭಕ್ತ್ಯಾ** ಎಂಬ ಪ್ರಯೋಗವಿರುವದರಿಂದ **ಸರ್ವ** ಶಬ್ದಕ್ಕೆ ಹೀಗೆ ಸಂಕೋಚಮಾಡಿ ಅರ್ಥಮಾಡುವದು ಯುಕ್ತವು. ಪ್ರಕರಣವು ಭಕ್ತಿಯೋಗವಾದುದರಿಂದ ಭಕ್ತಿಯೋಗದ ಅನ್ವಯವಿದ್ದ ಸರ್ವರೂ ಎಂದೇ ಅರ್ಥಮಾಡತಕ್ಕದ್ದಾಗಿರುತ್ತದೆ. ಆದುದರಿಂದಲೇ **"ದೇವತಿರ್ಯಙ್ಮನುಷ್ಯ"** ಇತ್ಯಾದಿ ವ್ಯಾಖ್ಯಾನವು. **ದೇವ** ಶಬ್ದವನ್ನು ಇಲ್ಲಿ ಸೇರಿಸಿರುವದು. **"ತದುಪರ್ಯಪಿ ಬಾದರಾಯಣಸ್ಸಂಭವಾತ್"** ಎಂಬ ಅಧಿಕರಣದಲ್ಲಿ ದೇವತೆಗಳಿಗೂ ಉಪಾಸನೆಯಲ್ಲಿ ಅಧಿಕಾರ ಉಂಟೆಂದೂ, ಸ್ವರ್ಗದಲ್ಲಿರುವವರೂ ಕೂಡ ಪರಮಾತ್ಮೋಪಾಸನೆಯನ್ನು ಮಾಡಿ ಪುನಃ ಇಲ್ಲಿಗೆ ಬರುವ ಅವಶ್ಯಕವಿಲ್ಲದೆ ಸ್ವರ್ಗದಿಂದ ಮೋಕ್ಷಕ್ಕೇನೇ ಹೋಗಬಹುದೆಂದೂ, ಶ್ರೀ ಬಾದರಾಯಣರ ಅಭಿಪ್ರಾಯವೆಂದು ಹೇಳಲ್ಪಟ್ಟಿರುವದನ್ನು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು. ತಿರ್ಯಕ್ಕುಗಳಲ್ಲಿ ಗಜೇಂದ್ರನನ್ನೂ, ವಾನರೇಂದ್ರನಾದ ಆಂಜನೇಯನನ್ನೂ, ಸ್ಥಾವರಗಳಲ್ಲಿ, ಅಶ್ವತ್ಥವೃಕ್ಷ ತುಳಸೀಗಿಡ ನಿದರ್ಶನವಾಗಿ ಭಾವಿಸಬಹುದು. ಆದಿ ಭರತರು ಮೃಗವಾಗಿ ಜನ್ಮವೆತ್ತಿದಾಗಲೂ ಪರಮಾತ್ಮನಲ್ಲಿ ಭಕ್ತಿರೂಪಜ್ಞಾನವಿತ್ತೆಂದು ಹೇಳಲ್ಪಟ್ಟಿರುತ್ತದೆ. ಕೆಲವು ಗೋವುಗಳೂ ವಾನರಗಳೂ ಸಹ ದೇವಾಲಯಗಳನ್ನು ಬಿಟ್ಟು ಕದಲದೆ, ಎಷ್ಟು ಅಟ್ಟಿದರೂ ಬೇರೆ ಕಡೆಗೆ ಹೋಗದೆ, ಅಲ್ಲಿ ಸಿಕ್ಕಿದುದನ್ನೇ ತಿಂದುಕೊಂಡಿದ್ದು ಅಲ್ಲೇ ಪ್ರಾಣಬಿಟ್ಟಿರುವದನ್ನು ಕಂಡಿರುವೆವು. ಇವುಗಳಿಗೆ ಅಂತಹ ಜ್ಞಾನವಿಲ್ಲವೆಂದು ನಿರೋಧಿಸಿ ಹೇಳುವದು ಕಷ್ಟತರವಾಗುತ್ತದೆ. ಅದೂ ಅಲ್ಲದೆ **ಸರ್ವಭೂತೇಷು** ಎಂಬ ಪ್ರಯೋಗಕ್ಕೆ ಇನ್ನೊಂದು ವಿಧವಾಗಿಯೂ ಸಾಮಂಜಸ್ಯವನ್ನು ಕಲ್ಪಿಸಬಹುದು. ಪರಮಾತ್ಮನನ್ನು ಭಕ್ತಿಯಿಂದ ಭಜಿಸಿ ಆತನನ್ನು ಹೊಂದುವ ಉಪಾಯಗಳೆರಡೆಂದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ.—(೧) ಉಪಾಸನೆಯು (೨) ಭರನ್ಯಾಸವು. ಇವೆರಡಕ್ಕೂ ಶರಣಾಗತಿಯು ಆವಶ್ಯಕವು. ಮೊದಲನೆಯುದರಲ್ಲಿ ಇದು ಅಙ್ಗವು ; ಎರಡನೆಯದರಲ್ಲಿ ಅಂಗಿಯು. ಈ ಶ್ಲೋಕದಲ್ಲಿ ಇವೆರಡು ಉಪಾಯಗಳಿಗೂ ಅನ್ವಯಿಸುವ ಹಾಗೆ, ಮಹರ್ಷಿಯು ಮಹಾ ಕವಿಯಾದುದರಿಂದ, ಬರೆದಿರುತ್ತಾರೆ. ವ್ಯಂಗಾರ್ಥಗಳಿಂದಲೇ ಗ್ರಂಥಕ್ಕೆ ಮಹಾತ್ಮ್ಯೆಯು. ಇಂತಹ ಅಂಗಿ ಶರಣಾಗತಿಯನ್ನು ದೇವತೆಗಳೂ, ಮನುಷ್ಯರಲ್ಲಿ ಚಂಡಾಲ ಪತಿತ ಮೊದಲುಗೊಂಡು ಋಷಿಗಳವರೆಗೂ ಸರ್ವರೂ, ಮಾಡಲು ಅಧಿಕಾರವಿರುವದರಿಂದ, **ಸರ್ವಭೂತೇಷು** ಎಂಬ ಮೂಲದ ಪ್ರಯೋಗವೂ ಅದಕ್ಕೆ **"ದೇವತಿರ್ಯಙ್ಮನುಷ್ಯಸ್ಥಾವರಾತ್ಮನಾವಸ್ಥಿತೇಷು"** ಎಂಬ ವ್ಯಾಖ್ಯಾನವೂ ಸಹ, ಎರಡು ವಿಧ ಉಪಾಯಗಳಿಗೂ ಅನ್ವಯಿಸುವಂಥಾದ್ದಾಗಿ ಸರ್ವ ಸಮಂಜಸವೇ. ಆದುದರಿಂದ ಸರ್ವೇಶ್ವರನಿಗೆ ಚತುರ್ಮುಖನೂ,

ವಿಶ್ವಾಮಿತ್ರಾದಿ ಋಷಿಗಳೂ, ಒಬ್ಬ ಶಬರಸ್ತ್ರೀಯೂ, ಒಬ್ಬ ವಕ್ರಳಾದವಳೂ, ಒಬ್ಬ ಗಜನೂ, ಒಬ್ಬ ವಾನರನೂ, ಅಶ್ವತ್ಥವೃಕ್ಷವೂ ಎಲ್ಲವೂ ಸರ್ವೇಶ್ವರನಿಗೆ ಆಶ್ರಿತರಾದುದರಿಂದ ದಯಸೀಯ ಭಾಗದಲ್ಲಿ ಸಮವೇ ಎಂಬ ತಾತ್ಪರ್ಯವು. **ಯೇ ಭಜನ್ತಿತು ಮಾಂ ಭಕ್ತ್ಯಾ** ಎಂಬ ಪ್ರಯೋಗವು ಎರಡು ಉಪಾಯಗಳಿಗೂ ಸರಿಹೋಗುತ್ತದೆ. **ಭಕ್ತ್ಯಾ** ಎಂಬುದಕ್ಕೆ ಪರಭಕ್ತ್ಯಾ ಎಂಬರ್ಥ ಮಾಡಿ ಉಪಾಸನಮೂಲಕವಾಗಿ ಎಂದು ಅರ್ಥವನ್ನು ಮಾಡಬಹುದು, ಆತನಲ್ಲದೆ ಇನ್ನು ಯಾರು ರಕ್ಷಕರಿಲ್ಲವೆಂದು ತಿಳಿದು ಮಹಾವಿಶ್ವಾಸವನ್ನಿಟ್ಟು ಆತನಲ್ಲಿ ನಿರತಿಶಯ ಭಕ್ತಿಯಿಂದ ಇರುವನಾದುದರಿಂದ ಭರನ್ಯಾಸ ನಿಷ್ಠನಿಗೂ, ಈ ಭಕ್ತ್ಯಾ ಎಂಬ ಪ್ರಯೋಗವು ಅನ್ವಯಿಸುತ್ತದೆ. ಈ ಅರ್ಥವೇನೋ ಸ್ವಾರಸ್ಯವೂ ಆಗಬಹುದು, ಶಾಸ್ತ್ರವಿರುದ್ಧವೂ ಅಲ್ಲವು. ಆದರೆ ಅಪ್ರಸ್ತುತ ವಿಷಯವಾಗುವದಿಲ್ಲವೋ ಎಂದರೆ, ಹೀಗೆ ಆಕ್ಷೇಪಿಸುವನಿಗೆ ಸಮಾಧಾನವೇನೆಂದರೆ, ಭಗವದ್ಗೀತೆಯು ಒಂದೇ ಉಪಾಯವಾದ ಉಪಾಸನವನ್ನು ಕುರಿತೇ ಹೇಳಿರುತ್ತದೆಂಬ ಭಾವವು ಸರಿಯಲ್ಲವು. ಅರ್ಜುನನು ಪ್ರಥಮತಃ ಈ ಎರಡನೆಯ ಉಪಾಯವಾದ ಶರಣಾಗತಿಯನ್ನೇ **"ಶಾಧಿಮಾಂ ತ್ವಾಂ ಪ್ರಪನ್ನಂ"** ಎಂದು ಹೇಳಿ, (ಗೀ. ೨. ೭) ಅನುಷ್ಠಿಸಿರುತ್ತಾನೆ. ಚರಮಶ್ಲೋಕವೂ ಭರನ್ಯಾಸವನ್ನೂ ಬೋಧಿಸುತ್ತದೆ. ಈ ಶ್ಲೋಕದ ವ್ಯಾಖ್ಯಾನದಲ್ಲೂ ಶ್ರೀ ದೇಶಿಕೇಂದ್ರರು, **"ಅಹಂ ಚ ತೇ ಚ ಅನ್ಯೋನ್ಯಂ ಪಿತ್ರಾದಿಷ್ವಿವ ನ್ಯಸ್ತಭರಾ ಇತಿ ಪಿಂಡಿತಾರ್ಥಃ"** ಎಂಬಲ್ಲಿ ಈ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. **ನಮೇದ್ವೇಷ್ಯೋಽಸ್ತಿ. ನ ಪ್ರಿಯಃ** ಎಂಬುದಕ್ಕೆ **ನತ್ಯಾಜ್ಯೋಽಸ್ತಿ ನ ಸಙ್ಗ್ರಾಹ್ಯೋಽಸ್ತಿ** ಎಂದು ಇಲ್ಲಿ ವ್ಯಾಖ್ಯಾನ ಮಾಡಲು ಕಾರಣವೇನೆಂದರೆ? ಆಶ್ರಯಿಸಲು ಬಂದವನನ್ನು ಕುರಿತು ದ್ವೇಷಿಸುವದು ಎಂದರೆ ಆತನ ಪರಿತ್ಯಾಗವೇ; ಹಾಗೆ ಆಶ್ರಯಿಸಲು ಬಂದವನನ್ನು ಪ್ರೀತಿಸುವದು ಎಂದರೆ ಆತನನ್ನು ಪರಿಗ್ರಹಿಸುವದೇ; ಆದುದರಿಂದಲೇ ಹಾಗೆ ವ್ಯಾಖ್ಯಾನಮಾಡಿರುತ್ತಾರೆ. ಈತನ ಜಾತಿ, ಗುಣ ವೃತ್ತಾದಿಗಳ ನಿಕೃಷ್ಟತೆಯಿಂದ ಆಶ್ರಯಿಸಿದವನನ್ನು ತ್ಯಾಜ್ಯನೆಂದು ದೂರೀಕರಿಸುವದಿಲ್ಲವು. ರಾಕ್ಷಸನಾಗಿದ್ದ ವಿಭೀಷಣನೂ ಬೇಡನಾದ ಗುಹನೂ ಇವರೆಲ್ಲಾ ತ್ಯಾಜ್ಯರಲ್ಲವು. ಆದರೆ ಇವರುಗಳು ಆಶ್ರಯಿಸಿದುದು ಭಕ್ತಿಯೋಗದಿಂದ ಅಲ್ಲವು ಬೇರೆ ಉಪಾಯವಾದ ಪ್ರಪದನ ಮೂಲಕವಾಗಿ ಆಶ್ರಯವು. ಆಶ್ರಿತ ವಿಷಯದಲ್ಲಿ ಸಮವೆಂಬ ನಿದರ್ಶನಕ್ಕೆ ಯಾವ ಉಪಾಯವಾದರೂ ಆಗಬಹುದು. ಜಾತ್ಯಾದಿಗಳಲ್ಲಿ ಉತ್ಕೃಷ್ಟನೋ ನಿಕೃಷ್ಟನೋ, ಅಂತವನು ಭಕ್ತಿಯಿಂದ ಆಶ್ರಯಿಸಿಬಿಡುತ್ತಾನೆ, ಆಗ ನಿನ್ನ ಭಾವನೆ ಹೇಗೆ? ಎಂದು ಪ್ರಶ್ನಿಸಬಹುದು ಎಂದು ಊಹಿಸಿ, ಅದಕ್ಕೆ ಉತ್ತರವಾಗಿ ವ್ಯಾಖ್ಯಾನದಲ್ಲಿ, **ಸಮಾಶ್ರಿತತ್ವಾತಿರೇಕೇಣ** ಎಂಬ ಪ್ರಯೋಗವು. ಯಾವಾಗ ಆಶ್ರಯಿಸಿ ಬಿಟ್ಟನೋ, ಆತನು ಪ್ರಿಯನೇ ಸರಿ ಎಂಬ ಭಾವವು. ಐಶ್ವರ್ಯಾರ್ಥಿಗಳಾಗಿ ಧ್ರುವನ ಹಾಗೆ ಆಶ್ರಯಿಸಿದರೂ ಅವರೂ ಪ್ರಿಯರೇ; ಅವರುಗಳನ್ನು ಉದಾರಿಗಳೆಂದೇ ಹೇಳಿರುವೆನು; ಆದರೆ ಅವರು ಇಲ್ಲಿನ ಪ್ರಕರಣಾನುಗುಣವಾಗಿ ಮೋಕ್ಷಾರ್ಥಿಗಳಾದರೆ ಇನ್ನೂ ಅತ್ಯರ್ಥ ಪ್ರಿಯರಾಗುವರು ಎಂದು ಹಿಂದೆಯೇ ಹೇಳಿರುವೆನು. ಇಂತಹ ಅಭಿಪ್ರಾಯಗಳನ್ನೆಲ್ಲಾ ಜ್ಞಾಪಿಸುವದಕ್ಕಾಗಿ **ಸಮಾಶ್ರಿತತ್ವಾತಿರೇಕೇಣ** ಎಂಬ ಪ್ರಯೋಗವು. ಹೀಗೆ ಆಶ್ರಿತರ ಜಾತ್ಯಾದಿಗಳ ನಿಕೃಷ್ಟತೆ ಉತ್ಕೃಷ್ಟತೆಯಿಂದ ತ್ಯಾಜ್ಯರಾಗಲಿ ಪ್ರಿಯರಾಗಲಿ ಆಗುವದಿಲ್ಲವೆಂದು ಹೇಳಿದ್ದೇನೋ ಸರಿಯೇ; ಆದರೆ ನಿನ್ನ ಅನುಗ್ರಹವೇನೋ ಮುಖ್ಯವಾಗಿ ಬೇಕಲ್ಲಾ, ಅದನ್ನು ಹೊಂದುವ ಬಗೆ ಹೇಗೆ ಎಂದು ಕೇಳುತ್ತೀಯೋ ಹೇಳುವೆನು ಕೇಳು, ಎಂದು ಉತ್ತರಾರ್ಧದಿಂದ ತಿಳಿಸುತ್ತಾರೆ. **ಅಪಿತು** - ಜಾತ್ಯಾದಿಗಳ ಉತ್ಕೃಷ್ಟತೆಯಿಂದ ಸಂಗ್ರಾಹ್ಯನಲ್ಲದಿದ್ದರೆ, ಇನ್ನು ಏತರಿಂದ ಸಂಗ್ರಾಹ್ಯನೆಂದರೆ, **ಭಕ್ತ್ಯಾ** - ಭಕ್ತಿಯಿಂದ; ಭಕ್ತರು ಯಾರೆಂದರೆ **ಅತ್ಯರ್ಥ ಪ್ರಿಯತ್ವೇನ ಮದ್ಭಜ**

**ಭಾ. ಲಾಭಾ ನ್ಮದ್ಭಜನೈ ಕಪ್ರಯೋಜನಾ ಯೇ ಮಾಂ ಭಜನ್ತೇ, ತೇ ಜಾತ್ಯಾದಿಭಿರು ತ್ಕೃಷ್ಟಾ ಅಪಕೃಷ್ಟಾ ವಾ ಮತ್ಸಮಾನ ಗುಣವದ್ಯಥಾಸುಖಂ ಮಯ್ಯೇವ ವರ್ತನ್ತೇ; ಅಹಮಪಿ ತೇಷು ಮದುತ್ಕೃಷ್ಟೇಷ್ವಿವ ವರ್ತೇ.** || ೨೯ ||

**ನೇನ ವಿನಾऽತ್ಮಧಾರಣಾऽಲಾಭಾತ್ ಮದ್ಭಜನೈಕ ಪ್ರಯೋಜನಾಃ** – ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ನನ್ನಲ್ಲಿ ನಿರತಿಶಯ ಪ್ರೀತಿಯನ್ನಿಟ್ಟಿರುವದರಿಂದ, ಅವರಿಗೆ ನನ್ನ ಭಜನವಿಲ್ಲ ದಿದ್ದರೆ ಆತ್ಮವೇ ನಿಲ್ಲದೆಂದು ಭಾವಿಸುವರಾದುದರಿಂದ, ನನ್ನ ಭಜನವನ್ನೊಂದನ್ನೇ ಪ್ರಯೋಜನವಾಗಿ ವುಳ್ಳವರು, ಇಂತಹ ಭಕ್ತಿಯಿಂದ, **ಯೋಮಾಂ ಭಜನ್ತೇ** - ಯಾರು ನನ್ನನ್ನೇ ಭಜಿಸುತ್ತಾರೋ ಆಶ್ರಯಿಸುತ್ತಾರೋ, **ತೇ** – ಅಂತಹ ಭಕ್ತರು, ಜಾತ್ಯಾದಿಗಳಿಂದ ಉತ್ಕೃಷ್ಟರೇಯಾಗಲಿ ನಿಕೃಷ್ಟರೇಯಾಗಲಿ, **ಮತ್ಸಮಾನಗುಣವತ್** - ನನಗೆ ಪರಮ ಮಿತ್ರರಾ ಗುವದರಿಂದ ನನಗೆ ಸಮಾನವಾದ ಗುಣವನ್ನು ಹೊಂದಿದಹಾಗೆ, **ಯಥಾಸುಖಂ** - ಐಕರಸ್ಯ ದಿಂದ ಸುಖವಾಗಿರೋಣ ಹೇಗೋ ಹಾಗೆ, **ಮಯ್ಯೇವ ವರ್ತನ್ತೇ** – ನನ್ನ ವಿಷಯದಲ್ಲೇ ವರ್ತಿ ಸುವರು ; **ಅಹಮಪಿ** - ನಾನೂ ಕೂಡ, **ಮದುತ್ಕೃಷ್ಟೇಷ್ವಿವ ವರ್ತೇ** – ನನಗಿಂತ ಉತ್ಕೃಷ್ಟರಲ್ಲಿ ಹೇಗೋ ಹಾಗೆ ವರ್ತಿಸುವೆನು ಎಂದರೆ ಅಂತವರನ್ನು ಅಭಿಮಾನದಿಂದ ಕಾಣುವೆನು ; ಇದರಿಂದ **ಸರ್ವೇಶ್ವರನ** ಸೌಲಭ್ಯ ಸೌಶೀಲ್ಯ ಗುಣಗಳು ವ್ಯಕ್ತವು. ಚೇತನ ವರ್ಗಕ್ಕೆಲ್ಲಾ ತಾನು ಸ್ವಾಮಿ ಯಾದರೂ, ತನ್ನನ್ನು ಗೌರವಿಸಿದ ವಿಶ್ವಾಮಿತ್ರಮಹರ್ಷಿಗೆ **ಇಮೌಸ್ಮ ಮುನಿಶಾರ್ದೂಲ ಕಿಂಕರೌಸಮುಪಸ್ಥಿತೌ। ಆಜ್ಞಾಪಯ ಯಥೇಷ್ಟಂ ವೈ ಶಾಸನಂ ಕರವಾವ ಕಿಮ್?** ಎಂದು ಹೇಳಿಕೊಂಡಿರುದು ಇಲ್ಲಿ ಅನುಸಂಧೇಯವು. ಮಹಾ ಭಾಗವತೋತ್ತಮರಾದ ಕುಚೇ ಲರೇ ಮೊದಲಾದವರ ಪಾದವನ್ನು ತೊಳೆದು **"ಪಾದವನೇಜನೀಃ। ಅಗ್ರಹೀತ್ ಶಿರಸಾ ರಾಜನ್"** ಎಂದು ಹೇಳಿ ಪಾದೋದಕವನ್ನು ಶ್ರೀ ಕೃಷ್ಣಭಗವಾನ್ ಶಿರಸಾ ಧರಿಸಿದರೆಂಬ ಇತಿಹಾಸವು, **"ಮದುತ್ಕೃಷ್ಟೇಷ್ವಿವವರ್ತೇ"** ಎಂಬ ವ್ಯಾಖ್ಯಾನದ ನಿದರ್ಶನವೆಂದು ಭಾವಿಸ ಬಹುದು. ಹಾಗೆಯೇ ಸಾಂದೀಪಿನಿಯವರಿಗೂ, ಭರದ್ವಾಜ ಅಗಸ್ತ್ಯ ಮೊದಲಾದ ಋಷಿಗಳಿಗೂ, ತೋರಿಸಿದ ಮರ್ಯಾದೆಗಳೂ ಸಹ ನಿದರ್ಶನಗಳು. ಇಲ್ಲಿ ನನಗಿಂತ ಅವರು ಉತ್ಕೃಷ್ಟರೆಂದು ಹೇಳಿಕೊಂಡಿರುವದು **ಸರ್ವೇಶ್ವರನ ಸೌಶೀಲ್ಯ ಪರಾಕಾಷ್ಠೆ** ಎಂದು ಭಾವಿಸತಕ್ಕದ್ದು. **ಯಾಃ ಕ್ರಿಯಾಃ ಸಂಪ್ರಯುಕ್ತಾಸ್ಸ್ಯು ರೇಕಾಂತ ಗತಬುದ್ಧಿಭಿಃ। ತಾಸ್ಸರ್ವಾ ಶ್ಶಿರಸಾ ದೇವಃ ಪ್ರತಿಗೃಹಾಣತಿ ವೈ ಸ್ವಯಮ್"** ಎಂಬುದು ಅನುಸಂಧೇಯವು. (ಮೋಕ್ಷ. ೩೫೩-೬೪) **ಭಕ್ತ್ಯಾಭಜಂತಿ** ಎಂಬ ಪ್ರಯೋಗದಲ್ಲಿ **ಭಜಂತಿ** ಎಂಬುದರಲ್ಲಿ ಭಕ್ತಿಭಾವವೂ ಅಂತರ್ಗತವಾಗಿದ್ದರೂ. ಆ ಭಕ್ತಿಯು ಎಂತಾದ್ದು ಎಂದರೆ ತುಂಬಾ ಅಸದೃಶವಾದುದು ಎಂಬ ಅಭಿಪ್ರಾಯದಿಂದ ಭಕ್ತ್ಯಾ ಎಂದು ಮೂಲದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂಬುದನ್ನು ತಿಳಿಸುವ ದಕ್ಕಾಗಿ **"ಮದ್ಭಜನೇನ ವಿನಾऽತ್ಮಧಾರಣಾಲಾಭಾನ್ಮದ್ಭಜನೈಕಪ್ರಯೋಜನಾಃ"** ಎಂದು ವ್ಯಾಖ್ಯಾನಮಾಡಿರುತ್ತಾರೆ. **ತೇ ಮಯಿ, ತೇಷು ಚಾಪ್ಯಹಂ** ಎಂದು ಮೂಲದಲ್ಲಿರುವದಕ್ಕೆ ಬರೆದ ವ್ಯಾಖ್ಯಾನದ ಸಾರಾಂಶವೇನೆಂದರೆ, ನನ್ನನ್ನೇ ಏಕಾಂತಭಕ್ತಿಯಿಂದ ಭಜಿಸುವದರಿಂದ ನನ್ನ ಪಾರಮೇಶ್ವರಾನುಸಂಧಾನವು ಪ್ರಾಪ್ತವಾಗಿ, ಏನೊಂದೂ ದುಃಖಗಳಭಯವಿಲ್ಲದೆ ನನ್ನನ್ನೇ ಯಾವಾಗಲೂ ಸೇವಿಸುತ್ತಾರೆ ; ಆ ಕಾರಣದಿಂದ ನಾನೂ ಸಹ ಅವರಲ್ಲಿ ಸಂಪೂರ್ಣಾಭಿಮಾನವ ನ್ನಿಟ್ಟಿರುವೆನು ಎಂಬ ತಾತ್ಪರ್ಯವು. ಪರಮಾತ್ಮನು ವಿಧಿಸಿರುವದು ಸ್ವಜಾತಿಗೆ ಪ್ರತಿನಿಯತ ವಾದ ಆಚರಣೆಯೊಂದಿಗೆ ಆತನನ್ನು ಭಕ್ತಿಯಿಂದ ಆಶ್ರಯಿಸೋಣವು. ಯಾವಾಗ ಇದು

**ಭಾ. ಅವ. ತತ್ರಾಪಿ**--

ನಡೆಯಿತೋ, ಆಗ ಉತ್ಕೃಷ್ಟಾಪಕೃಷ್ಟ ಜಾತಿಯ ಮೂಲಕ ಸಙ್ಗ್ರಾಹ್ಯನಾಗಲಿ ತ್ಯಾಜ್ಯನಾಗಲಿ ಆಗುವದಿಲ್ಲವು. ಆದುದರಿಂದಲೇ ಆಶ್ರಯಿಸಿದವರೆಲ್ಲಾ ಸಮರೆಂಬುದು ಸಿದ್ಧವು ಎಂಬ ತಾತ್ಪರ್ಯವು. ಈ ಸಮ ಭಾವವನ್ನೇ ಸ್ವಾಮಿ ದೇಶಿಕರವರು ದಯಾಶತಕದಲ್ಲಿ **"ನಿಷಾದಾನಾಂ ನೇತಾ ಕಪಿಕುಲಪತಿಃ ಕಾಪಿ ಶಬರೀ ಕುಚೇಲಃ ಕುಬ್ಜಾ ಸಾ ವ್ರಜಯುವತಯೋ ಮಾಲ್ಯಕೃದಿತಿ। ಅಮೀಷಾಂ ನಿಮ್ನತ್ವಂ ವೃಷಗಿರಿಪತೇರುನ್ನತ ಮಪಿ ಪ್ರಭೂತೈ ಸ್ರೋತೋಭಿಃ ಪ್ರಸಭ ಮನುಕಂಪೇ ಸಮಯಸಿ"** (ದಯಾ. ೬೪.) ಎಂಬ ಶ್ಲೋಕದಲ್ಲಿ ಸೌಶೀಲ್ಯಪರಾಕಾಷ್ಠಾರೂಪ ಸಮತ್ವವನ್ನು ಉಪಪಾದಿಸಿರುತ್ತಾರೆ. ಹೀನವಾದ ಬೇಟೆಯಾಡುವ ವೃತ್ತಿಯುಳ್ಳ ಶಬರರಿಗೆ ರಾಜನಾದ ಗುಹನೂ, ತೋಟಗಳನ್ನೆಲ್ಲಾ ಧ್ವಂಸಮಾಡುವದೇ ಮೊದಲಾದ ಅನೇಕ ದೋಷ ಯುಕ್ತ ಕಪಿಗಳಿಗೆ ರಾಜನಾದ ಸುಗ್ರೀವನು, ಹೀನವಾದ ಶಬರಕುಲದಲ್ಲಿ ಹುಟ್ಟಿ ಸ್ತ್ರೀಯಾಗಿರುವ ಯಾವಳೋ ಒಬ್ಬ ಶಬರಿಯು ಬಹಳ ಅಸಹ್ಯವಾಗಿ ಗಂಟು ಗಂಟುಗಳಿದ್ದುದರಿಂದ ಚನ್ನಾಗಿ ಒಗೆಯುವದಕ್ಕೂ ಕೂಡ ಆಗದೆ ದುಷ್ಟವಾಸನೆಯಿಂದ ಕೂಡಿದ ಹರಕು ಬಟ್ಟೆಯನ್ನು ಹೊದ್ದಿದ್ದ ಕುಚೇಲರೂ, ದೇಹದಲ್ಲಿ ನಾನಾವಿಧ ವಕ್ರತೆಯಿದ್ದು ಯಾರಿಗೂ ಇಷ್ಟವಾಗದ ಅವಯವವನ್ನು ಹೊಂದಿರುವ ಕುಬ್ಜೆಯೂ, ಹಾಲುಮಾರುವವರ ಕುಲದಲ್ಲಿ ಹುಟ್ಟಿದ ಗೋಪಸ್ತ್ರೀಯರೂ, ಹೂವಾಡಿಗ ಕುಲದಲ್ಲಿ ಜನಿಸಿದವನೂ, ಹಾಗೆಯೇ ಹುಳಮಾಂಸ ಮೊದಲಾದವುಗಳನ್ನು ತಿನ್ನುವ ಪಕ್ಷಿಯಾದ ಜಟಾಯುವೂ, ಹೀಗೆ ಇವರನ್ನೆಲ್ಲಾ, ನಿನ್ನ ದಯೆಯು ನಿನಗೂ ಸಹ ಸಮಮಾಡಿ ಬಿಟ್ಟಿತು. ಹೇಗೆಂದರೆ ಜಲಪ್ರವಾಹವು ಸಣ್ಣ ಕಲ್ಲುಗಳನ್ನೂ ದೊಡ್ಡ ಒಂಡೆಗಳನ್ನೂ ಮುಚ್ಚಿ ಬಿಟ್ಟು ಎಲ್ಲವೂ ಸಮವಾಗಿರುವಹಾಗೆ ಹೇಗೆ ಮಾಡುತ್ತದೋ ಹಾಗೆಯೇ ನಿನ್ನ ಕೃಪಾ ಪ್ರಹವೂ ಎಂಬ ಭಾವವು. ಇವರುಗಳನ್ನೂ, ಎತ್ತರದಲ್ಲಿ ತಿರುಮಲೆಯಲ್ಲಿರುವ ನಿನ್ನನ್ನೂ ಈ ಪ್ರವಾಹವು ಸಮಮಾಡಿರುತ್ತದೆಂಬ ತಾತ್ಪರ್ಯವು.

**ಭಾಷ್ಯಾವತಾರಿಕೆಯ ಅರ್ಥವು:**—ಯಾವಾಗ ಆಶ್ರಯಿಸಿದರೋ, ಇವರೆಲ್ಲರೂ ಜಾತ್ಯಾದಿ ಉತ್ಕೃಷ್ಟತೆ ನಿಕೃಷ್ಟತೆಗಳಿದ್ದರೂ ಅವರೆಲ್ಲರಲ್ಲೂ ತನಗೆ ಸಮಭಾವವೆಂದು ಹೇಳಿ ತಮ್ಮ ಸೌಲಭ್ಯ ಸೌಶೀಲ್ಯ ಗುಣಗಳನ್ನು ವ್ಯಕ್ತಪಡಿಸಿದರು. **ತತ್ರಾಪಿ** - ಅದರಲ್ಲೂ, ಹಾಗೆ ಆಶ್ರಯಿಸಿದವರಲ್ಲಿ ಮಹತ್ತಾದ ಪಾಪಿಯಾಗಿದ್ದವನೊಬ್ಬನು ಆಶ್ರಯಿಸಿದರೆ, ಅಂತವನಲ್ಲೂ ಸಮಭಾವವೇ ? ಆತನೂ ಸಾಧುವೇ ? ಅವನೂ ಪರಮ ಗ್ರಾಹ್ಯನೇ ? ಇದು ಸರಿಯೇ ? ಎಂದರೆ ಸರಿ ಎಂದು ಸಕಾರಣವಾಗಿ ತಿಳಿಸುತ್ತಾರೆ —

**ಮೂಲಕ್ಕೆ ಅರ್ಥವು:**—ಹಿಂದೆ ಜಾತ್ಯಾದಿ ಉತ್ಕೃಷ್ಟತೆ ನಿಕೃಷ್ಟತೆಗಳೊಂದನ್ನೂ ಪರಿ ಗಣಿಸದೆ ಆಶ್ರಿತರಾದ ಸರ್ವ ಭಕ್ತರನ್ನೂ ಅನುಗ್ರಹಿಸುವೆನೆಂದು ಹೇಳಿದರು. ಆಶ್ರಯಿಸಿದ ಮಹರ್ಷಿಗಳೆಲ್ಲಾ ಗ್ರಾಹ್ಯರೆಂಬುದೇನೋ ಸರಿ ; ಆದರೆ ಶಾಸ್ತ್ರವಿರುದ್ಧವಾದ ಕರ್ಮಗಳನ್ನೇ ಎಸ ಗುತ್ತಾ, ಕೃತ್ಯಾಕರಣ, ಅಕೃತ್ಯಕರಣ ದೋಷಗಳಿಗೆಲ್ಲಾ ಗುರಿಯಾಗಿರುವವನೂ, ಆಶ್ರಯಿಸಿದರೆ ಆತನೂ ಮಾನ್ಯನೋ ? ಎಂದರೆ ಹೌದು, ಆತನೂ ಮಾನ್ಯನೇ ಎಂದು ಹೇಳುತ್ತಾರೆ. —ಅದು ಹೇಗೆಂದರೆ ? ಹಿಂದೆ ದೋಷಿಯೇ ಆಗಿದ್ದರೂ, ಈಗ ಆತನ ವ್ಯವಸಾಯವು ಸಮೀಚೀನವಾದು ದಾಗಿ ತನ್ನನ್ನೇ ಏಕಾನ್ತಭಕ್ತಿಯಿಂದ ಭಜಿಸುವದರಿಂದ ಮಾನನೀಯನೇ ಎಂದು ಹೇಳು ತ್ತಾರೆ.—**ಸುದುರಾಚಾರೋಽಪಿಚೇತ್** - ಅತ್ಯಂತ ದುಷ್ಟವಾದ ವೇದ ವಿರುದ್ಧಗಳಾದ ದುರಾ ಚಾರವುಳ್ಳವನಾಗಿ ಇದ್ದರೂ ಎಂದರೆ ಶಾಸ್ತ್ರವಿರುದ್ಧಕರ್ಮಗಳನ್ನೇ ನಡೆಸಿ ಮಹಾ ಪಾಪಿ ಎಂದೆನಿ

**ಮೂ. ಅಪಿ ಚೇತ್ಸುದುರಾಚಾರೋ ಭಜತೇ ಮಾ ಮನನ್ಯಭಾಕ್ ।**
**ಸಾಧುರೇವ ಸಮಂತವ್ಯ ಸ್ಸಮ್ಯಗ್ವ್ಯವಸಿತೋ ಹಿ ಸಃ ॥** ೩೦.

ಸಿದ್ಧರೂಕೂಡ, ಯಾವುದೋ ಒಂದು ಸುಕೃತ ಪರಿಪಾಕದಿಂದಲೋ, ಅಥವಾ ಶಾಸ್ತ್ರಜನ್ಯ ಜ್ಞಾನದಿಂದಲೋ, ಅಥವಾ ಮಹತ್ವಾದ ಗುರೂಪದೇಶ ಮಹಿಮೆಯಿಂದಲೋ ಹೇಗೋ, **ಮಾಂ** - ನನ್ನನ್ನು **ಅನನ್ಯಭಾಕ್** - ದೇವತಾಂತರ ಸಂಬಂಧವಿಲ್ಲದೆಯೂ ಅಥವಾ ಇತರ ಫಲ ಸಂಬಂಧವಿಲ್ಲದೆಯೂ, ಏಕಾಂತಚಿತ್ತನಾಗಿ, **ಭಜತೇ ಚೇತ್** - ಭಕ್ತಿಯೋಗಮೂಲಕವಾಗಲಿ ಅಥವಾ ಭರನ್ಯಾಸ ಮೂಲಕವಾಗಿ ಆಶ್ರಯಿಸಿದುವಾದರೆ, ಅಂತಹ ಪಾಪಿಯೂ ಕೂಡ, **ಸಾಧುರೇವ** - ನಮ್ಮ ಅನುಗ್ರಹಕ್ಕೆ ಪರಮ ಯೋಗ್ಯನೇ ಸರಿ; ಆದುದರಿಂದ, **ಸಃ** - ಆತನು, **ಮಂತವ್ಯಃ** - ಬಹುಮಾನಿಸಲ್ಪಡತಕ್ಕವನು, ಸುಮ್ಮನೇ ತಿಳಿಯತಕ್ಕದ್ದೆಂದು ಅರ್ಥಮಾಡುವದು ಮಂದವು, ಆತನು ಸನ್ಮಾನಕ್ಕೆ ಅರ್ಹನು ಎಂಬ ಭಾವವು. ಅದೇನು ಅಂತಹ ಪಾಪಿಯಾಗಿದ್ದವನು ಕೂಡ ಮಾನ್ಯನು ಎಂದು ಹೇಳುತ್ತೀ? ಎಂದರೆ ಅದಕ್ಕೆ ಕಾರಣವನ್ನು ಹೇಳುತ್ತಾರೆ. **ಸಃ** - ಅವನು ಈಗ, **ಸಮ್ಯಗ್ವ್ಯವಸಿತೋಹಿ** - ನನ್ನನ್ನು ಆಶ್ರಯಿಸಿ ಉತ್ತಾರಣೆಯನ್ನು ಹೊಂದಬೇಕೆಂಬ ನಿಶ್ಚಯ ಬುದ್ಧಿಯುಳ್ಳವನಷ್ಟೇ. ಆ ಕಾರಣದಿಂದಲ್ಲವೇ ನನ್ನನ್ನು ಸೇವಿಸುತ್ತಿದ್ದಾನೆ? ಯಾವಾಗ ಉಪಾಯಾನುಷ್ಠಾನವನ್ನು ಮಾಡಬೇಕೆಂದು ಸಙ್ಕಲ್ಪಿಸಿದನೋ, ಅವನಿಗೆ ಕ್ರಮೇಣ **"ಯಥೈಷಿಕಾತೂಲಮಗ್ನೌ ಪ್ರದೂಯೇತ ಏವಂ ಹಾಸ್ಯ ಪಾಪ್ಮಾನಃ ಪ್ರದೂಯಂತೇ"** ಎಂದೂ **"ಯಥಾಪುಷ್ಕರ ಪಲಾಶೇ ಆಪೋನಶ್ಲಿಷ್ಯನ್ತೇ, ಏವಂ ವಿದಿ ಪಾಪಂ ಕರ್ಮ ನಶ್ಲಿಷ್ಯತೇ"** (ಛಾಂ. ೮ ೧೪. ೩.) ಎಂದೂ ಶ್ರುತಿಯಲ್ಲಿ ಹೇಳಿರುವಹಾಗೂ ಮತ್ತು **"ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷ ವಿನಾಶೌ ತದ್ವ್ಯಪದೇಶಾತ್"** (೪. ೧. ೧೩.) ಎಂಬ ಸೂತ್ರದಲ್ಲೂ ಹೇಳಿರುವಹಾಗೂ, ಪೂರ್ವಾಘಗಳೆಲ್ಲಾ ನಾಶವಾಗುತ್ತವೆ. ಆದುದರಿಂದ ಆತನು ಹಿಂದೆ ಎಷ್ಟೇ ದುರಾಚಾರಿಯಾಗಿ ಇದ್ದರೂ, ಯಾವಾಗ ಆಶ್ರಯಿಸಿ ಪ್ರಪನ್ನನಾದನೋ, ಆಗ ಎಲ್ಲಾ ಪಾಪಗಳೂ ನಶಿಸಿ ಹೋಗುವದರಿಂದ ಅಂತಹ ಸುಸಙ್ಕಲ್ಪದಿಂದ ಆತನೂ **ಸಾಧುರೇವ** - ನಮ್ಮ ಅನುಗ್ರಹಕ್ಕೆ ಯೋಗ್ಯನೇ; ಪಾಪಿಷ್ಠನಾದವನು ಆಶ್ರಿತನಾಗಿಬಿಟ್ಟರೆ ಅಂತವನ ವಿಷಯದಲ್ಲೂ ಕೂಡ ನಾನು **ಸಮೋಽಹಂ** ಎಂದು ಹೇಳಿದರು **ಸುದುರಾಚಾರ** ನಾಗಿರುವ ಮಹಾಪಾಪಿಗೆ ಶಾಸ್ತ್ರದಲ್ಲೂ ಲೋಕದಲ್ಲೂ ಶಿಕ್ಷೆಯು ವಿಹಿತವಾದುದು, ಆತನು ಸತ್ಪುರುಷರಿಂದಲೂ ನಿಂದ್ಯನು. ಹೀಗಿರುವಾಗಲೂ, ನಾನು ಅಂತವನ ವಿಷಯದಲ್ಲೂ ಸಮವಾಗಿ ಭಾವಿಸುವೆನು. ಅಂತಹ ನಿಂದ್ಯನನ್ನು ಸಾಧುರೇವ ಎಂದು ಹೇಳಿ ಏವ ಕಾರದಿಂದ ದೃಢಪಡಿಸಿ ಹೇಳಬಹುದೋ? ಇದು ನಿನ್ನಂತಹ ನ್ಯಾಯಪರರಿಗೆ ವಿರುದ್ಧ ಧರ್ಮವಲ್ಲವೋ? ಎಂದರೆ, ಆತನ ವ್ಯವಸಾಯವು ತುಂಬಾ ಮಂಗಳಕರವಾದುದಲ್ಲವೇ ಎನ್ನುತ್ತಾರೆ ನನ್ನನ್ನೀಗ ಭಕ್ತಿಯಿಂದ ಆತನು ಭಜನಮಾಡುತ್ತಾನೆಯಲ್ಲವೇ? ಹಾಗೆ ಅಂತವನ ಪಾಪಗಳನ್ನೆಲ್ಲಾ ನಾಶಮಾಡಿ ಪರಿಗ್ರಹಿಸುವೆನೆಂದು ಸಙ್ಕಲ್ಪಿಸಿ ಶಾಸ್ತ್ರಮೂಲಕ ತಿಳಿಸಿರುತ್ತೇನೆಯಲ್ಲವೇ? ಆದುದರಿಂದ **ಸಾಧುರೇವ.** ಅಥವಾ ಪಾಪಿಯು ಶರಣಾಗತನಾಗಿ ಆಶ್ರಯಿಸಿದರೂ ಶಿಕ್ಷಿಸುವದು ಲೋಕದ ನ್ಯಾಯ್ಯಾಧಿಪತಿಗಳಿಗೆ ನ್ಯಾಯವಾಗಿರಬಹುದು. ನನ್ನಂತಹ ಕರುಣಾಸಾಗರನಿಗೆ ಅದು ಯೋಗ್ಯವೇ? ನನ್ನ ಮಹತ್ವಕ್ಕೂ ನಾನು ಪರಮದಯಾನಿಧಿ ಎಂಬ ಯಶಸ್ಸಿಗೂ, ಆಶ್ರಯಿಸಿದರೂ ಶಿಕ್ಷಿಸುವದು ಅರ್ಹವೋ? ಆದುದರಿಂದ **ಸಾಧುರೇವ** ಎಂದು ಬಹುಮಾನಿಸಲು ಯೋಗ್ಯನೆಂದೇ ದೃಢೀಕರಿಸಿ ಹೇಳುತ್ತೇನೆ. ನಾನು ಹಾಗೆ ಪೂರ್ವ ದುರಾಚಾರಗಳನ್ನು ಬಿಟ್ಟು ಬಿಟ್ಟು, ಸನ್ಮಾರ್ಗವನ್ನು ಅವಲಂಬಿಸಿ ತನ್ನನ್ನು ಆಶ್ರಯಿಸಿದರೆ ತನಗೆ ಮುಂದಕ್ಕೆ ಸಂಪೂರ್ಣ ಸುಖವುಂಟೆಂಬ ನಂಬಿಕೆ

ಯನ್ನು ಹುಟ್ಟಿಸಿ, ಅಂತವನನ್ನು ನಾನು ಸನ್ಮಾನಿಸದೇ ಹೋದರೆ, ಆ ಮೇಲೆ ಪಾಪಕೃತ್ಯದಲ್ಲಿ ಪ್ರವರ್ತಿಸಿದವನು ಯಾವನೂ, ನನ್ನನ್ನು ಆಶ್ರಯಿಸುವದೇ ಇಲ್ಲವು. ಆಗ ಲೋಕದಲ್ಲಿ ಪಾಪ ಕೃತ್ಯದ ಪ್ರಾಬಲ್ಯ ಉಂಟಾಗಿ ಲೋಕನಾಶಕ್ಕೆ ನಾನೇ ಹೇತುವಾಗುವದಿಲ್ಲವೇ ? ಆದುದ ರಿಂದ **ಸಾಧುರೇವ ಸಮಂತವ್ಯಃ.** ಆಶ್ರಯಿಸಲಿ, ಆಶ್ರಯಿಸದೇ ಹೋಗಲಿ, ಕರ್ಮಾನುಗುಣ ವಾಗಿ ಮಾತ್ರವೇ ಶಿಕ್ಷೆರಕ್ಷೆಗಳೇ ವಿನಾ ಅನ್ಯಥಾ ಇಲ್ಲವೆಂದು ನನ್ನ ಸಙ್ಕಲ್ಪವನ್ನು ಶಾಸ್ತ್ರಮೂಲಕ ತಿಳಿಸಿದೆನಾದರೆ, ಈ ಎಲ್ಲರಂತೆಯೂ ನಾನೂ ಆದೆನು. **"ಯದಿವಾ ರಾವಣಸ್ಸ್ವಯಂ"** ಎಂದು ಹೇಳಿರುವಹಾಗೆ ಮಾಡಿದ ಅಮೋಘ ಕ್ಷಮಾಗುಣದಿಂದ ಪರಿಪೂರ್ಣನೆಂದು ಹೇಳಲು ಆಗ ಸಾಧ್ಯವಾಗುತ್ತದೋ? ಆದುದರಿಂದ ಭೂಮಿದೇವತೆಗೆ ನನ್ನಿಂದ ಕೊಡಲ್ಪಟ್ಟ ಕ್ಷಮಾಗು ಣವೇ, ನನ್ನಲ್ಲಿಲ್ಲವೆಂದು ಲೋಕದವರೆಲ್ಲಾ ಹೇಳಿಕೊಳ್ಳುವರಾದುದರಿಂದ, ಅಂತಹ ಆಶ್ರಿತರಾದ ದುರಾಚಾರಗಳನ್ನೆಲ್ಲಾ ಕ್ಷಮಿಸಿ ಆತನನ್ನು **ಸಾಧುರೇವ** ಎಂದು ಪರಿಗ್ರಹಿಸುವೆನು ಆತನು ಹಿಂದೆ ಪಾಪಿಯಾಗಿದ್ದನೆಂಬುದನ್ನು ವಿಧಿನಿಷೇಧವಾಕ್ಯಾತಿಕ್ರಮದಿಂದ ಈಷದಪಿ ಸ್ಮರಿಸದೆ, **"ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ"** ಎಂದು ಮಹರ್ಷಿಯು ಕೊಂಡಾಡಿರುವ ಹಾಗೆ, ಆತನು **ಸಾಧುರೇವ** ಎಂದು ಬಹುಮಾನಿಸುವೆನು. ಆದುದರಿಂದ. **"ಉಪಕಾರಿಷು ಯಸ್ಸಾಧು ಸ್ಸಾಧುತ್ವೇ ತಸ್ಯ ಕೋ ಗುಣಃ । ಅಪಕಾರಿಷು ಯಸ್ಸಾಧುಸ್ಸಸಾಧುರಿತಿ ಕಥ್ಯತೇ"** ಎಂದು ಹೇಳಿರುವಹಾಗೆ, ತನ್ನ ಪೂಜಿಸಿದವನನ್ನು ಅನುಗ್ರಹಿಸುವದೇನೂ ದೊಡ್ಡದ ಲ್ಲವು, ಮಹಾ ಪಾಪಿಯನ್ನೂ ಕೂಡ ತನ್ನನ್ನು ಭಜಿಸಿದಮಾತ್ರದಿಂದ ಸಾಧುರೇವ ಎಂದು ಹೇಳಿದ ಕರುಣಾ ಮಹೋದಧಿಯೂ ಪರಮಸಾಧುರೇವ ಎಂದು ನಾವೂ ಹೇಳುವಹಾಗೆ ದುರಾ ಚಾರನನ್ನು ಸಾಧುರೇವ ಎಂದು ಮಹಾನುಭಾವನು ಇಲ್ಲಿ ಹೇಳಿರುತ್ತಾನೆ ಈ ಸಂದರ್ಭದಲ್ಲಿ **"ಪುಣ್ಯಂ ಯತ್ತವಪೂಜನಂ ಭವತಿ ಚೇತ್ತತ್ಕರ್ತುರಿಷ್ಟೇಕೃತೇ । ತತ್ಸ್ಯಾದ್ರಂಗಪತೇ ಕೃತಪ್ರತಿಕೃತಂ ಸರ್ವೇಪಿ ತತ್ಕುರ್ವತೇ । ಪಾಪಂ ಚೇದಪರಾಧಮೇವ ಭವತ ಸ್ತತ್ಕರ್ತುಸಂ ರಕ್ಷಣೇ । ಕ್ಷಾನ್ತಿಸ್ತೇ ನಿರುಪಾಧಿಕಾ ನಿರುಪಮಾ ಲಕ್ಷ್ಯೇತ ತತ್ಕ್ಷ್ಮ್ಯತಾಮ್॥** ಎಂಬ ಕ್ಷಮಾಷೋಡಶಿಯಶ್ಲೋಕವು ಅನುಸಂಧೇಯವು ನಿನ್ನನ್ನು ಆರಾಧಿಸುತ್ತಾನೆಂಬ ಪುಣ್ಯಾವಿ ರುವ ಸುಕೃತಿಯನ್ನು ರಕ್ಷಿಸುವದೇನೂ ದೊಡ್ಡದಲ್ಲವು. ಆತನು ಆರಾಧಿಸಿದನು, ನೀನು ರಕ್ಷಿಸು ತ್ತೀಯೇ; ಇದು, ಆತನು ಸುಕೃತವನ್ನು ಮಾಡಿದುದಕ್ಕೆ ಪ್ರತಿಯಾಗಿ, ಒಳ್ಳೇದನ್ನು ಮಾಡಿರು ತ್ತೀಯೇ, ಹೀಗೆ ಲೋಕದ ಜನರೂ ಸಹ ಮಾಡಿರುವದನ್ನು ಕಂಡಿರುವೆವು ನಿನ್ನ ಮಹಿಮೆಯು ಎಲ್ಲಿ? ಎಂದರೆ ಅಪರಿಮಿತವೂ ನಿನ್ನ ಆಜ್ಞೆಗಳನ್ನುಲ್ಲಂಘಿಸಿ, ಮಹಾ ಪಾಪಿಷ್ಠನಾದ್ದರೂ, ಅಂತ ವನು ಈಗ ನನ್ನನ್ನು ಆಶ್ರಯಿಸಿದನೇ ಎಂಬ ಅಭಿಮಾನದಿಂದ ರಕ್ಷಿಸುವುದಾದರೆ, ಅದೀಗ ನಿನ್ನ ನಿರವಧಿಕವಾದ ನಿರುಪಮವಾದ ಕ್ಷಮಾಗುಣಕ್ಕೆ ಯೋಗ್ಯವು ಎಂಬುದು ಈ ಶ್ಲೋಕಾರ್ಥವು.

ಈ ಮೂಲದ ಶ್ಲೋಕಕ್ಕೂ ಕೂಡ ಭರನ್ಯಾಸನಿಷ್ಠರ ವಿಷಯದಲ್ಲೂ ಅನ್ವಯಉಂಟೆಂಬುದು ವ್ಯಕ್ತಪಡುತ್ತದೆ. ಹೇಗೆಂದರೆ **"ಅಪಿಚೇತ್ಸುದುರಾಚಾರಃ"** ಎಂಬಲ್ಲಿ ಶ್ರೀ ಕೃಷ್ಣಭಗವಾನ್ ಆಗಿ ಉಪದೇಶಿಸಿರುವ ಅರ್ಥವೇ, ಶ್ರೀರಾಮಚಂದ್ರಪ್ರಭುವಿನಿಂದ **"ಆನಯೈನಂ ಹರಿಶ್ರೇಷ್ಠ ದತ್ತ ಮಸ್ಯಾಭಯಂಮಯಾ । ವಿಭೀಷಣೋವಾಸುಗ್ರೀವ ಯದಿವಾ ರಾವಣಸ್ಸ್ವಯಮ್"** ಎಂದೂ, **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ । ದೋಷೋದ್ಯಪಿ ತಸ್ಯಸ್ಯಾತ್ಸತಾ ಮೇ ತದಗರ್ಹಿತಮ್"** ಎಂದೂ, (ರಾ. ಯುದ್ಧಕಾಂಡ. ೧೮ ನೆಯ ಅಧ್ಯಾಯ) ಶರಣಾಗತಿಯ ವಿಷಯದಲ್ಲೂ ಹೇಳಿರುವದರಿಂದಲೂ, ಉಪದೇಶಕರು ಎರಡು ಸಂದರ್ಭದಲ್ಲೂ ಶ್ರೀ ಮಹಾ ವಿಷ್ಣುವೇಯಾದುದರಿಂದಲೂ, **"ಅಪಿಚೇತ್ಸುದುರಾಚಾರಃ"**

**ಭಾ. ತತ್ರ ತತ್ರ ಜಾತಿವಿಶೇಷೇ ಜಾತಾನಾಂ ಯಸ್ಸಮಾಚಾರ ಉಪಾದೇಯಃ ಪರಿಹರಣೀಯಶ್ಚ, ತಸ್ಮಾದತಿವೃತ್ತೋಽಪ್ಯುಕ್ತಪ್ರಕಾರೇಣ ಮಾಮನನ್ಯಭಾಕ್ - ಭಜನೈಕ**

ಎಂಬುದೂ, ಭರನ್ಯಾಸರೂಪ ಶರಣಾಗತಿಗೂ ಅನ್ವಯಿಸುತ್ತದೆಂಬ ಧ್ವನ್ಯರ್ಥವನ್ನೂ ಇಲ್ಲಿ ಗ್ರಹಿಸುವದರಲ್ಲೇನೂ ವಿರೋಧವಿಲ್ಲವು. ಈ ಮೇಲಿನ ಶ್ಲೋಕಾರ್ಥಗಳು ಸರ್ವರಿಗೂ ವ್ಯಕ್ತವಾದವುಗಳು. ಹೀಗೆಲ್ಲಾ ಅನೇಕ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟವರಾಗಿ ಶ್ರೀಕೃಷ್ಣ ಭಗವಾನರವರು **ಸಾಧುರೇವ ಸಮಂತವ್ಯಃ** ಎಂದು ಹೇಳಿರುತ್ತಾರೆ. ಎಲ್ಲಾ ಪಾಪಿಗಳನ್ನೂ ನಾನು ಸಾಧುರೇವ ಭಾವಿಸುವದಿಲ್ಲವು. ಹೀಗೆ ಭಾವಿಸಿದರೆ ನನಗೆ ವೈಷಮ್ಯಾದಿ ದೋಷಗಳು ತಪ್ಪುವದಿಲ್ಲವು. ಯಾವನು ನನ್ನನ್ನು ಆಶ್ರಯಿಸಿ, ಭಜಿಸಲು ಯತ್ನಿಸುವದರಿಂದ, ಸಮೀಚೀನವಾದ ವ್ಯವಸ್ಥಿತ ಬುದ್ಧಿಯುಕ್ತನೋ, ಅವನು ಮಾತ್ರವೇ **ಸಾಧುರೇವ,** ಎಂಬುದರಿಂದ ಇತರರಲ್ಲವೆಂದು ವ್ಯಾವರ್ತಿಸಿ ಹೇಳಿದಂತೂ ಆಯಿತು. ಮುಂದಕ್ಕೆ ಆತನು ದುರಾಚಾರನಾಗಿರುವದಿಲ್ಲವೆಂಬ ಸಙ್ಕಲ್ಪವನ್ನು ಹೊಂದಿರುವದರಿಂದಲೂ ಆತನು "**ಸಾಧುರೇವ**" ಎಂದು ಹೇಳಲ್ಪಟ್ಟಿತು. ಮುಂದಕ್ಕೆ ಆತನು ಎಂದಿಗೂ ದುರಾಚಾರಿಯಾಗುವದಿಲ್ಲವೆಂಬ ಭಾವವು. "**ಸಮ್ಯಗ್ವ್ಯವಸಿತೋ ಹಿಸಃ**" ಎಂಬುದರಿಂದ ಏರ್ಪಟ್ಟಿತು. ಇದರಿಂದ ಅನುಕೂಲ್ಯ ಸಙ್ಕಲ್ಪವೂ ಪ್ರಾತಿಕೂಲ್ಯವರ್ಜನೆಯೂ ಅನುಸರಿಸಿ ಬರುತ್ತದೆಂದು ಹೇಳಿದಂತೆ ಆಯಿತು. ಮುಂದಕ್ಕೆ ಪುನಃ ದುರಾಚಾರನಾದರೆ, ಅವನ್ನು ಸಾಧುರೇವ ಎಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು ಏರ್ಪಟ್ಟಿತು. ಅಂತವನು ಪ್ರಾಯಶ್ಚಿತ್ತಕ್ಕೆ ಅರ್ಹನು. **ಅನನ್ಯಭಾಕ್** ಎಂಬುದರಿಂದ ಅನನ್ಯ ಗತಿತ್ವವೂ, **ಮಾಂಭಜತೇ** ಎಂಬಲ್ಲಿ ಮಹಾವಿಶ್ವಾಸದಿಂದಕೂಡಿದ ಶರಣಾಗತಿಯು ತೋರಿಬರುತ್ತದೆ. ಆದುದರಿಂದ ಶರಣಾಗತಿಗೆ ಬೇಕಾದ ಪರಿಕರಗಳನ್ನು ಬೋಧಿಸಿ ಸಾಙ್ಗ ಪ್ರಪದನವನ್ನು ಬೋಧಿಸುವ ಶ್ಲೋಕವಾಗಿಯೂ ಭಾವಿಸಬಹುದು. ಇದು ಅತಿಶಯೋಕ್ತಿಯೆಂದು ಹೇಳುವವರು, ಮಹಾಕವಿಯ ವ್ಯಂಗಾರ್ಥವನ್ನು ಗ್ರಹಿಸುವ ಸಹೃದಯವಿಲ್ಲದವರೆಂದಾಗುತ್ತದೆ. ಈ ಶ್ಲೋಕದ **ಭಜತೇ** ಎಂಬ ಪದವೂ, ಹಾಗೆಯೇ "**ಚತುರ್ವಿಧಾ ಭಜನ್ತೇ ಮಾಂ**" ಎಂಬಲ್ಲಿರುವ **ಭಜನ್ತೇ** ಎಂಬ ಪದವೂ, ಸಮಾನಾರ್ಥಕಗಳಾಗಿ ಎರಡು ವಿಧವಾದ ಉಪಾಯಾನುಷ್ಠಾನವನ್ನು ಬೋಧಿಸುತ್ತವೆ. ಆದುದರಿಂದ ಜಾತ್ಯಾದಿ ನಿಕೃಷ್ಟತೆಗಳಿಂದಲೂ ಆಶ್ರಿತನನ್ನು ತ್ಯಾಗಮಾಡುವದಿಲ್ಲವೆಂದು ಹಿಂದೆ ಹೇಳಿದರು. ನಿಕೃಷ್ಟವೃತ್ತಿಯ ಮೂಲಕ ಪಾಪಿ ಎಂದೂ ತ್ಯಾಗಮಾಡುವದಿಲ್ಲವು ಎಂದೂ ಇಲ್ಲಿ ಹೇಳಿದರು. ಯಾವಾಗ ಆಶ್ರಯಿಸಿಬಿಟ್ಟರೋ ಪಾಪಿಷ್ಠನೂ ಪುಣ್ಯವಂತನೂ ಇಬ್ಬರೂ ಸಮರೇ ಎಂದು, ಇಲ್ಲಿ ಹೇಳಲ್ಪಟ್ಟಿತೆಂದು ತಿಳಿಯತಕ್ಕದ್ದು.

**ಭಾಷ್ಯಾರ್ಥವು:—**ಹಿಂದಿನ ಶ್ಲೋಕದಲ್ಲಿ ಜಾತ್ಯಾದಿಗಳ ಉತ್ಕೃಷ್ಟತೆ ನಿಕೃಷ್ಟತೆಗಳನ್ನು ಪರಿಗಣಿಸದೆ ಆಶ್ರಯಿಸಿದವರನ್ನೆಲ್ಲಾ ಸಮನಾಗಿ ಭಾವಿಸುವೆನೆಂದು ಹೇಳಿದರು. ಈ ಶ್ಲೋಕದಲ್ಲಿ ವೃತ್ತಿಯಲ್ಲಿ ಪಾಪಿಷ್ಠರೇಯಾಗಲಿ ಪುಣ್ಯವಂತರೇಯಾಗಲಿ ಯಾವಾಗ ಆಶ್ರಯಿಸಿಬಿಟ್ಟರೋ, ಆಗ ಅವರೆಲ್ಲಾ ಸಾಧುವೇ, ಸಮರೇ ಎಂದು ಹೇಳುತ್ತಾರೆ. ಹಾಗಾದರೆ ಪಾಪಿಷ್ಠರೂ ಆಶ್ರಯಿಸಿಬಿಟ್ಟರೆ ಗ್ರಾಹ್ಯರೇ ? ಎಂದರೆ ಗ್ರಾಹ್ಯರೇಸರಿ ಎಂದು ಬೋಧಿಸುತ್ತಾರೆ.-ಇದರಿಂದ ಸರ್ವೇಶ್ವರನ ನಿರುಪಮ ಔದಾರ್ಯವೂ ಕೃಪಾ ಮಾಹಾತ್ಮ್ಯೆಯೂ, ಕ್ಷಮಾಗುಣವೂ ಸೌಶೀಲ್ಯವೂ ಪ್ರದರ್ಶಿಸಲ್ಪಟ್ಟವು. **ತತ್ರ ತತ್ರ ಜಾತಿವಿಶೇಷೇ**-ಆಯಾಜಾತಿ ವಿಶೇಷಗಳಲ್ಲಿ, **ಜಾತಾನಾಂ** - ಹುಟ್ಟಿದವರಿಗೆ, **ಯಸ್ಸಮಾಚಾರ ಉಪಾದೇಯಃ ಪರಿಹರಣೀಯಶ್ಚ** - ಯಾವುದು ಶಾಸ್ತ್ರವಿಹಿತವಾಗಿ ಒಳ್ಳೇ ಆಚಾರವಾಗಿ ಪರಿಗ್ರಾಹ್ಯವಾಗಿಯೂ, ಯಾವುದು ಶಾಸ್ತ್ರವಿಹಿತವಲ್ಲದೆ ದುರಾಚಾರವಾ

**ಭಾ. ಪ್ರಯೋಜನೋ ಭಜತೇ ಚೇತ್, ಸಾಧುರೇವ ಸಃ - ವೈಷ್ಣವಾಗ್ರೇಸರ ಏವಸಃ, ಮನ್ತವ್ಯಃ - ಬಹುಮನ್ತವ್ಯಃ, ಪೂರ್ವೋಕ್ತೈಸ್ಸನು ಇತ್ಯರ್ಥಃ । ಕುತಏತತ್ ?**

ಗಿರುತ್ತದೋ ಅದು ತ್ಯಾಜ್ಯವಾಗಿಯೂ, ಇದೆಯೋ, ಆದರೆ ಮಷ್ಟಸಿಗ್ರುಹರೂಪ ಕ್ಷತ್ರಿಯನ ಆಚಾರವು, ಬ್ರಾಹ್ಮಣನಿಗೆ ಯುಕ್ತವಲ್ಲವು; ಬ್ರಾಹ್ಮಣನಿಗೆ ಯೋಗ್ಯವಾದ ಉಪಾಸನವು ಶೂದ್ರನಿಗೆ ಯುಕ್ತವಲ್ಲವು ; ಶೂದ್ರನಿಗೆ ಯುಕ್ತವಾದ ಮದ್ಯ ಮತ್ತು ಮಾಂಸ ಸೇವನೆಯು ಬ್ರಾಹ್ಮಣ ನಿಗೆ ನಿಷಿದ್ಧವು ; ಬ್ರಾಹ್ಮಣನಿಗೆ ವಿಹಿತವಾದ ಯಜ್ಞ ಶಿಷ್ಟ ಸೋಮಪಾನವು ಶೂದ್ರಾದಿಗ ಳಿಗೆ ನಿಷಿದ್ಧವು ; ಇಂತವರೆಲ್ಲಾ ಕೂಡ ದುರಾಚಾರರಲ್ಲೇ ಅಂತರ್ಗತರು. **ತಸ್ಮಾತ್ ಅತಿ ವೃತ್ತೋಽಪಿ** - ಹಾಗೆ ವಿಹಿತವಾಗಿ ಮಾಡತಕ್ಕದ್ದನ್ನು ಮಾಡದೆಯೂ, ಮಾಡಕೂಡದಾಗಿ ಪರಿ ಹರಣೀಯವಾದುದನ್ನೂ ಮಾಡುತ್ತಾ, ಎಂದರೆ ಕೃತ್ಯಾಕರಣ, ಅಕೃತ್ಯಕರಣಗಳ ದೋಷಗ ಳಿಂದ, **ಅತಿವೃತ್ತೋಽಪಿ** - ಶಾಸ್ತ್ರಕ್ರಮವನ್ನುಲ್ಲಂಘಿಸಿದವನಾದರೂ, **ಉಕ್ತಪ್ರಕಾರೇಣ** - ಹಿಂದೆ ಉಪದೇಶಿಸಿದ ರೀತಿಯಲ್ಲಿ, ಹೇಗೆ ಎಂದರೆ ಸತತ ಕೀರ್ತನ ಯತನ ನಮಸ್ಕಾರಾದಿಗಳಿಂದ (೧೪ ನೆಯ ಶ್ಲೋಕ) **ಮಾಂ** - ಮಹಾ ಕೃಪಾಸಾಗರನಾಗಿ ಕ್ಷಮಾಗುಣ ಪರಿಪೂರ್ಣನಾಗಿರುವ ನನ್ನನ್ನು, **ಅನನ್ಯಭಾಕ್** - ಎಂದರೆ **ಭಜನೈಕಪ್ರಯೋಜನಃ** - ಭಜನಮಾತ್ರವೇ ಸ್ವಯಂ ಪ್ರಯೋಜನನಾಗಿ, ಇದರಿಂದ ಅನ್ಯದೇವತಾ ಸಂಬಂಧವಾಗಲಿ ಫಲಾದಿ ಸಂಬಂಧಗಳೇಯಾಗಲಿ ಯಾವದೂ ಇಲ್ಲದೇ, ಮಹಾ ವಿಶ್ವಾಸದಿಂದಲೂ ಏಕಾಂತ್ಯದಿಂದಲೂ, ನನ್ನನ್ನೇ ಚಿಂತಿಸುತ್ತಾ, **ಭಜತೇಚೇತ್** - ಭಜಿಸಿದುದೇ ಆದರೆ **ಸಾಧುರೇವಸಃ** ಎಂದರೆ **ವೈಷ್ಣವಾಗ್ರೇಸರ ಏವ ಸಃ** - ವಿಷ್ಣುವೇ ಪರತತ್ವವಾದುದರಿಂದ ವೈಷ್ಣವಾಗ್ರೇಸರನೇ, ಅವನು ಭಗವದ್ಭಕ್ತಾಗ್ರೇಸರನು ಭಕ್ತ ಶ್ರೇಷ್ಠನೆಂದು, **ಮನ್ತವ್ಯಃ** - ಎಂದರೆ **ಬಹುಮನ್ತವ್ಯಃ** - ಸನ್ಮಾನಿಸಲು ಅರ್ಹನು, ಮಂತವ್ಯ ಕ್ರಿಯೆಗೆ **ಸಂ** ಎಂಬ ಉಪಸರ್ಗ ಸಂಬಂಧದಿಂದ ಬಹುಮಂತವ್ಯನೆಂದು ಅರ್ಥಹೇಳುವದೇ ಸ್ವಾರಸ್ಯವು. ಸಾಧುವೆಂದು **ತಿಳಿಯತಕ್ಕದ್ದೆಂದು** ಇಷ್ಟುಮಾತ್ರವೇ ಅರ್ಥಹೇಳುವದು ಸ್ವಾರಸ್ಯವಲ್ಲವೆಂದು ಮೇಲಿಯೇ ಮೂಲಕ್ಕೆ ಅರ್ಥ ಬರೆಯುವಾಗಲೇ ವ್ಯಕ್ತಗೊಳಿಸಲ್ಪಟ್ಟಿರು ತ್ತದೆ. ಇಲ್ಲಿ **ಸಾಧುರೇವ** ಎಂಬುದಕ್ಕೆ **ವೈಷ್ಣವಾಗ್ರೇಸರ ಏವ** ಎಂಬ ವ್ಯಾಖ್ಯಾನ ಹೇಗೆ ? ಎಂದರೆ **ಅನನ್ಯಭಾಕ್ಕಾಗಿ** ಯಾವಾಗ ಭಜಿಸಿದನೋ, ಆಗ ಅನ್ಯದೇವತಾ ಸಂಬಂಧವಿಲ್ಲವು, ವೈಷ್ಣವಾಗ್ರೇಸರನೆಂದೇ ಹೇಳಿದಂತಾಯಿತು ಭಾರತ ಶಾಂತಿಪರ್ವದಲ್ಲಿ (೩೫೦-೩೬) **"ಬ್ರಹ್ಮಾ ಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಸ್ಸ್ಮೃತಾಃ । ಪ್ರತಿಬುದ್ಧಾ ನ ಸೇವಂತೇ ಯಸ್ಮಾತ್ಪರಿಮಿತಂ ಫಲಂ"** ಇಲ್ಲಿ ಪ್ರತಿಬುದ್ಧನು ಯಾರೆಂದರೆ **"ಪ್ರತಿಬುದ್ಧಸ್ತು ಮೋಕ್ಷ ಭಾಕ್"** ಎಂದು ಹೇಳಿರುವಹಾಗೆ ಮೋಕ್ಷಾರ್ಥಿಯಾಗಿ ಪ್ರಪನ್ನನಾದವನು. ಇಂತವನು, ಜೀವ ಕೋಟಿಗೆ ಸೇರಿದವರಾಗಿ ಮೋಕ್ಷವನ್ನು ಕೊಡುವ ಸಾಮರ್ಥ್ಯವಿಲ್ಲದಿರುವ, ಅಶಾಶ್ವತ ಅಲ್ಪ ಫಲ ಗಳನ್ನು ಮಾತ್ರ ಕೊಡಲು ಯೋಗ್ಯತೆ ಇರುವ, ಚತುರ್ಮುಖ ರುದ್ರರನ್ನು ಆಶ್ರಯಿಸುವದಿಲ್ಲವು. ಆದುದರಿಂದ **ಸಾಧುರೇವ** - ಹಾಗೆ ಸಾಧುವಾಗಬೇಕಾದರೆ ಪ್ರತಿಬುದ್ಧನಾಗಿ ವೈಷ್ಣವಾಗ್ರೇಸ ರನೇ ಆಗಿರಬೇಕೆಂದು ವ್ಯಾಖ್ಯಾನವು. ಹಾಗಲ್ಲದೆ ಅನ್ಯದೇವತಾ ಭಜನೆಯುಳ್ಳವರೆಲ್ಲಾ ಅಸಾಧು ಗಳೇ ಎಂಬ ತಾತ್ಪರ್ಯವು ; ಏಕೆಂದರೆ ಅವರಿಗೆ ಮೋಕ್ಷವನ್ನು ಕೊಡುವ ಅಧಿಕಾರವಿಲ್ಲದಿ ದ್ದರೂ ಆಶ್ರಯಿಸಿದುದರಿಂದ. ವೈಷ್ಣವಾಗ್ರೇಸರನಾಗಿ ಆತನನ್ನು ಆಶ್ರಯಿಸಿದವನೀಗ **ಸಾಧುರೇವ** ಎಂಬುದು ಮುಖ್ಯಾಭಿಪ್ರಾಯವು. ಮೋಕ್ಷಾರ್ಥಿಗೆ ಉಪಾಸ್ಯನು ಶ್ರೀ ಮಹಾವಿಷ್ಣುವೇ ಆಗಿ, ಈಗ ಮಹತ್ತಾದ ಉಪದೇಶವನ್ನು ಬೋಧಿಸುವ **ಮಾಮೇವೈಷ್ಯಸಿ** ಎಂದು ಪದೇ ಪದೇ ಹೇಳು ವವನೂ ಸಹ ವಿಷ್ಣ್ವವತಾರಿಯಾದ **ಶ್ರೀಕೃಷ್ಣನೇ**ಯಾಗಿರುವದರಿಂದ **ಸಾಧುರೇವ** ಎಂಬುದಕ್ಕೆ

**ಭಾ. ಸಮ್ಯಗ್ವ್ಯವಸಿತೋ ಹಿ ಸಃ - ಯತೋಽಸ್ಯ ವ್ಯವಸಾಯ ಸ್ಸಮೀಚೀನಃ ; ಭಗವಾನ್ ನಿಖಿಲ ಜಗದೇಕಕಾರಣಭೂತಃ ಪರಂಬ್ರಹ್ಮ ನಾರಾಯಣ ಶ್ಚರಾಚರಪತಿ ರಸ್ಮತ್ಸ್ವಾಮೀ ಮಮ ಗುರು ಮಮ ಸುಹೃತ್ ಮಮ ಪರಮಂ ಭೋಗ್ಯಮ್" ಇತಿ ಸರ್ವೈ**

**ವೈಷ್ಣವಾಗ್ರೇಸರ ಏವ** ಎಂದು ಹೇಳಿ, ಆ ಕಾರಣದಿಂದ ಅಂತವನು **ಬಹುಮನ್ತವ್ಯಃ** ಮಾನನೀಯನೆಂದು ವ್ಯಾಖ್ಯಾನಮಾಡಿದರು. ಆಗಲಿ, ಸಾಧುಗಳೀಗ ಕ್ಷೀಣಪಾಪರಾಗುವರೆಂದು **"ಸಾಧವಃ ಕ್ಷೀಣಪಾಪಾಸ್ಸ್ಯುಃ"** ಎಂಬಲ್ಲಿ ಹೇಳಿರುತ್ತದೆ. ಅಂತಹ **"ನರಾಣಾಂ ಕ್ಷೀಣ ಪಾಪಾನಾಂ ಕೃಷ್ಣೇ ಭಕ್ತಿಃಪ್ರಜಾಯತೇ"** ಎಂದು ವಿಷ್ಣು ಪುರಾಣದಲ್ಲಿ ಹೇಳಿರುತ್ತದೆ. ಹೀಗಿರುವಾಗ ಇಂತಹ ಸುದುರಾಚಾರನನ್ನು ವೈಷ್ಣವಾಗ್ರೇಸರನಹಾಗೆ ಭಾವನೆ ಹೇಗೆ ? ಎಂದರೆ; **ಮನ್ತವ್ಯಃ** ಎಂಬುದಕ್ಕೆ ತಿಳಿ ಎಂದು ಅರ್ಥಮಾಡದೆ, **ಬಹುಮನ್ತವ್ಯಃ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಈ ಅರ್ಥವು **ಸಮನ್ತವ್ಯಃ** ಎಂದು ಒಂದೇ ಪದಮಾಡಿದರೆ ಉಪಸರ್ಗದ ಬಲದಿಂದ ಬಹುಮನ್ತವ್ಯಃ ಎಂಬರ್ಥವು ಸ್ಪಷ್ಟವು. ಹೀಗೆ **ಬಹುಮನ್ತವ್ಯಃ** ಎಂದು ಹೇಳಿದುವರ ಅಭಿಪ್ರಾಯವೇನೆಂದರೆ ತಿಳಿಸುತ್ತಾರೆ.—**ಪೂರ್ವೋಕ್ತೈಸ್ಸಮ ಇತ್ಯರ್ಥಃ** - ಹಿಂದೆ ಹೇಳಿದವರಿಗೆ ಸಮನು ಎಂಬ ತಾತ್ಪರ್ಯವು. ಹಿಂದೆ ಹೇಳಲ್ಪಟ್ಟಿರುವ **ಮಹಾತ್ಮಾನಸ್ತು** ಎಂದಾರಂಭಿಸಿ ಹೇಳಿದ ಜ್ಞಾನಿಗಳಿಗೆ ಸಮವೆಂದು ಹೇಳಬಹುದು. ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಆಶ್ರಿತರಿಗೆ ಸಮವೆಂದೂ ಹೇಳಬಹುದು. ಹೀಗೆ ಹೇಳುವದು ಸಙ್ಗತಿಗೂ ಅನುಗುಣವಾಗಿರುತ್ತದೆ. ಇದರಿಂದ ಎಲ್ಲಾ ಆಶ್ರಿತರೂ ಸಮರೇ, ಅವರಲ್ಲಿ ಉತ್ಕೃಷ್ಟ ನಿಕೃಷ್ಟಭಾವಗಳ ತಾರತಮ್ಯವೇ ಇಲ್ಲವು; ಜಾತಿಭೇದದಿಂದಾಗಲಿ, ಕುಲಭೇದದಿಂದಾಗಲಿ, ಗುಣಭೇದದಿಂದಾಗಲಿ ಪಾಪಪುಣ್ಯರೂಪವೃತ್ತಿ ಭೇದದಿಂದಾಗಲಿ ತಾರತಮ್ಯವಿಲ್ಲದೆ ಎಲ್ಲರೂ ನನಗೆ ಸಮರೆಂದು ಹೇಳಿದಂತಾಯಿತು. ಪಾಪಿಷ್ಠನನ್ನೂ ಪುಣ್ಯಮಾಡಿದವನನ್ನೂ ಸಮನಾಗಿ ಭಾವಿಸಬಹುದೋ ಎಂಬಾಕ್ಷೇಪವನ್ನು ತೋರಿಸುವದಕ್ಕಾಗಿ, **ಕುತ ಏತತ್** - ಅದು ಹೇಗೆ ಸಮಂಜಸವು ? ಎಂದರೆ, **ಸಮ್ಯಗ್ವ್ಯವಸಿತೋ ಹಿ ಸಃ** ಎಂಬುದು ಅದಕ್ಕೆ ಸಮಾಧಾನವು. **ಕುತ ಏತತ್**? ಎಂಬ ಪ್ರಶ್ನೆಗೆ ಕಾರಣವು, ಮೂಲದಲ್ಲಿರುವ **ಹಿ** ಶಬ್ದಾರ್ಥವು. **ಹಿ** ಎಂಬುದು ಕಾರಣವನ್ನು ಬೋಧಿಸುತ್ತದೆ. ಇದರ ಅರ್ಥವೇನೆಂದರೆ. **ಯತೋಽಸ್ಯವ್ಯವಸಾಯಸ್ಸಮೀಚೀನಃ** - ಯಾವ ಕಾರಣದಿಂದ ಈತನ ವ್ಯವಸಾಯವು ಎಂದರೆ ದೃಢಸಙ್ಕಲ್ಪವು ಸಮೀಚೀನವಾದುದೋ, ಆ ಕಾರಣದಿಂದ ಅಂತಹ ಪಾಪಿಯೂ ಗ್ರಾಹ್ಯನೇ, ಸನ್ಮಾನಿಸಲು ಅರ್ಹನೇ, ಎಂಬ ಭಾವವು. ಆ ವ್ಯವಸಾಯವು ಆತನಲ್ಲೀಗ ಉಂಟಾಗಿರುವದು ಎಂಥಾದ್ದೆಂದರೆ ? ವಿವರಿಸಿ ಹೇಳುತ್ತಾರೆ—**ಭಗವಾನ್** - ಭಗವಂತನು, ಹೇಯ ಪ್ರತ್ಯನೀಕನು, ದಯಾ ಕ್ಷಮಾದಿ ಸಕಲ ಕಲ್ಯಾಣಗುಣಗಳಿಗೂ ಆಕರನು, ಆತನೇ, **ನಿಖಿಲ ಜಗದೇಕಕಾರಣನು. "ಕಾರಣಂತು ಧ್ಯೇಯಃ"** ಎಂಬರ್ಥದಿಂದ ಅಂತವನೇ ಭಜನೆಗೆ ಯೋಗ್ಯನು, ಇನ್ನು ಯಾರೂ ಅಲ್ಲವು ಎಂಬುದು ಬೋಧಿತವು. ಇದರಿಂದ ಹಿಂದೆ ೧೩ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ **"ಜ್ಞಾತ್ವಾ ಭೂತಾದಿ ಮವ್ಯಯಂ"** ಎಂಬರ್ಥವು ಅನುವಾದಮಾಡಲ್ಪಟ್ಟಿತು. ಆತನೇ ಪರಬ್ರಹ್ಮನು ಆತನೇ ಸಕಲತತ್ತ್ವಾರ್ಥಗಳನ್ನು ನಿರ್ಧರಿಸಿ ಹೇಳುವ ಅರ್ಥವುಳ್ಳ **"ಯಚ್ಚಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇ ಪಿವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ"** ಎಂದು ಹೇಳಿರುವಹಾಗೆ **ನಾರಾಯಣ** ಶಬ್ದವಾಚ್ಯನು, ಇದರಿಂದ **"ನಾರಾಯಣಂ ಪರಂಬ್ರಹ್ಮ"** ಎಂಬ ಪರತತ್ತ್ವ ನಿರ್ಣಾಯಕವಾದ ತೈತ್ತರೀಯ ನಾರಾಯಣೀಯವಾಕ್ಯವು ಸ್ಮಾರಿತವು. ಆತನೇ ಸಕಲ **ಚರಾಚರಪತಿಯು. "ಪತಿಂ ವಿಶ್ವಸ್ಯಾತ್ಮಾ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಸಕಲ ಚರಾಚರಗಳಿಗೂ ಪತಿಯು, ಸರ್ವ

ಭಾ. **ದುರ್ಷ್ಟಾಪ್ರೋಽಯಂ ವ್ಯವಸಾಯಸ್ತೇನಕೃತಃ, ತತ್ಕಾರ್ಯಂ ಚಾನನ್ಯಪ್ರಯೋಜನಂ ನಿರಂತರಂ ಭಜನಂ ತಸ್ಯಾಸ್ತಿ; ಅತಸ್ಸಾಧುರೇವ; ಬಹುಮನ್ತವ್ಯಶ್ಚ; ಅಸ್ಮಿನ್ ವ್ಯವಸಾಯೇ ತತ್ಕಾರ್ಯೇಚೋಕ್ತಪ್ರಕಾರ ಭಜನೇ ಸಂಪನ್ನೇ ಸತಿ, ತಸ್ಯಾಚಾರ ವ್ಯತಿ**

ಶೇಷಿಯು; ಆದುದರಿಂದಲೇ **ಅಸ್ಮತ್ಸ್ವಾಮೀ** – ನನಗೂ ನಾಥನು, **ಮಮಗುರುಃ** – ನನಗೆ ಅಜ್ಞಾನಾಂಧಕಾರವನ್ನು ಹೋಗಲಾಡಿಸುವ ಇಂತಹ ಗೀತಾ ಮೊದಲಾದ ಸುಜ್ಞಾನವನ್ನುಪದೇಶಿಸುವ ಆಚಾರ್ಯನು; ಹಿಂದೆ ಅಜ್ಞಾನದಿಂದ **ಸುದುರಾಚಾರ**ವನ್ನು ಮಾಡಿದವನಿಗೆ ಈಗ ತನ್ನನ್ನಾಶ್ರಯಿಸುವಹಾಗೆ ಜ್ಞಾನಕೊಟ್ಟವನೂ ಶ್ರೀಮನ್ನಾರಾಯಣನಲ್ಲವೇ ಎಂಬ ಆದರಾತಿಶಯದಿಂದ **ಮಮಗುರುಃ** ಎಂಬ ಪ್ರಯೋಗವು. ಹೀಗೆಲ್ಲಾ ಮಹತ್ತಾದ ಉಪಕಾರಗಳನ್ನೆಲ್ಲಾ ಎಸಗಿದವನು, **ಮಮಸುಹೃತ್** – ಅನಾದಿಕಾಲದಿಂದಲೂ ಲೆಕ್ಕ ಮಾಡಲು ಕೂಡ ಅಸಾಧ್ಯಗಳಾಗಿರುವ ಮಹಾಪರಾಧಗಳಿದ್ದರೂ ಅವುಗಳನ್ನು ಈಷದಪಿ ಪರಿಗಣಿಸದ, ಆಶ್ರಯಿಸಿದನೇ ಎಂಬ ಪರಮ ವಾತ್ಸಲ್ಯಯುಕ್ತನಾಗಿ ನನಗೆ ಪರಮ ಹಿತೈಷಿಯಾಗಿ ತನ್ನನ್ನು ಹೊಂದುವ ಮಾರ್ಗವನ್ನು ತೋರಿಸುವ ಸಿದ್ಧೋಪಾಯನು, ನಾಥೋಪಾಯಗಳಾದ ಈ ಭಕ್ತಿ ಮಾರ್ಗವನ್ನಾಗಲಿ ಭರನ್ಯಾಸಮಾರ್ಗವನ್ನಾಗಲಿ ತೋರಿಸಿದ ಪರಮ ಬಂಧುವು, **ಮಮ ಪರಮಂ ಭೋಗ್ಯಂ** – ನನಗೆ ಭೋಗ್ಯನಾಗಿ ಪರಮ ಪ್ರಾಪ್ಯನಾಗಿ ಕೊನೆಗೆ ಈ ಅಲ್ಪಾಸ್ಥಿರ ದುಃಖಮಿಶ್ರ ಭೋಗಗಳನ್ನು ತಪ್ಪಿಸಿ ಪರಿಪೂರ್ಣ ಬ್ರಹ್ಮಾನುಭವವನ್ನು ಕೊಟ್ಟು ನನ್ನ ಕೈಂಕರ್ಯವನ್ನು ಪರಿಗ್ರಹಿಸುವೆನೆಂದು ಸಙ್ಕಲ್ಪಿಸಿರುವ ಭಗವಂತನು, ಇಲ್ಲಿ ಆದರಾತಿಶಯವನ್ನು ತೋರಿಸುವದಕ್ಕಾಗಿ **ಮಮ** ಶಬ್ದವು ಅನೇಕಸಲ ಪಠಿತವು, **ಇತಿ** – ಎಂಬ **ಅಯಂ ವ್ಯವಸಾಯಃ** – ಇಂತಹ ದೃಢ ನಿಶ್ಚಯ ಬುದ್ಧಿಯು, ಇಂತಹ ದೃಢಸಙ್ಕಲ್ಪವು, **ತೇನಕೃತಃ** – ಆ ದುರಾಚಾರನಿಂದ ಮಾಡಲ್ಪಟ್ಟದುವಾಗಿರುತ್ತದೆ, ಹಿಂದೆ ಪಾಪಿಯೆಂದು ಆತನನ್ನು ಕೈ ಬಿಟ್ಟೇನೆ ಎಂಬ ಭಾವದಿಂದ **ತೇನಕೃತಃ** ಎಂಬ ಪ್ರಯೋಗವು. **ಸರ್ವೈಃ ದುಷ್ಪ್ರಾಪಃ** – ಇದು ಎಲ್ಲರಿಗೂ ಸುಲಭವಾಗಿ ಉಂಟಾಗತಕ್ಕದ್ದಲ್ಲವು ಎಂದರೆ **"ಬಹೂನಾಂ ಜನ್ಮನಾಮನ್ತೇ"** ಎಂದು ಹೇಳಿರುವಹಾಗೆ ಬಹುಜನ್ಮಗಳನಂತರ ಈತನು ಮಾಡಿದ ಸುಕೃತದಿಂದ ಪ್ರೀತನಾದ ನಾನೇ ಅಂತವನನ್ನು ದಿವ್ಯಕಟಾಕ್ಷದಿಂದ ಈಕ್ಷಿಸಿದರೇನೇ ಇವೆಲ್ಲಾ ಲಭಿಸತಕ್ಕದ್ದೆಂಬ ಭಾವವು, ಹೀಗೆ ದೃಢಮತಿಯು ಯಾವಾಗ ಕೃಪೆಯಿಂದ ಆತನಿಗೆ ದೊರೆಯಿತೋ, ಆಗ **ತತ್ಕಾರ್ಯಂ ಚಾನನ್ಯ ಪ್ರಯೋಜನಂ ನಿರಂತರಭಜನಂ ತಸ್ಯಾಸ್ತಿ** – ಆ ವ್ಯವಸಾಯಕ್ಕೆ ಕಾರ್ಯರೂಪವಾದ, ಇನ್ನು ಯಾವ ಪ್ರಯೋಜನವಿಲ್ಲದೆ ಸ್ವಯಂ ಪ್ರಯೋಜನವಾಗಿರುವ, ನಿರಂತರನನ್ನನ್ನು ಭಜಿಸೋಣವು ಆತನಿಗೆ ಉಂಟು; ಹೀಗೆ ವ್ಯವಸಾಯವೂ ಅದರ ಫಲವಾದ ಭಜನವೂ; ಉಂಟು, **ಅತಃ** – ಆ ಕಾರಣದಿಂದ ಅಂತಹ ದುರಾಚಾರನಾಗಿದ್ದವನೂ ಕೂಡ, **ಸಾಧುರೇವ, ಬಹುಮನ್ತವ್ಯಶ್ಚ** – ನನ್ನ ಕೃಪೆಗೆ ಅರ್ಹನೂ ಹೌದು, ಸನ್ಮಾನಿಸಲು ಯೋಗ್ಯನೂ ಹೌದು; ಯಾವಾಗಲೋ ಆತನಿಗೆ ಶಾಸ್ತ್ರವಿರುದ್ಧಾಚರಣೆಯು ಪ್ರಾಪ್ತವಾಗಿತ್ತೆಂಬುದರಿಂದ, ಅವನು ಅನಾದರಣೀಯನೆಂದು ಭಾವಿಸತಕ್ಕದ್ದವು. ಆಶ್ರಿತನು ಎಂತವನೇ ಆಗಲಿ ಆದರಣೀಯನೇ ಎಂಬುದೇ ಈ ಶ್ಲೋಕದ ಹಿಂಡಿತಾರ್ಥವೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ—**ಅಸ್ಮಿನ್ವ್ಯವಸಾಯೇ,** ಈ ದೃಢ ಸಙ್ಕಲ್ಪವೂ, **ತತ್ಕಾರ್ಯೇಚ** – ಅದರ ಕಾರ್ಯವಾದ, **ಉಕ್ತಪ್ರಕಾರ ಭಜನೇ** – ಭಗವಂತನನ್ನು ಏಕಾಂತ್ಯದಿಂದ, ಮೇಲೆ ಹೇಳಿದ ಪ್ರಕಾರವೆಂದರೆ ಸತತ ಕೀರ್ತನ ಯತನ ನಮಸ್ಕಾರ, ಉಪಾಯನಾನುಷ್ಠಾನಗಳಿಂದ ಭಜನವು, **ಸಂಪನ್ನೇ ಸತಿ** – ಪ್ರಾಪ್ತವಾಗಲು, **ತಸ್ಯಾಚಾರ ವ್ಯತಿಕ್ರಮಃ** – ಆತನು ಹಿಂದೆ ಅತಿಕ್ರಮಿಸಿ ನಡೆದ ದುರಾಚಾರವು ಎಂದರೆ ಅಕೃತ್ಯಕರಣ, ಕೃತ್ಯಾಕರಣಾದಿ

**ಭಾ. ಕ್ರಮ ಸ್ವಲ್ಪ ವೈಕಲ್ಯ ಮಿತಿ ನ ತಾವತಾಽನಾದರಣೀಯಃ, ಅಪಿತು ಬಹುಮನ್ತವ್ಯ ಏವೇತ್ಯರ್ಥಃ** ॥ ೩೦ ॥

ದೋಷಗಳು, **ಸ್ವಲ್ಪವೈಕಲ್ಯಮಿತಿ** - ಏನೋ ಸ್ವಲ್ಪ ನ್ಯೂನತೆಯಿಂದ ಎಂದು ಭಾವಿಸಿ, **ನತಾವತಾಽನಾದರಣೀಯಃ** - ಅಷ್ಟು ಮಾತ್ರದಿಂದಲೇ ಆತನು ಅನಾದರಣೀಯನಲ್ಲವು, **ಅಪಿತು** - ಮತ್ತೇನೆಂದರೆ, **ಬಹುಮನ್ತವ್ಯ ಏವೇತ್ಯರ್ಥಃ** - ಬಹುಮಾನಿಸಲ್ಪಡತಕ್ಕವನೇ ಸರಿ ಎಂಬ ತಾತ್ಪರ್ಯವು. ಈ ಶ್ಲೋಕದಲ್ಲಿ ಸ್ವಾಮಿಯನ್ನು ಆಶ್ರಯಿಸಬೇಕೆಂಬ ದೃಢ ಸಙ್ಕಲ್ಪವಾದ ವ್ಯವಸಾಯಕ್ಕೆ ಪ್ರಾಮುಖ್ಯವನ್ನು ಕೊಟ್ಟಿರುವದು ಎತಕ್ಕೆಂದರೆ—ಅದೊಂದಿದ್ದರೆ ಸರಿಯಾದ ತತ್ತ್ವಜ್ಞಾನವೂ, ತನ್ಮೂಲಕ ಉಕ್ತಪ್ರಕಾರಭಜನವೂ, ಅದರಿಂದ ಪರಮಾತ್ಮಸಾಕ್ಷಾತ್ಕಾರಮೋಕ್ಷಪ್ರಾಪ್ತಿ ಎಲ್ಲಾ ಶ್ರೇಯಃಪರಂಪರೆಗಳೂ ಪ್ರಾಪ್ತವಾಗುತ್ತವೆ ಎಂಬ ಭಾವನೆಯಿಂದ. ದುರಾಚಾರಿಯ ಪರಿಗ್ರಹಕ್ಕೆ ಸಮ್ಯಗ್ವ್ಯವಸಾಯವೇ ಪ್ರಧಾನಹೇತುವಾಗಿ ಇಲ್ಲಿ ಉಪದೇಶಿಸಲ್ಪಟ್ಟಿತು. ಹಾಗೆಯೇ ಮಹರ್ಷಿಯೂ ಈ ಅರ್ಥವನ್ನೇ **"ಜ್ಞಾನಂಚ ವ್ಯವಸಾಯಶ್ಚ ದ್ವೌಪರಪ್ರತಿಪಾದಕೌ । ವ್ಯವಸಾಯಾದೃತೇ ಬ್ರಹ್ಮ ನಾಸಾದಯತಿ ತತ್ಪರಂ"** (ಭಾರ. ಶಾಂತಿ. ೩೩೪-೪೭) ಎಂಬುವದರಿಂದ ಉಪಪಾದಿಸಿರುತ್ತಾರೆ. ಜ್ಞಾನವೂ ವ್ಯವಸಾಯವೂ ಎರಡೂ ಪರಬ್ರಹ್ಮವನ್ನು ಹೊಂದಿಸುವ ಶಕ್ತಿಯುಳ್ಳವು ; ಅದರಲ್ಲಿ ವ್ಯವಸಾಯವಿಲ್ಲದಿದ್ದರೆ ಜ್ಞಾನವು ಪರಬ್ರಹ್ಮವನ್ನು ಸೇರಿಸಲಾರದು ಎಂಬುದು ಈ ಶ್ಲೋಕಾರ್ಥವು. ಶ್ರೀ ದೇಶಿಕರುದಾಹರಿಸಿರುವ ಈ ಶ್ಲೋಕವು, ಈಗಿನ ಕೋಶಗಳಲ್ಲಿ ಪೂರ್ವಾರ್ಧವು ಬದಲಾಯಿಸಲ್ಪಟ್ಟು **"ಭವಾಂಶ್ಚೋತ್ಪನ್ನ ವಿಜ್ಞಾನಃಸ್ಥಿರಬುದ್ಧಿರಲೋಲುಪಃ"** ಎಂದಿರುತ್ತದೆ. ಜ್ಞಾನಕ್ಕೆ ಬದಲಾಗಿ ವಿಜ್ಞಾನಶಬ್ದವಿರುವದರಿಂದ ಅಭಿಪ್ರಾಯದಲ್ಲೇನೂ ವ್ಯತ್ಯಾಸವಿಲ್ಲವು. ಹಿಂದೆ ಬರೀ ಜ್ಞಾನವೇ ಸದ್ಗತಿಯನ್ನು ಹೊಂದಿಸದು, ವ್ಯವಸಾಯವೂ ಆವಶ್ಯಕವೆಂದು ತಿಳಿದವರಾಗಿ, ವ್ಯಾಸಮಹರ್ಷಿಯ ಆಜ್ಞೆಯನ್ನು ಪಡೆದು ಅವರ ಮಕ್ಕಳಾದ ಶುಕರು ಮಿಥಿಲಾಧಿಪತಿಯಾದ ಜನಕರಲ್ಲಿಗೆ ಹೋಗಿ ಮೋಕ್ಷಸಾಧನರೂಪ ಜ್ಞಾನವನ್ನು ಹೊಂದುವ ಪ್ರಕರಣದಲ್ಲಿ, ಶುಕರನ್ನು ಕುರಿತು ಜನಕರು ಹೇಳುವ ವಾಕ್ಯವು. ಆದುದರಿಂದ ಶ್ರೀ ದೇಶಿಕರವರ ಪಾಠವೇ ಸಮಂಜಸವಾಗಿ ತೋರುತ್ತದೆ. ಹೀಗೆ ಮಹರ್ಷಿಗಳ ವಾಕ್ಯಗಳನ್ನೆಲ್ಲಾ ಬದಲಾಯಿಸಿ ಪಾಠಾಂತರಗಳನ್ನೇರ್ಪಡಿಸಿರುವದು ಸರಿಯಲ್ಲವು. ಮಹರ್ಷಿಗಳ ವಾಕ್ಯಗಾಂಭೀರ್ಯ ಸ್ವಾರಸ್ಯಾದಿಗಳನ್ನು ಗ್ರಹಿಸದೆ ಮನಬಂದಂತೆ ತಿದ್ದುಪಡಿ ಮಾಡುವದು ತುಂಬಾ ದೋಷಾವಹವು ಶ್ರೀಮದ್ರಾಮಾಯಣದಲ್ಲಿ ಇಷ್ಟೇ ಸರ್ಗಗಳಿವೆ ಎಂದು ಮಹರ್ಷಿಯ ವಾಕ್ಯವೇ ಇದ್ದರೂ, ಸರ್ಗಗಳು ಬಿಟ್ಟುಹೋಗಿದ್ದವೆಂದು ಹೇಳಿ ಸೇರಿಸಿರುವವರು ಎಂತವರೋ ತಾವುಗಳೇ ಊಹಿಸಬಹುದು. ಹಾಗೆಯೇ ಭಾರತ ಭಾಗವತಗಳಲ್ಲಿ ಅನೇಕರು ತಮ್ಮ ತಮ್ಮ ಮನಬಂದಂತೆ ತಿದ್ದಿರುತ್ತಾರೆ, ಹೀಗೆ ತಿದ್ದುಪಡಿ ಮಾಡುವದು ತುಂಬಾ ಹೀನಕೃತ್ಯವಲ್ಲವೇ ?

ಹೀಗೆ ಆಶ್ರಯಿಸಿದವರೆಲ್ಲಾ ಎಂತವರೇ ಆಗಲಿ ನನಗೆ ಎಲ್ಲರೂ ಸಮರು, ಅವರೆಲ್ಲರೂ ಸಮವಾಗಿ ನನ್ನ ಅನುಗ್ರಹಕ್ಕೆ ಪಾತ್ರರು ಎಂದು ಹೇಳಿದುದರಿಂದ ಆ ಕಲ್ಯಾಣ ಗುಣಾಕರನಾದ ಸರ್ವೇಶ್ವರನು **"ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯ"** ನೆಂದು ಶ್ರೀ ಯತಿವರ್ಯರು ಪದೇ ಪದೇ ಕೊಂಡಾಡಿದುವ ಅರ್ಥವು ಈ ಎರಡು ಶ್ಲೋಕಗಳಿಂದಲೂ ಉಪಪಾದಿತವು. ಆದುದರಿಂದ ಸರ್ವೇಶ್ವರನ ಸೌಲಭ್ಯ, ಸೌಶೀಲ್ಯ, ದಯಾ, ವಾತ್ಸಲ್ಯ, ಕ್ಷಮಾ, ಉದಾರಾದಿ ಗುಣಗಳ ಮಾಹಾತ್ಮ್ಯೆಯು ಈ ಶ್ಲೋಕಗಳಲ್ಲಿ ಕೊಂಡಾಡಲ್ಪಟ್ಟವು. ಆಶ್ರಯಿಸಿದವನು ಹಿಂದೆ ಎಷ್ಟು ದುರಾಚಾರನಾಗಿದ್ದರೂ ಆತನು ಸಾಧುವೇ ಎಂದು ಹೇಳಿರುವದರಿಂದ, ಕೆಲವರಿಗೆ ಮೋಕ್ಷವೇ ಇಲ್ಲವು, ಸರ್ವೇಶ್ವರನಿಂದಲೇ ಹಾಗೆ ನಿತ್ಯಸಂಸಾರಿಯಾಗಿ ಏರ್ಪಟ್ಟಿದುವವರೆಂಬ ವಾದವು ಈ

**ಭಾ. ಅ. ನನು (೧)"ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ। ನಾಶಾಂತ ಮಾನಸೋವಾಪಿ ಪ್ರಜ್ಞಾನೇನೈನ ಮಾಪ್ನುಯಾತ್" ಇತ್ಯಾದಿ ಶ್ರುತೇಃ, ಆಚಾರ ವ್ಯತಿಕ್ರಮ ಉತ್ತರೋತ್ತರ ಭಜನೋತ್ಪತ್ತಿ ಪ್ರವಾಹಂ ನಿರುಣದ್ಧೀತ್ಯತ್ರಾಹ—**

ಶ್ಲೋಕದಿಂದಲೂ ಸರಿಯಲ್ಲವೆಂದು ತೋರಿಬರುತ್ತದೆ. ಹಾಗೆ ಹೇಳುವದಕ್ಕೆ ಬದಲಾಗಿ ಚೇತನನೇ ತನಗೆ ಜ್ಞಾನವೊದಲಾದವುಗಳನ್ನು ಕೊಟ್ಟಿದ್ದರೂ ಆತನನ್ನು ಆಶ್ರಯಿಸದೇನೆ ಇದ್ದು ಬಿಟ್ಟು ಯಾವಾಗಲೂ ನಿತ್ಯ ಸಂಸಾರಿಯಾಗಿಯೇ ಇದ್ದರೂ ಇರಬಹುದು ಎಂದರೆ ಒಪ್ಪತಕ್ಕ ಮಾತಾಗುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು:—**ಆಗಲಿ; **"ದುಶ್ಚರಿತಾತ್** ಪರದಾರ ಪರದ್ರವ್ಯಗಳ ಅಪಹಾರಾದಿ ದುಶ್ಚರಿತಗಳಿಂದ, **ಅವಿರತಃ**-ನಿವೃತ್ತನಲ್ಲದೆ ಇರುವವನೂ, **ಅಶಾಂತ** - ಕಾಮ ಕ್ರೋಧಗಳ ವೇಗದ ಉಪಶಾಂತಿ ಇಲ್ಲದವನೂ, **ಅಸಮಾಹಿತಃ**-ನಾನಾವಿಧ ವ್ಯಾಪಾರಗಳಲ್ಲಿಟ್ಟಿರುವದರಿಂದ ಸಾವಧಾನ ಚಿತ್ತವಿಲ್ಲದವನೂ, **ಅಶಾಂತ ಮಾನಸಃ** - ಮನಸ್ಸನ್ನು ಜಯಿಸದೇ ಇರುವವನೂ, ಸಹ, **ಏನಂ** - ಈ ಪರಮಾತ್ಮನನ್ನು **ಪ್ರಜ್ಞಾನೇನ** - ಪರಮಾತ್ಮ ಸಾಕ್ಷಾತ್ಕಾರ ರೂಪಜ್ಞಾನದಿಂದ, **ನಾಪ್ನುಯಾತ್** - ಹೊಂದಲಾರನು, ಇದರಿಂದ ಉಪಾಸನಕ್ಕೆ ಅಙ್ಗವಾಗಿ ದುಶ್ಚರಿತಗಳಿರಕೂಡದೆಂದೂ, ಕಾಮಕ್ರೋಧಗಳಿಂದ ಬಿಡಲ್ಪಟ್ಟವನಾಗಿರಬೇಕೆಂದೂ, ಐಹಿಕ ಪ್ರವೃತ್ತಿ ರಹಿತ ಚಿತ್ತಸ್ವಾಸ್ಥ್ಯವನ್ನು ಉಂಟಾಗಿರಬೇಕೆಂದೂ, ಮನಸ್ಸನ್ನು ಜಯಿಸಿದವನಾಗಿರಬೇಕೆಂದೂ ಹೇಳಲ್ಪಟ್ಟಿತು," **ಇತ್ಯಾದಿ ಶ್ರುತೇಃ** - ಇವೇ ಮೊದಲಾದ ಶ್ರುತಿಯಮೂಲಕ, **ಆಚಾರವ್ಯತಿಕ್ರಮಃ** - ಅವರವರುಗಳ ಆಚಾರಗಳ ಉಲ್ಲಂಘನೆಯು, **ಉತ್ತರೋತ್ತರ ಭಜನೋತ್ಪತ್ತಿ ಪ್ರವಾಹಂ** - ಮುಂದಕ್ಕೆ ಉಪಾಸನೆಯನ್ನುಂಟುಮಾಡುವ ಪ್ರವಾಹವನ್ನು, **ನಿರುಣದ್ಧಿ** - ತಡೆದು ಬಿಡುತ್ತದೆ, ಎಂದು ಹೇಳಿದೆಯಲ್ಲಾ ಎಂದು ಪೂರ್ವ ಪಕ್ಷವನ್ನು ತಂದರೆ ಅದಕ್ಕೆ ಸಮಾಧಾನವು ಮುಂದಿನ ಶ್ಲೋಕದಿಂದ ಹೇಳಲ್ಪಡುತ್ತದೆ. ದುಶ್ಚರಿತನಾಗಿದ್ದರೂ ಚಿಂತೆಯಿಲ್ಲವು, ಆತನು **ಸಾಧುರೇವ ಸಮಂತವ್ಯಃ** - ಬಹುಮಾನಿಸಲು ಅರ್ಹನೆಂದು ಹೇಳಲ್ಪಟ್ಟಿತಲ್ಲಾ, ಮುಕ್ತಿಯುಂಟಾಗುವ ಮಾತುಹಾಗಿರಲಿ, ಅಂತವನಿಗೆ ಪ್ರಜ್ಞಾರೂಪ ಜ್ಞಾನವೇ ಉಂಟಾಗುವದಿಲ್ಲವೆಂದು ಹೇಳಿಬಿಟ್ಟಿತಲ್ಲವೇ? ಹಾಗೆತಾನೆ ಇನ್ನೊಂದು ಕಡೆಯಲ್ಲೂ ಹೇಳಿರುತ್ತದೆ. **ಪಾಪಂ ಪ್ರಜ್ಞಾಂ ನಾಶಯತಿ ಕ್ರಿಯಮಾಣಂ ಪುನಃಪುನಃ। ನಷ್ಟಪ್ರಜ್ಞಃ ಪಾಪ ಮೇವ ಪುನರಾರಭತೇ ದ್ವಿಜ"** (ಭಾರ. ಉದ್ಯೋ. ೩೫. ೬೩.) ಮತ್ತು **ಪಾಪಕೃತ್ ಪಾಪ ಮಶ್ನುತೇ** (ರಾಮಾ ಯುದ್ಧ ೧೧೪-೨೬) ಎಂದೂ ಹೇಳಲ್ಪಟ್ಟಿದೆ. ಹೀಗೆ ಇದು ಶ್ರುತಿ ವಾಕ್ಯಕ್ಕೂ ಇತರ ಶಾಸ್ತ್ರಪ್ರಮಾಣಗಳಿಗೂ ವಿರೋಧವಾಗುವದಿಲ್ಲವೇ? ಅಂತಹ ದುರಾಚಾರನಾದವನು ಆಶ್ರಿತನು ಎಂಬುದರಿಂದ ಹಿಂದೆ ಹೇಳಿದಂತೆ ಮಾನನೀಯನೆಂದೇನೋ ಒಂದುವೇಳೆ ಒಪ್ಪಿಕೊಂಡರೂ ಒಪ್ಪಿಕೊಳ್ಳೋಣ, ಆತನಿಗೆ ಮುಖ್ಯವಾಗಿ ಸಿದ್ಧಿಯುಂಟೋ? ಎಂದರೆ ತನ್ನ ಭಕ್ತನು ಯಾವಾಗ ಆದನೋ, ಆಗ ಆತನಿಗೆ ಪ್ರಾಪ್ತಿ ವಿರೋಧಿಗಳೆಲ್ಲಾ ಕಳೆದುಹೋಗಿ ಮೋಕ್ಷ ಪ್ರಾಪ್ತಿಯುಂಟಾಗುವದರಲ್ಲಿ ಸಂದೇಹವಿಲ್ಲವೆಂದು **ನಮೇಭಕ್ತಃ ಪ್ರಣಶ್ಯತಿ** ಎಂದು ಹೇಳುತ್ತಾರೆಂಬ ಭಾವವು.

**ಮೂಲಕ್ಕೆ ಅರ್ಥವು:—**ಹಿಂದೆ ಹೀಗೆ ದುರಾಚಾರನಾಗಿದ್ದರೂ ಯಾವಾಗ ನನ್ನ ವಿಷಯವಾದ ಉಪಾಸನೆಯನ್ನು ಮಾಡಬೇಕೆಂದು, ಅಥವಾ ನನ್ನನ್ನು ಶರಣಾಗತಿಯಮೂಲಕ ಆಶ್ರಯಿ

(೧) ಕಠ. ೧. ೨. ೨೪.

**ಮೂ. ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ।**
**ಕೌನ್ತೇಯ ಪ್ರತಿಜಾನೀಹಿ ನಮೇ ಭಕ್ತಃ ಪ್ರಣಶ್ಯತಿ ॥ ೩೧.**

ಸಬೇಕೆಂದು, **ಸಮ್ಯಗ್ವ್ಯವಸಿತಃ** - ದೃಢವಾದ ಸಙ್ಕಲ್ಪವುಳ್ಳವನಾದನೋ, ತದನಂತರ ಆತನು **ಧರ್ಮಾತ್ಮಾ** - ಈ ನನ್ನನ್ನೇ ನಿರಂತರ ಭಜಿಸುವ ಉಪಾಯಾನುಷ್ಠಾನದಲ್ಲೇ ಮನಸ್ಸುಳ್ಳವನು, ಅವನು ಮುಂದೆ ದುರಾಚಾರವನ್ನು ಬಿಟ್ಟು ಬೇಗ, ಧರ್ಮವೆಂದರೆ ಶಾಸ್ತ್ರದ ವಿಧಿ ನಿಷೇಧವಾಕ್ಯಗಳಿಗೆ ಅನುಸಾರವಾಗಿ ನಡೆಯೋಣವು, ಅದರಲ್ಲಿ ಸ್ಥಿರಬುದ್ಧಿಯುಳ್ಳವನಾಗುವನು, ತನ್ಮೂಲಕವಾಗಿ ಸ್ವಾಮಿ ಭಜನೆಯಲ್ಲಿ ಮನಸ್ಸುಳ್ಳವನಾಗುವನು ಎಂಬರ್ಥವು, **ಕ್ಷಿಪ್ರಂ ಭವತಿ** - ಬೇಗ ಆಗುವನು. ಯಾವಾಗ ನನ್ನನ್ನು ಉಪಾಸಿಸಬೇಕೆಂಬ ಅಥವಾ ಆಶ್ರಯಿಸಬೇಕೆಂಬ ದೃಢಸಙ್ಕಲ್ಪವುಳ್ಳವನಾದನೋ, ಆಗ ಆತನಿಗೆ ಉಪಾಯ ವಿರೋಧಿಗಳಾದ ಪಾಪಗಳೆಲ್ಲಾ ಕಳೆದುಹೋಗಿ ನನ್ನನ್ನು ಯಾವಾಗಲೂ ಭಜಿಸುವದರಲ್ಲೇ ಸಕ್ತವಾದ ಮನಸ್ಸುಳ್ಳವನಾಗುವನು, ಮತ್ತು **ಶಶ್ವಚ್ಛಾನ್ತಿಂ ನಿಗಚ್ಛತಿ** - ಬಾರಿಬಾರಿಗೂ ಆ ದುರಾಚಾರಗಳನ್ನು ದೂರಮಾಡಿಕೊಂಡು ಬಾಹ್ಯೇಂದ್ರಿಯ ಅಂತರಿಂದ್ರಿಯಗಳ ಹಾವಳಿಯಿಲ್ಲದೆ ಶಾಂತವಾದ ಮನಸ್ಸುಳ್ಳ ಭಾವವನ್ನು ಹೊಂದುವನು. ಮನಸ್ಸು ಪಾಪಕ್ಕೆ ಅಂಜಿ, ವಿಷಯುಗಳಲ್ಲಿ ಪ್ರವರ್ತಿಸದೆ ಇರುವದರಿಂದ ನೈರ್ಮಲ್ಯವನ್ನು ಹೊಂದುವದೇ ಶಾನ್ತಿಯು ಮುಖ್ಯವಾಗಿ ಅರ್ಜುನನು ಈ ಸಂದರ್ಭದಲ್ಲಿ ವೃಥವಾಗಿ ಸಂಬತಕ್ಕ ವಿಷಯವನ್ನು ಬೋಧಿಸುತ್ತಾರೇನೆಂದರೆ, **ಹೇ ಕೌನ್ತೇಯ** - ಓ ಅರ್ಜುನನೇ **ಪ್ರತಿಜಾನೀಹಿ** - ನೀನೂ ಪ್ರತಿಜ್ಞೆಯನ್ನು ಮಾಡಬಹುದು, ನಾನೇನೋ ಸತ್ಯ ಸಙ್ಕಲ್ಪನಾಗಿ ಪ್ರತಿಜ್ಞೆಯನ್ನು ಮಾಡಿರುವೆನಾದುದರಿಂದ, ಈ ಸಂದರ್ಭದಲ್ಲಿ ನೀನೂ ಈಷದಪಿ ಸಂದೇಹವನ್ನಿಡದೇ ನೀನೇ ನನಗಾಗಿ ಪ್ರತಿಜ್ಞೆಯನ್ನು ಮಾಡಬಹುದು ; ಅದೇನೆಂದರೆ **ನಮೇ ಭಕ್ತಃ ಪ್ರಣಶ್ಯತಿ** - ನನ್ನ ಭಕ್ತನು ಎಂದಿಗೂ ನಷ್ಟವನ್ನು ಹೊಂದುವದಿಲ್ಲವು, ಆತನಿಗೆ ಅಮಂಗಳವು ಯಾವುದೂ ಇಲ್ಲವು, ಅವನು ಹೇಗಿದ್ದರೂ ನನ್ನ ಕೃಪೆಗೆ ಪಾತ್ರನಾದುದರಿಂದ ಒಂದಾನೊಂದು ಕಾಲದಲ್ಲಿ ಆತನಿಗೆ ಮುಕ್ತಿ ಎಂಬುದು ಕರಗತವು ಎಂದು ತಿಳಿ ಎಂಬ ಭಾವವು. **ಮೇಭಕ್ತಃ** ಎಂದಿರುವದರಿಂದ ಇತರರ ಭಕ್ತರಿಗೆ ಚ್ಯುತಿ ಇರಬಹುದು, ನನ್ನ ಭಕ್ತರಿಗಾದರೋ ಚ್ಯುತಿಯ ಗಂಧವೇ ಇಲ್ಲವು; ಏಕೆಂದರೆ ಆತನು ನನ್ನನ್ನು ಭಜನದಿಂದ ಪ್ರೀತಿಗೊಳಿಸಬೇಕೆಂಬುದಾಗಿಯೇ ಸದಾ ಉದ್ಯುಕ್ತನಾಗಿರುವದರಿಂದ ಆತನಿಗೆ ಸಂಪೂರ್ಣಾನುಗ್ರಹವೇ ಎಂದು ನಂಬು ಎಂಬ ಭಾವವು ; ಈ ವಿಷಯದಲ್ಲಿ ನೀನು ಪ್ರತಿಜ್ಞೆಯನ್ನು ಮಾಡಬಹುದು. ಹಾಗೆ ಪ್ರತಿಜ್ಞೆ ಮಾಡಬೇಕಾದರೆ ಅದು ವೇದ್ಯವಾದ ಅಂಶವೇ ಆಗಿರಬೇಕು. ನೀನೇ ಇದಕ್ಕೆಲ್ಲಾ ನಿದರ್ಶನವು ಎಂಬ ಭಾವವು. ನೀನು ಇನ್ನು ಭಕ್ತಿಯೋಗದಲ್ಲಿಳಿಯದಿದ್ದರೂ, ನನ್ನನ್ನು ಪ್ರೀತಿಸಿ ಅಂತಹ ಭಜನ ಸಙ್ಕಲ್ಪವುಳ್ಳವನಾದುದರಿಂದಲೇ ಈ ಐಹಿಕ ವಿಷಯದಲ್ಲೂ ಕೂಡ ಶತ್ರುಗಳ ಮೂಲಕ ಪ್ರಾಪ್ತವಾದ ನಾನಾವಿಧ ವಿಪತ್ತುಗಳು ಯಾವುವು ನನ್ನ ಅನುಗ್ರಹದಿಂದ ನಿನಗೆ ಈಷದಪಿ ತೊಂದರೆ ಮಾಡದಿರುವದರಿಂದ ನೀನೇ ಪ್ರತಿಜ್ಞೆಯನ್ನು ಮಾಡಬಹುದೆಂಬ ಭಾವವು. ಇಲ್ಲಿ **ಭಕ್ತಃ** ಎಂದಿದ್ದರೂ ಪ್ರಕರಣಾನುಗುಣವಾಗಿ ಜ್ಞಾನಿಯೇ ಹೇಳಲ್ಪಟ್ಟನೆಂದು ಭಾವಿಸಬಹುದು. ಆದರೆ ಭಕ್ತಃ ಎಂದಿರುವದರಿಂದ ನಾಲ್ಕು ಜನ ಭಕ್ತರಿಗೂ ಏಕೆ ಅನ್ವಯಿಸಕೂಡದೆಂದು ಬಲಾತ್ಕರಿಸಿದರೆ **ಮದ್ಭಕ್ತಾ ಯಾನ್ತಿಮಾಮಪಿ** ಎಂದು ಹಿಂದೆಯೇ ಹೇಳಿರುವದರಿಂದ, ಹಾಗೆ **ಅರ್ಥ**ಮಾಡಿದರೂ ಏನೊಂದೂ ಪ್ರತ್ಯವಾಯವಿಲ್ಲವು ಐಶ್ವರ್ಯಗಳಿಗಾಗಿಯಾದರೂ ಆತನನ್ನು ಭಜಿಸುವದೂ ಸುಕೃತವಿಶೇಷಾದುದರಿಂದ, ಅಂತವನೂ **ಸುಕೃತಿ** ಎಂದೂ, **ಉದಾರಿ** ಎಂದೂ, ಹಿಂದೆ ಕೊಂಡಾ

**ಭಾ. ಮತ್ಪ್ರಿಯತ್ವಕಾರಿತಾऽನನ್ಯ ಪ್ರಯೋಜನ ಮದ್ಭಜನೇನ ವಿಧೂತ ಪಾಪತಯೈವ** ಪಡಲ್ಪಟ್ಟಿರುವವರಿಂದ, ಆತನೂ **ನಮೇ ಭಕ್ತಃ ಪ್ರಣಶ್ಯತಿ** ಎಂಬುವರಲ್ಲಿ ಅಂತರ್ಗತನೆಂದು ಭಾವಿಸಿ ವರೂ ಭಾವಿಸಬಹುದು. ದುರಾಚಾರಿಯಾಗಿದ್ದರೂ ಆತನು ಒಂದಾನೊಂದು ಕಾಲದಲ್ಲಿ ನಿಶ್ರೇ ಯಸ್ಸನ್ನು ಹೊಂದುತ್ತಾನೆಂದು ಹಿಂದೆಯೇ **"ಮದ್ಭಕ್ತಾ ಯಾಂತಿ ಮಾಮಪಿ"** ಎಂಬಲ್ಲಿ ಹೇಳ ಲ್ಪಟ್ಟಿರುವಹಾಗೆ ಐಶ್ವರ್ಯಾರ್ಥಿಯಾಗಿ ಆತನನ್ನು ಉಪಾಸಿಸಿದ ಭಕ್ತನಿಗೆ ಒಂದಾನೊಂದು ಕಾಲದಲ್ಲಿ ಪರಮ ನಿಶ್ರೇಯಸ್ಸುಂಟೆಂದು ಒಪ್ಪಿಕೊಳ್ಳಲು ಅಭ್ಯಂತರವೇನಿರುತ್ತದೆ ? ಈ ಮೇಲೆ ಹೇಳಿದ ದುರಾಚಾರನೇ **ಕ್ಷಿಪ್ರಂ ಭವತಿ ಧರ್ಮಾತ್ಮಾ** ಎಂದು ಹೇಳಿದನಂತರ, ಶ್ರೀಮನ್ನಾ ರಯಣನೇ, ತನ್ನ ಸೃಷ್ಟಿಯಲ್ಲೇ, ಯಾವಾಗಲೂ ನಿತ್ಯಸಂಸಾರಿಯಾಗಿಯೇ ಕೆಲವು ಚೇತನರು ಇರಲಿ ಎಂದು ಸಙ್ಕಲ್ಪಿಸಿರುತ್ತಾನೆಂಬ ಭಾವವು, ಈ ಶ್ಲೋಕದಿಂದ ನಿರಸ್ತವು ಎಷ್ಟು ದುರಾ ಚಾರಿಯಾಗಿದ್ದರೂ ಯಾವಾಗ ತನ್ನನ್ನು ಅನನ್ಯ ಭಾಕ್ಕಾಗಿ ಭಜಿಸುತ್ತಾನೋ, ಆಗ ಆತನೂ ಕೂಡ ತನ್ನ ವಿಶೇಷಾನುಗ್ರಹಕ್ಕೆ ಪಾತ್ರನೇ ಸರಿ ಎಂದು ತನ್ನ ಪರಮ ಕಾರುಣ್ಯೌದಾರ್ಯ ಸೌಲಭ್ಯಗಳನ್ನು ಪ್ರದರ್ಶಿಸಿರುತ್ತಾರೆ. ಇಂತಹ ಕಲ್ಯಾಣಗುಣ ಮಹೋದಧಿಯ ಅತಿಶಯಕ್ಕೆ ಕುಂದಕವಾಗಿ ಅರ್ಥಹೇಳುವದು ನ್ಯಾಯವಲ್ಲವು. ಅಜಾಮಿಳೋಪಾಖ್ಯಾನವೇ ಈ ದಯಾಂಭೋ ನಿಧಿಯ ಮಾಹಾತ್ಮ್ಯೆಯನ್ನು ಸ್ಫುಟವಾಗಿ ಪ್ರದರ್ಶಿಸುತ್ತದೆ. ಇಲ್ಲಿ **ಭಕ್ತಃ** ಎಂಬುದರಿಂದ ಭಕ್ತಿ ಯೋಗನಿಷ್ಠನು ಹೇಳಲ್ಪಟ್ಟನೆಂದು ಅರ್ಥಮಾಡಿದುದೇನೋ ಸರಿಯೇ ; ಆದರೆ ಉಪಾಸನಾಧಿ ಕಾರಿಯಲ್ಲದ ಶರಣಾಗತಿಯ ಮೂಲಕ ಆಶ್ರಯಿಸಿದ ಕೀಳುಜಾತಿಯವನೂ ಸಹ ಭಕ್ತನೇ ; ಅವನಲ್ಲೂ ಕೂಡ ಈ ಸಾಮಾನ್ಯ ಭಕ್ತಿಯು ಉತ್ಪನ್ನತೆಯನ್ನು ಹೊಂದುತ್ತದೆಂಬುದು ಶ್ರೀ ಯತಿವರ್ಯರ **"ಪರಭಕ್ತಿ ಪರಜ್ಞಾನ ಪರಮಭಕ್ತ್ಯೈಕ ಸ್ವಭಾವಂ ಮಾಂ ಕುರುಷ್ವ"** ಎಂದು ಶರಣಾಗತಿಗದ್ಯವಾಕ್ಯವಿರುತ್ತದ ; ಮತ್ತು ನಮ್ಮಾಳ್ವಾರವರ ಪಾಶುರಗಳಲ್ಲಿ ಇಂತಹ ಉಪಪಾದನೆಯೇ ಇರುತ್ತದೆ. ಆದುದರಿಂದ ಈ ಶ್ಲೋಕದಲ್ಲಿ ಲಘೂಪಾಯವೂ ಸಹ ಉಪಪಾದಿ ತವೆಂದು ಭಾವಿಸುವದರಲ್ಲಿ ಏನೊಂದೂ ಅಭ್ಯಂತರವಿರುವದಿಲ್ಲವು. ಉಪಾಸನಾಧಿಕಾರಿಗಳಲ್ಲದ ನಿಕೃಷ್ಟಜಾತಿಯವರಿಗೂ ಕರುಣಾನಿಧಿಯಾದ ತಾನು ಅನುಗ್ರಾಹಕನೆಂಬುದು, ಈ ಶ್ಲೋಕದಲ್ಲೂ ಮುಂದಿನ ಶ್ಲೋಕಗಳಲ್ಲೂ ಉಪಪಾದಿತವೆಂಬುದು ಶ್ರೀರಂಗಾದಿ ದಿವ್ಯ ದೇಶವಾಸಿಗಳಾದ ಮಹಾಗುರುಗಳ ಸಂಪ್ರದಾಯಾರ್ಥವು ಇದೇ ಶ್ರೀ ಯತಿವರ್ಯರ **ಪರಿಪೂರ್ಣ ಭಕ್ತಿರ್ಭವತಿ** ಎಂಬ ಪ್ರಯೋಗದಿಂದ ಗ್ರಾಹ್ಯವೆಂದು ಭಾವಿಸುವರು. ಮಹರ್ಷಿಯ ಮಹಾಕಾವ್ಯದ ವಾಕ್ಯಗ ಳಾದುದರಿಂದ ಅಲ್ಲಲ್ಲೇ ವ್ಯಂಗಾರ್ಥಮೂಲಕ ಎರಡು ಉಪಾಯಗಳನ್ನೂ ಬೋಧಿಸುತ್ತಾ ರೆಂಬುದು ನಿರ್ವಿವಾದವು. ಏಕೆಂದರೆ ಚರಮಶ್ಲೋಕದಲ್ಲಿ ಇದು ಸುವ್ಯಕ್ತವು ಅದೂ ಅಲ್ಲದೆ ಉಪಾಸನಾಧಿಕಾರಿಗಳಾಗಿ ಉತ್ಕೃಷ್ಟಜಾತಿಯಲ್ಲಿ ಹುಟ್ಟಿದವರು ಉಪಾಧಿಯ ಮೂಲಕ ಆ ಜನ್ಮ ದಲ್ಲೇ ಮೋಕ್ಷಪ್ರಾಪ್ತಿ ಇಲ್ಲದೆ ಇದ್ದರೆ, ಧರ್ಮವ್ಯಾಧ, ವಿದುರ, ಶಬರಿ, ಜಡಭರತಾದಿಗಳಹಾಗೆ ಉತ್ತರ ಜನ್ಮಗಳಲ್ಲಿ ಆ ಉಪಾಸನದ ಮಾಹಾತ್ಮ್ಯೆಯಿಂದಲೇ ಪರಮಾತ್ಮನಲ್ಲಿ ಭಕ್ತಿಯುಳ್ಳವ ರಾಗಿ ಆಶ್ರಯಿಸಿ, ಮೋಕ್ಷವನ್ನು ಹೊಂದಿರುವ ನಿದರ್ಶನಗಳು ಇವೆಯಷ್ಟೇ.

**ಭಾಷ್ಯಾರ್ಥವು:—**ಈತನು ಉಪಾಸನವನ್ನು ಆರಂಭಿಸಿರುವದರಿಂದಲೂ, ಉಪಾಸನ ಪ್ರತಿಬಂಧಕ ಪಾಪ ನಿವೃತ್ತಿಯುಂಟಾಗುತ್ತದೆಂಬ ಭಾವವು, **ಕ್ಷಿಪ್ರಂ ಧರ್ಮಾತ್ಮಾ ಭವತಿ** ಎಂಬುದ ರಿಂದ ತೋರಿಬರುತ್ತದೆಂದು, ವ್ಯಾಖ್ಯಾನವನ್ನು ಬರೆಯುತ್ತಾರೆ. **ಕ್ಷಿಪ್ರಂ ಧರ್ಮಾತ್ಮಾ ಭವತಿ** ಎಂದರೆ ಯಾರು ಎಂದು ಕಣ್ತೃಪದವು ಈ ಶ್ಲೋಕದಲ್ಲೇ ಇಲ್ಲದುದರಿಂದಲೂ ಯಾರು ಎಂಬು ವನ್ನೂ ತಿಳಿಸುತ್ತಾರೆ. **ಮತ್ಪ್ರಿಯತ್ವಕಾರಿತ** – ಹೀಗೆ ನನ್ನ ಪ್ರೀತಿಯನ್ನು ಸಂಪಾದಿಸಬೇಕೆಂದು

**ಭಾ. ಸಮೂಲೋನ್ಮೂಲಿತರಜಸ್ತಮೋಗುಣಃ ಕ್ಷಿಪ್ರಂ ಧರ್ಮಾತ್ಮಾ ಭವತಿ - ಕ್ಷಿಪ್ರಮೇವ ವಿರೋಧಿರಹಿತ ಸಪರಿಕರ ಮದ್ಭಜನೈಕಮನಾ ಭವತಿ ; ಏವಂ ರೂಪ ಭಜನ ಮೇವ ಹಿ (೧) "ಧರ್ಮಸ್ಯಾಸ್ಯ ಪರಂತಪ" ಇತ್ಯುಪಕ್ರಮೇ ಧರ್ಮಶಬ್ದೋದಿತಮ್. ಶಶ್ವಚ್ಛಾನ್ತಿಂ ನಿಗಚ್ಛತಿ - ಶಾಶ್ವತೀ ಮಪುನರಾವರ್ತಿನೀಂ ಮತ್ಪ್ರಾಪ್ತಿ ವಿರೋಧ್ಯಾಚಾರ ನಿವೃತ್ತಿಂ ಗಚ್ಛತಿ, ಕೌನ್ತೇಯ ತ್ವಮೇವಾಸ್ಮಿನ್ನರ್ಥೇ ಪ್ರತಿಜ್ಞಾಂ**

ಮಾಡಲ್ಪಟ್ಟ **ಅನನ್ಯ ಪ್ರಯೋಜನ ಮದ್ಭಜನೇನ** - ಇನ್ನು ಯಾವ ಫಲದಲ್ಲೂ ಮನಸ್ಸಿಲ್ಲದೆ, ಸ್ವಯಂ ಪ್ರಯೋಜನವಾದ ನನ್ನನ್ನು ಹೊಂದುವ ಉಪಾಯಾನುಷ್ಠಾನದಿಂದ, **ವಿಧೂತಪಾಪತಯೈವ** - ಕೊಡಹಲ್ಪಟ್ಟ ಪಾಪಗಳುಳ್ಳೋಣದರಿಂದ ಎಂದರೆ ನಷ್ಟಗಳಾದ ಪಾಪಗಳುಳ್ಳೋಣದರಿಂದ, **ಸಮೂಲೋನ್ಮೂಲಿತ ರಜಸ್ತಮೋಗುಣಃ** - ಸಂಪೂರ್ಣವಾಗಿ ರಜಸ್ತಮೋಗುಣಗಳಿಂದುಂಟಾಗುವ ಹಾವಳಿಯನ್ನು ಮೂಲೋತ್ಪಾಟನಮಾಡಿದವನಾಗಿರುವವನು, **ಕ್ಷಿಪ್ರಂ** - ಬಹು ಬೇಗನೆ ಎಂದರೆ ಉಪಾಯಾನುಷ್ಠಾನವನ್ನಾರಂಭಿಸಿದ ಸ್ವಲ್ಪಕಾಲದಲ್ಲೇ, **ಧರ್ಮಾತ್ಮಾ ಭವತಿ** - ಉಪಾಸನದಲ್ಲೇ ದೃಢಚಿತ್ತವನ್ನುಳ್ಳವನಾಗುವನು ; ಎಂದರೆ **ಕ್ಷಿಪ್ರಮೇವ ವಿರೋಧಿರಹಿತ ಸಪರಿಕರ ಮದ್ಭಜನೈಕಮನಾ ಭವತಿ** - ಬೇಗನೆ ಪಾಪಗಳ ಸಂಬಂಧವಿಲ್ಲದ ಪರಿಕರಗಳಿಂದಕೂಡಿದ ಉಪಾಸನದಮೂಲಕವಾಗಲಿ ಅಥವ ಭರನ್ಯಾಸದಮೂಲಕವಾಗಲಿ ನನ್ನನ್ನು ಆಶ್ರಯಿಸುವದರಲ್ಲಿ ಮನಸ್ಸುಳ್ಳವನಾಗುವನು ; ಇಲ್ಲಿ **ಧರ್ಮಾತ್ಮಾ** ಎಂಬಲ್ಲಿ ಧರ್ಮ ಶಬ್ದವು ಉಪಾಯಾನುಷ್ಠಾನರೂಪ ಉಪಾಸನವನ್ನಾಗಲಿ ಭರನ್ಯಾಸವನ್ನಾಗಲಿ, **ಆತ್ಮಾ** ಎಂಬ ಶಬ್ದವು ಮನಸ್ಸನ್ನು, ಬೋಧಿಸುತ್ತವೆ ಎಂಬ ತಾತ್ಪರ್ಯವು. ಆದುದರಿಂದ ಯಾವನು ಧರ್ಮಾತ್ಮಾ ಆಗುತ್ತಾನೆ ಎಂದರೆ, ಹಿಂದಿನ ಶ್ಲೋಕದಲ್ಲಿ ಸುದುರಾಚಾರನಾಗಿದ್ದರೂ ಸಮ್ಯಗ್ವ್ಯವಸಿತ ಬುದ್ಧಿಯುಳ್ಳವನಾಗಿ ಅನನ್ಯ ಭಾಕ್ಕಾಗಿ ಯಾವನು ಪರಮಾತ್ಮನನ್ನೇ ಮನಸ್ಸಿನಿಂದ ಸದಾ ಭಜಿಸುತ್ತಾನೋ ಅವನು ಎಂಬುದೇ ಕರ್ತೃ ಪದವು, **"ಅನನ್ಯ ಭಾಕ್"** ಎಂದು ೩೦ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟವನು ಇಲ್ಲಿ ಉದ್ದೇಶ್ಯನು ಎಂಬುದು ವ್ಯಕ್ತವು. ಆತನೂ **ಸಾಧು ರೇವ** ಎಂದು ಹೇಳಿದರು. ಅದನ್ನೇ ಈ ಶ್ಲೋಕದಲ್ಲಿ ಉಪಪಾದಿಸುತ್ತಾರೆ **ಏವಂ ರೂಪ ಭಜನ ಮೇವ ಹಿ** - ಈ ವಿಧವಾದ ಭಜನವೇಯಲ್ಲವೇ ಹಿಂದೆ ಈ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ **ಧರ್ಮಸ್ಯಾಸ್ಯ ಪರಂತಪ** ಎಂದು **ಇತ್ಯುಕ್ರಮೇ** - ಎಂದು ಅಧ್ಯಾಯದ ಉಪಕ್ರಮದಲ್ಲಿ, **ಧರ್ಮಶಬ್ದೋದಿತಂ** - ಧರ್ಮವೆಂಬ ಶಬ್ದದಿಂದ ಉಪಾಯಾನುಷ್ಠಾನವು ಹೇಳಲ್ಪಟ್ಟಿತು. ಹೀಗೆ **ಕ್ಷಿಪ್ರಂ ಭವತಿ ಧರ್ಮಾತ್ಮಾ** ಎಂಬುದರಿಂದ ಹಿಂದಿನ **ದುರಾಚಾರ** ಸಂತತಿಯೆಲ್ಲಾ ಕಳೆಯಿತು, ಉಪಾಸನದಲ್ಲೇನೋ ಆಸಕ್ತಿಯುಂಟಾಯಿತೆಂದೇನೋ ಭಾವಿಸೋಣ ; ಆದರೆ ದುರಾಚಾರದಲ್ಲೇ ಇದುವರೆಗೂ ಸಕ್ತವಾದ ಮನಸ್ಸು. ಅದರ ವಾಸನೆಯಿಂದ ಹೇಗೆ ಬಿಡುಗಡೆಯನ್ನು ಹೊಂದಿ ಮುಂದಕ್ಕೆ ಪ್ರತಿಬಂಧಕವಿಲ್ಲದೆ ಇದ್ದೀತು ? ಎಂಬ ಶಂಕೆಗೆ ಸಮಾಧಾನವನ್ನು ಹೇಳುತ್ತಾರೆ. ಆ ದುರಾಚಾರ ವಾಸನೆಯ ತಂಟೆಯು ಸಂಪೂರ್ಣವಾಗಿ ಕಳೆದು ಹೋಗುತ್ತದೆಂದು ಮುಂದಿನ ವಾಕ್ಯದಿಂದ ಹೇಳಲ್ಪಡುತ್ತದೆ. ಒಳ್ಳೇ ಆಚಾರದ ಮಹಿಮೆಯು ಏನೆಂದರೆ ಹಿಂದೆ ಮಾಡಿದ ಪಾಪಗಳು ಉಪಾಸನಾನುಷ್ಠಾನಕ್ಕೆ ಪ್ರತಿಬಂಧಕಗಳಾಗಿ ಪರಿಣಮಿಸದೇ ಹೋಗೋಣವು. **ಶಶ್ವಚ್ಛಾಂತಿಂ ನಿಗಚ್ಛತಿ** ಎಂದರೆ **ಶಾಶ್ವತೀ ಮಪುನರಾವರ್ತಿನೀಂ** - ಶಾಶ್ವತವಾದ ಪುನರ್ಜನ್ಮವಿಲ್ಲದ ಮೋಕ್ಷರೂಪವಾದ, **ಮತ್ಪ್ರಾಪ್ತಿವಿರೋಧ್ಯಾಚಾರ ನಿವೃತ್ತಿಂ** ದಿವ್ಯ - ವೈಕುಂಠದಲ್ಲಿ ನನ್ನ ಪ್ರಾಪ್ತಿಯುಂಟಾಗುವದಕ್ಕೆ ವಿರೋಧವಾದ ಆಚಾರವೆಂದರೆ ದುರಾಚಾರದ, ನಿವೃತ್ತಿಯನ್ನು,

(೧) ಗೀ. ೯. ೩.

**ಭಾ. ಕುರು - ಮದ್ಭಕ್ತ್ಯುಪಕ್ರಾನ್ತೋ ವಿರೋಧ್ಯಾಚಾರ ಮಿಶ್ರೋಽಪಿ ನನಶ್ಯತಿ, ಅಪಿತು ಮದ್ಭಕ್ತಿ ಮಾಹಾತ್ಮ್ಯೇನ ಸರ್ವಂ ವಿರೋಧಿಜಾತಂ ನಾಶಯಿತ್ವಾ ಶಾಶ್ವತೀಂ ವಿರೋಧಿ ನಿವೃತ್ತಿ ಮಧಿಗಮ್ಯ, ಕ್ಷಿಪ್ರಂ ಪರಿಪೂರ್ಣಭಕ್ತಿ ರ್ಭವತಿ - ಇತಿ. ||೩೧||**

**ಗಚ್ಛತಿ** - ಹೊಂದುತ್ತಾನೆ. ಇಲ್ಲಿ ಶಾನ್ತಿ ಶಬ್ದಕ್ಕೆ ಪ್ರಕರಣಕ್ಕನುಗುಣವಾಗಿ ಪರಮಾತ್ಮ ಪ್ರಾಪ್ತಿಗೆ ವಿರೋಧವಾದ ದುರಾಚಾರದ ನಿವೃತ್ತಿ ಎಂದು ಅರ್ಥಮಾಡಿರುತ್ತಾರೆ. ಬಹಿರಂತ ರಿಂದ್ರಿಯಗಳ ಉಪರತಿತಾನೇ ಶಾಂತಿ ಶಬ್ದದ ಮುಖ್ಯಾಭಿಪ್ರಾಯವು, **ಕೌನ್ತೇಯ** - ಓ ಅರ್ಜುನನೇ, **ತ್ವಮೇವ** - ನೀನೇ, **ಅಸ್ಮಿನ್ನರ್ಥೇ** - ಈ ಅಭಿಪ್ರಾಯದಲ್ಲಿ, ಈ ವಿಷಯದಲ್ಲಿ, **ಪ್ರತಿಜ್ಞಾಂಕುರು** - ಪ್ರತಿಜ್ಞೆಯನ್ನು ಮಾಡು. ಇದು **ಪ್ರತಿಜಾನೀಹಿ** ಎಂಬುದರ ಅರ್ಥವು. ಶ್ರೀಮಚ್ಛಂಕರಾಚಾರ್ಯರೂ ಹೀಗೆಯೇ ಅರ್ಥಮಾಡಿರುತ್ತಾರೆ. ಇಲ್ಲಿ ಬರೀ ತಿಳಿಯತಕ್ಕದ್ದು ಎಂದು ಇಷ್ಟುಮಾತ್ರ ಅರ್ಥಹೇಳಿದರೆ ಸ್ವಾರಸ್ಯವೇ ಇಲ್ಲವು ಎಂಬ ಭಾವದಿಂದ ಹಾಗೆ ಅರ್ಥ ಮಾಡಿರುತ್ತಾರೆ. ಇಲ್ಲಿ ಶ್ರೀ ಕೃಷ್ಣನ ಅಭಿಪ್ರಾಯವೇನೆಂದರೆ:— ನಾನು ಸರ್ವಜ್ಞನಾಗಿಯೂ ಸತ್ಯ ಸಙ್ಕಲ್ಪನಾದುದರಿಂದ, **ನಮೇ ಭಕ್ತಃಪ್ರಣಶ್ಯತಿ** ಎಂಬುದು ಸತ್ಯ ಸಂಕಲ್ಪನಾದ ನನ್ನ ಪ್ರತಿಜ್ಞೆಯಾದರೂ, **ಕೌನ್ತೇಯ** ಎಂಬ ಸಂಬೋಧನೆಯಿಂದ ಕುಂತೀಪುತ್ರನಾಗಿ ನನ್ನ ಸಂಬಂಧಿ ಯಾಗಿ ನನ್ನ ಮನಸ್ಸನ್ನು ಸ್ವಲ್ಪಮಟ್ಟಿಗೆಯಾದರೂ ನೀನು ಅರಿತನಾಗಿರುವದರಿಂದ ನೀನೂ ಸಹ ನಿಸ್ಸಂದೇಹವಾಗಿ ಪ್ರತಿಜ್ಞೆಯನ್ನು ಮಾಡಬಹುದು ಎಂಬ ತಾತ್ಪರ್ಯವು. ಆ ಪ್ರತಿಜ್ಞೆಯಾವು ದೆಂದರೆ ಹೇಳುತ್ತಾರೆ.—**ಮದ್ಭಕ್ತ್ಯುಪಕ್ರಾನ್ತಃ** - ನನ್ನ ಭಕ್ತಿಯಲ್ಲಿ ಪ್ರಾರಂಭಿಸಿದವನು, **ವಿರೋಧ್ಯಾಚಾರಮಿಶ್ರೋಽಪಿ** - ಉಪಾಯಾನುಷ್ಠಾನಕ್ಕೆ ವಿರೋಧವಾದ ಆಚಾರವೆಂದರೆ ದುರಾ ಚಾರದಿಂದ ಸೇರಿದವನಾದರೂ ಕೂಡ, **ನನಶ್ಯತಿ** - ನಷ್ಟವಾಗುವದಿಲ್ಲವು, **ಅಪಿತು** - ಮತ್ತೇ ನೆಂದರೆ, **ಮದ್ಭಕ್ತಿ ಮಾಹಾತ್ಮ್ಯೇನ** - ನನ್ನಲ್ಲಿಟ್ಟಿರುವ ಭಕ್ತಿಯ ಮಾಹಾತ್ಮ್ಯೆಯಿಂದ, **ಸರ್ವಂವಿರೋಧಿಜಾತಂ ನಾಶಯಿತ್ವಾ** - ಸಮಸ್ತ ವಿರೋಧಿ ಪಾಪಸಮೂಹವನ್ನೂ ಕಳೆದು ಕೊಂಡವನಾಗಿ, **ಶಾಶ್ವತೀಂ ವಿರೋಧಿನಿವೃತ್ತಿಂ ಅಧಿಗಮ್ಯ** - ಹೀಗೆ ಶಾಶ್ವತವಾದ ವಿರೋಧಿ ನಿವೃತ್ತಿಯನ್ನು ಹೊಂದಿದವನಾಗಿ, **ಕ್ಷಿಪ್ರಂ** - ಬೇಗನೆ, **ಪರಿಪೂರ್ಣಭಕ್ತಿಯುಳ್ಳವನು, ಭವತಿ**- ಆಗುವನು. **ಇತಿ** - ಎಂಬುದು, ಅಭಿಪ್ರಾಯವೆಂಬ ಭಾವವು. ಇದು ಹೇಗೆ ಎಂದರೆ ಮನಸ್ಸು ಯಾವಾಗ ನಿರ್ಮಲವಾಯಿತೋ, ಯಾವಾಗ ಧರ್ಮಾತ್ಮಾ ಆದನೋ, ಆಗ ಬುದ್ಧಿಯೂ ಸಹ ಪರಿಶುದ್ಧವಾಯಿತು. ಆಗ ಸ್ವಾಮಿಯು **"ದದಾಮಿ ಬುದ್ಧಿಯೋಗಂ"** ಎಂದು ಹೇಳಿರುವಹಾಗೆ ದಿವ್ಯಬುದ್ಧಿಯನ್ನಿತ್ತು ತನ್ನನ್ನೇ ಉಪಾಸಿಸುವಹಾಗೆ ಯಾಗಲಿ ಭರನ್ಯಾಸಮಾಡುವಹಾಗೆ ಯಾಗಲಿ ಮಾಡಿಕೊಳ್ಳುವನೆಂಬ ಭಾವವು. ಹೀಗೆ ದುರಾಚಾರಗಳಿದ್ದೂ ಉಪಾಸನೆಯ ಮಾಹಾತ್ಮ್ಯೆಯಿಂದ ಅವುಗಳಿಂದ ನಿವೃತ್ತಿಯನ್ನು ಹೊಂದಿದುದಕ್ಕೆ ಮೂರು ನಿದರ್ಶನಗಳನ್ನು ಶ್ರೀ ದೇಶಿಕೇಂದ್ರರು ಸೂಚಿಸಿರುತ್ತಾರೆ. (೧) ಶಾಂತಿ ಪರ್ವದ ೩೪೫ ನೆಯ ಅಧ್ಯಾಯದಲ್ಲಿರುವ **ಉಪರಿಚರವಸುವಿನವೃತ್ತಾಂತವು.** (೨) ಭಗವಂತನೊಂದಿಗೆ ಯುದ್ಧಮಾಡಬೇಕೆಂದಿದ್ದ **ಪ್ರಹ್ಲಾದವೃತ್ತಾಂತವು.** (ವಿ. ಪು. ೧. ೧೫. ೧೫೭) (೩) ಪಾಪಿಷ್ಠನಾದ **ಕ್ಷತ್ರ ಬಂಧುವಿನ ವೃತ್ತಾಂತವು.** (ವಿಷ್ಣು ಧರ್ಮ ೯೭ ನೆಯ ಅಧ್ಯಾಯ ಮೊದಲುಗೊಂಡು)

**(೧) ಉಪರಿಚರವಸುವಿನ ವೃತ್ತಾಂತವು**— ಇಂದ್ರನು ಭೂಮಿಗೆ ಬಂದು ಯಜ್ಞಮಾಡ ಉಪಕ್ರಮಿಸಿದಾಗ ಬೃಹಸ್ಪತಿಯು ಅದಕ್ಕೆ ಬೇಕಾದ ಪಿಷ್ಟವನ್ನು, ಪಶುಮಾಡುವದಕ್ಕಾಗಿ ತೆಗದು ಕೊಂಡು ಬನ್ನಿ ಎಂದು ಆಜ್ಞಾಪಿಸಿದನು. ಅದನ್ನು ಕೇಳಿ ದೇವತೆಗಳು ಪಿಷ್ಟಪಶು ಕೂಡದೆಂದೂ, ಸಾಕ್ಷಾತ್ ಪಶುವಾದ ಮೇಕೆಯನ್ನೇ ತರತಕ್ಕದ್ದೆಂದು ಹೇಳಿದರು. ಅದಕ್ಕೆ ಋಷಿಗಳೆಲ್ಲರೂ ಸೇರಿ

ಇದು ಕೃತಯುಗವಾಗಿರುವಾಗ ಹೇಗೆ ಪ್ರತ್ಯಕ್ಷ ಪಶುವಧೆಯು ? ಇದು ಶ್ರುತಿವಿರುದ್ಧವಾದುದು, ಆದುದರಿಂದ ಅಜವೆಂದು ಕರೆಯಲ್ಪಡುವ ಬೀಜಗಳ ಹಿಟ್ಟಿನಿಂದ ಮಾಡಿದ ಪಶುವನ್ನೇ ತರತಕ್ಕದ್ದೆಂದು ಹೇಳಿದರು. ಹೀಗೆ ವಿವಾದವು ನಡೆಯುತ್ತಿರುವಾಗ ಉಪರಿಚರವಸುವೆಂಬ ರಾಜನು ಅಲ್ಲಿಗೆ ಬರಲು ; ಆಗ ಅವರಿಬ್ಬರೂ ನಮ್ಮಗಳ ಸಂಶಯವನ್ನು ಪರಿಹರಿಸತಕ್ಕದ್ದೆಂದು **ರಾಜನನ್ನು** ಪ್ರಾರ್ಥಿಸಲು ; ಈತನೂ ದೇವತೆಯಾದುದರಿಂದ ದೇವತೆಗಳ ಪಕ್ಷವನ್ನು ಹಿಡಿದು ತೀರ್ಪನ್ನು ಕೊಟ್ಟಿದುದರಿಂದ ಋಷಿಗಳಿಂದ ಶಪಿಸಲ್ಪಟ್ಟು ಭೂಮಿಯನ್ನು ಭೇದಿಸಿಕೊಂಡು ಒಂದು ವಿವರದಲ್ಲಿ ಬಿದ್ದನು. ಆಗ ದೇವತೆಗಳು ತಮ್ಮ ಪಕ್ಷವಾಗಿ ಹೇಳಿದುದಕ್ಕೆ ಆ ರಾಜನಿಗೆ ಈ ದುರವಸ್ಥೆ ಬಂತೇ ಎಂದು ಪರಿತಾಪಗೊಂಡವರಾಗಿ ನಿನಗೆ ಶೀಘ್ರ ಶಾಪ ವಿಮೋಚನೆಯಾಗಲಿ ಎಂದು ವರವನ್ನಿತ್ತು ಹೊರಟು ಹೋದರು. ಈ ವರಬಲದಿಂದ ವಸುವು ಶ್ರೀಮನ್ನಾರಾಯಣನ ಮುಖದಿಂದ ಬಂದ ವಿಷ್ವಕ್ಸೇನಮಂತ್ರವನ್ನು ಜಪಿಸಿ, ಪೂಜಿಸಿದನು. ಇದಕ್ಕೆ ಶ್ರೀಮನ್ನಾರಾಯಣನು ಪ್ರೀತನಾಗಿ ವೈನತೇಯರನ್ನನ್ನು, ಕರೆದು, ನೀನು ಹೋಗಿ ಬ್ರಾಹ್ಮಣರಿಂದ ಶಾಪಗ್ರಸ್ಥನಾಗಿ ಬಿದ್ದಿರುವ ಉಪರಿಚರವಸುವನ್ನು ವಿಮಾನದಲ್ಲಿ ಕೂರಿಸಿ ಬ್ರಹ್ಮಲೋಕವನ್ನು ಹೊಂದಿಸುವದೆಂದು ಹೇಳಲು, ಹಾಗೆಯೇ ಗರುತ್ಮಂತನು ಸ್ವಾಮಿಯ ಆಜ್ಞೆಯನ್ನು ನೆರವೇರಿಸಿದನು. ಈ ಇತಿಹಾಸವನ್ನು ಭೀಷ್ಮರು ಯುಧಿಷ್ಠಿರನಿಗೆ ಉಪದೇಶಿಸಿರುತ್ತಾರೆ. ಆ ರಾಜನು **"ಧರ್ಮಾತ್ಮಾ ಸಂಶಿತವ್ರತಃ"** ಎಂದು ಹೇಳಿರುವಹಾಗೆ ನಾರಾಯಣ ಭಕ್ತನು ; ಶಾಪದಿಂದ ಮನುಷ್ಯಲೋಕದಿಂದ ಬಂದಿದ್ದನು. ಪುನಃ ಸರ್ವೇಶ್ವರನ ಕೃಪೆಯಿಂದ ಬ್ರಹ್ಮಲೋಕಪ್ರಾಪ್ತಿಯುಂಟಾಯಿತು. **(೨) ಪ್ರಹ್ಲಾದ ವೃತ್ತಾಂತವು.** ಪ್ರಹ್ಲಾದನು ಮಹಾಭಕ್ತ ಶಿಖಾಮಣಿಯು ; ಶ್ರೀ ಪರಾಶರರು **"ಧರ್ಮಾತ್ಮಾ ಸತ್ಯ ಶೌಚಾದಿ ಗುಣಾನಾ ಮಾಕರಃ** ಪರಃ **| ಉಪಮಾನ ಮಶೇಷಾಣಾಂ ಸಾಧೂನಾಂ ಯಸ್ಸದಾಭವತ್"** ನಿತ್ಯ ನೈಮಿತ್ತಿಕಾನುಷ್ಠಾನಗಳಿಂದ ಸೇರಿದ ಉಪಾಸನದಲ್ಲೇ ಸಕ್ತನಾದ ಮನಸ್ಸುಳ್ಳವನೆಂದು ಸತ್ಯ ಶೌಚಾದಿ ಕಲ್ಯಾಣಗುಣಗಳಿಗೆ ಆಕಾರನೆಂದೂ, ಆ ಕಾರಣದಿಂದ ಪರಮ ಶ್ರೇಷ್ಠನೆಂದೂ, ಇತರ ಸಾಧುಗಳಿಗೆಲ್ಲಾ ದೃಷ್ಟಾಂತರೂಪದಲ್ಲಿದ್ದಾನೆಂದೂ ಹೀಗೆಲ್ಲಾ ಸ್ತುತಿಸಿರುತ್ತಾರೆ. ಇಂತವನು ಒಂದು ಕಾಲದಲ್ಲಿ ಸರ್ವೇಶ್ವರನೊಂದಿಗೆ ಎದುರಿಸಿ ನಿಂತು, ಅನಂತರ ಅದು ತನ್ನ ತಪ್ಪೆಂದು ತಿಳಿದವನಾಗಿ ಎಚ್ಚೆತ್ತುಕೊಂಡನೆಂದು ಹೇಳಲ್ಪಟ್ಟಿರುತ್ತದೆ. (೩) ಪಾಪಿಷ್ಠನಾದ ಕ್ಷತ್ರಬಂಧುವು, ಭಗವನ್ನಾಮ ಪ್ರಭಾವದಿಂದ ಮುಂದಿನ ಜನ್ಮದಲ್ಲಿ ತನ್ನ ಜಾತಿಯನ್ನು ಸ್ಮರಿಸಿದವನಾಗಿ ತುಂಬಾ ವೈರಾಗ್ಯವನ್ನು ಹೊಂದಿದವನಾಗಿ ಭಗವಂತನನ್ನು ಶರಣುಹೊಂದಿ, ಮುಕ್ತಿಯನ್ನು ಹೊಂದಿದನು. ಈ ವೃತ್ತಾಂತಕ್ಕೆ ಶ್ರೀಮದ್ರಹಸ್ಯತ್ರಯಸಾರದ ಗುರುಪರಂಪರಾಸಾರದ ೫೦ ನೆಯ ಪುಟವನ್ನು ಪರಾಂಬರಿಸಿ. ಇಲ್ಲಿ ಶರಣಾಗತಿಯ ಮೂಲಕ ಅನುಗ್ರಹವು.

**ಮೂಲಕ್ಕೆ ಅರ್ಥವು:**—ಹಿಂದೆ ೨೯ ನೆಯ ಶ್ಲೋಕದಿಂದ, **"ಸಮೋಽಹಂ ಸರ್ವಭೂತೇಷು"** ಎಂದು ಹೇಳಿರುವ ಸಂದರ್ಭವು ಮೋಕ್ಷಾರ್ಥಿಯಾದ ಭಕ್ತಿಯೋಗನಿಷ್ಠನ ವಿಷಯವಾದುದರಿಂದ, ದೇವ, ತಿರ್ಯಕ್, ಮನುಷ್ಯ, ಸ್ಥಾವರ ರೂಪದಲ್ಲಿ ಯಾವುದಾದರೂ ಜನ್ಮಪ್ರಾಪ್ತಿಯು ಉಂಟಾದ ಭಾವವು **ಭೂತ** ಶಬ್ದದಿಂದ ತೋರಿಬರುವದರಿಂದ, ಉಪಾಸನವನ್ನಾರಂಭಿಸಿ ಯೋಗಭ್ರಷ್ಟನ ವಿಷಯನೆಂದು ಊಹಿಸತಕ್ಕದ್ದಾಗಿರುತ್ತದೆ. **ಸಮೋಽಹಂ** ಎಂಬಲ್ಲಿ ಹೇಳಿದ ಸಮತ್ವವು, ತನ್ನನ್ನು ಆಶ್ರಯಿಸಿದ ಪ್ರಪನ್ನರ ವಿಷಯದಲ್ಲಿ ಪೂರ್ಣಾನುಗ್ರಹದಲ್ಲೂ, ಅದರಿಂದ ಸಾಧ್ಯವಾದ ಫಲದಲ್ಲೂ, ಎಂದು ತಿಳಿಯತಕ್ಕದ್ದು, ಏಕೆಂದರೆ ಪ್ರಪನ್ನ ಅಪ್ರಪನ್ನರಿಗೆ ಸಮಭಾವ ಕೊಡುವದಿಲ್ಲವಷ್ಟೇ ? ಅಂತವರಲ್ಲೂ ಕೊಡುತ್ತದೆಂದರೆ ವೈಷಮ್ಯಾದಿ ದೋಷಗಳು

**ಮೂ. ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ।**
**ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾ ಸ್ತೇಽಪಿ ಯಾಂತಿ ಪರಾಂ ಗತಿಮ್. ॥** **೩೨.**
**ಕಿಂ ಪುನ ರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯ ಸ್ತಥಾ।**
**ಅನಿತ್ಯ ಮಸುಖಂ ಲೋಕ ಮಿಮಂ ಪ್ರಾಪ್ಯ ಭಜಸ್ವ ಮಾಂ ॥** **೩೩.**

ಭಗವಂತನಿಗೆ ಏರ್ಪಡುತ್ತವೆ. ಆದುದರಿಂದ ಇದೂ ಪ್ರಸನ್ನ ವಿಷಯವಾದುದೇ ಎಂಬುದರಲ್ಲಿ ಸಂದೇಹವಿಲ್ಲವು. ಜನ್ಮಾದಿ ವ್ಯತ್ಯಾಸಗಳಿಂದ ಹಾಗೆಯೇ ವಿನಾ ನನ್ನ ಅನುಗ್ರಹದಲ್ಲಿ ವ್ಯತ್ಯಾಸ ವಿಲ್ಲವೆಂದು ಹೇಳಿದರು. ಹಿಂದೆ ಪಾಪಿಷ್ಠನಾಗಿದ್ದನೆಂಬ ನೆಪದಿಂದ ಅವನೇನಾದರೂ ತ್ಯಾಜ್ಯನೋ? ಎಂದರೆ, ತ್ಯಾಜ್ಯನಲ್ಲವೆಂದು ಶರಣಾಗತಿಯ ಮಾಹಾತ್ಮ್ಯವನ್ನು ತಿಳಿಸಿ, ಆತನು ಎಷ್ಟು ದುರಾ ಚಾರನಾಗಿದ್ದರೂ, ಆತನು ಆಶ್ರಯಿಸಿದ ಮಾತ್ರದಿಂದ ಗ್ರಾಹ್ಯನೆಂದೂ, ಹಾಗೆ ಆಶ್ರಯಿಸಿದ ಮಹಿ ಮೆಯಿಂದ ಮುಂದೆ ದುರಾಚಾರಗಳೆಲ್ಲಾ ನಿವೃತ್ತಿ ಹೊಂದುತ್ತವೆಂದೂ, ಹೇಳಿ, ಅವರ ಮುಂದೆ ೩೧ ನೆಯಶ್ಲೋಕದಲ್ಲಿ ತನ್ನನ್ನು ಉಪಾಯಾನುಷ್ಠಾನದ ಮೂಲಕ ಆಶ್ರಯಿಸಿದವನು ಎಂದಿಗೂ ನಷ್ಟನಾಗುವದಿಲ್ಲವೆಂದು ಉಪದೇಶಿಸಿದರು. ಹಾಗೆ ಯೋಗನಿಷ್ಠನಿಗೆ ಈಗ ನೀಚ ಜನ್ಮಗಳಾದ ಸ್ತ್ರೀ ವೈಶ್ಯ ಶೂದ್ರಾದಿ ಜನ್ಮಗಳುಂಟಾದರೂ, ಹಿಂದಿನ ಯೋಗಮಾಹಾತ್ಮ್ಯೆಯಿಂದಲೇ, ಈಗಲೂ ತನ್ನನ್ನು ಭಜಿಸಿ, ಅವರೆಲ್ಲರೂ ಕೊನೆಗೆ ಈಗಿನ ಜನ್ಮಗಳಿಗೆ ವಿಹಿತಗಳಾದ ಉಪಾಯಾನುಷ್ಠಾನದ ಮೂಲಕ ಮುಕ್ತಿ ಹೊಂದುವರೆಂದು ಹೇಳಿ, ಅಂತಹ ಯೋಗಭ್ರಷ್ಟನಿಗೇನೇ ಉತ್ತಮ ಜನ್ಮ ಗಳಾದ ಬ್ರಾಹ್ಮಣ ಕ್ಷತ್ರಿಯರಲ್ಲೇ ಹುಟ್ಟಿ ಉಪಾಸಿಸಲು ಸರ್ವಾನುಕೂಲಗಳೂ ಪ್ರಾಪ್ತವಾದರೆ, ಇನ್ನು ಅಂತವರ ವಿಷಯದಲ್ಲಿ ಹೇಳತಕ್ಕದ್ದೇನಿದೆ ಎನ್ನುತ್ತಾರೆ—ಅಥವಾ ತನ್ನನ್ನು ಆಶ್ರಯಿಸು ವವರು ಎಷ್ಟು ನಿಕೃಷ್ಟಜನ್ಮವನ್ನೆತ್ತಿದ್ದರೂ ಶರಣಾಗತಿಯ ಮೂಲಕ ಆಶ್ರಯಿಸಿದರೆ, ಅದರ ಮಾಹಾತ್ಮ್ಯೆಯಿಂದ ಆತನು ಮೋಕ್ಷವನ್ನು ಹೊಂದುವದು ಸಿದ್ಧವು ಎಂದು ಹೇಳುತ್ತಾರೆ. ಅವರು ಬ್ರಾಹ್ಮಣರಾಗಿ ಬ್ರಹ್ಮವಿತ್ತಾದರೆ, ನನ್ನ ಅನುಗ್ರಹವು ಅವರಿಗೆ ಸಂಪೂರ್ಣವಾಗಿ ಸಿದ್ಧಿಸು ತ್ತದೆಂಬುದು ಕೈಮುತಿಕನ್ಯಾಸಿದ್ಧವು ಎಂಬುದು ಅಭಿಪ್ರಾಯವು. ಓ ಅರ್ಜುನನೇ ನೀನಾದರೋ ರಾಜರ್ಷಿಯು, ನೀನೂ ಒಳ್ಳೇ ಜನ್ಮವನ್ನೆತ್ತಿರುತ್ತೀಯೇ, ನಿನ್ನಲ್ಲಿ ಪ್ರೀತನಾಗಿ ನಿನಗೆ ಅನುಗ್ರಹ ಮಾಡಲು ಸಙ್ಕಲ್ಪಿಸಿರುವೆನು, ನೀನು ನನ್ನನ್ನು ಆಶ್ರಯಿಸಿರುತ್ತೀಯೇ, **ಶಾಧಿ ಮಾಂ ತ್ವಾಂ ಪ್ರಪನ್ನಂ** (ಗೀ. ೨. ೭.) ಎಂದು ಬೇಡಿರುತ್ತೀಯೇ, ಮುಂದೆ ಈ ಅಧ್ಯಾಯ ನಿಗಮನದಲ್ಲಿ ಹೇಳುವ ಪರಮ ರಹಸ್ಯವಾದ ಉಪದೇಶವನ್ನು ನೀನು ಕೈಕೊಂಡರೆ ನಿನಗೂ ಮುಕ್ತಿಫಲಪ್ರಾಪ್ತವು ನಿಸ್ಸಂದೇಹವೆಂಬ ಭಾವದಿಂದ ಹೇಳುತ್ತಾರೆ. **ಹೇ ಪಾರ್ಥ** - ಓ ಅರ್ಜುನನೇ **ಮಾಂ** - ನನ್ನನ್ನು **ವ್ಯಪಾಶ್ರಿತ್ಯ** - ವಿಶೇಷವಾಗಿ ಆಶ್ರಯಿಸಿ, ಇದರಿಂದ ಉಪಾಯಾನುಷ್ಠಾನಮಾಡಲು ಯೋಗ್ಯಾಧಿಕಾರಿಯಾಗಿ ಹುಟ್ಟಿ ನನ್ನನ್ನು ಚನ್ನಾಗಿ ಉಪಾಯಾನುಷ್ಠಾನಮೂಲಕ ಆಶ್ರಯಿಸಿ, ಅನಂತರ, **ಹಿ** – ಯಾವ ಕಾರಣದಿಂದಾಗಲಿ, **ಸ್ತ್ರಿಯಃ** - ಸ್ತ್ರೀಗಳೇಯಾಗಲಿ, ವೈಶ್ಯರೇಯಾ ಗಲಿ, ಶೂದ್ರರೇಯಾಗಲಿ, ಹೀಗೆ **ಪಾಪಯೋನಯಃ** - ಪಾಪಜನ್ಮವನ್ನು ಎಂದರೆ ನಿಕೃಷ್ಟ ಜನ್ಮವನ್ನು ಹೊಂದಿದವರು, **ಯೇಸ್ಯುಃ** – ಯಾರು ಆಗುವರೋ, **ತೇಽಪಿ** – ಅವರುಗಳೂ ಕೂಡ, ಆ ಯೋಗ ಮಾಹಾತ್ಮ್ಯೆಯ ಬಲದಿಂದಲೇ ಪುನಃ ನನ್ನನ್ನೇ ಭಜಿಸಿದವರಾಗಿ, ಕೊನೆಗೆ **ಪರಾಂಗತಿಂ** - ಶ್ರೇಷ್ಠವಾದ ಗತಿಯಾದ ಪರಮ ಪದವನ್ನು, **ಯಾನ್ತಿ** – ಹೊಂದುತ್ತಾರೆ, ಹೀಗೆ ಹಿಂದೆ ಹೊಂದಿರುತ್ತಾರೆ, ಈಗಲೂ ಹೊಂದುತ್ತಾರೆ, ಮುಂದೆಯೂ ಹೊಂದುವರು ಎಂಬ ಅಭಿ ಪ್ರಾಯದಲ್ಲಿ **ಯಾಂತಿ** ಎಂಬ ಪ್ರಯೋಗವು. ಹಿಂದೆ ಉಪಾಸನಾಧಿಕಾರಿಗಳಾಗುವ ವರ್ಣದಲ್ಲೇ ಜನಿಸಿ, ಉಪಾಸನವನ್ನು ಮಾಡಿ, ಅದಕ್ಕೆ ಅಙ್ಗವಾಗಿ ಶರಣಾಗತಿಯನ್ನು ಅನುಷ್ಠಿಸಿದವರಾಗಿ,

ಶಾಪಮೂಲಕವಾಗಿಯೋ, ಪ್ರಾರಬ್ಧ ಕಳೆಯದ ಮೂಲಕವಾಗಿಯೋ, ಸ್ವಯಂಕೃತಾಪರಾಧ ಮೂಲಕವಾಗಿಯೋ, ಸ್ತ್ರೀ ವೈಶ್ಯಶೂದ್ರಾದಿ ನಿಕೃಷ್ಟಜನ್ಮ ಪ್ರಾಪ್ತಿಯುಂಟಾದರೂ, ಹಿಂದಿನ ಯೋಗಮಾಹಾತ್ಮ್ಯೆಯಿಂದ ಭಗವಂತನನ್ನೇ ಭಜಿಸುವವರಾಗಿ ಮುಕ್ತಿ ಹೊಂದುವರು ಎಂಬ ಭಾವವು. ಯಾವಾಗ ಭಗವದ್ಭಕ್ತನಾದನೋ ಒಂದು ವೇಳೆ ಸ್ವಲ್ಪ ಪ್ರತಿಬಂಧಕವು ಮಧ್ಯದಲ್ಲಿ ಉಂಟಾದರೂ **ನಮೇಭಕ್ತಃ ಪ್ರಣಶ್ಯತಿ** – ಎಂದು ಹೇಳುವಹಾಗೆ ಆತನು ನಷ್ಟನೇ ಆಗುವ ದಿಲ್ಲವು. ಆತನಿಗೆ ಮುಕ್ತಿಯು ಯಾವಾಗಲಾದರೂ ಒಂದು ಕಾಲದಲ್ಲಿ ಉಂಟೆಂಬುದು ಸಿದ್ಧವು. ಏಕೆಂದರೆ ಆತನು ತನ್ನನ್ನು ಉಪಾಸಿಸಿದ ಸುಕೃತಿಯಾದುದರಿಂದ ಎಂಬ ಭಾವವು. ಆತನು ಹೇಗಾದರೂ ಮಾಡಿ ನನ್ನನ್ನು ಹೊಂದಬೇಕೆಂಬ ದೃಢಸಂಕಲ್ಪನಾಗಿರುವುದರಿಂದ ಎಂಬ ಅಭಿಪ್ರಾಯವು.

ಸ್ತ್ರೀಯಾಗಿ ಜನಿಸಿ, ಹಿಂದಿನ ಸುಕೃತದಿಂದ ಮೋಕ್ಷವು ಉಂಟಾಗುವದಕ್ಕೆ ನಿದರ್ಶನವಾಗಿ **ಗೋಪಿಕಾಸ್ತ್ರೀಯರು**ಗಳನ್ನು ಹೇಳಬಹುದು. ಇವರೆಲ್ಲಾ ಮಹಾ ಶ್ರೇಷ್ಠರಾದ ಭಗವದುಪಾಸಕ ರಾಗಿದ್ದು ಈತನ ಅವತಾರದಲ್ಲೇ ಅವರುಗಳಿಗೆ **ಪರಾಂಗತಿ**ಯನ್ನು ಕೊಡಲು ಸಙ್ಕಲ್ಪಿಸಿರುತ್ತಾನೆ ಯಾದುದರಿಂದ, ಸರ್ವಜ್ಞನಾದ ತನಗೆ ಇದು ಚೆನ್ನಾಗಿ ವೇದ್ಯವಾದುದರಿಂದ ಎಲ್ಲಾ ಬಿಟ್ಟು ಪ್ರಥಮತಃ **ಸ್ತ್ರಿಯಃ** ಎಂದು ಉಪಕ್ರಮಿಸಿ ಹೇಳಿರುತ್ತಾರೆ. ತಾಪಸಿಯಾಗಿ, ಮತಂಗಮಹರ್ಷಿ ಯನ್ನು ಆಶ್ರಯಿಸಿದ **ಶಬರಿಯು**, ಸ್ತ್ರೀಯೂ ಅಲ್ಲದೆ ಹೀನವಾದ ಶಬರಜಾತಿಯಲ್ಲಿ ಹುಟ್ಟಿದ ವಳು ; ಅವಳು ಶ್ರೀರಾಮನ ಪರಮಾನುಗ್ರಹದಿಂದ ಮುಕ್ತಿಯನ್ನು ಹೊಂದಿದಳು, ದೇವಹೂತಿ, ಅದಿತಿ ಮೊದಲಾದವರುಗಳೂ ಕೂಡ ನಿದರ್ಶನವು. ಹಾಗೆಯೇ ರಾಕ್ಷಸಿಯಾದ ಪೂತನಿಯೂ ; ವೈಶ್ಯನಿದರ್ಶನಕ್ಕೆ ತುಲಾಧಾರರನ್ನು ಹೇಳಬಹುದು ; ಕಾಂಚೀಪೂರ್ಣರೂ ಸಹ ವೈಶ್ಯರೇ. ಶೂದ್ರನಿದರ್ಶನಕ್ಕೆ ಚಾಣೂರನನ್ನೂ ವಿದುರರನ್ನೂ ನಮ್ಮ ಆಳ್ವಾರುಗಳಲ್ಲಿ ಕೆಲವರನ್ನೂ ಹೇಳ ಬಹುದು. ಹೀಗೆ ಹೇಳಿದುದು ರಕ್ಷರೂ, ಯಕ್ಷರೂ, ದೈತೇಯರೂ, ಪಕ್ಷಿಗಳೂ, ಮೃಗಗಳೂ, ಇವರುಗಳಿಗೆಲ್ಲಾ ಉಪಲಕ್ಷಣವು ; ಬಕ, ಕೇಶಿ, ನರಕಾಸುರ, ಶಿಶುಪಾಲಾದಿಗಳೂ, ಜಟಾಯು, ಮಾರೀಚಾದಿಗಳು ಇದಕ್ಕೆ ನಿದರ್ಶನವು. ಈ ಸಂದರ್ಭದಲ್ಲಿ **"ರಕ್ಷಾಂಸಿಯಕ್ಷಾ ದೈತೇಯಾಃ ಸ್ತ್ರಿಯಶ್ಶೂದ್ರಾವ್ರಜೌಕಸಃ। ಖಗಾಮೃಗಾಃ ಪಾಪಜೀವಾ ಸ್ಸನ್ತಿಹ್ಯಚ್ಯುತತಾಂ ಗತಾಃ"** ಎಂಬ ಶ್ಲೋಕವು (ಭಾಗ. ೭. ೭. ೫೩) ಅನುಸಂಧೇಯವು. ಹಾಗೆಯೇ **"ಧರ್ಮವ್ಯಾಧಾದಯೋ ಷ್ಯನ್ಯೇ ಪೂರ್ವಾಭ್ಯಾಸಾ ಜ್ಜುಗುಪ್ಸಿತೇ। ವರ್ಣಾವರತ್ವೇ ಸಂಪ್ರಾಪ್ತೇ ಸ್ಸಂಸಿದ್ಧಿಂ ಶ್ರಮ ಣೀಯಥಾ"** ಎಂಬ ಶ್ಲೋಕವೂ ಅನುಸಂಧೇಯವು. ಈ ವಿಷ್ಣುಧರ್ಮ ಶ್ಲೋಕಕ್ಕೆ ಕೆಲವರು ಶಾಸ್ತ್ರಸಮ್ಮತವಲ್ಲದ ಅರ್ಥವನ್ನು ಹೇಳಿ, ಧರ್ಮವ್ಯಾಧರು ಆದಿಶಬ್ದದಿಂದ ವಿದುರಾದಿಗಳೂ ವಿಶೇಷಾಧಿಕಾರಿಗಳಾದುದರಿಂದ ಅಪಶೂದ್ರಾಧಿಕರಣದ ಉಪದೇಶಕ್ಕೆ ವಿರುದ್ಧವಾಗಿ ಶೂದ್ರ ರಾದರೂ ಉಪಾಸನವನ್ನು ಮಾಡಿದರು ಎಂದು ಹೇಳುವರು. ಎಂತಹ ವಿಶೇಷಾಧಿಕಾರಿಯಾ ಗಿದ್ದರೂ ಶಾಸ್ತ್ರಾತಿಕ್ರಮಣ ಮಾರ್ಗವನ್ನು ಅವರು ಅವಲಂಬಿಸುವದು ಸರಿಯಲ್ಲವು. ಇಷ್ಟು ಮಾತ್ರವೇ ಅಲ್ಲದೆ ಇನ್ನೂ ಅನೇಕ ಪೂರ್ವಪಕ್ಷಗಳಿಗೆ ಕಾರಣವಾಗುತ್ತದೆ. ಹೀಗೆ ಶಾಸ್ತ್ರಾತಿಕ್ರಮಕ್ಕೆ ಅರ್ಹತಾನಹ.ತೆಯನ್ನು ಹೇಳುವವರು ಯಾರು ? ಶೂದ್ರನು ಉಪಾಸಿಸಿದನೆಂದು ರಾಮಾವತಾರಿ ಯಾಗಿ ಆತನನ್ನು ವಧಿಸಿ ಕೃಷ್ಣಾವತಾರಿಯಾಗಿ ವಿದುರರನ್ನು ರಕ್ಷಿಸಿದರು ಎಂದರೆ ವಿಷ್ಣುವಿಗೆ ವೈಷಮ್ಯವು ಏರ್ಪಡುವದಿಲ್ಲವೇ ? ಶ್ರೀ ಕೃಷ್ಣನು ದುರ್ಯೋಧನನೆದುರಿಗೆ ಎಳ್ಳಷ್ಟೂ ಶಾಸ್ತ್ರಾತಿ ಕ್ರಮವನ್ನು ಮನ್ನಿಸುವನಲ್ಲವೆಂದು ಶಪಥಮಾಡಿರುತ್ತಾರೆ. ಆದುದರಿಂದ ಸರಿಯಾದ ಅರ್ಥವು ಹೇಗೆಂದರೆ, **ಅನ್ಯೇ ಧರ್ಮವ್ಯಾಧಾದಯಃ** – ಇತರರಾದ ಧರ್ಮವ್ಯಾಧ ವಿದುರಾದಿಗಳು, **ಜುಗು**

**ಪ್ಸಿತೇ ವರ್ಣಾವರತ್ವೇ** - ಜುಗುಪ್ಸಿತವಾದ ನಿಕೃಷ್ಟವರ್ಣವಾದ ಶೂದ್ರತ್ವವು ಉಂಟಾದರೂ, **ಸಂಸಿದ್ಧಿ**ಯನ್ನು ಹೊಂದಿದರು, ಎಂದರೆ ಮೋಕ್ಷವನ್ನು ಹೊಂದಿದರು. ಇದಕ್ಕೆ ಹೇತುವೇನು ಎಂದರೆ **ಪೂರ್ವಾಭ್ಯಾಸಾತ್** - ಹಿಂದಿನ ಜನ್ಮದಲ್ಲಿ ಮಾಡಿದ ಅಭ್ಯಾಸದಿಂದ ; **ಅಭ್ಯಾಸ ಶಬ್ದಕ್ಕೆ ಸಂಶೀಲನಮ್** ಎಂದರೆ ದಿವ್ಯಮಂಗಳವಿಗ್ರಹದ ಉಪಾಸನೆಯ ಬಲದಿಂದಲೇ. ಹೀಗೆ ಈ ಅನುಮಾನ ರೂಪದಲ್ಲಿರುವ ವಾಕ್ಯವು ಹೇತುವಿನೊಂದಿಗೆ ಹೇಳಲ್ಪಟ್ಟಿತು. ಇದಕ್ಕೆ ದೃಷ್ಟಾಂತವನ್ನು ಕೊಡುತ್ತಾರೆ—**ಶ್ರಮಣೀಯಥಾ** - ಶಬರಿಯ ಹಾಗೆ ; ಈ ದೃಷ್ಟಾಂತದಲ್ಲಿ ಶಬರಿಯು ಬೇಡರವಳಾಗಿ ಸ್ತ್ರೀಯಾಗಿಯೂ ಇರುವದರಿಂದ ಎರಡು ಕಾರಣಗಳಿಂದಲೂ ಉಪಾಸನಕ್ಕೆ ಅನರ್ಹಳು. ಹಾಗಾದರೆ ಇವಳು ಮೋಕ್ಷವನ್ನು ಹೊಂದಿದುದು ಹೇಗೆ? ಎಂದರೆ ಭಾಗವತ ಸಂಶ್ರಯಣದಿಂದ; ಮತಂಗಋಷಿಯಾದ ಭಾಗವತರನ್ನು ಆಶ್ರಯಿಸಿದುದರಿಂದ ; ಹಾಗೆಯೇ ಆಕೆಯು ಶ್ರೀ ರಾಮಚಂದ್ರಪ್ರಭುವಿನಲ್ಲಿ **"ಅಹಂತು ಪರಿಚಾರಿಣೀ"** ಎಂದು ಹೇಳಿಕೊಂಡಿರುತ್ತಾಳೆ. ಇವರಿಗೆಲ್ಲಾ ಹಿಂದೆ ಮಾಡಿದ ಉಪಾಸನಬಲದಿಂದಲೇ, ಪ್ರಾರಬ್ಧಕರ್ಮವಶಾತ್ ಹೀನ ಜನ್ಮ ಉಂಟಾದರೂ, ಮೋಕ್ಷವೆಂದು ಭಾವಿಸತಕ್ಕದ್ದು.

ಇಂತವರಿಗೂ ಕೂಡ ಮೋಕ್ಷವು ಕರಗತವಾಗಿರುವಾಗ, ಪುನಃ ಉಪಾಸನಾಧಿಕಾರಿಯಾಗುವದಕ್ಕೆ ಯೋಗ್ಯವಾದ ಬ್ರಾಹ್ಮಣ, ರಾಜರ್ಷಿ ಧರ್ಮಗಳು ಪ್ರಾಪ್ತನಾಗಿರುವವರಿಗೆ ಸಂದೇಹವೇನಿರುತ್ತದೆ ಎಂದು ಹೇಳುತ್ತಾರೆ, **ಪುಣ್ಯಾಃ** - ಸುಕೃತಶಾಲಿಗಳಾಗಿ, ಆ ಕಾರಣದಿಂದ; **ಬ್ರಾಹ್ಮಣಾಃ** - ಮುಂದಕ್ಕೆ ಭಕ್ತಿಯೋಗಕ್ಕೆ ಅನುಕೂಲವಿರುವ ಬ್ರಾಹ್ಮಣರ ಸತ್ಕುಲದಲ್ಲಿ ಹುಟ್ಟಿದವರೂ, **ತಥಾ** - ಹಾಗೆಯೇ, **ರಾಜರ್ಷಯಃ** - ಕ್ಷತ್ರಿಯ ಕುಲದಲ್ಲಿ ಹುಟ್ಟಿ ರಾಜರಾಗಿ ಋಷಿಗಳಹಾಗೆ ಅನುಷ್ಠಾನಪರರಾಗಿಯೂ ಇರುವವರೂ, **ಪರಾಂಗತಿಂ ಯಾಂತಿ** - ಮುಕ್ತಿಯನ್ನು ಹೊಂದುತ್ತಾರೆಂಬುದು, **ಕಿಂಪುನಃ** - ಹೇಳತಕ್ಕದ್ದೇನಿರುತ್ತದೆ. ಇಲ್ಲಿ **ರಾಜರ್ಷಯಃ** ಎಂದು ಹೇಳಿರುವದರಿಂದ ಅರ್ಜುನನಾದ ನಿನ್ನ ಮತ್ತು ಅಜಾತಶತ್ರುವಾದ ಧರ್ಮರಾಯ ಮೊದಲಾದವರ ವಿಷಯಗಳಲ್ಲಿ ಹೇಳತಕ್ಕದ್ದೇನಿರುತ್ತದೆಂಬ ಭಾವವೂ ತೋರಿಬರುತ್ತದೆ. ಅವರಿಗೆ ಮುಕ್ತಿಯೆಂಬುದು ಕೈಮುತಿಕನ್ಯಾಯಸಿದ್ಧವೆಂಬ ಭಾವವು **ಸ್ತ್ರೀ ವೈಶ್ಯ ಶೂದ್ರಾದಿಗಳು** ಅನಧಿಕಾರಿಗಳಾಗಿ (ವೈಶ್ಯರಲ್ಲಿ ಕೆಲವರಿಗೆ ಸೂತ್ರದಲ್ಲಿ ಅನಧಿಕಾರ ಹೇಳಿರುವದರಿಂದ) ಇದ್ದರೂ, ಸ್ವಧರ್ಮಾನುಷ್ಠಾನಗಳನ್ನು ಅನುಷ್ಠಿಸುವವರಾಗಿ, ಭಾಗವತಾಶ್ರಯಣವನ್ನು ಮಾಡಿ ಭಗವದ್ಭಜನಮೂಲಕವಾಗಿ ಹಿಂದಿನ ಯೋಗಬಲದಿಂದಲೇ ಮುಕ್ತಿಯನ್ನು ಹೊಂದುವಾಗ, ಸುಕೃತ ಪರಿಪಾಕದಿಂದ ಪುನಃ ಉಪಾಸನಾಧಿಕಾರಿಯಾಗಲು ಯೋಗ್ಯವಾದ ಬ್ರಾಹ್ಮಣ ಕ್ಷತ್ರಿಯ ಜನ್ಮಗಳನ್ನು ಹೊಂದಿದವರಿಗೆ ಮುಕ್ತಿಯುಂಟೆಂಬುದು ಕೈಮುತಿಕನ್ಯಾಯಸಿದ್ಧವೆಂಬ ಭಾವವು. ಉತ್ತರಾರ್ಧದಿಂದ ಈ ನ್ಯಾಯವನ್ನೇ ಅರ್ಜುನನಿಗೆ ಅನ್ವಯಿಸಿ, ನೀನೂ ಸುಕೃತಶಾಲಿಯಾಗಿ ರಾಜರ್ಷಿಯಾಗಿ ಹುಟ್ಟಿರುವೆ ; ಇಂತಹ ಅನುಕೂಲಗಳು ಪ್ರಾಪ್ತವಾಗುವದು ದುರ್ಲಭವು, ಇದೀಗ ಸುಸಮಯವು; ನಿನಗೆ ಈ ಲೋಕದ ಐಶ್ವರ್ಯ ಭೋಗಾದಿಗಳೆಲ್ಲವೂ ಅನಿತ್ಯವೆಂಬ, ದುಃಖಮಿಶ್ರವೆಂಬ, ಜ್ಞಾನವು ಉಂಟಾಗಿದೆ; ಇಂತಾದ್ದರಲ್ಲಿ ಆಶೆಯನ್ನು ಸಂಪೂರ್ಣವಾಗಿ ತೊರೆದು ಶಾಶ್ವತವಾಗಿ ನಿರತಿಶಯ ಸುಖರೂಪವಾದ ಮೋಕ್ಷವನ್ನು ಹೊಂದು ಎಂದೂ, ಇಂತಹ ಸುಸಮಯವನ್ನು ಕಳೆದುಕೊಳ್ಳಬೇಡವೆಂದೂ ಪರಮ ಸುಹೃತ್ತಿನ ರೂಪದಲ್ಲಿ ಉಪದೇಶಿಸುತ್ತಾರೆ— ಆ ಕಾರಣದಿಂದ, **ಅನಿತ್ಯಂ** - ಅಶಾಶ್ವತವಾದ, **ಅಸುಖಂ** - ಸುಖವೇ ಅಲ್ಲದ, **ಇಮಂ ಲೋಕಂ** - ಕರ್ಮ ಭೂಯಿಷ್ಠವಾಗಿ ದುಃಖಾಸಂಭಿನ್ನವಾದ, ಸುಖವೇ ಇಲ್ಲದಿರುವ, ನಿನಗೆ ಈ ವಿಷಯವು ಈಗ ಪ್ರತ್ಯಕ್ಷವಾಗಿ ತೋರುವದರಿಂದ, **ಈ ಲೋಕವನ್ನು**, **ಪ್ರಾಪ್ಯ** - ಹೊಂದಿ,

ಹೀಗಿರುವದರಿಂದಲೇ, **ಮಾಂ ಭಜಸ್ವ** - ನನ್ನನ್ನು, ಭಜನಮಾಡು, ಶಾಶ್ವತ ಸುಖಿಯಾಗು ಎಂದು, ಸಹಸ್ರ ಮಾತಾಪಿತೃಗಳು ಹೇಳುವ ಹಿತೋಕ್ತಿಗಿಂತಲೂ ಹಿತಕರವಾದ ಉಪದೇಶವನ್ನು ಮಾಡಿರುತ್ತಾರೆ. ಈ ಲೋಕವು ಅನಿತ್ಯವು, ಅಸುಖವು ಎಂದು ಹೇಳಿರುವದರಿಂದ ನಿತ್ಯವಿಭೂತಿಯು ಅನಿತ್ಯವಲ್ಲದೆ ಶಾಶ್ವತವೆಂದೂ, **ಅಸುಖವಿಲ್ಲದೆ** ದುಃಖಗಂಧವಿಲ್ಲವೆಂದೂ, ಆ ಆನಂದವೆಂತಾದ್ದೆಂದರೆ ಶ್ರುತಿಯೂಕೂಡ ಅದನ್ನು ಮೀಮಾಂಸೆ ಮಾಡಿ ಹೇಳಲು ಸಾಧ್ಯವಿಲ್ಲವೆಂದೂ ಹೇಳಿದಂತಾಯಿತು. **ಇಮಂ ಲೋಕಂ** - ಎಂದು ಯುದ್ಧ ರಂಗವನ್ನು ಬೆರಳಿನಿಂದ ತೋರಿಸುತ್ತಾ ಹೇಳಿದುದರಿಂದ, ದುರ್ಯೋಧನನು ತನಗೆ ರಾಜ್ಯವು ದಕ್ಕಿತು ಎಂಬುದು ನೀರಿನ ಗುಳ್ಳೆಯ ಪ್ರಾಯವೆಂದೂ, ಆತನಿಗೆ ಹೇಗೆ ಈಗ ನಾನಾರೂಪ ಅಸುಖಗಳು ಪ್ರಾಪ್ತವಾಗಿವೆ ಎಂಬುದನ್ನು ನೀನು ಪ್ರತ್ಯಕ್ಷದಿಂದಲೇ ನೋಡು ಎಂದು ಹೇಳಿದಂತಾಯಿತು. ನಿನಗೇನೇ ರಾಜ್ಯಪ್ರಾಪ್ತಿಯಾಗಿದ್ದುದು, ಅದೇ ಹೇಗೆ ಒಂದು ವ್ಯಾಜಮೂಲಕವಾಗಿ ಅಶಾಶ್ವತವಾಗಿ ನಿನಗೆ ತಪ್ಪಿಹೋಯಿತು, ಅದನ್ನು ಮನಸ್ಸಿನಲ್ಲಿಡು ; ಮತ್ತು ನೀನು ಏನೇನು ಅಸುಖಗಳನ್ನು ಅನುಭವಿಸಿದಿ ಎಂಬುದನ್ನು ಜ್ಞಾಪಿಸಿಕೋ. ಆದುದರಿಂದಲೇ, **ಅನಿತ್ಯ ಮಸುಖಂ ಇಮಂಲೋಕಂ** - ಈ ಲೋಕವು ನಂಬತಕ್ಕದ್ದಲ್ಲವು ; ಶಾಶ್ವತ ಲೋಕಕ್ಕಾಗಿ ಪ್ರಯತ್ನವನ್ನು ಮಾಡು ಎಂಬ ತಾತ್ಪರ್ಯವು **ಇಮಂ ಲೋಕಂ ಪ್ರಾಪ್ಯ** ಎಂಬುದರಿಂದ ಇನ್ನೊಂದು ಸ್ವಾರಸ್ಯಾರ್ಥವು ದ್ಯೋತಿತವು. ನೀನು ಈ ಲೋಕವನ್ನು ಹೊಂದಿರುವ, ಇತರ ತಿರ್ಯಕ್ ಸ್ಥಾವರಾದಿಗಳ ಹಾಗಲ್ಲದೆ ಮನುಷ್ಯ ಜನ್ಮವೂ, ಆ ಜನ್ಮದಲ್ಲೂ ರಾಜರ್ಷಿ ಜನ್ಮವೂ, ಪ್ರಾಪ್ತವಾಗಿರುವದು ಮಹಾ ಸುಕೃತ ಪರಿಪಾಕದ ಫಲವು. ಆದುದರಿಂದ ಈ ಲೋಕವನ್ನು ನೀನು ಹೊಂದಿರುವ ಈ ಅರ್ಜುನ ರೂಪವು, ಈ ಸಂಸಾರ ಸಾಗರವನ್ನು ದಾಟುವದಕ್ಕಾಗಿ ನಾನು ದಯಪಾಲಿಸಿರುವ, **ಕಾಯನೌಃ** -- ಈ ಶರೀರವೆಂಬ ಒಳ್ಳೇ ನಾವೆಯು, ಎಂದು ಭಾವಿಸು. ಇಂತಹ ಸುಸಮಯದಲ್ಲೇ ನೀನು, **ಭಜಸ್ವ ಮಾಂ** - ನನ್ನಲ್ಲಿ ಉಪಾಯಾನುಷ್ಠಾನವನ್ನು ಮಾಡಿ ಈ ಸಾಗರವನ್ನು ದಾಟಿಬಿಡು ಎಂಬ ಹಿತೋಪದೇಶವಾಗಿಯೂ ತೋರಿಬರುತ್ತದೆ. ಈ ಸಂದರ್ಭದಲ್ಲಿ ಭಾಗವತ ೨-೭-೪೬ ನೆಯ ಶ್ಲೋಕವು ಅನುಸಂಧೇಯವು. **ತೇವೈ ವಿದನ್ತ್ಯತಿತರನ್ತಿ ಚ ದೇವ ಮಾಯಾಂ ಸ್ತ್ರೀಶೂದ್ರ ಹೂಣ ಶಬರಾ ಅಪಿ ಪಾಪಜೀವಾಃ। ಯದ್ಯದ್ಭುತಕ್ರಮಪರಾಯಣಶೀಲ ಶಿಕ್ಷಾಸ್ತಿರ್ಯಗ್ಜನಾ ಅಪಿಕಿಮು ಶ್ರುತಧಾರಣಾ ಯೇ ॥** ಈ ಶ್ಲೋಕದಲ್ಲಿ ದಾಸನು ಮೇಲೆ ವಿವರಿಸಿದ ವಿಧವಾಗಿ ಎಂದರೆ ಪ್ರಪತ್ತಿಮೂಲಕವಾಗಿ, ಸ್ತ್ರೀ ಶೂದ್ರ ಹೂಣ ಶಬರರಾಗಿ ಪಾಪಜನ್ಮವನ್ನು ಹೊಂದಿದವರಿಗೆ ಬಹು ಸುಲಭವಾಗಿಯೂ ಪರಮ ಪದ ಉಂಟೆಂದು ಹೇಳಿರುತ್ತದೆ. ಸ್ತ್ರೀ ಶೂದ್ರಾದಿಗಳಿಗೆ **ಮಹಾಭಾಗವತ ಸಂಶ್ರಯಣದಿಂದಲೂ** ಮೋಕ್ಷ ಉಂಟೆಂದು **ಅದ್ಭುತ ಕ್ರಮ ಪರಾಯಣಶೀಲಶಿಕ್ಷಾಃ** ಎಂಬುದರಿಂದ ಹೇಳಲ್ಪಟ್ಟಿರುತ್ತದೆ. **ಅದ್ಭುತಕ್ರಮನು** ತ್ರಿವಿಕ್ರಮಾವತಾರಿಯಾದ ಶ್ರೀಮನ್ನಾರಾಯಣನು, ಆತನೇ **ಪರಾಯಣಂ** ಎಂದರೆ ಉತ್ಕೃಷ್ಟವಾದ ಪ್ರಾಪ್ಯನೂ ಪ್ರಾಪಕನೂ ಆಧಾರನೂ ಆಗಿ ವುಳ್ಳ ಮಹಾಭಾಗವತೋತ್ತಮರು, ಅವರ **ಶೀಲೆ** - ಆಚಾರದಲ್ಲಿ, **ಶಿಕ್ಷಾಃ** - ಶಿಕ್ಷೆಯುಳ್ಳ, ಸ್ತ್ರೀ ಶೂದ್ರಾದಿಗಳು, **ದೇವಮಾಯೆಯಾದ** ಪ್ರಕೃತಿಯನ್ನು ದಾಟಿ ಮುಕ್ತಿಯನ್ನು ಹೊಂದುವರೆಂಬ ಭಾವವು. ಈ ಪ್ರಪದನರೂಪವಾದ ಉಪಾಯವೂ ಸಹ ಈ ಶ್ಲೋಕದಲ್ಲಿ ಸೂಚಿತವೆಂಬುದು ಭಾಗವತೋತ್ತಮರ ಅಭಿಪ್ರಾಯವು. ಸ್ತ್ರೀ ಶೂದ್ರಾದಿಗಳಿಗೂ ಕೂಡ ಮೋಕ್ಷ ಉಂಟೆಂದು ಹೇಳಲ್ಪಟ್ಟಿತು. ಹೇಗೆ ಎಂಬುದಾಗಿ ಹೇಳಲ್ಪಡಲಿಲ್ಲವು. ಹೇಗೆ ಮೋಕ್ಷವು ಸಾಧ್ಯವೆಂಬುದನ್ನು ಊಹಿಸತಕ್ಕದ್ದಾಗಿರುತ್ತದೆ. **ಒಂದನೇಯದು** ಪೂರ್ವದಲ್ಲಿ ಉಪಾಸನಾಧಿಕಾರಿಗಳಾಗಿದ್ದು ಪ್ರಾರಬ್ಧವು ಕಳೆಯದೇ ಇದ್ದು

**ಭಾ. ಸ್ತ್ರಿಯೋ ವೈಶ್ಯಾ ಶ್ಶೂದ್ರಾಶ್ಚ ಪಾಪಯೋನಯೋಽಪಿ, ಮಾಂ ವ್ಯಪಾಶ್ರಿತ್ಯ ಪರಾಂಗತಿಂ ಯಾಂತಿ; ಕಿಂಪುನಃ ಪುಣ್ಯಯೋನಯೋ ಬ್ರಾಹ್ಮಣಾ ರಾಜರ್ಷಯಶ್ಚ ಮದ್ಭಕ್ತಿ ಮಾಸ್ಥಿತಾಃ? ಅತಸ್ತ್ವಂ ರಾಜರ್ಷಿರಸ್ಥಿರಂ ತಾಪತ್ರಯಾಭಿಹತತಯಾ ಅಸುಖಂ ಚೇಮಂ ಲೋಕಂ ಪ್ರಾಪ್ಯ ವರ್ತಮಾನೋ ಮಾಂ ಭಜಸ್ವ ||೩೨, ೩೩||**

ದರಿಂದ ಈಗ ಸ್ತ್ರೀ ಶೂದ್ರಾದಿ ಪಾಪಯೋನಿತ್ವ ಬಂದಿದೆಯೆಂದೂ ಊಹಿಸಬಹುದು. ಇದು ಪ್ರಕೃತಕ್ಕೆ ಅನುಗುಣವಾದ ಊಹೆಯು. ಇವರು ನಿಕೃಷ್ಟ ಜನ್ಮದಲ್ಲಿ ಹುಟ್ಟಿದ್ದರೂ ಉಪಾಸನವನ್ನೇ ಅವರು ಈಗಲೂ ಮಾಡಿ ಮೋಕ್ಷಹೊಂದಿದರೆಂಬ ವಾದವು ಮಾತ್ರ ಶಾಸ್ತ್ರ ವಿರುದ್ಧವು. **ಎರಡನೆಯದು.** ಅಥವಾ ಸ್ತ್ರೀ ಶೂದ್ರಾದಿಗಳು ಉಪಾಸನೆಗೆ ಅನಧಿಕಾರಿಗಳಾದುದರಿಂದ ಪ್ರಪತ್ತ್ಯನುಷ್ಠಾನವನ್ನು ಭಾಗವತ ಸಂಶ್ರಯಣ ಮೂಲಕ ಅನುಷ್ಠಿಸಬಹುದೆಂದೂ ಊಹಿಸಬಹುದು. ಇದೇ ಪ್ರಪತ್ತಿಮಾರ್ಗವು. ಸ್ತ್ರೀತ್ವ ಶಬರತ್ವರೂಪದಲ್ಲಿ ಪಾಪಜನ್ಮವೆನ್ನಿತ್ತಿದ ಶಬರಿಯು ಈ ಎರಡು ಉಪಾಯಗಳಲ್ಲಿ ಯಾವುದಾದರೂ ಒಂದಕ್ಕೆ ನಿದರ್ಶನವೆಂದು ಊಹಿಸಬಹುದು. ಹಿಂದೆ ಉಪಾಸನವನ್ನೂ ಮಾಡಿ ಪ್ರಾರಬ್ಧ ಕಳೆಯದೆ ಶಬರತ್ವವು ಬಂದಿರಬಹುದು; ಮತ್ತು ಈಗ ಮತಂಗಋಷಿಯನ್ನಾಶ್ರಯಿಸಿ, ಅವರು ಈಕೆಗಾಗಿ ಮಾಡಿದ ಶರಣಾಗತಿಯಿಂದ ಮೋಕ್ಷವುಂಟಾಗಿರಬಹುದು. ಹೀಗೆ ಎರಡು ಉಪಾಯಕ್ಕೂ ನಿದರ್ಶನವಾಗಬಹುದು. ಹೀಗಿರುವಾಗ ಪುಣ್ಯಜನ್ಮವನ್ನೆತ್ತಿ ಉಪಾಸನೆಗೆ ಅಧಿಕಾರವಿರುವ ಕುಲದಲ್ಲೇ ಹುಟ್ಟಿದ ಬ್ರಾಹ್ಮಣಾದಿಗಳಿಗೆ ಮೋಕ್ಷದಲ್ಲಿ ಸಂದೇಹವೆಲ್ಲಿಯದು ಎಂಬ ಭಾವವು ||೩೩||

**ಭಾಷ್ಯಾರ್ಥವು:**—ಹಿಂದೆ ಉತ್ತಮ ವರ್ಣದವನಾಗಿಯೇ ಉಪಾಸನಕ್ಕೆ ಅಧಿಕಾರವಿರುವ ಜನ್ಮದಲ್ಲಿರುವಾಗ, ದುರಾಚಾರ ಸಂಬಂಧವು ಹಿಂದೆಯಾಗಲಿ, ಅಥವಾ ನಿಕೃಷ್ಟಜನ್ಮದಲ್ಲಿಯಾಗಲಿ, ಉಂಟಾದರೂ ಅಂತವನಿಗೂ ಕೂಡ ನನ್ನನ್ನಾಶ್ರಯಿಸುವದರಿಂದ ಸದ್ಗತಿಯುಂಟೆಂದು ಹೇಳಿದರು. ಈಗ ಅಂತಹ ಭಕ್ತಿಯೋಗ ಸಂಬಂಧವಿರುವವನು ನಿಕೃಷ್ಟ ಜನ್ಮವನ್ನು ಪ್ರಾರಬ್ಧವಶಾತ್ ಹೊಂದಿ ಸ್ತ್ರೀ ವೈಶ್ಯ ಶೂದ್ರನಾದರೂ, ಆ ಯೋಗಬಲದಿಂದ ತನ್ನಲ್ಲಿ ಶರಣಾಗತಿಯನ್ನು ಮಾಡಿ ಮುಕ್ತಿ ಹೊಂದುವರೆಂದು, ಹಿಂದೆ **ಸಮೋಽಹಂ** ಎಂಬಲ್ಲಿ ಹೇಳಿದುದನ್ನೇ ಅನುವಾದ ಮಾಡಿ ಹೇಳುತ್ತಾರೆ—ಹೀಗಿರುವಾಗ ಅಂತಹ ಭಕ್ತಿಯೋಗ ಸಂಬಂಧವಿರುವನೇ ಪ್ರಸ ಉಪಾಸನೆಗೆ ಸಾಮರ್ಥ್ಯವೂ ಅಧಿಕಾರವೂ ವುಳ್ಳ ಬ್ರಾಹ್ಮಣ ಕ್ಷತ್ರಿಯರಾಗಿ ಹುಟ್ಟಿದರೆ, ಅವರುಗಳಿಗೆ ಪರಮಪದ ಪ್ರಾಪ್ತಿಯುಂಟೆಂದು ಹೇಳುವದು ನಿಸ್ಸಂದೇಹ ವಿಷಯವೆಂದು ಹೇಳುತ್ತಾರೆ. ಕೆಲವರು ಉತ್ಕೃಷ್ಟ ಜನ್ಮದಿಂದಲೇ ಮೋಕ್ಷವೇ ವಿನಾ, ನಿಕೃಷ್ಟ ಜನ್ಮದಿಂದ ಇಲ್ಲವೆನ್ನುವರು. ಆದರೆ ಶರಣಾಗತಿಯ ಮೂಲಕ ಆಶ್ರಯಣವು ಎಲ್ಲಾ ಜನ್ಮದವರಿಗೂ ಉಂಟೆಂದು ಈ ಶ್ಲೋಕಗಳೂ ಸ್ಥಾಪಿಸುತ್ತವೆ ಸ್ತ್ರೀಯರೂ ವೈಶ್ಯರೂ ಶೂದ್ರರೂ ಸಹ ಹೇಗೆ **ಪಾಪಯೋನಯೋಽಪಿ** - ಪಾಪ ಜನ್ಮವನ್ನು ಈಗ ಹೊಂದಿದವರಾದರೂ ಎಂದರೆ ಪಾಪಮೂಲಕವಾಗಿ ನಿಕೃಷ್ಟ ಜನ್ಮವನ್ನೆತ್ತಿದವರಾದರೂ, **ಮಾಂ ವ್ಯಪಾಶ್ರಿತ್ಯ** - ನನ್ನನ್ನು ವಿಶೇಷವಾಗಿ ಆಶ್ರಯಿಸಿ, ಶರಣಾಗತಿಯ ಮೂಲಕ ಆಶ್ರಯಿಸಿ, ಏಕೆಂದರೆ ಅವರು ನಿಕೃಷ್ಟಜಾತಿಯವರಾದುದರಿಂದ ಅವರಿಗೆ ಭಕ್ತಿಯೋಗದಲ್ಲಿ ಅಧಿಕಾರವಿಲ್ಲವು, **ಪರಾಂ ಗತಿಂ ಯಾಂತಿ** - ಶ್ರೇಷ್ಠವಾದ ಗತಿಯಾದ ಪರಮ ಪದವನ್ನು ಹೊಂದುತ್ತಾರೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯರಾದ ತ್ರೈವರ್ಣಿಕರಿಗೂ ವೇದದಲ್ಲೂ ಬ್ರಹ್ಮವಿದ್ಯೆಯಲ್ಲೂ ಅಧಿಕಾರ ಉಂಟೆಂಬ ಪ್ರಮಾಣಗಳಿವೆ. ಶಾರೀರಕ ಸೂತ್ರಗಳ ಅಪಶೂದ್ರಾಧಿಕರಣದಲ್ಲೂ ಇದು ಉಪಪಾದಿತವು. ಹೀಗಿರುವಾಗ **ಸ್ತ್ರಿಯೋವೈಶ್ಯಾಸ್ತಥಾಶೂದ್ರಾಃ** ವೈಶ್ಯರನ್ನು ಅನಧಿಕಾರ ಪಂಗಡಕ್ಕೆ ಸೇರಿಸಿರುವದು ಹೇಗೆ? ಎಂದರೆ ಸತ್ರಾದಿಗಳಲ್ಲಿ ಅವರಿಗೆ

ಅಧಿಕಾರವಿಲ್ಲದಿರುವದರಿಂದ ಹಾಗೆ ಕೆಲವು ವೈಶ್ಯರ ಗಣನೆಯು. ಇನ್ನು **ಪುಣ್ಯಯೋನಯಃ**- ಪುಣ್ಯಜನ್ಮಗಳನ್ನು ಹೊಂದಿದ ಬ್ರಾಹ್ಮಣರೂ ಮತ್ತು **ರಾಜರ್ಷಯಶ್ಚ** - ರಾಜರುಗಳಾಗಿದ್ದರೂ ಋಷಿಗಳಹಾಗೆ ಆಚಾರನಿಷ್ಠರಾಗಿರುವ ಕ್ಷತ್ರಿಯರೂ ಸಹ, **ಮದ್ಭಕ್ತಿ ಮಾಸ್ಥಿತಾಃ** - ನನ್ನಲ್ಲಿ ಸ್ಥಿರವಾದ ಭಕ್ತಿಯನ್ನು ಹೊಂದಿದವರಾಗಿ, ಯೋಗದಲ್ಲಿ ಪ್ರತಿಷ್ಠಿತರಾಗಿ ಅಂತಹ ಪರಾಂಗತಿ ಯನ್ನು ಹೊಂದುವರೆಂಬುದನ್ನು **ಕಿಂಪುನಃ** - ಹೇಳತಕ್ಕದ್ದೇನಿರುತ್ತದೆ. ಅದು ಕೈಮುತಿಕನ್ಯಾ ಯಸಿದ್ಧವೆಂಬ ಭಾವವು. **ಅತಃ** - ಆ ಕಾರಣದಿಂದ, **ತ್ವಂ** - ರಾಜರ್ಷಿಯಾದ ನೀನು ಅಸ್ಥಿರ ವಾಗಿಯೂ, **ತಾಪತ್ರಯಾಭಿಹತತಯಾ** - ಆಧಿಭೌತಿಕ, ಆಧಿದೈವಿಕ ಆಧ್ಯಾತ್ಮಗಳೆಂಬ ಮೂರು ವಿಧ ದುಃಖಗಳ ಹತಿ (ಹೊಡೆತ) ಇರುವದರಿಂದ, **ಅಸುಖಂಚ** - ಸುಖವಿಲ್ಲದಿರುವ, **ಇಮಂ ಲೋಕಂ ಪ್ರಾಪ್ಯ** - ಈ ಲೋಕವನ್ನು ಹೊಂದಿ ಎಂದರೆ ಇಲ್ಲಿ ಜನ್ಮವನ್ನೆತ್ತಿ, **ವರ್ತ ಮಾನಃ** - ಇರುವನಾದುದರಿಂದ, **ಮಾಂಭಜಸ್ವ** - ನನ್ನನ್ನು ಚನ್ನಾಗಿ ಉಪಾಸನಮೂಲಕ ವಾಗಲಿ ಅಥವಾ ಭರನ್ಯಾಸಮೂಲಕವಾಗಲಿ ವಿಹಿತಕರ್ಮಗಳೊಂದಿಗೆ ಆಶ್ರಯಿಸು ; ಏತಕ್ಕೆಂದರೆ ಅಸ್ಥಿರವಲ್ಲದೆ ಶಾಶ್ವತವಾಗಿಯೂ, ಅಸುಖವಲ್ಲದೆ ನಿರತಿಶಯಾನಂದ ರೂಪವಾಗಿಯೂ ಇರುವ ಮೋಕ್ಷವನ್ನು ಹೊಂದುವದಕ್ಕಾಗಿ ಎಂಬ ಭಾವವು. ಇಂತಹ ಬ್ರಹ್ಮವಿದ್ಯಾ ನಿಷ್ಠೆಯಲ್ಲಿ ಸೇರು ವದಕ್ಕೆ ಅರ್ಥಿತ್ವ ಸಾಮರ್ಥ್ಯಗಳು ಆವಶ್ಯಕವು. ರಾಜರ್ಷಿಯಾಗಿರುವದರಿಂದ ನಿನಗೆ ಅಧಿಕಾರ ರೂಪ ಸಾಮರ್ಥ್ಯವುಂಟು. **ಶಾಧಿಮಾಂ ತ್ವಾಂ ಪ್ರಪನ್ನಂ** ಎಂದು ಹೇಳಿಕೊಂಡಾಗಲೇ ಅರ್ಥಿತ್ವವುಂಟು. ಇವೆರಡೂ ಇರುವ ಸುಕೃತಿಯಾದುದರಿಂದ, **ಭಜಸ್ವಮಾಂ** ಎಂದು ಹೇಳಿ ಹಿತೋಪದೇಶವನ್ನು ಮಾಡಿರುತ್ತಾರೆ. ಈ ಉಪಾಯಾನುಷ್ಠಾನವು ಅರ್ಥಿತ್ವ ಸಾಮರ್ಥ್ಯಗಳೆ ರಡೂ ಇರುವ ಅರ್ಜುನನನ್ನು ಕುರಿತು ಉಪದೇಶಿಸುವ ವಿಷಯವಾದುದರಿಂದ ಗೀತೆಯಲ್ಲಿ ಭಕ್ತಿ ಯೋಗ ಶಬ್ದದಿಂದ ನಿರ್ದಿಷ್ಟವಾದ ಉಪಾಸನವು ಹೇಳಲ್ಪಟ್ಟಿತು. ಬ್ರಹ್ಮವಿದ್ಯೆಗೆ ಶರಣಾಗತಿಯು ಅಙ್ಗವಾಗಿ ೬ ನೆಯ ಅಧ್ಯಾಯದ ೧೪ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಹೀಗೆ ಉಪಾಸನೆಗೆ ಅಧಿಕಾರಿಯಲ್ಲದೆ ಸಾಮರ್ಥ್ಯವಿಲ್ಲದವರಿಗೆ ಮೋಕ್ಷವಿಲ್ಲವೋ ? ಎಂಬುದು ಇಲ್ಲಿ ಮುಖ್ಯವಾಗಿ ಉಂಟಾಗುವ ಶಂಕೆಯು. ಇಂತಹ ಸ್ತ್ರೀ ಶೂದ್ರಾದಿ ಚಂಡಾಲರಿಗೂ ಕೂಡ ಮೋಕ್ಷವು ಸ್ವಧರ್ಮಾನುಷ್ಠಾನ ಭಾಗವತ ಸಂಪ್ರಯಣಾದಿ ಸಹಕಾರಿಯುಕ್ತ ಉಪಾಯಾನುಷ್ಠಾನದಿಂದ ಸಿದ್ಧವೆಂಬುದು ಶ್ರುತಿ, ಸ್ಮೃತಿ, ಇತಿಹಾಸ ಸಮ್ಮತವು. ಆ ಉಪಾಯಾನುಷ್ಠಾನವು ಯಾವು ದೆಂದರೆ—(೧) ಅನುಕೂಲಸ್ಯ ಸಙ್ಕಲ್ಪವು. (೨) ಪ್ರಾತಿಕೂಲಸ್ಯ ವರ್ಜನವು, (೩) ರಕ್ಷಿಷ್ಯತೀತಿ ವಿಶ್ವಾಸವು, (೪) ಈ ಮೃತ್ಯುಸಂಸಾರ ಭೀತಿಯಿಂದ ರಕ್ಷಿಸು ಎಂಬ ಗೋಪ್ತೃತ್ವ ವರಣವು. (೫) ನನಗೆ ನಿನ್ನ ಬಿಟ್ಟರೆ ಇನ್ನು ಯಾರೂ ಗತಿಯಿಲ್ಲವೆಂಬ ಕಾರ್ಪಣ್ಯವು, ಹೀಗೆ ಈ ಐದು ಅಙ್ಗ ಗಳಿಂದ ಕೂಡಿ ತನ್ನ ಆತ್ಮವನ್ನು ಪರಮಾತ್ಮ ಚರಣದಲ್ಲಿ, ಸಮರ್ಪಿಸೋಣವು. ಇದನ್ನು ಒಬ್ಬ ಮಹಾಗುರುವನ್ನು ಆಶ್ರಯಿಸಿ ಆತನು ಹೇಳಿಕೊಟ್ಟ ಮಂತ್ರ ಪುರಸ್ಸರವಾಗಿ ಮಾಡತಕ್ಕದ್ದು. ಇದಕ್ಕೆ ಪ್ರಪದನ ಭರನ್ಯಾಸ ಪ್ರಪತ್ತಿ ಶರಣಾಗತಿ ಇತ್ಯಾದಿ ಹೆಸರುಗಳೂ ಉಂಟು. ಇಲ್ಲಿ ಶರಣಾ ಗತಿಯು ಅಙ್ಗವಲ್ಲವು ಅಂಗಿಯೇ. ಇದನ್ನು ಶ್ರೀ ದೇಶಿಕವರ್ಯರು **"ಅಂದಣರಂದಿಯರ್"** ಎಂಬ ಅಧಿಕಾರಸಙ್ಗ್ರಹ ಪಾಶುರದಲ್ಲೂ, **ಶ್ರೌತೀ ಸರ್ವಶರಣ್ಯತಾ ಸ್ಮೃತ್ಯಾಪಿ ಸತ್ಯಾಪಿತಾ- ಸತ್ಯಾದಿಷ್ವಿವ ನೈಗಮೇಷ್ವಧಿಕೃತಿಸ್ಸರ್ವಾಸ್ಪದೇಸತ್ಪಥೇ"** ಎಂಬ ಶ್ಲೋಕದಲ್ಲೂ ಉಪಪಾದಿಸಿ, ಈ ಪ್ರಪತ್ತಿ ಮಾರ್ಗದಲ್ಲಿ ಅಧಿಕಾರವು **ಸರ್ವಸ್ಯಶರಣಂ ಸುಹೃತ್** ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೂ, **"ಸರ್ವಲೋಕಶರಣ್ಯಾಯ ರಾಘವಾಯ ಮಹಾತ್ಮನೇ"** ಎಂಬ ಮಹರ್ಷಿ ವಾಕ್ಯದ ಹಾಗೂ, ಸರ್ವರಿಗೂ ಅಧಿಕಾರ ಉಂಟೆಂದು ಸ್ಥಾಪಿಸಿರುತ್ತಾರೆ. ಇದು ಕಠಶ್ರುತಿಯಲ್ಲೂ,

**ಭಾ. ಅವ. ಭಕ್ತಿಸ್ವರೂಪಮಾಹ—**

**ಮೂ. ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇ ವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ ॥ ೩೪.**

**ಇತಿ ಶ್ರೀ ಭಗವದ್ಗೀತಾ ಸೂಪನಿಷತ್ಸು ಪರಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ರಾಜವಿದ್ಯಾ ರಾಜಗುಹ್ಯಯೋಗೋನಾಮ ನವ ಮೋಧ್ಯಾಯಃ ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.**

ಪಾದ್ಮ ಪುರಾಣದಲ್ಲೂ, ಉಪಪಾದಿತವಾಗಿರುವ ದ್ವಯ ಮಂತ್ರದಲ್ಲೂ, **"ವಸುರಣ್ಯೇ ವಿಭೂರಸಿ"** ಎಂಬ ಮಂತ್ರದಲ್ಲೂ ಉಪಪಾದಿತವು. ಶ್ರೀಮದ್ರಾಮಾಯಣದಲ್ಲಿ ಈ ಅಂಗಿಯಾದ ಶರಣಾಗತಿಯ ಉಪಪಾದನೆಯೇ ನಾನಾವಿಧ ಫಲಗಳಿಗಾಗಿ ಪ್ರದರ್ಶಿಲ್ಪಟ್ಟಿರುತ್ತದೆ. ಅವರಲ್ಲಿ ವಿಭೀಷಣ, ಲಕ್ಷ್ಮಣ, ಇವರೇ ಮೊದಲಾದವರುಗಳಿಂದ ಮಾಡಲ್ಪಟ್ಟ ಶರಣಾಗತಿಯೇ ಮೋಕ್ಷಾರ್ಥ ಶರಣಾಗತಿಗಳು. ಆದುದರಿಂದ ಉಪಾಯಾನುಷ್ಠಾನಗಳು ಎರಡು ವಿಧವು, ಶಕ್ತರಿಗೆ ಭಕ್ತಿಮಾರ್ಗವೂ, ಅಶಕ್ತರಿಗೆ ಪ್ರಪತ್ತಿ ಎಂದೂ ತಿಳಿಯುವದು. ಹೀಗೆ ಈ ಸ್ತ್ರೀ ವೈಶ್ಯ ಶೂದ್ರಾದಿಗಳಿಗೆ ಭಕ್ತಿಮಾರ್ಗದಲ್ಲಿ ಅಧಿಕಾರವಿಲ್ಲದುದರಿಂದ ಒಬ್ಬ ಪರಮ ಗುರುವನ್ನು ಆಶ್ರಯಿಸಿ, ಆತನು ಅನುಷ್ಠಿಸುವ ಪ್ರಪದನದ ಮೂಲಕ ಮುಕ್ತಿಯನ್ನು ಅವರು ಹೊಂದುವರು ಎಂಬುದು ಶಾಸ್ತ್ರಾರ್ಥವು.

**ಭಾಷ್ಯಾವತಾರಿಕೆಯ ಅರ್ಥವು:—**ಇಷ್ಟು ಅಮೋಘ ಮಾಹಾತ್ಮ್ಯೆಯುಳ್ಳದು ಭಕ್ತಿಯೋಗವಾದುದರಿಂದ ಅದರ ಸ್ವರೂಪವೆಂಥಾದ್ದೆಂಬುದನ್ನು ಮುಂದಿನ ಶ್ಲೋಕದಿಂದ ಉಪಪಾದಿಸುತ್ತಾರೆ. ಈ ಮುಂದಿನ ಶ್ಲೋಕದ ಉಪದೇಶವೇ **ಗೀತೆಯ ಮುಖ್ಯೋಪದೇಶವು.** ಈ ಉಪದೇಶವೇ ಅಧ್ಯಾಯಾದಿಯಲ್ಲಿ **"ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ"** ಎಂದು ಬಹುವಾಗಿ ಶ್ಲಾಘಿಸಲ್ಪಟ್ಟ ರಹಸ್ಯೋಪದೇಶವು ; ಇದರ ಮಹಿಮೆಯನ್ನು ತಿಳಿಯದೆ ಅವಲಂಬಿಸದೆ **"ನಿವರ್ತಂತೇ ಮೃತ್ಯು ಸಂಸಾರವರ್ತ್ಮನಿ"** ಎಂದು ಪರಿತಾಪದಿಂದ ಹೇಳಲ್ಪಟ್ಟಿತು. ಇದು ಅಷ್ಟು ಮಹಿಮೆಯುಳ್ಳ ಉಪದೇಶವಾದುದರಿಂದ ಇಲ್ಲಿ ಗ್ರಂಥ ಮಧ್ಯದಲ್ಲೂ ಹೇಳಿರುದಲ್ಲದೆ, ಪುನಃ ೧೧ ನೆಯ ಅಧ್ಯಾಯಾಂತ್ಯದಲ್ಲಿ ಜ್ಞಾಪಿಸಿ, ಅಂತ್ಯದಲ್ಲೂ ನಿಗಮನರೂಪದಲ್ಲಿ ಇದನ್ನೇ ಪುನಃ ಅನುವಾದ ಮಾಡಿ ೧೮-೬೫ ನೆಯ ಶ್ಲೋಕದಲ್ಲಿ **"ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು"** ಎಂದು ಹಿತೋಪದೇಶವನ್ನು ಮಾಡಿರುತ್ತಾರೆ. ಆದುದರಿಂದ ಸಾರಭೂತವಾದ ಉಪದೇಶವು.

**ಮೂಲಕ್ಕೆ ಅರ್ಥವು:—**ಮಾನಸ, ವಾಚಿಕ, ಕಾಯಿಕ ರೂಪವ್ಯಾಪಾರಗಳೆಲ್ಲವೂ ಪ್ರಪನ್ನನಿಗೆ ನನ್ನ ಉದ್ದೇಶ್ಯವಾಗಿಯೇ ಆಗಿರಬೇಕೆಂದು ಉಪದೇಶಿಸುತ್ತಾರೆ—ಉಪಾಯಾನುಷ್ಠಾನವೂ ಅದಕ್ಕೆ ಸಹಕಾರಿಗಳಾಗುವ ನಿತ್ಯ ನೈಮಿತ್ತಿಕಾನುಷ್ಠಾನಗಳೂ ಸಹ, ಇವೇ ಪ್ರಪನ್ನನಿಗೆ ಮುಖ್ಯವಾದ ವ್ಯಾಪಾರಗಳು. ಇವುಗಳು ಭಗವಂತನನ್ನು ಕುರಿತು ಮಾಡಲ್ಪಟ್ಟಿರುವದರಿಂದ ಅವನಲ್ಲೇ ಆತನ ಪ್ರೀತ್ಯರ್ಥವಾಗಿ ಸಮರ್ಪಿಸತಕ್ಕದ್ದೆಂದು ಹೇಳುತ್ತಾರೆ. ಉಪಾಸನೆಯ **ಸ್ವರೂಪವು** ಹೇಳಲ್ಪಡುತ್ತದೆ. **ಮನ್ಮನಾಭವ -** ನೀನು ನನ್ನಲ್ಲೇ ಇಟ್ಟ ಮನಸ್ಸುಳ್ಳವನಾಗಬೇಕಾದರೆ ಇನ್ನು ಯಾವುದರಲ್ಲೂ ಮನಸ್ಸಿಡಕೂಡದೆಂದೂ ಹೇಳಿದಂತಾಯಿತು. ಮನಸ್ಸು ಆತನ ದಿವ್ಯಮಙ್ಗಳ ವಿಗ್ರಹವನ್ನೇ ಸಾಕ್ಷಾತ್ಕರಿಸುತ್ತಾ ಧ್ಯಾನಿಸುತ್ತಾ ಜನ್ಮಾವಧಿ ಪ್ರತಿದಿನವೂ ಇರತಕ್ಕದ್ದೆಂಬುದು ತಾತ್ಪರ್ಯವು. ಆ ದಿವ್ಯಮಂಗಳ ರೂಪವು ಧ್ಯಾನಕ್ಕೆ ಹೇಗಿರಬೇಕೆಂಬುದನ್ನು **ಶ್ರೀ ಭಾಷ್ಯಕಾರರು** ತಮ್ಮ ಭಾಷ್ಯದಲ್ಲಿ **ಬಹು ನಿಪುಣವಾಗಿ** ತೋರಿಸಿರುತ್ತಾರೆ. ಉಪಾಸನಕ್ಕೆ

ಆಲಂಬನವು ಆವಶ್ಯಕವು. ಆದುದರಿಂದ ಇಂತಹ ದಿವ್ಯ ಮಙ್ಗಳ ವಿಗ್ರಹವನ್ನೇ ಉಪಾಸಿಸ ತಕ್ಕದ್ದು ಎಂದು ಹೇಳಲ್ಪಟ್ಟಿತು. ಆದರೆ ಶ್ರೀ ಕೃಷ್ಣಭಗವಾನರವರು ತಮ್ಮ ದಿವ್ಯ ಮಙ್ಗಳ ವಿಗ್ರಹವನ್ನು ಕುರಿತು ಉಪದೇಶಿಸಬೇಡವೋ ? ಎಂದರೆ ಮುಂದೆ ೧೧ ನೆಯ ಅಧ್ಯಾಯದಲ್ಲಿ **"ಕಿರೀಟಿನಂಗದಿನಂ ಚಕ್ರಹಸ್ತಮ್"** ಎಂಬ ೪೬ ನೆಯ ಶ್ಲೋಕದಲ್ಲಿ ಆರೂಪವನ್ನು, ಅರ್ಜುನನೇ ಪ್ರಾರ್ಜ್ಞನಾಗಿ ತಿಳಿದಿರುವನಾದುದರಿಂದ, ಅದನ್ನೇ ತೋರಿಸು ಎಂದು ಪ್ರಾರ್ಥಿಸಲು ಅದನ್ನೇ ತೋರಿಸುತ್ತಾರೆ—ಆ ಅಧ್ಯಾಯದ ೪೯ ನೆಯ ಶ್ಲೋಕದಲ್ಲಿ **"ತದೇವಮೇ ರೂಪ ಮಿದಂ ಪ್ರಪಶ್ಯ** ಎಂಬ ಉಕ್ತಿಯಿಂದ ವ್ಯಕ್ತವು. ಇದೇ ತತ್ಕ್ರತುನ್ಯಾಯದ ಪ್ರಕಾರ ಉಪಾಸ್ಯ ರೂಪವು. ಇದೇ ಉಪೇಯರೂಪವಾದ ಪರವಾಸುದೇವ ರೂಪವು.

ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಪರಮಾತ್ಮನ ಉಪಾಸ್ಯರೂಪವು ವಿಧಿಸಲ್ಪಟ್ಟಿರುತ್ತದೆ. ಹಾಗೆಯೇ ಆತನ ಕಲ್ಯಾಣಗುಣಗಳ ಅನುಸಂಧಾನವೂ ವಿಧಿಸಲ್ಪಟ್ಟಿರುತ್ತದೆ. ಎಲ್ಲಿಯೂ ನಿರ್ಗುಣ ಬ್ರಹ್ಮ ಎಂದರೆ ಸರ್ವ ವಿಶೇಷರಹಿತ ಬ್ರಹ್ಮವನ್ನು ಉಪಾಸಿಸಬೇಕೆಂದು ಹೇಳಿರುವ ದಿಲ್ಲವು. ಈಗ **ಮನ್ಮನಾಭವ** ವೆಂದು ಉಪದೇಶಿಸುವ ಶ್ರೀ ಕೃಷ್ಣನೇ ಪರತತ್ವವಾಗಿ ಉಪದೇ ಶಿಸಿದರೆ, ಪರತತ್ವವು ಸಗುಣವೇ ಆಯಿತು. ಆತನು ನಿರ್ಗುಣನೇ ? ಈಗ ಸಗುಣವಾಗಿ ತೋರುತ್ತಾನೆಂದರೆ, ಸಗುಣತ್ವವು ಅಯಥಾರ್ಥವಾದ ಅವಸ್ಥೆ ಎಂದಾಯಿತು. ಅಂತಹ ಉಪಾಸನೆಯು ಹೇಗೆ ಉಪಾದೇಯವು? ಉಪಾಸನಕ್ಕೆ ದಿವ್ಯಮಙ್ಗಳ ವಿಗ್ರಹವು ಆವಶ್ಯಕವೆಂದು ಪುರುಷಸೂಕ್ತದಲ್ಲಿ **ಸಹಸ್ರಶೀರ್ಷಾದಿ** ವರ್ಣನೆಗಳಿಂದಲೂ **ಆದಿತ್ಯವರ್ಣಂ ತಮಸಃಪರ ಸ್ತಾತ್,** ಇತ್ಯಾದಿಗಳಿಂದಲೂ ದಿವ್ಯಮಙ್ಗಳ ವಿಗ್ರಹವನ್ನು ವರ್ಣಿಸಿ ಅನಂತರ **"ತಮೇವಂ ವಿದ್ವಾನ್ ಅಮೃತ ಇಹಭವತಿ"** ಎಂದು **ಏವಂ ವಿದ್ವಾನ್** ಎಂಬುದರಿಂದ ಉಪಾಯಾನುಷ್ಠಾನ ವನ್ನು ವಿಧಿಸಿ, **ನಾನ್ಯಃಪಂಥಾ ವಿದ್ಯತೇ ಅಯನಾಯ** ಎಂದು ಉಪಾಯಾನುಷ್ಠಾನವಿಲ್ಲದೆ ಮೋಕ್ಷಪ್ರಾಪ್ತಿಗೆ ಬೇರೇ ಮಾರ್ಗವಿಲ್ಲವೆಂದೂ ನಿಗಮನಮಾಡಿ ಶ್ರುತಿಯು ಹೇಳಿತು. ಆ ಪರಮ ಪುರುಷನು ಯಾರೆಂದರೆ **"ಸಹಸ್ರ ಶೀರ್ಷಂದೇವಂ"** ಎಂದಾರಂಭಿಸಿ ನಾರಾಯಣನೇ ಎಂದು ಹೇಳಿ, ಈ ನಾರಾಯಣನನ್ನು ಗೊತ್ತುಮಾಡುವದಕ್ಕೆ ಅಂಗವೇನೆಂದರೆ ಶ್ರೀಯಃಪತಿತ್ವ ವೆಂದು, **"ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂದು ಹೇಳಿರುವದರಿಂದ, ಧ್ಯಾನ ಪರಾಯಣರಾದ ಮಹರ್ಷಿಗಳೆಲ್ಲರೂ ಶ್ರೀಮನ್ನಾರಾಯಣನೇ ಧ್ಯೇಯ ವಸ್ತುವೆಂದು ಶ್ರೀಯಃಪತಿತ್ವದಿಂದ ತಿಳಿದು, ತಮ್ಮ ಮನಸ್ಸಿನಲ್ಲಿದ್ದ ಶಙ್ಕಾರೂಪ ಕಳಙ್ಕಗಳನ್ನೆಲ್ಲಾ ಕಳೆದುಕೊಂಡರೆಂದು ಹೇಳಲ್ಪಟ್ಟಿರು ತ್ತದೆ. ಬ್ರಹ್ಮವಿದ್ಯೆಗಳಲ್ಲೆಲ್ಲಾ ಉಪಾಸ್ಯದೇವತೆಯು ದಿವ್ಯ ಮಙ್ಗಳ ವಿಗ್ರಹವುಳ್ಳದೆಂದು ಹೇಳ ಲ್ಪಟ್ಟಿರುತ್ತದೆ. ಹೀಗಿರುವಾಗ ನಿರ್ಗುಣೋಪಾಸನೆಯನ್ನು ಹೇಗೆ ಕೆಲವರು ವಿಧಿಸುತ್ತಾರೋ ಮತ್ತು ಅಲ್ಲಿ ಸಾಕ್ಷಾತ್ಕಾರವು ತಾನೇ ಹೇಗೋ ತಿಳಿಯದು. ಉಪಾಸನೆಯಲ್ಲಿ, **ಮನ್ಮನಾ**ವಾಗ ಬೇಕು. ಮನಸ್ಸು ಆತನನ್ನು ಸಾಕ್ಷಾತ್ಕರಿಸಬೇಕು. ರೂಪವೇ ಇಲ್ಲದೆ ನಿರ್ಗುಣವಾದರೆ ಸಾಕ್ಷಾತ್ಕಾರವು ಹೇಗೆ ? ಆದುದರಿಂದ **ಮನ್ಮನಾಭವ** - ದಿವ್ಯಸ್ವರೂಪ ಮಙ್ಗಳವಿಗ್ರಹಯುಕ್ತ ನಾಗಿ ಕಲ್ಯಾಣಗುಣಾಕರನಾಗಿರುವ ನನ್ನಲ್ಲಿ ಯಾವಾಗಲೂ ಮನಸ್ಸುಳ್ಳವನಾಗು. ಒಂದು ಕ್ಷಣಮಾತ್ರ ಮನಸ್ಸಿಟ್ಟುಬಿಟ್ಟುದುದರಿಂದ **ಮನ್ಮನಾಭವ** ಎಂದು ಹೇಳಲಾಗುವದಿಲ್ಲವು, ಸತತ ಧ್ಯಾನವಿರಬೇಕೆಂದೇ **ಮನ್ಮನಾಭವ** ವೆಂಬ ಹಿತೋಪದೇಶವು. ಶ್ರೀಮದ್ಭಾಗವತದ ಎರಡನೆಯ ಸ್ಕಂದದ ಆದಿಯಲ್ಲಿ ಶ್ರೀ ಶುಕ ಮಹರ್ಷಿಯು ಯೋಗಿಗಳು ಮಾಡತಕ್ಕ ಕರ್ತವ್ಯಗಳೇನು ? ಅವರುಗಳಿಗೆ ಸಂಸಿದ್ಧಿಯು ಹೇಗೆ ಲಭಿಸುತ್ತದೆ ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವಾಗಿ ಉಪಾಸನಕ್ಕೆ ಬೇಕಾದ ಅಷ್ಟಾಂಗಗಳನ್ನೆಲ್ಲಾ ವಿಶದವಾಗಿ ಉಪದೇಶಿಸುವ ಸಂದರ್ಭದಲ್ಲಿ

**ಶುಭಾಶ್ರಯದಲ್ಲಿ** ಮನಸ್ಸನ್ನು ಸ್ಥಾಪನಮಾಡುವದೇ ಧಾರಣವೆಂದು, **"ಶುಭಾರ್ಥೇ ಧಾರಯೇದ್ಧಿಯಾ"** (೨. ೧. ೧೭.) ಎಂದು ಹೇಳಿರುತ್ತಾರೆ. **ಧ್ಯಾನ**ವನ್ನು ಹೇಳುವಾಗಲೂ, **ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ** ಎಂಬುದರಿಂದ ಆ ಶುಭಾಶ್ರಯದ ಒಂದೊಂದು ಅವಯವವನ್ನು ಏಕಾಗ್ರಚಿತ್ತದಿಂದ ಧ್ಯಾನಿಸಬೇಕೆಂದು ಹೇಳಿ, ಪುರುಷಸೂಕ್ತದಲ್ಲಿ ಹೇಳಿರುವ ಮೇರೆಗೆ ವಿಶ್ವರೂಪದಿವ್ಯ ಮಙ್ಗಳ ವಿಗ್ರಹದ ಧ್ಯಾನವನ್ನು ಪರೀಕ್ಷಿದ್ರಾಜನಿಗೆ ಉಪದೇಶಿಸುತ್ತಾರೆ. ಆಮೇಲೆ ಇಂತಹ ಉಪಾಸನೆಯು ಕಷ್ಟತರವಾದುದೆಂದು ಉಪದೇಶಿಸಿ ಉಪಾಸನೆಗೆ ಬೇಕಾದ ಶುಭಾಶ್ರಯದ ಬಾಹುಳ್ಯವನ್ನು ಹೇಳುವವರಾಗಿ, ಅನಂತರ ಹೃದಯಾಕಾಶದಲ್ಲಿ ಅಙ್ಗುಷ್ಠಮಾತ್ರ ಪುರುಷನಿದ್ದಾನೆಂದೂ **ಪ್ರಸನ್ನ ವಕ್ತ್ರಂ ನಲಿನಾಯತೇಕ್ಷಣಂ** ಎಂದಾರಂಭಿಸಿ, ದಿವ್ಯಮಙ್ಗಳ ವಿಗ್ರಹವನ್ನು ವರ್ಣಿಸಿರುತ್ತಾರೆ. ಒಂದೊಂದು ಅಙ್ಗವನ್ನು ಮೊದಲು ಧ್ಯಾನಿಸಿ ಅಭ್ಯಾಸಮಾಡಿಕೊಂಡು ಕೃತ್ಸ್ನ ಧ್ಯಾನಾಭ್ಯಾಸವನ್ನು ಅನಂತರ ಉಪದೇಶಿಸಿರುತ್ತಾರೆ. ಇದಾದ ನಂತರ **"ಆಪ್ರಯಾಣಾತ್"** ಎಂಬ ಬ್ರಹ್ಮ ಸೂತ್ರದಲ್ಲಿ ಹೇಳಿರುವಹಾಗೆ ಮರಣಾವಧಿ ಉಪಾಸಿಸಿ, **ಆತ್ಮಾನ ಮಾತ್ಮನ್ಯ ವಿರುಷ್ಯ** ಎಂದು ತನ್ನ ಆತ್ಮಾವನ್ನು ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದೆಂದು ಹೇಳಿ, ಈ ಉಪಾಯದಿಂದ **ಪರಂ ಪದಂ ವೈಷ್ಣವಂ** ಎಂದು ಹೇಳಿರುವದು ಲಭಿಸುತ್ತದೆಂದು ಮಹರ್ಷಿಯು ಉಪದೇಶಿಸಿ ಮುಗಿಸಿದರೇ ವಿನಾ, ತದನಂತರ ನಿರ್ಗುಣ ಬ್ರಹ್ಮೋಪಾಸನವನ್ನು ಮಾಡತಕ್ಕದ್ದೆಂದು ಅಲ್ಲಿ ಹೇಳಲಿಲ್ಲವು. ಆದುದರಿಂದ, ನಿರ್ಗುಣೋಪಾಸನವು ಸಾಧ್ಯವೇ ಇಲ್ಲವಾದುದರಿಂದ ವಿಧಿಸಲೇ ಇಲ್ಲವು. ಉಪಾಸನವು ಸಾಕ್ಷಾತ್ಕಾರವನ್ನೂ ಪರಬ್ರಹ್ಮರೂಪವನ್ನೂ, ಅಪೇಕ್ಷಿಸುತ್ತದೆ. ಶ್ರುತಿಯೂ ಕೂಡ, ಉಪಾಸನಕ್ಕೂ ಸಾಕ್ಷಾತ್ಕಾರಕ್ಕೂ ದಿವ್ಯಮಙ್ಗಳ ವಿಗ್ರಹವು ಆವಶ್ಯಕವೆಂದು **"ಯಮೇವೈಷವೃಣುತೇ ತೇನಲಭ್ಯಃ ತಸ್ಯೇಷ ಆತ್ಮಾವಿವೃಣುತೇ ತನೂಂ ಸ್ವಾಂ"** ಎಂಬಲ್ಲಿ **ತನೂಂ ಸ್ವಾಂ** ಎಂಬುದರಿಂದ ವ್ಯಕ್ತಪಡುತ್ತದೆ. ಹಾಗಾದರೆ **"ಯದಸ್ತೌಷೀರ್ಗುಣಮಯಂ ನಿರ್ಗುಣಂ ಮಾಮನು ವರ್ಣಯನ್"** ಎಂದು (ಭಾಗ. ೩.೯.೩೯.) ಶಾಸ್ತ್ರಗಳಲ್ಲಿ ಪರಬ್ರಹ್ಮನು ನಿರ್ಗುಣನು ಎಂದು ವಿಷ್ಣು ಸಹಸ್ರನಾಮದಲ್ಲೂ ಹೇಳಿದೆಯಲ್ಲಾ, ಅದರ ಅರ್ಥವೇನೆಂದರೆ ಹೇಯಗುಣ ರಹಿತನು, ಪ್ರಾಕೃತಗುಣರಹಿತನು, ಎಂಬ ಅರ್ಥವು ಈ ಪಾದ್ಮೋತ್ತರ ಅರ್ಥವನ್ನೇ ಕೆಲವು ಆಧುನಿಕ ಅದ್ವೈತ ಸಿದ್ಧಾಂತ ಶಿಖಾಮಣಿಗಳು ಒಪ್ಪಿಕೊಂಡಿರುತ್ತಾರೆ. **ಮದ್ಭಕ್ತೋಭವ**-ನನ್ನಲ್ಲಿ ನಿರತಿಶಯ ಪ್ರೀತಿಯುಕ್ತನಾಗು, ತೈಲಧಾರಾವಚ್ಛಿನ್ನ ಸಂತತ ಸ್ಮೃತಿರೂಪ ಧ್ಯಾನಪರನಾಗು ಎಂಬ ಭಾವವು. ಇಲ್ಲಿ ಭಕ್ತಶಬ್ದವನ್ನುಪಯೋಗಿಸಿದ್ದರೂ, ಜ್ಞಾನಿಯಾಗು ಎಂಬರ್ಥದಲ್ಲಿ ಉಪಯೋಗಿಸಿರುತ್ತಾರೆ; ಏಕೆಂದರೆ ಪ್ರಕರಣವು ಜ್ಞಾನಿಯ ಸಂಬಂಧವಾದುದಾದುದರಿಂದ, ಜ್ಞಾನಿ ಎಂದು ಹೇಳದೆ, ತೈಲಧಾರಾವಚ್ಛಿನ್ನ ಸಂತತ ನಿರತಿಶಯ ಪ್ರೀತಿಯನ್ನು ಇಲ್ಲಿ ಬೋಧಿಸುವದು ಆವಶ್ಯಕವಾದುದರಿಂದ. **ಮದ್ಭಕ್ತೋಭವ** ಎಂಬ ಪ್ರಯೋಗವು. **"ಪ್ರೀತಿರೂಪಮನುಧ್ಯಾನಂ ಭಕ್ತಿರಿತ್ಯಭಿಧೀಯತೇ"** ಎಂದು ಹೇಳಿರುವ ಪ್ರೀತಿ ವಿಶೇಷರೂಪ ಭಕ್ತಿಯನ್ನು ಹೊಂದಿರುವವನಲ್ಲವೇ **ಭಕ್ತನು.**

ಇಂತಹ ಉಪಾಸನೆಯನ್ನವಲಂಬಿಸು ಎಂದು ಹಿತರೂಪವಾದ ಉಪಾಯಾನುಷ್ಠಾನವನ್ನು ಬೋಧಿಸಿದರು. ಅದಕ್ಕೆ ಅಙ್ಗರೂಪವಾಗಿ ಉಪಾಸನಕ್ಕೆ ಅನುಗ್ರಾಹಕವಾಗಿ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಅನುಷ್ಠಿಸು ಎಂದು ಉಪದೇಶಿಸುತ್ತಾರೆ—ಇದನ್ನು ಹಿಂದೆಯೇ ಕೀರ್ತನ ಯತನ ನಮಸ್ಕಾರಾದಿಗಳಿಂದ ಹೇಳಿದ್ದರು; ಅದನ್ನೇ ಪುನಃ ಅನುವಾದಮಾಡಿ ಹೇಳುತ್ತಾರೆ.—**ಮದ್ಯಾಜೀಭವ** - ನನ್ನನ್ನುದ್ದೇಶಿಸಿಯೇ ನಿನಗೆ ಆಜ್ಞಾ ಕೈಂಕರ್ಯಗಳಾಗಿ ವಿಧಿಸಿರುವ ಸಂಧ್ಯಾವಂದನ ಬ್ರಹ್ಮಯಜ್ಞ, ಭಗವದಾರಾಧನ ವೈಶ್ವದೇವಾದಿ ಪಂಚಮಹಾಯಜ್ಞಗಳನ್ನು ಮಾಡು,

ಹೀಗೆ **ಮತ್ಪರಾಯಣೋಭವ** - ನಾನೇ ಶ್ರೇಷ್ಠವಾದ ಅಯನವೆಂದು ಭಾವಿಸು. ಅಯನ ಶಬ್ದಕ್ಕೆ ಧಾತುವ್ಯುತ್ಪತ್ತಿಯಿಂದ ಪ್ರಾಪಕನು, ಪ್ರಾಪ್ಯನು, ಆಧಾರನೂ ಎಂಬ ಅರ್ಥಗಳು. ಇದರಿಂದ ನಾನೇ ಪ್ರಾಪಕನೂ ಪ್ರಾಪ್ಯನೂ, ಆಧಾರನೆಂದು ಭಾವಿಸು; ಹೀಗೆ ನಿತ್ಯ ನೈಮಿತ್ತಿಕ ರೂಪ ಆಜ್ಞಾ ಕೈಂಕರ್ಯಗಳನ್ನು ಮಾಡು ಎಂದು ಹೇಳಿ, ಅನಂತರ **ಮಾಂ ನಮಸ್ಕುರು** - ನನ್ನನ್ನು ಕುರಿತು ನಮಸ್ಕಾರ ಮಾಡು ಎಂದು ಉಪದೇಶಿಸಿದರು. ಇದರಿಂದ ಅಜ್ಞ ಶರಣಾಗತಿಯನ್ನು ಮಾಡು ಎಂದು ಮುಖ್ಯವಾಗಿ ಹೇಳಿ, ಅನಂತರ ಪ್ರತಿದಿನವೂ ಅದನ್ನು ಅನುಸಂಧಾನವನ್ನು ಮಾಡತಕ್ಕದ್ದು. ಈ ಅಜ್ಞವು ಮುಖ್ಯವಾದುದು; ಇಷ್ಟು ಮಾಡಿದುದೂ ಕೈಗೂಡಬೇಕಾದರೆ, **"ತಸ್ಯಚ ವಶೀಕರಣಂ ತಚ್ಛರಣಾಗತಿರೇವ"** ಎಂಬ ಅಮೋಘೋಕ್ತಿಗನುಸಾರವಾಗಿ **ನಮಸ್ಕುರು** ಎಂಬುದರಿಂದ ಭಗವಂತನ ಶರಣಾಗತಿಯು ವಿಧಿಸಲ್ಪಟ್ಟಿತು. ಒಂದೆ ಎಲ್ಲಾ **ಉಪಾಸನ** ಭಕ್ತಿ **ಯಜನ** ಮುಂತಾದವುಗಳನ್ನೆಲ್ಲಾ **ಭವ** ಎಂಬ ಸಾಮಾನ್ಯ ಕ್ರಿಯೆಯಿಂದ ಹೇಳಿ, **ನಮಸ್ಕುರು** ಎಂಬಲ್ಲಿ ಕುರು ಎಂಬ ಭಿನ್ನ ಕ್ರಿಯೆಯನ್ನು ಉಪಯೋಗಿಸಿರುವುದರಿಂದಲೇ ಈ ಅರ್ಥವು ವ್ಯಕ್ತವು. **ನಮಃ** ಎಂಬ **ಶಬ್ದವು** ಬರೀ ಪ್ರಣಾಮರೂಪ ಅರ್ಥವೆಂದು ಹೇಳಿದರೆ ಸ್ವಾರಸ್ಯಕ್ಕೆ ಕುಂದಕವು. ನಮಸ್ಸು ಎರಡು ವಿಧವು (೧) ಅಖಂಡ ನಮಸ್ಸು (೨) ಸಖಂಡ ನಮಸ್ಸು ಎಂಬುದಾಗಿ. ಅಖಂಡ ನಮಸ್ಸಿನಿಂದ ರಕ್ಷಣೋಪಾಯವು ಶಿಕ್ಷಿಸಲ್ಪಟ್ಟಿತು; ಅದು ಶರಣಾಗತಿಯೇ ಎಂದು ಮಾರ್ಕಂಡೇಯ ಮಹರ್ಷಿಯು ದ್ರೌಪದೀ ಸಹಿತ ಪಂಚಪಾಂಡವರಿಗೂ ಉಪದೇಶಿಸಿರುತ್ತಾರೆ. **"ಯಸ್ಸದೇವೋಮಯಾದೃಷ್ಟಃ ಪುರಾಪದ್ಮಾಯತೇಕ್ಷಣಃ। ಸ ಏಷ ಪುರುಷವ್ಯಾಘ್ರ ಸ್ಸಂಬಂಧೀ ತೇ ಜನಾರ್ದನಃ"** (ಭಾರ. ವನ. ೧೯೨ ೫೬) ನನಗೆ ಒಂದೆ ಸೇವೆಯನ್ನಿತ್ತ ಪುಂಡರೀಕಾಕ್ಷನೇ ಈ ಶ್ರೀಕೃಷ್ಣನು, ಈಗ ನಿನಗೆ ಬಂಧುವೆನಿಸಿರುವನು, ಅದು ಹೇಗೆ ನಿರ್ಧರಿಸಿ ಹೇಳುವೆ ಎಂದು ಕೇಳುತ್ತೀಯೋ; ಶ್ರುತಿಪ್ರತಿಪಾದ್ಯವಾದ ಪುಂಡರೀಕಾಕ್ಷಗಳೇ ಸಾಕ್ಷಿಯು ಎಂದು **ಪದ್ಮಾಯತೇಕ್ಷಣಃ** ಎಂಬ ಪ್ರಯೋಗವು. ಯೋಗಿಗಳ ಮನಸ್ಸನ್ನು ಪಹರಿಸುವ ಶ್ರೀ ಕೃಷ್ಣನ ಕಣ್ಣುಗಳೇ, ಆತನು ಜನಾರ್ದನೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತವೆ ಎನ್ನುತ್ತಾರೆ. ಹೀಗೆ ಹೇಳಿ ಮಹರ್ಷಿಯು ಪರಮ ಹಿತೋಪದೇಶವನ್ನು ಮಾಡುತ್ತಾರೆ - **"ಸರ್ವೇಷಾ ಮೇವ ಲೋಕಾನಾಂ ಪಿತಾ ಮಾತಾ ಚ ಮಾಧವಃ। ಗಚ್ಛಧ್ವ ಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ"** ಓ ಪುರುಷ ಶ್ರೇಷ್ಠರಾದ ಕುಂತೀ ಕುಮಾರರುಗಳೇ ಈ ಶರಣ್ಯನಾದ, ಶ್ರೀಕೃಷ್ಣನನ್ನು ಶರಣು ಹೊಂದಿರಿ ಎಂದು ಆಜ್ಞಾಪಿಸಲು, ಆಗ ಮಹರ್ಷಿವಾಕ್ಯವನ್ನು ಕೈಕೊಂಡು **"ಏವ ಮುಕ್ತಾ ಸ್ತ್ರಯಃ ಪಾರ್ಥಾಃ ಯಮೌಚ ಭರತರ್ಷಭಾ। ದ್ರೌಪದ್ಯಾ ಸಹಿತಾ ಸ್ಸರ್ವೇನಮಶ್ಚಕ್ರು ರ್ಜನಾರ್ದನಂ** (ಭಾರ. ವನ. ೧೯೨. ೫೬.) ಧರ್ಮರಾಜ ಭೀಮಾರ್ಜುನರು ಮೂವ್ವರೂ, ನಕುಲ ಸಹದೇವರಾದ ಯಮಳರೂ, ದ್ರೌಪದಿಯೊಂದಿಗೆ ಶ್ರೀಕೃಷ್ಣನ ಸನ್ನಿಧಿಯಲ್ಲಿ **ನಮಶ್ಚಕ್ರುಃ** ಶರಣಾಗತಿಯನ್ನು ಮಾಡಿದರು ಎಂಬರ್ಥವು. ಇದು **ಅಖಂಡ** ನಮಸ್ಸಿನ ಅರ್ಥವು. ಸಖಂಡ ನಮಸ್ಸಾದರೆ **ಮಃ ನ** ಎಂದಾಗುವುದರಿಂದ ಸ್ವರಕ್ಷಣೆಯಲ್ಲಿ ತನಗೆ ಅನ್ವಯವಿಲ್ಲವೆಂದೂ ತಾನು ಸರ್ವೇಶ್ವರನಿಗೇನೇ ಶೇಷಭೂತನು ಇತ್ಯಾದಿ ಅರ್ಥಗಳು ತೋರಿಬರುತ್ತವೆ. ಇನ್ನೂ ಅನೇಕಭಾವಗಳು **ನಮಸ್ಕುರು** ಎಂಬುದರಿಂದ ತೋರಿಬರುತ್ತವೆ. ಗ್ರಂಥ ವಿಸ್ತರಭಯದಿಂದ ನಿಲ್ಲಿಸಬೇಕಾಗಿದೆ. ಆದುದರಿಂದ **ನಮಸ್ಕುರು** ಎಂದರೆ ನನ್ನನ್ನೇ **ಶರಣುಹೊಂದು** ಎಂಬುದೇ ಅರ್ಥವು. ನಮಶ್ಶಬ್ದದಿಂದ ತೋರುವ ಎಲ್ಲಾ ಅರ್ಥಗಳ ವಿವರಣೆಯು ದಾಸನು ಬರೆದಿರುವ ಮೂಲಮಂತ್ರಾಧಿಕಾರದ ವ್ಯಾಖ್ಯಾನದಲ್ಲಿ ದೊರೆಯುತ್ತದೆ. ಹೀಗೆ ಅರ್ಥವನ್ನು ಹೇಳದೆ ಬರೀ ಕಾಯಿಕ ಸಾಷ್ಟಾಂಗ ಪ್ರಣಾಮವೆಂದು ಇಷ್ಟು ಮಾತ್ರವೇ

**ಭಾ. ಮನ್ಮನಾಭವ ಮಯಿಸರ್ವೇಶ್ವರೇಶ್ವರೇ ನಿಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನೇ ನಮ** ಶಬ್ದಕ್ಕೆ ಅರ್ಥಮಾಡಿದರೆ, **ಮದ್ಯಾಜೀಭವ** ಎಂಬುದರಲ್ಲೇ ಭಗವದಾರಾಧನೆ ನಮಸ್ಕಾರಾದಿಗಳೆಲ್ಲಾ ಅಂತರ್ಗತವಾಗಿರುವಾಗ, ಬೇರೇ **ನಮಸ್ಕುರು** ಎಂಬ ಪ್ರಯೋಗಕ್ಕೆ ಸಾರ್ಥಕ್ಯವೇನೆಂದರೆ ಉತ್ತರವಿಲ್ಲವಾಗುತ್ತದೆ. ವಾಲ್ಮೀಕಿ ಮಹರ್ಷಿಯೂ **"ನಿಪಪಾತ ವಿಭೀಷಣಃ ಪಾದಯೋಶ್ಶರಣಾನ್ವೇಷೀ"** ಎಂದು ಹೇಳಿರುವದರಿಂದ, ಜ್ಞಾನಿಯ ದಂಡವತ್ಪ್ರಣಾಮವು ಶರಣ್ಯನ ಪಾದದಲ್ಲಿ ಶರಣವನ್ನಪೇಕ್ಷಿಸುವನಾಗಿ ಬೀಳುವದು ಎಂದೇ ಅಭಿಪ್ರಾಯಪಟ್ಟಿರುತ್ತಾರೆ. **ಏವಂ** - ಹೀಗೆ **ಆತ್ಮಾನಂ ಯುಕ್ತ್ವಾ** - ಮನಸ್ಸನ್ನು ನನ್ನಲ್ಲೇ ಸದಾ ಸೇರಿಸುವನಾದರೆ, **ಮಾಮೇವೈಷ್ಯಸಿ** - ನನ್ನನ್ನೇ ಪ್ರಾಪ್ಯವಾಗಿ ಹೊಂದುತ್ತೀಯೆ. ಅವಧಾರಣದಿಂದ ಈ ವಿಷಯದಲ್ಲಿ ನಿನಗೆ ಈಷದಪಿ ಸಂದೇಹವು ಬೇಡ ಎಂಬ ಭಾವವು. ಅನೇಕ ಜನ್ಮಾರ್ಜಿತ ಪುಣ್ಯಪಾಪರೂಪ ಕರ್ಮಬಂಧದಿಂದ ವಿಮೋಚನೆಯುಂಟೇ ಎಂದು ನೀನು ಸ್ವಲ್ಪವೂ ಶಂಕಿಸಬೇಡವೆಂಬ ತಾತ್ಪರ್ಯವು. ಇಲ್ಲಿ **ಏವಂ ಆತ್ಮಾನಂ ಯುಕ್ತ್ವಾ** ಎಂದಿರುವದರಿಂದ ಉಪಾಸನದಲ್ಲಿ ಮನಸ್ಸು ಪರಮಾತ್ಮನಲ್ಲೇ ನಿಲ್ಲಿಸುವದು ಮುಖ್ಯವಾದುದರಿಂದ, ಹಾಗೆ ಅರ್ಥಮಾಡುವದೇ ಸಮಂಜಸವು. ಆದರೆ **ನಮಸ್ಕುರು** ಎಂಬುದಕ್ಕೆ ಹಿಂದೆ ಸತತ ಕೀರ್ತನ ಯತನ ನಮಸ್ಕಾರಾದಿಗಳು ಬೋಧಿತಗಳಾಗಿರುವದರಿಂದ ಅವುಗಳ ಅನುವಾದವಾಗಿ **ನಮಸ್ಕುರು** ಪ್ರಹ್ವೀಭಾವರೂಪ ಪ್ರಣಾಮವನ್ನು ಹೇಳುವದೇ ಯುಕ್ತವೆಂದರೆ, ಆಗ **ಏವಂ** ಎಂದರೆ ಮನ್ಮನಾಭವನಾಗಿ, ಮದ್ಯಾಜಿ ಮುಂತಾದ್ದು ಆಗಿ, ಮತ್ಪರಾಯಣನೂ ಆಗಿ **ಆತ್ಮಾನಂ ಯುಕ್ತ್ವಾ** - ನಿನ್ನ ಆತ್ಮಾವನ್ನು ಸೇರಿಸಿ, ಎಲ್ಲಿ ಸೇರಿಸಿ ಎಂದರೆ **ಓಮಿತ್ಯಾತ್ಮಾನಂ ಯುಂಜೀತ** (ತೈ. ನಾರಾ.) ಎಂದು ಶ್ರುತಿಯಲ್ಲೂ ಹಾಗೆಯೇ ಸುಮ್ಮನೇ **ಯುಂಜೀತ** ಎಂದು ವಿಧಿಸಿದ್ದರೂ, ಪರಮಾತ್ಮನಲ್ಲಿ **ಯುಂಜೀತ** ಎಂಬರ್ಥವು ಹೇಗೋ, ಹಾಗೆಯೇ ಇಲ್ಲೂ. ಆತನ ಪಾದಾರವಿಂದದಲ್ಲಿ ಸಮರ್ಪಿಸಿ ಶರಣಾಗತಿಯನ್ನು ಮಾಡು ಎಂದರ್ಥಮಾಡತಕ್ಕದ್ದು ಹೇಗೆ ನ್ಯಾಯವೋ, ಹಾಗೆಯೇ **ಆತ್ಮಾನಂ ಯುಕ್ತ್ವಾ** ಎಂದರೆ ನಿನ್ನ ಆತ್ಮಾವನ್ನು ನನ್ನ ಪಾದಾರವಿಂದದಲ್ಲಿ ಸಮರ್ಪಿಸಿ ಅಥವಾ ಶರಣಾಗತಿಯನ್ನು ಮಾಡಿದುದಾದರೆ, **ಮಾಮೇವೈಷ್ಯಸಿ** - ನನ್ನನ್ನು **ಹೊಂದು**ವೆ, ಸಂದೇಹವಿಲ್ಲವು, ಎಂದಾದರೂ ಅರ್ಥಮಾಡಬಹುದು. **ಮನ್ಮನಾಭವ, ಮದ್ಭಕ್ತಃ**, ಇವುಗಳಿಂದಲೇ ಮನಸ್ಸನ್ನು ಶ್ರೀ ಕೃಷ್ಣನಲ್ಲೇ ನಿಲ್ಲಿಸತಕ್ಕದ್ದೆಂದು ಹೇಳಿದನಂತರ, **ಆತ್ಮಾನಂ ಯುಕ್ತ್ವಾ** ಪುನಃ ಮನಸ್ಸನ್ನು ಸೇರಿಸಿ ಎಂದು ಹೇಳುವದಕ್ಕೆ ಬದಲಾಗಿ ನಿನ್ನ ಆತ್ಮವನ್ನು ನನ್ನಲ್ಲಿ ಸೇರಿಸಿ ಎಂದು ಅರ್ಥಮಾಡಿದರೂ ಸಮಂಜಸವೇ ಆಗುತ್ತದೆ. ಶ್ರೀ ಭಾಷ್ಯಕಾರರು, **"ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ"** ಆತನನ್ನು ವಶಮಾಡಿಕೊಡುವದು ಆತನಲ್ಲಿ ಅನುಷ್ಠಿಸಿದ ಶರಣಾಗತಿಯೇ ವಿನಾ ಬೇರೆ ಇಲ್ಲವೆಂದು ಹೇಳಿರುವದರಿಂದ, ಈ ರಾಜಗುಹ್ಯವಾದ ಉಪಾಯವಾದ ಉಪಾಸನಕ್ಕೆ ಈ ಶರಣಾಗತಿಯು ಮುಖ್ಯಾಂಗವು ಎಂದು ತಿಳಿಯತಕ್ಕದ್ದು.

**ಭಾಷ್ಯಾರ್ಥವು:**—ಹಿಂದಿನ ಶ್ಲೋಕದಲ್ಲಿ **ಭಜಸ್ವಮಾಂ** - ನನ್ನನ್ನು ಧ್ಯಾನಿಸು ಉಪಾಸಿಸು ಎಂದು ಹಿಂದೆ ವಿಧಿಸಲ್ಪಟ್ಟಿರುವದರಿಂದ, ಆ ಉಪಾಸನವನ್ನು ಹೇಗೆ ಮಾಡತಕ್ಕದ್ದು, ಅದರ ಸ್ವರೂಪವೆಂತಾದ್ದೆಂಬುದನ್ನು ತಿಳಿಸುತ್ತಾರೆಂಬುದು ಸಙ್ಗತಿಯು. **ಮನ್ಮನಾಭವ** - ಮನಸ್ಸನ್ನು ನನ್ನಲ್ಲೇ ಇಡುವನಾಗು, ಹೀಗೆ ನನ್ನಲ್ಲಿ ಮನಸ್ಸನ್ನಿಡಲು ಶುಭಾಶ್ರಯವು ಆವಶ್ಯಕವಾಗಿ ಅದು **ಮಯಿ** ಎಂಬ ಶಬ್ದದಿಂದ ತೋರಿಬರುವದರಿಂದ, ಅಂತಹ ಉಪಾಸ್ಯ ದೇವತೆಯಾಗಿ ಪರತತ್ವವಾದ ಆತನ ಸ್ವರೂಪ ರೂಪಗುಣಾದಿಗಳನ್ನು ವಿವರಿಸಿ ಹೇಳುತ್ತಾರೆ. **ಮಯಿ** ಎಂಬ ಸರ್ವನಾಮ ಶಬ್ದದಿಂದ ಉಪಾಸನಾರ್ಹನಾಗಿರುವ ನಾನು ಎಂತಹವನೆಂದರೆ **ಸರ್ವೇಶ್ವರೇಶ್ವರೇ** -

**ಭಾ. ಸರ್ವಜ್ಞೇ, ಸತ್ಯಸಙ್ಕಲ್ಪೇ, ನಿಖಿಲಜಗದೇಕ ಕಾರಣೇ, ಪರಸ್ಮಿನ್ ಬ್ರಹ್ಮಣಿ, ಪುರು**

ಅನೇಕ ಲೋಕನಾಯಕರುಗಳಿಗೂ ಈಶ್ವರನಾಗಿ ನಿಯಾಮಕನಾಗಿರುವ, ಈಶ್ವರತ್ವಕ್ಕೆ ಬೇಕಾದ ಧರ್ಮಗಳು ಯಾವುವೆಂಬುದು ಮುಂದೆ ೧೫ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತವೆ. ಸರ್ವವನ್ನೂ ವ್ಯಾಪಿಸುವದು, ಸರ್ವವನ್ನೂ ಭರಿಸುವದು, ಸರ್ವವನ್ನೂ ನಿಯಮಿಸುವದೂ ಈ ಮೂರು ಧರ್ಮಗಳೂ ಇರಬೇಕು. **ಸರ್ವೇಶ್ವರೇಶ್ವರೇ** ಎಂಬ ಪ್ರಯೋಗವು. **"ತಮೀಶ್ವರಾಣಾಂ ಪರಮಂ ಮಹೇಶ್ವರಂ"** (ಶ್ವೇ.೬ ೭.) **"ನತಸ್ಯೇಶೇಕಶ್ಚನ"** (ತೈ.ನಾ.೧.೯.) "ಆತನಿಗೆ ನಿಯಾಮಕರಾಗಿ ಈಶರು ಯಾರೂ ಇಲ್ಲವು, ಅವನೇ ಸರ್ವೇಶ್ವರನು," ಇತ್ಯಾದಿ ಪ್ರಮಾಣಗಳನ್ನು ಸೂಚಿಸುತ್ತವೆ. ಇದರಿಂದ ಈಶ್ವರಲ್ಲದ ಬ್ರಹ್ಮರುದ್ರೇಂದ್ರಾದಿಗಳು ಮೋಕ್ಷಪ್ರದಾನ ವಿಷಯದಲ್ಲಿ ಅಶಕ್ತರೆಂಬುದೂ ಸೂಚಿತವು. ಒಂದೊಂದುಅಂಡದ ಸೃಷ್ಟಿಲಯಗಳಿಗೆ ಈಶ್ವರರಾದವರು ಇವರು. ಬೇರೆಅಂಡಗಳನ್ನು ನಿಯಮನಮಾಡಲು ಶಕ್ತರಲ್ಲವು, ಇಂತವರು ಮೋಕ್ಷಕೊಡುವ ಶಕ್ತಿಯುಳ್ಳವರೇ? ಅವರುಗಳಿಗೇ ಇನ್ನೂ ಮೋಕ್ಷವಿಲ್ಲದೆ ಜೀವಕೋಟಿಗೆ ಸೇರಿದವರಾಗಿ ಸುಕೃತ ಪರಿಪಾಕದಿಂದ ಆಧಿಪತ್ಯವನ್ನು ಪರಮಾತ್ಮನಿಂದ ಪಡೆದವರು. ತಮಗೇನೇ ಇನ್ನೂ ಪ್ರಾಪ್ತವಾಗದ ಮೋಕ್ಷವನ್ನು ಅವರು ಹೇಗೆ ಇತರರಿಗೆ ಕೊಡಲು ಸಮರ್ಥರಾದಾರು? ಆದುದರಿಂದಲೇ **ಸರ್ವೇಶ್ವರೇಶ್ವರೇ** ಎಂಬ ಪ್ರಯೋಗವು. ಮುಂದೆ ಈತನೇ **ಪರಬ್ರಹ್ಮನು ಪುರುಷೋತ್ತಮ**ನೆಂದು ಹೇಳಲ್ಪಡುತ್ತದೆ. ಮತ್ತು ಉಪಾಸ್ಯನು ಇನ್ನು ಎಂತವನಾಗಿರಬೇಕೆಂದರೆ **ನಿಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನೇ**—ಸಮಸ್ತ ದೋಷಗಳ ಲವಲೇಶವೂ ಇರದೆ ಕಲ್ಯಾಣಗುಣಗಳಿಗೆ ಆಕರನಾಗಿರಬೇಕು, ಉಪಾಸ್ಯ ದೇವತೆಯು ಉಭಯಲಿಙ್ಗವುಳ್ಳದ್ದಾಗಿರಬೇಕು, ಎಂದು ಶಾರೀರಕ ಸೂತ್ರ **"ನಸ್ಥಾನತೋಽಪಿ ಪರಸ್ಯೋಭಯಲಿಙ್ಗಂ ಸರ್ವತ್ರಹಿ"** (ಶಾರೀ. ೩. ೨. ೧೧) ಎಂಬಲ್ಲಿ ಉಪಪಾದಿತವು. ಕಲ್ಯಾಣ ಗುಣಗಳನ್ನಿಲ್ಲದವರನ್ನು ಯಾರು ಆಶ್ರಯಿಸುವರು ? ನೀಚ ಪ್ರಭುವನ್ನು ನೀಚರು ಆಶ್ರಯಿಸುವದಿಲ್ಲವೋ ಎಂದರೆ ನೀಚಫಲಕ್ಕಾಗಿ ಹಾಗೆ ಆಶ್ರಯವು. ಸತ್ಪ್ರಭುವನ್ನು ಹೇಗೆ ಸತ್ಪುರುಷರು ಆಶ್ರಯಿಸುವರೋ, ಹಾಗೆಯೇ ಇಲ್ಲಿಯೂ ಮೋಕ್ಷಫಲಕ್ಕಾಗಿ, ತತ್ಪ್ರಥಾನಶಕ್ತಿಯೊಂದಿಗೆ ಅಂತಹ ನಿರುಪಮವಾದ ಶ್ರೇಯಸ್ಸನ್ನು ಕೊಡುವವರೊಂದಿಗೆ ಸ್ವಾತಂತ್ರ್ಯ, ಔದಾರ್ಯ, ಕಾರುಣ್ಯ ಕ್ಷಮಾದಿ ಕಲ್ಯಾಣ ಗುಣಾಕರನಾಗಿ ದುರ್ಗುಣಗಳು ಯಾವುವೂ ಇಲ್ಲದ ಪ್ರಭುವನ್ನೇ ಆಶ್ರಯಿಸತಕ್ಕದ್ದು. ಇದನ್ನೇ ಶಾಸ್ತ್ರಗಳು **ಸಗುಣ ನಿರ್ಗುಣ**ಶಬ್ದಗಳಿಂದ ಬೋಧಿಸುತ್ತವೆ. ನಿರ್ಗುಣನೆಂದರೆ, ಯಾವಗುಣವೂ ಕಲ್ಯಾಣಗುಣಗಳೂ ಕೂಡ ಇಲ್ಲದವನೆಂಬರ್ಥವಲ್ಲವು **"ಭರ್ತಾತು ಖಲು ನಾರೀಣಾಂ ಗುಣವಾನ್ನಿರ್ಗುಣೋಽಪಿ ವಾ"** (ರಾ. ಅಯೋ. ೬೨. ೮.) ಎಂದು ವಾಲ್ಮೀಕಿ ಮಹರ್ಷಿಗಳು ಪ್ರಯೋಗಿಸಿರುತ್ತಾರೆ. ಇಲ್ಲಿ ನಿರ್ಗುಣ ಶಬ್ದಕ್ಕೆ ಯಾವ ಗುಣವೂ ಇಲ್ಲವೆಂದು ಅರ್ಥವು ಹೇಗೆ ಸರಿಯಲ್ಲವೋ ಹಾಗೆಯೇ ಪರಮಾತ್ಮನೂ ಸಹ ಎಂದು ತಿಳಿಯತಕ್ಕದ್ದು. ಈ ಲೀಲಾವಿಭೂತಿಯಲ್ಲಿರುವ ರಜಸ್ತಮೋಗುಣಗಳ ಸಂಬಂಧದಿಂದ ಹೇಯವಾಗಿರುವ ಗುಣಗಳಿಲ್ಲದೆ, ಎಂದರೆ ಪ್ರಾಕೃತ ಗುಣಗಳಿಲ್ಲದೆ ಅಪ್ರಾಕೃತಗುಣಗಳಿರುವವನು. ಇದೀಗ ನಿರ್ಗುಣ ಶಬ್ದಾರ್ಥವು, ಇದನ್ನೇ ಛಾಂದೋಗ್ಯವು (೮. ೧. ೫.) **"ಅಪಹತ ಪಾಪ್ಮಾ ವಿಜರೋ ವಿಮೃತ್ಯು ರ್ವಿಶೋಕೋ ವಿಜಿಘತ್ಸೋಽಪಿಪಾಸಃ"** ಎಂದು ನಿರ್ಗುಣಗಳನ್ನೆಲ್ಲಾ ಎಂದರೆ ಹೇಯಗುಣಗಳನ್ನು ನಿಷೇಧಿಸಿ ಮುಂದೆ **"ಸತ್ಯಕಾಮ ಸ್ಸತ್ಯಸಙ್ಕಲ್ಪಃ"** ಎಂದು ಕಲ್ಯಾಣ ಗುಣಗಳನ್ನು ಹೇಳಿರುತ್ತದೆ. ವಿಷ್ಣು ಪುರಾಣದಲ್ಲಿ **"ಸಮಸ್ತ ಕಲ್ಯಾಣ ಗುಣಾತ್ಮಕೋಽಸೌ"** ಎಂದೂ, **"ಸಮಸ್ತ ಹೇಯ ರಹಿತಂ ವಿಷ್ಣ್ವಾಖ್ಯಂ ಪರಮಂಪದಂ"** ಎಂದೂ ಹೇಳಲ್ಪಟ್ಟಿರುತ್ತದೆ. ಆಶ್ರಯಿಸಲುಪಯುಕ್ತವಾದ ಗುಣಗಳಿರಬೇಕು, ಅವುಗಳನ್ನು ವಿವರಿಸಿ

**ಭಾ. ಷೋತ್ತಮೇ ಪುಂಡರೀಕದಳಾಮಲಾಯತಾಕ್ಷೇ, ಸ್ವಚ್ಛನೀಲಜೀಮೂತಸಙ್ಕಾಶೇ,**

ಹೇಳುತ್ತಾರೆ.—**ಸರ್ವಜ್ಞೇ ಸತ್ಯಸಙ್ಕಲ್ಪೇ** - ಆತನು ಶ್ರುತಿಯಲ್ಲಿ "**ಯಸ್ಸರ್ವಜ್ಞಸ್ಸರ್ವವಿತ್**" ಎಂದು ಹೇಳಿರುವಹಾಗೆ ಸರ್ವಜ್ಞನಾಗಿರಬೇಕು, ಆಶ್ರಿತಾನಾಶ್ರಿತ ವಿವೇಚನೆಗೂ, ಆಶ್ರಿತನ ಕೋರಿಕೆಗಳನ್ನು ತಿಳಿಯುವುದಕ್ಕೂ, ಆತನ ಪಾಪಗಳನ್ನು ತನ್ಮೂಲಕವಾದ ದುಃಖಗಳನ್ನೂ ಹೋಗಲಾಡಿಸುವುದಕ್ಕೂ, ಇವೇ ಮೊದಲಾದವುಗಳಿಗೆ ಸರ್ವಜ್ಞತೆ ಬೇಕು. ಭಕ್ತನಿಗೆ ಮಾಡಿದ ಅನುಗ್ರಹವನ್ನು ನೆರವೇರಿಸಿಕೊಡುವ ಸತ್ಯ ಸಙ್ಕಲ್ಪತೆಯೂ ಧ್ಯೇಯವಸ್ತುವಿನಲ್ಲಿರಬೇಕೆಂದು **ಸತ್ಯಸಙ್ಕಲ್ಪೇ** ಎಂಬ ಪ್ರಯೋಗವು. ! ಸಮುದ್ರ ತರಣಕ್ಕೆ ಪೂರ್ವಭಾವಿಯಾಗಿಯೇ, ಇನ್ನೂ ಜಯಾಪಜಯಗಳ ವಿಮರ್ಶೆಯನ್ನೂ ಮಾಡದೇ, ರಾವಣ ವಧೆಯೂ ಆಗದೇ, ಇರುವದಕ್ಕೆ ಮುಂಚೆಯೇ, ಶರಣಾಗತನಾದ ವಿಭೀಷಣನಿಗೆ ಲಂಕಾರಾಜ್ಯಾಭಿಷೇಕವನ್ನು ನಿಸ್ಸಂಶಯವಾಗಿ ಮಾಡಿಸಿದುದು ಆತನ ಸತ್ಯ ಸಙ್ಕಲ್ಪತೆಗೆ ಒಳ್ಳೇ ನಿದರ್ಶನವು. ಸರ್ವಜ್ಞತ್ವ ಸತ್ಯಸಙ್ಕಲ್ಪತ್ವಾದಿಗಳು, ಭಕ್ತ ಪರಿಪಾಲನೆಗೂ, ಅಭಕ್ತರಲ್ಲಿ ತಟಸ್ಥನಾಗಿರುವದಕ್ಕೂ, ದುಷ್ಟರನ್ನು ನಿಗ್ರಹಿಸುವದಕ್ಕೂ ಸಹಕಾರಿಗಳು, ಆದುದರಿಂದ **ಮಯಿ** ಎಂಬಲ್ಲಿ ಉಪಪಾದಿಸಿರುತ್ತಾರೆ. ಉಪಾಸ್ಯ ದೇವತೆಯು ಇನ್ನೂ ಎಂತವನೆಂದರೆ **ನಿಖಿಲ ಜಗದೇಕ ಕಾರಣಃ** - ನಿಖಿಲ ಜಗತ್ತಿಗೂ ಉಪಾದಾನ ನಿಮಿತ್ತ **ಸಹಕಾರಿ** ಸಮಸ್ತ ಕಾರಣನೂ ತಾನೊಬ್ಬನೇ. ಇನ್ನು ಯಾವುದರ ಸಾಪೇಕ್ಷೆಯಿಲ್ಲದೆ ಕಾರಣನು, ಬ್ರಹ್ಮರುದ್ರಾದಿ ಸಮಸ್ತ ಚೇತನಕ್ಕೂ ಸಮಸ್ತ ಜಗತ್ತುಗಳ ಅಚೇತನಕ್ಕೂ, ಕಾರಣನು, (೮ ನೆಯ ಶ್ಲೋಕಾರ್ಥವು. ಅಥವಾ ೭೬) "**ಯತೋವಾ ಇಮಾನಿ ಭೂತಾನಿ ಜಾಯನ್ತೇ**" (ತೈ. ಭೃ. ಗು. ೧.) ಎಂದಾರಂಭಿಸಿ "**ತದ್ವಿಜಿಜ್ಞಾಸಸ್ವ**" ಯಾವನು ಜಗತ್ಕಾರಣನೋ ಅವನೀಗ ಉಪಾಸ್ಯನೆಂದೂ "**ಕಾರಣಂತು ಧ್ಯೇಯಃ**" (ಅಥರ್ವಶಿಖೋಪ) ಎಂದೂ ಹೇಳಿರುವದರಿಂದ ಅಂತಹ ಪರಬ್ರಹ್ಮವೇ "**ಜನ್ಮಾದ್ಯಸ್ಯ ಯತಃ**" (೨ ನೆಯ ಬ್ರಹ್ಮಸೂತ್ರ) ಎಂಬಲ್ಲಿಯೂ **ಉಪಾಸ್ಯ**ವೆಂದು ಹೇಳಿರುವದರಿಂದಲೂ, **ನಿಖಿಲ ಜಗದೇಕ ಕಾರಣೇ** ಎಂಬ ಪ್ರಯೋಗವು. ಇದು ೧೮ ನೆಯ ಶ್ಲೋಕದ "**ಪ್ರಭವ ಪ್ರಲಯಸ್ಥಾನಂ ನಿಧಾನಂ ಬೀಜಮವ್ಯಯಂ**" ಎಂಬುದರ ಸೂಚನೆಯು. **ಪರಸ್ಮಿನ್ ಬ್ರಹ್ಮಣಿ ಪುರುಷೋತ್ತಮೇ** - ಪರಬ್ರಹ್ಮನಾಗಿ ಪುರುಷೋತ್ತಮನಾದ ನನ್ನಲ್ಲಿ, ಮುಂದೆ ೧೫ ನೆಯ ಅಧ್ಯಾಯದ ಶ್ಲೋಕದಲ್ಲಿ ಶ್ರೀಕೃಷ್ಣನಾದ ತಾನೇ **ಪುರುಷೋತ್ತಮನು** ಹೇಗೆ ಎಂಬುದು ಉಪಪಾದಿಸಲ್ಪಡುವದರಿಂದ, ಆ ಪುರುಷೋತ್ತಮ ಶಬ್ದ ನಿರ್ದಿಷ್ಟನಾದವನೇ ಪರಬ್ರಹ್ಮವು, ಆತನೇ ಧ್ಯೇಯನೆಂದು ಹೇಳಲ್ಪಟ್ಟಿತು. ಅದೂ ಅಲ್ಲದೆ ತಮ್ಮ ಅಭಿಪ್ರಾಯವು ಪುರುಷಸೂಕ್ತ ಪ್ರತಿಪಾದಿತನಾದ ಪುರುಷೋತ್ತಮನೇ ಉಪಾಸ್ಯನೆಂದು ಅಲ್ಲಿ ಹೇಳಿರುವದಕ್ಕೆ, ಅನುಸಾರವಾದುದೆಂದೂ ತಿಳಿಸುವದಕ್ಕಾಗಿಯೂ ಹಾಗೆ ಪ್ರಯೋಗವು. ಇದುವರೆಗೂ ಉಪಾಸ್ಯ ಪರಬ್ರಹ್ಮಸ್ವರೂಪವು ಎಂತಾದ್ದೆಂಬುದು ಉಪದೇಶಿಸಲ್ಪಟ್ಟಿತು. ಮುಂದೆ ಸಮಸ್ತ ಶಾಖೆಗಳಲ್ಲೂ ಪಠಿತವಾಗಿ, ಪುರುಷಸೂಕ್ತಾದಿಗಳಿಂದ ಸಿದ್ಧವಾಗಿ ಉಪಾಸ್ಯ ದೇವತೆಗೆ ಶುಭಾಶ್ರಯವು ಅತ್ಯಾವಶ್ಯಕವು ; ಅದು ಇಲ್ಲದೆ ಸಾಕ್ಷಾತ್ಕಾರವು ಸಾಧ್ಯವಿಲ್ಲವಾದುದರಿಂದ, ಆ ದಿವ್ಯ ಮಙ್ಗಳ ವಿಗ್ರಹವು ಎಂತಾದ್ದೆಂದರೆ—ತಾನು ಜನ್ಮಕಾಲದಲ್ಲಿ ವಸುದೇವ ದೇವಕಿಯರಿಗೆ ಯಾವ ಅದ್ಭುತ ದಿವ್ಯ ಮಙ್ಗಳ ವಿಗ್ರಹವನ್ನು ಪರಮಕೃಪಯಾ ಪ್ರದರ್ಶಿಸಿದನೋ, "**ತಮದ್ಭುತಂ ಬಾಲಕ ಮಂಬುಜೇಕ್ಷಣಂ**" ಎಂದು ಮಹರ್ಷಿಯಿಂದ ಕೊಂಡಾಡಲ್ಪಟ್ಟ ಚಕ್ರಾದಿ ದಿವ್ಯಾಯುಧ ದಿವ್ಯಾಭರಣಾದಿಗಳಿಂದ ಸೇರಿದ ದಿವ್ಯ ಮಙ್ಗಳ ವಿಗ್ರಹವೇ ಉಪಾಸ್ಯವೆಂದು, ಅದನ್ನು ವರ್ಣಿಸುತ್ತಾರೆ. ಆ ದಿವ್ಯ ಮಙ್ಗಳ ವಿಗ್ರಹವೆಂತಾದ್ದೆಂದರೆ **ಪುಂಡರೀಕದಳಾಮಲಾಯತಾಕ್ಷೇ.** - ಪುಂಡರೀಕದಳದಹಾಗೆ ಪರಿಶುದ್ಧವಾದ ವಿಶಾಲವಾದ ಕಣ್ಣುಗ

**ಭಾ. ಯುಗಪದುದಿತ ದಿನಕರ ಸಹಸ್ರ ಸದೃಶ ತೇಜಸಿ, ಲಾವಣ್ಯಾಮೃತ ಮಹೋದಧೌ, ಉದಾರಪೀವರಚತುರ್ಬಾಹೌ, ಅತ್ಯುಜ್ಜ್ವಲಪೀತಾಮ್ಬರೇ, ಅಮಲ ಕಿರೀಟ ಮಕರ**

ಳುಳ್ಳ, ಛಾಂದೋಗ್ಯದಲ್ಲಿ (೧ ೬. ೭.) **ತಸ್ಯ ಯಥಾ ಕಪ್ಯಾಸಂ ಪುಂಡರೀಕ ಮೇವ ಮಕ್ಷಿಣೀ"** ಎಂದು ಹೇಳಿರುವಹಾಗೆ ಇಂತಹ ಕಣ್ಣಿನ ಸೊಬಗು ಯೋಗಿಗಳ ಮನಸ್ಸನ್ನು ಸಂಪೂರ್ಣವಾಗಿ ಅಪಹರಿಸುತ್ತದೆ. **"ರಾಜೀವಾಕ್ಷಂ ಮಹಾದ್ಯುತಿ"** (ರಾ. ಅ. ೯೮. ೧೦) **"ತಂ ಪದ್ಮ ದಳ ಪತ್ರಾಕ್ಷಂ ಸಿಂಹ ವಿಕ್ರಾಂತಗಾಮಿನಂ । ಧನ್ಯಾಃ ಪಶ್ಯಂತಿ** (ರಾ ಸುಂ. ೩೫-೧೬) ಎಂದೂ **"ಪದ್ಮಾಯತೇಕ್ಷಣಂ"** (ಭಾರ.) ಹೀಗೆಲ್ಲಾ ಮಹರ್ಷಿಗಳು ಪರಮ ಕೃಪಾ ಸೂಚಕವಾದ ಕಣ್ಣುಗಳನ್ನು ಕಂಡು ಬೆರಗಾಗಿರುತ್ತಾರೆ. ಶ್ರೀ ಭಾಷ್ಯಕಾರರೂ **"ಯಥಾ ಕಪ್ಯಾಸಂ"** ಎಂಬ ಶ್ರುತಿಗೆ **"ಗಂಭೀರಾಂಭಸ್ಸಮುದ್ಭೂತಸುಮೃಷ್ಟ ನಾಳರವಿಕರವಿಕಸಿತ ಪುಂಡರೀಕ ದಳಾ ಮಲಾಯತೇಕ್ಷಣಃ** ಎಂದು ವೇದಾರ್ಥಸಂಗ್ರಹದಲ್ಲಿ ವ್ಯಾಖ್ಯಾನಮಾಡಿರುತ್ತಾರೆ. ತುಂಬಾ ಆಳವಾದ ನೀರಿನಲ್ಲಿ ಹುಟ್ಟಿರುವ ನಾಳದಲ್ಲಿ ಸೂರ್ಯ ಕಿರಣಗಳಿಂದ ವಿಕಸಿತವಾದ ಕಮಲಪತ್ರನೋಪಾದಿಯಲ್ಲಿ ನಿರ್ಮಲವಾದ ಕಣ್ಣುಗಳುಳ್ಳವನು ಎಂಬುದು ಇದರರ್ಥವು. ಮಾರ್ಕಂಡೇಯ ಮಹರ್ಷಿಯು ಪ್ರಳಯದಲ್ಲಿ ತಾವು ನೋಡಿದ ಆ ಪರಮಾತ್ಮನ ಕಣ್ಣಿನ ಲಾವಣ್ಯವೇ ಈಗ ಶ್ರೀಕೃಷ್ಣನಲ್ಲೂ ತಮಗೆ ತೋರಿಬರುವದರಿಂದ, ಶ್ರೀಕೃಷ್ಣನು ಪರಮ ಪುರುಷನೆಂದು ನಿಶ್ಚಯಿಸಿದರೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ ಆಶ್ರಯೋಪಯುಕ್ತಗಳಾದ ಗುಣಗಳುಳ್ಳವನೆಂದು ಕಣ್ಣುಗಳ ದೃಷ್ಟಿಯಿಂದಲೇ ಗ್ರಹಿಸಬಹುದು ಎಂಬ ತಾತ್ಪರ್ಯವು. **ಸ್ವಚ್ಛನೀಲ ಜೀಮೂತ ಸಙ್ಕಾಶೇ** – ಮಣಿ ಮುಕುರ ಮೊದಲಾದವುಗಳಹಾಗೆ ಸ್ವಚ್ಛವಾದ, **"ನೀಲತೋಯದ ಮಧ್ಯಸ್ಥಾ"** ಎಂಬಲ್ಲಿ ಹೇಳಿರುವಹಾಗೆ ಕಪ್ಪಾದ ಮೇಘಕ್ಕೆ ಸಮಾನವಾದ ವರ್ಣವುಳ್ಳ, **ಯುಗಪದುದಿತ ದಿನಕರ ಸಹಸ್ರ ಸದೃಶ ತೇಜಸಿ** – ಒಂದೇಕಾಲದಲ್ಲಿ ಉದಿಸಿದ ಸಹಸ್ರ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳ, ಮುಂದೆ ಹನ್ನೊಂದನೆ ಅಧ್ಯಾಯದಲ್ಲಿ (೧೧-೧೨) **ದಿವಿ ಸೂರ್ಯ ಸಹಸ್ರಸ್ಯ** ಎಂಬುದಾಗಿ ಹೇಳಲ್ಪಡುತ್ತದೆಂದು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು. **"ತಮೇವ ಭಾನ್ತಮನುಭಾತಿ ಸರ್ವಂ"** ಎಂಬ ಮುಂಡಕ ಶ್ರುತಿ (೨. ೨. ೧೦) ಈ ಪ್ರಯೋಗವನ್ನು ಸೂಚಿಸುತ್ತದೆ, **ಲಾವಣ್ಯಾಮೃತಮಹೋದಧೌ** – ಸರ್ವಾವಯವ ಮನೋಹರತ್ವವೂ, ಅಂತಹ ಸೌಂದರ್ಯದಿಂದ ನೋಡುವವರ ದೃಷ್ಟಿ ಚಿತ್ತಾಪಹಾರವೂ, ಲಾವಣ್ಯ ಶಬ್ದದಿಂದ ಬೋಧಿತವು ; ಅಂತಹ ಲಾವಣ್ಯವೆಂಬ ಅಮೃತಕ್ಕೆ ಸಮುದ್ರರೂಪನು, ಇದರಿಂದ ಭಕ್ತರ ಮನಸ್ಸನ್ನು ಅಪಹರಿಸುವ ಮಾಹಾತ್ಮ್ಯವು ಬೋಧಿತವು. ಕಣ್ಣಿನಿಂದ ನೋಡಿದರೆ ಆನಂದವನ್ನುಂಟುಮಾಡಿ ದೃಷ್ಟಿಯು ಹಿಂದಕ್ಕೆ ಬಾರದಹಾಗೆ ಆಸೇಚನಕವಾಗಿರೋಣವು. ಸರ್ವಾವಯವಗಳ ಸೌಂದರ್ಯಾತಿಶಯವನ್ನು ನೋಡುವವರಿಂದುಂಟಾಗುವ ಆನಂದಕ್ಕೆ ಹೇತುವಾದುದು. ಇದನ್ನು ಗೋಪಿಕಾಗೀತೆಯಲ್ಲಿ ಗೋಪಸ್ತ್ರೀಯರು **"ಜಡ ಉದೀಕ್ಷತಾಂ ಪಕ್ಷ್ಮಕೃದ್ದೃಶಾಮ್"** ಎಂದು ಚತುರ್ಮುಖನು ಕಣ್ಣಿಗೆ ರೆಪ್ಪೆಯನ್ನು ನಿರ್ಮಿಸಿದುದರಿಂದ ಮಂದನಲ್ಲವೇ ? ಎಂಬ ಪ್ರಯೋಗದಲ್ಲಿ ಕಾಣಬಹುದು. **ಉದಾರಪೀವರ ಚತುರ್ಬಾಹೂ** – ಆಜಾನು ಬಾಹುವಾಗಿಯೂ ಸ್ಥೂಲವಾಗಿಯೂ ಇರುವ ಚತುರ್ಭುಜಗಳುಳ್ಳವನು ; ಆಜಾನುಬಾಹುತ್ವವು ಉದಾರತ್ವಾಭಿಮತ ಫಲಪ್ರದತ್ವಾದಿಗಳನ್ನು ಸೂಚಿಸುತ್ತದೆ. ಉಪಾಸ್ಯದೇವತೆಗೆ ಸಾಮಾನ್ಯವಾಗಿ ಚತುರ್ಭುಜವೇ ಹೇಳಲ್ಪಟ್ಟಿರುತ್ತದೆ, ಅವತಾರಕಾಲಗಳಲ್ಲಿ ಈ ನಿಯಮವು ವ್ಯತ್ಯಸ್ತವಾದೀತೇ ವಿನಾ, ದಿವ್ಯ ಮಙ್ಗಳ ವಿಗ್ರಹವು ವಾಸುದೇವ ವೈಕುಂಠಮೂರ್ತಿಗೆ ಚತುರ್ಭುಜವೇ ನಿತ್ಯವಾಗಿ ಹೇಳಲ್ಪಟ್ಟಿರುತ್ತದೆ, ವಸುದೇವನಿಗೆ ತೋರಿದ ರೂಪದಲ್ಲಿ ಸಾಮಾನ್ಯ ಪರರೂಪವನ್ನು ಗ್ರಹಿಸಬ

**ಭಾ. ಕುಂಡಲ ಹಾರಕೇಯೂರ ಕಟಕಭೂಷಿತೇ, ಅಪಾರಕಾರುಣ್ಯಸೌಶೀಲ್ಯ ಸೌಂದರ್ಯ ಮಾಧುರ್ಯ ಗಾಂಭೀರ್ಯೌದಾರ್ಯ ವಾತ್ಸಲ್ಯಜಲಧೌ, ಅನಾಲೋಚಿತ ವಿಶೇಷ ಶೇಷ ಲೋಕ ಶರಣ್ಯೇ, ಸರ್ವಸ್ಯಾತ್ಮನಿ, ತೈಲಧಾರಾವದವಿಚ್ಛೇದೇನ ನಿವಿಷ್ಟ ಮನಾಭವ।**

ಹುದು. **"ತಮದ್ಭುತಂ ಬಾಲಕ ಮಮ್ಬುಜೇಕ್ಷಣಂ ಚತುರ್ಭುಜಂ ಶಙ್ಖಗದಾದ್ಯುದಾಯುಧಮ್। ಶ್ರೀವತ್ಸಲಕ್ಷ್ಮಂ ಗಳಶೋಭಿಕೌಸ್ತುಭಂ ಪೀತಾಂಬರಂ ಸಾಂದ್ರಪಯೋದಸೌಭಗಮ್। ಮಹಾರ್ಹ ವೈಡೂರ್ಯ ಕಿರೀಟ ಕುಂಡಲ ತ್ವಿಷಾ ಪರಿಷ್ವಕ್ತ ಸಹಸ್ರ ಕುನ್ತಲಮ್। ಉದ್ದಾಮಕಾಂಚ್ಯಂಗದಕಂಕಣಾದಿಭಿರ್ವಿರೋಚಮಾನಂ ವಸುದೇವ ಐಕ್ಷತ"** (ಭಾ. ೧೦. ೩. ೮. ೯.) ಆದುದರಿಂದ ಶ್ರೀಕೃಷ್ಣಭಗವಾನರವರು ತಮ್ಮ ಭಕ್ತರಲ್ಲಿ ಅಕ್ರೂರ ಮುಚುಕುಂದ ಕೆಲವರಿಗೆ ಚತುರ್ಭುಜತ್ವೇನ ಸೇವೆಯನ್ನಿತ್ತಿದುದರಿಂದ ತನ್ನ ಪರತ್ವವನ್ನು ಪ್ರಕಟಿಸಿರುತ್ತಾರೆ. **"ಅತ್ಯುಜ್ವಲ ಪೀತಾಂಬರೇ** – ವಿಶೇಷ ಕಾಂತಿಯಿಂದ ಪ್ರಕಾಶಿಸುವ ಪೀತಾಂಬರವನ್ನುಳ್ಳ, **ಅಮಲಕಿರೀಟ ಮಕರಕುಂಡಲಹಾರ ಕೇಯೂರ ಕಟಕ ಭೂಷಿತೇ** – ಸ್ವಚ್ಛವಾದ ಕಿರೀಟವೇನು **ಮಕರ**ವೆಂದರೆ ಮೊಸಳೆ ಅಥವಾ ಮೀನು, ಅದರ ಆಕಾರದ ಹಾಗಿರುವ ಕುಂಡಲಗಳೇನು, ಹಾರವೇನು, **ಕೇಯೂರ** ವೆಂದರೆ ಬಾಜು ಬಂದುಗಳೇನು, **ಕಟಕ** - ಕೈಬಳೆಗಳೇನು, ಇವುಗಳಿಂದ, **ಭೂಷಿತೇ** – ಅಲಂಕರಿಸಲ್ಪಟ್ಟವನು, ಹೀಗೆ ಆತನ ದಿವ್ಯ ಮಙ್ಗಳ ವಿಗ್ರಹವು ವರ್ಣಿಸಲ್ಪಟ್ಟಿತು, ಮುಂದೆ ಉಪಾಸ್ಯ ದೇವತೆಯಲ್ಲಿದ್ದು ಉಪಾಸಕನಿಗೆ ಅನುಗ್ರಾಹಕಗಳಾದ ಕಲ್ಯಾಣಗುಣಗಳು ಹೇಳಲ್ಪಡುತ್ತವೆ. **ಯಸ್ಮಿನ್ಯದಂತ ಸ್ತದುಪಾಸಿತವ್ಯಮ್** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ, ಇಂತಹ ಕಲ್ಯಾಣ ಗುಣಾಕರನೇ ಉಪಾಸ್ಯನೆಂಬ ಭಾವವು. **ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತಿ ನಾರಾಯಣ ಸ್ಸರಸಿಜಾಸನಸನ್ನಿವಿಷ್ಟಃ। ಕೇಯೂರವಾನ್ ಮಕರ ಕುಂಡಲವಾನ್ ಕಿರೀಟಿ ಹಾರಿ ಹಿರಣ್ಮಯ ವಪುಃ ಧೃತ ಶಂಖ ಚಕ್ರಃ ||"** ಎಂಬುದು ಅನುಸಂಧೇಯವು. **ಅಪಾರಕಾರುಣ್ಯ ಸೌಶೀಲ್ಯ ಸೌಂದರ್ಯ ಮಾಧುರ್ಯ ಗಾಂಭೀರ್ಯೌದಾರ್ಯ ವಾತ್ಸಲ್ಯ ಜಲಧೌ** – ಇಂತಹ ಆಶ್ರಯಣೋಪಯುಕ್ತ ಕಲ್ಯಾಣಗುಣಗಳಿಗೆ ಮಹೋದಧಿಯು, ಈ ಗುಣಗಳಿಂದ ತೋರಿಬರುವ ಭಾವಗಳೆಲ್ಲಾ ಪ್ರಥಮಾವತಾರಿಕೆಯಲ್ಲಿ ವಿವರಿಸಲ್ಪಟ್ಟವೆ. **ಅನಾಲೋಚಿತ ವಿಶೇಷಾಶೇಷ ಲೋಕ ಶರಣ್ಯೇ** – ಆಶ್ರಯಿಸಿದ ಸಮಸ್ತ ಜನರಲ್ಲೂ ಏನೊಂದು ವಿಶೇಷವನ್ನೂ ಪರಿಗಣಿಸದೇ ಇರುವವನಾದ, ಇದು **ಸಮೋಽಹಂ** ಎಂದಾರಂಭಿಸಿ **"ತೇಽಪಿ ಯಾಂತಿ ಪರಾಂಗತಿಂ"** (೩೨) ಎಂಬುವವರೆಗೂ ಹೇಳಿದ ಶ್ಲೋಕಾರ್ಥಗಳನ್ನು ಮನಸ್ಸಿನಲ್ಲಿಟ್ಟು, **"ಅನಾಲೋಚಿತ ವಿಶೇಷ"** ವೆಂಬ ಪ್ರಯೋಗವು. ಈ ಅಭಿಪ್ರಾಯವನ್ನೇ **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ। ದೋಷೋ ಯದ್ಯಪಿ ತಸ್ಯಸ್ಯಾತ್"** (ರಾಮಾ. ಯುದ್ಧ. ೧೮. ೩.) **"ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ" "ಆನಯೈನಂ ಹರಿಶ್ರೇಷ್ಠ ದತ್ತ ಮಸ್ಯಾಭಯಂ ಮಯಾ। ವಿಭೀಷಣೋವಾ ಸುಗ್ರೀವ ಯದಿವಾ ರಾವಣ ಸ್ಸ್ವಯಂ"** ಎಂಬೀಪ್ರಮಾಣಗಳಿಂದ ಮಹರ್ಷಿಯು ಪ್ರದರ್ಶಿಸಿರುತ್ತಾರೆ. **ಸರ್ವಸ್ಯಾತ್ಮನಿ** - ಸಮಸ್ತಕ್ಕೂ ಆತ್ಮನಾಗಿರುವ, ಇಂತಹ **ಮಯಿ** – ನನ್ನಲ್ಲಿ, ಇದು **ಮಯಾತತ ಮಿದಂ ಸರ್ವಂ** ಎಂಬ ಶ್ಲೋಕಾರ್ಥಾನುವಾದವು. ಶರೀರಕ್ಕೆ ಮಾಡಿದ ಅನುಕೂಲವು ಶರೀರಿಗೆ ಭೋಗ್ಯವಾಗಿ ಪರಿಣಮಿಸುತ್ತದೆ ಎಂಬ ಭಾವದಿಂದ **ಸರ್ವಸ್ಯಾತ್ಮನಿ** ಎಂದು ಹೇಳಲ್ಪಟ್ಟಿತು. ಹಾರವು ಶರೀರಕ್ಕೆ ರಮಣೀಯವಾಗುವದರಿಂದ ಆತ್ಮನು ಹೇಗೆ ಸಂತೋಷಿಸುವನೋ ಹಾಗೆ ಎಂಬುದು ಸೂಚಿತವು. ಹಾಗೆಯೇ ಶ್ರೀ ಭೀಷ್ಮರು ಧರ್ಮರಾಜರನ್ನು ಕುರಿತು ಹೇಳುತ್ತಾರೆ. **"ಕೃಷ್ಣಸ್ಯ ಹಿ ಕೃತೇ**

**ಭಾ. ತದೇವ ವಿಶಿನಷ್ಟಿ-ಮದ್ಭಕ್ತಃ-ಅತ್ಯರ್ಥ ಮತ್ಪ್ರಿಯತ್ವೇನ ಯುಕ್ತೋಮನ್ಮನಾಭವೇತ್ಯರ್ಥಃ। ಪುನರಪಿ ವಿಶಿನಷ್ಟಿ-ಮದ್ಯಾಜೀ-ಅನವಧಿಕಾತಿಶಯ ಪ್ರಿಯಮದನುಭವ ಕಾರಿತ ಮದ್ಯಜನ ಪರೋ ಭವ। ಯಜನಂ ನಾಮ ಪರಿಪೂರ್ಣಶೇಷವೃತ್ತಿಃ।**

**ವಿಶ್ವಮಿದಂ ಭೂತಂ ಚರಾಚರಮ್** ಈ ವಿಶ್ವವೆಲ್ಲಾ ಕೃಷ್ಣನಿಗಾಗಿಯೇ ಎಂದು ಹೇಳಲ್ಪಟ್ಟಿರುತ್ತದೆ, (ಭಾರ. ಸಭಾ. ೪೧. ೨೩.) ತೈಲಧಾರೆಯಹಾಗೆ, **ಅವಿಚ್ಛೇದೇನ ನಿವಿಷ್ಟಮನಾ ಭವ** - ವಿಚ್ಛೇದವಿಲ್ಲದಹಾಗೆ ಇಟ್ಟ ಮನಸ್ಸುಳ್ಳವನಾಗು. ಇಲ್ಲಿ **ಮನ್ಮನಾಭವ** ಎಂಬುದರಿಂದ **"ನಿದಿಧ್ಯಾಸಿತವ್ಯಃ"** (ಬೃ. ೬. ೫. ೬.) **"ಧ್ಯಾಯೀತ"** (ಮುಂ. ೨. ೨. ೬.) **"ಧ್ರುವಾಸ್ಮೃತಿ"** (ಛಾಂ. ೭. ೨೬. ೨.) ಇವೇ ಮೊದಲಾದ ಶ್ರುತಿ ಪ್ರಮಾಣಗಳಲ್ಲಿ ಹೇಳಿರುವ **"ಅವಿಚ್ಛಿನ್ನ ಸ್ಮೃತಿ ಸಂತಾನರೂಪ"** ಉಪಾಸನವೇ ಹೇಳಲ್ಪಟ್ಟಿತೆಂಬ ಭಾವವು. ಹೀಗೆ **ಮಯಿ** ಎಂಬಲ್ಲಿ ತೋರುವ ಧ್ಯೇಯ ವಸ್ತುವಿನ ಸ್ವರೂಪ ರೂಪಗುಣ ವಿಭವೈಶ್ವರ್ಯಗಳು ತಿಳಿಸಲ್ಪಟ್ಟು ಇಂತಹ ಪರಿಪೂರ್ಣ ಪರಬ್ರಹ್ಮವೇ ಧ್ಯೇಯವು ಎಂದು ಹೇಳಲ್ಪಟ್ಟಿತು. ಅಂತಹ ಪರಬ್ರಹ್ಮವೇ ಪ್ರಾಪ್ಯವೂ ಎಂದು ಮುಂದೆ ಶ್ಲೋಕಾಂತ್ಯದಲ್ಲಿ ಹೇಳಲ್ಪಡುತ್ತದೆ. ಈ ಅಭಿಪ್ರಾಯವೇ ಮುಂದಿನ ವಾಕ್ಯವಾದ **ಮದ್ಭಕ್ತೋಭವ** ಎಂಬುದರಿಂದ ಇಂತಹ ಅವಿಚ್ಛಿನ್ನ ಸ್ಮೃತಿ ಸಂತಾನರೂಪವಾದ ಭಕ್ತಿಯುಳ್ಳವನಾಗು ಎಂಬ ಪ್ರಯೋಗವೆಂದು ಭಾವಿಸಿ ಅದಕ್ಕೆ ಅವತಾರಿಕೆಯನ್ನು **ತದೇವ ವಿಶಿನಷ್ಟಿ** - ಅದನ್ನೇ ವಿಶೇಷಿಸಿ, ಉಪಪಾದಿಸಿ ಹೇಳುತ್ತಾರೆಂದು, ಕೊಟ್ಟಿರುತ್ತಾರೆ. **ಮದ್ಭಕ್ತಃ** ಎಂದರೆ **ಅತ್ಯರ್ಥಮತ್ಪ್ರಿಯತ್ವೇನ ಯುಕ್ತೋಮನ್ಮನಾಭವೇತ್ಯರ್ಥಃ - ಇಷ್ಟೆಂದು** ಹೇಳಲು ಸಾಧ್ಯವಿಲ್ಲದಷ್ಟು ನನ್ನಲ್ಲಿ ಪ್ರೀತಿರೂಪ ಅನುಧ್ಯಾನದಿಂದ ಕೂಡಿದವನಾಗಿ, ಹೀಗೆ ಮನ್ಮನಾಭವ ಎಂಬ ತಾತ್ಪರ್ಯವು. ಹೀಗೆ **ಅತ್ಯರ್ಥ ಪ್ರಿಯತ್ವೇನ** ವೆಂಬ ಪ್ರಯೋಗದಿಂದ ಉಪಾಸನವು ನಿರತಿಶಯ ಭಕ್ತಿಯುಳ್ಳದಾದುದರಿಂದ ಜ್ಞಾನರೂಪವಾದುದೆಂದೂ ಇಲ್ಲಿ ಹೇಳಲ್ಪಟ್ಟಿತು. ಇದನ್ನೇ ಮುಂದೆಯೂ ಪುನಃ ಪುನಃ ಅನುವಾದಮಾಡಿ, **"ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ"** (ಗೀ. ೧೨. ೨.) ಎಂದೂ. **ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ" ಎಂದೂ,** ಪುನಃ **ಮನ್ಮನಾಭವ"** ಎಂದೂ ೧೮ ನೆಯ ಅಧ್ಯಾಯದಲ್ಲೂ ಉಪದೇಶಿಸಿರುತ್ತಾರೆ. ಇಲ್ಲಿ ಮನ್ಮನಾಭವವೆಂದು ಹೇಳಿ, ಸಾಧ್ಯೋಪಾಯವಾದ ಭಕ್ತಿಯೋಗವನ್ನು ವಿಧಿಸಿರುವದರಲ್ಲಿ, ಅವಧಾರಣಾರ್ಥವು ನನ್ನಲ್ಲೇ ಮನಸ್ಸನ್ನು ಯಾವಾಗಲೂ ನಿಲ್ಲಿಸು ಎಂಬ ಭಾವವು ವ್ಯಕ್ತವು, ಏಕೆಂದರೆ **ಮಾಮೇವೈಷ್ಯಸಿ** ಎಂದು ಪ್ರಾಪ್ತಿರೂಪ ಫಲವನ್ನು ಹೇಳುವಾಗ ಯಾವಾಗ ಅವಧಾರಣವು ಸ್ಪಷ್ಟವೋ, ಆಗ ಸಾಧ್ಯೋಪಾಯದಲ್ಲೂ ಸುಸ್ಪಷ್ಟವೆಂಬ ಭಾವವು. **ಮದ್ಭಕ್ತೋಭವ** ಎಂಬುದರಿಂದ ನೀನು ಮಾಡುವ ಭಕ್ತಿಯಿಂದ ನಾನು ಸಂತುಷ್ಟನಾಗಿ, ನಿನ್ನನ್ನು ಭಕ್ತನಾಗಿ ಭಾವಿಸಿದರೆ ಆಗೀಗ ನಿನ್ನನ್ನು ವರಿಸುವೆನು ಎಂದು **ಯಮೇ ವೈಷವೃಣುತೇ ತೇನಲಭ್ಯಃ"** ಎಂಬ ಶ್ರುತ್ಯರ್ಥವು ಸೂಚಿತವು. ಇದನ್ನು ಸೂಚಿಸುವದಕ್ಕಾಗಿಯೇ, **ಅತ್ಯರ್ಥ ಮತ್ಪ್ರಿಯತ್ವೇನ** ಎಂಬ ಭಾಷ್ಯವು. ಹೀಗೆ ತೈಲಧಾರೆಯ ಹಾಗೆ ಅವಿಚ್ಛಿನ್ನ ಸ್ಮೃತಿ ಸಂತಾನರೂಪ ಪ್ರೀತ್ಯತಿಶಯವಿದ್ದರೇನೆ ಮಿಕ್ಕ ಕಾಲಗಳಲ್ಲೂ ಭಗವದಾರಾಧನರೂಪವಾದ ನಿತ್ಯನೈಮಿತ್ತಿಕಾನುಷ್ಠಾನಾದಿ ಪಂಚಮಹಾ ಯಜ್ಞಗಳೇನು ; ಭಗವದರ್ಚನಾದಿ ರೂಪಕೈಂಕರ್ಯಗಳೇನು, ಆತನ ಕಥಾಶ್ರವಣವೇನು, ಇವೇ ಮೊದಲಾದವುಗಳಲ್ಲಿ ಮನಸ್ಸಿರಬೇಕೆಂಬ ಅಭಿಪ್ರಾಯದಿಂದ, **ಪುನರಪಿ ವಿಶಿನಷ್ಟಿ** ಎಂದು ಮುಂದಿನ ವಾಕ್ಯಕ್ಕೆ ಅವತಾರಿಕೆಯನ್ನು ಕೊಟ್ಟು ಅದೇ ಉಪಪಾದಿಸಲ್ಪಡುತ್ತದೆ ಎಂದು ಹೇಳುತ್ತಾರೆ; - **ಮದ್ಯಾಜೀ** ಎಂದರೆ **ಅನವಧಿಕಾತಿಶಯಪ್ರಿಯಮದನುಭವಕಾರಿತಮದ್ಯಜನಪರೋ ಭವ** - ಅವಧಿ ಇಲ್ಲದಷ್ಟು

**ಭಾ. ಔಪಚಾರಿಕ ಸಾಂಸ್ಪರ್ಶಿಕಾ ಭ್ಯವಹಾರಿಕಾದಿ ಸಕಲ ಭೋಗಪ್ರದಾನ ರೂಪೋ ಹಿ ಯಾಗಃ । ಯಥಾ ಮದನುಭವಜನಿತ ನಿರವಧಿಕಾತಿಶಯ ಪ್ರೀತಿಕಾರಿತ ಮದ್ಯಜನ ಪರೋ ಭವಸಿ, ತಥಾ ಮನ್ಮನಾಭವೇ ತ್ಯುಕ್ತಂ ಭವತಿ । ಪುನರಪಿ ತದೇವ ವಿಶಿನಷ್ಟಿ-ಮಾಂ ನಮಸ್ಕುರು - ಅನವಧಿಕಾತಿಶಯ ಪ್ರಿಯಮದನುಭವಕಾರಿತಾತ್ಯರ್ಥಪ್ರಿಯ ಶೇಷ ವೃತ್ತಾ ವಪರ್ಯವಸ್ಯ ನ್ಮಯ್ಯಂತರಾತ್ಮನ್ಯ ತಿಮಾತ್ರ ಪ್ರಹ್ವೀಭಾವವ್ಯವ ಸಾಯಂ ಕುರು । ಮತ್ಪರಾಯಣಃ-ಅಹಮೇವ ಪರಮಯನಂ ಯಸ್ಯಾಸೌ ಮತ್ಪ**

ಅತಿಶಯವಾಗಿ ಪ್ರಿಯವಾಗಿರುವ ನನ್ನ ಅನುಭವದಿಂದ ಮಾಡಲ್ಪಟ್ಟ ನನ್ನ ವಿಷಯವಾದ ಯಜನದಲ್ಲಿ ಆಸಕ್ತನಾಗು. ಇದರಿಂದ ಕೈಙ್ಕರ್ಯವು ಹೇಳಲ್ಪಟ್ಟಿತೆಂಬುದು ಭಾಷ್ಯಾಭಿಪ್ರಾಯವು. ಇಲ್ಲಿ **ಯಾಜೀ** ಎಂಬ ಶಬ್ದದಿಂದ ತೋರಿಬರುವ ಯಜನ ಶಬ್ದಾರ್ಥವೇನೆಂಬುದನ್ನು ತಿಳಿಸುತ್ತಾರೆ.— **ಯಜನಂ ನಾಮ** - ಯಜನವೆಂದರೆ **ಪರಿಪೂರ್ಣ ಶೇಷವೃತ್ತಿಃ** - ಸಂಪೂರ್ಣವಾದ ದಾಸ್ಯಕ್ಕೆ ವಿಹಿತವಾದ ವ್ಯಾಪಾರವು, ಅದು ಯಾವುದೆಂದರೆ ಕಿಂಕರನಾದ ಇವನು ಮಾಡುವ ಕೈಂಕರ್ಯವು. ಅದೇ ಧಾತುವಿನಿಂದುಂಟಾದ ಯಾಗವೆಂದರೇನೆಂಬುದನ್ನು ತಿಳಿಸುತ್ತಾರೆ.—**ಔಪಚಾರಿಕ** - ಅರ್ಘ್ಯಪಾದ್ಯಾಚಮನ ನೀರಾಜನಾದಿ ಕೈಂಕರ್ಯಗಳು, **ಸಾಂಸ್ಪರ್ಶಿಕ** - ಅಭಿಷೇಕ, ಊರ್ಧ್ವ ಪುಂಡ್ರ, ಗಂಧ, ಪುಷ್ಪಾರ್ಚನಾದಿ ರೂಪ ಕೈಂಕರ್ಯಗಳು, **ಅಭ್ಯವಹಾರಿಕ** - ನಿವೇದನ, ತಾಂಬೂಲಾದಿ ಕೈಂಕರ್ಯಗಳು, ಇವೇ ಮೊದಲಾದ, **ಸಕಲಭೋಗಪ್ರದಾನ ರೂಪೋ ಹಿಯಾಗಃ** - ಸಕಲ ಭೋಗಗಳನ್ನೂ ಭಗವಂತನಿಗೆ ಸಮರ್ಪಿಸುವ ರೂಪವಾದುದಲ್ಲವೇ ಯಾಗವೆಂಬುದು. ಆದುದರಿಂದ ಇಲ್ಲಿ ಯಜನಶಬ್ದದಿಂದ ದರ್ಶಪೂರ್ಣಮಾಸ ಮೊದಲಾದವು ಹೇಳಲ್ಪಟ್ಟವೆಂದು ಭಾವಿಸತಕ್ಕದ್ದಲ್ಲವು. **ಯಜದೇವಪೂಜಾಯಾಂ** ಎಂಬ ಧಾತುವಿನಿಂದ ಪರಮ ಪುರುಷಾರಾಧನವು ಬೋಧಿತವು. ಪರದೇವತೆಯನ್ನುದ್ದೇಶಿಸಿ ದ್ರವ್ಯತ್ಯಾಗವು ಯಾಗವೆನಿಸುತ್ತದೆ. ಇದರಲ್ಲೇ ಪಂಚಮಹಾ ಯಜ್ಞಗಳನ್ನೊಳಗೊಂಡ ವೈಶ್ವದೇವವೂ ಸೇರಿತು. ಈ ಬಾಹ್ಯವಾದ ಉಪಚಾರಗಳಿಂದ ಮನಸ್ಸು ಪರಮಾತ್ಮನಲ್ಲೇ ಹೇಗೆ ಸಕ್ತವಾದೀತೆಂದು ಯಾರಾದರೂ ಆಕ್ಷೇಪಿಸಬಹುದೆಂದು ಯೋಚಿಸಿ ತಾವೇ ಸಮಾಧಾನವನ್ನು ಹೇಳುತ್ತಾರೆ.—**ಯಥಾ** - ಹೇಗೆ ನೀನು, ನನ್ನ ಅನುಭವದಿಂದುಂಟಾದ ಅವಧಿಯಿಲ್ಲದ ಅತಿಶಯವುಳ್ಳ ಪ್ರೀತಿಯಿಂದ ಮಾಡಲ್ಪಟ್ಟ, **ಮದ್ಯಜನ ಪರೋ ಭವಸಿ** - ಹೇಗೆ ನನ್ನ ಪೂಜಾರೂಪ ಕೈಂಕರ್ಯದಲ್ಲಿ ಆ ಸಕ್ತಿಯುಳ್ಳವನಾಗಬೇಕೋ, **ತಥಾಮನ್ಮನಾಭವೇತ್ಯುಕ್ತಂ ಭವತಿ** - ಹಾಗೆ ನನ್ನಲ್ಲೇ ಇಟ್ಟ ಮನಸ್ಸುಳ್ಳವನಾಗು ಎಂದು ಹೇಳಿದಂತಾಯಿತು. ಪುನಃ ಹಾಗೆ ಮನಸ್ಸನ್ನಿಟ್ಟದುದಕ್ಕೆ ಇನ್ನೊಂದು ಲಕ್ಷಣವೇನೆಂಬುದನ್ನು ತಿಳಿಸುವದಕ್ಕಾಗಿ **ಪುನರಪಿತದೇವ ವಿಶಿನಷ್ಟಿ**-ಪುನಃ ಇನ್ನೊಂದು ಸಲವೂ ಅದನ್ನೇ ವಿಶೇಷಿಸಿ ಹೇಳುತ್ತಾರೆ. **ಮಾಂ ನಮಸ್ಕುರು** ಎಂದರೆ ಅನವಧಿಕಾತಿಶಯ ಪ್ರಿಯವಾದ ನನ್ನ ಅನುಭವದಿಂದ ಮಾಡಲ್ಪಟ್ಟ, **ಅತ್ಯರ್ಥ ಪ್ರಿಯ ಶೇಷವೃತ್ತಾ** - ಇಷ್ಟೆಂದು ಹೇಳಲಸಾಧ್ಯವಾಗಿ ಪ್ರಿಯವಾದ ಸಮಸ್ತ ವಿಧ ಕೈಂಕರ್ಯಗಳಲ್ಲೇ, **ಅಪರ್ಯವಸ್ಯ**-ನಿಂತುಬಿಡದೇ, **ಮಯ್ಯಂತರಾತ್ಮನಿ** - ಎಲ್ಲಾದಕ್ಕೂ ಅಂತರಾತ್ಮನಾದ ನನ್ನಲ್ಲಿ, **ಅತಿಮಾತ್ರ ಪ್ರಹ್ವೀಭಾವ ವ್ಯವಸಾಯಂ** - ಹೆಚ್ಚಾದ ನಮ್ರನಾಗಿರುವ ಭಾವದ ಅಭ್ಯಾಸವನ್ನು, **ಕುರು** - ಮಾಡು. ಸಾಧಾರಣವಾಗಿ ನಮಸ್ಕಾರವು ತುಂಬಾ ಪೂಜ್ಯತೆಯಿದ್ದು, ಉಪಕಾರಗಳನ್ನು ಪಡೆದುದಕ್ಕೆ ಕೃತಜ್ಞತಾಭಾವದಿಂದಲೂ, ಅಥವಾ ಮುಂದೆ ಶ್ರೇಯಸ್ಸನ್ನು ಹೊಂದಬೇಕೆಂಬ ಆಶೆಯಿಂದಲೂ ತೋರಿಸುವ ಪ್ರಹ್ವೀ ಭಾವರೂಪ ವ್ಯಾಪಾರವು. ಚೇತನನಾದ ತನಗೆ ಉಂಟಾಗಿರುವ ಸರ್ವವಿಧ ಆನುಕೂಲ್ಯಗಳೂ ಸರ್ವೇಶ್ವರನಿಂದಲೇ ; ಮುಂದಕ್ಕೂ ಈ ಹೇಯ ಬಂಧ ನಿವೃತ್ತಿಯೂ ನಿರತಿಶಯಾ

**ಭಾ. ರಾಯಣಃ, ಮಯಾ ವಿನಾ ತ್ಮಧಾರಣಾಸಂಭಾವನಯಾ ಮದಾಶ್ರಯ ಇತ್ಯರ್ಥಃ। ಏವ ಮಾತ್ಮಾನಂ ಯುಕ್ತ್ವಾ ಮತ್ಪರಾಯಣ ಸ್ತ್ವಮೇವ ಮನವಧಿಕಾತಿಶಯ ಪ್ರೀತ್ಯಾ ಮದನುಭವಸಮರ್ಥಂ ಮನಃ ಪ್ರಾಪ್ಯ ಮಾಮೇವೈಷ್ಯಸಿ। ಆತ್ಮಶಬ್ದೋ**

ನಂದರೂಪ ಭೋಗವೂ ಆತನಿಂದಲೇ ಯಾಮದರಿಂದ ಪ್ರಹ್ವೀಭಾವವೂ ಮತ್ತು ಅದರ ವ್ಯವಸಾಯವೂ ತನ್ನ ನೈಜ ದಾಸ್ಯ ವೃತ್ತಿಗೆ ಯೋಗ್ಯವಾದುವು. ಹೀಗಿರುವದರಿಂದಲೇ ನಮಃ ಎಂಬುದು ಶರಣಾಗತಿರೂಪವಾದ ಉಪಾಯವನ್ನೇ ಬೋಧಿಸುತ್ತದೆಂಬ ಭಾವವು. ಮನ್ಮನಾಭವ ಎಂದು ಯಾವಾಗ ಮನಸ್ಸನ್ನು ಸರ್ವೇಶ್ವರನಲ್ಲಿಟ್ಟನೋ, ಆಗ ಅದರ ಪರೀವಾಹವಾಗಿ ಕೈಂಕರ್ಯವೂ, ಆತನ ಪ್ರೀತಿಯನ್ನು ಸಂಪಾದಿಸುವದಕ್ಕಾಗಿ ನಮಸ್ಕಾರವೂ ಮಾಡತಕ್ಕದ್ದೆಂದು ವಿಧಿಸಿದರು. ಅನೇಕ ಕೈಂಕರ್ಯಗಳು ಇರುವಾಗ ಈ ನಮಸ್ಕಾರವು ಮುಖ್ಯವಾಗಿ ಹೇಳಲ್ಪಡಲು ಕಾರಣವೇನೆಂದರೆ— **ಶರಣಾನ್ವೇಷಿ**ಯಾಗಿ ಆತನ ಕಾಲಲ್ಲಿ ಬಿದ್ದರೆ ಆತನು ವಶ್ಯನಾಗುವಹಾಗೆ ಇತರ ಕೈಂಕರ್ಯಗಳಿಂದಲ್ಲವಾದುದರಿಂದ, **ನಮಸ್ಕುರು** ಎಂದು ಮುಖ್ಯವಾಗಿ ಹೇಳಲ್ಪಟ್ಟಿತು. (ಹಿಂದೆ ೭. ೧೪ ರಲ್ಲಿ) ಮುಖ್ಯವಾಗಿ ಈ ನಮಸ್ಕಾರವು ಅಙ್ಗರೂಪವಾಗಿ ಪ್ರಪದನ ಶಬ್ದದಿಂದ, **"ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ"** ಎಂಬುದರಿಂದ ಹೇಳಲ್ಪಟ್ಟಿತಾದುದರಿಂದ, **ಶೇಷವೃತ್ತಿ** ರೂಪಕೈಙ್ಕರ್ಯದಲ್ಲಿ **ಅಪರ್ಯವಸ್ಯ** - ನಿಂತು ಬಿಡಬೇಡವೆಂದು ಹೇಳಿ, ಈ ನಮಸ್ಕಾರರೂಪ ಅನುಸಂಧಾನವು ಅಭ್ಯಾಸರೂಪದಲ್ಲಿ ಮಾಡತಕ್ಕದ್ದೆಂದು ಬೋಧಿಸಿರುತ್ತಾರೆ. ಈ ನಮಸ್ಕಾರವು ಸಹಜ ಶೇಷಭಾವದ ಪರಾಕಾಷ್ಠಾದಶೆಯೆಂದು ಭಾವಿಸತಕ್ಕದ್ದು. ಅದರಿಂದುಂಟಾಗುವ ಆನಂದವು ನಿರತಿಶಯವಾದುದೆಂದು ತಿಳಿಸುವದಕ್ಕಾಗಿ **ಅತಿಮಾತ್ರ ಪ್ರಹ್ವೀಭಾವ**ವೆಂಬ ಪ್ರಯೋಗವು.

**ಮತ್ಪರಾಯಣಃ** ಎಂಬುವದಕ್ಕೆ ವ್ಯುತ್ಪತ್ತಿಯು ಹೇಗೆಂದರೆ, **ಅಹಮೇವ ಪರಮಯನಂ ಯಸ್ಯಾಸೌ,** - ನಾನೇ ಯಾವಚೇತನನಿಗೆ ಅತ್ಯಂತ ಶ್ರೇಷ್ಠನಾದ ಪ್ರಾಪಕನೂ, ಪ್ರಾಪ್ಯನೂ, ಆಧಾರನೋ, ಅಂತಹ ಚೇತನನು **ಮತ್ಪರಾಯಣನು,** ಇದರ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ;- **ಮಯಾವಿನಾ** - ನನ್ನಿಂದಲ್ಲದೆ, **ಆತ್ಮಧಾರಣಾ ಸಂಭಾವನಯಾ** - ಆತ್ಮಧಾರಣವು ಸಾಧ್ಯವಿಲ್ಲದುದರಿಂದ, **ಮದಾಶ್ರಯ ಇತ್ಯರ್ಥಃ** - ನನ್ನನ್ನೇ ಆಶ್ರಯವಾಗಿ ಉಳ್ಳವನೆಂಬ ಭಾವವು. ನಾನಿಲ್ಲದ ನಿನಗೆ ಸತ್ತೆಯೂ ಇಲ್ಲವು; ಏನೊಂದು ವ್ಯಾಪಾರವನ್ನೂ ನೀನು ನಡೆಸಲಾರೆ; ನಾನಿಲ್ಲದೆ ಒಳ್ಳೇ ಶ್ರೇಯಸ್ಸು ಮೊದಲಾದವುಗಳನ್ನು ಹೊಂದಲಾರೆ; **"ಸ್ವಯಂ ಮೃತ್ಪಿಂಡ ಭೂತ"**ನು ಎಂಬ ಭಾವವು. **ಏವಮಾತ್ಮಾನಂ ಯುಕ್ತ್ವಾ** - ಹೀಗೆ ಮನಸ್ಸನ್ನು ಸದಾ ನನ್ನಲ್ಲೇ ಸೇರಿಸಿ, **ಮತ್ಪರಾಯಣಃ** - ನನ್ನನ್ನೇ ಆಶ್ರಯವಾಗಿ ಉಳ್ಳವನಾಗಿ, ಹೀಗೆ ನನ್ನನ್ನೇ ಧ್ಯಾನಿಸುತ್ತಾ ಇದ್ದರೆ, ಇಂತಹ ಪರಾಯಣತ್ವವು ಅವ್ಯವಹಿತ ಮೋಕ್ಷಪ್ರಾಪ್ತಿಗೆ ಸಾಧನವಾದ ಪರಮಭಕ್ತಿಯುಂಟಾಗುವದಕ್ಕೆ ಆವಶ್ಯಕವೆಂಬುದು ಪ್ರಕಟಿಸಲ್ಪಟ್ಟಿತು. ನೀನು ಹಿಂದೆ ಉಪಪಾದಿಸಿದ ರೀತಿಯಲ್ಲಿ, **ಅನವಧಿಕಾತಿಶಯಿತ** ಪ್ರೀತಿಯಿಂದ, **ಮದನುಭವ ಸಮರ್ಥಂ** - ನನ್ನನ್ನು ಅನುಭವಿಸಲು ಯೋಗ್ಯವಾದ, **ಮನಃ ಪ್ರಾಪ್ಯ** - ಮನಸ್ಸನ್ನು ಹೊಂದಿದವನಾದರೆ, **ಮಾಮೇವೈಷ್ಯಸಿ** ನನ್ನನ್ನೇ ಹೊಂದುತ್ತೀಯೆ, ನನ್ನ ನಿತ್ಯ ವಿಭೂತಿಯಲ್ಲಿ ನನ್ನ ಸಾಯುಜ್ಯವನ್ನೇ ಹೊಂದಿ ನನಗೆ ಸಮಾನವಾದ ಶಾಶ್ವತವಾದ ಭೋಗವನ್ನು ಹೊಂದುತ್ತೀಯೆ ಎಂಬ ತಾತ್ಪರ್ಯವು. **ಆತ್ಮಶಬ್ದೋ ಹ್ಯತ್ರ ಮನೋವಿಷಯಃ** - ಈ ಶ್ಲೋಕದಲ್ಲಿರುವ ಆತ್ಮಶಬ್ದವಾದರೋ ಮನಸ್ಸನ್ನು ಕುರಿತು ಬೋಧಿಸುವಂತಾದ್ದು. **ಏವಂ ರೂಪೇಣ ಮನಸಾ** - ಇಂತಹ ಮನಸ್ಸಿನಿಂದ ಎಂದರೆ ತೈಲಧಾರಾವದವಚ್ಛಿನ್ನವಾದ ಮನಸ್ಸಿನಿಂದ, **ಮಾಂಧ್ಯಾತ್ವಾ** -

**ಭಾ. ಹ್ಯತ್ರ ಮನೋ ವಿಷಯಃ. ಏವಂ ರೂಪೇಣ ಮನಸಾ ಮಾಂ ಧ್ಯಾತ್ವಾ, ಮಾಮನುಭೂಯ, ಮಾಮಿಷ್ಟ್ವಾ, ಮಾಂ ನಮಸ್ಕೃತ್ಯ, ಮತ್ಪರಾಯಣೋ ಮಾಮೇವ ಪ್ರಾಪ್ಸ್ಯಸೀತ್ಯರ್ಥಃ। ತದೇವಂ ಲೌಕಿಕಾನಿ ಶರೀರ ಧಾರಣಾರ್ಥಾನಿ ವೈದಿಕಾನಿ ಚ ನಿತ್ಯನೈಮಿತ್ತಿಕಾನಿ ಕರ್ಮಾಣಿ ಮತ್ಪ್ರೀತಯೇ ಮಚ್ಛೇಷತೈಕರಸೋ ಮಯೈವ ಕಾರಿತ ಇತಿ ಕುರ್ವನ್, ಸತತಂ ಮತ್ಕೀರ್ತನಯತನ ನಮಸ್ಕಾರಾದಿಕಾನ್ ಪ್ರೀತ್ಯಾ ಕುರ್ವಾಣೋ ಮನ್ನಿಯಾಮ್ಯಂ ನಿಖಿಲಜಗನ್ಮಚ್ಛೇಷತೈಕರಸಮಿತಿ ಚಾನುಸಂದಧಾನೋಽತ್ಯರ್ಥ**

ನನ್ನನ್ನು ಉಪಾಸನೆ ಮಾಡಿ (ಇದು **ಮನ್ಮನಾಃ** ಎಂಬುದರರ್ಥವು) **ಮಾಂ ಅನುಭೂಯ** - ನನ್ನನ್ನನುಭವಿಸಿ ಎಂದರೆ ಅದರಿಂದ ಆನಂದವನ್ನು ಪಡೆದು (ಇದು ಮದ್ಭಕ್ತಃ ಎಂಬುದರರ್ಥವು;) **ಮಾಮಿಷ್ಟ್ವಾ** - ನನ್ನನ್ನೇ ಆರಾಧಿಸಿ (ಇದು ಮದ್ಯಾಜೀ ಎಂಬುದರರ್ಥವು;) **ಮಾಂನಮಸ್ಕೃತ್ಯ** - ನನ್ನನ್ನೇ ನಮಸ್ಕರಿಸಿ, **ಮತ್ಪರಾಯಣಃ** - ಹೀಗೆ ಸದಾ ನನ್ನನ್ನಾಶ್ರಯಿಸಿದವನಾಗಿ, **ಮಾಮೇವ ಪ್ರಾಪ್ಸ್ಯಸೀತ್ಯರ್ಥಃ** - ನನ್ನನ್ನು ಹೊಂದುವಿ ಎಂಬರ್ಥವು. ತತ್ಕ್ರತುನ್ಯಾಯವೂ ಸಹ ಇಲ್ಲಿ **ಉಪಪಾದಿತವು**. ಮುಂದೆ ಈ ಅಧ್ಯಾಯದಿಂದ ತೋರಿಬರುವ **ಸಾರಾಂಶ**ವನ್ನು ಉಪದೇಶಿಸುತ್ತಾರೆ. **ತತ್** - ಆ ಕಾರಣದಿಂದ, ಎಂದರೆ, ನೀನು ಶುಭಾಶುಭ ಫಲರೂಪ ಕರ್ಮ ಬಂಧನಗಳಿಗೆ ಸಿಲುಕಿರುವವರಿಂದಲೂ, (೨೮) ನಾನು ಆ ಬಂಧನವನ್ನು ತಪ್ಪಿಸುವದಕ್ಕಾಗಿ "**ನಿವಾಸ ಶ್ಶರಣಂ** ಸುಹೃತ್" ಆಗಿರುವದರಿಂದಲೂ, ಈ ಭಕ್ತಿರೂಪೋಪಾಯವು ನಿರತಿಶಯ ಸುಖವನ್ನು ಸಾಧಿಸಿಕೊಡುವದರಿಂದಲೂ, ಎಂಬ ಭಾವವು; **ಏವಂ** ಈ ಅಧ್ಯಾಯದಲ್ಲಿ ಉಪಪಾದಿತವಾಗಿರುವ ಹಾಗೆ, **ಲೌಕಿಕಾನಿ ಶರೀರಧಾರಣಾರ್ಥಾನಿ** - ಇತ್ಯಾದಿ, ಶರೀರಧಾರಣೆಗೆ ಉಪಯುಕ್ತಗಳಾದ ಲೌಕಿಕಗಳಾದ ಮತ್ತು ವೈದಿಕಗಳಾದ ನಿತ್ಯನೈಮಿತ್ತಿಕಗಳಾದ ಕರ್ಮಗಳನ್ನೂ, (ಶ್ಲೋ. ೨೭) **ಮತ್ಪ್ರೀತಯೇ** - ನನ್ನ ಪ್ರೀಣನಕ್ಕಾಗಿ, **ಮಚ್ಛೇಷತೈಕರಸಃ** - ನನಗೆ ದಾಸನಾಗಿರುವದೇ ಮುಖ್ಯಾನಂದವಾಗಿ ಭಾವಿಸುವವನಾಗಿ, (೧೬) **ಮಯೈವ ಕಾರಿತ ಇತಿ ಕುರ್ವನ್** - ನನ್ನಿಂದಲೇ ಮಾಡಲ್ಪಟ್ಟಿತೆಂದು ಮಾಡುವವನಾಗಿ, (೨೭) **ಸತತಂ ಮತ್ಕೀರ್ತನಯತನ ನಮಸ್ಕಾರಾದಿಕಾನ್ ಪ್ರೀತ್ಯಾಕುರ್ವಾಣಃ** - ಯಾವಾಗಲೂ ನನ್ನ ಸ್ತೋತ್ರ ಯತನ ನಮಸ್ಕಾರ ಮೊದಲಾದವುಗಳನ್ನು ಪರಮ ಭಕ್ತಿಯಿಂದ ಮಾಡುವವನಾಗಿ, (೧೪ ನೆಯ ಶ್ಲೋ) **ಮನ್ನಿಯಾಮ್ಯಂ ನಿಖಿಲಜಗತ್** - ನನ್ನ ವಿಭೂತಿಯಾಗಿ ನನ್ನ ನಿಯಮಕ್ಕೆ ಒಳಪಟ್ಟ **ಈ** ಸಮಸ್ತ ಜಗತ್ತು (೪ ಮತ್ತು ೧೦ ನೆಯ ಶ್ಲೋಕಗಳು) **ಮಚ್ಛೇಷತೈಕರಸ ಮಿತಿ ಚಾನುಸಂದಧಾನಃ** - ನನಗೆ ಶೇಷಭೂತವಾಗಿರುವದೇ ಮುಖ್ಯಾನಂದವುಳ್ಳದೆಂದು ಅನುಸಂಧಾನ ಮಾಡುವವನಾಗಿ, (೧೩. ನೆಯ ಶ್ಲೋಕಾರ್ಥವು), **ಅತ್ಯರ್ಥ ಪ್ರಿಯಂ ಮದ್ಗುಣಗಣಂ** - ಅತ್ಯರ್ಥಪ್ರಿಯವಾದ ನನ್ನ ಕಲ್ಯಾಣಗುಣ ಸಮೂಹವನ್ನೂ (**ಸಮೋಽಹಂ** ಎಂಬುದರಿಂದ ಹಿಡಿದು ನಾಲ್ಕು ಶ್ಲೋಕಗಳು) "**ಯಸ್ಮಿನ್ ಯದನ್ತಸ್ತದುಪಾಸಿತವ್ಯಂ**" ಎಂದು ಹೇಳಿರುವ ಹಾಗೆ ಉಪಾಸನೆಯನ್ನು ಮಾಡುವಾಗ ಕಲ್ಯಾಣಗುಣಗಣ ಯುಕ್ತನೆಂದೂ ಉಪಾಸಿಸತಕ್ಕದ್ದಾದುದರಿಂದ ಹಾಗೆ ಪ್ರಯೋಗವು. ತೈಲಧಾರೆಯ ಹಾಗೆ ನಿರತಿಶಯ ಪ್ರೀತಿ ನಿರಂತರ ಚಿಂತನೆಯೊಂದಿಗೆ, **ಅನುಸಂಧಾಯ** - ಅನುಸಂಧಾನಮಾಡಿ, **ಅಹರಹಃ** - ಪ್ರತಿ ದಿನದಲ್ಲೂ, **ಉಕ್ತಲಕ್ಷಣ ಮಿದ ಮುಪಾಸನಮ್ ಉಪಾದದಾನಃ** - ಮೇಲೆ ಹೇಳಲ್ಪಟ್ಟ ಲಕ್ಷಣವುಳ್ಳ, ಶಾಸ್ತ್ರದಲ್ಲಿ ಹೇಳಿರುವ ಮೇರೆಗೆ ತಿಳಿಯುವದುಮಾತ್ರವೇ ಅಲ್ಲದೆ ಅದನ್ನು ಅನುಷ್ಠಿಸುವವನೂ ಆದರೆ, ಇಂತಹ ಉಪಾಸನೆಯನ್ನಂಗೀಕರಿಸಿದವನಾದರೆ, **ಉಪಾಸನಂ ಉಪದಧಾನಃ** ಎಂದು ಹೇಳಿರುವದು ಹೇತುರೂಪವಾದುದು ; ಹೀಗೆ ಉಪಾಸನವನ್ನು ಕೈಕೊಂಡು ಯೋಗ ನಿಷ್ಪತ್ತಿಯುಂಟಾದರೆ

**ಭಾ. ಪ್ರಿಯ ಮದ್ಗುಣಗಣಂ ಚಾನುಸಂಧಾಯಾ ಹರಹರುಕ್ತ ಲಕ್ಷಣ ಮಿದ ಮುಪಾಸನ ಮುಪಾದದಾನೋ ಮಾ ಮೇವ ಪ್ರಾಪ್ಸ್ಯಸಿ || ೩೪ ||**

**ಇತಿ ಶ್ರೀಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ನವಮೋಽಧ್ಯಾಯಃ.**

ಎಂಬ ಭಾವವು ; **ಮಾಮೇವ ಪ್ರಾಪ್ಸ್ಯಸಿ** - ನನ್ನನ್ನೇ ಹೊಂದುತ್ತೀಯೇ ; ಇದರಿಂದ ಇದು ಪರಮ ಪುರುಷನನ್ನು ಸಾಧಿಸಿಕೊಡುತ್ತದೆ ಎಂಬುದು ಹೇಳಲ್ಪಟ್ಟಿತು. ಇದು ಮುಖ್ಯವಾದ ಸಾಧ್ಯೋಪಾಯವಾದುದರಿಂದ ಈ ಹಿತೋಪದೇಶವೆಂಬ ಭಾವವು. ಇಲ್ಲಿ **ಮನ್ಮನಾಭವ** ಎಂಬ ಹಿತೋಪದೇಶವು ದೇಹಾವಸಾನದವರೆಗೂ ಯಾವಜ್ಜೀವವೂ ಪ್ರತಿದಿನವೂ ಮಾಡತಕ್ಕದ್ದೆಂದು ತಿಳಿಸುವದಕ್ಕಾಗಿ, **ಅಹರಹಃ** ಎಂಬ ಪ್ರಯೋಗವು.

ಈ ಅಧ್ಯಾಯವು ಹಿತತಮವಾದ ಭಕ್ತಿಯೋಗೋಪಾಯವನ್ನು ಉಪಪಾದಿಸುವದರಿಂದಲೂ ಅದನ್ನು ಶ್ರೀಕೃಷ್ಣಭಗವಾನರವರು **ರಾಜವಿದ್ಯಾ ರಾಜಗುಹ್ಯ** ವೆಂದು ಶ್ಲಾಘಿಸಿರುವದರಿಂದ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಹೆಸರನ್ನು ಹೊಂದಿರುತ್ತದೆ. ಇತರ ನಾಮಗಳಿಗಿಂತ ಇದೇ ಯುಕ್ತವಾದುದಾಗಿ ತೋರುತ್ತದೆ.

ಇಂತು ಶ್ರೀ ಭಗವದ್ಗೀತೆಯ ೯ ನೆಯ ಅಧ್ಯಾಯಕ್ಕೂ, ಶ್ರೀ ಯತಿವರ್ಯರ ಭಾಷ್ಯಕ್ಕೂ,
ತಿರುನಾರಾಯಣಪುರಂ **ಸಿ. ಯಂ. ವಿಜಯರಾಘವಶರ್ಮನ**
**ಆಚಾರ್ಯ ಹೃದಯಾನ್ವೇಷಿಣೀ**
ಎಂಬ ಅರ್ಥ ತಾತ್ಪರ್ಯಗಳೂ ಸಹ ಸಂಪೂರ್ಣವು.

**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**
ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

*

## ಶ್ರೀಮದ್ಯಾಮುನಮುನಯೇ ನಮಃ.

# ಶ್ರೀಮದ್ಗೀತಾರ್ಥಸಙ್ಗ್ರಹೇ

## ನವಮಾಧ್ಯಾಯ ಸಙ್ಗ್ರಹ ಶ್ಲೋಕಃ

**ಸ್ವಮಾಹಾತ್ಮ್ಯಂ, ಮನುಷ್ಯತ್ವೇ ಪರತ್ವಂಚ, ಮಹಾತ್ಮನಾಮ್ ।**
**ವಿಶೇಷೋ, ನವಮೇ, ಯೋಗೋ ಭಕ್ತಿರೂಪಃ, ಪ್ರಕೀರ್ತಿತಃ ॥** ೧೩.

ಈ ೯ ನೆ ಅಧ್ಯಾಯದಲ್ಲಿ **ಪ್ರಕೀರ್ತಿತಃ** - ಹೊಗಳಲ್ಪಟ್ಟಿರುವದು ಎಂದರೆ ಉಪಪಾದಿಸಲ್ಪಟ್ಟಿರುವದು ಯಾವುದೆಂದರೆ ಹೇಳುತ್ತಾರೆ. ನಾಲ್ಕು ವಿಷಯಗಳು ಹೇಳಲ್ಪಟ್ಟಿವೆ ಎಂದು ಉಪದೇಶಿಸುತ್ತಾರೆ.

(೧) **ಸ್ವಮಾಹಾತ್ಮ್ಯಂ**—ತನ್ನ ಮಾಹಾತ್ಮ್ಯೆಯೂ ; ೪ ನೆಯ ಶ್ಲೋಕ ಮೊದಲುಗೊಂಡು ೧೦ ನೆಯ ಶ್ಲೋಕದವರೆಗೂ ಇದು ಹೇಳಲ್ಪಟ್ಟಿರುತ್ತದೆ ಈ ಜಗತ್ತಿಗೆಲ್ಲಾ ತಾನೇ ಕಾರಣನೆಂದೂ (೭-೮), ತನ್ನಿಂದಲೇ ಇವೆಲ್ಲಾ ಸತ್ತಾ ಸ್ಥಿತಿ ನಿಯಮನಾದಿಗಳನ್ನು ಹೊಂದಿರುತ್ತವೆಂದೂ (೪), ಈ ನಿಯಮನಾದಿ ಸರ್ವಪ್ರವೃತ್ತಿಗಳೂ ಸಙ್ಕಲ್ಪಮಾತ್ರದಿಂದಲೇ ಜರಗುತ್ತವೆ ಎಂದೂ (೫), ತನಗೆ ಲೋಕದ ಹೇಯಗುಣಗಳು ಸಂಬಂಧಿಸುವದಿಲ್ಲವೆಂದೂ, ಚೇತನನಿಗೆ ಪ್ರವೃತ್ತಿಗಳೆಲ್ಲವೂ ಅವರವರ ಕಾರ್ಯಾನುಗುಣವಾದುದರಿಂದ ತನಗೆ ವೈಷಮ್ಯ ನೈರ್ಘೃಣ್ಯ ದೋಷಗಳ ಸಂಬಂಧವಿಲ್ಲವೆಂದೂ, (೯) ಹೇಳಿಕೊಂಡಿರುತ್ತಾರೆ.

(೨) **ಮನುಷ್ಯತ್ವೇ ಪರತ್ವಂಚ** - ಮಾನುಷಾವತಾರಿಯಾಗಿದ್ದರೂ ಪರಭಾವವನ್ನು ಹೊಂದಿರೋಣವು (೧೧) ಇದನ್ನು ರಾಜಸ ತಾಮಸ ಗುಣ ಯುಕ್ತರು ಅರಿಯಲಾರರು (೧೨).

(೩) **ಮಹಾತ್ಮನಾಂ ವಿಶೇಷಃ**—ಸ್ವರೂಪ ಸ್ವಭಾವ ದಿವ್ಯಮಙ್ಗಳ ವಿಗ್ರಹಗಳನ್ನು ನಾನು ಹೊಂದಿರುವೆನೆಂದು ಸಾತ್ವಿಕ ಶಿಖಾಮಣಿಗಳು ನನ್ನ ಪರತ್ವವನ್ನು ಅರಿತಿರುವದರಿಂದ ಅವರ ವೈಲಕ್ಷಣ್ಯವು ಹೇಳಲ್ಪಟ್ಟು (೧೩) ಅವರುಗಳು ನನ್ನನ್ನೇ ಯಾವಾಗಲೂ ಸ್ತುತಿಸುತ್ತಾ ಅರ್ಚಿಸುತ್ತಾ ನಮಸ್ಕರಿಸುತ್ತಾ ಇರುವರು (೧೪). ನಿತ್ಯನೈಮಿತ್ತಿಕ ಕರ್ಮಗಳನ್ನನುಷ್ಠಿಸುತ್ತಾ ನನ್ನನ್ನು ಉಪಾಸಿಸುವರು (೧೫). ಅವರುಗಳು ವಿಶೇಷ ಜ್ಞಾನಸಂಯುಕ್ತರಾಗಿ ನಾನು ವಿಶ್ವ ಶರೀರಕನೆಂದು ತಿಳಿದು ಉಪಾಸಿಸುವರು (೧೫ ರಿಂದ ೧೯). ಈ ಮಹಾತ್ಮರ ವಿಶೇಷವನ್ನೇ ಪ್ರಕಟಿಸುವದಕ್ಕಾಗಿ, ಇಂತಹ ಜ್ಞಾನವಿಲ್ಲದ ಮಂದಮತಿಗಳು ಐಹಿಕಕಾಮದಲ್ಲೇ ಬಿದ್ದು ನರಳುವ ಸ್ವಭಾವವುಳ್ಳವರೆಂದು ಪ್ರಾಸಙ್ಗಿಕವಾಗಿ ಹೇಳಿರುತ್ತಾರೆ (೨೦. ೨೧). ಮಹಾತ್ಮರುಗಳಾದ ಜ್ಞಾನಿಗಳಿಗಾದರೋ ಇಂತಹ ದುರ್ಗತಿ ಇಲ್ಲವೆಂದೂ (೨೨. ೨೩. ೨೪. ಮತ್ತು ೨೫). ಅಂತವರುಗಳು ಸಮರ್ಪಿಸುವದೆಲ್ಲಾ ಭಗವಂತನಿಗೆ ಭೋಗ್ಯರೂಪವಾದುದೆಂದೂ (೨೬) ಅವರುಗಳು ಮಾಡುವ ಲೌಕಿಕ ವೈದಿಕ ಸಮಸ್ತ ಕರ್ಮಗಳನ್ನೂ ಭಗವದರ್ಪಣರೂಪದಲ್ಲಿ ಸಮರ್ಪಿಸುವರೆಂದೂ (೨೭) ಹೇಳಲ್ಪಟ್ಟಿರುತ್ತದೆ.

(೪) **ಯೋಗೋಭಕ್ತಿರೂಪಃ.**—ಈ ಜ್ಞಾನಿಗಳು ಮಾಡುವ ಉಪಾಸನವು ಮಹತ್ತಾದುದಾಗಿ, ಅವರಿಗೆ ಭಗವಂತನ ಸಂಕೀರ್ತನ ಯತನ ನಮಸ್ಕಾರಾದಿಗಳೇ ಮೊದಲಾದವು ಇಲ್ಲವಾದರೆ ಆತ್ಮವೇ ನಿಲ್ಲಲಾರದೆನ್ನುವಷ್ಟು ನಿರತಿಶಯವಾಗಿ ತೈಲಧಾರಾವದವಚ್ಛಿನ್ನ ಸ್ಮೃತಿ ಸಂತಾನರೂಪವಾದುದಾಗಿ, ತದ್ಭಜನಂ ವಿನಾ ಬೇರೇ ಆನಂದವೇ ಇಲ್ಲವೆಂಬ ಜ್ಞಾನರೂಪವಾದುದಾಗಿ ಹೇಳಲ್ಪಟ್ಟಿರುತ್ತದೆ (೩೪) ಅಂತಹ ಉಪಾಸನದಲ್ಲಿ ನಿಷ್ಠೆಯುಳ್ಳವರಿಗೆ ಅವರ

ಜಾತಿ, ಕುಲ, ಗುಣ, ವೃತ್ತಾದಿಗಳ ಉತ್ಕೃಷ್ಟನಿಕೃಷ್ಟತೆಯನ್ನು ಪರಿಗಣಿಸದೆ, ಸಮವಾದ ಕೃಪೆಯನ್ನು ತೋರುವೆನೆಂದೂ, ಒಂದುವೇಳೆ ಅವರು ಪ್ರಾರಬ್ಧ ಕಳೆಯದೆ ನಿಕೃಷ್ಟ ಜನ್ಮವನ್ನೆತ್ತಿದರೂ ನಷ್ಟರಾಗುವದಿಲ್ಲವೆಂದೂ, (೨೯. ೩೦. ೩೧). ಅಂತಹ ಸ್ತ್ರೀ ಶೂದ್ರಾದಿಗಳೂ ಕೂಡ ಮುಕ್ತಿ ಹೊಂದಿರುವಾಗ (೩೨), ಇನ್ನು ಬ್ರಾಹ್ಮಣರಾಗಿ ಪುಣ್ಯಶೀಲರಾಗಿ, ರಾಜರ್ಷಿಗಳಾಗಿ ಹುಟ್ಟಿದವರಿಗೆ ಸಂದೇಹವೇನೆಂದು ಹೇಳಿ (೩೩), ಅನಂತರ ೩೪ ನೆಯ ಕೊನೆಯ ಶ್ಲೋಕದಲ್ಲಿ, **ರಾಜವಿದ್ಯಾ ರಾಜಗುಹ್ಯಂ** ಎಂದು ಅಧ್ಯಾಯಾದಿಯಲ್ಲಿ ಹೇಳಿದ ಪರಮ ಹಿತೋಪದೇಶವಾದ ಉಪಾಸನ ಸ್ವರೂಪವನ್ನು ಹೇಳಿ, ಈ ಅಧ್ಯಾಯವನ್ನು ಮುಗಿಸಿರುತ್ತಾರೆ. ಹೀಗೆ ಈ ಒಂಭತ್ತು ಅಧ್ಯಾಯಗಳಿಂದಲೂ ಗೀತೆಯಲ್ಲಿ ಹೇಳಬೇಕಾದ ತತ್ವಹಿತ ಪುರುಷಾರ್ಥಗಳ ಯಾಥಾತ್ಮ್ಯವೂ, ಪರಮ ಹಿತವಾದ ಸಾಧ್ಯೋಪಾಯದ ಸ್ವರೂಪವೂ, ಅದು ಹೇಗೆ ಅನುಗ್ರಹೀತವೂ ಎಂಬಿವು ತಿಳಿಸಲ್ಪಟ್ಟವು. ಶ್ರೀ ಯಾಮುನ ಮುನಯೇನಮಃ

---

## ಒಂಭತ್ತನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

೧. ಹಿಂದಿನ ಅಧ್ಯಾಯದಲ್ಲಿ ಭಕ್ತರಾದ ಉಪಾಸಕರ ಭೇದಗಳು ಪ್ರತಿಪಾದಿಸಲ್ಪಟ್ಟವು. ಈ ಅಧ್ಯಾಯದಲ್ಲಿ ಉಪಾಸ್ಯನಾದ ಪರಮ ಪುರುಷನ ಮಾಹಾತ್ಮ್ಯೆಯೂ, ಭಕ್ತರಲ್ಲಿ ಶ್ರೇಷ್ಠರಾದ ಜ್ಞಾನಿಗಳ ಪಾರಮ್ಯವೂ, ತಿಳಿಸಲ್ಪಟ್ಟು, ಭಕ್ತಿರೂಪವಾದ ಉಪಾಸನದ ಸ್ವರೂಪವು ಹೇಳಲ್ಪಡುತ್ತದೆ. ಲಕ್ಷ್ಮೀಪತಿಯಾದ ಭಗವಂತನು ಹೇಳುತ್ತಾನೆ.—ಓ ಅರ್ಜುನನೇ, ನೀನೂ ಅಸೂಯಾರಹಿತನಾದುದರಿಂದ ನಿನ್ನಲ್ಲಿರುವ ವಾತ್ಸಲ್ಯದಿಂದ ನಿನಗೆ ಈ ಅತ್ಯಂತ ರಹಸ್ಯವಾದ ಈ ಉಪಾಸನರೂಪವಾದ ನನ್ನ ವಿಷಯವಾದ ಜ್ಞಾನವನ್ನೂ, ಅದಕ್ಕೆ ಸಂಬಂಧಿಸಿದ ವಿಶೇಷಜ್ಞಾನವನ್ನೂ, ತಿಳಿಸುವೆನು. ಅದನ್ನು ನೀನು ಚೆನ್ನಾಗಿ ಕೇಳಿ ತಿಳಿದವನಾದರೆ, ನೀನು ಈಗ ನಿನಗಿರುವ ಅಶುಭವಾದ ಸಂಸಾರ ಸಂಬಂಧದಿಂದ ಬಿಡುಗಡೆಯನ್ನು ಹೊಂದುತ್ತೀಯೆ.

೨. ಇದು ಎಲ್ಲಾ ವಿದ್ಯೆಗಳಿಗಿಂತಲೂ ನಿರತಿಶಯವಾದುದರಿಂದಾಗಲಿ, ಅಥವಾ ರಾಜರ್ಷಿಗಳಿಗೆ ಯೋಗ್ಯವಾದ ವಿದ್ಯೆಯಾದುದರಿಂದಾಗಲಿ, ರಾಜವಿದ್ಯೆ ಎಂದು ಹೇಳಲ್ಪಡುತ್ತದೆ. ಎಲ್ಲಾ ರಹಸ್ಯಗಳಿಗಿಂತಲೂ ತುಂಬಾ ರಹಸ್ಯವಾದುದರಿಂದ ರಾಜಗುಹ್ಯವೆನಿಸುತ್ತದೆ. ನನ್ನ ಪ್ರಾಪ್ತಿಗೆ ವಿರೋಧಿಗಳಾದ ಎಲ್ಲಾ ಪಾಪಗಳನ್ನೂ ಹೋಗಲಾಡಿಸುವದರಿಂದ ಪರಮೋತ್ತಮವಾದ ಪವಿತ್ರವಾದ ವಿದ್ಯೆಯು. ಆ ಭಕ್ತಿರೂಪವಾದ ಉಪಾಸನವೆನಿಸುವ ವಿದ್ಯೆಯು ಪರಮ ಪುರುಷನನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸುವದಕ್ಕೆ ವಿಷಯವಾದದ್ದು, ಪರಮ ನಿಶ್ರೇಯಸ್ಸಿನೊಂದಿಗೆ ಸೇರಿದುದು ಎಂದರೆ ಸಾಧಿಸಿಕೊಡುವಂತಾದ್ದು. ಅದೂ ಅಲ್ಲದೆ ಅದನ್ನು ಅನುಷ್ಠಿಸುವದು ತುಂಬಾ ಸುಖಕರವಾದುದು. ಫಲವನ್ನು ಸಾಧಿಸಿಕೊಡುವದಲ್ಲದೆ ಅದಕ್ಕೆ ಎಂದಿಗೂ ನಾಶವಿಲ್ಲವು ಎಂದರೆ ಅದು ಸದಾ ನನ್ನ ಅನುಗ್ರಹ ಸಂಪಾದಕವಾಗಿಯೇ ಇರುವಂತಾದ್ದು.

೩. ಶತ್ರುಗಳನ್ನು ತಪಿಸುವಹಾಗೆ ಮಾಡುವ ಯೋಗ್ಯತೆಯಿರುವ ಅರ್ಜುನನೇ, ಹೀಗೆ ಉಪಾಸನಾನುಷ್ಠಾನರೂಪ ಧರ್ಮವನ್ನು ಮಾಡಿ, ನನ್ನನ್ನು ನಿರಂತರ ನಿರತಿಶಯ ಪ್ರೀತಿಯಿಂದ ಧ್ಯಾನಿಸಿ, ಮೋಕ್ಷಸುಖವನ್ನು ಹೊಂದುವ ಇಂತಹ, ರಾಜವಿದ್ಯೆಯನ್ನನುಷ್ಠಿಸುವ ಯೋಗ್ಯತೆಯು ಅನೇಕರಿಗೆ ಇದ್ದರೂ ಅದರಲ್ಲಿ ವಿಶ್ವಾಸಪೂರ್ವಕತ್ವರೆ ರಹಿತರಾಗಿರುವ ಕ್ಷೇತ್ರಜ್ಞರಾದ ಈ ಬದ್ಧ ಜೀವರುಗಳು ಮೋಕ್ಷದೆಶೆಯಲ್ಲಿ ನನ್ನನ್ನು ಹೊಂದಿ ಪುನರ್ಜನ್ಮವಿಲ್ಲದ ನಿರತಿಶಯ ಪದವನ್ನು ಹೊಂದದೆ ಮೃತ್ಯುರೂಪವಾದ ಸಂಸಾರ ಬಂಧನ ಮಾರ್ಗದಲ್ಲೇ ಬಿದ್ದಿರುತ್ತಾರೆ. ಇದು ತುಂಬಾ ಆಶ್ಚರ್ಯವಲ್ಲವೇ ಎಂಬ ಭಾವವು.

೪, ೫. ಮೊದಲು ಪ್ರಾಪ್ಯನಾಗಿ ಚಿಂತಿಸಲು ಸಾಧ್ಯವಿಲ್ಲದ ನನ್ನ ಮಾಹಾತ್ಮ್ಯೆಯನ್ನು ತಿಳಿಸುವೆನು. ಸಾವಧಾನದಿಂದ ಕೇಳು. ಈ ಚಿದಚಿದಾತ್ಮಕವಾದ ಸರ್ವ ಜಗತ್ತಿನಲ್ಲಿ ನಾನು ಸ್ವರೂಪತಃ ಇರುವಾಗ ಯಾರಿಗೂ ಗೋಚರವಿಲ್ಲದವನಾಗಿ, ಎಲ್ಲಕ್ಕೂ ಅಂತರ್ಯಾಮಿಯಾಗಿರುವ ನನ್ನಿಂದ ಈ ಚಿದಚಿದ್ರೂಪವಾದ ಜಗತ್ತಿನ, ಧಾರಣ, ನಿಯಮನಾರ್ಥವಾಗಿಯೂ ಶೇಷಿಯಾಗಿರುವದಕ್ಕಾಗಿಯೂ ಅವನ್ನೆಲ್ಲಾ ವ್ಯಾಪಿಸಿರುತ್ತೇನೆ. ಆದುದರಿಂದಲೇ ಸಮಸ್ತ ಚಿದಚಿದ್ರೂಪ ಭೂತಗಳೂ ನನ್ನಲ್ಲೇ ಇರುವುವು ಎಂದರೆ ಅವುಗಳು ನನಗೆ ಶರೀರವಾಗಿ ನಾನು ಆತ್ಮನಾದುದರಿಂದ ನನ್ನಿಂದಲೇ ಸತ್ತೆಯನ್ನು ಹೊಂದಿ ನನ್ನ ನಿಯಾಮ್ಯ ವರ್ಗಕ್ಕೆ ಸೇರಿದವು, ಹೀಗೆ ನಾನು ಉಪಕಾರಕನು. ನಾನಾದರೋ ಹಾಗಿಲ್ಲವು ಎಂದರೆ ನನಗೆ ಉಪಕಾರಕವಾಗಿ ಯಾವುವೂ ಇಲ್ಲವು. ಅವುಗಳಿಂದ ನನಗೆ ಆಗತಕ್ಕದ್ದೇನೂ ಇಲ್ಲವು. ನಾನು ಯಾವುದಕ್ಕೂ ಅಧೀನವಾಗಿಲ್ಲವು.

ಅವುಗಳ ಧಾರಣ ನಿಯಮನಾದಿಗಳಿಗೆ ನಾನು ಕಾರಣನೆಂದರೆ, ಕೊಡವು ಜಲಕ್ಕೆ ಆಧಾರವಾಗಿರುವಹಾಗೆ, ನಾನು ಅವುಗಳನ್ನು ಹೊತ್ತಿರುವೆನೆಂದು ತಿಳಿಯತಕ್ಕದ್ದಲ್ಲವು. ಇನ್ನು ಹೇಗೆ ಧಾರಕ ನಿಯಾಮಕನು, ಎಂದರೆ ಸಙ್ಕಲ್ಪಮಾತ್ರದಿಂದಲೇ ಆಧಾರನು ನಿಯಾಮಕನು. ಹೀಗೆ ಎಲ್ಲವನ್ನೂ ವ್ಯಾಪಿಸಿ ನಿಯಮಿಸುವ ಈ ನನ್ನ ಈಶ್ವರತ್ವವೆನಿಸುವ ಯೋಗವನ್ನು ಪರಿಶೀಲಿಸಿ ನೋಡು. ಅದು ಎಂತಾದ್ದೆಂದರೆ ಸಮಸ್ತ ಭೂತಗಳಿಗೂ ಸಙ್ಕಲ್ಪರೂಪ ಧ್ಯಾನಮಾತ್ರದಿಂದಲೇ ನಾನು ಭರ್ತಾ ; ಆದರೆ ಆ ಸಮಸ್ತ ಭೂತಗಳಿಂದಲೂ ನನಗೆ ಆಗತಕ್ಕದ್ದೇನೂ ಇಲ್ಲವು. ನನ್ನ ಮನೋಮಯ ಸಙ್ಕಲ್ಪವೇ ಆ ಭೂತಗಳ ಸತ್ತೆ, ಧಾರಣ ನಿಯಮಾದಿಗಳಿಗೆ ಕಾರಣವು.

೬. ಹೀಗೆ ಸಮಸ್ತವೂ ತನ್ನ ಸಙ್ಕಲ್ಪಾಯತ್ತ ಸತ್ತಾಸ್ಥಿತಿ ನಿಯಮನಗಳನ್ನುಳ್ಳವೆಂದು ಸದೃಷ್ಟಾಂತವಾಗಿ ಹೇಳುತ್ತಾರೆ. ಯಾವುದೊಂದೂ ಆಲಂಬನವಿಲ್ಲದಿರುವ ಆಕಾಶದಲ್ಲಿ ಮಹತ್ತಾದ ವಾಯುವು ಸದಾ ಸಂಚರಿಸುವದರಿಂದ ಅದು ನನ್ನ ಸಙ್ಕಲ್ಪಾಯತ್ತವೆಂದು ನೀನು ಹೇಗೆ ಅವಶ್ಯಕವಾಗಿ ನಂಬಬೇಕಾಗಿದೆಯೋ, ಹಾಗೆಯೇ ಸಮಸ್ತ ಭೂತಗಳೂ ನನ್ನ ಸಙ್ಕಲ್ಪಮಾತ್ರದಿಂದಲೇ ಸತ್ತಾಸ್ಥಿತಿ ನಿಯಮನಾದಿಗಳನ್ನು ಹೊಂದಿ ನನಗೆ ಅಧೀನವಾಗಿವೆ ಎಂದು ತಿಳಿ. ಸೂರ್ಯ ಚಂದ್ರಾದಿಗಳಿಗೆ ಅಂತರಿಕ್ಷದಲ್ಲಿ ಕ್ಲಿಪ್ತವಾದಗತಿಗಳೂ, ಮೇಘೋದಯಗಳೂ, ಸಮುದ್ರವು ವೇಲಾತಿಕ್ರಮಣ ಮಾಡದಿರುವದು, ಹೀಗೆಯೇ ಈ ಪೃಥ್ವಿಯ ಸರ್ವಪ್ರವೃತ್ತಿಗಳೂ ನನ್ನ ಸಙ್ಕಲ್ಪಾಧೀನವಾದವು.

೭. ಸರ್ವಭೂತಗಳ ಸತ್ತಾಸ್ಥಿತಿನಿಯಮನಾದಿಗಳು ಹೇಗೆ ನನ್ನ ಸಙ್ಕಲ್ಪಾಧೀನವಾದವೋ, ಹಾಗೆಯೇ ಚತುರ್ಮುಖನಿಗೂ ಪ್ರಳಯವಾದ ಪ್ರಾಕೃತಪ್ರಳಯದಲ್ಲಿ ನಾಮರೂಪಾನರ್ಹ ಸ್ಥಿತಿಯಾದ ಸೂಕ್ಷ್ಮದಶೆಯನ್ನು ಹೊಂದಿ ನಾನು ಚಿದಚಿದಾತ್ಮನಾಗಿರುವೆನು. ಹಾಗೆಯೇ ಪುನಃ ಸೃಷ್ಟಿಕಾಲದಲ್ಲಿ ನಾಮರೂಪವನ್ನು ಹೊಂದಲು ಯೋಗವಾದ ಸ್ಥೂಲ ದಶೆಯನ್ನು ಹೊಂದುವಹಾಗೆ ಸೃಷ್ಟಿಸಿ ಸ್ಥೂಲಚಿದಚಿದಾತ್ಮಕನಾಗುವೆನು.

೮. ನನಗೆ ಶರೀರವಾಗಿ ನನ್ನದಾಗಿರುವ ವಿಚಿತ್ರಸ್ವರೂಪ ಪರಿಣಾಮವನ್ನು ಹೊಂದುವ ಪ್ರಕೃತಿಯನ್ನು ಮೂಲಮಾಡಿಕೊಂಡು, ಅದರೊಂದಿಗೆ ಸೇರಿ ದೇವತಿರ್ಯಙ್ಮನುಷ್ಯ ಸ್ಥಾವರರೂಪದಲ್ಲಿ ಸರ್ವಪ್ರಾಣಿವರ್ಗವನ್ನು ಸೇರಿಸಿ, ಆ ತ್ರಿಗುಣಾತ್ಮಕವಾದ ಪ್ರಕೃತಿಗೆ ವಶವಾಗಿರುವಹಾಗೆ ನಾನು ಪುನಃಪುನಃ ಆಯಾಕಾಲಗಳಲ್ಲಿ ಹೀಗೆ ವಿವಿಧ ವಿಚಿತ್ರ ಸೃಷ್ಟಿಯನ್ನು ಮಾಡುವೆನು.

೯. ಹೀಗೆ ಭೂತಗ್ರಾಮವನ್ನು ವಿವಿಧ ವಿಚಿತ್ರ ಶರೀರವುಳ್ಳದ್ದಾಗಿ ಸೃಷ್ಟಿಸುವದರಿಂದ ತಮಗೆ ವೈಷಮ್ಯ ನೈರ್ಘೃಣ್ಯ ದೋಷಗಳು ಪ್ರಾಪ್ತವಾಗುವದಿಲ್ಲವೋ ? ಎಂದರೆ ಇಲ್ಲವೆನ್ನು

ತ್ತಾರೆ—ಆ ವಿಷಮ ಸೃಷ್ಟ್ಯಾದಿಗಳು, ಓ ಅರ್ಜುನನೇ, ನನ್ನಲ್ಲಿ ನೈರ್ಘೃಣ್ಯಾದಿದೋಷಗಳಿಗೆ ಗುರಿಮಾಡುವದಿಲ್ಲವು ; ಏಕೆಂದರೆ ಪ್ರಾಣಿಗಳು ಪೂರ್ವದಲ್ಲಿ ಮಾಡಿದ ಕರ್ಮಗಳಿಗನುಸಾರವಾಗಿ ದೇವಾದಿ ವಿಷಮಶರೀರಗಳು ಅವುಗಳಿಗೆ ಉಂಟಾಗುತ್ತವೆ. ಆದುದರಿಂದ ನಾನು ಆ ವೈಷಮ್ಯಕ್ಕೆ ಕಾರಣನಲ್ಲವು. ಶರೀರ ವೈಷಮ್ಯಾದಿಗಳಿಗೆ ಅವರ ಕರ್ಮಗಳೇ ಕಾರಣವಾದುದರಿಂದ ನಾನು ಅವುಗಳಿಗೆ ಸಂಬಂಧವಿಲ್ಲದೇನೆ ಉದಾಸೀನನಹಾಗೆ ಇರುವೆನು.

೧೦. ಹೀಗೆ ಪ್ರಾಣಿಗಳ ಪೂರ್ವಕರ್ಮಾನುಗುಣವಾಗಿ ಸತತ ಪರಿಣಾಮಿಯಾದ ಪ್ರಕೃತಿಯ ಮೂಲಕ ಈ ವಿವಿಧ ವಿಚಿತ್ರ ಸೃಷ್ಟಿಯಾದನಂತರ, ನಿನ್ನಿಂದ ಆಗತಕ್ಕದ್ದೇನು ? ಎಂದರೆ, ನಾನು ಈ ಚರಾಚರಕ್ಕೆಲ್ಲಾ ಅಧ್ಯಕ್ಷನು, ಸ್ವಾಮಿಯು. ಸತ್ಯ ಸಙ್ಕಲ್ಪನಾದ ನನ್ನಿಂದ ಈಕ್ಷಿಸಲ್ಪಟ್ಟೇ ಸೃಷ್ಟಿಯು. ಆದುದರಿಂದ ನಾನೇ ಸರ್ವವಿಧಕಾರಣನು, ಈ ಚರಾಚರಗಳಿಂದ ಕೂಡಿದ ಜಗತ್ತು ನನ್ನಿಂದಲೇ ಉತ್ಪನ್ನವಾಗುತ್ತದೆ. ಓ ಕುಂತೀಪುತ್ರನಾದ ಅರ್ಜುನನೇ ಈ ಮೇಲಿನ ಕಾರಣದಿಂದಲೇ ಈ ಚರಾಚರಯುಕ್ತವಾದ ಜಗತ್ತು ಸೃಷ್ಟಿಲಯಾದಿಗಳಿಗೊಳಗಾಗಿ ಸುತ್ತುತ್ತದೆ.

೧೧. ಈ ವಿಷಯವೆಲ್ಲಾ ಮಹಾತ್ಮರಾದ ಭಕ್ತರಿಗೆ ತಿಳಿಯುವದೇವಿನಾ, ಮೂಢರು ತಿಳಿಯಲಾರರೆನ್ನುತ್ತಾರೆ.—ಹೀಗೆ ಎಲ್ಲಕ್ಕೂ ಕಾರಣಭೂತನಾಗಿ ಸರ್ವಜ್ಞನಾಗಿ ಸತ್ಯಸಙ್ಕಲ್ಪನಾಗಿ ಸರ್ವ ಶೇಷಿಯಾಗಿ, ಪರಮಕಾರುಣ್ಯದಿಂದ ಸರ್ವರೂ ನನ್ನನ್ನಾಶ್ರಯಿಸಿ ಪರಮಶ್ರೇಯಸ್ಸನ್ನು ಹೊಂದಲಿ ಎಂದು ಮಾನುಷ ಶರೀರವೆನ್ನೆತ್ತಿ ಅವತರಿಸಿರುವ, ನನ್ನ ಈ ಸರ್ವೋತ್ಕೃಷ್ಟಭಾವವನ್ನು ತಿಳಿಯದೆ (ದುರ್ಯೋಧನಾದಿ) ಮೂಢರು ಕೇವಲ ಮನುಷ್ಯನೆಂದೇ ಭಾವಿಸುವರು.

೧೨. ಹೀಗೆ ಮೂಢರಾಗಿ ಪರತ್ವವನ್ನು ತಿಳಿಯದೇ ಇರಲು ಕಾರಣವನ್ನು ಹೇಳಿ, ಅದರಿಂದ ಅವರಿಗೆ ಉಂಟಾಗುವ ದುರ್ಗತಿಯನ್ನು ತಿಳಿಸುತ್ತಾರೆ.—ಆ ಮೂಢರಾದರೋ, ಅವರಲ್ಲಿ ಸಾತ್ವಿಕವು ಅತ್ಯಲ್ಪವಾಗಿ ರಾಜಸ ತಾಮಸವು ಹೆಚ್ಚಾಗಿರುವದರಿಂದ, ರಾಕ್ಷಸ ಮತ್ತು ಆಸುರೀ ಸ್ವಭಾವ ಯುಕ್ತರಾಗಿ, ಭ್ರಮ ಬುದ್ಧಿಯಿಂದ ಕೂಡಿದವರು. ಆದುದರಿಂದ, ದೈವಸಹಾಯ ಶೂನ್ಯರಾಗಿ ನಿರರ್ಥಕ ಕಾಮನೆಯುಳ್ಳವರಾಗುವರು ; ಏಕೆಂದರೆ ಅವರು ನಿಷ್ಫಲ ಕರ್ಮಾರಂಭಗಳುಳ್ಳವರು ; ಇದಕ್ಕೆ ಕಾರಣವು ಅವರು ವಿಪರೀತ ಜ್ಞಾನವುಳ್ಳವರಾಗಿರೋಣವು. ಇದು ಏತಕ್ಕೆ ಎಂದರೆ ಯಥಾರ್ಥ ಜ್ಞಾನಶೂನ್ಯರು.

೧೩. ಆದರೆ ಪೂರ್ವ ಸುಕೃತ ಪರಿಪಾಕದಿಂದ ನನ್ನನ್ನು ಶರಣುಹೊಂದಿದ (ಸಂಜಯ ಉದ್ಧವಾದಿ) ಭಕ್ತರಾದ ಮಹಾತ್ಮರಾದರೋ, ಸತ್ವಗುಣಾಧಿಕ್ಯದಿಂದ ದೈವೀ ಸ್ವಭಾವವನ್ನು ಹೊಂದಿದವರಾಗಿರುವದರಿಂದ, ನಾನು ಸರ್ವಭೂತಗಳಿಗೂ ಕಾರಣಭೂತನೆಂದೂ, ನನ್ನ ಪರತ್ವಕ್ಕೆ ಏನೊಂದೂ ಚ್ಯುತಿ ಇಲ್ಲದವನಾಗಿ ಸಾಧು ಪರಿತ್ರಾಣಕ್ಕಾಗಿ ಮನುಷ್ಯನಾಗಿ ನಾನು ಅವತರಿಸಿರುವನೆಂದೂ ತಿಳಿದು, ನನ್ನಲ್ಲಿಯೇ ಭಜನೈಕ ಚಿತ್ತವೃತ್ತಿಯುಳ್ಳವರಾಗಿರುವರು.

೧೪. ಈ ಭಕ್ತರಾಗಿ ಅನನ್ಯಮನಸ್ಕರಾಗಿ ಉಪಾಸಿಸುವರ, ಉಪಾಸನೇತರ ಕಾಲಗಳಲ್ಲಿನ ಪ್ರವೃತ್ತಿಗಳು ಎಂತವೆಂಬುದನ್ನು ತಿಳಿಸುತ್ತಾರೆ.—ಪರತ್ವಕಾರುಣ್ಯ ಸೌಲಭ್ಯಾತಿಶಯವುಳ್ಳ ನನ್ನನ್ನೂ, ನನ್ನ ಕಲ್ಯಾಣಗುಣಗಣವನ್ನೂ, ನನ್ನ ದಿವ್ಯ ಚೇಷ್ಟಿತಗಳನ್ನೂ, ಅವರು ಯಾವಾಗಲೂ ಸ್ತುತಿಸುತ್ತಲೂ, ನನಗೆ ಕೈಙ್ಕರ್ಯ ಆರಾಧನೆ ಮೊದಲಾದವುಗಳನ್ನೆಸಗಬೇಕೆಂಬ ದೃಢ ಸಙ್ಕಲ್ಪರಾಗಿಯೂ, ನಾನು ಪರಮ ಶ್ರೇಯಸ್ಸನ್ನೀಯುವೆನೆಂಬ ಭಾವನೆಯಿಂದ ಮನಸಾ ವಾಚಾ ಕಾಯೇನ ಸಾಷ್ಟಾಙ್ಗ ನಮಸ್ಕರಿಸುತ್ತಲೂ, ಯಾವಾಗಲೂ ನನ್ನೊಂದಿಗೆ ನಿತ್ಯಯೋಗವನ್ನು ಅಪೇಕ್ಷಿಸುವವರಾಗಿಯೂ, ಉಪಾಸನೆಯನ್ನು ಮಾಡುತ್ತಾರೆ.

೧೫. ಇನ್ನು ಕೆಲವರು ಹಿಂದೆ ಹೇಳಿದ ಕೀರ್ತನ, ಯತ್ನ, ನಮಸ್ಕಾರಾದಿಗಳು ಮಾತ್ರವೇ ಅಲ್ಲದೆ, ಅವರೊಂದಿಗೆ ನನ್ನ ಯಥಾರ್ಥ ಸ್ವರೂಪದಿಂದ ಕೂಡಿದ ಜ್ಞಾನಯಜ್ಞದಿಂದ ಕೂಡಿ ನನ್ನನ್ನು ಉಪಾಸಿಸುತ್ತಾರೆ.—ಅದು ಹೇಗೆಂದರೆ, ಸೃಷ್ಟಿಯು ವೈಚಿತ್ರ್ಯ ವೈವಿಧ್ಯದಿಂದ ಬಹುವಾಗಿಯೂ, ಹೀಗಿದ್ದರೂ ಅವುಗಳೆಲ್ಲಾ ನನಗೆ ಶರೀರವಾಗಿ ಅವುಗಳಿಗೆಲ್ಲಾ ನಾನು ಆತ್ಮಾವಾಗಿರುವುದರಿಂದ ಹೀಗೆ ಸ್ಥೂಲ ಚಿದಚಿದ್ವಿಶಿಷ್ಟನಾಗಿ ಒಂದೇಯಾಗಿ ವಿಶ್ವಪ್ರಕಾರನಾಗಿರುವೆನೆಂದು ಭಾವಿಸಿ ಉಪಾಸಿಸುತ್ತಾರೆ.

೧೬. ತಾನು ವಿಶ್ವಶರೀರಕನೆಂಬುದನ್ನು ನಾಲ್ಕು ಶ್ಲೋಕಗಳಿಂದ ಉಪಪಾದಿಸಿ ಹೇಳುತ್ತಾರೆ.—ಭಗವದಾರಾಧನರೂಪಗಳಾದ ಯಜ್ಞಯಾಗಾದಿ ನಿತ್ಯ ನೈಮಿತ್ತಿಕಾನುಷ್ಠಾನಗಳೂ ಅವುಗಳಿಗೆ ಬೇಕಾದ ಪರಿಕರಗಳೂ ಮಂತ್ರಗಳೂ ಎಲ್ಲವೂ ನಾನೇ ಎಂದು ಬೋಧಿಸುತ್ತಾರೆ. ಜ್ಯೋತಿಷ್ಟೋಮಾದಿ ಕ್ರತುವೂ ನಾನೇ; ಪಶ್ವಾಲಂಬನವುಳ್ಳ ಮಹಾಯಜ್ಞವೂ ಪಂಚಮಹಾಯಜ್ಞವೂ ನಾನೇ; ಪಿತೃಗಣಕ್ಕೆ ಕೊಡುವ ಕವ್ಯವೂ ನಾನೇ, ಹವಿಸ್ಸೂ ನಾನೇ, ಮಂತ್ರವೂ ನಾನೇ, ಆಜ್ಯವೂ (ತುಪ್ಪ) ನಾನೇ; ಅಗ್ನಿಯೂ ನಾನೇ; ಸಮಿತ್ತು, ಲಾಜ, ದರ್ಭೆ, ಮೊದಲಾದವೂ ನಾನೇ; ಎಂದರೆ ಎಲ್ಲವೂ ನನಗೆ ಶರೀರವಾಗಿರುವದರಿಂದ ನಾನೇ.

೧೭. ಈ ಸ್ಥಾವರ ಜಙ್ಗಮಾತ್ಮಕವಾದ ಜಗತ್ತಿನಲ್ಲಿ ಅಲ್ಲಿಲ್ಲ ತಂದೆ, ತಾಯಿ, ಪೋಷಕ ರಕ್ಷಕ, ಪಿತಾಮಹಾನೆಂದು ಹೇಳಿಸಿಕೊಳ್ಳುವವರೆಲ್ಲಾ ನಾನೇ ಎಂದರೆ ಅವರುಗಳಿಗೆಲ್ಲಾ ಆತ್ಮಾವಾಗಿರುವವನು ನಾನೇ ಎಂಬ ಭಾವವು. ವೇದಗಳಿಂದ ತಿಳಿಯತಕ್ಕವನಾಗಿ ಪಾವನನಾಗಿರುವನೂ ನಾನೇ; ಓಂಕಾರವೂ, ಋಗ್ಯಜುಸ್ಸಾಮವೇದವೂ ನಹನಾನೇ.

೧೮. ಭಜಿಸುವವರ ಪ್ರಾಪ್ಯಸ್ಥಾನವೂ ನಾನೇ; ಎಲ್ಲರಿಗೂ ಧಾರಕ ಪೋಷಕನೂ ನಾನೇ; ಎಲ್ಲರಿಗೂ ಶಾಸ್ತಾವಾಗಿ ಸ್ವಾಮಿಯಾದವನೂ ನಾನೇ; ಸಾಕ್ಷಾತ್ತಾಗಿ ಎಲ್ಲವನ್ನೂ ನೋಡುತ್ತಿರುವವನೂ ನಾನೇ; ಸರ್ವರ ವಾಸಸ್ಥಾನವೂ ನಾನೇ; ಭಕ್ತರ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಗಳಿಗೆ ಸಹಾಯಭೂತನಾಗಿ ಸಿದ್ಧೋಪಾಯನಾಗಿರುವವನೂ ನಾನೇ; ಭಕ್ತರಿಗೆ ಹಿತೈಷಿಯೂ ನಾನೇ; ಅವರಿಗೆ ಬೇಕಾದುದರ ಉತ್ಪತ್ತಿವಿನಾಶಗಳಿಗೆ ಕಾರಣಭೂತನಾದವನೂ ನಾನೇ; ಯಾವುದು ನಾಶರಹಿತವಾದ ಕಾರಣವೋ ಅದೂ ನಾನೇ.

೧೯. ಹಾಗೇಯೇ ಅವರಿಗೆ ಅನುಕೂಲ ಪ್ರತಿಕೂಲ ರೂಪದಲ್ಲಿ ಭೌತಿಕವಾಗಿ ಪ್ರಾಪ್ತವಾಗುವುದೆಲ್ಲಾ ನಾನೇ ಎಂದು ತಿಳಿಸುತ್ತಾರೆ.—ನಾನೇ ಸೂರ್ಯಾಗ್ನಿರೂಪದಲ್ಲಿ ತಪಿಸುವೆನು. ನಾನೇ. ಮಳೆಗಾಲವನ್ನು ಬಿಸಿಲುಕಾಲದಲ್ಲಿ ತಡೆದು, ಮಳೆಗಾಲದಲ್ಲಿ ಸುರಿಸುವೆನು, ಯಾವುದರಿಂದ ಲೋಕವು ಜೀವಿಸುತ್ತದೋ, ಮತ್ತು ಯಾವುದರಿಂದ ಮರಣವನ್ನು ಹೊಂದುತ್ತದೋ, ಅವೆಲ್ಲವೂ ನಾನೇ. ವರ್ತಮಾನಕಾಲದಲ್ಲಿ ಯಾವುದು ಇರುತ್ತದೋ, ಹಿಂದೆ ಇತ್ತೋ, ಮುಂದೆ ಇರುವುದೋ, ಅವೆಲ್ಲವೂ ನಾನೇ.

೨೦. ಹೀಗೆ ಮಹಾತ್ಮರಾದ ಭಕ್ತರು, ಸರ್ವವಿಶ್ವಾತ್ಮಕತ್ವ ಜ್ಞಾನದೊಂದಿಗೆ ಕೀರ್ತನ ಯತನ ನಮಸ್ಕಾರಾದಿ ಪ್ರವೃತ್ತಿಗಳೊಂದಿಗೆ ನನ್ನನ್ನು ಉಪಾಸನೆ ಮಾಡುವರೆಂದು ಹೇಳಿ, ಅಂತಹ ಜ್ಞಾನಶೂನ್ಯರನ್ನಾಗಿ ಐಹಿಕಗಳಲ್ಲಿ ಅಪೇಕ್ಷೆಯುಳ್ಳ ಐಶ್ವರ್ಯಾರ್ಥಿಗಳ ವೃತ್ತಿಯನ್ನು ತಿಳಿಸುತ್ತಾರೆ.—ಇವರು ಋಗ್ಯಜುಸ್ಸಾಮವೇದಗಳನ್ನು ತಿಳಿದವರಾಗಿ, ಅಲ್ಲಿ ಹೇಳಿರುವ ಯಜ್ಞಗಳನ್ನು ಅನುಷ್ಠಿಸಿ, ನನ್ನನ್ನಾರಾಧಿಸಿದವರಾಗಿ, ಯಜ್ಞಶಿಷ್ಟ ಸೋಮಪಾನವನ್ನು ಮಾಡುವವರಾಗಿ, ಅದರಿಂದ ಸ್ವರ್ಗಪ್ರಾಪ್ತಿಗೆ ಪ್ರತಿಬಂಧಕ ಪಾಪಗಳನ್ನು ಕಳೆದುಕೊಂಡವರಾಗಿ, ಸ್ವರ್ಗಲೋಕಪ್ರಾಪ್ತಿಗಾಗಿ ನನ್ನನ್ನು ಪ್ರಾರ್ಥಿಸುತ್ತಾರೆ. ಅವರು ಪುಣ್ಯಕರವಾದ ಇಂದ್ರನ ಲೋಕವನ್ನು ಹೊಂದಿ, ದುಃಖಮಿಶ್ರವಲ್ಲದ ಸ್ವರ್ಗಲೋಕಭೋಗಗಳನ್ನನುಭವಿಸುತ್ತಾರೆ.

೨೧. ಇವರು ತಮ್ಮ ಪ್ರಾರ್ಥನೆಗೆ ಅನುಗುಣವಾದ ವಿಶಾಲವಾದ ಸ್ವರ್ಗಲೋಕದ ಭೋಗಗಳನ್ನನುಭವಿಸಿ, ಮಾಡಿದ ಸುಕೃತ ಪರಿಪಾಕವು ಮುಗಿದನಂತರ, ಈ ಮಾನುಷಲೋಕವನ್ನೇ ಮಿಕ್ಕ ಕರ್ಮಾನುಭವಕ್ಕಾಗಿ ಪ್ರವೇಶಿಸುವರು. ಹೀಗೆ ಕೇವಲ ವೇದಗಳಲ್ಲಿನ ಯಜ್ಞಯಾಗಾದಿ ಅನುಷ್ಠಾನಪರರು ಐಹಿಕ ಕಾಮುಗಳಲ್ಲಿ ಆಶೆಯುಳ್ಳವರಾಗಿ, ಅತಾಶ್ವಗಳಾದ ಫಲಗಳನ್ನು ಹೊಂದುವರು. ಪುನಃ ಪುನಃ ಜನ್ಮ ಸಂತತಿಯನ್ನೆತ್ತುವರು.

೨೨. ಆದರೆ, ನನ್ನಸ್ನ್ನು ಅನನ್ಯ ಮನಸ್ಕರಾಗಿ ಉಪಾಸಿಸುವ ಜ್ಞಾನಿಗಳಿಗಾದರೋ ಜನ್ಮ ಸಂತತಿ ಇಲ್ಲವೆನ್ನುತ್ತಾರೆ.—ಅನನ್ಯ ಪ್ರಯೋಜನರಾಗಿ ನನ್ನನ್ನೇ ಧ್ಯಾನಿಸುತ್ತಾ ಯಾವ ಭಕ್ತರು ನನ್ನನ್ನು ವಿಶ್ವತೋಮುಖ ಜ್ಞಾನದೊಂದಿಗೆ ಉಪಾಸಿಸುತ್ತಾರೋ, ಹಾಗೇ ನನ್ನೊಂದಿಗೇನೇ ಯಾವಾಗಲೂ ಇರಬೇಕೆಂಬ ಅಪೇಕ್ಷೆಯುಳ್ಳವರ ಯೋಗಕ್ಷೇಮವನ್ನು ನಾನೇ ವಹಿಸುವೆನು. ಯೋಗವೆಂದರೆ ಇದುವರೆಗೂ ಲಭಿಸದೇ ಇರುವುದರ ಪ್ರಾಪ್ತಿಯು, ಅದೇ ಮೋಕ್ಷವು ಕ್ಷೇಮವೆಂದರೆ ಹಾಗೆ ಪ್ರಾಪ್ತವಾದುದರ ರಕ್ಷಣೆಯು, ಮೋಕ್ಷವು ಲಭಿಸಿದನಂತರ, ಪುನರಾವರ್ತಿ ಇಲ್ಲದಹಾಗೆ ಅದರ ರಕ್ಷಣೆಯು.

೨೩. ಕಾಮಕಾಮಿಗಳಾದ ಐಶ್ವರ್ಯಾರ್ಥಿಗಳ ಆರಾಧನೆಯಿಂದಲೂ ನಾನೇ ಆರಾಧಿಸಲ್ಪಡುವವನು, ಹೀಗಿರುವಾಗ, ಅವರಿಗೆ ಪುನರ್ಜನ್ಮ ಪ್ರಾಪ್ತಿಯೂ, ಜ್ಞಾನಿಗಳಾಗಿ ಅನನ್ಯ ಮನಸ್ಕರಾಗಿ ನಿನ್ನನ್ನು ಉಪಾಸಿಸುವವರಿಗೆ ಪುನರ್ಜನ್ಮ ನಿವೃತ್ತಿಯೂ, ಹೀಗೆ ವ್ಯತ್ಯಸ್ತಫಲವು ನ್ಯಾಯವೋ? ಎಂದರೆ ಸಮಾಧಾನವನ್ನು ಹೇಳುತ್ತಾರೆ.—ಯಾರು ಇಂದ್ರಾದಿ ಅನ್ಯದೇವತೆಗಳ ಭಕ್ತರಾಗಿ ವೇದಗಳಲ್ಲಿ ಹೇಳಿರುವ ಯಜ್ಞಯಾಗಾದಿಗಳನ್ನು ಶ್ರದ್ಧೆಯಿಂದ ಕೂಡಿದವರಾಗಿ ಅನುಷ್ಠಿಸುತ್ತಾರೋ, ಅವರೂ ಸಹ ಆ ದೇವತೆಗಳಿಗೂ ಆತ್ಮನಾಗಿರುವ ನನ್ನನ್ನೇ ಆರಾಧಿಸುವುದೇನೋ ನಿಶ್ಚಯವು. ಆದರೆ ಅವರ ಆರಾಧನೆಯು ಶಾಸ್ತ್ರ ದೃಷ್ಟಿ ಇಲ್ಲದುದು, ಏಕೆಂದರೆ, ಆ ದೇವತೆಗಳೂ ನನಗೆ ಶರೀರವಾಗಿ, ಅವರ ಆರಾಧನೆಯಿಂದ ಅವರಿಗೆ ಆತ್ಮನಾದ ನಾನೇ ಆರಾಧಿಸಲ್ಪಡುವವನೆಂಬ ಜ್ಞಾನವು, ಅವರಿಗೆ ಇಲ್ಲದುದರಿಂದ ವಿಧಿಪೂರ್ವಕವಾದುದಲ್ಲವು.

೨೪. ಹೀಗೆ ಎಲ್ಲಾ ಬ್ರಹ್ಮ ರುದ್ರೇಂದ್ರಾದಿ ದೇವತಗಳೆಲ್ಲಾ ನನಗೆ ಶರೀರವು, ಅವರಿಗೆಲ್ಲಾ ನಾನು ಆತ್ಮ ಎಂಬ ಜ್ಞಾನವಿಲ್ಲದೆ ಆರಾಧಿಸುತ್ತಾರಾದುದರಿಂದ, ಸಮಸ್ತ ಯಜ್ಞಗಳಲ್ಲೂ ಭೋಕ್ತಾವೂ ನಾನೇ, ಅವುಗಳನ್ನು ನಡೆಸಿಕೊಟ್ಟು ಫಲಕೊಡುವ ಸಾಮರ್ಥ್ಯವುಳ್ಳ ಸ್ವಾಮಿಯೂ ನಾನೇ, ಎಂಬ ಯಥಾರ್ಥಜ್ಞಾನವು ಅವರಿಗಿಲ್ಲವು, ಆದುದರಿಂದಲೇ ಅವರು ಪುನಃ ಪುನಃ ಸಂಸಾರ ಬಂಧಕ್ಕೆ ಸಿಕ್ಕಿ ಜಾರಿಬೀಳುವರು.

೨೫. ಐಶ್ವರ್ಯಾರ್ಥಿಯಾಗಿ ಫಲಕಾಮನೆಯಿಂದ ಮಾಡಿದ ಯಜ್ಞಾದಿ ಕರ್ಮಕ್ಕೆ ಅಲ್ಪಾಸ್ಥಿರ ಫಲದೊಂದಿಗೆ ಪುನಸ್ಸಂಸಾರವೂ, ಜ್ಞಾನಿಯಾಗಿ ಫಲಕಾಮನೆಯಿಲ್ಲದೆ ಮಾಡಿದ ಆಕರ್ಮಕ್ಕೆ ಮಹತ್ತಾದ ಶಾಶ್ವತವಾದ ಅಪುನರಾವೃತ್ತಿಯೂ ಹೀಗೆ ಫಲಭೇದವು ಅತ್ಯಾಶ್ಚರ್ಯಕರವಾದುದೆಂದು ಹೇಳುತ್ತಾರೆ—ಇಂದ್ರಾದಿಗಳನ್ನು ಕುರಿತು ಯಜ್ಞಮಾಡುತ್ತೇವೆಂದು ಸಙ್ಕಲ್ಪಸಿ ಆರಾಧಿಸುವವರು ಅವರುಗಳ ಲೋಕಗಳನ್ನು ಹೊಂದಬಹುದು; ಹಾಗೆಯೇ ಪಿತೃಗಳನ್ನು ಕುರಿತು ಯಜ್ಞಮಾಡತಕ್ಕದ್ದೆಂದು ಸಙ್ಕಲ್ಪಿಸಿ ನಡೆಸುವವರು ಪಿತೃಲೋಕಗಳನ್ನು ಪಡೆಯಬಹುದು. ಯಕ್ಷರಾಕ್ಷಸ ಪಿಶಾಚಗಳನ್ನುದ್ದೇಶಿಸಿ ಯಜ್ಞಮಾಡಿದವರು ಅವರುಗಳ ಲೋಕಗಳನ್ನು ಹೊಂದಬಹುದು; ಇವೆಲ್ಲಾ ಅಲ್ಪಾಸ್ಥಿರ ಫಲಗಳು, ಪುನಸ್ಸಂಸಾರಕ್ಕೆ ಹೇತುವು. ಆದರೆ ನನ್ನನ್ನಾರಾಧಿಸಬೇಕೆಂದು ಸಙ್ಕಲ್ಪಿಸಿ ನಿಷ್ಕಾಮರಾಗಿ ಯಜ್ಞಗಳನ್ನನುಷ್ಠಿಸುವವರು, ಶಾಶ್ವತವಾದ ಪುನಸ್ಸಂಸಾರವಿಲ್ಲದ ನನ್ನ ಲೋಕದಲ್ಲಿ ನನ್ನ ಸಾಯುಜ್ಯವನ್ನು ಹೊಂದುವರು.

೨೬. ಇಂದ್ರಾದಿಗಳನ್ನು ಪ್ರೀತಿಗೊಳಿಸಬೇಕಾದರೆ ಶಾಸ್ತ್ರದಲ್ಲಿ ವಿಧಿಸಿರುವದಕ್ಕೆ ಸ್ವಲ್ಪವೂ ವ್ಯತ್ಯಾಸವಿಲ್ಲದೆ ನಡೆಯಬೇಕು, ನನ್ನನ್ನು ಪ್ರೀತಿಗೊಳಿಸುವದಾದರೋ ತುಂಬಾ ಸುಲಭವೆನ್ನುತ್ತಾರೆ ವಿಹಿತ ದಿನಗಳಲ್ಲಿ ಎತ್ತಿದ ಬರೀ ತುಳಸೀದಳವನ್ನಾಗಲಿ, ನನ್ನ ಪ್ರೀತಿಗೆ ಅರ್ಹವಾದ ಕೇವಲ ಪುಷ್ಪವನ್ನಾಗಲಿ, ಅರ್ಘ್ಯ ಪಾದ್ಯಾಚಮನಗಳ ರೂಪದಲ್ಲಾಗಲಿ ಅಭಿಷೇಕರೂಪದಲ್ಲಾಗಲಿ ತೀರ್ಥವನ್ನಾಗಲಿ, ಯಾವ ಜ್ಞಾನಿಯು ವಿಶೇಷ ಭಕ್ತಿಯಿಂದ ಸಮರ್ಪಿಸುತ್ತಾನೋ, ಅದನ್ನು ಭಕ್ತನು ಹೀಗೆ ಪರಿಶುದ್ಧ ಮನಸ್ಸಿನಿಂದ ಸಮರ್ಪಿಸಿದನೇ ಎಂಬ ಭಾವನೆಯಿಂದ ತುಂಬಾ ಆದರದಿಂದ ಸ್ವೀಕರಿಸುವೆನು; ಕೃಷ್ಣ ತುಲಾಭಾರದಲ್ಲಿ ತುಳಸೀಪತ್ರವೂ ಗಜೇಂದ್ರನ ಪುಷ್ಪವೂ, ವನವಾಸದ ಪ್ರಥಮದಿನದಲ್ಲಿ ಲಕ್ಷ್ಮಣನು ಶ್ರೀರಾಮನಿಗೆ ಸಮರ್ಪಿಸಿದ ತೀರ್ಥವೂ ಪರಮ ಗ್ರಾಹ್ಯವಾದುವೆಂಬುದು ಉಪದೇಶಿಸಲ್ಪಟ್ಟಿತು.

೨೭. ಆದುದರಿಂದ ನೀನು ಐಶ್ವರ್ಯಕಾಮಿಯಾಗದೆ, ಜ್ಞಾನಿಯಾಗಿ ಮಹಾತ್ಮನಾಗಿ ಉಪಾಸಿಸತಕ್ಕದ್ದೇ ನಿನಗೆ ಉಚಿತವಾದುದರಿಂದ, ನೀನು ಧರ್ಮದಲ್ಲಿ ದೃಷ್ಟಿಯಿಟ್ಟು ಮಾಡುವ ಸರ್ವವ್ಯಾಪಾರಗಳನ್ನು ನನ್ನಲ್ಲಿ ಸಮರ್ಪಿಸಿ ಕೃಷ್ಣಾರ್ಪಣಮಸ್ತು ಎಂದು ಹೇಳು ಎನ್ನುತ್ತಾರೆ,— ಯಾವ ವಿಹಿತ ಲೌಕಿಕ ಕರ್ಮವನ್ನು ಮಾಡುತ್ತೀಯೋ, ದೇಹಧಾರಣೆಗಾಗಿ ಯಾವ ಪರಿಶುದ್ಧ ಅನ್ನವನ್ನು ತಿನ್ನುತ್ತೀಯೋ, ಯಾವ ವೈದಿಕವಾದ ಹೋಮಾದಿಗಳನ್ನು ಮಾಡುತ್ತೀಯೋ, ಯಾವ ಸತ್ಪಾತ್ರದಲ್ಲಿ ದಾನಮಾಡುತ್ತೀಯೋ, ಯಾವ ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸನ್ನು ಮಾಡುತ್ತೀಯೋ, ಅವೆಲ್ಲವನ್ನೂ ನನ್ನಲ್ಲಿ ಸಮರ್ಪಿಸು.

೨೮. ಹೀಗೆ ವಿಹಿತಗಳಾದ ಸರ್ವಲೌಕಿಕ ಕರ್ಮಗಳನ್ನೆಲ್ಲಾ ನನ್ನ ಪ್ರೀತ್ಯರ್ಥವಾಗಿ ಮಾಡಿ, ಶ್ರೀಕೃಷ್ಣಾರ್ಪಣಮಸ್ತು ಎಂದು ತ್ಯಾಗಮಾಡಿದುದಾದರೆ ಉಂಟಾಗುವ ಫಲವನ್ನು ನಿರೂಪಿಸುತ್ತಾರೆ— ಹೀಗೆ ಸರ್ವಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸೋಣವೆಂಬ ಯೋಗದಿಂದ ಕೂಡಿದ ಮನಸುಳ್ಳವನಾದರೆ, ಸಮಸ್ತ ಈ ಲೌಕಿಕ ವೈದಿಕ ಕರ್ಮಗಳನ್ನೆಸಗಿದರೂ ಕೂಡ, ಹಿಂದಿನ ಸಮಸ್ತಕರ್ಮಬಂಧಗಳಿಂದಲೂ ಬಿಡಲ್ಪಡುವಿ, ಮುಂದಕ್ಕೂ ಈ ಕರ್ಮಗಳೂ ನಿನ್ನನ್ನು ಬಂಧಿಸುವುದಿಲ್ಲವಾದುದರಿಂದ, ಅವುಗಳಿಂದ ಬಿಡಲ್ಪಟ್ಟವನಾಗಿ ನನ್ನನ್ನೇ ಹೊಂದುತ್ತೀಯೆ.

೨೯. ಹಿಂದೆ ಅನಂತಾಪರಾಧಗಳನ್ನು ಮಾಡಿದ್ದರೂ ಅವುಗಳು ಬಂಧಿಸುವುದಿಲ್ಲವು, ಪರಮಕಾರುಣಿಕನಾದ ನನ್ನ ಅಪ್ರಾಕೃತ ಅಲೌಕಿಕ ಸ್ವಭಾವವನ್ನು ಹೇಳುತ್ತೇನೆ ಕೇಳು ಎನ್ನುತ್ತಾರೆ,— ಸರ್ವ ಪ್ರಾಣಿಗಳೂ, ಹಿಂದೆ ಅವರು ಎಂತವರೇಯಾಗಿರಲಿ, ನನ್ನನ್ನು ಯಾವಾಗ ಆಶ್ರಯಿಸಿದರೋ, ಆಗ ಅವರ ವಿಷಯದಲ್ಲಿ ನನಗೆ ಸಮವಾದ ಪ್ರೀತಿಯೇ. ಹಿಂದೆ ಜಾತಿಗುಣ ಪ್ರವೃತ್ತಿಗಳಿಂದ ನಿಕೃಷ್ಟನಾಗಿದ್ದನೆಂಬದಾಗಿ ಆತನಲ್ಲಿ ನನಗೆ ದ್ವೇಷವಿಲ್ಲವು; ಹಿಂದೆ ಜಾತಿಗುಣ ಪ್ರವೃತ್ತಿಗಳಿಂದ ಉತ್ಕೃಷ್ಟನಾಗಿದ್ದನೆಂಬದಾಗಿ ವಿಶೇಷ ಮಮತೆ ಇಲ್ಲವು. ಆಶ್ರಿತರೆಲ್ಲಾ ನನಗೆ ಸಮರೇ. ಇಂತಹ ಆಶ್ರಿತರಲ್ಲಿ ಸಮತ್ವವು ಈ ಲೋಕದಲ್ಲಿ ಯಾರಲ್ಲೂ ದೊರಕುವದು ಕಷ್ಟವು. ಯಾರು ನನ್ನನ್ನು ಭಕ್ತಿಯಿಂದ ಆರಾಧಿಸಿ ಉಪಾಸಿಸುತ್ತಾರೋ, ಅವರು ನನಗೆ ಸಮಾನವಾದ ಗುಣಸ್ವರೂಪರಾಗಿ, ನಾನೇ ಸಮಸ್ತವೆಂದು ಭಾವಿಸಿ ನನ್ನ ವಿಷಯದಲ್ಲಿ ನಡೆದುಕೊಳ್ಳುವರು, ಆದರಿಂದಲೇ ನಾನೂ ಕೂಡ ಅವರ ವಿಷಯದಲ್ಲಿ ಉತ್ಕೃಷ್ಟಾಭಿಮಾನವನ್ನು ಇಟ್ಟಿರುವೆನು.

೩೦. ನೀನು ಜಾತಿಗುಣ ವೃತ್ತದಿಂದ ಮಹನೀಯರಾಗಿರುವ ಆಶ್ರಿತರ ವಿಷಯದಲ್ಲಿ ಇಂತಹ ಪ್ರೀತಿಯನ್ನು ತೋರಿಸುವದೇನೋ ನ್ಯಾಯವು, ಹಿಂದೆ ವಿಶೇಷ ದುರಾಚಾರಿಯಾಗಿರುವವರ ವಿಷಯದಲ್ಲೂ ಇಂತಹ ಸಮವಾದ ಪ್ರೀತಿಯು ನ್ಯಾಯವೋ? ಎಂದರೆ ನ್ಯಾಯವೆನ್ನುತ್ತಾರೆ—ಈಗ ಆಶ್ರಯಿಸಿರುವವನು ಹಿಂದೆ ಎಷ್ಟು ದುರಾಚಾರಿಯೇ ಇರಲಿ, ಆತನು ಮುಂದಕ್ಕೆ ವಿಹಿತವೃತ್ತಿಯಲ್ಲಿದ್ದುಕೊಂಡು ನನ್ನನ್ನಾಶ್ರಯಿಸಬೇಕೆಂಬ ದೃಢಸಙ್ಕಲ

ನಾಗಿರುತ್ತಾನೆಯಲ್ಲವೇ. ಆದುದರಿಂದ ಈಗ ಆತನು ಪರಮ ಗ್ರಾಹ್ಯನಾಗಿ ಸಾಧುವೆಂದೇ ಅಭಿಮಾನಿಸತಕ್ಕದ್ದು. ಹಿಂದಿನ ದುರಾಚಾರದಿಂದ ಆತನು ತಾಜ್ಯನಲ್ಲವು.

೩೧. ಅಂತಹ ದುರಾಚಾರನಾದವನನ್ನು ರಕ್ಷಿಸುವದು ನ್ಯಾಯವೋ ಎಂದಾಕ್ಷೇಪಿಸುವಿಯೋ? ರಕ್ಷಿಸುವದು ನ್ಯಾಯವೇ ಎನ್ನುತ್ತಾರೆ.—ಏಕೆಂದರೆ, ಆತನು ಮುಂದಕ್ಕೆ ಅಂತಹ ದೃಢಸಙ್ಕಲ್ಪವುಳ್ಳವನಾದುದರಿಂದ ಬಹು ಶೀಘ್ರವಾಗಿ ನನ್ನ ಪ್ರೀತಿಯನ್ನು ಸಂಪಾದಿಸಿಕೊಂಡು ಹಿಂದಿನ ಪಾಪಗಳನ್ನು ಕಳೆದುಕೊಳ್ಳುವದರಿಂದ ಧರ್ಮಾತ್ಮನಾಗುತ್ತಾನೆ. ಆದರಿಂದ ಆತನಿಗೆ ನನ್ನ ಭಜನದಲ್ಲೇ ಮನಸ್ಸುಂಟಾಗುತ್ತದೆ. ಆದರಿಂದ ದುರಾಚಾರಗಳನ್ನೆಲ್ಲಾ ತ್ಯಾಗಮಾಡಿ ನನ್ನ ಪ್ರಾಪ್ತಿಗೆ ಅನುಕೂಲವಾದ ಮನಸ್ಸಿನ ಶಾಂತಿಯನ್ನು ಹೊಂದುವನು. ಓ ಕುನ್ತೀಪುತ್ರನೇ, ನನ್ನ ಭಕ್ತನು ಎಂದಿಗೂ ನಷ್ಟಹೊಂದುವದಿಲ್ಲವೆಂಬ ವಿಷಯದಲ್ಲಿ ನೀನೇ ದೃಷ್ಟಾಂತವಾದುದರಿಂದ, ನೀನೇ ನನಗಾಗಿ ಪ್ರತಿಜ್ಞೆಯನ್ನು ಮಾಡಬಹುದು.

೩೨. ಆಗಲಿ, ಒಂದುವೇಳೆ ಆಶ್ರಯಿಸಿದ ನಂತರ ಕಾರಣಾಂತರದಿಂದ ನಿಕೃಷ್ಟ ಜನ್ಮ ಬಂದರೂ, ಅಥವಾ ನೀಚಜನ್ಮ ಬಂದು ನನ್ನನ್ನು ಪ್ರಪದನದ ಮೂಲಕ ಆಶ್ರಯಿಸಿದರೂ, ಅವರಿಗೂ ಮುಕ್ತಿಯುಂಟು ಎನ್ನುತ್ತಾರೆ.—ಓ ಪಾರ್ಥನೇ, ನೀಚ ಜನ್ಮವನ್ನು ಹೊಂದುವವರಾಗಿ, ಅವರು ಸ್ತ್ರೀಯರೇ ಆಗಲಿ, ಸತ್ರಾದಿಗಳಲ್ಲಿ ಅಧಿಕಾರವಿಲ್ಲದ ವೈಶ್ಯರೇಯಾಗಲಿ, ಶೂದ್ರರೇಯಾಗಲಿ, (ಉಪಲಕ್ಷಣವಾಗಿ, ಚಂಡಾಲರೇ ಆಗಲಿ) ನನ್ನನ್ನು ಭಾಗವತ ಸಂಪ್ರಯಣ ಮೂಲಕ ಆಶ್ರಯಿಸಿದುದಾದರೆ, ಅಂತವರೂಕೂಡ ಶ್ರೇಷ್ಠಗತಿಯಾದ ಮುಕ್ತಿಯನ್ನು ಹೊಂದುವರು. ಅವರಲ್ಲಿ ನನ್ನ ವಾತ್ಸಲ್ಯವು ಅಂಥಾದ್ದು.

೩೩. ಹೀಗೆ ನಿಕೃಷ್ಟ ಜನ್ಮ ಬಂದು ಚನ್ನಾಗಿ ಆಶ್ರಯಿಸಿದವರಿಗೇನೇ ನನ್ನ ಸಂಪೂರ್ಣಾನುಗ್ರಹ ಉಂಟು ಎಂದು ಪ್ರತಿಜ್ಞೆಯಾದನಂತರ, ಅವರುಗಳಿಗೆ ಸುಕೃತ ವಿಶೇಷದಿಂದ ಬ್ರಾಹ್ಮಣಾದಿ ಜನ್ಮಗಳುಂಟಾದರೆ, ಇನ್ನು ಅವರುಗಳು ಶ್ರೇಷ್ಠವಾದ ಗತಿಯನ್ನು ಹೊಂದುವರೆಂದು ಹೇಳಬೇಕೇ? ಅದು ಸ್ವತಸ್ಸಿದ್ಧವು. ಆದುದರಿಂದ, ಓ ಅರ್ಜುನನೇ, ಸುಕೃತ ಪರಿಪಾಕದಿಂದ ನಿನಗೆ ಒಳ್ಳೇ ಜನ್ಮ ಪ್ರಾಪ್ತವಾಗಿದೆ. ಈ ಸುಸಮಯದಲ್ಲೇ ಈ ಲೋಕದ ಒಳ್ಳೇ ಜ್ಞಾನ ವಿವೇಕಾದಿಗಳುಳ್ಳವನಾಗಿ ಜನಿಸಿರುವ ನೀನು, ಈ ಲೋಕವು ಅನಿತ್ಯವಾದುದು ಸುಖವಿಲ್ಲದುದು ಅಂತಹ ಲೋಕದಲ್ಲಿ ನಾನು ಇರುತ್ತೇನೆಂದು ತಿಳಿದು, ನನ್ನನ್ನು ಭಜಿಸು, ನನ್ನನ್ನು ಹೊಂದುವದಕ್ಕಾಗಿ ಉಪಾಯಾನುಷ್ಠಾನವನ್ನು ಮಾಡು ಎಂಬ ಹಿತೋಪದೇಶವು.

೩೪. ಆದುದರಿಂದ ನನ್ನ **ಪರಮಹಿತೋಪದೇಶ**ವೇನೆಂದರೆ.—ನಾನೇ ಸರ್ವಕಾರಣನಾಗಿ ಧ್ಯೇಯವಸ್ತುವಾದುದರಿಂದ ನನ್ನ ದಿವ್ಯ ಮಙ್ಗಳ ವಿಗ್ರಹವನ್ನೂ, ನನ್ನ ಕಲ್ಯಾಣಗುಣಗಳನ್ನೂ, ಚಿನ್ತಿಸುತ್ತಾ, ತೈಲಧಾರೆಯಂತೆ ಅವಿಚ್ಛಿನ್ನಸ್ಮೃತಿ ಸಂತಾನರೂಪ ಧ್ಯಾನವನ್ನು ಮಾಡುವವನಾಗಿ ನನ್ನಲ್ಲೇ ಮನಸ್ಸನ್ನಿಡು. ನನ್ನಲ್ಲಿ ಅಪರಿಮಿತವಾದ ಪ್ರೀತಿಯನ್ನು ತೋರಿಸುವದರ ಮೂಲಕ ನನ್ನ ಭಕ್ತನಾಗು. ನೀನು ಪ್ರತಿನಿತ್ಯದಲ್ಲೂ ಮಾಡುವ ನಿತ್ಯನೈಮಿತ್ತಿಕಾದಿ ಪಂಚ ಮಹಾ ಯಜ್ಞಗಳನ್ನು ಫಲಾಭಿಸಂಧಿಯಿಲ್ಲದೆ ನನ್ನ ಪ್ರೀತ್ಯರ್ಥವಾಗಿಯೇ ಅನುಷ್ಠಿಸಿ, ಅವುಗಳನ್ನೆಲ್ಲಾ ನನ್ನಲ್ಲೇ ಸಮರ್ಪಿಸಿಬಿಡು. ನನ್ನನ್ನೇ ಶರಣುಹೊಂದಿ ನಮಸ್ಕರಿಸು. ನಾನು ನಿನಗೆ ಶೇಷಿಯು ಆಧಾರನು ಗತಿಯು ಎಂದು ಭಾವಿಸು. ಹೀಗೆ ನಿರ್ಮಲವಾದ ಮನಸ್ಸನ್ನು ನನ್ನಲ್ಲೇ ಸೇರಿಸಿದುದಾದರೆ, ಎಂದರೆ ನನ್ನನ್ನೇ ಧ್ಯಾನಿಸಿ, ನನ್ನನ್ನು ಸಾಕ್ಷಾತ್ಕರಿಸುವ ಅನುಭವವನ್ನು ಹೊಂದಿ, ನನನಾಗಿಯೇ ನಿತ್ಯಕರ್ಮಗಳನ್ನನುಷ್ಠಿಸಿ, ನನ್ನನ್ನೇ ನಮಸ್ಕರಿಸಿ, ನನ್ನನ್ನೇ ಪರಮಗತಿಯೆಂದು ಭಾವಿಸಿದುದಾದರೆ, ನನ್ನ ಸಾಯುಜ್ಯವನ್ನೇ ಹೊಂದುವಿ. ಸಂಶಯಬೇಡವೆಂದು, ಈ ಗುಹ್ಯತಮೋಪದೇಶವನ್ನು ಮಾಡಿದರು.

ಒಂಭತ್ತನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು ಸಂಪೂರ್ಣವು.

**ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ**

*

ಶ್ರಿಯೈ ನಮಃ
ಶ್ರೀನಿವಾಸಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ

# ಶ್ರೀಮದ್ಭಗವದ್ಗೀತಾಯಾಂ

## ದಶಮೋಽಧ್ಯಾಯಃ

**ಭಾ. ಅವ. ಭಕ್ತಿಯೋಗಸ್ಸಪರಿಕರ ಉಕ್ತಃ । ಇದಾನೀಂ ಭಕ್ತ್ಯುತ್ಪತ್ತಯೇ ತದ್ವಿವೃದ್ಧಯೇ ಚ ಭಗವತೋ ನಿರಙ್ಕುಶೈಶ್ವರ್ಯಾದಿ ಕಲ್ಯಾಣಗುಣಗಣಾನನ್ತ್ಯಂ, ಕೃತ್ಸ್ನಸ್ಯ ಜಗತಸ್ತಚ್ಛರೀರತಯಾ ತದಾತ್ಮಕತ್ವೇನ ತತ್ಪ್ರವರ್ತ್ಯತ್ವಂ ಚ ಪ್ರಪಂಚ್ಯತೇ—**

**ಭಾಷ್ಯಾವತಾರಿಕೆಯ ಅರ್ಥವು :—ಭಕ್ತಿಯೋಗ ಸ್ಸಪರಿಕರಃ ಉಕ್ತಃ**—ಅಙ್ಗಗಳಿಂದ ಸೇರಿದ ಭಕ್ತಿಯೋಗವು ಇದುವರೆಗೂ ಹೇಳಲ್ಪಟ್ಟಿತು. ಪರಿಕರಗಳನ್ನು ಕರ್ಮಯೋಗ ಜ್ಞಾನಯೋಗಗಳೆಂದು ಭಾವಿಸಿ, ಭಕ್ತಿಯೋಗಕ್ಕೆ ಇವು ಅಙ್ಗಗಳಾದುದರಿಂದ, ಅವುಗಳಿಂದ ಕೂಡಿದ ಭಕ್ತಿಯೋಗವೆಂಬ ತಾತ್ಪರ್ಯದಿಂದ ಈ ಒಂಭತ್ತು ಅಧ್ಯಾಯಗಳ ಅರ್ಥದ ಅನುವಾದವೆಂದು **ಭಕ್ತಿಯೋಗಸ್ಸಪರಿಕರ ಉಕ್ತಃ** ಎಂದು ಹೇಳಿದರೆಂದು ಭಾವಿಸಬಹುದು. ಅಥವಾ ಈ ಒಂಭತ್ತನೆಯ ಅಧ್ಯಾಯದಲ್ಲಿ ಹೇಳಿದ ಪ್ರಪದನರೂಪ ಅಙ್ಗವೂ (೬-೧೪-೯-೩೪) ಮತ್ತು ನಿತ್ಯ ನೈಮಿತ್ತಿಕಗಳ ಅನುಷ್ಠಾನರೂಪ ಅಙ್ಗವೂ (೯-೩೪) ಸೇರಿದ ಭಕ್ತಿಯೋಗವು ಉಪಾಯವಾಗಿ ವಿಧಿಸಲ್ಪಟ್ಟಿತೆಂದಾದರೂ ಅರ್ಥ ಮಾಡಬಹುದು. ಇದರಿಂದ ಮೂರು ಅಧ್ಯಾಯಗಳ ಅನುವಾದವೆಂದು ಭಾವಿಸಬಹುದು. ಅಥವಾ ಯಮ ನಿಯಮಾದಿಗಳು ಅಲ್ಲಲ್ಲೇ ಹೇಳಲ್ಪಟ್ಟಿರುವದರಿಂದ ಈ ಪರಿಕರಗಳಿಂದ ಸೇರಿದ ಅಷ್ಟಾಂಗಯೋಗವು ಉಪದೇಶಿಸಲ್ಪಟ್ಟಿತೆಂದಾದರೂ ಅರ್ಥ ಮಾಡಬಹುದು. ಇವುಗಳಲ್ಲಿ ಮೊದಲಿನ ಅಭಿಪ್ರಾಯವನ್ನೇ ಇಟ್ಟುಕೊಳ್ಳಬಹುದು.

ಮುಂದೆ ಈ ೧೦ನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆಂಬುದನ್ನು ಶ್ರೀ ಯಾಮುನೇಯರ ಈ ಅಧ್ಯಾಯದ ಸಙ್ಗ್ರಹಶ್ಲೋಕವನ್ನನುಸರಿಸಿ ಹೇಳುತ್ತಾರೆ.–**ಇದಾನೀಂ** - **ಈ** ೧೦ನೆಯ ಅಧ್ಯಾಯದಲ್ಲಾದರೋ, (೧) **ಭಕ್ತ್ಯುತ್ಪತ್ತಯೇ ತದ್ವಿವೃದ್ಧಯೇಚ**-ಭಕ್ತಿಯುಂಟಾಗುವದಕ್ಕೂ ಮತ್ತು ಅದು ವಿಶೇಷವಾಗಿ ವೃದ್ಧಿ ಹೊಂದುವದಕ್ಕೂ ಸಹ, ಭಗವಂತನು **ನಿರಂಕುಶೈಶ್ವರ್ಯಾದಿಕಲ್ಯಾಣ ಗುಣಗಣಾನನ್ತ್ಯಂ** - ಅಪ್ರತಿಹತನಾದ ಐಶ್ವರ್ಯ ಮತ್ತು ಆದಿ ಶಬ್ದದಿಂದ ವಿಭೂತಿಯ ಮತ್ತು ಕಲ್ಯಾಣ ಗುಣ ಸಮೂಹದ ಆನನ್ತ್ಯವೂ, (೨) **ಕೃತ್ಸ್ನಸ್ಯಜಗತಃ**-ಸಮಸ್ತ ಜಗತ್ತು, **ತಚ್ಛರೀರತಯಾ**—ಆ ಭಗವಂತನಿಗೆ ಶರೀರವಾಗಿರುವದರಿಂದ **ತದಾತ್ಮಕತ್ವೇನ**–ಎಲ್ಲವೂ ಆತನನ್ನೇ ಆತ್ಮನಾಗಿ ಹೊಂದಿರೋಣದರಿಂದ, **ತತ್ಪ್ರವರ್ತ್ಯತ್ವಂಚ**—ಆತನಿಂದಲೇ ಪ್ರವೃತ್ತಿಯನ್ನು ಹೊಂದಿರುವಿಕೆಯೂ ಎಂದರೆ ಆತನಿಂದ ನಿಯಮನವೂ, **ಪ್ರಪಂಚ್ಯತೇ**-ವಿಸ್ತರಿಸಿ ಹೇಳಲ್ಪಡುತ್ತದೆ. ವಿಸ್ತರಿಸಿ ಹೇಳಲ್ಪಟ್ಟಿದೆ ಎಂಬುದರಿಂದಲೇ ಹಿಂದೆ ಸಙ್ಗ್ರಹವಾಗಿ ಹೇಳಿದುದನ್ನೇ ಇಲ್ಲಿ ವಿಸ್ತರಿಸಿ ಹೇಳುತ್ತಾರೆಂಬ ಭಾವವು. ಹಾಗೆ ವಿಸ್ತರಿಸಿ

**ಶ್ರೀ ಭಗವಾನುವಾಚ—**

**ಮೂ. ಭೂಯ ಏವ ಮಹಾಬಾಹೋ, ಶೃಣು ಮೇ ಪರಮಂ ವಚಃ।**
**ಯತ್ತೇ ಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ೧.**

**ಹೇಳಲು ಕಾರಣವೇನೆಂದರೆ.**— ಹಿಂದೆಯೇ ಅರ್ಜುನನಿಗೆ ಭಕ್ತಿಯೋಗದಲ್ಲಿ ವಿಶ್ವಾಸವು ಉಂಟಾಗಿ ಆ ಭಕ್ತಿಯೋಗವು ಉತ್ಪನ್ನವಾಗುವದಕ್ಕೂ, ಹಾಗೆ ಉತ್ಪನ್ನವಾದುದು ವೃದ್ಧಿಯನ್ನು ಹೊಂದುವ ದಕ್ಕೂ ಈಗ ಪುನಃ ವಿಸ್ತರವಾಗಿ ಅನುವಾದಮಾಡಿ ಹೇಳಲ್ಪಡುತ್ತದೆಂಬ ಭಾವವು. ತನ್ನ ಸ್ವರೂಪ ರೂಪ ಗುಣವಿಭವೈಶ್ವರ್ಯಾದಿಗಳೆಲ್ಲಾ ಅತ್ಯಂತ ವಿಲಕ್ಷಣವಾದವೆಂದೂ, ತನಗೆ ವಿಶ್ವವೆಲ್ಲಾ ಶರೀರ ವೆಂದೂ, ಅವೆಲ್ಲಕ್ಕೂ ತಾನು ಆತ್ಮಾವೆಂದೂ, ಹಿಂದೆಯೂ ಹೇಳಲ್ಪಟ್ಟಿರುತ್ತದೆ; ಆದರೂ ಮಾ ಹಾತ್ಮ್ಯೆಯ ಜ್ಞಾನವು ಚನ್ನಾಗಿ ಉಂಟಾಗುವದಕ್ಕಾಗಿ ಅವುಗಳ ಪ್ರಪಂಚನವು ಅವಶ್ಯಕವೆಂಬ ಭಾವವು. ಆದುದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲವು. **ಪ್ರಪಂಚ್ಯತೇ** ಎಂದು ಏಕೆ ಹೇಳಲ್ಪಟ್ಟಿತೆಂದರೆ—ಶ್ರೀ ಯಾಮುನೇಯರು ಈ ಅಧ್ಯಾಯದ ಸಙ್ಗ್ರಹ ಶ್ಲೋಕದಲ್ಲಿ **ಸ್ವಕ ಲ್ಯಾಣಗುಣಾನನ್ತ್ಯವು** ಮುಂತಾದ್ದು **ವಿಸ್ತೀರ್ಣದಶಮೋದಿತಾ**-೧೦ನೆಯ ಅಧ್ಯಾಯದಲ್ಲಿ ವಿಸ್ತ ರಿಸಿ ಹೇಳಲ್ಪಟ್ಟಿದೆ ಎಂದು ಅಪ್ಪಣೆಕೊಡಿಸಿರುವುದರಿಂದ. ಈ ಅಭಿಪ್ರಾಯವು, ದಶಮೋಧ್ಯಾ ಯದ ಪ್ರಥಮಶ್ಲೋಕಾದಿಯಲ್ಲಿಯೇ **ಭೂಯ ಏವ** ಎಂಬ ಪ್ರಯೋಗದಿಂದಲೂ ಸೂಚಿತವು.

**ಮೂಲಕ್ಕೆ ಅರ್ಥವು:**—ಗೀತಾ ಶಾಸ್ತ್ರವನ್ನು ಇಲ್ಲಿಗೆ ಸಙ್ಗ್ರಹವಾಗಿ ಹೇಳಿ ಮುಗಿಸಿದರು- ಮೋಕ್ಷಶಾಸ್ತ್ರಗಳಲ್ಲಿ ಮುಖ್ಯವಾಗಿ ಹೇಳತಕ್ಕದ್ದು ಮೂರು (೧) ತತ್ವ (೨) ಹಿತ. (೩) ಪುರು ಷಾರ್ಥಗಳು.

(೧) ತತ್ವವನ್ನು ಸಙ್ಗ್ರಹವಾಗಿ, ಜಗತ್ತಿನಲ್ಲಿ ಎರಡು ಸತ್ಯಗಳಾದ ಪ್ರಕೃತಿಗಳೆಂದೂ ಒಂದು ಸ್ವರೂಪವಿಕಾರ ಹೊಂದುವ ಅಚಿತ್ತತ್ವವಾಗಿ ಅಪರಾಪ್ರಕೃತಿಎಂದೂ, ಇನ್ನೊಂದೂ ಹಾಗೆಯೇ ನಿತ್ಯವಾಗಿ ಸ್ವರೂಪವಿಕಾರವಿಲ್ಲದೆ, ಸ್ವಭಾವವಿಕಾರವನ್ನು ಬದ್ಧದಶೆಯಲ್ಲಿ ಮಾತ್ರ ಹೊಂದಿ, ಮುಕ್ತದಶೆಯಲ್ಲಿ ನಿರ್ವಿಕಾರವಾಗಿರುವದರಿಂದ ಪರಾಪ್ರಕೃತಿಎಂದೂ, ಇವೆರಡೂ ತನ್ನ ಸ್ವತ್ತಾಗಿ ತನಗೆ ಶರೀರವಾಗಿ ತನಗೆ ಅಧೀನವಾಗಿವೆ ಎಂದೂ, ಇವೆರಡಕ್ಕೂ ಆತ್ಮವಾಗಿ ಶೇಷಿ ಯಾಗಿ ನಿಯಾಮಕನಾಗಿ ಶ್ರಿಯಃಪತಿ ನಾರಾಯಣನಾದ ನಾನೇ ಶ್ರೀಕೃಷ್ಣನಾಗಿ ಅವತರಿಸಿ ರುವವನೆಂದೂ, ಹೀಗೆ ನಿತ್ಯಗಳಾದ ಮೂರು ತತ್ವಗಳು, **ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ನಿತ್ಯಗಳಾಗಿ ಯಥಾರ್ಥಗಳಾದ ತತ್ವಗಳು ಮೂರಾದ ಚಿದಚಿದೀಶ್ವರರೆಂದು ಹೇಳಿ ಈ ಮೂರರ ಸ್ವರೂಪಾದಿಗಳು ಶೋಧಿಸಲ್ಪಟ್ಟವು.

(೨) **ಹಿತವು**—ಕರ್ಮಯೋಗದಿಂದ ಸೇರಿದ ಭಕ್ತಿಯೋಗವಾಗಲಿ, ಅಥವಾ ಕರ್ಮಯೋಗ ಜ್ಞಾನಯೋಗಗಳಿಂದ ಸೇರಿದ ಭಕ್ತಿಯೋಗವಾಗಲಿ ಆಗಬಹುದೆಂದೂ, ಆ ಭಕ್ತಿಯೋಗವು, ಐಹಿಕಗಳಲ್ಲಿ ಮಮತೆಯನ್ನು ತೊರೆದು ಅನನ್ಯ ಮನಸ್ಕನಾಗಿ ಮಾಡುವ ತೈಲಧಾರೆಯಹಾಗೆ ಅವಿಚ್ಛಿನ್ನಸ್ಮೃತಿ ಸಂತಾನ ರೂಪವಾದ ಉಪಾಸನವೆಂದೂ, ಆ ಭಗವಂತನ ದಿವ್ಯ ಮಙ್ಗಳ ವಿಗ್ರಹದ ಸಾಕ್ಷಾತ್ಕಾರರೂಪವಾದ ಉಪಾಸನೆಯ ಮುಖ್ಯೋದ್ದೇಶವು ಭಗವಂತನ ಮುಖೋ ಲ್ಲಾಸರೂಪವಾಗಿ, ಆತನು ಸಿದ್ಧೋಪಾಯನಾಗಿ ನಿಂತು ಫಲಪ್ರಾಪ್ತಿಯನ್ನುಂಟುಮಾಡುವ ನೆಂದು ಉಪದೇಶಿಸಲ್ಪಟ್ಟಿತು. ಇದಕ್ಕೆ ಅನುಗ್ರಾಹಕವಾಗಿ ನಿತ್ಯನೈಮಿತ್ತಿಕಾನುಷ್ಠಾನದಿಂದ ಕೂಡಿದ ಕರ್ಮಯೋಗವನ್ನು ಅನುಷ್ಠಿಸತಕ್ಕದ್ದೆಂದೂ ಹೇಳಲ್ಪಟ್ಟಿತು. ಇದಕ್ಕೆ ಅಧಿಕಾರವಿಲ್ಲ ದವರು ಎರಡನೆಯ ಉಪಾಯವಾದ ಪ್ರಪದನವನ್ನು ಅನುಷ್ಠಿಸತಕ್ಕದ್ದು.

(೩) **ಪುರುಷಾರ್ಥವು**–ಭಗವಂತನ ರೂಪದ ಸಾಕ್ಷಾತ್ಕಾರವೂ, ಭಗವತ್ಸ್ಮರಣಮೂಲಕ **ನಿರ್ಯಾಣವೂ,** ಅರ್ಚಿರಾದಿ ಸದ್ಗತಿಯೂ, ಅತಿವಾಹಕರಲ್ಲಿ ಮುಖ್ಯನಾದ ಅಮಾನವ ಕರಸ್ಪರ್ಶ ಮೂಲಕ ಪರಬ್ರಹ್ಮಪ್ರಾಪ್ತಿಯೂ, ಇವೆಲ್ಲಾ ಹೇಳಲ್ಪಟ್ಟವು. ಆ ಪ್ರಾಪ್ತಿಯಲ್ಲುಂಟಾಗುವ ಮಹತ್ತಾದ ಪ್ರಯೋಜನವೆಂತಾದ್ದೆಂಬುದು ಮುಂದೆ ವಿಸ್ತರಿಸಲ್ಪಡುವದು. ಹೀಗೆ ತತ್ತ್ವಹಿತ ಪುರುಷಾರ್ಥಗಳು ಉಪದೇಶಿಸಲ್ಪಟ್ಟಿರುವದರಿಂದ ಗ್ರಂಥದ ಮುಖ್ಯೋದ್ದೇಶವು ಈ ಗ್ರಂಥದ ಅರ್ಥಕ್ಕೆ ಸರಿಯಾಗಿ ಒಂಭತ್ತು ಅಧ್ಯಾಯಗಳಲ್ಲಿ ಮುಗಿಸಿರುತ್ತಾರೆ. ಇವುಗಳ ವಿಷಯದಲ್ಲಿ ಇನ್ನೂ ತನ್ನ ಪ್ರಿಯಶಿಷ್ಯನಿಗೂ, ತನ್ಮೂಲಕ ಲೋಕದ ಸುಕೃತಿಗಳಿಗೂ, ವಿಶೇಷ ವಿಶ್ವಾಸವು ಉಂಟಾಗುವದಕ್ಕಾಗಿ, ಇವುಗಳ ವಿಷಯವಾಗಿಯೇ ಮುಂದೆ ವಿಸ್ತರಿಸಿ ಹೇಳತಕ್ಕದ್ದಿರುವದರಿಂದ, ಪುನಃ ಉಪದೇಶಿಸುತ್ತಾರೆ. ಅರ್ಜುನನು ಶರಣಾಗತಿಯನ್ನು ಮಾಡಿ ಯಾವ ಯಾಥಾತ್ಮ್ಯವನ್ನು ಕೇಳಿ ತಿಳಿಯಬೇಕೆಂದು ಪ್ರಾರ್ಥಿಸಿದನೋ, ಅದನ್ನೇ ಎಂದರೆ ಪರಮ ಹಿತವಾದುದನ್ನೇ **ರಾಜವಿದ್ಯಾ ರಾಜಗುಹ್ಯಂ** ಎಂದು ಪ್ರಶಂಸಿಸಿ ಉಪದೇಶಿಸಿದರು.

ಆದರೆ ಶ್ರೀ ಕೃಷ್ಣಭಗವಾನರವರು ಅರ್ಜುನನಲ್ಲಿ ತಮಗಿರುವ ಅತ್ಯಂತ ಪ್ರೀತಿಯಿಂದ ಪ್ರೇರಿತರಾಗಿ, ಪುನಃ ಅವುಗಳ ವಿಷಯವಲ್ಲೇ ಇನ್ನೂ ಹೇಳತಕ್ಕದ್ದಿದೆ, ಅದನ್ನು ಸಾವಧಾನದಿಂದ ಕೇಳು ಎಂದು, **ಭೂಯ ಏವ ಮಹಾಬಾಹೋ ಶೃಣು** ಎಂದಾರಂಭಿಸಿ ಉಪದೇಶಿಸುತ್ತಾರೆ,—**ಹೇ ಮಹಾಬಾಹೋ**— ಶತ್ರು ವಿಜಯದಲ್ಲಿ ಪರಾಕ್ರಮಿಯಾದ ಅರ್ಜುನನೇ, ಈ ಶತ್ರುಗಳು ಬಾಹ್ಯ ಶತ್ರುಗಳಾದ ದುರ್ಯೋಧನಾದಿಗಳಾದರೂ ಆಗಬಹುದು, ಅಂತಹ ಶತ್ರುಗಳನ್ನು ನೀನು ಗೆಲ್ಲಲು ಸಮರ್ಥನೆಂಬ ಆಶಯದಿಂದ ಹಾಗೆ ಸಂಬೋಧನೆ ಎಂದೂ ಭಾವಿಸಬಹುದು.—ಹಿಂದೆಯೂ ಅನೇಕ ಶತ್ರುಗಳನ್ನು ಯುದ್ಧದಲ್ಲಿ ಗೆದ್ದಿದ್ದೀಯೆ, ಮುಂದೆಯೂ ನೀನು ಗೆಲ್ಲುವದೇನೋ ನಿಶ್ಚಯವು, ಆದುದರಿಂದ ನೀನು ಮಹಾಬಾಹುವೇ ಸರಿ. ಅಥವಾ ಈಗ ಉಪದೇಶಿಸಿರುವ ಭಕ್ತಿಯೋಗಕ್ಕೆ ಯಮ ನಿಯಮಾದಿಗಳು ಆವಶ್ಯಕವಾದುದರಿಂದ ಬಾಹ್ಯೇಂದ್ರಿಯ, ಅಂತರಿಂದ್ರಿಯಗಳನ್ನು ಜಯಿಸುವ ಸಾಮರ್ಥ್ಯವು ನಿನಗುಂಟು ಎಂಬಾಶಯದಿಂದಾಗಲಿ ಮಹಾಬಾಹೋ ಎಂಬ ಪ್ರಯೋಗವು. **ಭೂಯ ಏವ**–ಹಿಂದೆ ಹೇಳಿದುದೇ ಸಾಕಾದರೂ, ಅದರಲ್ಲಿ ನಿನಗೆ ಅಭಿರುಚಿಯು ಚೆನ್ನಾಗಿ ಉಂಟಾಗಿ ಯೋಗವು ಸಂಪೂರ್ಣತೆಯನ್ನು ಹೊಂದುವದಕ್ಕಾಗಿ, ಪುನಃ, **ಅಹಂ**–ಭಕ್ತರಲ್ಲಿ ಪರಮ ಕಾರುಣಿಕನಾಗಿ ಸಿದ್ಧೋಪಾಯನಾಗಿರುವ ನಾನು, **ಪ್ರೀಯಮಾಣಾಯ**–ಹಿಂದೆ ನಡೆದ ಸಂವಾದವನ್ನು ನೋಡಿದರೆ, ನನ್ನಲ್ಲಿಯೂ ನನ್ನ ಮಾತಿನಲ್ಲಿಯೂ ಅತಿಶಯ ಪ್ರೀತಿಯನ್ನು ಹೊಂದಿರುವ, **ತೇ**–ಉಪದೇಶಕ್ಕೆ ತುಂಬಾಯೋಗ್ಯನಾಗಿ ಅನಸೂಯನಾದ ಶಿಷ್ಯನಾಗಿರುವ ನಿನಗೆ, **ಹಿತಕಾಮ್ಯಯಾ**–ಪರಮ ಹಿತವಾದುದನ್ನು ಉಪದೇಶಿಸಿ ಪರಮ ನಿಶ್ಶ್ರೇಯಸ್ಸನ್ನು ನೀನು ಹೊಂದಬೇಕೆಂಬ ಅಭಿಲಾಷೆಯಿಂದ, **ಯತ್**–ಯಾವುದನ್ನು, **ವಕ್ಷ್ಯಾಮಿ**–ಹೇಳುವೆನೋ, (**ತತ್**–ಅಂತಹ) ಹಿಂದೆ **ಯತ್** ಎಂದಿರುವದರಿಂದ **ತತ್** ಎಂದಿಟ್ಟುಕೊಳ್ಳಬೇಕು, **ಮೇ**–ನನ್ನ, **ಪರಮಂ**–ಅತ್ಯುತ್ಕೃಷ್ಟವಾದ, **ವಚಃ**–**ಉಪದೇಶವನ್ನು, ಶೃಣು**–ತುಂಬಾ ಆದರದಿಂದ ಕೇಳು. ಅರ್ಜುನನು **"ಯಚ್ಛ್ರೇಯಸ್ಸ್ಯಾನ್ನಿಶ್ಚಿತಂ ಬ್ರೂಹಿತನ್ಮೇ"** ಎಂದು ಏನನ್ನು ಪ್ರಾರ್ಥಿಸಿದನೋ, ಅದನ್ನು ಈ ಒಂಭತ್ತುಅಧ್ಯಾಯಗಳಿಂದಲೂ ಹೇಳಿ, ಪರಮ ಗುಹ್ಯವಾದುದನ್ನೂ ಒಂಭತ್ತನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಹೇಳಿ ನಿಗಮನ ಮಾಡಿದುದೇನೋ ಆಯಿತು. ಹೀಗಿರುವಾಗ **ಭೂಯ ಏವ**—ಹೇಳಲು ಕಾರಣವೇನು? ಇದೂ ಅಲ್ಲದೆ " **ನಾಪೃಷ್ಟಃ ಕಸ್ಯಚಿದ್ಬ್ರೂಯಾನ್ನಚಾನ್ಯಾಯೇನ ಪೃಚ್ಛತಃ** " ಎಂದು ಮನುವಾಕ್ಯವು, ಇರುತ್ತದೆ. ಪ್ರಶ್ನಿಸದೇ ಇರುವ ಶಿಷ್ಯನಿಗೂ ಕೂಡ ಉಪದೇಶವನ್ನು ನಿರಾಕರಿಸಿರುವದರಿಂದ, ಪುನಃ ಹೇಳಬಹುದೋ? ಎಂದರೆ–ಹಿಂದೆ ಪ್ರಶ್ನಿಸಿದ ಶಿಷ್ಯನಿಗೆ ಸಂಪೂರ್ಣ ಜ್ಞಾನವು ಉಂಟಾಗಿ, ಅಜ್ಞಾನ, ಅನ್ಯಥಾಜ್ಞಾನ ವಿಪರೀತಜ್ಞಾನಗಳು

ಯಾವುವು ಬಾಧಿಸದಹಾಗೆ, ನಿಸ್ಸಂಶಯವಾದ ಅವಬೋಧಕ್ಕೂ, ಮತ್ತು ಅದರಲ್ಲಿ ಸಂಪೂರ್ಣ ವಿಶ್ವಾಸವೂ ಉಂಟಾಗುವದಕ್ಕೂ, **ಭೂಯ ಏವ** ವಿಸ್ತರಿಸಿ ಉಪದೇಶವು ಆವಶ್ಯಕವು. ಇಲ್ಲಿ ಶ್ಲೋಕಾದಿಯಲ್ಲೇ **ಭೂಯ ಏವ** ಎಂಬ ಪ್ರಯೋಗವಿರುವದರಿಂದ ಎರಡು ಅಭಿಪ್ರಾಯಗಳು ವ್ಯಕ್ತವು. (೧) ನಿನಗೆ ತತ್ವಹಿತ ಪುರುಷಾರ್ಥಗಳ ವಿಷಯದಲ್ಲಿ ಸಜ್ಗ್ರಹವಾಗಿ ನಿನಗೆ ತಿಳಿಸ ಬೇಕಾದುದು ಎಷ್ಟು ಆವಶ್ಯಕವೋ, ಅಷ್ಟನ್ನು ತಿಳಿಸಿದ್ದಾಯಿತು. (೨) ಇನ್ನು ಮುಂದೆ ಹೇಳು ವದೆಲ್ಲಾ ಇದರ ನಿಪುಣತರವಾದ ಅನುವಾದವಾಗಿ ನಿನಗೆ ಆ ಪರಮ ಹಿತದಲ್ಲಿ ಸಂಪೂರ್ಣಾಭಿ ರುಚಿಯುಂಟಾಗುವದಕ್ಕಾಗಿ ಹೇಳುತ್ತೇನೆ, ಸಾವಧಾನದಿಂದ ಕೇಳು ಎಂಬ ಭಾವವು ತೋರಿ ಬರುತ್ತದೆ. ತನ್ನ **ಶಿಷ್ಯ**ನಿಗೆ ಮನಸ್ಸಿಗೆ ಉಪದೇಶವು ಚೆನ್ನಾಗಿ ಹಿಡಿಯುವಹಾಗೆ ಉಪನಿಷತ್ತು ಗಳು ಉಪದೇಶಿಸುವ ರೀತಿಯಲ್ಲಿ ಆಚಾರ್ಯನು ಪುನಃ ಪುನಃ ವಿಸ್ತರಿಸಿ ಉಪಪಾದಿಸಿ ಹೇಳ ತಕ್ಕದ್ದೆಂದೇ, **“ ಪುನಃ ಪುನಃ ಚೋದಯತೀವ ಹೃಷ್ಟಃ ”** (ರಾಮಾ ಸುಂ ) ಎಂದು ಮಹ ರ್ಷಿಯಿಂದ ಹೇಳಲ್ಪಟ್ಟಿರುತ್ತದೆ. ಇಂತಹ ಸಂದರ್ಭದಲ್ಲಿ, ವಿಸ್ತರಿಸಿ ಹೇಳುವದೂ, ಉಪಪಾದಿಸಿ ಹೇಳುವದೂ, ದೃಷ್ಟಾಂತಿಸಿಹೇಳುವದೂ, ಇವೆಲ್ಲಾ ಪುನರುಕ್ತಿ ದೋಷಕ್ಕೆ ಒಳಗಾಗುವದಿಲ್ಲವು. ಉಪದೇಶವನ್ನು ಕೇಳುತ್ತಾ ಇರುವ ಅರ್ಜುನನಿಗೆ ಶೃಣು ಎಂದು ಹೇಳುವದು ಪರಮ ಆದರ ದಿಂದ ನೀನು ಕೇಳತಕ್ಕದ್ದೆಂದು ಹೇಳಿದಂತಾಯಿತು. ತಾವು ಈಗ ವಿಸ್ತರಿಸಿ ಹೇಳುವದು ಪರಮ ನಿಶ್ಶ್ರೇಯಸ್ಸಿನ ಪ್ರಾಪ್ತಿಗೆ ಸಾಧನಭೂತವಾಗಿ ಸರ್ವೋತ್ಕೃಷ್ಟವಾದ ಹಿತವನ್ನುಂಟುಮಾಡುವದ ರಿಂದ **ಪರಮಂ ವಚಃ** ಎಂಬ ಪ್ರಯೋಗವು. ಹಾಗೆ ಸರ್ವೋತ್ಕೃಷ್ಟವಾದ ಉಪದೇಶವನ್ನು ಬೀದಿ ಯಲ್ಲಿ ಹೋಗುವರೆಲ್ಲರಿಗೂ ಎಂದಿಗೂ ಉಪದೇಶಿಸುವದಿಲ್ಲವು. ಯೋಗ್ಯನಿಗೆ ಮಾತ್ರವೇ ಹೇಳ ತಕ್ಕದ್ದೆಂದು **“ ಇದಂತೇ ನಾಪತಸ್ಕಾಯ ”** ಎಂಬ (೧೮-೬೭) ಶ್ಲೋಕದಲ್ಲಿ ತಾವೇ ಹೇಳಿರು ತ್ತಾರೆ. ಹಾಗಾದರೆ ಈಗ ಅರ್ಜುನನಿಗೆ ಹೇಳಲು ಕಾರಣವೇನೆಂದರೆ, **ಪ್ರೀಯಮಾಣಾಯ ತೇ,** ಹಿಂದೆ ತಾವು ಉಪದೇಶಿಸಿದ ತಮ್ಮ ಮಾಹಾತ್ಮ್ಯ ಮೊದಲಾದುವುಗಳನ್ನು ಕೇಳಿ ತಮ್ಮಲ್ಲಿ ನಿರತಿ ಶಯ ಪ್ರೀತಿಯು ಉಂಟಾದುದನ್ನು ಕಂಡು, ಅದಕ್ಕಾಗಿ ಈ ಗುಹ್ಯತಮ ವಿಷಯವಾಗಿಯೇ ಇನ್ನೂ ವಿಸ್ತರಿಸಿ ಉಪದೇಶಿಸತಕ್ಕದ್ದುಂಟು, ಅದನ್ನು ಹೇಳುತ್ತೇನೆಂದು ಪ್ರತಿಜ್ಞೆಯನ್ನು ಮಾ ಡುತ್ತಾರೆ. ಹೀಗೆ ಪ್ರೀತಿ ತೋರಿದವರ ವಿಷಯದಲ್ಲಿ ತಾವು ಪ್ರೀತಿಯನ್ನು ತೋರಿ ಅವರಿಗೆ ವಿಶೇಷ ಹಿತವನ್ನುಂಟುಮಾಡುವದು, **“ ಕೃತೇ ಚ ಪ್ರತಿ ಕರ್ತವ್ಯಂ ಏಷಧರ್ಮಸ್ಸನಾತನಃ ”** (ರಾಮಾ. ಸುಂದರ. ) ಎಂದು ಹೇಳಿರುವಾಗ ಶಾಸ್ತ್ರ ಸಮ್ಮತ ಲೋಕಸಮ್ಮತ ವಿಷಯವಾದು ದರಿಂದ ಅಂತಹ ಭಕ್ತನ ವಿಷಯದಲ್ಲಿ ಸಿದ್ಧೋಪಾಯನಾಗಿ ಪರಮ ಹಿತವನ್ನುಂಟುಮಾಡು ವದು ವಿಧಾಯಕವಾದುದರಿಂದ, **ಹಿತಕಾಮ್ಯಯಾ ಯದ್ವಕ್ಷ್ಯಾಮಿ ತಚ್ಛೃಣು** ಎಂದು ಪ್ರತಿ ಜ್ಞೆ **ಮಾಡಿ** ಉಪದೇಶಿಸುತ್ತಾರೆ ನಿನ್ನಂತಹ ಸಾಧುವಿನ ಪರಿತ್ರಾಣತಾನೇ ನನಗೆ ಲೀಲಾ ವಿಭೂ ತಿಯಲ್ಲಿರುವ ಮುಖ್ಯೋದ್ದೇಶವು. ಅದಕ್ಕಾಗಿಯಲ್ಲವೇ ನಾನು ಮುಖ್ಯವಾಗಿ ಅವತರಿಸಿರುವದು ಎಂದು ನಾನು ಹಿಂದೆಯೇ ಉಪದೇಶಿಸಿರುವೆನು. ಆದುದರಿಂದ ನಿನಗೆ **ಹಿತಕಾಮ್ಯವೇ** ನನಗೆ ಪರಮ ಪ್ರಯೋಜನವೆಂದು ಶ್ರೀ ಕೃಷ್ಣಭಗವಾನರವರು ಭಕ್ತನಲ್ಲಿ ತಮಗಿರುವ ವಾತ್ಸಲ್ಯಾತಿ ಶಯವನ್ನು ಪ್ರದರ್ಶಿಸಿರುತ್ತಾರೆ.

**ಭಾಷ್ಯಾರ್ಥವು:**—ಹೇಳಿದುದು ಸಂಪೂರ್ಣವಾಗಿ ಶಿಷ್ಯನಿಗೆ ವೇದ್ಯವಾಗದಿದ್ದರೆ, ಉಪ ದೇಶಕನಾದ ಗುರುವು ಶಿಷ್ಯನಿಂದ ಪುನಃ ಪ್ರಾರ್ಥಿಸಲ್ಪಟ್ಟರೆ, ಪುನಃ ಬೋಧಿಸುವದು ನ್ಯಾಯವು. ಈ ಸಂದರ್ಭದಲ್ಲಿ ಅರ್ಜುನನು ಪ್ರಶ್ನಿಸದೇನೇ ಶ್ರೀ ಕೃಷ್ಣಭಗವಾನರವರ ಭೂಯ ಏವ ಉಪ ದೇಶಿಸಿರುವದು ಭಕ್ತನಲ್ಲಿ ತನಗಿರುವ ವಾತ್ಸಲ್ಯಾತಿರೇಕತ್ವವನ್ನು ಪ್ರಕಟಿಸುತ್ತದೆ. ಅರ್ಜುನನಿಗೆ ತಮ್ಮಲ್ಲಿ ಪ್ರೀತಿಯುತ್ಪನ್ನವಾಗಿದೆ ಎಂದು ತೋರಿಬರುವ, **ಪ್ರೀಯಮಾಣಾಯ** ಎಂಬುದಕ್ಕೆ ಕಾರಣವನ್ನು ತಿಳಿಸುತ್ತಾರೆ. **ಮಮಮಾಹಾತ್ಮ್ಯಂ**—ಸರ್ವೇಶ್ವರನಾಗಿ ಜಗನ್ನಿಯಾಮಕನಾಗಿ ರುವ ನನ್ನ ಮಾಹಾತ್ಮ್ಯೆಯನ್ನು, **ಶ್ರುತ್ವಾ**—ಕೇಳಿ, **ಪ್ರೀಯಮಾಣಾಯ**—ನನ್ನಲ್ಲಿ ನಿರತಿಶಯ ಪ್ರೀತಿಯುಂಟಾಗಿರುವ, **ತೇ**—ನಿನಗೆ, ಮುಂದೆ **ಹಿತಕಾಮನಯಾ** ಎಂಬುದಕ್ಕೆ ಭಾಷ್ಯಬರೆ ಯುವರಾಗಿ ಆ ಹಿತವು ಯದ್ರೂಪವೆಂದರೆ ತಿಳಿಸುತ್ತಾರೆ.—**ಮದ್ಭುಕ್ತ್ಯುತ್ಪತ್ತಿ ವಿವೃದ್ಧಿರೂಪ**

**ಭಾ. ಮಮಮಾಹಾತ್ಮ್ಯಂ ಶ್ರುತ್ವಾ, ಪ್ರೀಯಮಾಣಾಯ ತೇ ಮದ್ಭಕ್ತ್ಯುತ್ಪತ್ತಿವಿವೃದ್ಧಿ ರೂಪ ಹಿತಕಾಮನಯಾ ಭೂಯೋ ಮನ್ಮಾಹಾತ್ಮ್ಯಪ್ರಪಂಚವಿಷಯಮೇವ ಪರಮಂ ವಚೋ ಯದ್ವಕ್ಷ್ಯಾಮಿ ತದ ವಹಿತಮನಾಶ್ಶೃಣು.**

ನನ್ನಲ್ಲಿ ಭಕ್ತಿಯುಂಟಾಗಿ ಅದು ವೃದ್ಧಿಯನ್ನು ಹೊಂದಿ ಫಲಕ್ಕೆ ಸದ್ಯಃ ಸಹಕಾರಿಯಾಗುವ, **ಹಿತಕಾಮನಯಾ**-ಹಿತವನ್ನುಂಟುಮಾಡುವ ಅಭಿಲಾಷೆಯಿಂದ, ಪ್ರೀಯಮಾಣಾಯ ಎಂಬ ಲ್ಲಿಯೇ ಭಕ್ತಿಯು ಉತ್ಪತ್ತಿಯಾಗಿರುವಹಾಗೆ ತೋರಿ ಬರುತ್ತದಲ್ಲಾ, ಪುನಃ ಇಲ್ಲಿ **ಭಕ್ತ್ಯುತ್ಪತ್ತಿ ವಿವೃದ್ಧಿರೂಪ** ಎಂಬ ಪ್ರಯೋಗವು ಹೇಗೆ ಎಂದರೆ, ಈ ಪರಾಕಾಷ್ಠೆಯನ್ನು ಹೊಂದಿರುವ ಭಕ್ತಿಯಲ್ಲಿ ಆತನ ವಿಷಯವಾಗಿ ಸ್ಮೃತಿ ಸಂತಾನರೂಪ ಪರಮೈಕಾಂತ್ಯ ಭಕ್ತಿ ಇಲ್ಲದಿದ್ದರೆ ಆತ್ಮವೇ ನಿಲ್ಲದು ಎಂಬ ಉತ್ಕೃಷ್ಟ ಭಕ್ತಿಯು ಇಲ್ಲಿ ಹೇಳಲ್ಪಟ್ಟಿತು. ಇದು ವಿವೃದ್ಧವಾದರೆ ಆಗ ಯೋಗನಿಷ್ಪತ್ತಿಯುಂಟಾಗಿ ಫಲವು ನಿಸ್ಸಂದೇಹವೆಂದು ಏರ್ಪಡುತ್ತದೆ ಎಂಬ ಭಾವವು.— ಈ ಭಕ್ತಿಯುಂಟಾಗುವದಕ್ಕೆ ಸರ್ವಪಾಪಗಳು ಕಳೆಯಬೇಕು. ಆದುದರಿಂದ **"ಸರ್ವಪಾಪೈಃ ಪ್ರಮುಚ್ಯತೇ"** ಎಂದು ಮುಂದೆ ೩ನೆಯ ಶ್ಲೋಕದಲ್ಲೂ, ಹಾಗೆ ಪ್ರತಿಬಂಧಕ ಪಾಪಗಳು ತೊಲಗಿದರೇನ್ನೆ, **"ಸೋಽವಿಕಂಪ್ಯೇನ ಯೋಗೇನಯುಜ್ಯತೇ"** ಎಂದು ೭ನೆಯ ಶ್ಲೋಕದಲ್ಲೂ ಹೇಳಲ್ಪಡುತ್ತವೆ, ಇಂತಹ ಭಕ್ತಿ ಈಗ ಇಲ್ಲಿ ಭಕ್ತ್ಯುತ್ಪತ್ತಿ ಎಂಬ ಸಂದರ್ಭದಲ್ಲಿ ಹೇಳಲ್ಪಟ್ಟಿತು, **ಭೂಯಃ**-ಪುನಃ **ಮನ್ಮಾಹಾತ್ಮ್ಯ ಪ್ರಪಂಚನ ವಿಷಯಮೇವ**-ಪುನಃ ಹೇಳಬಹುದೋ ಎಂಬಾಕ್ಷೇಪಕ್ಕೆ ಅದಕ್ಕೆ ಸಮಾಧಾನವಾಗಿ ಪುನಃ, ನನ್ನ ಮಹಾತ್ಮ್ಯೆಯನ್ನು ವಿಸ್ತರಿಸಿ ಹೇಳುವ ವಿಷಯವಾದ, **ಪರಮಂವಚಃ**-ಸರ್ವೋತ್ಕೃಷ್ಟವಾದ ಉಪದೇಶವನ್ನು ರಾಜಗುಹ್ಯವಾದ ಹಿತವನ್ನುಪದೇಶಿಸುವ ವಿಷಯವಾದುದನ್ನೇ, ಹಿಂದೆ ಮಾಹಾತ್ಮ್ಯೆಯು ಸಙ್ಗ್ರಹಿಸಿ ಹೇಳಲ್ಪಟ್ಟಿತು; ಈ ಉಪದೇಶವಾದರೋ ನನ್ನ ಮಾಹಾತ್ಮ್ಯೆಯ ವಿಸ್ತರವಾಗಿ ಆ ರಾಜಗುಹ್ಯವಾದುದಕ್ಕೂ ಮಾಹಾತ್ಮ್ಯೆಯನ್ನುಂಟುಮಾಡುವದಾಗಿ, ಆ ಕಾರಣದಿಂದ ಮುಂದೆ **"ಗುಹ್ಯತಮ"** ವೆಂದು (ಗೀ. ೧೫-೬೪) ಶ್ಲಾಘಿಸಲ್ಪಟ್ಟದುದು ಆಗುವದರಿಂದ, **ಪರಮಂವಚಃ**— ಇದಕ್ಕಿಂತ ಉತ್ಕೃಷ್ಟವಾದುದು ಇಲ್ಲದಾಗಿ, ಸರ್ವೋತ್ಕೃಷ್ಟ ಉಪದೇಶವನ್ನು, **ಯದ್ವಕ್ಷ್ಯಾಮಿ**— ಯಾವುದನ್ನು ಮುಂದೆ ಹೇಳುತ್ತೇನೋ, **ತದವಹಿತಮನಾಶ್ಶೃಣು**-ಅದನ್ನು ಸಾವಧಾನ ಚಿತ್ತವುಳ್ಳವನಾಗಿ ಎಂದರೆ ಪರಮಾದರದಿಂದ ಕೇಳು, ಕೇಳು ಎಂಬುದರಿಂದ ಅಂತಹ ಪರಮ ಹಿತವನ್ನು ಅನುಷ್ಠಿಸು ಎಂಬ ತಾತ್ಪರ್ಯವು. ಓಂದೆ ಶಿಶುಪಾಲಾದಿಗಳಹಾಗೆ ಅಲ್ಲದೆ, **"ಅನಸೂಯವೇ"** (೯.೧) ನನ್ನಲ್ಲಿ ಅಸೂಯೆ ಇಲ್ಲದೇ ಇರುವನಾದುದರಿಂದ ಸಂಕ್ಷೇಪವಾಗಿ ಹೇಳಿದುದಾಯಿತು, ಈಗ ನಿನ್ನಲ್ಲಿ ವಿಶೇಷ ಗುಣಸಂಪತ್ತಿಯು ತೋರಿ, **"ಪ್ರೀಯಮಾಣ"** ನೆಂದು ತೋರಿಬಂದುದರಿಂದ, ಪುನಃ ವಿಸ್ತರಿಸಿ ನಿನ್ನ ಮನಸ್ಸು ಹಿಡಿಯುವಂತೆ ಹೇಳುವದು ನನಗೆ ಧರ್ಮವಾದುದರಿಂದ ಹೇಳುವೆನು, ಆದುದರಿಂದ ಅದನ್ನು ಚನ್ನಾಗಿ ಮನಸ್ಸನ್ನು ಕೊಟ್ಟು ಕೇಳು ಎಂದು **ಅವಹಿತಾ ಮನಾಶ್ಶೃಣು** ಎಂದು ವ್ಯಾಖ್ಯಾನಮಾಡಿರುತ್ತಾರೆ. ನೀನು ಮಾತ್ರವೇ ಅಲ್ಲದೆ ನಿನ್ನಂತಹ ಲೋಕದ ಮುಮುಕ್ಷುಗಳೂ ಕೂಡ ಇದರಲ್ಲಿ ಪರಮ ಶ್ರದ್ಧಾನ್ವಿತರಾಗಿ ಈ ಪರಮ ಗುಹ್ಯವಾದ ಹಿತೋಪದೇಶವನ್ನು ತಿಳಿದು, ಅನುಷ್ಠಿಸಿ ನನ್ನನ್ನು ಹೊಂದಲಿ ಎಂಬ ಉದಾರಭಾವದಿಂದ ಧರ್ಮಸಂಸ್ಥಾಪನಕ್ಕಾಗಿಯೂ ಅವತರಿಸಿರುವ ನಾನು ನನ್ನ ಮಾಹಾತ್ಮ್ಯೆಯನ್ನೂ, ಹಿತಾನುಷ್ಠಾನದ ಮಾಹಾತ್ಮ್ಯೆಯನ್ನೂ ವಿಸ್ತರಿಸಿ ಹೇಳುವದೂ ಕೂಡ ನನ್ನ ಕರ್ತವ್ಯವಾದುದರಿಂದಲೂ, **ಹಿತಕಾಮನಯಾ**— ನಿನಗೆ ಮಾತ್ರವೇ ಹಿತವನ್ನುಂಟುಮಾಡುವ ಅಭಿಲಾಷೆಮಾತ್ರವೇ ಅಲ್ಲದೆ, ಲೋಕದ ಸಾಧುಜನಗಳಿಗೂ

**ಮೂ. ನ ಮೇವಿದುಸ್ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹ ಮಾದಿ ರ್ಹಿ ದೇವಾನಾಂ ಮಹರ್ಷೀಣಾಂಚ ಸರ್ವಶಃ ॥**

ಕೂಡ ಪರಮ ಹಿತವನ್ನುಂಟುಮಾಡುವದೇ ನನ್ನ ಕರ್ತವ್ಯವಾದುದರಿಂದ, ಅಂತಹ ಹಿತವನ್ನುಂಟುಮಾಡುವದಕ್ಕಾಗಿ, **ತೇ ವಕ್ಷ್ಯಾಮಿ** — ನಿನಗೆ ಹೇಳುವೆನು; ನಿನ್ನನ್ನು ವ್ಯಾಜೀಕರಿಸಿ ಏನನ್ನು ಹೇಳುತ್ತೇನೋ, ಅದನ್ನೂ ಕೂಡ ಸಾವಧಾನದಿಂದ ಕೇಳು ಎಂಬ ಭಾವವೂ ತೋರಿಬರುತ್ತದೆ. ಇದರಿಂದ ಅರ್ಜುನನು ತನಗಾಗಿಯೇ ಈ ಮಹತ್ತಾದ ಉಪದೇಶವನ್ನೆಲ್ಲಾ ಮಾಡಿದನು ಎಂಬ ಗರ್ವವನ್ನು ತೊರೆದು, ಹೀಗೆಲ್ಲಾ ಸರ್ವೇಶ್ವರನು ತನ್ನನ್ನು ವ್ಯಾಜೀಕರಿಸಿ ನಡೆದಿರುವದೂ ಕೂಡ ಲೋಕಹಿತಾರ್ಥವಾಗಿ ಎಂದು ತಿಳಿಯಲಿ ಎಂಬ ಭಾವವೂ ದ್ಯೋತಿತವು. **ಹಿತಕಾಮುನಯಾ** ಎಂದು ಹೇಳಿದರೆ ಅರ್ಜುನನು ಪರಮ ಜ್ಞಾನಿಯಾದ ಪಕ್ಷದಲ್ಲಿ, **ಲೋಕಹಿತಕಾಮನಯಾ** ಎಂದೇ ತಿಳಿದು, **ತೇ ವಕ್ಷ್ಯಾಮಿ** ಎಂಬುದಕ್ಕೆ ತನ್ನನ್ನು ವ್ಯಾಜೀಕರಿಸಿಯೇ ಎಲ್ಲರಿಗೂ ಉಪದೇಶಿಸಿರುವನು, ಎಂದು ತಿಳಿದುಕೊಂಡು ತಾನೂ ಹಾಗೆಯೇ ಅನುಷ್ಠಿಸುವನು ಎಂಬ ಭಾವವೂ ತೋರಿಬರುತ್ತದೆ, ಇದನ್ನೇ ಸರ್ವೇಶ್ವರನು ಮುಂದೆಯೂ **ನಿಮಿತ್ತ ಮಾತ್ರಂ ಭವ ಸವ್ಯಸಾಚಿ** ಎಂದೇ ಹೇಳುತ್ತಾರೆ. ರಾಜಸೂಯ ಸಭೆಯಲ್ಲಿ ಶಿಶುಪಾಲನು ಅಸೂಯೆಯಿಂದ ನಿಂದಿಸಿದರೂ, ನನ್ನಲ್ಲಿ ವಿಶೇಷ ಪ್ರೀತ್ಯಾದರಗಳನ್ನು ತೋರಿ ಅಗ್ರಪೂಜೆಯನ್ನು ಮಾಡಿದ ನಿನಗೂ ನಿನ್ನ ಸಹೋದರರಿಗೂ ಹಿತಮಾಡತಕ್ಕದ್ದು ನನಗೆ ಇತಿಕರ್ತ್ತವ್ಯವೇ ಎಂಬ ಭಾವವನ್ನೂ **ಹಿತಕಾಮುನಯಾ** ಎಂಬ ಪ್ರಯೋಗವು ಸೂಚಿಸುತ್ತದೆ. ಅದೂ ಅಲ್ಲದೆ ನನ್ನ ಮಹಾತ್ಮ್ಯೆಯನ್ನು ಚನ್ನಾಗಿ ಅರಿತು, ಸೈನ್ಯದ ಸಹಾಯವೂ ಇಲ್ಲದೆ, ಯುದ್ಧದಲ್ಲಿ ಆಯುಧಗಳನ್ನೂ ನಾನು ಉಪಯೋಗಿಸತಕ್ಕವನಲ್ಲವು ಎಂದು ಹೇಳಿದರೂ ರಣಾಂಗಣಕ್ಕೆ ನಾನು ಸುಮ್ಮನೆ ಬಂದರೆ ಸಾಕು ಎಂದು ಪ್ರಾರ್ಥಿಸಿದ ಶಿಷ್ಯನಿಗೆ ಹಿತಮಾಡದಿದ್ದರೆ ತಮ್ಮ ಸ್ವರೂಪಕ್ಕೇ ಕುಂದಕವೆಂದು ಭಾವಿಸಿ **ಹಿತಕಾಮನಯಾ** ತಾವೇ **ಭೂಯ ಏವ** ಉಪದೇಶಿಸುತ್ತಾರೆಂಬ ಭಾವವೂ ತೋರಿಬರುತ್ತದೆ.

**ಮೂಲಕ್ಕೆ ಅರ್ಥವು :**— ಪ್ರಾಪ್ಯದಲ್ಲಿ ನಿರತಿಶಯ ಮಾಹಾತ್ಮ್ಯೆಯು ಚನ್ನಾಗಿ ಮನಸ್ಸಿಗೆ ಹಿಡಿದರಲ್ಲವೇ ಪ್ರಾಪ್ಯಸಾಧನಾನುಷ್ಠಾನದಲ್ಲಿ ಪರಮ ವಿಶ್ವಾಸವು ದೃಢವಾಗಿ ನಿಲ್ಲುತ್ತದೆ. ಆದುದರಿಂದ ಪ್ರಥಮತಃ ತನ್ನ ಮಾಹಾತ್ಮ್ಯೆಯನ್ನು ದೇವಗಣವಾಗಲಿ ಋಷಿಗಣವಾಗಲಿ ಯಾರೂ ಚನ್ನಾಗಿ ಅರಿತಿಲ್ಲವು. ಅವರುಗಳೆಲ್ಲಾ ಪರಿಮಿತಿಜ್ಞಾನವುಳ್ಳವರಾದುದರಿಂದ ಅವರು ಯಾರೂ ತಿಳಿಯಲಿಲ್ಲವು. ಅಂತಹ ಅಮೋಘೋಪದೇಶವನ್ನು ನಿನಗೆ ನನ್ನಲ್ಲಿರುವ ಪ್ರೀತ್ಯತಿಶಯದಿಂದ ತಿಳಿಸುವೆನೆಂದು ಹೇಳುತ್ತಾರೆ. ಆದರೆ ಅರ್ಜುನನಾದ ತಾನೂ ಪರಿಮಿತಜ್ಞಾನವುಳ್ಳವನಲ್ಲವೋ? ನಾನು ತಾನೇ ತಿಳಿಯುವ ಬಗೆ ಹೇಗೆ ಎಂದರೆ ನನ್ನ ಕೃಪೆಯಿಂದ ನಿನಗೆ ತಿಳಿಯುವ ಶಕ್ತಿಯುಂಟಾಗಿ ನೀನು ತಿಳಿಯುವಿ ಎಂಬ ಭಾವವು. **"ದದಾಮಿ ಬುದ್ಧಿಯೋಗಂತಂ ಯೇನ ಮಾಮುಪಯಾಂತಿತೇ"** ಎಂದು ೧೦ನೆಯ ಶ್ಲೋಕದಲ್ಲಿ ಮುಂದೆ ಹೇಳುತ್ತಾರೆ. ನೀನು ನರಾವತಾರಿಯು, ನಾನು ನಾರಾಯಣಾವತಾರಿಯು; ಆದುದರಿಂದ ನಿನಗೆ ತಿಳಿಯುವ ಹಾಗೆ ಜ್ಞಾನವನ್ನು ಕೊಡುವೆನೆಂಬುದು ಸೂಚಿತವು.

**ಸುರಗಣಾಃ**-ದೇವತೆಗಳ ಸಮೂಹಗಳೂ, **ಮಹರ್ಷಯಃ**-ಮಹರ್ಷಿಗಳೂ ಕೂಡ, ಇಲ್ಲಿ ಬದ್ಧಚೇತನರುಗಳಲ್ಲಿ ಹೆಚ್ಚು ಜ್ಞಾನವಿಕಾಸ ಉಂಟಾದವರು ಯಾರು ಎಂದು ಹೇಳುವದಕ್ಕಾಗಿ ದೇವತೆಗಳೂ, ಮನುಷ್ಯರಲ್ಲಿ ಮಹರ್ಷಿಗಳೂ ಹೇಳಲ್ಪಟ್ಟರು. ಮಹರ್ಷಿಗಳು ಧರ್ಮ ತಪಸ್ಸೇ ಮೊದಲಾದ ಕರ್ಮಾನುಷ್ಠಾನಗಳಿಂದ ಇತರರಿಗಿಂತ ಹೆಚ್ಚು ಜ್ಞಾನವಿಕಾಸವುಳ್ಳವರು; ಇಂತವರೂ

**ಭಾ. ಸುರಗಣಾ ಮಹರ್ಷಯಶ್ಚಾತೀಂದ್ರಿಯಾರ್ಥ ದರ್ಶಿನೋಽಧಿಕತರಜ್ಞಾನಾ ಅಪಿ, ಮೇ ಪ್ರಭವಂ-ಪ್ರಭಾವಂ ನವಿದುಃ-ಮಮನಾಮಕರ್ಮ ಸ್ವರೂಪ ಸ್ವಭಾವಾದಿಕಂ**

ಕೂಡ ಎಂಬ ಭಾವವು. **ಮೇ** - ನನ್ನ, **ಪ್ರಭವಂ** - ಪ್ರಭಾವವನ್ನು, ಸ್ವರೂಪ ರೂಪಗುಣ ವಿಭವೈಶ್ವರ್ಯಾದಿಗಳ ಪ್ರಭಾವವನ್ನು, **ನವಿದುಃ** ತಿಳಿಯಲಿಲ್ಲವು, ಅವರುಗಳೂ ಕೂಡ ಸ್ವಲ್ಪ ಪುಣ್ಯಭಾಕ್ಕುಗಳಾದರೂ, ಕರ್ಮವಶಾತ್ — ಪರಿಚ್ಛಿನ್ನಜ್ಞಾನವುಳ್ಳವರಾದುದರಿಂದ ನನ್ನನ್ನು ಚನ್ನಾಗಿ ತಿಳಿಯಲಾರರು ಎಂಬ ಭಾವವು. ಈ ಅಭಿಪ್ರಾಯವನ್ನೇ ಉತ್ತರಾರ್ಧದಿಂದ ಸಮರ್ಥಿಸಿ ಹೇಳುತ್ತಾರೆ.—ಹೀಗೆ ಇವರುಗಳೆಲ್ಲಾ ತಿಳಿಯದೇ ಇರುವದಕ್ಕೆ ಕಾರಣವು ಉತ್ತರಾರ್ಧದಿಂದ ಹೇಳಲ್ಪಡುವದರಿಂದ, ಅಲ್ಲಿ **ಹಿ** - ಶಬ್ದಪ್ರಯೋಗವು. ಹೀಗೆ ಸುರಗಣವೂ ಮಹರ್ಷಿಗಳೇ ನನ್ನನ್ನು ತಿಳಿಯಲಿಲ್ಲವೆಂದರೆ, ಇನ್ನು ಪಾಮರರಾದ ಮನುಷ್ಯರು ಸರ್ವಾತ್ಮನಾ ತಿಳಿಯಲಾರರೆಂದು ಹೇಳತಕ್ಕದ್ದೇನಿರುತ್ತದೆ ಎಂಬ ಭಾವವೂ ತೋರಿಬರುತ್ತದೆ. ಇಲ್ಲಿ ಪ್ರಭವವೆಂದರೆ ಉತ್ಪತ್ತಿ ಎಂಬರ್ಥವಲ್ಲವು; ಪ್ರಕರ್ಷೇಣಭವವೆಂದರೆ ಇರುವಿಕೆ ಎಂಬರ್ಥವು, ಆದುದರಿಂದ ಮಾಹಾತ್ಮ್ಯ ಎಂಬರ್ಥವು. ಇವರು ಹೀಗೆ ತಿಳಿಯದಿರಲು ಕಾರಣವೇನೆಂದರೆ **ದೇವಾನಾಂ ಮಹರ್ಷೀಣಾಂಚ**-ಮೇಲೆ ಹೇಳಿದ ಈ ಹೆಚ್ಚು ಜ್ಞಾನವುಳ್ಳ ದೇವತೆಗಳಿಗೂ ಮಹರ್ಷಿಗಳಿಗೂ ಸಹ, **ಸರ್ವಶಃ**-ಎಲ್ಲಾ ಪ್ರಕಾರದಲ್ಲೂ, **ಅಹಂ ಆದಿರ್ಹಿ**-ಮೂಲಕಾರಣನಾಗಿ ಸತ್ತಾದಾಯಿಕನಾಗಿಯೂ ನಿಯಾಮಕನಾಗಿಯೂ ನಾನು ಇರುವಂತವನಷ್ಟೇ; ಎಂದರೆ ಅವರವರ ಪೂರ್ವಕರ್ಮಾನುಗುಣವಾಗಿ ಕರಣಕಳೇಬರಾದಿಗಳನ್ನು ನಾನು ಉಂಟುಮಾಡುವನಾದುದರಿಂದ, ಅವರುಗಳ ಸುಕೃತಗಳಿಗೆ ಅನುಸಾರವಾಗಿ ದೇವತೆಗಳನ್ನಾಗಿಯೂ ಋಷಿಗಳನ್ನಾಗಿಯೂ ಅವರಿಗೆ ಉತ್ಪತ್ತಿಯನ್ನು ಕಲ್ಪಿಸುತ್ತೇನೆ. ಯದ್ಯಪಿ ಸುರಗಣವೂ ಮಹರ್ಷಿಗಳೂ ಅವರುಗಳ ಸುಕೃತಪರಿಪಾಕದಿಂದ ಸ್ವಲ್ಪ ಜ್ಞಾನಾಧಿಕರಾದರೂ, ಅವರಿಗೆ ಬದ್ಧದೆಶೆಯು ಹೋಗಲಿಲ್ಲವಾದುದರಿಂದ ಎಷ್ಟಾದರೂ ಪರಿಮಿತಜ್ಞಾನವುಳ್ಳವರೇ; ಆ ಕಾರಣದಿಂದ ಅವರೂ ತಿಳಿಯಲಾರರು. ಚತುರ್ಮುಖ ಬ್ರಹ್ಮರುದ್ರರೂ ಕೂಡ ಸುರಗಣಕ್ಕೆ ಸೇರಿದವರೇ, ಅವರೂ ಕೂಡ ಪರಮಾತ್ಮನ ಮಹಾತ್ಮ್ಯೆಯನ್ನು ತಿಳಿಯಲಿಲ್ಲವು ಎಂಬುದಕ್ಕೆ **"ಯನ್ನದೇವಾನಮುನಯೋ ನಚಾಹಂ ನಚ ಶಂಕರಃ। ಜಾನಂತಿ ಪರಮೇಶಸ್ಯ ತದ್ವಿಷ್ಣೋಃಪರಮಂ ಪದಮ್** ಎಂದು ಚತುರ್ಮುಖನ ವಾಕ್ಯವಾಗಿ ಶ್ರೀ ಪರಾಶರರು ವಿಷ್ಣುಪುರಾಣದಲ್ಲಿ ಹೇಳಿರುತ್ತಾರೆ. ಇದೂ ಮೂಲದ ಶ್ಲೋಕವೂ ಒಂದೇ ಅಭಿಪ್ರಾಯವುಳ್ಳವು. ಇವರಿಗೇ ಹೀಗಿರುವಾಗ ಇನ್ನು ಅಂತಹ ಸುಕೃತವಿಲ್ಲದವರೂ, ಪಾಪಿಷ್ಠರೂ ತಿಳಿಯಲಾರರೆಂದು ಹೇಳತಕ್ಕದ್ದೇನಿರುತ್ತದೆಂಬ ಭಾವವು. ಸರ್ವಶಃ ಎಂದು ಹೇಳಿರುವದರಿಂದ, ಎಲ್ಲಾ ವಿಷಯದಲ್ಲೂ ಚೇತನ ವರ್ಗವು ಭಗವಂತನಿಗೆ ಅಧೀನವೆಂಬ ಅತ್ಯಂತ ಪಾರತಂತ್ರ್ಯವು ಪ್ರದರ್ಶಿಸಲ್ಪಟ್ಟಿತು

**ಭಾಷ್ಯಾರ್ಥವು:**—ತಾವು ಮುಂದೆ ಹೇಳುವ ಉಪದೇಶವು ಅತಿ ದುರ್ಲಭವಾದುದು: ಯಾವ ಸುರರಾಗಲಿ ಮಹರ್ಷಿಯಾಗಲಿ, ಉಪದೇಶಿಸಲಾರರು; ಆದುದರಿಂದ ನಾನೇ ಉಪದೇಶಿಸುವದರಿಂದ ನಿನಗೆ ಪರಮಾದರಣೀಯವಾದುದೆಂದು ಹೇಳುತ್ತಾರೆ: **ಸುರಗಣಾ ಮಹರ್ಷಯಶ್ಚ**—ದೇವತೆಗಳ ಸಮೂಹವಾಗಲಿ, ಅಥವಾ ಮಹರ್ಷಿಗಳೇ ಆಗಲಿ, **ಅತೀಂದ್ರಿಯಾರ್ಥ ದರ್ಶಿನಃ**—ಬಾಹ್ಯೇಂದ್ರಿಯಗಳಿಗೆ ಗೋಚರವಲ್ಲದ ವಿಷಯವನ್ನು ಸಾಕ್ಷಾತ್ಕರಿಸುವವರಾಗಿ, **ಅಧಿಕತರ ಜ್ಞಾನಾ ಅಪಿ**—ಇತರರಿಗಿಂತ ಹೆಚ್ಚು ಜ್ಞಾನವುಳ್ಳವರಾದರೂ, **ಮೇ**—ನನ್ನ **ಪ್ರಭವಂ**-ವೆಂದರೆ, ಪ್ರಭಾವವನ್ನು, **ನವಿದುಃ**—ತಿಳಿಯಲಿಲ್ಲವೆಂದರೆ, **ಮಮ**—ನನ್ನ, **ನಾಮ, ಕರ್ಮ, ಸ್ವರೂಪ ಸ್ವಭಾವವೇ** ಮೊದಲಾದುವುಗಳನ್ನು, **ನಜಾನಂತಿ**—ಯಥಾರ್ಥವಾಗಿ ತಿಳಿಯ

ಭಾ. **ನಜಾನನ್ತಿ; ಯತಸ್ತೇಷಾಂ ದೇವಾನಾಂ ಮಹರ್ಷೀಣಾಂಚ ಸರ್ವಶೋಽಹಮಾದಿಃ ತೇಷಾಂ ಸ್ವರೂಪಸ್ಯ ಜ್ಞಾನಶಕ್ತ್ಯಾದೇಶ್ಚಾಹಮಾದಿಃ, ತೇಷಾಂ ದೇವತ್ವದೇವರ್ಷಿತ್ವಾದಿ ಹೇತುಭೂತ ಪುಣ್ಯಾನುಗುಣಂ, ಮಯಾದತ್ತಂ ಜ್ಞಾನಂ ಪರಿಮಿತಮ್, ಅತಸ್ತೇ ಪರಿಮಿತಜ್ಞಾನಾ ಮತ್ಸ್ವರೂಪಾದಿಕಂ ಯಥಾವನ್ನಜಾನನ್ತಿ||೨||**

ಲಾರರು. **ಪ್ರಭವಂ** ಎಂದರೆ ಪ್ರಭಾವವೆಂದೇ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ವ್ಯಾಖ್ಯಾನವು. ಆದರೆ ಬೇರೆ ದ್ವೈತವ್ಯಾಖ್ಯಾನದಲ್ಲಿ ಮಾತ್ರ ಜಗತ್ತಿನ ಉತ್ಪತ್ತಿ ಎಂದೂ ಅರ್ಥಮಾಡಿರುತ್ತಾರೆ. ಉತ್ತರಾರ್ಧದ ಅರ್ಥವನ್ನು ತಿಳಿಸುತ್ತಾರೆ. — **ಯತಃ** — ಯಾವ ಕಾರಣದಿಂದ, **ತೇಷಾಂ ದೇವಾನಾಂ ಮಹರ್ಷೀಣಾಂಚ**— ಆ ದೇವತೆಗಳಿಗೂ ಮಹರ್ಷಿಗಳಿಗೂ ಕೂಡ, **ಸರ್ವಶಃ**— ಸರ್ವಪ್ರಕಾರದಲ್ಲೂ, **ಅಹಂ ಆದಿಃ**— ನಾನು ಮೂಲ ಕಾರಣನೋ, ಮುಂದೆ **ಸರ್ವಶಃ ಅಹಮಾದಿಃ** ಎಂಬುದರ ತಾತ್ಪರ್ಯವನ್ನು ತಿಳಿಸುತ್ತಾರೆ.—**ತೇಷಾಂ**— ಆ ದೇವತೆಗಳ ಮತ್ತು ಋಷಿಗಳ, ಜ್ಞಾನಾಶಕ್ತ್ಯಾದಿಗಳಿಗೂ ಸಹ. **ಅಹಮಾದಿಃ**— ನಾನು ಕಾರಣಭೂತನೋ; ಅದರ ಒಟ್ಟು ತಾತ್ಪರ್ಯವನ್ನು ವಿವರಿಸುತ್ತಾರೆ.— ಯಾವ ಕಾರಣದಿಂದ, **ತೇಷಾಂ**— ಅವರುಗಳ. **ದೇವತ್ವದೇವರ್ಷಿತ್ವಾದಿ ಹೇತುಭೂತಪುಣ್ಯಾನುಗುಣಂ** — ದೇವತ್ವವೇನು, ದೇವರ್ಷಿತ್ವವೇನು, ಇವೇ ಮೊದಲಾದುವುಗಳಿಗೆ ಕಾರಣವಾದ ಪುಣ್ಯಗಳಿಗೆ ಅನುಗುಣವಾಗಿ, **ಮಯಾದತ್ತಂ ಜ್ಞಾನಂ ಪರಿಮಿತಂ**— ನನ್ನಿಂದ ಕೊಡಲ್ಪಟ್ಟ ಜ್ಞಾನವು ಅವರಿಗೆ ಪರಿಮಿತವಾದುದೋ, **ಅತಃ**— ಆ ಕಾರಣದಿಂದ, **ತೇ ಪರಿಮಿತಜ್ಞಾನಾಃ**— ಆ ದೇವತೆಗಳೂ ಋಷಿಗಳೂ ಪರಿಮಿತವಾದ ಜ್ಞಾನವುಳ್ಳವರು, **ಮತ್ಸ್ವರೂಪಾದಿಕಂ**— ಮೇಲೆ ಹೇಳಿದ ನನ್ನ ಸ್ವರೂಪವೇ ಮೊದಲಾದುವನ್ನು, **ಯಥಾವನ್ನಜಾನಂತಿ**— ಹೇಗೆ ಮಹತ್ತಾದುದೋ ಅದನ್ನು ಯಥಾವತ್ತಾಗಿ ತಿಳಿಯಲಾರರು. ಇಲ್ಲಿ **ಯತಃ ಅತಃ,** ಎಂದು ಅರ್ಥ ಮಾಡಿರುವದು, ಮೂಲದ ಹಿ ಶಬ್ದಾರ್ಥವು. **ಸರ್ವಶಃ ಅಹಂ ಆದಿಃ** ಎಂದಿರುವದರಿಂದ **ಸರ್ವಶಃ** ಎಂಬ ಶಬ್ದದ ವ್ಯಾಖ್ಯಾನವಾಗಿ **ಸ್ವರೂಪಸ್ಯ ಜ್ಞಾನಶಕ್ತ್ಯಾದೇಶ್ಚ** ಎಂದು ವಿವರಿಸಿರುತ್ತಾರೆ. ಆದರೆ ತಾನೇ ಸಙ್ಕಲ್ಪಿಸಿ ಅವರಿಗೆ ಕೊಡುವ ಜ್ಞಾನವು ಪರಿಮಿತವಾಗಿರಬಹುದೋ ಎಂಬಾಕ್ಷೇಪ ಬಂದೀತಾಗಿ, ಅವರುಗಳ ಜನ್ಮಕ್ಕೆ ಹೇತುಭೂತವಾದುದು ಅವರ ಸುಕೃತಗಳೇ ವಿನಾ, ತನ್ನ ಇಷ್ಟವಲ್ಲವೆಂದು ತಿಳಿಸುವದಕ್ಕಾಗಿ, **ಪುಣ್ಯಾನುಗುಣಂ** ಎಂಬ ಪ್ರಯೋಗವು. ಇದರಿಂದ ಸರ್ವೇಶ್ವರನಿಗೇನೂ ವೈಷಮ್ಯನೈರ್ಘೃಣ್ಯಗಳಿಲ್ಲವೆಂದೂ, **ನಮೇದ್ವೇಷ್ಯೋಽಸ್ತಿನಪ್ರಿಯಃ** ಎಂಬಲ್ಲಿ ಪ್ರದರ್ಶಿಸಲ್ಪಟ್ಟಹಾಗೆ, ಬೋಧಿತವಾಯಿತು. ಪರಮಾತ್ಮನ ಮಹಿಮೆಯನ್ನು ತಿಳಿಯುವದು ದುರ್ಲಭವೆಂದು ತೈತ್ತಿರೀಯವು ಹೇಳುತ್ತದೆ— " **ಕೋ ಅದ್ಧಾವೇದ ಕ ಇಹ ಪ್ರವೋಚತ್ । ಕುತ ಆಜಾತಾ ಕುತ ಇಯಂ ವಿಸೃಷ್ಟಿಃ । ಅರ್ವಾಗ್ದೇವಾ ಅಸ್ಯ ವಿಸರ್ಜನಾಯ । ಅಥಾ ಕೋ ವೇದ ಯತ ಆ ಬಭೂವ । ಇಯಂ ವಿಸೃಷ್ಟಿರ್ಯತ ಆಬಭೂವ । ಯದಿ ವಾ ದಧೇ ಯದಿ ವಾನ । ಯೋ ಅಸ್ಯಾಧ್ಯಕ್ಷಃ ಪರಮೇವ್ಯೋಮನ್ । ಸೋ ಅಙ್ಗ ವೇದ ಯದಿ ವಾನ ವೇದ"** (ತೈ. ಬ್ರಾ.೨. ಅಷ್ಟ. ೭ ಪ್ರ ೯ ಅನುವಾಕ.) ಇದರ ಅರ್ಥವೇನೆಂದರೆ—

ಸರಿಯಾದ ಶಾಸ್ತ್ರ ಜ್ಞಾನವಿಲ್ಲದ ಕೆಲವರು ಪರಮಾಣುಗಳೇ ಜಗತ್ಕಾರಣವೆಂದೂ ಇನ್ನು ಕೆಲವರು ಪ್ರಧಾನವೇ ಎಂದೂ, ತಾನಾಗಿಯೇ ಜಗತ್ತಿನ ಉತ್ಪತ್ತಿಯಾಯಿತೆಂದೂ, ಜಗತ್ತು ಶೂನ್ಯವೆಂದೂ, ಹೀಗೆಲ್ಲಾ ನಾನಾಬಗೆಯಾಗಿ ಅಜ್ಞಾನದಿಂದ ಹೇಳುವರು. ಯಾವ ಪುರುಷನು ಜಗತ್ತಿಗೆ ಕಾರಣವೀತನೆಂದು ಹೇಳಲು ಜ್ಞಾನವುಳ್ಳವನು? ತಾನೇ ಅಜ್ಞನಾಗಿರುವಾಗ ಜಗತ್ಕಾ

**ಭಾ. ಅವ. ತದೇತದ್ದೇವಾದ್ಯಚಿನ್ತ್ಯಸ್ವಯಾಥಾತ್ಮ್ಯವಿಷಯಜ್ಞಾನಂ ಭಕ್ತ್ಯುತ್ಪತ್ತಿ ವಿರೋಧಿ ಪಾಪವಿಮೋಚನೋಪಾಯ ಮಾಹ-**

**ಮೂ: ಯೋ ಮಾ ಮಜ ಮನಾದಿಂಚ ವೇತ್ತಿ ಲೋಕ ಮಹೇಶ್ವರಮ್ ।**
**ಅಸಮ್ಮೂಢ ಸ್ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩.**

ರಣನೀತನು ಎಂದು ಹೇಗೆ ಹೇಳುವನು? ಅದು ತಾನೆ ಎಲ್ಲಿಂದ ಬಂತು? ಈ ವಿವಿಧವಾದ ಸೃಷ್ಟಿಗೆ ಉಪಾದಾನ ನಿಮಿತ್ತ ಕಾರಣವು ಯಾವುದು? ಇವನ್ನು ತಿಳಿದವರು ದೇವತೆಗಳೇ ಮನುಷ್ಯರೇ? ಎಂದರೆ ಇವರು ಯಾರೂ ಶಕ್ಯರಲ್ಲವು. ಸೃಷ್ಟಿಗೆ ಮೊದಲು ಅವರು ದೇವತೆ ಮನುಷ್ಯರಾಗಿರಲಿಲ್ಲವು ಹೀಗಿರುವಾಗ ಇನ್ನು ಯಾರು ತಾನೆ ತಿಳಿದು ಹೇಳುವರು ಇದ್ದಾರೆ? ಹೀಗೆ ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದ ಊಹಿಸಿ ಹೇಳುವವರು ಈ ಲೋಕದಲ್ಲಿ ಯಾರಿದ್ದಾರೆ? ಆದುದರಿಂದ ಜಗತ್ಕಾರಣನಿವನು ಎಂಬುದು ಶಾಸ್ತ್ರೈಕ ಸಮಧಿಗಮ್ಯವಿಷಯವು. ಹೀಗೆ ಪ್ರತ್ಯಕ್ಷವಾಗಿ ತೋರುವ ಭೂತ ಭೌತಿಕರೂಪ ವಿಚಿತ್ರವಿವಿಧ ಸೃಷ್ಟಿಗೆ ಯಾವ ಉಪಾದಾನ ಕಾರಣದಿಂದುಂಟಾದುದು ಅದರ ಸ್ವರೂಪವೆಂತಾದ್ದು? ಅದು ಹೇಗೆ ಸ್ವರೂಪವನ್ನು ಧರಿಸಿರುತ್ತದೆ? ನಿತ್ಯ ವಿಭೂತಿಯಲ್ಲಿರುವ ಯಾವ ಜಗತ್ತಿನ ಸ್ವಾಮಿಯೋ ಆತನೇ ತನ್ನ ಮಾಹಾತ್ಮ್ಯವನ್ನು ತಿಳಿದಿರುವನೋ? ಇಲ್ಲವೋ? ಹೀಗಿರುವಾಗ ಮನುಷ್ಯನು ಸರಿಯಾಗಿ ಆತನ ಮಾಹಾತ್ಮ್ಯವನ್ನು ತಿಳಿಯುತ್ತಾನೆಂಬುದಕ್ಕೆ ಅವಕಾಶ ಎಲ್ಲಿಯದು? ಎಂಬುದು ಈ ವಾಕ್ಯಗಳ ತಾತ್ಪರ್ಯವು. ಈ ಶ್ರುತ್ಯರ್ಥವೇ ಈ ಶ್ಲೋಕದ ಪೂರ್ವಾರ್ಧದಲ್ಲಿ ಉಪಪಾದಿತವು. ಹಾಗೆಯೇ ವಿಷ್ಣುಪುರಾಣವೂ ಹೇಳುತ್ತದೆಂಬುದು ಮೂಲದ ಅರ್ಥದಲ್ಲೇ ಪ್ರದರ್ಶಿಸಲ್ಪಟ್ಟಿರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು :-** ದೇವ ಮಹರ್ಷಿಗಳೂ ಕೂಡ ಮಿತಪ್ರಜ್ಞರಾದುದರಿಂದ ನನ್ನನ್ನು ತಿಳಿಯಲಾರರೆಂದು ಹಿಂದೆ ಹೇಳಿದುದು ಏಕೆ ಎಂಬುದನ್ನು ಮುಂದೆ ತಿಳಿಸುತ್ತಾರೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ.- **ತದೇತತ್** ಅಂತಹ ಈ, **ಅಚಿನ್ತ್ಯಸ್ವಯಾಥಾತ್ಮ್ಯವಿಷಯಜ್ಞಾನಂ**-ಮನಸ್ಸಿನಿಂದ ಚಿಂತಿಸಲೂ ಅಸಾಧ್ಯವಾದ ತನ್ನ ಯಾಥಾತ್ಮ್ಯವಿಷಯವಾದ ಜ್ಞಾನವನ್ನು, **ಭಕ್ತ್ಯುತ್ಪತ್ತಿಗೆ ವಿರೋಧಿಗಳಾದ ಪಾಪಗಳಿಂದ ವಿಮೋಚನೋಪಾಯಂ**-ಬಿಡುಗಡೆಯನ್ನು ಹೊಂದುವ ಉಪಾಯವನ್ನಾಗಿ, **ಆಹ**-ಹೇಳುತ್ತಾರೆ. ಹೀಗೆ ಸುರಗಣ ಮಹರ್ಷಿಗಳಿಗೂ ಕೂಡ ತಿಳಿಯಲಸಾಧ್ಯವಾದುದನ್ನು ಮನುಷ್ಯನಾಗಿ ಕ್ಷತ್ರಿಯನಾದ ತನಗೆ ತಾನೇ ವೇದ್ಯ ಹೇಗೆ ಎಂದು ಅರ್ಜುನನು ಧೈರ್ಯವನ್ನೂ ಶ್ರದ್ಧೆಯನ್ನೂ ನೀಗಬಹುದೆಂದು ಭಾವಿಸಿ, ತನ್ನ ಮಹಾತ್ಮ್ಯೆಯನ್ನು ತಿಳಿಯುವುದು ಸಾಧ್ಯವೆಂದೂ ಹೇಳಿ, ಭಕ್ತ್ಯುತ್ಪತ್ತಿ ವಿವೃದ್ಧಿಗಳಿಗೆ ಬೇಕಾದ ಜ್ಞಾನವೆಂತಾದ್ದೆಂಬುದನ್ನು ನಿರೂಪಿಸುತ್ತಾರೆ. ಅಂತಹ ಜ್ಞಾನವನ್ನು ಹೊಂದಿ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಬಹುದೆಂದು ಉಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :- ಮರ್ತ್ಯೇಷು**-ಮೃತಿಯನ್ನು ಹೊಂದುತ್ತಾ ಹೊಂದುತ್ತಾ ಜನ್ಮಸಂತತಿಯನ್ನು ಹೊಂದಿರುವ ಮನುಷ್ಯರಲ್ಲಿ, **ಯಃ**-ಯಾವನು, ಇಲ್ಲಿ ಭಕ್ತಿಯೋಗಾರಂಭಕನು ಹೇಳಲ್ಪಟ್ಟನು, **ಮಾಂ**-ನನ್ನನ್ನು, **ಅಜಂ ಅನಾದಿಂಚ**-ಉತ್ಪತ್ತಿ ರಹಿತನನ್ನಾಗಿಯೂ, ಆದಿಯಿಲ್ಲದವನನ್ನಾಗಿಯೂ ಸಹ, ಪ್ರಕೃತಿ ಚೇತನರಾದ ಚಿದಚಿತ್ತುಗಳಿಗೂ ಅಜತ್ವ, ಅನಾದಿತ್ವಗಳುಂಟು ; ಪ್ರಕೃತಿಯು ಶ್ರುತಿಯಲ್ಲಿ " **ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ** " ಎಂದು ಅಜಾ ಶಬ್ದದಿಂದ ಹೇಳಲ್ಪಟ್ಟಿರುತ್ತದೆ. " **ಅಜೋನಿತ್ಯಃ ಶಾಶ್ವತೋಽಯಂ** " (ಗೀ.೨-೨೦)

ಎಂದು ಚೇತನನೂ ಅಜಶಬ್ದದಿಂದ ಹೇಳಲ್ಪಟ್ಟಿರುತ್ತಾನೆ. ಹಾಗೆಯೇ ಶ್ರುತಿಯಲ್ಲೂ " **ಜ್ಞಾಜ್ಞೌ ದ್ವಾವಜಾ ವೀಶನೀಶೌ** " (ಶ್ವೇ ೧.೯) ಪರಮಾತ್ಮ ಜೀವಾತ್ಮರಿಬ್ಬರೂ ಅಜರೆಂದು ಹೇಳಲ್ಪಟ್ಟಿರುತ್ತಾರೆ. ಹಾಗೆಯೇ ಅನಾದಿತ್ವವೂ ಪ್ರಕೃತಿ ಪುರುಷರಿಬ್ಬರಿಗೂ ಉಂಟೆಂದು " **ಪ್ರಕೃತಿಂ ಪುರುಷಂಚೈವ ವಿದ್ಧ್ಯನಾದೀಉಭಾವಪಿ** " (ಗೀ. ೧೩.೨೦) ಎಂದು, ಮುಂದೆ ಹೇಳುತ್ತಾರೆ. ಹೀಗೆ ಅಜತ್ವ ಅನಾದಿತ್ವವೂ ನನಗುಂಟು ಎಂದರೆ ಚಿದಚಿತ್ತುಗಳ ಹಾಗೋ ಎಂದರೆ, ಹಾಗಲ್ಲವು; ಅವುಗಳಿಗಿಂತ ತಾನು ವಿಲಕ್ಷಣನೆಂದು ಹೇಳುತ್ತಾರೆ.– **ಅಜೋಽಪಿಸನ್ ಅವ್ಯಯಾತ್ಮಾಭೂತಾನಾಂ ಈಶ್ವರೋಽಪಿ ಸನ್** " (ಗೀ.೪.೬.) ಎಂದು ಅವತಾರ ರಹಸ್ಯಗಳನ್ನು ಪದೇಶಿಸುವ ಶ್ಲೋಕದಲ್ಲೂ ಇಂತಹ ವೈಲಕ್ಷಣ್ಯವೇ ಹೇಳಲ್ಪಟ್ಟಿರುತ್ತದೆ. **ಅಜೋಽಪಿಸನ್** – ಉತ್ಪತ್ತಿಶೂನ್ಯವಾದ ಪ್ರಕೃತಿಗೂ, ಅಜತ್ವ ಉಂಟು, ಅದರ ಹಾಗೋ ಎಂದರೆ ಸ್ವರೂಪವಿಕಾರವಿಲ್ಲವೆಂದು **ಅವ್ಯಯಾತ್ಮಾಸನ್** – ಸ್ವರೂಪನಾಶವಿಲ್ಲದವನಾಗಿ, ಜೀವಾತ್ಮನಿಗೂ ಸ್ವರೂಪನಾಶವಿಲ್ಲವು, ಅತನ ಹಾಗೋ ಎಂದರೆ, ಅವನಿಗೂ ವಿಲಕ್ಷಣನೆಂದು, **ಭೂತಾನಾಂ ಈಶ್ವರೋಽಪಿಸನ್** – ಈ ಅಚಿತ್ತಿನೊಂದಿಗೆ ಸೇರಿದ ಚೇತನರಿಗಿಂತಲೂ, ಸ್ವರೂಪಸ್ವಭಾವವಿಕಾರಗಳಿಲ್ಲದೆ ವಿಲಕ್ಷಣನಾಗಿ ಸರ್ವಕ್ಕೂ **ಆತ್ಮಾವಾಗಿ,** ಸರ್ವಕ್ಕೂ ನಿಯಾಮಕನಾಗಿ ಎಂಬರ್ಥವು. ಇಲ್ಲಿ **ಅಜತ್ವ, ಅನಾದಿತ್ವ**ಗಳೆರಡೂ ಅಚಿತ್, ಚಿತ್ತುಗಳೆರಡಕ್ಕೂ ಉಂಟು, ಅದರಹಾಗೆ ಸ್ವರೂಪವಿಕಾರವೇನು, ಸ್ವಭಾವವಿಕಾರವೇನು, ಇವುಗಳುಂಟೋ ಎಂದರೆ ಇವೆರಡಕ್ಕೂ ವಿಲಕ್ಷಣನೆಂದು **ಲೋಕ ಮಹೇಶ್ವರಂ** ಎಂಬುದರಿಂದ ತಿಳಿಸಿರುತ್ತಾರೆ. ಸರ್ವಲೋಕದ ಚಿದಚಿತ್ತುಗಳ ಹಾಗೆ ಸ್ವರೂಪಸ್ವಭಾವವಿಕಾರಗಳಿಲ್ಲದೆ ಅವುಗಳನ್ನೆಲ್ಲಾ ವ್ಯಾಪಿಸಿ, ಅವುಗಳಿಗೆಲ್ಲಾ ಆತ್ಮಾವಾಗಿ, ಆದರೆ ಅವುಗಳ ಹೇಯತ್ವ ಸಂಬಂಧವಿಲ್ಲದೆ, ಅವುಗಳಿಗೆಲ್ಲಾ ನಿಯಾಮಕನಾಗಿ ವಿಲಕ್ಷಣನೆಂಬ ಭಾವವು. **ಲೋಕಮಹೇಶ್ವರಂ**–ಎಲ್ಲವನ್ನೂ ವ್ಯಾಪಿಸಿ, ಧರಿಸಿ, ಎಲ್ಲವೂ ನನ್ನ ಸ್ವತ್ತಾಗಿ, ಹೀಗೆ ಸರ್ವ ಲೋಕಕ್ಕೂ ನಿಯಾಮಕನಾಗಿ ನಿಯಮಿಸುವ ವಿಭೂತಿಯುಳ್ಳವನು, ಈಶ್ವರನಾದ ನಾನು. ಇಂತಹ ಶಕ್ತಿಯು ಇನ್ನು ಯಾರಿಗೂ ಇಲ್ಲವು: ಇಂತಹ ಅತ್ಯದ್ಭುತ ಶಕ್ತಿಯುಳ್ಳವನಾಗಿ. **ಯೋವೇತ್ತಿ**–ಯಾರು ತಿಳಿಯುತ್ತಾರೋ; ಎಂದರೆ ಚಿತ್, ಅಚಿತ್ ಈಶ್ವರರೆಂಬ ಮೂರು ತತ್ವಗಳು ಈ ಲೋಕದಲ್ಲಿ ಸ್ಥೂಲದೆಶೆಯಲ್ಲಿ ಯಾವಾಗಲೂ ಒಟ್ಟಿಗೆ ಇವೆಯೆಂದೂ, ಅದರಲ್ಲಿ ಈಶ್ವರನು ಈ ಚಿದಚಿತ್ತುಗಳಿಗೆ ಆತ್ಮಾವಾಗಿ ನಿಯಾಮಕನಾಗಿದ್ದರೂ, ಅವುಗಳಿಗಿಂತ ಹೇಯಪ್ರತ್ಯನೀಕನಾಗಿ, ವಿಲಕ್ಷಣನೆಂದು ಯಾವನು ತಿಳಿಯುವನೋ, **ಸಃ**–ಅವನು, **ಅಸಮ್ಮೂಢಃ**–ಮೋಹವೆಂದರೆ ಭ್ರಮೆ; ಅದನ್ನುಳ್ಳವನು ಸಮ್ಮೂಢನು; ದೇಹಾತ್ಮಭ್ರಮೆ, ಸ್ವತಂತ್ರಾತ್ಮಭ್ರಮೆ, ಜೀವಪರಮಾತ್ಮೈಕ್ಯಭ್ರಮೆಯು. ಇವುಗಳಿಲ್ಲದವನು **ಅಸಮ್ಮೂಢನು** ಪ್ರಾಜ್ಞನು; **ಸ**ಮಸ್ತ ಪಾಪಗಳಿಂದಲೂ, ಎಂದರೆ ಭಕ್ತ್ಯುತ್ಪತ್ತಿ ವಿವೃದ್ಧಿಗಳಿಗೆ ವಿರೋಧಿಗಳಾದ ಸಮಸ್ತ ಪಾಪಗಳಿಂದಲೂ, ಭಕ್ತಿನಿಷ್ಪತ್ತಿಯುಂಟಾದ ನಂತರ ಇನ್ನು ಮಿಕ್ಕ ಸಮಸ್ತ ಪಾಪಗಳಿಂದಲೂ ಸಹ, **ಪ್ರಮುಚ್ಯತೇ**–ಬಿಡುಗಡೆಯನ್ನು ಹೊಂದುತ್ತಾನೆ. ಹಿಂದೆ **ಮೋಹಿತಂ " ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ** " (ಗೀ.೭.೧೩) ಎಂಬಲ್ಲಿ ಮೋಹವಿರುವವನು ಸರ್ವೇಶ್ವರನ ವೈಲಕ್ಷಣ್ಯವನ್ನು ತಿಳಿಯಲಾರನೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಇಲ್ಲಿಯಾದರೋ, ಮೋಹಗಳಿಲ್ಲದವನು ಯಾರೆಂದರೆ ಚಿತ್ತು, ಅಚಿತ್ತು ಈಶ್ವರ ಈ ಮೂರು ತತ್ವಗಳಿಗಿರುವ ವೈಲಕ್ಷಣ್ಯವನ್ನು ಚನ್ನಾಗಿ ತಿಳಿದವನು. ಅಚಿತ್ತಿಗೆ ಸ್ವರೂಪ ಸ್ವಭಾವಗಳಲ್ಲಿ ವಿಕಾರವೆಂದೂ, ಚಿತ್ತಿಗೆ ಸ್ವರೂಪ ವಿಕಾರವಿಲ್ಲದೆ ಸ್ವಭಾವದಲ್ಲಿ ಮಾತ್ರ ವಿಕಾರವೆಂದೂ, ಇವೆರಡಕ್ಕೂ ಆತ್ಮಾವಾಗಿರುವ ಈಶ್ವರನು, ಈ ಯಾವ ವಿಕಾರಗಳೂ ಇಲ್ಲದೆ ವಿಲಕ್ಷಣನಾಗಿರುವನೆಂಬ ಜ್ಞಾನವು ಮುಖ್ಯವಾಗಿ ಬೇಕು, ಇವರ ಮುಖ

**ಭಾ. ನಜಾಯತ ಇತ್ಯಜಃ ; ಅನೇನ ವಿಕಾರಿದ್ರವ್ಯಾ ದಚೇತನಾ ತ್ತತ್ಸಂಸೃಷ್ಟಾತ್ಸಂಸಾರಿ**

ಪ್ರಯೋಜನವು ವೇದಾಂತಿಗೆ ಯಾವುದೆಂದರೆ, ಅಸಮ್ಮೂಢತ್ವಉಂಟಾಗುವದಕ್ಕೆ. ಮುಖ್ಯವಾಗಿ ಮೂರು ಭ್ರಮೆಗಳು ಭಕ್ತಿಯೋಗನಿಷ್ಠನಿಗೆ ಕೂಡದು, ಅವು ಯಾವುವೆಂದರೆ (೧) **ದೇಹಾತ್ಮ ಭ್ರಾಂತಿಯು** ದೇಹವೇ ಆತ್ಮಾ ಎಂಬ ಭ್ರಮೆಯು ಇದು ಕೂಡದೆಂದು ಕರ್ಮಯೋಗ ಪ್ರಶಂಸೆಯಲ್ಲಿ ಹಿಂದೆಯೇ ಹೇಳಲ್ಪಟ್ಟಿತು. ಚಿತ್ತಾದ ಜ್ಞಾನವುಳ್ಳ ಆತ್ಮಾ ಸ್ವರೂಪ ವಿಕಾರವನ್ನು ಹೊಂದುವ ಜಡವಾದ ಅಚಿತ್ತಿಗಿಂತಲೂ ವಿಲಕ್ಷಣನು, ಈ ಜ್ಞಾನದಿಂದ ಈಗ ತನಗೆ ಪ್ರಾಪ್ತವಾಗಿರುವ ಅಚಿತ್ಸಂಸರ್ಗರೂಪ ದುರ್ಗತಿಯು ತೊಲಗುವಹಾಗೆ ತಾನು ಯತ್ನಿಸತಕ್ಕದ್ದೆಂದು ಆ ಉಪಾಯಾನುಷ್ಠಾನವನ್ನು ಶ್ರದ್ಧೆಯಿಂದ ಮಾಡುವನು. (೨) ತಾನು ಸ್ವತಂತ್ರನೆಂಬ ಭ್ರಮೆಯು ಮುಂದೆ ೧೫ ನೆಯ ಅಧ್ಯಾಯದಲ್ಲಿ ಈ ಭ್ರಮೆಯನ್ನು ನಿಪುಣತರವಾಗಿ ಹೋಗಲಾಡಿಸುತ್ತಾರೆ. ಇದು ೧೫-೧೯, ೬೦, ೬೧ ನೆಯ ಶ್ಲೋಕಗಳಲ್ಲಿ ವ್ಯಕ್ತವು. (೩) ಜೀವಾತ್ಮನೂ ಪರಮಾತ್ಮನೂ ಒಂದೇ ಎಂಬ ಭ್ರಮೆಯು ; ತಾನು ಪರಮಾತ್ಮನಿಗೆ ಶೇಷಭೂತನು, ಅಧೀನನು, ಪರಮಾತ್ಮನು ತನಗೆ ನಿಯಾಮಕನು, ಆತನೇ ತನಗೆ ಪ್ರಾಪ್ಯನು ಎಂದು ತಿಳಿದರೆ, ತಾನು ಉಪಾಯಾನುಷ್ಠಾನವನ್ನು ಮಾಡಿ ಆತನನ್ನು ಹೊಂದಬೇಕೆಂಬುದರಲ್ಲಿ ಶ್ರದ್ಧೆಯೂ ಆತನಲ್ಲಿ ಭಕ್ತಿಯೂ, ಉಂಟಾಗುತ್ತವೆ. ಭಕ್ತಿಯು ವೃದ್ಧಿಯನ್ನೂ ಹೊಂದುತ್ತದೆ. ಇಬ್ಬರೂ ಒಂದೇ ಎಂಬ ಭ್ರಮವಿದ್ದುದಾದರೆ ಉಪಾಯಾನುಷ್ಠಾನವನ್ನು ಮಾಡಲು ಕಾರಣವೇ ಇರುವುದಿಲ್ಲವು. ಆದುದರಿಂದ ಈ ಭ್ರಮೆಗಳು ತೊಲಗಿ ಅಸಂಮೂಢನಾದರೇನೆ ಭಕ್ತ್ಯುತ್ಪತ್ತಿ ವಿವೃದ್ಧಿಗಳುಂಟಾಗುತ್ತವೆ ಎಂಬ ಭಾವವು ಈ ಮೂರು ಮೋಹಗಳನ್ನೂ ಭಗವಂತನ ಅಮೋಘೋಪದೇಶದ ಮಹಾತ್ಮ್ಯೆಯಿಂದ ಕಳೆದುಕೊಂಡವನಾಗಿಯಲ್ಲವೇ ಕಡೆಗೆ ೧೮ ನೆಯ ಅಧ್ಯಾಯದ ೭೩ ನೆಯ ಶ್ಲೋಕದಲ್ಲಿ **"ನಷ್ಟೋಮೋಹಸ್ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ"** ಎಂದು ಅರ್ಜುನನು ಹೇಳಿಕೊಳ್ಳುತ್ತಾನೆ. **ಮರ್ತ್ಯೇಷು** ಎಂಬ ಪ್ರಯೋಗದಿಂದ, ಈಗ ಪ್ರಕೃತಿ ಸಂಸರ್ಗ ಉಂಟಾಗಿ ಜರಾಮರಣಾದಿಗಳು ಪ್ರಾಪ್ತವಾಗಿರುವದುರ್ದಶೆಯು ಸೂಚಿತವಾಗಿ ಆ ದುರ್ದಶೆಯನ್ನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳಬೇಕೆಂಬ ಉತ್ಸಾಹ ಶ್ರದ್ಧೆ ಇವುಗಳು ಈತನಿಗೆ ಉಂಟಾಗಬೇಕೆಂಬುದು ಸೂಚಿತವು. ತನಗೆ ಬಂದಿರುವ ಮರ್ತ್ಯ ಭಾವವನ್ನು ಕಳೆದುಕೊಳ್ಳಬೇಕೆಂದು ಯತ್ನಿಸುವನು. ಏಕೆಂದರೆ ಈಗ ಈತನು ಅಸಮ್ಮೂಢನು, ಅಸಮ್ಮೂಢನು ಹೇಗೆಂದರೆ, ಆತನು, ಚಿದಚಿತ್ತುಗಳಿಗೂ ವಿಲಕ್ಷಣನಾಗಿ ಲೋಕಮಹೇಶ್ವರನೆಂದು ಚೆನ್ನಾಗಿ ತಿಳಿದಿರುವನಾದುದರಿಂದ ಎಂಬ ಭಾವವು. ಇದಕ್ಕೆ ಫಲವೇನೆಂದರೆ ಭಕ್ತಿಯೋಗನಿಷ್ಪತ್ತಿಗೆ ವಿರೋಧವಾದ ಪಾಪಗಳೆಲ್ಲವೂ ತೊಲಗುತ್ತವೆ. ಭಕ್ತಿಯೋಗನಿಷ್ಪತ್ತಿಯಾದನಂತರ ಇನ್ನೂ ಇತರ ಪಾಪಗಳೆಲ್ಲವೂ ತೊಲಗುತ್ತವೆ. ಅನಂತರ ಪರಮಾತ್ಮಪ್ರಾಪ್ತಿಯುಂಟಾಗುತ್ತದೆ ಎಂಬುದು ಈ ಶ್ಲೋಕದ ತಾತ್ಪರ್ಯವು.

**ಭಾಷ್ಯಾರ್ಥವು:**-ಹಿಂದಿನ ಶ್ಲೋಕದಲ್ಲಿ ಸುರಗಣವೂ ಮಹರ್ಷಿಗಳೂಕೂಡ ತನ್ನನ್ನು ಯಥಾರ್ಥವಾಗಿ ತಿಳಿಯರು ಎಂದು ಹೇಳಿದರು. ಇದರಿಂದ ಅವರೆಲ್ಲರಿಗಿಂತಲೂ ತಾನು ವಿಲಕ್ಷಣನೆಂದು ಹೇಳಿದಂತಾಯಿತು. ಇಂತಹ ಜ್ಞಾನದ ಉಪಯೋಗವೇನೆಂಬುದನ್ನು ತಿಳಿಸುತ್ತಾರೆ.-**ನಜಾಯತೇ ಇತ್ಯಜಃ**-ಯಾವುದು ಹುಟ್ಟುವದಿಲ್ಲವೋ ಎಂದರೆ ಯಾವುದಕ್ಕೆ ಉತ್ಪತ್ತಿ ಇಲ್ಲವೋ ಅದು **ಅಜಃ** ಎಂದು ಹೇಳಲ್ಪಡುತ್ತದೆ. **ಅನೇನ** - ಇದರಿಂದ ಎಂದರೆ ಈ ಪ್ರಕೃತಿಯಿಂದ, ವಿಕಾರಿ ದ್ರವ್ಯವಾದ, ಅಚೇತನಕ್ಕಿಂತಲೂ ಮತ್ತು **ತತ್ಸಂಸೃಷ್ಟಾತ್**-ಆ ಅಚೇತನದೊಂದಿಗೇ ಸಂಬಂಧನಿಕೊಂಡಿರುವ, ಸಾಂಸರಿಕಚೇತನಾಚ್ಚ. ಸಂಸಾರವನ್ನು ಹೊಂದಿರುವ ಬದ್ಧ

ಭಾ. **ಚೇತನಾಚ್ಚ ವಿಸಜಾತೀಯತ್ವಮುಕ್ತಮ್ ; ಸಂಸಾರಿಚೇತನಸ್ಯಹಿ ಕರ್ಮಕೃತಾಚಿತ್ಸಂಸರ್ಗೋಜನ್ಮ । "ಅನಾದಿ"ಮಿತ್ಯನೇನ ಪದೇನಾ ದಿಮತೋಽಜಾನ್ಮುಕ್ತಾತ್ಮನೋ ವಿಸಜಾತೀಯತ್ವ ಮುಕ್ತಮ್ । ಮುಕ್ತಾತ್ಮನೋಹಿ ಅಜತ್ವ ಮಾದಿಮತ್.**

ಜೀವನಿಗಿಂತಲೂ ಸಹ ಎಂದರ ಅಚೇತನ ಬದ್ಧಚೇತನ ಎರಡಕ್ಕಿಂತಲೂ. **ವಿಸಜಾತೀಯತ್ವಮುಕ್ತಮ್**-ಪರಮಾತ್ಮನಿಗೆ ವೈಲಕ್ಷಣ್ಯವು ಹೇಳಲ್ಪಟ್ಟಿತು, **ಅಜ** ಶಬ್ದದಿಂದಲೇ ಅಷ್ಟು ಚೇತನಾ ಚೇತನವೈಲಕ್ಷಣವನ್ನೆಲ್ಲಾ ಹೇಗೆ ಹೇಳುತ್ತೀರಿ? **"ಅಜೋನಿತ್ಯಶ್ಶಾಶ್ವತಃ"** (ಎಂದು ಗೀ. ೨.೨೦.) ಹಿಂದೆ ಜೀವಾತ್ಮನ ವಿಷಯದಲ್ಲೂ ಹೇಳಿರುವಾಗ ಜೀವಾತ್ಮನಿಗಿಂತಲೂ ಪರಮಾತ್ಮನು ವಿಲಕ್ಷಣನೆಂಬರ್ಥವು ಹೇಗೆ ಉಂಟಾಯಿತು? ಎಂದರೆ ಚೇತನರು ತ್ರಿವಿಧವು. (೧) ಬದ್ಧ (೨) ಮುಕ್ತ (೩) ನಿತ್ಯರೆಂಬುದಾಗಿ. ಈ ಮೂರುವಿಧ ಚೇತನರಿಗಿಂತಲೂ ಪರಮಾತ್ಮನು ವಿಲಕ್ಷಣನೆಂದು ಉಪದೇಶಿಸುತ್ತಾರೆ ವೈಲಕ್ಷಣ್ಯಕ್ಕೆ ಹೇತುವನ್ನು ತಿಳಿಸುತ್ತಾರೆ.-**ಸಂಸಾರಿ ಚೇತನಸ್ಯಹಿ** ಬದ್ಧ ಚೇತನನಿಗಲ್ಲವೇ, **ಕರ್ಮಕೃತಾಚಿತ್ಸಂಸರ್ಗೋ ಜನ್ಮ**-ಕರ್ಮದಿಂದುಂಟಾದ, ಅಚಿತ್ತಿನ ಸಂಬಂಧದಿಂದ ಎಂದರೆ ಪ್ರಾಪ್ತವಾದ ದೇಹಪ್ರಯುಕ್ತನಾಗಿ ಬಂದುದು ಜನ್ಮವು; ಬದ್ಧಚೇತನನು ಇದುವರೆಗೂ ಕರ್ಮಮೂಲಕನಾಗಿ ಸುಖದುಃಖಾನುಭವಗಳಿಗಾಗಿ ದೇಹವನ್ನು ಹೊಂದುವದರ ಮೂಲಕ ಅಸಂಖ್ಯಾತವಾದ ಜನ್ಮಗಳನ್ನು ಎತ್ತಿರುತ್ತಾನೆ. **"ಗಣ್ಯನ್ತೇ ಪಾಂಸವೋ ಭೂಮೌ ಗಣ್ಯನ್ತೇ ದಿವಿತಾರಕಾಃ । ಗಣ್ಯನ್ತೇ ವರ್ಷಧಾರಾಸ್ತು ನವ್ಯತೀತಾಃ ಪಿತಾಮಹಾಃ"** ಎಂದು ವಿಷ್ಣುಧರ್ಮದಲ್ಲಿನ ಅತಿಶಯೋಕ್ತಿಯು ಈ ಚೇತನನಿಗೆ ಪಿತಾ, ಪಿತಾಮಹರೂ ಇಷ್ಟು ಎಂದು ಎಣಿಸಲೂ ಕೂಡ ಸಾಧ್ಯವಿಲ್ಲದಷ್ಟು ಜನ್ಮಸಂತತಿಯನ್ನು ಎತ್ತಿದ್ದಾನೆಂದು ಹೇಳಲ್ಪಟ್ಟಿರುತ್ತದೆ. ಅಚಿತ್ತಿಗೆ ಸ್ವರೂಪಸ್ವಭಾವವಿಕಾರರೂಪ ಉತ್ಪತ್ತಿಯೂ, ಚೇತನನಿಗೆ ಕರ್ಮಕೃತಸ್ವರೂಪದಲ್ಲಿ ವಿಕಾರವಿಲ್ಲದೆ ಸ್ವಭಾವದಲ್ಲಿ ವಿಕಾರವುಳ್ಳ ಹೊಸ ಹೊಸ ಜನ್ಮವೂ ಇರುವವರಿಂದ ಅಜತ್ವದಲ್ಲಿ ವ್ಯತ್ಯಾಸ ಉಂಟೆಂಬ ಭಾವವು. ಆದರೆ ಶ್ರುತಿಯಲ್ಲೂ ಇನ್ನೂ ಇತರ ಪ್ರಮಾಣಗಳಲ್ಲೂ ಅಜ ಶಬ್ದಪ್ರಯೋಗವು ಅಚೇತನ ಚೇತನಗಳಿಗೆ ಕಂಡಿರುವೆಯಲ್ಲಾ ಎಂದರೆ ದ್ರವ್ಯ ನಿತ್ಯತ್ವವನ್ನು ಬೋಧಿಸುವದಕ್ಕಾಗಿ ಹಾಗೆ ಪ್ರಯೋಗವೆಂದು ತಿಳಿಯತಕ್ಕದ್ದು. ಅಜತ್ವವು ದ್ರವ್ಯ ನಿತ್ಯತ್ವವನ್ನು ಬೋಧಿಸುತ್ತದೆ ಎಂದರ ದ್ರವ್ಯಕ್ಕೆ ಸ್ವರೂಪ ಸ್ವಭಾವ ಅವಸ್ಥಾಂತರಾಪ್ರಯತ್ವಗಳು ಉಂಟಾಗುವಾಗ ದ್ರವ್ಯಕ್ಕೆ ನಾಶ ಇಲ್ಲವೆಂಬ ಭಾವವು. ಚಿತ್ತಿನ ಅಜತ್ವದಲ್ಲಿ ಸ್ವಭಾವ ವಿಕಾರವೇ ವಿನಾ ಸ್ವರೂಪವಿಕಾರವಿಲ್ಲವು. ಅಚಿತ್ತಿನ ಅಜತ್ವದಲ್ಲಿ ಸ್ವರೂಪ ಸ್ವಭಾವಗಳೆರಡರಲ್ಲೂ ವಿಕಾರವುಂಟು. ಆದರೆ ಮುಕ್ತಾತ್ಮನು ಅಜನಲ್ಲವೋ? ಆತನಿಗೆ ಜನ್ಮವಿಲ್ಲವಲ್ಲಾ, ಆತನಹಾಗೋ ಪರಮಾತ್ಮನು ಎಂದರೆ, ಆತನಿಗಿಂತಲೂ ವಿಲಕ್ಷಣನು ಎಂದು ಮುಂದೆ ಹಾಗೆಯೇ ಅನಾದಿ ಶಬ್ದ ಪ್ರಯೋಗದಿಂದ ಮುಕ್ತಾತ್ಮನಿಗಿಂತಲೂ ವೈಲಕ್ಷಣ್ಯವು ಹೇಳಲ್ಪಟ್ಟಿತೆಂದು ಭಾಷ್ಯವನ್ನು ಬರೆಯುತ್ತಾರೆ. **ಅನಾದಿಂ ಇತ್ಯನೇನಪದೇನ**-ಅನಾದಿಂ ಎಂಬೀಪದದಿಂದ **ಆದಿಮತಃ**-ಆದಿಯನ್ನು ಹೊಂದಿದ, **ಅಜಾತ್**-ಇನ್ನು ಮುಂದೆ ಜನ್ಮವಿಲ್ಲದಿರುವ, **ಮುಕ್ತಾತ್ಮನಃ**-ಮುಕ್ತಾತ್ಮನಿಗಿಂತಲೂ. **ವಿಸಜಾತೀಯತ್ವಮುಕ್ತಮ್**-ವೈಲಕ್ಷಣ್ಯವು ಹೇಳಲ್ಪಟ್ಟಿತು. ಮುಕ್ತಾತ್ಮರಿಗೆ ಅಜತ್ವವು ಆದಿಮತ್ತಾದುದು, ಅದನ್ನೇ ವಿವರಿಸಿರುತ್ತಾರೆ—**ಮುಕ್ತಾತ್ಮನೋಹಿ**-ಮುಕ್ತಾತ್ಮನಿಗಾದರೋ, ಅಜತ್ವವು, **ಆದಿಮತ್** ಆದಿಯುಳ್ಳದುದು; ಪರಮಾತ್ಮನ ಅಜತ್ವವಾದರೋ ಆದಿ ಇಲ್ಲದುದು. ಅನಾದಿಯು ಎಂಬ ಭಾವವು ಹೀಗೆ ವ್ಯಾವರ್ತಿಸಿ ಶ್ರೀ ಮಹರ್ಷಿಯ ಪ್ರಯೋಗಗಳನ್ನು ಅನೇಕ ಕಡೆ ಕಾಣಬಹುದು. ಇದೇ ಗೀತೆಯಲ್ಲೇ ಹೀಗೆ ವಿಸಜಾತೀಯತ್ವವು ಉಪ

**ಭಾ. ತಸ್ಯ ಹೇಯಸಮ್ಬಂಧಸ್ಯ ಪೂರ್ವವೃತ್ತತ್ವಾತ್ತದರ್ಹತಾಸ್ತಿ; ಅತೋಽನಾದಿ ಮಿತ್ಯನೇನ ತದನರ್ಹತಯಾ ತತ್ಪ್ರತ್ಯನೀಕತೋಚ್ಯತೇ; (೧) "ನಿರವದ್ಯಮ್" ಇತ್ಯಾದಿ ಶ್ರುತ್ಯಾಚ। ಏವಂ ಹೇಯಸಂಬಂಧ ಪ್ರತ್ಯನೀಕಸ್ವರೂಪತಯಾ ತದನರ್ಹಂ ಮಾಂ**

ಪಾದಿಸಲ್ಪಟ್ಟಿರುತ್ತವೆಂದು ಹಿಂದೆ ಹೇಳಲ್ಪಟ್ಟಿತು. ಶ್ರೀ ಪರಾಶರರೂ **ಅವಿಕಾರಾಯಶುದ್ಧಾಯ ನಿತ್ಯಾಯ ಪರಮಾತ್ಮನೇ** ಎಂಬಲ್ಲಿ ಇಂತಹ ವಿಸಜಾತೀಯತ್ವವನ್ನು ಉಪಪಾದಿಸಿರುತ್ತಾರೆ. ಹೇಗೆಂದರೆ ಅವಿಕಾರಾಯ ಎಂಬ ವಿಕಾರಶೂನ್ಯತೆಯಿಂದ ಪ್ರಕೃತಿಗಿಂತಲೂ ವಿಸಜಾತೀಯತ್ವವನ್ನು ಹೇಳಿದರು. ಹೀಗೆ ಹೇಳಿದರೆ ಸ್ವರೂಪವಿಕಾರವಿಲ್ಲದ ಬದ್ಧಾತ್ಮನಹಾಗೋ ಎಂದರೆ ಆತನನ್ನೂ ವ್ಯಾವರ್ತಿಸುವದಕ್ಕಾಗಿ **ಶುದ್ಧಾಯ** ಎಂಬ ಪ್ರಯೋಗವು. ಬದ್ಧಾತ್ಮನಿಗಿರುವ ಪ್ರಕೃತಿಸಂಬಂಧದಿಂದುಂಟಾದ ಸ್ವಭಾವವಿಕಾರವಿಲ್ಲವೆಂದು[1] ಹೇಳಿದರು. ಹಾಗಾದರೆ ಸ್ವರೂಪ ಸ್ವಭಾವ ವಿಕಾರವಿಲ್ಲದ ಮುಕ್ತಾತ್ಮನಹಾಗೊ, ಎಂದರೆ, ಆತನಿಗೆ ಅಶುದ್ಧತ್ವವು ಒಂದುಕಾಲದಲ್ಲಾದರೂ ಇತ್ತು, ಈತನಿಗಾದರೋ ಯಾವಾಗಲೂ ಇಲ್ಲವೆಂದು ಹೇಯಪ್ರತ್ಯನೀಕತ್ವವು ನಿತ್ಯವೆಂದು ನಿತ್ಯಾಯ ಎಂದು ಹೇಳಲ್ಪಟ್ಟಿತು. ಹಾಗೆ ನಿತ್ಯವಾದುದಾದರೆ ನಿತ್ಯರಿಗೂ ಸಹ ನಿತ್ಯವೇ, ಅವರಹಾಗೋ ಎಂದರೆ, ಅವರಿಗಿಂತಲೂ ವಿಲಕ್ಷಣನಾಗಿ ಅವರಿಗೂ ಆತ್ಮನಾಗಿ ನಿಯಾಮಕನಾಗಿರುವದರಿಂದ, **ಪರಮಾತ್ಮನೇ** ಎಂದು ಎಲ್ಲವನ್ನು ವ್ಯಾಪಿಸುವನಾಗಿ, ಎಲ್ಲಕ್ಕೂ ಆತ್ಮನಾಗಿರುವದರಿಂದ ಸಮಸ್ತವ್ಯಾವೃತ್ತಿಯು ಹೇಳಲ್ಪಟ್ಟಿತು. ಹಾಗೆಯೇ ಇಲ್ಲಿಯೂ ಅಜ ಶಬ್ದದಿಂದ ಅಚಿದ್ವ್ಯಾವೃತ್ತಿಯೂ, ಬದ್ಧಾತ್ಮ ವ್ಯಾವೃತ್ತಿಯೂ, ಹಾಗಾದರೆ ಅಜತ್ವನಿರುವದರಿಂದ ಮುಕ್ತಾತ್ಮರಹಾಗೋ ಎಂದರೆ ಅನಾದಿ ಶಬ್ದದಿಂದ ಮುಕ್ತವ್ಯಾವೃತ್ತಿಯೂ, **ಲೋಕಮಹೇಶ್ವರಂ** ಎಂಬುದರಿಂದ ನಿತ್ಯರೇ ಮೊದಲುಗೊಂಡು ಸರ್ವವ್ಯಾವೃತ್ತಿಯೂ, ಹೇಳಲ್ಪಟ್ಟಿತೆಂಬ ಭಾವವು. ಮುಂದೆ ಮುಕ್ತಾತ್ಮನ ಅಜತ್ವವು ಆದಿಮತ್ತಾದುದು ಹೇಗೆ ಎಂಬುದನ್ನು ಉಪಪಾದಿಸುತ್ತಾರೆ.—**ತಸ್ಯ**-ಆ ಮುಕ್ತಾತ್ಮನಿಗೆ, **ಹೇಯ ಸಂಬಂಧಸ್ಯ ಪೂರ್ವವೃತ್ತತ್ವಾತ್** - ಅಚಿತ್ಸಂಸರ್ಗರೂಪ ಹೇಯಸಂಬಂಧವಾದರೋ ಮುಕ್ತಿಗೆ ಮೊದಲು ಇದ್ದುದರಿಂದ, **ತದರ್ಹತಾಸ್ತಿ**—ಅಂತಹ ಸಂಬಂಧಕ್ಕೆ ಅರ್ಹತೆ ಇತ್ತು, ಎಂದರೆ ಒಂದು ಕಾಲದಲ್ಲಾದರೂ ಹೇಯಸಂಬಂಧಕ್ಕೆ ಸಹಕಾರಿಕಾರಣಗಳು ಈ ಮುಕ್ತಾತ್ಮನಲ್ಲೂ ಇತ್ತು; ಈಗ ಆ ಸಹಕಾರಿಕಾರಣಗಳಿಲ್ಲವು: ಪರಮಾತ್ಮನಿಗಾದರೋ ಹೇಯತ್ವವು ಯಾವಾಗಲೂ ಇಲ್ಲವೆಂಬ ಭಾವವು. ಇವನ್ನೇ ಮುಂದೆ ಉಪಪಾದಿಸುತ್ತಾರೆ.—**ಅತಃ**-ಆ ಕಾರಣದಿಂದ, **ಅನಾದಿ ಮಿತ್ಯನೇನ ಅನಾದಿಂ** ಎಂಬ ಪ್ರಯೋಗದಿಂದ, **ತದನರ್ಹತಯಾ**-ಕರ್ಮಾವಿದ್ಯಾದಿ ಸಹಕಾರಿ ಕಾರಣಗಳಿಲ್ಲದುದರಿಂದ ಅಂತಹ ಹೇಯ ಸಂಬಂಧಕ್ಕೆ ಅರ್ಹತೆಯಿಲ್ಲದುದರಿಂದ, ತತ್ಪ್ರತ್ಯನೀಕತಾ **ಉಚ್ಯತೇ**-ಅಂತಹ ಹೇಯಸಂಬಂಧವಿಲ್ಲವೆಂದು ಹೇಯಪ್ರತ್ಯನೀಕತ್ವವು ಹೇಳಲ್ಪಟ್ಟಿತು, ಅದರ ಸಮರ್ಥನೆಗಾಗಿ ಶ್ರುತಿಪ್ರಮಾಣವನ್ನು ಉದಾಹರಿಸುತ್ತಾರೆ;—**ನಿರವದ್ಯಂಇತ್ಯಾದಿ ಶ್ರುತ್ಯಾಚ**- "**ನಿಷ್ಕಲಂ ನಿಷ್ಕ್ರಿಯಗ್ಂ ಶಾಂತಂ ನಿರವದ್ಯಂ ನಿರಂಜನಮ್**" ಎಂಬಿವೇ ಮೊದಲಾದ ಶ್ರುತಿಪ್ರಮಾಣದಿಂದಲೂ ಹೇಯಪ್ರತ್ಯನೀಕತ್ವವು ತೋರಿಬರುತ್ತದೆ. ಯಾವ ಗುಣಗಳೂ ಇಲ್ಲವೆಂಬ ಅಭಿಪ್ರಾಯವಲ್ಲ. ಇಲ್ಲಿ ಆದಿಪದದಿಂದ **ನಿಷ್ಕಳೋ ನಿರಂಜನೋ ನಿರ್ವಿಕಲ್ಪೋ ನಿರಾಖ್ಯಾತಶ್ಶುದ್ಧೋದೇವ ಏಕೋನಾರಾಯಣಃ**" ಇತ್ಯಾದಿ ಶ್ರುತಿಗಳೂ ಸೂಚಿಸಲ್ಪಟ್ಟವು. ಮುಂದೆ **ಲೋಕ ಮಹೇಶ್ವರಮ್** ಎಂಬುವಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ.

(೧) ಶ್ವೇ. ಉ. ೬. ೧೯. ೫೨.

**ಭಾ. ಲೋಕಮಹೇಶ್ವರಂ-ಲೋಕೇಶ್ವರಾಣಾ ಮೀಶ್ವರಂ, ಮರ್ತ್ಯೇಷ್ವಸಮ್ಮೂಢೋ ಯೋವೇತ್ತಿ; ಇತರಸಜಾತೀಯ ತ್ವೈಕೀಕೃತ್ಯ ಮೋಹಸ್ಸಂಮೋಹಃ, ತದ್ರಹಿತೋಽ ಸಮ್ಮೂಢಃ, ಸ ಮದ್ಭಕ್ತ್ಯುತ್ಪತ್ತಿವಿರೋಧಿಭಿ ಸ್ಸರ್ವೈಃ ಪಾಪೈಃ ಪ್ರಮುಚ್ಯತೇ ।**

---

**ಏವಂ ಹೇಯ ಸಂಬಂಧ ಪ್ರತ್ಯನೀಕಸ್ವರೂಪತಯಾ**-ಮೇಲೆ ಹೇಳಿದ ರೀತಿಯಲ್ಲಿ ಹೇಯ ಸಂಬಂಧಕ್ಕೆ ವೈರಿಯಾಗಿರುವ ಸ್ವರೂಪವಿರುವವರಿಂದ, **ತದನರ್ಹಂ**-ಹೇಯ ಸಂಬಂಧಕ್ಕೆ ಅನ ರ್ಹನಾಗಿರುವ, **ಮಾಂ**-ನನ್ನನ್ನು, ನಾನು ಇನ್ನೂ ಎಂತವನೆಂದರೆ, **ಲೋಕಮಹೇಶ್ವರಮ್** ಎಂದರೆ **ಲೋಕೇಶ್ವರಾಣಾಮೀಶ್ವರಮ್**-ಲೋಕಾಧಿಪತಿಗಳಿಗೂ ನಿಯಾಮಕನಾದ ನನ್ನನ್ನು. **ಮರ್ತ್ಯೇಷು**-ಜನ್ಮಮೃತಿಗಳನ್ನು ಹೊಂದುವ ಮನುಷ್ಯರಲ್ಲಿ, **ಅಸಮ್ಮೂಢಃ**-ಇಂತಹವಿಲಕ್ಷಣ ಜ್ಞಾನದಿಂದ ಮೋಹಗಳಿಲ್ಲದವನು, **ಯಃ**-ಯಾವನು, **ವೇತ್ತಿ** ತಿಳಿಯುವನೋ, ಮೋಹವೆಂದ ರೇನೆಂಬುದನ್ನು ತಿಳಿಸುತ್ತಾರೆ,--**ಇತರ ಸಜಾತೀಯ ತ್ವೈಕೀಕೃತ್ಯ ಮೋಹಸ್ಸಮ್ಮೋಹಃ**- ಇತರವಾದುದಕ್ಕೆ ಸಜಾತೀಯತೆಯನ್ನೇರ್ಪಡಿಸಿ, ಎರಡೂ ಒಂದೇ ಎಂದು ಭಾವಿಸುವ ಮೋಹ ವೇ ಸಂಮೋಹವು. ಇಂತಹ ಮೋಹವಿಲ್ಲದಿರುವವನು **ಅಸಮ್ಮೂಢನು**. ಅಂತಹ ಮೋಹಗಳು ಯಾವುದೆಂದರೆ, ಜ್ಞಾನದಿಂದ ಪ್ರಕಾಶಿಸುತ್ತಾ ಬೇರೆಯಾದ ಚಿತ್ತನ್ನು ಜಡವಾಗಿ ಸ್ವರೂಪ ವಿಕಾರವಿರುವ ಅಚಿತ್ತಿಗೆ ಸಮವಾಗಿ ಭಾವಿಸೋಣವು. ಆತ್ಮಾ ಈ ದೇಹವೇ ಎಂದು ಭಾವಿ ಸೋಣವು ಮತ್ತು ಕರ್ಮಕೃತ ಸ್ವಭಾವ ವಿಕಾರದಿಂದ ಜರಾಮರಣಾದಿಗಳುಳ್ಳ ಬದ್ಧಾತ್ಮನೂ ಅಂತಹ ವಿಕಾರಗಳೊಂದೂ ಇಲ್ಲದ ಪರಮಾತ್ಮನೂ ಒಂದೇ ಎಂದು **ಏಕೀಕೃತ್ಯಮೋಹವು** ಇನ್ನೊಂದು ಭ್ರಮವು. ಇವೆರಡೂ ಪ್ರಬಲ ಮೋಹಗಳು, ಇವುಗಳಿಲ್ಲದವನು ಅಸಮ್ಮೂಢನು. ಇವೆರಡು ಭ್ರಮಗಳೂ ಉಪಾಯಕ್ಕೆ ಪ್ರಬಲ ವಿರೋಧಿಗಳಾಗಿ ಪಾಪವಾಸನಾದೂಷಿತರಾಗಿರು ವವರಿಗೆ ಉಂಟಾಗುತ್ತವೆ. ಪ್ರಸನ್ನನಿಗಾದರೋ ಸರ್ವೇಶ್ವರನ ಕೃಪೆಯಿಂದ ಪಾಪಫಲಗಳಾದ ಈ ಎರಡು ಮೋಹಗಳೂ ತೊಲಗಿ ಉಪಾಯದ ಉತ್ಪತ್ತಿ ವೃದ್ಧಿಗಳಿಗೆ ಪ್ರತಿಬಂಧಕವು ದೂರೀ ಕೃತವಾಗುತ್ತದೆಂದು ಮುಂದೆ ತಿಳಿಸುತ್ತಾರೆ. ಈ ಎರಡು ಭ್ರಮಗಳಲ್ಲಿ ಎರಡನೆಯ ಭ್ರಮ ವಾದ ಜೀವಪರಮಾತ್ಮೈಕ್ಯರೂಪ ಮೋಹವನ್ನು ಶ್ರೀ ವ್ಯಾಸಮಹರ್ಷಿಯು ಭಾರತ ಆದಿಪರ್ವ ದಲ್ಲಿ ಬಹಳವಾಗಿ ನಿಂದಿಸಿರುತ್ತಾರೆ. **"ಏಕೋಹಮಸ್ಮೀತಿ ಚ ಮನ್ಯಸೇ ತ್ವಂ ನಹೃಚ್ಛಯಂ ವೇತ್ಸಿ ಕವಿಂ ಪುರಾಣಮ್? । ಯೋವೇದಿತಾಕರ್ಮಣಃ ಪಾಪಕಸ್ಯ ತಸ್ಯಾಂತಿಕೇತ್ವಂ ವೃಜಿನಂ ಕರೋಷಿ" ॥** "ಇದು ಶಕುಂತಳಾವಾಕ್ಯವು, ತನ್ನ ಪತಿಯನ್ನು ಕುರಿತು ಕೋಪಿಸಿ ಹೇಳುತ್ತಾಳೆ. ನೀನು ಒಬ್ಬನೇ ಎಂದು ತಿಳಿದಿರುವೆಯೋ ? ನಿನ್ನ ಹೃದಯ ಗುಹೆಯಲ್ಲೇ ಇರು ವ ಪರಮಾತ್ಮನೊಬ್ಬನು ಬೇರೆ ಇದ್ದಾನೆಂದು ನಿನಗೆ ತಿಳಿಯದೋ ? ನೀನು ನನ್ನನ್ನು ಮದುವೆ ಮಾಡಿಕೊಂಡು ಮಾಡಿಕೊಳ್ಳಲಿಲ್ಲವೆಂದು ಹೇಳುವ ಪಾಪಕರ್ಮವನ್ನು ಯಾವ ಹೃದಯ ಗುಹೆ ಯಲ್ಲಿರುವ ಪರಮಾತ್ಮನೇ ಪ್ರಥಮತಃ ಕಂಡಿರುವನೋ ಅವನ ಪ್ರತ್ಯಕ್ಷದಲ್ಲೇ ಈ ಪಾಪಕರ್ಮ ವನ್ನು ಮಾಡುತ್ತೀಯೇ" ಎಂಬುದು ತಾತ್ಪರ್ಯವು, **"ದ್ವಾಸುಪರ್ಣಾಸಯುಜಾ" "ಈಶನೀ ಶೌ" "ನಿತ್ಯೋ ನಿತ್ಯಾನಾಂ"** ಇತ್ಯಾದಿ ಶ್ರುತ್ಯರ್ಥವನ್ನು ಸರಿಯಾಗಿ ಗ್ರಹಿಸಿ ಜೀವಪರಮಾತ್ಮ ರೊಂದೇ ಎಂಬ ಭ್ರಮವನ್ನು ಮುಖ್ಯವಾಗಿ ನೀಗತಕ್ಕದ್ದು. ಹೀಗೆ ಪರಮಾತ್ಮನು ಈಶನು. ತಾನು ಅನೀಶನು, ಎಂದರೆ ಆತನಿಗೆ ದಾಸನು ಎಂಬ ಅಭಿಪ್ರಾಯವು ಚೆನ್ನಾಗಿ ಮನಸ್ಸಿನಲ್ಲಿ ಅಂಟಿದ್ದರೆ, ಆಗತಾನೇ ಆ ಈಶನನ್ನು ಆಶ್ರಯಿಸಿ ತಾನು ನಿಶ್ಶ್ರೇಯಸ್ಸನ್ನು ಹೊಂದಬಹುದು. ಹಾಗಿಲ್ಲದೆ ತಾನೇ ಪರಮಾತ್ಮನೆಂಬ ಮೋಹವಿದ್ದುದಾದರೆ, ಇನ್ನು ಬೇರೆ ಪ್ರಯತ್ನ

**ಭಾ. ಏತದುಕ್ತಂ ಭವತಿ-ಲೋಕೇ ಮನುಷ್ಯಾಣಾಂ ರಾಜಾ ಇತರ ಮನುಷ್ಯ ಸಜಾತೀಯಃ ಕೇನಚಿತ್ಕರ್ಮಣಾ ತದಾಧಿಪತ್ಯಂ ಪ್ರಾಪ್ತಃ; ತಥಾ ದೇವಾನಾಮಧಿಪತಿರಪಿ;**

- - - - - - -

ವೇಕೆ? ಎಂದು ತಟಸ್ಥನಾಗುವನು. **"ಪತಿಂವಿಶ್ವಸ್ಯ"** ಎಂಬ ಶ್ರುತಿಯಲ್ಲೂ ಆತನೇ ಪತಿಯು, ಸ್ವಾಮಿಯೆಂದೂ, ಶೇಷಿಯೆಂದೂ ಹೇಳಿರುವದರಿಂದ ವಿಶ್ವದ ಚಿತ್ತೆಲ್ಲಾ ದಾಸಕೋಟಿಗೆ ಸೇರಿ ತೆಂದೂ, ಆತನಿಗೆ ಶೇಷವೆಂದೂ, ವ್ಯಕ್ತವಾಗಿ ಹೇಳಿರುತ್ತದೆ **ವಿದಧಾತಿ ಕಾಮಾ**ನ್ ಎಂದು ಶ್ರುತಿಯು ಹೇಳಿದರೆ, ಪುರುಷಾರ್ಥವನ್ನು ಕೊಡುವನೊಬ್ಬನು, ಅದನ್ನು ಪಡೆಯುವರು ಬೇರೆ ಎಂಬುದು ಸುವ್ಯಕ್ತವು. ಹೀಗೆ ಪರಮೇಶ್ವರನು ವಿಶ್ವಕ್ಕೆಲ್ಲಾ ಪತಿ ಎಂಬ ಶ್ರುತ್ಯರ್ಥವನ್ನೇ **ಲೋಕೇಶ್ವರಾಣಾಂ ಈಶ್ವರಂ** ಎಂಬಲ್ಲಿ ಸ್ಫುಟವಾಗಿ ಹೇಳಿದರು. ವಾಸ್ತವವಾಗಿಯೂ ಇರುವದು ಆತ್ಮಾ ಒಂದೇ, ಇನ್ನು ಯಾವುದೂ ಇಲ್ಲವಾದರೆ ಈ ಶ್ಲೋಕದಲ್ಲಿ ಹೇಳಿರುವ **"ಲೋಕ ಮಹೇಶ್ವರಂ"** ಎಂಬ ಪ್ರಯೋಗಕ್ಕೆ ಅರ್ಥವೇ ಇಲ್ಲವಾಗುತ್ತದೆ. ವ್ಯಾವಹಾರಿಕ ದಶೆಯಲ್ಲಿ ಕೂಡುತ್ತದೆ ಎಂದರೆ ಗೀತಾಶಾಸ್ತ್ರವು ಪಾರಮಾರ್ಥಿಕವಲ್ಲವೆಂದು ಹೇಳಿದಂತಾಗುತ್ತದೆ. ಗೀತಾ ಚರಮಶ್ಲೋಕವು ವ್ಯಾವಹಾರಿಕವನ್ನೇ ಬೋಧಿಸುವದಾಗಿ ಪಾರಮಾರ್ಥಿಕೋಪದೇಶವು ಎಲ್ಲಿಯೂ ಗ್ರಂಥದಲ್ಲೇ ಇಲ್ಲವಾಗುತ್ತದೆ. ಮತ್ತು ತಾನು ಸ್ವತಂತ್ರನು ಎಂಬ ಮೂರನೆಯ ಭ್ರಮವೂ ಕೂಡದು. ತಾನು ಪರಮಾತ್ಮನಿಗೆ ಅಧೀನನು, ಪರಮಾತ್ಮನಿಂದಲೇ ತನಗೆ ಸತ್ತಾಸ್ಥಿತಿಗಳು, ಪರಮಾತ್ಮನೇ ತನಗೆ ನಿಯಾಮಕನೆಂಬ ಜ್ಞಾನವೂ ಅವಶ್ಯಕವು. ಆದುದರಿಂದ, **ಲೋಕಮಹೇಶ್ವರನು** ಪರಮಾತ್ಮನು ಎಂಬ ಅಭಿಪ್ರಾಯವು ಇದ್ದರೆ, ತಾನೇ ಪರಮಾತ್ಮನೆಂಬ ಮೋಹಕ್ಕೆ ಅವಕಾಶವೇ ಇಲ್ಲವೆಂಬ ತಾತ್ಪರ್ಯವು. ಹೀಗೆ ಮೋಹ ಜ್ಞಾನಗಳು ಯಾವನಿಗೆ ಇಲ್ಲವೋ, **ಸಃ**-ಅವನು **ಮದ್ಭಕ್ತ್ಯುತ್ಪತ್ತಿ ವಿರೋಧಿಭಿ ಸ್ಸರ್ವೈಃ ಪಾಪೈಃ**-ನನ್ನನ್ನು ಉಪಾಸಿಸುವ ಭಕ್ತ್ಯುತ್ಪತ್ತಿಗೆ ವಿರೋಧಿಗಳಾದ ಸಮಸ್ತ ಪಾಪಗಳಿಂದಲೂ, **ಪ್ರಮುಚ್ಯತೇ**-ಬಿಡಲ್ಪಡುವನು, ಮೂಲದಲ್ಲಿ **ಸರ್ವಪಾಪೈಃ ಪ್ರಮುಚ್ಯತೇ** ಎಂದಿರುವಾಗ ಸರ್ವ ಶಬ್ದಕ್ಕೆ **ಮದ್ಭಕ್ತ್ಯುತ್ಪತ್ತಿ ವಿರೋಧಿಭಿಃ** ಎಂದು ಸಂಕುಚಿತಾರ್ಥವುಳ್ಳ ವಿಶೇಷಣವನ್ನು ಕೊಟ್ಟಿರುವದು ನ್ಯಾಯವೋ? ಎಂದರೆ ಈ ಜ್ಞಾನಮಾತ್ರದಿಂದಲೇ ಮೋಕ್ಷವುಂಟೆಂಬ ಭ್ರಮೆಯುಂಟಾಗದೇ ಇರುವದಕ್ಕಾಗಿ ಹಾಗೆ ವ್ಯಾಖ್ಯಾನವು. ಉಪಾಸನಾರಂಭಕನ ಪ್ರಕರಣವಾದುದರಿಂದ ತದನುಗುಣವಾಗಿ ಅರ್ಥಮಾಡುವದು ನ್ಯಾಯವು. ಸರ್ವ ಪಾಪಗಳಿಂದ ಬಿಡುಗಡೆಯು, ಕೊನೆಗೆ ಉಪಾಯ ನಿಷ್ಪತ್ತಿಯಿಂದ ಸಾಧ್ಯವೇ ಹೊರತು ಪರಮಾತ್ಮನು ಅಜನು, ಲೋಕ ಮಹೇಶ್ವರನೆಂಬ ಜ್ಞಾನಮಾತ್ರದಿಂದ ಎಂದಿಗೂ ಇಲ್ಲವು. ಇಲ್ಲಿ ಮುಖ್ಯವಾಗಿ ಒಂದು ಪೂರ್ವಪಕ್ಷವು ತೋರಬಹುದೇನೆಂದರೆ.—ಸುರಗಣವೂ ಮಹರ್ಷಿಗಳೂ ಸರಿಯಾದ ಜ್ಞಾನವಿಲ್ಲದೆ, **ಪ್ರಭವಂ ನವಿದುಃ** ಎಂದು ಹೇಳಿದನಂತರ, ಕೇವಲ ಮರ್ತ್ಯರಿಗೆ **ಅಸಮ್ಮೂಢತ್ವ** ಯುಕ್ತಜ್ಞಾನ ಉಂಟಾಗುವದು ಸಾಧ್ಯವೋ? ಮರ್ತ್ಯನಾಗಿ ಪ್ರಕೃತಿಸಂಬಂಧ ಜ್ಞಾನ ತಿರೋಧಾನಗಳಿರುವಾಗ ಇಂತಹ **ಅಸಮ್ಮೂಢತ್ವವು** ಹೇಗೆ? ಎಂದರೆ ಸಮಾಧಾನವು ಹೇಳಲ್ಪಡುತ್ತದೆ.—ಓ ಅರ್ಜುನನೇ ನೀನು ಯೋಚಿಸಬೇಡ, ನಾನು ನಿನಗೆ ದಯಪಾಲಿಸುವ ಉಪದೇಶ ಜ್ಞಾನದಿಂದಲೇ ಇಂತಹ ಮೋಹಗಳನ್ನು ದೂರೀಕರಿಸುವ ಸುಜ್ಞಾನವು ಸಾಧ್ಯವೆಂದು, **ಮರ್ತ್ಯೇಷು ಅಸಮ್ಮೂಢಃ ಯೋವೇತ್ತಿ** ಎಂಬ ಪ್ರಯೋಗವು. ಇಂತಹ ವೈಲಕ್ಷಣ್ಯ ಜ್ಞಾನವೇ ಯೋಗ ನಿಷ್ಪತ್ತಿಗೆ ಸಾಧಕವೆಂದು ಸಪ್ತದಲ್ಲೇ ೭ ನೆಯ **"ಏತಾಂ ವಿಭೂತಿಂ"** ಎಂಬ ಶ್ಲೋಕದಲ್ಲೇ ಉಪದೇಶಿಸಿರುತ್ತಾರೆ. ಹೀಗೆ ತನ್ನ ಉಪದೇಶಮಾಹಾತ್ಮ್ಯೆಯಿಂದ ಸಾಧ್ಯವೆಂಬುದನ್ನು ಮುಂದೆ (ಗೀ. ೧೦. ೧೧.)ರಲ್ಲಿ **ಯೋವಲಾ**

**ಭಾ. ತಥಾಣ್ಡಾಧಿಪತಿ ರಪೀ ತರಸಂಸಾರಿ ಸಜಾತೀಯಃ; ತಸ್ಯಾಪಿ ಭಾವನಾತ್ರಯಾನ್ತರ್ಗತತ್ವಾತ್, (೧) "ಯೋ ಬ್ರಹ್ಮಾಣಂ ವಿದಧಾತಿ" ಇತಿ ಶ್ರುತೇಶ್ಚ । ತಥಾऽನ್ಯೇಪಿ ಯೇ ಕೇಚನಾಣಿಮಾದ್ಯೈಶ್ವರ್ಯಂ ಪ್ರಾಪ್ತಾ । ಅಯಂತು ಲೋಕ**

**ಮೇವಾಸಮ್ಮೂಢೋ ಜಾನಾತಿಪುರುಷೊತ್ತಮಮ್"** ಎಂದು ಅನುವಾದಮಾಡಿ ಹೇಳಿರುತ್ತಾರೆ. ಇಲ್ಲಿ ವೇತ್ತಿ ಎಂಬುದಕ್ಕೆ ಬದಲಾಗಿ ಅಲ್ಲಿ ಜಾನಾತಿ ಎಂದಿರುತ್ತದೆ. ಎರಡು ಕ್ರಿಯಾಪದಗಳ ಅರ್ಥವೂ ಒಂದೇ. ತಿಳಿಯುವದು ಹೇಗೆಂದರೆ ಉಪಾಸನರೂಪ ಜ್ಞಾನದಿಂದ, ಆತನನ್ನು ಸಾಕ್ಷಾತ್ಕರಿಸೋಣದರಿಂದ; ಆದುದರಿಂದ ಎರಡೂ ಸಮಾನಾರ್ಥವುಳ್ಳವು ಭಕ್ತಿಯೋಗದ ಮೂಲಕ ಪರಮಾತ್ಮ ಸಾಕ್ಷಾತ್ಕಾರವೇ ಸಾಧ್ಯೋಪಾಯವು. ಇಂತಹ ಜ್ಞಾನವೇ ಎಂದು ಮುಂದೆ ೭ ನೆಯ ಶ್ಲೋಕವಾದ **ಏತಾಂ ವಿಭೂತಿಂ ಯೋಗಂಚ ಮಮ ಯೋ ವೇತ್ತಿ ತತ್ತ್ವತಃ"** ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಎಲ್ಲವೂ ತನ್ನ ನಿಯಾಮ್ಯ ವರ್ಗಕ್ಕೆ ಸೇರಿದುದಾಗಿ ತಾನು ಸರ್ವಲೋಕ ಮಹೇಶ್ವರನು, ಮತ್ತು ತಾನು ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಯೋಗದಿಂದ ಕೂಡಿದವನೆಂಬ ಜ್ಞಾನ ಉಂಟಾದರೆ ಭಕ್ತಿಯೋಗದಲ್ಲಿ ಅಭಿನಿವೇಶ ಉಂಟಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಸುರಗಣಮಹರ್ಷಿಗಳಿಗೂ ಸರಿಯಾದ ಜ್ಞಾನವಿಲ್ಲದಿದ್ದರೂ ತನ್ನ ಉಪದೇಶ ಬಲದಿಂದ ಮರ್ತ್ಯರಿಗೆ ಅಸಮ್ಮೂಢತ್ವ ಸಾಧ್ಯವೆಂಬ ಭಾವವು. ಈ ಶ್ಲೋಕದ ಮುಖ್ಯತಾತ್ಪರ್ಯವೇನೆಂಬುದನ್ನು "**ಏತದುಕ್ತಂ ಭವತಿ**"-ಇದೀಗ ತಾತ್ಪರ್ಯವು ಎಂದಾರಂಭಿಸಿ ಹೇಳುತ್ತಾರೆ—**ಲೋಕೇ ಮನುಷ್ಯಾಣಾಂ ರಾಜಾ**- ಲೋಕದಲ್ಲಿ ಮನುಷ್ಯರಿಗೆಲ್ಲಾ ರಾಜನಾದವನು **ಇತರ ಮನುಷ್ಯಸಜಾತೀಯಃ**–ಇತರರಾಗಿ ಮನುಷ್ಯಜಾತಿಗೇ ಸೇರಿದವರಲ್ಲಿ ಒಬ್ಬನು; ಆತನು, **ಕೇನ ಚಿತ್ಕರ್ಮಣಾ ತದಾಧಿಪತ್ಯಂ ಪ್ರಾಪ್ತಃ**-ಯಾವುದೋ ಒಂದು ಸುಕೃತ ಪರಿಪಾಕದಿಂದ, ಆ ಆಧಿಪತ್ಯವನ್ನು ಪರಮಾತ್ಮ ಕೃಪಯಾ ಹೊಂದಿರುತ್ತಾನೆ, **ತಥಾ**-ಹಾಗೆಯೇ **ದೇವಾನಾಮಧಿಪತಿರಪಿ**-ಯಾವುದೋ ಸುಕೃತ ವಿಶೇಷದಿಂದ ಸ್ವರ್ಗಲೋಕದಲ್ಲೂ ಸಹ ದೇವತೆಗಳಿಗೆಲ್ಲಾ ಅಧಿಪತಿಯು, ಅವರಲ್ಲೇ ಒಬ್ಬನು ರಾಜಾವಾಗಿರುತ್ತಾನೆ. **ತಥಾಣ್ಡಾಧಿಪತಿರಪೀ ತರ ಸಂಸಾರಿ ಸಜಾತೀಯಃ**-ಹಾಗೆಯೇ ಅಂಡಾಧಿಪತಿಯಾದ ಚತುರ್ಮುಖ ಬ್ರಹ್ಮನೂ ಇತರ ಬದ್ಧಚೇತನರಲ್ಲೇ ಒಬ್ಬನಾಗಿ ಅತಿಶಯ ಸುಕೃತಪರಿಪಾಕದ ಮಹಿಮೆಯಿಂದ ಅಂಡಾಧಿಪತಿಯಾಗಿರುವನು. ಚತುರ್ಮುಖನೂ ಕೂಡ ಬದ್ಧಾತ್ಮನೆಂದು, **ಸಂಸಾರಿಸಜಾತೀಯಃ** ಎಂಬ ಪ್ರಯೋಗದಿಂದ ಹೇಗೆ ಹೇಳುತ್ತೀರಿ? ಎಂದರೆ, ಅದಕ್ಕೆ ಹೇತುವನ್ನು ತಿಳಿಸುತ್ತಾರೆ, **ತಸ್ಯಾಪಿ**-ಅವನೂ ಕೂಡ, **ಭಾವನಾತ್ರಯಾಂತರ್ಗತತ್ವಾತ್**-ಭಾವನಾತ್ರಯಕ್ಕೆ ಒಳಪಟ್ಟಿರುವನಾದುದರಿಂದಲೂ, ಇನ್ನೂ ಶ್ರುತಿ ಪ್ರಮಾಣದಿಂದಲೂ ಹಾಗೆ ಭಾವಿಸುವೆವುಎಂದು ಹೇಳುತ್ತಾರೆ.—"**ಯೋ ಬ್ರಹ್ಮಾಣಂ ವಿದಧಾತಿಪೂರ್ವಂ" ಇತಿ ಶ್ರುತೇಶ್ಚ**-ಎಂಬ **ಶ್ರುತಿಪ್ರಮಾಣದ** ಮೂಲಕವಾಗಿಯೂ ಚತುರ್ಮುಖನು ಸಂಸಾರಿಯೆಂದು ಹೇಳಲ್ಪಟ್ಟಿದೆ ಎಂದು ತಿಳಿಸುತ್ತಾರೆ. ಇಲ್ಲಿ ಚಕಾರವು ಈ ಅಭಿಪ್ರಾಯಕ್ಕೆ ಶ್ರುತಿಯೇ ಇರುವದರಿಂದ ನಿರ್ವಿವಾದ ವಿಷಯವೆಂದು ಸೂಚಿಸುತ್ತದೆ. ಅಂಡ ಸೃಷ್ಟಿಯಾದ ಒಡನೆಯೇ ಚತುರ್ಮುಖನು ಸೃಜ್ಯವರ್ಗಕ್ಕೆ ಸೇರಿದವನಾಗಿ ಇಲ್ಲಿ ಹೇಳಲ್ಪಟ್ಟಿರುವದರಿಂದ ಜೀವಕೋಟಿಗೇ ಸೇರಿದವನು, ಎಂದು ಹೇಳಿದಂತಾಯಿತು; ಮುಂದೆ "**ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ**" ವೇದಗಳನ್ನು ಆತನಿಗೆ ಉಪದೇಶಿಸಿದನೆಂದೂ ಹೇಳಿರುವದರಿಂದ, ಪ್ರಕೃತಿಸಂಬಂಧದಿಂದ ಜ್ಞಾನಸಂಕೋಚವೂ, ಸರಿ

(೧) ಶ್ವೇತ. ಉಪ. ೬-೧೮

ಯಾವ ಜ್ಞಾನವುಂಟಾಗುವದಕ್ಕಾಗಿ ಉಪದೇಶದ ಆವಶ್ಯಕತೆಯೂ. ಹೇಳುವದರಿಂದ, ಚತುರ್ಮುಖ ಬ್ರಹ್ಮನೂ ನಮ್ಮಹಾಗೆ ಸಂಸಾರಿ ವರ್ಗಕ್ಕೇ ಸೇರಿದವನು. ಕರ್ಮಕೃತದೇಹವುಳ್ಳವನು; ಆದುದರಿಂದ ಪ್ರಶ್ನೋಪನಿಷತ್ತಿನಲ್ಲಿ **"ಜೀವಘನ"** ಶಬ್ದದಿಂದ ನಿರ್ದಿಷ್ಟನು. ಪ್ರಾಸಂಗಿಕವಾಗಿ **ಈ** ಪ್ರಮಾಣವು ವೇದಗಳ ಅಪೌರುಷೇಯತ್ವ ನಿತ್ಯತ್ವಗಳನ್ನೂ ಬೋಧಿಸುತ್ತವೆಂದೂ ತಿಳಿಯಬಹುದು. **ಅನ್ಯೇಪಿ**- ಇತರರಾದ. **ಕೇಚನ** - ಯಾರಾದರೆ. **ಅಣಿಮಾದ್ಯೈಶ್ವರ್ಯಗಳನ್ನು, ಪ್ರಾಪ್ತಾಃ**- ಹೊಂದಿರುವರೋ, ಅವರೂ ಕೂಡ. **ತಥಾ**- ಹಾಗೆಯೇ ಎಂದರೆ ಇತರ ಕ್ಷೇತ್ರಜ್ಞರ **ಸಜಾತೀಯರೇ**. ಪರಮಾತ್ಮನಂತವರೋ ಹಾಗಲ್ಲವೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ. **ಇಲ್ಲಿ** **ಅನ್ಯೇಪಿ** ಎಂಬುದರಿಂದ ಬ್ರಹ್ಮನ ಪುತ್ರರಾದ ಸನಕ ಸನತ್ಕುಮಾರರು ಮೊದಲಾದ ಬ್ರಹ್ಮ ಕುಮಾರರು ಹೇಳಲ್ಪಟ್ಟರು. **ಅಣಿಮಾದಿ** ಎಂಬಲ್ಲಿ ಆದಿಪದದಿಂದ **ಅಣಿಮಾ ಮಹಿಮಾಚೈವ ಗರಿಮಾ ಲಘಿಮಾ ತಥಾ** ಎಂಬಲ್ಲಿ ಹೇಳಿರುವ ಅಷ್ಟೈಶ್ವರ್ಯವುಳ್ಳವರು ಹೇಳಲ್ಪಟ್ಟರು. ಯೋಗಯುಕ್ತನಿಗೆ **ಈ** ಅಷ್ಟೈಶ್ವರ್ಯಗಳೂ ಉಂಟಾಗುತ್ತವೆಂದು **ಸಾಂಖ್ಯ** ಕೌಮುದಿಯಲ್ಲಿ ಹೇಳಲ್ಪಟ್ಟಿರುತ್ತದೆ. **ಅಣಿಮಾಮಹಿಮಾಚ ತಥಾಲಘಿಮಾಗರಿಮಾ ವಶಿತ್ವಮೈಶ್ವರ್ಯಂ। ಪ್ರಾಪ್ತಿಃ ಪ್ರಾಕಾಮ್ಯಂ ಚೇತ್ಯಷ್ಟೈಶ್ವರ್ಯಾಣಿ ಯೋಗಯುಕ್ತಸ್ಯ"** ಯೋಗಯುಕ್ತನಿಗುಂಟಾಗುವ ಐಶ್ವರ್ಯವು ಎಂದರೆ ನಿಯಮನ ಶಕ್ತಿಯು ಎಂಟು ವಿಧವು.- **ಅಣಿಮಾ** ಎಂದರೆ ಸೂಕ್ಷ್ಮತಯಾ ಅಲಕ್ಷ್ಯವಾಗೋಣವೂ, **ಮಹಿಮಾ**-ಮಹತ್ವದಿಂದ ಲಕ್ಷ್ಯವಾಗೋಣ. ಗುರುತ್ವದಿಂದುಂಟಾಗುವದು ಗರಿಮಾ, ಲಘುತ್ವದಿಂದ ಲಘಿಮಾ. ಇಷ್ಟಪ್ರಾಪ್ತಿಯು. ಪ್ರಾಕಾಮ್ಯವೆಂದರೆ ಇಚ್ಛೆಯಿಂದ ನಿರ್ವಿಘ್ನವಾಗಿ ಸಂಚರಿಸುವ ಶಕ್ತಿಯು. **ವಶಿತ್ವಂ** ಎಂದರೆ ಇಂದ್ರಿಯಗಳನ್ನು ಸ್ವಾಧೀನದಲ್ಲಿಡೋಣವು. ಕೆಲವರು **ಈ** ಅಣಿಮಾದಿ ಸಿದ್ಧಿಗಳು ರುದ್ರನಿಗೆ ಸ್ವಾಭಾವಿಕವೆಂದು ಹೇಳುವರು. ಯಥಾರ್ಥಾಭಿಪ್ರಾಯವೇನೆಂದರೆ ಭಗವಂತನ ಕೃಪೆಯಿಂದ ರುದ್ರನಿಗೆ ಜನ್ಯತ ಉಂಟಾದುದು ಎಂಬುದು. ಹೀಗೆ ಅಭಿಪ್ರಾಯವಿಲ್ಲದಿದ್ದರೆ. **ಮಹಾದೇವ ಸ್ಸರ್ವಮೇಧೇ ಮಹಾತ್ಮಾ ಹುತ್ವಾತ್ಮಾನಂದೇವದೇವೋ ಬಭೂವ**(ಶಾಂತಿ. ೨೦ ೧೨) ರುದ್ರನು ಸರ್ವಮೇಧವೆಂಬ ಯಜ್ಞದಲ್ಲಿ ತನ್ನ ಶರೀರವನ್ನೇ ಹೋಮಮಾಡಿ ಭಗವತ್ಕೃಪೆಯಿಂದ ದೇವದೇವನೆಂದಾದನು **ಎಂಬ** ಪ್ರಮಾಣಕ್ಕೆ ವಿರೋಧವಾಗುತ್ತದೆ.

ಭಾವನಾತ್ರಯವು ಯಾವುದೆಂದರೆ **ಬ್ರಹ್ಮಭಾವನಾ, ಕರ್ಮಭಾವನಾ, ಉಭಯಭಾವನಾ** ಎಂಬದಾಗಿ ಮೂರು; ಇವುಗಳುಳ್ಳವರು ಜೀವಾತ್ಮರು. ಇದು ವಿಷ್ಣು ಪುರಾಣದ ಷಷ್ಠಾಂಶದ ಸಪ್ತಮಾಧ್ಯಾಯ ೪೭-೫೦ ಶ್ಲೋಕಗಳಲ್ಲಿ ಶ್ರೀ ಪರಾಶರರಿಂದ ಉಪಪಾದಿತವು. ಅಲ್ಲಿ **"ಕರ್ಮಭಾವಾತ್ಮಿಕಾ ಹ್ಯೇಕಾ ಬ್ರಹ್ಮಭಾವಾತ್ಮಿಕಾ ಪರಾ। ಉಭಯಾತ್ಮಿಕಾ ತಥೈವಾನ್ಯಾ ತ್ರಿವಿಧಾಭಾವಭಾವನಾ॥ ಸನಂದನಾದಯೋಯೇತು ಬ್ರಹ್ಮಭಾವನಯಾಯುತಾಃ ಕರ್ಮಭಾವನಯಾ ಚಾನ್ಯೇದೇವಾದ್ಯಾಃ ಸ್ಥಾವರಾವರಾಃ। ಹಿರಣ್ಯಗರ್ಭಾದಿಷು ಚ ಬ್ರಹ್ಮಕರ್ಮಾತ್ಮಿಕಾದ್ವಿಧಾ"** ಎಂದು ಹೇಳಲ್ಪಟ್ಟಿರುತ್ತದೆ. ಪ್ರಕರಣವು ಯಾವುದೆಂದರೆ ಯೋಗಿಗಳಿಗೆ ಉಪಾಸ್ಯವು ಯಾವುದು ಎಂಬ ಚರ್ಚೆಯಲ್ಲಿ, ನಿರಾಕಾರವಾದುದೇ ಉಪಾಸ್ಯವೇ ಹೇಗೆ, ಅನುಭಾವ್ಯವಲ್ಲವೆಂದು ನಿರೂಪಿಸಲು ಹೊರಟು, ಜೀವಾತ್ಮನು ಹೊಂದುವ ರೂಪಗಳೆಲ್ಲಾ ಅನುಭಾವ್ಯಗಳೆಂದೂ, ಅವುಗಳಿಗೆಲ್ಲಾ ಹೇಯಸಂಬಂಧ ಉಂಟೆಂದೂ, ಪ್ರಕೃತಿ, ಅವಿದ್ಯಾಸಂಬಂಧಗಳಿಂದ **ಈ** ಮೂರು **ಭಾವನೆಗಳಿರುವುದರಿಂದ** ಚತುರ್ಮುಖ, ರುದ್ರ. ಇಂದ್ರಾದಿಗಳು ಯಾರೂ ಉಪಾಸ್ಯರಲ್ಲವೆಂದು ವ್ಯಕ್ತಪಡಿಸಿ. ಅನಂತರ ಪರಮಾತ್ಮನ ರೂಪವೇ ಉಪಾಸ್ಯವೆಂದು ಸ್ಥಾಪಿಸಲ್ಪಟ್ಟಿರುತ್ತದೆ. ಸನಂದನಾದಿಗಳು ಬ್ರಹ್ಮಭಾವನೆಯಿಂದ ಯುಕ್ತರು. ಇಲ್ಲಿ ಬ್ರಹ್ಮ ಭಾವನೆ ಎಂದರೆ ಜೀವನು ಬ್ರಹ್ಮಾ

**ಭಾ. ಮಹೇಶ್ವರಃ-ಕಾರ್ಯಕಾರಣಾವಸ್ಥಾದಚೇತನಾದ್ಬದ್ಧಾನ್ಮುಕ್ತಾಚ್ಚ ಚೇತನಾದೀಶಿತವ್ಯಾತ್ಸರ್ವಸ್ಮಾನ್ನಿಖಿಲಹೇಯ ಪ್ರತ್ಯನೀಕಾನವಧಿಕಾತಿಶಯಾ ಸಂಖ್ಯೇಯ ಕಲ್ಯಾಣೈಕತಾನತಯಾ ನಿಯಮನೈಕ ಸ್ವಭಾವತಯಾ ಚ ವಿಸಜಾತೀಯ ಇತೀತರಸಜಾತೀಯತಾಮೋಹರಹಿತೋ ಯೋ ಮಾಂ ವೇತ್ತಿ, ಸಃ ಸರ್ವೈಃ ಪಾಪೈಃ ಪ್ರಮುಚ್ಯತೇ ಇತಿ॥**

ಜೀವಾತ್ಮರೆಲ್ಲಾ ಸೇರಿ ಎಂಬ ಮನೋ ವ್ಯಾಪಾರವು. ಕರ್ಮ ಭಾವನೆಯುಳ್ಳವರು ದೇವತಿರ್ಯಙ್ಮನುಷ್ಯ ಸ್ಥಾವರರು. ಕರ್ಮಗಳಿಂದ ಫಲವನ್ನು ಸಾಧಿಸುವವರು. ಹಿರಣ್ಯಗರ್ಭಾದಿಗಳು ಉಭಯ ಭಾವನೆಯುಳ್ಳವರು. ಹೀಗೆ ಜೀವಾತ್ಮಸ್ವರೂಪದಲ್ಲಿ ಭೇದಬುದ್ಧಿಯುಳ್ಳ ಬದ್ಧರೆಲ್ಲಾ ಈ ಭಾವನಾತ್ರಯದಲ್ಲಿ ಸೇರುವವರಿಂದ ಭಾವನಾತ್ರಯಾಂತರ್ಗತರು ಈ ಅಧಿಪತಿಗಳೆಲ್ಲಾ ಎಂಬ ಪ್ರಯೋಗವು. ಮುಕ್ತಾತ್ಮರು ಹಾಗಲ್ಲವು, ಅವರೆಲ್ಲಾ ಜ್ಞಾನೈಕಾಕಾರತಯಾ ಸ್ವರೂಪ ಭಿನ್ನರಲ್ಲವು. ಇವರು ಅರೂಪರಾದುದರಿಂದ ಧ್ಯೇಯರಾಗಲು ಸಾಧ್ಯರಲ್ಲವು. ಹಾಗಾದರೆ ಯೋಗಯುಕ್ತಗಳಿಂದ ಧ್ಯೇಯವಾದುದು ಯಾವುದು? ಎಂದರೆ ಪರಮಾತ್ಮನ ಪರವ್ಯೂಹಾದಿರೂಪಗಳೂ, ರಾಮಕೃಷ್ಣಾದಿ ವಿಭವರೂಪಗಳೂ, ಹಾರ್ದ ಅರ್ಚಾರೂಪಾದಿಗಳೂ ಎಂದು ಬೋಧಿಸುತ್ತಾರೆ. ಈ ರೂಪಗಳೆಲ್ಲಾ **ತ್ರಿಭಾವ ಭಾವನಾತೀತ** ಗಳೆಂದು ಹೇಳಲ್ಪಟ್ಟಿವೆ ಜೀವಾತ್ಮರಾದರೋ. **“ ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ ”** ಕರ್ಮಯೋನಿಗಳಾದ ದೇವಾದಿ ಸಮಸ್ತ ಕ್ಷೇತ್ರಜ್ಞರೂ ಅಶುದ್ಧರಾದುದರಿಂದ ಉಪಾಸ್ಯರಲ್ಲವು **“ ಆಬ್ರಹ್ಮಸ್ತಂಬ ಪರ್ಯನ್ತಾ ಜಗದನ್ತರ್ವ್ಯವಸ್ಥಿತಾಃ । ಪ್ರಾಣಿನಃ ಕರ್ಮಜನಿತ ಸಂಸಾರ ವಶವರ್ತಿನಃ । ಯತಸ್ತತೋ ನತೇ ಧ್ಯಾನೇ ಧ್ಯಾನಿನಾ ಮುಪಕಾರಿಕಾಃ”**॥ ಚತುರ್ಮುಖನು ಮೊದಲುಗೊಂಡು ಎಲ್ಲಾ ಜೀವಾತ್ಮರು ಮೋಕ್ಷಾರ್ಥಿಗೆ ಉಪಾಸ್ಯರಾಗಲು ಯೋಗ್ಯರಲ್ಲವೆಂದು ಹೇಳಿದರು. ಈ ಅಭಿಪ್ರಾಯವನ್ನೇ ಶ್ರೀ ವ್ಯಾಸಮಹರ್ಷಿಯೂ ವ್ಯಕ್ತಪಡಿಸಿರುತ್ತಾರೆ. **“ ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಃ ಸ್ಮೃತಾಃ । ಪ್ರತಿಬುದ್ಧಾನ ಸೇವನ್ತೇ ಯಸ್ಮಾತ್ಪರಿಮಿತಂ ಫಲಂ ”** (ಭಾರ. ಶಾಂತಿ- ೩೫೦-೩೬) ಬ್ರಹ್ಮರುದ್ರೇಂದ್ರಾದಿಗಳನ್ನು ಪ್ರಾಜ್ಞರು ಧ್ಯಾನಿಸಿ ಆರಾಧಿಸುವದಿಲ್ಲವು. ಏಕೆಂದರೆ ಅವರುಗಳಿಗೆ ಮುಕ್ತಿ ಕೊಡುವ ಶಕ್ತಿ ಇಲ್ಲದುದರಿಂದ ಪರಿಮಿತವಾದ ಅಲ್ಪಾಸ್ಥಿರ ಫಲಗಳನ್ನು ಮಾತ್ರವೇ ಕೊಡುತ್ತಾರೆ. ಆ ಫಲಗಳನ್ನೂ ಕೂಡ ಭಗವಂತನೇ ಕೊಡುವವನು. ಏಕೆಂದರೆ ಭಗವಂತನಿಗೆ ಅವರು ಅಧೀನರೆಂದು **“ ಏತೌದ್ವೌ ವಿಬುಧ ಶ್ರೇಷ್ಠೌ ಸೃಷ್ಟಿಸಂಹಾರಕಾರಕೌ । ತದಾದರ್ಶಿತ ಪಂಥಾನ್ ಸೃಷ್ಟಿಸಂಹಾರಕಾರಕೌ ”** ಪರಮಾತ್ಮನಿಂದ ಪ್ರದರ್ಶಿಸಲ್ಪಟ್ಟ ಮಾರ್ಗವುಳ್ಳವರಾಗಿ ಆತನು ನಿಯಮಿಸಿದ ಸೃಷ್ಟಿಸಂಹಾರ ಕರ್ಮಗಳನ್ನು ಮಾಡುವರಾದುದರಿಂದ ಮೋಕ್ಷಪ್ರದತ್ವ ಶಕ್ತಿಯು ಇವರಿಗಿಲ್ಲವು. ನಿತ್ಯವಿಭೂತಿ ಲೀಲಾ ವಿಭೂತಿ ಎಲ್ಲವೂ ಪರಮಾತ್ಮನಿಗೆ ಸೇರಿದವು. ಆದುದರಿಂದ ಬ್ರಹ್ಮರುದ್ರೇಂದ್ರಾದಿಗಳು ನಿತ್ಯ ವಿಭೂತಿಯ ಕಿಂಕರತ್ವಾಧಿರಾಜ್ಯವನ್ನು ಹೇಗೆ ದಯಪಾಲಿಸಲು ಸಮರ್ಥರು? ಆದರೆ ಪ್ರತರ್ದನ ಬ್ರಹ್ಮವಿದ್ಯೆಯಲ್ಲಿ ಪ್ರತರ್ದನರು ಇಂದ್ರನಲ್ಲಿಗೆಹೋಗಿ ಯಾವುದು ಮೋಕ್ಷಾರ್ಥಿಗೆ ಉಪಾಸ್ಯವು ಎಂದು ಕೇಳಲು, **ಮಾಂ ಉಪಾಸ್ವ** ಎಂದು ಇಂದ್ರನು ಹೇಳಿರುತ್ತಾನಲ್ಲಾ ಎಂದು ಪೂರ್ವ ಪಕ್ಷವನ್ನು ತಂದರೆ, ಅದಕ್ಕೆ ಸಮಾಧಾನವಾಗಿ ಶಾರೀರಕ ಸೂತ್ರವು ಹೇಳುತ್ತದೇನೆಂದರೆ—ಅಲ್ಲಿ ಇಂದ್ರಶಬ್ದದಿಂದ ಜೀವಾತ್ಮನು ಹೇಳಲ್ಪಡಲಿಲ್ಲವು. **“ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ”** ಎಂಬ ಸೂತ್ರದಲ್ಲಿ (೧.೧. ೩೧) ಉಪಪಾದಿಸಲ್ಪಟ್ಟಹಾಗೆ. **“ ಅನ್ತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ”** (ಯಜು ಆರಣ) **ಐತದಾತ್ಮ್ಯ**

**ಮಿದಂಸರ್ವಂ" "ತತ್ತ್ವಮಸಿ"**(ಛಾ.೬.೮.೭.) **"ಯ ಆತ್ಮನಿ ತಿಷ್ಠನ್"**(ಬೃ.೫.೭.೨೨) ಸರ್ವಭೂ **ತಾನ್ತರಾತ್ಮಾ"** (ಸ.ಬಾಲ ೭.೭.) ಇತ್ಯಾದಿ ಉಪನಿಷದ್ವಾಕ್ಯಗಳಲ್ಲಿ ಹೇಳಿರುವಾಗೆ ಇನ್ದ್ರಶಬ್ದ ದಿಂದ ಇಂದ್ರಶರೀರಕ ಪರಮಾತ್ಮನೇ ಹೇಳಲ್ಪಟ್ಟನು. ಈ ಶಾಸ್ತ್ರದೃಷ್ಟಿಯಿಂದಲೇ ಇಂದ್ರನು **ಮಾಂ ಉಪಾಸ್ವ** ಎಂಬ ಪ್ರಯೋಗದಿಂದ ಮಚ್ಛರೀರಕ ಪರಮಾತ್ಮನನ್ನೇ ಉಪಾಸಿಸು ಎಂದು ಉಪದೇಶಿಸಿದನೆಂಬ ತಾತ್ಪರ್ಯವು. **ಅಯಂತು**–ಈ ಪರಮಾತ್ಮನಾದರೋ, ಹಿಂದೆ ಹೇಳಿದ ಕ್ಷೇತ್ರ ಜ್ಞರಹಾಗೆ ಅಲ್ಲದೆ. **ಲೋಕಮಹೇಶ್ವರಃ** ಎಂದರೆ ಕಾರ್ಯಾವಸ್ಥೆಯಲ್ಲಾಗಲಿ ಕಾರಣಾವಸ್ಥೆಯಲ್ಲಾ ಗಲಿ ಇರುವ **ಅಚೇತನಾತ್**-ಅಚೇತನಕ್ಕಿಂತಲೂ, ಹಾಗೆಯೇ **ಬದ್ಧಾತ್ ಮುಕ್ತಾಚ್ಚ ಚೇತನಾತ್** ಬದ್ಧಾವಸ್ಥೆಯಲ್ಲೂ, ಮುಕ್ತಾವಸ್ಥೆಯಲ್ಲೂ. ಕಾರ್ಯಕಾರಣರೂಪದಲ್ಲಿರುವ ಚೇತನ ವರ್ಗಕ್ಕಿಂತಲೂ ಹೀಗೆ **ಸರ್ವಸ್ಮಾತ್ ಈಶಿತವ್ಯಾಚ್ಚ** ಸಮಸ್ತಗಳಾದ ನಿಯಾಮ್ಯವಾದ ಅಚೇತನವರ್ಗ ಚೇತನವರ್ಗ ಕ್ಕಿಂತಲೂ, **ನಿಖಿಲಹೇಯ ಇತ್ಯಾದಿ**-ಸಮಸ್ತಹೇಯವಾದುದಕ್ಕೂ ಪ್ರತಿಭಟರೂಪವಾಗಿ, ಅನವಧಿ ಕಾತಿಶಯಾಸಂಖ್ಯೇಯ ಕಲ್ಯಾಣ ಗುಣಗಳಿಗೆ ಮುಖ್ಯವಾದ ಆಕರನಾಗಿರುವದರಿಂದ. **ನಿಯಮನೈಕಸ್ವಭಾವ ತಯಾ**-ಇವುಗಳನ್ನೆಲ್ಲಾ ನಿಯಮಿಸುವ ಮುಖ್ಯಸ್ವಭಾವವುಳ್ಳವನಾದದರಿಂದ, **ವಿಜಾತೀಯ ಇತಿ**- ಅವುಗಳೆಲ್ಲಕ್ಕಿಂತಲೂ ಬೇರೆಯಾಗಿ ವಿಲಕ್ಷಣನು ಎಂದು ಭಾವಿಸಿ, ಇತರ ಸಜಾತೀಯತಾ **ಮೋಹ ರಹಿತಃ**-ಇತರ ವಾದವುಗಳಿಗೂ ಮತ್ತು ಇತರರಿಗೂ. ಈಶ್ವರನಾದ ನಾನು ಸಮನೆಂಬ ಮೋಹವಿಲ್ಲ ದವನಾಗಿ, ಇದು ಅಸಮ್ಮೂಢಃ ಎಂಬುದರ ಉಪಪಾದನೆಯು, **ಯಃ**-ಯಾವ ಭಕ್ತನು, **ಮಾಂ ವೇತ್ತಿ**. ನನ್ನನ್ನು ತಿಳಿಯುವನೋ. **ಸಃ**-ಅಂತಹ ಮುಮುಕ್ಷುವು. ಸರ್ವೈಃ **ಪಾಪ್ಮೈಃ ಪ್ರಮುಚ್ಯ ತೇ** ಉಪಾಸನಾರಂಭ ಮತ್ತು ವಿವೃದ್ಧಿಗಳಿಗೆ ಪ್ರತಿಬಂಧಕಗಳಾದ ಸರ್ವಪಾಪಗಳಿಂದಲೂ ಬಿಡು ಗಡೆಯನ್ನು ಹೊಂದುತ್ತಾನೆ. ಲೋಕಮಹೇಶ್ವರನಾಗಿ ವಿಜಾತೀಯನೆಂದು ಹೇಳುವದಕ್ಕೆ ಎರಡು ಕಾರಣಗಳನ್ನು ತೋರಿಸುತ್ತಾರೆ (೧) ಹೇಯ ಪ್ರತ್ಯನೀಕತೆಯೂ, ಕಲ್ಯಾಣಗುಣಾ ಕರತ್ವವೂ. ಇವು ಲಕ್ಷ್ಮೀಪತಿಯಾ ಇನ್ನು ಯಾರಿಗೂ ಇಲ್ಲದಿರುವದರಿಂದ ಸರ್ವಲೋಕ ವಿಜಾತೀ ಯತ್ವವನ್ನು ಸಮರ್ಥಿಸುತ್ತವೆ. **ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ** ಎಂದಲ್ಲಿಯೇ ಹೇಳಲ್ಪಟ್ಟಿರುತ್ತದೆ. (೨) ನಿಯಮನೈಕ ಸ್ವಭಾವವು. ಲೋಕಗಳ ಸಮಸ್ತರಾದ ಈಶ್ವರರಿಗೂ ನಿಯಾಮಕನಾದುದರಿಂದ, ಪರಮಾತ್ಮನು ಇತರ ಸಜಾತೀಯನೆಂಬ ಮೋಹವು ಕೂಡದು. ನಮ್ಮ ಆತ್ಮಾ ಮತ್ತು ಪರಮಾತ್ಮಾಗಳಿಗೆ ಸಜಾತೀಯತ್ವವನ್ನು ಹೇಳುವದೇ ಮೋಹವು. ಇದೇ ಜೀವಪರಮಾತ್ಮೈಕ್ಯಭ್ರಮವು. ಇದು ಮುಖ್ಯವಾಗಿ ಕೂಡದಾದುದರಿಂದ ಅಸಮ್ಮೂಢನಾದವನು ಇಂತಹ ಭ್ರಮವಿಲ್ಲದವನು ಯೋಗವಿರೋಧಿಗಳಾದ ಸಮಸ್ತ ಪಾಪಗಳಿಂ ದಲೂ ಬಿಡುಗಡೆಯನ್ನು ಹೊಂದುವನು. ಹೀಗೆ **"ಏತದುಕ್ತಂ ಭವತಿ"** ಎಂದಾರಂಭಿಸಿ ತಾತ್ಪ ರ್ಯವನ್ನು ತಿಳಿಸಲು ಕಾರಣವೇನೆಂದರೆ ? ಮೂಲದಲ್ಲಿ **ಲೋಕಮಹೇಶ್ವರಮ್** ಎಂಬ ಗೂಢ ವಾದ ಪ್ರಯೋಗದಿಂದ ಪರಮಾತ್ಮನು ಲೀಲಾ ವಿಭೂತಿಯಲ್ಲೂ. ನಿತ್ಯ ವಿಭೂತಿಯಲ್ಲೂ ಇರುವ ತ್ರಿವಿಧ ಚೇತನರಾದ ಬದ್ಧ ಮುಕ್ತ ನಿತ್ಯರಿಗಿಂತಲೂ ವಿಜಾತೀಯನು, ಅವರಿಗೆಲ್ಲಾ ನಿಯಾಮ ಕನು ಎಂಬುದನ್ನು ಚೆನ್ನಾಗಿ ವ್ಯಕ್ತಪಡಿಸುವದಕ್ಕಾಗಿ, ಎಂದು ಭಾವಿಸತಕ್ಕದ್ದು. ಈ ಶ್ಲೋಕ ದಲ್ಲಿ **ಲೋಕಮಹೇಶ್ವರಂ** ಎಂಬ ಪ್ರಯೋಗವು ಸಜಾತೀಯವಾದಕ್ಕೆ ಅನುಕೂಲಿಸದೇ ಇರುವ ದರಿಂದ ಏಕಾತ್ಮವಾದವೂ ನಿರಾಕೃತವು. ಜೀವಾತ್ಮ ಪರಮಾತ್ಮರುಗಳಿಗೆ ಅದ್ವೈತಾಭಿಪ್ರಾ ಯವು ಇಲ್ಲಿ ಸರ್ವಾತ್ಮನಾ ಕೂಡುವದಿಲ್ಲವು. ಇಲ್ಲಿ **ಲೋಕ** ಶಬ್ದವು ಈ ಲೋಕವನ್ನು ಮಾತ್ರ ಬೋಧಿಸುವದಿಲ್ಲವು. ಸರ್ವಲೋಕವನ್ನೂ ಬೋಧಿಸುವದಾಗಿ, ಇದರಲ್ಲಿ ನಿತ್ಯ ವಿಭೂತಿ ಯಾದ ದಿವ್ಯ ವೈಕುಂಠಲೋಕವೂ ಸೇರಿತು. ಹಾಗೆ ಅರ್ಥ ಮಾಡದಿದ್ದರೆ ನಿತ್ಯ ವಿಭೂತಿಯಲ್ಲಿ

**ಭಾ ಅವ. ಏವಂ ಸಸ್ವಭಾವಾನುಸಂಧಾನೇನ ಭಕ್ತ್ಯುತ್ಪತ್ತಿ ವಿರೋಧಿಪಾಪ ನಿರಸನಮ್, ವಿರೋಧಿ ನಿರಸನಾದೇವಾರ್ಥತೋ ಭಕ್ತ್ಯುತ್ಪತ್ತಿಂಚ ಪ್ರತಿಪಾದ್ಯ, ಸ್ವೈಶ್ವರ್ಯ ಸ್ವ ಕಲ್ಯಾಣಗುಣ ಪ್ರಪಂಚಾನುಸಂಧಾನೇನ ಭಕ್ತಿವಿವೃದ್ಧಿ ಪ್ರಕಾರಮಾಹ—**

ರುವ ಇನ್ನು ಎರಡು ವಿಧ ಚೇತನರಾದ ಮುಕ್ತ ನಿತ್ಯರಿಗೆ ಭಗವಂತನು ಈಶ್ವರನಲ್ಲವು ಎಂದು ಹೇಳಿದಂತಾಗುವದು. ಹಾಗೆಯೇ ಮುಂದೆ **"ದ್ವಾ ವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ"** (೧೯. ೧೫-೧೬) ಎಂಬಲ್ಲಿ ಲೋಕೇ ಎಂಬ ಪ್ರಯೋಗದಲ್ಲಿ ನಿತ್ಯ ವಿಭೂತಿಯೂ ಮತ್ತು ಎಲ್ಲಾ ಲೋಕಗಳು ಅಂತರ್ಗತಗಳು.

**ಭಾಷ್ಯಾವತಾರಿಕೆಯ ಅರ್ಥವು:— ಏವಂ** . ಈ ವಿಧವಾಗಿ ಎಂದರೆ ಹಿಂದಿನ ಶ್ಲೋಕ ದಲ್ಲಿ ಉಪದೇಶಿಸಲ್ಪಟ್ಟ ಹಾಗೆ. **ಸ್ವಸ್ವಭಾವಾನುಸಂಧಾನೇನ**- ಪರಮಾತ್ಮನಾಗಿ ಈಗ ಅವತಾರ ರೂಪದಲ್ಲಿರುವ ಶ್ರೀಕೃಷ್ಣನಾದ, **ಸ್ವ** - ತನ್ನ, ಅಜತ್ವ, ಅನಾದಿತ್ವ, ಸರ್ವಲೋಕ ಮಹೇಶ್ವರತ್ವ, ಮೊದಲಾದ ಸ್ವಭಾವಗಳ ಅನುಸಂಧಾನದಿಂದ, ಭಕ್ತಿಯೋಗದ. ಉತ್ಪತ್ತಿ ಎಂದರೆ ಆರಂಭಕ್ಕೆ. ವಿರೋಧಿಯಾದ ಪಾಪಗಳ ನಿರಸನವು, ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. **ವಿರೋಧಿ ನಿರಸನಾದೇವ**- ಇಂತಹ ವಿರೋಧಿಯಾದ ಪಾಪಗಳ ನಿರಸನದಿಂದಲೇ **ಅರ್ಥತಃ**— ಸ್ವತಃ ತಾನಾಗಿಯೇ ಭಕ್ತಿಯೋಗದ ಉತ್ಪತ್ತಿಯು ಉಂಟಾಗುತ್ತದೆಂದು, **ಪ್ರತಿಪಾದ್ಯ** - ಪ್ರತಿಪಾದಿಸಿ, **ಸ್ವೈಶ್ವರ್ಯ** - ಐಶ್ವರ್ಯದಿಂದ ಕೂಡಿದ ಎಂದರೆ ತನ್ನ ನಿಯಮನಕ್ಕೆ ಒಳಪಟ್ಟ ಮಹಾ ವಿಭೂತಿ ದ್ವಯಗಳಿಂದ ಕೂಡಿದ, **ಸ್ವಕಲ್ಯಾಣ ಗುಣಗಣ ಪ್ರಪಂಚಾನುಸಂಧಾನೇನ** – ತನ್ನ ನಿರತಿಶಯಗಳಾದ ಕಲ್ಯಾಣ ಗುಣಗಳ ಸಮೂಹದ ವಿಸ್ತರದ ಅನುಸಂಧಾನದಿಂದ ಭಕ್ತಿ ಯೋಗವು ಅಭಿವೃದ್ಧಿ ಹೊಂದುವ ಪ್ರಕಾರವನ್ನು ಮುಂದೆ ಹೇಳುತ್ತಾರೆ.— ಮುಂದೆ ಹೇಳುವ ದೇನು ಎಂದರೆ ಚೇತನರ ಸರ್ವ ಪ್ರವೃತ್ತಿಗಳಿಗೂ ಮನಸ್ಸೇ ಮುಖ್ಯವಾದುದು, ಅಂತಹ ಮನ ಸ್ಸಿನ ಸಕಲವಿಧ ಭಾವಗಳೂ **ಮತ್ತ ಏವ** - ನನ್ನಿಂದಲೇ, ಉಂಟಾಗುತ್ತವೆ. ಅವರುಗಳ ಪ್ರವೃತ್ತಿಗಳೆಲ್ಲಾ ಮದಾಯತ್ತವಾದುದೆಂದು, **"ತೇನವಿನಾ ತೃಣಾಗ್ರಮಪಿ ನ ಚಲತಿ"** ಎಂದು ಹೇಳಿರುವಹಾಗೆ ನನ್ನ ಸಹಾಯವಿಲ್ಲದುದಾದರೆ ಚೇತನರಿಗೆ ಯಾವ ಮನೋಭಾವಗಳೂ ಉಂಟಾಗುವದಿಲ್ಲವು ಎಂದು ತಿಳಿಸುತ್ತಾರೆ ಆದರೆ ಮನೋಭಾವಗಳುಂಟಾಗುವದಕ್ಕೆ ಪ್ರಾರಬ್ಧ ಕರ್ಮವಾಸನೆಯು ಕಾರಣವಲ್ಲವೋ ? ನೀನು ಹೇಗೆ ಕಾರಣವೆಂಬ ಸಂದೇಹವು ಇಲ್ಲಿ ನ್ಯಾಯ ವಾಗಿ ತೋರತಕ್ಕದ್ದೇ. ಹಿಂದೆಯೇ ಎರಡನೆಯ ಅಧ್ಯಾಯದಲ್ಲಿ **"ಸದೃಶಂ ಚೇಷ್ಟತೆ ಸ್ವಸ್ಯಾಃ"** ಎಂಬಲ್ಲಿಯೂ, ಮತ್ತು ಅದರ ಮುಂದಿನ ಶ್ಲೋಕವಾದ **"ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ"** ಎಂಬಲ್ಲಿಯೂ. ಆಪಾತತಃ ನೋಡಿದರೆ ಪರಸ್ಪರ ವಿರೋಧವು ತೋರುವುದು. ಅವುಗಳಿಗೆ ಸಮಾ ಧಾನವನ್ನು ಅಲ್ಲಿ ಹೇಳಿದೆವು. ಪ್ರಾರಬ್ಧರೂಪ ಕರ್ಮಾನುಗುಣವಾಗಿ ಪ್ರಾಪ್ತವಾದ ವಾಸನಾ ಬಲದಿಂದ ಕರ್ಮಗಳಲ್ಲಿ ಯದ್ಯಪಿ ಇಚ್ಛೆಯುಂಟಾಗಬಹುದು. ಅದು ಸಾಧುವೇ ಅಸಾಧುವೇ ಎಂದು ವಿತರ್ಕಿಸುವ ಸಂದರ್ಭದಲ್ಲಿ, ಸರ್ವೇಶ್ವರನು ಈತನಿಗೆ ವಿವೇಕವನ್ನು ಕೊಟ್ಟು, ಪ್ರಥಮ ಸಙ್ಕಲ್ಪದಲ್ಲಿ ಈತನನ್ನು ತನ್ನ ಅಧೀನವಲ್ಲದೆ ಸರ್ವಸ್ವತಂತ್ರನಾಗಿ ಬಿಟ್ಟು, ಅನಂತರ ಆತನು ಸಙ್ಕಲ್ಪಿಸಿದನಂತರ, ಸಾಧು ಮತ್ತು ಅಸಾಧು ಪ್ರವೃತ್ತಿಗಳ ಪ್ರಯತನಾದಿಗಳಲ್ಲಿ ತಾನೇ ಕಾರಣ ವಾಗುವದರಿಂದ, **ಮತ್ತ ಏವ** ಎಂದು ಮುಂದೆ ೫ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ ಎಂಬ **ತಾತ್ಪರ್ಯವು.**

**ಮೂ- ಬುದ್ಧಿರ್ಜ್ಞಾನ ಮಸಮ್ಮೋಹಃ ಕ್ಷಮಾ ಸತ್ಯಂ ದಮ ಶ್ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾ ಭಯ ಮೇವ ಚ ॥ ೪ ॥**
**ಅಹಿಂಸಾ ಸಮತಾ ತುಷ್ಟಿ ಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

**ಮೂಲಕ್ಕೆ ಅರ್ಥವು:-** ತಾನು ಸರ್ವಲೋಕ ಮಹೇಶ್ವರನೆಂದು ಶ್ರೀ ಕೃಷ್ಣಭಗವಾನ್ ರವರು ಹೇಳಿಕೊಂಡರು. ಹೇಗೆ ತನಗೆ ಸರ್ವನಿಯಮನತ್ವವೆಂಬುದನ್ನು ಮೊದಲು ತಿಳಿಸುತ್ತಾರೆ. ಅದಕ್ಕಾಗಿ ಪ್ರಥಮತಃ ಸರ್ವಭೂತಗಳಿಗೂ ಉಂಟಾಗುವ ಮನಸ್ಸಿನಭಾವಗಳೂ ತನ್ನ ಅಧೀನವೆಂದು ಹೇಳುವದಕ್ಕಾಗಿ, ಕೆಲವು ಮನಸ್ಸಿನ ಭಾವಗಳನ್ನು ಹೇಳಿ, ಅವೆಲ್ಲಾ ನನ್ನ ಮೂಲಕವಾಗಿಯೇ ಪ್ರಾಪ್ತವಾಗುತ್ತವೆಂದು ಉಪದೇಶಿಸುತ್ತಾರೆ – ಆ ಭಾವಗಳೆಲ್ಲಾ ಈ ಪ್ರಾಣಿಗಳ ಸುಕೃತ ದುಷ್ಕೃತಗಳೇನು ಮತ್ತು ವಿವೇಕಾವಿವೇಕರೂಪ ಜ್ಞಾನವೇನು, ಇವುಗಳ ಮೂಲಕವೂ ಉಂಟಾಗುವದರಿಂದ **ಪೃಥಗ್ವಿಧಾಃ** – ನಾನಾ ಬಗೆಯಾದುವೆಂದೂ ತಿಳಿಸುತ್ತಾರೆ.— ಹೀಗೆ ಪ್ರಾಚೀನ ಸುಕೃತ ದುಷ್ಕೃತಾದಿಗಳೂ ವಿವೇಕಾವಿವೇಕ ಜ್ಞಾನಗಳೂ ಕೂಡ ಸ್ವಾಮಿ ಸಙ್ಕಲ್ಪಕ್ಕಧೀನದೊಂದಿಗೆ ಸಹಕಾರಿ ಕಾರಣಗಳಾಗಿರುವದರಿಂದ, ತನ್ನ ಮೂಲಕವಾಗಿ ಹೀಗೆ ಪೃಥಗ್ವಿಧಗಳಾಗಿವೆ ಎಂದು ಹೇಳಿರುವದರಲ್ಲಿ ಲೋಕ ಮಹೇಶ್ವರನಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳಿಲ್ಲವೆಂಬುದು ಸ್ಫುಟವಾಗಿ ತೋರಿ ಬರುತ್ತದೆ. ೧. **ಬುದ್ಧಿಃ**-ಸರಿಯಾಗಿ ವಸ್ತುವನ್ನು ನಿರೂಪಿಸುವ ಸಾಮರ್ಥ್ಯವು. ಅಥವಾ ಆತ್ಮನ ಧರ್ಮಭೂತ ಜ್ಞಾನವು: ಇದು ವಿವೇಕ ಜ್ಞಾನವು; ಮನಸ್ಸಿನಮೂಲಕ ಇಂದ್ರಿಯ ಪ್ರವೃತ್ತಿಯ ಸಾಧುತ್ವ ಅಸಾಧುತ್ವವನ್ನು ತಿಳಿಸುವ ಶಕ್ತಿಯುಳ್ಳದು ೨. **ಜ್ಞಾನಂ** - ದ್ರವ್ಯದ ಯಥಾರ್ಥ ತಿಳುವಳಿಕೆಯು. ೩. **ಅಸಮ್ಮೋಹಃ-** ಅಜ್ಞಾನ, ಅನ್ಯಥಾ ಜ್ಞಾನ, ವಿಪರೀತಜ್ಞಾನಗಳಿಲ್ಲದಿರುವಿಕೆಯು. ಸರಿಯಾದ ಜ್ಞಾನವಿಲ್ಲದಿರುವಿಕೆಯು **ಅಜ್ಞಾನವು;** ಅಜ್ಞಾನದಲ್ಲೆಲ್ಲಾ ಪ್ರಧಾನ ಅಜ್ಞಾನವು ಯಾವುದೆಂದರೆ ಜೀವಾತ್ಮರುಗಳಲ್ಲಿ ಸ್ವರೂಪದಲ್ಲಿ ಭೇದಗ್ರಹಣವೆಂದು ಶ್ರೀ ಪರಾಶರರು **"ವಿಭೇದ ಜನಕೇಽಜ್ಞಾನೇ"** ಎಂಬುದರಿಂದ ತಿಳಿಸಿರುತ್ತಾರೆ. (ವಿ.ಪು. ೬.೭.೯೬) **ಅನ್ಯಥಾ ಜ್ಞಾನವು** ಒಂದು ಧರ್ಮಿಯ ಸರಿಯಾದ ಧರ್ಮವನ್ನು ಬಿಟ್ಟು ಬೇರೆ ಧರ್ಮವೆಂಬ ಮೋಹವು, ಬೆಳ್ಳಗಿರುವ ಶಂಖವು ಕಾಮಾಲೆ ರೋಗದಿಂದ ಪೀತವಾದುದೆಂದು ತಿಳಿಯೋಣವು. ಪರಮಾತ್ಮನಿಗೆ ಶೇಷನಾದ ಆತ್ಮನನ್ನು ಸ್ವತಂತ್ರನೆಂದು ಭಾವಿಸೋಣವು. **ವಿಪರೀತಜ್ಞಾನ**ವೆಂದರೆ ಒಂದು ಧರ್ಮಿಯನ್ನು ಇನ್ನೊಂದು ಧರ್ಮಿಯಾಗಿ ಭಾವಿಸೋಣವು; ಹೇಗೆಂದರೆ, ಶುಕ್ತಿಯನ್ನು ರಜತವೆಂದೂ, ರಜ್ಜುವನ್ನು ಸರ್ಪವೆಂದೂ, ಹಾಗೆಯೇ ಜೀವಾತ್ಮನನ್ನು ಪರಮಾತ್ಮನೆಂದೂ, ತಿಳಿಯೋಣವು. ವಿಜಾತೀಯವಾಗಿ ವಿಲಕ್ಷಣವಾಗಿರುವದನ್ನು ಸಜಾತೀಯವೆಂದು ಭಾವಿಸುವದು **ಸಮ್ಮೋಹ**ವು, ಅದಿಲ್ಲದಿರೋಣವು ಅಸಮ್ಮೋಹವು. (೪) **ಕ್ಷಮಾ-**ಅಪರಾಧಕ್ಕಾಗಿ ಶಿಕ್ಷಿಸಬಾರದಹಾಗೆ ಸಹಿಸೋಣವು. (೫) **ಸತ್ಯಂ**-ಪ್ರಾಣಿ ಹಿತಕರವಾದುದನ್ನು ತಾನು ಪ್ರಮಾಣಗಳ ಮೂಲಕ ಗ್ರಹಿಸಿದಹಾಗೆ ಯಥಾರ್ಥವಾಗಿ ಹೇಳೋಣವು; ಜನರಂಜನೆಗಾಗಿಯೂ, ಭೀತಿಯಾಗಿಯೂ ಹೇಳುವದು ಸತ್ಯವಾಗುವದಿಲ್ಲವು. ಮದುವೆ ದಿಬ್ಬಣದವರ ಗಾಡಿಗಳು ಹೋದಮಾರ್ಗವನ್ನು ಕಳ್ಳರಿಗೆ ಯಥಾರ್ಥವಾಗಿ ತಿಳಿಸುವದು ಮದುವೆಗಾಗಿ ಹೊರಟವರಿಗೆ ಅನರ್ಥಕವಾಗುವದರಿಂದ ಸತ್ಯವಾಗುವದಿಲ್ಲವು, ಆದುದರಿಂದಲೇ, **"ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾತ್"** ಎಂಬ ಉಪದೇಶವು. ನಾವು ಹೇಳುವದರಲ್ಲಿ ಭೂತ

ಹಿತವೂ ಯಾಥಾರ್ಥ್ಯವೂ ಎರಡೂ ಇರಬೇಕು. ಒಂದೇ ಇದ್ದರೆ ಸತ್ಯವಾಗುವದಿಲ್ಲವಾದುದರಿಂದ ಅಂತಹದ್ದನ್ನು ಹೇಳಕೂಡದು. ಅದುದರಿಂದಲೇ **ನಬ್ರೂಯಾತ್ ಸತ್ಯಮಪ್ರಿಯಂ। ಪ್ರಿಯಂ ಚ ನಾನೃತಂ ಭ್ರೂಯಾತ್।** ಎಂದು ಉಪದೇಶವು. ಪ್ರಿಯಾಪ್ರಿಯಗಳನ್ನು ಪರಿಗಣಿಸದೆ ಋಷಿ ಕನ್ಯಾ ವಿವಾಹ ವಿಷಯವನ್ನು ಒಬ್ಬ ರಾಕ್ಷಸನಿಗೆ ಋಷಿಯು ಸತ್ಯವಾಗಿ ತಿಳಿಸಿದುದರಿಂದ ಅನರ್ಥ ಪ್ರಾಪ್ತಿಯುಂಟಾಗಿ, ಋಷಿ ಶಾಪಗ್ರಸ್ತನಾದನೆಂಬ ಇತಿಹಾಸವು ಆದಿಪರ್ವದಲ್ಲುಂಟು. (೬.) **ದಮಃ** -- ಬಾಹ್ಯೇಂದ್ರಿಯಗಳ ನಿಗ್ರಹವು. (೭) **ಶಮಃ** -- ಅಂತರಿಂದ್ರಿಯವಾದ ಮನಸ್ಸು ಬಾಹ್ಯೇಂದ್ರಿಯಗಳ ಮೂಲಕ ವಿಷಯಗಳಲ್ಲಿ ಪ್ರವರ್ತಿಸದಹಾಗೆ ನಿಗ್ರಹಿಸೋಣವು, **ಶಮಃ** ಎಂದು ಹೇಳಿದರೆ **ದಮಃ** ಎಂಬುದೂ ಬರಲಿಲ್ಲವೇ, **"ಇಂದ್ರಿಯೇಭ್ಯಃ ಪರಂ ಮನಃ"** ಇಂದ್ರಿಯಗಳನ್ನು ವಶಮಾಡಿಕೊಳ್ಳುವದಕ್ಕಿಂತ ಮನಸ್ಸನ್ನೇ ವಶಮಾಡಿಕೊಂಡರೇ ಇನ್ನೂ ಉತ್ತಮವೇ ಎಂಬ ಭಾವವು. ಪರಸ್ತ್ರೀಯನ್ನು ಕಂಡ ಕಣ್ಣನ್ನು ನಿಗ್ರಹಿಸುವದಕ್ಕೂ ಮನಸ್ಸಿಲ್ಲದೇ ಆಗುವದಿಲ್ಲವು. ಮನಸ್ಸು, ಹೀಗೆ ನೋಡುವದು ಸರಿಯಲ್ಲವೆಂದು ಬುದ್ಧಿಯ ಸಹಾಯದಿಂದ ವಿವೇಕಿಸಿ ತಿಳಿಸುವದರಿಂದಲೇ ದಮವು. ಆದರೆ ಮನಸ್ಸನ್ನೇ ವಶಮಾಡಿಕೊಂಡರೆ ಕಣ್ಣನ್ನು ಪರಸ್ತ್ರೀಯ ಕಡೆಗೇನೇ ಬಿಡುವದಿಲ್ಲವು. ಆದುದರಿಂದಲೇ ಎರಡೂ ಪ್ರತ್ಯೇಕಿಸಿ ಹೇಳಲ್ಪಟ್ಟವು. (೮) **ಸುಖಂ**-- ಶಾಸ್ತ್ರಸಮ್ಮತವಾದ, ಆತ್ಮನಿಗೆ ಅನುಕೂಲವಾಗಿರುವ ಅನುಭವವು. ಒಬ್ಬನಿಗೆ ಪರದ್ರವ್ಯಾಪಹರಣ ಪರದಾರ ಗಮನಗಳು ಅನುಕೂಲವಾಗಿ ತೋರಬಹುದು. ಇವು ಸುಖವಾಗುವದಿಲ್ಲವು. ಏಕೆಂದರೆ ಶಾಸ್ತ್ರವಿರುದ್ಧವಾಗಿ ಭಗವನ್ನಿಗ್ರಹಕ್ಕೆ ಕಾರಣವಾಗುವುದರಿಂದ ಆತ್ಮನಿಗೆ ಹಾನಿಕರವು. ಪ್ರತಿಕೂಲವು. ಆದರೆ ಶಾಸ್ತ್ರನಿಷಿದ್ಧವಲ್ಲದ ಉಪಭೋಗಗಳು ಈತನ ಸುಕೃತಗಳ ದ್ವಾರಾ ಉಂಟಾಗುತ್ತವೆ; ಮೃಷ್ಟಾನ್ನ ಭೋಜನವು, ಭಗವದ್ಭಾಗವತಾರ್ಚನೆಗಳಿಗೆ ಪುಷ್ಕಲ ದ್ರವ್ಯ ಪ್ರಾಪ್ತಿಯೂ, ಪ್ರಾಸಾದವೂ, ಕ್ಷೇತ್ರಪ್ರಾಪ್ತಿಯೂ, ಪರ್ಯಂಕ ಶಯನವೂ, ಸುಪುತ್ರಾದಿ ಪ್ರಾಪ್ತಿಯೂ, ಸೇವಕಾದಿ ಪ್ರಿಯಾಪ್ಯವರ್ಗವೂ ಇವೇ ಮೊದಲಾದ ಸುಖವೂ ಈ ಶಬ್ದದಲ್ಲಿ ಅಡಗಿರುತ್ತವೆ; ಅಂತಹ ಅನುಕೂಲಾನುಭವವನ್ನು ಇತರ ಪ್ರಾಣಿಗಳಿಗೆ ಉಂಟುಮಾಡುವದೂ ಕೂಡ ಸುಖ ಶಬ್ದದಲ್ಲೇ ಅಡಗಿತು. ಇದೂ ಅಲ್ಲದ ತನಗೂ ಇತರರಿಗೂ ಆತ್ಮೋಜ್ಜೀವನಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಡುವದರಿಂದುಂಟಾಗುವ ಅನುಭವವೂ **ಸುಖ** ಶಬ್ದದಿಂದ ಬೋಧಿತವು. ೯. ಮೇಲೆ ಹೇಳಿದವುಗಳಿಗೆ ವಿರೋಧವಾದವುಗಳಾಗಿರುವ ಪ್ರತಿಕೂಲಾನುಭವವೇ **ದುಃಖವು**. ೧೦. **ಭವಃ** - ಸುಖಾನುಭವಕ್ಕೆ ಬೇಕಾದ ಉತ್ಸಾಹವನ್ನು ಹೊಂದಿರುವಿಕೆಯು, ಅನಿರ್ವೇದವು. ೧೧. **ಅಭಾವಃ** ಅಂತಹ ಉತ್ಸಾಹವಿಲ್ಲದೆ ಅದಕ್ಕೆ ಪ್ರತಿಯೋಗಿಯಾದ ನಿರ್ವೇದವು. ೧೨. **ಭಯಂ**-ಅನಿಷ್ಟವಾದುದು ಪ್ರಾಪ್ತವಾಗುತ್ತದೆಂದು ಮನಸ್ಸಿನಲ್ಲಿ ಭೀತಿಯು, ೧೩. **ಅಭಯಂ**-ಅಂತಹ ಭೀತಿಗೆ ಒಳಗಾಗದಿರೋಣವು, ಮನಸ್ಸಿನ ಸ್ಥೈರ್ಯವು. ೧೪. **ಅಹಿಂಸಾ** - ಇತರ ಪ್ರಾಣಿಗಳಿಗೆ ಪೀಡಾರೂಪವಾಗಿಯೂ, ಅಹಿತವಾಗಿಯೂ ಏನನ್ನೂ ಮಾಡಕೂಡದೆಂಬ ಮನೋವ್ಯಾಪಾರವು. ಇದು ಮನೋವ್ಯಾಪಾರ ಹೇಗೆ? ಎಂದರೆ ಮುಂದೆ ಇವೆಲ್ಲಾ **ಭವನ್ತಿ ಭಾವಾಃ** ಎಂದು ಮನೋ ವಿಕಾರವನ್ನು ತಿಳಿಸುವ ಭಾವ ಶಬ್ದ ಪ್ರಯೋಗವಿರುವದರಿಂದ ಹಾಗೆ ಅರ್ಥವು. ಮಗುವಿಗೆ ಹಾಲು ಹೊಯ್ಯುವದೂ, ರೋಗಿಗೆ ಶಸ್ತ್ರಗಳ ಮೂಲಕ ಚಿಕಿತ್ಸೆಯೂ, ಯಜ್ಞದಲ್ಲಿ ಭಾಗವಧೆಯೂ, ಪೀಡಾರೂಪವಾಗಿ ತೋರಿದರೂ, ಹಿತವನ್ನುಂಟುಮಾಡುತ್ತವೆ ಎಂಬ ಭಾವನೆಯಿಂದ ಮಾಡಲ್ಪಡುವದರಿಂದ, ಅಹಿಂಸೆಯೇ ವಿನಾ ಹಿಂಸೆಯಲ್ಲವು, ೧೫. **ಸಮತಾ** ಎಂದರೆ ಸಮ ಬುದ್ಧಿಯು, ರಾಗದ್ವೇಷಗಳಿಗೆ ವಶವಾಗದೆ ಪ್ರಾಣಿವರ್ಗವೆಲ್ಲಾ ಸಮವೆಂಬ ಭಾವವು. ಬದ್ಧರೆಲ್ಲಾ ಗುಣಗಳಿಂದ ಸಮರು ಎಂದು **ಇಲ್ಲಿ ಹೇಳಲ್ಪಡ**

ಇಲ್ಲವು, ಅವರೆಲ್ಲರೂ ಭಿನ್ನರೇ; ಎಲ್ಲಾ ಪ್ರಾಣಿಗಳಲ್ಲೂ ಪ್ರೀತಿ ಇರಬೇಕೆಂದು ಇಲ್ಲಿ **ಸಮತಾ** ಎಂಬುದರಿಂದ ಹೇಳಲ್ಪಟ್ಟಿತು. ಆದರೆ ಘಾತುಕ ಮೃಗವು ಮೇಲೆ ಬೀಳಲು ಬಂದರೆ ಆಗಲೂ ಸಮತೆಯೇ ಎಂದರೆ ಸ್ವರಕ್ಷಣಕ್ಕಾಗಿ ಅದನ್ನು ವಧಿಸುವದು ಇತರರ ರಕ್ಷಣೆಗೂ ಉಪಯುಕ್ತವಾಗುವದರಿಂದ ಸಮತಾ ಭಾವಕ್ಕೆ ನ್ಯೂನತೆ ಇಲ್ಲವು. ೧೬. **ತುಷ್ಟಿಃ**-ಎಲ್ಲಾ ಪ್ರಾಣಿಗಳನ್ನು ಕಂಡರೂ ಸಂತೋಷಚಿತ್ತದಿಂದಿರುವದು. ಅಥವಾ **ಯದೃಚ್ಛಾಲಾಭ ಸಂತುಷ್ಟಃ** ಎಂದು ಹೇಳಿರುವಹಾಗೆ ತನಗೆ ದೇವರು ಅನುಗ್ರಹಿಸಿರುವದರಲ್ಲಿ ಅಲಂಬುದ್ಧಿಯು. ೧೭. **ತಪಃ**-ಶಾಸ್ತ್ರಗಳಲ್ಲಿ ಹೇಳಿರುವ ಹಾಗೆ ದೇಹದಂಡನೆಯು ಎಂದರೆ ಹಾಗೆ ಮಾಡಬೇಕೆಂಬ ಮನಸ್ಸಿನ ಭಾವವು, ಕೃಛ್ರ ಚಾಂದ್ರಾಯಣಾದಿಗಳ ಅನುಷ್ಠಾನ ಮಾಡಬೇಕೆಂಬ ಭಾವವು. ೧೮. **ದಾನಂ**- ತಾನು ಧರ್ಮದಿಂದ ತನ್ನ ಉಪಭೋಗಕ್ಕಾಗಿ ಸಂಪಾದಿಸಿದುದನ್ನು ಇತರರ ಭೋಗಕ್ಕಾಗಿ ಅದರ ತನಗೇನೆಂದೂ ಪ್ರತಿಫಲಾಪೇಕ್ಷೆಯಿಲ್ಲದಹಾಗೆ ಸತ್ಪಾತ್ರದಲ್ಲಿ ತ್ಯಾಗಮಾಡಬೇಕೆಂಬ ಸಂಕಲ್ಪವು. ೧೯. **ಯಶಃ**-ಒಳ್ಳೇ ಗುಣಗಳುಳ್ಳವನೆಂಬ ಕೀರ್ತಿಗಾಗಿ ಸಂಕಲ್ಪವು, ೨೦. **ಅಯಶಃ**-ಅಂತಹ ಸುಗುಣಗಳೊಂದೂ ಇಲ್ಲದವನೆಂದು ಹೇಳಿಸಿಕೊಳ್ಳುವ ಎಂದರೆ ನೃಶಂಸನು. ಸಾಹಸನು. ಲೋಕಕಂಟಕನು ಇತ್ಯಾದಿ ಜನರು ಹೇಳುವದಕ್ಕೆ ಯೋಗ್ಯವಾದ ಮನೋವ್ಯಾಪಾರ, ಇಂತಹ **ಪೃಥಗ್ವಿಧಾಃ**-ಇನ್ನೂ ಇವುಗಳಹಾಗೆಯೇ ನಾನಾವಿಧಗಳಾದ, **ಭಾವಾಃ** ಮನೋವ್ಯಾಪಾರಗಳೆಲ್ಲಾ. **ಮತ್ತ ಏವ ಭವನ್ತಿ**-ನನ್ನಿಂದಲೇ ಉಂಟಾಗತಕ್ಕವು, **ಏವ** ಕಾರವಿರುವದರಿಂದ ನನ್ನ ಸಂಕಲ್ಪವಿಲ್ಲದಿದ್ದರೆ ಇವು ಯಾವುವೂ ಉಂಟಾಗಲಾರವೆಂಬ ಭಾವವು. ಏವಕಾರದಿಂದ ಇನ್ನು ಯಾವ ಅನ್ಯದೇವತೆ ಮೊದಲಾದವರುಗಳಿಂದ ಉಂಟಾಗತಕ್ಕದ್ದಲ್ಲವು ಎಂಬುದೂ ದ್ಯೋತಿತವು. ಸರ್ವೇಶ್ವರ ಸಂಕಲ್ಪವು ಇನ್ನು ಯಾವ ಅಧಿಕಾರಿಯ ಸಂಕಲ್ಪಕ್ಕೂ ಅಧೀನವಾದುದಲ್ಲವು; ನಮ್ಮ ಶರೀರವೂ ಅದರ ವ್ಯಾಪಾರವೂ ಅದರಲ್ಲಿ ವಸಿಸುವ ಆತ್ಮನಿಗೆ ಹೇಗೆ ಅಧೀನವೋ, ಹಾಗೆಯೇ ನಾವೂ ಮತ್ತು ವಿಶ್ವವೆಲ್ಲಾ ಸರ್ವೇಶ್ವರನಿಗೆ ಶರೀರವಾಗಿ, **"ಐತದಾತ್ಮ್ಯಮಿದಂ ಸರ್ವಂ"** (ಛಾಂ. ೬; ೮. ೭.) ಎಂದು ಹೇಳಿರುವಹಾಗೆ ಆತನು ಎಲ್ಲಕ್ಕೂ ಆತ್ಮನಾಗಿರುವದರಿಂದ ಈ ವಿಶ್ವವೆಲ್ಲಾ ಅವನಿಗೇನೇ ಅಧೀನವು. ನಮ್ಮ ಶರೀರದ ಅವಯವಗಳೆಲ್ಲಾ ನಮಗೆ ಮಾತ್ರವೇ ಹೇಗೆ ಅಧೀನವೋ, ಹಾಗೆಯೇ ವಿಶ್ವವೆಲ್ಲಾ ಅವನಿಗೆ ಅಧೀನವು. ಶ್ರೀ ನಿಗಮಾಂತ ದೇಶಿಕರವರು ಇದನ್ನು ಬಹು ನಿಪುಣತರವಾಗಿ **"ಅಧೇಯತ್ವ ಪ್ರಭೃತಿ ನಿಯಮ್ಯೈರಾದಿಕರ್ತುಶ್ಶರೀರಂ, ಸತ್ತಾಸ್ಥೇಮ ಪ್ರಯತನ ಫಲೇಷ್ವೇ ತದಾಯತ್ತಮೇತತ್"** ಎಂದು ಉಪದೇಶಿಸಿರುತ್ತಾರೆ. ಹೀಗೆ ಸರ್ವ ಚಿದಚಿದಾತ್ಮಕವಾದ ವಿಶ್ವವೂ **"ಏತದಾಯತ್ತಂ"** ಪರಮಾತ್ಮನಿಗೆ ಅಧೀನವಾದನಂತರ. ಚೇತನರ **ಸ್ವಭಾವಗಳೂ ಮತ್ತ ಏವ** ಎಂಬುದು ಸುಸ್ಪಷ್ಟವು ಆದರೆ ಈ ಸಂದರ್ಭದಲ್ಲಿ **ದುಃಖ**, **ಭಯ**, **ಅಯಶಃ**, ಇಂತಹ ಭಾವಗಳಿಗೆ ಪರಮಾತ್ಮನು ಹೇಗೆ ಕಾರಣನು? ಒಳ್ಳೇ ಭಾವಗಳಿಗೆ ಆತನು **ಮತ್ತ ಏವ** ಎಂದು ಹೇಳಿಕೊಂಡದ್ದನ್ನು ಒಪ್ಪುವೆವು. ದುಷ್ಟ ಭಾವಗಳಿಗೆ ಮತ್ತ ಏವ ಎಂಬುದು ಹೇಗೆ ಅನ್ವಯಿಸುತ್ತದೆ? ಹೇಗೆ ಸಮಂಜಸವು? ಎಂದು ಕೇಳಬಹುದು, ಇದಕ್ಕೆ ಸಮಾಧಾನವನ್ನು ಈ ಶ್ಲೋಕದ ಅನುತಾತ್ಪರ್ಯದಲ್ಲೇ ಹೇಳಿರುತ್ತೇವೆ. ಇಂತಹ ಸಮಾಧಾನವನ್ನು ಮುಂದೆ ೧೬ ನೆಯ ಅಧ್ಯಾಯದ ೬೯, ೭೦ ನೆಯ ಶ್ಲೋಕಗಳಲ್ಲಿ ಶ್ರೀ ಕೃಷ್ಣಭಗವಾನರವರೇ ಬಹು ಸ್ಪಷ್ಟವಾಗಿ ತಿಳಿಸುವದಲ್ಲದೆ, ಅಂತಹ ದುಷ್ಟ ಪ್ರವೃತ್ತಿಯುಂಟಾಗದೇ ಇರುವದಕ್ಕೆ ಏನುಮಾಡಬೇಕೆಂಬುದನ್ನೂ ತಿಳಿಸುತ್ತಾರೆ. ಹೀಗೆ ಸತ್ಯಸಂಕಲ್ಪನು ನಿರ್ಧರಿಸಿರುವದಕ್ಕೆ ವ್ಯಾಘಾತವು ಬ್ರಹ್ಮಾದಿ ಯಾವ ದೇವತೆಗಳಿಂದಲೂ ಸಾಧ್ಯವಿಲ್ಲವು.

**ಭಾಷ್ಯಾರ್ಥವು**.-೧. ಬುದ್ಧಿ ಎಂದರೆ **ಮನಸಃ ನಿರೂಪಣ ಸಾಮರ್ಥ್ಯಮ್**-ಮನಸ್ಸಿಗಿರುವ ನಿರೂಪಿಸುವ ಸಾಮರ್ಥ್ಯವು, ಮುಂದೆ ಜ್ಞಾನವೆಂಬ ಪ್ರಯೋಗವಿರುವದರಿಂದ ಎರ

ಭಾ. **ಬುದ್ಧಿಃ-ಮನಸೋ ನಿರೂಪಣ ಸಾಮರ್ಥ್ಯಮ್, ಜ್ಞಾನಂ-ಚಿದಚಿದ್ವಸ್ತು ವಿಶೇಷ ವಿಷಯೋ ನಿಶ್ಚಯಃ, ಅಸಮ್ಮೋಹಃ-ಪೂರ್ವಗೃಹೀತಾದ್ರಜತಾದೇರ್ವಿಸಜಾತೀಯೇ ಶುಕ್ತಿಕಾದಿ ವಸ್ತುನಿ ಸಜಾತೀಯತಾ ಬುದ್ಧಿನಿವೃತ್ತಿಃ; ಕ್ಷಮಾ-ಮನೋವಿಕಾರ**

ಡಕ್ಕೆ ಇರುವ ವ್ಯತ್ಯಾಸವನ್ನು ತಿಳಿಸುವುದಕ್ಕಾಗಿ. **ಬುಧ್ಯತೇ ಅನಯಾ** ಎಂಬ ವ್ಯುತ್ಪತ್ತಿಯನ್ನು ಪ್ರದರ್ಶಿಸುವುದಕ್ಕಾಗಿ ಮನಸ್ಸಿನ ನಿರೂಪಣ ಸಾಮರ್ಥ್ಯವೆಂದು ವ್ಯಾಖ್ಯಾನಮಾಡಿದರು, ಅಂತಹ ಸಾಮರ್ಥ್ಯವುಳ್ಳವನನ್ನೇ **ಬುದ್ಧಿಮಾನ್** ಎಂದು ಹೇಳುವ ವಾಡಿಕೆಯುಂಟು. ಇದು ಜ್ಞಾನವಾನ್ ಎಂಬುದಕ್ಕಿಂತ ವ್ಯತ್ಯಸ್ತವಾದ ಅಧಿಕಾರಿಯು ಹೇಳಲ್ಪಟ್ಟಿತೆಂಬುದು ವ್ಯಕ್ತವು, ಶಾಸ್ತ್ರಜ್ಞಾನವುಳ್ಳವನನ್ನೇ **ಜ್ಞಾನವಾನ್** ಎಂದು ಹೇಳಲ್ಪಡುವನು? ೨. ಜ್ಞಾನಂ ಎಂದರೆ **ಚಿದಚಿದ್ವಸ್ತು ವಿಶೇಷ ವಿಷಯೋ ನಿಶ್ಚಯಃ**-ಚಿದಚಿತ್ತುಗಳ ಸ್ವರೂಪ ಸ್ವಭಾವಾದಿಗಳ ವೈಲಕ್ಷಣ್ಯವನ್ನು ಯಥಾರ್ಥವಾಗಿ ತಿಳಿಯೋಣವು, ಇಲ್ಲಿ ಚಿದಚಿತ್ತುಗಳು ಮಾತ್ರವೇ ಹೇಳಿದ್ದರೂ ಪರಮಾತ್ಮ ವೈಲಕ್ಷಣ್ಯ ಜ್ಞಾನಕ್ಕೂ ಕೂಡ ಇದು ಉಪಲಕ್ಷಣವು. ಇಲ್ಲಿ ಜ್ಞಾನಶಬ್ದದಿಂದ ಲೌಕಿಕ ಭೌತಿಕ ಶಾಸ್ತ್ರೀಯ ಮೊದಲಾದ ಸರ್ವ ಜ್ಞಾನಗಳೂ ವಿವಕ್ಷಿತವಾದರೂ ಶಾಸ್ತ್ರೀಯವೇದ ವಿಷಯದಲ್ಲಿ ಹೇಳಲ್ಪಡುವ ಮುಖ್ಯವಾದ ಜ್ಞಾನವು ಯಾವುದೆಂಬುವನ್ನು ಶ್ರೀ ಪರಾಶರರು, **"ಸಂಜ್ಞಾಯತೇಯೇನ ತದಸ್ತದೋಷಂ ಶುದ್ಧಂ ಪರಂ ನಿರ್ಮಲಮೇಕರೂಪಂ । ಸಂದೃಶ್ಯತೇ ವಾಪ್ಯಧಿಗಮ್ಯತೇವಾ ತಜ್ಜ್ಞಾನಮಜ್ಞಾನ ಮತೋನ್ಯದುಕ್ತಮ್"** ಎಂಬುವದರಿಂದ ಬ್ರಹ್ಮವಿದ್ಯಾ ಮೂಲಕ ಉಂಟಾಗುವ ಜ್ಞಾನವೇ ಜ್ಞಾನವು, ಮಿಕ್ಕ ಜ್ಞಾನವೆಲ್ಲಾ ಅಜ್ಞಾನವೇ ಎಂದು ಹೇಳಿರುತ್ತಾರೆ. ಯಾವ ಆಗಮೋತ್ಥ ಜ್ಞಾನದಿಂದ ಆ ಪರಮಾತ್ಮನು ತಿಳಿಯಲ್ಪಡುವನೋ, ಮತ್ತು ಯಾವ ವಿವೇಕೋತ್ಥ ಜ್ಞಾನದಿಂದ ದರ್ಶನ ಸಮಾನಾಕಾರ: ರೂಪವಾದ ಭಕ್ತಿಯೋಗವೆಂದು ಹೇಳಿಸಿಕೊಳ್ಳುವ ಉಪಾಸನದಿಂದ ಆತನು ಸಾಕ್ಷಾತ್ಕರಿಸಲ್ಪಡುವನೋ, ಮತ್ತು ಅದರ ಫಲವಾಗಿ ಅಂತಿಮ ಸ್ಮೃತಿ, ಅರ್ಚಿರಾದಿ ಗಮನ ಮೊದಲಾದವುಗಳ ಮೂಲಕ ಹೊಂದಲ್ಪಡುವನೋ, ಅದೀಗ **ಜ್ಞಾನವು;** ಮಿಕ್ಕಿದುದೆಲ್ಲಾ ಅಜ್ಞಾನವೆಂದು ಹೇಳಿದರು. ಆ ಪರಮಾತ್ಮನೆಂತವನೆಂದರೆ **ತದಸ್ತದೋಷಂ** ಎಂಬುವದರಿಂದ ಅಚಿತ್ತಿನಹಾಗೆ ಸ್ವರೂಪ ವಿಕಾರಾದಿ ದೋಷಗಳಿಲ್ಲದವನೆಂದೂ, **ಶುದ್ಧಂ**-ಚಿತ್ತಿನಹಾಗೆ ಸ್ವಭಾವವಿಕಾರಾದಿಗಳಿಲ್ಲದೆ ಪರಿಶುದ್ಧನಾದವನೆಂದೂ, **ಪರಂ ನಿರ್ಮಲಂ**-ಮುಕ್ತನಹಾಗೆ ಅಲ್ಲದೆ ಯಾವಾಗಲೂ ಪ್ರಕೃತಿ ಸಂಬಂಧವಾದ ಗುಣಗಳಿಲ್ಲದೆ ಅವರಿಗಿಂತ ವಿಲಕ್ಷಣನಾಗಿಯೂ, **ಏಕರೂಪಂ**-ಅನೇಕ ರೂಪಗಳನ್ನು ಹೊಂದಬಹುದಾದ ನಿತ್ಯಸೂರಿಗಳಿಗಿಂತಲೂ ವಿಲಕ್ಷಣನಾಗಿರುವ ಪರಮಾತ್ಮನೆಂಬದಾಗಿ ಹೇಳಲ್ಪಟ್ಟಿತು. ತ್ರಿವಿಧಾಚೇತನಗಳೇನು, ತ್ರಿವಿಧ ಚೇತನವೇನು ಇವುಗಳಿಗಿಂತ ವಿಲಕ್ಷಣನಾದ ಪರಮಾತ್ಮನನ್ನು ಶಾಸ್ತ್ರಮುಖೇನ ತಿಳಿದು, ವಿವೇಕದಿಂದ ಸಿದ್ಧೋಪಾಯನನ್ನಾಗಿ ವರಿಸಿ. ಸಾಧ್ಯೋಪಾಯದ ಮೂಲಕ ಸಾಕ್ಷಾತ್ಕರಿಸಿ. ಅವನನ್ನು ಹೊಂದುವ ಜ್ಞಾನವೇ **ಜ್ಞಾನವು**-ಮಿಕ್ಕಿದುದೆಲ್ಲಾ ಅಜ್ಞಾನವೆಂಬುದು ಈ ಅಮೋಘ ಶ್ಲೋಕದ ಭಾವವು. ೩. **ಅಸಮ್ಮೋಹಃ** ಎಂದರೆ **ಪೂರ್ವಗೃಹೀತಾತ್ ರಜತಾತ್**-ಮೊದಲು ಗ್ರಹಿಸಲ್ಪಟ್ಟ ಬೆಳ್ಳಿಯೇ ಮೊದಲಾದುವುಗಳಿಗಿಂತಲೂ, **ವಿಸಜಾತೀಯೇ ಶುಕ್ತಿಕಾದಿ ವಸ್ತುನಿ**-ವ್ಯತ್ಯಸ್ತವಾದ ಮುತ್ತಿನ ಚಿಪ್ಪೇ ಮೊದಲಾದ ವಸ್ತುವಿನಲ್ಲಿ, **ಸಜಾತೀಯತಾ ಬುದ್ಧಿ ನಿವೃತ್ತಿಃ**-ಒಂದೇ ಜಾತೀಯ ವಸ್ತು ಎಂಬ ಜ್ಞಾನದ ನಿವೃತ್ತಿಯು ಮುತ್ತಿನಚಿಪ್ಪಿನಲ್ಲಿ ಬೆಳ್ಳಿ ಎಂಬ ಭ್ರಮದ ನಿವೃತ್ತಿಯು, ಪರಮಾತ್ಮನು ಚಿದಚಿತ್ತುಗಳಿಗಿಂತಲೂ ವಿಸಜಾತೀಯನು. ಸಜಾತೀಯನೆಂಬ ಭಾವವು ಭ್ರಮೆಯು; ಅಲ್ಲದಿರೋಣವು, ಅಣುವಾಗಿ ಅಸೀಶನಾಗಿ ಪರತಂ

**ಭಾ. ಹೇತೌ ಸತ್ಯಪ್ಯ ವಿಕೃತಮನಸ್ತ್ವಮ್ ; ಸತ್ಯಮ್ - ಯಥಾದೃಷ್ಟವಿಷಯಂ ಭೂತ ಹಿತರೂಪಂ ವಚನಮ್; ತದನುಗುಣಮನೋವೃತ್ತಿರಿಹಾ ಭಿಪ್ರೇತಾ ಮನೋ ವೃತ್ತಿ ಪ್ರಕರಣಾತ್: ದಮಃ - ಬಾಹ್ಯಕರಣಾನಾ ಮನರ್ಥವಿಷಯೇಭ್ಯೋ ನಿಯ**

ವಾಗಿ ಅಸೀಲನಾಗಿ ಪರತಂತ್ರನಾಗಿರುವ ಜೀವನೂ, ವಿಭುವಾಗಿ ಈಶನಾಗಿ ಸ್ವತಂತ್ರ ನಾಗಿರುವ ಪರಮಾತ್ಮನೂ, ಪರಾತ್ತೀಯರೆಂದು ಭಾವಿಸೋಣವು ಮೋಹವು. ಅದಿಲ್ಲದಿರೋಣವು **ಅಸಮ್ಮೋಹವು.** ೨. **ಕ್ಷಮಾ** ಎಂದರೆ **ಮನೋವಿಕಾರಹೇತೌ ಸತ್ಯಪಿ** - ಮನಸ್ಸಿಗೆ ವಿಕಾರ ಉಂಟಾಗುವದಕ್ಕೆ ಎಂದರೆ ಕ್ರೋಧವು ಉಂಟಾಗುವದಕ್ಕೆ ಕಾರಣವಿದ್ದರೂ ಕೂಡ, **ಅವಿಕೃತ ಮನಸ್ತ್ವಂ**-ವಾಗೆ ವಿಕಾರ ಹೊಂದದೇ ಅದನ್ನು ಸಹಿಸಿಕೊಳ್ಳುವ ಮನೋ ಭಾವವು, **"ಯಸ್ಸ ಮುತ್ಪತಿತಂ ಕ್ರೋಧಂ ಕ್ಷಮಯೈವ ನಿರಸ್ಯತಿ"** (ಎಂಬಲ್ಲಿ ಸುಂದರ. ೫೫-೬) ಮಹ ರ್ಷಿಯು **ಕ್ಷಮಾ** ಶಬ್ದದ ಈ ಅಭಿಪ್ರಾಯವನ್ನು ಬಹು ಚನ್ನಾಗಿ ಪ್ರದರ್ಶಿಸಿರುತ್ತಾರೆ. ಕ್ರೋಧ ವೇಗವನ್ನು ತಡೆಯುವದು ಕ್ಷಮೆ ಎಂಬ ಭಾವವು, ಚಕ್ರಕ್ಕೆ ಬಿಲೀ ಮರದ ತಡೆಯನ್ನು ಕಟ್ಟಿದ ಹಾಗೆ ಎಂದು ಭಾವಿಸತಕ್ಕದ್ದು: ಅಥವಾ ಮೋಟಾರ್ ವೇಗವನ್ನು ತಡೆಯುವದಕ್ಕೆ ಬ್ರೇಕನ್ನು ಹಾಕಿದಹಾಗೆ. ಆದರೆ ಕ್ರೋಧಕ್ಕೆ ಕಾರಣವಿದ್ದರೂ, ಕ್ರೋಧವ್ಯಾಪಾರ ಉಂಟಾಗದಿರುವದು ಹೇಗೆ? ಎಂದು ಆಕ್ಷೇಪಿಸಬಹುದು. ಅದಕ್ಕೆ ಪ್ರತಿಬಂಧಕವಿಲ್ಲದಿದ್ದರೆ ಕೋಪ ಉಂಟಾಗುವದೇ ಸತ್ಯವು. ಆದರೆ ಉರಿಯುವ ಜ್ವಾಲೆಗೆ ನೀರಿನ ಹಾಗೂ, ಪ್ರವಹಿಸುವ ನೀರಿಗೆ ಕಟ್ಟೆಯ ಹಾಗೂ, ಕೋಪಕ್ಕೆ ಕ್ಷಮೆಯು ಪ್ರತಿಬಂಧಕವು. ೧೬. ೩-೩೭ನೆಯ ಶ್ಲೋಕದಲ್ಲಿ **ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹ ವೈರಿಣಮ್** - ಎಂಬಲ್ಲಿ ಕ್ರೋಧವು ನಿಂದಿಸಲ್ಪಟ್ಟಿರುತ್ತದೆ. (೩-೩೭ನೆಯ ಪುಟವು). ಭಾರತದಲ್ಲಿ **ಕ್ರೋಧಮೂಲೋ ವಿನಾಶೋ ಹಿ** ಎಂದೂ ಗರ್ಹಿಸಲ್ಪಟ್ಟಿರುತ್ತದೆ. (ವನಪರ್ವ, ೨೯-೩) ೩. **ಸತ್ಯಂ** ಎಂದರೆ **ಯಥಾ ದೃಷ್ಟವಿಷಯಂ ಭೂತಹಿತ ರೂಪ ವಚನಂ** - ಹೇಗೆ ವಿಷಯವು ಪ್ರತ್ಯಕ್ಷಾದಿ ಪ್ರಮಾಣದಿಂದ ಕಾಣಲ್ಪಟ್ಟಿತೋ ಹಾಗೂ, ಮತ್ತು ಪ್ರಾಣಿವರ್ಗಕ್ಕೆ ಹಿತಕರವಾಗಿರುವಹಾಗೂ, ಇರುವ ಮಾತು, **ತದನುಗುಣ ಮನೋವೃತ್ತಿರಿಹಾ ಭಿಪ್ರೇತಾ**-ಅಂತಹ ಪ್ರಮಾಣದೃಷ್ಟವಾಗಿಯೂ, ಪ್ರಾಣಿಹಿತಕರವಾಗಿರುವಮಾತಿಗೆ ಅನುಗುಣ ವಾದ ಮನಸ್ಸಿನ ಭಾವವು ಇಲ್ಲಿ ಹೇಳಲ್ಪಟ್ಟಿದುದು: ಇಲ್ಲಿ ವಾಕ್ಕೇ ಹೇಳಲ್ಪಡಲಿಲ್ಲವು. ಇವೆಲ್ಲಾ **ಭಾವಾ**. ಮನಸ್ಸಿನ ಭಾವಗಳೆಂದು ಮುಂದೆ ಹೇಳಲ್ಪಡುವದರಿಂದ, ಪ್ರಕರಣವು ಮನೋ ವೃತ್ತಿ ಯನ್ನು ಹೇಳುವದಾದುದರಿಂದ ಎಂದು **ಮನೋವೃತ್ತಿ ಪ್ರಕರಣಾತ್** ಎಂದು ಹೇತುವನ್ನು ಕೊಟ್ಟಿರುತ್ತಾರೆ. ಸತ್ಯವಾಗುವದಕ್ಕೆ ಯಥಾರ್ಥ ದೃಷ್ಟವಾದುದಾಗಿ ಮಾತ್ರವಿದ್ದರೆ ಅದು ಸತ್ಯ ವೆಂದು ಹೇಳಿಸಿಕೊಳ್ಳುವದಿಲ್ಲವು ಅದು ಭೂತಹಿತವನ್ನುಂಟುಮಾಡತಕ್ಕದ್ದಾಗಿರಬೇಕು. **ಸತ್ಯಂ ಬ್ರೂಯಾತ್ಪ್ರಿಯಂಬ್ರೂಯಾತ್ ನಬ್ರೂಯಾತ್ಸತ್ಯಮಪ್ರಿಯಂ। ಪ್ರಿಯಂಚ ನಾನೃತಂ ಬ್ರೂಯಾತ್ ಏಷಧರ್ಮಸ್ಸನಾತನಃ** ॥ ಎಂಬ ಮನುವಾಕ್ಯವು ಮನುಸಂಧೇಯವು. ಹಾಗೆಯೇ ಇನ್ನೊಂದು ಕಡೆಯಲ್ಲಿ **"ಸತ್ಯಂ ಭೂತಹಿತಂ ಪ್ರೋಕ್ತಂ"** ಎಂದು ಹೇಳಲ್ಪಟ್ಟಿರುತ್ತದೆ. ೪. **ದಮಃ** ಎಂದರೆ **ಬಾಹ್ಯಕರಣಾನಾಂ ಅನರ್ಥವಿಷಯೇಭ್ಯಃ ನಿಯಮನಂ** - ಬಾಹ್ಯೇಂ ದ್ರಿಯಗಳು ಅನರ್ಥವನ್ನುಂಟುಮಾಡುವ ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸದಹಾಗೆ ಅವುಗ ಳನ್ನು ನಿಗ್ರಹಿಸೋಣವು, ಇಲ್ಲಿ **ಅನರ್ಥವಿಷಯಗಳ** ದಶೆಯಿಂದ ಎಂದು ಹೇಳಿದುದರಿಂದ ಶಬ್ದ ಸ್ಪರ್ಶಾದಿ ವಿಷಯ ಸುಖಗಳು ಪುನಃ ಬಂಧಕ್ಕೆ ಕಾರಣವಾಗುವವರಿಂದ ಅನರ್ಥಾವಹ ವಿಷಯಗ ಳೆಂದು ಹೇಳಲ್ಪಟ್ಟವು: ಹಾಗಲ್ಲದೆ ಶಾಸ್ತ್ರೀಯಗಳಾಗಿರುವವದರಲ್ಲಿ ಸಂಬಂಧವು ಸಾಧುವಾದುದ

**ಭಾ. ಮನಸೋಽವಸಾದಃ; ಭಯಂ ಆಗಾಮಿನೋ ದುಃಖಸ್ಯ ಹೇತುದರ್ಶನಜಂ ದುಃಖಮ್; ತನ್ನಿವೃತ್ತಿಃ-ಅಭಯಮ್; ಅಹಿಂಸಾ-ಪರದುಃಖಾಹೇತುತ್ವಮ್; ಸಮತಾ ಆತ್ಮನಿಸುಹೃತ್ಸು ವಿಪಕ್ಷೇಷು ಚಾರ್ಥಾನರ್ಥಯೋಸ್ಸಮಮತಿತ್ವಮ್; ತುಷ್ಟಿಃ-ಸರ್ವೇ**

**ರೇಣಾತ್ಮಾಪಹಾರಿಣಾ"** ಎಂದು ಹೇಳಿರುವಹಾಗೆ ನನ್ನದು ನನ್ನದು ಎಂದು ಚೋರ ಕೃತ್ಯವನ್ನು ಮಾಡಿರುವುದರಿಂದ ಆತನ ಸ್ವತ್ತನ್ನು ಪುನಃ ಆತನಿಗೇನೇ **ನಿರ್ಯಾತಯಿತು ಮರ್ಹಸಿ** - ಹಿಂತಿರುಗಿ ಕೊಟ್ಟುಬಿಡಲು ಅರ್ಹನಾಗು ಎಂದು ಉಪದೇಶಿಸಿರುತ್ತಾಳೆ. ಇದೇ ಮುಖ್ಯವಾದ ಆತ್ಮೋಜ್ಜೀವನವು. ಇದಕ್ಕನುಕೂಲವಾದ ಅನುಭವವೇ ಮುಖ್ಯವಾಗಿ **ಸುಖ ರೂಪ** ವೆಂಬ ಭಾವವು; **ದುಃಖಂ** ಎಂದರೆ ಇದಕ್ಕೆ ಪ್ರತಿಕೂಲವಾದ ಅನುಭವವು, ಪುನಸ್ಸಂಸಾರಾದಿಗಳಿಂದಲೂ ಅದರಿಂದುಂಟಾಗುವ ಕ್ಲೇಶಗಳಿಂದಲೂ ನರಕಾನುಭವಗಳಿಂದಲೂ ಉಂಟಾಗುವದೇ ದುಃಖವು, ೧೦. **ಭವಃ** ಎಂದರೆ **ಭವನಮ್** ಆಗೋಣವು, ಎಂದರೆ ಅವಸ್ಥೆಯು; **ಅನುಕೂಲಾನುಭವ ಹೇತುಕಂ ಮನಸೋ ಭವನಮ್**-ಸುಖರೂಪವಾದ ಅನುಕೂಲಾನುಭವಕ್ಕೆ, ಕಾರಣವಾದ ಮನಸ್ಸಿನ ಅವಸ್ಥೆಯು, ಆದುದರಿಂದ ಭವಶಬ್ದಕ್ಕೆ ಉದ್ಧರ್ಷವೆಂಬ ಅರ್ಥವನ್ನು ಹೇಳಬಹುದು, ಉತ್ಸಾಹವೆಂಬ ಅಭಿಪ್ರಾಯವಾಗುತ್ತದೆ, ಸುಖಾನುಭವವನ್ನು ಹೊಂದಲು ಬೇಕಾದ ಉತ್ಸಾಹವು **ಭವ**ಃ ಎಂಬುದರಿಂದ ನಿರ್ದೇಶಿಸಲ್ಪಟ್ಟಿತು. ೧೧. **ಅಭಾವವು** ಅದರ ಪ್ರತಿಯೋಗಿಯಾದ **ನಿರ್ವೇದವು, ಅವಸಾದವು;** ಆದುದರಿಂದ, **ಅಭಾವ**ಃ - ಪ್ರತಿಕೂಲಾನುಭವಕ್ಕೆ ಹೇತುವಾದ **ಮನಸಃ ಅವಸಾದ**ಃ – ಮನಸ್ಸಿನ ದೈನ್ಯಸ್ಥಿತಿಯೆಂದು ಭಾಷ್ಯವನ್ನು ಬರೆದಿರುತ್ತಾರೆ. ಸಾಧನ ಸಪ್ತಕಗಳಲ್ಲಿ ಅನವಸಾದವು ಒಂದು, ಇಲ್ಲಿ ಸಾಧನ ಸಪ್ತಕಗಳಾದ ವಿವೇಕ ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದ, ಅನುದ್ಧರ್ಷಗಳೆಂಬವುಗಳಲ್ಲಿ ಕೆಲವೆಲ್ಲವೂ ಹೇಳಲ್ಪಟ್ಟಿವೆ. ಬುದ್ಧಿ, ಜ್ಞಾನ, ಅಸಮ್ಮೋಹ, ದಮ, ಶಮ, ಸುಖಶಬ್ದಗಳಿಂದ ವಿವೇಕ ವಿಮೋಕಗಳು ಗ್ರಹಿಸಲ್ಪಟ್ಟವು. **ಭವ** ಎಂಬ ಶಬ್ದದಿಂದಲೂ ಮುಂದೆ **ತಪೋದಾನ** ಶಬ್ದಗಳಿಂದಲೂ ಅಭ್ಯಾಸ **ಕ್ರಿಯಾ** ಎಂದರೆ ಧ್ಯಾನ ಯಜ್ಞಾನುಷ್ಠಾನಗಳು ಹೇಳಲ್ಪಟ್ಟವು. **ಸತ್ಯ ಆರ್ಜವ ದಯಾದಾನ ಅಹಿಂಸಾದಿ**ಗಳೇ ಕಲ್ಯಾಣಗಳು. ಇವು ಸತ್ಯ, ದಾನ, ಅಹಿಂಸೆ ಮೊದಲಾದ ಶಬ್ದಗಳಿಂದಲೇ ಹೇಳಲ್ಪಟ್ಟಿರುತ್ತವೆ. ಆದುದರಿಂದ ಈ ಎರಡು ಶ್ಲೋಕಗಳಲ್ಲೂ ಸಾಧನ ಸಪ್ತಕಗಳೂ ಅವುಗಳ ಪ್ರತಿಯೋಗಿಗಳು ಇನ್ನೂ ಕೆಲವು ಮನಸ್ಸಿನ ಅವಸ್ಥೆಗಳೂ ಸಹ ಬೋಧಿತಗಳು. ೧೨. **ಭಯಂ** ಎಂದರೆ **ಆಗಾಮಿನೋ ದುಃಖಸ್ಯ ಹೇತುದರ್ಶನಜಂ ದುಃಖಮ್** - ಮುಂದೆ ಬರುವ ದುಃಖಕ್ಕೆ ಕಾರಣವನ್ನು ತಿಳಿಯುವದರಿಂದುಂಟಾಗುವ ದುಃಖವು. ೧೩. **ತನ್ನಿವೃತ್ತಿಃ ಅಭಯಂ** - ಅಂತಹ ಭಯದಿಂದ ನಿವೃತ್ತಿಯು; ಅಭಯ ಭಯಗಳು, ಸುಖ ದುಃಖಗಳಲ್ಲೇ ಅಂತರ್ಗತಗಳಾದರೂ, ಎರಡಕ್ಕೂ ವ್ಯತ್ಯಾಸವನ್ನು ತೋರಿಸುವದಕ್ಕಾಗಿ ಮುಂದೆ ಬರುವ ದುಃಖಕ್ಕಾಗಿ ಈಗಲೇ ದುಃಖಿಸುವದು ಭಯವೆಂದು **ಆಗಾಮಿನ** ಎಂಬ ಪ್ರಯೋಗವು. ೧೪. **ಅಹಿಂಸಾ** ಎಂದರೆ **ಪರದುಃಖಾಹೇತುತ್ವಂ** - ಇತರರ ದುಃಖಕ್ಕೆ ಕಾರಣವಾಗದೇ ಇರೋಣವು. ೧೫. **ಸಮತಾ** ಎಂದರೆ **ಆತ್ಮನಿ ಸುಹೃತ್ಸುವಿಪಕ್ಷೇಷು ಚಾರ್ಥಾನರ್ಥಯೋಃ ಸ್ಸಮಮತಿತ್ವಂ** - ತನಗಾಗಲಿ, ತನ್ನ ಸ್ನೇಹಿತರಿಗೇಯಾಗಲಿ, ತನಗೆ ಶತ್ರುಗಳಾಗಿರುವವರಿಗೇಯಾಗಲಿ, ಇಷ್ಟಾನಿಷ್ಟಗಳು ಪ್ರಾಪ್ತವಾದರೂ ಒಂದೇ ವಿಧವಾದ ವಿಕಾರಹೊಂದದ ಬುದ್ಧಿಯುಳ್ಳೋಣವೂ; ಇಂತಹ ಸಮಮತಿಯು ವಿಷ್ಣು ಪುರಾಣದಲ್ಲಿ ಉಪಪಾದಿತವು. ಯಮನು ತನ್ನ ಭಟರಿಗೆ ವಿಷ್ಣುಭಕ್ತರ ತಂಟೆಗೆ ಹೋಗಬೇಡಿ, ಆ ವಿಷ್ಣು

**ಭಾ. ಷ್ವಾತ್ಮಸು ದೃಷ್ಟೇಷು ತೋಷಸ್ವಭಾವತ್ವಮ್; ತಪಃ-ಶಾಸ್ತ್ರೀಯೋ ಭೋಗಸಙ್ಕೋಚರೂಪಕಾಯಕ್ಲೇಶಃ. ದಾನಂ - ಸ್ವಕೀಯ ಭೋಗ್ಯಾನಾಂ ಪರಸ್ಮೈ ಪ್ರತಿಪಾದನಂ; ಯಶಃ - ಗುಣವತ್ತಾಪ್ರಥಾ; ಅಯಶಃ - ನೈರ್ಗುಣ್ಯಪ್ರಥಾ;**

ಭಕ್ತರು ಹೇಗೆ ಇರುತ್ತಾರೆಂದರೆ ಹೇಳುತ್ತಾರೆ.— "**ನಚಲತಿ ನಿಜಧರ್ಮ ವರ್ಣತೋ ಯಸ್ಸಮಮತಿ ರಾತ್ಮಸುಹೃದ್ವಿಪಕ್ಷಪಕ್ಷೇ। ನಹರತಿ ನಚ ಹಂತಿ ಕಿಂಚಿದುಚ್ಚೈಸ್ಸಿತಮನಸಂ ತ ಮವೈಹಿ ವಿಷ್ಣುಭಕ್ತಮ್**" (ವಿ. ಪು. ೩. ೭. ೨೦.) ಇಲ್ಲಿ ಹೇಳಿರುವ **ಆತ್ಮಸುಹೃದ್ವಿಪಕ್ಷ** ಪಕ್ಷದಲ್ಲಿ **ಸಮಮತಿಯೇ** ಸಮತಾ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಈ ಶ್ಲೋಕಾಭಿಪ್ರಾಯವೇನೆಂದರೆ ಯಾವನು ತನ್ನ ವರ್ಣಾಶ್ರಮ ಧರ್ಮಾನುಷ್ಠಾನದಿಂದ ಸ್ವಲ್ಪವೂ ಕದಲದೇ ಇರುತ್ತಾನೋ. ತನ್ನ ಮತ್ತು ತನ್ನ ಸ್ನೇಹಿತರ, ದ್ವೇಷಿಗಳ ವಿಷಯದಲ್ಲೆಲ್ಲಾ ಸಮಬುದ್ಧಿಯುಳ್ಳವನೋ, ಪರಸ್ವತ್ತನ್ನು ಯಾವನು ಅಪಹರಿಸುವದಿಲ್ಲವೋ, ಪರಪೀಡೆಯನ್ನು ಮಾಡುವದಿಲ್ಲವೋ, ಹೀಗೆ ಬಾಹ್ಯೇಂದ್ರಿಯ ಅಂತರಿಂದ್ರಿಯಗಳೆರಡನ್ನೂ ಜಯಿಸಿ ತುಂಬಾ ಪರಿಶುದ್ಧ ಮನಸ್ಸನ್ನುಳ್ಳವನೋ. ಅವನೇ ವಿಷ್ಣುಭಕ್ತನೆಂದು ತಿಳಿ" ಎಂದು ಆಜ್ಞಾಪಿಸಿರುತ್ತಾನೆ. "**ವಿದ್ಯಾವಿನಯ ಸಂಪನ್ನೇ**" ಎಂದು ಬ್ರಹ್ಮಸ್ವರೂಪತಾರತಮ್ಯದಲ್ಲೂ ಎಲ್ಲಾ ಆತ್ಮರೂ ಒಂದೇ ಎಂಬ ಭಾವನೆಯೂ ಮತ್ತು ಎಲ್ಲಾ ಆತ್ಮರೂ ಆತನಿಗೆ **ಮೇ ಪರಾ ಪ್ರಕೃತಿ** ಎಂದು ಆತನಿಗೆ ಶರೀರವೆಂಬ ಭಾವನೆಯಿಂದ ಎಲ್ಲರಲ್ಲೂ ಸುಹೃತ್ತೇ ಆಗಲಿ ವಿಪಕ್ಷನೇ ಆಗಲಿ ಅನುಕೂಲವಾಗಿರಬೇಕೆಂಬುದೂ, ಇಲ್ಲಿ ವಿವಕ್ಷಿತವು. ನಮ್ಮನ್ನು ದ್ವೇಷಿಸುವವನಿಗೆ ಒಳ್ಳೇಪದವಿಯುಂಟಾದರೆ ಅಸೂಯೆ ಪಡಬಾರದು, ಆತನಿಗೆ ದುಃಖ ಪ್ರಾಪ್ತವಾದರೆ ಸಂತೋಷಪಡಬಾರದೆಂಬುದೂ ಸೂಚಿತವು. ೧೬. **ತುಷ್ಟಿಃ** ಎಂದರೆ **ಸರ್ವೇಷ್ವಾತ್ಮಸುದೃಷ್ಟೇಷು ತೋಷಸ್ವಭಾವತ್ವಮ್** - ನಮ್ಮ ದೃಷ್ಟಿ ಪಥಕ್ಕೆ ಬಿದ್ದ ಎಲ್ಲಾ ಆತ್ಮರ ವಿಷಯದಲ್ಲೂ ಸಂತೋಷವಾಗಿರುವ ಸ್ವಭಾವವನ್ನು ಹೊಂದಿರೋಣವು, ನಮಗೆ ವಿರೋಧಿಗಳಾಗಿದ್ದರೂ ಅಂತವರನ್ನೂ ಕೂಡ ದ್ವೇಷಿಸದೆ ಸಂತೋಷಚಿತ್ತರಾಗಿರೋಣವು, ಇದು **ಸಮತಾ** ಯಿಂದ ಹುಟ್ಟುವ ಮನಸ್ಸಿನ ಭಾವವು. ೧೭. **ತಪಃ** ಎಂದರೆ **ಶಾಸ್ತ್ರೀಯೋ ಭೋಗಸಙ್ಕೋಚರೂಪಕಾಯಕ್ಲೇಶಃ** ಶಾಸ್ತ್ರದಲ್ಲಿ ಹೇಳಿರುವ ಅನುಷ್ಠಾನದ ಮೂಲಕವಾಗಿ ಭೋಗಕ್ಕೆ ಕುಂದಕ ಮಾಡಿಕೊಳ್ಳುವ ದೇಹ ಕ್ಲೇಶಕ್ಕೆ ಹೇತುವಾದ ಮನೋವ್ಯಾಪಾರವು, ಎಲ್ಲಾ ದೇಹಕ್ಲೇಶಗಳೂ ತಪಸ್ಸಾಗುವದಿಲ್ಲವು. ಶಾಸ್ತ್ರದಲ್ಲಿ ಹೇಳಿರುವಹಾಗೆ ಅನುಷ್ಠಿಸಿ ಕಾಯಕ್ಲೇಶವನ್ನುಂಟುಮಾಡುವದೀಗ ತಪಸ್ಸು ಎಂದು ತೋರಿಸುವದಕ್ಕಾಗಿ **ಶಾಸ್ತ್ರೀಯೋ** ಎಂಬ ಪ್ರಯೋಗವು; **ದಾನಂ** ಎಂದರೆ **ಸ್ವಕೀಯಭೋಗ್ಯಾನಾಂ ಪರಸ್ಮೈ ಪ್ರತಿಪಾದನಮ್**-ತನಗೆ ಭೋಗ್ಯವಾದವುಗಳನ್ನು ಇತರರ ಸ್ವತ್ತಾಗಿ ಮಾಡುವದು. ಇದರಿಂದ ಅದರಲ್ಲಿ ಪುನಃ ತನಗೆ ಯಾವವಿಧವಾದ ಸಂಬಂಧ ಸ್ವಾತಂತ್ರ್ಯವಿಲ್ಲವೆಂಬ ಭಾವವು; ಇದನ್ನು ತಿಳಿಸುವದಕ್ಕಾಗಿ **ನಮಮ** ಎಂದು ದಾನಕೊಟ್ಟ ಒಡನೆಯೇ ಹೇಳಲ್ಪಡುತ್ತದೆ. ಆದುದರಿಂದ ದಾನಕೊಟ್ಟುದುದರ ಪ್ರತಿಗ್ರಹವು ತುಂಬಾ ದೋಷವಾಗಿ ಭಾವಿಸಲ್ಪಟ್ಟಿರುತ್ತದೆ. ನೃಗೋಪಾಖ್ಯಾನದಲ್ಲಿ ಇದು ವ್ಯಕ್ತವು. ಇತರರು ತನ್ನಲ್ಲಿ ಇಟ್ಟಿರು ಎಂದು ಕೊಟ್ಟ ಹಣವನ್ನೂ ಕೊಡುವದೂ, ಇತರರು ಮಾರ್ಗದಲ್ಲಿ ಬೀಳಿಸಿಕೊಂಡುಹೋದ ಹಣವನ್ನು ತೆಗೆದು ಅನ್ಯರಿಗೆ ಕೊಡುವದೂ, ಕೂಡ ದಾನವಾಗುವದಿಲ್ಲವೆಂದು ತಿಳಿಸುವದಕ್ಕಾಗಿ ಸ್ವಕೀಯ ಶಬ್ದವು. ತನ್ನದೇಯಾಗಿದ್ದರೂ ಭೋಗ್ಯವಲ್ಲದ ಕೊಳೆತ ಬಾಳೇಹಣ್ಣು, ಹಳಸಿದ ಅನ್ನ ಮುಂತಾದವುಗಳನ್ನೂ ಕೊಡುವದೂ ದಾನವಾಗುವದಿಲ್ಲವೆಂದು ತಿಳಿಸುವದಕ್ಕಾಗಿ **ಭೋಗ್ಯಾನಾಂ** ಎಂಬ ಪದವು. ಕೊಟ್ಟನಂತರವೂ ಅದರಲ್ಲಿ ಸಂಬಂಧವಿದ್ದೋಣ

**ಭಾ. ಏತಚ್ಚೋಭಯಂ ತದನುಗುಣ ಮನೋವೃತ್ತಿದ್ವಯಂ ಮನ್ತವ್ಯಮ್, ತತ್ಪ್ರಕರಣಾತ್; ತಪೋದಾನೇಚ ತಥಾ; ಏವಮಾದ್ಯಾಸ್ಸರ್ವೇಷಾಂ ಭೂತಾನಾಂ ಭಾವಾಃ- ಪ್ರವೃತ್ತಿ ನಿವೃತ್ತಿ ಹೇತವೋ ಮನೋವೃತ್ತಯೋ, ಮತ್ತ ಏವ ಸಙ್ಕಲ್ಪಾಯತ್ತಾ ಭವನ್ತಿ ॥ ೫ ॥**

ವಿಷ್ಣುರೂ ದಾನವಾಗುವದಿಲ್ಲವೆಂದು ಹೇಳುವದಕ್ಕಾಗಿ **ಪರಸ್ಮೈಪ್ರತಿಪಾದನಂ** ಎಂಬ ಪ್ರಯೋಗವು. ೧೯. **ಯಶಃ** ಎಂದರೆ **ಗುಣವತ್ತಾ ಪ್ರಥಾ**-ಒಳ್ಳೇ ಗುಣವನ್ನು ಹೊಂದಿರುವ ಖ್ಯಾತಿಯು, ಶ್ಲಾಘನೆಯು. ೨೦. **ಅಯಶಃ**-ಅಂತಹ ಒಳ್ಳೇಗುಣವಿಲ್ಲವೆಂಬ ಪ್ರವಾದವು, **ಏತಚ್ಚೋಭಯಂ** - ಈ ಯಶೋಽಯಶವೆರಡೂ, **ತದನುಗುಣಮನೋವೃತ್ತಿದ್ವಯಂ ಮನ್ತವ್ಯಮ್**-ಅವೆರಡಕ್ಕೂ ಅನುಗುಣವಾದ ಮನಸ್ಸಿನ ಎರಡುವಿಧ ಭಾವಗಳೆಂದು ಭಾವಿಸತಕ್ಕದ್ದು; ಏಕೆಂದರೆ, **ತತ್ಪ್ರಕರಣಾತ್**-ಮನೋ ಭಾವಗಳನ್ನು ಹೇಳುವ ಪ್ರಕರಣವಾದುದರಿಂದ ಹೀಗೆ ಪ್ರಕರಣ ಸಙ್ಗತಿಗಳನ್ನು ಮನಸ್ಸಿನಲ್ಲಿಟ್ಟೇ ಅರ್ಥಮಾಡಿದರೆ ಸಮಂಜಸವಾದ ಅರ್ಥವು ದೊರೆಯುತ್ತದೆ. ಇಲ್ಲವಾದರೆ ವಿಪರೀತಾರ್ಥಗಳುಂಟಾಗುತ್ತವೆ. ಇಲ್ಲಿ ಹೇಗೆ ಮನೋಭಾವ ಪರವಾಗಿ ಅರ್ಥ ಹೇಳಲ್ಪಟ್ಟಿತೋ, **ತಪೋ ದಾನೇಚ ತಥಾ**- ಹಾಗೆಯೇ **ತಪಃ ದಾನಂ** ಎಂಬ ಶಬ್ದಗಳಿಗೂ ಅರ್ಥ ಹೇಳತಕ್ಕದ್ದು, ಎಂದರೆ ತಪಸ್ಸು ದಾನ ಇವುಗಳಿಗೆ ಅನುಗುಣವಾದ ಮನಸ್ಸಿನ ಭಾವವೆಂದು ಅರ್ಥ ಮಾಡತಕ್ಕದ್ದು. **ಏವ ಮಾದ್ಯಾಸ್ಸರ್ವೇಷಾಂ ಭೂತಾನಾಂ ಭಾವಾಃ**- ಇವೇ ಮೊದಲಾದ ಸಮಸ್ತ ಪ್ರಾಣಿಗಳ ಮನಸ್ಸಿನ ಭಾವಗಳು, **ಪ್ರವೃತ್ತಿ ನಿವೃತ್ತಿಹೇತವಃ**-ಕೆಲಸಗಳನ್ನು ಮಾಡುವದಕ್ಕೂ, ಅಥವಾ ಕೆಲಸಗಳಿಂದ ಹಿಂತೆಗೆಯುವವಕ್ಕೂ ಕಾರಣಗಳಾಗಿರುವ, **ಮನೋವೃತ್ತಯಃ**-ಮನೋಭಾವಗಳೆಲ್ಲವೂ, ಇಲ್ಲಿ ಎಷ್ಟೋ ಕೆಲವು ಮಾತ್ರ ಹೇಳಲ್ಪಟ್ಟವು, ಇವು ಇಂತಹ ಎಲ್ಲಾ ಮನೋಭಾವಗಳಿಗೂ ಉಪಲಕ್ಷಣವೆಂದು ಹೇಳುವದಕ್ಕಾಗಿ **ಏವ ಮಾದ್ಯಾಃ**- ಎಂಬ ಪ್ರಯೋಗವು: ಇವುಗಳೆಲ್ಲಾ **ಮತ್ತಏವ** ಎಂದರೆ **ಮತ್ಸಙ್ಕಲ್ಪಾಯತ್ತಾ ಭವಂತಿ**-ಎಲ್ಲಾ ಜಗತ್ಸೃಷ್ಟಿಗೂ ಕಾರಣಭೂತನಾಗಿ ಸರ್ವಕ್ಕೂ ಆತ್ಮನಾಗಿರುವ ನನ್ನ ಸಙ್ಕಲ್ಪಕ್ಕೆ ಅಧೀನವಾದವುಗಳಾಗುತ್ತವೆ. ಮನಸ್ಸಿನ ಭಾವಗಳೇ ಭಗವಂತನ ಅಧೀನವೆಂದು ಹೇಳಿದ ನಂತರ ಪ್ರವೃತ್ತಿ ನಿವೃತ್ತಿರೂಪ ವ್ಯಾಪಾರಗಳೂ ಆತನ ಅಧೀನವೇ ಎಂಬುದು ಕೈಮುತಿಕನ್ಯಾಯಸಿದ್ಧವೆಂದು ಹೇಳುವದಕ್ಕಾಗಿ, **ಪ್ರವೃತ್ತಿ ನಿವೃತ್ತಿ ಹೇತವಃ** ಎಂಬ ಪ್ರಯೋಗವು. ಇದು ಭಕ್ತಿಯೋಗ ಪ್ರಕರಣವಾದುದರಿಂದ ಪ್ರವೃತ್ತಿ ನಿವೃತ್ತಿ ಶಬ್ದಗಳು ಅಂತಹ ಧರ್ಮಗಳನ್ನು ಬೋಧಿಸುತ್ತವೆ ಎಂದೂ, ಆ ಕಾರಣದಿಂದ ಪ್ರವೃತ್ತಿ ಧರ್ಮಗಳಿಗೂ ನಿವೃತ್ತಿ ಧರ್ಮಗಳಿಗೂ ಕಾರಣಭೂತಗಳಾದ ಮನೋಭಾವಗಳೆಂದೂ, ಅರ್ಥಮಾಡಬಹುದು. ಅಥವಾ ಪ್ರವೃತ್ತಿ ಧರ್ಮಗಳು ಪುನಸ್ಸಂಸ್ಕೃತಿಗೆ ಕಾರಣಭೂತಗಳು, ನಿವೃತ್ತಿ ಧರ್ಮಗಳು ಮೋಕ್ಷಕ್ಕೆ ಕಾರಣಭೂತಗಳು, ಆದುದರಿಂದ ಪುನಸ್ಸಂಸಾರಕ್ಕೂ ಮುಕ್ತಿಪ್ರಾಪ್ತಿಗೂ ಕಾರಣಭೂತಗಳಾದವು ಮನೋಭಾವಗಳೆಂದು ಹೇಳಿದಂತಾಯಿತು. ಇದನ್ನೇ ಮೋಕ್ಷಧರ್ಮದಲ್ಲಿ ಶ್ರೀ ವ್ಯಾಸ ಭಗವಾನರವರು, **"ಪ್ರವೃತ್ತಿಃ ಪುನರಾವೃತ್ತಿಃ ನಿವೃತ್ತಿರ್ಪರಮಾಗತಿಃ"** ಎಂದು ಹೇಳಿರುತ್ತಾರೆ. ಶ್ರೀ ಪರಾಶರರು, ಮನಸ್ಸಿನ ಭಾವಗಳು ಹೇಗೆ ಬಂಧಮೋಕ್ಷಗಳಿಗೆ ಕಾರಣವೆಂಬುದನ್ನು **"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಙ್ಗೀ ಮುಕ್ತ್ಯೈ ನಿರ್ವಿಷಯಂ ಮನಃ"** ( ವಿ. ಪು. ೬. ೭. ೨೮ ) ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. ಮೇಲೆ ಹೇಳಿರುವ ಮನೋಭಾವಗಳಲ್ಲಿ ಕೆಲವು ಬಂಧಕ್ಕೂ ಕೆಲವು ಮುಕ್ತಿಗೂ ಹೇತು

**ಭಾ. ಅವ. ಸರ್ವಸ್ಯ ಭೂತಜಾತಸ್ಯ ಸೃಷ್ಟಿಸ್ಥಿತ್ಯೋಃ ಪ್ರವರ್ತಯಿತಾರಶ್ಚ ಮತ್ಸಙ್ಕಲ್ಪಾಯತ್ತ ಪ್ರವೃತ್ತಯ ಇತ್ಯಾಹ—**

**ಮೂ. ಮಹರ್ಷಯ ಸ್ಸಪ್ತ ಪೂರ್ವೇ ಚತ್ವಾರೋ ಮನವ ಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬ ॥**

ವಾದುದರಿಂದ **ಪ್ರವೃತ್ತಿ ನಿವೃತ್ತಿ ಹೇತವ** ಎಂಬ ಪ್ರಯೋಗವನ್ನು ಮಾಡಿರಬಹುದು. ಹೀಗೆ ಸರ್ವ ಚೇತನರ ಮನೋಭಾವಗಳೆಲ್ಲಾ ತನಗೆ ಅಧೀನವೆಂದು ಹೇಳಿರುವದರಿಂದ ಈತನ ಸರ್ವ ನಿಯಮನ ರೂಪ ಮಹದೈಶ್ವರ್ಯವು ಅಪಾರವಾದುದು ಎಂದು ಹೇಳಿದ ಹಾಗಾಗುವದರಿಂದ ಅರ್ಜುನನಿಗೆ ಭಕ್ತಿ ವೃದ್ಧಿಯುಂಟಾಗುವದೆಂಬುದು ನಿಸ್ಸಂದೇಹವಾಗಿ ಹೇಳಲ್ಪಟ್ಟಿತು ॥ ೪-೫ ॥

**ಭಾಷ್ಯಾವತಾರಿಕೆಯ ಅರ್ಥವು :— ಸರ್ವಸ್ಯ ಭೂತಜಾತಸ್ಯ** - ಸಮಸ್ತವಾದ ಅಚಿತ್ಸಂಸೃಷ್ಟವಾದ ಚೇತನ ವರ್ಗದ, **ಸೃಷ್ಟಿಸ್ಥಿತ್ಯೋಃ** - ಸೃಷ್ಟಿ ಸ್ಥಿತಿಗಳನ್ನು, ಈ ಮುಂದಿನ ಶ್ಲೋಕದಲ್ಲಿ ಸೃಷ್ಟಿಕ್ರಮವೇ ತೋರಿದರೂ, ಸೃಷ್ಟಿಯಾದಾಗ ಆಯಿತೋ ಒಡನೇ ಸ್ಥಿತಿಯುಂಟಾಗುವದರಿಂದಲೂ, ಮತ್ತು ಸಂತತ ಪರಂಪರೆಯೂ **ಇಮಾಃ ಪ್ರಜಾಃ** ಎಂಬುದರಿಂದ ತೋರಿಬರುವುದರಿಂದಲೂ, **ಸೃಷ್ಟಿಸ್ಥಿತ್ಯೋಃ** ಎಂಬ ಪ್ರಯೋಗವು. **ಪ್ರವರ್ತಯಿತಾರಶ್ಚ** — ನಡೆಸುವ ಚತುರ್ಮುಖ, ಆತನ ಮಾನಸ ಪುತ್ರರೇ ಮೊದಲಾದವರೆಲ್ಲರೂ, **ಮತ್ಸಙ್ಕಲ್ಪಾಯತ್ತ ಪ್ರವೃತ್ತಯಃ** - ನನ್ನ ಸಙ್ಕಲ್ಪಕ್ಕೆ ಅಧೀನವಾದ ಪ್ರವೃತ್ತಿಯುಳ್ಳವರೆಂದು ಮುಂದಿನ ಶ್ಲೋಕದಿಂದ ಹೇಳುತ್ತಾರೆ. ಪ್ರಕೃತಿಯ ವಿಕಾರಗಳೂ, ಪಂಚೀಕರಣ ಅಥವಾ ತ್ರಿವೃತ್ಕರಣ ಮೊದಲಾದ ಅಂಡ ಸೃಷ್ಟಿವರೆಗೂ ಸಮಷ್ಟಿ ಸೃಷ್ಟಿ ಎಂದು ಹೇಳಿಸಿಕೊಳ್ಳುವ ಸೃಷ್ಟಿಯು ಪರಮಾತ್ಮನೇ ನಡೆಸುತ್ತಾನೆ. ಅಂಡಸೃಷ್ಟಿಯಾದನಂತರ ಆಗುವ ಸೃಷ್ಟಿಮೊದಲಾದವುಗಳನ್ನು ಸಪರಿವಾರರಾದ ಬ್ರಹ್ಮರುದ್ರಾದಿಗಳ ಮೂಲಕ ನಡೆಸುತ್ತಾನೆ. ಇದಕ್ಕೆ ವ್ಯಷ್ಟಿ ಸೃಷ್ಟಿ ಎಂದು ಹೆಸರು. ಇಲ್ಲಿ **ಸೃಷ್ಟಿ ಸ್ಥಿತ್ಯೋಃ** ಎಂದು ಹೇಳಿರುವದು ವ್ಯಷ್ಟಿಸೃಷ್ಟ್ಯಾದಿಗಳನ್ನು ಕುರಿತೇ ಹೇಳಿದುದು. ಇವನ್ನು ಪ್ರವರ್ತಿಸುವವರು, ಬ್ರಹ್ಮನ ಮಾನಸ ಪುತ್ರರೂ ಪೌತ್ರರೂ; ಇವರುಗಳಿಗೆಲ್ಲಾ ಸರ್ವೇಶ್ವರನೇ ಆತ್ಮನಾಗಿ, ಇವರುಗಳು **"ಯಸ್ಯಾತ್ಮಾ ಶರೀರಂ" "ಯಸ್ಯ ಸರ್ವಾಣಿ ಭೂತಾನಿ ಶರೀರಂ"** (ಬೃ. ೫-೭-೨೨) ಇತ್ಯಾದಿ ಶ್ರುತಿಗಳ ಮೂಲಕ ಶರೀರವಾಗಿ ಅವನಿಗೆ ಮಾತ್ರವೇ ಅಧೀನರಾದುದರಿಂದ, **ಮತ್ಸಙ್ಕಲ್ಪಾಯತ್ತಪ್ರವೃತ್ತಯಃ** ಎಂದು ಹೇಳಲ್ಪಟ್ಟರು. ನಮ್ಮ ಕೈಕಾಲು ಚಕ್ಷುರಾದಿಗಳಿಗೆಲ್ಲಾ ಜೀವಾತ್ಮನಿಗೆ ಶರೀರವಾಗಿ ಹೇಗೆ ಜೀವಾತ್ಮ ಸಙ್ಕಲ್ಪಾಯತ್ತಗಳೋ, ಹಾಗೆ ಇವರುಗಳೆಲ್ಲಾ ಪರಮಾತ್ಮನಿಗೆ ಶರೀರವಾಗಿ ಆತನ ಸಙ್ಕಲ್ಪಾಧೀನರೆಂಬ ಭಾವವು. ಅವರುಗಳೆಲ್ಲಾ ಚತುರ್ಮುಖಬ್ರಹ್ಮನ ಸಙ್ಕಲ್ಪಕ್ಕೆ ಅಧೀನವಾದ ಸೃಷ್ಟಿಯುಳ್ಳವರು, ಅಂತವರು ಹೇಗೆ ಮತ್ಸಙ್ಕಲ್ಪಾಧೀನರೆಂದರೆ ಆ ಬ್ರಹ್ಮನಿಗೂ ನಾನು ಆತ್ಮಾ, ಆತನಿಂದುಂಟಾದ ಸರ್ವಪ್ರಾಣಿಗಳಿಗೂ ನಾನು ಆತ್ಮಾ, ಆದುದರಿಂದ ನಾನು **"ಸರ್ವಾತ್ಮಾ"** ಸರ್ವಕ್ಕೂ ಆತ್ಮನಾಗಿರುವದರಿಂದ **ಮತ್ಸಙ್ಕಲ್ಪಾಯತ್ತ** ಪ್ರವೃತ್ತಿಯುಳ್ಳವರೆಂದು ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು :— ಯೇಷಾಂ** - ಯಾವ ಈ ಸಪ್ತರ್ಷಿಗಳಿಗೂ ನಾಲ್ಕು ಮನುಗಳಿಗೂ ಕ್ರಮೇಣ, **ಲೋಕೇ** - ಈ ಲೋಕದಲ್ಲಿ, **ಇಮಾಃ ಪ್ರಜಾಃ** - ಈ ಪ್ರಜೆಗಳೆಲ್ಲರೂ ದಾಂಪತ್ಯ ಭಾವದಿಂದ ಮಕ್ಕಳಾಗಿ ಹುಟ್ಟಿರುವರೋ, ಅಂತಹ, **ಪೂರ್ವೇ**- ಕಳೆದ ಮನ್ವಂತರದಲ್ಲಿ, **ಸಪ್ತ ಮಹರ್ಷಯಃ** - ಬ್ರಹ್ಮನ ಮಾನಸ ಪುತ್ರರಾದ ಭೃಗ್ವಾದಿ ಸಪ್ತ ಮಹರ್ಷಿಗಳೂ **ಋಷ ಗತೌ** ಎಂಬ ವ್ಯುತ್ಪತ್ತಿಯಿಂದ ಮಹಾ ಜ್ಞಾನಸಿದ್ಧಿಗಳಾದುದರಿಂದ ಮಹರ್ಷಿಗಳು ಎಂದು ಹೇಳ

ಸ್ಪಿಡುವರೆಂಬ ಭಾವವು. **ಚತ್ವಾರೋ ಮನಸ್ತಥಾ** - ಹಾಗೆಯೇ ನಾಲ್ಕು ಸಾವರ್ಣಿಕ ಮನುಗಳೂ. **ಮದ್ಭಾವಾಃ** - ನನ್ನ ಸಙ್ಕಲ್ಪವನ್ನೇ ಅನುಸರಿಸಿರುವವರಾಗಿ, **ಮಾನಸಾ ಜಾತಾಃ** - ಮಾನಸ ಪುತ್ರರಾಗಿ ಹುಟ್ಟಿದವರು. ದಾಂಪತ್ಯಭಾವದಿಂದ ಹುಟ್ಟಿದವರಲ್ಲವೆಂಬ ಭಾವವು; ಲೋಕದಲ್ಲಿ ಯಾರು ಯಾರಿಗೆ ಯಾರು ಯಾರು ಕಾರಣಭೂತರಾಗಿ ತೋರಿದರೂ, ಅವರೆಲ್ಲರಿಗೂ ಮೂಲಕಾರಣಭೂತನು ನಾನೇ, ಎಂದು ಶ್ರೀಕೃಷ್ಣಭಗವಾನರವರ ಉಪದೇಶವು. ಈ ಶ್ಲೋಕದ ಮೂಲಕ ಹೇಗೆ ಲೋಕದ ಪ್ರಜಾಸೃಷ್ಟಿಯುಂಟಾಯಿತೆಂಬುದನ್ನು ತಿಳಿಸುವದರಿಂದ ತಮ್ಮ ಮಹತ್ತಾದ ವೈಭವವನ್ನು ಉಪದೇಶಿಸುತ್ತಾರೆ. ಚತುರ್ಮುಖನಿಂದ ಏಳು ಮಾನಸ ಪುತ್ರರು ಜನಿಸಿದರು ಎಂದು ಹೇಳಲ್ಪಟ್ಟಿತು. ಅವರು ಯಾರೆಂದರೆ "**ಬ್ರಹ್ಮಣಃ ಸಪ್ತವೈ ಪುತ್ರಾ ಮಹಾತ್ಮಾನಃ ಸ್ವಯಂಭುವಃ । ಮರೀಚಿ ರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ । ವಶಿಷ್ಠಶ್ಚ ಮಹಾಭಾಗಾಃ ಸದೃಶೋವೈ ಸ್ವಯಂಭುವಾ । ಸಪ್ತ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ**" ಎಂದು ಬ್ರಹ್ಮನ ಏಳು ಮಾನಸ ಪುತ್ರರೆಂದು ಹೇಳಿರುತ್ತದೆ. ಆದರೆ ವಿ. ಪು ೧-೭-೫-ರಲ್ಲಿ **ಭೃಗುಂ ಪುಲಸ್ತ್ಯಂ ಪುಲಹಂ ಕ್ರತು ಮಙ್ಗಿರಸನ್ತಥಾ । ಮರೀಚಿನ್ದಕ್ಷ ಮತ್ರಿಂಚ ವಸಿಷ್ಠಂಚೈವ ಮಾನಸಾನ್**" ಎಂದು ಹೇಳಲ್ಪಟ್ಟಿರುತ್ತದೆ. ಈ ಒಂಬತ್ತು ಮಾನಸ ಪುತ್ರರು ಚತುರ್ಮುಖನಿಂದ ಸೃಷ್ಟಿಸಲ್ಪಟ್ಟ ಒಂಬತ್ತು ಕನ್ನಿಕೆಯರನ್ನು ಮದುವೆಮಾಡಿಕೊಂಡು ಪ್ರಜೆಗಳನ್ನುಂಟುಮಾಡಿದರೆಂದು "**ಖ್ಯಾತಿಂಭೂತಿಂ ಚ ಸಂಭೂತಿಂ ಕ್ಷಮಾಂ ಪ್ರೀತಿಂ ತಥೈವಚ । ಸನ್ನತಿಂಚ ತಥೈವೋರ್ಜಾಂ ಮನಸೂಯಾಂ ತಥೈವಚ । ಪ್ರಸೂತಿಂಚ ತತಸ್ಸೃಷ್ಟ್ವಾದದೌ ತೇಷಾಂ ಮಹಾತ್ಮನಾಮ್**" ಇಲ್ಲಿನಾಲ್ವರು ಮನುಗಳು ಎಂಬುದರಿಂದ ಚತುರ್ಮುಖನ ದಿನದಲ್ಲಿ ಅಧಿಪತ್ಯವನ್ನು ವಹಿಸುವ ಚತುರ್ದಶ ಮನುಗಳು ಇಲ್ಲಿ ಹೇಳಲ್ಪಡುತ್ತದೆ. ಪ್ರಜಾಸೃಷ್ಟಿಕ್ರಮದಲ್ಲಿ ಉಪಯುಕ್ತರಾದನಾಲ್ಕು ಮನುಗಳು ಹೇಳಲ್ಪಟ್ಟರು. ಅವರು ಯಾರೆಂದರೆ ಬ್ರಹ್ಮ ಸಾವರ್ಣಿ, ರುದ್ರ ಸಾವರ್ಣಿ, ಧರ್ಮ ಸಾವರ್ಣಿ, ದಕ್ಷಸಾವರ್ಣಿ, ಎಂಬುದಾಗಿ. ಈ ಏಳು ಋಷಿಗಳಿಂದ ದಾಂಪತ್ಯ ಭಾವದಿಂದ ಅವರಗೋತ್ರದವರೆಂದು ಹೇಳಿಕೊಂಡು ಪ್ರಜೆಗಳು ಜನಿಸಿದರು. ಹಾಗೆಯೇ ಈ ನಾಲ್ಕು ಸಾವರ್ಣಿಕ ಮನುಗಳಿಂದಲೂ ಪ್ರಜೆಗಳುಉತ್ಪನ್ನರಾದರು. ಹೀಗೆ ಇವರುಗಳೂ, ಇವರಿಂದ ಜನಿಸಿದವರೂ ಎಲ್ಲರೂ **ಮದ್ಭಾವಾಃ** ನನ್ನ ಸಙ್ಕಲ್ಪಾಧೀನವಾದ ಮನೋವೃತ್ತಿಗಳನ್ನುಳ್ಳವರು, ಎಂದು ಹೇಳಲ್ಪಟ್ಟಿರುತ್ತದೆ. ಇದರಿಂದ ಎಲ್ಲಾ ಲೋಕವ್ಯಾಪಾರಗಳೆಲ್ಲಾ ನನ್ನ ಅಧೀನವೆಂದು ಹೇಳಲ್ಪಟ್ಟಿತು. ಚತುರ್ಮುಖ ಬ್ರಹ್ಮನಿಗೆ ಸನಕಾದಿಗಳೂ ನಾರದ ರುದ್ರಾದಿಗಳೆಲ್ಲರೂ ಪುತ್ರರಾಗಿರುವಾಗ ಅವರನ್ನೆಲ್ಲಾ ಹೇಳದೆ ಸಪ್ತಋಷಿಗಳನ್ನೂ ನಾಲ್ಕು ಮನುಗಳನ್ನೂ **ಮಾತ್ರ** ಹೇಳಲು ಕಾರಣ ವೇನೆಂದು ಪ್ರಶ್ನಿಸಿದರೆ, ಅವರುಗಳೆಲ್ಲಾ ಪ್ರಜಾ ಸೃಷ್ಟಿಕಾರ್ಯವನ್ನು ಕೈಕೊಳ್ಳದೇ ಭಗವಧ್ಯಾನದಲ್ಲಿ ಮಾತ್ರ ಆಸಕ್ತರಾದವರು. ಇವರುಗಳಾದರೋ ಪ್ರಜಾ ಸೃಷ್ಟ್ಯಾದಿ ಅಧಿಕಾರಗಳನ್ನು ಹೊಂದಿದವರು. **ಇಮಾಃ ಪ್ರಜಾಃ** ಎಂಬಲ್ಲಿಯೂ ಕೂಡ ಕೆಲವರು ಬ್ರಹ್ಮಚರ್ಯವನ್ನು ಮಾತ್ರವೇ ಯಾಗಲೀ ಅಥವಾ ಸನ್ಯಾಸವನ್ನೇಯಾಗಲೀ ಅವಲಂಬಿಸಿ ಪ್ರಜಾಸೃಷ್ಟಿಯ ಕೆಲಸವನ್ನು ವಹಿಸದೇ ಆಂಜನೇಯ ಭೀಷ್ಮಾದಿಗಳಹಾಗೆ ಇರಬಹುದು. ಅಂತವರೂ ಕೂಡ ಈ ಶ್ಲೋಕಕ್ಕೆ ಉದ್ದೇಶ್ಯರಲ್ಲವು ಎಂದು ತಿಳಿಯ ತಕ್ಕದ್ದು. ಇಲ್ಲಿ ಮುಖ್ಯವಾಗಿ ಜಗತ್ತಿನ ವ್ಯಾಪಾರಗಳು ಪ್ರವಾಹ ನಿತ್ಯವಾಗಿ ಹೇಗೆ ನಡೆಯುತ್ತದೆಂಬುದು ವಿಧೇಯಾಂಶವೆಂದು ಭಾವಿಸತಕ್ಕದ್ದು. ಹಿಂದೆ (೯. ೯. ೧೦.) ಶ್ಲೋಕದಲ್ಲಿ "**ಜಗದ್ವಿಪರಿವರ್ತತೇ**" ಎಂದು ಸೂಕ್ಷ್ಮವಾಗಿ ಹೇಳಿದುದನ್ನೇ ಇಲ್ಲಿ ವಿಸ್ತರಿಸಿ ಉಪದೇಶಿಸಿರುತ್ತಾರೆಂದು ಭಾವಿಸತಕ್ಕದ್ದು. ಇಲ್ಲಿ ಪ್ರಳಯದವ

ಭಾ. **ಪೂರ್ವೇ ಸಪ್ತ ಮಹರ್ಷಯಃ - ಅತೀತ ಮನ್ವಂತರೇ ಯೇ ಭೃಗ್ವಾದ್ಯಯಃ ಸಪ್ತ ಮಹರ್ಷಯೋ ನಿತ್ಯಸೃಷ್ಟಿ ಪ್ರವರ್ತನಾಯ ಬ್ರಹ್ಮಣೋ ಮನಸ್ಸಂಭವಾಃ, ನಿತ್ಯಸ್ಥಿತಿಪ್ರವರ್ತನಾಯ, ಯೇ ಚ ಸಾವರ್ಣಿಕಾ ನಾಮ ಚತ್ವಾರೋ ಮನವಃ ಸ್ಥಿತಾಃ, ಏಷಾಂ ಸಂತಾನ ಮಯೇ ಲೋಕೇ ಜಾತಾ ಇಮಾ ಸ್ಸರ್ವಾಃ ಪ್ರಜಾಃ ಪ್ರತಿಕ್ಷಣ ಮಾಪ್ರಲಯಾದ ಪತ್ಯಾನಾ ಮುತ್ಪಾದಕಾಃ ಪಾಲಕಾಶ್ಚ ಭವಂತಿ ; ತೇ ಭೃಗ್ವಾದಯೋ ಮನವಶ್ಚ, ಮದ್ಭಾವಾಃ ಮಮಯೋ ಭಾವಃ, ಸ ಏವ ಯೇಷಾಂ ಭಾವಃ ತೇ ಮದ್ಭಾವಾಃ ಮನ್ಮತೇ ಸ್ಥಿತಾಃ- ಮತ್ಸಙ್ಕಲ್ಪಾನುವರ್ತಿನ ಇತ್ಯರ್ಥಃ ॥ ೬ ॥**

ರೆಗೂ ಆಗುವ ಸೃಷ್ಟಿಸ್ಥಿತಿಗಳು ಹೇಳಲ್ಪಟ್ಟಿರುವವರಿಂದ. ಸೃಷ್ಟಿಯಾದುದು ಪ್ರಳಯವನ್ನು ಹೊಂದದೇ ಇರುವದಿಲ್ಲವಾದುದರಿಂದ ಚತುರ್ಮುಖ ರುದ್ರ ಮತ್ತು ಆತನ ಪರಿವಾರವೂ, ಹಾಗೆಯೇ ಇತರ ಬ್ರಹ್ಮಾಂಡಗಳ ಬ್ರಹ್ಮರುದ್ರರೂ ಇವರುಗಳ ಮೂಲಕ ನಡೆಯುವ ಪ್ರಳಯವೂ ಕೂಡ ನನ್ನ ಸಙ್ಕಲ್ಪಾಧೀನವೆಂದೂ ಹೇಳಿದಂತಾಯಿತು. ಸೃಷ್ಟಿಯನ್ನು ಹೇಳಿದುದ ಪ್ರಲಯಕ್ಕೂ ಉಪಲಕ್ಷಣವನ್ನಾಗಿ ಇಟ್ಟುಕೊಳ್ಳತಕ್ಕದ್ದು. ಪ್ರಳಯವು ನಾಲ್ಕು ವಿಧವೆಂದು ಪ್ರಾಪ್ತಸ್ಥಳದಲ್ಲಿ ವಿವರಿಸುವೆವು.

**ಭಾಷ್ಯಾರ್ಥವು:**— ಸೃಷ್ಟಿಸ್ಥಿತಿ ಲಯಾಧಿಕಾರಿಗಳಾಗಿ ಎಷ್ಟು ದೊಡ್ಡ ಹೆಸರುಗಳನ್ನು ಹೊಂದಿದ್ದರೂ, ಅವರುಗಳೂ ಕೂಡ ನನ್ನ ಸಙ್ಕಲ್ಪಕ್ಕೆ ಅಧೀನರೇ ಎಂದು ಭಾವಿಸತಕ್ಕದ್ದೇ; ಸರ್ವರೂ ನನ್ನ ಸಙ್ಕಲ್ಪದಿಂದಲೇ ಹುಟ್ಟಿದವರೆಂದು ಪ್ರಥಮತಃ ತಿಳಿಸುತ್ತಾರೆಂದು ವ್ಯಾಖ್ಯಾನ ಬರೆಯುತ್ತಾರೆ. **ಪೂರ್ವೇ** ಎಂದರೆ **ಅತೀತ ಮನ್ವಂತರೇ** – ಕಳೆದ ಮನ್ವಂತರದಲ್ಲಿ, **ಸಪ್ತ ಮಹರ್ಷಯಃ** ಎಂದರೆ **ಭೃಗ್ವಾದಯ ಸ್ಸಪ್ತಮಹರ್ಷಯಃ**– ಭೃಗುವೇ ಮೊದಲಾದ ಏಳು ಮಹರ್ಷಿಗಳೂ, **ನಿತ್ಯಸೃಷ್ಟಿಪ್ರವರ್ತನಾಯ** - ಈ ಸೃಷ್ಟಿಯು ಪ್ರವಾಹತಃ ನಿತ್ಯವಾಗಿರುವ ಹಾಗೆ ಪ್ರವರ್ತಿಸುವದಕ್ಕಾಗಿ, **ಬ್ರಹ್ಮಣಃ** - ಚತುರ್ಮುಖ ಬ್ರಹ್ಮನ, **ಮನಸ್ಸಂಭವಾಃ** - ಮನಸ್ಸಿನಿಂದ ಹುಟ್ಟಿದವರು, ತಂದೆತಾಯಿಗಳ ದಾಂಪತ್ಯಭಾವದಿಂದ ಹುಟ್ಟಿದವರಲ್ಲವೆಂಬ ಭಾವವು, ಮತ್ತು **ನಿತ್ಯಸೃಷ್ಟಿ ಪ್ರವರ್ತನಾಯ** – ವಿಷ್ಣು ಪುರಾಣದಲ್ಲಿ **"ನಿತ್ಯ ಸರ್ಗಸ್ಯ ಹೇತವಃ"** ಎಂದು ಹೇಳಿರುವಹಾಗೆ, ಪ್ರವಾಹತಃ ನಿತ್ಯವಾದ ಈ ಪ್ರಾಣಿಗಳ ಉತ್ಪತ್ತಿಯನ್ನು ಪ್ರವರ್ತಿಸುವದಕ್ಕಾಗಿ, **ಯೇ ಚ ಸಾವರ್ಣಿಕಾನಾಮಾ** – ಯಾವ ಸಾವರ್ಣಿಕರೆಂದು ಹೆಸರುಳ್ಳ, **ಚತ್ವಾರೋ ಮನವಃ** – ನಾಲ್ಕು ಮನುಗಳೂ, **ಸ್ಥಿತಾಃ**–ಇರುತ್ತಾರೋ, **ಯೇಷಾಂ** – ಯಾವ ಈ ಏಳು ಬ್ರಹ್ಮಪುತ್ರರ ಮತ್ತು ಈ ನಾಲ್ಕು ಮನುಗಳ, **ಸಂತಾನ ಮಯೇ ಲೋಕೇ** – ಪಿತಾ, ಪುತ್ರ, ಪೌತ್ರರೂಪದಿಂದ ಸಂತಾನವು ವೃದ್ಧಿಯಾಗಿರುವ ಲೋಕದಲ್ಲಿ, **ಜಾತಾಃ** – ಹುಟ್ಟಿದ, **ಇಮಾ. ಪ್ರಜಾಃ** – ಈ ಪ್ರಾಣಿಗಳು ಎಂದರೆ ಈಗ ಕಣ್ಣಿಗೆ ತೋರುವ ಪ್ರಜೆಗಳು ಮಾತ್ರವೇ ಇದರಿಂದ ಹೇಳಲ್ಪಡಲಿಲ್ಲವು; ಮುಂದೆ ಹುಟ್ಟುವ ಪ್ರಜೆಗಳನ್ನೂ ಸೇರಿಸಿ ಹೇಳಲ್ಪಟ್ಟಿತೆಂದು ಭಾವಿಸಿ. ಆದುದರಿಂದ ಪುತ್ರ, ಪೌತ್ರಾದಿರೂಪದಲ್ಲಿ ಜನಿಸುವ ಪ್ರಜೆಗಳೆಲ್ಲಾ ಎಂಬ ಭಾವವು. ಇದರಲ್ಲೇ ಇತರ ಪ್ರಾಣಿಗಳೂ ಸಹ ಅಂತರ್ಗತರೇ. **ಪ್ರತಿಕ್ಷಣ ಮಾಪ್ರಲಯಾ ದಪತ್ಯಾನಾ ಮುತ್ಪಾದಕಾಃ** - ಪ್ರತಿಕ್ಷಣದಲ್ಲೂ ಪ್ರಲಯ ಉಂಟಾಗುವವರೆಗೂ ಮಕ್ಕಳನ್ನು ಪಡೆಯುವವರಾಗಿಯೂ, **ಪಾಲಕಾಶ್ಚ** - ಆ ಮಕ್ಕಳನ್ನು ಪೋಷಿಸುವವರಾಗಿಯೂ ಸಹ, **ಭವಂತಿ** - ಆಗುವರೋ, **ತೇ** - ಅಂತಹ, **ಭೃಗ್ವಾದಯಃ** - ಭೃಗುವೇ ಮೊದಲಾದ ಸಪ್ತರ್ಷಿಗಳೂ, ಮನುಗಳೂ ಸಹ, **ಮದ್ಭಾವಾಃ** ಎಂದರೆ **ಮಮ ಯೋ ಭಾವ. .**

ನನ್ನದು ಯಾವ ಸಙ್ಕಲ್ಪವೋ, **ಸ ಏವ** - ಅದೇ, **ಯೇಷಾಂ** - ಯಾವ ಸಪ್ತರ್ಷಿ ಮನುಗಳ, **ಭಾವಃ** - ಸಙ್ಕಲ್ಪವೋ, **ತೇ** - ಅಂತಹವರು, **ಮದ್ಭಾವಾಃ** - ಎಂದೆನಿಸುವವರು, ತಾತ್ಪರ್ಯವೇನೆಂದರೆ, **ಮನ್ಮತೇ ಸ್ಥಿತಾಃ** - ನನ್ನ ಅಭಿಪ್ರಾಯಕ್ಕನುಸಾರವಾಗಿ ವರ್ತಿಸುವವರು, **ಮತ್ಸಙ್ಕಲ್ಪಾನುವರ್ತಿನ ಇತ್ಯರ್ಥಃ** - ನನ್ನ ಸಙ್ಕಲ್ಪವನ್ನು ಅನುವರ್ತಿಸಿ ನಡೆಯುವವರು ಎಂಬ ಅಭಿಪ್ರಾಯವು. **ಯೇಷಾಂ ಲೋಕೇ ಇಮಾಃ ಪ್ರಜಾಃ** ಎಂಬಲ್ಲಿ ಯಚ್ಛಬ್ದವು, ಇವೆಲ್ಲವೂ ಪುರಾಣಗಳಲ್ಲಿ ಪ್ರಸಿದ್ಧವಾದುದೆಂದೂ, ಸೂಚಿಸುತ್ತದೆ. ಏಕೆಂದರೆ **"ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ"** ಎಂಬ ಪ್ರಮಾಣವಾಕ್ಯವಿರುವದರಿಂದ, ಹಾಗೆ ಭಾವಿಸಬಹುದು. ಶ್ರೀ ಯತಿವರ್ಯರು **ಸಪ್ತರ್ಷಯಃ** ಎಂಬುದಕ್ಕೆ ಭೃಗ್ವಾದಿ ಸಪ್ತರ್ಷಿಗಳೆಂದು ವ್ಯಾಖ್ಯಾನ ಮಾಡಿರುವದು, ಮೇಲೆ ಉದಾಹರಿಸಿರುವ ಶಾಂತಿಪರ್ವದ ವಾಕ್ಯದರೀತ್ಯಾ ಅಲ್ಲವೆಂದು ತೋರುತ್ತದೆ. ಏಕೆಂದರೆ ಅಲ್ಲಿ **ಭೃಗುವಿನ** ಹೆಸರೇ ಇಲ್ಲವು. ಶ್ರೀ ಪರಾಶರರ **"ನವಬ್ರಹ್ಮಾಣಃ"** ಎಂಬ ವಾಕ್ಯದಲ್ಲಿ ಉಂಟು. ಆದರೆ ಒಂಬತ್ತು ಎಂದು ಹೇಳಿದ್ದರೂ ಆ ಪ್ರಮಾಣವನ್ನನುಸರಿಸಿ ಏಳು ಮಹರ್ಷಿಗಳನ್ನು ಮಾತ್ರವನ್ನೇ ಅಙ್ಗೀಕರಿಸಿರಬಹುದು. ಸಂಧ್ಯಾವಂದನಾದಿಗಳಲ್ಲಿ ಅಙ್ಗನ್ಯಾಸ ಕರನ್ಯಾಸ ಪ್ರಕರಣದಲ್ಲಿ **"ಬ್ರಹ್ಮಋಷಿಃ, ಅತ್ರಿಭೃಗು ಕುತ್ಸ ವಸಿಷ್ಠ ಗೌತಮ ಕಾಶ್ಯಪಾಂಗೀರಸಋಷಯಃ"** ಎಂದಿರುವದರಿಂದ ಇದನ್ನೇನಾದರೂ ಮನಸ್ಸಿನಲ್ಲಿಟ್ಟು, **ತೇ ಭೃಗ್ವಾದಯಃ** ಎಂದು ಭಾಷ್ಯ ಬರೆದಿರಬಹುದೇ ಎಂದು ಯೋಚಿಸಬಹುದು. ಅಥವಾ ಹಿಂದೆ **"ಮಹರ್ಷೀಣಾಂ ಭೃಗುರಹಮ್"** ಎಂಬ ವಾಕ್ಯಾನುಸಾರ ಭೃಗುವಿಗೆ ಪ್ರಾಧಾನ್ಯವು ಹೇಳಲ್ಪಟ್ಟಿರುವದರಿಂದ **ಮಹರ್ಷಯಃ** ಎಂಬುದಕ್ಕೆ **ಭೃಗ್ವಾದಯಃ** ಎಂಬ ಯತಿವರ್ಯರ ವ್ಯಾಖ್ಯಾನವೆಂದೂ ಊಹಿಸಬಹುದು. ಸುಬಾಲೋಪನಿಷತ್ತಿನಲ್ಲಿಯೂ **"ಸ ಮಾನಸಾನ್ ಸಪ್ತಪುತ್ರಾನಸೃಜತ"** ಎಂದು ಚತುರ್ಮುಖನಿಗೆ ೭ ಮಾನಸಪುತ್ರರೆಂದು ಹೇಳಲ್ಪಟ್ಟಿರುತ್ತದೆ. ಭಾಗವತದಲ್ಲಿ ಹೇಳಿರುವದೇನೆಂದರೆ—

**ಅಥಾಭಿಧ್ಯಾಯತ ಸ್ಸರ್ಗಂ ದಶಪುತ್ರಾ ಪ್ರಜಜ್ಞಿರೇ । ಭಗವಚ್ಛಕ್ತಿಯುಕ್ತಸ್ಯ ಲೋಕಸಂತಾನಹೇತವ ॥ ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ । ಭೃಗುರ್ವಸಿಷ್ಠೋ ದಕ್ಷಶ್ಚ ದಶಮಸ್ತತ್ರ ನಾರದ**

ಹೀಗೆ ಹತ್ತುಮಕ್ಕಳನ್ನು ಹೇಳಿರುವದು ಹಿಂದಿನ ಪ್ರಮಾಣಗಳಿಗೆ ವಿರೋಧವೆಂದು ಭಾವಿಸತಕ್ಕದ್ದಲ್ಲವು. ದಕ್ಷನಾರದಾದಿಗಳನ್ನು ಸೇರಿಸಿ ಹತ್ತು ಎಂದು ಇಲ್ಲಿ ಹೇಳಲ್ಪಟ್ಟವು. ಇದರಲ್ಲಿ ಭೃಗುವು ಹೇಳಲ್ಪಟ್ಟಿರುತ್ತಾರೆ. ಇವರುಗಳು ಹೇಗೆ ಚತುರ್ಮುಖ ಶರೀರದಿಂದ ಹುಟ್ಟಿದರೆಂಬುದು ಮುಂದೆ ಹೇಳಲ್ಪಡುತ್ತದೆ.

**ಉತ್ಸಙ್ಗಾನ್ನಾರದೋ ಜಜ್ಞೇ ದಕ್ಷೋಽಙ್ಗುಷ್ಠಾತ್ ಸ್ವಯಂಭುವಃ । ಪ್ರಾಣಾದ್ವಸಿಷ್ಠಸ್ಸಂಭೂತೋ ಭೃಗುಸ್ತ್ವಚಿ ಕರಾತ್ಕ್ರತುಃ ॥ ಪುಲಹೋ ನಾಭಿತೋ ಜಜ್ಞೇ ಪುಲಸ್ತ್ಯಃ ಕರ್ಣಯೋರ್ಋಷಿಃ । ಅಙ್ಗಿರಾ ಮುಖತೋಽಕ್ಷ್ಣೋಽತ್ರಿ ರ್ಮರೀಚಿ ರ್ಮನಸೋಽಭವತ್ ॥**

ಎಂಬುದಾಗಿರುತ್ತದೆ. ಹೀಗೆ ಮಾನಸ ಸೃಷ್ಟಿಯಿಂದ ಜಗತ್ಸೃಷ್ಟಿ ತೃಪ್ತಿಕರವಾಗದೆ, ಚತುರ್ಮುಖನು ದಾಂಪತ್ಯ ಭಾವದಿಂದ ಸೃಷ್ಟಿಯನ್ನುಂಟುಮಾಡಲು ಪ್ರಯತ್ನಿಸಿದನೆಂಬ ಇತಿಹಾಸಾನುಗುಣವಾಗಿ **"ಸಂತಾನಮಯೇ ಲೋಕೇ"** ಎಂಬುದಾಗಿ ಶ್ರೀ ಯತಿವರ್ಯರ ವ್ಯಾಖ್ಯಾನವು. ಇವೆಲ್ಲಾ ಅನೇಕ ಪುರಾಣಗಳಲ್ಲಿ ಉಪಬೃಂಹಿತವು. **ಯೇಷಾಂ ಲೋಕೇ** ಎಂದು ಏಕೆ ಹೇಳಲ್ಪಟ್ಟಿತೆಂದರೆ ಈ ಸಪ್ತರ್ಷಿಗಳನ್ನು ಮತ್ತು ಈ ಮನುಗಳನ್ನು ಮೂಲಮಾಡಿಕೊಂಡು ಜಗತ್ತಿನ ಪ್ರಜಾಸೃಷ್ಟಿಯೆಲ್ಲಾ ತನ್ನ ಸಙ್ಕಲ್ಪಾನುಸಾರ ದಾಂಪತ್ಯಭಾವದಿಂದ ನಡೆಯಿತಾದುದರಿಂದ ಹಾಗೆ ಪ್ರಯೋಗವು, ಮೊದಲು ಮಾತ್ರ ಉತ್ಪತ್ತಿಯು ಮಾನಸವಾಗಿ ಇವರುಗಳೆಲ್ಲಾ ಜನಿಸಿ

ದುದರಿಂದ **ಮಾನಸಾಜಾತಾಃ** ಎಂದು ಮೂಲದಲ್ಲಿ ಹೇಳಲ್ಪಟ್ಟಿತು. ಇದಕ್ಕೆ ವ್ಯತಿರಿಕ್ತವಾದ ದಾಂಪತ್ಯದಿಂದುಂಟಾದ ಜನ್ಮವನ್ನು, **ಇಮಾಃ ಪ್ರಜಾಃ** ಎಂಬುದರಿಂದ ಹೇಳಲ್ಪಟ್ಟಿತು. ಪ್ರಲಯದ ವರೆಗೂ ಜನ್ಮವನ್ನೆತ್ತುವ ಪ್ರಾಣಿಗಳ ವಿಷಯದಲ್ಲಿ, **ಇಮಾಃ** ಎಂಬ ಶಬ್ದ ಪ್ರಯೋಗದಿಂದ, ಈ ಲೋಕದ ಜನ್ಮಕ್ಕೆಲ್ಲಾ ಮಿಥುನರೂಪ ದಾಂಪತ್ಯವೇ ಕಾರಣವೆಂಬುದು ಸ್ಪಷ್ಟವಾದುದರಿಂದ **ಸಂತಾನಮಯೋ ಲೋಕೇ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಶ್ರೀ ಪರಾಶರರು ಈ ಅಭಿಪ್ರಾಯವನ್ನೇ **" ತತಃ ಪ್ರಭೃತಿ ಮೈತ್ರೇಯ ಪ್ರಜಾ ಮೈಥುನ ಸಂಭವಾಃ ಸಙ್ಕಲ್ಪಾದ್ದರ್ಶನಾತ್ಸ್ಪರ್ಶಾತ್ ಪೂರ್ವೇಷಾಮಭವನ್ ಪ್ರಜಾಃ "** (ವಿ. ಪು. ೧ ೧೫. ೭೯) ಎಂಬಲ್ಲಿ ಉಪದೇಶಿಸಿರುತ್ತಾರೆ. ಹೀಗೆ ಲೋಕವನ್ನೆಲ್ಲಾ ಮನುಷ್ಯನ ಜನ್ಮ ಒಂದರಲ್ಲೇ ಒಂದು ದಿನದಲ್ಲೇ ಅನೇಕರು ಹುಟ್ಟುತ್ತಾರೆ, ಅನೇಕ ಜನರು ಸಾಯುತ್ತಾರೆ. ಇದೂ ಅಲ್ಲದೆ ಮನುಷ್ಯರಲ್ಲದೆ ಇನ್ನೂ ಅನೇಕ ವಿಧ ದೇವ, ತಿರ್ಯಜ್, ಸ್ಥಾವರ ಸೃಷ್ಟಿಗಳಿರುವುದರಿಂದ ಪ್ರತಿ ಕ್ಷಣವೂ ಪ್ರಲಯದ ವರೆಗೂ ಸೃಷ್ಟಿ ಕರ್ಮವು ನಿತ್ಯವಾಗಿ ಪ್ರತಿ ಕ್ಷಣವೂ ನಡೆಯುವುದರಿಂದ **ನಿತ್ಯಸೃಷ್ಟಿ ಪ್ರವರ್ತನ** ವೆಂಬ ಮತ್ತು **ಪ್ರತಿ ಕ್ಷಣ ಮಾಪ್ರಲಯಾತ್** ಇತ್ಯಾದಿ ಪ್ರಯೋಗಗಳ ಸಾಮಂಜಸ್ಯವು ವ್ಯಕ್ತ ಪಡುತ್ತದೆ. **ಮದ್ಭಾವಾ** ಎಂದರೆ ನನ್ನ ಸಙ್ಕಲ್ಪಾನುಸಾರ ಸೃಷ್ಟಿಯನ್ನುಂಟು ಮಾಡುವವರು ಎಂದು ಹೇಳಿಬಿಟ್ಟರೆ, ಕರುಣಾಸಾಗರನಾದವನು ಹೀಗೆ ಪ್ರಜೆಗಳಲ್ಲಿ ಕೆಲವರನ್ನು ರಾಜ್ಯಾದಿ ಆಡಳಿತದಲ್ಲೂ ಕೆಲವರನ್ನು ದಾಸ್ಯ ವೃತ್ತಿಯಲ್ಲೂ, ಕೆಲವರನ್ನು ಸುಖಿಗಳನ್ನಾಗಿಯೂ ಕೆಲವರನ್ನು ದುಃಖಭಾಕ್ಕುಗಳನ್ನಾಗಿಯೂ. ಕೆಲವರನ್ನು ಐಶ್ವರ್ಯಯುಕ್ತರನ್ನಾಗಿಯೂ ಕೆಲವರನ್ನು ದರಿದ್ರರನ್ನಾಗಿಯೂ ಕೆಲವರನ್ನು ಬ್ರಹ್ಮವಿತ್ತುಗಳಾಗಿ ಜ್ಞಾನನಿಧಿಗಳನ್ನಾಗಿಯೂ ಕೆಲವರನ್ನು ಹಿಂಸಾದಿ ಕ್ರೂರ ಕರ್ಮಗಳಲ್ಲಿ ಅಭಿರುಚಿಯುಳ್ಳವರನ್ನಾಗಿಯೂ ಸಙ್ಕಲ್ಪಿಸಿ ಸೃಷ್ಟಿಸುವ ಹಾಗೆ ಮಾಡಬಹುದೋ ಎಂಬ ಶಙ್ಕೆ ಉತ್ಪನ್ನವಾಗಬಹುದು. ಇಂತಹ ವಿಷಮ ಸೃಷ್ಟಿಗೆ ತಾನೇ ಸರ್ವಕಾರಣನಲ್ಲವೆಂದು ೮ ನೆಯ ಅಧ್ಯಾಯ ೧೯ ನೆಯ ಶ್ಲೋಕದಲ್ಲಿ ಉಪಪಾದಿತವು. ಇಂತಹ ವಿಷಮಸೃಷ್ಟಿರೂಪವಾದ ದೇವ, ಮನುಷ್ಯ ತಿರ್ಯಜ್ ಸ್ಥಾವರ ಸೃಷ್ಟಿರೂಪವಾದ ಭೂತ ಗ್ರಾಮವನ್ನು ನಾನೇ ನನ್ನ ಸಙ್ಕಲ್ಪ ಮೂಲಕ **" ವಿಸೃಜಾಮಿ ಪುನಃ ಪುನಃ "** ಹೀಗೆ ಮಾಡುವುದರಿಂದ ತನಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳೇನೂ ಇಲ್ಲವೆಂದು ಅದರ ಮುಂದಿನ ಶ್ಲೋಕದಲ್ಲಿ, ತಾನು ಹಾಗೆ ಸಙ್ಕಲ್ಪಿಸಿ ನಡೆಯುವುದು ಸ್ವತಂತ್ರಿಸಿ ಅಲ್ಲವು; ಕ್ಷೇತ್ರಜ್ಞರ ಕರ್ಮಾನುಗುಣವಾಗಿ ಸಙ್ಕಲ್ಪಿಸಿ ನಡೆಸುವುದರಿಂದ, ತನಗೆ ಯಾವ ವಿಧವಾದ ಆಕ್ಷೇಪಣೆಯೂ ಇಲ್ಲವೆಂದು ವ್ಯಕ್ತವಾಗಿ ಹೇಳುತ್ತಾರೆ. ಆದುದರಿಂದ ಅವರೆಲ್ಲಾ **ಮದ್ಭಾವಾಃ** ನಡೆಸುವರು ಎಂದು ಹೇಳಿರುವುದರಿಂದ ಯಾವವಿಧವಾದ ವಿರೋಧವೂ ಇಲ್ಲವು. **ಮದ್ಭಾವಾಃ** ಎಂದರೆ **ಮನ್ಮತೇ ಸ್ಥಿತಾಃ** ಎಂಬ ವ್ಯಾಖ್ಯಾನವು ಹೇಗೆ? ಎಂದರೆ ದಾಸಭೂತರು ಪ್ರಭುವಿನ ಆಜ್ಞಾನುವರ್ತಿಗಳಾದುದರಿಂದ ಪರಮಾತ್ಮ ಸಙ್ಕಲ್ಪಾನುಸಾರವೇ ಅವರ ಸಙ್ಕಲ್ಪವೂ ಸಹ ಎಂಬ ಭಾವನೆಯಿಂದ ಹಾಗೆ ವ್ಯಾಖ್ಯಾನವು. ಇದರಿಂದ ಶ್ರೀ ಕೃಷ್ಣಭಗವಾನರವರ ನಿಯಾಮ್ಯ ವರ್ಗವೂ ಅದ್ಭುತವಾದುದು. ಅವರ ನಿಯಮನ ಶಕ್ತಿಯೂ ಅದ್ಭುತವಾದುದು. ಎಂದು ತಿಳಿಸಿದರು. ಹೀಗೆ ಪರಮಾಶ್ಚರ್ಯಯುಕ್ತವಾದುದು ತನ್ನ **ಲೋಕ ಮಹೇಶ್ವರತ್ವ** ವೆಂದು ಉಪದೇಶಿಸಿದರು || ೬ ||

**ಮೂಲಕ್ಕೆ ಅರ್ಥವು:—** ಹಿಂದಿನ ಶ್ಲೋಕದಲ್ಲಿ ಲೀಲಾ ವಿಭೂತಿಯ ಸೃಷ್ಟಿ ಸ್ಥಿತಿಗಳು ಹೇಗೆ ಪ್ರಳಯದವರೆಗೂ ತನ್ನ ಸಙ್ಕಲ್ಪ ಮೂಲಕವೇ ನಡೆಯುತ್ತವೆ ಎಂದು ಹೇಳುವುದರಿಂದ ಪ್ರಾಪ್ತವಾದ ಮಹಾತ್ಮ್ಯೆಯಿಂದಲೂ, ಮತ್ತು ನಿರತಿಶಯ ಕಲ್ಯಾಣ ಗುಣಗಳಿಗೆ ಆಕರನೆಂದು ಆಯಾ ಪ್ರಾಪ್ತಸ್ಥಳಗಳಲ್ಲಿ ತನಗೆ ಅದ್ಭುತವಾದ ಅಪ್ರಯೋಜಿತ ಗುಣಗಳವೆ ಎಂದು ಹೇಳಿದ

**ಮೂ. ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪ್ಯೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭.**

ಮಾಹಾತ್ಮ್ಯಯಿಂದಲೂ, ತನಗೆ ಅಪಾರವಾದ ಅತಿಶಯವುಂಟೆಂದೂ, ಇಂತಹ ಪಾರಮೈಶ್ವರ್ಯಕ್ಕೂ ಕಲ್ಯಾಣಗುಣಾಕರತ್ವಕ್ಕೂ ಮೂಲಕಾರಣವು ತನಗಿರುವ ಲಕ್ಷ್ಮೀ ವಿಶಿಷ್ಟತೆಯೆಂದೂ ಹೇಳಿ, ಇಂತಹ ಮಹತ್ತರಗಳಾದ ಪಾರಮೈಶ್ವರ್ಯದ ಮತ್ತು ಯೋಗದ ಸರಿಯಾದ ಜ್ಞಾನದಿಂದ ಭಕ್ತಿ ಯೋಗದ ಅಭಿವೃದ್ಧಿಯುಂಟಾಗುವದರಲ್ಲಿ ಸಿಸ್ಸಂದೇಹವೆಂದು ಹೇಳುತ್ತಾರೆ. **ಮಮ-ಸರ್ವಜ್ಞತ್ವ**, ಸೌಲಭ್ಯ, ಸೌಶೀಲ್ಯಾದಿ ಆಶ್ರಯಣೋಚಿತ ಗುಣಗಳುಳ್ಳ ನನ್ನ, **ಏತಾಂ ವಿಭೂತಿಂ**- ಇಂತಹ ಅಪಾರವಾದ ನಿಯಾಮ್ಯ ವರ್ಗವನ್ನೆಲ್ಲಾ ಹೊಂದಿರುವ ಐಶ್ವರ್ಯವನ್ನೂ **ಯೋಗಂ ಚ** ಹಿಂದೆ **ಏತಾಂ ವಿಭೂತಿಂ** ಎಂದಿರುವದರಿಂದ **ಏತಂ ಯೋಗಂಚ** ಎಂದು ಇಟ್ಟುಕೊಳ್ಳತಕ್ಕದ್ದು. **ಯುಜ್ಯತೇ ಅನೇನ** ಎಂಬ ವ್ಯುತ್ಪತ್ತಿಮೂಲಕ ನನ್ನನ್ನು ಆಶ್ರಯಿಸಲು ಯೋಗ್ಯವಾದ ಕಲ್ಯಾಣ ಗುಣಗಳಿಂದ ಸೇರಿರೋಣವೂ, ಮತ್ತು ಉಪಲಕ್ಷಣವಾಗಿ ಸರ್ವೇಶ್ವರನೊಂದಿಗೆ ಯಾವಾಗಲೂ ಸೇರಿಕೊಂಡೇ ಅಪೃಥಕ್ಸಿದ್ಧ ವಿಶೇಷಣವಾಗಿರುವ ಲಕ್ಷ್ಮಿಯ ಸಂಬಂಧವೂ, ಹೀಗೆ ಈ ಎಲ್ಲಾ ದ್ರವ್ಯದ ಮತ್ತು ಸ್ವಭಾವಗಳ ಸಂಬಂಧವು ಈ ಯೋಗಶಬ್ದದಿಂದ ಹೇಳಲ್ಪಟ್ಟಿತು, ಎಲ್ಲಾ ವಿಧದಲ್ಲೂ ಅತಿಶಯದಾಯಕಳಾದ ಶ್ರೀ ಮಹಾಲಕ್ಷ್ಮಿಯು ಶ್ರೀ ಮಹಾವಿಷ್ಣುವಿನೊಂದಿಗೆಸೇರಿ **ನಿತ್ಯಾನಪಾಯಿನೀ** ಎಂದುಹೇಳಿಸಿಕೊಂಡು **ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ**, ಎಂದು ಹೇಳಿರುವದರಿಂದ ಲಕ್ಷ್ಮೀಯುಕ್ತತೆಯೂ ಈ **ಯೋಗಂಚ** ಎಂದು ಹೇಳಿದ ಶಬ್ದದಲ್ಲೇ ಅಂತರ್ಗತವು. ಈ ಲಕ್ಷ್ಮೀ ವಿಶಿಷ್ಟತೆಯು, ಸರ್ವೇಶ್ವರನ ಸ್ವಾಭಾವಿಕ ಮಾಹಾತ್ಮ್ಯಗೆ ಇನ್ನೂ ಹೆಚ್ಚು ಅತಿಶಯವನ್ನು ಕೊಡುತ್ತದೆಂದು " **ಅಪ್ರಮೇಯಂ ಹಿ ತತ್ತೇಜಃ ಯಸ್ಯಸಾ ಜನಕಾತ್ಮಜಾ** " (ರಾ. ಅರ. ೩೭-೧೮) "ಯಾರಿಗೆ ಜನಕನಂದನೆಯು ಪತ್ನಿಯೋ ಆ ಕಾರಣದಿಂದ ಆ ಶ್ರೀರಾಮನ ತೇಜಸ್ಸು ಅಸದೃಶವಾದುದಾಯಿತೆಂಬ "ರಾಕ್ಷಸನಾದ ಮಾರೀಚನ ವಾಕ್ಯವಿರುತ್ತದೆ. ರತ್ನಕ್ಕೆ ದೀಪ್ತಿಯು ಹೇಗೋ, ಪುಷ್ಪಕ್ಕೆ ಪರಿಮಳವು ಹೇಗೋ ಹಾಗೆ ಅತಿಶಯದಾಯಕಳು ಲಕ್ಷ್ಮಿಯಾದುದರಿಂದ **ಯೋಗಂಚ** ಎಂಬುದರಲ್ಲಿ ಲಕ್ಷ್ಮಿ ಸಂಬಂಧವೂ ಹೇಳಲ್ಪಟ್ಟಿತು. ಆದರೆ **ಏತಾಂ** ಎಂಗು, ಹಿಂದೆ ಹೇಳಿದುದನ್ನಲ್ಲವೇ ಇಲ್ಲಿ ಉದ್ದೇಶಿಸಿ ಹೇಳಬೇಕು ? ಹಿಂದೆ ಶ್ರಿಯಃಪತಿತ್ವವು ಎಲ್ಲಿ ಹೇಳಲ್ಪಟ್ಟದೆ ? ಎಂದಾಕ್ಷೇಪಿಸಿದರೆ, ಹಿಂದೆ ಹೇಳದಿದ್ದರೂ ಶ್ರೀ ವ್ಯಾಸಮಹರ್ಷಿಯು **ಶ್ರೀ ಭಗವಾನುವಾಚ** ಎಂದು ಪದೇ ಪದೇ ಹೇಳಿರುವದರಿಂದ, ಲಕ್ಷ್ಮಿಯೊಂದಿಗೆ ನಿತ್ಯಯೋಗವುಳ್ಳ ಭಗವಂತನು ಹೇಳುತ್ತಾನೆಂಬರ್ಥವು ತೋರಿಬರುವದರಿಂದ, ಲಕ್ಷ್ಮೀಯೋಗವು ಹಿಂದೆ ಹೇಳಲ್ಪಟ್ಟಿತೆಂದೇ ಭಾವಿಸಬಹುದು. ಇಲ್ಲಿ **ಶ್ರೀ** ಎಂದರೆ **ಸರ್ವಸಂಪದ್ಯುಕ್ತನಾದ** ಎಂಬ ಲಾಕ್ಷಣಿಕಾರ್ಥವನ್ನು ಹೇಳುತ್ತೇವೆ ಎಂದರೆ, ಅರ್ಜುನನಿಗೂ ಹಾಗೆಯೇ ಉಪಯೋಗಿಸಿದ್ದ ಪಕ್ಷದಲ್ಲಿ ಹಾಗೆ ಅರ್ಥವನ್ನು ಹೇಳಬಹುದಿತ್ತು. ಶ್ರೀಶಬ್ದವಿಲ್ಲದೆ ಸುಮ್ಮನೆ **ಅರ್ಜುನಉವಾಚ** ಎಂದು ಹೇಳಿ, ಶ್ರೀಕೃಷ್ಣನ ವಿಷಯದಲ್ಲಿ ಮಾತ್ರ **ಶ್ರೀ ಭಗವಾನುವಾಚ** ಎಂಬ ಪ್ರಯೋಗವಿರುವದರಿಂದ, ಇದಕ್ಕೆ ಲಕ್ಷ್ಮೀಯುಕ್ತನಾದ ಭಗವಂತನೆಂದೇ ಹೇಳತಕ್ಕದ್ದು. ಆದುದರಿಂದ ಶ್ರೀ ಭಗವಾನುವಾಚ ಎಂಬಲ್ಲಿ ಶ್ರೀಶಬ್ದಕ್ಕೆ ಲಕ್ಷ್ಮೀ ಎಂಬ ಮುಖ್ಯಾರ್ಥವನ್ನೇ ಹೇಳತಕ್ಕದ್ದು. ಮುಖ್ಯಾರ್ಥ ಹೇಳಲು ಅವಕಾಶವಿರುವಾಗ ಗೌಣಾರ್ಥವನ್ನು ಹೇಳಕೂಡದೆಂಬ ನ್ಯಾಯವೂ ಉಂಟು. ಅದೂ ಅಲ್ಲದೆ, **ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ। ಅನ್ಯೇಷು ಚಾವತಾರೇಷು ವಿಷ್ಣೋರೇಷಾನಪಾಯಿನೀ** * ಎಂದು ಅವತಾರಗಳಲ್ಲೂ ಸಹ ಭಗವಂತನೊಂದಿಗೇನೇ ಸೇರಿ

ಯುತ್ತಾಳೆಂಬ ಶ್ರೀ ಪರಾಶರ ದಿವ್ಯಸೂಕ್ತಿಯುಂಟು. **ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾ
ಮ್ಯಾತ್ಮಮಾಯಯಾ** (ಗೀ. ೪-೬) ಎಂಬಲ್ಲಿ ಅಜಹತ್ಸ್ವಸ್ವಭಾವ ಸ್ವರೂಪನಾಗಿ ಹುಟ್ಟುತ್ತೇನೆಂ
ಬುದರಿಂದ **ಲಕ್ಷ್ಮೀಪತಿತ್ವವೂ,** ಕೂಡ ಸ್ವಸ್ವರೂಪನಾದುದರಿಂದ ಲಕ್ಷ್ಮೀವಿಶಿಷ್ಟನಾಗಿಯೇ ಅವ
ತರಿಸುತ್ತೇನೆಂಬುದೂ ದ್ಯೋತಿತವು. ಇದರಿಂದ ಲಕ್ಷ್ಮೀಸಂಬಂಧವು **ನಿತ್ಯ** ಯೋಗ ರೂಪದಲ್ಲಿ
ಯಾವಾಗಲೂ ಉಂಟೆಂಬುದು ಹಿಂದೆಯೂ ಹೇಳಿದೆ ಎಂದೂ ಗ್ರಹಿಸಬಹುದು. ಆದುದರಿಂದ
**ಯೋಗಂಚ** ಎಂದು ಹೇಳಿರುವದರಿಂದ ತನ್ನೊಂದಿಗೆ ಸೇರಿರುವ ತನ್ನ ದಿವ್ಯಮಂಗಳವಿಗ್ರಹವೇನು
ಲಕ್ಷ್ಮೀ ಏನು, ಕಲ್ಯಾಣಗುಣಗಳೇನು ಇವುಗಳ ಯೋಗವೆಲ್ಲಾ ಹೇಳಲ್ಪಟ್ಟಿತೆಂದು ಭಾವಿಸುವದೇ
ಯುಕ್ತವು. ಹೀಗೆ ಅರ್ಥವನ್ನು ಹೇಳದರೆ ಗೀತೆಯಲ್ಲಿ ಲಕ್ಷ್ಮೀ ವಿಷಯವೇ ಹೇಳಲ್ಪಡಲಿಲ್ಲವೆಂಬ
ಕೆಲವರ ಆಕ್ಷೇಪವು ದೂರೀಕೃತವಾಗುತ್ತದೆ. ಮತ್ತು "**ಅಪರೇಯಮಿತಸ್ತ್ವನ್ಯಾಂ**" ಎಂಬಲ್ಲಿ ಚಿದ
ಚಿತ್ತುಗಳಾದ ಪರಾಪರಪ್ರಕೃತಿಗಳೆಂದು ಹೇಳಿ, ಅವುಗಳೆಲ್ಲಾ ನನಗೆ ಅಪೃಥಕ್ಸಿದ್ಧವಿಶೇಷಣ
ಗಳಾಗಿ ನನಗೆ ಶರೀರವೆಂದೂ **ಮಯಿ ಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾಇವ**" (ಗೀ.
೭.೭.) ಎಂದೂ ಹೇಳಿರುವದರಿಂದಲೂ, ಈ ಯೋಗಶಬ್ದದಲ್ಲಿ ಅವೂ ಅಂತರ್ಗತವು; ಮತ್ತು ಆಶ್ರಯಿಸಿ
ಉಪಾಯಾನುಷ್ಠಾನಮಾಡುವದಕ್ಕೆ ತಕ್ಕ ಯೋಗ್ಯವಾದ ಗುಣಗಳನ್ನು ಹೊಂದಿರುವನೆಂದು
**ಸ ಚ ಮಮ ಪ್ರಿಯಃ** (೭. ೧೭) ಎಂಬುದರಿಂದ ತನ್ನ ಪರಮ ಸೌಹಾರ್ದವನ್ನೂ, **ಉದಾರಾಸ್ಸರ್ವ
ಏವೈತೇ** (೭.೧೮) ಎಂದು ಅಂತವರನ್ನು ಉದಾರರೆಂದು ಹೇಳಿದುದರಿಂದ ತನ್ನ ಪರಮೌದಾರ್ಯವ
ನ್ನೂ, "**ಮದ್ಭಕ್ತಾ ಯಾಂತಿ ಮಾಮಪಿ**" (ಗೀ.೭.೨೩) ಎಂಬುದರಿಂದಲೂ, **ಯೋಗಕ್ಷೇಮಂ
ವಹಾಮ್ಯಹಂ**" (ಗೀ.೨೨) ಎಂಬುದರಿಂದಲೂ, ತನ್ನ ಪರಮ ಕಾರುಣ್ಯವನ್ನೂ, "**ನಮೇಭಕ್ತಃ
ಪ್ರಣಶ್ಯತಿ**" ಎಂಬ, (೯.೩೧) "**ತಸ್ಯಾಹಂ ಸುಲಭಃ ಪಾರ್ಥ**" (ಗೀ.೮.೧೪) ಎಂದು ತನ್ನ ಸೌಲಭ್ಯವ
ನ್ನೂ, "**ಜ್ಞಾನೀತ್ವಾತ್ಮೈವ ಮೇಮತಂ**" ಎಂಬುದರಿಂದ ಪರಮ ಸೌಶೀಲ್ಯವನ್ನೂ, ಹೀಗೆಲ್ಲಾ
ಹೇಳಿದುದನ್ನೆಲ್ಲಾ ಒಟ್ಟುಗೂಡಿಸಿ, ಹೀಗೆ ಹೇಯಗಳೊಂದೂ ಇಲ್ಲದೆ ಕಲ್ಯಾಣಗುಣಗಣಮಹೋದ
ಧಿಯೆಂದು ಈ **ಯೋಗ**ಶಬ್ದದಿಂದ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಹೀಗೆ ತಾನು ಉಭಯವಿ
ಭೂತಿಗೂ ನಿಯಾಮಕನೆಂದೂ, ಲಕ್ಷ್ಮೀ ಕಲ್ಯಾಣಗುಣಗಳು, ದಿವ್ಯಮಂಗಳವಿಗ್ರಹ, ಸಮಸ್ತ ಚಿದಚಿ
ದ್ವಸ್ತುಗಳು ಇವುಗಳಿಂದ ಕೂಡಿ ಮಹದೈಶ್ವರ್ಯಯುಕ್ತನು. ವಿಶ್ವವೆಲ್ಲವೂ ತನಗೆ ಅಗಾಧ ಸಂಸಾರವು
ಆದರೆ ನಮ್ಮ ಹಾಗೆ ಕರ್ಮಮೂಲಕವಾಗಿ ಬಂಧನರೂಪದಲ್ಲಿ ಬಂದುದಲ್ಲವು; ಸ್ವಸಙ್ಕಲ್ಪಾಧೀನವಾಗಿ
ಬಂದುದು ಎಂದು ಭಾವಿಸತಕ್ಕದ್ದು. **ಪಾದೋಽಸ್ಯ ವಿಶ್ವಾಭೂತಾನಿ, ತ್ರಿಪಾದಸ್ಯಾಮೃತಂದಿವಿ**
ಎಂದು ಹೇಳಿರುವ ಮೇರೆಗೆ ಹೀಗೆ ತನ್ನ ಲೀಲಾವಿಭೂತಿಯೇನು, ನಿತ್ಯವಿಭೂತಿಯೇನು ಈ ಉಭ
ಯವಿಭೂತಿಯನ್ನೂ ಮತ್ತು ತಾನು ಅವುಗಳೊಂದಿಗೂ, ಲಕ್ಷ್ಮಿಯೊಂದಿಗೂ ಕಲ್ಯಾಣ ಗುಣಗ
ಳೊಂದಿಗೂ ಸೇರಿ, ಇವುಗಳಿಂದ ವಿಶಿಷ್ಟನಾಗಿ ಏಕನಾಗಿರುವ ಭಾವವನ್ನು **ಯಃ** – ಯಾವನು,
**ತತ್ವತಃ**– ಇರುವದು ಇರುವಹಾಗೆ ಯಥಾರ್ಥವಾಗಿ, ಎಂದರೆ ಮಿಥ್ಯಾತ್ವಾದಿಗಳನ್ನು ಆರೋ
ಪಿಸದೆ, **ವೇತ್ತಿ**– ತಿಳಿಯುತ್ತಾನೋ, **ಸಃ**– ಅಂತವನು, **ಅವಿಕಂಪ್ಯೇನ ಯೋಗೇನ**– ಅಚಾಂಚಲ್ಯ
ವಾದ ಭಕ್ತಿಯೋಗದೊಡನೆ. **ಯುಜ್ಯತೇ**– ಸೇರಿಸಲ್ಪಡುವನು. **ನಾತ್ರಸಂಶಯಃ** – ಈ ಸಂದ
ರ್ಭದಲ್ಲಿ ಈಷನು ಸಂದೇಹವಿರುವದಿಲ್ಲವು. ಭಕ್ತಿಯೋಗನಿಷ್ಠನು **ಏತಾಂ ವಿಭೂತಿಂ ಯೋ
ಗಂಚ** ಯಥಾರ್ಥವಾಗಿ ತಿಳಿಯತಕ್ಕದ್ದೆಂದು ಏಕೆ ಹೇಳಲ್ಪಟ್ಟಿತೆಂದು ಮುಖ್ಯವಾಗಿ ಗ್ರಹಿಸತಕ್ಕ
ದ್ದಾಗಿರುತ್ತದೆ. ಅಚಾಂಚಲ್ಯವಾದ ಭಕ್ತಿಯೋಗನಿಷ್ಠೆಯಿಂದ ಲಭಿಸುವ ಫಲವು ಪರಿಪೂರ್ಣ
ಬ್ರಹ್ಮಾನುಭವವು. ತತ್ಕ್ರತುನ್ಯಾಯದ ಪ್ರಕಾರ ಇಂತಹ ಅನುಭವವು ಲಭಿಸಬೇಕಾದರೆ
ಅಂತಹ ಪರಿಪೂರ್ಣ ಬ್ರಹ್ಮವೇ ಉಪಾಸ್ಯವಾಗಿರತಕ್ಕದ್ದು ಆವಶ್ಯಕವು. ಅದೇ ಈ ಶ್ಲೋಕದಲ್ಲಿ

**"ಏತಾಂ ವಿಭೂತಿಂಯೋಗಂಚ ಮಮಯೋವೇತ್ತಿ"** ಎಂಬುದರಿಂದ, ಇಂತಹ ಪರಿಪೂರ್ಣ ಬ್ರಹ್ಮದ ಧ್ಯಾನವೇ ಆವಶ್ಯಕವೆಂದು ಹೇಳಲ್ಪಟ್ಟಿತು. ಇದು ವಿಶಿಷ್ಟಾದ್ವೈತವನ್ನು ಬಹು ಸ್ಫುಟವಾಗಿ ವ್ಯಕ್ತಪಡಿಸುವ ಶ್ಲೋಕವು. ಅದ್ವೈತಸಿದ್ಧಾಂತಕ್ಕೆ ಅನುಕೂಲವಿಲ್ಲವು. ಇಲ್ಲಿ **ಮಮ ವಿಭೂತಿಂ ತತ್ವತಃ ವೇತ್ತಿ"** ಎಂದಿರುವದರಿಂದ, ಯಥಾರ್ಥವಾಗಿ ನಿಯಮನಕ್ಕೆ ಯೋಗ್ಯವಾದುದು ಇದ್ದರಲ್ಲವೇ ಅವರ ವಿಭೂತಿ ಎಂದರೆ ನಿಯಾಮ್ಯವರ್ಗವೆಂದು ಹೇಳಬಹುದು. ವಿಭೂತಿಯೆಲ್ಲಾ ಮಿಥ್ಯೆಯಾದರೆ, ಆಗ ನಿಯಾಮ್ಯವರ್ಗವೇ ಇಲ್ಲವು. ಸ್ವಂ ಇಲ್ಲದ ಸ್ವಾಮಿ, ಯಜಮಾನನಾಗುವನು. ಇಲ್ಲದಿರುವದನ್ನು ತತ್ವತಃ ತಿಳಿಯೋಣವು ಹೇಗೆ? **ಯೋಗಂಚ** ಎಂದು ಹೇಳಿರುವದರಿಂದ ಪರಬ್ರಹ್ಮವು ಸವಿಶೇಷವೇ ಎಂಬುದು ಸ್ಪಷ್ಟವು. ಗೀತೆಯಲ್ಲಿ ಎಲ್ಲಿಯೂ ವ್ಯಾವಹಾರಿಕ ದೆಶೆಯಲ್ಲಿ ಮಾತ್ರ ಸವಿಶೇಷಣನೆಂದೂ, ಪಾರಮಾರ್ಥಿಕದಶೆಯಲ್ಲಿ ನಿರ್ವಿಶೇಷನೆಂದೂ ಹೇಳಲಿಲ್ಲವು. ಸವಿಶೇಷಣನಾದ ತಾನೇ ಪರಬ್ರಹ್ಮನೆಂದು ಶ್ರೀಕೃಷ್ಣನು **"ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ"** ಎಂದು ಹೇಳಿಕೊಂಡಿರುವಾಗ ಶ್ರೀಕೃಷ್ಣನಿಗಿಂತ ಬೇರೆಯಾಗಿ, ಅವನಿಗೆ ಸಮನಾಗಿಯಾಗಲಿ, ಅಥವಾ ಉತ್ಕೃಷ್ಟನಾಗಿಯಾಗಲಿ, ಇನ್ನು ಯಾವ ಪರದೇವತೆಯಿಲ್ಲವೆಂದು ತೋರಿಬರುವದರಿಂದ. ನಿರ್ಗುಣ ಪರಬ್ರಹ್ಮನೊಬ್ಬನಿದ್ದಾನೆಂಬ ವಾದಕ್ಕೆ ಅವಕಾಶವು ಎಲ್ಲಿಯದು? ಶ್ರೀಕೃಷ್ಣನು ಉಪದೇಶಿಸಿರುವದು ಪಾರಮಾರ್ಥಿಕದಶೆಯಲ್ಲಿ ಅಲ್ಲವು, ವ್ಯಾವಹಾರಿಕದೆಶೆಯಲ್ಲಿ ಎಂದರೆ ಗೀತಾಶಾಸ್ತ್ರದ ಯಾಥಾತ್ಮ್ಯಕ್ಕೆ ಕುಂದಕವಲ್ಲವೇ? ಆಗ ಗೀತೋಪನಿಷತ್ತಿಗೆ ಮಾಹಾತ್ಮ್ಯೆಯನ್ನೇ ತೆಗೆದು ಹಾಕಿದಹಾಗಾಗುವದಿಲ್ಲವೇ? ಆದುದರಿಂದ ಸವಿಶೇಷಣನಾಗಿರುವ ಶ್ರೀಕೃಷ್ಣನು ಎಂದರೆ ಸಾಕ್ಷಾನ್ಮನ್ಮಥ ಮನ್ಮಥನಾಗಿ ಯೋಗಿಗಳ ಮನಸ್ಸನ್ನೆಲ್ಲಾ ಅಪಹರಿಸುವಹಾಗೆ ದಿವ್ಯಮಙ್ಗಳವಿಗ್ರಹವೇನು ರುಕ್ಮಿಣೀರೂಪದಲ್ಲಿರುವ ಲಕ್ಷ್ಮೀಪ್ರಿಯೇನು, ಕಲ್ಯಾಣಗುಣಮಹೋದಧಿಯಾಗಿರುವದೇನು, ಉಭಯವಿಭೂತಿನಿಯಮನವೇನು, ಹೀಗೆ ಸರ್ವವಿಶೇಷಣ ವಿಶಿಷ್ಟನಾದವನೇ ಪರಿಪೂರ್ಣ ಪರಬ್ರಹ್ಮನು. ವಿಭೂತಿ ಎಲ್ಲವೂ ಮಿಥ್ಯೆಯಾಗಿ, ಯೋಗವು ಆತನ ಎಲ್ಲಾ ವಿಶೇಷಣ ವಿಶಿಷ್ಟತೆಯನ್ನು ಬೋಧಿಸದಿದ್ದರೆ, ಭಕ್ತಿಯೋಗನಿಷ್ಠನು **"ಅವಿಕಂಪ್ಯೇನ ಯೋಗೇನ ಯುಜ್ಯತೇ"** ಎಂಬುದಕ್ಕೆ ಪ್ರಬಲಹೇತುವೇನಿರುತ್ತದೆ? ವಿಭೂತಿಯೂ ಯೋಗವೂಸಹ ಸುಳ್ಳೆಂದು ತಿಳಿದರೆ, ಭಕ್ತಿಯೋಗಕ್ಕೆ ಇನ್ನೂ ಕುಂದಕವೇ ವಿನಾ. ಅದರ ಅಭಿವೃದ್ಧಿಗೆ ಹೇಗೆ ಕಾರಣವಾದೀತು? **ನಾತ್ರ ಸಂಶಯಃ** ಎಂದು ಹೇಳಿರುವದರಿಂದ, **"ವಿಭೂತಿಂ ಯೋಗಂಚ ಯೋವೇತ್ತಿ ತತ್ವತಃ"** ಎಂಬುದನ್ನು ಸತ್ಯವಾದುದಾಗಿ ಭಾವಿಸತಕ್ಕದ್ದೆಂದೇ ಹೇಳಿದಂತಾಯಿತು. ಈ ವಿಷಯದಲ್ಲಿ ಸಂಶಯವು **ಬೇಡ**ವೆಂದೇ ಶ್ರೀಕೃಷ್ಣಭಗವಾನರವರು ಉಪದೇಶಿಸಿರುತ್ತಾರೆ. ಇಲ್ಲಿ ಅರ್ಜುನನಿಗೆ ಯಾವವಿಧದಲ್ಲಿ ಸಂಶಯವಿತ್ತು ಎಂದು ಭಾವಿಸಿ, ಶ್ರೀಕೃಷ್ಣನು **ನಾತ್ರ ಸಂಶಯಃ** ಎಂದು ಹೇಳಿದನೆಂದು ನಾವು ಆಲೋಚಿಸತಕ್ಕದ್ದಾಗಿರುತ್ತದೆ. ಇಷ್ಟು ಅಗಾಧವಾದ ವಿಭೂತಿಗಳೂ, ಅವುಗಳನ್ನೆಲ್ಲಾ ನಿಯಮಿಸುವ ವಿಚಿತ್ರ ಶಕ್ತಿಯೂ, ಪ್ರಪನ್ನನ ವಿಷಯದಲ್ಲಿ ಇಷ್ಟು ದಯಾರಸವೂ, ಸರ್ವೋತ್ಕೃಷ್ಟಗಳಾದ ಸರ್ವಜ್ಞತ್ವ ಸೌಲಭ್ಯ ಸೌಶೀಲ್ಯ ವಾತ್ಸಲ್ಯಾದಿ ಕಲ್ಯಾಣಗುಣಗಳ ಸಮೂಹವೂ, ಇಷ್ಟೆಲ್ಲಾ ಒಬ್ಬ ಅಧಿಕಾರಿಗೆ ಸಾಧ್ಯವೇ? ಮತ್ತು ಇಂತಹ ಪಾರಮೈಶ್ವರ್ಯವೆಲ್ಲಾ ನಿಜವಾಗಿಯೂ ನನ್ನಲ್ಲಿದೆ ಎಂಬ ಜ್ಞಾನದಿಂದಲ್ಲಿಯಾದರೂ ಭಕ್ತಿವೃದ್ಧಿಯುಂಟೇ? ಎಂದು ಹೀಗೆಲ್ಲಾ ಶಂಕಿಸಬೇಡ. ಪರತತ್ವವಾಗಿ **"ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ, ಸ್ವಾಭಾವಕೀ ಜ್ಞಾನಬಲಕ್ರಿಯಾ ಚ"** (ಶ್ವೇತ.೬.೭) ಎಂದು ಉಪನಿಷತ್ತಿನಲ್ಲಿ ಹೇಳಿರುವಹಾಗೆ ವಿಚಿತ್ರಾದ್ಭುತ ಶಕ್ತಿಯುಳ್ಳವನಿಗೆ ಇದು ಅಸಾಧ್ಯವೇನೂ ಅಲ್ಲವೆಂದೂ, ಅಂತಹ ಜ್ಞಾನದಿಂದ ಭಕ್ತಿವೃದ್ಧಿಯುಂಟೆಂದೂ. **ನಾತ್ರ ಸಂಶಯಃ** ಎಂದು ಭಾವಿಸತಕ್ಕದ್ದು. ಇವೆಲ್ಲಾ ಸುಳ್ಳು, ಈ ವಿಷಯದಲ್ಲಿ ಸಂಶಯ ಪಡಬೇಡವೆಂದು

**ಭಾ. ವಿಭೂತಿಃ - ಐಶ್ವರ್ಯಮ್, ಏತಾಂ-ಸರ್ವಸ್ಯ ಸಮುದಾಯತ್ತೋತ್ಪತ್ತಿ ಸ್ಥಿತಿ ಪ್ರವೃತ್ತಿ ರೂಪಾಂ, ವಿಭೂತಿಂ, ಮಮ ಹೇಯ ಪ್ರತ್ಯನೀಕ ಕಲ್ಯಾಣಗುಣರೂಪಂ-ಯೋಗಂಚ ಯಸ್ತತ್ತ್ವತೋ ವೇತ್ತಿ, ಸೋಽವಿಕಮ್ಪ್ಯೇನ - ಅಪ್ರಕಮ್ಪ್ಯೇನ, ಭಕ್ತಿಯೋಗೇನ**

ಹೇಳಿದರೆಂದು ಅರ್ಥ ಹೇಳುವದು ತುಂಬಾ ನಿಸ್ಸಾರವಾದುದು, ಏಕೆಂದರೆ ಮಿಥ್ಯೆಯಾದುದನ್ನು ತಿಳಿಯೋಣವೆಂಬುದೇ ಅಸಾಧ್ಯವು. ಗಗನ ಕುಸುಮವನ್ನು ತಿಳಿಯೋಣಹೇಗೆ? ಸತ್ಯವಾದವಸ್ತುವನ್ನು ತಿಳಿಯಬಹುದು. ಇಲ್ಲದಿರುವುದನ್ನು ತತ್ವತಃ ತಿಳಿಯುವುದು ಹೇಗೆ? **ತತ್ವತಃ** - ಹೇಗೆ ಇದೆಯೋ ಹಾಗೆ ತಿಳಿಯೋಣವೀಗ ತತ್ವತಃ ತಿಳಿಯೋಣವು. ಪರಮಾತ್ಮನಿಗೆ ಈ ವಿಶ್ವವೆಲ್ಲಾ ಶರೀರವು ಆತನು ಇವೆಲ್ಲಕ್ಕೂ ಎಂದರೆ ಚೇತನಾಚೇತನಕ್ಕೂ ಆತ್ಮನಾಗಿ ಸರ್ವ ನಿಯಾಮಕನೆಂದು ತಿಳಿಯೋಣ ವೀಗ ತತ್ವತಃ ತಿಳಿಯೋಣವು; ಇದೇ ಹಿಂದೆ ಹೇಳಲ್ಪಟ್ಟಿರುತ್ತದೆ ನಾನು ಅಜನು, ಅನಾದಿಯು, ಸರ್ವಲೋಕ ಮಹೇಶ್ವರನೆಂದು ತಿಳಿಯುವದೀಗ ತತ್ವತಃ ತಿಳಿಯೋಣವು.(ಗೀ. ೧೯. ೩.)ಎಂದು ಹಿಂದೆ ಉಪದೇಶಿಸಿರುತ್ತಾರೆ. ಈ ಶ್ಲೋಕದಲ್ಲಿ ತಾನು ಮಹತ್ತಾದ ನಿಯಾಮ್ಯವರ್ಗವನ್ನುಳ್ಳವನೆಂದೂ, ತನಗೆ ಮಹತ್ತಾದ ಎಲ್ಲಾ ವಿಧದಲ್ಲೂ ಪರಿಪೂರ್ಣವಾದ ಯೋಗಗಳುಂಟೆಂದೂ ಹೇಳಲ್ಪಟ್ಟಿತೇ ವಿನಾ, ರೆಕ್ಕೆಗಳಿಲ್ಲದ ಹಕ್ಕಿಯಂತೆ ನಿರ್ವಿಶೇಷನೆಂದು ಹೇಳಲ್ಪಡಲಿಲ್ಲವು.

**ಭಾಷ್ಯಾರ್ಥವು:**—ಈ ತನ್ನ ಮಹತ್ತಾದ ವಿಭೂತಿಗಳು ಮತ್ತು ತನಗೆ ಅನುಬಂಧಿಸಿಕೊಂಡಿರುವ ಮಹತ್ತಾದ ಕಲ್ಯಾಣಗುಣಗಳೇನು, ಲಕ್ಷ್ಮಿಯೊಂದಿಗೆ ನಿತ್ಯಯೋಗವೇನು, ಇವುಗಳ ಜ್ಞಾನವು ಭಕ್ತಿಯೋಗನಿಷ್ಪತ್ತಿಗೆ ಹೇತುವೆಂದು ಉಪದೇಶಿಸುತ್ತಾರೆ.–**ವಿಭೂತಿಃ** ಎಂದರೆ ಐಶ್ವರ್ಯವು, ನಿಯಾಮ್ಯವರ್ಗವು, ಆದುದರಿಂದ **ಏತಾಂ ವಿಭೂತಿಂ** ಎಂದರೆ **ಸರ್ವಸ್ಯ ಸಮುದಾಯತ್ತೋತ್ಪತ್ತಿ ಸ್ಥಿತಿಪ್ರವೃತ್ತಿ ರೂಪಾಂ ವಿಭೂತಿಂ**-ಸಮಸ್ತವೂ ನನಗೆ ಅಧೀನವಾದ ಉತ್ಪತ್ತಿ ಸ್ಥಿತಿ ಪ್ರವೃತ್ತಿಗಳನ್ನುಳ್ಳ ಐಶ್ವರ್ಯವನ್ನು, **ಮಮ ಹೇಯಪ್ರತ್ಯನೀಕ ಕಲ್ಯಾಣ ಗುಣರೂಪಂ ಯೋಗಂಚ**–ನನ್ನ ಹೇಯ ಪ್ರತ್ಯನೀಕವಾದ ಕಲ್ಯಾಣ ಗುಣಗಳಿಂದ ಸೇರಿರುವಿಕೆಯನ್ನೂ ಸಹ, ಇದು ಪರಮಾತ್ಮನೊಂದಿಗೆ ಸೇರಿರುವ ಇತರ ವಿಶೇಷಣಗಳಿಗೂ ಉಪಲಕ್ಷಣವು, **ಯಃ**-ಯಾವ ಭಕ್ತಿಯೋಗವನ್ನಾರಂಭಿಸಿದವನು, **ತತ್ವತೋ ವೇತ್ತಿ**-ಇದ್ದುದು ಇದ್ದಹಾಗೆ ಯಥಾರ್ಥವಾಗಿ ತಿಳಿಯುವನೋ, ಎಂದರೆ ಭ್ರಮೆಗಳಿಲ್ಲದೇ ತಿಳಿಯುವನೋ, ಪ್ರತ್ಯಕ್ಷವಾದ ನನ್ನ ವಿಭೂತಿಗಳಿಗೆ ಅಪಲಾಪವನ್ನು ಹೇಳುವದೂ, ಹೇಯಪ್ರತ್ಯನೀಕನಾಗಿರುವ ನನ್ನನ್ನು ಅವಿದ್ಯಾ ಗೃಹೀತನನ್ನಾಗಿ ಭಾವಿಸಿ ದುಃಖಿತ್ವಾದಿಗಳು ನನಗುಂಟೆಂದು ಹೇಳುವದೂ, ಕಲ್ಯಾಣಗುಣ ಮಹೋದಧಿಯನ್ನು ಸರ್ವಗುಣ ಶೂನ್ಯನೆಂದು ಭಾವಿಸುವದೂ, ಲಕ್ಷ್ಮೀವಿಶಿಷ್ಟನಾಗಿ ಪರಸ್ಪರಾತಿಶಯವನ್ನು ಹೊಂದಿರುವನೆಂದು **"ಆನೀತವಾದಗ್ಂ ಸ್ವಧಯಾತದೇಕಂ"** ಲಕ್ಷ್ಮೀವಿಶಿಷ್ಟನಾಗಿ ನಾನು ಒಬ್ಬನೆಂದು ಶ್ರುತಿಯಲ್ಲಿ ಹೇಳಿದ್ದರೂ ನಿರ್ವಿಶೇಷನೆಂದು ಭಾವಿಸುವದೂ, ಇತ್ಯಾದಿ ಭ್ರಮೆಗಳು ಯಾವುವೂ ಇಲ್ಲದೆ, ಯಥಾರ್ಥವಾಗಿ ತಿಳಿಯುತ್ತಾನೋ ಎಂಬ ಭಾವವು, **ಸಃ**-ಅಂತಹ ಭಕ್ತಿಯೋಗಾರಂಭಕನು, **ಅವಿಕಮ್ಪ್ಯೇನ** ಎಂದರೆ **ಅಪ್ರಕಮ್ಪ್ಯೇನ**-ಎಷ್ಟು ವಿಘ್ನಗಳು ಪ್ರಾಪ್ತವಾದರೂ ಅವಿಚಾಲ್ಯವಾದ ಯೋಗೇನ–ಕದಲಿಸಲು ಸಾಧ್ಯವಲ್ಲದ **ಭಕ್ತಿಯೋಗ**ದಿಂದ, **ಯುಜ್ಯತೇ** – ಸೇರುವನು ಎಂದರೆ ಭಕ್ತಿಯೋಗವು ವೃದ್ಧಿಹೊಂದುವದರಿಂದ ಅದು ಸ್ಥಿರವಾಗಿ ನೆಲಗೊಂಡು, ಭಕ್ತಿಯೋಗ ನಿಷ್ಪತ್ತಿಯನ್ನು ಹೊಂದುವನು ಎಂಬ ಭಾವವು, **ನಾತ್ರಸಂಶಯಃ** – ಈ ವಿಷಯದಲ್ಲಿ ನಿನಗೆ ಸಂದೇಹಬೇಡ. ಯಾವ ವಿಷಯದಲ್ಲಿ ಎಂದರೆ ನನ್ನ ಅತ್ಯದ್ಭುತವಾದ ವಿಶ್ವ ನಿಯಮನ ಶಕ್ತಿ

**ಭಾ. ಯುಜ್ಯತೇ; ನಾತ್ರಸಂಶಯಃ; ಮದ್ವಿಭೂತಿ ವಿಷಯಂ ಕಲ್ಯಾಣ ಗುಣವಿಷಯಂಚ ಜ್ಞಾನಂ ಭಕ್ತಿಯೋಗ ವರ್ಧನಮಿತಿ ಸ್ವಯಮೇವ ದ್ರಕ್ಷ್ಯಸೀತ್ಯಭಿಪ್ರಾಯಃ ॥೭॥**

ಯನ್ನು ಹೊಂದಿರುವ ಪಾರಮೈಶ್ವರ್ಯ ಉಂಟೆಂಬುದರಲ್ಲೂ, ನಾನು ಲಕ್ಷ್ಮೀ, ದಿವ್ಯಮಂಗಳವಿಗ್ರಹವು ಕಲ್ಯಾಣ ಗುಣಗಣವು. ಇವುಗಳಿಂದ ಸೇರಿ ಭಕ್ತಿಯೋಗ ನಿಷ್ಠನಿಗೆ ಎಲ್ಲಾ ವಿಧದಲ್ಲೂ ಉಪಕಾರಕನಾಗಿರುವುದರಮೂಲಕ, ಆತನ ಭಕ್ತಿಯೋಗವು ವೃದ್ಧಿಹೊಂದುತ್ತದೆ ಎಂಬುದರಲ್ಲೂ ಸಂದೇಹ ಬೇಡವೆಂದು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ **ವಿಭೂತಿಂ ಯೋಗಂಚ**-ಎಂಬ ಎರಡು ಪದಗಳಿಂದ ವಿಶ್ವ ನಿಯಾಮಕನಾಗಿ, ಸರ್ವಪ್ರಕಾರ ವಿಶಿಷ್ಟನಾಗಿ, ಪ್ರಕಾರಿಯಾದ ಪರಿಪೂರ್ಣ ಬ್ರಹ್ಮನಾದ ಸರ್ವೇಶ್ವರನ ಮಾಹಾತ್ಮ್ಯೆಯು ಹೇಳಲ್ಪಟ್ಟಿತು. ತೇಜಸ್ಸಿಲ್ಲದ ಸೂರ್ಯನೋಪಾದಿಯಲ್ಲಿ ಬ್ರಹ್ಮನು ನಿರ್ವಿಶೇಷನೆಂದು ಹೇಳಲ್ಪಡಲಿಲ್ಲವೆಂದು ಭಾವಿಸತಕ್ಕದ್ದು. ಕಲ್ಯಾಣ ಗುಣಗಳುಳ್ಳವನೆಂದು ತಿಳಿದರೇನೆ ಧ್ಯಾನಕ್ಕೆ ಅರ್ಹನು. ಆಶ್ರಯಿಸಲು ಉಚಿತವಾಗಿಯೂ ನಮ್ಮ ಮನೋರಥವು ಪೂರ್ಣವಾಗುವಹಾಗೂ ಕಲ್ಯಾಣಗುಣಗಳಿದ್ದರಲ್ಲವೇ ಆಶ್ರಯಿಸಬಹುದು. ಇಂತಹ ಗುಣಗಳ ಯೋಗವೂ ದಿವ್ಯಮಂಗಳ ವಿಗ್ರಹದೊಂದಿಗೆ **"ತಸ್ಮಿನ್ಯದಂತಸ್ತದುಪಾಸಿತವ್ಯಂ"** (ತೈ. ನಾರಾ ೧೨) ಎಂಬಲ್ಲಿ ಉಪಾಸ್ಯವೆಂದು ಮುಖ್ಯವಾಗಿ ವಿಧಿಸಿರುವದರಿಂದ, ಶ್ರೀಯತಿವರ್ಯರು ಮಿಕ್ಕ ಯೋಗಗಳನ್ನೆಲ್ಲಾ ಬಿಟ್ಟು ಕಲ್ಯಾಣಗುಣಯೋಗವನ್ನೇ ಪ್ರಧಾನವಾಗಿ ಉಪದೇಶಿಸಿರುತ್ತಾರೆ. ಏಕೆಂದರೆ, ಯಾವ ಗುಣಗಳೂ ಇಲ್ಲದವನು ಉಪಾಯೋಪೇಯನಾಗಲು ಅರ್ಹನಾಗಲಾರನು. **ಸರ್ವಜ್ಞ**ತೆಯು ಜೀವಾತ್ಮರ ಅನಿಷ್ಟ ನಿವೃತ್ತಿಗೂ ಇಷ್ಟಪ್ರಾಪ್ತಿಗೂ ಬೇಕಾದುದು. ಬಹುಕಾಲದಿಂದ ಬಂಧನದಲ್ಲೇ ಬಿದ್ದು ನರಳುತ್ತಿರುವವನನ್ನು ತಪ್ಪಿಸುವಂತಹ **ಅಘಟಿತ** ಘಟನೆಯ ರೂಪಶಕ್ತಿಯು ಬೇಕು. ಆಶ್ರಿತರ ವಿವಿಧ ಮನೋರಥಗಳನ್ನೂ, ಮತ್ತು ಎಲ್ಲಕ್ಕೂ ಮೇಲಾದ ನಿರತಿಶಯಾನಂದವನ್ನೂ ಉಂಟುಮಾಡುವುದಕ್ಕೂ ಪರಿಪೂರ್ಣಕಾಮತ್ವವನ್ನು ಬೋಧಿಸುವ ಪ್ರಾಪ್ತಿ ಎಂಬ ಧರ್ಮವಿರಬೇಕು. ತನ್ನನ್ನು ಆಶ್ರಯಿಸಲು ಎಲ್ಲರೂ ಬರಲಿ ಎಂದು ಅವತಾರಕಾಲಗಳಲ್ಲಿ **ಸೌಲಭ್ಯ**ವಿರಬೇಕು. ಹಾಗೆ ಸರ್ವಜನಮನೋನಯನಗಳಿಗೆ ಆಕರ್ಷಕನಾಗಿ ಸಂಸ್ಕಾರ ಹೊಂದಿದ ವಿಗ್ರಹಾದಿಗಳಿಗೆ ಅನುಗುಣವಾದ ದಿವ್ಯಮಂಗಳವಿಗ್ರಹಯುಕ್ತನಾಗುವ ಸೌಲಭ್ಯವೂ ಇರಬೇಕು. ಹಿಂದೆ ಎಷ್ಟು ಅಪರಾಧಮಾಡಿದ್ದರೂ ಅವುಗಳನ್ನೆಲ್ಲಾ ಮರೆತು ನನ್ನನ್ನು ಆಶ್ರಯಿಸಲು ಬಂದನೇ ಎಂಬ ವಾತ್ಸಲ್ಯವಿರಬೇಕು. ತಾನು ಪರತ್ವಾದಿ ಮಹತ್ತಾದ ಪಾರಮೈಶ್ವರ್ಯವನ್ನು ಹೊಂದಿದವನಾದರೂ, ನಿಕೃಷ್ಟವಾದ ಅವಸ್ಥೆಯಲ್ಲಿರುವ ಆಶ್ರಿತನೊಂದಿಗೆ ಸೇರಿ ಆತನ ಕಷ್ಟಗಳನ್ನೆಲ್ಲಾ ಕೇಳಿ, ಅವುಗಳನ್ನು ಪರಿಹರಿಸಲು ಸೌಶೀಲ್ಯವಿರಬೇಕು. ಹೀಗೆಲ್ಲಾ ವರ್ತಿಸಿ ಹೇಗಾದರೂ ಆಶ್ರಿತನನ್ನು ಉದ್ಧಾರಮಾಡಬೇಕೆಂಬ ಕಂಕಣಬದ್ಧನಾಗಿರುವಹಾಗೆ ಕರುಣಾಮಹೋದಧಿಯಾಗಿರಬೇಕು. ಇಂತಹ ಕಲ್ಯಾಣಗುಣಗಳಿವೆ ಎಂದು ದೃಢವಾಗಿ ನಂಬಿದರಲ್ಲವೇ ಭಕ್ತಿಯಲ್ಲಿ ಶ್ರದ್ಧೆಯು ಸ್ಥಿರವಾದುದಾಗಿ ವೃದ್ಧಿಯನ್ನು ಹೊಂದೀತು? ಆದುದರಿಂದಲೇ ಯೋಗವೆಂದರೆ **ಕಲ್ಯಾಣಗುಣಯೋಗ**ವೆಂದೇ ಅರ್ಥಮಾಡಿದರು ಈ ಕಲ್ಯಾಣಗುಣಯೋಗವೆಂದು ಹೇಳಿದುದು, ಲಕ್ಷ್ಮಿಯೊಂದಿಗೆ ನಿತ್ಯಯೋಗಕ್ಕೂ ಉಪಲಕ್ಷಣವಾಗಿ ಭಾವಿಸಬಹುದು. ಪುರುಷಕಾರಭೂತೆಯಾಗಿ ಅನುಗ್ರಹಮಯಳಾಗಿ ಅಜ್ಞಾತ ನಿಗ್ರಹಳಾಗಿರುವ ಲಕ್ಷ್ಮಿಯನ್ನೂ ಆಶ್ರಯಿಸಲು, ಆಕೆಯೊಂದಿಗೂ ಸ್ವಾಮಿಗೆ ಯೋಗ ಉಂಟೆಂದೂ **"ಯೋವೇತ್ತಿ"** ಯಾವನು ತಿಳಿಯುವನೋ ಅಂತವನು ಅವಿಚಾಲ್ಯವಾದ ಭಕ್ತಿಯೋಗಪ್ರಾಪ್ತಿಯನ್ನು ಹೊಂದುವನೆಂಬ ಅರ್ಥವೂ ವ್ಯಕ್ತವು. ಈ ಶ್ಲೋಕದಲ್ಲಿ ಯೋಗ ಶಬ್ದಗಳು ಭಿನ್ನಾರ್ಥಗಳಲ್ಲಿ ಉಪಯೋಗಿಸಲ್ಪಟ್ಟಿವೆ: ಪೂರ್ವಾರ್ಧದ

**ಭಾ. ಅ. ವಿಭೂತಿಜ್ಞಾನ ವಿಪಾಕರೂಪಂ ಭಕ್ತಿವೃದ್ಧಿಂ ದರ್ಶಯತಿ.—**

ಯೋಗಶಬ್ದಕ್ಕೆ ಸಂಬಂಧವೆಂಬ ಅರ್ಥವು. ಉತ್ತರಾರ್ಧದ ಯೋಗ ಶಬ್ದವು ಪ್ರಕರಣಾನುಗುಣವಾಗಿ ಭಕ್ತಿಯೋಗವೆಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ಹೀಗೆ ಈ ಗ್ರಂಥದಲ್ಲಿ ಯೋಗ ಶಬ್ದವು ಅನೇಕಾರ್ಥಗಳಲ್ಲಿ ಪ್ರಕರಣಾನುಗುಣವಾಗಿ ಉಪಯೋಗಿಸಲ್ಪಟ್ಟಿರುತ್ತದೆ. ನನಗಿರುವ ಅಗಾಧವಾದ ಉಭಯ ವಿಭೂತಿ ನಿಯಮನದ ಮತ್ತು ನನ್ನೊಂದಿಗೆ ಅಪೃಥಕ್ಸಿದ್ಧ ವಿಶೇಷಣಗಳಾಗಿ ಸೇರಿಕೊಂಡಿರುವವುಗಳ, ಹೀಗೆ ಧರ್ಮಗಳಿಲ್ಲವ ಯಥಾರ್ಥವಾದ ಇವೆರಡರ ಜ್ಞಾನವೂ ಭಕ್ತಿಯೋಗವರ್ಧಕವೆಂದೂ, ಈ ವಿಷಯದಲ್ಲಿ ಸಂದೇಹ ಬೇಡವೆಂದೂ, ಉಪದೇಶಿಸಲ್ಪಟ್ಟಿತು ಎಂಬ ತಾತ್ಪರ್ಯಾರ್ಥವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ — **ಮದ್ವಿಭೂತಿ ವಿಷಯಂ**– ನನಗೆ ಸೇರಿದ ನಿಯಾಮ್ಯ ವರ್ಗದ ನಿಯಮನವನ್ನು ಕುರಿತ, ಮತ್ತು **ಕಲ್ಯಾಣ ಗುಣವಿಷಯಂಚ**– ಭಕ್ತಿಯೋಗಿಯು ನನ್ನನ್ನಾಶ್ರಯಿಸಲು ಉಪಯುಕ್ತಗಳಾಗಿ ನನ್ನಲ್ಲಿರುವ ಕಲ್ಯಾಣಗುಣಾದಿಗಳಿಂದ ಕೂಡಿರುವ ವಿಷಯವಾದ ಜ್ಞಾನವು, **ಭಕ್ತಿಯೋಗ ವರ್ಧನಮಿತಿ**– ಭಕ್ತಿಯೋಗವನ್ನು ಅಭಿವೃದ್ಧಿ ಪಡಿಸಿ ದೃಢಪಡಿಸುವದು ಎಂದು. **ಸ್ವಯಮೇವ – ಅರ್ಜುನ** ನಾದ ನೀನೇ ಮುಂದೆ, **ದ್ರಕ್ಷ್ಯಸೀತ್ಯರ್ಥಃ**– ಕಾಣುವಿ ಎಂಬ ತಾತ್ಪರ್ಯವು ಮುಂದೆ ೧೧ ನೆಯ ಅಧ್ಯಾಯದಲ್ಲಿ ಹೇಳಲ್ಪಡುವ ಸರ್ವ ವಿಭೂತಿ ಯೋಗವನ್ನು ಪ್ರದರ್ಶಿಸುವ ವಿಶ್ವರೂಪ ದರ್ಶನದಿಂದ ನೀನೇ ತಿಳಿಯುವಿ ಎಂಬ ಭಾವವು. **ನಾತ್ರಸಂಶಯಃ** ಎಂದು ಏತಕ್ಕಾಗಿ ಹೇಳಿದೆನೆಂದರೆ, ನಿನಗೆ ಸಾಕ್ಷಾತ್ತಾಗಿಯೇ ಗೊತ್ತಾಗುತ್ತದ ಎಂಬ ಅಭಿಪ್ರಾಯದಿಂದ ಹೇಳಿರುತ್ತೇನೆ ಎಂಬ ಭಾವವು ಪ್ರದರ್ಶಿಸಲ್ಪಟ್ಟಿತು. ಸಾಕ್ಷಾತ್ತಾಗಿ ಪ್ರತ್ಯಕ್ಷವಾಗಿ ನಿನಗೆ ಗೋಚರವಾಗುವ ವಿಷಯದಲ್ಲಿ ನಿನಗೆ ಯಾವವಿಧ ಸಂದೇಹವೂ ಬೇಕಿಲ್ಲವು ಎಂಬರ್ಥವು. ಈ ಜ್ಞಾನವು ಮುಖ್ಯವಾದ ಪ್ರಯುಕ್ತ ಅರ್ಜುನನ ಮನಸ್ಸಿಗೆ ಚನ್ನಾಗಿ ಹಿಡಿಯುವದಕ್ಕೆ, ಅದನ್ನೇ ಅನುವಾದಮಾಡಿ ಹೇಳಿ ಇಂತಹ ಜ್ಞಾನದಿಂದ ಭಾವಸಮನ್ವಿತರಾಗಿ ಬುಧರಾಗುವರೆಂದು ಮುಂದೆ ತಿಳಿಸುತ್ತಾರೆ. ||೭||

**ಭಾಷ್ಯಾವತಾರಿಕೆಯ ಅರ್ಥವು:— ವಿಭೂತಿಜ್ಞಾನವಿಪಾಕರೂಪಂ**– ನನ್ನ ಸರ್ವ ನಿಯಾಮ್ಯ ವರ್ಗದ ನಿಯಮನದ ಜ್ಞಾನದಿಂದ, ಪರಿಪಕ್ವದೆಶೆಯನ್ನು ಹೊಂದಿದ, ಇಲ್ಲಿ ಯಥಾರ್ಥವಾದ ವಿಭೂತಿಜ್ಞಾನವನ್ನು ಮಾತ್ರ ಹೇಳಿದುದು, ಅದರೊಂದಿಗೆ ಹೇಳದ **ಯೋಗಜ್ಞಾನಕ್ಕೂ** ಉಪಲಕ್ಷಣವೆಂದು ಭಾವಿಸತಕ್ಕದ್ದು. ಹೀಗೆ ಇವೆರಡರ ಜ್ಞಾನದಿಂದ, **ಭಕ್ತಿವೃದ್ಧಿಂ**-ಭಕ್ತಿಯ ಅಭಿವೃದ್ಧಿಯನ್ನು, ಇದು ಭಕ್ತಿಯೋಗವು ಚನ್ನಾಗಿ ನೆಲಗೊಂಡು ಪರಭಕ್ತಿ ಎಂದೆನಿಸಿಕೊಳ್ಳುವ ಅವಸ್ಥೆಯು; ಅದನ್ನು, **ದರ್ಶಯತಿ**-ತೋರಿಸುತ್ತಾರೆ ಎಂದರೆ ಅದು ಹೇಗೆ ಉಂಟಾಗುತ್ತದೆಂಬುದನ್ನು ವ್ಯಕ್ತಪಡಿಸುತ್ತಾರೆ. ಇದರಿಂದ ವಿಭೂತಿ ಯೋಗ ಮತ್ತು ಕಲ್ಯಾಣಗುಣಗಣ ಯೋಗಗಳ ಜ್ಞಾನದಿಂದುಂಟಾಗುವ ಪ್ರಯೋಜನವು ಮುಂದಿನ ಶ್ಲೋಕದಲ್ಲಿ ವ್ಯಕ್ತಪಡಿಸಲ್ಪಡುತ್ತದೆಂಬ ಭಾವವು.

**ಮೂಲಕ್ಕೆ ಅರ್ಥವು:—** ಹಿಂದೆ ತಾನು ಸರ್ವಕ್ಕೂ ಅಂತರಾತ್ಮನಾಗಿ ಸರ್ವವೂ ತನ್ನ ಸ್ವತ್ತಾಗಿ, ಸರ್ವಕ್ಕೂ ತಾನು ನಿಯಾಮಕನೆಂದೂ, ತಾನು ಕಲ್ಯಾಣಮಹೋದಧಿ ಎಂದೂ, ಯಾವನು **ತತ್ವತಃ ವೇತ್ತಿ**, ಯಥಾರ್ಥವಾಗಿ ತಿಳಿಯುವನೋ, ಅವನು ಅಸ್ಖಲಿತವಾದ ಭಕ್ತಿಯೋಗದಲ್ಲಿ ನಿಲ್ಲುವನೆಂದು ಹೇಳಿದರು. ಈ ಶ್ಲೋಕದಲ್ಲಿ, ತತ್ತ್ವತಃ ತಿಳಿಯೋಣವು ಯದ್ರೂಪವೆಂದು ಚನ್ನಾಗಿ ವಿಶದೀಕರಿಸಿ, ಅದರಿಂದ ಭಾವ ಸಮನ್ವಿತರೂಪ ಪ್ರಯೋಜನವುಂಟೆಂದು ಹೇಳುತ್ತಾರೆ ಆ ಭಾವಸಮನ್ವಿತವು ಎಂಥಾದ್ದೆಂದರೆ **"ಮಚ್ಚಿತ್ತಾ ಮದ್ಗತ ಪ್ರಾಣಾಃ"** ಎಂದು ಅದರ ಮುಂದಿನ ಶ್ಲೋಕದಲ್ಲಿ ಉಪಪಾದಿಸಿ, ಭಕ್ತಿ ವೃದ್ಧಿಯು ಅಂತಹ ಜ್ಞಾನದಿಂದ **ಉಂಟಾಯಿ**

**ಮೂ. ಅಹಂ ಸರ್ವಸ್ಯ ಪ್ರಭವೋ ಮತ್ತ ಸ್ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥** **೮.**

ತೆಂದು ಹೇಗೆ ಗೊತ್ತುಮಾಡಬಹುದೆಂಬುವನ್ನು ವ್ಯಕ್ತಪಡಿಸುತ್ತಾರೆ. ಆದುದರಿಂದಲೇ ಶ್ರೀ ಯತಿಪರ್ಯರು ಅವತಾರಿಕೆಯಲ್ಲಿ **ಭಕ್ತಿವೃದ್ಧಿಂ ದರ್ಶಯತಿ**—ಎಂದು ಪ್ರಯೋಗಿಸುತ್ತಾರೆ. **ಅಹಂ**-ಸರ್ವೇಶ್ವರನಾಗಿ ಶ್ರೀ ಕೃಷ್ಣನಾದನಾನು, **ಸರ್ವಸ್ಯ ಪ್ರಭವಃ**-**"ಯತೋವಾ ಇಮಾನಿ"** (ತೈ. ಭೃಗು.) ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಸಮಸ್ತ ವಿಶ್ವದ ಉತ್ಪಾದಕನು,ಉಪಾದಾನ ನಿಮಿತ್ತ ಸಹಕಾರಿರೂಪ ಸರ್ವವಿಧಕಾರಣನು ; ಆದುದರಿಂದ ಈ ಜಗತ್ತಿನಲ್ಲಿ ಕಾಣುವ ವಿವಿಧ ವಿಚಿತ್ರಸೃಷ್ಟಿಗೆಲ್ಲಾ ನಾನೇ ಕಾರಣನು; ಆಗಲಿ ಲೋಕದಲ್ಲಿ ಅನೇಕ ಚೇತನರು ಅನೇಕ ವಿಧವಾದ ಸೃಷ್ಟಿಗೆ ಅಧಿಕಾರಿಗಳಾಗಿ ಕಂಡಿರುವೆವಲ್ಲಾ; ಮೋಟಾರ್‌ಕಾರ್, ರೈಲು, ಸ್ಟೀಮರ್, ವಿಮಾನಗಳ ನಿರ್ಮಾಣವೂ, ಅವುಗಳನ್ನು ಬಹುತ್ವರೆಯಾಗಿ ನಡೆಸುವಹಾಗೆ ಸೃಷ್ಟಿಯೂ,ವಿಲಾಯಿತಿಯ ಸಂಗೀತವು ಇಲ್ಲಿ ಕೇಳುವಹಾಗೆ ಮಾಡುವ ಯಂತ್ರ ಸೃಷ್ಟಿ, ಇವೇ ಮೊದಲಾದ ಇನ್ನೂ ಅನೇಕ ಸೃಷ್ಟಿಗೂ ಚೇತನನು ಕಾರಣವಾಗಿ ತೋರುತ್ತಾನೆಯಲ್ಲವೇ? ಎಂದರೆ, **ಮತ್ತಃಸರ್ವಂಪ್ರವರ್ತತೇ**-ಈ ವಿಶ್ವದಲ್ಲಿ ನಡೆಯುವ ಸರ್ವಪ್ರವರ್ತನವೂ ನನ್ನ ಮೂಲಕವಾಗಿಯೇ ಎಂದು ತಿಳಿಸುವದಕ್ಕಾಗಿ, ನನ್ನಿಂದಲೇ ಎಲ್ಲವೂ ನಡೆಯುತ್ತದೆಂದು ಹೇಳಿರುತ್ತಾರೆ. ಚತುರ್ಮುಖಾದಿಗಳ ಸೃಷ್ಟಿಗಳಿಗೂ ನಾನೇಕಾರಣನು ಎಂಬ ಭಾವವು ಇದರಿಂದ"**ತತ್ಸೃಷ್ಟ್ವಾ ತದೇವಾನುಪ್ರಾವಿಶತ್**""**ನಾರಾಯಣಾದೇವ ಸಮುತ್ಪದ್ಯನ್ತೇ**,ಇತ್ಯಾದಿಸೃಷ್ಟಿಕ್ರಮಬೋಧಕ ಶ್ರುತ್ಯರ್ಥಗಳೂ **"ಜನ್ಮಾದ್ಯಸ್ಯಯತಃ"** ಎಂಬ ಬ್ರಹ್ಮಸೂತ್ರವೂ ಉಪಬೃಂಹಿತವಾಯಿತು. ಆದರೆ ಹಿಂದೆ ೭-೬ರಲ್ಲಿ **"ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ"** ಎಂದು ಹೇಳಿರುವಾಗ **"ಅಹಂ ಸರ್ವಸ್ಯ** ಪ್ರಭವಃ" ಎಂದು ಇಲ್ಲಿ ಹೇಳುವದು ಪುನರುಕ್ತಿಯಲ್ಲವೋ ಎಂದಾಕ್ಷೇಪಿಸಿದರೆ, ಸರ್ವ ವಿಭೂತಿ ನಿಯಮನವು ಪ್ರಾಪ್ತ ವಿಷಯವಾದುದರಿಂದ,ಅದಕ್ಕೆಸಾಧಕವಾಗಿ ಜಗತ್ಕಾರಣತ್ವವು ಹೇಳಲ್ಪಟ್ಟಿರುವದರಿಂದ **ಪುನರುಕ್ತಿ** ದೋಷಕ್ಕೆ ಗುರಿಯಾಗುವದಿಲ್ಲವು. ಅದೂ ಅಲ್ಲದೆ, **ಇಲ್ಲಿ** ಉಪಾಸ್ಯನು ಯಾರೆಂಬ **ವಿವೇಚನೆ**ಯಲ್ಲಿ **"ಕಾರಣಂತುಧ್ಯೇಯಃ"**ಜಗತ್ಕಾರಣನೂ ಯಾರೋ. ಅವನೇ ಉಪಾಸ್ಯನೆಂಬ ಭಾವವೂ ಪ್ರದರ್ಶಿಸಲ್ಪಟ್ಟಿತು. **ಪ್ರಭವ** ಶಬ್ದದಿಂದ ಇಲ್ಲಿ ಸೃಷ್ಟಿಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದಲ್ಲವು ; ಮುಂದೆ **ಮತ್ತಃಸರ್ವಂಪ್ರವರ್ತತೇ** ಎಂದು ಹೇಳಿರುವದರಿಂದಲೂ, ಸೃಷ್ಟಿಯನ್ನು ಹೊಂದಿದ ವಸ್ತುಗಳಿಗೆ ಸ್ಥಿತಿಲಯಗಳ ತಪ್ಪಿದ್ದಲ್ಲವಾದುದರಿಂದಲೂ, ಈ ಪ್ರಭವಶಬ್ದವು, ಸ್ಥಿತಿಲಯಗಳಿಗೂ ಉಪಲಕ್ಷಣವಾಗಿ ಭಾವಿಸತಕ್ಕದ್ದು. ಅಹಂ ಸರ್ವಸ್ಯ ಪ್ರಭವಃ **ಇತ್ಯಾದಿ** ಪೂರ್ವಾರ್ಧವಲ್ಲಿ ಹೇಳಿರುವದರಿಂದ ಹೀಗೆ ಜಗತ್ತನ್ನು ಸೃಷ್ಟಿಸಿ, ಅದನ್ನೇ ವ್ಯಾಪಿಸಿರುವದರಿಂದ ಸರ್ವವನ್ನೂ ನಿಯಮಿಸುವ ಪಾರಮೈಶ್ವರ್ಯವುಂಟೆಂದು ಬೋಧಿತವಾಗಿ ಹಿಂದಿನ ಶ್ಲೋಕದ **ವಿಭೂತ್ಯರ್ಥವು** ವ್ಯಕ್ತಪಡಿಸಲ್ಪಟ್ಟಿತು. ಹಾಗೆ ಸಮಸ್ತದಸೃಷ್ಟಿನಿಯಮನಾದಿಗಳಿಂದ ಪರಿಪೂರ್ಣಕಾಮನಿಗೆ ಆಗತಕ್ಕದ್ದೇನು? ಎಂದು ಪ್ರಶ್ನಿಸಿದುದಾದರೆ,-**ಅಚಿದವಿಶಿಷ್ಟಾನ್ಪ್ರಳಯೇ ಜಂತೂನವಲೋಕ್ಯಜಾತನಿರ್ವೇದಾಃ । ಕರಣಕಳೇಬರಯೋಗಂ ವಿತರಸಿ ವೃಷಶೈಲನಾಥ ಕರುಣೇತ್ವಂ** ಎಂದು ಹೇಳಿರುವಹಾಗೆ ಅಪಾರ ಕರುಣೆಯಿಂದಲೂ ಇತರ ಕಲ್ಯಾಣ ಗುಣಗಳಿಂದಲೂ ಪ್ರೇರಿತನಾಗಿ ಸೃಷ್ಟ್ಯಾದಿ ಕರ್ಮಗಳನ್ನು ಮಾಡುತ್ತಾನೆ. ಇಂತಹ ಸ್ವಾಮಿಯ ನಿರ್ಹೇತುಕ ಕೃಪಾಪ್ರಭಾವವೇ ಕಾರಣವೆಂದು ಶ್ರೀ ಪರಾಶರರು **ಜಗತಾ ಮುಪಕಾರಾಯ ನ ಸಾ ಕರ್ಮನಿಮಿತ್ತಜಾ। ಚೇಷ್ಟಾ ತಸ್ಯಾಪ್ರಮೇಯಸ್ಯ ವ್ಯಾಪಿನ್ಯವ್ಯಾಹತಾತ್ಮಿಕಾ** ॥ (ವಿ, ಪು, ೬, ೭, ೨೨)

ಭಾ· **ಅಹಂ, ಸರ್ವಸ್ಯ. ವಿಚಿತ್ರ ಚಿದಚಿತ್ಪ್ರಪಂಚಸ್ಯ, ಪ್ರಭವಃ — ಉತ್ಪತ್ತಿಕಾರಣಮ್ ಸರ್ವಂ ಮತ್ತ ಏವ ಪ್ರವರ್ತತ ಇತೀದಂ ಮಮ ಸ್ವಾಭಾವಿಕಂ ನಿರಙ್ಕುಶೈಶ್ವರ್ಯಂ. ಸೌಶೀಲ್ಯಸೌಂದರ್ಯವಾತ್ಸಲ್ಯಾದಿಕಲ್ಯಾಣಗುಣಗಣಯೋಗಂ ಚ ಮತ್ವಾ, ಬುಧಾಃ-**

ಉಪದೇಶಿಸಿರುತ್ತಾರೆ, ಜಗತ್ತಿನ ಉಪಕಾರಕ್ಕಾಗಿಯೇ ಸೃಷ್ಟಿಯೂ ತನ್ನ ಅವತಾರರೂಪ ಉತ್ಪತ್ತಿಯೂ, ನಮ್ಮ ಹಾಗೆ ಕರ್ಮಫಲಭೋಗಕ್ಕಲ್ಲವು. ಅದಕ್ಕಾಗಿಯೇ **ನ ಸಾ ಕರ್ಮನಿಮಿತ್ತಜಾ** ಎಂದು ಹೇಳಿದರು. ಇಲ್ಲಿ "**ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ**" ಎಂಬ ಶ್ರುತ್ಯರ್ಥವೂ ಕೂಡಾ ಉಪಪಾದಿಸಲ್ಪಟ್ಟಿತು. **ತೇನ ವಿನಾ ತೃಣಮಪಿ ನ ಚಲತಿ** ಎಂಬಲ್ಲಿ ಹೇಳಿರುವ ಅಭಿಪ್ರಾಯವೂ ಬೋಧಿಸಲ್ಪಟ್ಟಿತು. ಇದನ್ನೇ ಮುಂದೆ "**ಅಧಿಷ್ಠಾನಂ ತಥಾ ಕರ್ತಾ**" ಎಂದಾರಂಭಿಸಿ "**ದೈವಂ ಚೈವಾತ್ರ ಪಂಚಮಂ**" ಎಂದುಪೂರ್ತಿಸಿದ ಶ್ಲೋಕದಲ್ಲಿಕಾರಣವನ್ನಾಗಿ ಹೇಳುತ್ತಾರೆ. ಹಾಗೆಯೇ ಚೇತನ ವ್ಯಾಪಾರವಾದರೋ ವ್ಯಾಜವೆಂದು **ನಿಮಿತ್ತಮಾತ್ರಂ ಭವ ಸವ್ಯಸಾಚಿನ್** (೧೧. ೩೩) ಎಂಬಲ್ಲಿ ವ್ಯಕ್ತಪಡಿಸಿರುತ್ತಾರೆ. ಆದುದರಿಂದ "**ಅಹಂ ಸರ್ವಸ್ಯ ಪ್ರಭವಃ ಮತ್ತಸ್ಸರ್ವಂ ಪ್ರವರ್ತತೇ**" ಎಂದು ಹೀಗೆ ಸ್ವಾರಸ್ಯಗರ್ಭಿತವಾದ ವಾಕ್ಯದಿಂದ ಇವೆಲ್ಲವನ್ನೂ ಉಪದೇಶಿಸಿದರು; **ಇತಿ ಮತ್ವಾ**-ಹೀಗೆ ತಿಳಿದಾದವರೆ, **ಬುಧಾಃ**-ಶಾಸ್ತ್ರಜ್ಞಾನ ವಿವೇಕಜ್ಞಾನಗಳಿಂದ ಶೋಭಿಸುವ ಪಂಡಿತರಾಗಿ, **ಭಾವ ಸಮನ್ವಿತಾಃ**-ಮುಂದನಾನು ತಿಳಿಸುವ ಮನೋಭಾವಗಳಿಂದ ಯುಕ್ತರಾಗಿ, **ಮಾಂ ಭಜನ್ತೇ**— ನನ್ನನ್ನು ಅಸ್ಖಲಿತ ಭಕ್ತಿಯೋಗದಿಂದ ಧ್ಯಾನಿಸುವರಾಗುತ್ತಾರೆ ಇಲ್ಲಿ ಮತ್ವಾ ಎಂಬಲ್ಲಿ ತ್ವಾ ಪ್ರತ್ಯಯ ಸ್ವಾರಸ್ಯದಿಂದ, **ಈ** ವಿಭೂತಿಯೋಗಗಳ ತತ್ವತಃ-ತಿಳಿಯೋಣವೆಂದರೆ, ನಾನು ಸರ್ವ ಕಾರಣನೂ, ಆದುದರಿಂದ ಸರ್ವಪ್ರವರ್ತನೆಗೂ ಕಾರಣನೂ ಎಂಬ ಜ್ಞಾನ ಯಾವಾಗ ಉಂಟಾಯಿತೋ. ಆಗ ಆತನು ಬುಧನಾಗಿ ಭಾವಸಮನ್ವಿತನಾಗಿ ನನ್ನನ್ನು ಅವ್ಯಭಿಚರಿತ ಭಕ್ತಿಯೋಗದಿಂದ ಧ್ಯಾನಿಸುವನು ಎಂಬ ಸ್ವಾರಸ್ಯಾರ್ಥವು ವ್ಯಕ್ತಪಡುತ್ತದೆ.

**ಭಾಷ್ಯಾರ್ಥವು:**—ಪೂರ್ವಾರ್ಧವು ಹಿಂದಿನ ಶ್ಲೋಕದ ಅನುವಾದ ಪೂರ್ವಕ ಉಪನ್ಯಾಸವೆಂದು ತೋರಿಸಿ, ಅಂತಹ ಜ್ಞಾನವು ಹೇಗೆ ಭಕ್ತಿವರ್ಧಕವಾಗಿ ಪರಿಣಮಿಸುತ್ತದೆಂಬುದನ್ನು ಪ್ರದರ್ಶಿಸುತ್ತಾರೆ.—**ಅಹಂ**-ಹಿಂದೆ ಹೇಳಿದಹಾಗೆ ಮಹತ್ತಾದ ವಿಭೂತಿ ಕಲ್ಯಾಣಗುಣಯೋಗವುಳ್ಳನಾನು, ಅದನ್ನೇ ಮುಂದೆ ಅನುವಾದ ಮಾಡುತ್ತಾರೆ,—**ಸರ್ವಸ್ಯ**—ಸಮಸ್ತಕ್ಕೂ ಎಂದರೆ **ವಿಚಿತ್ರಚಿದಚಿತ್ಪ್ರಪಂಚಸ್ಯ**—ನಾನಾ ಬಗೆಯಾದ ವೈಚಿತ್ರ್ಯತೆಯುಳ್ಳ ಜೀವಾತ್ಮರೇನು ಪ್ರಕೃತಿಯೇನು ಇವುಗಳ ಸಮ್ಮೇಳನದಿಂದ ವಿಚಿತ್ರವಾದ ಜಗತ್ತಿನ, ಒಬ್ಬ ಮನುಷ್ಯ ದೇಹವನ್ನು ವಿಮರ್ಶಿಸಿ ನೋಡಿಯೇ ಮಹರ್ಷಿಗಳು "**ವಿಚಿತ್ರ ದೇಹ ಸಂಪತ್ತಿಃ**" ಎಂದು ಹೇಳಿಬಿಟ್ಟರು, ಅದು ಯಾರಿಗೆ ಸಮರ್ಪಿಸಲು ಯೋಗ್ಯವೆಂದರೆ "**ಈಶ್ವರಾಯ ನಿವೇದಿತುಂ**" ಎಂದು ಮುಂದೆ ಹೇಳುತ್ತಾರೆ, ಇಂತಹ ವಿಚಿತ್ರ ಪ್ರಪಂಚದ **ಪ್ರಭವಃ** ಎಂದರೆ ಉತ್ಪತ್ತಿಗೆ ಕಾರಣವು; **ಸರ್ವಂ** —ಸಮಸ್ತವೂ, **ಮತ್ತ ಏವ ಪ್ರವರ್ತತೇ**—ನನ್ನಿಂದಲೇ ಪ್ರವರ್ತಿಸುತ್ತದೆ. ಯಾವಾಗ ನಾನು ಉತ್ಪತ್ತಿಗೆ ಕಾರಣನೆಂದಾಯಿತೋ, ಸ್ಥಿತಿಲಯಾದಿಗಳಿಗೂ ಕಾರಣನೆಂದು ಹೇಳುವ ಆವಶ್ಯಕವಿಲ್ಲವು, ಏಕೆಂದರೆ **ಜನ್ಮಾದ್ಯಸ್ಯ ಯತಃ**-ಎಂಬ ಸೂತ್ರವೂ, ಅದಕ್ಕೆ ವಿಷಯವಾಕ್ಯವಾದ ಶ್ರುತಿಯೂ "**ಯತೋ ವಾ ಇಮಾನಿ ಭೂತಾನಿ ಜಾಯನ್ತೇ. ಯೇನ ಜಾತಾನಿ ಜೀವಂತಿ, ಯತ್ಪ್ರಯನ್ತ್ಯಭಿಸಂವಿಶನ್ತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ**" (ತೈ-ಭೃಗು) ಯಾವನಿಂದ ಸೃಷ್ಟಿಸ್ಥಿತಿಲಯಾದಿಗಳೋ ಆತನನ್ನೇ ಧ್ಯಾನಿಸತಕ್ಕದ್ದು. ಆತನೇ ಪರಬ್ರಹ್ಮನೆಂದು ಉಪದೇಶಿಸುತ್ತವೆ.

**"ತಜ್ಜಲಾನಿತಿ ಶಾನ್ತ ಉಪಾಸೀತ"**(ಛಾಂ.೩-೧೪-೧) ಎಂಬ ಶ್ರುತ್ಯರ್ಥವೂ ಅನುಸಂಧೇಯವು. ಶ್ರೀ ಪರಾಶರರೂ ಹಾಗೆಯೇ **"ವಿಷ್ಣೋಸ್ಸಕಾಶಾದುದ್ಭೂತಂಜಗತ್ತತ್ರೈವಚ ಸ್ಥಿತಂ। ಸ್ಥಿತಿ ಸಂಯಮಕರ್ತಾಸೌ ಜಗತೋಽಸ್ಯ ಜಗಚ್ಚ ಸಃ"** (ವಿ.ಪು.೧.೧.೩೧) ಈ ಜಗತ್ತು ಶ್ರೀ ಮಹಾವಿಷ್ಣುವಿನ, **ಸಕಾಶಾತ್**-ಸಙ್ಕಲ್ಪಜ್ಞಾನದಿಂದ ಉತ್ಪತ್ತಿಯನ್ನು ಹೊಂದಿರುತ್ತದೆಂದೂ, ಅವಕ್ಕೆ ಅಂತರಾತ್ಮನಾಗಿ ಅವರಲ್ಲೇ ಇದ್ದು ನಿಯಮನ ಮಾಡುವನೆಂದೂ, ಇಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗಿದ್ದರೂ, ಯತಿವರ್ಯರು **ಪ್ರಭವಃ-ಉತ್ಪತ್ತಿಕಾರಣಮ್** ಎಂದು ಇಷ್ಟುಮಾತ್ರ ಹೇಳಿ ಲಯದವರೆಗೂ ಏಕ ಹೇಳಲಿಲ್ಲವೆಂದರೆ, ಅದು ಅಪ್ರಕೃತವು. ಈಗ ಅರ್ಜುನನಿಗೆ ತನ್ನ ವಿಭೂತಿ ಯೋಗಗಳ ಮಾಹಾತ್ಮ್ಯವನ್ನು ಹೇಳಿ ಭಕ್ತಿಯೋಗದ ಉತ್ಪತ್ತಿ ವೃದ್ಧಿಗಳನ್ನುಂಟುಮಾಡುವ ಪ್ರಕರಣವಾದುದರಿಂದ ಅಷ್ಟುಮಾತ್ರವೇ ಮೂಲದಲ್ಲಿ ಹೇಳಲ್ಪಟ್ಟಿತು; ಅದಕ್ಕನುಸಾರವಾಗಿ ಭಾಷ್ಯವು. **ಉತ್ಪತ್ತಿ ಕಾರಣಮ್** ಎಂಬ ವ್ಯಾಖ್ಯಾನದಿಂದ,ಚತುರ್ಮುಖಾದಿ ಈಗಿನ ಪ್ರಾಣಿವರ್ಗದಿಂದಲೂ ಉಂಟಾದ ಉತ್ಪತ್ತಿಗೂ ಕೂಡ ಆತನೇ ಕಾರಣನೆಂಬಭಾವವೂ, **ಸರ್ವಸ್ಯ** ಎಂಬ ಪದದ ಮೂಲಕ ಅರ್ಥವಾಗಿ ತೋರಿಬರುತ್ತದೆಂದು ಹೇಳುವದಕ್ಕಾಗಿ ಹಾಗೆ ಪ್ರಯೋಗವು ಇದನ್ನೇ ಮುಂದಿನ ವಾಕ್ಯವೂ **ಸಮರ್ಥಿಸುತ್ತದೆ. ಸರ್ವಂ ಮತ್ತ ಏವ ಪ್ರವರ್ತತೇ**—ವಿಶ್ವದಲ್ಲಿ ಕಾಣಬರುವ ಸಮಸ್ತ ಪ್ರವೃತ್ತಿಗಳೂ ಕೂಡ ನನ್ನಿಂದಲೇ ಉಂಟಾದವು ಎಂಬ ಭಾವವು. ನೀನು ಈ ವಿಶ್ವದ ಸಮಸ್ತ ಸತ್ತಾಸ್ಥಿತಿ ಪ್ರವೃತ್ತಿಗಳಿಗೆ ಕಾರಣನು, ನಿನಗೊಬ್ಬ ಕಾರಣನುಂಟೋ ಎಂದರೆ ಇಲ್ಲವೆಂಬ ಭಾವವೂ ಸಹ, **ಮತ್ತಸ್ಸರ್ವಂ ಪ್ರವರ್ತತೇ** ಎಂಬ ಮೂಲದ ವಾಕ್ಯದಲ್ಲಿ ತೋರುತ್ತದೆಂದು ತೋರಿಸುವದಕ್ಕಾಗಿ ವ್ಯಾಖ್ಯಾನದಲ್ಲಿ **ಮತ್ತ ಏವ** ಎಂದು ಅವಧಾರಣ ಪ್ರಯೋಗವಿರುತ್ತದೆ. ಹೀಗೆ ಎಲ್ಲಾ ಪ್ರವೃತ್ತಿಯೂ ನನ್ನಿಂದಲೇ, **ಇತಿ**-ಎಂಬುದಾಗಿ. **ಮಮ ಸ್ವಾಭಾವಿಕಂ ನಿರಙ್ಕುಶೈಶ್ವರ್ಯಮ್**—ನನಗೆ ಸಹಜವಾದ ಅಪ್ರತಿಹತವಾದ ತುಂಬಾ ಮಹತ್ತಾದ ವಿಶ್ವನಿಯಮನಶಕ್ತಿಯನ್ನೂ, ಇಲ್ಲಿ **ಸ್ವಾಭಾವಿಕಂ** ಎಂದು ಹೇಳಿದುದರಭಿಪ್ರಾಯವು, ಅವಿದ್ಯಾದಿ ಉಪಾಧಿಗಳ ಮೂಲಕವಾಗಿ ಹಾಗೆ ನಾನು ಪ್ರವರ್ತಿಸುವದಿಲ್ಲವೆಂದು ತಿಳಿಸುವದಕ್ಕಾಗಿ ಎಂದು ಭಾವಿಸಬಹುದು. ಹಾಗಾದರೆ ಹೀಗೆ ಸೃಷ್ಟಿಸಲು ಕಾರಣವೇನು? **"ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ"** ಎಂದಿದೆಯಲ್ಲಾ, ಪ್ರಯೋಜನವಿಲ್ಲದೆ ಯಾರೂ ಪ್ರವೃತ್ತಿಸುವದಿಲ್ಲವಲ್ಲಾ ಎಂದರೆ, ನನ್ನ ಮಹತ್ತಾದ ಕಲ್ಯಾಣಗುಣಗಳ ಯೋಗವು ನನ್ನನ್ನು ಹಾಗೆ ನಿರ್ಬಂಧಿಸಿ,ಪ್ರಚೋದಿಸುವಹಾಗೆ ಮಾಡುತ್ತದೆಂಬ ಭಾವವೂ ಕೂಡ **ಮತ್ತಸ್ಸರ್ವಂ ಪ್ರವರ್ತತೇ** ಎಂಬಲ್ಲಿ ಅಡಗಿದೆ ಎಂದೂ, ಅಂತಹ ಪ್ರವರ್ತನೆಗೆ ಅದೇ ಬೀಜವೆಂದು ತೋರ್ಪಡಿಸುತ್ತಾರೆ -**ಸೌಶೀಲ್ಯ ಸೌನ್ದರ್ಯ ವಾತ್ಸಲ್ಯಾದಿ ಕಲ್ಯಾಣಗುಣಗಣಯೋಗಂಚ—ಸೌಶೀಲ್ಯ** ಇದು ಸಂಸಾರ ಬಂಧಕ್ಕೆ ಸಿಕ್ಕಿ ಕ್ಲೇಶಿಸುತ್ತಾ ನೈಚ್ಯಭಾವವನ್ನು ಹೊಂದಿರುತ್ತಾರಲ್ಲಾ ಎಂಬ ಪರಿತಾಪದಿಂದ ಅವರೊಂದಿಗೆ ಸೇರಿ ಅವರಿಗೆ ಬಂಧಮುಕ್ತ್ಯುಪಾಯವನ್ನು ತೋರ್ಪಡಿಸಿ ಕೊಡುವ ಗುಣವು; ಇದು ಕುಚೇಲ ವಿದುರಾದಿಗಳೊಂದಿಗೂ, ಶಬರಿ ಸುಗ್ರೀವಾಂಜನೇಯ ಗುಹಾದಿಗಳೊಂದಿಗೂ ಏಕೀಭವಿಸುವಂತಹ ಪ್ರೀತಿ ವಿಶೇಷವು, **ಸೌಂದರ್ಯ**-ಈಗ ಕೃಷ್ಣಾವತಾರಿಯಾಗಿ **ಸಾಕ್ಷಾನ್ಮನ್ಮಥ ಮನ್ಮಥನಾಗಿ**, ಭಾಗವತೋತ್ತಮರೇ ಗೋಪಿಕಾಸ್ತ್ರೀಯರಾಗಿ ಅವತರಿಸಿರುವವರ ಮನಸ್ಸನ್ನೂ, **ಅತೀವ ಪ್ರಿಯದರ್ಶನನಾಗಿ**, ವಾನರಾದಿ ಅನೇಕ ಭಕ್ತರ ಮನಸ್ಸನ್ನೂ, ಆಕರ್ಷಿಸುವದಕ್ಕಾಗಿ ಏರ್ಪಟ್ಟ ದಿವ್ಯಮಙ್ಗಳ ವಿಗ್ರಹದ ಸೊಬಗು. **ವಾತ್ಸಲ್ಯ**—ಈ ಲೋಕದಲ್ಲಿ ಬದ್ಧಚೇತನನಾಗಿ ಯಾವಾಗ ಹುಟ್ಟಿದನೋ ಆತನು ಪಾಪಿಯಾಗಿ ಹೋದ ಎಂಬುದು ಹಣೆಯಲ್ಲೇ ಪ್ರಕಾಶವಾಗಿ ಬರೆದ ವಿಷಯವು, ಅಂತವರ ವಿಷಯದಲ್ಲೂ **"ದೋಷೋ ಯದ್ಯಪಿ ತಸ್ಯಸ್ಯಾತ್ ಸತಾ ಮೇತದಗರ್ಹಿತಂ** (ರಾ. ಯು.

ಭಾ. **ಜ್ಞಾನಿನಃ, ಭಾವ ಸಮನ್ವಿತಾಃ, ಮಾಂ ಸರ್ವಕಲ್ಯಾಣ ಗುಣಾನ್ವಿತಂ ಭಜನ್ತೇ, ಭಾವಃ—ಮನೋವೃತ್ತಿ ವಿಶೇಷಃ । ಮಯಿ ಸ್ಪೃಹಯಾಲವೋ ಮಾಂ ಭಜನ್ತ ಇತ್ಯರ್ಥಃ ॥೮॥**

---

೧೮-೩.) ದೋಷವೆಷ್ಟಿದ್ದರೇನು? ಎಂದು ಅವೆಲ್ಲವನ್ನೂ ಆಶ್ರಯಿಸಿದ ಒಡನೆಯೇ ಮರೆತುಬಿಡುವ ಕಲ್ಯಾಣಗುಣವು, ಹಾಗೆಯೇ ಇನ್ನೊಂದು ಕಡೆಯಲ್ಲೂ **"ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ। ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ"** ಎಂದು (ರಾ. ಅಯೋಧ್ಯಾ.) ಮಹರ್ಷಿಯು ಉಪಪಾದಿಸಿರುತ್ತಾರೆ; ಆತನನ್ನು ಆಶ್ರಯಿಸೋಣವನ್ನೂ ಕೂಡ **"ಉದಾರಾಸ್ಸರ್ವ ಏವೈತೇ"** (ಗೀ. ೭–೧೮) ಎಂದು ಹೇಳಿರುವ ಹಾಗೆ ಕರುಣಾಮಹೋದಧಿಯು; ಪರಮೌದಾರ್ಯದಿಂದ ಒಂದು **ಕಥಂಚಿದುಪಕಾರವೆಂದೇ** ಭಾವಿಸುವನು. ಯಾವಾಗ ತನ್ನನ್ನು ಆಶ್ರಯಿಸಿಬಿಟ್ಟನೋ ಆಗ ಆತನು ತನ್ನವನಾದನು; ಇದು **ಆತ್ಮವತ್ತಯಾ**—ಎಂಬುದರ ಅಭಿಪ್ರಾಯವು. **ಆಗ ನ ಸ್ಮರತ್ಯಪಕಾರಾಣಾಂ ಶತಂ**—ಶತಾಪರಾಧಿಯಾಗಿದ್ದರೂ, ಆ ದೋಷಗಳನ್ನು ಸ್ಮರಿಸದೆ, ಕಾಪಾಡುವನು, ಇಂತಹ ಗುಣವು ವಾತ್ಸಲ್ಯವೆನಿಸುತ್ತದೆ. **ಆದಿ** ಪದದಿಂದ ಇನ್ನೂ ಇತರ ಸೌಲಭ್ಯ, ಸರ್ವಜ್ಞತೆ, ಕಾರುಣ್ಯವೇ ಮೊದಲಾದ ಕಲ್ಯಾಣಗುಣಗಳು ಸಙ್ಗ್ರಹಿಸಲ್ಪಟ್ಟವು; ಇಂತಹ **ಕಲ್ಯಾಣಗುಣಗಣಯೋಗಂಚ**-ಕಲ್ಯಾಣಗುಣಗಳಸಮೂಹದಿಂದ ಸೇರಿರುವಿಕೆಯನ್ನೂ ಸಹ, ಹೀಗೆ ಇಂತಹ ಅದ್ಭುತಗಳಾದ **ನಿರಂಕುಶೈಶ್ವರ್ಯರೂಪವಿಭೂತಿಯನ್ನೂ ಇಂತಹ ಕಲ್ಯಾಣಗುಣಯೋಗವನ್ನೂ ಸಹ, ಮತ್ವಾ**- ಚನ್ನಾಗಿ ತಿಳಿದು, **ಬುಧಾಃ**-ಎಂದರೆ **ಜ್ಞಾನಿನಃ** - ಇಂತಹ ಶಾಸ್ತ್ರಜನ್ಯಜ್ಞಾನವುಳ್ಳವರಾಗಿ, ಭಾವಸಮನ್ವಿತರಾಗಿ, **ಮಾಂ** - ಹೀಗೆ **ಸರ್ವ ಕಲ್ಯಾಣಗುಣಾನ್ವಿತ**ನಾಗಿರುವ ನನ್ನನ್ನು, ಹೀಗೆ ಹೇಳುದುದರಿಂದ ಅವತಾರ ಕಾಲದ ಸೌಲಭ್ಯವೂ ಹೇಳಿದಂತಾಯಿತು. ಅದೂ ಅಲ್ಲದೆ ಹಿಂದೆ **ಅಹಂ ಸರ್ವಸ್ಯ ಪ್ರಭವಃ** ಎಂಬಲ್ಲಿ ಅಸ್ಮಚ್ಛಬ್ದವಿರುವವರಿಂದ ಸುಮ್ಮನೇ ಭಜನ್ತೇ ಎಂದು ಇಷ್ಟು ಹೇಳಿದರೇನೆ ಅರ್ಥವಾಗುವಾಗ, **ಮಾಂ**-ಎಂದು ಪುನಃ ಹೇಳಿದುದು ನಿರರ್ಥಕವಲ್ಲವೋ ? ಎಂದರೆ, **"ಕಾರಣಂ ತು ಧ್ಯೇಯಃ"** ಎಂದು ಹೇಳಿರುವದರಿಂದ **ತಾನೇ** ಜಗತ್ಕಾರಣನು ಎಂದು ಹೇಳುವದಕ್ಕಾಗಿ **ಅಹಂ** ಎಂಬ ಶಬ್ದವೆಂದು ಭಾವಿಸಬಹುದು; ಮತ್ತು ಭಜನಕ್ಕೆ ದಿವ್ಯಮಙ್ಗಳವಿಗ್ರಹವೂ ಆವಶ್ಯಕವು, ನಿರ್ಗುಣಬ್ರಹ್ಮವಲ್ಲವು. ಈಗ ಕೃಷ್ಣಾವತಾರಿಯಾಗಿರುವ ತನ್ನ ದಿವ್ಯಮಙ್ಗಳವಿಗ್ರಹವೂ ಧ್ಯೇಯವೇ ಎಂದು ತೋರಿಸುವದಕ್ಕಾಗಿಯೂ, ಪುನಃ **ಮಾಂ**-ಎಂಬ ಪ್ರಯೋಗವು. **ಭಜನ್ತೇ**-ಉಪಾಸಿಸುತ್ತಾರೆ. ಇಲ್ಲಿ **ಭಾವ**ಶಬ್ದವು **ಮನೋವೃತ್ತಿ ವಿಶೇಷಃ**-ಮನಸ್ಸಿನ ವ್ಯಾಪಾರ ವಿಶೇಷವನ್ನು ಬೋಧಿಸುತ್ತದೆ. ಇವರ ತಾತ್ಪರ್ಯವೇನೆಂದರೆ, ಭಾವಸಮನ್ವಿತರಾಗುತ್ತಾರೆಂಬುದರಿಂದ **ಮಯಿ ಸ್ಪೃಹಯಾಳವಃ-** ಇನ್ನು ಯಾವುವರಲ್ಲೂ ಇಚ್ಛೆಯಿಲ್ಲದೆ ನನ್ನಲ್ಲೇ ಆಸೆಯುಳ್ಳವರಾಗಿ, **ಮಾಂ ಭಜನ್ತ ಇತ್ಯರ್ಥಃ** ನನ್ನನ್ನೇ ಧ್ಯಾನಿಸುತ್ತಾರೆಂಬ ತಾತ್ಪರ್ಯವು, ಎಂದರೆ ಮನೋವೃತ್ತಿಯನ್ನು ಯಾವಾಗಲೂ ನನ್ನಲ್ಲೇ ಇಟ್ಟವರಾಗುತ್ತಾರೆ; ಇನ್ನು ಯಾವವರಲ್ಲೂ ಅವರಿಗೆ ಇಚ್ಛೆಯು ಇರುವದಿಲ್ಲವೆಂಬ ಭಾವವು, ಯಾವಾಗಲೂ ಆತನ ಸ್ಮರಣೆಯು, ಆತನ ವಿಷಯವಾದ ಆಲಾಪವು, ಆತನ ದಿವ್ಯ ಚೇಷ್ಟೆಗಳ ಕಥಾಶ್ರವಣವು, ಆತನ ಧ್ಯಾನವು, ಹೀಗೆಯೇ ತಮ್ಮ ಕಾಲವನ್ನೆಲ್ಲಾ ಕಳೆಯುತ್ತಾ, ನನ್ನಲ್ಲಿ ಭಕ್ತಿಯನ್ನು ವೃದ್ಧಿಮಾಡಿಕೊಳ್ಳುತ್ತಾರೆಂಬ ಭಾವವು. ಇವನ್ನೇ ಮುಂದಿನ ಶ್ಲೋಕದಲ್ಲಿ ಉಪಪಾದಿಸಿ ಹೇಳುತ್ತಾರೆ. ಹೀಗೆ ಭಾವಶಬ್ದಕ್ಕೆ ಮನೋವೃತ್ತಿ ವಿಶೇಷವೆಂದು ಅರ್ಥಮಾಡಿದರೇನೇ, ಭಾವಸಮನ್ವಿತತ್ವದ ಪ್ರಪಂಚವು ಮುಂದಿನ ಶ್ಲೋಕವು, ಎಂಬ ಸಙ್ಗತಿಯು ತೋರೆಯುತ್ತದೆ.

ಭಾ. ಅವ. ಕಥಮ್ ?—

ಮೂ. ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥ ೯.

ಹಾಗಲ್ಲದೆ ಬೇರೆ ಅರ್ಥಗಳನ್ನು ಹೇಳುವವರಿಗೆ ಸದ್ಗತಿಯು ದೊರೆಯುವುದು ಕಷ್ಟವು. ॥ ೮ ॥

**ಭಾಷ್ಯಾವತಾರಿಕೆಯ ಅರ್ಥವು:**— ಹೇಗೆ ಸೃಷ್ಟ್ಯಾದಿಗಳಿಗೆ ಸರ್ವಕಾರಣಭೂತನಾಗಿ ಅವುಗಳನ್ನೆಲ್ಲಾ ನಿಯಮಿಸುವ ನಿರಙ್ಕುಶೈಶ್ವರ್ಯವೇನು, ಕಲ್ಯಾಣಗುಣಗಳ ಯೋಗವೇನು, ಇವುಗಳಿಂದ ನಿರತಿಶಯ ಮಾಹಾತ್ಮ್ಯಯುಳ್ಳವನೆಂದು ಭಕ್ತಿಯೋಗಾರಂಭಕನು ಯಾವಾಗ ತಿಳಿದನೋ, ಆಗ ಬುಧನಾಗಿ, ಭಾವಸಮನ್ವಿತನಾಗಿ ಆಗುವನೆಂದು ಹೇಳಿದರು. ಹಾಗೆ ಮನೋವೃತ್ತಿಯೆಲ್ಲಾ ಪರಮಾತ್ಮನಾದ ನನ್ನಲ್ಲೇ ಇದ್ದುದಾಗುತ್ತದೆಂದು ಹೇಗೆ ತಿಳಿಯಬಹುದೆಂದು ಪ್ರಶ್ನಿಸಿದರೆ, ಅದಕ್ಕೆ ಉತ್ತರವು ಈ ೯ನೆಯ ಶ್ಲೋಕದಲ್ಲಿ ದೊರೆಯುವದರಿಂದ, ಹೇಗೆ ಭಾವಸಮನ್ವಿತರೆಂದು ಹೇಳಬಹುದೆಂದರೆ ಉತ್ತರವನ್ನೀಯುತ್ತಾರೆಂಬ ಅಭಿಪ್ರಾಯದಿಂದ, **ಕಥಂ** ಎಂದು ಅವತಾರಿಕೆಯನ್ನು ಕೊಟ್ಟಿರುತ್ತಾರೆ.

**ಮೂಲಕ್ಕೆ ಅರ್ಥವು:**— ಇಂತಹ ವಿಭೂತಿ ಮತ್ತು ಕಲ್ಯಾಣಗುಣಗಣಾದಿಯೋಗಜ್ಞಾನದಿಂದ ಇಂತಹ ಪರಿಪಕ್ವವಾದ ಭಕ್ತಿವೃದ್ಧಿಯುಂಟಾಗಿ, ಹೇಗೆ ಬುಧರಾಗಿ ಭಾವಸಮನ್ವಿತರಾದರೆಂದು ತಿಳಿಯಬಹುದು ? ಎಂದರೆ, ಸರ್ವಪ್ರವೃತ್ತಿಗೂ ಮನಸ್ಸೇ ಮೂಲಾಧಾರವಾದುವದರಿಂದ ಅವರುಗಳ ವ್ಯಾಪಾರಗಳಿಂದಲೇ ಅವರುಗಳ ಚಿತ್ತವೃತ್ತಿಯನ್ನು ಗ್ರಹಿಸಬಹುದು. ಇದು ಭಕ್ತಿಯು ವೃದ್ಧಿಹೊಂದಿ ಪರಿಪಾಕಾವಸ್ಥೆಗೆ ಬರುವ ದೆಶೆಯನ್ನು ಸೂಚಿಸುತ್ತದೆಂದು ಭಾವಿಸತಕ್ಕದ್ದು. ಅವರುಗಳು **ಮಚ್ಚಿತ್ತಾಃ**- ನನ್ನಲ್ಲೇ ಸಕ್ತವಾದಮನಸ್ಸನ್ನುಳ್ಳವರಾಗಿ, **ಮದ್ಗತಪ್ರಾಣಾಃ**-ನನ್ನನ್ನೇ ಹೊಂದಿದ ಪ್ರಾಣವುಳ್ಳವರಾಗಿ, ಎಂದರೆ ನನ್ನ ಚಿಂತನಾದಿಗಳಿಲ್ಲದೇ ಹೋದರೆ ಜಲದಿಂದ ತೆಗೆದುಹಾಕಿದ ಮತ್ಸ್ಯಗಳಂತೆ **"ಮತ್ಸ್ಯಾ ಇವ ಜಲೋದ್ಧೃತಾಃ"** ಪ್ರಾಣವನ್ನೇ ಧರಿಸಲಾರರಾಗಿ, **ಪರಸ್ಪರಂ ಬೋಧಯಂತಃ**-ಅವರವರಿಗೆ ತಿಳಿದ ಪರಮಾತ್ಮನ ಸ್ವರೂಪರೂಪಗುಣ ವಿಭವೈಶ್ವರ್ಯಾದಿಗಳ ವಿಷಯವಾದ ಜ್ಞಾನವನ್ನು ಪರಸ್ಪರ ಬೋಧಿಸುವವರಾಗಿಯೂ, **ಪರಸ್ಪರಂ ಕಥಯನ್ತಶ್ಚ**-ಇತಿಹಾಸಗಳಲ್ಲಿ ಬೋಧಿಸಿರುವ ಗುಣಚೇಷ್ಟಿತಗಳನ್ನು ಪರಸ್ಪರ ಹೇಳುವವರಾಗಿ, ಹೀಗೆ ಪರಸ್ಪರ ಬೋಧನ ಕಥನಗಳಿಂದ ಅವರಿಗುಂಟಾಗುವ ಫಲವೇನು ಎಂದರೆ ಕ್ರಮವಾಗಿ ಪರಸ್ಪರ ಬೊಧಿಸುವವರು ಸಂತೋಷಪಡುತ್ತಾರೆಂದು **ತುಷ್ಯಂತಿ ಚ** ಎಂಬುದರಿಂದಲೂ ದಿವ್ಯ ಚೇಷ್ಟಿತಗಳನ್ನು ವರ್ಣಿಸುವವರು ಕರ್ಣಾನಂದವನ್ನುಂಟುಮಾಡುವರು ಮತ್ತು ಹೊಂದುವರೆಂದೂ ಅರ್ಥಉಂಟಾಗುವದಕ್ಕಾಗಿ **ರಮಂತಿ ಚ** ಎಂಬುದರಿಂಲೂ ಹೇಳಲ್ಪಟ್ಟಿರುತ್ತದೆ. ಎರಡು ಕಡೆಯಲ್ಲೂ ಚಕಾರವು ಎರಡುಸಲ ಹೇಳಿರುವದರಿಂದ ಸಮುಚ್ಚಯಾರ್ಥವಾಗಿ, ಮೊದಲಿನ ಅನುಭವವು ಸಂತೋಷರೂಪವಾಗಿ ಅದನ್ನು ಬೋಧಿಸುತ್ತಾ ಬೋಧಿಸುತ್ತಾ ಕೇಳುತ್ತಾ ಕೇಳುತ್ತಾ ಅವರ ಪರಿಪಾಕದೆಶೆಯಾದ ಪರಮಾನಂದದಿಂದ ಭರಿತರಾಗುವರು ಎಂದಾಗಲಿ ಅರ್ಥ ಹೇಳಬಹುದು. ಅಥವಾ ಬೋಧಯನ್ತಃ ಕಥಯನ್ತಃ ಎಂಬುದರ ಮಧ್ಯೆ **ಪರಸ್ಪರಂ** ಎಂದಿರುವದರಿಂದ ಗುಣಾನುಭವವನ್ನಾಗಲಿ,ಆತನ ಸ್ವರೂಪಸ್ವಭಾವವನ್ನಾಗಲಿ, ಕೇಳುವವರಿದ್ದರೆ ಪರಸ್ಪರಂ ಕಥಯನ್ತಃ ಎಂದು ಅರ್ಥಹೇಳಿ, ಪರಸ್ಪರ ಹೇಳಿಕೇಳಲು ಅವಕಾಶವಿಲ್ಲದಿದ್ದರೆ, ತಾವೇ **ತುಷ್ಯಂತಿ ಚ ರಮನ್ತಿ ಚ** - ತಾವೇ ಮನಸ್ಸಿನ ಆಹ್ಲಾದವನ್ನು ಹೊಂದಿ ಎಂದು ತುಷ್ಯಂತಿ ಎಂಬುದರಿಂದಲೂ,

ಭಾ. **ಮಚ್ಚಿತ್ತಾಃ—ಮಯಿ ನಿವಿಷ್ಟ ಮನಸಃ, ಮದ್ಗತಪ್ರಾಣಾಃ—ಮದ್ಗತಜೀವಿತಾಃ, ಮಯಾ ವಿನಾತ್ಮಧಾರಣಮಲಭಮಾನಾ ಇತ್ಯರ್ಥಃ; ಸ್ವೈಃ ಸ್ವೈರನುಭೂತಾ**

ಆ ಸಂತೋಷವ್ಯಾಪಾರಗಳಾದ ಗಾಯನ, ನರ್ತನ, ಆನಂದ ಬಾಷ್ಪವನ್ನು ಸುರಿಸೋಣ, ಪದೇ ಪದೇ ನಮಸ್ಕರಿಸೋಣ ಇತ್ಯಾದಿ **"ಬದ್ಧೇನಾಂಜಲಿನಾ ನತೇನಾ ಶಿರಸಾ"** ಎಂದು ಮುಕುಂದ ಮಾಲೆಯಲ್ಲಿ ಹೇಳಿರುವ ಸರ್ವವ್ಯಾಪಾರಗಳೂ **ರಮನ್ತಿಚ** ಎಂಬುದರಿಂದಲೂ ,ಸಙ್ಗೃಹೀತವೆಂದೂ, ಭಾವಿಸಬಹುದು. ಇಲ್ಲಿ ಮಚ್ಚಿತ್ತರಾಗಿ ಮದ್ಗತ ಪ್ರಾಣರಾಗುವದರಿಂದಲೇ, ಪರಸ್ಪರ ಬೋಧನ ಕಥನ ವ್ಯಾಪಾರಗಳುಂಟಾಗುತ್ತವೆ; ಅದರಿಂದಲೇ ಅವರುಗಳು **ತುಷ್ಯನ್ತಿಚ ರಮನ್ತಿಚ** ಎಂಬಲ್ಲಿ ಹೇಳಿದ ಅವಸ್ಥೆಯುಳ್ಳವರಾಗುವರು ಎಂಬುದು ತಾತ್ಪರ್ಯವು. ಭಾವಸಮನ್ವಿತತ್ವವು ಉಂಟಾದುದಕ್ಕೆ ಏನು ಗುರುತು ಎಂದರೆ **ಮಚ್ಚಿತ್ತರಾಗಿ ಮದ್ಗತಪ್ರಾಣರಾಗುವದೇ.** ಉಪಾಸಕನಿಗೆ ಉಂಟಾಗುವ ಆನಂದಪರೀವಾಹವು. **ಈ** ರೀತಿಯಲ್ಲಿ ಪರಿಣಮಿಸುತ್ತದೆ ಎಂಬ ಭಾವವು. ಭಜನ ಸುಖವು ವಿಪುಲವಾದುದೆಂದು ಶ್ರೀ ದೇಶಿಕರವರು ಕೊಂಡಾಡಿರುತ್ತಾರೆ. ಶ್ರುತಿಗಳೂ ಹಾಗೆಯೇ ಬೋಧಿಸುತ್ತವೆ. ಇಂತಹ ಭಜನಾನಂದವನ್ನು ಹೊಂದಿದವರಿಗೆ ಸಂಸಾರ ಕ್ಲೇಶಗಳು, ಕುಚೇಲರಿಗೆ ದಾರಿದ್ರ್ಯಾದಿ ಕ್ಲೇಶಗಳು ಬಾಧಿಸದೇ ಇದ್ದ ತೆರದಿ,ಸ್ವಲ್ಪವೂ ಬಾಧಿಸಲಾರವು. ಅಂತವರಿಗೆ ಇದೇ ಭೂವೈಕುಂಠವು. ಇದು ಸುಖ ಇದು ದುಃಖ ಎಂಬ ವಿವೇಚನೆಯೇ ಇರುವದಿಲ್ಲವು. ಸದಾ ಧಿಯಾರಮನ್ತೇ ಎಂದು ಹೇಳಿರುವ ಹಾಗೆ ಧೀರರಾಗಿ ಆನಂದದಲ್ಲಿರುವರು ಎಂಬ ಭಾವವು. ಇಲ್ಲಿ **ನಿತ್ಯಂ** ಎಂದಿರುವ ಮೂಲದಲ್ಲಿರುವ ಪದವು **ತುಷ್ಯನ್ತಿ ರಮನ್ತಿ** ಎಂಬೆರಡಕ್ಕೂ ಅನ್ವಯಿಸತಕ್ಕದ್ದು. ಸಂಸೃತಿಯಲ್ಲಿರುವ ಸರ್ವಕ್ಲೇಶಗಳ ನಿವೃತ್ತಿಯಿಂದ ಮೋಕ್ಷಪ್ರಾಪ್ತಿಗೆ, ಭಕ್ತಿಯೋಗ ನಿಷ್ಪತ್ತಿದ್ವಾರಾ ಪರಬ್ರಹ್ಮ ಸಾಕ್ಷಾತ್ಕಾರವೇ ಸರ್ವೋತ್ಕೃಷ್ಟ ಫಲವೆಂದೂ, ಅಂತಹ ಭಕ್ತಿಯೋಗದಲ್ಲಿ ಪ್ರವೇಶವಿರುವವನ ವ್ಯಾಪಾರಗಳು ಬಹು ರಮಣೀಯವಾದವುಗಳೆಂದು ಹೇಳುವ ಕುಂತಿಯ ವಾಕ್ಯವು ಅನುಸಂಧೇಯವು. **"ಶೃಣ್ವನ್ತಿ ಗಾಯನ್ತಿ ಗೃಣನ್ತ್ಯಭೀಕ್ಷ್ಣಶಃ ಸ್ಮರನ್ತಿ ನನ್ದನ್ತಿ ತವೇಹಿತಂ ಜನಾಃ। ತ ಏವ ಪಶ್ಯನ್ತ್ಯ ಚಿರೇಣ ತಾವಕಂ ಭವಪ್ರವಾಹೋ ಪರಮಂ ಪದಾಂಬುಜಮ್"** (ಭಾಗ.೧.೮.೩೬) "ಯಾವ ಭಕ್ತಜನರು, **ತವೇಹಿತಂ**-ನಿನ್ನ ದಿವ್ಯಚೇಷ್ಟಿತಗಳನ್ನು, **ಶೃಣ್ವನ್ತಿ**-ವಕ್ತೃವಿನಿಂದ ಕೇಳುತ್ತಾರೋ, **ಗೃಣಂತಿ**—ಶ್ರೋತೃವಿನ ಸಾನ್ನಿಧ್ಯದಲ್ಲಿ ಉಪದೇಶಿಸುತ್ತಾರೋ, ಇದು **ಬೋಧಯಂತಃ ಪರಸ್ಪರಂ ಕಥಯಂತಶ್ಚ** ಎಂಬಲ್ಲಿ ತೋರುವ ಅರ್ಥವು, ಯಾರೂ ಇಲ್ಲದ ಸಂದರ್ಭದಲ್ಲಿ ತಾವೇ ನಿನ್ನ ದಿವ್ಯ ಚೇಷ್ಟಿತಗಳನ್ನು ಗಾಯನಮಾಡುತ್ತಾರೋ, ಸ್ಮರಿಸುತ್ತಾರೋ, ಸಂತೋಷಪಡುತ್ತಾರೋ, **ನನ್ದನ್ತಿ ಚ** ಎಂಬುದರಿಂದ **ತುಷ್ಯನ್ತಿ ಚ ರಮಂತಿ ಚ** ಎಂಬಲ್ಲಿರುವ ಅರ್ಥಗಳು ಸೂಚಿತವು ; **ತ ಏವ**—ಅಂತಹ ಭಕ್ತಜನರಾದ ಮುಮುಕ್ಷುಗಳಾದ ಯೋಗಿಗಳೇ, ಭಗವಚ್ಚರಣಾರವಿಂದ ಸಾಕ್ಷಾತ್ಕಾರವನ್ನು ಶೀಘ್ರವಾಗಿ ಪಡೆದವರಾಗಿ, ಸಂಸಾರ ಪ್ರವಾಹದ ಶಾಂತಿಯನ್ನು ಹೊಂದುವರು ಎಂದು ಕುಂತಿಯು ಸ್ತೋತ್ರಮಾಡಿರುತ್ತಾಳೆ. **ಈ** ಶ್ಲೋಕದಲ್ಲಿ ಹೇಳಿರುವ ಅಭಿಪ್ರಾಯವೇ ಹಿಂದೆಯೇ **"ಸತತಂ ಕೀರ್ತಯಂತೋ ಮಾಂ"** ಎಂಬಲ್ಲಿ (ಗೀ. ೯. ೧೪.) ಸ್ವಲ್ಪಮಟ್ಟಿಗೆ ಸೂಚಿಸಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು:—ಭಾವಸಮನ್ವಿತರಾಗಿ** ಆಗುತ್ತಾರೆಂದು ತಾನು ಹೇಳಿದುವರ ಅಭಿಪ್ರಾಯವೇನೆಂದರೆ ತಿಳಿಸುತ್ತಾರೆ. ಕೆಲವು ವಿಶೇಷಣಗಳಿಂದ ಭಾವಸಮನ್ವಿತತ್ವವನ್ನು ವ್ಯಕ್ತಪಡಿಸುತ್ತಾರೆ. (೧) **ಮಚ್ಚಿತ್ತಾಃ** ಎಂದರೆ **ಮಯಿ ನಿವಿಷ್ಟ ಮನಸಃ**—

**ಭಾ　ಮದೀಯಾನ್ ಗುಣಾನ್ ಪರಸ್ಪರಂ ಬೋಧಯನ್ತೋ ಮದೀಯಾನಿ ದಿವ್ಯಾನಿ ರಮಣೀಯಾನಿ ಕರ್ಮಾಣಿ ಚ ಕಥಯನ್ತಃ, ತುಷ್ಯನ್ತಿ ಚ ರಮನ್ತಿ ಚ-ವಕ್ತಾರಸ್ತದ್ವಚನೇನಾನನ್ಯಪ್ರಯೋಜನೇನ ತುಷ್ಯನ್ತಿ; ಶ್ರೋತಾರಶ್ಚ ತಚ್ಛ್ರವಣೇನಾನವಧಿಕಾತಿಶಯ ಪ್ರಿಯೇಣ ರಮನ್ತೇ ॥೯॥**

ನನ್ನಲ್ಲೇ ಇಡಲ್ಪಟ್ಟ ಮನಸ್ಸುಳ್ಳವರಾಗುತ್ತಾರೆ, ಏಕಾಂತಿಗಳಾಗುತ್ತಾರೆಂಬ ಭಾವವು. (೨) **ಮದ್ಗತಪ್ರಾಣಾಃ** ಎಂದರೆ **ಮದ್ಗತಜೀವಿತಾಃ**-ನನ್ನನ್ನು ಹೊಂದಿದ ಜೀವವುಳ್ಳವರಾಗಿ. ಪ್ರಾಣ ಶಬ್ದಕ್ಕೆ ಇಂದ್ರಿಯಗಳೆಂದು ಕೆಲವರು ಅರ್ಥಮಾಡುತ್ತಾರೆ. ಮನಸ್ಸೇ ಭಗವಂತನಲ್ಲಿರುವಾಗ ಮನಸ್ಸಿಗೆ ಅಧೀನಗಳಾದ ಇಂದ್ರಿಯಗಳೂ ಆತನ ವಶವಾದವೆಂದು ಅರ್ಥಮಾಡುವದರಲ್ಲಿ ಅಷ್ಟು ಸ್ವಾರಸ್ಯವಿಲ್ಲವು, ಆದುದರಿಂದ, **ಮಯಾ ವಿನಾತ್ಮಧಾರಣಮಲಭಮಾನಾ ಇತ್ಯರ್ಥಃ**— ನಾನಿಲ್ಲದಿದ್ದರೆ ತಮಗೆ ಪ್ರಾಣಧಾರಣೆಯೇ ಸಾಧ್ಯವಿಲ್ಲದಹಾಗೆ ಭಾವಿಸುವರು ಎಂಬುದೇ ತಾತ್ಪರ್ಯವು. ಶ್ರೀ ಕುಲಶೇಖರರೂ ಈ ಅಭಿಪ್ರಾಯವನ್ನೇ **"ನಿತ್ಯಂ ತ್ವಚ್ಚರಣಾರವಿಂದಯುಗಳಧ್ಯಾನಾಮೃತಾಸ್ವಾದಿನಾಮಸ್ಮಾಕಂ ಸರಸೀರುಹಾಕ್ಷ ಸತತಂ ಸಂಪದ್ಯತಾಂ ಜೀವಿತಂ"** ಎಂಬ ವಾಕ್ಯದಲ್ಲಿ ತೋರ್ಪಡಿಸಿರುತ್ತಾರೆ ಇಲ್ಲಿ **ಬೋಧಯಂತಃ ಕಥಯಂತಃ** ಎಂಬ ಎರಡು ಪದಗಳೂ ಪೃಥಕ್ಕಾಗಿರುವದರಿಂದ ಅವುಗಳಿಗೆ ಬೇರೆಬೇರೆ ಅರ್ಥ ಕಲ್ಪಿಸುವದು ನ್ಯಾಯವೆಂದು ತೋರಿ ವ್ಯತ್ಯಾಸವನ್ನು ಪ್ರದರ್ಶಿಸುತ್ತಾರೆ- (೩) **ಸ್ವೈಃ ಸ್ವೈರನುಭೂತಾನ್ ಮದೀಯಾನ್ ಗುಣಾನ್**-ಅವರುಗಳಿಂದ ಅನುಭವಿಸಲ್ಪಟ್ಟ ನನ್ನ ಕಲ್ಯಾಣಗುಣಗಳನ್ನು, **ಪರಸ್ಪರಂ ಬೋಧಯಂತಃ**-ಪರಸ್ಪರ ಬೋಧಿಸುವವರಾಗಿ, (೪) **ಮದೀಯಾನಿ ದಿವ್ಯಾನಿ ರಮಣೀಯಾನಿ ಕರ್ಮಾಣಿ ಚ ಕಥಯಂತಃ**—ನನ್ನ ಸಂಬಂಧವುಳ್ಳ ಅಸದೃಶಗಳಾಗಿ ಅತಿಮಾನುಷಗಳಾಗಿ ಭೋಗ್ಯಭೂತಗಳಾಗಿ, ಮನೋಹರಗಳಾದ ದಿವ್ಯಾದ್ಭುತ ಚೇಷ್ಟಿತಗಳನ್ನು ವರ್ಣಿಸುವವರಾಗಿ, ಮುಖ್ಯವಾಗಿ ಬೋಧಶಬ್ದದಿಂದ ಮಾಹಾತ್ಮ್ಯ ತಿಳಿಯದವರಿಗೆ ಕಲ್ಯಾಣ ಗುಣಗಳ ಉಪದೇಶವೂ, ಕಥನ ಶಬ್ದದಿಂದ ದಿವ್ಯಚೇಷ್ಟಿತಗಳ ವರ್ಣನೆಯೂ ಹೇಳಲ್ಪಟ್ಟವೆಂಬ ಭಾವವು; **ಮದೀಯಾನ್ ಗುಣಾನ್** ಎಂದು ಹೇಳಿರುವದು, ಭಗವಂತನ ಸ್ವರೂಪ ನಿರೂಪಕ ಧರ್ಮಗಳೇನು, ನಿರೂಪಿತ ಸ್ವರೂಪ ವಿಶೇಷಣಗಳೇನು ಇವೆರಡುವಿಧ ಗುಣಗಳೂ ಹೇಳಲ್ಪಟ್ಟವು ಎಂದು ಭಾವಿಸತಕ್ಕದ್ದು; **ತುಷ್ಯಂತಿ ರಮಂತಿ** ಶಬ್ದಗಳು ಎರಡೂ ಸಂತೋಷ ಸೂಚಕಗಳಾಗಿರುವದರಿಂದ ದಿವ್ಯಚೇಷ್ಟಿತ ಶ್ರವಣ ಒಂದರಿಂದಲೇ ಈ ಎರಡೂ ಉಂಟಾಗುತ್ತದೆಂದು ಅರ್ಥ ಹೇಳುವದು ಅಷ್ಟು ಸ್ವಾರಸ್ಯವಿಲ್ಲವೆಂದು ಭಾವಿಸಿ, ಇವೆರಡಕ್ಕೂ ಅಭಿಪ್ರಾಯ ಭೇದವನ್ನು ಉಪದೇಶಿಸುತ್ತಾರೆ.—**ವಕ್ತಾರಃ**-ದಿವ್ಯಚೇಷ್ಟಿತಗಳ ಕಥೆಯನ್ನು ಹೇಳುವವರು, **ಅನನ್ಯಪ್ರಯೋಜನೇನ**—ದ್ರವ್ಯವೇ ಮೊದಲಾದ ಯಾವವಿಧ ಪ್ರಯೋಜನವೂ ಇಲ್ಲದೇ ಇರುವ, **ತದ್ವಚನೇನ**-ಅಂತಹ ನನ್ನ ದಿವ್ಯಚೇಷ್ಟಿತಗಳ ಕಥೆಯ ಪ್ರವಚನದಿಂದ, **ತುಷ್ಯಂತಿ**-ಸಂತೋಷ ಪಡುತ್ತಾರೆ, ಇದರಿಂದ ದ್ರವ್ಯಕ್ಕಾಗಿ ಹರಿಕಥೆಗಳನ್ನು ನಡೆಸುವವರು ವ್ಯಾವರ್ತಿಸಲ್ಪಟ್ಟರು. ಹರಿಕಥೆಯನ್ನು ಮಾಡುವಾಗಲೂ ಜನರಂಜನೆಯಾಗುತ್ತದೆಂಬ ಭ್ರಮೆಯಿಂದ ಅಯಥಾರ್ಥ ಕಥೆಗಳನ್ನು ಸೇರಿಸಿ ಸರ್ವೇಶ್ವರನ ದಿವ್ಯ ಚೇಷ್ಟಿತಗಳ ಸ್ವಾರಸ್ಯವನ್ನೇ ಹಾಳುಮಾಡುವದು ತುಂಬಾ ನಿಂದಿತವು. **ಶ್ರೋತಾರಶ್ಚ**—ಕೇಳುವವರಾದವರೋ, **ಅನವಧಿಕಾತಿಶಯಪ್ರಿಯೇಣ**—ಅವಧಿಯಿಲ್ಲದಷ್ಟು ಹೆಚ್ಚು ಪ್ರಿಯವಾಗಿರುವ, **ತಚ್ಛ್ರವಣೇನ**—ಆ ದಿವ್ಯ ಕಥಾ ಶ್ರವಣದಿಂದ, **ರಮನ್ತೇ**—ಆನಂದಿಸುವರು. ಅಡಿಗೆ ಮಾಡುವವನಿಗೆ ತನ್ನ ಅಡಿಗೆಯ ಭೋಜನದಿಂದುಂಟಾ

**ಮೂ. ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾಂತಿ ತೇ ॥** ೧೦

ಗುವ ಸುಖಕ್ಕಿಂತಲೂ, ಭೋಜನಕ್ಕೆ ಬಂದವರಿಗೆ ಹೇಗೆ ಹೆಚ್ಚು ಸುಖವೋ ಹಾಗೆ ನಿಸ್ಪೃಹನಾಗಿ ಹರಿಕಥೆಯನ್ನು ಯಥಾರ್ಥವಾಗಿ ನಡೆಸುವವರಿಗೆ ಸುಮ್ಮನೆ ಸುಖಮಾತ್ರವಾದರೂ, ಕೇಳುವವರಿಗೆ ಪರಮಾನಂದ ಉಂಟಾಗುತ್ತದೆಂಬ ಭಾವವೂ ಸೂಚಿತವು ॥೯॥

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕಗಳಿಂದ ಭಕ್ತ್ಯುತ್ಪತ್ತಿ ವಿವೃದ್ಧಿಗಳಿಗೆ ಕಾರಣಗಳು ಹೇಳಲ್ಪಟ್ಟವು. ಅವುಗಳು ಯಾವುವೆಂದರೆ ಸರ್ವೇಶ್ವರನು ಅಜನು ಅನಾದಿಯು ಸರ್ವಲೋಕಮಹೇಶ್ವರನೆಂಬಜ್ಞಾನವು ಭಕ್ತ್ಯುತ್ಪತ್ತಿಗೂ ವಿಶ್ವಕಾರಣನಾಗಿ ವಿಶ್ವ ಸರ್ವ ಪ್ರವೃತ್ತಿಗೂ ಕಾರಣಭೂತನೆಂಬ ಮತ್ತು ಕಲ್ಯಾಣ ಮಹೋದಧಿ ಎಂಬ ಜ್ಞಾನವು ಭಕ್ತಿ ವಿವೃದ್ಧಿಗೂ ಕಾರಣವೆಂದು ವ್ಯಕ್ತಪಡಿಸಲ್ಪಟ್ಟಿತು. ಆದರೆ ಈ ಚೇತನನಿಗೆ ಅನಾದಿ ಕರ್ಮ ಸಂಚಯದಿಂದ ಕಲುಷಿತರೂಪ ಜ್ಞಾನ ತಿರೋಧಾನವಿರುವಾಗ, ಇಂತಹ ಪವಿತ್ರವಾದ ಜ್ಞಾನದ ಅವಸ್ಥೆಯು ಸಾಧ್ಯವೇ ಎಂದು ಅರ್ಜುನನು ಪ್ರಶ್ನಿಸಬಹುದು, ಅಥವಾ ಅಧೈರ್ಯ ಪಡಬಹುದೆಂದು ಭಾವಿಸಿ, ಯಾವಾಗ ನನ್ನ ಪ್ರೀತಿಗೆ ಭಕ್ತಿಯೋಗಾರಂಭದಿಂದ ವಿಷಯನಾದನೋ, ಆಗ ಇಂತಹ ಪರಿಪಾಕ ಜ್ಞಾನಾವಸ್ಥೆಗೆ ಬೇಕಾದ ಬುದ್ಧಿಯೋಗವನ್ನು ನಾನೇ ಕರುಣಿಸುತ್ತೇನೆಂದು ಹೇಳುತ್ತಾರೆ. ಮನಸ್ಸೇ ಸರ್ವಪ್ರವೃತ್ತಿಗೂ ಕಾರಣವು, ಅದಕ್ಕೆ ವಿಷಯ ಪ್ರಾವಣ್ಯತೆಯಲ್ಲಿಯೇ ಸಾಧಾರಣವಾಗಿ ಅನ್ವಯವು. ಹೀಗಿರುವಾಗ **ಮಚ್ಚಿತ್ತಾಃ ಮದ್ಗತಪ್ರಾಣಾಃ ತುಷ್ಯಂತಿಚ ರಮನ್ತಿಚ** ಎಂದು ಹೀಗೆಲ್ಲಾ ಹೇಳಿದುದು ಸಾಧ್ಯವೇ? ಹಿಂದೆಯೇ ಅರ್ಜುನನು "**ಚಂಚಲಂಹಿಮನಃಕೃಷ್ಣ**"(೬.೩೪)ಎಂದು ಹೇಳಿ ಅಧೈರ್ಯವನ್ನು ತಿಳಿಸಿದ್ದನು; ಆದುದರಿಂದ ಆತನಿಗೆ ಪೂರ್ಣ ನಂಬಿಕೆಯನ್ನುಂಟುಮಾಡುವದಕ್ಕಾಗಿ, ಅಂತಹ ಚಂಚಲ ಮನಸ್ಸನ್ನೂ ಕೂಡ ನಿಗ್ರಹಿಸುವ ಶಕ್ತಿಯುಳ್ಳದ್ದು, ಆತ್ಮನ ಧರ್ಮಭೂತಜ್ಞಾನವು; ಅದು ಪವಿತ್ರವಾಗಿ, ಈ ಮನಸ್ಸನ್ನು ವಶಪಡಿಸಿಕೊಳ್ಳುವ ಬುದ್ಧಿಯೋಗವನ್ನು ನಾನೇ ಅನುಗ್ರಹಿಸುತ್ತೇನೆಂದು ಹೇಳುತ್ತಾರೆ.—ಭಾರತದ ಅಜಗರೋಪಾಖ್ಯಾನದಲ್ಲಿ ಅಗಸ್ತ್ಯಶಾಪಗ್ರಸ್ತನಾದ ನಹುಷನು ಅಜಗರನಾಗಿ ಯುಧಿಷ್ಠಿರನನ್ನು ಕುರಿತುಹೇಳುತ್ತಾನೆ- ಏನೆಂದರೆ, "**ಬುದ್ಧಿರ್ಗುಣವಿಧಾನೇನ ಮನಸ್ತದ್ಗುಣವದ್ಭವೇತ್**" ಬುದ್ಧಿಯನಿಯಮನಾನುಸಾರ ಮನಸ್ಸು ಪ್ರವರ್ತಿಸುತ್ತದೆ. (ಅರಣ್ಯ ೧೮೩ ೨೬.) ಆದುದರಿಂದ ಒಳ್ಳೇ ಬುದ್ಧಿಯೋಗವನ್ನು ಯಾವಾಗ ಇತ್ತೆನೋ, ಆಗ **ಮಚ್ಚಿತ್ತಾಃಮದ್ಗತಪ್ರಾಣಾಃ**, ಆಗಿಯೇ ಆಗುತ್ತಾರೆಂದು ಹೇಳುತ್ತಾರೆ. ಯಾವಾಗ ತನ್ನನ್ನು ಹೊಂದಬೇಕೆಂಬ ಅಭಿಲಾಷಾಯುಕ್ತನಾಗಿ ಯೋಗವನ್ನು ಕೈಕೊಂಡನೋ, ಆಗ ಅವನು **ಯೋ ಮದ್ಭಕ್ತಸ್ಸಮೇ ಪ್ರಿಯಃ** ಎಂದು ಹೇಳಿರುವ ಹಾಗೆ, ನನ್ನವನಾದವನು ಆತನನ್ನು ಕಡೆಹಾಯಿಸುವ ಭಾರವು ನನ್ನದು. ಆತನಿಗೆ ಬೇಕಾದ ಜ್ಞಾನಪರಿಪಾಕದೆಶೆಯನ್ನು ನಾನೇ ದಯಪಾಲಿಸುತ್ತೇನೆಂದು ಹೇಳುತ್ತಾರೆ **ತೇಷಾಂ** ಹಿಂದೆ ಹೇಳಿದಹಾಗೆ ನನ್ನ ವಿಭೂತಿ ಕಲ್ಯಾಣಗುಣ ಯೋಗಗಳ ಮಾಹಾತ್ಮ್ಯೆಯನ್ನರಿತು, ಮಚ್ಚಿತ್ತರಾಗಿ ಮದ್ಗತಪ್ರಾಣರಾಗಿ ಮಹಾತ್ಮರಾಗಿ ಭಕ್ತಿಯೋಗನಿಷ್ಠರಾದ, **ಸತತ ಯುಕ್ತಾನಾಂ**-ಮೋಕ್ಷದೆಶೆಯಲ್ಲಿ ನಿತ್ಯಯೋಗ ರೂಪವಾದ ಸಾಯುಜ್ಯವನ್ನು ಅಪೇಕ್ಷಿಸುವ, ಅಥವಾ ಧ್ಯಾನ ಕಾಲದಲ್ಲೂ ಮತ್ತು ಇತರಕಾಲದಲ್ಲೂ ನನ್ನ ಗುಣಾನುಕಥನವೇನು ನನ್ನ ದಿವ್ಯಚೇಷ್ಟಿತಗಳನ್ನು ಕೊಂಡಾಡುವವೇನು, ಹಿಂದಿನ ಶ್ಲೋಕದಲ್ಲಿ ಹೇಳಿದ ಇಂತಹ ಮನೋವೃತ್ತಿಯನ್ನು (ಭಾವ ಸಮುಸ್ಥಿತತ್ವವನ್ನು) ಹೊಂದಿರುವ, ಭಜತಾಂ—ನನ್ನ ಪ್ರೀತಿಯನ್ನು ಹೇಗೆ

ಹೊಂದಬೇಕೋ ಹಾಗೆ ಪ್ರೀತ್ಯತಿಶಯದಿಂದ ಧ್ಯಾನಿಸುವವರಿಗೆ, **ತಂ**-ನಿರತಿಶಯ ಮಾಹಾತ್ಮ್ಯ ಯುಳ್ಳ **ಬುದ್ಧಿಯೋಗವನ್ನು, ಪ್ರೀತಿಪೂರ್ವಕಂ ದದಾಮಿ**-ಆತನು ನನ್ನನ್ನು ಆಶ್ರಯಿಸಿದನೇ, ಆತನು ಮಹಾಭಕ್ತನೇ ಪರಮೋದಾರಿಯೇ, ಎಂಬುದಾಗಿ ಆತನನ್ನು ಪರಮ ಸುಹೃತ್ತೆಂದು ಭಾವಿಸಿ, ತುಂಬಾ ಪ್ರೀತಿ ಪೂರ್ವಕವಾಗಿ ಕೊಡುತ್ತೇನೆ. ಕೆಲವರು ಪ್ರೀತಿ ಪೂರ್ವಕಂ ಎಂಬುದನ್ನು **ಭಜತಾಂ** ಎಂಬುದಕ್ಕೆ ಅನ್ವಯಿಸಿರುತ್ತಾರೆ. ಇದು ಅಷ್ಟು ಸ್ವಾರಸ್ಯಾರ್ಥವಾಗುವದಿಲ್ಲ. ಆದುದರಿಂದ ಶ್ರೀ ಯತಿವರ್ಯರು ಪ್ರೀತಿಪೂರ್ವಕಂ ಎಂಬುದನ್ನು **ದದಾಮಿ** ಎಂಬುದರೊಂದಿಗೆ ಅನ್ವಯಿಸಿರುತ್ತಾರೆ. ಶ್ರೀಕೃಷ್ಣ ಭಗವಾನರವರ ದಿವ್ಯಸೂಕ್ತಿಯಲ್ಲಿ **ಪ್ರೀತಿಪೂರ್ವಕಂ** ಎಂಬುದು ಮಧ್ಯದಲ್ಲಿರುವದರಿಂದ, ಕಾಕಾಕ್ಷಿನ್ಯಾಯಪ್ರಕಾರ, **ಪ್ರೀತಿಪೂರ್ವಕಂ ಭಜತಾಂ ಪ್ರೀತಿ ಪೂರ್ವಕಂ ದದಾಮಿ,**ಎಂದೂ ಅನ್ವಯಿಸಿದರೂ ಅನ್ವಯಿಸಬಹುದು. ಪ್ರೀತಿಪೂರ್ವಕಧ್ಯಾನಿಸುವವರಿಗೆ ಪ್ರೀತಿಪೂರ್ವಕವಾಗಿಯಲ್ಲವೇ ಕೊಡತಕ್ಕದ್ದು. ನನಗೇನಾದರೂ ವೈಷಮ್ಯಾದಿಗಳುಂಟೋ? ಆತನು ಸ್ವಲ್ಪಮಟ್ಟಿಗೆ ಪ್ರೀತಿತೋರಿಸಿದರೆ ಆತನಲ್ಲಿ ವಿಶೇಷ ಪ್ರೀತಿಯನ್ನು ನಾನು ತೋರಿಸುವೆನು. ಅವರು ನನ್ನನ್ನು ಪ್ರೀತಿಸದೇಹೋದರೆ ಇಲ್ಲವೇವಿನಾ,ಅವರು ನನ್ನನ್ನು ಪ್ರೀತಿಸಿ ಭಜಿಸಿದನಂತರ ನಾನೂ ಪ್ರೀತಿಪೂರ್ವಕವಾಗಿಯೇ ಕೊಡತಕ್ಕದ್ದೇ ನ್ಯಾಯವೆಂಬ ಭಾವವು ದ್ಯೋತಿತವು. ಈ ನಾನು ಕೊಡತಕ್ಕ ಬುದ್ಧಿಯೋಗವು ಏನುಮಾಡುತ್ತದೆಂದರೆ"**ಜ್ಞಾನವಿಜ್ಞಾನಸಂಪನ್ನಾಃ ಪರಂ ಶ್ರೇಷ್ಠಂಪಿದುರ್ಮಮ**"(ಭಾಗ.೧೧.೧೯.೩)ಎಂದು ಹೇಳಿರುವಹಾಗೆ ದೇಹಸ್ವರೂಪವೇನು ತನ್ನ ಸ್ವರೂಪವೇನು, ಪರಮಾತ್ಮಸ್ವರೂಪವೇನು ಎಂಬ ಜ್ಞಾನದಿಂದ,ಅವನೇ ಸರ್ವ ಶ್ರೇಷ್ಠನೆಂದು ತಿಳಿಸಿ, ಅವನನ್ನು ಹೊಂದುವ ಮಾರ್ಗವನ್ನು ಸ್ಫುಟವಾಗಿ ಸೂಚಿಸುತ್ತದೆ. ಆ ಬುದ್ಧಿಯೋಗವು ಎಂತಹ ಮಾಹಾತ್ಮ್ಯಯುಳ್ಳದುಎಂಬ ಅಪೇಕ್ಷೆಯಲ್ಲಿ ಹೇಳುತ್ತಾರೆ. **ಯೇನ**-ಯಾವ ಈಬುದ್ಧಿಯೋಗದಿಂದ, **ಮಾಂ**-ಸ್ವಸ್ವರೂಪಾವಿರ್ಭಾವ, ಅರ್ಚಿರಾದಿಗಮನ ಪರಿಪೂರ್ಣ ಬ್ರಹ್ಮಾನುಭವಾದಿಗಳೇ ಮೊದಲಾದ ಪ್ರಯೋಜನಗಳನ್ನುಂಟುಮಾಡುವ ಹಾಗೆ ಪರಮ ದಯಾಳುವಾದ ನನ್ನನ್ನು, **ತೇ** - ಆ ಮಹಾತ್ಮರಾದ ಭಕ್ತರು, **ಉಪಯಾನ್ತಿ** - ದಿವ್ಯ ವೈಕುಂಠದಲ್ಲಿ ಪರವಾಸುದೇವರೂಪಧಾರಿಯಾದ ನನ್ನಲ್ಲಿಗೆ ಸಮೀಪಿಸಿ ಬಂದು ಸೇರುತ್ತಾರೋ, ಅಂತಹ ಬುದ್ಧಿಯೋಗವನ್ನು ಅವರಿಗೆ ಕೃಪೆಗೈಯುವೆನೆಂಬ ಭಾವವು. ಹೀಗೆ ನನ್ನ ಭಜನದಲ್ಲಿ ಮಾತ್ರ ಪ್ರೀತಿಯನ್ನು ತೋರಿದರೆ ನಾನು ಅವರಿಗೆ ಪ್ರೀತಿಪೂರ್ವಕವಾಗಿ ಕೊಡುವದು ಎಷ್ಟು ಮಹತ್ತಾದುದು ನೋಡು. ಅವರ ಅಂತಸ್ತಿಗೆ ಸರಿಯಾದ ಪ್ರೀತಿಯನ್ನುಅವರು ತೋರಿಸಿದರು.ನನ್ನ ಪರತ್ವ ಸೌಶೀಲ್ಯಾದಿಗುಣಗಳಿಗೆ ಅನುಗುಣವಾಗಿ ನಾನೂ ಎಂತಹ ನಿರತಿಶಯಫಲವನ್ನುದಯಪಾಲಿಸಿರುತ್ತೇನೆಂಬಭಾವವೂ ತೋರಿಬರುತ್ತದೆ. ಯಾರು ನನ್ನನ್ನು ಬಂದು ಸೇರಬೇಕೆಂಬ ಅಪೇಕ್ಷೆಯುಳ್ಳವರಾಗಿ ನನ್ನ ಭಕ್ತರಾಗಬೇಕೆಂಬ ದೃಢಸಂಕಲ್ಪವನ್ನುಸ್ವಲ್ಪಮಟ್ಟಿಗೆ ಪ್ರದರ್ಶಿಸಿದರೋ, ಒಡನೆಯೇ ಒಳ್ಳೇ ಬುದ್ಧಿಯೋಗವನ್ನು ಕೊಟ್ಟು, ಅವರು ಮಚ್ಚಿತ್ತರಾಗಿ ಮದ್ಗತಪ್ರಾಣರಾಗಿ, ನನ್ನ ಗುಣ ಕಥನವನ್ನು ಆದರದಿಂದ ಕೇಳುವವರಾಗಿ, ಮತ್ತು ಅದನ್ನೇ ಇತರರಿಗೆ ಶ್ರವಣ ಮಾಡಿಸುವವರಾಗಿ, ಹೀಗೆ ತಾವೂ ಸುಪ್ರೀತರಾಗಿ ಇತರರನ್ನೂ ಸಂತೋಷಪಡಿಸುವವರಾಗುವರು. ಆಗ ನನ್ನ ಅನುಗ್ರಹದ ಮಾಹಾತ್ಮ್ಯೆಯಿಂದ ನನ್ನ ಸಾಯುಜ್ಯವನ್ನು ಹೊಂದಿ ನನಗೆ ಸಮವಾದ ನಿರತಿಶಯಾನಂದವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲವೆಂಬ ಭಾವವು. **ದದಾಮಿ ಬುದ್ಧಿಯೋಗಂತಂ ಯೇನ ಮಾಂ ಉಪಯಾನ್ತಿ ತೇ** ಎಂಬುದರಿಂದ ಸಿದ್ಧೋಪಾಯನಾದ ಪ್ರಾಪಕನೂ ನಾನೇ, ಪ್ರಾಪ್ಯನೂ ನಾನೇ ಎಂದು ಈ ಶ್ಲೋಕದಲ್ಲಿ **ಮುಕ್ತಿದೋ ಮುಕ್ತಭೋಗ್ಯಃ** ಎಂದು ಹೇಳಿರುವ ಅರ್ಥವು, ಉಪದೇಶಿಸಲ್ಪಟ್ಟಿತು. ಹೀಗೆ ತಾನೇ ಸಿದ್ಧೋಪಾಯನೆಂದೂ, ತಾನೇ ಪ್ರಾಪ್ಯ

ನೆಂದೂ, ಹೇಳಿರುವದರಿಂದ, **ನಾರಾಯಣ** ಶಬ್ದದ **ನಾರಾಣಾಂ ಅಯನಂ** ಎಂಬ ತತ್ಪುರುಷ ಸಮಾಸಾರ್ಥವು ಇಲ್ಲಿ ವ್ಯಕ್ತಪಡಿಸಲ್ಪಟ್ಟಿತು. ನಿತ್ಯರಾದ ಜೀವಾತ್ಮರಿಗೆ ಅಯನಂ ಎಂದರೆ ಪ್ರಾಪ್ಯ, ಪ್ರಾಪಕನು, ಆಧಾರನು ಎಂಬರ್ಥವು. **ಇಣ್ ಗತೌ** ಎಂಬ ಧಾತುವಿನಿಂದ ಉತ್ಪನ್ನವಾದುದು **ಅಯನ** ಶಬ್ದವು. **ಈಯತೇ ಇತ್ಯಯನಂ** ಎಂಬ ವ್ಯುತ್ಪತ್ತಿಯಿಂದ ಈ ಚೇತನನಿಂದ ಹೊಂದಲ್ಪಡುವವನಾದುದರಿಂದ **ಪ್ರಾಪ್ಯ**ನೆಂಬರ್ಥವುಂಟಾಗುತ್ತದೆ. **ಈಯತೇ ಅನೇನೇತಿ ಅಯನಂ** ಎಂಬ ಕರಣ ವ್ಯುತ್ಪತ್ತಿಯಿಂದ, ತನ್ನಿಂದಲೇ ಹೊಂದಿಸಲ್ಪಡುವದರಿಂದ ಪ್ರಾಪಕನಾಗಿ ಸಿದ್ಧೋಪಾಯನೆಂಬರ್ಥವು ತೋರಿಬರುತ್ತದೆ. **ಈಯಂತ್ಯಸ್ಮಿನ್ ಇತಿ ಅಯನಂ** ಎಂಬ ಅಧಿಕರಣ ವ್ಯುತ್ಪತ್ತಿಯಿಂದ, ಆಧಾರನೆಂಬರ್ಥವುಂಟಾಗುತ್ತದೆ. ಆದುದರಿಂದ ತಾನು ನಾರಾಯಣನಾಗಿ ಪ್ರಾಪಕನೂ ಪ್ರಾಪ್ಯನೂ ಸಹ ಹೌದು ಎಂಬ ಗುಹ್ಯವಾದ ಉಪದೇಶವು ಈ ಶ್ಲೋಕದ ಉತ್ತರಾರ್ಧದಲ್ಲಿ ಮಾಡಲ್ಪಟ್ಟಿತೆಂದು ಭಾವಿಸತಕ್ಕದ್ದು

ತಾನು ಪ್ರೀತಿಯಿಂದ ಅನುಗ್ರಹಿಸುವ ಬುದ್ಧಿಯೋಗದ ಮಾಹಾತ್ಮ್ಯೆಯು ಅಪಾರವಾದುದೆಂದು ತಿಳಿಸುತ್ತಾರೆ,-**ಯೇನ** ಎಂಬ **ಯಚ್ಛ**ಬ್ದದಿಂದಲೇ ಮಾಹಾತ್ಮ್ಯೆಯು ವ್ಯಕ್ತವು. ಇನ್ನು ಮುಂದಕ್ಕೆ ಸಂಸಾರ ತಾಪತ್ರಯವಾದ ಅನಿಷ್ಟನಿವೃತ್ತಿಯಿಂದ ಕೂಡಿದ ಇಷ್ಟಪ್ರಾಪ್ತಿಯಾದ ಮೋಕ್ಷಾನುಭವರೂಪನಿರತಿಶಯಫಲಕ್ಕೆ ಈ ಬುದ್ಧಿಯೋಗವುಸಹಕಾರಿಯಾದುದೆಂದೂಅಂತಹಮಾಹಾತ್ಮ್ಯೆಯುಳ್ಳದೆಂದು ಹೇಳುತ್ತಾರೆ **ಯೇನ**-ಅಂತಹ ನಿರತಿಶಯ ಜ್ಞಾನದಿಂದ **ಮಾಮುಪಯಾನ್ತಿ ತೇ,**ಅವರು ನನ್ನ ಸಮೀಪವನ್ನು ಹೊಂದುವರು. ಹೀಗೆ ಹೇಳಲ್ಪಟ್ಟಿರುವದರಿಂದ,ಆತನನ್ನು ಪ್ರಾಪ್ಯವಾಗಿ ಹೊಂದುವರು ಎಂಬರ್ಥವು ಸ್ಪಷ್ಟವಾಗಿರುತ್ತದೆ. **"ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ"** ಎಂದು ಶ್ರುತಿಯು ಉದ್ಘೋಷಿಸುತ್ತದೆ, ಇನ್ನು ಹಾಗೆಯೇ ಶ್ರುತಿಗಳು **ಭೋಕ್ತಾ ಪ್ರೇರಿತಾ** ಎಂದೂ, **ಅನೀಶನು ಈಶನೆಂದೂ, ದ್ವಾಸುಪರ್ಣಾಸಯುಜಾ** ಎಂದೂ, **ಪತಿಂ ವಿಶ್ವಸ್ಯ** ಎಂಬಲ್ಲಿ ಶೇಷರಾದ ನಮಗೆಲ್ಲಾ ಶೇಷಿ ಸ್ವಾಮಿ ಎಂದೂ, **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ....ವಿದಧಾತಿ ಕಾಮಾನ್"** ಎಂಬಲ್ಲೂ ಜೀವಪರಮಾತ್ಮಭೇದವು ವ್ಯಕ್ತವು. ಇದೇ ಗೀತೆಯಲ್ಲೇ **ಉತ್ತಮಃ ಪುರುಷಸ್ತ್ವನ್ಯಃ** ಎಂಬಲ್ಲಿ ಜೀವ ಪರಮಾತ್ಮ ಭೇದವು ಬಹು ಸ್ಫುಟವಾಗಿ ಉಪಪಾದಿತವು. ಹೀಗೆಲ್ಲಾ ಇದ್ದರೂ ಇಲ್ಲಿ **ಉಪಯಾನ್ತಿ** ಶಬ್ದದಿಂದ ಸ್ವರೂಪೈಕ್ಯವು ಹೇಳಲ್ಪಟ್ಟಿತೆಂದು ಕೆಲವರು ಭಾವಿಸುವರು. **ಉಪ** ಎಂಬ ಉಪಸರ್ಗವು ಸಾಮೀಪ್ಯವನ್ನು ಬೋಧಿಸುವದರಿಂದ ಪರಮಾತ್ಮನ ಹತ್ತಿರ ಸೇರುವರು; **ಸಾಯುಜ್ಯವನ್ನು** ಹೊಂದುವರು ಎಂಬ ಭಾವವೇ ವ್ಯಕ್ತವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಈ ಸಾಯುಜ್ಯವೇ ಮೋಕ್ಷವೆಂದು **"ಸಾಯುಜ್ಯಮನ್ಯೇ ಸತುಮೋಕ್ಷ ಉಕ್ತಃ** ಎಂಬುದಾಗಿ ಭಾಗವತದಲ್ಲಿ ವ್ಯಾಸೋಕ್ತಿಯೇ ಇರುತ್ತದೆ. ಗೀತೆಯಲ್ಲಿ ಮೋಕ್ಷವು ಸ್ವರೂಪೈಕ್ಯ ರೂಪವೆಂದು ಎಲ್ಲಿಯೂ ಬೋಧಿಸಲಿಲ್ಲವು. ಇನ್ನೊಂದುಕಡೆಯಲ್ಲಿ ಮೋಕ್ಷವನ್ನುದ್ದೇಶಿಸಿ ಹೇಳುವಾಗ **"ಮಮ ಸಾಧರ್ಮ್ಯಮಾಗತಾಃ"** ನನ್ನೊಂದಿಗೆ ಸಮಾನ ಧರ್ಮವನ್ನು ಹೊಂದುವರು, ಎಂದರೆ **ಭೋಗಮಾತ್ರಸಾಮ್ಯಲಿಂಗಾಚ್ಚ** ಎಂದು ಸೂತ್ರವಲ್ಲಿ ಹೇಳಿರುವಹಾಗೆ, ಸಮಾನಾನಂದವನ್ನು ಹೊಂದುವರು. ಇದನ್ನೇ **"ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂಬ ಶ್ರುತಿಯು ಉಪದೇಶಿಸುತ್ತದೆ. ಈ ಸಂದರ್ಭದಲ್ಲಿ **ಸಾಮ್ಯ** ಶಬ್ದವನ್ನು ಉಪಯೋಗಿಸಿರುವದರಿಂದಲೇ, ಎರಡೂ ಭಿನ್ನಪದಾರ್ಥಗಳಿಗೇ ಸಾಮ್ಯಶಬ್ದವು ಉಚಿತವಾದುದರಿಂದ, ಜೀವ ಪರಮಾತ್ಮ ಭೇದವು ಸ್ಪಷ್ಟವು. ಒಂದು ಇನ್ನೊಂದಕ್ಕೆ ಸಾಮ್ಯವೆಂದು ಯಾವಾಗ ಹೇಳಲ್ಪಟ್ಟಿತೋ ಆಗ ಕೆಲವು ವಿಷಯಗಳಲ್ಲಿ ಸಮತ್ವವೂ, ಕೆಲವು ಸಂದರ್ಭಗಳಲ್ಲಿ ಅಸಮತ್ವವೂ ಸ್ವತಸ್ಸಿದ್ಧವು. ಹೀಗೆ ಮುಕ್ತನಿಗೂ ಪರಮಾತ್ಮನಿಗೂ ಸಾಮ್ಯ

ವೆಂದು ಹೇಳಿದುದರಿಂದ ಸರ್ವಜ್ಞರಾದ ಶ್ರೀವ್ಯಾಸಮಹರ್ಷಿಗಳು, ಭೋಗದಲ್ಲಿ ಮಾತ್ರ ಸಾಮ್ಯ
ವೆಂದು **"ಭೋಗಮಾತ್ರ ಸಾಮ್ಯಲಿಂಗಾಚ್ಚ"** ಎಂಬ ಸೂತ್ರದಲ್ಲಿ ಹೇಳಿ, **ಜಗದ್ವ್ಯಾಪಾರವ
ರ್ಜಮ್"** ಎಂಬ ಸೂತ್ರದಲ್ಲಿ ಜಗದ್ವ್ಯಾಪಾರದಲ್ಲಿ **ಸಾಮ್ಯವಿಲ್ಲವೆಂದೂ** ಉಪಪಾದಿಸಿರುತ್ತಾರೆ.
ಈ ಹುಡುಗನು ಸಿಂಹಕ್ಕೆ ಸಮನು ಎಂದರೆ ಪರಾಕ್ರಮದಲ್ಲಿ ಮಾತ್ರ ಸಮನೆಂದೂ, ರೂಪದಲ್ಲಿ ಸಮ
ನಲ್ಲವೆಂದೂ ಹೇಗೆ ಏರ್ಪಡುತ್ತದೋ, ಹಾಗೆಯೇ ಈ ಮುಂಡಕ ಸಾಮ್ಯ ಶ್ರುತಿಯಿಂದ ಪರ
ಮಾತ್ಮ ಜೀವಾತ್ಮಭೇದವು ಸಿದ್ಧವು. ಹೀಗಿರುವಾಗ **ಉಪಯಾಂತಿ** ಎಂಬ ಧಾತು ಪ್ರತ್ಯಯ
ಗಳಿಂದ ಪರಸ್ಪರ ಭಿನ್ನಭಾವವು ಸ್ಫುಟವಾಗಿ ತೋರುವಾಗ, ಸ್ವರೂಪೈಕ್ಯವನ್ನು ಹೇಳಿತೆಂದು
ಅರ್ಥಮಾಡುವದು ಸಾಹಸವೇ ಸರಿ. ಆದುದರಿಂದ ಜೀವಾತ್ಮನು ಪ್ರಾಪ್ತಾ, ಪರಮಾತ್ಮನು ಪ್ರಾಪ್ಯ
ನೆಂಬ ಭಾವವು ಶಾಸ್ತ್ರ ಸಮಂಜಸವು. ಇದಕ್ಕಾಗಿ ಅನೇಕ ಪ್ರಮಾಣಗಳನ್ನು ಉದಾಹರಿಸ
ಬಹುದು. ಆದುದರಿಂದ ಶಾಸ್ತ್ರಜ್ಞಾನವನ್ನು ವಿಮರ್ಶಿಸಿ ತಿಳಿದು ಪ್ರಾಜ್ಞನೆನಿಸುವವನಿಗೆ ಐದರ
ಯಥಾರ್ಥಜ್ಞಾನವಿರಬೇಕೆಂದು ಹಾರೀತ ಸಂಹಿತಾ ವಾಕ್ಯವು ಉದ್ಘೋಷಿಸುತ್ತದೆ. ಅವು
ಯಾವುವೆಂದರೆ **"ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ। ಪ್ರಾಪ್ತ್ಯು
ಪಾಯಂ ಫಲಂ ಚೈವ ತಥಾ ಪ್ರಾಪ್ತಿ ವಿರೋಧಿ ಚ। ವದನ್ತಿ ಸಕಲಾ ವೇದಾಸ್ಸೇತಿಹಾಸ
ಪುರಾಣಕಾಃ"** ಪ್ರಾಪ್ಯ ಸ್ವರೂಪ, ಪ್ರಾಪ್ತೃವಿನ ಸ್ವರೂಪ, ಈ ಪ್ರಾಪ್ತಾ ಆ ಪ್ರಾಪ್ಯನನ್ನು
ಹೊಂದುವ ಉಪಾಯ, ಹಾಗೆ ಹೊಂದಿದರಿಂದ ಉಂಟಾಗುವ ಪ್ರಯೋಜನಗಳು, ಅಂತಹ
ಪ್ರಾಪ್ತಿಗೆ ಪ್ರತಿಬಂಧಕಗಳು ಯಾವವು, ಇಷ್ಟು ತಿಳಿಯತಕ್ಕದ್ದು ಎಂದು ಹೇಳಿರುವದರಿಂದ, ಪ್ರಾಪ್ಯ
ಸ್ವರೂಪ ಪ್ರಾಪ್ತೃಸ್ವರೂಪಗಳು ಬೇರೆಬೇರೆಯೆಂದು ವಿಶದವಾಗಿ ಹೇಳಿ, ಈ ಉಪಾಯವಾದ
ಭಕ್ತಿಯೋಗದಿಂದ ಪ್ರಾಪ್ತಾವಾದ ಜೀವಾತ್ಮನು ಪ್ರಾಪ್ಯನಾದ ಪರಮಾತ್ಮನನ್ನು ಹೊಂದುವನೆಂದು
**ಮಾಂ ಉಪಯಾನ್ತಿತೇ** ಎಂದು ಅವರುಗಳು ನನ್ನನ್ನು ಸಮೀಪಿಸಿ ಸೇರುವರು ಎಂದರೆ ನನ್ನ
ಸಾಯುಜ್ಯವನ್ನು ಹೊಂದುವರು, ಸಯುಕ್ಕಿನ ಭಾವವನ್ನು ಹೊಂದುವರು. ಸಮಾನಾನಂದ
ಭಾಕ್ಕುಗಳಾಗುವರು ಎಂದು ಹೇಳಿರುತ್ತದೆ. ಗೀತೆಯಲ್ಲೆಲ್ಲಾ ಈ ಐದು ವಿಷಯಗಳೇ ಹೇಳಲ್ಪ
ಟ್ಟಿರುವುವು. ಈ ಮುಕ್ತನ ಸಯುಕ್ಕಾಗಿರುವ ಭಾವವೆಂತಾದ್ದೆಂಬುದನ್ನು ಶ್ರೀ ವೇದವ್ಯಾಸರೇ
ಬಹುಸ್ಪಷ್ಟವಾಗಿ ವಸಿಷ್ಠ ಕರಾಳ ಸಂವಾದವನ್ನು ಬೋಧಿಸುವ ಇತಿಹಾಸದಲ್ಲಿ **ಪರೇಣ ಪರ
ಧರ್ಮೀಚ** ಎಂದಾರಂಭಿಸಿ ವ್ಯಕ್ತಪಡಿಸಿರುತ್ತಾರೆ. (ಭಾರ. ೩೧೩.೨೬-೩೧) **ಮಾಮುಪಯಾ
ನ್ತಿ ತೇ** ಎಂಬಲ್ಲಿ ಈ ವಾಕ್ಯದಲ್ಲೇ ಕರ್ತೃವು ಜೀವಾತ್ಮರು, ಕರ್ಮವು ಪರಮಾತ್ಮನು, ಕರ್ತೃ ಕರ್ಮಗ
ಳೆರಡೂ ಒಂದು ಎಂದರೆ ವೈಯಾಕರಣಿಯು ಕೋಪಿಸುವನು. ಆಗಲಿ ನಾವೂ ಇದೆಲ್ಲಾ ಒಪ್ಪುತ್ತೇವೆ.
ಇಂತಹ ಪ್ರಾಪ್ಯ ಪ್ರಾಪ್ತಾ ಸಂಬಂಧವನ್ನೆಲ್ಲಾ ವ್ಯಾವಹಾರಿಕ ದೆಶೆಯಲ್ಲಿ ಒಪ್ಪುತ್ತೇವೆ, ಪಾರಮಾ
ರ್ಥಿಕವಾಗಿ ಇಲ್ಲವೆಂದು ಹೇಳುತ್ತೇವೆ ಎಂದರೆ ಅರ್ಜುನನು ಪರಮಾರ್ಥಜ್ಞಾನಕ್ಕಾಗಿ **"ಶಾಧಿ
ಮಾಂ ತ್ವಾಂ ಪ್ರಪನ್ನಂ"** ಎಂದು ಶರಣಾಗತನಾದವನಿಗೆ ಇಂತಹ ಪರಮಾರ್ಥಜ್ಞಾನವನ್ನು
ಗೀತೆಯಲ್ಲಿ ಎಲ್ಲಿಯೂ ಹೇಳದೆ, ಪರತತ್ತ್ವವಾದ ಶ್ರೀಕೃಷ್ಣನು ಅತನನ್ನು ವಂಚಿಸಿದನೆಂಬ ಅಪಲಾ
ಪಕ್ಕೆ ಗುರಿಯಾಗುವದಿಲ್ಲವೇ? ಗೀತೆಯು ಪರಮಾರ್ಥಜ್ಞಾನೋಪದೇಶವನ್ನು ಮಾಡಲಿಲ್ಲ
ವೆಂದು ಹೇಳಿದರೆ, ಅದರ ಮಾಹಾತ್ಮ್ಯೆಗೆ ಕುಂದಕವಾಗುವದಿಲ್ಲವೇ? ಕೊನೆಯ ಶ್ಲೋಕದಲ್ಲೂ
ಪ್ರಾಪ್ತಾ ಪ್ರಾಪ್ಯ ಭೇದವನ್ನೇ ಉಪಪಾದಿಸಿರುತ್ತಾರೆ. ಆ ಅನೋಘವಾದ ಗೀತಾ ಚರಮ
ಶ್ಲೋಕವೆನಿಸುವದರಲ್ಲಿ ಪ್ರಾಜ್ಞನು ಶಾಸ್ತ್ರದಲ್ಲಿ ತಿಳಿಯತಕ್ಕದ್ದಾಗಿ ಸಂಹಿತಾವಾಕ್ಯವು ಉಪದೇಶಿ
ಸಿದ ಐದಂಶಗಳೂ ಬಹು ಸೂಕ್ಷ್ಮವಾಗಿ ಹೇಳಲ್ಪಟ್ಟಿವೆ. ಪೂರ್ವಾರ್ಧದಲ್ಲಿ **"ಮಾಮೇಕಂ
ಶರಣಂ ವ್ರಜ"** ಎಂಬುದರಿಂದ ಉಪಾಯವೂ, **ಸರ್ವಪಾಪೇಭ್ಯಃ** ಎಂಬುದರಿಂದ ಉಪಾಯ

**ಭಾ. ತೇಷಾಂ ಸತತ ಯುಕ್ತಾನಾಂ - ಮಯಿ ಸತತಯೋಗಮಾಶಂಸಮಾನಾನಾಂ, ಮಾಂ ಭಜಮಾನಾನಾ ಮಹಂ ತಮೇವ ಬುದ್ಧಿಯೋಗಂ - ವಿಪಾಕದಶಾಪನ್ನಂ ಪ್ರೀತಿಪೂರ್ವಕಂ ದದಾಮಿ; ಯೇನ ತೇ ಮಾಮುಪಯಾನ್ತಿ ॥ ೧೦ ॥**

ವಿರೋಧಿಯೂ, **ಮೋಕ್ಷಯಿಷ್ಯಾಮಿ** ಎಂಬುದರಿಂದ ಫಲವೂ, **ಅಹಂ** ಎಂಬುದರಿಂದ ಪ್ರಾಪ್ಯವೂ **ತ್ವಾ** ಎಂಬುದರಿಂದ ಪ್ರಾಪ್ತೃವೂ ಹೀಗೆ ವಿವೇಕಿಸಿ ಹೇಳಲ್ಪಟ್ಟಿರುತ್ತವೆ. ಆದುದರಿಂದ **ಮಾಂ ಉಪಯಾನ್ತಿ ತೇ** ಎಂಬಲ್ಲಿ ಎಲ್ಲಿಯೂ ತೋರದಿರುವ ಸ್ವರೂಪೈಕ್ಯಾರ್ಥವನ್ನು ಹೇಳುವದು ಉಚಿತ ವಲ್ಲವು. ವಿಶಿಷ್ಟಾದ್ವೈತಿಗಳಿಗೆ ಮೋಕ್ಷವೆಂದರೆ **ದೇಶವಿಶೇಷವಿಶಿಷ್ಟಬ್ರಹ್ಮಪ್ರಾಪ್ತಿಪೂರ್ವಕ ಸ್ವಸ್ವರೂಪಾವಿರ್ಭಾವಲಕ್ಷಣಾಂ ಮುಕ್ತಿಂ ಪ್ರಾಪ್ನೋತಿ"** ವೈಕುಂಠ ಅಥವಾ ನಿತ್ಯವಿಭೂತಿ ಎಂಬ ದೇಶ ವಿಶೇಷ, ಪರಿಪೂರ್ಣ ಬ್ರಹ್ಮವೆಂದರೆ ದಿವ್ಯಮಙ್ಗಳ ವಿಗ್ರಹ, ಲಕ್ಷ್ಮೀ ವಿಶಿಷ್ಟತೆ ಕಲ್ಯಾಣ ಗುಣಗಣ ಯೋಗ, ದಿವ್ಯಾಯುಧ ದಿವ್ಯಾಭರಣಾದಿಗಳಿಂದ ಯುಕ್ತತೆ, ನಿತ್ಯ ಮುಕ್ತರುಗಳಿಂದ ಕೈಙ್ಕರ್ಯ, ಇವುಗಳಿಂದೆಲ್ಲಾ ಯುಕ್ತನಾದ ಇಂತಹ ಪರಿಪೂರ್ಣ ಬ್ರಹ್ಮನನ್ನು ಅನುಭವಿಸುವ ಆನಂದಪ್ರಾಪ್ತಿಗಾಗಿ ಹೇಯವಾದ ಪ್ರಕೃತಿ ಸಂಬಂಧವನ್ನು ಪರಮಾತ್ಮಕೃಪಯಾ ಕಳೆದುಕೊಂಡು ಸ್ವಸ್ವರೂಪಾವಿರ್ಭಾವವನ್ನು ಹೊಂದಿ ಪರವಾಸುದೇವ ಸನ್ನಿಧಿಯಲ್ಲಿದ್ದುಕೊಂಡು ಆತನಿಗೆ ಕೈಙ್ಕರ್ಯವನ್ನು ಎಸಗುವದು ಇದೀಗ ವಿಶಿಷ್ಟಾದ್ವೈತಿಗಳು ಹೇಳುವ ಮುಕ್ತಿಯು. ಇದರ ಉಪಪಾದನೆಯನ್ನು, ಶ್ರೀ ದೇಶಿಕರವರ ಪರಿಪೂರ್ಣ ಬ್ರಹ್ಮಾನುಭವಾಧಿಕಾರಕ್ಕೆ ದಾಸನು ಬರೆದಿರುವ ವ್ಯಾಖ್ಯಾನದಲ್ಲಿ ಕಾಣಬಹುದು. ಮುಕ್ತಿ ಶಬ್ದಕ್ಕೆ ಇತರ ಸಿದ್ಧಾಂತಿಗಳು ಭಿನ್ನಭಿನ್ನವಾಗಿ ಅರ್ಥಮಾಡಿರುತ್ತಾರೆ. ಆದುದರಿಂದ **ಉಪಯಾನ್ತಿ** ಎಂದರೆ ಆತನ ದಿವ್ಯ ವೈಕುಂಠಕ್ಕೆ ಅರ್ಚಿರಾದಿ ಮಾರ್ಗದ ಮೂಲಕ ಹೋಗಿ ಸೇರಿ, ಆತನ ಸಾಯುಜ್ಯವನ್ನು ಹೊಂದುವದೆಂಬುದೇ ಸರಿಯಾದ ಅರ್ಥವು. ಇದನ್ನೇ ಎಲ್ಲಾ ಉಪನಿಷತ್ತುಗಳೂ ಐಕಕಂಠ್ಯದಿಂದ ಬೋಧಿಸುತ್ತವೆ. ಈ ಶ್ಲೋಕದಲ್ಲಿರುವ **ಉಪಯಾನ್ತಿ** ಎಂಬ ಪ್ರಯೋಗವು, ಏಕಾತ್ಮವಾದಕ್ಕೂ ಅದ್ವೈತಾಭಿಪ್ರಾಯಕ್ಕೂ ವಿರುದ್ಧವಾಗುತ್ತದೆ. ಅರ್ಚಿರಾದಿ ಮಾರ್ಗದಿಂದ ಬಂದು ನನ್ನ ಸಾಯುಜ್ಯವನ್ನು ಹೊಂದುತ್ತಾರೆಂಬ ಅರ್ಥವೀಗ ಈ ಉಪಯಾನ್ತಿ ಶಬ್ದದಿಂದ ತೋರಿಬರುತ್ತದೆ.

**ಭಾಷ್ಯಾರ್ಥವು:**—ಅನಾದಿಕಾಲದಿಂದಲೂ ಉಂಟಾದ ಕರ್ಮಸಂಚಯಗಳಲ್ಲಿ ಈಗ ಪ್ರಾರಬ್ಧ ಕರ್ಮವನ್ನು ಅನುಭವಿಸುವದಕ್ಕಾಗಿ ಬಂದ ದೇಹಸಂಬಂಧದಿಂದ ಜ್ಞಾನವು ತಿರೋಹಿತವಾಗಿರುವಾಗ, **"ಮಚ್ಚಿತ್ತಾ ಮದ್ಗತಪ್ರಾಣಾಃ"** ಎಂದು ಹೇಳಿರುವ ವ್ಯಾಪಾರಗಳಿಗೆ ಬೇಕಾದ ಪರಿಪಕ್ವ ರೂಪವಾದ ಜ್ಞಾನಾವಸ್ಥೆಯು ಸಾಧ್ಯವೇ ಎಂಬ ಶಙ್ಕೆಗೆ ಸಮಾಧಾನವನ್ನು ಹೇಳುತ್ತಾರೆ.— ತನ್ನ ಕೃಪೌದಾರ್ಯಾದಿಗಳ ಮಾಹಾತ್ಮ್ಯೆಯನ್ನು ಹೇಳುವವರಾಗಿ, ಅವುಗಳಿಂದ ಪ್ರೇರಿತನಾಗಿ ತಾನು ಅಂತಹ ಭಕ್ತಿಯೋಗನಿಷ್ಠನಿಗೆ ಬೇಕಾದ ಮನಸ್ಸನ್ನು ವಶಮಾಡಿಕೊಳ್ಳುವ ಬುದ್ಧಿಯೋಗವನ್ನೇ ತಾನೇ ದಯಪಾಲಿಸುತ್ತೇನೆಂದು ತಿಳಿಸುತ್ತಾರೆ.—ಭಕ್ತ್ಯುತ್ಪತ್ತಿ ವಿವೃದ್ಧಿಗೆ ಹೇತುವು, ಭಗವಂತನಾದ ತನ್ನ ವಿಭೂತಿಯ ಮತ್ತು ತನ್ನ ಯೋಗಗಳ ಯಥಾರ್ಥಜ್ಞಾನವೆಂದು ಹೇಳಲ್ಪಟ್ಟಿತು. ಇಂತಹ ಭಕ್ತಿಯು, ಭಗವತ್ಪ್ರಾಪ್ತಿಗೆ ಪೂರ್ವಭಾವಿಯಾಗಿ ಬೇಕಾದ ಭಗವತ್ಸಾಕ್ಷಾತ್ಕಾರಪ್ರಾಪ್ತಿಗೆ, ಭಗವಂತನಾದ ತಾನು ಕರುಣಿಸಿ ಅನುಗ್ರಹಿಸುವ ಬುದ್ಧಿಯೋಗವೇ ವಿನಾ ಅನ್ಯಥಾ ಇಲ್ಲವೆಂದು ಉಪದೇಶಿಸುತ್ತಾರೆ.—**ತೇಷಾಂ**—ಮಚ್ಚಿತ್ತರಾಗಿ ಮದ್ಗತಪ್ರಾಣರಾಗಿ ಹೇಳಲ್ಪಟ್ಟ ಆ ಅಂತಹ ಭಕ್ತಿಯೋಗನಿಷ್ಠರಾದ ಮತ್ತು **ಸತತಯುಕ್ತಾನಾಂ** ಎಂದರೆ **ಮಯಿ ಸತತಯೋಗಮಾಶಂಸಮಾನಾನಾಂ.** ನನ್ನೊಂದಿಗೆ ಸಾಯುಜ್ಯರೂಪವಲ್ಲಿ ನಿತ್ಯಯೋಗವನ್ನ

ಪೇಕ್ಷಿಸುವವರಾಗಿ, **ನಿತ್ಯಯುಕ್ತ** ಶಬ್ದದ **"ಕ್ತ"** ಪ್ರತ್ಯಯ ಸ್ವಾರಸ್ಯದಿಂದ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ; **ಭಜತಾಂ** ಎಂದರೆ **ಭಜಮಾನಾನಾಂ** - ಉಪಾಸನೆಯನ್ನು ಮಾಡುವವರಿಗೆ **ಅಹಂ** - ನಾನೇ ಎಂದರೆ ಆತನು ಕೇಳಿಕೊಳ್ಳದಿದ್ದರೂ ನಾನೇ ಸ್ವತಂತ್ರಿಸಿ, **ತಮೇವ** - ಅಂತಹ ಅಪೇಕ್ಷೆಯನ್ನು ಒಳಗೊಂಡಿರುವ, **ಬುದ್ಧಿಯೋಗಂ ವಿಪಾಕದಶಾಪನ್ನಂ** - ಪರಿಪಕ್ವ ದಶೆಯನ್ನು ಹೊಂದಿದ ಬುದ್ಧಿಯೋಗವನ್ನು, **ಪ್ರೀತಿಪೂರ್ವಕವಾಗಿ, ದದಾಮಿ** - ಕೊಡುವೆನು, ಎಂದರೆ ಆತನಿಗೆ ಸತ್ವ ವಿವೃದ್ಧಿಯಿಂದ ಧರ್ಮಭೂತಜ್ಞಾನವು ವಿಕಾಸಹೊಂದುವ ಹಾಗೆ ಮಾಡುವೆನು; ನನ್ನನ್ನು ಹೊಂದುವದಕ್ಕೆ ಯೋಗ್ಯವಾದ ಜ್ಞಾನವನ್ನು ಕೊಡುವೆನು. ಹಿಂದೆ **"ಸಂಜ್ಞಾಯತೇ"** ಎಂಬ ಶ್ಲೋಕದಲ್ಲಿ ಶ್ರೀ ಪರಾಶರರು ಉಪಪಾದಿಸಿರುವ ಅಂತಹ ಅಮೋಘ ಜ್ಞಾನವನ್ನು ಕೊಡುವೆನೆಂಬ ಭಾವವು. ಅಲ್ಲಿ, ಅಂತಹ ಜ್ಞಾನವೇ ಜ್ಞಾನವೆನಿಸುತ್ತದೇ ವಿನಾ ಮಿಕ್ಕಿದುದೆಲ್ಲಾ ಅಜ್ಞಾನವೆಂದು ಹೇಳಲ್ಪಟ್ಟಿರುತ್ತದೆ. ಅದನ್ನು **ಪ್ರೀತಿಪುರಸ್ಸರವಾಗಿ** ಕೊಡುತ್ತೇನೆಂದು ಹೇಳಲ್ಪಟ್ಟಿತು; ಅಂತಹ ನನ್ನ ಪ್ರೀತಿಯಲ್ಲಿ ಏನು ವಿಶೇಷವು? ನಾನು ಹಾಗೆ ಪ್ರೀತಿಯಿಂದ ಕೊಡುವದರ ಫಲವೇನು? ಎಂದೇನಾದರೂ ಕೇಳುತ್ತೀಯೋ, ಹೇಳುವೆನು ಕೇಳು. **ಯೇನ ತೇ ಮಾಂ ಉಪಯಾನ್ತಿ**-ಅಂತಹ ಮಹತ್ತಾದ ಪ್ರೀತಿಯಿಂದ ಕೊಟ್ಟ ಬುದ್ಧಿಯೋಗದಿಂದ, ಆ ಭಜಕರು ನನ್ನ ಸಾಮೀಪ್ಯವನ್ನು ಹೊಂದುವರು ಎಂದರೆ ಸಾಯುಜ್ಯ ರೂಪವಾದ ಪರಿಪೂರ್ಣಬ್ರಹ್ಮಾನುಭವವನ್ನು ಹೊಂದುವರು. ಆದರೆ, ಹಿಂದೆ **ಮಚ್ಚಿತ್ತಾ ಮದ್ಗತಪ್ರಾಣಾಃ**- ಎಂದು ಹೇಳಿರುವದರಿಂದ ಸದಾ ಇಂತಹ ಚಿತ್ತವೃತ್ತಿಯುಳ್ಳವರು ಈ ಭಕ್ತಿ ಯೋಗ ನಿಷ್ಠರಾಗುವದರಿಂದ **ಸತತಯುಕ್ತಾನಾಂ** - ಎಂಬುದಕ್ಕೆ ಯಾವಾಗಲೂ ನನ್ನಲ್ಲೇ ಸಕ್ತವಾದ ಮನಸ್ಸುಳ್ಳವರೆಂದು ಕೆಲವರು ಅರ್ಥಮಾಡಿರುತ್ತಾರೆ; ಇದು ಸಾಧ್ಯವಲ್ಲವು, ಮತ್ತು **ಸತತಯುಕ್ತಾನಾಂ** - ಎಂದರೆ ಪ್ರತಿದಿನವೂ ಕ್ಲಿಪ್ತಕಾಲದಲ್ಲಿ ನಡೆಸುವದರಮೂಲಕ ಹಾಗೆ ಪ್ರಯೋಗವೆಂದರೆ ಸ್ವಾರಸ್ಯವೇ ಇಲ್ಲವಾಗುತ್ತದೆ. ಆದರೆ ಭಕ್ತಿಯು ಬೆಳೆಯುತ್ತಾ ಬೆಳೆಯುತ್ತಾ ಭಜನಕಾಲವು ಹೆಚ್ಚಾಗುತ್ತಾ ಹೆಚ್ಚಾಗುತ್ತಾ ಬರುವದು ನಿಸ್ಸಂದೇಹವಾದುದರಿಂದ **"ಸತತ ಯೋಗಮಾಶಂಸಮಾನಾನಾಂ"** ಎಂಬ ವ್ಯಾಖ್ಯಾನವು. ಆದರೆ ಸದಾ ಅಂತಹ ಚಿತ್ತವೃತ್ತಿ ಯುಳ್ಳವರೆಂದು ಹಿಂದೆಯೇ ಹೇಳಿ, ಶ್ರೀ ಯತಿವರ್ಯರ ಅರ್ಥದಲ್ಲಿ **ಕ್ತ** ಪ್ರತ್ಯಯ ಸ್ವಾರಸ್ಯವು ಬೋಧಿತವಾಗುವ ಹೆಚ್ಚು ವಿಶೇಷವು ತೋರಿಬರುತ್ತದೆ.

ಹಿಂದಿನ ಜನ್ಮದಲ್ಲಿ ಸ್ವಲ್ಪಮಟ್ಟಿಗೆ ಸುಕೃತವನ್ನು ಮಾಡಿರುವವನನ್ನು ಸರ್ವೇಶ್ವರನು ಹುಟ್ಟುವಕಾಲದಲ್ಲಿ ತನ್ನ ದಿವ್ಯಕಟಾಕ್ಷದಿಂದ ಈಕ್ಷಿಸುವನು. ಈ ಮಾಹಾತ್ಮ್ಯೆಯಿಂದ ಆತನು ಮಹಾಭಾಗವತರುಗಳ ಮಧ್ಯದಲ್ಲಿ ಬೆಳೆದು, ಆ ಸುಕೃತ ಪರಿಪಾಕದಿಂದ ಮಹತ್ತಾದ ಜ್ಞಾನ ನಿಧಿಯನ್ನು ಗುರುವಾಗಿ ಆಶ್ರಯಿಸುವನು. ಆಗ ಆ ಗುರುವಿನ ಮೂಲಕವಾಗಿ ಪರಮಾತ್ಮ ನನ್ನು ಉಪಾಸಿಸಿ ಆತನ ಸಾಯುಜ್ಯವನ್ನು ಹೊಂದಬೇಕೆಂಬ ಇಚ್ಛೆಯುಂಟಾಗುತ್ತದೆ. ಇದ ಕ್ಕಾಗಿ ಯಾವಾಗ ಕರ್ಮಯೋಗವನ್ನನುಷ್ಠಿಸಿದನೋ ಆಗ ಉಪಾಸನಾರಂಭಕ್ಕೆ ಪ್ರತಿಬಂಧಕ ಗಳಾದ ಪಾಪಗಳನ್ನೆಲ್ಲಾ ಕಳೆದುಕೊಂಡು ಸ್ವಾಮಿಯನ್ನು ಸತತಯುಕ್ತನಾಗಿ ಧ್ಯಾನಿಸಬೇಕೆಂಬ ಇಚ್ಛೆಯುಂಟಾಗುತ್ತದೆ. ಅದಕ್ಕೆ ಬೇಕಾದ ಬುದ್ಧಿಯೋಗವನ್ನೆಲ್ಲಾ ನಾನೇ ದಯಪಾಲಿಸುವದರ ಮೂಲಕ ನನ್ನಲ್ಲಿ ಶ್ರೇಷ್ಠತರವಾದ ಭಕ್ತಿ ಎಂದರೆ ಪ್ರೀತಿಯುಂಟಾಗುತ್ತದೆ. ಇಂತಹ ಪ್ರೀತಿಯೇ ಪರಾಭಕ್ತಿ ಅಥವಾ ಪರಭಕ್ತಿ ಎನಿಸುತ್ತದೆ. ಕರ್ಮಯೋಗದಲ್ಲಿದ್ದ ಸಾಮಾನ್ಯವಾದ ಭಕ್ತಿಯು ಅಭಿವೃದ್ಧಿಯನ್ನು ಹೊಂದಿ ಹೀಗೆ ಪರಭಕ್ತಿಯಾಗಿ ಉಪಾಸನಮಾಡುವ ಕಾಲದಲ್ಲಿ ಪರಿಣಮಿಸು ವದರಿಂದ ಉಪಾಸನವೇ ಪರಭಕ್ತಿ ಅಥವಾ ಭಕ್ತಿಯೋಗವೆಂದು ಹೇಳಲ್ಪಡುತ್ತದೆ. ಈ ಬುದ್ಧಿ

**ಭಾ. ಅವ. ಕಿಂಚ—**

**ಮೂ. ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

ಯೋಗದಿಂದ ಉಪಾಸನವು ಕೈಗೂಡಿ ಮುಂದೆ ಪರಮಾತ್ಮಸಾಕ್ಷಾತ್ಕಾರವನ್ನುಂಟುಮಾಡಿ ಪರಮಾತ್ಮಾಪರೋಕ್ಷಜ್ಞಾನವು ಸಿದ್ಧಿಸುವದರಿಂದ ಅಂತಹ ವಿವೃದ್ಧವಾದಭಕ್ತಿಯು ಪರಜ್ಞಾನವೆಂದು ಹೇಳಿಕೊಳ್ಳುತ್ತದೆ. ಇದು ಇನ್ನೂ ಬೆಳೆದು ಪರಮಾತ್ಮನನ್ನು ಒಂದು ಕ್ಷಣವು ಅಗಲಿರಲಾರದೆಂಬ ಪರಿತಾಪವು ಉಂಟಾಗುತ್ತದೆ. ಇಂತಹ ಉತ್ಕಟೇಚ್ಛೆಯುಳ್ಳ ಭಕ್ತಿಯು ಪರಾಕಾಷ್ಠಾ ದಶೆಯು ಪರಮಭಕ್ತಿಯೆನಿಸುತ್ತದೆ. ಇದನ್ನು ನೋಡಿ ಕರುಣಾಸಾಗರನು ಈತನಿಗೆ ದೇಹವಿಯೋಗವನ್ನುಂಟುಮಾಡಿಸಿ ತನ್ನನ್ನು ಬಂದು ಸೇರುವಹಾಗೆ ಮಾಡುತ್ತಾನೆ. ಈ ಅಭಿಪ್ರಾಯವೆಲ್ಲಾ **"ಯೇನ ಮಾಂ ಉಪಯಾನ್ತಿತೇ"** ಎಂಬುವದರಲ್ಲಿ ಅಂತರ್ಗತವು. **"ಭಜತಾಂ ಪ್ರೀತಿಪೂರ್ವಕಮ್"** ಎಂಬುವದರಿಂದ ಭಜಿಸುತ್ತಾ ಭಜಿಸುತ್ತಾ, ಭಗವಂತನಲ್ಲಿ ತೋರಿಸುವ ಪ್ರೀತಿಯು ಹೀಗೆ ಅಭಿವೃದ್ಧಿಯನ್ನು ಹೊಂದುತ್ತದೆಂಬ ಭಾವವು ಸೂಚಿತವು. ಇದು ಹೇಗೆ ಅಭಿವೃದ್ಧಿ ಹೊಂದಿ ಕೊನೆಗೆ ಇಲ್ಲಿರುವ ಸ್ಥಿತಿಯು ಪರಮ ದುಸ್ಸಹವಾಗುತ್ತದೆಂಬುದು ಶ್ರೀ ನಮ್ಮಾಳ್ವಾರ್ರವರ ತಿರುವಾಯ್ ಮೊಳಿಯಲ್ಲಿ ನಿಪುಣತರವಾಗಿ ಉಪಪಾದಿತವು. ಸರ್ವೇಶ್ವರನು ದಯಪಾಲಿಸುವ **ಬುದ್ಧಿಯೋಗದ** ಮಾಹಾತ್ಮ್ಯೆಯು ಇಂತಾದ್ದೆಂದು ಗ್ರಹಿಸತಕ್ಕದ್ದಾಗಿರುತ್ತದೆ. ॥ ೧೦ ॥

**ಭಾಷ್ಯಾವತಾರಿಕೆಯ ಅರ್ಥವು:**—ಹಿಂದೆ ಅಂತಹ ಜ್ಞಾನಿಯ ವಿಷಯದಲ್ಲಿ ಉದಾರಭಾವವೂ, ವಾತ್ಸಲ್ಯವೂ, ನಿರತಿಶಯವಾದುದರಿಂದ ಆತನಿಗೆ ತನ್ನನ್ನು ಉಪಾಸಿಸಲು ಬೇಕಾದ ಬುದ್ಧಿಯೋಗವನ್ನು ಕೊಡುತ್ತೇನೆಂದು ಹೇಳಿದರು. ಆದರೆ ಈ ಬುದ್ಧಿಯೋಗದ ಮೂಲಕ ಉಪಾಸನಾರಂಭಾದಿಗಳಿಗೆ ಪ್ರತಿಬಂಧಕಗಳಾದ ಅಜ್ಞಾನಾಂಧಕಾರವನ್ನು ಹೋಗಲಾಡಿಸುತ್ತೀಯೋ ? ಎಂದರೆ ಅದನ್ನೂ ಹೋಗಲಾಡಿಸುತ್ತೇನೆಂದು ಈ ಮುಂದಿನ ಶ್ಲೋಕದಲ್ಲಿ ಹೇಳುವದರಿಂದ, **ಕಿಂಚ** ಎಂಬ ಅವತಾರಿಕೆಯನ್ನು ಕೊಟ್ಟಿರುತ್ತಾರೆ ಬುದ್ಧಿಯೋಗ ಉಂಟಾಗಬೇಕಾದರೆ ಹಿಂದಿನ ಪ್ರತಿಬಂಧಕರೂಪ ಪಾಪ ನಿರಸನವಾಗಬೇಕು. ಅದು ಉಂಟಾಗುತ್ತದೋ ಎಂದರೆ ಉಂಟಾಗುತ್ತದೆ ಎನ್ನುತ್ತಾರೆ. ಈ ಶ್ಲೋಕದಲ್ಲಿ ತನ್ನ ಭಕ್ತನಲ್ಲಿ ತನಗೆ ನಿರತಿಶಯ ಕೃಪೆಯು ಎಂಬುದು ಉಪಪಾದಿತವು. ಇದು **ಅನುಕಂಪಾರ್ಥಂ** ಎಂಬುದರಿಂದಲೇ ವ್ಯಕ್ತವು.

**ಮೂಲಕ್ಕೆ ಅರ್ಥವು:—ತೇಷಾಮೇವ** - ಅಂತಹ ನನ್ನನ್ನು ಉಪಾಸಿಸುವವರ, **ಅನುಕಂಪಾರ್ಥಂ** - ಅನುಗ್ರಹಕ್ಕಾಗಿಯೇ, **ಆತ್ಮಭಾವಸ್ಥಃ** - ಅವರ ಮನಸ್ಸಿನಲ್ಲೇ ಸದಾ ಇರುವವನಾಗಿ, ಅವರು ನನ್ನನ್ನೇ ಸದಾ ಸ್ಮರಿಸುವಹಾಗೆ ಮಾಡುವವನಾಗಿ, **ಭಾಸ್ವತಾ** - ದೇದೀಪ್ಯಮಾನವಾದ, **ಜ್ಞಾನದೀಪೇನ** - ಜ್ಞಾನವೆಂಬ ದೀಪದಿಂದ, **ಅಜ್ಞಾನಜಂ ತಮಃ** - ಪೂರ್ವಜನ್ಮಗಳಲ್ಲಿಮಾಡಿದ ದುಷ್ಕರ್ಮಪರಿಪಾಕದಿಂದುಂಟಾದ ಅಜ್ಞಾನರೂಪ ಕತ್ತಲೆಯನ್ನು, **ಅಹಮ್** ಅಂತವರಲ್ಲಿ ಕೃಪಾಪ್ರೇರಿತನಾದ ನಾನು, **ನಾಶಯಾಮಿ** - ಹೋಗಲಾಡಿಸುವೆನು. ಯಾವಾಗ ಸುಕೃತ ಪರಿಪಾಕದಿಂದ ಪರಮಾತ್ಮನ ಅನುಗ್ರಹವನ್ನು ಹೊಂದಿದರೋ, ಆಗ ಹಿಂದಿನ ಅವರ ದುಷ್ಕೃತಗಳಿಂದ ಜ್ಞಾನವು ತಿರೋಹಿತವಾಗಿದ್ದುದು ವಿಕಾಸ ಹೊಂದಿದಾಗ ಅಜ್ಞಾನಾಂಧಕಾರವೆಲ್ಲಾ ತೊಲಗುತ್ತದೆ. ಹೇಗೆಂದರೆ ಪ್ರಕಾಶಿಸುವ ದೀಪದಿಂದ ಕತ್ತಲೆಯು ಹೇಗೆ ತೊಲಗುತ್ತದೋ ಆ ರೀತಿಯಲ್ಲಿ ಅವರುಗಳ ಅಜ್ಞಾನವೆಲ್ಲಾ ನಾಶವಾಗುತ್ತದೆ. ದೇಹವೇ ಆತ್ಮಾ, ತಾನು ಸ್ವತಂತ್ರನು. ದೇಹಸೌಖ್ಯಗಳೇ ಸುಖಗಳು. ಇತ್ಯಾದಿ ಅಜ್ಞಾನಗಳೆಲ್ಲಾ ತೊಲಗುವುವು

**ಭಾ. ತೇಷಾಮೇವಾನುಗ್ರಹಾರ್ಥ ಮಹಮ್, ಆತ್ಮಭಾವಸ್ಥಃ-ತೇಷಾಂ ಮನೋವೃತ್ತೌ**

ಎಂಬ ಭಾವವು. ಸುಕೃತಗಳೇ ಹಿಂದಿನ ದುಷ್ಕೃತಗಳನ್ನು ಸಾಕ್ಷಾತ್ತಾಗಿ ನಾಶಮಾಡುತ್ತವೆ ಎಂಬ ಅಭಿಪ್ರಾಯವು ಸರಿಯಲ್ಲವೆಂದು ಹಿಂದೆಯೇ ೮ನೆಯ ಅಧ್ಯಾಯದ ೨೮ನೆಯ ಶ್ಲೋಕದಲ್ಲಿ ತಿಳಿಸಿದ್ದೆವು. ಸುಕೃತರೂಪ ಪ್ರಾಯಶ್ಚಿತ್ತಗಳಿಂದ ದುಷ್ಕೃತಗಳು ನಷ್ಟವಾಗುತ್ತವೆಂದು ಶಾಸ್ತ್ರಗಳಲ್ಲಿ ಹೇಳಿವೆಯಲ್ಲಾ, ಎಂದರೆ ಹೌದು, ಆದರೆ ಅಂತಹ ಸುಕೃತವು ತಾನೇ ದುಷ್ಕೃತವನ್ನು ನಾಶಮಾಡಲಾರದು ಹಾಗಾದರೆ ನಾಶವಾಗುವ ಕ್ರಮ ಹೇಗೆಂದರೆ, ಸುಕೃತವು ಪರಮಾತ್ಮನ ಅನುಗ್ರಹವನ್ನೂ ದುಷ್ಕೃತವು ನಿಗ್ರಹವನ್ನೂ ಉಂಟು ಮಾಡುತ್ತವೆ. ಪರಮಾತ್ಮನ ಅನುಗ್ರಹವು ಆತನ ನಿಗ್ರಹ ಸಙ್ಕಲ್ಪವನ್ನು ಶಮನ ಮಾಡಬಹುದು. ಈ ರೀತಿಯಲ್ಲಿ ಸುಕೃತರೂಪ ಪ್ರಾಯಶ್ಚಿತ್ತವೂ ಪರಮಾತ್ಮನ ನಿಗ್ರಹ ಸಙ್ಕಲ್ಪಕ್ಕೆ ಪ್ರತಿಬಂಧಕವಾಗಬಹುದು. ಹಾಗೆಯೇ ಈ ಉಪಾಸನರೂಪ ಸುಕೃತವು ಆತನ ಅನುಗ್ರಹವನ್ನು ಸಂಪಾದಿಸುವದರಮೂಲಕ ಹಿಂದಿನ ದುಷ್ಕೃತಗಳಿಂದುಂಟಾದ ಜ್ಞಾನ ತಿರೋಹಿತತ್ವವು ತೊಲಗುತ್ತದೆಂದು ಹೇಳಲ್ಪಟ್ಟಿತು. ಇದರಿಂದ ಈ ಜೀವಾತ್ಮನ ಧರ್ಮಭೂತ ಜ್ಞಾನವು ವಿಕಾಸವನ್ನು ಹೊಂದಿ ಆತನನ್ನು ಹೊಂದುವ ಪ್ರಯತ್ನವು ಕೈಗೂಡುತ್ತದೆಂಬ ಭಾವವು. **ನಾಶಯಾಮಿ ಅನುಕಂಪಾರ್ಥಂ** ಈ ಎರಡು ಪ್ರಯೋಗಗಳಿಂದ ಸುಕೃತವು ತಾನೇ ಏನನ್ನು ಮಾಡಲಾರದು, ಅದರಿಂದ ಪ್ರೀತನಾದ ಪರಮಪುರುಷನೇ ಅನುಗ್ರಹಿಸುವನೆಂಬುದು ವ್ಯಕ್ತವು. ಇಲ್ಲಿ **ಭಾಸ್ವತಾ ಜ್ಞಾನದೀಪೇನ ನಾಶಯಾಮಿ** ಎಂದರೆ **ತೇಷಾಂ**-ಆ ಉಪಾಸಕರ ಜ್ಞಾನದೀಪ್ತಿಯಿಂದಲೇ ಎಂಬುದು ವ್ಯಕ್ತವು. ಅವರಿಗೆ ಅಜ್ಞಾನವು ತೊಲಗುವಹಾಗೆ ಮಾಡುವದರಮೂಲಕ ಜ್ಞಾನದೀಪ್ತಿಯು ಪ್ರಕಾಶಿಸುವ ಹಾಗೆ ಮಾಡುವೆನು. ಇದರಿಂದ ಅವರು ನನ್ನನ್ನು ಆಶ್ರಯಿಸಿ ನನ್ನನ್ನು ಹೊಂದಿ ನಿರತಿಶಯಸುಖವನ್ನನುಭವಿಸಲಿ ಎಂದು ಹಾಗೆ ಅನುಗ್ರಹಿಸುವನೆಂಬ ಭಾವವು. ಇಲ್ಲಿ **ಆತ್ಮಭಾವಸ್ಥಃ** ಎಂಬುದರಿಂದ ಪರಮಾತ್ಮನು ಮನಸ್ಸಿನಮೂಲಕವಾಗಿ ಉಂಟಾಗುವ ಜ್ಞಾನಮೂಲಕವಾಗಿ ತಿಳಿಯತಕ್ಕವನಾಗಿ ಜ್ಞೇಯವಸ್ತುವೆಂದು ಹೇಳಲ್ಪಟ್ಟಿತು. **"ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್"** ಎಂದು( ಪು. ಸೂ )ಶ್ರುತಿಯಲ್ಲಿ ಹೇಳಿರುವ ಅರ್ಥವು ಉಪಪಾದಿತವು. ಹೀಗೆ **ಜ್ಞಾನದೀಪೇನ ಭಾಸ್ವತಾ** ಎಂದು ಹೇಳಿದುದರಿಂದ ಆತ್ಮರ ಸ್ವರೂಪವೂ ಜ್ಞಾನವೂ, ಧರ್ಮವೂ ಜ್ಞಾನವೂ, ಎಂದು ಏರ್ಪಟ್ಟಿತು. ಆದುದರಿಂದ ಆತ್ಮವು ಜ್ಞಾನಸ್ವರೂಪಮಾತ್ರವೇ ಅಲ್ಲದೆ ಜ್ಞಾನ ಗುಣಕನಲ್ಲವೆಂಬ ವಾದವು ನಿರಸ್ತವು. ಜ್ಞಾನ ಸ್ವರೂಪವೂ ಅಲ್ಲದೆ ಜ್ಞಾನಗುಣಕನೂ ಆತ್ಮಾ ಎಂಬುದು **"ಜ್ಞೋತ ಏವ"** ಎಂಬ (೨. ೩. ೧೯) ಶಾರೀರಕ ಸೂತ್ರದಲ್ಲಿ ಉಪಪಾದಿತವು. ಇದಕ್ಕೆ ಪ್ರಮಾಣವು **"ಏಷ ಹಿ ದ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮನ್ತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ"** (ಪ್ರಶ್ನ. ೬. ೫.)

**ಭಾಷ್ಯಾರ್ಥವು:–ತೇಷಾ ಮೇವಾನುಗ್ರಹಾರ್ಥಂ**-ಇಲ್ಲಿ ಅನುಕಂಪಾ ಎಂಬುವದಕ್ಕೆ ಅನುಗ್ರಹವೆಂದು ಅರ್ಥಮಾಡಿರುತ್ತಾರೆ. **ಅನುಕಂಪಾ** ಎಂದರೆ ಕೃಪೆಯು, ಅದರಿಂದುಂಟಾಗುವದು ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿರೂಪವಾದ ಅನುಗ್ರಹವಾದುದರಿಂದ ಹಾಗೆ ಭಾಷ್ಯವು; **ಅನುಗ್ರಹ**ದಿಂದ ಕೂಡದಿರುವ ಕೃಪೆಯು ಅಜಾಗಳಸ್ತನದಹಾಗೆ ನಿರರ್ಥಕವಾದುದು, ಇದು ಹಾಗಲ್ಲವು; ನಿರ್ಧನನ ಕೃಪೆಯು ಅರ್ಥಾರ್ಥಿಗೆ ಪ್ರಯೋಜನಕಾರಿಯಲ್ಲವು, ಅನುಗ್ರಹರೂಪವಾದುದೆಂಬ ಭಾವದಿಂದ ಸಮಂಜಸವಾಗಿ ಹಾಗೆ ವ್ಯಾಖ್ಯಾನವು. ಹೀಗೆ ಸತತಯುಕ್ತರಾಗಿರುವ ಜ್ಞಾನಿಗಳಿಗೆ ಅನುಗ್ರಹ ಮಾಡುವದಕ್ಕಾಗಿ, **ಅಹಂ** - ಇಂತಹ ಅನುಗ್ರಹಕ್ಕೆ ಸಾಧಕವಾದ ಜ್ಞಾನಶಕ್ತಿ

**ಭಾ. ವಿಷಯತಯಾವಸ್ಥಿತೋ ಮದೀಯಾನ್ ಕಲ್ಯಾಣಗುಣಗಣಾನ್ ಆವಿಷ್ಕುರ್ವನ್ ಮದ್ವಿಷಯ ಜ್ಞಾನಾಖ್ಯೇನ ಭಾಸ್ವತಾ ದೀಪೇನ ಜ್ಞಾನವಿರೋಧಿಪ್ರಾಚೀನ ಕರ್ಮರೂಪಾಜ್ಞಾನಜಂ ಮದ್ವ್ಯತಿರಿಕ್ತ ಪೂರ್ವಾಭ್ಯಸ್ತವಿಷಯಪ್ರಾವಣ್ಯರೂಪಂ-ತಮೋ ನಾಶಯಾಮಿ ॥ ೧೧ ॥**

ಕಾರುಣ್ಯ ದಿವ್ಯಮಂಗಳ ವಿಗ್ರಹಾದಿಗಳಿಂದ ಪರಿಪೂರ್ಣನಾದ ನಾನು, **ಆತ್ಮಭಾವಸ್ಥಃ**-ಎಂದರೆ **ತೇಷಾಂ ಮನೋವೃತ್ತ್ಯಾ ವಿಷಯತಯಾವಸ್ಥಿತಃ**-ಅವರುಗಳು ನನ್ನನ್ನು ಏಕಾಂತ್ಯದಿಂದ ಧ್ಯಾನಿಸುವುದರಿಂದ ಅವರುಗಳ ಮನೋವೃತ್ತಿಗೆ ವಿಷಯನಾಗಿ ಅವರ ಮನಸ್ಸಿನಲ್ಲೇ ಯಾವಾಗಲೂ ಇರುವವನಾಗಿ, ಇದರ ಅಭಿಪ್ರಾಯವೇನೆಂದರೆ **ಮದೀಯಾನ್ ಕಲ್ಯಾಣ ಗುಣಗಣಾನ್ ಆವಿಷ್ಕುರ್ವನ್**-ನನ್ನ ಸಂಬಂಧವಾದ ಕಲ್ಯಾಣಗುಣಗಳ ಸಮೂಹವನ್ನು ಕೊಂಡಾಡುವವನಾಗಿ, ಆಶ್ರಿತನ ಅನುಸಂಧಾನಕ್ಕೆ ಉಪಯುಕ್ತನಾದ ೧೬ ಗುಣಗಳು ದ್ವಯಮಂತ್ರದ **ನಾರಾಯಣ** ಶಬ್ದದಿಂದ ಬೋಧಿತವು. ದ್ವಯಾಧಿಕಾರವನ್ನು ಪರಾಂಬರಿಸಿ **ಮದ್ವಿಷಯಾಖ್ಯೇನ** - ನನ್ನ ವಿಷಯವಾದುದೆಂದು ಹೇಳಲ್ಪಡುವ, **ಭಾಸ್ವತಾದೀಪೇನ** - ತೇಜೋವಿಶಿಷ್ಟವಾದ ಧರ್ಮಭೂತ ಜ್ಞಾನರೂಪ ದೀಪದಿಂದ, **ಜ್ಞಾನವಿರೋಧಿ ಪ್ರಾಚೀನಕರ್ಮರೂಪಾಜ್ಞಾನಜಂ** - ಪರಮಾತ್ಮನನ್ನು ತಿಳಿಯಲು ಬೇಕಾದ ಜ್ಞಾನಕ್ಕೆ ವಿರೋಧಿರೂಪವಾಗಿರುವ ಹಿಂದೆ ಮಾಡಿದ ದುಷ್ಕೃತರೂಪವಾದ ಅಜ್ಞಾನದಿಂದುಂಟಾದ, **ಮದ್ವ್ಯತಿರಿಕ್ತ ಪೂರ್ವಾಭ್ಯಸ್ತ ವಿಷಯ ಪ್ರಾವಣ್ಯರೂಪಂ** - ನನಗಿಂತಲೂ ಬೇರೆಯಾದ ಎಂದರೆ ನನ್ನ ಧ್ಯಾನವಲ್ಲದ, ಹಿಂದಿನಿಂದಲೂ ಅಭ್ಯಾಸಮಾಡಲ್ಪಟ್ಟ ವಿಷಯಲಂಪಟರೂಪವಾದ, **ತಮಃ** - ಅಂಧಕಾರವನ್ನು **ನಾಶಯಾಮಿ** - ನಾಶಮಾಡುವೆನು. ಇಲ್ಲಿ **ಅಜ್ಞಾನಜಂ ತಮಃ**-ಎಂಬ ಪ್ರಯೋಗದಿಂದ ಹಿಂದಿನ ದುಷ್ಕರ್ಮ ವಾಸನಾರೂಪ ಅಜ್ಞಾನವು ಹೇತುವಾಯಿತು. ಅದರಿಂದುಂಟಾದುದು ತಮಸ್ಸು; ಅದುದರಿಂದ ವಿಷಯಪ್ರಾವಣ್ಯವೆಂದು ಸ್ವಾರಸ್ಯವಾಗಿ ವ್ಯಾಖ್ಯಾನಮಾಡಿರುತ್ತಾರೆ. ತಮಶ್ಶಬ್ದದಿಂದ ಇಲ್ಲಿ ತಮೋಗುಣವು ಹೇಳಲ್ಪಡಲಿಲ್ಲವು. ಅಜ್ಞಾನವು ಎಂತಹದ್ದೆಂಬುದನ್ನು ವಿವರಿಸಿ ಹೇಳಿದರು. ಹಿಂದಿನ ಅನೇಕ ಜನ್ಮಗಳಿಂದಲೂ ವಿಷಯ ಪ್ರಾವಣ್ಯದಲ್ಲಿ ಮನಸ್ಸು ಪ್ರವರ್ತಿಸುತ್ತಿದ್ದುದರಿಂದ ಅದೇ ಅಭ್ಯಾಸದಿಂದ ಕೃಪಣನಾಗಿರುವ ನನ್ನನ್ನು ಸ್ಮರಿಸದ ಹಾಗೆಮಾಡುವ ವಿಷಯ ಪ್ರಾವಣ್ಯ ರೂಪ ತಮಸ್ಸನ್ನು ಎಂದು ಅರ್ಥಮಾಡಿದರು. ಅಂಧಕಾರವನ್ನು ದೀಪವು ಹೇಗೆ ನಾಶಮಾಡುತ್ತದೋ ಹಾಗೆ ನಾಶಮಾಡುವೆನು ಎಂಬ ಭಾವವು. **"ಭಾಸ್ವತಾಜ್ಞಾನದೀಪೇನ"** ಎಂಬ ರೂಪಕದಿಂದ, ಪರಮಾತ್ಮನು, ಜೀವಾತ್ಮನ ಮನಸ್ಸಿಗೆ ಯಾವಾಗ ವಿಷಯನಾದನೋ, ಆಗ ಮನಸ್ಸಿನೊಂದಿಗೆ ಆತ್ಮನ ಧರ್ಮಭೂತಜ್ಞಾನಕ್ಕೆ ಸಂಬಂಧವಿರುವುದರಿಂದ, ಜ್ಞಾನದ ಪ್ರಸರವು ವೃದ್ಧಿಹೊಂದುತ್ತದೆ. ಆತ್ಮನು ಅಣುವು, ಆತ್ಮನ ಧರ್ಮಭೂತ ಜ್ಞಾನವು ವಿಭುವು. ಆದುದರಿಂದ **ಭಾಸ್ವತಾ**-ಶಬ್ದದಿಂದ ಈ ಜ್ಞಾನದ ಪ್ರಸರಣೆಯೂ, ತನ್ಮೂಲಕ ವಿಭುತ್ವವೂ, ಬೋಧಿತವು. ಬುದ್ಧಿಗೂ ಮನಸ್ಸಿಗೂ ಇರುವ ಸಂಬಂಧವನ್ನು ಶ್ರುತಿಯು **"ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವತು"** ಎಂದು ವ್ಯಕ್ತಪಡಿಸುತ್ತದೆ. ಮೂಲದಲ್ಲಿ **ಅಜ್ಞಾನಜಂ ತಮಃ**-ಎಂದಿರುವುದರಿಂದ ಅಜ್ಞಾನವು ಹೇಗೆ ಉಂಟಾಯಿತೆಂಬುದನ್ನು **"ಪ್ರಾಚೀನ ಕರ್ಮರೂಪಾಜ್ಞಾನಜಂ"** ಎಂಬುದರಿಂದ ಉಪಪಾದಿಸಿ ಹೇಳಿದರು. ಇಂತಹ ಅಜ್ಞಾನದಿಂದುಂಟಾದ ತಮಸ್ಸು ಎಂತಹದ್ದೆಂದರೆ **ಮದ್ವ್ಯತಿರಿಕ್ತ ಪೂರ್ವಾಭ್ಯಸ್ತ ವಿಷಯಪ್ರಾವಣ್ಯ ರೂಪಂ**-ಹಿಂದಿನ ಕರ್ಮವಾಸನೆಯಿಂದ ಅನುಸರಿಸಿ ಬಂದ ವಿಷಯೋಪಭೋಗದಲ್ಲೇ ಆಸಕ್ತಿ

ರೂಪವಾದುದು, ಇದರಿಂದ ಭಗವಂತನನ್ನು ಸ್ಮರಿಸುವ ಸುಕೃತ ವಿಲ್ಲದುದು ಈ ತಮಸ್ಸು; ಇದು ನಾಶವಾದರೆ ವಿಷಯ ಪ್ರಾವಣ್ಯವು ತೊಲಗಿ ಪರಮಾತ್ಮನಾದ ನನ್ನಲ್ಲೇ ಮನಸ್ಸು ಸಕ್ತ ವಾದುದಾಗುತ್ತದೆ ಎಂಬ ಭಾವವು ಇಂತಹ ಬುದ್ಧಿಯೋಗವನ್ನುಂಟುಮಾಡುವೆನೆಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಜ್ಞಾನವನ್ನು ದೀಪವೆಂದು ರೂಪಕಮಾಡಿ ಅದು ಭಾಸಮಾನ ವಾದುದೆಂದು **ಭಾಸ್ವತಾ** ಎಂಬ ವಿಶೇಷಣವನ್ನು ಕೊಟ್ಟಿರುವದರಿಂದ ಧರ್ಮ ಧರ್ಮಿಗಳೆರಡೂ ಜ್ಞಾನ ರೂಪವಾದುವೆಂದು ಏರ್ಪಟ್ಟಿತು. ಪರಮಾತ್ಮ ವಿಷಯವಾಗಿ ಪ್ರವೃತ್ತಿಯೂ, ಮತ್ತು ವಿಷಯ ಪ್ರಾವಣ್ಯ ನಿವೃತ್ತಿ ರೂಪವಿಷಯಿತ್ವವೂ, ಧರ್ಮಭೂತಜ್ಞಾನಕ್ಕೇನೇ ಸೇರಿದುದು ಎಂಬುದು ವ್ಯಕ್ತ ವು. ಈ ಅಭಿಪ್ರಾಯವು **ಆತ್ಮಭಾವಸ್ಥಃ** ಎಂಬ ಪ್ರಯೋಗದಿಂದಲೂ ವ್ಯಕ್ತಪಡುತ್ತದೆ ಹೇಗೆಂದರೆ ಅವರುಗಳ ಮನೋವೃತ್ತಿಯಿಂದ ಅವರ ಧರ್ಮಭೂತಜ್ಞಾನಕ್ಕೆ ವಿಷಯಭೂತನಾಗಿರುವನಾಗಿ ಎಂಬ ಸ್ವಾರಸ್ಯಾರ್ಥವು ತೋರಿಬರುತ್ತದೆ. ಇಲ್ಲಿ ಧರ್ಮಭೂತ ಜ್ಞಾನದ **ವಿಷಯಿತ್ವವು** ಬಹು ಚನ್ನಾಗಿ ಬೋಧಿಸಲ್ಪಟ್ಟಿತು. ಇದನ್ನೇ ಬಹು ನಿಪುಣತರವಾಗಿ ಪ್ರದರ್ಶಿಸುವದಕ್ಕಾಗಿ **ಜ್ಞಾನ ದೀಪೇನ ಭಾಸ್ವತಾ** ಎಂಬುದಕ್ಕೆ **ಮದ್ವಿಷಯಾಖ್ಯೇನ ಭಾಸ್ವತಾ ದೀಪೇನ** ಎಂಬ ಸರಸವಾದ ವ್ಯಾಖ್ಯಾನವು. ವ್ಯಾಖ್ಯಾನದಲ್ಲಿ **ಮದೀಯಾನ್ ಕಲ್ಯಾಣಗುಣಗಣಾಂಶ್ಚಾವಿಷ್ಕುರ್ವನ್** ಎಂದು ಮೂಲದಲ್ಲಿ ತೋರದಿರುವದನ್ನು ಹೇಗೆ ಬರೆದರು ಎಂದು ಕೆಲವರು ಆಕ್ಷೇಪಿಸಬಹುದು. ಇದು ಅರ್ಥವಾಗಿ ತೋರಿಬರುವದರಿಂದಲೇ ಹಾಗೆ ವ್ಯಾಖ್ಯಾನವು. ಆತ್ಮಾವಿಗೆ ಧರ್ಮಭೂತಜ್ಞಾನ ಉಂಟೆಂದೂ, ಅದಕ್ಕೆ **ವಿಷಯಿತ್ವವೂ** ಉಂಟೆಂದು ಯಾವಾಗ ಸ್ಥಾಪಿತವೋ, ಆಗ ಮನಸ್ಸಿನ ಮೂಲಕವಾಗಿಯೇ ಆ ವಿಷಯಿತ್ವವಾದುದರಿಂದ, **ಆತ್ಮಭಾವಸ್ಥಃ** - ಎಂಬಲ್ಲಿ ಆತ್ಮಶಬ್ದಕ್ಕೆ ಮನಸ್ಸೆಂದೇ ಅರ್ಥಮಾಡುವದು ಸಮಂಜಸವೆಂದು, **ಮನೋಭಾವದಲ್ಲಿರುವವನಾಗಿ** ಎಂದೇ ಅರ್ಥಮಾಡಿರುತ್ತಾರೆ. ಮನೋಭಾವದಲ್ಲಿ ಹೇಗೆ ಇರುವದು ಎಂದರೆ ಆತನ ದಿವ್ಯ ಸ್ವರೂಪರೂಪ ಗುಣ ವಿಭೂತಿಗಳನ್ನು ಚಿಂತಿಸುತ್ತಿರುವದೇ. ಈಗ ಪ್ರಕೃತ ಸಂದರ್ಭದಲ್ಲಿ ಜ್ಞಾನಿಗಳ ಉತ್ತಾರ ಣೆಗೆ ಪರಮಾತ್ಮನ ಕಲ್ಯಾಣಗುಣಗಣಗಳ ಆವಿಷ್ಕಾರವೇ ಮುಖ್ಯವಾದುದರಿಂದ ಹಾಗೆ ವ್ಯಾಖ್ಯಾ ನವು ಎಂದು ತಿಳಿಯತಕ್ಕದ್ದು. ಇದರಿಂದ ಆತ್ಮಾ ಬರೀ ಜ್ಞಾನಸ್ವರೂಪನೆಂಬ ವಾದವು ಈ ಶ್ಲೋಕದಿಂದ ಪಲಾಯನ ಸೂಕ್ತವನ್ನು ಜಪಿಸಿತು. ಆತ್ಮಾ, ಜ್ಞಾನಸ್ವರೂಪಮಾತ್ರವೇ ಎಂಬು ವವರಿಗೆ ಪರಮಾತ್ಮ ಸಾಕ್ಷಾತ್ಕಾರದ ಸಿದ್ಧಿಯೇ ಇಲ್ಲವಾಗುತ್ತದೆ. ದಿವ್ಯ ಮಙ್ಗಳ ವಿಗ್ರಹದ ಉಪಾಸನಾಕ್ರಮವು ಹೇಗೆ ಎಂದು ಕೇಳಬೇಕಾಗುತ್ತದೆ. **“ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು । ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಏವಚ । ಇಂದ್ರಿಯಾಣಿ ಹಯಾನಾಹುಃ”** ಎಂಬ ಶ್ರುತಿಯು ಬಹುನಿಪುಣತರವಾಗಿ ವಿಷಯಜ್ಞಾನವು ಆತ್ಮಾವಿಗೆ ಹೇಗೆ ಉಂಟಾಗುತ್ತದೆಂಬುದನ್ನೂ ಬೋಧಿಸುತ್ತದೆ — ವಿಷಯಗಳಲ್ಲಿ ಸಂಚರಿಸುವ ಕುದುರೆಗಳಿಗೆ ಮನಸ್ಸೆಂಬುದೇ ಲಗಾಮು, ಇದನ್ನು ಹಿಡಿದಿರುವದು ಬುದ್ಧಿ ಎಂಬ ಸಾರಥಿಯು, ಈ ಬುದ್ಧಿ ಯಿಂದ ನಡೆಸಲ್ಪಟ್ಟ ರಥದಲ್ಲಿ ಆತ್ಮನು ಕೂತಿದ್ದಾನೆಂದು ಶ್ರುತಿಯು ಬಹುಸ್ವಾರಸ್ಯವಾಗಿ ಉಪ ದೇಶಿಸಿರುತ್ತದೆ. ಈ ಬುದ್ಧಿಸ್ಥಾನದಲ್ಲಿರುವ ಸಾರಥಿಯು ಆತ್ಮನಿಗೆ ಸಂಬಂಧಿಸಿರುವ ಧರ್ಮಭೂತ **ಜ್ಞಾನವಲ್ಲವೇ ?** **ಅಜ್ಞಾನಜಂ ತಮಃ** ಎಂದು ಮೂಲದಲ್ಲಿ ಅಜ್ಞಾನವನ್ನು **ಹೇತು**ವಾಗಿಯೂ ತಮಸ್ಸನ್ನು ಅದರ ಕಾರ್ಯವಾಗಿಯೂ ಹೇಳಲ್ಪಟ್ಟಿರುವದರಿಂದ, ಪ್ರಾಚೀನ ಕರ್ಮರೂಪ ಅವಿದ್ಯೆ ಎಂದು ಹೇಳಿಸಿಕೊಳ್ಳುವ ಅಜ್ಞಾನದಿಂದುಂಟಾದುದು ತಮಸ್ಸೆಂದು ಹೇಳಿದರು. ಆ ಕಾರಣದಿಂದ ತಮಸ್ಸು ಯಾವುದು ಎಂದರೆ ವಿಷಯ ಪ್ರಾವಣ್ಯವೇ ಎಂದು ವ್ಯಕ್ತಪಡಿಸಿದರು. ನಿರತಿಶಯ **ಭೋಗ್ಯವಾದುದು ಪರಮಾತ್ಮ ಸಾಕ್ಷಾತ್ಕಾರವು ಎಂಬ ಜ್ಞಾನ ಉಂಟಾದರೆ, ಸ್ಥಿರವಿಂದೇ**

**ಭಾ. ಅವ. ಏವಂ ಸಕಲೇತರ ವಿಸಜಾತೀಯಂ, ಭಗವದಸಾಧಾರಣಂ, ಶೃಣ್ವತಾಂ ನಿರತಿಶಯಾನಂದಜನಕಂ, ಕಲ್ಯಾಣಗುಣಯೋಗಂ ತದೈಶ್ವರ್ಯ ಏತತಿಂ ಚ ಶ್ರುತ್ವಾ, ತದ್ವಿಸ್ತಾರಂ ಶ್ರೋತುಕಾಮೋಽರ್ಜುನ ಉವಾಚ—**

**ಮಕರಂದನಿರ್ಭರೇ ಮಧುವ್ರತೋನೇಕ್ಷುರಕಂ ಹಿ ವೀಕ್ಷತೇ"** (ಸ್ತೋ. ಶ್ಲೋ. ೨೭) ಮಕರಂದದಿಂದ ಪರಿಪೂರ್ಣವಾದ ಕಮಲಪುಷ್ಪವಿರುವಾಗ ಮಧುಕರವು ಮಕರಂದವಿಲ್ಲದಿರುವ ಮುತ್ತಗದ ಹೂವೇ ಮೊದಲಾದುದನ್ನು, ನೋಡಲು ಬಲ್ಲಾಗಿದ್ದರೂ, ಹೇಗೆ ಕಣ್ಣೆತ್ತಿ ನೋಡುವದಿಲ್ಲವೋ, ಹಾಗೆಯೇ ಸ್ವಾಮಿಯದತ್ತ ಬುದ್ಧಿಯೋಗವುಳ್ಳ ಜ್ಞಾನಿಯು ಅಲ್ಪಾಸ್ಥಿರಗಳಾದ ವಿಷಯೋಪಭೋಗಗಳಲ್ಲಿ ಪ್ರಾವಣ್ಯವಿಲ್ಲದಿರುವನಾಗುವನು ಎಂಬ ಭಾವವು. ಜ್ಞಾನ ದೀಪವೆಂದು ರೂಪಕವಾಡಿರುವದರಿಂದ ಕತ್ತಲಲ್ಲಿ ಗುಂಡಿಯಲ್ಲಿ ಬೀಳುವಹಾಗೆ ವಿಷಯ ಪ್ರಾವಣ್ಯದಲ್ಲಿ ಬೀಳುವದಿಲ್ಲವೆಂಬ ಭಾವವೂ ತೋರಿಬರುತ್ತದೆ. ಇಲ್ಲಿ ತಮಸ್ಸು ಜ್ಞಾನದೀಪದಿಂದ ಹೋಗುತ್ತದೆ ಎಂದು ಹೇಳಿದರೆ, ಆ ಜ್ಞಾನವೂ ತಮಸ್ಸಿನ ನಿರಸನದಿಂದುಂಟಾದುದಲ್ಲವೋ? ಎಂದರೆ, ಅಲ್ಪ ಸುಕೃತದಿಂದುಂಟಾದ ಭಗವದನುಗ್ರಹದಿಂದ ಪ್ರಾಪ್ತವಾದುದು ಜ್ಞಾನವೆಂದು ಹೇಳಲ್ಪಟ್ಟಿತು. ಅಂತಹ ಅಲ್ಪಸುಕೃತವಾದರೂ ಇದ್ದರೇನೇ ಅಂತಪರಲ್ಲಿ ಸರ್ವೇಶ್ವರನಿಗೆ ಅನುಕಂಪಾ ಉಂಟಾಗುತ್ತದೆ. ಅವರುಗಳು ಪರಮಾತ್ಮ ಭಜನವನ್ನು ಮಾಡಬೇಕೆಂಬ ಸಙ್ಕಲ್ಪಯುಕ್ತರಾಗಿ ಕರ್ಮಯೋಗಾದಿಗಳನ್ನು ಯಾವಾಗ ಅನುಷ್ಠಿಸಿದರೋ, ಆಗ ಅವರು ಸುಕೃತಿಗಳೇ ಆದುದರಿಂದ, ಮಿಕ್ಕ ಉಪಾಸನಾ ನಿಷ್ಪತ್ತಿಗೆ ಪ್ರತಿಬಂಧಕಗಳೆಲ್ಲಾ ತೊಲಗುವಹಾಗೆ, ಅವರ ತಮಸ್ಸಾದ ವಿಷಯ ಪ್ರಾವಣ್ಯವನ್ನು ಹೋಗಲಾಡಿಸುವದಕ್ಕಾಗಿ, ಅವರಿಗೆ ಜ್ಞಾನದೀಪವನ್ನು ದಯಪಾಲಿಸುವನೆಂಬ ಭಾವವು. ಆದರ ಜ್ಞಾನದೀಪ್ತಿಯಿಂದ ವಿಷಯ ಪ್ರಾವಣ್ಯದ ನಾಶ ಉಂಟಾಗುವದು ಸಹಜವೇ, ಮತ್ತು ವಿಷಯಪ್ರಾವಣ್ಯದ ನಾಶದಿಂದ ಜ್ಞಾನದೀಪ್ತಿಯು ಲಭಿಸಿ ಪರಮಾತ್ಮ ಸಾಕ್ಷಾತ್ಕಾರ ಉಂಟಾಗುವದೂ ನ್ಯಾಯವೇ. ಹಾಗಾದರೆ ಇಲ್ಲಿ ಅನ್ಯೋನ್ಯಾಶ್ರಯ ದೋಷವೋ ? ಎಂದಾಕ್ಷೇಪಿಸಿದರೆ ಎಂದಿಗೂ ಇಲ್ಲವು. ಏತಕ್ಕೆಂದರೆ ಎರಡಕ್ಕೂ ಕಾರಣಭೂತವಾದುದು ಪರಮಾತ್ಮಾನುಗ್ರಹವಾದುದರಿಂದ; ಇದು **ತೇಷಾಮೇವಾನುಕಂಪಾರ್ಥಂ** ಎಂಬುದರಿಂದ ವ್ಯಕ್ತವು.

**ಭಾಷ್ಯಾವತಾರಿಕೆಯ ಅರ್ಥವು:**— ಹಿಂದೆ **"ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ವತಃ"** ಎಂದು ಹೇಳಿ, ಆ ವಿಭೂತಿಯ ಮತ್ತು ಯೋಗದ ಮಾಹಾತ್ಮ್ಯೆಯನ್ನು ಯಾವಾಗ ಸಂಕ್ಷೇಪವಾಗಿ ಹೇಳಿದರೋ, ಮತ್ತು ಅವನ್ನು **ತತ್ವತಃ ತಿಳಿಯುವದು** ಅವಿಚಾಲ್ಯವಾದ ಭಕ್ತಿಯೋಗ ನಿಷ್ಠಗೆ ಆವಶ್ಯಕವೆಂದೂ ಸಹ ಯಾವಾಗ ಹೇಳಿದರೋ, ಆಗ ಅರ್ಜುನನಿಗೆ ಆ ವಿಭೂತಿಯ ಮತ್ತು ಯೋಗದ ವಿಸ್ತಾರ ಜ್ಞಾನದಲ್ಲಿ ಅಭಿರುಚಿಯುಂಟಾಗಿ, ಆ ಮಹತ್ತಾದ ವಿಭೂತಿಯೋಗಗಳ ವಿಸ್ತರವನ್ನು ತಿಳಿಯಬೇಕೆಂದು ಅರ್ಜುನನು ಪ್ರಾರ್ಥಿಸುತ್ತಾನೆಂಬ ಅವತಾರಿಕೆಯನ್ನು ಶ್ರೀಭಾಷ್ಯಕಾರರು ಪೂರ್ವಾಪರ ಸಂಗತಿಯ ಪ್ರದರ್ಶನಕ್ಕಾಗಿ ದಯಪಾಲಿಸುತ್ತಾರೆ.— **ಏವಂ** - ಹೀಗೆ ಎಂದರೆ ಹಿಂದೆ ಉಪಪಾದಿಸಿದ ರೀತಿಯಲ್ಲಿ ಹೇಗೆ ಉಪಪಾದಿಸಲ್ಪಟ್ಟಿತೆಂದರೆ ತಿಳಿಸುತ್ತಾರೆ.—**ಸಕಲೇತರ ವಿಸಜಾತೀಯಂ**- ಭಗವಂತನಿಗಿರುವ ಕಲ್ಯಾಣ ಗುಣಯೋಗವು, ಸಮಸ್ತರಾದ ಇತರ ಚೇತನರಿಗೆಲ್ಲಾ ಇರುವ ಗುಣಯೋಗಕ್ಕಿಂತ ವಿಲಕ್ಷಣವು; ಇದು ಚತುರ್ಮುಖ ರುದ್ರಾದಿಗಳಿಗಿಂತ ವಿಲಕ್ಷಣವೆಂಬುದು ಭೃಗುಮಹರ್ಷಿಯ ಉಪಾಖ್ಯಾನದಲ್ಲಿ ಸ್ಪಷ್ಟವು. ತೈತ್ತರೀಯಾನಂದವಲ್ಲಿಯಲ್ಲಿ ಆನಂದಗುಣವು ಬೃಹಸ್ಪತ್ಯಾದಿಗಳ ಆನಂದಕ್ಕಿಂತ ವಿಲಕ್ಷಣವಾದುದೆಂದು ಹೇಳಿ, ಅದರ ಮಾಹಾತ್ಮ್ಯೆಯನ್ನು ಹೇಳಲು ಸಾಧ್ಯವಿಲ್ಲದೆ ಶ್ರುತಿಯು ವಿರಾಮ

ವನ್ನು ಹೊಂದಿತು. ಆದುದರಿಂದ **ಭಗವದಸಾಧಾರಣಂ** - ಭಗವಂತನಿಗೆ ಮಾತ್ರವೇ ಅಸಾಧಾರಣವಾದುದು; **ಶೃಣ್ವತಾಂ ಆನಂದ ಜನಕಂ- "ತುಷ್ಯನ್ತಿ ಚ ರಮನ್ತಿ ಚ"** (ಗೀ. ೧೦. ೯) ಎಂಬಲ್ಲಿ ಹೇಳಿರುವಹಾಗೆ ಕೇಳುವವರಿಗೆ ಆನಂದವನ್ನುಂಟು ಮಾಡುವಂತಾದ್ದು, **ಇಂತಹ ಕಲ್ಯಾಣ ಗುಣಗಣ ಯೋಗಂ**-ಕಲ್ಯಾಣಗುಣ ಸಮೂಹದಿಂದ ಸೇರಿರುವಿಕೆಯನ್ನೂ, **ತದೈಶ್ವರ್ಯ ವಿತತಿಂ ಚ**-ಲಕ್ಷ್ಮೀ ಮತ್ತು ಚೇತನಾಚೇತನರೂಪವಾದ ಭಗವಂತನ ಸಮಸ್ತ ನಿಯಾಮ್ಯವರ್ಗದ ಸಮೂಹವನ್ನೂ ಸಹ, **ಶ್ರುತ್ವಾ** ಕೇಳಿದವನಾಗಿ, **ತದ್ವಿಸ್ತಾರಂ ಶ್ರೋತು ಕಾಮಃ-"ವಿಸ್ತರೇಣಾತ್ಮನೋ ಯೋಗಂ"** (ಗೀ. ೧೦. ೧೮) ಎಂದೂ **"ವಿಸ್ತರಸ್ಯ ಮೇ"** (ಗೀ. ೧೦. ೧೯) ಎಂದೂ ಮುಂದೆ ಹೇಳಿರುವಹಾಗೆ ಅವುಗಳನ್ನೇ ವಿಸ್ತಾರವಾಗಿ ತಿಳಿಯಬೇಕೆಂಬ ಆಶೆಯುಳ್ಳವನಾದ **ಅರ್ಜುನ ಉವಾಚ**-ಅರ್ಜುನನು ಹೇಳುತ್ತಾನೆ. ಇಲ್ಲಿ **"ಸಕಲೇತರ"** ವೆಂದಾರಂಭಿಸಿಕೊಟ್ಟಿರುವ ಮೂರು ವಿಶೇಷಗಳನ್ನು ಕಲ್ಯಾಣಗುಣಗಣಯೋಗಕ್ಕೂ, ಐಶ್ವರ್ಯ ವಿತತಿಗೂ ಅನ್ವಯಿಸಬಹುದು. ಇವು ಸಕಲೇತರ ವಿಸಜಾತೀಯವೆಂದು ಎಲ್ಲಿ ಹಿಂದೆ ಹೇಳಲ್ಪಟ್ಟಿದೆ ? ಎಂದರೆ **"ಪಿತಾಹಮಸ್ಯ ಜಗತಃ ಮಾತಾ ಧಾತಾ ಪಿತಾಮಹಃ"** (ಗೀ.೯.೧೭) ಎಂದೂ **"ಗತಿ ರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್"** (ಗೀ. ೯. ೧೮) **"ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ"** (ಗೀ. ೯. ೨೬) **"ಸಾಧುರೇವ ಸಮಂತವ್ಯಃ"** (ಗೀ. ೯. ೩೦) **"ನ ಮೇ ಭಕ್ತಃ ಪ್ರಣಶ್ಯತಿ"**(ಗೀ.೯.೩೧)**"ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿಯಾನ್ತಿ ಪರಾಂ ಗತಿಂ"** (ಗೀ. ೯. ೩೨) **"ಯೋಗಕ್ಷೇಮಂ ವಹಾಮ್ಯಹಂ"** (ಗೀ. ೯. ೨೨) ಎಂದೂ **"ಜ್ಞಾನೀತ್ವಾತ್ಮೈವಮೇಮತಂ"**(ಗೀ. ೭. ೧೮) ಇತ್ಯಾದ್ಯನೇಕ ಶ್ಲೋಕಗಳಲ್ಲಿ ತನ್ನ ಕಲ್ಯಾಣ ಗುಣಯೋಗವು, **ಸಕಲೇತರ ವಿಸಜಾತೀಯ** ವೆಂದೂ **ಭಗವದಸಾಧಾರಣ** ವೆಂದೂ **ಶೃಣ್ವತಾಂ ನಿರತಿಶಯಾನಂದ ಜನಕ** ವೆಂದೂ ಹೇಳಲ್ಪಟ್ಟಿರುತ್ತದೆ. ಹಾಗೆಯೇ ಆತನ ವಿಭೂತಿಯೂ ಸಹ, **"ಮಯಾ ತತಮಿದಂ ಸರ್ವಂ" "ಜಗದವ್ಯಕ್ತಮೂರ್ತಿನಾ । ಮತ್ಸ್ಥಾನಿ ಸರ್ವ ಭೂತಾನಿ ನ ಚಾಹಂ ತೇಷ್ವವಸ್ಥಿತಃ । ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗ ಮೈಶ್ವರಂ ॥"** (ಗೀ. ೯. ೪. ೫.) ಎಂದೂ **"ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ"**(ಗೀ.೯.೬)ಎಂದೂ **"ವಿಸೃಜಾಮಿ ಪುನಃಪುನಃ । ಭೂತಗ್ರಾಮಮಿಮಂ ಕೃತ್ಸ್ನಂ"** (ಗೀ. ೯. ೮) **"ಬುದ್ಧಿ ರ್ಜ್ಞಾನ ಮಸಂಮೋಹಃ"** ಇತ್ಯಾದಿ ಎಂದೂ(ಗೀ. ೧೦. ೪. ೫) **"ಅಹಂ ಸರ್ವಸ್ಯ ಪ್ರಭವಃ ಮತ್ತಸ್ಸರ್ವಂ ಪ್ರವರ್ತತೇ"** (ಗೀ. ೧೦, ೮) ಎಂದೂ **"ಯೋ ಮಾಮಜ ಮನಾದಿಂ ಚ ವೇತ್ತಿ ಲೋಕಮಹೇಶ್ವರಮ್"** (ಗೀ. ೧೦. ೩) ಎಂದೂ ಹೀಗೆ ಅನೇಕ ಕಡೆಗಳಲ್ಲಿ ತನ್ನ ಐಶ್ವರ್ಯ ವಿತತಿಯು; ಸಕಲೇತರ ವಿಸಜಾತೀಯವೆಂದೂ ತನಗೇನೇ ಅಸಾಧಾರಣವೆಂದೂ, ನಿರತಿಶಯಾನಂದ ಜನಕವೆಂದೂ ಹೇಳಲ್ಪಟ್ಟಿರುತ್ತದೆಂಬ ಭಾವವು.

ಇಲ್ಲಿ **ತದ್ವಿಸ್ತಾರಂ ಶ್ರೋತುಕಾಮಃ** ಎಂಬುದರಿಂದ ಅರ್ಜುನನು ಮುಂದೆ ಪ್ರಾರ್ಥಿಸುವ ವಾಕ್ಯದಿಂದ, ಅರ್ಜುನನಿಗೆ ಶ್ರೀಕೃಷ್ಣ ಮಾಹಾತ್ಮ್ಯೆಯು ಚನ್ನಾಗಿ ನೆಲಗೊಂಡು, ಇನ್ನೂ ಆತನ ಕಲ್ಯಾಣ ಗುಣಗಳ ಮತ್ತು ವಿಭೂತಿಗಳ ಮಾಹಾತ್ಮ್ಯೆಯನ್ನೂ ವಿಸ್ತಾರವಾಗಿ ಕೇಳಬೇಕೆಂಬ ಪರಮ ಕುತೂಹಲವು ಉತ್ಪನ್ನವಾಯಿತೆಂಬುದು ಸೂಚಿತವು. ಈ ಅವತಾರಿಕೆಯು ೧೨ನೆಯ ಶ್ಲೋಕ ಮೊದಲು ೧೮ನೆಯ ಶ್ಲೋಕ ಪರ್ಯಂತವಾದ ಅರ್ಜುನನ ವಾಕ್ಯಕ್ಕೆಲ್ಲಾ ಅವತಾರಿಕೆ ಎಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು**:—ಅರ್ಜುನನು ಹೇಳುತ್ತಾನೆ ಏನೆಂದರೆ.... ಪರಮ ಪುರುಷನಾದ ಶ್ರೀಕೃಷ್ಣನ ಕಲ್ಯಾಣಗುಣ ಮತ್ತು ವಿಭೂತಿಗಳ ಉಪದೇಶವು ತನ್ನ ಮನಸ್ಸು ದಣಿಯುವ

**ಮೂ.** **ಪರಂಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥** ೧೨.

**ಆಹುಸ್ತ್ವಾಮೃಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸ ಸ್ಸ್ವಯಂ ಚೈವ ಬ್ರವೀಷಿ ಮೇ ॥** ೧೩.

ಹಾಗೆ ಉಪಪಾದಿತವಾಗಲಿಲ್ಲವೆಂಬಾಶಯದಿಂದ ಅವುಗಳನ್ನು ವಿಸ್ತರಿಸಿ ಉಪದೇಶಿಸಬೇಕೆಂದು ತುಂಬಾ ಭಕ್ತಿಯಿಂದ ಪ್ರಾರ್ಥಿಸುತ್ತಾನೆ. ಇವುಗಳ ಮಾಹಾತ್ಮ್ಯೆಯು ತನಗೆ ಸ್ವಲ್ಪಮಟ್ಟಿಗೆ ಮಹರ್ಷಿಗಳಾದ ನಾರದ, ಅಸಿತ, ದೇವಲ, ವ್ಯಾಸರುಗಳಿಂದ ವನವಾಸ ಕಾಲದಲ್ಲಿ ಉಪದಿಷ್ಟವಾಗಿತ್ತು. ಈಗ ನೀನೂ ಸ್ವಲ್ಪಮಟ್ಟಿಗೆ ಅವುಗಳ ಮಾಹಾತ್ಮ್ಯೆಯನ್ನು ತಿಳಿಸಿರುತ್ತೀಯೇ. ಅವುಗಳ ಮಾಹಾತ್ಮ್ಯೆಯಲ್ಲಿ ನನಗೆ ಪರಮ ದಾರ್ಢ್ಯವುಂಟಾಯಿತು ಅವುಗಳನ್ನೆಲ್ಲಾ ಅನುವಾದರೂಪದಲ್ಲಿ ಆವರ್ತಿಸಿ **ಹೇಳುವವನಾಗಿ**, ಅವುಗಳಲ್ಲಿ ನನಗೆ ಹೆಚ್ಚಾದ ಪ್ರೀತಿಯು ಉಂಟಾಗಿರುವದರಿಂದ, ಅವುಗಳ ಮಾಹಾತ್ಮ್ಯೆಯನ್ನು ಇನ್ನೂ ವಿಸ್ತಾರವಾಗಿ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಾನೆ. ಅಂತಹ ಅಮೃತಪಾನವನ್ನು ಮಾಡಿ ಆತ್ಮೋಜ್ಜೀವನವನ್ನು ಮಾಡಿಕೊಳ್ಳುತ್ತಾನೆಂದು **"ಶೃಣ್ವತೋ ನಾಸ್ತಿಮೇಽಮೃತಂ"**ಎಂದು ೧೮ನೇ ಶ್ಲೋಕದಲ್ಲಿ ಬೇಡುತ್ತಾನೆ-ಶೃತಿಗಳು ಪರತತ್ವವನ್ನು, **ಪರಂಬ್ರಹ್ಮ** - **"ನಾರಾಯಣ ಪರಂಬ್ರಹ್ಮ ತತ್ವಂ ನಾರಾಯಣಃ ಪರಃ"** ಎಂದು ಶ್ರುತ್ಯರ್ಥ ಸಾರಭೂತವಾದ ಪುರುಷಸೂಕ್ತದಲ್ಲಿ ಹೇಳಿರುವ ಹಾಗೆ ಸ್ವರೂಪದಿಂದಲೂ ಕಲ್ಯಾಣಗುಣಗಳಿಂದಲೂ ಬೃಹತ್ವವನ್ನು ಹೊಂದಿರುವ ಪರಬ್ರಹ್ಮನೆಂದೂ, **ಪರಂಧಾಮ "ಪರಂಜ್ಯೋತಿರುಪಸಂಪದ್ಯ"** ಎಂದೂ **"ನಾರಾಯಣಪರೋಜ್ಯೋತಿ"** ಎಂಬೂ ಹೇಳಿರುವಹಾಗೆ ಕೋಟಿ ಸೂರ್ಯ ಪ್ರಕಾಶಕ್ಕೂ ಮೀರಿದ ಸರ್ವೋತ್ಕೃಷ್ಟ ತೇಜಸ್ಸೆಂದೂ, ಅಥವಾ **ಪರಂಧಾಮ** ವೆಂದರೆ ಶ್ರೇಷ್ಠವಾದ ಪ್ರಾಪ್ಯಸ್ಥಾನವು, **ಪವಿತ್ರಂ** - ಪರಮಪಾವನನಾಗಿ ಪವಿತ್ರಮಾಡುವವನೆಂದೂ, **ಪರಮಂ** - **"ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ"**ಎಂದು ಹೇಳಿರುವಹಾಗೆ ತನಗೆ ಸಮರೂ ಅಧಿಕರೂ ಇಲ್ಲದಿರುವವನೆಂದೂ ಶ್ರುತಿಗಳಲ್ಲಿ ಹೇಳಿರುವವನು, ಅಥವಾ **ಪರಮಂ** ಎಂಬುದು **ಪವಿತ್ರಂ** ಎಂಬುದಕ್ಕೆ ವಿಶೇಷಣವಾಗಿ ಸರ್ವೋತ್ಕೃಷ್ಟವಾಗಿ ಪವಿತ್ರಮಾಡುವವನೂ, **ಭವಾನ್**- ನೀನೇ. ಹೀಗೆ ಶ್ರುತಿಗಳು ಮಾತ್ರವೇ ಹೇಳಿದವು ಎಂಬಲ್ಲವು. ಅದನ್ನೇ ಸರ್ವಜ್ಞರಾದ ಮಹರ್ಷಿಗಳು ದೃಢೀಕರಿಸಿ ಹೇಳದಿದ್ದರೆ ಅದಕ್ಕೆ ಅಷ್ಟುಮಾಹಾತ್ಮ್ಯೆ ಇಲ್ಲವೆಂದುಭಾವಿಸಿ, ಸರ್ವೇಶ್ವರನೇ ಭಾಗವತಮಾಹಾತ್ಮ್ಯೆಯನ್ನು ಪ್ರದರ್ಶಿಸುವದಕ್ಕಾಗಿ ಮಹರ್ಷಿಗಳೂಕೂಡ ನಿನ್ನನ್ನು ಸರ್ವೇಶ್ವರನೆಂದೇ ಕೊಂಡಾಡಿರುತ್ತಾರೆಂದು ಅರ್ಜುನನು ಹೇಳುವಹಾಗೆ ಪ್ರೇರಿಸುತ್ತಾರೆ. **ತ್ವಾಂ**- ನಿನ್ನನ್ನು, **ಪುರುಷಂ**- ಪುರುಷಸೂಕ್ತದಲ್ಲಿ ಹೇಳಿರುವ ಪರಮಪುರುಷನೆಂದೂ, **ಶಾಶ್ವತಂ**- ಯಾವಾಗಲೂ ನಿತ್ಯನಾಗಿ ಇರುವದರಿಂದ ಸನಾತನನೆಂದೂ, **ದಿವ್ಯಂ-ದಿವಿ** ಎಂದರೆ ನಿತ್ಯವಿಭೂತಿ ಎನಿಸುವ ದಿವ್ಯವೈಕುಂಠದಲ್ಲಿ ಪರವಾಸುದೇವರೂಪ ದಿವ್ಯಮಙ್ಗಳ ವಿಗ್ರಹವನ್ನು ಹೊಂದಿ ನಿತ್ಯಮುಕ್ತರಿಗೆ ಭೋಗ್ಯಭೂತನಾಗಿರುವನೆಂದೂ, **ಆದಿದೇವಂ**- **"ಯತೋವಾ ಇಮಾನಿಭೂತಾನಿ"**ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಎಲ್ಲಾ ಲೀಲಾವಿಭೂತಿಗೂ ಸೃಷ್ಟಿಕರ್ತಾವಾಗಿ ಎಲ್ಲಕ್ಕೂ ಮೂಲಾಧಾರನಾಗಿರುವನೆಂದೂ, **ಅಜಂ** - ಉತ್ಪತ್ತ್ಯಾದಿ ವಿಕಾರಶೂನ್ಯನಾಗಿರುವನೆಂದೂ. **ವಿಭುಮ್**- **ತತ್ಸೃಷ್ಟ್ವಾ ತದೇವಾನುಪ್ರಾವಿಶತ್"**ಎಂದು ಹೇಳಿರುವ ಹಾಗೆ ಸರ್ವವ್ಯಾಪಿ ಎಂದೂ, **ಸರ್ವೇ ಋಷಯಃ**-ಸಮಸ್ತರಾದ ಪ್ರಾಜ್ಞರಾದ ಋಷಿಗಳು, **ಆಹುಃ** ಹೇಳುತ್ತಾರೆ. ಅದಕ್ಕೆ ಕೆಲವು ಮುಖ್ಯ ನಿದರ್ಶನಗಳನ್ನು ಕೊಡುತ್ತಾರೆ. **ತಥಾ** - ಹಾಗೆಯೇ

**ಭಾ. ಪರಂ ಬ್ರಹ್ಮ, ಪರಂಧಾಮ, ಪರಮಂ ಪವಿತ್ರಂ, ಇತಿ ಯಂ ಶ್ರುತಯೋ**

**ದೇವರ್ಷಿರ್ನಾರದಃ**-ದೇವರ್ಷಿಗಳಾದ ನಾರದರೂ, **ಅಸಿತರೂ,** ಅವರ ತಂದೆಗಳಾದ **ದೇವಲರೂ, ವ್ಯಾಸರೂ,** ಸಹ ಹಾಗೆಯೇ ಹೇಳುತ್ತಾರೆ; ಇಷ್ಟೇ ಅಲ್ಲವು, ಅದನ್ನೇ **ಸ್ವಯಂಚೈವ**-ನೀನೂ ಸಹ, **ಮೇ**-ನನಗೆ ಹಿತವನ್ನುಂಟುಮಾಡುವದಕ್ಕಾಗಿ, **ಬ್ರವೀಷಿ** - ಹೇಳಿರುತ್ತೀಯೇ. ನೀನೂ ಹೇಳಿರುತ್ತೀಯೇ ಎಂದು ಅರ್ಜುನನು ಹೇಳಿದನಲ್ಲಾ ಅದು ಎಲ್ಲಿ? ಎಂದರೆ ತನ್ನ ಅವತಾರ ಮಾಹಾತ್ಮ್ಯೆಯನ್ನು ತಿಳಿಸುವ ಸಂದರ್ಭದಲ್ಲಿ, **"ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಂ ಈಶ್ವರೋಽಪಿ ಸನ್। ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ"**(ಗೀ.೪.೬) ಎಂದೂ **"ನಮಾಂ ಕರ್ಮಾಣಿ ಲಿಂಪಂತಿ"**(ಗೀ.೪.೧೪)ಎಂದೂ, **"ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಂ। ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ"** (ಗೀ.೫ ೨೯) **"ಸರ್ವಭೂತಸ್ಥಿತಂ ಯೋ ಮಾಂ"** (ಗೀ. ೬. ೩೧) **"ಅಹಂಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ"** (ಗೀ. ೭. ೬) **"ಪರಂಭಾವಮಜಾನನ್ತಃ"** (ಗೀ. ೯. ೧೧) **"ಯೋ ಮಾಮಜಮನಾದಿಂ ಚ"**(ಗೀ.೧೦.೩)ಎಂದು ಹೀಗೆ ಅನೇಕಾವರ್ತಿ ನೀನೇ ಪರತತ್ವವೆಂದು ಉಪದೇಶಿಸಿರುತ್ತಿಯೇ. ಇದರಿಂದ ಶ್ರೀ ಕೃಷ್ಣನಾದ ನೀನೇ ಪರತತ್ವವೆಂಬುದು ಸರ್ವವಿಧದಲ್ಲೂ ಸ್ಥಾಪಿತವು. ಶಾಸ್ತ್ರಗಳು ಹೇಳಿದುದೂ, ಪ್ರತ್ಯಕ್ಷವಾಗಿ ನನಗೆ ದೃಗ್ಗೋಚರವಾದುದೂ, ಋಷಿಗಳು ಹೇಳಿದುದೂ, ಎಲ್ಲಕ್ಕೂ ಐಕಕಂಠ್ಯವೇ ತೋರುತ್ತಿದೆ ಎಂಬ ಭಾವವು. ಇಲ್ಲಿ ಪರಮಾತ್ಮನನ್ನು ಬೋಧಿಸುವ ಸಮಸ್ತ ನಾಮಗಳಾದ ಪರಂಬ್ರಹ್ಮ, ಪರಂಧಾಮ, ಪರಂಜ್ಯೋತಿಸ್ಸು, ನಾರಾಯಣ, ಇತ್ಯಾದಿ ಅನೇಕ ಪದಗಳೂ ಕೂಡ ಸಾರ್ಥವತ್ತಾದವುಗಳಾಗಿರುವದರಿಂದ ಸವಿಶೇಷವಾದವುಗಳೇ; ಪರಮಾತ್ಮನನ್ನು ನಿರ್ವಿಶೇಷಬ್ರಹ್ಮನೆಂದು ಹೇಳುವದೂ ಸವಿಶೇಷಣವೇ ಆಗುತ್ತದೆ. ಹೇಗೆ? ಎಂದರೆ ಬ್ರಹ್ಮಶಬ್ದವು ಸ್ವಭಾವತಃ ನಿರಸ್ತ ನಿಖಿಲದೋಷನಾಗಿ ಅನವಧಿಕಾತಿಶಯಾಸಂಖ್ಯೆಯ ಕಲ್ಯಾಣಗುಣಗಣಗಳನ್ನುಳ್ಳವನನ್ನು ಬೋಧಿಸುತ್ತದೆ. ಏಕೆಂದರೆ ಸರ್ವತ್ರ ಬೃಹತ್ವ ಗುಣಯೋಗದಿಂದಲ್ಲವೇ ಬ್ರಹ್ಮಶಬ್ದಪ್ರಯೋಗವು. **"ಬೃಹತ್ವಾದ್ಬೃಂಹಣತ್ವಾಚ್ಚ ತದ್ಬ್ರಹ್ಮೇತ್ಯಭಿಧೀಯತೇ"** ಎಂದು ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. ವಿಷ್ಣುಪುರಾಣದಲ್ಲಿ **"ಬೃಹತ್ವಾದ್ಬೃಂಹಣತ್ವಾಚ್ಚ ಯದ್ರೂಪಂ ಬ್ರಹ್ಮ ಸಂಜ್ಞಿತಮ್"** ಎಂದು ಇರುತ್ತದೆ. ಆದುದರಿಂದ ಸ್ವರೂಪಗುಣಾದಿಗಳಿಂದ ಬೃಹತ್ವವು ಬ್ರಹ್ಮಶಬ್ದದಿಂದ ಬೋಧಿತವಾಗುವದರಿಂದ, **ನಿರ್ವಿಶೇಷಬ್ರಹ್ಮ** ಎಂಬ ಪ್ರಯೋಗದಲ್ಲೇ ಅಸಾಮಂಜಸ್ಯವು ಪ್ರತಿಷ್ಠಿತವು. ಪರಬ್ರಹ್ಮವು ನಿರ್ವಿಶೇಷವಾದರೆ ಬ್ರಹ್ಮಶಬ್ದವನ್ನು ಉಪಯೋಗಿಸುವದು ತಪ್ಪಲ್ಲವೇ? ॥ ೧೨, ೧೩ ॥

**ಭಾಷ್ಯಾರ್ಥವು:— ಭವಾನ್** ಎಂಬುದು ಪ್ರಥಮಾಂತವಾದುದರಿಂದ **ಪರಂಬ್ರಹ್ಮ ಪರಂಧಾಮಾದಿ** ಗಳನ್ನು **ಆಹುಃ** ಎಂಬುದರಿಂದ ಅನ್ವಯಿಸುವದು ಸಾಧ್ಯವಿಲ್ಲದುದರಿಂದ **ಭವಾನ್** ಎಂಬುದರವರೆಗೂ ಒಂದು ವಾಕ್ಯವಾಗಿಯೂ ಮುಂದೆ ಮೂರು ಪಾದಗಳನ್ನು ಒಂದು ವಾಕ್ಯವಾಗಿಯೂ ಅನ್ವಯಿಸತಕ್ಕದ್ದೆಂದೂ ಅನ್ವಯವನ್ನು **"ಪರಂಬ್ರಹ್ಮ"** ಎಂದಾರಂಭಿಸಿದ ವಾಕ್ಯದ ಮೂಲಕ ವ್ಯಕ್ತಪಡಿಸುತ್ತಾರೆ. **ಪರಂಬ್ರಹ್ಮ ಪರಂಧಾಮ, ಪರಮಂ ಪವಿತ್ರಂ ಇತಿ**-ಎಂದು, **ಯಂ** - ಯಾವ ಪರಮಾತ್ಮನನ್ನು, **ಶ್ರುತಯೋ ವದಂತಿ**-ಶ್ರುತಿಗಳು ಹೇಳುತ್ತವೋ, **ಸಹಿ**-ಆ ಪರಮಾತ್ಮನೇ, **ಭವಾನ್**-ನೀನಾಗಿದ್ದೀ. ಮುಂದೆ ಸರ್ವೇಶ್ವರನು, ಪರಬ್ರಹ್ಮವಾಚ್ಯನೆಂದು ಎಲ್ಲಿ ಹೇಳಲ್ಪಟ್ಟಿದೆ ಎಂದರೆ ಶ್ರುತಿಗಳನ್ನು ಉದಾಹರಿಸುತ್ತಾರೆ.—

(೧) **"ಯತೋ ವಾ ಇಮಾನಿ ಭೂತಾನಿ ಜಾಯನ್ತೇ"**-ಈ ಶ್ರುತಿಯು ಉಪಾಸ್ಯಬ್ರಹ್ಮ

**ಭಾ. ವದಂತಿ, ಸಹಿ ಭರ್ಗಾ। (೧)"ಯತೋ ವಾ ಇಮಾನಿ ಭೂತಾನಿ ಜಾಯನ್ತೇ, ಯೇನ ಜಾತಾನಿ ಜೀವನ್ತಿ, ಯತ್ಪ್ರಯನ್ತ್ಯಭಿಸಂವಿಶನ್ತಿ, ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" (೨) "ಬ್ರಹ್ಮವಿದಾಪ್ನೋತಿಪರಂ"।(೧)"ಸ ಯೋ ಹವೈ ತತ್ಪರಮಂ ಬ್ರಹ್ಮವೇದಬ್ರಹ್ಮೈವ**

ಲಕ್ಷಣವನ್ನು ಬೋಧಿಸುತ್ತದೆ. ಯಾವನಿಂದ ಈ ಪರಿದೃಶ್ಯವಾದ ಶರೀರದಿಂದ ಕೂಡಿದ ಚೇತನರಾದ ಪ್ರಾಣಿವರ್ಗವೆಲ್ಲಾ ಹುಟ್ಟುತ್ತವೆಯೋ, **ಯೇನ ಜಾತಾನಿ ಜೀವನ್ತಿ** - ಯಾವನಿಂದ ಈ ಜನ್ಮವೆತ್ತಿದ ಪ್ರಾಣಿಗಳು ಜೀವಿಸಿರುತ್ತವೆಯೋ, **ಯತ್ಪ್ರಯನ್ತ್ಯಭಿಸಂವಿಶನ್ತಿ**-ಎಲ್ಲಿ ಇರುತ್ತವೆಯೋ ಮತ್ತು ಲಯವನ್ನು ಹೊಂದುತ್ತವೆಯೊ, ಅಥವಾ ಮೋಕ್ಷವನ್ನು ಹೊಂದುತ್ತವೆಯೋ ಮತ್ತು ಲಯವನ್ನು ಹೊಂದುತ್ತವೆಯೋ, **ತತ್** - ಅಂತವನನ್ನೇ **ವಿಜಿಜ್ಞಾಸಸ್ವ** - ಉಪಾಸಿಸ ತಕ್ಕದ್ದು, **ತತ್ಬ್ರಹ್ಮೇತಿ** - ಅದೇ ಪರಬ್ರಹ್ಮವೆಂದೇ ಉಪಾಸಿಸತಕ್ಕದ್ದು ಇದರಿಂದ ಮೋಕ್ಷಾರ್ಥಿಗೆ ಪರಬ್ರಹ್ಮನೇ ಉಪಾಸ್ಯನೆಂದೂ, ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಯಾವನು ಕಾರಣನೋ ಅವನೇ ಪರಬ್ರಹ್ಮನೆಂದೂ, ಹೇಳಲ್ಪಟ್ಟಿತು. ಸೃಷ್ಟಿಗೆ ಯಾವನು ಕಾರಣಭೂತನೋ ಅವನೇ ಪರಬ್ರಹ್ಮನೆಂದು ಹೇಳಿದರೆ ಸಾಕಾಗಿರುವ ಇನ್ನು ಸ್ಥಿತಿ ಲಯಗಳನ್ನು ಏಕೆ ಹೇಳಬೇಕೆಂದರೆ, ವಿಶದವಾಗಿ ಈ ಲೀಲಾವಿಭೂತಿಯ ಸರ್ವ ವ್ಯಾಪಾರಕ್ಕೂ ಆತನೊಬ್ಬನೇ ಕಾರಣಭೂತನೇ ವಿನಾ ಇನ್ನ್ಯಾರೂ ಇಲ್ಲವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಹಾಗೆಯೇ **"ಸರ್ವಂ ಖಲ್ವಿದಂ ಬ್ರಹ್ಮ ತಜ್ಜ ಲಾನಿತಿ ಶಾಂತ ಉಪಾಸೀತ"** ಎಂದು ಶ್ರುತಿಯು ಇನ್ನೊಂದು ಕಡೆಯಲ್ಲಿ ಹೇಳಿರುತ್ತದೆ. ಪರಮಾತ್ಮನಿಂದ ಹುಟ್ಟಿ ಪರಮಾತ್ಮನಲ್ಲೇ ಇರುವದರಿಂದ ಸರ್ವಾತ್ಮಕವಾಗಿರುವ, ಪರಮಾತ್ಮನಲ್ಲೇ ಲಯವನ್ನು ಹೊಂದುವದರಿಂದ ಎಲ್ಲವೂ ಬ್ರಹ್ಮವೆಂದು ಭಾವಿಸಿ ಶಾಂತನಾಗಿ ಆತನನ್ನೇ ಉಪಾಸಿಸತಕ್ಕದ್ದೆಂದು ಬೋಧಿಸುತ್ತದೆ.

(೨) **"ಬ್ರಹ್ಮವಿತ್"** ಪರಬ್ರಹ್ಮನನ್ನು ಉಪಾಸಿಸಿ ಸಾಕ್ಷಾತ್ಕರಿಸಿದವನು, **ಪರಂ**- ಅಂತಹ ಪರಬ್ರಹ್ಮವನ್ನೇ, **ಆಪ್ನೋತಿ** - ಹೊಂದುತ್ತಾನೆ, ತತ್ಕ್ರತುನ್ಯಾಯವು ಬೋಧಿಸಲ್ಪಟ್ಟಿತು. ನಿರತಿಶಯ ಬೃಹತ್ವಕ್ಕೆ ಆಶ್ರಯವಾದ ವಸ್ತುವನ್ನು ಉಪಾಸಿಸುವವನು ಎಲ್ಲಕ್ಕೂ ಉತ್ಕೃಷ್ಟವಾದವನನ್ನು ಹೊಂದುವನು ಎಂಬರ್ಥವು. **ಬ್ರಹ್ಮವಿತ್**-ಎಂದರೆ ಪರಬ್ರಹ್ಮಜ್ಞಾನಮಾತ್ರವುಳ್ಳವನೆಂಬರ್ಥವಲ್ಲವು. ವೇದನಶಬ್ದವು ಉಪಾಸನವನ್ನು ಬೋಧಿಸುವದರಿಂದ, ಬ್ರಹ್ಮವಿತ್ ಎಂದರೆ ಪರಬ್ರಹ್ಮೋಪಾಸಕನು. ಈ ಶ್ರುತಿಯಲ್ಲಿ ಉಪಾಸ್ಯನೂ ಪ್ರಾಪ್ಯವೂ ಒಂದೇ ಎಂದು ಉಪದೇಶಿಸಲ್ಪಟ್ಟಿತು ಸಗುಣ ಪರಬ್ರಹ್ಮನನ್ನು ಉಪಾಸಿಸಿದರೆ, **ಪರಂ ಪ್ರಾಪ್ನೋತಿ**-ಆ ಸಗುಣಬ್ರಹ್ಮನಿಗೂ ಶ್ರೇಷ್ಠನಾದ ನಿರ್ಗುಣ ಪರಬ್ರಹ್ಮನನ್ನು ಹೊಂದುವನು ಎಂಬರ್ಥವನ್ನು ಕೆಲವರು ಮಾಡಿರುವುದು ಸರಿಯಲ್ಲವೆಂದು ತೋರಿಸುವದಕ್ಕಾಗಿ ಮುಂದಿನ ಶ್ರುತಿಯನ್ನು ಉದಾಹರಿಸುತ್ತಾರೆ. ಈ ತೈತ್ತರೀಯ ವಾಕ್ಯವು ಪರಬ್ರಹ್ಮವನ್ನು ಉಪಾಸಿಸಿದವನು ಪರಬ್ರಹ್ಮವನ್ನು ಹೊಂದುವನು ಎಂದು ಹೇಳಿತು. ಮುಂದಿನ **"ಸಯೋಹವೈ"** ಎಂಬ ಮುಂಡಕ ವಾಕ್ಯದಲ್ಲಿ, **ಪರಬ್ರಹ್ಮವನ್ನು** ಉಪಾಸಿಸಿದವನು, ಬ್ರಹ್ಮವನ್ನು ಹೊಂದುವನು ಎಂದು ಹೇಳಿದುದರಿಂದ, ಎರಡು ಕಡೆಯಲ್ಲೂ ಬ್ರಹ್ಮಶಬ್ದವು ಪರಬ್ರಹ್ಮನನ್ನೇ ಬೋಧಿಸುವದರಿಂದ ಸಗುಣಬ್ರಹ್ಮ ನಿರ್ಗುಣಬ್ರಹ್ಮವೆಂದು ಅರ್ಥಮಾಡುವುದು ಸುತರಾಂ ಸರಿಯಿಲ್ಲವೆಂದು ವ್ಯಕ್ತಪಡಿಸುವದಕ್ಕಾಗಿ ಮುಂದಿನ ಮುಂಡಕ ಶ್ರುತಿಯನ್ನು ಉದಾಹರಿಸಿರುತ್ತಾರೆ. **ಯಃ ಏತತ್ಪರಮಂ ಬ್ರಹ್ಮವೇದ**-ಯಾವ ಮೋಕ್ಷಾರ್ಥಿಯು ಸರ್ವಾಧಿಕನಾದ ಪರಬ್ರಹ್ಮನನ್ನು ಪ್ರೀತಿರೂಪಾಪನ್ನ ದರ್ಶನ ಸಮಾನಾಕಾರವಾದ ಉಪಾಸನದಿಂದ ಧ್ಯಾನಿ

(೧) ತೈ. ಭೃಗು. (೨) ತೈ. ಆನಂ ೧. (೩) ಮುಂಡಕ.

ಭಾ. ಭವತಿ" । ತಥಾ ಪರಂಧಾಮ: ಧಾಮಶಬ್ದೋ ಜ್ಯೋತಿರ್ವಚನಂ; ಪರಂಜ್ಯೋತಿಃ (೪) "ಅಥ ಯದತಃ ಪರೋ ದಿವೋ ಜ್ಯೋತಿ ರ್ದೀಪ್ಯತೇ" (೫) "ಪರಂಜ್ಯೋತಿ

ಸುವನೋ,ಎಂದರೆ ಪರಬ್ರಹ್ಮಸಾಕ್ಷಾತ್ಕಾರವನ್ನು ಧ್ಯಾನಮೂಲಕಹೊಂದುವನೋ. **ಸಬ್ರಹ್ಮೈವ ಭವತಿ ಹ**-ಅವನು ಆವಿರ್ಭವಿಸಿದ ಪರಬ್ರಹ್ಮ ಸಾಮ್ಯವನ್ನು ಹೊಂದಿದವನಾಗುವನು; ಇದು ತಾತ್ಪರ್ಯಾರ್ಥವು. **ನಿರಂಜನಃ ಪರಮಂ ಸಾಮ್ಯ ಮುಪೈತಿ** ಎಂಬ ಶ್ರುತಿಗೆ ವಿರೋಧವಿಲ್ಲದೆ ಅರ್ಥಮಾಡಬೇಕಾಗಿರುವದರಿಂದ ಪರಮಾತ್ಮನೊಂದಿಗೆ ಐಕ್ಯವನ್ನು ಹೊಂದುತ್ತಾನೆಂಬರ್ಥವು ಕೂಡುವದಿಲ್ಲವು. ಆದುದರಿಂದ ಶ್ರೀರಜ್ಗರಾಮಾನುಜರು ಆವಿರ್ಭವಿಸಿದ ಸ್ವಸ್ವರೂಪ ಉಳ್ಳವನಾಗುವದರ ಮೂಲಕ ಪರಮಾತ್ಮನೊಂದಿಗೆ ಸಾಮ್ಯವನ್ನು ಹೊಂದುತ್ತಾನೆಂದು ಭಾಷ್ಯ ಬರೆದಿರುತ್ತಾರೆ. ಸಾಮ್ಯವನ್ನು ಎರಡು ವಸ್ತುಗಳಿಗೆ ಹೇಳಿದರೆ, ಕೆಲವು ಧರ್ಮಗಳಲ್ಲಿ ಮಾತ್ರವೇ ಸಮತ್ವವೆಂಬ ಮತ್ತು ಮಿಕ್ಕ ವಿಷಯಗಳಲ್ಲಿ ಎರಡೂ ಬೇರೆ ಬೇರೆ ಎಂಬ, ಭಾವವೂ ಸಿದ್ಧವಾದುದರಿಂದ, ಯಾವುದರಲ್ಲಿ ಸಮತ್ವವೆಂಬುದನ್ನು ಶ್ರೀವ್ಯಾಸಮಹರ್ಷಿಯು **"ಭೋಗಮಾತ್ರ ಸಾಮ್ಯಲಿಂಗಾಚ್ಚ** ಎಂಬ ಸೂತ್ರದಲ್ಲಿ ಭೋಗದಲ್ಲಿ ಮಾತ್ರವೆಂದು ಹೇಳಿ, ಯಾವುದರಲ್ಲಿ ಸಾಮ್ಯವಿಲ್ಲವೆಂಬುದನ್ನು **ಜಗದ್ವ್ಯಾಪಾರವರ್ಜಂ** ಎಂಬ ಸೂತ್ರದಲ್ಲಿ ಜಗತ್ತಿನ ಸೃಷ್ಟಿಸ್ಥಿತಿಲಯಾದಿ ವ್ಯಾಪಾರಗಳಲ್ಲಿ ಸಾಮ್ಯವಿಲ್ಲವೆಂದು ತಿಳಿಸಿರುತ್ತಾರೆ. ಬ್ರಹ್ಮಶಬ್ದವು ಪರಮಪುರುಷನನ್ನೇ ಹೇಗೆ ಬೋಧಿಸುತ್ತದೆ ಎಂದರೆ ಶಬ್ದ ಶಕ್ತಿಯಿಂದಲೂ ಅರ್ಥಶಕ್ತಿಯಿಂದಲೂ ಬೋಧಿಸುತ್ತದೆ ಎಂದು ಶ್ರೀ ಪರಾಶರರು ಹೇಳಿರುವದು ಹಿಂದೆಯೇ ಉದಾಹೃತವು. **ತಥಾ ಪರಂಧಾಮ**-ಹಾಗೆಯೇ ಶ್ರುತಿಗಳು ಪರಂಧಾಮವೆಂದು ಹೇಳಲ್ಪಡುವವನೂ ನೀನೇ. ಇಲ್ಲಿ-ಧಾಮಶಬ್ದಕ್ಕೆ ಸ್ಥಳವೆಂದು ಅರ್ಥವಿದ್ದರೂ ಆ ಅರ್ಥವು ಸರಿಯಲ್ಲವೆಂದು, **"ಧಾಮಶಬ್ದೋ ಜ್ಯೋತಿರ್ವಚನಂ"** ಎಂದು ಧಾಮ ಶಬ್ದವು ಜ್ಯೋತಿಸ್ಸನ್ನು ಎಂದರೆ ಪ್ರಕಾಶವನ್ನು ಸೂಚಿಸುತ್ತದೆ, ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಆದುದರಿಂದ **ಪರಂಜ್ಯೋತಿಃ** ಎಂಬರ್ಥವು. ಪರಂಜ್ಯೋತಿಸ್ಸೆಂದು ಎಲ್ಲಿ ಶ್ರುತಿಯಲ್ಲಿ ಹೇಳಿರುತ್ತವೆ ಎಂದರೆ ಉದಾಹರಿಸುತ್ತಾರೆ. (೪) ಈ ಪರಂಜ್ಯೋತಿಸ್ಸು ಗಾಯತ್ರಿಯಹಾಗೆ ಚತುಷ್ಪಾದಯುಕ್ತವಾದುದು ಎಂದು ಶ್ರುತಿಯು ಹೇಳುತ್ತದೆ. ಈ ಅಭಿಪ್ರಾಯವೇ **"ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ"** ಎಂಬಲ್ಲಿ ಚತುಷ್ಪಾದಯುಕ್ತತೆಯಿಂದಲೂ **ಆದಿತ್ಯವರ್ಣಂ ತಮಸಃ ಪರಸ್ತಾತ್"** ಎಂಬಲ್ಲಿ ನಿರತಿಶಯ ದೀಪ್ತಿಯುಕ್ತಭಾವದಿಂದಲೂ ಹೇಳಲ್ಪಟ್ಟಿರುತ್ತದೆ. **"ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೆ, ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ"** ಎಂಬುದು ಪೂರ್ಣ ವಾಕ್ಯವು. ಇದರರ್ಥವೇನೆಂದರೆ-ಇದು **ಜ್ಯೋತಿಶ್ಚರಣಾಭಿಧಾನಾತ್"** ಎಂಬ ಸೂತ್ರಕ್ಕೆ ವಿಷಯವಾಕ್ಯವು. ಅಪ್ರಾಕೃತಸ್ಥಾನವಿಶೇಷದ ಹೊರಗೆ, ಸಮಷ್ಟಿವ್ಯಷ್ಟಿಸೃಷ್ಟಿಗೂ ಹೊರಗೆ, ಸರ್ವೋತ್ತಮ ಸ್ಥಾನ ವಿಶೇಷಗಳಲ್ಲೂ, ಲೋಕಗಳಲ್ಲೂ, ತನ್ನ ಜ್ಯೋತಿಸ್ಸಿನಿಂದ ಎಲ್ಲಾ ಜ್ಯೋತಿಸ್ಸುಗಳನ್ನೂ ಬೆಳಗುವಹಾಗೆ ಮಾಡುವ ಜ್ಯೋತಿಸ್ಸಾದ ಪರಮಾತ್ಮನು ಪ್ರಕಾಶಿಸುತ್ತಾನೋ, ಅಂತಹ ನಿತ್ಯ ವಿಭೂತಿಯ ಮೇಲೂ ಪ್ರಕಾಶಿಸುವ ತ್ರಿಪಾದ್ಬ್ರಹ್ಮವೇ ಈ ಶರೀರವನ್ನು ಹೊಂದಿದ ಪುರುಷನೊಳಗೂ ಕೌಕ್ಷೇಯ ಜ್ಯೋತಿಶ್ಶರೀರಕನಾಗಿ ವೈಶ್ವಾನರ ಶಬ್ದದಿಂದ ಹೇಳಿಸಿಕೊಳ್ಳುವವನು. ಅಂತವನನ್ನು **ಉಪಾಸೀತ** ಎಂದು ಮುಂದಿನ ವಾಕ್ಯದಲ್ಲಿದೆ. ಇಲ್ಲಿ **ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕೇ, ತಸ್ಯ ಭಾಸಾ ಸರ್ವಮಿದಂ**

(೩) ಮುಂ. ೩. ೨. ೯. (೪) ಛಾಂ. ೩. ೧೩. ೭.

**ಭಾ. ರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" (೬) "ತಂ ದೇವಾ ಜ್ಯೋತಿಷಾಂ ಜ್ಯೋತಿಃ" ಇತಿ । ತಥಾಚ ಪರಮಂ ಪವಿತ್ರಂ - ಪರಮಂ ಪಾವನಂ ; ಸ್ಮರ್ತು**

**ವಿಧಾತಿ** ಎಂದು ಕಂಠ ಶ್ರುತಿ ವಚನವೂ, **"ನಾರಾಯಣ ಪರೋಜ್ಯೋತಿಃ"** ಎಂಬ ಪುರುಷಸೂಕ್ತ ಸೂಕ್ತಿಯೂ ಇದನ್ನೇ ಸಮರ್ಥಿಸುತ್ತವೆ." (೫) **ಪರಂಜ್ಯೋತಿಸ್ಸೆಂದರೆ** ಪರಮಾತ್ಮಾವೆಂಬು ದಕ್ಕೆ ಇನ್ನೂ ಎರಡು ಶ್ರುತಿಗಳನ್ನು ಉದಾಹರಿಸುತ್ತಾರೆ. **ಪರಂಜ್ಯೋತಿಃ**-ನಿರತಿಶಯ ನಿರವ ಧಿಕ ಜ್ಯೋತಿಸ್ಸಾದ ಪರಮ ಪುರುಷನನ್ನು, **ಉಪಸಂಪದ್ಯ**-ಹೊಂದಿ, ಯಾರು ಹೊಂದಿ ಎಂದರೆ ಹಿಂದೆ **"ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿ ರುಪಸಂಪದ್ಯ"** ಎಂದು ಇರುವದರಿಂದ **ಸಂಪ್ರಸಾದಃ** ಎಂದರೆ ಜೀವನೆಂದು ಅರ್ಥಮಾಡಿರುತ್ತಾರೆ. ಆದುದರಿಂದ ಜೀವಾತ್ಮನು ಪರಮಾತ್ಮನೊಂದಿಗೆ ಸಂಪತ್ತಿಯನ್ನು ಹೊಂದಿ **ಸ್ವೇನರೂಪೇಣ** - ತನ್ನ ನೈಜ ಸ್ವರೂಪವಾದ ಗುಣಾಷ್ಟಕಗಳೊಂದಿಗೆ, **ಅಭಿನಿಷ್ಪದ್ಯತೇ**-ಆವಿರ್ಭವಿಸುವನು, ಇದರಿಂದ ಜೀವನಿಗೆ ಪ್ರಾಕೃತ ಶರೀರನಾಶವೂ ಅದಕ್ಕೆ ಕಾರಣಗಳಾದ ಕರ್ಮಗಳನಾಶವೂ, ತನ್ನ ನೈಜಸ್ವರೂಪ ಪ್ರಾಪ್ತಿ ಯೂ, ಭಗವಂತನು ಮುಕ್ತನಿಗೆ ಪ್ರಾಪ್ಯನೆಂಬುದೂ, ಉಪದೇಶಿಸಲ್ಪಟ್ಟವು."(೬)**"ತಂ ದೇವಾಃ** ಇತ್ಯಾದಿ **ದೇವಾಃ** - ದೇವತೆಗಳು, **ಜ್ಯೋತಿಷಾಂ ಜ್ಯೋತಿಃ** - ಸರ್ವಲೋಕಗಳ ಜ್ಯೋತಿಸ್ಸು ಗಳಿಗೆಲ್ಲಾ ಜ್ಯೋತಿರ್ದಾಯಕನಾಗಿರುವ ನಿರತಿಶಯ ಜ್ಯೋತಿಸ್ಸಾದ, **ತಂ**-ಆ ಮಹಾ ಪ್ರಸಿದ್ಧ ನಾದ ಪರಮ ಪುರುಷನನ್ನು, ಉಪಾಸಿಸುತ್ತಾರೆಂಬೀ ಶ್ರುತಿಯಿಂದ ಪರಂಜ್ಯೋತಿಶ್ಶಬ್ದ ವಾಚ್ಯನು ಪರಮಪುರುಷನೆಂದು ಹೇಳಲ್ಪಟ್ಟಿರುತ್ತದೆ. ಇಂತಹ ಪರಮಪುರುಷನು ನಮಗೆ ಹೇಗೋ ಹಾಗೆಯೇ ದೇವತೆಗಳಿಗೂ ಆತನೇ ಉಪಾಸ್ಯನೆಂದೂ, **"ಜ್ಯೋತಿಷಿ ಭಾವಾಚ್ಚ"** ಎಂಬ ಶಾರೀರಕ ಸೂತ್ರದಲ್ಲಿ (೧. ೩. ೩೧) ಉಪಪಾದಿಸಿರುವಹಾಗೆ, ದೇವತೆಗಳಿಗೂ ಉಪಾಸನೆಯಲ್ಲಿ ಅಧಿಕಾರ ಉಂಟೆಂದೂ ಸ್ಥಾಪಿಸಲ್ಪಟ್ಟಿತು. **ತಥಾ ಚ**-ಹಾಗೆಯೇ ಶ್ರುತಿಗಳು ಪರಬ್ರಹ್ಮವನ್ನು **ಪರಮಂ ಪವಿತ್ರಂ** ಎಂದರೆ **ಪರಮಂ ಪಾವನಂ**-ಪಾಪಪರಿಹಾರಮೂಲಕವಾಗಿ, ಧ್ಯಾನಿಸುವ ನನ್ನು ವಿಶೇಷವಾಗಿ ಪರಿಶುದ್ಧಮಾಡುವವನೆಂದು ಹೇಳುತ್ತವೆ;ಎಂದರೆ **ಸ್ಮರ್ತುಃ** ಈಗ ನೀನುನನಗೆ ಉಪದೇಶಿಸುತ್ತಿರುವ ಭಕ್ತಿಯೋಗಮೂಲಕ ನಿನ್ನನ್ನು ಸ್ಮರಿಸುವವನಿಗೆ, **ಅಶೇಷಕಲ್ಮಷಾಶ್ಲೇಷ ಕರಂ**-ಸಮಸ್ತ ಪಾಪಗಳೂ ಅಬುದ್ಧಿ ಪೂರ್ವಕಗಳಾದ ಉತ್ತರಾಘಗಳೂ ಅಂಟದಹಾಗೆ ಮಾಡು ವವನನ್ನು ಎಂದೂ, **ವಿನಾಶಕರಂ ಚ**-ಹಿಂದಿನ ಪಾಪಗಳನ್ನೆಲ್ಲಾ ನಾಶಮಾಡುವವನನ್ನು ಎಂಬ ರ್ಥವು. ಇದು ಕಮಲಸುತರಾದ ಉಪಕೋಸಲರಿಗೆ ಆಚಾರ್ಯರಾದ ಜಾಬಾಲರ ಉಪದೇಶವು ಇಲ್ಲಿ **ಕಲ್ಮಷಾಶ್ಲೇಷಕರಂ** ಎಂದು ಹೇಳಿರುವದರಿಂದ ಯಾವಾಗ ವಿವೇಕದಿಂದ ಕಲ್ಮಷವೆಂದು ಬುದ್ಧಿಗೆ ವೇದ್ಯವೋ ಆಗ ಅಂತಹ ಬುದ್ಧಿಪೂರ್ವಕಗಳಾದ ಉತ್ತರಾಘಗಳನ್ನು ಎಂದಿಗೂ ಮಾಡುವದಿಲ್ಲವೆಂಬುದು ದ್ಯೋತಿತವು; ಆದುದರಿಂದ ಬುದ್ಧಿ ಪೂರ್ವಕಗಳಲ್ಲದ ಉತ್ತರಾಘಗಳ ಅಶ್ಲೇಷವೇ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಹೀಗೆ ಸಂಚಿತ ಪಾಪಗಳ ನಾಶವೂ ಆಗಾಮಿಗ ಳಾದ ಅಬುದ್ಧಿಪೂರ್ವಕಗಳಾದ ಅಘಗಳ ಅಶ್ಲೇಷವೂ, **"ತದಧಿಗಮ ಉತ್ತರಪೂರ್ವಾಘಯೋ ರಶ್ಲೇಷವಿನಾಶೌ, ತದ್ವ್ಯಪದೇಶಾತ್"** ಎಂಬಲ್ಲಿ [ಶಾರೀ. ಸೂ. ೪. ೧. ೧೩] ಉಪಪಾದಿತ ವಾಗಿವೆ. **ತದಧಿಗಮೇ**-ಆ ಬ್ರಹ್ಮವಿದ್ಯೆಯ ಅನುಷ್ಠಾನವು ಪ್ರಾಪ್ತವಾದನಂತರ, **ಉತ್ತರಪೂರ್ವಾ ಘಯೋಃ**-ಆ ವಿದ್ಯಾರಂಭಕ್ಕೆ ಅನಂತರ ಮತ್ತು ಪೂರ್ವಭಾವಿಯಾದ ಪುಣ್ಯಪಾಪಗಳ, **ಅಶ್ಲೇಷ ವಿನಾಶೌ**-ಉತ್ತರಾಘಕ್ಕೆ ಅಂಟದಿರೋಣವೂ, ಪೂರ್ವಾಘಗಳ ನಾಶವೂ ಉಂಟಾಗುತ್ತವೆ. ಇಲ್ಲಿ

(೫) ಛಾಂ. ೮. ೧೨. ೨. (೬) ಬೃ. ೬. ೪. ೧೬.

ಭಾ. **ರಶೇಷಕಲ್ಮಷಾಶ್ಲೇಷಕರಂ ವಿನಾಶಕರಂ ಚ। (೭) "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯನ್ತ ಏವಮೇವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" (೮) ತದ್ಯಥೇಷೀಕ ತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹ್ಯಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ**

ಉತ್ತರಾಘವೆಂದು ಹೇಳಿರುವನು ಬುದ್ಧಿ ಪೂರ್ವಕವಲ್ಲದ ಪಾಪಗಳ ವಿನಾಶವೆಂದೇ ಅರ್ಥಮಾಡ ತಕ್ಕದ್ದು; ಏಕೆಂದರೆ ಹಾಗೆ ಶ್ರುತಿಯಲ್ಲಿ ಹೇಳಿರುವದರಿಂದ, ಎಂಬುದು ಈ ಸೂತ್ರಾರ್ಥವು. ಯಾವ ಶ್ರುತಿಯಲ್ಲಿ ಎಂದರೆ ಶ್ರೀ ಭಾಷ್ಯಕಾರರು ಉದಾಹರಿಸಿರುವ ಈ ಶ್ರುತಿಯಲ್ಲಿ." (೭) ಈ ವಾಕ್ಯದ ಹಿಂದೆ **ಲೋಕಾನ್ವಾವಕಿಲ ಸೋಮ್ಯ ತೇಽವೋಚರ್ ಅಹಂ ತು ತೇ ತತ್ ವಕ್ಷ್ಯಾಮಿ** ಎಂದು ಇರುತ್ತದೆ. **ಹೇಸೋಮ್ಯ, ತೇ**-ಆ ಅಗ್ನಿಗಳು, **ಲೋಕಾನ್ವಾವ ಕಿಲ** ಪೃಥಿವ್ಯಾದಿ ಲೋಕಗಳನ್ನು ಮಾತ್ರವೇ ಯಲ್ಲವೇ, **ಅವೋಚನ್**-ಅವುಗಳು ಹೇಳಿದವು, **ಅಹಂ ತು**-ನಾನಾದರೋ, **ತೇ**.ನಿನಗೆ, **ಯಥಾ**-ಹೇಗೆ, **ಪುಷ್ಕರಪಲಾಶೇ**-ಕಮಲಪತ್ರದಲ್ಲಿ, **ಆಪೋ ನ ಶ್ಲಿಷ್ಯನ್ತೇ**-ಉದಕವು ಅಂಟು ವದಿಲ್ಲವೋ, **ಏವಮೇವ**-ಹಾಗೆಯೇ, **ವಿದಿ**-ಉಪಾಸಕನಲ್ಲಿ, **ಪಾಪಂಕರ್ಮ**-ಪಾಪಕರ್ಮವು ಇದರಲ್ಲಿ ಪುಣ್ಯವೂ ಸೇರಿತು, **ನ ಶ್ಲಿಷ್ಯತೇ**—ಅಂಟುವದಿಲ್ಲವೋ, **ತತ್**—ಅಂತಹ ವಿದ್ಯೆಗೆ ವಿಷಯಭೂತನಾದ ಪರಬ್ರಹ್ಮವನ್ನು, **ವಕ್ಷ್ಯಾಮಿ**—ನಿನಗೆ ಕೇಳಲು ಅಪೇಕ್ಷೆಯಿದ್ದರೆ ಉಪದೇಶಿಸುವೆನು. ಪಾಪಗಳ ಅಶ್ಲೇಷವೆಂದರೆ, ಪಾಪಗಳಿಗೆ ಹೇತುಭೂತ ಕರ್ಮಾಚರಣೆ ಯಿದ್ದರೂ ಪಾಪೋತ್ಪತ್ತಿ ಪ್ರತಿಬಂಧಕವಾಡುವ ಶಕ್ತಿಯನ್ನು ಹೊಂದಿರೋಣವು, ಇಲ್ಲಿ ಪಾಪ ವಾದರೋ ಅಬುದ್ಧಿ ಪೂರ್ವಕವಾಗಿ ಮಾಡುವಪಾಪಗಳಿಗೆ ಮಾತ್ರವೇ ಅಶ್ಲೇಷವೇ ವಿನಾ, ಬುದ್ಧಿ ಪೂರ್ವಕವಾಗಿ ಮಾಡುವ ಪಾಪಗಳಿಗೆ ಅಶ್ಲೇಷವಿಲ್ಲವು. ಬುದ್ಧಿಪೂರ್ವಕಾಘಗಳಿಗಾಗಿ ಪ್ರಾಯ ಶ್ಚಿತ್ತವು ಆವಶ್ಯಕವು."

ಹೇಗೆ ಶ್ರೀಮನ್ನಾರಾಯಣನು ಪರಮಪಾವನನು ಎಂಬುದಕ್ಕೆ ಮುಂದಿನ ಶ್ರುತಿವಾಕ್ಯವನ್ನು ಉದಾಹರಿಸುತ್ತಾರೆ-(೮) **ಯಥಾ**-ಹೇಗೆ, **ಇಷೀಕತೂಲಂ**-ಮೌಂಜೀ ಹುಲ್ಲಿನಲ್ಲಿರುವ ಹತ್ತಿಯು, **ಅಗ್ನೌಪ್ರೋತಂ**-ಅಗ್ನಿಯಲ್ಲಿಟ್ಟಮದು, **ಪ್ರದೂಯೇತ**-ಭಗ್ಗನೆದಗ್ಧವಾಗುತ್ತದೋ, **ಏವಂ**-ಹಾಗೆ ಯೇ, **ಅಸ್ಯ**-ಈ ವಿಧವಾದಬ್ರಹ್ಮವಿದ್ಯಾನಿಷ್ಠನಾಗಿಪ್ರಾಣಾಗ್ನಿಹೋತ್ರಾನುಷ್ಠಾನಮಾಡುವವನಿಗೆ, **ಸರ್ವೇಪಾಪ್ಮಾನಃ**-ಸಮಸ್ತ ಪುಣ್ಯಪಾಪಗಳೂ, **ಪ್ರದೂಯನ್ತೇ**-ದಗ್ಧವಾಗಿಹೋಗುವುವು. ಇಲ್ಲಿ ಬ್ರಹ್ಮೋಪಾಸನವಾದ ಅಜ್ಞಿಗೆ ಅಗ್ನಿಹೋತ್ರವು ಅಜ್ಞವಾದುದರಿಂದ ಅಜ್ಞಿಯಫಲವನ್ನೇಅಜ್ಞದ ಸ್ತುತ್ಯರ್ಥವಾಗಿ ಅಜ್ಞಕ್ಕೂ ಅದೇ ಫಲವೇ ಹೇಳಲ್ಪಟ್ಟಿರುತ್ತದೆ." ಪರತತ್ವವು ಯಾವುದೆಂದು ನಿರ್ಣ ಯಮಾಡಿ ಸಿದ್ಧಾಂತಿಸಿ ಹೇಳುವ ನಾರಾಯಣಾನುವಾಕದಲ್ಲಿ ಹೇಳಿರುವ ನಾರಾಯಣನೇ ನೀನು ಎಂದು ತಿಳಿಸುವದಕ್ಕಾಗಿ ಅಲ್ಲಿನವಾಕ್ಯವನ್ನು ಉದಾಹರಿಸುತ್ತಾರೆ.-(೯) **ನಾರಾಯಣಪರಂಬ್ರಹ್ಮ** ಇತ್ಯಾದಿ-ಶ್ರೀಮನ್ನಾರಾಯಣನೇ, ಪರಬ್ರಹ್ಮವೆಂದೂ, ಪರತತ್ವವೆಂದೂ ಪರಂಜ್ಯೋತಿಸ್ಸೆಂದೂ ಪರಮಾತ್ಮನೆಂದೇ ಹೇಳಲ್ಪಡುವವನು ಎಂಬರ್ಥವು. ಶ್ರುತಿಗಳಲ್ಲಿ ಪರಂಬ್ರಹ್ಮ ಪರಮಾತ್ಮಪರಂ ಜ್ಯೋತಿಸ್ಸು, ಇತ್ಯಾದಿ ಶಬ್ದಗಳಿಂದೆಲ್ಲಾ ಹೇಳಲ್ಪಡುವ ಪರತತ್ವವು ಶ್ರೀಮನ್ನಾರಾಯಣನೇ ಎಂಬ ತತ್ವನಿರ್ಣಯ ವಾಕ್ಯವು ಉದಾಹರಿಸಲ್ಪಟ್ಟಿತು. **ಅಹಂ ತು ತೇ ತತ್ ವಕ್ಷ್ಯಾಮಿ ಯಥಾ ಪುಷ್ಕರ ಪಲಾಶ ಆಪೋ** ಇತ್ಯಾದಿ ಪೂರ್ಣವಾಕ್ಯವು. ಹೇಸೌಮ್ಯ, **ತೇ**—ಅಗ್ನಿಗಳು ಪೃಥಿ ವ್ಯಾದಿ ಲೋಕಗಳನ್ನು ನಿನಗಾಗಿ ಉಪದೇಶಿಸಿದವು. ತಿಳಿಯತಕ್ಕ ಪರಬ್ರಹ್ಮವಿಷಯವಾಗಿ ಸಂಪೂರ್ಣವಾಗಿ ಹೇಳಲಿಲ್ಲವು. ನಾನಾದರೋ ನಿನಗೆ ಪದ್ಮಪತ್ರಕ್ಕೆ ನೀರು ಹೇಗೆ ಅಂಟುವದಿ

(೭) ಛಾಂ ಉಪ, ೪. ೧೪. ೩. (೮) ಛಾಂ. ಉಪ. ೫. ೧೪. ೩.

**ಭಾ. (೯)"ನಾರಾಯಣಃಪರಂಬ್ರಹ್ಮತತ್ತ್ವಂನಾರಾಯಣಃಪರಃ" ಇತಿಹಿ ಶ್ರುತಯೋವದನ್ತಿ। ಋಷಯಶ್ಚ ಸರ್ವೇ ಪರಾವರತತ್ತ್ವಯಾಥಾತ್ಮ್ಯವಿದಸ್ತ್ವಾಮೇವ ಶಾಶ್ವತಂದಿವ್ಯಂ**

ಲ್ಲವೋ, ಹಾಗೆ ಸರ್ವ ಪಾಪಗಳೂ ಅಂಟದಹಾಗೆ ಇರುವ ಬ್ರಹ್ಮವಿದ್ಯೆಗೆ ವಿಷಯಭೂತನಾದ ಪರಬ್ರಹ್ಮನನ್ನು ಕುರಿತು ನೀನು ಕೇಳುವವನಾದರೆ ಉಪದೇಶಿಸುವೆನು, ಇಲ್ಲಿಪಾಪಶಬ್ದವು ಪುಣ್ಯಕ್ಕೂ ಉಪಲಕ್ಷಣವು. ಇಲ್ಲಿರುವ ಪಾಪಶಬ್ದವು ಪ್ರಾಮಾದಿಕ ಪಾಪವೇ ವಿನಾ ಬುದ್ಧಿಪೂರ್ವಕ ಪಾಪ ವಿಷಯ ವಲ್ಲವೆಂದು ಶ್ರೀ ಭಾಷ್ಯಕಾರರು ನಿರ್ಣಯಿಸಿರುತ್ತಾರೆ. ಮೂಲದಲ್ಲಿ **ಪರಂಬ್ರಹ್ಮ ಪರಂಧಾಮೇತ್ಯಾದಿ** ಈ ನಾಮಗಳೇ ಉಪಯೋಗಿಸಲ್ಪಟ್ಟಿರುವದರಿಂದ ಅರ್ಜುನನು ಈ ತೈತ್ತಿರೀಯಶ್ರುತಿಯನ್ನೇ ಮನಸ್ಸಿನಲ್ಲಿಟ್ಟು ಹೇಳಿರುತ್ತಾನೆಂದು ತೋರಿಸಿರುತ್ತಾರೆ; **ಇತಿ ಹಿ ಶ್ರುತಯೋ ವದನ್ತಿ**—ಹೀಗೆ ತಾನೇ ಇಲ್ಲಿ ಉದಾಹೃತಶ್ರುತಿಗಳು ನಿನ್ನನ್ನು ಕುರಿತು ಹೇಳುತ್ತವೆ. ಇಲ್ಲಿ **ನಾರಾಯಣ ಪರಂ ಬ್ರಹ್ಮ** ಎಂಬಲ್ಲೂ **ನಾರಾಯಣ ಪರೋಜ್ಯೋತಿಃ** ಎಂಬಲ್ಲೂ ಪ್ರಥಮಾಂತವು ಲೋಪವಾಗಿರುತ್ತದೆ. **ನಾರಾಯಣಃ ಪರಂಬ್ರಹ್ಮ, ನಾರಾಯಣಃ ಪರೋಜ್ಯೋತಿಃ** ಎಂದೂ ಇರಬೇಕು. ಮಹೋಪನಿಷತ್ತಿನಲ್ಲಿ **"ನಾರಾಯಣ ಪರಂಬ್ರಹ್ಮ"** ವೆಂದೇ ಇರುತ್ತದೆ. ಆದುದರಿಂದ **ನಾರಾಯಣ ಪರಂಬ್ರಹ್ಮ** ವೆಂದು ಸಮಸ್ತಪದವನ್ನು ಹೂಡಿಕೊಂಡು ನಾರಾಯಣನಿಗಿಂತ ಪರಂಬ್ರಹ್ಮವೆಂದರೆ ಅಧಿಕನಾದ ಪರಬ್ರಹ್ಮನುಂಟೆಂದು ಹೇಳುವ ನಾರಾಯಣಮಾತ್ಸರ್ಯವು ನಿಷೇಧಿಸಲ್ಪಟ್ಟಿತು."

ಮುಂದೆ ಋಷಿವಾಕ್ಯಗಳಿಂದಲೂ ಸಮರ್ಥಿಸಿ ಹೇಳುತ್ತಾರೆ.- **ಋಷಯಶ್ಚ ಸರ್ವೇ**-ಸಮಸ್ತ ಋಷಿಗಳೂ, ಎಂದರೆ **ಪರಾವರತತ್ತ್ವಯಾಥಾತ್ಮ್ಯವಿದಃ**-ಪರತತ್ತ್ವವೇನು ಅವರ ತತ್ತ್ವವಾದ ಬ್ರಹ್ಮಾದಿಯಾಗಿರುವ ಸಮಸ್ತ ಜೀವತತ್ತ್ವವೇನು, ಇವುಗಳ ಸ್ವರೂಪಾದಿಗಳ ಯಾಥಾತ್ಮ್ಯವನ್ನು ತಿಳಿದವರು, ಇದರಿಂದ ಋಷಿಶಬ್ದದಿಂದ ಬೋಧಿತಾರ್ಥವು ವ್ಯಕ್ತಗೊಳಿಸಲ್ಪಟ್ಟಿತು; ಆದುದರಿಂದ ಋಷಿಗಳು ಸರ್ವಜ್ಞರೆಂದೂ ಅವರುಗಳ ಉಪದೇಶವು ಆಪ್ತತಮವೆಂಬುದೂ ದ್ಯೋತಿತವು; ನಾರದ, ಪರಾಶರ, ವ್ಯಾಸ, ಶುಕ, ಶೌನಕಾದಿ ಮಹರ್ಷಿಗಳ ಉಕ್ತಿಗಳು ವೇದೋಪಬೃಹ್ಮಣಗಳಾಗಿರುವದರಿಂದ ಅವುಗಳಿಗೆ ಪರಮ ಮಾಹಾತ್ಮ್ಯಯು ಎಂಬುದೂ ದ್ಯೋತಿತವು. ಆದುದರಿಂದಲೇ ಋಷಿವಾಕ್ಯವನ್ನು ಪ್ರಾಜ್ಞನಾದ ಅರ್ಜುನನು ಮೊದಲು ಹೇಳಿ, ಅನಂತರ **"ಸ್ವಯಂ ಚೈವ ಬ್ರವೀಷಿ"** ಎಂದು ಮುಗಿಸಿದರು. **ತ್ವಾಮೇವ**-ನಿನ್ನನ್ನೇ, **ಶಾಶ್ವತಂ**—ನಿತ್ಯನನ್ನಾಗಿಯೂ, **ದಿವ್ಯಂ**-ಪರಮವ್ಯೋಮವೆಂದರೆ ವೈಕುಂಠವನ್ನೇ ನಿಲಯವಾಗಿ ಉಳ್ಳವನನ್ನಾಗಿಯೂ, **ಪುರುಷಂ**—"**ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ**" [ಪ್ರಶ್ನೋಪ. ೫, ೫.] ಎಂದರೆ ಶ್ರೇಷ್ಠರಾದ ಬ್ರಹ್ಮರುದ್ರೇಂದ್ರಾದಿಗಳಿಗೂ ಶ್ರೇಷ್ಠನಾಗಿ, ಶರೀರದಲ್ಲಿ ಶಯನಿಸಿರುವದರಿಂದ ಪುರುಷಶಬ್ದ ವಾಚ್ಯನಾಗಿರುವವನನ್ನು, **ಈಕ್ಷತೇ**—ಸಾಕ್ಷಾತ್ಕರಿಸುವನು ಎಂಬಲ್ಲಿ ತೋರಿಬರುವ ಪುರುಷ ಶಬ್ದವಾಚ್ಯನಾಗಿರುವನನ್ನು, ಇಲ್ಲಿ **ಶಾಶ್ವತಂ ದಿವ್ಯಂ ಪುರುಷಂ** ಎಂಬ ಪ್ರಯೋಗಗಳಿಂದ ಪುರುಷಸೂಕ್ತ ಪ್ರತಿಪಾದಿತನಾಗಿರುವ ಶಾಶ್ವತ ವೈಕುಂಠ ನಿಲಯನು ಹೇಳಲ್ಪಟ್ಟನೆಂದು ಭಾವಿಸತಕ್ಕದ್ದು. **ತ್ವಾಮೇವ** ಎಂದು ಏವಕಾರದೊಂದಿಗೆ ಪ್ರಯೋಗವು ಬ್ರಹ್ಮರುದ್ರಾದಿಗಳಿಗೂ ನಿಯಾಮಕನಾಗಿರುವ ವೈಲಕ್ಷಣ್ಯವನ್ನು ಬೋಧಿಸುತ್ತದೆ; ಅಥವಾ ಇಂತಹ ಪರಮ ಪುರುಷನು ಈಗ ಮನುಷ್ಯನಾಗಿ ಅವತರಿಸಿರುವವನು ನೀನೇ ಎಂಬ ಭಾವವನ್ನಾಗಲಿ ಸೂಚಿಸುತ್ತದೆ. **"ಆದಿದೇವಂ**–ಆದಿಯಾದ ದೇವನು ಎಂದರೆ ಲೀಲಾ

[೯] ತೈ. ನಾರಾ. ೧೧. ೩.

**ಭಾ. ಪುರುಷಮಾದಿದೇವಮಜಂ ವಿಭುಮಾಹುಃ । ತಥೈವ ದೇವರ್ಷಿರ್ನಾರದಃ, ಅಸಿತೋ ದೇವಲೋ ವ್ಯಾಸಶ್ಚ ।(೧೦)"ಯೇ ಚ ವೇದವಿದೋ ವಿಪ್ರಾ ಯೇ ಚಾಧ್ಯಾತ್ಮವಿದೋ ಜನಾಃ । ತೇ ವದನ್ತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಂ । ಪವಿತ್ರಾಣಾಂ ಹಿ ಗೋವಿಂದಃ ಪವಿತ್ರಂ ಪರಮುಚ್ಯತೇ । ಪುಣ್ಯಾನಾಮಪಿ ಪುಣ್ಯೋಽಸೌ**

ವಿಭೂತಿಗೂ ಕಾರಣಭೂತನನ್ನಾಗಿಯೂ, **"ಕ್ರೀಡತೋ ಬಾಲಕಸ್ಯೇವ ಚೇಷ್ಟಾಸ್ತಸ್ಯ ನಿಶಾಮಯ"** (ವಿ. ಪು. ೧. ೨. ೧೮) **"ಕ್ರೀಡಾ ಹರೇರಿದಂ ಸರ್ವಂ" "ಬಾಲಃ ಕ್ರೀಡನಕೈರಿವ"** (ಭಾರ. ಸಭಾ. ೧೦. ೩೧) ಮತ್ತು **"ಲೋಕವತ್ತು ಲೀಲಾ ಕೈವಲ್ಯಂ"** (ಬ್ರ. ಸೂ. ೨.೧.೩೩) ಎಂಬ ಪ್ರಮಾಣಗಳು ಈ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ಲೋಕದಲ್ಲಿ ಪರಿಪೂರ್ಣಕಾಮನಾದ ರಾಜನಿಗೆ ಲೀಲೆಯಲ್ಲಿ ಹೇಗೆ ಅಭಿರುಚಿಯೋ, ಹಾಗೆಯೇ ಪರಮಪುರುಷನಿಗೂ ಈ ಜಗತ್ಸೃಷ್ಟಿ ಸ್ಥಿತಿಲಯಾದಿಗಳಲ್ಲಿ ಲೀಲೆಯೇ ಪ್ರಯೋಜನವು ಎಂಬುದು ಸೂತ್ರತಾತ್ಪರ್ಯವು. ಇದರಿಂದ **"ನಾರಾಯಣಾದ್ಬ್ರಹ್ಮಾ ಜಾಯತೇ, ನಾರಾಯಣಾದ್ರುದ್ರೋ ಜಾಯತೇ"** ಎಂದು ನಾರಾಯಣೋಪನಿಷತ್ತಿನಲ್ಲೂ, ಮತ್ತು ಮಹೋಪನಿಷತ್ತಿನಲ್ಲೂ **"ಏಕೋ ಹವೈ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನಃ"** ಎಂದು ಉಪಪಾದಿತವಾದಹಾಗೆ ಅಖಿಲ ಜಗತ್ಕಾರಣತ್ವವು **ಆದಿದೇವ** ಶಬ್ದದಿಂದ ಬೋಧಿಸಲ್ಪಟ್ಟಿತು. **ಅಜಂ** - ಕರ್ಮಕೃತ ಜನ್ಮ ರಹಿತನನ್ನಾಗಿಯೂ, ಅಥವಾ ನಿರ್ವಿಕಾರಸ್ವರೂಪವುಳ್ಳವನನ್ನಾಗಿಯೂ, **ವಿಭುಂ "ಆಕಾಶವತ್ಸರ್ವಗತಶ್ಚ ನಿತ್ಯಃ"** ಎಂದು ಹೇಳಿರುವಹಾಗೆ ಸರ್ವವ್ಯಾಪಿಯನ್ನಾಗಿಯೂ ಅಥವಾ ಎಲ್ಲವನ್ನು ವ್ಯಾಪಿಸುವದರಮೂಲಕ ಸರ್ವನಿಯಮನಶಕ್ತಿಯುಳ್ಳವನಾಗಿಯೂ, ಇದರಿಂದ **ಏಷ ಸರ್ವಭೂತಾನ್ತರಾತ್ಮಾ ಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ"** (ಸುಬಾಲ. ೭) ಎಂದು ಹೇಳಿರುವಹಾಗೆ, ವಿಭು ಶಬ್ದದಿಂದ ಸರ್ವಾಂತರ್ಯಾಮಿತ್ವವೂ, ಸರ್ವಶರೀರಕತ್ವವೂ, ಆಮೂಲಕ ಸಾಮಾನಾಧಿಕರಣ್ಯದಿಂದ ಸರ್ವಶಬ್ದ ವಾಚ್ಯತ್ವವೂ ಬೋಧಿಸಲ್ಪಟ್ಟವು, ಹೀಗೆಲ್ಲಾ ನಿನ್ನನ್ನು **ಆಹುಃ**-ಹೇಳುತ್ತಾರೆ. ಹಾಗೆ ಹೇಳುವವರು ಇನ್ನೂ ಯಾರೆಂದರೆ ತಿಳಿಸುತ್ತಾರೆ.-**ತಥೈವ**-ಹಾಗೆಯೇ, ದೇವರ್ಷಿಗಳಾದ ಸರ್ವಜ್ಞರಾದ ಮಹಾ ಪ್ರಖ್ಯಾತರಾದ ನಾರದರೂ,ಮುಂದೆ**"ದೇವರ್ಷೀಣಾಂ ಚ ನಾರದಃ"** ಎಂದು ಶ್ರೀ ಕೃಷ್ಣನೇ ಉಪದೇಶಿಸುವಹಾಗೆ ದೇವರ್ಷಿಗಳಲ್ಲೂ ಶ್ರೇಷ್ಠರಾದ ನಾರದರೂ, **ಅಸಿತರೂ, ದೇವಲಶ್ಚ** - ಅವರ ತಂದೆಯಾದ ದೇವಲರೂ **"ಋಷಯಸ್ಸರ್ವೇ"** ಎಂದು ಹೇಳಿ, ಅನಂತರ ನಾರದಾದಿಗಳ ಹೆಸರುಗಳನ್ನು ಅರ್ಜುನನು ಹೇಳಿದುದು ಋಷಿಗಳಲ್ಲಿ ಇವರು ಮುಖ್ಯರು, ಇವರೀಗ ಭಗವಂತನ ಮಾಹಾತ್ಮ್ಯೆಯನ್ನು ಚನ್ನಾಗಿ ತಿಳಿದವರು, ತತ್ತ್ವನಿರ್ಣಯದಲ್ಲಿ ಶಕ್ತರು ಎಂಬುದನ್ನು ಸೂಚಿಸುತ್ತದೆ. **ವ್ಯಾಸಶ್ಚ**-ಶ್ರೀ ಪರಾಶರರ ಪುತ್ರರಾಗಿ ಈಗ ಭಗವದುಪದೇಶವನ್ನು ಬೋಧಿಸುವ ವ್ಯಾಸರು; ಹೀಗೆ ಜ್ಞಾನನಿಧಿಗಳಾದ ಈ ಮಹರ್ಷಿಗಳೆಲ್ಲಾ ಈ ನಿನ್ನ ಮಾಹಾತ್ಮ್ಯೆಗಳನ್ನು ಕೊಂಡಾಡಿರುತ್ತಾರೆಂಬ ತಾತ್ಪರ್ಯವು. ಮೊದಲು ಶ್ರೀ ವೇದವ್ಯಾಸೋಕ್ತಿಯನ್ನು ಉದಾಹರಿಸುತ್ತಾರೆ. (೧೦) **"ವೇದವಿದಃ** - ವೇದಗಳ ಕರ್ಮಭಾಗವನ್ನು ಚನ್ನಾಗಿ ತಿಳಿದ ಪ್ರಾಜ್ಞರಾದ, ಮುಂದೆ **ಅಧ್ಯಾತ್ಮವಿದಃ** ಎಂದು ವೇದಾಂತಿಗಳು ಹೇಳಲ್ಪಡುವದರಿಂದ ಕರ್ಮಭಾಗಜ್ಞರೆಂದೇ ಗೋಬಲೀವರ್ದನ್ಯಾಯದ ಪ್ರಕಾರ ಅರ್ಥಮಾಡತಕ್ಕದ್ದಾಗಿರುತ್ತದೆ **ವಿಪ್ರಾಃ**-ಬ್ರಾಹ್ಮಣರು, **ಯೇ ಚ**-ಯಾರೋ, ಮತ್ತು **ಅಧ್ಯಾತ್ಮವಿದೋ ಜನಾಃ**—ವೇದಾಂತ ಜ್ಞಾನದಲ್ಲಿ ಪ್ರಾಜ್ಞರಾದ ಬ್ರಹ್ಮವಿತ್ತುಗಳಾದವರು, **ಯೇ ಚ** - ಯಾರೋ, **ತೇ** -

(೧೦) ಭಾರತ. ಅರಣ್ಯ. ೭೧. ೧೨೩.

**ಭಾ. ಮಙ್ಗಳಾನಾಂ ಚ ಮಙ್ಗಳಂ"(೧೧)"ತ್ರೈಲೋಕ್ಯಂ ಪುಂಡರೀಕಾಕ್ಷೋ ದೇವದೇವ ಸ್ಸನಾತನಃ । ಆಸ್ತೇ ಹರಿರಚಿನ್ತ್ಯಾತ್ಮಾ ತತ್ರೈವ ಮಧುಸೂದನಃ (೧೨) "ಏಷ ನಾರಾಯಣಃ ಶ್ರೀಮಾನ್ ಕ್ಷೀರಾರ್ಣವ ನಿಕೇತನಃ । ನಾಗಪರ್ಯಙ್ಕ ಮುತ್ಸೃಜ್ಯ**

ಅವರೆಲ್ಲರೂ, **ಮಹಾತ್ಮಾನಂ ಕೃಷ್ಣಂ** - ಸರ್ವಾತಿಶಯತ್ವ ಪಾರಮೈಶ್ವರ್ಯಾದಿಗಳಿಂದ ಯುಕ್ತನಾದ ಅಥವಾ ಪರಮಾತ್ಮನಾಗಿರುವ ಶ್ರೀಕೃಷ್ಣನನ್ನು, **ಸನಾತನಂ ಧರ್ಮಂ** - ಯಾಗದಾನಾದಿಗಳಾದ ಧರ್ಮಗಳ ಹಾಗೆ ಅನಿತ್ಯವಲ್ಲದೆ ನಿತ್ಯವಾದ ಸಿದ್ಧೋಪಾಯರೂಪನಾಗಿರುವ ಧರ್ಮವನ್ನಾಗಿ, **ಆಹುಃ**-ಉಪದೇಶಿಸಿದರು."(೧೧)"**ಗೋವಿಂದಃ**-ಶ್ರೀಕೃಷ್ಣನು, **ಪವಿತ್ರಾಣಾಂ ಹಿ ಪರಂ ಪವಿತ್ರಂ** - ಪಾಪಪರಿಹಾರಕಗಳಾದ ಪ್ರಾಯಶ್ಚಿತ್ತರೂಪ ಧರ್ಮಗಳಲ್ಲೆಲ್ಲಾ ಶ್ರೇಷ್ಠವಾದ ಪಾಪಧ್ವಂಸರೂಪಧರ್ಮವು ಶ್ರೀ ಕೃಷ್ಣನು, ಎಂದು, **ಉಚ್ಯತೇ** - ಹೇಳಲ್ಪಡುತ್ತಾನೆ, **ಅಸೌ** - ಈ ಶ್ರೀಕೃಷ್ಣನು, **ಪುಣ್ಯಾನಾಮಪಿ** - ಶ್ರೇಯಸ್ಸುಗಳನ್ನು ಸಾಧಿಸಿಕೊಡುವ ಎಲ್ಲಾ ಧರ್ಮಗಳಿಗಿಂತಲೂ **ಅಸೌ ಪುಣ್ಯಃ** - ಶ್ರೇಷ್ಠನಾಗಿರುವ ಶ್ರೇಯಸ್ಸಾಧಕನು, **ಮಙ್ಗಳಾನಾಂ ಚ ಪರಂ ಮಙ್ಗಳಂ** - ಸಮೃದ್ಧಿಗಳನ್ನು ಸಾಧಿಸಿಕೊಡುವ ಎಲ್ಲಾ ಉಪಾಯಗಳಿಗಿಂತಲೂ ಶ್ರೇಷ್ಠವಾದ ಸಮೃದ್ಧಿಯನ್ನುಂಟುಮಾಡುವವನು, (೧೧) "**ತ್ರೈಲೋಕ್ಯಂ**-ಮೇಲಿನ, ಮಧ್ಯದ, ಕೆಳಗಿನ, ಹೀಗೆ ಮೂರು ಲೋಕಗಳೂಸಹ, **ಪುಂಡರೀಕಾಕ್ಷಃ**-ಕಮಲದಹಾಗೆ ಕಣ್ಣುಗಳುಳ್ಳ ಶ್ರೀಕೃಷ್ಣನೇ ಅಥವಾ ಬದ್ಧ ಮುಕ್ತ ನಿತ್ಯರೂಪ ಮೂರುವಿಧ ಲೋಕವೂ ಶ್ರೀ ಕೃಷ್ಣನೇ ಎಂದರೆ ಹೀಗೆ ಇವರುಗಳಿಗೆಲ್ಲಾ ಆತ್ಮಾವಾಗಿರುವದರಿಂದ ಸಾಮಾನಾಧಿಕರಣ್ಯಭಾವದಿಂದಾಗಲಿ, ಅಥವಾ ಕಾರಣ ಕಾರ್ಯಭಾವದಿಂದಲಾಗಲಿ ಶ್ರೀ ಕೃಷ್ಣನೇ ಎಂಬ ಭಾವವು ಇಲ್ಲಿ **ಪುಂಡರೀಕಾಕ್ಷ** ಶಬ್ದದಿಂದ ಅಂತರಾದಿತ್ಯ ವಿದ್ಯೆಯಲ್ಲಿ ಹೇಳಿರುವಹಾಗೆ, ಛಾಂದೋಗ್ಯ ೧.೬. ೭ರಲ್ಲಿ "**ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ**" ಎಂಬ ವಾಕ್ಯದಿಂದ ಪ್ರತಿಪಾದಿತವಾಗಿರುವ ದಿವ್ಯ ಚಕ್ಷುಸ್ಸುಗಳ ಸೊಬಗಿನಿಂದ ಶೋಭಿಸುವ ದಿವ್ಯಮಙ್ಗಳ ವಿಗ್ರಹತ್ವವು ಉಪದೇಶಿಸಲ್ಪಟ್ಟಿತು. ಶ್ರೀ ಭಾಷ್ಯಕಾರರು ಈ ಛಾಂದೋಗ್ಯವಾಕ್ಯಕ್ಕೆ ಬಹು ರಮಣೀಯವಾದ ಭಾಷ್ಯವನ್ನು ತಾವು ಬರೆದ ವೇದಾಂತ ಸಂಗ್ರಹದಲ್ಲಿ **ಗಮ್ಭೀರಾಮ್ಭಸ್ಸಮುದ್ಭೂತಸುಮೃಷ್ಟನಾಳ ರವಿಕರ ವಿಕಸಿತ ಪುಂಡರೀಕ ದಳಾಮಲಾಯತೇಕ್ಷಣಃ**" ಎಂಬುದಾಗಿ ಬರೆದಿರುತ್ತಾರೆ; ತುಂಬಾ ಆಳವಾದ ಜಲಾಶಯದಲ್ಲಿ ಹುಟ್ಟಿ ಕಲ್ಮಷವಿಲ್ಲದ ನಾಳದಲ್ಲಿರುವದಾಗಿ ಸೂರ್ಯ ಕಿರಣಗಳಿಂದ ವಿಕಸಿತವಾಗಿರುವ ಕಮಲಪತ್ರದಹಾಗೆ ನಿರ್ಮಲವಾಗಿ ವಿಶಾಲವಾಗಿ ಮನೋಹರವಾಗಿರುವ ಕಣ್ಣುಗಳುಳ್ಳವನು," ಎಂಬುದು ಈ ವಾಕ್ಯಾರ್ಥವು. ಇವರಿಂದ ಭಕ್ತಾನುಗ್ರಹಕ್ಕೆ ಬೇಕಾದ ಕರುಣಾಪೂರ್ಣತೆಯು ಪ್ರದರ್ಶಿಸಲ್ಪಟ್ಟಿತು. ಶ್ರೀ ಕೃಷ್ಣನೇ ಪರತತ್ವವೆಂದು ಹೇಗೆ ನಿರ್ಣಯಮಾಡಿ ಹೇಳುತ್ತೀರಿ ಎಂದರೆ ಆ ಪುಂಡರೀಕ ಸದೃಶವಾದ ಕಣ್ಣುಗಳ ರಮಣೀಯತ್ವವು ಇನ್ನು ಯಾರಿಗೂ ಇಲ್ಲವಾದುದರಿಂದ ನಿರ್ಧರಿಸಿ ಹೇಳಬಹುದೆಂಬ ತಾತ್ಪರ್ಯವು. ಮಾರ್ಕಂಡೇಯರೂ ಸಹ ಈ ಕಣ್ಣಿನ ಚಂದದಿಂದಲೇ ತಾವು ಪ್ರಳಯದಲ್ಲಿ ಕಂಡ ಪರಮ ಪುರುಷನೇ ಶ್ರೀ ಕೃಷ್ಣನೆಂದು ನಿಸ್ಸಂಶಯವಾಗಿ ಯುಧಿಷ್ಠಿರಾದಿಗಳಿಗೆ ಉಪದೇಶಿಸಿರುತ್ತಾರೆ. ಈ ಶ್ರುತಿ ವಾಕ್ಯಕ್ಕೆ ದ್ರಮಿಡ ಭಾಷ್ಯದಲ್ಲಿ ಕೊಟ್ಟ ಆರು ಅರ್ಥಗಳಲ್ಲಿ ಶ್ರೀ ಭಾಷ್ಯಕಾರರು ಮೂರು ಅರ್ಥಗಳನ್ನು ಮಾತ್ರ ಪರಿಗ್ರಹಿಸಿರುತ್ತಾರೆ. (ಶಾ. ಸೂ.) ಈ ಮೂರು ಲೋಕವೂ ಪುಂಡರೀಕಾಕ್ಷನೆಂಬ ಸಾಮಾನಾಧಿಕರಣಕ್ಕೆ ಕಾರಣವೇನೆಂದರೆ—**ದೇವದೇವಸ್ಸನಾತನಃ** - ಬ್ರಹ್ಮರುದ್ರಾದಿ ಸರ್ವ ದೇವತೆ

(೧೧) ಭಾರತ. ಅರಣ್ಯ. ೮೬. ೨೪. ೨೫. (೧೨) ಭಾರತ. ಅರಣ್ಯ. ೮೬. ೨೮.

ಭಾ- **ಹ್ಯಾಗತೋ ಮಧುರಾಂ ಪುರೀಂ । ಪುಣ್ಯಾ ದ್ವಾರವತೀ ತತ್ರ ಯತ್ರಾಸ್ತೇ ಮಧು ಸೂದನಃ । ಸಾಕ್ಷಾದ್ದೇವಃ ಪುರಾಣೋಽಸೌ ಸಹಿ ಧರ್ಮಸ್ಸನಾತನಃ" ತಥಾ; (೧೨) "ಯತ್ರ ನಾರಾಯಣೋ ದೇವಃ ಪರಮಾತ್ಮಾ ಸನಾತನಃ । ತತ್ರ ಕೃತ್ಸ್ನಂ ಜಗ ತ್ಪಾರ್ಥ ತೀರ್ಥಾನ್ಯಾಯತನಾನಿ ಚ । ತತ್ಪುಣ್ಯಂ ತತ್ಪರಂ ಬ್ರಹ್ಮ ತತ್ತೀರ್ಥಂ**

---

ಗಳಿಗೂ ಸ್ವಾಮಿಯಾಗಿ, ಅನಾದಿಯಾಗಿ ನಿತ್ಯನಾಗಿರುವ ಮತ್ತು **ಅಚಿನ್ತ್ಯಾತ್ಮಾ**—ಊಹಿಸಲು ಕೂಡ ಅಸಾಧ್ಯವಾದ ಸ್ವರೂಪವುಳ್ಳ, **ಮಧುಸೂದನಃ**—ಮಧುವೆಂಬ ರಾಕ್ಷಸನನ್ನು ಕೊಂದ, **ಹರಿಃ**-ಶ್ರೀ ಮಹಾವಿಷ್ಣುವು, **ತತ್ರೈವ**-ಅಲ್ಲಿಯೇ ಎಂದರೆ ಮೂರು ಲೋಕದಲ್ಲೂ, ಆ**ಸ್ತೇ**-ಆತ್ರ ವಾಗಿ ಇರುತ್ತಾನೆ." ಎಂದೂ (೧೨) **ಏಷಃ**-ಈ ಶ್ರೀ ಕೃಷ್ಣನೇ, **ಶ್ರೀವರ್ಗ**-ಲಕ್ಷ್ಮೀಯುಕ್ತನಾದ **ನಾರಾಯಣನು,** ಇದರಿಂದ **"ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂಬ ಶ್ರುತ್ಯರ್ಥವು ಬೋಧಿ ತವು, **ಕ್ಷೀರಾರ್ಣವ ನಿಕೇತನಃ**—ಸಮಸ್ತ ವ್ಯಷ್ಟಿರೂಪ ಸೃಷ್ಟಿಗೂ ಕಾರಣಭೂತನಾಗಿರುವ ಕ್ಷೀರಾಬ್ಧಿಶಾಯಿಯು, ಈಗ ಅವತಾರಕಾಲವು, **"ಯದಾ ಯದಾ ಹಿ ಧರ್ಮಸ್ಯ ಗ್ಲಾನಿ ರ್ಭವತಿ ಭಾರತ"** ಎಂದು ಹೇಳಿರುವಹಾಗೆ, ಒದಗಿದುದರಿಂದ, **ನಾಗಪರ್ಯಙ್ಕಮುತ್ಸೃಜ್ಯ**-ಶೇಷನೆಂಬ ಮಂಚವನ್ನು ಬಿಟ್ಟು ಎಂದರೆ ವಟಪತ್ರದಲ್ಲಿ ಆದಿಶೇಷನಮೇಲೆ ಸುಮ್ಮನೆ ಶಯನಿಸಿ ರುವದನ್ನು ಬಿಟ್ಟು, ಅವತರಿಸಬೇಕೆಂದು ಸಙ್ಕಲ್ಪಿಸಿ, **ಮಧುರಾಪುರಿಯನ್ನು ಕುರಿತು ಆಗತೋ ಹಿ**—ಬಂದಿರುತ್ತಾನೆ, ನಿಶ್ಚಯವು; ಪರ್ಯಙ್ಕವನ್ನು, **ಉತ್ಸೃಜ್ಯ**-ಬಿಟ್ಟು, **ಆಗತಃ** - ಬಂದನು; ಎಂದರೆ ಅಲ್ಲಿ ಇಲ್ಲವೆಂಬರ್ಥವಲ್ಲವು, ಅಲ್ಲಿಯೂ ಹಾಗೆಯೇ ಇದ್ದುಕೊಂಡು ಅವತರಿಸಬೇಕೆಂದು ಸಙ್ಕಲ್ಪಿಸಿ ಮಧುರಾಪುರಿಯಲ್ಲಿ ದೇವಕೀಗರ್ಭಮೂಲಕ ಜನಿಸಿ ವಿವಿಧ ವಿಚಿತ್ರ ಅತ್ಯದ್ಭುತಾತಿ ಮಾನುಷ ಚೇಷ್ಟೆಗಳಮೂಲಕ ಸಾಧು ಪರಿತ್ರಾಣ ದುಷ್ಟನಿಗ್ರಹ ಧರ್ಮಸಂಸ್ಥಾಪನಾದಿಗಳನ್ನು ಮಾಡುವದಕ್ಕಾಗಿ, **ಆಗತಃ**-ಬಂದವನಲ್ಲವೇ ಎಂಬ ತಾತ್ಪರ್ಯವು; ಆ [illegible]ದಿಂದಲೇ **ಯತ್ರಾಸ್ತೇ ಮಧುಸೂದನಃ**—ಈ ಮಧುಸೂದನನಾದ ಶ್ರೀ ಕೃಷ್ಣನು ಎಲ್ಲಿ ಇರುತ್ತಾನೋ ತತ್ರ-ಅಂತಹ ಮಹತ್ತಾದ ಪ್ರದೇಶದಲ್ಲಿ, **ದ್ವಾರವತೀ** ಎಂಬ ಪಟ್ಟಣವು, **ಪುಣ್ಯಾ**—ಶ್ರೀ ಕೃಷ್ಣನ ಪಾದ ವಿನ್ಯಾಸದಿಂದ ಮಹಾ ಪವಿತ್ರಕರವಾದ ಪುಣ್ಯಕ್ಷೇತ್ರವು, **"ಸುಭಗಶ್ಚಿತ್ರಕೂಟೋಽಸೌ, ಯಸ್ಮಿನ್ವಸತಿ ಕಾಕುತ್ಸ್ಥಃ"** ಎಂಬುದು (ರಾ.ಅಯೋ. ೯೯.೧೨) ಅನುಸಂಧೇಯವು. **ಅಸೌ**-ಶ್ರೀ ಕೃಷ್ಣನು ಅಂತಹ **ಸಾಕ್ಷಾದ್ದೇವಃ**-ಸಾಕ್ಷಾತ್ತಾದ ಕ್ರೀಡಾಪರನಾದ ಪರಮಪುರುಷನು,ಅಂಶಾ ವತಾರಿಯಾಗಲಿ, ಅಂತರ್ಯಾಮಿಯಾಗಿಯಾಗಲಿ ಇರುವ ಪರಮಪುರುಷನಲ್ಲವು, ಸಾಕ್ಷಾತ್ತಾದ ಪರಮಪುರುಷನೇ ಎಂಬ ಭಾವವು. ನಿರ್ಗುಣ ಬ್ರಹ್ಮವೆಂಬುವ ಪಾರಮಾರ್ಥಿಕ ತತ್ತ್ವಬೇರೆ ಯುಂಟೆಂದು ಹೇಳಲ್ಪಟ್ಟವನಲ್ಲವು,ಸಾಕ್ಷಾತ್ತಾದ ಪರತತ್ತ್ವವೇ ಇವನು ಎಂಬಭಾವವು. **ಪುರಾಣಃ "ಕವಿಂ ಪುರಾಣಂ"** (ಗೀ.೮.೯) ಎಂಬಲ್ಲಿ ಹೇಳಿರುವಹಾಗೆ ಅನಾದಿಯು; ಆದಿಮಧ್ಯಾಂತರಹಿ ತನು; **ಸಹಿಧರ್ಮಸ್ಸನಾತನಃ**-ನಿಸ್ಸಂಶಯವಾಗಿ ಅವನೇ ಶಾಶ್ವತಶ್ರೇಯಸ್ಸಾಧನನು, ಸರ್ವಾಭೀ ಷ್ಟ ಸಿದ್ಧೋಪಾಯನು. ಇದು ಧೌಮ್ಯಋಷಿ ವಚನವು. ಇದಾದ ನಂತರ**"ಯೇ ಚ ವೇದವಿದೋ ವಿಪ್ರಾಯೇಚಾಧ್ಯಾತ್ಮವಿದೋಜನಾಃ।ತೇವದನ್ತಿಮಹಾತ್ಮಾನಂ ಕೃಷ್ಣಂಧರ್ಮಂಸನಾತನಂ"** ಎಂಬ ಕೃಷ್ಣನು ಸಿದ್ಧೋಪಾಯನೆಂದು ಹೇಳುವ ಅಮೋಘೋಕ್ತಿಯು ಇರುತ್ತದೆ. ಮುಂದೆ ಶ್ರೀ ನಾರದೋಕ್ತಿ ರೂಪಪ್ರಮಾಣವನ್ನು ಉದಾಹರಿಸುತ್ತಾರೆ. **ತಥಾ**-ಹಾಗೆಯೇ,(೧೨)**ದೇವಃ**-ಲೀಲಾ ಸಕ್ತನಾದ,**ಸನಾತನಃ**-ನಿತ್ಯನಾದ, **ಪರಮಾತ್ಮನಾದ ನಾರಾಯಣನು ಯತ್ರ**-ಯಾವ ಪ್ರದೇಶ ದಲ್ಲಿ ಮೂರ್ತೀಭವಿಸಿ ದಿವ್ಯಮಙ್ಗಳ ವಿಗ್ರಹಯುಕ್ತನಾಗಿರುತ್ತಾನೋ, **ತತ್ರ** ಅಲ್ಲಿಯೇ, **ಹೇ ಪಾರ್ಥ**

ಭಾ. **ತತ್ತಪೋವನಮ್। ತತ್ರ ದೇವರ್ಷಯಸ್ಸಿದ್ಧಾ ಸ್ಸರ್ವೇ ಚೈವ ತಪೋಧನಾಃ । ಆದಿದೇವೊ ಮಹಾಯೋಗೀ ಯತ್ರಾಸ್ತೇ ಮಧುಸೂದನಃ। ಪುಣ್ಯಾನಾಮಪಿ ತತ್ಪುಣ್ಯಂ ಮಾಭೂತ್ತೇಽಸಂಶಯೋಽತ್ರ ವೈ"(೧೩)"ಕೃಷ್ಣ ಏವ ಹಿ ಲೋಕಾನಾಮುತ್ಪತ್ತಿರಪಿ ಚಾಪ್ಯಯಃ । ಕೃಷ್ಣಸ್ಯ ಹಿ ಕೃತೇ ಭೂತಮಿದಂ ವಿಶ್ವಂ ಚರಾಚರಂ" ಇತಿ । ತಥಾ ಸ್ವಯಮೇವ ಬ್ರವೀಷಿ ಚ "ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವಚ । ಅಹಂಕಾರ ಇತೀಯಂ ಮೇ ಭಿನ್ನಾಪ್ರಕೃತಿ ರಷ್ಟಧಾ" ಇತ್ಯಾದಿನಾ,"ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ"ಇತ್ಯನ್ತೇನ॥೧೨,೧೩॥**

ಓ ಅರ್ಜುನನೇ, **ಕೃತ್ಸ್ನಂ ಜಗತ್**-ಸಮಸ್ತ ಜಗತ್ತು ಅಲ್ಲಿಯೇ; **ತೀರ್ಥಾನ್ಯಾಯತನಾನಿಚ**-ಪುಣ್ಯತೀರ್ಥಗಳೂ, ಪುಣ್ಯಕ್ಷೇತ್ರಗಳೂ ಸಹ, **ತತ್ಪುಣ್ಯಂ**-ಅದೇ ಮಹಾ ಪವಿತ್ರವಾಗುವವರಿಂದ ಪುಣ್ಯಸ್ಥಳವು; **ತತ್ಪರಂ ಬ್ರಹ್ಮ**-ಆಸ್ಥಳವೇ ಪರಬ್ರಹ್ಮವು ಎಂದರೆ ಪರಬ್ರಹ್ಮಸಮಾನವು, ಏತರಿಂದೆಂದರೆ ಪರಬ್ರಹ್ಮವನ್ನೇ ಪ್ರಾಪಕ ಪ್ರಾಪ್ಯವೆಂದು ಆಶ್ರಯಿಸುವಹಾಗೆಮಾಡುವ ಮಾಹಾತ್ಮ್ಯಯುಳ್ಳದುದರಿಂದ ಎಂಬ ಭಾವವು, **ತತ್ತೀರ್ಥವು**-ಅದೇ ಗಂಗಾ ಯಮುನಾ ರೂಪ ಪುಣ್ಯತೀರ್ಥವು; **ತತ್ತಪೋವನಮ್**-ಧ್ಯಾನೋಪಾಸನಾದಿಗಳಿಗೆ ಉಪಯುಕ್ತವಾಗಿರುವ ಬದರಿಕಾಶ್ರಮವೇ ಮೊದಲಾದ ತಪೋವನವು; **ತತ್ರ**—ಅಂತಹ ಭಗವದಧಿಷ್ಠಿತ ಸ್ಥಳದಲ್ಲೇ **ಸಮಸ್ತ ದೇವರ್ಷಿಗಳೂ, ಸಿದ್ಧರೂ, ತಪೋಧನರೂ,** ಇರುವರೆಂದು ಭಾವಿಸು, **ಯತ್ರ**-ಯಾವ ಸ್ಥಳದಲ್ಲಿ, ಈ ಮಧುಸೂದನನಾಗಿ, ಆದಿದೇವನಾದ, **ಮಹಾಯೋಗೀ**—ಮಹತ್ತಾದ ಸ್ವರೂಪ ರೂಪ ಗುಣ ವಿಭವೈಶ್ವರ್ಯಾದಿಗಳಿಂದ ಯುಕ್ತನಾದ ಶ್ರೀ ಕೃಷ್ಣನು, **ಆಸ್ತೇ**-ಇರುತ್ತಾನೋ, **ತತ್**-ಆ ಪ್ರದೇಶವು, **ಪುಣ್ಯಾನಾಮಪಿ ಪುಣ್ಯಂ,** ಇದಕ್ಕೆ ಅರ್ಥವು ಹಿಂದೆಯೇ ಬರೆಯಲ್ಪಟ್ಟಿರುತ್ತದೆ, **ಅತ್ರ**-ಈ ವಿಷಯದಲ್ಲಿ, **ಮಾ ಭೂತ್ತೇ ಸಂಶಯಂ ವೈ**—ಓ ಪಾರ್ಥನೇ ನಿನಗೆ ಈಷದಪಿ ಸಂದೇಹವು ಬೇಡ, ಮನುಷ್ಯರೂಪದಲ್ಲಿರುವವನಿಗೆ ಇಷ್ಟೆಲ್ಲಾ ಮಾಹಾತ್ಮ್ಯೆಯು ಎಲ್ಲಾದರೂ ಉಂಟೋ ಎಂದು ಶಙ್ಕಿಸಬೇಡವೆಂಬ ಭಾವವು; (೧೩) " **ಕೃಷ್ಣ ಏವ**—ಶ್ರೀ ಕೃಷ್ಣನೇ, **ಲೋಕಾನಾಂ**—ಸಮಸ್ತಲೋಕಗಳ, **ಉತ್ಪತ್ತಿರಪಿ ಚಾಪ್ಯಯಃ**—ಉತ್ಪತ್ತಿಗೂ ಲಯಕ್ಕೂ ಸಹ ಕಾರಣಭೂತನು, **ಹಿ** ಎಂಬುವರಿಂದ ಸಂಶಯ ಬೇಡವೆಂಬ ಭಾವವು. **ಇದಂ ವಿಶ್ವಂ ಚರಾಚರಮ್**—ಈ ಚರಾಚರರೂಪವಾದ ವಿಶ್ವವೆಲ್ಲವೂ, **ಕೃಷ್ಣಸ್ಯ ಹಿ ಕೃತೇಭೂತಂ**—ಕೃಷ್ಣನಿಗೋಸ್ಕರವಾಗಿಯೇ ಉಂಟಾದುದು ಎಂದರೆ ಆತನಿಗೆ ಶೇಷಭೂತವು, ಭೋಗ್ಯವು ಎಂಬ ಭಾವವು. ಇದು ಶ್ರೀ ಭೀಷ್ಮರ ಉಕ್ತಿಯು. ಮುಂದೆ ಮೂಲದ **ಸ್ವಯಂಚೈವ ಬ್ರವೀಷಿ ಮೇ** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ. **ತಥಾ**-ಹಾಗೆಯೇ, **ಸ್ವಯಮೇವ ಚ**-ನೀನೂ ಸಹ, **ಬ್ರವೀಷಿ**-ಹೇಳಿರುತ್ತೀಯಷ್ಟೆ, ಗೀತಾ ೭ ನೆಯ ಅಧ್ಯಾಯದ ೪ ನೆಯ ಶ್ಲೋಕ ಮೊದಲುಗೊಂಡು ದಶಮಾಧ್ಯಾಯದ ೧೧ ನೆಯ ಶ್ಲೋಕದವರೆವಿಗೂ ಹೇಳಿರುವ ಉಪದೇಶದ ಮೂಲಕವೂ ವ್ಯಕ್ತವೆಂದು ಅರ್ಜುನನು ಪರಮಾತ್ಮಸ್ವರೂಪವನ್ನು ತಾನು ತಿಳಿದವನಾದನೆಂದು ಹೇಳಿಕೊಳ್ಳುತ್ತಾನೆ. ೭ ನೆಯ ಅಧ್ಯಾಯದ ಮೊದಲು ಇದುವರೆಗೂ ನೀನು ಮಾಡಿದ ಮಹತ್ತಾದ ಉಪದೇಶದಿಂದ ನಿನ್ನ ಸ್ವರೂಪ ರೂಪಗುಣ ವಿಭವಾದಿಗಳೆಲ್ಲಾ ವಿದಿತವಾಗಿ ನಾನು ಅರಣ್ಯವಾಸದಲ್ಲಿರುವಾಗ ಪರಮಮಹರ್ಷಿಗಳಿಂದ ತತ್ತ್ವಯಾಥಾತ್ಮ್ಯರೂಪ ಶಾಸ್ತ್ರಜ್ಞಾನವನ್ನು ಹೊಂದಿದುದು. ಈಗ ಈ ನಿನ್ನ ಮಹತ್ತಾದ ಸಾಕ್ಷಾದುಪದೇಶದಿಂದ ದಾರ್ಢ್ಯವನ್ನು ಹೊಂದಿತೆಂದು,

(೧೩) ಭಾರತ ಸಭಾ, ೪೧, ೨೩.

**ಮೂ. ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪.**

**ಸ್ವಯಂಚೈವ ಬ್ರವೀಷಿಮೇ** ಎಂದು ಹೇಳುತ್ತಾನೆ. ಇದಕ್ಕೆ ವ್ಯಾಖ್ಯಾನವನ್ನು ದಯಪಾಲಿಸುತ್ತಾರೆ. **ತಥಾ**–ಹಾಗೆಯೇ ಎಂದರೆ ಋಷಿಗಳ ದಿವ್ಯ ಸೂಕ್ತಿಗಳ ಅಭಿಪ್ರಾಯದ ಹಾಗೆಯೇ; **ಸ್ವಯಮೇವ**–ಸಾಕ್ಷಾತ್ತಾಗಿ ನೀನೇ, **ಬ್ರವೀಷಿಚ**–ಹೇಳಿರುತ್ತೀಯೇ, ಎಲ್ಲಿ ಎಂದರೆ **"ಭೂಮಿರಾಪೋನಲೋ ವಾಯುಃ" ಇತ್ಯಾದಿನಾ**–ಎಂಬೀ ಶ್ಲೋಕವನ್ನೇ ಮೊದಲು ಮಾಡಿಕೊಂಡು, **"ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ"** ಎಂಬ ಶ್ಲೋಕಾಂತ್ಯದವರೆಗೂ ಹೇಳಿರುತ್ತೀಯೇ ಎಂಬ ತಾತ್ಪರ್ಯವು. ಇವುಗಳ ಅರ್ಥಗಳು ಹಿಂದೆಯೇ ವಿವರಿಸಲ್ಪಟ್ಟಿವೆ. **"ಭೂಮಿರಾಪಃ"** ಇತ್ಯಾದಿ ಶ್ಲೋಕಗಳಿಂದ ಪರಮಾತ್ಮನಿಗೆ ಸರ್ವಶೇಷಿತ್ವ ಸರ್ವಕಾರಣತ್ವ, ಸರ್ವಶರೀರತ್ವ, ಸರ್ವಾತ್ಮಕತ್ವ, ಸರ್ವನಿಯಮನತ್ವಾದಿಗಳು ಉಪದೇಶಿಸಲ್ಪಟ್ಟವೆಂಬ ಭಾವವು. ೧೨. ೧೩ ॥

**ಮೂಲಕ್ಕೆ ಅರ್ಥವು:**–ಹಿಂದೆ ಅರಣ್ಯವಾಸದಲ್ಲಿರುವಾಗ ಶ್ರೀ ನಾರದ ವ್ಯಾಸಾದಿ ಮಹರ್ಷಿಗಳು ಹೇಳಿದುದೂ, ಶಾಸ್ತ್ರಗಳಲ್ಲಿ ಹೇಳಿರುವದೂ, ಈಗ ನೀನು ಉಪದೇಶಿಸಿರುವದೂ, ಇವುಗಳಿಗೆಲ್ಲಾ ಮಹತ್ತಾದ ಐಕಕಂಠ್ಯವಿರುವದರಿಂದ ತನಗೆ ಈಗ ಈಷದಪಿ ಸಂಶಯವಿಲ್ಲದಹಾಗೆ ದಾರ್ಢ್ಯವು ಪ್ರಾಪ್ತವಾಯಿತೆಂದು ತಿಳಿಸಿ, ನಿನ್ನ ಐಶ್ವರ್ಯದ ಮತ್ತು ಕಲ್ಯಾಣಗುಣಗಳ ಮಾಹಾತ್ಮ್ಯೆಯನ್ನು ದೇವದಾನವರೇ ತಿಳಿಯರು, ಇನ್ನು ಮನುಷ್ಯರ ಪಾಡೇನು ? ಯಾರೂ ತಿಳಿಯಲಾರರೆಂದು ಅರ್ಜುನನು ಹೇಳುತ್ತಾನೆ.—**ಹೇ ಕೇಶವ–ಕ ಇತಿ ಬ್ರಹ್ಮಣೋನಾಮ ಈಶೋಹಂ ಸರ್ವದೇಹಿನಾಂ। ಆವಾಂ ತವಾಂಗೇ ಸಂಭೂತೌ ತಸ್ಮಾತ್ ಕೇಶವನಾಮವಾನ್॥ಕಃ** ಎಂದರೆ ಚತುರ್ಮುಖಬ್ರಹ್ಮನು; ನಾನು ಸರ್ವಪ್ರಾಣಿಗಳಿಗೂ ಪ್ರಳಯಕ್ಕೆ ಅಧಿಪತಿಯಾಗಿ ಈಶನು ಎಂದು ಹೇಳಿಸಿಕೊಳ್ಳುತ್ತೇನೆ; ನಾವಿಬ್ಬರೂ ನಿಮ್ಮ ಶರೀರದಿಂದ ಉತ್ಪನ್ನರಾಗಿರುವದರಿಂದ ನಿಮಗೆ ಕೇಶವನೆಂಬ ನಾಮವು ಸಲ್ಲುತ್ತದೆ ಎಂಬ ರುದ್ರವಾಕ್ಯಾನುಸಾರ, ಓ ಕೇಶವನೇ, **ಯತ್**–ಯಾವುದನ್ನೂ **ಮಾಂ**—ನನ್ನನ್ನು ಕುರಿತು ಎಂದರೆ ನನಗೆ, **ವದಸಿ**–ಹಿಂದೆ ಉಪದೇಶಿಸಿರುತ್ತೀಯೋ, **ಸರ್ವಮೇತತ್**—ಆ ಇವೆಲ್ಲಾ ಉಪದೇಶವನ್ನೂ **ಋತಂ**—ಸತ್ಯವನ್ನಾಗಿ **ಮನ್ಯೇ**—ತಿಳಿದಿರುತ್ತೇನೆ. ಹಿಂದೆ ನಾನು ವನವಾಸದಲ್ಲಿರುವಾಗ ಋಷಿಗಳ ಮೂಲಕವೇ ನಿಸ್ಸಂಶಯವಾಗಿ ನೀನೇ ಸಾಕ್ಷಾತ್ಪರತತ್ವವೆಂಬ ವಿಷಯವನ್ನು ತಿಳಿದಿದ್ದೆನು. ಈಗ ನೀನೇ ಸಾಕ್ಷಾತ್ತಾಗಿ ಉಪದೇಶಿಸಿರುವದರಿಂದ ಇನ್ನೂ ಹೆಚ್ಚಿನ ಮನೋದಾರ್ಢ್ಯವು ಉಂಟಾಗಿರುವದರಿಂದ ಸಂದೇಹಕ್ಕೆ ಈಷದಪಿ ಕಾರಣವಿಲ್ಲದಿರುವದರಿಂದ, **ಏತತ್ಸರ್ವಂ ಋತಂ ಮನ್ಯೇ** ಎಂದು ಅರ್ಜುನನು ಹೇಳುತ್ತಾನೆ. ಆದುದರಿಂದ ಮಹಾ ಸುಕೃತಿಯು ತಾನು ಎಂದು ಭಾವಿಸಿ, ಪರತತ್ವ ನೀನೇ ಎಂದು ಹೇಳುವದಕ್ಕಾಗಿ, **ಭಗವನ್** ಎಂಬ ಸಂಬೋಧನೆಯು. ಹೇಯಗುಣರಹಿತನಾಗಿ ಷಾಡ್ಗುಣ್ಯಪರಿಪೂರ್ಣನಾದವನೇ, ಎಂದರೆ ಕಲ್ಯಾಣಗುಣಾಕರನೇ ಎಂಬ ಭಾವವು, **ತೇ** - ಹಿಂದೆ ಹೇಳಿದಹಾಗೆ ವಿಚಿತ್ರಾದ್ಭುತ ಮಹಿಮೆಯುಳ್ಳ ನಿನ್ನ. **ವ್ಯಕ್ತಿಂ**-ವ್ಯಕ್ತವಾಗಿ ತೋರುವ ನಿನ್ನ ಗುಣ ವಿಭವೈಶ್ವರ್ಯಗಳ ಅದ್ಭುತಯೋಗವನ್ನು, **ದೇವಾಃ** - ದೇವತೆಗಳೂ, **ನ ವಿದುಃ** - ತಿಳಿಯಲಾರರು, **ದಾನವಾಃ**- ದಾನವರು, **ನ ವಿದುಃ** - ತಿಳಿಯಲಾರರು. ಹೀಗಾದನಂತರ ಮನುಷ್ಯರು ತಿಳಿಯಲಾರರೆಂಬುದು ಕೈಮುತಿಕ ನ್ಯಾಯಸಿದ್ಧವು. ಹೀಗಿರುವಾಗ ನಾನು ಸ್ವಲ್ಪಮಟ್ಟಿಗೆ ಕೃಪಾಸಾಗರನಾದ ನಿನ್ನ ಅನುಗ್ರಹದಿಂದ ತಿಳಿದುದರಿಂದ ನಾನು ಸುಕೃತಿಯೆಂದೇ ಭಾವಿಸತಕ್ಕದ್ದಾಗಿರುತ್ತದೆಂಬ ಭಾವವು. **"ಸರ್ವಮೇತದೃತಂ ಮನ್ಯೇ"** ಎಂದು ಹೇಳಿರುವದರಿಂದ ಋಷಿ

**ಭಾ. ಅತ ಸ್ಸರ್ವ ಮೇತದ್ಯಥಾವಸ್ಥಿತವಸ್ತುಕಥನಂ ಮನ್ಯೇ, ನ ಪ್ರಶಂಸಾದ್ಯಭಿಪ್ರಾಯಮ್; ಯನ್ಮಾಂ ಪ್ರತ್ಯನನ್ಯಸಾಧಾರಣ ಮನವಧಿಕಾತಿಶಯಂ ಸ್ವಾಭಾವಿಕಂ ತವೈಶ್ವರ್ಯಂ ಕಲ್ಯಾಣಗುಣಾನನ್ತ್ಯಂ ಚ ವದಸಿ। ಅತೋ ಭಗವನ್—ನಿರತಿಶಯ**

ಪ್ರೋಕ್ತ ಇತಿಹಾಸಪುರಾಣಗಳು ವೇದೋಪಬೃಹ್ಮಣಗಳಾಗಿ ಪರಮಗ್ರಾಹ್ಯವೆಂಬುದು ಸೂಚಿತವು.

**ಭಾಷ್ಯಾರ್ಥವು:**—ಈ ಶ್ಲೋಕಕ್ಕೂ ಹಿಂದೆ ಹೇಳಿದುದಕ್ಕೂ ಸಙ್ಗತಿಯನ್ನು ತೋರಿಸುವ ಉದ್ದೇಶ್ಯದಿಂದ, **ಅತಃ**-ಎಂದು ಪ್ರಾರಂಭಿಸಿ ಹೇಳುತ್ತಾರೆ — **ಅತಃ**-ಆ ಕಾರಣದಿಂದ ಎಂದರೆ ಶ್ರುತಿವಾಕ್ಯಗಳಿಗೂ ಋಷಿವಾಕ್ಯಗಳಿಗೂ ನಿನ್ನ ಈ ಮಹತ್ತಾದ ಉಪದೇಶಕ್ಕೂ, ಸಂವೈಕಕಂಠ್ಯವಿರುವದರಿಂದ, **ಸರ್ವಮೇತತ್** - ನನಗೆ ಅನುಗ್ರಹಮಾಡಿ ಉಪದೇಶಿಸಿರುವ ಈ ಎಲ್ಲವನ್ನೂ, ನಿನ್ನ ಸ್ವರೂಪ ಸ್ವಭಾವಗಳನ್ನೂ, ಈ ಚರಾಚರಗಳ ಸ್ವರೂಪ ಸ್ವಭಾವವನ್ನೂ ಅಥವಾ **ಏತಾಂ ವಿಭೂತಿಂ ಯೋಗಂಚ** ಎಂಬಲ್ಲಿ ಹೇಳಿದಹಾಗೆ ನಿನ್ನ ವಿಭೂತಿಯನ್ನೂ ನಿನಗಿರುವ ಕಲ್ಯಾಣಗುಣ, ಲಕ್ಷ್ಮೀ ದಿವ್ಯಮಙ್ಗಳವಿಗ್ರಹಾದಿಗಳ ಯೋಗವನ್ನೂ "**ಯಥಾವಸ್ಥಿತವಸ್ತುಕಥನಂ** - ವಾಸ್ತವವಾಗಿ ಹೇಗೆ ವಸ್ತುವಿದೆಯೋ ಹಾಗೆ ಹೇಳಿರುವದನ್ನಾಗಿ, **ಮನ್ಯೇ** - ತಿಳಿಯುವೆನು, ಇವರ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ—ಯಥಾವಸ್ಥಿತವಾದ ಮಾಹಾತ್ಮ್ಯೆಯ ಕಥನವೇ ವಿನಾ **ನ ಪ್ರಶಂಸಾದ್ಯಭಿಪ್ರಾಯಮ್** - ಸ್ತುತಿ ಅತಿಶಯೋಕ್ತಿ ಮೊದಲಾದ ಅಭಿಪ್ರಾಯವಲ್ಲವು, ಮಾಹಾತ್ಮ್ಯೆಯೇನೂ ಇಲ್ಲದ ಸ್ತುತಿರೂಪವಲ್ಲವೆಂಬುದನ್ನು ದೃಢವಾಗಿ ನಂಬಿರುತ್ತೇನೆ ಎಂಬ ತಾತ್ಪರ್ಯವು. ಸಾಧಾರಣವಾಗಿ ಲೋಕದಲ್ಲಿ ರಾಜರೇ ಮೊದಲಾದವರ ಸ್ತೋತ್ರದಲ್ಲಿ ಅತಿಶಯೋಕ್ತಿಯು ಇರಬಹುದು. ಈ ರಾಜಾಧಿರಾಜನ ಸ್ತೋತ್ರದಲ್ಲಿಯಾದರೋ ಆತನ ಮಾಹಾತ್ಮ್ಯೆಯ ಲವಾಂಶವನ್ನೂ ಕೂಡ ಮಹಾಪ್ರಾಜ್ಞರೆಂದೆನಿಸಿದ ಮಹರ್ಷಿಗಳೂ ಕೂಡ ಪ್ರದರ್ಶಿಸಲಾರರು, ವೇದವೇ"**ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ**" ಎಂದು ಹೇಳಿ ಸುಮ್ಮನಾಯಿತು. ಆದುದರಿಂದ **ನ ಪ್ರಶಂಸಾದ್ಯಭಿಪ್ರಾಯಂ** ಎಂಬ ಪ್ರಯೋಗವು; ಅತಿಶಯೋಕ್ತಿ ಏನೂ ಇಲ್ಲವೆಂಬ ಅಭಿಪ್ರಾಯವು. ಕೆಲವರು ಸತ್ಯವು ಎರಡುವಿಧವು ಎಂದು ಹೇಳುವರು, ವ್ಯಾವಹಾರಿಕವೆಂದೂ ಪಾರಮಾರ್ಥಿಕವೆಂದೂ. ಸತ್ಯವಾದುದು ಒಂದೇಯಾಗಿರಬೇಕೇ ವಿನಾ, ಎರಡು ಪರಸ್ಪರ ವ್ಯತ್ಯಸ್ತವಾಗಿರಲಾರದು ಒಂದು ಸತ್ಯವಾದರೆ, ಇನ್ನೊಂದಲ್ಲವೆಂಬುದು ಸಿದ್ಧವು. ಹೀಗಿರುವಾಗ ವ್ಯಾವಹಾರಿಕ ಸತ್ಯವೆಂಬ ಪಾರಮಾರ್ಥಿಕ ಸತ್ಯವೆಂಬ ಶಬ್ದಗಳಿಗೆ ಯಾವ ಅರ್ಥಗಳೋ ನಮಗೆ ಗೋಚರವಿಲ್ಲವು. ವ್ಯಾವಹಾರಿಕ ಸತ್ಯವು, ಪಾರಮಾರ್ಥಿಕವಲ್ಲದ ಸತ್ಯವು ಎಂದರೆ ಅಸತ್ಯವಾದಸತ್ಯವೆಂದು ಹೇಳಿದಂತಾಯಿತ **ಸರ್ವಮೇತದೃತಂ** ಮನ್ಯೇ ಎಂಬುದರಿಂದ **ಸಗುಣಬ್ರಹ್ಮವೇ** ಪರತತ್ವವೆಂದು ನಿರ್ಣಯಿಸಿದಂತಾಯಿತು. ಮತ್ತು ಆತನು ಕಲ್ಯಾಣಗುಣಾಕರನೆಂದೂ, ಆತನ ವಿಭೂತಿಯೆಲ್ಲವೂ ಸತ್ಯವೆಂದೂ ಹೇಳಿದಂತಾಯಿತು. ಈ ಶ್ಲೋಕದಿಂದ, ಪರಬ್ರಹ್ಮವು ಪಾರಮಾರ್ಥಿಕದಶೆಯಲ್ಲಿ ನಿರ್ವಿಶೇಷವೆಂದೂ, ಆತನ ವಿಭೂತಿಯೆಲ್ಲವೂ ಮಿಥ್ಯಾ ಎಂದೂ ಹೇಳುವ ವಾದಗಳು ನಿರಸ್ತವು. ಯಾವ ಕಾರಣದಿಂದ ಸತ್ಯವೆಂದೇ ತಿಳಿದಿರುತ್ತೇನೆ ಎಂದರೆ **ಯತ್**—ಯಾವ ಕಾರಣದಿಂದ **ಮಾಂ ಪ್ರತಿ**—ನನ್ನನ್ನು ಕುರಿತು, **ಮಾಂ ಪ್ರತಿ** ಎಂದು ಎದೆ ಮುಟ್ಟಿ ತೋರಿಸಿ ಹೇಳುವದರ ಅಭಿಪ್ರಾಯವೇನೆಂದರೆ "**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ**"(ಗೀ. ೨. ೭) ಎಂದು ಆರಂಭದಲ್ಲಿ ನಮಸ್ಕಾರಾದಿ ವಂದನೆಗಳಿಂದ ಶಿಷ್ಯನೆಂದು ಪ್ರತಿಜ್ಞೆಯನ್ನುಮಾಡಿ ಶರಣಾಗತಿಯನ್ನನುಷ್ಠಿಸಿ ಬ್ರಹ್ಮವಿದ್ಯಾದಾನವನ್ನು ಬೇಡಿದ ನನ್ನನ್ನು ಎಂಬರ್ಥವು. **ಏತತ್-**

**ಭಾ. ಜ್ಞಾನಶಕ್ತಿಬಲೈಶ್ವರ್ಯ ವೀರ್ಯ ತೇಜಸಾಂ ನಿಧೇ, ತೇ ವ್ಯಕ್ತಿಂ - ವ್ಯಂಜನ ಪ್ರಕಾರಂ ನ ಹಿ ಪರಿಮಿತಜ್ಞಾನಾ ದೇವಾ ದಾನವಾಶ್ಚ ವಿದುಃ　|| ೧೪ ||**

ಎಂಬ ಶಬ್ದದಲ್ಲಿ ಗರ್ಭಿತವಾದ ಅರ್ಥ ನಿರೂಪಣವನ್ನು ಮಾಡುತ್ತಾರೇನೆಂದರೆ–**ಯತ್**-ಯಾವ, **ಅನನ್ಯಸಾಧಾರಣಂ**-ಇತರರಿಗೆ ಸಾಧಾರಣವಲ್ಲದ, **ಅನವಧಿಕಾತಿಶಯಂ**-ಅವಧಿಯಿಲ್ಲದ ಅತಿಶಯವನ್ನು ಹೊಂದಿರುವ, **ಸ್ವಾಭಾವಿಕಂ**-ಸ್ವಾಭಾವಿಕವಾದ, ಇತರರಿಗೆ ಅಧೀನವಾಗಿ ಬಂದುದಲ್ಲವೆಂಬ ಭಾವವು, ಇದರಿಂದ ಸಮವೂ, ಅಧಿಕವೂ ಇಲ್ಲದಿರುವ ಭಾವವು ಸೂಚಿತವು, **ತವೈಶ್ವರ್ಯಂ**-ನಿನ್ನ ಐಶ್ವರ್ಯವನ್ನೂ, **ಕಲ್ಯಾಣ ಗುಣಾನನ್ತ್ಯಂ ಚ**-ಕಲ್ಯಾಣಗುಣಗಳಿಗೆ ಅಂತವಿಲ್ಲದಿರೋಣವನ್ನೂ ಸಹ, **ವದಸಿ**-ಉಪದೇಶಿಸಿರುತ್ತೀಯೋ, ಆ ಕಾರಣದಿಂದ ಎಂಬ ಭಾವವು. **ಅತಃ**-ಆ ಕಾರಣದಿಂದ, **ಭಗರ್ವ**-ಭಗವಂತನಾದ ಶ್ರೀ ಕೃಷ್ಣನೇ, ಭಗವಚ್ಛಬ್ದದಿಂದ ಬೋಧಿತಾರ್ಥವನ್ನು ತಿಳಿಸುತ್ತಾರೆ.–**ನಿರತಿಶಯ ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯತೇಜಸಾಂ ನಿಧೇ**-ಈ ಷಾಡ್ಗುಣ್ಯಗಳಿಗೆ ನಿಧಿಯಾದವನೇ, ಈ ಜ್ಞಾನಶಕ್ತಿ ಮೊದಲಾದ ಗುಣಗಳ ಅರ್ಥಗಳಿಗೆ ಹಿಂದೆ ೪ನೆಯ ಪುಟವನ್ನು ನೋಡಿ. ಶ್ರೀಪರಾಶರರು ಭಗವತ್ ಶಬ್ದದಿಂದ ಬೋಧಿತಾರ್ಥವನ್ನು **"ಜ್ಞಾನಶಕ್ತಿಬಲೈಶ್ವರ್ಯ ವೀರ್ಯತೇಜಾಂಸ್ಯಶೇಷತಃ । ಭಗವಚ್ಛಬ್ದ ವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ** (ವಿ ಪು.೬.೫.೭೯) ಎಂಬ ಶ್ಲೋಕದಮೂಲಕ ಹೇಳಿ ಭಗವಚ್ಛಬ್ದದಿಂದ **ಬೋಧಿ**ತಗಳಾದವು ಯಾವುದೆಂದರೆ ಹೇಯಗುಣಗಳ ಸ್ಪೃಕ್ಕೇ ಇಲ್ಲದ ಷಾಡ್ಗುಣ್ಯಪರಿಪೂರ್ಣತೆಯು ಎಂದೂ, ಇವುಗಳಿಂದ ಯುಕ್ತನು ಭಗವಂತನೆಂದೂ, ಉಪದೇಶಿಸಿರುತ್ತಾರೆ. ಇದಕ್ಕನುಗುಣವಾಗಿ ಶ್ರೀಯತಿವರ್ಯರ ಭಾಷ್ಯವು. **ತೇ**-ಅಂತಹ ನಿನ್ನ, **ವ್ಯಕ್ತಿಂ** ಎಂದರೆ **ವ್ಯಂಜನಪ್ರಕಾರಂ**-ನಿನ್ನ ಕಲ್ಯಾಣ ಗುಣಗಳೇನು ಐಶ್ವರ್ಯವೇನು ಇವುಗಳ ವಿಸ್ತಾರವಾದ ಪ್ರದರ್ಶನದ ಪ್ರಕಾರವನ್ನು, ಶ್ರೀಮಚ್ಛಂಕರಾಚಾರ್ಯರೂ **ವ್ಯಕ್ತಿಂ** ಎಂದರೆ **ಪ್ರಭವ** ವೆಂದು ಅರ್ಥಮಾಡಿ ಈ ಅಭಿಪ್ರಾಯವನ್ನೇ ತೋರಿಸಿರುತ್ತಾರೆ, ಇದನ್ನೇ ಹಿಂದೆ **"ನ ಮೇ ವಿದುಸ್ಸುರಗಣಾಃ ಪ್ರಭವಂ ನ ಮಹರ್ಷಯಃ"** (ಗೀ.೧೦.೨) ಎಂದು ಶ್ರೀಕೃಷ್ಣನೇ ಹೇಳಿರುವದರಿಂದ,ಅದರ ಅನುವಾದವಿದೆಂದು ಭಾವಿಸತಕ್ಕದ್ದು. ಇಲ್ಲಿ ವ್ಯಕ್ತಿ ಶಬ್ದಕ್ಕೆ ದಿವ್ಯ ಮಙ್ಗಳ ವಿಗ್ರಹವೆಂಬ ಅರ್ಥವಲ್ಲವು. ಏಕೆಂದರೆ ಅದು ಅಪ್ರಸ್ತುತವು. ಪರಿಮಿತವಾದ ಜ್ಞಾನವುಳ್ಳ, **ದೇವಾ ದಾನವಾಶ್ಚ**-ದೇವತೆಗಳೂ ದಾನವರೂ ಸಹ, **ನಹಿವಿದುಃ**-ತಿಳಿಯಲಾರರಷ್ಟೇ, **ಹಿ** ಶಬ್ದದಿಂದ ನಿಸ್ಸಂಶಯವು ದ್ಯೋತಿತವು. ಅದರಿಂದಲೇ ಮನುಷ್ಯರಿಗೆ ಸರ್ವಾತ್ಮನಾ ಅಸಾಧ್ಯವೆಂಬುದು ಕೈಮುತಿಕ ನ್ಯಾಯಸಿದ್ಧವೆಂದೂ ಹೇಳಿದಂತಾಯಿತು. ಇಲ್ಲಿ **ಋತಂಮನ್ಯೇ** ಎಂದು ಹೇಳಿರುವದರಿಂದ ಪಾರಮಾರ್ಥಿಕೋಪದೇಶವೇ ವಿನಾ ವ್ಯಾವಹಾರಿಕರೀತ್ಯಾ ಅಲ್ಲವೆಂದು ಹೇಳಿದಂತಾಯಿತು. ಶ್ರೀಮಚ್ಛಂಕರಾಚಾರ್ಯರವರೂ **"ಸತ್ಯಮೇವ ಮನ್ಯೇ"**ಎಂಬ ಭಾಷ್ಯವನ್ನೇ ಅನುಗ್ರಹಿಸಿರುತ್ತಾರೆಯಾದುದರಿಂದ ವ್ಯಾವಹಾರಿಕ ಸತ್ಯವೆಂದು ಅರ್ಥಮಾಡಲು ಸಾಧ್ಯವಿಲ್ಲವು. ಆಗಲಿ, ದೇವದಾನವರೇ ತಿಳಿಯಲಸಾಧ್ಯವಾದ ವಿಷಯವನ್ನು, ಮನುಷ್ಯನಾಗಿ ಅರ್ಜುನನೆಂದೆನಿಸಿರುವ ನೀನು, ಹೇಗೆ **ಋತಂಮನ್ಯೇ** ಯಥಾರ್ಥವಾಗಿ ತಿಳಿದಿ? ಎಂದಾಕ್ಷೇಪತಂದರೆ, ಅರ್ಜುನನು ಸಾಮಾನ್ಯನಲ್ಲವು, ಅನೇಕ ಋಷಿಗಳನ್ನೂ ಆತನ ಅಣ್ಣನಾಗಿ ಧರ್ಮದೇವತೆಯಾದ ಧರ್ಮರಾಜನನ್ನೂ ಬಿಟ್ಟು ಅರ್ಜುನನಿಗೆ ಈ ಮಹತ್ತಾದ ಉಪದೇಶವು ಹೇಗೆ? ಎಂಬುದನ್ನು ವಿವೇಕಿಸಿ ತಿಳಿದರೆ, **ಋತಂಮನ್ಯೇ** ಎಂದು ಅರ್ಜುನನು ಹೇಳಲು ಸಾಮರ್ಥ್ಯವುಂಟೆಂಬುದು ವ್ಯಕ್ತಪಡುತ್ತದೆ. ಅರ್ಜುನನು ನರಾವತಾರಿಯಾಗಿ ನಾರಾಯಣನೊಂದಿಗೆ ಧರ್ಮಸಂಸ್ಥಾಪನೆಗಾಗಿ ಅವತರಿಸಿರುವವನು; ಆದುದರಿಂದ ಆತನಿಗ **ಋತಂಮನ್ಯೇ** ಎಂದು

**ಮೂ. ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ೧೫.**

ಹೇಳಬಹುದು **"ದದಾಮಿ ಬುದ್ಧಿಯೋಗಂ ತಂ"** ಎಂದು ಹೇಳಿರುವ ಮೇರೆಗೆ ನಿತ್ಯನಾಗಿ ತಿಳಿಯಲು ಬೇಕಾದ ಬುದ್ಧಿಯೋಗವು ಅರ್ಜುನನಿಗೆ ಉಂಟೆಂದೂ ಭಾವಿಸತಕ್ಕದ್ದು. ಕೆಲವು ಸಂದರ್ಭಗಳಲ್ಲಿ ಅಜ್ಞನಾದ ಮನುಷ್ಯನಹಾಗೆ ಪ್ರವರ್ತಿಸಿರುತ್ತಾನಲ್ಲಾ ಎಂದರೆ ಸೀತಾರಾಮರ ಮತ್ತು ಶ್ರೀ ಕೃಷ್ಣನ ಪ್ರವೃತ್ತಿಗಳ ಹಾಗೆ ಅದೆಲ್ಲಾ ವಿಡಂಬನವೆಂದು ತಿಳಿಯತಕ್ಕದ್ದು.

**ಮೂಲಕ್ಕೆ ಅರ್ಥವು:**—ದೇವ ದಾನವರಿಗೂ ಕೂಡ ನಿನ್ನ ವೈಭವದ ಇಯತ್ತಾ ಇಷ್ಟೆಂಬುದು ತಿಳಿಯದು ಎಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ದೇವತೆಗಳಲ್ಲೇ ಬ್ರಹ್ಮರುದ್ರೇಂದ್ರಾದಿಗಳೂ ಅಂತರ್ಗತರಾದುದರಿಂದ ಅವರಿಗೂ ಕೂಡ ತಿಳಿಯದು ಎಂದು ಹೇಳಿದ ನಂತರ, ಇನ್ನು ಯಾರಿಗೆ ಮಾತ್ರ ತಿಳಿಯುವದೆಂದರೆ ಹೇಳುತ್ತಾರೆ.—ಸರ್ವಜ್ಞನಾದ ನಿನಗೊಬ್ಬನಿಗೆ ನಿನ್ನ ವೈಭವ ಮಾಹಾತ್ಮ್ಯೆಯು ತಿಳಿಯಬೇಕೇವಿನಾ ಇನ್ನು ಯಾರಿಗೂ ಶಕ್ಯವಲ್ಲವೆಂದು ಅರ್ಜುನನು ಹೇಳುತ್ತಾನೆ. ತನ್ನ ಮಾಹಾತ್ಮ್ಯೆಯನ್ನು ತಾನೇ ತಿಳಿಸಲಿ ಎಂಬ ಆದರಾತಿಶಯದಿಂದ ಹೇಳಿದ ವಾಕ್ಯವಾಗಿರುತ್ತದೆ. **ಹೇ ಪುರುಷೋತ್ತಮ**-ಸಮಸ್ತ ಚಿದಚಿತ್ತುಗಳೂ ನಿನಗೆ ಶರೀರವಾಗಿ ಹೀಗೆ ಸರ್ವಶರೀರತ್ವ ಸರ್ವಾತ್ಮಕತ್ವಗಳಿಂದ ವಿಲಕ್ಷಣನಾಗಿರುವದರಿಂದ, ಪುರುಷಸೂಕ್ತದಲ್ಲಿ ಪ್ರತಿಪಾದಿಸಲ್ಪಟ್ಟ ಪುರುಷೋತ್ತಮನೆನಿಸುವನೇ, ಪುರುಷೋತ್ತಮ ಶಬ್ದದಿಂದ ಸರ್ವ ಪುರುಷರುಗಳಿಗಿಂತಲೂ ಶ್ರೇಷ್ಠನಾಗಿ ವಿಲಕ್ಷಣವೆಂಬ ಭಾವವು. **ಪುರುಷರು**-ಶರೀರಗಳಾದ ಬದ್ಧರು; **ಉತ್ಪುರುಷರು**-ಅವರಿಗೆ ಮೇಲಾದ ಮುಕ್ತರು; **ಉತ್ತರ ಪುರುಷರು**-ನಿತ್ಯರು; **ಉತ್ತಮಪುರುಷನು** - ಇವರೆಲ್ಲರಿಗಿಂತಲೂ ವಿಲಕ್ಷಣನಾದ ಭಗವಂತನು. ಇದನ್ನೇ ಇತರ ಸಂಬೋಧನೆಗಳಿಂದ **"ಭೂತಭಾವನ"** ಇತ್ಯಾದಿಗಳಿಂದ ವಿಶದೀಕರಿಸುತ್ತಾರೆ. **ಸ್ವಯಮೇವ**-ಸರ್ವಜ್ಞನಾಗಿರುವದರಿಂದ ಸಾಕ್ಷಾತ್ತಾಗಿ, **ತ್ವಂ** - ನೀನೊಬ್ಬನೇ, **ಆತ್ಮನಾ** - ಇತರರಿಂದಲ್ಲದೆ ನಿನ್ನಿಂದಲೇ, **ಆತ್ಮಾನಂ**-ನಿನ್ನನ್ನು ಎಂದರೆ ನಿನ್ನ ಸ್ವರೂಪಾದಿಗಳನ್ನು ಧರ್ಮಭೂತಜ್ಞಾನದಿಂದ, **ವೇತ್ಥ**-ತಿಳಿದಿರುತ್ತೀಯೇ; ಅಂತಹ ವಿಲಕ್ಷಣ ಜ್ಞಾನವಿಲ್ಲದ ಅಲ್ಪಜ್ಞನಾದ ನಾನು ಗ್ರಹಿಸಿರುವದು ಎಷ್ಟರಮಟ್ಟಿಗೆ ಎಂದರೆ ಅರ್ಜುನನು ಕೆಲವು ಸಂಬೋಧನೆಗಳಿಂದ ಸೂಚಿಸುತ್ತಾನೆ. **ಹೇ ಭೂತಭಾವನ** - **"ಜನ್ಮಾದ್ಯಸ್ಯಯತಃ"** ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿಸಿರುವಹಾಗೆ ಸರ್ವಭೂತಗಳ ಉತ್ಪತ್ತಿಗೆ ಕಾರಣಭೂತನೇ, **ಭೂತೇಶ**-ಅವುಗಳನ್ನೆಲ್ಲಾ ಸೃಷ್ಟಿಸಿ **ತತ್ಸೃಷ್ಟ್ವಾ ತದೇವಾನುಪ್ರಾವಿಶತ್** ಎಂಬ ಶ್ರುತಿಯಲ್ಲಿ ಹೇಳಿರುವಹಾಗೆ ಎಲ್ಲಕ್ಕೂ ಅಂತರಾತ್ಮಾವಾಗಿ ಸರ್ವನಿಯಾಮಕನೇ, **ದೇವದೇವ**-ಸರ್ವದೇವತೆಗಳಿಗೂ ಸ್ವಾಮಿಯಾದವನೇ, ಆದುದರಿಂದ **ಜಗತ್ಪತೇ**-ಸರ್ವಜಗತ್ತಿಗೂ ಸ್ವಾಮಿಯೇ, ನೀನೇ ನಿನ್ನ ಸ್ವರೂಪಾದಿಗಳ ವೈಭವವನ್ನು ಬಲ್ಲೆಯೇ ವಿನಾ, ಇನ್ನು ಯಾರೂ ತಿಳಿಯಲಾರರೆಂಬ ಭಾವವು.

**ಭಾಷ್ಯಾರ್ಥವು**-ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನ ವೈಭವ ಮಾಹಾತ್ಮ್ಯೆಯನ್ನು ಯಾರೂ ಅರಿಯರೆಂದು ಹೇಳಿ, ನೀನೊಬ್ಬನೇ ಪರಿಪೂರ್ಣವಾಗಿ ತಿಳಿಯುವೆಯೇ ವಿನಾ ಅಲ್ಪಜ್ಞನಾದ ಅರ್ಜುನನಾದ ತಾನು ತಿಳಿಯಲು ಸಾಧ್ಯವೇ ಎಂದು ಸೂಚಿಸಿ, ಈಗ ನಿನ್ನ ಸ್ವಂತ ಉಪದೇಶದ ಮೂಲಕ ಎಷ್ಟರಮಟ್ಟಿಗೆ ತಿಳಿದಿರುವೆನೆಂದರೆ ನೀನು ಸರ್ವ ವಿಲಕ್ಷಣನೆಂದು ತಿಳಿದಿರುವೆನು, ಎಂಬುದಾಗಿ ಅರ್ಜುನನು ಹೇಳುವನೆಂದು ಸೂಚಿಸುವದಕ್ಕಾಗಿ ಪ್ರಥಮತಃ **ಪುರುಷೋತ್ತಮ** ಎಂಬ ಸಂಬೋಧನೆಯು. **"ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ"**

**ಭಾ. ಹೇ ಪುರುಷೋತ್ತಮ ಆತ್ಮನಾ ಆತ್ಮಾನಂ – ತ್ವಾಂ, ಸ್ವಯಮೇವ – ಸ್ವೇನೈವ ಜ್ಞಾನೇನ ವೇತ್ಥ; ಭೂತಭಾವನ - ಸರ್ವೇಷಾಂ ಭೂತಾನಾಮುತ್ಪಾದಯಿತಃ, ಭೂತೇಶ-ಸರ್ವೇಷಾಂ ಭೂತಾನಾಂ ನಿಯನ್ತಃ, ದೇವ ದೇವ-ದೇವತಾನಾಮಪಿ ಪರ ದೈವತ, ಯಥಾ ಮನುಷ್ಯ ಮೃಗ ಪಕ್ಷಿ ಸರೀಸೃಪಾದೀ ಸೌಂದರ್ಯ ಸೌಶೀಲ್ಯಾದಿ ಕಲ್ಯಾಣಗುಣಗಣೈ ರ್ದೈವತಾ ನ್ಯತೀತ್ಯ ವರ್ತಂತೇ. ತಥಾ ತಾನಿ ಸರ್ವಾಣಿ ದೈವ ತಾನ್ಯಪಿ ತೈಸ್ತೈರ್ಗುಣೈ ರತೀತ್ಯ ವರ್ತಮಾನ, ಜಗತ್ಪತೇ-ಜಗತ್ಸ್ವಾಮಿನ್ ॥ ೧೫ ॥**

(ಗೀ.೧೫.೧೮) ಎಂಬಲ್ಲಿ ವಿಸ್ತರಿಸಲ್ಪಟ್ಟ ಅಭಿಪ್ರಾಯವೇ ಇಲ್ಲಿ ಸೂಚಿಸಲ್ಪಟ್ಟಿರುತ್ತದೆಂಬ ಅಭಿಪ್ರಾಯವನ್ನೂ ಸಹ ಗ್ರಹಿಸಬಹುದು. **ಹೇ ಪುರುಷೋತ್ತಮ**-ಹೇ ಪುರುಷಶ್ರೇಷ್ಠನೇ, **ಆತ್ಮನಾ** ತಮ್ಮಿಂದಲೇ, **ಆತ್ಮಾನಂ** - ತಮ್ಮನ್ನು ಎಂದರೆ ನಿನ್ನನ್ನು, **ಸ್ವಯಮೇವ** ಎಂದರೆ ಸ್ವೇನೈವ ಜ್ಞಾನೇನ ನಿಮ್ಮ ಜ್ಞಾನದಿಂದಮಾತ್ರವೇ, ಅಥವಾ **ಸ್ವಯಮೇವ**-ನೀವೇ, **ಆತ್ಮನಾ** - ನಿಮ್ಮ ಜ್ಞಾನದಿಂದಲೇ, **ವೇತ್ಥ**-ತಿಳಿಯುತ್ತೀರಿ. ಇಲ್ಲಿ **"ತ್ವಮೇವ ತ್ವಾಂ ವೇತ್ಥ ಯೋಽಸಿ ಸೋಽಸಿ"** ಎಂಬ ಶ್ರುತಿಯ ಅರ್ಥವು ಉಪಪಾದಿತವು. ಅರ್ಜುನನಾದ ತಾನು ಪುರುಷೋತ್ತಮನೆಂಬುದನ್ನು ಹೇಗೆ ಗ್ರಹಿಸಿದನೆಂಬುದನ್ನು ಮುಂದೆ ಹೇಳುತ್ತಾನೆ. ಅನೇಕ ಶ್ರುತಿಗಳು ಶ್ರೀ ಕೃಷ್ಣನನ್ನು ಪುರುಷೋತ್ತಮನೆಂದು ತಿಳಿಸುತ್ತವೆ ಎಂದು ಶ್ರೀ ದೇಶಿಕರವರು ಅವುಗಳನ್ನು ಉದಾಹರಿಸುತ್ತಾರೆ—(೧) **"ಸಕಾರಣಂ ಕರಣಾಧಿಪಾಧಿಪಃ"** (ಶ್ವೇ. ೬. ೯) **ಸಃ** - ಅ, **ಕರಣಾಧಿಪನಾದ** ಎಂದರೆ ಇಂದ್ರಿಯಗಳಿಗೆ ಯಜಮಾನನಾದ ಜೀವಾತ್ಮವರ್ಗಕ್ಕೂ ಕೂಡ ಸ್ವಾಮಿಯಾದವನಾಗಿ, **ಕಾರಣಂ** - ಸರ್ವ ಜಗತ್ತಿಗೂ ಕಾರಣನು; ಈ ಅರ್ಥವು **ಭೂತಭಾವನ** ಎಂಬ ಸಂಬೋಧನ ಗರ್ಭಿತಾರ್ಥವು. ಹಾಗೆಯೇ **"ತಮೀಶ್ವರಾಣಾಂ ಪರಮಂ ಮಹೇಶ್ವರಮ್ ತಂ ದೈವತಾನಾಂ ಪರಮಂಚ ದೈವತಮ್ । ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಮ್"** (ಶ್ವೇತ. ೬. ೭) ಲೋಕೇಶ್ವರರುಗಳಿಗೆಲ್ಲಾ ಪರಮ ಶ್ರೇಷ್ಠನಾದ ಮಹೇಶ್ವರನೆಂದೂ, ಎಲ್ಲಾ ದೇವತೆಗಳಿಗಿಂತಲೂ ಸರ್ವೋತ್ಕೃಷ್ಟ ದೈವತನೆಂದೂ, ಶೇಷಿತ್ವವನ್ನು ಹೊಂದಿದವರಿಗೆಲ್ಲಾ ಸರ್ವೋತ್ಕೃಷ್ಟ ಶೇಷಿಯಾಗಿ ಸ್ವಾಮಿಯಾಗಿರುವನೆಂದೂ, ಲೀಲಾಸಕ್ತನಾಗಿ ಸರ್ವಲೀಲಾ ವಿಭೂತಿಗೂ ನಿಯಾಮಕನಾಗಿ ಸ್ತುತ್ಯರ್ಹನಾಗಿರುವನೆಂದೂ, ನಾವು ತಿಳಿದು ಉಪಾಸಿಸುವೆವು ಎಂಬುದು ತಾತ್ಪರ್ಯವು. ಈ ಶ್ರುತಿಯಲ್ಲಿ ಮುಂದೆ ಹೇಳುವ ನಾಲ್ಕು ಸಂಬೋಧನೆಗಳ ಅರ್ಥವೂ ವೇದ್ಯವು. ಆದುದರಿಂದ ಈ ಶ್ರುತಿಯನ್ನು ಮನಸ್ಸಿನಲ್ಲಿಟ್ಟೇ ಗೀತಾಚಾರ್ಯರು ಹೇಳಿರುತ್ತಾರೆಂದು ವ್ಯಾಖ್ಯಾನ ಮಾಡಿರುತ್ತಾರೆ. **ಹೇ ಭೂತೇಶ** ಎಂದರೆ **ಸರ್ವೇಷಾಂ ಭೂತಾನಾಂ ನಿಯನ್ತಃ** - ಸಮಸ್ತ ಪ್ರಾಣಿಗಳಿಗೂ ನಿಯಂತಾವಾದವನೇ, ಇದು **"ತಮೀಶ್ವರಾಣಾಂ"** ಇತ್ಯಾದಿಗಳ ಅರ್ಥವು; **ದೇವದೇವ** ಎಂದರೆ **ದೈವತಾನಾಮಪಿ ಪರಮ ದೈವತಂಚ** - ಎಲ್ಲಾ ದೈವತಗಳಿಗೂ ಕೂಡ ಪರದೈವತವು, ಬ್ರಹ್ಮರುದ್ರೇಂದ್ರಾದಿಗಳಿಗೂ ಪರದೇವತೆಯು, ಇವರುಗಳಲ್ಲಿ ಇರುವ ಗುಣಗಳಿಗಿಂತಲೂ ಸರ್ವ ಶ್ರೇಯಸ್ಸನ್ನೂ ಕೊಡಲು ಯೋಗ್ಯವಾದ ಸೌಲಭ್ಯ ಸೌಶೀಲ್ಯಾದಿ ಗುಣಗಳಿಂದ ಯುಕ್ತನಾಗಿ ಕಲ್ಯಾಣಗುಣಮಹೋದಧಿ ಎಂಬ ಭಾವವು ದ್ಯೋತಿತವು. ಇಲ್ಲಿ **ಸೌಂದರ್ಯಸೌಶೀಲ್ಯಾದಿ** ಗುಣಗಳನ್ನು ಹೇಳಿದುದು ದಿವ್ಯ ಮಙ್ಗಳ ವಿಗ್ರಹ ರೂಪದಲ್ಲಿ ಹೊಂದಿರುವ ಗುಣಗಳೇನು, ಆತ್ಮಗುಣಗಳೇನು, ಇವೆಲ್ಲಕ್ಕೂ ಉಪಲಕ್ಷಣವು. ಈ ಅಭಿಪ್ರಾಯವನ್ನೇ ಮುಂದಿನ ವಾಕ್ಯದಿಂದ ಪ್ರದರ್ಶಿಸುತ್ತಾರೆ, **ಯಥಾ** - ಹೇಗೆ, ಮನುಷ್ಯನೇನು, ಮೃಗಗಳೇನು,

**ಮೂ. ವಕ್ತುಮರ್ಹಸ್ಯಶೇಷೇಣ ದಿವ್ಯಾಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬.**

**ಸರೀಸೃಪಾದೀನ್**-ಹಾವೇ ಮೊದಲಾದವುಗಳನ್ನೂ, ಸೌಂದರ್ಯ, ಸೌಶೀಲ್ಯವೇ ಮೊದಲಾದ, ಕಲ್ಯಾಣಗುಣಗಳ ಸಮೂಹದಿಂದ, **ದೈವತಾನಿ** - ದೇವತೆಗಳು, **ಅತೀತ್ಯವರ್ತಂತೇ** - ಮೀರಿ, ಉತ್ಕೃಷ್ಟತೆಯಿಂದ ಮೇಲಾಗಿ ಇರುತ್ತಾರೋ, **ತಥಾ**-ಹಾಗೆಯೇ, **ತಾನಿ ಸರ್ವಾಣಿ ದೈವತಾನ್ಯಪಿ** ಆ ಸಮಸ್ತ ದೇವತೆಗಳನ್ನೂ ಕೂಡ, **ತೈಸ್ತೈರ್ಗುಣೈಃ**-ಮೇಲೆ ಹೇಳಿದ ಆತ್ಮಗುಣ ದಿವ್ಯಮಙ್ಗಳ ವಿಗ್ರಹಗುಣಗಳಿಂದ, **ಅತೀತ್ಯವರ್ತಮಾನ**-ವೈಲಕ್ಷಣ್ಯವನ್ನು ಹೊಂದಿ ಅವುಗಳಿಗಿಂತ ಉತ್ಕೃಷ್ಟನಾಗಿರುವವನೇ, ದೇವಾದಿಗಳಿಗೂ ಕೀಟಕ್ಕೂ ಎಷ್ಟು ಅಂತರವೋ ಹಾಗೆಯೇ ಪರಮೇಶ್ವರನಾದ ಶ್ರೀಕೃಷ್ಣನಿಗೂ ದೇವತೆಗಳಿಗೂ ಅಂತರವು ಎಂಬ ಭಾವವು; ಇಂತಹ ಉತ್ಕೃಷ್ಟ ನಿಕೃಷ್ಟ ಭಾವಗಳು ರಾಮನಾದ ಪರಮಾತ್ಮನಿಗೂ ರಾವಣನಾದ ಜೀವಾತ್ಮನಿಗೂ ಉಂಟೆಂಬುದು, **"ಯದಂತರಂ ಸಿಂಹಸೃಗಾಲಯೋಃ"** ಎಂದಾರಂಭಿಸಿ ಹೇಳುವ ವಾಕ್ಯಗಳಿಂದ ಅನುಸಂಧೇಯಗಳು. (ರಾಮಾ. ಅರಣ್ಯ. ೪೭ನೆಯ ಅಧ್ಯಾಯ) ಹೇ **ಜಗತ್ಪತೇ** ಎಂದರೆ **ಜಗತ್ಸ್ವಾಮಿನ್** - ಜಗತ್ತಿಗೆ ಸ್ವಾಮಿಯೇ; ಈ ಪ್ರಯೋಗವು **ಪತಿಂ ವಿಶ್ವಸ್ಯ** ಎಂಬ ಪುರುಷ ಸೂಕ್ತ ವಾಕ್ಯವನ್ನು ಸೂಚಿಸುವದಾಗಿ ಶ್ರೀ ಯಾಮುನೇಯರು **"ಮಮ ನಾಥ ಯದಸ್ತಿ"** ಎಂಬ ದಿವ್ಯಶ್ಲೋಕದಲ್ಲಿ ಉಪಪಾದಿಸಿರುವಹಾಗೆ, ಸರ್ವೇಶ್ವರನಿಗಿರುವ ಸರ್ವಶೇಷಿತ್ವವನ್ನು ಬೋಧಿಸುವಂತಾದ್ದಾಗಿರುತ್ತದೆ. ಮುಂದೆ ಲೋಕಗಳಲ್ಲಿನ ವಿಭೂತಿ ವಿಸ್ತರವನ್ನು ಅಪೇಕ್ಷಿಸುವವನಾಗಿರುವದರಿಂದ **ಜಗತ್ಪತೇ** ಎಂದು ಇಲ್ಲಿ ನಿಗಮನವು. **ಸ್ವಂ**-ಇದ್ದರಲ್ಲವೇ ಸ್ವಾಮಿತ್ವವು ಸ್ವಾಮಿಗೆ ಸಲ್ಲುತ್ತದೆ. **ಸ್ವಂ** - ಇಲ್ಲದ ಸ್ವಾಮಿಯು ಎಂದು ಹೇಳುವ ಸಿದ್ಧಾಂತವು ಗ್ರಾಹ್ಯವಲ್ಲವು. ಮಿಥ್ಯಾವಾದುದರ ವಿಸ್ತಾರವಾಗಿ ವಿಭೂತಿ ವಿಸ್ತರವು ವ್ಯರ್ಥವಾಗುವದಿಲ್ಲವೇ ? ಮನೆ ಇದ್ದರಲ್ಲವೇ ಮನೆಗೆ ಯಜಮಾನನು ಎಂಬ ವ್ಯವಹಾರವು ಯುಕ್ತವು. ಆದುದರಿಂದ ಇಲ್ಲಿ **ಜಗತ್ಪತೇ** ಎಂದು ಸಂಬೋಧಿಸಿ ಮುಂದಿನ ಶ್ಲೋಕದಿಂದ ವಿಭೂತಿಯನ್ನೆಲ್ಲಾ **ಅಶೇಷೇಣ** ವಿಸ್ತರಿಸಿ ಹೇಳು ಎಂದು ಅರ್ಜುನನು ಪ್ರಾರ್ಥಿಸುತ್ತಾನೆ.

**ಮೂಲಕ್ಕೆ ಅರ್ಥವು:**–ಅರ್ಜುನನು ಹೀಗೆ ಸ್ವಾಮಿಯನ್ನು ತನಗೆ ಈಗ ಉಪದೇಶರೂಪದಲ್ಲಿ ಉಂಟಾದ ಜ್ಞಾನದಿಂದ ಸ್ತುತಿಸಿದವನಾಗಿ, ಆತನ ವಿಭೂತಿಯ ಮಹಿಮೆಯನ್ನೆಲ್ಲಾ ಚನ್ನಾಗಿ ತಿಳಿಯಬೇಕೆಂಬ ಆಶೆಯಿಂದ, ವಿಸ್ತಾರವಾಗಿ ಉಪದೇಶಿಸಬೇಕೆಂದು ಪ್ರಾರ್ಥಿಸುತ್ತಾನೆ. **ಯಾಭಿಃ ವಿಭೂತಿಭಿಃ**-ಯಾವ ವಿವಿಧ ವಿಚಿತ್ರಗಳಾದ ನಿಯಾಮ್ಯ ವರ್ಗಗಳಿಂದ ಕೂಡಿದವನಾಗಿ, **ಇಮಾನ್ ಲೋಕಾನ್**-ಈ ಎಲ್ಲಾ ಲೋಕಗಳನ್ನೂ, **ವ್ಯಾಪ್ಯ**-ವ್ಯಾಪಿಸಿ, **ತಿಷ್ಠಸಿ**-ಅವುಗಳಲ್ಲಿ ಅಂತರ್ಭೂತವಾಗಿ ಸ್ಥಿರವಾಗಿ ನಿಂತಿರುತ್ತೀಯೋ, ಆ ಕಾರಣದಿಂದ, **ಆತ್ಮ ವಿಭೂತಯಃ** - ಸ್ವಕೀಯಗಳಾದ ನಿನ್ನ ನಿಯಾಮ್ಯ ವರ್ಗಗಳು, **ದಿವ್ಯಾಹಿ**-ಬಹು ರಮಣೀಯವಾಗಿ ಶ್ರೇಷ್ಠವಾದವಷ್ಟೇ, ಹಿಂದೆ **ಯಾಭಿಃ**-ಎಂದು ಯಚ್ಛಬ್ದವಿರುವದರಿಂದ, **ವಕ್ತುಮರ್ಹಸಿ** ಎಂಬ ಕ್ರಿಯೆಗೆ ಉಚಿತ ತಚ್ಛಬ್ದವನ್ನು ಇಟ್ಟುಕೊಳ್ಳತಕ್ಕದ್ದು. **ತಾಃ** - ಅಂತಹ ವಿಭೂತಿ ವರ್ಗವನ್ನೆಲ್ಲಾ, **ಅಶೇಷೇಣ** - ಸಂಪೂರ್ಣವಾಗಿ, **ವಕ್ತುಮರ್ಹಸಿ**-ನನಗೆ ಉಪದೇಶಿಸಲು ಯೋಗ್ಯನಾಗಿರುತ್ತೀಯೇ ನಿನ್ನ ವಿಭೂತಿ ವರ್ಗದ ಮಹಿಮೆಯನ್ನು ವ್ಯಕ್ತಪಡಿಸಲು ನಿನಗೇನೇ ಸಾಧ್ಯವೇ ವಿನಾ ಇನ್ನು ಯಾರಿಗೂ ಶಕ್ಯವಲ್ಲವಾದುದರಿಂದ ನೀನೇ ದಯವಿಟ್ಟು ತಿಳಿಸು ಎಂದು ಪ್ರಾರ್ಥಿಸುತ್ತಾನೆ. **ವ್ಯಾಪ್ಯ** ಎಂಬ ಪ್ರಯೋಗವಿರುವದರಿಂದ ಈ ಚರಾಚರಯುಕ್ತವಾದ ವಿಶ್ವವೆಲ್ಲಾ ಆತನಿಗೆ ಶರೀರವು, ತಾನು ಎಲ್ಲಕ್ಕೂ ಆತ್ಮವೆಂಬ ಭಾವವು ಪ್ರದರ್ಶಿಸಲ್ಪಟ್ಟಿತು. **ಆತ್ಮವಿಭೂತಯಃ** ಎಂಬಲ್ಲಿ

**ಭಾ. ದಿವ್ಯಾಃ ತ್ವದನನ್ಯ ಸಾಧಾರಣ್ಯೋ ವಿಭೂತಯೋ ಯಾಃ ತಾಂ ಸ್ತ್ವಮೇವಾ ಶೇಷೇಣ ವಕ್ತುಮರ್ಹಸಿ - ತ್ವಮೇವ ವ್ಯಞ್ಜಯೇತ್ಯರ್ಥಃ । ಯಾಭಿ ರನನ್ತಾಭಿ ರ್ವಿಭೂತಿಭಿಃ - ಯೈರ್ನಿಯಮನ ವಿಶೇಷೈಯುರ್ಕ್ತ ಇಮಾನ್ ಲೋಕಾಂಸ್ತ್ವಂ ನಿಯನ್ತೃತ್ವೇನ ವ್ಯಾಪ್ಯ ತಿಷ್ಠಸಿ ॥ ೧೬ ॥**

ರುವ ಆತ್ಮಶಬ್ದವು ಸರ್ವೇಶ್ವರನಿಗೆ ಶರೀರವಾಗಿ ಸ್ವಕೀಯವೆಂದು ಬೋಧಿಸುತ್ತದೆ **ಯಾಭಿರ್ವಿಭೂತಿಭಿಃ ತಿಷ್ಠಸಿ** ಎಂಬುದರಿಂದ ಅವುಗಳಿಂದ ಸೇರಿ ಏಕೀಭವಿಸಿರುತ್ತಾನೆಂಬ ವಿಶಿಷ್ಟಾದ್ವೈತ ಸಿದ್ಧಾಂತವು ಇಲ್ಲಿ ವ್ಯಕ್ತವು. ಪೂರ್ವಾರ್ಧದಲ್ಲೂ ಉತ್ತರಾರ್ಧದಲ್ಲೂ ವಿಭೂತಿ ಶಬ್ದವು ಎರಡು ಸಲ ಪ್ರಯೋಗಿಸಿರುವದು ಅರ್ಜುನನಿಗೆ ಆ ವಿಭೂತಿಯಲ್ಲಿರುವ ಮಾಹಾತ್ಮ್ಯೆಯನ್ನೂ ಅವುಗಳನ್ನು ತಿಳಿಯಬೇಕೆಂಬ ಆದರಾತಿಶಯವನ್ನೂ ವ್ಯಕ್ತಪಡಿಸುತ್ತದೆ.

**ಭಾಷ್ಯಾರ್ಥವು:**–ಮುಂದಿನ ಗೀತೋಪದೇಶಗಳಿಗೆ ಕಾರಣಭೂತವಾದ ಪ್ರಾರ್ಥನೆಯನ್ನು ಅರ್ಜುನನು ಮಾಡುತ್ತಾನೆ. **ದಿವ್ಯಾಃ**-ಬಹು ಪ್ರಕಾಶವಾಗಿ ಅತಿಮನೋಹರಗಳಾದ, **ತ್ವದ ಸಾಧಾರಣ್ಯೋ ವಿಭೂತಯಃ**-ನಿನಗೇನೆ ಅಸಾಧಾರಣಗಳಾದ ನಿಯಾಮ್ಯ ವರ್ಗಗಳು, ಇದು **ಆತ್ಮವಿಭೂತಯಃ**-ಎಂಬುದರ ವಿವರಣವು, **ಯಾಃ**-ಯಾವವೋ, **ತಾಃ**-ಅವುಗಳನ್ನು, **ತ್ವಮೇವ**-ನೀನೇ, **ಅಶೇಷೇಣ** - ನಿಶ್ಶೇಷವಾಗಿ ಎಂದರೆ ಸಂಪೂರ್ಣವಾಗಿ, **ವಕ್ತುಮರ್ಹಸಿ** - ಎಂದರೆ **ತ್ವಮೇವವ್ಯಂಜಯ**.ದಿವ್ಯಗಳಾಗಿರುವದರಿಂದ ನೀನೇ ಪ್ರಕಾಶಪಡಿಸತಕ್ಕದ್ದು, **ಇತ್ಯರ್ಥಃ** - ಎಂಬ ತಾತ್ಪರ್ಯವು; **ವಕ್ತುಮರ್ಹಸಿ** ಎಂಬ ವಾಕ್ಯವು ಅರ್ಜುನನಿಗಿರುವ ವಿಭೂತಿ ವಿಸ್ತರವನ್ನು ಕೇಳಬೇಕೆಂಬ ಕುತೂಹಲವನ್ನು ಪ್ರದರ್ಶಿಸುತ್ತದೆ. **ಆತ್ಮವಿಭೂತಯಃ** ಎಂಬುದಕ್ಕೆ **ಅಸಾಧಾರಣ್ಯೋ ವಿಭೂತಯಃ** ಎಂಬ ವ್ಯಾಖ್ಯಾನದಿಂದ, ನಾವು ಗ್ರಹಿಸತಕ್ಕ ಮುಖ್ಯಾಂಶ**ವೇ**ನೆಂದರೆ **"ಕೃಷ್ಣಸ್ಯ ಹಿ ಕೃತೇ ಭೂತಮಿದಂ ವಿಶ್ವಂ ಚರಾಚರಂ** ಎಂಬಲ್ಲಿ ಹೇಳಿರುವಹಾಗೆ, ಎಲ್ಲಾ ಲೋಕದಲ್ಲಿನ ಎಲ್ಲಾ ವಿಭೂತಿಗಳೂ ಆತನದೇ; ಇನ್ನು ಯಾರಿಗೂ ಅದಕ್ಕೆ ಅಧಿಕಾರವಿಲ್ಲವು ಎಂಬುದನ್ನು ತಿಳಿಸುವದಕ್ಕಾಗಿಯೇ **ಅಸಾಧಾರಣ್ಯಃ** ಎಂಬ ಪ್ರಯೋಗವು. ಇದನ್ನೇ ಶ್ರೀಯಾಮುನೇಯರು **"ಮಮ ನಾಥ ಯದಸ್ತಿ ಯೋಽಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ"** ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. ಆದುದರಿಂದ ನನ್ನ ಮನೆ, ನನ್ನವರು, ನನ್ನ ಕ್ಷೇತ್ರ, ಇತ್ಯಾದಿ ಪ್ರಯೋಗಗಳು ಹಾಸ್ಯಾಸ್ಪದಗಳಾಗಿ ಅಹಂಕಾರ ಗರ್ಭಿತವು. ದೇವರಿಗೆ ತೆಂಗಿನಕಾಯನ್ನು ಒಡೆದರೆ ಅದು ಈತನ ಸ್ವಂತವಾದುದಲ್ಲವು. ದೇವರ ಸ್ವತ್ತನ್ನು ದೇವರಿಗೆ ಸಮರ್ಪಿಸಿದ ಭಾವನೆಯು ಇರತಕ್ಕದ್ದು. ಮೂಲದಲ್ಲಿ **ಆತ್ಮವಿಭೂತಯಃ** ಎಂದು ಪ್ರಥಮಾಂತವನ್ನು, **ವಕ್ತುಮರ್ಹಸಿ** ಎಂಬುದರೊಂದಿಗೆ ಅನ್ವಯಿಸುವದಕ್ಕಾಗಿ, **ಯಾಃ ವಿಭೂತಯೋ**, **ತಾಃ** ಎಂದು ಅನ್ವಯವನ್ನು ದಯಪಾಲಿಸಿರುತ್ತಾರೆ. ಶ್ರೀಮಚ್ಛಂಕರಾಚಾರ್ಯರೂ ಹಾಗೆಯೇ ಅನ್ವಯಿಸಿರುತ್ತಾರೆ. ಹಿಂದೆ ೧೪ನೆಯ ಶ್ಲೋಕದಲ್ಲಿ **"ನಹಿತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ"** ಎಂದು ಹೇಳಲ್ಪಟ್ಟಿರುವದರಿಂದ, ಅಶೇಷೇಣ ಹೇಳಲು ಸರ್ವೇಶ್ವರನಿಗೆ ಅರ್ಹತೆಯು ಇದ್ದರೂ ಅರ್ಜುನನಿಗೆ ತಾನೇ ತಿಳಿಯಲು ಯೋಗ್ಯತೆ ಎಲ್ಲಿಯದು ಎಂಬಾಕ್ಷೇಪ ನಿವೃತ್ತಿಗಾಗಿ, **ವಕ್ತುಮರ್ಹಸಿ** ಎಂಬುದಕ್ಕೆ **ತ್ವಮೇವವ್ಯಂಜಯ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇದರಿಂದ ನೀನು ನಿಶ್ಶೇಷವಾಗಿ ತಿಳಿಯುವ ಯೋಗ್ಯತೆಯನ್ನುಂಟು ಮಾಡುವದಕ್ಕಾಗಿ ಬುದ್ಧಿಯೋಗವನ್ನು ನೀನೇ ಉಂಟುಮಾಡಬೇಕೆಂಬ ಆಶಯವು ದ್ಯೋತಿತವು. **"ದದಾಮಿ ಬುದ್ಧಿಯೋಗಂತಂ ಯೇನ ಮಾ ಮುಪಯಾಂತಿ ತೇ"** (ಗೀ. ೧೦–೧೦) ತಿಳಿಯಲು ಬೇಕಾದ

**ಮೂ. ಕಥಂ ವಿದ್ಯಾಮಹಂ ಯೋಗೀ ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ ॥** ೧೭.

ಬುದ್ಧಿಯೋಗವನ್ನೂ ಶ್ರೀ ಕೃಷ್ಣನೇ ದಯಪಾಲಿಸತಕ್ಕದ್ದಾಗಿರುತ್ತದೆ. **ದಿವ್ಯಾಃ ವಿಭೂತಯಃ** ಎಂಬ ಬಹುವಚನಪ್ರಯೋಗದಿಂದ ವಿಭೂತಿಗಳ ವೈವಿಧ್ಯವೂ ವೈಚಿತ್ರ್ಯವೂ ಆನಂತ್ಯವೂ ಸೂಚಿಸಲ್ಪಟ್ಟವು. ಮುಂದಿನ ವಾಕ್ಯದಲ್ಲಿ ಈ ಅಭಿಪ್ರಾಯವನ್ನೇ ಸೂಚಿಸುತ್ತಾರೆ. ಮತ್ತು ಅವು ಹೇಗೆ ನಿನಗೆ ವಿಭೂತಿಗಳು ಎಂದರೆ ತಿಳಿಸುತ್ತಾರೆ. **ಯಾಭಿರನನ್ತ ವಿಭೂತಿಭಿಃ** ಎಂದರೆ **ಯೈರ್ನಿಯಮನ ವಿಶೇಷೈಃ**-ಯಾವ ನಿನ್ನ ನಿಯಮನಕ್ಕೆ ಒಳಪಟ್ಟ ವಿಲಕ್ಷಣಗಳಾದ ವಿಶೇಷ ವಸ್ತುಗಳಿಂದ (**ಯುಕ್ತಃ**-ಕೂಡಿದವನಾಗಿ,) **ಯಾಭಿರ್ವಿಭೂತಿಭಿಃ** ಎಂಬುದಕ್ಕೆ **ತಿಷ್ಠಸಿ** ಎಂಬುದರೊಂದಿಗೆ ಅನ್ವಯವನ್ನು ಸೂಚಿಸುವದಕ್ಕಾಗಿ, ಅಲ್ಲಿ **ಯುಕ್ತಃ** ಎಂಬ ಮೂಲದಲ್ಲಿಲ್ಲದ ಪದವನ್ನು ಪ್ರಯೋಗಿಸಿರುತ್ತಾರೆ. **ಯಾಭಿರ್ವಿಭೂತಿಭಿಃ ತಿಷ್ಠಸಿ** ಎಂಬ ಪ್ರಯೋಗದಿಂದ ವಿಶಿಷ್ಟಾದ್ವೈತಸಿದ್ಧಾಂತಾರ್ಥವೇ ಉಪದೇಶಿಸಲ್ಪಟ್ಟಿರುತ್ತದೆ. ಇದು ನಿರ್ವಿಶೇಷಬ್ರಹ್ಮಾಭಿಪ್ರಾಯಕ್ಕೆ ವಿರುದ್ಧವಾದ ಪ್ರಯೋಗವು. ವಿಭೂತಿ ಎಂಬ ವಸ್ತ್ವಂತರವಿಲ್ಲದಿದ್ದರೆ, ವ್ಯಾಪ್ಯ ವ್ಯಾಪಕ ಭಾವವೂ ಸಹ ಹೇಗೆ ಕೂಡುತ್ತದೆಂದು ಕೇಳಬೇಕಾಗುತ್ತದೆ. ಯಥಾರ್ಥವಾದ ಶರೀರಾತ್ಮಭಾವವನ್ನು ಸೂಕ್ಷ್ಮದಶೆಯಲ್ಲೂ ಸ್ಥೂಲದಶೆಯಲ್ಲೂ ಸಹ ಒಪ್ಪಿಕೊಂಡರಲ್ಲವೇ ಅಂತಹ ವ್ಯಾಪ್ಯ ವ್ಯಾಪಕ ಭಾವವನ್ನು ಗ್ರಹಿಸಬಹುದು. **ವಿಭೂತಿಭಿಃ ತಿಷ್ಠಸಿ** ಎಂಬುದರಿಂದ ವಿಶಿಷ್ಟತೆಯೇ ಬೋಧಿಸಲ್ಪಟ್ಟಿರುವದರಿಂದ ಅದನ್ನು ವ್ಯಕ್ತಪಡಿಸುವದಕ್ಕಾಗಿಯೇ, **ಯುಕ್ತಃ** ಎಂಬ ಪದವು ಭಾಷ್ಯದಲ್ಲಿ ಸೇರಿಸಲ್ಪಟ್ಟಿರುತ್ತದೆ. **ನಿಯನ್ತೃತ್ವೇನ ವ್ಯಾಪ್ಯ** ಎಂಬ ಭಾಷ್ಯವನ್ನು ಬರೆದಿರುವದು, **"ತತ್ಸೃಷ್ಟ್ವಾ ತದೇವಾನುಪ್ರಾವಿಶತ್"** ಎಂಬ **"ಅಂತರೋ ಯಮಯತಿ"** ಎಂಬ, (ಬೃ. ೫ ೭) **"ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ"** (ಯಜು ಆರಣ್ಯ ೩. ೧೧) ಎಂಬ **"ಅಂತರ್ಯಾಮ್ಯಮೃತಃ"** (ಸು. ೭) ಎಂಬ ಶ್ರುತ್ಯರ್ಥಗಳನ್ನು ಮನಸ್ಸಿನಲ್ಲಿಟ್ಟು ಸರ್ವಲೋಕವೂ ಆತನಿಗೆ ವಿಭೂತಿಯೆಂದು ಇಲ್ಲಿ ಹೇಳಲ್ಪಟ್ಟಿತು. ಅವುಗಳನ್ನು ವ್ಯಾಪಿಸಿರುವದರಿಂದ ಸ್ವಾಮಿಯು ಅವುಗಳಿಗೆಲ್ಲಾ ನಿಯಾಮಕನಾಗಿರುತ್ತಾನೆಂಬ ಅರ್ಥವು ಬೋಧಿಸಲ್ಪಟ್ಟಿತು. **ತಿಷ್ಠಸಿ** ಎಂದು ಹೇಳಿರುವದರಿಂದ ಸರ್ವೇಶ್ವರನು ಹಾಗೆ ಅಂತರ್ಯಾಮಿಯಾಗಿರುವ ಮಾತ್ರದಿಂದಲೇ ತನ್ನ ಸಙ್ಕಲ್ಪಮೂಲಕವಾಗಿಯೇ ಏನೊಂದೂ ವಿಶೇಷ ಪ್ರಯತ್ನಗಳಿಲ್ಲದೆ ಸರ್ವವನ್ನೂ ನಿಯಮಿಸುವನೆಂಬ ಭಾವವೂ ಸೂಚಿಸಲ್ಪಟ್ಟಿತು. ಈ ಶ್ಲೋಕದಲ್ಲಿ **ವ್ಯಾಪ್ಯ ತಿಷ್ಠಸಿ** ಎಂಬ ಪ್ರಯೋಗವು **"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ"** ಎಂಬ ತೈ. ನಾರಾಯಣಾನುವಾಕದ ಅರ್ಥವನ್ನು ಉಪಪಾದಿಸುತ್ತದೆ.

**ಮೂಲಕ್ಕೆ ಅರ್ಥವು:**-ಹಿಂದೆ ಎಲ್ಲಾ ಲೋಕದ ವಿವಿಧ ವಿಚಿತ್ರ ವಸ್ತುಗಳನ್ನೂ ವ್ಯಾಪಿಸಿ ಎಲ್ಲಾ ವಿಭೂತಿ ವರ್ಗಕ್ಕೂ ನಿಯನ್ತಾವಾಗಿರುತ್ತೀ ಎಂಬ ಭಾವವು ಪ್ರದರ್ಶಿಸಲ್ಪಟ್ಟಿತು. ಈ ವಿಭೂತಿಗಳ ಮಧ್ಯದಲ್ಲಿ ಯಾವ ಯಾವ ಮಹಿಮೆಯನ್ನು ಹೊಂದಿದ ವಸ್ತುಗಳಲ್ಲಿ ನೀನು ಇರುವದಾಗಿ ಭಾವಿಸಿ ಭಕ್ತಿಯೋಗನಿಷ್ಠನಾದ ನಾನು ನಿನ್ನನ್ನು ಧ್ಯಾನಿಸತಕ್ಕದ್ದು ಎಂದು ಅರ್ಜುನನು ಪ್ರಶ್ನಿಸುತ್ತಾನೆ.—**ಅಹಂ**-ನಿನ್ನ ವಿಭೂತಿಯ ಮಹಿಮೆಯನ್ನು ವಿಸ್ತಾರವಾಗಿ ತಿಳಿಯಬೇಕೆಂಬ ಕುತೂಹಲವುಳ್ಳ ನಾನು, **ಯೋಗೀ** - ನಿನ್ನ ಉಪದೇಶಪ್ರಕಾರ ಭಕ್ತಿಯೋಗನಿಷ್ಠನಾಗಬೇಕೆಂಬಿರುವನಾಗಿ, **ಯೋಗೀ**-ಎಂಬ ಶಬ್ದಾರ್ಥವನ್ನೇ ಮುಂದೆ ವಿವರಿಸುತ್ತಾರೆ.—**ಸದಾ ಪರಿಚಿಂತಯನ್** ಯಾವಾಗಲೂ ಎಂದರೆ ದೇಹಾವಸಾನದವರೆಗೆ ಕ್ಲಿಪ್ತಕಾಲಗಳಲ್ಲಿ ನಿನ್ನನ್ನೇ ಉಪಾ

**ಭಾ. ಅಹಂ ಯೋಗೀ—ಭಕ್ತಿಯೋಗನಿಷ್ಠಸ್ಸನ್, ಭಕ್ತ್ಯಾ ತ್ವಾಂ ಸದಾ ಪರಿಚಿನ್ತಯನ್ ಚಿನ್ತಯಿತುಂ ಪ್ರವೃತ್ತಃ, ಚಿನ್ತನೀಯಂ ತ್ವಾಂ—ಪರಿಪೂರ್ಣೈಶ್ವರ್ಯಾದಿ ಕಲ್ಯಾಣ ಗುಣಗಣಂ, ಕಥಂ ವಿದ್ಯಾಮ್ ? ಪೂರ್ವೋಕ್ತಬುದ್ಧಿ ಜ್ಞಾನಾದಿ ಭಾವ ವ್ಯತಿರಿಕ್ತೇಷ್ವನುಕ್ತೇಷು ಕೇಷುಕೇಷು ಚ ಭಾವೇಷು ಮಯಾ ನಿಯನ್ತೃತ್ವೇನಚಿನ್ತ್ಯೋಸಿ?॥**

ಸಿಸುವನಾಗಿ, ಪರಿ ಎಂಬ ಉಪಸರ್ಗವು ತೈಲಧಾರೆಯಹಾಗೆ ಅನವಚ್ಛಿನ್ನಭಕ್ತಿಯಿಂದ ಉಪಾಸನವೇನು, ಮತ್ತು ಸಿಕ್ಕ ಕಾಲಗಳಲ್ಲಿ ಹಿಂದೆ ಹೇಳಿರುವಹಾಗೆ **"ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ । ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ"** (ಗೀ. ೯. ೧೪) ಕೀರ್ತನ, ಯತನ, ನಮಸ್ಕಾರಾದಿಗಳೇನು, ಇವುಗಳೊಂದಿಗೆ ಭಜನವನ್ನು ಸೂಚಿಸುತ್ತದೆ; ಹೀಗೆ ನಿನ್ನನ್ನು ಉಪಾಸಿಸುವವನಾಗಿ, **ಕಥಂ ವಿದ್ಯಾಮ್** - ಹೇಗೆ ನಿನ್ನನ್ನು ಸಾಕ್ಷಾತ್ಕರಿಸುವೆನು ? ವೇದನ ಶಬ್ದವು ಪರಮಾತ್ಮ ಸಾಕ್ಷಾತ್ಕಾರದಲ್ಲೇ ಮುಖ್ಯವೃತ್ತಿಯುಳ್ಳದ್ದಾಗಿ ಶ್ರುತಿಗಳಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ; ಉತ್ತರಾರ್ಧದಿಂದ ಅರ್ಜುನನು ತನ್ನ ಪ್ರಶ್ನೆಯನ್ನು ವ್ಯಕ್ತಪಡಿಸುತ್ತಾನೆ. **ಹೇ ಭಗವನ್**-ಓ ಹೇಯ ಪ್ರತ್ಯನೀಕನಾಗಿ ಷಾಡ್ಗುಣ್ಯ ಪರಿಪೂರ್ಣನಾದ ಶ್ರೀ ಕೃಷ್ಣನೇ, **ಕೇಷು ಕೇಷು ಚ ಭಾವೇಷು** - ಯಾವ ಯಾವ ಪ್ರಶಸ್ತ ಪದಾರ್ಥಗಳಲ್ಲಿರುವವನಾಗಿ, **ಮಯಾ**- ನನ್ನಿಂದ, **ಚಿನ್ತ್ಯೋಸಿ** - ಧ್ಯಾನಿಸಲು ಅರ್ಹನಾಗಿದ್ದೀ, ತಿಳಿಸೈಯ್ಯಾ ಎಂಬ ಭಾವವು. ಹೀಗೆ **ಕೇಷು ಕೇಷು ಭಾವೇಷು**-ಎಂದು ಪ್ರಶ್ನಿಸಿದುದರಿಂದಲೇ ಮುಂದೆ ಶ್ರೀ ಕೃಷ್ಣನು **ಆದಿತ್ಯಾನಾಂ ಅಹಂ ವಿಷ್ಣುಃ**-ಎಂದು ಆರಂಭಿಸಿ ಉತ್ತರವನ್ನು ದಯಪಾಲಿಸುತ್ತಾರೆ. ಈ ವಿಭೂತಿ ವಿಶೇಷಗಳು ಧ್ಯಾನಕ್ಕೆ ಪ್ರಶಸ್ತವಾದುವುಗಳೆಂಬ ಭಾವವು. ಎಲ್ಲಕ್ಕೂ ಅಂತರಾತ್ಮನಾಗಿರುವದರಿಂದ ಸರ್ವವಸ್ತು ಸಾಮಾನಾಧಿಕರಣ್ಯವು ಇದ್ದರೂ, ಹೇಯ ಪದಾರ್ಥ ಸಾಮಾನಾಧಿಕರಣ್ಯವು ಧ್ಯಾನಕ್ಕೆ ಅನರ್ಹವಾಗಿ, ಪವಿತ್ರಪದಾರ್ಥಗಳ ಸಾಮಾನಾಧಿಕರಣ್ಯವು ಪ್ರಶಸ್ತವಾಗಿರುವದರಿಂದ, ಯಾವ ಯಾವ ವಸ್ತು ಜಾತದಲ್ಲಿ ಯಾವು ಯಾವುವು ಪ್ರಶಸ್ತವು, ತನ್ಮೂಲಕವಾಗಿ ಅವುಗಳಿಗೆ ಅಂತರ್ಯಾಮಿಯಾಗಿರುವ ನೀನು ಹೇಗೆ ಧ್ಯೇಯನೆಂದು ಪ್ರಶ್ನಿಸುತ್ತಾನೆ. ॥ ೧೭ ॥

**ಭಾಷ್ಯಾರ್ಥವು:**-ಭಕ್ತಿಯೋಗನಿಷ್ಠನಾದ ನಾನು ಯಾವ ಯಾವ ಪ್ರಶಸ್ತ ವಿಭೂತಿಗಳಿಗೆ ಅಂತರಾತ್ಮನಾಗಿರುವ ಭಾವನೆಯಿಂದ ನಿನ್ನನ್ನು ಉಪಾಸಿಸತಕ್ಕದ್ದೆಂದು ಬೇಡುತ್ತಾನೆ. **ಅಹಂ** ನಾನು, ವಿಭೂತಿ ಮಾಹಾತ್ಮ್ಯೆಯ ವಿಸ್ತರವನ್ನು ತಿಳಿಯಬೇಕೆಂಬ ಆಶೆಯುಳ್ಳ ನಾನು, **ಯೋಗೀ** ಎಂದರೆ **ಭಕ್ತಿಯೋಗನಿಷ್ಠಸ್ಸನ್**-ಭಕ್ತಿಯೋಗ ನಿಷ್ಠೆಯನ್ನು ಹೊಂದಬೇಕೆಂದಿರುವವನಾಗಿ, ಅರ್ಜುನನು ಇನ್ನೂ ಉಪದೇಶಾವಸ್ಥೆಯಲ್ಲಿಯೇ ಇದ್ದಾನೆಯೇ ವಿನಾ, ಅನುಷ್ಠಾನದೆಶೆಯನ್ನು ಇನ್ನೂ ಹೊಂದಲಿಲ್ಲವಾದುದರಿಂದ, ಅದನ್ನು ಮನಸ್ಸಿನಲ್ಲಿಟ್ಟು, **ಯೋಗೀ** - ಭಕ್ತಿಯೋಗದಲ್ಲಿರುವವನೆಂದು ಅರ್ಥಮಾಡದೆ, ಭಕ್ತಿಯೋಗವನ್ನನುಷ್ಠಿಸಬೇಕೆಂಬ ಕುತೂಹಲವುಳ್ಳವನಾಗಿ ಎಂಬ ಭಾವವು ಸೂಚಿತವು. **ಯೋಗೀ** – ಎಂಬುದಕ್ಕೆ **ಯೋಗಿನ್** - ಎಂದು ಪಾಠಾಂತರವನ್ನಿಟ್ಟುಕೊಂಡು ಶ್ರೀ ಕೃಷ್ಣನಿಗೆ ಸಂಬೋಧನೆಯಾಗಿ ಕೆಲವರು ಭಾವಿಸಿರುತ್ತಾರೆ. ಶ್ರೀ ದೇಶಿಕರವರು ಇದು ಅನಾರ್ಷವೆಂದು ಹೇಳಿ ಈ ಪಾಠವನ್ನು ತಿರಸ್ಕರಿಸಿರುತ್ತಾರೆ. **ಭಕ್ತ್ಯಾ** ಭಕ್ತಿಯಿಂದ, **ತ್ವಾಂ** - ನಿನ್ನನ್ನು, **ಸದಾ** - ಯಾವಾಗಲೂ, **ಪರಿಚಿನ್ತಯನ್** - ಎಂದರೆ **ಚಿನ್ತಯಿತುಂ ಪ್ರವೃತ್ತಃ** - ಧ್ಯಾನಿಸಲು ಪ್ರವರ್ತಿಸಿದವನಾಗಿ, ಇನ್ನೂ ಪರಿಚಿಂತನದಲ್ಲಿ ಅರ್ಜುನನು ಇಳಿಯದಿರುವದರಿಂದ, **ಚಿನ್ತಯಿತುಂ ಪ್ರವೃತ್ತಃ** - ಎಂಬ ವ್ಯಾಖ್ಯಾನವು ; ಮುಂದೆ

**ಮೂ. ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮.**

ಮೂಲದ **ತ್ವಾಂ** ಎಂಬ ಶಬ್ದದಿಂದ ಬೋಧಿತಾರ್ಥವನ್ನು ವ್ಯಕ್ತಪಡಿಸಿರುತ್ತಾರೆ- **ಚಿನ್ತನೀಯಂ** ಧ್ಯಾನಿಸಲು ಯೋಗ್ಯನಾದ, **ತ್ವಾಂ** ಎಂದರೆ **ಪರಿಪೂರ್ಣೈಶ್ವರ್ಯಾದಿ ಕಲ್ಯಾಣಗುಣಗಣಂ**- ಪರಿಪೂರ್ಣವಾದ ಐಶ್ವರ್ಯವೇ ಮೊದಲಾದ ಕಲ್ಯಾಣಗುಣಗಳ ಸಮೂಹವನ್ನೂ ಹೊಂದಿರುವ ನಿನ್ನನ್ನು, **ಕಥಂ ವಿದ್ಯಾಮ್**-ಹೇಗೆ ಸಾಕ್ಷಾತ್ಕರಿಸಬಹುದು ? ಹೇಳು. ತನ್ನ ಪ್ರಶ್ನಾಭಿಪ್ರಾಯ ವೇನೆಂಬುದನ್ನು ಮುಂದೆ ವ್ಯಕ್ತಪಡಿಸಿರುತ್ತಾನೆ. **ಪೂರ್ವೋಕ್ತ ಬುದ್ಧಿಜ್ಞಾನಾದಿ ಭಾವವ್ಯತಿರಿಕ್ತೇಷ್ವನುಕ್ತೇಷು** - ಹಿಂದೆ ಉಪದೇಶಿಸಲ್ಪಟ್ಟ ಬುದ್ಧಿಜ್ಞಾನಗಳಿಗಿಂತ ಬೇರೆಯಾಗಿ ಹಿಂದೆ ಉಪದೇಶಿಸಲ್ಪಡದೇ ಇರುವ, **ಕೇಷು ಕೇಷು ಚ ಭಾವೇಷು** - ಯಾವ ಯಾವ ವಸ್ತುಗಳಲ್ಲಿ, **ಮಯಾ**-ನನ್ನಿಂದ, **ನಿಯಂತೃತ್ವೇನ** - ನೀನು ಅವುಗಳಿಗೆಲ್ಲಾ ನಿಯನ್ತಾ ಎಂಬ ಭಾವದಿಂದ, **ಚಿನ್ತ್ಯೋಽಸಿ**-ಧ್ಯಾನಿಸಲು ಯೋಗ್ಯನು ? ಅರ್ಜುನನು ಮಹಾ ಪ್ರಾಜ್ಞನು, ಹಿಂದೆ ಹೇಳಿದುದನ್ನೇ ಪುನಃ ಹೇಳು ಎಂದು ಕೇಳಲಿಲ್ಲವು. ಹಿಂದೆ ಉಪಾಸನೆಯ ವಿಷಯದಲ್ಲಿ ಹೇಳಿದ ಬುದ್ಧಿಜ್ಞಾನಾದಿಗಳಲ್ಲದೆ ಹೊಸ ವಿಷಯವನ್ನೇ ಕುರಿತು ಪ್ರಶ್ನಿಸಿರುತ್ತಾನೆಂದು ತೋರಿಸುವದಕ್ಕಾಗಿ "**ಪೂರ್ವೋಕ್ತಬುದ್ಧಿಜ್ಞಾನಾದಿ**ಗಳಿಗೆ ವ್ಯತಿರಿಕ್ತವಾಗಿ, ಯಾವ ಯಾವ ವಸ್ತುಗಳಲ್ಲಿ, ನಿನ್ನ ಅಂತರ್ಯಾಮಿತ್ವವು ಮಾಹಾತ್ಮ್ಯಯನ್ನು ಹೊಂದಿರುವದರಿಂದ, ನೀನು ಅವುಗಳಲ್ಲಿ, ಆತ್ಮನಾಗಿದ್ದಿ ಎಂದು ಧ್ಯಾನಿಸಲು ಯೋಗ್ಯನು ಎಂದು ಪ್ರಶ್ನಿಸುತ್ತಾನೆ; ಆದುದರಿಂದ ಪುನರುಕ್ತಿಯು ಎಂದಿಗೂ ಅಲ್ಲವೆಂಬ ಭಾವವು. ಆದರೆ ಮುಂದಿನ ಶ್ಲೋಕದಲ್ಲೇ **ಭೂಯಃ ಕಥಯ**-ಪುನಃ ಹೇಳು ಎಂದು ಇದೆಯಲ್ಲಾ ಎಂದು ಆಕ್ಷೇಪ ತಂದರೆ, ಹಿಂದೆ ಹೇಳಿದುದು ಸಙ್ಗ್ರಹವಾಗಿ ಈಗ ಅದರ ವಿಸ್ತರೋಪದೇಶವನ್ನು ಪ್ರಾರ್ಥಿಸಿರುವದರಿಂದ ಪ್ರಕರಣವೇನೋ ಒಂದೇಯಾದುದರಿಂದ, **ಭೂಯಃ** ಎಂಬ ಪ್ರಯೋಗವು. ಹಿಂದೆ ಹೇಳಿದುದನ್ನೇ ಹೇಳು ಎಂಬ ಪ್ರಾರ್ಥನೆಯಲ್ಲವು, ಆ ವಿಭೂತಿಗಳ ವಿಷಯದಲ್ಲೇ ಹೊಸ ವಿಷಯಗಳನ್ನು ತಿಳಿಯಬೇಕೆಂಬ ಪ್ರಶ್ನೆಯೆಂದೇ ಭಾವಿಸತಕ್ಕದ್ದು. ॥ ೧೭ ॥

**ಮೂಲಕ್ಕೆ ಅರ್ಥವು:**— ತನ್ನ ಭಾಗ್ಯೋದಯದಿಂದ ಸರ್ವಲೋಕ ಗುರುವೇ ಸ್ವಯಂ ಉಪದೇಶಕನಾಗಿ ದಯಪಾಲಿಸಿದ ಜ್ಞಾನದಿಂದ ಪರಮ ಹರ್ಷಿತನಾಗಿ ಆತನ ವಿಭೂತಿಗಳ ಮಾಹಾತ್ಮ್ಯಯ ಸಙ್ಗ್ರಹೋಪದೇಶದಿಂದ ತೃಪ್ತನಾಗದೆ, ಹಿಂದೆ ಆರು ಶ್ಲೋಕಗಳಿಂದಲೂ ಆತನನ್ನು ಕೊಂಡಾಡಿ ಪ್ರಾರ್ಥಿಸಿದ ವಿಷಯವನ್ನೇ ಈ ಶ್ಲೋಕದ ಮೂಲಕ ನಿಗಮನರೂಪದಲ್ಲಿ ಆತನ ವಿಚಿತ್ರಾದ್ಭುತ ವಿಭೂತಿ ಯೋಗ ಕಥನರೂಪ ಅಮೃತವನ್ನು ಪಾನಮಾಡಬೇಕೆಂಬ ಕುತೂಹಲಯುಕ್ತನಾಗಿ ಪ್ರಾರ್ಥಿಸುತ್ತಾನೆ.— **ಹೇ ಜನಾರ್ದನ** - ದುಷ್ಟರನ್ನು ಕ್ಲೇಶಾದಿಗಳ ಮೂಲಕ ಶಿಕ್ಷಿಸುವವನೇ, ಅಥವಾ ಶಿಷ್ಟರಿಂದ ಅಭೀಷ್ಟಸಿದ್ಧಿಗಾಗಿ ಪ್ರಾರ್ಥಿಸಲ್ಪಡುವವನೇ, ಹೀಗೆಯೇ ಶ್ರೀಮಚ್ಛಂಕರಾಚಾರ್ಯರೂ ಶ್ರೀ ದೇಶಿಕರೂ ಸಹ ವ್ಯುತ್ಪತ್ತಿ ಮೂಲಕ ಭಾಷ್ಯವನ್ನು ಬರೆದಿರುತ್ತಾರೆ. **ಆತ್ಮನಃ** - ನಿನ್ನ, **ಯೋಗಂ** - ನಿನಗೆ ಅಪೃಥಕ್ಸಿದ್ಧ ವಿಶೇಷಣಗಳಾಗಿರುವ ವಿಚಿತ್ರಾದ್ಭುತ ಚಿದಚಿತ್ತುಗಳೊಂದಿಗೆ ಸೇರಿರುವದನ್ನೂ ಮತ್ತು **ವಿಭೂತಿಂಚ**-ನಿಯಾಮ್ಯವರ್ಗವನ್ನೂ ಸಹ, ಇಲ್ಲಿ **ಯೋಗಂ** - ಎಂಬುದಕ್ಕೆ ಸೇರಿರೋಣವೆಂದು ಅರ್ಥಮಾಡಿದರೆ, ಆಗ **ವಿಭೂತಿಂ** ಎಂಬ ಪದಕ್ಕೂ ನಿಯಾಮ್ಯ ವರ್ಗವನ್ನು ನಿಯಮಿಸೋಣವೆಂಬ ಅರ್ಥವನ್ನಾಗಲಿ ಹೇಳಬಹುದು. **ವಿಸ್ತರೇಣ** - ವಿಸ್ತಾರವಾಗಿ,

**ಭಾ.** **(೧)" ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂಪ್ರವರ್ತತೇ " ಇತಿ ಸಂಕ್ಷೇಪೇಣೋಕ್ತಂ" ತವ ಸೃಷ್ಟ್ಯಾದಿ ಯೋಗಂ ; ವಿಭೂತಿಂ - ನಿಯಮನಂ ಚ, ಭೂಯೋ ವಿಸ್ತರೇಣ ಕಥಯ; ತ್ವಯೋಚ್ಯಮಾನಂ ತ್ವನ್ಮಹಿಮಾಮೃತಂ ಶೃಣ್ವತೋ ಮೇ ತೃಪ್ತಿರ್ನಾಸ್ತಿ ಹಿ ; ಮಮಾಽತೃಪ್ತಿಸ್ತ್ವಯೈವ ವಿದಿತೇತ್ಯಭಿಪ್ರಾಯಃ** **॥ ೧೮ ॥**

---

**ಭೂಯಃ ಕಥಯ** - ಪುನಃ ಮನದಣಿಯುವಂತೆ ಹೇಳು; **ಅಮೃತಮ್** - ನಿನ್ನ ಕಲ್ಯಾಣ ಗುಣ ವಿಭವೈಶ್ವರ್ಯಾದಿಗಳ ಕಥನರೂಪವಾದ ಅಮೃತವನ್ನು, **ಶೃಣ್ವತಃ** ಕೇಳುತ್ತಿರುವ, **ಮೇ**-ನನಗೆ, **ತೃಪ್ತಿರ್ನಾಸ್ತಿ ಹಿ** - ತೃಪ್ತಿ ಎಂಬುದು ಇಲ್ಲವಷ್ಟೇ. ನನಗಿರುವ ಈ ಅತೃಪ್ತಿಯು ನೀನು ಸರ್ವಜ್ಞನಾದುದರಿಂದ ನಿನಗೇನೇ ವೇದ್ಯವಾಗಿರುವಾಗ ನಾನು ನಿನಗೆ ಹೇಳಬೇಕೇ? ಆದುದರಿಂದ ಇದು ಯಥಾರ್ಥವೇ ಎಂಬ ಭಾವದಲ್ಲಿ **ಹಿ** ಎಂಬ ಪ್ರಯೋಗವು. ಇಲ್ಲಿ **ಆತ್ಮನಃ ಯೋಗಂ ವಿಭೂತಿಂಚ** ಎಂದು ಪ್ರಯೋಗವಿರುವದರಿಂದ ಕಲ್ಯಾಣಗುಣಯೋಗವೇನು ಅಪೃಥಕ್ಸಿದ್ಧವಿಶೇಷಣವಾದ ಈ ಚಿದಚಿದ್ವಿಭೂತಿಯೇನು ಲಕ್ಷ್ಮಿಯೊಂದಿಗೆ ನಿತ್ಯಯೋಗವೇನು, ದಿವ್ಯಮಙ್ಗಳವಿಗ್ರಹವೇನು ಇವುಗಳಿಂದ ಸೇರಿರುವನೆಂಬರ್ಥವು. ವಿಭೂತಿಗೆ ಮಿಥ್ಯಾತ್ವವನ್ನಾರೋಪಿಸಿದರೆ ಯೋಗ ಶಬ್ದಕ್ಕೆ ಅರ್ಥವೇನೆಂದು ಕೇಳಬೇಕಾಗುತ್ತದೆ. ಇಲ್ಲದೇ ಇರುವದರ ಕಥನವು ಹೇಗೆ ಅಮೃತಪ್ರಾಯವಾದೀತು ? ಮತ್ತು ಕಲ್ಯಾಣ ಗುಣಗಳ ಮಹೋದಧಿಯಲ್ಲದೆ ನಿರ್ವಿಶೇಷನಾಗಿರುವವನ ಕಥನವು ಹೇಗೆ? ಭಜನವೂ ಹೇಗೆ ? ಅಂತಹ ನಿರ್ಗುಣಬ್ರಹ್ಮಕಥನವು ಅಮೃತಪ್ರಾಯವಾಗಿ ತೃಪ್ತಿಯಿಲ್ಲದುದು ಹೇಗೆ ಆದೀತು ?

**ಭಾಷ್ಯಾರ್ಥವು:**—ಈ ಶ್ಲೋಕದಲ್ಲಿ **ಭೂಯಃ ಕಥಯ ವಿಸ್ತರೇಣ** ಎಂಬ ಪ್ರಾರ್ಥನೆ ಇರುವದರಿಂದ ಹಿಂದೆ ಉಪದೇಶಿಸಿದುದು ಸಙ್ಗ್ರಹವೆಂಬುದನ್ನು ಪ್ರದರ್ಶನುವದಕ್ಕಾಗಿ ಹಿಂದೆ ತಿಳಿಸಿದುದನ್ನು ಜ್ಞಾಪಿಸುವದಕ್ಕಾಗಿ **" ಅಹಂ ಸರ್ವಸ್ಯ "** ಎಂಬ ಶ್ಲೋಕವನ್ನು ಉದಾಹರಿಸುತ್ತಾರೆ. ಹಿಂದೆ **" ಅಹಂ ಸರ್ವಸ್ಯ "** ಎಂಬ ಶ್ಲೋಕಮೂಲಕವಾಗಿ ನಾನು ಸರ್ವಸೃಷ್ಟಿಗೂ ಕಾರಣನು, ನನ್ನಿಂದಲೇ ಎಲ್ಲಕ್ಕೂ ಪ್ರವೃತ್ತಿಯುಂಟಾಗುತ್ತದೆ. **ಇತಿ**-ಎಂದು, **ಸಂಕ್ಷೇಪೇಣೋಕ್ತಂ**-ಸಂಕ್ಷೇಪವಾಗಿ ಹೇಳಲ್ಪಟ್ಟ, ಇದು ಮೂಲದಲ್ಲಿ ಇಲ್ಲವಲ್ಲಾ ಎಂದರೆ, ವಿಸ್ತರವಾಗಿ ಈಗ ಹೇಳು ಎಂದರೆ ಅರ್ಥವಾಗಿ ಹಿಂದೆ ಹೇಳಿದುದು ಸಂಕ್ಷೇಪವೆಂಬುದು ವ್ಯಕ್ತವಾದುದರಿಂದ ಹಾಗೆ ವ್ಯಾಖ್ಯಾನವು, **ಹೇ ಜನಾರ್ದನ** - ಓ ಜನಾರ್ದನನೇ, **ತವ**-ನಿನ್ನ- ಇದು **ಆತ್ಮನಃ** ಎಂಬ ಶಬ್ದದ ಅರ್ಥವು, **ಸೃಷ್ಟ್ಯಾದಿ ಯೋಗಂ** ಎಂದರೆ ಅವುಗಳೊಂದಿಗೆ ಸೇರಿರೋಣವನ್ನೂ, **ವಿಭೂತಿಂ** ಎಂದರೆ **ನಿಯಮನಂ**- ಆ ಸರ್ವ ಚಿದಚಿತ್ತುಗಳ **ನಿಯಮನವನ್ನೂ** ಸಹ **ಭೂಯಃ** ಪುನಃ, ವಿಸ್ತರವಾಗಿ **ಕಥಯ** - ಹೇಳು; **ತ್ವಯಾ** - ಭಕ್ತಪರಾಧೀನನಾಗಿ ಅವರ ಪ್ರಾರ್ಥನೆಯನ್ನು ಸಲ್ಲಿಸಬೇಕೆಂಬ ವ್ರತವನ್ನು ಧರಿಸಿರುವ ನಿನ್ನಿಂದ, **ಉಚ್ಯಮಾನಂ** - ಮುಂದೆ ಉಪದೇಶಿಸಲ್ಪಡುವ, **ತ್ವನ್ಮಹಿಮಾಮೃತಂ** - ನಿನ್ನ ಮಹಿಮೆ ಎಂಬ ಅಮೃತವನ್ನು, ಮಧುರಾನಾಥನಿಂದ ಉಪದೇಶಿಸಲ್ಪಡುವದು ಎಲ್ಲಾ ಮಧುರವಾದವುಗಳಿಗಿಂತಲೂ ಮಧುರವಾಗಿ ನಿರತಿಶಯ **ಭೋಗ್ಯ ಭೂತವಾದುದೆಂಬ** ಅಭಿಪ್ರಾಯದಲ್ಲಿ ಇಲ್ಲಿ **ಅಮೃತ** ಶಬ್ದವು ಪ್ರಯೋಗಿಸಲ್ಪಟ್ಟಿರುತ್ತದೆ. ಇತರರು ನಿನ್ನ ಮಹಿಮೆಯನ್ನು ಹೇಳಿದರೇನೇ ಅಮೃತ ಸಮಾನವು, ಇನ್ನು ನೀನೇ ಹೇಳಿದುದಾದರೆ ಭೋಗ್ಯತಮವಲ್ಲದೆ ಅನ್ಯಥಾ ಇಲ್ಲವೆಂದು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು. **ಶೃಣ್ವತಃ**– ಉಪದೇಶರೂಪದಲ್ಲಿ ಕೇಳುತ್ತಿರುವ **ಮೇ** - ನನಗೆ, **ತೃಪ್ತಿರ್ನಾಸ್ತಿಹಿ**-ತೃಪ್ತಿಯು ಇಲ್ಲವಷ್ಟೇ **ಮಮಾತೃಪ್ತಿಃ** - ನನ್ನ ಅತೃಪ್ತಿಯು, ಎಂದರೆ ನನಗೆ, ಅತೃಪ್ತಿಯು

**ಶ್ರೀ ಭಗವಾನುವಾಚ—**

**ಮೂ. ಹನ್ತತೇ ಕಥಯಿಷ್ಯಾಮಿ ವಿಭೂತೀರಾತ್ಮನಶ್ಶುಭಾಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥ ೧೯.**

ಉಂಟೆಂಬುದು, **ತ್ವಯ್ಯೇವ**-ಸರ್ವಜ್ಞನಾದ ನಿನ್ನಿಂದಲೇ ಎಂದರೆ ನಿನಗೇನೇ, **ವಿದಿತಾ**-ತಿಳಿಯುವದು **ಇತ್ಯಭಿಪ್ರಾಯಃ**-ಎಂಬುದು ಅಭಿಪ್ರಾಯವು, ಇದು **ಹಿ**-ಶಬ್ದದಿಂದ ತೋರುವ ಅರ್ಥವು. ಇಲ್ಲಿ ಯೋಗ ವಿಭೂತಿಗಳ ಮಾಹಾತ್ಮ್ಯೆಯ ಶ್ರವಣವು ಅಮೃತವೆಂದು ಹೇಳಿರುವದು, ಅದರಿಂದ ಉಪಾಯಾನುಷ್ಠಾನಕ್ಕೂ, ಶಾಶ್ವತವಾದ, ಜರಾಮರಣ ಗಂಧವಿಲ್ಲದ, ಮೋಕ್ಷಪ್ರಾಪ್ತಿಗೂ ಹೇತುವಾಗುವದರಿಂದ ಅಮೃತವೆಂದು ಹೇಳಲ್ಪಟ್ಟಿತು. ಸಾಕ್ಷಾನ್ಮನ್ಮಥ ಮನ್ಮಥನ ಮುಖದಿಂದ ಬರುವಾಗ ಅತಿ ಮಧುರವಾಗಿ ಅಧರಾಮೃತ ಸಂಬಂಧ ಉಂಟಾಗುವದರಿಂದಾಗಲಿ ಅಮೃತವೆಂಬ ಪ್ರಯೋಗವು. ಇಲ್ಲಿ ಜನಾರ್ದನ ಎಂಬ ಸಂಬೋಧನೆಯು ಸಾಭಿಪ್ರಾಯವುಳ್ಳದುದಾಗಿದೆ. ಹಿಂದೆ ಸಮುದ್ರ ಮಥನಕಾಲದಲ್ಲಿ ಪ್ರತಿಕೂಲರಾದ ರಾಕ್ಷಸರನ್ನು ನಿಗ್ರಹಿಸಿ, ಅನುಕೂಲರಾದ ದೇವತೆಗಳಿಗೆ ಅನುಗ್ರಹಮಾಡಿ ಅಮೃತಪಾನವನ್ನು ಮಾಡಿಸಿದವನೇ ಎಂಬರ್ಥವು ಸ್ವಾರಸ್ಯವಾಗಿ ವ್ಯುತ್ಪತ್ತಿಮೂಲಕ ತೋರಿಬರುತ್ತದೆ. ಅಥವಾ ವಿಷ್ಣುಸಹಸ್ರನಾಮದಲ್ಲಿರುವ ಮಧು ಶಬ್ದವನ್ನು ಈ ಅಮೃತಶಬ್ದವು ಸ್ಮರಿಸುವಹಾಗೆ ಮಾಡುತ್ತದೆ. ಈ ಯೋಗ ವಿಭೂತಿಗಳ ವಿಸ್ತರ ಜ್ಞಾನವು ಬ್ರಹ್ಮವಿದ್ಯಾನಿಷ್ಠನಾಗಲು ಹೇತುವಾಗಿ ಅಂತವರಿಗೆ ಸ್ವಾಮಿಯು ಮಧುವಾಗಿ ಅಮೃತಪ್ರಾಯನೆಂಬ ಭಾವವನ್ನೂ ಸೂಚಿಸುತ್ತದೆ

**ಶ್ರೀ ಭಗವಾನ್ ಉವಾಚ**-ಲಕ್ಷ್ಮೀಯುಕ್ತನಾದ ಭಗವಂತನು ಹೇಳುತ್ತಾನೆ. ಭಕ್ತಾನುಗ್ರಹವೇ ಮುಖ್ಯವಾಗಿ ಭಾವಿಸಿರುವ ಶ್ರೀ ಕೃಷ್ಣನು ಆತನ ಪ್ರಾರ್ಥನೆಯನ್ನು ನಡೆಸಿಕೊಡುವವಾಗಿ **ಕಥಯಿಷ್ಯಾಮಿ** ಎಂದು ಪ್ರತಿಜ್ಞಾಮೂಲಕ ತಿಳಿಸುತ್ತಾರೆ.—

**ಮೂಲಕ್ಕೆ ಅರ್ಥವು:—"ವಿಸ್ತರೇಣ"** ಚೆನ್ನಾಗಿ ವಿಸ್ತರಿಸಿ ಹೇಳೆಂದು ಅರ್ಜುನನು ಬೇಡಿದನು. ಎಷ್ಟು ವಿಸ್ತರಿಸಿದರೂ ಮುಗಿಯದ ಪ್ರಕರಣದಲ್ಲಿ ವಿಸ್ತರಿಸಿ ಹೇಳು ಎಂಬುದಕ್ಕೆ ಅರ್ಥವಿಲ್ಲವಾದುದರಿಂದ, ಯಥಾರ್ಥವಾಗಿ ಎಷ್ಟು ಇದೆಯೋ ಅಷ್ಟೆಲ್ಲಾ ಅರ್ಜುನನಿಗೆ ತಿಳಿಯಪಡಿಸುವದು ಅಸಾಧ್ಯ ವಿಷಯವಾದುದಾಗಿರುವದರಿಂದ, ಅವುಗಳಲ್ಲಿ ಯಾವುಯಾವುವು ಪ್ರಾಧಾನ್ಯವಾಗಿರುವ ಮಹಿಮೆಯುಳ್ಳವುಗಳೋ ಅಷ್ಟುಮಟ್ಟಿಗೆ ಮಾತ್ರ ವಿಸ್ತರಿಸಿ ಹೇಳುವೆನು ಕೇಳು ಎಂದು ತಿಳಿಸುತ್ತಾರೆ. ವಿಸ್ತರಿಸಿ ಹೇಳುವದಕ್ಕೆ ವಿಭೂತಿಗೆ ಅಂತವಿದ್ದ ಪಕ್ಷದಲ್ಲಿ ಆಗಬಹುದು, ಅಂತವಿಲ್ಲದುದನ್ನು ವಿಸ್ತರಿಸಿ ಹೇಳಲು ಸಾಧ್ಯವಿಲ್ಲವೆಂಬ ಅಭಿಪ್ರಾಯದಿಂದ ಉಪದೇಶಿಸುತ್ತಾರೆ. ಯಾವಾಗ ತನ್ನ ವಿಭೂತಿಯ ಮಾಹಾತ್ಮ್ಯೆಯನ್ನು ವಿಸ್ತರಿಸಿ ತಿಳಿಯಬೇಕೆಂದು ಶ್ರದ್ಧೆಯನ್ನು ತೋರ್ಪಡಿಸಿದನೋ ಆಗ ಶ್ರೀ ಕೃಷ್ಣನು ಸುಪ್ರೀತನಾಗಿ ಹೇಳುತ್ತಾನೆ- **ಹೇ ಕುರುವಂಶದಲ್ಲಿ** ಶ್ರೇಷ್ಠನಾದ ಅರ್ಜುನನೇ, **ಹಂತ**-ನೀನು ಪ್ರಾರ್ಥಿಸಿದುದು ತುಂಬಾ ಸಂತೋಷವೈಯ್ಯಾ, ಹಾಗೆ ಪ್ರಾರ್ಥಿಸುವದು ಬಹು ಅಪರೂಪವೆಂಬ ಭಾವವೂ ಸೂಚಿತವು. ನೀನು ಭಕ್ತನು ಎಂದು ತಿಳಿದನಂತರವೂ, ನೀನು ಇದಕ್ಕಾಗಿ **ಶಾಧಿ ಮಾಂ ತ್ವಾಂ ಪ್ರಪನ್ನಂ**-(ಗೀ.೨-೭) ಎಂದು ಶರಣಾಗತಿಯನ್ನನುಷ್ಠಿಸಿದ ನಂತರವೂ ನಾನೇ ನಿನಗೆ ವಿಸ್ತರಿಸಿ ಚೆನ್ನಾಗಿ ತಿಳಿಯುವಹಾಗೆ ಮಾಡತಕ್ಕದ್ದು ನನ್ನ ಕರ್ತವ್ಯವು. ಹೀಗಿರುವಾಗ ನೀನೆ ಪ್ರಾರ್ಥಿಸಿದ ನಂತರ, ನಾನು ತುಂಬಾ ಸಂತುಷ್ಟನಾದೆನೈಯ್ಯಾ ಎಂದು **ಹಂತ** ಎಂದು ಪ್ರಾರಂಭಿಸಿ ಹೇಳುತ್ತಾರೆ. ಲೋಕೋಪಕಾರಕ್ಕಾಗಿ ನನ್ನ ಯೋಗ ವಿಭೂತಿಗಳನ್ನು ವಿಸ್ತರಿಸಿ ಹೇಳುವೆನು, ಅನೇಕರು

ನನ್ನನ್ನು ಆಶ್ರಯಿಸಿ ಆತ್ಮೋಜ್ಜೀವನವನ್ನು ಮಾಡಿಕೊಳ್ಳಲೆಂಬ ಧರ್ಮಸಂಸ್ಥಾಪನೆಯನ್ನು ಮನಸ್ಸಿನಲ್ಲಿಟ್ಟೇ ಉದಾರಭಾವದಿಂದ ನಾನು ಅವತರಿಸಿರುವುದು, ಆದುದರಿಂದ ನಾನೇ ಹೇಳಬೇಕೆಂದಿದ್ದೆನು. ಈಗ ನೀನೂ ಪ್ರಾರ್ಥಿಸಿರುತ್ತೀಯೆ ತುಂಬಾ ಸಂತೋಷದಿಂದ ಹೇಳುವೆನು ಕೇಳು ಎಂದು **ಹಂತ** ಎಂದು ಪ್ರಾರಂಭಿಸಿರುತ್ತಾರೆ. **ತೇ** - ಅಂತಹ ಶ್ರದ್ಧಾಳುವಾಗಿ ಪರಮ ಕುತೂಹಲವುಳ್ಳ ನಿನಗೆ, **ಕಥಯಿಷ್ಯಾಮಿ**—ನಿನ್ನ ಇಷ್ಟಾನುಸಾರ ವಿಸ್ತರಿಸುವೆನು. ಇದರಿಂದ ಶ್ರದ್ಧೆ ಇಲ್ಲದವನಿಗೆ ಹೇಳುವದಿಲ್ಲವು ಎಂಬುದೂ ಸೂಚಿತವು. ಉದ್ಧವರು ಪರಮ ಶ್ರದ್ಧಾಳುವಾದುದರಿಂದ ಪರಮಹಿತೋಪದೇಶವನ್ನು ಮಾಡಿದೆನು. ತನ್ನ ಪಿತಾವಾದ ವಸುದೇವನು ಶ್ರದ್ಧಾಳುವಲ್ಲದುದರಿಂದ ಉಪದೇಶಿಸಲಿಲ್ಲವು. ಜ್ಞಾನವಿಲ್ಲವೇ ಎಂದು ಶೋಕವು ಹುಟ್ಟಿದರೇನೇ ಉಪದೇಶಿಸತಕ್ಕದ್ದೇ ವಿನಾ, ವೇದಾಂತವನ್ನು ಬೀದಿಯಲ್ಲಿ ಹೋಗುವವರೆಲ್ಲರಿಗೂ ಹೇಳತಕ್ಕದ್ದಲ್ಲವೆಂದು ಶ್ರೀ ಕೃಷ್ಣಭಗವಾನರವರೇ ಗೀತಾಂತ್ಯದಲ್ಲಿ **“ ಇದಂ ತೇ ನಾತಪಸ್ಕಾಯ ”** (೧೮-೬೭) ಎಂಬ ಶ್ಲೋಕದಲ್ಲಿ ಹೇಳಿ, ಇನ್ನು ಎಂತವನಿಗೆ ಹೇಳತಕ್ಕದ್ದೆಂದರೆ, **“ ಶ್ರದ್ಧಾವಾನನಸೂಯಶ್ಚ ಶೃಣುಯಾತ್ ”** ಶ್ರದ್ಧಾಯುಕ್ತನಾಗಿ ಅಸೂಯಾರಹಿತನಿಗೆ ಉಪದೇಶಿಸತಕ್ಕದೆಂದು ಹೇಳುತ್ತಾರೆ. ಏನನ್ನು **ಕಥಯಿಷ್ಯಾಮಿ**—ಉಪದೇಶಿಸುವೆನು ಎಂದರೆ **ಆತ್ಮನಃ**—ಸ್ವಕೀಯವಾದ, **ವಿಭೂತೀಃ ಪ್ರಾಧಾನ್ಯತಃ ಶುಭಾಃ**— ಯಾವ ವಿಭೂತಿಗಳು ತುಂಬಾ ಮಹಿಮೆಯುಳ್ಳವುಗಳಾಗಿ ತುಂಬಾ ಮಂಗಳಕರವಾದವೆಂದು ಎಣಿಸಲ್ಪಟ್ಟಿವೆಯೋ ಅಂತವುಗಳನ್ನು, **ಕಥಯಿಷ್ಯಾಮಿ**—ಹೇಳುವೆನು. ಪ್ರಾಧಾನ್ಯತೆಯಿಂದ ಶುಭಗಳಾಗಿರುವುವುಗಳನ್ನು ಮಾತ್ರ ವಿಸ್ತರಿಸಿ ಹೇಳುವದು ನ್ಯಾಯವೋ ಎಂದರೆ, **ನಾಸ್ತ್ಯನ್ತೋ ವಿಸ್ತರಸ್ಯ ಮೇ**—ನಾನು ವಿಭೂತಿಗಳನ್ನು ವಿಸ್ತರಿಸಿ ಹೇಳುವದೂ ಸಾಧ್ಯವಿಲ್ಲವು. ಒಂದುವೇಳೆ ನನಗೆ ಸಾಧ್ಯವೆಂದರೂ, ನಿನಗೆ ಅದನ್ನು ಕೇಳಿ ತಿಳಿಯಲು ಸಾಧ್ಯವಿಲ್ಲವು. ಆಗಲಿ, ನಿನ್ನ ಕೃಪೆಯಿಂದಲಾಗಲಿ ತಿಳಿಯಕೂಡದೋ ಎನ್ನುತ್ತೀಯೋ, **ಮೇ**—ನನ್ನ, **ವಿಸ್ತರಸ್ಯ**—ವಿಭೂತಿಗಳನ್ನು ವಿಸ್ತರಿಸಿ ಹೇಳುವದಕ್ಕೆ **ನಾಸ್ತ್ಯನ್ತಃ**—ಕೊನೆಯೇ ಇಲ್ಲದೇ ಹೋಗುತ್ತದೆ, ನಾನು ಹೇಳುತ್ತಲೇ ಇರಬೇಕಾಗುತ್ತದೆ. ನೀನು ಕೇಳುತ್ತಲೇ ಇರಬೇಕಾಗುತ್ತದೆ; ಬೇಜಾರಿನಿಂದ ಸುಮ್ಮನಾಗಬೇಕೇ ವಿನಾ, ವಿಭೂತಿವಿಸ್ತರವು ಮುಗಿಯಿತು ಎಂದಲ್ಲವು ಎಂಬ ಭಾವವು. ಈ ಅಭಿಪ್ರಾಯವೇ ಮುಂದೆಯೂ **“ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ”** (ಗೀ. ೧೦-೪೦) ಎಂದು ಅನುವಾದ ಮಾಡಲ್ಪಡುತ್ತದೆ. ಈ ಸಂದರ್ಭದಲ್ಲಿ **“ಇಷು ಕ್ಷಯಾನ್ನಿವರ್ತಂತೇ ನಾಂತರಿಕ್ಷ ಕ್ಷಿತಿಕ್ಷಯಾತ್ । ಮತಿಕ್ಷಯಾನ್ನಿವರ್ತನ್ತೇ”** ಎಂಬ ಶ್ಲೋಕವು ಅನುಸಂಧೇಯವು. ಇದು ಕಲ್ಯಾಣ ಗುಣಗಣಯೋಗ ವಿಷಯವಾಗಿ ಹೇಳಲ್ಪಟ್ಟಿದೆ; ವಿಭೂತಿಯು ಹೇಗೋ, ಆತನ ಕಲ್ಯಾಣಗುಣಗಣವನ್ನು ವಿಸ್ತರಿಸಿ ಹೇಳುವದು ಸಾಧ್ಯವಲ್ಲವೆಂದು ಹೇಳಲ್ಪಟ್ಟಿರುತ್ತದೆ. ಪರಮಾತ್ಮನ ಕಲ್ಯಾಣಗುಣಗಣಯೋಗವನ್ನು ತಿಳಿಯುವದು ಅಸಾಧ್ಯವೆಂದು ಶ್ರುತಿಯು, ಪರಮಾತ್ಮನ ಆನಂದದ ಎಲ್ಲೆಯನ್ನು ತಿಳಿಯಲು ಸಾಧ್ಯವಿಲ್ಲದೆ **“ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾಸಹ”** ಎಂದು ಹೇಳಿ ಸುಮ್ಮನಾಯಿತು. ಹಾಗೇಯೇ **“ಯಥಾ ರತ್ನಾನಿ ಜಲಧೇರಸಂಖ್ಯೇಯಾನಿ ಪುತ್ರಕ । ತಥಾ ಗುಣಾಶ್ಚ ದೇವಸ್ಯ ತ್ವಸಂಖ್ಯೇಯಾ ಹಿ ಚಕ್ರಿಣಃ”** (ವಾಮನಪುರಾಣ ೭೪-೭೦) **“ವರ್ಷಾಯುತೈರ್ಯಸ್ಯ ಗುಣಾನಶಕ್ಯಾವಕ್ತುಂ ಸಮೇತೈರಪಿ ಸರ್ವದೇವೈಃ । ಚತುರ್ಮುಖಾಯುರ್ಯದಿಕೋಟಿವಕ್ತ್ರೋ ಭವೇನ್ನರಃ ಕ್ವಾಪಿ ವಿಶುದ್ಧಚೇತಾಃ । ಸ ತೇ ಗುಣಾನಾಮಯುತೈಕಮಂಶಂ ವದೇನ್ನವಾ ದೇವವರಪ್ರಸೀದ”**(ಭಾರತ. ಭೀಷ್ಮಪರ್ವ)ಎಂಬ ಶ್ಲೋಕಗಳುಅನುಸಂಧೇಯಗಳು,

**ಧಾ. ಹೇ ಕುರುಶ್ರೇಷ್ಠ ಮದೀಯಾಃ ಕಲ್ಯಾಣೀರ್ವಿಭೂತೀಃ ಪ್ರಾಧಾನ್ಯತಸ್ತೇ ಕಥಯಿಷ್ಯಾಮಿ; ಪ್ರಾಧಾನ್ಯ ಶಬ್ದೇನೋತ್ಕರ್ಷೋ ವಿವಕ್ಷಿತಃ (೧)"ಪುರೋಧಸಾಂ ಚ**

---

ಈ ವಿಭೂತಿ ವರ್ಗವು ಲೀಲಾವಿಭೂತಿ ನಿತ್ಯವಿಭೂತಿ ಎಂದು ಎರಡಾಗಿ ವಿಭಕ್ತವೆಂದು ಶ್ರೀ ಪರಾಶರಭಟ್ಟರು **"ಲೀಲಾಯಾಮಖಿಲಂ ಚರಾಚರಮಿದಂ ಭೋಗೇ ವಿಭೂತಿಃ ಪರಾ"** ಎಂದು ಸೃಷ್ಟಿಗೆ ಒಳಗಾದ ಲೀಲಾ ವಿಭೂತಿ ಎಂದೂ ಹಾಗೆ ಸೃಷ್ಟಿಗೆ ಒಳಗಾಗದ ನಿತ್ಯವಿಭೂತಿ ಎಂದೂ ಎರಡು ವಿಧವೆಂದೂ, **"ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ"** ಎಂಬ ಪುರುಷ ಸೂಕ್ತ ವಿಭಾಗದ ರೀತ್ಯಾ ಹೇಳಿರುತ್ತಾರೆ. ಆದರೆ ಈಗ ಶ್ರೀ ಕೃಷ್ಣನು ವಿಸ್ತರಿಸಿ ಉಪದೇಶಿಸುವದು ಲೀಲಾವಿಭೂತಿಯೋ ನಿತ್ಯವಿಭೂತಿಯೋ ಎಂದು ಪ್ರಶ್ನಿಸಿದರೆ, ಮಾಹಾತ್ಮ್ಯಯಿಂದ ಪ್ರಧಾನವಾದುದು ಎರಡು ವಿಭೂತಿಯಲ್ಲೂ ಇರುವದರಿಂದ ಎರಡನ್ನೂ ಸೇರಿಸಿ ಹೇಳುತ್ತಾರೆ. ಆದರೆ ಅರ್ಜುನನು ಲೀಲಾವಿಭೂತಿಗೆ ಸೇರಿದವನಾದುದರಿಂದ ಪ್ರಾಧಾನ್ಯತಃ ಲೀಲಾವಿಭೂತಿಗೆ ಸಂಬಂಧಿಸಿದವುಗಳೇ ಹೇಳಲ್ಪಡುವುವು. ಇದರಿಂದ ನಿತ್ಯವಿಭೂತಿಗೆ ಸೇರಿದ ವಿರಜಾ, ಐರಂಮದೀಯ, ಸಹಸ್ರತೂಣೀರ ಮಂಟಪಾದಿಗಳೂ ನಿತ್ಯಸೂರಿಗಳೂ ಸಹ ಏಕೆ ಹೇಳಲ್ಪಡಲಿಲ್ಲವೆಂದು ಆಕ್ಷೇಪಿಸತಕ್ಕದ್ದಲ್ಲವು. ಎಷ್ಟು ಪ್ರಕೃತವೋ ಅಷ್ಟುಮಾತ್ರವೇ ಉಪದೇಶಿಸಲ್ಪಟ್ಟಿರುತ್ತದೆ. ಉಪದೇಶ ಸರ್ವಸ್ವವು ಅದರಲ್ಲಿ ಅಡಗಿರಲು ಪ್ರಕರಣವಿಲ್ಲವು. **ಅನಂತಃ, ಗಾಯತ್ರೀ, ರಾಮಃ, ಕಾಲಃ, ವಿಷ್ಣುಃ, ಏಕಮಕ್ಷರಂ, ವೈನತೇಯಃ, ವಾಸುದೇವಃ, (ಪರಂ) ತೇಜಃ,** ಇತ್ಯಾದಿಗಳಾದ ಮುಂದೆ ಹೇಳುವವುಗಳು ನಿತ್ಯಗಳಾದವೆಂದು ಭಾವಿಸತಕ್ಕದ್ದು. ಇಲ್ಲಿ **ಶುಭಾಃ ವಿಭೂತೀಃ** ಎಂದು ಹೇಳಿರುವದರಿಂದ, ಅಶುಭವಿಭೂತಿಯೂ ಬೇಕಾದಷ್ಟು ಉಂಟು; ಚೇತನ ವರ್ಗದಲ್ಲಿ ಶುಭರಾದವರು ನಿತ್ಯರೂ ಮುಕ್ತರೂ, ನಾರದ, ವ್ಯಾಸ ಮೊದಲಾದ ಮಹರ್ಷಿಗಳೂ ಲೋಕಾಧಿಪತಿಗಳೂ ಮೊದಲಾದವರೂ ಉಂಟು; ಅಶುಭರಲ್ಲಿ ಅಸುರ ರಾಕ್ಷಸರೂ ಲೋಕಕಂಟಕರಾದ ನರಾಧಮರೂ ಎಲ್ಲಾ ಉಂಟು: ಇಂತಹ ಸುಕೃತಿ ದುಷ್ಕೃತಿಗಳ ಕರ್ಮಾನುಗುಣಭೋಗಕ್ಕಾಗಿ ಶುಭಾಶುಭ ಅಚಿದ್ವರ್ಗವೂ ವಿವಿಧ ವಿಚಿತ್ರವಾಗಿ ಅನಂತವಾಗಿವೆ. ಈಗ ಅರ್ಜುನನಿಗೆ ಮುಖ್ಯವಾಗಿ ತಿಳಿಸತಕ್ಕದ್ದು ಯಾವುವೆಂದರೆ ಶುಭಗಳಾದ ವಿಭೂತಿಗಳಲ್ಲಿ ಪ್ರಧಾನವಾಗಿ ಮಾಹಾತ್ಮ್ಯಯುಳ್ಳವು ಯಾವುವು ಎಂಬುದು ಮಾತ್ರ ಹೇಳಲ್ಪಡುವವು. ಅಂತಹ ಶ್ಲಾಘನೀಯವಿಭೂತಿಗಳಿಗೆಲ್ಲಾ ನಾನು ಅಂತರಾತ್ಮವಾಗಿ ನಿಯಾಮಕನೆಂಬ ಭಾವವನ್ನಿಟ್ಟು ನನ್ನನ್ನು ಧ್ಯಾನಿಸು ಎಂದು ಉಪದೇಶಿಸುತ್ತಾರೆ. ||೧೯||

**ಭಾಷ್ಯಾರ್ಥವು:**—ಸರ್ವೇಶ್ವರನಾದ ಶ್ರೀ ಕೃಷ್ಣನು ತನ್ನ ಪ್ರಿಯ ಭಕ್ತನಿಗೆ ಅತೃಪ್ತಿಯುಂಟಾಗಿದೆಯೆಂಬುದನ್ನು ತಿಳಿದವನಾಗಿ, ಆದರಿಂದ ಪ್ರಸನ್ನನಾಗಿ, ಇಂತಹ ಶ್ರದ್ಧೆಯುಳ್ಳವನಿಗೆ ಹೆಚ್ಚಿನ ಉಪದೇಶವು ಸಾರ್ಥಕವೆಂದು ಭಾವಿಸಿದವನಾಗಿ, ತನ್ನ ವಿಭೂತಿಯನ್ನು ಸಮಗ್ರವಾಗಿ ಉಪದೇಶಿಸುವದೂ ಆತನು ಅದನ್ನೆಲ್ಲಾ ಕೇಳಿ ತಿಳಿಯುವದೂ ಎರಡೂ ಅಸಾಧ್ಯವೆಂದು ಯೋಚಿಸಿ ವಿಭೂತಿಗಳಲ್ಲಿ ಕೆಲವು ಮಹತ್ತಾದವುಗಳು ಯಾವುವೆಂಬುದನ್ನು ತಿಳಿಸುತ್ತಾರೆ—**ಹೇ ಕುರುಶ್ರೇಷ್ಠ**—ಕುರುಕುಲದಲ್ಲಿ ಶ್ರೇಷ್ಠನಾದ ಅರ್ಜುನನೇ, **ಮದೀಯಾಃ**—ನನ್ನ ಸಂಬಂಧವಾದ ಸಂಬಂಧವು ಹೇಗೆಂದರೆ, ಶರೀರಾತ್ಮಭಾವದಿಂದ, ನನ್ನ ಸಂಬಂಧವಾದ ನನಗೆ ಅಪೃಥಕ್ಸಿದ್ಧ ವಿಶೇಷಣಗಳಾದ, **ಕಲ್ಯಾಣೀರ್ವಿಭೂತೀಃ**-ಶುಭಕರಗಳಾದ ವಿಭೂತಿಗಳನ್ನು, **ಪ್ರಾಧಾನ್ಯತಃ**-ಮುಖ್ಯವಾದವುಗಳು ಯಾವುವೋ ಅವು. **ತೇ**—ಅನಸೂಯುವಾಗಿ, ಶ್ರದ್ಧಾಳುವಾಗಿ, ಇನ್ನೂ ಹೆಚ್ಚಾಗಿ ತಿಳಿಯಬೇಕೆಂಬ ಆಸಕ್ತಿಯುಳ್ಳ ನಿನಗೆ, **ಕಥಯಿಷ್ಯಾಮಿ**—ನಿನ್ನ ಅಪೇಕ್ಷಾನುಗುಣ

ಭಾ. **ಮುಖ್ಯಂ ಮಾಂ" ಇತಿ ಹಿ ವಕ್ಷ್ಯತೇ; ಜಗತ್ಸೂತ್ಕೃಷ್ಟಾಃ ಕಾರ್ತ್ಸ್ನೇನ ವಿಭೂತೀಃ ವಕ್ಷ್ಯಾಮಿ. ವಿಸ್ತರೇಣ ವಕ್ತುಂ ಶ್ರೋತುಂಚ ನಶಕ್ಯತೇ, ತಾಸಾಮಾನನ್ತ್ಯಾತ್; ವಿಭೂತಿತ್ವಂ ನಾಮ ನಿಯಮನತ್ವಂ, ಸರ್ವೇಷಾಂ ಭೂತಾನಾಂ ಬುದ್ಧ್ಯಾದಯಃ**

---

ವಾಗಿ ಹೇಳುವೆನು. **ಪ್ರಾಧಾನ್ಯಶಬ್ದೇನ**—ಪ್ರಾಧಾನ್ಯವೆಂಬ ಪ್ರಯೋಗದಿಂದ, **ಉತ್ಕರ್ಷೋ ವಿವಕ್ಷಿತಃ**—ಉತ್ಕೃಷ್ಟತೆಯನ್ನು ಹೇಳುವ ಅಭಿಪ್ರಾಯವು. ಅದನ್ನು ಹೇಗೆ ಹೇಳುತ್ತೀರಿ ಎಂದರೆ ಅದಕ್ಕೆ ಸಾಧಕವಾಗಿ ಪ್ರಮಾಣವನ್ನು ಉದಾಹರಿಸುತ್ತಾರೆ. (೧) **ಪುರೋಧಸಾಂ ಚ ಮುಖ್ಯಂ ಮಾಂ"** "ಪುರೋಹಿತರುಗಳಲ್ಲಿ ಮುಖ್ಯನಾಗಿ ಎಂದರೆ ಉತ್ಕೃಷ್ಟನಾದ **ಬೃಹಸ್ಪತಿ** ಎಂದು ನನ್ನನ್ನು ತಿಳಿ" ಇಲ್ಲಿ **ಪ್ರಧಾನ** ಶಬ್ದದ ಹಾಗೆ ಮುಖ್ಯಶಬ್ದವೂ ಉತ್ಕೃಷ್ಟತೆಯಿಂದ ಮುಖ್ಯತ್ವವನ್ನು ಸೂಚಿಸುತ್ತದೆ. ಹಾಗೆ **ಬೃಹಸ್ಪತಿ** ಶಬ್ದವಲ್ಲಿ ಬೃಹತ್ ಶಬ್ದವೂ, ಪತಿಶಬ್ದವೂ ಸಹ, ಉತ್ಕೃಷ್ಟತೆಯನ್ನೇ ಬೋಧಿಸುತ್ತವೆ. **" ಇತಿ ಹಿ ವಕ್ಷ್ಯತೇ "** ಹೀಗಲ್ಲವೇ ಮುಂದೆ ಹೇಳಲ್ಪಡುತ್ತದೆ. ಇದರಿಂದ ಉತ್ಕೃಷ್ಟವಾದುವುಗಳನ್ನೇ ಶ್ರೀ ಕೃಷ್ಣನು ಬೋಧಿಸುತ್ತಾನೆಂಬ ಭಾವವು. ಆದುದರಿಂದ ತಾತ್ಪರ್ಯಾಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. **ಜಗತ್ಸೂತ್ಕೃಷ್ಟಾಃ** ಜಗತ್ತಿನಲ್ಲಿ ಉತ್ಕೃಷ್ಟತೆಯನ್ನು ಹೊಂದಿದ, **ಕಾರ್ತ್ಸ್ನೇನವಿಭೂತೀಃ**—ಎಲ್ಲವನ್ನೂ ಸಮಗ್ರವಾಗಿ ಹೇಳಲು ಸಾಧ್ಯವಲ್ಲದುದರಿಂದ ಏನೋ ಕೆಲವು ನಿಯಾಮ್ಯ ವರ್ಗಗಳನ್ನು, **ವಕ್ಷ್ಯಾಮಿ**—ಹೇಳುವೆನು,ಅದು ಏಕೆ ಎಂದರೆ, ವಿಸ್ತಾರವಾಗಿ, **ವಕ್ತುಂಶ್ರೋತುಂಚ** ನಾನು ಹೇಳುವದಕ್ಕೂ, ನೀನು ಕೇಳುವದಕ್ಕೂ, **ನಶಕ್ಯತೇ**—ಸಾಧ್ಯವಲ್ಲವು ಕಾರಣವೇನೆಂದರೆ **ತಾಸಾಂ**—ಅಂತಹ ವಿಭೂತಿಗಳಿಗೆ, **ಆನನ್ತ್ಯಾತ್**-ಅಂತವೇ ಇಲ್ಲದಿರುವದರಿಂದ, ಈ ಅರ್ಥಾಭಿಪ್ರಾಯವು ಮೂಲದಲ್ಲಿ ಎಲ್ಲಿ ತೋರಿಬರುತ್ತದೆ? ಎಂದು ಕೇಳಿದರೆ, **ನಾಸ್ತ್ಯನ್ತಃ** ಎಂದು ಹೇಳಿರುವದರಿಂದ ಅಂತವಿಲ್ಲದುದನ್ನು ಸಮಗ್ರವಾಗಿ ವಿಸ್ತರಿಸಿ ಹೇಳಲು ಸಾಧ್ಯವಿಲ್ಲವೆಂಬುದು ವ್ಯಕ್ತವು. ಸಮಗ್ರವಾಗಿ ವಿಸ್ತರಿಸಿ ಹೇಳಬೇಕೆಂದು ಪ್ರಾರ್ಥಿಸಿದವನಿಗೆ,ಪ್ರಾಧಾನ್ಯತಃ ಉತ್ಕರ್ಷವನ್ನು ಪ್ರಕಟಿಸುವ ಕೆಲವು ವಿಭೂತಿಗಳನ್ನು ಮಾತ್ರ ಹೇಳಿಬಿಡುವದು ನ್ಯಾಯವೋ ಎಂದರೆ **ತಾಸಾಂ ಆನನ್ತ್ಯಾತ್**—ಅವುಗಳು ಅನಂತಗಳಾದುದರಿಂದ ಹೇಳಲೂ ಸಾಧ್ಯವಲ್ಲವು, ಕೇಳಲೂ ಸಾಧ್ಯವಲ್ಲವು ಎಂದು **ನಾಸ್ತ್ಯನ್ತೋ ವಿಸ್ತರಸ್ಯ ಮೇ** ಎಂಬುವದಕ್ಕೆ ವ್ಯಾಖ್ಯಾನಮಾಡಿದರು. ಈ ಅಭಿಪ್ರಾಯವೇ ಮುಂದಕ್ಕೆ ೪೦ ನೆಯ ಶ್ಲೋಕದಲ್ಲಿ **"ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ"** ಎಂಬಲ್ಲಿ ಅನುವಾದಮಾಡಿ ಹೇಳಲ್ಪಟ್ಟಿರುತ್ತದೆ. **ವಿಭೂತಿತ್ವ** ವೆಂದರೇನು ಎಂಬುವದಕ್ಕೆ ಅರ್ಥಬರೆಯುತ್ತಾರೆ. **ವಿಭೂತಿತ್ವಂ ನಾಮನಿಯಾಮ್ಯತ್ವಂ**-ವಿಭೂತಿತ್ವವೆಂದರೆ ಸರ್ವೇಶ್ವರನಿಂದ ನಿಯಮಿಸಲ್ಪಡೋಣವು; ಹೀಗೆ ಅರ್ಥಮಾಡಲು ಕಾರಣವೇನೆಂದರೆ ಅದಕ್ಕೆ ಹೇತುವನ್ನು ತಿಳಿಸುತ್ತಾರೆ. **ಸರ್ವೇಷಾಂ ಭೂತಾನಾಂ** ಸಮಸ್ತ ಅಚಿದ್ವಿಶಿಷ್ಟವಾದ ಪ್ರಾಣಿಗಳ. **ಬುದ್ಧ್ಯಾದಯಃ**-ಬುದ್ಧಿಯೇ ಮೊದಲಾದವು, ಆದಿಶಬ್ದದಿಂದ ಸಙ್ಕಲ್ಪ ಮೊದಲಾದವುಗಳು ಹೇಳಲ್ಪಟ್ಟವು **ಪೃಥಗ್ವಿಧಾ ಭಾವಾಃ**—ನಾನಾವಿಧಗಳಾದ ಮನಸ್ಸಿನ ಭಾವಗಳು, **ಮತ್ತಏವ ಭವನ್ತೀತಿ**-ನನ್ನ ಮೂಲಕವಾಗಿಯೇ ಉಂಟಾಗುತ್ತವೆಂದು, **ಉಕ್ತ್ವಾ**—ಹೇಳಿ, **"ಏತಾಂ ವಿಭೂತಿಂ ಯೋಗಂಚ ಮಮ ಯೋ ವೇತ್ತಿ ತತ್ತ್ವತಃ**-ಯಥಾರ್ಥವಾಗಿ ಹೇಗೆ ಇರುತ್ತವೋ ಹಾಗೆಯೇ ಈ ಸರ್ವಭೂತಗಳ ನಿಯಮನವನ್ನೂ ನನ್ನ ಸೃಷ್ಟಿಯೇ ಮೊದಲಾದುವುಗಳಿಗೆ ಉಪಯುಕ್ತವಾಗಿರುವ ಯೋಗವನ್ನೂ ಸಹ ಯಾವನು ತಿಳಿಯುವನೋ." ಎಂದು, ಹಿಂದೆ **ಪ್ರತಿಪಾದನಾತ್**—ಪ್ರತಿಪಾದಿ

(೧) ಗೀ. ೧೦.೨೪

**ಭಾ. ಪೃಥಗ್ವಿಧಾ ಭಾವಾ ಮತ್ತ ಏವ ಭವಂತೀತ್ಯುಕ್ತ್ವಾ । (೧) ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ" ಇತಿ ಪ್ರತಿಪಾದನಾತ್; ತಥಾ ತತ್ರ ಯೋಗ ಶಬ್ದನಿರ್ದಿಷ್ಟಂ ಸ್ರಷ್ಟೃತ್ವಾದಿಕಂ, ವಿಭೂತಿಶಬ್ದನಿರ್ದಿಷ್ಟಂ ತತ್ಪ್ರವರ್ತ್ಯತ್ವಮಿತಿ ಹ್ಯುಕ್ತಂ; ಪುನಶ್ಚ (೨) "ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ । ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವ ಸಮನ್ವಿತಾಃ ಇತಿ ॥ ೧೯ ॥**

ಸಿರುವುದರಿಂದ, ವಿಭೂತಿತ್ವವೆಂದರೆ ಸರ್ವಭೂತಗಳ ನಿಯಮನವೆಂದೇ ಅರ್ಥವೆಂಬ ಭಾವವು. ಆದರೆ ಹಿಂದೆ ೭ನೇ ಶ್ಲೋಕದಲ್ಲಿ ವಿಭೂತಿ ಶಬ್ದಕ್ಕೆ ಅರ್ಥಮಾಡಿದುದಕ್ಕೂ ಇದಕ್ಕೂ ಏನಾದರೂ ವ್ಯತ್ಯಾಸ ಉಂಟೋ ? ಎಂದರೆ ಎರಡರ ತಾತ್ಪರ್ಯವೂ ಒಂದೇ ಎಂದು ತಿಳಿಸುತ್ತಾರೆ. **ತಥಾ**-ಹಾಗೆಯೇ, **ತತ್ರ**-ಆ ಸಂದರ್ಭದಲ್ಲಿ, **ಯೋಗಶಬ್ದನಿರ್ದಿಷ್ಟಂ** - ಯೋಗಶಬ್ದದಿಂದ ಹೇಳಲ್ಪಟ್ಟ **ಸ್ರಷ್ಟೃತ್ವಾದಿಕಂ** - ಸೃಷ್ಟಿಮಾಡುವುದೇ ಮೊದಲಾದುವನ್ನೂ, **ವಿಭೂತಿ ಶಬ್ದದಿಂದ ನಿರ್ದಿಷ್ಟಂ**-ಹೇಳಲ್ಪಟ್ಟ, **ತತ್ಪ್ರವರ್ತ್ಯಂಚ**-ಅವುಗಳ ನಿಯಮನ, **ಇತಿ ಹಿ ಉಕ್ತಂ**-ಎಂದಲ್ಲವೆ ಇಲ್ಲಿ ಹೇಳಿದುದು; ಇಷ್ಟೇ ಅಲ್ಲವು, ಹಿಂದೆ ೭ನೆಯ ಶ್ಲೋಕದಲ್ಲೂ **ಈ** ತಾತ್ಪರ್ಯವೇ ಬೋಧಿಸಲ್ಪಟ್ಟಿರುತ್ತದೆಂದು ಹೇಳುತ್ತಾರೆ.—**ಪುನಶ್ಚ**-ಪುನಃ **"ಅಹಂ ಸರ್ವಸ್ಯ ಪ್ರಭವಃ"** ಎಂಬ ಶ್ಲೋಕದಲ್ಲಿ " **ನಾನು** ಸರ್ವಸೃಷ್ಟಿಗೂ ಕಾರಣನು, ನನ್ನಿಂದಲೇ ಆ ಸೃಷ್ಟಿಸಲ್ಪಟ್ಟಿದುದೆಲ್ಲಾ ಪ್ರವರ್ತಿಸುತ್ತವೆ, ಹೀಗೇಗ ತಿಳಿದವರಾಗಿ ಪಂಡಿತರಾದ ಜ್ಞಾನಿಗಳು, ಧ್ಯಾನಕ್ಕೆ ಯೋಗ್ಯವಾದ ಮನೋಭಾವಗಳಿಂದ ಸೇರಿದವರಾಗಿ ಉಪಾಸಿಸುತ್ತಾರೆ" **ಇತಿ**-ಎಂದು ಹೇಳಲ್ಪಟ್ಟಿರುತ್ತದೆ. ಹೀಗೆ ಇವೆರಡು ಶ್ಲೋಕಗಳನ್ನು ಶ್ರೀ ಯತಿವರ್ಯರು ಇಲ್ಲಿ ಉದಾಹರಿಸಿರುವುದು ಶ್ರೀ ಕೃಷ್ಣ ಭಗವಾನರವರ ಅಭಿಪ್ರಾಯಾನುಸಾರವಾಗಿ. ೭ನೆಯ ಶ್ಲೋಕದಲ್ಲಿ ಹೇಳಿದ **ಯೋಗಂ ವಿಭೂತಿಂಚ** ಎಂಬ ಪದಗಳ ತಾತ್ಪರ್ಯವನ್ನೇ, **ಅಹಂ ಸರ್ವಸ್ಯ ಪ್ರಭವಃ** ಎಂಬಲ್ಲಿ ಅನುವಾದ ಮಾಡಿರುವ ಅರ್ಥವನ್ನೇ ಅನುಸರಿಸಿ, **ಯೋಗ ಶಬ್ದಕ್ಕೆ ಸ್ರಷ್ಟೃತ್ವಾದಿಕಂ** ಎಂಬ ಭಾಷ್ಯವನ್ನೂ, **ಮತ್ತಸ್ಸರ್ವಂ ಪ್ರವರ್ತತೇ** ಎಂಬಲ್ಲಿ ತೋರಿಬರುವ ಅರ್ಥವನ್ನೇ ಅನುಸರಿಸಿ **ವಿಭೂತಿ** ಶಬ್ದಕ್ಕೆ ಆತನಿಂದ **ಪ್ರವರ್ತ್ಯತ್ವಂ** ಎಂದು ಭಾಷ್ಯವನ್ನೂ ದಯಪಾಲಿಸಿರುತ್ತಾರೆ. ಹಿಂದೆ ೭ನೆಯ ಶ್ಲೋಕದಲ್ಲಿ **ಏತಾಂ ವಿಭೂತಿಂ ಯೋಗಂ ಚ** ಎಂಬಲ್ಲಿ **ವಿಭೂತಿಂ** ಎಂಬುದಕ್ಕೆ **ಐಶ್ವರ್ಯಂ** ಎಂದು ಹೇಳಿ, ಅದು ಎಂತಾದ್ದೆಂದರೆ **ಸರ್ವಸ್ಯ ಮದಾಯತ್ತ ಸ್ಥಿತಿ ಪ್ರವೃತ್ತಿ ರೂಪಾಂ ವಿಭೂತಿಂ** ಎಂದು ಇಲ್ಲಿನಹಾಗೆಯೇ ಅಲ್ಲಿಯೂ ವ್ಯಾಖ್ಯಾನವು. ಆದರೆ ಯೋಗ ಶಬ್ದಕ್ಕೆ ಆಗ **ಹೇಯ ಪ್ರತ್ಯನೀಕ ಕಲ್ಯಾಣಗುಣರೂಪಂ ಯೋಗಂ ಚ** ಎಂದು ಹೇಳಿ, ಇಲ್ಲಿ **ಸ್ರಷ್ಟೃತ್ವಾದಿ ಯೋಗಂ** ಎಂದು ಭಾಷ್ಯ ಬರೆದಿರುವುದು ಸರಿಯೇ? ಎಂದರೆ ಅರ್ಜುನನು ಪ್ರಾರ್ಥಿಸಿದುದಕ್ಕೆ ಹೇಳಿದ ಉತ್ತರದಲ್ಲಿ ಸ್ರಷ್ಟೃತ್ವಾದಿಯೋಗವೇ ಹೇಳಿರುವುದರಿಂದ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ. ಆದರೆ ಎರಡಕ್ಕೂ ತಾತ್ಪರ್ಯವ್ಯತ್ಯಾಸವೋ ಎಂದರೆ ಏನೂ ಇಲ್ಲವು. ಹೇಗೆಂದರೆ **ಸ್ರಷ್ಟೃತ್ವಾನಿ** ಎಂದು ಆದಿಪದದಿಂದ ಪಾಲನ ಪ್ರಲಯಗಳು ಹೇಳಲ್ಪಟ್ಟವು. ಪಾಲನಕ್ಕೆ ಗುಣಾಕರಯೋಗವು ಅತ್ಯಾವಶ್ಯಕವಾಗುವುದರಿಂದ ಎರಡು ಕಡೆಯಲ್ಲಿಯೂ ತಾತ್ಪರ್ಯವು ಒಂದೇಯಾಗಿ ಏಕಕಂಠ್ಯವೇ ಇರುತ್ತದೆ. ಉಪಾಸಕನಿಗೆ ಮುಖ್ಯವಾಗಿ ತಾನು ಉಪಾಸಿಸುವ ವಸ್ತುವು ಹೇಯಪ್ರತ್ಯನೀಕತ್ವ, ಕಲ್ಯಾಣಗುಣಾಕರತ್ವ, ಸರ್ವಶರೀರಕತ್ವ, ಸರ್ವಾತ್ಮಕತ್ವ

(೧) ಗೀ. ೧೦.೭ (೨) ಗೀ. ೧೦.೮.

**ಭಾ. ಅ. ತತ್ರ ಸರ್ವಭೂತಾನಾಂ ಪ್ರವರ್ತನರೂಪಂ ನಿಯಮನ ಮಾತ್ಮತಯಾಽವಸ್ಥಾಯೇತೀಮಮರ್ಥಂ ಯೋಗಶಬ್ದನಿರ್ದಿಷ್ಟಂ ಸರ್ವಸ್ಯ ಸ್ರಷ್ಟೃತ್ವಂ ಪಾಲಯಿತೃತ್ವಂ ಸಂಹರ್ತೃತ್ವಂ ಚೇತಿ ಸುಸ್ಪಷ್ಟಮಾಹ—**

ಸರ್ವನಿಯಂತೃತ್ವ, ವಿಭೂತಿತ್ವ ಇವುಗಳಿಂದ ಯುಕ್ತನಾದ ಪರಿಪೂರ್ಣ ಪರಬ್ರಹ್ಮನೆಂಬ ಜ್ಞಾನ ವಿರಬೇಕೆಂಬುದು ಮುಖ್ಯಾಶಯವು; ಹೀಗೆ ಗೀತೆಯಲ್ಲಿ ವಿಶಿಷ್ಟಾದ್ವೈತಭಾವವೇ ಬೋಧಿತವೇ ವಿನಾ, ನಿರ್ಗುಣತ್ವವನ್ನಾಗಲಿ ವಿಭೂತಿಯಾದ ಜಗತ್ತಿನ ಮಿಥ್ಯಾತ್ವವನ್ನಾಗಲಿ ಎಲ್ಲಿಯೂ ಬೋಧಿಸಿಲ್ಲವು. ಹೀಗೆ ಎರಡು ಶ್ಲೋಕಕ್ಕೂ ಏಕಕಂಠ್ಯದಿಂದ ಹಾಗೆ ಅರ್ಥಮಾಡಿರುವದೇನೋ ಯುಕ್ತವೆಂದು ಭಾವಿಸೋಣ. ಇನ್ನು ಯಾರಾದರೂ ಜ್ಞಾನಿಗಳು ವಿಭೂತಿಶಬ್ದಕ್ಕೆ ಹಾಗೆ ಅರ್ಥ ಮಾಡಿರುತ್ತಾರೆಯೇ? ನಿಯಮನವಾಗಲಿ, ನಿಯಾಮ್ಯವರ್ಗವೆಂದಾಗಲಿ ವಿಭೂತಿಶಬ್ದಕ್ಕೆ ರೂಢಿಯಲ್ಲುಂಟೋ? ಎಂದು ಕೇಳಿದರೆ, ಶ್ರೀ ವ್ಯಾಸರ ತಂದೆಗಳಾದ ಶ್ರೀ ಪರಾಶರರೂ ಹಾಗೆಯೇ ಪ್ರಯೋಗಿಸಿರುತ್ತಾರೆ.

**(೧) ಬ್ರಹ್ಮಾ ದಕ್ಷಾದಯಃ ಕಾಲಸ್ತಥೈವಾಖಿಲಜನ್ತವಃ । ವಿಭೂತಯೋ ಹರೇರೇತಾ ಜಗತಸ್ಸೃಷ್ಟಿ ಹೇತವಃ ॥ ವಿಷ್ಣು ರ್ಮನ್ವಾದಯಃ ಕಾಲ ಸ್ಸರ್ವಭೂತಾನಿ ಚ ದ್ವಿಜ । ಸ್ಥಿತೇ ರ್ನಿಮಿತ್ತಭೂತಸ್ಯ ವಿಷ್ಣೋರೇತಾವಿಭೂತಯಃ॥ ರುದ್ರಃ ಕಾಲಾನ್ತಕಾದ್ಯಾಶ್ಚ ಸಮಸ್ತಾಶ್ಚೈವ ಜಂತವಃ । ಚತುರ್ಧಾಪ್ರಲಯಾಯ್ತೈತಾ ಜನಾರ್ದನ ವಿಭೂತಯಃ॥**

ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಭೂತಗಳಾದ ವಿಭೂತಿಗಳು ಇಲ್ಲಿ ಹೇಳಲ್ಪಟ್ಟವು. ಆದರೆ ಇಲ್ಲಿ ವಿಷ್ಣುವೂ ಕೂಡ ವಿಭೂತಿಯು ಹೇಗೆ ಎಂಬ ಸಂಶಯವು ಬಾಧಿಸಬಹುದು. ಶ್ರೀವರವರ ಮುನೀಶ್ವರರು ಇದಕ್ಕೆ ಸಮಾಧಾನವಾಗಿ, ವಿಷ್ಣುಶಬ್ದದಿಂದ ವಿಷ್ಣುವಿನ ಅವತಾರರೂಪ ದಿವ್ಯ ಮಙ್ಗಳವಿಗ್ರಹವನ್ನು ವಿಭೂತಿತ್ವೇನ ಪರಿಗಣನೆಯೆಂದು ಉಪದೇಶಿಸಿರುತ್ತಾರೆ. ಆದುದರಿಂದ ವಿಭೂತಿಶಬ್ದಕ್ಕೆ ನಿಯಾಮ್ಯವರ್ಗ ಮತ್ತು ಪ್ರವರ್ತ್ಯತ್ವ ಎಂಬರ್ಥಗಳು ರೂಢಿಯಲ್ಲೂ ಸಹ ಉಂಟೆಂಬುದು ಏರ್ಪಟ್ಟಿತು.

**ಭಾಷ್ಯಾವತಾರಿಕೆಯ ಅರ್ಥವು:**—ಹಿಂದೆ ೧೮ನೆಯ ಶ್ಲೋಕದಲ್ಲಿ **"ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ"** ಎಂದು ಯೋಗ ಮತ್ತು ವಿಭೂತಿ ಎಂಬ ಎರಡು ವಿಷಯಗಳು, ಅರ್ಜುನನಿಂದ ಪ್ರಾರ್ಥಿಸಲ್ಪಟ್ಟವು. ಅವೆರಡಕ್ಕೂ ಶ್ರೀ ಕೃಷ್ಣನು ಪ್ರಥಮತಃ ಸಙ್ಗ್ರಹವಾಗಿ ಉತ್ತರವನ್ನು ಹೇಳಿ, ಅನಂತರ ವಿಸ್ತರಿಸುವದರಿಂದ, **ತತ್ರ** ಎಂದಾರಂಭಿಸಿ ಅವತಾರಿಕೆಯನ್ನು **"ಅಹಮಾತ್ಮಾ"** ಎಂಬ ಶ್ಲೋಕಕ್ಕೆ ದಯಪಾಲಿಸಿರುತ್ತಾರೆ. **ತತ್ರ** - ಪ್ರಶ್ನೆಗಳಿಗೆ ಉತ್ತರವನ್ನು ಹೇಳುವ ಸಂದರ್ಭದಲ್ಲಿ, **ಸರ್ವಭೂತಾನಾಂ** - ಸಮಸ್ತ ಪ್ರಾಣಿಗಳಿಗೂ, **ಆತ್ಮತಯಾಽವಸ್ಥಾಯ** - ಅವುಗಳಿಗೆ ಆತ್ಮವಾಗಿದ್ದುಕೊಂಡು **ಪ್ರವರ್ತನ ರೂಪಂ ನಿಯಮನಂ** - ಪ್ರವರ್ತಿಸುವಹಾಗೆ ಮಾಡುವ ನಿಯಮನವೂ, **ಇಮಂ ಅರ್ಥಂ ಇತಿ** - ವಿಭೂತಿ ಶಬ್ದದಿಂದ ಹೇಳಲ್ಪಟ್ಟದುದು ಇದೇ ಅರ್ಥವೆಂದೂ, ಯೋಗ ಶಬ್ದದಿಂದ **ನಿರ್ದಿಷ್ಟಂ** - ಯೋಗಶಬ್ದದಿಂದ ಹೇಳಲ್ಪಟ್ಟದುದು. **ಸರ್ವಸ್ಯ** - ಸಮಸ್ತ ಚಿದಚಿತ್ತುಗಳ, **ಸ್ರಷ್ಟೃತ್ವಂ ಪಾಲಯಿತೃತ್ವಂ ಸಂಹರ್ತೃತ್ವಂಚ** - ಸೃಷ್ಟಿಪಾಲನೆ ಸಂಹಾರ ಅಥವಾ ಪ್ರಳಯ ವೆಂದೂ, **ಸುಸ್ಪಷ್ಟಮಾಹ** - ಬಹು ಸ್ಪಷ್ಟವಾಗಿ ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. **ಸುಸ್ಪ** ಷ್ಟವೆಂದು ಹೇಳಿರುವದರಿಂದ ಅನ್ಯಥಾ ಅರ್ಥಮಾಡಲು ಸಾಧ್ಯವೇ ಇಲ್ಲವೆಂದೂ, ಬೇರೆಯಾಗಿ

(೧) ವಿ. ಪು. ೧-೨೨ ೩೧-೩.

**ಮೂ. ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥** ೨೦.

ಅರ್ಥ ಮಾಡಿದರೆ ಅಪಾರ್ಥವಾಗುತ್ತದೆಂದೂ ಹೇಳಿದಂತಾಯಿತು. **ಆತ್ಮತಯಾ ಅವಸ್ಥಾಯ** ಎಂದು ವ್ಯಾಖ್ಯಾನ ಮಾಡಿರುವದು ನಿಯಮನಕ್ಕೆ ಅಂತರಾತ್ಮಾವಾಗಿ ವ್ಯಾಪ್ತಿಯು ಆವಶ್ಯಕ ವೆಂದು ಉಪದೇಶಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು; **"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್"** ಎಂಬ ಮತ್ತೂ, **"ಅಂತರೋ ಯಮಯತಿ"** ಎಂದು ಹಿಂದೆ ಉದಾಹರಿಸಿರುವ ಶ್ರುತಿಗಳನ್ನು ಮನಸ್ಸಿನಲ್ಲಿಟ್ಟು ಮಾಡಿದ ಪ್ರಯೋಗವಾಗಿರುತ್ತದೆ. ಯಾವಾಗ ಈತನು ಆತ್ಮಾವಾದನೋ, ಸಮಸ್ತ ಚಿದಚಿತ್ತುಗಳೂ ಆತನಿಗೆ ಶರೀರವೆಂದು ಹೇಳುವ ಶ್ರುತಿಗಳೂ ಕೂಡ ಜ್ಞಾಪಿಸಲ್ಪಟ್ಟವು; ಶರೀರವಿಲ್ಲದೆ **ಆತ್ಮತಯಾ** ಎಂಬ ಪ್ರಯೋಗವೇ ಕೂಡುವ ದಿಲ್ಲವೆಂದು ಭಾವಿಸತಕ್ಕದ್ದು; ಹಿಂದೆ ಯೋಗಶಬ್ದ ವ್ಯಾಖ್ಯಾನದಲ್ಲಿ **ಸ್ರಷ್ಟೃತ್ವಾದಿಯೋಗಂ** ಎಂದು ೧೮ ನೆಯ ಶ್ಲೋಕಭಾಷ್ಯದಲ್ಲಿ ಮಾಡಿದುದನ್ನೇ ಇಲ್ಲಿ ವಿಸ್ತರಿಸಿ, **ಸ್ರಷ್ಟೃತ್ವಂ ಪಾಲ ಯಿತೃತ್ವಂ ಸಂಹರ್ತೃತ್ವಂ** ಎಂದು ಆದಿಶಬ್ದಾರ್ಥವನ್ನು ಬೋಧಿಸಿರುತ್ತಾರೆ. ಯಾವಾಗ ಲೀಲಯಾ ಸ್ರಷ್ಟೃತ್ವವುಂಟೋ, ಆಗ ಪಾಲಯಿತೃತ್ವವೂ ಸಂಹರ್ತೃತ್ವವೂ ಉಂಟೇ ವುಂಟೆಂಬುದು ಸಿದ್ಧವು; ಆದುದರಿಂದಲೇ **"ಜನ್ಮಾದ್ಯಸ್ಯಯತಃ"** ಎಂಬ ಸೂತ್ರವೂ ಮತ್ತು **"ವಿಷ್ಣೋಸ್ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಂ । ಸ್ಥಿತಿಸಂಯಮಕರ್ತಾಸೌ ಜಗ ತೋಽಸ್ಯ ಜಗಚ್ಚ ಸಃ"** (ವಿ. ಪು. ೧. ೧. ೩೧) ಎಂಬ ಮಹರ್ಷಿಗಳ ಪ್ರಯೋಗವೂ ಇರುತ್ತವೆ. ಶ್ರುತಿಯೂ **"ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ"** ಎಂಬಲ್ಲಿ **"ತಜ್ಜ ಲಾನ್"** ಎಂಬ ಶಬ್ದ ಮೂಲಕ ಸೃಷ್ಟಿಸ್ಥಿತಿಲಯಗಳು ಮೂರೂ ಹೇಳಲ್ಪಟ್ಟವು. ಬ್ರಹ್ಮರುದ್ರರು ಪರಮಾತ್ಮನಿಂದ ಕೊಡಲ್ಪಟ್ಟ ಒಂದೊಂದಕ್ಕೆ ಮಾತ್ರ ಶಕ್ತಿಯುಂಟಾಗಿದ್ದರೂ, ಮೂರಕ್ಕೂ ಶಕ್ತಿಉಳ್ಳವನು ಪರಬ್ರಹ್ಮಮಾತ್ರವೇ. ಯಾವಾಗ ಯೋಗಶಬ್ದನಿರ್ದಿಷ್ಟಗಳಾದ ಸೃಷ್ಟಿಸ್ಥಿತಿ ಗಳಿಗೆ ಕಾರಣಭೂತನಾಗಿ ಅವುಗಳನ್ನೇ ಶರೀರ ಮಾಡಿಕೊಂಡು ಅವುಗಳಿಗೆ ಅಂತರಾತ್ಮಾವಾಗಿ ಅನುಪ್ರವೇಶ ಮಾಡಿದನೋ, ವಿಭೂತಿತ್ವಕ್ಕೆ ಎಂದರೆ ಅವುಗಳ ನಿಯಮನಕ್ಕೂ ಕಾರಣಭೂತ ನಾಗಿ, ಅವುಗಳ ಪ್ರವೃತ್ತಿಗೂ ಹೇತುವಾಗುವನೆಂದು ಹೇಳಿ, ಹೀಗೆ ಶರೀರಾತ್ಮಭಾವವುಂಟಾಗು ವದರಿಂದ ಮೇಲಿನ ಶ್ರೀ ಪರಾಶರೋಕ್ತಿಯಲ್ಲಿ ಪ್ರದರ್ಶಿಸಲ್ಪಟ್ಟಹಾಗೆ, ಸಮಸ್ತ ವಿಭೂತಿವರ್ಗ ಮೊಂದಿಗೆ ಸಾಮಾನಾಧಿಕರಣ್ಯವೂ, ಸರ್ವಶಬ್ದವಾಚ್ಯತ್ವವೂ ಉಂಟಾಗುತ್ತದೆಂದು ಬೋಧಿಸಲು ಪ್ರಾರಂಭಿಸಿ, **"ಅಹಮಾತ್ಮಾಗುಡಾಕೇಶ"** ಎಂದು ಉಪದೇಶಿಸುತ್ತಾರೆ. ಹಿಂದೆ **ಯೋಗ**ಶಬ್ದಕ್ಕೆ ಲಕ್ಷ್ಮ್ಯಾ ನಿತ್ಯಯೋಗ, ಕಲ್ಯಾಣಗುಣಗಣಯೋಗ, ಚಿದಚಿದ್ವಿಶಿಷ್ಟರೂಪಯೋಗ, ಹೀಗೆ ಎಲ್ಲಾ ಯೋಗಕ್ಕೂ ಅರ್ಥಮಾಡಿ, ಇಲ್ಲಿ **"ಯೋಗ ಶಬ್ದನಿರ್ದಿಷ್ಟಂ ಸರ್ವಸ್ಯ ಸ್ರಷ್ಟೃತ್ವಂ. ಪಾಲ ಯಿತೃತ್ವಂ, ಸಂಹರ್ತೃತ್ವಂ** ಎಂದು, ಚಿದಚಿದ್ವಿಶಿಷ್ಟರೂಪಯೋಗ ಮಾತ್ರ ಹೇಳಿದುದು ಹೇಗೆ? ಎಂದರೆ ಈ ಶ್ಲೋಕದಲ್ಲಿ ಚಿದಚಿದ್ವಿಶಿಷ್ಟವಾದ ಜಗತ್ತಿಗೂ, ಪರಮಾತ್ಮನಿಗೂ ಶರೀರಾತ್ಮಭಾವವು ಮುಖ್ಯವಾಗಿ ಈ ಶ್ಲೋಕದಲ್ಲಿ ಉಪಪಾದಿಸಬೇಕಾಗಿರುವದರಿಂದ ಎಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು:—ಹೇ ಗುಡಾಕೇಶ**—ಗುಡಾಕ ಎಂದರೆ ನಿದ್ರೆ, ಅದಕ್ಕೆ ಈಶನು ಎಂದರೆ ನಿದ್ರೆಯನ್ನು ಜಯಿಸಿದವನು; ನಿದ್ರೆಯು ತಮೋಗುಣವನ್ನು ಸೂಚಿಸುತ್ತದೆ; ಅದ ರಿಂದುಂಟಾಗುವ ಅಜ್ಞಾನವನ್ನು ಜಯಿಸಿದವನು, ಓ ಮಹಾಪ್ರಾಜ್ಞನೇ ಎಂಬರ್ಥವು; ಅಥವಾ ಘನವಾದ ಕೇಶ ಉಳ್ಳವನೇ ಎಂದಾದರೂ ಆಗಬಹುದು. ಯೋಗ ವಿಭೂತಿಗಳ ಅಭಿಪ್ರಾಯ

**ಭಾ. ಸರ್ವೇಷಾಂ, ಭೂತಾನಾಂ ಮಮ ಶರೀರ ಭೂತಾನಾಂ, ಆಶಯೇ-ಹೃದಯೇ ಅಹ ಮಾತ್ಮತಯಾಽವಸ್ಥಿತಃ ಆತ್ಮಾ ಹಿ ನಾಮ – ಶರೀರಸ್ಯ ಸರ್ವಾತ್ಮನಾ ಆಧಾರೋ**

ವನ್ನು ಚನ್ನಾಗಿ ಗ್ರಹಿಸಬೇಕಾದರೆ ಮೊದಲು ಪ್ರತಿಜ್ಞಾವಾಕ್ಯವನ್ನು ದಯಪಾಲಿಸುತ್ತಾರೆ. **ಅಹಂ ಆತ್ಮಾ** - ನಾನು ಜಗತ್ತಿಗೆಲ್ಲಾ ಆತ್ಮಾ ಎಂದರೆ ಅವುಗಳನ್ನೆಲ್ಲಾ ವ್ಯಾಪಿಸಿ ನಿಯಾಮಕ ನಾಗಿರುವ ಅಂತರಾತ್ಮನು ಅದನ್ನೇ ಉಪಪಾದಿಸಿ ಹೇಳುತ್ತಾರೆ.–**ಸರ್ವಭೂತಾಶಯಸ್ಥಿತಃ** - **"ತತ್ಸೃಷ್ಟ್ವಾ ತದೇವಾನುಪ್ರಾವಿಶತ್"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಸಮಸ್ತ ಅಚಿ ದ್ವಿಶಿಷ್ಟವಾದ ಚಿತ್ತುಗಳಲ್ಲಿರುವವನಾಗಿರುತ್ತಾನೆ. ಹೀಗೆ ಅವುಗಳು **"ಗೂಢಮಗ್ರೇ ಪ್ರಕೇತಂ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಸೃಷ್ಟಿಗೆ ಮುಂದೆ ಸೂಕ್ಷ್ಮದೆಶೆಯಲ್ಲೂ ಮತ್ತು ಸೃಷ್ಟ್ಯನಂತರ **"ಬಹುಸ್ಯಾಂ"** ಎಂದು ಹೇಳಿರುವಹಾಗೆ, ಸ್ಥೂಲದಶೆಯಲ್ಲೂ, ಅವುಗಳನ್ನೆಲ್ಲಾ ವ್ಯಾಪಿಸಿ ಅಂತ ರಾತ್ಮಾವಾಗಿರುವದರಿಂದ ಅವುಗಳ ಸೃಷ್ಟಿ ಸ್ಥಿತಿ ಲಯಗಳಿಗೆ ನಾನೇ ಕಾರಣಭೂತನೆಂದು ಉತ್ತ ರಾರ್ಧದಿಂದ ಹೇಳುತ್ತಾರೆ. **ಅಹಂ**-ನಾನೇ, **ಭೂತಾನಾಂ**-ಅಚಿದ್ವಿಶಿಷ್ಟವಾದ ಚೇತನವರ್ಗದ, **ಆದಿಶ್ಚ ಮಧ್ಯಂಚ ಅಂತ ಏವ ಚ** - ಸೃಷ್ಟಿ, ಸ್ಥಿತಿ ಅಥವಾ ಪಾಲನ, ಲಯಗಳಿಗೆ ಕಾರಣ ಭೂತನು. ಮೂಲದಲ್ಲಿರುವ ಭೂತಶಬ್ದಕ್ಕೆ ಅಚಿದ್ವಿಶಿಷ್ಟಚಿತ್ತೆಂಬ ಅರ್ಥವು, ಇದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ. ಈ ವಿಭೂತಿಯು ಸೂಕ್ಷ್ಮದೆಶೆಯಲ್ಲಿ ಸೃಷ್ಟಿಗೆ ಮೊದಲೂ, ಸೃಷ್ಟಿ ಯಾದನಂತರ ಸ್ಥೂಲರೂಪದಲ್ಲಿರುತ್ತದೆ. ಇದು ಆತನಿಗೆ ಶರೀರವು. ಆತನು ಇದಕ್ಕೆ ಆತ್ಮಾ; ಆದುದರಿಂದಲೇ ಅದರ ನಿಯಮನಕ್ಕೆ ಕಾರಣಭೂತನಾಗಿ ಎಂದರೆ ಅವುಗಳ ಸೃಷ್ಟಿ ಪಾಲನ ಲಯಗಳಿಗೆ ಹೇತುವಾಗಿ ಅವುಗಳಿಗೆ ಪ್ರವೃತ್ತಿಯನ್ನುಂಟುಮಾಡಿರುತ್ತಾನೆ. ಶರೀರಾತ್ಮಭಾವ ಲಕ್ಷಣವು, ಹಿಂದೆ **"ಮಯಿ ಸರ್ವಮಿದಂ ಪ್ರೋತಮ್ ಸೂತ್ರೇ ಮಣಿಗಣಾ ಇವ"** (ಗೀ. ೭. ೭) ಎಂಬಲ್ಲಿ ಉಪಪಾದಿತವು, ೬೨೬ನೇ ಪುಟವನ್ನು ನೋಡಿ. ಹೀಗೆ ಶರೀರಾತ್ಮ ವಿರುವದರಿಂದ, ಶರೀರವನ್ನು ಬೋಧಿಸುವ ಶಬ್ದಗಳು ಆತ್ಮಾವನ್ನೂ ಬೋಧಿಸುವದರಿಂದ ಸಾಮಾ ನಾಧಿಕರಣ್ಯವೂ ಸರ್ವಶಬ್ದವಾಚ್ಯತ್ವವೂ, ಉಂಟಾಗುತ್ತವೆ. ಆದುದರಿಂದ ಈ ಶ್ಲೋಕದ ಉತ್ತ ರಾರ್ಧಕ್ಕೆ ಸಾಮಾನಾಧಿಕರಣ್ಯದಿಂದ, ಸೃಷ್ಟಿಸಲ್ಪಟ್ಟ ಪಾಲಿಸಲ್ಪಟ್ಟ ಲಯಹೊಂದಿಸಲ್ಪಟ್ಟವೆಲ್ಲಾ ನಾನೇ ಎಂದೂ ಅರ್ಥಮಾಡಬಹುದು. ಆದಿ ಮಧ್ಯ ಅಂತವನ್ನು ಹೊಂದಿದವು ನಾನೇ ಎಂಬ ತಾತ್ಪರ್ಯವಾದರೂ ಆಗಬಹುದು. ಈ ಸಾಮಾನಾಧಿಕರಣ್ಯವೇ **"ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ"** ಎಂಬ ಶ್ರುತಿಯಲ್ಲಿ ಹೇಳಿರುತ್ತದೆ.

**ಭಾಷ್ಯಾರ್ಥವು:**—ಮೊದಲು **ಸರ್ವಭೂತಾಶಯಸ್ಥಿತಃ** - ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ—**ಮಮ ಶರೀರಭೂತಾನಾಂ** - ನನಗೆ ಶರೀರರೂಪಗಳಾದ, **ಸರ್ವೇಷಾಂ ಭೂತಾನಾಂ** ಸಮಸ್ತ ಪ್ರಾಣಿಗಳ **ಆಶಯೇ** - ಹೃದಯದಲ್ಲಿ, **ಅಹಂ** - ನಾನು, **ಆತ್ಮತಯಾ** - ಆತ್ಮಾವಾಗಿ, **ಅವಸ್ಥಿತಃ** - ಇರುತ್ತೇನೆ. ಇಲ್ಲಿ ಮೂಲದಲ್ಲಿಲ್ಲದ **ಶರೀರ ಭೂತಾನಾಂ** ಎಂಬ ಪ್ರಯೋಗವು, **ಆತ್ಮಾ** ಎಂಬ ಶಬ್ದದಿಂದ ದ್ಯೋತಿತವಾದ ಅರ್ಥವನ್ನೂ ಸೂಚಿಸುತ್ತದೆ; ಸರ್ವೇಶ್ವರನು ಯಾವಾಗ ಸಮಸ್ತ ಭೂತಗಳಿಗೂ ಆತ್ಮಾವಾದನೋ, ಆಗ ಸಮಸ್ತ ಭೂತಗಳೂ **"ಯಸ್ಯ ಸರ್ವಾಣಿ ಭೂತಾನಿ ಶರೀರಂ"** ಎಂಬ ಶ್ರುತ್ಯನುಸಾರವಾಗಿ ಆತನಿಗೆ ಶರೀರವೆಂಬ ಭಾವವು ವ್ಯಕ್ತವು. ಸರ್ವಕ್ಕೂ ಆತ್ಮಾವಾಗಿರಬೇಕಾದರೆ ಕೆಲವರ ಅಭಿಪ್ರಾಯವು, ಆಧಾರವಾಗಿಯೂ ನಿಯಂತಾವಾಗಿಯೂ ಶೇಷಿಯಾಗಿಯೂ ಹೀಗೆ ಮೂರು ಸೇರಿದ ಲಕ್ಷಣ ವಾಗಿರಬೇಕೆಂಬುದು. ಇನ್ನೂ ಕೆಲವರ ಅಭಿಪ್ರಾಯವೂ ಒಂದೇ ಸಾಕೆಂದೂ, ಈ ಮೂರೂ

**ಭಾ. ನಿಯನ್ತಾ ಶೇಷೀಚ । ತಥಾ ವಕ್ಷ್ಯತೇ - (೧) ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತ ಸ್ಸ್ಮೃತಿರ್ಜ್ಞಾನ ಮಪೋಹನಂಚ"(೨)"ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ"**

ಮೂರು ಬೇರೆಬೇರೆ ಲಕ್ಷಣಗಳಿಂದೂ ಹೇಳುವರು. ಶ್ರೀ ಯತಿವರ್ಯರ ಅಭಿಪ್ರಾಯವು ಚೇತನನಿಗೆ ಯಾವ ದ್ರವ್ಯವು ಅಪೃಥಕ್ಸಿದ್ಧ ವಿಶೇಷಣವೋ ಅದು ಶರೀರವೆಂದೂ, ಚೇತನನು ಅದಕ್ಕೆ ಆತ್ಮಾವೆಂದೂ, ಆ ಆತ್ಮಾವಿಗೆ ಇವು ಮೂರೂ ಎಂದರೆ ಆಧಾರವಾಗಿಯೂ ನಿಯನ್ತಾವಾಗಿಯೂ ಶೇಷಿಯಾಗಿಯೂ ಇರುವ ಸಾಮರ್ಥ್ಯವುಂಟೆಂದೂ ಹೇಳಿರುತ್ತಾರೆ. ತಾವೇ ಮುಂದೆ ಶ್ರುತಿಪ್ರಮಾಣಗಳನ್ನೂ ಉದಾಹರಿಸುತ್ತಾರೆ. ಇಲ್ಲಿ **ಆತ್ಮಾ** ಎಂಬಶಬ್ದಕ್ಕೆ ಪ್ರತ್ಯಗಾತ್ಮಾ ಇತ್ಯಾದಿ ಬೇರೆ ಅರ್ಥವಲ್ಲವೆಂಬುದನ್ನು ತಿಳಿಸುವದಕ್ಕಾಗಿ, ಇಲ್ಲ **ಆತ್ಮಾ** ಎಂದರೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಆತ್ಮಾಹಿನಾಮ** - ಆತ್ಮಾ ಎಂಬುದರ ಅರ್ಥವಾದರೋ, **ಶರೀರಸ್ಯ**-ಶರೀರಕ್ಕೇನೆ, **ಸರ್ವಾತ್ಮನಾ**-ಸಂಪೂರ್ಣವಾಗಿ, ಆಧಾರವಾಗಿಯೂ, ನಿಯನ್ತಾವಾಗಿಯೂ, ಶೇಷಿಯಾಗಿಯೂ, ಇರೋಣವು. **ತಥಾ ವಕ್ಷ್ಯತೇ** - ಹಾಗೆಯೇ ಪ್ರಮಾಣಗಳು ಹೇಳುತ್ತವೆ. (೧) "**ಸರ್ವಸ್ಯ**-ಸಮಸ್ತ ಭೂತಗಳ ಮುಂದೆ **ಹೃದಿ** ಎಂಬ ಪ್ರಯೋಗವಿರುವದರಿಂದ **ಸರ್ವಸ್ಯ** - ಎಂದರೆ ಸರ್ವಭೂತಗಳು ಎಂದೇ ಅರ್ಥಮಾಡತಕ್ಕದ್ದು; **ಹೃತ್** - ಇಲ್ಲದ ಬರೀ ಅಚಿತ್ ಮಾತ್ರ ವಿವಕ್ಷಿತವಲ್ಲವು, **ಹೃದಿ**-ಹೃದಯದಲ್ಲಿ, **ಅಹಂ**-ನಾನು **ಸನ್ನಿವಿಷ್ಟಃ**-ಇರುವವನು; **ಮತ್ತಃ**-ನನ್ನಿಂದಲೇ **ಸ್ಮೃತಿಃ**-ಸ್ಮೃತಿಯೂ, ಜ್ಞಾನವೂ, ಅಪೋಹನವೂ ಎಂದರೆ ಜ್ಞಾನನಿವೃತ್ತಿಯು, ಅಥವಾ ಊಹೆಯು. ಈ ವಾಕ್ಯವಾದನಂತರ "**ದ್ವಾವಿಮೌ ಪುರುಷೌ ಲೋಕೇ**" (ಗೀ. ೧೫. ೧೬) ಎಂದೂ "**ಕ್ಷರಸ್ಸರ್ವಾಣಿಭೂತಾನಿ**" (ಗೀ. ೧೫. ೧೬) ಎಂದೂ ಹೇಳಿರುವದರಿಂದ ಸರ್ವಭೂತಗಳೆಂದೇ **ಸರ್ವಸ್ಯ** ಎಂಬುವದಕ್ಕೆ ಅರ್ಥಮಾಡತಕ್ಕದ್ದಾಗಿರುತ್ತದೆ. ಇಲ್ಲಿ **ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ** ಎಂದು ಹೇಳಿರುವದರಿಂದ ಆಧಾರವೆಂಬುದೂ, **ಮತ್ತಸ್ಸ್ಮೃತಿ ಜ್ಞಾನಮಪೋಹನಂ ಚ**" ಎಂಬುದರಿಂದ ಸರ್ವನಿಯನ್ತೃತ್ವವೂ, ಸಿದ್ಧವು. ಹೀಗೆ **ಆಧಾರನಿಯನ್ತೃತ್ವಗಳನ್ನು** ಉದಾಹರಿಸುವ ಪ್ರಮಾಣಗಳನ್ನು ಪ್ರದರ್ಶಿಸಿದರು. ಹಿಂದೆಯೂಕೂಡ "**ಮಯಿ ಸರ್ವಮಿದಂ ಪ್ರೋತಂ**" ಎಂಬಲ್ಲಿಯೂ (ಗೀ. ೭. ೭) ಹೀಗೆ ಸರ್ವಾಧಾರತ್ವವು ಉಪಪಾದಿತವು. ಮುಂದೆ ಇವುಗಳನ್ನೇ ಪ್ರತಿಪಾದಿಸುವ ಇನ್ನೊಂದು ಪ್ರಮಾಣವನ್ನು ಉದಾಹರಿಸುತ್ತಾರೆ. **ಸರ್ವಭೂತಾನಾಂ**-ಸರ್ವಭೂತಗಳಿಗೂ, **ಈಶ್ವರಃ**-ಸ್ವಾಮಿಯಾಗಿ ಎಂದರೆ ಶೇಷಿಯಾಗಿ ನಿಯಾಮಕನಾಗಿ, **ಹೃದ್ದೇಶೇಽರ್ಜುನ ತಿಷ್ಠತಿ**-ಓ ಅರ್ಜುನನೇ ಹೃದ್ದೇಶದಲ್ಲೇ ಭಗವಂತನು ಇರುತ್ತಾನೆ; ಇದರಿಂದ ಶೇಷಿತ್ವ ಆಧಾರ ಭಾವಗಳು ಹೇಳಲ್ಪಟ್ಟವು. ಹೇಗೆ ಹೃದ್ದೇಶದಲ್ಲಿದ್ದಾನೆ ? ಎಂದರೆ, **ಮಾಯಯಾ**"**ಮಾಯಾನ್ತು ಪ್ರಕೃತಿಂ ವಿದ್ಧಿ ಮಾಯಿನಂತು ಮಹೇಶ್ವರಂ**" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಪ್ರಕೃತಿಯ ಸಂಬಂಧದಿಂದ, **ಯನ್ತ್ರಾರೂಢಾನಿ**-ಯಂತ್ರಗಳಿಂದ ಸುತ್ತಿಸಲ್ಪಟ್ಟ ಬೊಂಬೆಗಳನ್ನೋಪಾದಿಯಲ್ಲಿ, ಸರ್ವಭೂತಗಳನ್ನೂ ಸುತ್ತಿಸುವವನಾಗಿ ಇದ್ದಾನೆ. ಮುಂದೆ "**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ**" ಎಂದು ಇರುವದರಿಂದ. **ಬಿಭರ್ತಿ ಈಶ್ವರಃ** ಎಂಬ ಪದಗಳಿಂದ ಆಧಾರತ್ವ ನಿಯಂತೃತ್ವಗಳು ಸ್ಪಷ್ಟವು. ಹೀಗೆಲ್ಲಾ ಇರುವದರಿಂದ ಸರ್ವಭೂತಶಬ್ದವು ಅಚಿದ್ವಿಶಿಷ್ಟ ಜೀವ ಪರವೆಂಬುದು ಸಿದ್ಧವು. **ಭ್ರಾಮಯನ್ ಸರ್ವಭೂತಾನಿ** ಎಂದು ಹೇಳಿರುವದರಿಂದ ಸರ್ವನಿಯನ್ತೃತ್ವವು ಬೋಧಿಸಲ್ಪಟ್ಟಿತು. ಮುಂದೆ

(೧) ಗೀ. ೧೫. (೨) ಗೀ. ೧೮. ೬೧.

**ಭಾ. ಇತಿ (೩) ಯಸ್ಸರ್ವೇಷು ಭೂತೇಷು ತಿಷ್ಠನ್ ಸರ್ವೇಭ್ಯೋ ಭೂತೇಭ್ಯೋಽನ್ತರೋ ಯಂ ಸರ್ವಾಣಿ ಭೂತಾನಿ ನವಿದುಃ. ಯಸ್ಯ ಸರ್ವಾಣಿಭೂತಾನಿ ಶರೀರಂ. ಯಸ್ಸರ್ವಾಣಿ ಭೂತಾನ್ಯನ್ತರೋ ಯಮಯತಿ, ಏಷ ತ ಆತ್ಮಾನ್ತರ್ಯಾಮ್ಯಮೃತಃ ಇತಿ, (೪) "ಯ ಆತ್ಮನಿ ತಿಷ್ಠನ್ನಾತ್ಮನೋಽನ್ತರೋ. ಯಮಾತ್ಮಾನವೇದ, ಯಸ್ಯಾತ್ಮಾಶರೀರಂ.**

"**ಕ್ಷರಸ್ಸರ್ವಾಣಿ ಭೂತಾನಿ**" (ಗೀ. ೧೫. ೧೬) ಎಂದಿರುವದಕ್ಕೆ ಅನುಗುಣವಾಗಿ ಸರ್ವಭೂತ ಶಬ್ದವು ಬದ್ಧ ಜೀವಾತ್ಮನನ್ನು ಬೋಧಿಸುತ್ತದೆ. ಇತಿ ಎಂದು ಮುಂದೆ ಹೇಳಲ್ಪಡುತ್ತದೆ. ಈ ಉಪದೇಶವು ಶ್ರುತ್ಯನುಸಾರವಾದುದೇ ಎಂದು ತೋರಿಸುತ್ತಾರೆ. **ಶ್ರೂಯತೇ ಚ** - ಶ್ರುತಿಯಲ್ಲೂ ಕೂಡಾ ಈ ಅಭಿಪ್ರಾಯವೇ ಹೇಳಲ್ಪಟ್ಟಿರುತ್ತದೆ. (೩) **ಯಃ** - ಯಾವ ಪ್ರಸಿದ್ಧನಾದ ಪರಮಾತ್ಮನು, **ಸರ್ವೇಷು ಭೂತೇಷು ತಿಷ್ಠನ್**-ಸಮಸ್ತ ಪ್ರಾಣಿಗಳಲ್ಲೂ ಇರುವವನಾಗಿ (ಆಧಾರತ್ವವು ಹೇಳಲ್ಪಟ್ಟಿತು,) **ಸರ್ವೇಭ್ಯೋ ಭೂತೇಭ್ಯೋ ಅನ್ತರಃ** - ಹಾಗಿದ್ದರೂ ಸಮಸ್ತ ಪ್ರಾಣಿಗಳಿಗಿಂತಲೂ ಬೇರೆಯವನಾಗಿ, ಇದರಿಂದ ನಿರ್ವಿಕಾರತ್ವವೂ ತನ್ಮೂಲಕ ಹೇಯಪ್ರತ್ಯನೀಕತ್ವವೂ ಬೋಧಿತವು. ಇದರಿಂದ ಅದ್ವೈತ ಸಿದ್ಧಾಂತಕ್ಕೂ ವಿರೋಧವು. **ಸರ್ವಾಣಿಭೂತಾನಿ**-ಹೀಗಿದ್ದರೂ, ಸಮಸ್ತಪ್ರಾಣಿಗಳೂ ಯಾವ ಭಗವಂತನನ್ನು **ನವಿದುಃ**-ತಿಳಿಯಲಾರರೋ ಎಂದು ಹೇಳಿರುವದರಿಂದ ಅಚಿತ್ಸಂಬಂಧದಿಂದ ಜ್ಞಾನತಿರೋಹಿತತ್ವವು ಸೂಚಿಸಲ್ಪಟ್ಟಿತು. **ಯಸ್ಯ ಸರ್ವಾಣಿ ಭೂತಾನಿ ಶರೀರಂ** - ಯಾವ ಪರಮಾತ್ಮನಿಗೆ ಈ ಸಮಸ್ತ ಚೇತನರೂ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವೋ, (ಇದರಿಂದ ವಿಶಿಷ್ಟಾದ್ವೈತವು ಬೋಧಿಸಲ್ಪಟ್ಟಿತು.) **ಯಃ**-ಯಾವ ಪರಮಾತ್ಮನು, **ಸರ್ವಾಣಿ ಭೂತಾನ್ಯನ್ತರೋ ಯಮಯತಿ** - ಸಮಸ್ತ ಪ್ರಾಣಿಗಳ ಒಳಗೆ ಇರುವವನಾಗಿ ಅವರನ್ನು ನಿಯಮಿಸುವನೋ, ಇದರಿಂದ ಸರ್ವಾತ್ಮಕತ್ವ ನಿಯನ್ತೃತ್ವಗಳು ಬೋಧಿಸಲ್ಪಟ್ಟವು. **ಏಷಃ**-ಅಂತಹ ಮಾಹಾತ್ಮ್ಯಯುಳ್ಳ ಈ ಪರಮಾತ್ಮನು, **ತೇ**-ಆ ಕಾರಣದಿಂದ ನಿನಗೂ ಸಹ, **ಆತ್ಮಾ**-ಅಂತರಾತ್ಮನಾಗಿ, **ಅಹಮಾತ್ಮಾ ಗುಡಾಕೇಶ** ಎಂಬಲ್ಲಿರುವ ಅರ್ಥವು ಬೋಧಿತವು. **ಅಂತರ್ಯಾಮಿಯಾಗಿರುವ ಅಮೃತಃ**-ಆನಂದ ಸ್ವರೂಪನು." ಇತಿ ಎಂದು ಹೇಳಲ್ಪಟ್ಟಿರುತ್ತದೆ. ಮತ್ತು (೪) "**ಯಃ**-ಯಾವ ಪ್ರಸಿದ್ಧನಾದ ಪರಮಾತ್ಮನು, **ಆತ್ಮನಿ ತಿಷ್ಠನ್** - ಈ ಪ್ರತ್ಯಗಾತ್ಮನಲ್ಲೂ ಇರುವವನಾಗಿ, **ಆತ್ಮನೋ ಅನ್ತರಃ** - ಈ ಪ್ರತ್ಯಗಾತ್ಮನಿಗಿಂತ ಬೇರೆಯಾಗುವವನೋ, ಜೀವಾತ್ಮ ಪರಮಾತ್ಮ ಭೇದವು ಉಪದೇಶಿಸಲ್ಪಟ್ಟಿತು; ಹೀಗೆ ಪರಮಾತ್ಮ ಸಂಬಂಧವಿದ್ದರೂ, **ಯಮಾತ್ಮಾ ನವೇದ** - ಆ ಪರಮ ಪುರುಷನನ್ನು ಈ ಪ್ರತ್ಯಗಾತ್ಮನು ತಿಳಿಯಲಾರನೋ; **ಯಸ್ಯಾತ್ಮಾ ಶರೀರಂ** - ಯಾವ ಪರಮಾತ್ಮನಿಗೆ ಈ ಜೀವಾತ್ಮನು ಶರೀರವೋ, **ಯ ಆತ್ಮಾನಮಂತರೋ ಯಮಯತಿ** - ಯಾವ ಪರಮಾತ್ಮನು ಹೀಗೆ ಜೀವಶರೀರಕನಾಗಿ, ಜೀವನಿಗೆ ಆತ್ಮನಾಗಿದ್ದುಕೊಂಡು ಆ ಆತ್ಮನನ್ನು ನಿಯಮಿಸುವನೋ, **ಸಃ**-ಅಂತಹ ಮಾಹಾತ್ಮ್ಯಯುಳ್ಳ ಪರಮಪುರುಷನು, **ತೇ**-ನಿನಗೂ ಸಹ, ಆತ್ಮನಾಗಿದ್ದಾನೆ: ನಿನಗೆ ಅಂತರ್ಯಾಮಿಯಾಗಿ. **ಅಮೃತಃ** - ಆನಂದಸ್ವರೂಪನಾಗಿ ನಿನಗೆ ಪ್ರಾಪ್ಯನಾಗಿ ಆನಂದದಾಯಕನು" ಇತಿ ಎಂಬುದಾಗಿ ಮೇಲಿನ ಶ್ರುತ್ಯರ್ಥವೇ ಉಪಪಾದಿಸಲ್ಪಟ್ಟಿರುತ್ತದೆ. ಹಿಂದಿನ ಶ್ರುತಿಯಲ್ಲಿ ಅಚಿದ್ವಿಶಿಷ್ಟ ಆತ್ಮನನ್ನೂ, ಈ ಶ್ರುತಿಯಲ್ಲಿ ಸುಮ್ಮನೆ ಆತ್ಮನನ್ನು ಕುರಿತು ಹೇಳಲ್ಪಟ್ಟಿತು. ಎರಡೂ ಬದ್ಧಾತ್ಮನನ್ನೇ ಕುರಿತು ಹೇಳಲ್ಪಟ್ಟಿತೆಂಬುದು ಸಿದ್ಧವು; ಏಕೆಂದರೆ **ಯಮಾತ್ಮಾ ನವೇದ** ಎಂದೂ, **ಯಂ**

(೩) ಬೃ. ೫. ೭. ೧೫. (೧೪) ಶತಪಥಬ್ರಾಹ್ಮಣ ೧೪. ೫. ೩೦.

**ಭಾ. ಯ ಆತ್ಮಾನಮನ್ತರೋ ಯಮಯತಿ ಸ ತ ಆತ್ಮಾನ್ತರ್ಯಾಮ್ಯಮೃತಃ" ಇತಿ ಚ। ಏವಂ ಸರ್ವಭೂತಾನಾಮಾತ್ಮತಯಾವಸ್ಥಿತೋಽಹಂ ತೇಷಾಮಾದಿರ್ಮಧ್ಯಂ ಚಾಂತಶ್ಚ, ತೇಷಾಮುತ್ಪತ್ತಿ ಸ್ಥಿತಿ ಪ್ರಲಯ ಹೇತುರಿತ್ಯರ್ಥಃ ॥ ೨೦ ॥**

**ಸರ್ವಾಣಿ ಭೂತಾನಿ ನ ವಿದುಃ** ಎಂದೂ ಹೇಳಲ್ಪಟ್ಟಿರುವದರಿಂದ ಅಚಿತ್ಸಂಯೋಗವಿರುವದರಿಂದ ಜ್ಞಾನತಿರೋಹಿತತ್ವವು ಹೇಳಲ್ಪಟ್ಟಿರುತ್ತದೆ; ಮುಕ್ತಾತ್ಮನನ್ನು ಕುರಿತು **ನವೇದ** ಎಂದು ಹೇಳಲು ಸಾಧ್ಯವಿಲ್ಲವು, ಏಕೆಂದರೆ ಆತನು ಜ್ಞಾನ ಮೊದಲಾದ ಗುಣಾಷ್ಟಕಗಳಿಂದ ಶೋಭಿಸುವಂತವನು. ಹಾಗಾದರೆ ಒಂದೇ ಅರ್ಥವುಳ್ಳ ಎರಡು ಶ್ರುತಿಗಳನ್ನು ಉದಾಹರಿಸಿದುದು ಏತಕ್ಕೆಂದರೆ, ಆತ್ಮನು ಅಚಿದ್ವಿಶಿಷ್ಟನಾಗಿಯೇ ಇರಲಿ, ವಿಶಿಷ್ಟನಲ್ಲದೇ ಇರಲಿ, ಆತನು ಯಾವಾಗಲೂ ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವೆಂದೂ, ಪರಮಾತ್ಮನು ಆತ್ಮಾವೆಂದೂ ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಮುಂದೆ ಪೂರ್ವಾರ್ಧದಿಂದ ಹೀಗೆ ಉಂಟಾದ ಅಭಿಪ್ರಾಯಕ್ಕೂ ಉತ್ತರಾರ್ಧಕ್ಕೂ ಇರುವ ಸಂಬಂಧವನ್ನು **ಏವಂ** ಎಂದಾರಂಭಿಸಿದ ಮುಂದಿನ ವಾಕ್ಯದಿಂದ ಸೂಚಿಸುತ್ತಾರೆ. ಹೀಗೆ ಸರ್ವ ಅಚಿದ್ವಿಶಿಷ್ಟನಾದ ಆತ್ಮಾವಿಗೆ ಎಲ್ಲಾ ಅವಸ್ಥೆಯಲ್ಲೂ ನಾನು ಆತ್ಮಾವಾಗಿರುವದರಿಂದ ಸೃಷ್ಟಿ, ಸ್ಥಿತಿ, ಲಯಗಳಿಗೂ ನಾನೇ ಕಾರಣಭೂತನೆಂದು ಹೇಳಿಕೊಳ್ಳುತ್ತಾರೆ. **ಏವಂ ಸರ್ವಭೂತಾನಾಮಾತ್ಮತಯಾ ಅವಸ್ಥಿತಃ** - ಈ ಪ್ರಕಾರವಾಗಿ ಸರ್ವ ಭೂತಗಳೂ ನನಗೆ ಶರೀರವಾಗಿ ನಾನು ಎಲ್ಲಾದಕ್ಕೂ ಆತ್ಮಾವಾಗಿರುವವನಾಗಿರುವದರಿಂದಲೇ, **ತೇಷಾಂ** - ಅವುಗಳಿಗೆಲ್ಲಾ, **ಅಹಂ** - ನಾನೇ, **ಆದಿಯೂ, ಮಧ್ಯವೂ, ಅಂತವೂ** ಸಹ, ಎಂದರೆ **ತೇಷಾಂ**-ಅವುಗಳ **ಉತ್ಪತ್ತಿಗೂ, ಸ್ಥಿತಿಗೂ, ಪ್ರಲಯಕ್ಕೂ** ಸಹ, **ಹೇತುರಿತ್ಯರ್ಥಃ**- ನಾನೇ ಕಾರಣಭೂತನೆಂಬ ತಾತ್ಪರ್ಯವು. ತಾನೇ ಕಾರಣನು ಎಂದು ಹೇಳಿದುದರ ಅಭಿಪ್ರಾಯವೇನೆಂದರೆ—**"ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ"**- ಎಂದು (೨ ೧. ೧೫) ಸೂತ್ರದಲ್ಲಿ ಉಪಪಾದಿಸಿರುವ ಹಾಗೆ, ಯಾವಾಗ ಕಾರಣನಾದನೋ, ಕಾರ್ಯವೂ ತಾನೇ ಎಂದು ಹೇಳಿದಂತಾಯಿತು; ಮೇಲಿನ ಸೂತ್ರವು ಕಾರ್ಯಕಾರಣಗಳಿಗೆ ಅನನ್ಯತ್ವವನ್ನು ಬೋಧಿಸುತ್ತದೆ. ಆದುದರಿಂದ ಪ್ರಲಯವಾದನಂತರ ಸೂಕ್ಷ್ಮ ಚಿದಚಿದ್ವಿಶಿಷ್ಟನಾದ ಪರಮಾತ್ಮನೇ ಸೃಷ್ಟ್ಯನಂತರ ಸ್ಥೂಲಚಿದಚಿದ್ವಿಶಿಷ್ಟ ಪರಮಾತ್ಮನಾಗುತ್ತಾನೆ ಹೀಗೆ ಕಾರಣಕ್ಕೂ ಕಾರ್ಯಕ್ಕೂ ಅನನ್ಯತ್ವವು; ಇದೇ ವಿಶಿಷ್ಟಾದ್ವೈತಸಿದ್ಧಾಂತವು. ಆದರೆ ಹೀಗೆ ಕಾರಣಕಾರ್ಯಗಳೂ ಒಂದೇ, ಪರಮಾತ್ಮನೊಬ್ಬನೇ ಇದ್ದಾನೆ, ಇನ್ನೆಲ್ಲಾ ಮಿಥ್ಯವು ಎಂದು ಹೇಳಿ ಅನನ್ಯತ್ವವನ್ನು ಅದ್ವೈತ ಸಿದ್ಧಾಂತಿಗಳು ಸಾಧಿಸುವರು. ಹೀಗೆ ಸಾಧಿಸುವದು ಮೇಲೆ ಹೇಳಿದ ಶ್ರುತಿಗಳಿಗೂ ಇನ್ನೂ ಇತರ ಶ್ರುತಿಗಳಿಗೂ ವಿರುದ್ಧವು. ದ್ವೈತಸಿದ್ಧಾಂತಿಗಳಿಗೆ ಇದು ವಿರೋಧವಾದುದರಿಂದ, ಅವರು ಈ ಸೂತ್ರಾರ್ಥವನ್ನೇ ಬೇರೆ ವಿಧವಾಗಿ ಅನ್ವಯಿಸಿರುತ್ತಾರೆ. ಸರ್ವ ಶ್ರುತಿ ಸಮ್ಮತವಾದ ಅನನ್ಯತ್ವವು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮಾತ್ರವೇ ಸಲ್ಲುತ್ತದೆ. ಹೀಗೆ ಹೇಳಿದರೇನೇ ಶರೀರಬೋಧಕ ಶಬ್ದಗಳಿಗೂ ಪರಮಾತ್ಮನಿಗೂ ಸಾಮಾನಾಧಿಕರಣ್ಯವೂ, ಪರಮಾತ್ಮನಿಗೆ ಸರ್ವಶಬ್ದ ವಾಚ್ಯತ್ವವೂ ಕೂಡುತ್ತವೆ.

**ಭಾಷ್ಯಾವತಾರಿಕೆಯು:**- ಈ ಸಾಮಾನಾಧಿಕರಣ್ಯವೂ ಸರ್ವಶಬ್ದ ವಾಚ್ಯತ್ವವೂ ಶರೀರಾತ್ಮಭಾವದಿಂದ ಪರಮಾತ್ಮನಿಗೆ ಕೂಡುವದರಿಂದ ತಾನೇ ಪ್ರತಿಯೊಂದು ವಿಧ ವಿಭೂತಿ ವರ್ಗದಲ್ಲೂ ಶ್ರೇಷ್ಠನಾದ ವಿಭೂತಿಯೆಂದು ಶ್ರೀ ಕೃಷ್ಣ ಭಗವಾನರವರು ಸಾಮಾನಾಧಿಕರಣ್ಯದಿಂದ ಉಪದೇಶಿಸಿರುತ್ತಾರೆಂದು ಮುಂದಿನ ಶ್ಲೋಕಕ್ಕೆ ಅವತಾರಿಕೆಯನ್ನು ದಯಪಾಲಿಸುತ್ತಾರೆ —ಒಂದೇ

ಭಾ. **ಅ. ಏವಂ ಭಗವತಸ್ಸ್ವವಿಭೂತಿಭೂತೇಷು ಸರ್ವೇಷ್ವಾತ್ಮತಯಾವಸ್ಥಾನಂ ತತ್ತಚ್ಛಬ್ದ ಸಾಮಾನಾಧಿಕರಣ್ಯನಿರ್ದೇಶಹೇತುಂ ಪ್ರತಿಪಾದ್ಯ ವಿಭೂತಿವಿಶೇಷಾನ್ ಸಾಮಾನಾಧಿಕರಣ್ಯೇನ ವ್ಯಪದಿಶತಿ । ಭಗವತ್ಯಾತ್ಮತಯಾ ಅವಸ್ಥಿತೇ ಹಿ ಸರ್ವೇ ಶಬ್ದಾ**

ಬೇರಾದ ಅಶ್ವಹಯ ಶಬ್ದಗಳಿಗೆ ಸಾಮಾನಾಧಿಕರಣ್ಯವು ಕೂಡುವದಿಲ್ಲವು, ಮತ್ತು ಅಧ್ಯಾಸ(ಭ್ರಮ)ದಿಂದ ಭಿನ್ನವಾಗಿದ್ದರೂ, ರಜ್ಜು ಸರ್ಪಗಳಿಗೆ ಸಾಮಾನಾಧಿಕರಣ್ಯವೂ, ಸರಿಹೋಗುವದಿಲ್ಲವು. ಈ ಎರಡು ವಿಧವಾಗಿಯೂ ಇತರರು ಹೇಳುವ ಸಾಮಾನಾಧಿಕರಣ್ಯವು ಸರಿಯಲ್ಲವೆಂದೂ ಅಪೃಥಕ್ಸಿದ್ಧ ವಿಶೇಷಣವಾಗಿ ಹೇಳುವ ಶರೀರಾತ್ಮಭಾವದಿಂದಲೇ ಸಾಮಾನಾಧಿಕರಣ್ಯವೇ ವಿನಾ, ಅನ್ಯಥಾ ಸರಿಹೋಗುವದಿಲ್ಲವೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. ಹಾಗೆಯೇ ಎಲ್ಲಾ ಜೀವಾತ್ಮರೂ ಒಂದೇ ಪರಮಾತ್ಮನೇ ಆದಪಕ್ಷದಲ್ಲಿ, ಸಾಮಾನಾಧಿಕರಣ್ಯದ ಉಪದೇಶವೇ ಸರಿಹೋಗುವದಿಲ್ಲವಾದುದರಿಂದ ಸಾಮಾನಾಧಿಕರಣ್ಯಸಿದ್ಧಾಂತವು ಅದ್ವೈತಾಭಿಪ್ರಾಯಕ್ಕೆ ಸರಿಹೋಗುವದಿಲ್ಲವು. **ಭಿನ್ನಪ್ರವೃತ್ತಿ ನಿಮಿತ್ತಾನಾಂ ಶಬ್ದಾನಾಂ ಏಕಸ್ಮಿನ್ ಅರ್ಥೇ ವೃತ್ತಿಸ್ಸಾಮಾನಾಧಿಕರಣ್ಯಂ"** ಎಂದು ಸಾಮಾನಾಧಿಕರಣ್ಯ ಲಕ್ಷಣವು ಬೋಧಿಸಲ್ಪಟ್ಟಿರುವದರಿಂದ, ಭಿನ್ನಗಳಾದ ಶರೀರಾತ್ಮಭಾವಗಳಿಗೇನೇ ಸಾಮಾನಾಧಿಕರಣ್ಯವು ಸಮಂಜಸವಾಗುವದರಿಂದ. ಜೀವಾತ್ಮರೂ ಪರಮಾತ್ಮನೂ ಭಿನ್ನವೆಂದಾದರೇನೇ ಸಾಮಾನಾಧಿಕರಣ್ಯವನ್ನು ಹೇಳಲು ಸಾಧ್ಯವೇ ವಿನಾ, ಒಂದೇಆತ್ಮವಾದರೆ ಸಾಧ್ಯವಿಲ್ಲವು. ಇದೇ ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಮುಖ್ಯವಾದ ಅಭಿಪ್ರಾಯವು. ಈಭಾವವನ್ನು ಚೆನ್ನಾಗಿ ಗ್ರಹಿಸತಕ್ಕದ್ದು ಅವಶ್ಯಕವೆಂದುಭಾವಿಸಿ, ಸಾಮಾನಾಧಿಕರಣ್ಯವೂ, ಸರ್ವಶಬ್ದವಾಚ್ಯತ್ವವೂ ಹೇಗೆ ಎಂಬುವನ್ನು ಈ ಅವತಾರಿಕೆಯಲ್ಲಿ ಉಪಪಾದಿಸುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಶರೀರಾತ್ಮಭಾವವೇ. ಈ ಮುಂದಿನ ಶ್ಲೋಕದಲ್ಲಿ ಹೇಳುವ ಸಾಮಾನಾಧಿಕರಣ್ಯಭಾವಕ್ಕೆ ಕಾರಣವೆಂಬ ಸಙ್ಗತಿಯನ್ನೂ ದಯಪಾಲಿಸುತ್ತಾರೆ,—**ಏವಂ** - ಹಿಂದೆ ಹೇಳಿದ ರೀತಿಯಲ್ಲಿ, ಹೀಗೆ, **ಭಗವತಃ** - ಭಗವಂತನ, **ಸರ್ವೇಷು** - ಸಮಸ್ತಗಳಾದ, **ಸ್ವ ವಿಭೂತಿ ಭೂತೇಷು**- ತನ್ನ ನಿಯಾಮ್ಯವರ್ಗವಾದ ಚಿದಚಿತ್ತುಗಳಲ್ಲಿ, **ಆತ್ಮತಯಾ**- ಶರೀರಗಳಾದ ಅವುಗಳಿಗೆಲ್ಲಾ ಆತ್ಮಾವಾಗಿ. **ಅವಸ್ಥಾನಂ** - ಇರೋಣವು **ತತ್ತಚ್ಛಬ್ದ ಸಾಮಾನಾಧಿಕರಣ್ಯ ನಿರ್ದೇಶಹೇತುಂ** - ಆ ಶಬ್ದಗಳಿಂದ ಸಾಮಾನಾಧಿಕರಣ್ಯದಿಂದ ಹೇಳುವದಕ್ಕೆ ಕಾರಣವನ್ನು **ಪ್ರತಿಪಾದ್ಯ** - ಪ್ರತಿಪಾದಿಸಿ. **ವಿಭೂತಿ ವಿಶೇಷಾನ್** - ಈ ಮುಂದಿನ ಶ್ಲೋಕದಿಂದ, ಹಿಂದೆ **ಪ್ರಾಧಾನ್ಯತಃ** ಎಂದು ಹೇಳಿರುವದರಿಂದ **ವಿಭೂತಿ ವಿಶೇಷಾನ್** ಎಂದರೆ ಪ್ರಧಾನಗಳಾದ ವಿಭೂತಿಗಳನ್ನು, **ಸಾಮಾನಾಧಿಕರಣ್ಯೇನ**- ಸಾಮಾನಾಧಿಕರಣ್ಯದಿಂದ, **ವ್ಯಪದಿಶತಿ** - ತಾನೇ ಎಂಬುದಾಗಿ ಶ್ರೀ ಕೃಷ್ಣಭಗವಾನ್ ರವರು ಉಪದೇಶಿಸುತ್ತಾರೆ. ಸರ್ವಜಗತ್ತೂ ಪ್ರಾಣಿಗಳೂ ಪರಮಾತ್ಮನಿಗೆ ಶರೀರವಾಗಿ, ಪರಮಾತ್ಮನು ಅವುಗಳಿಗೆಲ್ಲಾ ಆತ್ಮಾವಾದುದರಿಂದ ಅಂತಹ ಪ್ರಾಣಿಗಳನ್ನು ಬೋಧಿಸುವ ದೇವ. ಮನುಷ್ಯ, ತಿರ್ಯಕ್ ಸ್ಥಾವರಗಳ ಶಬ್ದಗಳು, ಪರಮಾತ್ಮನನ್ನೇ ತಚ್ಛರೀರಕನನ್ನಾಗಿ ಬೋಧಿಸುತ್ತದೆಂಬ ಭಾವವು ಆದುದರಿಂದ ಸರ್ವಭೂತಗಳೊಂದಿಗೂ ಸಾಮಾನಾಧಿಕರಣ್ಯವೂ. ಸರ್ವ ಶಬ್ದ ವಾಚ್ಯತ್ವವೂ ಕೂಡುತ್ತದೆಂಬ ಭಾವವು. **ಭಗವತ್ಯಾತ್ಮತಯಾವಸ್ಥಿತೇ ಹಿ** – ಭಗವಂತನು ಹೀಗೆ ಎಲ್ಲಾವಕ್ಕೂ ಯಾವಾಗ ಆತ್ಮಾವಾಗಿ ಇರಲಾಗಿ ಆಗ. **ಸರ್ವೇ ಶಬ್ದಾಃ** - ಸಮಸ್ತ ಶಬ್ದಗಳೂ. **ತಸ್ಮಿನ್ ಏವ** - ಆ ಭಗವಂತನಲ್ಲಿಯೇ, **ಪರ್ಯವಸ್ಯನ್ತಿ** - ಪರ್ಯವಸಾನವನ್ನು ಹೊಂದುತ್ತವೆ; ಎಂದರೆ ಹೋಗಿ ಸೇರುತ್ತವೆ ಭಗವಂತನನ್ನೇ ಬೋಧಿಸುತ್ತವೆ ಎಂಬ ತಾತ್ಪರ್ಯವು. ಶರೀರವನ್ನು ಬೋಧಿಸುವ ಶಬ್ದಗಳು. ಶರೀರಿಯಾದ

**ಭಾ. ಸ್ತಸ್ಮಿನ್ನೇವ ಪರ್ಯವಸ್ಯನ್ತಿ; ಯಥಾ "ದೇವೋ ಮನುಷ್ಯಃ ಪಕ್ಷೀ ವೃಕ್ಷಃ" ಇತ್ಯಾದಯ ಶ್ಶಬ್ದಾ ಶ್ಶರೀರಾಣಿ ಪ್ರತಿಪಾದಯಂತ ಸ್ತತ್ತದಾತ್ಮನಿ ಪರ್ಯವಸ್ಯನ್ತಿ; ಭಗವತ ಸ್ತತ್ತದಾತ್ಮತಯಾಽವಸ್ಥಾನಮೇವ ತತ್ತಚ್ಛಬ್ದ ಸಾಮಾನಾಧಿಕರಣ್ಯ ನಿಬಂಧನಮಿತಿ,**

---

ಪರಮಾತ್ಮನನ್ನೇ ಬೋಧಿಸುತ್ತವೆ ಎಂಬಭಾವವು. ಅದುಹೇಗೆಂದರೆ ಅದನ್ನು ವ್ಯಕ್ತಪಡಿಸುತ್ತಾರೆ **ಮನುಷ್ಯ, ದೇವತೆ** ಎಂದರೆ ಮನುಷ್ಯ ಶರೀರಕ, ದೇವಶರೀರಕ ಪರಮಾತ್ಮನೆಂಬ ಭಾವವು. ಅಗಲಿ, **ಪುಮಾನ್ನ ದೇವೋ ನ ನರೋ ನ ತಿರ್ಯಙ್ನ ಚ ಪಾದಪಃ । ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ"** (ವಿ. ಪು. ೨-೧೩. ೯೮) ಎಂದರೆ ಜೀವಾತ್ಮನು, ದೇವನೂ ಅಲ್ಲವು, ಮನುಷ್ಯನೂ ಅಲ್ಲವು, ಮೃಗಾದಿಗಳೂ ಅಲ್ಲವು ವೃಕ್ಷವೂ ಅಲ್ಲವು; ಹಾಗಾದರೆ ಈ ಶರೀರಗಳ ಭೇದವೆಲ್ಲಾ ಹೇಗೆ ಎಂದರೆ, ಓ ರಾಜನೇ ಇವೆಲ್ಲಾ ಕರ್ಮಮೂಲಕ ಬಂದವು" ಎಂದು ಆದಿಭರತರು ಹೇಳಿರುವಹಾಗೆ ಶರೀರವನ್ನು ಬೋಧಿಸುವ ಶಬ್ದಗಳು ಶರೀರಿಯಾದ ಜೀವಾತ್ಮನನ್ನು ಬೋಧಿಸಲಿ, ಪರಮಾತ್ಮನನ್ನು ಬೋಧಿಸುವದುಹೇಗೆ? ಎಂದಾಕ್ಷೇಪಿಸಿದರೆ, ಅಪೃಥಕ್ಸಿದ್ಧ ವಿಶೇಷಣವಾಗಿ ಎಲ್ಲವೂ ಸ್ವಾಮಿಗೆ ಶರೀರವಾಗಿರುವದರಿಂದ ದೇವದತ್ತನ ಆತ್ಮವೂ ಆತನ ಶರೀರವೂ ಎರಡೂ ಪರಮಾತ್ಮನಿಗೆ ಶರೀರವಾದುದರಿಂದ ಬೋಧಿಸುತ್ತವೆಎಂದು ಹೇಳುವೆವು. ಮನುಷ್ಯ ಶರೀರವಾದರೋ, ಅದರ ಆತ್ಮನಿಂದ ಪ್ರತ್ಯೇಕಿಸಲ್ಪಡಬಹುದು ನಮ್ಮಗಳ ಆತ್ಮವಾದರೋ ಸ್ವಾಮಿಗೆ ಶರೀರವಾಗಿ, ಅಪೃಥಕ್ಸಿದ್ಧ ವಿಶೇಷಣವಾಗಿ ಎಂದಿಗೂ ಪ್ರತ್ಯೇಕಿಸಲ್ಪಡಲು ಸಾಧ್ಯವಿಲ್ಲವು. ಆದುದರಿಂದ ತತ್ತಚ್ಛಬ್ಧಗಳು ಪರಮಾತ್ಮನನ್ನೇ ಬೋಧಿಸುತ್ತವೆ ಎಂಬ ಭಾವವು; ಆದರೂ ದೇವ ಮನುಷ್ಯಾದಿ ಶಬ್ದಗಳೇ ಆಯಾ ಅವಸ್ಥಾಕಾಲಗಳಲ್ಲಿ ಹೇಗೆ ಆತ್ಮನಲ್ಲೇ ಪರ್ಯವಸಾನವನ್ನು ಹೊಂದುವವೋ, ಹಾಗೆಯೇ ಪರಮಾತ್ಮಶರೀರಗಳಾದ ಸರ್ವಭೂತಗಳನ್ನು ಬೋಧಿಸುವ ಶಬ್ದಗಳು ಪರಮಾತ್ಮನನ್ನು ಬೋಧಿಸುತ್ತವೆ ಎಂದು ಮುಂದೆ ಉಪದೇಶಿಸುತ್ತಾರೆ. **ಯಥಾ**-ಹೇಗೆ, ನಾಲ್ಕು ವಿಧ-ಪ್ರಾಣಿಗಳಾದ ದೇವತೆ, ಮನುಷ್ಯ, ಪಕ್ಷಿಮೊದಲಾದ ತಿರ್ಯಗ್ಜಂತುವು, ಸ್ಥಾವರವಾದ ವೃಕ್ಷ ಇವೇ ಮೊದಲಾದ ಶಬ್ದಗಳು, **ಶರೀರಾಣಿ ಪ್ರತಿಪಾದಯಂತಃ**-ಆಯಾ ಶರೀರಗಳನ್ನು ಬೋಧಿಸುವವುಗಳಾಗಿ, **ತತ್ತದಾತ್ಮನಿ ಪರ್ಯವಸ್ಯಂತಿ**-ಆಯಾ ಶರೀರಗಳಲ್ಲಿನ ಆತ್ಮರುಗಳನ್ನು ಬೋಧಿಸುವದರಲ್ಲಿ ಪರ್ಯವಸಾನವನ್ನು ಹೊಂದುವುವೋ, ಹಾಗೆಯೇ, **ಭಗವತಃ**—ಭಗವಂತನ, **ಆತ್ಮತಯಾವಸ್ಥಾನಮೇವ**—ತನ್ನ ಎಲ್ಲಾ ವಿಭೂತಿಗಳಿಗೂ ಆತ್ಮಾವಾಗಿರುವದೇ. **ತತ್ತಚ್ಛಬ್ದ ಸಾಮಾನಾಧಿಕರಣ್ಯ ನಿಬಂಧನಮಿತಿ**—ಆಯಾ ಶಬ್ದಗಳ ಮೂಲಕ ಅವುಗಳೊಂದಿಗೆ ಸಾಮಾನಾಧಿಕರಣ್ಯದಿಂದ ಹೇಳಲ್ಪಡಲು ಕಾರಣವು. ಹೇಗೆ ನಮ್ಮ ಶರೀರಾತ್ಮಗಳ ದೃಷ್ಟಾಂತಮೂಲಕ ನಮ್ಮ ಶರೀರವನ್ನು ಬೋಧಿಸುವ ದೇವ ಮನುಷ್ಯಾದಿ ಶಬ್ದಗಳು ಅವುಗಳಲ್ಲಿರುವ ಆತ್ಮಾವನ್ನು ಹೇಗೆ ಬೋಧಿಸುವುವೋ, ಹಾಗೆಯೇ ಸರ್ವಭೂತಗಳನ್ನು ಬೋಧಿಸುವ ಶಬ್ದಗಳು ಅವುಗಳಿಗೆ ಆತ್ಮಾವಾದ ಪರಮಾತ್ಮನಲ್ಲೇ ಅನ್ವಯಿಸುತ್ತವೆ ಎಂಬ ಭಾವವು. ಸಾಮಾನಾಧಿಕರಣ್ಯೋಕ್ತಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರಾತ್ಮಭಾವದಿಂದ ವಿಶೇಷಣ ವಿಶೇಷ್ಯ ಭಾವದಿಂದಿರುವವೇ ನಿಬಂಧನವೆಂದು ಏಕೆ ಹೇಳಿದರೆಂದರೆ, ಇತರರು ಹೇಳುವ ರಜ್ಜು ಸರ್ಪದಹಾಗೆ ಭ್ರಮರೂಪದಿಂದ ಸಾಮಾನಾಧಿಕರಣ್ಯೋಕ್ತಿಯು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆದುದರಿಂದ ಜೀವಾತ್ಮನೇ ಅವಿದ್ಯಾ ಗೃಹೀತನಾಗಿ ಹೇಯಸಂಬಂಧವಿರುವ ಪರಮಾತ್ಮನೆಂಬ ಭಾವದಿಂದಲಾಗಲಿ ಭ್ರಮದಿಂದಲಾಗಲಿ ಜೀವಾತ್ಮನಿಗೆ ಪರಮಾತ್ಮನೊಂದಿಗೆ ಸಾಮಾನಾಧಿಕರಣ್ಯವಾದವು ಅಸಂಗತವಾದುದೆಂಬ ಭಾವವು ಇದರಿಂದ ವ್ಯಕ್ತವು. ಹೇಗೆ **ಆತ್ಮತಯಾ ಅವ**

ಭಾ. **ವಿಭೂತ್ಯುಪಸಂಹಾರೇ ವಕ್ಷ್ಯತಿ-"ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ"। ಇತಿ, ಸರ್ವೇಷಾಂ ಸ್ವೇನಾವಿನಾಭಾವವಚನಾತ್। ಅವಿನಾಭಾವಶ್ಚ ನಿಯಾಮ್ಯತಯೇತಿ "ಮತ್ತಸ್ಸರ್ವಂ ಪ್ರವರ್ತತೇ" ಇತ್ಯುಪಕ್ರಮೋದಿತಮ್—**

**ಸ್ಥಾನವೇ** ಸಾಮಾನಾಧಿಕರಣ್ಯವ್ಯವಹಾರಕ್ಕೆ ಕಾರಣವೆಂದು **ಅವಸ್ಥಾನಮೇವ** ಎಂದು ಅವಧಾರಣವನ್ನು ಪ್ರಯೋಗಿಸುತ್ತಾರೆ. ಇದರಿಂದ ಮಿಥ್ಯಾವಾದಿಗಳು ಹೇಳುವ ಭ್ರಮಾದಿಗಳು ಈ ಸಾಮಾನಾಧಿಕರಣ್ಯಕ್ಕೆ ಹೇತುವೆಂದು ಹೇಳುವ ವಾದವು ಸರಿಯಲ್ಲವೆಂದು ಹೇಳಿದಂತಾಯಿತು. ಆಗಲಿ ಜಗನ್ಮಿಥ್ಯಾ ಎಂದು ಹೇಳಿ ಭ್ರಮಾದಿಗಳೇ ಕಾರಣವೆಂದು ಏಕೆ ಇಲ್ಲಿ ಅಙ್ಗೀಕರಿಸ ಕೂಡದು ? ಎಂದು ಕೇಳಿದರೆ, ಹಿಂದೆಯೂ ಮುಂದೆಯೂ ಹೇಳಿರುವವಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಅಙ್ಗೀಕರಿಸಬಹುದೋ ? ಹಿಂದೆ ಹೇಳಿರುವವನ್ನೂ ಮುಂದೆ ಉಪಸಂಹಾರ ರೂಪದಲ್ಲಿ ಹೇಳಿರುವ ಪ್ರಮಾಣಗಳನ್ನೂ ಯತಿವರ್ಯರೇ ಮುಂದಿನ ವಾಕ್ಯದಲ್ಲಿ ಉದಾಹರಿಸಿರುತ್ತಾರೆ. ಅದೂ ಅಲ್ಲದೆ ಪರಬ್ರಹ್ಮನಿಗೆ ಸೀಚಭಾವವಾದ ಅವಿದ್ಯಾ ಗೃಹೀತತ್ವವನ್ನು ಭ್ರಮದಿಂದಲಾಗಲಿ ಅಥವಾ ಸ್ವಸಙ್ಕಲ್ಪದಿಂದಲಾಗಲಿ ಉಪಪಾದಿಸುವದು ಸಾಧ್ಯವಿಲ್ಲವು. ಆದುದರಿಂದ **ಅಹಮಾತ್ಮಾ ಗುಡಾಕೇಶ ಸರ್ವಭೂತೇಷ್ವವಸ್ಥಿತಃ** ಎಂಬುದು ಮಿಥ್ಯಾವಾದಕ್ಕೂ ಅವಿದ್ಯಾ ಗೃಹೀತತ್ವವಾದಕ್ಕೂ ಪರಮ ಕುಂದಕವು. ಮಿಥ್ಯೆಯಾದುದಕ್ಕೆ **ಆತ್ಮಾ** ಎಂಬ ಭಾವವು ಹೇಗೆ ಕೂಡುತ್ತದೋ ತಿಳಿಯದು. **ಸರ್ವಭೂತೇಷ್ವವಸ್ಥಿತಃ** ಎಂದರೆ ಸರ್ವ ಭೂತಗಳೇ ಬೇರೆ, ಅವುಗಳಲ್ಲಿ ಅವಸ್ಥಿತನಾದವನೇ ಬೇರೆ ಎಂದು ಹೇಳಿದಂತಾಗುವದಿಲ್ಲವೇ? ಬೇರೆಯೇ ಎಂದು ಒಪ್ಪಿಕೊಳ್ಳಲೇ ಬೇಕಾಗಿರುವಾಗ, ಜೀವಪರಮಾತ್ಮಸ್ವರೂಪೈಕ್ಯವಾದವು ಹೇಗೆ? ಅವಿದ್ಯಾ ಗೃಹೀತತ್ವಕ್ಕೆ ಅವಕಾಶವೆಲ್ಲಿಯದು? ಹೇಯಪ್ರತ್ಯನೀಕನನ್ನು ಅವಿದ್ಯಾಗೃಹೀತನೆಂದು ಹೇಳಬಹುದೋ? ಇತ್ಯಾದಿ ಆಕ್ಷೇಪಗಳಿಗೆ ಸಮಾಧಾನವಿಲ್ಲವಾಗುತ್ತದೆ. ಈ ಮಿಥ್ಯಾವಾದವೂ, ಅವಿದ್ಯಾಗೃಹೀತತ್ವವಾದವೂ ಯಾವ ಗೀತಾಪ್ರಮಾಣಗಳಿಗೂ ಸರಿಹೋಗುವದಿಲ್ಲವೆಂದು ತಿಳಿಸುತ್ತಾರೆ. **ವಿಭೂತ್ಯುಪಸಂಹಾರೇ**-ವಿಭೂತಿ ಮಾಹಾತ್ಮ್ಯೆಯನ್ನು ಉಪಸಂಹಾರಮಾಡಿ ಎಂದರೆ ಮುಗಿಸಿ ಹೇಳುವ ಸಂದರ್ಭದಲ್ಲಿ, **ವಕ್ಷ್ಯತಿ**-ಹೇಳುತ್ತಾರೇನೆಂದರೆ-"**ಮಯಾವಿನಾ**-ನನ್ನಿಂದ ಸೇರದೇ ಇರುವ ಎಂದರೆ ನನ್ನಿಂದ ಪ್ರತ್ಯೇಕಿಸಬಹುದಾದ, **ಭೂತಂ ಚರಾಚರಂ**-ಚರಾಚರ ರೂಪ ಸರ್ವಭೂತವಾದುದು, **ಯತ್**-ಯಾವುದುಂಟೋ, **ತತ್**-ಅಂತಹ ಚರಾಚರವಸ್ತುವು, ನಾಸ್ತಿ ಇಲ್ಲವು; ನನ್ನೊಂದಿಗೆ ಸೇರದೆ ನನಗೆ ಅಪೃಥಕ್ಸಿದ್ಧ ವಿಶೇಷಣವಾಗದಿರುವುದು ಯಾವುದೂ ಇಲ್ಲವು ಎಂದರೆ ಎಲ್ಲಾ ಚರಾಚರ ವಸ್ತುಗಳೂ ನನಗೆ ಅಪೃಥಕ್ಸಿದ್ಧ ವಿಶೇಷಣಗಳಾಗಿ ನನ್ನೊಂದಿಗೆ ಅವಿನಾಭೂತತ್ವವನ್ನು ಹೊಂದಿವೆ ಎಂಬ ತಾತ್ಪರ್ಯವು; ನಾನಲ್ಲದೆ ಇನ್ನು ಯಾವ ಚರಾಚರ ವಸ್ತುವೂ ಇಲ್ಲವೆಂಬ ಮಿಥ್ಯಾವಾದಾರ್ಥವಲ್ಲವು." **ಇತಿ**-ಎಂಬದಾಗಿ, **ಸರ್ವೇಷಾಂ**-ವಿಭೂತಿಯಾದ ಸಮಸ್ತ ಚರಾಚರ ವಸ್ತುವಿಗೂ, **ಸ್ವೇನ ಅವಿನಾಭಾವವಚನಾತ್**-ಪರಮಾತ್ಮನಾದ ತನ್ನೊಂದಿಗೆ ಅವಿನಾಭಾವವನ್ನು ಉಪದೇಶಿಸಿರುವದರಿಂದ. **ಅವಿನಾಭಾವಶ್ಚ**-ಅವಿನಾಭಾವವಾದರೋ, **ನಿಯಾಮ್ಯತಯೇತಿ** ಆ ಚರಾಚರವಿಭೂತಿಗಳನ್ನು ನಿಯಮಿಸುವುದಕ್ಕಾಗಿ ಉಂಟಾಗಿರುತ್ತದೆಂದು (೧)"**ಮತ್ತಸ್ಸರ್ವಂ ಪ್ರವರ್ತತೇ**"-"ನನ್ನ ಮೂಲಕವಾಗಿ ಸರ್ವಭೂತಗಳಿಗೆ ಪ್ರವೃತ್ತಿಯುಂಟಾಗಿರುತ್ತದೆ, **ಇತ್ಯುಪಕ್ರಮೋದಿತಂ**-ಎಂದು ಪ್ರಾರಂಭದಲ್ಲೇ ಉಪದೇಶಿಸಲ್ಪಟ್ಟಿತು. ಇಲ್ಲಿ ಉಪಕ್ರಮ ಉಪಸಂಹಾರಗಳಲ್ಲಿ ಹೇಳಿರುವ ವಾಕ್ಯಗಳನ್ನು ಉದಾಹರಿಸಿರುವ ಅಭಿಪ್ರಾಯವೇನೆಂದರೆ, ಅವೆರಡಕ್ಕೂ ಏಕ

(೧) ಗೀ. ೧೦.೩೯

ಕಂಠ್ಯವು ಅತ್ಯಾವಶ್ಯಕವಾದುದರಿಂದ ಉಪಕ್ರಮದಲ್ಲಿ ಹೇಳಿದ ಅಭಿಪ್ರಾಯವೇ ಮಧ್ಯದಲ್ಲೂ ಸಮರ್ಥಿಸಲ್ಪಟ್ಟು ಉಪಸಂಹಾರರೂಪದಲ್ಲಿ ಕೊನೆಯಲ್ಲೂ ಹೇಳಲ್ಪಡತಕ್ಕದ್ದಾಗಿರುತ್ತದೆ. ಚರಾಚರ ಜಗತ್ತೆಲ್ಲವೂ ತನಗೆ ಶರೀರವಾಗಿ ತಾನು ಎಲ್ಲಕ್ಕೂ ಆತ್ಮಾವಾಗಿ ಹೀಗೆ ಅವೆಲ್ಲಾ ಅಪೃಥಕ್ಸಿದ್ಧ ವಿಶೇಷಣವಾಗಿ ತನ್ನೊಂದಿಗೇನೇ ಯಾವಾಗಲೂ ಇರುವದರಿಂದ ಆ ಜಗತ್ತೇ ತಾನು ಎಂದು ಸಾಮಾನಾಧಿಕರಣ್ಯವು ಕೂಡುತ್ತದೆಂದು ಆ ಕಾರಣದಿಂದಲೇ ಶ್ರೀ ಪರಾಶರರೂ ತಮ್ಮ ಶಿಷ್ಯರಾದ ಮೈತ್ರೇಯರಿಗೆ **"ಜಗಚ್ಚ ಸಃ"** (ವಿ. ಪು. ೧. ೧. ೩೧) ಆ ಜಗತ್ತೂ ಪರಮಾತ್ಮನೇ ಎಂದು ಉಪದೇಶಿಸಿದರು. ಹೀಗೆ ಶಾಸ್ತ್ರಗಳ ಉಪದೇಶದಲ್ಲಿ ಉಪಕ್ರಮೋಪಸಂಹಾರಗಳಿಗೆ ಐಕಕಂಠ್ಯವು ಇರುತ್ತದೆ. ಇದಕ್ಕೆ ಇನ್ನೊಂದು ನಿದರ್ಶನವನ್ನು ತೋರುವೆವು. ಇದೇ ಗೀತೆಯಲ್ಲಿ ಗೀತೋಪದೇಶದ ಉಪಕ್ರಮವಾದ **"ನ ತ್ವೇವಾಹಂ"** (ಗೀ. ೨. ೧೨) ಎಂಬ ಶ್ಲೋಕದಲ್ಲಿ **"ನಿತ್ಯೋನಿತ್ಯಾನಾಂ"** ಎಂಬಿವೇ ಮೊದಲಾದ ಶ್ರುತಿಗಳನ್ನನುಸರಿಸಿ ಜೀವಾತ್ಮ ಪರಮಾತ್ಮ ಭೇದವು ಉಪದೇಶಿಸಲ್ಪಟ್ಟಿತು. ಅದೇ ಮಧ್ಯದಲ್ಲಿ **"ಉತ್ತಮಃ ಪುರುಷಸ್ತ್ವನ್ಯಃ"** (ಗೀ. ೧೫. ೧೭) ಇತ್ಯಾದಿ ಸ್ಥಳಗಳಲ್ಲಿ ಸ್ಫುಟವಾಗಿ ಸಮರ್ಥಿಸಲ್ಪಟ್ಟು, ಉಪಸಂಹಾರದ ಚರಮಶ್ಲೋಕದಲ್ಲಿ ರಕ್ಷ್ಯ ರಕ್ಷಕ, ಪ್ರಾಪ್ಯ ಪ್ರಾಪಕ ಭೇದದಲ್ಲಿ **ಅಹಂ, ತ್ವಾಂ** ಇತ್ಯಾದಿ ಪ್ರಯೋಗಗಳಿಂದ ಪರಮಾತ್ಮ ಜೀವಾತ್ಮ ಭೇದವು ಬೋಧಿತವಾಗಿ, ಹೀಗೆ ಉಪಕ್ರಮೋಪಸಂಹಾರಗಳಿಗೆ ಐಕಕಂಠ್ಯವು ವ್ಯಕ್ತವು. ಸರ್ವಭೂತಗಳಲ್ಲೂ ಇರುವವನಾಗಿ ನಾನು ಆತ್ಮಾ ಎಂದು ಹೇಳಿರುವದರಿಂದ ಹಿಂದಿನ ಶ್ಲೋಕದಲ್ಲಿ, ಶ್ರುತಿಗಳಲ್ಲಿ ಬೋಧಿಸಿರುವ ಶರೀರಾತ್ಮ ಭಾವವೇ ಉಪದೇಶಿಸಲ್ಪಟ್ಟಿತೆಂಬ ತಾತ್ಪರ್ಯವು. ಆತ್ಮಾ ವಿಶೇಷ್ಯವೆಂದೂ, ಸರ್ವಭೂತಗಳೂ ಆತನಿಂದ ಪೃಥಕ್ಕರಿಸಲು ಸಾಧ್ಯವಲ್ಲದ ವಿಶೇಷಣವೆಂದೂ ಹೇಳಲ್ಪಟ್ಟಿತು. ಹೀಗೆ ಆತ್ಮಾವಾಗಿಯೇ ಪರಮಾತ್ಮನು ಸರ್ವಭೂತಗಳಿಗೂ ನಿಯಾಮಕನು; ಆತನು ಆತ್ಮಾವಾಗಿರುವದರಿಂದಲೇ ಸರ್ವಭೂತಗಳ ಪ್ರವೃತ್ತಿಯು ಎಂಬ ಭಾವವು. ಆದರೆ ಅಗ್ನಿಯಿಲ್ಲದೆ ಧೂಮವಿಲ್ಲವು, ಗುಣಿಯಿಲ್ಲದ ಗುಣವಿಲ್ಲವು ಎಂದು ಹೇಳಿದರೆ, ಅಗ್ನಿಯೂ ಗುಣಿಯೂ ಪರಮಾರ್ಥವೆಂದೂ, ಧೂಮ ಮತ್ತು ಗುಣ ಪರಮಾರ್ಥವಲ್ಲದ ಮಿಥ್ಯಾಭೂತವೆಂದು ಆಗುವದಿಲ್ಲವೇ ? ಎಂದರೆ ಹಾಗಾಗುವದಿಲ್ಲವು. ಏಕೆಂದರೆ ಮಿಥ್ಯೆಯಾದುದಕ್ಕೆ ಪರಮಾರ್ಥವಾದುದೊಂದಿಗೆ ಅವಿನಾಭೂತವೆಲ್ಲಿಯದು ? ಎರಡು ಸತ್ಯವಾದ ಪದಾರ್ಥಗಳಿಗೆ ತಾನೇ ಅವಿನಾಭಾವವನ್ನೂ ಹೇಳಬಹುದು. ಆದುದರಿಂದ ಪರಮಾತ್ಮನು ಹೇಗೆ ಸತ್ಯವೋ, ಆತನೊಂದಿಗೆ ಅವಿನಾಭೂತವಾದ ವಿಭೂತಿರೂಪ ಭೂತಗ್ರಾಮವೂ ಸತ್ಯವು ಎಂದು ಹೇಳತಕ್ಕದ್ದು. ಆಗಲಿ, "ಯಜ್ಞದತ್ತನಲ್ಲದೆ ಮನೆಯಲ್ಲಿ ಇನ್ನು ಯಾರೂ ಇಲ್ಲವು" "ರಜ್ಜುವಲ್ಲದೆ ಸರ್ಪವೂ ಯಾವುದೂ ಇಲ್ಲವು" ಎಂದು ಹೇಳಿದರೆ, ಯಜ್ಞದತ್ತನೊಬ್ಬನೇ ಸತ್ಯವು, ಮನೆಯಲ್ಲಿ ಇತರರಿರುವದು ಹೇಗೆ ಅಸತ್ಯವೋ, ಮತ್ತು ರಜ್ಜು ಒಂದೇ ಸತ್ಯವಾಗಿ ಭ್ರಮವಾದ ಸರ್ಪವು ಹೇಗೆ ಅಸತ್ಯವೋ, ಹಾಗೆ ಏಕೆ ಭಾವಿಸಕೂಡದು ? ಎಂಬಾಕ್ಷೇಪಕ್ಕೆ ಸಮಾಧಾನವನ್ನು "ಅವಿನಾಭೂತ" ಶಬ್ದಾರ್ಥದ ಮೂಲಕ ತಿಳಿಸುತ್ತಾರೆ. ಜಗತ್ತು ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ, ಜಗತ್ತೂ ಆತನಿಗೆ ಶರೀರವಾಗಿ, ಆತನು ಜಗತ್ತಿಗೆ ಆತ್ಮಾವಾದುದರಿಂದ, ಜಗತ್ತೂ ಪರಮಾತ್ಮನೇ ಎಂಬ ಸಾಮಾನಾಧಿಕರಣ್ಯವು ಸಮಂಜಸವಾಗುತ್ತದೆ. ನೀಲವು ಘಟಕ್ಕೆ ಅಪೃಥಕ್ಸಿದ್ಧವಿಶೇಷಣವಾದುದರಿಂದ ನೀಲೋ ಘಟಃ ಎಂಬ ಸಾಮಾನಾಧಿಕರಣ್ಯವು ಹೇಗೆ ಸರಿ ಹೋಗುತ್ತದೋ ಹಾಗೆಯೇ ಎಂದು ಭಾವಿಸತಕ್ಕದ್ದು. ಈ ಸಾಮಾನಾಧಿಕರಣ್ಯಕ್ಕೆ ನಿಬಂಧನವು ಶರೀರಾತ್ಮಭಾವದಿಂದ ಪರಮಾತ್ಮನು ಎಲ್ಲವನ್ನೂ ಅವಿನಾಭೂತವಾಗಿ ವ್ಯಾಪಿಸಿರುವದೇ. ಇದೇ ವಿಭೂತಿವಿಸ್ತರದ ಉಪಕ್ರಮದಲ್ಲಿ **"ವ್ಯಾಪ್ಯ ತಿಷ್ಠಸಿ"** (ಶ್ಲೋ. ೧೬) ಎಂದೂ

**ಮೂ. ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥** **೨೧.**

**"ಅಹಮಾತ್ಮಾ ಗುಡಾಕೇಶ"**(ಶ್ಲೋ. ೨೦) ಎಂದೂ ಹೇಳಲ್ಪಟ್ಟು, ಉಪಸಂಹಾರದಲ್ಲಿ **"ನ ತದಸ್ತಿ ವಿನಾಯತ್ಸ್ಯಾತ್"** (ಶ್ಲೋ. ೩೯) ಎಂದು ಈ ಅವಿನಾಭಾವವೇ ಉಪಪಾದಿಸಲ್ಪಟ್ಟಿರುತ್ತದೆ. **"ಅವಿನಾಭೂತ"** ವೆಂದರೇನು? ಎಂದರೆ ನಿಯಾಮ್ಯತಯಾ ಅವಿನಾಭೂತವೆಂದು **ಹೇಳಿರುತ್ತಾರೆ;** ಸರ್ವೇಶ್ವರನ ನಿಯಾಮ್ಯವರ್ಗವು ಎಂದಿಗೂ ಮಿಥ್ಯೆಯಾಗಲಾರದೆಂದು ಹೇಳಿ ಅದಕ್ಕೆ **ಗೀತೋಕ್ತಿ** ಯನ್ನೇ ಪ್ರಮಾಣವಾಗಿ ಉದಾಹರಿಸಿರುತ್ತಾರೆ. **"ಮತ್ತಸ್ಸರ್ವಂ ಪ್ರವರ್ತತೇ"** ನನ್ನಿಂದಲೇ ಸರ್ವಭೂತಗಳ ಪ್ರವೃತ್ತಿಯು ಎಂದು ಹೇಳಿರುವದರಿಂದ, ಹೀಗೆ ಪ್ರವೃತ್ತಿಯುಳ್ಳ ಸರ್ವವೂ **ಮಿಥ್ಯೆ** ಯಾಗಲಾರದು. **ಗೊಂಬೆಗಳಿಲ್ಲದೆ ಗೊಂಬೆಯಾಟವೆಂದಿಗೂ ಇರುವದಿಲ್ಲವೆಂಬ ಭಾವವು. ಅವರು** ಗಳ ದೃಷ್ಟಾಂತದಲ್ಲಾದರೋ, ಅಗ್ನಿಯು ಧೂಮವನ್ನು ನಿಯಮಿಸಲಾರದು, ಸರ್ವೇಶ್ವರನಾದರೋ ತನ್ನ ಸಮಸ್ತ ವಿಭೂತಿಯನ್ನೂ ನಿಯಮಿಸಬಲ್ಲನು; ಅಂತಹ ನಿಯಾಮ್ಯವರ್ಗವೆಲ್ಲಾ ಮಿಥ್ಯೆ ಯಾಗಲಾರದೆಂಬ ಭಾವದಿಂದ, **ಅವಿನಾಭಾವಶ್ಚ ನಿಯಾಮ್ಯತಯಾ** ಎಂಬ **ಪ್ರಯೋಗವು.** ಆದುದರಿಂದ **"ಅಹಮಾತ್ಮಾ ಗುಡಾಕೇಶ"** ಎಂಬಲ್ಲಿ ಸರ್ವಶರೀರಗಳಲ್ಲೂ ಇರುವ **ಜೀವಾತ್ಮರಿಗೂ** ಪರಮಾತ್ಮನಿಗೂ ಸ್ವರೂಪೈಕ್ಯವು ಬೋಧಿಸಲ್ಪಟ್ಟಿತೆಂಬ ವಾದವು **ದೂರೀಕೃತವಾಯಿತು. ಇಲ್ಲಿ** ಆತ್ಮಾ ಎಂದರೆ ಶರೀರನಿಯಾಮಕನಾದ **ಆತ್ಮಾ** ಎಂದೇ ಅರ್ಥ ಹೇಳುವದೇ **ಶ್ರುತ್ಯನುಸಾರ** ವಾದುದು ಎಂಬ ತಾತ್ಪರ್ಯವು. ಶ್ರೀಮಚ್ಛಂಕರಾಚಾರ್ಯರು **ಮಿಥ್ಯಾ** ಶಬ್ದವನ್ನು ಸ್ವರೂಪ ಸ್ವಭಾ ವಾದಿ ವಿಕಾರವುಳ್ಳ ಪದಾರ್ಥಗಳಿಗೆ ಉಪಯೋಗಿಸಿರುತ್ತಾರೆ. ಶೂನ್ಯವೆಂಬ ಅರ್ಥದಲ್ಲಿ ಉಪ ಯೋಗಿಸಲಿಲ್ಲವು.

**ಮೂಲಕ್ಕೆ ಅರ್ಥವು:–ಆದಿತ್ಯಾನಾಂ**-ಕಾಶ್ಯಪರಿಂದ ಅದಿತಿಯಲ್ಲಿ ಹುಟ್ಟಿದ ಮಕ್ಕಳಾದ ದ್ವಾದಶಾದಿತ್ಯರಲ್ಲಿ, **ಅಹಂ**-ನಾನು. **ವಿಷ್ಣುಃ** - ಮುಖ್ಯನಾದ ವಿಷ್ಣುನಾಮಕ ಆದಿತ್ಯನು; ಹಿಂದೆ **"ಪ್ರಾಧಾನ್ಯತಃ ಪ್ರವಕ್ಷ್ಯಾಮಿ"** ಎಂದೂ, ಮುಂದೆ ೨೪ನೆಯ ಶ್ಲೋಕದಲ್ಲಿ **"ಪುರೋಧಸಾಂಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ"** ಎಂಬಲ್ಲಿ **ಮುಖ್ಯಂ** ಎಂದೂ ಹೇಳಲ್ಪಟ್ಟಿರುವದರಿಂದ **ಪ್ರಧಾನನಾದ ಮುಖ್ಯನಾದ** ನಾನು ಎಂದೇ ಅರ್ಥವನ್ನು ಹೇಳತಕ್ಕದ್ದು. ದ್ವಾದಶಾದಿತ್ಯರಲ್ಲೇ ವಿಷ್ಣುನಾಮಕ ಆದಿತ್ಯನೊಬ್ಬನನ್ನೇ ಬೋಧಿಸುತ್ತದೆ. **ಅಹಂ ವಿಷ್ಣುಃ** ಎಂದು ಹೇಳಿರುವದರಿಂದ ಆ ವಿಷ್ಣುಶರೀರಕನಾಗಿ, ಆತನಿಗೆ ಆತ್ಮಾವಾಗಿಯೂ ಇರುವವನು ನಾನೇ **ಎಂಬ ಭಾವವು.** ಹಾಗೆಯೇ, ಮುಂದೆ ಹೇಳುವ ಸಾಮಾನಾಧಿಕರಣ್ಯಗಳಲ್ಲೆಲ್ಲಾ ಎಂದು **ಅರ್ಥಮಾಡತಕ್ಕದ್ದು.** **ಜ್ಯೋತಿಷಾಂ**-ಎಲ್ಲೆಲ್ಲಿ ಜ್ಯೋತಿಸ್ಸುಗಳು ಕಾಣಬರುತ್ತವೋ ಅವುಗಳಲ್ಲಿ **ಅಹಂ**-ನಾನು, **ಅಂಶುಮಾನ್** - ಮಹತ್ತಾಗಿ ಪ್ರಕಾಶವುಳ್ಳ ಮುಖ್ಯನಾದ, **ರವಿಃ** - ಸೂರ್ಯನೇ ಎಂದರೆ ಸೂರ್ಯನಿಗೆ ಆತ್ಮಾವಾಗಿರುವವನು ನಾನೇ; **ಮರುತಾಂ**-ಮರುದ್ಗಣದಲ್ಲಿ, **ಮರೀಚಿರಸ್ಮಿ**-ಮುಖ್ಯನಾದ ಮರೀಚಿಗೆ ಆತ್ಮಾವಾಗಿರುವವನು ನಾನೇ; ತಚ್ಛರೀರಕಪರಮಾತ್ಮನು ನಾನು ಎಂದು ಭಾವವು. **ನಕ್ಷತ್ರಾಣಾ ಮಹಂಶಶೀ**-ಆಕಾಶದಲ್ಲಿ ಪ್ರಕಾಶಿಸುವ ಲೆಕ್ಕಮಾಡಲು ಸಾಧ್ಯವಿಲ್ಲದ **ನಕ್ಷತ್ರಗಳ** ಮಧ್ಯದಲ್ಲಿ, ಪ್ರಧಾನನಾಗಿರುವ ಚಂದ್ರನಿಗೂ ಆತ್ಮಾವಾಗಿರುವವನು ನಾನೇ

**ಭಾಷ್ಯಾರ್ಥವು:**–ಧ್ಯೇಯವಸ್ತುವಾದ ಲಕ್ಷ್ಮೀನಾರಾಯಣನು ಉಭಯ ವಿಭೂತಿ **ವಿಶಿಷ್ಟ** ನಾಗಿ ಹೀಗೆ **ಪರಿಪೂರ್ಣಪರಬ್ರಹ್ಮನೇ** ಉಪಾಸ್ಯನೆಂದು **ತೋರಿಸುವದಕ್ಕಾಗಿ ತಾನೇ ಸರ್ವಕ್ಕೂ** ಆತ್ಮಾವಾದುದರಿಂದ ಆಯಾ ವಿಭೂತಿ ವರ್ಗಗಳಲ್ಲಿ ಪ್ರಧಾನವಾದುದಕ್ಕೂ ಸಹ ನಿಯಾಮಕನಾದು

**ಭಾ. ದ್ವಾದಶ ಸಂಖ್ಯಾಸಂಖ್ಯಾತಾನಾಮಾದಿತ್ಯಾನಾಂ ದ್ವಾದಶೋ ಯ ಉತ್ಕೃಷ್ಟೋ ವಿಷ್ಣುರ್ನಾಮಾದಿತ್ಯಃ, ಸೋಽಹಮ್; ಜ್ಯೋತಿಷಾಂ-ಜಗತಿ ಪ್ರಕಾಶಕಾನಾಂ ಯೋಂಶುಮಾನ್ ರವಿಃ-ಆದಿತ್ಯಗಣಃ, ಸೋಹಮ್; ಮರುತಾ ಮುತ್ಕೃಷ್ಟೋ**

ದರಿಂದ ಸಾಮಾನಾಧಿಕರಣ್ಯದಿಂದ ತತ್ತ್ವಜ್ಞ ಬ್ರಾಹ್ಮಣನು ತಾನು ಎಂದು ಉಪದೇಶಿಸುತ್ತಾರೆ. **ದ್ವಾದಶಸಂಖ್ಯಾ ಸಂಖ್ಯಾತಾನಾಂ** - ಹನ್ನೆರಡು ಸಂಖ್ಯೆಯಿಂದ ಎಣಿಸಲ್ಪಟ್ಟ, **ಆದಿತ್ಯಾನಾಂ**- ಆದಿತ್ಯರಲ್ಲಿ, **ದ್ವಾದಶೋ ಯಃ ಉತ್ಕೃಷ್ಟಃ**-ಹನ್ನೆರಡನೆಯವನು, ಯಾವನು ಉತ್ಕೃಷ್ಟ ನಾಗಿ, **ವಿಷ್ಣುರ್ನಾಮಾದಿತ್ಯಃ**-ವಿಷ್ಣು ಶಬ್ದದಿಂದ ನಿರ್ದೇಶಿಸಲ್ಪಟ್ಟ ಆದಿತ್ಯನೋ, **ಸೋಽಹಂ**- ಅವನೂ ನಾನು; ಇಲ್ಲಿ ಷಷ್ಠಿಯು ನಿರ್ಧಾರಣಷಷ್ಠಿಯಾದುದರಿಂದ ಅಪರುಗಳಲ್ಲಿ **ಉತ್ಕೃಷ್ಟಃ** ಎಂದು ಭಾಷ್ಯವನ್ನು ಬರೆದಿರುತ್ತಾರೆ. ಕೆಲವರು ವ್ಯಾಪ್ತಿಯಿಂದ ವಿಷ್ಣುವು ಎಂದು ಸಾಕ್ಷಾತ್ತಾಗಿ ಪರಮಾತ್ಮನನ್ನೇ ಬೋಧಿಸುತ್ತದೆಂದು ಅರ್ಥ ಮಾಡಿರುತ್ತಾರೆ. ಇದು ಸರಿಯಲ್ಲವು.

ದ್ವಾದಶಾದಿತ್ಯರು ಯಾರೆಂದರೆ:—**ಮಾರೀಚಾತ್ ಕಾಶ್ಯಪಾಜ್ಜಾತಾಸ್ತೇಽದಿತ್ಯಾ ದಕ್ಷ ಕನ್ಯಯಾ । ತತ್ರ ವಿಷ್ಣುಶ್ಚ ಶಕ್ರಶ್ಚ ಜಜ್ಞಾತೇ ಪುನರೇವ ಹಿ । ಅರ್ಯಮಾ ಚೈವ ಧಾತಾ ಚ ತ್ವಷ್ಟಾ ಪೂಷಾ ತಥೈವ ಚ । ವಿವಸ್ವಾನ್ ಸವಿತಾಚೈವ ಮಿತ್ರೋ ವರುಣ ಏವ ಹ । ಅಂಶು ರ್ಭಗಶ್ಚಾತಿತೇಜಾ ಆದಿತ್ಯಾದ್ವಾದಶ ಸ್ಮೃತಾಃ"** (ವಿ. ಪು. ೧. ೧೫. ೧೩೧) ಎಂಬೀ ಶ್ಲೋಕ ಗಳಲ್ಲಿ ವಿಷ್ಣುವು ನಿರ್ಧಾರಣ ಷಷ್ಠಿಯ ಮೂಲಕ ಈ ೧೨ ಆದಿತ್ಯರಲ್ಲಿ ವಿಷ್ಣುನಾಮಕ ಆದಿತ್ಯನು ನಾನು ಎಂದು ಪ್ರಾಧಾನ್ಯತಃ ಹೇಳಲ್ಪಟ್ಟಿರುತ್ತದೆ. ಇದರಿಂದ ಒಬ್ಬನೇ ಸೂರ್ಯನಿಗೆ ೧೨ ವಿಧ ಗಳಾದ ದೇಹಗಳೆಂಬ ಕೆಲವರ ಅಭಿಪ್ರಾಯವು **"ಉತ್ಕೃಷ್ಟ"** ಶಬ್ದದಿಂದ ಸುತರಾಂ ಕೂಡುವ ದಿಲ್ಲವು. ಅಮರ ನಿಘಂಟಿನಲ್ಲಿ **"ಆದಿತ್ಯ ವಿಶ್ವವಸವಃ"** ಎಂದಾರಂಭಿಸಿ **"ರುದ್ರಾಶ್ಚ ಗಣ ದೇವತಾಃ"** ಗಣದೇವತೆಗಳೆಂದು ಹೇಳಲ್ಪಟ್ಟಿರುವದರಿಂದ, ಬೇರೆಬೇರೆ ಆತ್ಮರುಗಳು ಎಂದು ಭಾವಿಸತಕ್ಕದ್ದು. ವಿಷ್ಣು ಪುರಾಣದ ಪ್ರಥಮಾಂಶ ದ್ವಾವಿಂಶೋಧ್ಯಾಯದ ೩ನೆಯ ಶ್ಲೋಕದಲ್ಲಿ **"ಆದಿತ್ಯಾನಾಂ ಪತಿಂ ವಿಷ್ಣುಂ"** ಎಂದು ಆದಿತ್ಯಗಣಕ್ಕೆಲ್ಲಾ ಅವರಲ್ಲೇ ಒಬ್ಬನಾದ **ವಿಷ್ಣುವು** ಪತಿಯಾದವನು ಎಂದಿರುತ್ತದೆ. ಆದಿತ್ಯರೆಲ್ಲಾ ಒಬ್ಬನಾದ ಆದಿತ್ಯನಿಗೆ ಇರುವ ದೇಹಗಳೆಂದು ಅಪಾರ್ಥ ಕಲ್ಪಿಸಿದರೆ, **ಅವರುಗಳಿಗೆ ವಿಷ್ಣುವು ರಾಜನು** ಎಂದರೆ ಆ ದೇಹಗಳಿಗೆ ರಾಜನು ಎಂದು ಅರ್ಥಮಾಡಲು ಆಗುತ್ತದೆಯೇ? ಆದುದರಿಂದ ಈ ವಿಷ್ಣುವು ವಿಷ್ಣ್ವಂಶಾವತಾರಿಯಾಗಿ ಉಪೇಂದ್ರನೆಂದು ಹೇಳಿಸಿಕೊಳ್ಳುವವನು ಕಾಶ್ಯಪರಾದ ಅದಿತಿಯಲ್ಲಿ ಜನಿಸಿದವನು.

ಆಗಲಿ ಸೂರ್ಯನಿಗೆ ದ್ವಾದಶಾತ್ಮಾ ಎಂಬ ಹೆಸರಿರುವದರಿಂದ ಒಬ್ಬನೇ ೧೨ ಶರೀರಗಳುಳ್ಳ ವನೆಂದು ಅರ್ಥವು ತೋರಿಬರುತ್ತದಲ್ಲಾ? ಎಂದರೆ ಸೂರ್ಯನಿಗೆ ಸಂಕ್ರಮಣ ಕಾಲಗಳಲ್ಲೆಲ್ಲಾ ೧೨ ವಿಧ ಶರೀರಗಳುಂಟೆಂದು ಹೇಳುತ್ತದೆ. ಈ ದ್ವಾದಶಾತ್ಮಾ ಎಂಬುದಕ್ಕೂ ದ್ವಾದಶಾದಿತ್ಯ ಶಬ್ದಕ್ಕೂ ಏನೂ ಸಂಬಂಧವಿಲ್ಲವು. ಅಲ್ಲಿಯೂ ದ್ವಾದಶ, ಇಲ್ಲಿಯೂ ದ್ವಾದಶ, ಶಬ್ದಗಳಿಗಿರುವ ದರಿಂದ ಅನೇಕರಿಗೆ ಭ್ರಮಣಕ್ಕೆ ಕಾರಣವಾಗಿರುತ್ತದೆ. ಇಂತಹ ಭ್ರಮದಿಂದಲೇ **"ದ್ವಾದಶಾ ತ್ಮನ್ನಮೋಸ್ತು ತೇ"** ಎಂಬ ಆದಿತ್ಯ ಹೃದಯ ವಾಕ್ಯದಲ್ಲಿ ದ್ವಾದಶಾದಿತ್ಯಪರವಾಗಿ ಕೆಲವರು ಅರ್ಥಮಾಡಿರುತ್ತಾರೆ. ಮುಂದೆ**"ರವಿರಂಶುಮಾನ್"**ಎಂದಿರುವದರಿಂದ ಪುನರುಕ್ತಿಯಾಗುತ್ತದೆ.

**ಜ್ಯೋತಿಷಾಂ** ಎಂದರೆ **ಜಗತಿ ಪ್ರಕಾಶಕಾನಾಂ** - ಸೃಷ್ಟಿಸಲ್ಪಟ್ಟ ಜಗತ್ತಿನಲ್ಲಿ ಪ್ರಕಾಶ ವುಳ್ಳವುಗಳಲ್ಲೆಲ್ಲಾ, **ಯೋಂಶುಮಾನ್ ರವಿಃ** - ಯಾವ ಬಹು ಪ್ರಕಾಶವುಳ್ಳವನಾದ, **ರವಿಃ** - ಎಂದರೆ, **ಆದಿತ್ಯಗಣಃ** - ಸೂರ್ಯನೂ ಮತ್ತು ಅವನಿಗೆ ಸೇರಿದ ಗಣವೋ, **ಸೋಽಹಂ** - ಅದೂ ಎಂದರೆ ತಚ್ಛರೀರಕ ಪರಮಾತ್ಮನು ನಾನೇ. ತಾನೂ ಕೂಡ ಪರಂಜ್ಯೋತಿಸ್ಸಾಗಿ ಕೋಟ

ಭಾ. **ಮರೀಚಿರ್ಮರುತಾಮಸ್ಮಿ, ಸೋಹಮಸ್ಮಿ; ನಕ್ಷತ್ರಾಣಾಮಹಂ ಶಶೀ–ನೇಯಂ ನಿರ್ಧಾರಣೇ ಷಷ್ಠೀ, "ಭೂತಾನಾಮಸ್ಮಿ ಚೇತನಾ" ಇತಿವತ್; ನಕ್ಷತ್ರಾಣಾಂ ಪತಿರ್ಯಶ್ಚಂದ್ರಃ ಸೋಹಮಸ್ಮಿ** ॥ ೨೧ ॥

ಸೂರ್ಯಪ್ರಕಾಶನಾದುದರಿಂದ ಅಂತಹವನನ್ನು ವ್ಯಾವರ್ತಿಸಿ ಅರ್ಥ ಮಾಡಬೇಕಾಗಿರುವದರಿಂದ ತನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತಿನಲ್ಲಿರುವ ಎಲ್ಲಾ ಪ್ರಕಾಶವುಳ್ಳವುಗಳು ಎಂದು **ಜಗತಿ** ಎಂದು ಪ್ರಯೋಗಿಸಿರುತ್ತಾರೆ. ಜಗತ್ತಿನಲ್ಲಿ ಸೂರ್ಯನಿಗಿಂತ ಮಹತ್ತಾದ ಜ್ಯೋತಿಸ್ಸುಳ್ಳವನಿಲ್ಲವಾದ್ದರಿಂದ **ರವಿಃ ಅಂಶುಮಾನ್** ಎಂದು ಹೇಳಲ್ಪಟ್ಟಿರುತ್ತದೆ ಇಲ್ಲಿ ಮತುಪ್ ಪ್ರತ್ಯಯದಿಂದ ನಿರ್ಧಾರಣೆಗೆ ಉಪಯುಕ್ತವಾದ ಅತಿಶಯಿತ ಪ್ರಕಾಶಯೋಗವು ಹೇಳಲ್ಪಟ್ಟಿತು. ಹಿಂದೆ **ಉತ್ಕೃಷ್ಟಃ** ಎಂದು **ಭಾಷ್ಯ** ಬರೆದಿರುವದರಿಂದ, ಪ್ರಾಧಾನ್ಯತೆಯಿಂದಲೇ ಮುಂದೆ ಹೇಳಲ್ಪಡುವದರಿಂದ, ಅಲ್ಲೆಲ್ಲಾ ಈ ಉತ್ಕೃಷ್ಟ ಭಾವವನ್ನೇ ಅನ್ವಯಿಸಿಕೊಳ್ಳಬೇಕೆಂದು ಸೂಚಿಸಿದಂತಾಯಿತು. ಇದನ್ನು ಜ್ಞಾಪಿಸುವದಕ್ಕಾಗಿಯೇ ಮೂಲದಲ್ಲೇ **"ಪುರೋಧಸಾಂಚ ಮುಖ್ಯಂ ಮಾಂ"** ಎಂದು ಉದಾಹರಿಸಿದರು. ಹಾಗೆಯೇ **ಮರುತಾಂ**-೪೯ ವಾಯುಗಳಲ್ಲಿ, **ಉತ್ಕೃಷ್ಟೋ ಮರೀಚಿರ್ಯಃ**-ಉತ್ಕೃಷ್ಟನಾದ ಮರೀಚಿನಾಮಕನಾದ ವಾಯುವು ಯಾರೋ, **ಸೋಹಮಸ್ಮಿ**-ಆ ಮರೀಚಿಯೂ ನಾನೇ ಆಗಿದ್ದೇನೆ. ಮೊದಲು ಸಪ್ತಮರುತ್ತುಗಳು, ಅವುಗಳಲ್ಲಿ ಒಂದೊಂದನ್ನೂ ಏಳೇಳಾಗಿ **ಮಾರುದ ಮಾರುದ** ಅಳಬೇಡ ಅಳಬೇಡವೆಂದು ಕತ್ತರಿಸಿದುದರಿಂದ ೪೯ ವಾಯುಗಳಾಗಿ ಮಾರುದ ಎಂಬುದರಿಂದ **ಮರುತ್** ಎಂಬ ವ್ಯವಹಾರವುಂಟಾಯಿತು. **ನಕ್ಷತ್ರಾಣಾಂ ಅಹಂ ಶಶೀ**-ನಕ್ಷತ್ರಗಳ ಮಧ್ಯದಲ್ಲಿ, **ಅಹಂ ಶಶೀ**-ಆ ನಕ್ಷತ್ರಗಳಿಗೆ ಪತಿಯಾದ ಚಂದ್ರನು ಯಾರೋ, ಅವನೂ ನಾನು. **ನಕ್ಷತ್ರಾಣಾಂ** ಎಂಬ ಷಷ್ಠಿಗೂ ಹಿಂದಿನ **ಆದಿತ್ಯಾನಾಂ** ಎಂಬ ಷಷ್ಠಿಗೂ ವ್ಯತ್ಯಾಸವಿರುವದರಿಂದ, **ನೇಯಂ ನಿರ್ಧಾರಣೇಷಷ್ಠೀ-ಈ** ಷಷ್ಠಿಯು ನಿರ್ಧಾರಣಾರ್ಥದಲ್ಲಿ ಹೇಳಲ್ಪಡಲಿಲ್ಲವು ಎಂದು ವ್ಯಾಖ್ಯಾನ ಮಾಡಿರುತ್ತಾರೆ: ಹಿಂದೆ **ಆದಿತ್ಯಾನಾಮಹಂ ವಿಷ್ಣುಃ**-ಎಂಬಲ್ಲಿ ವಿಷ್ಣುನಾಮಕನು ಆದಿತ್ಯರಲ್ಲೊಬ್ಬನು, ಹಾಗೆಯೇ ಇನ್ನು ಎರಡು ಸಂದರ್ಭಗಳಲ್ಲೂ ಹೇಳಲ್ಪಟ್ಟಿತು; ಇಲ್ಲಾದರೋ **ಚಂದ್ರನು** ನಕ್ಷತ್ರಗಳಲ್ಲಿ ಸೇರಲಿಲ್ಲವು, ಆದರೆ **ತಾರಾಧಿಪಃ**-ತಾರೆಗಳ ಮಧ್ಯದಲ್ಲಿ ಅವುಗಳಿಗೆ ಪತಿಯು; ಹಾಗೆ ನಿರ್ಧಾರಣ ಷಷ್ಠಿಯಲ್ಲದಿದ್ದರೆ ಇದು ಎಂತಹ ಷಷ್ಠೀ ಎಂದರೆ ಸಂಬಂಧ ಸಾಮಾನ್ಯಷಷ್ಠೀ ಎಂದು ತಿಳಿಸುವದಕ್ಕಾಗಿ, ಒಂದು ದೃಷ್ಟಾಂತವನ್ನು ಕೊಡುತ್ತಾರೆ. ಮುಂದಿನ ಶ್ಲೋಕದಲ್ಲೇ **ಭೂತಾನಾಮಸ್ಮಿ ಚೇತನಾ** ಎಂಬಲ್ಲೇ ಹಾಗೆ ಇರುತ್ತದೆ. ಪ್ರಾಣಿವರ್ಗದಲ್ಲೆಲ್ಲಾ ಯಾವ ಚೈತನ್ಯ ಉಂಟೋ ಅದೂ ನಾನೇ, **ಇತಿವತ್** ಎಂಬ ಪ್ರಯೋಗದ ಹಾಗೆ. **ನಕ್ಷತ್ರಾಣಾಂಪತಿಃ**-ನಕ್ಷತ್ರಗಳಿಗೆ ಸ್ವಾಮಿಯಾದವನು **ಯಶ್ಚಂದ್ರಃ**-ಯಾವ ಪ್ರಧಾನನಾದ ಚಂದ್ರನೋ, **ಸೋಹಮಸ್ಮಿ** - ಅವನೂ ನಾನೇ, **ನಕ್ಷತ್ರಾಣಾ ಮಹಂ ಶಶೀ** ಎಂಬಲ್ಲಿ ನಕ್ಷತ್ರಗಳು ಸುಕೃತಿಗಳಿಗೆ ಭೋಗಸ್ಥಾನಗಳೆಂದೂ ಚಂದ್ರಮಂಡಲವು ಸ್ವರ್ಗಿಗಳಿಗೆ ಭೋಗಸ್ಥಾನವೆಂದೂ, ಶ್ರುತಿಯಲ್ಲಿ ಹೇಳಲ್ಪಟ್ಟಿರುವದರಿಂದ ನಿರ್ಧಾರಣ ಷಷ್ಠೀ ಎಂದೇ ಹೇಳಬಹುದಲ್ಲಾ ? ಮಿಕ್ಕ ಕಡೆಗಳಲ್ಲೆಲ್ಲಾ ನಿರ್ಧಾರಣ ಷಷ್ಠಿಯು ಹೇಳಲ್ಪಟ್ಟಿರುವಾಗ ಇದೊಂದರಲ್ಲಿ ಮಾತ್ರ ಸಂಬಂಧ ಸಾಮಾನ್ಯ ಷಷ್ಠೀ ಎಂದು ಏಕೆ ಅರ್ಥ ಮಾಡಬೇಕು ? ಎಂದು ಆಕ್ಷೇಪಿಸಿದರೆ, ನಕ್ಷತ್ರ ಶಬ್ದದಿಂದ ರಾತ್ರಿಯಲ್ಲಿ ಪ್ರಕಾಶಿಸುವಂತವು ಹೇಳಲ್ಪಟ್ಟಿತೆಂದು ಛತ್ರೀನ್ಯಾಯದಿಂದ ಗ್ರಹಿಸತಕ್ಕದ್ದು. ಅದೂ ಅಲ್ಲದೆ **"ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ", "ನಾದಃ ಪ್ರವದತಾಮಹಂ" "ಅಹಮೇವಾಕ್ಷಯಃ**

**ಮೂ. ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥** ೨೨.

**ಭಾ. ವೇದಾನಾಂ - ಋಗ್ಯಜುಸ್ಸಾಮಾಥರ್ವಣಾಂ ಯ ಉತ್ಕೃಷ್ಟಸ್ಸಾಮವೇದಃ,**

---

**ಕಾಲಃ" "ಉದ್ಭವಶ್ಚ ಭವಿಷ್ಯತಾಂ" "ದ್ಯೂತಂ ಛಲಯತಾಮಸ್ಮಿ" "ತೇಜಸ್ತೇಜಸ್ವಿನಾಮಹಮ್" "ಜಯೋಽಸ್ಮಿ"** ಎಂಬಲ್ಲಿಯೂ ಕೂಡ ನಿರ್ಧಾರಣಷಷ್ಠಿಯು ಕೊಡುವದಿಲ್ಲವು. ಆದುದರಿಂದ ಚಂದ್ರನಿಗೆ ನಕ್ಷತ್ರಜಾತೀಯತ್ವವಿಲ್ಲದುದರಿಂದ ಸಂಬಂಧ ಸಾಮಾನ್ಯ ಷಷ್ಠ್ಯರ್ಥವನ್ನು ಹೇಳುವದೇ ಉಚಿತವು.

**ಮೂಲಕ್ಕೆ ಅರ್ಥ:—ವೇದಾನಾಂ** - ಚತುರ್ವೇದಗಳಲ್ಲಿ, **ಸಾಮವೇದೋಽಸ್ಮಿ** - ಗಾನರೂಪವಾಗಿ ಉತ್ಕೃಷ್ಟವಾಗಿ ಪರಬ್ರಹ್ಮಸ್ವರೂಪವನ್ನು ತಿಳಿಸುವ ಸಾಮವೇದವೂ ನಾನೇ. **ದೇವಾನಾಂ**-ದೇವತೆಗಳಲ್ಲಿ, **ವಾಸವಃ**-ಅವರುಗಳಿಗೆ ಪತಿಯಾಗಿರುವ ಮಹದೈಶ್ವರ್ಯಯುಕ್ತನಾದ ಇಂದ್ರನೂ ನಾನೇ, ತಚ್ಛರೀರಕ ಪರಮಾತ್ಮನೂ ನಾನೇ, ಇಂದ್ರನೂ ಪ್ರತರ್ದನ ವಿದ್ಯೆಯಲ್ಲಿ ತಾನೇ ಪರಮಾತ್ಮನೆಂದು ಹೇಳಿಕೊಂಡಿರುತ್ತಾನೆ. **ಇಂದ್ರಿಯಾಣಾಂ**-ಏಕಾದಶೇಂದ್ರಿಯಗಳಲ್ಲಿ, ನಿಯಾಮಕನಾಗಿರುವದರಿಂದ ಅವುಗಳಲ್ಲೆಲ್ಲಾ ಉತ್ಕೃಷ್ಟೇಂದ್ರಿಯವಾದ, **ಮನಶ್ಚಾಸ್ಮಿ** ಆ ಇಂದ್ರಿಯಗಳಿಗೆಲ್ಲಾ ಮನಸ್ಸಾಗಿರುತ್ತೇನೆ. **ಭೂತಾನಾಂ**-ಭೂತಗಳಲ್ಲಿರುವ, **ಚೇತನಾಸ್ಮಿ**-ಚೇತನವೂ ನಾನೇಯಾಗಿರುತ್ತೇನೆ. ಚೇತನಾ ಎಂದರೆ ಜ್ಞಾನವನ್ನುಂಟುಮಾಡುವುದು ಎಂಬರ್ಥವು. ಇವುಗಳಿಗೆಲ್ಲಾ ಅಂತರಾತ್ಮಾವಾಗಿ ಪ್ರಾಶಸ್ತ್ಯದಾಯನೂ ನಾನೇ ಎಂಬ ತಾತ್ಪರ್ಯವು.

**ಭಾಷ್ಯಾರ್ಥವು:—ವೇದಾನಾಂ** ಎಂದರೆ **ಋಗ್ಯಜುಸ್ಸಾಮಾಥರ್ವಣಾಂ**-ಋಗ್ಯಜುಸ್ಸಾಮಾಥರ್ವಣ ವೇದಗಳಲ್ಲಿ, **ಯಃ ಉತ್ಕೃಷ್ಟಸ್ಸಾಮವೇದಃ**-ಯಾವುದು ಉತ್ಕೃಷ್ಟವಾದ ಸಾಮವೇದವೋ, **ಸೋಽಹಂ** - ಅದೂ ನಾನೇ; ಸಾಮವೇದಕ್ಕೆ ಉತ್ಕೃಷ್ಟತೆ ಹೇಗೆ ಎಂದರೆ ಗಾನರೂಪವಾಗಿ ಸಹಸ್ರಶಾಖೆಯೂ ಇರುವದರಿಂದಲೂ, ಆತನನ್ನು ಹೊಂದುವ ಉಪಾಯವನ್ನು ಪ್ರತಿಪಾದಿಸುವದರಿಂದಲೂ, ಉತ್ಕೃಷ್ಟತೆಯು; ಆದುದರಿಂದಲೇ ನಮ್ಮಾಳ್ವಾರ್‌ರವರು ಸಾಮವೇದಾರ್ಥಗಳನ್ನೇ ತಿರುವಾಯ್‌ಮೊಳಿಯಲ್ಲಿ ಉಪಪಾದಿಸಿರುತ್ತಾರೆ. ಸಾಮ ಶಬ್ದಕ್ಕೆ ಗಾನಮಾಡಲ್ಪಡುವುದು ಎಂದೇ ಅರ್ಥವು. ಸಾಮವೇದಕ್ಕೆ ಪ್ರಾಧಾನ್ಯವು ವೇದದಲ್ಲೇ **ಋಗ್ಭ್ಯೋ ಜಾತಂ ವೈಶ್ಯಂ ವರ್ಣಮಾಹುಃ, ಯಜುರ್ವೇದಂ ಕ್ಷತ್ರಿಯಸ್ಯಾಹು ರ್ಯೋನಿಂ, ಸಾಮವೇದೋ ಬ್ರಾಹ್ಮಣಾನಾಂ ಪ್ರಸೂತಿಃ"** ಎಂದು ಹೇಳಲ್ಪಟ್ಟಿರುತ್ತದೆ; ಮತ್ತು **"ಸಾಮಜ್ಯಾಯಾನ್ಸಾ ಅತೋ ಮಮ ಮಹಿಮಾ"** ಎಂಬ ಶ್ರುತಿವಾಕ್ಯವೂ ಉಂಟು. ಹೀಗೆ ಸಾಮವೇದಕ್ಕೆ ಉತ್ಕೃಷ್ಟತೆಯನ್ನು ಹೇಳಿರುವದರಿಂದ ಇದೇ ಪ್ರಮಾಣವೆಂದೂ, ಮಿಕ್ಕವು ಅಷ್ಟು ಪ್ರಮಾಣವಲ್ಲವೆಂದೂ ಭಾವಿಸತಕ್ಕದ್ದಲ್ಲವು ವೇದವೆಲ್ಲವೂ ಪ್ರಮಾಣವೇ. ಅವರಲ್ಲಿರುವದೆಲ್ಲಾ ಬಾಧ್ಯಬಾಧಕಭಾವಗಳೇನೂ ಇಲ್ಲದೆ, ಸರ್ವಸಮಂಜಸವೆಂಬುದು ನಮ್ಮ ಸಿದ್ಧಾಂತವು. ಪರಸ್ಪರವಿರೋಧವಾಗಿ ತೋರಬಹುದು. ಅವುಗಳನ್ನು ವಿರೋಧವಿಲ್ಲದ ಹಾಗೆ ಅನ್ವಯಿಸುವ ಯೋಗ್ಯತೆ ಇರಬೇಕು.—ಇಲ್ಲದಿದ್ದರೆ **"ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ"** ಎಂಬಲ್ಲಿ ಅಲ್ಪಶ್ರುತನು ಅಪಾರ್ಥವನ್ನು ಎಲ್ಲಿ ಹೇಳುತ್ತಾನೋ ಎಂದು ವೇದವು ನಡುಗುತ್ತದೆಂದು ತಿಳಿಸಲ್ಪಟ್ಟಿರುತ್ತದೆ. **"ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ" "ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ" "ದ್ವಾಸುಪರ್ಣಾ**

ಭಾ. **ಸೋಽಹಮ್; ದೇವಾನಾ ಮಿನ್ದ್ರೋಽಹಮಸ್ಮಿ; ಏಕಾದಶಾನಾ ಮಿಂದ್ರಿಯಾಣಾಂ ಯದುತ್ಕೃಷ್ಟಂ ಮನ ಇಂದ್ರಿಯಮ್, ತದಹಮಸ್ಮಿ; ಇಯಮಪಿ ನ ನಿರ್ಧಾರಣೇ-ಭೂತಾನಾಂ ಚೇತನವತಾಂ ಯಾ ಚೇತನಾ, ಸಾಹಮಸ್ಮಿ** ॥ ೨೨ ॥

**ಸಯುಜಾ ಸಖಾಯಾ "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ" "ಆನೀದವಾತಗ್ಂ ಸ್ವಧಯಾ ತದೇಕಂ....ತಮ ಆಸೀತ್ ತಮಸಾಗೂಢ ಮಗ್ರೇ ಪ್ರಕೇತಂ"** ಎಂಬವುಗಳಲ್ಲಿ ಮೊದಲನೇಎರಡು ಪ್ರಮಾಣಗಳಲ್ಲೂ ಒಂದೇಎಂದೂ, ಅನಂತರ ಎರಡೆಂದೂ, ಆಮೇಲೆ ಮೂರೆಂದೂ, ಕೊನೆಯ ಪ್ರಮಾಣದಲ್ಲಿ ನಾಲ್ಕು ಉಂಟೆಂದೂ, ಹೇಳಿರುತ್ತವೆ. ಮೇಲೆ ನೋಡಿದರೆ ಪರಸ್ಪರ ವಿರುದ್ಧಾರ್ಥಗಳುಳ್ಳಹಾಗೆ ತೋರುತ್ತವೆ. ಆದರೆ ತತ್ವಜ್ಞನಿಗೆ ಪರಮ ಸಾಮಂಜಸ್ಯವು ಉಂಟು ವಿಶಿಷ್ಟಾದ್ವೈತ ಸಿದ್ಧಾಂತರೀತ್ಯಾ ಇವುಗಳಿಗೆ ಸಾಮಂಜಸ್ಯವಿರುವಹಾಗೆ ಅರ್ಥಮಾಡಬಹುದೇ ವಿನಾ, ಅದ್ವೈತ ಮತ್ತು ದ್ವೈತ ಸಿದ್ಧಾಂತರೀತ್ಯಾ ಸಮಂಜಸವಾದ ಅರ್ಥಹೇಳುವದು ಕಷ್ಟವು ಆದುದರಿಂದ ಎಲ್ಲಾ ವೇದಗಳೂ ನಮಗೆ ಪ್ರಮಾಣವೇ. ಆದರೆ ಸಾಮವೇದವು ಪರಬ್ರಹ್ಮನನ್ನೇ ಕುರಿತೇ ಹೇಳಿರುವದರಿಂದ ಅದಕ್ಕೆ ಪ್ರಾಧಾನ್ಯತೆಯು. **ದೇವಾನಾಮಿಂದ್ರೋಽಹಮಸ್ಮಿ** - ಬ್ರಹ್ಮರುದ್ರೇಂದ್ರಾದಿ ದೇವತೆಗಳಲ್ಲಿ ನಾನು ಇಂದ್ರನಾಗಿದ್ದೇನೆ. ಇಂದ್ರನಿಗಿಂತ ಮೂಲಭೂತರಾದ ಬ್ರಹ್ಮರುದ್ರರೂ ಮತ್ತು ಅಗ್ನಿ ಯಮ ವರುಣಾದಿಗಳೂ ಕೂಡ ದೇವಶಬ್ದದಲ್ಲಿ ಅಡಗಿರುವಾಗ, ಅವರನ್ನೆಲ್ಲಾ ಬಿಟ್ಟು ಇಂದ್ರನನ್ನು ಪ್ರಾಮುಖ್ಯತೆಯಿಂದ ಹೇಳಿರುವದು ಹೇಗೆ? ಎಂದರೆ, **ಇದಿ ಪರಮೈಶ್ವರ್ಯೇ** ಎಂಬ ಧಾತುವಿನಿಂದ, ಇಂದ್ರಶಬ್ದದ ವ್ಯುತ್ಪತ್ತಿ ರೀತ್ಯಾ, ಸ್ವರ್ಗಭೋಗಾದಿ ಪರಮೈಶ್ವರ್ಯಯುಕ್ತನಾಗಿರುವದರಿಂದ ಉತ್ಕೃಷ್ಟನು. ಆದುದರಿಂದ ಮೂಲದ ವಾಸವ ಶಬ್ದಕ್ಕೆ ಇಂದ್ರನೆಂಬ ಭಾಷ್ಯವು. ಇದರಿಂದ ಬ್ರಹ್ಮರುದ್ರಾದಿಗಳು ನಿಕೃಷ್ಟರೆಂದು ಭಾವಿಸತಕ್ಕದ್ದಲ್ಲವು. ಅವರಲ್ಲಿ ಮಹತ್ವವು ಬೇರೆ ವಿಧವಾಗಿ ಉಂಟೇ ಉಂಟು. ಶ್ರೀ ಮಚ್ಛಂಕರಾಚಾರ್ಯರೂ ಸಹ **ದೇವಾನಾಂ** ಎಂಬ ಶಬ್ದಕ್ಕೆ **"ರುದ್ರಾದಿತ್ಯಾದೀನಾಂ ವಾಸವಃ ಇನ್ದ್ರಃ ಅಸ್ಮಿ"** ಎಂದೇ ವ್ಯಾಖ್ಯಾನ ಮಾಡಿರುತ್ತಾರೆ. ಆದರೆ ಈ ತೊಂದರೆ ಬರುತ್ತದೆಂದು ಯೋಚಿಸಿ, ಶ್ರೀ ಭಾಷ್ಯಕಾರರು **ದೇವಾನಾಂ** ಎಂಬ ಶಬ್ದಕ್ಕೆ ಬ್ರಹ್ಮ ರುದ್ರರನ್ನು ವ್ಯಾವರ್ತಿಸಿ, ಸ್ವರ್ಗವಾಸಿಗಳಾಗಿ ಸ್ವರ್ಗಸುಖಾನುಭವ ಮಾಡುವವರ ಮಧ್ಯೆ ಅವರಿಗೆ ಪತಿಯಾದ ದೇವೇಂದ್ರನು ನಾನೇ ಎಂದು ಅರ್ಥಮಾಡಿರುತ್ತಾರೆ. **ಏಕಾದಶಾನಾಂ ಇಂದ್ರಿಯಾಣಾಂ** - ಹನ್ನೊಂದು ಇಂದ್ರಿಯಗಳಲ್ಲಿ **ಯದುತ್ಕೃಷ್ಟಂ ಮನ ಇಂದ್ರಿಯಮ್** - ಯಾವ ಮಿಕ್ಕ ದಶೇಂದ್ರಿಯಗಳಿಗೂ ನಿಯಾಮಕವಾಗಿ ಉತ್ಕೃಷ್ಟವಾದ ಮನಸ್ಸೆಂಬ ಇಂದ್ರಿಯವೋ, **ತದಹಮಸ್ಮಿ** - ಅದೂ ನಾನಾಗಿದ್ದೇನೆ. ಮನಸ್ಸೊಂದನ್ನು ಜಯಿಸಿದರೆ, ದಶೇಂದ್ರಿಯಗಳನ್ನೂ, ಶಬ್ದಾದಿ ವಿಷಯಗಳನ್ನೂ, ಜಯಿಸಿದಹಾಗಾಯಿತು. ಎಂಬ ಭಾವದಿಂದ ಮನಸ್ಸಿನ ಉತ್ಕೃಷ್ಟತೆಯು. ಮನಸ್ಸಿನಿಂದಲೇ ಈ ಚೇತನನಿಗೆ ಬಂಧಮೋಕ್ಷಗಳೂ, ಉಂಟಾಗುತ್ತವೆ ಆದುದರಿಂದ ಮನಸ್ಸಿನ ಪ್ರಾಧಾನ್ಯತೆಯು. **"ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ"** (ಕಠ.೧. ೩. ೧೦.) ಎಂದು ಶ್ರುತಿಯೂ ಪ್ರಾಧಾನ್ಯತೆಯನ್ನು ಬೋಧಿಸುತ್ತದೆ ಈ ಶ್ರುತಿಯಲ್ಲೂ ಮತ್ತು **ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ** ಎಂಬ ಮುಂಡಕ ಶೃತಿಯಲ್ಲೂ (೨. ೧. ೩.) ಮನಸ್ಸನ್ನು ಇಂದ್ರಿಯಗಳಿಂದ ಪೃಥಕ್ಕರಿಸಿ ಹೇಳಿದೆಯಲ್ಲಾ ಎಂದರೆ, ಇಂತಹ ಶಙ್ಕಾನಿವೃತ್ತಿಗಾಗಿ **ಏಕಾದಶಾನಾಂ ಇಂದ್ರಿಯಾಣಾಂ** ಎಂಬ ಪ್ರಯೋಗವು. ಹಾಗಾದರೆ ಈ ಶ್ರುತಿಗಳು ಏಕೆ ಪ್ರತ್ಯೇಕಿಸಿಹೇಳಿದವು? ಎಂದರೆ, ಇಂದ್ರಿಯಗಳಲ್ಲಿ ಮನಸ್ಸು ಮಹತ್ವಾದುದರಿಂದಲೇ ಪ್ರತ್ಯೇಕಿಸಿ ಹೇಳಿದವು. ಆದುದರಿಂದ

**ಮೂ,** **ರುದ್ರಾಣಾಂ ಶಙ್ಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಂ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಶ್ಶಿಖರಿಣಾಮಹಮ್ ॥** ೨೩.

ಗೋಬಲೀ ವರ್ದನ್ಯಾಯದ ಪ್ರಕಾರ ಹೇಳಿದವೆಂದು ಭಾವಿಸತಕ್ಕದ್ದು. ಆದುದರಿಂದ ಇಲ್ಲಿಯೂ ನಿರ್ಧಾರಣ ಷಷ್ಠಿಯೇ ಎಂಬ ಭಾವವು. ಇನ್ದ್ರಿಯಗಳು ಹನ್ನೊಂದು ಎಂಬುದಕ್ಕೆ "**ಇನ್ದ್ರಿಯಾಣಿ ದಶೈಕಂಚ**" ಎಂಬ ಪ್ರಯೋಗವು ಗೀತೆಯಲ್ಲೇ ಇದೆ. ( ಗೀ ೧೩. ೫. ) ಹಾಗೆಯೇ ವಿಷ್ಣುಪುರಾಣದಲ್ಲೂ (೧. ೨. ೪೮.) "**ಏಕಾದಶಂ ಮನಶ್ಚಾತ್ರ**" ಎಂದು ಇರುತ್ತದೆ. ವಿಷ್ಣುಪುರಾಣದಲ್ಲಿ "**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಙ್ಗಿ ಮುಕ್ತ್ಯೈ ನಿರ್ವಿಷಯಂ ಮನಃ**" ಮನಸ್ಸೇ ಮನುಷ್ಯರ ಬಂಧ ಮೋಕ್ಷಗಳಿಗೆ ಕಾರಣವೆಂದು ಹೇಳಿರುವದರಿಂದಲೂ ಇತರ ಇಂದ್ರಿಯಗಳಿಗಿಂತ ಮನಸ್ಸಿಗೆ ಪ್ರಾಧಾನ್ಯವು. "**ಮನೋ ಹಿ ಹೇತುಸ್ಸರ್ವೇಷಾಮಿನ್ದ್ರಿಯಾಣಾಂ ಪ್ರವರ್ತನೇ**" ಎಂಬ ಪ್ರಾಜ್ಞನಾದ ಹನುಮಂತನ ವಾಕ್ಯ ಇರುತ್ತದೆ. (ರಾ. ಸುಂ.) **ಇಯ ಮಪಿ** ಇದೂಕೂಡಾ ಎಂದರೆ ಮುಂದೆ ಹೇಳಿರುವ ಷಷ್ಠಿಯು ಹೇಳಲ್ಪಡಲಿಲ್ಲವು. **ನಕ್ಷತ್ರಾಣಾ ಮಹಂ ಶಶೀ** ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುವಹಾಗೆ ಎಂದು ತಿಳಿಸುವದಕ್ಕಾಗಿ **ಅಪಿ** ಶಬ್ದವು. **ಚೇತನವತಾಂ** - ಚೇತನವನ್ನು ಹೊಂದಿದ, **ಭೂತಾನಾಂ** - ಭೂತಗಳಲ್ಲಿರುವ **ಯಾ, ಚೇತನಾ** - ಯಾವ ಮುಖ್ಯವಾದ ಚೇತನ ಉಂಟೋ, **ಸಾಹಮಸ್ಮಿ** - ಆ ಚೇತನವೂ ನಾನೇ ಆಗಿರುತ್ತೇನೆ. ಚೇತನ ವೆಂದರೇನು ಎಂಬ ಪ್ರಶಂಸೆಯಲ್ಲಿ ಭೂತಗಳಲ್ಲಿ ಚೇತನವೆಂದು ಹೇಳಿಸಿಕೊಳ್ಳುವ ಒಂದು ಭೂತಉಂಟು, ಎಂದು ಕೇಳಲು ಸಾಧ್ಯವಿಲ್ಲವಾದುದರಿಂದ, **ಇಯಮಪಿ ನ ನಿರ್ಧಾರಣೇ** ಎಂಬ ಪ್ರಯೋಗವು. **ಭೂತಾನಾಮಸ್ಮಿ ಚೇತನಾ** ಎಂಬಲ್ಲಿ ನಿರ್ಧಾರಣ ಷಷ್ಠ್ಯರ್ಥವನ್ನು ಹೇಳುವದಕ್ಕಾಗುವದಿಲ್ಲವೆಂದು ಮೊದಲೇ ತಿಳಿಸುತ್ತಾರೆ. ಹಾಗಾದರೆ ಇದು ಎಂತಹ ಷಷ್ಠಿ ಎಂದರೆ ಸಂಬಂಧ ಸಾಮಾನ್ಯ ಷಷ್ಠಿ ಎಂದು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಆದರೆ ಒಂದೆರಡು ಕಡೆಯಲ್ಲಿ **ಚೇತನಾ** ಎಂಬುದು ಆರನೆಯ ಭೂತವೆಂದೂ, ಇನ್ನೊಂದು ಕಡೆಯಲ್ಲಿ ಮನಸ್ಸನ್ನೇ **ಚೇತನ** ವೆಂದೂ ಹೇಳಿರುವದರಿಂದ ನಿರ್ಧಾರಣಾರ್ಥವೇ ಏಕೆ ಕೂಡದು ? ಎಂದರೆ ಪಂಚ ಭೂತಗಳೇ ಪ್ರಸಿದ್ಧವಾಗಿ ಹೇಳಲ್ಪಟ್ಟಿರುವದರಿಂದಲೂ, ಆರನೆಯದು ಮಾತ್ರವಲ್ಲದೆ ಏಳನೆಯದೂ ಎಂಟನೆಯದೂ ಎಂದೂ ಕೆಲವುಕಡೆ ಹೇಳಲ್ಪಟ್ಟಿರುವದರಿಂದಲೂ, ಮನಸ್ಸೆಂದರ್ಥಮಾಡುವದು ಅಪ್ರಸಿದ್ಧಾರ್ಥವೆಂದಾಗುತ್ತದೆ. "**ತೇಜಸ್ತೇಜಸ್ವಿನಾಂ**" "**ಸತ್ವಂ ಸತ್ವವತಾಂ**" ಎಂಬಲ್ಲಿ ಹೇಳಿರುವಹಾಗೆ ಇಲ್ಲಿಯೂ ಸಾರಭೂತವಿಶೇಷಣವು **ಚೇತನಾ** ಎಂಬುದರಿಂದ ಹೇಳಲ್ಪಟ್ಟಿತೆಂದು "**ಚೇತನವತಾಂ ಯಾ ಚೇತನಾ**" ಎಂಬ ಭಾಷ್ಯವು. ಚೇತನವೆಂದರೆ ಮನಸ್ಸು ಬುದ್ಧಿಗಳ ಪ್ರವೃತ್ತಿಗಳಿಗೆ ಹೇತುಭೂತವಾದುದು. ಶ್ರೀ ಮಚ್ಛಂಕರಾಚಾರ್ಯರು "**ಕಾರ್ಯಕಾರಣ ಸಂಘಾತೇ ಅಭಿವ್ಯಕ್ತಾ ಬುದ್ಧೇಃ ವೃತ್ತಿಃ ಚೇತನಾ** ಎಂದು ಸಮಂಜಸವಾದ ವ್ಯಾಖ್ಯಾನ ಮಾಡಿರುತ್ತಾರೆ. ಜ್ಞಾನವನ್ನುಂಟುಮಾಡುವದು ಚೇತನವೆನಿಸುತ್ತದೆ. ಚಿತಿ ಸಂಜ್ಞಾನೇ ಎಂಬ ಧಾತುವು, ಚೇತಯಂತೇ ಅನಯೇತಿ **ಚೇತನಾ** ಎಂಬ ವ್ಯುತ್ಪತ್ತಿಯಿಂದ ಜ್ಞಾನವನ್ನುಂಟುಮಾಡುವದು ಎಂಬರ್ಥವು.

**ಮೂಲಕ್ಕೆ ಅರ್ಥವು:-ರುದ್ರಾಣಾಂ** - ಏಕಾದಶ ರುದ್ರಗಣದಲ್ಲಿ; **ಶಙ್ಕರಶ್ಚಾಸ್ಮಿ** -ಶಙ್ಕರನಾಮಕನಾದ ರುದ್ರನು ನಾನು; ಹಿಂದೆ ದ್ವಾದಶಾದಿತ್ಯರಲ್ಲಿ ವಿಷ್ಣುನಾಮಕ ಆದಿತ್ಯನೆಂದು **ಆದಿತ್ಯಾನಾಮಹಂ ವಿಷ್ಣುಃ** ಎಂದು ಹೇಳಿದಹಾಗೆ, ಇಲ್ಲಿಯೂ ಹೇಳಲ್ಪಟ್ಟಿತು. ಏಕಾದಶರುದ್ರರಲ್ಲಿ ಪ್ರಾಧಾನ್ಯತೆಯನ್ನು ಹೊಂದಿರುವ ಶಙ್ಕರನೇ ವಿವಕ್ಷಿತನೆಂದು ಗ್ರಹಿಸತಕ್ಕದ್ದಾಗಿರುತ್ತದೆ. ಏಕಾದಶ

**ಭಾ. ರುದ್ರಾಣಾಮೇಕಾದಶಾನಾಂ ಶಂಕರೋಽಹಮಸ್ಮಿ ;ಯಕ್ಷರಕ್ಷಸಾಂ ವೈಶ್ರವಣೋಽಹಂ**

ರುದ್ರರು ಯಾರೆಂದರೆ ಶ್ರೀ ಪರಾಶರರು ಹೇಳುತ್ತಾರೆ–**"ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚಾಪರಾಜಿತಃ । ವೃಷಾಕಪಿಶ್ಚ ಶಂಭುಶ್ಚ ಕಪರ್ದೀರೈವತಸ್ತಥಾ । ಮೃಗವ್ಯಾಧಶ್ಚ ಶರ್ವಶ್ಚ ಕಪಾಲೀಚ ಮಹಾಮುನೇ । ಏಕಾದಶೈತೇ ಕಥಿತಾ ರುದ್ರಾಸ್ತ್ರಿಭುವನೇಶ್ವರಾಃ"** (ವಿ.ಪು. ೧. ೧೫, ೧೨೨-೧೨೩) ಇಲ್ಲಿ **ಶಂಕರ** ನಾಮವಿಲ್ಲದುದರಿಂದ ಶಂಕರನಾಮಾರ್ಥವೂ ಶಂಭುನಾಮಾರ್ಥವೂ ಒಂದೇಯಾಗಿರುವದರಿಂದ ಶಂಭು ಶಬ್ದವು ಶಂಕರ ಶಬ್ದಕ್ಕೆ ಬದಲಾಗಿದೆ ಎಂದು ಊಹಿಸಬಹುದು. ಅಮರಸಿಘಂಟಿನಲ್ಲೂ **"ರುದ್ರಾಶ್ಚ ಗಣದೇವತಾಃ"** ಎಂದು ದ್ವಾದಶಾದಿತ್ಯರು ಮೊದಲುಗೊಂಡು ಇವರೆಲ್ಲರೂ ಗಣದೇವತೆಗಳೆಂದು ಹೇಳಲ್ಪಟ್ಟಿರುತ್ತವೆ. ಕೆಲವರು ರುದ್ರನೆಂಬುವನೊಬ್ಬನಿಗೆ, ಹನ್ನೊಂದು ದೇಹಗಳು ಎಂದು ಅಭಿಪ್ರಾಯಪಡುವರು. ಇದು ಮೇಲಿನ ಪರಾಶರವಾಕ್ಯಕ್ಕೆ ವಿರೋಧವು. ದ್ವಾದಶಾದಿತ್ಯರು ಭಿನ್ನರಾದ ಆತ್ಮರುಗಳು ಎಂದೇ ಭಾಗವತ ಏಕಾದಶಸ್ಕಂಧದಲ್ಲೂ ಹೇಳಲ್ಪಟ್ಟಿರುತ್ತದೆ. ಅಲ್ಲಿಯೂ ಶ್ರೀಕೃಷ್ಣಭಗವಾನರವರು ತಮ್ಮ ವಿಭೂತಿಯಲ್ಲಿ ಪ್ರಧಾನವಾದವುಗಳನ್ನು ಕೇಳಿ ತಿಳಿಯಬೇಕೆಂಬ ಅಭಿಲಾಷೆಯುಳ್ಳವರಿಗೆ ಹೇಳುತ್ತಾರೇನೆಂದರೆ ಅಲ್ಪರಾಜ್ಯಕ್ಕಾಗಿ ಜ್ಞಾತಿಗಳನ್ನೂ ಗುರುಗಳನ್ನೂ ವಧಿಸುವದು ಯುಕ್ತವಲ್ಲವೆಂದು ವಿಷಾದಿಸುತ್ತಿದ್ದ ಕಾಲದಲ್ಲಿ ಅರ್ಜುನನು ಇದೇ ಪ್ರಶ್ನೆಯನ್ನು ಮಾಡಿದನು, ಆಗಮಾಡಿದ ಉಪದೇಶವನ್ನೇ ನಿನಗೂ ಮಾಡುತ್ತೇನೆಂದು ಹೇಳುತ್ತಾರೆ. **"ಅಕ್ಷರಾಣಾಮಕಾರೋಽಸ್ಮಿ ಗಾಯತ್ರೀ ಛಂದಸಾಮಹಮ್ । ಇನ್ದ್ರೋಽಹಂ ಸರ್ವದೇವಾನಾಂ ವಸೂನಾಮಸ್ಮಿ ಹವ್ಯವಾಟ್ । ಆದಿತ್ಯಾನಾಮಹಂ ವಿಷ್ಣುಃ ರುದ್ರಾಣಾಂ ನೀಲಲೋಹಿತಃ । ಬ್ರಹ್ಮರ್ಷೀಣಾಂ ಭೃಗುರಹಂ ರಾಜರ್ಷೀಣಾಮಹಂ ಮನುಃ। ದೇವರ್ಷೀಣಾಂ ನಾರದೋಽಹಂ ಹವಿರ್ಧಾನ್ಯಸ್ಮಿ ಧೇನುಷು"** ಎಂದು ಹೀಗೆಯೇ ಹೇಳುತ್ತಾ ಹೋಗುತ್ತಾರೆ. ಏಕಾದಶರುದ್ರರಲ್ಲಿ ಇಲ್ಲಿ **ಶಂಕರ** ಶಬ್ದಕ್ಕೆ ಬದಲಾಗಿ **ನೀಲಲೋಹಿತ** ವೆಂದು ಇರುತ್ತದೆ. ಇವುಗಳು ಪರ್ಯಾಯಪದಗಳಾದುದರಿಂದ ಪರಸ್ಪರ ವಿರೋಧವೇನೂ ಇಲ್ಲವು, **ಯಕ್ಷರಕ್ಷಸಾಂ**— ಯಕ್ಷರಕ್ಷರುಗಳಲ್ಲಿ, **ವಿತ್ತೇಶಃ**—ಮಹದೈಶ್ವರ್ಯಯುಕ್ತನಾದ ಕುಬೇರನಾಗಿದ್ದೇನೆ. **ವಸೂನಾಂ**—ಅಷ್ಟ ವಸುಗಳಲ್ಲಿ ಎಂಟನೆಯವನಾದ, **ಪಾವಕೋಽಸ್ಮಿ**—ಪಾವಕನಾಮಕನಾದ ವಸುವಾಗಿರುತ್ತೇನೆ. ಅಷ್ಟ ವಸುಗಳು ಯಾರು ಎಂಬುದು ವಿಷ್ಣುಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ. — **ಯೇತ್ವನೇಕವಸುಪ್ರಾಣಾ ದೇವಾ ಜ್ಯೋತಿಃ ಪುರೋಗಮಾಃ। ವಸವೋಽಷ್ಟೌ ಸಮಾಖ್ಯಾತಾಸ್ತೇಷಾಂ ವಕ್ಷ್ಯಾಮಿ ವಿಸ್ತರಮ್। ಆಪೋ ಧ್ರುವಶ್ಚ ಸೋಮಶ್ಚ ಧರ್ಮಶ್ಚೈವಾನಿಲೋ ನಲಃ । ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋನಾಮಭಿಸ್ಸ್ಮೃತಾಃ ".** (ವಿ.ಪು. ೧-೧೫-೧೧೦-೧) ಇವರಿಗೆ ವಸುಗಳೆಂದು ಏಕೆಹೆಸರು ಎಂದರೆ ಅನೇಕ **ವಸು** ಎಂದರೆ ಧನ ಅಥವಾ ತೇಜಸ್ಸನ್ನೇ ಬಲವಾಗಿ ಉಳ್ಳವರು, ಅವರುಗಳ ಹೆಸರುಗಳು ಆಪ, ಧ್ರುವ ಎಂದಾರಂಭಿಸಿ ಪ್ರಭಾಸರೆಂದು ಎಂಟು ಜನರು ; ಅವರಲ್ಲಿ **ಜ್ಯೋತಿಃ ಪುರೋಗಮಾಃ** ಎಂದು ಹೇಳಿರುವದರಿಂದ ಅನಲಶಬ್ದದಿಂದ ಹೇಳಲ್ಪಟ್ಟ ಅಗ್ನಿಯೇ ಪ್ರಧಾನನು. **ಶಿಖರಿಣಾಂ**—ಶಿಖರವನ್ನು ಹೊಂದಿರುವ ಪರ್ವತಗಳಲ್ಲಿ, **ಮೇರುರಹಮ್**—ಚಿನ್ನ ರತ್ನಗಳುಳ್ಳ ಪರ್ವತವಾಗಿಯೂ, ಗ್ರಹಗಳು ಸುತ್ತುವುದಕ್ಕೆ ಅಕ್ಷರೂಪವಾಗಿಯೂ; ಪ್ರಾಧಾನ್ಯತೆಯನ್ನು ಹೊಂದಿರುವ ಮೇರು ಪರ್ವತವೂ ನಾನೇ. ಇವರುಗಳಿಗೆಲ್ಲಾ ಅಂತರಾತ್ಮಾವಾಗಿ ಮಾಹಾತ್ಮ್ಯೆಯನ್ನುಂಟುಮಾಡಿರುವನು ನಾನೇ ಎಂಬ ಭಾವವು.

**ಭಾಷ್ಯಾರ್ಥವು:**—**ರುದ್ರಾಣಾಂ**—ಎಂದರೆ **ಏಕಾದಶಾನಾಂ**—ಏಕಾದಶ ರುದ್ರರಲ್ಲಿ,

**ಭಾ. ವಸೂನಾಮಷ್ಟಾನಾಂ ಪಾವಕೋಽಹಮ್ ; ಶಿಖರಿಣಾಂ-ಶಿಖರಶೋಭಿನಾಂ ಪರ್ವತಾನಾಂ ಮಧ್ಯೇ ಮೇರುರಹಮ್ ॥ ೨೩ ॥**

**ಮೂ. ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕನ್ದಸ್ಸರಸಾಮಸ್ಮಿ ಸಾಗರಃ ॥** **೨೪.**

**ಶಙ್ಕರೋಽಹಮಸ್ಮಿ**—ಪ್ರಧಾನನಾಗಿರುವ ಶಙ್ಕರನಾಮಕ ರುದ್ರನೂ ನಾನೇ; **ಯಕ್ಷರಕ್ಷಸಾಂ**-ಯಕ್ಷರಕ್ಷಸ್ಸುಗಳಲ್ಲಿ, **ವೈಶ್ರವಣೋಽಹಮ್** — ವಿಶ್ರವಸ್ಸಿನ ಪುತ್ರನಾಗಿ, ಧನೈಶ್ವರ್ಯಗಳಿಗೆ ಅಧಿಪತಿಯಾಗಿ, ರಾವಣನಿಗೆ ತಮ್ಮನಾಗಿ ಪ್ರಖ್ಯಾತನಾಗಿರುವ ಕುಬೇರನೂ ನಾನೇ, ಯಕ್ಷರಕ್ಷಸ್ಸುಗಳನ್ನು ಇಲ್ಲಿ ಒಟ್ಟುಗೂಡಿಸಿ ಹೇಳಿರುವದು ಜಾತಿಯಲ್ಲಿ ಅವರುಗಳಿಗೆ ತುಂಬಾ ವ್ಯತ್ಯಾಸವಿಲ್ಲವೆಂಬ ಭಾವದಿಂದ ಎಂದು ಊಹಿಸಬಹುದು. ತಾನೇ ರಾಕ್ಷಸನಲ್ಲದಿದ್ದರೂ ರಾಕ್ಷಸರಾಜನಿಗೆ ತಮ್ಮನು, ಅಥವಾ ಅವರಿಬ್ಬರ ಸಂಗಡಕ್ಕೂ ಕುಬೇರನು ಅಧಿಪತಿ ಎಂಬ ಭಾವದಿಂದಲಾದರೂ ಇಟ್ಟುಕೊಳ್ಳಬಹುದು; **ವಸೂನಾಂ ಅಷ್ಟಾನಾಂ**—ಅಷ್ಟ ವಸುಗಳಲ್ಲಿ **ಪಾವಕೋಽಹಮ್**—ಶ್ರೇಷ್ಠನಾದ ಪಾವಕನಾಮಕನು ನಾನೇ; **ಶಿಖರಿಣಾಂ** ಎಂದರೆ **ಶಿಖರಶೋಭಿನಾಂ ಪರ್ವತಾನಾಂ**-ಶಿಖರಗಳಿಂದ ಶೋಭಿಸುವ ಪರ್ವತಗಳ ಮಧ್ಯದಲ್ಲಿ, **ಮೇರುರಹಮ್**—ಸ್ವರ್ಣರತ್ನಗರ್ಭಿತವಾಗಿ ಮಾಹಾತ್ಮ್ಯೆಯನ್ನು ಹೊಂದಿದ ಮೇರುಪರ್ವತವು ನಾನೇ, ಪರ್ವತಗಳಲ್ಲಿ ಮೇರುವು ನಾನು ಎಂದು ಹೇಳದೇ, **ಶಿಖರಿಣಾಂ** ಎಂಬ ಪ್ರಯೋಗದಿಂದ ಸಾಮಾನ್ಯ ಪರ್ವತಗಳು ಹೇಳಲ್ಪಡಲಿಲ್ಲವೆಂದೂ ಶಿಖರದಿಂದ ಶೋಭಾಯಮಾನವಾದ ಪರ್ವತಗಳು ವಿಶೇಷಿಸಿ ಹೇಳಲ್ಪಟ್ಟವೆಂದೂ ತಿಳಿಸುವದಕ್ಕಾಗಿ **ಶಿಖರ ಶೋಭಿನಾಂ** ಎಂಬದಾಗಿ ವ್ಯಾಖ್ಯಾನವು. **ಶಿಖರಿ** ಎಂಬಲ್ಲಿ ಪ್ರತ್ಯಯದಿಂದಲೇ ವಿಶಿಷ್ಟತೆಯೂ ತದ್ದ್ವಾರಾ ಪ್ರಶಂಸೆಯೂ ಬೋಧಿಸಲ್ಪಟ್ಟವೆಂದು ತಿಳಿಯತಕ್ಕದ್ದು. ಮುಂದೆಯೇ **ಸ್ಥಾವರಾಣಾಂ ಹಿಮಾಲಯಃ** ಎಂದು ಇರುವದರಿಂದ ಇಲ್ಲಿ ಸಾಮಾನ್ಯತಃ ಹೇಳಲ್ಪಟ್ಟಿತೆಂದೂ **ಮೇರುಶ್ಶಿಖರಿಣಾಮಹಂ** ಎಂಬಲ್ಲಿ **ವಿಶೇಷತಃ** ಹೇಳಲ್ಪಟ್ಟಿತೆಂದೂ ಭಾವಿಸಬಹುದು **ಶಿಖರಿಣಾಂ** ಎಂಬುದರಿಂದ ವಿಶೇಷವನ್ನು ಹೇಳಿ, ಆ ಶಿಖರಿಗಳಲ್ಲಿ ಮೇರುವು ಶ್ರೇಷ್ಠವಾದುದೆಂದು ಹೇಳಲ್ಪಟ್ಟಿತು ॥೨೩॥

**ಮೂಲಕ್ಕೆ ಅರ್ಥವು:-ಪುರೋಧಸಾಂ ಚ**-ರಾಜಪುರೋಹಿತರುಗಳಲ್ಲೂ, **ಹೇ ಪಾರ್ಥ**-ಓ ಪೃಥು ಎಂಬವಳ ಕುಮಾರನಾದ ಅರ್ಜುನನೇ, **ಮಾಂ**-ನನ್ನನ್ನು, **ಮುಖ್ಯಂ**-ಮುಖ್ಯನಾದ **ಬೃಹಸ್ಪತಿಮ್** — ಬುದ್ಧಿಶ್ರೇಷ್ಠರಲ್ಲಿ ಅಗ್ರಗಣ್ಯನಾಗಿ ದೇವಪುರೋಹಿತನಾದ ಬೃಹಸ್ಪತಿಯನ್ನಾಗಿ, **ವಿದ್ಧಿ**-ತಿಳಿ; ಜ್ಞಾನವಿಜ್ಞಾನಗಳಿಂದ ಬೃಹತ್ತಾದ ಪತಿ ಎಂಬುದರಿಂದಲೇ ಬೃಹಸ್ಪತಿ ಶಬ್ದಕ್ಕೇನೇ ಉತ್ಕರ್ಷವು; **ಸೇನಾನೀನಾಂ**-ಸೇನಾನಾಯಕರಲ್ಲಿ, **ಸ್ಕಂದಃ**-ದೇವಸೇನಾನಾಯಕನು **ಅಹಮಸ್ಮಿ**-ನಾನಾಗಿದ್ದೇನೆ; ಇಲ್ಲಿ **ಅಹಂ** ಎಂದು ಪ್ರಥಮಾವಿಭಕ್ತಿಯು ಇರುವದರಿಂದ, ಪೂರ್ವಾರ್ಧದ ಅನ್ವಯವು ಕೂಡುವುದಿಲ್ಲವು **ಸರಸಾಂ**-ಭೂಮಿಯಿಂದ ಸುತ್ತುವರಿಯಲ್ಪಟ್ಟ ಜಲಾಶಯಗಳಲ್ಲಿ ಎಂದರೆ ಪ್ರವಾಹವಿಲ್ಲದೆ ಸರಸ್ಸುಗಳೆಂದು ಹೇಳಿಸಿಕೊಳ್ಳುವ ಜಲಾಶಯಗಳಲ್ಲಿ ಎಂಬ ಭಾವವು, **ಸಾಗರೋಽಸ್ಮಿ**-ನಾನು ಶ್ರೇಷ್ಠನಾದ, ಅಗಾಧವಾಗಿ ಅಲೆಗಳಿಂದ ಘೋಷಿಸುವ, ಅನೇಕರತ್ನಗಳಿಗೆ ಆಕರವಾಗಿ ಬಹುವಿಶಾಲವಾಗಿರುವ, ಪ್ರಸಿದ್ಧನಾದ ಸಾಗರನಾಗಿರುತ್ತೇನೆ ।೨೪।

**ಭಾಷ್ಯಾರ್ಥವು:-ಪುರೋಧಸಾಂ**-ರಾಜಪುರೋಹಿತರುಗಳಲ್ಲಿ ಉತ್ಕೃಷ್ಟನಾದ ಬೃಹಸ್ಪತಿಯು, **ಯಃ**-ಯಾವನುಂಟೋ **ಸೋಽಹಮಸ್ಮಿ**-ಅವನೂ ನಾನೆಯೇ, **ಈ ಬೃಹತಾಂಪತಿಃ**-ಬೃಹಸ್ಪತಿಃ ಎಂಬುದರಿಂದಲೇ ಅತಿಶಯವು ವ್ಯಕ್ತವು. ಶಚೀದೇವಿಯ ಕಷ್ಟದಶೆಯಲ್ಲಿ ಸಿನಾರಕೋಟಾಯ

**ಭಾ. ಪುರೋಧಸಾಮುಖ್ಯಶ್ಚೋ ಬೃಹಸ್ಪತಿರ್ಯಃ. ಸೋಽಹಮಸ್ಮಿ; ಸೇನಾನೀನಾಂ ಸೇನಾಪತೀನಾಂ ಸ್ಕಂದೋಽಹಮಸ್ಮಿ; ಸರಸಾಂ ಸಾಗರೋಽಹಮಸ್ಮಿ ॥ ೨೪ ॥**

**ಮೂ. ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ ೨೫.**

ಸೇನಾಪತಿಗಳಲ್ಲಿ, **ಸ್ಕಂದೋಽಹಮಸ್ಮಿ**-ಪ್ರಸಿದ್ಧನಾದ ಸ್ಕಂದನೂ ನಾನೇ ಆಗಿದ್ದೇನೆ; **ಸೇನೇಶರು** ಪ್ರಧಾನರಾಗಿರುವಾಗ ಅವರನ್ನು ಬಿಟ್ಟು ಸ್ಕಂದನನ್ನು ಹೇಳಿದುದು ಹಾಗೆ? ಎಂದರೆ ನಿತ್ಯವಿಭೂತಿಯಲ್ಲಿರುವರನ್ನು ಹೇಳುವದು ಅಷ್ಟು ಪ್ರಕೃತವಲ್ಲವೆಂದು ಭಾವಿಸಿ, ಕರ್ಮವಶ್ಯರಾದ ಸೇನಾನಿಗಳಲ್ಲಿ ಪ್ರಧಾನನಾಗಿ ಸ್ಕಂದನು ಹೇಳಲ್ಪಟ್ಟನೆಂದು ಭಾವಿಸತಕ್ಕದ್ದು. ಅದಕ್ಕಾಗಿ ಸ್ವರ್ಗಾದಿ ಲೋಕಗಳ ಸೇನಾನಾಯಕರನ್ನು ಮನಸ್ಸಿನಲ್ಲಿಟ್ಟು **ಸೇನಾಪತೀನಾಂ** ಎಂಬ ವ್ಯಾಖ್ಯಾನವು. ನಿತ್ಯ ವಿಭೂತಿಯಲ್ಲಿರುವವರು ಒಬ್ಬರೇ ಸೇನೇಶರು; ಆದುದರಿಂದ ಬಹುವಚನಕ್ಕೂ ನಿರ್ಧಾರಣ ಷಷ್ಠಿಗೂ ಅವಕಾಶವೇ ಇಲ್ಲವು. **ಸರಸಾಂ**-ಸರಸ್ಸುಗಳಲ್ಲಿ, **ಸಾಗರೋಽಹಮಸ್ಮಿ**-ಮಹತ್ತಾದ ನಿರುಪಮವಾದ ಸಾಗರವೂ ನಾನೇ ಆಗಿದ್ದೇನೆ ಇಲ್ಲಿ ಸರಸ್ಸುಶಬ್ದಕ್ಕೆ ಪ್ರವಾಹರಹಿತ ಜಲಾಶಯವೆಂಬರ್ಥವೇ ಸರಿಯಾದುದು; ಏಕೆಂದರೆ, ಮುಂದೆ **ಸ್ರೋತಸಾಮಸ್ಮಿ ಜಾಹ್ನವೀ**-ನದಿಗಳಲ್ಲಿ ನಾನು ಗಂಗೆ ಎಂದು ಮುಂದೆ ಹೇಳುವದರಿಂದ; ಎಲ್ಲಾ ಕಡೆಯಲ್ಲೂ, **"ಆದಿತ್ಯಾನಾಮಹಂ ವಿಷ್ಣುಃ ಸೇನಾನೀನಾಮಹಂ ಸ್ಕಂದಃ"** ಹೀಗೆ ಪ್ರಥಮಾಂತದಲ್ಲಿ ಸಾಮಾನಾಧಿಕರಣ್ಯವಿರುವಾಗ, **ಈ** ಶ್ಲೋಕದ ಪೂರ್ವಾರ್ಧದಲ್ಲಿ ಮಾತ್ರ **ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ** ಎಂದು ಬೇರೆ ವಿಧವಾಗಿ ಹೇಳಿರುವದಕ್ಕೆ ಕಾರಣವೇನೆಂಬ ಪ್ರಶ್ನೆಯು ಯುಕ್ತವಾದುದು. ಅದಕ್ಕೆ ಪ್ರಾಜ್ಞರು ಸಮಾಧಾನವನ್ನು ಹೇಳುವದೂ ಆವಶ್ಯಕವು. ಶ್ರೀ ಕೃಷ್ಣನ ಅಭಿಪ್ರಾಯವು ತಾನು ನಿರ್ಧಾರಣ ಷಷ್ಠ್ಯರ್ಥದ ಸಾಮಾನಾಧಿಕರಣ್ಯವನ್ನು ಹೇಳಿರುವ ಸ್ಥಳದಲ್ಲೆಲ್ಲಾ ಹೀಗೆಯೇ ಅರ್ಥಮಾಡಬೇಕೆಂದು ತಿಳಿಸುವದಕ್ಕಾಗಿ ಎಂದು ಪ್ರಾಜ್ಞರು ಗ್ರಹಿಸುತ್ತಾರೆ **ಆದಿತ್ಯಾನಾಂ ಅಹಂ ವಿಷ್ಣುಃ** ಎಂಬುದಕ್ಕೆ **"ಆದಿತ್ಯಾನಾಂ ಮುಖ್ಯಂ ಮಾಂ ವಿದ್ಧಿ ವಿಷ್ಣುಂ"** ಎಂದು ಅರ್ಥ ಮಾಡತಕ್ಕದ್ದು ಎಂಬ ತಾತ್ಪರ್ಯವು. **ವಿದ್ಧಿ** ಎಂಬ ಕ್ರಿಯಾಪದವು **ಮಾಂ** ಎಂಬುದರಿಂದ ಹೇಳಲ್ಪಟ್ಟ ಶ್ರೀ ಕೃಷ್ಣನೂ, ಬೃಹಸ್ಪತಿಯೂ ಸಹ ಬೇರೆಯೇ ಎಂದೂ, ಶರೀರಾತ್ಮಭಾವದಿಂದ ಸಾಮಾನಾಧಿಕರಣ್ಯವೆಂದೂ ಸೂಚಿಸುತ್ತದೆ. ಅಶ್ವವನ್ನು ತುರಗವೆಂದು **ವಿದ್ಧಿ - ತಿಳಿ** ಎಂದು ಹೇಳುವದು ಹಾಸ್ಯಾಸ್ಪದವು. ಇದರಿಂದ ಸ್ವರೂಪೈಕ್ಯಾಭಿಪ್ರಾಯಕ್ಕೆ ಅನುಕೂಲವೇ ಇಲ್ಲವು. ಅವತಾರಿಯಾದ ನಾನೇ ಬೃಹಸ್ಪತಿಗೆ ಅಂತರಾತ್ಮನಾಗಿರುವವನು, ಆ ಕಾರಣದಿಂದ ಅವನೂ ನಾನೇ ಎಂಬಲ್ಲಿ ಭೇದಭಾವವನ್ನು ಈ ಪೂರ್ವಾರ್ಧದಲ್ಲಿ ತೋರಿಸಿರುವ ಅನ್ವಯವು ವ್ಯಕ್ತಗೊಳಿಸುತ್ತದೆ. ಇದಕ್ಕೆ ನಿದರ್ಶನವಾಗಿ ಶ್ರೀ ವಾಲ್ಮೀಕಿ ಮಹರ್ಷಿಯ ಅದ್ಭುತ ಶ್ಲೋಕವಾದ **"ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ । ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾ ಸುಖಂ"** ಎಂಬಲ್ಲಿ ಸಾಮಾನಾಧಿಕರಣ್ಯಾರ್ಥವು ಅನುಸಂಧೇಯವು.

**ಮೂಲಕ್ಕೆ ಅರ್ಥವು:—ಮಹರ್ಷೀಣಾಂ** - ಮಹಾನುಭಾವರಾದ ಸರ್ವ ಋಷಿಗಣ ಮಧ್ಯದಲ್ಲಿ, ಅಥವಾ ಸಪ್ತರ್ಷಿಗಳಲ್ಲಿ, **ಭೃಗುರಹಂ**-ತುಂಬಾ ಪ್ರಾಜ್ಞರಾದ ಭೃಗುಮಹರ್ಷಿಯೂ ನಾನೇ. ಪರತತ್ವ ನಿರ್ಣಯವನ್ನು ಮಾಡಿದ ಭೃಗುಮಹರ್ಷಿಯೂ ನಾನೇ. ಆತನಿಗೂ ಆತ್ಮಾವಾಗಿ ಆತನಿಗೆ ಮಾಹಾತ್ಮ್ಯವನ್ನು ಉಂಟುಮಾಡಿದವನೂ ನಾನೇ ಎಂಬ ಭಾವವು. **ದೇವರ್ಷೀಣಾಂಚ ನಾರದಃ** ಎಂದು ಮುಂದಿನ ಶ್ಲೋಕದಲ್ಲಿ ಹೇಳಿರುವದರಿಂದ, ಅಪರುಗಳನ್ನು ವ್ಯಾವ

**ಭಾ. ಮಹರ್ಷೀಣಾಂ ಮರೀಚ್ಯಾದೀನಾಂ ಭೃಗು ರಹಂ; ಅರ್ಥಾಭಿಧಾಯಿನಶ್ಶಬ್ದಾಃ-**

ತ್ಪಿ ಇಹಲೋಕ ಮಹರ್ಷಿಗಳು ಹೇಳಲ್ಪಟ್ಟರೆಂದು ಭಾವಿಸತಕ್ಕದ್ದು. ಭೃಗುಮಹರ್ಷಿಗೆ ಪ್ರಾಶಸ್ತ್ಯ ಹೇಗೆ ಎಂಬುದು, ಮೋಕ್ಷಧರ್ಮ ೧೮೨ನೆಯ ಅಧ್ಯಾಯದಲ್ಲಿ ವಿದಿತವು. ಎಲ್ಲಾ ಮಹರ್ಷಿಗಳೂ ಒಟ್ಟಿಗೆ ಸೇರಿ ಮಾಡಿದ ಸದಸ್ಸಿನಲ್ಲಿ, ಪರತತ್ತ್ವ್ಯಾವದೆಂಬ ನಿರ್ಣಯವು ಆಗಬೇಕೆಂದು ದ್ದೇಶಿಸಿ ಅದಕ್ಕಾಗಿ ಭೃಗು ಮಹರ್ಷಿಯನ್ನು ಸಭಾಧ್ಯಕ್ಷರನ್ನಾಗಿಮಾಡಿ, ಅವರು ನಿರ್ಣಯ ಮಾಡತಕ್ಕದ್ದೆಂದೂ ಒಪ್ಪಿದರು. ಅವರು ಚತುರ್ಮುಖಬ್ರಹ್ಮನಲ್ಲಿ ರಾಜಸಗುಣದ, ರುದ್ರನಲ್ಲಿ ತಾಮಸ ಗುಣದ, ಉತ್ಕರ್ಷವನ್ನೂ ಕಂಡು, ಶ್ರೀಮಹಾವಿಷ್ಣುವಿನಲ್ಲಿ ಶುದ್ಧ ಸತ್ತ್ವೋದ್ರೇಕವನ್ನೂ ಕಂಡು, ಸಭೆಯಲ್ಲಿ ಹೇಳಿರುವದೇನೆಂದರೆ—**"ನಾರಾಯಣೋ ಜಗನ್ಮೂರ್ತಿ ರಂತರಾತ್ಮಾಸನಾತನಃ । ಕೂಟಸ್ಥೋಽಕ್ಷರ ಅವ್ಯಕ್ತೋ ನಿರ್ಲೇಪೋವ್ಯಾಪಕಃ ಪ್ರಭುಃ"** (೧೮೦-೧೭) ಎಂದು ಹೇಳಿ, ಶ್ರೀ ನಾರಾಯಣಾನುವಾಕದಲ್ಲಿ **"ದೇವ ಏಕೋ ನಾರಾಯಣಃ"** ಎಂದೂ ಮತ್ತು **"ನಾರಾಯಣ ಪರಂಬ್ರಹ್ಮ ತತ್ತ್ವಂ ನಾರಾಯಣಃ ಪರಃ"** ಎಂದು ಪುರುಷಸೂಕ್ತದಲ್ಲೂ ಹೇಳಿರುವ ಹಾಗೆ ಪರತತ್ತ್ವ ನಿರ್ಣಯವನ್ನು ಸ್ಥಾಪಿಸಿದುದರಿಂದ ಭೃಗುಮಹರ್ಷಿಗೆ ಪ್ರಾಶಸ್ತ್ಯವು. ಇಲ್ಲಿ **ಕೂಟಸ್ಥ**, ಅಕ್ಷರ, ಅವ್ಯಕ್ತ ಶಬ್ದಗಳು ಪರಮಾತ್ಮನನ್ನು ಬೋಧಿಸುತ್ತವೆ. ಆದರೆ ಇದೇ ಗೀತೆಯಲ್ಲೇ ಈ ವಿಶೇಷಣಗಳು ಪ್ರಕೃತಿ ವಿಯುಕ್ತ ದಶೆಯಲ್ಲಿ ಜೀವಾತ್ಮನಿಗೆ ಪಲ್ಲಿಂತ್ರವೆಯಾದುದರಿಂದ ಜೀವಾತ್ಮನಿಗೂ ಪ್ರಯೋಗಿಸಲ್ಪಟ್ಟವೆ. (ಗೀ. ೧೨-೧ನ್ನೂ ೧೫- ಪರಾಂಬರಿಸಿ) ಪ್ರಕರಣಾನುಗುಣವಾಗಿ ಅರ್ಥಮಾಡಿಕೊಳ್ಳತಕ್ಕದ್ದಾಗಿರುತ್ತದೆ. ಎರಡು ಕಡೆಯಲ್ಲೂ ಒಂದೇ ಅರ್ಥವುಳ್ಳವೆಂಬ ಭ್ರಮೆಯು ಕೂಡದು. **"ಗಿರಾಂ**-ವ್ಯವಹರಿಸುವ ಮಾತುಗಳಲ್ಲಿ. **ಏಕಮಕ್ಷರಂ** - ಒಂದೇ ಅಕ್ಷರವಾಗಿರುವ **ಓಂ** ಎಂಬ ಪ್ರಣವವು ನಾನಾಗಿದ್ದೇನೆ. ಓಂ ಎಂಬಲ್ಲಿ ಮೂರು ಅಕ್ಷರವಿರುವಾಗ ಒಂದು ಅಕ್ಷರ ಹೇಗೆ? ಎಂದರೆ, **"ಅಕ್ಷರಾಣಾ ಮಕಾರೋಽಸ್ಮಿ"** ಎಂದು ಮುಂದೆ ಇರುವದರಿಂದ. ಇಲ್ಲಿ **ಗಿರಾಂ** - ಎಂದು ವಿಶೇಷಾರ್ಥಗಳನ್ನು ಬೋಧಿಸುವ ಒಂದಕ್ಷರ ಶಬ್ದವು ಬೋಧಿತನಾಗಿರುವದರಿಂದ **ಓಂ** ಎಂಬ ಪ್ರಣವವನ್ನು ತಿಳಿಸುತ್ತದೆಂದೇ ಅರ್ಥಮಾಡಬೇಕಾಗಿರುತ್ತದೆ. ಆದರೆ ಒಂದಕ್ಷರನೆಂಬ ಪ್ರಯೋಗವು ಶಾಸ್ತ್ರದಲ್ಲುಂಟೋ ಎಂದರೆ **"ಓಮಿತ್ಯೇಕಾಕ್ಷರಂ ಬ್ರಹ್ಮವ್ಯಾಹರನ್ ಮಾಂ ಅನುಸ್ಮರನ್"** ಎಂಬ ಪ್ರಮಾಣವಿಲ್ಲೇ ಇರುತ್ತದೆ. (೮-೧೩) ನಾರಾಯಣಾನುವಾಕದಲ್ಲೂ **"ಓಮಿತ್ಯೇಕಾಕ್ಷರಂ, ನಮ ಇತಿ ದ್ವೇ ಅಕ್ಷರೇ"** ಎಂದು ಇರುತ್ತದೆ. **ಯಜ್ಞಾನಾಂ** - ಯಜ್ಞಗಳಲ್ಲಿ, **ಜಪಯಜ್ಞೋಽಸ್ಮಿ** - ಸ್ವರ್ಗಾದಿ ಭೋಗಗಳ ಸಾಧಕಗಳಲ್ಲದೆ ಮೋಕ್ಷಪ್ರಾಪ್ತಿಗೆ ಹೇತುವಾಗಿ ಉತ್ಕೃಷ್ಟವಾದ ಮೂಲಮಂತ್ರದ್ವಯ ಚರಮಶ್ಲೋಕ ದ್ವಾದಶಾಕ್ಷರ ಷಡಕ್ಷರಾದಿ ಜಪಯಜ್ಞವಾಗಿರುತ್ತೇನೆ. **ಸ್ಥಾವರಾಣಾಂ**-ಪರ್ವತಗಳಲ್ಲಿ. **ಹಿಮಾಲಯಃ** - ಬದರೀನಾರಾಯಣಾಶ್ರಮಗಳಿಗೂ ಇನ್ನೂ ಅನೇಕ ತಪೋನಿಷ್ಠರಾದ ಋಷಿಗಳ ಆಶ್ರಮಗಳಿಗೂ ಆಕರವಾಗಿ, ಗಂಗಾದಿ ಮಹಾ ಪುಣ್ಯ ನದಿಗಳಿಗೂ ಉತ್ಪತ್ತಿಸ್ಥಾನವಾಗಿ, ಪರ್ವತಗಳಲ್ಲಿ ಅತಿ ಬೃಹತ್ತಾಗಿಯೂ ಉನ್ನತವಾಗಿಯೂ ಇರುವದರಿಂದ, ಹೀಗೆ ನಾನಾ ವಿಧದಿಂದ ಉತ್ಕೃಷ್ಟತೆಯನ್ನು ಹೊಂದಿದ ಹಿಮಾಚಲವೂ ನಾನೇ ಸರಿ. ಇಲ್ಲಿ ಸ್ಥಾವರಶಬ್ದಕ್ಕೆ ವೃಕ್ಷಾದಿಗಳೂ ಕೂಡ ಸೇರಿದವಾಗಿರುವಾಗ ಪರ್ವತಮಾತ್ರವೆಂದು ಅರ್ಥ ಹೇಳಿದುದು ಹೇಗೆ ಎಂಬುವಕ್ಕೆ ಕೆಳಗೆ ಭಾಷ್ಯವನ್ನು ಪರಾಂಬರಿಸಿ. ಹೀಗೆ ಭೃಗ್ವಾದಿಗಳಿಗೆ ಅಂತರಾತ್ಮಾವಾಗಿ ಅವರುಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟಿರುವವನು ನಾನೇ ಎಂಬ ತಾತ್ಪರ್ಯವು.

**ಭಾಷ್ಯಾರ್ಥವು:**—**ಮಹರ್ಷೀಣಾಂ** ಎಂದರೆ **ಮರೀಚ್ಯಾದೀನಾಂ** - ಮರೀಚಿಯೇ

**ಭಾ. ಗಿರಃ; ತಾಸಾಮೇಕಾಕ್ಷರಂ ಪ್ರಣವೋಽಹಮಸ್ಮಿ; ಯಜ್ಞಾನಾಮುತ್ಕೃಷ್ಟೋ ಜಪಯಜ್ಞೋಽಸ್ಮಿ; ಪರ್ವತಮಾತ್ರಾಣಾಂ ಹಿಮವಾನಹಮ್ ॥ ೨೫ ॥**

ಮೊದಲಾದವರುಗಳಲ್ಲಿ. ಹೀಗೆ **ಮರೀಚ್ಯಾದೀನಾಂ** ಎಂಬ ವ್ಯಾಖ್ಯಾನದಿಂದ ಇಹಲೋಕದ ಸಪ್ತರ್ಷಿ ಮೊದಲಾದವರುಗಳ ಮಧ್ಯೆ, **ಭೃಗುರಹಮ್**- ಭೃಗುಮಹರ್ಷಿಯು ನಾನು. ಭೃಗು ಮಹರ್ಷಿಗೂ ಆತ್ಮನಾಗಿರುವವನು ನಾನೇ. **ಅರ್ಥಾಭಿದಾಯಿನಶ್ಶಬ್ದಾಃ** - ಇದು ಗಿರಾಂ ಎಂಬುದರ ವ್ಯಾಖ್ಯಾನವು; ಅರ್ಥವನ್ನು ಬೋಧಿಸುವ ಶಬ್ದಗಳು **ಗಿರಃ** ಎಂದು ಹೇಳಲ್ಪಡುವುವು. **ತಾಸಾಂ** - ಅಂತಹ ಶಬ್ದಗಳಲ್ಲಿ, **ಏಕಮಕ್ಷರಂ** - ಒಂದಕ್ಷರವಾದ ಪ್ರಣವವು, **ಅಹಮಸ್ಮಿ** - ನಾನೇ ಆಗಿದ್ದೇನೆ. ಇಲ್ಲಿ **ವರ್ಣ** ವೆಂದು ಹೇಳದೆ, **ಗಿರಾಂ** ಎಂದು ಹೇಳಿದುದರ ಅರ್ಥವನ್ನು ವ್ಯಕ್ತಪಡಿಸುವದಕ್ಕಾಗಿ **ಅರ್ಥಾಭಿದಾಯಿನಶ್ಶಬ್ದಾಃ** ಎಂದು ಭಾಷ್ಯವನ್ನು ಬರೆದಿರುತ್ತಾರೆ. ಸಮುದ್ರ ಘೋಷಾದಿಗಳೂ ಶಬ್ದಗಳಾದರೂ **ಗಿರ** ಗಳಾಗುವದಿಲ್ಲ; ಮಾತುಗಳಾಗುವದಿಲ್ಲವು. ಪ್ರಣವದ ಮಹಾತ್ಮ್ಯೆಯು ಶಿಕ್ಷಾವಲ್ಲಿಯಲ್ಲಿ ಹೇಳಲ್ಪಟ್ಟು, ಅದರ ಉಪಾಸನೆಯು ಸರ್ವಾರ್ಥ ದಾಯಿಕವೆಂದು ಶೃತಿಯು ಬೋಧಿಸುತ್ತದೆ. ಅದು ಅ ಉ ಮಕಾರಗಳುಳ್ಳದ್ದಾಗಿಯೂ ಅಮೋಘಾರ್ಥವನ್ನು ಬೋಧಿಸುವಂತಾದ್ದಾಗಿರುತ್ತದೆ. **"ಅಕಾರೇಣೋಚ್ಯತೇ ವಿಷ್ಣುಃ ಸರ್ವಲೋಕೇಶ್ವರೋಹರಿಃ । ಉದ್ಧೃತಾ ವಿಷ್ಣುನಾ ಲಕ್ಷ್ಮೀ ರುಕಾರೇಣಾಚ್ಯುತೋ ತಥಾ । ಮಕಾರಸ್ತು ತಯೋರ್ದಾಸಃ ಇತಿ ಪ್ರಣವ ಲಕ್ಷಣಮ್"** (ಕಠಶೃತಿ) ದಾಸನಾದ ಮಕಾರವಾಚ್ಯನಾಗಿ ಜ್ಞಾನಸ್ವರೂಪನಾದ ಜೀವಾತ್ಮನು, ಅಕಾರೋಕಾರ ವಾಚ್ಯರಾಗಿ ಲೋಕೈಕೇಶ್ವರೇಶ್ವರಿಗಳಾದ ಲೋಕದಂಪತಿಗಳಿಗೆ ಶೇಷಭೂತರು ಎಂದರೆ ದಾಸರು, ಆದುದರಿಂದ ಈ ಜೀವಾತ್ಮನ ಸರ್ವ ಕೈಂಕರ್ಯಗಳೂ ಅವರಿಗೇನೆ ಎಂಬರ್ಥವನ್ನು ಪ್ರಣವವು ಬೋಧಿಸುತ್ತದೆ. **"ಅಗ್ರತಃ ಪ್ರಯಯೌ ರಾಮಃ ಸೀತಾ ಮಧ್ಯೇ ಸುಮಧ್ಯಮಾ । ಪೃಷ್ಟತಸ್ತು ಧನುಷ್ಪಾಣಿಃ ಲಕ್ಷ್ಮಣೋನುಜಗಾಮಹ"** (ರಾಮಾ. ಅಯೋಧ್ಯಾ) ಎಂಬ ವಾಲ್ಮೀಕಿ ಮಹರ್ಷಿಯ ವಾಕ್ಯದಿಂದ ಈ ಪ್ರಣವಾರ್ಥವನ್ನು ಗ್ರಹಿಸಬಹುದು. ಮತ್ತು **"ಅಕಾರೋ ವಿಷ್ಣುರಿತ್ಯುಕ್ತೋ ಮಕಾರೋ ಜೀವವಾಚಕಃ । ತಯೋಸ್ತು ನಿತ್ಯಸಂಬಂಧಃ ಉಕಾರೇಣ ಪ್ರಕೀರ್ತಿತಃ"** ಎಂಬ ಪ್ರತಿಪಾದನೆಯ ಪ್ರಕಾರ, ಅಕಾರವು **"ಅಕಾರಾರ್ಥೋ ವಿಷ್ಣುಃ"** ಎಂದು ಹೇಳಿರುವ ಹಾಗೆ ವಿಷ್ಣುವಾಚಕವು. ಇದರಲ್ಲಿ **ಆಯ** ಎಂಬ ಚತುರ್ಥಿಯು ಲುಪ್ತವಾಗಿರುತ್ತದೆಂದು ವ್ಯಾಕರಣರೀತ್ಯಾ ಸ್ಥಾಪಿಸಬಹುದು. ಆದುದರಿಂದ **ಅ** ಎಂದರೆ ವಿಷ್ಣುವಿಗೇ ಎಂಬ ಅರ್ಥವಾಗುತ್ತದೆ. **ಉ** ಎಂಬುದು ಪ್ರತ್ಯಾದಿಗಳಲ್ಲಿ ಅವಧಾರಣವು. ಆದುದರಿಂದ **ಅ, ಉ** ಎಂಬಕ್ಷರಗಳಿಂದ ಶ್ರೀ ಮಹಾವಿಷ್ಣುವಿಗೇನೇ, **ಮಕಾರೋಜೀವವಾಚಕಃ"** ಈ ಜೀವನು; ಎಂದರೆ ಅಕಾರವಾಚ್ಯನಾದ ಶ್ರೀ ವಿಷ್ಣುವಿಗೇನೆ ಈ ಜೀವನು ಶೇಷಭೂತನು ಎಂಬರ್ಥವು ಬೋಧಿತವಾಗುತ್ತದೆ. ಇನ್ನಾರಿಗೂ ಶೇಷಭೂತನಲ್ಲವು ಎಂಬುದರಿಂದ ಬ್ರಹ್ಮ ರುದ್ರಾದಿಗಳಾದ ಅನ್ಯ ದೇವತೆಗಳಿಗೆ ಶೇಷನಲ್ಲವೆಂಬ ಭಾವವೂ ತೋರಿಬರುತ್ತದೆ. ಆದುದರಿಂದ **ಈತನು ಮಾಡುವ ಸರ್ವವಿಧ** ಕೈಂಕರ್ಯಗಳೂ ಶ್ರೀವಿಷ್ಣುವಿಗೇನೇ ವಿನಾ ಅನ್ಯರಿಗಲ್ಲವೆಂಬ ಗೀತಾರ್ಥವೂ **ವೇದ್ಯವು.** ಹೀಗೆಲ್ಲಾ ಅಮೋಘಾರ್ಥಗಳನ್ನು ಬೋಧಿಸುವದರಿಂದ ಓಂಕಾರಕ್ಕೆ ಮಾಹಾತ್ಮ್ಯೆಯು. ಶ್ರೀಮಚ್ಛಂಕರಾಚಾರ್ಯರೂ ಸಹ **ಏಕಂ ಅಕ್ಷರಂ** ಎಂದರೆ ಪ್ರಣವವೆಂದೇ ಅರ್ಥಮಾಡಿರುತ್ತಾರೆ. ಆದರೆ ಕೆಲವರು **ಏಕಂ ಅಕ್ಷರಂ** ಎಂದರೆ ಅಕಾರವೆಂದು ಊಹಿಸಿ ವಿಷ್ಣುವಾಚಕವಾದ ಅಕಾರವೆಂದು ಅರ್ಥಮಾಡಿರುತ್ತಾರೆ; ಈ ಅರ್ಥವು **"ಅಕ್ಷರಾಣಾಮಕಾರೋಽಸ್ಮಿ"** ಎಂದು ಮುಂದೆ ಇರುವದ

ರಿಂದ, ಪುನರುಕ್ತಿದೋಷಕ್ಕೆ ಗುರಿಯಾಗುತ್ತದೆ. ಪ್ರಣವದಿಂದ ತೋರಿಬರುವ ಸರ್ವಾರ್ಥಗಳ ಉಪಪಾದನೆಗೆ ಶ್ರೀ ದೇಶಿಕರವರ ಮೂಲಮಂತ್ರಾಧಿಕಾರಕ್ಕೆ ದಾಸನು ಬರೆದಿರುವ ವ್ಯಾಖ್ಯಾನ ವನ್ನು ಪರಾಂಬರಿಸತಕ್ಕದ್ದು. **ಯಜ್ಞಾನಾಂ**-ಯಜ್ಞಗಳಲ್ಲಿ, ಉತ್ಕೃಷ್ಟವಾದ **ಜಪಯಜ್ಞವು** ನಾನಾಗಿದ್ದೇನೆ. ಇಲ್ಲಿ ಜಪಯಜ್ಞಕ್ಕೆ ಮಾಹಾತ್ಮ್ಯೆಯು ಹೇಗೆ? ಪಶುವಧೆಯಿಲ್ಲದುದರಿಂದ ಜಪಯಜ್ಞಕ್ಕೆ ಮಾಹಾತ್ಮ್ಯೆಯೇ ಎಂಬ ಚರ್ಚೆಯಲ್ಲಿ ಪಶುವಧಾರೂಪ ಯಜ್ಞಗಳೂ ವಿಧಿಸಲ್ಪಟ್ಟಿರುವದರಿಂದ ಫಲಾಕಾಂಕ್ಷೆಯಿಲ್ಲದ ಗೃಹಸ್ಥಾಶ್ರಮಿಯು ಅಂತಹ ಯಜ್ಞಗಳನ್ನು ಆಚರಿಸುವ ದರಿಂದ ಭಗವತ್ಪ್ರೀಣನವೂ ದೇಶಪೀಡಾ ಪರಿಹಾರವೂ ಲೋಕಕ್ಕೆ ಕ್ಷೇಮವೂ ಸಹ ಉಂಟಾಗುವ ದರಲ್ಲಿ ಸಂದೇಹವಿಲ್ಲವು ಫಲಾಕಾಂಕ್ಷಿಯಾಗಿ ಮಾಡಿದರೂ ಅಂತವನಿಗೆ ಸ್ವರ್ಗಾದಿ ಭೋಗ ಗಳೂ ಪ್ರಾಪ್ತವಾಗುತ್ತವೆ. ಅವು ಅಲ್ಪಾಸ್ಥಿರ ಫಲಗಳಾದುದರಿಂದ ಅಂತಹ ಯಜ್ಞಾನುಷ್ಠಾನವು ನಿಂದ್ಯವೇ. ಪತ್ನೀರಹಿತನಾದ ವಿಧುರನಿಗೆ ಯಜ್ಞದಲ್ಲಿ ಅಧಿಕಾರವಿಲ್ಲವು. ಪ್ರಪನ್ನರಿಗೆ ಆವಶ್ಯಕ ವಿಲ್ಲವು. ಆದರೆ ಶ್ರುತಿಯು ಇಂತಹ ಹಿಂಸಾರೂಪ ವ್ಯಾಪಾರವನ್ನು ಅನುಮೋದಿಸಿ ಯಜ್ಞಾದಿ ಗಳನ್ನು ವಿಧಿಸಬಹುದೋ ಎಂಬಾಕ್ಷೇಪಕ್ಕೆ ಪಶು ಸಂಜ್ಞಪನ ಕಾಲದ ಮಂತ್ರವಲ್ಲಿ ಅಧಿಕಾರಿಯು ಯಜ್ಞಪಶುವನ್ನು ಕುರಿತು ಹೇಳುವದೇನೆಂದರೆ, "ಓ ಪಶುವೇ ಈಗ ನಿನಗೆ ದೇಹವಿಯೋಗ ವನ್ನುಂಟು ಮಾಡುವ ಈ ಹಿಂಸೆಯಾಗಿ ತೋರುವ ಮರಣದಿಂದ ನೀನು ಎಲ್ಲಿಗೆ ಸುಕೃತಿಗಳು ಹೋಗುತ್ತಾರೋ, ಪಾಪಿಗಳು ಹೋಗಲಾರರೋ, ಅಂತಹ ಉತ್ತಮ ಸ್ಥಾನವನ್ನು ಪರಮಾತ್ಮನು ಹೊಂದಿಸಲಿ" ಎಂದಿರುವದರಿಂದ, ಆ ಪಶುವಿಗೆ ಸ್ವರ್ಗಾದಿಲೋಕ ಪ್ರಾಪ್ತಿಯುಂಟಾಗುವದರಿಂದ ಶ್ರುತಿಯ ಅನುಮೋದನವೆಂದು ಭಾವಿಸತಕ್ಕದ್ದು. ಆದುದರಿಂದ ಪ್ರತ್ಯಕ್ಷಪಶುವಧಾರೂಪ ಯಜ್ಞವು ಹಿಂಸಾರೂಪವಾಗಿ ಶಾಸ್ತ್ರವಿಹಿತವಲ್ಲವೆಂಬ ವಾದವು ನಿರಸ್ತವು. ಆದರೆ ಅಂತಹ ಯಜ್ಞ ದಲ್ಲಿ ಪಶುಹಿಂಸೆಯೂ, ಪಶುವಿಗೆ ತಾತ್ಕಾಲಿಕ ಕ್ಲೇಶವೂ ಇರುವದರಿಂದ ಉಪರಿಚರಾದಿಗಳು ಪಿಷ್ಟ ಪಶುಗಳ ಮೂಲಕ ಯಜ್ಞಮಾಡಿದರೆಂದು ಹೇಳಲ್ಪಟ್ಟಿರುತ್ತದೆ. ಯುಗಭೇದದಿಂದಲೂ ಪಿಷ್ಟ ಪಶುವೂ ಸಾಕ್ಷಾತ್ಪಶುವೂ ಉಪಾದೇಯಗಳು. ಆದುದರಿಂದ ಜಪಯಜ್ಞಕ್ಕೆ ಮಾಹಾತ್ಮ್ಯೆ ಹೇಗೆಂದರೆ:-(೧) ವಿಧುರಾದಿ ಸರ್ವರಿಗೂ ಅಧಿಕಾರವಿರುವದರಿಂದಲೂ (೨) ಪಶುಹಿಂಸಾದಿಕ್ಲೇಶ ಗಳಿಲ್ಲವಾದುದರಿಂದಲೂ (೩) ಐಕಾಂತ್ಯವನ್ನುಂಟುಮಾಡಿ ಸಮಾಧಿ ಮೂಲಕ ಮೋಕ್ಷಕ್ಕೆ ಹೇತು ವಾಗುವದರಿಂದಲೂ ಪ್ರಾಶಸ್ತ್ಯವು ಎಂದು ಭಾವಿಸತಕ್ಕದ್ದು. ಹೀಗೆ ಜಪಯಜ್ಞಕ್ಕೆ ಪ್ರಾಶಸ್ತ್ಯವಿರು ವದರಿಂದಲೇ ಶ್ರೀ ಮನುವು **"ಸರ್ವೇಶೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಂ"** ಜಪಯಜ್ಞದ ಹದಿನಾರಂಶದಲ್ಲಿ ಒಂದಂಶದ ಯೋಗ್ಯತೆಯನ್ನೂ ಈ ಮಿಕ್ಕ ಸರ್ವಯಜ್ಞಗಳೂ ಹೊಂದಲಾರವೆಂದು ಹೇಳಿರುತ್ತಾರೆ. ಹಾಗೆಯೇ ಇನ್ನೊಂದು ಕಡೆಯಲ್ಲಿ **ವಿಧಿಯಜ್ಞಾ ಜ್ಜಪ ಯಜ್ಞೋ ವಿಶಿಷ್ಟೋ ದಶಭಿರ್ಗುಣೈಃ"**-ಯಜ್ಞಯಾಗಾದಿಗಳಿಗಿಂತ ಜಪಯಜ್ಞವು ಹತ್ತರಷ್ಟು ಗುಣಾಧಿಕ್ಯದಿಂದ ಕೂಡಿದುದೆಂದು ಹೇಳಲ್ಪಟ್ಟಿರುತ್ತದೆ. **ಪರ್ವತಮಾತ್ರಾಣಾಂ**-ಸಾಮಾನ್ಯ ಪರ್ವತ ಗಳಲ್ಲಿ, **ಹಿಮವಾನಹಮ್**-ಹಿಮವತ್ಪರ್ವತವೂ ನಾನೇ; ಹಿಂದೆ **ಮೇರು ಶ್ಶಿಖರಿಣಾ ಮಹಂ**, ಎಂದು ಶಿಖರಗಳುಳ್ಳ ಪರ್ವತವಿಶೇಷಣಗಳೆಂದು ಭಾವಿಸಿ, ಅವುಗಳನ್ನು ವ್ಯಾವರ್ತಿಸಿ ಸಾಮಾನ್ಯ ಪರ್ವತಗಳು ಹೇಳಲ್ಪಟ್ಟವೆಂದು ತಿಳಿಸುವದಕ್ಕಾಗಿ **ಪರ್ವತಮಾತ್ರಾಣಾಂ** ಎಂಬ ಪ್ರಯೋಗವು. **ಸ್ಥಾವರಾಣಾಂ** ಎಂದು ಮೂಲದಲ್ಲಿರುವಾಗ, ಸ್ಥಾವರ ಶಬ್ದದಲ್ಲಿ ವೃಕ್ಷಾದಿಗಳೂ ಅಡಗಿರುವಾಗ, **ಪರ್ವತಮಾತ್ರಾಣಾಂ** ಎಂಬ ವ್ಯಾಖ್ಯಾನ ಹೇಗೆ ಎಂದರೆ, **ಅಶ್ವತ್ಥಸ್ಸರ್ವವೃಕ್ಷಾಣಾಂ** ಎಂಬುದು ಮುಂದಿನ ವಾಕ್ಯವೇ ಆಗಿರುವದರಿಂದ, ಅವುಗಳನ್ನೂ ಬಿಟ್ಟು. **ಪರ್ವತಮಾತ್ರಾಣಾಂ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಸಾಮಾನ್ಯ ಪರ್ವತಗಳಲ್ಲೆಲ್ಲಾ ಹಿಮವಂತನು **ಶೈಲರಾಟ್**-ಎಂದೆನಿ

**ಮೂ. ಅಶ್ವತ್ಥಸ್ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ |**
**ಗಂಧರ್ವಾಣಾಂ ಚಿತ್ರರಥ ಸ್ಸಿದ್ಧಾನಾಂ ಕಪಿಲೋ ಮುನಿಃ ॥ ೨೬.**

ನಿರುವದರಿಂದ ಹಿಮವಂತನಿಗೆ ಪ್ರಾಶಸ್ತ್ಯವು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಅನೇಕ ಉಪಾಸಕರಿಗೆ ವಾಸಸ್ಥಾನವಾಗಿ, ಬದರಿಕಾಶ್ರಮ ಮೊದಲಾದ ಸಿದ್ಧಾಶ್ರಮಗಳಿಗೆ ಆಶ್ರಯವಾಗಿ, ಪಾರ್ವತಿಗೆ ಜನ್ಮಸ್ಥಾನವಾಗಿ, ಗಂಗಾನದಿಗಳ ಉದ್ಭವಸ್ಥಾನವಾಗಿ, ಪ್ರಸಿದ್ಧವಾದ ಪರ್ವತವು. ॥ ೨೫ ॥

**ಮೂಲಕ್ಕೆ ಅರ್ಥವು:—ಸರ್ವ ವೃಕ್ಷಾಣಾಂ** - ಸಮಸ್ತ ವೃಕ್ಷಗಳಲ್ಲೂ, **ಅಹಂ ಅಶ್ವತ್ಥಃ**-ಶ್ರೇಷ್ಠವಾಗಿ, ಪೂಜಿಸುವವರ ಇಷ್ಟಾರ್ಥವನ್ನು ಕೊಡುವ ಅಶ್ವತ್ಥವೃಕ್ಷವೂ ನಾನೇ, ಅಶ್ವತ್ಥ ವೃಕ್ಷಕ್ಕೆ ಪೂಜ್ಯತೆಯು ಹೇಗೆಂದರೆ; ಸ್ತ್ರೀಯರಿಗೆ ದೀರ್ಘಸೌಮಂಗಲ್ಯವೇನು ಅಪುತ್ರರಾದ ಸಂದರ್ಭದಲ್ಲಿ ಪುತ್ರಪ್ರಾಪ್ತಿಯೇನು. ಹೀಗೆ ಕಾಮಿತಾರ್ಥವನ್ನುಂಟುಮಾಡುವ ಶಕ್ತಿಯು, ಅಶ್ವತ್ಥವೃಕ್ಷದಲ್ಲಿ ಪ್ರತಿಷ್ಠಿತನಾಗಿ ಅಂತರ್ಯಾಮಿಯಾಗಿರುವ ವಿಷ್ಣುವಿನ ಮೂಲಕವೆಂದು ಭವಿಷ್ಯೋತ್ತರ ಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುತ್ತದೆ. **ದೇವರ್ಷೀಣಾಂಚ**-ದೇವರ್ಷಿಗಳಲ್ಲೂ ಕೂಡ, **ಅಹಂ ನಾರದಃ - ನಾರಂ ದದಾತೀತಿ ನಾರದಃ** ಎಂಬ ವ್ಯುತ್ಪತ್ತಿಮೂಲಕ, ಸರ್ವರಿಗೂ ಜ್ಞಾನಪ್ರದರಾಗಿ ತನ್ಮೂಲಕ ಪ್ರಾಶಸ್ತ್ಯವನ್ನು ಹೊಂದಿದ ನಾರದಮುನಿಯೂ **ನಾನೇ.** ಕ್ಷತ್ರಬಂಧುವೇ ಮೊದಲಾದ ನಿಕೃಷ್ಟವೃತ್ತಿಯನ್ನು ಅವಲಂಬಿಸಿದವರಿಗೂ ತಮ್ಮ ಸಮಾಗಮ ಮಾತ್ರದಿಂದಲೇ ಪಾವನತ್ವವನ್ನೂ ಬುದ್ಧಿಯೋಗವನ್ನೂ, ಉಂಟುಮಾಡಿ ಉಪಾಯಾನುಷ್ಠಾನವನ್ನುಪದೇಶಿಸಿ ಮೋಕ್ಷಸಂಪಾದಕರಾದುದರಿಂದ ಶ್ರೀ ನಾರದರಿಗೆ ಮಾಹಾತ್ಮ್ಯೆಯು. ಭಗವದ್ಧ್ಯಾನ, ಗಾನಗಳಲ್ಲೇ ಸಕ್ತರಾಗಿ ಮಹಾ ವಿರಕ್ತರಾಗಿ ಪ್ರಾಶಸ್ತ್ಯವನ್ನು ಹೊಂದಿದವರಾದುದರಿಂದ ತದಾತ್ಮಕನೂ ನಾನೇ ಎಂದು ಶ್ರೀ ಕೃಷ್ಣನು ಹೇಳುತ್ತಾನೆ. **ಗಂಧರ್ವಾಣಾಂ**-ಗಂಧರ್ವರಲ್ಲಿ, **ಚಿತ್ರರಥಃ**-ಶ್ರೇಷ್ಠನಾಗಿ ಅವರಿಗೆ ಪತಿಯಾಗಿ ನಿನಗೂ ತಿಳಿದಿರುವ ಚಿತ್ರರಥನೂ ನಾನೇ. ಪಾಂಡವರು ಪಾಂಚಾಲನಗರಕ್ಕೆ ಹೋಗುವ ಮಾರ್ಗದಲ್ಲಿ ಅರ್ಧರಾತ್ರಿಯಲ್ಲಿ ಭಾಗೀರಥೀನದಿಯಲ್ಲಿ ಹೆಂಗಸರೊಂದಿಗೆ ಜಲಕ್ರೀಡೆಯಲ್ಲಿದ್ದ ಚಿತ್ರರಥನನ್ನು ಕಾಣುತ್ತಾರೆ. ಅರ್ಜುನನಿಗೂ ಚಿತ್ರರಥನಿಗೂ ವಾಗ್ವಾದ ಉಂಟಾಗಿ ಚಿತ್ರರಥನು ಬಾಣಪ್ರಯೋಗ ಮಾಡುವನು. ಆಗ ಅರ್ಜುನನು ಕುಪಿತನಾಗಿ ಆಗ್ನೇಯಾಸ್ತ್ರವನ್ನು ಉಪಯೋಗಿಸಿದುದರಿಂದ ಆತನ ರಥವು ದಗ್ಧವಾಯಿತು. ಚಿತ್ರರಥನಾದ ತಾನು ದಗ್ಧರಥನಾದೆನೇ ಎಂಬ ಚಿಂತಾಕ್ರಾಂತನಾಗಿರುವಾಗ ಆತನ ಹೆಂಡತಿಯಾದ ಕುಂಭೀನಸಿಯು ಯುಧಿಷ್ಠಿರನಲ್ಲಿ ಪತಿಯ ಬಿಡುಗಡೆಗಾಗಿ ಶರಣಾಗತಳಾದುದರಿಂದ ಅಣ್ಣನ ಆಜ್ಞೆಯಪ್ರಕಾರ ಅರ್ಜುನನು ಚಿತ್ರರಥನನ್ನು ಬಿಟ್ಟುಬಿಡುವನು. ಆಗ ಚಿತ್ರರಥನಿಗೂ ಅರ್ಜುನನಿಗೂ ಪರಸ್ಪರ ಪ್ರೀತಿಯುಂಟಾಗಿ ಚಿತ್ರರಥನು, ವಸಿಷ್ಠ ವಿಶ್ವಾಮಿತ್ರ ಪರಾಶರ ವೃತ್ತಾಂತಗಳನ್ನೆಲ್ಲಾ ತಿಳಿಸಿ, ಧೌಮ್ಯರನ್ನು ಪುರೋಹಿತರನ್ನಾಗಿ ವರಿಸಬಹುದೆಂದೂ ಮತ್ತು ಪಾಂಡವರಿಗೆ ಶ್ರೇಯಸ್ಸುಂಟಾಗುತ್ತದೆಂದೂ ಹೇಳಿ ಅರ್ಜುನನಿಂದ ಆಗ್ನೇಯಾಸ್ತ್ರವನ್ನು ಪಡೆದು ಹೊರಟು ಹೋಗುವನು. ಹೀಗೆ ಪ್ರಸಿದ್ಧನಾದ ಗಂಧರ್ವರಾಜನು ಚಿತ್ರರಥನು. ಆತನಿಗೂ ಆತ್ಮಾವಾಗಿ ಸತ್ತಾದಾಯಕನಾಗಿರುವವನೂ ನಾನೇ ಎಂದು ಹೇಳುತ್ತಾರೆ. **ಸಿದ್ಧಾನಾಂ**-ಪೂರ್ವ ಸುಕೃತಗಳ ಮೂಲಕ ಅಣಿಮಾದ್ಯೈಶ್ವರ್ಯಗಳ ಸಿದ್ಧಿಯನ್ನು ಹೊಂದಿದ ಸಿದ್ಧರುಗಳಲ್ಲಿ, **ಕಪಿಲನಾಮಕಮುನಿಯೂ** ನಾನೇ, ಇಲ್ಲಿ ಹೇಳಿರುವ ಕಪಿಲರು ಕಾಪಿಲ ಸ್ಮೃತಿ ಕರ್ತರಲ್ಲವು; ಭಗವದವತಾರವಾಗಿ ದೇವಹೂತಿಯ ಮಕ್ಕಳಾದ ಕಪಿಲಮಹರ್ಷಿಯು. ಇಲ್ಲಿ ಒಂದು ದೊಡ್ಡ ಆಕ್ಷೇಪ ಉಂಟಾಗುತ್ತದೆ. ಕಪಿಲರೂಕೂಡ ಶ್ರೀಕೃಷ್ಣನ ಹಾಗೆ ಭಗವದವತಾರವಾದರೆ

**ಭಾ. ವೃಕ್ಷಾಣಾಂ ಪೂಜ್ಯೋऽಶ್ವತ್ಥೋಹಮ್; ದೇವರ್ಷಿಣಾಂ ನಾರದೋऽಹಮ್ ॥ ೨೬**

**ಮೂ ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭.**

ಕಪಿಲರು ಭಗವದ್ವಿಭೂತಿಗೆ ಹೇಗೆ ಸೇರಿದರು ? ಎಂಬುದು ಸರಿಯಾದ ಆಕ್ಷೇಪವು ಶರೀರಿಯನ್ನು ಹೇಳುವ ಶಬ್ದವು ಶರೀರವನ್ನೂ ಸಹ ಹೇಗೆ ಬೋಧಿಸಬಲ್ಲದೋ, ಹಾಗೆ ಕಪಿಲಾವತಾರಿಯ ದಿವ್ಯ ಮಙ್ಗಳ ವಿಗ್ರಹವೂ ನನ್ನ ವಿಭೂತಿಯಲ್ಲಿ ಸೇರಿದುದೇ ಎಂಬ ಭಾವವು. ಮುಂದೆ **ರಾಮಶ್ಶಸ್ತ್ರಭೃತಾಮಹಂ** ಎಂಬಲ್ಲೂ, **ವೃಷ್ಣೀನಾಂ ವಾಸುದೇವೋಸ್ಮಿ** ಎಂಬಲ್ಲೂ ಕೂಡ, ಹೀಗೆಯೇ ಗ್ರಹಿಸತಕ್ಕದ್ದಾಗಿರುತ್ತದೆ. ಹೀಗೆ ನನ್ನ ವಿಭೂತಿಗಳ ಮಧ್ಯೆ ಇವರುಗಳ ಶ್ರೈಷ್ಠ್ಯಕ್ಕೆ ಕಾರಣವು ನನ್ನ ಅಂತರಾತ್ಮತ್ವವೇ ಎಂಬ ಭಾವವು.

**ಭಾಷ್ಯಾರ್ಥವು:—ಸರ್ವವೃಕ್ಷಾಣಾಂ** - ಸಮಸ್ತ ಮರಗಳಲ್ಲೂ, **ಪೂಜ್ಯಃ ಅಶ್ವತ್ಥೋಹಮ್** - ಪೂಜಿಸಲು ಯೋಗ್ಯವಾದ ಅಶ್ವತ್ಥವೃಕ್ಷವು ನಾನೇ ; ಪೂಜಾರ್ಹವಾದುದರಿಂದ ಅಶ್ವತ್ಥವೃಕ್ಷಕ್ಕೆ ಮಾಹಾತ್ಮ್ಯೆಯು. ಸೋಮವಾರದಿಂದ ಸೇರಿದ ಅಮಾವಾಸ್ಯೆಯಲ್ಲೂ ಮತ್ತು ಕ್ರಮವಾಗಿ ಕ್ಲಿಪ್ತಕಾಲದಲ್ಲೂ ಅಶ್ವತ್ಥಪೂಜೆ, ಪ್ರದಕ್ಷಿಣೆ ಮೊದಲಾದವುಗಳಿಂದ ಸ್ತ್ರೀ ಪುರುಷರು ತಮ್ಮ ಅಭೀಷ್ಟಗಳನ್ನು ಹೊಂದಿರುತ್ತಾರೆ. ಮಕ್ಕಳಿಲ್ಲದವರು ಪಿಮರಾಶ್ವತ್ಥಕ್ಕೆ ಹೋಗಿ ವಿಶೇಷ ಪೂಜಾಫಲವಾಗಿ ಮಕ್ಕಳನ್ನು ಪಡೆದಿರುತ್ತಾರೆಂಬ ಪ್ರತೀತಿಯುಂಟು. ಪಾರಿಜಾತದ ವೃಕ್ಷಗಳು ಮಾಹಾತ್ಮ್ಯೆಯನ್ನು ಹೊಂದಿ ಪ್ರಸಿದ್ಧವಾದವುಗಳೆಂದು ಇತಿಹಾಸಗಳಲ್ಲಿ ಪ್ರೋಕ್ತಗಳಾದರೂ, ಅವು ಪೂಜ್ಯಗಳಲ್ಲವಾದುದರಿಂದ ಅಂತವುಗಳನ್ನು ವ್ಯಾವರ್ತಿಸಿ, ವೃಕ್ಷಗಳಲ್ಲೆಲ್ಲಾ ಪೂಜ್ಯವಾದುದು ಅಶ್ವತ್ಥವಾದುದರಿಂದ **ಪೂಜ್ಯಃ** ಎಂಬ ಪ್ರಯೋಗವು. **ದೇವರ್ಷೀಣಾಂ**-ದೇವರ್ಷಿಗಳಲ್ಲಿ, **ನಾರದೋಹಂ**-ನಾರದ ಮಹರ್ಷಿಯೂ ನಾನೇ ಶ್ರೀ ನಾರದ ಮಹರ್ಷಿಯು ಬಹು ಪ್ರಕಾರದಿಂದಲೂ ಅತಿಶಯವುಳ್ಳವರೆಂಬುದು ಮಹಾಭಾರತಾದಿ ಇತಿಹಾಸ ಪುರಾಣಗಳಲ್ಲಿ ಪ್ರಸಿದ್ಧವು. ಶ್ರೀಮದ್ರಾಮಾಯಣ ರಚನೆಗೆ ಅನುಗ್ರಾಹಕರು. ಉತ್ತರಾರ್ಧಾರ್ಥವು ವ್ಯಕ್ತವೆಂಬ ಭಾವದಿಂದ ಅದಕ್ಕೆ ಭಾಷ್ಯವನ್ನು ಬರೆಯಲಿಲ್ಲವು. ಗಂಧರ್ವರಿಗೆ ಪತಿಯಾಗಿ ನಿನಗೂ ತಿಳಿದಿರುವ ಚಿತ್ರರಥನೂ ನಾನೇ, ಎಂದು ಹೇಳಲ್ಪಟ್ಟಿತು. ಸಿದ್ಧರೆಂದು ಏಕೆ ಅವರಿಗೆ ಹೆಸರು ಎಂದರೆ, ಪೂರ್ವಾರ್ಜಿತ ವಿಶೇಷ ಸುಕೃತದ್ವಾರಾ ಜನ್ಮಪ್ರಭೃತಿಸಿದ್ಧವಾದ ಅಣಿಮಾದ್ಯೈಶ್ವರ್ಯವುಳ್ಳವರು ಎಂಬ ಭಾವವು. ಕಪಿಲಮಹರ್ಷಿಯು **"ಆದಿವಿದ್ವಾನ್ ಸಿದ್ಧಃ"** ಎಂದು ಪ್ರಶಂಸಿಸಲ್ಪಟ್ಟಿರುತ್ತಾರೆ. **"ಋಷಿಂ ಪ್ರಸೂತಂ ಕಪಿಲಂ ಮಹಾಂತಂ"** (ಶ್ವೇತಾ. ೫. ೨) ಎಂದೂ ಶ್ರುತಿಯೂ ಸ್ತುತಿಸಿರುತ್ತದೆ. ಶ್ರೀ ರಾಮಾಯಣದಲ್ಲೂ **"ತೇಪಿ ಸರ್ವೇ ಮಹಾತ್ಮಾನೋ ಭೀಮವೇಗಾ ಮಹಾಬಲಾಃ । ದದೃಶುಃ ಕಪಿಲಂ ತತ್ರ ವಾಸುದೇವಂ ಸನಾತನಂ"** (ರಾ. ಬಾ. ೪೦. ೨೪) ವಾಸುದೇವನೇ ಕಪಿಲಾವತಾರಿಯಾದನೆಂದು ಹೇಳಲ್ಪಟ್ಟಿರುತ್ತದೆ.

**ಮೂಲಕ್ಕೆ ಅರ್ಥವು**:-ಸಾಮಾನಾಧಿಕರಣ್ಯದ ತಾತ್ಪರ್ಯವು ಚನ್ನಾಗಿ ಮನಸ್ಸಿಗೆ ಹಿಡಿಯಲಿ ಎಂಬ ಆಶಯದಿಂದ ಸಾಮಾನಾಧಿಕರಣ್ಯರೂಪದಲ್ಲಿ ಹೇಳುವದನ್ನು ಬಿಟ್ಟು ಸಾಮಾನಾಧಿಕರಣ್ಯ ತಾತ್ಪರ್ಯವನ್ನು ವಿಶದೀಕರಿಸುತ್ತಾರೆ. **ಅಶ್ವಾನಾಂ**-ಕುದುರೆಗಳಲ್ಲೆಲ್ಲಾ, **ಅಮೃತೋದ್ಭವಮ್** - ಸಮುದ್ರ ಮಥನಕಾಲದಲ್ಲಿ ಕ್ಷೀರಸಮುದ್ರದಿಂದ ಹುಟ್ಟಿದ, **ಉಚ್ಚೈಃಶ್ರವಸಂ** - ದೊಡ್ಡದಾದ ಕಿವಿಗಳುಳ್ಳದ್ದಾಗಿ ಇಂದ್ರನಿಗೆ ರಾಜಾಶ್ವವಾಗಿ ಮಾಹಾತ್ಮ್ಯೆಯನ್ನು ಹೊಂದಿದ

ಮೂ. ಆಯುಧಾನಾ ಮಹಂ ವಜ್ರಂ ಧೇನೂನಾ ಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮.
ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾ ಮಹಮ್ ।
ಪಿತೄಣಾಮರ್ಯಮಾಚಾಸ್ಮಿ ಯಮಸ್ಸಂಯಮತಾ ಮಹಮ್ ॥ ೨೯.

ಉಚ್ಚೈಶ್ರವನಾಮಕ ಕುದುರೆಯನ್ನಾಗಿ, **ಮಾಂ ವಿದ್ಧಿ** - ನನ್ನನ್ನು ತಿಳಿ, ಎಂದರೆ ತದಾತ್ಮಕನಾಗಿ ನನ್ನನ್ನು ತಿಳಿ ಎಂಬ ಭಾವವು. **"ಅಶ್ವಾನಾಮಹಂ ಅಮೃತೋದ್ಭವ ಉಚ್ಚೈಶ್ರವಾಃ"** ಎಂದು ಹೇಳುವವರ ಅಭಿಪ್ರಾಯವೇ ಇದು. **ಉಚ್ಚೈಶ್ರವಾಃ** - ಜನ್ಮರೂಪಗುಣಾದಿಗಳಿಂದ ಮಾಹಾತ್ಮ್ಯೆಯನ್ನು ಹೊಂದಿರುವದರಿಂದ ವಿಪುಲ ಕೀರ್ತಿಯುಳ್ಳ ಕುದುರೆಯೆಂಬ ಹೆಸರಿನಿಂದಲೇ ಪ್ರಸಿದ್ಧಿಯು ವ್ಯಕ್ತವು. **ಅಮೃತೋದ್ಭವಂ** ಎಂಬುದನ್ನು ಕಾಕಾಕ್ಷಿನ್ಯಾಯದಿಂದ ಎರಡು ಕಡೆಗೂ ಅನ್ವಯಿಸಬಹುದು. **ಗಜೇಂದ್ರಾಣಾಂ**-ಉತ್ತಮ ಗಜಗಳಲ್ಲಿ, **ಅಮೃತೋದ್ಭವಮ್** ಸಮುದ್ರಮಥನಕಾಲದಲ್ಲಿ ಕ್ಷೀರಸಮುದ್ರದಿಂದ ಹುಟ್ಟಿದ. **ಐರಾವತಂ** - ಬಹು ಸುಂದರವಾಗಿ, ಸ್ವಚ್ಛವಾಗಿ ಬಿಳುಪಾಗಿ ಇಂದ್ರನಿಗೆ ವಾಹನವಾಗಿ ಹೀಗೆ ಅತಿಶಯ ಹೊಂದಿದ ಐರಾವತವನ್ನೂ, **ಮಾಂ ವಿದ್ಧಿ** - ನನ್ನನ್ನಾಗಿ ತಿಳಿ, **ಐರಾವತ** ಶಬ್ದಕ್ಕೆ **ಇರಾವಾನ್** ಎಂದರೆ ಸಮುದ್ರದಲ್ಲಿ ಹುಟ್ಟಿದುದು ಎಂಬ ವ್ಯುತ್ಪತ್ತಿಯಿಂದ ತೋರಿದ ಅರ್ಥವು. ಹಾಗೆಯೇ **ನರಾಣಾಂ** ಮನುಷ್ಯರಲ್ಲಿ, **ನರಾಧಿಪಮ್**-ಅವರುಗಳಿಗೆಲ್ಲಾ ಕ್ಷೇಮಾದಿ ಸಂಪಾದಕನಾದ ರಾಜನನ್ನಾಗಿಯೂ, **ಮಾಂ ವಿದ್ಧಿ**-ನನ್ನನ್ನು ತಿಳಿ. **ನಾವಿಷ್ಣುಃ ಪೃಥಿವೀ ಪತಿಃ** - ಎಂಬ ಉಕ್ತ್ಯನುಸಾರ ವಿಷ್ಣುವೇ ಆತನಿಗೆ ಅತಿದಾಯಕನೆಂಬ ಭಾವವು ಇವರುಗಳಿಗೆಲ್ಲಾ ಅಂತರಾತ್ಮನಾಗಿ ಮಾಹಾತ್ಮ್ಯೆಯನ್ನುಂಟು ಮಾಡುವವನು ನಾನೇ ಎಂಬ ತಾತ್ಪರ್ಯವು. ॥ ೨೭ ॥

**ಆಯುಧಾನಾಂ** - ಸೃಷ್ಟಿಸಲ್ಪಟ್ಟ ವಿಭೂತಿಗೆ ಸೇರಿದ ಆಯುಧಗಳಲ್ಲಿ, **ಅಹಂ ವಜ್ರಂ** - ನಾನೇ ವಜ್ರಾಯುಧವು ಎಂದರೆ ವಜ್ರಾಯುಧಕ್ಕೂ ಅತಿಶಯದಾಯಕನೂ ಮತ್ತು ಅದನ್ನು ಶರೀರವಾಗಿ ಹೊಂದಿರುವವನೂ, ನಾನೇ. ದಧೀಚಿಮಹರ್ಷಿಯ ಎಲುಬಿನಿಂದ ಮಾಡಲ್ಪಟ್ಟು, ಇಂದ್ರ ಶತ್ರುವಾದ ವೃತ್ರಾಸುರನನ್ನು ಕೊಲ್ಲಲು ಸಾಧಕವಾಗಿ, ಇಂದ್ರನಿಗೆ **ವಜ್ರೀ** ಎಂಬ ಹೆಸರನ್ನು ಕೂಡ ಕೊಟ್ಟು, ಹೀಗೆ ಅತಿಶಯವನ್ನುಂಟುಮಾಡಿದವನೂ ನಾನೇ. ಆದರೆ ಸರ್ವೇಶ್ವರನ ನಿತ್ಯವಿಭೂತಿಗೆ ಸೇರಿದ ಚಕ್ರವೇ ಮೊದಲಾದ ಆಯುಧಗಳಿಗೆ ಉತ್ಕರ್ಷವು ವ್ಯಕ್ತವಾಗಿರುವದರಿಂದ ಅದನ್ನು ತಿಳಿಸುವದು ಅಪ್ರಸ್ತುತವಾದುದರಿಂದ, **ಆಯುಧಾನಾಂ** ಎಂಬುದರಿಂದ ಲೀಲಾ ವಿಭೂತಿಯ ಆಯುಧಗಳು ಮಾತ್ರವೇ ಇಲ್ಲಿ ವಿವಕ್ಷಿತವು. **ಧೇನೂನಾಂ**-ಹಾಲನ್ನು ಕರೆಯುವ ಆಕಳುಗಳಲ್ಲಿ, **ಕಾಮಧುಕ್** - ಮೋಕ್ಷ ವ್ಯತಿರಿಕ್ತ ಸರ್ವಶ್ರೇಯಸ್ಸನ್ನೂ ಉಂಟುಮಾಡುವ ಕಾಮಧೇನುವೂ **ಅಸ್ಮಿ**-ನಾನೇ ಆಗಿದ್ದೇನೆ. ತದಾತ್ಮಕನಾಗಿ ಅವಕ್ಕೆ ಸತ್ತಾ ದಾಯಕನೂ ನಾನೇ ಎಂಬರ್ಥವು. **ಪ್ರಜನಃ** - ದಾಂಪತ್ಯಾನುರಾಗವನ್ನುಂಟುಮಾಡಿ ಪ್ರಜಾವೃದ್ಧಿಗೆ ಹೇತುವಾಗಿ ಮಕ್ಕಳು ಜನಿಸುವಹಾಗೆ ಮಾಡುವ, **ಕಂದರ್ಪಶ್ಚಾಸ್ಮಿ** - ಮನ್ಮಥನೂ ಸಹ ನಾನೇ, ತದಾತ್ಮಕನೂ ತತ್ಸತ್ತಾದಾಯಿಕನೂ ನಾನೇ, **ಸರ್ಪಾಣಾಂ** - ಒಂದು ಹೆಡೆಯುಳ್ಳ ಹಾವುಗಳಲ್ಲಿ, **ವಾಸುಕಿಃ ಅಸ್ಮಿ** - ಪ್ರಸಿದ್ಧನಾದ ವಾಸುಕಿಯೂ ನಾನೇ. ॥ ೨೮ ॥

**ನಾಗಾನಾಂ** - ಅನೇಕ ಹೆಡೆಗಳುಳ್ಳ ಹಾವುಗಳಲ್ಲಿ, **ಅನನ್ತಶ್ಚಾಸ್ಮಿ**-ಸಹಸ್ರ ಫಣೆಗಳುಳ್ಳವನಾಗಿ ನನಗೆ ಶಯ್ಯಾಸನ ಮೊದಲಾದ ರೂಪದಲ್ಲಿ ಕೈಂಕರ್ಯನಿರತನಾಗಿರುವ ಶೇಷನೂ ನಾನೇ; **ಯಾದಸಾಂ** - ನೀರಿನಲ್ಲಿರುವ ಜಲಜಂತುಗಳ ಮಧ್ಯೆ, **ವರುಣೋಽಹಮ್** - ಜಲಾಧಿ

**ಭಾ. ಕಾಮಧುಕ್ - ದಿವ್ಯಾಸುರಭಿಃ; ಜನನಹೇತುಃ ಕಂದರ್ಪಶ್ಚಾಹಮಸ್ಮಿ; ಸರ್ಪಾಃ - ಏಕಶಿರಸಃ, ನಾಗಾಃ - ಬಹು ಶಿರಸಃ; ಯಾದಾಂಸಿ - ಜಲವಾಸಿನಃ; ತೇಷಾಂ ವರುಣೋಽಹಮ್; ದಣ್ಡಯತಾಂ ವೈವಸ್ವತೋಽಹಮ್ ॥ ೨೭, ೨೮, ೨೯ ॥**

ಮಾನದೇವತೆಯಾಗಿ, ತನ್ನನ್ನು ತನ್ನ ಮಂತ್ರಮೂಲಕ ಧ್ಯಾನಿಸಿ ಜಲಾಶಯಗಳಲ್ಲಿ ಅವಗಾಹನೆಯನ್ನು ಮಾಡುವವರ ಪಾಪಗಳನ್ನು ಹೋಗಲಾಡಿಸುವ ಪ್ರಸಿದ್ಧನಾದ ವರುಣದೇವತೆಯೂ ನಾನೇ. " **ಉದುತ್ತಮಂ ಸ್ಯಾಮ, ಅಸ್ತಭ್ನಾದ್ದ್ಯಾಂವ್ರತಾನಿ, ಯತ್ಕಿಂಚೇದಂ ಪ್ರಿಯಾಸಃ ಅವತೇ ಕೃತಾನಿ, ತತ್ತ್ವಾಯಾಮಿ ಪ್ರಮೋಷೀಃ**" ಎಂದು ಜಪಿಸಿ, " **ಹಿರಣ್ಯಶೃಂಗಂ ವರುಣಂ ಪ್ರಪದ್ಯೇ, ತೀರ್ಥಂ ಮೇ ದೇಹಿಯಾಚತಃ । ಯನ್ಮಯಾ ಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ, ಯನ್ಮೇ ಮನಸಾವಾಚಾ ಕರ್ಮಣಾವಾ ದುಷ್ಕೃತಂ ಕೃತಮ್ । ತನ್ನ ಇನ್ದ್ರೋವರುಣೋ ಬೃಹಸ್ಪತಿ ಸ್ಸವಿತಾಚ ಪುನನ್ತು ಪುನಃ ಪುನಃ** " ಎಂದು ಎರಡುಸಾರಿ ಹೇಳಿ ಅವಗಾಹನೆ ಮಾಡಿ, ಅನಂತರ" **ಯತ್ಪೃಥಿವ್ಯಾಗ್ಂ ರಜಸ್ಸಮಾನ್ತರಿಕ್ಷೇ ವಿರೋಧಸೀ ಇಮಾಗ್ಂ ತದಾಪೋ ವರುಣಃ ಪುನಾತ್ವಘಮರ್ಷಣಃ** " ಇತ್ಯಾದಿ ಮಂತ್ರದಿಂದ ಅಂಜಲಿಯಿಂದ ನೀರನ್ನು ತೆಗೆದುಕೊಂಡು ತಲೆಗೆ ಅಭಿಷೇಕಮಾಡಿಕೊಳ್ಳತಕ್ಕದ್ದೆಂಬ ವಿಧಿಗಳಿರುವದರಿಂದಲೂ, ಇದರಿಂದ ವಾಙ್ಮನಸಾ ಕರ್ಮಣಾ ಮಾಡಿದ ಪಾಪಗಳು ಈ ಸಂಸ್ಕಾರಬಲದಿಂದ ನಾಶವಾಗುವದರಿಂದಲೂ ವರುಣದೇವತೆಗೆ ಪ್ರಾಧಾನ್ಯವು. **ಪಿತೄಣಾಂ** - ಪಿತೃದೇವತೆಗಳಿಗೆಲ್ಲಾ, **ಅರ್ಯಮಾಚಾಸ್ಮಿ** - ರಾಜನಾದ ಅರ್ಯಮನೂ, ನಾನೇಯಾಗಿದ್ದೇನೆ. ಪಿತೃಗಳಿಗೆ ರಾಜನಾಗಿ ಪ್ರಾಧಾನ್ಯವು. ಇಂದ್ರನಿಗೆ ಕುಂಡಲ ಕವಚಗಳನ್ನು ದಾನಮಾಡಿದ ಕರ್ಣನಿಗೆ ತಂದೆಯಾದವನು ಅರ್ಯಮಾ ಎಂದು ಹೇಳಿಸಿಕೊಳ್ಳುವನು, ಆತನೇ ಈತನೋ ಅಥವಾ ಬೇರೆಯೋ ತಿಳಿಯಲಿಲ್ಲವು. **ಸಂಯಮತಾಂ** - ದಂಡನೆ ಮಾಡುವ ಅಧಿಕಾರಿಗಳಲ್ಲಿ, **ಯಮಃ ಅಹಮ್** - ಯಮನೂ ನಾನೇ, ಆತನಿಗೂ ಆತ್ಮಾವಾಗಿ ದಂಡಿಸುವ ಅಧಿಕಾರವನ್ನು ಕೊಟ್ಟವನೂ ನಾನೇ ಎಂಬ ಭಾವವು.

**ಭಾಷ್ಯಾರ್ಥವು:—** ಕುದುರೆಗಳ ಮಧ್ಯದಲ್ಲಿ ಅಮೃತೋದ್ಭವವಾದ ಉಚ್ಚೈಶ್ರವಸ್ಸಾಗಿ ನನ್ನನ್ನು ತಿಳಿ ಎಂದು ಹೇಳಲ್ಪಟ್ಟಿತು. ಉಚ್ಚೈಶ್ರವಸ್ಸು ಅಮೃತೋದ್ಭವವು ಹೇಗೆ? ಎಂದರೆ ಅಮೃತವೆಂದರೆ ನೀರೆಂದೂ ತನ್ಮೂಲಕ ಕ್ಷೀರವೆಂದೂ ಅರ್ಥವೇ- ಅದರಿಂದ ಉತ್ಪನ್ನವಾದುದೆಂದು ಹೇಳಬಹುದು, ಅಥವಾ ಕ್ಷೀರವು ಮಥಿಸಲ್ಪಟ್ಟದುದರಿಂದ ಅಮೃತರೂಪವಾಗಿ ಅದರಿಂದ ಹುಟ್ಟಿದುದು ಎಂದು ಹೇಳಬಹುದು ಅಥವಾ ಕ್ಷೀರ ಸಮುದ್ರ ಮಥನದಿಂದ ಅಮೃತವೂ ಹುಟ್ಟಿದುದರಿಂದ, ಅದರೊಂದಿಗೆ ಹುಟ್ಟಿದುದು ಎಂದಾಗಲಿ ಅರ್ಥ ಹೇಳಬಹುದು. **ಕಾಮಧುಕ್** ಎಂದರೆ **ದಿವ್ಯಾಸುರಭಿಃ** - ಸ್ವರ್ಗಲೋಕಕ್ಕೆ ಯೋಗ್ಯವಾದ ಧೇನುವು ಎಂದರೆ ಸಮುದ್ರಮಥನಕಾಲದಲ್ಲಿ ಹುಟ್ಟಿದ ಸ್ವರ್ಗಾದಿ ಶ್ರೇಯಸ್ಸನ್ನು ಕೊಡುವ ಕಾಮಧೇನುವು. **ಜನನಹೇತುಃ**-ಇದು **ಪ್ರಜನಃ** ಎಂದು ಮೂಲದಲ್ಲಿರುವದರ ಅರ್ಥವು, ಪ್ರಜಾಭಿವೃದ್ಧಿಗಾಗಿ ಮಕ್ಕಳು ಹುಟ್ಟುವದಕ್ಕೆ ಕಾರಣವಾಗಿರುವ, **ಕಂದರ್ಪಶ್ಚಾಹಮಸ್ಮಿ** - ಮನ್ಮಥನೂ ಕೂಡ ನಾನೇ ಎಂದರೆ, ತದಾತ್ಮಕನೂ ನಾನೇ ಎಂಬ ಭಾವವು; **ಸರ್ಪಾಃ** ಎಂದರೆ **ಏಕಶಿರಸಃ**-ಒಂದು ಹೆಡೆ ಇರುವ ಹಾವುಗಳು; **ನಾಗಾಃ** ಎಂದರೆ **ಬಹುಶಿರಸಃ**-ಒಂದಕ್ಕಿಂತ ಹೆಚ್ಚಾದ ಹೆಡೆಗಳುಳ್ಳ ಹಾವುಗಳು; **ಯಾದಾಂಸಿ** ಎಂದರೆ **ಜಲವಾಸಿನಃ** - ನೀರಿನಲ್ಲಿ ವಾಸಿಸುವ ಮೀನು, ಕೂರ್ಮ, ಮೊಸಳೆ ಮೊದಲಾದ ಜಲಜಂತುಗಳು. **ತೇಷಾಂ**-ಅವುಗಳ ಮಧ್ಯವಾಸಿಸುವ **ವರುಣೋಽಹಂ** -

**ಮೂ. ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥** ೩೦.

ವರುಣನು ನಾನು; **ದಂಡಯತಾಮ್** - ದಂಡಿಸುವ ಅಧಿಕಾರಿಗಳಲ್ಲಿ, **ವೈವಸ್ವತೋಽಹಮ್** - ಯಮನು ನಾನೇ.

**ಮೂಲಕ್ಕೆ ಅರ್ಥವು:— ದೈತ್ಯಾನಾಂ** - ದೈತ್ಯರುಗಳಲ್ಲಿ, **ಪ್ರಹ್ಲಾದಶ್ಚಾಸ್ಮಿ** - ಪರಮ ಭಕ್ತರಾಗಿ, ಭಾಗವತಾಗ್ರೇಸರರಾದ ಪ್ರಹ್ಲಾದರಿಗೂ, ಆತ್ಮಾವಾದವನೂ ನಾನೇ. ತನಗೆ ಶತ್ರುವಾದ ವಿಷ್ಣುವಿನ ಭಕ್ತನಾದನಲ್ಲಾ ಎಂಬ ಕೋಪದಿಂದ ತಂದೆಯು ಕೊಟ್ಟ ಚಿತ್ರಹಿಂಸೆ ಗಳನ್ನೆಲ್ಲಾ ಪರಿಗಣಿಸದೆ ವಿಷ್ಣುವಿನಲ್ಲೇ ಸಕ್ತವಾದ ಮನಸ್ಸುಳ್ಳವರಾದುದರಿಂದ ಪ್ರಹ್ಲಾದರಿಗೆ ಪರಮ ಮಾಹಾತ್ಮ್ಯೆಯು. **"ಉಪಮಾನ ಮಶೇಷಾಣಾಂ ಸಾಧೂನಾಂ ಯಸ್ಸದಾಭವತ್"** (ವಿ. ಪು. ೧. ೧೫. ೧೫೫) ಪರಮಭಾಗವತರಲ್ಲಿ ಯಾರನ್ನೀಗ ನಿದರ್ಶನನನ್ನಾಗಿ ಆರಿಸಬಹುದು ಎಂಬ ವಿಚಾರದಲ್ಲಿ ಯಾವ ಪ್ರಹ್ಲಾದರು ಉತ್ಕೃಷ್ಟರಾದ ನಿದರ್ಶನವೋ ಎಂಬ ಶ್ರೀ ಪರಾ ಶರೋಕ್ತಿಯಿಂದ ಮಾಹಾತ್ಮ್ಯೆಯು ವ್ಯಕ್ತವು. ರಾಕ್ಷಸರಲ್ಲಿ ವಿಭೀಷಣನು ಹೇಗೋ ಹಾಗೆ ದೈತ್ಯರಲ್ಲಿ ಪ್ರಹ್ಲಾದರು. ಆದರೆ ವಿಭೀಷಣನು ಪ್ರಪತ್ತಿಯನ್ನು ಅನುಷ್ಠಿಸಿದ ಶಾಸ್ತ್ರವಿವೇಕ ಜನ್ಯಜ್ಞಾನಗಳುಳ್ಳವನು; ಪ್ರಹ್ಲಾದರಾದರೋ ಪರಮೈಕಾಂತ್ಯದಿಂದ ಶ್ರೀ ಮಹಾವಿಷ್ಣುವನ್ನೇ ಧ್ಯಾನಿಸುತ್ತಲಿರುವ ಬಾಲರು, ಆದುದರಿಂದ ಪ್ರಹ್ಲಾದಶ್ಚಾಸ್ಮಿ ಎಂಬ ಪ್ರಯೋಗವು ಅಕ್ರೂರ ಉದ್ಧವಾದಿ ಪರಮಭಾಗವತೋತ್ತಮರನ್ನೂ ಕೂಡ ಬಿಟ್ಟು ಪ್ರಹ್ಲಾದರನ್ನು ಮುಖ್ಯವಾಗಿ ಹೇಳಲು ಇದೇ ಕಾರಣವು. ಅಮೂ ಅಲ್ಲದೆ ತಂದೆಯ ಮೂಲಕ ನಾನಾವಿಧಗಳಾದ ಚಿತ್ರಹಿಂಸೆ ಗಳಿದ್ದರೂ, ಶ್ರೀ ಮಹಾವಿಷ್ಣುಧ್ಯಾನದಲ್ಲೇ ಸಕ್ತವಾದ ಮನಸ್ಸಿಟ್ಟಿರುವುದು ನಿರತಿಶಯ ಮಾಹಾ ತ್ಮ್ಯೆಗೆ ಕಾರಣವಾದ ಪ್ರಯುಕ್ತ **ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ** ಎಂಬ ಪ್ರಯೋಗವು. ಇಷ್ಟೇ ಅಲ್ಲವು; ತನ್ನ ನಿರತಿಶಯ ಉಪದೇಶದಿಂದಲೂ ಸಂಸರ್ಗದಿಂದಲೂ ಕ್ರೂರಕರ್ಮಿಗಳ ಕುಲ ದಲ್ಲಿ ಹುಟ್ಟಿದ ಬಾಲರನ್ನೆಲ್ಲಾ ತನ್ನ ಮಾರ್ಗಕ್ಕೇನೆ ಆಕರ್ಷಣ ಮಾಡಿದುದು ಇನ್ನೂ ಉತ್ಕರ್ಷ ವನ್ನು ಪ್ರದರ್ಶಿಸುತ್ತದೆ. ಆದುದರಿಂದಲೇ **ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ** ಎಂದು ಹೇಳ ಲ್ಪಟ್ಟಿತು. ಆ ಭಾಗವತೋತ್ತಮರ ಉಪದೇಶವು, ಜಗತ್ತಿನ ಚಿದಚಿತ್ತುಗಳೆಲ್ಲಾ ವಿಷ್ಣುವಿಗೆ ಶರೀರವಾಗಿ ಅವುಗಳೆಲ್ಲಕ್ಕೂ ಆತ್ಮಾವಾಗಿ, ಅವುಗಳ ಸತ್ತಾಸ್ಥಿತಿ ನಿಯಮನಾದಿಗಳಿಗೆಲ್ಲಾ ಆತನೇ ಕಾರಣಭೂತನಾಗಿರುವದರಿಂದ ಸರ್ವ ಜಗತ್ತಿಗೂ ಪರಮಾತ್ಮನಿಗೂ ಸಾಮಾನಾಧಿಕರಣ್ಯವು ಏರ್ಪಡುತ್ತದೆಂಬ ಪ್ರಕೃತೋಪದೇಶವನ್ನೇ ಒಳಗೊಂಡಿರುವದರಿಂದ ಮಹತ್ತಾದುದು. ಇದು ಪ್ರಕೃತಕ್ಕೆ ಬೇಕಾದ ಉಪದೇಶವಾದುದರಿಂದ ಅದನ್ನು ತಿಳಿಸುವೆನು. **"ಸರ್ವಗ ತ್ವಾದನಂತಸ್ಯ ಸ ಏವಾಹಮವಸ್ಥಿತಃ । ಮತ್ತಸ್ಸರ್ವ ಮಹಂ ಸರ್ವಂ ಮಯಿ ಸರ್ವಂ ಸನಾತನೇ"** ಅನಂತನಾಗಿ ಅಪರಿಚ್ಛೇದ್ಯ ಪ್ರಭಾವನಾಗಿರುವ ಪರಮಾತ್ಮನು ಎಲ್ಲಕ್ಕೂ ಆತ್ಮಾವಾಗಿರುವದರಿಂದ ಆತನೇ ಎಲ್ಲವೂ ಆಗಿರುತ್ತಾನೆ. ಆದುದರಿಂದ ಈ ಜಗತ್ತೆಲ್ಲವೂ ನನ್ನಿಂ ದಲೇ; ನಾನೇ ಎಲ್ಲಾ ಜಗತ್ತು; ನನ್ನಲ್ಲೇ ಸರ್ವ ಜಗತ್ತು; ಎಂದರೆ ಈ ಜಗತ್ತೆಲ್ಲವೂ ಮಚ್ಛರೀ ರಕಪರಮಾತ್ಮನಿಂದಲೇ ಉಂಟಾದುದು; ಈ ಜಗತ್ತೆಲ್ಲವೂ ಆ ಕಾರಣದಿಂದ ಕಾರ್ಯಕಾರಣ ಗಳಿಗೆ ಅನನ್ಯತ್ವವಿರುವದರಿಂದ, ಮಚ್ಛರೀರಕ ಪರಮಾತ್ಮನೇ, ಆ ಮಚ್ಛರೀರಕ ಪರಮಾತ್ಮ ನಲ್ಲೇ ಎಲ್ಲವೂ ಇರುವದು, ಎಂಬ ಭಾವವು. (ವಿ. ಪು. ೧. ೧೯. ೮೫) ಈ ಶ್ಲೋಕವನ್ನು ಕಂಡು ಏಕಾತ್ಮವಾದಿಯು ಹರ್ಷಿಸಬಹುದು. ಆದರೆ **ಸರ್ವಗತ್ವಾದನಂತಸ್ಯ** ಎಂಬ ಹೇತುವು

**ಭಾ. ಅನರ್ಥಪ್ರೇಪ್ಸುತಯಾ ಗಣಯತಾಂ ಮಧ್ಯೇ, ಕಾಲಃ-ಮೃತ್ಯುರಹಮ್** ॥ ೩೦ ॥

ಆತನ ವಾದಕ್ಕೆ ವಿರುದ್ಧವು **ಕಾಲಃ ಕಲಯತಾಮಹಂ** ಅನರ್ಥವನ್ನುಂಟು ಮಾಡುವವರ ಮಧ್ಯೇ, ಮರಣ ದೇವಾತ್ಮಕನೂ ನಾನೇ. **"ಅಹಮೇವಾಕ್ಷಯಃ ಕಾಲಃ"** ಎಂದು (ಗೀ. ೧೦ ೩೩) ಮುಂದೆ ಹೇಳಿರುವದರಿಂದ ಕಾಲತತ್ವಾತ್ಮಕನೆಂದು ಅರ್ಥಮಾಡಲು ಸಾಧ್ಯವಿಲ್ಲವು ಮತ್ತು ಕಾಲಶಬ್ದಕ್ಕೆ ಯಮನೆಂದು ಅರ್ಥಮಾಡೋಣವೆಂದರೆ ಒಂದೆಯೇ **ಯಮಸ್ಸಂಯಮತಾ ಮಹಂ** ಎಂದು ಹೇಳಲ್ಪಟ್ಟಿರುವದರಿಂದ ಸಾಧ್ಯವಿಲ್ಲವು. ಆದುದರಿಂದ ಮರಣಕ್ಕಿಂತ ಹೆಚ್ಚಾದ **ಅನರ್ಥಾವಹ** ವಾದುದು ಯಾವುದೂ ಇಲ್ಲವಾದುದರಿಂದ **ಕಾಲಾಭಿಮಾನಿದೇವತೆ** ಎಂದೇ ಅರ್ಥ ಮಾಡುವದೇ ಉಚಿತವು. ಇಲ್ಲಿ ಕಾಲಶಬ್ದವು ಒಬ್ಬ ಪುರುಷ ವಿಶೇಷವನ್ನು ಸೂಚಿಸುತ್ತದೆಂದು ಅರ್ಥಮಾಡುವದು, **ಕಲಯತಾಂ** ಎಂಬ ಪ್ರಯೋಗದಿಂದ ವ್ಯಕ್ತವು. ಕಾಲಕ್ಕೆ ವಶಪಟ್ಟು ಎಲ್ಲವೂ ನಾಶವಾಗುತ್ತದೆಂಬುದು **"ಕಾಲಃ ಪಚತಿ"** ಇತ್ಯಾದಿ ಪ್ರಯೋಗದಿಂದ ವ್ಯಕ್ತಪಡುವದರಿಂದ ಕಾಲನೆಂದರೆ ಸಂವತ್ಸರಯುಗವೇ ಮೊದಲಾದ ಕಾಲವು ಸೂಚಿಸಲ್ಪಟ್ಟಿತೆಂದು ಭಾವಿಸುವರು. ಇದೂ ಅಲ್ಲದೆ ಅಚೇತನನಾದ ಕಾಲಕ್ಕೆ **ಕಲಯತಾಂ** ಎಂಬಲ್ಲಿ ತೋರಿಬರುವ ಗಣಯಿತೃತ್ವವು ಇರುವದಿಲ್ಲವು, ಏಕೆಂದರೆ ಕಾಲನೆಲ್ಲಾ ಒಂದೇ. ಆಗ ನಿರ್ಧಾರಣಷಷ್ಠಿಯಲ್ಲದೆ ಬೇರೆ ಅರ್ಥವನ್ನು ಹೇಳಬೇಕಾಗುತ್ತದೆ. ಆಗ **ಕಾಲೋಹಂ** ಎಂದು ಇಷ್ಟೇ ಹೇಳಬಹುದಾಗಿತ್ತು. **ಕಲಯತಾಂ** ಎಂಬುದರ ಅರ್ಥಸ್ವಾರಸ್ಯವು ವ್ಯಕ್ತಪಡುವದಿಲ್ಲವು ಆಗ ಬಹುವಚನವೂ ವ್ಯರ್ಥವಾಗುತ್ತದೆ. ಆ ಕಾರಣಗಳಿಂದ ಕಾಲವೆಂದರೆ ಕಾಲಾಭಿಮಾನದೇವತೆ ಎಂದು ಅರ್ಥಮಾಡಿ, **ಕಲಯತಾಂ** ಎಂದರೆ ನಾಶಮಾಡುವ ಅಧಿಕಾರಿಗಳಲ್ಲಿ ಎಂದು ನಿರ್ಧಾರಣ ಷಷ್ಠ್ಯರ್ಥವನ್ನು ಹೇಳುವದು ಉಚಿತವು. **ಮೃಗಾಣಾಂ**-ಮೃಗಗಳಲ್ಲಿ, **ಮೃಗೇಂದ್ರೋಹಂ**-ಅವುಗಳಿಗೆ ರಾಜನಾದ ಸಿಂಹವೂ ನಾನೇ, ಎಂದರೆ ಸಿಂಹಾತ್ಮಕನೂ ನಾನೇ ಸರಿ; ಮೃಗಗಳಲ್ಲೆಲ್ಲಾ ಮಹಾ ಪರಾಕ್ರಮವುಳ್ಳದಾದುದರಿಂದ ಅದಕ್ಕೆ ಮಾಹಾತ್ಮ್ಯೆಯು **ವೈನತೇಯಶ್ಚ ಪಕ್ಷಿಣಾಂ** - ಪಕ್ಷಿಗಳಲ್ಲೆಲ್ಲಾ ಶ್ರೇಷ್ಠನಾದ ಗರುತ್ಮಾನನೂ ನಾನೇ; ಎಂದರೆ ಗರುತ್ಮಾತ್ಮಕನೂ ನಾನೇ: ಶ್ರೀಮಹಾವಿಷ್ಣುವಿಗೆ ವಾಹನವಾಗಿ, **ಗರುಡಾ ನಿಲಯೋಶ್ಯೈಘ್ರ್ಯಂ** ಎಂಬ ಪ್ರಯೋಗದಲ್ಲಿ ತೋರಿಬರುವ ಶೀಘ್ರ ಗಮನಕಾಲದಿಂದಲೂ, ಅಮೃತ ಕಲಶವೇ ಮೊದಲಾದವನ್ನು ತಂದ ಪರಾಕ್ರಮದಿಂದಲೂ, ಇನ್ನೂ ಇತರ ಇತಿಹಾಸಗಳಿಂದಲೂ, ಮಾಹಾತ್ಮ್ಯೆಯು. ಮತ್ತು ಅಜ್ಞಗಳೆಲ್ಲಾ ವೇದಮಯತ್ವವೆಂಬ ಪ್ರಸಿದ್ಧಿಯಿಂದಲೂ, ಮಾಹಾತ್ಮ್ಯೆಯು; **"ಪಕ್ಷೀಚ ಶಾಖಾನಿಲಯಂ ಪ್ರವಿಷ್ಟಃ** (ಸುಂದರ) ಎಂಬಲ್ಲಿ ಸೂಚಿಸಲ್ಪಟ್ಟ ಶುಭ ಸೂಚಕ ಪಕ್ಷಿಯಾಗಿಯೂ ಮಾಹಾತ್ಮ್ಯೆಯು; ಆದುದರಿಂದ ಶ್ರೇಷ್ಠ ವಿಭೂತಿಯಾಗಿ ಅದರೊಂದಿಗೆ ಸಾಮಾನಾಧಿಕರಣ್ಯವು ಬೋಧಿಸಲ್ಪಟ್ಟಿತು.

**ಭಾಷ್ಯಾರ್ಥವು:**— ಮಿಕ್ಕ ಮೂರು ಸಾಮಾನಾಧಿಕರಣ್ಯಗಳಲ್ಲಿ ಅರ್ಥದಲ್ಲಿ ಯಾವುದೊಂದೂ ಸಂದೇಹವಿಲ್ಲದೆ ವ್ಯಕ್ತವಾದುದರಿಂದ ಅವುಗಳನ್ನೆಲ್ಲಾ ಬಿಟ್ಟು **ಕಾಲಃ ಕಲಯತಾಮಹಮ್** ಎಂಬುವಕ್ಕೆ ಮಾತ್ರ ಭಿನ್ನಾರ್ಥಗಳು ಹೇಳಬಹುದಾಗಿ ಯೋಚಿಸಿ, ಅದಕ್ಕೆ ಸರಿಯಾದ ಅರ್ಥವನ್ನು ಹೇಳುವದು ಆವಶ್ಯಕವೆಂದು ಭಾವಿಸಿ, ಅದರ ಅರ್ಥವನ್ನು ಮಾತ್ರ ಉಪದೇಶಿಸುತ್ತಾರೆ. **ಕಲಯತಾಂ** ಎಂದರೆ **ಅನರ್ಥಪ್ರೇಪ್ಸುತಯಾ ಗಣಯತಾಂ ಮಧ್ಯೇ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಅನರ್ಥಗಳನ್ನು ಉಂಟುಮಾಡತಕ್ಕವುಗಳೆಂದು ಎಣಿಸಲ್ಪಟ್ಟವುಗಳ ಮಧ್ಯೇ, ನಿರ್ಧಾರಣ ಷಷ್ಠ್ಯರ್ಥವನ್ನು ತೋರಿಸುತ್ತಾರೆ, **ಕಾಲಃ** ಎಂದರೆ **ಮೃತ್ಯುರಹಂ**- ಮರಣವನ್ನುಂಟುಮಾಡುವ ದೇವತೆಯೂ ನಾನೇ. ಮುಂದೆ ಯಾವ ಇಷ್ಟಾರ್ಥ ಸಾಧನೆಗೂ

**ಮೂ. ಪವನಃ ಪವತಾಮಸ್ಮಿ ರಾಮಶ್ಶಸ್ತ್ರಭೃತಾಮಹಂ ।**
**ಝುಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥** ೩೧.

ಅವಕಾಶವಿಲ್ಲದಹಾಗೆ ಮರಣವು ಮಾಡುವದರಿಂದ. **ಅನರ್ಥಪ್ರೇಪ್ಸುತಯಾ ಗಣಯತಾಂ** ಎಂಬ ವ್ಯಾಖ್ಯಾನವು. ಆಗಲಿ, ಭೂತ ಭವಿಷ್ಯದ್ವರ್ತಮಾನದ ಕಾಲವೆಂದು ಅರ್ಥಮಾಡೋಣ ವೆಂದರೆ ಮುಂದೆ ೩೩ನೆಯ ಶ್ಲೋಕದಲ್ಲಿ **"ಅಹಮೇವಾಕ್ಷಯಃ ಕಾಲಃ"** ಎಂದಿರುವದರಿಂದ, ಆ ಅರ್ಥವು ಇಲ್ಲಿಗೆ ಸರಿಹೋಗುವದಿಲ್ಲವು. ಆದುದರಿಂದ ಆ ಅರ್ಥಗಳನ್ನೆಲ್ಲಾ ಬಿಟ್ಟು **ಕಾಲ** ಪುರುಷನೆಂದು ಅರ್ಥಮಾಡುವದು ಯುಕ್ತವೆಂದು ಭಾವಿಸಿ, **ಕಲಯತಾಂ-** ಅನರ್ಥವನ್ನುಂಟು ಮಾಡುವವರ ಮಧ್ಯೇ, ಕಾಲಃ ಎಂದರೆ ಮೃತ್ಯುದೇವತೆಯು ನಾನೇ ಎಂದು ಹೇಳಿದರೆಂದು ಅರ್ಥ ಮಾಡತಕ್ಕದ್ದೇ ಸಮಂಜಸವಾದುದು ಎಂಬ ಭಾವದಿಂದ **ಮೃತ್ಯುರಹಮ್** ಎಂಬ ವ್ಯಾಖ್ಯಾನವು. ಆದರೆ ಮುಂದೆ ೩೪ನೆಯ ಶ್ಲೋಕದಲ್ಲಿ **"ಮೃತ್ಯುಸ್ಸರ್ವಹರಶ್ಚಾಹಮ್"** ಎಂದಿರುವದರಿಂದ ಪುನರುಕ್ತಿಯುಲ್ಲವೋ ? ಎಂದರೆ ಇಲ್ಲಿ ನಿರ್ಧಾರಣ ಷಷ್ಠ್ಯರ್ಥವನ್ನು ಪ್ರಕಟಿಸಿ ಅನರ್ಥಗಳನ್ನು ಉಂಟುಮಾಡುವ ಅಧಿಕಾರಿಗಳ ಮಧ್ಯೆ ಪ್ರಾಮುಖ್ಯವು ಹೇಳಲ್ಪಟ್ಟಿತು. ಅಲ್ಲಿಯಾದರೋ ನಿರ್ಧಾರಣಾರ್ಥವಿಲ್ಲದೆ ಬರೀ ಸಾಮಾನಾಧಿಕರಣ್ಯವನ್ನು ಹೇಳಿ, ಸಮಸ್ತಾನರ್ಥವೂ ಮೃತ್ಯುವಿಗೆ ಸ್ಥಾಪಿಸಲ್ಪಟ್ಟಿತು. ಮುಖ್ಯವಾಗಿ ಸರ್ವಪ್ರಾಣಹರತ್ವವು ಅಲ್ಲಿ ಉಪದೇಶಿಸಲ್ಪಟ್ಟಿತು.

**ಮೂಲಕ್ಕೆ ಅರ್ಥವು:— ಪವತಾಂ**-ಒಂದು ಕಡೆಯಿಂದ ಇನ್ನೊಂದು ಕಡೆಗೆ ಶೀಘ್ರವಾದ ಗಮನಶಕ್ತಿಯುಳ್ಳ ಅಧಿಕಾರಿಗಳಲ್ಲಿ, **ಪವನಃ**-ವಾಯುವು ನಾನಾಗಿದ್ದೇನೆ; ವಾಯುವೇಗವು ಬಹು ಶೀಘ್ರವಾದುದೆಂಬ ಮಹಿಮೆಯುಳ್ಳದು. **ಶಸ್ತ್ರಭೃತಾಂ-**ಯುದ್ಧದಲ್ಲಿ ಉಪಯೋಗಿಸುವ ಸರ್ವಾ ಯುಧಗಳಿಗೂ ಶಸ್ತ್ರಶಬ್ದಪ್ರಯೋಗವಿರುವದರಿಂದ, ಅಂತಹ ಆಯುಧಗಳನ್ನು ಹಿಡಿದಿರುವವರ ಮಧ್ಯದಲ್ಲಿ **ರಾಮಃ ಅಹಮ್** - ಧನುರ್ಧಾರಿಯಾದ ಸೀತಾಪತಿಯಾದ ರಾಮನೂ ನಾನೇ. ಶ್ರೀ ರಾಮನು ಪರಶುರಾಮನನ್ನು ಗೆದ್ದುದರಿಂದ ಶರಸಂಧಾನದಲ್ಲಿ ಅದ್ವಿತೀಯ ಪರಾಕ್ರಮವುಳ್ಳ ವನಾದುದರಿಂದಲೂ, ಶೈವಧನುರ್ಭಂಗದಿಂದಲೂ ಇತರ ರಾಕ್ಷಸ ಸಮೂಹದ ನಿಧನದಿಂದಲೂ, ಶ್ರೀ ರಾಮನೇ ಇಲ್ಲಿ ಹೇಳಲ್ಪಟ್ಟನೆಂಬುದು ವ್ಯಕ್ತವು **ಬ್ರಹ್ಮಾಸ್ವಯಂಭೂಶ್ಚತುರಾನನೋವಾ ರುದ್ರ ಸ್ತ್ರಿಣೇತ್ರ ಸ್ತ್ರಿಪುರಾಂತಕೋವಾ । ಇನ್ದ್ರೋ ಮಹೇನ್ದ್ರಸ್ಸುರ ನಾಯಕೋವಾ ತ್ರಾತುಂ ನಶಕ್ತಾ ಯುಧಿ ರಾಮವಧ್ಯಮ್"** ಎಂಬ ಮತ್ತು, **ಕಿಶ್ಚಲಕ್ಷ್ಮಣ ಮುಖ್ಯಾನಾಂ ರಾಮ ಕೋಪಾನುವರ್ತಿನಾಮ್ । ಶರಾಣಾ ಮಗ್ರತ ಸ್ಸ್ಥಾತುಂ ಶಕ್ತೋದೇವಾಸುರೇಷ್ವಪಿ"**ಎಂಬ ಆಂಜನೇಯೋಕ್ತಿಗಳು ಇಲ್ಲಿ ಅನುಸಂಧೇಯಗಳು. ರಾಮನೇ ಪರತತ್ವವಾಗಿರುವಾಗ ಅಂತಹ ರಾಮನೊಂದಿಗೆ ಸಾಮಾನಾಧಿಕರಣ್ಯವು, ತುರಗವು ಅಶ್ವವು ಎಂದು ಹೇಳಿದ ಸಾಮಾನಾಧಿಕರಣ್ಯ ವಾಕ್ಯದ ಹಾಗೆ, ಅಸಮಂಜಸವಾಗುವದಿಲ್ಲವೇ ? ಎಂದು ನ್ಯಾಯವಾಗಿ ಆಕ್ಷೇಪಿಸಬಹುದು. ಇದಕ್ಕೆ ಸಮಾಧಾನವು ಹಿಂದೆಯೇ ಹೇಳಲ್ಪಟ್ಟಿರುವದಲ್ಲದೆ, ಮುಂದೆ ಈ ಶ್ಲೋಕ ಭಾಷ್ಯದಲ್ಲೇ ಶ್ರೀ ಭಾಷ್ಯಕಾರರಿಂದ ಚನ್ನಾಗಿ ಉಪಪಾದಿಸಲ್ಪಟ್ಟಿರುತ್ತದೆ ಶ್ರೀ ರಾಮನು **"ಧರ್ಮೋವಿಗ್ರಹ ವಾನ್"** (ದಶಾವತಾರ ಸ್ತೋತ್ರ) ಎಂದು ಹೇಳಿರುವ ಹಾಗೆ ಧರ್ಮವೇ ಮೂರ್ತೀಭವಿಸಿರುವ ರೂಪವೆಂದೂ, ಪಿತೃವಾಕ್ಯಪರಿಪಾಲನ ಮಾಡಿದವನೆಂದೂ ಶರಣಾಗತರಕ್ಷಕನೆಂಬ ವ್ರತವನ್ನು ಧರಿಸಿದವನೆಂದೂ, ದುಷ್ಟರಾಕ್ಷಸ ಸಂಹಾರ ಮೂಲಕ ಶರಣಾಗತರಾದ ಶಿಷ್ಟರಾದ ಋಷಿಗಳನ್ನು ರಕ್ಷಿಸಿದವನೆಂದೂ, ಹೀಗೆಲ್ಲಾ ಮಾಹಾತ್ಮ್ಯಯುಳ್ಳವನು. ಈ ಮಾಹಾತ್ಮ್ಯೆಯು ರಾಮರೂಪದಿವ್ಯ ಮಙ್ಗಳವಿಗ್ರಹಕ್ಕೆಂದು ಭಾವಿಸತಕ್ಕದ್ದು. ಶಸ್ತ್ರಭೃತರಾದ ವ್ಯಕ್ತಿಗಳಲ್ಲಿ ರಾಮರೂಪ ದಿವ್ಯ

ಮಜ್ಜಗಳ ವಿಗ್ರಹಕ್ಕೆ ಪ್ರಾಧಾನ್ಯವೆಂಬಭಾವವು ತೋರಿಬರುವದರಿಂದ ಕೆಲವರು ತೀಕ್ಷ್ಣಧಾರೆಯುಳ್ಳದೇ ಶಸ್ತ್ರವೆಂದು ಹೇಳಿ, ಗಂಡು ಕೊಡಲಿಯನ್ನು ಧರಿಸಿದ ಪರಶುರಾಮನೇ ಇಲ್ಲಿ ಹೇಳಲ್ಪಟ್ಟನೇ ವಿನಾ, ಶಸ್ತ್ರಗಳಿಲ್ಲದೇ ಧನುಸ್ಸು ಶರಗಳನ್ನು ಹಿಡಿದ ಶ್ರೀ ರಾಮನು ಹೇಳಲ್ಪಡಲಿಲ್ಲವೆಂದು ಭಾವಿಸುವರು; ಆಗಲೂ ನಿಃಕ್ಷತ್ರಿಯ ಕುಲವನ್ನೆಲ್ಲಾ ೨೧ ಸಲ ಧ್ವಂಸಮಾಡಿದ ಮಾಹಾತ್ಮ್ಯೆಯು ಉಂಟು. ಆದರೆ ತೀಕ್ಷ್ಣಾಗ್ರವುಳ್ಳ ಶರವು ಶಸ್ತ್ರವಾಗುವದರಲ್ಲೇನೂ ಅಭ್ಯಂತರವಿಲ್ಲವು. **"ವರಾಯುಧಧರಂ ರಾಮಂ"** (ಬಾಲ. ೭೬-೯) ಎಂಬ ಮಹರ್ಷಿಯ ಪ್ರಯೋಗವೂ ಉಂಟು. ಅದೂ ಅಲ್ಲದೆ. ಅಗಸ್ತ್ಯರಿಂದ ಖಡ್ಗವನ್ನು ಶ್ರೀರಾಮ ಪ್ರಭುವು ಪಡೆದರೆಂದು **"ಶರಂ ಖಡ್ಗಂಚ ಮಾನದ । ಜಯಾಯ ಪ್ರತಿಗೃಹ್ಣೀಷ್ವ"** (ಅರಣ್ಯ ೧೨) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂದ ಇಲ್ಲಿ ಶ್ರೀ ರಾಮನೆಂದು ಅರ್ಥ ಹೇಳುವದಕ್ಕೇನೂ ತೊಂದರೆಯಿಲ್ಲವು. **ಝಷಾಣಾಂ**-ಜಲಜಂತುಗಳಾದಮತ್ಸ್ಯಾದಿಗಳಲ್ಲಿ, **ಮಕರಶ್ಚಾಸ್ಮಿ**-ಅವುಗಳಲ್ಲೆಲ್ಲಾ ಬೃಹತ್ತಾದ ಮೊಸಳೆಯೂ ನಾನೇ ಆಗಿದ್ದೇನೆ. ತದಾತ್ಮಕನೂ ನಾನೇ ಎಂಬ ಭಾವವು. ಆದರೆ ತಿಮಿ ತಿಮಿಂಗಿಲಗಳು ಇರುವಾಗ ಮಕರವೇ ದೊಡ್ಡದಾಗಿ ಹೇಗೆ ಹೇಳಲ್ಪಟ್ಟಿತೆಂದರೆ, ಇವುಗಳೆಲ್ಲವೂ ಮಕರಜಾತಿಗೇ ಸೇರಿದವಾದುದರಿಂದ ಬಾಧಕವಿಲ್ಲವು. ಅಥವಾ ಮದಿಸಿದ ಗಜೇಂದ್ರನನ್ನೂ ಕೂಡ ಹಿಡಿದು ನಿಲ್ಲಿಸಿದ ದೇವಲಶಾಪಗ್ರಸ್ತನಾದ ಹೂಹೂಗಂಧರ್ವನೆಂದು, ಇತಿಹಾಸದಲ್ಲಿ ಪ್ರಖ್ಯಾತನಾದ ಮಕರನೂ ನಾನೇ ಎಂಬ ಅರ್ಥವನ್ನೂ, ಹೇಳಬಹುದು. ಆಗ ಮಕರಕ್ಕಿಂತ ಬಲಿಷ್ಠವಾದ ತಿಮಿಂಗಿಲಾದಿಗಳು ಹೇಳಲ್ಪಡಲಿಲ್ಲವೆಂಬ ಆಕ್ಷೇಪಕ್ಕೆ ಆಸ್ಪದವಿಲ್ಲವು. **ಸ್ರೋತಸಾಂ** ಪಾಪಪರಿಹಾರರೂಪಪಾವನತ್ವವನ್ನು ಹೊಂದಿದ ಪುಣ್ಯ ನದಿಗಳಲ್ಲಿ, **ಸ್ರೋತಸಾಂ** ಎಂದು ಸಾಮಾನ್ಯವಾಗಿ ನದಿಗಳನ್ನೂ ಹೇಳಿದ್ದರೂ, ಪಾವನತ್ವವನ್ನುಂಟು ಮಾಡುವ ಇನ್ನೂ ಅನೇಕ ಕೃಷ್ಣಾ, ಗೋದಾವರಿ, ಯಮುನಾ, ಕಾವೇರ್ಯಾದಿ ನದಿಗಳೆಲ್ಲಾ ಇರುವದರಿಂದ, ಅಂತಹ ಪುಣ್ಯ ನದಿಗಳ ಮಧ್ಯದಲ್ಲಿ ಎಂದರ್ಥ ಮಾಡುವದೇ ಸರಸವು. **ಜಾಹ್ನವೀ** - ಜಹ್ನುವಿನಿಂದ ಹುಟ್ಟಿದವಳಾದ ಗಂಗೆಯು ನಾನೇ. ಪರಮಾತ್ಮನ ಅಂಗುಷ್ಠ ಮೂಲಕ ಹುಟ್ಟಿರುವದರಿಂದ ಗಂಗೆಗೆ ಪರಮಪಾವನತ್ವವೂ, ನಿರತಿಶಯ ಮಾಹಾತ್ಮ್ಯೆಯೂ, ಉಂಟು. ಉಪನಿಷತ್ತಿನಲ್ಲೂ ಎಲ್ಲಾ ಪುಣ್ಯನದಿಗಳಿಗಿಂತಲೂ ಗಂಗೆಗೆ ಪ್ರಾಧಾನ್ಯವು. **"ಇಮಮ್ಮೇ ಗಂಗೇ ಯಮುನೇ ಸರಸ್ವತಿ ಶತದ್ರಿ ಸ್ತೋಮಗ್‌ಂ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ **"ಗಂಗಾ ಚ ಸರಿತಾಂ ಶ್ರೇಷ್ಠಾ"** (ಬಾಲ. ೩೪. ೨೨) ಎಂಬ ಮಹರ್ಷಿಯ ಉಕ್ತಿಯೂ ಇರುತ್ತದೆ; ಆ ಶ್ರೈಷ್ಠ್ಯವು ಏತರಿಂದೆಂದರೆ, ಮುಂದೆ ಹೇಳುತ್ತಾರೆ. **"ಸರ್ವಪಾಪ ವಿನಾಶನೀ"** ಯಾದುದರಿಂದ ಎಂದು ಕಾರಣವನ್ನು ತಿಳಿಸಿರುತ್ತಾರೆ. ಗಂಗೆಗೆ **ಜಾಹ್ನವೀ** ಎಂಬ ಹೆಸರು ಹೇಗೆ ಬಂತು? ಜಹ್ನುಸುತಳು ಹೇಗಾದಳು? ಎಂದರೆ,—ಭಗೀರಥನು ತನ್ನ ವಂಶೀಕರಾದ ಅರವತ್ತುಸಾವಿರ ಸಗರಪುತ್ರರ ಉತ್ತಾರಣಕ್ಕಾಗಿ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದುದರಿಂದ, ಅವರು ಶಿರಸ್ಸಿನಲ್ಲಿ ಧರಿಸಿ ಅನಂತರ ಕೆಳಗೆ ಬಿಟ್ಟಾಗ, ಜಹ್ನುಋಷಿಯು ಯಜ್ಞಮಾಡುತ್ತಿದ್ದ ಯಜ್ಞವಾಟವು ಕೊಚ್ಚಿಹೋದುದರಿಂದ ಮಹರ್ಷಿಯು ಕುಪಿತರಾಗಿ, ಗಂಗೆಯನ್ನು ಪಾನಮಾಡಿಬಿಟ್ಟರೆಂದೂ, ಅನಂತರ ಭಗೀರಥನಿಂದ ಬಹುವಾಗಿ ಪ್ರಾರ್ಥಿಸಲ್ಪಟ್ಟುದುದರಿಂದ ತನ್ನ ಕಿವಿಗಳ ಮೂಲಕ ಗಂಗೆಯನ್ನು ಮಹರ್ಷಿಯು ಬಿಟ್ಟರೆಂಬ ಇತಿಹಾಸವನ್ನು ಶ್ರೀ ಮದ್ರಾಮಾಯಣದ ಬಾಲಕಾಂಡದ ೩೪ನೆಯ ಸರ್ಗದಲ್ಲಿ ಕಾಣಬಹುದು. **ತತಸ್ತುಷ್ಟೋ ಮಹಾತೇಜಾ ಶ್ರೋತ್ರಾಭ್ಯಾ ಮಸೃಜತ್ಪುನಃ । ತಸ್ಮಾಜ್ಜಹ್ನುಸುತಾ ಗಂಗಾ, ಪ್ರೋಚ್ಯತೇ ಜಾಹ್ನವೀತಿಚ"** ಎಂಬ ವಾಕ್ಯದಲ್ಲಿ ಗಂಗೆಗೆ **ಜಾಹ್ನವೀ** ಎಂಬ ಹೆಸರು ಹೇಗೆ ಬಂತೆಂಬುದು ಉಪದೇಶಿಸಲ್ಪಟ್ಟಿರು

**ಭಾ. ಪವತಾಂ—ಗಮನ ಸ್ವಭಾವಾನಾಂ ಪವನೋಽಹಮ್; ಶಸ್ತ್ರಭೃತಾಂ ರಾಮೋಽಹಮ್, ಅತ್ರ ಶಸ್ತ್ರಭೃತ್ತ್ವಂ ವಿಭೂತಿಃ ಅರ್ಥಾಂತರಾಭಾವಾತ್; ಆದಿತ್ಯಾದಯಶ್ಚ ಕ್ಷೇತ್ರಜ್ಞಾಃ ಆತ್ಮತ್ವೇನಾವಸ್ಥಿತಸ್ಯ ಭಗವತ ಶ್ಶರೀರತಯಾ ಧರ್ಮಭೂತಾ ಇತಿ ಶಸ್ತ್ರಭೃತ್ತ್ವಸ್ಥಾನೀಯಾಃ ॥ ೩೧ ॥**

ತ್ರದೆ. ಗಂಗಾನದಿಗೆ ಪರಮಪಾವನತ್ವ ರೂಪಮಾಹಾತ್ಮ್ಯೆಯಿರುವದರಿಂದಲೇ ಸ್ನಾನಕಾಲದಲ್ಲಿ **ವಿಷ್ಣುವಾಮಪದಾಙ್ಗುಷ್ಠನಖಸ್ರೋತೋವಿನಿಸ್ಸೃತೇ। ತದ್ಭಕ್ತಿ ವಿಷ್ಣುರೂಪಾತ್ವಂ ಗಂಗೇ ಮಾಂ ಮೋಚಯೈನಸಃ ॥ ವಿಷ್ಣುಪಾದಾಬ್ಜ ಸಂಭೂತೇ ಗಂಗೇ ತ್ರಿಪಥಗಾಮಿನೀ, ಧರ್ಮದ್ರವೇತಿ ವಿಖ್ಯಾತೇ ಪಾಪಂ ಮೇ ಹರ ಜಾಹ್ನವೀ"** ಇತ್ಯಾದಿ ಶ್ಲೋಕಗಳು ಪಠನೀಯು ಗಳು. ಪರಮಭಾಗವತನಾದ ರುದ್ರಾಂಗಸ್ಪರ್ಶವಿರುವದರಿಂದಲೂ ಗಂಗೆಗೆ ಮಹಿಮೆಯು. ಮಹರ್ಷಿಯು **"ಭವಾಂಗಪತಿತಂ ತೋಯಂ ಪವಿತ್ರಮಿತಿ ಪಸ್ಪೃಶುಃ"**, ವಿಷ್ಣುವಿನ ಪಾದ ದಿಂದ ಹುಟ್ಟಿದ್ದರಿಂದಲೇ ಮಹತ್ತಾದ ಪಾವನತ್ವವು ; ಅಂತಾದ್ದು ಮಹಾಭಾಗವತನ ಸ್ಪರ್ಶವಾದರೆ ಇನ್ನೂ ಅದಕ್ಕೆ ಮಾಹಾತ್ಮ್ಯೆಯು ಎಂದು ಹೇಳಿರುತ್ತಾರೆ. ಭಾಗವತಪಾದೋದಕಕ್ಕೆ ವಿಶೇಷ ಮಾಹಾತ್ಮ್ಯೆಯನ್ನು ಶ್ರೀಕೃಷ್ಣನೇ ಕುಚೇಲೋಪಾಖ್ಯಾನದಲ್ಲಿ ತೋರಿಸಿದ್ದಾರೆ. ಆದರೂ ರುದ್ರನೂ ಪರಮಭಾಗವತನಾಗಿ ವಿಷ್ಣುಪಾದೋದಕ ಮಾಹಾತ್ಮ್ಯೆಯನ್ನು ಚನ್ನಾಗಿ ಅರಿತವನಾದ ಪ್ರಯುಕ್ತ ತನ್ನ ಜಟಾಮಂಡಲದಲ್ಲೇ ಎಲ್ಲಾ ಜಲವನ್ನೂ ಇಟ್ಟುಕೊಂಡು, ಕೊನೆಗೆ ತನ್ನ ತಲೆಯಿಂದಲೇ ತನ್ನ ಪಾದಸ್ಪರ್ಶವಿಲ್ಲದಹಾಗೆ, ಬದರಿಕಾದಿ ಆಶ್ರಮಗಳಿಗೆ ಆಶ್ರಯವಾದ ಹಿಮವತ್ಪರ್ವತದ ಬಳಿ ಬೀಳಿಸಿದನಾದುದರಿಂದ ಇನ್ನೂ ಹೆಚ್ಚಾದ ಮಾಹಾತ್ಮ್ಯೆಯು ಹೀಗೆ ಭಗವತ್ಸಂಬಂಧವೂ ಭಾಗವತ ಸಂಬಂಧವೂ ಇದ್ದುದರಿಂದ ಅದಕ್ಕೆ ಪಾವನತ್ವವು ನಿರತಿಶಯವಾದುದಾಯಿತು. ಹಾಗೆಯೇ ಆಹಾರವೂ ಸಹ ಭಗವನ್ನಿವೇದಿತವಾಗಿ ಭಾಗವತ ಸ್ವೀಕಾರವೂ ಉಳ್ಳದ್ದಾದರೆ ಅದಕ್ಕೆ ಪಾವನತ್ವವು ಹೆಚ್ಚು. ಹೀಗೆ ಭಗವನ್ನಿವೇದನವಾಗಿ, **ಭುಕ್ತವತ್ಸು ದ್ವಿಜಾಗ್ರ್ಯೇಷು** ಭಾಗವತರಾದ ಬ್ರಾಹ್ಮಣರೆಲ್ಲಾ ಊಟಮಾಡಿದ ನಂತರ, ಶ್ರೀಕೃಷ್ಣನು **ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿಚ"** ಎಂದು ಹೇಳಿರುವದರಿಂದ ಶ್ರೀಕೃಷ್ಣಭಗವಾನರವರೇ ಹಾಗೆ ಭಗವದ್ಭಾಗವತ ಸಂಬಂಧದಿಂದ ನಿರತಿಶಯ ಪಾವನತ್ವವನ್ನು ಪ್ರದರ್ಶಿಸಿರುತ್ತಾರೆ.

**ಭಾಷ್ಯಾರ್ಥವು :—ಪವತಾಂ** ಎಂದರೆ **ಗಮನಸ್ವಭಾವಾನಾಂ**—ಒಂದುಕಡೆಯಿಂದ ಇನ್ನೊಂದುಕಡೆಗೆ ಶೀಘ್ರವಾಗಿ ಗಮನವನ್ನು ಹೊಂದಿರುವ ವಸ್ತುಗಳ ಮಧ್ಯದಲ್ಲಿ, **ಪವನೋಽಹಮ್**—ವಾಯುವೂ ನಾನೇ ಎಂದರೆ ವಾಯ್ವಾತ್ಮಕನೂ ನಾನೇ ಎಂಬ ಭಾವವು, ಇಲ್ಲಿ ವಾಯುವಿನ ಅಸಾಧಾರಣ ಶಕ್ತಿಯಾದ ಬೀಸುವಿಕೆಯು ಮಾತ್ರವೇ ವಿವಕ್ಷಿತವಾಗಿದ್ದರೆ ನಿರ್ಧಾರಣಷಷ್ಠಿಯು ಬೇಕಿಲ್ಲವು, ನಿರ್ಧಾರಣಷಷ್ಠಿ ಇರುವದರಿಂದ ಅಂತಹ ಸ್ವಭಾವವುಳ್ಳವುಗಳಿಗೂ ವಾಯುವಿಗೂ ಸಮಾನ ಧರ್ಮವಿರಬೇಕಾದುದರಿಂದ **ಪವತಾಂ** ಎಂಬ ಶಬ್ದಕ್ಕೆ **ಗಮನಸ್ವಭಾವಾನಾಂ** ಎಂಬ ವ್ಯಾಖ್ಯಾನವು. **ಪವನಕ್ಕೆ** ಮಾಹಾತ್ಮ್ಯೆಯು, ಶೀಘ್ರ ಗಮನದಿಂದಲಾಗಲಿ, ಅಥವಾ ಗಮನದಿಂದ ಅಪರಿಶುದ್ಧತೆಯನ್ನು ಹೋಗಲಾಡಿಸುವದರಿಂದಲಾಗಲಿ, ಅಥವಾ ತನ್ನ ಸಂಚಾರಮೂಲಕ ಸಮುದ್ರೋದಕವನ್ನು ಹೀರಿ ಮೇಘೋತ್ಪತ್ತಿಯನ್ನುಂಟುಮಾಡಿ ಧರಣಿಯನ್ನು ಸುವೃಷ್ಟಿಯಿಂದ ಸಮೃದ್ಧಿಯುಕ್ತವಾದುದನ್ನಾಗಿ ಮಾಡುವದರಿಂದಲಾಗಲಿ, ಸೂರ್ಯಕಿರಣಗಳಿಂದ ತಪ್ತ ಪ್ರದೇಶಕ್ಕೆ ತನ್ನ ಶೈತ್ಯಾದಿ ಗುಣಗಳಿಂದ ತಂಪನ್ನೆಸಗುವದರಿಂದಲಾಗಲಿ. ಎಂದು ಭಾವಿಸಬಹುದು. **ಶಸ್ತ್ರಭೃತಾಂ ರಾಮೋಹಮ್**-ಯುದ್ಧದಲ್ಲಿ ಶಸ್ತ್ರವನ್ನು ಹಿಡಿದು ಯುದ್ಧಮಾಡಿ ಗೆದ್ದವರಲ್ಲಿ, **ರಾಮೋಹಮ್,**

ಶ್ರೀ ರಾಮನೂ ನಾನೇ, ಇಲ್ಲಿ ರಾಮಶಬ್ದಕ್ಕೆ ಬಲರಾಮ ಪರಶುರಾಮ ದಾಶರಥಿರಾಮವೆಂಬ ಮೂರರ್ಥದಲ್ಲಿ ಒಂದನ್ನು ಹೇಳಬೇಕಾಗುತ್ತದೆ ಬಲರಾಮನಿಗೆ ಶ್ರೀರಾಮನಷ್ಟು ಪರಾಕ್ರಮವಿಲ್ಲವು; ಪರಶುರಾಮನು ಶ್ರೀರಾಮನಿಂದ ಸೋತವನು; ಈ ಕಾರಣಗಳಿಂದ ಶಸ್ತ್ರವನ್ನು ಹಿಡಿದು ಗೆದ್ದವರ ಮಧ್ಯದಲ್ಲಿ ಶ್ರೀದಾಶರಥಿರಾಮನೇ ಮಹಾಪರಾಕ್ರಮವುಳ್ಳವನು; **ರಾಮಶ್ಶಸ್ತ್ರಭೃತಾಂವರಃ** ಎಂಬ ವಾಲ್ಮೀಕಿ ಮಹರ್ಷಿ ಪ್ರಯೋಗವೂ ಉಂಟು. **"ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವರಾಕ್ಷಸಾನ್ । ಅಙ್ಗುಳ್ಯಗ್ರೇಣ ತಾನ್ ಹನ್ಯಾಂ ಇಚ್ಛನ್ ಹರಿಗಣೇಶ್ವರ"** ಎಂದು ಶ್ರೀರಾಮನೇ ಹೇಳಿಕೊಂಡಿರುತ್ತಾನೆ. ಆಂಜನೇಯನು ರಾವಣನನ್ನು ಕುರಿತು **"ದೇವಾಶ್ಚ ದೈತ್ಯಾಶ್ಚ ನಿಶಾಚರೇಂದ್ರ ಗಂಧರ್ವವಿದ್ಯಾಧರನಾಗಯಕ್ಷಾಃ । ರಾಮಸ್ಯ ಲೋಕತ್ರಯನಾಯಕಸ್ಯ ಸ್ಥಾತುಂ ನ ಶಕ್ತಾಸ್ಸಮರೇಷು ಸರ್ವೇ"**(ರಾಮಾ.ಸುಂದ. ೫೧ ೪೪) ಎಂದು ಹೇಳಿರುತ್ತಾನೆ. ಆದುದರಿಂದ ಶಸ್ತ್ರಭೃತ್ತ್ವದಲ್ಲಿ ಶ್ರೀರಾಮನ ದಿವ್ಯಮಙ್ಗಳ ವಿಗ್ರಹಕ್ಕೆ ಮಾಹಾತ್ಮ್ಯೆಯು. ಈ ಸಂದರ್ಭದಲ್ಲಿ ಇತರರು ಮಾಡಬಹುದಾದ ಒಂದು ಪೂರ್ವಪಕ್ಷಕ್ಕೆ ಸಮಾಧಾನ ಹೇಳುವದು ಅತ್ಯವಶ್ಯಕವಾದುದರಿಂದ, ಆ ಪೂರ್ವಪಕ್ಷವನ್ನು ಮನಸ್ಸಿನಲ್ಲಿ ಊಹಿಸಿ ಸಮಾಧಾನವನ್ನು ಹೇಳುತ್ತಾರೆ.—ಶ್ರೀರಾಮನೇ ಪರತತ್ವವಾಗಿರುವಾಗ ಶ್ರೀರಾಮನೂ ತನಗೆ ವಿಭೂತಿ ಎಂದು ತೋರಿಸುವ ಸಾಮಾನಾಧಿಕರಣ್ಯಭಾವವೂ ಅಸಙ್ಗತವಲ್ಲವೇ ? ಶ್ರೀರಾಮನು ಪರಮಾತ್ಮನಿಗೆ ಶರೀರ ಹೇಗೆ? ಎಂಬಾಕ್ಷೇಪಕ್ಕೆ, ವಿಭೂತಿ ಎಂದು ಹೇಳತಕ್ಕದ್ದು ಪ್ರಕರಣವಾಗಿ, ಆದಕ್ಕೆ ಶರೀರಾತ್ಮ ಭಾವವು ಅತ್ಯಾವಶ್ಯಕವಾಗಿರುವದರಿಂದ, ಶ್ರೀರಾಮರೂಪದಲ್ಲಿರುವ ಪರಮಾತ್ಮನು ವಿವಕ್ಷಿತವಲ್ಲವೆಂದೂ ಶ್ರೀರಾಮರೂಪದಿವ್ಯಮಙ್ಗಳ ವಿಗ್ರಹವೇ ವಿವಕ್ಷಿತವೆಂದು ಅರ್ಥ ಮಾಡಬೇಕಾಗಿರುತ್ತದೆ. ದಿವ್ಯಮಙ್ಗಳವಿಗ್ರಹವನ್ನು ಶಸ್ತ್ರಭೃತ್ತ್ವರೂಪ ವಿಭೂತಿಯೆಂದು ಹೇಳಲು ಏನೊಂದೂ ಅಭ್ಯಂತರವಿಲ್ಲವು ಈ ವಿಷಯಗಳನ್ನೇ ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ. **ಅತ್ರ ಶಸ್ತ್ರಭೃತ್ತ್ವಂ ವಿಭೂತಿಃ**-ಈ ಸಂದರ್ಭದಲ್ಲಿ ದಿವ್ಯಮಙ್ಗಳ ವಿಗ್ರಹದ ಶಸ್ತ್ರವನ್ನು ಹಿಡಿದಿರುವಿಕೆಯೇ ವಿಭೂತಿಯು, ಏಕೆಂದರೆ **ಅರ್ಥಾಂತರಾಭಾವಾತ್** - ಬೇರೇ ಇನ್ನು ಯಾವ ವಸ್ತುವೂ ಇಲ್ಲದಿರುವದರಿಂದ; ರಾಮಶಬ್ದದಿಂದ ಬೋಧಿತವಾಗುವನು, ದಿವ್ಯ ಧನುಸ್ಸನ್ನೂ ಶರಗಳನ್ನೂ ಹಿಡಿದ ದಿವ್ಯಮಙ್ಗಳ ವಿಗ್ರಹವುಳ್ಳ ಪರಮಾತ್ಮನೇ ಎಂಬುದು ವ್ಯಕ್ತವು. ಮುಖ್ಯಾರ್ಥವಾದ ಪರಮಾತ್ಮನನ್ನು ಇಲ್ಲಿ ವಿಭೂತಿ ಎಂದು ಹೇಳುವದು ಸಾಧ್ಯವಿಲ್ಲದುದರಿಂದ ಶಸ್ತ್ರಧರಿಸಿರುವ ದಿವ್ಯಮಙ್ಗಳವಿಗ್ರಹವೇ ವಿಭೂತಿ ಎಂದು ಹೇಳತಕ್ಕದ್ದೆಂಬ ಭಾವವು. ಶಸ್ತ್ರಭೃತ್ತ್ವವನ್ನು ವಿಭೂತಿಯೆಂದು ಹೇಗೆ ಹೇಳುವಿರಿ ? ಎಂದು ಕೇಳಿದರೆ, ಅದಕ್ಕೆ ಉತ್ತರವನ್ನು ಹಿಂದಿನ ವೃತ್ತಾಂತಗಳ ಮೂಲಕ ಹೇಳುತ್ತಾರೆ.—**ಆದಿತ್ಯಾದಯಶ್ಚ**—ಹಿಂದೆ ಹೇಳಲ್ಪಟ್ಟ ಆದಿತ್ಯನೇ ಮೊದಲಾದವರಾದ, **ಕ್ಷೇತ್ರಜ್ಞಾಃ**—ಬದ್ಧ ಚೇತನರೆಲ್ಲಾ, **ಆತ್ಮತ್ವೇನಾವಸ್ಥಿತಸ್ಯ ಭಗವತಃ**—ಅವರಿಗೆಲ್ಲಾ ಆತ್ಮಾವಾಗಿ ಇರುವ ಭಗವಂತನಿಗೆ, **ಶರೀರತಯಾ**—ಶರೀರವಾಗಿರುವದರಿಂದ, **ಧರ್ಮಭೂತಾಃ**—ಪರಮಾತ್ಮನಿಗೆ ವಿಶೇಷಗಳು, ಅಪೃಥಕ್ಸಿದ್ಧ ವಿಶೇಷಣಗಳು, ಇತಿ-ಆಗಿರುವದರಿಂದ, **ಶಸ್ತ್ರಭೃತ್ತ್ವಸ್ಥಾನೀಯಾಃ**—ಶಸ್ತ್ರಭೃತ್ತ್ವಸ್ಥಾನದಲ್ಲಿರುವವು ; ಅವುಗಳು ಹೇಗೆ ವಿಶೇಷಣಗಳೋ, ಹಾಗೆಯೇ ಇಲ್ಲಿಯೂ ಶಸ್ತ್ರಭೃತ್ತ್ವವೂ ವಿಶೇಷಣವಾಗಿ ವಿಭೂತಿ ಎಂಬ ತಾತ್ಪರ್ಯವು. ಮೂಲದ ಉತ್ತರಾರ್ಧದ ಅರ್ಥಗ್ರಹಣದಲ್ಲಿ ಏನೂ ತೊಂದರೆ ಇಲ್ಲವಾದುದರಿಂದ ಆದಕ್ಕೆ ವ್ಯಾಖ್ಯಾನವನ್ನು ದಯಪಾಲಿಸಲಿಲ್ಲವು.

**ಮೂಲಕ್ಕೆ ಅರ್ಥವು:—ಸರ್ಗಾಣಾಂ**— ಸೃಷ್ಟಿಯನ್ನು ಹೊಂದುವ ವಸ್ತುಗಳಿಗೆ, **ಆದಿಃ**—ಯಾರು ಯಾರು ಕಾರಣವೋ, **ಮಧ್ಯಂ**—ಯಾರು ಯಾರು ಮಧ್ಯಸ್ಥಿತಿಯಾದ

ಮೂ. **ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥**

ಭಾ. **ಸೃಜ್ಯನ್ತ ಇತಿ ಸರ್ಗಾಃ, ತೇಷಾಂ ಆದಿಃ—ಕಾರಣಮ್ ; ಸರ್ವದಾ ಸೃಜ್ಯಮಾನಾನಾಂ ಸರ್ವೇಷಾಂ ಪ್ರಾಣಿನಾಂ ತತ್ರ ತತ್ರ ಸ್ರಷ್ಟಾರೋಽಹಮೇವೇತ್ಯರ್ಥಃ । ತಥಾನ್ತಃ-ಸರ್ವದಾ ಸಂಹ್ರಿಯಮಾಣಾನಾಂ ತತ್ರ ತತ್ರ ಸಂಹರ್ತಾರೋಽಪ್ಯಹಮೇವ**

---

ಪಾಲನವನ್ನುಂಟುಮಾಡುವರೋ, **ಅಂತಶ್ಚ**—ಯಾರುಯಾರು ನಾಶವನ್ನುಂಟುಮಾಡುವರೋ **ಹೇ ಅರ್ಜುನ**-ಓ ಅರ್ಜುನನೇ, **ಅಹಮೇವ**-ನಾನೆಯೇ : ಅವರುಗಳಿಗೆಲ್ಲಾ ಆತ್ಮಾವಾಗಿರುವವನೂ ನಾನೇ ಸರಿ ಎಂಬ ಭಾವವು. ಇದು ವಿಭೂತಿ ಅಧ್ಯಾಯವಾಗಿ ಸಾಮಾನಾಧಿಕರಣ್ಯವನ್ನು ಹೇಳಬೇಕಾಗಿರುವದರಿಂದಲೂ ಸೃಷ್ಟಿ ಸ್ಥಿತಿಲಯಾದಿಗಳಿಗೆ ನಾನೇ ಕಾರಣನೆಂದು ಅರ್ಥ ಮಾಡಿದರೆ ಹಿಂದೆ ೨೦ನೆಯ ಶ್ಲೋಕದಲ್ಲಿ ಹೇಳಿರುವದರ ಪುನರುಕ್ತಿ ದೋಷವುಂಟಾಗುವದರಿಂದಲೂ, ಈ ಮೇಲಿನ ಅರ್ಥವೇ ಉಚಿತವು. **ವಿದ್ಯಾನಾಂ**—ಶ್ರೇಯಸ್ಸಾಧಕವಾದ ವಿದ್ಯೆಗಳ ಮಧ್ಯದಲ್ಲಿ, **ಅಧ್ಯಾತ್ಮವಿದ್ಯಾ**-ಪರಬ್ರಹ್ಮಪ್ರಾಪ್ತಿಯನ್ನುಂಟುಮಾಡುವ ಬ್ರಹ್ಮವಿದ್ಯೆಯೂ, **ಅಹಮ್**—ನಾನೇ ; ಇತರ ವಿದ್ಯೆಗಳು ಅಲ್ಪಾಸ್ಥಿರಶ್ರೇಯಸ್ಸಾಧನ ಭೂತಗಳಾಗಿರಬಹುದು, ಬ್ರಹ್ಮವಿದ್ಯೆಯಾದರೋ ನಿರತಿಶಯವಾಗಿ ಶಾಶ್ವತವಾಗಿರುವ ಪರಿಪೂರ್ಣಬ್ರಹ್ಮಾನುಭವವನ್ನು ಸಾಧಿಸಿ ಕೊಡುವದರಿಂದ ಅದಕ್ಕೆ ಮಾಹಾತ್ಮ್ಯಯು. ಆ ಕಾರಣದಿಂದ ಬ್ರಹ್ಮವಿತ್ತು ಸರ್ವ ಪ್ರಾಣಿಗಳಲ್ಲೂ ಸರ್ವೋತ್ಕೃಷ್ಟನು. **ಪ್ರವದತಾಂ**-ವಿಶೇಷವಾಗಿ ವಿತಂಡಾದಿ ವಾದಮಾಡುವವರ ಮಧ್ಯದಲ್ಲಿ, **ವಾದಃ**-ಜೀವ ಪರಮಾತ್ಮ ಯಾಥಾತ್ಮ್ಯ ನಿರ್ಣಯರೂಪವಾದವೂ, **ಅಹಮೇವ**—ನಾನೇ.

**ಭಾಷ್ಯಾರ್ಥವು**:—ಇದು ವಿಭೂತಿ ವಿಸ್ತರ ಪ್ರಕರಣವಾಗಿಯೂ ಹಿಂದೆ ೨೦ ನೆಯಶ್ಲೋಕದಲ್ಲಿ **ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ** ಎಂದು ಹೇಳಲ್ಪಟ್ಟಿರುವದರಿಂದ, ನಾನು ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತನೆಂದು ಅರ್ಥಮಾಡುವದು ಸಮಂಜಸವಾಗುವದಿಲ್ಲವಾದುದರಿಂದ, ವಿಭೂತಿ ಸಾಮಾನಾಧಿಕರಣ್ಯವು ಉಂಟಾಗುವಹಾಗೆ ಭಾಷ್ಯವನ್ನು ಬರೆದಿರುತ್ತಾರೆ. **ಸೃಜ್ಯನ್ತ ಇತಿ ಸರ್ಗಾಃ**-ಸೃಷ್ಟಿಯನ್ನು ಹೊಂದುವುವು ಯಾವುವೋ ಅವು ಸರ್ಗಗಳೆನ್ನಿಸುವುವು, **ತೇಷಾಂ ಆದಿಃ** ಎಂದರೆ **ಕಾರಣಮ್**-ಅಂತಹ ಭೂತಗಳಿಗೆಲ್ಲಾ ಕಾರಣವೆಂಬ ಭಾವವು. ವಾಕ್ಯತಾತ್ಪರ್ಯವನ್ನು ತಿಳಿಸುತ್ತಾರೆ-**ಸರ್ಗಾಣಾಂ** ಎಂದರೆ **ಸರ್ವದಾ ಸೃಜ್ಯಮಾನಾನಾಂ ಸರ್ವೇಷಾಂ ಪ್ರಾಣಿನಾಂ**-ಮೂರು ಕಾಲದಲ್ಲೂ ಉತ್ಪತ್ತಿಯನ್ನು ಹೊಂದುವ ಸಮಸ್ತ ಪ್ರಾಣಿಗಳಿಗೂ, **ತತ್ರತತ್ರ ಸ್ರಷ್ಟಾರಃ**-ಆಯಾಯಾ ಸಂದರ್ಭವಲ್ಲೂ ಸೃಷ್ಟಿಕರ್ತಾರೂಪದಲ್ಲಿರುವವರೆಲ್ಲರೂ, **ಅಹಮೇವೇತ್ಯರ್ಥಃ**—ನಾನೇ ಎಂಬ ತಾತ್ಪರ್ಯವು, ತದಾತ್ಮಕನಾದವನು ನಾನೇ ಎಂಬ ಭಾವವು. **"ಬೀಜಂ ಮಾಂ ಸರ್ವಭೂತಾನಾಂ"** ಎಂದು ಉಪಾದಾನ ಕಾರಣವು ಮುಂದೆ ಹೇಳುವದರಿಂದ ಇಲ್ಲಿ ನಿಮಿತ್ತಕಾರಣಮಾತ್ರ ವಿವಕ್ಷಿತವು. **ತಥಾನ್ತಃ** ಎಂದರೆ **ಸರ್ವದಾ ಸಂಹ್ರಿಯಮಾಣಾನಾಂ ತತ್ರ ತತ್ರ ಸಂಹರ್ತಾರೋಽಪ್ಯಹಮೇವ**—ಎಲ್ಲಾ ಕಾಲದಲ್ಲೂ ಅವಸ್ಥಾಂತರವನ್ನು ಹೊಂದುವ ಪ್ರಾಣಿಗಳಲ್ಲಿ ಆಯಾಯಾ ಸಂದರ್ಭದಲ್ಲಿ ಅವಸ್ಥಾಂತರವನ್ನುಂಟುಮಾಡುವವನೂ ಸಹ ನಾನೇ. **ತಥಾ ಚ**—ಹಾಗೆಯೇ. **ಮಧ್ಯಂ** ಎಂದರೆ ಪಾಲನೆಯು, ತಾತ್ಪರ್ಯವೇನೆಂದರೆ **ಸರ್ವದಾ**—ಎಲ್ಲಾ ಕಾಲದಲ್ಲೂ, **ಪಾಲ್ಯ**

ಭಾ **ತಥಾಚ ಮಧ್ಯಂ - ಪಾಲನಂ; ಸರ್ವದಾ ಪಾಲ್ಯಮಾನಾನಾಂ ಪಾಲಯಿತಾರಶ್ಚಾಹ ಮೇವೇತ್ಯರ್ಥಃ। ಜಲ್ಪವಿತಂಡಾದಿ ಕುರ್ವತಾಂ, ತತ್ತ್ವನಿರ್ಣಯಾಯ ಪ್ರವೃತ್ತೋ ವಾದೋ ಯಃ, ಸೋಽಹಮ್** ॥ ೩೨ ॥

**ಮಾನಾನಾಂ**- ಪಾಲಿಸಲು ಯೋಗ್ಯವಾದ ಪ್ರಾಣಿಗಳನ್ನು, **ಪಾಲಯಿತಾರಶ್ಚ** - ರಕ್ಷಿಸುವವರೂ ಸಹ, **ಅಹಮೇವೇತ್ಯರ್ಥಃ** - ನಾನೇ ಎಂಬ ಭಾವವು. ಇಲ್ಲಿ ಸರ್ಗ ಶಬ್ದಕ್ಕೆ ಸೃಷ್ಟಿ ಎಂಬರ್ಥ ಮಾತ್ರವೇ ಸರಿಹೋಗುವದಿಲ್ಲವಾದುದರಿಂದ **ಸರ್ಗಾಣಾಂ** ಎಂಬುವಕ್ಕೆ **ಸರ್ವದಾ ಸೃಜ್ಯಮಾನಾನಾಂ**-ಎಂದು ಭಾಷ್ಯವನ್ನು ಬರೆದಿರುತ್ತಾರೆ. **ಆದಿಃ, ಮಧ್ಯಂ, ಅಂತಃ** ಎಂಬ ಪದಗಳು ಕಾಲವನ್ನು ಸೂಚಿಸುತ್ತವೆಂದು ಅರ್ಥಮಾಡಲು ಮುಂದೆ **ಅಹಮೇವಾಕ್ಷಯಃ ಕಾಲಃ** ಎಂದು ಹೇಳಲ್ಪಡುತ್ತದೆ. ಆದುದರಿಂದ ವಿಭೂತಿ ಸಾಮಾನಾಧಿಕರಣ್ಯವು ಸಮಂಜಸವಾಗುವವಕ್ಕಾಗಿ **ಸರ್ಗಾಣಾಂ** ಎಂಬುದಕ್ಕೆ **ಸರ್ವದಾ ಸೃಜ್ಯಮಾನಾನಾಂ ಸರ್ವೇಷಾಂ ಪ್ರಾಣಿನಾಂ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಇಲ್ಲಿ ನಿಯಮನ ರೂಪಕಾರಣತ್ವವೇ ಪ್ರಕರಣವಾದುದರಿಂದ, **ಸರ್ಗಾಣಾಂ** ಎಂಬುದಕ್ಕೆ ಕ್ರಿಯಾಪದವನ್ನು ಹೇಳಿ, ಸೃಷ್ಟಿ ಸ್ಥಿತಿ ಲಯಗಳಿಗೆ ಸರ್ವವಿಧ ಕಾರಣನು ತಾನೇ ಎಂದು ಹೇಳುವದು ಅಪ್ರಸ್ತುತವು. ಅದೂ ಅಲ್ಲದೆ ತಾನು ಸರ್ವವಿಧಕಾರಣವು ಎಂದು, ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಆದುದರಿಂದ ನಿಮಿತ್ತಕಾರಣಭೂತರಾದ ಅಧಿಕಾರಿಗಳೇ ಉದ್ದೇಶ್ಯರೆಂದು ಭಾವಿಸತಕ್ಕದ್ದು. **ಜಲ್ಪ ವಿತಂಡಾದಿ ಕುರ್ವತಾಂ**-ಇದು **ಪ್ರವದತಾಂ**-ಎಂಬುದರ ವ್ಯಾಖ್ಯಾನವು; ಎಷ್ಟು ಬೇಕೋ ಅಷ್ಟುಮಾತ್ರವೇ ಉಪಪಾದನೆಯಿಲ್ಲದೆ, ಹೇತು ಹೇತುಮದ್ಭಾವವಿಲ್ಲದ ಮತ್ತು ದುಷ್ಟ ಹೇತುಗಳಿಂದ ಕೂಡಿದ ವಾದಗಳೇ ಮೊದಲಾದವುಗಳ ಮಧ್ಯದಲ್ಲಿ, **ವಾದೋಹಮ್** - ಎಂದರೆ ತತ್ವನಿರ್ಣಯಕ್ಕಾಗಿ ಪ್ರವೃತ್ತವಾದ ಶಾಸ್ತ್ರಸಮ್ಮತವಾದ ಉಪಪಾದನೆಯು, **ಯಃ** - ಯಾವುದೋ, **ಸೋಹಮ್** - ಅದೂ ನಾನೇ, ಪರಮಾತ್ಮ ಜೀವಾತ್ಮ ತತ್ತ್ವಗಳ ಯಾಥಾತ್ಮ್ಯ, ಸಂಬಂಧ, ಪ್ರಾಪ್ಯ ಪ್ರಾಪಕ ಮೊದಲಾದ ಭಾವಗಳನ್ನು ತಿಳಿಸುವ ಸತ್ತರ್ಕರೂಪವಾದಕ್ಕೇ ಅತಿಶಯವಲ್ಲದೆ ಮಿಕ್ಕವಾದಗಳೆಲ್ಲಾ ನಿಷ್ಫಲವಾದವುಗಳು, ಎಂಬ ಭಾವವು. ಇಂತಹ ತರ್ಕಗಳೆಲ್ಲಾ **"ತರ್ಕಾಽಪ್ರತಿಷ್ಠಾನಾತ್"** ಎಂಬ ಸೂತ್ರದಲ್ಲಿ ನಿರಾಕರಿಸಲ್ಪಟ್ಟಿವೆ. ಇಂತಹ ಸತ್ತರ್ಕಗಳು ಶಾಸ್ತ್ರಗಳ ತಳಹದಿಯನ್ನು ಹೊಂದಿದವಾದುದರಿಂದ ಆಹಾರ್ಯಗಳು. ಮಿಕ್ಕವುಗಳಿಗೆ ಅಂತಹ ಬಲವಿಲ್ಲದುದರಿಂದ ಅರಳೆಯು ಪ್ರಚಂಡವಾಯುವಿನಿಂದ ಪಲಾಯನವನ್ನು ಹೊಂದುವಹಾಗೆ ಅಂತಹ ತರ್ಕಗಳು ಎಂದಿಗೂ ಬಾಳಲಾರದೆ ಕುತರ್ಕಗಳೆನಿಸುತ್ತವೆ **ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ । ಯಸ್ತರ್ಕೇಣಾನುಸಂಧತ್ತೇ ಸಧರ್ಮಂ ವೇದ ನೇತರಃ** ಎಂದು **ನೇತರಃ** ಎಂದು ಹೇಳಿರುವ ಸ್ಥಳದಲ್ಲಿ **"ಜಲ್ಪ ವಿತಂಡಾದಿ ವಾದಗಳು"** ಹೇಳಲ್ಪಟ್ಟವು, ಇದೇ ಪ್ರವದತಾಂ ಎಂಬುದರ ಅರ್ಥವು. ಇದರಿಂದ ಕುವಾದಗಳು ಹೇಳಲ್ಪಟ್ಟವು. ಬಾಹ್ಯಕುದೃಷ್ಟಿಗಳ ವಾದವು ಇಲ್ಲಿ ನಿಂದಿಸಲ್ಪಟ್ಟವು. ಅಯಥಾರ್ಥವಾದವು ಸರಿಯಲ್ಲವೆಂದು ತಿಳಿದು ಸ್ವಾಮಿ ದೇಶಿಕರವರು, ಶತದೂಷಣಿ, ನ್ಯಾಯಸಿದ್ಧಾಂಜನ ಪರಮತ ಭಂಗ ಇತ್ಯಾದಿ ಗ್ರಂಥಗಳನ್ನು ರಚಿಸಿರುತ್ತಾರೆ, ಅಸೂಯೆಯಿಂದ ದೂಷಿಸಲಿಲ್ಲವು. ಸತ್ತರ್ಕ ಮೂಲಕ ವಾದಿಸುತ್ತಾರೆ. ಈ ಪದವಿ ಕ್ರೂರವಾಕ್ಕುಗಳು ಅವುಗಳಲ್ಲಿರುವದಿಲ್ಲವು. ಜ್ಞಾನನಿಧಿಗಳು ಅವುಗಳನ್ನು ಅವಲೋಕಿಸಿ, ವಾದವು ಸಮ್ಮತವಾಗಿದ್ದರೆ ಅಙ್ಗೀಕರಿಸಬಹುದು.

**ಮೂಲಕ್ಕೆ ಅರ್ಥವು:—ಅಕ್ಷರಾಣಾಂ** - ಅಕ್ಷರಗಳಲ್ಲಿ, **ಅಕಾರೋಸ್ಮಿ** - ಪ್ರಥಮಾಕ್ಷರವಾದ ಅಕಾರವೂ ನಾನೇ, ಅಕಾರವು ಸರ್ವ ವಾಕ್ಕುಗಳಿಗೂ ಆದಿಯಾಗಿ ಅವುಗಳಿಗೆ ಸಹಕಾರಿ

**ಮೂ. ಅಕ್ಷರಾಣಾ ಮಕಾರೋಽಸ್ಮಿ ದ್ವಂದ್ವಸ್ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥ ೩೩.**

ಯಾಗಿರುವಪದರಿಂದ, ಅಕ್ಷರಗಳಿಗೆ ಹೇಗೆ ಮೂಲವೋ, ಹಾಗೆಯೇ ಜಗತ್ತೇ ಮೊದಲಾದವುಗಳಿಗೆ ಮೂಲಕಾರಣಭೂತನಾಗಿ ವಿಷ್ಣುವಾಚಕವಾದ ಅಕ್ಷರನಾಗಿರುವದರಿಂದ, ಅದಕ್ಕೆ ವಿಶೇಷ ಮಾಹಾತ್ಮ್ಯೆಯು ಆದುದರಿಂದಲೇ **"ಅಕಾರೋವೈ ವಿಷ್ಣುಃ" "ಅಕಾರೋ ವಿಷ್ಣುವಾಚಕಃ" "ಅಕಾರಾರ್ಥೋ ವಿಷ್ಣುಃ" "ಅಕಾರೇಣಾಖಿಲಾಧಾರಃ ಪರಮಾತ್ಮಾಭಿಧೀಯತೇ" "ಅಕಾರೇಣೋಚ್ಯತೇ ವಿಷ್ಣುಃ"** ಎಂಬ ಜ್ಞಾನಾಗ್ರೇಸರರುಗಳ ದಿವ್ಯ ಸೂಕ್ತಿಗಳುಂಟು. ಹೀಗೆ ಅಕಾರವು ವಿಷ್ಣುವೇ ಪ್ರಾಪ್ಯಪ್ರಾಪಕನೆಂದು ಬೋಧಿಸುತ್ತದೆ. ಹೀಗೆ ವಿಷ್ಣುವನ್ನು ಅಕಾರದಿಂದ ಹೇಳುವದರಿಂದ ಇನ್ನೂ ವಿಶೇಷಾರ್ಥಗಳೂ ಬೋಧಿತವಾಗುತ್ತವೆ. ಹೇಗೆಂದರೆ, **"ಏವಮಕ್ಷರರೂಪೇಣ ಕಾರಣತ್ವ ಮಿವೋದಿತಂ । ರಕ್ಷಕತ್ವಂಚ ಧಾತ್ವರ್ಥಾ ಚ್ಛೇಷಿತ್ವಂ ಪದರೂಪತಃ । ಶ್ರೀಶತ್ವಂ ವಾಚ್ಯಗತ್ಯಾಚ ಯುಜ್ಯತೇ ಪರಮಾತ್ಮನಃ"** ಎಂದು ಹೇಳಿರುವಹಾಗೆ ಪರಮಾತ್ಮನ ಸ್ವರೂಪಾದಿ ನಾಲ್ಕು ಅರ್ಥಗಳು ಸೂಚಿಸಲ್ಪಟ್ಟವು. ಅಕಾರವು ಹೇಗೆ ಅಕ್ಷರಗಳಿಗೆಲ್ಲಾ ಆದಿಯೋ, ಹಾಗೆಯೇ ಅಕಾರವು ಪರಮಾತ್ಮನನ್ನು ಬೋಧಿಸಿ, ಆತನು (೧) ಜಗತ್ಕಾರಣನೆಂದು ತಿಳಿಸುತ್ತದೆ. (೨) **ಅವ ರಕ್ಷಣೆ** ಎಂಬ ಧಾತ್ವರ್ಥದ ಮೂಲಕ ಅಕಾರವು ಪರಮಾತ್ಮನನ್ನು ಜಗದ್ರಕ್ಷಕನನ್ನಾಗಿ ತಿಳಿಸುತ್ತದೆ. (೩) **ಈ** ಅಕಾರವು, ವ್ಯಾಕರಣ ಮೂಲಕ ಲುಪ್ತ ಚತುರ್ಥಿ ಎಂದು ತೋರಿಸಬಹುದಾಗಿರುವದರಿಂದ, **ಆಯ** ಎಂಬ ಚತುರ್ಥ್ಯರ್ಥವನ್ನು ಬೋಧಿಸುವದರಿಂದ ಸರ್ವಕ್ಕೂ ಪರಮಾತ್ಮನು ಶೇಷಿಯೆಂದು ತಿಳಿಸುತ್ತದೆ. (೪) ಸನ್ನಿಯೋಗ ಶಿಷ್ಟನ್ಯಾಯದಪ್ರಕಾರ ವಾಚ್ಯಗತಿಯ ಮೂಲಕ ಶ್ರಿಯಃಪತಿತ್ವವನ್ನು ಸೂಚಿಸುತ್ತದೆ. ಆದುದರಿಂದ ಅಕಾರವು **ಸರ್ವ** ವರ್ಣಗಳಿಗಿಂತಲೂ ಹೆಚ್ಚು ಮಾಹಾತ್ಮ್ಯೆಯುಳ್ಳದು. ಇದಲ್ಲದೆ ಪ್ರಣವದಲ್ಲಿ ಈ ಅಕ್ಷರವು ಸೇರಿರುತ್ತದೆ. ಹೀಗೆಲ್ಲಾ ಈ ವರ್ಣಕ್ಕೆ ಸರ್ವಾತಿಶಯವಿರುವದರಿಂದ **"ಅಕ್ಷರಾಣಾಮಕಾರೋಽಸ್ಮಿ"** ಎಂಬ ಪ್ರಯೋಗವು. ಅಕಾರದಿಂದ ಮಿಥುನತ್ವವು ತೋರಿಬರುವದರಿಂದಲೇ ಮುಂದೆ **ದ್ವಂದ್ವಸ್ಸಾಮಾಸಿಕಸ್ಯ ಚ** ಎಂದು ಹೇಳಲ್ಪಡುತ್ತದೆ. **ಸಾಮಾಸಿಕಸ್ಯ ಚ** - ಸಮಾಸ ಸಮೂಹದಲ್ಲಿ **ದ್ವಂದ್ವಃ ಅಸ್ಮಿ**-ಲಕ್ಷ್ಮೀನಾರಾಯಣರು ಎಂದು ಹೇಳುವಹಾಗೆ ಉಭಯಪದ ಪ್ರಾಧಾನ್ಯವಿರುವ ದ್ವಂದ್ವ ಸಮಾಸವೂ ನಾನೇ; ಕರ್ಮಧಾರಯ ಮೊದಲಾದ ಸಮಾಸಗಳಲ್ಲಿ ಉತ್ತರಪದಕ್ಕೆ ಪ್ರಾಧಾನ್ಯವು; ಬಹುವ್ರೀಹಿಯಲ್ಲಿ **ಎರಡು** ಪದಗಳಿಗೂ ಪ್ರಾಧಾನ್ಯವಿಲ್ಲದೆ ಅಲ್ಲಿ ಇಲ್ಲದ ಮೂರನೆಯ ಪದಕ್ಕೆ ಪ್ರಾಧಾನ್ಯವು. ದ್ವಂದ್ವಸಮಾಸದಲ್ಲಾದರೋ **ಎರಡಕ್ಕೂ** ಪ್ರಾಧಾನ್ಯತೆಯುಂಟು, ಆದುದರಿಂದ ದ್ವಂದ್ವಸಮಾಸಕ್ಕೆ ಮಾಹಾತ್ಮ್ಯೆಯು. ಇಲ್ಲಿ ಇನ್ನೊಂದು ವ್ಯಂಗ್ಯಾರ್ಥವೂ ತೋರಿಬರುತ್ತದೆ. ಕಾರಣವಾದ ಪರತತ್ವದಲ್ಲೂ ಕಾರ್ಯವಾದ ಜಗತ್ತಿನಲ್ಲೂ ಸಹ ದ್ವಂದ್ವರೂಪ ಮಿಥುನತ್ವವನ್ನು ನಾವು ನೋಡುತ್ತೇವೆ. ಪರತತ್ವವು ಲಕ್ಷ್ಮೀನಾರಾಯಣರಾಗಿ ದ್ವಂದ್ವರೂಪವು ಕಾರಣ ಕಾರ್ಯರೂಪಗಳಲ್ಲಿ ವ್ಯಕ್ತವು. ಸಾಮಾಸಿಕಸ್ಯ ಎಂದರೆ ಒಟ್ಟಿಗೆ ಸಂಶ್ಲಿಷ್ಟವಾಗಿ ಸೇರಿರುವ ಸಮೂಹದಲ್ಲಿ ಎಂಬ ವ್ಯಂಗ್ಯಾರ್ಥವು ತೋರಿಬರುತ್ತದೆ. **ಕಾರ್ಯವಾದ ಈ** ಜಗತ್ತಿನಲ್ಲೂ ದ್ವಂದ್ವರೂಪದಿಂದಲೇ ವೃದ್ಧಿಯು. **ಈ** ಜಗತ್ತು ಮಿಥುನರೂಪವಾದುದು, **ದೇವಮನುಷ್ಯ ತಿರ್ಯಕ್‌ಸ್ಥಾವರಗಳೆಲ್ಲಾ** ಮಿಥುನರೂಪವಾಗಿ ಅಭಿವೃದ್ಧಿಯನ್ನು ಹೊಂದುತ್ತವೆ. ಆದುದರಿಂದ ಒಟ್ಟಿಗೆ ಸೇರಿರುವ ವಸ್ತುಸಮೂಹಗಳಲ್ಲಿ ದ್ವಂದ್ವಕ್ಕೆ ಎಂದರೆ ಮಿಥುನತ್ವಕ್ಕೆ ಮಾಹಾತ್ಮ್ಯೆಯು **ಇಷ್ಟೇ** ಅಲ್ಲವು ಜಗತ್ತಿನಲ್ಲಿ ತೋರಿಬರುವ ಸಂಯೋಗ ಶಕ್ತಿ

**ಭಾ. ಅಕ್ಷರಾಣಾಂ ಮಧ್ಯೇ "ಅಕಾರೋ ವೈ ಸರ್ವಾವಾಕ್" ಇತಿ ಶ್ರುತಿ ಸಿದ್ಧ ಸರ್ವ ವರ್ಣಾನಾಂ ಪ್ರಕೃತಿ ರಕಾರೋಽಹಮ್। ಸಾಮಾಸಿಕಃ-ಸಮಾಸ ಸಮೂಹಃ;**

ವಿದ್ಯುಚ್ಛಕ್ತಿ ಅಯಸ್ಕಾಂತಶಕ್ತಿ ಮೊದಲಾದವುಗಳಲ್ಲೂ ಈ ದ್ವಂದ್ವಭಾವವು ವ್ಯಕ್ತವು. ಪದಾರ್ಥಗಳ ಸಂಯೋಗದಲ್ಲೂ, ವಿದ್ಯುಚ್ಛಕ್ತಿ ಅಯಸ್ಕಾಂತ ಶಕ್ತಿ ಮೊದಲಾದವುಗಳಲ್ಲೂ ಈ ದ್ವಂದ್ವ ಭಾವವು ಭೌತಿಕ ಶಾಸ್ತ್ರಜ್ಞರಿಗೆ ವ್ಯಕ್ತವು. ಇಲ್ಲಿ ದ್ವಂದ್ವ ಶಬ್ದಕ್ಕೆ ಯುಗ್ಮವೆಂಬರ್ಥವು ತೋರಿಬರುವದರಿಂದ ದ್ವಿಪದದ್ವಂದ್ವವನ್ನು ಮನಸ್ಸಿನಲ್ಲಿಟ್ಟು ಈ ಸ್ವಾರಸ್ಯಗಳನ್ನು ಹೇಳಬಹುದು. ಬಹುಪದ ದ್ವಂದ್ವಸಮಾಸವೆಂದು ಭಾವಿಸಿದರೂ, ಸಮಾಸಗಳಲ್ಲಿ ದ್ವಂದ್ವಕ್ಕೇನೆ ಪ್ರಾಧಾನ್ಯವು. ಉತ್ತರಾರ್ಧದಲ್ಲಿ ಹೇಳಿರುವ ಕಾಲಕ್ಕೂ ಧಾತುವಿಗೂ ಸಾಧಾರಣವಾದ ಧರ್ಮಗಳಿರುವ ವಸ್ತುಗಳಿಲ್ಲವಾದುದರಿಂದ, ನಿರ್ಧಾರಣ ಷಷ್ಠಿಗಳನ್ನು ಹೇಳದೆ, ಅಸಾಧಾರಣ ಧರ್ಮಗಳುಳ್ಳ ಅವುಗಳೊಂದಿಗೇನೇ ಸಾಮಾನಾಧಿಕರಣ್ಯವನ್ನು ಹೇಳುತ್ತಾರೆ. **ಅಕ್ಷಯಃ**— ಆದ್ಯಂತಗಳಿಲ್ಲದೆ ನಿತ್ಯವಾದ, **ಕಾಲಃ**-ಕಲಾಕಾಷ್ಠಾದಿ ವಿಭಾಗಗಳಿಂದ ಅರಿಯಬಹುದಾದ ಕಾಲಕ್ಕೆ ಆತ್ಮನೂ, **ಅಹಮೇವ**-ನಾನೇ; ಕಾಲತತ್ತ್ವಾತ್ಮಕನೂ ನಾನೇ; ಎಂಬ ಭಾವವು. ಕಾಲವು ಜಡವಾಗಿಯೂ ವಿಭುವಾಗಿಯೂ ನಿತ್ಯವಾಗಿಯೂ ಇರುವಂಥಾದ್ದು. ಅಂತಹ ಧರ್ಮಗಳುಳ್ಳ ಪದಾರ್ಥವು ಇನ್ನು ಯಾವುದೂ ಇಲ್ಲವಾದುದರಿಂದ ನಿರ್ಧಾರಣಷಷ್ಠಿಯನ್ನು ಪ್ರಯೋಗಿಸಲು ಸಾಧ್ಯವಿಲ್ಲವು. ಕಾಲಕ್ಕೆ ಮಾಹಾತ್ಮ್ಯವು ಹೇಗೆ ಎಂದು ಕೇಳಿದರೆ ಶ್ರೀ ಪರಾಶರರು ವಿಷ್ಣು ಪುರಾಣ ೧ ೨೨ ನೆಯ ಅಧ್ಯಾಯದಲ್ಲಿ "**ಬ್ರಹ್ಮಾ ದಕ್ಷಾದಯಃ ಕಾಲಸ್ತಥೈವಾಖಿಲ ಜಂತವಃ। ವಿಭೂತಯೋ ಹರೇ ರೇತಾ ಜಗತಸ್ಸೃಷ್ಟಿ ಹೇತವಃ ॥೩೧॥ ವಿಷ್ಣುರ್ಮನ್ವಾದಯಃ ಕಾಲ ಸ್ಸರ್ವಭೂತಾನಿಚ ದ್ವಿಜ। ಸ್ಥಿತೇರ್ನಿಮಿತ್ತಭೂತಸ್ಯ ವಿಷ್ಣೋರೇತಾ ವಿಭೂತಯಃ ॥೩೨॥ ರುದ್ರಃ ಕಾಲಾಂತಕಾದ್ಯಾಶ್ಚ ಸಮಸ್ತಾಶ್ಚೈವ ಜಂತವಃ। ಚತುರ್ಧಾಪ್ರಳಯಾಯೈತಾಜನಾರ್ದನ ವಿಭೂತಯಃ ॥೩೩॥**" ಎಂಬಲ್ಲಿ ಹೇಳಿರುವ ಹಾಗೆ ಕಾಲವು ಪರಮಾತ್ಮನ-ಸೃಷ್ಟಿಸ್ಥಿತಿ ಲಯಗಳಿಗೆ ಕಾರಣಭೂತವಾದ ವಿಭೂತಿಯೆಂದು ಹೇಳಲ್ಪಟ್ಟು, ಸರ್ವವೂ ಸ್ವಾಮಿ ಸಂಕಲ್ಪ ಮೂಲಕ ಈ ಲೀಲಾ ವಿಭೂತಿಯಲ್ಲಿ ಕಾಲಾಧೀನವಾಗಿರುವದರಿಂದ ಕಾಲಕ್ಕೆ ಮಾಹಾತ್ಮ್ಯವು. ಇಂತಹ ಪ್ರಭುತ್ವವು ಕಾಲಕ್ಕೆ ನಿತ್ಯವಿಭೂತಿಯಲ್ಲಿ ಇಲ್ಲವು. ಇಲ್ಲಿಯಾದರೋ ಸರ್ವವೂ ಕಾಲಕ್ಕೆ ವಶವಾದುದರಿಂದ ಅದಕ್ಕೆ ಮಾಹಾತ್ಮ್ಯವು. ಹಾಗೆಯೇ ಮೇಲೆ ಹೇಳಿರುವ **ಬ್ರಹ್ಮಾದಕ್ಷಾದಯಃಕಾಲಃ** ಎಂಬಲ್ಲಿ ಹೇಳಿರುವ ಹಾಗೆ ಚತುರ್ಮುಖ ಬ್ರಹ್ಮನು ಸೃಷ್ಟಿಗೆ ಉಪಯುಕ್ತವಾದ ಮುಖ್ಯ ವಿಭೂತಿಯಲ್ಲಿ ಸೇರಿರುವದರಿಂದ ಆತನ ಪ್ರಾಮುಖ್ಯದ ನಿರೂಪಣಕ್ಕಾಗಿ ಮುಂದೆ **ಧಾತಾಹಂ ವಿಶ್ವತೋ ಮುಖಃ** ಎಂದು ಉಪದೇಶಿಸುತ್ತಾರೆ. **ವಿಶ್ವತೋಮುಖಃ**— ಎಲ್ಲಾ ಕಡೆಗೂ ಎಂದರೆ ನಾಲ್ಕು ಕಡೆಗೂ ಮುಖವುಳ್ಳ ಚತುರ್ಮುಖ ಬ್ರಹ್ಮನೂ, **ಧಾತಾ**— ಸರ್ವ ವ್ಯಷ್ಟಿ ಸೃಷ್ಟಿಕರ್ತನಾಗಿ ಜಗತ್ತಿಗೆ ಧಾರಕ-ಪೋಷಕನಾಗಿರುವವನೂ, **ಅಹಮೇವ**— ನಾನೇ ಸರಿ.

**ಭಾಷ್ಯಾರ್ಥವು:— ಅಕ್ಷರಾಣಾಂಮಧ್ಯೇ**— ಅಕ್ಷರಗಳ ಮಧ್ಯದಲ್ಲಿ "**ಅಕಾರೋ ವೈ ಸರ್ವಾವಾಕ್**" ಅಕಾರವೇ ಸಮಸ್ತವಾದ ವಾಕ್ಕು, **ಇತಿ** ಎಂದು, **ಶ್ರುತಿ** ಸಿದ್ಧವಾದ **ಸಮಸ್ತ** ವರ್ಣಗಳಲ್ಲೂ ಪ್ರಕೃತಿಯಾಗಿರುವ **ಅಕಾರೋಽಹಮ್**— ಅಕಾರವೇ ನಾನು, ತದಾತ್ಮಕನು ನಾನು ಎಂಬ ಭಾವವು. ಆದುದರಿಂದ ಅಕಾರಕ್ಕೆ ಪ್ರಾಶಸ್ತ್ಯವು. ಶ್ರೀ ನಿಗಮಾಂತರವರು ಬಹ್ವೃಚೋಪನಿಷದ್ವಾಕ್ಯವನ್ನು ಉದಾಹರಿಸುತ್ತಾರೆ. "**ಅ ಇತಿ ಬ್ರಹ್ಮ**" ಈ ಪರಮಾತ್ಮ

**ಭಾ. ತಸ್ಯ ಮಧ್ಯೇ ದ್ವಂದ್ವ ಸಮಾಸೋಽಹಮ್; ಸಹ್ಯುಭಯ ಪದಾರ್ಥ ಪ್ರಧಾನತ್ವೇನೋತ್ಕೃಷ್ಟಃ। ಕಲಾ ಮುಹೂರ್ತಾದಿಮಯೋಽಕ್ಷಯಃ ಕಾಲೋಽಹಮೇವ ಸರ್ವಸ್ಯ ಸ್ರಷ್ಟಾ ಹಿರಣ್ಯಗರ್ಭಶ್ಚತುರ್ಮುಖೋಽಹಮ್ ॥೩೩॥**

ನನ್ನ ವಾಕ್ಕಿನಮೂಲಕ ಸ್ತ್ರೀಯೆಂದಾಗಲಿ, ಪುರುಷನೆಂದಾಗಲಿ, ನಪುಂಸಕನೆಂದಾಗಲಿ ಹೇಳಲು ಸಾಧ್ಯವಿಲ್ಲವೆಂದು **"ಯತೋವಾಚೋನಿವರ್ತಂತೇ"** ಎಂಬ ಪ್ರತ್ಯರ್ಥವನ್ನು ಉಪಪಾದಿಸಿ, ಅಂತಹ ಅಕಾರವಾಚ್ಯನೇ ಪರಬ್ರಹ್ಮನೆಂದು ಈ ಶ್ರುತಿಯು ಹೇಳುತ್ತದೆ. ಆದುದರಿಂದ ಅಕಾರಕ್ಕೆ ಮಾಹಾತ್ಮ್ಯೆಯು ಎಂಬ ಭಾವವು. ಅಕಾರವಿಲ್ಲದೆ ಇತರ ವರ್ಣಗಳೂ ವಾಕ್ಕುಗಳೂ ಇಲ್ಲವೆಂದು ಭಾವಿಸಿ, **ಸರ್ವವರ್ಣಾನಾಂ ಪ್ರಕೃತಿಃ** ಎಂದು ಪ್ರಯೋಗಿಸುತ್ತಾರೆ. ಸಮಸ್ತ ವರ್ಣಗಳೂ ಅಕಾರವಿಲ್ಲದೆ ಇಲ್ಲವು, ಅವುಗಳಿಗೆ ಮೂಲಕಾರಣವು. **ಸಾಮಾಸಿಕಃ** ಎಂದರೆ **ಸಮಾಸ ಸಮೂಹವು; ತಸ್ಯ ಮಧ್ಯೇ**—ಆ ಸಮೂಹದ ಮಧ್ಯದಲ್ಲಿ, **ದ್ವಂದ್ವಸಮಾಸೋಽಹಮ್**-ದ್ವಂದ್ವಸಮಾಸವೇ ನಾನು. ಇದಕ್ಕೆ ಪ್ರಕೃಷ್ಟತೆ ಹೇಗೆ ಎಂದರೆ ಹೇಳುತ್ತಾರೆ. **ಸಹ್ಯುಭಯಪದಾರ್ಥ ಪ್ರಧಾನತ್ವೇನ ಉತ್ಕೃಷ್ಟಃ, ಸಹಿ**—ಆ ದ್ವಂದ್ವ ಸಮಾಸವಾದರೋ, **ಉಭಯ ಪದಾರ್ಥ ಪ್ರಧಾನತ್ವೇನ**—ಸಮಾಸದ ಎರಡು ಪದಗಳ ಅರ್ಥಗಳೂ ಮುಖ್ಯವಾದವುಗಳಾಗಿರುವದರಿಂದ **ಉತ್ಕೃಷ್ಟಃ**-ಉತ್ಕೃಷ್ಟವಾದುದು, ಅವ್ಯಯೀ ಭಾವ, ತತ್ಪುರುಷ, ಕರ್ಮಧಾರಯ, ಬಹುವ್ರೀಹಿ ಸಮಾಸಗಳಲ್ಲಾದರೋ, ಪೂರ್ವಪದದ ಅರ್ಥವೋ, ಉತ್ತರ ಪದದ ಅರ್ಥವೋ, ಅಥವಾ ಬೇರೆ ಇನ್ನೊಂದರ ಅರ್ಥವೋ ಪ್ರಧಾನವಾಗಬಹುದು. ದ್ವಂದ್ವದಲ್ಲಾದರೋ ಎರಡು ಪದಗಳ ಅರ್ಥಕ್ಕೂ ಪ್ರಾಮುಖ್ಯತೆಯು ಎಂಬ ಭಾವವು. ಮುಂದೆ **ಅಹಮೇವಾಕ್ಷಯಃ ಕಾಲಃ** ಎಂಬ ವಾಕ್ಯದ ಅಕ್ಷಯ ಶಬ್ದಾರ್ಥವನ್ನು ವಿವರಿಸುತ್ತಾರೆ. **ಕಲಾ**-ಎಂದರೆ ೧೮ ಸಲ ರೆಪ್ಪೆಯಾಡಿಸುವ ಕಾಲವಾದ ಕಾಷ್ಠಾ ಎಂಬುದು ಮೂವತ್ತಾದರೆ ಒಂದು ಕಲಾ ಎನಿಸುತ್ತದೆ. ಇಂತಹ ಕಲೆಗಳು ೩೦ ಆದರೆ ಕ್ಷಣವೆಂದು ಹೆಸರು. ಹಾಗೆ ೧೨ ಕ್ಷಣಗಳಾದರೆ ಒಂದು ಮುಹೂರ್ತವೆನಿಸುತ್ತದೆ. **ಅಷ್ಟಾದಶನಿಮೇಷಾಸ್ತು ಕಾಷ್ಠಾ ತ್ರಿಂಶತ್ತು ತಾಃ ಕಲಾಃ। ತಾಸ್ತು ತ್ರಿಂಶತ್ಕ್ಷಣಸ್ತೇತು ಮುಹೂರ್ತೋದ್ವಾದಶಾಸ್ತ್ರಿಯಾಂ"** ಎಂದು ಅಮರ ನಿಘಂಟು ಇರುತ್ತದೆ. ಇಲ್ಲಿ **ಆದಿ** ಪದದಿಂದ ಹಗಲು ರಾತ್ರಿ, ಮಾಸ, ಸಂವತ್ಸರಾದಿ ಕಾಲಭೇದಗಳು ಹೇಳಲ್ಪಟ್ಟವು, ಹೀಗೆ ಕಲಾಮುಹೂರ್ತಾದಿ ರೂಪವಾದ, **ಅಕ್ಷಯಕಾಲಃ**-ನಾಶರಹಿತವಾಗಿ ಕಾಲಕ್ಕೂ ಆತ್ಮಾವಾಗಿರುವನು, **ಅಹಮೇವ**-ನಾನೇನೇ. ಹೀಗೆ ಕಾಲ ವಿಭಾಗಗಳು ಶ್ರುತಿಸ್ಮೃತಿ ಸಿದ್ಧಗಳು. ತೈ. ನಾರಾ. ೧.೮ ರಲ್ಲಿ **"ಕಲಾಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚಸರ್ವಶಃ। ಅರ್ಧ ಮಾಸಾ ಮಾಸಾ ಋತವ ಸ್ಸಂವತ್ಸರಶ್ಚ ಕಲ್ಪತಾಂ"** ಎಂದು ಹೇಳಲ್ಪಟ್ಟಿರುತ್ತದೆ. ವಿಷ್ಣು ಪುರಾಣದಲ್ಲೂ **"ಕಾಷ್ಠಾತ್ರಿಂಶತ್ಕಲಾತ್ರಿಂಶತ್ಕಲಾ ಮೌಹೂರ್ತಿಕಾ ವಿಧಿಃ। ತಾವತ್ಸಂಖ್ಯೈರಹೋರಾತ್ರಂ ಮುಹೂರ್ತೈರ್ಮಾನುಷಂ ಸ್ಮೃತಂ। ಅಹೋರಾತ್ರಾಣಿ ತಾವನ್ತಿ ಮಾಸಃ ಪಕ್ಷದ್ವಯಾತ್ಮಕಃ।"** (ವಿ. ಪು) ಎಂಬೀ ವಿಭಾಗಗಳಿರುತ್ತವೆ. ಈ ಲೀಲಾ ವಿಭೂತಿಯು ಈ ಕಾಲಕ್ಕೆ ವಶವಾಗಿ ಜನ್ಮಸ್ಥಿತಿಲಯಗಳನ್ನು ಹೊಂದುತ್ತವೆ. ಆದರೆ ನಿತ್ಯವಿಭೂತಿಯಲ್ಲಾದರೋ **"ನ ಕಾಲ ಸ್ತತ್ರ ವೈಪ್ರಭುಃ"** ಕಾಲಕ್ಕೆ ಇಂತಹ ಶಕ್ತಿಯಿಲ್ಲವೆಂದು ವಿಷ್ಣುಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ. **"ಕಲಾಮುಹೂರ್ತಾದಿಮಯಶ್ಚಕಾಲಃ ನಯದ್ವಿಭೂತೇಃ ಪರಿಣಾಮ ಹೇತುಃ। ಅಜನ್ಮನಾಶಸ್ಯ ಸಮಸ್ತ ಮೂರ್ತೇಃ ಅನಾಮರೂಪಸ್ಯ ಸನಾತನಸ್ಯ"** (ವಿ. ಪು. ೪. ೧. ೮೪.) ಎಂಬ ಶ್ಲೋಕವು ಅನುಸಂಧೇಯವು. ಹಾಗೆಯೇ **"ಅನಾದಿರ್ಭಗವಾ**

**ಮೂ. ಮೃತ್ಯುಸ್ಸರ್ವಹರಶ್ಚಾಹ ಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಶ್ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ॥** ೩೪.

**ಕಾಲೋಽನಾದ್ಯೋಽಸ್ಯ ದ್ವಿಜವಿದ್ಯತೇ** (ವಿ. ಪು. ೧. ೩. ೨೬) **"ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃತ್ತೋ ನಾನ್ತೋ ನಚಾದಿರ್ನ ಚ ಮೇಽಸ್ತಿ ಮಧ್ಯಮ್"** ಎಂಬ ಪ್ರಮಾಣಗಳು ಅನುಸಂಧೇಯಗಳು. ಈ ಪ್ರಮಾಣಗಳೂ **"ಅಹಮೇವಾಕ್ಷಯಃ ಕಾಲಃ"** ಎಂಬಲ್ಲಿ ಹೇಳಿರುವ ಅರ್ಥವನ್ನೇ ಉಪಪಾದಿಸುತ್ತವೆ. ಕಾಲಕ್ಕೆ ಪರಿಣಾಮಹೇತುವಾಗಿ ಈ ಲೀಲಾ ವಿಭೂತಿಯಲ್ಲೇ ಹೆಚ್ಚು ಮಹಿಮೆಯುಂಟು. ನಿತ್ಯವಿಭೂತಿಯಲ್ಲಾದರೋ ಕಾಲವು ಪರಿಣಾಮವನ್ನುಂಟು ಮಾಡುವ ಶಕ್ತಿಯುಳ್ಳವು. ಮುಂದೆ ನಾಲ್ಕನೆಯ ಪಾದಕ್ಕೆ ಭಾಷ್ಯವನ್ನನುಗ್ರಹಿಸುತ್ತಾರೆ.— **ಸರ್ವಸ್ಯಸ್ರಷ್ಟಾ**-ಅಂಡಾಂತರ್ವರ್ತಿಯಾಗಿ ಸಮಸ್ತ ವ್ಯಷ್ಟಿ ಸೃಷ್ಟಿ ಕರ್ತನಾಗಿ, **ಹಿರಣ್ಯ ಗರ್ಭ** ನೆನಿಸಿ, **ಚತುರ್ಮುಖೋಽಹಮ್**-ನಾಲ್ಕು ಮುಖಗಳಿಂದಲೂ ನಾಲ್ಕು ವೇದಗಳನ್ನು, ಪರಮಾತ್ಮನಿಂದ ಉಚ್ಚಾರಣಾನೂಚ್ಚಾರಣೆಯಮೂಲಕ ಗ್ರಹಿಸಿದುದನ್ನು ಬಿಡುವ ಚತುರ್ಮುಖನೂ ನಾನೇ. ಹೀಗೆ ವ್ಯಷ್ಟಿಸೃಷ್ಟಿಗೆ ಎಂದರೆ ಅಂಡ ಸೃಷ್ಟಿಗೆ ಅಧಿಕಾರಿಯಾಗಿ ಮಾಡಲ್ಪಟ್ಟು, ಪರಮಾತ್ಮನಿಂದ ಉಪದಿಷ್ಟವಾದ ವೇದಗಳನ್ನು ಉಚ್ಚರಿಸಿ ತನ್ನ ಮಕ್ಕಳಿಗೆ ಉಪದೇಶಿಸಿದುದರಿಂದಲೂ ಮಾಹಾತ್ಮ್ಯೆಯನ್ನು ಹೊಂದಿರುವವನು ಚತುರ್ಮುಖನು. ಆದುದರಿಂದ ಅಂತಹ ಚತುರ್ಮುಖನಿಗೂ ಆತ್ಮಾವಾಗಿರುವದರಿಂದ ಆತನೂ ನಾನೇ. ಇಲ್ಲಿ **ವಿಶ್ವತೋಮುಖಃ** ಎಂದರೆ ಚತುರ್ಮುಖನೆಂಬ ಭಾಷ್ಯವು. ನಾಲ್ಕು ದಿಕ್ಕಿಗೂ ನಾಲ್ಕು ಮುಖಗಳಾದುದರಿಂದ **ವಿಶ್ವತೋ ಮುಖನು.** ಆದರೆ ಮೇಲಿನ ದಿಕ್ಕು ಕೆಳಗಿನ ದಿಕ್ಕುಗಳಲ್ಲಿ ಮುಖ್ಯವಿಲ್ಲವಲ್ಲಾ ಎಂದರೆ ಅವು ಮುಖ್ಯವಲ್ಲವು ಕೆಳಗೂ ಮೇಲೆಯೂ ಇರುವ ಲೋಕಗಳೂ ಉಪಲಕ್ಷಣವಾಗಿ ವಿಶ್ವತೋಮುಖ ಶಬ್ದದಲ್ಲಿ ಅಂತರ್ಗತಗಳೆಂದಾಗಲಿ ಭಾವಿಸಬಹುದು. ದಿಕ್ಚತುಷ್ಟಯವೇ ಮುಖ್ಯವಾದುದರಿಂದ ವಿಶ್ವತೋಮುಖನು ಚತುರ್ಮುಖನೆಂಬ ಭಾವವು. **ಧಾತಾ** ಎಂಬಪ್ರಯೋಗವು ಚತುರ್ಮುಖನಿಗೆ ಹೇಗೆ ಎಂದರೆ ಅಚಿತ್ತಿಗೂ ಚಿತ್ತಿಗೂ ಕರ್ಮಾನುಸಾರ ಸಂಯೋಗವನ್ನುಂಟುಮಾಡುವ ಗರ್ಭವುಳ್ಳವನೆಂಬರ್ಥವು. ಇದರರ್ಥವಾಗಿ ಭಾಷ್ಯದಲ್ಲಿ ಹಿರಣ್ಯಗರ್ಭನೆಂಬ ಪ್ರಯೋಗವು. ಹಿರಣ್ಯ ಸದೃಶವಾದ ಗರ್ಭವುಳ್ಳವನು, ಎಂದರೆ ವಿವಿಧ ವಿಚಿತ್ರವಾಗಿ ಅತಿರಮಣೀಯವಾದ ಪ್ರಕೃತಿಯನ್ನೂ ಪುರುಷನನ್ನೂ ಸೇರಿಸುವ ಗರ್ಭವುಳ್ಳವನೆಂಬ ಭಾವವು.

**ಮೂಲಕ್ಕೆ ಅರ್ಥವು:—ಸರ್ವಹರಃ**-ಸಮಸ್ತ ಪ್ರಾಣವನ್ನೆಲ್ಲಾ ಅಪಹರಿಸುವನೂ ನಾನೇ. ಯಮನ ಆಜ್ಞಾನುಸಾರ ಯಮಭಟನಾಗಿ ಸಮಸ್ತ ಪ್ರಾಣಿವರ್ಗದ ಪ್ರಾಣವನ್ನು ಅಪಹರಿಸುವ ಅಧಿಕಾರಿಯಾದ, **ಮೃತ್ಯುಃ**-ಮೃತ್ಯುಶಬ್ದದಿಂದ ಬೋಧಿತನೂ ನಾನೇ, ಎಂದರೆ ತದಾತ್ಮಕನೂ ನಾನೇ. ಹಿಂದೆ ಯಮನೂ ಕಾಲಾಭಿಮಾನದೇವತೆಯೂ ಹೇಳಲ್ಪಟ್ಟಿರುವದರಿಂದ ಪುನರುಕ್ತಿ ದೋಷವಿಲ್ಲದಹಾಗೆ ಯಮಾಜ್ಞೆಯ ನಿರ್ವಾಹಕಾಧಿಕಾರಿ ಎಂದು ಅರ್ಥಮಾಡಬೇಕಾಗಿದೆ. ಸರ್ವಹರಃ ಎಂಬ ಪ್ರಯೋಗದಿಂದ, ಮೃತ್ಯುವು ಯಾವಾಗ ಒದಗಿತೋ, ಆಗ ಐಹಿಕ ಸಮಸ್ತೋಪ ಭೋಗಗಳೂ ನಿಂತು ಹೋಗುತ್ತವೆ ಎಂಬ ಭಾವವು ವ್ಯಕ್ತಗೊಳಿಸಲ್ಪಟ್ಟಿತು. ಪ್ರಾರಬ್ಧ ಕರ್ಮಫಲವಾಗಿ ಉಪಭೋಗಕ್ಕೆ ಕುಂದಕಉಂಟಾಗಿ ದುಃಖಪ್ರಾಪ್ತಿಯುಂಟಾದರೂ, **ದುಃಖಸ್ಯಾನಂತರಂ ಸುಖಂ"** ಎಂಬ ವ್ಯಾಸೋಕ್ತಿಯ ಹಾಗೆ ಪುನಃ ಭೋಗಪ್ರಾಪ್ತಿಯು ಲಭಿಸಬಹುದು. **"ಏತಿ ಜೀವನ್ತಮಾನಂದೋ ನರಂ ವರ್ಷ ಶತಾದಪಿ"** ಎಂಬ ಮಹರ್ಷಿಯ ಉಕ್ತಿಯೂ ಅನುಸಂಧೇಯವು. ಆಯುಸ್ಸು ಇಲ್ಲದೆ ಹೋಗಿ ಮೃತ್ಯು ಉಂಟಾದರೆ ಆ ಜನ್ಮದ ಎಲ್ಲಾ ಉಪ

ಧೋಗಗಳೂ ನಿಂತು ಹೋಗುತ್ತವೆ ಎಂಬ ಭಾವವು. **ಭವಿಷ್ಯತಾಂ** ಮುಂದೆ ಹುಟ್ಟುವವುಗಳಿಗೆ **ಉದ್ಭವಶ್ಚ** - ಉತ್ಪತ್ತಿಯೂ ಕೂಡ ನಾನೇ, ಅದಕ್ಕೂ ಆತ್ಮನಾದುದರಿಂದಲೂ, ಅವು ನನ್ನ ಮೂಲಕವೇ ಉಂಟಾಗುವದರಿಂದಲೂ ಅವೂ ನಾನೇ ಎಂಬ ಭಾವವು. **ನಾರೀಣಾಂ**-ಸ್ತ್ರೀಯರುಗಳಲ್ಲಿ, **ಕೀರ್ತಿ**ನಾಮಕ ಹೆಂಗಸೂ ನಾನೇ, **ಶ್ರೀಶ್ಚ**-ನಾರೀಣಾಂ **ಉತ್ತಮಾವಧೂಃ** ಸ್ತ್ರೀಯರಲ್ಲೆಲ್ಲಾ ಸರ್ವೋತ್ಕೃಷ್ಟ ಸ್ತ್ರೀಯಾಗಿ, ಭೃಗುವಿನಿಂದ ಖ್ಯಾತಿಯಲ್ಲಿ ಅವತರಿಸಿದ ಲಕ್ಷ್ಮಿಯೂ ನಾನೇ, **ವಾಕ್ಚ** - ಚತುರ್ಮುಖನ ಹೆಂಡತಿಯಾಗಿ, ಸರ್ವ ವಿದ್ಯೆಗೂ ಆಧಾರಳಾಗಿ, ತುಂಬಾ ಪ್ರಸಿದ್ಧವಾದ ಜ್ಞಾನನಿಧಿಯಾದ ಪರಮ ಸಾಧ್ವಿಯಾದ ಸರಸ್ವತಿಯೂ ನಾನೇ. ನಾರೀಣಾಂ ಎಂಬ ಪದವು, ಶ್ಲೋಕದ ಮಧ್ಯದಲ್ಲಿರುವದರಿಂದ ಕಾಕಾಕ್ಷಿನ್ಯಾಯದಿಂದ ಎರಡು ಕಡೆಗೂ ಅನ್ವಯಿಸತಕ್ಕದ್ದಾಗಿರುತ್ತದೆ. ಆದುದರಿಂದ ನಾರಿಗಳಲ್ಲಿ **"ಸ್ಮೃತಿ"** ಎಂಬ ಹೆಸರುಳ್ಳ ಮತ್ತು **ಮೇಧಾ** ಎಂಬ ಹೆಸರುಳ್ಳ, **ಧೃತಿ** ಎಂಬ ಹೆಸರುಳ್ಳ ಮತ್ತು **ಕ್ಷಮಾ** ಎಂಬ ಹೆಸರುಳ್ಳ ಪ್ರಖ್ಯಾತರಾದ ಸ್ತ್ರೀಯರೂ ಸಹ ನಾನೇ; ಎಂದರೆ ಅವರಿಗೆ ಆತ್ಮನಾಗಿ ಅವರಿಗೆ ಮಾಹಾತ್ಮ್ಯೆಯನ್ನುಂಟುಮಾಡಿದವನೂ ನಾನೇ ಎಂಬ ಭಾವವು. ಹೀಗೆ ಏಳು ಯಶಸ್ವಿಗಳಾಗಿ ಪ್ರಧಾನರಾದ ನಾರೀಮಣಿಗಳು ಯಾರು ? ಎಂದರೆ ತಿಳಿಸುವೆವು. ಇದಕ್ಕಾಗಿ ಈ ವಿಷ್ಣು ಪುರಾಣ ಶ್ಲೋಕಗಳು (೧. ೭. ೧೭ ೨೫) ಅನುಸಂಧೇಯಗಳು.

**ಶತರೂಪಾಂ ಚ ತಾಂ ನಾರೀಂ ತಪೋನಿರ್ಧೂತ ಕಲ್ಮಷಾಮ್ ।**
**ಸ್ವಾಯಂಭುವೋ ಮನುರ್ದೇವಃ ಪತ್ನೀತ್ವೇ ಜಗೃಹೇ ವಿಭುಃ ॥ ೧೭.**
**ತಸ್ಮಾಚ್ಚ ಪುರುಷಾ ದ್ದೇವೀ ಶತರೂಪಾ ವ್ಯಜಾಯತ ।**
**ಪ್ರಿಯವ್ರತೋತ್ತಾನಪಾದೌ ಪ್ರಸೂತ್ಯಾಕೂತಿಸಂಜ್ಞಿತಮ್ ॥ ೧೮.**
**ಕನ್ಯಾದ್ವಯಂ ಚ ಧರ್ಮಜ್ಞ ರೂಪೌದಾರ್ಯಗುಣಾನ್ವಿತವ ।**
**ದದೌ ಪ್ರಸೂತಿಂ ದಕ್ಷಾಯ ಆಕೂತಿಂ ರುಚಯೇ ಪುರಾ ॥ ೧೯.**
**ಪ್ರಜಾಪತಿಸ್ಸ ಜಗ್ರಾಹ ತಯೋ ರ್ಜಜ್ಞೇ ಸದಕ್ಷಿಣಃ ।**
**ಪುತ್ರೋ ಯಜ್ಞೋ ಮಹಾಭಾಗ ದಂಪತ್ಯೋ ರ್ಮಿಥುನಂ ತತಃ ॥ ೨೦.**
**ಯಜ್ಞಸ್ಯ ದಕ್ಷಿಣಾಯಾಂತು ಪುತ್ರಾ ದ್ವಾದಶ ಜಜ್ಞಿರೇ ।**
**ಯಾಮಾ ಇತಿ ಸಮಾಖ್ಯಾತಾ ದೇವಾಸ್ಸ್ವಾಯಂಭುವೇ ಮನೌ ॥ ೨೧.**
**ಪ್ರಸೂತ್ಯಾಂಚ ತಥಾದಕ್ಷಃ ಚತಸ್ರೋ ವಿಂಶತಿ ಸ್ತಥಾ ।**
**ಸಸರ್ಜ ಕನ್ಯಾ ಸ್ತಾಸಾಂತು ಸಮ್ಯಙ್ನಾಮಾನಿ ಮೇ ಶೃಣು ॥ ೨೨.**
**ಶ್ರದ್ಧಾಲಕ್ಷ್ಮೀರ್ಧೃತಿ ಸ್ತುಷ್ಟಿಃ ಪುಷ್ಟಿ ರ್ಮೇಧಾ ಕ್ರಿಯಾ ತಥಾ ।**
**ಬುದ್ಧಿರ್ಲಜ್ಜಾ ವಪು ಶ್ಶಾಂತಿಃ ಸಿದ್ಧಿಃ ಕೀರ್ತಿ ಸ್ತ್ರಯೋದಶೀ ॥ ೨೩.**
**ಪತ್ನ್ಯರ್ಥಂ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಃ ಪ್ರಭುಃ ।**
**ತಾಭ್ಯ ಶ್ಶಿಷ್ಟಾ ಯವೀಯಸ್ಯಃ ಏಕಾದಶ ಸುಲೋಚನಾಃ ॥ ೨೪.**
**ಖ್ಯಾತಿಸ್ಸತ್ಯಥ ಸಂಭೂತಿ ಸ್ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ।**
**ಸನ್ನತಿ ಶ್ಚಾನಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ॥ ೨೫.**
**ಭೃಗು ರ್ಭವೋ ಮರೀಚಿಶ್ಚ ತಥಾ ಚೈ ವಾಂಗಿರಾ ಮುನಿಃ ।**
**ಪುಲಸ್ತ್ಯಃ ಪುಲಹಶ್ಚೈವ ಕ್ರತುಶ್ಚರ್ಷಿವರ ಸ್ತಥಾ ॥ ೨೬.**
**ಅತ್ರಿ ರ್ವಸಿಷ್ಠೋ ವಹ್ನಿಶ್ಚ ಪಿತರಶ್ಚ ಯಥಾಕ್ರಮಮ್ ।**
**ಖ್ಯಾತ್ಯಾದ್ಯಾ ಜಗೃಹುಃ ಕನ್ಯಾ ಮುನಯೋ ಮುನಿಸತ್ತಮ ॥ ೨೭.**

ಈ ಶ್ಲೋಕಗಳಿಂದ ಈ ಮೇಲೆ ಹೇಳಿದ ನಾರೀಮಣಿಗಳು ಯಾರೆಂಬುವನ್ನು ನಿಸ್ಸಂಶಯವಾಗಿ ಗ್ರಹಿಸಬಹುದು. ಮೊದಲು ಸಙ್ಕಲ್ಪಮಾತ್ರದಿಂದ ಪ್ರಜಾವೃದ್ಧಿಯು ಆಗದಿರಲು, ಅನಂತರ ದಾಂಪತ್ಯಭಾವದಿಂದ ಪ್ರಜಾವೃದ್ಧಿಯು ಸಮರ್ಪಕವಾಗಿ ಆಯಿತು ಎಂದು ಹೇಳುವ ಪ್ರಕರಣದಲ್ಲಿ ಈ ಮೇಲೆ ಹೇಳಿದ ಏಳು ನಾರೀಮಣಿಗಳು ಆಯಾ ಗುಣಗಳಿಂದ ಶೋಭಿತರಾಗಿ ಪ್ರಾಧಾನ್ಯವನ್ನು ಹೊಂದಿದವರೆಂದು ಇಲ್ಲಿ ಹೇಳಲ್ಪಟ್ಟಿರುತ್ತದೆ. ಬ್ರಹ್ಮನಿಗೆ ಮಗನಾಗಿ ರುದ್ರನು ಕ್ರೋಧದಿಂದ ಹುಟ್ಟಿದನು. ಇದು ಸರಿಯಾಗಲಿಲ್ಲವೆಂದು ಯೋಚಿಸಿ ಸ್ವಾಯಂಭುವ ಮನು ಎಂಬುವನನ್ನು ಮಾನಸ ಸೃಷ್ಟಿಯಿಂದ ಉಂಟುಮಾಡಿ ಶತರೂಪಾ ಎಂಬ ಕನ್ನಿಕೆಯು ಪತ್ನಿಯಾಗುವ ಹಾಗೆ ಚತುರ್ಮುಖನು ಮಾಡಿದನು. ಇವರಿಂದ ಪ್ರಿಯವ್ರತ ಉತ್ತಾನಪಾದರೆಂಬ ಇಬ್ಬರು ಗಂಡುಮಕ್ಕಳೂ, ಪ್ರಸೂತಿ ಆಕೂತಿ ಎಂಬ ಇಬ್ಬರು ಹೆಣ್ಣುಮಕ್ಕಳೂ, ಜನಿಸಿದರು. ಪ್ರಸೂತಿಯನ್ನು ದಕ್ಷನು ಮದುವೆ ಮಾಡಿಕೊಂಡನು. ಅವರಿಂದ ೨೪ ಹೆಣ್ಣುಮಕ್ಕಳು ಜನಿಸಿದರು. ಅವರಲ್ಲಿ ೧೩ ಕನ್ನಿಕೆಯರಾದ ಶ್ರದ್ಧಾ, ಲಕ್ಷ್ಮೀಃ, ಧೃತಿಃ, ತುಷ್ಟಿಃ, ಮೇಧಾ, ಕ್ರಿಯಾ, ಬುದ್ಧಿಃ, ಲಜ್ಜಾ, ವಪುಃ, ಶಾನ್ತಿಃ, ಸಿದ್ಧಿಃ, ಕೀರ್ತಿಃ ಎಂಬುವರನ್ನು ಯಮಧರ್ಮರಾಯನು ಮದುವೆಮಾಡಿಕೊಂಡನು. ಮಿಕ್ಕ ೧೧ ಕನ್ನಿಕೆಯರು ಖ್ಯಾತಿಃ, ಸತೀ, ಸಂಭೂತಿಃ, ಸ್ಮೃತಿಃ, ಪ್ರೀತಿಃ, ಕ್ಷಮಾ, ಸನ್ನತಿಃ, ಅನಸೂಯಾ, ಊರ್ಜಾ, ಸ್ವಾಹಾ ಸ್ವಧಾ ಎಂಬುವರು. ಇವರಲ್ಲಿ ಖ್ಯಾತಿಯು ಭೃಗುವಿಗೂ, ಸತಿಯು ಭವನಿಗೂ, ಸಂಭೂತಿ ಮರೀಚಿಗೂ, ಸ್ಮೃತಿಯು ಅಂಗಿರಸ್ಸಿಗೂ, ಪ್ರೀತಿಯು ಪುಲಸ್ತ್ಯರಿಗೂ, ಕ್ಷಮೆಯು ಪುಲಹರಿಗೂ, ಸನ್ನತಿಯು ಕ್ರತುವಿಗೂ, ಅನಸೂಯೆಯು ಅತ್ರಿಗೂ, ಊರ್ಜೆಯು ವಸಿಷ್ಠರಿಗೂ, ಸ್ವಾಹಾ ವಹ್ನಿಗೂ, ಸ್ವಧಾ ಪಿತೃ ದೇವತೆಗೂ, ಪತ್ನಿಗಳಾದರು. ಹೀಗೆ ಈ ಕನ್ನಿಕೆಯರೆಲ್ಲಾ ಪ್ರಸಿದ್ಧರಾದ ನಾರೀಮಣಿಗಳು, ಆದುದರಿಂದ ಇವರಲ್ಲಿ ಕೆಲವರು ಇಲ್ಲಿ ಹೇಳಲ್ಪಟ್ಟಿರುತ್ತಾರೆ.

**ಕೀರ್ತಿಯು**—ದಕ್ಷಪ್ರಸೂತಿಯರ ಮಗಳು ಯಮಧರ್ಮರಾಯನ ಹೆಂಡತಿಯು. ಶ್ರೀ ಲಕ್ಷ್ಮಿಯು, ಭೃಗು ಖ್ಯಾತಿಗಳಿಂದ ಅವತರಿಸಿದವಳು. **"ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಶ್ರೀಃ ಪೂರ್ವಮುದಧೇಃ ಪುನಃ"** (ವಿ. ಪು. ೧. ೯. ೧೪೧) ಎಂಬ ಪ್ರಮಾಣಾನುಸಾರ ಕ್ಷೀರಸಾಗರ ಕನ್ನಿಕೆಯಾಗಿ ಸಮುದ್ರಮಥನಕಾಲದಲ್ಲಿ ಅವತರಿಸುವದಕ್ಕೆ ಪೂರ್ವವಾದ ಅವತಾರವು. ಇದರಿಂದ ಅತ್ಯುತ್ತಮ ಸ್ತ್ರೀ ರತ್ನವೆಂಬುದು ಸಿದ್ಧವು. ಶ್ರೀ ಶಬ್ದಕ್ಕೆ ನಾಲ್ಕು ಧಾತುಗಳಿಂದುಂಟಾದ ಆರುವಿಧ ವ್ಯುತ್ಪತ್ತಿಗಳಿಂದ ಲಕ್ಷ್ಮಿಯ ಪ್ರಾಧಾನ್ಯವು ವ್ಯಕ್ತವು. ಇವುಗಳ ಉಪಪಾದನೆಗೆ ದಾಸನು ಬರೆದಿರುವ ಶ್ರೀಸ್ತುತಿಯು ೨೩ ನೆಯ ಪುಟವನ್ನಾಗಲಿ ಅಥವಾ ಚತುಶ್ಲೋಕಿಯು ೧೬-೧೭ ನೆಯ ಪುಟವನ್ನಾಗಲಿ, ಅಥವಾ ದ್ವಯ ಮಂತ್ರಾಧಿಕಾರದ ಶ್ರೀಮಚ್ಛಬ್ದದ ಅರ್ಥ ವಿವರಣೆಯನ್ನಾಗಲಿ ಪರಾಂಬರಿಸಬಹುದು. ಚೇತನರ ವಿಷಯದಲ್ಲಿ ಅನುಗ್ರಹಮಯಳಾಗಿ ಲೋಕಜನನಿಯಾಗಿರುವ ಮಾಹಾತ್ಮ್ಯೆಯು. ಆದರೆ ಲಕ್ಷ್ಮಿಯು ಹೇಗೆ ಸರ್ವೇಶ್ವರನ ವಿಭೂತಿಗೆ ಸೇರಿದವಳು? ಎಂದರೆ ಅಪೃಥಕ್ಸಿದ್ಧ ವಿಶೇಷಣವಾಗಿ ನಿತ್ಯಾನಪಾಯಿನಿಯಾಗಿ ವಿಭೂತಿಗೆ ಸೇರಿದವಳು. ಆಕೆಯ ದಿವ್ಯಮಙ್ಗಳವಿಗ್ರಹವೂ ಸ್ವಾಮಿ ವಿಭೂತಿಗೆ ಸೇರಿದುದೇ. ಇಂತಹ ವಿಭೂತಿಯಿಂದಲೇ **"ಅಪ್ರಮೇಯೆಂಹಿ ತತ್ತೇಜಃ"** ಎಂದು ಹೇಳಲ್ಪಟ್ಟಿತು. ಇದರಿಂದ ಲಕ್ಷ್ಮಿಯ ವಿಷಯವು ಗೀತೆಯಲ್ಲಿ ಹೇಳಲ್ಪಡಲೇ ಇಲ್ಲವೆಂಬ ವಾದವು ನಿರಸ್ತವು. **ವಾಕ್**-**"ವಾಗ್ವಾಣೀ ಸರಸ್ವತೀ"** ಎಂಬ ನಿಘಂಟುವಿನ ಪ್ರಕಾರ ಚತುರ್ಮುಖಬ್ರಹ್ಮ ಪತ್ನಿಯಾದ ಸರಸ್ವತಿಯು. **ಸ್ಮೃತಿಃ**—ಈಕೆಯೂ ದಕ್ಷಪ್ರಸೂತಿಯರ ಮಗಳು ಅಂಗೀರಸ್ ಮುನಿಯ ಹೆಂಡತಿಯು. **ಮೇಧಾ, ಧೃತಿಃ**-ಇಬ್ಬರೂ ದಕ್ಷಪ್ರಸೂತಿಯರ ಮಕ್ಕಳು; **ಕೀರ್ತಿಯ** ಹಾಗೆ **ಯಮಧರ್ಮರಾಯನ** ಹೆಂಡತಿಯರು

ಭಾ. **ಸರ್ವ ಪ್ರಾಣಹರೋ ಮೃತ್ಯುಶ್ಚಾಹಮ್; ಉತ್ಪತ್ಸ್ಯಮಾನಾನಾ ಮುದ್ಭವಾಖ್ಯಂ ಕರ್ಮ ಚಾ ಹಮ್; ನಾರೀಣಾಂ ಶ್ರೀರಹಮ್; ಕೀರ್ತಿಶ್ಚಾಹಮ್; ವಾಕ್ಚಾಹಮ್; ಸ್ಮೃತಿಶ್ಚಾಹಮ್; ಮೇಧಾಚಾಹಮ್; ಧೃತಿಶ್ಚಾಹಮ್; ಕ್ಷಮಾ ಚಾಹಮ್ ॥೩೪॥**

**ಕ್ಷಮಾ**-ದಕ್ಷಪ್ರಸೂತಿಯವರ ಮಗಳು ಪುಲಹರ ಹೆಂಡತಿಯು. ಹೀಗೆ ಇವರು **ನಾರೀಮಣಿಗ** ಳಲ್ಲಿ ಆಯಾಗುಣಗಳಿಂದಲೂ, ಪ್ರಸಿದ್ಧರಾದ ಮಹರ್ಷಿಗಳಿಗೆ ಪತ್ನಿಯರಾಗಿ ಸಾಧ್ವೀಮಣಿಗ ಳಾದುದರಿಂದಲೂ, ಮಾಹಾತ್ಮ್ಯಯುಳ್ಳವರಾಗಿ ಹೇಳಲ್ಪಟ್ಟಿರು. **ನಾರೀಣಾಂ** ಎಂಬ ನಿರ್ಧಾರಣ ಷಷ್ಠಿಯು ಈ ಏಳು ಜನ ನಾರೀಮಣಿಗಳಿಗೂ ಅನ್ವಯಿಸುವಹಾಗೆ ಪಾಠಮಧ್ಯದಲ್ಲಿದೆ. **ಈ** ಹೆಸರುಗಳೆಲ್ಲಾ ಸಾರ್ಥಕವಾದವೆಂದು ಗ್ರಹಿಸತಕ್ಕದ್ದು. ಇಲ್ಲಿ ಕೀರ್ತ್ಯಾದಿ ಶಬ್ದಗಳು ನಾರಿಗಳ ಗುಣಗಳನ್ನು ಬೋಧಿಸುತ್ತವೆಂದು ಭಾವಿಸುವರು. ಇದು ಸರಿಯಲ್ಲವು ಏಕೆಂದರೆ, ಪುರುಷರ ಕೀರ್ತ್ಯಾದಿ ಪ್ರಧಾನವಲ್ಲವೋ ಎಂಬ ಆಕ್ಷೇಪವು ನಿರುತ್ತರವಾದುದಾಗುತ್ತದೆ.

**ಭಾಷ್ಯಾರ್ಥವು:—ಸರ್ವಪ್ರಾಣಹರಃ**-ಸಮಸ್ತರ ಪ್ರಾಣಗಳನ್ನೂ ಅಪಹರಿಸುವ ಅಧಿಕಾರಿ ಯಾದ, **ಮೃತ್ಯುಶ್ಚಾಹಮ್**-ಮರಣಾಭಿಮಾನ ದೇವತೆಯೂ ನಾನೇ, ಇಲ್ಲಿ ಯಮನು ಹೇಳಲ್ಪಡ ಲಿಲ್ಲವೆಂಬ ಭಾವನೆಯಿಂದಲೇ **ಸರ್ವ ಪ್ರಾಣಹರಃ**-ಎಂಬ ವಿಶೇಷಣವು; ಆದುದರಿಂದಲೇ ಮರ ಣಾಭಿಮಾನದೇವತೆಗೆ ಸರ್ವೋಪಘೋಗವನ್ನು ನಾಶಪಡಿಸುವದರಿಂದ ಪ್ರಾಧಾನ್ಯವು. **ಕೆಲವರು** ಮೃತ್ಯು ಶಬ್ದವು ಪ್ರಳಯಾಭಿಮಾನಿದೇವತೆಯನ್ನು ಬೋಧಿಸುತ್ತದೆಂದು ಅಭಿಪ್ರಾಯಪಡುವರು. ಇದು ಸರಿಯಲ್ಲವು; ಏಕೆಂದರೆ ಹಿಂದೆಯೇ **ಭೂತಾನಾ ಮನ್ತ ಏವ ಚ** ಎಂಬಲ್ಲಿಯೇ ಪ್ರಳಯವು ಹೇಳಲ್ಪಟ್ಟಿರುವದರಿಂದ ಅದನ್ನು ಬಿಟ್ಟು ಬೇರೆ ಅರ್ಥವನ್ನುಹೇಳುವದು ಉಚಿತವು. **ಉತ್ಪತ್ಸ್ಯಮಾನಾನಾಂ**-ಮುಂದೆ ಉಂಟಾಗುವ ವಸ್ತುಗಳಿಗೆ **ಉದ್ಭವಾಖ್ಯಂ ಕರ್ಮಚಾಹಂ**-ಉತ್ಪತ್ತಿರೂಪ ಕರ್ಮವೂ ಸಹ ನಾನೇ ಎಂದರೆ ಉತ್ಪತ್ತಿ ಕರ್ಮಾತ್ಮಕನೂ ನಾನೇ. ಉದ್ಭವಶಬ್ದದಿಂದ ಉತ್ಪತ್ತಿರೂಪ ಕರ್ಮಕ್ಕೆ ಬದಲಾಗಿ ಲಾಕ್ಷಣಿಕವಾಗಿ ಅಧಿಕಾರಿಯೇ ಹೇಳಲ್ಪಟ್ಟನೆಂದು ಏಕೆ ಭಾವಿಸಕೂಡದು ? ಮೃತ್ಯು ಶಬ್ದಕ್ಕೆ ಅಧಿಕಾರಿ ಪರವಾಗಿ ಅರ್ಥಮಾಡಲಿಲ್ಲವೇ ? ಎಂದರೆ **ಸರ್ಗಾಣಾ ಮಾದಿ ರಂತಶ್ಚ ಮಧ್ಯಂ ಚೈವಾ ಹ ಮರ್ಜುನ** ಎಂಬಲ್ಲಿ ಈ ಅಧಿಕಾರಿ ಪರವಾಗಿ ಅರ್ಥಹೇಳಿರುವದರಿಂದ, ಅದನ್ನು ವ್ಯಾವರ್ತಿಸಿ, ಇಲ್ಲಿ ಕ್ರಿಯಾರೂಪ ಅರ್ಥವನ್ನು ಹೇಳಿರುತ್ತಾರೆ. ಉತ್ಪತ್ಸ್ಯಮಾನಗಳೂ ಉತ್ತರೋತ್ತರ ಸೃಜ್ಯಗಳೇ ಎಂದು ಭಾವಿಸಲು ಏನೊಂದೂ ತೊಂದರೆಯಿಲ್ಲವು. **ನಾರೀಣಾಂ ಶ್ರೀ ರಹಮ್**-ಸ್ತ್ರೀಯರಲ್ಲಿ ಸ್ವರೂಪರೂಪಗುಣವಿಭವೈಶ್ವರ್ಯಾದಿಗಳಿಂದ ಸರ್ವೋತ್ಕೃಷ್ಟಳಾಗಿ **"ತುಲ್ಯ ಶೀಲವಯೋವೃತ್ತಾಂ ತುಲ್ಯಾಭಿಜನ ಲಕ್ಷಣಾಂ । ರಾಘವೋಽರ್ಹತಿ ವೈದೇಹೀಂ ತಂ ಚೇಯ ಮಸಿತೇಕ್ಷಣಾ"** ಎಂಬಂತೆ ನನಗೆ ಅನುರೂಪವಾಗಿ ಸ್ವರೂಪ ರೂಪಾದಿಗಳನ್ನುಳ್ಳ ಸರ್ವ ಲೋಕೇಶ್ವರನಾದ ನನಗೆ ಪ್ರಿಯ ಪತ್ನಿಯಾಗಿ, ಆ ಕಾರಣದಿಂದ ನನ್ನ ಹಾಗೆಯೇ ಸರ್ವ ಲೋಕಕ್ಕೂ ಈಶ್ವರೀ ಎಂದರೆ ನಿಯಾಮಕಳಾಗಿ, ನನ್ನ ಸಮಸ್ತ ಪ್ರವೃತ್ತಿಗಳಲ್ಲೂ ಸಹಾಯಕ ಳಾಗಿ, ಆ ಕಾರಣದಿಂದ ನನ್ನಹಾಗೆಯೇ ಚೇತನರ ವಿಷಯದಲ್ಲಿ ಉಪಾಯೋಪೇಯಳಾಗಿ ನನ್ನ ಹಾಗೆಯೇ ಮೋಕ್ಷವನ್ನು ದಯಪಾಲಿಸುವ ಹೀಗೆ ಮಹತ್ವವನ್ನು ಹೊಂದಿರುವ **ಲಕ್ಷ್ಮಿಯೂ** ನಾನೇ, ಎಂದರೆ ಅವಳಿಗೂ ಆತ್ಮನಾಗಿರುವವನೂ ನಾನೇ. ಹೀಗೆ ಶ್ರೀಯತಿವರ್ಯರು ಪಾಠಕ್ರಮ ವನ್ನು ತಪ್ಪಿಸಿ ಶ್ರೀಶಬ್ದವುಕೀರ್ತಿ ವಾಕ್‌ಶಬ್ದಗಳ ಮಧ್ಯೆ ಇದ್ದರೂ **ನಾರೀಣಾಂ ಶ್ರೀಃ** ಎಂಬಲ್ಲಿ ನಿರ್ಧಾರಣ ಷಷ್ಠ್ಯರ್ಥಹೇಳಿ ಸರ್ವ ಸ್ತ್ರೀಗಳಲ್ಲೆಲ್ಲಾ ಲಕ್ಷ್ಮಿಯು ಸರ್ವೋತ್ಕೃಷ್ಟಳೆಂದು ಅರ್ಥ ಮಾಡಿ, ಮಿಕ್ಕವರಾದ ದಕ್ಷಕನ್ನಿಕೆಯರಾದ ಕೀರ್ತಿಯೂ, ಸ್ಮೃತಿಯೂ, ಮೇಧಾವೂ, ಕ್ಷಮೆಯೂ,

**ಮೂ. ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾ ಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥** ೩೫.

ಸಹ ಲಕ್ಷ್ಮಿಗಿಂತ ಜೀವಕೋಟಿಗೆ ಸೇರಿ ಸಿಕೃಷ್ಟರಾದವರೂ, ಶ್ರೇಷ್ಠ ಗುಣಯುಕ್ತರಾದುದರಿಂದ ಉತ್ತಮ ನಾರಿಗಳೇ ಎಂದು ವ್ಯಕ್ತಪಡಿಸುವದಕ್ಕಾಗಿ **ಕೀರ್ತಿಶ್ಚಾಹಮ್; ಸ್ಮೃತಿಶ್ಚಾಹಮ್, ಮೇಧಾ ಚಾಹಮ್, ಧೃತಿಶ್ಚಾಹಮ್, ಕ್ಷಮಾ ಚಾಹಮ್"** ಎಂದು ಭಾಷ್ಯವನ್ನು ಬರೆದಿರುತ್ತಾರೆ. **ವಾಕ್ಚಾಹಮ್** ಎಂಬುದರಿಂದ ಚತುರ್ಮುಖನ ಪತ್ನಿಯಾದ ಸರಸ್ವತಿಯು ಹೇಳಲ್ಪಟ್ಟಳು.

**ಮೂಲಕ್ಕೆ ಅರ್ಥವು:—ಸಾಮ್ನಾಂ**-ಬಂದ **ವೇದಾನಾಂ ಸಾಮವೇದೋಽಸ್ಮಿ** ಎಂದು (೨೨ನೆಯ ಶ್ಲೋಕವು) ಸಾಮವೇದಕ್ಕೆ ಉತ್ಕೃಷ್ಟತೆಯನ್ನು ಹೇಳಿದ್ದರು; ಈಗ ಆ ಸಾಮವೇದದಲ್ಲೂ ಉತ್ಕೃಷ್ಟಭಾಗವು ಹೇಳಲ್ಪಡುತ್ತದೆ. **ಸಾಮ್ನಾಂ**-ಸಾಮವೇದಗಳಲ್ಲಿ, **ಬೃಹತ್ಸಾಮ**-ಸರ್ವೋತ್ಕೃಷ್ಟವಾದ ಬೃಹತ್ಸಾಮವು, **ಅಹಮ್**-ನಾನೇ, ತದಾತ್ಮಕನೂ ನಾನೇ; **ಛಂದಸಾಂ**-ವೈದಿಕ ಛಂದಸ್ಸುಗಳಲ್ಲಿ ಸರ್ವೋತ್ಕೃಷ್ಟವಾದ **ಛಂದಸಾಂ ಮಾತಾ** ವಾದ **ಗಾಯತ್ರೀ** ಮಂತ್ರವಿರುವ ಛಂದಸ್ಸೂ ನಾನೇ; ಈ ಗಾಯತ್ರೀ ಛಂದಸ್ಸಿಗೆ ಮಾಹಾತ್ಮ್ಯೆಯು ಹೇಗೆ ಎಂದರೆ, ಗಾಯತ್ರೀ ಮಂತ್ರವು ಈ ಛಂದಸ್ಸಿನಲ್ಲಿರುವದರಿಂದ ಎಂಬ ಭಾವವು. ಇದರಿಂದ ಗಾಯತ್ರೀರೂಪ ಸಂಧ್ಯಾ ಜಪಮಂತ್ರಕ್ಕೆ ಮಾಹಾತ್ಮ್ಯೆಯು ಹೇಗೆಂದರೆ ತಿಳಿಸುವೆವು. ಪರಬ್ರಹ್ಮಧ್ಯಾನಪರವಾದುದಾಗಿ ದ್ವಯಮಂತ್ರಾರ್ಥಗಳನ್ನೆಲ್ಲಾ ಒಳಗೊಂಡಿರುವದರಿಂದ, ಉಪಾಯೋಪೇಯನೇ ಶ್ರಿಯಃಪತಿಯು ಎಂದು ಈ ಮಂತ್ರವು ಬೋಧಿಸುತ್ತದೆ. **ಆಯಾತು ವರದಾ** ಎಂಬ ಅನುವಾಕದಿಂದಲೇ ಗಾಯತ್ರೀ ಮಾಹಾತ್ಮ್ಯೆಯು ವಿದಿತವು. ಆ ಮಂತ್ರವು ಯಾರನ್ನು ಕುರಿತು ಧ್ಯಾನವೆಂಬ ಆಶಯದಲ್ಲಿ **"ತಚ್ಛಬ್ದವಾಚಕ ಶ್ರೀರ್ಮಾ"** ಎಂದು ಹೇಳಿರುವದರಿಂದ ಶ್ರಿಯಃಪತಿ ಎಂದೂ, ಜಗತ್ಕಾರಣನಾಗಿರುವ ಧ್ಯೇಯ ವಸ್ತುವು ಶ್ರೀರ್ಮ ನಾರಾಯಣನೆಂದೂ, ಆತನು ಯಾರು ಎಂಬ ಪ್ರಶಂಸೆಯಲ್ಲಿ **ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ** ಎಂದು ವ್ಯಕ್ತಪಡಿಸಿರುವದರಿಂದ, ಇಲ್ಲಿ ಭರ್ಗಶಬ್ದದಿಂದ ಪರಂಜ್ಯೋತಿಸ್ಸಾದ ಶ್ರೀಮನ್ನಾರಾಯಣನ ದಿವ್ಯ ತೇಜಸ್ಸೇ ಹೇಳಲ್ಪಟ್ಟಿರುತ್ತದೆ- ಭರ್ಗಶಬ್ದಕ್ಕೆ ಜ್ಯೋತಿಸ್ಸೆಂದೇ ಅರ್ಥವೆಂದು ಭಾವಿಸತಕ್ಕದ್ದೆಂಬುದು, ಮುಂದಿನ **ಧಿಯೋಯೋನಃ ಪ್ರಚೋದಯಾತ್** ಎಂಬುದರಿಂದ ಬುದ್ಧಿಯ ವಿಕಾಸವು ಪ್ರಾರ್ಥಿಸಲ್ಪಟ್ಟಿರುವದರಿಂದ ಏರ್ಪಡುತ್ತದೆ. **ಭರ್ಗಃ ಧೀಮಹಿ**-ಧ್ಯಾನಿಸುವೆವು ಎಂದು **ಭರ್ಗಃ** ಎಂಬ ಪದವು ಸಕಾರಾಂತ ದ್ವಿತೀಯೆಯಾದುದರಿಂದ, ಅಕಾರಾಂತ ಪ್ರಥಮಾರ್ಥವನ್ನು ಹೇಳಿ ರುದ್ರನು ಹೇಳಲ್ಪಟ್ಟನೆಂಬುವದಕ್ಕೆ ಸಾಧ್ಯವಿಲ್ಲವು. ಆದುದರಿಂದ ಶ್ರೀಮನ್ನಾರಾಯಣನ ದಿವ್ಯ ತೇಜಸ್ಸೇ ಇಲ್ಲಿ ಧ್ಯೇಯವೆಂದು ಭಾವಿಸತಕ್ಕದ್ದು ಹೀಗೆ ಮೋಕ್ಷಪ್ರಾಪ್ತಿಯನ್ನುಂಟುಮಾಡುವ ದ್ವಯಮಂತ್ರಾರ್ಥವನ್ನು ಬೋಧಿಸುವ ಮಂತ್ರವಾಗಿ ಶ್ರಿಯಃಪತಿಯ ಉಪಾಯೋಪೇಯ ಭಾವವನ್ನು ವ್ಯಕ್ತಪಡಿಸುವದರಿಂದ ಈ ಗಾಯತ್ರಿಗೆ ಅತ್ಯುತ್ಕೃಷ್ಟತೆಯು. ಆದುದರಿಂದ ಈ ಗಾಯತ್ರೀ ಛಂದಸ್ಸು ಗಾಯತ್ರೀ ಮಹಾಮಂತ್ರಕ್ಕೆ ಆಧಾರವಾದ ಛಂದಸ್ಸಾದುದರಿಂದಲೇ **"ಗಾಯತ್ರೀ ಛಂದಸಾಮಹಂ** ಎಂಬ ಪ್ರಯೋಗವು. **ಮಾಸಾನಾಂ**-ದ್ವಾದಶ ಮಾಸಗಳಲ್ಲಿ, **ಮಾರ್ಗಶೀರ್ಷೋಽಹಂ**-ಮಾರ್ಗಶೀರ್ಷಮಾಸವೂ ನಾನೇ, ಹೇಮಂತಋತುವಿನ ಪ್ರಥಮ ಮಾಸವಾದ ಮಾರ್ಗಶೀರ್ಷಮಾಸವಲ್ಲಿ ಉಷಃಕಾಲಕ್ಕೆ ಪೂರ್ವಭಾವಿಯಾಗಿ ಪುಣ್ಯತೀರ್ಥಾವಗಾಹನೆಯೂ ಸೂರ್ಯೋದಯಾತ್ಪೂರ್ವದಲ್ಲೇ ಭಗವದಾರಾಧನೆಯೂ ಮೋಕ್ಷಸಾಧನ ಸಹಕಾರಿಯೆಂದೂ ಹೇಳಲ್ಪಟ್ಟಿರುತ್ತದೆ. ಈ ಮಾಸದಲ್ಲಿ ಸೂರ್ಯನು ಧನುಸ್ಸಿಗೆ ಬರುವದರಿಂದ ಧನುರ್ಮಾಸಪೂಜೆ ಎಂಬ ಹೆಸರಿ

**ಭಾ. ಸಾಮ್ನಾಂ ಬೃಹತ್ಸಾಮಾಹಮ್; ಛಂದಸಾಂ ಗಾಯತ್ರ್ಯಹಮ್; ಕುಸುಮಾಕರೋ ವಸನ್ತಃ** ||೩೫||

ನಲ್ಲಿ ಅನೇಕರು ಸೂರ್ಯೋದಯಾತ್ಪೂರ್ವದಲ್ಲೇ ಶ್ರೀಮಹಾವಿಷ್ಣುವನ್ನು, ಹುಗ್ಗಿ ಪರಮಾನ್ನ ಮೊದಲಾದ ನಿವೇದನದೊಂದಿಗೆ ಪೂಜಿಸಿ, ಅನಂತರ ನಿತ್ಯಕರ್ಮಾನುಷ್ಠಾನಗಳನ್ನು ಆಚರಿಸುತ್ತಾರೆ. ನನ್ದವ್ರಜದಲ್ಲಿ ಗೋಪಿಕಾಸ್ತ್ರೀಯರು ನಿಯತಾಹಾರರಾಗಿ, ಈ ಮಾರ್ಗಶೀರ್ಷಮಾಸದಲ್ಲೇ ತಮ್ಮ ಶ್ರೀ ಕೃಷ್ಣಪ್ರಾಪ್ತಿರೂಪ ಇಷ್ಟಾರ್ಥಸಿದ್ಧಿಗಾಗಿ ಕಾತ್ಯಾಯನೀ ವ್ರತವನ್ನಾಚರಿಸಿದರೆಂದು **"ಹೇಮನ್ತೇ ಪ್ರಥಮೇಮಾಸಿ ನಂದವ್ರಜಕುಮಾರಿಕಾಃ। ಚೇರುರ್ಹವಿಷ್ಯಂ ಭುಂಜಾನಾ ಮಾಸಂ ಕಾತ್ಯಾಯನೀ ವ್ರತಮ್"** ಎಂದು (ಭಾಗ. ೧೦. ೨೨) ಹೇಳಲ್ಪಟ್ಟಿರುತ್ತದೆ. ಆದರೆ ಫಲದಾಯಕತ್ವವು ಕಾತ್ಯಾಯನಿಗಲ್ಲದೆ ಪರತತ್ತ್ವವಾದ ಶ್ರೀಕೃಷ್ಣನಿಗೇ ಸೇರಿದುದರಿಂದ ಹೇಳುತ್ತಾರೆ.—**"ನ ಮಯ್ಯಾವೇಶಿತಧಿಯಾಂ ಕಾಮಃ ಕಾಮಾಯ ಕಲ್ಪತೇ। ಭರ್ಜಿತಾಃ ಕ್ವಥಿತಾಧಾನಾಃಪ್ರಾಯೋಬೀಜಾಯ ನೇಷ್ಯತೇ"** ನನ್ನಲ್ಲಿಟ್ಟ ಮನಸ್ಸುಳ್ಳವರಿಗೆ ಹುರಿದ ಬೀಜವು ಹೇಗೆ ಅಂಕುರಿಸುವದಿಲ್ಲವೋ ಹಾಗೆ ಪುನಸ್ಸಂಸಾರಾದಿಗಳಿಗೆ ನನ್ನಲ್ಲಿಟ್ಟ ಪ್ರೀತಿಯು ಕಾರಣವಾಗಲಾರದೆಂದು ಹೇಳಿರುತ್ತಾರೆ. ಇದನ್ನನುಸರಿಸಿ, ಈ ಧನುರ್ಮಾಸದಲ್ಲೇ ಪೆರಿಯಾಳ್ವಾರ್ರವರ ಪುತ್ರಿಯಾಗಿ ಭೂದೇವಿಯ ಅವತಾರವಾದ ಶ್ರೀ ಆಂಡಾಳರವರು, ಶ್ರೀ ರಂಗನಾಥನೇ ತನಗೆ ಪತಿಯಾಗಬೇಕೆಂಬ ಉದ್ದೇಶ್ಯದಿಂದ, ಅರುಣೋದಯಕ್ಕೆ ಮುಂಚಿತವಾಗಿಯೇ ತನ್ನ ಸಖಿಯರನ್ನೆಲ್ಲಾ ಎಬ್ಬಿಸಿ ಕರೆದುಕೊಂಡುಹೋಗಿ ಸ್ನಾನಮಾಡಿ ಶ್ರೀರಂಗಮನ್ನಾರ್ರವರನ್ನು ಸೇವಿಸಿ, ಅವರೆಲ್ಲಾ ತಮ್ಮ ತಮ್ಮ ಶ್ರೇಯಃಪ್ರಾರ್ಥನೆಯನ್ನು ಮಾಡಿಕೊಳ್ಳುವಹಾಗೆ ಮಾಡಿ, ಹೀಗೆ ಒಂದು ವ್ರತವನ್ನು ಆಚರಿಸಿದರು. ಇದನ್ನೆಲ್ಲಾ ೩೦ ಪಾಶುರಗಳುಳ್ಳ ರಹಸ್ಯಾರ್ಥಗರ್ಭಿತವಾದ **ತಿರುಪ್ಪಾವೈ** ಎಂಬ ಗ್ರಂಥವಾಗಿ ರಚಿಸಿರುತ್ತಾರೆ. ಈ ಧನುರ್ಮಾಸದಲ್ಲಿ ಪ್ರತಿದಿನವೂ **ಶಾತ್ತುಮರ್ಯ್ರೆಯ** ಕಾಲದಲ್ಲಿ ಕ್ರಮವಾಗಿ ಒಂದೊಂದು ಪಾಶುರವನ್ನು ಪಠಿಸಿ ಅರ್ಥಾನುಸಂಧಾನಮಾಡುವ ಪದ್ಧತಿ ಈಗಲೂ ಉಂಟು. ಹೀಗೆ ಮಾರ್ಗಶೀರ್ಷ ಮಾಸಾರಾಧನೆಯು ಪರಮಶ್ರೇಯಸ್ಕರವಾದುದರಿಂದ **ಮಾಸಾನಾಂ ಮಾರ್ಗಶೀರ್ಷೋಽಹಂ** ಎಂದು ಮಾರ್ಗಶೀರ್ಷ ಮಾಸಕ್ಕೆ ಮಾಹಾತ್ಮ್ಯೆಯು ಹೇಳಲ್ಪಟ್ಟಿತು. **ಋತೂನಾಂ** ಆರು ಋತುಗಳಲ್ಲಾದರೋ **ಕುಸುಮಾಕರಃ**-ವಸನ್ತರ್ತುವೂ, **ಅಹಂ** ನಾನೇ, ವಸನ್ತರ್ತುವಿನಲ್ಲಿ ವೃಕ್ಷಗಳೆಲ್ಲಾ ಚಿಗುರಿ ಹೂಬಿಟ್ಟು, ಫಲ ಸಮೃದ್ಧಿಯನ್ನು ಹೊಂದುತ್ತವೆ. ಕೋಕಿಲಾದಿ ಪಕ್ಷಿನಿನದಗಳಿಂದ ಅತಿಮನೋಹರವಾಗಿ, ದವಸ ಧಾನ್ಯಗಳಸಂಪತ್ತಿನಿಂದ ಶುಭ ಶೋಭನ ಯಜ್ಞಾದಿ ಮಹಾಕರ್ಮಗಳಿಗೆ ಅನುಕೂಲವಾದ ಋತುವೆಂದು ಶಾಸ್ತ್ರವಿಹಿತವಾಗಿದೆ. ಸರ್ವೋಪಭೋಗಗಳಿಗೆ ಅನುಕೂಲವಾಗಿ ಆನಂದಕರವಾಗಿ ತೋರುವದರಿಂದ ವಸಂತಋತುವಿಗೆ ಪ್ರಾಧಾನ್ಯವು ಹೆಚ್ಚು. **ಕುಸುಮಾಕರ** ವೆಂಬ ಶಬ್ದವೇ ಈ ಅಭಿಪ್ರಾಯವನ್ನು ಸೂಚಿಸುತ್ತದೆ. ಪುಷ್ಪಗಳಿಗೆ ಆಕರವೆಂಬುದು ಸರ್ವೋಪಭೋಗಾನಂದಾದಿಗಳಿಗೂ ಉಪಲಕ್ಷಣವು.

**ಭಾಷ್ಯಾರ್ಥವು:—ಸಾಮ್ನಾಂ** - ಸಾಮವೇದಗಳಲ್ಲಿ, **ಬೃಹತ್ಸಾಮವು** ನಾನೇ, ಬೃಹತ್ಸಾಮಕ್ಕೆ ಶ್ರುತಿಯಲ್ಲೇ ಮಾಹಾತ್ಮ್ಯೆಯು ಹೇಳಲ್ಪಟ್ಟಿರುತ್ತದೆ. ಇದೂ ರಥನ್ತರವೂ ಅತ್ಯುತ್ತಮ ಸ್ತೋತ್ರವೆಂದು ಹೊಗಳಲ್ಪಟ್ಟಿರುತ್ತವೆ. **ಛಂದಸಾಂ** - ವೈದಿಕ ಛಂದಸ್ಸುಗಳಲ್ಲಿ, **ಗಾಯತ್ರ್ಯಹಮ್** - ಗಾಯತ್ರೀಮಂತ್ರವಿರುವ ಛಂದಸ್ಸೂ ನಾನೇ. ಬಹ್ವೃಚೋಪನಿಷತ್ತಿನಲ್ಲಿ **" ಅಗ್ರಂ ವೈ ಛಂದಸಾಂ ಗಾಯತ್ರೀ "** ಎಂದು ಗಾಯತ್ರಿಗೆ ಮಹಾ

**ಮೂ. ದ್ಯೂತ ಇಛಲಯತಾ ಮಸ್ಮಿ ತೇಜ ಸ್ತೇಜಸ್ವಿನಾ ಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾ ಮಹಮ್ ॥** ೩೬.

ತ್ಮ್ಯೆಯು ಹೇಳಲ್ಪಟ್ಟಿದೆ ಎಂದು ಶ್ರೀದೇಶಿಕರು ಉದಾಹರಿಸುತ್ತಾರೆ. **ಮಾಸಾನಾಂ ಮಾರ್ಗಶೀರ್ಷೋಽಹಮ್** ಎಂಬಲ್ಲಿ ಧನುರ್ಮಾಸ ಪೂಜಾ ಮಾಹಾತ್ಮ್ಯೆಯು ಸರ್ವರಿಗೂ ವೇದ್ಯಾಂಶವಾದುದರಿಂದ ಅದಕ್ಕೆ ವ್ಯಾಖ್ಯಾನವನ್ನು ಬರೆಯಲಿಲ್ಲವು. **ಋತೂನಾಂ ಕುಸುಮಾಕರಃ**-ಎಂಬುದಕ್ಕೆ **ಅಹಮೇವ** ಎಂಬುದನ್ನು ಸೇರಿಸಿಕೊಳ್ಳತಕ್ಕದ್ದಾಗಿರುತ್ತದೆ. **ಕುಸುಮಾಕರಃ**-ಎಂದರೆ **ವಸಂತರ್ತು** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಆ ಕಾಲದಲ್ಲಿ ಸರ್ವಪ್ರಾಣಿಗಳಿಗೂ ಸುಖಾತಿಶಯವುಂಟೆಂಬುದು ಪ್ರತ್ಯಕ್ಷಸಿದ್ಧವೆಂದು ಕುಸುಮಾಕರಶಬ್ದವು ಸೂಚಿಸುತ್ತದೆ. ದವಸ ಧಾನ್ಯಗಳ ಸಮೃದ್ಧಿಯು ಒದಗಿ, ಯಜ್ಞಯಾಗ ವಿವಾಹಾದಿ ಸರ್ವ ಶುಭಕರ್ಮಗಳಿಗೂ ವಸಂತ ಋತುವು ಶ್ರೇಷ್ಠವಾದ ಕಾಲವೆಂಬುದು **"ವಸನ್ತೇ ವಸನ್ತೇ ಜ್ಯೋತಿಷಾ ಯಜೇತ"** ಎಂಬ **"ವಸನ್ತೇ ದೀಕ್ಷಯೇ ದ್ವಿಪ್ರಂ ಗ್ರೀಷ್ಮೇ ರಾಜನ್ಯ ಮೇವಚ"** ಎಂಬ ಉಕ್ತಿಗಳಿಂದಲೂ ವ್ಯಕ್ತವು. ॥ ೩೫ ॥

**ಮೂಲಕ್ಕೆ ಅರ್ಥವು:**—ಛಲಯತಾಂ - **"ಅಸ್ಖಲಿತಂ ಛಲಂ"** ಎಂಬ ನಿಘಂಟು ಪ್ರಕಾರ ಛಲವೆಂದರೆ ಎದುರಾಳಿಗೆ ಅವಮರ್ಯಾದೆಗಾಗಿ ಮೋಸಮಾಡಿ ಗೆಲ್ಲಬೇಕೆಂಬ ಆಶೆಯು, ಅಂತಹ ವ್ಯಾಪಾರವನ್ನುಳ್ಳವರ, **ದ್ಯೂತಂ** - ಪಗಡೆ ಮೊದಲಾದ ಮೋಸದ ಜೂಜಾಟವೂ, **ಅಹಮಸ್ಮಿ**-ನಾನೇ ಆಗಿರುತ್ತೇನೆ. ಹಾಗೆ ಮೋಸದಿಂದ ಗೆಲ್ಲುವ ಅಧಿಕಾರಿಗೂ **ಆತ್ಮಾ** - ನಾನೇ ಎಂಬ ತಾತ್ಪರ್ಯವು. ಹಾಗೆ ಗೆಲ್ಲುವವನೂ ನಾನೇ ಎಂಬ ಸಾಮಾನಾಧಿಕರಣ್ಯ ಭಾವವು. ಆದರೆ ಮೂಲದಲ್ಲಿ **ದ್ಯೂತೋಽಸ್ಮಿ** ಎಂಬಲ್ಲಿ ಪಗಡೆ ಆಟ ಮೊದಲಾದ ಕ್ರಿಯೆಯೊಂದಿಗೆ ಸಾಮಾನಾಧಿಕರಣ್ಯವು ಹೇಗೆ ಎಂಬ ಪ್ರಶ್ನೆಯು ಯುಕ್ತವಾದುದು. ಹಾಗೆ ಗುಣಮೊದಲಾದ ದ್ರವ್ಯಗಳೊಂದಿಗೆ ಸಾಮಾನಾಧಿಕರಣ್ಯವು ಹೇಗೆ ಎಂಬುದು ಹಿಂದೆಯೂ ಹೇಳಲ್ಪಟ್ಟಿರುತ್ತದೆ. (೧೦. ೩೦) ಅಂತಹ ಗುಣಕ್ರಿಯೆಗಳು ಹೇಳಲ್ಪಟ್ಟಾಗ ತತ್ಸಂಬಂಧಿ ದ್ರವ್ಯಗಳೊಂದಿಗೆ ಸಾಮಾನಾಧಿಕರಣ್ಯವೆಂದು ತಿಳಿಯತಕ್ಕದ್ದು. ವಂಚನೆ ರೂಪ ಆಟವೂ ನಾನೇ ಎಂದು ಅದಕ್ಕೆ ಪ್ರಾಧಾನ್ಯವನ್ನು ಹೇಳಬಹುದೋ? ಎಂದಾಕ್ಷೇಪಿಸಿದರೆ, ಒಬ್ಬನಿಗೆ ಪ್ರಾರಬ್ಧ ಕರ್ಮಾನುಗುಣಕ್ಕೂ, ಇನ್ನೊಬ್ಬನಿಗೆ ಅಧರ್ಮ ಕರ್ಮಾನುಷ್ಠಾನದಿಂದ ಪ್ರಾರಬ್ಧ ಕರ್ಮರೀತ್ಯಾ ಅಶ್ರೇಯಸ್ಸಿಗೂ, ಕಾರಣವಾಗಿ ನಡೆಸುತ್ತೇನಾದುದರಿಂದ, ಪ್ರಾಧಾನ್ಯವೇ. ಇದಕ್ಕೆ ನೀವುಗಳೂ ದುರ್ಯೋಧನಾದಿಗಳು ಸಾಕ್ಷಿಗಳೆಂಬ ಭಾವವೂ ಇಲ್ಲಿ ತೋರಿಬರುತ್ತದೆ. ಒಂದು ಪಗಡೆಯ ಆಟಮೂಲಕವಾಗಿ ದುರ್ಯೋಧನಾದಿಗಳಿಗೆ ಛಲವನ್ನುಂಟುಮಾಡಬೇಕೆಂಬ ಆಶೆಯುಂಟಾಗಿ, ತನ್ಮೂಲಕವಾಗಿ ರಾಜ್ಯವನ್ನೂ ದ್ರೌಪದಿಯನ್ನೂ ನೀವು ಕಳೆದುಕೊಂಡು ನಿಮಗೆ ವನವಾಸಪ್ರಾಪ್ತಿಯೂ, ದುರ್ಯೋಧನಾದಿಗಳಿಗೆ ಇವುಗಳ ಪ್ರಾಪ್ತಿಯ ಗರ್ವದಿಂದ ದ್ರೌಪದಿಯ ಮಾನಭಂಗರೂಪ ಮಹಾಪರಾಧಪ್ರಾಪ್ತಿಯೂ ಉಂಟಾಗಲೂ ಸಹ ನಾನೇ ಕಾರಣನೆಂದು ಹೇಳಿದಂತಾಯಿತು. ನಳ ದಮಯಂತಿಗಳ ಇಂತಹ ದುಸ್ಥಿತಿ ಉಂಟಾದ ಪಗಡೆಯ ಆಟರೂಪ ಛಲಕ್ಕೂ ನಾನೇ ಕಾರಣನೆಂಬ ಭಾವವು. **ತೇಜಸ್ವಿನಾಂ**—ತೇಜಸ್ಸನ್ನು ಹೊಂದಿದ ಅಧಿಕಾರಿಗಳ, **ತೇಜಃ**-ತೇಜಸ್ಸೂ ಸಹ, **ಅಹಮಸ್ಮಿ**-ನಾನೇ ಆಗಿದ್ದೇನೆ. ಇಲ್ಲಿ ತೇಜಶ್ಶಬ್ದದಿಂದ ಜ್ಞಾನದೀಪ್ತಿಯುಳ್ಳವರ ಜ್ಞಾನವೂ ನಾನೇ ಎಂಬರ್ಥವನ್ನು ಹೇಳಬಹುದು. ಶ್ಲೋಕಾಭಿಪ್ರಾಯವು ತೇಜಸ್ಸುಳ್ಳವರ ತೇಜಸ್ಸು, ಜಯಕಾಂಕ್ಷೆಯುಳ್ಳವರ ಜಯವೂ ವ್ಯವಸಾಯಿಗಳ ವ್ಯವಸಾಯವೂ ಸತ್ವವಂತರ ಸತ್ವವೂ ನಾನೇ ಎಂದು ಹೇಳುವ ಪ್ರಕರಣವಾಗಿ

**ಭಾ. ಛಲಂ ಕುರ್ವತಾಂ ಛಲಾಸ್ಪದೇಷ್ವಕ್ಷಾದಿಲಕ್ಷಣಂ ದ್ಯೂತಮಹಮ್; ಜೇತ್ವಣಾಂ ಜಯೋಽಸ್ಮಿ; ವ್ಯವಸಾಯಿನಾಂ ವ್ಯವಸಾಯೋಽಸ್ಮಿ; ಸತ್ತ್ವವತಾಂ ಸತ್ತ್ವಂ ಮಹಾಮನಸ್ತ್ವಮ್ ॥೩೬॥**

ತೋರುತ್ತದೆ. ಆದುದರಿಂದ ಸಂಬಂದ ಸಾಮಾನ್ಯ ಷಷ್ಠ್ಯರ್ಥವೇ ಸಾಧುವಾಗಿ **ತೋರುತ್ತದೆ. ಜಯೋಽಸ್ಮಿ ವ್ಯವಸಾಯೋಽಸ್ಮಿ**— ಹಿಂದೆ **ತೇಜಸ್ತೇಜಸ್ವಿನಾಮಹಂ** ಎಂದು ಹೇಳಿ, ಮುಂದೆಯೂ **ಸತ್ತ್ವಂ ಸತ್ತ್ವವತಾಮಹಂ** ಎಂದು ಹೇಳಿ, ಮಧ್ಯೆ ಮಾತ್ರ **ಜಯೋಽಸ್ಮಿವ್ಯವಸಾಯೋಽಸ್ಮಿ** ಎಂದು ಹೇಳಿದರೆ, ಅವುಗಳಹಾಗೆಯೇ ಇವುಗಳನ್ನೂ ಅನ್ವಯಿಸತಕ್ಕದ್ದೆಂದು ಹೇಳಿದಂತಾಯಿತು. ಇದುದರಿಂದ ಶ್ರೀ ಭಾಷ್ಯಕಾರರೂ ಹಾಗೆಯೇ ಅರ್ಥಮಾಡಿರುತ್ತಾರೆ. **ಜಯೋಽಸ್ಮಿ**— ಜಯುವನ್ನಪೇಕ್ಷಿಸುವವರ ಜಯವೂ ನಾನೇ, **ವ್ಯವಸಾಯೋಽಸ್ಮಿ**— ವ್ಯವಸಾಯ ವೆಂದರೆ ತತ್ತ್ವಾರ್ಥನಿರ್ಣಯಬೇಕೆಂಬಪೇಕ್ಷೆಯುಳ್ಳವರ ವ್ಯವಸಾಯವೂ ನಾನೇ, **ಸತ್ವವತಾಂ**- ಸತ್ವಮಾರ್ಗವನ್ನವಲಂಬಿಸಿದವರ, **ಸತ್ವಂ**-ಸನ್ಮಾರ್ಗವೂ, **ಅಹಮೇವ**-ನಾನೇ, ಇಲ್ಲಿ ಸತ್ವ ಶಬ್ದಕ್ಕೆ "**ಸತ್ವಸ್ಥಾ ನಿಭೃತಂ ಪ್ರಸಾದಯ**" ಎಂಬಲ್ಲಿರುವ ಸಾತ್ವಿಕಗುಣಯುಕ್ತರೆಂಬ ಅರ್ಥವೆಂದು ಭಾವಿಸತಕ್ಕದ್ದು. ಸತ್ವವೆಂದರೆ ಕೆಲವರು ಬಲವೆಂದು ಅರ್ಥಮಾಡಿರುವದು ಅಷ್ಟು ಸ್ವಾರಸ್ಯವಾಗುವದಿಲ್ಲವು ಶ್ರೀ ಮಚ್ಛಂಕರಾಚಾರ್ಯರೂ **ಸತ್ವವತಾಂ** ಎಂಬುವದಕ್ಕೆ ಸರಸವಾಗಿ **ಸಾತ್ವಿಕಾನಾಂ** ಎಂದು ಸರಿಯಾದ ಅರ್ಥವನ್ನು ಬರೆದಿರುತ್ತಾರೆ. ಶ್ರೀ ಭಾಷ್ಯಕಾರರು ಈ ಅಭಿಪ್ರಾಯುವನ್ನೇ ಅನುಮೋದಿಸಿ ಮಹಾ ಮನಸ್ಕರೆಂದು ಬರೆದಿರುತ್ತಾರೆ. ಅಂತಹ ಮಹಾ ಮನಸ್ಕರೇ ಪರಮ ಸಾತ್ವಿಕರು. ಅಂತವರ ಸಾತ್ವಿಕಮನಸ್ತ್ವವೂ ನಾನೇ. ಎಂದು ಹೇಳಿದರು. ಹೀಗೆ ಜ್ಞಾನ, ಸಙ್ಕಲ್ಪ, ಯತ್ನ, ಜಯ, ಸುಗುಣ, ದುರ್ಗುಣಗಳೆಲ್ಲವೂ ಎಲ್ಲೆಲ್ಲಿ ತೋರಿಬರುತ್ತವೋ ಅವೆಲ್ಲವೂ ನಾನೇ ಎಂದು, ಎಲ್ಲಕ್ಕೂ ತಾನೇ ಆತ್ಮಾವಾಗಿ ಕಾರಣನೆಂದು ಉಪದೇಶಿಸಿದರು.

**ಭಾಷ್ಯಾರ್ಥವು:— ಛಲಂ ಕುರ್ವತಾಂ** - ಮೋಸವನ್ನು ಮಾಡಬೇಕೆಂದಿರುವವರ ಇದು **ಛಲಯುತಾಂ**-ಎಂಬುವದರಅರ್ಥವು, **ಛಲಾಸ್ಪದೇಷು**-ಶತ್ರುವಿಗೆ ಪರಾಜಯವನ್ನುಮಾಡುವದಕ್ಕೆ ಅವಕಾಶವಿರುವ **ಅಕ್ಷಾದಿ ಲಕ್ಷಣಂ**-ಪಗಡೇ ಆಟಾದಿ ಶಬ್ದದಿಂದ ಇಸ್ಪೀಟಾಟ ಕುದುರೆ ಜೂಜು ಕ್ಷೇತ್ರ ಘನ ಮೊದಲಾದ ರೂಪದಲ್ಲಿರುವ **ದ್ಯೂತಮಹಮ್** ಜೂಜಾಟವೂ ನಾನೇ. ಇಲ್ಲಿ ಜೂಜಾಟಕ್ಕೆ ಪ್ರಾಶಸ್ತ್ಯವು ಏತರಿಂದೆಂದರೆ, ಆ ಆಟದಲ್ಲಿ ಮಗ್ನನಾದವನಿಗೆ ಅನೇಕ ಸಂದರ್ಭಗಳಲ್ಲಿ ತನ್ನ ಸರ್ವಸ್ವವೂ ಸ್ವಲ್ಪವೂ ಪ್ರಯಾಸವಿಲ್ಲದೆ ಅರ್ಜುನಾದಿಗಳಿಂದುಂಟಾದಹಾಗೆ ನಾಶವಾಗುವದರಿಂದ ಎಂದು ಗ್ರಹಿಸತಕ್ಕದ್ದು **ಜೇತ್ವಣಾಂ ಜಯೋಽಸ್ಮಿ** ಜಯಾಪೇಕ್ಷೆಯಿಂದ ಪ್ರಯತ್ನಮಾಡುವವರ. **ಜಯೋಽಸ್ಮಿ** ಜಯವೂನಾನೇ; **ವ್ಯವಸಾಯಿನಾಂ** - ವ್ಯವಸಾಯಾತ್ಮಕ ಬುದ್ಧಿಯುಳ್ಳವರ **ವ್ಯವಸಾಯೋಽಸ್ಮಿ** - ವ್ಯವಸಾಯವೂ ನಾನೇ. ಇಲ್ಲಿ ಮೂಲದಲ್ಲಿರುವ **ಜೇತ್ವಣಾಂ ವ್ಯವಸಾಯಿನಾಂ** ಎಂಬ ಪದಗಳೊಂದಿಗೆ ಅನ್ವಯಿಸಿರುವುದಕ್ಕೆ ಕಾರಣವು ಮೇಲೆಯೇ ಸೂಚಿಸಲ್ಪಟ್ಟಿರುತ್ತದೆ. **ಸತ್ತ್ವವತಾಂ** - ಸತ್ವವುಳ್ಳವರಲ್ಲಿರುವ ಸತ್ವವೂ ನಾನೇ ಸರಿ; **ಸತ್ತ್ವಂ** ಎಂದರೆ **ಮಹಾಮನಸ್ತ್ವಂ** - ಪರಮ ಸಾತ್ವಿಕ ಭಾವವು.

**ಮೂಲಕ್ಕೆ ಅರ್ಥವು:—** ಇಲ್ಲಿ ಯಥಾಪ್ರಕಾರ ಷಷ್ಠ್ಯಂತಪದಗಳೆಲ್ಲಾ ನಿರ್ಧಾರಣಾರ್ಥವನ್ನು ಸೂಚಿಸುತ್ತವೆ. ತನ್ನ ದಿವ್ಯ ಮಙ್ಗಳ ವಿಗ್ರಹವೂ ಅರ್ಜುನನೂ ಸಹ ತನ್ನ ಉತ್ಕೃಷ್ಟ ವಿಭೂತಿಗಳೇ ಎಂದು ಪ್ರಥಮತಃ ಪೂರ್ವಾರ್ಧದಲ್ಲಿ ಹೇಳುತ್ತಾರೆ. ನರನಾರಾಯಣರಾಗಿ ಈಗ ಅವತರಿಸಿರುವ ತಮ್ಮಿಬ್ಬರಲ್ಲಿ ತನ್ನ ಮಙ್ಗಳವಿಗ್ರಹವೂ ನರನಾದ ಅರ್ಜುನನೂ ತನಗೆ ಶರೀರ

**ಮೂ. ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥** ೩೭.

ವಾಗಿ, ಇವೆರಡಕ್ಕೂ ತಾನೇ ಆತ್ಮನಾದುದರಿಂದ, ವಾಸುದೇವ ಧನಂಜಯ ಶಬ್ದದಿಂದ ಹೇಳಲ್ಪಡುವನು ತಾನೇ ಎಂದು ಹೇಳುತ್ತಾರೆ. ಆದುದರಿಂದ ನನ್ನ ದಿವ್ಯಮಂಗಳ ವಿಗ್ರಹವೂ, ನೀನೂ ಸಹ ಉತ್ಕೃಷ್ಟ ವಿಭೂತಿಗಳೆಂದು ಉಪದೇಶಿಸುತ್ತಾರೆ.—**ವೃಷ್ಣೀನಾಂ**—ವೃಷ್ಣಿವಂಶದ ರಾಜರ ಮಧ್ಯದಲ್ಲಿ, ಇಲ್ಲಿ ಸಾಧಾರಣರಾದ ಎಲ್ಲಾ ವೃಷ್ಣಿಗಳು ಹೇಳಲ್ಪಟ್ಟರೆಂದು ಭಾವಿಸ ತಕ್ಕದ್ದಲ್ಲವು ಇದು ಸ್ವಾರಸ್ಯಾರ್ಥವಾಗುವದಿಲ್ಲವು. ಇತರ ಯಾದವರಿಗೂ ಕೃಷ್ಣನಿಗೂ ಅಜಗಜಾಂತರವು ಸಿದ್ಧವು. ಅದನ್ನು ಹೇಳಲು ಬರಲಿಲ್ಲವು. ಇತರ ಯಾದವರಾಜರಿಗೂ ಈ ಯಾದವರಾಜಸಿಂಹನಾದ ಕೃಷ್ಣನಿಗೂ ಇರುವ ವೈಲಕ್ಷಣ್ಯವೇ ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು ಶ್ರೇಷ್ಠರಾದ ಆ ವಂಶದ ರಾಜರುಗಳಲ್ಲೂ ಶ್ರೇಷ್ಠತಮನಾದ, **ವಾಸು ದೇವೋಽಸ್ಮಿ**—ವಸುದೇವಪುತ್ರನಾದವನೂ ನಾನೇ; ಪರಮಾತ್ಮನೇ ತಾನಾಗಿರುವಾಗ ಈ ಸಾಮಾನಾಧಿಕರಣ್ಯ ಪ್ರಯೋಗವು, ತುರಗವು ಅಶ್ವವು ಎಂದು ಹೇಳುವಹಾಗೆ, ರಸಾಭಾಸ ಉಳ್ಳ ವಾಕ್ಯವಾಗುವದಿಲ್ಲವೇ? ಎಂದರೆ, ಇದಕ್ಕೆ ಹಿಂದೆಯೇ ಸಮಾಧಾನವು ಹೇಳಲ್ಪಟ್ಟಿರು ತ್ತದೆ. ಇನ್ನೊಂದುಸಲ ಇದರ ಭಾಷ್ಯದಲ್ಲಿ ಅನುವಾದಮಾಡಿ ಹೇಳಲ್ಪಡುತ್ತದೆ, **ಪಾಂಡ ವಾನಾಂ**—ಪಾಂಡುಪುತ್ರರುಗಳಲ್ಲಿ, **ಧನಂಜಯಃ**—ರಾಜಸೂಯ ಯಾಗಕ್ಕಾಗಿ ಅನೇಕ ರಾಜ ರನ್ನು ಜಯಿಸಿ ಧನಾರ್ಜನೆಯನ್ನುಮಾಡಿ ಧನಂಜಯನೆಂದು ಕರೆಯಲ್ಪಡುವನು ಯಾರೋ ಅವನೂ ನಾನೇ; ಎಂದರೆ ಪಾಂಡುಪುತ್ರರಲ್ಲಿ ಶ್ರೇಷ್ಠನಾಗಿರುವ ಅರ್ಜುನನಿಗೆ ಆತ್ಮನಾಗಿರುವವ ನೂ ನಾನೇ. ಧರ್ಮರಾಯ ಭೀಮಾದಿಗಳಿರುವಾಗ ಅರ್ಜುನನಿಗೆ ಪ್ರಾಶಸ್ತ್ಯವು ಹೇಗೆ? ಎಂದರೆ ಅರ್ಜುನನೂ ತಾನೂ ನರನಾರಾಯಣವತಾರಿಗಳಾಗಿ, ಅರ್ಜುನನಲ್ಲಿ ಹೀಗೆ ವಿಷ್ಣ್ವಂಶವಿರುವದ ರಿಂದಲೂ ಮತ್ತೂ ಆಕಾರಣದಿಂದ ವಿಶ್ವರೂಪ ಪ್ರದರ್ಶನವೇನು ಗೀತಾಶಾಸ್ತ್ರೋಪದೇಶವೇನು, ಲೀಲಾ ಸಾರಥ್ಯವೇನು ಇಂತಹ ಅನುಗ್ರಹಗಳು ಇತರ ಪಾಂಡವರಿಗೆ ಲಭಿಸದೇ ಅರ್ಜುನನಿಗೆ ಮಾತ್ರ ಲಭಿಸಿದುದರಿಂದಲೂ, ಅರ್ಜುನನಿಗೆ ಪ್ರಾಧಾನ್ಯವು ಹೆಚ್ಚು. ಅಧರ್ಮಿಗಳಾದ ದುರ್ಯೋ ಧನ ದುಶ್ಶಾಸನಾದಿಗಳನ್ನೂ ಗೆಲ್ಲುವದು ಅಷ್ಟುಮಹತ್ತಾದುದಲ್ಲವು ಬ್ರಹ್ಮವಿತ್ತಾಗಿರುವ ಶ್ರೀಭೀಷ್ಮ ರನ್ನು ಶರತಲ್ಪದಲ್ಲಿ ಬಂಧಿಸುವ ಶಕ್ತಿಯು ಅರ್ಜುನನಲ್ಲಿ ಮಾತ್ರವೇ ಪ್ರತಿಷ್ಠಿತವಾದುದರಿಂ ದಲೂ ಮಾಹಾತ್ಮ್ಯಯು. ಪಾಂಡವರಲ್ಲಿ ಧನಂಜಯನೂ ನಾನೇ ಎಂದು ಹೇಳಿದುದರಿಂದ ಜೀವ ಪರಮಾತ್ಮರ ಐಕ್ಯವು ಹೇಳಲ್ಪಟ್ಟಿತೆಂದು ಭಾವಿಸಿದರೆ ಸಾಮಾನಾಧಿಕರಣ್ಯಾರ್ಥವು ಹೊರಟು ಹೋಗುತ್ತದೆ. **ಮುನೀನಾಂ**-ಮನನ ಶೀಲರಾದ ಧ್ಯಾನಯೋಗನಿಷ್ಠರಲ್ಲಿ, **ವ್ಯಾಸಃ**-ಮಹಾಶ್ರೇಷ್ಠ ರಾದ ವ್ಯಾಸರೂ, **ಅಹಮೇವ**-ನಾನೇ; ತದಾತ್ಮಕನೂ ನಾನೇಎಂಬ ಭಾವವು. ಪರತತ್ವನಿರ್ಣ ಯದಿಂದಲೂ ವೇದಗಳನ್ನು ಕ್ರಮಪಡಿಸಿದುದರಿಂದಲೂ, ವೇದಾರ್ಥಗಳಿಗೆ ಪರಸ್ಪರ ವಿರೋಧವಿ ಲ್ಲದಹಾಗೆ ಅರ್ಥನಿರೂಪಣಕ್ಕಾಗಿ ಬ್ರಹ್ಮಸೂತ್ರಗಳನ್ನು ಅನುಗ್ರಹಿಸಿದುದರಿಂದಲೂ, ಅಸದೃಶ ವಾದ ಪಂಚಮವೇದನೆಂದು ಪ್ರಖ್ಯಾತಿಯನ್ನು ಹೊಂದಿರುವ ಮಹಾಭಾರತವನ್ನು ರಚಿಸಿದುದರಿಂ ದಲೂ, ಈ ಗೀತಾಚಾರ್ಯೋಪದೇಶವು ನಮಗೆ ಲಭಿಸುವಹಾಗೆ ಮಾಡಿದುದರಿಂದಲೂ, ಪುರುಷನಿ ನಿಗೆ ಬೇಕಾದ ತತ್ವಹಿತ ಪುರುಷಾರ್ಥಗಳನ್ನೂ ಅವನಲ್ಲಿ ಪ್ರಜ್ವಲಿಸುವ ಜ್ಞಾನಭಕ್ತಿ ವೈರಾಗ್ಯಗ ಳನ್ನೂ ಬಹುನಿಪುಣತರವಾಗಿ ಭಾಗವತದಲ್ಲಿ ಉಪಪಾದಿಸಿರುವದರಿಂದಲೂ, ಶ್ರೀ ವೇದವ್ಯಾಸರಿಗೆ ಎಲ್ಲಾ ಋಷಿಗಳಿಗಿಂತಲೂ ವಿಶೇಷವಾದ ಪ್ರಾಶಸ್ತ್ಯವು. ಇಂತಹ ಪ್ರಾಶಸ್ತ್ಯವನ್ನು ಅವರ

**ಭಾ. ವಸುದೇವಸೂನುತ್ವ ಮತ್ರ ವಿಭೂತಿಃ, ಅರ್ಥಾನ್ತರಾ ಭಾವಾದೇವ; ಪಾಂಡವಾನಾಂ ಧನಂಜಯೋಽರ್ಜುನೋಽಹಮ್; ಮುನಯೋ - ಮನನೇನಾತ್ಮ ಯಾಥಾತ್ಮ್ಯ ದರ್ಶಿನಃ, ತೇಷಾಂ ವ್ಯಾಸೋಽಹಮ್; ಕವಯೋ-ವಿಪಶ್ಚಿತಃ ॥ ೩೭ ॥**

---

ತಂದೆಗಳಾದ ಶ್ರೀ ಪರಾಶರರೇ ಕೊಂಡಾಡಿರುತ್ತಾರೆ. **"ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ । ಕೋಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತ ಕೃದ್ಭವೇತ್"** ತಮ್ಮ ಮಗನಾದ ವ್ಯಾಸಮಹರ್ಷಿಯನ್ನು ನಾರಾಯಣಾಂಶ ಸಂಭೂತರೆಂದೇ ಓ ಮೈತ್ರೇಯರೇ ನೀವು ತಿಳಿಯತಕ್ಕದ್ದು. ಏಕೆಂದರೆ ಅಂತಹ ಅಂಶವಿಲ್ಲದ ಬೇರೆ ಯಾವನು ಈ ಅಮೋಘ ಗ್ರಂಥವಾದ ಭಾರತವನ್ನು ರಚಿಸಲು ಸಾಧ್ಯವು? ಎಂದು ಹೇಳಿರುತ್ತಾರೆ. **ಕವೀನಾ ಮುಶನಾಕವಿಃ**- ಕವಿಗಳ ಮಧ್ಯದಲ್ಲಿ ಮಹಾ ಜ್ಞಾನಿಗಳಾಗಿ, ಶಾಸ್ತ್ರಜ್ಞಾನ ವಿವೇಕಜನ್ಯ ಜ್ಞಾನಗಳಿಂದ ಪ್ರಕಾಶಿಸುತ್ತಿರುವರಲ್ಲಿ, ಉಶನಾ ಎಂಬ ಮಹಾ ಪ್ರಾಜ್ಞರು ಯಾರೋ, ಆತನೂ ನಾನೇ, ತದಾತ್ಮಕನೂ ನಾನೇ ಎಂಬ ಭಾವವು. **ಉಶನಸ್ಸು** - ಶುಕ್ರರು, ನೀತಿಶಾಸ್ತ್ರ ವಿಚಾರದವರಾದುದರಿಂದ ಅವರಿಗೆ ಮಾಹಾತ್ಮ್ಯೆಯು ಹೇಳಲ್ಪಟ್ಟಿರುತ್ತದೆ. **ಉಶನಾ ಭಾರ್ಗವಃ ಕವಿಃ** ಎಂದು ನಿಘಂಟು ಇರುತ್ತದೆ. ದೈತ್ಯರಿಗೆ ಶ್ರೇಯಸ್ಸನ್ನೇ ಇಚ್ಛಿಸುವವರಾದುದರಿಂದ **ಉಶನಾ** ಎಂದರೆ ಶುಕ್ರನು. ॥ ೩೭ ॥

**ಭಾಷ್ಯಾರ್ಥವು:—ವೃಷ್ಣೀನಾಂ ವಾಸುದೇವೋಽಸ್ಮಿ**-ಯಾದವರಾಜರುಗಳಲ್ಲಿ ವಸುದೇವ ಪುತ್ರನೆನಿಸಿದ ಶ್ರೀ ಕೃಷ್ಣನೆಂಬ ಮನುಷ್ಯಾವತಾರಿಯೇ ನಾನು ಎಂದು ಹೇಳಿದರು. ಪರತತ್ವವೇ ಶ್ರೀಕೃಷ್ಣನಾಗಿ ವಸ್ತ್ವಂತರವೇ ಇಲ್ಲದಿರುವಾಗ ವಿಭೂತಿತ್ವವೂ ಸಾಮಾನಾಧಿಕರಣ್ಯವೂ ಹೇಗೆ ಕೂಡುತ್ತದೆ ಎಂಬ ಶಂಕಾ ಸಮಾಧಾನಾರ್ಥವಾಗಿ **ವಸುದೇವಸೂನುತ್ವಂ ಅತ್ರ ವಿಭೂತಿಃ** - ವಸುದೇವನಿಗೆ ಪುತ್ರತ್ವದಿಂದಿರುವದು ಇಲ್ಲಿ ವಿಭೂತಿಯು; ವಸುದೇವಸೂನುವಾಗಿರುವ ದಿವ್ಯಮಂಗಳವಿಗ್ರಹವು ವಿಭೂತಿಯು ಎಂಬ ಭಾವವು; ಹೀಗೆ ಭಾವಿಸಲು ಕಾರಣವೇನೆಂದರೆ, **ಅರ್ಥಾಂತರಾಭಾವಾದೇವ** - ಇನ್ನು ಬೇರೆ ವಸ್ತುವೇ ಇಲ್ಲದುದರಿಂದ, ಅರ್ಥಾಂತರ ಶಬ್ದದಿಂದ ಬೇರೆ ಚೇತನವೇ ಇಲ್ಲವಾದುದರಿಂದ ಎಂಬ ಭಾವವು. ಶ್ರೀಕೃಷ್ಣನೂ ಆತನ ಶರೀರವೂ, ಇಷ್ಟು ಮಾತ್ರವೇ ಇರುವದರಿಂದ, ಶ್ರೀ ಕೃಷ್ಣನಲ್ಲದೆ ಬೇರೆ ಇನ್ನು ಯಾರೂ ಇಲ್ಲವು ಎಂಬುದು ತಾತ್ಪರ್ಯವು. ಇಲ್ಲಿ ಸಾಮಾನಾಧಿಕರಣ್ಯವನ್ನು, ತನಗೂ ತನ್ನ ಶರೀರಕ್ಕೂ, ಹೀಗೆ ಭಿನ್ನ ಪದಾರ್ಥಗಳಿಗೆ ಹೇಳಿದುದರಿಂದ ನಮಗೆ ಇದು ಸಮಂಜಸವು. ಅದ್ವೈತ ಸಿದ್ಧಾಂತಕ್ಕಾದರೋ ಎರಡೂ ಒಂದೇ ಆತ್ಮವಾಗಿ, ಭಿನ್ನವಾದವುಗಳೇ ಇಲ್ಲವಾದುದರಿಂದ, ಸಾಮಾನಾಧಿಕರಣ್ಯ ಪ್ರಯೋಗಕ್ಕೆ ಅನುಕೂಲವಿಲ್ಲವು. ಪರಮಾತ್ಮನಿಗಿಂತ ಆತನ ವಿಭೂತಿಯು ಬೇರೆಯೇ ಆಗಿರಬೇಕು: ಈ ಸಂದರ್ಭದಲ್ಲಿ ಆತನು ವಸುದೇವಪುತ್ರನಾಗಿ ವಹಿಸಿರುವ ದಿವ್ಯಮಂಗಳ ವಿಗ್ರಹವಲ್ಲದೆ ಬೇರೆ ವಸ್ತ್ವಂತರವಿಲ್ಲದುದರಿಂದ ಅದೇ ವಿಭೂತಿಯು. ಈ ಪ್ರಶಂಸೆಯು ಹಿಂದೆಯೇ **ರಾಮಶ್ಶಸ್ತ್ರಭೃತಾಮಹಮ್** ಎಂಬ ಸಂದರ್ಭದಲ್ಲೂ ನಡೆದಿರುವದರಿಂದಲೇ ಅಲ್ಲಿ ಹೇಳಲ್ಪಟ್ಟಹಾಗೆ ಇಲ್ಲಿಯೂ ಎಂಬ ಅಭಿಪ್ರಾಯದಿಂದ, **ಅಭಾವಾದೇವ** ಎಂಬಲ್ಲಿನ ಏವಕಾರ ಪ್ರಯೋಗವು. **ವಿಭೂತಿಯು** ಪರಮಾತ್ಮನಿಗಿಂತ ಬೇರೆಯಾಗಿರಬೇಕೆಂದೂ. ಹಾಗಿದ್ದರೇನೇ ಸಾಮಾನಾಧಿಕರಣ್ಯವು ಕೂಡುತ್ತದೆಂದೂ, ಅದ್ವೈತಿಗಳು ಹೇಳುವಹಾಗೆ ಒಂದೇಯಾಗಿರುವ ಪದಗಳಿಗೆ ಸಾಮಾನಾಧಿಕರಣ್ಯವು ಸರಿಯಲ್ಲವೆಂದೂ ತಿಳಿಸುವದಕ್ಕಾಗಿ ಇಲ್ಲಿ **ವಸ್ತ್ವಂತರಾಭಾವಾತ್** ಎಂಬ ಹೇತು ನಿರ್ದೇಶವು. **ವಸುದೇವ ಸೂನುತ್ವೇ** ಎಂದು ತಾನು, ವಸುದೇವನಿಗೆ

ಮಗನಾಗಿರುವದರಿಂದಾಗಲಿ, ಅಥವಾ ತನಗೆ ವಸುದೇವನು ತಂದೆಯಾಗಿರುವದರಿಂದಲಾಗಲಿ, ಮಾಹಾತ್ಮ್ಯವೇನೂ ಇಲ್ಲವು. ತಾನು ಅವತಾರಿಯಾಗಿ **"ತಮದ್ಭುತಂ ಬಾಲಕಮಂಬುಜೇಕ್ಷಣಂ ಚತುರ್ಭುಜಂ ಶಂಖ ಗದಾದ್ಯುದಾಯುಧಮ್"** ಇತ್ಯಾದಿ ಶ್ಲೋಕದಲ್ಲಿ ಹೇಳಿರುವ ರೂಪವೂ ಮತ್ತು ಅನಂತರ ಆ ರೂಪವನ್ನು ಉಪಸಂಹಾರ ಮಾಡಿಕೊಂಡು ಮನುಷ್ಯರೂಪದಿಂದ ಅತಿ ಮಾನುಷ ದಿವ್ಯಾದ್ಭುತ ಚೇಷ್ಟೆಗಳನ್ನು ನಡಿಸಿದ ದಿವ್ಯಮಂಗಳವಿಗ್ರಹತ್ವವೂ ವಿಭೂತಿಯು ಎಂಬುದು **ವಸುದೇವ ಸೂನುತ್ವಂ** ಎಂದು ಹೇಳಿದುದರ ಅಭಿಪ್ರಾಯವು ಎಂದು ಗ್ರಹಿಸತಕ್ಕದ್ದು. **ವೃಷ್ಣೀನಾಂ** ಎಂಬಲ್ಲಿ ಸಾಧಾರಣ ಯಾದವರು ಉದ್ದೇಶ್ಯರಲ್ಲವೆಂದೂ, ಖ್ಯಾತಿಯನ್ನು ಹೊಂದಿದ ವೃಷ್ಣಿಗಳಲ್ಲಿ ಎಂಬರ್ಥವೇ ಉದ್ದೇಶ್ಯವೆಂದೂ ತಿಳಿಯತಕ್ಕದ್ದು. **ಪಾಂಡವಾನಾಂ-ಧನಂಜಯೋಽರ್ಜುನೋಽಹಮ್** - ಪಾಂಡವರಲ್ಲಿ ಧರ್ಮರಾಜನು, ಧರ್ಮವೇ ಮೂರ್ತಿಭವಿಸಿದ ಹಾಗೆ ಪ್ರವೃತ್ತಿಯನ್ನು ಹೊಂದಿ ಅಜಾತಶತ್ರುವೆಂದು ಖ್ಯಾತಿಹೊಂದಿದವನು. ಭೀಮನಿಗಿಂತ ಬಲಿಷ್ಠರು ಲೋಕದಲ್ಲಿಲ್ಲವೆಂದು ಆತನು ಮಹಿಮೆಯನ್ನು ಹೊಂದಿದವನು; ರೂಪ ಯೌವನಾದಿಗಳಿಂದಲೂ ಶೌರ್ಯ ಪರಾಕ್ರಮಗಳಿಂದಲೂ ಮಾದ್ರೀಸುತರು ಅತಿಶಯವನ್ನು ಹೊಂದಿದವರು; ಹೀಗೆಲ್ಲಾ ಇರುವಾಗ ಧನಂಜಯನಾದ ಅರ್ಜುನನು ಹೇಗೆ ಮಾಹಾತ್ಮ್ಯೆಯನ್ನು ಹೊಂದಿದವನೆಂದರೆ, ಸರ್ವೇಶ್ವರನು ಅರ್ಜುನನಿಗೆ ವಿಶೇಷ ಸಖ್ಯೆಯನ್ನುಂಟುಮಾಡಿ, ಪಾಶುಪತಾಸ್ತ್ರ ಮೊದಲಾದವುಗಳನ್ನು ಪಡೆದು, ಗಾಂಡೀವ ಧನುರ್ಧಾರಿಯಾಗಿ, ಭಾರತಯುದ್ಧವೇನು ಗೋಗ್ರಹಣವೇನು ಇತ್ಯಾದಿ ಸಂದರ್ಭಗಳಲ್ಲಿ ಮಹಾ ಪರಾಕ್ರಮಿಯಾಗಿರುವಹಾಗೆ ಅನುಗ್ರಹಿಸಿ, ಹಿಂದೆ ಅಸದೃಶವಾದ ರಾಜಸೂಯಯಾಗವನ್ನು ನಿರ್ವಹಿಸುವದಕ್ಕಾಗಿ ಬೇಕಾದ ಪುಷ್ಕಳ ಧನವನ್ನು ರಾಜರುಗಳಿಂದ ಸಂಗ್ರಹಿಸಿದುದರಿಂದ, **ಧನಂಜಯ** ಶಬ್ದದಿಂದ ಪ್ರಖ್ಯಾತನು ಮತ್ತು ನರಾವತಾರಿಯಾಗಿ ತನ್ನ ಅಂಶವನ್ನೂ ಉಳ್ಳವನು. ಆದುದರಿಂದ ಅರ್ಜುನನಾದ ನೀನೂ ಸಹ ನಾನೇ ಎಂಬ ತಾತ್ಪರ್ಯದಿಂದ ಹೇಳಿದುದಾಗಿರುತ್ತದೆ. ಎದುರಿಗೆ ಅರ್ಜುನನಿದ್ದರೂ ನೀನೂ ಸಹ ನಾನೇ, ನಿನಗೂ ಸಹ ಸತ್ತಾದಾಯಕನಾಗಿ ನಾನೇ ಆತ್ಮಾ ಎಂದು ಯುಷ್ಮಚ್ಛಬ್ದವನ್ನು ಪಯೋಗಿಸದೆ **ಧನಂಜಯ**ನೆಂದು ಹೇಳಿರುವದು, ಅರ್ಜುನನಾಗಿ ಲೋಕದಲ್ಲಿ ಮಾಹಾತ್ಮ್ಯೆಯನ್ನು ಹೊಂದಿರುವದನ್ನು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಕುದುರೆಯನ್ನು ಕಟ್ಟಿಹಾಕಿದ ಎಲ್ಲಾ ರಾಜರನ್ನೂ ಜಯಿಸಿ, ಬೇಕಾದ ಧನವನ್ನು ಸಂಗ್ರಹಿಸಬೇಕಾದರೆ ಸ್ವಾಮಿದತ್ತ ಅಸದೃಶ ಪರಾಕ್ರಮವಿರತಕ್ಕದ್ದೆಂದೂ, ತಾನೇ ಆತ್ಮಾವಾಗಿ ಅದನ್ನು ದಯಪಾಲಿಸಿದವನೂ ತಾನೇ ಎಂದು ಸೂಚಿಸುವದಕ್ಕಾಗಿಯೂ **ಧನಂಜಯ**ವೆಂಬ ಪ್ರಯೋಗವು. **ಮುನಯಃ** ಎಂದರೆ **ಮನನೇನ ಆತ್ಮಯಾಥಾತ್ಮ್ಯ ದರ್ಶಿನಃ** - ಮನನ ಶೀಲರಾಗಿ ತತ್ವದ ಯಾಥಾತ್ಮ್ಯವನ್ನು ಕಂಡವರು, **ತೇಷಾಂ** - ಅಂತವರುಗಳ ಮಧ್ಯೇ, **ವ್ಯಾಸೋಽಹಂ** – ವ್ಯಾಸಮಹರ್ಷಿಯೂ ನಾನೇ ಎಂದರೆ ತದಾತ್ಮಕನೂ ನಾನೇ. **ಮುನೀನಾಂ**-ಎಂಬುದಕ್ಕೆ ಋಷಿಗಳ ಮಧ್ಯದಲ್ಲಿ ಎಂದರ್ಥಮಾಡಲು **ಮಹರ್ಷೀಣಾಂ ಭೃಗುರಹಂ** ಎಂದು ಹಿಂದೆ ಹೇಳಲ್ಪಟ್ಟಿರುವದರಿಂದ, ಅದನ್ನು ವ್ಯಾವರ್ತಿಸಿ ಮುನಿಶಬ್ದದ ನಿರ್ವಚನವನ್ನು ಮನಸ್ಸಿನಲ್ಲಿಟ್ಟು **"ಏತದೇವ ವಿದಿತ್ವಾ ಮುನಿರ್ಭವತಿ"** ಮನನದಿಂದ **ಮುನಿ** ಎಂದು ಹೇಳಲ್ಪಡುವವನು ಎಂಬ ಶ್ರುತ್ಯನುಸಾರವಾಗಿ, **ಮನನೇನ ಆತ್ಮಯಾಥಾತ್ಮ್ಯ ದರ್ಶಿನಃ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **"ಆಲೋಡ್ಯ ಸರ್ವ ಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ । ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ"** ಎಂದೂ **ವೇದಶಾಸ್ತ್ರಾತ್ಪರಂ ನಾಸ್ತಿ ನದೈವಂ ಕೇಶವಾತ್ಪರಂ"** ಎಂದೂ ಹೀಗೆಲ್ಲಾ ಪರತತ್ವ ಯಾಥಾತ್ಮ್ಯನಿರ್ಣಯ

**ಮೂ. ದಂಡೋ ದಮಯತಾ ಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾ ಮಹಮ್ ॥** **೩೮**

ಮಾಡಿರುವವರಿಂದ ಶ್ರೀ ವೇದವ್ಯಾಸರಿಗೆ ವಿಶೇಷ ಮಾಹಾತ್ಮ್ಯೆಯು ಮತ್ತು "**ತಪೋ ವಿಶಿಷ್ಟಾದಪಿವೈ ವಸಿಷ್ಠಾನ್ಮುನಿಸತ್ತಮಾತ್ । ಮನ್ಯೇ ಶ್ರೇಷ್ಠತಮಂತ್ವಾದ್ಯರಹಸ್ಯ ಜ್ಞಾನವೇದನಾತ್**" ವಸಿಷ್ಠರೇ ಮುನಿಶ್ರೇಷ್ಠರು, ಎಂದಿರುವಾಗ, ಅವರಿಗಿಂತಲೂ ಶ್ರೀ ವ್ಯಾಸರನ್ನು ಮುನಿಗಳಲ್ಲಿ ಶ್ರೇಷ್ಠತಮರೆಂದು ಭಾವಿಸುವೆನೆಂದು ಹೇಳಲ್ಪಟ್ಟಿತು, ಏಕೆಂದರೆ ತಪೋವಿಶಿಷ್ಟತೆಯಿಂದಲೂ ಮನನಶೀಲರಲ್ಲೂ ತುಂಬಾ ಶ್ರೇಷ್ಠರಾದುದರಿಂದಲೂ, ಮತ್ತು ರಹಸ್ಯಗಳ ಜ್ಞಾನವೆಲ್ಲಾ ಹೊಂದಿರುವದರಿಂದಲೂ, ಇವರು ಶ್ರೇಷ್ಠತಮರು ಎಂಬ ಭಾವವು. ಇವರು ಒಂದು ಭಗವದಂಶಾವತಾರವೇ ಎಂಬ ಆಶಯದಿಂದ "**ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯವಿಷ್ಣವೇ**" ಎಂದು ಹೇಳಲ್ಪಟ್ಟಿರುತ್ತದೆ. ಇದರಿಂದೆಲ್ಲಾ ಮಾಹಾತ್ಮ್ಯೆಯು. **ಕವಯೋವಿಪಶ್ಚಿತಃ**-ಕವಿಗಳು ಎಂದರೆ ವಿಪಶ್ಚಿತ್ತುಗಳು, ಮಹಾ ಪ್ರಾಜ್ಞರು. **ಕವೀನಾಂ ಉಶನಾ ಕವಿಃ** ಎಂದಿರುವ ಸ್ಥಳದಲ್ಲಿ ಕವಿಶಬ್ದಕ್ಕೆ ಏನು ಅರ್ಥವೆಂಬುದನ್ನು ತಿಳಿಸಿದರು, ಕವಿಶಬ್ದದಿಂದ ಕಾವ್ಯರಚನಾಶಕ್ತಿಯುಳ್ಳವನೆಂಬ ಅರ್ಥವಲ್ಲವು ಎಂದು ತಿಳಿಸುವದಕ್ಕಾಗಿ ಹಾಗೆ ಭಾಷ್ಯವು. ಉಶನಸ್ಸರು ಪ್ರಾಜ್ಞರಲ್ಲಿ ಅಗ್ರಗಣ್ಯರೆಂಬುದು, "**ನಕಶ್ಚಿನ್ನೋಽಪನಯತೇ ಪುಮಾ ಅನ್ಯತ್ರ ಭಾರ್ಗವಾತ್ । ಶೇಷಸಂಪ್ರತಿ ಶಿಷ್ಯಸ್ತು ಬುದ್ಧಿಮತ್ಸ್ವವತಿಷ್ಠತೇ**" ಎಂಬುದರಿಂದ ವ್ಯಕ್ತವು. ॥ ೩೭ ॥

**ಮೂಲಕ್ಕೆ ಅರ್ಥವು**:—ಈ ಶ್ಲೋಕದ ನಾಲ್ಕು ಷಷ್ಠೀಗಳೂ ಸಂಬಂಧ ಸಾಮಾನ್ಯಷಷ್ಠಿಗಳೇ ವಿನಾ ನಿರ್ಧಾರಣ ಷಷ್ಠಿಗಳಲ್ಲವು. ನಿರ್ಧಾರಣಾರ್ಥವು ಕೂಡುವದಿಲ್ಲವು. **ದಮಯತಾಂ**-ನಿಯಮವನ್ನು ಅತಿಕ್ರಮಿಸಿದುದರಿಂದ ದಂಡವನ್ನು ವಿಧಿಸುವವರ, **ದಂಡಃ** - ಶಿಕ್ಷೆಯೂ ಸಹ ನಾನೇ, ಎಂದರೆ ಅಪರಾಧಿಗಳನ್ನು ಶಿಕ್ಷಿಸುವದಕ್ಕಾಗಿ ಏರ್ಪಡಿಸಿರುವ **ನ್ಯಾಯಾಧಿಪತಿಗಳ** ಶಿಕ್ಷೆಯೂ ನಾನೇ ಎಂದು ಹೇಳಿರುವದರಿಂದ, ಮಹಾಪರಾಧಿಗಳನ್ನು ಶಿಕ್ಷಿಸುವಹಾಗೆ **ಮಾಡುವ**ವನೂ ನಾನೇ. ಶಿಕ್ಷೆಯೂ ಕ್ರಿಯೆಯಾಯಿತು. ಅಂತಹ ಕ್ರಿಯೆಯೊಂದಿಗೆ ಸಾಮಾನಾಧಿಕರಣ್ಯವು ಹೇಗೆ ಕೂಡುತ್ತದೆ ? ಎಂದರೆ ಆ ಕ್ರಿಯಾ ಸಂಬಂಧಿತ್ವೇನ, ಆ ಕ್ರಿಯಾಧಿಕಾರಿಯೊಂದಿಗೆ ಸಾಮಾನಾಧಿಕರಣ್ಯವು ಎಂದು ಭಾವಿಸತಕ್ಕದ್ದು. ಮಹಾಪರಾಧಿಗಳನ್ನು ಲೋಕರಕ್ಷಣಾರ್ಥವಾಗಿ ದಂಡಿಸುವಹಾಗೆ ಪ್ರೇರಿಸುವನು ನಾನೇ ಎಂಬ ತಾತ್ಪರ್ಯವು. ಲೋಕರಕ್ಷಣ ಕ್ರಿಯೆಯಾದುದರಿಂದ ದಂಡಕ್ಕೆ ಪ್ರಾಧಾನ್ಯವು. "**ಅದಂಡ್ಯಾನ್ ದಂಡಯನ್ ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್। ಅಯಶೋ ಮಹದಾಪ್ನೋತಿ ನರಕಂಚೈವಗಚ್ಛತಿ**" ಎಂದು ನೀತಿಶಾಸ್ತ್ರವಿರುವದರಿಂದ ಲೋಕಕಂಟಕರ ಶಿಕ್ಷಣಕ್ಕೆ ಪ್ರಾಧಾನ್ಯವಿರುವದರಿಂದ ಸರ್ವೇಶ್ವರನೇ ಅದನ್ನು ನಡೆಸುತ್ತಾನಾದುದರಿಂದ **ದಂಡೋಽಹಂ** ಎಂದು ಇಲ್ಲಿ ಹೇಳಲ್ಪಟ್ಟಿತು. **ಜಿಗೀಷತಾಂ** - ಜಯಹೊಂದಬೇಕೆಂಬಪೇಕ್ಷೆಯುಳ್ಳವರ, **ನೀತಿರಸ್ಮಿ** - ಸಾಮ ದಾನ ಭೇದ ದಂಡವೆಂಬ ನಾಲ್ಕು ಉಪಾಯದಲ್ಲಿ ಆ ಸಂದರ್ಭಕ್ಕೆ ಉಪಯುಕ್ತವಾದ ಉಪಾಯವೂ ನಾನೇ ಜಯೋಪಾಯವಾದುದರಿಂದ ನೀತಿಗೆ ಪ್ರಾಧಾನ್ಯವು. ಇಲ್ಲೆಲ್ಲಾ ಸಾಮಾನಾಧಿಕರಣ್ಯದ ಸಾಮಂಜಸ್ಯವು ಸಂಬಂಧಮೂಲಕ ಎಂದು ಮೇಲೆಉಪಪಾದಿಸಿದ ರೀತಿಯಲ್ಲಿ ಎಂದು ಭಾವಿಸತಕ್ಕದು. ಹಾಗೆಯೇ-**ಗುಹ್ಯಾನಾಂ**-ರಹಸ್ಯವು ಅವಶ್ಯಕವಾದ ಸಂದರ್ಭಗಳಲ್ಲಿನ, **ಮೌನಂ**-ಮೌನದಿಂದಿರೋಣವೂ ನಾನೇ. ಮಂತ್ರ ವಿಷಯಗಳಲ್ಲಿ ಗೋಪನಾರ್ಥವಾಗಿ ಮೌನವು ಆವಶ್ಯಕವು. ಹಾಗೆಯೇ ವಿಪತ್ತು ಕಲಹ ಮುಂತಾದ ಅನರ್ಥಗಳು, ಕೆಲವು ವಿಷಯಗಳ ಬಹಿರಂಗದಿಂದ ಉಂಟಾಗುವ ಸಂದರ್ಭದಲ್ಲಿ **ಮೌನೇನ ಕಲಹಂ ನಾಸ್ತಿ**

**ಭಾ. ನಿಯಮಾತಿಕ್ರಮಣೇ ದಂಡಂ ಕುರ್ವತಾಂ ದಂಡೋಽಹಮ್; ವಿಜಿಗೀಷೂಣಾಂ ಜಯೋಪಾಯಭೂತಾ ನೀತಿ ರಸ್ಮಿ; ಗುಹ್ಯಾನಾಂ ಸಂಬಂಧಿಷು ಗೋಪನೇಷು ಮೌನ ಮಸ್ಮಿ; ಜ್ಞಾನವತಾಂ ಜ್ಞಾನಂ ಚಾಹಮ್** ॥ ೩೮ ॥

ಎಂದು ಹೇಳಿರುವಹಾಗೆ ಪ್ರಾಣಿವರ್ಗಕ್ಕೆ ಅನರ್ಥಗಳು ಪ್ರಾಪ್ತವಾಗುವ ಸಂದರ್ಭದಲ್ಲಿ ಮೌನದಿಂದ ಇರಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಮೌನಕ್ಕೆ ಪ್ರಾಧಾನ್ಯವು. ಆದುದರಿಂದ ಸುಮ್ಮನಿರುವದು ಸುವರ್ಣ ಸಮಾನವೆಂಬ ಪಾಶ್ಚಾತ್ಯರ ಹೇಳಿಕೆಯುಂಟು ಬ್ರಾಹ್ಮಣನ ಕನ್ಯಾರತ್ನವನ್ನು ಯಾರು ವಿವಾಹ ಮಾಡಿಕೊಂಡರೆಂದು ಅಗ್ನಿಯನ್ನು ರಾಕ್ಷಸನು ಕೇಳಲು, ಅಂತಹ ಸಂದರ್ಭದಲ್ಲಿ ಮೌನದಿಂದ ಇರದೆ ತಿಳಿಸಿದುದರಿಂದ ಅಗ್ನಿಯು ಅನರ್ಥಕ್ಕೆ ಗುರಿಯಾದನೆಂದು ಆದಿಪರ್ವದಲ್ಲಿ ಇತಿಹಾಸ ಉಂಟು. ಪ್ರಕಟನೆಯಿಂದ ಅನರ್ಥ ಉಂಟಾಗುವ ಸಂದರ್ಭದಲ್ಲಿ ಮೌನಕ್ಕೆ ಪ್ರಾಶಸ್ತ್ಯವು. ಅಂತಹ ಮೌನಕ್ಕೆ ಅಧಿಕಾರಿಯಾರೋ ಅವನೂ ನಾನೇ ಎಂಬ ಭಾವವು. ಮಂತ್ರವನ್ನು ಒಳ್ಳೇ ಸತ್ಪಾತ್ರದಲ್ಲಿ ಉಪಯೋಗಿಸತಕ್ಕದ್ದು. ಅದರರ್ಥವನ್ನು ಪ್ರಕಟಿಸಬಾರದು. ಏಕೆಂದರೆ **"ಗುರುಂ ಪ್ರಕಾಶಯೇದ್ಧೀಮಾನ್ ಮಂತ್ರಂ ಯತ್ನೇನ ಗೋಪಯೇತ್"**, ಎಂದು ವಿಧಿಸಿ ಮಂತ್ರವನ್ನು ಪ್ರಕಟಿಸಿದರೆ ಅನರ್ಥಪ್ರಾಪ್ತಿ ಎಂದು ಉತ್ತರಾರ್ಧದಲ್ಲಿ **"ಅಪ್ರಕಾಶ ಪ್ರಕಾಶಾಭ್ಯಾಂ ಕ್ಷೀಯೇತೇ ಸಂಪದಾಯುಷೀ"** ಎಂದು ಹೇಳುತ್ತದೆ. ಇದರ ಸಂಪೂರ್ಣಾರ್ಥಕ್ಕೆ ದಾಸನು ಬರೆದಿರುವ ರಹಸ್ಯತ್ರಯದ ವ್ಯಾಖ್ಯಾನ ಕಾಣಿಕೆಯ ಪುಟವನ್ನು ಪರಾಂಬರಿಸಿ. ಹಾಗೆಯೇ **ಜ್ಞಾನವತಾಂ** - ಪರಮಶ್ರೇಯಸ್ಸಾಧನರೂಪ ಜ್ಞಾನವನ್ನು ಹೊಂದಿರುವ ಬ್ರಹ್ಮವಿತ್ತುಗಳ, **ಜ್ಞಾನಂ**-ಅಂತಹ ಜ್ಞಾನವೂ ಸಹ ನಾನೇ. ಅಂತವರಿಗೆ ಅಂತಹ ಜ್ಞಾನವನ್ನು ಪದೇಶಿಸಿರುವವನು ನಾನೇ; ಎಂದರೆ, ಅಂತಹ ಮಹತ್ತಾದ ಜ್ಞಾನೋಪದೇಶಕರಿಗೆ ಆತ್ಮಾ ನಾನೇ ಎಂಬ ಭಾವವು. ಇಲ್ಲಿ ಜ್ಞಾನ ಶಬ್ದಕ್ಕೆ ಸಾಧಾರಣ ಲೋಕಜ್ಞಾನ, ವಿಷಯ ಜ್ಞಾನಾದಿಗಳು ಅರ್ಥವಲ್ಲವು. ಪ್ರಾಧಾನ್ಯತಃ ಮಹತ್ತಾದ ಜ್ಞಾನ ವಿವಕ್ಷೆಯು ತೋರಿಬರುವದರಿಂದ, ಕೆಳಗೆ ಭಾಷ್ಯದಲ್ಲಿ ಎಂತಹ ಜ್ಞಾನವು ಇದು ಎಂಬುದು ಉಪಪಾದಿಸಲ್ಪಡುತ್ತದೆ.

**ಭಾಷ್ಯಾರ್ಥವು:—ನಿಯಮಾತಿಕ್ರಮಣೇ**-ನಿಯಮವನ್ನು ಅತಿಕ್ರಮಿಸಿದ ಸಂದರ್ಭದಲ್ಲಿ **ದಂಡಂ ಕುರ್ವತಾಂ** - ಶಿಕ್ಷೆಯನ್ನು ಮಾಡುವವರ, **ದಂಡೋಽಹಮ್** - ಶಿಕ್ಷೆಯೂ ನಾನೇ, ಇದು ಮುಖ್ಯವಾಗಿ ರಾಜನೀತಿಯನ್ನು ಗ್ರಹಿಸಬೇಕಾಗಿರುವ ನೀನೂ ತಿಳಿಯಬೇಕಾಗಿರುವ ಅಂಶವಾಗಿರುತ್ತದೆ ಎಂಬ ಭಾವವು ಇಲ್ಲಿ ಸೂಚಿಸಲ್ಪಟ್ಟಿತು. ಮಹತ್ತಾದ ಅಪರಾಧಿಗಳನ್ನು ಶಿಕ್ಷಿಸಿ ಲೋಕಕ್ಕೆ ಕ್ಷೇಮವನ್ನುಂಟು ಮಾಡುವದಕ್ಕೇನೆ ಕ್ಷತ್ರಿಯನಾದ ನೀನು ಆಯುಧವನ್ನು ಹಿಡಿದಿರುವದು, ಇವನ್ನು ಮಾಡದಿದ್ದರೆ ನಿನಗೂ ಅನರ್ಥವು. ಲೋಕಕ್ಕೂ ಅನರ್ಥವು. ದುರುಳರಾದ ದುರ್ಯೋಧನ ಮುಖ್ಯಾಸನಾದಿಗಳನ್ನು ದಂಡಿಸದೇ ಇರುವದು ದೋಷಯುಕ್ತವಾದುದು. ನಿನ್ನನ್ನು ಪ್ರೇರಿಸಿ ಅವರನ್ನು ಹೇಗಾದರೂ ಮಾಡಿ ದಂಡಿಸುವವನೂ ನಾನೇ ಎಂಬುದು ಇಲ್ಲೇ ವ್ಯಕ್ತವು. ಆದರೆ ಅವರೊಂದಿಗೆ ಸಂಧಿಗೆ ಹೋಗಿದ್ದೆಯಲ್ಲಾ ಎಂದಾಕ್ಷೇಪ ತಂದರೆ, ಅದು ಲೋಕವಿಡಂಬನವು; ಎಂದಿಗಾದರೂ ಸಂಧಿಯಾಗುವಹಾಗೆ ಮಾಡುವೆನೇ? ಇನ್ನು ಯಾರಾದರೂ ಹೋದರೆ ಎಲ್ಲಿ ಸಂಧಿಯಾಗಿ ಆ ಪಾಪಿಷ್ಠರು ಉಳಿಯುತ್ತಾರೋ ಎಂಬ ಭಯದಿಂದ ನಾನೇ ಹೋಗಿ ಸಂಧಿಯಾಗದಹಾಗೆ ಮಾಡಿರುತ್ತೇನೆ ಎಂಬ ಭಾವವು. **"ಗೋವಿಂದೇತಿ ಯದಾಕ್ರಂದ ತ್ಕೃಷ್ಣಾ ಮಾಂ ದೂರವಾಸಿನಮ್ । ಋಣಂ ಪ್ರವೃದ್ಧ ಮಿವ ಮೇ ಹೃದಯಾನ್ನಾಪಸರ್ಪತಿ"** ಎಂಬುದು ಅನುಸಂಧೇಯವು. ವಧಿಸಲು ಯೋಗ್ಯರಾದವರು ನನ್ನಲ್ಲಿ ಶರಣಾ

ಗತಿಯನ್ನು ಎಂದಿಗೂ ಆಚರಿಸುವದಿಲ್ಲವು. ಅಂತಹ ನೃಶಂಸರನ್ನು **"ತ್ರಾತುಂ ನ ಶಕ್ತಾ ಯುಧಿ ರಾಮವಧ್ಯಮ್"** ಎಂಬಲ್ಲಿ ಹೇಳಿರುವಹಾಗೆ ಇನ್ನು ಯಾರೂ ಕಾಪಾಡಲಾರರು. ಆದುದರಿಂದ ಸಾಪರಾಧಿಯ ದಂಡವು ಲೋಕರಕ್ಷಣಾರ್ಥರೂಪವಾಗಿ ಅತಿಶಯಾವಹವು. **ವಿಜಿಗೀಷೂಣಾಂ**-ಇದು **ಜಿಗೀಷತಾಂ** ಎಂಬುದರ ವ್ಯಾಖ್ಯಾನವು, ಜಯಿಸಬೇಕೆಂಬ ಇಚ್ಛೆಯುಳ್ಳವರ, **ಜಯೋಪಾಯಭೂತ ನೀತಿರಸ್ಮಿ**-ಜಯಕ್ಕೆ ಸಾಧಕವಾದ ಆಲೋಚನೆಯೂ ನಾನೇ; ಎಂದರೆ ಅಂತಹ ಆಲೋಚನೆಯುಳ್ಳವರ ಆಲೋಚನೆಯೂ ನಾನೇ; ಹಾಗೆ ಆಲೋಚಿಸುವವರಿಗೂ ಆತ್ಮಾವಾಗಿರುವನು ನಾನೇ ಎಂಬ ತಾತ್ಪರ್ಯವು. ಇಲ್ಲಿ ಬುದ್ಧಿ ವ್ಯಾಪಾರವು ವಿವಕ್ಷಿತವಾದರೂ ಅಂತಹ ಬುದ್ಧಿಯುಳ್ಳ ಅಧಿಕಾರಿಯೊಂದಿಗೆ ಸಾಮಾನಾಧಿಕರಣ್ಯವೆಂದು ಭಾವಿಸತಕ್ಕದ್ದು. ಅಧಿಕಾರಿಯೇ ವಿಭೂತಿರೂಪದ್ರವ್ಯವು. **ಗುಹ್ಯಾನಾಂ**-ರಹಸ್ಯವಾಗಿರುವವುಗಳಿಗೆ, **ಸಂಬಂಧಿಷು ಗೋಪನೇಷು** ಸಂಬಂಧಿಸಿರುವ ಗೋಪನಮಾಡತಕ್ಕವುಗಳಲ್ಲಿನ, **ಮೌನಮಸ್ಮಿ**-ಮೌನವೂ ನಾನೇ, ಇಲ್ಲಿ **ಸಂಬಂಧಿಷು ಗೋಪನೇಷು** - ಎಂದು ವ್ಯಾಖ್ಯಾನ ಮಾಡಿರುವದರಿಂದಲೇ ಇಲ್ಲಿ ಸಂಬಂಧ ಸಾಮಾನ್ಯಾರ್ಥವು ಷಷ್ಠಿಗೆ ಎಂಬುದು ವ್ಯಕ್ತವು. ಸ್ಥಾಲೀಪುಲಾಕನ್ಯಾಯ ಪ್ರಕಾರ ನಾಲ್ಕು ಷಷ್ಠಿಗಳೂ ಹಾಗೆಯೇ ಎಂದು ಇಟ್ಟುಕೊಳ್ಳತಕ್ಕದ್ದು. **ಜ್ಞಾನವತಾಂ**-ಜ್ಞಾನನಿಷ್ಠೆಯುಳ್ಳವರ, **ಜ್ಞಾನಂ**-ಮೋಕ್ಷಪ್ರಾಪ್ತಿಸಾಧನಭೂತವಾದ ಜ್ಞಾನವೂ ಸಹ ನಾನೇ, ಅಂತಹ ಜ್ಞಾನಕ್ಕೆ ಕಾರಣಭೂತನು ನಾನೇ. ಆದುದರಿಂದ ಅಂತಹ ಪರಬ್ರಹ್ಮಸಾಕ್ಷಾತ್ಕಾರ ರೂಪಜ್ಞಾನಾಧಿಕಾರಿಗಳಿಗೂ ಕೂಡ, ಆತ್ಮಾವಾಗಿರುವವನೂ ನಾನೇ ಎಂಬುದು ತಾತ್ಪರ್ಯವು. ಇಲ್ಲಿ ಸಾಧಾರಣವಾಗಿ ಜ್ಞಾನ ಶಬ್ದದಿಂದ ಎಲ್ಲಾ ವಿಧ ಜ್ಞಾನವೂ ನಾನೇ ಎಂದು ಏಕೆ ಮಾಡಕೂಡದು ? ಎಂದರೆ ಹಿಂದೆ **ಭೂತಾನಾಮಸ್ಮಿ ಚೇತನಾ** ಎಂಬಲ್ಲಿ ಜ್ಞಾನಸ್ವರೂಪನಾಗಿ ಜ್ಞಾನ ಗುಣಕನಾಗಿರುವ ಚೇತನನು ಪ್ರಶಂಸಿಸಲ್ಪಟ್ಟಿರುವದರಿಂದ ಜ್ಞಾನರೂಪ ಚೈತನ್ಯವು ಶ್ಲಾಘಿಸಲ್ಪಟ್ಟಿತು. ಇಲ್ಲಿ ತುಂಬಾ ಮಹಿಮೆಯುಳ್ಳ ಜ್ಞಾನದ ಪ್ರಶಂಸೆಯೇ ವಿವಕ್ಷಿತವಾಗಿರುವದರಿಂದ ಮೋಕ್ಷಪ್ರಾಪ್ತಿ ಹೇತುಜ್ಞಾನವು ಮಾತ್ರವೇ ಜ್ಞಾನವೆಂದೂ, ಮಿಕ್ಕ ಜ್ಞಾನಗಳೆಲ್ಲಾ ಅಜ್ಞಾನವೆಂದೂ ಅಭಿಪ್ರಾಯವು. ಮಿಕ್ಕವೆಲ್ಲಾ ಅಜ್ಞಾನತುಲ್ಯವೇ ಎಂದು ಶ್ರೀಪರಾಶರರು ಹೇಳಿರುತ್ತಾರೆ. **"ಸ ಜ್ಞಾಯತೇ ಯೇನ ತದಸ್ತದೋಷಂ ಶುದ್ಧಂಪರಂ ನಿರ್ಮಲ ಮೇಕರೂಪಮ್ । ಸಂದೃಶ್ಯತೇ ವಾಪ್ಯವಗಮ್ಯತೇವಾ ತಜ್ಜ್ಞಾನಮಜ್ಞಾನಮತೋಽನ್ಯದುಕ್ತಮ್"** (ವಿ. ಪು. ೬. ೫. ೮೭) ಯಾವ ಕಾರಣದಿಂದ ಭಗವತ್ಪ್ರಾಪ್ತಿಯೇ ತಾಪತ್ರಯಪಿರುವ ಈ ಸಂಸಾರಕ್ಕೆ ಭೇಷಜವೋ, ಆ ಕಾರಣದಿಂದ ಯಾವ ಆಗಮೋತ್ಥ ಜ್ಞಾನದಿಂದ ಆ ಕೃಪಾ ಪರಿಪೂರ್ಣನಾದ ಪರಮ ಪುರುಷನು ತಿಳಿಯಲ್ಪಡುವನೋ, ಯಾವ ವಿವೇಕಜನ್ಯ ಜ್ಞಾನದಿಂದ ಸಾಕ್ಷಾತ್ಕರಿಸಲ್ಪಡುವನೋ ಮತ್ತು ಅಂತಹ ದರ್ಶನ ಸಮಾನಾಕಾರದಿಂದ ತೈಲಧಾರೆಯಹಾಗೆ ಅವಿಚ್ಛಿನ್ನವಾದ ಸ್ಮೃತಿ ಸಂತಾನರೂಪ ಪರಮ ಜ್ಞಾನದಿಂದ ಏಕೀಭವಿಸಿರುವಹಾಗೆ ಮಾಡುತ್ತದೆಯೋ, ಅದೀಗ ಜ್ಞಾನವು; **ಅತೋಽನ್ಯತ್ ಅಜ್ಞಾನಂ**-ಭಗವದ್ವ್ಯತಿರಿಕ್ತವಿಷಯವಾದ ಎಲ್ಲಾ ಜ್ಞಾನವು ಜ್ಞಾನವೆಂದು ಹೇಳಿಸಿಕೊಂಡರೂ ಅದು ಅಜ್ಞಾನವೇ, ಏಕೆಂದರೆ ಅವಿದ್ಯಾರೂಪವಾಗಿ ಬಂಧಕ್ಕೆ ಹೇತುವಾಗುವದರಿಂದ ಎಂಬ ಭಾವವು. ಹೀಗೆ ಶಾಸ್ತ್ರಜನ್ಯಜ್ಞಾನ, ವಿವೇಕಜನ್ಯಜ್ಞಾನ, ಭಕ್ತಿರೂಪಾಪನ್ನ ಜ್ಞಾನಗಳಿಂದ ಧ್ಯೇಯ ವಸ್ತುವಾದ ಪರಬ್ರಹ್ಮನು ಸಾಕ್ಷಾತ್ಕರಿಸಲ್ಪಡುವನು. **ಆ ತತ್** ಎಂಥಾದ್ದೆಂದರೆ, **ಅಸ್ತದೋಷಂ**-ವಿಕಾರಾಸ್ಪದಾದಿ ದೋಷರಹಿತನು, ಇದರಿಂದ ಅಚಿದ್ವೈಲಕ್ಷಣ್ಯವು ಹೇಳಲ್ಪಟ್ಟಿತು, **ಶುದ್ಧಂ**-ಮಹಾಪರಿಶುದ್ಧನು, ಹೇಯಪ್ರತ್ಯನೀಕನು, ಇದರಿಂದ ಬದ್ಧಚೇತನರಿಗಿಂತ ವಿಲಕ್ಷಣನೆಂದು ಹೇಳಲ್ಪಟ್ಟಿತು, ನಿರ್ಮಲಂ ಎಂಬುದರಿಂದ ಯಾವಕಾಲದಲ್ಲೂ ಹೇಯಾರ್ಹತೆ ಇಲ್ಲವೆಂದು

**ಮೂ. ಯಚ್ಚಾಪಿ ಸರ್ವಭೂತಾನಾಂ ಬೀಜಂ ತದ ಹ ಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯.**

ಹೇಳಿದುದರಿಂದ ಮುಕ್ತರಿಗಿಂತಲೂ ವಿಲಕ್ಷಣನೆಂದು ಹೇಳಲ್ಪಟ್ಟಿತು, **ಪರಂ ಏಕರೂಪಂ** ಎಂದು ಹೇಳಿರುವದರಿಂದ ನಿತ್ಯರಿಗೂ ಶೇಷಿಯಾಗಿ ವಿಲಕ್ಷಣನಾಗಿ ಇರುವ ಪರತ್ವವು ಹೇಳಲ್ಪಟ್ಟಿತು. ಇಂತಹ ಪರಮಾತ್ಮ ಪ್ರಾಪ್ತಿಗೆ ಹೇತುಭೂತ ಜ್ಞಾನವೇ ಜ್ಞಾನವೆಂದೂ, ಆ ಕಾರಣದಿಂದ ಅಂತಹ ಜ್ಞಾನಕ್ಕೇ ಪರಮೋತ್ಕರ್ಷವೆಂದೂ, ಇಲ್ಲಿ ಹೇಳಲ್ಪಟ್ಟಿತು ॥೩೮॥

**ಮೂಲಕ್ಕೆ ಅರ್ಥವು:**–ಹಿಂದೆ ಸಾಮಾನ್ಯವಾಗಿ ಎಲ್ಲಾ ವಿಭೂತಿಗಳೊಂದಿಗೂ, ಹಾಗೆಯೇ ಪ್ರಾಧಾನ್ಯತಃ ಹೇಳಲ್ಪಟ್ಟ ವಿಭೂತಿಗಳೊಂದಿಗೂ, ಸಾಮಾನಾಧಿಕರಣ್ಯವು ಹೇಳಲ್ಪಟ್ಟಿತು. ಹಾಗೆ ಸಾಮಾನಾಧಿಕರಣ್ಯವನ್ನು ಹೇಳಲು ಹೇತುವೇನೆಂಬುದು ಇಲ್ಲಿ ವಿಶದೀಕರಿಸಿ ಪ್ರಕಟಿಸಲ್ಪಡುತ್ತದೆ ವಿಭೂತಿಗಳ ಸೃಷ್ಟಿಸ್ಥಿತಿ ಪ್ರವೃತ್ತಿ ಲಯಾದಿಗಳಿಗೆಲ್ಲಾ ತಾನೇ ಸರ್ವವಿಧ ಕಾರಣನೂ ಆಗಿ, ಅವುಗಳನ್ನು ವ್ಯಾಪಿಸಿ, ಅವುಗಳಿಗೆಲ್ಲಾ ಅಂತರಾತ್ಮಾವಾಗಿರುವನೇ ಈ ಸಾಮಾನಾಧಿಕರಣ್ಯಕ್ಕೆ ಹೇತುವೆಂದು ಚನ್ನಾಗಿ ವ್ಯಕ್ತಪಡಿಸುತ್ತಾರೆ. ಚರಾಚರವೆಲ್ಲಾ ಈತನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವಾಗಿರುವದರಿಂದ ಶರೀರವನ್ನು ಬೋಧಿಸುವ ಶಬ್ದಗಳು ಶರೀರಿಯಾದ ಆತ್ಮಾವಿನಲ್ಲಿ ಅನ್ವಯಿಸುತ್ತವೆ ಎಂಬ ತತ್ತ್ವವನ್ನು ಇಲ್ಲಿ ನಿರೂಪಣೆ ಮಾಡಿರುತ್ತಾರೆ. ಹಾಗಲ್ಲದೆ ಜಗತ್ತೆಲ್ಲಾ ಮಿಥ್ಯಾವಾಗಿ, ಪರಮಾತ್ಮನೊಬ್ಬನೇ ಇರುವನಾದರೆ ವಿಭೂತಿ ಎಲ್ಲಿಯದು ? ಆತ್ಮತ್ವವೆಲ್ಲಿಯದು ? ಸಾಮಾನಾಧಿಕರಣ್ಯಕ್ಕೆ ಅವಕಾಶ ಹೇಗೆ ? ಹೇಗೆ ಸಾಮಾನಾಧಿಕರಣ್ಯವನ್ನು ಹೇಳಲು ಸಾಧ್ಯವು ? ಆದುದರಿಂದ ಜಗತ್ತು ಮಿಥ್ಯೆ ಎಂಬ ವಾದಕ್ಕೆ ಪ್ರಬಲ ವಿರೋಧವಾದುದು ಈ ಶ್ಲೋಕವು. ಪರಮಾತ್ಮನಿಗೆ ಅವಿನಾಭೂತವಾಗಿ ಚರಾಚರ ಉಂಟೆಂದು ಈ ಶ್ಲೋಕದಲ್ಲಿ ಹೇಳಿರುವದರಿಂದ ವಿಶಿಷ್ಟಾದ್ವೈತ ತತ್ತ್ವವು ಸ್ಥಾಪಿತವು **ಸರ್ವಭೂತಾನಾಂ**-ಅಚಿತ್ಸಂಸರ್ಗವಿರುವ ಸಮಸ್ತ ಚೇತನರಿಗೂ, **ಯಚ್ಚಾಪಿಬೀಜಂ** - ಅದರ ಸೃಷ್ಟಿಸ್ಥಿತಿ ಪ್ರವೃತ್ತ್ಯಾದಿ ಸಮಸ್ತಾವಸ್ಥೆಗಳಿಗೂ ಪ್ರತ್ಯಕ್ಷವಾಗಿಯಾಗಲಿ ಅನುಮಾನದಿಂದಾಗಲಿ ತೋರಿಬರುವ ಯಾವ ಮೂಲಕಾರಣ ಉಂಟೋ, **ತತ್-ಆ** ಕಾರಣವು, ಓ ಅರ್ಜುನನೇ, **ಅಹಂ**-ನಾನೇ. ಮತ್ತು **ಮಯಾವಿನಾ** - ನಾನಿಲ್ಲದೆ, **ಯತ್**-ಯಾವ, **ಭೂತಂ** - ಎಂದರೆ **ಚರಾಚರಮ್** - ಸ್ಥಾವರ ಜಙ್ಗಮಾದಿಗಳಾದ ಪ್ರಾಣಿವರ್ಗವು, **ಸ್ಯಾತ್**-ಉಂಟೋ, **ತತ್**–ಅದು, **ನಾಸ್ತಿ**-ಇಲ್ಲವು. ನಾನು ಸೇರಿಲ್ಲದಿರುವ ಯಾವ ಚರಾಚರವು ಇಲ್ಲವು, **ಮಯಾವಿನಾ** - ಇಲ್ಲವು ಎಂದರೆ ನನಗೆ ಅವಿನಾಭೂತವಾಗಿ ನನ್ನೊಂದಿಗೇನೇ ಸೇರಿ ನನಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಎಲ್ಲವೂ ಇವೆ ಎಂಬ ಅರ್ಥವು. ಹೀಗೆ ಹೇಳುವದು ಯುಕ್ತವೇ ? ಹಾಗಲ್ಲದೆ, **ಮಯಾವಿನಾ ನ ಸ್ಯಾತ್**-ನಾನಲ್ಲದೆ ಇಲ್ಲವು ಎಂದರೆ ನಾನೊಬ್ಬನೇ ಸತ್ಯವು, ಮಿಕ್ಕಿದ್ದೆಲ್ಲಾ ಮಿಥ್ಯಾ ಎಂದು ಅರ್ಥ ಹೇಳುವದು ಯುಕ್ತವೇ ? ಎಂಬುದನ್ನು ನಿಷ್ಪಕ್ಷಪಾತಿಗಳಾದ ಪ್ರಾಜ್ಞರು ವಿವೇಕಿಸಬಹುದು. ಹೀಗೆ ಮಿಥ್ಯಾ ಎಂಬರ್ಥವನ್ನು ಹೇಳಿದರೆ ಪೂರ್ವಾರ್ಧದ ಅರ್ಥಕ್ಕೆ ವಿರುದ್ಧವಾಗುವದಿಲ್ಲವೇ ? ಮಿಥ್ಯೆಯಾಗಿರುವದಕ್ಕೆ ಬೀಜವೆಂದರೇನು ? ಸತ್ಯವಾದ ಬೀಜಕ್ಕೆ ಸತ್ಯವಾದ ಅಂಕುರವು. ಬೀಜವು ಸತ್ಯವಾಗಿರುವಾಗ ಅಂಕುರವು ಅಸತ್ಯವಾಗುವದು ಹೇಗೆ ? **ಅತಃ ಮದಾತ್ಮಕಂ ಸರ್ವಂ** ಎಂದು ಪ್ರಾಜ್ಞರಾದ ಶ್ರೀ ಶಂಕರಾಚಾರ್ಯರು ಅರ್ಥ ಮಾಡಿದರೇ ವಿನಾ, ಮಿಥ್ಯಾತ್ವವನ್ನು ಅವರು ಉಪಪಾದಿಸಲಿಲ್ಲವು. ಶ್ರೀ ಶಂಕರಾಚಾರ್ಯರು ಮಿಥ್ಯಾ ಶಬ್ದವನ್ನೇನೋ ಉಪಯೋಗಿಸಿರುತ್ತಾರೆ, ಅವರ ಅಭಿಪ್ರಾಯವು ಏನೆಂದರೆ ಚರಾಚರ ಮಿಥ್ಯಾ ಎಂದರೆ ವಿಕಾರಯುಕ್ತವಾದುವು ಎಂಬುದು. ॥ ೩೯ ॥

ಭಾ. **ಸರ್ವಭೂತಾನಾಂ-ಸರ್ವಾವಸ್ಥಾವಸ್ಥಿತಾನಾಂ ತತ್ತದವಸ್ಥಾ ಬೀಜಭೂತಂ ಪ್ರತೀಯಮಾನ ಮಪ್ರತೀಯ ಮಾನಂ ಚ ಯತ್, ತದಹಮೇವ; ಭೂತಜಾತಂ ಮಯಾ ಆತ್ಮತಯಾ ವಸ್ಥಿತೇನ ವಿನಾ ಯತ್ಸ್ಯಾತ್, ನತದಸ್ತಿ; (೧) "ಅಹಮಾತ್ಮಾ ಗುಡಾ**

**ಭಾಷ್ಯಾರ್ಥವು:**—ಹಿಂದೆ ಇಷ್ಟುದೂರ ವಿಭೂತಿವಿಸ್ತರವನ್ನೂ, ಅವುಗಳಲ್ಲಿ ಪ್ರಾಧಾನ್ಯವಾದವುಗಳನ್ನೂ, ತಿಳಿಸಿ ಅವುಗಳೊಂದಿಗೆ ತನಗೆ ಸಾಮಾನಾಧಿಕರಣ್ಯವನ್ನೂ ಸರ್ವಶಬ್ದ ವಾಚ್ಯತ್ವವನ್ನೂ ತಿಳಿಸುವದಕ್ಕಾಗಿ ಎಲ್ಲಕ್ಕೂ ತಾವು **"ಅಹಮಾತ್ಮಾ ಗುಡಾಕೇಶ"** ಎಂಬಲ್ಲಿ ಹೇಳಿರುವಹಾಗೆ ಆತ್ಮಾವಾಗಿ, ಎಲ್ಲವೂ ತನಗೆ ಶರೀರವಾಗುವದರಿಂದ ಎಲ್ಲವೂ ತಾನೇ ಎಂದು ತಿಳಿಸಿದರು. ಈ ಅಭಿಪ್ರಾಯವು ಹಿಂದೆ **"ಅಪರೇಯ ಮಿತಸ್ತ್ವನ್ಯಾಂ"** (ಗೀ.೭-೫) ಎಂದೂ **"ಮಯಿ ಸರ್ವ ಮಿದಂ ಪ್ರೋತಂ"** (ಗೀ ೭-೭) ಎಂದು ಹೇಳಿದ್ದರೂ, ಅದು ಚನ್ನಾಗಿ ಪ್ರತಿಷ್ಠಿತವಾಗುವದಕ್ಕಾಗಿ ಜಗತ್ತಿನ ಸರ್ವ ಚರಾಚರವೂ ತನಗೆ ಅಪೃಥಕ್ಸಿದ್ಧ ವಿಶೇಷಣವೆಂದೂ, ಅವುಗಳೆಲ್ಲಾ ತನ್ನೊಂದಿಗೆ ಯಾವಾಗಲೂ ಸೇರಿಯೇ ಇರುವದೆಂದು ವಿಶಿಷ್ಟಾದ್ವೈತ ತತ್ವವನ್ನು ಉಪದೇಶಿಸಿ, ತಾನಿಲ್ಲದೆ ಇವು ಯಾವುವೂ ಇರಲಾರದೆಂದು ಉಪದೇಶಿಸುತ್ತಾರೆ **ಸರ್ವಭೂತಾನಾಂ ಬೀಜಂ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ, **ಸರ್ವಾವಸ್ಥಾವಸ್ಥಿತಾನಾಂ**-ಸಮಸ್ತಾವಸ್ಥೆಗಳಲ್ಲಿರುವ ಸರ್ವಭೂತಗಳಿಗೂ ತತ್ತದವಸ್ಥೆಗಳಿಗೆ, **ಬೀಜಭೂತಂ**-ಕಾರಣಭೂತವಾಗಿ, **ಪ್ರತೀಯಮಾನಂ** ತೋರಿಬರುವದೂ, **ಅಪ್ರತೀಯಮಾನಂ ಚ**-ನಮಗೆ ತೋರಿಬರದೆ ಇರುವದೂ ಸಹ, **ಯತ್**-ಯಾವುದುಂಟೋ, **ತದಹಮೇವ**-ಅದೆಲ್ಲಾ ನಾನೇ. ಹೀಗೆ ವ್ಯಾಖ್ಯಾನಮಾಡಲು ಕಾರಣವೇನೆಂದರೆ, ಪ್ರಾಕೃತ ನೈಮಿತ್ತಿಕ ಸೃಷ್ಟ್ಯಾದಿಗಳಿಗೆ ತಾನೇ ಕಾರಣನೆಂದು, ಹಿಂದೆ **"ಅಹಮಾದಿಶ್ಚ ಮಧ್ಯಂಚ"** ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆಯಾದುದರಿಂದ, ಇಲ್ಲಿ ಮುಖ್ಯವಾಗಿ ಹೇಳಬೇಕಾದುದು, ಸರ್ವ ಪ್ರಾಣಿಗಳ ಸರ್ವಾವಸ್ಥೆಗಳಿಗೂ ಎಂದರೆ ನಿತ್ಯ ಸೃಷ್ಟಿ ಸ್ಥಿತಿ ಪ್ರವೃತ್ತಿಗಳಿಗೆಲ್ಲಾ ತಾನು ಕಾರಣಭೂತನೆಂದು ಹೇಳಿ, ಅದು ಹೇಗೆ ಎಂದು, ಮುಂದೆ ಹೇಳುವ ಸಾಮಾನಾಧಿಕರಣ್ಯ ಸರ್ವ ಶಬ್ದವಾಚ್ಯತ್ವಗಳಿಗೆ ಇದು ಸಹಾಯವೆಂದು ತಿಳಿಸುವದಕ್ಕಾಗಿ, ನಿತ್ಯ ಸೃಷ್ಟಿ ಮೊದಲಾದ ಅವಸ್ಥೆಗಳಿಗೆ ಕಾರಣಭೂತವಾಗಲು ಆಯಾಸರ್ವಭೂತಗಳನ್ನೇ ಶರೀರಮಾಡಿಕೊಂಡು ಅವುಗಳಿಗೆ ಆತ್ಮಾವಾಗಿರುವದರಿಂದಲೇ ಎಲ್ಲಾ ಅವಸ್ಥೆಗಳಿಗೂ ಬೀಜವು ತಾನು, ಎಂದು ಉಪದೇಶವು. ಇಲ್ಲಿ **ಪ್ರತೀಯಮಾನಂ ಅಪ್ರತೀಯಮಾನಂ** ಎಂದು ವ್ಯಾಖ್ಯಾನಮಾಡಲು ಕಾರಣವು, ಮೂಲದಲ್ಲಿ **ಯಚ್ಚಾಪಿ** ಎಂಬ ಪ್ರಯೋಗದ ತಾತ್ಪರ್ಯವೆಂದು ಭಾವಿಸತಕ್ಕದ್ದು. ಕೆಲವಕ್ಕೆ ಕಾರಣವು ವ್ಯಕ್ತವು, ಮಗುವಿಗೆ ತಂದೆತಾಯಿಗಳು ಕಾರಣವೆಂದು ವ್ಯಕ್ತವಾಗಿ ತೋರಬಹುದು. ಆ ಮಗುವು ಸದಾ ಖಾಯಿಲೆಯುಳ್ಳದ್ದಾಗಿಯೂ, ಅಥವಾ ದೃಢಾಂಗವುಳ್ಳದ್ದಾಗಿಯೂ ಇರುವುದಕ್ಕೆ ಕಾರಣವು ತಿಳಿಯದೇ ಇರಬಹುದು, ಹೀಗೆ ಮೇಲೆ ಹೇಳಿದಹಾಗೆ ಪ್ರತೀಯಮಾನವಾದುದೇಯಾಗಲಿ ಅಥವಾ ಪ್ರತೀಯಮಾನವಿಲ್ಲದೇಯಾಗಲಿ, ಇವೆಲ್ಲಕ್ಕೂ ನಾನೇ ಕಾರಣಭೂತನು ಎಂಬ ತಾತ್ಪರ್ಯವು. ಅಥವಾ **ಪ್ರತೀಯಮಾನಂ** ಎಂದರೆ ಪ್ರತ್ಯಕ್ಷವಾಗಿ ತೋರುವ, **ಅಪ್ರತೀಯಮಾನಂ**-ಪ್ರತ್ಯಕ್ಷಗೋಚರವಿಲ್ಲದೆ, ಅನುಮಾನದಿಂದ ಊಹಿಸತಕ್ಕದ್ದು ಎಂದಾಗಲಿ ಅರ್ಥಮಾಡಬಹುದು. ಶರೀರವು ಪ್ರತೀಯಮಾನವಾದುದು, ಆತ್ಮಾ ಅಪ್ರತೀಯಮಾನವಾದುದು ಹೀಗೆ ಇವೆಲ್ಲಕ್ಕೂ ಆತನು ಆತ್ಮಾ ಎಂಬ ಅಭಿಪ್ರಾಯವು. ಇಲ್ಲಿ ಬೀಜ ಶಬ್ದದಿಂದ ಜಡಪ್ರಕೃತಿ ಮಾತ್ರ ಹೇಳಲ್ಪಟ್ಟಿತೆಂದು ಅರ್ಥಮಾಡಲು ಸಾಧ್ಯವಿಲ್ಲವು. ಏಕೆಂದರೆ ಅದು ಎಲ್ಲಕ್ಕೂ ಬೀಜವಲ್ಲವು. ಬೀಜವೆಂದರೆ ಸಸ್ಯರೂಪ ಭತ್ತ ಮೊದಲಾದ ಬೀಜವೆಂಬರ್ಥವೂ ಕೂಡುವದಿಲ್ಲವು

ಭಾ. **ಕೇಶ ಸರ್ವಭೂತಾಶಯಸ್ಥಿತಃ” ಇತಿ ಪ್ರಕ್ರಮಾತ್ ; “ನತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ಇತ್ಯತ್ರಾಪ್ಯಾತ್ಮತಯಾ ವಸ್ಥಾನಮೇವ ವಿವಕ್ಷಿತಮ್. ಸರ್ವಂ ವಸ್ತುಜಾತಂ ಸರ್ವಾವಸ್ಥಂ ಮಯಾ ಆತ್ಮಭೂತೇನ ಯುಕ್ತಂ ಸ್ಯಾದಿತ್ಯರ್ಥಃ. ಅನೇನ ಸರ್ವಸ್ಯಾಸ್ಯ ಸಾಮಾನಾಧಿಕರಣ್ಯಸ್ಯಾತ್ಮತಯಾವಸ್ಥಿತಿರೇವ ಹೇತುರಿತಿ ಪ್ರಕಟಯತಿ** ॥ ೩೯ ॥

---

ಆಗ ಜಂಗಮ ದ್ರವ್ಯಕ್ಕೆ ಅದು ಬೀಜವಾಗುವದಿಲ್ಲವು. ಆದುದರಿಂದ ಶ್ರೀ ಭಾಷ್ಯಕಾರರು **“ಸರ್ವ ಭೂತಾನಾಂ ಸರ್ವಾವಸ್ಥಾವಸ್ಥಿತಾನಾಂ ತತ್ತದವಸ್ಥಾಬೀಜಭೂತಂ”** ಎಂದು ವ್ಯಾಖ್ಯಾನ ಮಾಡಿದರು. ಉತ್ತರಾರ್ಧಕ್ಕೆ ಮುಂದೆ ಭಾಷ್ಯವನ್ನು ಬರೆಯುತ್ತಾರೆ. **ಭೂತಜಾತಂ** - ಪ್ರಾಣಿ ವರ್ಗವು, ಇದು **ಭೂತಂ ಚರಾಚರಂ** ಎಂಬುದಕ್ಕೆ ವ್ಯಾಖ್ಯಾನವು, **ಮಯಾವಿನಾ** ಎಂದರೆ **ಮಯಾ ಆತ್ಮತಯಾವಸ್ಥಿತೇನ ವಿನಾ**-ನಾನು ಆತ್ಮಾವಾಗಿಲ್ಲದೇ ಇರುವದಾಗಿ, **ಯತ್ಸ್ಯಾತ್**-ಯಾವುದುಂಟೋ, **ನತದಸ್ತಿ**-ಅಂತಹ ಚರಾಚರ ಭೂತವು ಇಲ್ಲವು. ಹೀಗೆ ವ್ಯತಿರೇಕದಿಂದ ಹೇಳಿದುದರ ಅಭಿಪ್ರಾಯವೇನೆಂದರೆ ? ಎಲ್ಲಾದಕ್ಕೂ ನಾನೇ ಆತ್ಮಾವಾಗಿಯೇ ಇರುತ್ತೇನೆ, ಹಾಗಿಲ್ಲದೇ ಇರುವ ಚರಾಚರವಸ್ತುವೇ ಲೋಕದಲ್ಲಿಲ್ಲವು ಎಂದು ತಿಳಿಸುವದಕ್ಕಾಗಿ ಹೀಗೆ ಹೇಳಿದರೇವಿನಾ ಬೇರೆಯಲ್ಲವು. ಚರಾಚರವಸ್ತುಗಳೆಲ್ಲಾ ಅಸತ್ತಾದುವು, ಮಿಥ್ಯೆಯು, ಭ್ರಾಂತಿಯಿಂದ ಹಾಗೆ ತೋರುವವು, ನಾನೊಬ್ಬನೇ ಸತ್ಯವು ಎಂಬರ್ಥವು ಸರ್ವಾತ್ಮನಾ ಕೂಡುವದಿಲ್ಲವು, ಏಕೆಂದರೆ ಹಿಂದೆ ೨೦ನೆಯ ಶ್ಲೋಕದಲ್ಲಿ ಉಪಕ್ರಮಿಸಿ ಹೇಳಿದುದಕ್ಕೂ ಇಲ್ಲಿ ಉಪಸಂಹಾರಮಾಡಿ ಹೇಳಿದುದಕ್ಕೂ ಏಕಕಂಠ್ಯವಿರಬೇಕೇವಿನಾ ವಿರೋಧಕೂಡದೆಂದು ಮುಂದೆತಿಳಿಸುತ್ತಾರೆ.–**“ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ” ಇತಿ ಪ್ರಕ್ರಮಾತ್**-ಎಂದು ಆರಂಭದಲ್ಲಿ ಹೇಳಿರುವದರಿಂದ. **ನತದಸ್ತಿವಿನಾ** ಎಂದು ವ್ಯತಿರೇಕದಲ್ಲಿ ಇಲ್ಲಿ ಹೇಳಿರುವದಕ್ಕೂ ಅಲ್ಲಿ(ಗೀ. ೧೦.೨೦.) ಹೇಳಿರುವದಕ್ಕೂ ಸಹ ಏಕ ಕಂಠ್ಯವಿರತಕ್ಕದ್ದೆಂದು ತಿಳಿಸುತ್ತಾರೆ. **ಸರ್ವಭೂತಾಶಯಸ್ಥಿತಃ** ಎಂದು ಶ್ರೀ ಕೃಷ್ಣಭಗವಾನರವರ ಸರ್ವಭೂತಗಳಲ್ಲೂ ನಾನು ಇದ್ದೇನೆ ಎಂಬ ವಾಕ್ಯವು ಮಿಥ್ಯಾಭೂತವಸ್ತುವಿನಲ್ಲಿರುವಿಕೆಯನ್ನು ಬೋಧಿಸಿತು ಎಂದು ಶ್ರೀ ಕೃಷ್ಣನು ಸುಳ್ಳಾದುದನ್ನು ಉಪದೇಶಿಸಿದನು ಎಂದು ಹೇಳಲು ಆಗುವದಿಲ್ಲವಾದುದರಿಂದ, ಅದಕ್ಕನುಸಾರವಾಗಿ ಈ ವ್ಯತಿರೇಕ ರೂಪದ ಉಕ್ತಿಯಲ್ಲೂ ಹಾಗೆಯೇ ಅರ್ಥಮಾಡತಕ್ಕದ್ದೆಂಬ ಭಾವವು. ಗೀತಾಶಾಸ್ತ್ರದಲ್ಲಿ ಎಲ್ಲಿಯೂ ಮಿಥ್ಯಾವಾದಕ್ಕೆ ಅನುಕೂಲವೇ ಇಲ್ಲವೆಂದು ಪ್ರಾಪ್ತಸ್ಥಳಗಳಲ್ಲಿ ಸೂಚಿಸಿರುವೆವು. ಪರಮಾತ್ಮನು ಸಮಸ್ತ ಚಿದಚಿತ್ತುಗಳಿಗೂ ಆತ್ಮಾವಾಗಿರುವದರಿಂದಲೇ ಶರೀರಾತ್ಮಗಳಹಾಗೆ ಅವಿನಾಭಾವವು ; ವಿಶೇಷಣಗಳೊಂದಿಗೆ ವಿಶೇಷ್ಯವು ; ವಿಶಿಷ್ಟಾದ್ವೈತವು. ಹೀಗೆ “ **ನತದಸ್ತಿ** ” ಎಂದು ವ್ಯತಿರೇಕೋಕ್ತಿಯ ಅಭಿಪ್ರಾಯವೇನೆಂಬುದನ್ನು ಹಿಂದಿನ ೨೦ನೆಯ ಶ್ಲೋಕಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ಅನ್ವಯ ಮುಖೇನ ಮುಂದೆ ತಾತ್ಪರ್ಯವನ್ನು ದಯಪಾಲಿಸುತ್ತಾರೆ.–“ **ನತದಸ್ತಿ** ”**ಇತ್ಯತ್ರಾಪಿ** - ಎಂಬೀ ಉತ್ತರಾರ್ಧದಲ್ಲಿಯೂ ಕೂಡ, **ಆತ್ಮತಯಾವಸ್ಥಾನಮೇವ** - ಸರ್ವಭೂತಗಳಿಗೂ ತಾನು ಆತ್ಮಾವಾಗಿರುವ ಭಾವವೇ **ವಿವಕ್ಷಿತಂ** - ಇಲ್ಲಿಯೂ ಹೇಳಬೇಕಾದದ್ದು. ಹೀಗೆ ಹೇಳಿದುದರ ತಾತ್ಪರ್ಯವೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಸರ್ವಾವಸ್ಥಂ** - ಸಮಸ್ತಾವಸ್ಥೆಯುಳ್ಳ, **ಸರ್ವಂ ವಸ್ತುಜಾತಂ** - ಸಮಸ್ತ ವಸ್ತು ಸಮೂಹವೂ, **ಆತ್ಮಭೂತೇನ ಮಯಾ** - ಎಲ್ಲಾದಕ್ಕೂ ಆತ್ಮಾವಾಗಿರುವ ನನ್ನೊಂದಿಗೆ **ಯುಕ್ತಂ ಸ್ಯಾದಿತ್ಯರ್ಥಃ** - ನನಗೆ ಶರೀರವಾಗಿ, ಅಪೃಥಕ್ಸಿದ್ಧವಿಶೇಷಣ

ವಾಗಿರುವದರಿಂದ, ಸೇರಿದುವಾಗಿಯೇ ಇವೆ ಎಂಬ ತಾತ್ಪರ್ಯವು. ಚರಾಚರದೊಂದಿಗೆ ಅವಿನಾಭೂತತ್ವವನ್ನು ಈ ಉತ್ತರಾರ್ಧವು ಉಪದೇಶಿಸಿತು ಎಂಬುದು ಸಾರಭೂತಾರ್ಥವು. ಇದೇ ಹಿಂದೆಯೂ **"ಮಯಿ ಸರ್ವ ಮಿದಂ ಪ್ರೋತಂ ಸೂತ್ರೇಮಣಿಗಣಾ ಇವ"** (ಗೀ. ೭. ೭) ಎಂಬಲ್ಲಿಯೂ ಮತ್ತು **"ಯಾಭಿರ್ವಿಭೂತಿಭಿರ್ಲೋಕಾನಿಮಾಂ ಸ್ತ್ವಂ ವ್ಯಾಪ್ಯ ತಿಷ್ಠಸಿ"** (ಗೀ. ೧೦. ೧೬) ಎಂಬಲ್ಲಿಯೂ ಈ ವಿಧವಾದ ಅವಿನಾಭೂತತ್ವವು ಹೇಳಲ್ಪಟ್ಟಿತು. ಆ ಅವಿನಾಭೂತತ್ವವು ಹೇಗೆ ಎಂದರೆ ಶರೀರಾತ್ಮಭಾವದಿಂದ ಎಂಬುದು ಇಲ್ಲಿ ಸ್ಫುಟವಾಗಿ ತೋರಿಬರುತ್ತದೆ. ಹಾಗೆಯೇ ಶ್ರೀ ಪರಾಶರರೂ **"ಯದಂಬು ವೈಷ್ಣವಃ ಕಾಯಸ್ತತೋ ವಿಪ್ರವಸುಂಧರಾ । ಪದ್ಮಾಕಾರಾ ಸಮುದ್ಭೂತಾ ಪರ್ವತಾಬ್ಧ್ಯಾದಿ ಸಂಯುತಾ"** ಯಾವ ಕಾರಣದಿಂದ ಈ ಪರ್ವತ ಸಮುದ್ರಗಳಿಂದ ಸೇರಿದ ಜಗತ್ತೆಲ್ಲಾ ಪರಮಾತ್ಮನಿಗೆ ಶರೀರವೋ, ಆ ಕಾರಣದಿಂದ, **"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋ ದಿಶಶ್ಚ।ನದ್ಯಸ್ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ"** (ವಿ. ಪು. ೨. ೧೨. ೩೭-೩೮) ಅಸ್ತಿ ನಾಸ್ತಿ ಶಬ್ದಗಳಿಂದ ಹೇಳಲ್ಪಟ್ಟ ಚಿದಚಿತ್ತೆಲ್ಲಾ ಸಮಸ್ತವೂ ವಿಷ್ಣುವೇ ಎಂದು ಹೇಳಿ, ಶರೀರಾತ್ಮಭಾವವೇ ಸಾಮಾನಾಧಿಕರಣ್ಯೋಕ್ತಿಗೆ ನಿಬಂಧನವೆಂದು ವ್ಯಕ್ತವಾಗಿ ಬೋಧಿಸಿರುತ್ತಾರೆ.

ಮೂಲದಲ್ಲಿರುವ ಈ ಶ್ಲೋಕವನ್ನು ಇಲ್ಲಿ ಹೇಳಲು ಸಂಗತಿ ಏನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಹಿಂದೆ ಅನೇಕ ಶ್ಲೋಕಗಳಿಂದ **"ಆದಿತ್ಯಾನಾ ಮಹಂ ವಿಷ್ಣುಃ"** ಎಂದಾರಂಭಿಸಿ ಸರ್ವ ವಿಭೂತಿಗಳೊಂದಿಗೂ, ಆ ಕಾರಣದಿಂದ ಪ್ರಧಾನಗಳಾದ ವಿಭೂತಿಗಳೊಂದಿಗೂ ಸಾಮಾನಾಧಿಕರಣ್ಯವು ಹೇಳಲ್ಪಟ್ಟಿತು. ಇದರಿಂದ ಸರ್ವ ಶಬ್ದ ವಾಚ್ಯತ್ವವೂ ಪರಮಾತ್ಮನಿಗೆ ಪರ್ಯವಸಿತು ಹೀಗೆ ಸಾಮಾನಾಧಿಕರಣ್ಯದಿಂದ ಹೇಳಲು ಕಾರಣವೇನು ಎಂಬುದನ್ನು ಈ ಶ್ಲೋಕವು ಉಪದೇಶಿಸುವದರಿಂದ ಫಲಿತಾರ್ಥವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಅನೇನ** - ಇದರಿಂದ, ಈ ಶ್ಲೋಕಾಭಿಪ್ರಾಯದಿಂದ, **ಸರ್ವಸ್ಯಾಸ್ಯ ಸಾಮಾನಾಧಿಕರಣ್ಯಸ್ಯ** - ಈ ಭಗವಂತನಿಗೆ ಸಮಸ್ತ ವಸ್ತುಗಳೊಂದಿಗೂ ಸಾಮಾನಾಧಿಕರಣ್ಯವನ್ನು ಹೇಳುವದಕ್ಕೆ, **ಆತ್ಮತಯಾವಸ್ಥಿತಿರೇವ**-ಸಮಸ್ತವೂ ಈತನಿಗೆ ಶರೀರವಾಗಿ, ಈತನು ಅವೆಲ್ಲಕ್ಕೂ ಆತ್ಮನಾಗಿ ಇರೋಣವೇ **ಹೇತುರಿತಿ** - ಕಾರಣವೆಂದು, **ಪ್ರಕಟಯತಿ** - ಶ್ರೀಕೃಷ್ಣಭಗವಾನರವರು ಉದ್ಘೋಷಿಸಿ ಬಹು ಸ್ಪುಟವಾಗಿ ಹೇಳುತ್ತಾರೆಂಬ ಭಾವವು? ಇಲ್ಲಿ **ಅವಸ್ಥಿತಿರೇವ ಹೇತುಃ** ಎಂದು ಅವಧಾರಣ ಪ್ರಯೋಗದಿಂದ ಸಾಮಾನಾಧಿಕರಣ್ಯ ಲಕ್ಷಣವೂ ಇನ್ನು ಯಾವ ಕಾರಣದಿಂದಲೂ ಉಪಪಾದಿಸಲು ಸಾಧ್ಯವಿಲ್ಲವೆಂಬ ಅಭಿಪ್ರಾಯವೂ ದ್ಯೋತಿತವು. ಇತರ ಸಿದ್ಧಾಂತಿಗಳು ಸಾಮಾನಾಧಿಕರಣ್ಯಕ್ಕೆ ಹೇತುಗಳನ್ನು ಹೇಳುವದು ಸಮಂಜಸವಲ್ಲವೆಂಬುದೂ ಸೂಚಿತವು. ಸಾಮಾನಾಧಿಕರಣ್ಯೋಕ್ತಿಲಕ್ಷಣಗಳನ್ನು ಪರಿಗಣಿಸದೇ ಹೇಳುವ ಅಭಿಪ್ರಾಯಗಳು ಇತರ ಸಿದ್ಧಾಂತಿಗಳ ವಾದಗಳು ಎಂದು ಹೇಳಿದಂತಾಯಿತು **ಪ್ರಕಟಯತಿ** ಎಂಬುದರಿಂದ ಸಾಮಾನಾಧಿಕರಣ್ಯ ಲಕ್ಷಣವನ್ನು ಘಂಟಾಘೋಷದಹಾಗೆ ಪ್ರಾಜ್ಞರಿಗೆಲ್ಲಾ ತಿಳಿಯಪಡಿಸುತ್ತಾರೆ ಎಂಬ ಭಾವವು ವ್ಯಕ್ತಪಡುತ್ತದೆ. ಆತ್ಮ ಒಂದೇ ಲೊಕದಲ್ಲಿ ಇರುವದಾದರೆ, ಸಾಮಾನಾಧಿಕರಣ್ಯವು ಹೇಗೆ? ಎಂಬಾಕ್ಷೇಪಕ್ಕೆ ಸರಿಯಾದ ಉತ್ತರವು ದೊರೆಯದು. ಈ ಶ್ಲೋಕದಲ್ಲಿ, ತಾನು ಆತ್ಮನಾಗಿ ಇಲ್ಲದೆ ಯಾವ ವಸ್ತುವೂ ಇಲ್ಲವೆಂದು ಹೇಳಿರುವದರಿಂದ, ಎಲ್ಲಾ ವಸ್ತುಗಳಿಗೂ, ಆ ವಸ್ತುಗಳ ವಿಶೇಷಣಗಳಿಗೂ, ಆ ವಸ್ತುಗಳ ಮೂಲಕ ಅವಿನಾ ಭೂತತ್ವವೂ ಆತ್ಮತ್ವವೂ ಸಿದ್ಧವೆಂದು ಗ್ರಹಿಸತಕ್ಕದ್ದಾಗಿರುತ್ತದೆ. ಇದು ಹಿಂದೆಯೇ ಉಪಪಾದಿತವು. ॥ ೩೯ ॥

**ಮೂ. ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥** ೪೦.

**ಮೂಲಕ್ಕೆ ಅರ್ಥವು:**—ಹಿಂದೆ ವಿಭೂತಿಯನ್ನು ವಿಸ್ತರಿಸಿಹೇಳುವದರ ಉಪಕ್ರಮದಲ್ಲಿ **"ಹನ್ತ ತೇ ಕಥಯಿಷ್ಯಾಮಿ ವಿಭೂತೀ ರಾತ್ಮನಶ್ಶುಭಾಃ । ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯಮೇ"** ಎಂದು ೧೯ನೆಯ ಶ್ಲೋಕದಲ್ಲಿ ಹೇಳಿದುದನ್ನೇ ಈಗ ನಿಗಮನದಲ್ಲೂ ಅನುವಾದಮಾಡಿ ಮುಗಿಸುತ್ತಾರೆ. **ಹೇ ಪರಂತಪ**-ಓ ಶತ್ರುಗಳನ್ನು ತಪಿಸುವಹಾಗೆ ಮಾಡುವನೇ, ಇದರಿಂದ ಇಂತಹ ಪರಂತಪನಾದ ನೀನೂ ನನ್ನ ವಿಭೂತಿಎಂಬುದು ಇನ್ನೊಂದು ಸಲ ಸ್ಮಾರಿತವು. **ಮಮ**-ಕಲ್ಯಾಣಗುಣ ವಿಭೂತಿಗಳಿಂದ ಪರಿಪೂರ್ಣಬ್ರಹ್ಮನಾದ ನನ್ನ, **ದಿವ್ಯಾನಾಂ**-ಹಿಂದೆ **ಶುಭಾಃ ವಿಭೂತೀಃ** ಎಂದು ಹೇಳಿದರು, ಅದನ್ನೇ ಅನುವಾದಮಾಡಿ **ದಿವ್ಯಾನಾಂ** ಎಂದು ಈಗ ಹೇಳುತ್ತಾರೆ, ಎಂದರೆ ಕಲ್ಯಾಣತಮಗಳಾದ, ಮಿಥ್ಯೆಯಾದವನ್ನು **ದಿವ್ಯಗಳೆಂದೂ, ಶುಭಗಳೆಂದೂ**, ಹೇಳಲು ಆಗುವದಿಲ್ಲವಷ್ಟೇ; ಇಂತಹ ದಿವ್ಯಗಳಾದ, **ವಿಭೂತೀನಾಂ**-ನಿಯಾಮ್ಯವರ್ಗಗಳಿಗೆ, **ನಾಂತೋಽಸ್ತಿ**-ಅಂತವೇ ಇಲ್ಲವು, ವಿಭೂತಿಯು ಅನಂತವಾದುದು ಎಂಬ ತಾತ್ಪರ್ಯವು. ಹೀಗೆ ಅನಂತವಾಗಿದ್ದರೂ ಪ್ರಾಧಾನ್ಯತಃ ವಿಸ್ತರಿಸಿ ಹೇಳಿದರಲ್ಲಾ ಅದೇಕೆ ಎಂದು ಕೇಳುತ್ತೀಯೋ? ಅನಂತವೆಂದು ಇಷ್ಟುಮಾತ್ರ ಹೇಳಿ, ವಿಸ್ತರಿಸಲು ಸಾಧ್ಯವಿಲ್ಲವೆಂದು ಹೇಳಿ ಸುಮ್ಮನಾಗದೆ, ಪ್ರಾಧಾನ್ಯತಃ ವಿಭೂತಿಗಳನ್ನು ವಿಸ್ತರಿಸಿ ಉಪದೇಶಿಸಿದರಲ್ಲಾ ಅದು ಏಕೆ ಎಂದು ಕೇಳುತ್ತೀಯೋ? ಒಂದು ಉದ್ದೇಶ್ಯವನ್ನು ಮನಸ್ಸಿನಲ್ಲಿಟ್ಟು ಅದನ್ನು ನಿನಗೆ ಉಪದೇಶಿಸಿದೆನು ಎಂದು ತಿಳಿಸುತ್ತಾರೆ. ಮೇಲಿನ ಶಙ್ಕಾ ನಿವಾರಣಾರ್ಥವಾಗಿಯೇ **ತು** ಶಬ್ದವನ್ನು ಪ್ರಯೋಗಿಸಿ, **ಉದ್ದೇಶತಃ** ತಿಳಿಸಿದೆನೆಂದು ಉತ್ತರಾರ್ಧದಿಂದ ಹೇಳುತ್ತಾರೆ. **ಮಯಾ**-ನನ್ನಿಂದ, ನಿನಗೆ ಪರಮ ಹಿತೋಪದೇಶ ಮಾಡಬೇಕೆಂದಿರುವ ನನ್ನಿಂದ, **ಏಷಃ**-ಈಗ ೨೦ನೆಯ ಶ್ಲೋಕದಿಂದ ಇದುವರೆಗೂ ಉಪದೇಶಿಸಿದ, **ವಿಭೂತೇಃ ವಿಸ್ತರಸ್ತು**-ವಿಭೂತಿಯ ವಿಸ್ತರವಾದರೋ, **ಉದ್ದೇಶತಃ** ಹಿಂದೆ ೧೯ನೆಯ ಶ್ಲೋಕದಲ್ಲಿ ಹೇಳಿರುವ **ಪ್ರಾಧಾನ್ಯತಃ** ಎಂಬುದಕ್ಕೆ ಬದಲಾಗಿ ಇಲ್ಲಿ **ಉದ್ದೇಶತಃ** ಎಂದಿರುವದರಿಂದ ಎರಡು ಪದಗಳಿಂದುಂಟಾಗುವ ಅರ್ಥವೂ ಒಂದೇಯಾಗಿರಬೇಕೆಂಬುದು ತೋರಿಬರುತ್ತದೆ. ಎಲ್ಲವೂ ಹೇಳಲು ಸಾಧ್ಯವಿಲ್ಲದುದರಿಂದ ಏಕದೇಶಮಾತ್ರವೇ ಸಾಧ್ಯವಾಗಿ ಪ್ರಾಧಾನ್ಯತಃ ಹೇಳಲ್ಪಟ್ಟಿತು; ಅದನ್ನೇ ಅನುವಾದಮಾಡಿ ಏಕದೇಶಮಾತ್ರ ಉದ್ದೇಶತಃ ಹೇಳಲ್ಪಟ್ಟಿತೆಂಬ ಭಾವವು. ಅಥವಾ ಒಂದು ಉದ್ದೇಶವನ್ನು ಮನಸ್ಸಿನಲ್ಲಿಟ್ಟು, ಆ ಉದ್ದೇಶ ಯಾವುದೆಂದರೆ ನಿನಗೆ ಪರಮ ಹಿತವು ಉಂಟಾಗುವಹಾಗೆ ಜ್ಞಾನೋಪದೇಶವನ್ನು ಮಾಡಬೇಕೆಂಬದಾಗಿ; ಭಕ್ತಿಯೋಗದಲ್ಲಿ ಇಳಿಯಬೇಕೆಂದಿರುವ ನಿನಗೆ ಧ್ಯೇಯವಸ್ತುವಿನಲ್ಲಿ ಮಾಹಾತ್ಮ್ಯೆಯೂ ಶ್ರದ್ಧೆಯೂ ಪ್ರೀತಿಯೂ ಅಙ್ಕುರಿಸುವದಕ್ಕಾಗಿ, ಕಲ್ಯಾಣಗುಣಗಳಿಂದಲೂ, ನಿರತಿಶಯ ಮಾಹಾತ್ಮ್ಯೆಯುಳ್ಳ ವಿಭೂತಿವರ್ಗಗಳಿಂದಲೂ ಶೋಭಿಸುವ ಪರಿಪೂರ್ಣಬ್ರಹ್ಮನೆಂಬ ಭಾವ ಉಂಟಾಗಲಿ ಎಂಬ ಉದ್ದೇಶದಿಂದ; ಅತಿಶಯಿತ ಮಾಹಾತ್ಮ್ಯೆಯುಳ್ಳವುಗಳು ಮಾತ್ರವೇ ಉದ್ದೇಶತಃ ಉಪದೇಶಿಸಲ್ಪಟ್ಟವೆಂಬ ಭಾವವು; **ಪ್ರೋಕ್ತಃ**-ಉಪದೇಶಿಸಲ್ಪಟ್ಟಿತು. ಇಷ್ಟೆಲ್ಲಾ ಅನಂತವಾದುದನ್ನು ಉಪದೇಶಿಸಿದೆಯಲ್ಲಾ ಯಾವ ಪ್ರಯೋಜನಕ್ಕಾಗಿ ಎಂದು ನೀನು ಕೇಳಬಹುದು. ಇಂತಹ ಶಙ್ಕಾ ನಿವರ್ತನೆಗಾಗಿಯೇ **ತು** ಶಬ್ದವು. ಮನಸ್ಸಿನಲ್ಲಿ ಉದ್ದೇಶವನ್ನಿಟ್ಟೇ ನಿನಗೆ ಉಪದೇಶಿಸಿರುತ್ತೇನೆಂಬ ತಾತ್ಪರ್ಯವು. ಆ ಉದ್ದೇಶ್ಯವಾದರೋ ನನ್ನಲ್ಲಿ ಮಾಹಾತ್ಮ್ಯೆಯು ಸ್ಥಾಪಿಸಲ್ಪಟ್ಟು ನಾನು ಧ್ಯೇಯವಸ್ತುವೆಂಬ ನಂಬಿಕೆಯು ನಿನಗೆ ನೆಲಗೊಳ್ಳಲಿ ಎಂಬ ಆಶಯದಿಂದ ಹೇಳ

ಭಾ. ಮಮ ದಿವ್ಯಾನಾಂ-ಕಲ್ಯಾಣೀನಾಂ ವಿಭೂತೀನಾಮನ್ತೋನಾಸ್ತಿ. ಏಷ ತು ವಿಭೂತೇರ್ವಿಸ್ತರೋ ಮಯಾ ಕೈಶ್ಚಿದುಪಾದಿಭಿಸ್ಸಂಕ್ಷೇಪತಃ ಪ್ರೋಕ್ತಃ॥ ४೦.

ಮೂ. ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್॥ ४१.

ಸ್ಪಷ್ಟವೆಂಬ ತಾತ್ಪರ್ಯವು. ಯಾದೃಚ್ಛಿಕವಾಗಿ ಹೇಳಿದೆನೆಂದು ಭಾವಿಸಬೇಡ. ಮುಖ್ಯವಾಗಿ ನೀನು ತಿಳಿಯತಕ್ಕದ್ದಾದುದರಿಂದ ಉಪದೇಶಿಸಿರುತ್ತೇನೆ.

**ಭಾಷ್ಯಾರ್ಥವು:**—**ಮಮ**—ನನ್ನ, **ದಿವ್ಯಾನಾಂ** ಎಂದರೆ **ಕಲ್ಯಾಣೀನಾಂ**—ಮಙ್ಗಳಕರಗಳಾದ, ಹಿಂದೆ ಶುಭಗಳು ಎಂದು ಹೇಳಿದುದನ್ನನುಸರಿಸಿ ಇಲ್ಲಿ **ದಿವ್ಯಾನಾಂ** ಎಂದು ಪ್ರಯೋಗವಿರುವದರಿಂದ **ಕಲ್ಯಾಣೀನಾಂ** ಎಂಬ ಭಾಷ್ಯವು; **ವಿಭೂತೀನಾಂ**-ನಿಯಾಮ್ಯವರ್ಗಗಳಿಗೆ, **ಅಂತವು, ನಾಸ್ತಿ**—ಇಲ್ಲವು. ಹೀಗೆ ಅಂತವಿಲ್ಲದುದನ್ನು ವಿಸ್ತರಿಸಿಹೇಳುವದು ಅಸಾಧ್ಯವಾಗಿರುವಾಗ ಈಗ ಉಪದೇಶಿಸಿದುದು ಯಾವ ಪ್ರಯೋಜನಕ್ಕಾಗಿ ಎಂಬ ಶಙ್ಕಾವ್ಯುದಾಸಕ್ಕಾಗಿ ಹೇಳುವ ಉತ್ತರವಾದುದರಿಂದ **ತು** ಶಬ್ದವು, **ಮಯಾ** ನನ್ನಿಂದ **ಏಷಃ**-ಈಗ ಉಪದೇಶಿಸಿದ **ವಿಭೂತೇ ರ್ವಿಸ್ತರಸ್ತು** ವಿಭೂತಿಗಳ ವಿಸ್ತರವಾದರೋ, **ಕೈಶ್ಚಿದುಪಾದಿಭಿಃ ಸಂಕ್ಷೇಪತಃ** - ಇದು **ಉದ್ದೇಶತಃ** ಎಂಬುದರ ವ್ಯಾಖ್ಯಾನವು. ಕೆಲವು ವ್ಯಾಜಗಳಿಂದ ಸಂಪೂರ್ಣವಾಗಿ ಹೇಳುವದು ಸಾಧ್ಯವಲ್ಲದುದರಿಂದ ಸಂಕ್ಷೇಪವಾಗಿಯೂ ಮತ್ತು ವಿಭೂತಿಮತ್ತಾಗಿರುವವನೇ ಧ್ಯೇಯವಸ್ತುವಾಗಿ ಆತನಲ್ಲಿ ಭಕ್ತಿ ನೆಲಗೊಳ್ಳುವುದಕ್ಕೆ ಅದರ ಮಾಹಾತ್ಮ್ಯೆಯ ಪ್ರದರ್ಶನಕ್ಕಾಗಿಯೂ ಸಂಕ್ಷೇಪವಾಗಿ, **ಪ್ರೋಕ್ತಃ** - ಹೇಳಲ್ಪಟ್ಟಿತು ದಿವ್ಯಗಳಾದವನ್ನು ತಿಳಿಸಿದರೆ ಮಾಹಾತ್ಮ್ಯೆಯು ತೋರಿಬರುತ್ತದೆಂಬ ಉದ್ದೇಶದಿಂದ ಹಾಗೆ ಉಪದೇಶಿಸಲ್ಪಟ್ಟ ಭಾವವು. **ಸಂಕ್ಷೇಪತಃ** - ಎಂದು ವ್ಯಾಖ್ಯಾನಮಾಡಿರುವದು, **ಉದ್ದೇಶತಃ** ಎಂಬುದರಿಂದ ಹೇಳಲ್ಪಟ್ಟಿರುವದು, ಎಲ್ಲೋ ಏಕದೇಶವೆಂಬ ಭಾವವನ್ನು ಸೂಚಿಸುತ್ತದೆ.

**ಮೂಲಕ್ಕೆ ಅರ್ಥವು:**—ಪ್ರಾಧಾನ್ಯತಃ ಹೇಳುವೆನೆಂದು (ಗೀ. ೧೦. ೧೯) ಎಂದಾರಂಭಿಸಿದುವನ್ನೇ ಹಿಂದಿನ ಶ್ಲೋಕದಲ್ಲಿ ಉದ್ದೇಶತಃ ಸಙ್ಗ್ರಹವಾಗಿ ತಿಳಿಸಿರುತ್ತೇನೆಂದು ಹೇಳಿದರು. ಆ ಉದ್ದೇಶವು ಯಾವುದು ಮುಖ್ಯವಾಗಿ ಎಂದರೆ ತಿಳಿಸುತ್ತಾರೆ. ಹೀಗೆ **ದಿವ್ಯಗಳಾಗಿ** ಎಂದರೆ ಮಙ್ಗಳಕರಗಳಾಗಿರುವ ವಿಭೂತಿಗಳನ್ನು **ಪ್ರಾಧಾನ್ಯತಃ** ಹೇಳಿದುದರಿಂದ ನೀನು ಗ್ರಹಿಸತಕ್ಕ ಅಂಶವೇನೆಂದರೆ–ಎಲ್ಲೆಲ್ಲಿ ಈ ವಿಭೂತಿಗಳ ಮಙ್ಗಳಕರವಾದ ಮಾಹಾತ್ಮ್ಯೆಯನ್ನು **ಕಾಣುತ್ತಿಯೋ** ಅವೆಲ್ಲವೂ ನನ್ನ ದಿವ್ಯ ತೇಜಸ್ಸಿನ ಏಕದೇಶ ಸಂಬಂಧದಿಂದಲೇ ಉಂಟಾಗಿರುವದರಿಂದಲೇ ಅವುಗಳಿಗೆ ಅಸಾಧಾರಣ ಮಹಾತ್ಮ್ಯೆಯು ಎಂದು ತಿಳಿ, ಎಂದು ಉಪದೇಶಿಸುತ್ತಾರೆ. ನನ್ನ ವಿಭೂತಿಗಳಿಗೇನೇ ಇಂತಹ ಮಾಹಾತ್ಮ್ಯೆಯನ್ನುಂಟುಮಾಡಿದವನು ನಾನಾದರೆ ನನ್ನ ಮಾಹಾತ್ಮ್ಯೆಯು ಅಚಿಂತ್ಯವೆಂಬುದು ಕೈಮುತಿಕನ್ಯಾಯಸಿದ್ಧವೆಂಬ ಭಾವವು. ಅಥವಾ ಇನ್ನೊಂದುವಿಧವಾಗಿಯೂ ಅವತಾರಿಕೆಯನ್ನು ಕೊಡಬಹುದು. ಮಾಹಾತ್ಮ್ಯೆಯುಳ್ಳ ವಿಭೂತಿಗಳು ಇಷ್ಟೇ ಅಲ್ಲವು ಇನ್ನೂ ಅನೇಕಉಂಟು. ಅಂತಹ **ಪ್ರಾಧಾನ್ಯತಃ** ಮಾಹಾತ್ಮ್ಯೆಯುಳ್ಳವುಗಳನ್ನೂ ಕೂಡ ಹೇಳಿ ಮುಗಿಸುವುದು ಸಾಧ್ಯವಿಲ್ಲವಾದುದರಿಂದ, ಎಲ್ಲೆಲ್ಲಿ ನನ್ನ ವಿಭೂತಿಗೆ ಸೇರಿದವುಗಳು ಸಂಪತ್ತು, ಶಾಸ್ತ್ರ, ಜ್ಞಾನವಿಕಾಸ ಇತ್ಯಾದಿಗಳಿಂದ ಲೋಕದಲ್ಲಿ ಮಾಹಾತ್ಮ್ಯೆಯುಳ್ಳವಾಗಿ ತೋರಿ ಬರುತ್ತವೆಯೋ ಅವೆಲ್ಲವೂ ನನ್ನ ತೇಜಸ್ಸಿನ ಏಕದೇಶಸಂಬಂಧದಿಂದಲೇ ಹಾಗೆಉತ್ಕೃಷ್ಟತೆಯನ್ನು ಹೊಂದಿದವೆಂದು ತಿಳಿ ಎಂದು ಹೇಳಿ ಮುಗಿಸುತ್ತಾರೆ. **ಯದ್ಯತ್**-ಯಾವಯಾವ, **ವಿಭೂತಿಮತ್**-ಸ್ವಾಮಿ ನಿಯ

**ಭಾ ಯದ್ಯತ್ ವಿಭೂತಿಮತ್ - ಈಶಿತವ್ಯಸಂಪನ್ನಂ, ಭೂತಜಾತಂ, ಶ್ರೀಮತ್ - ಕಾನ್ತಿಮತ್, ಧನಧಾನ್ಯಸಮೃದ್ಧಂ ವಾ ಊರ್ಜಿತಂ - ಕಲ್ಯಾಣಾರಂಭೇಷೂದ್ಯುಕ್ತಮ್, ತತ್ತನ್ಮಮ ತೇಜೋಂಶ ಸಂಭವಮಿತ್ಯವಗಚ್ಛ. ತೇಜಃ - ಪರಾಭಿಭವನ ಸಾಮರ್ಥ್ಯಮ್, ಮಮಾಚಿನ್ತ್ಯಶಕ್ತೇರ್ನಿಯಮನಶಕ್ತ್ಯೇಕದೇಶಸಂಭವಮಿತ್ಯರ್ಥಃ ||**

ಮನಕ್ಕೆ ಒಳಪಟ್ಟ **ಸತ್ವಂ** - ಪ್ರಾಣಿವರ್ಗವು, **ಶ್ರೀಮತ್** - ಲಕ್ಷ್ಮೀಕಟಾಕ್ಷದಿಂದ ಯುಕ್ತವಾಗಿದೆಯೋ, ಅಥವಾ ಸರ್ವಸಂಪತ್ಸಮೃದ್ಧಿ ಯುಕ್ತವಾಗಿವೆಯೋ ಅಥವಾ ಕಾಂತಿಯುಕ್ತವಾಗಿವೆಯೋ ಪ್ರಾಜ್ಞತೆ ಮೊದಲಾದವುಗಳಿಂದ ಪ್ರಕಾಶಿಸುತ್ತಾ ಇವೆಯೋ, ಮತ್ತು **ಯದ್ಯತ್ ಊರ್ಜಿತಮೇವವಾ** - ಯಾವ ಯಾವವು ಮೊದಲಿದ್ದುದಕ್ಕಿಂತ ಅತಿಶಯಿತ ಮಹೋನ್ನತೆಯನ್ನು ಹೊಂದುವದಾಗಿವೆಯೋ **ತತ್ತತ್** - ಅಂತಹ ಭೂತವರ್ಗವೆಲ್ಲಾ **ಮಮ ತೇಜೋಂಶಸಂಭವಮ್**- ಅಪ್ರತಿಹತವಾಗಿ ಇತರರನ್ನೆಲ್ಲಾ ತಿರಸ್ಕರಿಸುವ ನನ್ನ ತೇಜಸ್ಸಿನ ಲವಾಂಶದಿಂದುಂಟಾದ ಉತ್ಪತ್ತಿಯುಳ್ಳವುವೆಂದು, ಎಂದರೆ ನಾನು ಅವುಗಳಿಗೆಲ್ಲಾ ಅಂತರಾತ್ಮವಾಗಿ ಅವುಗಳಿಗೆಲ್ಲಾ ಮಾಹಾತ್ಮ್ಯಯುಂಟಾಗಲಿ ಎಂದು ಸಙ್ಕಲ್ಪಿಸಿರುವದರಿಂದಲೇ ಅಂತಹ ಮಾಹಾತ್ಮ್ಯಯುಳ್ಳವೆಂದು **ತ್ವಂ** ನೀನು, **ಅವಗಚ್ಛ** - ತಿಳಿ, ಎಂಬ ಭಾವವು; ನಿಸ್ಸಂದೇಹವಾಗಿ ಹಾಗೆ ಭಾವಿಸತಕ್ಕದ್ದು, ಎಂಬ **ಉಪದೇಶವು.** ಅವುಗಳ ಮಾಹಾತ್ಮ್ಯಯಿಂದ ನಾನು ಎಷ್ಟು ತೇಜೋವಿಶಿಷ್ಟನು, ಎಷ್ಟು ಮಹತ್ತಾದವನು ಎಂಬುದನ್ನು ನೀನು ಸುಲಭವಾಗಿ ಗ್ರಹಿಸಿ ಅಂತವನನ್ನು ಭಜಿಸಿದರೆ ನಿನಗೆ ಸರ್ವಶ್ರೇಯಸ್ಸೂ ದೊರೆಯುತ್ತದೆಂಬುದನ್ನು ನೀನೇ ಗ್ರಹಿಸಬಹುದೆಂಬ ಭಾವವು. ವ್ಯಾಸ, ಅಂಬರೀಷ, ಶುಕ, ಶೌನಕ, ಮನು, ವಾಲ್ಮೀಕಿ, ಧೃವ, ಪ್ರಹ್ಲಾದ, ವಿಭೀಷಣ ಮೊದಲಾದವರೆಲ್ಲಾ ನನ್ನ ಅಂಶಭೂತರೆಂಬ ಭಾವವು.

**ಭಾಷ್ಯಾರ್ಥವು**:—ವಿಭೂತಿಗಳಲ್ಲಿ ಪ್ರಾಧಾನ್ಯವಾದವುಗಳಲ್ಲೂ, ಕೆಲವು ಮಾತ್ರವೇ ಉಪದೇಶಿಸಲ್ಪಟ್ಟಿರುವದರಿಂದ ಇನ್ನೂ ಅನೇಕವಿದೆಯಲ್ಲಾ ಎಂದು ಪರ್ಯಾಲೋಚಿಸಿ, ಇನ್ನೂ ಹೇಳದೆ ಇರುವವುಗಳಲ್ಲಿ ಉತ್ಕೃಷ್ಟ ವಿಭೂತಿಯೆಂದು ನೀನು ತಿಳಿಯುವಬಗೆಯನ್ನು ಹೇಳುವೆನು; ಅವುಗಳಿಗೆಲ್ಲಾ ನಾನೇ ಆತ್ಮನೆಂದೂ ತಿಳಿ ಎಂದು, ಈ ಶ್ಲೋಕದ ಮೂಲಕ ತಿಳಿಸುತ್ತಾರೆ— **ಯದ್ಯತ್** - ಯಾವ ಯಾವುದು, **ವಿಭೂತಿಮತ್** ಎಂದರೆ **ಈಶಿತವ್ಯ ಸಂಪನ್ನಂ** –ನಿಯಮಿಸಲ್ಪಡುವ ಪ್ರಭಾವವನ್ನು ಹೊಂದಿರುವ, **ಭೂತಜಾತಂ** - ಇದು, **ಸತ್ವಂ** ಎಂಬುದರ ವ್ಯಾಖ್ಯಾನವು. ಪ್ರಾಣಿವರ್ಗವು **ಸತ್ವಂ**, ಎಂದರೆ ಪ್ರಾಣಿ ಅಥವಾ ಜನ್ತು ಎಂಬರ್ಥವಾಗುತ್ತದೆ, **ಭೂತಜಾತಂ** - ಭೂತಸಮೂಹವೆಂಬ ವ್ಯಾಖ್ಯಾನವು ಹೇಗೆ ? ಎಂದರೆ **ಯತ್ ಯತ್** ಎಂದು ಎರಡುಸಲ ಮೂಲದಲ್ಲಿ ಹೇಳಿರುವದರಿಂದ ಉಂಟಾಗುವ ಅಭಿಪ್ರಾಯವು **ಶ್ರೀಮತ್** - ಎಂದರೆ **ಕಾನ್ತಿಮತ್** - ಪ್ರಕಾಶವನ್ನು ಹೊಂದಿರುತ್ತದೋ, ಅಥವಾ **ಧನಧಾನ್ಯ ಸಮೃದ್ಧಂ ವಾ** - **ಧನಧಾನ್ಯ ಸಮೃದ್ಧಿ** ಯುಳ್ಳದೋ **ಊರ್ಜಿತಂ** - ಮಙ್ಗಳಕರಕಾರ್ಯಗಳಲ್ಲಿ ಉದ್ಯುಕ್ತವಾಗಿರುವುದೋ ಎಂದರೆ ಅಭಿವೃದ್ಧಿಯನ್ನು ಹೊಂದುತ್ತಲಿರುವುದೋ **ತತ್ತತ್** ಅವುಗಳನ್ನೆಲ್ಲಾ **ಮಮ ತೇಜೋಂಶಸಂಭವಮ್** - ನನ್ನ ತೇಜಸ್ಸಿನ ಲವಾಂಶದಿಂದ ಉತ್ಪತ್ತಿಯುಳ್ಳವನ್ನಾಗಿ **ಇತ್ಯವಗಚ್ಛ**-ಎಂದು ತಿಳಿ. ವಿಭೂತಿಶಬ್ದಕ್ಕೆ ಈ ಪ್ರಕರಣಾನುಗುಣ್ಯೇನ **ಈಶಿತವ್ಯ**ವೆಂದೇ ಅರ್ಥವೆಂದು ಸ್ಪಷ್ಟವಾಗಿ ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಮುಂದೆ **ಮಮ ತೇಜೋಂಶ ಸಂಭವಂ** ಎಂದಿರುವದರಿಂದ ಅಂತಹ ತೇಜಸ್ಸಿನ ಲವಾಂಶದಿಂದುಂಟಾದುದೂ ಸಹ ಕಾಂತಿಯುಕ್ತವಾಗಿಯೇ ಇರಬೇಕೆಂದು ತಿಳಿಸುವದಕ್ಕಾಗಿ **ಶ್ರೀಮತ್** ಎಂಬುದಕ್ಕೆ **ಕಾನ್ತಿಮತ್**

ಎಂಬ ಭಾಷ್ಯವು. ಶ್ರೀ ಶಬ್ದಕ್ಕೆ ಲಾಕ್ಷಣಿಕಾರ್ಥವೇ ಯುಕ್ತವೆಂದು ಭಾವಿಸಿ, ಶ್ರೀ ಎಂದರೆ ಕಾಂತಿಯೂ ಆಗಬಹುದು, ಅಥವಾ ಸಂಪತ್ತೂ ಆಗಬಹುದೆಂದು, **ಧನಧಾನ್ಯ ಸಮೃದ್ಧಿಂವಾ** ಎಂದು ವಿಕಲ್ಪಿಸಿ ಅರ್ಥಮಾಡಿರುತ್ತಾರೆ. ಇಲ್ಲಿ **ಊರ್ಜಿತಂ** ಎಂದರೆ ಕಲ್ಯಾಣಾರಂಭೇಷು **ಉದ್ಯುಕ್ತಂ** - ಶ್ರೇಯಸ್ಸನ್ನುಂಟುಮಾಡುವ ಕಾರ್ಯಾರಂಭದಲ್ಲಿ ಉದ್ಯುಕ್ತವಾದ, ಊರ್ಜಾ ಎಂದರೆ ದೀನತ್ವವಿಲ್ಲದೆ ಸನ್ನಾಹ ಶೀಲತ್ವವು ಹೇಳಿರುವದರಿಂದ **ಉತ್ಸಾಹ ಶೀಲತೆಯಿಂದ "ಉತ್ಸಾಹವಂತಃ ಪುರುಷಾನಾವಸೀದಂತಿ ಕರ್ಮಸು"** (ರಾಮಾಯಣ. ಕಿಷ್ಕಿಂಧಾ.೧-೧೧೨) ಎಂದು ಹೇಳಿರುವಹಾಗೆ, **ಕಲ್ಯಾಣಾರಂಭ** ಯಾವಾಗ ಆಯಿತೋ, ಆಗ ಫಲಸಿದ್ಧಿಯೂ ಉಂಟೆಂಬುದೂ ಸೂಚಿತವು; ಏಕೆಂದರೆ ಅವೆಲ್ಲವೂ **ಮಮ ತೇಜೋಂಶ ಸಂಭವಂ;** ಇಲ್ಲಿ ತೇಜಶ್ಶಬ್ದಕ್ಕೆ ಯಾವ ಅರ್ಥವೆಂದರೆ ಮೊದಲು ಅವತಾರಿಕೆಯಲ್ಲಿ ಜ್ಞಾನಬಲೈಶ್ವರ್ಯತೇಜಸ್ಸೇ ಮೊದಲಾದ ಷಾಡ್ಗುಣ್ಯ ಪರಿಪೂರ್ಣನೆಂದು ಹೇಳಲ್ಪಟ್ಟಲ್ಲಿ ತೇಜಶ್ಶಬ್ದಕ್ಕೆ ಯಾವ ಅರ್ಥವೋ, ಅದೇ ಅರ್ಥವೆಂದು ತಿಳಿಸುತ್ತಾರೆ-**ತೇಜಃ** ಎಂದರೆ ಕಾಂತಿ ಎಂಬರ್ಥವಲ್ಲವು; **ಪರಾಭಿಭವನ ಸಾಮರ್ಥ್ಯಮ್**-ಇತರರಿಂದ ತಾನು ತಿರಸ್ಕರಿಸಲ್ಪಡದೆ ಅವರನ್ನು ನಿರಾಕರಿಸುವ ಸಾಮರ್ಥ್ಯವು. ತೇಜಶ್ಶಬ್ದಕ್ಕೆ ಅರ್ಥಹೇಳಿ, **ಮಮ ತೇಜೋಂಶ ಸಂಭವಂ** ಎಂದು ಹೇಳಿದುದರ ತಾತ್ಪರ್ಯವೇನೆಂದರೆ ತಿಳಿಸುತ್ತಾರೆ.-**ಮಮ**-ಅತ್ಯದ್ಭುತಾಶ್ಚರ್ಯಶಕ್ತಿಯುಳ್ಳ ನನ್ನ, ಅಘಟಿತ ಘಟನಾ ಶಕ್ತಿಯುಳ್ಳ ನನ್ನ, **ಅಚಿನ್ತ್ಯಶಕ್ತೇಃ**-ಇತರರು ಯೋಚನೆ ಮಾಡಲುಕೂಡ ಸಾಧ್ಯವಲ್ಲದ ಮಹತ್ತಾದ ಶಕ್ತಿಯುಳ್ಳ ನನ್ನ, **ನಿಯಮನಶಕ್ತ್ಯೇಕ ದೇಶಸಂಭವ ಮಿತ್ಯರ್ಥಃ**-ನಿಯಮನ ಶಕ್ತಿಯ ಲವಾಂಶದಿಂದುಂಟಾದ ಉತ್ಪತ್ತಿಯುಳ್ಳವೆಂಬ ತಾತ್ಪರ್ಯವು. **ಅಚಿನ್ತ್ಯ ಶಕ್ತೇಃ** ಎಂಬ ಪ್ರಯೋಗವು **ಮಮ ತೇಜಸ್ಸು** ಎಂಬುದರಿಂದ ತೋರಿಬರುವ ಅರ್ಥವನ್ನು ಪ್ರಕಟಿಸುತ್ತದೆ. ಅಘಟಿತ ಘಟನಾರೂಪವಾದ ಅದ್ಭುತಶಕ್ತಿಯುಳ್ಳವನಿಗೆ ಇದೆಲ್ಲಾ ಆ ಶಕ್ತಿಯ ಏಕದೇಶವೆಂಬ ಭಾವವು. ತೇಜಸ್ಸಿನ ಲವಾಂಶದಿಂದುಂಟಾಗಿರುವದರಿಂದ ಅವುಗಳಿಗೆ ಉತ್ತೇಜಕರವಾಗಿ ಅವುಗಳು ಮಾಹಾತ್ಮ್ಯೆಯನ್ನು ಹೊಂದಿವೆ. ಹೀಗೀಗ ನೀನು ಭಾವಿಸತಕ್ಕದ್ದು. ನನ್ನ ನಿಯಮನ ಶಕ್ತಿಯ ಪ್ರಭಾವದಿಂದಲೇ ಅವುಗಳಿಗೆ ಅಂತಹ ಮಾಹಾತ್ಮ್ಯೆಯುಂಟಾಗಿದೆ ಎಂದು ತಿಳಿ. ಒಬ್ಬ ಆಚಾರ್ಯನಿಷ್ಠರು ಜ್ಞಾನನಿಷ್ಠೆ ಕರ್ಮನಿಷ್ಠೆಗಳಿಂದ ಶೋಭಿಸುತ್ತಿದ್ದರೂ, ಇನ್ನೊಬ್ಬನು ರಾಜನಾಗಿ ಸರ್ವಭೋಗ ಸಮೃದ್ಧಿಯಿಂದ ಕೂಡಿದ್ದರೂ, ಇನ್ನೊಬ್ಬನು ಲೋಕದ ಜನರ ಮರ್ಯಾದೆಗೆ ಒಳಗಾಗಿ ಅವರಿಗೆ ಹಿತಕರವಾದ ಕೆಲಸಗಳಲ್ಲಿ ನಿರತನಾಗಿ ಅವರುಗಳಿಂದ ಪೂಜಿಸಲ್ಪಡುತ್ತಿದ್ದರೂ, ಇನ್ನೊಬ್ಬನು ಭೌತಿಕಶಾಸ್ತ್ರ ಪ್ರವೀಣನಾಗಿ ಅನೇಕರಿಗೆ ಪ್ರಯೋಜನಕರವಾದ ವಿಷಯಗಳನ್ನುಂಟುಮಾಡಿ ಲೋಕದಲ್ಲಿ ಗೌರವವನ್ನು ಹೊಂದುತ್ತಲಿದ್ದರೂ, ಇಂತಹ ಮಾಹಾತ್ಮ್ಯೆಗೆಲ್ಲಾ ಕಾರಣನು ನಾನೇ ಎಂದು ತಿಳಿ ಎಂಬ ತಾತ್ಪರ್ಯವು. ನನ್ನ ಅದ್ಭುತ ನಿಯಮನ ಶಕ್ತಿಯ ಪ್ರಭಾವದಿಂದ ಅವರುಗಳಿಗೆಲ್ಲಾ ಮಾಹಾತ್ಮ್ಯೆಯುಂಟಾಗಿರುವುದೆಂಬುದು ತಾತ್ಪರ್ಯವು. ಹೀಗೆ ಇವೆಲ್ಲಾ ಮಾಹಾತ್ಮ್ಯೆಯನ್ನು ಹೊಂದಿರುವದು, ತನ್ನ ಅಚಿನ್ತ್ಯವಾದ ತೇಜಸ್ಸಿನ ಲವಾಂಶವೆಂಬುದಕ್ಕೂ ನಿದರ್ಶನಗಳನ್ನು ಹೇಳಬಹುದು. ಅಪವಿತ್ರಳಾದ ಅಹಲ್ಯೆಯು ಶಿಲೆಯಾಗಿದ್ದವಳು ಪವಿತ್ರವಾದ ಸ್ತ್ರೀರೂಪದಿಂದ ಪುನಃ ಅಹಲ್ಯೆಯಾದುದೂ, ತನ್ನ ಪಾದದಿಂದ ಹೊರಟನೀರು ರುದ್ರನನ್ನೂ ಪವಿತ್ರೀಕರಿಸಿ ತನ್ಮೂಲಕ ಲೋಕಕ್ಕೆಲ್ಲಾ ಪವಿತ್ರತಮವಾದ ಗಂಗೆಯಾಗಿ ಸಗರ ಪುತ್ರರಿಗೂ ಉತ್ತಾರಕವಾಗಿ ಪರಿಣಮಿಸಿದುದೂ, ದರ್ಭೆಯು ಬ್ರಹ್ಮಾಸ್ತ್ರವಾದುದೂ, ಅಸ್ತ್ರದಿಂದ ಇದ್ದಲಾದ ಉತ್ತರೆಯ ಗರ್ಭವು ಜೀವಿಸಿ ಪರೀಕ್ಷಿದ್ರಾಜನಾದುದೂ, ಪತಿವ್ರತಾ ಶಿರೋಮಣಿಯಾದ ದ್ರೌಪದಿಯ ವಸ್ತ್ರವು ಅನಂತವಾದುದೂ, ಪರಮ ಭಾಗವತನಾದ ಪ್ರಹ್ಲಾದನಿಗೆ ಮಾಡಿದ

ತಂದೆಯ ಚಿತ್ರಹಿಂಸೆಗಳೆಲ್ಲಾ ವಿಫಲವಾದುದೆಂದೂ, ಹೀಗೆ ಇವೇ ಮೊದಲಾದವುಗಳ ಮಾಹಾತ್ಮ್ಯೆ ಎಲ್ಲವೂ ಸಾಕಾದನಿದರ್ಶನಗಳು. ಆದುದರಿಂದ ಸ್ವಾಮಿಯ ತೇಜಸ್ಸಿನಂಶವೆಂದು ಒಪ್ಪಿಕೊಳ್ಳಲು ಅಭ್ಯಂತರವೇನೂ ಇಲ್ಲವು ಶ್ರೀಮಚ್ಛಂಕರಾಚಾರ್ಯರೂ **ಮಮತೇಜೋಂಶ ಸಂಭವಂ** ಎಂಬುದಕ್ಕೆ **ಮಮ ಈಶ್ವರಸ್ಯ ತೇಜೋಂಶ ಸಂಭವಂ "ತೇಜಸಃ ಅಂಶಃ ಏಕದೇಶಃ ಸಂಭವಃ ಯಸ್ಯ ತತ್"** ಎಂದು ವ್ಯಾಖ್ಯಾನಮಾಡಿರುವಾಗ, **ನಿಯಮನ ವರ್ಗವಾದ** ವಿಭೂತಿಯೆಲ್ಲಾ ಮಿಥ್ಯಾವಾಗಿ ತುಚ್ಛವಾದುದಾದರೆ,ಈಶ್ವರಶಬ್ದವು ತಾನೇ ಪರತತ್ವಕ್ಕೆ ಹೇಗೆ ಸಲ್ಲುತ್ತದೆ?ಆದುದರಿಂದ ಶ್ರೀಮಚ್ಛಂಕರಾಚಾರ್ಯರ ಮಿಥ್ಯಾ ಶಬ್ದದ ತಾತ್ಪರ್ಯವು ಸರಿಯಾಗಿ ಗ್ರಹಿಸಲ್ಪಡಲಿಲ್ಲವೆಂದು ಊಹಿಸಬೇಕಾಗಿದೆ. ಏಕೆಂದರೆ ಈಗಿನವರು ಮಿಥ್ಯಾ ಶಬ್ದಕ್ಕೆ ಹೇಳುವ ಅರ್ಥವು ಈ ಶ್ಲೋಕದ ಶಂಕರಭಾಷ್ಯಕ್ಕೆ ಸರಿಹೋಗುವದಿಲ್ಲವು. ಮಿಥ್ಯಾವಾದ ಶಬ್ದಾರ್ಥದ ವಿಷಯದಲ್ಲಿ ಅದ್ವೈತ ಸಿದ್ಧಾಂತ ಶಿಖಾಮಣಿಗಳಾದ ಕಲ್ಕತ್ತಾ ಯೂನಿವರ್ಸಿಟಿಯ ಕೋಕಿಲೇಶ್ವರ ಶಾಸ್ತ್ರಿಗಳು ಹಾಗೆಯೇ ಅಭಿಪ್ರಾಯ ಪಟ್ಟಿರುತ್ತಾರೆ. ಈಶ್ವರ ತೇಜಸ್ಸಿನಿಂದುಂಟಾದುದು ಗಗನಕುಸುಮದ ಹಾಗೆ ತುಚ್ಛವಾಗಲಾರದು ; ಈಶ್ವರ ಸಙ್ಕಲ್ಪಾಧೀನನಾಗಿ ಸ್ಥೂಲಸೂಕ್ಷ್ಮದೆಶೆಗಳನ್ನು ಹೊಂದಬಹುದು ; ಅವಸ್ಥೆಗಳು ಬದಲಾಯಿಸಬಹುದು. ಆದರೆ ಇಲ್ಲದೇ ಹೋಗುತ್ತವೆ ಎಂದು ಹೇಳಬಹುದೋ? ಹೀಗೆ ನಾಶವಾದುದಾದರೆ ಮಮ ತೇಜೋಂಶ ಸಂಭವವೆಂದು ಇಲ್ಲದ ಮಹತ್ವವನ್ನು ಆರೋಪಿಸಿ ಶ್ರೀಕೃಷ್ಣನು ಹೇಳಿಕೊಂಡನೆಂದಾಗುವದಿಲ್ಲವೋ? ಆದುದರಿಂದ ಗೀತೋಪದೇಶಕ್ಕೂ ಈಗಿನವರ ಮಿಥ್ಯಾವಾದಕ್ಕೂ ತುಂಬಾ ದೂರವು ಶ್ರೀಮಚ್ಛಂಕರಾಚಾರ್ಯರ ಅಭಿಪ್ರಾಯವು, ಶ್ರೀ ಕೃಷ್ಣನು ಈಶ್ವರನಾದುದರಿಂದ ಈಶಿತವ್ಯವೂ ಇದ್ದೇ ಇರಬೇಕು. ಆದುದರಿಂದ ಜಗತ್ತು ಬರೀ ಅಧ್ಯಾಸವಲ್ಲವು, ಸತ್ಯವಾದಸ್ಥಿತಿಯುಳ್ಳದ್ದೆಂದೇ ಮುಂದಿನಅಧ್ಯಾಯಾಂತ್ಯ ಶ್ಲೋಕದಲ್ಲಿ ವ್ಯಕ್ತವಾಗಿ **ವಿಷ್ಟಭ್ಯಾಹಮಿದಂಕೃತ್ಸ್ನಂ** ಎಂಬ ಪ್ರಯೋಗದಿಂದ ತಿಳಿಸಿರುತ್ತಾರೆ. ಜಗತ್ತು ನಾಶವನ್ನು ಹೊಂದಿ ಶೂನ್ಯವಾಗುತ್ತದೆಂಬುದು ಭೌತಿಕಶಾಸ್ತ್ರಕ್ಕೂ ವಿರೋಧವು. ಅದು ಅವಸ್ಥಾಭೇದವನ್ನು ಹೊಂದಬಹುದೇವಿನಾ ನಾಶವಾಗುವದಿಲ್ಲವು. ಭಗವತ್ಸಂಕಲ್ಪಾಧೀನವಾಗಿ ಸ್ಥೂಲಸೂಕ್ಷ್ಮಾವಸ್ಥೆಗಳನ್ನು ಹೊಂದಬಹುದು, ಇಂತಹ ಅವಸ್ಥಾಭೇದಗಳಿಂದ ಅದರ ಶಕ್ತಿಯೂ ಕೂಡ ವ್ಯತ್ಯಾಸವನ್ನು ಹೊಂದಬಹುದು. ದ್ರವ್ಯವೂ ಅದಕ್ಕೆ ಸ್ವಾಮಿದತ್ತವಾದ ಶಕ್ತಿಯೂ ಎರಡಕ್ಕೂ ಎಂದಿಗೂ ನಾಶವಿಲ್ಲವು. ಆದುದರಿಂದ ಈಗಿನವರ ಮಿಥ್ಯಾವಾದವು ಲೋಕವೇದಗಳ ಸಮ್ಮತಿ ಇಲ್ಲದುದು ಮಿಥ್ಯಾವಾದಿಗಳು ಉದಾಹರಿಸುವ ಶ್ರುತಿಗಳಿಗೆ ಅರ್ಥವೇನೆಂಬುದು ಶ್ರೀ ಭಾಷ್ಯಾದಿಗಳಲ್ಲಿ ವ್ಯಕ್ತವು. ನಿರಙ್ಕುಶೈಶ್ವರ್ಯವುಳ್ಳ ಮಹಾನುಭಾವನ ಪ್ರಭಾವಕ್ಕೆ ಬೆರಗಾಗಿ ಜ್ಞಾನನಿಧಿಗಳಾದ ಶ್ರೀ ಪರಾಶರರು ಮನಸ್ತೃಪ್ತಿಯನ್ನು ಹೊಂದದೆ ಹೋದರು. ಅಂತಹ ಐಶ್ವರ್ಯಕ್ಕೆ ಮಿಥ್ಯಾತ್ವವನ್ನು ಕಲ್ಪಿಸುವದಕ್ಕೆ ಮನವು ಎಂದಿಗೂ ಒಡಂಬಡುವದಿಲ್ಲವು. **ಪಾದೋಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ** ಎಂದು ವಿಭೂತಿವರ್ಗವನ್ನು ವಿವೇಕಿಸಿ **ಏಕಪಾದ್ವಿಭೂತಿ** ಯಾದ ಲೀಲಾ ವಿಭೂತಿಯೆಂದೂ. **ತ್ರಿಪಾದ್ವಿಭೂತಿ** ಯಾದ ನಿತ್ಯ ವಿಭೂತಿಎಂದೂ ವಿಭಾಗಿಸಿ ಶ್ರುತಿಯು ಉಪದೇಶಿಸಿರುವದೂ ಮಿಥ್ಯೆಯೇ? ಎಂದು ಕೇಳಬೇಕಾಗುತ್ತದೆ. ಪುರುಷ ಸೂಕ್ತವು ಸರ್ವ ವೇದಸಾರವೆಂದು ಭಾವಿಸುತ್ತಾರೆ. **"ಭಾರತೇ ಭಗವದ್ಗೀತಾ ಧರ್ಮಶಾಸ್ತ್ರೇಷುಮಾನವಂ। ವೇದೇಷುಪೌರುಷಂ ಸೂಕ್ತಂ ಪುರಾಣೇಷುಚ ವೈಷ್ಣವಮ್"** ಎಂಬ ವಚನವಿರುತ್ತದೆ. ಅಂತಹ ಪುರುಷಸೂಕ್ತವು ಸುಳ್ಳಾದುದನ್ನು ಉಪದೇಶಿಸುತ್ತದೆಯೇ ? ಉಪದೇಶಿಸಿದರೂ ಚಿಂತೆಯಿಲ್ಲವು ; ಅದು ಮಿಥ್ಯೆ ಎಂದು ಎಲ್ಲಾದರೂ ಹೇಳಬೇಡವೇ? ಎಲ್ಲಿ ಹೇಳಿರುತ್ತದೆ? ಶ್ರೀಮಚ್ಛಂಕರಾಚಾರ್ಯರವರು ಪದಗಳಿಗೆ ಧಾತು ಪ್ರತ್ಯಯ

**ಮೂ. ಅಥವಾ ಬಹುನೈತೇನ ಕಿಂ ಜ್ಞಾನೇನ ತವಾರ್ಜುನ।**
**ವಿಷ್ಟಭ್ಯಾಹ ಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋ ಜಗತ್ ॥ ೪೨.**

**ಇತಿ ಶ್ರೀ ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನಸಂವಾದೇ ವಿಭೂತಿ ವಿಸ್ತರಯೋಗೋ ನಾಮ ದಶಮೋಧ್ಯಾಯಃ.**
**ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ**

---

ಗಳಿಗೆ ಅನುಸಾರವಾಗಿ ಭಾಷ್ಯ ಬರೆಯುವವರಲ್ಲಿ ಅಗ್ರಗಣ್ಯರು **ವಿಷ್ಟಭ್ಯ** ಎಂದು ಮುಂದಿನ ಶ್ಲೋಕದಲ್ಲಿರುವ ಪದಕ್ಕೆ **ವಿಶೇಷತಃ ಸ್ತಂಭನಂ ಕೃತ್ವಾ** ಎಂದು ವ್ಯಾಖ್ಯಾನ ಮಾಡುತ್ತಾರೆ. ಇದರಿಂದ ಸ್ಥಿರವಾದ ಸ್ಥಾಪನರೂಪ ಅರ್ಥವು ಹೊರಪಡುತ್ತದೆ. ಮಿಥ್ಯೆಯಾದರೆ **ಜಗತ್ತನ್ನು ವಿಷ್ಟಭ್ಯ** ಎಂದು ಹೇಳುವದು ಅರ್ಥವೇ ಆಗುವುದಿಲ್ಲವು. ಆದುದರಿಂದ ಈ ವಿಭೂತಿ ವಿಸ್ತರಾಧ್ಯಾಯವು ಮಿಥ್ಯಾವಾದಕ್ಕೆ ಸುತರಾಂ ಅನುಕೂಲಿಸುವದಿಲ್ಲವು.

**ಮೂಲಕ್ಕೆ ಅರ್ಥವು:**—ವಿಭೂತಿಗಳ ಪ್ರಧಾನತೆಗೆ ನಾನೇ ಕಾರಣವಾಗಿ ಅವುಗಳೊಂದಿಗೆ ಸಾಮಾನಾಧಿಕರಣ್ಯವನ್ನೂ ಹೇಳಿ, ಇನ್ನು ಎಲ್ಲೆಲ್ಲಿ ಇಂತಹ ಮಾಹಾತ್ಮ್ಯಯನ್ನು ಕಾಣುತ್ತೀಯೋ, ಹಾಗೆಯೇ ಅಚಿತ್ತುಗಳಲ್ಲಿ ತೋರುವ ವೈಚಿತ್ರ್ಯತೆ, ಅಲಂಕಾರ, ಸುವಾಸನೆ, ಮನೋಹರತ್ವ, ಮೊದಲಾದ ಅವೆಲ್ಲಕ್ಕೂ ನಾನೇ ಕಾರಣನೆಂದು ತಿಳಿ, ಎಂದು ಹಿಂದೆ ಉಪದೇಶಿಸಿದರು. ಇನ್ನೂ ಹೀಗೆಯೇ ಬಹುವಾಗಿ ಹೇಳುತ್ತಾ ಹೋದೇನು ಅಂತಹ ಜ್ಞಾನಗಳಿಂದ ನೀನು ಗ್ರಹಿಸಬೇಕಾದ ಸಾರಭೂತ ವಿಷಯವನ್ನು ನೀನು ಗ್ರಹಿಸಿದೆಯೋ, ಇಲ್ಲವೋ, ಆದುದರಿಂದ ಇನ್ನು ಸಾವಿರಮಾತಿನಿಂದ ಏನು ಫಲ? ಒಟ್ಟು ಕೂಡಿಸಿಹೇಳುವೆನು ಕೇಳು ಎನ್ನುತ್ತಾರೆ.–ವಿಭೂತಿಗಳು ಪ್ರಧಾನವಾದವೇ ಆಗಲಿ, ಅಪ್ರಧಾನವೇ, ಆಗಲಿ, ಸಮಸ್ತವೂ ನನಗೆ ಅಧೀನವಾಗಿ ನನ್ನ ನಿಯಾಮ್ಯ ವರ್ಗಕ್ಕೆ ಸೇರಿದವು. ಅವುಗಳಿಗೆಲ್ಲಾ ನಾನೇ ಆತ್ಮಾವಾಗಿ ಅವುಗಳಲ್ಲಿ ಸ್ಥಾಪಿತನಾಗಿದ್ದೇನೆ. ಹೀಗೆ ನನ್ನ ವಿಭೂತಿ ವರ್ಗವು ಕಾರಣಭೂತವಾಗಿ ಸೂಕ್ಷ್ಮಾವಸ್ಥೆಯಲ್ಲೇ ಇರಲಿ, ಕಾರ್ಯಭೂತವಾಗಿ ಸ್ಥೂಲಾವಸ್ಥೆಯಲ್ಲೇ ಇರಲಿ, ಹೀಗೆ ಸಮಸ್ತ ವಿಭೂತಿಗೂ ನನಗೂ ಶರೀರಾತ್ಮರೂಪ ಸಂಬಂಧವು ಎಂದಿಗೂ ತಪ್ಪಿದ್ದಲ್ಲ ಯಾವಾಗಲೂ ಸ್ಥಿರವಾದುದೆಂಬ ವೇದ್ಯಾರ್ಥದಲ್ಲಿ ಸಾರಭೂತಾಂಶವನ್ನುಪದೇಶಿಸಿ ಈ ವಿಭೂತಿ ವಿಸ್ತರಾಧ್ಯಾಯದ ನಿಗಮನವನ್ನು ಮಾಡುತ್ತಾರೆ.— **ಅಥವಾ** ಎಂಬುದರಿಂದ ಇಲ್ಲಿ ಹೇಳುವದು, ಹಿಂದೆ ಹೇಳಿದುದನ್ನು ವ್ಯಾವರ್ತಿಸಿ ವಿಕಲ್ಪಿಸಿ ಉಪದೇಶಿಸಿದುದೆಂದು ಭಾವಿಸತಕ್ಕದ್ದಲ್ಲವು. ಹಿಂದೆ ಉಪದೇಶಿಸಿದ್ದನ್ನೇ ಇನ್ನೊಂದು ವಿಧವಾಗಿ ಉಪದೇಶಿಸುವವರಿಂದ ಅರ್ಜುನನಿಗೆ ಸಾರಭೂತವಾದ ನಿಷ್ಕರ್ಷೆಯುಳ್ಳ ಜ್ಞಾನವು ಲಭಿಸೀತೆಂಬ ಆಶಯದಿಂದ **ಅಥವಾ** ಎಂಬ ಪ್ರಯೋಗವು. ವಿಕಲ್ಪಾರ್ಥ ಭ್ರಮವನ್ನು ಸಂಪೂರ್ಣವಾಗಿ ನಿವಾರಣೆ ಮಾಡುವದಕ್ಕಾಗಿ **ಅಥ, ವಾ,** ಎಂದು ಎರಡು ಪದವಾಗಿಟ್ಟು ಅರ್ಥಮಾಡಬಹುದು, **ಅಥ**-ಅನಂತರವಲ್ಲಿ ಹೀಗೆಯೇ ಬಹುವಾಗಿ ಹೇಳುವ **ಏತೇನ ಜ್ಞಾನೇನ ವಾ** - ಇಂತಹ ಜ್ಞಾನದಿಂದಲಾಗಲೀ ಏನೂ ಲಾಭವಿಲ್ಲವು. ಸಾರಭೂತವನ್ನು ತಿಳಿಸುತ್ತೇನೆ ಕೇಳು ಎಂಬ ಭಾವವು. ಹೀಗೆಯೇ **ಏತೇನ - ಈ** ಹಿಂದೆ ಹೇಳಿದುದಕ್ಕೆ ಅನುಗುಣವಾದ **ಬಹುನಾ ಜ್ಞಾನೇನ**–ಇನ್ನು ಹೆಚ್ಚಾದ ಜ್ಞಾನದಿಂದ ಎಂದರೆ ಇನ್ನೂ ಹೆಚ್ಚಿದ ನನ್ನ ಉಪದೇಶದಿಂದ, **ಕಿಂ**–ಫಲವೇನು? ಫಲವೇನು ಎಂದುದರಿಂದ ಫಲವೇ ಇಲ್ಲವು, ನಿಷ್ಪ್ರಯೋಜನವೆಂಬರ್ಥವಲ್ಲವು, ಹಾಗೆ ಅರ್ಥಮಾಡಿದರೆ, ಏಕೆ ಉಪದೇಶಿಸಿದಿರಿ? ಎಂಬ ಆಕ್ಷೇಪಕ್ಕೆ ಉತ್ತರವಿಲ್ಲವಾಗುತ್ತದೆ. ಆದುದರಿಂದ ಇದುವರೆಗೂ ಹೇಳಿದುದರಿಂದುಂಟಾದ ಫಲವೆಷ್ಟೋ, ಇನ್ನೂ ಹೀಗೆಯೇ ಹೇಳುತ್ತಾ ಹೋದರೂ ಅಷ್ಟೆಯೇ

ಫಲವು ಎಂಬ ಭಾವವು. ನೀನು ಈ ಗ್ರಹಿಸಿರುವದಕ್ಕೆ ಹೆಚ್ಚಾಗಿ ಏನೂ ಗ್ರಹಿಸಹೋಗುವದಿಲ್ಲವು ಎಂಬ ತಾತ್ಪರ್ಯವು. ಇದೆಲ್ಲಾ ನಿನಗೆ ಉಪದೇಶಿಸಿದುದರಿಂದ ನೀನು ಸಾರಭೂತವಾದ ಅಂಶವನ್ನು ಗ್ರಹಿಸತಕ್ಕದ್ದುಂಟು. ಆದುದರಿಂದ ಹಿಂದೆಹೇಳಿದಹಾಗೆಯೇಹೇಳುವ ಸಾವಿರಮಾತಿನಿಂದೇನು? ಪ್ರಧಾನ ಪ್ರತಿತಂತ್ರವನ್ನು ಉಪದೇಶಿಸುವೆನು ಕೇಳು. ಇದೀಗ ಸಾರಭೂತವಾದ ಜ್ಞಾನವು. ಈ ಜ್ಞಾನದಿಂದ ಸರ್ವಸಮಂಜಸಾಭಿಪ್ರಾಯಗಳು ದೊರೆತು, ಎಲ್ಲಾಶ್ರುತಿವಾಕ್ಯಗಳಿಗೂ ಪರಸ್ಪರ ವ್ಯಾಘಾತವಿಲ್ಲದಹಾಗೆ ಸಮಂಜಸವಾದ ಅರ್ಥಗಳು ದೊರೆಯುವದರಿಂದ **ಏತೇನ ಬಹುನಾ ಜ್ಞಾನೇನ ಕಿಂ** ಎಂದು ಹೇಳಿ, ಅಂತಹ ಸಾರಭೂತ ಜ್ಞಾನವನ್ನುಪದೇಶಿಸುತ್ತಾರೆ.– **ಇದಂ ಜಗತ್** ಈ ಚಿದಚಿದಾತ್ಮಕಜಗತ್ತಾದ, **ಕೃತ್ಸ್ನಂ** ಸಮಸ್ತವನ್ನೂ, ಕಾರಣಾವಸ್ಥೆಯಲ್ಲಿ ಇರುವದನ್ನೇ ಯಾಗಲೀ, ಕಾರ್ಯರೂಪದಲ್ಲಿರುವದನ್ನೇಯಾಗಲೀ, ಹೀಗೆ ಸಮಸ್ತ ವಿಶ್ವವನ್ನೂ **ಜಗತ್** ಎಂಬ ಶಬ್ದವೂ, ಸರ್ವ ವಿಶ್ವಕ್ಕೂ ಉಪಲಕ್ಷಣವು; **ವಿಷ್ಟಭ್ಯ** - ಆತ್ಮತ್ವೇನ ಪ್ರವೇಶಮಾಡಿ ಅದರೊಂದಿಗೆ ಸ್ಥಿರವಾಗಿರುವವನಾಗಿ **ಏಕಾಂಶೇನ** - ನನ್ನ ಮಹತ್ವದ ಲವಾಂಶದಿಂದ **ಸ್ಥಿತಃ** - ಇದ್ದೇನೆ. ಶ್ರೀ ಯಾಮುನೇಯರು **ಮಹಿಮಾರ್ಣವ ವಿಪ್ರುಷಸ್ತೇ** - ಎಂಬುದರಿಂದ ಏಕಾಂಶ ಶಬ್ದಪ್ರಯೋಗದ ಅರ್ಥವನ್ನು ಸೂಚಿಸಿರುತ್ತಾರೆ. ಪರಮಾತ್ಮನ ಮಹಿಮೆ ಎಂಬುದೇ ಒಂದು ಅಪಾರ ಸಮುದ್ರವು, ಅದರ ತುಂತುರು ಇವೆಲ್ಲಾ ಎಂಬ ಭಾವವು. ಅವೆಲ್ಲವೂ ನನಗೆ ನಿಜವಾದ ಶರೀರವು. ಅವುಗಳಿಗೆಲ್ಲಾ ನಾನು ಆತ್ಮಾ ಎಂಬ ಶರೀರಾತ್ಮ ಸಂಬಂಧವು ಯಾವಾಗಲೂ ಸ್ಥಿರವಾದುದೆಂಬ ಶ್ರುತಿ ಸಾರಾಂಶವನ್ನು ಉಪದೇಶಿಸಿರುತ್ತಾರೆ. ಶ್ರುತಿಯಲ್ಲಿ ಎಲ್ಲೆಲ್ಲಿ ಇದು ಉಪಪಾದಿತವೆಂಬುದನ್ನು ಮುಂದೆ ಭಾಷ್ಯದಲ್ಲಿ ತಿಳಿಸಿರುವೆವು. ಇದು ಪ್ರಧಾನ ಪ್ರತಿತಂತ್ರವಾದುದರಿಂದ ಇನ್ನೊಂದುಸಲ ಅನುವಾದರೂಪದಲ್ಲಿ ಸೂಕ್ಷ್ಮವಾಗಿ ತಿಳಿಸುವುದು ಅವಶ್ಯಕವಾದುದರಿಂದ ಈ ಶ್ಲೋಕದ ಭಾಷ್ಯದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ,

**ಭಾಷ್ಯಾರ್ಥವು:**— ಹಿಂದೆ **ಪ್ರಾಧಾನ್ಯತಃ** ವಿಭೂತಿವಿಸ್ತರವು ಹೇಳಲ್ಪಟ್ಟಿತು. ಅವುಗಳಿಂದ ಗ್ರಹಿಸತಕ್ಕ ಮುಖ್ಯ ಸಾರಾಂಶವನ್ನು ತಿಳಿಸುತ್ತಾರೆ. ಯಥಾರ್ಥವಾದ ಜ್ಞಾನಕ್ಕೂ, ಸರ್ವೋಪನಿಷದ್ವಾಕ್ಯಗಳ ಸಾಮಂಜಸ್ಯಾಪಾದನಕ್ಕೂ, ಬಹುಉಪಯುಕ್ತವಾಗಿ ಸಾರಭೂತವಾದ ಜ್ಞಾನವಾದುದರಿಂದ ವಿಭೂತಿವಿಸ್ತರವನ್ನೂ ಅವುಗಳಮಹಿಮೆಯನ್ನೂ, ಬೋಧಿಸುವ ಸಾವಿರವಾಕ್ಯಗಳು ಹಾಗಿರಲಿ, ಎಂದು ಪೂರ್ವಾರ್ಧದಲ್ಲಿ ಹೇಳಿ, ಉತ್ತರಾರ್ಧದಲ್ಲಿ ಅರ್ಜುನನು ಸಾರಭೂತವಾಗಿ ಈ ವಿಭೂತ್ಯಧ್ಯಾಯದಿಂದ ಗ್ರಹಿಸತಕ್ಕದ್ದೇನೆಂಬುದನ್ನು ತಿಳಿಸುತ್ತಾರೆ. ಒಂದನೇಶ್ಲೋಕದಲ್ಲಿ ವಿಭೂತಿಯಲ್ಲಿ ಸೇರಿದ ಎಲ್ಲವೂ ಪರಮಾತ್ಮನೊಂದಿಗೇನೇ ಇರುವ ಅವಿನಾಭೂತವನ್ನು ಉಪಪಾದಿಸಿ ಅದು ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವೆಂದು ಹೇಳಿದರು. ಈಗ ಈ ವಿಭೂತಿಯಾದ ಸರ್ವ ವಿಶ್ವಕ್ಕೂ ತಾನೇ ಆತ್ಮಾ, ಹಾಗೆ ವ್ಯಾಪಿಸಿ ಅದರೊಂದಿಗೇನೇ ಸ್ಥಿರವಾಗಿರುವದರಿಂದ ಅವರ **ಸತ್ತಾಸ್ಥಿತಿ** ಪ್ರವೃತ್ತಿಗಳೆಲ್ಲಾ ತನಗೆ ಅಧೀನವೆಂದು ತಿಳಿಸುತ್ತಾರೆ. ಈ ಶ್ಲೋಕದ ತಾತ್ಪರ್ಯವನ್ನು ತುಂಬಾ ಜ್ಞಾನನಿಧಿಗಳ ಉಕ್ತಿಯಿಂದ ಗ್ರಹಿಸಬಹುದು. " **ಆಧೇಯತ್ವ ಪ್ರಭೃತಿನಿಯಮ್ಯೈರಾದಿಕರ್ತುಶ್ಶರೀರಂ ಸತ್ತಾಸ್ಥೇಮಪ್ರಯತನಫಲೇಷ್ವೇತದಾಯತ್ತಮೇತತ್** " ಎಂಬುದು ಶರೀರಾತ್ಮಭಾವದಿಂದ ಏರ್ಪಡುತ್ತದೆ. **ಏತತ್** - ಈ ವಿಶ್ವವೆಲ್ಲಾ **ಆಧೇಯತ್ವ ಪ್ರಭೃತಿನಿಯಮ್ಯೈಃ** - ಪರಮಾತ್ಮನನ್ನು ಆಧಾರವು, ವಿಶ್ವವು ಆಧೇಯವು, ಪರಮಾತ್ಮನು ನಿಯಾಮಕನು, ವಿಶ್ವವು ನಿಯಾಮ್ಯವು, ಪರಮಾತ್ಮನು ಶೇಷಿಯು, ವಿಶ್ವವು ಆತನಿಗೆ ಶೇಷವು, ಹೀಗಿರುವ ನಿಯತ ಸಂಬಂಧಗಳಿಂದ **ಆದಿಕರ್ತುಶ್ಶರೀರಂ** - ಸರ್ವಕ್ಕೂಸೃಷ್ಟಿಕರ್ತಾವಾಗಿರುವ ಪರಮಾತ್ಮನಿಗೆ ಶರೀರವು. ಆತನು " **ಅಹಮಾತ್ಮಾ ಗುಡಾಕೇಶ** " ಎಂಬಲ್ಲಿ ಹೇಳಿರುವಹಾಗೆ **ಆತ್ಮಾ ಸತ್ತಾ**

**ಭಾ. ಬಹುನೈತೇನ-ಉಚ್ಯಮಾನೇನ, ಜ್ಞಾನೇನ ಕಿಂ ಪ್ರಯೋಜನಮ್, ಇದಂ-ಚಿದಚಿದಾತ್ಮಕಂ, ಕೃತ್ಸ್ನಂ-ಜಗತ್, ಕಾರ್ಯಾವಸ್ಥಂ ಕಾರಣಾವಸ್ಥಂ, ಸ್ಥೂಲಂ ಸೂಕ್ಷ್ಮಂ ಚ ಸ್ವರೂಪಸದ್ಭಾವೇ ಸ್ಥಿತೌ, ಪ್ರವೃತ್ತಿಭೇದೇಚ, ಯಥಾ ಮತ್ಸಙ್ಕಲ್ಪಂ ನಾತಿವರ್ತೇತ, ತಥಾ ಮಮ ಮಹಿಮ್ನೋಽಯುತಾಯುತಾಂಶೇನವಿಷ್ಟಭ್ಯಾಹಮವಸ್ಥಿತಃ**

**ಸ್ಥೇಮ ಪ್ರಯತನಫಲೇಷು**-ಆದುದರಿಂದ ಈ ವಿಶ್ವದ ಸರ್ವಭೂತಗಳ ಸ್ವರೂಪಸ್ಥಿತಿ ಪ್ರವೃತ್ತಿಗಳೂ, ಆ ಪ್ರವೃತ್ತಿಗಳ ಫಲಗಳೂ ಎಲ್ಲವೂ, ಆತನ ಸಙ್ಕಲ್ಪಾಧೀನವೆಂದು ಬಹು ಸ್ಫುಟವಾಗಿ ಈ ಶ್ಲೋಕಾಭಿಪ್ರಾಯವನ್ನೇ ನಿಗಮಾಂತದೇಶಿಕರು ಉಪಪಾದಿಸಿರುತ್ತಾರೆ. **ಬಹುನಾ**-ಇನ್ನೂ ಪಚ್ಚಾದ. **ಏತೇನ** ಎಂದರೆ **ಉಚ್ಯಮಾನೇನ** ಹೇಳಲ್ಪಡುವ, **ಜ್ಞಾನೇನ**—ನನ್ನ ಉಪದೇಶ ಮೂಲಕ ನೀನು ಹೊಂದುವ ಜ್ಞಾನದಿಂದ, **ಕಿಂ ಪ್ರಯೋಜನಮ್**—ಪ್ರಯೋಜನವೇನು? ಹಾಗಾದರೆ ಉಪದೇಶಿಸಿದುದು ಏಕೆ ಎಂದು ಕೇಳುತ್ತೀಯೋ? ಹಿಂದೆ ಇಷ್ಟುದೂರ ಹಿಂದಿನ ಉಪದೇಶದಿಂದ ಗ್ರಹಿಸತಕ್ಕ ಅಂಶವು ಇಷ್ಟೇ; ಹೇಳುತ್ತೇನೆ ಕೇಳು; ಆದುದರಿಂದಲೇ ಸುಮ್ಮನೆ ಹೀಗೆ ವಿಸ್ತರಿಸಿ ಹೇಳುವದನ್ನು ಇಲ್ಲಿಗೆ ನಿಲ್ಲಿಸಿ ಬಿಟ್ಟು, ನೀನು ಮುಖ್ಯವಾಗಿ ಇವರಿಂದ ಗ್ರಹಿಸತಕ್ಕ ಸಾರಭೂತವಾದುದನ್ನು ತಿಳಿಸುವೆನು. **ಇದಂ** ಎಂದರೆ **ಚಿದಚಿದಾತ್ಮಕಂ**-ಚಿದಚಿದ್ರೂಪವಾಗಿರುವ, **ಕೃತ್ಸ್ನಂ ಜಗತ್**-ಸಮಸ್ತಜಗತ್ತೂ ಎಂದರೆ **ಕಾರ್ಯಾವಸ್ಥಂ**-ಕಾರ್ಯಾವಸ್ಥೆಯನ್ನು ಹೊಂದಿದ ಮತ್ತು **ಕಾರಣಾವಸ್ಥಂ** - ಕಾರಣಾವಸ್ಥೆಯನ್ನು ಹೊಂದಿದ ಜಗತ್ತು, ಕ್ರಮವಾಗಿ ಅದು ಹೇಗೆ ಇರುವಂತಾದ್ದೆಂದರೆ ತಿಳಿಸುತ್ತಾರೆ, ಕಾರ್ಯಾವಸ್ಥೆಯನ್ನು ಹೊಂದಿದುದು **ಸ್ಥೂಲಂ**-ಸ್ಥೂಲರೂಪವಾಗಿಯೂ, ಕಾರಣಾವಸ್ಥೆಯನ್ನು ಹೊಂದಿದುದು **ಸೂಕ್ಷ್ಮಂ**-ಸೂಕ್ಷ್ಮರೂಪವಾಗಿಯೂ, ಇರುವದರ **ಸ್ವರೂಪ ಸದ್ಭಾವೇ**-ಸ್ವರೂಪವನ್ನು ಹೊಂದುವದರಲ್ಲೂ **ಸ್ಥಿತೌ**-ಸ್ಥಿತಿಯಲ್ಲೂ, **ಪ್ರವೃತ್ತಿಭೇದೇಚ**-ಪ್ರವೃತ್ತಿ ಭೇದಗಳನ್ನು ಹೊಂದುವದರಲ್ಲೂ ಸಹ, **ಯಥಾ ಮತ್ಸಙ್ಕಲ್ಪಂ ನಾತಿವರ್ತೇತ**-ಹೇಗೆ ನನ್ನ ಸಙ್ಕಲ್ಪವನ್ನು ಅತಿಕ್ರಮಿಸಿ ನಡೆಯುವದಿಲ್ಲವೋ, (ಇದು **ವಿಷ್ಟಭ್ಯ** ಎಂಬುದರ ಅಭಿಪ್ರಾಯವು.) **ತಥಾ**-ಹಾಗೆ **ಮಮ ಮಹಿಮ್ನಃ**-ನನ್ನ ಮಹಿಮೆಯು, ಇಲ್ಲಿ ಮುಖ್ಯವಾಗಿ ಪ್ರಕರಣಾನುಗುಣವಾದ ಮಹಿಮೆಯು ಯಾವುದೆಂದರೆ ಸರ್ವನಿಯಮನ ಶಕ್ತಿಯು, ಅದರೊಂದಿಗೆ ಸರ್ವಕ್ಕೂ ಆಧಾರವಾಗಿಯೂ ಶೇಷಿಯಾಗಿಯೂ ಇರುವ ಶಕ್ತಿಗೂ ಇದು ಉಪಲಕ್ಷಣವು. **ಅಯುತಾಯುತಾಂಶೇನ**-ಅಯುತಾಂಶದ ಅಯುತಾಂಶದಿಂದ, ಎಂದರೆ ಅತ್ಯಲ್ಪಾಂಶದಿಂದ, **ವಿಷ್ಟಭ್ಯ**-ಅವುಗಳಿಗೆ ಆತ್ಮಾವಾಗಿ ಸ್ಥಿರವಾಗಿ ನಿಂತು, **ಅಹಂ ಅವಸ್ಥಿತಃ**-ನಾನು ಇರುತ್ತೇನೆ; ಸ್ಥಿರವಾಗಿ ಅವುಗಳಲ್ಲಿರುತ್ತೇನೆ. ಶ್ರೀಮಚ್ಛಂಕರಾಚಾರ್ಯರು **ವಿಷ್ಟಭ್ಯ**-ಎಂಬುದಕ್ಕೆ **ವಿಶೇಷತಃ ಸ್ತಂಭನಂಕೃತ್ವಾ**-ಎಂದು ಭಾಷ್ಯವನ್ನು ಬರೆದಿರುತ್ತಾರೆ. ಇದನ್ನನುಮೋದಿಸಿ ಶ್ರೀ ದೇಶಿಕರವರು **ಸ್ತಂಭನ**-ಶಬ್ದಕ್ಕೆ ಸ್ವಸಙ್ಕಲ್ಪ ದಶೆಯಿಂದ ನಿವಾರಣವೆಂದೂ ಅಥವಾ ಜಗತ್ತನ್ನೆಲ್ಲಾ ಪ್ರವೇಶಿಸಿ ಅಧಿಷ್ಠಾನಮಾಡಿಕೊಂಡು ಅವೆಲ್ಲವನ್ನು ನಿಯಮಿಸೋಣವು ಎಂದು ಅರ್ಥಬರೆದಿರುತ್ತಾರೆ. ಹೀಗೆ ಹೇಳಿರುವದರಿಂದ ಈ ನೆಯ ಶ್ಲೋಕದಲ್ಲಿ ವ್ಯತಿರೇಕದಿಂದ ಸಮಸ್ತ ಚರಾಚರವಾದ ವಿಶ್ವದೊಂದಿಗೆ, **ವಿಷ್ಟಭ್ಯ** ಪದದೊಂದಿಗೆ, **ಹೇಳಲ್ಪಟ್ಟ** ಅಪೃಥಕ್ಸಿದ್ಧವಿಶೇಷಣವಾದ ಅವಿನಾಭೂತತ್ವವನ್ನೇ ಈ **ವಿಷ್ಟಭ್ಯ** ಎಂಬ ಪ್ರಯೋಗದಿಂದ ಅನುವಾದ ಮಾಡಿರುತ್ತಾರೆ. ಸರ್ವವಿಶ್ವವೂ ಸತ್ಯವಾಗಿಯೇ ಅವನಿಗೆ ಶರೀರವೇ; ಅವುಗಳಿಗೆಲ್ಲಾ ಆತನು ಆತ್ಮಾ; ಇದರಿಂದ ಚಿದಚಿತ್ತುಗಳೊಂದಿಗೆ ಈತನು ಯಾವಾಗಲೂ ಸೇರಿರುತ್ತಾನೆ. ಸೃಷ್ಟಿಗೆ ಮೊದಲು ಈ ಚಿದಚಿತ್ತುಗಳು ನಾಮರೂಪಗಳಿಗೆ ಅನರ್ಹವಾಗಿ ಸೂಕ್ಷ್ಮದೆಸೆಯಲ್ಲಿರುತ್ತವೆ. ಸೃಷ್ಟಿ

ಭಾ. ಯಥೋಕ್ತಂ ಭಗವತಾ ಪರಾಶರೇಣ (೧) ಯಸ್ಯಾಯುತಾಯುತಾಂಶಾಂಶೇ ವಿಶ್ವ ಶಕ್ತಿರಿಯಂ ಸ್ಥಿತಾ" ಇತಿ॥ ೪೨.

ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ

ದಶಮೋಽಧ್ಯಾಯಃ

ಶ್ರೀಮತೇ ರಾಮಾನುಜಾಯ ನಮಃ.

---

ನಂತರ ಸ್ಥೂಲದೆಶೆಯನ್ನು ಹೊಂದಿ, ನಾಮರೂಪಗಳನ್ನು ವಹಿಸುತ್ತವೆ. ಹೀಗೆ ಇವುಗಳೊಂದಿಗೆ ತಾನೂ ಸೇರಿ ಒಂದು, ಇಂತಹ ಏಕತ್ವವನ್ನೇ ಶ್ರುತಿಗಳು ಉಪಪಾದಿಸುತ್ತವೆ. **"ಆನೀತ ವಾದಗ್ಂ ಸ್ವಧಯಾ ತದೇಕಂ" "ತಮಸಾಗೂಢಮಗ್ರೇ ಪ್ರಕೇತಂ" ಅಗ್ರೇ-ಸೃಷ್ಟೇಃ ಪ್ರಾಕ್**-ಸೃಷ್ಟಿಗೆ ಮೊದಲು, **ತಮಸಾ**-ಚಿದಚಿತ್ತುಗಳ ಸಮ್ಮೇಳನವಾಗಿ ತಮಶ್ಶಬ್ದವಾಚ್ಯವಾದ ಪ್ರಕೃತಿಯೊಂದಿಗೆ, ಸೂಕ್ಷ್ಮವಾಗಿ ನಾಮರೂಪಾನರ್ಹವಾದ ಅವಸ್ಥೆಯಲ್ಲಿತ್ತು ಎಂಬರ್ಥವು. ಈ ಅರ್ಥವೇ **"ಸದೇವಸೋಮ್ಯೇದಮಗ್ರ ಆಸೀತ್"** ಎಂಬಲ್ಲೂ **"ಸತ್"** ಎಂಬುದರಿಂದ ಚಿದ ಚಿತ್ತುಗಳ ಸಮ್ಮೇಳನವು ಹೇಳಲ್ಪಟ್ಟಿತು. ಹೀಗೆ ಏಕತ್ವವನ್ನು ಶ್ರುತಿಗಳು ವಿಶಿಷ್ಟತೆಯಿಂದ ಬೋಧಿಸುವದರಿಂದ ಐಕ್ಯಶ್ರುತಿಯ ಸಾಮಂಜಸ್ಯವೂ, **"ದ್ವಾಸುಪರ್ಣಾ" "ದ್ವಾವಜಾ ವೀಶ ನೀಶೌ"** ಇತ್ಯಾದಿ ದ್ವಿತ್ವಬೋಧಕ ಶ್ರುತಿಗಳ ಪರಮಾತ್ಮ ಜೀವಾತ್ಮ ಭೇದದಿಂದ ಸಾಮಂಜಸ್ಯವೂ ಉಂಟಾಗುತ್ತದೆ. ವಿಶಿಷ್ಟತಯಿಂದ ಐಕ್ಯವಾದುದರಿಂದ ನಿರ್ಗುಣಬ್ರಹ್ಮವಾದವನ್ನೂ ಜಗನ್ಮಿಥ್ಯಾವಾದವನ್ನೂ ತರಬೇಕಾದ ಅವಶ್ಯಕತೆಯು ಇರುವದಿಲ್ಲವು. ಹೀಗೆ ಎಲ್ಲಕ್ಕೂ ಆತ್ಮಾ ಆದುದರಿಂದ ತಾನು ಆಧಾರನು ಜಗತ್ತು ಆಧೇಯವೆಂಬುದೂ, ತಾನು ನಿಯಾಮಕನು ಜಗತ್ತು ನಿಯಾಮ್ಯವೆಂಬುದೂ, ತಾನು ಶೇಷಿಯು ಜಗತ್ತು ಶೇಷಭೂತವಾದುದು, ತಾನು ರಕ್ಷಕನೂ ಸರ್ವಪ್ರಾಣಿವರ್ಗವೂ ರಕ್ಷ್ಯವೂ ಎಂಬೀ ಸಕಲ ಭಾವಗಳೂ ಕೂಡುವುವು; ಈ ಭಾವವು ಮನಸ್ಸಿಗೆ ಹಿಡಿದರೆ, ಪಾರಮಾರ್ಥಿಕ ಸತ್ಯ, ಅಪಾರಮಾರ್ಥಿಕ ಸತ್ಯವೆಂದು, ಇಲ್ಲದಿರುವ ಎರಡು ಬಗೆಯಸತ್ಯ ಉಂಟೆಂದು ಹೇಳುವ ಅವಶ್ಯಕತೆಯೂ, ದೂರೀಕೃತವಾಗುವದು. ಸುಳ್ಳಾದ ಸತ್ಯವೆಂಬ ಪ್ರಯೋಗವೇ ಅವಗಾಹನೆಗೆ ಬರುವದು ಕಷ್ಟವು. ಮೂಲದಲ್ಲಿ **ಏಕಾಂಶೇನ ಸ್ಥಿತಃ** ಎಂದಿರುವದಕ್ಕೆ **ಅಯುತಾಯುತಾಂಶೇನ ಅವಸ್ಥಿತಃ** ಎಂದು ಭಾಷ್ಯವನ್ನು ಬರೆದರು. ಹಿಂದೆ **ಮಮ ತೇಜೋಂಶ ಸಂಭವಂ** ಎಂದು ಹೇಳಿರುವದರಿಂದ, ತೇಜಸ್ಸೇ ಮಹಿಮೆಯುಳ್ಳದುದರಿಂದಲೂ, **ಅಂಶ** ಶಬ್ದವು ತುಂಬಾ ಅಲ್ಪವನ್ನು ಸೂಚಿಸುವದರಿಂದಲೂ, **ಮಮ ಮಹಿಮ್ನಃ ಅಯುತಾಯುತಾಂಶೇನ** ಎಂಬದಾಗಿ ಭಾಷ್ಯವು. ಹಾಗೆ ಬರೆಯಲು ತಮಗೆ ಪ್ರಮಾಣ ಬಲವುಂಟೋ? ಎಂದರೆ ಉಂಟೆಂದು ಶ್ರೀ ಪರಾಶರೋಕ್ತಿಯನ್ನು ಉದಾಹರಿಸುತ್ತಾರೆ. **ಯಥೋಕ್ತಮ್ ಭಗವತಾ ಪರಾಶರೇಣ** — ಜ್ಞಾನನಿಷ್ಠೆ ಕರ್ಮನಿಷ್ಠೆಗಳಿಂದ ಮಹಾಪೂಜ್ಯರಾದ ಶ್ರೀ ಪರಾಶರರಿಂದ ಹಾಗೆಯೇ ಹೇಳಲ್ಪಟ್ಟಿರುತ್ತದೆ—**"ಯಸ್ಯ**—ಯಾವ ಅದ್ಭುತ ಶಕ್ತಿಯುಳ್ಳ ಪರಮಾತ್ಮನ, **ಅಯುತಾಯುತಾಂಶಾಂಶೇ**—ಅಯುತಾಂಶವು ಯಾವುದೋ, ಅಂತಹ ಒಂದಾದ ಅಂಶದ ಪುನಃ ಅಯುತಾಂಶವು ಯಾವುದೋ ಅಂತಹ ಅಲ್ಪಭಾಗದ ಮಹಿಮೆಯಲ್ಲಿ, **ಇಯಂ**—ಈ ಪ್ರತ್ಯಕ್ಷಾದಿಗಳಿಂದ ಗೋಚರವಾದ ಈ,

(೧) ವಿ. ಪು. ೧.೯.೫೩.

**ವಿಶ್ವಶಕ್ತಿಃ**—ವಿಶ್ವರೂಪವಾದ ಶಕ್ತಿಯು, **ಸ್ಥಿತಾ**–ಇರುತ್ತದೋ, ಇವಕ್ಕೆ ಉತ್ತರಾರ್ಧವು **"ಪರಬ್ರಹ್ಮಸ್ವರೂಪಸ್ಯ ಪ್ರಣಮಾಮ ಸ್ತ ಮವ್ಯಯಂ"** ವೆಂದು ಇರುತ್ತದೆ. **ಪರಬ್ರಹ್ಮ ಸ್ವರೂಪಸ್ಯ** ಎಂಬುದು **ಯಸ್ಯ**-ಎಂಬದಕ್ಕೆ ವಿಶೇಷಣವು. ಅಂತಹ **ತಂ ಅವ್ಯಯಂ**-ನಾಶರಹಿತನಾಗಿ ಅಚ್ಯುತನೆಂದು ಹೇಳಿಸಿಕೊಳ್ಳುವ ಅಂತಹ **ಪರಬ್ರಹ್ಮನನ್ನು, ಪ್ರಣಮಾಮಃ**–ನಮಸ್ಕರಿಸುವೆವು ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ **ಭಗವತಾ** ಎಂಬ ಪದವು ತುಂಬಾ ಜ್ಞಾನಸಿಧಿಯಾಗಿರುವದರಿಂದಲೂ ತತ್ವಗಳನ್ನು ಯಥಾರ್ಥವಾಗಿ ನಿರ್ಭಯವಾಗಿ ಉಪದೇಶಿಸಿರುವದರಿಂದಲೂ ಮಹಾ ಪೂಜ್ಯತೆಯನ್ನು ಸೂಚಿಸುತ್ತದೆ. ಆದುದರಿಂದ ಅವರು ಅನುಗ್ರಹಿಸಿರುವ ವಿಷ್ಣುಪುರಾಣವು ಪುರಾಣರತ್ನವೆಂಬ ಪ್ರಸಿದ್ಧಿಯನ್ನು ಹೊಂದಿರುತ್ತದೆ. ಇದರ ಮಾಹಾತ್ಮ್ಯೆಯನ್ನು ತಿಳಿದ ಶ್ರೀ ಯತಿವರ್ಯರು ತಮ್ಮ ಆಚಾರ್ಯರಾದ ಯಾಮುನೇಯರ ದಿವ್ಯಸೂಕ್ತಿಯನ್ನನುಸರಿಸಿ ಶ್ರೀಪರಾಶರರಿಗೆ ತುಂಬಾ ಪೂಜ್ಯತೆಯನ್ನು ಸೂಚಿಸುವದಕ್ಕಾಗಿ **ಭಗವತಾಪರಾಶರೇಣ** ಎಂದು ಪ್ರಯೋಗಿಸಿರುತ್ತಾರೆ ಶ್ರೀ ಯಾಮುನೇಯರು ಶ್ರೀಪರಾಶರರನ್ನು ಕೊಂಡಾಡಿರುವದು ಹೇಗೆಂದರೆ – **"ತತ್ವೇನ ಯಶ್ಚಿದಚಿದೀಶ್ವರ ತತ್ಸ್ವಭಾವಭೋಗಾಪವರ್ಗ ತದುಪಾಯಗತೀ ರುದಾರಃ। ಸಂದರ್ಶಯ ನ್ನಿರಮಮಿಾತ ಪುರಾಣರತ್ನಂ ತಸ್ಮೈನಮೋ ಮುನಿವರಾಯ ಪರಾಶರಾಯ"** ಹೀಗೆ ಸಮೀಚೀನವಾದ ಉಪದೇಶರೂಪದಲ್ಲಿ ಯಾವ ಮಹರ್ಷಿಯು, ಚಿತ್ ಅಚಿತ್ ಈಶ್ವರ ಎಂಬ ತತ್ತ್ವತ್ರಯಗಳ ಸ್ವರೂಪಸ್ಥಿತಿ ಪ್ರವೃತ್ತಿಗಳೇನು, ಪುರುಷಾರ್ಥರೂಪಗಳಾದ ಐಶ್ವರ್ಯಾದಿ ಮೋಕ್ಷರೂಪ ಫಲಗಳೇನು, ಇವುಗಳನ್ನು ಹೊಂದುವ ಉಪಾಯಗಳೇನು, ಇವುಗಳನ್ನೆಲ್ಲಾ ಬಹು ಉದಾರ ಬುದ್ಧಿಯಿಂದ ವಂಚನೆ ಇಲ್ಲದೆ ಯಥಾರ್ಥವಾಗಿ ತಿಳಿಸುವದಕ್ಕಾಗಿ ವಿಷ್ಣುಪುರಾಣವೆಂಬ ಪುರಾಣ ರತ್ನವನ್ನು ನಿರ್ಮಿಸಿದರೋ, ಅಂತಹ ಮಹಾನುಭಾವರಾದ ಶ್ರೀ ಪರಾಶರ ಮಹರ್ಷಿಗಳಿಗೆ ನಮಸ್ಕಾರವೆಂದು ತಮ್ಮ ಗ್ರಂಥಾದಿಯಲ್ಲಿ ಕೃತಜ್ಞತಾಸೂಚಕವಾದ ಮಙ್ಗಳಾಚರಣೆಯನ್ನು ಮಾಡಿರುತ್ತಾರೆ. **ಯಸ್ಯಾಯುತಾಯುತಾಂಶೇ** ಎಂಬ ಪ್ರಯೋಗವನ್ನೇ ಶ್ರೀಯಾಮುನೇಯರೂ, ತಮ್ಮ ಸ್ತೋತ್ರರತ್ನದಲ್ಲಿ ಉಪಯೋಗಿಸಿರುತ್ತಾರೆ.—**"ಕಸ್ಯಾಯುತಾಯುತಾಶತೈಕ ಕಲಾಂಶಕಾಂಶೇ ವಿಶ್ವಂ ವಿಚಿತ್ರ ಚಿದಚಿತ್ಪ್ರವಿಭಾಗವೃತ್ತಮ್"** ಅಸಂಖ್ಯಾತವಾದ ಬ್ರಹ್ಮಾಂಡಾವರಣಗಳನ್ನೆಲ್ಲಾ ವ್ಯಾಪಿಸಿ ಅವುಗಳಿಗೆಲ್ಲಾ ಆತ್ಮಾವಾಗಿರುವದು ಪರಮಾತ್ಮನ ಮಹಿಮೆಯ ಲವಾಂಶವೇ ಎಂಬ ಭಾವವೇ ಇಲ್ಲಿಯೂ ಉಪಪಾದಿತವಾಗಿರುವದು. ಮಹಿಮೆಯ ಏಕದೇಶದಿಂದ ಅಘಟಿತ್ವವೇ ಇಲ್ಲೆಲ್ಲಾ ಸ್ಥಾಪಿತವಾಗಿರುವದು (ಸ್ತೋತ್ರ. ೧೨.) ಹೀಗೆ ನಿತ್ಯಗಳಾಗಿರುವ ಮೂರು ತತ್ವಗಳುಂಟೆಂದು ಶಾಸ್ತ್ರಗಳಲ್ಲೆಲ್ಲಾ ಬೋಧಿತವು. **"ಭೋಕ್ತಾಭೋಗ್ಯಂ ಪ್ರೇರಿತಾರಂ ಚ ಮತ್ವಾ"** ಎಂಬ (ಶ್ವೇ.೨.೧೨) **ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ ಕ್ಷರಾತ್ಮಾನಾ ಈಶತೇ ದೇವ ಏಕಃ"** ಎಂಬ (ಶ್ವೇ.೮.೧-೧೨) **"ಅಸ್ಮಾನ್ಮಾಯಿೂ ಸೃಜತೇ ವಿಶ್ವಮೇ ತತ್ತಸ್ಮಿಂ ಶ್ಚಾನ್ಯೋ ಮಾಯಯಾ ಸನ್ನಿರುದ್ಧಃ। ಮಾಯಾಂತು ಪ್ರಕೃತಿಂ ವಿದ್ಧಿ ಮಾಯಿನಂತು ಮಹೇಶ್ವರಮ್"** (ಶ್ವೇ. ೪-೯, ೧೦) **"ಪ್ರಧಾನ ಕ್ಷೇತ್ರಜ್ಞ ಪತಿರ್ಗುಣೇಶಃ"** (ಶ್ವೇ.೧ ೧೬) **"ಪತಿಂ ವಿಶ್ವಸ್ಯಾತ್ಮೇಶ್ವರಮ್** (ತೈ. ನಾ. ೧೧) ಹಾಗೆಯೇ ಇದೇ ಗೀತೆಯಲ್ಲೇ **ಅಹಂಕಾರ ಇತೀಯಂ ಮೇ ಭಿನ್ನಾಪ್ರಕೃತಿ ರಷ್ಟಧಾ॥ ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮಾಮಿಕಾಮ್। ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್"** (ಗೀ.೭-೪.೫) **"ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾಇವ"** (ಗೀ.೭-೭) **ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ"** (ಗೀ. ೧೩-೧೯) ಹೀಗೆ ಇದನ್ನು ಹೇಳುವ ಈಶ್ವರನೂ ಸೇರಿ ತತ್ವತ್ರಯಗಳು. ಇತ್ಯಾದ್ಯನೇಕ ಪ್ರಮಾಣಗಳಿವೆ.

ಈ ಅಧ್ಯಾಯಕ್ಕೆ ಅನೇಕ ಕೋಶಗಳಲ್ಲಿ ಬೇರೆ ಬೇರೆ ಹೆಸರುಗಳು ಕೊಡಲ್ಪಟ್ಟಿವೆ.—ಕೆಲವರು ಸಾಂಖ್ಯಯೋಗವೆಂದೂ, ಇನ್ನು ಕೆಲವರು ಅಕ್ಷರ ಪರಬ್ರಹ್ಮಯೋಗವೆಂದೂ, ಇನ್ನು ಕೆಲವರು ವಿಭೂತಿಯೆಂದೂ, ವಿಭೂತಿ ವಿಸ್ತರಯೋಗವೆಂದೂ ಹೀಗೆಲ್ಲಾ ಅಧ್ಯಾಯ ತಾತ್ಪರ್ಯಗಳನ್ನು ತಿಳಿಸಿರುತ್ತಾರೆ. ಇವೆಲ್ಲಾ ಹೆಸರುಗಳೂ ಉಪಪನ್ನಗಳೇ; ಭಕ್ತಿಯೋಗ ನಿಷ್ಪತ್ತಿಗಾಗಿ ಪರಬ್ರಹ್ಮನ ಕಲ್ಯಾಣಗುಣಗಳ ಆನಂತ್ಯವೂ, ವಿಭೂತಿಯ ಯೋಗವೂ, ಹೇಳಿರುವದರಿಂದ ಸಾಂಖ್ಯಯೋಗವೆಂದು ಹೇಳಲು ಅಭ್ಯಂತರವಿಲ್ಲವು. ಹಾಗೆಯೇ ಅಕ್ಷರ ಪರಬ್ರಹ್ಮ ಯೋಗಾಧ್ಯಾಯವೆಂದೂ ಹೇಳಬಹುದು. ಆದರೆ ಮುಖ್ಯವಾಗಿ ಧ್ಯೇಯವಸ್ತುವಿನ ಮಾಹಾತ್ಮ್ಯೆಯು ಚೆನ್ನಾಗಿ ನೆಲೆಗೊಳ್ಳುವದಕ್ಕಾಗಿ ವಿಭೂತಿಯ ಮಾಹಾತ್ಮ್ಯೆಯೂ ಅದರ ವಿಸ್ತರವೂ ಹೇಳಲ್ಪಟ್ಟಿತೆಂದು ಭಾವಿಸಿ **ವಿಭೂತಿ ವಿಸ್ತರಯೋಗೋನಾಮ ದಶಮೋಧ್ಯಾಯ** ವೆಂದು ಹೇಳುವದೇ ಯುಕ್ತವಾಗಿ ತೋರುತ್ತದೆ. ||೪೨||

ಇಂತು ಶ್ರೀ ಭಗವದ್ಗೀತೆಯ ೧೦ನೆಯ ಅಧ್ಯಾಯಕ್ಕೂ, ಶ್ರೀ ಯತಿವರ್ಯರ ಭಾಷ್ಯಕ್ಕೂ,
ತಿರುನಾರಾಯಣಪುರಂ **ಸಿ. ಯಂ. ವಿಜಯರಾಘವಶರ್ಮನ**
**ಆಚಾರ್ಯ ಹೃದಯಾನ್ವೇಷಿಣೀ**
ಎಂಬ ಅರ್ಥ ತಾತ್ಪರ್ಯಗಳೂ ಸಂಪೂರ್ಣವು.
**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ**
ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ

## ಹತ್ತನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು

ಹಿಂದಿನ ಅಧ್ಯಾಯವಲ್ಲಿ ಭಕ್ತಿಯೋಗವೂ ಅದರ ಪರಿಕರಗಳೂ, ಹೇಳಲ್ಪಟ್ಟವು. ಆ ಭಕ್ತಿ ಯೋಗದ ಉತ್ಪತ್ತಿ ಅಭಿವೃದ್ಧಿಗಳಿಗಾಗಿ ಭಗವಂತನ ಮಾಹಾತ್ಮ್ಯೆಯು ಈಗ ಹೇಳಲ್ಪಡುತ್ತದೆ. ಅದಕ್ಕಾಗಿ ತನ್ನ ಕಲ್ಯಾಣಗುಣಗಳ ಆನನ್ತ್ಯವೂ, ಎಲ್ಲವೂ ತನಗೆ ಶರೀರವಾಗಿ ಎಲ್ಲಕ್ಕೂ ತಾನು ಆತ್ಮಾವಾದುದರಿಂದ, (೧) ತನ್ನ ನಿಯಾಮ್ಯ ವರ್ಗವಾದ ವಿಭೂತಿಗಳ ಪ್ರಾಧಾನ್ಯತೆಯೂ (೨) ಅವುಗಳೊಂದಿಗೆ ತನಗಿರುವ ಸಾಮಾನಾಧಿಕರಣ್ಯವೂ (೩) ತನ್ನ ಸರ್ವಶಬ್ದ ವಾಚ್ಯತ್ವವೂ ಈ ಅಧ್ಯಾಯವಲ್ಲಿ ಹೇಳಲ್ಪಡುತ್ತವೆ.

೧. ಲಕ್ಷ್ಮೀಯುಕ್ತ ಭಗವಂತನು ಹೇಳುತ್ತಾನೆ.—ಹೊರಗಿನ ಶತ್ರುಗಳನ್ನೂ ಹಾಗೆಯೇ ಅಂತಶ್ಶತ್ರುಗಳನ್ನೂ ಜಯಿಸುವ ಸಾಮರ್ಥ್ಯವುಳ್ಳ ಓ ಅರ್ಜುನನೇ, ನಿನ್ನ ಭಕ್ತಿ ವಿಶ್ವಾಸಗಳಿಂದ ಪ್ರೀತನಾಗಿ ಪರಮ ವಾತ್ಸಲ್ಯಾತಿರೇಕದಿಂದ ಪ್ರೇರಿತನಾದ ನನ್ನ, ಅಮೋಘವಾದ ಇನ್ನೊಂದು ಸಲ ಮಾಡುವ ಉಪದೇಶವನ್ನು ಸಾವಧಾನದಿಂದ ಕೇಳು. ಏಕೆಂದರೆ ಹಿಂದೆ ಉಪದೇಶಿಸಿದ ನನ್ನನ್ನು ಹೊಂದುವ ಉಪಾಯವಾದ ಭಕ್ತಿಯೋಗವು ನೆಲಸಿ ವೃದ್ಧಿಯಾಗಿ ನಿರತಿಶಯ ಹಿತವನ್ನುಂಟುಮಾಡಬೇಕೆಂಬ ಅಪೇಕ್ಷೆಯಿಂದಹೇಳುವೆನಾದುದರಿಂದ ನೀನುಗಮನಿಸಿ ಕೇಳತಕ್ಕದ್ದು.

೨. ಅದೇನು ಸಾವಧಾನದಿಂದ ಕೇಳತಕ್ಕದ್ದೆಂದರೆ, ಯದ್ಯಪಿ ಹೆಚ್ಚು ಜ್ಞಾನವುಳ್ಳ ದೇವತೆಗಳ ಸಮೂಹವಾಗಲಿ, ಅಥವಾ ಮಹರ್ಷಿಗಳಾಗಲಿ, ತನ್ನ ಮಾಹಾತ್ಮ್ಯೆಯನ್ನು ಚೆನ್ನಾಗಿ ತಿಳಿಯರು. ಏಕೆಂದರೆ ಅವರೆಲ್ಲಾ ಕರ್ಮವಶ್ಯರಾಗಿ ಅಂತಹ ದೇವತೆಗಳಿಗೂ ಮಹರ್ಷಿಗಳಿಗೂ ನಾನು ಆದಿಯಾಗಿ ಸರ್ವಪ್ರಕಾರವಾಗಿಯೂ ನಿಯಾಮಕನಾದುದರಿಂದ ಅವರಿಗೆಲ್ಲಾ ಇರುವುದು ಪರಿಮಿತಜ್ಞಾನವು.

೩. ಹೀಗೆ ಸರಿಯಾದ ಜ್ಞಾನವಿಲ್ಲದಿರುವುದಕ್ಕೆ ಕಾರಣವು ಭಕ್ತ್ಯುತ್ಪತ್ತಿಗೆ ವಿರೋಧಿಯಾದ ಪಾಪಗಳ ವಿಮೋಚನೆಯಿಲ್ಲದಿರೋಣವು. ಅಂತಹ ಪಾಪವಿಮೋಚನಕ್ಕೆ ಉಪಾಯವನ್ನು ತಿಳಿಸುತ್ತಾರೆ. ಯಾವನು ಭಕ್ತಿಯೋಗವಲ್ಲಿಯೇ ಬೇಕೆಂದಿದ್ದಾನೋ ಅವನು, ನನ್ನನ್ನು ಬದ್ಧಜೀವರುಗಳಿಗಿಂತಲೂ ವಿಲಕ್ಷಣವಾ॥ ಜನ್ಮರಹಿತನೆಂದೂ, ಮುಕ್ತರಹಾಗೆ **ಈಚೆಗೆ** ಬಂದ ಪಾರಿಶುದ್ಧ್ಯವಿಲ್ಲದೆ ಅನಾದಿಯಾಗಿ ವಿಲಕ್ಷಣನೆಂದೂ, ಮತ್ತು ಸರ್ವಲೋಕದ ಸ್ವಾಮಿಗಳಿಗೂ ನಿಯಾಮಕನಾಗಿ ಅವರಿಗೆಲ್ಲಾ ಸ್ವಾಮಿಯಾಗಿ ಸರ್ವಲೋಕೇಶ್ವರನೆಂದೂ, ಹೀಗೆ ತಿಳಿದು, ಮೋಹರಹಿತನಾಗಿ ಪ್ರಾಜ್ಞನೆನಿಸುವನೋ, ಅವನೀಗ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕವಾದ ಸರ್ವಪಾಪಗಳಿಂದಲೂ ಬಿಡಲ್ಪಡುವನು.

೪, ೫. ತಾನು ಸರ್ವಲೋಕ ಮಹೇಶ್ವರನು ಹೇಗೆಂಬುದನ್ನು ತಿಳಿಸುತ್ತಾರೆ.— ಮನಸ್ಸಿನ ನಿರೂಪಣಾ ಸಾಮರ್ಥ್ಯವಾದ **ಬುದ್ಧಿಯೂ**, ಚಿದಚಿದ್ವಸ್ತುವಿಶೇಷ ವಿಷಯಕವಾದ **ನಿಶ್ಚಯಜ್ಞಾನವೂ,** ಅಜ್ಞಾನ ಅನ್ಯಥಾಜ್ಞಾನ ವಿಪರೀತಜ್ಞಾನಗಳಿಂದುಂಟಾಗುವ ಭ್ರಮಗಳಿಲ್ಲದಿರುವ **ಅಸಮ್ಮೋಹವೂ**, ಮನೋವಿಕಾರವುಂಟಾಗುವ ಕಾರಣವಿದ್ದರೂ ವಿಕಾರವುಂಟಾಗದಹಾಗೆ ಸಹಿಸಿಕೊಳ್ಳುವ **ಕ್ಷಮೆಯೂ,** ಭೂತಹಿತವಾಗಿ ಯಥಾರ್ಥ ವಚನವೆನಿಸುವ **ಸತ್ಯವೂ,** ಬಾಹ್ಯೇಂದ್ರಿಯಗಳನ್ನು ಅನರ್ಥಕರಗಳಾದ ವಿಷಯಗಳಿಂದ ನಿವರ್ತಿಸುವ **ದಮ**ವೂ, ಮನಸ್ಸನ್ನು ಅನರ್ಥಕರಗಳಾದ ವಿಷಯೋಪಭೋಗಗಳಿಗಾಗಿ ಇಂದ್ರಿಯಗಳನ್ನು ಪ್ರೇರಿಸದಹಾಗೆ ಮಾಡುವ **ಶಮವೂ,** ಆತ್ಮನಿಗೆ ಅನುಕೂಲಾನುಭವರೂಪ **ಸುಖವೂ,** ಪ್ರತಿಕೂಲರೂಪವಾದ **ದುಃಖವೂ,** ಸುಖಾನುಭವಕ್ಕೆ ಯೋಗ್ಯವಾದ ಮನಸ್ಸಿನ ಅವಸ್ಥೆಯಾದ **ಭವವೂ**, ದುಃಖಾನುಭವಕ್ಕೆ ಹೇತುವಾದ ಮನಸ್ಸಿನ ವೈಸ್ಯತೆಯಾದ, **ಅಭಾವವೂ;** ಮುಂದೆ ದುಃಖಕ್ಕೆ ಕಾರಣ ಉಂಟೆಂಬ **ಭಯ**ವೂ, ಅಂತಹ ದುಃಖಕ್ಕೆ ಕಾರಣವಿಲ್ಲವೆಂಬ **ಅಭಯವೂ**, ಇತರರ ದುಃಖಕ್ಕೆ ಕಾರಣವಾಗಕೂಡದೆಂಬ **ಅಹಿಂಸೆಯೂ**, ತನಗಾಗಲಿ ಮಿತ್ರರಿಗಾಗಲಿ ಶತ್ರುಗಳಿಗಾಗಲಿ ಇಷ್ಟಾನಿಷ್ಟಗಳು ಉಂಟಾದರೂ ಸಮಬುದ್ಧಿಯಿಂದಿರುವ **ಸಮತೆಯೂ**, ಎಲ್ಲಾ ಪ್ರಾಣಿಗಳನ್ನು ಕಂಡರೂ **ಸಂತೋಷಚಿತ್ತ**ದಿಂದಿರುವ **ತುಷ್ಟಿಯೂ,** ಶಾಸ್ತ್ರದಲ್ಲಿ ಹೇಳಿರುವಹಾಗೆ ಉಪಭೋಗವನ್ನು ನಿರಾಕರಿಸಿ ಕಾಯಕ್ಲೇಶವನ್ನಾಚರಿಸುವ **ತಪಸ್ಸೂ**, ಧರ್ಮದಿಂದ ಸ್ವಾರ್ಜಿತವಾಗಿ ತನ್ನ ಭೋಗಕ್ಕಾಗಿರುವದನ್ನು ಪ್ರತಿಫಲಾಕಾಂಕ್ಷೆಯಿಲ್ಲದೆ ಇತರರಿಗೆ ಕೊಡುವ **ದಾನವೂ**, ಒಳ್ಳೇ ಗುಣಾಢ್ಯನೆಂಬ ಖ್ಯಾತಿರೂಪವಾದ **ಯಶಸ್ಸೂ,** ತುಂಬಾ ಕೆಟ್ಟವನೆಂಬ ನಿಂದೆಗೆ ಒಳಪಡಿಸುವ **ಅಯಶಸ್ಸೂ,** ಇಂತಹ ಮನಸ್ಸಿನ ಪ್ರವೃತ್ತಿಗೆ ಕಾರಣಭೂತವಾದವುಗಳೆಲ್ಲಾ ನನ್ನ ಸಙ್ಕಲ್ಪದಿಂದ ಉಂಟಾದವುಗಳಾಗಿ ನಾನಾವಿಧಗಳಾಗಿವೆ. ಹೀಗೆ ಸರ್ವಪ್ರೇರಕನಾಗಿ ನಿಯಾಮಕನಾಗಿ ನಾನು **ಸರ್ವಲೋಕೇಶ್ವರನು.**

೬. ಲೋಕದಲ್ಲಿರುವ ಪ್ರಾಣಿಗಳ ಮೂಲಕ ನಡೆಯುವ ಸೃಷ್ಟಿಸ್ಥಿತಿ ನಿಯಮನಾದಿಗಳೆಲ್ಲಾ ಸರ್ವಲೋಕೇಶ್ವರನಾದ ತನ್ನ ಸಙ್ಕಲ್ಪಮೂಲಕವಾಗಿಯೇ ನಡೆಯುತ್ತವೆ ಎಂದು ಹೇಳುತ್ತಾರೆ.- ಹಿಂದೆ **ಚತುರ್ಮುಖನ** ಮಾನಸಪುತ್ರರಾಗಿ ಜನಿಸಿದ ಸಪ್ತರ್ಷಿಗಳೂ ಮತ್ತು ಸಾವರ್ಣಿಕ ಮನುಗಳೂ, ನನ್ನ ಸಙ್ಕಲ್ಪದಿಂದ ಚತುರ್ಮುಖನ ಮಾನಸಪುತ್ರರಾಗಿ ಹುಟ್ಟಿ ದಾಂಪತ್ಯಭಾವದಿಂದ ಪ್ರಜಾಸೃಷ್ಟಿಯಲ್ಲಿ ಪ್ರವರ್ತಿಸಿದವರೆಲ್ಲರೂ ನನ್ನ ಸಙ್ಕಲ್ಪಕ್ಕೆ ಅಧೀನರಾಗಿಯೇ ಜನಿಸಿದವರು ಮತ್ತು ನಡೆಸಿದವರು.

೭. ಹೀಗೆ ಇವರುಗಳೇನು, ಇವರುಗಳಿಂದ ಕ್ರಮವಾಗಿ ಜನಿಸಿದ ಪ್ರಜಾಸಮೂಹವೇನು, **ಹೀಗೆ ಸರ್ವಲೋಕದಲ್ಲಿರುವ ಚಿದಚಿದ್ರೂಪ ಮಿಶ್ರವಾದ ಅಶೇಷ ನಿಯಾಮ್ಯವರ್ಗವಾದ ವಿಭೂತಿಯನ್ನೂ, ಅದರೊಂದಿಗೆ ಪ್ರಾಪ್ತಸ್ಥಳಗಳಲ್ಲಿ ಹೇಳಲ್ಪಟ್ಟ ನನ್ನೊಂದಿಗೇ ಯಾವಾಗಲೂ ಅವಿನಾ**

ಭೂತದಿಂದಿರುವ ಲಕ್ಷ್ಮೀಕಲ್ಯಾಣಗುಣದಿವ್ಯಾಯುಧಾದಿಗಳ ಯೋಗವೇನು, ಇವುಗಳಿಂದೆಲ್ಲಾ ಸೇರಿರುವೆನೆಂದು ಯಾವನು ತಿಳಿಯುವನೋ, ಅಂತವನು ಅಚಾಲ್ಯವಾದ ಭಕ್ತಿಯೋಗದಿಂದ ಯುಕ್ತನಾಗುವನು; ಇವುಗಳಿಂದಸೇರಿರುವೆನೆಂಬ ಜ್ಞಾನವು ಭಕ್ತಿಯೋಗವರ್ಧಕವೆಂಬ ಭಾವವು.

೮. ವಿಭೂತಿ ಮತ್ತು ಕಲ್ಯಾಣಗುಣಗಳಿಂದ ನಾನು ಯಾವಾಗಲೂ ಸೇರಿರುವೆನೆಂಬ ಜ್ಞಾನವು ಭಕ್ತಿಯೋಗ ವರ್ಧಕವೆಂದು ಹೇಳುತ್ತಾರೆ.--ನಾನು ಸಮಸ್ತ ವಿಚಿತ್ರವಾದ ಚಿದಚಿತ್ಪ್ರಪಂಚಕ್ಕೂ ಉತ್ಪತ್ತಿಕಾರಣವು. ಇವೆಲ್ಲವೂ ನನ್ನ ಸಙ್ಕಲ್ಪ ಮೂಲಕವಾಗಿಯೇ, ಪ್ರವೃತ್ತಿಯನ್ನು ಹೊಂದುತ್ತವೆ ಎಂದು ತಿಳಿದವರಾಗಿ, ನನ್ನಲ್ಲೇ ಇಟ್ಟಿರುವ ಮನಸ್ಸಿನಿಂದ ಕೂಡಿದವರಾಗಿ, ಪ್ರಾಜ್ಞರು ಸಮಸ್ತ ಕಲ್ಯಾಣಗುಣಗಳಿಂದ ಸೇರಿದ ನನ್ನನ್ನು ಉಪಾಸನೆಮಾಡುತ್ತಾರೆ

೯. ಅಂತಹ ಜ್ಞಾನಿಗಳು ನನ್ನಲ್ಲೇ ಮನಸ್ಸನ್ನಿಟ್ಟಿರುವರೆಂದು ಹೇಗೆ ತಿಳಿಯಬಹುದೆಂಬುದನ್ನು ತಿಳಿಸುತ್ತಾರೆ. ಅವರುಗಳು ನನ್ನಲ್ಲೇಇಟ್ಟಿರುವ ಮನಸ್ಸನ್ನುಳ್ಳವರು ಹೇಗೆಂದರೆ- ನನ್ನನ್ನೇ ಹೊಂದಿದ ಪ್ರಾಣವುಳ್ಳವರಾಗಿ, ನನ್ನ ಕಲ್ಯಾಣಗುಣದಿವ್ಯಚೇಷ್ಟೆಗಳ ವಿಷಯದಲ್ಲಿ ಪರಸ್ಪರ ಅವರುಗಳಿಗೆ ತಿಳಿದಿರುವ ಅತಿಶಯವನ್ನು ಬೋಧಿಸುವವರಾಗಿ, ನನ್ನ ದಿವ್ಯಗಳಾದ ಅತಿ ಮಾನುಷಚೇಷ್ಟೆಗಳನ್ನು ಕುರಿತು ಹೇಳುವವರಾದ ಪಕ್ಷದಲ್ಲಿ ಅನನ್ಯಪ್ರಯೋಜನರಾಗಿ ಸಂತುಷ್ಟಿಯನ್ನುಹೊಂದುವವರಾಗಿ, ಕೇಳುವವರಾದ ಪಕ್ಷದಲ್ಲಿ ಅದರಿಂದ ಆನಂದಿಸುವವರಾಗಿ, ಹೀಗೆಲ್ಲಾ ಇರುವದರಿಂದ ಅವರು ನನ್ನಲ್ಲೇ ಮನಸ್ಸನ್ನಿಟ್ಟವರೆಂದು ಭಾವಿಸಬಹುದು.

೧೦. ಈ ಚೇತನನಿಗೆ ಅನಾದ್ಯವಿದ್ಯಾ ಕರ್ಮವಾಸನಾದಿಗಳಿರುವಾಗ, ಹೀಗೆಲ್ಲಾ ಇರಲು ಸಾಧ್ಯವೇ? ಎಂದರೆ ಸಮಾಧಾನವನ್ನು ಹೇಳುತ್ತಾರೆ.—ನನ್ನೊಂದಿಗೆ ಯಾವಾಗಲೂಸಾಯುಜ್ಯವನ್ನು ಹೊಂದಬೇಕೆಂಬ ಅಭಿಲಾಷೆಯುಳ್ಳವರಾಗಿ, ನನ್ನ ಉಪಾಸನವನ್ನು ಕೈಕೊಳ್ಳಬೇಕೆಂದಿರುವವರಿಗೆ ಬೇಕಾದ ಬುದ್ಧಿಯೋಗವನ್ನು ನಾನೇ ಕರುಣಿಸಿ ದಯಪಾಲಿಸುವೆನು.

೧೧. ಅವರುಗಳ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿ ರೂಪವಾದ ಅನುಗ್ರಹಾರ್ಥವಾಗಿ ಅವರಿಗೆ ಅಜ್ಞಾನದಿಂದುಂಟಾದ ಅಹಂಕಾರವನ್ನು ಹೋಗಲಾಡಿಸುವೆನು. ಹೇಗೆಂದರೆ ಸದಾ ಅವರ ಮನಸ್ಸಿನಲ್ಲೇ ಇರುವವನಾಗಿ, ದೇದೀಪ್ಯಮಾನವಾದ ಜ್ಞಾನವೆಂಬ ದೀಪದಿಂದ ಅವರ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವೆನು

೧೨,೧೩. ಹೀಗೆ ನಿಯಾಮ್ಯವರ್ಗರೂಪನಿರಂಕುಶೈಶ್ವರ್ಯವನ್ನೂ, ತನ್ನಲ್ಲಿರುವ ನಿರತಿಶಯವಾದ ಕಲ್ಯಾಣಗುಣಗಳ ಯೋಗವನ್ನೂ, ಕೇಳಿ ತಿಳಿದುದರಿಂದ ಆ ನಿಯಾಮ್ಯವರ್ಗವಾದ ವಿಭೂತಿಯವಿಷಯದಲ್ಲಿ ವಿಸ್ತಾರವಾಗಿ ಕೇಳಿ ತಿಳಿಯಬೇಕೆಂಬ ಕುತೂಹಲದಿಂದ ಅರ್ಜುನನು ಪ್ರಾರ್ಥಿಸುತ್ತಾನೆ, ಪ್ರಾರ್ಥನೆಗೆ ಪೂರ್ವವಾಗಿ ತನಗೆ ಈ ಮಹತ್ತಾದ ಸ್ವಾಮಿಯ ಉಪದೇಶದಿಂದ ಉಂಟಾದ ಜ್ಞಾನವನ್ನು ಅರಿಕೆಮಾಡಿಕೊಳ್ಳುತ್ತಾನೆ.—ಹಿಂದೆ ವನವಾಸದಲ್ಲಿದ್ದಾಗ, ಸಮಸ್ತಋಷಿಗಳೂ, ಬ್ರಹ್ಮರ್ಷಿಯಾದ ನಾರದರೂ, ಅಸಿತರೂ, ದೇವಲರೂ, ವಿಷ್ಣ್ವಂಶರಾಗಿ ಈ ಮಹಾಭಾರತ ಕರ್ತೃವಾದ ವ್ಯಾಸರೂ ಸಹ, ತಮ್ಮನ್ನು ಹೇಗೆ ಭಾವಿಸುತ್ತಾರೆ. ಎಂದರೆ-ತಾವು ಎಲ್ಲಾ ಬೃಹತ್ತಾದ ಎಂದರೆ ಎಲ್ಲಾ ದೊಡ್ಡ ವಸ್ತುಗಳಿಗೂ ದೊಡ್ಡವನಾಗಿಯೂ, ಕಲ್ಯಾಣಗುಣಗಳ ವಿಷಯದಲ್ಲೂ ಬೃಹತ್ತ್ವವಿರುವದರಿಂದ ಪರಬ್ರಹ್ಮನೆಂದೂ, ಶ್ರುತಿಯಲ್ಲಿ **ಜ್ಯೋತಿಷಾಂ ಜ್ಯೋತಿಃ** ಎಂದು ಹೇಳಿರುವಹಾಗೆ ಎಲ್ಲ ಜ್ಯೋತಿಸ್ಸಿಗೂ ಜ್ಯೋತಿಸ್ಸನ್ನು ಕೊಡುವವನಾಗಿ, ಪರಂಜ್ಯೋತಿಸ್ಸಾದ ಪ್ರಯುಕ್ತ **ಪರಂಧಾಮ** ನೆಂದೂ **"ಮಙ್ಗಳಾನಾಂಚಮಙ್ಗಳಂ"** ಎಂದು ಹೇಳುವಹಾಗೆ ಸ್ಮರಿಸುವವರಿಗೆ ಪಾಪಹರನಾಗಿ ಪವಿತ್ರನೆಂದೂ, ನಿನಗಿಂತ ಸಮನೂ ಅಧಿಕನೂ ಇಲ್ಲದುದರಿಂದ **ನಿಸ್ಸಮಾಭ್ಯಧಿಕನಾಗಿ ಪರಮನೆಂದೂ, ಪರಮಪುರುಷನೆಂದೂ, ಶಾಶ್ವತನೆಂದೂ, ದಿವ್ಯಂ—**

ದಿವ್ಯ ವೈಕುಂಠದಲ್ಲಿದ್ದುಕೊಂಡು ನಿತ್ಯಮುಕ್ತರಿಗೆ ಭೋಗ್ಯನೆಂದೂ. **"ಯತೋವಾ ಇಮಾನಿ ಭೂತಾನಿ"** ಎಂದು ಹೇಳಿರುವಹಾಗೆ, ಎಲ್ಲಾ ಜಗತ್ತಿಗೂ ಮೂಲಕಾರಣನಾದವನೆಂದೂ. ಉತ್ಪತ್ತ್ಯಾದಿ ವಿಕಾರಶೂನ್ಯನೆಂದೂ. **ವಿಭುವ್–"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್"** ಎಂದು ಹೇಳಿರುವಹಾಗೆ ಸೃಷ್ಟಿಸಿ ಎಲ್ಲವನ್ನೂ ವ್ಯಾಪಿಸಿರುವವನೆಂದೂ ಹೇಳುತ್ತಾರೆ. ಈಗ ನೀನೂ ಸಹ ಕೃಪೆಗೈದು ಹಾಗೆಯೇ ಉಪದೇಶಿಸಿರುತ್ತೀಯೆ.

೧೪. ಹೀಗೆ ಎರಡು ಉಪದೇಶಕ್ಕೂ ಏಕಕಂಠ್ಯವಿರುವುದರಿಂದ, ಬ್ರಹ್ಮರುದ್ರಾದಿಗಳಿಗೂ ಸ್ವಾಮಿಯಾದ ಕೇಶವನೇ! ನನ್ನಲ್ಲಿ ವಾತ್ಸಲ್ಯವನ್ನಿಟ್ಟು ನೀನು ಈಗ ನಿನ್ನ ನಿಯಾಮ್ಯವರ್ಗದ ಮತ್ತು ಕಲ್ಯಾಣಗುಣಾಕರತ್ವದ ವಿಷಯದಲ್ಲೂ ಉಪದೇಶಿಸಿರುವುದೆಲ್ಲಾ ಯಥಾರ್ಥವಾಗಿ ನಿಸ್ಸಂಶಯವನ್ನುಂಟುಮಾಡುವ ದಾರ್ಢ್ಯವುಳ್ಳದೆಂದು ನಂಬುತ್ತೇನೆ. ಆದುದರಿಂದ ಹೇಯಗುಣರಹಿತನಾಗಿ ಕಲ್ಯಾಣಗುಣ ಮಹೋದಧಿಯಾಗಿರುವ ಭಗವಂತನೇ! ದೇವತೆಗಳಾಗಲಿ, ದಾನವರಾಗಲಿ ನೀನು ಹೇಗೆ ಪ್ರಾಜ್ಞರಿಗೆ ವ್ಯಕ್ತನು ಎಂಬುದನ್ನು ತಿಳಿಯಲಾರರು.

೧೫. ಆದುದರಿಂದ, ಬದ್ಧಮುಕ್ತ ನಿತ್ಯರುಗಳಿಗಿಂತ ಶ್ರೇಷ್ಠನಾದ ಪುರುಷೋತ್ತಮನೇ! **"ತ್ವಮೇವಾತ್ಮಾನಂ ವೇತ್ಥ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಸರ್ವಜ್ಞನಾದ ಸರ್ವಜಗತ್ಕಾರಣನೇ! ಎಲ್ಲಾ ಭೂತಗಳಿಗೂ ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೂ ಸ್ವಾಮಿಯೇ! ಸರ್ವಜಗತ್ತಿಗೂ ಸ್ವಾಮಿಯೇ! ನೀನೇ ನಿನ್ನನ್ನು ನಿನ್ನ ಧರ್ಮಭೂತ ಜ್ಞಾನದಮೂಲಕ ತಿಳಿದಿರುವೆಯೇ ವಿನಾ, ಇತರರು ಸರಿಯಾಗಿ ತಿಳಿಯಲಾರರು.

೧೬. ಈ ಶ್ಲೋಕದಲ್ಲಿ ಅರ್ಜುನನು ತನ್ನ ಪ್ರಾರ್ಥನೆಯನ್ನು ತಿಳಿಸುತ್ತಾನೆ.—ಯಾವ ವಿಭೂತಿಗಳೊಂದಿಗೆ ಇದ್ದುಕೊಂಡು ಅವುಗಳ ನಿಯಮನಕ್ಕಾಗಿ ನೀನು ಈ ಲೋಕಗಳನ್ನೆಲ್ಲಾ ವ್ಯಾಪಿಸಿ ಇರುತ್ತೀಯೋ, ಅಂತಹ ನಿನ್ನ ದಿವ್ಯ ವಿಭೂತಿಗಳನ್ನು ಕುರಿತು ಸಂಪೂರ್ಣವಾಗಿ, ಹೇಳಲು ನಿನಗೊಬ್ಬನಿಗೆ ಸಾಧ್ಯವಾದುದರಿಂದ, ನೀನೇ ತಿಳಿಸತಕ್ಕದ್ದಾಗಿರುತ್ತದೆ.

೧೭. ನಾನು ಭಕ್ತಿಯೋಗನಿಷ್ಠನಾಗಿ, ಪರಭಕ್ತಿಯಿಂದ ನಿನ್ನನ್ನು ಯಾವಾಗಲೂ ಧ್ಯಾನಿಸಲು ಪ್ರವೃತ್ತನಾಗಿ, ಧ್ಯಾನಾರ್ಹನಾದ ನಿನ್ನನ್ನು ಸಂಪೂರ್ಣವಾದ ಐಶ್ವರ್ಯಕಲ್ಯಾಣ ಗುಣಗಣಯುಕ್ತನನ್ನಾಗಿ ತಿಳಿಯುವ ಬಗೆ ಹೇಗೆ? ಹಿಂದೆ ಹೇಳಲ್ಪಟ್ಟ ಬುದ್ಧಿ ಜ್ಞಾನಾದಿ ಭಾವಗಳಿಗೆ ವ್ಯತಿರಿಕ್ತನಾದ ಯಾವ ಯಾವ ವಸ್ತುಗಳಲ್ಲಿ ನನ್ನಿಂದ ನೀನು ಸರ್ವಕ್ಕೂ ನಿಯಂತೃ ಎಂಬುದಾಗಿ ಭಾವಿಸಿ ಧ್ಯಾನಿಸಲಿ?

೧೮. ಪ್ರತಿಕೂಲ ಜನರಿಗೆ ನರಕಾದಿಗಳ ಪ್ರಾಪ್ತಿಯನ್ನುಂಟುಮಾಡುವ ಅಥವಾ ಅನುಕೂಲರಾದವರುಗಳಿಂದ ಅವರುಗಳ ಅಭೀಷ್ಟವನ್ನು ಯಾಚಿಸಲ್ಪಡುವ ಓ ಜನಾರ್ದನನೇ! ಹಿಂದೆ **"ಅಹಂ ಸರ್ವಸ್ಯ ಪ್ರಭವಃ"** ಎಂಬ ಎಂಟನೆಯ ಶ್ಲೋಕದಲ್ಲಿ ಸಂಕ್ಷೇಪದಿಂದ ಹೇಳಿರುವ ಸೃಷ್ಟಿಕರ್ತೃತ್ವ ಪಾಲಯಿತೃತ್ವ ಮೊದಲಾದವುಗಳಾಗಿ ಜಗತ್ತಿನೊಂದಿಗೆ ನಿನಗಿರುವ ಯೋಗವನ್ನೂ ಮತ್ತು ನಿಯಾಮ್ಯವರ್ಗವನ್ನೂ ಸಹ, ವಿಸ್ತಾರವಾಗಿ ಪುನಃ ವಿವರಿಸಿ ಹೇಳು. ನಿನ್ನಿಂದ ಹೇಳಲ್ಪಡುವ ನಿನ್ನ ಮಾಹಾತ್ಮ್ಯ ಎಂಬ ಅಮೃತವನ್ನು ಕೇಳುತ್ತಿರುವ ನನಗೆ ತೃಪ್ತಿ ಇಲ್ಲವು. ನನಗೆ ಹೀಗೆ ಅತೃಪ್ತಿಯುಂಟೆಂದು ಸರ್ವಜ್ಞನಾದ ನಿನಗೇ ತಿಳಿಯುವದು.

೧೯. ಶ್ರೀ ಭಗವಂತನು ಹೇಳುತ್ತಾನೆ.—ನೀನು ಶ್ರದ್ಧಾಳುವಾಗಿಯೂ, ಅನಸೂಯನಾಗಿಯೂ ಈಗ ಕೇಳಿ ತಿಳಿದುದು ಸಾಲದೇ ಎಂಬ ಅತೃಪ್ತಿಯುಳ್ಳವನಾಗಿಯೂ, ಇರುವಂತೆ **ತೋರಿಬರುವದರಿಂದ. ವಿಸ್ತರಿಸಿಹೇಳು ಎಂದು ಪ್ರಾರ್ಥಿಸಿದನಂತರ, ತುಂಬಾ ಸಂತೋಷದಿಂದ, ಹೇಳಬೇಕಾಯಿತು. ಆದರೆ ವಿಸ್ತರಿಸಿ ನನ್ನ ಮಙ್ಗಳಕರಗಳಾದ ಸರ್ವ ವಿಭೂತಿಗಳನ್ನು ಹೇಳ.**

ವದು ಸಾಧ್ಯವಿಲ್ಲವಾದುದರಿಂದ, ಅವುಗಳಿಗೆ ಅಂತವೇ ಇಲ್ಲವಾಗಿ ನಾನು ಹೇಳುತ್ತಲೇ ಇರಬೇಕಾಗುತ್ತದೆ, ನೀನು ಕೇಳುತ್ತಲೇ ಇರಬೇಕಾಗುತ್ತದೆ; ಹೀಗಾಗುವದರಿಂದ ಅವುಗಳಲ್ಲಿ ಪ್ರಧಾನಗಳಾಗಿ ಮಾಹಾತ್ಮ್ಯ ಹೊಂದಿರುವವನ್ನು ಮಾತ್ರ ಹೇಳುವೆನು ಕೇಳು.

೨೦. ಸರ್ವಭೂತಗಳಿಗೂ ಪ್ರವರ್ತನ ರೂಪವಾದ ತನಗಿರುವ ನಿಯಮನವು ಅವುಗಳಿಗೆಲ್ಲಕ್ಕೂ ತಾನು ಆತ್ಮಾವಾಗಿರುವ ಕಾರಣದಿಂದಲೇ ಎಂದು ತಿಳಿಸುವದಕ್ಕಾಗಿ ಯೋಗಶಬ್ದದಿಂದ ಹೇಳಲ್ಪಟ್ಟುದುದು, ಸಮಸ್ತಕ್ಕೂ ಸ್ರಷ್ಟಾವಾಗಿ ಪಾಲಕನಾಗಿಯೂ ಸಂಹರ್ತಾವಾಗಿಯೂ ಇರುವ ಭಾವವೆಂದು ಬಹುಸ್ಪಷ್ಟನಾಗಿ ತಿಳಿಸುತ್ತಾರೆ—ಓ ನಿದ್ರಾರೂಪವಾದ ತಮೋಗುಣವನ್ನು ಜಯಿಸಿದ ಅರ್ಜುನನೇ! ನನಗೆ ಶರೀರರೂಪದಲ್ಲಿರುವ ಸರ್ವಪ್ರಾಣಿಗಳಿಗೆ, ನಾನೇ ಅವರುಗಳ ಸರ್ವಪ್ರವೃತ್ತಿಗಳಿಗೂ ಕಾರಣಭೂತನಾಗಿ. ಆತ್ಮಾನಾಗಿದ್ದೇನೆ. ಹೀಗೆ ಆತ್ಮಾವಾಗಿರುವೆನು ಎಂಬುದರಿಂದ ತೋರುವ ಭಾವವೇನೆಂದರೆ—ನಾನು ಅವರಿಗೆಲ್ಲಾ ಆಧಾರನು, ನಿಯಾಮಕನು, ಶೇಷಿಯು ಎಂದು ಉತ್ತರಾರ್ಧದಿಂದ ಹೇಳುತ್ತಾರೆ.—ನಾನೇ ಎಲ್ಲಾ ಪ್ರಾಣಿಗಳಿಗೂ ಸೃಷ್ಟಿ ಕರ್ತಾ, ಅವುಗಳ ಸ್ಥಿತಿ ಪಾಲನೆ ಮತ್ತು ಪ್ರಳಯಕ್ಕೂ ಕಾರಣಭೂತನು.

೨೧. ಹೀಗೆ ಎಲ್ಲಾ ಚಿದಚಿದ್ವಸ್ತುಗಳೂ ಪರಮಾತ್ಮನಿಗೆ ಶರೀರವಾಗಿ. ಅವುಗಳನ್ನೆಲ್ಲಾ ಭಗವಂತನು ವ್ಯಾಪಿಸಿ, ಆತ್ಮಾವಾಗಿ ಹೊಂದಿರುವದರಿಂದ. ದೇವೋಹಂ ಮನುಷ್ಯೋಹಂ ಎಂಬ ಪ್ರಯೋಗಗಳಹಾಗೆ, ಶರೀರವಾಚಿ ಶಬ್ದವೆಲ್ಲಾ ಆತ್ಮಾವನ್ನು ಹೇಗೆ ಬೋಧಿಸುತ್ತವೋ, ಹಾಗೆ ಶರೀರವಾದ ಜಗತ್ತಿನ ಎಲ್ಲಾ ವಸ್ತುಗಳು ಅವುಗಳಿಗೆಲ್ಲಾ ಆತ್ಮಾವಾದ ಪರಮಾತ್ಮನನ್ನು ಬೋಧಿಸುವದರಿಂದ ಪರಮಾತ್ಮನಿಗೆ ಸರ್ವಶಬ್ದವಾಚ್ಯತ್ವವೂ, ಅವುಗಳೊಂದಿಗೆ ಸಾಮಾನಾಧಿಕರಣ್ಯವೂ ಉಂಟೆಂದು ಹೇಳಲು ಹೊರಟು, ಅವುಗಳಲ್ಲಿ ಮುಖ್ಯವಾದವುಗಳನ್ನು ಹೇಳುತ್ತಾ, ನಾನೇ ಅವುಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟವನಾಗಿ, ಅವೂ ನಾನೇ ಎಂದು ಸಾಮಾನಾಧಿಕರಣ್ಯದಿಂದ ಹೇಳುತ್ತಾರೆ. —ದ್ವಾದಶಾದಿತ್ಯರಲ್ಲಿ ಅವರಿಗೆಲ್ಲಾ ಪತಿಯಾಗಿ ಮುಖ್ಯನಾದ ವಿಷ್ಣು ನಾಮಕ ಆದಿತ್ಯನು ಯಾರೋ, ಅವನೂ ನಾನೇ. ಇದರಿಂದ ಮಿಕ್ಕ ಆದಿತ್ಯರು ತಾನಲ್ಲವೆಂಬರ್ಥವಲ್ಲವು. ಎಲ್ಲಾ ಆದಿತ್ಯರೂ ನಾನೇ. ವಿಷ್ಣುನಾಮಕ ಆದಿತ್ಯನಿಗೆ ಪ್ರಾಧಾನ್ಯತೆಯನ್ನುಂಟುಮಾಡಿದವನೂಕೂಡ ನಾನೇ ಎಂಬ ಭಾವವು ಜಗತ್ತಿನಲ್ಲಿ ಪ್ರಕಾಶಿಸುವುವುಗಳಲ್ಲಿ ಯಾವ ವಿಶೇಷ ಜ್ಯೋತಿಸ್ಸ್ವರೂಪನಾದ ಸೂರ್ಯನೋ, ಅವನೂ ನಾನೇ. ವಾಯುಗಳಲ್ಲಿ ಉತ್ಕೃಷ್ಟನಾದ ಮರೀಚಿನಾಮಕ ವಾಯುವು ಯಾರೋ. ಅವನೂ ನಾನೇ. ನಕ್ಷತ್ರಗಳ ಮಧ್ಯದಲ್ಲಿರುವ ಚಂದ್ರನು ಯಾರೋ ಅವನೂ ನಾನೇ. ಇಲ್ಲಿ ಚಂದ್ರನು ನಕ್ಷತ್ರಗಳಿಗೆ ಸೇರಿದವನಲ್ಲವು. ಆದರೆ ೨೭ ನಕ್ಷತ್ರಗಳಿಗೂ ಪತಿಯು.

೨೨. ನಾಲ್ಕು ವೇದಗಳಲ್ಲಿ ಯಾವ ಸಾಮವೇದವು ಉತ್ಕೃಷ್ಟವೋ, ಅದೂ ನಾನೇ. ದೇವತೆಗಳಿಗೆಲ್ಲಾ ವಿಶೇಷ ಐಶ್ವರ್ಯ ಭೋಗಗಳಿಂದಕೂಡಿ ಅಧಿಪತಿ ಎಂದೆನಿಸಿ ಸ್ವರ್ಗಲೋಕಾಧಿಪತ್ಯವನ್ನು ವಹಿಸಿರುವನು ಯಾವ ಇಂದ್ರನೋ. ಅವನೂ ನಾನೇ. ಹನ್ನೊಂದು ಇಂದ್ರಿಯಗಳಲ್ಲಿ ಮುಖ್ಯವಾದ ಯಾವ ಮನಸ್ಸು ಆ ಮಿಕ್ಕ ಇಂದ್ರಿಯಗಳಿಗೆಲ್ಲಾ ನಿಯಾಮಕವಾಗಿ ಮುಖ್ಯವಾದುದೋ, ಅದೂ ನಾನೇ. ಪ್ರಾಣಿಗಳಲ್ಲಿರುವ ಯಾವ ಉತ್ಕೃಷ್ಟವಾದ ಚೇತನ ಉಂಟೋ ಅದೂ ನಾನೇ.

೨೩. ಹನ್ನೊಂದುಮಂದಿಗಳಾದ ಏಕಾದಶ ರುದ್ರರಲ್ಲಿ ಶಙ್ಕರವಾಚ್ಯನಾದ ಮಿಕ್ಕ ಹತ್ತು ರುದ್ರರಿಗೂ ಪತಿಯಾದ ರುದ್ರನು ಯಾರೋ, ಅವನೂ ನಾನೇ, ಯಕ್ಷರಾಕ್ಷಸರಿಗೆಲ್ಲಾ ಅಧಿಪತಿಯಾಗಿ ಪ್ರಾಧಾನ್ಯ ಹೊಂದಿದ ಕುಬೇರನು ಯಾರೋ. ಅವನೂ ನಾನೇ, ಎಂದರೆ ಅವನಿಗೂ

ಮಾಹಾತ್ಮ್ಯೆಯನ್ನು ಕೊಟ್ಟು ಅವನಿಗೆ ಆತ್ಮಾವಾಗಿರುವವನೂ ನಾನೇ. ಹೀಗೆಯೇ ಅರ್ಥ ಮಾಡಬೇಕೇ ವಿನಾ. ಜೀವನಾದ ಕುಬೇರನೂ ಪರಮಾತ್ಮನಾದ ನಾನೂ ಸ್ವರೂಪತಃ ಒಂದೇ ಎಂದು ಇಲ್ಲೆಲ್ಲಾ ಅರ್ಥವಲ್ಲವೆಂದು ಮುಂಡಿನ ಶ್ಲೋಕದಿಂದ ತಿಳಿಸುತ್ತಾರೆ.

೨೪. ಹೇ ಪಾರ್ಥನೇ? ರಾಜ ಪುರೋಹಿತರುಗಳಲ್ಲಿ ದೇವತೆಗಳಿಗೆ ಪುರೋಹಿತನಾಗಿ ಮುಖ್ಯನಾದ ಬೃಹಸ್ಪತಿಯು ಯಾರೋ. ಅವನೂ ನಾನೇ ಎಂದರೆ ತದಾತ್ಮನಾಗಿ ತದ್ವಾಚ್ಯ ನಾದವನೂ ನಾನೇ. ಆತನಿಗೆ ಸತ್ತಾದಾಯಕನೂ ನಾನೇ. ಪ್ರಾಕೃತ ಲೋಕಗಳ ಸೇನಾ ನಾಯಕರಲ್ಲಿ ಶ್ರೇಷ್ಠನಾದ ಸ್ಕಂಧನು ಯಾರೋ, ಅವನೂ ನಾನೇ. ಸರಸ್ಸುಗಳಲ್ಲೆಲ್ಲಾ ಬಹು ದೊಡ್ಡದಾಗಿ ಮುಖ್ಯವಾದ ಸಾಗರವು ಯಾವುದೋ. ಅದೂ ನಾನೇ.

೨೫. ಸಪ್ತಮಹರ್ಷಿಗಳಲ್ಲೂ ಮತ್ತು ಇತರ ಮಹರ್ಷಿಗಳಲ್ಲೂ, ಪರತತ್ವ ನಿರ್ಣಯ ಮಾಡಿ ಪ್ರಸಿದ್ಧಿ ಹೊಂದಿದ ಭೃಗುಮಹರ್ಷಿಯು ಯಾರೋ ಅವರೂ ನಾನೇ. ಅರ್ಥವತ್ತಾದ ಶಬ್ದಗಳಲ್ಲಿ ಪ್ರಣವವೆಂದೆನಿಸಿ ವೇದಾಧ್ಯಯನ ಆರಂಭದಲ್ಲೂ ಅಂತ್ಯದಲ್ಲೂ ಪಠನೀಯವಾಗಿ, ವಿಶೇಷಾರ್ಥಗಳನ್ನು ಹೊಂದಿ, ಪರಮಾತ್ಮ ಜೀವಾತ್ಮರ ಸ್ವರೂಪ ಸಂಬಂಧಾದಿಗಳನ್ನು ಬಹು ಸ್ವಾರಸ್ಯವಾಗಿ ಉಪದೇಶಿಸುವ ಮಾಹಾತ್ಮ್ಯೆಯನ್ನು ಹೊಂದಿದ ಯಾವ ಪ್ರಣವವೋ ಅದೂ ನಾನೇ ಯಜ್ಞಗಳಲ್ಲಿ ಪಶುಹಿಂಸೆಯಿಲ್ಲದೆ ಅಲ್ಪಾಸ್ಥಿರ ಸ್ವರ್ಗಾದಿ ಭೋಗಗಳಲ್ಲದೆ ನಿರತಿಶಯ ಮೋಕ್ಷಪ್ರಾಪ್ತಿಗೆ ಸಹಕಾರಿಯಾದ ಅಷ್ಟಾಕ್ಷರಾದಿಗಳ ಜಪಯಜ್ಞವು ಯಾವುದೋ, ಅದೂ ನಾನೇ. ಪರತತ್ವಗಳಲ್ಲಿ, ಬದರಿಕಾಶ್ರಮ, ರುದ್ರ. ಗಂಗಾಮೊದಲಾದವುಗಳಿಗೆ ಆಶ್ರಯವಾಗಿ. ಬೃಹತ್ತಾದ ಪರ್ವತವಾದ ಹಿಮಾಚಲವು ಯಾವುದೋ. ಅದೂ ನಾನೇ.

೨೬. ಸರ್ವ ವೃಕ್ಷಗಳಲ್ಲೆಲ್ಲಾ, ಪ್ರದಕ್ಷಿಣ ನಮಸ್ಕಾರಾದಿ ಸೇವೆಗಳ ಮೂಲಕ ಕಾಮಿ ತಾರ್ಥ ಪ್ರದಾಯಕವೆಂದು ಪ್ರಸಿದ್ಧಿಹೊಂದಿರುವ ಯಾವ ಅಶ್ವತ್ಥವೃಕ್ಷವೋ ಅದೂ ನಾನೇ ಎಂದರೆ ತದಾತ್ಮಕನೂ ನಾನೇ. ದೇವರ್ಷಿಗಳಲ್ಲಿ ಮಹತ್ತಾದ ಜ್ಞಾನಪ್ರದರೆಂಬ ಪ್ರಖ್ಯಾತಿ ಯನ್ನು ಹೊಂದಿ. ಸದಾ ವಿಷ್ಣುಗಾನದಲ್ಲೇ. ಸಕ್ತರಾಗಿರುವ ನಾರದರು ಯಾರೋ, ಅವರೂ ನಾನೇ; ಎಂದರೆ ತದಾತ್ಮಕನೂ ನಾನೇ. ಗಂಧರ್ವರಿಗೆ ರಾಜನೆನಿಸಿ ಬಹು ಪ್ರಸಿದ್ಧವಾದ ರಥದಲ್ಲಿ ಸಂಚರಿಸುವವನಾಗಿ, ಅದನ್ನು ನೀನು ಪಾವಕಾಸ್ತ್ರದಿಂದ ದಹಿಸಲು ಶರಣಾಗತನಾಗಿ, ಧೃಪದರಾಯನ ಪಟ್ಟಣಕ್ಕೆ ತೆರಳೆಂದು ಹಿತವನ್ನು ಬೋಧಿಸಿದ ಯಾವ ಚಿತ್ರರಥನೋ, ಅವನೂ ನಾನೇ. ಸಿದ್ಧರುಗಳಲ್ಲೆಲ್ಲಾ, ಶ್ರೇಷ್ಠನಾದ ಕಪಿಲಾವತಾರಿಯಾಗಿ ತಾಯಿಗೆ ತತ್ವೋಪದೇಶ ವನ್ನು ಲೋಕಹಿತಾರ್ಥವಾಗಿ ಉಪದೇಶಿಸಿ, ಮಾಹಾತ್ಮ್ಯೆಯನ್ನು ಹೊಂದಿದ ಮುನಿಯು ಯಾರೋ. ಆತನೂ ನಾನೇ; ಎಂದರೆ ಆ ದಿವ್ಯ ಮಂಗಳವಿಗ್ರಹವೂ ನನ್ನ ಶರೀರನಾಗಿ ಅದಕ್ಕೂ ನಾನು ಆತ್ಮಾವಾದುದರಿಂದ ನಾನೇ.

೨೭. ಎಲ್ಲಾ ಕುದುರೆಗಿಂತಲೂ ಶ್ರೇಷ್ಠವಾದುದಾಗಿ. ಕ್ಷೀರಾಬ್ಧಿಮಥನಕಾಲದಲ್ಲಿ, ಅಮೃತದೊಂದಿಗೆ ಅಥವಾ ಸಮುದ್ರ ಜಲದಿಂದ ಜನ್ಮವನ್ನು ಹೊಂದಿ, ದೊಡ್ಡಕಿವಿ ಮೊದಲಾದ ವುಗಳಿಂದ ನೋಡಲು ಅಂದವಾಗಿ, ಇಂದ್ರನಿಗೆ ರಾಜಾಶ್ವನಾಗಿ, ಮಾಹಾತ್ಮ್ಯೆಯನ್ನು ಹೊಂದಿದ ಉಚ್ಚೈಃಶ್ರವಸ್ಸೆಂಬ ಕುದುರೆಯು ಯಾವುದೋ, ಅದೂ ನಾನೇ ಹಾಗೆಯೇ, ಗಜೇಂದ್ರಗಳಲ್ಲೆಲ್ಲಾ ಹೆಚ್ಚು ಮಾಹಾತ್ಮ್ಯೆಯುಳ್ಳದ್ದಾಗಿ ಅದೇ ಕಾಲದಲ್ಲೇ ಸಮುದ್ರದಿಂದ ಉತ್ಪನ್ನವಾಗಿ ಬಹು ಸುಂದರವಾಗಿ ಬಿಳೀ ಬಣ್ಣವುಳ್ಳದ್ದಾಗಿ ಇಂದ್ರನಿಗೆ ವಾಹನವಾಗಿರುವ ಐರಾವತವು ಯಾವುದೋ, ಅದೂ ನಾನೇ ಎಂದರೆ ತದಾತ್ಮಕನೂ ನಾನೇ, ಮನುಷ್ಯರಲ್ಲಿ ಅವರಿಗೆಲ್ಲಾ ಪತಿಯಾಗಿ ರಕ್ಷಕನಾದ ರಾಜನು ಯಾರೋ, ಅವನೂ ನಾನೇ.

೨೮. ಸೃಷ್ಟಿಗೆ ಸೇರಿದ ಆಯುಧಗಳಲ್ಲಿ ಇಂದ್ರನ ವಜ್ರಾಯುಧವು ಯಾವುದೋ, ಅದೂ ನಾನೇ. ಹಾಲನ್ನು ಕರೆಯುವ ಆಕಳುಗಳಲ್ಲಿ ಮೋಕ್ಷವ್ಯತಿರಿಕ್ತ ಸರ್ವಶ್ರೇಯಸ್ಸನ್ನೂ ಕೊಡುವ ಕಾಮಧೇನುವು ಯಾವುದೋ ಅದೂ ನಾನೇ. ಪ್ರಜಾವೃದ್ಧಿಗೆ ಹೇತುವಾಗಿ, ಮಕ್ಕಳು ಜನಿಸುವ ಹಾಗೆ ಮಾಡುವ ಲೋಕಸುಂದರನಾದ, ಲೋಕದಲ್ಲಿ ಪ್ರಬಲಾಧಿಕಾರಿಯಾಗಿ ಮಾಹಾತ್ಮ್ಯಯುಳ್ಳ ಮನ್ಮಥನು ಯಾರೋ, ಅವನೂ ನಾನೇ. ತದಾತ್ಮಕನೂ ನಾನೇ ಎಂಬ ಭಾವವು. ಒಂದು ಹೆಡೆಯುಳ್ಳ ಹಾವುಗಳಲ್ಲಿ ಪ್ರಸಿದ್ಧನಾದ ವಾಸುಕಿಯು ಯಾರೋ, ಆತನೂ ನಾನೇ.

೨೯. ಅನೇಕ ಹೆಡೆಗಳುಳ್ಳ ಹಾವುಗಳಲ್ಲಿ, ಸಹಸ್ರ ಫಣೆಗಳುಳ್ಳವನಾಗಿ ನನಗೆ ಶಯ್ಯಾಸನ ಪರ್ಯಂಕ ರೂಪಗಳಲ್ಲಿ ನನಗೆ ಕೈಂಕರ್ಯವನ್ನೂ ಮಾಡುತ್ತಾ, ಪ್ರಸಿದ್ಧನಾದ ಆದಿಶೇಷನು ಯಾರೋ, ಆತನೂ ನಾನೇ. ಜಲದಲ್ಲಿ ವಾಸಮಾಡುವವರ ಮಧ್ಯದಲ್ಲಿ, ಜಲಾಭಿಮಾನದೇವತೆಯಾಗಿ, ಅವಗಾಹನ ಸ್ನಾನಮಾಡುವವರಿಗೆ ಅಂತಃ ಬಾಹ್ಯ ಪರಿಶುದ್ಧತೆಯನ್ನುಂಟು ಮಾಡುವ ವರುಣನು ಯಾರೋ, ಅವನೂ ನಾನೇ. ಪಿತೃಗಳಲ್ಲಿ ಅವರಿಗೆ ಪತಿಯಾದ ಅರ್ಯಮಾ ಎಂಬುವನು ಯಾರೋ, ಅವನೂ ನಾನೇ. ದಂಡಿಸುವ ಅಧಿಕಾರಿಗಳಲ್ಲಿ ಯಮನೂ ನಾನೇ.

೩೦. ನನ್ನ ಪರಮ ಭಕ್ತರುಗಳಲ್ಲಿ: ಪರಮಭಾಗವತಾಗ್ರೇಸರನಾಗಿ, ರಾಕ್ಷಸಕುಲದ ಬಾಲರನ್ನೂ ಸಹ ತನ್ನ ಉಪದೇಶದಿಂದ ಪರಮ ಭಾಗವತರನ್ನಾಗಿ ಮಾಡಿದ, ತಂದೆಯ ತೊಂದರೆಗಳು ಯಾವುವೂ ನಾಟದ ಹಾಗೆ ಭಗವಂತನಾದ ನನ್ನ ಕೃಪೆಯನ್ನು ಹೊಂದಿ, ಹೀಗೆ ಮಾಹಾತ್ಮ್ಯಯನ್ನು ಪಡೆದ ಪ್ರಹ್ಲಾದನು ಯಾರೋ, ಆತನೂ ನಾನೇ. ಅನರ್ಥವನ್ನುಂಟು ಮಾಡುವವರ ಮಧ್ಯೇ ಮೃತ್ಯುರೂಪನಾದುದೂ ನಾನೇಸರಿ. ಮೃಗಗಳಿಗೆಲ್ಲಾ ರಾಜನಾಗಿ ಪ್ರಸಿದ್ಧಿಯನ್ನು ಹೊಂದಿದ ಸಿಂಹವೂ ನಾನೇ. ಪಕ್ಷಿಗಳಲ್ಲೆಲ್ಲಾ ವಿಷ್ಣುವಾಹನನಾಗಿ, ಶೀಘ್ರ ಗಮನವುಳ್ಳವನಾಗಿ, ಶ್ರೇಯಸ್ಸೂಚಕಪಕ್ಷಿ ಎಂದು ಹೇಳಿಸಿಕೊಳ್ಳುವ, ಗರುಡನು ಯಾರೋ ಅವನು ನಾನೇ.

೩೧. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಲು ಅನುಕೂಲವಾದ ಶೀಘ್ರಗಮನವನ್ನುಳ್ಳವರುಗಳಲ್ಲಿ, ವಾಯ್ವಾತ್ಮಕನೂ ನಾನೇ ಶಸ್ತ್ರವನ್ನು ಹಿಡಿದವರಲ್ಲಿ ರಾಮನೆನಿಸಿದ, ೧೪೦೦೦ ರಾಕ್ಷಸರನ್ನೂ ಮೂರೂ ಮುಕ್ಕಾಲು ಘಳಿಗೆಯಲ್ಲಿ ಕೊಂದು, ಪ್ರಸಿದ್ಧಿ ಹೊಂದಿದ, ದಿವ್ಯ ಮಙ್ಗಳವಿಗ್ರಹವುಳ್ಳವನೂ ನಾನೇ, ಮತ್ಸ್ಯಗಳ ಮಧ್ಯದಲ್ಲಿ, ಗಜೇಂದ್ರನ ಕಾಲನ್ನು ಘಟ್ಟಿಯಾಗಿ ಹಿಡಿದ ಮೊದಲು ಹೂಹೂ ಗಂಧರ್ವನಾಗಿ ದೇವಲಶಾಪದಿಂದ ಬಲಿಷ್ಠನಾಗಿ, ಪ್ರಸಿದ್ಧವಾದ ಮೊಸಳೆಯು ಯಾವುದೋ ಅದೂ ನಾನೇ, ತದಾತ್ಮಕನೂ ನಾನೇ. ಪುಣ್ಯನದಿಗಳಲ್ಲೆಲ್ಲಾ, ನಾನು ತ್ರಿವಿಕ್ರಮಾವತಾರಿಯಾದಾಗ ನನ್ನ ಪಾದದಿಂದ ಜನಿಸಿ ಮಹಾ ಪವಿತ್ರಳೆಂಬ ಮಾಹಾತ್ಮ್ಯಯುಳ್ಳವಳಾಗಿ, ಭಾಗವತೋತ್ತಮನಾದ ರುದ್ರನೂ ಮಹಾ ಪವಿತ್ರಳೆಂದು ಶಿರಸ್ಸಿನಲ್ಲಿ ಧರಿಸಿದ ಪ್ರಸಿದ್ಧಿಯುಳ್ಳ, ಗಂಗಾನದಿ ಯಾವುದೋ ಅದೂ ನಾನೇ.

೩೨. ಸೃಷ್ಟಿಸಲ್ಪಟ್ಟ ಪ್ರಾಣಿಗಳಿಗೆ ಕಾರಣಭೂತರೂ, ಪಾಲಕರೂ, ನಾಶಕ್ಕೆ ಹೇತುಭೂತರೂ ಸಹ, ಯಾರು ಯಾರೋ, ಓ ಅರ್ಜುನನೇ ಅವರೆಲ್ಲರೂ ನಾನೇ. ಶ್ರೇಯಸ್ಸಾಧನವಾದ ವಿದ್ಯೆಗಳಲ್ಲೆಲ್ಲಾ, ಮೋಕ್ಷಸಾಧಕವಾದ ಬ್ರಹ್ಮವಿದ್ಯೆಯು ಯಾವುದೋ, ಅದೂ ನಾನೇ. ವಾದಗಳಲ್ಲೆಲ್ಲಾ ತತ್ತ್ವ ನಿರ್ಣಯಕ್ಕೆ ಪ್ರವೃತ್ತವಾದ ಉತ್ಕೃಷ್ಟವಾಗಿ ಶಾಸ್ತ್ರವಿಹಿತವಾದ ವಾದವು ಯಾವುದೋ, ಅದೂ ನಾನೇ. ವಿದ್ಯೆ ವಾದಗಳ ಅಧಿಕಾರಿಗಳಿಗೂ ಆತ್ಮಾ ನಾನೇ ಎಂಬ ಭಾವವು.

೩೩. ಅಕ್ಷರಗಳಲ್ಲೆಲ್ಲಾ ಮೂಲಾಕ್ಷರವೆಂದೆನಿಸಿ, ಜಗತ್ಕಾರಣನಾಗಿ ಧಾತ್ವರ್ಥದಿಂದ ಸರ್ವರಕ್ಷಕನಾಗಿ, ಸರ್ವಶೇಷಿಯಾಗಿ, ಶ್ರಿಯಃಪತಿಯಾಗಿ, ಪರಮಾತ್ಮನಿದ್ದಾನೆಂದು ಬೋಧಿಸುವ ಪ್ರಸಿದ್ಧಿಯುಳ್ಳ ಅಕಾರವು ಯಾವುದೋ, ಅದೂ ನಾನೇ. ಸಮಾಸ ಸಮೂಹಗಳಲ್ಲೆಲ್ಲಾ ಲಕ್ಷ್ಮೀನಾರಾಯಣರು ಎಂಬಲ್ಲಿ ಎರಡು ಪದ ಪ್ರಾಮುಖ್ಯತೆಯನ್ನೂ ಪ್ರದರ್ಶಿಸಿ, ಈ ಜಗತ್ತೆಲ್ಲಾ ಮಿಥುನ ರೂಪವೆಂದು ತೋರಿಸುವ ಮಾಹಾತ್ಮ್ಯಯುಳ್ಳ ದ್ವಂದ್ವ ಸಮಾಸವು ಯಾವುದೋ, ಅದೂ ನಾನೇ. ಕಲಾಕಾಷ್ಠಾದಿ ವಿಭಾಗಗಳನ್ನುಳ್ಳದ್ದಾಗಿ, ಜಡವಾದರೂ ವಿಭುವಾಗಿ ನಿತ್ಯವಾಗಿ ಇರುವ ಕಾಲವೂ ನಾನೇ, ಎಂದರೆ ಕಾಲತತ್ತ್ವಾತ್ಮಕನೂ ನಾನೇ. ಕಲ್ಪಾದಿಯಿಂದಲೂ ಭೂತ ವರ್ತಮಾನ ಭವಿಷ್ಯತ್ಕಾಲ ವ್ಯಷ್ಟಿಸೃಷ್ಟಿಗಳಿಗೂ ಕಾರಣಭೂತನಾಗಿ ನಾಲ್ಕುದಿಕ್ಕಿನ ಮುಖದಿಂದಲೂ ನಾಲ್ಕು ವೇದಗಳನ್ನು ಉಚ್ಚರಿಸಿ, ಉಚ್ಚಾರಣರೂಪದಲ್ಲಿ ವೇದಗಳನ್ನು ಪದೇಶಿಸಿದ ಮಹನೀಯನಾದ ಚತುರ್ಮುಖ ಬ್ರಹ್ಮನು ಯಾರೋ, ಅವನೂ ನಾನೇ ಎಂದರೆ ತದಾತ್ಮಕನೂ ನಾನೇ.

೩೪. ಸಮಸ್ತ ಪ್ರಾಣಿವರ್ಗದ ಪ್ರಾಣವನ್ನು ಅಪಹರಿಸುವ ಅಧಿಕಾರಿಯು ಯಾರೋ, ಅವನೂ ನಾನೇ. ಮುಂದೆ ಹುಟ್ಟುವವರಿಗೆ ಉತ್ಪತ್ತಿರೂಪ ಕರ್ಮವೂ ನಾನೇ. ನಾರಿಗಳಲ್ಲಿ ಮೊದಲು ಮೊದಲು ಜನಿಸಿ ಮಹಾಪರಿಶುದ್ಧ ಸಾಧ್ವಿಗಳಾಗಿ, ಮಹತ್ತಾದ ಗುಣಗಳಿಂದ ಸಾರ್ಥವತ್ತಾದನಾಮಧೇಯಗಳನ್ನು ಹೊಂದಿರುವ ನಾರೀಮಣಿಗಳಲ್ಲಿ, ಭೃಗು ಖ್ಯಾತಿಗಳಿಂದ ಅವತರಿಸಿದವನನ್ನು ಪತ್ನಿಯಾದ ಶ್ರೀದೇವಿಯೂ ನಾನೇ, ಅವಳಿಗೂ ಅವಳ ದಿವ್ಯಮಙ್ಗಳ ವಿಗ್ರಹಕ್ಕೂ ಆತ್ಮಾ ನಾನೇ ಎಂಬ ಭಾವವು. ದಕ್ಷಪ್ರಸೂತಿಯರ ಮಕ್ಕಳಾಗಿ ಕೀರ್ತಿ, ಮೇಧಾ, ಧೃತಿನಾಮಕರಾಗಿ ಯಮಧರ್ಮರಾಯನ ಪತ್ನಿಯರಾದವರೂ ನಾನೇ. ದಕ್ಷಪ್ರಸೂತಿಯರ ಮಗಳಾಗಿ, ಪುಲಹರ ಹೆಂಡತಿಯಾಗಿ ಕ್ಷಮಾನಾಮಕ ಸ್ತ್ರೀಯೂ ನಾನೇ. ಚತುರ್ಮುಖನ ಹೆಂಡತಿಯಾದ ವಾಕ್ಕೆಂದರೆ ಸಂಸ್ಕೃತಿಯೂ ನಾನೇ. ಹೀಗೆ ಅಯಾ ಗುಣಗಳಿಂದ ಪ್ರಸಿದ್ಧರಾದ ಈ ನಾರೀಮಣಿಗಳಿಗೆಲ್ಲಾ ಆತ್ಮಾವಾದವನೂ ನಾನೇ ಎಂಬ ಭಾವವು.

೩೫. ಸಾಮವೇದದಲ್ಲಿ ಸರ್ವೋತ್ಕೃಷ್ಟವಾದ ಬೃಹತ್ಸಾಮವೂ ನಾನೇ. ಛಂದಸ್ಸುಗಳಿಗೆಲ್ಲಾ ತಾಯಿ ಎಂದು ಹೇಳಿಸಿಕೊಳ್ಳುವ ಬಹು ಪ್ರಸಿದ್ಧವಾದ ದ್ವಯ ಮಂತ್ರಾರ್ಥವನ್ನು ಒಳಗೊಂಡಿರುವ ಗಾಯತ್ರಿಯೂ ನಾನೇ. ಸಂವತ್ಸರದ ೧೨ ಮಾಸಗಳಲ್ಲಿ ಉಷಃಕಾಲದ ಭಗವದಾರಾಧನೆಗೆ ಯೋಗ್ಯವಾಗಿ ಶ್ರೇಷ್ಠವಾದ ಮಾರ್ಗಶೀರ್ಷಮಾಸವೂ ನಾನೇ. ಋತುಗಳಲ್ಲಿ ಧನಧಾನ್ಯಗಳನ್ನೂ ಮನೋಹರವಾದ ಪುಷ್ಪ ಫಲಾದಿಗಳನ್ನೂ ಕೊಟ್ಟು, ಶುಭ ಶೋಭನಾದಿ ಕರ್ಮಗಳಿಗೆ ಯೋಗ್ಯವಾಗಿ ಮಹಿಮೆಯನ್ನು ಹೊಂದಿರುವ ವಸಂತಋತುವೂ ನಾನೇ. ತದಾತ್ಮಕನೂ ನಾನೇ ಎಂಬ ಭಾವವು.

೩೬. ಎದುರಾಳಿಯನ್ನು ಸೋಲಿಸಿ ಗೆಲ್ಲಬೇಕೆಂಬ ಆಶೆಯಿರುವ ಜೂಜಾಡುವವರ ಜೂಜಾಟವೂ ನಾನೇ. (ನೀವೇ ಎದುರಾಳಿಗೆ ಜೂಜಾಟದಲ್ಲಿ ಎಲ್ಲವನ್ನೂ ಸೋತು ಬಂದಿರುವವರೇ ನಿದರ್ಶನವೆಂಬ ಭಾವವು) ಅಂತಹ ನಿಮಗೂ ಆತ್ಮಾವಾಗಿರುವವನೂ ನಾನೇ ಎಂಬ ಭಾವವೂ ದ್ಯೋತಿತವು. ತೇಜಸ್ಸನ್ನು ಹೊಂದಿದ ಅಧಿಕಾರಿಗಳಲ್ಲಿರುವ ತೇಜಸ್ಸೂ ನಾನೇ. ಜಯಶೀಲರಾಗಬೇಕೆಂಬ ಅಪೇಕ್ಷೆಯುಳ್ಳವರಿಗೆ ಉಂಟಾಗುವ ಜಯವೂ ನಾನೇ. ವ್ಯವಸಾಯಾತ್ಮಕವಾದ ಬುದ್ಧಿಯುಳ್ಳವರ ವ್ಯವಸಾಯವೂ ನಾನೇ. ಸಾತ್ವಿಕರಲ್ಲಿರುವ ಪರಮ ಸಾತ್ವಿಕಭಾವವೂ ನಾನೇ; ತದಾತ್ಮಕನಾಗಿ ಅವುಗಳಿಗೆಲ್ಲಾ ಕಾರಣಭೂತನು ನಾನೇ ಎಂಬ ತಾತ್ಪರ್ಯವು.

**೩೭. ವೃಷ್ಣಿವಂಶದ ರಾಜರಲ್ಲಿ ಪ್ರಸಿದ್ಧನಾಗಿ, ವಸುದೇವಪುತ್ರನಾಗಿ ಅವತರಿಸಿರುವವನೂ ನಾನೇ. ಆ ದಿವ್ಯಮಙ್ಗಳವಿಗ್ರಹಕ್ಕೂ ಆತ್ಮಾ ನಾನೇ ಎಂಬ ಭಾವವು. ಪಂಚಪಾಂಡವರಲ್ಲಿ, ನಾನ**

ನಾರಾಯಣಾವತಾರಿಯಾದುದರಿಂದ ನನಗೆ ಸಹಾಯಕನಾಗಿ ನರಾವತಾರಿಯಾಗಿ ಮಹತ್ತಾದ ಬಾಹುಪರಾಕ್ರಮವುಳ್ಳವನಾಗಿ ಗಾಂಡೀವ ಧನುರ್ಧಾರಿಯಾಗಿ, ಪಾಶುಪತಾಸ್ತ್ರವನ್ನು ಪಡೆದವನಾಗಿ ಇಂತಹ ವಿಶೇಷ ಪ್ರಖ್ಯಾತಿಯನ್ನು ಹೊಂದಿ, ರಾಜಸೂಯಕ್ಕಾಗಿ ಅನೇಕ ರಾಜರುಗಳನ್ನೆಲ್ಲಾ ಗೆದ್ದು ಪ್ರಖ್ಯಾತಿ ಹೊಂದಿದ ಧನಂಜಯನೆಂದು ಹೇಳಿಸಿಕೊಳ್ಳುವ ನೀನೂ ನಾನೇ, ಎಂದರೆ ನಿನಗೆ ಆತ್ಮಾವಾಗಿರುವವನೂ ನಾನೇ, ಮನನ ಶೀಲರಾಗಿರುವ ಮಹರ್ಷಿಗಳಲ್ಲೆಲ್ಲಾ ವೇದಗಳನ್ನೆಲ್ಲಾ ಕ್ರಮಪಡಿಸಿ, ಅವುಗಳಿಗೆ ಪರಸ್ಪರ ವ್ಯಾಘಾತವಿಲ್ಲದಹಾಗೆ ಬ್ರಹ್ಮಸೂತ್ರಗಳನ್ನು ಅನುಗ್ರಹಿಸಿ ಪಂಚಮ ವೇದವೆನಿಸುವ ಮಹಾಭಾರತಾದಿ ಗ್ರಂಥಗಳನ್ನು ರಚಿಸಿ, ಜ್ಞಾನಾಗ್ರೇಸರರಲ್ಲಿ ಅಗ್ರಗಣ್ಯರೆಂದು ಪ್ರಖ್ಯಾತಿಯನ್ನು ಹೊಂದಿದ, ವ್ಯಾಸಮಹರ್ಷಿಯೂ ನಾನೇ; ಎಂದರೆ ತದಾತ್ಮಕನೂ ನಾನೇ. ಕವಿಗಳ ಮಧ್ಯದಲ್ಲಿ ನೀತಿ ವಿಶಾರದರಾಗಿ ಬಹು ಪ್ರಾಜ್ಞರಾದ ದೈತ್ಯಗುರುವಾದ ಶುಕ್ರನೂ ನಾನೇ.

೩೮. ನಿಯಮವನ್ನು ಅತಿಕ್ರಮಿಸಿದ ಅಪರಾಧಿಗಳನ್ನು ಶಿಕ್ಷಿಸುವ ನ್ಯಾಯಾಧಿಪತಿಯಾಗಿ ವಿಧಿಸುವ ಶಿಕ್ಷೆಯೂ ನಾನೇ. ಜಯವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವರ ಸಾಮದಾನ ಭೇದಾದಿ ಉಪಾಯವೂ ನಾನೇ. ಬಹು ಗೋಪ್ಯವಾಗಿರುವುಗಳಾದ ಮನ್ತ್ರಗಳ ವಿಷಯದಲ್ಲೂ, ಅಥವಾ ಅನರ್ಥಗಳುಂಟಾಗದಹಾಗೆ ಗೋಪ್ಯವಾಗಿರುವುವುಗಳ ವಿಷಯದಲ್ಲೂ, ಇರಬೇಕಾದ ಮೌನವೂ ನಾನೇ. ಜ್ಞಾನವುಳ್ಳವರುಗಳ ಜ್ಞಾನವೂ ನಾನೇ. ಇವಕ್ಕೆಲ್ಲಾ ಆಯಾಧರ್ಮಗಳಿರುವ ಅಧಿಕಾರಿಗಳಿಗೆ ಆತ್ಮಾವಾಗಿ ಅವುಗಳಿಗೆ ಕಾರಣಭೂತನಾದವನೂ ನಾನೇ. ಎಂಬ ಭಾವವು.

೩೯. ಈ ಶ್ಲೋಕದಲ್ಲಿ ಸರ್ವವೂ ತನ್ನೊಂದಿಗೇನೇ, ಯಾವಾಗಲೂ ಸೇರಿರುವುವು ಎಂದೂ, ತಾನಿಲ್ಲದೆ ಈ ಜಗತ್ತಿನಲ್ಲಿ ಯಾವ ಚರಾಚರವೂ ಸತ್ತೆಯನ್ನು ಹೊಂದಿರಲಾರದೆಂದೂ, ಮೇಲೆ ಹೇಳಿದ ಸಾಮಾನಾಧಿ ಕರಣ್ಯೋಕ್ತಿಯನ್ನು ವಿಶದೀಕರಿಸುವ ಸಾರಭೂತವಾದ ಪ್ರಧಾನ ಪ್ರತಿತಂತ್ರವನ್ನು ಬೋಧಿಸುತ್ತಾರೆ.—ಎಲ್ಲವನ್ನೂ ನಾನು ವ್ಯಾಪಿಸಿ, ಎಲ್ಲಕ್ಕೂ ನಾನು ಆತ್ಮಾವಾಗಿರುವವರಿಂದಲೇ, ಲೋಕದ ಎಲ್ಲಾ ಪ್ರಾಣಿವರ್ಗದ ಸರ್ವಾವಸ್ಥೆಗಳಿಗೂ ಕಾರಣಭೂತವಾಗಿ ವ್ಯಕ್ತವಾಗಿಯೂ ವ್ಯಕ್ತವಲ್ಲದೆಯೂ ಯಾವುದುಂಟೋ, ಅವೆಲ್ಲವೂ ನಾನೇ ನಾನು ಅವುಗಳಿಗೆ ಆತ್ಮಾವಾಗಿ ಇಲ್ಲದೆ ಯಾವ ಚರಾಚರವೂ ಇಲ್ಲವು ಎಲ್ಲವೂ ನನಗೆ ಶರೀರವು, ಅವುಗಳೆಲ್ಲವನ್ನೂ ವ್ಯಾಪಿಸಿ, ಅವುಗಳಿಗೆ ಆತ್ಮಾವಾಗಿ, ಅವುಗಳೊಂದಿಗೇನೇ ಇರುತ್ತೇನೆಂದು ತಿಳಿ. ಆದುದರಿಂದ ಎಲ್ಲವೂ ನಾನೇ ಎಂಬ ಭಾವವು.

೪೦. ಓ ಬಹಿಶ್ಶತ್ರುಗಳನ್ನೂ ಅಂತಶ್ಶತ್ರುಗಳನ್ನೂ ಜಯಿಸುವ ಸಾಮರ್ಥ್ಯವುಳ್ಳ, ಅರ್ಜುನನೇ! ನಾನು ಈಗ ಹೇಳುತ್ತಿರುವ ಮಂಗಳಕರಗಳಾಗಿಯೂ ಅತ್ಯದ್ಭುತಗಳಾಗಿಯೂ ಇರುವ ಇಂತಹ ನಿಯಾಮ್ಯವರ್ಗಕ್ಕೆ ಕೊನೆಯೇ ಇಲ್ಲವು. ನಾನು ಹೇಳುತ್ತಾ ಹೋಗಬೇಕಾಗುತ್ತದೆ; ನೀನು ಕೇಳುತ್ತಲೇ ಇರಬೇಕಾಗಿರುತ್ತದೆ. ಈ ನನ್ನ ವಿಭೂತಿಗಳನ್ನು ಹೀಗೆ ವಿಸ್ತರಿಸಿ ನಿನಗೆ ಉಪದೇಶವು-ಒಂದು ಮುಖ್ಯೋದ್ದೇಶದಿಂದ ಮಾಡಲ್ಪಟ್ಟಿತು. ಅದೇನೆಂದರೆ ನನ್ನ ವಿಭೂತಿಯೇ ಇಷ್ಟು ಮಹತ್ತಾದನಂತರ, ನಾನು ಎಷ್ಟು ಮಾಹಾತ್ಮ್ಯೆಯುಳ್ಳವನೆಂಬುದು ತೋರಿ, ಅಂತವನನ್ನು ಪ್ರಾಪ್ಯವಾಗಿ ಹೊಂದುವದಕ್ಕಾಗಿ ಭಕ್ತಿಯೋಗವು ಆರಂಭಿಸಲ್ಪಟ್ಟು ಅದು ವಿವೃದ್ಧಿಯನ್ನು ಹೊಂದುವ ಪ್ರಯೋಜನಕ್ಕಾಗಿ ಉಪದೇಶಿಸಿದೆನು.

೪೧. ಸಂಪೂರ್ಣವಾಗಿ ಈ ವಿಭೂತಿಯನ್ನು ವಿಸ್ತರಿಸಿ ಹೇಳುವದು ಸಾಧ್ಯವಿಲ್ಲದುದರಿಂದ, ನೀನು ಎಲ್ಲೆಲ್ಲಿ ಕಾಂತಿಮತ್ತಾದ, ಜ್ಞಾನವಿಕಾಸಾದಿಗಳಿಂದ ಸರ್ವೋತ್ಕೃಷ್ಟವಾದ ಮತ್ತು ಧನಧಾನ್ಯ ಸಮೃದ್ಧಿ ಯುಕ್ತವಾದ ಮತ್ತು ಕಲ್ಯಾಣಾರಂಭದಲ್ಲಿ ಉದ್ಯುಕ್ತವಾದ ವಿಭೂತಿ ವರ್ಗವನ್ನು ಕಾಣುತ್ತೀಯೋ, ಅವೆಲ್ಲವೂ ನನ್ನ, ಯಾರಿಂದಲೂ ತಿರಸ್ಕರಿಸಲ್ಪಡದೇ ಇರುವ ಅದ್ಭುತವಾದ ಅಚಿಂತ್ಯ ಶಕ್ತಿಯ ಅಯುತಾಯುತಾಂಶದಿಂದುಂಟಾದುದೆಂದು ಭಾವಿಸು.

೪೨ ಹೀಗಾದನಂತರ ಇನ್ನು ಹೆಚ್ಚಾಗಿ ಹೇಳಿ ಉಂಟಾಗುವ ಜ್ಞಾನದಿಂದೇನು? ಈ ವಿಭೂತಿ ವಿಸ್ತರೋಪದೇಶದಿಂದ ನೀನು ಸಾರಭೂತನಾಗಿ ತಿಳಿಯುವ ಅಂಶವು ಇಷ್ಟೇ. ಈ ಚಿದಚಿದಾತ್ಮಕವಾದ ಸಮಸ್ತ ಜಗತ್ತೂ ಸೂಕ್ಷ್ಮರೂಪದಲ್ಲಿರುವಾಗಲೇ ಯಾಗಲಿ: ಸ್ಥೂಲರೂಪದಲ್ಲಿರುವಾಗಲೇಯಾಗಲಿ, ಅವುಗಳ ಸತ್ತಾಸ್ಥಿತಿ ನಿಯಮನಾದಿಗಳಿಗೆಲ್ಲಾ ಕಾರಣಭೂತನಾಗಿ ಹೀಗೆ ಆ ಸಕಲ ಜಗತ್ತಿನಲ್ಲೂ ಪ್ರತಿಷ್ಠಿತನಾಗಿರುವೆನು; ಅವುಗಳನ್ನು ಶರೀರವಾಗಿ ಹೊಂದಿ ಅವುಗಳಿಗೆ ಆತ್ಮನಾಗಿ ಅವುಗಳ ಸತ್ತಾಸ್ಥಿತಿ ಪ್ರವೃತ್ತಿ ನಿಯಮನಾದಿಗಳಿಗೆ ಕಾರಣಭೂತನಾಗಿರುವೆನು. ಇದು ಸಾರಭೂತವಿಷಯವು. ಇದು ನಿನಗೆ ಅವಗಾಹನೆಗೆ ಬಂದರೆ ಸರ್ವಶಾಸ್ತ್ರಾರ್ಥವೂ ವೇದ್ಯವಾಗಿ ನನ್ನ ಮಾಹಾತ್ಮ್ಯೆಯು ತಿಳಿದೀತು. ನನ್ನನ್ನೇ ಉಪಾಸಿಸುವಿ ಎಂಬುದು ಸೂಚಿತವು. ಇದೇ ನನ್ನ ಉಪದೇಶದ ಮುಖ್ಯೋದ್ದೇಶವು ಎಂಬ ಭಾವವು.

**ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ**

ಹತ್ತನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು ಸಂಪೂರ್ಣವು.

**ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ**

ಶ್ರೀಮದ್ಯಾಮುನಮುನಿ ವಿರಚಿತ

# ಶ್ರೀಮದ್ಗೀತಾರ್ಥಸಙ್ಗ್ರಹೇ

## ದಶಮಾಧ್ಯಾಯ ಸಙ್ಗ್ರಹಶ್ಲೋಕಃ

**ಸ್ವಕಲ್ಯಾಣ ಗುಣಾನನ್ತ್ಯ ಕೃತ್ಸ್ನ ಸ್ವಾಧೀನತಾ ಮತಿಃ ।**
**ಭಕ್ತ್ಯುತ್ಪತ್ತಿ ವಿವೃದ್ಧ್ಯರ್ಥಾ ವಿಸ್ತೀರ್ಣಾ ದಶಮೋದಿತಾ ॥** ೧೪.

ಶ್ರೀ ಯಾಮುನ ಮುನಯೇ ನಮಃ

(೧) **ಸ್ವಕಲ್ಯಾಣ ಗುಣಾನನ್ತ್ಯ**-ತನ್ನ ಕಲ್ಯಾಣಗುಣಗಳ ಆನನ್ತ್ಯದಿಂದ ಕೂಡಿದ **ಕೃತ್ಸ್ನ ಸ್ವಾಧೀನತಾಮತಿಃ**—ಸಮಸ್ತ ವಿಶ್ವವನ್ನೂ ಸ್ವಾಧೀನಮಾಡಿಕೊಂಡು ನಿಯಮಿಸುವ ಸಙ್ಕಲ್ಪವು, ಎಂದರೆ ಎಲ್ಲಾ ಚಿದಚಿತ್ತುಗಳನ್ನೂ ಶರೀರವಾಗಿ ಮಾಡಿಕೊಂಡು, (೩೯) ಎಲ್ಲಕ್ಕೂ ತಾನು ಆತ್ಮನಾಗಿ ಪ್ರವೇಶಿಸಿರುವದರಿಂದ (೨೦) ಎಲ್ಲವೂ ತನ್ನ ವಿಭೂತಿಯಾಗಿರುವದನ್ನು (೧೬) **ವಿಸ್ತೀರ್ಣಾ**-ವಿಸ್ತರಿಸಲ್ಪಟ್ಟುದಾಗಿ, **ದಶಮೋದಿತಾ** - ದಶಮಾಧ್ಯಾಯದಲ್ಲಿ ಹೇಳಲ್ಪಟ್ಟಿತು; ಯಾವ ಪ್ರಯೋಜನಕ್ಕಾಗಿ ಅರ್ಜುನನಿಗೆ ಉಪದೇಶಿಸಲ್ಪಟ್ಟಿತೆಂದರೆ (೨) **ಭಕ್ತ್ಯುತ್ಪತ್ತಿ ವಿವೃದ್ಧ್ಯರ್ಥಾ**-ಭಕ್ತಿಯೋಗದ ಉತ್ಪತ್ತಿಯೇನು, ಅದರ ಅಭಿವೃದ್ಧಿಯೇನು ಇವುಗಳೇ ಪ್ರಯೋಜನವುಳ್ಳದ್ದಾಗಿರುವದು ಈ ಭಗವತ್ಸಂಕಲ್ಪವು ಹಾಗೆಯೇ ಪ್ರಥಮಶ್ಲೋಕದಲ್ಲೇ ಶ್ರೀ ಕೃಷ್ಣಭಗವಾನರವರು "**ಯತ್ತೇಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ**" ಎಂದು ಹೇಳಿರುವದನ್ನನುಸರಿಸಿ, **ಭಕ್ತ್ಯುತ್ಪತ್ತಿ ವಿವೃದ್ಧ್ಯರ್ಥಾ** ಎಂದು ಹೇಳಿರುತ್ತಾರೆ.— **ಸ್ವಕಲ್ಯಾಣಗುಣಾನನ್ತ್ಯವು, "ಏತಾಂ ವಿಭೂತಿಂ ಯೋಗಂ ಚ"** (೭) **"ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ನಾಶಯಾಮಿ"** (೧೧) ಎಂಬಲ್ಲಿ ಕಲ್ಯಾಣಗುಣಗಳಿಂದ ಯುಕ್ತನಾಗಿ ಅಪಾರಕಾರುಣ್ಯಮಹೋದಧಿ ಎಂಬಲ್ಲಿಯೂ, ಆಶ್ರಯೋಚಿತ ಕಲ್ಯಾಣ ಗುಣಾಕರನೆಂಬಲ್ಲಿಯೂ ಹೇಳಲ್ಪಟ್ಟಿತು; **ಕೃತ್ಸ್ನಸ್ವಾಧೀನತಾಮತಿಯು** ವಿಸ್ತರಿಸಲ್ಪಟ್ಟಿರುವದು ಎಲ್ಲಿ? ಎಂದರೆ ಅರ್ಜುನ ಪ್ರಶ್ನೆಯು ಮುಗಿದ ನಂತರ ೧೯ನೆಯ ಶ್ಲೋಕ ಮೊದಲುಗೊಂಡು, ಅಧ್ಯಾಯ ಪರಿಸಮಾಪ್ತಿಯವರೆಗೂ ತಾನು ಹೇಗೆ ಎಲ್ಲಕ್ಕೂ ಆತ್ಮನಾಗಿಯೂ (೨೦) ಎಲ್ಲವೂ ತನಗೆ ಶರೀರವಾಗಿದೆಯೆಂದೂ, (೩೯) ಆ ಕಾರಣದಿಂದ ಸಾಮಾನಾಧಿಕರಣ್ಯದಿಂದ ಸಮಸ್ತವೂ ತಾನೆಂದೂ, (೨೦) ಇದರಿಂದ ತನಗೆ ಸರ್ವಶಬ್ದವಾಚ್ಯತ್ವವುಂಟೆಂದೂ, ತನ್ನ ಮಹಿಮೆಯು ವ್ಯಕ್ತಪಡುವದಕ್ಕಾಗಿ ಅವುಗಳಲ್ಲಿ ಯಾವ ಯಾವ ವಿಭೂತಿಗಳು ಪ್ರಶಸ್ತವಾದುವು, ಮಂಗಳಕರವಾದುವು, ಅದ್ಭುತವಾದುವು, ಅವೆಲ್ಲವೂ ತನ್ನಿಂದಲೇ ಎಂದು ತಿಳಿಸಿ,(೨೧ ರಿಂದ ೩೮) ಈ ಶರೀರಾತ್ಮಭಾವವು ಹೀಗೆ ಯಾವಾಗಲೂ ತನಗೆ ಸ್ಥಿರವಾದುದು ಎಂದು ಬೋಧಿಸಿ, ಅಂತಹ ನಿಯಮನಶಕ್ತಿಯೇ ಮೊದಲಾದುದು ತನ್ನ ಮಹಿಮೆಯ ಏಕದೇಶವೆಂದೂ, (೪೧) ಇದರಿಂದ ಇಂತಹ ಜಗತ್ತುಗಳಹಾಗೆ ಬೇರೆಬೇರೆ ಬ್ರಹ್ಮರುದ್ರರುಗಳ ಆಧಿಪತ್ಯಕ್ಕೆ ಸೇರಿದ ಅನೇಕ ಬ್ರಹ್ಮಾಂಡಗಳುಂಟೆಂಬ ಭಾವವನ್ನೂ ಉಪದೇಶಿಸಿರುತ್ತಾರೆಂಬ ಭಾವವು. ಇಲ್ಲಿ **ಸ್ವಾಧೀನತಾ** ಎಂದು ಹೇಳಿರುವದರಿಂದ, ಈ ವಿಭೂತಿಗಳ ಸ್ವರೂಪ ಸ್ಥಿತಿ ಪ್ರವೃತ್ತಿಗಳೂ, ಸರ್ವಭೂತಗಳಿಗೂ ಪ್ರಾಪ್ತವಾಗುವ ಫಲಗಳೂ ಎಲ್ಲವೂ ಭಗವತ್ಸಂಕಲ್ಪಾಧೀನವಾದುವೆಂಬ ಸಾರಭೂತವಾದ ಉಪದೇಶವು ಸಂಗ್ರಹಿಸಲ್ಪಟ್ಟಿತು.

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ
ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ



# ಶ್ರೀಮದ್ಭಗವದ್ಗೀತಾಯಾಂ

## ಏಕಾದಶೋಽಧ್ಯಾಯಃ

---

**ಭಾ. ಅ. ಏವಂ ಭಕ್ತಿಯೋಗನಿಷ್ಪತ್ತಯೇ ತದ್ವಿವೃದ್ಧಯೇ ಚ ಸಕಲೇತರ ವಿಲಕ್ಷಣೇನ ಸ್ವಾಭಾವಿಕೇನ ಭಗವದಸಾಧಾರಣೇನ ಕಲ್ಯಾಣಗುಣಗಣೇನ ಸಹ ಭಗವತಸ್ಸರ್ವಾತ್ಮತ್ವಂ, ತತ ಏವ ತದ್ವ್ಯತಿರಿಕ್ತಸ್ಯ ಕೃತ್ಸ್ನಸ್ಯ ಚಿದಚಿದಾತ್ಮಕಸ್ಯ ವಸ್ತುಜಾತಸ್ಯ ತಚ್ಛರೀರತಯಾ ತದಾಯತ್ತಸ್ವರೂಪಸ್ಥಿತಿ ಪ್ರವೃತ್ತಿತ್ವಂ ಚೋಕ್ತಮ್.**

---

**ಭಾಷ್ಯಾವತಾರಿಕೆಯ ಅರ್ಥವು:**—ಮೊದಲು. ಹಿಂದಿನ ವಿಭೂತಿ ವಿಸ್ತರಾಧ್ಯಾಯದಲ್ಲಿ ಮುಖ್ಯವಾಗಿ ಉಪದೇಶಿಸಲ್ಪಟ್ಟಿದುದನ್ನು ಒಂದು ವಾಕ್ಯದ ಮೂಲಕ ವ್ಯಕ್ತಪಡಿಸುತ್ತಾರೆ. **ಏವಂ**-ಈ ಪ್ರಕಾರವಾಗಿ ಎಂದರೆ ೧೦ ನೆಯ ಅಧ್ಯಾಯದಲ್ಲಿನ ಉಪದೇಶದ ಪ್ರಕಾರವಾಗಿ, **ಭಕ್ತಿಯೋಗ ನಿಷ್ಪತ್ತಯೇ** - ಭಕ್ತಿಯೋಗದ ಉತ್ಪತ್ತಿಯುಂಟಾಗುವದಕ್ಕಾಗಿಯೂ. **ತದ್ವಿವೃದ್ಧಯೇ ಚ** - ಆ ಭಕ್ತಿಯೋಗವು ಅಭಿವೃದ್ಧಿಯಾಗುವದಕ್ಕಾಗಿಯೂ, ಎಂದರೆ ಫಲೋನ್ಮುಖವಾಗುವದಕ್ಕೂ ಸಹ, **ಸಕಲೇತರ ವಿಲಕ್ಷಣೇನ** - ಸಮಸ್ತರಾದ ಇತರ ಚೇತನರ ಸ್ವರೂಪ ಸ್ವಭಾವಗಳಿಗಿಂತಲೂ ವಿಲಕ್ಷಣವಾಗಿ, **ಸ್ವಾಭಾವಿಕೇನ** - ಪರಮಾತ್ಮನಿಗೆ ಮಾತ್ರವೇ ಸಹಜವಾದ. **ಭಗವದಸಾಧಾರಣೇನ**-ಭಗವಂತನಿಗೆ ಮಾತ್ರವೇ ಕ್ಲಿಪ್ತವಾದ, **ಕಲ್ಯಾಣ ಗುಣಗಣೇನ ಸಹ**- (೧೦–೧೧) ಆಶ್ರಯೋಚಿತವಾದ ದಯಾ ವಾತ್ಸಲ್ಯಾದಿ ಕಲ್ಯಾಣಗುಣಗಳ ಸಮೂಹದಿಂದ ಕೂಡಿರುವದರೊಂದಿಗೆ, **ಭಗವತಃ** ಭಗವಂತನ, **ಸರ್ವಾತ್ಮತ್ವಂ** (೧೦-೨೦) ಸರ್ವಚಿದಚಿತ್ತಿಗೂ ಆತ್ಮನಾಗಿರುವ ಭಾವವೂ, **ತತ ಏವ**-ಹಾಗೆ ಆತ್ಮನಾಗಿರುವ ಕಾರಣದಿಂದಲೇ, **ತದ್ವ್ಯತಿರಿಕ್ತಸ್ಯ**-ಭಗವಂತನಲ್ಲಿದೆ ಬೇರೆಯಾದ. **ಕೃತ್ಸ್ನಸ್ಯ ಚಿದಚಿದಾತ್ಮಕಸ್ಯ ವಸ್ತುಜಾತಸ್ಯ** ಸಮಸ್ತವಾದ ಚಿದಚಿದ್ರೂಪದಲ್ಲಿರುವ ವಸ್ತುಸಮೂಹವೆಲ್ಲಾ **ತಚ್ಛರೀರತಯಾ**—(೧೦.೩೯) ಆ ಭಗವಂತನಿಗೆ ಅಪೃಥಕ್ಸಿದ್ಧ ವಿಶೇಷಣರೂಪ ಶರೀರವಾಗುವದರಿಂದ, **ತದಾಯತ್ತ ಸ್ವರೂಪ ಸ್ಥಿತಿ ಪ್ರವೃತ್ತಿತ್ವಂ ಚ ಉಕ್ತಮ್** (೧೦-೮) ಆ ಪರಮಾತ್ಮನಿಗೇನೇ ಅಧೀನಗಳಾದ ಸ್ವರೂಪ ಸ್ಥಿತಿ ಪ್ರವೃತ್ತಿಯೂ ಕೂಡ **ಉಕ್ತಮ್**-ಹೇಳಲ್ಪಟ್ಟಿವು (೧೦.೪೨) ಇಲ್ಲಿ **ಭಕ್ತಿಯೋಗ ನಿಷ್ಪತ್ತಯೇ ತದ್ವಿವೃದ್ಧಯೇ ಚ**" ಎಂಬ ಪ್ರಯೋಗವು ಹಿಂದೆ ೧೦ ನೆಯ ಅಧ್ಯಾಯದ ೪೦ ನೆಯ ಶ್ಲೋಕದಲ್ಲಿ **"ಏಷತೂದ್ದೇಶತಃ ಪ್ರೋಕ್ತಃ"** ಎಂಬಲ್ಲಿ ಹೇಳಿರುವ ಉದ್ದೇಶದ ವಿವರಣೆಯೆಂದು ಭಾವಿಸತಕ್ಕದ್ದು. ಹತ್ತನೆಯ ಅಧ್ಯಾಯವು ಈ ಅಭಿಪ್ರಾಯದಿಂದಲೇ ಹೇಳಲ್ಪಟ್ಟಿತೆಂಬ ಭಾವವು ಹೀಗೆ ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟಿದುದು ತುಂಬಾ ಮುಖ್ಯವಾದ ಅಂಶವಾದುದರಿಂದ ಅದನ್ನು ಅನುವಾದಮಾಡಿ ಹೇಳಿ, ಈ ಮುಂದಿನ ಅಧ್ಯಾಯಕ್ಕೂ ಹಿಂದಿನ ಅಧ್ಯಾಯಕ್ಕೂ ಸಙ್ಗತಿಯನ್ನು ಸೂಚಿಸಿ. ಈ ಹನ್ನೊಂದನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆಂಬುದನ್ನು ತಿಳಿಸುತ್ತಾರೆ ಈ ಮುಂದಿನ ಅರ್ಜುನನ ಪ್ರಶ್ನೆಯಿಂದಲೇ ಭಗವಂತನ ಉದ್ದೇಶವು ಕೈಗೂಡಿತೆಂದೂ, ಅತನಲ್ಲಿ ಭಕ್ತಿಯು ಅಂಕುರಿಸಿತು ಎಂಬುದನ್ನೂ, ಗ್ರಹಿಸಬಹುದು. **ತಂ**—ಅಂತಹ ಸರ್ವಾತಿಶಯರೂಪ ಮಾಹಾತ್ಮ್ಯೆಯನ್ನು ಹೊಂದಿದ, **ಏತಂ**—ಈ, ಎಂದರೆ ೧೦ ನೆಯ ಅಧ್ಯಾಯದಲ್ಲೂ ಮತ್ತು ಹಿಂದೆಯೂ

**ಭಾ. ಅವ. ತಮೇತಂ ಭಗವದಸಾಧಾರಣಂ ಸ್ವಭಾವಂ ಕೃತ್ಸ್ನಸ್ಯ ತದಾಯತ್ತಸ್ವರೂಪಸ್ಥಿತಿ ಪ್ರವೃತ್ತಿತಾಂಚ ಭಗವತ್ಸಕಾಶಾದುಪಶ್ರುತ್ಯೈವಮೇವೇತಿ ನಿಶ್ಚಿತ್ಯ, ತಥಾಭೂತಂ**

ಆಶ್ರಿತರಿಗೆ ಉಪಯುಕ್ತವಾದವು ಎಂದು ಹಿಂದೆ ಹೇಳಲ್ಪಟ್ಟವುಗಳಾದ, **ಭಗವದಸಾಧಾರಣಂ**—ಭಗವಂತನಿಗೆ ಮಾತ್ರವೇ ಮುಖ್ಯವಾಗಿರುವ, **ಸ್ವಭಾವಂ**—ಈ ಕಲ್ಯಾಣ ಗುಣಾಕರತ್ವವೂ **"ಯತ್ತೇಹಂ ಪ್ರೀಯಮಾಣಾಯ ವಕ್ಷ್ಯಾಮಿಹಿತಕಾಮ್ಯಯಾ"** (೧೦-೧) ಎಂದು ಹೇಳಿರುವ ಸಂದರ್ಭದಲ್ಲೂ ಮತ್ತು **"ತೇಷಾಮೇವಾನುಕಂಪಾರ್ಥಂ"** (೧೦-೧೧) ಎಂಬಲ್ಲೂ ತೋರಿಬರುವ ಆಶ್ರಿತರ ವಿಷಯದಲ್ಲಿ ದಯಾ ವಾತ್ಸಲ್ಯನಿಧಿಯಾಗಿರುವ ಸ್ವಭಾವವೂ, **ಕೃತ್ಸ್ನಸ್ಯ**—ಸಮಸ್ತ ಚಿದಚಿದಾತ್ಮಕ ರೂಪವಾದ ಜಗತ್ತಿನ. **ತದಾಯತ್ತಸ್ವರೂಪ ಸ್ಥಿತಿ ಪ್ರವೃತ್ತಿತಾಂಚ**-ಆ ಸರ್ವೇಶ್ವರನಿಗೇನೇ ಅಧೀನವಾದ ಸ್ವರೂಪಸ್ಥಿತಿ ಪ್ರವೃತ್ತಿಗಳುಳ್ಳೋಣ ವನ್ನೂ ಸಹ, **ಭಗವತ್ಸಕಾಶಾದುಪಶ್ರುತ್ಯ**-ಭಗವಂತನಿಂದಲೇ ಸಾಕ್ಷಾತ್ತಾಗಿ ಉಪದೇಶಿಸಲ್ಪಟ್ಟವನಾಗಿ, ಅಂತಹ ಭಗವಂತನನ್ನು ಸಾಕ್ಷಾತ್ಕರಿಸಬೇಕೆಂಬ ಆಶೆಯಿಂದ ಪ್ರಾರ್ಥಿಸುತ್ತಾನೆ ಎಂದು ಮುಂದೆ ಇದೆ. ಸಾಧಾರಣ ಗುರುಗಳಿಂದ ಉಪದೇಶಿಸಲ್ಪಟ್ಟರೇನ(,ಸ್ವಾಮಿಯ ಕಲ್ಯಾಣ ಗುಣಕಥಾಮೃತ ಪಾನದಲ್ಲೂ, ಆತನ ವಿವಿಧ ವಿಚಿತ್ರಾದ್ಭುತ ವಿಭೂತಿಗಳ ಐಶ್ವರ್ಯವನ್ನೂ ಕೇಳು ವದರಲ್ಲೂ, ತೃಪ್ತಿಯೇ ಇಲ್ಲದೇ ಹೋಗುತ್ತದೆ; ಹಾಗಲ್ಲದೆ ಲೋಕಗುರುವೇ ಉಪದೇಶಿಸಲು ಸಂದೇಹವಿಲ್ಲವೆಂದು ಪ್ರದರ್ಶಿಸುವದಕ್ಕಾಗಿ, **ಭಗವತ್ಸಕಾಶಾದುಪಶ್ರುತ್ಯ** ಎಂಬ ಪ್ರಯೋಗವು. ಇನ್ಯಾರಾದರು ಉಪದೇಶಿಸಿದುದಾದರೆ, ನಿಸ್ಸಂದೇಹವಾಗಿ **"ಸರ್ವಮೇತ ದೃತಂ, ಮನ್ಯೇ"** ಎಂದು ಹೇಳಲು ಸಾಧ್ಯವಲ್ಲದೇ ಹೋಗಬಹುದು ; ಯಥಾರ್ಥಜ್ಞಾನಕ್ಕಾಗಿ ಶರಣಾಗತಿಯನ್ನು ಮಾಡಿದ ಶಿಷ್ಯನಿಗೆ ಅತ್ಯರ್ಥ ಪ್ರಿಯನು ನೀನು ಎಂದು ಹೇಳಿ, ಅಪಾರ ಮಾರ್ಥಿಕವಾದುದನ್ನು ಎಂದಿಗೂ ಹೇಳಲಾರನು ಎಂಬ ಭಾವವನ್ನೂ ಸೂಚಿಸುವದಕ್ಕಾಗಿಯೂ **ಭಗವತ್ಸಕಾಶಾದುಪಶ್ರುತ್ಯ** ಎಂಬ ಪ್ರಯೋಗವು ಸರ್ವಜ್ಞನಾಗಿ, ಪರಮ ಹಿತೈಷಿಯಾಗಿ, **ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ** ಎಂಬ ಪೀಠಿಕೆಯೊಂದಿಗೆ ಉಪದೇಶಿಸಿದವನು ಪರಮಾರ್ಥವನ್ನು ಉಪದೇಶಿಸುವನೇ ವಿನಾ ಅನ್ಯಥಾ ಇಲ್ಲವೆಂಬ ಭಾವವೂ **ಭಗವತ್ಸಕಾಶಾದುಪಶ್ರುತ್ಯ** ಎಂಬುದರಿಂದ ಸೂಚಿತವು. ಈ ಅಭಿಪ್ರಾಯವನ್ನೇ ಅರ್ಜುನನು ಈ ೧೧ ನೆಯ ಅಧ್ಯಾಯದ ಪ್ರಥಮಶ್ಲೋಕದಲ್ಲಿ **"ಮೋಹೋಽಯಂ ವಿಗತೋ ಮಮ"** ಎಂದು ಉಪದೇಶಕ್ಕೆ ಮುಂದೆ ಮೋಹವಿತ್ತೆಂದೂ, ಈಗ ಅದು ಗತಿಸಿ ಹೋಯಿತೆಂದೂ, ಹೇಳಿಕೊಂಡಿರುತ್ತಾನೆ. ಇತರರು ತನ್ನನ್ನು ಯಥಾರ್ಥವಾಗಿಯೂ ಅರಿಯಲೂಲಾರರು ಬೋಧಿಸಲೂಲಾರರು ಎಂದು **ನಮೇವಿದುಸ್ಸುರಗಣಾಃ** ಎಂಬಲ್ಲಿ ಹೇಳಿರುತ್ತಾರೆ- ಆದುದರಿಂದ **ಭಗವತ್ಸಕಾಶ** ದಿಂದಲೇ ಉಂಟಾದ ಉಪದೇಶವಾದರೋ ಪರಮಾರ್ಥವೆಂಬುದರಲ್ಲಿ ಈಷತ್ಸಂದೇಹವೂ ಕೂಡದು. ಇದು ವ್ಯಾವಹಾರಿಕ ಸತ್ಯಮಾತ್ರವೆಂದೂ ಹೇಳಲು ಸಾಧ್ಯವಲ್ಲವೆಂಬುದೂ ಇದರಿಂದ ಸೂಚಿತವು; ಈ ಪ್ರಯೋಗದಿಂದ ಇನ್ನೊಂದು ಆಶಯವು ತೋರಿಬರುತ್ತದೆಂದು ಶ್ರೀ ದೇಶಿಕರವರು ಸೂಚಿಸಿರುತ್ತಾರೆ. ಒಂದು ವೇಳೆ ಇತರ ಆಚಾರ್ಯರುಗಳು ಈ ತತ್ವಗಳನ್ನೇ ಯಥಾರ್ಥವಾಗಿ ಉಪದೇಶಿಸಿದ್ದರೂ,ಅಂತಹ ಕಲ್ಯಾಣಗುಣಗಳಿಂದಲೂ ವಿಭೂತ್ಯೈಶ್ವರ್ಯದಿಂದಲೂ ಕೂಡಿದ ಭಗವಂತನನ್ನು ಸಾಕ್ಷಾತ್ತಾಗಿ ಪ್ರದರ್ಶಿಸಬೇಕೆಂದು ಪ್ರಾರ್ಥಿಸಲು ಅಸಾಧ್ಯವು; **ಭಗವತ್ಸಕಾಶಾತ್ ಉಪದೇಶವು ದೊರೆತ ಸುಕೃತದಿಂದ ವಿಶ್ವರೂಪದರ್ಶನವನ್ನು ದಯಪಾಲಿಸಬೇಕೆಂದು ಪ್ರಾರ್ಥಿ**

ಸಲು ಅನುಕೂಲವು ದೊರೆಯಿತು ಎಂಬುದೂ ಸೂಚಿತವು ಆದುದರಿಂದ **ಏವಮೇವ್ಯೈತಿ ನಿಶ್ಚಿತ್ಯ**—ಉಪದೇಶವೆಲ್ಲಾ ಪರಮಾರ್ಥವೆಂದೇ ನಿಶ್ಚಯಿಸಿದವನಾಗಿ (ಇದು ೩ನೆಯ ಶ್ಲೋಕದ ಅಭಿಪ್ರಾಯವು.) **ತಥಾಭೂತಂ ಭಗವಂತಂ**-ಇಂತಹ ನಿರತಿಶಯ ಕಲ್ಯಾಣಗುಣಗಳಿಂದಲೂ, ಮಹತ್ತಾದ ವಿಭೂತಿಯ ಐಶ್ವರ್ಯದಿಂದಲೂ ವಿಶಿಷ್ಟನಾದ ಭಗವಂತನನ್ನು. ಇಲ್ಲಿ **ಭಗವಂತಂ** ಎಂಬ ಶಬ್ದವೇ ಸರ್ವೇಶ್ವರನ ಹೇಯ ಪ್ರತ್ಯನೀಕತೆಯನ್ನೂ ಕಲ್ಯಾಣಗುಣಾಕರತ್ವವನ್ನೂ ಬೋಧಿಸುತ್ತದೆ; ಅಂತಹ ಭಗವಂತನನ್ನು, **ಸಾಕ್ಷಾತ್ಕರ್ತುಕಾಮಃ** - ಸಾಕ್ಷಾತ್ತಾಗಿ ನೋಡ ಬೇಕೆಂಬ ಅಪೇಕ್ಷೆಯುಳ್ಳವನಾಗಿ, ಈಗ ಶ್ರೀ ಕೃಷ್ಣನನ್ನು ಪ್ರತ್ಯಕ್ಷದಲ್ಲಿ ನೋಡುತ್ತಾ ಇಲ್ಲವೇ ಎಂದರೆ ಮನುಷ್ಯಾವತಾರಿಯಾಗಿ ಇದ್ದುದಾದುದರಿಂದ. ಸಾಧಾರಣ ಮನುಷ್ಯನಹಾಗೆ ತೋರು ತ್ತಾನೆ; ಇಂತಹ ವಿಭವೈಶ್ವರ್ಯಗಳಿಂದ ಯುಕ್ತವಾದ ಅತ್ಯದ್ಭುತ ರೂಪವನ್ನು ನೋಡಬೇಕೆಂಬ ಪ್ರಾರ್ಥನೆಯು; ಹೀಗೆ ನೋಡಬೇಕೆಂಬ ಕುತೂಹಲಯುಕ್ತನಾಗಿ, **ಅರ್ಜುನ ಉವಾಚ**-ಅರ್ಜು ನನು ಹೇಳುತ್ತಾನೆ. **ತದಾಯತ್ತ ಸ್ವರೂಪಸ್ಥಿತಿ** ಪ್ರವೃತ್ತಿಯುಳ್ಳದು ಈ ಕೃತ್ಸ್ನ ಜಗತ್ತು ಎಂದು ಎಲ್ಲಿ ಹೇಳಲ್ಪಟ್ಟಿದೆ? ಎಂದರೆ, **"ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥ ಗ್ವಿಧಾಃ"** (೧೦-೫) ಎಂಬಲ್ಲೂ, **"ಮತ್ತಸ್ಸರ್ವಂ ಪ್ರವರ್ತತೇ"** (೧೦-೮) ಎಂಬಲ್ಲೂ, **ವಿಷ್ಟ ಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್** (೧೦-೪೨ ಎಂಬಲ್ಲೂ ಹೇಳಲ್ಪಟ್ಟಿದೆ. **ಅರ್ಜುನ ಉವಾಚ**-ಅರ್ಜುನನು ಮುಂದಿನ ಮೂರು ಶ್ಲೋಕಗಳಿಂದ ಪ್ರಾರ್ಥಿಸುತ್ತಾನೆ. ಪ್ರಥಮ ಶ್ಲೋಕದಲ್ಲಿ ಇಷ್ಟು ದೂರ ಉಪದೇಶಿಸಿರುವುದರಿಂದ ತನ್ನ ಮೋಹವೆಲ್ಲಾ ಗತಿಸಿ ಹೋದುದರಿಂದ, ಅದಕ್ಕಾಗಿ ತನ್ನ ಕೃತಜ್ಞತಾಭಾವವನ್ನು ಪ್ರದರ್ಶಿಸಿ, ಎರಡನೆಯ ಶ್ಲೋಕದಲ್ಲಿ ತನ್ನ ಆಸ್ತಿಕ್ಯಬುದ್ಧಿಯಿಂದ ಮಾಹಾತ್ಮ್ಯೆಯನ್ನೂ ತಿಳಿದೆನು ಎಂದು ಹೇಳಿ, ಮೂರನೆಯ ಶ್ಲೋಕ ದಲ್ಲಿ ತನಗೆ ಆತನಲ್ಲಿ ವಿಶೇಷ ಭಕ್ತಿಯುಂಟಾಗಿರುವುದರಿಂದ ಅಂತಹ ಪರಮೈಶ್ವರ್ಯರೂಪವನ್ನು ತೋರಿಸು ಎಂದು ಪ್ರಾರ್ಥಿಸುತ್ತಾನೆ. ಹತ್ತನೆಯ ಅಧ್ಯಾಯದಲ್ಲಿ **"ಅಹಂ ಸರ್ವಸ್ಯ ಪ್ರಭವಃ"** (ಗೀ. ೧೦-೮.) ಎಂದಾರಂಭಿಸಿ, ಆ ಅಧ್ಯಾಯಾಂತ್ಯದಲ್ಲಿ **"ಏಕಾಂಶೇನ ಸ್ಥಿತೋ ಜಗತ್"** ಎಂದು ಮುಗಿಸಿ ಹೇಳಿದ ಮಾಹಾತ್ಮ್ಯೆಯನ್ನು ಪ್ರದರ್ಶಿಸುವ ರೂಪವನ್ನು ನೋಡಲು ಅಪೇಕ್ಷಿ ಸುತ್ತಾನೆ ಎಂಬ ಭಾವವು. ಸ್ವಾಮಿಯ ಉದ್ದೇಶ್ಯವು, ಈತನಿಗೆ ಭಕ್ತಿಯೋಗದಲ್ಲಿ ಅಭಿರುಚಿ ಯುಂಟಾಗುವದಕ್ಕಾಗಿ ತನ್ನ ವಿಭೂತಿಯ ಮಾಹಾತ್ಮ್ಯೆಯನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಿ ಹೇಳಿದರು. ಭಗವಂತನೇ ಒಂದು ಉದ್ದೇಶ್ಯವನ್ನು ಮನಸ್ಸಿನಲ್ಲಿಟ್ಟರೆ, ಅದು ಫಲಕಾರಿಯಾಗದೇ ಹೋದೀತೇ? ಒಡನೇ ಆತನ ಮಾಹಾತ್ಮ್ಯೆಯು ಅತ್ಯದ್ಭುತವೆಂದು ತಿಳಿದವನಾಗಿ ಅದನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಬೇಕೆಂಬ ಅಭಿಲಾಷೆಯಿಂದ ಅಂತಹ ವಿಶ್ವರೂಪವನ್ನು ತೋರಿ ಸೆಂದು ಪ್ರಾರ್ಥಿಸುತ್ತಾನೆ. **ತಥೈವ**-ಹಾಗೆಯೇ ಎಂದರೆ ಆ ಪಾರ್ಥನ ಪ್ರಾರ್ಥನೆಗೆ ಅನುಸಾರ ವಾಗಿಯೇ, ಅಥವಾ ಹಿಂದಿನ ಉಪದೇಶಕ್ಕನುಸಾರವಾಗಿಯೇ **ಭಗವತ್ಪ್ರಸಾದಾತ್** - ಭಗ ವಂತನು ಪ್ರಸನ್ನನಾಗಿ ದಯಪಾಲಿಸಿದುದರಿಂದ, **ಅನನ್ತರಂ**-ಒಡನೆಯೇ, **ದ್ರಕ್ಷ್ಯತಿ**-ವಿಶ್ವ ರೂಪವನ್ನು ನೋಡುವನು. ಅದೂ ಈ ೧೧ನೆಯ ಅಧ್ಯಾಯದಲ್ಲೇ ಹೇಳಲ್ಪಡುತ್ತದೆಂಬ **ತಾತ್ಪರ್ಯವು.** ಹಿಂದಿನ ಉಪದೇಶಕ್ಕನುಗುಣವಾಗಿಯೇ ವಿಶ್ವರೂಪ ಪ್ರದರ್ಶನವು ಎಂಬುವನ್ನು ವ್ಯಕ್ತಪಡಿಸುವದಕ್ಕಾಗಿ ಈ ಅಧ್ಯಾಯದ ೧೧ ನೆಯ ಮತ್ತು ೧೩ ನೆಯ ಶ್ಲೋಕಗಳ ಉತ್ತರಾರ್ಧ ಪೂರ್ವಾರ್ಧಗಳನ್ನು ಉದಾಹರಿಸುತ್ತಾರೆ —(೧) **"ಸರ್ವಾಶ್ಚರ್ಯಮಯಂ**-ಸಮಸ್ತ ಆಶ್ಚರ್ಯದಿಂದ

**ಭಾ. ದನಂತರಂ ದ್ರಕ್ಷ್ಯತಿ(೧) "ಸರ್ವಾಶ್ಚರ್ಯಮಯಂದೇವ ಮನನ್ತಂವಿಶ್ವತೋಮುಖಂ। ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ" ಇತಿ ಹಿ ವಕ್ಷ್ಯತೇ—**

**ಅರ್ಜುನ ಉವಾಚ—**

**ಮೂ. ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಯಂ ವಿಗತೋ ಮಮ ॥** ೧.

ಕೂಡಿರುವವನಾಗಿಯೂ, **ದೇವಂ**-ಕೋಟಿಸೂರ್ಯ ಸಮಾನಾದ ಪ್ರಕಾಶವುಳ್ಳವನಾಗಿಯೂ ಅಥವಾ ಲೀಲಾವಿಭೂತಿಯಲ್ಲಿ ಆಸಕ್ತಿಯುಳ್ಳವನಾಗಿಯೂ, **ಅನನ್ತಂ**-ದೇಶ ಕಾಲ ವಸ್ತು ಪರಿಚ್ಛಿತ್ತಿ ರಹಿತನಾಗಿಯೂ, **ವಿಶ್ವತೋಮುಖಮ್** - ಎಲ್ಲಾ ದಿಕ್ಕುಗಳವರೆಗೂ ಇರುವ ಮುಖವುಳ್ಳವನಾಗಿಯೂ, ಮುಖಶಬ್ದವು ಸರ್ವಶರೀರಕ್ಕೂ ಉಪಲಕ್ಷಣವಾಗಿಟ್ಟುಕೊಳ್ಳಬಹುದು, ಆದುದರಿಂದ ವಿಶ್ವಶರೀರಕನಾಗಿ ಎಂಬರ್ಥವು. **ತತ್ರ**-ಅಂತಹ ವಿಶ್ವಶರೀರದಲ್ಲೇ, **ಪ್ರವಿಭಕ್ತಮನೇಕಧಾ-ಬಹುಸ್ಯಾಂ** ಎಂದು ಹೇಳಿದಹಾಗೆ ಅಚೇತನ, ಚೇತನ ಇವುಗಳಿಂದ ಸೇರಿ ವಿವಿಧ ವಿಚಿತ್ರ ರೂಪದಿಂದ ನಾನಾವಿಧಗಳಾಗಿ ವಿಭಾಗಿಸಲ್ಪಟ್ಟ, **ಕೃತ್ಸ್ನಂಜಗತ್**-ಈ ಸಮಸ್ತ ಜಗತ್ತನ್ನೂ, **ಏಕಸ್ಥಂ** - ಎಲ್ಲೋ ಒಂದು ಏಕದೇಶದಲ್ಲಿರುವದಾಗಿ, **ಅಪಶ್ಯತ್** - ಅರ್ಜುನನು ಕಂಡನೆಂದು ಮುಂದೆ ಇರುತ್ತದೆ." **ಇತಿ ಹಿ ವಕ್ಷ್ಯತೇ** - ಹೀಗಲ್ಲವೇ ಮುಂದೆ ಉಪದೇಶಿಸಲ್ಪಡುತ್ತದೆ. ಸರ್ವೇಶ್ವರನಾದ ಶ್ರೀ ಕೃಷ್ಣನು, **"ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ"** (ಗೀ. ೧೦-೮) ಎಂದಾರಂಭಿಸಿ, **"ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್"** (ಗೀ. ೧೦-೪೨) ಎಂದು ಮುಗಿಸಿದ ಉಪದೇಶಕ್ಕನುಗುಣವಾಗಿ ರೂಪವನ್ನು ಕಂಡೆನೆಂದು ತಿಳಿಸುವದಕ್ಕಾಗಿ ಈ ಶ್ಲೋಕಗಳನ್ನು ಉದಾಹರಿಸಿರುತ್ತಾರೆಂದು ತಿಳಿಯತಕ್ಕದ್ದು. ಆದುದರಿಂದ **ತಥೈವ** ಎಂಬ ಪ್ರಯೋಗವು. ಅವತಾರಿಕೆಯಲ್ಲಿ **ಏವಮೇವೇತಿ ನಿಶ್ಚಿತ್ಯ** ಎಂದು ಹೇಳಿರುವದರಿಂದ, ಇದಕ್ಕಿಂತಲೂ ಬೇರೆಯಾದ ಪರಮಾರ್ಥಜ್ಞಾನ ಒಂದುಂಟು ಎಂಬ ವಾದದ ನಿರಸನಕ್ಕಾಗಿ ಹಾಗೆ ಪ್ರಯೋಗವು.

**ಮೂಲಕ್ಕೆ ಅರ್ಥವು**—ವಿಶೇಷ ಪ್ರಾರ್ಥನೆಗೆ ಪೂರ್ವಭಾವಿಯಾಗಿ, ಹಿಂದೆ ಇದುವರೆಗೂ ಹೊಂದಿದ ಆತ್ಮಸ್ವರೂಪೋಪದೇಶಕ್ಕಾಗಿ, ಕೃತಜ್ಞತಾ ಪ್ರದರ್ಶನವು ಆವಶ್ಯಕವೆಂದು ಭಾವಿಸಿ, ಆತನ ಕೃಪಾಪ್ರಭಾವವನ್ನು ಕೊಂಡಾಡಿ, ಈ ಉಪದೇಶದಿಂದ ತಮಗೆ ಮಹತ್ತಾದ ಪ್ರಯೋಜನವು ಯಾವುದೆಂದರೆ ದೇಹಾತ್ಮಭ್ರಾಂತಿಯೇ ಮೊದಲಾದ ಭ್ರಮೆಗಳ ಸಂಪೂರ್ಣವಾದ ನಾಶವು ಎಂದು ಹೇಳುತ್ತಾನೆ. ಮುಂದಿನ ಎರಡು ಶ್ಲೋಕಗಳಿಂದ ಆಸ್ತಿಕ್ಯವೂ, ಭಕ್ತಿಯೂ ತನಗುಂಟೆಂದು ತೋರಿಸುತ್ತಾನೆ. **ಮದನುಗ್ರಹಾಯ** - ಹಿಂದೆ **ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ** ಎಂದು ಶ್ರೀ ಕೃಷ್ಣನೇ ಹೇಳಿರುವದನ್ನನುಸರಿಸಿಯೇ **ಮದನುಗ್ರಹಾಯ** ಎಂದು ಹೇಳುತ್ತಾನೆ —ನನ್ನನ್ನು ಎಂದರೆ ನನ್ನಂಥಾವರನ್ನು ಅನುಗ್ರಹಿಸುವದಕ್ಕಾಗಿಯೇ, **ಪರಮಂ ಗುಹ್ಯಂ–"ರಾಜವಿದ್ಯಾ ರಾಜಗುಹ್ಯಂ"** ಎಂದಾರಂಭಿಸಿ, ಬ್ರಹ್ಮಪ್ರಾಪ್ತಿಗೆ ಸಾಧನಭೂತವಾದ ನಿರುಪಮವಾದ ಪರಮಗುಹ್ಯವಾಗಿ ಪರಬ್ರಹ್ಮೋಪಾಸನರೂಪವಾದ,

(೧) ಗೀ. ೧೧-೧೧-೧೩.

**ಅಧ್ಯಾತ್ಮ ಸಂಜ್ಞಿತಮ್** - ಜೀವಸ್ವರೂಪಾದಿಗಳ ವಿಷಯದಲ್ಲಿ ಚನ್ನಾಗಿ ಉಪದೇಶವುಂಟಾಗಿ ಬ್ರಹ್ಮಪ್ರಾಪ್ತಿಯನ್ನುಂಟುಮಾಡುವ ಬ್ರಹ್ಮವಿದ್ಯೆಯೆಂದು ಹೇಳಿಸಿಕೊಳ್ಳುವುದು, **ಯತ್**-ಯಾವ ಮಹತ್ತಾದ, **ವಚಃ** - ಉಪದೇಶವು, **ತ್ವಯಾ ಉಕ್ತಂ** - ಭಕ್ತಾನುಗ್ರಹವೇ ವ್ರತವಾಗಿರುವ ನಿನ್ನಿಂದ ಹೇಳಲ್ಪಟ್ಟಿತೋ, **ತೇನ**-ಅಂತಹ ಪೂರ್ವಷಟ್ಕದ ಮತ್ತು ತದನಂತರ ಮಾಡಿದ ಚರಮೋಪದೇಶದಿಂದ, **ಮಮ**-ಅಜ್ಞಾನದಲ್ಲಿದ್ದ ನನ್ನ, **ಅಯಂ ಮೋಹಃ**-ಈ ಭ್ರಮೆಯು, **ವಿಗತಃ**-ದೂರೀಕೃತವಾಯಿತು. ಅವಿವೇಕಜ್ಞಾನವು ತೊಲಗಿತು. ಶಾಸ್ತ್ರಜನ್ಯಜ್ಞಾನ ವಿವೇಕ ಜನ್ಯಜ್ಞಾನಗಳು ಉಂಟಾದವು ಎಂಬ ಭಾವವು. ಎರಡು ಭ್ರಮೆಗಳಿಗೆ ಅರ್ಜುನನು ಒಳಗಾಗಿದ್ದನು, ಆ ಎರಡು ಭ್ರಮೆಗಳು ಯಾವುವೆಂದರೆ—"**ಅನಾತ್ಮನ್ಯಾತ್ಮಬುದ್ಧಿರ್ಯಾ ಅಸ್ವೇ ಸ್ವಮಿತಿ ಯಾ ಮತಿಃ**" (೧) ಆತ್ಮಾ ಅಲ್ಲದುದರಲ್ಲಿ ಆತ್ಮಾ ಎಂಬ ಬುದ್ಧಿಯು (೨) ತನ್ನದಲ್ಲದುದ ರಲ್ಲಿ **ತನ್ನ**ದೆಂಬ **ಬುದ್ಧಿ**ಯು; ಇವುಗಳನ್ನು (೧) ದೇಹಾತ್ಮಭ್ರಾಂತಿಯೆಂದೂ (೨) ಸ್ವತಂತ್ರಾತ್ಮಭ್ರಾಂತಿಯೆಂದೂ ಹೇಳುವರು. ದೇಹಾತ್ಮ ಭ್ರಾಂತಿಯನ್ನು ಎರಡನೆಯ ಅಧ್ಯಾಯ ದಲ್ಲಿ "**ನತ್ವೇವಾಹಂ ಜಾತುನಾಸಂ**" ಎಂದಾರಂಭಿಸಿ ಉಪದೇಶಿಸಿ ಹೋಗಲಾಡಿಸಿದರು. (೩) ಈಗ ವಿಭೂತಿಯೆಲ್ಲಾ ತನ್ನ ನಿಯಾಮ್ಯವರ್ಗವು, ಎಲ್ಲರೂ ಸರ್ವೇಶ್ವರನಿಗೆ ಅಧೀನರಾದ ಸತ್ತಾ ಸ್ಥಿತಿ ಪ್ರವೃತ್ತಿಗಳುಳ್ಳವರು ಎಂದು ಹೇಳಿದುದರಿಂದ ತಾನು ಸ್ವತಂತ್ರನಲ್ಲವು ತಾನೂ, ತನಗೆ ಸೇರಿದ ನಿಯಾಮ್ಯವರ್ಗವೆಲ್ಲವೂ ಪರಮಾತ್ಮನವೇ ಆದುದರಿಂದ ಇವರು ತನ್ನವರು ಬಂಧುಗಳು ಎಂಬ ಭ್ರಮೆಯೂ ತೊಲಗಿತು ಎಂಬುದು ತೋರಿಬರುತ್ತದೆ ಇನ್ನೊಂದು ಮೂರನೆಯ ಭ್ರಮೆಯೂ ಲೋಕದಲ್ಲಿ ಉಂಟು. ಅದು ಪರಮಭಕ್ತನಾದ ಅರ್ಜುನನಲ್ಲಿರಲಿಲ್ಲವು. ಆದರೂ ಲೋಕದಲ್ಲಿ ವಿಶೇಷವಾಗಿ ಆ ಭ್ರಮೆಯೂ ಉಂಟು ಆದುದರಿಂದ ಪ್ರಾಸಙ್ಗಿಕವಾಗಿ ಹೇಳುವೆವು. ಇದು ಯಾವುದೆಂದರೆ ತಾನೇ ಪರಮಾತ್ಮನೆಂಬ ಭ್ರಮೆಯು. ಇದನ್ನು ಶ್ರೀ ಕೃಷ್ಣ ಭಗವಾನರವರು ಅನೇಕ ಕಡೆಗಳಲ್ಲಿ ಹೋಗಲಾಡಿಸಿರುತ್ತಾರೆ. ಮೊದಲಿನ ಶ್ಲೋಕ ವಾದ "**ನತ್ವೇವಾಹಂ**" ಎಂಬಲ್ಲೂ, ಜೀವಾತ್ಮನನ್ನು "**ಮಮ ಪರಾಪ್ರಕೃತಿ**" ಎಂದು ಹೇಳಿ ಕೊಂಡಿರುವದರಿಂದಲೂ, ಜೀವಾತ್ಮರನ್ನು ಕ್ಷರಾಕ್ಷರ ಶಬ್ದಗಳಿಂದ ವಿವೇಕಿಸಿ "**ಉತ್ತಮಃ ಪುರುಷಸ್ತ್ವನ್ಯಃ**" ಎಂದು ಮುಂದೆ ಹೇಳುವದರಿಂದಲೂ, "**ಅಹಮಾತ್ಮಾ ಗುಡಾಕೇಶ**" ಎಂಬಲ್ಲಿ ಎಲ್ಲಕ್ಕೂ ಎಂದರೆ ತನಗೆ ಶರೀರಗಳಾದ ಎಲ್ಲಾ ಚಿದಚಿತ್ತುಗಳಿಗೂ ಆತ್ಮಾವೆಂದು ಹೇಳಿ ಕೊಂಡಿರುವದರಿಂದಲೂ, **ಮತ್ತಃ ಸರ್ವಂ ಪ್ರವರ್ತತೇ** ಇತ್ಯಾದಿ ಪ್ರಯೋಗಗಳಿಂದಲೂ ಜೀವ ಪರಮಾತ್ಮೈಕ್ಯ ಭ್ರಮವನ್ನು ಇತರರಲ್ಲಿ ಹೋಗಲಾಡಿಸಿರುತ್ತಾರೆ ಇಲ್ಲಿ ಅರ್ಜುನನು ಮಾತ್ರವೇ ಉಪದೇಶಕ್ಕೆ ಅರ್ಹನಾದ ಅಧಿಕಾರಿಯಲ್ಲವು. ಎಲ್ಲರೂ ಅಧಿಕಾರಿಗಳಾದುದರಿಂದ ಎಲ್ಲರಿಗೂ ಅನ್ವಯಿಸುವಹಾಗೆ ಎರಡು ವಿಧ ಉಪಾಯಗಳೂ ಇಲ್ಲಿಯೇ ಉಪದಿಷ್ಟವು. ಆದುದರಿಂದ ಸಾರ್ವತ್ರಿಕವಾಗಿ ಗೀತೋಪದೇಶಕ್ಕೆ ಎಲ್ಲರೂ ಅಧಿಕಾರಿಗಳೇ. ಶಕ್ತಿಯುಳ್ಳ ಬ್ರಾಹ್ಮಣಾದಿ ತ್ರಿವರ್ಣಕ್ಕೆ ಉಪಾಸನೋಪದೇಶವು. ಮಿಕ್ಕವರಿಗೆಲ್ಲಾ ಲಘೂಪಾಯವಾದ ಶರಣಾಗತಿಯ ಉಪದೇಶವು. ಹೀಗೆ ಗೀತಾಗ್ರಂಥವು ಎರಡು ಉಪಾಯಗಳನ್ನು ಉಪದೇಶಿಸಿರುವದರಿಂದ ಎಲ್ಲರಿಗೂ ಉಪ ಯುಕ್ತವಾದುದೇ ಎಂದು ಭಾವಿಸತಕ್ಕದ್ದು. ಲಘೂಪಾಯವಾದ ಭರನ್ಯಾಸವು ಎಲ್ಲಿ ಹೇಳಲ್ಪಟ್ಟಿ ರುತ್ತದೆ? ಎಂದರೆ ಪ್ರಾಪ್ತಸ್ಥಳಗಳಲ್ಲಿ ಹಿಂದೆಯೂ ಹೇಳಿರುತ್ತೇವೆ. ಮುಂದೆಯೂ ತಿಳಿಸುವೆವು. **ಅರ್ಜುನನೂ** ವಿಶ್ವರೂಪದರ್ಶನಾನಂತರ, "**ಸನಾತನಸ್ತ್ವಂ ಪುರುಷೋ ಮತೋ ಮೇ**" ಎಂದು **ಆತನು ಪರಮಪುರುಷನೆಂದೂ, ಆತನ ವಿಭೂತಿಯ ಏಕದೇಶಕ್ಕೆ** ತಾನು ಸೇರಿದವನೆಂದೂ, **ಹೇಳಿ ಕೊಂಡಿರುತ್ತಾನೆ. "ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ"**(ಗೀ.೧೫-೭)

ಎಂಬಲ್ಲೂ, ಮತ್ತು ಸರ್ವ ಪ್ರವೃತ್ತಿಗೂ, " **ಅಧಿಷ್ಠಾನಂ ತಥಾ ಕರ್ತಾ** " ಎಂದಾರಂಭಿಸಿ, **ದೈವಂ ಚೈವಾತ್ರ ಪಂಚಮಂ** ಎಂದು ಮುಗಿಸಿ, ಇಬ್ಬರೂ ಕಾರಣವೆಂದು ಹೇಳಿ, ಜೀವಪರಮಾತ್ಮ ಭೇದವನ್ನು ಸ್ಫುಟವಾಗಿ ತಿಳಿಸುತ್ತಾರೆ. ಚರಮಶ್ಲೋಕದಲ್ಲೂ **ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎಂದು ಭೇದವೇ ಹೇಳಲ್ಪಟ್ಟಿರುತ್ತದೆ. ನನ್ನೊಂದಿಗೆ ಐಕ್ಯಹೊಂದುವಿ ಎಂದು ಎಲ್ಲಿಯೂ ಹೇಳಲಿಲ್ಲವು. **ಮಮ ಸಾಧರ್ಮ್ಯಮಾಗತಾಃ** ಎಂದು ಸಮಾನ ಧರ್ಮತ್ವ ವನ್ನು ಮುಕ್ತಿದೆಶೆಯಲ್ಲಿ ಹೊಂದುವರು ಎಂದು ಹೇಳಿರುವದರಿಂದ, ಐಕ್ಯವೆಂಬುದು ಪರಮಾರ್ಥ ವಲ್ಲವೆಂಬುದು ಗೀತಾಶಾಸ್ತ್ರದಲ್ಲಿ ಸ್ಫುಟವು. ಅರ್ಜುನನು ತನಗೆ ಜ್ಞಾತಿಗಳಾದ ಗುರುಗಳಾದ ಮತ್ತು ಇತರ ಬಂಧುಗಳಾದವರ ಶರೀರ ಹನನದಿಂದ ಅವರುಗಳ ಆತ್ಮಗಳೇ ನಷ್ಟ ಹೊಂದುತ್ತವೆ ಎಂದು ಭಾವಿಸಿ, ಗಾಂಡೀವವನ್ನು ಬಿಸಾಡಿದ್ದನು. ಈಗ ಜೀವಾತ್ಮರುಗಳಿಗೆ ಎಂದಿಗೂ ನಾಶ ವಿಲ್ಲವು, ಬೇರೆಬೇರೆ ಹೊಸ ಶರೀರಗಳನ್ನು ಹೊಂದಬಹುದು ಎಂಬ ಉಪದೇಶದಿಂದ ಜೀವಾತ್ಮ ಭ್ರಮವು ತೊಲಗಿತು. ಮತ್ತು ಇವರುಗಳೆಲ್ಲಾ ತನ್ನ ನೆಂಟರಿಷ್ಟರು, ಗುರುಗಳು ಎಂದು ಭಾವಿ ಸಿದ್ದನು. ಈಗ ಎಲ್ಲವೂ ಸರ್ವೇಶ್ವರನ ವಿಭೂತಿಯೆಂದೂ, ತದಾಯತ್ತ ಸ್ವರೂಪಸ್ಥಿತಿ ಪ್ರವೃತ್ತಿ ಯುಳ್ಳವರೆಂದೂ, ಎಲ್ಲವೂ ಸರ್ವೇಶ್ವರನ ಸಙ್ಕಲ್ಪಾನುಗುಣವಾಗಿ ನಡೆಯುತ್ತದೆಂದೂ ಆಯಿತೋ ಆಗ ಇವರು ನನ್ನ ಅನುಬಂಧಿಗಳು ಗುರುಗಳು ಇತ್ಯಾದಿ ಭ್ರಮೆಯೂ ತೊಲಗಿತು. ಹೀಗೆ ಅರ್ಜುನನಿಗಿದ್ದ ಎರಡು ವಿಧ ಭ್ರಮೆಗಳೂ ತೊಲಗಿದವು ಎಂಬ ಭಾವವು. ಶ್ರೀ ದೇಶಿಕರವರು ಈ ಭ್ರಮೆಗಳು ಹೇಗೆ ತೊಲಗುತ್ತವೆ ಎಂದರೆ ಹೇಳುತ್ತಾರೆ.—ಚಿತ್, ಅಚಿತ್, ಈಶ್ವರರಾದ ಮೂರು ಸತ್ಯಗಳಾದ ತತ್ತ್ವಗಳ ಸ್ವರೂಪ ಸ್ಥಿತಿ ಪ್ರವೃತ್ತಿಗಳ ಸರಿಯಾದ ಜ್ಞಾನ ಉಂಟಾದರೆ, ಎಲ್ಲಾ ಭ್ರಮೆಯೂ ತೊಲಗುತ್ತವೆಂದು ಈ ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ.

**ಪ್ರಕೃತ್ಯಾತ್ಮಭ್ರಾಂತಿರ್ಗಳತಿ ಚಿದಚಿಲ್ಲಕ್ಷಣಧಿಯಾ ।**
**ತಥಾ ಜೀವೇಶೈಕ್ಯಪ್ರಭೃತಿ ಕಲಹಸ್ತದ್ವಿಭಜನಾತ್ ॥** ಎಂಬುದು ಶ್ಲೋಕವು.

೧. ದೇಹವೇ ಆತ್ಮಾ ಎಂಬ ಭ್ರಾಂತಿಯು, ಜಡವಾದ ಅಶಾಶ್ವತವಾದ ದೇಹಕ್ಕಿಂತಲೂ, ಚಿದ್ರೂಪನಾಗಿರುವ ಜೀವಾತ್ಮನು ಸಙ್ಕಲ್ಪ, ಪ್ರಯತನಾದಿಗಳಿಗೆ ಬೇಕಾದ ಜ್ಞಾನವಿಶಿಷ್ಟನೆಂಬ ಜ್ಞಾನದಿಂದ ನಾಶವಾಗುತ್ತದೆ.

೨. ಜೀವ ಪರಮಾತ್ಮೈಕ್ಯ ಭ್ರಾಂತಿಯು, ದಾಸನಾಗಿ ಅಣುವಾದ ಜೀವನೂ, ವಿಭು ವಾಗಿ ಸರ್ವವನ್ನೂ ವ್ಯಾಪಿಸುವ ಶಕ್ತಿಯುಳ್ಳ ಈಶನಾದ ಸರ್ವೇಶ್ವರನೂ ಬೇರೆ ಎಂದು ಹೇಳುವ ಶ್ರುತಿ, ಸ್ಮೃತಿ, ಪುರಾಣೇತಿಹಾಸ ವಾಕ್ಯಗಳ ಜ್ಞಾನದಿಂದ ನಾಶವಾಗುತ್ತದೆ. ತನ್ನ ಸತ್ತಾಸ್ಥಿತಿ ನಿಯಮನ ಪ್ರವೃತ್ತಿಗಳಿಗೆ ಪರಮಾತ್ಮನು ಆವಶ್ಯಕವೆಂಬ ಜ್ಞಾನದಿಂದಲೂ ತೊಲಗುತ್ತದೆ.

೩. ಸ್ವತಂತ್ರಾತ್ಮಭ್ರಾಂತಿಯು, ಯಾವಾಗ ಜೀವಾತ್ಮನಾದ ತಾನು ಪರಮಾತ್ಮನಿಗೆ ಅಧೀನವಾದ ಸ್ವರೂಪಸ್ಥಿತಿ ಪ್ರವೃತ್ತಿಗಳುಳ್ಳವನೆಂಬ ಜ್ಞಾನವುಂಟಾಗುತ್ತದೋ, ಆಗ ಇದೂ ನಾಶವಾಗುತ್ತದೆ.

ಈಗ ಶ್ರೀ ಕೃಷ್ಣಭಗವಾನರವರ ನಿರ್ಹೇತುಕ ಕೃಪಾಮೂಲಕವಾಗಿ ಲಭಿಸಿದ ಉಪದೇಶ ಮೂಲಕ ಅಚಿತ್ತತ್ತ್ವ, ಚಿತ್ತತ್ತ್ವ, ಈಶ್ವರ ತತ್ತ್ವಗಳ ಯಥಾರ್ಥವಾದ ಜ್ಞಾನವು, ಉಂಟಾದುದ ರಿಂದ **ಮೋಹೋಯಂ ವಿಗತೋಮಯಾ**—ಈ ಭ್ರಮೆಗಳಿಂದುಂಟಾದ ಯುದ್ಧಮಾಡುವುದು ಅಧರ್ಮವೆಂಬ ಅಭಿಪ್ರಾಯವು ದೂರೀಕೃತವಾದುದೆಂಬ ಭಾವವು.

**ಭಾಷ್ಯಾರ್ಥವು :—ದೇಹಾತ್ಮಾಭಿಮಾನ ರೂಪಮೋಹೇನ**—ದೇಹವೇ ಆತ್ಮಾ ಎಂಬ ಅಭಿಮಾನರೂಪವಾದ ಅಜ್ಞಾನದಿಂದ **ಮೋಹಿತಸ್ಯ — ಮೋಹಗೊಂಡ, ಭ್ರಾಂತಿಯನ್ನು**

**ಭಾ.** ದೇಹಾತ್ಮಾಭಿಮಾನ ರೂಪಮೋಹೇನ ಮೋಹಿತಸ್ಯ - ಮಮಾನುಗ್ರಹೈಕ ಪ್ರಯೋಜನಾಯ, ಪರಮಂಗುಹ್ಯಂ - ಪರಮರಹಸ್ಯಂ, ಅಧ್ಯಾತ್ಮಸಂಜ್ಞಿತಂ - ಆತ್ಮನಿವಕ್ತವ್ಯಂ, ವಚಃ(೧)"ನತ್ವೇವಾಹಂ ಜಾತುನಾಸಂ" ಇತ್ಯಾದಿ, (೨)"ತಸ್ಮಾದ್ಯೋಗೀ ಭವಾರ್ಜುನ" ಇತ್ಯೇತದನ್ತಂ ಯತ್ತ್ವಯೋಕ್ತಮ್, ತೇನಾಯಂ ಮಮಾತ್ಮವಿಷಯೋ ಮೋಹ ಸ್ಸರ್ವೋ ವಿಗತೋ - ದೂರತೋ ನಿರಸ್ತಃ ॥೧॥

---

ಹೊಂದಿರುವ, **ಮಮ**-ವಿಷಾದದಿಂದ ಪೀಡಮಾನನಾಗಿದ್ದ ನನ್ನ. **ಅನುಗ್ರಹೈಕ ಪ್ರಯೋಜನಾಯ**-ಅನುಗ್ರಹವೇ ಮುಖ್ಯ ಪ್ರಯೋಜನಕ್ಕಾಗಿ, ಇದು ಇಲ್ಲಿ **"ಮದನುಗ್ರಹಾಯ"** ಎಂಬುದರ ವ್ಯಾಖ್ಯಾನವು, **ಪರಮಂ ಗುಹ್ಯಂ** - ಅತ್ಯಂತ ರಹಸ್ಯವಾದ, **ಅಧ್ಯಾತ್ಮಸಂಜ್ಞಿತಂ**-ಎಂದರೆ, **ಆತ್ಮನಿವಕ್ತವ್ಯಂ**-ಶರೀರದಲ್ಲಿರುವ ಆತ್ಮವಿಷಯದಲ್ಲಿ ಹೇಳಬೇಕಾದ, **ವಚಃ**-ಮಾತು, ಉಪದೇಶವು; ಹಾಗೆ ಹೇಳಿದ ಉಪದೇಶವು ಯಾವುದೆಂದರೆ ತಿಳಿಸುತ್ತಾರೆ.—(೧) **"ನತ್ವೇವಾಹಂ ಜಾತುನಾಸಂ"** ಎಂಬುದನ್ನೇ ಮೊದಲು ಮಾಡಿಕೊಂಡು, (೨) **"ತಸ್ಮಾದ್ಯೋಗೀ ಭವಾರ್ಜುನ"** ೬ನೆಯ ಅಧ್ಯಾಯದ ೪೬ನೆಯ ಶ್ಲೋಕದ, **ಇತ್ಯೇತದನ್ತಂ** - ಎಂಬುದರ ಕೊನೆಯವರೆಗೂ, **ಯತ್ತ್ವಯಾ** - ಯಾವುದು ನಿನ್ನಿಂದ ಪೂರ್ವಷಟ್ಕದಲ್ಲಿ ಹೇಳಲ್ಪಟ್ಟಿತೋ, **ತೇನ** - ಆ ಉಪದೇಶದಿಂದ, **ಅಯಂ**-ಈ, **ಮಮ ಆತ್ಮವಿಷಯಃ** - ನನ್ನ ಆತ್ಮವಿಷಯವಾದ, **ಸರ್ವಃ ಮೋಹಃ** ಸಮಸ್ತ ಅಜ್ಞಾನವು, **ವಿಗತಃ** ಎಂದರೆ **ದೂರತಃ ನಿರಸ್ತಃ** – ದೂರವಾಗಿ ನಿರಸನ ಮಾಡಲ್ಪಟ್ಟಿತು, ನಿರ್ಮೂಲಮಾಡಲ್ಪಟ್ಟಿತೆಂಬ ಭಾವವು; ಸಸ್ಯದ ಮೂಲವು ಸ್ವಲ್ಪ ನಿಂತರೆ ಪುನಃ ಚಿಗುರುವ ಸಂಭವವುಂಟು; ನಿರ್ಮೂಲಮಾಡಲ್ಪಟ್ಟು ದೂರೀಕೃತವಾದುದರಿಂದ ಪುನಃ ಸಂಶಯಕ್ಕೆ ಅವಕಾಶವೇ ಇಲ್ಲವೆಂದು. **ವಿಗತಃ** - ಎಂಬಲ್ಲಿರುವ ವಿ ಎಂಬ ಉಪಸರ್ಗಾಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಇಲ್ಲಿ ಭ್ರಮದಲ್ಲಿ **ದೇಹಾತ್ಮಭ್ರಮ** ವೆಂದು ಮಾತ್ರ ಹೇಳಿದುದು, ಆತ್ಮಾ ಯಾವುದು ಎಂಬ ವಿಷಯದಲ್ಲಿ ಇತರರು ಭ್ರಮಿಸಬಹುದಾದ ಎಲ್ಲಕ್ಕೂ ಉಪಲಕ್ಷಣವನ್ನಾಗಿ ಇಟ್ಟುಕೊಳ್ಳತಕ್ಕದ್ದು. **"ದೇಹೇಂದ್ರಿಯ ಮನಃ ಪ್ರಾಣ ಧೀಭ್ಯೋಽನ್ಯೋಽನನ್ಯಸಾಧನಃ"** ಎಂಬ ಶ್ಲೋಕದಲ್ಲಿ ಹೇಳಿರುವ ಹಾಗೆ ದೇಹವೇ ಆತ್ಮಾ ಎಂಬ, ಇಂದ್ರಿಯಗಳೇ ಆತ್ಮಾ ಎಂಬ, ಮನಸ್ಸೇ ಆತ್ಮಾ ಎಂಬ, ಬುದ್ಧಿಯೇ ಆತ್ಮಾ ಎಂಬ ಎಲ್ಲಾ ಭ್ರಮಗಳೂ **ದೇಹಾತ್ಮಭ್ರಮ** ಶಬ್ದದಿಂದ ಉಪಲಕ್ಷಣವಾಗಿ ಹೇಳಲ್ಪಟ್ಟವು. ಎಲ್ಲಕ್ಕೂ ಬೇರೆಯಾದವನು ಆತ್ಮಾ ಎಂಬ ವಿವೇಕವನ್ನು ಶ್ರೀ ಕೃಷ್ಣ ಭಗವಾನರವರು ತಮ್ಮ ಉಪದೇಶದಿಂದ ಉಂಟುಮಾಡಿದರು ಎಂಬ ಭಾವವು. ಭ್ರಮಗಳು ಮುಖ್ಯವಾಗಿ ಮೂರಿರುವಾಗ ಈ ಭ್ರಮ ಒಂದನ್ನೇ ಏಕೆ ಹೇಳಿದರು? ಎಂದರೆ ಯಾವಾಗ ಈ ಭ್ರಮ ಉಂಟಾಯಿತೋ ಯಾವಾಗ ದೇಹಾತಿರಿಕ್ತವಾಗಿ ಯಾವುದೂ ಇಲ್ಲವೆಂದಾಯಿತೋ, ಪರಮಾತ್ಮನೆಂದು ಬೇರೆ ಒಂದಿಲ್ಲವೆಂಬ ಭ್ರಮೆಯು ಒಡನೆ ತಲೆದೋರುವದು; ತನಗೆ ಮೇಲೆ ಸ್ವಾಮಿಯಾಗಿ ಯಾರೂ ಇಲ್ಲವೆಂದಾಯಿತೋ, ತಾನು ಸ್ವತಂತ್ರನೆಂಬ ಭ್ರಾಂತಿಯೂ ನೆಲಗೊಳ್ಳುತ್ತದೆ. ಆದುದರಿಂದ ಸರ್ವ ಭ್ರಮಗಳಿಗೂ ಇದು ಮೂಲವಾದುದರಿಂದ, ದೇಹಾತ್ಮಾಭಿಮಾನರೂಪ **ಮೋಹ** ವೆಂದು ಒಂದನ್ನೇ ಹೇಳಿದರು. ಇದು ಹೋದರೆ, ಆದ

---

(೧) ಗೀ. ೨-೧೨. (೨) ಗೀ. ೬-೪೬.

ರೊಂದಿಗೆ ಇನ್ನೆರಡೂ ಹೋಗುತ್ತವೆಂದು ತಿಳಿಸುವದಕ್ಕಾಗಿ **ಮೋಹಸ್ಸರ್ವಃ** ಎಂಬ ಪ್ರಯೋಗವು. ದೇಹವೇ ಬೇರೆ. ಆತ್ಮನೇ ಬೇರೆ, ಆತ್ಮನು ದೇಹವಿಯೋಗವಾದಹಾಗೆಲಾ **"ಅನ್ಯಾನಿ ಸಂಯಾತಿ ನವಾನಿ ದೇಹೀ"** ಹೊಸ ಹೊಸ ಶರೀರಗಳನ್ನು ಹೊಂದುವನು; ಆತ್ಮ **"ಅವಿನಾಶೀ"** ಎಂದೂ **"ಅಚ್ಛೇದ್ಯ"** ನೆಂದೂ. **"ನಿತ್ಯಸ್ಸರ್ವಗತಸ್ಸ್ಥಾಣುಃ ಅಚಲೋಽಯಂ ಸನಾತನಃ"** ಎಂದೂ ಯಾವಾಗ ಉಪದೇಶವು ದೊರಕಿತೋ, ಆಗಲೇ ಈ **ಮೋಹವು** ದೂರೀಕೃತವಾಯಿತೆಂಬ ಭಾವವು. ಪರಮಾತ್ಮನು ನನಗೆ ಆತ್ಮ, ನಿನ್ನ ನಿಯಾಮಕನೆಂದು. ನನ್ನ ಸತ್ತಾಸ್ಥಿತಿ, ಪ್ರಯತ್ನಾದಿಗಳೆಲ್ಲಾ ಪರಮಾತ್ಮನಾದ ನಿನ್ನ ಅಧೀನವೆಂದು. ಯಾವಾಗ ಉಪದೇಶ ಲಭಿಸಿತೋ, ಯಾವಾಗ ಹೀಗೆ ದೇಹವಾದ ಜಡಪ್ರಕೃತಿಯೇನು, ಆತ್ಮಸ್ವರೂಪವೇನು, ಈಶ್ವರನೇನು, ಹೀಗೆ ಮೂರು ತತ್ತ್ವಗಳ ಸ್ವರೂಪಸ್ವಭಾವಾದಿಗಳ ಯಥಾರ್ಥ ಉಪದೇಶಗಳು ನನಗೆ ಪರಮ ಕೃಪೆಯಾಸಿನ್ನಿಂದ ಲಭಿಸಿತೋ, ಆಗ ಸಮಸ್ತ ಭ್ರಮವೂ **"ಭ್ರಮಸ್ಸರ್ವಃ"** ತೊಲಗಿತು. ಅಥವಾ **ಭ್ರಮಸ್ಸರ್ವಃ**-ಭ್ರಮವೂ ಸಂಪೂರ್ಣವಾಗಿ ವಿಶೇಷವಾಗಿಯೂ, **ವಿಗತಃ**-ನಿರ್ಮೂಲವಾಗಿಯೂ, ಸಮಾಸವಾಗಿ ದೂರಕ್ಕೆ ತೊಲಗಿತು ಎಂದು ವ್ಯಾಖ್ಯಾನಮಾಡಿರುತ್ತಾರೆ. **ಮದನುಗ್ರಹಾಯ** ಎಂದು ಇಷ್ಟುಮಾತ್ರ ಮೂಲದಲ್ಲಿರುವುದಕ್ಕೆ **ಮಮಾನುಗ್ರಹೈಕ ಪ್ರಯೋಜನಾಯ** ಎಂದು ಅವಧಾರಣದೊಂದಿಗೆ ಏಕಶಬ್ದದಿಂದ ಕೂಡಿದ ವ್ಯಾಖ್ಯಾನವನ್ನು **ಹೇಗೆ ಮಾಡಿದರು ? ಎಂದರೆ,** ದುಷ್ಟರಾದ ದುರ್ಯೋಧನಾದಿಗಳು ಹೇಗಾದರೂ ಹತರಾಗಬೇಕು, ತಾನಾದರೋ ಯುದ್ಧವೇ ಮಾಡುವುದಿಲ್ಲವೆಂದು ದುರ್ಯೋಧನನಿಗೆ ವಾಗ್ದಾನಮಾಡಿದ್ದಾಯಿತು. ಆದುದರಿಂದ ಯುದ್ಧ**ಪ್ರೋತ್ಸಾಹನಕ್ಕಾಗಿ ಮಾತ್ರ ಇವೆಲ್ಲಾ** ವಂಚಿಸಿ ಹೇಳಿದ ಉಪದೇಶವೆಂಬ ಭ್ರಮೆಯೂ ಕೂಡ **ಹೋಯಿತು ಎಂಬುದು** ತಾತ್ಪರ್ಯವು. ನೀನು ಹೇಳಿರುವದೆಲ್ಲಾ ಸತ್ಯವೇ ಎಂಬ ಆಸ್ತಿಕ್ಯಬುದ್ಧಿಯೂ ನೆಲಗೊಂಡಿರುತ್ತದೆಂಬುದೂ ಮೂರುಶ್ಲೋಕಗಳಿಂದಲೂ ಸೂಚಿತವು. ಅರ್ಜುನನು ಆರ್ತ ಧರ್ಮಪ್ರಿಯನೆಂದು ಹೇಳಿರುವದರಿಂದ ಅಂತವನಿಗೆ ಅನುಗ್ರಹಮಾಡುವದೇ ಅವತಾರಿಯಾದ **ಈತನ ಪ್ರಥಮೋದ್ದೇಶವೆಂದು "ಪರಿತ್ರಾಣಾಯ ಸಾಧೂನಾಂ"** ಎಂಬಲ್ಲಿ ಹೇಳಿರುವದನ್ನು ಜ್ಞಾಪಿಸುವದಕ್ಕಾಗಿ **ಮಮಾನುಗ್ರಹೈಕಪ್ರಯೋಜನಾಯ** ಎಂಬ ಭಾಷ್ಯವು ; ಅವತಾರಗಳ ಮೂರು ಉದ್ದೇಶಗಳಲ್ಲಿ **ಸಾಧುಪರಿತ್ರಾಣವೇ** ಮುಖ್ಯೋದ್ದೇಶವು. ದುಷ್ಟನಿಗ್ರಹವೂ, ಅದಕ್ಕಾಗಿ ಯುದ್ಧಪ್ರೋತ್ಸಾಹವೂ, ಎರಡನೆಯ ಉದ್ದೇಶವು ; ಇತರರಿಗೆ ಧರ್ಮೋಪದೇಶವು ಮೂರನೆಯ ಉದ್ದೇಶವು. ಆದುದರಿಂದ ಅರ್ಜುನನು ಹೇಳುತ್ತಾನೆ — ಯುದ್ಧ ಪ್ರೋತ್ಸಾಹಕ್ಕಾಗಿ **ಮಾತ್ರ**ವೇಯಾಗಲಿ, ಅಥವಾ ಕೇವಲ ಇತರ ಲೋಕೋಪಕಾರಕ್ಕಾಗಲಿ ಈ ಗೀತೋಪದೇಶವೆಂದು ಭಾವಿಸಲಾರೆನು. ನನ್ನಲ್ಲಿ ನಿನಗಿರುವ ಅತ್ಯರ್ಥ ಕೃಪಾವಾತ್ಸಲ್ಯಾದಿಗಳನ್ನು ನೋಡಿದರೆ, ನನ್ನ ಅನುಗ್ರಹಕ್ಕಾಗಿಯೇ ಈ ಉಪದೇಶವೆಂದು ಭಾವಿಸುವೆನೆಂದು ಅರ್ಜುನನು ಹೇಳಿರಬೇಕೆಂದು **ಮಮಾನುಗ್ರಹೈಕ ಪ್ರಯೋಜನಾಯ** ಎಂಬ ವ್ಯಾಖ್ಯಾನವು. ಇದರಿಂದ ನಿನ್ನ ಉಪದೇಶದಲ್ಲಿ ಯುದ್ಧವನ್ನು ಹೇಗಾದರೂ ಮಾಡಿಸಬೇಕೆಂದು ವಂಚಿಸಿದ ಯುಕ್ತಿಯಾದವಲ್ಲವೆಂದು ಗ್ರಹಿಸಿರುವೆನು ಎಂಬ ಭಾವವು. ಈ ಅರ್ಥಗಳೆಲ್ಲಾ ತೋರುವದಕ್ಕಾಗಿ **ಮದನುಗ್ರಹಾಯ** ಎಂಬ ಪ್ರಯೋಗಕ್ಕೆ **ಮಮಾನುಗ್ರಹೈಕ ಪ್ರಯೋಜನಾಯ** ಎಂಬ ಭಾಷ್ಯವು **"ನಾನವಾಪ್ತಮ ವಾಪ್ತವ್ಯಮ್"** ಎಂಬಲ್ಲೇ ಪರಿಪೂರ್ಣಕಾಮನು ಹೇಳಿಕೊಂಡಿರುತ್ತಾನೆ. ತಾನು ಮಾಡುವದೆಲ್ಲವೂ ಭಕ್ತಾನುಗ್ರಹಕ್ಕಾಗಿಯೇ ವಿನಾ. ತನಗಾಗಿ ಯಾವುದೂ ಇಲ್ಲವು

ಮೂಲದಲ್ಲಿ **ಪರಮಂ ಗುಹ್ಯಂ** - ಎಂದು ಇದ್ದುದನ್ನು **ಪರಮಗುಹ್ಯಂ** ಎಂದು ಸಮಾಸ **ಮಾಡಿ ಪರಮಂ** ಎಂಬುದನ್ನು **ಗುಹ್ಯಂ** ಎಂಬುದಕ್ಕೆ ವಿಶೇಷಣವಾಗಿ **ತೋರಿಸಿರುತ್ತಾರೆ,**

**ಭಾ. ಅ. ತಥಾಚ—**

ಹಿಂದೆ **ರಾಜವಿದ್ಯಾ ರಾಜಗುಹ್ಯಂ** ಎಂದು ಈ ಭಕ್ತಿಯೋಗವು ಕೊಂಡಾಡಲ್ಪಟ್ಟಿರುವದರಿಂದ **ಪರಮಂ** ನಿರುಪಮವಾದುದು ಈ ಭಕ್ತಿಯೋಗವೆಂದು ಅರ್ಥಮಾಡಬಹುದಾಗಿತ್ತು. ಬ್ರಹ್ಮ ವಿದ್ಯೆಯು ಎಲ್ಲರಿಗೂ ಉಪದೇಶಿಸತಕ್ಕದ್ದಲ್ಲವೆಂಬ ಭಾವವು ಮುಖ್ಯವಾದುದು ; ಸರ್ವೋತ್ಕೃಷ್ಟ ವಾದ ವಿದ್ಯೆ ಎಂಬುದು ಸರ್ವರಿಗೂ ವೇದ್ಯವೇ. ಶಿಕ್ಷ್ಯದವರಿಗೆಲ್ಲಾ ಉಪದೇಶಿಸತಕ್ಕದ್ದಲ್ಲವೆಂದು ಶ್ರೀ ಕೃಷ್ಣನೇ ಗೀತೋಪದೇಶಾಂತ್ಯದಲ್ಲಿ ಹೇಳುವದರಿಂದ, ಅತ್ಯಂತ ರಹಸ್ಯವಾದುದನ್ನು, ತನ್ನನ್ನು ಒಂದು ವಸ್ತುವೆಂದು ಭಾವಿಸಿ ತನಗೆ ಉಪದೇಶಿಸಿದನೇ ಎಂಬ ಕೃತಜ್ಞತೆಯನ್ನೂ, ತನಗಿರುವ ಆಸ್ತಿಕ್ಯಬುದ್ಧಿಯನ್ನೂ, ತನಗಿರುವ ಭಕ್ತಿವಿಶ್ವಾಸಗಳನ್ನೂ, ಈ ಸಮಾಸಪದವು ವ್ಯಕ್ತ ಪಡಿಸುತ್ತದೆಂದು ಭಾವಿಸಿ, **ಪರಮಂಗುಹ್ಯಂ** ಎಂಬುದಕ್ಕೆ **ಪರಮಗುಹ್ಯಂ** ಎಂಬ ಭಾಷ್ಯವು. **ಮೌನಂ ಚೈವಾಸ್ಮಿಗುಹ್ಯಾನಾಂ** ಎಂದು ಹಿಂದೆ ೧೦-೩೮ರಲ್ಲಿ ಹೇಳಿದ ಗುಹ್ಯ ಶಬ್ದಾರ್ಥಕ್ಕಿಂತ ಬೇರೆ ಅರ್ಥ ಉಳ್ಳದ್ದೆಂದು ಅಲ್ಲಿ **ಗೋಪನ** ವೆಂಬ ವ್ಯಾಖ್ಯಾನವೂ, ಇಲ್ಲಿ **ರಹಸ್ಯ** ವೆಂಬ ವ್ಯಾಖ್ಯಾನವು. ಬ್ರಹ್ಮವಿದ್ಯೆಗೆ **ಅಧ್ಯಾತ್ಮವಿದ್ಯೆ** ಎಂಬ ಸಂಜ್ಞಾ ಏತಕ್ಕೆ ಎಂಬುದನ್ನು **ಆತ್ಮನಿ ವಕ್ತವ್ಯಂ** ಎಂಬ ವ್ಯಾಖ್ಯಾನದಿಂದ ತಿಳಿಸುತ್ತಾರೆ. ಶರೀರದಲ್ಲಿರುವ ಆತ್ಮವಿಷಯವಾದ್ದುದು, ಆತ್ಮಸಂಬಂಧಿಯಾದ ವಿದ್ಯೆಯು ; ಆತ್ಮಸ್ವರೂಪಾದಿಗಳನ್ನು ಬೋಧಿಸುವ ವಿದ್ಯೆಯು ; ಎಲ್ಲವೂ ಪರಮಾತ್ಮನಿಗೆ ಶರೀರವೆಂದು ಬೋಧಿಸುವ ವಿದ್ಯೆಯು. ತಾನು ಹೇಗೆ ವ್ಯಾಪ್ತ, ಪರಬ್ರಹ್ಮನು ಹೇಗೆ ವ್ಯಾಪ್ಯನೆಂದು ಬೋಧಿಸುವ ವಿದ್ಯೆಯೆಂಬ ಭಾವವು. ಮೊದಲು ಆತ್ಮವಿಷಯವಾದ ಸ್ವರೂಪ ಸ್ವಭಾವಾದಿಗಳು ಉಪದೇಶಿಸಲ್ಪಟ್ಟಿದುದರಿಂದಲೇ ಈಗ ಬ್ರಹ್ಮವಿದ್ಯೆಯಾದ ಭಕ್ತಿ ಯೋಗ ನಿಷ್ಪತ್ತಿ ವಿವೃದ್ಧಿಗಳಲ್ಲಿ ವಿಶ್ವಾಸವು ಉಂಟಾಗಿದೆ ಎಂಬ ಭಾವವೂ ಸೂಚಿತವು.

**ಭಾಷ್ಯಾವತಾರಿಕೆಯ ಅರ್ಥವು—ತಥಾಚ**-ಹಾಗೆಯೇ ಇನ್ನೂ ಅರ್ಜುನನು ಹೇಳುತ್ತಾನೆ ಹಿಂದೆ ಹೇಳಿದುದರ ಅನುವಾದವಲ್ಲದೆ ಇನ್ನು ಬೇರೆ ಅಭಿಪ್ರಾಯವನ್ನೂ ಅರ್ಜುನನು ಹೇಳುತ್ತಾ ನೆಂದು ತಿಳಿಸುವದಕ್ಕಾಗಿ **ಚ** ಎಂಬ ಪದವು. ಹಿಂದೆ ಮೋಹವಜ್ಞಾನವು ತೊಲಗಿತು ಎಂದು ಹೇಳಿ ಈ ಶ್ಲೋಕದಿಂದ ನಿನ್ನ ಮಾಹಾತ್ಮ್ಯೆಯು ನಿನ್ನ ಉಪದೇಶದಿಂದಲೇ ವಿದಿತವಾದುದರಿಂದ ಮೋಹ ತೊಲಗಲು ಹೇತುವೆಂದು ಕೆಲವರು ಭಾವಿಸುವರೆಂಬುದು ಸರಿಯಲ್ಲವೆಂದು ತಿಳಿಸುವದ ಕ್ಕಾಗಿ **ತಥಾಚ** ಎಂಬ ವ್ಯಾಖ್ಯಾನವು ಮೋಹ ಹೋಗಲು ಕಾರಣವು ದೇಹ ಮತ್ತು ಆತ್ಮಗಳ ವಿವೇಕ ಜ್ಞಾನದಿಂದ; ಪರಮಾತ್ಮನ ಕಲ್ಯಾಣಗುಣಾಕರತ್ವದಿಂದಲೂ, ವಿವಿಧ ವಿಚಿತ್ರ ವಿಭೂತಿ ಮತ್ವದಿಂದಲೂ, ಸಕಲ ಜಗತ್ತಿನ ಸತ್ತಾಸ್ಥಿತಿಪ್ರವೃತ್ತಿಗಳಿಗೆ ಪರಮಾತ್ಮನೇ ಕಾರಣವು ಎಂಬ ಜ್ಞಾನೋಪದೇಶದಿಂದ ಆತನಲ್ಲಿ ಮಾಹಾತ್ಮ್ಯೆಯೂ ವ್ಯಕ್ತಪಡುವದೂ ಅಲ್ಲದೆ, ಸ್ವತಂತ್ರಾತ್ಮ ಭ್ರಮೆಯೂ ತೊಲಗುತ್ತದೆ. ಆದುದರಿಂದ ಹಿಂದಿನ ಶ್ಲೋಕೋಕ್ತಿಗೆ ಈ ಮುಂದಿನ ಶ್ಲೋಕ ವನ್ನು ಹೇತುವಾಗಿ ಭಾವಿಸತಕ್ಕದ್ದಲ್ಲವೆಂದು ಸೂಚಿಸುವದಕ್ಕಾಗಿ **ಚ** ಶಬ್ದವು. ನನ್ನ ಮೋ ಹವೂ ತೊಲಗಿತು. ನಿನ್ನ ಮಾಹಾತ್ಮ್ಯೆಯೂ ವೇದ್ಯವಾಯಿತು ಎಂಬುದು ತಾತ್ಪರ್ಯವು. ಶ್ರೀ ಶಂಕರಾಚಾರ್ಯರೂ "**ಕಿಂಚ**" ಎಂದೇ ಸರಿಯಾದ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಈ ಚಕಾರವು ಮೂಲದಲ್ಲಿರುವ ಚಕಾರವನ್ನನುಸರಿಸಿರುತ್ತದೆಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು:—** ನಿನ್ನ ಉಪದೇಶದ **ಮೂಲಕ** ಸರ್ವಕ್ಕೂ ನೀನೇ ಕಾರಣನೆಂದೂ ನಿನ್ನ ಮಾಹಾತ್ಮ್ಯೆಯು ಅತ್ಯದ್ಭುತವಾದುದೆಂದೂ ಸವಿಸ್ತಾರವಾಗಿ ತಿಳಿದೆನು ಎಂದು ಅರ್ಜುನನು ಹೇಳುತ್ತಾನೆ-**ಹೇ ಕಮಲಪತ್ರಾಕ್ಷ "ಕಪ್ಯಾಸಂ"** ಎಂಬ ಶ್ರುತಿಯಲ್ಲಿ ಉಪಪಾದಿಸಿರುವಹಾಗೆ

**ಮೂ. ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥** ೨.

ಅಗಾಧವಾದ ನೀರಿನಲ್ಲಿ ನಾಳದಮೂಲಕ ಮೇಲಕ್ಕೆ ಬಂದು, ಸೂರ್ಯನಿಂದ ವಿಕಸಿತವಾದ ಕಮಲ ಪತ್ರದಹಾಗೆ ರಮಣೀಯವಾಗಿ ಭಕ್ತಾನುಗ್ರಹವನ್ನು ಸೂಚಿಸುವ ವಿಶಾಲವಾಗಿ ಮನೋಹರ ವಾಗಿ, ಕೃಪಾಪೀಯೂಷ ಜಲನಿಧಿ ಎಂಬುದನ್ನು ಸೂಚಿಸುವ, ಕಣ್ಣುಗಳನ್ನುಳ್ಳವನೇ, **ತ್ವತ್ತಃ**-ಸರ್ವ ಕಾರಣಭೂತನಾದ ನಿನ್ನ ದೆಸೆಯಿಂದ, **ಭೂತಾನಾಂ**-ಜಗತ್ತಿನ ಸರ್ವಭೂತಗಳ, **ಭವಾಪ್ಯಯೌ**- ಉತ್ಪತ್ತಿ ಪ್ರಲಯಗಳೂ, **ತ್ವತ್ತಃ**-ನಿನ್ನಿಂದಲೇ ಸಾಕ್ಷಾತ್ತಾಗಿ, ಉಂಟಾಗುತ್ತ ವೆಂದು **ವಿಸ್ತರಶಃ**-ವಿಸ್ತರವಾಗಿ, **ಶ್ರುತೌ**-ಕೇಳಲ್ಪಟ್ಟವು; ಅಥವಾ ನಿನ್ನಿಂದಲೇ ಕೇಳಿ ತಿಳಿದೆನು **"ಅಹಮಾದಿಶ್ಚ ಮಧ್ಯಂಚ ಭೂತಾನಾಮನ್ತ ಏವಚ"** ಇತ್ಯಾದಿ ವಾಕ್ಯಗಳ ಮೂಲಕ ಉಪದೇಶಿಸಲ್ಪಟ್ಟಿವೆಂಬ ತಾತ್ಪರ್ಯವು. ಹಾಗೆಯೇ **ಮಾಹಾತ್ಮ್ಯಮಪಿ**-ಉಭಯ ವಿಭೂತಿನಾಯ ಕನಾಗಿಯೂ ಕಲ್ಯಾಣಗುಣಮಹೋದಧಿಯಾಗಿಯೂ, ಆ ವಿಭೂತಿಗಳಲ್ಲಿ ವಿವಿಧ ವಿಚಿತ್ರತೆ ಏನು ಶ್ರೇಷ್ಠತೆಯೇನು ಇವುಗಳಿಂದ ಕೂಡಿದವನಾಗಿಯೂ ಇರುವ ಮಾಹಾತ್ಮ್ಯೆಯನ್ನೂ ಕೂಡ, **ಮಯಾ**-ಮಹಾ ಭಾಗ್ಯಶಾಲಿಯಾದ ನನ್ನಿಂದ, **ವಿಸ್ತರಶಃ**-ವಿಸ್ತಾರವಾಗಿ, **ಶ್ರುತಮ್**-ಕೇಳ ಲ್ಪಟ್ಟಿತು; **ಮಯಾವಿಸ್ತರಶೋಶ್ರುತಂ**- ಎಂದು ಇಟ್ಟುಕೊಳ್ಳಬೇಕೆಂದು ತೋರಿಬರುತ್ತದೆ. ಇಲ್ಲಿ **ತ್ವತ್ತಃ** ಎಂಬುದನ್ನು **ಭವಾಪ್ಯಯೌ**-ಎಂಬುದರೊಂದಿಗೆ ಶ್ರೀ ಭಾಷ್ಯಕಾರರು ಅನ್ವಯಿಸಿ ರುತ್ತಾರೆ. ನಿನ್ನಿಂದಲೇ ಈ ಕೃತ್ಸ್ನ ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳೆಂಬುದು; **ಶ್ರುತೌ**- ಎಂದು ವ್ಯಾಖ್ಯಾನಮಾಡಿರುತ್ತಾರೆ. ಹೀಗೆ ಅನ್ವಯಿಸುವದರಿಂದ ಒಂದು ಸ್ವಾರಸ್ಯವೂ ಏರ್ಪ ಡುತ್ತದೆ, ಹಿಂದಿನ ಶ್ಲೋಕದಲ್ಲಿ ತನಗೆ ಭ್ರಮಹೋಯಿತು ಎಂದು ಹೇಳಿರುವದರಿಂದ, ಈ ಮನುಷ್ಯರೂಪದಲ್ಲಿರುವ ಶ್ರೀ ಕೃಷ್ಣನು ಸೃಷ್ಟಿ, ಸ್ಥಿತಿ, ಲಯಗಳಿಗೆ ಹೇಗೆ ಕಾರಣನು ಎಂಬ ಭ್ರಮವೂ ತೊಲಗಿತು ಎಂಬ ಅರ್ಥ ಬರುವದರಿಂದ, ಸರಸವಾದ ಅನ್ವಯವೆಂದೇ ಭಾವಿಸ ತಕ್ಕದ್ದು. ನೀನು ಪರತತ್ವವೆಂಬುದರಲ್ಲಿ ನನಗೆ ಈಷದಪಿ ಸಂದೇಹವಿಲ್ಲವಾದುದರಿಂದ ಮುಂದಿನ ಮೂರನೆಯ ಶ್ಲೋಕದಲ್ಲಿ ವಿಶ್ವರೂಪದರ್ಶನವನ್ನು ಪ್ರದರ್ಶಿಸು ಎಂಬ ವಿಶೇಷ ಪ್ರಾರ್ಥನೆಗೆ ಈ ಅನ್ವಯವು ಸಾಧಕವಾಗುತ್ತದೆ ಆ ಮಾಹಾತ್ಮ್ಯೆಯು ಎಂಥಾದ್ದೆಂದರೆ **ಅವ್ಯಯಮ್**-ನಾಶರಹಿ ತವಾದುದು, ಚ್ಯುತಿ ಇಲ್ಲದುದು ಈ ಕಲ್ಯಾಣ ಗುಣಾಕರತ್ವದ ಮಾಹಾತ್ಮ್ಯೆಗೂ ವಿಭೂತಿ ಮತ್ತ್ವದ ಮಾಹಾತ್ಮ್ಯೆಗೂ ಚ್ಯುತಿಯಿಲ್ಲವೆಂದು, ಕಂಠೋಕ್ತವಾಗಿರುವಾಗ ಮಿಥ್ಯಾವಾದಕ್ಕೆ ಅನು ಕೂಲವಿಲ್ಲವು. ಗೀತೆಯು ಮಿಥ್ಯಾವಾದಕ್ಕೆ ಅವಕಾಶವನ್ನೇ ಕೊಟ್ಟಿಲ್ಲವು. ಯಾವಾಗ **ಭವಾ ಪ್ಯಯೌ** ಎಂಬುದರಿಂದ ಸೃಷ್ಟಿಲಯಗಳು ಹೇಳಲ್ಪಟ್ಟವೋ, ಆಗ ಸ್ಥಿತಿ ಪ್ರವೃತ್ತಿ ರಕ್ಷಣಾದಿ ಗಳೂ ಹೇಳಿದಂತಾದುವು. ಇಲ್ಲಿ **ಭೂತ** ಶಬ್ದದಿಂದ ಚಿದಚಿತ್ತುಗಳ ಸಮ್ಮೇಳನವುಳ್ಳ ಜಗತ್ತಿನ ವಸ್ತುಗಳೇ ಬೋಧಿಸಲ್ಪಟ್ಟವು. ಇಲ್ಲಿ **ವಿಸ್ತರಶಃ**-ಎಂಬುದರಿಂದ ಪರಮಾತ್ಮನ ಸ್ವರೂಪಾದಿಗಳ ಕಲ್ಯಾಣಗುಣಗಳ ಮತ್ತು ವಿಭೂತಿಯೋಗದ ವಿಸ್ತರರೂಪವಾದ ಉಪದೇಶವು ಸೂಚಿಸಲ್ಪಟ್ಟಿತು. **ಶ್ರುತೌ**-ಸಾಕ್ಷಾತ್ತಾಗಿ ನಿನ್ನಿಂದಲೇ ಕೇಳಲ್ಪಟ್ಟಿರುವದರಿಂದ ತನಗೆ ಆ ಉಪದೇಶದಲ್ಲಿ ಪರಿ ಪೂರ್ಣ ನಂಬಿಕೆಯೂ, ವಿಶ್ವಾಸವೂ, ತನ್ಮೂಲಕವಾಗಿ ವಿಶೇಷ ಭಕ್ತಿಯೂ ಆಸ್ತಿಕ್ಯವೂ, ಅದ ರಿಂದ ಕೃತಜ್ಞತೆಯೂ, ಉಂಟಾಯಿತು ಎಂಬ ಭಾವವು. **ಕಮಲಪತ್ರಾಕ್ಷ**-ಎಂಬ ಪದದಿಂದ ಹಿಂದಿನ ಶ್ಲೋಕದಲ್ಲಿ ಉಪಯೋಗಿಸಿದ **ಮದನುಗ್ರಹಾಯ** ಎಂಬಲ್ಲಿ ತೋರಿಬರುವ **ಪರಿ ಪೂರ್ಣ ಕೃಪಾ ವಾತ್ಸಲ್ಯಾದಿಗಳು ದ್ಯೋತಿತವು**.

**ಭಾ. ತಥಾ ಸಪ್ತಮಪ್ರಭೃತಿ ದಶಮಪರ್ಯನ್ತೇ, ತ್ವದ್ವ್ಯತಿರಿಕ್ತಾನಾಂ ಸರ್ವೇಷಾಂ ಭೂತಾನಾಂ, ತ್ವತ್ತಃ - ಪರಮಾತ್ಮನೋ, ಭವಾಪ್ಯಯೌ - ಉತ್ಪತ್ತಿಪ್ರಲಯೌ ವಿಸ್ತರಶೋ ಮಯಾ ಶ್ರುತೌ ಹಿ । ಕಮಲಪತ್ರಾಕ್ಷ, ತವಾವ್ಯಯಂ-ನಿತ್ಯಂ, ಸರ್ವ**

**ಭಾವಾರ್ಥವು:** ನನಗೆ ಪರಮಾಸ್ತಿಕ್ಯವೂ, ನಿನ್ನಲ್ಲಿ ನಿರತಿಶಯಮಾಹಾತ್ಮ್ಯೆಯೂ ಉಂಟಾಯಿತೆಂದು ಕೃತಜ್ಞತೆಯನ್ನು ಅರ್ಜುನನು ಸೂಚಿಸುತ್ತಾನೆ. **ತಥಾ**-ಹಾಗೆಯೇ, ಎಂದರೆ ಅರ್ಜುನನು ಇನ್ನೂ ಹೇಳುತ್ತಾನೆಂಬ ಭಾವವು **ಸಪ್ತಮ ಪ್ರಭೃತಿದಶಮ ಪರ್ಯನ್ತೇ**-ಸಪ್ತಮಾಧ್ಯಾಯ ಮೊದಲುಗೊಂಡು ದಶಮಾಧ್ಯಾಯವನ್ನು ಮುಗಿಸಿ ಹೇಳುವದರಲ್ಲಿ, **ತ್ವದ್ವ್ಯತಿರಿಕ್ತಾನಾಂ** - ನಿನಗಿಂತಲೂ ಬೇರೆಯಾದ **ಸರ್ವೇಷಾಂ ಭೂತಾನಾಂ** - ಸಮಸ್ತ ಚಿದಚಿನ್ಮಿಶ್ರವಾದ ಈ ಜಗತ್ತಿನಲ್ಲಿರುವ ಭೂತಗಳ, **ತ್ವತ್ತಃ** - ನಿನ್ನ ಮೂಲಕವಾಗಿಯೇ. **ಭವಾಪ್ಯಯೌ**- ಎಂದರೆ **ಉತ್ಪತ್ತಿಪ್ರಲಯೌ**-ಸೃಷ್ಟಿಪ್ರಲಯಗಳು, ಸಂಸಾರ ಮತ್ತು ಮೋಕ್ಷವೆಂಬ ಅರ್ಥವು ಇಲ್ಲಿ ಸರಿಹೋಗುವುದಿಲ್ಲವು. **ವಿಸ್ತರಶಃ** - ವಿಸ್ತರಿಸಲ್ಪಟ್ಟವುಗಳಾಗಿ, **ಮಯಾ** - ನನ್ನಿಂದ, **ಶ್ರುತೌಹಿ** - ಕೇಳಲ್ಪಟ್ಟವಷ್ಟೇ. ಭಕ್ತಿರಸವು ಚೆನ್ನಾಗಿ ನೆಲೆಗೊಳ್ಳಲು, ಸರ್ವೇಶ್ವರನಲ್ಲಿ ಪರಿಪೂರ್ಣತಾರೂಪಮಾಹಾತ್ಮ್ಯೆಯೂ ಕೃಪಾಪುರಸ್ಸರವಾದ ಅನುಗ್ರಹವೂ ಇರಬೇಕು. ಇವೆರಡೂ ಉಂಟೆಂದು ತಿಳಿಸುವದಕ್ಕಾಗಿ ೭ನೆಯ ಅಧ್ಯಾಯ ಮೊದಲುಗೊಂಡು ಇದುವರೆಗೂ **ವಿಸ್ತರಶಃ** - ಉಪದೇಶಿಸುತ್ತಾರೆಂದು ತಿಳಿಸುವದಕ್ಕಾಗಿ "**ಸಪ್ತಮ ಪ್ರಭೃತಿ**" ಇತ್ಯಾದಿ ಪ್ರಯೋಗವು. ಮೂಲದಲ್ಲಿ **ಭೂತಾನಾಂ** ಎಂದು ಇಷ್ಟುಮಾತ್ರವಿರುವುದಕ್ಕೆ **ತ್ವದ್ವ್ಯತಿರಿಕ್ತಾನಾಂ ಸರ್ವೇಷಾಂ ಭೂತಾನಾಂ** ಎಂದು ಏಕೆ ಭಾಷ್ಯವೆಂಬುದು ನ್ಯಾಯವಾದ ಪ್ರಶ್ನೆಯು. ನಾನು ಚಿದಚಿತ್ತಿನೊಂದಿಗೆ ಯಾವಾಗಲೂ ಸೇರಿಯೇ ಇರುತ್ತೇನೆ. (ಗೀ. ೧೦. ೪೦.) ಅಪೃಥಕ್ಸಿದ್ಧ ವಿಶೇಷಣವಾಗಿ ಅವುಗಳು ನನಗೆ ಶರೀರವು ನಾನು ಆತ್ಮಾ (ಗೀ. ೧೦. ೨೦.) ಹೀಗೆಲ್ಲಾ ಹೇಳಿರುವದರಿಂದ ಯಾವಾಗ ಭೂತಗಳಿಗೆ ಸೃಷ್ಟಿಸ್ಥಿತಿಲಯಗಳಾದವೋ, ತನಗೂ ಹಾಗೆಯೇ ಉಂಟೋ? ಎಂದರೆ ಸೃಷ್ಟಿಲಯಗಳು ಪರಮಾತ್ಮವ್ಯತಿರಿಕ್ತ ಭೂತಗಳಿಗೇ ವಿನಾ ತನಗಿಲ್ಲವು, ಎಂದು ಹೇಳುತ್ತಾರೆ. ಈ ಭೂತಗಳು ಸೃಷ್ಟಿಸಲ್ಪಟ್ಟು ಸ್ಥೂಲರೂಪಹೊಂದಿದಹಾಗೆಲ್ಲಾ **ತತ್ಸೃಷ್ಟ್ವಾ ತದೇವಾನುಪ್ರಾವಿಶತ್** ಎಂದು ಹೇಳಿರುವಹಾಗೆ ಸ್ವರೂಪತಃ ವ್ಯಾಪ್ತಿಯುಂಟೆಂದು ತಿಳಿಸುವದಕ್ಕಾಗಿಯೂ, ಸೃಷ್ಟಿಲಯಗಳಿಗೆ ಪರಮಾತ್ಮನು ನಿರ್ವಿಕಾರನಾಗಿ ಒಳಗಾಗಿಲ್ಲವೆಂದೂ ತಿಳಿಸುವದಕ್ಕಾಗಿಯೂ ಹಾಗೆ ಪ್ರಯೋಗವು. **ತದ್ವ್ಯತಿರಿಕ್ತಾನಾಂ** ಎಂದು ಹೇಳಿದ ನಂತರ ನಿತ್ಯರೂ ಮುಕ್ತರೂ ತದ್ವ್ಯತಿರಿಕ್ತರಲ್ಲವೋ? ಅವರೂ ಹಾಗಾದರೆ ಸೃಷ್ಟಿಲಯಗಳಿಗೆ ಸಿಕ್ಕಿದವರೋ, ಎಂದರೆ, ಅವರು "**ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ**" ಈ ಸೃಷ್ಟಿಪ್ರಳಯಗಳಿಗೆ ಸಿಕ್ಕುವವರಲ್ಲವಾದುದರಿಂದ ಅವರುಗಳನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ **ಸರ್ವೇಷಾಂ ಭೂತಾನಾಂ** ಎಂಬ ಪ್ರಯೋಗವು. ಪ್ರಕೃತಿ ಸಂಬಂಧವಿರುವ ಜೀವಾತ್ಮರುಗಳಿಗೆ ಭೂತಶಬ್ದವೇ ವಿನಾ **ಭೂತ** ಶಬ್ದದಿಂದ ನಿತ್ಯಮುಕ್ತರು ಹೇಳಲ್ಪಡುವುದಿಲ್ಲವು. ಯಾವಾಗ ಸೃಷ್ಟಿಲಯಾಧಿಕಾರಿ ಎಂದಾಯಿತೋ, ಅದರಿಂದಲೇ ಮಾಹಾತ್ಮ್ಯವೂ ವ್ಯಕ್ತವು ಎಂದು ಬೋಧಿಸುವದಕ್ಕಾಗಿ **ಹಿ** ಶಬ್ದವು. ಯಾವಾಗ ಇವೆಲ್ಲವೂ ಕೇಳಲ್ಪಟ್ಟದುದಾಯಿತೋ, ಅದರಿಂದ ಸಾಕ್ಷಾತ್ತಾಗಿ ನೋಡಬೇಕೆಂಬ ಪರಮ ಕುತೂಹಲವು ನನ್ನಲ್ಲಿ ಉಂಟಾಗಿದೆ, ಎಂಬ ಭಾವವನ್ನೂ ಸೂಚಿಸುತ್ತದೆ. ಇದನ್ನೇ ಮುಂದೆ ತಿಳಿಸುತ್ತಾರೆ. ಹಿಂದೆ ೨ನೆಯ ಶ್ಲೋಕದಲ್ಲೇ ನಾನು ಯಾವಾಗ ಆದಿ ಸೃಷ್ಟಿಕರ್ತನಾದೆನೋ, ಆಗ ಅವೆಲ್ಲವನ್ನೂ ಶರೀರವಾಗಿ ಹೊಂದಿ ಅವುಗಳಿಗೆ

**ಭಾ. ಚೇತನಾಚೇತನವಸ್ತುಶೇಷಿತ್ವಂ. ಜ್ಞಾನಬಲಾದಿಕಲ್ಯಾಣಗುಣಗಣೈ ಸ್ತವೈವ ಪರತರತ್ವಂ. ಸರ್ವಾಧಾರತ್ವಂ ಚಿನ್ತಿತ ನಿಮಿಷಿತಾದಿ ಸರ್ವಪ್ರವೃತ್ತಿಷು ತವೈವಪ್ರವರ್ತ**

---

ಆತ್ಮಾವಾದುದರಿಂದ ಸರ್ವನಿಯಂತೃತ್ವವೂ ತನ್ಮೂಲಕವಾಗಿ ಮಾಹಾತ್ಮ್ಯೆಯೂ, ಏರ್ಪಟ್ಟ ವೆಂಬ ಭಾವವು. **ಹೇ ಕಮಲಪತ್ರಾಕ್ಷ**-ಓ ಕಮಲಪತ್ರದಹಾಗೆ ಬಹು ರಮಣೀಯವಾಗಿ, ಭಕ್ತರ ಮನಸ್ಸನ್ನು ಆಕರ್ಷಿಸಿ, ಅವರಿಗೆ ಅನುಗ್ರಹಿಸುವ, ನಿರ್ಹೇತುಕ ಕೃಪಾಸೂಚಕವಾದ ಕಣ್ಣುಗಳುಳ್ಳವನೇ, ಮಾರ್ಕಂಡೇಯರು ಶ್ರೀಕೃಷ್ಣನೇ ಪರತತ್ವವೆಂದು ಯುಧಿಷ್ಠಿರಾದಿಗಳಿಗೆ ಉಪದೇಶಿಸುವ ಸಂದರ್ಭದಲ್ಲಿ, ಈ ಉಪದೇಶವನ್ನು ಏತರಿಂದ ವ್ಯಕ್ತವಾಗಿ ಹೇಳುತ್ತೇನೆಂದರೆ, ತಿಳಿಸುತ್ತಾರೆ-ಸರ್ವೇಶ್ವರನು ನನಗೆ ಪ್ರಳಯದಲ್ಲಿ ಸೇವೆಯನ್ನು ಅನುಗ್ರಹಿಸಿದ ಕಾಲದಲ್ಲಿ, ನಾನು ನೋಡಿದ ಪುಂಡರೀಕಾಕ್ಷಗಳೇ ಈಗಲೂ ಶ್ರೀಕೃಷ್ಣನಲ್ಲಿ ಕಾಣಬರುತ್ತವೆ ; ಆದುದರಿಂದ ನನಗೆ ಈತನೇ ಪರತತ್ವವೆಂಬುದು ಸುಸ್ಪಷ್ಟವೆಂದು ಹೇಳಿಕೊಂಡಿರುತ್ತಾರೆ. **"ಯಃ ಸದೇವೋ ಮಯಾದೃಷ್ಟಃ ಪುರಾಪದ್ಮಾಯತೇಕ್ಷಣಃ । ಸ ಏವ ಪುರುಷವ್ಯಾಘ್ರ ಸಂಬಂಧೀ ತೇಜನಾರ್ದನಃ"** ಎಂದು ಹೇಳಿ. ಆದುದರಿಂದ ಈತನನ್ನು ಪಾಂಡವರಾದ ನೀವೆಲ್ಲರೂ ಶರಣಾಗತಿಯನ್ನು ಅನುಷ್ಠಿಸಿರಿ ಎಂದು ಮಹರ್ಷಿಯು ಉಪದೇಶಿಸುತ್ತಾರೆ **"ಸರ್ವೇಷಾಮೇವ ಭೂತಾನಾಂ ಪಿತಾ ಮಾತಾ ಚ ಮಾಧವಃ । ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ"** (ಭಾರ. ವನ ೧೯೨. ೫೧-೫೬) ಈ ಕಣ್ಣುಗಳಸೊಬಗು ಮಹಾನುಭಾವರಾದವರಿಗೆ ವೇದ್ಯವೇವಿನಾ ಪಾಪಿಗಳಾದ ರಾವಣಾದಿಗಳಿಗಿಲ್ಲವೆಂದು ಸೀತೆಯು ಹೇಳುತ್ತಾಳೆ **"ತಂ ಪದ್ಮದಳಪತ್ರಾಕ್ಷಂ ಸಿಂಹವಿಕ್ರಾಂತಗಾಮಿನಂ । ಧನ್ಯಾಃ ಪಶ್ಯನ್ತಿ ಮೇ ನಾಥಂ ಕೃತಜ್ಞಂ ಪ್ರಿಯವಾದಿನಂ"**(ರಾ ಸುಂ) ಧನ್ಯರಾದ ಅರ್ಜುನ ಮೊದಲಾದವರಿಗೇನೇ ಆ ಕಣ್ಣಿನ ಲಾವಣ್ಯವನ್ನು ಪ್ರದರ್ಶಿಸಿ, ಅವರ ಮನಸ್ಸನ್ನು ಆಕರ್ಷಿಸುವನೇ ವಿನಾ ರಾವಣಾದಿ ಎಲ್ಲರಿಗೂ ಆ ಸುಕೃತವಿಲ್ಲವೆಂಬುದು ಸೂಚಿತವು. ಇದೂ ಅಲ್ಲದೆ ಅಂತರಾದಿತ್ಯಾದಿ ವಿದ್ಯೆಗಳಲ್ಲಿ ಪುಂಡರೀಕಾಕ್ಷಗಳುಳ್ಳ ದಿವ್ಯಮಂಗಳ ವಿಗ್ರಹವೂ ಧ್ಯೇಯವಸ್ತುವೆಂಬುದನ್ನು, ಹೇ ಕಮಲಪತ್ರಾಕ್ಷ ಎಂಬ ಸಂಬೋಧನೆಯು ಸೂಚಿಸುತ್ತದೆ. ಮಾಹಾತ್ಮ್ಯೆಯನ್ನು ಪ್ರದರ್ಶಿಸುವ ಸರ್ವ ಸಾಮರ್ಥ್ಯವು ಈ ಅಕ್ಷಗಳಿಗೇನೇ ಉಂಟು ಎಂಬ ತಾತ್ಪರ್ಯವೂ ದ್ಯೋತಿತವು **ತವ**-ನಿನ್ನ, **ಅವ್ಯಯಂ**-ಎಂದರೆ **ನಿತ್ಯಂ**-ನಾಶವಿಲ್ಲದೆ ನಿತ್ಯವಾದ, ಸರ್ವ ಚೇತನಾಚೇತನ ವಸ್ತುಗಳಿಗೆ **ಶೇಷಿತ್ವಂ**-ಶೇಷಿಯಾಗಿರೋಣವೂ, ಜ್ಞಾನ ಬಲವೇ ಮೊದಲಾದ ಷಾಡ್ಗುಣ್ಯಾದಿ ಕಲ್ಯಾಣಗುಣ ಸಮೂಹದಿಂದ, **ತವೈವ**-ನಿನಗೇನೇ ಸಲ್ಲುವ, **ಪರತರತ್ವಂ**-ಸರ್ವೋತ್ಕೃಷ್ಟಭಾವವೂ, **ಸರ್ವಾಧಾರತ್ವಂ**-ಸಮಸ್ತವೂ ನಿನಗೆ ಶರೀರವಾದುದರಿಂದ ಅವೆಲ್ಲವೂ ಆಧೇಯವಾಗಿ ಅವುಗಳಿಗೆಲ್ಲಾ ನೀನು ಆಧಾರವಾಗಿಯೂ (ಇದು ನಾರಾಯಣ ಶಬ್ದದಲ್ಲಿ ಬೋಧಿತವಾಗುವ ಅರ್ಥವು) **ಚಿನ್ತಿತ ನಿಮಿಷಿತಾದಿ ಪ್ರವೃತ್ತಿಷು**-ಚಿನ್ತಿತ ಎಂದರೆ ಸಙ್ಕಲ್ಪಿಸಿ ಮಾಡುವ ಪ್ರವೃತ್ತಿಗಳಲ್ಲೂ ಮತ್ತು ಸಙ್ಕಲ್ಪಿಸದೆ ತಾನಾಗಿಯೇ ನಡೆಯುವ ರೆಪ್ಪೆಯಾಡಿಸುವದೇ ಮೊದಲಾದ ಪ್ರವೃತ್ತಿಗಳಲ್ಲೂ. ಇಲ್ಲಿ ಆದಿ ಶಬ್ದದಿಂದ ಹೃದಯ ಮತ್ತು ಶ್ವಾಸಕೋಶಗಳೇ ಮೊದಲಾದ ಪ್ರವೃತ್ತಿಗಳಲ್ಲೂ. ಇಲ್ಲಿ ಆದಿ ಶಬ್ದದಿಂದ ಹೃದಯ ಮತ್ತು ಶ್ವಾಸಕೋಶಗಳೇ ಮೊದಲಾದವುಗಳ ಕಾರ್ಯಗಳೂ ಹೇಳಲ್ಪಟ್ಟವು, **ತವೈವ**-ನಿನಗೇನೇ, **ಪ್ರವರ್ತಯಿತೃತ್ವಂ**-ಪ್ರವರ್ತಿಸುವಹಾಗೆ ಮಾಡುವ ಸಾಮರ್ಥ್ಯವೂ, **ಇತ್ಯಾದಿ**-ಇವೇ ಮೊದಲಾದ **ಅಪರಿಮಿತಂ ಮಾಹಾತ್ಮ್ಯಂ ಚ**-ಅಪರಿಮಿತವಾದ ಮಾಹಾತ್ಮ್ಯವೂ ಕೂಡ, **ಶ್ರುತಂ**-ಕೇಳಲ್ಪಟ್ಟಿತು, ಉಪದೇಶಿಸಲ್ಪಟ್ಟಿತೆಂಬ ಭಾವವು. ಇಲ್ಲಿ ಮೂಲದಲ್ಲಿ ಹೇಳಿರುವ ಮಾಹಾತ್ಮ್ಯೆಯು ಯದ್ರೂಪವೆಂಬುದರ ವಿವರಣೆಗಾಗಿ " **ಸರ್ವ ಚೇತನಾಚೇತನ** " ವೆಂದಾರಂಭಿಸಿ

**ಭಾ. ಯಿತ್ಯತ್ರ ಮಿತ್ಯಾದ್ಯಪರಿಮಿತಂ-ಮಾಹಾತ್ಮ್ಯಂ ಚ ಶ್ರುತಮ್ । "ಹಿ" ಶಬ್ದೋವಕ್ಷ್ಯಮಾಣ ದಿದೃಕ್ಷಾ ದ್ಯೋತನಾರ್ಥಃ ॥೨॥**

"**ಅಪರಿಮಿತಂ**"ಎಂಬುವವರೆಗೂ ಭಾಷ್ಯವು ಮಾಹಾತ್ಮ್ಯೆಯು ಎಂತಾದ್ದೆಂದರೆ ಸರ್ವಚೇತನಾಚೇತನಗಳಿಗೂ ತಾನು, "**ಪತಿಂ ವಿಶ್ವಸ್ಯ**" ಎಂಬ ಶ್ರುತಿಯಲ್ಲಿ ಹೇಳಿರುವಹಾಗೆ ಸರ್ವಶ್ರೇಷಿಯು, "**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ**" (ಗೀ. ೧೦. ೩) ಎಂಬುದರಿಂದಲೂ ಸರ್ವ ಶೇಷಿತ್ವವು ವ್ಯಕ್ತವು. ಹಾಗೆಯೇ ಗೀತಾ ೭-೪ ರಲ್ಲೂ ೭-೭ ರಲ್ಲೂ ೧೦-೪ ರಲ್ಲೂ ಶೇಷಿತ್ವಾದಿಗಳು ಬೋಧಿತವು. ಪರಾಪ್ರಕೃತಿ ಅಪರಾಪ್ರಕೃತಿ ಗಳಾದ ಸಮಸ್ತಚೇತನಾಚೇತನಗಳೂ ನನ್ನದು ನನಗೆ ಶೇಷಭೂತವಾದವೆಂದು (ಗೀ ೭-೫) ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. "**ವಿಷ್ಟಭ್ಯಾಹಮಿದಂ ಕೃತ್ಸ್ನಂ**" ಎಂಬಲ್ಲಿಯೂ ದ್ಯೋತಿತವು ಜ್ಞಾನಬಲಾದಿ ಕಲ್ಯಾಣಗುಣಗಣಗಳಿಂದ ಯುಕ್ತನೆಂಬುದನ್ನು, "**ಸುಹೃದಂ ಸರ್ವಭೂತಾನಾಂ**" ಗೀ ೫-೨೯ ಎಂಬಲ್ಲೂ. "**ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್**" (ಗೀ. ೯.೧೮) ಎಂಬಲ್ಲೂ, "**ಯೋಗಕ್ಷೇಮಂ ವಹಾಮ್ಯಹಂ**" (ಗೀ.೯-೨೨) ಎಂಬಲ್ಲೂ **ನಮೇಭಕ್ತಃ ಪ್ರಣಶ್ಯತಿ**" (ಗೀ.೯-೩೧) ಎಂಬಲ್ಲೂ "**ಬುದ್ಧಿರ್ಬುದ್ಧಿ ಮತಾಮಸ್ಮಿ, ತೇಜಸ್ತೇಜಸ್ವಿನಾಮಹಂ । ಬಲಂಬಲವತಾಂಚಾಹಂ**" (ಗೀ. ೭-೧೧) ಎಂಬಲ್ಲೂ, ವ್ಯಕ್ತವು. "**ಮಯಿಸರ್ವಮಿದಂ ಪ್ರೋತಂ** ಎಂಬಲ್ಲಿ ಸರ್ವಾಧಾರತ್ವವೂ. (ಗೀ. ೭.೭) **ಪರಂಭಾವ ಮಜಾನಂತಃ**" (ಗೀ ೭.೨೪) ಎಂಬಲ್ಲಿ ಪರತ್ವವೂ. "**ಬುದ್ಧಿರ್ಜ್ಞಾನ ಮಸಮ್ಮೋಹಃ ಕ್ಷಮಾ ಸತ್ಯಂ ದಮಶ್ಶಮಃ**" ಎಂದಾರಂಭಿಸಿ. "**ಭವನ್ತಿ ಭಾವಾ ಭೂತಾನಾಂ ಮತ್ತಏವ ಪೃಥಗ್ವಿಧಾಃ**" ಎಂದು ಮುಗಿಸಿ ಸರ್ವಪ್ರವೃತ್ತಿಗಳಿಗೂ ತಾನೇಕಾರಣನೆಂದೂ, "**ಯತಃ ಪ್ರವೃತ್ತಿ ರ್ಭೂತಾನಾಂ**" ಎಂಬಲ್ಲೂ, ಹೇಳಿಕೊಂಡಿರುವದರಿಂದ, ಮಾಹಾತ್ಮ್ಯೆಯು ಈ ವಿಧವಾದುದೆಂದು ವಿವರಿಸಿದ್ದಾರೆ. ಮೂಲದಲ್ಲಿರುವ **ಹಿ** ಶಬ್ದವು **ವಕ್ಷ್ಯಮಾಣ ದಿದೃಕ್ಷಾ ದ್ಯೋತನಾರ್ಥಃ**-ಮುಂದೆ ಮೂರನೆಯ ಶ್ಲೋಕದಲ್ಲಿ ಹೇಳಲ್ಪಡುವ ಸರ್ವವಿಭೂತಿಯುಕ್ತನಾಗಿ ಆಶ್ಚರ್ಯಕರವಾದ ರೂಪವನ್ನು ನೋಡಬೇಕೆಂಬ ಅಪೇಕ್ಷೆಯನ್ನು ಸೂಚಿಸುವ ಅಭಿಪ್ರಾಯ ವುಳ್ಳದ್ದು. ಇಂತಹ ಅಪರಿಮಿತ ಮಹಾತ್ಮ್ಯೆಯುಳ್ಳವನೆಂದಲ್ಲವೇ ನೀನು ಉಪದೇಶಿಸಿದುದು, ಆದುದರಿಂದ ಅಂತಹ ಅದ್ಭುತ ರೂಪವನ್ನು ನೋಡಬೇಕೆಂಬ ಪರಮ ಕುತೂಹಲವುಂಟು ಎಂಬ ಭಾವವನ್ನು ಪ್ರದರ್ಶಿಸುತ್ತದೆ "**ಹಿ**" ಶಬ್ದವು. ಇಂತಹ ಅಚಿನ್ತನೀಯವಾದ ಪಾರಮ್ಯೈಶ್ವರ್ಯಯುಕ್ತನೆಂಬುದನ್ನು ಯಾವಾಗ ಗ್ರಹಿಸಿದನೋ, "**ಭೂಯಃಕಥಯ ತೃಪ್ತಿರ್ಹಿ ಶೃಣ್ವತೋನಾಸ್ತಿ ಮೇಽಮೃತಮ್**" ಎಷ್ಟುಕೇಳಿದರೂ ನಿನ್ನ ಪಾರಮ್ಯೈಶ್ವರ್ಯ ವಿಷಯವಾಗಿ, ನನಗೆ ತೃಪ್ತಿಯೇ ಇಲ್ಲವೆಂದು ಹೇಳಿ. ಯಾವಾಗ ಅನಂತರ ಸರ್ವೇಶ್ವರನಿಂದ ಈ ಅಪರಿಮಿತ ಪಾರಮ್ಯೈಶ್ವರ್ಯವನ್ನೆಲ್ಲಾ ಕೇಳಿ ತಿಳಿದನೋ, ಆಗ ಅವನ್ನೆಲ್ಲಾ ಸಾಕ್ಷಾತ್ತಾಗಿ ನೋಡಬೇಕೆಂಬ ಕುತೂಹಲದಿಂದ ಅರ್ಜುನನು ಪ್ರೇರಿತನಾಗಿದ್ದಾನೆಂಬುದು ಈ ಎರಡನೆಯ ಶ್ಲೋಕದಿಂದ ವ್ಯಕ್ತವು. ಆದುದರಿಂದ ಅಂತಹ ಕೇಳಿ ತಿಳಿದ ಪಾರಮ್ಯೈಶ್ವರ್ಯವನ್ನೇ, ಕಣ್ಣಿನಿಂದ ಸಾಕ್ಷಾತ್ಕಾರವಾಗಬೇಕೆಂಬ ಕುತೂಹಲವುಂಟು, ದಯಪಾಲಿಸು ಎಂದು ಪ್ರಾರ್ಥಿಸುತ್ತಾನೆ.

**ಮೂಲಕ್ಕೆ ಅರ್ಥವು :**—ಈ ಶ್ಲೋಕದಲ್ಲಿ, ಅರ್ಜುನನು ಶ್ರೀಕೃಷ್ಣನಲ್ಲಿ ಪರತ್ವವನ್ನೂ ಸರ್ವ ನಿಯನ್ತೃತ್ವವನ್ನೂ, ಸರ್ವವನ್ನೂ ಧರಿಸುವ ಶಕ್ತಿಯನ್ನೂ, ಬದ್ಧಮುಕ್ತ ನಿತ್ಯಚೇತನರ,

**ಮೂ. ಏವಮೇತದ್ಯಥಾತ್ಥ ತ್ವ ಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥** ೩.

ಗಿಂತಲೂ ವೈಲಕ್ಷಣ್ಯವನ್ನೂ ತಿಳಿದವನಾದ ಪ್ರಯುಕ್ತ, ಹೇ ಪರಮೇಶ್ವರ ಹೇ ಪುರುಷೋತ್ತಮ ಎಂಬ ಮಹತ್ತಾದ ಅರ್ಥಗರ್ಭಿತಗಳಾದ ಎರಡು ಸಂಬೋಧನಗಳಿಂದ ಸ್ತುತಿಸಿದವನಾಗಿ ಅಂತಹ ಕಲ್ಯಾಣಗುಣಯೋಗ ವಿಭೂತಿಯೋಗ ಇವುಗಳಿಂದ ಯುಕ್ತನಾಗಿರುವ ಈ ಮಹತ್ತಾದ ಐಶ್ವರ್ಯ ವನ್ನು ಪ್ರದರ್ಶಿಸುವ ದಿವ್ಯಮಙ್ಗಳವಿಗ್ರಹವನ್ನು ನೋಡಲಪೇಕ್ಷಿಸುತ್ತೇನೆಂದು ಪ್ರಾರ್ಥಿಸುತ್ತಾನೆ –

**ಹೇ ಪರಮೇಶ್ವರ** - ಎಲ್ಲವನ್ನೂ ವ್ಯಾಪಿಸಿ, ಧರಿಸಿ ಎಂದರೆ ನಿಯಮಿಸಿ ಎಲ್ಲವೂ ತನಗೆ ಸ್ವತ್ತಾಗಿ ಹೊಂದಿರುವ ಸರ್ವೋತ್ಕೃಷ್ಟನಾದ ಸ್ವಾಮಿಯೇ, **ಏವಂ** - ಈ ಪ್ರಕಾರವಾಗಿ, **ಏತತ್**-ಹಿಂದಿನ ಅಧ್ಯಾಯಗಳಲ್ಲಿರುವ ಉಪದೇಶವನ್ನು, **ಯಥಾ** - ಹೇಗೆ, **ಆತ್ಮಾನಂ**-ನಿನ್ನನ್ನು ಕುರಿತು, **ಆತ್ಥ**-ಕೃಪಯಾ ಹೇಳಿದೆಯೋ ನಿನ್ನ ವಿಷಯವಾಗಿ, ನಿನ್ನಲ್ಲಿ ಭಕ್ತಿವಿಶ್ವಾಸ ಗಳುಂಟಾಗುವದಕ್ಕಾಗಿ ನೀನು ಏನನ್ನು ಉಪದೇಶಿಸಿದೆಯೋ, **ಹೇ ಪುರುಷೋತ್ತಮ**-ಬದ್ಧ ಮುಕ್ತ ನಿತ್ಯರಾದ ಜೀವಾತ್ಮರುಗಳಿಗಿಂತ ವಿಲಕ್ಷಣನಾಗಿರುವ ಪುರುಷಸೂಕ್ತದಲ್ಲಿ ಪ್ರತಿಪಾದಿತ ನಾಗಿರುವ ಪುರುಷಶ್ರೇಷ್ಠನೇ, **ತೇ** - ಅಪರಿಮಿತ ಮಾಹಾತ್ಮ್ಯಯುಳ್ಳ ನಿನ್ನ, **ರೂಪಮೈಶ್ವರಂ** - ಅತ್ಯದ್ಭುತವಾಗಿ, **ಮತಂಮನ್ಯೇ** ಎಂದು ಹೇಳಿರುವ ಸತ್ಯಗಳಾದ ಕಲ್ಯಾಣ ಗುಣಗಳ ಮತ್ತು ವಿಭೂತಿಗಳ ಯೋಗವುಳ್ಳ ದಿವ್ಯಮಂಗಳವಿಗ್ರಹವನ್ನು, **ದ್ರಷ್ಟುಂ ಇಚ್ಛಾಮಿ**-ನೋಡಲಪೇಕ್ಷಿಸುತ್ತೇನೆ. ತೋರಿಸು ಎಂದು ಒಂದೇಸಲ ಸಾಕ್ಷಾತ್ತಾಗಿ ಕೇಳಿಕೊಳ್ಳುವದ ಕ್ಕಿಂತ ರಾಜಾಧಿರಾಜನಲ್ಲಿ ತನಗೆ ಅಪೇಕ್ಷಿತವು ಯಾವುದೋ, ಅಷ್ಟುಮಾತ್ರ ತಿಳಿಸುವದು ತನ್ನ ದಾಸಭಾವಕ್ಕೆ ಯೋಗ್ಯವೆಂದು ಭಾವಿಸಿ, **ದ್ರಷ್ಟುಮಿಚ್ಛಾಮಿ** ಎಂದು ಪ್ರಥಮತಃ ಇಲ್ಲಿ ಹೇಳಿ, ಮುಂದೆ **ದರ್ಶಯ** ಎಂದು ಪ್ರಾರ್ಥಿಸುತ್ತಾನೆ. **ಪರಮೇಶ್ವರ** ನೆಂಬ ಸಂಬೋಧನೆಯು **ವ್ಯಾಪನಾದ್ಭರಣಾತ್ಸ್ವಾಮ್ಯಾತ್** ಎಂಬ ಮೂರು ಹೇತುಗಳಿಂದ ಪರಮಾತ್ಮನಲ್ಲಿ ಅನ್ವಯಿ ಸುತ್ತದೆ. ಸರ್ವವನ್ನೂ ವ್ಯಾಪಿಸಿ, ಭರಿಸಿ, ಎಲ್ಲಕ್ಕೂ ಸ್ವಾಮಿಯಾಗಿ, ಸಮಸ್ತಕ್ಕೂ ನಿಯಂತ್ರಾ ವಾಗಿದ್ದರೇನೇ ಪರಮೇಶ್ವರನೆಂದು ಹೇಳಿಸಿಕೊಳ್ಳಬಹುದು. ಹಾಗಿಲ್ಲದಿದ್ದರೆ ಈ ಶಬ್ದವು ರುದ್ರ ನಲ್ಲಿ, ಭಗವಚ್ಛಬ್ದವಹಾಗೆ, ಲಾಕ್ಷಣಿಕವು ತಾನು ಎಲ್ಲವನ್ನೂ ವ್ಯಾಪಿಸಿರುತ್ತೇನೆಂದು **"ಅಹ ಮಾತ್ಮಾ" "ಮಯಾತತಮಿದಂ ಸರ್ವಂ" "ಸರ್ವಭೂತಸ್ಥ ಮಾತ್ಮಾನಂ"** ಎಂಬಲ್ಲಿ ಸರ್ವ ವ್ಯಾಪ್ತಿಯೂ **"ಮಯಿ ಸರ್ವಮಿದಂ ಪ್ರೋತಂ" "ಸರ್ವಭೂತಾನಿ ಚಾತ್ಮನಿ"** ಇತ್ಯಾದಿಗಳಲ್ಲಿ ಭರಣವೂ, **"ಮತ್ತಸ್ಸರ್ವಂ ಪ್ರವರ್ತತೇ"** ಎಂಬಲ್ಲಿ ಸರ್ವನಿಯನ್ತೃತ್ವವೂ, **"ನಾಂತೋಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ"** ಎಂಬಲ್ಲಿ ಸರ್ವಸ್ವಾಮ್ಯತ್ವವೂ ಹೇಳಲ್ಪಟ್ಟಿರು ವದರಿಂದ, ಹೇ ಪರಮೇಶ್ವರ ಎಂಬ ಸಂಬೋಧನೆಯು. ಹಿಂದೆಯೇ ತಾನೇ **ಭೂತಭಾವನ ಭೂತೇಶ ದೇವದೇವ ಜಗತ್ಪತೇ** ಎಂಬಲ್ಲಿಯೇ ಪುರುಷೋತ್ತಮನೆಂಬುದನ್ನು ವ್ಯಕ್ತಪಡಿ ಸಿದ್ದನು ; ಅದನ್ನೇ ಈಗ ಪುರುಷೋತ್ತಮ ಎಂಬ ಸಂಬೋಧನೆಯಿಂದಲೂ ಅರ್ಜುನನ ಅನುವಾದ ರೂಪವಾಗಿ ಹೇಳುತ್ತಾನೆ. ಪುರುಷ ಶಬ್ದಕ್ಕೆ **ಪುರಿಶೇತೇ**-ದೇಹವೆಂಬ ಪಟ್ಟಣದಲ್ಲಿ ಮಲಗಿರು ವವನು ಆತ್ಮಾ ಎಂಬರ್ಥದಿಂದ ಪುರುಷನು ಬದ್ಧಜೀವನು. ಉತ್ ಪುರುಷನು ಎಂಬುದರಿಂದ ಈ ಬದ್ಧಶರೀರದಿಂದ ಉತ್ತಾರಣೆಯನ್ನು ಹೊಂದಿದ ಮುಕ್ತನು ಹೇಳಲ್ಪಟ್ಟನು, ಉತ್ತಮಪುರು ಷನು ಸ್ವಾಮಿಸಙ್ಕಲ್ಪದಿಂದ ಎಂದಿಗೂ ಕರ್ಮಬಂಧವೇ ಇಲ್ಲದ ನಿತ್ಯಸೂರಿಯು, **ಉತ್ತಮ ಪುರು ಷನು, ಈ ಮೂರುವಿಧ ಆತ್ಮರುಗಳಿಗಿಂತ ವಿಲಕ್ಷಣವಾಗಿ** ಸರ್ವಶ್ರೇಷ್ಠನಾಗಿರುವ ಭಗವಂತನು

**ಭಾ. ಹೇ ಪರಮೇಶ್ವರ, ಏವಮೇತದಿತ್ಯವಧೃತಂ. ಯಥಾತ್ಥ-ತ್ವಮಾತ್ಮಾನಂ ಬ್ರವೀಷಿ, ಪುರುಷೋತ್ತಮ ಆಶ್ರಿತ ವಾತ್ಸಲ್ಯಜಲಧೇ, ತವೈಶ್ವರಂ-ತ್ವದಸಾಧಾರಣಂ, ಸರ್ವಸ್ಯ**

ಸರ್ವವಿಲಕ್ಷಣನು ಪರಮಾತ್ಮನು ಹೇಗೆಂಬುದು ಮುಂದೆ (೧೫. ೧೬-೧೭.೧೮) **ಹೇಳಲ್ಪಡುತ್ತದೆ.** ಹೀಗೆ ಆತ್ಮರುಗಳು ಪುರುಷ, ಉತ್ಪುರುಷ, ಉತ್ತರ ಪುರುಷ ಉತ್ತಮ ಪುರುಷನೆಂದು ನಾಲ್ಕು ವಿಧರು. ಹೀಗೆ ಸರ್ವಾತ್ಮ ವಿಲಕ್ಷಣನೆಂದು ಹೇಳುವದಕ್ಕಾಗಿ **ಪುರುಷೋತ್ತಮ** ನೆಂಬ ಸಂಬೋಧನೆಯು. ಈ ಸಂದರ್ಭದಲ್ಲಿ ಪಾದ್ಮ ಪುರಾಣದ ನಾಮ ನಿರ್ವಚನಾಧ್ಯಾಯದಲ್ಲಿ ಹೇಳಿರುವುದು ಅನುಸಂಧೇಯವು. **ಪ್ರೋಕ್ಷಂಜ್ಞೇಶು ಶರೀರೇಽಸ್ಮಿನ್ ಶಯನಾತ್ ಪುರುಷೋ ಹರಿಃ। ಶಕಾರಸ್ಯ ಷಕಾರೋಽಯಂ ವ್ಯತ್ಯಾಸೇನ ಪ್ರಯುಜ್ಯತೇ॥ ಯದ್ವಾಪುರೇ ಶರೀರೇಽಸ್ಮಿನ್ ಆಸ್ತೇ ಸಪುರುಷೋ ಹರಿಃ। ಯದಿ ವಾ ಪುರಿವಾಸೀತಿ ಪುರುಷಃ ಪ್ರೋಚ್ಯತೇ ಹರಿಃ॥ ಯದಿವಾ ಪೂರ್ವಮೇವಾಹ ಮಿಹೇತಿಪುರುಷಂ ವಿದುಃ॥ ಯದಿವಾ ಬಹುದಾನಾದ್ವೈವಿಷ್ಣುಃ ಪುರುಷಉಚ್ಯತೇ॥ ಪೂರ್ಣತ್ವಾತ್ಪುರುಷೋ ವಿಷ್ಣುಃ ಪುರಾಣತ್ವಾಚ್ಚ ಶಾರ್ಙ್ಗಿಣಃ। ಪುರಾಣ ಭಜನಾ ಚ್ಚಾಪಿವಿಷ್ಣುಃ ಪುರುಷ ಈರ್ಯತೇ॥** ಈ ಶರೀರದಲ್ಲಿ ಶಯನಿಸಿರುವದರಿಂದ ಪುರುಷ ಶಬ್ದವಾಚ್ಯನು ಶ್ರೀ ಹರಿಯು. ಇಲ್ಲಿ ಷಕಾರವಿದೆಯಲ್ಲಾ ಎಂದರೆ ಷಕಾರ ಶಕಾರಗಳು ವ್ಯತ್ಯಸ್ತವಾಗಿ ಪ್ರಯೋಗಿಸಲ್ಪಡುತ್ತವೆ. ಅಥವಾ ಈ ಶರೀರದಲ್ಲಿ **ಆಸ್ತೇ** ಇರುತ್ತಾನೆ, ಆದುದರಿಂದ ಪುರುಷನು ಶ್ರೀ ಹರಿಯು, ಅಥವಾ ಮೊದಲಿನಿಂದಲೂ ಅನಾದಿಯಾಗಿರುತ್ತಾನಾದ್ದರಿಂದಾಗಲಿ, ಪುರುಷನು ಶ್ರೀಹರಿಯು. ಅಥವಾ **ಪುರು** ಎಂದರೆ ಉದಾರನಾಗಿ ತುಂಬಾ ಅಧಿಕವಾಗಿ ಆಶ್ರಿತರಿಗೆ ಕೊಡುತ್ತಾನೆ, ಆದುದರಿಂದ ಪುರುಷನು ವಿಷ್ಣುವು ಪೂರ್ಣತ್ವವಿರುವದರಿಂದಲಾಗಲಿ, ಪುರಾಣತ್ವವೆಂದರೆ ಸನಾತನತ್ವವಿರುವದರಿಂದಾಗಲಿ ಪುರುಷನು ವಿಷ್ಣುವು. ಬಹುಕಾಲದಿಂದಲೂ ಪ್ರಪನ್ನರು ಭಜಿಸುವದರಿಂದಲಾಗಲಿ ಪುರುಷನು ವಿಷ್ಣುವು, ಎಂಬುದು ಮೇಲಿನ ವಾಕ್ಯಗಳ ಅರ್ಥವು. ಇದರಿಂದ ಪರಮೇಶ್ವರ, ಪರಮ ಪುರುಷ ಶಬ್ದಗಳು ಪುರುಷ ಸೂಕ್ತದಲ್ಲಿ ಹೇಳಲ್ಪಟ್ಟ ಲಕ್ಷ್ಮೀಪತಿಯಾದ ನಾರಾಯಣನೇ ಎಂದು ಪರದೇವತಾ ಪಾರಮಾರ್ಥ್ಯವನ್ನು ಪ್ರಕಟಿಸುತ್ತವೆ.

**ಭಾಷ್ಯಾರ್ಥವು:**—ಈಗ ವಿಭೂತಿ ವಿಸ್ತಾರಾಧ್ಯಾಯದಿಂದ ಅರ್ಜುನನಿಗೆ ಉಪದೇಶಿಸಲ್ಪಟ್ಟದ್ದು ಏನೆಂದರೆ?—ತಾನು ಸರ್ವ ಶರೀರಕನು ಸರ್ವಾತ್ಮಕನು ಸರ್ವನಿಯನ್ತಾ; ಆದುದರಿಂದ ಪ್ರಕರಣಾನುಗುಣವಾಗಿ ಇವೆಲ್ಲಾಭಾವವನ್ನೂ ತಾನು ಗ್ರಹಿಸಿದೆನೆಂದೂ, ಮುಖ್ಯವಾಗಿ ಜಗತ್ತಿನೊಂದಿಗೆ ತನಗಿರುವ ಅವಿನಾ ಭೂತತ್ವವನ್ನೂ, **"ವಿಷ್ಟಭ್ಯಾಹ ಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್"** ಎಂಬಲ್ಲಿ ಹೇಳಲ್ಪಟ್ಟ ಸಾರಭೂತಾರ್ಥವನ್ನು ತಾನು ಗ್ರಹಿಸಿರುತ್ತೇನೆಂದೂ ತಿಳಿಸುವದಕ್ಕಾಗಿ. **ಪರಮೇಶ್ವರ** ಎಂಬ ಸಂಬೋಧನೆಯು. ಓ ಪರಮೇಶ್ವರನೇ **ಏವ ಮೇತದಿತ್ಯವಧೃತಂ**-ತಮ್ಮಿಂದ ಉಪದೇಶರೂಪದಲ್ಲಿ ಕೇಳಲ್ಪಟ್ಟುದುದನ್ನು, **ಯಥಾತ್ಥ** ಎಂದರೆ, **ತ್ವಂ ಆತ್ಮಾನಂ ಬ್ರವೀಷಿ**-ನೀನು ನಿನ್ನನ್ನು ಕುರಿತು ಹೇಗೆ ಹೇಳಿರುತ್ತೀಯೋ, **ಹೇ ಪುರುಷೋತ್ತಮ**—ಓ ದೇಹವನ್ನು ಹೊಂದಿರುವ ಬದ್ಧಾದಿ ಜೀವರುಗಳಿಗಿಂತಲೂ ಸರ್ವಶ್ರೇಷ್ಠನೇ. ತ್ರಿವಿಧ ಚೇತನರುಗಳಿಗಿಂತಲೂ ವಿಲಕ್ಷಣನೇ, **ಆಶ್ರಿತವಾತ್ಸಲ್ಯಜಲಧೇ**—ಆಶ್ರಿತ ಭಕ್ತರಲ್ಲಿರುವ ದೋಷಗಳನ್ನು ಪರಿಗಣಿಸದೆ ರಕ್ಷಿಸಬೇಕೆಂಬ ವಾತ್ಸಲ್ಯಕ್ಕೆ ಸಮುದ್ರರೂಪನೇ, **"ದೋಷೋ ಯದ್ಯಪಿ ತಸ್ಯ ಸ್ಯಾತ್ಸತಾಮೇತದಗರ್ಹಿತಂ"** ಆಶ್ರಿತರಲ್ಲಿ ದೋಷವಿದ್ದರೇನು, ಅಂತಹ ಪಾಪಿಯನ್ನೂ ಕೂಡ ರಕ್ಷಿಸುವದು ಸತ್ಪುರುಷರಿಗೇನೂ

**ಭಾ. ಪ್ರಕಾಸಿತೃತ್ವೇ, ಪಾಲಯಿತೃತ್ವೇ, ಸ್ರಷ್ಟೃತ್ವೇ, ಸಂಹರ್ತೃತ್ವೇ, ಭರ್ತೃತ್ವೇ ಕಲ್ಯಾಣಗುಣಾಕರತ್ವೇ. ಪರತರತ್ವೇ, ಸಕಲೇತರ ವಿಸಜಾತೀಯತ್ವೇ, ಅವಸ್ಥಿತಂ ರೂಪಂ ದ್ರಷ್ಟುಮ್—ಸಾಕ್ಷಾತ್ಕರ್ತುಮಿಚ್ಛಾಮಿ ॥೩॥**

ನಿಂದಿತವಲ್ಲವೆಂದು ಹೇಳಿದನಂತರ. ಪುರುಷೋತ್ತಮನಲ್ಲವಾದರೋ ಅಂತವನ ರಕ್ಷಣೆಯು ಆತನ ಮಾಹಾತ್ಮ್ಯಗೆ ಯುಕ್ತವಾದುದೆಂಬ ಭಾವದಿಂದ, **ಆಶ್ರಿತ ವಾತ್ಸಲ್ಯ ಜಲಧೇ** ಎಂಬ ಸಂಬೋಧನೆಯು. **ಪುರುಷ** ಶಬ್ದಕ್ಕೆ ಇನ್ನೊಂದು ವಿವರಣೆ **ಪುರು ಸನೋತೀತಿ ಪುರುಷಃ** ಎಂಬ **ವ್ಯುತ್ಪತ್ತಿ**ಯನ್ನೂ ಅಲ್ಲದೆ, **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್** ಎಂಬ ಶ್ರುತಿಯಲ್ಲಿರುವ **ವಿದಧಾತಿಕಾಮಾನ್** ಎಂಬುದರ ತಾತ್ಪರ್ಯವಾಗಿ, **ವಿಶೇಷವಾಗಿ ಪುರುಷಾರ್ಥಗಳನ್ನೀಯುವ ಪರಮ ದಾತಾ** ಎಂಬರ್ಥವುಂಟಾಗುತ್ತದೆ. ಅಂತವನು ಭಕ್ತರ ದೋಷಾನಭಿಜ್ಞನಾಗಿರುವುದರಲ್ಲಿ ಸಂದೇಹವಿಲ್ಲವು, ಆದುದರಿಂದಲೇ **ಆಶ್ರಿತ ವಾತ್ಸಲ್ಯ ಜಲಧೇ** ಎಂಬ ಭಾಷ್ಯವು. ಹೀಗೆ ಪರಮೇಶ್ವರ ಮತ್ತು **ಪುರುಷೋತ್ತಮ** ಎಂಬೆರಡು ಸಂಬೋಧನೆಗಳಿಂದ ಅರ್ಜುನನು ಶ್ರೀ ಕೃಷ್ಣನಲ್ಲಿ ಪರತ್ವವೂ ಭಕ್ತಾನುಗ್ರಹ ವಾತ್ಸಲ್ಯವೂ ಎರಡೂ ಉಂಟೆಂದು ಭಾವಿಸಿ ತನ್ನ ಅಭಿಮತವನ್ನು ತಿಳಿಸುತ್ತಾನೆ. ಶ್ರೀ ವಾಲ್ಮೀಕಿ ಮಹರ್ಷಿಯೂ ಇಂತಹ ಪುರುಷೋತ್ತಮನಾದ ಶ್ರೀ ರಾಮನಲ್ಲಿರುವ ಗುಣವನ್ನು ಹೀಗೆಯೇ ವರ್ಣಿಸಿರುತ್ತಾರೆ **"ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ । ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ"** ತನ್ನಲ್ಲಿ ಭಕ್ತಿಯುಳ್ಳವನು ಹೇಗೇಯಾಗಲಿ ಒಂದು ವ್ಯಾಜರೂಪದಲ್ಲಿ ಯಾದೃಚ್ಛಿಕವಾಗಿಯೋ, ತನಗೆ ಹಿತಕ್ಕಾಗಿಯೋ ಹೇಗೋ ಅಲ್ಪ ಸುಕೃತವಾದ ಶರಣಾಗತಿಯನ್ನು ಅನುಷ್ಠಿಸಿದರೆ, ತನ್ನ ಆಶ್ರಿತನನ್ನು ತನ್ನವನೆಂದು ಭಾವಿಸಿ ಆತನಲ್ಲಿ ಸಹಸ್ರಾಪರಾಧಗಳನ್ನು ಪರಿಗಣಿಸದೆ ವಾತ್ಸಲ್ಯಾತಿರೇಕವನ್ನು ಹೊಂದಿದವನೆಂದು ಹೇಳಲ್ಪಟ್ಟಿರುತ್ತದೆ ಕಾಪುರುಷರು ಇದಕ್ಕೆ ವ್ಯತಿರಿಕ್ತವಾಗಿ ಕಾಣುವವರು. ಸರ್ಷಪ ಮಾತ್ರ ದೋಷವನ್ನು ಮೇರು ಪರ್ವತದಷ್ಟಾಗಿ ಭಾವಿಸುವರು. ಇಂತಹ ಪರಮ ಪುರುಷನಿಗಾದರೋ ಅಂತಹ ಅಪರಾಧಗಳಾವುವೂ ಕಣ್ಣಿಗೇನೇ ಬೀಳುವುದಿಲ್ಲವು. ಆತನು **"ಅವಿಜ್ಞಾತಾ"**. ಆದುದರಿಂದ **ಆಶ್ರಿತವಾತ್ಸಲ್ಯ ಜಲಧಿಯು " ಎನ್ನಡಿಯಾರ್ ಅದು ಶೆಯ್ಯಾರ್ "** ನನ್ನ ದಾಸರಾದ ಭಕ್ತರು ಅಂತಹ ದೋಷಕೃತ್ಯವನ್ನು ಎಂದಿಗೂ ಮಾಡರು ಎಂದು ಹೇಳುವ **ಪರಮ ಪುರುಷನು.** ಮುಂದೆ **ರೂಪಮೈಶ್ವರಂ ದ್ರಷ್ಟುಮಿಚ್ಛಾಮಿ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ. ನಿನ್ನ ಐಶ್ವರ ವೆಂದರೆ ಸರ್ವ ನಿಯಮನ ಸ್ವಭಾವವನ್ನು ಚೆನ್ನಾಗಿ ವ್ಯಕ್ತಪಡಿಸುವ ರೂಪವನ್ನು ಎಂದರೆ ದಿವ್ಯಾಂಗಳ ವಿಗ್ರಹವನ್ನು ನೋಡಲಪೇಕ್ಷಿಸುತ್ತೇನೆ ಎಂಬ ಭಾವವು. ಇಲ್ಲಿ ಐಶ್ವರ ಶಬ್ದದಿಂದ ಯಾವ ಯಾವ ಗುಣಗಳು ಸೂಚಿಸಲ್ಪಟ್ಟಿವೆಂಬುದನ್ನು ತಿಳಿಸುತ್ತಾರೆ. **ತವೈಶ್ವರಂ** ಎಂದರೆ **ತ್ವದ ಸಾಧಾರಣಂ** ಇತರರಿಗಿಲ್ಲದ ನಿನಗೆ ಮಾತ್ರ ಸಲ್ಲತಕ್ಕ ಇದು ಮುಂದೆ ಇರುವ **"ಅವಸ್ಥಿತಂ ರೂಪಂ"** ಎಂಬುದಕ್ಕೆ ವಿಶೇಷಣವು. **ಸರ್ವಸ್ಯ ಪ್ರಕಾಸಿತೃತ್ವೇ- "ಮತ್ತಸ್ಸರ್ವಂ ಪ್ರವರ್ತತೇ"** (೧೦-೮) ಎಂದ ಹೇಳುವಹಾಗೆ ಎಲ್ಲವನ್ನೂ ಬೆಳಗಿಸುವದರಲ್ಲೂ, **ಪಾಲಯಿತೃತ್ವೇ- "ಗತಿರ್ಭರ್ತಾ ಪ್ರಭುಸ್ಸಾಕ್ಷೀನಿವಾಸಶ್ಶರಣಂ ಸುಹೃತ್"** (ಎಂದೂ) **ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ನಾಶಯಾಮಿ** (೧೦-೧೧) **"ದದಾಮಿ ಬುದ್ಧಿಯೋಗಂ ತಂ"** (೧೦-೧೦) ಎಂದೂ, ಹೀಗೆಲ್ಲಾ ಹೇಳಿರುವಹಾಗೆ ರಕ್ಷಿಸುವದರಲ್ಲೂ, **ಸ್ರಷ್ಟೃತ್ವೇ ಸಂಹರ್ತೃತ್ವೇ " ಅಹಮಾದಿಶ್ಚ ಮಧ್ಯಂಚ ಭೂತಾನಾಮನ್ತ ಏವಚ "** ಎಂದೂ (ಗೀ. ೧೦.೨೦) **" ಅಹಂ ಸರ್ವಸ್ಯ ಪ್ರಭವಃ "** (ಗೀ. ೧೦-೮)

ಎಂದೂ ಹೇಳಿರುವಹಾಗೆ, ಸೃಷ್ಟಿಸುವದರಲ್ಲೂ, ಪ್ರಳಯವನ್ನು ಹೊಂದಿಸುವದರಲ್ಲೂ, **ಭರ್ತೃತ್ವೇ**- “ **ಗತಿರ್ಭರ್ತಾ** ” ಎಂಬಲ್ಲಿ ಹೇಳಿರುವಹಾಗೆ ಭರಿಸುವದರಲ್ಲೂ, **ಪರತರತ್ವೇ**—“ **ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ** ” ಎಂಬಲ್ಲಿ ಹೇಳಿರುವ ಹಾಗೆ ಎಲ್ಲಕ್ಕಿಂತಲೂ ವಿಲಕ್ಷಣವಾಗಿರುವ ಪರತ್ವದಲ್ಲೂ, ಹೀಗೆ **ಸಕಲೇತರ ವಿಸಜಾತೀಯತ್ವೇ, ಅವಸ್ಥಿತಂ**-ತನಗಿಂತಲೂ ಬೇರೆಯಾದ ಸರ್ವ ಚಿದಚಿತ್ತುಗಳಿಗಿಂತಲೂ ವಿಲಕ್ಷಣನಾಗಿರುವ, **ರೂಪಂ**—ದಿವ್ಯ ಮಂಗಳವಿಗ್ರಹವನ್ನು, **ದ್ರಷ್ಟುಂ**-ಸಾಕ್ಷಾತ್ಕರಿಸಲು, ಈ ಪ್ರಾಕೃತ ಚಕ್ಷುಸ್ಸುಗಳಿಂದ ನೋಡಲು ಸಾಧ್ಯವಲ್ಲದುದರಿಂದ, **ಸಾಕ್ಷಾತ್ಕರ್ತುಂ** ಎಂಬ ವ್ಯಾಖ್ಯಾನವು. **ಇಚ್ಛಾಮಿ**-ಅಪೇಕ್ಷಿಸುತ್ತೇನೆ. ನೀನು ಧರಿಸುವ ದಿವ್ಯ ಮಂಗಳ ವಿಗ್ರಹವು ಈ ಸರ್ವ ಭಾವಗಳನ್ನೂ ವ್ಯಕ್ತಪಡಿಸಬೇಕೆಂಬ ಆಶಯದಿಂದ, **ತವ ಐಶ್ವರಂ** ಎಂದು ಹೇಳಲ್ಪಟ್ಟಿತೆಂಬ ಭಾವವು. ಇಲ್ಲಿ ನಿಯಮನ ಶಕ್ತಿಯನ್ನು ತೋರಿಸುವ ರೂಪವೆಂಬುವದರಿಂದ ಮುಂದೆ ೩೩ ನೆಯ ಶ್ಲೋಕಾಭಿಪ್ರಾಯವೂ, ಪಾಲಯಿತೃತ್ವದಲ್ಲಿರುವ ರೂಪವೆಂಬುದರಿಂದ ೩೬ನೆಯ ಶ್ಲೋಕಾಭಿಪ್ರಾಯವೂ, ಸೃಷ್ಟೃತ್ವ ಸಂಹರ್ತೃತ್ವದಲ್ಲಿರುವ ರೂಪವೆಂಬುದರಿಂದ ೧೯ ನೆಯ ಮತ್ತು ೨೯, ೩೦ ನೆಯ ಶ್ಲೋಕಾಭಿಪ್ರಾಯವೂ, ಪರತತ್ವವನ್ನು ಸೂಚಿಸುವ ರೂಪವೆಂಬುದರಿಂದ ಮುಂದೆ ೧೫ ನೆಯ ಶ್ಲೋಕಾಭಿಪ್ರಾಯವೂ, ಹೀಗೆಯೇ ಮುಂದಿನ ಶ್ಲೋಕಗಳಲ್ಲಿ ಈ ಎಲ್ಲಾ ಭಾವಗಳೂ ವ್ಯಕ್ತವು. ಆದುದರಿಂದಲೇ **ತವ ಐಶ್ವರಂ** ಎಂಬುದರಿಂದ ಈ ಭಾವಗಳು ಸೂಚಿತವೆಂದು ವ್ಯಾಖ್ಯಾನಮಾಡಿರುತ್ತಾರೆ. ಅಥವಾ ಹಿಂದಿನ ಉಪದೇಶದಿಂದಲೇ **ಏವಮೇತತ್** ಎಂದು ಎರಡು ಪದ ವಿವಕ್ಷಿತಾರ್ಥಗಳೆಂದಾಗಲಿ, ಅಥವಾ ಅರ್ಜುನನ ಪರಮೇಶ್ವರ, ಪುರುಷೋತ್ತಮ ಎಂಬೆರಡು ಸಂಬೋಧನಾರ್ಥಗಳ ವಿವರಣೆ ಎಂದಾಗಲಿ ಹಾಗೆ ಭಾಷ್ಯವೆಂದೂ ಭಾವಿಸಬಹುದು, **ಪಶ್ಯ ಮೇ ಯೋಗಮೈಶ್ವರಂ** (೧೧-೮) ಎಂದು ಮುಂದೆಯೂ ಈ ಪ್ರಯೋಗವೇ ಇರುವದರಿಂದ, ಹಿಂದೆ ಕೇಳಿ ತಿಳಿದುದನ್ನೇ ಈಗ ನೋಡಬೇಕೆಂಬ ಅಭಿಲಾಷೆಯಿಂದ ಅರ್ಜುನನು ಪ್ರೇರಿತನಾಗಿದ್ದಾನೆಂದೂ ಅದನ್ನೇ ಸಾಕ್ಷಾತ್ಕರಿಸುವದರಿಂದಲೂ, **ಯೋಗಮೈಶ್ವರಂ** ಎಂಬುದಕ್ಕೆ ಹೀಗೆ ಎರಡು ವಿಧವಾಗಿ ಉಪಪಾದನೆಯೂ ಸಾಧ್ಯವು. ಇಲ್ಲಿ ರೂಪಶಬ್ದವು ಸಾಕ್ಷಾತ್ಕರಿಸುವ ರೂಪವಾದ್ದರಿಂದ ದಿವ್ಯಮಂಗಳ ವಿಗ್ರಹವೆಂದು ಅರ್ಥಮಾಡಲ್ಪಟ್ಟಿತು. ರೂಪ ಶಬ್ದಕ್ಕೆ ಪ್ರಕಾರವೆಂಬರ್ಥವಾದುದರಿಂದ ಸ್ವರೂಪ ನಿರೂಪಕ ಧರ್ಮಗಳೂ ಈ ರೂಪದಲ್ಲೇ ಗರ್ಭಿತವೆಂದರ್ಥಮಾಡುವದಕ್ಕೇನೂ ಅಭ್ಯಂತರವಿಲ್ಲವು. ಆದರೆ ಮುಂದೆ ೫ ನೆಯ ಶ್ಲೋಕದಲ್ಲಿ “ **ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ**” ಎಂಬ ಪ್ರಯೋಗವಿರುವದರಿಂದ ಇಲ್ಲಿ ರೂಪಶಬ್ದದಿಂದ ದಿವ್ಯಮಂಗಳ ವಿಗ್ರಹವೆಂಬರ್ಥವೇ ಉಚಿತವು. ಅದು **ಶತಶಃ ಸಹಸ್ರಶಃ** ನಾನಾಪ್ರಕಾರವಾಗಿರಬಹುದೆಂಬ ಭಾವವೂ ವ್ಯಕ್ತವು. **ದ್ರಷ್ಟುಮಿಚ್ಛಾಮಿ** ಎಂಬಲ್ಲಿ ಉಪಾಸನಮೂಲಕವಾಗಿ ನಿನ್ನನ್ನು ಸಾಕ್ಷಾತ್ಕರಿಸಬೇಕೆಂಬ ಅರ್ಥವಲ್ಲವು. ಮುಂದಿನ ಶ್ಲೋಕದಲ್ಲಿ ಈ ಪ್ರಾಕೃತ ಚಕ್ಷುಸ್ಸಿನಿಂದ ನಿನ್ನನ್ನು ನೋಡಲು ಸಾಧ್ಯವಿರಲಾರದೆಂಬ ಶಬ್ದವನ್ನು ಅರ್ಜುನನೇ ಪ್ರಯೋಗಿಸಿ ಹೇಳುತ್ತಾನೆ. ಆದುದರಿಂದ ದಿವ್ಯಚಕ್ಷುಸ್ಸನ್ನು ಶ್ರೀಕೃಷ್ಣನು ದಯಪಾಲಿಸಿದರೆ ಆಗ ಸಾಕ್ಷಾತ್ತಾಗಿ ನೋಡಬಹುದೆಂಬ ಅಭಿಪ್ರಾಯದಿಂದ **ದ್ರಷ್ಟುಮಿಚ್ಛಾಮಿ** ಎಂದು ಹೇಳುತ್ತಾನೆ. ಇದಕ್ಕನುಸಾರವಾಗಿಯೇ ಶ್ರೀ ಕೃಷ್ಣ ಭಗವಾನರವರು **ದಿವ್ಯಂ ದದಾಮಿ ತೇ ಚಕ್ಷುಃ** ಎಂದು ದಯಪಾಲಿಸಿ ಸಾಕ್ಷಾತ್ತಾಗಿ ನೋಡುವ ಹಾಗೆ ಮಾಡುತ್ತಾರೆ. ಅಕ್ರೂರರಿಗೆ ಸ್ನಾನಮಾಡುವಾಗಲೂ, ಯಶೋದೆಗೆ ಮಣ್ಣು ತಿನ್ನಲಿಲ್ಲವೆಂದು ಬಾಯಿ ತೆಗೆದು ತೋರಿಸುವಾಗಲೂ ಅಂತಹ ದಿವ್ಯಚಕ್ಷುಸ್ಸನ್ನೇ ದಯಪಾಲಿಸಿ ತನ್ನ ಮಹಿಮೆಯನ್ನು ತೋರಿಸಿರುತ್ತಾರೆ. ಆದುದರಿಂದ **ದ್ರಷ್ಟುಮಿಚ್ಛಾಮಿ** ಎಂದು ಹೇಳಿರುವದು ಉಪಾಸನ ಮೂಲಕವಾದ ಸಾಕ್ಷಾತ್ಕಾರವಲ್ಲವು ॥ ೩ ॥

**ಮೂ. ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ॥** ೪.

**ಮೂಲಕ್ಕೆ ಅರ್ಥವು:—**ನೀನು ದಯಮಾಡಿ ಉಪದೇಶಿಸಿದ ಸ್ವರೂಪರೂಪ ವಿಭವೈಶ್ವರ್ಯಾದಿಗಳನ್ನೆಲ್ಲಾ ಸಾಕ್ಷಾತ್ತಾಗಿ ಚಕ್ಷುಸ್ಸಿನಿಂದ ನೋಡಬೇಕೆಂಬ ಕುತೂಹಲದಿಂದ **ದ್ರಷ್ಟುಮಿಚ್ಛಾಮಿ** ಎಂದು ಪ್ರಾರ್ಥಿಸಿದ್ದೇನೋ ಆಯಿತು. ಆದರೆ ಅರ್ಜುನನಿಗೆ ಸ್ವಲ್ಪಸಂದೇಹ ಉಂಟಾಗಿ ಪುನಃ ಕೇಳಿಕೊಳ್ಳುತ್ತಾನೆ. ಇಷ್ಟೆಲ್ಲಾ ಅತನು ದಯಪಾಲಿಸುವದಕ್ಕೆ ತಾನು ಯೋಗ್ಯನಹುದೋ ಅಲ್ಲವೊ? ಅಥವಾ ಆತನು ತೋರಿಸಿದರೂ ತನಗೆ ಈ ಪ್ರಾಕೃತಚಕ್ಷುಸ್ಸಿನಿಂದ ನೋಡಲು ಸಾಧ್ಯವಾಗುತ್ತದೆಯೋ ಇಲ್ಲವೋ? ಎಂಬ ಸಂದೇಹದಿಂದ **ಪುನಃಹೇಳುತ್ತಾನೆ. ಏನೆಂದರೆ—ಹೇ ಪ್ರಭೋ—**ಅಘಟಿತಘಟನಾದಿ ಸರ್ವಶಕ್ತಿಗಳುಳ್ಳ ಸ್ವಾಮಿಯೇ! ನೀನು ಇಂತಹ ಅಚಿನ್ತ್ಯಶಕ್ತಿಯುಳ್ಳವನಾದುದರಿಂದ ನನ್ನ ಸಂದೇಹಕ್ಕೆ ಕಾರಣವಿಲ್ಲವೆಂದು **ಭಾವಿಸಿದವನಾಗಿ. ಹೇ ಪ್ರಭೋ** ಎಂಬ ಸಂಬೋಧನೆಯು. **ತತ್**—ಆ ಮಹತ್ತಾದ ವಿಭೂತಿಗಳ ಯೋಗವನ್ನು ಪ್ರದರ್ಶಿಸುವ ದಿವ್ಯಮಂಗಳವಿಗ್ರಹವನ್ನು. **ಮಯಾದ್ರಷ್ಟುಮ್**-ನನ್ನಂತಹ ಸಾಧಾರಣ ಮನುಷ್ಯನಿಂದ ಈ ಮಾಂಸಚಕ್ಷುಸ್ಸಿನಿಂದಲೇ ನೋಡಲು, **ಶಕ್ಯಮಿತಿ**-ಸಾಧ್ಯವೆಂದು, **ಮನ್ಯಸೇಯದಿ** ನೀನು ತಿಳಿದಿರುವಿಯಾದರೆ. **ಹೇ ಯೋಗೇಶ್ವರ** ಓ ಕಲ್ಯಾಣಗುಣಗಳಯೋಗ ಮತ್ತು ವಿಭೂತಿ ಯೋಗಗಳಿಗೆ ಸ್ವಾಮಿಯೇ. **ತತಃ**-ಆಕಾರಣದಿಂದ. **ತ್ವಂ**-ಕಾರುಣ್ಯವಾತ್ಸಲ್ಯ ಸೌಶೀಲ್ಯಾದಿ ಕಲ್ಯಾಣ ಮಹೋದಧಿಯಾದ ನೀನು. **ಮೇ** ನಿನ್ನ ಪರಮಭಕ್ತನಾಗಿ ನಿನ್ನ ಈ ದಿವ್ಯರೂಪವನ್ನು ನೋಡಬೇಕೆಂಬ ಕುತೂಹಲವುಳ್ಳನನಗೆ, **ಆತ್ಮಾನಂ**-ನಿನ್ನನ್ನು. **ಅವ್ಯಯಮ್**-ಸ್ವಲ್ಪವೂನ್ಯೂನತೆ ಇಲ್ಲದಿರೋಣ ಹೇಗೋಹಾಗೆ ಸರ್ವೈಶ್ವರ್ಯಯೋಗದಿಂದ ಪರಿಪೂರ್ಣನಾಗಿ, **ದರ್ಶಯ**-ದಯಮಾಡಿ ತೋರಿಸು. ಮಹತ್ತಾದ ಐಶ್ವರ್ಯದಲ್ಲಿರುವ ನೀನೆಲ್ಲಿ? ಮಹಾಪಾಪಿಯಾಗಿ ಮನುಷ್ಯಶರೀರಕನಾದ ನಾನೆಲ್ಲಿ; ಅಂಥವನನ್ನು ಈ ನಿಕೃಷ್ಟದೆಶೆಯಲ್ಲಿರುವವನು ನೋಡಲು ಸಾಧ್ಯವೇ? ಆದುದರಿಂದ **ಮಯಾ ದ್ರಷ್ಟುಂ ತಚ್ಛಕ್ಯಮಿತಿ ಮನ್ಯಸೇ ಯದಿ** ಎಂದು ಸಂಶಯಾವಿಷ್ಕೃತಿಯನ್ನು ತೋರಿಸುವದಕ್ಕಾಗಿ ನಿಕೃಷ್ಟನಾದ **ಮಯಾ** ಎಂಬ ಪ್ರಯೋಗವು. ನೋಡುವದು ಕಣ್ಣಿನಮೂಲಕವಾಗಿ; ಇಂತಹ ಅಪರಿಮಿತ ನಿರತಿಶಯ ವಿಭೂತಿಗಳ ಯೋಗದಿಂದಿರುವವನನ್ನು **ಈ** ಕಣ್ಣುಗಳ ಮೂಲಕವಾಗಿ **ದ್ರಷ್ಟುಂಶಕ್ಯಮಿತಿ ಯದಿಮನ್ಯಸೇ**. ಆಗ ತೋರಿಸು ಎಂದೂ ಪ್ರಾರ್ಥಿಸುತ್ತಾನೆ. ಈ ಕಣ್ಣುಗಳಮೂಲಕ ಸಾಧ್ಯವಾಗದೆ ಮುಂದೆ ದಿವ್ಯಚಕ್ಷುಸ್ಸನ್ನು **"ದಿವ್ಯಂ ದದಾಮಿತೇ ಚಕ್ಷುಃ"** (೧೧-೮) ಎಂದು ಹೇಳಿ ದಯಪಾಲಿಸುತ್ತಾನೆ. **ಮನ್ಯಸೇಯದಿ** ಎಂಬ ಪ್ರಯೋಗದಿಂದ ಸ್ವಾಮಿ ತಿಳುವಳಿಕೆಯಲ್ಲಿ ಏನೆಂದು ಸಂದೇಹದಿಂದ ಹೇಳಿದ ವಾಕ್ಯವಲ್ಲವು. ಸ್ವಾಮಿಸರ್ವಜ್ಞನಾದುದರಿಂದ ಎಲ್ಲಿಯೂ ಆತನಿಗೆ ನಿಶ್ಚಯವೇ ಮತ್ತು ನಿಶ್ಚಯವೇ ಸರಿ. ಈತನಿಂದ ಈ ಚರ್ಮಚಕ್ಷುಸ್ಸಿನಿಂದ ನೋಡಲು ಸಾಧ್ಯವು, ಸಾಧ್ಯವಿಲ್ಲವೆಂಬುದರಲ್ಲಿ ಶ್ರೀಕೃಷ್ಣನಿಗೇನೂ ಸಂದೇಹವಿಲ್ಲವು. ಅರ್ಜುನನಾದ ತನಗೆ ಸಾಕ್ಷಾತ್ಕರಿಸಲು ಸಾಧ್ಯವಾದರೆ ತೋರಿಸು. ಎಂಬ ಭಾವವು. ಹೇಗಾದರೂ ಮಾಡಿ ಸಾಧ್ಯವಾಗುವಹಾಗೆ ಮಾಡುವ ಶಕ್ತಿಯು ನಿನಗೆ ಉಂಟು ಎಂದು **ಹೇ ಪ್ರಭೋ** ಎಂದು ಸಂಬೋಧಿಸಿ, ಅನಂತರ **ತತಃ**-ಆ ಕಾರಣದಿಂದ ತನ್ನ ಪ್ರಾರ್ಥನೆಯು, **ದರ್ಶಯ** ಎಂದು ಬೇಡುತ್ತಾನೆ. ಇಲ್ಲಿ **ಆತ್ಮಾನಂದರ್ಶಯ**-ನಿನ್ನನ್ನು ತೋರಿಸು ಎಂದರೆ ನಿನ್ನ ಯಥಾರ್ಥಗಳಾದ ಸ್ವರೂಪಗುಣ ವಿಭವೈಶ್ವರ್ಯಗಳಿಂದ ಯುಕ್ತನಾಗಿರುವ ನಿನ್ನನ್ನು ತೋರಿಸು ಎಂಬ **ಭಾವವು**. ನಿನ್ನಿಂದ **ಸಾಕ್ಷಾತ್ಕರಿಸುವದು** ಸಾಧ್ಯವಿಲ್ಲವು. ಆದುದರಿಂದ **ಆಗುವದಿಲ್ಲವೆಂದು**

**ಭಾ. ತತ್-ಸರ್ವಸ್ಯಸ್ರಷ್ಟೃ, ಸರ್ವಸ್ಯಪ್ರಶಾಸಿತೃ, ಸರ್ವಸ್ಯಾಧಾರಭೂತಂ, ತ್ವದ್ರೂಪಂ, ಮಯಾದ್ರಷ್ಟುಂ ಶಕ್ಯಮಿತಿ ಯದಿಮನ್ಯಸೇ, ತತೋ ಯೋಗೇಶ್ವರ! ಯೋಗೋ-ಜ್ಞಾನಾದಿ ಕಲ್ಯಾಣಗುಣಯೋಗಃ, "ಪಶ್ಯಮೇ ಯೋಗಮೈಶ್ವರಂ" ಇತಿಹಿ ವಕ್ಷ್ಯತೇ। ತ್ವದ್ವ್ಯತಿರಿಕ್ತಸ್ಯ ಕಸ್ಯಾಪ್ಯಸಂಭಾವಿತಾನಾಂ ಜ್ಞಾನಬಲೈಶ್ವರ್ಯವೀರ್ಯ ಶಕ್ತಿ ತೇಜಸಾಂನಿಧೇ! ಆತ್ಮಾನಂ ತ್ವಾಮವ್ಯಯಂ ಮೇ ದರ್ಶಯ। ಅವ್ಯಯ ಮಿತಿ ಕ್ರಿಯಾವಿಶೇಷಣಮ್। ತ್ವಾಂ ಸಕಲಂ ಮೇ ದರ್ಶಯೇತ್ಯರ್ಥಃ ॥ ೪ ॥**

ಎಲ್ಲಿ ಹೇಳಿಬಿಟ್ಟಾನೋ ಎಂಬ ಭಯದಿಂದ, **ಹೇ ಪ್ರಭೋ** ಎಂಬ ಸಂಬೋಧನೆಯು; ನಿನಗೆ ಯಾವುದೂ ದುರ್ಲಭವಲ್ಲವು, ಅಘಟಿತ ಘಟನಾಶಕ್ತಿಯುಂಟು. ಸರ್ವಶಕ್ತನು ನೀನೆಂಬುದು ತನಗೆ ಚನ್ನಾಗಿ ತಿಳಿಯುವದೆಂದು **ಹೇ ಪ್ರಭೋ**-ಎಂದು ಶ್ರೀಕೃಷ್ಣನನ್ನು ಸಂಬೋಧಿಸಿ ಹೇಳುತ್ತಾನೆ—ಹೀಗೆ ನೀನು ಸರ್ವ ಐಶ್ವರ್ಯವನ್ನು ತೋರಿಸುವ ಸಾಮರ್ಥ್ಯವುಳ್ಳವನಾದುದರಿಂದ, ತೋರಿಸುವವರಲ್ಲಿ ಏನೊಂದೂ ನ್ಯೂನತೆಯೂ ಇಲ್ಲದೆ ಎಲ್ಲ ಸ್ವಾರಸ್ಯವಾಗಿ ನಾನು ಪ್ರತ್ಯಕ್ಷವಾಗಿನೋಡುವಹಾಗೆ ದಯಪಾಲಿಸಬೇಕೆಂದು "**ಅವ್ಯಯಂ**" ಎಂಬ ಶಬ್ದದಿಂದ ಹೇಳಲ್ಪಟ್ಟಿರುತ್ತದೆ. ತೋರಿಸುವದರಲ್ಲಿ ಸ್ವಲ್ಪವೂ ನ್ಯೂನತೆ ಇರಕೂಡದೆಂಬುದು ಅರ್ಜುನನ ಮನೋರಥವು **ಆತ್ಮಾನಂದರ್ಶಯ** ಎಂದಿಷ್ಟುಮಾತ್ರವೇ ಹೇಳದೆ **ತ್ವಂ ಆತ್ಮಾನಂದರ್ಶಯ** ಎಂದಿರುವದರಿಂದ ಇತರಮಹರ್ಷಿಗಳು ಮೊದಲಾದವರೂ ನಿನ್ನ ಮಹಾಶಕ್ತಿಯನ್ನು ವ್ಯಕ್ತಪಡಿಸುವದರಲ್ಲೇನೋ ಸಮರ್ಥರು ಹೌದು. ಹೀಗೆ ಸಾಕ್ಷಾತ್ತಾಗಿ ರೂಪವನ್ನು ತೋರಿಸುವ **ಅಘಟಿತ ಘಟನಾಶಕ್ತಿಯು** ಇತರರಿಗಿಲ್ಲವು; ಸರ್ವೇಶ್ವರನಾದ ನೀನೇ ದಯಪಾಲಿಸಿದರೆ **ಉಂಟೇ** ವಿನಾ ಇಲ್ಲದಿದ್ದರೆ ಇಲ್ಲವೆಂಬ ಭಾವಸೂಚಕವಾಗಿ **ತ್ವಂ ಆತ್ಮಾನಂದರ್ಶಯ** ಎಂಬ ಪ್ರಯೋಗವು ॥೪॥

**ಭಾಷ್ಯಾರ್ಥವು**:-ಅರ್ಜುನನು ಪ್ರಾರ್ಥಿಸಿದ ಒಡನೆಯೇ, ಆತನ ಅಭೀಷ್ಟವನ್ನು ಸಲ್ಲಿಸುವದಕ್ಕಾಗಿ "**ಪಶ್ಯಮೇಪಾರ್ಥ**" ಎಂದು ಹೇಳಬೇಕಾದರೆ, ಅರ್ಜುನನು ಪ್ರಾರ್ಥಿಸುವಾಗ ಅವನಲ್ಲಿ ತೋರಿಬಂದ ಭಕ್ತಿವಿಶ್ವಾಸಗಳಿಂದ ತುಂಬಾ ಪ್ರೀತನಾಗಿರಬೇಕೆಂದು ಸೂಚಿತವು. ಮೊದಲು **ತತ್** ಎಂಬ ಶಬ್ದದಿಂದ ಬೋಧಿತವಾದುದು ದಿವ್ಯಮಂಗಳವಿಗ್ರಹವೆಂದೂ ಅದು ಎಂಥಾದ್ದೆಂದರೆ ಎಲ್ಲಕ್ಕೂ ಸೃಷ್ಟಿಕರ್ತನಾಗಿ, ಎಲ್ಲವುಗಳ ಸತ್ಪ್ರವೃತ್ತಿ ಪ್ರವೃತ್ತಿಗಳಿಗೂ ನಿಯಾಮಕನಾಗಿ, ಹೀಗೆ ಸರ್ವಕ್ಕೂ ಆಧಾರಭೂತನಾಗಿರುವನ ರೂಪವೆಂದೂ, ಹೇಳುತ್ತಾರೆ **ತತ್**-ಆ ಎಂದರೆ **ಸರ್ವಸ್ಯಸ್ರಷ್ಟೃ, ಸರ್ವಸ್ಯಪ್ರಶಾಸಿತೃ, ಸರ್ವಸ್ಯಾಧಾರಭೂತಂ ತ್ವದ್ರೂಪಂ**-ಸಮಸ್ತಕ್ಕೂ ಸೃಷ್ಟಿಕರ್ತೃವಾಗಿಯೂ, ಸಮಸ್ತಕ್ಕೂ ನಿಯಾಮಕನಾಗಿಯೂ, ಸಮಸ್ತಕ್ಕೂ ಆಧಾರಭೂತನಾಗಿಯೂ, ಇರುವ ಆ ದಿವ್ಯಮಂಗಳವಿಗ್ರಹವನ್ನು, ಇಲ್ಲಿಯೂ **ರೂಪ** ಶಬ್ದದಲ್ಲಿ ಸ್ವರೂಪ ಪ್ರದರ್ಶಕಾಕಾರವೂ ಸೇರಿತೆಂದು ಅರ್ಥಮಾಡುವದರಲ್ಲೇನೂ ಅಭ್ಯಂತರವಿಲ್ಲವು. **ಮಯಾ**-ನನ್ನಿಂದ. **ದ್ರಷ್ಟುಂ ಶಕ್ಯಮಿತಿ**-ನೋಡಲು ಸಾಧ್ಯವೆಂದು. **ಯದಿ ಮನ್ಯಸೇ** ನೀನು ಸರ್ವಜ್ಞನಾದುದರಿಂದ ತಿಳಿದಿರುವೆಯಾದರೆ, **ತತಃ** ಆ ಕಾರಣದಿಂದ ಎಂದರೆ, ನೀನು ಪ್ರಭುವಾಗಿ ಸರ್ವಶಕ್ತನಾಗಿ ನಿನಗಸಾಧ್ಯವಾದುದು ಯಾವುದೂ ಇಲ್ಲದುದರಿಂದ, **ಹೇ ಯೋಗೇಶ್ವರ** ಎಂದರೆ **ಯೋಗ** ವೆಂಬುದರಿಂದ, **ಜ್ಞಾನಾದಿಕಲ್ಯಾಣಗುಣಗಳ** ಯೋಗವು ಹೇಳಲ್ಪಟ್ಟಿತು. (೧) "**ಪಶ್ಯಮೇ ಯೋಗಮೈಶ್ವರಂ**"-ನನ್ನ ಕಲ್ಯಾಣಗುಣಗಳ ಯೋಗವನ್ನೂ ಮಹತ್ತ್ವದ ವಿಭೂತಿಯಿಂದ ಕೂಡಿದ ಐಶ್ವರ್ಯವನ್ನೂ ಸಹ ನೋಡು" **ಇತಿ ಹಿ ವಕ್ಷ್ಯತೇ**—ಎಂದ

(೧) ಗೀ. ೧೧

**ಭಾ. ಅವ. ಏವಂ ಕೌತೂಹಲಾನ್ವಿತೇನ ಹರ್ಷಗದ್ಗದಕಂಠೇನ ಪಾರ್ಥೇನ ಪ್ರಾರ್ಥಿತೋ ಭಗವಾನುವಾಚ**—

ಲ್ಲವೇ ಮುಂದೆ ಶ್ರೀ ಕೃಷ್ಣಭಗವಾನನಿಂದ ಹೇಳಲ್ಪಡುತ್ತದೆ? ಆದುದರಿಂದ **ಯೋಗೇಶ್ವರ** ಎಂದರೆ **ಸ್ವವ್ಯತಿರಿಕ್ತಸ್ಯ ಕಸ್ಯಾಪ್ಯಸಂಭಾವಿತಾನಾಂ ಜ್ಞಾನಬಲೈಶ್ವರ್ಯ ವೀರ್ಯಶಕ್ತಿತೇಜಸಾಂ ನಿಧೇ**-ನೀನಲ್ಲದೆ ಇನ್ನು ಯಾರಿಗೂ ಇಲ್ಲದೇ, ನಿನಗೆ ಮಾತ್ರವೇ ಅಸಾಧಾರಣವಾಗಿರುವ ಜ್ಞಾನಾದಿ ಷಾಡ್ಗುಣ್ಯ ಪರಿಪೂರ್ಣತೆಯ ಯೋಗಕ್ಕೆ ಸ್ವಾಮಿಯೇ. ಅಥವಾ **ಯೋಗೇಶ್ವರ**-ಸಮಸ್ತ ಯೋಗಗಳಾದ ಶಕ್ತಿ, ಕಲ್ಯಾಣಗುಣ, ಉಭಯವಿಭೂತಿ, ಇವುಗಳಿಗೆ ನಾಯಕನೇ! **ಆತ್ಮಾನಂ**-ಅಂತಹ ದಿವ್ಯಮಂಗಳವಿಗ್ರಹವುಳ್ಳ ನಿನನ್ನಾಗಿ, **ತ್ವಾಂ**-ನಿನ್ನನ್ನು, **ಅವ್ಯಯಂ ಯಥಾತಥಾ** - ಸ್ವಲ್ಪವೂ ನ್ಯೂನತೆ ಇಲ್ಲದಹಾಗೆ ಪರಿಪೂರ್ಣವಾಗಿ, **ಮೇ ದರ್ಶಯ**-ನನಗೆ ತೋರಿಸು. ಇಲ್ಲಿ ಅವ್ಯಯವೆಂಬುದು ಕ್ರಿಯಾವಿಶೇಷಣವು **ತ್ವಾಂ ಸಕಲಂ ಮೇ ದರ್ಶಯೇತ್ಯರ್ಥಃ**-ನಿನ್ನನ್ನು ಸಮಸ್ತ ಗುಣವಿಭೂತಿವಿಗ್ರಹಯುಕ್ತನನ್ನಾಗಿ ನನಗೆ ಪ್ರದರ್ಶಿಸು ಎಂಬ ತಾತ್ಪರ್ಯವು **ಅವ್ಯಯಂ** ಎಂಬುದನ್ನು **ಆತ್ಮಾನಂ** ಎಂಬುದಕ್ಕೆ ವಿಶೇಷಣಮಾಡಿ ನಾಶರಹಿತನಾದ ನಿನ್ನನ್ನು ಎಂದು ಅರ್ಥಮಾಡಿದರೆ ಸ್ವಾರಸ್ಯಾರ್ಥವೇನೂ ಹೊರಪಡುವದಿಲ್ಲವೆಂದು ನಿನ್ನ ಮಾಹಾತ್ಮ್ಯೆಯೆಲ್ಲವನ್ನೂ ಎಂದರೆ ನಿನ್ನ ಯೋಗೈಶ್ವರ್ಯವೆಲ್ಲವನ್ನೂ ಸ್ವಲ್ಪವೂ ನ್ಯೂನತೆಯಿಲ್ಲದಿರುವಹಾಗೆ ಪ್ರದರ್ಶಿಸು ಎಂದು ಅರ್ಥಮಾಡುವದು ಪ್ರಕರಣಾನುಗುಣವಾಗಿ ಸ್ವಾರಸ್ಯವಹವೆಂದು ಭಾವಿಸಿ, ಇಲ್ಲಿ ಅವ್ಯಯಶಬ್ದವು ಕ್ರಿಯಾವಿಶೇಷಣವೆಂದು ವ್ಯಾಖ್ಯಾನಮಾಡಿರುತ್ತಾರೆ. ಹಾಗೆ **ಆತ್ಮಾನಂ ಅವ್ಯಯಂ ಯಥಾತಥಾ ದರ್ಶಯ** ಎಂದು ಹೇಳಿ ವ್ಯಾಖ್ಯಾನಮಾಡುವದರಿಂದ **ಸಕಲಂ ಮೇ ದರ್ಶಯ** ವೆಂಬುದು ತಾತ್ಪರ್ಯವೆಂದು ಉಪದೇಶಿಸಿದರು. ಇದರಿಂದ ಸಮಸ್ತಕಲ್ಯಾಣಗುಣಗಳೇನು, ಮಹತ್ತುಗಳಾದ ವಿಭೂತಿಗಳೇನು, ಇವುಗಳಿಂದ ವಿಶಿಷ್ಟವಾದ ರೂಪವನ್ನು ಪ್ರದರ್ಶಿಸು ಎಂಬ ಪ್ರಾರ್ಥನೆ ಎಂದು ವಿಶೇಷಾರ್ಥವು ದೊರೆಯುತ್ತದೆಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು**— ಯಾವಾಗ ಅರ್ಜುನನು ಭಕ್ತಿವಿಶ್ವಾಸಪೂರ್ವಕವಾಗಿ ತನ್ನ ಮನೋರಥವನ್ನು ತಿಳಿಸಿ, ಸರ್ವೇಶ್ವರನ ಸರ್ವಮಾಹಾತ್ಮ್ಯೆಯ ಪ್ರದರ್ಶಕವಾದ ರೂಪವನ್ನು ನೋಡಬೇಕೆಂಬ ಕುತೂಹಲವನ್ನು ತೋರಿಸಿದನೋ, ಆಗ ಅಂತಹ ಭಕ್ತನ ಮನೋರಥವು ವಿತಥವಾಗಲಾರದೆಂಬ ಭಾವವನ್ನು ಸೂಚಿಸುವದಕ್ಕಾಗಿ ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಏವಂ**-ಈ ಮೇಲಿನ ನಾಲ್ಕುಶ್ಲೋಕಗಳಲ್ಲಿ ಹೇಳಿರುವ ಹಾಗೆ, **ಕೌತೂಹಲಾನ್ವಿತೇನ**-ಇಂತಹ ಮನೋರಥವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳ, **ಹರ್ಷಗದ್ಗದಕಂಠೇನ**-ಹರ್ಷದಿಂದ ಗದ್ಗದಸ್ವರವುಳ್ಳ, **ಪಾರ್ಥೇನ**-ಅರ್ಜುನನಿಂದ, ಪ್ರಾರ್ಥಿಸಲ್ಪಟ್ಟ ಭಗವಂತನಾದ ಲಕ್ಷ್ಮೀಯುಕ್ತನಾದ ಶ್ರೀ ಕೃಷ್ಣನು ಹೇಳುತ್ತಾನೆ— ಇಲ್ಲಿ -**ಹರ್ಷಗದ್ಗದಕಂಠೇನ** ಎಂದು ಹೇಳಿರುವದರ ಅಭಿಪ್ರಾಯವು ಅರ್ಜುನನು ವಿಶೇಷ ಭಕ್ತಿವಿಶ್ವಾಸ ಕುತೂಹಲಗಳಿಂದ ಯುಕ್ತನಾಗಿದ್ದನು ಎಂದೂ, ಅಂತಹ ಸ್ಥಿತಿಯುಳ್ಳವನಿಗೆ ಸರ್ವೇಶ್ವರನು ಒಲಿಯುವನು ಎಂದೂ, ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು. ಹೀಗೆ ಹೇಳಿದೆ, “**ಬದ್ಧೇನಾಂಜಲಿನಾ ನತೇನ ಶಿರಸಾ ಗಾತ್ರೈಸ್ಸರೋಮೋದ್ಗಮೈಃ ಕಂಠೇನ ಸ್ವರಗದ್ಗದೇನ ನಯನೇ ನೋದ್ಗೀರ್ಣಭಾಷ್ಪಾಂಬುನಾ**” (ಮುಕುಂದ. ೨೦) ಎಂಬ ಶ್ಲೋಕದಲ್ಲಿ ಹೇಳಿರುವಹಾಗೆ ಬದ್ಧಾಂಜಲಿಗೂ, ನಮ್ರವಾದ ಶಿರಸ್ಸಿಗೂ, ರೋಮಾಂಚವುಳ್ಳ ಶರೀರಕ್ಕೂ, ಆನಂದಾಶ್ರುಪೂರ್ಣವಾದ ಕಣ್ಣಿಗೂ ಸಹ ಉಪಲಕ್ಷಣವು, ಭಕ್ತನು ಪ್ರಾರ್ಥಿಸುವಾಗ ಇಂತಹ ಅವಸ್ಥೆಯಲ್ಲಿರುವನೆಂಬ ಭಾವವು ಯಾವಾಗ

**ಶ್ರೀ ಭಗವಾನುವಾಚ:—**

**ಮೂ.　ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥　　೫.**

**ಭಾ　ಪಶ್ಯ ಮೇ ಸರ್ವಾಶ್ರಯಾಣಿ ರೂಪಾಣಿ; ಅಥ ಶತಶ ಸ್ಸಹಸ್ರಶಶ್ಚ ನಾನಾವಿಧಾನಿ-ನಾನಾಪ್ರಕಾರಾಣಿ, ದಿವ್ಯಾನಿ-ಅಪ್ರಾಕೃತಾನಿ, ನಾನಾವರ್ಣಾಕೃತೀನಿ-ಶುಕ್ಲಕೃಷ್ಣಾದಿ ನಾನಾವರ್ಣಾನಿ ನಾನಾಕಾರಾಣಿ ಚ ಪಶ್ಯ ॥೫॥**

**"ಪಶ್ಯಮೇ"** ಎಂದು ಶ್ರೀ ಭಗವಾನರವರು ಮುಂದೆ ಉತ್ತರವನ್ನು ದಯಪಾಲಿಸುತ್ತಾರೋ, ಆಗ **ಈ**ತನ ಭಕ್ತಿ ವಿಶ್ವಾಸ ಕುತೂಹಲಗಳಿಂದ ಸಂಸ್ತೀಕರಾಗಿಯೇ ಅನುಗ್ರಹಿಸಬೇಕೆಂಬುದು ವ್ಯಕ್ತವಾಗುವದರಿಂದ, ಈತನ ಪ್ರಾರ್ಥನೆಗೂ ಶ್ರೀಕೃಷ್ಣನ ಉತ್ತರಕ್ಕೂ ಇರುವ ಸಙ್ಗತಿಯನ್ನು **ಈ** ಅವತಾರಿಕೆಯ ಮೂಲಕ **ತೋ**ರಿಸಿರುತ್ತಾರೆ.

**ಮೂಲಕ್ಕೆ ಅರ್ಥವು:—ಹೇ ಪಾರ್ಥ**-ಓ ಅರ್ಜುನನೇ **ಮೇ**-ನನ್ನ, **ರೂಪಾಣಿ**-ದಿವ್ಯ ಮಙ್ಗಳ ವಿಗ್ರಹಗಳನ್ನು, **ಪಶ್ಯ**-ನೋಡು ಎಂದರೆ ಮುಂದೆ ನಿನ್ನ ಇಷ್ಟದಂತೆ ಸಮಗ್ರವಾಗಿ **ತೋ**ರಿಸುತ್ತೇನೆ, **ಪರ್ಯಾಪ್ತಯಂ** ಎಂಬ ಪ್ರಾರ್ಥನೆಗೆ ಅನುಸಾರವಾಗಿ ಸಕಲಮಾಹಾತ್ಮ್ಯೆಯೂ ವ್ಯಕ್ತವಾಗುವಹಾಗೆ ರೂಪಗಳನ್ನೆಲ್ಲಾ ತೋರಿಸುತ್ತೇನೆಂಬ ಭಾವವು. ಆ ರೂಪಗಳು ಎಂತಹವೆಂದರೆ **ಶತಶೋಽಥ ಸಹಸ್ರಶಃ**-ನೂರು [illegible] ಆಗಬಹುದು, ಸಹಸ್ರವಾದರೂ ಆಗಬಹುದು. ಲೆಕ್ಕಮಾಡಲು ಸಾಧ್ಯವಿಲ್ಲವೆಂಬ ತಾತ್ಪರ್ಯವು **ನಾನಾವಿಧಾ**[illegible]- [illegible]ನಾವಿಧಗಳಾದ, **ದಿವ್ಯಾನಿ** - ಅಪ್ರಾಕೃತಗಳಾದ, ಪ್ರಾಕೃತರೂಪಗಳಾಗಿ ತೋರಿದರೂ ದಿವ[illegible] ವಿಗ್ರಹಗಳು ಅಪ್ರಾಕೃತಗಳೇ ಎಂಬ ಭಾವವು. ಹಿಂದೆ ಗೀತೆ ೪ [illegible] ನೆಯ ಶ್ಲೋಕವನ್ನು ಪರಾಂಬರಿಸಿ. ಇನ್ನು ಎಂತವು ದಿವ್ಯಮಙ್ಗಳವಿಗ್ರಹಗಳೆಂದರೆ **ನಾನಾವರ್ಣಾಕೃತೀನಿ ಚ**- ನಾನಾವಿಧ ಶರೀರ ವರ್ಣದಕಾಂತಿಗಳೇನು, ಆಕೃತಿಗಳು ಅವಯವಗಳಿಂದ ಕೂಡಿದ ಆಕಾರಗಳೇನು ಇವುಗಳನ್ನುಳ್ಳದು; ಯೋಗ್ಯವಾದ ಕೃಷ್ಣ, ಬಿಳೀ ಮೊದಲಾದ ಬಣ್ಣಗಳಿಂದ ಕೂಡಿದ ಆಯಾ ಅವಯವಗಳೂ ಆಕಾರಗಳೂ, ಇವೆಲ್ಲವನ್ನು ತೋರಿಸುವೆನು, ನೋಡು.

**ಭಾಷ್ಯಾರ್ಥವು—ಮೇ** - ಸ್ವರೂಪ ರೂಪಗುಣ[illegible] ಮಾಹಾತ್ಮ್ಯೆಯುಳ್ಳ ನನ್ನ **ಸರ್ವಾಶ್ರಯಾಣಿ** - ಸಮಸ್ತಕ್ಕೂ ಆಶ್ರಯವಾಗಿರುವ ಅಥವಾ ಸರ್ವಚೇತನರಿಗೂ ಆಶ್ರಯವಾಗಿ ವುಳ್ಳ, **ರೂಪಾಣಿ** - ದಿವ್ಯಮಙ್ಗಳವಿಗ್ರಹಗಳನ್ನು, **ಪಶ್ಯ** - ನೋಡು, **ಅಥ** - ಅನಂತರದಲ್ಲಿ **ಶತಶ ಸ್ಸಹಸ್ರಶಶ್ಚ** - ನೂರು ಅಥವಾ ಸಾವಿರಗಳಾದ ಎಂದರೆ ಅಸಂಖ್ಯಾಕಗಳಾದ, **ನಾನಾವಿಧಾನಿ** ಎಂದರೆ **ನಾನಾಪ್ರಕಾರಾಣಿ** - ನಾನಾ ಪ್ರಕಾರವಾದವುಗಳನ್ನು, ಪರ, ವ್ಯೂಹ, ವಿಭವ, ಹಾರ್ದ, ಅರ್ಚಾವತಾರಾದಿ ರೂಪಗಳಾಗಿ ಬಹುವಿಧವಾದವು, ಉಪಾಸಕರು ಉಪಾಸಿಸುವ ನಾನಾವಿಧ ರೂಪಗಳನ್ನು ಆದಿತ್ಯ, ದಹರ, ಅಕ್ಷಿ ಮೊದಲಾದ ವಿದ್ಯೆಗಳಲ್ಲೂ ಹೇಳಿರುವಹಾಗೆ ಬಹುವಿಧವಾದ ರೂಪಗಳನ್ನು, ಅಲ್ಲದೆ ಕಠೋಪನಿಷತ್ತಿನಲ್ಲಿ **"ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋರೂಪಂ ರೂಪಂ ಪ್ರತಿರೂಪೋ ಬಭೂವ । ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ"** ತೇಜೋದ್ರವ್ಯವಾದುದು ಅನೇಕ ತೇಜಸ್ಸುಳ್ಳ ದ್ರವ್ಯಗಳಲ್ಲಿ ಪ್ರವೇಶಿಸಿ ಹೇಗೆ ಅನೇಕ ರೂಪಗಳನ್ನು ಹೊಂದುತ್ತದೆಯೋ;

**ಮೂ. ಪಶ್ಯಾದಿತ್ಯಾನ್ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬.**

**ಹಾಗೆಯೇ** ಪರಮಾತ್ಮನು ಸರ್ವಭೂತಗಳಿಗೂ ಅಂತರಾತ್ಮನಾಗಿ ಅನೇಕ ರೂಪಗಳನ್ನು ಹೊಂದುತ್ತಾನೆಂದು ಹೇಳುವಹಾಗೆ ನಾನಾವಿಧ ರೂಪಗಳೆಂದು ಕೆಲವರು ಅರ್ಥಮಾಡಿರುತ್ತಾರೆ. ಅಥವಾ ಪ್ರತ್ಯೇಕಗಳಾದ ವಿಧವಿಧಗಳಾದ ಭೂಷಣಾಯುಧಗಳಿಂದಲೂ ಭುಜಗಳ ಸಂಖ್ಯಾಭೇದ ಮೊದಲಾದವುಗಳಿಂದಲೂ ನಾನಾಪ್ರಕಾರವಾದವೆಂದಾಗಲೀ ಅರ್ಥಮಾಡಬಹುದು. ಆ ರೂಪಗಳು ಇನ್ನೂ ಎಂತಹವೆಂದರೆ, **ದಿವ್ಯಾನಿ** ಎಂದರೆ ಅಪ್ರಾಕೃತಗಳಾದವನ್ನು, ಇಲ್ಲಿ ದಿವ್ಯಶಬ್ದದಿಂದ ಶುದ್ಧ ಸತ್ವಮಯವಾದುದು ಎಂಬುದು ವಿವಕ್ಷಿತವಾದುದರಿಂದ ದಿವ್ಯಾನಿ ಎಂಬ ಪ್ರಯೋಗವು, ಈ ಪ್ರಕೃತಿಮಂಡಲಕ್ಕೆ ಸಂಬಂಧಪಟ್ಟದ್ದಲ್ಲವು, ವಿಲಕ್ಷಣವಾದುದು ಎಂಬ ಅಭಿಪ್ರಾಯದಿಂದ ಹಾಗೆ ಪ್ರಯೋಗವು. ಮತ್ತು **ನಾನಾವರ್ಣಾಕೃತೀನಿ** ಎಂದರೆ **ಶುಕ್ಲ ಕೃಷ್ಣಾದಿ ನಾನಾವರ್ಣಾದಿ ನಾನಾಕಾರಾಣಿಚ** - ನಾನಾವಿಧವಾದ ಬಿಳುಪು ಕಪ್ಪು ದೇಹವರ್ಣಗಳಿಂದ ಕೂಡಿದುದನ್ನೂ ಮತ್ತು ಸುರ ನರ ತಿರ್ಯಕ್ ಮೊದಲಾದ ಅವಯವ ಸಂಸ್ಥಾನಗಳುಳ್ಳ ರೂಪಗಳನ್ನೂ. **ಪಶ್ಯ**-ತೋರಿಸುವೆನು ನೋಡು ಎಂಬ ತಾತ್ಪರ್ಯವು. ॥ ೫ ॥

**ಮೂಲಕ್ಕೆ ಅರ್ಥವು**— ಅನೇಕರೂಪಗಳು ತನ್ನವು ಎಂದು ಹೇಳಿ ಮೊದಲು ಒಂದು ಆಶ್ಚರ್ಯಕರವಾಗಿ ಜಗತ್ತನ್ನೆಲ್ಲಾ ಏಕದೇಶದಲ್ಲಿ ಒಳಗೊಂಡಿರುವಹಾಗಿರುವ ರೂಪವನ್ನು ಪ್ರದರ್ಶಿಸುವರಾಗಿ ಹೇಳುತ್ತಾರೆ. **ಇಹೈಕಸ್ಥಂ** ಎಂದು ಮುಂದಿನ ೭ ನೆಯ ಶ್ಲೋಕದಲ್ಲಿರುವದು ಇಲ್ಲಿಗೂ ಅನ್ವಯವು ಇವುಗಳನ್ನೆಲ್ಲಾ ತೋರಿಸಿ ನೋಡು ಎಂದು ಹೇಳಿ. ಮುಂದೆ **ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯ** ಎಂದು ಹೇಳಿರುವದರಿಂದ **ಇಹ** ಎಂದರೆ ಈ ದೇಹದಲ್ಲೇ, ಈ ಆದಿತ್ಯರ ವಸೂನ್ ರುದ್ರಾನ್ ಮೊದಲಾದವರನ್ನೆಲ್ಲಾ ನನ್ನ ದೇಹದ ಏಕದೇಶದಲ್ಲೇ ನೋಡು ಎಂಬ ಭಾವದಿಂದ ಆರಂಭಿಸಿ ಹೇಳುವಹಾಗೆ ಇದೆ. ಈ ಅಭಿಪ್ರಾಯದಿಂದಲೇ **ಮದ್ದ್ಯೇಕಸ್ಮಿನ್ರೂಪೇ** ಎಂದು ಆರಂಭಿಸಿ ಭಾಷ್ಯವನ್ನು ದಯಪಾಲಿಸಿರುತ್ತಾರೆ. ನೀನು ನನ್ನ ದೇಹದ ಏಕದೇಶದಲ್ಲಿ ಈ ಸರ್ವವನ್ನೂ ನೋಡು ಎಂದು ಹೇಳುತ್ತಾರೆ — **ಆದಿತ್ಯಾನ್** - ದ್ವಾದಶಾದಿತ್ಯರನ್ನೂ. **ವಸೂನ್**_ಅಷ್ಟವಸುಗಳನ್ನೂ, **ರುದ್ರಾನ್** - ಏಕಾದಶರುದ್ರರನ್ನೂ. **ಅಶ್ವಿನೌ** - ಇಬ್ಬರಾದ ಅಶ್ವಿನೀ ದೇವತೆಗಳನ್ನೂ. **ತಥಾ**-ಹಾಗೆಯೇ. **ಮರುತಃ**-೪೯ ಮರುತ್ತುಗಳನ್ನೂ. ಹೀಗೆ **ಬಹೂನಿ** - ಅನೇಕರಾದ ನನ್ನ ಈ ಲೀಲಾ ವಿಭೂತಿಗೆ ಸೇರಿದವರನ್ನೆಲ್ಲಾ, **ಅದೃಷ್ಟಪೂರ್ವಾಣಿ**-ನಿನ್ನಿಂದ ಮೊದಲು ನೋಡದೇ ಇರುವ ಇವರುಗಳನ್ನೂ ಮತ್ತು **ಆಶ್ಚರ್ಯಾಣಿ**-ಆಶ್ಚರ್ಯಕರವಾದ ವಿಭೂತಿಗಳನ್ನೂ. **ಹೇ ಭಾರತ** - ಭರತಕುಲೋತ್ಪನ್ನನಾದ ಅರ್ಜುನನೇ, **ಪಶ್ಯ** - ತೋರಿಸುವೆನು ನೋಡು. ಇಲ್ಲಿ **ಅದೃಷ್ಟಪೂರ್ವಾಣಿ** ಎಂದು ಹಿಂದೆ ನೋಡದೇ ಇದ್ದವುಗಳನ್ನು ಮಾತ್ರ ತೋರಿಸಿದರು. ಪ್ರತ್ಯಕ್ಷದಲ್ಲಿ ನೋಡಿದವುಗಳು ಯಾವುವನ್ನೂ ತೋರಿಸಲಿಲ್ಲವು ಎಂಬರ್ಥವಲ್ಲವು, ಯಾವಾಗ ಅದೃಷ್ಟಪೂರ್ವಗಳೂ ತೋರಿಸಲ್ಪಟ್ಟವೋ, ದೃಷ್ಟಪೂರ್ವಗಳೂ ತೋರಿಸಲ್ಪಟ್ಟವೆಂಬುದು ಸಿದ್ಧವು. ಏಕೆಂದರೆ ಮುಂದಿನ ಶ್ಲೋಕದಲ್ಲಿ **ಜಗತ್ಕೃತ್ಸ್ನಂ ಪಶ್ಯ** ಎಂದು ಹೇಳುವದರಿಂದ ದೃಷ್ಟಪೂರ್ವಗಳೂ ತೋರಿಸಲ್ಪಟ್ಟವೆಂಬುದು ವ್ಯಕ್ತವು. ೨೬ ನೆಯ ಮತ್ತು ಅವುಗಳ ಮುಂದಿನ ಶ್ಲೋಕಗಳನ್ನು ಪರಾಂಬರಿಸಿ. ದ್ವಾದಶಾದಿತ್ಯರ ಹಿಂದೆ ೧೩೭೮ ನೆಯ ಪುಟದಲ್ಲೂ ಏಕಾದಶರುದ್ರರೂ ಅಷ್ಟವಸುಗಳು ೧೩೮೩ ನೆಯ ಪುಟದಲ್ಲೂ ಹೇಳಲ್ಪಟ್ಟಿರುತ್ತಾರೆ.

**ಭಾ. ಮಮೈಕಸ್ಮಿನ್ರೂಪೇ ಪಶ್ಯಾದಿತ್ಯಾನ್ದ್ವಾದಶ, ವಸೂನಷ್ಟೌ, ರುದ್ರಾನೇಕಾದಶ, ಅಶ್ವಿನೌ ದ್ವೌ, ಮರುತಶ್ಚೈಕೋನ ಪಂಚಾಶತಂ, ಪ್ರದರ್ಶನಾರ್ಥಮಿದಮ್ ; ಇಹ ಜಗತಿ ಪ್ರತ್ಯಕ್ಷದೃಷ್ಟಾನಿ ಶಾಸ್ತ್ರದೃಷ್ಟಾನಿಚ ಯಾನಿವಸ್ತೂನಿ, ತಾನಿಸರ್ವಾಣ್ಯನ್ಯಾನ್ಯಪಿ ಸರ್ವೇಷು ಲೋಕೇಷು ಸರ್ವೇಷು ಚ ಶಾಸ್ತ್ರೇಷ್ವದೃಷ್ಟ ಪೂರ್ವಾಣಿ ಬಹೂನ್ಯಾಶ್ಚರ್ಯಾಣಿ ಪಶ್ಯ ॥ ೬ ॥**

---

**ಭಾಷ್ಯಾರ್ಥವು:—ಮಮೈಕಸ್ಮಿನ್ರೂಪೇ**-ನನ್ನ ಒಂದು ರೂಪದಲ್ಲೇ, ಇದು ಮೂಲದಲ್ಲಿಲ್ಲವಲ್ಲಾ ಹೇಗೆ ಭಾಷ್ಯದಲ್ಲಿ ಸೇರಿಸಿದರು? ಎಂದರೆ, ಅರ್ಜುನನು **ದರ್ಶಯಾತ್ಮಾನಂ** ಎಂದು ಪ್ರಾರ್ಥಿಸಿರುವದರಿಂದ, ತನ್ನ ಒಂದು ರೂಪದಲ್ಲೇ ಇವೆಲ್ಲಾ ವಿಭೂತಿಯೂ ಅಡಗಿರುವಹಾಗೆ ತೋರಿಸುತ್ತಾನೆಂಬುದು ವ್ಯಕ್ತವು. ಆದಿತ್ಯರನ್ನೂ ವಸುಗಳನ್ನೂ ಮುಂತಾದವರುಗಳನ್ನೂ ಪ್ರತ್ಯೇಕವಾಗಿ ನೋಡುವದರಲ್ಲೇನೂ ಆಶ್ಚರ್ಯವಿಲ್ಲವು. ಒಂದು ರೂಪದಲ್ಲಿ ಅಡಗಿರುವದನ್ನು ನೋಡುವದೇ ಆಶ್ಚರ್ಯವು. ಇದು ಮುಂದಿನಶ್ಲೋಕದಲ್ಲಿ ವ್ಯಕ್ತವಾಗುವದರಿಂದ ಹಾಗೆ ಭಾಷ್ಯವು. **ಆದಿತ್ಯಾನ್ದ್ವಾದಶ**-ದ್ವಾದಶಾದಿತ್ಯರನ್ನೂ, **ವಸೂನಷ್ಟೌ**-ಎಂಟು ವಸುಗಳನ್ನೂ, **ರುದ್ರಾನೇಕಾದಶ**-ಹನ್ನೊಂದು ರುದ್ರರನ್ನೂ, **ಅಶ್ವಿನೌದ್ವೌ**-ಅಶ್ವಿನೀದೇವತೆಗಳಿಬ್ಬರನ್ನೂ, **ಮರುತಶ್ಚೈಕೋನಪಂಚಾಶತಂ**-೪೯ ಮರುತ್ತುಗಳನ್ನೂ, **ಪಶ್ಯ**-ನೋಡು. **ಪ್ರದರ್ಶನಾರ್ಥಮಿದಂ**—ಹೀಗೆ ಇವರುಗಳನ್ನು ಮಾತ್ರ ಹೇಳಿದುದು, ಇತರರು ಯಾರನ್ನೂ ತೋರಿಸಲಿಲ್ಲವೆಂಬರ್ಥವಲ್ಲವು. ಅಷ್ಟದಿಕ್ಪಾಲಕರೂ, ತಾನೂ ನೋಡಿರುವ ಸೂರ್ಯ ಚಂದ್ರ ನಕ್ಷತ್ರಾದಿಗಳೂ, ನವಗ್ರಹಗಳೂ ಮೊದಲಾದವನ್ನು ತೋರಿಸಲಿಲ್ಲವೆಂಬರ್ಥವಲ್ಲವೆಂದು ತಿಳಿಸುವದಕ್ಕಾಗಿ, **ಪ್ರದರ್ಶನಾರ್ಥಮಿದಂ** ಎಂಬ ವ್ಯಾಖ್ಯಾನವು. ಎಂದರೆ ಮಿಕ್ಕವುಗಳಿಗೂ ಉಪಲಕ್ಷಣವಾಗಿ **ಇವು** ಹೇಳಲ್ಪಟ್ಟವೆಂಬ ತಾತ್ಪರ್ಯವು. ಮುಖ್ಯವಾಗಿ ಬ್ರಹ್ಮರುದ್ರೇಂದ್ರಾದಿಗಳನ್ನು ಬಿಟ್ಟು ಮಿಕ್ಕ ದೇವತೆಗಳಲ್ಲಿ ಪ್ರಧಾನರಾದವರು, ದ್ವಾದಶಾದಿತ್ಯರು ಅಷ್ಟವಸುಗಳು, ಏಕಾದಶರುದ್ರರು, **ಅಶ್ವಿ**ನೀದೇವತೆಗಳಿಬ್ಬರು, ಹೀಗೆ ಮೂವತ್ತುಮೂರು ಮಂದಿಯಾಪುದರಿಂದ, ಇವರು ಮೊದಲು ಹೇಳಲ್ಪಟ್ಟರೆಂದು ಭಾವಿಸತಕ್ಕದ್ದು. ಉತ್ತರಾರ್ಧಕ್ಕೆ ಮುಂದೆ ವ್ಯಾಖ್ಯಾನ ಬರೆಯುತ್ತಾರೆ. **ಇಹಜಗತಿ**-ಈ ಲೋಕದಲ್ಲೇ, **ಪ್ರತ್ಯಕ್ಷದೃಷ್ಟಾನಿ**-ಓ ಅರ್ಜುನನೇ ನೀನೇ ಸಾಕ್ಷಾತ್ತಾಗಿ ನೋಡಿರುವ ಮತ್ತು **ಶಾಸ್ತ್ರದೃಷ್ಟಾನಿಚ**-ಯಾವಾಗ ಪ್ರತ್ಯಕ್ಷಾನುಮಾನ ಪ್ರಮಾಣಗಳಿಗೆ ಗೋಚರವಲ್ಲವೋ, ಆಗ ಶಾಸ್ತ್ರಮೂಲಕವಾಗಿಯೇ ತಿಳಿಯಬಹುದಾದ, **ಯಾನಿ ವಸ್ತೂನಿ**-ಯಾವವಸ್ತುಗಳಿರುವುವೋ, **ತಾನಿಸರ್ವಾಣಿ**-ಅವುಗಳೆಲ್ಲವನ್ನೂ, ಮತ್ತು **ಅನ್ಯಾನ್ಯಪಿ**-ಇವುಗಳಲ್ಲದೆ ಬೇರೆಯಾದವುಗಳನ್ನೂ ಕೂಡ ಎಂದರೆ **ಸರ್ವೇಷು ಲೋಕೇಷು ಚ**-ಸಮಸ್ತ ಲೋಕಗಳಲ್ಲಿರುವವುಗಳಾದ, **ವಸ್ತೂನಿ ಚ**-ವಸ್ತುಗಳನ್ನೂ ಕೂಡ, **ಶಾಸ್ತ್ರೇಷ್ವದೃಷ್ಟ ಪೂರ್ವಾಣಿ** ಶಾಸ್ತ್ರಗಳಲ್ಲೂ ಕಾಣದಿರುವ, **ಬಹೂನಿ**-ಅನೇಕವಾದವುಗಳಾಗಿ, **ಆಶ್ಚರ್ಯಾಣಿ ಪಶ್ಯ**—ಆಶ್ಚರ್ಯವಾದವುಗಳನ್ನೂ, ನೋಡು. ಮೂಲದಲ್ಲಿ **ಬಹೂನ್ಯದೃಷ್ಟಪೂರ್ವಾಣಿ** ಎಂದು ಇಷ್ಟುಮಾತ್ರ ಹೇಳಿದ್ದರೂ, ಇಹಲೋಕದಲ್ಲಿ ನೋಡಿರುವ, ಮತ್ತು ಶಾಸ್ತ್ರದಲ್ಲಿ ಹೇಳಿರುವ, ಇಹಲೋಕದಲ್ಲಿ ನೋಡದೇ ಇರುವ, ಮತ್ತು ಶಾಸ್ತ್ರದಿಂದ ಗೋಚರಗಳಲ್ಲದೆ ಬೇರೆ ಲೋಕಗಳಲ್ಲೂ ಇರುವ ಮತ್ತು ಅಲ್ಲಿಯೂ ಶಾಸ್ತ್ರಗೋಚರಗಳಿಲ್ಲದವೆಂದೂ ವಿಕಲ್ಪದಿಂದ ಹೇಳಿರುವದು, **ಬಹೂನಿ ಆಶ್ಚರ್ಯಾಣಿ** ಎಂಬುದರಿಂದ ತೋರಿಬರುವ ವ್ಯಾಖ್ಯಾನವು. **ಅದೃಷ್ಟ ಪೂರ್ವಾಣಿ**-ಮೊದಲು ನೋಡದೇ ಇದ್ದವು, ಎಂಬುದರಿಂದ, ಎಲ್ಲಿ ನೋಡದೇ ಇದ್ದವು ಎಂಬುದನ್ನು ವ್ಯಕ್ತಿ

**ಮೂ.** **ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥** ೭

ಪಡಿಸುವದಕ್ಕಾಗಿ **ಇಹ ಜಗತಿ** ಎಂಬ ಪ್ರಯೋಗವು. ಹೀಗಾಗ **ಇಹ ಜಗತ್ತು** ಊಹಿಸಲ್ಪಟ್ಟಿತೋ. ಆಗ ಇತರ ಲೋಕಗಳಲ್ಲಿರುವ ವಸ್ತುಗಳ ಆನಂತ್ಯವು ಹೇಳಲ್ಪಟ್ಟಿತು. **ಅದೃಷ್ಟ ಪೂರ್ವಾಣಿ** ಎಂದು ಮೂಲದಲ್ಲಿ ಹೇಳಿರುವದು ಯಾವ ಪ್ರಮಾಣಗಳಿಂದ ಎಂದು ಹೇಳಲ್ಪಡದೇ ಇದ್ದುದರಿಂದ, ಪ್ರತ್ಯಕ್ಷದಿಂದ ಅದೃಷ್ಟಪೂರ್ವಾಣಿ ಎಂದೂ, ಶಾಸ್ತ್ರದಿಂದ ಅದೃಷ್ಟ ಪೂರ್ವಾಣಿ ಎಂದು ಅರ್ಥಮಾಡಿದರು. ಆದರೆ ಅನುಮಾನ ಪ್ರಮಾಣವೇಕೆ ಇಲ್ಲಿ ವಿಕಲ್ಪದಲ್ಲಿ ಸೇರಲಿಲ್ಲವೆಂದರೆ, ಅದು ಪ್ರತ್ಯಕ್ಷ ಪ್ರಮಾಣಗಳಿಂದ ಪ್ರಾಪ್ತವಾಗುವ ಊಹೆಯಾದುದರಿಂದ ಪ್ರತ್ಯಕ್ಷದಲ್ಲೇ ಅಂತರ್ಗತವು. ಬಹು ವಿಚಿತ್ರವಾದವುಗಳಾದುದರಿಂದ ಅವು ಆಶ್ಚರ್ಯಾವಹವು, ಮತ್ತು ಹಿಂದೆ ಎಂದಿಗೂ ನೋಡದೇ ಇರುವದರಿಂದಲೂ ಆಶ್ಚರ್ಯಕರವಾದವು ಎಂಬ ತಾತ್ಪರ್ಯವು ॥೬॥

**ಮೂಲಕ್ಕೆ ಅರ್ಥವು:**— ಈ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನರು ತನ್ನ ವಿಶ್ವರೂಪವನ್ನು ತೋರಿಸುತ್ತೇನೆಂದು ಹೇಳಿ, ತನ್ನ ದೇಹದ ಏಕದೇಶದಲ್ಲೇ ಸರ್ವವನ್ನೂ ಮತ್ತು ಅರ್ಜುನನಿಗೆ ಅಭಿಮತವಾದವುಗಳನ್ನೆಲ್ಲಾ ಕಾಣಬಹುದೆಂದು ಹೇಳುತ್ತಾರೆ **ಮಮ**- ಈಗ ವಿಶ್ವರೂಪವನ್ನು ಧರಿಸಿರುವ ನನ್ನ, **ಇಹದೇಹೇ**— ಈ ಒಂದು ದೇಹದಲ್ಲೇ, **ಏಕಸ್ಥಂ**— ಆ ದೇಹದ ಒಂದು ಭಾಗದಲ್ಲೇ, **ಅದ್ಯ**- ಈಗಲೇ ಎಂದರೆ ಒಡನೆಯೇ. ಏನೊಂದೂ ಅದಕ್ಕಾಗಿ ಪ್ರಯತ್ನಬೇಕಿಲ್ಲವು, ಸರ್ವಶಕ್ತನಾಗಿರುವ ತನಗೆ ಇದೊಂದು ಲೀಲಾಮಾತ್ರವೆಂಬ ಭಾವವು, **ಅದ್ಯ** ಎಂಬ ಪ್ರಯೋಗದಿಂದ ತೋರಿಬರುತ್ತದೆ. ನಾನು ತೋರಿಸುವದಕ್ಕಾಗಿ ಅದ್ಯ ಇದಾನೀಮೇವ ಸಿದ್ಧವಾಗಿದ್ದೇನೆ, ನೀನು ಮಾತ್ರ ಸಿದ್ಧನಾಗಿಲ್ಲವೆಂಬುದೂ ಸೂಚಿತವು. ಅದುದರಿಂದ ನಿನ್ನನ್ನು ನೋಡುವಹಾಗೆ ಮಾಡತಕ್ಕದ್ದಿದೆ, ನಿನಗೆ ಅಪ್ರಾಕೃತವಾದ ದಿವ್ಯಚಕ್ಷುಸ್ಸು ಅವಶ್ಯಕವೆಂಬುದೂ ಸೂಚಿತವು. **ಜಗತ್ಕೃತ್ಸ್ನಂ**-ಸಮಸ್ತ ಜಗತ್ತನ್ನೂ, ಅದೆಂತಹದ್ದೆಂಬುದನ್ನು ವಿವರಿಸಿರುತ್ತಾರೆ,— **ಸಚರಾಚರಮ್**-ಜಙ್ಗಮ ಸ್ಥಾವರಗಳಿಂದ ಕೂಡಿದುದು ಇವೆಲ್ಲವನ್ನೂ **ಪಶ್ಯ**-ನೋಡು; ಇನ್ನೂ ಏನನ್ನೂ ನೋಡಬಹುದೆಂದರೆ, **ಅನ್ಯತ್**-ಇನ್ನು ಬೇರೆಯಾಗಿ, **ಯತ್**-ಯಾವುದನ್ನು, **ದ್ರಷ್ಟುಮಿಚ್ಛಸಿ-ಈ** ಯುದ್ಧದಲ್ಲಿರುವವರಗತಿಏನಾಗುತ್ತದೆಂಬುದೇ ಮೊದಲಾದವನ್ನು ನೋಡಬೇಕೆಂದಪೇಕ್ಷಿಸುತ್ತೀಯೋ, ಮತ್ತು ಮುಂದೆ ಏನೇನು ನಡೆಯುತ್ತದೆಂಬುದನ್ನು ತಿಳಿಯಬೇಕೆಂದಿದ್ದೀಯೋ, **ತತ್** ಎಂದು ಇಟ್ಟುಕೊಳ್ಳತಕ್ಕದ್ದು, ಇವೆಲ್ಲವನ್ನೂ ಕೂಡ. **ಹೇ ಗುಡಾಕೇಶ**-ನಿದ್ರೆಯನ್ನು ಜಯಿಸಿದವನಾಗಿ, ನಾನು ತೋರಿಸುವದನ್ನೆಲ್ಲಾ ಜಾಗರೂಕನಾಗಿ ನೋಡಬೇಕೆಂದಿರುವ ಅರ್ಜುನನೇ, **ಪಶ್ಯ**-ನೋಡು. ಹಿಂದಿನ ಶ್ಲೋಕದಲ್ಲಿ **ಆಶ್ಚರ್ಯಾಣಿ ಚ ಪಶ್ಯ** ಎಂದು ಹೇಳಿದ್ದರು ಆಶ್ಚರ್ಯಹೇಗೆ ಎಂದರೆ, ಸಮಸ್ತಚರಾಚರಯುಕ್ತವಾದ ಜಗತ್ತನ್ನೂ ಪರಮಾತ್ಮನ ಏಕರೂಪದಲ್ಲಿ ನೋಡುವದೇ ಆಶ್ಚರ್ಯವು. ಅವುಗಳನ್ನೆಲ್ಲಾ ದೇಹದ ಏಕಭಾಗದಲ್ಲಿ ನೋಡುವದೂ ಆಶ್ಚರ್ಯವು, ಹಿಂದೆ ನಡೆದುದೂ ಮುಂದೆ ಬರುವದೂ ಎಲ್ಲವನ್ನೂ ಈಗಲೇ ಪ್ರತ್ಯಕ್ಷದಲ್ಲಿ ಕಾಣುವದೂ ಪರಮಾಶ್ಚರ್ಯವು, **ಯಚ್ಚಾನ್ಯದ್ದ್ರಷ್ಟುಮಿಚ್ಛಸಿ** ಎಂದು ಹೇಳಿರುವದರಿಂದ, ಮುಂದೆ ೨೬, ೨೭, ೩೩, ೩೪ನೆಯ ಶ್ಲೋಕಗಳಲ್ಲಿ ಹೇಳುವ ಅಭಿಪ್ರಾಯಗಳು ಈಗಲೇ ಸೂಚಿತವು. ಇದೂ ಅಲ್ಲದೆ, ಕೊನೆಗೆ ಪ್ರಾಪ್ಯನಾಗಿರುವ ಪರರೂಪವನ್ನು ತೋರಿಸು ಎಂದು ಪ್ರಾರ್ಥಿಸಿ, ಅದನ್ನೂ ಅರ್ಜುನನು ನೋಡುತ್ತಾನೆ. ಇವೇ ಅರ್ಜುನನಿಗೆ ನೋಡಲು ಕುತೂಹಲವಿರುವ ಇತರ ವಿಷಯಗಳು. ಆದರೆ ಇವುಗಳಿಗಾಗಿ ಅರ್ಜುನನು ವಿಶ್ವರೂಪವನ್ನು ನೋಡಬೇಕೆಂಬ ಪ್ರಾರ್ಥನೆಯನ್ನು ಮಾಡ

**ಭಾ. ಇಹಮಮ್ಯೈಕಸ್ಮಿನ್ ದೇಹೇ ತತ್ರಾಪ್ಯೇಕಸ್ಥಂ-ಏಕದೇಶಸ್ಥಂ. ಸಚರಾಚರಂ ಕೃತ್ಸ್ನಂ ಜಗತ್ ಪಶ್ಯ. ಯಚ್ಚಾನ್ಯದ್ದ್ರಷ್ಟುಮಿಚ್ಛಸಿ, ತದಪ್ಯೇಕದೇಹೈಕದೇಶ ಏವ ಪಶ್ಯ ॥೭॥**

**ಮೂ. ನತು ಮಾಂ ಶಕ್ಯಸೇ ದ್ರಷ್ಟು ಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಂ ॥ ೮.**

ಲಿಲ್ಲವು. ಅತ್ಯದ್ಭುತ ಕಲ್ಯಾಣಯೋಗ ವಿಭೂತಿಯ ಐಶ್ವರ್ಯಗಳ ಮಾಹಾತ್ಮ್ಯೆಯನ್ನು ಸಾಕ್ಷಾತ್ತಾಗಿ ಕಾಣಬೇಕೆಂಬ ಕುತೂಹಲದಿಂದಲೇ ವಿಶ್ವರೂಪದರ್ಶನದ ಪ್ರಾರ್ಥನೆಯು. ಇದರೊಂದಿಗೆ ಯಾದೃಚ್ಛಿಕವಾಗಿ ಇನ್ನು ಏನನ್ನಾದರೂ ನೋಡಬೇಕೆಂಬ ಅಪೇಕ್ಷೆಯಿದ್ದರೂ ಅದನ್ನೂ ನೋಡು ಎಂದು ಹೇಳಿ ಸರ್ವಜ್ಞನಾಗಿ ಅರ್ಜುನನ ಮನೋಗತವನ್ನು ತಿಳಿದವನಾದ ಪ್ರಯುಕ್ತ ಧಾರ್ತರಾಷ್ಟ್ರರ ಮುಂದಿನ ಗತಿ ಏನೆಂಬುದನ್ನೂ ಆ ಶ್ಲೋಕಗಳಲ್ಲಿ ತೋರಿಸುತ್ತಾರೆ. ನನ್ನ ದೇಹದಲ್ಲಿ ಎಲ್ಲವನ್ನೂ ನೋಡು ಎಂಬುದರಿಂದ ಸರ್ವೇಶ್ವರನ ಸರ್ವಾಧಾರತ್ವವು ವ್ಯಂಜಿತವಾಯಿತು.

**ಭಾಷ್ಯಾರ್ಥವು**—ತಾನು ತೋರಿಸುವ ಒಂದು ದೇಹದಲ್ಲೇ ಸಮಸ್ತ ಜಗತ್ತನ್ನೂ ಇನ್ನೂ ಯಾವುವನ್ನೂ ಅರ್ಜುನನಾದ ನೀನು ನೋಡಬೇಕೆಂದಿದ್ದೀಯೋ. ಅವೆಲ್ಲವನ್ನೂ ನೀನು ನೋಡುತ್ತೀಯೇ ಎಂದು ಹೇಳುತ್ತಾರೆ **ಮಮ**-ನನ್ನ. **ಇಹ** ಎಂದರೆ **ಏಕಸ್ಮಿನ್**-ನಾನೀಗ ತೋರಿಸುವ ಒಂದಾದ, **ದೇಹೇ**-ದೇಹದಲ್ಲೇ. **ತತ್ರಾಪಿ**-ಆ ಒಂದು ದೇಹದಲ್ಲೂ, **ಏಕಸ್ಥಂ** ಎಂದರೆ **ಏಕದೇಶಸ್ಥಂ**-ಅತ್ಯಲ್ಪಭಾಗದಲ್ಲಿರುವ, **ಸಚರಾಚರಂ** ಜಂಗಮ ಸ್ಥಾವರಗಳಿಂದ ಕೂಡಿದ **ಕೃತ್ಸ್ನಂ ಜಗತ್**-ಸಮಸ್ತ ಜಗತ್ತನ್ನೂ, **ಪಶ್ಯ**-ನೋಡು ಎಂದರೆ ನೀನು ನೋಡುವಿ ಎಂಬ ಭಾವವು. ಮತ್ತು **ಯಚ್ಚಾನ್ಯದ್ದ್ರಷ್ಟು ಮಿಚ್ಛಸಿ**-ಬೇರೆ ಇನ್ನು ಯಾವುದನ್ನು ನೀನು ನೋಡಲು ಅಪೇಕ್ಷಿಸುತ್ತೀಯೋ. **ತದಪಿ**-ಅದನ್ನೂ ಕೂಡ, **ಏಕದೇಹೈಕದೇಶೇ**-ಈ ವಿಶ್ವರೂಪದ ಒಂದು ಅಲ್ಪಭಾಗದಲ್ಲೇ **ಪಶ್ಯ**-ನೋಡು ಎಂದರೆ ನೋಡಹೋಗುತ್ತೀ. ಇಲ್ಲಿ ಮೂಲದಲ್ಲಿ ವ್ಯಕ್ತವಾಗಿ ಹೇಳದೇ ಇರುವ **ಏಕಸ್ಮಿನ್ದೇಹೇ** ಎಂಬ ವ್ಯಾಖ್ಯಾನವು ಹೇಗೆಂದರೆ **ಇಹದೇಹೇ**-ಈ ನಾನು ತೋರಿಸುವ ದೇಹದಲ್ಲಿ ಎಂದು ಏಕವಚನವಿರುವದರಿಂದಲೂ, ಮುಂದಿನ ಸಂಜಯ ವಾಕ್ಯದಲ್ಲೂ (ಌನೆಯ ಶ್ಲೋಕವು) **ದರ್ಶಯಾಮಾಸ ರೂಪ ಮೈಶ್ವರಂ** ಎಂದು ಏಕವಚನವಿರುವದರಿಂದಲೂ, **ಏಕಸ್ಮಿನ್ ದೇಹೇ** ಎಂಬ ವ್ಯಾಖ್ಯಾನವು **ಏಕಸ್ಥಂ**-ಏಕದೇಶದಲ್ಲಿರುವದು ಎಂದು ಇಷ್ಟು ಮಾತ್ರ ಅರ್ಥವಾಗುವದರಿಂದಲೂ. ದೇಹವು ಅಪ್ರಾಕೃತವಾದುದರಿಂದಲೂ. ಒಂದು ಅವಯವದಲ್ಲಿರುವದನ್ನಾಗಿ ಎಂದು ಅರ್ಥವಾಡುವ ಆವಶ್ಯಕತೆಯು ತೋರಲಿಲ್ಲವು **ಯಚ್ಚಾನ್ಯದ್ದ್ರಷ್ಟುಮಿಚ್ಛಸಿ** ಎಂಬುದರಲ್ಲೇ ಮುಂದಿನ ಧಾರ್ತರಾಷ್ಟ್ರಾದಿಗಳಿಗೆ ಜಯಾಪಜಯ ಮೊದಲಾದುವೂ ಕೂಡ ಅಂತರ್ಗತವು. ಇವುಗಳನ್ನೂ ಕೂಡ ದೇಹದ ಏಕದೇಶದಲ್ಲೇ ಕಾಣುವಿ ಎಂಬ ಅಭಿಪ್ರಾಯವಾದುದರಿಂದ ಇದಕ್ಕೂ ಕೂಡ ಅನ್ವಯಿಸಿ. **ತದಪ್ಯೇಕದೇಹೈಕದೇಶೇ** ಎಂದು ಹೇಳುತ್ತಾರೆ

**ಮೂಲಕ್ಕೆ ಅರ್ಥವು**—ನೀನು ನನಗೆ ಅತ್ಯರ್ಥಪ್ರಿಯನಾದುದರಿಂದ. ನಿನ್ನ ಇಷ್ಟ ಪ್ರಕಾರ ವಿಶ್ವರೂಪವನ್ನು ನಾನು ತೋರಿಸಲು ಸಿದ್ಧನಾಗಿದ್ದರೂ, ನೀನು ಈ ಪ್ರಾಕೃತ ಚರ್ಮಚಕ್ಷುಸ್ಸಿನಿಂದ ನೋಡಲು ಸಾಧ್ಯವಿಲ್ಲದುದರಿಂದ ನಿನಗೆ ದಿವ್ಯಚಕ್ಷುಸ್ಸನ್ನು ಕೊಡುವೆನು; ತನ್ಮೂಲಕ ನೀನು ನನ್ನ ಮಾಹಾತ್ಮ್ಯೆಯ ಪ್ರದರ್ಶಕವಾದ ಕಲ್ಯಾಣಗುಣಯೋಗವಿರುವ ಭಾವವನ್ನೂ ದಿವ್ಯಾದ್ಭುತ ವಿಭೂತಿಯೋಗವನ್ನೂ ಕಾಣಬಹುದೆಂದು ಶ್ರೀಕೃಷ್ಣ ಭಗವಾನ್‌ರವರು ಹೇಳುತ್ತಾರೆ –

**ಅನೇನ**-ಈ ಪ್ರಾಕೃತ ಶರೀರಕ್ಕೆ ಸಂಬಂಧಿಸಿದ **ಸ್ವಚಕ್ಷುಷೈವ**-ನಿನಗಿರುವ ಈ ಸ್ವಂತ ಕಣ್ಣುಗಳಿಂದಲೇ, **ಮಾಂ**-ಅಂತಹ "**ಯೋಗವ್ಯೇಶ್ವರ**"ನೆಂದು ಹೇಳಿರುವಹಾಗೆ ವಿಶ್ವರೂಪವನ್ನು ಧರಿಸುವ ತನ್ನನ್ನು (ಈಗ ಶ್ರೀಕೃಷ್ಣನನ್ನು ಈ ಚರ್ಮಚಕ್ಷುಸ್ಸಿನಿಂದಲೇ ನೋಡುತ್ತ ಇದ್ದಾನಷ್ಟೆ) **ದ್ರಷ್ಟುಂ**-ನೋಡಲು, ಅಂತಹ ಯೋಗವನ್ನೂ ಐಶ್ವರ್ಯವನ್ನೂ ಹೊಂದಿದವನೆಂದು ನೋಡಲು, **ನ ಶಕ್ಯಸೇ**-ಸಮರ್ಥನಲ್ಲವು ನಾನೇನೋ ನೋಡು ಎಂದು ಹೇಳಿ ತೋರಿಸಲು ಸಿದ್ಧನಾಗಿದ್ದೇನೆ. ಹಾಗಾದರೆ ತೊಂದರೆ ಏನು ? ಎಂಬ ಶಂಕಾ ನಿವೃತ್ತಿಗಾಗಿ **ತು** ಶಬ್ದವು : ಆದುದರಿಂದ **ತೇ**-ನಿನಗೆ ಅತ್ಯರ್ಥಪ್ರಿಯನಾದ ನಿನಗೆ, **ದಿವ್ಯಂಚಕ್ಷುಃ**-ಅಪ್ರಾಕೃತವಾದ ಚಕ್ಷುಸ್ಸನ್ನು, **ದದಾಮಿ**-ಕೊಡುವೆನು (ಪರಮ ಭಕ್ತಾನುಗ್ರಹವು ಇಲ್ಲಿ ದ್ಯೋತಿತವು) **ಮೇ**-ನನ್ನ, **ಯೋಗಂ**-ಕಲ್ಯಾಣಗುಣಯೋಗವನ್ನೂ, ಕೃಪಾ ಸೌಶೀಲ್ಯ ಸೌಲಭ್ಯಾದಿಗಳೂ ಈಗಲೇ ವಿಶ್ವರೂಪವನ್ನು ತೋರಿಸುವದಕ್ಕೆ ಮುಂಚೆಯೇ, ಲೀಲಾಸಾರಥಿಯಾಗಿರುವದೂ, ಉದಾರಭಾವದಿಂದ "**ರಾಜವಿದ್ಯಾ ರಾಜಗುಹ್ಯಂ**" ಎಂದು ಹೇಳಿಸಿಕೊಳ್ಳುವ ಪರಮೋಪದೇಶವನ್ನು ಮಾಡುತ್ತಿರುವದೂ, ಐಹಿಕ ಶ್ರೇಯಸ್ಸಾಧಕವಾಗಿ ಯುದ್ಧ ಪ್ರೋತ್ಸಾಹನ ಮಾಡುತ್ತಿರುವುದೂ, ವಿಶ್ವರೂಪವನ್ನು ತೋರಿಸಲು ಯತ್ನಿಸಿ ತದರ್ಥವಾಗಿ ಪರಮ ಕೃಪಯಾ ದಿವ್ಯಚಕ್ಷುಸ್ಸನ್ನೂ ದಯಪಾಲಿಸಿದುದೂ. ಎಲ್ಲವೂ ಕಲ್ಯಾಣಗುಣಗಳ ಯೋಗಪ್ರದರ್ಶನಕ್ಕೆ ಸಾಕಾದವು. ಆಶ್ರಯಣೋಚಿತ ಗುಣಗಳ ಪ್ರಕಾಶಕ್ಕೆ ಬೇರೆ ನಿದರ್ಶನ ಬೇಕಿಲ್ಲವು : ಇನ್ನೂ ಮುಂದೆಯೂ ವಿಶ್ವರೂಪದಲ್ಲಿ ವ್ಯಕ್ತಪಡಿಸುತ್ತಾರೆ ಮತ್ತು **ಐಶ್ವರಂ** - ಅತ್ಯದ್ಭುತ ಸ್ವಾತಂತ್ರ್ಯ ವಿಭೂತಿಯುಕ್ತತೆಯನ್ನೂ. **ಪಶ್ಯ** - ನೋಡು. ಈ ಶ್ಲೋಕದಿಂದ ಮನುಷ್ಯನು ತನಗೆ ಪ್ರಕೃತಿ ಶರೀರವಿದ್ದು ಈ ಚರ್ಮ ಚಕ್ಷುಸ್ಸು ಇರುವತನಕ ಭಗವಂತನು ಪರಿಪೂರ್ಣ ಬ್ರಹ್ಮನೆಂದು ಸಾಕ್ಷಾತ್ಕರಿಸಲು ಸಾಧ್ಯವೇ ಇಲ್ಲವೆಂದೂ. ಎಲ್ಲೋ ಒಬ್ಬೊಬ್ಬರಾದ ಪರಾಶರ, ವ್ಯಾಸ, ಶುಕ, ಶೌನಕಾದಿಗಳಿಗೆ ಸರ್ವೇಶ್ವರನು ತನ್ನ ಉಪದೇಶದಿಂದ ಲೋಕೋಪಕಾರವನ್ನು ಮಾಡಲಿ, ಎಂಬ ಕೃಪೌದಾರ್ಯಭಾವದಿಂದ ತನ್ನ ಮಾಹಾತ್ಮ್ಯವನ್ನೆಲ್ಲಾ ಸಾಕ್ಷಾತ್ಕರಿಸುವ ಹಾಗೆ ಸಾಮರ್ಥ್ಯವನ್ನು ಕೊಟ್ಟಿರುವನೆಂದೂ. ಭಾವಿಸತಕ್ಕದ್ದು. ಆದುದರಿಂದಲೇ ಅವರುಗಳು ವೇದಶಾಸ್ತ್ರಕ್ಕೆ ಸ್ವಲ್ಪವೂ ವಿರೋಧವಿಲ್ಲದೆ ಇತಿಹಾಸಗಳನ್ನು ರಚಿಸಿರುತ್ತಾರೆ. ತದಿತರರು ಅಂತಹ ಜ್ಞಾನಮೂಲಕ ಪರಿಪೂರ್ಣ ಪರಬ್ರಹ್ಮನನ್ನು ಸಾಕ್ಷಾತ್ಕರಿಸಬೇಕಾದರೆ, ಎರಡು ಉಪಾಯಗಳಾದ ಭಕ್ತಿ ಪ್ರಪತ್ತಿಮಾರ್ಗಗಳಲ್ಲಿ ಯಾವುದಾದರೂ ಒಂದನ್ನು ಅನುಷ್ಠಿಸಿ ಸ್ವಾಮಿಕೃಪಯಾ ಈ ಪ್ರಾಕೃತ ಶರೀರವು ಬಿದ್ದುಹೋಗಿ ಅಪ್ರಾಕೃತ ಚಕ್ಷುಸ್ಸು ಬರುವಹಾಗೆ ಮಾಡಿಕೊಂಡರೆ ಆಗ ಗುಣಾಷ್ಟಕಗಳನ್ನು ಹೊಂದಿ ಸ್ವಸ್ವರೂಪಾವಿರ್ಭಾವದಿಂದ ಪರಿಪೂರ್ಣ ಬ್ರಹ್ಮಾನುಭವವನ್ನು ಹೊಂದಬಹುದೆಂಬುದೂ ಸೂಚಿತವು. ಈ ದರಿದ್ರವಾದ ಪ್ರಾಕೃತಚಕ್ಷುಸ್ಸು ಹೋಗಬೇಕು, ದಿವ್ಯಚಕ್ಷುಸ್ಸು ಬರುವಹಾಗೆ ಉಪಾಯಾನುಷ್ಠಾನದ ಮೂಲಕ ಮಾಡಿಕೊಳ್ಳಬೇಕು, ಆಗಿನ ಪರಿಪೂರ್ಣ ಪರಬ್ರಹ್ಮಸಾಕ್ಷಾತ್ಕಾರವು. ಎಂಬುದನ್ನು ಪ್ರತಿಪಾದಿಸುವಂತಾದ್ದು ಈ ಶ್ಲೋಕವು ||೮||

**ಭಾಷ್ಯಾರ್ಥವು** :— ಮೊದಲು ಹಿಂದಿನ ಶ್ಲೋಕಾನುವಾದಪೂರ್ವಕವಾಗಿ ಈ ಶ್ಲೋಕಕ್ಕೆ ಸಙ್ಗತಿಯನ್ನು ಪ್ರದರ್ಶಿಸುವದಕ್ಕೂ. ಮೂಲದಲ್ಲಿರುವ **ತು** ಶಬ್ದಾಭಿಪ್ರಾಯವನ್ನೂ ವ್ಯಕ್ತಪಡಿಸುವದಕ್ಕೂ ಉಚಿತವಾದ ವ್ಯಾಖ್ಯಾನವನ್ನು ದಯಪಾಲಿಸುತ್ತಾರೆ. ಈಗ ನಿನಗಿರುವ ಪ್ರಾಕೃತ ಚಕ್ಷುಸ್ಸಿನಿಂದ ನೀನು ನನ್ನರೂಪವನ್ನು ನೋಡಲು ಸಾಧ್ಯವಿಲ್ಲವಾದುದರಿಂದ ಅಪ್ರಾಕೃತ ಚಕ್ಷುಸ್ಸನ್ನು ದಯಪಾಲಿಸುವೆನು ತನ್ಮೂಲಕ ನೋಡು ಎನ್ನುತ್ತಾರೆ. **ಅಹಂ**-ನಾನು, **ಮಮದೇಹೈಕದೇಶೇ** - ನನ್ನ ವಿಶ್ವರೂಪದ ಏಕದೇಶದಲ್ಲೇ. **ಸರ್ವಂಜಗತ್** - ಸಮಸ್ತಜಗತ್ತನ್ನೂ, **ದರ್ಶಯಿಷ್ಯಾಮಿ**-ತೋರಿಸಲು ಸಙ್ಕಲ್ಪಿಸಿಗಿನೆನು ; ಆದರೆ ನಿನಗಾದರೋ ಈಗ ಹಾಗೆಯೇ ನೋಡಲು

**ಭಾ.** ಅಹಂ ಮಮ ದೇಹೈಕದೇಶೇ ಸರ್ವಂ ಜಗದ್ದರ್ಶಯಿಷ್ಯಾಮಿ ; ತ್ವಂತ್ವನೇನ-ನಿಯತಪರಿಮಿತವಸ್ತುಗ್ರಾಹಿಣಾ ಪ್ರಾಕೃತೇನ ಚಕ್ಷುಷಾ. ಮಾಂ - ತಥಾಭೂತಂ ಸಕಲೇತರ ವಿಸಜಾತೀಯ ಮಪರಿಮೇಯಂ, ದ್ರಷ್ಟುಂ ನ ಶಕ್ಷ್ಯಸೇ ; ತವದಿವ್ಯಂ. ಅಪ್ರಾಕೃತಂ ಮದ್ದರ್ಶನ ಸಾಧನಂ ಚಕ್ಷುರ್ದದಾಮಿ ; ಪಶ್ಯಮೇ ಯೋಗಮೈಶ್ವರಂ-ಮದಸಾಧಾರಣಂ ಯೋಗಂ ಪಶ್ಯ ; ಮಮಾನಂತ ಜ್ಞಾನಾದಿ ಯೋಗಮನಂತ ವಿಭೂತಿಯೋಗಂ ಚ ಪಶ್ಯೇತ್ಯರ್ಥಃ ॥ ೮ ॥

---

ಯೋಗ್ಯತೆಯಿಲ್ಲವಾದುದರಿಂದ ಏನುಮಾಡಬೇಕೆಂದರೆ ತಿಳಿಸುತ್ತಾರೆ : **ತ್ವಂತು** - ನೀನಾದರೋ **ಅನೇನ** - ಎಂದರೆ **ನಿಯತ ಪರಿಮಿತ ವಸ್ತು ಗ್ರಾಹಿಣಾ ಪ್ರಾಕೃತೇನ** - ನಿಯತವಾಗಿ ಪರಿಮಿತಗಳಾದ ವಸ್ತುಗಳನ್ನು ಮಾತ್ರ ಗ್ರಹಿಸುವ ಶಕ್ತಿಯುಳ್ಳ ಈ ಪ್ರಾಕೃತವಾದ, **ಚಕ್ಷುಷಾ**- ಕಣ್ಣಿನಿಂದ, **ಮಾಂ** - ಎಂದರೆ, **ತಥಾಭೂತಂ** - ನಿನ್ನ ಅಪೇಕ್ಷೆಗನುಸಾರವಾಗಿ ಅಂತಹ ರೂಪವನ್ನು ಧರಿಸುವ ನನ್ನನ್ನು. ಆ ರೂಪವೆಂತಾದ್ದೆಂಬುದನ್ನು ವಿವರಿಸಿ ಅದನ್ನು ಸಾಕ್ಷಾತ್ಕರಿಸುವ ಯೋಗ್ಯತೆಯು ಈ ಪ್ರಾಕೃತ ಕಣ್ಣುಗಳಿಗಿಲ್ಲವೆಂದು ಹೇಳುತ್ತಾರೆ — **ಸಕಲೇತರ ವಿಸಜಾತೀಯಂ** - ಈಗ ನೋಡುವ ಜಾತಿಗೆ ಸೇರಿದ ಸಮಸ್ತವಸ್ತುಗಳಿಗಿಂತಲೂ ವಿಲಕ್ಷಣವಾದ ಮತ್ತು **ಅಪರಿಮೇಯಂ** ಇವುಗಳಾದರೋ ಪರಿಮಿತಗಳಾದವು, ನಾನು ತೋರಿಸುವುದಾದರೋ, **ಅಪರಿಮೇಯಂ** - ಪ್ರತ್ಯಕ್ಷಾನುಮಾನಗಳಿಂದ ತಿಳಿಯಲಶಕ್ಯವಾದುದನ್ನು, **ದ್ರಷ್ಟುಂ** ನೋಡಲು, **ನಶಕ್ಷ್ಯಸೇ** - ನೀನು ಸಮರ್ಥನಾಗುವುದಿಲ್ಲವು. **ತವ** - ನಿನಗೆ, **ದಿವ್ಯಂ**-ಎಂದರೆ ಅಪ್ರಾಕೃತವಾದ **ಮದ್ದರ್ಶನ ಸಾಧನಂ** - ನನ್ನನ್ನು ಈ ವಿಶ್ವರೂಪದಲ್ಲಿ ನೋಡಲು ಸಾಧನಭೂತವಾದ **ಚಕ್ಷುಃ** ಕಣ್ಣನ್ನು, **ದದಾಮಿ** - ಕೊಡುವೆನು. **ಮೇ** - ನನ್ನ, **ಯೋಗಮೈಶ್ವರಮ್, ಎಂದರೆ ಮದಸಾಧಾರಣಮ್** ನನಗೆ ಮಾತ್ರವೇ ಅಸಾಧಾರಣವಾದುದಾದ ಯೋಗವನ್ನು, **ಪಶ್ಯ** - ನೋಡು, ಇದರ ತಾತ್ಪರ್ಯವನ್ನು ತಿಳಿಸುತ್ತಾರೆ.— **ಮಮ** ನನ್ನ, **ಅನಂತ ಜ್ಞಾನಾದಿ** ಕಲ್ಯಾಣಗುಣಗಳ ಯೋಗವನ್ನೂ. ಅನಂತಗಳಾದ **ವಿಭೂತಿ ಯೋಗಂ ಚ** - ವಿಭೂತಿಯೋಗವನ್ನೂ ಸಹ **ಪಶ್ಯೇತ್ಯರ್ಥಃ** - ನೋಡು ಎಂಬತಾತ್ಪರ್ಯವು ಇಲ್ಲಿ **ಯೋಗಂ ಐಶ್ವರಂ** ಎಂದು ಸಮಾಸವಿಲ್ಲದ ಪ್ರತ್ಯೇಕ ಪದಗಳಿರುವುದರಿಂದ, **ಯೋಗಂ** ಎಂಬುದರಿಂದ ಕಲ್ಯಾಣ ಗುಣಯೋಗವೂ, **ಐಶ್ವರಂ** ಎಂಬುದರಿಂದ ವಿಭೂತಿಯೋಗವೂ ಸಹ ಹೇಳಲ್ಪಟ್ಟಿವೆಂಬ ಭಾವವು. ಹಿಂದಿನ ಅಧ್ಯಾಯದ ಹದಿನೆಂಟನೆಯ ಶ್ಲೋಕದಲ್ಲಿ **ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ** ಎಂದು ಬೇರೆ ಬೇರೆ ಹೇಳಿರುವುದರಿಂದ ಹಾಗೆ ಅರ್ಥಮಾಡುವುದೇ ನ್ಯಾಯವೆಂದು ತೋರಿ ಅರ್ಥಮಾಡಿರುತ್ತಾರೆ. ಕೆಲವರು ಐಶ್ವರ ಎಂಬುದನ್ನು ಯೋಗ ಎಂಬುದಕ್ಕೆ ವಿಶೇಷಣವಾಗಿ ಅರ್ಥಮಾಡಿರುತ್ತಾರೆ; ಅರ್ಜುನನು **ಯೋಗಂವಿಭೂತಿಂಚ** ಎಂದು ಸಮುಚ್ಚಯವಾಗಿ ಎರಡನ್ನೂ ಕೇಳಿ ತಿಳಿದವನಾದುದರಿಂದ ಎರಡರ ಪ್ರದರ್ಶನವನ್ನೂ ಪ್ರಾರ್ಥಿಸಿದನೆಂದೂ, ಅವೆರಡನ್ನೂ ಆತನ ಪ್ರಾರ್ಥನೆಯ ಮೇರೆಗೆ ಪ್ರದರ್ಶಿಸುತ್ತಾರೆಂದೂ ಅರ್ಥಮಾಡುವುದೇ ಯುಕ್ತವು. ಆದರೆ ಕಲ್ಯಾಣಗುಣಗಳ ಪ್ರದರ್ಶನವು ಈ ರೂಪದಿಂದ ಹೇಗೆ? ಎಂದರೆ ವಿಶ್ವಗೋಪ್ತಾವಾಗಿ ತೋರಿಸೋಣವೂ, ಸಿದ್ಧರು ಮಹರ್ಷಿಗಳಿಗೆ ಅನುಗ್ರಹಮಾಡುವಹಾಗೂ ಅವರು ಸ್ತೋತ್ರಮಾಡಿ ನಮಸ್ಕಾರಾದಿಗಳನ್ನೆಸಗುವಹಾಗೆ ದುಷ್ಟರಾದ ಧಾರ್ತರಾಷ್ಟ್ರಾದಿಗಳಿಗೆ ನಾಶವುಂಟಾಗುವಹಾಗೆ, ಪಾಂಡವಾದಿಗಳಿಗೆ ರಾಜ್ಯಪ್ರಾಪ್ತಿಯುಂಟಾಗುವ ಹಾಗೂ ಪ್ರದರ್ಶನವು, ಇವೆಲ್ಲವೂ ಕಲ್ಯಾಣ ಮಹೋದಧಿಯ ಆಶ್ರಿತ

**ಸಂಜಯ ಉವಾಚ—**

**ಮೂ. ಏವ ಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥**

ರಕ್ಷಣೋಪಯುಕ್ತ ಗುಣಗಳ ಪ್ರದರ್ಶನವಲ್ಲವೇ? ಆದುದರಿಂದ **ಯೋಗಮೈಶ್ವರಂ** ಎಂಬುದಕ್ಕೆ **ಯೋಗಂಚ ಐಶ್ವರಂಚ** ಎಂಬ ಸಮುಚ್ಚಯಾರ್ಥವೇ ಸರಿಯಾದುದು ॥೮॥

**ಮೂಲಕ್ಕೆ ಅರ್ಥವು**—ಅರ್ಜುನನಿಗೆ ಶ್ರೀ ಕೃಷ್ಣ ಭಗವಾನರವರು ವಿಶ್ವರೂಪವನ್ನು ತೋರಿಸಿದರೆಂಬುದನ್ನು ಈ ಸಂಜಯ ವಾಕ್ಯದಿಂದ ತಿಳಿಯಬಹುದು. ಮುಂದಿನ ಆರು ಶ್ಲೋಕಗಳಿಂದ ಎಂತಹ ರೂಪವನ್ನು ತೋರಿಸಿದರೆಂದು ಚನ್ನಾಗಿ ಧೃತರಾಷ್ಟ್ರನಿಗೆ ವಿಸ್ತರಿಸಿ ಸಂಜಯರು ಹೇಳುತ್ತಾರೆ. ಈ ಕೃಷ್ಣಾರ್ಜುನ ಸಂವಾದ ರೂಪವಾದ ಗೀತಾಶಾಸ್ತ್ರವನ್ನು ಸಂಜಯರು ಧೃತರಾಷ್ಟ್ರನಿಗೆ ಅಲ್ಲವೆ ಹೇಳುತ್ತಿರುವದು. ಯಾರಿಗೆ ಜಯ ಉಂಟಾದೀತು? ನನ್ನ ಮಕ್ಕಳಿಗೋ ಪಾಂಡವರಿಗೋ ಎಂದು ತಿಳಿಯಬೇಕೆಂಬಾಶೆಯಿಂದ ಸಂಜಯರನ್ನು ಪ್ರಾರ್ಥಿಸಿರುತ್ತಾನೆ. ಸಂಜಯರು ಆತನಿಗೆ ಹೇಳುತ್ತಿದ್ದಾರೆಂಬುದನ್ನು ಜ್ಞಾಪಿಸುವದಕ್ಕಾಗಿ ಇಲ್ಲಿ ಸಂಜಯವಾಕ್ಯವೆಂದು ಹೇಳಲ್ಪಟ್ಟಿರುತ್ತದೆ ಎಲ್ಲವೂ ಸಂಜಯವಾಕ್ಯವೇ, ಹೀಗೆ ಶ್ರೀ ಕೃಷ್ಣನು ಭಕ್ತಾನುಗ್ರಹವನ್ನು ಮಾಡಲಿಚ್ಛೆಯುಳ್ಳವನಾಗಿ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದನು ಎಂದು ಹೇಳುವದರಿಂದಲೇ, ಶ್ರೀಕೃಷ್ಣಾನುಗ್ರಹವು ಪಾಂಡವರಿಗೇ ಅಲ್ಲದೆ ತನ್ನ ಮಕ್ಕಳಿಗಿಲ್ಲವೆಂಬುದನ್ನು ಧೃತರಾಷ್ಟ್ರನು ಗ್ರಹಿಸಿದನೆಂಬುದನ್ನು ಬೋಧಿಸುವದಕ್ಕಾಗಿಯೂ ಇಲ್ಲಿ ಈ ಸಂಜಯವಾಕ್ಯವು. ಇದನ್ನೇ ಸ್ಫುಟವಾಗಿ ಕೊನೆಯಲ್ಲಿ **"ಯತ್ರಯೋಗೇಶ್ವರಃ ಕೃಷ್ಣಃ"** ಎಂಬುವ ಶ್ಲೋಕದಲ್ಲಿ ಸಂಜಯರು ವ್ಯಕ್ತಪಡಿಸಿರುತ್ತಾರೆ. **ಹೇ ರಾಜನ್**-ಓ ರಾಜನಾದ ಧೃತರಾಷ್ಟ್ರ ಮಹಾರಾಜನೇ, **ಏವಮುಕ್ತ್ವಾ**-ನಿನಗೆ ದಿವ್ಯ ಚಕ್ಷುಸ್ಸನ್ನು ದಯಪಾಲಿಸುತ್ತೇನೆ, ತನ್ಮೂಲಕವಾಗಿ ನನ್ನ ಮಾಹಾತ್ಮ್ಯೆಯನ್ನು ಬಹುವಾಗಿ ಪ್ರದರ್ಶಿಸುವ ಈ ವಿಶ್ವರೂಪವನ್ನು ನೋಡು ಎಂದು ಹೀಗೆ ಹೇಳಿದವನಾಗಿ, **ತತಃ**-ಅನಂತರದಲ್ಲಿ ಕೃಷ್ಣನು ಸಾಮಾನ್ಯನಲ್ಲವು. ಆತನು ಎಂತಹನೆಂದರೆ **ಮಹಾ ಯೋಗೇಶ್ವರಃ ಹರಿಃ**-ಅತ್ಯದ್ಭುತಗಳಾಗಿಯೂ ಅತ್ಯಾಶ್ಚರ್ಯಕರಗಳಾಗಿಯೂ ಇರುವ ರೂಪ ಗುಣ ವಿಭೂತಿಗಳ ಯೋಗಗಳಿಗೆ ಈಶ್ವರನಾಗಿ ಸರ್ವಲೋಕ ನಿಯಾಮಕನಾದ ಶ್ರೀ ಹರಿಯು, ಪರಮ ಸೌಲಭ್ಯದಿಂದ ಅರ್ಜುನನಿಗೆ ಲೀಲಾಸಾರಥಿಯಾಗಿದ್ದುಕೊಂಡು. ತನ್ನ ಸೌಶೀಲ್ಯ ಕೃಪೌದಾರ್ಯಗಳಿಂದ ಪ್ರೇರಿತನಾಗಿ, **ಪಾರ್ಥಾಯ**-ತನ್ನ ಸೋದರತ್ತೆಯ ಮಗನಾದ ಅರ್ಜುನನಿಗೆ, **ಪರಮಂ**-ಸರ್ವೋತ್ಕೃಷ್ಟವಾದ, **ಐಶ್ವರಂ**ಗುಣಯೋಗ ವಿಭೂತಿಯೋಗಗಳ ಮಹತ್ತಾದ ಐಶ್ವರ್ಯವುಳ್ಳ, **ರೂಪಂ** - ದಿವ್ಯಮಂಗಳವಿಗ್ರಹವನ್ನು, **ದರ್ಶಯಾಮಾಸ** - ತೋರಿಸಿದನು, ಆಶ್ರಿತರ ಪಾಪಗಳನ್ನೆಲ್ಲಾ ಅಪಹರಿಸುವ ಶ್ರೀ ಹರಿಯು ತೋರಿಸಿದನು. ಪಾಂಡವರು ಆಶ್ರಯಿಸಿದರು, ಆದುದರಿಂದ ಅವರ ಪಾಪಗಳನ್ನೆಲ್ಲಾ ಹೋಗಲಾಡಿಸಿದವನು ನಿನ್ನ ಮಕ್ಕಳು ಆಶ್ರಯಿಸಲಿಲ್ಲವಾದುದರಿಂದ ಇಲ್ಲವೆಂಬುದು ಈ ಹರಿ ಶಬ್ದದಿಂದ ದ್ಯೋತಿತವು. ಅಥವಾ ದ್ರೌಪದಿ ಮೊದಲಾದವರು ಸಮರ್ಪಿಸಿದ ಹವಿಸ್ಸನ್ನು ಅಪಹರಿಸಿದವನು ಎಂದರೆ ಸ್ವೀಕರಿಸಿದವನು. ನಿನ್ನ ಮಗನು ಎಷ್ಟು ಮಹತ್ತಾಗಿ ಔತನಕ್ಕೆ ಏರ್ಪಾಡನ್ನು ಮಾಡಿದ್ದರೂ ಅದು ಸರಿಯಾದ ಹವಿಸ್ಸಲ್ಲವಾದುದರಿಂದ ಶ್ರೀ ಕೃಷ್ಣನು ಒಪ್ಪಲಿಲ್ಲವು. ಏಕೆಂದರೆ ಆತನು ಶ್ರೀಹರಿಯು, ಆಶ್ರಿತರು ಅರ್ಪಿಸಿದ ಹವಿಸ್ಸನ್ನೇ ಸ್ವೀಕರಿಸುವನೇ ವಿನಾ ಬೇರೆಯವರು ಸಮರ್ಪಿಸಿದುದನ್ನು ಒಲ್ಲನು ಅಥವಾ **"ಭಕ್ತಾನಾಂ ದುಃಖಹರಣಾತ್" ಹರಿಃ** ಎಂದೂ ಅರ್ಥವಾಗಬಹುದು ಭಕ್ತರಾದ

**ಭಾ. ಏವಮುಕ್ತ್ವಾ ಸಾರಥ್ಯೇಽವಸ್ಥಿತಃ ಪಾರ್ಥಮಾತುಲಜೋ ಮಹಾಯೋಗೇಶ್ವರೋ ಹರಿಃ. ಮಹಾಶ್ಚರ್ಯಯೋಗಾನಾ ಮೀಶ್ವರಃ ಪರಬ್ರಹ್ಮಭೂತೋ ನಾರಾಯಣಃ**

ಪಾಂಡವರಿಗೆ ದುಃಖೋಪಶಮನಕ್ಕಾಗಿ ಬಂದಿರುವ ಶ್ರೀ ಹರಿಯು ಎಂದು ಓ ಧೃತರಾಷ್ಟ್ರನೇ ನೀನು ಭಾವಿಸತಕ್ಕದ್ದೆಂಬ ಭಾವವು ಇಂತಹ ಅನುಗ್ರಹವು ಅರ್ಜುನನಿಗೆ ಸಿಕ್ಕಿತು. ನಿನ್ನ ಮಕ್ಕಳಿಗೆ ಸಿಕ್ಕೀತೇ ಎಂಬುದೂ ಸೂಚಿತವು ಆದುದರಿಂದ ಓ ಧೃತರಾಷ್ಟ್ರನೇ ಅರ್ಜುನನಲ್ಲಿ ಶ್ರೀ ಕೃಷ್ಣನಿಗೆ ಪರಮಾನುಗ್ರಹವು; ನಿನ್ನ ಮಕ್ಕಳಿಗೆ ಜಯವಾಗಬಹುದು ಎಂಬ ನಿನ್ನ ಆಶೆಯು ಪೂರ್ಣವಾಗಲಾರದು ಎಂದು ಹೇಳಿದಂತಾಯಿತು. ಮಹಾಯೋಗೇಶ್ವರಾನುಗ್ರಹವು ಯಾರಿಗೋ, ಅವರಿಗೆ ಜಯವೇ ವಿನಾ, ನಿನ್ನ ಆಶೆಯು ಪೂರ್ಣವಾಗಲಾರದು ಎಂಬುದು ಸೂಚಿತವು. ಈ ಸಂದರ್ಭದಲ್ಲಿ ಧೃತರಾಷ್ಟ್ರನು ಇದರಿಂದ ಸಂಶಯಾಪನ್ನನಾಗಿ ಸಂಜಯನನ್ನು ಕೇಳಬೇಕಾದ ವಿಷಯವಿರಬಹುದು. ಅದರೆ **ಪರಮಂ ರೂಪಮೈಶ್ವರಮ್** ಎಂದು ಸಂಜಯರು ಹೇಳಿದರಲ್ಲಾ, ಅದೆಂತಾದ್ದು, ವಿಶೇಷಾದ್ಭುತಾಶ್ಚರ್ಯಯುಕ್ತವಾದುದಾಗಿರಬೇಕೆಂದು ಗ್ರಹಿಸಿದವನಾಗಿ ಸಂಜಯಮುಖೇನ ಅದನ್ನು ಕೇಳಿ ತಿಳಿಯಬೇಕೆಂಬ ಆಶೆಯಿಂದ ಸಂಜಯನು ಹೇಳುತ್ತಿರುವುದನ್ನು ಕೇಳುತ್ತಿದ್ದಾನೆಂದೂ ಗ್ರಹಿಸತಕ್ಕದ್ದಾಗಿರುತ್ತದೆ; ಅದೂ ಅಲ್ಲದೆ ಶ್ರೀ ಕೃಷ್ಣಭಗವಾನರವರ ಉಪದೇಶವು ಮಹತ್ತಾದುದು; ಅರ್ಜುನನಿಗೆ ಉಪದೇಶಿಸಿದ್ದನ್ನೆಲ್ಲಾ ಕೇಳಿ ತಿಳಿಯಬೇಕೆಂಬ ಆಶೆಯಿಂದಲೂ ಕೇಳುತ್ತಿದ್ದನೆಂದೂ ಊಹಿಸಬಹುದು. ಇಲ್ಲಿ **ಮಹಾಯೋಗೇಶ್ವರಃ** ಎಂಬುದರಿಂದ ಸೃಷ್ಟಿ, ಸ್ಥಿತಿ, ನಿಯಮನಾದಿಗಳಿಗೆ ಹೇತುಭೂತನೆಂದೂ, ಹರಿ ಶಬ್ದದಿಂದ ಪ್ರಳಯಕ್ಕೆ ಹೇತುಭೂತನು ಶ್ರೀ ಕೃಷ್ಣನು, ಆತನು ಸಾಮಾನ್ಯ ಮನುಷ್ಯನಲ್ಲವು ಎಂಬುದನ್ನೂ ಸಂಜಯರು ಧೃತರಾಷ್ಟ್ರನಿಗೆ ತಿಳಿಸುತ್ತಾರೆ. **ಪರಮಂ ರೂಪಮೈಶ್ವರಂ** ಎಂಬ ಪ್ರಯೋಗದಿಂದಲೂ ಮುಂದೆ ವಿವರಿಸುವ ಅತ್ಯದ್ಭುತಾಶ್ಚರ್ಯರೂಪದಿಂದ ಶ್ರೀ ಕೃಷ್ಣನು ಸಾಮಾನ್ಯನಲ್ಲವೆಂಬುದೂ ದ್ಯೋತಿತವು.

**ಭಾಷ್ಯಾರ್ಥವು:—ಏವಮುಕ್ತ್ವಾ**-ನಿನಗೆ ದಿವ್ಯ ಚಕ್ಷುಸ್ಸನ್ನು ಕೊಡುವೆನು, ನನ್ನ ವಿಶ್ವರೂಪವನ್ನು ನೋಡು ಎಂದು ಹೀಗೆ ಹೇಳಿ, **ಸಾರಥ್ಯೇಽವಸ್ಥಿತಃ**-ಲೀಲಾ ಸಾರಥಿಯ ಕಾರ್ಯವನ್ನವಲಂಬಿಸಿಕೊಂಡಿರುವ, **ಪಾರ್ಥಮಾತುಲಜಃ**—ಅರ್ಜುನನ ಮಾವನ ಮಗನಾದ, **ಮಹಾಯೋಗೇಶ್ವರೋಹರಿಃ** ಎಂದರೆ **ಮಹಾಶ್ಚರ್ಯ ಯೋಗಾನಾಮೀಶ್ವರಃ**—ಮಹತ್ತಾದ ಆಶ್ಚರ್ಯಕರಗಳಾದ ಲಕ್ಷ್ಮೀ, ಕಲ್ಯಾಣಗುಣ, ಉಭಯ ವಿಭೂತಿಗಳ ಯೋಗಗಳಿಗೆಲ್ಲಾ ಸ್ವಾಮಿಯಾಗಿ ನಿಯಾಮಕನಾದ, **ಪರಬ್ರಹ್ಮನಾದ ನಾರಾಯಣನು**, ಈ ವಿಶ್ವರೂಪವನ್ನು ಧರಿಸಿದವನೇ ಪರಬ್ರಹ್ಮನಾದ ನಾರಾಯಣನು. ಈತನಿಗಿಂತಲೂ ಪರತ್ವವನ್ನು ಹೊಂದಿದ ನಿರ್ಗುಣಬ್ರಹ್ಮ ಒಂದುಂಟು ಎಂಬ ವಾದದ ಖಂಡನಕ್ಕಾಗಿ **ಪರಬ್ರಹ್ಮೋ ನಾರಾಯಣಃ** ಎಂಬ ಪ್ರಯೋಗವು. ಈ ಸಂದರ್ಭದಲ್ಲಿ ಭೀಷ್ಮೋಕ್ತಿಯು ಅನುಸಂಧೇಯವು—"**ಆಭೂತ ಸಂಪ್ಲವೇ ಪ್ರಾಪ್ತೇ ಪ್ರಲೀನೇ ಪ್ರಕೃತೌ ಮಹಾನ್ । ಏಕಸ್ತಿಷ್ಠತಿ ಸರ್ವಾತ್ಮಾ ಸ ತು ನಾರಾಯಣಃ ಪ್ರಭುಃ** (ಭಾರ. ಸಭಾ ೪೩-೨೫)" "**ಪುರಾ ನಾರಾಯಣೋ ದೇವಃ ಸ್ವಯಂಭೂಃ ಪ್ರಪಿತಾಮಹಃ । ಸಹಸ್ರಶೀರ್ಷಃ ಪುರುಷೋ ಧ್ರುವೋಽನನ್ತಸ್ಸನಾತನಃ । ಸಹಸ್ರಾಸ್ಯಃ ಸಹಸ್ರಾಕ್ಷಃ ಸಹಸ್ರಚರಣೋ ವಿಭುಃ । ಸಹಸ್ರಬಾಹುಃ ಸರ್ವಜ್ಞೋ ದೇವೋ ನಾಮಸಹಸ್ರವಾನ್ । ಸಹಸ್ರಮಕುಟೋ ದೇವೋ ವಿಶ್ವರೂಪೋ ಮಹಾದ್ಯುತಿಃ** ॥" ಇತ್ಯಾದಿ. **ಪರಮೈಶ್ವರಂ** ಉತ್ಕೃಷ್ಟಗಳಾಗಿಯೂ ಮಹತ್ತುಗಳಾಗಿಯೂ ಇರುವ ಕಲ್ಯಾಣಗುಣಗಣ ವಿಭೂತಿಗಳೊಂದಿಗೆ ಸೇರಿರುವ ಮತ್ತು ನಿಯನ್ತೃವಾಗಿರುವ, **ಸ್ವಾಸಾ**

**ಭಾ. ಪರಮಮೈಶ್ವರಂ—ಸ್ವಾಸಾಧಾರಣಂ ರೂಪಂ ಪಾರ್ಥಾಯ—ಪಿತೃಷ್ವಸುಃ ಪೃಥಾಯಾಃ ಪುತ್ರಾಯ ದರ್ಶಯಾಮಾಸ, ತದ್ವಿವಿಧವಿಚಿತ್ರ ನಿಖಿಲ ಜಗದಾಶ್ರಯಂ ವಿಶ್ವಸ್ಯ ಪ್ರಶಾಸಿತೃಚ ರೂಪಮ್ ॥ ೯ ॥**

---

**ಧಾರಣಂ**—ತನಗೆ ಮಾತ್ರವೇ ಅಸಾಧಾರಣವಾಗಿರುವ, **ರೂಪಂ**—ವಿಶ್ವರೂಪವನ್ನು. ದಿವ್ಯ ಮಂಗಳ ವಿಗ್ರಹವನ್ನು, **ಪಾರ್ಥಾಯ-ಪಿತೃಷ್ವಸುಃ ಪೃಥಾಯಾಃ ಪುತ್ರಾಯ**—ತನ್ನ ಅತ್ತೆಯಾದ ಪೃಥಾದೇವಿಯ ಮಗನಾದ ಅರ್ಜುನನಿಗೆ, **ದರ್ಶಯಾಮಾಸ**—ತೋರಿಸಿದನು; **ಪರಮಂ ರೂಪಮೈಶ್ವರಂ**—ಎಂಬುದರಿಂದ ತೋರಿಬರುವ ತಾತ್ಪರ್ಯವನ್ನು ಬರೆಯುತ್ತಾರೆ.—**ತದ್ವಿವಿಧ ವಿಚಿತ್ರನಿಖಿಲ ಜಗದಾಶ್ರಯಂ**—ವಿವಿಧವಾಗಿಯೂ, ವಿಚಿತ್ರವಾಗಿಯೂ ಇರುವ ಆ ಸಮಸ್ತ ಜಗತ್ತಿಗೂ ಆಶ್ರಯಭೂತವಾಗಿಯೂ, **ವಿಶ್ವಸ್ಯ ಪ್ರಶಾಸಿತೃ ಚ ರೂಪಮ್**—ಸಮಸ್ತ ವಿಶ್ವಕ್ಕೂ ನಿಯಾಮಕನಾಗಿರುವ ರೂಪವನ್ನು ತೋರಿಸಿದನು ಎಂಬ ಭಾವವು. ಮಹಾಯೋಗೇಶ್ವರನಾದ ಶ್ರೀಹರಿಯು ಅರ್ಜುನನಿಗೆ ಅತ್ತೆಯ ಮಗನಾಗಿ ಅವತರಿಸಿ, ಆತನಿಗೆ ಸಾರಥ್ಯದಲ್ಲಿ ನಿಂತು, ಇಂತಹ ವಿಶ್ವರೂಪವನ್ನು ಪ್ರದರ್ಶಿಸಿದನು ಎಂದು ಮಹಾ ಜ್ಞಾನಿಯಾದ ಸಂಜಯರು ಹೇಳುವವರಲ್ಲಿ ಅವರಿಗೆ ಅಭಿಪ್ರಾಯವೇನಿರಬಹುದು ಎಂದು ಊಹಿಸುವದರಲ್ಲಿ ಮಹಾಯೋಗೇಶ್ವರನಾಗಿರುವ ಶ್ರೀ ಹರಿಯು ಪರಮಾತ್ಮನು,ಎಂತಹ ಸೌಲಭ್ಯ ಸೌಶೀಲ್ಯ ದಯಾವಾತ್ಸಲ್ಯಾದಿಗಳಿಂದ ಯುಕ್ತನು, ಹೀಗೆ ತನ್ನ ಅತ್ತೆಯ ಮಗನೊಂದಿಗೆ ಸ್ನೇಹವೇನು, ಸಾರಥ್ಯವೇನು, ವಿಶ್ವರೂಪ ದರ್ಶನವೇನು ಅರ್ಜುನನು ಒಲ್ಲೆ ಎಂದರೂ ಆತನ ಕೈಯಲ್ಲಿ ಯುದ್ಧಮಾಡಿಸಿ ದುಷ್ಟನಿಗ್ರಹಮಾಡಿಸುವದೇನು, ಇತ್ಯಾದಿ ಅದ್ಭುತಾಶ್ಚರ್ಯ ಅತಿಮಾನುಷ ದಿವ್ಯಚೇಷ್ಟಿತಗಳೇನು ಎಂದು ಸಂಜಯರು ಬೆರಗಾಗಿ ಹೇಳಿದರು ಎಂಬುದನ್ನು ಸೂಚಿಸುವದಕ್ಕಾಗಿ, **ಸಾರಥ್ಯೇಽವಸ್ಥಿತಃ ಪಾರ್ಥಮಾತುಲಜಃ** ಇತ್ಯಾದಿ ಪ್ರಯೋಗಗಳು. ತನ್ನ ಐದು ರಾಜ್ಯಗಳನ್ನಿಟ್ಟುಕೊಂಡು ಸುಖವಾಗಿರಲು ಯೋಗ್ಯತೆಯಿಲ್ಲದ ಅರ್ಜುನನೆಲ್ಲಿ, ಅಖಿಲಜಗತ್ತಿಗೂ ಆಶ್ರಯವಾಗಿ ನಿಯನ್ತಾವಾಗಿರುವ ಪರಮಾತ್ಮನೆಲ್ಲಿ, ಇಂತವನಿಗೆ ತನ್ನ ಸ್ವರೂಪರೂಪಗುಣ ವಿಭವಗಳ ಐಶ್ವರ್ಯಪ್ರದರ್ಶಕವಾದ ರೂಪವನ್ನು ತೋರುವದು ಎಂದರೇನು; ಏನು ಅದ್ಭುತವೈಯಾ! ಏನುಸುಕೃತಿಯು ಅರ್ಜುನನು! ಓ ರಾಜನಾದ ಧೃತರಾಷ್ಟ್ರನೇ ಎಂದು ಹೇಳುವಮಾತು ಎಂಬ ತಾತ್ಪರ್ಯವು ಅರ್ಜುನನು ತನ್ನ ಸಂಬಂಧಿಯು ಎಂಬುದನ್ನು ಮನಸ್ಸಿನಲ್ಲಿಟ್ಟು ಹೀಗೆ ಆತ್ಯಾಶ್ಚರ್ಯಾದ್ಭುತ ಮಹಿಮೆಯುಳ್ಳವನು, ಇಂತಹ ಅದ್ಭುತರೂಪವನ್ನು ಧರಿಸಿ ತನ್ನ ಮಾಹಾತ್ಮ್ಯೆಯನ್ನು ಪ್ರದರ್ಶಿಸಿದನೆಂಬುದರಿಂದ ಪರಮಾತ್ಮನ ಸೌಲಭ್ಯ, ಸೌಶೀಲ್ಯ, ವಾತ್ಸಲ್ಯ, ಕಾರುಣ್ಯಾದಿಗಳ ಮಹಿಮೆಗೆ ಪಾರವೇ ಇಲ್ಲವೆಂದು ಹೇಳಿದಂತಾಯಿತು. ಇವುಗಳನ್ನೆಲ್ಲಾ ವ್ಯಕ್ತಪಡಿಸುವದಕ್ಕಾಗಿಯೇ **ಪಾರ್ಥಾಯ** ಎಂಬ ಪ್ರಯೋಗವೂ, ಮತ್ತು ಇದಕ್ಕೆ **ಪಿತೃಷ್ವಸುಃ ಪುತ್ರಾಯ** ಎಂಬ ಭಾಷ್ಯವೂ.

ಇಲ್ಲಿ ಪರಬ್ರಹ್ಮ**ಭೂತೋ ನಾರಾಯಣಃ** ಎಂಬಪ್ರಯೋಗವು ಏತಕ್ಕೆಂದರೆ, ಈ ವಿಶ್ವರೂಪವನ್ನು ಪರಬ್ರಹ್ಮನು ತೋರಿಸಿದನಲ್ಲಾ, ಇದೇನು ಶೈವರೂಪವೇ ವೈಷ್ಣವರೂಪವೇ ಎಂಬ ಚರ್ಚೆಯಲ್ಲಿ, ಕೆಲವರ ಅಭಿಪ್ರಾಯವೇನೆಂದರೆ. ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸುವದು ಇದೆಲ್ಲಾ ವ್ಯಾವಹಾರಿಕದೆಶೆಯ ಚೇಷ್ಟೆಗಳು, ಈಗತೋರಿಸಿದ ವಿಶ್ವರೂಪವು, ಶೈವರೂಪವು, ಏಕೆಂದರೆ, ಇಲ್ಲಿ **ಪರಮಂಐಶ್ವರಂರೂಪಂ** ಇತ್ಯಾದಿ ಪ್ರಯೋಗವೇ ಇರುವದರಿಂದ, ಈಶ್ವರನಾದ ಶಿವನ ರೂಪವೆಂದೂ ಇದಕ್ಕೆ ಪ್ರಮಾಣವಾಗಿ **“ನಿಹತಾಂಸ್ತೇನಪೂರ್ವಂ ತ್ವಂ ಹತವಾನಸಿವೈರಿಪೂ। ಅಪ್ರಮೇಯ ಪ್ರಭಾವಂ ತಂದೇವದೇವಮುಮಾಪತಿಂ। ಭಜಸ್ವನಿತ್ಯಂ ಪ್ರಯತೋವಿಶ್ವೇಶಂ**

**ಹರ ಮುನ್ಯಯಮ್"** ಎಂಬುದನ್ನು ಉದಾಹರಿಸುವರು. ಶ್ರೀ ಕೃಷ್ಣನು ರುದ್ರರೂಪವನ್ನು ಪ್ರದರ್ಶಿಸಿದರು ಎಂಬುವಕ್ಕೆ ಈ ಗೀತೆಯಲ್ಲಿ ಯಾವ ಸಾಧಕವೂ ಇಲ್ಲವು. ರುದ್ರರೂಪವು ಏಕಾ ಏಕಿ ಇಲ್ಲಿ ಬರಲು ಪ್ರಕರಣವೇನಾದರೂ ಉಂಟೇ? ಅದರ ಪ್ರಸಕ್ತಿಯೇ ಇಲ್ಲವಲ್ಲಾ? ಅರ್ಜುನನು ಅದನ್ನು ಪ್ರಾರ್ಥಿಸಿದನೇ? ಇಲ್ಲವೇ ಶ್ರೀ ಕೃಷ್ಣನು ಅಂತಹ ರೂಪವನ್ನು ತೋರಿಸುವೆನು ಎಂದೇನಾದರೂ ಪ್ರತಿಜ್ಞೆ ಮಾಡಿದನೇ? ಯಾವುದೂ ಇಲ್ಲವು. ತೋರಿಸಿದುದು ತನ್ನ ರೂಪವನ್ನೇ ಎಂಬುದು ಸ್ಪಷ್ಟವಾಗಿರುವುದು. ಹೇಗೆಂದರೆ **"ಮಮ ದೇಹೇ ಗುಡಾಕೇಶ"** (೧೧-೭) ಎಂದು ಇರುವುದರಿಂದ ತನ್ನದೇ ದೇಹವನ್ನು ಪ್ರದರ್ಶಿಸಿದನು ಎಂಬುವುದು ದೃಢೀಕೃತವಾಯಿತು. ಆ ರೂಪವನ್ನು ಕುರಿತ ಸಂಬೋಧನೆಗಳಲ್ಲಿ **"ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ"** (ಗೀ ೧೧-೨೪) ಎಂದೂ **"ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ"** (ಗೀ ೧೧-೩೦) ಎಂದೂ ಇರುವುದರಿಂದ ವಿಷ್ಣುರೂಪವೆಂಬುದು ಸುವ್ಯಕ್ತವು. ಹೃಷೀಕೇಶ, ಹರಿ ಇತ್ಯಾದಿ ಪ್ರಯೋಗಗಳೂ ಇರುವುದರಿಂದ **ಉಮಾಪತಿಯ** ರೂಪವೆಂಬುದು ಪೂರ್ವಾಪರ ವಿರೋಧಗಳನ್ನು ಪರಿಗಣಿಸದೆ ಮನಸ್ಸು ಬಂದಹಾಗೆ ಹೇಳುವ ಮಾತಾಗುತ್ತದೆ. ತನ್ನ ರೂಪವನ್ನೇ ತೋರಿಸು ಎಂದು ಪ್ರಾರ್ಥಿಸಿದರೆ, ಇತರ ರೂಪವನ್ನು ತೋರಿಸಿದನು ಎಂದು ಹೇಳಿದರೆ, ಭಕ್ತನು ಕೇಳುವದೊಂದು ಸ್ವಾಮಿಯು ತೋರುವುದೇ ಒಂದು, ಹೀಗೆ ಅಸಮಂಜಸವು ಪ್ರಾಪ್ತವಾಗುವದರಿಂದ. ಸರ್ವೇಶ್ವರನಿಗೆ ಭಕ್ತಪರಾಧೀನನು ಎಂಬ ಬಿರುದು ವ್ಯರ್ಥವಾಗುತ್ತದೆ. ಅಶ್ವಮೇಧಿಕ ಪರ್ವದಲ್ಲಿ ವಾಸುದೇವೋಪಾಖ್ಯಾನದಲ್ಲಿ **"ಅಭಿಜಾನಾಮಿ ಜಗತಃ ಕರ್ತಾರಂ ತ್ವಾಂ ಜನಾರ್ದನ। ದ್ರಷ್ಟುಮಿಚ್ಛಾಮಿ ತೇ ರೂಪಂ ವೈಷ್ಣವಂ ತನ್ನಿದರ್ಶಯ॥"** ವೈಶಂಪಾಯನಃ - **"ತತಃ ಸ ತಸ್ಮೈ ಪ್ರೀತಾತ್ಮಾ ದರ್ಶಯಾಮಾಸ ತದ್ವಪುಃ । ಶಾಶ್ವತಂ ವೈಷ್ಣವಂ ಧೀಮಾನ್ ದದೃಶೇ ಯದ್ಧನಂಜಯಃ"** ತೋರಿಸಿದ ರೂಪವು ಅರ್ಜುನನಿಗೆ ತೋರಿಸಿದ ತನ್ನ ವೈಷ್ಣವರೂಪವೇ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವದರಿಂದ, ಶಿವರೂಪವೆಂಬುದು ಈಶ್ವರ ಶಬ್ದದಿಂದುಂಟಾದ ಶಂಕೆಯು. ಪರಮಾತ್ಮನಾದ ಶ್ರೀಮನ್ನಾರಾಯಣನಿಗೆ ಪರಮೇಶ್ವರ ಶಬ್ದವು ಆತನಲ್ಲೇ ಪ್ರವೃತ್ತಿಯುಳ್ಳದುದು. ಏಕೆಂದರೆ ಈಶ್ವರತ್ವಕ್ಕೆ ಬೇಕಾದ ವ್ಯಾಪನ, ಭರಣ, ನಿಯಮನ, ಅಧಿಕಾರಾದಿ ಸಮಸ್ತ ಧರ್ಮಗಳೂ ಶ್ರೀಮನ್ನಾರಾಯಣನಲ್ಲಿ ಮುಖ್ಯಾರ್ಥವುಳ್ಳವುಗಳಾಗಿ ನಾರಾಯಣ ಶಬ್ದಾರ್ಥದಲ್ಲೇ ತೋರಿಬರುತ್ತವೆ. **"ಈಶ್ವರೋ ವಿಕ್ರಮೀ ಧನ್ವೀ"** ಎಂದು ಸಹಸ್ರನಾಮದಲ್ಲಿ ಈಶ್ವರನಾಮವು ಮುಖ್ಯಾರ್ಥವುಳ್ಳದ್ದಾಗಿ ಹೇಳಲ್ಪಟ್ಟಿರುತ್ತದೆ. ರುದ್ರನಲ್ಲಿ ಈಶ್ವರಶಬ್ದವು ಲಾಕ್ಷಣಿಕಾರ್ಥವುಳ್ಳದ್ದು. **"ಪತಿಂ ವಿಶ್ವಸ್ಯಾತ್ಮೇಶ್ವರಂ ಶಿವಮಚ್ಯುತಮ್"** ಎಂಬಲ್ಲೂ ಈಶ್ವರಶಬ್ದವು ನಾರಾಯಣನಲ್ಲೇ ಮುಖ್ಯವೃತ್ತಿಯುಳ್ಳದ್ದಾಗಿರುತ್ತದೆ. ಹಾಗೆಯೇ ಮುಂದೆ ಈ ಗ್ರಂಥದಲ್ಲೇ **"ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ । ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ"** (ಗೀ ೧೫-೧೮) ಎಂದು ಶ್ರೀಕೃಷ್ಣನಾದ ತಾನೇ ಹೇಳಲ್ಪಟ್ಟನೆಂದು ಹೇಳಿಕೊಂಡಿರುತ್ತಾನೆ. ಅನೇಕ ಇತಿಹಾಸಗಳಲ್ಲಿ ಶಿವನು ವಿಷ್ಣುವಿನ ವಿಭೂತಿಯೆಂದೇ ಹೇಳಲ್ಪಟ್ಟಿರುತ್ತದೆ. **"ರುದ್ರಃ ಕಾಲಾಂತಕಾದ್ಯಾಶ್ಚ ಸಮಸ್ತಾಶ್ಚೈವ ಜಂತವಃ । ಚತುರ್ಧಾ ಪ್ರಳಯಾಯೈತೇ** ಜನಾರ್ದನ ವಿಭೂತಯಃ" ಎಂದು ವಿಷ್ಣುಪುರಾಣದಲ್ಲಿ ಶ್ರೀ ಪರಾಶರರಿಂದ ಹೇಳಲ್ಪಟ್ಟಿರುತ್ತದೆ. "ಏತೌ ದ್ವೌ ವಿಬುಧ**ಶ್ರೇಷ್ಠೌ ಪ್ರಸಾದಕ್ರೋಧಜೌ ಸ್ಮೃತೌ । ತದಾದರ್ಶಿತಪಂಥಾನೌ ಸೃಷ್ಟಿಸಂಹಾರಕಾರಕೌ"** ಎಂದು ರುದ್ರನು **ತಾಮಸಗುಣಾಧಿಕ್ಯವುಳ್ಳವನಾದುದರಿಂದ** ಸ್ವಾಮಿಯಿಂದ ಸಂಹಾರ

**ಭಾಷ್ಯಾವತಾರಿಕೆಯು — ತಚ್ಚೇದೃಶಮ್ —**

(ಪ್ರಳಯ) ಕಾರ್ಯದಲ್ಲಿ ನಿಯಮಿಸಲ್ಪಟ್ಟಿರುವವನಾಗಿ ಶ್ರೀಮನ್ನಾರಾಯಣನ ವಿಭೂತಿಗೆ ಸೇರಿದವರು. (ವಿ. ಪು. ೧-೨೨-೩೩) ಮತ್ತು ಮೋಕ್ಷಧರ್ಮದಲ್ಲಿ, **“ಯಸ್ತು ತೇ ಸೋಽಗ್ರತೋ ಯಾತಿ ಯುದ್ಧೇ ಸಂಪ್ರತ್ಯುಪಸ್ಥಿತೇ । ತಂ ರುದ್ರಂ ವಿದ್ಧಿ ಕೌನ್ತೇಯ ದೇವದೇವಂ ಕಪರ್ದಿನಮ್ । ಕಾಲಸ್ಯೈವಾಭಿಹಿತಃ ಕ್ರೋಧಜೇತಿ ಮಯಾ ತವ । ನಿಹತಾಂಸ್ತೇನ ಪೂರ್ವಂ ತ್ವಂ ಹತವಾನಸಿ ವೈರಿಣಃ”** ಎಂದು ಹೇಳಿರುವದರಿಂದ ರುದ್ರನು ಶ್ರೀಮನ್ನಾರಾಯಣನಿಂದ ಆಜ್ಞಪ್ತನಾಗಿ ಸಂಹಾರ ಕಾರ್ಯವನ್ನು ನಡೆಸುವನೆಂಬುದು ವ್ಯಕ್ತವು. ಆದುದರಿಂದ ಶ್ರೀಮನ್ನಾರಾಯಣಾವತಾರಿಯಾದ ಶ್ರೀ ಕೃಷ್ಣನು ತನ್ನ ಮಹಿಮಾತಿಶಯವನ್ನು ಪ್ರದರ್ಶಿಸುವ ತನ್ನ ರೂಪವನ್ನೇ ತೋರಿಸಿದನೆಂಬುದು ಸುವ್ಯಕ್ತವು. **ಪಶ್ಯ ಮೇ ಯೋಗಮೈಶ್ವರಂ** ಎಂದು ಶ್ರೀ ಕೃಷ್ಣನು ಹೇಳಿ ಶಿವರೂಪವನ್ನು ತೋರಿಸಿದನು ಎಂದರೆ **ವಿಭೂತ್ಯಧ್ಯಾಯಪ್ರಕರಣವಾಗಿ**, ಆ ಶಿವರೂಪವು **ಮೇ**-ನನ್ನ ವಿಭೂತಿಗೆ ಸೇರಿದುದು ಎಂಬರ್ಥವು ತಪ್ಪಿದ್ದಲ್ಲವಾದುದರಿಂದ ಪೂರ್ವ ಪಕ್ಷಿಯ ಆಶೆಗೆ ಆಗಲೂ ಭಂಗವೆಂಬುದು ತಪ್ಪಿದ್ದಲ್ಲವು. ಆದುದರಿಂದ ಇವೆಲ್ಲಾ ಅಭಿಪ್ರಾಯವನ್ನೂ ನಿರಾಕರಿಸುವದಕ್ಕಾಗಿ ತೋರಿಸಿದ ರೂಪವು ಯಾವುದೆಂದರೆ — **ಸ್ವಾಸಾಧಾರಣಂ ರೂಪಂ** ಎಂದು ವ್ಯಾಖ್ಯಾನವನ್ನು ಅನುಗ್ರಹಿಸಿರುತ್ತಾರೆ. ಇಲ್ಲಿಯೂ ರೂಪವೆಂದರೆ ಸ್ವರೂಪಗುಣವಿಭವಾದಿಗಳ ಪ್ರದರ್ಶಕವಾದ ದಿವ್ಯಮಂಗಳವಿಗ್ರಹವೆಂದು ಅರ್ಥಮಾಡಬಹುದು. **ಪ್ರಶಾಸಿತೃಚ ರೂಪಮ್** ಎಂಬುದರಿಂದಲೂ, ಆತ್ಮಾವಾಗಿ ಸ್ವರೂಪತಃ ವ್ಯಾಪ್ತಿಯು ಈ ವಿಶ್ವರೂಪದಿಂದ ಪ್ರದರ್ಶಿಸಲ್ಪಟ್ಟಿತೆಂದು ಭಾವಿಸತಕ್ಕದ್ದು. ಅದೂ ಅಲ್ಲದೆ ಇಷ್ಟುದೂರ ಚರ್ಚೆಗೆ ಅವಕಾಶವಿಲ್ಲವೇನೆ **ಮಹಾ ಯೋಗೇಶ್ವರೋ ಹರಿಃ** ಎಂದು ಮೂಲದಲ್ಲೇ ಹರಿಶಬ್ದವಿರುವದರಿಂದ ಶೈವರೂಪವೆಂಬ ಸಂದೇಹಕ್ಕೆ ಕೂಡ ಅನುಕೂಲವಿಲ್ಲವು. ಹರಿಶಬ್ದ ನಿರ್ವಚನವು ಶ್ರೀ ಪರಾಶರ ಮಹರ್ಷಿಗಳಿಂದ ಮಾಡಲ್ಪಟ್ಟಿದೆ. **“ಬ್ರಹ್ಮಾಣಮಿನ್ದ್ರಂ ರುದ್ರಂ ಚ ಯಮಂ ವರುಣಮೇವ ಚ । ನಿಗೃಹ್ಯ ಹರತೇ ಯಸ್ಮಾತ್ತಸ್ಮಾದ್ಧರಿರಿತೀರ್ಯತೇ”** ಎಂಬ ಪ್ರಮಾಣವೇ ಸಂಶಯವನ್ನು ದೂರೀಕರಿಸುತ್ತದೆ ॥ ೯ ॥

**ಭಾಷ್ಯಾವತಾರಿಕೆಯ ಅರ್ಥವು :- ಪಶ್ಯ ಮೇ ಯೋಗಮೈಶ್ವರಂ** ಎಂದು ಶ್ರೀಕೃಷ್ಣನು ಹೇಳಿದ ರೂಪವೇ ಸಂಜಯರು ಹೇಳಿದ **ಪರಮಂ ರೂಪಮೈಶ್ವರಂ** ಎಂಬ ರೂಪವು. ಅದು ಎಂತಾದ್ದೆಂದರೆ, **ಈದೃಶಂ**-ಇಂತಾದ್ದು. ೧೦ ೧೧ ನೆಯ ಶ್ಲೋಕಗಳಲ್ಲಿ ಹೇಳುವಂತಾದ್ದು. ಹಾಗೆಯೇ ೧೨, ೧೩, ೧೪ ನೆಯ ಶ್ಲೋಕಗಳಲ್ಲೂ ಹೇಳಿರುವಂತಾದ್ದು. ಸಂಜಯರು ಧೃತರಾಷ್ಟ್ರನಿಗೆ ಚನ್ನಾಗಿ ತಿಳಿಯುವಹಾಗೆ ವರ್ಣಿಸಿ ಹೇಳುವ ವಾಕ್ಯಗಳು. ಹಿಂದೆ **ಪರಮಂ ರೂಪಮೈಶ್ವರಂ** ಎಂದು ಹೇಳಿದರು. ಅದು ಎಂತಾದ್ದೆಂದರೆ ಮುಂದಿನ ಎರಡು ಶ್ಲೋಕಗಳಿಂದ ಹೇಳುತ್ತಾರೆ.— ೯, ೧೦, ೧೧ ನೇ ಮೂರು ಶ್ಲೋಕಗಳೂ ಸೇರಿ ಒಂದೇ ಅನ್ವಯವು ೯ ನೆಯ ಶ್ಲೋಕದಲ್ಲಿ **ದರ್ಶಯಾಮಾಸ ಪಾರ್ಥಾಯ ರೂಪಮೈಶ್ವರಂ** ಎಂದು ಕ್ರಿಯಾಪದವಿರುತ್ತೆ. ೧೦, ೧೧ ಶ್ಲೋಕದಲ್ಲಿರುವವೆಲ್ಲಾ ದ್ವಿತೀಯಾನ್ತ ಪದಗಳು. **ರೂಪಮೈಶ್ವರಂ** ಎಂಬುವದ ವಿವರಣೆಯಾಗಿ ಅವುಗಳಿಗೆ ವಿಶೇಷಣಗಳು, ಓ ಧೃತರಾಷ್ಟ್ರನೇ ಕೇಳುವಂತನಾಗು, ಆ ವಿಶ್ವರೂಪವನ್ನು ತೋರಿಸಿದರು ಎಂದು ಹೇಳಿದೆನಲ್ಲಾ ಅದು ಎಂತಾದ್ದೆಂದರೆ.—

**ಮೂಲಕ್ಕೆ ಅರ್ಥವು:- ಅನೇಕ ವಕ್ತ್ರನಯನಂ** ಅನೇಕ ಮುಖಗಳನ್ನೂ ಕಣ್ಣುಗಳನ್ನೂ ಉಳ್ಳದುದು. **“ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್”** ಎಂದು ಹೇಳಿರುವ

**ಮೂ ಅನೇಕ ವಕ್ತ್ರನಯನ ಮನೇಕಾದ್ಭುತ ದರ್ಶನಮ್ ।**
**ಅನೇಕ ದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥** ೧೦.
**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವ ಮನನ್ತಂ ವಿಶ್ವತೋಮುಖಮ್ ॥** ೧೧.

**ಭಾ. ದೇವಂ-ದ್ಯೋತಮಾನಂ. ಅನನ್ತಂ-ಕಾಲತ್ರಯವರ್ತಿ ನಿಖಿಲಜಗದಾಶ್ರಯತಯಾ** ಹಾಗೆ ಅನೇಕಮುಖ, ನಯನಗಳುಳ್ಳ ರೂಪವು, ಇದು ಕರಚರಣಗಳೂ ಅನೇಕವೆಂಬುದಕ್ಕೆ ಉಪಲಕ್ಷಣವು; ಶ್ರುತಿಯು ಇನ್ನೊಂದುಕಡೆಯಲ್ಲೂ, "**ಸಹಸ್ರಶೀರ್ಷಂ ದೇವಂ**" ಎಂದೂ, "**ವಿಶ್ವತಶ್ಚಕ್ಷುರುತ ವಿಶ್ವತೋಮುಖಃ**" ಎಂದೂ ಇತ್ಯಾದಿ ಶ್ರುತ್ಯರ್ಥಗಳಿಗನುಸಾರವಾಗಿ ಇಲ್ಲಿ ಹೇಳಲ್ಪಟ್ಟಿತು. **ಅನೇಕಾದ್ಭುತ ದರ್ಶನಂ**-ಅನೇಕಗಳಾದ ಅದ್ಭುತಗಳಾದ ದರ್ಶನವುಳ್ಳದ್ದು ಆ ರೂಪವು. ಮತ್ತು ಅನೇಕಗಳಾದ, **ದಿವ್ಯ**-ಅಪ್ರಾಕೃತಗಳಾದ, **ಆಭರಣಂ**-ನಾನಾವಿಧವಾದ ಆಭರಣಗಳನ್ನುಳ್ಳದುದು. **ದಿವ್ಯ**-ಅಪ್ರಾಕೃತಗಳಾದ, **ಉದ್ಯತಾಯುಧಮ್**-ಕರಗಳಲ್ಲಿ ಎತ್ತಲ್ಪಟ್ಟ ಆಯುಧಗಳುಳ್ಳ ರೂಪವು. ಇಂತಹ ರೂಪವನ್ನು ಶ್ರೀಹರಿಯು, **ದರ್ಶಯಾಮಾಸ** ಎಂದು ಹಿಂದಿನ ಶ್ಲೋಕದೊಂದಿಗೆ ಅನ್ವಯವು. ಹೀಗೆ ಪರಮಾತ್ಮನು ದಿವ್ಯಮಙ್ಗಳವಿಗ್ರಹವನ್ನು ಧರಿಸಿರುವದು, ಶ್ರೀ ಪರಾಶರರು, ವಿಷ್ಣುಪುರಾಣದ ಅಸ್ತ್ರಭೂಷಣಾಧ್ಯಾಯದಲ್ಲಿ, "**ಪ್ರಾಣಿನಾಂ ಶ್ರೇಯಸೇ**"-ಪ್ರಾಣಿಗಳ ಶ್ರೇಯಸ್ಸಿಗಾಗಿಯೇ ಧರಿಸಿರುತ್ತಾರೆಂದು ಹೇಳಿರುತ್ತಾರೆ. **ಉದ್ಯತಾಯುಧಗಳು**-ಲೋಕಕಂಟಕರಾದ ದುಷ್ಟರ ನಿಗ್ರಹಾರ್ಥವಾಗಿ ಎಂದು ಭಾವಿಸತಕ್ಕದ್ದು. **ದಿವ್ಯಮಾಲ್ಯಾಂಬರಧರಂ**-ಅಪ್ರಾಕೃತಗಳಾದ ವೈಜಯಂತೀ ಮೊದಲಾದ ಪುಷ್ಪಹಾರ ಕಂಠಾಭರಣಗಳನ್ನೂ, ಪೀತಾಂಬರಗಳನ್ನೂ, ಅವುಗಳನ್ನು ಧರಿಸುವ, ಮತ್ತು **ದಿವ್ಯಗಂಧಾನುಲೇಪನಮ್**-**ಸರ್ವಗಂಧಃ** ಎಂದು ಹೇಳಿರುವ ಹಾಗೆ ಅಪ್ರಾಕೃತವಾದ ಗಂಧದ ಅನುಲೇಪನವುಳ್ಳ, **ಸರ್ವಾಶ್ಚರ್ಯಮಯಂ**-ಸಮಸ್ತ ಆಶ್ಚರ್ಯರೂಪದ ಪ್ರಾಚುರ್ಯವುಳ್ಳ. **ದೇವಂ**-ಲೀಲಾವಿಭೂತಿಯಲ್ಲಿ ಮಮತೆಯುಳ್ಳ, ಕ್ರೀಡಾಪರನಾದ, ಅಥವಾ ಅದ್ಭುತ ತೇಜಸ್ಸಿನಿಂದ ದೇದೀಪ್ಯಮಾನನಾಗಿರುವ, **ಅನನ್ತಂ**-ದೇಶಕಾಲವಸ್ತು ಪರಿಚ್ಛೇದರಹಿತನಾದ, **ವಿಶ್ವತೋಮುಖಮ್** ವಿಶ್ವದ ಎಲ್ಲಾ ದಿಕ್ಕುಗಳಲ್ಲೂ, ಮುಖವುಳ್ಳ ರೂಪವನ್ನು **ದರ್ಶಯಾಮಾಸ**ವೆಂದು ಮುಂದೆ ಇದೆ.— ತೋರಿಸಿದನು. ॥ ೧೦, ೧೧ ॥

**ಭಾಷ್ಯಾರ್ಥವು**:—**ದೇವಂ** ಎಂದರೆ **ದ್ಯೋತಮಾನಂ**.-**ದಿವು**-ಕಾಂತ್ಯಾಂ ಎಂಬ ಧಾತ್ವರ್ಥದ ಪ್ರಕಾರ ತೇಜೋರಾಶಿಯಾಗಿ ಪ್ರಕಾಶಿಸುತ್ತಿರುವ, ಇವೆಲ್ಲಾ ಹಿಂದಿನಶ್ಲೋಕದಲ್ಲಿರುವ **ರೂಪಮೈಶ್ವರಂ** ಎಂಬುವಕ್ಕೆ ವಿಶೇಷಣಗಳು. **ಅನನ್ತಂ** ಎಂದರೆ **ಕಾಲತ್ರಯವರ್ತಿ ನಿಖಿಲಜಗದಾಶ್ರಯತಯಾ**-ಭೂತವರ್ತಮಾನ ಭವಿಷ್ಯತ್ಕಾಲಗಳಲ್ಲೂ ಇರುತ್ತಿರುವದಾಗಿ ಎಂದರೆ ನಿತ್ಯವಾಗಿ ಸಮಸ್ತ ಜಗತ್ತಿಗೂ ಆಶ್ರಯವಾಗಿರುವದರಿಂದ. **ದೇಶ ಕಾಲ ಪರಿಚ್ಛೇದಾನರ್ಹಂ-ಸ್ವರೂಪತಃ ರೂಪತಃ** ದೇಶಕಾಲಗಳ ಪರಿಚ್ಛೇದಕ್ಕೆ ಯೋಗ್ಯವಲ್ಲದ. ಎಂದರೆ **ಈ** ದೇಶ **ಈ** ಕಾಲಗಳಲ್ಲಿ ಉಂಟು ಈ ದೇಶ ಈ ಕಾಲಗಳಲ್ಲಿಲ್ಲ ಎಂದಿರದೆ ಸರ್ವದೇಶ ಸರ್ವಕಾಲಗಳಲ್ಲೂ ನಿತ್ಯವಾಗಿರುವ, **ವಿಶ್ವತೋಮುಖಂ** ಎಂದರೆ **ವಿಶ್ವದಿಗ್ವರ್ತಿಮುಖಂ**-ವಿಶ್ವದ ದಿಕ್ಕುಗಳಲ್ಲೆಲ್ಲಾ ಇರುವ ಮುಖವುಳ್ಳ, ಹಿಂದೆ ಉದಾಹರಿಸಿರುವ "**ವಿಶ್ವತಶ್ಚಕ್ಷುರುತ ವಿಶ್ವತೋಮುಖಃ** (ಶ್ವೇ. ೩. ೩.) ಎಂಬ ಶ್ರುತ್ಯರ್ಥದಹಾಗೆ, ಸಮಸ್ತ ಜಗತ್ತಿಗೂ ಆತ್ಮನಾಗಿ ಅವುಗಳನ್ನೆಲ್ಲಾ ವ್ಯಾಪಿಸಿರುವ **ಸ್ವರೂಪವೂಕೂಡ** ಶೋಧಿತವಾಯಿತು. **ಸ್ವೋಚಿತ**-ತನಗೆ ಮಾತ್ರವೇ ಯೋಗ್ಯವಾದ, **ಅಂಬರ**-

ಭಾ. ದೇಶಕಾಲಪರಿಚ್ಛೇದಾನರ್ಹಂ, ವಿಶ್ವತೋಮುಖಮ್ - ವಿಶ್ವದಿಗ್ವರ್ತಿಮುಖಂ, ಸ್ವೋಚಿತ ದಿವ್ಯಾಂಬರ ಗಂಧಮಾಲ್ಯಾಭರಣಾಯುಧಾನ್ವಿತಮ್. ॥ ೧೦, ೧೧ ॥

ಭಾ. ಅವ. ತಾಮೇವ ದೇವ ಶಬ್ದ ನಿರ್ದಿಷ್ಟಾಂ ದ್ಯೋತಮಾನತಾಂ ವಿಶಿನಷ್ಟಿ-

ಮೂ. ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾ ಸ್ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨.

**ವಸ್ತ್ರ, ಗಂಧಮಾಲಿಕೆಗಳು, ಆಭರಣಗಳು**, **ಆಯುಧಗಳು** ಇವುಗಳಿಂದ **ಅನ್ವಿತಮ್**-ಕೂಡಿಕೊಂಡಿರುವ, ಈ ರೂಪದಲ್ಲಿ ಧರಿಸಿರುವ ಮಾಲಿಕೆಗಳೂ, ವಸ್ತ್ರಗಳೂ, ಆಭರಣಗಳೂ, ಆಯುಧಗಳೂ ಸಹ ಈ ನಮ್ಮ ಲೋಕದವುಗಳಹಾಗಲ್ಲದೆ ಶಾಶ್ವತವಾದವುಗಳೆಂದು ತಿಳಿಸುವುದಕ್ಕಾಗಿ, **ಸ್ವೋಚಿತ** ಶಬ್ದವೂ. **ದಿವ್ಯ** ಶಬ್ದವೂ ಎಂದು ಭಾವಿಸತಕ್ಕದ್ದು. **ರೂಪಮೈಶ್ವರಂ ದರ್ಶಯಾಮಾಸ** ಎಂದು ಅನ್ವಯಿಸುವು. **ಸರ್ವಾಶ್ಚರ್ಯಮಯಂ** ಎಂದರೆ ಆಶ್ಚರ್ಯಭೂತ ಸರ್ವತತ್ವಾಶ್ರಯಭೂತಂ ಎಂದು ಶ್ರೀ ದೇಶಿಕರು ಅರ್ಥಮಾಡಿರುತ್ತಾರೆ. ಆಶ್ಚರ್ಯಕರಗಳಾದ ಸರ್ವತತ್ವಗಳಿಗೂ ಆಶ್ರಯರೂಪವಾದುದು ಆ ವಿಶ್ವರೂಪವೆಂಬರ್ಥವು. ವಿಷ್ಣುಪುರಾಣದಲ್ಲಿ " **ಜಗದೇತನ್ಮಹಾಶ್ಚರ್ಯಮ್ ರೂಪಂ ಯಸ್ಯ ಮಹಾತ್ಮನಃ । ತೇನಾಶ್ಚರ್ಯವರೇಣಾ ಹಂ ಭವತಾ ಕೃಷ್ಣ ಸಂಗತಃ** " (೫. ೧೯. ೭.) ಈ ಜಗತ್ತೆಲ್ಲವೂ ಯಾವ ಮಹಾತ್ಮನ ಆಶ್ಚರ್ಯಕರವಾದ ರೂಪವೋ, ಅಂತಹ ಆಶ್ಚರ್ಯಶ್ರೇಷ್ಠನಾದ ಮಹಾತ್ಮನೊಂದಿಗೆ ನನಗೆ ಸುಕೃತ ಪರಿಪಾಕದಿಂದ ಸಂಬಂಧವು ಉಂಟಾಗಿದೆ ಎಂಬ ಯಮುನಾನದಿಯಲ್ಲಿ ಅವಗಾಹನಾನಂತರ ಅಕ್ರೂರನು ಶ್ರೀ ಕೃಷ್ಣನನ್ನು ಕುರಿತು ಹೇಳುವ ವಾಕ್ಯವು, ಇಲ್ಲಿ ಅನುಸಂಧೇಯವು.

**ಭಾಷ್ಯಾವತಾರಿಕೆಯ ಅರ್ಥವು:— ತಾಮೇವ ದೇವಶಬ್ದ ನಿರ್ದಿಷ್ಟಾಂ**-ಹಿಂದಿನ ಶ್ಲೋಕದಲ್ಲಿ ಆ ರೂಪವೆಂತಾದ್ದೆಂದು ಹೇಳುವ ಸಂದರ್ಭದಲ್ಲಿ **ದೇವಂ** ಎಂದು ಏಹು ಪ್ರಕಾರದಿಂದ ದೇದೀಪ್ಯವಾದ ರೂಪವೆಂದು ಹೇಳಲ್ಪಟ್ಟಿತು, **ತಾಮೇವ** - ಅಂತಹ ದೇವಶಬ್ದದಿಂದ **ನಿರ್ದಿಷ್ಟಾಂ**-ಬೋಧಿಸಲ್ಪಟ್ಟ. **ದ್ಯೋತಮಾನತಾಂ**-ದೀಪ್ಯಮಾನವಾದ ಸ್ಥಿತಿಯನ್ನು, **ವಿಶಿನಷ್ಟಿ** - ವಿಶೇಷಿಸಿ ಸಂಜಯರು ಧೃತರಾಷ್ಟ್ರನಿಗೆ ಹೇಳುತ್ತಾರೆ. ಆ ರೂಪದಲ್ಲಿ ಕಂಡುಬಂದ ದೀಪ್ತಿಯು ಎಂತಾದ್ದೆಂದರೆ ವರ್ಣಿಸುತ್ತಾರೆ.—

**ಮೂಲಕ್ಕೆ ಅರ್ಥವು :**—ಓ ಧೃತರಾಷ್ಟ್ರನೇ ! ಆ ವಿಶ್ವರೂಪದ ದಿವ್ಯತೇಜಸ್ಸು ಎಂತಾದ್ದೆಂಬುದನ್ನು ಹೇಗೆ ವರ್ಣಿಸಲಿ, ತುಂಬಾ ಅಸಾಧ್ಯ ವಿಷಯವು. ಅದಕ್ಕೆ ಯಾವ ಉಪಮೆಯನ್ನು ಹೇಳಲೂ ಸಾಧ್ಯವಿಲ್ಲವು. ಆದರೂ ಶ್ರೀ ವೇದವ್ಯಾಸರ ಪ್ರಸಾದದಿಂದ ನನಗೆ **ಅಭೂತೋಪಮೆ**ಯ ಮೂಲಕ ಉಪದಿಷ್ಟವಾದುದನ್ನು ತಿಳಿಸುವೆನು ಕೇಳು ಎಂದು ಸಂಜಯರು ವರ್ಣಿಸುತ್ತಾರೆ.—**ದಿವಿ** - ಅಂತರಿಕ್ಷದಲ್ಲಿ. **ಸೂರ್ಯಸಹಸ್ರಸ್ಯ** - ಸಹಸ್ರಸೂರ್ಯರ ಅಥವಾ ಸೂರ್ಯಸಹಸ್ರದ ಇಲ್ಲಿ **ಸಹಸ್ರ** ಶಬ್ದವು ಸಂಖ್ಯಾಪರವಲ್ಲವು, ಅನೇಕಾರ್ಥಪರವು, **ಭಾ**-ಪ್ರಕಾಶವು, **ಯದಿ ಯುಗಪದುತ್ಥಿತಾ ಭವೇತ್**-ಒಂದೇಸಲ ಹುಟ್ಟಿದುದು ಆದರೆ, **ಸಾ**-ಅಂತಹ ಅನೇಕ ಸೂರ್ಯತೇಜಸ್ಸಿನ, **ತಸ್ಯ ಮಹಾತ್ಮನಃ**-ಆ ವಿಶ್ವರೂಪವನ್ನು ಧರಿಸಿರುವ ಪರಮಾತ್ಮನ-**ಭಾಸಃ**-ಕಾಂತಿಗೆ, **ಸದೃಶೀಸ್ಯಾತ್**-ಒಂದುವೇಳೆ ಸಮಾನವಾದುದಾದರೂ ಆಗಬಹುದು, ಆಗಲೂ ಸಮಾನವಾಗಲಾರದು ಎಂಬುದೇ ಯದಿಶಬ್ದಾಭಿಪ್ರಾಯವು ಸಹಸ್ರಸೂರ್ಯರು ಏಕ **ಕಾಲದಲ್ಲಿ** ಉದಿಸಿ ಪ್ರಕಾಶಿಸುವದೂ ಎಂಬುದು ಎಂದಿಗೂ **ಇಲ್ಲವು**. ಒಂದುವೇಳೆ ಹಾಗೆ ಉದಿಸಿ

**ಭಾ. ತೇಜಸೋಽಪರಿಮಿತತ್ವ ದರ್ಶನಾರ್ಥಮಿದಂ ; ಅಕ್ಷಯತೇಜಸ್ಸ್ವರೂಪಮಿತ್ಯರ್ಥಃ॥**

**ಮೂ. ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕಧಾ ।**
**ಅಪಶ್ಯ ದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥** ೧೩.

ಪ್ರಕಾಶಿಸಿದರೆ ಆಗೇನಾದರೂ ಆ ಪರಿಮಿತವಾದ ತೇಜಸ್ಸು ಪರಮಾತ್ಮನ ತೇಜಸ್ಸಿಗೆ ಸಮಾನವಾದೀತೋ ಏನೋ ಎಂಬ ಭಾವವು. ಸಾವಿರವೆಂದು ಹೇಳುವುದರಿಂದ ತೇಜಸ್ಸು ಪರಿಚ್ಛಿತ್ತಿಯುಳ್ಳದುದು ಎಂದು ಹೇಳಿದಂತಲ್ಲವು. ಅಪರಿಚ್ಛಿನ್ನವೆಂದು ಹೇಳುವದಕ್ಕಾಗಿಯೇ ಅಂತಹ ಅಭೂತೋಪಮೆಯು ಎಂಬ ಭಾವವು. ಶ್ರುತಿಯೂ ಕೂಡ ಇಂತಹ ಪರಿಚ್ಛಿತ್ತಿ ಇರುವ ಹೋಲಿಕೆಯಿಂದಲೇ **"ಸ ಏಕೋಮಾನುಷ ಆನಂದಃ"** ಎಂದಾರಂಭಿಸಿ, **ಪರಮಾತ್ಮನ ಆನಂದವು** ಅಪರಿಮಿತವೆಂದು ಆನಂದವಲ್ಲಿಯಲ್ಲಿ ಉಪಪಾದಿಸಿರುತ್ತದೆ.

**ಭಾಷ್ಯಾರ್ಥವು:**—ಈ ಶ್ಲೋಕಾಭಿಪ್ರಾಯವೇನೆಂಬುದನ್ನು ತಿಳಿಸುವ ಸಂದರ್ಭದಲ್ಲಿ ಸಾವಿರ ಎಂದರೆ ಅಸಂಖ್ಯಾತಸೂರ್ಯರು ಏಕಕಾಲದಲ್ಲಿ ಉದಿಸಿದರೆ ಎಷ್ಟು ತೇಜಸ್ಸುಂಟಾಗುತ್ತದೋ, ಅಷ್ಟು ಪ್ರಕಾಶವುಳ್ಳದು ಎಂದು ಸಹಸ್ರ ಸಂಖ್ಯೆಯನ್ನುಪಯೋಗಿಸಿದ ಅಭಿಪ್ರಾಯವನ್ನು ತಿಳಿಸುತ್ತಾರೆ.—**ತೇಜಸಃ**-ಆ ವಿಶ್ವರೂಪಿಯ ತೇಜಸ್ಸಿನ, **ಅಪರಿಮಿತತ್ವವನ್ನು ದರ್ಶನಾರ್ಥಮಿದಮ್** - ಪ್ರದರ್ಶಿಸುವದಕ್ಕಾಗಿ ಇದನ್ನು ಹೇಳಿದುದಾಗಿರುತ್ತದೆ ಇದರಿಂದ ಒಟ್ಟು ತಾತ್ಪರ್ಯವೇನೆಂದರೆ, **ಅಕ್ಷಯ ತೇಜಸ್ಸ್ವರೂಪ ಮಿತ್ಯರ್ಥ** -ಅಪರಿಮಿತವಾದ ಪರಿಪೂರ್ಣವಾಗಿ ಸ್ವಲ್ಪವೂ ಕ್ಷೀಣದೆಶೆಯೇ ಇಲ್ಲದಿರುವ ತೇಜಸ್ಸುಳ್ಳದು ಎಂಬರ್ಥವು, ಅಥವಾ ಪರಿಪೂರ್ಣವಾಗಿ ಸ್ವಲ್ಪವೂ ನ್ಯೂನತೆಯಿಲ್ಲದ ತೇಜಸ್ಸುಳ್ಳ ಸ್ವರೂಪವುಳ್ಳದು ಎಂದಾಗಲಿ ಅರ್ಥ ಮಾಡಬಹುದು. ಈ ಸಂದರ್ಭದಲ್ಲಿ ಛಾಂದೋಗ್ಯ ಶ್ರುತಿಯು (೩.೧೩.೭) **"ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷೂತ್ತಮೇಷು ಲೋಕೇಷು ಇದಂ ವಾವ ತದ್ಯದಿದ ಮಸ್ಮಿನ್ನಂತಃ ಪುರುಷೇ ಜ್ಯೋತಿಃ"** ಎಂಬುದು ಅನುಸಂಧೇಯವು. ಸಮಸ್ತ ವ್ಯಷ್ಟಿ ಸಮಷ್ಟಿ ತತ್ವಗಳಿಗಿಂತಲೂ ಹೊರಗಿರುವ, ಮತ್ತು ಅವಕ್ಕಿಂತಲೂ ಅಪ್ರಾಕೃತಸ್ಥಾನವಿಶೇಷಕ್ಕಿಂತಲೂ ಆಚೆಗೂ ದೇದೀಪ್ಯಮಾನನಾಗಿ ಜ್ಯೋತಿಯಾಗಿರುವ ಪರಮಾತ್ಮನೇ ಕುಕ್ಷಿಯಲ್ಲಿಯೂ ಇರುವ ವೈಶ್ವಾನರಶಬ್ದವಾಚ್ಯನಾದವನು ಎಂಬುದು ತಾತ್ಪರ್ಯವು. **"ನತತ್ರ ಸೂರ್ಯೋಭಾತಿ"** ಎಂದು ಹೇಳಿ **"ತಸ್ಯಭಾಸಾ ಸರ್ವಮಿದಂ ವಿಭಾತಿ"** ಎಂಬ **"ಜ್ಯೋತಿಷಾಂ ಜ್ಯೋತಿಃ"** ಎಂಬ ಪ್ರಮಾಣಗತಾರ್ಥವು ಇಲ್ಲಿಯೂ ಹೇಳಲ್ಪಟ್ಟಿತು. ಇಂತಹ ನಿರತಿಶಯದೀಪ್ತಿಮತ್ವವು, ಜಗದೇಕಕಾರಣನಾಗಿ ಭಕ್ತರಿಂದ ಉಪಾಸ್ಯನಾಗಿ, ಸರ್ವಾಭೀಷ್ಟ ಫಲಪ್ರದನಾಗಿರುವ ಪರಮ ಪುರುಷನಿಗೆ ಮಾತ್ರವೇ ಸಲ್ಲುತ್ತದೆಂದು **ಜ್ಯೋತಿಶ್ಚರಣಾಭಿಧಾನಾತ್** ಎಂದು ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ.

**ಮೂಲಕ್ಕೆ ಅರ್ಥವು:**---ಇನ್ನು ಸಂಜಯನು ಧೃತರಾಷ್ಟ್ರನಿಗೆ ಆ ರೂಪವನ್ನು ವರ್ಣಿಸುತ್ತಾರೆ. ಪರಂಜ್ಯೋತಿಯು ದೇದೀಪ್ಯಮಾನವಾದ ಶರೀರದ ಏಕದೇಶದಲ್ಲಿ ಈ ಸಮಸ್ತ ಜಗತ್ತನ್ನು ಅರ್ಜುನನು ನೋಡಿದನೆಂದು ಹರಗಾಗಿ ಹೇಳುತ್ತಾರೆ **ತತ್ರ**-ಅನೇಕ ವಕ್ತ್ರನಯನಂ ಎಂದಾರಂಭಿಸಿ ಹೇಳಿದ ಮೂರು ಶ್ಲೋಕಗಳಿಂದಲೂ ವರ್ಣಿಸಲ್ಪಟ್ಟ, ಅಂತಹ ವಿಶ್ವರೂಪದಲ್ಲಿ **ತದಾ**-ಆ ಕಾಲದಲ್ಲಿ ಎಂದರೆ ವಿಶ್ವರೂಪ ಪ್ರದರ್ಶನ ಕಾಲದಲ್ಲಿ, **ದೇವ ದೇವಸ್ಯ**-ಬ್ರಹ್ಮರುದ್ರೇಂದ್ರಾದಿ ಸರ್ವದೇವತೆಗಳಿಗೂ ಸ್ವಾಮಿಯಾದ ಶ್ರೀಮನ್ನಾರಾಯಣನ, **ಶರೀರೇ**-ಈ

**ಭಾ. ತತ್ರ ಸನನ್ತಾಯಾಮವಿಸ್ತಾರೇ, ಅನನ್ತಬಾಹೂದರವಕ್ತ್ರನೇತ್ರೇ, ಅಪರಿಮಿತ ತೇಜಸ್ಕೇ, ಅಪರಿಮಿತದಿವ್ಯಾಯುಧೋಪೇತೇ, ಸ್ವೋಚಿತಾ ಪರಿಮಿತ ದಿವ್ಯ ಭೂಷಣೇ, ದಿವ್ಯಮಾಲ್ಯಾಂಬರಧರೇ, ದಿವ್ಯಗಂಧಾನುಲೇಪನೇ, ಅನನ್ತಾಶ್ಚರ್ಯ ಮಯೇ, ದೇವದೇವಸ್ಯ ದಿವ್ಯೇ ಶರೀರೇ, ಅನೇಕಧಾಪ್ರವಿಭಕ್ತಂ ಬ್ರಹ್ಮಾದಿ ವಿವಿಧ ವಿಚಿತ್ರದೇವ ತಿರ್ಯಙ್ಮನುಷ್ಯ ಸ್ಥಾವರಾದಿ ಭೋಕ್ತೃವರ್ಗ ಪೃಥಿವ್ಯಂತರಿಕ್ಷ ಸ್ವರ್ಗಪಾತಾಲಾತಲ ವಿತಲ ಸುತಲಾದಿ ಭೋಗಸ್ಥಾನ ಭೋಗ್ಯ ಭೋಗೋಪಕರಣ ಭೇದ ಭಿನ್ನಂಪ್ರಕೃತಿಪುರುಷಾತ್ಮಕಂ-ಕೃತ್ಸ್ನಂಜಗತ್(೧) "ಅಹಂಸರ್ವಸ್ಯಪ್ರಭವೋಮತ್ತ**

---

ಮಹಾದ್ಭುತಾಶ್ಚರ್ಯ ಶರೀರದಲ್ಲಿ, **ಜಗತ್ಕೃತ್ಸ್ನಂ**-ಈ ಚಿದಚಿದಾತ್ಮಕವಾದ ಸಮಸ್ತ ಜಗತ್ತನ್ನೂ, ಅದು ಎಂತಹದ್ದೆಂದರೆ, **ಅನೇಕಧಾ**-ಅನೇಕ ಬಗೆಯಾಗಿ, **ಪ್ರವಿಭಕ್ತಂ**-ವಿಭಾಗವನ್ನು ಹೊಂದಿದ ಈ ಸಮಸ್ತ ಜಗತ್ತನ್ನೂ, **ಏಕಸ್ಥಂ**-ಆ ಶರೀರದ ಏಕದೇಶದಲ್ಲಿರುವದನ್ನಾಗಿ, **ಅಪಶ್ಯತ್**-ಆಶ್ಚರ್ಯಯುಕ್ತನಾಗಿ ಕಂಡನು. "**ವಿಸ್ಮಯಾವಿಷ್ಟಃ**" ಆಶ್ಚರ್ಯಯುಕ್ತನೂ ಆದನು ಎಂದು ಮುಂದಿನಶ್ಲೋಕದಲ್ಲಿ ಹೇಳಲ್ಪಡುತ್ತದೆ. ಹಿಂದೆ ಎಲ್ಲವೂ ತನ್ನ ಶರೀರವೆಂದು ಹೇಳಲ್ಪಟ್ಟಿತು. ಅಂತಹದ್ದೆಲ್ಲಾ ತನ್ನ ಶರೀರದಲ್ಲಿರುವದು ಹೇಗೆ ಎಂಬ ಶಙ್ಕೆಗೆ ಉತ್ತರವಾಗಿ ನಮ್ಮ ಕಣ್ಣು ಈ ಆತ್ಮಾವಿನ ಶರೀರದ ಏಕದೇಶದಲ್ಲಿ ಹೇಗೆ ಇದೆಯೋ ಹಾಗೆ ಅದೂ ಈ ಆತ್ಮಾವಿನ ದೇಹದ ಏಕ ದೇಶದಲ್ಲಿದೆ ಎಂದು ಹೇಳಿದುದರಲ್ಲಿ ಅಸಂಗತವೇನೂ ಇಲ್ಲವು.

**ಭಾಷ್ಯಾರ್ಥವು:—ತತ್ರ** ಎಂದರೆ ಆ ದೇಹದಲ್ಲಿ ಎಂದರ್ಥವಾಗುತ್ತದೆ, ಹಿಂದೆ ಆ ದೇಹವೆಂತಹದ್ದೆಂದು ಜ್ಞಾಪಿಸುವದಕ್ಕೋಸ್ಕರ ಹಿಂದಿನ ಶ್ಲೋಕಗಳಲ್ಲಿ ಹೇಳಿದುದನ್ನು ಅನುವಾದ ರೀತ್ಯಾ ಉಪಪಾದಿಸಿ ಹೇಳುತ್ತಾರೆ. **ಅನನ್ತಾಯಾಮವಿಸ್ತಾರೇ**-ಕೊನೆಯಿಲ್ಲದ ಉದ್ದ ಮತ್ತು ವಿಸ್ತಾರವುಳ್ಳ, **ಅನನ್ತ ಬಾಹೂದರವಕ್ತ್ರನೇತ್ರೇ**-ಅನನ್ತಗಳಾದ ಬಾಹುಗಳು ಉದರ ಮುಖ, ಕಣ್ಣುಗಳನ್ನುಳ್ಳ, **ಅಪರಿಮಿತವಾದ ತೇಜಸ್ಸುಳ್ಳ, ಅಪರಿಮಿತ ದಿವ್ಯಾಯುಧೋಪೇತೇ**-ಅಪರಿಮಿತಗಳಾದ ಅಪ್ರಾಕೃತಾಯುಧಗಳಿಂದ ಕೂಡಿಕೊಂಡಿರುವ, **ಸ್ವೋಚಿತಾಪರಿಮಿತ ದಿವ್ಯ ಭೂಷಣೇ**-ತನಗೆ ಮಾತ್ರವೇ ಯೋಗ್ಯವಾಗಿರುವ ಅಸಂಖ್ಯೇಯಗಳಾದ ಅಪ್ರಾಕೃತಗಳಾದ ಭೂಷಣಗಳನ್ನು ಹೊಂದಿರುವ, **ದಿವ್ಯಮಾಲ್ಯಾಂಬರಧರೇ**-ಅಪ್ರಾಕೃತವಾದ ವೈಜಯಂತೀ ಮೊದಲಾದ ವನಮಾಲೆಯನ್ನೂ ಪೀತಾಂಬರವನ್ನೂ ಧರಿಸಿರುವ, **ದಿವ್ಯಗಂಧಗಳ ಅನುಲೇಪನವುಳ್ಳ, ಅನನ್ತಾಶ್ಚರ್ಯಮಯೇ**-ಅಪರಿಮಿತಾಶ್ಚರ್ಯಯುಕ್ತವಾದ, **ತತ್ರ**-ಶಬ್ದದಿಂದ ಇಷ್ಟು ಅರ್ಥವೂ ದ್ಯೋತಿತವೆಂಬ ಭಾವವು. ಇಂತಹ, **ದೇವದೇವಸ್ಯದಿವ್ಯೇಶರೀರೇ** ಸರ್ವ ದೇವತೆಗಳಿಗೂ ದೇವನಾದ, ಸ್ವಾಮಿಯಾದ ಸರ್ವೇಶ್ವರನ, ಅಪ್ರಾಕೃತ ಶರೀರದಲ್ಲಿ, **ಅನೇಕಧಾ ಪ್ರವಿಭಕ್ತಂ**-ನಾನಾವಿಧಗಳಾಗಿ ವಿಭಾಗಿಸಲ್ಪಟ್ಟಿರುವ, ಹೇಗೆ ನಾನಾಬಗೆಯಾಗಿ ವಿಭಾಗಿಸಲ್ಪಟ್ಟಿರುವದು ಈ ಜಗತ್ತು ಎಂಬುವನ್ನು ವ್ಯಕ್ತಪಡಿಸುತ್ತಾರೆ,—**ಬ್ರಹ್ಮಾದಿ** ಮುಂತಾದ್ದು, **ಚತುರ್ಮುಖಬ್ರಹ್ಮನೇ** ಮೊದಲುಗೊಂಡು, ವಿವಿಧವಾಗಿ ವಿಚಿತ್ರವಾಗಿರುವ, **ದೇವ ತಿರ್ಯಕ್ಕು ಮನುಷ್ಯ, ಸ್ಥಾವರವೇ** ಮೊದಲಾದ **ಭೋಕ್ತೃವರ್ಗವೇನು, ಪೃಥಿವಿ, ಅಂತರಿಕ್ಷ**, ಸ್ವರ್ಗ, ಪಾತಾಳ, ಅತಲ ವಿತಲ ಸುತಲವೇ ಮೊದಲಾದ ಭೋಗಸ್ಥಾನಗಳೇನು ಭೋಗ್ಯವಸ್ತುಗಳೇನು ಭೋಗೋಪಕರಣಗಳೇನು ಇಂತವುಗಳ ಭೇದದಿಂದ ಭಿನ್ನವಾಗಿರುವ, ಹೀಗೆ **ಪ್ರಕೃತಿಪುರುಷಾ**

---

(೧) ಗೀ. ೧೦, ೮.

ಭಾ. ಸ್ಸರ್ವಂ ಪ್ರವರ್ತತೇ, "(೨) ಹನ್ತ ತೇ ಕಥಯಿಷ್ಯಾಮಿ ವಿಭೂತೀರಾತ್ಮನಶ್ಶುಭಾಃ" (೩) "ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ" (೪) "ಆದಿತ್ಯಾನಾಮಹಂ ವಿಷ್ಣುಃ" ಇತ್ಯಾದಿನಾ, (೫) "ನತದಸ್ತಿ ವಿನಾಯತ್ಸ್ಯಾನ್ಮಯಾ ಭೂತಂ ಚರಾಚರಮ್। ವಿಷ್ಟಭ್ಯಾಹ ಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋ ಜಗತ್" ಇತ್ಯನ್ತೇ ನೋದಿತಮ್ ಏಕಸ್ಥಂ-ಏಕದೇಶಸ್ಥಂ, ಪಾಂಡವೋ ಭಗವತ್ಪ್ರಸಾದ ಲಬ್ಧತದ್ದರ್ಶನಾನುಗುಣ ದಿವ್ಯ ಚಕ್ಷುರಪಶ್ಯತ್ ॥ ೧೩ ॥

ಮೂ. **ತತಸ್ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿ ರಭಾಷತ ॥** ೧೪.

**ತ್ಮಕಂ**-ಪ್ರಕೃತಿ ಪುರುಷರೂಪವಾದ, ಸತ್ಯಗಳಾದ **ಅಚಿತ್ತೂ ಚಿತ್ತೂ** ಇವುಗಳಿಂದ ಕೂಡಿಕೊಂಡಿರುವ, **ಕೃತ್ಸ್ನಂಜಗತ್**-ಸಮಸ್ತ ಜಗತ್ತನ್ನೂ, ಹೀಗೆಲ್ಲಾ ಎಲ್ಲಿ ಹೇಳಿದೆ ಎಂದರೆ ಹಿಂದೆ ಹೇಳಿದ ಪ್ರಮಾಣಗಳನ್ನುದಾಹರಿಸಿ ತೋರಿಸುತ್ತಾರೆ.—"**ಅಹಂ ಸರ್ವಸ್ಯಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ**" ಎಂದೂ, **ಹನ್ತತೇ ಕಥಯಿಷ್ಯಾಮಿ ವಿಭೂತೀ ರಾತ್ಮನ ಶ್ಶುಭಾಃ.**" ಎಂದೂ, **ಇತ್ಯಾದಿನಾ** ಇವುಗಳನ್ನೇ ಮೊದಲು ಮಾಡಿಕೊಂಡು, "**ನತದಸ್ತಿವಿನಾಯತ್ಸ್ಯಾನ್ಮಯಾ ಭೂತಂ ಚರಾಚರಂ। ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನಸ್ಥಿತೋಜಗತ್**" **ಇತ್ಯನ್ತೇನ** ಎಂದು ಮುಗಿಸಿ, **ಉದಿತಮ್** ಹೇಳಲ್ಪಟ್ಟದುದನ್ನು ಎಂಬ ತಾತ್ಪರ್ಯವು, ಇಂತಹ ಸಮಸ್ತ ಜಗತ್ತನ್ನೂ, **ಏಕಸ್ಥಮ್**-ಆ ಶರೀರದ ಒಂದು ಭಾಗದಲ್ಲಿರುವದನ್ನಾಗಿ, **ಪಾಂಡವಃ**-ಪಾಂಡುತನಯನಾದ ಅರ್ಜುನನು, ಅವನು ಎಂತವನೆಂದರೆ, **ಭಗವತ್ಪ್ರಸಾದದಿಂದ, ಲಬ್ಧ**-ಪಡೆಯಲ್ಪಟ್ಟ, **ತದ್ದರ್ಶನಾನುಗುಣ**-ಆತನನ್ನು ಸಾಕ್ಷಾತ್ಕರಿಸಲು ಯೋಗ್ಯವಾದ, **ದಿವ್ಯಚಕ್ಷುಃ** ಅಪ್ರಾಕೃತವಾದ ಚಕ್ಷುಸ್ಸನ್ನು ಹೊಂದಿದವನು, ಆ ಕಾರಣದಿಂದಲೇ, **ಅಪಶ್ಯತ್**-ಕಂಡನು. ಇದಕ್ಕೂ ಮುಂದಿನ ಎರಡು ಶ್ಲೋಕಗಳಿಗೂ ತಾತ್ಪರ್ಯ ಚಂದ್ರಿಕಾ ವ್ಯಾಖ್ಯಾನವು ಇರುವದಿಲ್ಲವು.

**ಮೂಲಕ್ಕೆ ಅರ್ಥವು:**—ಇಂತಹ ದಿವ್ಯಾದ್ಭುತನಾಗಿಯೂ ಸರ್ವೈಶ್ವರ್ಯಮಯನಾಗಿಯೂ, ಇರುವ ಈ ವಿಶ್ವರೂಪವನ್ನು ನೋಡಿದನಂತರ ಅರ್ಜುನನಿದ್ದ ಸ್ಥಿತಿಯನ್ನು ಧೃತರಾಷ್ಟ್ರನಿಗೆ ಸಂಜಯರು ತಿಳಿಸುತ್ತಾರೆ – **ತತಃ**-ಅನಂತರವೆಂದರೆ ಸ್ವಾಮಿ ದತ್ತ ದಿವ್ಯಚಕ್ಷುಸ್ಸಿನ ಮೂಲಕವಾಗಿ ಆ ಮಹತ್ತಾದ ರೂಪವನ್ನು ಸಾಕ್ಷಾತ್ಕರಿಸಿದನಂತರ, **ಸಃ ಧನಂಜಯಃ**-ರಾಜರುಗಳನ್ನೆಲ್ಲಾ ಸೋಲಿಸಿ ರಾಜಸೂಯಯಾಗಕ್ಕೆ ಬೇಕಾದ ಧನವನ್ನೆಲ್ಲಾ ಗೆದ್ದ ಆ ಮಹಾಪರಾಕ್ರಮಿಯಾದ ಅರ್ಜುನನು, **ವಿಸ್ಮಯಾವಿಷ್ಟಃ**-ಆಶ್ಚರ್ಯಭರಿತನಾಗಿ, ಆಶ್ಚರ್ಯಕ್ಕೆ ಕಾರಣವೇನು ಎಂದರೆ ಸತ್ಯವಾದ ಚಿದಚಿದಾತ್ಮಕರೂಪವಾದ ಸಕಲ ಜಗತ್ತಿಗೂ ಕಾರಣಭೂತನಾಗಿ, ಅವುಗಳೆಲ್ಲಾ ತನಗೆ ಶರೀರವಾಗಿ, ಅವುಗಳೊಂದಿಗೆ ಅವಿನಾಭೂತನಾಗಿದ್ದುಕೊಂಡು, ಅವುಗಳಿಗೆಲ್ಲಾ ತಾನು ಆತ್ಮಾವಾಗಿ, ಆ ಕಾರಣದಿಂದ ಸರ್ವನಿಯನ್ತ್ರವಾಗಿ, ಹೀಗೆ ಸಕಲ ಜಗತ್ತನ್ನು **ವಿಷ್ಟಭ್ಯಸ್ಥಿತಃ** ಇರುವವನಾಗಿ, ಈಗ ತನ್ನ ಬೃಹತ್ತಾದ ಸ್ವರೂಪ ಪ್ರದರ್ಶಕ ದಿವ್ಯಮಂಗಳವಿಗ್ರಹದ ಏಕದೇಶದಲ್ಲಿ ಎಲ್ಲವೂ ಅಡಗಿದೆ ಎಂದು ತೋರಿಸಿದುದರಿಂದ. ಪರಮಾಶ್ಚರ್ಯಭರಿತನಾದನು ಎಂಬ ತಾತ್ಪರ್ಯವು. **ಹೃಷ್ಟರೋಮಾ**—ಹರ್ಷದಿಂಮುಂಟಾದ ರೋಮಾಂಚವನ್ನುಳ್ಳವನಾಗಿ, **ದೇವಂ**-

(೨) ಗೀ. ೧೦ ೧೯ (೩) ಗೀ. ೧೦ ೨೦ (೪) ಗೀ. ೧೦.೨೧ (೫) ಗೀ ೧೦.೩೯.

ದೇದೀಪ್ಯವಾದ ದಿವ್ಯಮಂಗಳವಿಗ್ರಹಯುಕ್ತನಾದ ಭಗವಂತನನ್ನು, **ಶಿರಸಾ-ತಲೆಬಾಗಿ, ಪ್ರಣಮ್ಯ-**ನಮಸ್ಕರಿಸಿ ಎಂದರೆ ದಂಡವತ್ಪ್ರಣಾಮವನ್ನು ಮಾಡಿ, **ಕೃತಾಂಜಲಿಃ-**ಅಂಜಲಿಬದ್ಧನಾಗಿ, **ಅಭಾಷತ-**ಮಾತನಾಡಿದನು, ಗದ್ಗದಸ್ವರದಿಂದ **ಮಾತನಾಡಿದನು** : ಯಾವಾಗ ಆಶ್ಚರ್ಯವೂ ಅದರಿಂದುಂಟಾದ **ರೋಮಾಂಚವೂ,** ನಮಸ್ಕಾರವೂ, ಅಂಜಲಿಯೂ ಇವೆಲ್ಲವೂ ಹೇಳಲ್ಪಟ್ಟಿ**ವೊ ಇವುಗಳೊಂದಿಗೇನೇ** ಉಂಟಾಗುವ ಗದ್ಗದಸ್ವರದಿಂದಲೂ ಮಾತನಾಡಿದನು ಎಂದೇ ಹೇಳಬಹುದು ಇವೆಲ್ಲವೂ ಏಕಕಾಲದಲ್ಲೇ ಭಕ್ತನಿಗೆ ಉಂಟಾಗುತ್ತವೆ ಎಂಬುದಕ್ಕೆ ಹಿಂದೆ ೧೧-೫ನೆಯ ಶ್ಲೋಕ ವ್ಯಾಖ್ಯಾನದಲ್ಲಿ ಉದಾಹರಿಸಿರುವ ಮುಕುಂದಮಾಲಾಸ್ತೋತ್ರವನ್ನು ಪರಾಂಬರಿಸಬಹುದು. ರಾಜಸೂಯ ಯಾಗಕ್ಕಾಗಿ ಬಹುಧನವನ್ನು ಸಂಪಾದಿಸಿದುದು ಈತನ ಅನುಗ್ರಹದಿಂದಲೇ ಎಂಬುವನ್ನು ಧನಂಜಯ ಶಬ್ದವು ಜ್ಞಾಪಿಸುತ್ತದೆ. ಹೀಗೆ ಧನವನ್ನು ಸಂಗ್ರಹಿಸಿ ಧನಂಜಯನೆಂಬ ಬಿರುದಿನಿಂದ ತುಷ್ಟಿಹಾನದಿಂದ ರಾಜಸೂಯ ಯಾಗವನ್ನು ಮಾಡಿದುದಲ್ಲವೇ ನಿಮ್ಮಗಳನ್ನು ಅವರು ಅಸೂಯೆಯಿಂದ ನೋಡಲು ಕಾರಣವೆಂಬಂಶವನ್ನು ಧನಂಜಯ ಶಬ್ದವು ಸ್ಮರಿಸುವಹಾಗೆ ಮಾಡುತ್ತದೆ ಶ್ರೀಕೃಷ್ಣನ ಕೃಪೆಯಿಲ್ಲದೆ ಈತನು ಧನಂಜಯನಾಗಲಿಲ್ಲವು; ಅಂತವನಲ್ಲಿ ಅಸೂಯೆಯನ್ನು ತೋರಿ ಓ ಧೃತರಾಷ್ಟ್ರನೇ! ನಿನ್ನ ಮಕ್ಕಳೆಲ್ಲಾ ಈ ಕಷ್ಟಕ್ಕೆ ಗುರಿಯಾಗಿದ್ದಾರೆಂಬ ಭಾವವನ್ನು ಸೂಚಿಸುವದಕ್ಕಾಗಿಯೂ ಸಂಜಯರು **ಧನಂಜಯ**ಶಬ್ದವನ್ನು ಪ್ರಯೋಗಿಸಿರುತ್ತಾರೆ. ನಮಸ್ಕಾರವೂ ಅಂಜಲಿಬಂಧವೂ ಇವೆರಡೂ, ಭಗವತ್ಪ್ರಸಾದವನ್ನು ಕ್ಷಿಪ್ರವಾಗಿ ಒದಗಿಸಿಕೊಡುವ ವ್ಯಾಪಾರಗಳು **"ಅಂಜಲಿಃ ಪರಮಾಮುದ್ರಾಕ್ಷಿಪ್ರಂದೇವಪ್ರಸಾದಿನೀ"**ಎಂಬುದು **"ಅಂಜಲಿಪ್ರಭಾವಬೋಧಕ ಶಾಸ್ತ್ರವು"** ಶಿರಸಾ **ಪ್ರಣಾಮ ಮಾಡಿದರೆ** ಸರ್ವೇಶ್ವರನು ಬಹು ಸುಲಭದಿಂದ ವಶ್ಯನು ಶ್ರೀರಾಮನು. **"ಶಿರಸಾ ಯಾಚಿತಸ್ತಸ್ಯ ವಚನಂ ನಕೃತಂ ಮಯಾ"** ಎಂದು ಶಿರಸಾ ಪ್ರಣಾಮಮಾಡಿ ಪ್ರಾರ್ಥಿಸಿದ ಭರತನ ಮಾತನ್ನು ನಡೆಸಿಕೊಡಲಿಲ್ಲವೇ ಎಂದು ಪರಿತಾಪವನ್ನು ಪ್ರದರ್ಶಿಸಿರುತ್ತಾರೆ. ಆದುದರಿಂದ ಅಂಜಲಿ ಬಂಧನ ಶಿರಸಾ ಪ್ರಣಾಮಗಳೆರಡೂ ಭಕ್ತಾಭೀಷ್ಟಗಳನ್ನು ಬಹು ಶೀಘ್ರವಾಗಿ ಒದಗಿಸಿಕೊಡುವ ವ್ಯಾಪಾರಗಳಾದುದರಿಂದ, ಅವೆರಡೂ ಮುಖ್ಯವಾಗಿ ಇಲ್ಲಿ ಹೇಳಲ್ಪಟ್ಟಿರುತ್ತವೆ. ಆದರೆ ಶರಣಾಗತಿಯನ್ನನುಷ್ಠಿಸಿದ ಭರತನಿಗೆ ಒಡನೆಯೇ ಆತನ ಮನೋರಥವು ಸಿದ್ಧಿಸದೆ ಹದಿನಾಲ್ಕು ವರ್ಷಗಳನಂತರ ಸಿದ್ಧಿಸಿದುದು ಹೇಗೆ? ಎಂದು ಆಕ್ಷೇಪಿಸಿದರೆ, ಹದಿನಾಲ್ಕು ವರ್ಷಗಳ ವನವಾಸವನ್ನು ದಶರಥ ಕೈಕೆಯಿಯವರಲ್ಲಿ ಒಪ್ಪಿಕೊಂಡ ಉಪಾಧಿಯು ಪ್ರತಿಬಂಧಕವಾಗಿದ್ದುದರಿಂದ ಸಿದ್ಧಿಸಲಿಲ್ಲವು ಆ ಉಪಾಧಿಯು ಕಳೆದ ಒಡನೆಯೇ ಸಿದ್ಧಿಸಿತು ಎಂಬುದು ಸಮಾಧಾನವು. ಆದುದರಿಂದ ಶಿರಸಾ ನಮಸ್ಕಾರವೂ ಅಂಜಲಿಬಂಧವೂ ಸಹ ಎಂದಿಗೂ ವಿಫಲವಾಗುವದಿಲ್ಲವು. ಇದರಿಂದ ಅರ್ಜುನನು ಶ್ರೀ ಕೃಷ್ಣನ ಪ್ರಸನ್ನತೆಯನ್ನು ಚನ್ನಾಗಿ ಸಂಪಾದಿಸಿಕೊಂಡಿರುತ್ತಾನೆ ಎಂದು ಸಂಜಯನು ಧೃತರಾಷ್ಟ್ರನಿಗೆ ಇಲ್ಲಿ ಹೇಳಿರುವದು ಗೀತಾಂತ್ಯದಲ್ಲಿ **"ಯತ್ರ ಯೋಗೇಶ್ವರಃ ಕೃಷ್ಣಃ" "ತತ್ರ ಶ್ರೀರ್ವಿಜಯೋ ಭೂತಿಃ"** ಎಂದು ಮುಗಿಸಿ ಹೇಳಲು ಸಾಧಕವಾಗಿರುತ್ತದೆ. **ಅಭಾಷತ ಮಾತನಾಡಿದನು** ಎಂದು ಹೇಳಿರುವದು. ಗದ್ಗದಸ್ವರ ಉಂಟಾಗಿ ಮಾತನಾಡುವದು ಕಷ್ಟವಾಗಿದ್ದರೂ ಪ್ರಯತ್ನಪೂರ್ವಕವಾಗಿ ಮಾತನಾಡಿದನಾದುದರಿಂದ ಅಂತಹ ಅವಸ್ಥೆಯನ್ನು ಸೂಚಿಸುತ್ತದೆ ||೧೪||

**ಭಾಷ್ಯಾರ್ಥವು:—ತತಃ-**ಅನಂತರದಲ್ಲಿ. ಸರ್ವೇಶ್ವರನ ಅನುಗ್ರಹವು ಉಂಟಾಗಿ ವಿಶ್ವರೂಪವನ್ನು ಭಗವದ್ದತ್ತವಾದ ಅಪ್ರಾಕೃತ ಚಕ್ಷುಸ್ಸಿನಿಂದ ಸಾಕ್ಷಾತ್ಕರಿಸಿದ ನಂತರ, **ಧನಂಜಯಃ** ಅರ್ಜುನನು, **ವಿಸ್ಮಯಾವಿಷ್ಟನಾದನೆಂದು** ಮೂಲದಲ್ಲಿ **ಹೇಳಿರುತ್ತದೆ.** ವಿಸ್ಮಯಾವಿಷ್ಟನಾಗಲು

**ಭಾ. ತತೋ ಧನಂಜಯೋ ಮಹಾಶ್ಚರ್ಯಸ್ಯ ಕೃತ್ಸ್ನಸ್ಯ ಜಗತಃ ಸ್ವದೇಹೈಕದೇಶೇ ನಾಶ್ರಯಭೂತಂ. ಕೃತ್ಸ್ನಸ್ಯಪ್ರವರ್ತಯಿತಾರಂ ಚಾಶ್ಚರ್ಯತಮಾನನ್ತಜ್ಞಾನಾದಿ ಕಲ್ಯಾಣಗುಣಗಣಂ ದೇವಂ ದೃಷ್ಟ್ವಾವಿಸ್ಮಯಾವಿಷ್ಟೋ ಹೃಷ್ಟರೋಮಾ ಶಿರಸಾ ದಂಡವತ್ಪ್ರಣಮ್ಯ ಕೃತಾಂಜಲಿ ರಭಾಷತ ॥ ೧೪ ॥**

ಕಾರಣವೇನೆಂಬುದನ್ನು ಉಪದೇಶಿಸುತ್ತಾರೆ.—**ಮಹಾಶ್ಚರ್ಯಸ್ಯ ಕೃತ್ಸ್ನಸ್ಯ ಜಗತಃ**-ಸರ್ವಜಗತ್ತನ್ನೂ ಪರಿಶೀಲಿಸಿ ನೋಡಿದರೆ, ಅದೇ ವಿಪುಲವಾಗಿ, ಅದ್ಭುತವಾಗಿ ಆಶ್ಚರ್ಯಯುಕ್ತವಾಗಿರುತ್ತದೆ, ಅಂತಹ ಜಗತ್ತಿಗೆಲ್ಲಾ, **ಸ್ವದೇಹೈಕ ದೇಶೇನ**-ತನ್ನ ದಿವ್ಯ ಮಂಗಳವಿಗ್ರಹದ ಅಲ್ಪಭಾಗದಿಂದಲೇ ತಾನು **ಆಶ್ರಯಭೂತಂ** - ಆಶ್ರಯಭೂತನಾಗಿ, ತಾನೇ ಆಧಾರನು, ಅವೆಲ್ಲವೂ ಆಧೇಯವಾಗಿಯೂ ಉಳ್ಳ, ಮತ್ತು ಎಲ್ಲಕ್ಕೂ ಆತ್ಮಾವಾಗಿರುವುದರಿಂದ, **ಕೃತ್ಸ್ನಸ್ಯ ಪ್ರವರ್ತಯಿತಾರಂ** - **"ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ"** (ಶ್ವೇ. ೧.೧೨) ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ, ಸರ್ವಕ್ಕೂ ನಿಯಾಮಕನಾಗಿಯೂ ಇರುವ, ಇಷ್ಟುಮಾತ್ರವೇ ಆಶ್ಚರ್ಯವಾದುದಲ್ಲವು, ಇನ್ನೂ ಆಶ್ಚರ್ಯಕ್ಕೆ ಕಾರಣ ಉಂಟೆಂದು ತೋರಿಸುತ್ತಾರೆ; ಮತ್ತು ಇದು ಚಕಾರದಿಂದುಂಟಾಗುವ ಅರ್ಥವು, **ಆಶ್ಚರ್ಯತಮ**-ಅತ್ಯಂತ ಆಶ್ಚರ್ಯಕರವಾದ, ಅನಂತಗಳಾದ ಜ್ಞಾನವೇ ಮೊದಲಾದ, ಇದರಿಂದ ಪ್ರಧಾನಗಳಾದ ಷಾಡ್ಗುಣ್ಯಗಳು ಹೇಳಲ್ಪಟ್ಟವು, **ಕಲ್ಯಾಣಗುಣಗಳ** ಸಮೂಹದಿಂದ ಕೂಡಿರುವ, **ದೇವಂ**-ಲೀಲಾವಿಭೂತಿಯಲ್ಲಿ ಆತ್ಮಾದರವುಳ್ಳ ಸರ್ವೇಶ್ವರನನ್ನು, **ದೃಷ್ಟ್ವಾ**-ಕಂಡು, ಹೀಗೆ ಆಶ್ಚರ್ಯಕ್ಕೆ ಎರಡು ಕಾರಣವು (೧) ಅತಿಶಯವಾದ ವಿಭೂತಿಗೆಲ್ಲಾ ಶ್ರೀಕೃಷ್ಣನು ಆತ್ಮಾವಾಗಿ ಅವುಗಳೊಂದಿಗೆ ಅವಿನಾಭೂತವಾಗಿ, ಅದ್ಭುತಮಾಹಾತ್ಮ್ಯಗಳನ್ನು ಆವನಿಂದಲೇ ಹೊಂದಿದ ಅಚಿದಂಶವೇನು ಚಿದಂಶವೇನು ಇವುಗಳಿಂದ ಕೂಡಿರುವದೇನು, (೨) ಈ ಜಗತ್ತಿನಲ್ಲಿರುವ ಭೂತಗಳೆಲ್ಲಾ ತನ್ನನ್ನಾಶ್ರಯಿಸಿ ಸರ್ವೋತ್ಕೃಷ್ಟ ಸ್ಥಿತಿಯನ್ನು ಹೊಂದಲಿ ಎಂಬ ಕೃಪೌದಾರ್ಯವಾತ್ಸಲ್ಯ ಸೌಲಭ್ಯ ಸೌಶೀಲ್ಯಾದಿ ಆಶ್ರಯೋಚಿತಗುಣಗಳಿಂದ ಕಂಗೊಳಿಸುತ್ತಿರುವದೇನು, ಇವುಗಳನ್ನೆಲ್ಲಾ, **ದೃಷ್ಟ್ವಾ**-ಕಂಡು, **ವಿಸ್ಮಯಾವಿಷ್ಟಃ**-ವಿಸ್ಮಯದಿಂದ ಆವರಿಸಲ್ಪಟ್ಟ ಮನಸ್ಸುಳ್ಳವನಾಗಿ, **ಹೃಷ್ಟರೋಮಾ**-ಅದರಿಂದ ಪರಮ ಹರ್ಷವನ್ನು ಹೊಂದಿ ತತ್ಸೂಚಿತವಾದ ರೋಮಾಂಚವುಳ್ಳವನಾಗಿ, **ಶಿರಸಾಪ್ರಣಮ್ಯ** ಎಂದರೆ ದಂಡವತ್ಪ್ರಣಾಮಗಳನ್ನೆಸಗಿದವನಾಗಿ, ಈ ಪ್ರಣಾಮಗಳನ್ನು ತನಗಿರುವ ಅವಕಾಶವನ್ನನುಸರಿಸಿ ತನ್ನಮನಸ್ಸಂಪ್ರೀಣನಾರ್ಥವಾಗಿ, **ಪ್ರದಕ್ಷಿಣ ನಮಸ್ಕಾರಾ ಯುಗ್ಮೇನ್ನೈವ ಕುರ್ಯಾತ್** ಎಂಬ ಶಾಸ್ತ್ರಮರ್ಯಾದಾನುಸಾರ ಮಾಡಿದನೆಂದು ಭಾವಿಸತಕ್ಕದ್ದು, **ಕೃತಾಂಜಲಿಃ** ಅಂಜಲಿಬದ್ಧನಾಗಿ, **ಅಭಾಷತ**-ಮುಂದೆ ಹೇಳಿರುವ ಹಾಗೆ ಮಾತನಾಡಿದನು. ಈ ನಮಸ್ಕಾರಾಂಜಲಿಗಳು ಇಹಲೋಕದಲ್ಲೇ ವಶ್ಯನಾದವನು ಪ್ರಭುವಾದವನಿಗೆ ಮಾಡಿದರೆ ಆತನ ಮಹಾಪರಾಧಗಳೆಲ್ಲಾ ಕ್ಷಮಿಸಲ್ಪಡುತ್ತವೆ. ಸುಗ್ರೀವನು ಬಹುಕಾಲದಿಂದಲೂ ದಾರ ರಾಜ್ಯಗಳ ವಿಶ್ಲೇಷೆಯನ್ನು ಹೊಂದಿದವನಾಗಿ, ಆರ್ತನಾಗಿ, ಸರ್ವೇಶ್ವರನಾದ ಶ್ರೀರಾಮನ ಅನುಗ್ರಹದಿಂದ ಪಡೆದು ಅದಕ್ಕೆ ಕೃತಜ್ಞತಾಭಾವದಿಂದ ಸೀತಾನ್ವೇಷಣ ವಿಷಯದಲ್ಲಿ ಸಹಾಯಮಾಡ್ಯತ್ತೇನೆಂದು ಪ್ರತಿಜ್ಞೆಯನ್ನು ಮಾಡಿದನಂತರವೂ ರಾಜಭೋಗಗಳಲ್ಲಿ ಲಿಪ್ತನಾಗಿ, ಕೃತಘ್ನನ ಪ್ರವೃತ್ತಿಯುಳ್ಳವನಾಗಿ ಮಹಾಪರಾಧಿಯಾಗಿದ್ದರೂ, ಶ್ರೀರಾಮ ಭಕ್ತನಾದ ಲಕ್ಷ್ಮಣನಿಗೆ ಮಾಡಿದ ಅಂಜಲಿ ಪ್ರಭಾವದಿಂದ ಆ ಮಹಾಪರಾಧವು ಕ್ಷಮಿಸಲ್ಪಡುತ್ತದೆಂದು ತನ್ನ ಸಚಿವನಾದ ಆಂಜನೇಯನ ಹಿತೋಪದೇಶವಾದ **"ಕೃತಾಪರಾಧಸ್ಯ ಹಿ ತೇ ನಾನ್ಯತ್ಪಶ್ಯಾಮ್ಯಹಂ ಕ್ಷಮಮ್। ಅಂತರೇಣಾಂಜಲಿಂ ಬಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್"** ಎಂಬುದನ್ನು

**ಅರ್ಜುನ ಉವಾಚ :—**

**ಮೂ. ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾಭೂತ ವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥ ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫.**

ಕೈಕೊಂಡುದುದರಿಂದ ರಕ್ಷಿಸಲ್ಪಟ್ಟನು. ಈ ಇತಿಹಾಸವು ಅಂಜಲಿ ಮಾಹಾತ್ಮ್ಯೆಯನ್ನು ಪ್ರಕಟಿಸುತ್ತದೆ. ಇಂತಹ ಅಂಜಲಿ ಮಾಡಿದ ಮಹಾಭಾಗವತೋತ್ತಮನ ವಿಷಯದಲ್ಲಿ ನಿಷ್ಠುರೋಕ್ತಿಗಳನ್ನಾಡಿ ಮಹಾಪರಾಧಕ್ಕೆ ತಾನು ಗುರಿಯಾದನಲ್ಲಾ ಎಂದು ಶ್ರೀ ಲಕ್ಷ್ಮಣನು ತನ್ನ ಕೋಪವನ್ನೂ ತ್ಯಜಿಸಿದುದೂ ಅಲ್ಲದೆ ಆತನ ಕ್ಷಮಾಪಣೆಯನ್ನೂ ಕೇಳಿಕೊಂಡನೆಂದು ಮಹರ್ಷಿಯು ಬೋಧಿಸಿರುತ್ತಾರೆ. ಹಾಗೆಯೇ ನಮಸ್ಕಾರವು ಶರಣಾಗತಿರೂಪವಾದುದರಿಂದ, ಮಹಾ ಪಾಪಿಯಾಗಿ ವಿಶೇಷಾಪರಾಧವನ್ನೂ ಮಾಡಿದ ಕಾಕನೂ ಕೂಡ ಪ್ರಣಾಮದಿಂದ ಕ್ಷಮಿಸಲ್ಪಟ್ಟಿರುತ್ತಾನೆ, ಯಾವಾಗ ಇಂತಹ ಪಾಪಿಯು ನಮಸ್ಕರಿಸಿದನೋ, ಆಗ ಆತನು, **ಕೃಪಯಾ ಪರ್ಯಪಾಲಯತ್**-ಕೃಪೆಯಿಂದ ರಕ್ಷಿಸಲ್ಪಟ್ಟನೆಂದು ಹೇಳಲ್ಪಟ್ಟಿರುತ್ತದೆ, ಇಂತಹ ನಮಸ್ಕಾರವೇ ವಿಭೀಷಣನಿಗೆ ಪರಮನಿಶ್ರೇಯಸ ಸಾಧನೆಗೆ ಹೇತುವಾಯಿತು ॥ ೧೪ ॥

**ಮೂಲಕ್ಕೆ ಅರ್ಥವು:**—ವಿಸ್ಮಯಾವಿಷ್ಟನಾದನು ಅರ್ಜುನನು, ಎಂದು ಹಿಂದಿನ ಶ್ಲೋಕದಲ್ಲಿ ಸಂಜಯರಿಂದ ಹೇಳಲ್ಪಟ್ಟಿತು, ಹಾಗೆ ವಿಸ್ಮಯಾವಿಷ್ಟನಾಗಲು ಏನೇನನ್ನು ನೋಡಿದನು ಎಂದರೆ ಅರ್ಜುನನು ತಾನೇ ಹೇಳುತ್ತಾನೆ—ಪ್ರತ್ಯಕ್ಷಸಾಕ್ಷಿಯ ಹೇಳಿಕೆಯು ಕೇಳುವವರಿಗೆ ಮಹತ್ತಾದ ವಿಶ್ವಾಸವನ್ನು ಉಂಟುಮಾಡುತ್ತದೆಯಾದುದರಿಂದ **"ಅರ್ಜುನ ಉವಾಚ"** ಎಂದು ಇಲ್ಲಿರುತ್ತದೆ. **ಹೇ ದೇವ**-ಓ ತೇಜೋಮಯನಾದ ಸ್ವಾಮಿಯೇ, **ತವದೇಹೇ**-ನಿನ್ನ ದಿವ್ಯಮಙ್ಗಳ ವಿಗ್ರಹದಲ್ಲಿ, **ದೇವಾನ್**-ದೇವತೆಗಳನ್ನೆಲ್ಲಾ, **ತಥಾ**-ಹಾಗೆಯೇ, **ಸರ್ವಾನ್**-ಸಮಸ್ತರಾದ, **ಭೂತವಿಶೇಷ ಸಂಘಾನ್**-ಪ್ರಾಣಿವಿಶೇಷ ಸಮೂಹಗಳನ್ನೂ, **ದೇವಾನ್** ಎಂಬುದರಿಂದ ಸ್ವರ್ಗಲೋಕದ ದೇವತೆಗಳು ಹೇಳಲ್ಪಟ್ಟರು, **ಭೂತವಿಶೇಷಸಂಘಾನ್** ಎಂಬುದರಿಂದ ಮನುಷ್ಯ, ತಿರ್ಯಙ್, ಸ್ಥಾವರ ರೂಪದ ಈ ಲೋಕದ ಭೂತಗಳು ಹೇಳಲ್ಪಟ್ಟವು ; ಉತ್ತರಾರ್ಧದಲ್ಲಿ ಚತುರ್ಮುಖ ಮೊದಲುಗೊಂಡು ಋಷಿಗಳನ್ನೂ, ವಾಸುಕಿ ಮೊದಲಾದ ನಾಗಲೋಕದವರನ್ನೂ, ನೋಡಿದೆನು ಎಂದು ಹೇಳಿಕೊಳ್ಳುತ್ತಾನೆ. **ಬ್ರಹ್ಮಾಣಂ**-ಚತುರ್ಮುಖ ಬ್ರಹ್ಮನನ್ನೂ ಮತ್ತು **ಈಶಂ**-ರುದ್ರನನ್ನೂ, ಆ ರುದ್ರನನ್ನು ಹೇಗೆ ನೋಡಿದನು ಎಂದರೆ **ಕಮಲಾಸನಸ್ಥಂ**-ಕಮಲಾಸನನು ಚತುರ್ಮುಖಬ್ರಹ್ಮನು ; ಅವನಲ್ಲಿರುವ, **ಈಶಂ**-ರುದ್ರನನ್ನೂ ಎಂದರೆ, ಅಂಡಾಧಿಪತಿಯು ಚತುರ್ಮುಖನು, ಈತನು ಸೃಷ್ಟಿಕರ್ತಾ; ಲಯಕ್ಕೆ ಅಧಿಪತಿಯು ರುದ್ರನು; ಚತುರ್ಮುಖನಲ್ಲಿರುವವನು ಆತನ ಪುತ್ರನಾದ ರುದ್ರನು ಎಂದರೆ, ಆತನ ಅಭಿಮತಾನುಸಾರ ಪ್ರಳಯಕಾರ್ಯವನ್ನು ನೆರವೇರಿಸುವವನು ಎಂಬ ಭಾವವು **"ಆದ್ಯೋನಾರಾಯಣೋದೇವಸ್ತಸ್ಮಾದ್ಬ್ರಹ್ಮಾ ತತೋಭವಃ"** ಮೊದಲು ನಾರಾಯಣನಿದ್ದನು; ಆತನಿಂದ ಚತುರ್ಮುಖನೂ, ಚತುರ್ಮುಖನಿಂದ ರುದ್ರನೂ ಉಂಟಾದರು ಎಂದು ವರಾಹ ಪುರಾಣೋಕ್ತಿಯು ಇರುತ್ತದೆ. ಹಾಗೆಯೇ ಇನ್ನೊಂದು ಕಡೆಯಲ್ಲಿ **"ಪರೋನಾರಾಯಣೋದೇವ ಸ್ತಸ್ಮಾಜ್ಜಾತಶ್ಚತುರ್ಮುಖಃ। ತಸ್ಮಾದ್ರುದ್ರೋ ಭವೇದ್ದೇವಿ"** ಎಂಬ ಪ್ರಮಾಣವೂ ಉಂಟು. **"ರುದ್ರಂ ಸಮಾಶ್ರಿತಾ ದೇವಾಃ ರುದ್ರೋ ಬ್ರಹ್ಮಾಣ ಮಾಶ್ರಿತಃ"** ಎಂದೂ ಭಾಗವತದಲ್ಲಿರುತ್ತದೆ. (ಭಾಗ. ೧೧. ೧೯. ೧೮) ಬ್ರಹ್ಮನಿಗೆ ಅಧೀನನು ಹೇಗೆ ಎಂಬ ಸಂದರ್ಭದಲ್ಲಿ ಬ್ರಹ್ಮರುದ್ರ ಸಂವಾದದಲ್ಲಿ **"ತವಾನ್ತರಾತ್ಮಾ ಮಮ ಚ ಯೇ ಚಾನ್ಯೇ ದೇಹಿ ಸಂಜ್ಞಿತಾಃ । ಸರ್ವೇಷಾಂ ಸಾಕ್ಷಿಭೂತೋಽಸೌ ನಗ್ರಾಹ್ಯಃ ಕೇನಚಿತ್ಕ್ವ**

ಭಾ. **ದೇವ ತವದೇಹೇ ಸರ್ವಾನ್ ದೇವಾನ್ ಪಶ್ಯಾಮಿ ; ತಥಾ ಸರ್ವಾನ್ ಪ್ರಾಣಿ ವಿಶೇಷಾಣಾಂ ಸಂಘಾನ್, ತಥಾ ಬ್ರಹ್ಮಾಣಂ-ಚತುರ್ಮುಖ ಮಂಡಾಧಿಪತಿಂ, ತಥೇಶಂ ಕಮಲಾಸನಸ್ಥಂ—ಕಮಲಾಸನೇ ಬ್ರಹ್ಮಣಿಸ್ಥಿತ ಮೀಶಂ—ತನ್ಮತೇಽವಸ್ಥಿತಂ, ತಥಾ ದೇವರ್ಷಿ ಪ್ರಮುಖಾನ್ ಸರ್ವಾನೃಷೀನ್ ಉರಗಾಂಶ್ಚ-ವಾಸುಕಿ ತಕ್ಷಕಾದೀನ್ ದೀಪ್ತಾನ್ ॥ ೧೫ ॥**

---

**ಚಿತ್** : ಹಾಗೆಯೇ **ಅಹಂ ಬ್ರಹ್ಮಾ ಆದ್ಯ ಈಶಃ ಪ್ರಜಾನಾಂ ತಸ್ಮಾಜ್ಜಾತಸ್ತ್ವಂಚಮತ್ತಃ ಪ್ರಸೂತಃ । ಮತ್ತೋಜಗತ್ಸ್ಥಾವರಜಂಗಮಂಚ ಸರ್ವೇ ವೇದಾಸ್ಸರಹಸ್ಯಾಶ್ಚಪುತ್ರ"** ಎಂಬ ವ್ಯಾಸೋಕ್ತಿಯಿಂದ ಗ್ರಹಿಸಬಹುದು. ಹಾಗೆಯೇ ಪದ್ಮಪುರಾಣದಲ್ಲಿ **"ವಿಷ್ಣುಂ ಸಮಾಶ್ರಿತೋ ಬ್ರಹ್ಮಾ ಬ್ರಹ್ಮಣೋಂಕ ಗತೋಹರಃ"** ಎಂದು ಹೇಳಲ್ಪಟ್ಟಿರುತ್ತದೆ. **ಸೋಧ್ಯಕ್ಷಃ ಸರ್ವಭೂತಾನಾಂ ಪ್ರಭೂತಪ್ರಭವೋಽಚ್ಯುತಃ । ಸನತ್ಕುಮಾರಂ ರುದ್ರಂಚ ಸಪ್ತರ್ಷೀಂಶ್ಚ ತಪೋಧನಾತ್ । ಸರ್ವಮೇವಾ ಸೃಜದ್ಬ್ರಹ್ಮಾ ತಥಾಲೋಕಾಂ ಸ್ತಥಾಪ್ರಜಾಃ** ಎಂದು ಭೀಷ್ಮೋಕ್ತಿಯು ಇರುತ್ತದೆ. (ಭಾರ. ಸಭಾ. ೪೨-೨೧) **ಋಷೀಂಶ್ಚ**-ಋಷಿಗಳನ್ನೂ, **ದಿವ್ಯಾನ್**-ತೇಜೋವಂತರಾದ, **ಸರ್ವಾನ್**-ಸಮಸ್ತರಾದ, **ಉರಗಾನ್**-ವಾಸುಕಿಯೇ ಮೊದಲಾದ ಸರ್ಪಜಾತೀಯರನ್ನೂ, ಪಶ್ಯಾಮಿ-ನೋಡುತ್ತೇನೆ ಎಂದು ಅರ್ಜುನನು ಹೇಳಿದನು. ಇಲ್ಲಿ ಭೂತ ವಿಶೇಷ ಸಂಘಕ್ಕೇ ದೇವತೆಗಳೂ ಸೇರಿದರೆ ಇಲ್ಲವೇ ? ಅಥವಾ ಅವರನ್ನು ವ್ಯಾವರ್ತಿಸಿ ಹೇಳಿತೇ ? ಎಂಬ ಪ್ರಶ್ನಾದಲ್ಲಿ, **ದೇವ ಮನುಷ್ಯ** ತಿರ್ಯಕ್ **ಸ್ಥಾವರ** ನಾಲ್ಕು ವಿಧ ಪ್ರಾಣಿಗಳೂ ಭೂತ ವಿಶೇಷ ಸಂಘಕ್ಕೇ ಸೇರಿದವರೆಂದು ತಿಳಿಯತಕ್ಕದ್ದು. **ಪುಮಾನ್ ನದೇವೋ ನನರೋ ನತಿರ್ಯಙ್ನಚಪಾದಪಃ । ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ"** ಎಂಬ ವಿಷ್ಣುಪುರಾಣಶ್ಲೋಕವು ಅನುಸಂಧೇಯವು. ಇಲ್ಲಿ ದೇವತೆಗಳೂ ನಮ್ಮ ಹಾಗೆ ಬದ್ಧಜೀವರೇ ಎಂಬ ಭಾವವು. ॥ ೧೫ ॥

ಭಾಷ್ಯಾರ್ಥವು :—**ದೇವ**-ಓ ದೇವನೆ ! **ತವದೇಹೇ**-ನಿನ್ನ ದೇಹದಲ್ಲಿ, **ಸರ್ವಾನ್ ದೇವಾನ್**-ಸಮಸ್ತ ದೇವತೆಗಳನ್ನೂ, **ಪಶ್ಯಾಮಿ**, ಎಂದರೆ ನಿನ್ನ ದೇಹದ ಏಕದೇಶದಲ್ಲಿ ಸಮಸ್ತ ದೇವತೆಗಳನ್ನೂ ನೋಡುತ್ತೇನೆ. ದೇವತೆಗಳೂ ಇತರ ಪ್ರಾಣಿವರ್ಗವೂ ಎಲ್ಲವೂ ಪರಮ ಪುರುಷನ ಶರೀರವು. ಈ ಶರೀರಗಳನ್ನು ಆತನ ದಿವ್ಯಮಂಗಳ ವಿಗ್ರಹದಲ್ಲಿ ನೋಡುತ್ತೇನೆ, ಎಂದರೆ ಕಣ್ಣು ಕಿವಿ ಮೂಗೂ ಮೊದಲಾದವೂ ಶರೀರವೇ, ಇವುಗಳನ್ನೆಲ್ಲಾ ನಮ್ಮ ದೇಹದಲ್ಲಿ ಹೇಗೆ ಕಾಣುತ್ತೇವೋ ಹಾಗೆ ಎಂದು ಭಾವಿಸತಕ್ಕದ್ದು. **ತಥಾ**-ಹಾಗೆಯೇ ಎಂದರೆ ಪ್ರಾಣಿ ವಿಶೇಷಗಳಾದ ದೇವತೆಗಳು ಹೇಗೋ ಹಾಗೆಯೇ, **ಸರ್ವಾನ್**-ಸಮಸ್ತಗಳಾದ, **ಪ್ರಾಣಿವಿಶೇಷಗಳ ಸಂಘಗಳನ್ನು, ತಥಾ**-ಹಾಗೆಯೇ **ಈಶಂ ಕಮಲಾಸನಸ್ಥಂ** ಎಂದರೆ **ಕಮಲಾಸನೇ ಬ್ರಹ್ಮಣಿ**-ಕಮಲವೇ ಆಸನವಾಗಿ ಉಳ್ಳ ಚತುರ್ಮುಖನಲ್ಲಿ, **ಸ್ಥಿತಂ ಈಶಂ** ಎಂದರೆ **ತನ್ಮತೇಽವಸ್ಥಿತಮ್**-ಆತನ ಅಭಿಪ್ರಾಯಾನುಸಾರ ನಡೆಯುವ ರುದ್ರನನ್ನೂ, **ತಥಾ**-ಹಾಗೆಯೇ, **ದೇವರ್ಷಿ ಪ್ರಮುಖಾನ್**-ನಾರದರೇ ಮೊದಲಾದ ದೇವರ್ಷಿಗಳೇ ಮೊದಲಾದ, **ಸರ್ವಾನ್ ಋಷೀನ್**-ಸಮಸ್ತ ಋಷಿಗಳನ್ನೂ, ಮತ್ತು **ದಿವ್ಯಾನ್** ಎಂದರೆ **ದೀಪ್ತಾನ್**-ತೇಜಸ್ಸಿನಿಂದ ಬೆಳಗುತ್ತಿರುವ, **ಉರಗಾಂಶ್ಚ** ಎಂದರೆ ವಾಸುಕಿ ತಕ್ಷಕರೇ ಮೊದಲಾದ ಸರ್ಪಜಾತೀಯರನ್ನೂ, **ಪಶ್ಯಾಮಿ**-ನೋಡುತ್ತೇನೆಂದು ಅರ್ಜುನನು ಅರಿಕೇಮಾಡಿಕೊಂಡನು. ಇಲ್ಲಿ ಈಶ ಶಬ್ದಕ್ಕೆ ರುದ್ರನೆಂಬ ರೂಢಿ ಇರುವದರಿಂದ, ಸೃಷ್ಟಿಕರ್ತನಾಗಿ ಅಂಡಾಧಿಪತಿಯಾದ **ಚತುರ್ಮುಖನನ್ನು**

**ಮೂ. ಅನೇಕ ಬಾಹೂದರ ವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನನ್ತರೂಪಮ್ ।**
**ನಾನ್ತಂ ನಮಧ್ಯಂ ನಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬.**

---

ಹೇಳಿದ ನಂತರ, ಈಶ ಶಬ್ದದಿಂದ ರುದ್ರನು ಹೇಳಲ್ಪಟ್ಟನೆಂದರ್ಥಮಾಡುವದು ಉಚಿತವು. ಪೂರ್ವಾರ್ಧದಲ್ಲಿ **ಪಶ್ಯಾಮಿ ದೇವಾನ್** ಎಂದು ಸಾಮಾನ್ಯವಾಗಿ ಹೇಳಿ, ಅದರಲ್ಲಿ ಮುಖ್ಯರಾದವರು ಸೃಷ್ಟಿಲಯಾಧಿಕಾರಿಗಳಾದ ಚತುರ್ಮುಖ ರುದ್ರರು, ಅವರುಗಳೇ **ಬ್ರಹ್ಮಾಣಂ ಈಶಂ** ಎಂಬ ಶಬ್ದದಿಂದ ಹೇಳಲ್ಪಟ್ಟರೆಂದು ಅನ್ವಯಿಸುವದು ಉಚಿತವು. ಋಷಿ ಶಬ್ದವು ಸಾಕ್ಷಾದ್ದ್ರಷ್ಟಾ ಎಂಬರ್ಥವುಳ್ಳದಾದುದರಿಂದ **ಋಷೀನ್** ಎಂಬುದರಿಂದ ಸರ್ವಜ್ಞರಾದ ನಾರದ ಪರಾಶರ ವ್ಯಾಸ ಶೌನಕಾದಿಗಳು ಹೇಳಲ್ಪಟ್ಟರು ॥ ೧೫ ॥

**ಮೂಲಕ್ಕೆ ಅರ್ಥವು :**—ಸರ್ವೇಶ್ವರನ ದಿವ್ಯ ಮಙ್ಗಳವಿಗ್ರಹದ ಏಕದೇಶದಲ್ಲಿ ನೋಡಿದುದನ್ನೆಲ್ಲಾ ಅರಿಕೆ ಮಾಡಿಕೊಂಡನು. ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ ಆತನ ದಿವ್ಯ ಮಙ್ಗಳವಿಗ್ರಹವನ್ನೇ ವರ್ಣಿಸುತ್ತಾನೆ—**ಅನೇಕ ಬಾಹೂದರ ವಕ್ತ್ರನೇತ್ರಂ**-ಅನೇಕಗಳಾದ ಬಾಹು, ಉದರ, ಮುಖ, ನೇತ್ರಗಳನ್ನುಳ್ಳವನಾಗಿ, ಹೀಗೆ ಅನನ್ತಾವಯವಗಳುಳ್ಳ ರೂಪವುಳ್ಳವನಾಗಿ, ಅಥವಾ ದೇಶಕಾಲ ಪರಿಚ್ಛೇದ ರಹಿತವಾದ ರೂಪವನ್ನುಳ್ಳವನಾಗಿ, **ತ್ವಾಂ**-ನಿನ್ನನ್ನು, **ಸರ್ವತಃ** ಎಲ್ಲಾ ಕಡೆಯಲ್ಲೂ, **ಪಶ್ಯಾಮಿ**-ನೋಡುತ್ತೇನೆ, ಇದೀಗ ನಿನ್ನಿಂದ ಅನುಗ್ರಹಿಸಲ್ಪಟ್ಟ ದಿವ್ಯ ಚಕ್ಷುಸ್ಸಿನಿಂದ ಪ್ರಾಪ್ತವಾದ ಪ್ರಯೋಜನವೆಂಬ ಭಾವವು. ಹೀಗೆ **ಸರ್ವತಃ**-ಹೀಗೆ ಎಲ್ಲಾಕಡೆಯಲ್ಲೂ ನೀನೇ ಕಾಣುವದರಿಂದ, ಹೀಗೆ **ವಿಶ್ವರೂಪ**-ವಿಶ್ವಶರೀರಕನೇ, **ವಿಶ್ವೇಶ್ವರ**-ವಿಶ್ವಕ್ಕೆಲ್ಲಾ ಆತ್ಮಾವಾಗಿ ನಿಯಾಮಕನೇ, ನಾನು, **ನಾನ್ತಂಪಶ್ಯಾಮಿ** ನಿನ್ನ ರೂಪದ ಅಂತವನ್ನೂ ಕಾಣುವದಿಲ್ಲವು, **ನಪುನಸ್ತವಾದಿಂ**-ನಿನ್ನ ರೂಪದ ಆದಿ ಯಾವುದೆಂಬುದನ್ನೂ ಕಾಣುವದಿಲ್ಲವು, ಯಾವಾಗ ಆದಿಯೂ ತಿಳಿಯದೆ ಅಂತವೂ ತಿಳಿಯದೇ ಹೋಯಿತೋ ಆಗ **ನಮಧ್ಯಂ ಪಶ್ಯಾಮಿ**-ಮಧ್ಯವನ್ನೂ ಕಾಣವದಿಲ್ಲವು ಇಲ್ಲಿ ಆದಿ, ಮಧ್ಯ, ಅನ್ತಗಳನ್ನು ನಾನು ಕಾಣೆನು ಎಂದು ಹೇಳಿದುದು, ಇದ್ದರೂ ತನಗೆ ಕಾಣಿಸಲಿಲ್ಲ ಎಂಬ ಭಾವದಿಂದ ಹೇಳಿದುದಲ್ಲವು; ಏಕೆಂದರೆ ಅಪ್ರಾಕೃತ ದಿವ್ಯ ಚಕ್ಷುಸ್ಸಿನ ಪ್ರಾಪ್ತಿ ಇರುವಾಗ ಆದಿ, ಮಧ್ಯ, ಅನ್ತಗಳಿದ್ದರೆ ಹೇಗೆ ಕಾಣಿಸದೇ ಹೋಗಲು ಸಾಧ್ಯವು? ಪೂರ್ವಾರ್ಧದಲ್ಲಿರುವ "**ಅನನ್ತರೂಪಂ**" ಎಂಬುದು ಹೇತುಗರ್ಭವಿಶೇಷಣವಾದುದರಿಂದ ಅಂತಹ ಅನಂತರೂಪಕ್ಕೆ ಆದಿ, ಮಧ್ಯ ಅಂತಗಳು ಎಂದಿಗೂ ಇಲ್ಲವೇ ಇಲ್ಲವು. ಶಶಶೃಂಗದ ಹಾಗೆ ಇಲ್ಲದೇ ಇರುವುವು ಇವುಗಳಾದುದರಿಂದ, **ನಪಶ್ಯಾಮಿ** ಎಂದು ಅರ್ಜುನನು ಹೇಳಿದನು ಎಂದು ತಿಳಿಯತಕ್ಕದ್ದು. ಆದುದರಿಂದಲೇ ಶ್ರೀ ಯತಿವರ್ಯರು **ಯತಸ್ತ್ವ ಮನಂತಃ; ಅತಸ್ತವ ನಾನ್ತಂನಮಧ್ಯಂ ನಪುನಸ್ತವಾದಿಂಚ ಪಶ್ಯಾಮಿ** ಎಂದು ವ್ಯಾಖ್ಯಾನಮಾಡಿರುತ್ತಾರೆ—**ವಿಶ್ವೇಶ್ವರ, ವಿಶ್ವರೂಪ** ಎಂಬ ಸಂಬೋಧನಗಳಿಂದ ಅರ್ಜುನನು ಹಿಂದಿನ ವಿಭೂತಿ ವಿಸ್ತರಾಧ್ಯಾಯದಿಂದ ಪ್ರಧಾನ ಪ್ರತಿತಂತ್ರವನ್ನು ಚನ್ನಾಗಿ ಗ್ರಹಿಸಿದವನಾದುದರಿಂದ ಸರ್ವೇಶ್ವರನು ವಿಶ್ವಶರೀರಕನಾಗಿ "**ಅಹಮಾತ್ಮಾ ಗುಡಾಕೇಶ**" ಎಂಬಲ್ಲಿ ಹೇಳಲ್ಪಟ್ಟಿರುವಹಾಗೆ ವಿಶ್ವಕ್ಕೆಲ್ಲಾ ಆತ್ಮಾವಾಗಿರುತ್ತಾನೆಂದೂ, ಆ ಕಾರಣದಿಂದ ವಿಶ್ವನಿಯಾಮಕನೆಂದೂ ಗ್ರಹಿಸಿದನೆಂದು ತೋರಿಸುವದಕ್ಕಾಗಿ **ವಿಶ್ವೇಶ್ವರ ವಿಶ್ವರೂಪ** ಎಂಬ ಸಂಬೋಧನೆಗಳು. ವಿಶ್ವಕ್ಕೆಲ್ಲಾ ಆತ್ಮಾವಾಗಿ, ಅದು ಶರೀರವಾಗಿರುವದರಿಂದಲೇ ಸರ್ವ ವಿಶ್ವಕ್ಕೂ ನಿಯಾಮಕನೆಂಬ ಭಾವವು. ॥ ೧೬ ॥

**ಭಾ· ಅನೇಕ ಬಾಹೂದರ ವಕ್ತ್ರನೇತ್ರಂ ಅನನ್ತರೂಪಂ ತ್ವಾಂ ಸರ್ವತಃ ಪಶ್ಯಾಮಿ ;**
**ವಿಶ್ವೇಶ್ವರ ವಿಶ್ವಸ್ಯ ನಿಯಂತಃ । ವಿಶ್ವರೂಪ-ವಿಶ್ವಶರೀರ, ಯತಸ್ತ್ವ ಮನನ್ತಃ,**
**ಅತಃ ತವ ನಾನ್ತಂ ನಮಧ್ಯಂ, ನಪುನಸ್ತವಾದಿಂಚ ಪಶ್ಯಾಮಿ ॥ ೧೬ ॥**

---

**ಮೂ. ಕಿರೀಟಿನಂ ಗದಿನಂ ಚಕ್ರಿಣಂಚ ತೇಜೋರಾಶಿಂ ಸರ್ವತೋ ದೀಪ್ತಿಮನ್ತಮ್ ।**
**ಪಶ್ಯಾಮಿ ತ್ವಾ ದುರ್ನಿರೀಕ್ಷ್ಯಂ ಸಮಂತಾದ್ದೀಪ್ತಾನಲಾರ್ಕದ್ಯುತಿಮಪ್ರಮೇಯಂ ॥**

---

**ಭಾಷ್ಯಾರ್ಥವು:—ಅನೇಕ ಬಾಹೂದರ ವಕ್ತ್ರನೇತ್ರಂ**-ಅನೇಕಗಳಾದ ಬಾಹುಗಳು ಉದರಗಳು, ಮುಖಗಳು, ನೇತ್ರಗಳು, ಇವುಗಳನ್ನುಳ್ಳವನಾಗಿಯೂ, **ಅನಂತರೂಪಂ**-ದೇಶ ಕಾಲಗಳಿಂದ ಪರಿಚ್ಛಿತ್ತಿಯಿಲ್ಲದ ರೂಪವುಳ್ಳವನನ್ನಾಗಿಯೂ, **ತ್ವಾಂ**-ನಿನ್ನನ್ನು, ಆ ಕಾರಣದಿಂ ದಲೇ, **ಸರ್ವತಃ** ಎಲ್ಲಾ ಕಡೆಯಲ್ಲಿಯೂ, **ಪಶ್ಯಾಮಿ**-ನೋಡುತ್ತೇನೆ, **ಸರ್ವತಃ ಪಶ್ಯಾಮಿ**-ಎಂಬುದ ರಿಂದ **ದೇಶತಃ** ಪರಿಚ್ಛಿತ್ತಿ ಇಲ್ಲವೆಂದು ಹೇಳಿದರು, **ಕಾಲತಃ**-ಪರಿಚ್ಛಿತ್ತಿ ಇಲ್ಲವೆಂದು ಹೇಳ ಬೇಕಾದರೆ **ಸದಾ ಪಶ್ಯಾಮಿ**-ಎಂದು ಹೇಳಬೇಕಾಗಿತ್ತು; ಸರ್ವೇಶ್ವರನು ದಿವ್ಯ ಚಕ್ಷುಸ್ಸನ್ನು ಎಲ್ಲಿವರೆಗೂ ಕೊಟ್ಟಿರುವನೋ ಅಲ್ಲಿತನಕ ನೋಡಬಹುದು, ತದನಂತರ ನೋಡುವದು ವಿರಾಮ ವನ್ನು ಹೊಂದುತ್ತದೆಯಾದುದರಿಂದ ಸದಾ ಎಂದು ಪ್ರಯೋಗಿಸದೆ **ಸರ್ವತಃ** ಎಂಬುದೊಂದನ್ನು ಮಾತ್ರವೇ ಉಪಯೋಗಿಸಿರುತ್ತಾರೆ. **ಹೇ ವಿಶ್ವೇಶ್ವರ** ಎಂದರೆ **ವಿಶ್ವಸ್ಯ ನಿಯನ್ತಃ**-ವಿಶ್ವಕ್ಕೆಲ್ಲಾ ನಿಯಾಮಕನೇ ! **ವಿಶ್ವರೂಪ** ಎಂದರೆ **ವಿಶ್ವಶರೀರ**-ವಿಶ್ವವನ್ನೆಲ್ಲಾ ಶರೀರವಾಗಿ ಉಳ್ಳವನೇ ! **ಯತಸ್ತ್ವಂ ಅನನ್ತಃ**-ಯಾವ ಕಾರಣದಿಂದ ದೇಶ ಕಾಲ ವಸ್ತು ಪರಿಚ್ಛಿತ್ತಿಯಿಲ್ಲದ ಶರೀರ ವುಳ್ಳವನೋ, **ಅತಃ**-ಆ ಕಾರಣದಿಂದ, **ತವ**-ನಿನಗೆ ಎಂದರೆ ನಿನ್ನ ರೂಪಕ್ಕೆ, **ನಾನ್ತಂ ಪಶ್ಯಾ ಮಿ**-ಅನ್ತವನ್ನೂ ಕಾಣೆನು. **ನಮಧ್ಯಂ** - ಮಧ್ಯವನ್ನೂ ಕಾಣೆನು, **ನಪುನಸ್ತವಾದಿಂಚ ಪಶ್ಯಾಮಿ**-ಮತ್ತು ನಿನ್ನ ರೂಪಕ್ಕೆ ಆದಿಯನ್ನೂ ಕೂಡ ಕಾಣೆನು, **ಯತಸ್ತ್ವಂ ಅನನ್ತಃ ಅತ ಏವ** ಎಂದು ಅರ್ಥಮಾಡಲು ಕಾರಣವೇನೆಂದರೆ, **ಅನನ್ತರೂಪಂ** ಎಂಬಲ್ಲಿರುವ ಅನಂತತ್ವವೇ **ನಾನ್ತಂ ನಮಧ್ಯಂ**-ಇತ್ಯಾದಿಯಿಂದ ಉತ್ತರಾರ್ಧದಲ್ಲಿ ಉಪಪಾದಿಸಲ್ಪಟ್ಟಿರುವದಕ್ಕೆ ಕಾರಣ ವೆಂದು ತೋರಿಸುವುದಕ್ಕಾಗಿಯೇ, **ಯತಃ ಅತಃ** ಎಂಬದಾಗಿ ವ್ಯಾಖ್ಯಾನಗಳು. ಆದುದರಿಂದ **ಅನಂತರೂಪಂ** ಎಂಬುದು ಹೇತುಗರ್ಭವಿಶೇಷಣವು ಎಂಬ ಭಾವವು. ॥೧೬॥

**ಮೂಲಕ್ಕೆ ಅರ್ಥವು:**—ಅರ್ಜುನನು ಪುನಃ ಆ ವಿಶ್ವರೂಪವನ್ನು ಸಾಕ್ಷಾತ್ಕರಿಸಿದ ರೀತಿಯನ್ನೇ ಅರಿಕೆಮಾಡಿಕೊಳ್ಳುತ್ತಾನೆ.- **ಕಿರೀಟಿನಂ**-ಕಿರೀಟವನ್ನು ಧರಿಸಿರುವವನಾಗಿಯೂ, **ಗದಿನಂ**-ಗದೆಯನ್ನು ಧರಿಸಿರುವವನಾಗಿಯೂ, **ಚಕ್ರಿಣಂಚ**-ಚಕ್ರಾಯುಧವನ್ನು ಧರಿಸಿದವ ನಾಗಿಯೂ ಸಹ, ಹೀಗೆ ಹೇಳಿದುದು ಇತರ ಪಂಚಾಯುಧಗಳಿಗೆ ಉಪಲಕ್ಷಣವಾಗಿ ಭಾವಿಸ ತಕ್ಕದ್ದು, **ತ್ವಾ**-ನಿನ್ನನ್ನು, **ಪಶ್ಯಾಮಿ** - ನೋಡುವೆನು, ಹೀಗೆ ದಿವ್ಯಾಯುಧಗಳಿಂದ ಕೂಡಿ ದವನಾಗಿಯೂ ಸಾಕ್ಷಾತ್ಕರಿಸುತ್ತಿದ್ದೇನೆಂಬ ಭಾವವು. ಇನ್ನೂ ಹೇಗೆ ನೋಡುತ್ತಿದ್ದೇನೆಂದರೆ, ಅವಯುವಶೋಭೆಯು ನೋಡಲು ಅಸಾಧ್ಯವಾಗುವಷ್ಟು ತೇಜೋಮಯವಾಗಿದೆ ಎಂದು ಹೇಳಿ ಕೊಳ್ಳುತ್ತಾನೆ; **ತೇಜೋರಾಶಿಂ**-ತೇಜಸ್ಸುಗಳ ರಾಶಿಯನ್ನುಳ್ಳವನಾಗಿಯೂ, ಆದುವರಿಂದಲೇ, **ಸರ್ವತೋ ದೀಪ್ತಿಮಂತಂ** - ಎಲ್ಲಾ ಕಡೆಯಲ್ಲೂ ಮಹಾ ಪ್ರಕಾಶವುಳ್ಳವನಾಗಿಯೂ, ಆ ಕಾರಣದಿಂದಲೇ **ಸಮಂತಾತ್**-ಸಂಪೂರ್ಣವಾಗಿ ಅಥವಾ ನಿನ್ನ ಶರೀರದ ಸಂಪೂರ್ಣ ಪ್ರದೇಶ ವೆಲ್ಲಾ, **ದುರ್ನಿರೀಕ್ಷ್ಯಂ**-ದೃಷ್ಟಿಸಿ ನೋಡಲು ಅಸಾಧ್ಯವಾಗಿ, ಸೂರ್ಯನನ್ನು ನಾವು ಈ ಚರ್ಮ

**ಭಾ. ತೇಜೋರಾಶಿಂ ಸರ್ವತೋ ದೀಪ್ತಿಮಂತಂ ಸಮಂತಾದ್ದುರ್ನಿರೀಕ್ಷ್ಯಂ ದೀಪ್ತಾನ ಲಾರ್ಕದ್ಯುತಿ ಮಪ್ರಮೇಯಂ ತ್ವಾಂ ಕಿರೀಟಿನಂ ಗದಿನಂ ಚಕ್ರಿಣಂ ಚ ಪಶ್ಯಾಮಿ॥**

ಚಕ್ಷುಸ್ಸಿನಿಂದಲೇ ನೋಡಲು ಹೇಗೆ ದುರ್ನಿರೀಕ್ಷ್ಯವೋ ಹಾಗೆ ಎಂಬ ಭಾವವು. **ದೀಪ್ತಾನಲಾರ್ಕ ದ್ಯುತಿಂ**-ಒಂದು ವಿಜಾತೀಯವಾಗಿ ಪ್ರಕಾಶಿಸುತ್ತಿರುವ ಬೆಂಕಿಯೇನು ಸೂರ್ಯನೇನು ಇವರುಗಳ ಕಾಂತಿಯು ಹಾಗೆ ಕಾಂತಿಯುಳ್ಳವನನ್ನೂ ಎಂದು, ಈ ಸಾದೃಶ್ಯವೂ ಸರಿಹೋಗುವದಿಲ್ಲವು ಎಂದು ಭಾವಿಸಿ, ಅ**ಪ್ರಮೇಯಂ**-ಅನದೃಶ ತೇಜೋಮಯನಾದುದರಿಂದ ಇಷ್ಟೆಂದು ಹೇಳಲು ಅಳ ವಿಲ್ಲದ, **ತ್ವಾಂ**-ನಿನ್ನನ್ನು, **ಪಶ್ಯಾಮಿ**-ನೋಡುತ್ತಿದ್ದೇನೆ. **"ಕಿರೀಟಿನಂ ಗದಿನಂ ಚಕ್ರಹಸ್ತಂ"** ಇತ್ಯಾದಿ ವಿಶೇಷಣಗಳಿಂದ ಯುಕ್ತನಾಗಿ ಈಗ ನೋಡುತ್ತೇನೆಂದು ಹೇಳಿದುದರಿಂದ ಲೀಲಾ ಸಾರಥಿರೂಪದಲ್ಲೂ ಮತ್ತು ಇತರರಿಗೆ ತೋರುವ ರೂಪದಲ್ಲೂ **"ಮಾನುಷೀಂತನುಮಾಶ್ರಿತ** ನನ್ನಾಗಿಯೂ **"ಪರಂಧಾಮಜಾನಂತಂ"** ಎಂಬಲ್ಲಿ ಹೇಳಿರುವಹಾಗೆ ಸಾಧಾರಣ ಮಾನು ಷರೂಪದಲ್ಲಿದ್ದನೆಂಬುದು ಸುವ್ಯಕ್ತವು. ॥೧೭॥

**ಭಾಷಾರ್ಥವು :—ತೇಜೋರಾಶಿಂ**-ಸ್ವರೂಪವೇ ತೇಜಸ್ಸಾದುದರಿಂದ ತೇಜೋಮಯ ವಾದ, ಆ ಕಾರಣದಿಂದ ಸ್ವಭಾವವೂಕೂಡ, **ಸರ್ವತೋದೀಪ್ತಿಮಂತಂ**-ಎಲ್ಲಾ ಕಡೆಯಲ್ಲೂ ತೇಜೋರೂಪಕಿರಣಗಳಿಂದ ಕೂಡಿರುವ, ಇವೆರಡರಿಂದ ಸ್ವರೂಪವೂ ಗುಣವೂ ಸಹ ತೇಜಸ್ಸು ಎಂದು ಹೇಳಲ್ಪಟ್ಟಿತು ; ಜ್ಞಾನರೂಪನಾದವನು ಜ್ಞಾನಗುಣಕನು ಹೇಗೋ ಹಾಗೆ **ಎಂಬ** ಭಾವವು. ಇದು ವ್ಯಕ್ತವಾಗುವದಕ್ಕಾಗಿ ಇಲ್ಲಿನ ಸ್ವಾಮಿದತ್ತವಾದ ಸ್ವರೂಪ ಸ್ವಭಾವಗಳಿಂದ ತೇಜೋಮಯಗಳಾದ ಉಪಮಗಳಿಂದ ನಿರ್ದೇಶಿಸಿ, ಆ ಉಪಮೆಗಳೂ ಕೂಡ ಪರಮಾತ್ಮನಾಗಿ ಈ ವಿಶ್ವರೂಪನಾಗಿರುವ ವಿಷಯದಲ್ಲಿ ಕೂಡುವದಿಲ್ಲವೆಂದು **ಅಪ್ರಮೇಯಂ**-ಎಂದು ಹೇಳಿ ಮುಗಿಸುತ್ತಾರೆ. ಒಂದು ವ್ಯಕ್ತಿಯನ್ನು ನೋಡಿದಾಗ ತೇಜಸ್ಸೇ ಮೊದಲು ಕಂಡುಬಂದು ಅನಂತರ ಕ್ರಮೇಣ ಕಿರೀಟಿಯು, ಗದಿಯು ಇತ್ಯಾದಿ ವ್ಯಕ್ತಿಲಕ್ಷಣೆಯು ತೋರಿಬರುವದರಿಂದ ಅರ್ಥಕ್ರಮವನ್ನನುಸರಿಸಿ ಮೊದಲು **ತೇಜೋರಾಶಿಂ** ಎಂದಾರಂಭಿಸಿ, ವ್ಯಾಖ್ಯಾನವು. **ಈ** ಸಂದರ್ಭದಲ್ಲಿ **"ಚಯಸ್ತ್ವಿಷಾಮಿತ್ಯವಧಾರಿತಂ ಪುರಾ ತತಶ್ಶರೀರೀತಿ ವಿಭಾವಿತಾಕೃತಿಂ। ವಿಭುರ್ವಿಭಕ್ತಾವಯವಮ್ ಪುಮಾನಿತಿ ಕ್ರಮಾದಮುಂ ನಾರದ ಇತ್ಯಬೋಧಿ ಸಃ"** ಎಂಬ ಶ್ಲೋಕವು ಅನುಸಂಧೇಯವು. ಆದುದರಿಂದ **ಸಮಂತಾದ್ದುರ್ನಿರೀಕ್ಷ್ಯಂ**-ಎಲ್ಲೆಲ್ಲಿ ಸುತ್ತಿ ನೋಡಿದರೂ ಆ ಅದ್ಭುತ ತೇಜಸ್ಸಿನಿಂದ ನೋಡಲಸಾಧ್ಯನಾದ, **ದೀಪ್ತಾನಲಾರ್ಕದ್ಯುತಿಂ**-ಮಹಾ ಜ್ಯೋತಿಸ್ಸೇ ಸ್ವರೂಪವಾಗಿಯೂ ಕಿರಣಗಳಾಗಿಯೂ ಪ್ರಕಾಶಿಸುತ್ತಿರುವ ಅಗ್ನಿಸೂರ್ಯರು ಗಳ ಕಾಂತಿಯುಹಾಗೆ ಕಾಂತಿಯುಳ್ಳ, **ಅಪ್ರಮೇಯಂ**-ಪರಿಚ್ಛಿತ್ತಿಯಿಲ್ಲದ, **ತ್ವಾಂ**-ನಿನ್ನನ್ನು, ಕಿರೀಟ, ಗದೆ, ಚಕ್ರಗಳೇ ಮೊದಲಾದ ಭೂಷಣಾಯುಧಗಳನ್ನುಳ್ಳವನಾಗಿ, **ಪಶ್ಯಾಮಿ**-ಕಾಣು ತ್ತೇನೆ ; ನಿನಗೇನೇ ಅಸಾಧಾರಣಗಳಾದ ಕಿರೀಟ ದಿವ್ಯಾಯುಧಗಳಿಲ್ಲದಿದ್ದರೆ ಈ ನಿನ್ನ ಅತ್ಯುಗ್ರ ತೇಜಸ್ಸ್ವರೂಪಗುಣಗಳಿಂದ ದುರ್ನಿರೀಕ್ಷ್ಯನಾಗಿ ನಿನ್ನದಿವ್ಯಮಂಗಳ ವಿಗ್ರಹವನ್ನು ನೋಡುವುದೇ ಅಸಾಧ್ಯವಾಗುತ್ತಿತ್ತು ಎಂಬ ಭಾವವು. ಇಲ್ಲಿ **ಸರ್ವತೋದೀಪ್ತಿಮಂತಂ** ಎಂದು ಹೇಳಿದುದ ರಿಂದ **ತಸ್ಯಭಾಸಾ ಸರ್ವ ಮಿದಂ ವಿಭಾತಿ** ಎಂಬ ಶ್ರುತ್ಯರ್ಥವು. ಉಪದಿಷ್ಟವು. ಚಂದ್ರ ಸೂರ್ಯಾ ಗ್ನಿ ಮೊದಲಾದ ದೀಪ್ತಿಯುಳ್ಳವಸ್ತುಗಳೂಕೂಡ ಆತನ ತೇಜಸ್ಸಿನಮೂಲಕ ತೇಜೋವಂತರಾಗಿ ಸತ್ತೆಯನ್ನು ಹೊಂದಿದ್ದಾರೆಂಬುದೂ ಸೂಚಿತವು. **ಸಮಂತಾದ್ದುರ್ನಿರೀಕ್ಷ್ಯಂ** ಎಂದು ಹೇಳಿರುವ ದರಿಂದ **ಹಿರಣ್ಮಯವಪುಃ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆಪ್ರಣಖಾತ್ಸರ್ವ**

**ಮೂ. ತ್ವಮಕ್ಷರಂ ಪರಮಂ ವೇದಿತವ್ಯಂ ತ್ವಮಸ್ಯ ವಿಶ್ವಸ್ಯ ಪರಂ ನಿದಾನಮ್ ।**
**ತ್ವಮವ್ಯಯಶ್ಶಾಶ್ವತಧರ್ಮಗೋಪ್ತಾ ಸನಾತನಸ್ತ್ವಂ ಪುರುಷೋಮತೋ ಮೇ॥೧೮**

**ಏವ ಸುವರ್ಣಃ"** ಇತ್ಯಾದಿ ಶ್ರುತ್ಯರ್ಥಗಳು ಜ್ಞಾಪಿಸಲ್ಪಟ್ಟವು. ಹಾಗೆಯೇ **"ಏಷಹ್ಯೇಷಾಂ ಸಮಸ್ತಾನಾಂ ತೇಜೋಬಲ ಪರಾಕ್ರಮೈಃ । ಮಧ್ಯೇತಪನ್ನಿವಾಭಾತಿ ಜ್ಯೋತಿಷಾಮಿವ ಭಾಸ್ಕರಃ,** ಎಂಬ ಭೀಷ್ಮೋಕ್ತಿಯು ಅನುಸಂಧೇಯವು (ಭಾರ ಸಭಾ. ೩೯-೪೬) ॥ ೧೭ ॥

**ಮೂಲಕ್ಕೆ ಅರ್ಥವು:–** ಈ ವಿಶ್ವರೂಪದರ್ಶನದಿಂದ, ಶ್ರೀಕೃಷ್ಣನಾಗಿ ಅವತರಿಸಿರುವವನು ಪರಮಪುರುಷನೇ ಎಂದು ಸಂಪೂರ್ಣ ನಂಬಿಕೆಯುಂಟಾಯಿತೆಂದು ಹೇಳಿ ಅತನನ್ನು ಸ್ತೋತ್ರ ಮಾಡುತ್ತಾನೆ — **ಅಕ್ಷರ** ಶಬ್ದವು ಗೀತೆಯಲ್ಲೇ ಅನೇಕಾರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ಇಲ್ಲಿ **"ಅಥಯಯಾ ತದಕ್ಷರ ಮಧಿಗಮ್ಯತೇ"** ಎಂದು (ಮುಂ.೧-೩೭ ೧೬) ಹೇಳಿರುವಹಾಗೂ ಮತ್ತು **"ಅಕ್ಷರಂ ತತ್ಪರಂ ಬ್ರಹ್ಮಕ್ಷರಂ ಸರ್ವಮಿದಂ ಜಗತ್** (ವಿ ಪು. ೧-೨೨.೧೬) ಎಂದು ಹೇಳಿರುವಹಾಗೆ ಇಲ್ಲಿ ಸ್ವರೂಪ ಸ್ವಭಾವ ವಿಕಾರಗಳಿಲ್ಲದ ಪರಮಪುರುಷನು ಹೇಳಲ್ಪಟ್ಟನು. **ತ್ವಂ**-ನೀನು, **ಅಕ್ಷರಂ**-ಸ್ವರೂಪ ಸ್ವಭಾವವಿಕಾರಗಳಿಲ್ಲದ ಪರಬ್ರಹ್ಮವು; **ಪರಮಂ ವೇದಿತವ್ಯಮ್**-ಸರ್ವೋತ್ಕೃಷ್ಟವಾದ ಜ್ಞೇಯವು. ಪುರುಷಸೂಕ್ತದಲ್ಲೂ **"ಅಕ್ಷರಂ ಪರಮಂ ಪ್ರಭುಮ್"** ಎಂದಿರುತ್ತದೆ ಮತ್ತು **"ನಾರಾಯಣಂ ಮಹಾಜ್ಞೇಯಮ್** ಎಂಬ ಪ್ರಯೋಗವನ್ನು ಅಲ್ಲಿಯೇ ಕಾಣಬಹುದು. ಅಕ್ಷರ ಶಬ್ದಕ್ಕೆ ಸ್ವರೂಪವಿಕಾರವಿಲ್ಲದೇ ಜೀವಾತ್ಮನೂ ಇರುವದರಿಂದ ಜೀವಾತ್ಮನೂ ಎಂಬ ಅರ್ಥದಲ್ಲೂ ಪ್ರಯೋಗವುಂಟು, **"ಅಕ್ಷರಂ ಬ್ರಹ್ಮಪರಮಂ"** (೮.೪) ಎಂಬಲ್ಲಿ ಪ್ರಕೃತಿಸಂಬಂಧವಿಲ್ಲದಿರುವ ಜೀವಾತ್ಮಸ್ವರೂಪವು ಹೇಳಲ್ಪಟ್ಟಿತು. ಹಾಗೆಯೇ **"ಯೇಚಾಪ್ಯಕ್ಷರಮವ್ಯಕ್ತಂ"** (೧೨ ೧೨ ೧) ಎಂಬಲ್ಲೂ ಸಹ ಅಂತಹ ಮುಕ್ತಸ್ವರೂಪವೇ ಹೇಳಲ್ಪಟ್ಟಿತು. ಉಪನಿಷತ್ತುಗಳಲ್ಲೂ ಹೀಗೂ ಪ್ರಯೋಗಗಳುಂಟು; **ಕ್ಷರಂಪ್ರಧಾನ ಮಮೃತಾಕ್ಷರಂಹರಃ"(** ) **"ಅವ್ಯಕ್ತಮಕ್ಷರೇ ಲೀಯತೇ"** ಇತ್ಯಾದಿ. **ವೇದಿತವ್ಯಂ-ಜ್ಞೇಯಮ್**-ಮೋಕ್ಷಾರ್ಥಿಗಳಿಂದ ತಿಳಿಯಲ್ಪಡಬೇಕಾಗಿರುವ ಪರಬ್ರಹ್ಮವೂ ನೀನೇ; ಎಂಬ ತಾತ್ಪರ್ಯವು ಇದರಿಂದ ಆತ್ಮಾವಿಗೆ **"ಜ್ಞೋತಏವ"** ಎಂದು ಬ್ರಹ್ಮಸೂತ್ರವಲ್ಲಿ ಹೇಳಿರುವಹಾಗೆ ಜ್ಞಾತೃತ್ವವೂ ಉಂಟು. ಆತನು ಬರೀ ಜ್ಞಾನಸ್ವರೂಪಮಾತ್ರವೇ ಎಂಬ ವಾದವು ನಿರಾಕರಿಸಲ್ಪಟ್ಟಿತು. **ಅಸ್ಯ ವಿಶ್ವಸ್ಯ**-ಈ ವಿಶ್ವಕ್ಕೆ **ತ್ವಂ**-ನೀನು, **ನಿದಾನಮ್**-ಶ್ರೇಷ್ಠವಾದ ಆಧಾರವು, ಸರ್ವಕ್ಕೂ ಆಶ್ರಯವು ನೀನೇ. ನಾರಾಯಣ ಶಬ್ದದ ತತ್ಪುರುಷಾರ್ಥವು, ವಿಶ್ವವೆಲ್ಲಕ್ಕೂ ಈತನು ಆಧಾರನು ಅವೆಲ್ಲವೂ ಆಧೇಯವೆಂದು ಬೋಧಿಸುತ್ತದೆ. ಹೇಗೆಂದರೆ? **ನಾರಾಣಾಂ ಅಯನಂ** ನಿತ್ಯರಾದ ಚೇತನರಿಗೂ ಪ್ರಾಪ್ಯಃ ಪ್ರಾಪಕಃ, ಆಧಾರಃ; **ಇಣ್‌ಗತೌ** ಎಂಬ ಧಾತುವಿನ ಮೂಲಕ. ಈತನು **ಈಯತೇ**-ಹೊಂದಲ್ಪಡುವನು, ಎಂಬ ಕರ್ಮಣ್ಯರ್ಥದಿಂದ ಪ್ರಾಪ್ಯನು, **ಈಯನ್ತೇ ಅನೇನ** ಎಂಬ ಕರಣಾರ್ಥದಿಂದ ಈತನಿಂದಲೇ ಪ್ರಾಪ್ಯವನ್ನು ಹೊಂದಲ್ಪಡುವವರು ಎಂಬುದರಿಂದ ಪ್ರಾಪಕನು; **ಈಯನ್ತೇ ಅಸ್ಮಿ**ನ್ ಎಂಬ ಅಧಿಕರಣವ್ಯುತ್ಪತ್ತಿಯಿಂದ ಇವನಲ್ಲೇ ಸೇರಿದವರು ಎಂಬುದರಿಂದ ಸರ್ವರಿಗೂ ಆಧಾರನು ಎಂಬರ್ಥವು **ತ್ವಂ**-ನೀನು, **ಅವ್ಯಯಃ**-ನಾಶರಹಿತನು, ಅಚ್ಯುತನು, **ಶಾಶ್ವತಧರ್ಮಗಳ ಗೋಪ್ತಾ**-ರಕ್ಷಕನು; ವೈದಿಕಗಳಾದ ವಿಧಿ ನಿಷೇಧರೂಪಗಳಲ್ಲಿ ಹೇಳಿರುವ ಸರ್ವಧರ್ಮಗಳ,
**ಗೋಪ್ತಾ**-ರಕ್ಷಕನು; ವೈದಿಕಗಳಾದ ವಿಧಿ ನಿಷೇಧರೂಪಗಳಲ್ಲಿ ಹೇಳಿರುವ ಸರ್ವಧರ್ಮಗಳ,
**ಗೋಪ್ತಾ**-ರಕ್ಷಕನು; **ಧರ್ಮಸಂಸ್ಥಾಪನಾರ್ಥಾ**ಯ **ಸಂಭವಾಮಿ ಯುಗೇಯುಗೇ** ಎಂದು

**ಭಾ, ಉಪನಿಷತ್ಸು (೧) "ದ್ವೇ ವಿದ್ಯೇ ವೇದಿತವ್ಯೇ" ಇತ್ಯಾದಿಷು ವೇದಿತವ್ಯತಯಾ ನಿರ್ದಿಷ್ಟಂಪರಮಮಕ್ಷರಂ ತ್ವಮೇವ ; ಅಸ್ಯ ವಿಶ್ವಸ್ಯ ಪರಂ ನಿದಾನಂ-ವಿಶ್ವಸ್ಯಾಸ್ಯ ಪರಮಾಧಾರ ಭೂತಸ್ತ್ವಮೇವ; ತ್ವಮವ್ಯಯಃ-ವ್ಯಯರಹಿತಃ. ಮತ್ಸ್ವರೂಪೋ ಯದ್ಯುಗೋಯದ್ವಿಭವಶ್ಚ ತ್ವಂ ತೇನೈವ ರೂಪೇಣ ಸರ್ವದಾವತಿಷ್ಠಸೇ.**

---

ಹೇಳಿರುವಹಾಗೆ ಧರ್ಮಗಳನ್ನು ಕಾಪಾಡುವದಕ್ಕಾಗಿಯೇ ಅವತರಿಸುವವನು ; **ಯೇಚ ವೇದವಿದೋ ವಿಪ್ರಾಯೇ ಚಾಧ್ಯಾತ್ಮವಿದೋಜನಾಃ ತೇ ವದನ್ತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಂ"** (ಭಾರ.ವನ ೭೧-೧೨೩) ಎಂಬ ಮತ್ತು **"ಧರ್ಮೋವಿಗ್ರಹವಾನ್ ಅಧರ್ಮವಿರತಿಂ ಧನ್ವೀ ಸ ತನ್ವೀತು ನಃ"** (ದಶಾವತಾರಸ್ತೋತ್ರಂ) ಎಂಬುವುಗಳು ಅನುಸಂಧೇಯಗಳು. **ತ್ವಂ ಸನಾತನಃ**-ನೀನು ಅನಾದಿಯಾಗಿರುವವನು, **ಪುರುಷಃ**-ಶ್ರೀ. ಪುರುಷಸೂಕ್ತ ಪ್ರತಿಪಾದ್ಯನಾಗಿ **"ಪುರುಷ ಏವೇದಗ್ಂ ಸರ್ವಂ"** ಎಂದು ಹೇಳಿರುವಹಾಗೆ ಪುರುಷನು. ಇತರವಾದವೆಲ್ಲಾ **ಸ್ತ್ರೀಪ್ರಾಯಮಿತರತ್** ಎಂದು ಹೇಳಲ್ಪಟ್ಟಿರುವದರಿಂದ ಆತನೊಬ್ಬನೇ ಪುರುಷನು ; ಆತನಿಂದಲೇ ಸರ್ವವೂ ಸತ್ತೆಯನ್ನು ಹೊಂದಿರುವದರಿಂದ ಆತನೇ ಪುರುಷನು, ಜೀವಾತ್ಮರೆಲ್ಲಾ ಅಬಲೆಯರಿಗೆ ಸಮಾನವೆಂಬ ಭಾವವು. ಪತಿವ್ರತೆಯಾದ ಅಬಲೆಗೆ ಪುರುಷನೇ ಹೇಗೆ ಪರಮಗತಿಯೋ. ಹಾಗೆಯೇ ಅನನ್ಯ ದೈವತ್ವಭಾವವುಳ್ಳ ಶುದ್ಧಾಂತ ಸಿದ್ಧಾಂತಿಯಾದ ಪರಮೈಕಾಂತಿಗೆ ಪುರುಷಶಬ್ದವಾಚ್ಯನಾಗಿ. ವಿಶ್ವಪತಿಯೇ ಪರಗತಿಯು ಎಂಬುದೂ ಈ ಪುರುಷ ಶಬ್ದದಿಂದ ಸೂಚಿತವು, ಹಿಂದೆ ಹಾಗೆಯೇ ಹೇಳಿರುತ್ತಾರೆ. ಪರಮೈಕಾಂತಿಯಾಗಿ **ಮನ್ಮನಾಭವ** ನಾದರೆ, **ಮಾಮೇವೈಷ್ಯಸಿ ಕೌಂತೇಯ** ಎಂಬ ಅಮೋಘೋಪದೇಶವು. (ಗೀ ೯ ೩೪.) **ಮತೋಮೇ**-ಹೀಗೀಗ ನನ್ನ ಅಭಿಪ್ರಾಯವೆಂದು ಅರ್ಜುನನು ಅರಿಕೆಮಾಡಿಕೊಳ್ಳುತ್ತಾನೆ. ಇವರಿಂದ ಪರಮ ಪುರುಷನಿಗೂ ಶೇಷಭೂತನಾದ ಜೀವಾತ್ಮನಿಗೂ ಭರ್ತೃಭಾರ್ಯಾಸಂಬಂಧವು ಬೋಧಿತವು. || ೧೮ ||

**ಭಾಷ್ಯಾರ್ಥವು :—ತ್ವಮಕ್ಷರಂ ಪರಮಂ** ಎಂದು ಹೇಳಲ್ಪಟ್ಟಿರುವದರಿಂದ ಇಲ್ಲಿ ಪರಬ್ರಹ್ಮನು ಅಕ್ಷರ ಶಬ್ದದಿಂದ ವಾಚ್ಯನು ಎಂಬುದಕ್ಕೆ ಮುಂಡಕೋಪನಿಷತ್ತಿನಲ್ಲಿ ಹೇಳಲ್ಪಟ್ಟಿದ್ದಾನೆಂದು ಪ್ರಮಾಣವನ್ನು ಮೊದಲು ತೋರಿಸುವದಕ್ಕಾಗಿ **ಉಪನಿಷತ್ಸು**-ಎಂದಾರಂಭಿಸಿರುತ್ತಾರೆ. ಉಪನಿಷತ್ತುಗಳಲ್ಲಿ **"ದ್ವೇ ವಿದ್ಯೆ ವೇದಿತವ್ಯೇ"** ಎಂದರೆ **ಅಪರಾ ಪರಾ** ಎಂಬ ಎರಡು ವಿದ್ಯೆಗಳು ತಿಳಿಯತಕ್ಕವು ಎಂಬಿವೇ ಮೊದಲಾದವುಗಳಲ್ಲಿ **ವೇದಿತವ್ಯತಯಾ ನಿರ್ದಿಷ್ಟಂ**-ತಿಳಿಯತಕ್ಕವು ಎಂಬಿವೇ ಮೊದಲಾದವುಗಳಲ್ಲಿ, **ವೇದಿತವ್ಯತಯಾ ನಿರ್ದಿಷ್ಟಂ**-ತಿಳಿಯತಕ್ಕವೆಂಬುದರಿಂದ ಹೇಳಲ್ಪಟ್ಟಿರುವ. **ಪರಮಂ ಅಕ್ಷರಂ**-ಶ್ರೇಷ್ಠವಾದ ಅಕ್ಷರಶಬ್ದ ವಾಚ್ಯನು, ನಿರ್ವಿಕಾರನಾದುದರಿಂದ ಅಕ್ಷರಶಬ್ದದಿಂದ ಹೇಳಿಸಿಕೊಳ್ಳುವನು, **ತ್ವಮೇವ**-ನೀನೇ. ಅಲ್ಲಿ ಹೇಳಲ್ಪಟ್ಟಿರುವ ವಾಕ್ಯವು ಯಾವುದೆಂದರೆ **"ಅಥಪರಾ ಯಯಾ ತದಕ್ಷರಮಧಿಗಮ್ಯತೇ"** ಎಂಬುದು. "ಮುಂದೆ ಪರವಿದ್ಯೆಯು ಹೇಳಲ್ಪಡುವದು ; ಯಾವ ಪರವಿದ್ಯೆಯಿಂದ ಆ ಅಕ್ಷರಶಬ್ದವಾಚ್ಯವಾದ ಪರಬ್ರಹ್ಮವು **ಅಧಿಗಮ್ಯತೇ ಆಧಿಕ್ಯೇನ ಗಮ್ಯತೇ** ಎಂದರೆ ದರ್ಶನಸಮಾನಕಾರ ಜ್ಞಾನದಿಂದ ಸಾಕ್ಷಾತ್ಕರಿಸಲ್ಪಡುತ್ತದೋ ಅದೇ ಪರವಿದ್ಯೆಯ ವಿಷಯವಾಕ್ಯವು. **ಉಪನಿಷತ್ಸು** ಎಂದು ಬಹುವಚನದಿಂದಲೂ, **ಆದಿಷು** ಎಂಬ ಪ್ರಯೋಗದಿಂದಲೂ, ಇತರ ಉಪನಿಷತ್ತುಗಳ ಕೆಲವಲ್ಲೂ ಹಾಗೆ ಪ್ರಯೋಗ ಉಂಟೆಂಬುದು ಸೂಚಿತವು. **"ಯಸ್ಸೇತುರೀಜಾನಾನಾಂ ಅಕ್ಷರಂ ಬ್ರಹ್ಮಯತ್ಪರಂ"** ಎಂದು ಕಠೋಪನಿಷತ್ತಿನಲ್ಲಿ (೩-೭) ನಿರ್ವಿಕಾರನಾದ ಪರಬ್ರಹ್ಮವು

**ಭಾ.** **ಶಾಶ್ವತ ಧರ್ಮಗೋಪ್ತಾ, ಶಾಶ್ವತಸ್ಯ,-ನಿತ್ಯಸ್ಯ- ವೈದಿಕಸ್ಯ, ಧರ್ಮಸ್ಯ, ಏವಮಾದಿಭಿರವತಾರೈಸ್ತ್ವಮೇವ ಗೋಪ್ತಾ ; ಸನಾತನಸ್ತ್ವಂ ಪುರುಷೋಮತೋ ಮೇ (೧) "ವೇದಾಹಮೇತಂ ಪುರುಷಂ ಮಹಾನ್ತಂ" (೨) "ಪರಾತ್ಪರಂ ಪುರುಷಂ"ಇತ್ಯಾದಿಷೂದಿತಸ್ಸನಾತನಃ ಪುರುಷಸ್ತ್ವಮೇವೇತಿ ಮೇ ಮತಃ-ಜ್ಞಾತಃ ; ಯದುಕುಲತಿಲಕಸ್ತ್ವಮೇವಂಭೂತ ಇದಾನೀಂ ಸಾಕ್ಷಾತ್ಕೃತೋ ಮಯೇತ್ಯರ್ಥಃ ॥ ೧೮ ||**

ಅಕ್ಷರ ಶಬ್ದದಿಂದ ಬೋಧಿಸಲ್ಪಟ್ಟಿರುತ್ತದೆ **ಅಸ್ಯ ವಿಶ್ವಸ್ಯ-** ಈ ವಿಶ್ವಕ್ಕೆ. **ಪರಂನಿಧಾನಂ-**ಎಂದರೆ **ಪರಮಾಧಾರಭೂತಸ್ತ್ವಮೇವ** - ನಾರಾಯಣ ಶಬ್ದದಲ್ಲಿ ತೋರುವ, ಸರ್ವೋತ್ಕೃಷ್ಟನಾದ ಆಧಾರಭೂತನು ನೀನೇ. ಕೆಲವುಗಳಿಗೆ ಜೀವನು ಆಶ್ರಯವಾಗಿ ತೋರಬಹುದುಃ ಅದನ್ನು ನಿರಾಕರಿಸಿ ಹೇಳುವದಕ್ಕಾಗಿ, **ಪರಂ ನಿಧಾನಂ** ಎಂಬಲ್ಲಿ **ಪರ** ಶಬ್ದ ಪ್ರಯೋಗವು (ಕೌಷೀ ೩.೯ ರಲ್ಲಿ) **"ಭೂತಮಾತ್ರಾಃ ಪ್ರಜ್ಞಾಮಾತ್ರಾ ಸ್ವರ್ಪಿತಾಃ । ಪ್ರಜ್ಞಾಮಾತ್ರಾಃ ಪ್ರಾಣೇಽರ್ಪಿತಾಃ"** ಎಂದರೆ ಪಂಚಭೂತಗಳು ಜೀವರುಗಳಲ್ಲೂ, ಜೀವರುಗಳು ಪ್ರಾಣಶಬ್ದವಾಚ್ಯನಾದ ಪರಮಾತ್ಮನಲ್ಲೂ ಆಧೇಯತಯಾ ಇರಿಸಲ್ಪಟ್ಟವು. **ತ್ವಮವ್ಯಯಃ**-ಎಂದರೆ **ವ್ಯಯರಹಿತಃ**-ನೀನೇ ನಾಶರಹಿತನು ; ಈ ಅರ್ಥವು **ಅಕ್ಷರ** ಶಬ್ದದಿಂದಲೂ ಬೋಧಿತವು ; ಮಿಕ್ಕವುಗಳಿಗೆಲ್ಲಾ ಬೇರೆ ಅವಸ್ಥಾಶ್ರಯ ರೂಪವಿಕಾರಾದಿಗಳುಂಟು ; ಸ್ವರೂಪಗುಣವಿಭವಗಳ ವಿಕಾರವೇ ನಾಶವೆಂಬುದು ; ಇದನ್ನೇ ಶಾಸ್ತ್ರವು ನಾಶವೆಂದು ಹೇಳುತ್ತದೆ ; ಮಿಥ್ಯಾತ್ವರೂಪನಾಶವಲ್ಲವು ; ವಿಕಾರಾದಿರೂಪನಾಶವಿಲ್ಲವೆಂದು ಹೇಳಿದುದರ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ —**ತ್ವಂ ಯತ್ಸ್ವರೂಪಃ**-ನೀನು ಯಾವ ಸ್ವರೂಪವುಳ್ಳವನೋ, **ಯದ್ಗುಣಃ**-ಯಾವ ಕಲ್ಯಾಣಗುಣಗಳನ್ನುಳ್ಳವನೋ, **ಯದ್ವಿಭವಶ್ಚ**-ಯಾವ ವಿಭೂತಿದ್ವಯಗಳಿಂದ ಯುಕ್ತನೋ, ನಿತ್ಯ ವಿಭೂತಿ ಏನೋ ಅವ್ಯಯವು, ಅದರಿಂದ ಯುಕ್ತನಾಗಿಯೂ ಅವ್ಯಯನು ಎಂದು ಹೇಳಬಹುದು ; ಲೀಲಾವಿಭೂತಿಯು ಹಾಗಲ್ಲದೆ ಸ್ಥೂಲಸೂಕ್ಷ್ಮಾವಸ್ಥಾರೂಪವಿಕಾರವುಳ್ಳದ್ದಾಗಿರುವಾಗ ಹೇಗೆ ಅವ್ಯಯಭಾವವೆಂದರೆ, ಅವಸ್ಥಾವಿಕಾರವುಳ್ಳದ್ದಾದರೂ, ದ್ರವ್ಯವು ನಿತ್ಯವು, ವ್ಯಯರಹಿತವು ; ಹೀಗೆ ಅಂತಹ ವಿಭೂತಿಗಳುಳ್ಳ ವಿಷಯದಿಂದಲೂ ಅವ್ಯಯನು ; ಅಥವಾ ಅವುಗಳಿಂದ ಸೇರಿದ್ದರೂ ವಿಕಾರರಹಿತನು. **ತೇನೈವ ರೂಪೇಣ-**ಆ ಆಕಾರಗಳಿಂದಲೇ, **ಸರ್ವದಾವತಿಷ್ಠಸೇ-**ಯಾವಾಗಲೂ ಇದ್ದೇ ಇರುತ್ತೀಯೆ. ಈತನ ಸ್ವರೂಪ ಗುಣವಿಭವಗಳೆಲ್ಲವೂ ನಿತ್ಯವಾಗಿ ಶಾಶ್ವತವಾದವುಗಳು ಎಂಬ ಭಾವವು ; ಇದರಿಂದ ನಿರ್ಗುಣವಾದವೂ ವಿಭೂತಿ ಮಿಥ್ಯಾವಾದವೂ ಸಹ ಈ ಅವ್ಯಯ ಶಬ್ದದಿಂದ ಪ್ರತ್ಯುಕ್ತವೆಂಬ ಭಾವವು, **"ಅನನ್ತಮವ್ಯಯಂ ಕವಿಂ"** ಎಂಬ ಪುರುಷಸೂಕ್ತವಚನವು ಇದರಿಂದ ಸ್ಮಾರಿತವು. ಹೀಗೆ ಅವ್ಯಯಶಬ್ದವು ಪರಮಾತ್ಮನಲ್ಲೇ ಮುಖ್ಯಬೋಧ ಉಳ್ಳದ್ದೆಂದು ತಿಳಿಸುವದಕ್ಕಾಗಿಯೇ, ಯತ್ಸ್ವರೂಪಂ, ಯದ್ಗುಣಂ, ಯದ್ವಿಭವಂ ಎಂದು ವ್ಯಾಖ್ಯಾನ ಮಾಡಲ್ಪಟ್ಟಿರುತ್ತದೆ. ಸ್ವಭಾವ ವಿಕಾರವು ಜೀವಾತ್ಮನಲ್ಲಿರುವುದರಿಂದ, **ಯದ್ಗುಣಂ** ಎಂಬುದರಿಂದ ಜೀವಾತ್ಮವೈಲಕ್ಷಣ್ಯವನ್ನು ಹೇಳಿದಂತಾಯಿತು. **ಶಾಶ್ವತಸ್ಯ-**ಎಂದರೆ ನಿತ್ಯವಾದ, **ವೈದಿಕಸ್ಯ ಧರ್ಮಸ್ಯ**-ವೈದಿಕಧರ್ಮದ, **ಏವಮಾದಿಭಿರವತಾರೈಃ-**ಇವೇ ಮೊದಲಾದ ಅವತಾರಗಳಿಂದ, **ತ್ವಮೇವಗೋಪ್ತಾ**-ನೀನೇ ರಕ್ಷಕನು, **ಸನಾತನಸ್ತ್ವಂ ಪುರುಷೋಮತೋಮೇ-**ಅನಾದಿಯಾದ ಪರಮಪುರುಷನು ನೀನೇ ಎಂಬುದು ನನ್ನ ಅಭಿಪ್ರಾಯವು. ಈ ವಾಕ್ಯಾಭಿಪ್ರಾಯವನ್ನು ವಿವರಿಸಿ ಹೇಳುತ್ತಾರೆ.—**"ಏತಂಪುರುಷಂ ಮಹಾನ್ತಂ"** ಎಂದು

(೧) ಪುಂ. ೧-೧.೩.

ಅಹಂಕಾರದಿಂದ ಇದೀಗ ನನ್ನ ಅಭಿಪ್ರಾಯವೆಂದು ಅರ್ಜುನನು ಹೇಳಲಿಲ್ಲವು. **ನಾನು** ತಿಳಿದಿರುವದು ಹೀಗೆ ಎಂಬ ಭಾವವು. ರಾಮನು **ತ**ನ್ನ ಬಾಲನೆಂದು ಭ್ರಮಿಸಿದ ದಶರಥನಿಗೆ **"ಅಹಂ ವೇದ್ಮಿ ಮಹಾತ್ಮಾನಂ"** ಶ್ರೀರಾಮನು ಯಾರೆಂಬುದನ್ನು ನಾನು ನನ್ನ ತಪೋಬಲಾದಿಗಳಿಂದ ತಿಳಿದಿರುವೆನು, ಇವುಗಳು ನಿನ್ನಲ್ಲಿಲ್ಲದಿರುವುದರಿಂದ ನೀನು ತಿಳಿಯಲಾರೆ ಎಂಬುದೇ ಹೇಗೆ ಅರ್ಥವೋ ಹಾಗೆ ಎಂಬ ಭಾವವು. ಅಹಂಕಾರ ಸೂಚಕವಾಕ್ಯವಲ್ಲವು. **"ಏತಂಪುರುಷಂ ಮಹಾಂತಮ್"** ವಿಶ್ವಾಮಿತ್ರರು ಹೇಗೆ ದಶರಥನಿಗೆ ನಂಬಿಕೆ ಹುಟ್ಟಿಸಲು ಹೇಳಿದರೋ, ಹಾಗೆಯೇ ವೇದಪುರುಷನಾಗಿ ಉಪಾಸಕನಾಗಿ ನಂಬಿಕೆಯನ್ನು ಹುಟ್ಟಿಸಲು ಹೇಳುತ್ತಾನೆ ಏನೆಂದರೆ— **ಅಹಂ**-ಸ್ವಾಮಿಕೃಪೆಯಿಂದ ಸರ್ವಜ್ಞನಾಗಿರುವ ವೇದಪುರುಷನಾದ ನಾನು, **ಏತಂ**-ಜಗತ್ಕಾರಣನಾಗಿ, ಜಗದಂತರ್ಯಾಮಿಯಾಗಿ ಕಲ್ಯಾಣಗುಣಯೋಗವುಳ್ಳವನಾಗಿ, ಸರ್ವವಿಭೂತಿ ನಾಯಕನಾಗಿರುವ ಮತ್ತು ಚೇತನನಿಗೆ ಪ್ರಾಪಕಪ್ರಾಪ್ಯನಾಗಿರುವ, **ಪುರುಷಂ**-ಪರಮಪುರುಷನನ್ನು **ಮಹಾಂತಂ**-ಅಪರಿಚ್ಛಿನ್ನ ಸ್ವರೂಪಗುಣ ವಿಭೂತಿಗಳನ್ನುಳ್ಳವನಾಗಿ **ವೇದ**-ತಿಳಿದಿರುವೆನು." ಮತ್ತು (೨) **ಪರಾತ್**-ಶ್ರೇಷ್ಠರಾದ ಬ್ರಹ್ಮರುದ್ರಾದಿ ವರ್ಗಕ್ಕಿಂತ, **ದಿವ್ಯಂ**-ತೇಜೋಮಯನಾದ, **ಪರಂಪುರುಷಂ**-ಶ್ರೇಷ್ಠನಾದ ಪರಮಪುರುಷನನ್ನು, **ಉಪೈತಿ**-ಹೊಂದುವನು **ಇತ್ಯಾದಿಷು**-ಇವೇ ಮೊದಲಾದವುಗಳಲ್ಲಿ, **ಉದಿತಃ**-ಹೇಳಲ್ಪಟ್ಟ, ಸನಾತನಃ **ಪುರುಷಃ**-ಅನಾದಿಪುರುಷನು, **ತ್ವಮೇವೇತಿ**-ನೀನೇ ಎಂದು, **ಮೇ ಮತಃ-ಜ್ಞಾತಃ**-ನನ್ನ ಅಭಿಪ್ರಾಯವಾಗಿ ತಿಳಿದು ಬಂದಿರುತ್ತದೆ. **ಯದುಕುಲ ತಿಲಕಃ**-ಯದುವಂಶಕ್ಕೆ ತಿಲಕಪ್ರಾಯನಾಗಿ ಜನಿಸಿರುವ, **ತ್ವಂ**-ನೀನು, ಎಂದರೆ ಬಾಹ್ಯಚಕ್ಷುಸ್ಸಿಗೆ ಯದುಕುಲ ತಿಲಕನಾಗಿ ತೋರುವ ನೀನು, ಏವಂ **ಭೂತಃ**-ಈ ವಿಶ್ವಕ್ಕೂ ಕಾರಣನಾಗಿ ಈ ವಿಶ್ವಕ್ಕೆಲ್ಲಾ ಆಧಾರಭೂತನೆಂದು ಪ್ರದರ್ಶಿಸುವ ಈ ವಿಶ್ವರೂಪನಾಗಿ, **ಇದಾನೀಂ**-ನಿನ್ನ ನಿರ್ಹೇತುಕ ಕೃಪೆಯಿಂದ ಈಗ, **ಮಯಾ ಸಾಕ್ಷಾತ್ಕೃತಃ**-ನನ್ನಿಂದ ನೀನು ದಯಪಾಲಿಸಿದ ದಿವ್ಯ ಚಕ್ಷುಸ್ಸಿನಿಂದ ಸಾಕ್ಷಾತ್ಕರಿಸಲ್ಪಟ್ಟಿರುತ್ತೀಯೇ, **ಇತ್ಯರ್ಥಃ**-ಎಂಬ ಅಭಿಪ್ರಾಯವು. ವೇದವೆಲ್ಲಾ ಅನಾದಿಯಾಗಿ ಅದರಲ್ಲಿ ಬೋಧಿತವಾಗಿರುವ ಧರ್ಮಗಳೂ ಅನಾದಿಯಾದವಾದುವರಿಂದ ವೈದಿಕ ಧರ್ಮಗಳೆಲ್ಲಾ ಶಾಶ್ವತ ಧರ್ಮಗಳು, ಅಂತಹ ಧರ್ಮಗಳಿಗೆ ಶ್ರೀ ಕೃಷ್ಣನು ಗೋಪ್ತಾ; ಅಂತಹ ಧರ್ಮಗಳ ಸಂಸ್ಥಾಪನೆಯೂ ಸಹ ಅವತಾರಕ್ಕೆ ಉದ್ದೇಶ್ಯವು ಆದುದರಿಂದಲೇ **"ಏವ ಮಾದಿಭಿರವತಾರೈಸ್ತ್ವಮೇವ ಗೋಪ್ತಾ"** ಇಂತಹ ಧರ್ಮ ಸಂಸ್ಥಾಪನೆಯು ಅನೇಕವಾದ ಮತ್ಸ್ಯ ಹಂಸ ರಾಮಾದ್ಯವತಾರಗಳಲ್ಲಿಯೂ ಕೂಡ ನಡೆದಿದೆ ಎಂದು ತೋರಿಸುವದಕ್ಕಾಗಿ **"ಏವ ಮಾದಿಭಿಃ"** ಎಂಬ ಪ್ರಯೋಗವು, ಇಲ್ಲಿರುವ ಪುರುಷ ಶಬ್ದವು ಎರಡು ವಿಧ ಧಾತು ವ್ಯುತ್ಪತ್ತಿಯಿಂದಲೂ ಪರಮಪುರುಷನನ್ನೇ ಬೋಧಿಸುತ್ತದೆಂದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ. ಅದಕ್ಕಾಗಿ ಎರಡು ಉಪನಿಷದ್ವಾಕ್ಯಗಳನ್ನು ಪ್ರಮಾಣವಾಗಿ ಇಲ್ಲಿ ಉದಾಹರಿಸಿರುತ್ತಾರೆ. ಮೂಲದಲ್ಲಿರುವ **ಮತೋಮೇ** ಎಂಬುದಕ್ಕೆ **ಮತೋಮೇ ಜ್ಞಾತಃ**- ಎಂಬ ವ್ಯಾಖ್ಯಾನದಿಂದ ಅರ್ಜುನನೊಬ್ಬನ ಅಭಿಪ್ರಾಯ ಮಾತ್ರವೇ ಅಲ್ಲವು, ಎಲ್ಲಾ ಜ್ಞಾನಿಗಳ ಅಭಿಪ್ರಾಯವೂ ಹಾಗೆಯೇ ಎಂದು ತಿಳಿಸಿದಂತಾಯಿತು. ಇಲ್ಲಿಯೂ **ಸಾಕ್ಷಾತ್ಕೃತಃ** ಎಂಬುದರರ್ಥವು ಭಕ್ತಿಯೋಗದಿಂದುಂಟಾಗುವ ಸಾಕ್ಷಾತ್ಕಾರವಲ್ಲವು. ಹಿಂದೆ **ಪಶ್ಯಾಮಿ** ಎಂಬಲ್ಲಿ ಎಷ್ಟರ್ಥವೋ ಅಷ್ಟು ಮಾತ್ರವೇ ಇಲ್ಲಿಯೂ ಎಂದು ತಿಳಿಯತಕ್ಕದ್ದು.

---

**(೧) ಪುರುಷಸೂಕ್ತವು. (೨) ಮುಂಡಕ ೩-೨-೮.**

**ಮೂ ಅನಾದಿ ಮಧ್ಯಾನ್ತ ಮನಂತ ವೀರ್ಯ ಮನನ್ತ ಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾ ದೀಪ್ತಹುತಾಶವಕ್ತ್ರಂ ಸ್ವತೇಜಸಾ ವಿಶ್ವ ಮಿದನ್ತಪಂತಮ್॥೧೯.**

**ಮೂಲಕ್ಕೆ ಅರ್ಥವು:**—ಅರ್ಜುನನು ತಾನು ಸಾಕ್ಷಾತ್ಕರಿಸಿದ ಪ್ರಕಾರವನ್ನು ಇನ್ನೂ ಅರಿಕೆಮಾಡಿಕೊಳ್ಳುತ್ತಾನೆ.—**ಅನಾದಿ ಮಧ್ಯಾನ್ತಂ**-ಆದಿ ಮಧ್ಯ, ಅಂತಗಳಿಲ್ಲದವನನ್ನಾಗಿಯೂ, ಹಿಂದೆ ೧೬ನೆಯ ಶ್ಲೋಕದಲ್ಲೇ, "**ನಾಂತಂ ನಮಧ್ಯಂ ನಪುನಸ್ತಮಾದಿಂ**" ಎಂದು ಹೇಳಲ್ಪಟ್ಟು, ಇಲ್ಲಿಯೂ **ಅನಾದಿ ಮಧ್ಯಾನ್ತಂ** ಎಂದು ಪ್ರಯೋಗಿಸಿರುವದು ಪುನರುಕ್ತಿದೋಷವಾಗುವದಿಲ್ಲವೋ ಎಂದರೆ ಅಲ್ಲಿ ದಿವ್ಯಮಙ್ಗಳವಿಗ್ರಹವನ್ನು ಕುರಿತು ಹೇಳಿದುದು, ಇದು ಸ್ವರೂಪವನ್ನು ಕುರಿತು ಹೇಳಿದುದೆಂದು ಭಾವಿಸಬಹುದು. ಅಥವಾ ಅದೇ ಸ್ವರೂಪಪರವೆಂದೂ, ಇದೇ ರೂಪಪರವೆಂದಾಗಲಿ ಭಾವಿಸಬಹುದು. ಅಥವಾ ವಿಕಾರಶೂನ್ಯತೆ ಇಲ್ಲವೆಂದು ಇಲ್ಲಿ ಹೇಳಿತೆಂದೂ, ಅಲ್ಲಿ ಅದಕ್ಕೆ ಕಾರಣವೆಂದು ಹೇಳಿತೆಂದಾಗಲಿ ಭಾವಿಸಬಹುದು; ಅಥವಾ ವಿಷ್ಣುಪುರಾಣದಲ್ಲಿ "**ಅನಾದಿ ರ್ಭಗವಾ ಕಾಲಃ**" ಎಂದು ಹೇಳಿರುವಹಾಗೆ, **ಕಾಲರೂಪ** ವಿಭೂತಿಗೂ ಅಂತರಾತ್ಮಾವಾದವನಿಗೆ ಆದಿಮಧ್ಯಾನ್ತ ರಾಹಿತ್ಯವಿಲ್ಲವೆಂದಾಗಲಿ ಹೇಳಬಹುದು. ಆದರೆ ೧೦ ನೇ ಅಧ್ಯಾಯದಲ್ಲಿ (೩೨ ಶ್ಲೋ.) "**ಸರ್ಗಾಣಾ ಮಾದಿರನ್ತಶ್ಚ ಮಧ್ಯಂಚೈವಾಹ ಮರ್ಜುನ**" ಎಂದೂ "**ಅಹಮಾದಿಶ್ಚ ಮಧ್ಯಂಚ ಭೂತಾನಾ ಮನ್ತ ಏವ ಚ**" (ಶ್ಲೋ. ೨೦) ಎಂದೂ ಹೇಳಿದೆಯಲ್ಲಾ, ಅದರೊಂದಿಗೆ ಪುನರುಕ್ತಿಯಲ್ಲವೋ ಎಂದರೆ ಅಲ್ಲವು: ಇದನ್ನೇ ನೋಡಬೇಕೆಂದು ಪ್ರಾರ್ಥಿಸಿದನು; ಅದನ್ನೇ ನಾನೀಗ ನೋಡುತ್ತೇನೆಂದು ಅರಿಕೆಮಾಡಿಕೊಳ್ಳುವುದರಿಂದ ಪುನರುಕ್ತಿಯಾಗುವದಿಲ್ಲವು, **ಅನಾದಿ ಮಧ್ಯಾನ್ತಂ** ಎಂಬಲ್ಲಿರುವ ನಿಷೇಧಾರ್ಥವನ್ನು ಬೋಧಿಸುವ ಆಕಾರವು ಆದಿ, ಮಧ್ಯ, ಅನ್ತ ಮೂರಕ್ಕೂ ಅನ್ವಯಿಸತಕ್ಕದಾದುದರಿಂದ ಆದಿಮಧ್ಯಾನ್ತ ರಹಿತನು ಎಂಬ ಭಾಷ್ಯವು. ಇದರಿಂದ ಸ್ವರೂಪತಃ ಆನಂತ್ಯವೂ ಬೋಧಿಸಲ್ಪಟ್ಟಿತು; ರೂಪಗುಣಗಳ ಆನಂತ್ಯವು ಮುಂದೆ ಹೇಳಲ್ಪಟ್ಟಿರುತ್ತದೆ; **ಅನನ್ತವೀರ್ಯಂ**-ಅಪರಿಚ್ಛಿನ್ನವಾದ ವೀರ್ಯವನ್ನುಳ್ಳವನು; ವೀರ್ಯವೆಂದರೆ ಸರ್ವೋಪಾದಾನತ್ವ ಸರ್ವಧಾರಣತ್ವ ಸರ್ವನಿಯಮನತ್ವಾದಿಗಳೆಲ್ಲಾ ಇದ್ದರೂ, ಸ್ವಲ್ಪವೂ ವಿಕಾರಹೊಂದದೇ ಇರೋಣವು ಎಂಬದಾಗಿ ಹಿಂದೆ ಅವತಾರಿಕೆಯಲ್ಲೇ ಹೇಳಲ್ಪಟ್ಟಿರುತ್ತದೆ: ಇದು, ಷಾಡ್ಗುಣ್ಯದಲ್ಲಿ ಒಂದು ಗುಣವಾದುದರಿಂದ, ವೀರ್ಯ ಒಂದನ್ನು ಹೇಳಿದುದು. ಇಂತಹ ಅನಂತಗಳಾದ **ಷಾಡ್ಗುಣ್ಯ** ಪರಿಪೂರ್ಣನೆಂಬ ಭಾವವು; ದಿವ್ಯಮಙ್ಗಳ ವಿಗ್ರಹವೂ ಅನಂತವೆಂದು ಮುಂದೆ ತಿಳಿಸುತ್ತಾರೆ, ಆ ಒಂದು ವಿಶ್ವರೂಪದಲ್ಲೇ, **ಅನಂತಬಾಹುಮ್**-ಅಸಂಖ್ಯೇಯಗಳಾದ ಬಾಹುಗಳನ್ನೂ ಅಥವಾ ಅಂತವಿಲ್ಲದಹಾಗೆ ಪ್ರಸಾರಿತಗಳಾದ ಬಾಹುಗಳನ್ನುಳ್ಳವನನ್ನಾಗಿಯೂ, **ಶಶಿಸೂರ್ಯನೇತ್ರಮ್**-ಅನೇಕಗಳಾದ ಚಂದ್ರ ಸೂರ್ಯರುಗಳ ಹಾಗೆ ಪ್ರಸಾದ ಪ್ರತಾಪಗಳಿಂದ ಕೂಡಿದ ನೇತ್ರಗಳುಳ್ಳವನನ್ನಾಗಿಯೂ, ಶಶಿಸೂರ್ಯರೇ ಈತನ ವಿಗ್ರಹ ನೇತ್ರವೆಂಬರ್ಥವಲ್ಲವು. ಹೀಗೆ ಅರ್ಥಮಾಡುವುದರಿಂದ "**ಚಂದ್ರಮಾಮನಸೋ ಜಾತಶ್ಚಕ್ಷುಸ್ಸೂರ್ಯೋ ಅಜಾಯತ**" ಎಂಬ ಶ್ರುತಿಗೆ ವಿರೋಧವಿಲ್ಲವು. ಇದರಿಂದ ಸ್ವಾಮಿಯ ಚಂದ್ರನಂತಿರುವ ಕಣ್ಣು ಭಕ್ತಾನುಗ್ರಹವನ್ನೂ, ಸೂರ್ಯನಂತಿರುವ ಕಣ್ಣು ದುಷ್ಕೃತಿಗಳ ನಿಗ್ರಹವನ್ನೂ ಬೋಧಿಸುತ್ತವೆ; **ದೀಪ್ತಹುತಾಶವಕ್ತ್ರಂ**-ಪ್ರಜ್ವಲಿಸುವ ಅಗ್ನಿಯಹಾಗೆ ಇರುವ ಮುಖವನ್ನುಳ್ಳವನನ್ನಾಗಿಯೂ, ಇಲ್ಲಿ ಮುಖವನ್ನು ಹೇಳಿದರೂ ಅದರಲ್ಲಿರುವ ಬಾಯಿಯೇ ಉದ್ದೇಶ್ಯವಾಗಿ ತೋರುತ್ತದೆ; ಈಗ ನೀನು **ಅವತರಿಸಿರುವದು ರಾಕ್ಷಸರಾದ ಈ ಲೋಕಕಂಟಕರನ್ನೆಲ್ಲಾ ನುಂಗಿದ ಹೊರ್ತು ಶಿಷ್ಟರನ್ನು**

**ಭಾ. ಅನಾದಿ ಮಧ್ಯಾನ್ತಂ-ಆದಿಮಧ್ಯಾನ್ತರಹಿತಮ್, ಅನನ್ತ ವೀರ್ಯಂ-ಅನವಧಿಕಾತಿಶಯ ವೀರ್ಯಂ. ವೀರ್ಯಶಬ್ದಃ ಪ್ರದರ್ಶನಾರ್ಥಃ, ಅವನಧಿಕಾತಿಶಯ ಜ್ಞಾನ ಬಲೈಶ್ವರ್ಯ ವೀರ್ಯ ಶಕ್ತಿ ತೇಜಸಾಂ ನಿಧಿ ಮಿತ್ಯರ್ಥಃ। ಅನನ್ತ ಬಾಹುಂ-ಅಸಂಖ್ಯೇಯ ಬಾಹುಮ್, ಸೋಽಪಿ ಪ್ರದರ್ಶನಾರ್ಥಃ, ಅನನ್ತಬಾಹೂದರಪಾದವಕ್ತ್ರಾದಿಕಂ, ಶಶಿಸೂರ್ಯನೇತ್ರಂ-ಶಶಿವತ್ಸೂರ್ಯವಚ್ಚ ಪ್ರಸಾದಪ್ರತಾಪಯುಕ್ತಸರ್ವನೇತ್ರಂ; ದೇವಾದೀನನುಕೂಲಾನ್ ನಮಸ್ಕಾರಾದಿ ಕುರ್ವಾಣಾನ್ ಪ್ರತಿಪ್ರಸಾದಃ, ತದ್ವಿಪರೀತಾನ್**

---

ರಕ್ಷಿಸುವದಕ್ಕಾಗದೇ ಇರುವದರಿಂದ, ಅವರನ್ನೆಲ್ಲಾ ನುಂಗುವ ಉದ್ದಿಶ್ಯವಾಗಿಯೇ ಎಂಬುವಹಾಗೆ **ದೀಪ್ತಹುತಾಶವಕ್ತ್ರಂ** ಎಂದು ಹೇಳುತ್ತಾನೆ. ಹೀಗೆ, **ಸ್ವತೇಜಸಾ** - ಯಾರಿಂದಲೂ ಪರಾಭವವೆಂಬುದೇ ಇಲ್ಲದಿರುವ ತೇಜಸ್ಸಿನಿಂದಲೇ, ಇತರ ಯಾರ ಸಹಾಯವೂ ಬೇಕಾಗದಿರುವ ಸ್ವಕೀಯವಾದ ಶಕ್ತಿಯಿಂದಲೇ, **ವಿಶ್ವಮಿದಂ**-ಈ ವಿಶ್ವವನ್ನೆಲ್ಲಾ. **ತಪಂತಂ**-ದುಷ್ಟನಿಗ್ರಹಕ್ಕಾಗಿ ತಪಿಸುವಹಾಗೆ ಮಾಡುವವನನ್ನಾಗಿಯೂ, (ಮುಂದೆ ೨೯, ೩೦ ನೆಯ ಶ್ಲೋಕಗಳಲ್ಲೂ ಈ ಅಭಿಪ್ರಾಯವೇ ವಿಸ್ತರಿಸಲ್ಪಡುತ್ತದೆ) ಹೀಗೆ **ತ್ವಾ**-ನಿನ್ನನ್ನು, **ಪಶ್ಯಾಮಿ**-ನೋಡುತ್ತೇನೆ, ಅಥವಾ **ದೀಪ್ತಹುತಾಶವಕ್ತ್ರಮ್** ಎಂಬುದರಿಂದ ಬ್ರಾಹ್ಮಣಾದಿಗಳು ಯಜ್ಞರೂಪದಲ್ಲಿ ದೀಪ್ತವಾದ ಅಗ್ನಿಮುಖದಲ್ಲಿ ಹಾಕಿದ ಹೋಮದ್ರವ್ಯಗಳಿಗೆಲ್ಲಾ ತಾನೇ ಭೋಕ್ತಾವಾಗಿರುವನೆಂಬುದನ್ನು ಸೂಚಿಸುವುದಕ್ಕಾಗಿ ಹಾಗೆ ಹೇಳಿ, ಹಾಗೆ ಮಾಡತಕ್ಕ ಯಜ್ಞಾದಿಗಳನ್ನು ತ್ಯಜಿಸಿ, ವಿಧಿ ನಿಷೇಧವಾಕ್ಯಗಳನ್ನು ಮನ್ನಿಸದೇ ಇರುವವರ ವಿಷಯದಲ್ಲಿ, **ವಿಶ್ವಮಿದಂ ತಪಂತಂ** ಎಂದಾಗಲಿ ಅರ್ಥಮಾಡಬಹುದು.

**ಭಾಷ್ಯಾರ್ಥವು** :—ಅನಾದಿ ಮಧ್ಯಾನ್ತಂ ಎಂದರೆ **ಆದಿಮಧ್ಯಾಂತರಹಿತಮ್**-ಆದಿ, ಮಧ್ಯ, ಅನ್ತಗಳಿಲ್ಲದವನು, **ಅನಂತವೀರ್ಯಂ** ಎಂದರೆ **ಅನವಧಿಕಾತಿಶಯ ವೀರ್ಯಂ** ಅವಧಿಯಿಲ್ಲದೆ ಅತಿಶಯವನ್ನು ಹೊಂದಿದ **ವೀರ್ಯಂ**-ಜಗತ್ಸೃಷ್ಟಿಪಾಲನ ನಿಯಮನಾದಿಗಳಿದ್ದರೂ ಅವುಗಳಿಂದ ವಿಕಾರವಿಲ್ಲದಿರೋಣವು, ಇಲ್ಲಿ **ವೀರ್ಯಶಬ್ದಃ ಪ್ರದರ್ಶನಾರ್ಥಃ**-ವೀರ್ಯಶಬ್ದವು ಮಿಕ್ಕವುಗಳನ್ನೂ ಸಹ ಪ್ರದರ್ಶಿಸುವ ಅಭಿಪ್ರಾಯದಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ, ಅದರಿಂದುಂಟಾಗುವ ತಾತ್ಪರ್ಯವೇನೆಂದರೆ, ಅನವಧಿಕಾತಿಶಯವುಳ್ಳ ಜ್ಞಾನಬಲ ಐಶ್ವರ್ಯ ವೀರ್ಯ ತೇಜಸ್ಸುಗಳಿಗೆ ನಿಧಿಯು ಎಂಬ ತಾತ್ಪರ್ಯವು. **ಅನಂತಬಾಹುಮ್**-ಎಂದರೆ ಅಸಂಖ್ಯೇಯಗಳಾದ ಬಾಹುಗಳುಳ್ಳವನಾಗಿಯೂ, **ಸೋಽಪಿ**-ಅದೂಕೂಡ **ಪ್ರದರ್ಶನಾರ್ಥಃ**-ಪ್ರದರ್ಶನಾರ್ಥ ಉಳ್ಳದುದು ಬಾಹುಹೇಳಿದುದು ಕರಚರಣಾದಿಗಳಿಗೂ ಉಪಲಕ್ಷಣವೆಂದು ಭಾವಿಸತಕ್ಕದ್ದೆಂಬ ಭಾವವು, ಇದರ ಅಭಿಪ್ರಾಯವೇನೆಂದರೆ **ಅನಂತ ಬಾಹೂದರ ಪಾದವಕ್ತ್ರಾದಿಕಂ**-ಅಸಂಖ್ಯೇಯಗಳಾದ ಬಾಹು, ಉದರ, ಪಾದ, ಮುಖವೇ ಮೊದಲಾದವುಗಳನ್ನುಳ್ಳವನನ್ನಾಗಿಯೂ ಎಂಬ ತಾತ್ಪರ್ಯವು. **ಶಶಿಸೂರ್ಯನೇತ್ರಂ**-ಎಂದರೆ **ಶಶಿವತ್ಸೂರ್ಯವಚ್ಚ ಪ್ರಸಾದ ಪ್ರತಾಪಯುಕ್ತ ಸರ್ವನೇತ್ರಮ್**-ಚಂದ್ರನೋಪಾದಿಯಲ್ಲಿ ತಂಪಾಗಿ ಭಕ್ತರಿಗೆ ಅನುಗ್ರಹಮಾಡುವ ಮತ್ತು ಸೂರ್ಯನಹಾಗೆ ಜ್ವಲಿಸುವ ಎಂದರೆ ಭಕ್ತರಲ್ಲದ ದುಷ್ಟರ ವಿಷಯದಲ್ಲಿ ನಿಗ್ರಹವನ್ನು ಸೂಚಿಸುವ ಇಂತಹ ಪ್ರಸಾದ ಪ್ರತಾಪಗಳಿಂದ ಸೇರಿದ ಸಮಸ್ತ ನೇತ್ರಗಳುಳ್ಳವನನ್ನಾಗಿ, **ಪಶ್ಯಾಮಿ;** ಇಲ್ಲಿ ಚಂದ್ರಸೂರ್ಯರೇ ಅವನಿಗೆ ಈ ವಿಶ್ವರೂಪದಲ್ಲಿ ಕಣ್ಣುಗಳು ಎಂಬರ್ಥವಲ್ಲವು. ಹಾಗೆ ರೂಪಕಮಾಡಿ ಇನ್ನೂ ಯಾವುದೂ ಹೇಳಲಿಲ್ಲವು, ಆಗ ಕೈಗಳು ಯಾವುವು, ಕಾಲುಗಳು ಯಾವುವು, ಎಂಬ ಪ್ರಶ್ನೆಗೆ ಉತ್ತರವಿಲ್ಲವು, ಆದು

ಭಾ. ಅಸುರರಾಕ್ಷಸಾದೀನ್ ಪ್ರತಿ, ಪ್ರತಾಪಃ (೧) "ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ, ಸರ್ವೇ ನಮಸ್ಯನ್ತಿ ಚ ಸಿದ್ಧ ಸಂಘಾಃ" ಇತಿ ಹಿ ವಕ್ಷ್ಯತೇ. ದೀಪ್ತಹುತಾಶವಕ್ತ್ರಂ ಪ್ರದೀಪ್ತಕಾಲಾನಲವತ್ ಸಂಹಾರಾನುಗುಣ ವಕ್ತ್ರಮ್ ; ಸ್ವತೇಜಸಾ ವಿಶ್ವಮಿದಂ ತಪನ್ತಂ; ತೇಜಃ-ಪರಾಭಿಭವನ ಸಾಮರ್ಥ್ಯಂ, ಸ್ವಕೀಯೇನ ತೇಜಸಾ ವಿಶ್ವ ಮಿದಂ ತಪನ್ತಂ ತ್ವಾಂ ಪಶ್ಯಾಮಿ-ಏವಂ ಭೂತಂ ಸರ್ವಸ್ಯ ಸ್ರಷ್ಟಾರಂ, ಸರ್ವಸ್ಯಾ ಧಾರಭೂತಂ, ಸರ್ವಸ್ಯಪ್ರಶಾಸಿತಾರಂ, ಸರ್ವಸ್ಯ ಸಂಹರ್ತಾರಂ, ಜ್ಞಾನಾದ್ಯಪರಿ ಮಿತ ಗುಣಸಾಗರಂ, ಆದಿಮಧ್ಯಾನ್ತರಹಿತ ಮೇವಂಭೂತದಿವ್ಯದೇಹಂ ತ್ವಾಂ

ದರಿಂದ ಪ್ರಸಾದವನ್ನೂ ಕ್ರೋಧವನ್ನೂ ಪ್ರದರ್ಶಿಸುವ ಅನೇಕ ಕಣ್ಣುಗಳುಳ್ಳವನೆಂದು ಅರ್ಥಮಾಡುವದು ಯುಕ್ತವು ಅದೂ ಅಲ್ಲದೆ ಹಿಂದೆ ಬಹುನೇತ್ರಗಳು ಈ ದಿವ್ಯಮಂಗಳ ವಿಗ್ರಹಕ್ಕೆ ಉಂಟೆಂದು ೧೬ ನೆಯ ಶ್ಲೋಕದಲ್ಲಿ **ಅನೇಕ ಬಾಹೂದರ ವಕ್ತ್ರನೇತ್ರಮ್** ಎಂಬ ಪ್ರಯೋಗಕ್ಕೆ ವಿರೋಧವಾಗುತ್ತದೆ ಆದುದರಿಂದ ಚಂದ್ರನಹಾಗೆ ಆಹ್ಲಾದವನ್ನೂ ಸೂರ್ಯನಹಾಗೆ ಕ್ರೌರ್ಯವನ್ನೂ ಪ್ರದರ್ಶಿಸುವ ನೇತ್ರಗಳೆಂದೇ ಅರ್ಥ ಹೇಳುವದು ಯುಕ್ತ ಎಂದು ಭಾವಿಸಿ ಅದನ್ನೇ ವಿವರಿಸುತ್ತಾರೆ. **ದೇವಾದೀನನುಕೂಲಾನ್**-ಶಾಸ್ತ್ರಗಳ ವಿಧಿ ನಿಷೇಧ ವಾಕ್ಯಗಳಿಗೆ ಅನುಕೂಲವಾಗಿ ನಡೆಯುವ ದೇವತೆಗಳೇ ಮೊದಲಾದವರನ್ನೂ, **ಆದಿ** ಶಬ್ದದಿಂದ ಮನುಷ್ಯ ವರ್ಗಾದಿಗಳೂ ಹೇಳಲ್ಪಟ್ಟವು ಅವರು ಎಂತವರೆಂದರೆ, **ನಮಸ್ಕಾರಾದಿ ಕುರ್ವಾಣಾನ್ ಪ್ರತಿ**-ನಮಸ್ಕಾರವೇ ಮೊದಲಾದವುಗಳ ಮೂಲಕ ಆಶ್ರಿತರನ್ನು ಕುರಿತು, ಇಲ್ಲಿ ಆದಿ ಶಬ್ದದಿಂದ ಶ್ರವಣ, ಕೀರ್ತನ ಮೊದಲಾದ ನವವಿಧ ಭಕ್ತಿಪ್ರವೃತ್ತಿಗಳೂ ಹೇಳಲ್ಪಟ್ಟವು ; ಅಥವಾ ಗೀತೆಯಲ್ಲೇ **ಬೋಧಯಂತಃ ಪರಸ್ಪರಂ। ಕಥಯಂತಶ್ಚ ಮಾಂ ನಿತ್ಯಂ** (ಗೀ. ೧೦-೯) ಎಂಬಲ್ಲಿ ಹೇಳಲ್ಪಟ್ಟ ವ್ಯಾಪಾರಗಳಾಗಲಿ, ಅಥವಾ **"ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ। ನಮಸ್ಯಂತಶ್ಚ ಮಾಂ ಭಕ್ತ್ಯಾ"** (ಗೀ ೯.೧೪) ಎಂಬಲ್ಲಿ ಹೇಳಲ್ಪಟ್ಟ ವ್ಯಾಪಾರಗಳಾಗಲಿ ಸಙ್ಗ್ರಹಿಸಲ್ಪಟ್ಟವೆಂದು ಭಾವಿಸಬಹುದು ; ಇಂತವರ ವಿಷಯದಲ್ಲಿ **ಪ್ರಸಾದಃ**-ಪ್ರಸನ್ನತೆಯೂ, **ತದ್ವಿಪರೀತಾನ್ ಅಸುರರಾಕ್ಷಸಾದೀನ್ ಪ್ರತಿ**-ಅದಕ್ಕೆ ವಿಪರೀತರಾಗಿ ನಡೆಯುವ ಎಂದರೆ ಪ್ರತಿಕೂಲರಾಗಿ ನಡೆಯುವ ಅಸುರರೂ ರಾಕ್ಷಸರೇ ಮೊದಲಾದವರನ್ನು ಕುರಿತು, **ಪ್ರತಾಪಃ**-ವಿಶೇಷವಾಗಿ ತಪಿಸುವಹಾಗೆ ಮಾಡೋಣವು **ಎಂದರೆ** ನಿಗ್ರಹವೂ ಸಹ. **"ರಕ್ಷಾಂಸಿ ಭೀತಾನಿ ದಿಶೋದ್ರವಂತಿ**-ರಾಕ್ಷಸರು ಭೀತರಾಗಿ ದಿಕ್ಕು ದಿಕ್ಕುಗಳಕಡೆಗೆ ಓಡಿ ಹೋಗುತ್ತಾರೆ, **ಸರ್ವೇ ಸಿದ್ಧ ಸಂಘಾಶ್ಚ"**-ಸಮಸ್ತರಾದ ಸಿದ್ಧರ ಸಂಘಗಳಾದರೋ, **ನಮಸ್ಯಂ**ತಿ-ನಮಸ್ಕರಿಸುತ್ತಾರೆ." **ಇತಿ ಹಿ ವಕ್ಷ್ಯತೇ**-ಎಂದಲ್ಲವೇ ಇದೇ ಅಧ್ಯಾಯದಲ್ಲಿ ಮುಂದೆ ಹೇಳಲ್ಪಡುತ್ತದೆ **ದೀಪ್ತಹುತಾಶವಕ್ತ್ರಮ್**-ಎಂದರೆ **ಪ್ರದೀಪ್ತ ಕಾಲಾನಲವತ್ಸಂಹಾರಾನುಗುಣವಕ್ತ್ರಮ್**-ಪ್ರಜ್ವಲಿಸುವ ಪ್ರಳಯಕಾಲದ ಅಗ್ನಿಯ ಹಾಗೆ ಸಂಹಾರಕ್ಕೆ ಅನುಗುಣವಾದ ಅಗಾಧವಾದ ಬಾಯಿಯುಳ್ಳವನು, ಅಜಗರದಹಾಗೆ ಸಕಲವನ್ನೂ ಗ್ರಸನಮಾಡುವ ದಶೆಗೆ ಯೋಗ್ಯವಾದ ಅಗಾಧವಾದ ಆಸ್ಯವನ್ನುಳ್ಳವನು, ಇತರರು ದೀಪ್ತ ಹುತಾಶವೇ ವಕ್ತ್ರಂ ಎಂದು ರೂಪಕಮಾಡಿ ಹೇಳಿರುವ ಅರ್ಥವು ಇಷ್ಟು ಸಮಂಜಸವಾದ ಅರ್ಥವಾಗುವದಿಲ್ಲ ಏಕೆಂದರೆ, ಸರ್ವತ್ರರೂಪಕ ನಿರೂಪಣವಿಲ್ಲವಾದುದರಿಂದ; ಮುಂದೆ **"ಕಾಲಾನಲ ಸನ್ನಿಭಾನಿ"** (ಗೀ.೧೧.೨೫) ಎಂದು ಹೇಳಲ್ಪಡುವದರಿಂದ ಇದೇ ಸರಿಯಾದ ಅರ್ಥವೆಂದು **ತೋರಬರುತ್ತದೆ. ಸ್ವತೇಜಸಾ ವಿಶ್ವಮಿದಂ ತಪನ್ತಂ**-ಎಂಬಲ್ಲಿ ತೇಜಶ್ಶಬ್ದವು,

**ಭಾ. ಯಥೋಪದೇಶಂ ಸಾಕ್ಷಾತ್ಕರೋಮೀತ್ಯರ್ಥಃ। ಏಕಸ್ಮಿನ್ ದಿವ್ಯದೇಹೇ ಅನೇಕೋದರಾದಿಕಂ ಕಥಮ್? ಇತ್ಥ ಮುಪಪದ್ಯತೇ-ಏಕಸ್ಮಾತ್ಕಟಿ ಪ್ರದೇಶಾದನನ್ತಪರಿಮಾಣಾದೂರ್ಧ್ವಮುದ್ಗತಾ ಯಥೋದಿತೋದರಾದಯಃ; ಅಧಶ್ಚ ಯಥೋದಿತ ದಿವ್ಯಪಾದಾಃ; ತತ್ರೈಕಸ್ಮಿನ್ ಮುಖೇ ನೇತ್ರದ್ವಯಮಿತಿ ಚ ನವಿರೋಧಃ ॥ ೧೯ ॥**

---

**ಪರಾಭಿಭವನಸಾಮರ್ಥ್ಯಂ**-ಇತರರನ್ನೆಲ್ಲಾ ಸೋಲಿಸಿ ಸ್ವಾಧೀನಮಾಡಿಕೊಳ್ಳುವ ಸಾಮರ್ಥ್ಯವು, **"ಅಂಗುಳ್ಯಗ್ರೇಣ ತಾನ್ ಹನ್ಯಾಂಇಚ್ಛನ್ ಹರಿಗಣೇಶ್ವರ"** (ರಾ. ಯುದ್ಧ. ೧೮-೨೪) ಎಂಬ ರಾಮವಾಕ್ಯವು ಅನುಸಂಧೇಯವು, **ಸ್ವಕೀಯೇನ ತೇಜಸಾ**-ಇಂತಹ ಸ್ವಕೀಯವಾದ ತೇಜಸ್ಸಿನಿಂದ, **ವಿಶ್ವಮಿದಂ ತಪನ್ತಂ ತ್ವಾಂ ಪಶ್ಯಾಮಿ**-ಈ ಸಮಸ್ತವಾದ ವಿಶ್ವವನ್ನೆಲ್ಲಾ ತಪಿಸುವಹಾಗೆ ಮಾಡುವಹಾಗೆ ನಿನ್ನನ್ನು ನೋಡುತ್ತೇನೆ, ಪ್ರಳಯಕಾಲದಲ್ಲಿ ಸರ್ವವೂ ಕ್ಲೇಶಪಡುವಹಾಗೆ ಮಾಡುವ ಜನಾರ್ಧನನಲ್ಲವೇ ಎಂಬ ಭಾವವು. ಹಿಂದೆ ಉಪದೇಶರೀತ್ಯಾ ಕೇಳಿದುದೂ, ಅನಂತರ ಶರಣ್ಯನ ಕೃಪಯಾ ದತ್ತವಾದ ದಿವ್ಯ ಚಕ್ಷುಸ್ಸಿನಿಂದ ಸಾಕ್ಷಾತ್ಕರಿಸಿದುದೂ ಇವೆಲ್ಲಾ ಆಕಾರವನ್ನೂ ಒಟ್ಟುಕೂಡಿಸಿ ತಾತ್ಪರ್ಯವನ್ನು ದಯಪಾಲಿಸುತ್ತಾರೆ. **ಏವಂ ಭೂತಂ**-ಈ ವಿಧವಾಗಿ, **ಸರ್ವಸ್ಯ ಸ್ರಷ್ಟಾರಂ**-ಸಮಸ್ತಕ್ಕೂ ಸೃಷ್ಟಿಕರ್ತನನ್ನಾಗಿಯೂ, **ಸರ್ವಸ್ಯ ಆಧಾರಭೂತಂ** - ಸಮಸ್ತಕ್ಕೂ ಆಧಾರನನ್ನಾಗಿಯೂ, **ಸರ್ವಸ್ಯ ಪ್ರಶಾಸಿತಾರಂ**-ಸಮಸ್ತವನ್ನೂ ನಿಯಮಿಸುವವನನ್ನಾಗಿಯೂ, **ಸರ್ವಸ್ಯ ಸಂಹರ್ತಾರಂ**-ಸಮಸ್ತಕ್ಕೂ ಪ್ರಲಯವನ್ನುಂಟುಮಾಡುವವನನ್ನಾಗಿಯೂ ಎಂದರೆ ಎಲ್ಲವೂ ಬಹುಸೂಕ್ಷ್ಮರೂಪವನ್ನು ಹೊಂದುವಹಾಗೂ, ಆ ಕಾರಣದಿಂದ ನಾಮ ರೂಪಗಳಿಲ್ಲದಹಾಗೆ ಮಾಡುವವನನ್ನಾಗಿಯೂ, **ಜ್ಞಾನಾದ್ಯಪರಿಮಿತ ಗುಣಸಾಗರಂ**-ಜ್ಞಾನವೇ ಮೊದಲಾದ ಅಪರಿಮಿತ ಕಲ್ಯಾಣಗುಣ ಮಹೋದಧಿಯನ್ನಾಗಿಯೂ, **ಆದಿ ಮಧ್ಯಾಂತರಹಿತವಾದ ಏವಂ ಭೂತ ದಿವ್ಯದೇಹಂ**-ಇಂತಹ ಮಹಾತೇಜಸ್ಸುಳ್ಳ ದಿವ್ಯ ಮಙ್ಗಳವಿಗ್ರಹವುಳ್ಳವನನ್ನಾಗಿಯೂ, **ತ್ವಾಂ**-ನಿನ್ನನ್ನು, **ಯಥೋಪದೇಶಂ**-ಮೊದಲು ಹೇಗೆ ಉಪದೇಶಿಸಿದಿಯೋ ಹಾಗೆಯೇ, **ಸಾಕ್ಷಾತ್ಕರೋಮೀತ್ಯರ್ಥಃ**-ಸಾಕ್ಷಾತ್ಕರಿಸುತ್ತೇನೆಂಬ ತಾತ್ಪರ್ಯವು ಈಗ ಅರ್ಜುನನು ನೋಡಿದ್ದು ಒಂದು ದಿವ್ಯಮಙ್ಗಳ ವಿಗ್ರಹವೇ, ಅನೇಕ ದಿವ್ಯಮಙ್ಗಳವಿಗ್ರಹಗಳೇ ಎಂಬ ವಿವೇಚನೆಯಲ್ಲಿ, ಅರ್ಜುನನು ಪ್ರಾರ್ಥಿಸಿರುವದು **ದ್ರಷ್ಟು ಮಿಚ್ಛಾಮಿತೇ ರೂಪಂ**-ಒಂದು ದಿವ್ಯಮಙ್ಗಳ ವಿಗ್ರಹ ಒಂದನ್ನು ಎಂಬ ಪ್ರಯೋಗವಿರುತ್ತದೆ. ಶ್ರೀ ಕೃಷ್ಣಭಗವಾನರವರ ವಾಕ್ಯದಲ್ಲೂ ಸಹ **ಪಶ್ಯಾದ್ಯ ಸಚರಾಚರಂ ಮಮದೇಹೇ** (೧೧-೭) ಎಂದು ಏಕವಚನವಿರುತ್ತದೆ. **ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ** (೧೧-೯) ಎಂಬಲ್ಲಿಯೂ ಏಕವಚನವಿರುವದರಿಂದ ಒಂದೇಯಾದ ವಿಶ್ವರೂಪವನ್ನೇ ತೋರಿಸಿದರೆಂದು ತೋರಿಬರುತ್ತದೆ. ಮುಂದೆ (೧೧-೧೬) ನೆಯ ಶ್ಲೋಕದಲ್ಲಿ ವಿಶ್ವರೂಪವೆಂಬ ಸಂಬೋಧನೆಯಿಂದಲೂ ವ್ಯಕ್ತವು. ೨೦ ನೆಯ ಶ್ಲೋಕದಲ್ಲೂ **ದೃಷ್ಟ್ವಾದ್ಭುತಂ ರೂಪಮುಗ್ರಂತವೇದಂ** ಎಂಬಲ್ಲಿಯೂ ಏಕವಚನವಿರುತ್ತದೆ.

ಆದರೆ ಎರಡು ಆಕ್ಷೇಪಗಳುಂಟಾಗಬಹುದು. ಒಂದನೆಯದು, ೫ ನೆಯ ಶ್ಲೋಕದಲ್ಲಿ **ಪಶ್ಯಮೇ ಪಾರ್ಥ ರೂಪಾಣಿಶತಶೋಥ ಸಹಸ್ರಶಃ**-ಎಂದು ಬಹುವಚನವಿದೆಯಲ್ಲಾ ಎಂದರೆ

---

(೧) ಗೀ. ೧೧-೩೬.

**ಭಾ. ಅವ. ಏವಂ ಭೂತಂ ತ್ವಾಂ ದೃಷ್ಟ್ವಾ ದೇವಾದಯೋಽಹಂಚ ಪ್ರವ್ಯಥಿತಾ ಭವಾಮ ಇತ್ಯಾಹ—**

ಈ ಆಕಾರಗಳೆಲ್ಲಾ ಒಂದೇ ವಿಶ್ವರೂಪಕ್ಕೆ ಸಂಬಂಧಿಸಿವಂತೇ ಇಟ್ಟುಕೊಳ್ಳತಕ್ಕದ್ದಾಗಿರುತ್ತದೆ ಎರಡನೆಯ ಆಕ್ಷೇಪವೇನೆಂದರೆ ಶ್ರೀಯುತಿವರ್ಯರೇ ಅವನ್ನು ಪಪಾದಿಸಿ, ಸಮಾಧಾನವನ್ನು ಹೇಳುತ್ತಾರೆ. **ಏಕಸ್ಮಿನ್**-ಒಂದೇ ಆದ. **ದಿವ್ಯದೇಹೇ**-ಅಪ್ರಾಕೃತ ದಿವ್ಯಮಙ್ಗಳ ವಿಗ್ರಹದಲ್ಲಿ, ಅನೇಕಗಳಾದ ಉದರವೇ ಮೊದಲಾದವುಗಳನ್ನು ಉಳ್ಳೋಣವೆಂಬುದು, **ಕಥಂ**-ಹೇಗೆ? ಎಂಬುದು ಪೂರ್ವಪಕ್ಷವು. ಒಂದೇ ದೇಹವೆಂದು ಹೇಳುವದೇನು? ಅನೇಕ ಉದರಗಳು, ಮುಖಗಳು, ಕಣ್ಣುಗಳು ಶಿರಸ್ಸುಗಳು ಎಂದು ಹೇಳುವದು ಹೇಗೆ ಸರಿಹೋಗುತ್ತದೆ? ಎಂಬುದು ಪೂರ್ವಪಕ್ಷವು ಸಮಾಧಾನ ಹೇಗೆಂದರೆ **ಇತ್ಥಮುಪದ್ಯತೇ**-ಈ ಮುಂದೆ ಹೇಳುವಹಾಗೆ ಗ್ರಹಿಸಿದರೆ ಸರಿಹೋಗುತ್ತದೆ ಒಂದೇ ವಿಗ್ರಹವೆಂಬ ಭಾವನೆ ಇರುವದರಿಂದ, **ಏಕಸ್ಮಾತ್ಕಟಿ ಪ್ರದೇಶಾತ್**-ಒಂದೇ ಕಟಿಪ್ರದೇಶವುಳ್ಳ **ಅನನ್ತ ಪರಿಮಾಣಾತ್**-ಅನಂತವೆಂದರೆ ಬಹು ಪರಿಮಾಣಉಳ್ಳದುದರ ದೆಶೆಯಿಂದ **ಊರ್ಧ್ವಮುದ್ಗತಾಃ** ಊರ್ಧ್ವ ಪ್ರದೇಶವನ್ನು ಹೊಂದಿರುವ, **ಯಥೋದಿತೋದರಾದಯಃ**-ಈಗ ಹೇಳಲ್ಪಟ್ಟಿರುವಹಾಗೆ ಉದರ ಮೊದಲಾದವುಗಳು, **ಅಧಶ್ಚ**-ಹಾಗೇಯೇ ಆ ಕಟಿಪ್ರದೇಶದ ಕೆಳಗೆ, **ಯಥೋದಿತ ದಿವ್ಯ ಪಾದಾಃ**-ಈಗ ಹೇಳಲ್ಪಟ್ಟಿರುವಹಾಗೆ ಅಪ್ರಾಕೃತಗಳಾದ ಪಾದಗಳು. ಹಾಗೇಯೇ **ತತ್ರ**-ಆ ಶರೀರದಲ್ಲೇ, **ಏಕಸ್ಮಿನ್ ಮುಖೇ**-ಒಂದೊಂದು ಮುಖದಲ್ಲಿ, **ನೇತ್ರದ್ವಯಂಚ**-ಎರಡು ನೇತ್ರಗಳು ಸಹ ಹೀಗೆ ಭಾವನೆ ಮಾಡಿದರೆ, **ನ ವಿರೋಧಃ**-ಏನೊಂದೂ ವಿರೋಧವಿಲ್ಲವು ಮೇಲೆಮಾಡಿದ ಪೂರ್ವಪಕ್ಷಕ್ಕೆ ಅವಕಾಶವಿಲ್ಲವೆಂಬಭಾವವು ಇದೀಗ ಅಭಿಪ್ರಾಯವು. **"ಅನೇಕ ಬಾಹೂದರ ವಕ್ತ್ರನೇತ್ರಂ**-ಎಂಬುದರಿಂದ ಅನೇಕ ಅವಯುಗಳುಂಟೆಂದು ದೇಹ ಮಾತ್ರ ಒಂದೇ ಎಂದು ತೋರಿಬರುತ್ತದೆ. ಪೂರ್ವಾಪರ ಅರ್ಜುನ ಶ್ರೀಕೃಷ್ಣರ ವಾಕ್ಯಗಳಿಂದಲೂ ಹಾಗೆಯೇ ಊಹಿಸಬೇಕಾಗಿದೆ. ಆದರೆ ಭಗವಚ್ಛಾಸ್ತ್ರಗಳಲ್ಲಿ ಬೋಧಿತಗಳಾದ ರೂಪಗಳಲ್ಲಿ ಒಂದೇ ರೂಪಕ್ಕೆ ಅನೇಕ ಉದರ ಮೊದಲಾದವುಗಳಿರುವಹಾಗೆ ಇಲ್ಲವಲ್ಲಾ ಎಂದರೆ, ಇದು ಭಗವಚ್ಛಾಸ್ತ್ರಪ್ರಕರಣವಲ್ಲವು. ಇದು ನಾರದಾದಿಗಳಿಗೆ ತೋರಿದ ರೂಪವೂ ಅಲ್ಲವು ಅವರಿಗೆ ತೋರಿದರೂಪವು ಬೇರೇ ವಿಧವಾದುದು ಧೃತರಾಷ್ಟ್ರನಿಗೆ ತೋರಿದ ರೂಪವೂ ಅದಕ್ಕೂ ಬೇರೆಯಾದುದು ಹಾಗೆಯೇ ವರಾಹ ನಾರಸಿಂಹಾದಿ ರೂಪಗಳಲ್ಲಿ ವೈಚಿತ್ರ್ಯವುಂಟು. ಅದೇಪ್ರಕಾರ ಇಲ್ಲಿಯು ವಿಶ್ವರೂಪದಲ್ಲೂ ಮೇಲೆ ಹೇಳಿದರೀತಿಯಲ್ಲಿ ವೈಚಿತ್ರ್ಯವನ್ನು ಅಂಗೀಕರಿಸತಕ್ಕದ್ದಾಗಿರುತ್ತದೆ ಆದುದರಿಂದ ಬೇರುಗಳೂ ಮೂಲಗಳೂ ಬಹುವಾಗಿ ಮಧ್ಯೆ ಬುಡಮಾತ್ರ ಒಂದೇಯಾಗಿರುವ ವಟವೃಕ್ಷವಂತೆ, ಇಲ್ಲಿಯೂ ಕಟಿಪ್ರದೇಶ ಮಾತ್ರ ಒಂದೇಯಾಗಿ ಕೆಳಗಿನ ಭಾಗಗಳು, ತೊಡೆಗಳು ಪಾದಗಳು ಅನೇಕವಾಗಿಯೂ, ಹಾಗೆಯೇ ಮೇಲಿನ ಭಾಗಗಳು, ಬಾಹು, ಉದರ, ಮುಖ, ಶಿರಸ್ಸು, ಕಣ್ಣುಗಳೂ ಅನೇಕವಾಗಿಯೂ ಇತ್ತೆಂದು ಭಾವಿಸತಕ್ಕದ್ದು || ೧೯ ||

**ಭಾಷ್ಯಾವತಾರಿಕೆಯ ಅರ್ಥವು :—ಏವಂ ಭೂತಂ**-ಇಂತಹ ಅತ್ಯುಗ್ರಾದ್ಭುತ ವಿಚಿತ್ರರೂಪವುಳ್ಳವನನ್ನಾಗಿ. **ತ್ವಾಂ ದೃಷ್ಟ್ವಾ**-ನಿನ್ನನ್ನು ನೋಡಿ, **ದೇವಾದಯಃ**-ದೇವತೆಗಳೇ ಮೊದಲಾದವರು, **ಆದಿ** ಶಬ್ದದಿಂದ ಋಷಿಗಳೇ ಮೊದಲಾದವರು ಹೇಳಲ್ಪಟ್ಟರು, **ಅಹಂ ಚ**-ನಾನೂಕೂಡ, **ಪ್ರವ್ಯಥಿತಾ ಭವಾಮಃ**-ವಿಶೇಷವಾಗಿ ವ್ಯಾಕುಲಿತ ಹೃದಯರಾಗಿ

**ಮೂ. ದ್ಯಾವಾ ಪೃಥಿವ್ಯೋರಿದಮನ್ತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥**

ದ್ದೇವೆ. **ಇತ್ಯಾಹ**-ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ — ಈ ವಿಶ್ವರೂಪವು ಗೋಪ್ಯವಾಗಿ ಅರ್ಜುನನಿಗೆ ಮಾತ್ರ ತೋರಿದ ರೂಪವೋ ಎಂದರೆ ಹಾಗಲ್ಲವು; ದೇವತೆಗಳಿಗೂ ಮಹರ್ಷಿಗಳಿಗೂ ಸಹ ಈ ರೂಪವು ತೋರಿಸಲ್ಪಟ್ಟ ಹಾಗೆ ತೋರುತ್ತದೆ. ಭಕ್ತಲೋಕಾನುಗ್ರಹದಲ್ಲಿ ಸ್ವಾಮಿಗೆ ವಿಶೇಷ ತಾತ್ಪರ್ಯವಾದುದರಿಂದ ಸ್ವಕೃತಪರಿಪಾಕದಿಂದ ದೇವತ್ವವನ್ನು ಹೊಂದಿದವರಿಗೂ ತನ್ನ ರೂಪವನ್ನು ಪ್ರದರ್ಶಿಸಿದನೆಂದು ಊಹಿಸತಕ್ಕದ್ದಾಗಿರುತ್ತದೆ. ಆದರೆ ಅವರ ಕಣ್ಣುಗಳೂ ಕೂಡ ಪ್ರಾಕೃತಗಳಾದುದರಿಂದ ಈ ವಿಶ್ವರೂಪ ಸಾಕ್ಷಾತ್ಕಾರಕ್ಕಾಗಿ ಅವರಿಗೂ ದಿವ್ಯ ಚಕ್ಷುಸ್ಸುಗಳನ್ನು ದಯಪಾಲಿಸಿರಬೇಕು. ಆದರೆ ಅರ್ಜುನನಿಗೆ ಮಾತ್ರ **ದಿವ್ಯಂ ದದಾಮಿತೇ ಚಕ್ಷುಃ**-ಎಂದು ದಯಪಾಲಿಸಿರಬೇಕೆಂದು ಒಪ್ಪಿಕೊಳ್ಳುವದರಲ್ಲಿ ಏನೊಂದೂ ತೊಂದರೆ ಇಲ್ಲವು. ಪ್ರಾಕೃತ ಚಕ್ಷುಸ್ಸಿನಿಂದ ನೋಡಲು ಸಾಧ್ಯವಿಲ್ಲವಷ್ಟೇ. ಮುಂದಿನ ಶ್ಲೋಕದಲ್ಲಿರುವ **ಲೋಕತ್ರಯಂ ಪ್ರವ್ಯಥಿತಂ** ಎಂಬುದನ್ನು ಹೀಗೆ ನಯನವಮಾಡುವದು ಯುಕ್ತವಾಗಿದೆ ಇಲ್ಲಿ ಲೋಕಶಬ್ದವು ಜನವನ್ನು ಬೋಧಿಸುತ್ತದೆ.

**ಮೂಲಕ್ಕೆ ಅರ್ಥವು:**—ಸೃಷ್ಟಿಸಿ ಕಾಪಾಡುವ ಭಾರವೇನೋ ನಿನ್ನದು ಎಂದು ತೋರ್ಪಡಿಸಿದುದು ಸರ್ವ ಸಮ್ಮತವು. ಆದರೆ ಅದೇ ವಿಶ್ವರೂಪದಿಂದಲೇ ಸರ್ವಕ್ಕೂ ಪ್ರಳಯ ಕಾರಕವೆಂದು ಅತ್ಯದ್ಭುತವಾಗಿ ತೋರುವ ಸ್ವಭಾವವನ್ನು ಪ್ರದರ್ಶಿಸಿರುತ್ತೀಯೇ. ವಾಸ್ತವವಾಗಿಯೂ ನೋಡಿದರೆ ಪ್ರಳಯವೇನೂ ಕ್ರೂರಕರ್ಮವಲ್ಲವು. ಬಹುಜನ್ಮಗಳನ್ನೆತ್ತಿ ಮಹಾಪರಾಧಗಳ ಭಾರದಿಂದ ಕ್ಲೇಶಪಡುತ್ತಿರುವ ಜೀವಸಮೂಹಕ್ಕೆ ಸ್ವಲ್ಪವಿಶ್ರಾಂತಿದಾಯಕವಾಗಿ ಪುನಃ ಹೇಗಾದರೂ ಮಾಡಿ ತನ್ನನ್ನು ಹೊಂದಲೆಂಬ ಸದುದ್ದೇಶ ಮಹಾಕೃಪೌದಾರ್ಯಗಳಿಂದ ಪ್ರೇರಿತನಾಗಿ, ಪುನಃ ಸೃಷ್ಟಿ ಕರ್ಮದಲ್ಲಿ ಪ್ರವರ್ತಿಸುವದರಿಂದ, ಅದೂ ಕೂಡ ನಿರ್ಹೇತುಕಕೃಪಾ ಪ್ರಭಾವವೇ. ಆದರೂ ಪ್ರಳಯಕಾಲದಲ್ಲಿ ಪ್ರಾರಬ್ಧಾದಿ ಕರ್ಮಗಳಿಂದ ಕ್ಲೇಶಪಡುವದನ್ನು ಈ ರೂಪದಲ್ಲಿ ನೋಡಿದರೆ ಕ್ರೂರವಾಗಿ ತೋರುತ್ತದೆ. ಇಂಥಾದ್ದನ್ನು ಸಾಕ್ಷಾತ್ಕರಿಸಲು ಯೋಗ್ಯತೆಯುಳ್ಳವರು ಮೂರು ವಿಧ ಜನರಲ್ಲಿ ಯಾರು ಯಾರೋ ಅವರೆಲ್ಲರೂ ಬಹುಶೋಕ ಕಾತರಯುಕ್ತರಾಗಿದ್ದಾರೆಂದು ಅರಿಕೆ ಮಾಡಿಕೊಳ್ಳುತ್ತಾನೆ. **ದ್ಯಾವಾಪೃಥಿವ್ಯೋಃ**-ದ್ಯುಶಬ್ದದಿಂದ ಬೋಧಿತಗಳಾದ ಮೇಲಿನ ಲೋಕಗಳ ಮತ್ತು ಪೃಥಿವಿ ಶಬ್ದದಿಂದ ಬೋಧಿತಗಳಾದ ಕೀಳಿನ ಲೋಕಗಳ **ಅನ್ತರಂ ಹಿ**-ಮಧ್ಯದಲ್ಲಿರುವ ಪ್ರದೇಶವೆಲ್ಲವೂ ಎಂದರೆ ಈ ಎಲ್ಲಾ ಲೋಕಗಳು ಆಕ್ರಮಿಸಿರುವ, ಮತ್ತು **ಸರ್ವಾಃ ದಿಶಶ್ಚ**-ಮೇಲಿನ ಮತ್ತು ಕೆಳಗಿನ ಎರಡು ದಿಕ್ಕುಗಳು ಮೇಲೆ ಹೇಳಲ್ಪಟ್ಟಿರುವದರಿಂದ ಗೋಬಲೀವರ್ದನ್ಯಾಯದ ಪ್ರಕಾರ, ಮಿಕ್ಕ ಎಂಟು ದಿಕ್ಕುಗಳೂ ಕೂಡ, ಹೀಗೆ ಸರ್ವವೂ, **ತ್ವಯೈಕೇನ**-ನಿನ್ನೊಬ್ಬನಿಂದಲೇ, **ವ್ಯಾಪ್ತಂ**-ವ್ಯಾಪಿಸಲ್ಪಟ್ಟಿರುತ್ತದೆ. ಇಲ್ಲಿ ಒಂದು ಮುಖ್ಯ ವಿಷಯವು ಗ್ರಹಿಸತಕ್ಕದ್ದಿರುತ್ತದೆ. ಯಾವರೂಪವನ್ನು ನಾರಾಯಣನು ತಾಳಿದರೂ ಲಕ್ಷ್ಮಿಯೊಂದಿಗೇನೇ ಇರುವನೆಂದು **ವಿಷ್ಣೋರೇಷಾನಪಾಯಿನೀ** ಎಂಬ ಮಹರ್ಷಿಪ್ರಮಾಣವಿರುವದರಿಂದ ಲಕ್ಷ್ಮಿಯ ಅವಿನಾಭೂತತ್ವವು ಸಿದ್ಧವು. ಸನ್ನಿಯೋಗಶಿಷ್ಟನ್ಯಾಯದ ಪ್ರಕಾರ **ಸಹವಾಪ್ರವೃತ್ತಿಃ ಸಹವಾನಿವೃತ್ತಿಃ**-ಎಂದು ಇರುವದರಿಂದ ಈ ವಿಶ್ವರೂಪಧರ ನಾರಾಯಣನಿಂದ ವ್ಯಾಪ್ತವೆಂದು ಹೇಳಿದ ನಂತರ, ಯಾವಾಗಲೂ ಒಟ್ಟಿಗೇನೆ ಇರುವ ಲಕ್ಷ್ಮಿಯಿಂ

ದಲೂ ವ್ಯಾಪ್ತವೆಂದು ಭಾವಿಸತಕ್ಕದ್ದು. ಇದು ಭಗವಚ್ಛಾಸ್ತ್ರದಲ್ಲಿ ಸುವ್ಯಕ್ತವು. ಆದರೆ ಹೀಗೆ ಇಬ್ಬರಿಂದಲೂ ವ್ಯಾಪ್ತವೆಂದು ಹೇಳಿ ಜಗತ್ತಿಗೆ ಇವರುಗಳು ಈಶ್ವರೇಶ್ವರೀಯರು ಎಂದು ಹೇಳಿದರೆ ನಿಸ್ಸಮಾಭ್ಯಧಿಕ ಶ್ರುತಿಯು ಕೋಪಿಸುವದಿಲ್ಲವೋ ಎಂದರೆ ಅದೇ ಭಗವಚ್ಛಾಸ್ತ್ರ ದಲ್ಲೇ **ಮಚ್ಛೇಷಭೂತಾः ಸರ್ವೇಷಾಂ ಈಶ್ವರೀವಲ್ಲಭಾः ಮಮ"** ಎಂದು ವ್ಯಕ್ತವಾಗಿ ಸರ್ವೇಶ್ವರನಿಗೆ ದಾಸಭೂತಳೆಂದು ಹೇಳಲ್ಪಟ್ಟಿರುತ್ತದೆ. ಆಗಲಿ ಹಾಗೆ ಇಬ್ಬರ ವ್ಯಾಪ್ತಿಯೂ ಇದ್ದರೆ **ತ್ವಯ್ಯೈಕೇನ** ಎಂಬ ಏಕಶಬ್ದ ಪ್ರಯೋಗವು ವಿರೋಧಿಸುವುದಿಲ್ಲವೇ ಎಂದರೆ ಸನ್ನಿ ಯೋಗಶಿಷ್ಟನ್ಯಾಯವೇ ಏಕತ್ವವನ್ನು ಸಮರ್ಥಿಸುತ್ತದೆ. ಶ್ರುತಿಯೂ **"ಆನೀತವಾತಗ್ಂ ಸ್ವಧಯಾ ತದೇಕಂ"**-ಸ್ವಧಯಾ ಸಹ ಲಕ್ಷ್ಮಿಯೊಂದಿಗೆ ಪರಮಾತ್ಮನು ಒಬ್ಬನು ಎಂದು ಹೇಳುತ್ತದೆ. ಹಾಗೆಯೇ ಶ್ರೀ ವ್ಯಾಸರೂ **ಏಕಾಕೀ ವಿದ್ಯಯಾ ಸಾರ್ಧಂ** ಎಂದು ಪ್ರಯೋ ಗಿಸುತ್ತಾರೆ. **ವಿದ್ಯೆಯೂ** ಎಂದರೆ ಲಕ್ಷ್ಮಿಯೊಂದಿಗೆ ಒಬ್ಬನು ಎಂಬರ್ಥವು. ಹಾಗೆಯೇ **ಮಾಮೇಕಂ ಶರಣಂ ವ್ರಜ** ಎಂಬಲ್ಲಿ **ಮಾಂ** ಎಂದರೆ ನನ್ನನ್ನು, ನಾನು ಎಂತವನೆಂದರೆ **ಏಕಂ** ಎಲ್ಲಾ ಅಪೃಥಕ್ಸಿದ್ಧ ವಿಶೇಷಣಗಳಿಂದಲೂ ಯುಕ್ತನಾಗಿರುವದರಿಂದ ನನ್ನೊಬ್ಬ ನನ್ನು, ಲಕ್ಷ್ಮೀ, ಕಲ್ಯಾಣಗುಣಗಳು ವಿಭೂತಿಗಳಿಂದ ಸೇರಿದ ನನ್ನೊಬ್ಬನನ್ನೇ ಶರಣ ಹೊಂದು ಎಂಬರ್ಥವು ಉಂಟಾಗುತ್ತದೆ. **ಹೇ ಮಹಾತ್ಮನ್**-ಯಾರಿಂದಲೂ ತಿಳಿಯಲ ಸಾಧ್ಯವಾದ ಮನೋವೃತ್ತಿಗಳುಳ್ಳವನೇ, ಎಂದರೆ ಮಹತ್ತುಗಳಾದ ಕೃಪಾ, ಔದಾರ್ಯ, ವಾತ್ಸಲ್ಯ ಸೌಲಭ್ಯಾದಿ ಗುಣಗಳುಳ್ಳವನೇ ಅಥವಾ ಮಹತ್ತುಗಳಾದ ಆತ್ಮಸಂಬಂಧಿಗಳಾದ ಆನಂದಾದಿ ಮಹಾ ಕಲ್ಯಾಣಗಳುಳ್ಳವನೇ, ಇದರಿಂದ **"ಆನಂದಯಾತಿ"** ಎಂದು ಶ್ರುತಿ ಯಲ್ಲಿ ಹೇಳಿರುವಹಾಗೆ ನಿನ್ನ ಭಕ್ತಾದಿ ಜನಗಳನ್ನು ಆನಂದಗೊಳಿಸುವದೇ ಸ್ವಭಾವವಾಗಿ ರುವ ಮಹಾತ್ಮನೇ! ಭಕ್ತಜನವಿಷಯದಲ್ಲಿ ತುಂಬಾ ಸೌಮ್ಯನು ಎಂಬ ಭಾವವು; **ತವ**-ನಿನ್ನ, ಅದ್ಭುತವಾದ **ಇದ ಮುಗ್ರರೂಪಂ**-ಈ ಕ್ರೂರರೂಪವನ್ನು, **ದೃಷ್ಟ್ವಾ**-ನೋಡಿ, ನೋಡಲು ಶಕ್ತಿಯುಳ್ಳವರೆಲ್ಲಾ ನೋಡಿ, **ಲೋಕತ್ರಯಂ**-ಯುದ್ಧವನ್ನು ನೋಡಬೇಕೆಂದು ಬಂದ ಅನುಕೂಲ ಪ್ರತಿಕೂಲರಾದ ಮತ್ತು ಎರಡೂ ಅಲ್ಲದ ಜನವು, **ಪ್ರವ್ಯಥಿತಂ**–ವಿಶೇಷ ವ್ಯಥೆಯುಳ್ಳದ್ದಾಗಿರುತ್ತದೆ. ಅಥವಾ ಹಿಂದಿನ ಶ್ಲೋಕದಲ್ಲಿ **ಪಶ್ಯಾಮಿ** ಎಂದಿರುವದರಿಂದ ಅದನ್ನು ಇಟ್ಟುಕೊಂಡು ಅರ್ಥಮಾಡುವದಾದರೆ, ಹೀಗೆ ಲೋಕತ್ರಯವನ್ನೂ ವಿಶೇಷ ವ್ಯಥೆ ಯುಳ್ಳದ್ದನ್ನಾಗಿ, **ಪಶ್ಯಾಮಿ**-ಕಾಣುತ್ತೇನೆ ಎಂದು ಅರ್ಥಮಾಡಬಹುದು. **ಈ ರೂಪವು** ಉಗ್ರವಾದುದರಿಂದ ಸರ್ವೇಶ್ವರನ ಸ್ವಭಾವವು ಉಗ್ರವೆಂದು ಅರ್ಜುನನು ಶಂಕಿಸಿ ಭೀತ ನಾಗಿರುವಹಾಗೆ ತೋರುತ್ತದೆ. ನೃಸಿಂಹಾವತಾರಿಯಾಗಿ ಉಗ್ರರೂಪವನ್ನು ತಾಳಿದುದು ಹಿರಣ್ಯಕಶಿಪುವಿನ, **ವಕ್ಷಸ್ತಸ್ಯ ವಿದಾರಯನ್**-ಎಂದು ಮಹರ್ಷಿಯು ಹೇಳಿರುವಹಾಗೆ, ವಕ್ಷಸ್ಸನ್ನು ಸೀಳುವದಕ್ಕಾಗಿಯೇ ವಿನಾ, ಭಕ್ತನಾದ ಪ್ರಹ್ಲಾದನ ವಿಷಯದಲ್ಲಾದರೋ, **ವಾತ್ಸಲ್ಯಮಾವೇದಯನ್** ವಾತ್ಸಲ್ಯವನ್ನೇ ತೋರಿಸಿರುತ್ತಾನೆ. ವಾತ್ಸಲ್ಯ ಗುಣವನ್ನು ಎಲ್ಲಿ ಪ್ರದರ್ಶಿಸಿದನು? ಇದಕ್ಕೆ ಸಾಕ್ಷಿಯಾರು? ಎಂದರೆ ನೃಸಿಂಹನಾಗಿ ವಾತ್ಸಲ್ಯವನ್ನು ತೋರಿಸಿದನೆಂದೂ, ಅದಕ್ಕೆ ಸಾಕ್ಷಿಯು ಪ್ರಹ್ಲಾದನೆಂದೂ ಹೇಳಲ್ಪಟ್ಟಿರುತ್ತದೆ. ನಿರ್ಹೇತುಕ ಕೃಪಾಮಹಿಮೆಯುಳ್ಳವನಿಗೆ ಉಗ್ರತ್ವವೆಲ್ಲಿಯದು? ಹಾಗಾದರೆ ಈಗ ಉಗ್ರತ್ವವೇಕೆ? ಎಂದರೆ ಮಹಾಪಾಪಿಗಳಾಗಿ ದುರಾತ್ಮರಾಗಿ ಲೋಕಕಂಟಕರಾಗಿರುವವರ ನಾಶಕ್ಕಾಗಿ ಈಗ ಉಗ್ರತ್ವ ವನ್ನು ವಹಿಸಿರುವನೇವಿನಾ ಅನ್ಯಥಾ ಅಲ್ಲವು. ತಾನು ಈಗ ಅವಲಂಬಿಸಿರುವ ಲೀಲಾ ಸಾರಥಿ ವೃತ್ತಿಯಿಂದಲೂ, ಇದಕ್ಕೆಹಿಂದೆ ವಹಿಸಿದ್ದ ದೂತವೃತ್ತಿಯಿಂದಲೂ ವಾತ್ಸಲ್ಯವು ವ್ಯಕ್ತವು. ||೨೦||

**ಭಾ. ದ್ಯುಶಬ್ದಃ ಪೃಥಿವೀ ಶಬ್ದಶ್ಚೋ ಭಾವುಪರಿತನಾನಾ ಮಧಸ್ತನಾನಾಂಚ ಲೋಕಾನಾಂ ಪ್ರದರ್ಶನಾರ್ಥೌ; ದ್ಯಾವಾಪೃಥಿವ್ಯೋರನ್ತರಂ-ಅವಕಾಶಃ, ಯಸ್ಮಿನ್ನವಕಾಶೇ ಸರ್ವೇ ಲೋಕಾಸ್ತಿಷ್ಠನ್ತಿ, ಸರ್ವೋಯ ಮವಕಾಶೋ, ದಿಶಶ್ಚ ಸರ್ವಾ**

**ಭಾಷ್ಯಾರ್ಥವು :**—ಇಲ್ಲಿ **ದ್ಯುಶಬ್ದವೂ ಪೃಥಿವೀ ಶಬ್ದವೂ, ಉಭೌ**-ಎರಡಾದ **ಉಪರಿತನಾನಾಂ ಅಧಸ್ತನಾನಾಂಚ ಲೋಕಾನಾಂ**-ಮೇಲೆ ಇರುವ ಎಲ್ಲಾ, ಮತ್ತು ಕೆಳಗಿರುವ ಎಲ್ಲಾ ಲೋಕಗಳ, **ಪ್ರದರ್ಶನಾರ್ಥೌ**-ಉಪಲಕ್ಷಣವಾಗಿ ತೋರಿಸುವ ಅರ್ಥವುಳ್ಳವುಗಳು; **ದ್ಯಾವಾ ಪೃಥಿವ್ಯೋಃ**-ಈ ಎಲ್ಲಾ ಲೋಕಗಳ, **ಅನ್ತರ** ವೆಂದರೆ **ಅವಕಾಶಃ**-ಪ್ರದೇಶವು, **ಯಸ್ಮಿನ್ ಅವಕಾಶೇ**-ಯಾವ ಪ್ರದೇಶದಲ್ಲಿ, **ಸರ್ವೇ ಲೋಕಾ ಸ್ತಿಷ್ಠನ್ತಿ**-ಈ ಸಮಸ್ತ ಲೋಕಗಳೂ ಇವೆಯೋ, ಇದರಲ್ಲಿ ಭೂಮಿಯೂ ಸೇರಿತು. **ಸರ್ವೋಯ ಮವಕಾಶಃ**-ಈ ಸಮಸ್ತ ಪ್ರದೇಶವೂ; **ದಿಶಶ್ಚ ಸರ್ವಾಃ** ಎಲ್ಲಾದಿಕ್ಕುಗಳೂ ಸಹ, **ತ್ವಯೈಕೇನ**-ನಿನ್ನೊಬ್ಬನಿಂದಲೇ, **ವ್ಯಾಪ್ತಾಃ**-ವ್ಯಾಪಿಸಲ್ಪಟ್ಟವೆ ನೀನೊಬ್ಬನೇ ಎಲ್ಲವನ್ನೂ ವ್ಯಾಪಿಸಿರುವೆ ಎಂಬಭಾವವು **ತೋರಿ** ಬರುತ್ತದೆ. ಅಂತರ ಶಬ್ದಕ್ಕೆ ಮಧ್ಯೆಇರುವ ಪ್ರದೇಶವೆಂದು ಅರ್ಥಮಾಡಿದರೆ ವ್ಯಾವೃತ್ತಿಯಿಂದ **ಪರಿಚ್ಛಿತ್ತಿ**ಯು ಏರ್ಪಡುತ್ತದೆಂದು ಭಾವಿಸಿ ಅಂತರಶಬ್ದಕ್ಕೆ ಅರ್ಥವನ್ನು ದಯಪಾಲಿಸುತ್ತಾರೆ. ದ್ಯಾವಾಪೃಥಿವಿಗಳ, **ಅಂತರಂ** ಎಂದರೆ ಅವಕಾಶವು; ಇಲ್ಲಿ **ಅಂತರ** ಶಬ್ದಕ್ಕೆ **"ಅಂತರ ಮವಕಾಶಾವಧಿ ಪರಿಧಾನಾಂತರ್ಧಿಭೇದ ತಾಪಿರ್ಥ್ಯೇ"** ಎಂದು ನಾನಾರ್ಥವಿರುವದರಿಂದ, ನಾಮಲಿಂಗಾನುಶಾಸನಪ್ರಕಾರವಾಗಿ ಅವಕಾಶವೆಂಬುದೇ ಅನುಗುಣವಾದ ಅರ್ಥವೆಂಬ ಭಾವವು. ಲೋಕಗಳಿರುವ ಅವಕಾಶದಲ್ಲೇ ಪರಮಾತ್ಮನೂ ಸಹ ವ್ಯಾಪಿಸಿರುವದು ಹೇಗೆ? **ಸಪ್ರತಿಘತ್ವ**ವಿರೋಧ ಭಾವವು ವುಂಟಾಗುವದಿಲ್ಲವೇ ಎಂದರೆ ಎರಡು ವಸ್ತುಗಳು ಏಕಕಾಲದಲ್ಲಿ ಒಂದು ಸ್ಥಳದಲ್ಲಿವೆ ಎಂಬ ವಿರೋಧಭಾವವು ಪರಮಾತ್ಮ ವ್ಯಾಪ್ತಿಯಲ್ಲಿ ಇಲ್ಲವೆಂಬ ಭಾವದಿಂದ ಮುಂದಿನ ವಾಕ್ಯದಿಂದ ಉಪಪಾದಿಸಿ ತೋರಿಸುತ್ತಾರೆ—**ಯಸ್ಮಿನ್ ಅವಕಾಶೇ**-ಎಷ್ಟು ಸ್ಥಳದಲ್ಲಿ, **ಸರ್ವೇಲೋಕಾಸ್ತಿಷ್ಠನ್ತಿ**-ಸಮಸ್ತ ಲೋಕಗಳೂ ಇರುತ್ತವೆಯೋ, **ಸರ್ವೋಯಮವಕಾಶಃ**-ಆ ಸಮಸ್ತ ಪ್ರದೇಶವೂ, ಹಾಗೆಯೇ **ದಿಶಶ್ಚಸರ್ವಾಃ**-ಸಮಸ್ತ ದಿಕ್ಕುಗಳೂ ಸಹ, **ತ್ವಯೈಕೇನ ವ್ಯಾಪ್ತಾಃ**-ನಿನ್ನೊಬ್ಬನಿಂದಲೇ ವ್ಯಾಪಿಸಲ್ಪಟ್ಟವೆ. ಈ ಲೋಕಗಳಿರುವ ಸ್ಥಳದಲ್ಲೆಲ್ಲಾ ಪರಮಾತ್ಮನೂ ಇರುತ್ತಾನೆಂಬ ಭಾವವು ಈಗ ಒಂದು ಪಾತ್ರೆಯತುಂಬಾ ನೀರುತುಂಬಿ ಒಂದು ಕಲ್ಲನ್ನು ಅದರಲ್ಲಿ ಹಾಕಿದರೆ ಆ ಕಲ್ಲಿನಗಾತ್ರದ ನೀರು ಹೊರಕ್ಕೆ ಚೆಲ್ಲಿ ಹೋಗುತ್ತದೆ. ಹಾಗೆ ಅಲ್ಲದೆ ಪರಮಾತ್ಮನು ಅವುಗಳಲ್ಲೆಲ್ಲಾ ವ್ಯಾಪಿಸಿರುವಾಗ ಇಂತಹ ತೊಂದರೆ ಇಲ್ಲವು ಎಂಬ ಭಾವವು, ಆದರೆ ಇಲ್ಲಿ **ವ್ಯಾಪ್ತಂ** ಎಂದು ಹೇಳಿರುವದು ಸ್ವರೂಪತಃ ವ್ಯಾಪ್ತಿಯೇ, ರೂಪದ ವ್ಯಾಪ್ತಿಯೇ ಎಂಬ ವಿಚಾರದಲ್ಲಿ ಹಿಂದಿನವಾಕ್ಯದಲ್ಲೂ ಮುಂದಿನದರಲ್ಲೂ ರೂಪವು ಒಂದೇ ಎಂದು, ಅದರ ವ್ಯಾಪ್ತಿಯೇ ಹೇಳಲ್ಪಟ್ಟಿರುವಾಗ ಈ ವಾಕ್ಯದಲ್ಲಿ ಮಾತ್ರ ಸ್ವರೂಪವ್ಯಾಪ್ತಿಯನ್ನು ಹೇಳಲು ಪ್ರಕರಣವಿಲ್ಲವಾದುದರಿಂದ ರೂಪವ್ಯಾಪ್ತಿ ಎಂದೇ ಅರ್ಥವನ್ನು ಮಾಡ ತಕ್ಕದ್ದು. ಇಂತಹ ವಿಭುವಾಗಿ ವ್ಯಾಪಿಸುವ ಶಕ್ತಿಯೂ ಬ್ರಹ್ಮರುದ್ರೇಂದ್ರಾದಿ ಯಾವ ಜೀವಾತ್ಮರುಗಳಿಗೂ ಇಲ್ಲವೆಂಬ ಭಾವವೂ **ದ್ಯೋತಿತವು.** ಸಮಸ್ತ ಲೋಕಗಳೂ ಮಿಥ್ಯೆಯಲ್ಲವು, ನಶ್ವರಗಳಾದರೂ ದ್ರವ್ಯ ನಿತ್ಯವು ಎಂದು ಹೇಳುವದಕ್ಕಾಗಿ, **ಸರ್ವೇಲೋಕಾಸ್ತಿಷ್ಠನ್ತಿ**-ಎಂಬ ಪ್ರಯೋಗವು. **ದೃಷ್ಟ್ವಾದ್ಭುತಂರೂಪಮುಗ್ರಂತವೇದಂ**-ಎಂಬಲ್ಲಿ ರೂಪವು **ಅದ್ಭುತ**

ಭಾ. **ತ್ವಯೈಕೇನ ವ್ಯಾಪ್ತಾಃ; ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ-ಅನನ್ತಾ** ಯಾಮವಿಸ್ತಾರ ಮತ್ಯದ್ಭುತ ಮತ್ಯುಗ್ರಂ ಚ ರೂಪಂ ದೃಷ್ಟ್ವಾ, **ಲೋಕತ್ರಯಂ ಪ್ರವ್ಯಥಿತಂ**-ಯುದ್ಧದಿದೃಕ್ಷಯಾ ಆಗತೇಷು ಬ್ರಹ್ಮಾದಿದೇವಾಸುರಪಿತೃಗಣ ಸಿದ್ಧ ಗಂಧರ್ವ ಯಕ್ಷರಾಕ್ಷಸೇಷು ಪ್ರತಿಕೂಲಾನುಕೂಲ ಮಧ್ಯಸ್ಥರೂಪಂ **ಲೋಕತ್ರಯಂ ಸರ್ವಂ ಪ್ರವ್ಯಥಿತಂ** ಅತ್ಯನ್ತಭೀತಂ. **ಮಹಾತ್ಮನ್**-ಅಪರಿಚ್ಛೇದ್ಯಮನೋ ವೃತ್ತೇ! ಏತೇಷಾ ಮಪ್ಯರ್ಜುನಸ್ಯೇವ ವಿಶ್ವಾಶ್ರಯರೂಪ ಸಾಕ್ಷಾತ್ಕಾರ ಸಾಧನಂ ದಿವ್ಯಂ ಚಕ್ಷುರ್ಭಗವತಾ ದತ್ತಮ್; ಕಿಮರ್ಥ ಮಿತಿ ಚೇತ್? ಅರ್ಜುನಾಯ

ಹೇಗೆಂಬುದನ್ನು ಉಪಪಾದಿಸುತ್ತಾರೆ.—**ಅನನ್ತಾಯಾಮ್** ಈ ದಿವ್ಯಮಙ್ಗಳ ವಿಗ್ರಹವು ಅನಂತವಾಗಿ ಉದ್ದ ಮತ್ತು ವಿಸ್ತಾರ ಉಳ್ಳ ಮತ್ತು **ಅತ್ಯದ್ಭುತಂ**-ತುಂಬಾ ಅದ್ಭುತವಾಗಿಯೂ, **ಉಗ್ರಂಚರೂಪಂ**-ಕ್ರೂರವಾದರೂಪವನ್ನು, **ದೃಷ್ಟ್ವಾ**-ಕಂಡು, **ಲೋಕತ್ರಯವೂ, ಪ್ರವ್ಯಥಿತಂ** ಎಂದರೆ **ಅತ್ಯಂತ ಭೀತಮ್**-ಅತ್ಯಂತ ಭಯಪಟ್ಟಿತೆಂಬ ಭಾವವು. ಇದರ ತಾತ್ಪರ್ಯವನ್ನು ವಿವರಿಸುತ್ತಾರೆ.—ಇಲ್ಲಿ **ಲೋಕತ್ರಯಂ** ಎಂಬುವಕ್ಕೆ ಮೇಲಿನ ಲೋಕಗಳೂ ಮಧ್ಯಲೋಕಗಳೂ ಅಧೋ ಲೋಕಗಳೂ ಎಂಬರ್ಥವು, **ದ್ಯಾವಾಪೃಥಿವ್ಯೋರಂತರಂ** ಎಂಬುದರಿಂದ ತೋರಿ ಬಂದರೂ, **ಪ್ರವ್ಯಥಿತಂ** ಎಂದಿರುವದರಿಂದ ಪ್ರಾಣಿವರ್ಗವೇ ಹೇಳಬೇಕಾದುದು ಆವಶ್ಯಕವಾದುದರಿಂದ, ಆ ಅರ್ಥವು ಕೂಡುವದಿಲ್ಲವು. ಅದುದರಿಂದ **ಲೋಕತ್ರಯ** ಶಬ್ದಕ್ಕೆ ಅರ್ಥವನ್ನು ಹೇಳುತ್ತಾರೆ —**ಯುದ್ಧದಿದೃಕ್ಷಯಾ**-ಈ ಮಹತ್ತಾದ ಘೋರ ಯುದ್ಧವನ್ನು ನೋಡಬೇಕೆಂಬ ಆಶೆಯಿಂದ, **ಆಗತೇಷು**-ಬಂದ ಬ್ರಹ್ಮಾದಿ **ದೇವಾಸುರ** ಪಿತೃಗಣ **ಸಿದ್ಧ ಗಂಧರ್ವ ಯಕ್ಷ ರಾಕ್ಷಸೇಷು**, ಇವರುಗಳಲ್ಲಿ **ಪ್ರತಿಕೂಲಾನುಕೂಲಮಧ್ಯಸ್ಥರೂಪಂ ಲೋಕತ್ರಯಂ ಸರ್ವಂ**-ಪ್ರತಿಕೂಲರು, ಅನುಕೂಲರು, ಪ್ರತಿಕೂಲವೂ ಅನುಕೂಲವೂ ಎರಡೂ ಅಲ್ಲದೆ ತಟಸ್ಥರಾಗಿರುವ ಈ ಇಬ್ಬರಿಗೂ ಮಧ್ಯಸ್ಥವಾದ ಅವಸ್ಥೆಯಲ್ಲಿರುವವರು ಹೀಗೆ ಈ ಮೂರು ವಿಧ ಸರ್ವ ಜನರೂ, **ಪ್ರವ್ಯಥಿತಂ** ಎಂದರೆ ಅತ್ಯಂತ ಭಯಪಟ್ಟಿರುತ್ತಾರೆ. ಇಲ್ಲಿ **ಲೋಕತ್ರಯಂ** ಶಬ್ದಕ್ಕೆ ಮೂರು ವಿಧ ಚೇತನರಾದ ಬದ್ಧಮುಕ್ತ ನಿತ್ಯರು ಎಂಬ, ಅನುಕೂಲ ಪ್ರತಿಕೂಲ ಉದಾಸೀನವೆಂಬ ಮೂರುವಿಧ ಅರ್ಥಗಳನ್ನು ಹೇಳಬಹುದು. ಮೊದಲಿನ ಅರ್ಥಗಳೆರಡೂ ಕೂಡುವದಿಲ್ಲವು. ರೂಪವನ್ನು ತೋರಿಸಿದುದು ಇಲ್ಲಿಯಾದುದರಿಂದ ಇತರ ಲೋಕಗಳಲ್ಲಿರುವವರಿಗೆ ಅನ್ವಯಿಸುವದಿಲ್ಲವು. ಮುಕ್ತರಿಗೂ ನಿತ್ಯರಿಗೂ ಸರ್ವಜ್ಞತೆಯಿರುವದರಿಂದ ಎಲ್ಲೆಲ್ಲಿ ನಡೆಯುವದೆಲ್ಲವೂ ವೇದ್ಯವಾಗಿ ಅವರಿಗೆ ವ್ಯಥೆ ಇಲ್ಲವು. ಎಲ್ಲಾ ಬದ್ಧರೂ ಆ ರೂಪವನ್ನು ನೋಡಲಿಲ್ಲವಾದುದರಿಂದ ಆ ಅರ್ಥವು ಕೂಡುವದಿಲ್ಲವು. **ದೃಷ್ಟ್ವಾದ್ಭುತಂ ರೂಪಂ ಲೋಕತ್ರಯಂ ಪ್ರವ್ಯಥಿತಂ** ಎಂದಿರುವದರಿಂದ ಯುದ್ಧವನ್ನು ನೋಡುವದಕ್ಕಾಗಿ ಬಂದವರಲ್ಲೇ **ಲೋಕತ್ರಯ**ವಾದುದರಿಂದ ಈ ಮೂರನೆಯ ಅರ್ಥವನ್ನೇ ಹೇಳಬೇಕೇ ವಿನಾ ಅನ್ಯಥಾ ಇಲ್ಲವು. ಆದುದರಿಂದ ಯತಿವರ್ಯರು ಹೀಗೆ ವ್ಯಾಖ್ಯಾನ ಮಾಡಿರುತ್ತಾರೆ. **ಹೇ ಮಹಾತ್ಮನ್** ಎಂದರೆ **ಅಪರಿಚ್ಛೇದ್ಯ ಮನೋವೃತ್ತೇ**-ಪರಿಚ್ಛಿತ್ತಿ ಇಲ್ಲದ ಮನೋ ವ್ಯಾಪಾರವುಳ್ಳವನೇ ಎಂದರೆ ನಿನ್ನ ಸಙ್ಕಲ್ಪವನ್ನು ಅರಿಯುವರು ಯಾರಿದ್ದಾರೆಂಬ ಭಾವವು. ಅಲ್ಲಿ ಸಂಧಿಗೆ ಸರ್ವ ಪ್ರಯತ್ನವೇನು? ಇಲ್ಲಿ ಯುದ್ಧಕ್ಕೆ ಸರ್ವಪ್ರೋತ್ಸಾಹವೇನು? ಆದುದರಿಂದ ನಿನ್ನ ಮನಸ್ಸಿನ ಆಳವನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲದವನೇ ಎಂಬ ಭಾವವು. ಹಾಗೆಯೇ

**ಭಾ. ಸ್ವೈಶ್ವರ್ಯಂ ಸರ್ವಂ ಪ್ರದರ್ಶಯಿತುಮ್ ; ಅತ ಇದ ಮುಚ್ಯತೇ-ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್" ಇತಿ.**

ರಾಮಾವತಾರಿಯಾಗಿ ಯೌವರಾಜ್ಯಾಭಿಷೇಕ ಪ್ರೋತ್ಸಾಹವೇನು? ಮಂದರೆಯನ್ನು ಪ್ರೇರಿಸಿ ವನವಾಸಕ್ಕೆ ಅನುಕೂಲಪಡಿಸಿಕೊಳ್ಳೋಣವೇನು? ಹೀಗೆ ಅಪರಿಚ್ಛೇದ್ಯ ಮನೋವೃತ್ತಿ ಯುಳ್ಳವನೇ ಎಂಬರ್ಥವು.

ಅಲ್ಲಿ ಆಕಾಶದಲ್ಲಿ ಬಂದು ನೆರೆದಿರುವವರೆಲ್ಲಾ ಈ ವಿಶ್ವರೂಪವನ್ನು ನೋಡಿ ಭೀತರಾದರು ಎಂದು ಹೇಳಿದರೆ, ಅವರಿಗೆಲ್ಲಾ ದಿವ್ಯ ಚಕ್ಷುಸ್ಸ ಸ್ವಾಮಿಯು ದಯಪಾಲಿಸಿರಬೇಕಾಯಿತಲ್ಲವೇ ಎಂದರೆ, ಹೌದು ಎಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ **ಏತೇಷಾಮಪಿ**-ಈ ಬ್ರಹ್ಮಾದಿ ದೇವಾಸುರಾದಿಗಳಿಗೆಲ್ಲಾ ಕೂಡ. **ಅರ್ಜುನಸ್ಯೇವ**-ಅರ್ಜುನನಿಗೆ ಹೇಗೋ ಹಾಗೆ, **ವಿಶ್ವಾಶ್ರಯರೂಪ ಸಾಕ್ಷಾತ್ಕಾರ ಸಾಧನಂ**-ಸರ್ವೇಶ್ವರನಾದ ತಾನು ಸಮಸ್ತ ವಿಶ್ವಕ್ಕೂ ಆಶ್ರಯನೆಂಬುದನ್ನು ಸಾಕ್ಷಾತ್ಕರಿಸುವದಕ್ಕೆ ಸಾಧನವಾದ, **ದಿವ್ಯಂ ಚಕ್ಷುಃ**-ಅಪ್ರಾಕೃತ ಚಕ್ಷುಸ್ಸು, ಅಥವಾ ತೇಜೋರೂಪವಾಗಿರುವ ಜ್ಞಾನ ಚಕ್ಷುಸ್ಸು, **ಭಗವತಾದತ್ತಂ**-ಭಗವಂತನಿಂದ ಕೊಡಲ್ಪಟ್ಟಿತು; ಎಂದರೆ ಹಾಗೆ ನಾವು ಅಭಿಪ್ರಾಯ ಪಡತಕ್ಕದ್ದಾಗಿದೆ ಎಂಬ ತಾತ್ಪರ್ಯವು; ಮೂಲದ ಶಬ್ದ ಪ್ರಯೋಗಗಳಿಂದ ಹಾಗೆ ಊಹಿಸತಕ್ಕದ್ದಾಗಿರುತ್ತದೆಂಬ ಭಾವವು ಹಾಗೆ ಅಂತರಿಕ್ಷದಲ್ಲಿ ಬಂದು ನೆರದಿರುವವರೆಲ್ಲರಿಗೂ ದಿವ್ಯ ಚಕ್ಷುಸ್ಸನ್ನಿತ್ತು ತನ್ನ ಈ ಅದ್ಭುತವಾಗಿಯೂ ಉಗ್ರವಾಗಿಯೂ ಇರುವ ರೂಪವನ್ನು ತೋರಿಸುವದರ ಉದ್ದೇಶ್ಯವೇನು? ಎಂದಾಕ್ಷೇಪಿಸಬಹುದಾಗಿ ಯೋಚಿಸಿ ಸಮಾಧಾನವನ್ನು ಹೇಳುತ್ತಾರೆ. **ಕಿಮರ್ಥಮಿತಿಚೇತ್**-ಏತಕ್ಕಾಗಿ ಅಲ್ಲಿ ನೆರದಿದ್ದ ಎಲ್ಲರಿಗೂ ತನ್ನ ವಿಶ್ವರೂಪವನ್ನು ತೋರಿದರು ಎಂದರೆ, **ಅರ್ಜುನಸ್ಯ ಸ್ವೈಶ್ವರ್ಯಂ ಸರ್ವಂ ಪ್ರದರ್ಶಯಿತುಮ್**-ಅರ್ಜುನನಿಗೆ ತನ್ನ ಐಶ್ವರ್ಯದ ಮಹಿಮೆ ಎಲ್ಲವನ್ನೂ ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಇಂತವರುಗಳಿಗೂ ಕೂಡ ತಾನು ಸಙ್ಕಲ್ಪಿಸಿದರ ಸಾಕ್ಷಾತ್ಕಾರವನ್ನು ಕೊಡುವ ಶಕ್ತಿಯುಳ್ಳ ಮಹಿಮೆಯುಳ್ಳವನು ತಾನಲ್ಲವೇ? ಅಂತಹ ಅಘಟಿತಘಟನಾಶಕ್ತಿಯೂ ಕೂಡ ತನಗುಂಟು ಎಂದು ಅರ್ಜುನನಿಗೆ ಸ್ವೈಶ್ವರ್ಯವನ್ನು ತೋರಿಸಬೇಕಾಗಿರುವದರಿಂದ ಹಾಗೆ ಎಲ್ಲರಿಗೂ ದಿವ್ಯ ಚಕ್ಷುಸ್ಸನ್ನು ದಯಪಾಲಿಸಿರಬೇಕು, ಇಲ್ಲದಿದ್ದರೆ ಅರ್ಜುನನು ಹಾಗೆ **ದೃಷ್ಟ್ವಾದ್ಭುತಂ** ಎಂದಾರಂಭಿಸಿ **ಪ್ರವ್ಯಥಿತಂ ಮಹಾತ್ಮನ್** ಎಂದು ಪೂರೈಸಿ ಹೇಳುವ ಕಾರಣವೇ ಇಲ್ಲವೆಂಬ ಅಭಿಪ್ರಾಯವನ್ನು ಮುಂದೆ ಸೂಚಿಸುತ್ತಾರೆ. **ಅತಃ**-ಆ ಕಾರಣದಿಂದಲೇ, ಅರ್ಜುನನು **ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್" ಇತಿ** ಎಂದು ಹೇಳಿರುತ್ತಾನೆ. ಹಾಗಿಲ್ಲದಿದ್ದರೆ ಅರ್ಜುನನು ಈ ವಾಕ್ಯವನ್ನು ಹೇಳಲೇ ಕಾರಣವಿಲ್ಲವು ಹೀಗೆ **ಲೋಕತ್ರಯಂ** ಎಂದರೆ ಅಲ್ಲಿ ಅಂತರಿಕ್ಷದಲ್ಲಿ ನೆರದಿರುವ ಅನುಕೂಲ ಪ್ರತಿಕೂಲ ಉದಾಸೀನರಾದ ಮೂರು ಪಂಗಡದವರೆಲ್ಲರೂ ಎಂದು ಅರ್ಥ ಮಾಡಿದರು. ಅಲ್ಲಿ ನೆರದಿರುವ ಸರ್ವರೂ ಎಂದು ಅರ್ಜುನನು ಹೇಳಬಹುದಲ್ಲಾ, ಗೂಢವಾಗಿ **ಲೋಕತ್ರಯಂ** ಎಂದು ಹೇಳುವದರ ಅಭಿಪ್ರಾಯವೇನು? ಹೀಗೆ ಎಲ್ಲರಿಗೂ ದಿವ್ಯ ಚಕ್ಷುಸ್ಸನ್ನು ಕೊಟ್ಟು ಉದಾರವಾಗಿ ಎಲ್ಲರಿಗೂ ತನ್ನ ಅದ್ಭುತರೂಪವನ್ನು ತೋರಿದನು ಎಂದು ಹೇಳಿದರೆ ಈ ವಿಶ್ವರೂಪಪ್ರದರ್ಶನ ರೂಪಾನುಗ್ರಹವು ನೆರದಿರುವ ತಾರತಮ್ಯವಿಲ್ಲದೇ ಇರುವ ಸರ್ವರಿಗೂ ಹೇಗೆ? ಎಂಬಾಕ್ಷೇಪವು ಸಮಾಧಾನವಿಲ್ಲದುದಾಗುತ್ತದೆ. ಮತ್ತು ಹಾಗೆ ತಾರತಮ್ಯವಿಲ್ಲದೇ ಅನುಗ್ರಹಿಸಿದರೆ. ವೈಷಮ್ಯನೈರ್ಘೃಣ್ಯಾದಿ ದೋಷಗಳಿಗೆ ಅವಕಾಶವಾಗುವ

**ಮೂ. ಅಮೀಹಿತ್ವಾ ಸುರಸಂಘಾ ವಿಶನ್ತಿ ಕೇಚಿದ್ಭೀತಾಃ ಪ್ರಾಞ್ಜಲಯೋ ಗೃಣನ್ತಿ ।**
**ಸ್ವಸ್ತೀ ತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥**

ದಿಲ್ಲವೇ? ಎಂಬ ಆಕ್ಷೇಪಗಳುಂಟಾಗಬಹುದು. ಇದಕ್ಕೆ ಸಮಾಧಾನ ಹೇಗೆಂದರೆ ಒಟ್ಟಿಗೆ ಸೇರಿಸುವ ಸಙ್ಕಲ್ಪವುಳ್ಳವನು ಶ್ರೀಕೃಷ್ಣನು ಈ ಮಹಾ ಯುದ್ಧವನ್ನು ನೋಡುವದಕ್ಕಾಗಿ ಬಂದವರು ಮೂರು ವಿಧ ಜನರೂ **ಅಪಿಚೇತ್ಸು ದುರಾಚಾರೋ ಭಜತೇ ಮಾ ಮನನ್ಯ ಭಾಕ್ । ಸಾಧುರೇವ ಸಮಂತವ್ಯ ಸ್ಸಮ್ಯಗ್ವ್ಯವಹಿತೋಹಿ ಸಃ "** ಎಂದು ಹೇಳಿರುವಹಾಗೆ ಅನುಗ್ರಹಕ್ಕೆ ಅರ್ಹರೇ ಆಗಿರಬಹುದೆಂದು ಊಹಿಸಲೇನೂ ಅಭ್ಯಂತರವಿಲ್ಲವು ಅಥವಾ ಮುಂದೆ, **ಅಮೀ ಹಿತ್ವಾ ಸುರಸಂಘಾ ವಿಶಂತಿ** ಎಂದು ಮೂಲದಲ್ಲಿರುವದರಿಂದ ಹಾಗೆ ಇರುವಹಾಗೆ **ಪಶ್ಯಾಮಿ** ಎಂದರ್ಥಮಾಡಿದರೆ ಈ ಆಕ್ಷೇಪಗಳಿಗೆ ಕಾರಣವಿಲ್ಲದಹಾಗೆ ಮಾಡಿಕೊಳ್ಳಬಹುದು. **ಲೋಕತ್ರಯ** ದಲ್ಲಿರುವ ಭಕ್ತವರ್ಗವೆಲ್ಲಾ ನಿನ್ನ ಕೃಪೆಯಿಂದ ಅನುಗ್ರಹಿಸಲ್ಪಟ್ಟ ಬುದ್ಧಿಯೋಗದ ಮೂಲಕ, **ದೃಷ್ಟ್ವಾ ಅದ್ಭುತಂ ರೂಪಂ ತವೇದಂ**-ಇಂತಹ ಈ ನಿನ್ನ ರೂಪವನ್ನು ಸಾಕ್ಷಾತ್ಕರಿಸಿ, **ಪ್ರವ್ಯಥಿತಂ**-ಭೀತಿಯಿಂದ ಮನಸ್ಸಿನಲ್ಲಿ ವ್ಯಾಕುಲವನ್ನು ಹೊಂದಿದುದಾಗಿ, **ಪಶ್ಯಾಮಿ**-ನೋಡುತ್ತೇನೆ. ಇಲ್ಲಿ **ಪ್ರವ್ಯಥಿತಂ**-ಎಂಬುದನ್ನು ದ್ವಿತೀಯಾಂತವಾಗಿ ಭಾವಿಸಬಹುದು. ದುರ್ಯೋಧನಾದಿಗಳು ಈ ರೂಪವನ್ನು ನೋಡಿದರೇ ಇಲ್ಲವೇ? ಎಂಬ ಪ್ರಶ್ನೆಯು ನ್ಯಾಯವಾಗಿ ಉದಿಸಬಹುದು; ಹಾಗೆ ತೋರಿಸಿದ್ದರೆ ಸಂಜಯರೂ ನಿನ್ನವರೂಕೂಡ ನೋಡಿದರೆಂದು ಧೃತರಾಷ್ಟ್ರನಿಗೆ ಹೇಳದೆ ಇರುತ್ತಿರಲಿಲ್ಲ. ಆದುದರಿಂದ ಎಲ್ಲರೂ ನೋಡಲಿಲ್ಲವು ಶ್ರೀಕೃಷ್ಣಭಗವಾನರವರು ತಮ್ಮ ಇಷ್ಟಾನುಸಾರ ತೋರಿದರೆಂದೇ ಇಟ್ಟುಕೊಳ್ಳಬೇಕು. ದುರ್ಯೋಧನ, ಭೀಷ್ಮದ್ರೋಣಾದಿಗಳಿಗೆ ಈ ವಿಶ್ವರೂಪವನ್ನು ತೋರಲಿಲ್ಲವೆಂದು ಶ್ಲೋಕ ೨೬-೨೭ ಗಳಿಂದ ವ್ಯಕ್ತವು. ವಿಶ್ವರೂಪಕ್ಕೆ ಹೊರಗೆ ಇದ್ದು ನೋಡಿದವರು ದೇವತೆಗಳು, ಸಿದ್ಧರು, ಮಹರ್ಷಿಗಳು ಮೊದಲಾದವರೂ ಮತ್ತು ಅರ್ಜುನನೂ, ಹೀಗೆ ಹೇಳಲು ಪ್ರಮಾಣವೇನು? ಎಂದರೆ ೨೩ ನೆಯ ಶ್ಲೋಕದಲ್ಲಿ **"ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್"** ಎಂದೂ, ೨೨ ನೆಯ ಶ್ಲೋಕದಲ್ಲಿ **"ರುದ್ರಾದಿತ್ಯಾಃ"** ಎಂದಾರಂಭಿಸಿ **"ಸಿದ್ಧ ಸಂಘಾ ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವಸರ್ವೇ"** ಎಂದೂ ವ್ಯಕ್ತವಾಗಿ ಹೇಳಲ್ಪಟ್ಟಿರುತ್ತದೆ. ಆದುದರಿಂದ ಇವರುಗಳು ಮಾತ್ರವೇ ವಿಶ್ವರೂಪವನ್ನು ನೋಡಿದವರು. ಧಾರ್ತರಾಷ್ಟ್ರಾದಿಗಳಾದರೋ ವಿಶ್ವರೂಪದ ಒಳಗೆ ಸೇರಿರುವಹಾಗೆ ಪ್ರದರ್ಶಿಸಲ್ಪಟ್ಟವರು ಆದುದರಿಂದ ದುರ್ಯೋಧನಾದಿಗಳಿಗೆ ಈ ವಿಶ್ವರೂಪ ದೃಶ್ಯವಿಲ್ಲವೆಂದು ಭಾವಿಸತಕ್ಕದ್ದು. ಅದೂ ಅಲ್ಲದೆ ಮುಂದೆ ನಾಶವಾಗುವವರಿಗೆ ನಾಶಉಂಟೆಂದು ಹೇಳುವದೂ ಅಸಂಗತ ವಿಷಯವೇ, ಆದುದರಿಂದ ದುರ್ಯೋಧನಾದಿಗಳಿಗೆ ವಿಶ್ವರೂಪಪ್ರದರ್ಶನರೂಪ ಅನುಗ್ರಹವಿಲ್ಲವು.

**ಮೂಲಕ್ಕೆ ಅರ್ಥವು:**—ಮುಂದಿನ ಎರಡು ಶ್ಲೋಕಗಳಿಂದಲೂ ಇನ್ನೂ ತಾನು ಏನನ್ನು ನೋಡುತ್ತೇನೆಂಬುದನ್ನು ಪುನಃ ಅರ್ಜುನನು ಅರಿಕೆ ಮಾಡಿಕೊಳ್ಳುತ್ತಾನೆ—ಇಲ್ಲಿ ನೋಡುತ್ತಿದ್ದವರ ಅವಸ್ಥೆ ಹೇಗೆ ಇತ್ತು ಎಂದು ಹೇಳುವ ಪ್ರಕರಣವಾಗಿ ತೋರುತ್ತದೆ. ಹೀಗೆ ಭಾವಿಸಿದರೆ, ಈ ನೋಡುತ್ತಿದ್ದವರು ವಿಶ್ವರೂಪದಲ್ಲಿ ಅಂತರ್ಗತರಲ್ಲವೆಂದು ಹೇಳಿದಂತಾಗುತ್ತದೆ. **ದ್ರೋಣಂಚ ಭೀಷ್ಮಂಚ** ಮತ್ತು ದುರ್ಯೋಧನಾದಿಗಳೆಲ್ಲ ವಿಶ್ವರೂಪದಲ್ಲೇ ಅಂತರ್ಗತರೆಂದು ಹೇಳಿರುವದರಿಂದ, ಇವರುಗಳೆಲ್ಲಾ ಏಕೆ ಅಂತರ್ಗತರಲ್ಲವೆಂಬ ಪ್ರಶ್ನೆಯು ಉಂಟಾಗುತ್ತದೆ. ಸ್ವಾಮಿಯು ತನ್ನ ಸಙ್ಕಲ್ಪಾನುಸಾರವಾಗಿ ಹಾಗೆ ನಡೆಸಿದನೆಂದು ಹೇಳಬಹುದು. ಇವರು

**ಭಾ. ಅಮೀ ಸುರಸಂಘಾಃ ಉತ್ಕೃಷ್ಟಾಃ ತ್ವಾಂ ವಿಶ್ವಾಶ್ರಯ ಮವಲೋಕ್ಯ ಹೃಷ್ಟಮನಸಸ್ತ್ವತ್ಸಮೀಪಂ ವಿಶನ್ತಿ ; ತೇಷ್ವೇವಕೇಚಿ ದತ್ಯುಗ್ರ ಮತ್ಯದ್ಭುತಂ ಚ ತವಾಕಾರಮಾಲೋಕ್ಯ ಭೀತಾಃ ಪ್ರಾಂಜಲಯಃ ಸ್ವಜ್ಞಾನಾನುಗುಣಂ ಸ್ತುತಿರೂಪಾಣಿ ವಾಕ್ಯಾನಿ ಗೃಣನ್ತಿ-ಉಚ್ಚಾರಯನ್ತಿ ; ಅಪರೇ ಮಹರ್ಷಿ ಸಂಘಾ ಸ್ಸಿದ್ಧಸಂಘಾಶ್ಚ-ಪರಾವರತತ್ವ ಯಾಥಾತ್ಮ್ಯವಿದಃ ಸ್ವಸ್ತೀತ್ಯುಕ್ತ್ವಾ ಪುಷ್ಕಲಾಭಿ ರ್ಭಗವದನುರೂಪಾಭಿಃ ಸ್ತುತಿಭಿಃ ಸ್ತುವನ್ತಿ ॥ ೨೧ ॥**

ವಿಶ್ವರೂಪವನ್ನು ನೋಡುತ್ತಿದ್ದವರೆಂದು ಹೇಳಲ್ಪಟ್ಟಿರುವದರಿಂದ ವಿಶ್ವರೂಪಕ್ಕೆ ಸೇರಿದವರಲ್ಲವೆಂಬ ಭಾವನೆಯೇ ಸರಿಯಾದುದು ; ಹೇಗೆ ಎಂದರೆ ಸೃಷ್ಟಿಕ್ರಮವನ್ನು ನಿತ್ಯರೂ ಮುಕ್ತರೂ ನೋಡುತ್ತಿದ್ದರು ಎಂದರೆ ಹೇಗೆ ಅವರು ಸೃಷ್ಟಿಕ್ರಮಕ್ಕೆ **"ಸರ್ಗೇಽಪಿ ನೋಪಜಾಯನ್ತೇ"** ಎಂದು ಹೇಳಿರುವನಹಾಗೆ ಸೇರಿದವರಲ್ಲವೋ, ಹಾಗೆ ಎಂದು ಭಾವಿಸತಕ್ಕದ್ದಾಗಿರುತ್ತದೆ. ಈ ಶ್ಲೋಕದಲ್ಲಿ ಹೇಳಿರುವ ಸುರಸಂಘವು ಶ್ರೀಕೃಷ್ಣಾವತಾರಕಾಲದಲ್ಲಿ ಸಹಾಯಕರಾಗಿ ಬಂದ ಸುರಸಂಘವೆಂದು ವ್ಯಾಖ್ಯಾನಮಾಡಲು ಏನೊಂದು ಕಾರಣವೂ ತೋರಿಬರುವದಿಲ್ಲವು. ಹಿಂದೆ **ಲೋಕತ್ರಯಂ ಪ್ರವ್ಯಥಿತಂ** ಎಂದು ಹೇಳಿರುವದನ್ನೇ ವಿವರಣೆಮಾಡಿ ಆ ಲೋಕತ್ರಯವು ಯಾವುದು? ಅವರು **ಪ್ರವ್ಯಥಿತಂ**- ಎಂದು ಹೇಳಲ್ಪಟ್ಟರಲ್ಲಾ ಅದು ಹೇಗೆ? ಎಂದರೆ ಅರ್ಜುನನು ತಿಳಿಸುತ್ತಾನೆ.—**ಅಮೀ**-ಈ ಎಂದರೆ ಈಗ ನಾನು ನೋಡುತ್ತಿರುವ, **ಸುರಸಂಘಾಃ** ದೇವತೆಗಳ ಸಮೂಹವು, **ತ್ವಾ**-ನಿನ್ನನ್ನು, **ವಿಶನ್ತಿ** ಹಿ-ಶರಣುಹೊಂದುತ್ತಿದ್ದಾರಷ್ಟೇ. **ಕೇಚಿತ್** ಅವರಲ್ಲೇ ಕೆಲವರು, **ಭೀತಾಃ**-ಭಯಪಟ್ಟವರಾಗಿ, ಭಯವೇನೆಂದರೆ ಸರ್ವೇಶ್ವರನು ಇಂತಹ ಅದ್ಭುತ ವಿಶ್ವರೂಪವನ್ನು ಏಕೆ ಧರಿಸಿದನೆಂಬ ಭೀತಿಯು, **ಪ್ರಾಂಜಲಯಃ**-ಬದ್ಧಾಂಜಲಿ ಪುಟರಾಗಿ, **ತ್ವಾಂ**-ನಿನ್ನನ್ನು, **ಗೃಣಂತಿ**-ಸ್ವೀಕರಿಸಿರುತ್ತಾರೆ ಎಂದರೆ ನಿನಗೆ ಅಂಜಲಿಮಾಡಿಕೊಂಡು ನಿಂತಿರುತ್ತಾರೆ. ಇಂತಹ ಪರಮಾಶ್ಚರ್ಯಾದ್ಭುತವಾಗಿಯೂ ಈ ರೂಪವು ಏಕೆ ಉಂಟಾಯಿತೋ ಎಂದು ಭೀತರಾಗಿ, **ಸ್ವಸ್ತೀತ್ಯುಕ್ತ್ವಾ**-ಲೋಕಕ್ಕೆಲ್ಲಾ ಮಙ್ಗಳ ಉಂಟಾಗಲೆಂದು ಹೇಳಿ, **ಮಹರ್ಷಿಸಿದ್ಧಸಂಘಾಃ** ಯುದ್ಧವನ್ನು ನೋಡುವದಕ್ಕಾಗಿ ನೆರೆದಿದ್ದ ಮಹರ್ಷಿಗಳ ಮತ್ತು ಸಿದ್ಧರ ಸಮೂಹಕ್ಕೆ ಸೇರಿದವರು, **ಪುಷ್ಕಲಾಭಿಸ್ತುತಿಭಿಃ**-ಯಥೇಚ್ಛಗಳಾದ ಸ್ತೋತ್ರಗಳಿಂದ, **ಸ್ತುವಂತಿ**-ಸ್ತೋತ್ರಮಾಡುತ್ತಾರೆ ; ಇವನ್ನೆಲ್ಲಾ ನೋಡುತ್ತಿದ್ದೇನೆಂಬ ಭಾವವು. **ಹಿ**-ಶಬ್ದವನ್ನು ಎಲ್ಲಾ ಕ್ರಿಯಾಪದಗಳಿಗೂ ಸೇರಿಸತಕ್ಕದ್ದು. **ಹಿ**-ಶಬ್ದದಿಂದ, ಇವೆಲ್ಲಾ ನಿನಗೆ ವೇದ್ಯವಾದ ವಿಷಯಗಳಷ್ಟೇ ಎಂಬ ಭಾವವು

**ಭಾಷ್ಯಾರ್ಥವು :—ಅಮೀಸುರಸಂಘಾಃ ಉತ್ಕೃಷ್ಟಾಃ** ಈ ಉತ್ಕೃಷ್ಟರಾದ ದೇವತೆಗಳ ಸಮೂಹಗಳು, **ತ್ವಾಂ ವಿಶ್ವಾಶ್ರಯಂ**-ಸಮಸ್ತ ವಿಶ್ವಕ್ಕೂ ಆಶ್ರಯನಾದ ನಿನ್ನನ್ನು, **ಅವಲೋಕ್ಯ**-ಕಂಡು, **ಹೃಷ್ಟಮನಸಃ**-ಸಂತೋಷಚಿತ್ತರಾಗಿ **ತ್ವತ್ಸಮೀಪಂವಿಶನ್ತಿ**-ನಿನ್ನ ಸಾಮೀಪ್ಯವನ್ನು ಹೊಂದುವರು, ಮೂಲದಲ್ಲಿ ಇಲ್ಲದೇ ಇರುವ **ಉತ್ಕೃಷ್ಟಾಃ**-ಎಂಬ ವ್ಯಾಖ್ಯಾನವು ಏತರಿಂದೆಂದರೆ, ಸುರಸಂಘಗಳು ಸುಕೃತಿಗಳಾದುದರಿಂದ ಉತ್ಕೃಷ್ಟರು ಎಂಬ ಭಾವನೆಯಿಂದ ಎಂದು ಭಾವಿಸತಕ್ಕದ್ದು. ಅದೂ ಅಲ್ಲದೆ ಎಲ್ಲಾಸುರರ ಸಂಘಗಳಿಗೂ ತೋರಲಿಲ್ಲವು ಅವರಲ್ಲೂ ಯೋಗ್ಯರಾದವರಿಗೆ ಮಾತ್ರ ತೋರಿಸಿದರೆಂಬ ಭಾವದಿಂದ **ಉತ್ಕೃಷ್ಟಾಃ**-ಎಂಬ ಭಾಷ್ಯವು ಹಾಗೆಯೇ **ವಿಶನ್ತಿ** ಎಂಬುದಕ್ಕೆ **ತ್ವತ್ಸಮೀಪಂವಿಶನ್ತಿ** ಎಂಬ ವ್ಯಾಖ್ಯಾನದಿಂದ ಸ್ವರೂಪೈಕ್ಯಭಾವವನ್ನು ನಿಷೇಧಿಸಿರುತ್ತಾರೆ, ಅಥವಾ ಪ್ರಲಯವನ್ನು ಹೊಂದುತ್ತಾರೆಂಬ ಅರ್ಥವನ್ನು ನಿರಾ

ಕರಿಸಿ ಹೇಳುವದಕ್ಕಾಗಿ ಎಂದು ಭಾವಿಸತಕ್ಕದ್ದು. ಪ್ರಲಯವಲ್ಲವೆಂದು ತಿಳಿಸುವದಕ್ಕಾಗಿ **ಹೃಷ್ಟಮನಸಃ**-ಎಂಬ ವ್ಯಾಖ್ಯಾನವು. ಮುಂದೆ ೨೭ ನೆಯ ಶ್ಲೋಕದಲ್ಲಿ **ವಕ್ತ್ರಾಣಿ ವಿಶನ್ತಿ**-ಎಂಬಲ್ಲಿರುವ **ವಿಶನ್ತಿ**- ಎಂಬರ್ಥವಲ್ಲವು. **ಕೇಚಿದ್ಭೀತಾಃ**-ಎಂದು ಮೂಲವಲ್ಲಿರುವದರಿಂದ ವಿಶನ್ತಿ ಹೇಳಲ್ಪಟ್ಟಿರುವವರು, ಭೀತರಲ್ಲವೆಂದು ಏರ್ಪಡುವವರಿಂದ. ವಿಶ್ವರೂಪವನ್ನು ನೋಡಿ, **ಹೃಷ್ಟಮನಸಃ**-ಸಂತೋಷಚಿತ್ತರೆಂದು ವ್ಯಾಖ್ಯಾನ ಮಾಡಲ್ಪಟ್ಟಿತು. ಆದುದರಿಂದ ವಿಶನ್ತಿ ಎಂಬುದಕ್ಕೆ ವಿನಾಶವನ್ನು ಹೊಂದುವರೆಂಬ ಅರ್ಥವು ಸಮಂಜಸವಲ್ಲವೆಂದು ತೋರ್ಪಡಿಸಿದರು. ಈ ಸುರಸಂಘವೂ ಆ ವಿಶ್ವರೂಪದ ಬಾಯನ್ನು ಪ್ರವೇಶಿಸಿದರೆಂಬ ಅರ್ಥವು ಸುತರಾಂ ಸರಿಯಲ್ಲವೆಂದು ಹೇಳಿದಂತಾಯಿತು. ಆದುದರಿಂದ ನಿನ್ನ ಶರಣ ಹೊಂದುವುದಕ್ಕಾಗಿ ನಿನ್ನ ಸಾಮಿಪ್ಯವನ್ನು ಹೊಂದುತ್ತಾರೆಂಬರ್ಥವು ಅನುಕೂಲಿಸುತ್ತದೆ **ತೇಷ್ವೇವ**-ಅವರುಗಳಲ್ಲೇ **ಕೇಚಿತ್**-ಕೆಲವರು **ಅತ್ಯುಗ್ರಮದ್ಭುತಂಚ ತವಾಕಾರ ಮಾಲೋಕ್ಯ**-ಅತಿ ಕ್ರೂರವಾಗಿಯೂ ಅತ್ಯದ್ಭುತವಾಗಿಯೂ ಇರುವ ಈ ನಿನ್ನ ರೂಪವನ್ನು ನೋಡಿ, **ಭೀತಾಃ**-ಭಯಪಟ್ಟವರಾಗಿ, **ಪ್ರಾಂಜಲಯಃ**-ಅಂಜಲಿಬದ್ಧರಾಗಿ, **ಸ್ವಜ್ಞಾನಾನುಗುಣಂ**-ಅವರ ಜ್ಞಾನಗಳಿಗೆ ಅನುಗುಣವಾಗಿ ಸ್ತುತಿರೂಪಗಳಾದ ವಾಕ್ಯಗಳನ್ನು, **ಗೃಣನ್ತಿ**-ಎಂದರೆ **ಉಚ್ಚಾರಯನ್ತಿ**-ಉಚ್ಚರಿಸುತ್ತಾರೆ. ಅಪರಾಧಿಗಳ ಅಂಜಲಿಯು ಸ್ವಾಮಿಯ ನಿಗ್ರಹ ಸಙ್ಕಲ್ಪವನ್ನು ನಿವಾರಿಸುವಂತಾದ್ದು. **"ಅಂಜಲಿಃ ಪರಮಾಮುದ್ರಾ ಕ್ಷಿಪ್ರಂದೇವ ಪ್ರಸಾದಿನೀ"** ಎಂದು ಕೊಂಡಾಡಲ್ಪಟ್ಟಿರುವದರಿಂದ ಅಂಜಲಿಯೂ, ನಮಸ್ಕಾರವೂ ಶರಣಾಗತಭಾವವನ್ನು ಸೂಚಿಸುತ್ತದೆ. ಶ್ರೀ ದೇಶಿಕರವರ "ಅಂಜಲಿವೈಭವವನ್ನು ಪರಾಂಬರಿಸಿ **ಅಪರೇ ಮಹರ್ಷಿ ಸಂಘಾಃ ಸಿದ್ಧಸಂಘಾಶ್ಚ**-ಬೇರೆಯಾದ ಭೃಗ್ವಾದಿ ಮಹರ್ಷಿಗಳ ಸಮೂಹವೂ ಸನಕರೇ ಮೊದಲಾದ ಸಿದ್ಧರ ಸಮೂಹವೂ ಸಹ, **ಪರಾವರತತ್ವಯಾಥಾತ್ಮ್ಯವಿದಃ**-ಪರತತ್ವವೆಂದರೆ ಈಶ್ವರ ತತ್ವ ಮತ್ತು **ಅಮರತತ್ವ** ವೆಂದರೆ ಜೀವತತ್ವ ಇವುಗಳ ಯಥಾರ್ಥವಾದ ಸ್ವರೂಪ ಸ್ವಭಾವಗಳನ್ನು ತಿಳಿದವರಾಗಿ, ಮಹರ್ಷಿಗಳೂ ಸಿದ್ಧರೂ ಎಂದು ಹೇಳಿದುದರಿಂದ ಅವರು ತುಂಬಾ ಜ್ಞಾನಿಗಳೆಂಬ ಭಾವವು ವ್ಯಕ್ತವೆಂದು **ಪರಾವರ ಯಾಥಾತ್ಮ್ಯವಿದಃ** ಎಂಬ ವ್ಯಾಖ್ಯಾನವು; **ಸ್ವಸ್ತೀತ್ಯುಕ್ತ್ವಾ "ಸ್ವಸ್ತಿಪ್ರಜಾಭ್ಯಃ"** ಎಂದು ಆರಂಭಿಸಿ **"ಲೋಕಾಸ್ಸಮಸ್ತಾಸ್ಸುಖಿನೋಭವನ್ತು"** ಎಂದು, ದೇಶಕ್ಕೆಲ್ಲಾ ಕ್ಷೇಮವಾಗಲೆಂದು, ಈಗ ಏನೋ ಮಹೋತ್ಪಾತಾದಿಗಳುಂಟಾಗಿ ಕ್ಷೋಭೆಯು ಪ್ರಾಪ್ತವಾಗುವ ಹಾಗೆ ತೋರುತ್ತದೆಯಾದುದರಿಂದ, ದೇಶಕ್ಕೆಲ್ಲಾ ಮಂಗಳವಾಗಲೆಂದು ಪ್ರಾರ್ಥಿಸಿದವರಾಗಿ, ಅಥವಾ ಸರ್ವೇಶ್ವರನನ್ನು ಕಂಡಾಗ ಆತನಿಗೇನೇ **"ಜಿತಂ ತೇ ಪುಂಡರೀಕಾಕ್ಷ"** ಎಂದು ಮಂಗಳಾಶಾಸನವನ್ನು ಮಾಡುವ ಸಂಪ್ರದಾಯವುಳ್ಳವರೆಂದಾಗಲಿ ಅರ್ಥಮಾಡಬಹುದು ಪೆರಿಯಾಳ್ವಾರವರೂ ಸಹ **ಪಲ್ಲಾಂಡು ಪಲ್ಲಾಂಡು** ಎಂದಲ್ಲವೇ ಮಂಗಳಾಶಾಸನವನ್ನು ಮಾಡಿದರು. ಇವರುಗಳೆಲ್ಲಾ **ಜಿತಂತ ಇತಿ ವಾದಿನಃ** ಎಂಬ ಭಾವವು. ರಾಜಾಧಿರಾಜರನ್ನು ಕಂಡರೆ ಭೃತ್ಯನು ಮಂಗಳಾಶಾಸನ ಸೂಚಕ ಪರಾಕುಗಳನ್ನು ಹೇಳುವದು ಆತನ ಸ್ವರೂಪಕ್ಕೆ ಯೋಗ್ಯವಾದ ಪ್ರವೃತ್ತಿ ಎಂಬುದು ತೋರಿಬರುತ್ತದೆ **ಪುಷ್ಕಲಾಭಿಃ** ಯಥೇಚ್ಛಗಳಾದ, **ಭಗವದನುರೂಪಾಭಿಃ**-ಭಗವಂತನಿಗೆ ಯೋಗ್ಯಗಳಾದ, **ಸ್ತುತಿಭಿಃ**-ಸ್ತೋತ್ರಗಳಿಂದ, **ಸ್ತುವನ್ತಿ**-ಸ್ತುತಿಸುತ್ತಾರೆ ॥ ೨೧ ॥

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವ ಯಕ್ಷಾಸುರ ಸಿದ್ಧಸಂಘಾ ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥**

**ಭಾ. ಊಷ್ಮಪಾಃ-ಪಿತರಃ-"ಊಷ್ಮಭಾಗಾಹಿ ಪಿತರಃ" ಇತಿ ಶ್ರುತೇಃ; ಏತೇ ಸರ್ವೇ ಸಸ್ಮಯಮಾಪನ್ನಾಸ್ತ್ವಾಂ ವೀಕ್ಷನ್ತೇ ॥ ೨೨ ॥**

**ಮೂಲಕ್ಕೆ ಅರ್ಥವು :—ಯೇ ಚ**-ಯಾವ, **ರುದ್ರಾದಿತ್ಯಾಃ**-ಏಕಾದಶರುದ್ರರೋ ದ್ವಾದಶಾದಿತ್ಯರೋ ಅಷ್ಟವಸುಗಳೋ **ವಿಶ್ವೇಽಶ್ವಿನೌ**-ವಿಶ್ವೇದೇವತೆಗಳೋ ಅಶ್ವಿನೀದೇವತೆಗಳೋ **ಮರುತಶ್ಚ**-೪೯ ಮರುದ್ಗಣವೋ, **ಊಷ್ಮಪಾಶ್ಚ**-ಪಿತೃಗಳೋ, ಗಂಧರ್ವರೂ ಯಕ್ಷರೂ ಅಸುರರೂ ಸಿದ್ಧರೂ ಇವರುಗಳ ಸಮೂಹದವರು ಯಾರೋ, **ತೇ ಸರ್ವೇ**-ಅವರೆಲ್ಲರೂ, **ವಿಸ್ಮಿತಾಶ್ಚೈವ**-ಆಶ್ಚರ್ಯಯುಕ್ತರಾಗಿ, **ತ್ವಾಂ**-ಈ ವಿಶ್ವರೂಪಧಾರಿಯಾದ ನಿನ್ನನ್ನು, **ವೀಕ್ಷನ್ತೇ**-ನೋಡುತ್ತಿದ್ದಾರೆ ॥ ೨೨ "

**ಭಾಷ್ಯಾರ್ಥವು :—**ಈ ಶ್ಲೋಕದಲ್ಲಿ **ಊಷ್ಮಪಾಃ** ಎಂದರೆ **ಪಿತರಃ**-ಪಿತೃಗಳು, ಏಕೆಂದರೆ **"ಊಷ್ಮಭಾಗಾಹಿ ಪಿತರಃ"** ಎಂದು **ಶ್ರುತೇಃ**-ಶ್ರುತಿಪ್ರಮಾಣವಿರುವದರಿಂದ, **ಏತೇ ಸರ್ವೇ**-ಇವರೆಲ್ಲರೂ, ಪೂರ್ವಾರ್ಧದಲ್ಲಿರುವ **ಯೇ ಚ**-ಎಂಬ ಪ್ರಯೋಗವಿರುವದರಿಂದ, **ಏತೇ ಸರ್ವೇ** ಎಂದು ಇಟ್ಟುಕೊಳ್ಳಬೇಕೆಂಬ ತಾತ್ಪರ್ಯವು, **ವಿಸ್ಮಯ ಮಾಪನ್ನಾಃ**-ಇದು **ವಿಸ್ಮಿತಾಶ್ಚೈವ** ಎಂಬುದರ ವ್ಯಾಖ್ಯಾನವು. ವಿಸ್ಮಯವನ್ನು ಹೊಂದಿದವರಾಗಿ, **ತ್ವಾಂ**-ಈಗ ವಿಶ್ವರೂಪ ದರ್ಶನವನ್ನು ದಯಪಾಲಿಸಿರುವ ನಿನ್ನನ್ನು, **ವೀಕ್ಷನ್ತೇ**-ನೋಡುತ್ತಾರೆ. ಹೀಗೆ ಈ ನಿನ್ನ ಮಹತ್ತಾದ ರೂಪವನ್ನು ಅವಲೋಕಿಸಿದವರೆಲ್ಲಾ ಆಶ್ಚರ್ಯಭರಿತರಾದವರೆಂದು ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು :—**ಈ ನಿನ್ನ ಉಗ್ರರೂಪವನ್ನು ನೋಡಿದವರು ಆಶ್ಚರ್ಯಭರಿತರಾದರೆಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಆಶ್ಚರ್ಯಮಾತ್ರವೇ ಅಲ್ಲದೆ ಭೀತಿಯುಕ್ತರೂ ಆದರೆಂದು ಅರ್ಜುನನು ಅರಿಕೆಮಾಡಿ, ಹಾಗೆಯೇ ತಾನೂಕೂಡ ಭಯಗ್ರಸ್ತನಾಗಿರುತ್ತೇನೆಂದು ಹೇಳಿಕೊಳ್ಳುತ್ತಾನೆ. **ಮಹಾಬಾಹೋ**-ಅಪಾರ ಪರಾಕ್ರಮ ಯುಕ್ತ ಬಾಹುವುಳ್ಳ, ಅಥವಾ ಆಜಾನುಲಂಬವಾದ ಬಾಹುಗಳುಳ್ಳ ಶ್ರೀಕೃಷ್ಣನೇ, **ತೇ**-ಈ ವಿಶ್ವರೂಪವನ್ನು ಧರಿಸಿರುವ ನಿನ್ನ, **ಬಹುವಕ್ತ್ರನೇತ್ರಂ**-ಅನೇಕ ಮುಖ ಅನೇಕ ನಯನಗಳುಳ್ಳ, **ಬಹು ಬಾಹೂರುಪಾದಮ್**-ಅನೇಕ ಬಾಹುಗಳೂ, ತೊಡೆಗಳೂ, ಪಾದಗಳೂವುಳ್ಳ **ಬಹುದಂಷ್ಟ್ರಾಕರಾಳಮ್**-ಬಹು ಕೋರೆದಾಡೆಗಳಿರುವದರಿಂದ ಕ್ರೂರವಾದ ಇದು ಭೀತಿಗೆ ಕಾರಣವಾದುದು ಎಂಬ ತಾತ್ಪರ್ಯವು, ಹೀಗೆ **ಮಹದ್ರೂಪಂ** ಮಹತ್ತಾದ ರೂಪವನ್ನು, **ದೃಷ್ಟ್ವಾ**-ನೋಡಿ, **ಲೋಕಾಃ**-ಹಿಂದೆ **ಲೋಕತ್ರಯಂ**-ಎಂಬ ಪ್ರಯೋಗದಿಂದ ಹೇಳಲ್ಪಟ್ಟ ಜನರೆಲ್ಲಾ, **ತಥಾ**-ಹಾಗೆಯೇ, **ಅಹಂ**-ನಾನೂ, **ಪ್ರವ್ಯಥಿತಾಃ**-ವಿಶೇಷಭೀತರಾಗಿದ್ದೇವೆ ಅಥವಾ ಭಯದಿಂದ ಚಲಿತರಾಗಿದ್ದೇವೆ. ಈ ಶ್ಲೋಕದಲ್ಲಿ ಶ್ರೀ ಕೃಷ್ಣನ ವಿಶ್ವರೂಪವು, ಅನೇಕ ಮುಖ, ನೇತ್ರ ಬಾಹು, ಊರು, ಉದರ, ಪಾದಗಳುಳ್ಳದ್ದೆಂದು ಹೇಳಿದ್ದರೂ **ರೂಪಂ** ಎಂದು ಏಕವಚನವಿರುವದರಿಂದ ನಾವು ಭಾವಿಸತಕ್ಕದ್ದೇನೆಂದರೆ, ಒಂದೇ ಕಟಿಪ್ರದೇಶಕ್ಕೆ ಅನೇಕ ಮುಖ ನೇತ್ರಾದಿಗಳಿದ್ದವೆಂಬ ಊಹೆಯೇ ಸಮಂಜಸವಾದುದೆಂದು ತೋರಿಬರುತ್ತದೆ. ಇದಕ್ಕನುಗುಣವಾಗಿ ೧೫ ನೆಯ ಶ್ಲೋಕದಲ್ಲಿ **ತವ ದೇವ ದೇಹೇ** ಎಂದು ಏಕವಚನವಿರುತ್ತದೆ. ಹಾಗೆಯೇ **ದೇವದೇವಸ್ಯ ಶರೀರೇ** ಎಂದು ೧೩ ನೆಯ ಶ್ಲೋಕದಲ್ಲಿರುತ್ತದೆ. ಹಾಗೆಯೇ

**ಮೂ ರೂಪಂಮಹತ್ತೇ ಬಹುವಕ್ತ್ರನೇತ್ರಂ ಮಹಾಬಾಹೋ ಬಹುಬಾಹೂರುಪಾದಂ ಬಹೂದರಂ ಬಹುದಂಷ್ಟ್ರಾಕರಾಳಂ ದೃಷ್ಟ್ವಾಲೋಕಾಃ ಪ್ರವ್ಯಥಿತಾಸ್ತಥಾಹಮ್॥**

**ಭಾ, ಬಹ್ವೀಭಿರ್ದಂಷ್ಟ್ರಾಭಿರತಿಭೀಷಣಾಕಾರಂ ಲೋಕಾಃ-ಪೂರ್ವೋಕ್ತಾಃ ಪ್ರತಿಕೂಲಾನುಕೂಲ ಮಧ್ಯಸ್ಥಾ ಸ್ತ್ರಿವಿಧಾಃ, ಸರ್ವೆ ಏವಾಹಂಚ ತವೇದಮೀದೃಶಂ ರೂಪಂ ದೃಷ್ಟ್ವಾ ಅತೀವವ್ಯಥಿತಾ ಭವಾಮಃ ॥ ೨೩ ॥**

೨೦ ನೆಯ ಶ್ಲೋಕದಲ್ಲೂ **"ದೃಷ್ಟ್ವಾದ್ಭುತಂರೂಪಮುಗ್ರಂ ತವೇದಮ್"** ಏಕವಚನವೇ ಇರುತ್ತದೆ. ಆದುದರಿಂದ ಅನೇಕರೂಪಗಳನ್ನು ವಿಶ್ವರೂಪವನ್ನು ತೋರಿಸುವಾಗ ತೋರಿಸಿದರೆಂಬ ಭಾವನೆಯು ಸಮಂಜಸವಾದುದಲ್ಲವು. ಆದರೆ ಹಿಂದೆ ೫ ನೆಯ ಶ್ಲೋಕದಲ್ಲಿ **ಪಶ್ಯಮೇ ಪಾರ್ಥ ರೂಪಾಣಿ,** ಎಂದು ಬಹುವಚನವಿದೆಯಲ್ಲಾ ಎಂದರೆ ಅದನ್ನು **ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ** ಎಂದು ಉಪಪಾದಿಸಿರುವದರಿಂದ ಒಂದೇ ದೇಹದಲ್ಲೇ ತೋರುವ ಅನೇಕ ದೃಶ್ಯಗಳ ವರ್ಣನೆ ಎಂದು ಭಾವಿಸತಕ್ಕದ್ದು. ಹೀಗೆ ಭಾವಿಸದಿದ್ದರೆ ಈ ಪ್ರತಿಜ್ಞಾವಾಕ್ಯಕ್ಕೂ ಮುಂದೆ ತೋರಿದುದಕ್ಕೂ ಐಕಕಂಠ್ಯವಿಲ್ಲವಾಗುತ್ತದೆ.

**ಭಾಷ್ಯಾರ್ಥವು :**—ಭೀತಿಗೆ ಕಾರಣಭೂತವು ಯಾವುದೋ ಅದನ್ನು ಮಾತ್ರ ಪ್ರದರ್ಶಿಸುತ್ತಾರೆ.—**ಬಹ್ವೀಭಿ ರ್ದಂಷ್ಟ್ರಾಭಿಃ**-ಅನೇಕ ಕೋರೆದಾಡೆಗಳಿಂದ, **ಅತಿ ಭೀಷಣಾಕಾರಂ**-ಅತಿಭಯಂಕರವಾದ ಆಕಾರವುಳ್ಳದಾದುದರಿಂದಲೇ, **ಲೋಕಾಃ** ಎಂದರೆ **ಪೂರ್ವೋಕ್ತಾಃ ಪ್ರತಿಕೂಲಾನುಕೂಲ ಮಧ್ಯಸ್ಥಾಸ್ತ್ರಿವಿಧಾಃ**-ಹಿಂದೆ ೨೦ ನೆಯ ಶ್ಲೋಕದಲ್ಲಿ ಲೋಕತ್ರಯ ಶಬ್ದದಿಂದ ಪೂರ್ವೋಕ್ತರಾದ ಪ್ರತಿಕೂಲರಾದ, ಅನುಕೂಲರಾದ, ಎರಡೂ ಅಲ್ಲದ ಮಧ್ಯಸ್ಥರಾದ, ಮೂರು ವಿಧರಾದ, **ಸರ್ವೇ**-ಸಮಸ್ತರೂ, ಅಲ್ಲಿ ಬಂದು ಅಂತರಿಕ್ಷದಲ್ಲಿ ನೆರೆದಿರುವವರೂ, **ಅಹಂ ಚ**-ನಾನೂ ಸಹ, **ತವೇದ ಮೀದೃಶಂ ರೂಪಂ**-ನಿನ್ನ ಇಂತಹ ಈ ರೂಪವನ್ನು, **ದೃಷ್ಟ್ವಾ**-ಕಂಡು, **ಅತೀವವ್ಯಥಿತಾ ಭವಾಮಃ**-ಹೆಚ್ಚಾಗಿ ವ್ಯಥೆಯುಳ್ಳವರಾಗಿದ್ದೇವೆ. ಆದರೆ ೨೦ ನೆಯ ಶ್ಲೋಕದಲ್ಲಿ **ಪ್ರವ್ಯಥಿತಂ** ಎಂಬುದಕ್ಕೆ **ಭೀತಂ** ಎಂಬ ಭಾಷ್ಯವೂ, ಇಲ್ಲಿ **ವ್ಯಥಿತಾಃ**-ದುಃಖಪಟ್ಟವರಾಗಿದ್ದೇವೆ ಎಂಬ ಭಾಷ್ಯವೂ ಹೇಗೆ ಎಂದರೆ ಭಯವು ಪೂರ್ವಭಾವಿಯಾಗಿ ಉಂಟಾಗಿ ಅನಂತರ ಕ್ಲೇಶ ಉಂಟಾಗುವದರಿಂದ ಹಾಗೆ ವ್ಯಾಖ್ಯಾನವು. ಆದುದರಿಂದ ಇಲ್ಲಿ **ಪ್ರವ್ಯಥಿತ** ಶಬ್ದಕ್ಕೆ ಭಯದಿಂದ ಉಂಟಾಗುವ ಮನಸ್ಚಲನೆಯೇ ತಾತ್ಪರ್ಯವೆಂದು ಭಾವಿಸತಕ್ಕದ್ದು. **ವ್ಯಥಭಯ ಸಂಚಲನಯೋಃ** ಎಂಬ ಧಾತ್ವರ್ಥಗಳ ಪ್ರಕಾರ ಎರಡರ್ಥಗಳೂ ಉಂಟೆಂಬುದು ಸ್ಪಷ್ಟವು. ॥ ೨೩ ॥

**ಮೂಲಕ್ಕೆ ಅರ್ಥವು :**—ಅರ್ಜುನನು ಹಿಂದಿನ ಶ್ಲೋಕದಲ್ಲಿ ನಾನೂ ಪ್ರವ್ಯಥಿತನಾಗಿದ್ದೇನೆಂದು ಹೇಳಿದನು. ಅದನ್ನೇ ಪುನಃ ವಿವರಿಸಿ ಅರಿಕೆ ಮಾಡಿಕೊಳ್ಳುತ್ತಾನೆ.—**ನಭಸ್ಸ್ಪೃಶಂ**-ದಿವ್ಯ ವೈಕುಂಠ ಲೋಕವನ್ನೂ ಮುಟ್ಟಿರುವ, ಮುಟ್ಟಿರುವದರಿಂದ, ದಿವ್ಯ ವೈಕುಂಠವಿನಾ ಮಿಕ್ಕ ಎಲ್ಲಾ ವಿಭೂತಿಯ ಲೋಕಗಳನ್ನೆಲ್ಲಾ ಈ ರೂಪವು ಆಕ್ರಮಿಸಿತ್ತೆಂದು ಅರ್ಥಮಾಡಬೇಕಾಗುತ್ತದೆ. ಹಾಗಾದರೆ ವಿಶ್ವರೂಪದ ವಿಶ್ವಶಬ್ದವು ನಿತ್ಯ ವಿಭೂತಿಯನ್ನು ವ್ಯಾವರ್ತಿಸಿ ಸೃಷ್ಟ್ಯಾದಿಗಳಿಗೆ ಒಳಪಟ್ಟ ವಿಶ್ವವು ಹೇಳಲ್ಪಟ್ಟಿತೆಂದು ಒಪ್ಪಬೇಕಾಗುತ್ತದೆ. **ವಿಷ್ಣೋ**-ಹೇ ಸರ್ವವ್ಯಾಪಿಯಾದ ಶ್ರೀ ಕೃಷ್ಣನೇ ಎಂಬ ಸಂಬೋಧನೆಯು. **ದೀಪ್ತಂ**-ಬಹುತೇಜೋಮಯವಾದ, ಅನೇಕ ವರ್ಣಗಳುಳ್ಳ ಪ್ರಕೃತಿಯು ಸತ್ವ ರಜಸ್ತಮೋ ಗುಣಗಳನ್ನುಳ್ಳದ್ದಾಗಿ ಲೋಹಿತ

**ಮೂ.** **ನಭಸ್ಪೃಶಂ ದೀಪ್ತಮನೇಕವರ್ಣಂ ವ್ಯಾತ್ತಾನನಂ ದೀಪ್ತವಿಶಾಲನೇತ್ರಂ ।**
**ದೃಷ್ಟ್ವಾಹಿತ್ವಾ ಪ್ರವ್ಯಥಿತಾನ್ತರಾತ್ಮಾ ಧೃತಿಂ ನವಿನ್ದಾಮಿ ಶಮಂಚವಿಷ್ಣೋ॥**

**ಭಾ.** **ನಭಶ್ಶಬ್ದಃ, (೧) "ತದಕ್ಷರೇ ಪರಮೇ ವ್ಯೋಮನ್" (೨) "ಆದಿತ್ಯವರ್ಣಂ ತಮಸಃ ಪರಸ್ತಾತ್" (೩) "ಕ್ಷಯನ್ತಮಸ್ಯ ರಜಸಃ ಪರಾಕೇ" (೪) "ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್" ಇತ್ಯಾದಿ ಶ್ರುತಿಸಿದ್ಧ ತ್ರಿಗುಣ ಪ್ರಕೃತ್ಯತೀತ ಪರಮ**

ಶುಕ್ಲ ಕೃಷ್ಣವರ್ಣಗಳುಳ್ಳದ್ದು ಈ ರೂಪದೊಂದಿಗೆ ಸೇರಿಕೊಂಡಿರುತ್ತದೆ; ಈ ರೂಪದಲ್ಲಿ ಈ ವರ್ಣಗಳುಳ್ಳ ಪ್ರಕೃತಿಯು ನಾನಾ ಪರಿಪಾಣದಲ್ಲಿ ಸೇರಿ, ನಾನಾ ವಿಧವರ್ಣಗಳುಳ್ಳ ದ್ರವ್ಯಗಳೆಲ್ಲಾ ಈ ರೂಪದಲ್ಲಿ ಅಡಗಿರುವದರಿಂದ **ಅನೇಕ ವರ್ಣಂ**-ಚಿತ್ರವರ್ಣ ಉಳ್ಳದ್ದು, ಎಂದು ಪ್ರಯೋಗವು; ಅಥವಾ ಸ್ವಾಮಿಯ ವಿಶ್ವರೂಪಶರೀರವೂ ಸಹ ಆಯಾಯಾ ಅವಯವಗಳಿಗನುಗುಣವಾಗಿ ಚಿತ್ರವರ್ಣ ಉಳ್ಳದುದು ಎಂಬರ್ಥವನ್ನೂ ಹೇಳಬಹುದು. **ವ್ಯಾತ್ತಾನನಂ**-ತೆರೆಯಲ್ಪಟ್ಟ ಬಾಯಿಗಳುಳ್ಳ, **ದೀಪ್ತ ವಿಶಾಲನೇತ್ರಂ**-ಜ್ವಲಿಸುವ ವಿಶಾಲಗಳಾದ ನೇತ್ರಗಳುಳ್ಳ, **ತ್ವಾ**-ನಿನ್ನನ್ನು, **ದೃಷ್ಟ್ವಾ**-ಕಂಡು, **ಪ್ರವ್ಯಥಿತಾಂತರಾತ್ಮಾ**-ಭಯದಿಂದ ಚಲಿಸದ ಮನಸ್ಸುಳ್ಳವನಾಗಿದ್ದೇನೆ ಆದುದರಿಂದ **ಧೃತಿಂ ನವಿನ್ದಾಮಿ**-ದೇಹಧಾರಣೆಗೆ ಬೇಕಾದ ಧಾರಣಾಶಕ್ತಿಯನ್ನು ಹೊಂದಿರುವದಿಲ್ಲವು, **ಶಮಂಚ ನವಿನ್ದಾಮಿ**-ಮನಶ್ಶಾಂತಿಯನ್ನೂ ಹೊಂದಿರುವದಿಲ್ಲವು. ಹೀಗೆ ಅರ್ಥಉಂಟಾಗುವದರಿಂದ ಪುನರುಕ್ತಿ ಇಲ್ಲವು. ತೆರದ ಬಾಯಿಗಳೂ ಕ್ರೂರ ಕೋರೆದಾಡೆಗಳೂ, ದೀಪ್ತಗಳಾದ ಕಣ್ಣುಗಳೂ ಎಲ್ಲವೂ ಭಯೋತ್ಪಾದಕಗಳಾದುದರಿಂದ ಮನಸ್ಥೈರ್ಯವು ಹುಟ್ಟದೆ, ಮನಶ್ಶಾಂತಿಯು ತೊಲಗಿರುತ್ತದೆಂಬ ಭಾವವು. ಇಲ್ಲಿ ಹಿ ಶಬ್ದವು ಹೇತ್ವರ್ಥ ಸೂಚಕವು, ಯಾವಕಾರಣದಿಂದ ನಿನ್ನ ರೂಪವು ಮೇಲೆ ವರ್ಣಿಸಿರುವಹಾಗೆ ಕ್ರೂರವಾಗಿ ತೋರಿಬರುತ್ತದೆಯೋ, ಆ ಕಾರಣದಿಂದ ಧೃತಿಯೂ ಇಲ್ಲವು, ಶಮವೂ ಇಲ್ಲವು ಎಂಬ ಭಾವವು ॥ ೨೪ ॥

**ಭಾಷ್ಯಾರ್ಥವು:**—(೧) "**ತತ್**-ಇಂತಹ ಸರ್ವ ಪ್ರಪಂಚ ಶರೀರಕನಾಗಿ, ಸರ್ವಕ್ಕೂ ಆತ್ಮಾವಾಗಿರುವ ಪರಬ್ರಹ್ಮವು, **ಅಕ್ಷರೇ**-ನಾಶರಹಿತವಾದ, **ಪರಮೇ ವ್ಯೋಮನ್**-ಪರಮವ್ಯೋಮ ಶಬ್ದಿತವಾದ ದಿವ್ಯ ವೈಕುಂಠದಲ್ಲಿ ಇರುತ್ತದೆಂಬ ಭಾವವು" ಎಂದೂ. (೨) "**ಆದಿತ್ಯವರ್ಣಂ**-ಸೂರ್ಯಸಮಾನ ವರ್ಣವುಳ್ಳವನನ್ನು, **ತಮಸಃ ಪರಸ್ತಾತ್**-ಪ್ರಕೃತಿಯ ಮಂಡಲಕ್ಕೆ ಆಚೆ ಅಪ್ರಾಕೃತ ಪ್ರದೇಶದಲ್ಲಿ" ಎಂದೂ (೩) **ಅಸ್ಯ, ರಜಸಃ**-ಈ ರಜೋಗುಣ ವಿಶಿಷ್ಟವಾದ ಪ್ರಕೃತಿಮಂಡಲದ, **ಪರಾಕೇ**-ಆಚೆ, **ಕ್ಷಯನ್ತಂ**-ವಾಸವಾಡುತ್ತಿರುವ" (೪) "**ಯಃ**-ಯಾವ ಮಹಾತ್ಮನು, **ಅಸ್ಯ ಅಧ್ಯಕ್ಷಃ**-ಈ ಜಗತ್ತಿನ ಯಜಮಾನನು, **ಪರಮೇ ವ್ಯೋಮನ್**-ಪರಮಪದದಲ್ಲೋ," ಎಂದೂ ಇತ್ಯಾದಿ **ಶ್ರುತಿಸಿದ್ಧ**-ಇವೇ ಮೊದಲಾದ ಶ್ರುತಿಗಳಿಂದ ತೋರಿಬರುವ, **ನಭಶ್ಶಬ್ದಃ**-ನಭಶ್ಶಬ್ದವು, **ತ್ರಿಗುಣಪ್ರಕೃತ್ಯತೀತ**-ಸತ್ವರಜಸ್ತಮೋ ಗುಣಗಳಿಂದ ಸೇರಿದ ಪ್ರಕೃತಿಗಿಂತ ವಿಲಕ್ಷಣವಾಗಿ ಮೇಲಾದ ಎಂದರೆ ನಿತ್ಯವಾದ ಶುದ್ಧ ಸತ್ವಮಯವಾದ **ಪರಮವ್ಯೋಮ ವಾಚೀ**-ಪರಮವ್ಯೋಮಶಬ್ದದಿಂದ ಹೇಳಲ್ಪಡುವ ದಿವ್ಯ ವೈಕುಂಠವನ್ನು ಬೋಧಿಸುತ್ತದೆ, ಹಾಗೆ ಅರ್ಥಮಾಡಲು ಕಾರಣವೇನೆಂದರೆ ಎರಡು ಹೇತುಗಳನ್ನು ಹೇಳುತ್ತಾರೆ. **ಸವಿಕಾರಸ್ಯ ಪ್ರಕೃತಿತತ್ವಸ್ಯ**-ವಿಕಾರ ವಿಶಿಷ್ಟವಾದ ಎಂದರೆ ಸ್ವರೂಪಸ್ವಭಾವ ವಿಕಾರ

(೧) ತೈ. ನಾರಾ. ೧೩. (೨) ಪುರುಷಸೂಕ್ತ. (೩) ಸಾಮ. ಉತ್ತರ. (೪) ಯಜು. ಅಷ್ಟ. ೮.೯.೬

**ಭಾ. ವ್ಯೋಮ ವಾಚೀ, ಸವಿಕಾರಸ್ಯ ಪ್ರಕೃತಿ ತತ್ತ್ವಸ್ಯ. ಪುರುಷಸ್ಯ ಚ ಸರ್ವಾವಸ್ಥಸ್ಯ, ಕೃತ್ಸ್ನಸ್ಯಾಶ್ರಯತಯಾ ನಭಸ್ಸ್ಪೃಶಮಿತಿ ವಚನಾತ್, ದ್ಯಾವಾ ಪೃಥಿವ್ಯೋರಿದಮನ್ತರಂ ಹಿ ವ್ಯಾಪ್ತಂ" ಇತಿ ಪೂರ್ವೋಕ್ತತ್ವಾಚ್ಚ; ದೀಪ್ತಮನೇಕವರ್ಣಂ ವ್ಯಾತ್ತಾನನಂ ದೀಪ್ತ ವಿಶಾಲನೇತ್ರಂ ತ್ವಾಂ ದೃಷ್ಟ್ವಾ ಪ್ರವ್ಯಥಿತಾನ್ತರಾತ್ಮಾ-ಅತ್ಯನ್ತ**

ಹೊಂದುವ ಪ್ರಕೃತಿ ತತ್ತ್ವಕ್ಕೂ. **ಸರ್ವಾವಸ್ಥಸ್ಯ ಪುರುಷಸ್ಯ**-ಪ್ರಕೃತಿಯ ಹಾಗೆ ಸ್ವರೂಪ ವಿಕಾರವಿಲ್ಲದಿದ್ದರೂ ಸ್ವಭಾವವಿಕಾರಹೊಂದಿ ಸಮಸ್ತಾವಸ್ಥೆಗಳನ್ನೂ ಹೊಂದುವ ಪುರುಷತತ್ತ್ವಕ್ಕೂ ಸಹ, ಹೀಗೆ **ಕೃತ್ಸ್ನಸ್ಯಾಶ್ರಯತಯಾ ನಭಸ್ಸ್ಪೃಶಮಿತಿ ವಚನಾತ್**-ಸಮಸ್ತ ಪ್ರಕೃತಿಮಂಡಲಕ್ಕೂ ಆಶ್ರಯವೆಂದು ತಿಳಿಸಲು ದಿವ್ಯ ವೈಕುಂಠವನ್ನು ಮುಟ್ಟುತ್ತಿರುವದು ಎಂದು ಹೇಳಲ್ಪಟ್ಟಿತು. ಇನ್ನೊಂದು ಕಾರಣವನ್ನು ಹೇಳುತ್ತಾರೆ, **"ದ್ಯಾವಾ ಪೃಥಿವ್ಯೋರಿದ ಮನ್ತರಂ ಹಿ ವ್ಯಾಪ್ತಂ"** ಎಂದು, **ಪೂರ್ವೋಕ್ತತ್ವಾಚ್ಚ**-ಹಿಂದೆ ೨೦ ನೆಯ ಶ್ಲೋಕದಲ್ಲಿ ನಭಶ್ಶಬ್ದವೂ ನಿತ್ಯ ವಿಭೂತಿಯನ್ನು ಬೋಧಿಸುವದರಿಂದ ಎಂಬ ಭಾವವು. **ದೀಪ್ತಂ**-ತೇಜೋಮಯವಾದ, **ಅನೇಕ ವರ್ಣಂ**-ನಾನಾಬಣ್ಣಗಳುಳ್ಳ. **ವ್ಯಾತ್ತಾನನಂ**-ತೆರೆಯಲ್ಪಟ್ಟ ಮುಖಗಳುಳ್ಳ, **ದೀಪ್ತ ವಿಶಾಲನೇತ್ರಂ**-ಪ್ರಜ್ವಲಿಸುವ ವಿಶಾಲಗಳಾದ ಕಣ್ಣುಗಳುಳ್ಳ, **ತ್ವಾಂ**-ವಿಶ್ವರೂಪವನ್ನು ಧರಿಸಿರುವ ನಿನ್ನನ್ನು, **ದೃಷ್ಟ್ವಾ**-ನೋಡಿ, **ಪ್ರವ್ಯಥಿತಾಂತರಾತ್ಮಾ**-ಎಂದರೆ **ಅತ್ಯಂತಭೀತಮನಾಃ**-ಅತ್ಯಂತ ಭಯಗೊಂಡ ಮನಸ್ಸುಳ್ಳವನಾಗಿ. **ಧೃತಿಂ ನವಿಂದಾಮಿ**-ಎಂದರೆ **ದೇಹಸ್ಯಧಾರಣಂ ನಲಭೇ**-ದೇಹಧಾರಣವನ್ನು ಹೊಂದಲಾರೆನು. **ಧೃತಿರ್ಧಾರಣ ಧೈರ್ಯಯೋಃ"** ಎಂಬ ನಿಘಂಟಿನಪ್ರಕಾರ ಇಲ್ಲಿ ಧೃತಿಶಬ್ದಕ್ಕೆ ಧಾರಣಾ ಎಂಬರ್ಥದಿಂದ ದೇಹಧಾರಣವೆಂದು ಭಾಷ್ಯವನ್ನು ಬರೆದರು. **ಮನಸಶ್ಚೇಂದ್ರಿಯಾಣಾಂ ಚ**-ಮನಸ್ಸಿನ ಮತ್ತು ಇಂದ್ರಿಯಗಳ, **ಶಮಂಚ**-ಉಪರತಿಯನ್ನೂ ಎಂದರೆ ಶಾಂತಿಯನ್ನೂ ಸಹ, **ನಲಭೇ**-ಹೊಂದಲಾರೆನು; ಶಮಶಬ್ದವು ಅಂತರಿಂದ್ರಿಯವಾದ ಮನಸ್ಸಿನ ಶಾಂತಿಯನ್ನೇ ಮುಖ್ಯವಾಗಿ ಬೋಧಿಸುತ್ತದೆ: ಮನಸ್ಸು ಚೇತನವಲ್ಲವು; ಶಾಂತಿಯು ಆತ್ಮಧರ್ಮವು, ಆತ್ಮಾವಿಗೆ ಶಾಂತಿಯುಂಟಾಗಬೇಕಾದರೆ ಮನಸ್ಸೂ ಶಾಂತಿಯನ್ನು ಹೊಂದಿತು ಎಂಬ ವ್ಯವಹಾರವು. **ವಿಷ್ಣೋ**-ಎಂದರೆ ಧಾತ್ವರ್ಥವನ್ನು ಮನಸ್ಸಿನಲ್ಲಿಟ್ಟು **ವ್ಯಾಪಿನ್**-ಎಂದು ಭಾಷ್ಯಬರೆದಿರುತ್ತಾರೆ, ಸರ್ವವನ್ನೂ ವ್ಯಾಪಿಸಿರುವನೇ! ಎಂಬರ್ಥವು, ಹೀಗೆ ವ್ಯಾಪಿಸಿ, ಎಲ್ಲಕ್ಕೂ ಅಂತರಾತ್ಮನಾಗಿ ಸರ್ವನಿಯಾಮಕನೇ ಸರ್ವಶೇಷಿಯೇ! ಎಂಬ ಭಾವವು. ಹರಿವಂಶದಲ್ಲಿ **"ವ್ಯಾಪ್ಯಸರ್ವಾನಿಮಾಂಲೋಕಾನ್ ಸ್ಥಿತಸ್ಸರ್ವತ್ರಕೇಶವಃ। ತತಶ್ಚ ವಿಷ್ಣುನಾಮಾಸಿ ವಿಶೇರ್ಧಾತೋಃ ಪ್ರವೇಶನಾತ್"** ಎಂಬ ಪ್ರಮಾಣವು ಅನುಸಂಧೇಯವು. ಎಲ್ಲಾ ಲೋಕಗಳನ್ನೂ ವ್ಯಾಪಿಸಿ ಎಲ್ಲಾ ಕಡೆಯಲ್ಲೂ ಇರುವದರಿಂದಲೂ ವಿಶಧಾತುವಿನಿಂದ ಎಲ್ಲವನ್ನೂ ಹಿಶತಿ ಪ್ರವೇಶಿಸುವನು ಎಂಬರ್ಥವುಂಟಾಗುವದರಿಂದ ನೀನು **ವಿಷ್ಣು** ಎಂಬ ಹೆಸರುಳ್ಳವನು ಎಂಬರ್ಥವು **"ಚರಾಚರೇಷು ಭೂತೇಷು ವಿಶನಾದ್ವಿಷ್ಣುರುಚ್ಯತೇ"** ಎಂಬ ನಿರುಕ್ತಿಯು ಇರುತ್ತದೆ ಆದುದರಿಂದ **ಸರ್ವವ್ಯಾಪಿನಂ**-ಸಮಸ್ತವನ್ನೂ ವ್ಯಾಪಿಸಿರುವ, **ಅತಿಮಾತ್ರಂ**-ನಿರತಿಶಯವಾದ ಪರಿಮಾಣವುಳ್ಳವನಾಗಿ, **ಅತ್ಯದ್ಭುತಂ**-ತುಂಬಾ ಅದ್ಭುತವಾಗಿಯೂ, ಅತಿ ಘೋರನಾಗಿಯೂ, ಇರುವ, **ತ್ವಾಂ ದೃಷ್ಟ್ವಾ**-ನಿನ್ನನ್ನು ಕಂಡು, **ಪ್ರಶಿಥಿಲಸರ್ವಾವಯವಃ**-ಶೈಥಿಲ್ಯವನ್ನು ಹೊಂದಿದ ಸಮಸ್ತ ಅವಯವಗಳುಳ್ಳವನಾಗಿ, **ವ್ಯಾಕುಲೇಂದ್ರಿಯಶ್ಚ**-ವ್ಯಾಕುಲಿತಗಳಾದ ಇಂದ್ರಿಯಗಳುಳ್ಳವನಾಗಿಯೂ, **ಭವಾಮಿತ್ಯರ್ಥಃ**-ಆಗಿರುತ್ತೇನೆಂದು ಅರ್ಜುನನು ಹೇಳಿದನೆಂಬ **ತಾತ್ಪರ್ಯವು**. ಯಾವಾಗ ಮನಸ್ಸಿಗೆ

**ಭಾ. ಭೀತಮನಾಃ, ಧೃತಿಂ ನವಿಂದಾಮಿ-ದೇಹಸ್ಯ ಧಾರಣಂ ನಲಭೇ; ಮನಸಶ್ಚೇನ್ದ್ರಿಯಾಣಾಂಚ ಶಮಂ ನಲಭೇ; ವಿಷ್ಣೋ-ವ್ಯಾಪಿನ್! ಸರ್ವವ್ಯಾಪಿನ ಮತಿಮಾತ್ರ ಮತ್ಯದ್ಭುತ ಮತಿಘೋರಂ ಚ ತ್ವಾಂ ದೃಷ್ಟ್ವಾ ಪ್ರಶಿಥಿಲ ಸರ್ವಾವಯವೋ ವ್ಯಾಕುಲೇಂದ್ರಿಯಶ್ಚ ಭವಾಮೀತ್ಯರ್ಥಃ || ೨೪ ||**

---

**ಮೂ. ದಂಷ್ಟ್ರಾ ಕರಾಳಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾನಲ ಸನ್ನಿಭಾನಿ।**
**ದಿಶೋ ನಜಾನೇ ನಲಭೇಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥**

---

ಭೀತಿಯುಂಟಾಯಿತೋ, ಆ ಕಾರಣದಿಂದ ಸರ್ವಾವಯವ ಶೈಥಿಲ್ಯವೂ, ಆ ಕಾರಣದಿಂದ ದೇಹ ಧಾರಣೆಯೇ ಕಷ್ಟವಾಗಿದೆಯೆಂದೂ, ಮನಸ್ಸಿನ ಮತ್ತು ಇಂದ್ರಿಯಗಳ ಸ್ವಾಸ್ಥ್ಯವು ತೊಲಗಿರುತ್ತದೆಂದೂ ಅರ್ಜುನನು ಹೇಳಿಕೊಳ್ಳುತ್ತಾನೆಂಬ ಭಾವವು. || ೨೪ ||

**ಮೂಲಕ್ಕೆ ಅರ್ಥವು:—**ಹಿಂದಿನ ಶ್ಲೋಕದಲ್ಲಿ ತುಂಬಾ ಭೀತಿಯಿಂದ ಶೈಥಿಲ್ಯ ಹೊಂದಿದ ಅವಯವಗಳುಳ್ಳವನಾಗಿಯೂ ಮನಸ್ಸ್ವಾಸ್ಥ್ಯವಿಲ್ಲವೆಂದು ಅರಿಕೆಮಾಡಿಕೊಂಡು, ಈ ಶ್ಲೋಕದಲ್ಲಿ ತನಗೆ ದಿಕ್ಕೇ ತಿಳಿಯದಹಾಗಿದೆ, ಪ್ರಸನ್ನನಾಗಿ ಸುಖವನ್ನುಂಟುಮಾಡೆಂದು ಪ್ರಾರ್ಥಿಸುತ್ತಾನೆ —**ತೇ**--ವಿಶ್ವರೂಪಿಯಾಗಿರುವ ನಿನ್ನ, **ದಂಷ್ಟ್ರಾಕರಾಳಾನಿ**-ಕೋರೆದಾಡಿಗಳಿಂದ ಕ್ರೂರಗಳಾಗಿರುವ, ಮತ್ತು **ಕಾಲಾನಲಸನ್ನಿಭಾನಿ**-ಪ್ರಳಯಕಾಲದ ಅಗ್ನಿಗೆ ಸಮಾನಗಳಾದ, **ಮುಖಾನಿ**-ಮುಖಗಳನ್ನು, **ದೃಷ್ಟ್ವೈವ**-ನೋಡಿದುದರಿಂದಲೇ, **ದಿಶೋನಜಾನೇ**-ದಿಕ್ಕುಗಳೇ ತೋಚುವುದಿಲ್ಲವು, **ನಲಭೇಚಶರ್ಮ**-ಯಾವಾಗ ಮನಸ್ಸ್ವಾಸ್ಥ್ಯವಿಲ್ಲವೋ ಆಗ, ಸುಖವನ್ನೂ ಹೊಂದಲಾರೆನು, **ಹೇ ದೇವೇಶ**-ಓ ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೂ ನಿಯಾಮಕನೇ! **ಹೇ ಜಗನ್ನಿವಾಸ**-ಓ ಜಗತ್ತೇ ನಿವಾಸವಾಗಿವುಳ್ಳವನೇ! ಅಥವಾ ಜಗತ್ತುಗಳಿಗೆಲ್ಲಾ ಆಶ್ರಯನೇ, **ಪ್ರಸೀದ**-ಪ್ರಸನ್ನನಾಗು, ಕೃಪೆಮಾಡಬೇಕು ಎಂಬ ತಾತ್ಪರ್ಯವು || ೨೫ ||

**ಭಾಷ್ಯಾರ್ಥವು:—**ಎಲ್ಲಾ ಅವಯವಗಳಿಗಿಂತಲೂ ಮುಖವು ತುಂಬಾ ಭೀಷಣವಾದುದಾಗಿ ಇತ್ತು ಎಂಬುದನ್ನು ತಿಳಿಸುವದಕ್ಕಾಗಿ ಪ್ರವೃತ್ತವಾದುದು ಈ ಶ್ಲೋಕವು. ತುಂಬಾ ತನಗೆ ಭಯಉಂಟಾಗಿದೆ. ಪ್ರಸನ್ನನಾಗು ಎಂದು ಅರ್ಜುನನು ಪ್ರಾರ್ಥಿಸುತ್ತಾನೆ—**ಯುಗಾಂತಕಾಲಾನಲವತ್ಸರ್ವಸಂಹಾರೇ**-ಯುಗದಕೊನೆಯಲ್ಲಿ ಉಂಟಾಗುವ ಪ್ರಳಯಕಾಲದ ಅಗ್ನಿಯ ಹಾಗೆ ಸಮಸ್ತ ಸೃಷ್ಟಿಯ ಸಂಹಾರದಲ್ಲಿ ಎಂದರೆ ಯಾವುದೂ ಇಲ್ಲದಹಾಗೆ ನಾಶವಲ್ಲವು, ಈಗ ಬಹುವಾಗಿ ತೋರುವದೆಲ್ಲಾ ಸ್ವಾಮಿ ಸಙ್ಕಲ್ಪದಿಂದ ನಾಮರೂಪಗಳಿಗೆ ಅನರ್ಹವಾದ ಸೂಕ್ಷ್ಮದೆಶೆಯನ್ನು ಹೊಂದಿಸುವ ಕಾಲದಲ್ಲಿ, **ಪ್ರವೃತ್ತಾನಿ**-ಪ್ರವರ್ತಿಸಿದ **ಅತಿಘೋರಾಣಿ**-ಇದು **ದಂಷ್ಟ್ರಾಕರಾಳಾನಿ**-ಎಂಬುದರ ಅರ್ಥವು, ತುಂಬಾ ಕ್ರೂರವಾದ, **ತವಮುಖಾನಿ ದೃಷ್ಟ್ವಾ**-ನಿನ್ನ ಮುಖಗಳನ್ನು ನೋಡಿ, **ದಿಶೋ ನಜಾನೆ**-ದಿಕ್ಕುಗಳನ್ನು ನಾನು ತಿಳಿಯೆನು, ಎಂದರೆ ದಿಕ್ಕುಗಳೇ ನನಗೆ ಕಾಣಬರುವದಿಲ್ಲವೆಂಬ ತಾತ್ಪರ್ಯವು, **ಸುಖಂಚ ನಲಭೇ**-ಮನಸ್ಸಿನ ಅನುಕೂಲಾವಸ್ಥೆಯೇ ಸುಖವಾದುದರಿಂದ, ಅದು ಇಲ್ಲದುದರಿಂದ ಸುಖವನ್ನೂ ನಾನು ಹೊಂದಲಾರೆನು. **ಹೇ ಜಗತಾಂ ನಿವಾಸ**-ಜಗತ್ತುಗಳಿಗೆಲ್ಲಾ ಆಧಾರಭೂತನಾಗಿ ಶೇಷಿಯಾಗಿರುವದರಿಂದ ಆಶ್ರಯಭೂತನೇ! **ಜಗನ್ನಿವಾಸ**-ಎಂಬುದಕ್ಕೆ ಜಗತ್ತುಗಳನ್ನೆಲ್ಲಾ ಆವಾಸವಾಗಿವುಳ್ಳವನೇ ಎಂದು ನಾರಾಯಣಶಬ್ದದ ಬಹುವ್ರೀಹ್ಯರ್ಥವಹಾಗೆ ಅರ್ಥಮಾಡಬಹುದು, ಆದರೆ ಈ ವಿಶ್ವರೂಪದರ್ಶನದಿಂದ ಪ್ರಾಪ್ತವಾದ ಅಭಿಪ್ರಾಯವು ಸರ್ವಾಧಾರತ್ವವಾಗಿ ಸರ್ವ ನಿಯಂತೃತ್ವ

**ಭಾ. ಯುಗಾಂತ ಕಾಲಾನಲವತ್ಸರ್ವ ಸಂಹಾರೇ ಪ್ರವೃತ್ತಾನ್ಯತಿಘೋರಾಣಿ ತವ ಮುಖಾನಿ ದೃಷ್ಟ್ವಾದಿಶೋ ನಜಾನೇ, ಸುಖಂ ಚ ನಲಭೇ, ಜಗತಾಂ ನಿವಾಸ, ದೇವೇಶ-ಬ್ರಹ್ಮಾದೀನಾಮೀಶ್ವರಾಣಾಮಪಿ ಪರಮಮಹೇಶ್ವರ, ಮಾಂ ಪ್ರತಿ ಪ್ರಸನ್ನೋಭವ, ಯಥಾಹಂ ಪ್ರಕೃತಿಂಗತೋ ಭವಾಮಿ, ತಥಾ ಕುರ್ವಿತ್ಯರ್ಥಃ ॥ ೨೫ ॥**

---

ಸರ್ವ ಶೇಷಿತ್ವಭಾವಗಳಾದುದರಿಂದ **ಜಗನ್ನಿವಾಸ**-ಎಂಬಲ್ಲಿ ತತ್ಪುರುಷಾರ್ಥವನ್ನೇ ಶ್ರೀಯತಿ ವರ್ಯರು ಸ್ವೀಕರಿಸಿರುತ್ತಾರೆ. ಇದನ್ನೇ ಮುಂದಿನ ಅವತಾರಿಕೆಯಲ್ಲೂ **"ಸ್ವಾಯತ್ತ ಸ್ಥಿತಿ ಪ್ರವೃತ್ತಿತ್ವಂ ದರ್ಶಯನ್"** ಎಂದು ತೋರಿಸಿರುತ್ತಾರೆ. ಆದರೆ **ಜಗನ್ನಿವಾಸ**-ಎಂಬುದಕ್ಕೆ ಬಹುವ್ರೀಹಿ ಅರ್ಥವನ್ನು ಹೇಳಿದರೆ **ಅಹಮಾತ್ಮಾಗುಡಾಕೇಶ**-ಎಂಬಲ್ಲಿ ಹೇಳಲ್ಪಟ್ಟ ಸರ್ವ ಜಗತ್ತಿನ ವ್ಯಾಪ್ತಿಯು ತೋರಿಬರುವದರಿಂದ, ಸ್ವಾಮಿಗೆ ನಿವಾಸವಾಗಿರುವ ಸರ್ವ ಜಗತ್ತೂ ಎಂದಿಗೂ ಮಿಥ್ಯೆಯಾಗಲಾರದೆಂಬ ಭಾವವೂ ಸೂಚಿತವಾಗುತ್ತದೆ. **ದೇವೇಶ**-ಎಂದರೆ **ಬ್ರಹ್ಮಾದೀನಾಮೀಶ್ವರಾಣಾಮಪಿ ಪರಮ ಮಹೇಶ್ವರ**-ಚತುರ್ಮುಖರುದ್ರೇಂದ್ರಾದಿಗಳೂ ತಮ್ಮ ತಮ್ಮಗಳ ಲೋಕಕ್ಕೆ ಅಧಿಪತಿಗಳಾಗಿ ಈಶ್ವರರು; ಇದು ದೇವಶಬ್ದದಿಂದ ತೋರಿ ಬರುವ ತಾತ್ಪರ್ಯವು, ಅಂತಹ ಈಶ್ವರರುಗಳಿಗೂಕೂಡ **ಮಹೇಶ್ವರ**-ಶ್ರೇಷ್ಠನಾದ ನಿಯಾಮ ಕನಾಗಿರುವ ಸ್ವಾಮಿಯೇ! ಎಂಬರ್ಥವು ಈ ವ್ಯಾಖ್ಯಾನವನ್ನು ಶ್ರೀ ಯತಿವರ್ಯರು **"ತಮೀಶ್ವರಾಣಾಂ ಪರಮಂ ಮಹೇಶ್ವರಂ"** ಎಂಬ ಶ್ವೇತಾಶ್ವತರ ವಾಕ್ಯವನ್ನು ಮನಸ್ಸಿನ ಲ್ಲಿಟ್ಟು ಅನುಗ್ರಹಿಸಿರುತ್ತಾರೆ. ಈ ವಿಶ್ವರೂಪ ದರ್ಶನದಿಂದ ಚತುರ್ಮುಖರುದ್ರಾದಿ ದೇವತೆ ಗಳೂ ನಮ್ಮ ಹಾಗೆ ಜೀವಕೋಟಿಗೆ ಸೇರಿ, ಸರ್ವೇಶ್ವರನ ವಿಭೂತಿಗೆ ಸೇರಿದವರಾಗಿ ಈ ಪ್ರಕೃ ತಿಮಂಡಲದ ಅಧಿಕಾರಿಗಳಾಗಿ ನಿಯಮಿಸಲ್ಪಟ್ಟವರೆಂಬುದನ್ನು ತಿಳಿದವನಾದುದರಿಂದಲೇ, **ದೇವೇಶ**-ಲೋಕಾಧಿ ಪತಿಗಳಾದ ದೇವತೆಗಳಿಗೂಕೂಡ ನಿಯಾಮಕನೇ ಎಂಬ ಸಂಬೋಧನೆ ಯೆಂದು ಭಾವಿಸತಕ್ಕದ್ದು. ಆಗಲಿ, ಕಾಲಾನಲಸನ್ನಿಭಾನಿ ಎಂದು ಇಷ್ಟುಮಾತ್ರ ಇರುವಾಗ **ಪ್ರಳಯಕಾಲದ ಕಾಲಾನಿಲ ಸನ್ನಿಭಾನಿ** ಎಂಬ ವ್ಯಾಖ್ಯಾನವು ಹೇಗೆ ಎಂದರೆ, ಕಾಲಾನಲ ಶಬ್ದದಿಂದ ವ್ಯಕ್ತವಾಗಿ ಪ್ರಳಯಕಾಲದ ಅನಲವೆಂಬ ಭಾವವು ತೋರಿಬರುವದರಿಂದ ಹಾಗೆ ವ್ಯಾಖ್ಯಾನವು. **ಮಾಂ ಪ್ರತಿ**-ನನ್ನನ್ನು ಕುರಿತು, **ಪ್ರಸನ್ನೋಭವ**-ಸಂತುಷ್ಟನಾಗಿ ಅನು ಗ್ರಹಿಸುವನಾಗು; ಹೀಗೆ ಹೇಳಿದುದರಿಂದ ಅರ್ಜುನನ ವಿಷಯದಲ್ಲೇನಾದರೂ ಸ್ವಾಮಿಗೆ ಕೋಪವೇ? ಪ್ರಸನ್ನನಾಗು ಎಂದು ಪ್ರಾರ್ಥಿಸಿದನಲ್ಲಾ ಎಂದರೆ ಅರ್ಜುನನ ಮನೋಗತ ವೇನೆಂಬುದನ್ನು ತಿಳಿಸುತ್ತಾರೆ. **ಯಥಾಹಂ ಪ್ರಕೃತಿಂಗತೋ ಭವಾಮಿ**-ನಾನು ಹೇಗೆ ಮೊದಲಿದ್ದ ಸ್ವಭಾವವನ್ನು ಹೊಂದಿದವನಾಗಬೇಕೋ, **ತಥಾಕುರ್ವಿತ್ಯರ್ಥಃ**-ಹಾಗೆ ದಯ ಪಾಲಿಸು, ಎಂಬ ಭಾವವು. ದಿಕ್ಕುಗಳು ಕಾಣುವದಿಲ್ಲವು, ಮನಸ್ಸಿಗೆ ಅನುಕೂಲವಿಲ್ಲ ವೆಂದು ಹೇಳಿ **ಪ್ರಸೀದ** ಎಂದು ಪ್ರಾರ್ಥಿಸಿದರು. ಮೊದಲಿನಹಾಗೆ ಮನಸ್ಸ್ವಸ್ಥ್ಯವುಂಟಾ ಗುವಹಾಗೆ ಅನುಗ್ರಹಿಸು ಎಂಬುದೇ ತಾತ್ಪರ್ಯವೆಂದು ತೋರಿಸಿರುತ್ತಾರೆ ಈ ವಿಶ್ವರೂಪವನ್ನು ಉಪಸಂಹಾರಮಾಡು ಎಂಬ ಭಾವವು. ॥ ೨೫ ॥

**ಭಾಷ್ಯಾವತಾರಿಕೆಯ ಅರ್ಥವು:**—ಏವಂ-ಈ ಪ್ರಕಾರವಾಗಿ, **ಸರ್ವಸ್ಯಜಗತಃ**-ಸಮಸ್ತಜಗತ್ತಿಗೂ, **ಸ್ವಾಯತ್ತಸ್ಥಿತಿಪ್ರವೃತ್ತಿತ್ವಂ**-ತನಗೇನೇ ಅಧೀನವಾದ ಸ್ಥಿತಿಪ್ರವೃತ್ತಿ ಗಳನ್ನು, **ದರ್ಶಯನ್**-ತೋರಿಸುವವನಾಗಿ, ಅವೆರಡನ್ನೂ ಹೇಳಿದುದು ಸೃಷ್ಟಿಗೂಕೂಡ ಉಪ ಲಕ್ಷಣವೆಂದು ಭಾವಿಸತಕ್ಕದ್ದು. **ಪಾರ್ಥಸಾರಥಿಃ**-ಸೌಶೀಲ್ಯಾತಿರೇಕದಿಂದ ಅರ್ಜುನನಿಗೆ ಲೀಲಾ

**ಭಾ. ಅವ. ಏವಂ ಸರ್ವಸ್ಯ ಜಗತಃ ಸ್ವಾಯತ್ತಸ್ಥಿತಿ ಪ್ರವೃತ್ತಿತ್ವಂ ದರ್ಶಯನ್, ಪಾರ್ಥ ಸಾರಥೀ ರಾಜವೇಷಚ್ಛದ್ಮನಾವಸ್ಥಿತಾನಾಂ ಧಾರ್ತರಾಷ್ಟ್ರಾಣಾಂ ಯೌಧಿಷ್ಠಿರೇಷ್ವನುಪ್ರವಿಷ್ಟಾನಾಂ ಚಾಸುರಾಂಶಾನಾಂ ಸಂಹಾರೇಣ ಭೂಭಾರಾವತರಣಂ ಸ್ವಮನೀಷಿತಂ ಸ್ವೇನೈವ ಕರಿಷ್ಯಮಾಣಂ ಪಾರ್ಥಾಯ ದರ್ಶಯಾಮಾಸ; ಸಚಪಾರ್ಥೋ**

ಸಾರಥಿಯಾಗಿರುವ ಶ್ರೀ ಕೃಷ್ಣನು, **ರಾಜವೇಷಚ್ಛದ್ಮನಾವಸ್ಥಿತಾನಾಂ**-ತಾವುಗಳು ರಾಜರಾಗಿರುವದೇ ಶಾಶ್ವತವೆಂದು ಭಾವಿಸಿ ಬಂದಿರುವ, ರಾಜವೇಷರೂಪ ಉಪಾಧಿಯಲ್ಲಿರುವ, ಎಂದರೆ ಅಶಾಶ್ವತಗಳಾದ ರಾಜವೇಷಧಾರಿಗಳಾಗಿರುವ. **ಧಾರ್ತರಾಷ್ಟ್ರಾಣಾಂ**-ಧೃತರಾಷ್ಟ್ರನ ಮಕ್ಕಳಾಗಿಯೂ, ಆತನ ಸಂಬಂಧಿಗಳಾಗಿಯೂ, ಆತನ ಕಡೆಯವರಾಗಿಯೂ ಇರುವವರ ಮತ್ತು **ಯೌಧಿಷ್ಠಿರೇಷು**-ಯುಧಿಷ್ಠಿರರೇ ಮೊದಲಾದಪಾಂಡವರ ಕಡೆಯಲ್ಲೂ, **ಅನುಪ್ರವಿಷ್ಟಾನಾಂ**-ಸೇರಿಕೊಂಡಿರುವ, **ಅಸುರಾಂಶಾನಾಂಚ**-ಅಸುರಾಂಶವಿರುವ ಯೋಧರುಗಳ, **ಸಂಹಾರೇಣ**-ಸರ್ವೇಶ್ವರನ ಸಙ್ಕಲ್ಪಾನುಸಾರ ಯುದ್ಧದಲ್ಲಿ ಸಂಹಾರಮೂಲಕವಾಗಿ, **ಭೂಭಾರಾವತರಣಂ**-ಭೂಭಾರವನ್ನಿಳಿಸುವದು, **ಸ್ವಮನೀಷಿತಂ**-ಸರ್ವೇಶ್ವರನಾದ ತನ್ನ ಇಷ್ಟಾನುಸಾರವಾದುದೆಂಬುದನ್ನು, **ಸ್ವೇನೈವ ಕರಿಷ್ಯಮಾಣಂ**-ತನ್ನಿಂದಲೇ ಮುಂದೆ ಮಾಡಲ್ಪಡತಕ್ಕದ್ದೆಂಬುದನ್ನು, **ಪಾರ್ಥಾಯ ದರ್ಶಯಾಮಾಸ**-ತೋರಿಸಿದನು ಇಲ್ಲಿ **ಸ್ವಮನೀಷಿತವು** ಯಾವುದೆಂದರೆ ಸಾಧು ಪರಿತ್ರಾಣಕ್ಕಾಗಿ ದುಷ್ಟನಿಗ್ರಹವು; ಅಂತಹ ದುಷ್ಟನಿಗ್ರಹವನ್ನೇ ಹಿಂದೆಯೂ ಮಾಡಿದೆನು; ಈಗಲೂ ಮಾಡಲುದ್ಯುಕ್ತನಾಗಿದ್ದೇನೆಂದು ತೋರಿಸುವದಕ್ಕಾಗಿಯೇ ಇಂತಹ ಘೋರ ರೂಪವನ್ನು ಶ್ರೀಕೃಷ್ಣಭಗವಾನರವರು ತಾಳಿದ್ದಾರೆಂಬುದು ಈ **ಸ್ವಮನೀಷಿತ**-ಶಬ್ದದಿಂದ ಸೂಚಿತವು. ಧೃತರಾಷ್ಟ್ರನ ಪುತ್ರರು ತುಂಭಾ ಅಧರ್ಮಿಗಳು, ಅವನ ಕಡೆಯವರೂ ಸಹ ಅವರುಗಳಹಾಗೆ ಲೋಕ ಕಂಟಕರೇ; ಆದುದರಿಂದ ಅವರುಗಳೆಲ್ಲಾ ಯುದ್ಧದಲ್ಲಿ ಮಡಿಯಲೆಂದೇ ಸರ್ವೇಶ್ವರನು ಮೊದಲೇ ಸಙ್ಕಲ್ಪಿಸಿರುತ್ತೇನೆಂಬುದನ್ನೂ ಈ ವಿಶ್ವರೂಪ ದರ್ಶನವಲ್ಲಿ ತೋರಿಸಿದನೆಂಬಭಾವವು ಆದರೆ ಯುಧಿಷ್ಠಿರಾದಿಗಳಕಡೆಯಲ್ಲೂ ಸಹ ಕೆಲವರು ಯುದ್ಧದಲ್ಲಿ ಸಾಯುತ್ತಾರಲ್ಲಾ ಅದು ಹೇಗೆ? ಎಂದರೆ ಅವರೂ ಆಸುರಾಂಶದವರೇ, ಅವರೂ ಸಹ ಯುದ್ಧದಲ್ಲಿ ಸಾಯತಕ್ಕದ್ದೆಂಬುದೇ ಸ್ವಾಮಿಯ ಸಙ್ಕಲ್ಪವಾದುದರಿಂದ, ಹೀಗೆ ಇಂತಹ ಅಧರ್ಮಿಗಳಾಗಿಯೂ ಲೋಕಕಂಟಕರಾಗಿಯೂ ಇರುವವರು ಸಾಯುವದರಿಂದ ಭೂಭಾರವು ಇಳಿಯಬೇಕೆಂಬುದೇ ಶ್ರೀಕೃಷ್ಣನಿಗೆ ಅಭಿಮತವಾಗಿರುವದರಿಂದ, ಯುದ್ಧವೂ ಹೇಗೂ ನಡೆಯುತ್ತದೆ ನೋಡು ಎಂದು ಅರ್ಜುನನಿಗೆ ತೋರಿಸುವ ಪ್ರಕರಣವೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಇದರಿಂದ ಹಿಂದೆ ಹೇಳಿರುವದಕ್ಕೂ ಮುಂದಿನ ಐದು ಶ್ಲೋಕಗಳಿಗೂ ಸಂಗತಿಯನ್ನು ತಿಳಿಸಿದರು. ಅರ್ಜುನನ ಇಷ್ಟಾನಿಷ್ಟವು ಇಲ್ಲಿ ಅಷ್ಟು ಮುಖ್ಯವಲ್ಲವು, ತನ್ನ ಸಂಕಲ್ಪಾನುಸಾರ ಹೇಗೂ ನಡೆಯುವದು ಸಿದ್ಧವು; ಆದುದರಿಂದ ಅರ್ಜುನನ ಪ್ರಯತ್ನಾದಿಗಳು ವ್ಯಾಜರೂಪಗಳಾಗಿ ಸಹಕಾರಿಗಳೇ ವಿನಾ ಬೇರೆಯಲ್ಲವೆಂದು ಭಾವವು. ಆದುದರಿಂದಲೇ **ಸ್ವೇನೈವ ಕರಿಷ್ಯಮಾಣಮ್** ಎಂದು ಅವಧಾರಣದೊಂದಿಗೆ ಪ್ರಯೋಗವು. ಹಾಗೆ ನಡೆಯಹೋಗುತ್ತದೆಂದು ಮುಂದೆ ಶ್ರೀಕೃಷ್ಣನು ತೋರಿಸುತ್ತಾನೆಂದೂ, ಅದನ್ನೆಲ್ಲಾ ಅರ್ಜುನನು ಕಂಡು ವಿಸ್ಮಿತನಾಗಿ ಶ್ರೀಕೃಷ್ಣನಲ್ಲಿ ಅರಿಕೆಮಾಡಿಕೊಳ್ಳುತ್ತಾನೆಂದೂ ಮುಂದಿನವಾಕ್ಯದಿಂದ ಹೇಳಲ್ಪಡುತ್ತದೆ. **ಸಚ ಪಾರ್ಥಃ**-ಆ ವಿಶ್ವರೂಪವನ್ನು ಅತಿ ಭಯದಿಂದಲೂ ಆಶ್ಚರ್ಯದಿಂದಲೂ ನೋಡುತ್ತಿರುವ ಅರ್ಜುನನು, ಭಗವಂತನ **ಸೃಷ್ಟ್ಯತ್ವಾದಿಕಂ-ಸೃಷ್ಟಿಸೋಣವೇ ಮೊದಲಾದವುಗಳನ್ನುಳ್ಳ ಇಲ್ಲಿ ಆದಿ ಶಬ್ದ**

**ಭಾ. ಭಗವತಃ ಸ್ರಷ್ಟೃತ್ವಾದಿಕಂ ಸರ್ವೈಶ್ವರ್ಯಂ ಸಾಕ್ಷಾತ್ಕೃತ್ಯ ತಸ್ಮಿನ್ನೇವ ಭಗವತಿ ಸರ್ವಾತ್ಮನಿ ಧಾರ್ತರಾಷ್ಟ್ರಾದೀನಾ ಮುಪಸಂಹಾರ ಮನಾಗತಮಪಿ, ತತ್ಪ್ರಸಾದ ಲಬ್ಧೇನ ದಿವ್ಯೇನ ಚಕ್ಷುಷಾ ಪಶ್ಯನ್ನಿದಂ ಪ್ರೋವಾಚ –**

---

ದಿಂದ ಸ್ಥಿತಿ, ನಿಯಮನ, ಲಯಾದಿಗಳು ನೇರವೇರುವವು. **ಸರ್ವೈಶ್ವರ್ಯಂ**-ಸಮಸ್ತ ವಿಭೂತಿಗಳೊಂದಿಗಿರುವ ಐಶ್ವರ್ಯವನ್ನು, **ಸಾಕ್ಷಾತ್ಕೃತ್ಯ**-ಸಾಕ್ಷಾತ್ಕರಿಸಿ. **ತಸ್ಮಿನ್ನೇವ ಭಗವತಿ ಸರ್ವಾತ್ಮನಿ**-ಸಮಸ್ತಕ್ಕೂ ಆತ್ಮನಾಗಿರುವ ಆ ಭಗವಂತನಲ್ಲೇ, **ಧಾರ್ತರಾಷ್ಟ್ರಾಣಾ ಮುಪಸಂಹಾರ ಮನಾಗತಮಪಿ**-ಈಗ ನಡೆಯದೇ ಇದ್ದರೂ ಮುಂದೆನಡೆಯುವ ಧಾರ್ತರಾಷ್ಟ್ರರುಗಳ ಸಂಹಾರವನ್ನು, **ತತ್ಪ್ರಸಾದಲಬ್ಧೇನ ದಿವ್ಯೇನ ಚಕ್ಷುಷಾ** ಆ ಭಗವಂತನ ಕೃಪಾ ಬಲದಿಂದ ಹೊಂದಿದ ದಿವ್ಯ ಚಕ್ಷುಸ್ಸಿನಿಂದ, **ಪಶ್ಯನ್**-ನೋಡಿದವನಾಗಿ, **ಇದಂ ಪ್ರೋವಾಚ**-ಧಾರ್ತರಾಷ್ಟ್ರಾದಿಗಳನ್ನು ಕುರಿತುದೃಶ್ಯವಾಗಿ ಮುಂದೆ ಹೇಳುವಹಾಗೆ ಭಗವಂತನಲ್ಲಿ ಅರಿಕೆಮಾಡಿಕೊಳ್ಳುತ್ತಾನೆ. ಇದರಿಂದ ಅರ್ಜುನನು ಸ್ವಾಮಿಸಙ್ಕಲ್ಪದ ಅಪ್ರತಿಹತತ್ವವನ್ನು ಗ್ರಹಿಸಿದವನಾಗಿ, ತಾನಿಲ್ಲದಿದ್ದರೂ ತನ್ನಿಷ್ಟಾನುಸಾರ ಭಗವಂತನು ನಡೆಸಿಕೊಳ್ಳುವನಾದುದರಿಂದ, ಅದಕ್ಕೆ ವಿರೋಧವಾಗಿ ಯಾವುದೂ ನಡೆಯುವದಿಲ್ಲವೆಂಬುದನ್ನೂ ಗ್ರಹಿಸಿದವನಾಗಿ, ಸ್ವಾಮಿಯೇ ತನ್ನನ್ನು ವ್ಯಾಜೀಕರಿಸಿ ತನ್ನ ಸಙ್ಕಲ್ಪವನ್ನು ನಡೆಸಿಕೊಳ್ಳುತ್ತಾನೆಂಬ ಅಂಶವನ್ನು ತಿಳಿದನೆಂಬುದು ಇಲ್ಲಿರುವ **ಅನಾಗತಮಪಿ**-ಎಂಬುದರಿಂದ ಸೂಚಿತವು. ಇನ್ನೂ ನಡೆಯುವದಕ್ಕೆ ಮುಂದೆಯೇ ಪ್ರತ್ಯಕ್ಷವಲ್ಲಿ ತೋರಿಸಿದುದರಿಂದ ಧಾರ್ತರಾಷ್ಟ್ರರ ಮತ್ತು ಅವರ ಕಡೆಯವರ ನಾಶವು ಖಂಡಿತವಾದುದೆಂದು ಅರ್ಜುನನು ನಂಬಿದನೆಂಬುದೂ ತೋರಿಬರುತ್ತದೆ. ಈ ಅವತಾರಿಕೆಯಿಂದ ನಾವು ಮುಖ್ಯವಾಗಿ ಗ್ರಹಿಸತಕ್ಕ ಅಂಶವು ಒಂದುಂಟು. ಭೌತಿಕ ದೈವಿಕ ರೂಪಗಳಲ್ಲಿ ಕೆಲವು ವ್ಯಾಪಾರಗಳು ನಡೆಯುತ್ತವೆ. ಇದಕ್ಕೆ ಚೇತನರ ಕರ್ಮಗಳು ಕಾರಣವಾಗಿದ್ದರೂ, ಮುಖ್ಯವಾಗಿ ಎಲ್ಲವೂ ದೈವಸಙ್ಕಲ್ಪ ಮೂಲಕವಾಗಿಯೇ ನಡೆಯುತ್ತವೆ. ಆದರೆ ಚೇತನರುಗಳ ಮೂಲಕವಾಗಿನಡೆಯುವ ವ್ಯಾಪಾರಗಳ ವಿಷಯದಲ್ಲಿ ಚೇತನರ ಸಙ್ಕಲ್ಪವೂ ಭಗವತ್ಸಙ್ಕಲ್ಪವೂ ಎರಡೂ ಆವಶ್ಯಕವು. ಎರಡೂ ಇಲ್ಲದೆ ಇವು ನಡೆಯಲಾರವು. ಈ ಅಂಶವೇ ಮುಂದೆ **"ಅಧಿಷ್ಠಾನಂ ತಥಾಕರ್ತಾ"** ಎಂಬಲ್ಲಿ (ಗೀ. ೧೮-೧೪) ಉಪಪಾದಿತವು. ಇವೆರಡರಲ್ಲಿ ಪ್ರಧಾನವಾದುದು ಭಗವತ್ಸಙ್ಕಲ್ಪವು. ಚೇತನ ಸಙ್ಕಲ್ಪವು ಭಗವಂತನಿಗೆ ಅಧೀನವಾಗಿ ಅತನ ಪ್ರೇರಣೆಯಿಂದ ನಡೆಯತಕ್ಕದಾದುದರಿಂದ ವ್ಯಾಜಮಾತ್ರವಾದುದೆಂದೂ ಹೇಳಲ್ಪಟ್ಟಿತು. ಈ ಯುದ್ಧದಲ್ಲೂ ಯಾರು ಯಾರು ದುಷ್ಟರೋ ಲೋಕ ಕಂಟಕರೋ ಅವರುಗಳನ್ನು ಧಾರ್ತರಾಷ್ಟ್ರರ ಕಡೆಯಲ್ಲೂ, ಕೆಲವರನ್ನು ಯುಧಿಷ್ಠಿರರ ಕಡೆಯಲ್ಲೂ ಇರುವಹಾಗೆ ಸೇರಿಸಿ ಹತರಾಗುವಹಾಗೆ ಮಾಡಿ ಭೂಭಾರಾವತರಣರೂಪ ಸುಸಙ್ಕಲ್ಪವನ್ನು ಹೃಷೀಕೇಶನು ನೆರವೇರಿಸಿಕೊಳ್ಳುತ್ತಾನೆ. ಮುಂದೆ ಯಾರು ಯಾರು ಹತರಾಗುವರೆಂಬುದನ್ನೂ ಕೂಡ ಈಗಲೇ ಅರ್ಜುನನಿಗೆ ತೋರಿಸಿರುತ್ತಾರೆ. ಆದುದರಿಂದ ಮುಂದೆ **"ನಿಮಿತ್ತಮಾತ್ರಂ ಭವ ಸವ್ಯಸಾಚಿನ್"** ಎಂದು (ಗೀ. ೧೧-೩೩ ನೆಯ ಶ್ಲೋಕದಲ್ಲಿ) ನೀನು ನಿಮಿತ್ತಮಾತ್ರಕ್ಕೆ ಮುಂದಾಳಾಗಿರುವ ಹಾಗೆ ನಟಿಸು, ಮಿಕ್ಕಿದ್ದೆಲ್ಲಾ ನಾನು ನಡೆಸಿ ಬಿಡುತ್ತೇನೆಂದು ಹೇಳುತ್ತಾರೆ. ಈ ಅವತಾರಿಕೆಯು ಮುಂದಿನ ಐದು ಶ್ಲೋಕಗಳಿಗೂ ಅನ್ವಯಿಸುವಹಾಗೆ ಭಾವಿಸತಕ್ಕದ್ದು.

**ಮೂ, ಅಮೀ ಸರ್ವೇ ಧೃತರಾಷ್ಟ್ರಸ್ಯ ಪುತ್ರಾ ಸ್ಸರ್ವೈಸ್ಸಹೈವಾವನಿಪಾಲಸಂಘೈಃ ।**
**ಭೀಷ್ಮೋದ್ರೋಣ ಸ್ಸೂತಪುತ್ರಸ್ತಥಾಸೌ ಸಹಾಸ್ಮದೀಯೈರಪಿಯೋಧಮುಖ್ಯೈಃ॥**
**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ ದಂಷ್ಟ್ರಾಕರಾಳಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾನ್ತರೇಷು ಸಂದೃಶ್ಯನ್ತೇ ಚೂರ್ಣಿತೈರುತ್ತಮಾಙ್ಗೈಃ ॥೨೭**

**ಮೂಲಕ್ಕೆ ಅರ್ಥವು:**—ಈ ಎರಡು ಶ್ಲೋಕಗಳೂ ಸೇರಿ ಏಕಾನ್ವಯವು. ಸಮಸ್ತರಾದ **ಅಮೀ ಸರ್ವೇ ಧೃತರಾಷ್ಟ್ರಸ್ಯ ಪುತ್ರಾಃ**-ಈ ಸಮಸ್ತರಾದ ನೂರೊಂದು ದುರ್ಯೋಧನ ದುಶ್ಶಾಸನಾದಿ ಧೃತರಾಷ್ಟ್ರನ ಪುತ್ರರುಗಳೆಲ್ಲರೂ ಮತ್ತು ಮಹಾರಥರಾದ ಭೀಷ್ಮರೂ, ದ್ರೋಣರೂ, **ತಥಾ**-ಹಾಗೆಯೇ, **ಅಸೌ ಸೂತಪುತ್ರಃ** ಈ ಸೂತಪುತ್ರನಾದ ಕರ್ಣನೂ, **ಸರ್ವೈಃ ಅವನಿಪಾಲಸಂಘೈಸ್ಸಹ**-ಇವರುಗಳಿಗೆ ಸಹಾಯವಾಗಿ ಬಂದ ಸಮಸ್ತರಾಜರುಗಳ ಸಮೂಹದೊಂದಿಗೂ ಸಹ, ಮತ್ತು **ಅಸ್ಮದೀಯೈರಪಿ ಯೋಧಮುಖ್ಯೈಸ್ಸಹ**-ನಮ್ಮ ಪಕ್ಷದವರಾದ ಕೆಲವು ದೃಷ್ಟದ್ಯುಮ್ನಾದಿ ಮುಖ್ಯರಾದ ಯೋಧರುಗಳಿಂದಲೂ ಸಹ, **ದಂಷ್ಟ್ರಾಕರಾಳಾನಿ**-ಕೋರೆದಾಡೆಗಳಿಂದ ಕ್ರೂರವಾಗಿರುವ, ಆ ಕಾರಣದಿಂದಲೇ **ಭಯಾನಕಾನಿ**-ಭಯೋತ್ಪಾದಕಗಳಾದ, **ತೇ ವಕ್ತ್ರಾಣಿ**-ನಿನ್ನ ಬಾಯಿಗಳನ್ನು ಕುರಿತು, **ತ್ವರಮಾಣಾಃ**-ಕಾಲಚೋದಿತರಾದುದರಿಂದ ತ್ವರೆಯಿಂದ ಹೋಗುವವರಾಗಿ, ದೀಪದಲ್ಲಿ ಬೀಳುವ ಶಲಭಗಳು ಎಂದರೆ, ಪತಂಗ ಹುಳುಗಳು ಹೇಗೆ ದೀಪವನ್ನು ಕುರಿತು ತ್ವರೆಯಾಗಿ ಬಂದು ಬೀಳುತ್ತವೋ, ಹಾಗೆ ಎಂಬ ಭಾವವು, **ವಿಶನ್ತಿ**-ನಾಶಹೊಂದಲು ಪ್ರವೇಶಿಸಿರುತ್ತಾರೆ **ಕೇಚಿತ್**-ಇನ್ನು ಕೆಲವರು, **ದಶನಾನ್ತರೇಷು**-ನಿನ್ನ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡವರಾಗಿ, **ಚೂರ್ಣಿತೈರುತ್ತಮಾಂಗೈಃ**-ಆ ಹಲ್ಲುಗಳಿಂದ ಪುಡಿಪುಡಿಯಾದ ಶಿರಸ್ಸುಗಳಿಂದ, **ಸಂದೃಶ್ಯನ್ತೇ**-ಕಾಣಲ್ಪಡುತ್ತಾರೆ, ಇಲ್ಲಿ ಕಣ್ಣೆದುರಿಗೇನೆ ಯುದ್ಧಕ್ಕೆ ದುರ್ಯೋಧನಾದಿ ಧೃತರಾಷ್ಟ್ರಪುತ್ರರೂ ಭೀಷ್ಮದ್ರೋಣಾದಿಗಳೂ ನಿಂತಿರುವದರಿಂದ **ಅಮೀ**-ಎಂಬ ಪ್ರಯೋಗವು ಇವರುಗಳಲ್ಲಿ ಧೃತರಾಷ್ಟ್ರನ ಪುತ್ರರುಗಳಾದ ದುರ್ಯೋಧನ ದುಶ್ಶಾಸನಾದಿಗಳು ಮಹಾ ಪಾಪಿಷ್ಠರಾಗಿ ಅಂತಹ ದುಷ್ಕೃತಿಗಳ ವಿನಾಶವು ಸರ್ವೇಶ್ವರನಿಗೆ ಪರಮ ಹಿತವಾದುದರಿಂದ **ಮೊದಲು** ಅವರುಗಳು **ಅಮೀ**-ಎಂದು ನಿರ್ದೇಶಿಸಲ್ಪಟ್ಟರೆಂದು ಭಾವಿಸತಕ್ಕದ್ದು. ಅವರಲ್ಲಿ ದುಷ್ಟ ಚತುಷ್ಟಯರೆಂದು ಹೇಳಿಸಿಕೊಳ್ಳುವವರು ನಾಲ್ವರು. ಅವರು ಯಾರೆಂದರೆ ದುರ್ಯೋಧನ ದುಶ್ಶಾಸನ, ಕರ್ಣ, ಶಕುನಿ ಆದುದರಿಂದಲೇ ಆ ನಾಲ್ವರಲ್ಲಿ ಮೊದಲು ಮೂವರು ಹೇಳಲ್ಪಟ್ಟರು. ಶಕುನಿಯ ವರ್ಜೆಯು ಕೀಳಾದುದರಿಂದ ಆತನು ಇಲ್ಲಿ ಹೇಳಲ್ಪಡಲಿಲ್ಲವು. ಆದರೆ ಇದನ್ನು ಹೇಳಿಬಿಟ್ಟು, ಉತ್ತರಾರ್ಧದಲ್ಲಿ **"ಭೀಷ್ಮೋ ದ್ರೋಣ ಸ್ಸೂತ ಪುತ್ರಸ್ತಥಾಸೌ"** ಎಂದು ಪ್ರತ್ಯೇಕಿಸಿ ಹೇಳಲು ಕಾರಣವೇನು? **ಅಮೀ** ಶಬ್ದದಿಂದಲೂ **ಆದಿ** ಶಬ್ದದಿಂದಲೂ ಇವರುಗಳು ಹೇಳಲ್ಪಡುವದಿಲ್ಲವೋ ಎಂದರೆ, **ಸೂತಪುತ್ರಸ್ತಥಾಸೌ** ಎಂಬಲ್ಲಿ ಕರ್ಣನು ಪೃಥಾಪುತ್ರನಾಗಿ ವಧಿಸಲ್ಪಡಕೂಡದೆಂದು ಪ್ರಾರ್ಥಿಸಲ್ಪಟ್ಟಿರುವದರಿಂದ ಅವನೂಕೂಡ ಹತನಾಗುವನೇ ಎಂಬ ವಿಸ್ಮಯವನ್ನು ಪ್ರದರ್ಶಿಸುವದಕ್ಕಾಗಿ **ಅಸೌ** ಎಂಬ ಪ್ರಯೋಗವು ಹಾಗೆಯೇ ಭೀಷ್ಮದ್ರೋಣರುಗಳೂ ಧಾರ್ಮಿಕರಾಗಿ ಭೀಷ್ಮರು ಪಿತಾಮಹರಾಗಿ, ದ್ರೋಣರೂ ಬ್ರಾಹ್ಮಣಕುಲಕ್ಕೆ ಸೇರಿದವರಾದುದರಿಂದ ಕರ್ಣನಹಾಗೆ ವಧ್ಯರಲ್ಲವೆಂದು ತಿಳಿದುಕೊಂಡಿದ್ದನು. ಅವರುಗಳಲ್ಲಿ ಭೀಷ್ಮರು ಪರಮ ಭಾಗವತರಾದುದರಿಂದ ಪ್ರಥಮ ನಿರ್ದೇಶವು; ಅಂತವರನ್ನೂ ಕೊಲ್ಲಬಹುದೇ ಎಂದಲ್ಲವೇ ಆತನಿಗೆ ವಿಷಾದಕ್ಕೆ ಕಾರಣವಾಗಿದ್ದುದು. ಈಗ ಸ್ವಾಮಿ ಸಙ್ಕಲ್ಪದಿಂದಲೇ ಈ ಮೂವರು ಹತರಾಗುವರು ಎಂದು ತಿಳಿದನಂತರ, ಸ್ವಾಮಿಯ ಆಜ್ಞಾನುಸಾರ ಯುದ್ಧಮಾಡಲು ಮುಂದೆ ಅಭ್ಯಂತರವನ್ನೇನೂ ಹೇಳುವದು ಸರಿಯಲ್ಲವೆಂಬ

ಭಾ. ಅಮೀ ಧೃತರಾಷ್ಟ್ರಸ್ಯ ಪುತ್ರಾ ದುರ್ಯೋಧನಾದಯ ಸ್ಸರ್ವೇ ಭೀಷ್ಮೋ ದ್ರೋಣ ಸ್ಸೂತಪುತ್ರಃ ಕರ್ಣಶ್ಚ, ತತ್ಪಕ್ಷೀಯೈ ರವನಿಪಾಲಸಮೂಹೈ ಸ್ಸರ್ವೈ ರಸ್ಮ

ಭಾವವೂ ಇಲ್ಲಿ ದ್ಯೋತಿತವು ಸ್ವಾಮಿಸಙ್ಕಲ್ಪಾನುಸಾರ ನಡೆಯುವ ಸಂದರ್ಭದಲ್ಲಿ ಸಂಪೂರ್ಣ ಪರಾಧೀನನಾದ ತನ್ನಿಂದ ಸ್ವಾಮಿಯ ಆಜ್ಞಾನುಸಾರ ವರ್ತಿಸುವದೇ ತನಗೆ ಸ್ವರೂಪವೆಂಬ ಭಾವವೂ ದ್ಯೋತಿತವು. ಆದುದರಿಂದ **ಯುಧ್ಯಸ್ವ ವಿಗತಜ್ವರಃ**-ಇತ್ಯಾದಿ ಉಪದೇಶವು. ಆಜ್ಞಾರೂಪವಾಗಿ ಅವಶ್ಯ ಕರ್ತವ್ಯವೆಂಬ ಭಾವವನ್ನು ಅರ್ಜುನನು ಇದರಿಂದ ಗ್ರಹಿಸಿರಬೇಕೆಂಬುದೂ ತೋರಿಬರುತ್ತದೆ. ಇವರುಗಳೆಲ್ಲಾ ಅಧರ್ಮಿಯಾದ ದುರ್ಯೋಧನನ ಪ್ರವೃತ್ತಿಗಳಿಗೆ ಸಹಾಯಭೂತರಾದುದರಿಂದಲೂ, ದುರ್ಯೋಧನ ದುಶ್ಶಾಸನರು, ಪರಸ್ತ್ರೀಯಾಗಿ ಮಹಾ ಪತಿವ್ರತೆಯಾಗಿರುವ ದ್ರೌಪದಿಗೆ ನೆರೆದ ಸಭೆಯಲ್ಲಿ ಅವಮಾನಪಡಿಸಿದುದರಿಂದಲೂ ಲೋಕಕಂಟಕರಾಗಿದ್ದುದರಿಂದಲೂ ಹನನ ಯೋಗ್ಯರು. ಭೀಷ್ಮ ದ್ರೋಣ ಅಶ್ವತ್ಥಾಮಾದಿಗಳಾದರೊ, ಇಂತಹ ಅನ್ಯಾಯವು ರಾಜ ಸಭೆಯಲ್ಲಿ ನಡೆಯುವಾಗಲೂ ತಟಸ್ಥರಾಗಿದ್ದುಕೊಂಡು, ದ್ರೌಪದಿಯ ಧರ್ಮಪ್ರಶ್ನೆಗೆ ಉತ್ತರವನ್ನು ಕೊಡದೆ, ಅನಂತರವೂ ಆ ಅಧರ್ಮಿಯೊಂದಿಗೇನೆ ಸೇರಿಕೊಂಡು ಈ ಅಧರ್ಮ ಯುದ್ಧದಲ್ಲಿ ಸಹಾಯಕರಾಗಿಯೂ ಬಂದುದರಿಂದ ವಧ್ಯರೇಸರಿ ಎಂಬ ಭಾವವೂ ತೋರಿಬರುತ್ತದೆ. ಅಧರ್ಮಸಂಬಂಧವಿರುವರೆಲ್ಲರೂ ಭಗವನ್ನಿಗ್ರಹಕ್ಕೆ ಗುರಿಯಾಗುವರೆಂಬುದೂ ಇಲ್ಲಿಶಿಕ್ಷಿತವು ಎಂಬುದನ್ನೂ ಗ್ರಹಿಸತಕ್ಕದ್ದು.

**ಭಾಷ್ಯಾರ್ಥವು :— ಅಮೀಧೃತರಾಷ್ಟ್ರಸ್ಯ ಪುತ್ರಾಃ**-ಈಗ ಯುದ್ಧಕ್ಕಾಗಿ ಬಂದಿರುವ ಈ ಧೃತರಾಷ್ಟ್ರನ ಪುತ್ರರಾದ, **ದುರ್ಯೋಧನಾದಯಸ್ಸರ್ವೇ**-ಸಮಸ್ತರಾದ ದುರ್ಯೋಧನನೇ ಮೊದಲಾದವರು, ಇಲ್ಲಿನ ಆದಿಶಬ್ದದಿಂದ ದುಶ್ಶಾಸನನೇ ಮೊದಲಾದ ಮಿಕ್ಕ ನೂರು ಮಂದಿ ಮಕ್ಕಳು ಹೇಳಲ್ಪಟ್ಟರು. ಜ್ಞಾನಿಗಳಾಗಿಯೂ ಬ್ರಹ್ಮವಿತ್ತಾಗಿಯೂ ಇರುವ ಭೀಷ್ಮರೂ ಆಚಾರ್ಯರಾದ ದ್ರೋಣರೂ, ಕುಂತೀಪುತ್ರನಾಗಿ ಸಹೋದರನಾಗಿ ಸೂತಪುತ್ರನೆನಿಸಿದ ಕರ್ಣನೂ ಸಹ, **ತತ್ಪಕ್ಷೀಯೈಃ**-ಅವರಪಕ್ಷಕ್ಕೇನೆ ಸೇರಿದ, **ಅವನಿಪಾಲ ಸಮೂಹೈಃ**-ರಾಜರುಗಳ ಸಮೂಹವಾದ, **ಸರ್ವೈಃ**-ಸಮಸ್ತರಿಂದಲೂ ಮತ್ತು **ಅಸ್ಮದೀಯೈರಪಿ**-ನಮ್ಮ ಪಕ್ಷಕ್ಕೂ ಸೇರಿದವರಾಗಿರುವ **ಕೈಶ್ಚಿತ್**-ಎಲ್ಲಿಯೋ ಕೆಲವು; **ಯೋಧಮುಖ್ಯೈಸ್ಸಹ**-ಯೋಧ ಶ್ರೇಷ್ಠರಿಂದಲೂ ಸಹ, **ತ್ವರಮಾಣಾಃ**-ಅವಸಾನಕಾಲ ಒದಗಿರುವದರಿಂದ ಶೀಘ್ರವಾಗಿಯೇ ತ್ವರೆಮಾಡುವವರಾಗಿ, **ತ್ವರಮಾಣಾಃ**-ಎಂಬ ಪ್ರಯೋಗವು **"ವಿಧಿವಿಹಿತಂ ಬುದ್ಧಿರನುಸರತಿ"** ಎಂಬ ಹೇಳಿಕೆಯಪ್ರಕಾರ ಅವರವರುಗಳ ದುಷ್ಕೃತರೂಪ ಪ್ರಾರಬ್ಧ ಕರ್ಮವೇ ನಾಶಕ್ಕಾಗಿ ಅವರನ್ನು ತ್ವರೆಗೊಳಿಸುತ್ತದೆಂಬ ಭಾವವನ್ನು ಸೂಚಿಸುತ್ತದೆ, **ದಂಷ್ಟ್ರಾಕರಾಳಾನಿ**-ಕೋರೆದಾಡೆಗಳಿಂದ ಕ್ರೂರವಾಗಿ, **ಭಯಾನಕಾನಿ**-ಭಯೋತ್ಪಾದಕಗಳಾಗಿರುವ, **ತವವಕ್ತ್ರಾಣಿ**-ನಿನ್ನ ಮುಖಗಳನ್ನು, **ವಿಶನ್ತಿ**-ಎಂದು ಇಷ್ಟುಮಾತ್ರವಿದ್ದರೂ, ಆ ಪ್ರವೇಶವು ನಾಶಕ್ಕಾಗಿ ಎಂಬುದು ವ್ಯಕ್ತವಾದುದರಿಂದ **ವಿನಾಶಾಯ ವಿಶನ್ತಿ** ಎಂಬ ವ್ಯಾಖ್ಯಾನವು; ಪ್ರವೇಶವು ಅನುಗ್ರಹವನ್ನು ಹೊಂದುವದಕ್ಕಾಗಿಯೂ ಆಗಬಹುದು. ಈಗ ದುಷ್ಟರ ಪ್ರವೇಶವಾದುದರಿಂದ, **ಚೂರ್ಣಿತ ಉತ್ತಮಾಂಗಾಃ**-ಇತ್ಯಾದಿ ಪ್ರಯೋಗದೊಂದಿಗೆ ಸಹ ಪಠಿತವಾಗಿರುವದರಿಂದಲೂ, **ನಾಶಾಯ ಪ್ರವಿಶನ್ತಿ**-ಎಂಬುದು ವ್ಯಕ್ತವಾದುದರಿಂದ ಹಾಗೆ ಪ್ರಯೋಗವು. ಮುಂದೆ ೨೯ ನೆಯ ಶ್ಲೋಕದಲ್ಲಿ **"ತಥೈವ ನಾಶಾಯ ವಿಶನ್ತಿ"** ಎಂದಿರುವದರಿಂದ **ನಾಶಾಯ**-ಎಂಬುದು ಸುಸ್ಪಷ್ಟವು. **ತತ್ರ**-ಆ ಸಂದರ್ಭದಲ್ಲಿ, **ಧಾರ್ತರಾಷ್ಟ್ರಾದಿಗಳು** ನಾಶಹೊಂದಿದ ಸಂದರ್ಭದಲ್ಲಿ

**ಭಾ. ದೀಯೈರಪಿ ಕೈಶ್ಚಿದ್ಯೋಧಮುಖ್ಯೈ ಸ್ಸಹ ತ್ವರಮಾಣಾ ದಂಷ್ಟ್ರಾಕರಾಳಾನಿ ಭಯಾನಕಾನಿ ತವ ವಕ್ತ್ರಾಣಿ ವಿನಾಶಾಯ ವಿಶನ್ತಿ; ತತ್ರ ಕೇಚಿಚ್ಚೂರ್ಣಿತೈ ರುತ್ತಮಾಙ್ಗೈರ್ದಶನಾಂತರೇಷು ವಿಲಗ್ನಾಸ್ಸಂದೃಶ್ಯನ್ತೇ ॥ ೨೬, ೨೭ ॥**

ಎಂಬ ಭಾವವು, ಅಥವಾ **ವಕ್ತ್ರಾಣಿ** ಎಂಬ ಪದವು ಹಿಂದೆ ಇರುವದರಿಂದ, ಆ ಮುಖಗಳಲ್ಲಿ ಎಂದಾದರೂ ಅರ್ಥ ಹೇಳಬಹುದು **ಕೇಚಿತ್**-ಕೆಲವರು, **ಚೂರ್ಣಿತೋತ್ತಮಾಂಗೈಃ**-ಹಲ್ಲಿನಿಂದ ಕಡಿಯಲ್ಪಟ್ಟು ಚೂರು ಚೂರಾದ ಶಿರಸ್ಸುಗಳಿಂದ, **ದಶನಾಂತರೇಷು**-ಹಲ್ಲುಗಳ ಮಧ್ಯದಲ್ಲಿ, **ವಿಲಗ್ನಾಃ**-ಸಿಕ್ಕಿಕೊಂಡಿರುವವರಾಗಿ, **ಸಂದೃಶ್ಯನ್ತೇ**-ಕಾಣಲ್ಪಡುತ್ತಾರೆ ಹಿಂದೆ ಕೆಲವರು ವಿನಾಶಹೊಂದುವದಕ್ಕಾಗಿ ಪ್ರವೇಶಿಸುತ್ತಾರೆಂದು ಹೇಳಲ್ಪಟ್ಟಿತು, ಇನ್ನು ಕೆಲವರು ಚೂರ್ಣಿತ ಶಿರಸ್ಕರಾಗಿ ಹಲ್ಲಿನ ಮಧ್ಯದಲ್ಲಿ ಸಿಕ್ಕಿರುವಹಾಗೆ ಕಾಣುತ್ತಾರೆಂದು ಹೇಳಿರುವದರಿಂದ, ನಾಶವನ್ನು ಹೊಂದಬೇಕೆಂದು ಜನ್ಮಕಾಲದಲ್ಲೇ ನಿಶ್ಚಿತರೆಂದು ತೋರಿಬರುತ್ತದೆ. ಪರಪಕ್ಷದವರು ದುಷ್ಟರಾಗಿ, ಅಥವಾ ದುಷ್ಟರ ಸಹಾಯಕರಾಗಿ ನಾಶವನ್ನು ಹೊಂದುವಹಾಗೆ ತೋರಿದುದೇನೋ ಸರಿಯೇ; ನಮ್ಮ ಪಕ್ಷದವರೂ ಯುದ್ಧದಲ್ಲಿ ತುಂಬಾ ಸಾಯದೇ ಇದ್ದರೂ, ಸ್ವಲ್ಪ ಮಟ್ಟಿಗೆ ಮಡಿಯುವಹಾಗೆ ತೋರುತ್ತದೆಂಬುದನ್ನು, **ಕೇಚಿತ್**-ಎಂಬ ಪ್ರಯೋಗದಿಂದ ವ್ಯಕ್ತಪಡಿಸಿರುತ್ತಾರೆ. ನಮ್ಮ ಪಕ್ಷದವರೂ ಆದೇಕೆ ಯುದ್ಧದಲ್ಲಿ ಸಾಯುತ್ತಾರೆ? ಎಂದರೆ, ಹಾಗೆ ಭಗವನ್ನಿಗ್ರಹಕ್ಕೆ ಒಳಪಟ್ಟಿರುವವರೂ ತಮ್ಮ ಪಂಗಡದಲ್ಲೇ ಉಂಟೆಂದು ತೋರಿಸಿರುತ್ತಾರೆ. ಸ್ವಾಮಿ ಸಙ್ಕಲ್ಪವು ಅವರುಗಳ ಪ್ರಾರಬ್ಧ ಕರ್ಮಾನುಗುಣವಾಗಿ ಹಾಗೆ ಸೇರಿಸಿ, ಸರ್ವೇಶ್ವರನ ನಿಗ್ರಹಾನುಗ್ರಹಗಳನ್ನು ಹೊಂದುವಹಾಗೆ ಮಾಡುತ್ತದೆಂಬ ಭಾವವೂ ಈ ಶ್ಲೋಕದಲ್ಲಿ ತೋರಿಬರುತ್ತದೆ ಭೀಷ್ಮ, ದ್ರೋಣ, ಸೂತಪುತ್ರರೂ ಇವರನ್ನೆಲ್ಲಾ ಶ್ರೀಕೃಷ್ಣನು ತನ್ನ ವಕ್ತ್ರಗಳನ್ನು ಪ್ರವೇಶಿಸಿ ನಷ್ಟವಾಗುವಹಾಗೆ ಮಾಡಿ ತೋರಿಸಿದರಲ್ಲಾ, ಮುಂದೆ ರಣದಲ್ಲಿ ಅರ್ಜುನ ಪುತ್ರನಾದ ಅಭಿಮನ್ಯುವೂ ಹತನಾಗುವನೆಂದು ಏಕೆ ತೋರಿಸಲಿಲ್ಲವು? ಎಂದು ಕೇಳಿದರೆ, ಪ್ರಾಪ್ತಕಾಲದಲ್ಲಿ ಶೋಕವು ನಿಯತವೇ ಆಗಿರುವಾಗ, ಅದನ್ನು ಈಗಲೇ ಪ್ರದರ್ಶಿಸಿ ಏಕೆ ಸಙ್ಕಟಪಡಿಸಬೇಕೆಂಬ ಉದ್ದೇಶ್ಯದಿಂದ ಕೃಪಾಸಾಗರನು ಅದನ್ನು ಮಾತ್ರ ಪ್ರದರ್ಶಿಸಲಿಲ್ಲವೆಂದು ತಿಳಿಯತಕ್ಕದ್ದಾಗಿರುತ್ತದೆ, ಇವರ ಕಡೆಯಲ್ಲೂ ಕೆಲವು ಯೋಧರು ಯುದ್ಧದಲ್ಲಿ ಸಾಯುವರೆಂದು ಅಷ್ಟುಮಾತ್ರ ತೋರಿಸಿದರೇ ವಿನಾ ನಿನ್ನ ಪುತ್ರನಾದ ಅಭಿಮನ್ಯುವು ಹತನಾಗುವನು ಎಂದು ತೋರಲಿಲ್ಲವು

ಯಾದವ ಪ್ರಕಾಶೀಯರು ಕೆಲವರು ಕೆಲವು ಐದು ಶ್ಲೋಕಗಳನ್ನು ತಮ್ಮಗ್ರಂಥಗಳ ಹಿಂದೆ (ಗೀ.೩-೩೭) ದಲ್ಲಿ **"ವಿದ್ಧ್ಯೇನಮಿಹ ವೈರಿಣಮ್"** ಎಂದಾದನಂತರ ಬರೆದಿರುತ್ತಾರೆ. ಅವು ಯಾವುದೆಂದರೆ, **ಅರ್ಜುನ ಉವಾಚ** ಎಂದು ಅರ್ಜುನನು **"ಭವತ್ಯೇಷಕಥಂ ಕೃಷ್ಣ ಕಥಂಚೈಷ ವಿವರ್ಧತೇ। ಕಿಮಾತ್ಮಕಃ ಕಿಮಾಚಾರಸ್ತನ್ಮಾಮಾಚಕ್ಷ್ವ ಪೃಚ್ಛತಃ" ॥೧॥** ಎಂದು ಕೇಳಿದಹಾಗೂ, ಅದಕ್ಕೆ ಉತ್ತರವಾಗಿ, **"ಶ್ರೀ ಭಗವಾನುವಾಚ.—ಏಷ ಸೂಕ್ಷ್ಮಃ ಪರಶ್ಶತ್ರು ರ್ದೇಹಿನಾ ಮಿಂದ್ರಿಯೈಸ್ಸಹ। ಸುಖಂತತ್ರ ಇವಾಸೀನೋ ಮೋಹಯನ್ಪಾರ್ಥತಿಷ್ಠತಿ ॥೨॥ ಕಾಮಕ್ರೋಧಮಯೋ ಘೋರಸ್ತಂಭ ಹರ್ಷಸಮುದ್ಭವಃ। ಅಹಂಕಾರೋಽಭಿಮಾನಾತ್ಮಾದುಸ್ತರಃ ಪಾಪಕರ್ಮಭಿಃ ॥೩॥ ಹರ್ಷಮಸ್ಯನಿವರ್ತ್ಯೈಷ ಶೋಕಮಸ್ಯ ದದಾತಿಚ। ಭಯಂ ಚಾಸ್ಯಕರೋತ್ಯೇಷಮೋಹಯಂಶ್ಚ ಮುಹುರ್ಮುಹುಃ ॥೪॥ ಸ ಏಷ ಕಲುಷಃ ಕ್ಷುದ್ರಶ್ಛಿದ್ರಾ ಪೇಕ್ಷೀ ಧನಂಜಯ। ರಜಃ ಪ್ರವರ್ತಿತೋ ಮೋಹಾ**

**ನ್ಮಾನುಷಾಣಾ ಮುಪದ್ರವಃ ॥೫॥** ಎಂದು ಹೀಗೆ ಐದು ಶ್ಲೋಕಗಳು ತೋರಿಬರುತ್ತವೆ, ಇವುಗಳ ಶೈಲಿಯನ್ನು ನೋಡಿದರೆ ಖಂಡಿತವಾಗಿಯೂ ಶ್ರೀ ವ್ಯಾಸೋಕ್ತಿಯಲ್ಲವೆಂಬುದು ವ್ಯಕ್ತ ಪಡುತ್ತದೆ. ದೇಹವೇ ಒಂದು ಧರ್ಮಕ್ಷೇತ್ರದ ಹಾಗಿರುವ ಯುದ್ಧರಂಗವು, ಅದರಲ್ಲಿ ಕಾಮ ಕ್ರೋಧಾದಿ ಧಾರ್ತರಾಷ್ಟ್ರರಹಾಗೆ ದುಷ್ಟೇಂದ್ರಿಯ ಮನಸ್ಸುಗಳಿಂದ ಉಂಟಾದ ಅರಿಷಡ್ವರ್ಗ ಗಳಿಗೂ ಜ್ಞಾನತ್ವ, ಅಮಲತ್ವ, ಸಾತ್ವಿಕಭಾವವುಳ್ಳ ವಿವೇಕಾದಿಗಳಿಗೂ ಪ್ರಬಲಯುದ್ಧವಾಗಿ ಶ್ರೀಕೃಷ್ಣನು ಪಾಂಡವರಿಗೆ ಸಹಾಯ ಮಾಡಿದಹಾಗೆ ಸರ್ವೇಶ್ವರನ ಅನುಗ್ರಹವನ್ನು ಆತನನ್ನು ಆಶ್ರಯಿಸಿ ಸಂಪಾದಿಸಿಕೊಂಡವರಿಗೆ ಸಕಲ ವಿಧದಲ್ಲೂ ಜಯ ಉಂಟಾಗಲು ಸಂದೇಹವಿಲ್ಲವೆಂಬ ಸಾರಭೂತಾರ್ಥವು ಇಲ್ಲಿ ತೋರಿಬರುತ್ತದೆಂದು ಇಷ್ಟುಮಾತ್ರ ಹೇಳಿದ್ದರೆ ಪ್ರಾಮಾಣಿಕ ವಿಷಯ ವಾಗುತ್ತಿತ್ತು. ಈ ಅಭಿಪ್ರಾಯವು ಹಿಂದೆ ಮಂಗಳ ಶ್ಲೋಕದಲ್ಲೇ ಉಪಪಾದಿತವು. ಈ ಶ್ಲೋಕಗಳು ವಿಶ್ವಾಸಕ್ಕೆ ಅನರ್ಹವೆಂದು ಭಾವಿಸಿಯೋ ಹೇಗೋ ಶ್ರೀ ಯತಿವರ್ಯರು ಅನು ಗ್ರಹಿಸಿರುವ ವ್ಯಾಖ್ಯಾನದಿಂದ ಈ ಶ್ಲೋಕಗಳು ಗೀತೆಗೆ ಸೇರಿದವಲ್ಲವೆಂದು ಊಹಿಸತಕ್ಕದ್ದಾಗಿ ರುತ್ತದೆ. ಶ್ರೀ ವ್ಯಾಸರು ಗೀತೆಯ ೧೮ ಅಧ್ಯಾಯಗಳಿಂದಲೂ ಶ್ಲೋಕಗಳಿಷ್ಟು ಎಂದು ಎಲ್ಲಿಯೂ ಹೇಳಿಲ್ಲವು. ಇದೂ ಅಲ್ಲದೆ ಇನ್ನೂ ಕೆಲವು ಕೋಶಗಳಲ್ಲಿ, **"ನಾನಾರೂಪೈ ರ್ಪುರುಷೈ ರ್ವಧ್ಯಮಾನಾ ವಿಶನ್ತಿತೇ ವಕ್ತ್ರ ಮಚಿನ್ತ್ಯ ರೂಪಮ್। ಯೌಧಿಷ್ಠಿರಾ ಧಾರ್ತರಾಷ್ಟ್ರಾಶ್ಚ ಯೋಧಾಶ್ಶಸ್ತ್ರೈಃ ಕೃತ್ತಾ ವಿವಿಧೈಸ್ಸರ್ವ ಏವ। ದಿವ್ಯಾನಿ ಕರ್ಮಾಣಿ ತವಾದ್ಭುತಾನಿ ಪೂರ್ವಾಣಿ ಪೂರ್ವೇಪ್ಯೃಷಯ ಸ್ಸ್ಮರನ್ತಿ। ನಾನ್ಯೋಽಸ್ತಿ ಕರ್ತಾ ಜಗತಸ್ತ್ವ ಮೇಕೋ ಧಾತಾ ವಿಧಾತಾಚ ವಿಭುರ್ಭವಶ್ಚ। ತವಾದ್ಭುತಂ ಕಿನ್ನು ಭವೇದಸಹ್ಯಂ ಕಿಂವಾಶಕ್ಯಂ ಪರತಃ ಕೀರ್ತಯಿಷ್ಯೇ। ಕರ್ತಾಸಿ ಲೋಕಸ್ಯ ಯತಸ್ಸ್ವಯಂ ವಿಭೋ ತ್ವತ್ತಸ್ಸರ್ವಂ ತ್ವಯಿ ಸರ್ವಂ ತ್ವಮೇವ॥ ಅತ್ಯದ್ಭುತಂ ಕರ್ಮನ ದುಷ್ಕರಂತೇ ಕರ್ಮೋಪಮಾನಂ ನಚವಿದ್ಯತೇತೇ। ನತೇ ಗುಣಾನಾಂ ಪರಿಮಾಣಮಸ್ತಿನ ತೇಜಸೋನಾಪಿ ಬಲಸ್ಯ ನರ್ದ್ಧೇಃ"** ಈ ಶ್ಲೋಕಗಳೂ ಉಂಟು. ಇವುಗಳಿಗೂ ಶ್ರೀ ವ್ಯಾಸ ಶೈಲಿಗೂ ಬಹು ದೂರವು. ತಮ್ಮ ತಮ್ಮ ಅಭಿಪ್ರಾಯಗಳ ಸಮರ್ಥನೆ ಉಂಟಾಗಲೆಂದು ಅನೇಕರು ಭಾಗವತ ಭಾರತಗಳಲ್ಲಿ ಬಹು ಶ್ಲೋಕಗಳನ್ನು ಸೇರಿಸಿ ಬಿಟ್ಟಿರುತ್ತಾರೆ. ಇದು ಪ್ರಾಜ್ಞರಾಗಿಯೂ ಇದ್ದುಕೊಂಡು ಮಾಡುವ ದುಷ್ಕೃತವು. **"ದಿವ್ಯಾನಿ"** ಇತ್ಯಾದಿ ಶ್ಲೋಕಗಳು ಶ್ರೀ ನಾರಾಯಣೀಯರ ವ್ಯಾಖ್ಯಾನದಲ್ಲೂ ಕಂಡುಬರುತ್ತದೆ. ಇವುಗಳು ಶ್ರೀ ವ್ಯಾಸ ಶೈಲಿಯೇ ಅಲ್ಲವಾದುದರಿಂದ ಶ್ರೀ ಯತಿವರ್ಯರಿಗೆ ಉಪಾದೇಯವಾಗದೇ ಹೋಗಿರಬಹುದು ಹಾಗೆಯೇ ಶ್ರೀ ಶಂಕರಭಾಷ್ಯ ದಲ್ಲೂ ಮೇಲೆ ಹೇಳಿದ ಯಾವ ಶ್ಲೋಕಗಳೂ ಇರುವಹಾಗೆ ತೋರಿಬರುವದಿಲ್ಲವು. ಹಾಗೆಯೇ ಶ್ರೀ ಮಧ್ವಾಚಾರ್ಯರೂ ಈ ಶ್ಲೋಕಗಳ ಯಾವುದನ್ನೂ ಅಂಗೀಕರಿಸಲಿಲ್ಲವು. ಹೀಗೆ ಸರ್ವ ಜ್ಞರ ಪರಿಶುದ್ಧ ಗ್ರಂಥಗಳಿಗೆ ತಮ್ಮ ಸ್ವಂತ ಕವಿತ್ವದಿಂದ ಕಾಲುಷ್ಯವನ್ನುಂಟುಮಾಡುವದ ರಷ್ಟು ದೊಡ್ಡ ಅಪರಾಧವು ಇನ್ನು ಬೇರೆ ಇರಲಾರದು. ಜ್ಞಾನವಿದ್ದವರು ಮಾಡುವ ಅಪರಾ ಧವಾದುದರಿಂದ ತುಂಬಾ ಹೀನವಾದುದು. ಶ್ರೀ ಮಚ್ಛಂಕರಾಚಾರ್ಯರು ತಮ್ಮ ಭಾಷ್ಯಾವ ತಾರಿಕೆಯಲ್ಲಿ ೭೦೦ ಶ್ಲೋಕಗಳು ಶ್ರೀ ಭಗವದ್ಗೀತೆಯಲ್ಲಿವೆ ಎಂದು ಹೇಳಿರುತ್ತಾರೆ. ಶ್ರೀ ಯತಿವರ್ಯರೂ ೭೦೦ ಶ್ಲೋಕಗಳನ್ನೇ ಅಙ್ಗೀ ಕರಿಸಿರುತ್ತಾರೆ ಅದರಲ್ಲಿ ಧೃತರಾಷ್ಟ್ರನು ಹೇಳುವದು ೧ ಶ್ಲೋಕ, ಸಂಜಯರು ಹೇಳುವದು ೪೧ ಶ್ಲೋಕಗಳು. ಅರ್ಜುನನು ೮೪, ಭಗವಂತನದು ೫೭೪.

**ಮೂ. ಯಥಾನದೀನಾಂ ಬಹವೋಽಮ್ಬುವೇಗಾಸ್ಸಮುದ್ರ ಮೇವಾಭಿಮುಖಾದ್ರವನ್ತಿ ।**
**ತಥಾ ತವಾಮೀ ನರಲೋಕ ವೀರಾವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ॥ ೨೮ ॥**
**ಯಥಾ ಪ್ರದೀಪ್ತ ಜ್ವಲನಂ ಪತಙ್ಗಾ ವಿಶನ್ತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶನ್ತಿ ಲೋಕಾಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥**

---

**ಮೂಲಕ್ಕೆ ಅರ್ಥವು :**—ಸರ್ವೇಶ್ವರನ ಮುಖಗಳನ್ನು ಪ್ರವೇಶಿಸಿ ದುಷ್ಟರೆಲ್ಲರೂ ನಾಶವನ್ನು ಹೊಂದಿದರು ಎಂದು ಅರ್ಜುನನು ಅರಿಕೆಮಾಡಿಕೊಂಡನು. ಅದು ತನಗೆ ಹೇಗೆ ತೋರಿತು ಎಂದರೆ ಎರಡು ದೃಷ್ಟಾಂತಗಳಮೂಲಕ ತಿಳಿಸುತ್ತಾನೆ. ಹಿಂದೆ **ತ್ವರಮಾಣಾ** ಎಂದು ಈ ದುಷ್ಟರಾದ ಯೋಧರೂ ರಾಜರುಗಳೂ ಸಹ, ತಾವಾಗಿಯೇ ಅವಸರದಿಂದ ವಿಧಿವಶರಾಗಿ ಈ ವಿಶ್ವರೂಪದ ಘೋರಮುಖಗಳಲ್ಲಿ ತಮ್ಮ ನಾಶಕ್ಕಾಗಿಯೇ ಬಂದು ಬೀಳುತ್ತಾರೆಂದು ಹೇಳಿದ್ದನು. ಅದುಹೇಗೆ ತೋರುತ್ತದೆಂಬುದನ್ನು ಎರಡು ದೃಷ್ಟಾಂತಗಳ ಮೂಲಕ ಸ್ಪಷ್ಟೀಕರಿಸುತ್ತಾನೆ. **ನದೀನಾಂ**-ನದಿಗಳ, **ಬಹವೋಽಮ್ಬುವೇಗಾಃ**-ಅನೇಕಗಳಾದ ನೀರಿನ ಪ್ರವಾಹಗಳು, **ಸಮುದ್ರಮೇವಾಭಿಮುಖಾಃ**-ಸಮುದ್ರವನ್ನೇ ಕುರಿತು, ಅದಕ್ಕೆ ಅಭಿಮುಖಗಳಾಗಿ. **ಯಥಾ**-ಹೇಗೆ, **ದ್ರವನ್ತಿ**-ಪ್ರವಹಿಸುತ್ತವೋ, **ತಥಾ**-ಹಾಗೆಯೇ, **ಅಮೀನರಲೋಕವೀರಾಃ**-ಈ ಎದುರಿಗೂ ಇರುವ ಮತ್ತು ನಮ್ಮ ಕಡೆಯಲ್ಲೂ ಇರುವ, ಕೆಲವರಾದ ಶೂರರಾದ ರಾಜರುಗಳೂ ಇತರ ಯೋಧರೂ ಸಹ, ಇದರಿಂದ ಪಾಂಡವರು ವ್ಯಾವರ್ತಿಸಿ ಹೇಳಲ್ಪಟ್ಟರು, **ತವ**-ನಿನ್ನ, **ವಕ್ತ್ರಾಣಿ**-ಬಾಯಿಗಳನ್ನು, **ವಿಶನ್ತಿ**-ಪ್ರವೇಶಿಸುತ್ತಾರೆ. ಉತ್ತರಾರ್ಧದಲ್ಲಿರುವ **ತವ**-ಎಂಬುದನ್ನು **ನರಲೋಕ ವೀರಾಃ**-ಎಂಬುದರೊಂದಿಗೆ ಅನ್ವಯಿಸಿದರೂ ಸ್ವಾರಸ್ಯಾರ್ಥವುಂಟು. ಹೇಗೆಂದರೆ ನಿನ್ನ ಎಂದರೆ ನಿನ್ನ ವಿಭೂತಿಯಾದ ಈ ನರಲೋಕವೀರರೆಂದು ಅರ್ಥಮಾಡಿದುದಾದರೆ ಅರ್ಜುನನಿಗೆ ವಿವೇಕವು ತಲೆದೋರಿ, ಅಜ್ಞಾನದಿಂದ ಇವರೆಲ್ಲಾ ನಮ್ಮ ಬಂಧುಗಳು ನಮ್ಮ ಗುರುಗಳು ಎಂದು ಭಾವಿಸಿದ್ದೆನು : ಇದೆಲ್ಲಾ ಅಜ್ಞಾನದ ವಿಜೃಂಭಣೆಯೇ ವಿನಾ ಬೇರೆಯಲ್ಲವು ; ಎಲ್ಲವೂ ನಿನ್ನ ಸ್ವತ್ತೇಯಾಗಿರುತ್ತದೆ ; ನನ್ನದೆಂಬುದು ಯಾವುದೂಇಲ್ಲವೆಂಬ ಅಭಿಪ್ರಾಯದಿಂದ **ತವಾಮೀನರಲೋಕ ವೀರಾಃ**- ಎಂಬ ಪ್ರಯೋಗವೆಂದು ಭಾವಿಸಬಹುದು. ಮುಂದಿನ ಶ್ಲೋಕದಲ್ಲೂ ಹೀಗೆಯೇ ಅನ್ವಯಿಸುವಹಾಗೆ **ಲೋಕಾಸ್ತವಾಪಿ**-ಎಂದು ಒಟ್ಟಿಗಿರುತ್ತದೆ, **ಅಭಿವಿಜ್ವಲನ್ತಿ**-ಎಂಬುದನ್ನು ಮುಂದಿನ ಶ್ಲೋಕದೊಂದಿಗೆ ಅನ್ವಯಿಸತಕ್ಕದ್ದು. **"ಯಥಾ ನದೀನಾಂ"** ಎಂಬ ದೃಷ್ಟಾಂತವು ಮುಂಡಕೋಪನಿಷತ್ತಿನ ೩-೨-೮ ನೆಯ ವಾಕ್ಯದಲ್ಲೂ, **"ಯಥಾನದ್ಯಸ್ಸ್ಯಂದಮಾನಾಸ್ಸಮುದ್ರೇ"** ಎಂಬದಾಗಿ ಉಂಟು, ಆದರೆ ಅದು ಉಪಾಸಕನು ಪ್ರಾಕೃತ ಶರೀರವನ್ನು ತ್ಯಜಿಸಿ, ಪರಮಾತ್ಮನೊಂದಿಗೆ ಸಾಯುಜ್ಯವನ್ನು ಹೊಂದುವ ಪ್ರಕರಣವು. ಶ್ರೀ ವ್ಯಾಸಮಹರ್ಷಿಗೆ ವೇದವೂ ಉಪನಿಷತ್ತೂ ಸಹ ಕರತಲಾಮಲಕವಾದುದರಿಂದ ಆ ಉಪಮೆಯನ್ನೇ ಈ ಸಂದರ್ಭದಲ್ಲಿ ದೃಷ್ಟಾಂತವಾಗಿ ತಿರುಗಿಸಿರುತ್ತಾರೆ. ಆದರೆ ಆ ಪ್ರಕರಣವೇ ಬೇರೆ, ಇದೇ ಬೇರೆ. **ಪತಂಗಾಃ**-ಬೆಂಕಿಯಲ್ಲಿ ಬೀಳುವ ಹುಳುಗಳು ಶಲಭಗಳು, **ಸಮೃದ್ಧವೇಗಾಃ**-ಸಂಪೂರ್ಣವಾದ ಎಂದರೆ ಹೆಚ್ಚಾದ ವೇಗವುಳ್ಳವುಗಳಾಗಿ, ಇದು ಮೇಲೆ **ತ್ವರಮಾಣಾಃ**-ಎಂದಿರುವದರ ಅರ್ಥವನ್ನೇ ಬೋಧಿಸುತ್ತದೆ, **ನಾಶಾಯ** ಸುಟ್ಟುಹೋಗಿ ನಾಶವನ್ನು ಹೊಂದುವದಕ್ಕಾಗಿಯೇ, **ಪ್ರದೀಪ್ತಜ್ವಲನಂ**-ವಿಶೇಷವಾಗಿ ಉರಿಯುತ್ತಿರುವ ಜ್ವಾಲೆಯನ್ನು **ಯಥಾ**-ಹೇಗೆ, **ವಿಶನ್ತಿ**-ಪ್ರವೇಶಿಸುತ್ತವೆಯೋ, **ತಥೈವ**-ಹಾಗೆಯೇ, **ಲೋಕಾ ಅಪಿ**-ಈ ದುಷ್ಕೃತಿಗಳಾದ ಜನರೂಕೂಡ, **ಸಮೃದ್ಧವೇಗಾಃ**-ತಾವೇ ಕರ್ಮ

ಪರಿಪಾಕದಿಂದ ಪ್ರಯತ್ನಪಟ್ಟು ತ್ವರೆಯಿಂದ ಹೆಚ್ಚಾದ ವೇಗವುಳ್ಳವರಾಗಿ, **ನಾಶಾಯ**-ತಮ್ಮ ಆತ್ಮನಾಶಕ್ಕಾಗಿ ಎಂದರೆ ಪುನಃ ಪುನಃ ಬಂಧನವನ್ನು ಹೊಂದುವದಕ್ಕಾಗಿ, **ಅಭಿವಿಜ್ವಲಂತಿ ತವ ವಕ್ತ್ರಾಣಿ**- ಜ್ವಲಿಸುತ್ತಿರುವ ನಿನ್ನ ಬಾಯಿಗಳನ್ನು. **ವಿಶನ್ತಿ**-ಪ್ರವೇಶಿಸುತ್ತಾರೆ. ಇಲ್ಲಿ **ಸಮೃದ್ಧವೇಗಾಃ**-ಎಂದು ಎರಡುಸಲ ಪ್ರಯೋಗವು ಏಕೆ ಎಂಬುದು ನ್ಯಾಯವಾದ ಪ್ರಶ್ನೆಯು; ಶಲಭಗಳು ಅಗ್ನಿಜ್ವಾಲೆಯನ್ನು ಪ್ರವೇಶಿಸುವಾಗ ತಾವಾಗಿಯೇ ಅತಿ ತ್ವರೆಯಿಂದ ಬಂದುಬಿದ್ದು ಭಸ್ಮವಾಗುತ್ತವೆ ಹಾಗೆಯೇ ಈ ದುಷ್ಕೃತಿಯು ತನ್ನ ದುಷ್ಕರ್ಮಪರಿಪಾಕದಿಂದ ತಾನೇ ಪ್ರವರ್ತಿಸುವಹಾಗೆ ತ್ವರೆಯಿಂದ ವಿಪತ್ತುಗಳಿಗೆ ತುತ್ತಾಗುತ್ತಾನೆಂದೂ ಆ ಕರ್ಮಪರಿಪಾಕವು ಮಹಾ ಬಲಿಷ್ಟವೆಂದೂ ತೋರಿಸುವದಕ್ಕಾಗಿ ಎರಡನೆಯಸಲ ಪ್ರಯೋಗವೆಂದು ಊಹಿಸಬಹುದು. ಈ ಸಂದರ್ಭದಲ್ಲಿ **"ಐಶ್ವರ್ಯೇವಾ ಸುವಿಸ್ತೀರ್ಣೇ ವ್ಯಸನೇವಾ ಸುದಾರುಣೇ। ರಜ್ಜ್ವೇವ ಪುರುಷಂ ಬದ್ಧ್ವಾಕೃತಾಂತಃ ಪರಿಕರ್ಷತಿ"** ಎಂಬ ಸೀತಾ ವಾಕ್ಯವು ಅನುಸಂಧೇಯವು (ರಾಮಾ. ಸುಂ.೩೭.೩) ಇಲ್ಲಿ ಕೃತಾಂತ ಶಬ್ದಕ್ಕೆ ಯಮನೆಂದಾಗಲಿ ಅಥವಾ ಸರ್ವೇಶ್ವರನೆಂದಾಗಲಿ ಅರ್ಥಮಾಡಬಹುದು. ಮೊದಲನೆಯ ನದಿಯ ದೃಷ್ಟಾಂತದಲ್ಲಿ ನಾಮರೂಪಗಳಿಲ್ಲದ ಹಾಗೆ ಹೋಗಿ ಜನ್ಮಾಂತರ ಉಂಟಾಗುವದರಿಂದ ನಾಶವೆಂದು ಹೇಳಲ್ಪಟ್ಟಿತು, ಎರಡನೆಯ ದೃಷ್ಟಾಂತದಲ್ಲಿ ದೇಹವೇ ಭಸ್ಮೀಭೂತವಾಗಿ ಮುಂದೆ ಅನಿಷ್ಟ ಫಲಪ್ರಾಪ್ತಿಯಿಂದ ನಾಶವೆಂಬುದು ಸ್ಪಷ್ಟವು. ಇಲ್ಲಿ ಎರಡನೆಯ ಶ್ಲೋಕದಲ್ಲಿರುವ ನಾಶವೆಂಬುದು ಹೀನಗಳಾದ ಜನ್ಮಗಳನ್ನು ಎತ್ತುವದಾಗಲಿ ಅಥವಾ ನರಕಪಾತಾದಿಗಳಾಗಲಿ ಆಗಬಹುದು. ಆತ್ಮವಾದರೋ ನಿತ್ಯವಾದುದು. ಇಲ್ಲಿ ಕೊಟ್ಟ ಈ ಎರಡು ದೃಷ್ಟಾಂತಗಳಿಂದ ಏನಾದರೂ ವೈಲಕ್ಷಣ್ಯ ತೋರಿಬರುತ್ತದೆಯೇ ಎಂಬುದು ನ್ಯಾಯವಾದ ಪ್ರಶ್ನೆಯು.—

೧. ಮೊದಲನೆಯ ಉದಾಹರಣೆಯಲ್ಲಿ **ನರಲೋಕ ವೀರಾಃ ತವ ವಕ್ತ್ರಾಣಿ ವಿಶನ್ತಿ** ಎಂದು ಇಷ್ಟುಮಾತ್ರವೇ ಹೇಳಲ್ಪಟ್ಟಿರುವದರಿಂದಲೂ, **ನಾಶಾಯ**-ಎಂಬುದು ಇಲ್ಲಿಗೆ ಅನ್ವಯಿಸದೆ ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿರುವದರಿಂದಲೂ, ಇಲ್ಲಿ ಹೇಳಲ್ಪಟ್ಟವರು ಕರ್ಮಪರಿಪಾಕದಿಂದ ಯುದ್ಧದಲ್ಲಿ ಮಡಿಯುವರಾಗಿ **ನರಲೋಕ ವೀರಾಃ**-ಎಂಬ ವೀರಶಬ್ದದಿಂದ ಪಾಂಡವರ ಪಕ್ಷದಲ್ಲೂ ಕೌರವರ ಪಕ್ಷದಲ್ಲೂ ಅಧರ್ಮಿಗಳಾಗದೆ ತಮ್ಮ ತಮ್ಮ ರಾಜರುಗಳಿಗೆ ಅಧೀನರಾಗಿ ಯುದ್ಧಮಾಡುತ್ತಾ ಮಡಿದು ವೀರಸ್ವರ್ಗವನ್ನು ಹೊಂದಿದವರು ಹೇಳಲ್ಪಟ್ಟರು, ನದಿಯ ಪ್ರವಾಹವು ಸಮುದ್ರವನ್ನು ಸೇರುವದು ಎಂಬುದರಿಂದ ಯುದ್ಧದಲ್ಲಿ ಮರಣವೂ, **ಅಂಬುವೇಗ** ಶಬ್ದದಿಂದ ವಿಚಿತ್ರಕರ್ಮ ಪ್ರವಾಹವೂ ಬೋಧಿತವು.

೨. ಎರಡನೆಯ ಉದಾಹರಣೆಯಲ್ಲಾದರೋ, ಸಾಧಾರಣವಾದ **ಲೋಕಾಃ**-ಎಂಬ ಶಬ್ದವನ್ನು ಪಯೋಗಿಸಿ, ಶಲಭ ದೃಷ್ಟಾಂತವನ್ನು ಕೊಟ್ಟು, ನಾಶಾಯ ಎಂಬ ಪದವಿರುವದರಿಂದ ಅಧರ್ಮಿಗಳಾದ ಯೋಧರು ಹೇಳಲ್ಪಟ್ಟು ಅನಿಷ್ಟವಾದ ನರಕಫಲ ಮೊದಲಾದವುಗಳನ್ನು ಹೊಂದುವರೆಂಬ ಭಾವವು ತೋರಿಬರುತ್ತದೆ ಎರಡು ಸಂದರ್ಭದಲ್ಲೂ **ಅಭಿಮುಖಾಃ ದ್ರವನ್ತಿ, ಸಮೃದ್ಧವೇಗಾಃ ವಿಶನ್ತಿ** ಎಂದಿರುವದರಿಂದ ಕರ್ಮ ಪ್ರವಾಹವು ಬಲಿಷ್ಠವಾಗಿ ಅದಕ್ಕನುಗುಣವಾದ ಅನುಭವಕ್ಕಾಗಿ ಈತನನ್ನು ಎಳೆದುಕೊಂಡು ಹೋಗುತ್ತದೆಂಬ ಭಾವವು ವ್ಯಕ್ತವಾಗುತ್ತದೆ. ಇಲ್ಲಿ **ಲೋಕಾಃ**-ಎಂದು ಸಾಧಾರಣವಾಗಿ ಹೇಳಿರುವದರಿಂದ ಎಲ್ಲಾ ಜನರೂ **"ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್"** ಇತ್ಯಾದಿ ಪ್ರಮಾಣಗಳಿಗೆ ಅನುಸಾರವಾಗಿ ಕರ್ಮ ಪ್ರವಾಹಕ್ಕೆ ಶಿಕ್ಕಿದವರೆಂಬ ಭಾವವು ತೋರಿಬರುತ್ತದೆ.

**ಭಾ. ಏತೇ ರಾಜಲೋಕಾ ಬಹವಃ ನದೀನಾ ಮಂಬುಪ್ರವಾಹಾಃ ಸಮುದ್ರಮಿವ, ಪ್ರದೀಪ್ತ ಜ್ವಲನಮಿವ ಚ ಶಲಭಾಃ, ತವವಕ್ತ್ರಾಣ್ಯಭಿಜ್ವಲಂತಿ ಸ್ವಯಮೇವ ತ್ವರಮಾಣಾ ಆತ್ಮನಾಶಾಯ ವಿಶನ್ತಿ ॥೨೮-೨೯॥**

**ಭಾಷ್ಯಾರ್ಥವು :—ಏತೇ ರಾಜಲೋಕಾಃ**-ಶತ್ರು ಪಂಗಡದಲ್ಲಿ ಬಹುವಾಗಿ ಈಗ ಎದುರಿಗಿರುವ ಮತ್ತು ಸ್ವಲ್ಪವಾಗಿ ನಮ್ಮ ಪಂಗಡದಲ್ಲೂ ಇರುವ, ಈ ರಾಜರಾಗಿರುವ ಜನರು **ನದೀನಾಂ**-ನದಿಗಳ, **ಬಹವಃ ಅಂಬುಪ್ರವಾಹಾಃ**-ಅನೇಕ ನೀರಿನ ಪ್ರವಾಹಗಳು, **ಸಮುದ್ರಮಿವ**-ಸಮುದ್ರವನ್ನು ಹೇಗೋ ಹಾಗೆ, ಮತ್ತು **ಶಲಭಾಃ**-ಈಚಲು ಹುಳುಗಳು, **ಪ್ರದೀಪ್ತ ಜ್ವಲನಮಿವ**-ವಿಶೇಷದೀಪ್ತವಾದ ಅಗ್ನಿಜ್ವಾಲೆಯನ್ನು ಹೇಗೋ ಹಾಗೂ, **ತವ ವಕ್ತ್ರಾಣ್ಯಭಿಜ್ವಲಂತಿ**-ಜ್ವಲಿಸುತ್ತಿರುವ ನಿನ್ನ ಬಾಯಿಗಳನ್ನು, **ಸ್ವಯಮೇವ**-ಯಾರೂ ಎಳೆದುಕೊಂಡು ಹೋಗಬೇಕೆಂಬ ಅವಶ್ಯಕತೆಯಿಲ್ಲದೆ ಭಗವನ್ನಿಗ್ರಹ ಸಙ್ಕಲ್ಪಕ್ಕೆ ಒಳಗಾಗಿರುವದರಿಂದ, ತಾವಾಗಿಯೇ, **ತ್ವರಮಾಣಾಃ**-ತ್ವರೆಮಾಡಿಕೊಂಡವರಾಗಿ, **ಆತ್ಮನಾಶಾಯ**- ತಮ್ಮ ಆತ್ಮವು ದುಸ್ಥಿತಿರೂಪನಾಶವನ್ನು ಹೊಂದುವದಕ್ಕಾಗಿ, **ವಿಶನ್ತಿ**-ಪ್ರವೇಶಿಸುತ್ತಾರೆ. ಕೆಲವರು **ಪತಙ್ಗಾಃ**-ಎಂದರೆ ಪಕ್ಷಿಗಳು ಎಂದು ಅರ್ಥ ಬರೆದಿರುತ್ತಾರೆ. ಪಕ್ಷಿಗಳು ಅಗ್ನಿಯನ್ನು ಕುರಿತು ಹೋಗುವದನ್ನು ಕಂಡಿಲ್ಲವು. ಆದುದರಿಂದ ಅರ್ಥವು ಸರಿಹೋಗುವದಿಲ್ಲವಾಗಿ **ಶಲಭಾಃ**-ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಮಳೆ ಬಂದ ಮಾರನೆಯದಿನ ಈ ಹುಳುಗಳು ಅಸಂಖ್ಯಾಕವಾಗಿ ಉತ್ಪನ್ನವಾಗಿ ಅವುಗಳೆಲ್ಲಾ ನಾಶಹೊಂದಲೆಂದು ಉರಿಸಿದ ಬೆಂಕಿಯಲ್ಲಿ ಬಿದ್ದು ಸಾಯುವದನ್ನು ಕಂಡಿರುವೆವು. ಪ್ರತಿಯೊಂದು ಕಾರ್ಯವು ನಡೆಯುವದಕ್ಕೂ ಸರ್ವೇಶ್ವರ ಸಙ್ಕಲ್ಪವೂ ಜೀವಾತ್ಮನ ಸಙ್ಕಲ್ಪ ಪ್ರಯತ್ನ ಕ್ರಿಯಾದಿಗಳೂ ಅವಶ್ಯಕಗಳು. ಹೀಗಿರುವಾಗ **ಸ್ವಯಮೇವ**-ಎಂಬ ಭಾಷ್ಯವು ಹೇಗೆ ಸಮಂಜಸವೆಂದರೆ, ಪ್ರಾರಬ್ಧ ಕರ್ಮಾನುಗುಣವಾಗಿ ಪರಮಾತ್ಮನ ಸಙ್ಕಲ್ಪರೀತ್ಯಾ ಜೀವಾತ್ಮನು **"ವಿಧಿವಿಹಿತಂ ಬುದ್ಧಿಮನುಸರತಿ"** ಎಂಬಹಾಗೆ ನಡೆಯುವದರಿಂದಲಾಗಲಿ, ಅಥವಾ ಪ್ರಥಮ ಸಙ್ಕಲ್ಪದಲ್ಲಿ ಪರಮಾತ್ಮನು ಜೀವಾತ್ಮನಿಗೆ ಸರ್ವಸ್ವಾತಂತ್ರವನ್ನೂ ಕೊಟ್ಟು, ಅನಂತರ ತಾನೂ ಅವನಿಗೆ ಪ್ರೇರಕನಾಗುವನು ಎಂಬ ಶಾಸ್ತ್ರಾರ್ಥ ಶಿಕ್ಷಣೆಯರೂಪದಿಂದಾಗಲಿ, ಸ್ವಯಮೇವ ಎಂಬ ಭಾಷ್ಯವು ಸಮಂಜಸವೇ **ಆತ್ಮನಾಶಾಯ**-ಆತ್ಮವು ಸುಕೃತಾಚರಣೆಗಳಿಂದ ಉತ್ಕೃಷ್ಟ ಜನ್ಮವನ್ನಾಗಲಿ, ಉತ್ಕೃಷ್ಟ ಲೋಕವನ್ನಾಗಲಿ, ಅಥವಾ ಉಪಾಯಾನುಷ್ಠಾನದಿಂದ ಐಶ್ವರ್ಯವನ್ನಾಗಲಿ, ಅಕ್ಷರಗತಿಯನ್ನಾಗಲಿ, ಪರಮಪದವನ್ನಾಗಲಿ, ಹೀಗೆ ಯಾವುದನ್ನೂ ತನ್ನ ಅನುಷ್ಠಾನದಿಂದ ಮಾಡಿಕೊಳ್ಳದೆ, ಈಗಿರುವದಕ್ಕಿಂತ ದುಸ್ಥಿತಿಯಾದ ನೀಚ ಜನ್ಮ, ತುಂಬಾ ದುಃಖಾನುಭವ ಮಾಡುವ ಜನ್ಮ, ಅಥವಾ ನರಕಪ್ರಾಪ್ತಿ, ಮೊದಲಾದವುಗಳುಂಟಾಗುವಹಾಗೆ ಮಾಡಿಕೊಳ್ಳುವದೇ ಆತ್ಮನಾಶವೆನ್ನಿಸುತ್ತದೆ. ಮೇಲೆ ಹೇಳಿದವೆಲ್ಲಾ ಪರಮಾತ್ಮಧ್ಯಾನದಿಂದ ಕ್ರಮೇಣ ಪ್ರಾಪ್ತವಾಗುವದರಿಂದ ಆತ್ಮೋಜ್ಜೀವವನ್ನಿಸುತ್ತವೆ. ಎರಡನೆಯ ದೃಷ್ಟಾನ್ತದಲ್ಲಿ **ನಾಶಾಯ**-ಎಂದು ಹೇಳಿರುವದರಿಂದ, ಲೋಕಕಂಟಕರಾಗಿರುವ ದುರ್ಯೋಧನ ದುಶ್ಶಾಸನಾದಿಗಳಿಗೆ ವೀರ ಸ್ವರ್ಗಾದಿಗಳಿಲ್ಲದಿರುವ ದುಸ್ಥಿತಿಯೂ, ಮೊದಲನೆಯ ಸಮುದ್ರ ದೃಷ್ಟಾಂತದಲ್ಲಿ ನಾಶಾಯ ಎಂದು ಹೇಳಲ್ಪಡದೇ ಇರುವದರಿಂದ, ಕೆಲವು ರಾಜರು ಅಷ್ಟು ಅಧರ್ಮಿಗಳಲ್ಲದೆ ಸುಮ್ಮನೆ ಬಂದಿರುವದರಿಂದ, ಅಗಾಧವಾದ ನದಿಗಳು, ಸಮುದ್ರದೊಂದಿಗೆ ಸೇರಿರುವಿಕೆಯು ಹೇಳಿರುವದರಿಂದ ವೀರ ಸ್ವರ್ಗಾದಿ ಪ್ರಾಪ್ತಿಯು ಬೋಧಿಸಲ್ಪಟ್ಟಿತೆಂದು ಭಾವಿಸಬಹುದು. **ದ್ರವನ್ತಿ**-ಎಂದು ಅಲ್ಲಿರು

**ಮೂ. ಲೇಲಿಹ್ಯಸೇ ಗ್ರಸಮಾನಸ್ಸಮನ್ತಾಲ್ಲೋಕಾನ್ ಸಮಗ್ರಾನ್ವದನೈರ್ಜ್ವಲದ್ಭಿಃ।**
**ತೇಜೋಭಿರಾಪೂರ್ಯಜಗತ್ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥೩೦.**

ವದು ಸುಕೃತ ಪರಿಪಾಕದಿಂದ ಸುಕೃತಫಲ ಹೊಂದಲು ತ್ವರೆಯು ಹೇಳಲ್ಪಟ್ಟಿತೆಂದೂ ಭಾವಿಸಿದರೂ ಭಾವಿಸಬಹುದು. ಪ್ರಥಮ ದೃಷ್ಟಾಂತದಲ್ಲಿ **ನರಲೋಕವೀರಾಃ**-ಎಂದು ಹೇಳಿ **ಈ** ಎರಡನೆಯ ದೃಷ್ಟಾಂತದಲ್ಲಿ **ಲೋಕಾಸ್ತವಾಪಿ** ಎಂದು ಬೇರೆ ಕರ್ತೃಪದವು ಹೇಳಲ್ಪಟ್ಟಿರುವದರಿಂದ ಬೇರೆ ಬೇರೆ ಅಧಿಕಾರಿಗಳೇ, ಹೇಳಲ್ಪಟ್ಟರೆಂದು ತೋರಿಬರುತ್ತದೆ. **ಅಪಿ** ಶಬ್ದವೂ **ಈ** ಅಭಿಪ್ರಾಯವನ್ನೇ ಸಮರ್ಥಿಸುವಹಾಗೆ ತೋರುತ್ತದೆ ಇಬ್ಬರೂ ಪ್ರವೇಶಿಸುವದೇನೋ ಸರಿ, ಅವರುಗಳು ಒಳ್ಳೇ ಫಲಕ್ಕಾಗಿ, ಇವರುಗಳು ಅನಿಷ್ಟಫಲಕ್ಕಾಗಿ ಎಂದು ಹೇಳಿದರೂ ಹೇಳಬಹುದು. ಆದರೆ ೨೬-೨೭ ನೆಯ ಶ್ಲೋಕಗಳೂ ಮತ್ತು ೨೯ ನೆಯ ಶ್ಲೋಕವೂ ಸಹ ದುಷ್ಕೃತಿಗಳನ್ನು ಕುರಿತೇ ಹೇಳಿದುದೆಂಬುದು ವ್ಯಕ್ತವಾಗುವದರಿಂದ, ಹಾಗೆಯೇ ಮಧ್ಯೆಯಿರುವ **ಈ** ಒಂದು ಶ್ಲೋಕವಮಾತ್ರ ವೀರಸ್ವರ್ಗ ಹೊಂದುವವನನ್ನು ಕುರಿತು ಹೇಳಿದುದೆಂದು ಭಾವಿಸುವದು ಸಾಧ್ಯವಿಲ್ಲವೆಂದರೆ, ಆಗ **ನಾಶಾಯ, ಆತ್ಮನಾಶಾಯ** ವೆಂಬುದನ್ನು ಎರಡು ಶ್ಲೋಕಗಳಿಗೂ ಅನ್ವಯಿಸುವಹಾಗೆ ಅರ್ಥಹೇಳಬೇಕಾಗುತ್ತದೆ, ಇದನ್ನೆಲ್ಲಾ ಪರಿಶೀಲನೆಯನ್ನು ಮಾಡಿಯೇ ಎರಡು ಶ್ಲೋಕಗಳನ್ನೂ ಒಟ್ಟಿಗೆ ಸೇರಿಸಿ ಏಕಾನ್ವಯವಾಗಿ ಭಾಷ್ಯವನ್ನು ಶ್ರೀ ಯತಿವರ್ಯರು ದಯಪಾಲಿಸಿರುತ್ತಾರೆ, ಏಕಾನ್ವಯಕ್ಕೆ ಇನ್ನೂ ಒಂದು ಕಾರಣವುಂಟು, **"ಅಭಿವಿಜ್ವಲನ್ತಿ"** ಎಂಬುದು ಮೊದಲನೆಯ ಶ್ಲೋಕಕ್ಕಿಂತ ಎರಡನೆಯ ಶ್ಲೋಕಕ್ಕೆ ಅನ್ವಯಿಸುವದು ನ್ಯಾಯವಾಗಿ ತೋರಿಬರುತ್ತದೆ. ಮೊದಲನೆಯ ಶ್ಲೋಕಾಂತ್ಯದಲ್ಲಿರುವದರಿಂದ ಆ ಶ್ಲೋಕಕ್ಕೂ ಅನ್ವಯಿಸತಕ್ಕದ್ದೇ ಎಂದರೆ ಆಗ ಈ ನಾಲ್ಕು ಶ್ಲೋಕಗಳೂ ದುಷ್ಕೃತಿಗಳ ವಿಷಯವೆಂದೇ ಹೇಳಬೇಕಾಗುತ್ತದೆ. ಹೇಗೆ ಸೂಕ್ತವೋ ಹಾಗೆ ಅನ್ವಯಿಸಬಹುದು. ಆದರೆ ೨೮ ನೆಯ ಶ್ಲೋಕದಲ್ಲಿ **ನಾಶಾಯ** ಎಂಬ ಪದವಿರುವದಿಲ್ಲವು ೨೯ ನೆಯ ಶ್ಲೋಕದಲ್ಲಿ **ಮಾತ್ರ ದೃಷ್ಟಾಂತ** ದಾರ್ಷ್ಟಾಂತ ಗಳಲ್ಲಿರುವದರಿಂದ ಅನಿಷ್ಟ ಫಲಕ್ಕಾಗಿಯೂ ೨೮ ನೆಯದು **ಸುಕೃತ ಫಲಕ್ಕಾಗಿಯೂ** ಎಂದು ಅರ್ಥ ಮಾಡುವದೇ ಉಚಿತವು.

**ಮೂಲಕ್ಕೆ ಅರ್ಥವು** :—ಸರ್ವೇಶ್ವರರಾದ ಶ್ರೀ ಕೃಷ್ಣಭಗವಾನರವರು ತಮ್ಮ **ಸತ್ಯಸಙ್ಕಲ್ಪತೆಯನ್ನು** ಅರ್ಜುನನಿಗೆ ತಿಳಿಯಪಡಿಸುವದಕ್ಕೋಸ್ಕರ ಅನೇಕರಾಜರೂ ಯೋಧರೂಸಹ ತಮ್ಮ ಪ್ರಜ್ವಲಿಸುವ ಬಾಯಿಯಲ್ಲಿ ಬಿದ್ದು ನಾಶವನ್ನು ಹೊಂದುವರೆಂದು **ತೋರಿಸುತ್ತಾರೆ. ತಾವು** ಅವತಾರವನ್ನು ಎತ್ತಿದುದು ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳಿಗಾಗಿ; ದುರ್ಯೋಧನ ದುಶ್ಶಾಸನಾದಿಗಳಿಗಿಂತ ಹೆಚ್ಚಾದ ಲೋಕಕಂಟಕರು ಇರಲಾರರು. ಈ ಅಧರ್ಮಿಗಳೂ ತತ್ಸಹಾಯಕರೂ, ಮಡಿಯಲೇ ಬೇಕೆಂಬುದೇ ಅವರ ಸತ್ಯ ಸಙ್ಕಲ್ಪವು. ಅದು ಹೇಗೋ ಪರಮಾತ್ಮ ಸಙ್ಕಲ್ಪಾನುಸಾರ ನಡೆದು ಹೋಗುತ್ತದೆಂಬುದನ್ನು ತಿಳಿದು ಅರ್ಜುನನು ಅರಿಕೆ ಮಾಡಿಕೊಳ್ಳುತ್ತಾನೆ. ಹೀಗೆ ಶ್ರೀ ಕೃಷ್ಣಭಗವಾನರವರ ಸಙ್ಕಲ್ಪವಿದ್ದುದಾದರೆ, ಸಂಧಿಗೆ ಏಕೆ ಯತ್ನಿಸಿ ತಾವೇ ದೂತರಾಗಿ ಏಕೆ ಹೋಗಿದ್ದರು ? ಎಂದರೆ ಸರ್ವೇಶ್ವರನು ಮಹಾ **ಕೃಪಾಳುವು** ; ಒಂದುವೇಳೆ ಅವರುಗಳು ತನ್ನ ಪರತ್ವವನ್ನರಿತು **"ದೃಷ್ಟ ಏವ ಹಿ ನ ಶೋಕಮಪನೇಷ್ಯತಿ ರಾಘವಃ"** ಎಂದು ಹೇಳಿರುವಹಾಗೆ, ಕಣ್ಣು ಎದುರಿಗೆ ಬಂದನೇ ಎಂದು ಶರಣಾಗತರಾದರೆ ರಕ್ಷಿಸಿಬಿಡಬೇಕೆಂಬುದೇ ಅಭಿಪ್ರಾಯವು. ಲೋಕ ಶಿಕ್ಷಣಾರ್ಥವಾಗಿ ಸುಸಮಯ ಒಂದನ್ನು ಶ್ರೀ ಕೃಷ್ಣಭಗವಾನರವರು ಒದಗಿಸಿಕೊಟ್ಟರೂ ಉಪಯೋಗಿಸಿಕೊಳ್ಳದೆ ಈ

ದುರ್ಮಾರ್ಗಿಗಳು ಕೆಟ್ಟರು ಎಂಬುದನ್ನು ಪ್ರಖ್ಯಾತಿಪಡಿಸುವದಕ್ಕಾಗಿಯೂ ತಾವೇ ಖುದ್ದಾಗಿ ಸಂಧಿಗಾಗಿ ಹೋದರೆಂದು ಭಾವಿಸತಕ್ಕದ್ದು. ಆ ಸಮಯದಲ್ಲೇ ದುರ್ಯೋಧನಾದಿಗಳಿಗೆ ವಿವೇಕತಲೆದೋರಿ ಹಿಂದೆಮಾಡಿದ ಅಪರಾಧವನ್ನು ಮನ್ನಿಸೆಂದು ಶರಣಾಗತರಾಗಿ ಪಾಂಡವರ ರಾಜ್ಯವನ್ನು ಅವರಿಗೆ ಕೊಟ್ಟುಬಿಟ್ಟದುದಾದರೆ ಮನ್ನಿಸಿಯೇ ಬಿಡೋಣವೆಂಬ ಸುಸಙ್ಕಲ್ಪದಿಂದ ಆ ಕರುಣಾಸಾಗರನು ಹೋಗಿದ್ದರೂ ಹೋಗಿರಬಹುದು. **"ದೋಷೋ ಯದ್ಯಪಿ ತಸ್ಯ ಸ್ಯಾತ್"** ಎಂದೂ **"ಯದಿವಾ ರಾವಣಸ್ಸ್ವಯಮ್"** ಎಂದೂ ಹೇಳಿದ ಮಹನೀಯನಲ್ಲವೇ? ಹಾಗೆ ಶರಣಾಗತರಾಗದೇ ಇದ್ದುದರಿಂದ ತಮ್ಮ ಸಙ್ಕಲ್ಪಕ್ಕೆ ಈ ದುಷ್ಟರಾದ ದುರ್ಯೋಧನಾದಿಗಳೆಲ್ಲಾ ಮಡಿಯಲೇಬೇಕು. ಆದರಿಂದ ತಮಗೆ ಶರಣಾಗತರಾದ ಪಾಂಡವರಿಗೂ ಮುಖ್ಯವಾಗಿ ಪ್ರಪನ್ನಳಾದ ದ್ರೌಪದಿಗೂ ಶ್ರೇಯಸ್ಸನ್ನುಂಟುಮಾಡುವದೇ ಮುಖ್ಯೋದ್ದೇಶವೆಂಬುದನ್ನು ಅರಿತೆನೆಂಬ ಭಾವದಿಂದ ಅರ್ಜುನನು ಹೇಳುತ್ತಾನೆ. ಹಿಂದೆ ೨೭ನೆಯ ಶ್ಲೋಕದಲ್ಲಿ ದುಷ್ಕೃತಿಗಳು ನಾಶಕ್ಕಾಗಿ ತಾವೇ **ತ್ವರಮಾಣಾಃ** ಅವಸರಗೊಂಡು ಸರ್ವೇಶ್ವರನ ಬಾಯಿಯಲ್ಲಿ ಪ್ರವೇಶಿಸಿದರು ಎಂದು ಹೇಳಿ ಆದನ್ನೇ ೨೮, ೨೯ ನೆಯ ಶ್ಲೋಕಗಳಲ್ಲಿ ಎರಡು ದೃಷ್ಟಾಂತಗಳ ಮೂಲಕ **ವಿಶನ್ತಿ** ಎಂದು ಹೇಳಿದರು. ಹೀಗೆ ಹೇಳಿದುದರಿಂದ ಈ ಎಲ್ಲಾ ವ್ಯಾಪಾರಗಳಲ್ಲಿ ಪರಮಾತ್ಮನು ಏನು ನಿರ್ವ್ಯಾಪಾರನಾಗಿರುತ್ತಾನೆಯೋ ಎಂದರೆ ಅವೆಲ್ಲಾ ಸತ್ಯಸಙ್ಕಲ್ಪರಾದ ಶ್ರೀ ಕೃಷ್ಣಭಗವಾನ್‌ರವರ ಸಙ್ಕಲ್ಪಕ್ಕೆ ಅಧೀನವಾದುದೆಂದು ಹೇಳುತ್ತಾರೆ. ಅವರವರ ಸಂಹಾರಾದಿಗಳಿಗೆ ಕಾರಣವು ಆ ಅಚೇತನರ ದುಷ್ಕೃತರೂಪ ವ್ಯಾಪಾರಗಳು ; ಅದಕ್ಕೆ ಫಲವು ಕೋಪಾವಿಷ್ಟನಾದ ಸರ್ವೇಶ್ವರನ ನಿಗ್ರಹ ಸಙ್ಕಲ್ಪವು.

**ಹೇ ವಿಷ್ಣೋ**-ಎಲ್ಲಾ ಚಿದಚಿತ್ತುಗಳನ್ನೂ ವ್ಯಾಪಿಸಿ ಅವುಗಳಿಗೆ ನಿಯಾಮಕನಾಗಿರುವ, ಶ್ರೀ ಮಹಾವಿಷ್ಣುವೇ, ಇಲ್ಲಿ ವಿಷ್ಣುವೇ ಪರತತ್ವವೆಂದು ತಿಳಿದು ಅರ್ಜುನನು ಸಂಬೋಧಿಸಿರುತ್ತಾನೆ. **"ಅಹಮಾತ್ಮಾ ಗುಡಾಕೇಶ"** ವೆಂಬುದು ಇಲ್ಲಿ ಅನುಸಂಧೇಯವು, **ಸಮಗ್ರಾನ್ ಲೋಕಾನ್**-ಯುದ್ಧಕ್ಕಾಗಿ ಬಂದ ಈ ಸಮಸ್ತ ರಾಜರೂ ಯೋಧಭಟ್ಟರೂ ಎಲ್ಲರನ್ನೂ, **ಜ್ವಲದ್ಭಿರ್ವದನೈಃ**-ಪ್ರಜ್ವಲಿಸುವ ಮುಖಗಳಿಂದ, **ಸಮಂತಾತ್**-ಎಲ್ಲಾ ಕಡೆಯಿಂದಲೂ, **ಗ್ರಸಮಾನಃ**-ನುಂಗುವವನಾಗಿ, **ಲೇಲಿಹ್ಯಸೇ**-ತುಟಿಗಳಿಗೆ ಅಂಟಿದುದನ್ನು ನಾಲಿಗೆಯಿಂದ ನೆಕ್ಕುತ್ತೀಯೆ ; ಮತ್ತು, **ಜಗತ್ಸಮಗ್ರಂ**-ಜಗತ್ತನ್ನೆಲ್ಲಾ ಸಂಪೂರ್ಣವಾಗಿ, **ತೇಜೋಭಿರಾಪೂರ್ಯ** ನಿನ್ನ ತೇಜಸ್ಸುಗಳಿಂದ ತುಂಬಿ, **ತವ ಉಗ್ರಾಃ ಭಾಸಃ**-ನಿಮ್ಮ ಕ್ರೂರಗಳಾದ ಕಾಂತಿಗಳು, **ಪ್ರತಪಂತಿ**-ವಿಶೇಷವಾಗಿ ತಪಿಸುವಹಾಗೆ ಮಾಡುತ್ತವೆ. ಸೌಶೀಲ್ಯ ವಾತ್ಸಲ್ಯ ಸೌಲಭ್ಯ ಕಾರುಣ್ಯಾದಿ ಕಲ್ಯಾಣಮಹೋದಧಿಯು, ಚೇತನರಲ್ಲಿ ಪರಮ ದೌಷ್ಟ್ಯವನ್ನು ಕಂಡರೆ, ಮತ್ತು ಆ ದೌಷ್ಟ್ಯವು ಪರಮ ಭಕ್ತನಾಗಿ ತನಗೆ ಅತ್ಯರ್ಥಪ್ರಿಯನಾಗಿರುವವನ ವಿಷಯವಾದರೆ ಸ್ವಾಮಿಯ ಕೋಪವು ಮಿತಿ ಮೀರಿದುದೆಂಬುದೂ, ಆ ಸಂದರ್ಭದಲ್ಲಿ ಸರ್ವೇಶ್ವರನು, ಅಂತವನು ವಧ್ಯನೆಂದು ಸಙ್ಕಲ್ಪಿಸಿಬಿಟ್ಟರೆ, ಅದಕ್ಕೆ ತಡೆಯನ್ನು ಮಾಡಲು ಯಾರಿಗೂ ಶಕ್ತಿಯಿಲ್ಲವೆಂಬುದೂ, ಈ ಶ್ಲೋಕದಿಂದ ದ್ಯೋತಿತವು. ಪ್ರಹ್ಲಾದನಿಗೆ ಮಾಡಿದ ಚಿತ್ರಹಿಂಸೆಯು ಹೇಗೆ ಹಿರಣ್ಯಕಶಿಪುವಿನ ವಧೆಗಾಗಿ ಕೋಪಾವೇಶವೊ, ಹಾಗೆಯೇ ಪ್ರಸನ್ನಳಾದ ದ್ರೌಪದಿಗೆ ಮಾಡಿದ ವಿಚಿತ್ರಾವಮಾನಕ್ಕಾಗಿ ಕೋಪಾವೇಶವೆಂದೂ ಭಾವಿಸಬಹುದು ||೩೦||

**ಭಾಷ್ಯಾರ್ಥವು :—ರಾಜಲೋಕಾನ್ ಸಮಗ್ರಾನ್**-ಇಲ್ಲಿ ಮೂಲದ **ಲೋಕಾನ್**-ಎಂಬುದಕ್ಕೆ ಜನರೂ ಯೋಧರೂ ಎಲ್ಲರೂ ಅರ್ಥವಾಗುವಾಗ, **ರಾಜಲೋಕಾನ್**-ಎಂದು ಹೇಳಿರುವದು, ರಾಜರೇ ಯುದ್ಧಕ್ಕೆ ಮುಖ್ಯಕಾರಣಭೂತರಾಗಿ ಅವರೊಂದಿಗೆ ಇತರರು ಬಂದಿರುವದರಿಂದ

**ಭಾ. ರಾಜಲೋಕಾನ್ ಸಮಗ್ರಾನ್ ಜ್ವಲದ್ಭಿ ರ್ವದನೈ ರ್ಗ್ರಸಮಾನಃ ಕೋಪವೇಗೇನ ತದ್ರುಧಿರಾವಸಿಕ್ತ ಮೋಷ್ಠಪುಟಾದಿಕಂ ಲೇಲಿಹ್ಯಸೇ-ಪುನಃ ಪುನರ್ಲೇಹನಂ ಕರೋಷಿ। ತವಾತಿಘೋರಾ ಭಾಸೋ ರಶ್ಮಯಃ ತೇಜೋಭಿಃಸ್ವಕೀಯೈಃ ಪ್ರಕಾಶೈ ರ್ಜಗತ್ಸಮಗ್ರ ಮಾಪೂರ್ಯ ಪ್ರತಪನ್ತಿ ॥೩೦॥**

---

**ಮೂ. ಆಖ್ಯಾಹಿ ಮೇ ಕೋ ಭವಾನುಗ್ರರೂಪೋ ನಮೋಽಸ್ತುತೇ ದೇವವರಪ್ರಸೀದ ವಿಜ್ಞಾತು ಮಿಚ್ಛಾಮಿ ಭವನ್ತ ಮಾದ್ಯಂ ನಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥**

---

ಹಾಗೆ ವ್ಯಾಖ್ಯಾನವು. ಯುದ್ಧಕ್ಕಾಗಿ ಬಂದ ಸಮಸ್ತರಾದ ರಾಜರ ಸಮೂಹವೆಲ್ಲವನ್ನೂ, **ಜ್ವಲದ್ಭಿರ್ವದನೈಃ**-ಜ್ವಾಲೆಗಳು ಹೊರಡುವ ಮುಖಗಳಿಂದ, **ಗ್ರಸಮಾನಃ**-ನುಂಗಿಬಿಡುವನಾಗಿ, **ಕೋಪವೇಗೇನ**-ಈಗ ಈತನು ನೋಡುತ್ತಿರುವ ರೂಪವು ಕೋಪಾವೇಶವನ್ನು ತೋರುತ್ತಿದೆ ಯೆಂಬಭಾವದಿಂದ ಹೇಳುತ್ತಾರೆ, ಮಹತ್ತಾದ ಕೋಪದಿಂದ, **ತದ್ರುಧಿರಾವಸಿಕ್ತಂ**-ಹಾಗೆ ನುಂಗಿದ ದುಷ್ಟರ ರಕ್ತದಿಂದ ತೋಯಿಸಲ್ಪಟ್ಟ, **ಓಷ್ಠಪುಟಾದಿಕಂ**–ತುಟಿಗಳ ಪುಟವೇ ಮೊದ ಲಾದುವನ್ನು, **ಲೇಲಿಹ್ಯಸೇ** ಎಂದರೆ **ಪುನಃ ಪುನಃ ಲೇಹನಂ ಕರೋಷಿ**-ಪುನಃ ಪುನಃ ನಾಲಿ ಗೆಯಿಂದ ನೆಕ್ಕುತ್ತೀಯೇ ಈ ಸಂದರ್ಭದಲ್ಲಿ "**ಸಂರಂಭ ದುಷ್ಪ್ರೇಕ್ಷಣಕರಾಳ ಲೋಚನೋ ವ್ಯಾತ್ತಾನನಾಂತಂ ವಿಲರ್ಹಸ್ವ ಜಿಹ್ವಯಾ**" (ಭಾಗ. ೭. ೮ ೩೦) ಎಂಬುದು ಕೋಪಾವೇಶ ವನ್ನು ತೋರಿಸುವದರಿಂದ ಅನುಸಂಧೇಯವು. **ತವ**-ನಿನ್ನ, **ಅತಿ ಘೋರಾಃ**-ಅತಿ ಕ್ರೂರ ಗಳಾದ, **ಭಾಸಃ**-ಎಂದರೆ **ರಶ್ಮಯಃ**-ಕಿರಣಗಳು, ಕೋಟಿ ಸೂರ್ಯಪ್ರಕಾಶವುಳ್ಳವನಾದು ದರಿಂದ ಆತನಿಂದ ಹೊರಡುವ ಕಿರಣಗಳು, ಎಂಬ ಭಾವವು. **ತೇಜೋಭಿಃ**-ಎಂದರೆ **ಸ್ವಕೀಯೈಃ ಪ್ರಕಾಶೈಃ**-ಸುಡುತ್ತಲಿರುವ ತನ್ನ ಪ್ರಕಾಶಗಳಿಂದ, **ಜಗತ್ಸಮಗ್ರಂ**-ಸಮಸ್ತ ಜಗ ತ್ತನ್ನೂ, **ಆಪೂರ್ಯ**-ತುಂಬಿ ಎಂದರೆ ವ್ಯಾಪಿಸಿ, **ಪ್ರತಪನ್ತಿ**-ಸುಡುತ್ತಾ ಇವೆ. ಇದರಿಂದ ಅಲ್ಲಿ ನೋಡಲು ನೆರದಿರುವ ಬ್ರಹ್ಮಾದಿ ದೇವತೆಗಳಿಗೂ ಕೂಡ ಪರಮ ದುಸ್ಸಹವಾದ ಸ್ಥಿತಿಯನ್ನು ಪರಮಾತ್ಮನು ಉಂಟುಮಾಡಿದನೆಂದು ತೋರಿಬರುತ್ತದೆ. ಇಲ್ಲಿ ಸಾಧು ಪರಿತ್ರಾಣ ದುಷ್ಟ ವಿನಾಶಾದಿಗಳು ಅವತಾರದ ಪ್ರಯೋಜನವೆಂಬುದು ಪ್ರಕಟಿಸಲ್ಪಟ್ಟಿತು.

**ಮೂಲಕ್ಕೆ ಅರ್ಥವು:—** ಅರ್ಜುನನ ಪ್ರಾರ್ಥನೆಯು "**ದ್ರಷ್ಟುಮಿಚ್ಛಾಮಿ ತೇ ರೂಪ ಮೈಶ್ವರಂ ಪುರುಷೋತ್ತಮ**" (೧೧.೩) ಎಂಬಲ್ಲಿ ವಿಭೂತಿ ಮಾಹಾತ್ಮ್ಯೆಯನ್ನು ಪ್ರದರ್ಶಿಸುವ ರೂಪವನ್ನು ತೋರಿಸು ಎಂಬುದು ; ಇದಕ್ಕನುಸಾರವಾಗಿಯೇ, ಸಂಜಯರು ಹೇಳಿರುವದೂ "**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್**"-ಐಶ್ವರರೂಪವನ್ನೇ ತೋರಿಸಿದರು ಎಂದೇಹೇಳಿರುತ್ತಾರೆ. ಹೀಗಿರುವಾಗ; ಈಗ ಆ **ರೂಪಮೈಶ್ವರಮ್**-ಎಂದು ಹೇಳಿರುವದರೊಂದಿಗೆ ಈ ಘೋರ ರೂಪಾಕೃತಿಯನ್ನು ಈ ಕೃಪಾಮಹೋದಧಿಯು ತೋರಿಸು ತ್ತಿರುವದನ್ನು ಕಂಡು ಅತಿ ಭೀತನಾಗಿಯೂ ಆತ್ಯಾಶ್ಚರ್ಯಯುಕ್ತನಾಗಿಯೂ ಕೇಳುತ್ತಾನೆ. ಈ ಉಗ್ರರೂಪವನ್ನು ತೋರಿಸುತ್ತಿದ್ದೀಯಲ್ಲಾ ಇದರ ತಾತ್ಪರ್ಯವೇನು ? ಇಂತಹ ಅತಿ ಮಾನುಷಪ್ರವೃತ್ತಿಗಳ ಉದ್ದೇಶವೇನು ? ಅಜ್ಞನಾದ ತನಗೆ ತೋಚದೆ ಇರುತ್ತದೆ. ಆದು ದರಿಂದ ಕೃಪಯಾ ತಿಳಿಸು. ಅದೂ ಅಲ್ಲದೆ ಈ ಘೋರ ರೂಪದಿಂದ ಅತ್ಯಂತ ಭೀತನಾಗಿ ದ್ದೇನೆಯಾದುದರಿಂದ ಈ ಉಗ್ರರೂಪವು ಸಾಕು ಎಂದು ತಿಳಿಸುವುದಕ್ಕಾಗಿ ಪ್ರಸನ್ನನಾಗು ಎಂದು ಪ್ರಾರ್ಥಿಸುತ್ತಾನೆ—**ಉಗ್ರರೂಪಃ**-ಕ್ರೂರವಾದ ಆಕೃತಿಯುಳ್ಳ, **ಭವಾನ್**-ನೀನು, **ಕಃ**-

**ಭಾ. "ದರ್ಶಯಾತ್ಮಾನ ಮವ್ಯಯಂ" ಇತಿ ತವೈಶ್ವರ್ಯಂ ನಿರಙ್ಕುಶಂ ಸಾಕ್ಷಾತ್ಕರ್ತುಂ ಪ್ರಾರ್ಥಿತೇನ ಭವತಾ ನಿರಙ್ಕುಶೈಶ್ವರ್ಯಂದರ್ಶಯತಾಽತಿಘೋರರೂಪ ಮಿದ ಮಾವಿಷ್ಕೃತಂ; ಅತಿಘೋರರೂಪಃ ಕೋ ಭವಾನ್-ಕಿಂ ಕರ್ತುಂ ಪ್ರವೃತ್ತ ಇತಿ ಭವನ್ತಂಜ್ಞಾತು ಮಿಚ್ಛಾಮಿ; ತವಾಭಿಪ್ರೇತಾಂ ಪ್ರವೃತ್ತಿಂ ನಜಾನಾಮಿ; ಏತ**

ಯಾರು, ಎಂದರೆ ಏತಕ್ಕಾಗಿ ಈ ಘೋರ ರೂಪವನ್ನು ತಾಳಿರುತ್ತೀಯೇ? ಎಂಬ ಭಾವವು, **ಹೇ ದೇವವರ**-ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನಾದವನೇ, **"ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ"** (ಶ್ವೇತಾ. ೭. ೮.) ಎಂದು ಹೇಳಿರುವಹಾಗೆ ನಿಸ್ಸಮಾಭ್ಯಧಿಕನೇ ಎಂಬ ತಾತ್ಪರ್ಯವು, ಹೀಗೆ ಹೇಳಿದುದರಿಂದ ಸಗುಣ ಬ್ರಹ್ಮನೀತನು, ಇವನಲ್ಲದೆ ನಿರ್ಗುಣಬ್ರಹ್ಮನಿದ್ದಾನೆಂಬ ವಾದವು ನಿರಾಕರಿಸಲ್ಪಟ್ಟಿತು; **ದೇವವರ**-ಎಂಬುದು ಷಷ್ಠೀತತ್ಪುರುಷವಲ್ಲವು, ಸಪ್ತಮೀತತ್ಪುರುಷವೂ ಅಲ್ಲವು, **ದೇವೇಭ್ಯೋವರಃ**-ಎಲ್ಲಾ ದೇವತೆಗಳಿಗಿಂತಲೂ. ಬ್ರಹ್ಮರುದ್ರಾದಿಗಳಿಗಿಂತಲೂ ಶ್ರೇಷ್ಠನು ಎಂಬರ್ಥವಾದುದರಿಂದ ಪಂಚಮೀತತ್ಪುರುಷವು, ಇದರಿಂದ ಏಕಾತ್ಮವಾದವು ಕೂಡುವದಿಲ್ಲವು. **ಆಖ್ಯಾಹಿಮೇ**-ದಯಮಾಡಿ ನನಗೆ ಹೇಳು, **ತೇ**-ನಿನಗೆ **ನಮೋಸ್ತು**-ನಮಸ್ಕಾರವು, **ಪ್ರಸೀದ**-ಪ್ರಸನ್ನನಾಗು; ಈಗ ನನಗೆ ಪ್ರಾಪ್ತವಾಗಿರುವ ಭಯವಿಹ್ವಲಾದಿಗಳನ್ನು ಹೋಗಲಾಡಿಸು; ಇದಕ್ಕಾಗಿ ನೀನು ಪ್ರಸನ್ನನಾಗು ಶಾಂತವಾದ ರೂಪವನ್ನು ತಾಳಿರುತ್ತೀಯೆ? ಈ ನಿನ್ನ ನಿಗ್ರಹವನ್ನು ಯಾರೋ ಸಂಪಾದಿಸಿಕೊಂಡಿರುವದರಿಂದ ನೀನು ಕೋಪಾವೇಶವುಳ್ಳವನಾಗಿ ತೋರುತ್ತೀಯೇ? ನಿನ್ನ ಈ ಅತಿಮಾನುಷ ಪ್ರವೃತ್ತಿಯನ್ನು ಮಂದಬುದ್ಧಿಯಾದ ನಾನು ಅರಿಯಲಾರೆನು, ದಯಮಾಡಿ ತಿಳಿಸು ಎಂದು ಉತ್ತರಾರ್ಧದಿಂದ ಬೇಡುತ್ತಾನೆ. ಇಲ್ಲಿ **ಕೋಭವಾನ್**-ಎಂದರೆ ನೀನುಯಾರು ಎಂಬರ್ಥವಲ್ಲವು. ಹಿಂದಿನ ಶ್ಲೋಕಾಂತ್ಯದಲ್ಲೇ **ವಿಷ್ಣೋ**-ಎಂಬ ಸಂಬೋಧನೆಯಿರುತ್ತದೆ. ವಿಷ್ಣ್ವವತಾರಿಯಾದ ಶ್ರೀ ಕೃಷ್ಣನೇ ತನ್ನ ವಿಶ್ವರೂಪವನ್ನು ಈಗ ತೋರಿರುವದೆಂಬುದೂ ಚನ್ನಾಗಿ ತಿಳಿಯುವದು **ಕೋಭವಾನ್**-ಎಂಬುದರಿಂದ **ಕೀದೃಶ ಸತ್ಯ ಸಙ್ಕಲ್ಪಯುಕ್ತೋ ಭವಾನ್**-ಎಂಬುದೇ ಅರ್ಥವು; ಏಕೆಂದರೆ ಅರ್ಜುನನು ತಾನೇ ಉತ್ತರಾರ್ಧದಿಂದ ಪ್ರಶ್ನೆಯನ್ನು ವ್ಯಕ್ತಪಡಿಸಿಕೊಳ್ಳುತ್ತಾನೆ. **ಆದ್ಯಂ**-ಸಮಸ್ತಕ್ಕೂ ಮೂಲಕಾರಣನಾಗಿ, ತನಗೆ ಕಾರಣವಿಲ್ಲದಿರುವ, **ಭವನ್ತಂ**-ನಿನ್ನನ್ನು, **ವಿಜ್ಞಾತುಂ**-ವಿಶೇಷಿಸಿ ತಿಳಿಯುವದಕ್ಕಾಗಿ, ಚನ್ನಾಗಿ ತಿಳಿಯುವದಕ್ಕಾಗಿ, ಅದು ಹೇಗೆ ಎಂದರೆ, ನಿನ್ನ ಈ ಉಗ್ರರೂಪದ ಉದ್ದೇಶವೇನೆಂದು ತಿಳಿಯುವದಕ್ಕಾಗಿ, **ಇಚ್ಛಾಮಿ**-ಅಪೇಕ್ಷಿಸುತ್ತೆನೆ, ಈ ಸಂದರ್ಭದಲ್ಲಿ, **ತವ ಪ್ರವೃತ್ತಿಂ**-ನಿನ್ನ ದಿವ್ಯಚೇಷ್ಟಿತವನ್ನು, **ನ ಹಿ ಪ್ರಜಾನಾಮಿ**-ಚನ್ನಾಗಿ ತಿಳಿಯಲಾರೆನಷ್ಟೇ. ||೩೧||

**ಭಾಷ್ಯಾರ್ಥವು:**-ಹೀಗೆ ಅತ್ಯನ್ತಘೋರರೂಪವನ್ನು ಕಂಡು ಭಯವಿಹ್ವಲನಾಗಿ ಅದನ್ನು ನೋಡುತ್ತಿರುವದು ಸಾಧ್ಯವಿಲ್ಲವಾಗಿ, ಅರ್ಜುನನು ತನ್ನ ವಿಭೂತ್ಯೈಶ್ವರ್ಯ ಮಾಹಾತ್ಮೆಯನ್ನು ತೋರಿಸಲು ಉದ್ಯುಕ್ತನಾದ ಭಗವಂತನಿಗೆ ಇಂತಹ ಘೋರರೂಪವನ್ನು ತಾಳಿರುವದರ ಉದ್ದೇಶವನ್ನು ಪ್ರಾರ್ಥಿಸುವನಾಗಿ, ಪ್ರಾಪ್ಯವಾದ ಶಾಂತವಾದ ರೂಪವನ್ನು ಧರಿಸುವದರ ಮೂಲಕ ಪ್ರಸನ್ನನಾಗೆಂದು ಮುಂದೆ ಬೇಡುತ್ತಾನೆ.—**"ದರ್ಶಯಾತ್ಮಾನ ಮವ್ಯಯ" ಮಿತಿ**-ಎಂದು, **ತವೈಶ್ವರ್ಯಂ ನಿರಙ್ಕುಶಂ**-ನಿನ್ನ ಅಪ್ರತಿಹತವಾಗಿ ಮಹತ್ತಾದ ವಿಭೂತಿ ಮೊದಲಾದವುಗಳ ಐಶ್ವರ್ಯವನ್ನು, **ದರ್ಶಯತಾ**-ತೋರಿಸುತ್ತಿರುವ, **ಭವತಾ**-ನಿನ್ನಿಂದ ಈ ಅತಿ ಘೋರರೂಪವು, **ಆವಿಷ್ಕೃತಂ**-ಪ್ರದರ್ಶಿಸಲ್ಪಟ್ಟಿತು. ಇಂತಹ **ಅತಿಘೋರರೂಪಃ**-ಅತ್ಯನ್ತಘೋರ

**ಭಾ. ದಾಖ್ಯಾಹಿ ನೋ ನಮೋಽಸ್ತು ತೇ ದೇವವರ ಪ್ರಸೀದ ನಮಸ್ತೇಽಸ್ತು ಸರ್ವೇಶ್ವರ, ಏವಂ ಕರ್ತು ಮನೇನಾಭಿಪ್ರಾಯೇಣೇದಂ ಸಂಹರ್ತೃರೂಪ ಮಾವಿಷ್ಕೃತ ಮಿತ್ಯು ಕ್ತ್ವಾ ಪ್ರಸನ್ನರೂಪಶ್ಚ ಭವ ॥೩೧॥**

ರೂಪವುಳ್ಳ, **ಭವಾನ್**-ನೀನು, **ಕಃ**-ಯಾರು ಎಂದರೆ, **ಕಿಂಕರ್ತುಂ ಪ್ರವೃತ್ತಃ**-ಏನನ್ನು ಮಾಡ ಬೇಕೆಂದು ಪ್ರವರ್ತಿಸಿದವನಾಗಿರುವೆ, **ಇತಿ**-ಎಂದು **ಭವನ್ತಂ**-ನಿನ್ನನ್ನು, **ಜ್ಞಾತು ಮಿಚ್ಛಾಮಿ**-ತಿಳಿಯಲಪೇಕ್ಷಿಸುತ್ತೇನೆ. ನಿನ್ನ ಮಹತ್ಸಙ್ಕಲ್ಪವೇನೆಂಬುದನ್ನು ತಿಳಿಯದಿರುತ್ತೇನೆ, ದಯ ಮಾಡಿ ತಿಳಿಸು ಎಂದು ಬೇಡುತ್ತಾನೆ ಭಕ್ತನಾಗಿ ನಿನ್ನನ್ನು ಶರಣ ಹೊಂದಿದವನಿಗೆ ಅನು ಗ್ರಹರೂಪಾವಿಷ್ಕಾರವು ನ್ಯಾಯವು; ನಿಗ್ರಹರೂಪ ಪ್ರದರ್ಶನದ ಉದ್ದೇಶವನ್ನು ತಾನು ಗ್ರಹಿಸ ಲಿಲ್ಲವೆಂದು, **ಕೋಽಭವಾನ್**-ಎಂದು ಪ್ರಶ್ನಿಸುತ್ತಾನೆಂಬ ತಾತ್ಪರ್ಯವು ಆದುದರಿಂದಲೇ **ಕಿಂ ಕರ್ತುಂ ಪ್ರವೃತ್ತಃ**-ಎಂದು ವ್ಯಾಖ್ಯಾನವು. ಇದೀಗ ಅಭಿಪ್ರಾಯವೆಂಬುದು ಮುಂದೆ ಉತ್ತರಾರ್ಧದಿಂದಲೇ ವ್ಯಕ್ತವು ಅದನ್ನೇ ವ್ಯಕ್ತಪಡಿಸುತ್ತಾರೆ ಹೀಗೆ ವ್ಯಾಖ್ಯಾನಮಾಡಿರು ವದರಿಂದ, ಶ್ರೀ ಕೃಷ್ಣನನ್ನು ಕುರಿತು ನೀನೇನು ದೇವನೋ, ದಾನವನೊ ಯಾರೋ ತಿಳಿಯದು ಎಂದು ಭಯಪಟ್ಟು ಶಙ್ಕಿಸಿದನೆಂಬ ಅರ್ಥ ವಿವರಣವು ಸ್ವಾರಸ್ಯವಾದುದಲ್ಲವೆಂದು ಹೇಳಿದಂತಾ ಯಿತು. ಹೀಗೆ ಅರ್ಥಮಾಡಿದರೆ, ಮುಂದೆ ಹೇಳಿರುವ **ನಮೋಽಸ್ತು ತೇ**-ಎಂಬ ನಮಸ್ಕಾರ ಕ್ಕೂ, **ದೇವವರ**-ಎಂಬ ಸಂಬೋಧನೆಗೂ, ವಿರುದ್ಧವಾಗುತ್ತದೆ. **ತವ**-ನಿನ್ನ, **ಅಭಿಪ್ರೇತಂ ಪ್ರವೃತ್ತಿಂ**- ಉದ್ದೇಶಿಸಿರುವ ಪ್ರವೃತ್ತಿಯನ್ನು **ನಜಾನಾಮಿ**-ನಾನು ತಿಳಿಯಲಾರೆನು, **ಏತತ್**-ಈ ನಿನ್ನ ಸುಸಙ್ಕಲ್ಪವನ್ನು **ಮೇ**-ನನಗೆ, **ಆಖ್ಯಾಹಿ**-ಹೇಳು, **ನಮೋಽಸ್ತು ತೇ ದೇವ ವರಪ್ರಸೀದ** ಎಂದರೆ **ನಮಸ್ತೇಽಸ್ತು ಸರ್ವೇಶ್ವರ**-ಸರ್ವರಿಗೂ ನಿಯಾಮಕನಾಗಿರುವವನೇ ನಿನಗೆ ನಮಸ್ಕಾರವು. ಈ ಶ್ಲೋಕದ ಮುಖ್ಯ ತಾತ್ಪರ್ಯವೇನೆಂಬುದನ್ನು ಮುಂದಿನ ವಾಕ್ಯದಿಂದ ಹೇಳುತ್ತಾರೆ.—**ಅನೇನಾಭಿಪ್ರಾಯೇಣ**-ಈ ಅಭಿಪ್ರಾಯದಿಂದ, ಈ ಉದ್ದೇಶದಿಂದ, **ಏವಂ ಕರ್ತುಂ**-ಹೀಗೆ ಮಾಡಬೇಕೆಂಬುದಾಗಿ, **ಇದಂ ಸಂಹರ್ತೃರೂಪಂ**-ಈ ಸಂಹರಿಸುವ ರೂಪವು, **ಆವಿಷ್ಕೃತಂ**-ಪ್ರದರ್ಶಿಸಲ್ಪಟ್ಟಿತು, **ಇತ್ಯುಕ್ತ್ವಾ**-ಎಂದು ಹೇಳಿ, **ಪ್ರಸನ್ನರೂಪಶ್ಚಭವ**-ಪ್ರಸನ್ನ ವಾದ ಅನುಗ್ರಹರೂಪವುಳ್ಳವನಾಗು ಈ ನಿಗ್ರಹಘೋರ ರೂಪವನ್ನು ತ್ಯಜಿಸಿ, ಅನುಗ್ರಹ ರೂಪವನ್ನು ತಾಳು ಎಂಬ ತಾತ್ಪರ್ಯವು. ಇಲ್ಲಿ ದೇವವರ ಶಬ್ದದಿಂದ ವಿಷ್ಣುವೂ ಕೂಡ, ಬ್ರಹ್ಮರುದ್ರರಹಾಗೆ ತ್ರಿಮೂರ್ತಿಗಳಲ್ಲೊಬ್ಬನು ಎಂದು ಹೇಳುವ ಅಭಿಪ್ರಾಯವು ಶಾಸ್ತ್ರಸಮ್ಮತ ವಾದುದಲ್ಲವೆಂದು ತೋರಿಸುವವಕ್ಕಾಗಿ, ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನೆಂದು ಅರ್ಥ ಮಾಡಿ, **ಸರ್ವೇಶ್ವರಃ**-ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ **ದೇವವರ**-ಶಬ್ದಕ್ಕೆ ಪಂಚ ಮ್ಯರ್ಥದಿಂದ **ದೇವೇಭ್ಯೋವರಃ**-ಸರ್ವ ದೇವತೆಗಳಿಗಿಂತಲೂ ಶ್ರೇಷ್ಠನು ಎಂಬರ್ಥದಿಂದ ಸರ್ವೇಶ್ವರಃ ಎಂಬ ವ್ಯಾಖ್ಯಾನವು ಅರ್ಜುನನು ಹಿಂದಿನ ಶ್ಲೋಕದಲ್ಲಿ, ಸರ್ವವ್ಯಾಪಿಯಾಗಿ ಸರ್ವಕ್ಕೂ ಆತ್ಮಾವಾಗಿ, ಸರ್ವಕ್ಕೂ ನಿಯಾಮಕನಾಗಿರುವದರಿಂದ, ಶ್ರೀ ಕೃಷ್ಣನು ಸರ್ವೇಶ್ವರ ನೆಂಬ ಅಭಿಪ್ರಾಯದಿಂದ **ವಿಷ್ಣೋ** ಎಂಬ ಸಂಬೋಧನೆಯನ್ನು ಉಪಯೋಗಿಸಿರುವದರಿಂದ **ದೇವವರ** ಶಬ್ದಕ್ಕೆ **ಸರ್ವೇಶ್ವರಃ**-ಎಂಬ ತಾತ್ಪರ್ಯಸೂಚಕ ಭಾಷ್ಯವು ಈ **ಪ್ರಸೀದ** ಎಂಬ ಶಬ್ದಕ್ಕೆ **ಪ್ರಸನ್ನರೂಪಶ್ಚಭವ** ಎಂಬ ವ್ಯಾಖ್ಯಾನವು ಹೇಗೆ ಸಮಂಜಸವೆಂದರೆ, ಮುಂದೆ **"ತದೇವ ಮೇ ದರ್ಶಯ ರೂಪಮ್"** (ಗೀ.೧೧. ೪೫.) ಎಂಬ ಶ್ಲೋಕದಲ್ಲಿ ಪ್ರಸನ್ನವಾದ ಪರವಾಸುದೇವ ರೂಪವನ್ನು ತೋರಿಸು ಎಂದು ಪ್ರಾರ್ಥಿಸಲ್ಪಟ್ಟಿರುತ್ತದೆ. ॥೩೧॥

**ಭಾ- ಅವ ಆಶ್ರಿತವಾತ್ಸಲ್ಯಾತಿರೇಕೇಣ ವಿಶ್ವೈಶ್ವರ್ಯಂ ದರ್ಶಯತೋ ಭವತೋ ಘೋರ ರೂಪಾವಿಷ್ಕಾರೇ ಕೋಭಿಪ್ರಾಯ ಇತಿ ಪೃಷ್ಟೋ ಭಗವಾನ್ ಪಾರ್ಥಸಾರಥಿಸ್ಸ್ವಾಭಿ ಪ್ರಾಯಮಾಹ-ಪಾರ್ಥೋದ್ಯೋಗೇನ ವಿನಾಪಿ ಧಾರ್ತರಾಷ್ಟ್ರಪ್ರಮುಖ ಮಶೇಷಂ ರಾಜಲೋಕಂ ನಿಹನ್ತು ಮಹಮೇವ ಪ್ರವೃತ್ತ ಇತಿ ಜ್ಞಾಪನಾಯ, ಮಮ ಘೋರರೂಪಾವಿಷ್ಕಾರಃ ತಜ್ಜ್ಞಾಪನಂಚ ಪಾರ್ಥಮುದ್ಯೋಜಯಿತುಮ್, ಇತಿ.**

---

**ಭಾಷ್ಯಾವತಾರಿಕೆಯ ಅರ್ಥವು:—"ಕಾಲೋಸ್ಮಿ"** ಇತ್ಯಾದಿ ಮುಂದಿನ ಮೂರು ಶ್ಲೋಕಗಳ ಅಭಿಪ್ರಾಯಗಳನ್ನು ಒಟ್ಟು ಸೇರಿಸಿ, ಅವುಗಳಿಗೆಲ್ಲಾ ಅವತಾರಿಕೆಯನ್ನು ದಯ ಪಾಲಿಸುತ್ತಾರೆ,—ಆಶ್ರಿತವಾತ್ಸಲ್ಯದ **ಅತಿರೇಕೇಣ**-ಅತಿಶಯದಿಂದ, ವಿಶ್ವೈಶ್ವರ್ಯವನ್ನು **ದರ್ಶಯತಃ**-ತೋರಿಸುತ್ತಿರುವ, **ಭವತಃ**-ನಿನಗೆ, **ಘೋರರೂಪಾವಿಷ್ಕಾರೇ**-ಈ ಘೋರರೂಪವನ್ನು ತಾಳುವದರಲ್ಲಿ, **ಕೋಽಭಿಪ್ರಾಯ ಇತಿ ಪೃಷ್ಟಃ**-ಏನು ಅಭಿಪ್ರಾಯವೆಂದು ಕೇಳಲ್ಪಟ್ಟವ ನಾಗಿ, **ಭಗವಾನ್**-ಹೇಯ ಪ್ರತ್ಯನೀಕನಾಗಿ ಷಾಡ್ಗುಣ್ಯಪರಿಪೂರ್ಣನಾದ, **ಪಾರ್ಥಸಾರಥಿಃ**-ಪಾರ್ಥನಿಗೆ ಲೀಲಾಸಾರಥಿಯಾದ ಶ್ರೀ ಕೃಷ್ಣಭಗವಾನರವರು, **ಸ್ವಾಭಿಪ್ರಾಯ ಮಾಹ**-ತಮ್ಮ ಉದ್ದೇಶವನ್ನು ಈ ಮುಂದಿನ **ಕಾಲೋಸ್ಮಿ**-ಇತ್ಯಾದಿ ಮೂರು ಶ್ಲೋಕಗಳ ಮೂಲಕ ತಿಳಿಸು ತ್ತಾರೆ. **ಪಾರ್ಥೋದ್ಯೋಗೇನ ವಿನಾಪಿ**-ಒಂದುವೇಳೆ ಈ ಅರ್ಜುನನ ಯುದ್ಧಾರಂಭ ಕೆಲಸ ವಿಲ್ಲದಿದ್ದರೂ ಕೂಡ, **ಧಾರ್ತರಾಷ್ಟ್ರ ಪ್ರಮುಖಂ**-ಧೃತರಾಷ್ಟ್ರಪುತ್ರರೇ ಮೊದಲಾದ, **ಅಶೇಷಂ ರಾಜಲೋಕಂ**-ಈ ಸಮಸ್ತ ರಾಜರಗುಂಪನ್ನೂ, **ನಿಹನ್ತುಂ**-ಕೊಲ್ಲುವದಕ್ಕಾಗಿ, **ಅಹಮೇವ**-ಇನ್ನು ಯಾರಪ್ರೇರಣೆ ಸಹಾಯ ಮೊದಲಾದವುಗಳು ಯಾವುವೂ ಇಲ್ಲದೆ ನಾನೇ, **ಪ್ರವೃತ್ತ ಇತಿ**-ಪ್ರವೃತ್ತಿಸಿರುವೆನು ಎಂದು, **ಜ್ಞಾಪನಾಯ**-ತಿಳಿಸುವದಕ್ಕಾಗಿ **ಮಮಘೋರ ರೂಪಾವಿಷ್ಕಾರಃ**-ನನ್ನ ಘೋರರೂಪದ ಪ್ರದರ್ಶನವು, **ತಜ್ಜ್ಞಾಪನಂಚ**-ಹಾಗೆ ಅದನ್ನು ತಿಳಿಸುವದಾದರೋ, **ಪಾರ್ಥಮುದ್ಯೋಜಯಿತುಮ್ ಇತಿ**-ಅರ್ಜುನನನ್ನು ಪುನಃ ಯುದ್ಧ ವ್ಯವಸಾಯದಲ್ಲಿ ಸೇರಿಸುವದಕ್ಕಾಗಿ, ಎಂದು, ಶ್ರೀ ಕೃಷ್ಣಭಗವಾನರವರು ತನ್ನ ಸಙ್ಕಲ್ಪವನ್ನು ತಿಳಿಸುತ್ತಾರೆ. ಪ್ರಾರಂಭಿಸಿದುದು ಅರ್ಜುನನಲ್ಲಿರುವ ವಾತ್ಸಲ್ಯಾತಿಶಯದಿಂದ, ತನ್ನ ಪರಮೈ ಶ್ವರ್ಯವನ್ನು ವ್ಯಕ್ತಪಡಿಸುವ ದಿವ್ಯಮಙ್ಗಳ ವಿಗ್ರಹದ ಪ್ರದರ್ಶನವು, ಅದು ಈ ಅತಿಘೋರ ರೂಪದ ಆವಿಷ್ಕಾರದಲ್ಲಿ ಪರಿಣಮಿಸಿತು. ತನ್ನ ಭಕ್ತರಲ್ಲಿರುವ ವಾತ್ಸಲ್ಯಾತಿರೇಕವೇ ಅವರ ಶತ್ರುಗಳಾದ ದುಷ್ಟರ ವಿಷಯದಲ್ಲಿ ಅತಿಘೋರರೂಪವನ್ನು ತಾಳುವ ಹಾಗೆ ಮಾಡುತ್ತದೆ. ಪ್ರಹ್ಲಾದನಲ್ಲಿರುವ ವಾತ್ಸಲ್ಯಾತಿರೇಕವು, ಆತನ ದ್ವೇಷಿಯಾದ ಪಿತಾವಿನ ನಾಶಕ್ಕಾಗಿ ಘೋರ ರೂಪವನ್ನು ತಾಳುವಹಾಗೆ ಮಾಡಿತು. ಹೀಗೆ ಈ ಅತಿಕ್ರೂರ ರೂಪವನ್ನು ಧರಿಸುವದರಲ್ಲಿ ನಿಮ್ಮ ಉದ್ದೇಶವೇನೆಂದು ಅರ್ಜುನನು ಬೆಸಗೊಳ್ಳಲು; ಅದಕ್ಕೆ, ಸ್ವಾಮಿಯವರು ಉತ್ತರ ವಾಗಿ ಹೇಳುತ್ತಾರೇನೆಂದರೆ —ನೀನು ಯುದ್ಧಮಾಡಿದರೂ ಸರಿಯೇ, ಮಾಡದಿದ್ದರೂ ಸರಿಯೇ, ಆ ದುಷ್ಟ ಧಾರ್ತರಾಷ್ಟ್ರರ ಮತ್ತು ಇತರ ರಾಜರ ನಾಶವನ್ನು ಸಙ್ಕಲ್ಪಿಸಿರುತ್ತೇನೆ, ತಾನು ಸತ್ಯ ಸಙ್ಕಲ್ಪನಾದುದರಿಂದ ತನ್ನ ಪ್ರತಿಜ್ಞೆಯು ಹೇಗೋ ನಡೆಯಲೇ ಬೇಕೆಂದು ಹೇಳುತ್ತಾನೆಂಬ ತಾತ್ಪರ್ಯವು. ಇಲ್ಲಿ **ಅಹಮೇವ**-ನಾನೇ ಎಂಬ ಪ್ರಯೋಗದ ತಾತ್ಪರ್ಯವು, ಶಿಷ್ಟಪರಿಪಾಲನೆ ಗಾಗಿ ದುಷ್ಟನಿಗ್ರಹವು ನನ್ನದೇ ಕರ್ತವ್ಯವು ಎಂದು ತಿಳಿಸುತ್ತಾರೆ. ಇತರರು ನನ್ನನ್ನು ಪ್ರವ ರ್ತಿಸುವಹಾಗೆ ಮಾಡುವತನಕ ಕಾಯುವದೂ ಇಲ್ಲವು; ಅಂತಹ ನನ್ನ ಸಙ್ಕಲ್ಪಕ್ಕೆ ವಿರುದ್ಧ ವಾಗಿ ಯಾರೂ ನಡೆಯಲೂ ಸಾಧ್ಯವಿಲ್ಲವೆಂಬ ಭಾವವೂ, ಇಲ್ಲಿ ದ್ಯೋತಿತವು. ಅರ್ಜುನನ

**ಶ್ರೀ ಭಗವಾನುವಾಚ—**

**ಮೂ. ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ**
**ಋತೇಽಪಿ ತ್ವಾ ನ ಭವಿಷ್ಯನ್ತಿ ಸರ್ವೇ ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ॥ ೩೨.**

ಪ್ರವೃತ್ತಿ ಇಲ್ಲದಿದ್ದರೂ ತನ್ನ ದುಷ್ಟನಿಗ್ರಹರೂಪ ಸಙ್ಕಲ್ಪವನ್ನು ನೆರವೇರಿಸಿಕೊಳ್ಳುವ ಸಾಮರ್ಥ್ಯವು ತನಗುಂಟು, ಎಂದು ಹೇಳಿದರೆ, ಆಗ ಅರ್ಜುನನು, ತಾನು ಯುದ್ಧಮಾಡಲಿ ಮಾಡದಿರಲಿ, ಇವರುಗಳು ಹೇಗೂ ಹತರಾಗುತ್ತಾರೆ; ಆದುದರಿಂದ ಭಗವದಾಜ್ಞೆಯನ್ನು ಶಿರಸಾವಹಿಸಿ, ಆತನ ಸಙ್ಕಲ್ಪಾನುಸಾರವಾಗಿ ನಡೆಸುವದು ತನಗೆ ಸ್ವರೂಪವೆಂದು ಭಾವಿಸುವನು ಎಂಬುದನ್ನು ತಿಳಿಸುವದಕ್ಕಾಗಿ **"ತಜ್ಜ್ಞಾಪನಂ ಪಾರ್ಥಮುದ್ಯೋಜಯಿತುಮ್"** ಎಂಬ ವ್ಯಾಖ್ಯಾನವು. ಭೀಮ ಸಹದೇವರು ಧಾರ್ತರಾಷ್ಟ್ರರ ನಾಶವನ್ನು ಹಾರೈಸಿದರು ಎಂಬುದರಿಂದಾಗಲಿ, ದ್ರೌಪದಿಯು ಕಣ್ಣುನೀರು ಬಿಟ್ಟು ರೋದಿಸಿ ಶರಣಾಗತಿಯನ್ನು ಮಾಡಿದಳೆಂಬುವದರಿಂದಾಗಲಿ ಮಾತ್ರವೇ ಅಲ್ಲವು. ದುಷ್ಟರನ್ನು ವಧಿಸುವದು ನನ್ನ ಕರ್ತವ್ಯವು, ಆದುದರಿಂದ, **ಅಹಮೇವ ಪ್ರವೃತ್ತಃ** ಎಂಬ ಪ್ರಯೋಗವು. ಅವತಾರಕಾಲದಲ್ಲಿ ನಡೆಸತಕ್ಕದ್ದು (೧) ಶಿಷ್ಟಪರಿಪಾಲನೆಯೂ, (೨) ದುಷ್ಟನಿಗ್ರಹವೂ, (೩) ಧರ್ಮಸಂಸ್ಥಾಪನೆಯೂ, ಈ ಮೂರನ್ನೂ, ಶ್ರೀಕೃಷ್ಣನು ನಡೆಸಲು ಪ್ರವರ್ತಿಸಿರುತ್ತಾನೆ. ಪಾಂಡವರ ಸಂರಕ್ಷಣೆಯು ದುಷ್ಟರಾದ ದುರ್ಯೋಧನಾದಿಗಳ ನಾಶವಿಲ್ಲದೆ ನಡೆಯದಾದುದರಿಂದ ಅದು ನಡೆದೇತೀರಬೇಕೆಂದು ತಿಳಿಸುವದಕ್ಕಾಗಿ ಈ ಘೋರರೂಪವು. ಪ್ರಹ್ಲಾದ ಪರಿಪಾಲನೆಯನ್ನು ವಾತ್ಸಲ್ಯಾತಿರೇಕದಿಂದ ನಡೆಸಬೇಕೆಂದಿರುವವನಿಗೆ ಕೋಪಾವೇಶದಿಂದ ಉಗ್ರನೃಸಿಂಹ ರೂಪವನ್ನು ತಾಳಿ ಹೇಗೆ ಹಿರಣ್ಯಕಶಿಪುವನ್ನು ಕೊಂದನೋ ಹಾಗೆ ಎಂದು ಭಾವಿಸತಕ್ಕದ್ದು. ಸರ್ವೇಶ್ವರನಿಗೆ ತನ್ನ ಭಕ್ತರಲ್ಲಿ ವಾತ್ಸಲ್ಯಾತಿರೇಕವಿರುವದರ ದೆಸೆಯಿಂದಲೇ ಆ ಭಕ್ತರುಗಳನ್ನು ಹಿಂಸಿಸುವರ ವಿಷಯದಲ್ಲಿ ನಿಗ್ರಹರೂಪ ಕೋಪವೇ ವಿನಾ ಸ್ವಾಭಾವಿಕವಾಗಿ ಇಲ್ಲವು. ಆದುದರಿಂದ ಹಿರಣ್ಯಕಶಿಪು, ರಾವಣ, ಶಿಶುಪಾಲಾದಿಗಳ ವಿಷಯದಲ್ಲಿ ಕೋಪವು ಆದರೆ ಅಂತಹ ಪಾತಕಿಯೂ ಶರಣಾಗತನಾದರೆ ಪ್ರಸನ್ನತೆ ಎಂಬುದು ಕಾಕ, ದುರ್ವಾಸಾದಿ ವೃತ್ತಾಂತಗಳಿಂದ ವ್ಯಕ್ತವು.

**ಮೂಲಕ್ಕೆ ಅರ್ಥವು:—**ಈ ಘೋರರೂಪವನ್ನು ತಾಳಿದುದರ ಉದ್ದೇಶವೇನೆಂದು ಪ್ರಾರ್ಥಿಸಿದ ಅರ್ಜುನನಿಗೆ, ತಮ್ಮ ಸುಸಙ್ಕಲ್ಪವನ್ನು ತಿಳಿಸುತ್ತಾರೆ—**ಶ್ರೀ ಭಗವಾನುವಾಚ-**ಲಕ್ಷ್ಮೀಯುತನಾದ ಭಗವಾನ್ ಹೇಳುತ್ತಾರೆ—**ಲೋಕಕ್ಷಯಕೃತ್**-ಲೋಕದ ನಾಶವನ್ನುಂಟುಮಾಡುವ, **ಪ್ರವೃದ್ಧಃ**-ಘೋರರೂಪಿಯಾಗಿ ವಿಶೇಷವಾಗಿ ಬೆಳೆದವನಾಗಿ, **ಕಾಲೋಽಸ್ಮಿ**-ಕಾಲಾತ್ಮಕ ನಾಗಿದ್ದೇನೆ **"ಕಲಾಮುಹೂರ್ತಾದಿ ಮಯಶ್ಚ ಕಾಲೋನಯದ್ವಿಭೂತೇಃ ಪರಿಣಾಮಹೇತುಃ** (ವಿ. ಪು ೪.೧.೮೪) ಎಂಬಲ್ಲಿ ನಿತ್ಯವಿಭೂತಿಯಲ್ಲಿ ಕಾಲವು ಪರಿಣಾಮಹೇತುವಲ್ಲವೆಂದೂ, ಈ ಲೀಲಾವಿಭೂತಿಯಲ್ಲಿ ಮಾತ್ರ ಪರಿಣಾಮಹೇತುವಾದುದರಿಂದ **ಲೋಕಕ್ಷಯಕೃತ್**-ಎಂಬ ಪ್ರಯೋಗವು (ವಿ. ಪು ೧-೨ ೨೬ ರಲ್ಲಿ) **"ಅನಾದಿರ್ಭಗವಾನ್ಕಾಲೋನಾಂತೋಽಸ್ಯ ದ್ವಿಜವಿದ್ಯತೇ"** ಹೀಗೆ ಅನಾದಿಯಾದುದರಿಂದ ಕಾಲಕ್ಕೆ **ಪ್ರವೃದ್ಧಃ**-ಎಂಬ ವಿಶೇಷಣವು- ಹೀಗೆ ಸೃಷ್ಟಿಸಲ್ಪಟ್ಟ ಸಮಸ್ತ ಲೋಕಕ್ಕೂ ಕ್ಷಯವೆಂಬುದು ತಪ್ಪಿದ್ದಲ್ಲವು. ಅಂತಹ ಕಾಲಾತ್ಮಕನಾಗಿ, ಕಾಲವನ್ನೂ ನಿಯಮಿಸುವವನಾಗಿರುವವನು ನಾನು ಎಂದು ಹೇಳಿಕೊಳ್ಳುತ್ತಾರೆ. ಹೀಗೆ ಕಾಲದ ಧರ್ಮವನ್ನು ಹೇಳಿ, ಆದುದರಿಂದ ಆ ಕಾಲಧರ್ಮಗಳಿಗನುಗುಣವಾಗಿ **ಲೋಕಾನ್**-ಈಗ ನೆರೆದಿರುವ ಸೇನೆಯಲ್ಲಿರುವ ರಾಜರೂ, ರಾಜಭಟರೂ,

ಯೋಧರೇ ಮೊದಲಾದವರನ್ನು, **ಸಮಾಹರ್ತುಂ**-ಲೋಕಕಂಟಕರಾಗಿ ದುಷ್ಟರಾಗಿರುವ ಪ್ರಯುಕ್ತ ಅವರುಗಳಿಗೆ ಈಗ ವಿನಾಶಕಾಲವು ಒದಗಿರುವದರಿಂದ ಅವರನ್ನು **ಸಮಾಹರ್ತುಂ**-ಪ್ರತ್ಯಕ್ಷವಾಗಿಯೇ ಕೊಲ್ಲಿಸುವದಕ್ಕೋಸ್ಕರ ಪಾರ್ಥಸಾರಥಿಯಾಗಿ ನಾನೇ ಪ್ರತ್ಯಕ್ಷವಾಗಿ ನಿಂತು ಶತ್ರುಗಳು ಸಂಪೂರ್ಣವಾಗಿ ನಾಶವಾಗುವಹಾಗೆ, ಕೊಲ್ಲಿಸುವದಕ್ಕಾಗಿ ಎಂಬ ಭಾವವು. **ಇಹ**-ಈಗ, ಎಂದರೆ ನಿನಗೆ ಸಾರಥಿಯಾಗಿ ಬಂದಿರುವ ಸಂದರ್ಭದಲ್ಲಿ, **ಪ್ರವೃತ್ತಃ** ಪ್ರವೃತ್ತಿಯನ್ನು ಹೊಂದಿರುವನಾಗಿದ್ದೇನೆ, ಅಥವಾ ಕಾಲ ಶಬ್ದಕ್ಕೆ ಯಮಾತ್ಮಕನೆಂದು ಅರ್ಥಮಾಡಿದರೂ ಕೂಡುತ್ತದೆ. **ಕಾಲ ಇವ ಪ್ರಜಾಕ್ಷಯೇ** ” (ಸುಂದರ ೪೬-೪) ಎಂಬ ಪ್ರಯೋಗವು ಈ ಸಂದರ್ಭದಲ್ಲಿ ಅನುಸಂಧೇಯವು. **ಪ್ರತ್ಯನೀಕೇಷು**-ಶತ್ರುಪಕ್ಷದಲ್ಲಿ, ಭಕ್ತನಾಗಿರುವ ನಿನಗೆ ಯಾವಾಗ ಶತ್ರುವೋ ಆಗ ನನಗೂ ಶತ್ರುವೆಂಬ ಭಾವವು, **ಯೇ ಯೋಧಾಃ ಅವಸ್ಥಿತಾಃ**-ಯಾವ ಯೋಧರಿರುತ್ತಾರೋ, **ತೇ ಸರ್ವೇ**-ಅವರೆಲ್ಲರೂ, **ಋತೇ ಪಿ ತ್ವಾ**-ನೀನಿಲ್ಲದಿದ್ದರೂ ಎಂದರೆ ನೀನು ಯುದ್ಧಮಾಡದಿದ್ದರೂ, **ನಭವಿಷ್ಯನ್ತಿ**-ಬದುಕಿರಲಾರರು; ನಾನು ಸತ್ಯ ಸಙ್ಕಲ್ಪನಾದುದರಿಂದ ನೀನು ಯುದ್ಧಮಾಡು, ಮಾಡದಿರು, ನನ್ನ ಸಙ್ಕಲ್ಪವನ್ನು ನಡೆಸಿಕೊಳ್ಳುವ ಶಕ್ತಿಯುಂಟು ; ಈ ಲೋಕ ಕಂಟಕರಿರುವದು ಭೂಮಿಗೆ ಭಾರವು ; ಅವರಿಗೆಲ್ಲಾ ಕಾಲವು ಒದಗಿದೆ ; ಕಾಲದ ಮಹತ್ತು ನಾಶವನ್ನುಂಟುಮಾಡುವದೇ, ಆದುದರಿಂದ ಅವರುಗಳು ಇನ್ನು ಬದುಕಿರಲಾರರು ; ಇದೀಗ ನನ್ನ ಉದ್ದೇಶವು. ಇದನ್ನೇ ನನ್ನ ಈ ಕ್ರೂರರೂಪದಿಂದ ತೋರಿಸುತ್ತೇನೆಂಬ ಭಾವವು. **“ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವರಾಕ್ಷಸಾನ್ । ಅಂಗುಳ್ಯಗ್ರೇಣತಾನ್ ಹನ್ಯಾಂ ಇಚ್ಛನ್ ಹರಿಗಣೇಶ್ವರ”** (ರಾ. ಯು ೧೮-೨೩) “ಈ ದುಷ್ಟರಾದ ಪಿಶಾಚರೂ, ದಾನವರೂ, ರಾಕ್ಷಸರೂ ಇವರೆಲ್ಲರನ್ನೂ ನಾನು ಸಂಕಲ್ಪಿಸಿದರೆ, ಒಂದು ಬೆರಳಿನ ತುದಿಯ ಹೊಡತದಿಂದ ಕೊಂದು ಹಾಕುವೆನು ಎಂದು ಸುಗ್ರೀವನನ್ನು ಕುರಿತು ಹೇಳಿದ ಶ್ರೀರಾಮೋಕ್ತಿಯು ಅನುಸಂಧೇಯವು. ಸರ್ವೇಶ್ವರನು **ತೇ ಸರ್ವೇನ ಭವಿಷ್ಯನ್ತಿ** ಎಂದು ಯಾವಾಗಸಂಕಲ್ಪಿಸಿದನೋ, ಆಗ ಅದಕ್ಕೆ ಪ್ರತಿಯಾಗಿ ನಿಲ್ಲಲು ಯಾರಿಗೂಯೋಗ್ಯತೆ ಇಲ್ಲವೆಂಬುದು **“ಬ್ರಹ್ಮಾಸ್ವಯಂಭೂಶ್ಚತುರಾನನೋ ವಾ ರುದ್ರಸ್ತ್ರಿನೇತ್ರಸ್ತ್ರಿಪುರಾಂತಕೋವಾ । ಇಂದ್ರೋಮಹೇಂದ್ರಸ್ಸುರನಾಯಕೋವಾ ತ್ರಾತುಂ ನಶಕ್ತಾಯುಧಿರಾಮವಧ್ಯಂ”** (ರಾಮಾ. ಸುಂದರ. ೫೧.೪೫) ಎಂದು ಆಂಜನೇಯನು ರಾವಣನನ್ನು ಕುರಿತು ಹೇಳುವ ವಾಕ್ಯದಿಂದ ಗ್ರಹಿಸಬಹುದು. ಚತುರ್ಮುಖ ಬ್ರಹ್ಮನು ನಾಲ್ಕು ಮುಖದಿಂದಲೂ ನಾಲ್ಕು ವೇದಗಳನ್ನು ಅಧ್ಯಯನ ಮಾಡುವವನಾಗಿ ಬ್ರಹ್ಮತೇಜೋ ಬಲಯುಕ್ತನಾಗಿ ಎಂಟು ಕಣ್ಣುಗಳುಳ್ಳವನಾಗಿ, ತಾನಾಗಿಯೇ ಉತ್ಪತ್ತಿಯನ್ನು ಹೊಂದಿದವನಾಗಿ, ಇದ್ದರೂ, ಅವನ ಕೈಯಿಂದಲೂ ಶ್ರೀರಾಮನು ವಧ್ಯನೆಂದು ಸಙ್ಕಲ್ಪಿಸಿದವನನ್ನು ರಕ್ಷಿಸಲು ಸಾಗದು. ಈತನೇ ಹೀಗಾದನಂತರ, ಈತನ ಮಗನೂ ದುರ್ಬಲನೇ ಎಂದು ಹೇಳುತ್ತಾರೆ, ಪ್ರಳಯಕಾಲದಲ್ಲಿ ಎಲ್ಲರನ್ನೂ ರೋದನಮಾಡುವಹಾಗೆ ಮಾಡುವದರಿಂದ ರುದ್ರನೆಂದು ಹೇಳಲ್ಪಟ್ಟು, ಮೂರು ನೇತ್ರಗಳನ್ನು ಧರಿಸಿದವನಾಗಿ, ಮೂರನೆಯ ನೇತ್ರದಿಂದ ಮನ್ಮಥನೇ ಮೊದಲಾದವರನ್ನು ದಹಿಸಿದನೆಂಬ ಪರಾಕ್ರಮವುಳ್ಳ ರುದ್ರನೂ, ಅಂತವನನ್ನು ಕಾಪಾಡಲಾರನು. ಈತನಪಾಡೇ ಹೀಗಾದನಂತರ ಇನ್ನು ಇಂದ್ರನಪಾಡೇನು ಎಂದು ಹೇಳುತ್ತಾರೆ. ಇಂದ್ರನು ಮಹಾಪರಾಕ್ರಮಿಯಾದ ವೃತ್ರಾಸುರನನ್ನು ಕೊಂದು, ಮಹತ್ತಾದ ಪರಮೈಶ್ವರ್ಯವನ್ನು ಹೊಂದಿದವನಾಗಿ, ಅನೇಕಕೋಟಿ ದೇವತೆಗಳಿಂದ ಸಹಾಯವನ್ನು ಹೊಂದಿದವನಾಗಿದ್ದರೂ ಶ್ರೀರಾಮನು ವಧಿಸಬೇಕೆಂದು ಸಙ್ಕಲ್ಪಿಸಿದವನನ್ನು ಕಾಪಾಡಲಾರನು ; ಓ ರಾವಣನೇ ಆದುದರಿಂದ ನೀನು

**ಭಾ. ಕಲಯತಿ ಗಣಯತೀತಿ ಕಾಲಃ; ಸರ್ವೇಷಾಂ ಧಾರ್ತರಾಷ್ಟ್ರಪ್ರಮುಖಾನಾಮಾಯುರವಸಾನಂ ಗಣಯನ್, ಅಹಂ ತತ್ಕ್ಷಯಕೃತ್ ಘೋರರೂಪೇಣ ಪ್ರವೃದ್ಧೋ ರಾಜಲೋಕಾನ್ ಸಮಾಹರ್ತು-ಮಾಭಿಮುಖ್ಯೇನ ಸಂಹರ್ತು ಮಿಹ ಪ್ರವೃತ್ತೋಽಸ್ಮಿ। ಅತೋ ಮತ್ಸಙ್ಕಲ್ಪಾದೇವ ತ್ವಾಮೃತೇಽಪಿ-ತ್ವದುದ್ಯೋಗಾದೃತೇಽಪಿ, ಏತೇ**

---

ವಧ್ಯನು, ನಿನಗೆ ಯಾರೂ ಸಹಾಯಕರು ದೊರೆಯುಲಾರರು" ಎಂಬ ಶ್ಲೋಕವು ಅನುಸಂಧೇಯವು. **"ವಿಧಿಸ್ತ್ರಿಪುರಮರ್ದನ ಸ್ತ್ರಿದಶಪುಂಗವಃ ಪಾವಕೋ ಯಮ ಪ್ರಭೃತಯೋಽಪಿ ಯದ್ವಿಮತರಕ್ಷಣೇ ನಕ್ಷಮಾಃ"** (ದೇಶಿಕ. ಅಭೀತಿ ) ಎಂಬಲ್ಲಿ ಇವರು ಪ್ರತ್ಯನೀಕರು, ವಿಮತರು, ಆದುದರಿಂದ ವಧ್ಯರೆಂದು ಸರ್ವೇಶ್ವರನು ಸಙ್ಕಲ್ಪಿಸಿದನಂತರ ಅಂತಹ ವಿಮತರನ್ನು ಇವರುಗಳು ಯಾರೂ ರಕ್ಷಿಸಲು ಅಶಕ್ತರು ಎಂದು ಶ್ರೀ ನಿಗಮಾಂತ ದೇಶಿಕರವರು ಅಪ್ಪಣೆ ಕೊಡಿಸಿರುತ್ತಾರೆ.

**ಭಾಷ್ಯಾರ್ಥವು :—ಕಲಯತಿ** ಎಂದರೆ **ಗಣಯತಿ**-ಎಣಿಸುವವನಾದುದರಿಂದ **ಕಾಲಃ**-ಕಾಲರೂಪೀ ಪರಮಾತ್ಮನೆಂದಾದರೂ ಆಗಬಹುದು **ಅನಾದಿರ್ಭಗವಾನ್ ಕಾಲಃ**-ಎಂದು ವಿಷ್ಣುಪುರಾಣ ಪ್ರಯೋಗವಿದೆ ಆದುದರಿಂದ, ಅಂತಹ ಕಾಲತತ್ವಕ್ಕೆ ಅಂತರ್ಯಾಮಿಯಾದ ಪರಮಾತ್ಮನೆಂದಾಗಲಿ ಅರ್ಥಮಾಡಬಹುದು, ಅಥವಾ ವ್ಯುತ್ಪತ್ತ್ಯರ್ಥವು ಸರಿಹೋಗುತ್ತದೆಂದು **ಕಲಯತಿ ಗಣಯತಿ**-ಎಂದು ಅರ್ಥಹೇಳಿ ಪರಮಾತ್ಮನನ್ನು **ಬೋಧಿಸುತ್ತದೆಂದು** ತಿಳಿಸಿದರು, ಅಥವಾ ಧ್ಯೇಯವಸ್ತುವು ಸೃಷ್ಟಿಸ್ಥಿತಿ ಪ್ರಳಯಕಾರಕನಾಗಿರುವದರಿಂದ ಅದನ್ನು ವ್ಯಕ್ತಪಡಿಸಲು, ಈಗ ರೌದ್ರರೂಪವನ್ನು ಧರಿಸಿರುವ ಸಂಹರ್ತಾ ತಾನೇ ಎಂದಾಗಲಿ ಅರ್ಥಮಾಡಬಹುದು ಯಮಾತ್ಮಕನಾಗಿ ಯಮನೊಂದಿಗೆ ಸಾಮಾನಾಧಿಕರಣ್ಯದಿಂದ **ಕಾಲೋಽಸ್ಮಿ**-ಎಂದೂ ಹೇಳಬಹುದು. ಹೀಗೆ **ವ್ಯುತ್ಪತ್ತಿ**ಮೂಲಕ ಪ್ರಾಪ್ತವಾದ ಅರ್ಥವು ಪರಮಾತ್ಮನಿಗೆ ಹೇಗೆ ಅನ್ವಯಿಸುತ್ತದೆಂಬುದನ್ನು ತೋರಿಸಿರುತ್ತಾರೆ. ಹೀಗೆ **ಕಾಲಾತ್ಮಕನಾಗಿಯೇ, ಸರ್ವೇಷಾಂ ಧಾರ್ತರಾಷ್ಟ್ರ ಪ್ರಮುಖಾನಾಂ**-ಸಮಸ್ತರಾದ ಧೃತರಾಷ್ಟ್ರನ ಮಕ್ಕಳ **ಮತ್ತು** ಕಡೆಯವರ, **ಆಯು ರವಸಾನಂ ಗಣಯನ್**-ಆಯುಸ್ಸಿನ **ಕೊನೆಯನ್ನು** ಲೆಖ್ಖಮಾಡಿದವನಾಗಿ, **ಅಹಂ**-ನಾನು **ತತ್ಕ್ಷಯಕೃತ್**-ಅವರುಗಳಿಗೆ ನಾಶಕರನಾಗಿ, ಘೋರ ರೂಪದಿಂದ, **ಪ್ರವೃದ್ಧಃ**-ಬೆಳದವನಾಗಿ, ತನ್ನ ನಿಗ್ರಹಕ್ಕೆ ಪಾತ್ರರಾದವರನ್ನೆಲ್ಲಾ ಗ್ರಸನಮೂಲಕ **ನಾಶ** ಮಾಡುವ ಅವಸ್ಥೆಯುಳ್ಳವನಾಗಿ, **ರಾಜಲೋಕಾನ್**-ರಾಜರುಗಳನ್ನು, **ಸಮಾಹರ್ತುಂ**-ಎಂದರೆ **ಆಭಿಮುಖ್ಯೇನ ಸಂಹರ್ತುಂ**-ಎದುರಿಗೇ ನಿಂತು **ಕೊಲ್ಲುವದಕ್ಕೋಸ್ಕರ, ಕೊಲ್ಲಲು ತಾನೇ** ಮೂಲಕಾರಣವಾದುದರಿಂದ **ಸಂಹರ್ತುಂ**-ಎಂಬ ಪ್ರಯೋಗವು. ಆದರೆ **ತಾನೇ** ಕೊಲ್ಲದೆ ಸಾರಥಿಯಾಗಿಮಾತ್ರ ಇದ್ದು ಇತರರಿಂದ ಕೊಲ್ಲಿಸುವದರಿಂದ ಪ್ರತ್ಯಕ್ಷದಲ್ಲೇ **ಕೊಲ್ಲಿ**ಸುವದಕ್ಕಾಗಿ ಎಂದೂ ಅರ್ಥಹೇಳಬಹುದು, ಅಥವಾ ತನ್ನ ಸಮಕ್ಷಮವೇ ಸಾಕು, ಆದರಿಂದ ಸಾರಥಿಯಾಗಿ ನಿಂತಮಾತ್ರದಿಂದಲೇ **ಸಮಾಹರ್ತುಂ**-ಸಂಪೂರ್ಣವಾಗಿ ನಾಶಮಾಡುವದಕ್ಕಾಗಿ ಎಂಬ ಭಾವವು, ಈ ಸಂದರ್ಭದಲ್ಲಿ **"ಮನಸೈವ ಜಗತ್ಸೃಷ್ಟಿಂ ಸಂಹಾರಂಚ ಕರೋತಿಯಃ। ತಸ್ಯಾರಿ ಪಕ್ಷಕ್ಷಪಣೇಕಿಯಾನುದ್ಯಮವಿಸ್ತರಃ"** (ವಿ. ಪು.೫ ೨೨.೨೫) ಎಂದರೆ ಸಙ್ಕಲ್ಪಮಾತ್ರದಿಂದಲೇ ಜಗತ್ತಿನ ಸೃಷ್ಟಿ ಲಯಗಳನ್ನು ನಡೆಸುವ ಮಹಾನುಭಾವನಿಗೆ, ತನ್ನ ಶತ್ರುಪಕ್ಷದ ನಾಶದಲ್ಲಿ ಯಾವ ವಿಸ್ತರವಾದ ಪ್ರಯತ್ನವು ಬೇಕಾಗಿರುತ್ತದೆ? ಎಂದು ಹೇಳಲ್ಪಟ್ಟಿರುತ್ತದೆ ಯಾವುದೂ ಬೇಕಿಲ್ಲವೆಂಬ ಭಾವವು. **ಇಹ**-ಈ ಸಂದರ್ಭದಲ್ಲಿ, **ಪ್ರವೃತ್ತೋಽಸ್ಮಿ**

**ಭಾ. ಧಾರ್ತರಾಷ್ಟ್ರಪ್ರಮುಖಾಸ್ತ್ವವ ಪ್ರತ್ಯನೀಕೇಷು ಯೇಽವಸ್ಥಿತಾ ಯೋಧಾಃ, ತೇ ಸರ್ವೇ ನಭವಿಷ್ಯನ್ತಿ-ವಿನಙ್ಕ್ಷ್ಯನ್ತಿ ॥೩೨॥**

ಪ್ರವರ್ತಿಸಿರುವೆನು, **ಅತಃ**-ಆ ಕಾರಣದಿಂದ, **ಮತ್ಸಙ್ಕಲ್ಪಾದೇವ**-ನನ್ನ ಸಙ್ಕಲ್ಪಮಾತ್ರದಿಂದಲೇ **ತ್ವಾಮೃತೇಽಪಿ**-ನೀನು ಇಲ್ಲದಿದ್ದರೂ, ಎಂದರೆ **ತ್ವದುದ್ಯೋಗಾದೃತೇಽಪಿ**-ನಿನ್ನ ಮೂಲಕ ಯುದ್ಧಾರಂಭಾದಿಗಳಿಲ್ಲದಿದ್ದರೂ, ಆದರೆ ಪುರುಷ ಪ್ರಯತ್ನಗಳು ಬೇಕಾಗಿ ಕಂಡಿರುವುದಲ್ಲಾ ಎಂದರೆ ಅವುಗಳೆಲ್ಲಾ ನಿಮಿತ್ತಮಾತ್ರವೇ ಎಂಬ ಭಾವವು. ಹೀಗೆ ನೀನು ಯುದ್ಧವನ್ನು ಮುಂದೆ ನಡೆಸಲಿ ನಡೆಸದೇಇರಲಿ, ತಾನು ಅವರುಗಳನ್ನು ಕೊಲ್ಲಿಸುವದು ಸಿದ್ಧವೆಂದಾದನಂತರ, ನಿನ್ನ ಕೈಯಿಂದಲೇ ಹೇಗಾದರೂ ಮಾಡಿ ಕೊಲ್ಲಿಸುವ ಶಕ್ತಿಯು ನನಗುಂಟು; ನೀನು ಒಲ್ಲೆಯಾದರೆ, ಇನ್ನು ಯಾರ ಕೈಯಲ್ಲಾದರೂ ನಡೆಸಿಬಿಡುವೆನೆಂಬ ಭಾವವು. ಆದುದರಿಂದಲೇ ಮುಂದೆ **"ನಿಮಿತ್ತಮಾತ್ರಂ ಭವ ಸವ್ಯಸಾಚಿನ್"** ಎಂದು ಉಪದೇಶವು. **ಧಾರ್ತರಾಷ್ಟ್ರಪ್ರಮುಖಾಃ**-ಧೃತರಾಷ್ಟ್ರನ ಪುತ್ರರೂ ಸಂಬಂಧಿಗಳೂ ಇನ್ನೂ ಮುಖ್ಯರಾದವರೆಲ್ಲಾ, ಅರ್ಜುನನಾದ ನಿನ್ನ, **ಪ್ರತ್ಯನೀಕೇಷು**-ಎದುರಿಗೆ ಪ್ರತಿಯಾಗಿ ನಿಂತು ಯುದ್ಧ ಮಾಡುವರಲ್ಲಿ, ಎಂದರೆ, ಶತ್ರು ಪಕ್ಷದವರಲ್ಲಿ, **ಯೇ ಅವಸ್ಥಿತಾಃ ಯೋಧಾಃ**-ಯಾವ ಯುದ್ಧಮಾಡುವವರು ಇರುತ್ತಾರೋ, **ತೇ ಸರ್ವೇ**-ಅವರೆಲ್ಲರೂ, **ನ ಭವಿಷ್ಯಂತಿ**-ಇರುವದಿಲ್ಲವು ಎಂದರೆ **ವಿನಙ್ಕ್ಷ್ಯನ್ತಿ** ನಾಶವಾಗುತ್ತಾರೆ. ಕಾಲ ಶಬ್ದವು ಅನೇಕ ಧಾತುಗಳಿಂದ ವ್ಯುತ್ಪತ್ತಿಯನ್ನು ಹೊಂದಿದ ಪದವು, ಅವುಗಳಲ್ಲಿ ಕೆಲವನ್ನು ಈ ಪಾದ್ಮಪುರಾಣ ಶ್ಲೋಕವು ಉಪಪಾದಿಸಿರುತ್ತದೆ. **ಕಾಲಃ ಕಲಿತಸಂಪೂರ್ಣಸ್ತದ್ಗುಣತ್ವಾಜ್ಜನಾರ್ದನಃ । ಸಂಹಾರಾತ್ಸರ್ವ ವಿತ್ವಾದ್ವಾ ಸರ್ವವಿದ್ರಾವಣೇನವಾ"** ಇವುಗಳಲ್ಲಿ ಆಯುಃಪರಿಮಿತಿಯಿಂದ **ಕಲಯತಿ ಗಣಯತೀತಿ ಕಾಲಃ**-ಎಂಬ ವ್ಯುತ್ಪತ್ತಿಯು ಇಲ್ಲಿಗೆ ಸಮಂಜಸವಾದುದಾಗಿರುತ್ತದೆ ಇವರೆಲ್ಲರೂ ನಿಯತವಾದ ಆಯುಸ್ಸುಳ್ಳವರು, ಆಯುಸ್ಸಿನ ಪರಿಮಿತಿಯು ಮುಗಿದುದರಿಂದ ಈಗ ಯುದ್ಧದಲ್ಲಿ ಅವರು ಮಡಿಯಲೇ ಬೇಕೆಂಬ ಭಾವವು **ಕಾಲೋಸ್ಮಿ**-ಎಂಬುದರಿಂದ ತೋರಿಬರುತ್ತದೆ. **ಋತೇಽಪಿತ್ವಾ** ಎಂಬುದನ್ನು **ನಭವಿಷ್ಯನ್ತಿ**-ಎಂಬುದರೊಂದಿಗೆ ಅನ್ವಯಿಸಿ, ನೀನು ಏನಾ ಇತರರೆಲ್ಲರೂ **ನಭವಿಷ್ಯನ್ತಿ**-ಜೀವಿಸಿರುವದಿಲ್ಲ ಸಾಯುವರು ಎಂದು ಅರ್ಥಮಾಡುವದು ಸಮಂಜಸವಾಗುವದಿಲ್ಲವು. ನೀನು ಎಂಬುದು ಇತರ ಪಾಂಡವರಿಗೂ ಉಪಲಕ್ಷಣವೆಂದು ಭಾವಿಸಿದರೂ, ಶತ್ರು ಪಕ್ಷದಲ್ಲೂ ಕೃಪಾದಿಗಳು ಹತರಾಗಲಿಲ್ಲವು ಎಲ್ಲರೂ ಹತರಾಗಲಿಲ್ಲವಾದುದರಿಂದ ಆ ಅರ್ಥವು ಸರಿಯಲ್ಲವು. ನಾನು ಸಙ್ಕಲ್ಪಿಸಿರುವದರಿಂದ, ನೀನು ಯುದ್ಧಮಾಡಲಿ ಮಾಡದಿರಲಿ, ಅದು ನಡೆಯಲೇ ನಡೆಯುತ್ತೆಯಾದುದರಿಂದಲೂ, ಮುಂದಿನ ಶ್ಲೋಕದ **ತಸ್ಮಾತ್**-ಎಂಬ ಪ್ರಯೋಗಕ್ಕೂ **ನಿಮಿತ್ತಮಾತ್ರಂ ಭವ ಸವ್ಯಸಾಚಿನ್**-ಎಂಬ ಉಪದೇಶಕ್ಕೂ ಸಮಂಜಸವಾದ ಹೇತುವಾಗುವದರಿಂದಲೂ, ಶ್ರೀ ಯತಿವರ್ಯರ ಭಾಷ್ಯವೇ ಸಮಂಜಸವಾಗಿರುತ್ತದೆ.

**ಮೂಲಕ್ಕೆ ಅರ್ಥವು :**—ನೀನು ಯುದ್ಧಮಾಡು, ಮಾಡದೇಇರು, ಇತರರ ಮೂಲಕವಾಗಿಯಾಗಲಿ ನನ್ನ ಸಂಕಲ್ಪವು ನಡೆಯುವದು ಸಿದ್ಧವಾದುದರಿಂದ, ನೀನೇ ಏತಕ್ಕೆ ನನ್ನ ಸುಸಙ್ಕಲ್ಪವನ್ನು ನಡೆಸಿಕೊಟ್ಟು, ನನ್ನ ಇನ್ನೂ ವಿಶೇಷಪ್ರೀತಿಗೆ ಪಾತ್ರನಾಗಿ, ಶತ್ರುಗಳನ್ನು ಸಂಹರಿಸಿ, ಅರ್ಜುನನು ಮಹಾ ಪರಾಕ್ರಮಿ, ಅವನಂತಹ ಮಹಾರಥನು ಲೋಕದಲ್ಲಿಲ್ಲವೆಂಬ ಕೀರ್ತಿಯನ್ನು ಸಂಪಾದಿಸಿಕೊಂಡು, ಸಮೃದ್ಧಿ ಹೊಂದಿರುವ ಎರಡು ಪಂಗಡದ ರಾಜ್ಯವನ್ನೆಲ್ಲಾ ಅನುಭವಿಸಿ, ಸುಖಾನುಭವವನ್ನು ಮಾಡಕೂಡದು? ಇವರುಗಳು ಸಾಯಲೇಬೇಕೆಂದು

**ಮೂ. ತಸ್ಮಾತ್ತ್ವಮುತ್ತಿಷ್ಠ ಯಶೋಲಭಸ್ವ ಜಿತ್ವಾಶತ್ರೂನ್ಭುಙ್ಕ್ಷ್ವರಾಜ್ಯಂ ಸಮೃದ್ಧಂ ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥**

ನಾನು ಇದಕ್ಕೆ ಮುಂಚೆಯೇ ನಿರ್ಧರಿಸಿರುತ್ತೇನೆ, ಆದುದರಿಂದ **ತಸ್ಮಾತ್ತ್ವಂ ಉತ್ತಿಷ್ಠ**-ಆ ಕಾರಣದಿಂದ, ಎಂದರೆ ನೀನು ಯುದ್ಧಮಾಡದಿದ್ದರೂ ನನ್ನ ಸಂಕಲ್ಪಾನುಸಾರ ಅವರು ಸಾಯುವದು ನಿಶ್ಚಯವಾದುದರಿಂದ, **ತ್ವಂ**-ಎಂದರೆ ಎಲ್ಲಾ ವಾಕ್ಯವು ಸಾವಧಾರಣವಾದುದರಿಂದ ಇಲ್ಲಿನ ಪ್ರಕರಣಾನುಗುಣವಾಗಿ **ತ್ವಮೇವ**-ನೀನೇ, **ಉತ್ತಿಷ್ಠ**-ಏಳು, **ಶತ್ರೂನ್ ಜಿತ್ವಾ**-ಶತ್ರುಗಳನ್ನೆಲ್ಲಾ ನನ್ನ ಸಙ್ಕಲ್ಪಾನುಸಾರ ಜಯಿಸಿ, ಯದ್ಯಪಿ ನೀನೇನೋ ಪರಾಕ್ರಮಿಯೇ, ನನ್ನ ಸಙ್ಕಲ್ಪವಿದ್ದರೆತಾನೇ ನೀನೂ ಜಯಿಸುವದೆಂಬುದೂ, ಮತ್ತು ಅದು ಅತಿ ಸುಲಭವಾಗಿ ಫಲಿಸೋಣವೂ, ಶತ್ರುಗಳು ನಿನ್ನಿಂದ ಜಯಿಸಲ್ಪಡತಕ್ಕದ್ದೆಂದು ನನ್ನ ಉದ್ದೇಶವಿರುವದರಿಂದ, **ಶತ್ರೂನ್ ಜಿತ್ವಾ**-ಶತ್ರುಗಳನ್ನು ಜಯಿಸಿ, **ರಾಜ್ಯಂ ಸಮೃದ್ಧಂ ಭುಙ್ಕ್ಷ್ವ**-ಸರ್ವ ಸಮೃದ್ಧಿಯೂ ಇರುವ ರಾಜ್ಯವನ್ನು ಅನುಭವಿಸು (ಇದೂ ನನ್ನ ಸಙ್ಕಲ್ಪವೇ ಎಂಬ ಭಾವವು). ಕುರು ಪಾಂಡವರ ರಾಜ್ಯಗಳು ಬಹು ಸಮೃದ್ಧಿಯುಳ್ಳ ಪ್ರದೇಶವೆಂದಾಗಲಿ, ಅಥವಾ ಎರಡು ರಾಜ್ಯಗಳೂ ನಿನಗೆ ಸೇರುವದರಿಂದ ಎರಡರಾದಾಯವೂ ನಿನ್ನದೇಯಾಗುವದರಿಂದಾಗಲಿ, ಅಥವಾ ಈಗ ದುರ್ಯೋಧನಾದಿಗಳ ಅಧರ್ಮದಿಂದ ಸಮೃದ್ಧಿಯಲ್ಲಿ ನ್ಯೂನತೆಯನ್ನು ಹೊಂದಿದ್ದರೂ ನೀನು ಅತ್ಯರ್ಥ ಪ್ರಿಯನಾದುದರಿಂದ ಸಮೃದ್ಧಿಯುಂಟಾಗಲೆಂದು ನಾನು ಸಙ್ಕಲ್ಪಿಸಿರುವದರಿಂದಾಗಲಿ, ಇಂತಹ ಸಮೃದ್ಧಿಯುಳ್ಳ ಭರತರಾಜ್ಯವನ್ನು ಅನುಭವಿಸು ಏಳು ಯುದ್ಧಮಾಡು; ಹೀಗೆ ನಿನಗೆ ಏಕೆ ಹೇಳುತ್ತೇನೆಂದು ಕೇಳುತ್ತೀಯೋ? **ಏತೇ**-ಈ ಧಾರ್ತರಾಷ್ಟ್ರಾದಿಶತ್ರುಪಕ್ಷದವರೆಲ್ಲಾ, **ಪೂರ್ವಮೇವಾ**-ಮೊದಲೇ ಎಂದರೆ ಅವತಾರಕ್ಕೆ ಪೂರ್ವಭಾವಿಯಾಗಿಯೇ ಅಥವಾ ಯುದ್ಧಾರಂಭಕ್ಕೆ ಮುಂದೆಯೇ ಸಂಧಿಗೆ ಮುಂದೆಯೇ ಅಥವಾ ಯಾವದಿನ ದ್ರೌಪದಿಯು **"ಶಙ್ಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ। ಗೋವಿಂದ ಪುಂಡರೀಕಾಕ್ಷ ರಕ್ಷ ಮಾಂ ಶರಣಾಗತಾಂ। ಹಾಕೃಷ್ಣ ದ್ವಾರಕಾವಾಸಿನ್ ಕ್ವಾಸಿ ಯಾದವನಂದನ। ಇಮಾ ಮವಸ್ಥಾಂ ಸಂಪ್ರಾಪ್ತಾಮನಾಥಾಂ ಕಿಮುಪೇಕ್ಷಸೇ। ಗೋವಿಂದದ್ವಾರಕಾವಾಸಿ ನ್ಕೃಷ್ಣಗೋಪೀಜನಪ್ರಿಯ। ಕೌರವೈಃ ಪರಿಭೂತಾಂ ಮಾಂ ಕಿಂ ನಜಾನಾಸಿ ಕೇಶವ"** ಎಂದು ಶರಣಾಗತಿಯನ್ನು ಮಾಡಿ ನೀಚ ದುರ್ಯೋಧನನ ಸಭೆಯಲ್ಲಿ ಅನಾಥಳಾಗಿ ರೋದಿಸಿದಳೋ ಆಗಲೇ ಎಂಬ ಭಾವವು: ಹೀಗೆ ಪೂರ್ವದಲ್ಲೇ, **ನಿಹತಾಃ**-ಕೊಲ್ಲಲ್ಪಟ್ಟರು, ಇವರಿಂದ ಆಯುಸ್ಸು ಮುಗಿದವರೆಂದು ನನ್ನಿಂದ ನಿರ್ಧರಿಸಲ್ಪಟ್ಟರು. ಆದುದರಿಂದ ಸತ್ತವರಲ್ಲೇ ಸೇರಿದವರೆಂಬ ಭಾವವು. ಹೊಡೆದ ಹಾವುಗಳ ಹಾಗೆ ಅರ್ಧಜೀವವುಳ್ಳವರು. ಅಂತವರನ್ನು ಪೂರಾ ಸಾಯಿಸುವದಕ್ಕೆ ನೀನು ಕಾರಣನಾಗು ಎಂದು **ನಿಮಿತ್ತ ಮಾತ್ರಂ ಭವ**-ಎಂದು ಮುಂದೆ ಹೇಳುತ್ತಾರೆ ನಿನಗೆ ಇದು ಸುಲಭ ಕೆಲಸವು. ಮೊದಲು ನಾನೇ ಅರ್ಧ ಕೊಂದಿರುವದರಿಂದ ನಿನಗೇನೂ ದೋಷವೂ ಇಲ್ಲವು, ಕಷ್ಟವೂ ಇಲ್ಲವು ಎಂದು ಹೇಳುವ ಭಾವವು ಶೀಘ್ರದಲ್ಲೇ ಹತರಾಗುವಂತವರೆಂದು ಸಙ್ಕಲ್ಪಿಸಲ್ಪಟ್ಟವರು; ಇದು ಭವಿಷ್ಯತ್ತಿನಲ್ಲಿ ನಡೆಯುವದು ಸತ್ಯವಾದುದರಿಂದ, ಭೂತಕಾಲದ ವ್ಯಪದೇಶವು. ಆದುದರಿಂದ **ಹೇ ಸವ್ಯಸಾಚಿನ್**-ಎಡಗೈಯಿಂದ ಕೂಡ ಶರಪ್ರಯೋಗಮಾಡುವ ಶಕ್ತಿಯುಳ್ಳ, ತನ್ಮೂಲಕ ಎರಡು ಕೈಗಳಿಂದಲೂ ಶರಪ್ರಯೋಗಮಾಡಿ ಯುದ್ಧಮಾಡುವ ಮಹಾ ಪರಾಕ್ರಮಿಯಾದ ಅರ್ಜುನನೇ! **ನಿಮಿತ್ತಮಾತ್ರಂ ಭವ**-ವ್ಯಾಜಮಾತ್ರ ಯುದ್ಧವನ್ನು ಪುನಃ ಆರಂಭಿಸಿ

**ಭಾ. ತಸ್ಮಾತ್ತ್ವಂ ತಾನ್ಪ್ರತಿ ಯುದ್ಧಾಯೋತ್ತಿಷ್ಠ; ತಾನ್ ಶತ್ರೂನ್ ಜಿತ್ವಾಯಶೋಲಭಸ್ವ; ಧರ್ಮ್ಯಂ ರಾಜ್ಯಂ ಚ ಸಮೃದ್ಧಂ ಭುಙ್ಕ್ಷ್ವ; ಮಯ್ಯೈವೇತೇ ಕೃತಾಪರಾಧಾಃ ಪೂರ್ವಮೇವ ನಿಹತಾಃ- ಹನನೇ ವಿನಿಯುಕ್ತಾಃ ; ತ್ವಂತು ತೇಷಾಂಹನನೇ**

ನಿರ್ವಾಹವಮಾಡು ಇಲ್ಲಿ ಮಹತ್ತಾದ ಕೆಲಸಗಳನ್ನು ಈ ಜಗತ್ತಿನಲ್ಲಿ ಮಾಡಿಸುವವರಲ್ಲಿ ಪ್ರಧಾನಕಾರಣನು ನಾನೇ ಸರಿ, ಅಂತಹ ಕೆಲಸಗಳಿಗೆ ಯೋಗ್ಯರಾದ ಕರ್ತೃಗಳನ್ನು ಆರಿಸಿ ತನ್ಮೂಲಕ ಕೆಲಸ ನಡೆಸುವವನೂ ನಾನೇ, ಲೋಕ ಕಂಟಕರನ್ನು ಕೊಲ್ಲುವ ಈ ಮಹತ್ಕರ್ಮವನ್ನು ಈಗ ಸಙ್ಕಲ್ಪಿಸಿರುವೆನು. ಅಂತಹ ಮಹತ್ಕರ್ಮವು ಮಹತ್ತಾದ ಪರಾಕ್ರಮಿಯಾಗಿ ಸವ್ಯಸಾಚಿ ಎಂದೆನಿಸಿರುವ ನಿನ್ನ ಮೂಲಕವೇ ನಡೆಯಬೇಕೆಂಬುದು ನನ್ನ ಉದ್ದೇಶವು. ಆದುದರಿಂದ ಪ್ರಧಾನ ಕಾರಣನು ನಾನು, ನೀನು ವ್ಯಾಜಮಾತ್ರವು, ಆದುದರಿಂದ ಏಳು, ಯುದ್ಧಮಾಡು ಎಂದು ಪರಮ ಹಿತೋಪದೇಶವನ್ನು ಮಾಡಿರುತ್ತಾರೆ. ಪರಮ ಹಿತ ಹೇಗೆಂದರೆ ಲೋಕಕ್ಕೆಲ್ಲಾ ಸುಖವೂ, ತನಗೂ ಕೀರ್ತಿಯೂ ಭೋಗವೂ, ಈ ಉಪದೇಶಮೂಲಕ ಸಾಧ್ಯೋಪಾಯಾನುಷ್ಠಾನವೂ, ಪರಬ್ರಹ್ಮ ಪ್ರಾಪ್ತಿಯೂ, ಎಲ್ಲವೂ ಲಭಿಸುವದರಿಂದ ಪರಮ ಹಿತೋಪದೇಶವೆಂದು ಭಾವಿಸತಕ್ಕದ್ದು. **ಜಿತ್ವಾ ಶತ್ರೂನ್** ಎಂಬ ಪ್ರಯೋಗವು **ಯಶೋ ಲಭಸ್ವ,** ಮತ್ತು **ಭುಙ್ಕ್ಷ್ವರಾಜ್ಯಂ** ಎಂಬೆರಡರಮಧ್ಯೆ ಇರುವದರಿಂದ ಕಾಕಾಕ್ಷಿನ್ಯಾಯದ ಪ್ರಕಾರ ಶತ್ರುಜಯವೇ ಈ ಎರಡುವಿಧ ಸುಕೃತಗಳನ್ನುಂಟುಮಾಡುವದು ಎಂಬ ಭಾವವನ್ನು ತೋರಿಸುತ್ತದೆ. ಈ ಧಾರ್ತರಾಷ್ಟ್ರರು ಮಾಡಿರುವ ದುಷ್ಕರ್ಮವು ಅತಿಪ್ರಬಲವಾದುದರಿಂದ ಈ ಸಂದರ್ಭದಲ್ಲಿ ತಾನು ಯಾರಿಂದಲೂ ಈ ನಿಗ್ರಹ ಕರ್ಮದಿಂದ ನಿಷೇಧಿಸಲ್ಪಡಲು ಸಾಧ್ಯವೇ ಇಲ್ಲವೆಂಬ ಭಾವವು, **ಮಯ್ಯೈವ ನಿಹತಾಃ**-ಎಂಬ ಏವಕಾರಪ್ರಯೋಗದಿಂದ ವ್ಯಕ್ತವು.

**ಭಾಷ್ಯಾರ್ಥವು :—ಋತೇಪಿ ತ್ವಾ ನಭವಿಷ್ಯಂತಿ** - ನೀನು ಯುದ್ಧಮಾಡದಿದ್ದರೂ ಅವರು ಉಳಿಯುವದಿಲ್ಲ, ಹೇಗೂ ನನ್ನ ಸಙ್ಕಲ್ಪದಿಂದಲೇ ಅವರು ಸಾಯುತ್ತಾರೆಂದು ನಿರ್ಧರಿಸಿರುವೆಯಾದರೆ ನನ್ನನು ಏಕೆ ಯುದ್ಧಮಾಡು ಎಂದು ಆಜ್ಞಾಪಿಸುತ್ತೀ? ಎಂದು ಕೇಳುತ್ತೀಯೋ, ಹೇಳುವೆನು— ನೀನು ಅತ್ಯರ್ಥ ಭಕ್ತನಾಗಿರುವದರಿಂದ ನಿನಗೆ ಪರಮ ಹಿತವನ್ನುಂಟುಮಾಡುವದಕ್ಕಾಗಿಯೂ, ಹಾಗೆ ಮಾಡುವದರಿಂದ ನನ್ನ ಸಂಪ್ರೀಣನವುಂಟಾಗಿ ನಿನ್ನ ಉತ್ತರೋತ್ತರ ಸರ್ವಶ್ರೇಯಸ್ಸಿಗೂ ಕಾರಣವಾಗಲೆಂದು ಭಾವಿಸಿ, ಯಾರಮೂಲಕವಾಗಿಯೋ ನಡೆದು ಹೋಗುವದಾಗಿದ್ದರೆ, ನೀನೇ ವ್ಯಾಜವಾಗಿ ನಿಂತು ಏಕೆ ನಡೆಯಕೂಡದು? ಎಂದು ಈ ಶ್ಲೋಕದ ಮೂಲಕ ಉಪದೇಶಿಸುತ್ತಾರೆ. ನೀನು ನನಗೆ ಅತ್ಯಂತ ಪ್ರಿಯನಾದುದರಿಂದ ನೀನೇ ಯುದ್ಧಮಾಡಿ ಜಯಿಸಿ, ಯಶಸ್ಸನ್ನು ಹೊಂದಿ, ಸಮೃದ್ಧಿಯಿಂದ ಕೂಡಿದ ರಾಜ್ಯವನ್ನು ಹೊಂದಿ, ಧರ್ಮದಿಂದ ರಾಜ್ಯವನ್ನು ಆಳಬೇಕೆಂಬುದು ನನ್ನ ಇಷ್ಟವಾದುದರಿಂದ ನೀನೇ ಈ ದುರಾತ್ಮರ ವಧೆಯನ್ನು ಮಾಡು, ಏಳು ಎಂದು ಹೇಳುತ್ತಾರೆ.—**ತಸ್ಮಾತ್**-ಹೇಗೋ ಅವರು ಸಾಯಲೇಬೇಕೆಂದು ನಾನು ನಿಷ್ಕರ್ಷಿಸಿರುವದರಿಂದ, **ತ್ವಂ**–ಮಹಾಪರಾಕ್ರಮಿಯಾದ ನೀನು, **ತಾನ್ಪ್ರತಿ**-ಆ ದುಷ್ಟರಾದ ಶತ್ರುಗಳಿಗೆ ಎದುರಾಗಿ, **ಯುದ್ಧಾಯೋತ್ತಿಷ್ಠ**-ಯುದ್ಧಕ್ಕಾಗಿ ಏಳು. ಇವರಿಂದುಂಟಾಗುವ, ಮತ್ತು ಹಾಗೆ ಆಗಬೇಕೆಂದು ತಾನು ಸಙ್ಕಲ್ಪಿಸಿರುವ ಫಲಗಳನ್ನು ತಿಳಿಸುತ್ತಾರೆ.—**ಶತ್ರೂನ್ ಜಿತ್ವಾ**-ಶತ್ರುಗಳನ್ನು ಯುದ್ಧದಲ್ಲಿ ಗೆದ್ದು, **ಯಶೋ ಲಭಸ್ವ** ಲೋಕದಲ್ಲೆಲ್ಲಾ ಅರ್ಜುನನು ಮಹಾವೀರನು ಪರಾಕ್ರಮಿಯು ಎಂಬ ಯಶಸ್ಸನ್ನು ಹೊಂದು; **ಧರ್ಮ್ಯಂ ರಾಜ್ಯಂಚ ಭುಙ್ಕ್ಷ್ವ**-ಧರ್ಮೋಪೇತವಾದ ರಾಜ್ಯವನ್ನು ಅನುಭವಿಸು; **ಧರ್ಮ್ಯಂ**

**ರಾಜ್ಯಂಚ**-ಎಂಬುದರಿಂದ ಧರ್ಮರಾಜನೇಜ್ಯೇಷ್ಠ ಭ್ರಾತಾವಾಗಿವುಳ್ಳವನು ನೀನು; ಆದುದರಿಂದ ಧರ್ಮದಿಂದ ಕೂಡಿದ ರಾಜ್ಯಪರಿಪಾಲನೆಯನ್ನು ಮಾಡಿ ನೀನು ಬಹುಕಾಲ ನನ್ನ ಅನುಗ್ರಹ ದಿಂದ ಬಾಳುವಿ ಎಂಬ ಭಾವವು ತೋರಿಬರುತ್ತದೆ. ಹಾಗೆ ಧರ್ಮವಲ್ಲದೆ ಅಧರ್ಮದಿಂದ ಪರಿಪಾಲನೆ ಯಾದರೆ, ದುರ್ಯೋಧನನಿಗೆ ಆಗುವಗತಿಯೇ ಉಂಟಾಗುತ್ತದೆಂಬದೂ ಸೂಚಿತವು. ರಾವಣನ ಅಟ್ಟಹಾಸಾದಿಗಳನ್ನು ಕಂಡು ಬೆರಗಾಗಿ ಸಾತ್ವಿಕ ಶಿಖಾಮಣಿಯಾದ ಶ್ರೀ ವಾಯುಪುತ್ರನು ಒಳ್ಳೆ ಸ್ಥಿತಿಯಲ್ಲಿರುವವನು ದುಸ್ಥಿತಿಯನ್ನು ಹೊಂದುವದು ತನ್ನ ಆರ್ಜವ ಸ್ವಭಾವಕ್ಕೆ ಇಷ್ಟ ವಲ್ಲವಾಗಿ, **"ಯದ್ಯಧರ್ಮೋನ ಬಲವಾನ್ ಸ್ಯಾದಯಂ ರಾಕ್ಷಸೇಶ್ವರಃ । ಸ್ಯಾದಯಂ ಸುರ ಲೋಕಸ್ಯ ಸಶಕ್ರಸ್ಯಾಪಿರಕ್ಷಿತಾ "** ಈ ರಾವಣನಿಗೆ ಅಧರ್ಮವೊಂದು ಮಾತ್ರವಿಲ್ಲದಿದ್ದರೆ, ಈತ ನನ್ನು ಹಿಡಿದು ನಿಲ್ಲಿಸುವರ್ಯಾರು? ಇಂದ್ರನಿಗೂ ಕೂಡ ರಕ್ಷಕನಾಗಿ ಆತನಿಗೂ ಮೇಲಾಗಿ ಇರಬಹುದಾಗಿದ್ದಿತೇ" ಎಂದು ಹೇಳಿ, ಸರ್ವಜ್ಞನಾದುದರಿಂದ, ಶ್ರೀರಾಮನದೆಶೆಯಿಂದ ಈತನಿಗೆ ಸರ್ವನಾಶ ಉಂಟೆಂದು ತಿಳಿದು ಶೋಕಿಸುವ ಪ್ರಕರಣವು. **ಧರ್ಮಾದರ್ಥಃ ಪ್ರಭವತಿ ಧರ್ಮಾ ತ್ಪ್ರಭವತೇ ಸುಖಂ । ಧರ್ಮೇಣ ಲಭತೇ ಸರ್ವಂ ಧರ್ಮಸಾರ ಮಿದಂ ಜಗತ್ "** ಎಂದು ಮಹರ್ಷಿಯು ಧರ್ಮವೇ ಸರ್ವಶ್ರೇಯಸ್ಸಿಗೂ ಮೂಲಕಾರಣವೆಂದು ನಿಷ್ಕರ್ಷಿಸಿ ಹೇಳಿದ ಉಪ ದೇಶವು ಅನುಸಂಧೇಯವು. **ಧರ್ಮ್ಯಂ**-ಎಂಬುದು ಮೂಲದಲ್ಲಿಲ್ಲದಿದ್ದರೂ ಹಿಂದೆ ಅರ್ಜುನನು ಈ ರಾಜ್ಯ ಸುಖಲೋಭಕ್ಕಾಗಿ, ಅಧರ್ಮ ಯುದ್ಧವನ್ನು ಮಾಡುವದು ಸರಿಯಲ್ಲವೆಂದು ಹೇಳಿ ದ್ದನು, ಈ ರಾಜ್ಯವು ತನಗೀಗ ಉಂಟಾಗಿರುವದು, ಧರ್ಮಯುದ್ಧಾನುಷ್ಠಾನದಿಂದ ಧರ್ಮೋ ಪೇತವಾದುದು ಎಂಬ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿಯೂ **ಧರ್ಮ್ಯಂ**-ಎಂಬ ವ್ಯಾಖ್ಯಾ ನವೆಂದು ಭಾವಿಸತಕ್ಕದ್ದು. ದುರ್ಯೋಧನಾದಿಗಳನ್ನು ತಪ್ಪಿಸಿ, ನಿನಗೆ ಈ ಯಶಸ್ಸೂ ರಾಜ್ಯ ಪ್ರಾಪ್ತಿಯೂ, ಸುಖವೂ, ಎಲ್ಲಾ ಉಂಟಾಗಲೆಂದು ನೀನು ಸಙ್ಕಲ್ಪಿಸಿದುದು ಹೇಗೆ ಎಂದು ಕೇಳ ಬಹುದೆಂದು ಭಾವಿಸಿ, ತನಗೆ ವೈಷಮ್ಯನೈರ್ಘೃಣ್ಯಾದಿದೋಷಗಳ್ಯಾವುವೂ ಇಲ್ಲವು ; ಯಾವಾಗ ಮಹಾಪರಾಧಿಗಳಾದರೋ, ಆಗಲೇ ಅವರ ನಾಶವನ್ನು ಸಙ್ಕಲ್ಪಿಸಿ ಬಿಟ್ಟೆನೆಂದು ಹೇಳುತ್ತಾರೆ. ಈ ಸಂದರ್ಭದಲ್ಲಿ **" ಸಾಧುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋಭವತಿ "** (ಬೃ. ೬ ೪ ೬), **"ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನಕರ್ಮಣಾ" "ಶುಭ ಕೃಚ್ಛುಭಮಾಪ್ನೋತಿ, ಪಾಪಕೃತ್ಪಾಪಮಶ್ನುತೇ । ವಿಭೀಷಣಸ್ಸುಖಂಪ್ರಾಪ್ತ ಸ್ಸಪ್ರಾಪ್ತಃ ಪಾಪ ಮೀದೃಶಮ್".** ಇತ್ಯಾದಿಗಳು ಇಲ್ಲಿ ಅನುಸಂಧೇಯಗಳು. **ಮಯ್ಯೈವ ಏತೇ ಕೃತಾಪರಾಧಾಃ**-ನನ್ನಿಂದಲೇ ಈ ಮಹಾಪರಾಧಗಳನ್ನು ಮಾಡಿದ ಈ ದುಷ್ಟರೆಲ್ಲರೂ, **ಪೂರ್ವ ಮೇವ**-ಮೊದಲೇ ಎಂದರೆ ಅಪರಾಧ ಮಾಡಿದಕಾಲದಲ್ಲೇ, **ನಿಹತಾಃ**-ನಾಶಹೊಂದಿದವರು ಎಂದರೆ **ಹನನೇ ವಿನಿಯುಕ್ತಾಃ**-ಸಂಹಾರ ಹೊಂದಬೇಕೆಂದು ನಿಯಮಿಸಲ್ಪಟ್ಟವರು ಎಂಬ ಭಾವವು, ಇಲ್ಲಿ **ನಿಹತಾಃ**-ಎಂಬ ಭೂತಕಾಲಾರ್ಥವು ಪ್ರತ್ಯಕ್ಷಕ್ಕೆ ವಿರೋಧವಾದುದರಿಂದ **ಹನನೇ ವಿನಿಯುಕ್ತಾಃ**-ಎಂಬ ವಾಖ್ಯಾನವು, ಆಗಲೇ ಸತ್ತವರು ಎಂದರೆ ಆಗಲೇ ಸಾಯ ಬೇಕೆಂದು ಸಙ್ಕಲ್ಪಿಸಲ್ಪಟ್ಟವರು ಎಂಬ ಭಾವವನ್ನು ತೋರಿಸುತ್ತಾರೆ ಹಾಗಾದರೆ ನಾನು ಮಾಡತಕ್ಕದ್ದೇನಿರುತ್ತದೆ? ನೀನೇ ಎಲ್ಲವನ್ನೂ ಮಾಡುತ್ತೀಯೆ, ನಾನು ಸುಮ್ಮನೆ ಇದ್ದು ಬಿಡುತ್ತೇನೆ, ನೀನೇ ನಡೆಸಿಕೊಟ್ಟು, ಭಕ್ತರಲ್ಲಿ ವಿಶೇಷ ಪ್ರೀತಿ ಇರುವದರಿಂದ, ಯಶಸ್ಸೂ ರಾಜ್ಯ ಪ್ರಾಪ್ತಿ, ಸುಖಾನುಭವ ಎಲ್ಲವನ್ನೂ ನೀನೇ ಉಂಟುಮಾಡು ಎನ್ನುತ್ತೀಯೋ? ಲೋಕವಿ ಡಂಬನಾರ್ಥವಾಗಿ ನಿನ್ನ ಸರ್ವ ವ್ಯಾಪಾರಗಳಿಗೂ ನೀನು ನಿಮಿತ್ತಮಾತ್ರವಾಗಿ ಸಙ್ಕಲ್ಪಿಸ ಬೇಕು, ಅದರೊಂದಿಗೆ ನನ್ನ ಪ್ರಧಾನವಾದ ಸಙ್ಕಲ್ಪವೂ ಇರಬೇಕು, ಹೀಗೆ ಎರಡೂ ಇದ್ದರೆ

**ಭಾ ನಿಮಿತ್ತಮಾತ್ರಂ ಭವ; ಮಯಾ ಹನ್ಯಮಾನಾನಾಂ ಶಸ್ತ್ರಾದಿಸ್ಥಾನೀಯೋಭವ। ಸವ್ಯಸಾಚಿನ್-"ಷಚ ಸಮವಾಯೇ", ಸವ್ಯೇನ ಶರಸಚನ ಶೀಲಸ್ಸವ್ಯಸಾಚೀ; ಸವ್ಯೇನಾಪಿ ಕರೇಣ ಶರಸಮವಾಯಕರಃ; ಕರದ್ವಯೇನ ಯೋದ್ಧುಂ ಸಮರ್ಥ ಇತ್ಯರ್ಥಃ ॥३३॥**

---

ನಿನ್ನನ್ನು ಚನ್ನಾಗಿ ಪ್ರಯತ್ನಮಾಡಿ ಆ ಕಾರ್ಯವನ್ನು ಸಾಧಿಸಿಕೊಳ್ಳುವಹಾಗೆ ಮಾಡುವನೆಂದು ಉಪದೇಶ ಮಾಡುತ್ತಾರೆ. ಆದುದರಿಂದ ಇಂತಹ ಸಙ್ಕಲ್ಪಗಳನ್ನು ನಾನು ಮಾಡಿದರೂ, ನಿನ್ನಂತವರ ವ್ಯಾಜಮೂಲಕವಾಗಿಯೇ ಅವು ನಡೆಯತಕ್ಕವು ಆದುದರಿಂದ **ತ್ವಂತು**-ನೀನಾದರೋ, **ತೇಷಾಂ ಹನನೇ**-ಅವರುಗಳನ್ನು ಕೊಲ್ಲುವದರಲ್ಲಿ, **ನಿಮಿತ್ತಮಾತ್ರಂ ಭವ**-ವ್ಯಾಜರೂಪವಾಗಿ ಮಾತ್ರ ನಿಲ್ಲು, ನನ್ನ ಸಙ್ಕಲ್ಪವಿಲ್ಲದಿದ್ದರೆ, ನಿನಗೆ ಕೊಲ್ಲಲು ಎಲ್ಲಿ ಸಾಮರ್ಥ್ಯವು? ಅವರುಗಳು ಸಾಯಲೇಬೇಕೆಂಬ ನನ್ನ ಸಙ್ಕಲ್ಪವಿರುವದರಿಂದಲೇ, **ನಿಮಿತ್ತ ಮಾತ್ರಂ ಭವ**-ನಿಮಿತ್ತ ಮಾತ್ರಕ್ಕೆ ನೀನು ಯುದ್ಧಕ್ಕೆ ನಿಲ್ಲು, ಮಿಕ್ಕದ್ದನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆಂಬ ಭಾವವು; ನೀನು ನಿಮಿತ್ತಮಾತ್ರ ಹೇಗೆ ಎಂದರೆ ವಿವರಿಸುತ್ತಾರೆ.— **ಮಯಾ ಹನ್ಯಮಾನಾನಾಂ**-ನನ್ನಿಂದ ಸಂಹರಿಸಲ್ಪಡಲು ಯೋಗ್ಯರಾದವರಿಗೆ, **ಶಸ್ತ್ರಾದಿ ಸ್ಥಾನೀಯೋ ಭವ**-ಶಸ್ತ್ರಾದಿ ರೂಪದಲ್ಲಿ ನೀನು ಇದ್ದುಬಿಡು. ಇದರಿಂದ ಅತ್ಯಂತ ಪಾರತಂತ್ರ್ಯವು ಬೋಧಿಸಲ್ಪಟ್ಟಿತು. ಹಾಗಾದರೆ ಈ ಜೀವಾತ್ಮನಿಗೆ ಕರ್ತೃತ್ವವಿಲ್ಲವೋ ಎಂದರೆ **"ಕರ್ತಾ ಶಾಸ್ತ್ರಾರ್ಥವತ್ವಾತ್"** (ಸೂ. ೨.೩.೩೩) ಎಂಬ ಬ್ರಹ್ಮಸೂತ್ರವು ಕರ್ತೃತ್ವವುಂಟೆಂದು ಹೇಳುತ್ತದೆ. ಆದುದರಿಂದಲೇ **ಉತ್ತಿಷ್ಠ, ಯಶೋಲಭಸ್ವ** ಎಂಬುದಾಗಿ ಹೇಳಿದರು ಹಾಗೆ ಕರ್ತೃತ್ವವೇ ಇಲ್ಲದಿದ್ದರೆ ಶಾಸ್ತ್ರಗಳ ವೈಯರ್ಥ್ಯವೂ, ಉಪದೇಶಸ್ಯೈರರ್ಥಕ್ಯವೂ, ಉಂಟಾಗುತ್ತವೆ. ಆದರೆ ಆ ಕರ್ತೃತ್ವವು ಭಗವದಧೀನವಾದುದು· ಆದುದರಿಂದ **ನಿಮಿತ್ತಮಾತ್ರಂ** ಎಂಬಲ್ಲಿ ಆ ಪಾರತಂತ್ರ್ಯವು ಬೋಧಿತವು; ಇದರಿಂದ ಹನನಕ್ಕೆ ಪ್ರಧಾನಕಾರಣನು ಭಗವಂತನು ಎಂದು ಹೇಳಲ್ಪಟ್ಟಿತು. ಶಸ್ತ್ರಧಾರಿಯು ಶಸ್ತ್ರವನ್ನು ಪಯೋಗಿಸಿದರೆ ತಾನೇ ಶಸ್ತ್ರದಿಂದ ಶತ್ರುಹನನವಾಗುತ್ತದೆ. ಶಸ್ತ್ರವು ಇಲ್ಲದೆಯೂ ಯುದ್ಧದಲ್ಲಿ ಹನನವಾಗಲಾರದಷ್ಟೆ. ಆದುದರಿಂದ ಶಸ್ತ್ರಸ್ಥಾನೀಯನಾದ ಅರ್ಜುನನ ಯತ್ನವು ಆವಶ್ಯಕವು.—ಆದರೆ ಭಗವಂತನ ಅಧೀನವಾದುದರಿಂದ **ನಿಮಿತ್ತಮಾತ್ರಂ**-ಎಂಬ ಪ್ರಯೋಗವು. **ಪರಾತ್ತು ತಚ್ಛ್ರುತೇ**-ಎಂಬ ಬ್ರಹ್ಮಸೂತ್ರದಲ್ಲಿ (೨.೩.೪೦) ಉಪಪಾದಿಸಿರುವಹಾಗೆ ಈ ಜೀವನಕರ್ತೃತ್ವವೆಲ್ಲಾ ಪರಮಾತ್ಮನಿಗೆ ಅಧೀನವಾದುದೆಂದು ಹೇಳಲ್ಪಟ್ಟಿತು. ಹಾಗಾದರೆ ಜೀವನಿಗೆ ಕರ್ತೃತ್ವವಿದ್ದು ಏನು ಪ್ರಯೋಜನವು? ಸರ್ವವೂ ಸ್ವಾಮಿ ಸಙ್ಕಲ್ಪಾನುಸಾರ ನಡೆದು ಹೋಗುವಾಗ ಈ ಜೀವಾತ್ಮನ, ಪ್ರಯತ್ನಾದಿಗಳೆಲ್ಲಾ ಅಜಾಗಳಸ್ತನದಹಾಗೆ ನಿರರ್ಥಕವಲ್ಲವೇ? ಜೀವಾತ್ಮನು, ಸ್ವಾಮಿಸಙ್ಕಲ್ಪಾನುಸಾರ ನಡೆದು ಹೋಗುತ್ತದೆಂದು ಭಾವಿಸಿ, ತಟಸ್ಥನಾಗಿ ಇರಬಹುದಲ್ಲಾ ಎಂದರೆ ಹಾಗಲ್ಲವು. ಆ ಕರ್ತೃತ್ವದಲ್ಲಿ ಈ ಜೀವಾತ್ಮನ ಪ್ರಥಮ ಸಙ್ಕಲ್ಪದಲ್ಲಿ ಮಾತ್ರ ಈತನಿಗೆ ಸರ್ವಸ್ವಾತಂತ್ರವನ್ನು ಸರ್ವೇಶ್ವರನು ಕೊಟ್ಟು, ಅನಂತರ ನಡೆಯುವ ಪ್ರಯತ್ನ ಸಾಹಸಾದಿಗಳೆಲ್ಲಾ ಪರಮಾತ್ಮಾಧೀನವೆಂದು ಒಪ್ಪಿಕೊಂಡರೇನೇ, ವಿಧಿನಿಷೇಧವಾಕ್ಯಗಳಿಗೆ ವೈಯರ್ಥ್ಯವಿಲ್ಲದೆ ಜೀವನಿಗೆ ಕರ್ತೃತ್ವವೂ, ಅದು ಪರಮಾತ್ಮಾಧೀನವಾದುದೆಂದೂ ಒಪ್ಪತಕ್ಕ ಸರ್ವಸಮಂಜಸಾರ್ಥವು ದೊರೆಯುತ್ತದೆ. ಇದೇ **"ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ"** (ಸೂ.೨.೩.೪೧) ಎಂಬ ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂ

**ಮೂ- ದ್ರೋಣಂಚ ಭೀಷ್ಮಂಚ ಜಯದ್ರಥಂಚ ಕರ್ಣಂತಥಾನ್ಯಾನಪಿಯೋಧಮುಖ್ಯಾನ್
ಮಯಾಹತಾಂಸ್ತ್ವಂಜಹಿಮಾವ್ಯಥಿಷ್ಠಾಃ ಯುಧ್ಯಸ್ವ ಜೇತಾಸಿರಣೇಸಪತ್ನಾನ್॥**

---

ದಲೇ **ನಿಮಿತ್ತಮಾತ್ರಂ**-ಎಂಬುವದರಿಂದ ಈ ಶಾಸ್ತ್ರಾರ್ಥವು ಪ್ರದರ್ಶಿಸಲ್ಪಟ್ಟಿತು. ಯುದ್ಧಮಾಡುತ್ತೇನೆಂಬ ಪ್ರಥಮ ಸಙ್ಕಲ್ಪಮಾತ್ರ ನಿನ್ನದಾಗಲಿ, ಅನಂತರ ಮಿಕ್ಕಿದ್ದೆಲ್ಲಾ ನನ್ನಾಧೀನವಾದುದರಿಂದ ನಾನು ನಡೆಸಿಬಿಡುವೆನು ಎಂಬುದೀಗ ಶಾಸ್ತ್ರಾರ್ಥವು. ಹೀಗೆ ನಿಮಿತ್ತಮಾತ್ರಂ **ಭವ ಸವ್ಯಸಾಚಿನ್** ಎಂಬ ವಿಧ್ಯುಕ್ತಿಯು ಸಾರ್ಥಕ್ಯವನ್ನು ಹೊಂದಿತು. ಮುಂದೆ **ಸವ್ಯಸಾಚಿನ್**-ಎಂಬ ಸಂಬೋಧನೆಯಿಂದ ತೋರುವ ಸ್ವಾರಸ್ಯವನ್ನು ವ್ಯಕ್ತಪಡಿಸುತ್ತಾರೆ.—"**ಷಚ ಸಮವಾಯೇ** ಎಂದರೆ **ಷಚ**-ಎಂಬ ಧಾತುವು ಸಮವಾಯೆ, ಸೇರಿಸುವ ಅರ್ಥವುಳ್ಳದುದರಿಂದ, ಶರಸಂಧಾನರೂಪ ಸಮವಾಯವಿರುವದರಿಂದ, **ಸವ್ಯೇನ ಶರಸಚನ ಶೀಲಸ್ಸವ್ಯಸಾಚೀ**-ಎಡಗೈಯಿಂದಲೂ ಕೂಡ, ಶರಸಂಧಾನಮಾಡಿಬಿಡುವ ಶೀಲವುಳ್ಳವನಾದುದರಿಂದ, **ಸವ್ಯಸಾಚಿಯು**. ಇದರ ಅಭಿಪ್ರಾಯವೇನೆಂದರೆ **ಸವ್ಯೇನಾಪಿಕರೇಣ**-ಎಡಗೈಯಿಂದಲೂ **ಕೂಡ, ಶರಸಮವಾಯಕರಃ**-ಎಂದರೆ ಶರಾನುಸಂಧಾನ ಮಾಡುವವನು ಎಂಬರ್ಥವು **ಎಡಗೈ**ಯಿಂದ ಶರಸಂಧಾನಮಾಡುವ ಶಕ್ತಿಯುಳ್ಳವನೆಂದರೆ, ಬಲಗೈ ದುರ್ಬಲವೆಂಬರ್ಥ **ಉಂಟಾ**ದೀತೆಂದು ಭಾವಿಸಿ, ಎಡಗೈಯಿಂದಲೂ ಕೂಡ ಶರಸಂಧಾನ ಮಾಡಬಲ್ಲವನೆಂಬರ್ಥವೆಂದು ಬೋಧಿಸುತ್ತಾರೆ. ಅದಕ್ಕಾಗಿಯೇ **ಸವ್ಯೇನಾಪಿಕರೇಣ** ಎಂಬಲ್ಲಿ **ಅಪಿ** ಪ್ರಯೋಗವು. ಇದರಿಂದ ಪ್ರಾಪ್ತವಾಗುವ ಅರ್ಥವನ್ನು ವ್ಯಕ್ತಪಡಿಸುತ್ತಾರೆ. **ಕರದ್ವಯೇನ**-ಎರಡು ಕೈಯಿಂದಲೂ ಶಸ್ತ್ರಗಳನ್ನು ಪಯೋಗಿಸಿ **ಯೋದ್ಧುಂ ಸಮರ್ಥಃ**-ಯುದ್ಧಮಾಡಲು ನೀನು ಸಮರ್ಥನೆಂಬ ತಾತ್ಪರ್ಯವು, ಆ ಸಂಬೋಧನೆಯಿಂದ ದ್ಯೋತಿತವೆಂದು ಉಪದೇಶಿಸುತ್ತಾರೆ. ಎಲ್ಲರೂ ಬಲಗೈಯಿಂದ ಮಾತ್ರವೇ ಶರಪ್ರಯೋಗವನ್ನು ಮಾಡಬಲ್ಲರು. ಎಲ್ಲರನ್ನೂ ಬಿಟ್ಟು, ನಿನ್ನನ್ನೇ ನಿಮಿತ್ತಮಾತ್ರನಾಗು ಎಂದು ಹೇಳುವದು ಏತಕ್ಕೆಂದರೆ ನೀನು ಸವ್ಯಸಾಚಿಯಾಗಿ ಮಹಾಪರಾಕ್ರಮಿಯಾಗಿರುವದರಿಂದ ಎಂದು ಹೇಳುವ ಭಾವವೂ ತೋರುತ್ತದೆ. ಭೂಮಿಯಲ್ಲಿ ದುಷ್ಟರು ಹೆಚ್ಚಿರುವದರಿಂದ ಆ ಭೂಭಾರವನ್ನಿಳಿಸುವದಕ್ಕಾಗಿಯೇ ನಿನ್ನನ್ನು ನೆಪಮಾಡಿಕೊಂಡು ಓ ಸವ್ಯಸಾಚಿಯೇ, ನಿನಗೆ ಎಡಗೈಯಿಂದಲೂ ಕೂಡ ಶರಸಂಧಾನ ಮಾಡುವ ಪರಾಕ್ರಮಿಯನ್ನಾಗಿ ನಾನೇ ಸಙ್ಕಲ್ಪಿಸಿ, ದುಷ್ಟರನ್ನೆಲ್ಲಾ ನಿನ್ನಮೂಲಕ ಹನನಮಾಡಿಸಬೇಕೆಂದು, ಉದ್ದೇಶಿಸಿರುತ್ತೇನೆಂಬ ಭಾವವು. ದ್ರುಪದನ ಧನುಸ್ಸನ್ನು ಆರೋಪಣಮಾಡಿ ಲಕ್ಷ್ಯವೇದಮೂಲಕ ದ್ರೌಪದಿಯನ್ನು ವಿವಾಹ ಮಾಡಿಕೊಂಡ ಮಹಾಪರಾಕ್ರಮಿ ನೀನಲ್ಲವೇ ಎಂಬುದು ಸೂಚಿತವು

**ಮೂಲಕ್ಕೆ ಅರ್ಥವು :**—ನಿಮಿತ್ತಮಾತ್ರಂ **ಭವ**-ನೀನು ನೆಪಮಾತ್ರಕ್ಕೆ ಇರು. ನಾನು ಎಲ್ಲವನ್ನೂ ನೋಡಿಕೊಳ್ಳುತ್ತೇನೆ; ಇವರೆಲ್ಲರೂ ಮೊದಲೇ ಸತ್ತವರ ಹಾಗೆಯೇ ಎಂದು **ಪೂರ್ವಮೇವ ನಿಹತಾಃ**-ಎಂದು ಹೇಳಿದರು. ಆದರೆ ಶ್ರೀ ಕೃಷ್ಣಭಗವಾನರವರು ಯುದ್ಧಮಾಡುವದಿಲ್ಲವೆಂದು ಪ್ರತಿಜ್ಞೆಮಾಡಿರುತ್ತಾರೆ: ಎಲ್ಲವನ್ನೂ ಅರ್ಜುನನೇ ನಿರ್ವಹಿಸಬೇಕಾಗುತ್ತದೆ. ದ್ರೋಣರಾದರೋ ಮಹಾ ಸಮರ್ಥರು, ತನಗೂ ಗುರುವಾಗಿ ಧನುರ್ವೇದವನ್ನು ಹೇಳಿಕೊಟ್ಟು ಅಮೋಘಾಸ್ತ್ರಗಳನ್ನುಳ್ಳವರು, ಅವರನ್ನು ಗೆಲ್ಲಲು ಸಾಧ್ಯವೇ? ಭೀಷ್ಮರಾದರೋ- ಪರಮ ಬ್ರಹ್ಮವಿತ್ತು; **ಬ್ರಹ್ಮತೇಜೋಬಲಂ ಬಲಂ**-ಎಂಬುದು ಸುಪ್ರಸಿದ್ಧವಾದುದರಿಂದ ಕ್ಷತ್ರಿಯನಾದ ತಾನು ಅಂತವರನ್ನು ಗೆಲ್ಲಲು ಸಾಧ್ಯವೇ? ಅದೂ ಅಲ್ಲದೆ ಪರಶುರಾಮನೊಂದಿಗೆ

ಯುದ್ಧಮಾಡಿ ದಿವ್ಯಾಸ್ತ್ರಗಳನ್ನು ಸಂಪಾದಿಸಿರುವವರು. ಅವರನ್ನು ಗೆಲ್ಲುವದಕ್ಕಾಗುತ್ತದೋ? ಜಯದ್ರಥನಾದರೋ ಆತನ ತಂದೆಯ ಮೂಲಕವಾಗಿ ಮೇಲಾದ ವರವನ್ನು ಪಡೆದಿರುತ್ತಾನೆ, ತನ್ನ ಮಗನ ತಲೆಯನ್ನು ಛೇದಿಸಿದವನ ತಲೆಯು ನೆಲಕ್ಕೆ ಉರುಳಬೇಕೆಂಬ ವರವಿರುತ್ತದೆ. ಇಂತವನನ್ನು ಹೇಗೆ ಕೊಲ್ಲಲು ಸಾಧ್ಯವು? ಕರ್ಣನು ಇಂದ್ರನಿಂದ ಪಡೆದ **ಶಕ್ತ್ಯಾಯುಧ** ವುಳ್ಳವನು ಈತನನ್ನೂ ಗೆಲ್ಲುವದು ಸಾಧ್ಯವೋ? ಹೀಗೆಲ್ಲಾ ನೀನು ಶಙ್ಕಿಸಬಹುದು. ಆದುದರಿಂದ ಶ್ರೀ ಕೃಷ್ಣನು ಇಂತಹ ಶಙ್ಕೆಗಳು ನಿನಗೆ ಬೇಕಿಲ್ಲವು. ಅವರೆಲ್ಲರೂ ಹತರಾಗ ಬೇಕೆಂಬುವದೇ ನನ್ನ ಸುಸಙ್ಕಲ್ಪವಾಗಿರುವದರಿಂದ ನಿನಗೆ ಜಯವುಂಟು. ನಿನಗೆ ಅದು ಅಧರ್ಮವೂ ಆಗಲಾರದು. ಆದುದರಿಂದ ನೀನು ಯಾವ ವಿಧದಲ್ಲೂ ಶಙ್ಕಿಸಿ ಶೋಕಿಸಲು ಕಾರಣವಿಲ್ಲವು. ಏಳು ಯುದ್ಧಮಾಡು ಎಂದು ಹೇಳುತ್ತಾರೆ — **ದ್ರೋಣಂಚ**-ದ್ರೋಣರನ್ನೂ ಭೀಷ್ಮರನ್ನೂ, ಜಯದ್ರಥನನ್ನೂ, ಕರ್ಣನನ್ನೂ ಸಹ **ತಥಾ**-ಹಾಗೆಯೇ, **ಅನ್ಯಾನಪಿ**-ಇನ್ನೂ ಇತರರಾದ, ದುರ್ಯೋಧನನೇ ಮೊದಲಾದ, **ಯೋಧ ಮುಖ್ಯಾನ್**-ಪ್ರತಿಕಕ್ಷಿಯ ಸೈನಿಕರಲ್ಲಿ ಮುಖ್ಯರಾದವರನ್ನೂ, ಇವರೆಂಥವರೆಂದರೆ, **ಮಯಾ ಹತಾನ್**-ಹಿಂದೆ ಹೇಳಿದಹಾಗೆ **ಮಯಾ ಪೂರ್ವಮೇವಹತಾನ್**-ನನ್ನಿಂದ ಮೊದಲೇ ನಾಶಹೊಂದಿದವರಾದವರನ್ನು ಎಂದರೆ ಹಾಗೆ ನನ್ನ ಸಙ್ಕಲ್ಪಕ್ಕೆ ಸೇರಿದವರನ್ನು, **ಜಹಿ**-ಜಯಿಸು, ಅದಕ್ಕಾಗಿ **ಯುಧ್ಯಸ್ವ**-ಯುದ್ಧಮಾಡಿ ಜಯಿಸು ಎಂಬ ಭಾವವು, **ಮಾವ್ಯಥಿಷ್ಠಾಃ**-ನಿನಗೆ ಯಾವ ವಿಧ ವ್ಯಥೆಯೂ ಬೇಡ, ನಾನೇ ಅವರ ವಧೆಯ ವಿಷಯವಾಗಿ ದೃಢಸಙ್ಕಲ್ಪವನ್ನು ಮಾಡಿರುವದರಿಂದ, ಅವರನ್ನು ವಧಿಸುವದು ಧರ್ಮವೇ, ನ್ಯಾಯವೇ? ಗುರು ಮೊದಲಾದವರನ್ನೂ ಜ್ಞಾತಿಗಳನ್ನೂ ಕೊಲ್ಲಬಹುದೇ? ಇತ್ಯಾದಿ ನಿನಗಿರುವ ಸಂದೇಹಶೋಕಗಳು ಬೇಡವು, ಮತ್ತು ಮಹಾರಥರಾದ ಅಸಹಾಯ ಶೂರರಾದ ದ್ರೋಣ, ಭೀಷ್ಮ, ಜಯದ್ರಥ, ಕರ್ಣರೇ ಮೊದಲಾದವರನ್ನು ಗೆಲ್ಲಲು ಸಾಧ್ಯ ವಾಗುತ್ತದೋ ಇಲ್ಲವೋ ಎಂಬ ಶಙ್ಕಾ ಶೋಕಗಳೂ ಸಹ ನಿನಗೆ ಬೇಕಿಲ್ಲವು; ಏತಕ್ಕೆಂದರೆ **ಜೇತಾಸಿ ರಣೇ ಸಪತ್ನಾನ್**-ಯುದ್ಧದಲ್ಲಿ ನಿನ್ನ ವೈರಿಗಳಾದ ಜ್ಞಾತಿಗಳನ್ನು ನನ್ನ ಸಙ್ಕಲ್ಪ ದಿಂದ, ಗೆಲ್ಲುತ್ತೀಯೇ ಎಂದರೆ ನನ್ನ ಸಙ್ಕಲ್ಪಮೂಲಕ ನಿನಗೆ ಜಯವೆಂಬುದು ನಿಸ್ಸಂದೇಹವು ಎಂಬ ಭಾವವು. **ಮಯಾ ಹತಾನ್ ತ್ವಾಂ ಜಹಿ** ಎಂದು ಹೇಳಿರುವದರಿಂದ ಈ ಪಾಂಡವರ ಜಯಕ್ಕೆ ಈಶ್ವರನೇ ಪ್ರಧಾನ ಕಾರಣನು ಎಂಬುದೂ, ಅರ್ಜುನನು ವ್ಯಾಜಭೂತನೆಂಬುದೂ ಇಲ್ಲೂ ಶಿಕ್ಷಿತವು. ಅರ್ಜುನನು ತನ್ನ ಶೋಕಕ್ಕೆ ಕಾರಣವನ್ನು ಮೊದಲನೆಯ ಅಧ್ಯಾಯದಲ್ಲಿ ಹೇಳಿಕೊಂಡಿರುತ್ತಾನೆ. ಆಚಾರ್ಯರೂ ಗುರುಗಳೂ ಇಂತಹವರನ್ನು ಕೊಲ್ಲುವದು ಹೇಗೆ? ಸ್ವಬಂಧುಗಳಾದ ಧಾರ್ತರಾಷ್ಟ್ರಾದಿಗಳನ್ನು ಕೊಂದು ರಾಜ್ಯೋಪಭೋಗಾದಿಗಳುಹೇಗೆ ಸುಖವು? ಕುಲಕ್ಷಯವು ವರ್ಣಸಙ್ಕರಾದಿ ದೋಷಗಳಿಗೆ ಹೇತುವಾಗುವದರಿಂದ, ಅಂತಹ ಕುಲಕ್ಷಯಕ್ಕೆ ಕಾರಣಭೂತರಾದವರಿಗೆ ನರಕವಾಸವು ತಪ್ಪೀತೆ ಎಂದು ಕೇಳಿರುತ್ತಾನಾದುದ ರಿಂದ, ಇಂತಹ ಶೋಕಗಳು ನಿನಗೆ ಬೇಡವೆಂದು **ಮಾವ್ಯಥಿಷ್ಠಾಃ**-ಎಂದು ಸಮಾಧಾನ ಮಾಡಿರುತ್ತಾರೆ. ಮತ್ತು ಅರ್ಜುನನು **"ನ ಚೈತ ದ್ವಿದ್ಮಃ ಕತರನ್ನೋ ಗರೀಯೋ "ಯದ್ವಾ ಜಯೇಮಯದಿವಾನೋ ಜಯೇಯುಃ"** (ಗೀ ೨.೬.) ಎಂದು ಜಯಾಪಜ ಯವು ಹೇಗೋ ಎಂಬ ಸಂದೇಹವನ್ನೂ ಸೂಚಿಸಿದ್ದನು; ಆ ಕಾರಣದಿಂದಲೂ, **ಮಾವ್ಯ ಥಿಷ್ಠಾಃ**-ಎಂದು ಹೇಳಿ, ನೀನು ಖಂಡಿತವಾಗಿಯೂ **ಜೇತಾಸಿ**-ಜಯಿಸುವೆ, ಜಯಹೊಂದಿದವ ನಾಗುವೆ, **ಯುಧ್ಯಸ್ವ**-ನೀನು ಯುದ್ಧಮಾಡು ಎಂದು ಉಪದೇಶಿಸುತ್ತಾರೆ. ಆಗಲಿ ಈ ವಧೆಯು ಅಧರ್ಮವಲ್ಲವೋ? ಎಂದರೆ, ದುಷ್ಟನಿಗ್ರಹವು ಅವತಾರದ ಉದ್ದೇಶ್ಯವೆಂದು

ಭಾ. **ದ್ರೋಣ ಭೀಷ್ಮಕರ್ಣಾದೀನ್ ಕೃತಾಪರಾಧತಯಾ ಮಯೈವ ಹನನೇ ವಿನಿಯುಕ್ತಾನ್ ತ್ವಂ ಜಹಿ-ತ್ವಂ ಹನ್ಯಾಃ; ಏತಾನ್ ಗುರೂನ್ ಬಂಧೂಂಶ್ಚಾನ್ಯಾನಪಿ ಭೋಗಸಕ್ತಾನ್ ಕಥಂ ಹನಿಷ್ಯಾಮೀತಿ ಮಾವ್ಯಥಿಷ್ಠಾಃ-ತಾನುದ್ದಿಶ್ಯ ಧರ್ಮಾಧರ್ಮಭಯೇನ ಬಂಧುಸ್ನೇಹೇನ ಕಾರುಣ್ಯೇನ ಚ ಮಾವ್ಯಥಾಂ ಕೃಥಾಃ। ಯತಸ್ತೇ ಕೃತಾಪರಾಧಾ ಮಯೈವ ಹನನೇ ವಿನಿಯುಕ್ತಾಃ, ಅತೋ ನಿರ್ವಿಶಙ್ಕೋಯುಧ್ಯಸ್ವ;**

ಹಿಂದೆಯೇ ನಾನು ನಿನಗೆ ನಾಲ್ಕನೆಯ ಅಧ್ಯಾಯದಲ್ಲಿ ಹೇಳಿರುತ್ತೇನೆ ಅಂತಹ ಸದುದ್ದೇಶವಿರುವ ನನ್ನ ಸಙ್ಕಲ್ಪವನ್ನು ನೆರವೇರಿಸಲು ಉದ್ಯುಕ್ತನಾದ ನಿನಗೆ ಅಧರ್ಮ ಹೇಗಾದೀತು? ರಾಜಾಜ್ಞೆಗೆ ಅನುಸಾರವಾಗಿ ನಡೆಸುವ ಭೃತ್ಯಕೃತ್ಯವು ಹೇಗೆ ಅಧರ್ಮ ವಾಗುವದಿಲ್ಲವೋ, ಹಾಗೆಯೇ ಲೋಕೇಶ್ವರೇಶ್ವರನಾದ ನನ್ನ ಆಜ್ಞೆಯಿಂದ ನಡೆಸುವ ನಿನ್ನ ವ್ಯಾಪಾರವೂ ಅಧರ್ಮವಲ್ಲವು. ಆದುದರಿಂದಲೂ **ಮಾವ್ಯಥಿಷ್ಠಾಃ**-ಎಂದು ಅರ್ಜುನನ ಸರ್ವವಿಧ ಶಙ್ಕೆಗಳನ್ನು ಹೋಗಲಾಡಿಸಿ ಸಮಾಧಾನವನ್ನು ಶ್ರೀ ಕೃಷ್ಣಭಗವಾನರವರು ಹೇಳಿರುತ್ತಾರೆ ಈ ಎಲ್ಲಾ ಪಾಪಿಗಳಿಗಿಂತಲೂ ದುರ್ಯೋಧನಾದಿಗಳು ಅತ್ಯಂತ ಪಾಪಿಷ್ಠರು ಅಂತವರ ನಾಶವು ನಿಸ್ಸಂದೇಹವಾದುದು ಎಂದು ಹಿಂದೆ ೨೬-೨೭ ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿತು ದ್ರೋಣ ಭೀಷ್ಮಾದಿಗಳ ಹೆಸರನ್ನು ಮಾತ್ರಹೇಳಿ, ದುರ್ಯೋಧನನ ಹೆಸರನ್ನು ಹೇಳದೆ, **ಅನ್ಯಾನಪಿ ಯೋಧಮುಖ್ಯಾನ್**-ಎಂಬಲ್ಲಿ ಅಡಗಿರುವ ಹಾಗೆ ಹೇಳಿರುವದರಿಂದ, ದುರ್ಯೋಧನನೇನೂ ಇವರಿಗೆ ಸಮಾನನಾದ ವೀರ ನಲ್ಲವೆಂದಾದರೂ ಭಾವಿಸಬಹುದು. ಇದನ್ನೆಲ್ಲಾ ಧೃತರಾಷ್ಟ್ರನಿಗೆ ಸಂಜಯನು ಹೇಳುವನಾದುದರಿಂದ ಪ್ರತ್ಯಕ್ಷವಾಗಿ ಏಕೆ ಇನ್ನೊಂದುಸಲ ಆತನಿಗೆ ತುಂಬಾ ಶೋಕಕಾರಣವಾದ ಮಾತನ್ನು ಹೇಳುವದು, ಆತನೇ ಪ್ರಾಜ್ಞನಾದರೆ ಊಹಿಸಿಕೊಳ್ಳಲಿ ಎಂದಾಗಲಿ ಎಂದು ಭಾವಿಸಬಹುದು. ಈ ಶ್ಲೋಕದಿಂದ ಸರ್ವೇಶ್ವರನಿಗಿರುವ ಆಶ್ರಿತರಲ್ಲಿರುವ ಪರಮಕೃಪೆಯೂ, ಸಂಪೂರ್ಣಾನುಗ್ರಹವೂ ವ್ಯಕ್ತವು, ॥೩೩॥

**ಭಾಷ್ಯಾರ್ಥವು**:—ಅರ್ಜುನನು **ಅಸ್ಥಾನ ಸ್ನೇಹ ಕಾರುಣ್ಯ ಧರ್ಮಾಧರ್ಮ ಭಯಾಕುಲ**" ನಾಗಿ **ಕಥಂ ಭೀಷ್ಮಂ** ಎಂದು ಹೇಳಿ ತಾನು ಹೇಗೆ ಅಧರ್ಮವಾಗಿ ತೋರುವ ಯುದ್ಧವನ್ನು ಮಾಡಲಿ ಎಂದು ಶೋಕಾಕುಲನಾಗಿದ್ದನು. ಅದಕ್ಕೆ ಪ್ರತಿಯಾಗಿ ಈ ಶ್ಲೋಕದ ಮೂಲಕ ಸರ್ವ ಸಮಾಧಾನವನ್ನು ಹೇಳುತ್ತಾರೆ.—**ದ್ರೋಣಭೀಷ್ಮ ಕರ್ಣಾದೀನ್**-ದ್ರೋಣ ಭೀಷ್ಮ ಕರ್ಣರೇ ಮೊದಲಾದವರನ್ನು. **ಕೃತಾಪರಾಧತಯಾ**-ಎಲ್ಲರೂ ಅಪರಾದಮಾಡಿದುದರಿಂದ, **ಮಯೈವ**-ನನ್ನಿಂದಲೇ, **ಹನನೇ ವಿನಿಯುಕ್ತಾನ್**-ಕೊಲ್ಲಲ್ಪಡಬೇಕೆಂದು ನಿಯಮಿಸಲ್ಪಟ್ಟವರನ್ನು, **ತ್ವಂ ಜಹಿ**-ನೀನು ಜಯಿಸು ಎಂದರೆ, **ತ್ವಂ ಹನ್ಯಾಃ**-ನೀನು ಅವರುಗಳನ್ನು ಕೊಲ್ಲಬೇಕು ಎಂಬ ತಾತ್ಪರ್ಯವು ಆದರೆ ಇವರುಗಳು ಬಂಧುಗಳು, ಗುರುಗಳು ತಮ್ಮಂದಿರು, ರಾಜ್ಯ ಭೋಗವನ್ನು ಅನುಭವಿಸುತ್ತ ಇರುವವರು, ಇವರುಗಳನ್ನು ಹೇಗೆ ಕೊಲ್ಲಲಿ ಇತ್ಯಾದಿ ಆಕ್ಷೇಪಗಳನ್ನು ತಂದು ಶೋಕಿಸಿದ್ದಿಯಲ್ಲವೇ, ಆ ವಿಷಯದಲ್ಲಿ ನಿನಗೆ ಶೋಕಕ್ಕೆ ಕಾರಣವಿಲ್ಲವೆಂದು ಮುಂದೆ ತಿಳಿಸುತ್ತಾರೆ.—**ಏತಾನ್ ಗುರೂನ್**-ಈ ಮೇಲೆಹೇಳಿದ ಗುರುಗಳನ್ನೂ, **ಬಂಧೂನ್**-ಕರ್ಣನೂ, ದುರ್ಯೋಧನನೂ ಇವರೇ ಮೊದಲಾದ **ಅನ್ಯಾನಪಿ**-ಬಂಧುಗಳನ್ನೂ, ಇತರರೂ ಆದ, **ಭೋಗಸಕ್ತಾನ್**-ಸುಖವಾಗಿ ಭೋಗಗಳನ್ನು ಅನುಭವಿಸುತ್ತಿರುವವರನ್ನೂ, **ಕಥಂ ಹನಿಷ್ಯಾಮೀತಿ**-ಹೇಗೆ ಕೊಲ್ಲಲಿ? ಎಂದರೆ ಕೊಲ್ಲುವದು ಅಧರ್ಮವಲ್ಲವೇ, ಎಂಬಭಿಪ್ರಾಯದಿಂದ ಎಂಬ ಭಾವವು, **ಮಾ ವ್ಯಥಿಷ್ಠಾಃ** ಎಂದರೆ **ಮಾವ್ಯಥಾಂ ಕೃಥಾಃ**-

**ಭಾ- ರಣೇ ಸಪತ್ನಾನ್ ಜೇತಾಸಿ ಜೇಷ್ಯಸಿ- ನೈತೇಷಾಂ ವಧೇ ನೃಶಂಸತಾ ಗನ್ಧಃ ಅಪಿತು ಜಯ ಲಭ್ಯತ ಇತ್ಯರ್ಥಃ ॥೩೪॥**

---

ಶೋಕವನ್ನು ಮಾಡಬೇಡ ; ಏಕೆಂದರೆ ಕಾರಣವು ವ್ಯಕ್ತವೆಂದು ವ್ಯಾಖ್ಯಾನಮಾಡುತ್ತಾರೆ— **ಯತಃ**-ಯಾವ ಕಾರಣದಿಂದ ನಿನಗೆ ಶೋಕಕ್ಕೆ ಕಾರಣವಿಲ್ಲವೆಂದರೆ, **ತೇ**-ಅವರು, **ಕೃತಾಪರಾಧಾಃ**-ಮಾಡಲ್ಪಟ್ಟ ಅಪರಾಧವನ್ನುಳ್ಳವರು, ಎಂದರೆ ಅವರುಗಳೆಲ್ಲಾ ಮಹಾಪರಾಧಿಗಳು, ಆದುದರಿಂದಲೇ, **ಮಯ್ಯೈವ**-ದುಷ್ಟನಿಗ್ರಹದಲ್ಲಿ ಉದ್ಯುಕ್ತನಾಗಿರುವ ನನ್ನಿಂದಲೇ, **ಹನನೇ ವಿನಿಯುಕ್ತಾಃ**-ಕೊಲ್ಲಲ್ಪಡುವದರಲ್ಲಿ ನಿಯಮಿಸಲ್ಪಟ್ಟವರಾಗಿರುತ್ತಾರೋ, ಆ ಕಾರಣದಿಂದ ಎಂಬ ಭಾವವು. ದುರ್ಯೋಧನಾದಿಗಳೇನೋ ಸಾಕ್ಷಾತ್ತಾಗಿ ಅಪರಾಧಿಗಳು ; ಆ ಕಾರಣದಿಂದ ಅವರೇನೋ **ಹನನೇ ವಿನಿಯುಕ್ತಾಃ**-ಕೊಲ್ಲಲ್ಪಡುವದರಲ್ಲಿ ನಿಯಮಿಸಲ್ಪಟ್ಟವರಾಗಿರುತ್ತಾರೋ, ಆ ಕಾರಣದಿಂದ ಎಂಬ ಭಾವವು. ದುರ್ಯೋಧನಾದಿಗಳೇನೋ ಸಾಕ್ಷಾತ್ತಾಗಿ ಅಪರಾಧಿಗಳು ; ಆ ಕಾರಣದಿಂದ ಅವರೇನೋ **ಹನನೇ ವಿನಿಯುಕ್ತಾಃ** ಎಂದು ಒಪ್ಪತಕ್ಕದ್ದು ಈ ದ್ರೋಣ ಭೀಷ್ಮರುಗಳಾಗಿರುವ ಆಚಾರ್ಯರು ಹೇಗೆ ಅಪರಾಧಿಗಳು ? ಎಂದರೆ ದ್ರೌಪದಿಗೆ ಅಪಮಾನವನ್ನು ದುರ್ಯೋಧನ ದುಶ್ಶಾಸನಾದಿಗಳು ಯತ್ನಿಸಿದಾಗ ದ್ರೌಪದಿಯು ಸಭಿಕರನ್ನು ಸಂಬೋಧಿಸಿ ಯುಧಿಷ್ಠಿರಾದಿಗಳಿಗೆ ತನ್ನನ್ನು ಪಣವಾಗಿ ಇಡಲು ಅಧಿಕಾರವುಂಟೋ ಹೇಗೆ ಎಂದು ಪ್ರಶ್ನಿಸಿದಾಗ, ವಿದುರ ವಿಕರ್ಣರಿಂದ ಅಧಿಕಾರವಿಲ್ಲವೆಂದು ಹೇಳಲ್ಪಟ್ಟರೂ, ಭೀಷ್ಮಾದಿಗಳು ಎನೊಂದೂ ಧರ್ಮಸೂಕ್ಷ್ಮವನ್ನು ಹೇಳದೆ ತಟಸ್ಥರಾದುದರಿಂದ ಮಹಾಪರಾಧಿಗಳೇ. ದ್ರೌಪದಿಯು ಸಭಿಕರನ್ನು ಕುರಿತು ನಾನು ಜಿತಳೇ ಜಿತಳಲ್ಲವೇ, ಸರಿಯಾಗಿ ಧರ್ಮವನ್ನು ತಿಳಿಸಿರಿ ಎಂದು ಕೇಳಿದುದಕ್ಕೆ ಶ್ರೀ ಭೀಷ್ಮರು ನಿರ್ಭಯವಾಗಿ ಉತ್ತರವನ್ನೀಯದೆ, ಆಕೆಯನ್ನು ಕುರಿತು ನಿಶ್ಚಯವಾದ ಉತ್ತರವು ನನಗೆ ತೋರುವದಿಲ್ಲವು ; ಏಕೆಂದರೆ ಯುಧಿಷ್ಠಿರನೇ ಇದು ಮೋಸವಲ್ಲವೆಂದು ಒಪ್ಪಿದ್ದಾನೆಂದು ಹೇಳಿದರು. ದ್ರೋಣಾದಿಗಳು ತಲೆಬೊಗ್ಗಿಸಿಕೊಂಡು ಸುಮ್ಮನಿದ್ದರು. ಕರ್ಣನು ಪ್ರತಿಭಟಿಸಿ, ಯಾವಾಗ ಐದು ಜನರಿಗೆ ಹೆಂಡತಿಯಾದವಳೋ, ಆಗ ಆಕೆಯು ವ್ಯಭಿಚಾರಿಯಾದಳು. ಆ ಕಾರಣ ಆಕೆಯು ಜಿತಳೇ ಎಂದು ಘೋಷಿಸಿದನು ಈ ಸಂದರ್ಭದಲ್ಲಿ, **“ಯೋಹಿ ಪ್ರಶ್ನಂ ನವಿಬ್ರೂಯಾದ್ಧರ್ಮದರ್ಶೀ ಸಭಾಂಗತಃ”। ಅನೃತೇ ಯಾಫಲಾ ವಾಪ್ತಿಸ್ತಸ್ಯಾಂ ಸೋರ್ಧಂ ಸಮಶ್ನುತೇ”** (ಸಭಾ ೯೦.೬೫) ಯಾವನು ಧರ್ಮದರ್ಶಿಯಾಗಿ, ಸಭೆಯಲ್ಲಿದ್ದ ಧರ್ಮವಿಷಯಿಕ ಪ್ರಶ್ನೆಯನ್ನು ಮಾಡಿದರೂ ಸರಿಯಾದ ನಿಶ್ಚಿತವಾದ ಉತ್ತರವನ್ನು ಧೈರ್ಯದಿಂದ ತಿಳಿಸದೇ ಇರುವನೋ, ಅಂತವನು ಅಂತಹ ನೆರದ ಸಭೆಯಲ್ಲಿ ಅನೃತ ಹೇಳಿದರೆ ಎಷ್ಟುದೋಷವೋ ಅದರ ಅರ್ಧಫಲವಾದ ದುರ್ಗತಿಯನ್ನು ಹೊಂದುವನೆಂಬ ವಿದುರೋಕ್ತಿಯಿಂದ ಇವರುಗಳು ಮಹಾಪರಾಧಿಗಳೇ ಸರಿ ಎಂಬ ಭಾವನೆಯಿಂದ **ಕೃತಾಪರಾಧಾಃ** ಎಂಬ ವ್ಯಾಖ್ಯಾನವು. ದುರ್ಯೋಧನ ದುಶ್ಶಾಸನರ ದುಶ್ಚರಿತವನ್ನು ನಿಂದಿಸಿ, ಅವರು ಮಹಾ ಅಯೋಗ್ಯರೆಂದೆನಿಸಿ ಅವರ ಸಂಸರ್ಗವನ್ನು ಈ ಭೀಷ್ಮಾದಿಗಳು ತ್ಯಜಿಸಲಿಲ್ಲವು. ಅವೆಲ್ಲಾಹೋಗಲಿ, ಈ ಅಧರ್ಮಯುದ್ಧದಲ್ಲಿ ಸಹಾಯಕರಾಗಿಯಾದರೂ ಬಾರದೇ ಇರಬೇಕಾಗಿತ್ತು. ಸಹಾಯಕರಾಗಿ ಸೇನಾಧಿಪತ್ಯವೇನು, ಇಂತಾದ್ದನೆಲ್ಲಾ ವಹಿಸಿ ಬಂದಿರುತ್ತಾರಾದುದರಿಂದ ಮಹಾಪರಾಧಿಗಳೇ, ಆದುದರಿಂದ ವಧ್ಯರೇ ಎಂಬ ಭಾವವು. ಕರ್ಣನಾದರೋ ಸಭೆಯಲ್ಲಿ ಪಾಂಡವರೂ ದ್ರೌಪದಿಯೂ ಸಹ ಧರ್ಮಜಿತರೆಂದು ಅಭಿಪ್ರಾಯವನ್ನು ಕೊಟ್ಟು ದ್ರೌಪದಿಯ ವಸ್ತ್ರಾಪಹರಣವು ನ್ಯಾಯವೆಂದು ತೀರ್ಪುಕೊಟ್ಟುದುದರಿಂದ ಮಹಾಪರಾಧಿಯು.

**ಸಂಜಯ ಉವಾಚ—**

**ಮೂ. ಏತಚ್ಛ್ರುತ್ವಾವಚನಂ ಕೇಶವಸ್ಯಕೃತಾಂಜಲಿ ರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ಸಗದ್ಗದಂ ಭೀತಭೀತಃ ಪ್ರಣಮ್ಯ ॥೩೫॥**

---

ಇನ್ನೂ ಅನೇಕ ಸಮಯಗಳಲ್ಲೂ ಪಾಂಡವರಿಗೆ ದ್ರೋಹಚಿಂತನೆಯನ್ನೇ ಮಾಡುತ್ತಿದ್ದುದರಿಂದ ದುಷ್ಟಚತುಷ್ಟಯಕ್ಕೆ ಸೇರಿದವನು. ಅಂತವರನ್ನು ವಧಿಸುವದು ಹೇಗೆ ಅಧರ್ಮವಾದೀತು? ಅಂತಹ ವಿಷಯದಲ್ಲಿ ಧರ್ಮವನ್ನು ಸ್ಥಾಪಿಸುವದಕ್ಕಾಗಿಯೇ ಕ್ಷತ್ರಿಯನು ಸಾಧಾರಣವಾಗಿ ಬಿಲ್ಲನ್ನು ಧರಿಸಿರುವಾಗ, ನೀನು ದುಷ್ಟರಲ್ಲಿ ಕಾರುಣ್ಯತೋರಿಸಿ ಶೋಕಿಸಬಹುದೋ? **ಮಾವ್ಯಥಿಷ್ಠಾಃ**-ಎಂದು ಹೇಳಿದರು ಎಂಬ ತಾತ್ಪರ್ಯವು. **ಅತಃನಿರ್ವಿಶಙ್ಕೋಯುಧ್ಯಸ್ವ**-ಆ ಕಾರಣದಿಂದ ಯಾವುದೊಂದು ಶಙ್ಕೆಯಿಲ್ಲದವನಾಗಿ, ಇದು ಗುರುಗಳ ಹನನ, ಇದು ಬಂಧುಹನನ, ಆ ಕಾರಣದಿಂದ ಅಧರ್ಮವು ಇತ್ಯಾದಿ ಶಙ್ಕೆ ಯಾವುದೂ ಇಲ್ಲದವನಾಗಿ ಯುದ್ಧವನ್ನು ಮಾಡು; ಇದು **ಮಾವ್ಯಥಿಷ್ಠಾಃ** ಎಂಬುದರಿಂದ ತೋರುವ ತಾತ್ಪರ್ಯವಾಗುವದರಿಂದ ಹಾಗೆ ಭಾಷ್ಯವು **ರಣೇಸಪತ್ನಾನ್ ಜೇತಾಸಿ** ಎಂದರೆ **ಜೇಷ್ಯಸಿ**-ಯುದ್ಧದಲ್ಲಿ ನೀನು ಶತ್ರುಗಳನ್ನು ಕೊಂದು ಜಯಶೀಲನಾಗುವಿ, ನೀನು ನನ್ನ ಅನುಗ್ರಹದಿಂದ ಜಯವನ್ನು ಹೊಂದುತ್ತೀಯೇ, ಹಾಗಾದರೆ ನನಗೇನೊಂದೂ ದೋಷವಿಲ್ಲವೋ ಎನ್ನುತ್ತೀಯೋ ಎಂದರೆ **ನೈತೇಷಾಂ ವಧೇ ನೃಶಂಸತಾ ಗಂಧಃ**-ಇವರುಗಳ ವಧೆಯಲ್ಲಿ ದೋಷಲೇಶವೂ ಇಲ್ಲವು; ನಿನಗೆ ಶ್ರೇಯಸ್ಸೇ ಉಂಟೆಂಬಭಿಪ್ರಾಯದಿಂದ ಹೇಳಿದವರಾತೆಂದು ವ್ಯಾಖ್ಯಾನಮಾಡುತ್ತಾರೆ. ಇದೂ ಕೂಡ **ಮಾವ್ಯಥಿಷ್ಠಾಃ** ಎಂಬ ಪ್ರಯೋಗದಿಂದುಂಟಾಗುವ ಅಭಿಪ್ರಾಯವೇ; **ಅಪಿತು**-ಮತ್ತೇನೆಂದರೆ, **ಜಯ ಏವ ಲಭ್ಯತೇ**-ಜಯವೇ ಉಂಟಾಗುತ್ತದೆ; ತನ್ಮೂಲಕವಾಗಿ ಯಶಸ್ಸೂ, ರಾಜ್ಯಪ್ರಾಪ್ತಿಯೂ, ಸುಖಾನುಭವವೂ, ಭಗವದಾಜ್ಞೆಯನ್ನು ನಡೆಸುವುದರಿಂದ ಇನ್ನೂ ಇತರ ಅನುಗ್ರಹಗಳೂ, ಸಹ ಲಭಿಸುವುವೆಂಬುದೂ, ದ್ಯೋತಿತವು. ಹಿಂದೆ ಈ ಶತ್ರುಪಕ್ಷದವರನ್ನು ಅರ್ಜುನನು ಗುರುಗಳೆಂದೂ, ಬಂಧುಗಳೆಂದೂ, ಧರ್ಮಿಷ್ಠರೆಂದೂ ಭಾವಿಸಿದ್ದನು. ಈಗ ಸರ್ವೇಶ್ವರನು ಹಾಗೆ ಭಾವಿಸತಕ್ಕದ್ದಲ್ಲವು, ಅವರೂ ಪರಿಪಂಥಿಗಳೇ ಎಂದು **ಸಪತ್ನಾನ್** ಎಂಬ ಪ್ರಯೋಗದಿಂದ ವ್ಯಕ್ತಪಡಿಸಿದರು; **ಮಾವ್ಯಥಿಷ್ಠಾಃ** ಎಂಬ ಪ್ರಯೋಗದಿಂದ, ಅರ್ಜುನನಾದ ನೀನು ಯಾವ ಯಾವ ಕಾರಣಗಳಿಂದ ಶೋಕಿಸಿದೆಯೋ, ಆ ಕಾರಣಗಳು ಯಾವುವು ಇಲ್ಲವಾದುದರಿಂದ ನೀನು ವ್ಯರ್ಥವಾಗಿ ಶೋಕಿಸಿದಿ; ಶೋಕಕ್ಕೆ ಹೇತುವೇ ಇಲ್ಲವೇ ಎಂದು ಹೇಳಿರುತ್ತಾರೆ ಇದರಿಂದ ನಿನ್ನ ತಿಳುವಳಿಕೆಯಲ್ಲಾ ತಪ್ಪು. ನಿನ್ನ ಕರ್ತವ್ಯವನ್ನೇ ನೀನು ಮರೆತು, ಅದನ್ನು ತ್ಯಾಗಮಾಡಿರುತ್ತೀಯೇ. ಎಂಬ ಭಾವವು. ॥೩೪॥

**ಮೂಲಕ್ಕೆ ಅರ್ಥವು:**—ಧೃತರಾಷ್ಟ್ರನನ್ನು ಕುರಿತು ಸಂಜಯರು ಹೇಳುತ್ತಾರೇನೆಂದರೆ—**ಕೇಶವಸ್ಯ**-ಚತುರ್ಮುಖ ರುದ್ರರಿಗೂ ನಿಯಾಮಕನಾದ ಶ್ರೀ ಕೃಷ್ಣಭಗವಾನರವರ, **ಏತದ್ವಚನಂ**-ತನಗೆ ಸರ್ವಶ್ರೇಯಸ್ಸನ್ನುಂಟುಮಾಡುವ ಸಙ್ಕಲ್ಪವನ್ನು ಪ್ರದರ್ಶಿಸಿ ಭಕ್ತಾನುಗ್ರಹವನ್ನು ವ್ಯಕ್ತಪಡಿಸಿ ಹೇಳಿದ ಈ ವಾಕ್ಯನ್ನು, **ಶ್ರುತ್ವಾ**-ಕೇಳಿ, ಒಡನೇ, **ಕೃತಾಂಜಲಿಃ**-ಕ್ಷಿಪ್ರಪ್ರಸಾದಿನಿಯಾದ ಅಂಜಲಿಯನ್ನು ಮಾಡಿದವನಾಗಿ, ಇದರಿಂದ ಅರ್ಜುನನು ಭಗವಂತನಲ್ಲಿ **ತುಂಬಾಭಕ್ತಿ** ವಿಶ್ವಾಸ ಕೃತಜ್ಞತಾ ಭಾವಗಳುಳ್ಳವನಾದನೆಂಬುದು ಸೂಚಿತವು, **ವೇಪಮಾನಃ**-ನಡಗುತ್ತಿರುವವನಾಗಿ, ಇದು ಭಯ ಭಕ್ತಿಗಳನ್ನು ಸೂಚಿಸುತ್ತದೆ, **ಕಿರೀಟೀ**-ಅರ್ಜುನನ್ನು ಇಲ್ಲಿ **ಕಿರೀಟೀ** ಎಂಬ ಪ್ರಯೋಗದಿಂದ ಕ್ಷಿಪ್ರದಲ್ಲೇ ಪಟ್ಟಾಭಿಷಿಕ್ತನಾಗುವನೆಂಬ ಭಾವವು

**ಭಾ. ಏತತ್, ಆಶ್ರಿತವಾತ್ಸಲ್ಯ ಜಲಧೇಃ ಕೇಶವಸ್ಯ ವಚನಂ ಶ್ರುತ್ವಾ ಅರ್ಜುನ ಸ್ತಸ್ಮೈನಮಸ್ಕೃತ್ಯ ಭೀತಭೀತೋ ಭೂಯಸ್ತಂ ಪ್ರಣಮ್ಯ ಕೃತಾಂಜಲಿ ರ್ವೇಪಮಾನಃ ಕಿರೀಟೀ ಸಗದ್ಗದ ಮಾಹ ॥೩೫॥**

ಸೂಚಿತವು, **ಭೂಯ ಏವ ನಮಸ್ಕೃತ್ವಾ**-ನಮಸ್ಕೃತ್ವಾ ಎಂಬ ಪ್ರಯೋಗವು ಆರ್ಷವು; ನಮಸ್ಕೃತ್ಯ ಎಂದರೆ ಬಹುಸಲ ನಮಸ್ಕಾರಮಾಡಿ, ಇದರಿಂದ ಒಂದುಸಲ ನಮಸ್ಕಾರವು ಶಾಸ್ತ್ರವಿಹಿತವಲ್ಲವೆಂಬುದು ಸೂಚಿತವು ಶಾಸ್ತ್ರಸಮ್ಮತವಾದುದು ಯಾವುದೆಂಬುದಕ್ಕೆ ದಾಸನು ಬರೆದಿರುವ ಗುರುಪರಂಪರಾಸಾರದ ೭-೯ನೆಯ ಪುಟಗಳನ್ನು ಪರಾಂಬರಿಸಿ. ಮುಂದೆ ೩೯ನೆಯ ಶ್ಲೋಕದಲ್ಲಿ "**ಪುನಶ್ಚ ಭೂಯೋಽಪಿ ನಮೋನಮಸ್ತೇ**" ಎಂಬ ಪ್ರಯೋಗವು, ಕೃತಜ್ಞತಾ ಭಾವದಿಂದ ಪ್ರಪನ್ನನು ತನಗೆ ಮನಸ್ತೃಪ್ತಿಯುಂಟಾಗುವವರೆಗೂ ಮಾಡಬಹುದೆಂಬುದನ್ನು ಪ್ರದರ್ಶಿಸುತ್ತದೆ. ಆದರೆ ಸರ್ವೇಶ್ವರಾನುಗ್ರಹಹೊಂದಲು, ಶರಣಾಗತಿರೂಪ ಸಕೃತ್ಪ್ರಣಾಮವೇ ಸಾಕೆಂದು ಹೇಳಲ್ಪಟ್ಟಿರುತ್ತದೆ. **ಭೀತಭೀತಃ**-ಅತ್ಯಂತ ಭಯವಿಹ್ವಲನಾಗಿ, **ಪ್ರಣಮ್ಯ**-ಶಿರಸ್ಸನ್ನು ಬಗ್ಗಿಸಿಕೊಂಡು ಹೀಗೆ ಅರ್ಥಮಾಡುವುದರಿಂದ **ನಮಸ್ಕೃತ್ವಾ** ಎಂಬುದರೊಂದಿಗೆ ಪುನರುಕ್ತಿಯಾಗುವುದಿಲ್ಲವು. ಈ ವೇಪಮಾನತ್ವವು, ಗದ್ಗದಸ್ವರವು, ಅಂಜಲಿನಮಸ್ಕಾರಾದಿ ಗಳೂ ಭಯದಿಂದ ಈ ಅರ್ಜುನನಿಗೆ ಉಂಟಾಯಿತೆಂದು ತೋರಿಸುವುದಕ್ಕಾಗಿ **ಭೀತಭೀತಃ** ಎಂಬ ಪ್ರಯೋಗವು; ಈತನು ಇದರಿಂದ ಅತ್ಯಂತ ಭೀತನಾದನು ಎಂಬ ಅಭಿಪ್ರಾಯವು. **ಕೃಷ್ಣಂ**-ಶ್ರೀಕೃಷ್ಣಭಗವಾನರವರನ್ನು ಕುರಿತು. **ಸಗದ್ಗದಂ**-ಈ ಭಯಭಕ್ತಿಗಳಿಂದ ಕಂಠದಲ್ಲಿ ಸರಿಯಾಗಿ ಮಾತು ಹೊರಡದಿರುವ ಗದ್ಗದಸ್ವರ ಉಂಟಾಗೋಣ ಹೇಗೋ ಹಾಗೆ, **ಆಹ**-ಅರಿಕೆಮಾಡಿಕೊಂಡನು. **ಭೂಯ ಏವ** ಎಂಬುದು ಕಾಕಾಕ್ಷಿನ್ಯಾಯದ ಪ್ರಕಾರ, **ಸನಮಸ್ಕೃತ್ವಾ** ಎಂಬುದಕ್ಕೂ **ಆಹ** ಎಂಬುದಕ್ಕೂ ಮಧ್ಯೆ ಇರುವದರಿಂದ ಎರಡಕ್ಕೂ ಅನ್ವಯಿಸಿ ಪುನಃ ಹೇಳಿದನು ಎಂದೂ ಅರ್ಥಮಾಡಬಹುದು ೩೬ನೆಯ ಶ್ಲೋಕದಿಂದ ೪೬ನೆಯ ಶ್ಲೋಕಾಂತ್ಯದವರೆಗೂ ಅರ್ಜುನನ ವಾಕ್ಯವು. ಈ ಒಂದು ಶ್ಲೋಕಮಾತ್ರ ಸಂಜಯ ವಾಕ್ಯವು ಮಧ್ಯೆಬರಲು ಕಾರಣವೇನು? ಎಂದರೆ ಶ್ರೀಕೃಷ್ಣಭಗವಾನರವರು ಹಿಂದಿನ ಶ್ಲೋಕದಲ್ಲಿ ದ್ರೋಣ ಭೀಷ್ಮ ಜಯದ್ರಥ ಕರ್ಣಾದಿಯೋಧ ಮುಖ್ಯರೆಲ್ಲಾ ನನ್ನಸಙ್ಕಲ್ಪಾನುಸಾರ ಹತರಾಗ ತಕ್ಕವರೇ. ಆದುದರಿಂದ ಶೋಕಿಸಬೇಡ, ನಿನ್ನ ಶತ್ರುಗಳನ್ನೆಲ್ಲಾ ಜಯಿಸು ಎಂದು ಹೇಳಿದ ವಾಕ್ಯವನ್ನು ಧೃತರಾಷ್ಟ್ರನಿಗೆ ಮುಖ್ಯವಾಗಿ ತಿಳಿಸಬೇಕೆಂದೂ, ಈಗಲಾದರೂ ಹೀಗೆ ವಿಪತ್ತು ಸನ್ನಿಹಿತವೆಂದಾದರೂ ತಿಳಿದು ಸಂಧಿಮಾಡಿಕೊಂಡು ಶರಣಾಗತರಾಗಿ, ಅವರ ರಾಜ್ಯವನ್ನು ಕೊಟ್ಟುಬಿಟ್ಟು ಸುಖವಾಗಿ ಬಾಳಬಹುದು ಎಂಬ ಭಾವವನ್ನು ದುರ್ಯೋಧನನಿಗೆ ತಿಳಿಸಲಿ ಎಂಬ ಹಿತವನ್ನು ಬೋಧಿಸುವದಕ್ಕಾಗಿ ಪ್ರವೃತ್ತವೆಂದು ಭಾವಿಸತಕ್ಕದ್ದು ಅರ್ಜುನನು ಶ್ರೀಕೃಷ್ಣ ನಿಗೆ ಎಷ್ಟು ಪ್ರಿಯನು ಎಂಬುದನ್ನು ಗ್ರಹಿಸಲಿ ಎಂಬುದೂ ಸಂಜಯರ ಅಭಿಪ್ರಾಯವು. ಸ್ವಾಮಿಯಾಗಿ ಆಶ್ರಿತವಾತ್ಸಲ್ಯಜಲಧಿಯಾಗಿರುವವನಿಗೆ ತಾನು ದಾಸಭೂತನೆಂದು ಭಾವಿಸಿ, ತಾನು ಹಾಗೆ ಶೇಷಭೂತನೆಂಬುದನ್ನು ಮನಸಾವಾಚಾಕಾಯೇನ ತೋರಿಸಬೇಕೆಂಬುದನ್ನು ಈ ಶ್ಲೋಕವು ಶಿಕ್ಷಿಸುವ ಹಾಗೆ ತೋರಿಬರುತ್ತದೆ. ಮನಸ್ಸಿನಿಂದ ಆಶ್ರಯಿಸುವಾಗ ಅಂಜಲಿಯು, ವಾಕ್ಕಿನಿಂದ ನಮೋನಮಃ ಎಂದು ಹೇಳಿ, ಕಾಯೇನ ಪುನಃಪುನಃ ಪ್ರಣಾಮವನ್ನೆಸಗ ಬೇಕೆಂಬುದು ಸೂಚಿತವು. ॥೩೫॥

**ಭಾಷ್ಯಾರ್ಥವು:—ಏತತ್ ಕೇಶವಸ್ಯ ವಚನಂ**-ಹಿಂದೆ ಹೇಳಲ್ಪಟ್ಟ ಕೇಶವನ ವಾಕ್ಯ ವನ್ನು, ಈ ವಾಕ್ಕಿನಿಂದ ಬ್ರಹ್ಮರುದ್ರರುಗಳಿಗೂ ರಕ್ಷಕನಾದವನು ಶ್ರೀಕೃಷ್ಣನೆಂಬ ಭಾವವು,

ಆತನು ಎಂತವನೆಂಬುದು ವ್ಯಕ್ತವೆಂದರೆ. **ಆಶ್ರಿತ ವಾತ್ಸಲ್ಯಜಲಧೇಃ**-ಆಶ್ರಿತರ ವಿಷಯದಲ್ಲಿ ದೋಷಗಳನ್ನು ಕೂಡ ಪರಿಗಣಿಸದೇ ಇರುವ ಮಮತೆಗೆ ಸಮುದ್ರಪ್ರಾಯನು, ಹೇಗೆಂದರೆ, ಅರ್ಜುನನು ಪ್ರಾರ್ಥಿಸಿದುದು ವಿಭೂತಿ ವಿಸ್ತರವನ್ನು ಪ್ರದರ್ಶಿಸುವ ದಿವ್ಯಮಙ್ಗಳದ ದರ್ಶನವು; ಅದನ್ನೂ ದಯಪಾಲಿಸಿದುದೂ ಅಲ್ಲದೆ, ತನಗೆ ಶ್ರೇಯೋರೂಪವಾದ ಜಯಸೂಚಕ ಸಙ್ಕಲ್ಪವನ್ನೂ ಕೂಡ ವ್ಯಕ್ತಪಡಿಸಿಮದರಿಂದ, **ಆಶ್ರಿತವಾತ್ಸಲ್ಯಜಲಧೇಃ ಕೇಶವಸ್ಯ**ಎಂಬ ಭಾಷ್ಯವು. ಇಂತಹ ಕೇಶವನ ಮಾತನ್ನು, **ಶ್ರುತ್ವಾ**-ಕೇಳಿ, ಅರ್ಜುನನು, **ತಸ್ಮೈ**-ಕೃಪಾನುಗ್ರಹಗಳನ್ನು ವರ್ಷಿಸುತ್ತಿರುವ ಆತನಿಗೆ, **ನಮಸ್ಕೃತ್ಯ**-ನಮಸ್ಕಾರಮಾಡಿದವನಾಗಿ, **ಭೀತಭೀತಃ**-ಅತ್ಯಂತ ಭೀತನಾಗಿ, **ಭೂಯಸ್ತಂ ಪ್ರಣಮ್ಯ**-ಪುನಃ ಪುನಃ ಶ್ರೀಕೃಷ್ಣನನ್ನು ನಮಸ್ಕರಿಸಿ, ಇದರಿಂದ ಏಕಪ್ರಣಾಮವು ಶ್ರೀ ಯತಿವರ್ಯರಿಗೆ ಇಷ್ಟವಲ್ಲದುದು ಎಂಬುದು ವ್ಯಕ್ತವು. ಅವರು ದಯಪಾಲಿಸಿರುವ ಗದ್ಯತ್ರಯಗಳಿಂದಲೂ ಅವರ ಅಭಿಮತವು ವ್ಯಕ್ತವು. ವೈಕುಂಠಗದ್ಯದಲ್ಲಿ "**ಪ್ರಣಮ್ಯೋತ್ಥಾಯೋತ್ಥಾಯ ಪುನಃ ಪುನಃ ಪ್ರಣಮ್ಯ**" ಎಂದು ಇರುತ್ತದೆ ಆಳವಂದಾರ್ರವರು "**ಭೂಯೋ ನಮೋಽಪರಿಮಿತಾಚ್ಯುತಿ**" ಎಂಬ ಶ್ಲೋಕದಲ್ಲೂ "**ನಮೋ ನಮೋ ವಾಙ್ಮನಸಾತಿ ಭೂಮಯೇ**" (ಸ್ತೋತ್ರ ೨೧) ಎಂಬಲ್ಲೂ ಸಾಂಪ್ರದಾಯ ಕ್ರಮವನ್ನು ವ್ಯಕ್ತಗೊಳಿಸಿ **ಪ್ರದಕ್ಷಿಣ ನಮಸ್ಕಾರಾನ್ಮಗ್ನೇನೈವ ಕುರ್ಯಾತ್** ಎಂಬ ಶಾಸ್ತ್ರವನ್ನು ಬೋಧಿಸಿರುತ್ತಾರೆ. ಶ್ರೀ ಯತಿವರ್ಯರೂ ತಮ್ಮ ಆಚಾರ್ಯರುಗಳಿಗೆ ಅನೇಕ ಸಲ ಪ್ರಣಾಮಮಾಡುತ್ತಿದ್ದರೆಂಬುದು **ತಿರುಕ್ಕೋಟ್ಟಿಯೂರ್‌ನಂಬಿ ಕಿಡಾಂಬಿಯಾಚ್ಚಾರ್**ರವರ ಇತಿಹಾಸದಿಂದ ಸುವ್ಯಕ್ತವು. **ಕೃತಾಂಜಲಿಃ**-ಅಂಜಲಿಯನ್ನುಮಾಡಿದವನಾಗಿ, **ವೇಪಮಾನಃ**-ನಡಗುವವನಾಗಿ, **ಕಿರೀಟೀ**-ಕಿರೀಟಧಾರಿಯಾದ ಅರ್ಜುನನು, ಯಾವಾಗ ಪುನಃ ಪುನಃ ಭಗವಂತನ ಚರಣಾರವಿಂದದಲ್ಲಿ ನಮಸ್ಕಾರಮಾಡಿ ಶಿರಸ್ಸನ್ನಿಟ್ಟನೋ, ಆಗ ಈತನು ಕಿರೀಟಿಯೇ ಎಂಬ ಭಾವವು. **ಈ** ಪದ ಪ್ರಯೋಗದಿಂದ ಸಂಜಯರು ಧೃತರಾಷ್ಟ್ರನಿಗೆ ನಿನ್ನ ಮಗನಿಗೆ ಜಯವೆಲ್ಲಿಯದು? ಹಿಂದೆ ಇಂದ್ರನಿಂದ ಬಂದ ಕಿರೀಟದ ಮಾತು ಹಾಗಿರಲಿ, ಮುಂದಕ್ಕೆ ಅರ್ಜುನನೇ ಕಿರೀಟಿಯಾಗತಕ್ಕವನೆಂಬ ಧ್ವನ್ಯರ್ಥವು ಸೂಚಿತವು. **ಸಗದ್ಗದಂ**-ಗದ್ಗದಸ್ವರಯುಕ್ತನಾಗೋಣ ಹೇಗೋ ಹಾಗೆ, **ಆಹ**-ಹೇಳಿದನು. ಮೂಲದಲ್ಲಿರುವ ಕೃಷ್ಣಶಬ್ದದಿಂದ ತನ್ನ ದಯೆಗೆ ಪಾತ್ರರಾದ ಭಕ್ತರನ್ನು ಸಂಸಾರಬಂಧದಿಂದ ಆಕರ್ಷಿಸಿ, ರಕ್ಷಿಸುವನೆಂಬುದು ಸೂಚಿತವು. **ಕೃಷ್ಣ ಕೃಷ್ಣ ಮಹಾಬಾಹೋ ಭಕ್ತಾನಾಮಭಯಂಕರ । ತ್ವಮೇಕೋದಹ್ಯಮಾನಾನಾಮಪವರ್ಗೋಹಿ ಸಂಸೃತೇಃ** ಎಂಬ ಅರ್ಜುನನ ಸ್ತುತಿಯೇ ಇದೆ; ಮತ್ತು "**ಕೃಷ್ಣಃ ಕೃಷ್ಣಃ ಕೃಷ್ಣ ಇತ್ಯಂತಕಾಲೇ ಜಲ್ಪನ್ ಜೀವಿತಂ ಯೋ ಜಹಾತಿ । ಅದ್ಯಶ್ಯಬ್ದಃಕಲ್ಪ್ಯತೇ ತಸ್ಯ ಮುಕ್ತ್ಯೈ ವ್ರೀಳಾ ನಮ್ರಾತಿಷ್ಠತೋನ್ಯಾವೃಣಸ್ಥಾ**"॥ ಎಂಬ ಶ್ಲೋಕವು ಅನುಸಂಧೇಯವು. ಕೃಷ್ಣಶಬ್ದಕ್ಕೆ "**ಕೃಷಿರ್ಭೂವಾಚಕಶ್ಶಬ್ದೋಣಶ್ಚ ನಿರ್ವೃತಿ ವಾಚಕಃ । ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋಭವತಿ ಸಾತ್ವತಃ**" (ಭಾರ. ಉ. ೬೯-೫) ಎಂಬುದರಿಂದ, ಭೂಮಿಯ ಸುಖಗಳನ್ನು ಸಹ ಕೊಡುವವನು ಎಂಬರ್ಥವೂ ಹೇಳಲ್ಪಟ್ಟಿರುತ್ತದೆ, ಆದುದರಿಂದ ಐಹಿಕಾಮುಷ್ಮಿಕ ಸುಖದಾಯಕನು ಎಂದು ಹೇಳಿದಂತಾಯಿತು.

**ಮೂಲಕ್ಕೆ ಅರ್ಥವು:**—ಶ್ರೀ ಕೃಷ್ಣಭಗವಾನ್‌ರವರು "**ಉತ್ತಿಷ್ಠ**," "**ಯುಧ್ಯಸ್ವ**" "**ಭುಂಕ್ಷ್ವರಾಜ್ಯಂ ಸಮೃದ್ಧಂ**" "**ಮಾವ್ಯಥಿಷ್ಠಾಃ**" "**ಜೇತಾಸಿ ರಣೇ ಸಪತ್ನಾನ್**" ಎಂದು ಯಾವಾಗ ಹೇಳಿದರೋ, ಆಗ ಶ್ರೀ ಕೃಷ್ಣನಲ್ಲಿ ಪರತ್ವವನ್ನು ನಿಸ್ಸಂಶಯವಾಗಿ ಕಂಡು, **ಇಂತಹ** ಸುಸಮಯದಲ್ಲೇ ಅವರು ಯಾವಾಗಲೂ ನಿತ್ಯಮುಕ್ತರಿಂದ ಸೇರಿ, ದಿವ್ಯ ವೈಕುಂಠ

**ಅರ್ಜುನ ಉವಾಚ—**

**ಮೂ. ಸ್ಥಾನೇ ಹೃಷೀಕೇಶ ತವಪ್ರಕೀರ್ತ್ಯಾಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ, ಸರ್ವೇ ನಮಸ್ಯನ್ತಿಚ ಸಿದ್ಧಸಂಘಾಃ ॥**

ದಲ್ಲಿರುವವರಾಗಿ ಅವರಿಗೆ ಶಾಶ್ವತ ಸೇವೆಯನ್ನು ಕೊಡುವ ಪರರೂಪವನ್ನು ಪ್ರಾರ್ಥಿಸಿ ನೋಡಬೇಕೆಂಬ ಕುತೂಹಲಯುಕ್ತನಾಗಿ, ಅದಕ್ಕೆ ಪೂರ್ವಭಾವಿಯಾಗಿ ಕೃತಜ್ಞತಾಭಾವದಿಂದ ಸ್ತುತಿಸುವವನಾಗಿ, ಶ್ರೀ ಕೃಷ್ಣಭಗವಾನರವರು ಜಗದುಪಕೃತಿಗಾಗಿ ಮರ್ತ್ಯನಾಗಿ ಅವತರಿಸಿರುವದನ್ನು ತಿಳಿಯದೆ ಅನೇಕಾಪಚಾರಗಳಿಗೆ ಅನ್ಯಾಯವಾಗಿ ಹೇತುವಾದೆನೇ ಎಂಬ ಪರಿತಾಪದಿಂದ ಶರಣಾಗತನಾಗಿ ಅನಂತರ ತನ್ನ ಮನೋರಥವನ್ನು ಅರಿಕೆಮಾಡಿಕೊಳ್ಳುತ್ತಾನೆ.— ಸರ್ವೇಶ್ವರನ ಈ ದಿವ್ಯ ವಿಶ್ವರೂಪವನ್ನು ನೋಡಿ ತನಗೆ ವಿಶೇಷ ಅನುರಾಗರೂಪ ಭಕ್ತಿಯೂ, ಹರ್ಷವೂ, ಕೃತಜ್ಞತೆಯೂ ಉಂಟಾದುದನ್ನೂ ತಿಳಿಸಿ, ಅದರಂತೆಯೇ ಇತರ ಸಿದ್ಧರೂ ಸಾಧ್ಯರೂ ಮೊದಲಾದವರೂ ಈ ನೀನು ಅನುಗ್ರಹಿಸಿದ ರೂಪವನ್ನು ನೋಡಿ ಸ್ತುತಿಸಿ ಆನಂದಪಡುತ್ತಿದ್ದಾರೆ ನಿನ್ನಲ್ಲಿ ವಿಶೇಷಸ್ನೇಹವನ್ನೂ ತೋರಿಸಿರುತ್ತಾರೆ. ಪಾಪಿಗಳಾದ ರಾಕ್ಷಸರಾದರೋ ಭಯಪಟ್ಟು ದಿಕ್ಕುದಿಕ್ಕುಗಳಿಗೆ ಓಡಿಹೋಗುತ್ತಿದ್ದಾರೆ ಇದೇನೂ ವ್ಯತ್ಯಸ್ತವಾದುದಲ್ಲವು. ಯುಕ್ತವಾದುದೇ ಎಂದು ಅರ್ಜುನನು ಶ್ರೀ ಕೃಷ್ಣನನ್ನು ಕುರಿತು ಹೇಳುತ್ತಾನೆ.— **ಹೇ ಹೃಷೀಕೇಶ**-ಓ ಸರ್ವಪ್ರೇರಿತಾ ಆದುದರಿಂದ ಸರ್ವರ ಇಂದ್ರಿಯಗಳಿಗೂ ನಿಯಾಮಕನೇ, ನಾವೇ ಸ್ವತಂತ್ರಿಸಿ ಮಾಡತಕ್ಕ ಕರ್ತೃತ್ವವು ನಮಗುಂಟು ಎಂದು ಭ್ರಮಿಸಿದ್ದೆನು; ಈಗ ನೀನು **ನಿಮಿತ್ತ ಮಾತ್ರಂ ಭವಸವ್ಯಸಾಚಿ** ಎಂದು ಯಾವಾಗ ಉಪದೇಶಿಸಿದೆಯೋ, ನಮ್ಮಗಳ ಪಾರತಂತ್ರ್ಯವೂ, ನಿನ್ನ ಸರ್ವೇಂದ್ರಿಯ ಪ್ರೇರಕತ್ವವೂ ನನಗೆ ವೇದ್ಯವಾಯಿತೆಂದು ತಿಳಿಸುವದಕ್ಕಾಗಿ, ಇಲ್ಲಿ **ಹೃಷೀಕೇಶ** ಎಂಬ ಸಂಬೋಧನೆಯು; ಓ ಸರ್ವ ಜಗನ್ನಿಯಾಮಕನೇ, **ಸ್ಥಾನೇ**-ಇದೆಲ್ಲಾಯುಕ್ತವೇ ಸರಿ, ಎಂದು ಅರ್ಜುನನು ಹೇಳುತ್ತಾನೆ. ಯಾವುದು ಯುಕ್ತವೆಂದರೆ ತಿಳಿಸುತ್ತಾನೆ; **ಜಗತ್**-ಈಗ ನಿನ್ನನ್ನು ನೋಡುತ್ತಿರುವ ಸಾಧು ಲೋಕವು, **ತವಪ್ರಕೀರ್ತ್ಯಾ**-ನಿನ್ನ ಈ ಅದ್ಭುತ ರೂಪವನ್ನು ನೋಡಿ ವಿಶೇಷವಾಗಿ ಸ್ತೋತ್ರ ಮಾಡುವದರ ಮೂಲಕ, **ಪ್ರಹೃಷ್ಯತಿ**-ಅತ್ಯಂತ ಸಂತೋಷಪಡುತ್ತಲಿದೆ. **ಅನುರಜ್ಯತೇಚ**-ಭಕ್ತಿವಿಶ್ವಾಸಗಳಿಂದಲೂ ಕೂಡಿರುತ್ತದೆ. ಇಲ್ಲಿ ಪುನರುಕ್ತಿಯಲ್ಲವು. ಪ್ರಿಯವಾದವ್ಯಕ್ತಿಯನ್ನು ನೋಡಿದುದರ ಮೂಲಕ ಮನಸ್ಸಿಗೆ ಹರ್ಷವೂ, ಪುತ್ರಾದಿಗಳಿಗೆ ಲೋಕಪಿತಾವಿನಲ್ಲಿ ಅತೀವ ಸ್ನೇಹವೂ ಈ ಎರಡು ಪದಗಳಿಂದ ಹೇಳಲ್ಪಟ್ಟವು ಅದೇನು ಹಾಗೆ ಹೇಳುತ್ತೀಯೇ ಎಂದರೆ,— ನೋಡು, ಆ ಕಾರಣದಿಂದ, **ಸಿದ್ಧ ಸಂಘಾಃ** ಸಮಸ್ತ ಸಿದ್ಧರ ಸಂಘವೆಲ್ಲಾ, **ನಮಸ್ಯನ್ತಿ**-ಆ ಸಂತೋಷ ಮತ್ತು ವಿಶೇಷಾನುರಾಗ ಇವುಗಳಿಂದ ಪ್ರೇರಿತರಾಗಿ ನಿನಗೆ ನಮಸ್ಕಾರವನ್ನು ಮಾಡುತ್ತಾರೆ; ಹೀಗೆ ಸುಕೃತಿಗಳಿಗೆ ನೀನು ಹೃಷೀಕೇಶನಾಗಿ ಪ್ರೇರಿಸುತ್ತೀಯೆ. ಅದೇ ದುಷ್ಕೃತಿಗಳಿಗೆ, ಹೃಷೀಕೇಶನಾಗಿ ಏನು ಮಾಡುತ್ತೀಯೋ ಎಂದರೆ ಹೇಳುತ್ತಾನೆ. **ರಕ್ಷಾಂಸಿ**-ರಕ್ಷೋಗಣಗಳಾದರೋ **ಭೀತಾನಿ**-ಭಯಗ್ರಸ್ತರಾಗಿ, **ದಿಶೋದ್ರವಂತಿ**-ದಿಕ್ಕುಗಳನ್ನು ಕುರಿತು, ಸರ್ವಾಭೀಷ್ಟಪ್ರದನಾದ ನಿನ್ನಿಂದ ದೂರವಾಗಿ, ಓಡಿಹೋಗುತ್ತಾರೆ. ಇಲ್ಲಿ **ಸ್ಥಾನೇ**-ಎಂಬುದು ಅವ್ಯಯವು ಯುಕ್ತವೆಂಬ ಭಾವವು. ಲೋಕದಲ್ಲಿ ದುಷ್ಕೃತಿಗಳು,"**ನಮಾಂ ದುಷ್ಕೃತಿನೋ ಮೂಢಾ ಪ್ರಪದ್ಯನ್ತೇ ನರಾಧಮಾಃ**" (ಗೀ. ೭೦-೧೫) ಎಂದು ಹೇಳಿರುವಹಾಗೆ, ಭಗವಂತನಿಂದ ವಿಮುಖರಾಗಿ ಹೋಗುತ್ತಾರೆಂದೂ, ಆ ಕಾರಣದಿಂದ "**ತಾವದಾರ್ತಿಸ್ತಥಾವಾಂಛಾತಾವ**

**ಭಾ. ಸ್ಥಾನೇ-ಯುಕ್ತಮ್ ; ಯದೇತದ್ಯುದ್ಧದಿದೃಕ್ಷಯಾ ಗತ ಮಶೇಷದೇವ ಗಂಧರ್ವ ಸಿದ್ಧ ಯಕ್ಷ ವಿದ್ಯಾಧರ ಕಿನ್ನರ ಕಿಂಪುರುಷಾದಿಕಂ-ಜಗತ್, ತ್ವತ್ಪ್ರಸಾದಾತ್ ತ್ವಾಂ ಸರ್ವೇಶ್ವರ ಮವಲೋಕ್ಯ, ತವಪ್ರಕೀರ್ತ್ಯಾಸರ್ವಂ ಪ್ರಹೃಷ್ಯತಿ, ಅನುರಜ್ಯ ತೇಚ ; ಯಚ್ಚತ್ವಾಮವಲೋಕ್ಯ ರಕ್ಷಾಂಸಿ ಭೀತಾನಿ ಸರ್ವಾದಿಶಃ ಪ್ರದ್ರವನ್ತಿ ; ಸರ್ವೇ ಸಿದ್ಧಸಂಘಾಃ- ಸಿಧ್ಧಾದ್ಯನುಕೂಲ ಸಂಘಾಃ ನಮಸ್ಯಂತಿಚ ; ತದೇತತ್ಸರ್ವಂ ಯುಕ್ತಮಿತಿ ಪೂರ್ವೇಣ ಸಂಬಂಧಃ ||೩೬||**

---

**ನ್ಯೋಹ ಸ್ತಥಾಸುಖಂ । ಯಾವನ್ನಯಾತಿಶರಣಂ ತ್ವಾಮಶೇಷಾಘನಾಶನಂ "** ಎಂದೂ (ವಿ. ಪು. ೧. ೯-೭೫) ಹೇಳಿರುವಹಾಗೆ ಅವರಿಗೆ ಅನಿಷ್ಟ ಪ್ರಾಪ್ತಿಯಾಗುತ್ತದೆಂದೂ, **" ಚತುರ್ವಿಧಾ ಭಜನ್ತೇ ಮಾಂ ಜನಾಸ್ಸುಕೃತಿನೋಽರ್ಜುನ "** ಎಂದು ಹೇಳಿರುವಹಾಗೆ (ಗೀ. ೭-೧೬) ಸುಕೃತಿಗಳಿಗೆ ಎರಡು ಉಪಾಯಗಳಲ್ಲಿ ಯಾವುದಾದರೂ ಒಂದನ್ನು ಉಪಾಯದ ಮೂಲಕ ಸೇವಿಸಿ, ನಿನ್ನನ್ನು ಆಶ್ರಯಿಸುವವರಾಗಿ, ಶ್ರೇಯಃಪ್ರಾಪ್ತಿಯುಂಟಾಗುವದೆಂಬ ಶಾಸ್ತ್ರಾರ್ಥವೂ ಈ ಅರ್ಜುನವಾಕ್ಯದಿಂದ ವ್ಯಕ್ತವು ; ಹೀಗೆ ಈ ಎರಡು ಉಪಾಯಗಳೂ ಇಲ್ಲಿ ಬೋಧಿತವೆಂದು ತಿಳಿಯಲಿ ಎಂದು ಶ್ರೀ ಗೀತಾಚಾರ್ಯರು **" ಉಪಾಸತೇ "** ಎಂದು ಹೇಳದೇ **" ಭಜನ್ತೇ "** ಎಂದು ಇಲ್ಲಿ ಪ್ರಯೋಗಿಸಿರುತ್ತಾರೆ. ಆದುದರಿಂದಲೇ ಅರ್ಜುನನು **ಸ್ಥಾನೇ-**ಯುಕ್ತವೆಂದು ಹೇಳಿರುತ್ತಾನೆ ; **"ಶುಭಕೃಚ್ಛುಭಮಾಪ್ನೋತಿ ಪಾಪಕೃತ್ಪಾಪಮಶ್ನುತೇ । ವಿಭೀಷಣಸ್ಸುಖಂ ಪ್ರಾಪ್ತಃ ತ್ವಂ ಪ್ರಾಪ್ತಃ ಪಾಪಮೀದೃಶಮ್ "** ಮಂಗಳಕರವಾದ ಕಾರ್ಯದಲ್ಲಿ ಪ್ರವೃತ್ತನಾದ ವಿಭೀಷಣನು ಶ್ರೀರಾಮನನ್ನಾಶ್ರಯಿಸಿ, ನಿರತಿಶಯ ಸುಖವನ್ನು ಹೊಂದಿದನು. ದುಷ್ಕರ್ಮಿಯಾದ ನೀನು ಇಂತಹ ಪಾಪಫಲವನ್ನು ಹೊಂದಿದಿ, **ಎಂಬ** ರಾವಣನು ವಧಿಸಲ್ಪಟ್ಟು ಬಿದ್ದಿರುವ ಅವಸ್ಥೆಯನ್ನು ನೋಡಿ ಮಂಡೋದರಿಯ ಪ್ರಲಾಪವು ಅನುಸಂಧೇಯವು. ಹಾಗೆಯೇ **" ಸಾಧುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋ ಭವತಿ "** ಎಂಬ (ಬೃ. ೬-೪-೫) ಶ್ರುತಿವಾಕ್ಯವೂ ಇದೆ ಹೀಗೆ ಭಗವಂತನಾದ ನೀನು ಸಙ್ಕಲ್ಪಿಸಿರುವದು ನ್ಯಾಯವೇ ಎಂಬ ಭಾವವು. || ೩೬ ||

**ಭಾಷ್ಯಾರ್ಥವು :**—ಮುಂದೆ ತಾನು ನೋಡಿದ ವಿಷಯವು ಯುಕ್ತವಾದುದೆಂದು ಮೊದಲು ಪ್ರತಿಜ್ಞಾವಾಕ್ಯರೂಪದಲ್ಲಿ ಅರ್ಜುನನು ಈ **" ಸ್ಥಾನೇಹೃಷೀಕೇಶ "** ವೆಂಬಶ್ಲೋಕದಮೂಲಕವಾಗಿ, ತಿಳಿಸುತ್ತಾನೆ. **ಸ್ಥಾನೇ**-ಎಂದರೆ ಯುಕ್ತವು. ಸ್ಥಳವನ್ನು ನಿರ್ದೇಶಿಸಿ ಹೇಳುವ ಸಪ್ತಮ್ಯಂತಪದವಲ್ಲವೆಂದೂ ಹೇಳುವದಕ್ಕಾಗಿ **ಯುಕ್ತಂ**-ಎಂಬ ವ್ಯಾಖ್ಯಾನವು. ಯುಕ್ತವಾದುದು ಯಾವುದೆಂದು ತಿಳಿಸುತ್ತಾನೆ **ಯುದ್ಧದಿದೃಕ್ಷಯಾ**-ಯುದ್ಧವನ್ನು ನೋಡಬೇಕೆಂಬ ಅಪೇಕ್ಷೆಯಿಂದ, **ಆಗತಂ**-ಬಂದ **ಅಶೇಷ ಕಿಂಪುರುಷಾದಿಕಂ**-ಸಮಸ್ತರಾದ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಯಕ್ಷರೂ, ವಿದ್ಯಾಧರರೂ, ಕಿನ್ನರರೂ, ಕಿಂಪುರುಷರೇ ಮೊದಲಾದವರುಗಳನ್ನುಳ್ಳ, **ಜಗತ್**-ನೆರೆದಿರುವ ಸಮಸ್ತಜನವೂ, **ತ್ವತ್ಪ್ರಸಾದಾತ್**-ನಿನ್ನ ಅನುಗ್ರಹದ ದೆಶೆಯಿಂದ, **ತ್ವಾಂ ಸರ್ವೇಶ್ವರ ಮವಲೋಕ್ಯ**-ಸರ್ವೇಶ್ವರನಾದ ನಿನ್ನನ್ನು ಕಂಡು, **ತವ ಪ್ರಕೀರ್ತ್ಯಾ**-ನಿನ್ನನ್ನು ಸ್ತೋತ್ರಮಾಡುವದರ ಮೂಲಕ, **ಸರ್ವಂ ಪ್ರಹೃಷ್ಯತಿ**-ಈ ಸಮಸ್ತ ಸಮೂಹವೂ ಸಂತೋಷಗೊಂಡಿದೆ, ಮತ್ತು **ಅನುರಜ್ಯತೇಚ**-ನಿನ್ನಲ್ಲಿ ಅನುರಾಗಪೂರ್ವಕವಾದ ಭಕ್ತಿಯನ್ನು ಪ್ರದರ್ಶಿಸಿರುತ್ತದೆ, **ಯದೇತತ್**-ಎಂಬುದು ಯಾವುದುಂಟೋ, ಮತ್ತು **ತ್ವಾಮವಲೋಕ್ಯ**-ನಿನ್ನನ್ನು ನೋಡಿ, **ರಕ್ಷಾಂಸಿ**-ರಾಕ್ಷಸರೆಲ್ಲಾ, **ಭೀತಾನಿ**-ಭಯಪಟ್ಟವರಾಗಿ, **ಸರ್ವಾ**

**ಭಾ. ಅವ. ಯುಕ್ತತಾ ಮೇವೋಪಪಾದಯತಿ—**
**ಮೂ. ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್ಗರೀಯಸೇಬ್ರಹ್ಮಣೋಪ್ಯಾದಿಕರ್ತ್ರೇ?॥**

**ದಿಶಃ**-ಸಮಸ್ತ ದಿಕ್ಕುಗಳನ್ನು ಕುರಿತು, **ಪ್ರದ್ರವಂತಿ**-ಓಡಿಹೋಗುತ್ತಿರುವರು, **ಯಚ್ಚ**-ಯಾವುದುಂಟೋ, **ಸರ್ವೇ-ಸಿದ್ಧಸಂಘಾಃ**-ಸಮಸ್ತ ಸಿದ್ಧರ ಸಮೂಹವೂ, ಎಂದರೆ **ಸಿದ್ಧಾದಿ ಅನುಕೂಲಸಂಘಾಃ**-ಸಿದ್ಧರೇ ಮೊದಲಾದ ಅನುಕೂಲರಾಗಿ ವರ್ತಿಸುವವರ ಸಮೂಹವೆಲ್ಲಾ, ಇದರಿಂದ ದೇವಗಂಧರ್ವಾದಿಗಳೂ ಸಹ, ಉಪಲಕ್ಷಣರೀತ್ಯಾ ಹೇಳಲ್ಪಟ್ಟರೆಂಬ ಭಾವವು. **ನಮಸ್ಯಂತಿಚ**-ನಮಸ್ಕಾರವನ್ನು ಮಾಡುತ್ತಾರೆಂಬುದೂ, **ಯಚ್ಚ**-ಯಾವುದುಂಟೋ, **ತದೇತತ್**-ಇವೆಲ್ಲವೂ, **ಯುಕ್ತಮಿತಿ**-ಸಹಜವಾದುದೆಂದು, **ಪೂರ್ವೇಣಸಂಬಂಧಃ**-ಮೊದಲು ಹೇಳಿದ **ಸ್ಥಾನೇ**-ಯುಕ್ತವೆಂದು ಹೇಳಿದುದರೊಂದಿಗೆ ಅನ್ವಯವು. ಇಲ್ಲಿ ಜಗತ್ತೆಂಬ ಪ್ರಯೋಗಕ್ಕೆ, ಅಲ್ಲಿ ಯುದ್ಧಾವಲೋಕನದ ಆಶೆಯಿಂದ ಬಂದು ನೆರೆದಿರುವ ಲೋಕವೇ ಜಗಚ್ಛಬ್ದದಿಂದ ಉದ್ದೇಶ್ಯರೆಂದು ಭಾವಿಸಿ, **ಯುದ್ಧದಿದೃಕ್ಷಯಾ**-ಎಂದಾರಂಭಿಸಿ ವ್ಯಾಖ್ಯಾನವು. ಸಿದ್ಧಸಂಘವನ್ನು ಅನುಕೂಲರೆಂದು ವ್ಯಾಖ್ಯಾನ ಮಾಡಿರುವದರಿಂದ ರಕ್ಷಸ್ಸುಗಳು ಪ್ರತಿಕೂಲರೆಂದು ಹೇಳಲ್ಪಟ್ಟಿತು. ಸರ್ವೇಶ್ವರನ ಆಜ್ಞಾರೂಪವಿಧಿ ನಿಷೇಧವಾಕ್ಯಗಳಿಗೆ ಅನುಗುಣವಾಗಿ ನಡೆಯುವರು ಅನುಕೂಲರು ; ಕೃತ್ಯಾಕರಣ, ಅಕೃತ್ಯಕರಣಾದಿ ದೋಷಗಳ ಮೂಲಕ ಅವುಗಳಿಗೆ ವಿರುದ್ಧವಾಗಿ ನಡೆಯುವವರು ಪ್ರತಿಕೂಲರು, **ತವಪ್ರಕೀರ್ತ್ಯಾ**-ಎಂಬುದಕ್ಕೆ ನಿನ್ನ ಕೀರ್ತನವನ್ನಿತರರು ಮಾಡುವದನ್ನು ಕೇಳಿ ಎಂದು ಕೆಲವರು ಅರ್ಥಮಾಡಿರುತ್ತಾರೆ. ಈ ಅರ್ಥಕ್ಕಿಂತ, ಹರ್ಷಾನುರಾಗಗಳನ್ನು ಹೊಂದಿರುವ ಅಧಿಕಾರಿಗಳು ಮಾಡಿದ ನಿನ್ನ ಸ್ತೋತ್ರದಿಂದ ಎಂದರ್ಥ ಮಾಡುವದೇ ಸರಿಯಾದುದೆಂದು ತೋರುತ್ತದೆ. ಹರ್ಷವು ಏತರಿಂದ ಎಂದರೆ ಪ್ರಿಯನಾದ ಅತಿಥಿಯ ಲಾಭದಿಂದ ಹೇಗೋ ಹಾಗೆ ಈ ಶ್ಲೋಕವು ಶ್ರೀ ವಿಷ್ಣು ಪಂಜರಾದಿಗಳಲ್ಲಿರುವ ಪ್ರಸಿದ್ಧ ಮನ್ತ್ರವಾಗಿ ಅನುಕೂಲ ಪ್ರತಿಕೂಲರ ಪ್ರವೃತ್ತಿಗಳನ್ನು ತೋರುವಂತಾದ್ದು. ॥೩೬॥

**ಭಾಷ್ಯಾವತಾರಿಕೆಯ ಅರ್ಥವು :—ಯುಕ್ತತಾಮೇವ**-ಆ ಯುಕ್ತತೆಯನ್ನೇ, **ಉಪಪಾದಯತಿ**-ಸಮರ್ಥನೆಯನ್ನು ಮಾಡಿ ಹೇಳುತ್ತಾನೆ. ಹಿಂದಿನ ಶ್ಲೋಕದಲ್ಲಿ ಅನುಕೂಲರಾದವರೆಲ್ಲರೂ ನಿನ್ನನ್ನು ಸ್ತೋತ್ರಮಾಡಿ ನಮಸ್ಕಾರಾದಿಗಳನ್ನು ಮಾಡುವದು ಯುಕ್ತವೇ ಸರಿ ಎಂದು ಹೇಳಿದನು, ಆ ಯುಕ್ತತೆಗೆ ಕಾರಣವನ್ನು ಹೇಳಿ ತನ್ನ ಅಭಿಪ್ರಾಯವನ್ನೇ ಸಮರ್ಥನೆ ಮಾಡಿ ಹೇಳುತ್ತಾನೆ

**ಮೂಲಕ್ಕೆ ಅರ್ಥವು :—ಮಹಾತ್ಮನ್**-ಮಹತ್ತಾದ ಸ್ವರೂಪವುಳ್ಳವನೇ! **ಗರೀಯಸೇ-"ನತತ್ಸಮಶ್ಚಾಭ್ಯಧಿಕಶ್ಚ ಶ್ರೂಯತೇ"** ಎಂದು (ಶ್ವೇ. ೮) ಶ್ರುತಿಯಲ್ಲಿ ಹೇಳಿರುವ ಹಾಗೆ ಎಲ್ಲಾ ಆತ್ಮರುಗಳಿಗಿಂತ ಶ್ರೇಷ್ಠನಾದ, ಮತ್ತು **ಬ್ರಹ್ಮಣೋಪಿ**-ಪ್ರಥಮ ಕ್ಷೇತ್ರಜ್ಞನಾದ ಚತುರ್ಮುಖನಿಗೂ ಕೂಡ, **ಆದಿಕರ್ತ್ರೇ**-ಮೂಲಕರ್ತೃವಾದ, **ತೇ**-ನಿನಗೆ **ಕಸ್ಮಾತ್**-ಯಾವ ಕಾರಣದಿಂದ, **ನನಮೇರನ್**-ನಮಸ್ಕರಿಸದೇ ಇರುವರು ? ಎಂದರೆ ನಮಸ್ಕರಿಸದೆ ಇರಲು ಕಾರಣವೇ ಇಲ್ಲವು ಎಲ್ಲರಿಗಿಂತಲೂ ನೀನು ಸರ್ವೋತ್ಕೃಷ್ಟನು. ಚತುರ್ಮುಖನೇ ಮೊದಲಾದ ಎಲ್ಲಾ ಪ್ರಜೆಗಳಿಗೂ ಆದಿಯಾಗಿ ನಿನ್ನ ನಾಭೀಕಮಲದಿಂದ ಆತನನ್ನು ಸೃಷ್ಟಿಸಿರುತ್ತೀಯೇ. ಹೀಗಿರುವಾಗ ನೀನು ಚತುರ್ಮುಖಮೊದಲಾದ ಸರ್ವರಿಂದಲೂ ನಮಸ್ಕರಿಸಲ್ಪಡದೇ ಇರಲು ಕಾರಣವೇ ಇಲ್ಲವೆಂಬ ಭಾವವು. ಹಾಗಾದರೆ ರಕ್ಷಸ್ಸುಗಳು ನಿನ್ನನ್ನು ನೋಡಿ ಓಡಿ ಹೋದರಲ್ಲಾ. ರಾವಣನು " ನನಮೇಯಂ " ಎಂದು ಹೇಳಿ ನಮಸ್ಕರಿಸದೇ ಹೋದನಲ್ಲಾ

**ಭಾ. ಮಹಾತ್ಮನ್ ! ತೇ-ತುಭ್ಯಂ ಗರೀಯಸೇ ಬ್ರಹ್ಮಣೋ-ಹಿರಣ್ಯಗರ್ಭಸ್ಯಾಪಿ ಆದಿಭೂತಾಯ ಕರ್ತ್ರೇ, ಹಿರಣ್ಯಗರ್ಭಾದಯಃ ಕಸ್ಮಾದ್ಧೇತೋರ್ನನಮಸ್ಕುರ್ಯುಃ ?॥೩೭॥**

ಎಂದರೆ ನಿನ್ನಲ್ಲಿ ಗರ್ವಿಯಸ್ತ್ವ ಉಂಟೆಂಬ ಜ್ಞಾನ ಅವರಿಗಿಲ್ಲವು ; ಏಕೆಂದರೆ ನಿನ್ನ ಗರೀಯಸ್ತ್ವವನ್ನು ತಿಳಿದು ಅನುಗ್ರಹವನ್ನು ಹೊಂದುವದಕ್ಕಾಗಿ ನಮಸ್ಕರಿಸಲು, ಅವರ ದುಷ್ಕೃತವು, ಪ್ರತಿಬಂಧಕವಾಯಿತೆಂಬ ಭಾವವು. ಇನ್ನೊಂದು ಮುಖ್ಯ ವಿಷಯವನ್ನೂ **ಗರೀಯಸೇ ಬ್ರಹ್ಮಣೋಪ್ಯಾದಿಕರ್ತ್ರೇ**ಎಂಬ ಈ ಪ್ರಯೋಗದಿಂದ ಗ್ರಹಿಸಬಹುದು, ಏನೆಂದರೆ—ಲೋಕದಲ್ಲೆಲ್ಲಾ ಪರಮಾತ್ಮನೊಬ್ಬನೇ ಯಾಗಿ ಸರ್ವವೂ ಮಿಥ್ಯಾವಾದರೆ, ಒಬ್ಬನೇ ಇರುವಾಗ ಗರೀಯಸ್ತ್ವವೂ, ಇದನ್ನು ಬೋಧಿಸುವ ಈ ನಿಸ್ಸಮಾಭ್ಯಧಿಕ ಶ್ರುತಿಯೂ ಸಹ ಹೇಗೆ ಕೂಡುತ್ತವೆ ? ಗೀತೆಯೂ ಶ್ರುತಿಯೂ ಮಿಥ್ಯಾವಾದಕ್ಕೆ ಎಲ್ಲಿಯೂ ಆಸ್ಪದವನ್ನು ಕೊಟ್ಟಿಲ್ಲವು. ಇಲ್ಲಿ **ಬ್ರಹ್ಮಣೋಪಿ ಆದಿಕರ್ತ್ರಾ**-ಎಂಬಲ್ಲಿ ಅಪಿ ಶಬ್ದದಿಂದ ತೋರುವದೇನೆಂದರೆ, ಎಲ್ಲಾ ಕ್ಷೇತ್ರಜ್ಞರಿಗೂ ದೇಹಪ್ರಾಪ್ತಿಗೆ ಅವರವರುಗಳ ಪಿತಾವಾಗಿ ಕೊನೆಗೆ ಸರ್ವರಿಗೂ, ಪಿತಾಮಹನು ಚತುರ್ಮುಖನು ಕಾರಣನು ಎಂದು ಭಾವಿಸಿ, ಅವನಿಗೂ ಕೂಡ ಕರಣ ಕಳೇಬರಾದಿಗಳನ್ನುಂಟುಮಾಡಿ, ವೇದಗಳನ್ನು ಕಳುಹಿಸಿಕೊಟ್ಟ ಮೂಲಕರ್ತಾ ನೀನು ಎಂದು ಹೇಳಿದುದರಿಂದ, ಆದಿ ಮೂಲವು ನೀನು, ನಿನ್ನಿಂದಲೇ ಸರ್ವಭೂತಗಳೂ ಎಂಬ ಭಾವವನ್ನು ಈ ಅಪಿ ಶಬ್ದವು ಸೂಚಿಸುತ್ತದೆ. ಅವನಿಗೇ ಆದಿಕರ್ತ್ರಾ ಆದಮೇಲೆ, ಸರ್ವಕ್ಕೂ ಆದಿಕರ್ತಾ ಎಂದು ಹೇಳತಕ್ಕದ್ದೇನಿದೆ ಎಂಬ ಭಾವವು, ಅಪಿ ಶಬ್ದದಿಂದ ತೋರುತ್ತದೆ. ಇಲ್ಲಿ ಮಹಾತ್ಮನ್ ಎಂಬುದು ಪರಮಾತ್ಮನನ್ನು ಕುರಿತ ಸಂಬೋಧನೆಯು. ಭಾಗವತೋತ್ತಮರೂ ಮಹಾತ್ಮರು ಎಂದು ಹೇಳಲ್ಪಡುವರು. ಆಗ ಏನರ್ಥವೆಂದರೆ ಮಹತ್ತಾದ ಮನಸ್ಸುಳ್ಳವರೆಂಬುದು. ಅವರುಗಳ ಮನಸ್ಸು ವಿಮಲವಾಗಿ ಮಹತ್ತಾದುದು ಎಂಬರ್ಥವು. ಹಿಂದಿನ ಶ್ಲೋಕದಲ್ಲಿ ಅನುಕೂಲರೂ ಮತ್ತು ಪ್ರತಿಕೂಲರೂ ಹೀಗೆ ಎರಡುವಿಧ ಜನಗಳ ಪ್ರವೃತ್ತಿಯೂ ಹೇಳಿರುವದರಿಂದ, ಸುಲಭವಾಗಿ ಈ ಶ್ಲೋಕಾರ್ಥದಲ್ಲಿ ಇಬ್ಬರಿಗೂ ಅನ್ವಯಿಸಿ ಸಮರ್ಥನೆಮಾಡಿ ಹೇಳಬಹುದು—ಹೇಗೆಂದರೆ ಮೇಲೆ ಉಪಪಾದಿಸಿದ ಅರ್ಥವು ಅನುಕೂಲರಿಗೆ ಆಯಿತು ಪ್ರತಿಕೂಲರಿಗೆ ಅನ್ವಯಿಸುವಾಗ ಈ ಪ್ರತಿಕೂಲರು ಚತುರ್ಮುಖನಿಗೂ ಆದಿಕರ್ತಾವಾಗಿ, **ಗರೀಯಸೇಪಿ**-ಸರ್ವಶ್ರೇಷ್ಠನಾಗಿದ್ದರೂ ಕೂಡ, **ತೇ**-ನಿನಗೆ, **ಕಸ್ಮಾತ್**-ಯಾವಕಾರಣದಿಂದ, **ನನಮೇರನ್**-ನಮಸ್ಕರಿಸುವದಿಲ್ಲವೋ, ಎಂದರೆ ಅವರ ದುಷ್ಕೃತವು ಅಷ್ಟು ಪ್ರಬಲವು, ಹಾಗೆ ನಮಸ್ಕರಿಸದೆ ಅವರುಗಳು ಪ್ರತಿಕೂಲರಾದುದರಿಂದ ದಿಕ್ಕು ದಿಕ್ಕುಗಳಿಗೆ ಓಡಿ ಹೋದರೆಂಬ ಭಾವವೂ ತೋರಿಬರುತ್ತದೆ ದುರ್ಯೋಧನನಹಾಗೆ ರಾವಣನಿಗೂ ಬುದ್ಧಿವಾದವನ್ನು ಹೇಳದೇ ಇರುವವರೇ ಇಲ್ಲವು. ಸೀತೆಯು **ಪ್ರಸಾದಯಸ್ವ ತಂ ಚೈನಂ ಶರಣಾಗತವತ್ಸಲಂ**" ಎಂದು ಹೇಳಿದರೂ, ಕೇಳಲಿಲ್ಲವು "**ದ್ವಿಧಾಭಜ್ಯೇಯ ಮಪ್ಯೇವಂ ನನಮೇಯಂತು ಕಸ್ಯಚಿತ್**" ಎರಡಾಗಿ ತನ್ನನ್ನು ಕತ್ತರಿಸಿದರೂ ತಾನು ಯಾರಿಗೂ ನಮಸ್ಕರಿಸುವನಲ್ಲವು ಎಂದು ಪಾಪನಿಶ್ಚಯನಾದ ರಾಕ್ಷಸನು ಹೇಳಿಕೊಂಡಿರುತ್ತಾನೆ. (ರಾ. ಯು. ೩೬-೧೧) ಮಹಾ ಕವಿಯ ಚಮತ್ಕಾರದಿಂದ ಎರಡುವಿಧ ಪ್ರವೃತ್ತಿಗಳಿಗೂ ಹೇತುವನ್ನು ಈ ಅರ್ಧ ಶ್ಲೋಕದಿಂದ ಹೇಳಿರುತ್ತಾರೆ.

**ಭಾಷ್ಯಾರ್ಥವು :—ಹೇ ಮಹಾತ್ಮನ್**-ಓ ಮಹತ್ತಾದ ಸ್ವರೂಪವುಳ್ಳವನೇ, **ತೇ**-ಎಂದರೆ **ತುಭ್ಯಂ**, ಇದು ಪ್ರಥಮಾ ಬಹುವಚನವಲ್ಲವೆಂಬ ತಾತ್ಪರ್ಯದಿಂದ, ನಿನಗೆ ಎಂಬರ್ಥವು, ಆ ನೀನು ಎಂತವನೆಂದರೆ **ಗರೀಯಸೇ**-ಪರಾವರರಿಗೂ ಈಶನಾಗಿ ಹೀಗೆ ಸರ್ವೋತ್ಕೃಷ್ಟನೇ,

**ಮೂ. ಅನನ್ತ ದೇವೇಶ ಜಗನ್ನಿವಾಸ, ತ್ವಮಕ್ಷರಂ ಸದಸತ್ತತ್ಪರಂ ಯತ್ ॥೩೮॥**
**ತ್ವಮಾದಿದೇವಃ ಪುರುಷಃ ಪುರಾಣಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ॥**

---

ಅದು ಹೇಗೆ ಎಂದರೆ, **ಬ್ರಹ್ಮಣಃ** ಎಂದರೆ **ಹಿರಣ್ಯಗರ್ಭಸ್ಯಾಪಿ-** ಎಲ್ಲಾ ಕ್ಷೇತ್ರಜ್ಞರಿಗೂ ಮೂಲಪುರುಷನು ಚತುರ್ಮುಖನು, ಅಂತವನಿಗೂ ಕೂಡ, **ಆದಿಭೂತಾಯ ಕರ್ತ್ರೇ**-ಮೂಲ ಭೂತನಾಗಿ ಸರ್ವಕ್ಕೂ ಕರ್ತಾವಾದ. ಈ ಗ್ರಂಥದಲ್ಲೇ ಬ್ರಹ್ಮಶಬ್ದವು ನಾಲ್ಕು ಅರ್ಥಗಳಲ್ಲಿ ಉಪಯೋಗಿಸಿರುವದರಿಂದ ಇಲ್ಲಿ ಚತುರ್ಮುಖನು ಉದ್ದೇಶ್ಯನೆಂದು ಹಿರಣ್ಯಗರ್ಭನೆಂದು ವ್ಯಾಖ್ಯಾನವು. **ತೇ**-ನಿನಗೆ ಎಂಬ ಭಾವವು, ಹಿರಣ್ಯಗರ್ಭಾದಿಗಳು ಈ ಶ್ಲೋಕದಲ್ಲಿ ಕರ್ತೃ ಪದವಾಗಿ ಹೇಳದಿದ್ದರೂ, ಅಲ್ಲಿ ಯುದ್ಧ ದರ್ಶನ ಕಾಂಕ್ಷೆಯಿಂದ ಬಂದ ಚತುರ್ಮುಖಾದಿಗಳು ಎಂದು ಕರ್ತೃಪದವನ್ನಿಟ್ಟುಕೊಳ್ಳಬೇಕೆಂದು **ಹಿರಣ್ಯ ಗರ್ಭಾದಯಃ**-ಎಂಬ ವ್ಯಾಖ್ಯಾನವು **ಕಸ್ಮಾದ್ಧೇತೋಃ**-ಯಾವ ಕಾರಣದಿಂದ, **ನನಮಸ್ಕುರ್ಯುಃ**-ನಮಸ್ಕರಿಸದೇ ಇರುವರು ? ಎಂದರೆ ನಮಸ್ಕರಿಸಿಯೇ ನಮಸ್ಕರಿಸುವರು ಎಂಬರ್ಥವು. ಹೀಗೆ ನಾನಾವಿಧದಿಂದಲೂ ಪರಮೋಪಕಾರಕನಾಗಿ, ಸಮಸ್ತಕ್ಕೂ ಕಾರಣಭೂತನಾಗಿರುವ ನಿನ್ನನ್ನು ಪ್ರಾಜ್ಞರು ನಮಸ್ಕರಿಸದೇ ಇರುತ್ತಾರೆಯೋ ? ಎಂದಿಗೂ ಇಲ್ಲವೆಂಬ ಭಾವವು ತೋರಿಬರುತ್ತದೆ. ಶ್ರೀ ಕೃಷ್ಣನು ಹೇಗೆ ಸರ್ವಶ್ರೇಷ್ಠನೆಂಬುದನ್ನು ಮುಂದಿನ ಏಳೂವರೆ ಶ್ಲೋಕಗಳಿಂದ ತೋರಿಸಿ, ಇಂತಹ ಅತ್ಯದ್ಭುತ ಮಹಿಮೆಗಳನ್ನುಳ್ಳವನಾಗಿ, ಪರಮೋಪಕಾರಿಯಾಗಿ ಪರಮ ಹಿತೈಷಿಯಾದವನನ್ನು ಯಾರಾದರೂ ಶರಣುಹೊಂದಿ ನಮಸ್ಕರಿಸದೆ ಇರುತ್ತಾರೆಯೋ ? ಆದುದರಿಂದ ನೀನು **ನಿಸ್ಸಮಾಭ್ಯಧಿಕನು** ಎಂದು ಇನ್ನೊಂದುಸಲ ಅನುವಾದಮಾಡಿ ಹೇಳಿ, ಪ್ರಸಾದಯೇ ಎಂದು ಅರ್ಜುನನು ನಮಸ್ಕರಿಸುತ್ತಾನೆ.

**ಮೂಲಕ್ಕೆ ಅರ್ಥವು :—ಅನನ್ತ**-" **ಅನನ್ತಮವ್ಯಯಂ ಕವಿಂ** " ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ದೇಶಕಾಲವಸ್ತು ಪರಿಚ್ಛೇದ ರಹಿತನೇ ! **ದೇವೇಶ**-ಓ ಬ್ರಹ್ಮರುದ್ರಾದಿ ದೇವತೆಗಳಿಗೂ ಸ್ವಾಮಿಯೇ ! **ಜಗನ್ನಿವಾಸ**-ಜಗತ್ತನ್ನೇ ನಿವಾಸವಾಗಿ ಉಳ್ಳವನೇ ! ಹಿಂದೆ ೨೫ ನೆಯ ಶ್ಲೋಕದಲ್ಲಿ ಜಗತ್ತಿಗೆಲ್ಲಾ ನಿವಾಸಭೂತನೆಂದಾಗಲಿ ಅಥವಾ ಜಗತ್ತನ್ನೆಲ್ಲಾ ನಿವಾಸವಾಗಿ ಉಳ್ಳವನೆಂದಾಗಲಿ ಅರ್ಥಮಾಡಬಹುದೆಂದು ತೋರಿಸಿರುತ್ತದೆ, ಇದರಿಂದ ಸರ್ವಕ್ಕೂ ಆಧಾರಭೂತನೆಂದೂ ಆತ್ಮಾವೆಂದೂ ಹೇಳಿದಂತಾಯಿತು. **ತ್ವ ಮಕ್ಷರಂ**-ನೀನೇ ಶ್ರುತಿಗಳಲ್ಲಿ ಅಕ್ಷರ ಶಬ್ದವಾಚ್ಯನು ಅಥವಾ ಅಕ್ಷರವೆಂದರೆ ಜೀವಾತ್ಮತತ್ವವು, ಸಾಮಾನಾಧಿಕರಣ್ಯದಿಂದ ತದಾತ್ಮಕನೇ ! ಎಂಬ ಭಾವವು. **ಸತ್**-ಸೃಷ್ಟ್ಯುನ್ಮುಖನಾಗಿ ಸೂಕ್ಷ್ಮ ಚಿದಚಿಚ್ಛರೀರಕನಾಗಿದ್ದು ಸ್ಥೂಲಭಾವವನ್ನು ಹೊಂದುವವನೂ, **ತ್ವಂ**-ನೀನೇ ; ಸೃಷ್ಟ್ಯುನ್ಮುಖನಲ್ಲವೆ ಸೂಕ್ಷ್ಮ ಚಿದಚಿದ್ವಸ್ತುಯುಕ್ತನಾಗಿ **ಅಸತ್**-ಅಸಚ್ಛಬ್ದವಾಚ್ಯನೂ, **ತ್ವಂ**-ನೀನೇ ; ಅಥವಾ ಸದಸತ್ತು ನೀನೇ ಎಂದರೆ ಕಾರ್ಯ ಕಾರಣರೂಪದಲ್ಲಿ ಪ್ರಕೃತ್ಯಾತ್ಮಕನೂ ನೀನೇ **ಯತ್**-ಯಾವುದು, **ತತ್ಪರಂ**-ಆ ಚಿದ ಚಿತ್ತುಗಳಿಗೂ ಶ್ರೇಷ್ಠವೋ, **ತತ್**-ಅದೇ, **ತ್ವಂ**-ನೀನು, **ಆದಿದೇವಃ**-ಆದುದರಿಂದ ಎಲ್ಲಾ ದೇವತೆಗಳಿಗೂ ನೀನು ಮೂಲಕಾರಣನು, **ಪುರುಷಃ**-" **ಪುರುಷಏವೇದಂ ಸರ್ವಂ** "ಎಂದು ಹೇಳಿರುವಹಾಗೆ ಜಗತ್ತೆಲ್ಲಾ ಸ್ತ್ರೀಪ್ರಾಯವಾಗಿ, ಅವಕ್ಕೆಲ್ಲಾ ಭರ್ತಾವಾಗಿ ರಕ್ಷಕನಾಗಿ ಶ್ರುತಿಯಲ್ಲಿ ಪುರುಷಶಬ್ದವಾಚ್ಯನಾಗಿರುವವನು, ಅಥವಾ ಚೇತನರಿಗೆ ವಿಶೇಷವಾಗಿ ಪುರುಷಾರ್ಥಗಳದಾಯಕನು, ನೀನೇ ; **ಪುರಾಣಃ**-ಅನಾದಿಯಾಗಿರುವವನು ನೀನೇ ; **ಅಸ್ಯ ವಿಶ್ವಸ್ಯ**-ಈ ವಿಶ್ವಕ್ಕೆಲ್ಲಾ, **ಪರಂ ನಿಧಾನಂ**-ಆತ್ಮಾವಾಗಿರುವದರಿಂದ, ಶ್ರೇಷ್ಠನಾಗಿ ಆಧಾರ

**ಭಾ. ಅನನ್ತದೇವೇಶ ಜಗನ್ನಿವಾಸ ತ್ವಮೇವಾಕ್ಷರಂ-ನಕ್ಷರತೀತ್ಯಕ್ಷರಂ ಜೀವಾತ್ಮತತ್ತ್ವಂ (೧)"ನಜಾಯತೇ ಮ್ರಿಯತೇವಾ ವಿಪಶ್ಚಿತ್" ಇತ್ಯಾದಿ ಶ್ರುತಿಸಿದ್ಧೋಜೀವಾತ್ಮಾ ಹಿ ನಕ್ಷರತಿ; ಸದಸಚ್ಚತ್ವಮೇವ-ಸದಸಚ್ಛಬ್ದ ನಿರ್ದಿಷ್ಟಂ ಕಾರ್ಯಕಾರಣಭಾವೇನಾ**

ವಾಗಿರುವವನೂ ನೀನೇ, ಹೀಗೆ ಸ್ತೋತ್ರಮಾಡುತ್ತಾನೆ **ಅಕ್ಷರಃ. ಆದಿದೇವಃ, ಪುರುಷಃ, ಪುರಾಣಃ, ಆದಿದೇವಃ, ಪರಂ ನಿಧಾನಂ** ಎಂಬೀಶಬ್ದಗಳೆಲ್ಲಾ ಹಿಂದೆಯೂ ಪ್ರಯೋಗಿಸಲ್ಪಟ್ಟಿರುತ್ತವೆ. ಇದೇ ಅಧ್ಯಾಯದ ೧೮ ನೆಯ ಶ್ಲೋಕದಲ್ಲಿ ಅಕ್ಷರಂ, ವಿಶ್ವಸ್ಯ ಪರಂ, ನಿಧಾನಂ, ಸನಾತನಃ ಪುರಾಣಃ, ಪುರುಷಃ ಎಂದು ಇರುವದರಿಂದ, ಅವುಗಳ ಅನುವಾದವೆಂದು ಭಾವಿಸತಕ್ಕದ್ದು. **ದೇವೇಶ ಜಗನ್ನಿವಾಸ** ಎಂಬ ಪ್ರಯೋಗಗಳು ಹಿಂದೆ ೨೫ ನೆಯ ಶ್ಲೋಕದಲ್ಲಿವೆ. ಅಕ್ಷರಶಬ್ದವಾಚ್ಯನು ಪರಮಾತ್ಮನೆಂದು **"ಅಕ್ಷರಮಮ್ಬರಾನ್ತಧೃತೇಃ"** ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. **"ಅಕ್ಷರಂ ಪರಮಂ ಪ್ರಭುಮ್"** ಎಂದು ಶ್ರುತಿವಾಕ್ಯವಿರುತ್ತದೆ. ಅಕ್ಷರ ಶಬ್ದವು ಪ್ರಧಾನವನ್ನೂ, ಪ್ರಕೃತಿವಿಯುಕ್ತಜೀವಾತ್ಮನನ್ನೂ, ಪರಮಾತ್ಮನನ್ನೂ ಬೋಧಿಸುತ್ತದೆ. ಗೀತಾ ೮. ೨೧ ನೆಯ ಶ್ಲೋಕದಲ್ಲೂ, ಗೀ. ೧೫-೧೬ ನೆಯ ಶ್ಲೋಕದಲ್ಲೂ ಅಕ್ಷರ ಶಬ್ದವು ಪ್ರಕೃತಿ ವಿಯುಕ್ತ ಜೀವಾತ್ಮನನ್ನು ಬೋಧಿಸುತ್ತದೆ. **"ಅಮೃತಾಕ್ಷರಂ ಹರಃ"** ಎಂಬ (ಶ್ವೇ. ೧-೧೦) ಶ್ರುತಿಯು ಜೀವಾತ್ಮನನ್ನೇ ಬೋಧಿಸುತ್ತದೆ. ಇಲ್ಲಿಯಾದರೋ ಪರಮಾತ್ಮನು ಹೇಳಲ್ಪಟ್ಟನು. ಪ್ರಮಾಣವು—**ಏತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತಿ ಅಸ್ಥೂಲಮನಣು ಅಹ್ರಸ್ವಂ" "ಅಥ ಪರಾ ಯಯಾ ತದಕ್ಷರ ಮಧಿಗಮ್ಯತೇ" "ಅಕ್ಷರಾತ್ಸಂಭವತೀಹ ವಿಶ್ವಮ್"** (ಮುಂ. ೧ ೧ ೯, ೫, ೭.) ಸಚ್ಛಬ್ದಕ್ಕೆ ಶ್ರುತ್ಯುದಾಹರಣವು.—**"ಸದೇವ ಸೋಮ್ಯೇದಮಗ್ರಆಸೀತ್ ಏಕಮೇವಾದ್ವಿತೀಯಮ್"** (ಛಾಂ. ೬ ೨.೧) ಸೃಷ್ಟ್ಯುನ್ಮುಖನಾದ ಪರಬ್ರಹ್ಮನು ಸಚ್ಛಬ್ದವಾಚ್ಯನು. **"ಅಸದ್ವಾಇದಮಗ್ರ ಆಸೀತ್ ತತೋ ವೈ ಸದಜಾಯತ"** (ತೈ. ಆನಂ. ೭. ೧) ಸೃಷ್ಟ್ಯುನ್ಮುಖನಲ್ಲದೆ ಪ್ರಳಯ ದಶೆಯಲ್ಲಿರುವ ಪರಬ್ರಹ್ಮನು **"ಅಸತ್"** ಶಬ್ದವಾಚ್ಯನು. ಪುರುಷ ಶಬ್ದವು ಪುರುಷ ಸೂಕ್ತದಲ್ಲಿ ಉಪಪಾದಿತವು.—**"ಪುರುಷಂ ಮಹಾನ್ತಮ್"**.

**ಭಾಷ್ಯಾರ್ಥವು:—ಹೇ ಅನಂತ ದೇವೇಶ ಜಗನ್ನಿವಾಸನೇ**-ಇವುಗಳಿಗೆ ಅರ್ಥವು ಅನೇಕ ಕಡೆಗಳಲ್ಲಿ ಉಪಪಾದಿಸಲ್ಪಟ್ಟಿರುತ್ತದೆ, ಆದುದರಿಂದ ಶ್ರೀ ಯತಿವರ್ಯರು ಭಾಷ್ಯವನ್ನು ಬರೆಯಲಿಲ್ಲವು. **ಜಗನ್ನಿವಾಸ**-ಎಂದರೆ ಜಗತ್ತು ಯಾರಿಗೆ ಆವಾಸವೋ ಅವನು ಎಂದಾಗಲಿ, ಅಥವಾ ಜಗತ್ತಿಗೆ ನಿವಾಸರೂಪನು ಎಂದಾಗಲಿ, ಅರ್ಥಮಾಡಬಹುದು. ಗೀತೆಯಲ್ಲೇ ಅಕ್ಷರ ಶಬ್ದವು ಪ್ರಕೃತಿ ವಿಯುಕ್ತನಾದ ಜೀವತತ್ವ, ಪರಬ್ರಹ್ಮ ಮೊದಲಾದವುಗಳನ್ನು ಬೋಧಿಸುತ್ತದೆ, ಇಲ್ಲಿ ಜೀವತತ್ತ್ವವು ಹೇಳಲ್ಪಟ್ಟಿತೆಂದು ವ್ಯಾಖ್ಯಾನಮಾಡುತ್ತಾರೆ.—**ತ್ವಮೇವಾಕ್ಷರಮ್**-ನೀನೇ ಜೀವಾತ್ಮಶರೀರಕನು, **ನಕ್ಷರತೀತ್ಯಕ್ಷರಂ**-ಯಾವುದಕ್ಕೆ ಸ್ವರೂಪತಃ ವಿಕಾರವಿಲ್ಲವೋ ಅದು ಅಕ್ಷರವೆನಿಸುತ್ತದೆ, ಆದುದರಿಂದ ಜೀವಾತ್ಮತತ್ವವು. ಏಕೆಂದರೆ, ಶ್ರುತಿ ಪ್ರಮಾಣವನ್ನು ಬೋಧಿಸುತ್ತಾರೆ—**ಈ ವಿಪಶ್ಚಿತ್**-ಜ್ಞಾನಸ್ವರೂಪನಾಗಿ ಜ್ಞಾನಗುಣಕನಾಗಿರುವ **ಈ** ಜೀವಾತ್ಮನು, **ನಜಾಯತೇ**-ಹುಟ್ಟುವದೂ ಇಲ್ಲವು ಎಂದರೆ ಆತನಿಗೆ **ಉತ್ಪತ್ತಿ ಇಲ್ಲವು, ನಮ್ರಿಯತೇವಾ**-ಸಾಯುವದೂ ಇಲ್ಲವು ಎಂದರೆ ವಿನಾಶವೂ ಇಲ್ಲವು, ಎಂದರೆ ಅನಾದಿಯಾಗಿ ನಿತ್ಯವಾಗಿ ಇರುತ್ತಾನೆಂಬ ಭಾವವು" **ಇತ್ಯಾದಿ ಶ್ರುತಿಸಿದ್ಧ**-ಇದೇ ಮೊದಲಾದ.

(೧) ಕಠ. ೧.೨.೧೮

**ಭಾ. ವಸ್ಥಿತಂ ಪ್ರಕೃತಿತತ್ವಂ, ನಾಮರೂಪವಿಭಾಗವತ್ತಯಾ ಕಾರ್ಯಾವಸ್ಥಂ ಸಚ್ಛಬ್ದನಿರ್ದಿಷ್ಟಂ; ತದನರ್ಹತಯಾ ಕಾರಣಾವಸ್ಥಂ ಅಸಚ್ಛಬ್ದ ನಿರ್ದಿಷ್ಟಂಚ ತ್ವಮೇವ। ತತ್ಪರಂ ಯತ್-ತಸ್ಮಾತ್ಪ್ರಕೃತೇಃ, ಪ್ರಕೃತಿ ಸಂಬಂಧಿನಶ್ಚ ಜೀವಾತ್ಮನಃ, ಪರಮನ್ಯನ್ಮುಕ್ತಾತ್ಮತತ್ವಂ ಯತ್, ತದಪಿತ್ವಮೇವ। ಅತಸ್ತ್ವಮಾದಿದೇವಃಪುರುಷಃ ಪುರಾಣಃ। ತ್ವಮಸ್ಯ ವಿಶ್ವಸ್ಯಪರಂ ನಿಧಾನಂ-ನಿಧೀಯತೇತ್ವಯಿ ವಿಶ್ವಮಿತಿ, ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ; ವಿಶ್ವಸ್ಯ ಶರೀರಭೂತಸ್ಯಾತ್ಮತಯಾ ಪರಮಾಧಾರಭೂತ ಸ್ತ್ವಮೇವೇತ್ಯರ್ಥಃ ॥೩೮॥**

---

ಶ್ರುತಿ ಪ್ರಮಾಣದಿಂದ ಸ್ಥಾಪಿಸಲ್ಪಟ್ಟ, **ಜೀವಾತ್ಮಾಹಿ ನಕ್ಷರತಿ**-ಜೀವಾತ್ಮನು ತಾನೇ ವಿನಾಶವಿಲ್ಲದವನು ? ಜೀವ ತತ್ವಕ್ಕೆ ಸ್ವರೂಪವಿಕಾರವಿಲ್ಲವೆಂದು, ತೋರಿಸುವದಕ್ಕಾಗಿ ಕಠ ಶ್ರುತಿಯನ್ನು ಉದಾಹರಿಸಿದರು. ಈ ಪೂರಾ ಶ್ರುತಿವಾಕ್ಯಕ್ಕೆ ೧೧೨ ನೆಯ ಪುಟವನ್ನು **ನೋಡಿ.** ಹೀಗೆ ಅರ್ಥಮಾಡಲು ಕಾರಣವೇನು ? ಸುಲಭವಾಗಿ ಅಕ್ಷರ ಶಬ್ದದಿಂದ ಪರಮಾತ್ಮನೆಂದೇ ಅರ್ಥಮಾಡಬಹುದಲ್ಲಾ ? ಎಂದರೆ, ಮುಂದೆ ಸದಸತ್ತೂ ನೀನೇ ಎಂಬೂ ಪ್ರಕೃತಿಗೆ ಆತ್ಮಾವೂ ನೀನೇ ಎಂದು ಹೇಳಿ, ಮುಂದೆ ಈ ಎರಡು ಅವರ ತತ್ವಗಳಿಗಿಂತಲೂ " **ತತ್ಪರಂ ಯತ್** " ಎಂದು ಶ್ರೇಷ್ಠತೆಯನ್ನು ಹೇಳಿರುವದರಿಂದಲೂ ಹಾಗೆ ವ್ಯಾಖ್ಯಾನವು ಅದೂ ಅಲ್ಲದೆ ಹಿಂದೆ ೧೮ ನೆಯ ಶ್ಲೋಕದಲ್ಲೂ " **ತ್ವಮಕ್ಷರಂ ಪರಮಂ ವೇದಿತವ್ಯಂ** " ಎಂಬಲ್ಲಿ ಅಕ್ಷರ ಶಬ್ದಕ್ಕೆ ಮುಂಡಕೋಪನಿಷತ್ಪ್ರಕಾರ ಪರಮಾತ್ಮ ವಶವಾಗಿ ಅರ್ಥಮಾಡಿದುವರಿಂದ ಪುನರುಕ್ತಿ ನಿವಾರಣಕ್ಕಾಗಿ ಜೀವಾತ್ಮವಶವಾಗಿ ಅರ್ಥವು ಹೇಳಲ್ಪಟ್ಟಿರುತ್ತದೆ. **ಸದಸಚ್ಚ ತ್ವಮೇವ**-ಕಾರ್ಯಕಾರಣರೂಪದಲ್ಲಿ ಸ್ಥೂಲಸೂಕ್ಷ್ಮರೂಪದಲ್ಲಿರುವ ಪ್ರಕೃತಿಯೂ ನೀನೇ ಎಂದರೆ ಪ್ರಕೃತ್ಯಾತ್ಮಕನೂ ನೀನೇ ಎಂಬ ಭಾವವು. ಅದನ್ನೇ ಮುಂದೆ ಉಪಪಾದಿಸುತ್ತಾರೆ. ಸದಸಚ್ಛಬ್ದಗಳಿಂದ ನಿರ್ದೇಶಿಸಲ್ಪಟ್ಟಿದುದು, **ಕಾರ್ಯಕಾರಣ ಭಾವೇನ**-ಜಗತ್ತಿನ ಕಾರ್ಯರೂಪದಿಂದಲೂ ಕಾರಣರೂಪದಿಂದಲೂ, **ಅವಸ್ಥಿತಂ**-ಇರುವ, ಪ್ರಕೃತಿತತ್ವವು, ಅದನ್ನೇ ವ್ಯಕ್ತಪಡಿಸಿ ಹೇಳುತ್ತಾರೆ. **ನಾಮರೂಪ ವಿಭಾಗವತ್ತಯಾ**-ವ್ಯವಹಾರಕ್ಕೆ ಯೋಗ್ಯವಾಗುವಹಾಗೆ ನಾಮರೂಪವಿಭಾಗಗಳನ್ನು ಹೊಂದುವದರ ಮೂಲಕ **ಕಾರ್ಯಾವಸ್ಥಂ**-ಕಾರ್ಯಾವಸ್ಥೆಯನ್ನು ಹೊಂದಿದ ಪ್ರಕೃತಿಯು, **ಸಚ್ಛಬ್ದನಿರ್ದಿಷ್ಟಂ**-" **ಸತ್** " ಎಂಬ ಶಬ್ದದಿಂದ ನಿರ್ದೇಶಿಸಲ್ಪಟ್ಟಿದುದು, **ತದನರ್ಹತಯಾ** ಹಾಗೆ ನಾಮರೂಪಗಳನ್ನು ಹೊಂದಲು ಯೋಗ್ಯತೆಯಿಲ್ಲದುದರಿಂದ, **ಕಾರಣಾವಸ್ಥಂ**-ಜಗತ್ತಿಗೆ ಕಾರಣಭೂತವಾಗಿರುವ ಅವಸ್ಥೆಯನ್ನು ಹೊಂದಿದ ಪ್ರಕೃತಿಯು, **ಅಸಚ್ಛಬ್ದನಿರ್ದಿಷ್ಟಂಚ**-" **ಅಸತ್** " ಎಂಬ ಶಬ್ದದಿಂದ ನಿರ್ದೇಶಿಸಲ್ಪಟ್ಟಿರುವದು, ಹೀಗೆ ಈ ಎರಡು ಅವಸ್ಥೆಯಲ್ಲಿರುವ ಪ್ರಕೃತಿಯಾದ ಸದಸತ್ತೂ ಸಹ, **ತ್ವಮೇವ**-ನೀನೇ, ಎಂದರೆ ತದಾತ್ಮಕನೂ ನೀನೇ; ಇವೆಲ್ಲಾ ನಿನಗೆ ಸ್ಥೂಲರೂಪದಲ್ಲೋ, ಸೂಕ್ಷ್ಮರೂಪದಲ್ಲೋ ಯಾವಾಗಲೂ ಶರೀರವು, ನೀನು ಯಾವಾಗಲೂ ಆತ್ಮಾ ಎಂಬ ಭಾವವು. ಹೀಗೆ ವ್ಯಾಖ್ಯಾನಕ್ಕೆ ಶ್ರುತಿಪ್ರಮಾಣವುಂಟೋ ಎಂದರೆ " **ಅಸದ್ವಾ ಇದಮಗ್ರ ಆಸೀತ್, ತತೋವೈ ಸದಜಾಯತ ತದಾತ್ಮಾನಂ ಸ್ವಯಮಕುರತ** " ಎಂಬ ತೈತ್ತರೀಯ (ಆನಂದ ೭೧) ಶ್ರುತಿಯು ಹೇಳುತ್ತದೆ. **ಇದಂ**-ಸ್ಥೂಲಚೇತನಾಚೇತನಶರೀರಕನಾದ ಪರಬ್ರಹ್ಮವು. **ಅಸತ್**-ನಾಮ ರೂಪಗಳಿಂದ ವ್ಯಕ್ತವಾಗದ ಬ್ರಹ್ಮವಾಗಿ, **ಅಗ್ರೇ**-ಸೃಷ್ಟಿಗೆ ಪೂರ್ವಕಾಲದಲ್ಲಿ, **ಆಸೀತ್**-ಇತ್ತು, **ತತಃ**-ಆ ಅಸತ್ತಿನ ದಶೆಯಿಂದ, **ಸತ್ ಅಜಾಯತ**-ಈ ಜಗತ್ತು ನಾಮರೂಪಗಳಿಗೆ ಅರ್ಹವಾದುದಾಗಿ

**ಮೂ. ವೇತ್ತಾಸಿ ವೇದ್ಯಂಚ ಪರಂಚ ಧಾಮ ತ್ವಯಾ ತತಂ ವಿಶ್ವಮನಂತರೂಪ ॥**

ಈ ವ್ಯಕ್ತಸ್ಥೂಲರೂಪ ಪ್ರಕೃತಿಶರೀರಕ ಬ್ರಹ್ಮವಾಗಿ ಆಯಿತು" ಎಂಬ ಭಾವವು. **"ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮರೂಪೇವ್ಯಾಕರಣವಾಣಿ"** (ಛಾಂ.೬-೩-೨) ಎಂಬುದೂ ಇದೇ ಅರ್ಥವುಳ್ಳದುದು, **ತತ್ಪರಂಯತ್**-ಇಲ್ಲಿ **ತತ್** ಶಬ್ದದಿಂದ ನಿರ್ದೇಶಿಸಲ್ಪಟ್ಟಿದುದು, **ಅಕ್ಷರಂ** ಮತ್ತು **ಸದಸತ್** ಎಂಬ ಶಬ್ದಗಳಿಂದ ಭಾವಿಸಿ ವ್ಯಾಖ್ಯಾನಮಾಡುತ್ತಾರೆ **ತಸ್ಮಾತ್**-ಆ ಕಾರಣದಿಂದ, **ಪ್ರಕೃತೇಃ** - ಪ್ರಕೃತಿಗಿಂತಲೂ **ಪ್ರಕೃತಿ ಸಂಬಂಧಿನಶ್ಚ ಜೀವಿತಾತ್ಮನಃ**-ಪ್ರಕೃತಿ ಸಂಬಂಧವಿರುವ ಬದ್ಧರಾದ ಜೀವಾತ್ಮರಿಗಿಂತಲೂ ಇವು ಸದಸಚ್ಛಬ್ದವದಲ್ಲಿರುವ ಪ್ರಕೃತಿಯಲ್ಲಿ ಸೇರಿರುವುವು, ಮತ್ತು **ಪರಮನ್ಯತ್ ಮುಕ್ತಾತ್ಮತತ್ತ್ವಂ**-ಶ್ರೇಷ್ಠವಾಗಿ ಬೇರೆಯಾಗಿ ಮಹಾ ಪರಿಶುದ್ಧವಾಗಿರುವ ಮುಕ್ತಾತ್ಮತತ್ವವೂ ಸಹ, **ತ್ವಮೇವ**-ನೀನೇಯೇ ; ಇದರಿಂದ **ತತ್ಪರಂ** ಎಂಬಲ್ಲಿನ ತಚ್ಛಬ್ದವು ಪ್ರಕೃತಿ ಪುರುಷರಿಬ್ಬರನ್ನೂ ಬೋಧಿಸಿ, ಅವರಿಗಿಂತಲೂ ಮುಕ್ತಾತ್ಮನು ಶ್ರೇಷ್ಠನೆಂದು ಹೇಳಿ, ತಚ್ಛರೀರಕನೂ ಪರಮಾತ್ಮನೇ ಎಂದು ಹೇಳಲ್ಪಟ್ಟಿತು. **"ಯಸ್ಯಾತ್ಮಾಶರೀರಂ"** ಎಂಬ ಶ್ರುತ್ಯರ್ಥವು ಇಲ್ಲಿ **ಬೋಧಿಸಲ್ಪಟ್ಟಿತು. ಅತಃ**-ಆ ಕಾರಣದಿಂದ, **ತ್ವಮಾದಿ ದೇವಃ**-ನೀನು ಎಲ್ಲಾ ಚೇತನರುಗಳಿಗೂ ಆದಿ ಕಾರಣನಾಗಿ ನಿತ್ಯ ಸೂರಿಗಳಿಗೂ ದೇವಾದಿ ಚತುರ್ಮುಖಾದಿಗಳಿಗೂ ಆದಿ ಕಾರಣನು **ಪುರುಷಃ**-ಪುರುಷಸೂಕ್ತ ಪ್ರತಿಪಾದ್ಯನು, **ಪುರಾಣಃ**-ಸನಾತನನು, **ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ**-ನಿನ್ನಲ್ಲೇ ಈ ಜಗತ್ತೆಲ್ಲಾ ಇಡಲ್ಪಟ್ಟಿರುತ್ತದೆ, ಎಂದರೆ ಅದರ ಸರ್ವಪ್ರವೃತ್ತಿ ರಕ್ಷಣೆ ಮೊದಲಾದವುಗಳೆಲ್ಲಾ ನಿನ್ನಲ್ಲೇ ಇರುವದರಿಂದ ನೀನು ನಿಧಾನವು ಎಂಬ ಭಾವವು ; **ನಿಧಾನಂ**-ಎಂದರೆ **ನಿಧೀಯತೇ ತ್ವಯಿವಿಶ್ವಮಿತಿ**-ನಿನ್ನಲ್ಲೇ ಈ ವಿಶ್ವವೆಲ್ಲಾ ಧರಿಸಲ್ಪಟ್ಟಿರುವದರಿಂದ, **ತ್ವಂ**-ನೀನು. **ಅಸ್ಯ ವಿಶ್ವಸ್ಯ**-ಈ ವಿಶ್ವದ, **ಪರಮಂನಿಧಾನವು**-ಸರ್ವೋತ್ಕೃಷ್ಟವಾದ ಆಧಾರವು ; ಇದನ್ನೇ ಚನ್ನಾಗಿ ವ್ಯಕ್ತಪಡಿಸುತ್ತಾರೆ-**ಶರೀರಭೂತಸ್ಯ**-ಶರೀರ ರೂಪವಾಗಿರುವ, **ವಿಶ್ವಸ್ಯ**-ವಿಶ್ವಕ್ಕೆ. **ಆತ್ಮತಯಾ**-ಆತ್ಮಾವಾಗಿರುವವರಿಂದ, **ಪರಮಾಧಾರಭೂತಃ**-ಸರ್ವೋತ್ಕೃಷ್ಟವಾಗಿರುವ ಆಧಾರ ಭೂತನಾಗಿರುವವನೂ, **ತ್ವಮೇವೇತ್ಯರ್ಥಃ**-ನೀನೇಯೇ ಎಂಬ ಅರ್ಥವು. ಮುಕ್ತಾತ್ಮನಿಗೂ, ಬದ್ಧಾತ್ಮನಿಗೂ, ಈ ಮುಕ್ತಾತ್ಮನಿಗೆ ಶರೀರವಾದ ಶುದ್ಧ ಸತ್ವಕ್ಕೂ ಬದ್ಧಾತ್ಮನೊಂದಿಗೆ ಸೇರಿರುವ ಪ್ರಕೃತಿಗೂ, ಹೀಗೆ ಎಲ್ಲಾ ಕೂಡಿಸಿ ಸರ್ವವಿಶ್ವಕ್ಕೂ ಆತ್ಮಾವೆಂದೂ ತನ್ಮೂಲಕವಾಗಿ ಸರ್ವಕ್ಕೂ ಪರತತ್ವವೇ ಆಧಾರವೆಂದೂ ಹೇಳಲ್ಪಟ್ಟಿತು. ಹೀಗೆ ಅಚಿತ್ತತ್ವಚಿತ್ತತ್ವಗಳೂ ಒಟ್ಟಿಗೆ ಸೇರಿವೆ ಎಂದೂ, ಇವುಗಳೊಂದಿಗೆ ಇವುಗಳ ಆತ್ಮಾವಾದ ಈಶ್ವರ ತತ್ವವೂ ಸೇರಿದೆ ಎಂದೂ ಹೀಗೆ ಈ ತತ್ವತ್ರಯಗಳುಂಟೆಂದು ಈ ಶ್ಲೋಕವು ಬೋಧಿಸುತ್ತದೆ. ೧೦ನೆಯ ಅಧ್ಯಾಯದ ೩೯ನೆಯ ಶ್ಲೋಕದಲ್ಲಿ ಹೇಳಿದ ಚಿದಚಿತ್ತುಗಳೊಂದಿಗೆ ಯಾವಾಗಲೂ ಸರ್ವೇಶ್ವರನಿಗೆ ಇರುವ ಅವಿನಾಭೂತತ್ವವೂ, ಹೀಗೆ ಅವುಗಳ ವಿಶಿಷ್ಟತೆಯಿಂದ ಮೂರು ತತ್ವವೂಸೇರಿ ಒಂದೆಂಬ ವಿಶಿಷ್ಟಾದ್ವೈತವೂ ಈ ಶ್ಲೋಕದಿಂದಲೂ ಶಿಕ್ಷಿತವೆಂದು ಗ್ರಹಿಸತಕ್ಕದ್ದು. ॥೩೮॥

**ಮೂಲಕ್ಕೆ ಅರ್ಥವು** :—ಸರ್ವೇಶ್ವರನ ವಿಭೂತಿವ್ಯಾಪ್ತಿಯನ್ನಲ್ಲವೇ ಕುರಿತು ಇಲ್ಲಿ ಸ್ತೋತ್ರಮಾಡುತ್ತಿದ್ದಾನೆ ; ಅದನ್ನೇ ಉಪಪಾದಿಸಿ ಹೇಳುತ್ತಾನೆ **ಹೇ ಅನಂತರೂಪ**-ಅಸಂಖ್ಯೇಯಗಳಾದ ದಿವ್ಯಮಙ್ಗಳವಿಗ್ರಹಗಳನ್ನು ಹೊಂದುವವನೇ ಅಥವಾ ವಿಶ್ವವೆಲ್ಲಾ ನಾನಾವಿಧ ಪ್ರಕಾರವಾಗಿ ಎಂದರೆ ವಿಶೇಷಣವಾಗಿ. ತಾನು ಪ್ರಕಾರಿಯಾಗಿ ಎಂದರೆ ವಿಶೇಷ್ಯವಾದುದರಿಂದಾಗಲಿ ಅನಂತ ಪ್ರಕಾರವಾಗಿ ತೋರುವವನೇ, **ವೇತ್ತಾಸಿ**-ಜ್ಞಾನಮೂಲಕ ತಿಳಿ

ಯುವ ಸರ್ವಜ್ಞನಾಗಿರುವ ಸರ್ವಾಧಿಕಾರಿಯೂ ನೀನೇಯಾಗಿದ್ದೀ; **ವೇದ್ಯಂಚ**-ಜ್ಞೇಯ ವಸ್ತುವು ಸಹ ನೀನೇ; ಇವೆರಡೂ ಯಾವಾಗ ಹೇಳಲ್ಪಟ್ಟಿತೋ ಜ್ಞಾನಾಧಿಕಾರಿಗೆ ಆತ್ಮಾ ವಾದುದರಿಂದಲೂ ನೀನೇ ವೇತ್ತಾವಾಗಿದ್ದೀ, ಚಕಾರವಿರುವದರಿಂದ **ವೇದ್ಯಂ ವೇತ್ತಾ** ಎಂದು ವೇದ್ಯವನ್ನು ಕರ್ಮವಾಗಿ ಅರ್ಥಮಾಡುವದು ಯುಕ್ತವಲ್ಲವು. ವೇತ್ತಾಕ್ಕೂ, ವೇತ್ತಾವಿಂದ ತಿಳಿಯಲ್ಪಡುವ ವೇದ್ಯಕ್ಕೂ ಆತ್ಮಾ ನೀನೇ ಎಂಬ ಭಾವವು. ಜ್ಞಾತಾಜ್ಞೇಯವೆರಡೂ ನೀನೇ ಎಂಬರ್ಥವು, ತದಾತ್ಮಕನಾಗಿ ನೀನೇ ಎಂಬುದೂ ತಾತ್ಪರ್ಯವು ಜೀವಾತ್ಮನೇ ಜ್ಞಾತಾ ಜ್ಞೇಯವಾಗುವ ಶಕ್ತಿ ಇದ್ದರೆ ಪರಮಾತ್ಮನಿಗೆ ಆ ಶಕ್ತಿಗಳಿಲ್ಲವೇ? ಇವರಿಂದ ಪರಮ ಜ್ಞೇಯವಸ್ತುವು ಪರಬ್ರಹ್ಮವೇ ಎಂದು ಹೇಳಿದಂತಾಯಿತು. **"ತ್ವಮಕ್ಷರಂ ಪರಮಂ ವೇದಿತವ್ಯಂ"** (ಗೀ, ೧೧. ೧೮) ಎಂಬಲ್ಲಿ ಈ ಅರ್ಥವು ಉಪಪಾದಿತವು, **"ನಾರಾಯಣಂ ಮಹಾಜ್ಞೇಯಮ್** (ವು. ಸೂ) ಎಂಬುದೂ ಅನುಸಂಧೇಯವು. ಆ ಜ್ಞೇಯ ವಸ್ತುವು ದಿವ್ಯಮಙ್ಗಳ ವಿಗ್ರಹರೂಪ ಧ್ಯೇಯರೂಪದಲ್ಲಾದರೆ, ಅದರ ಆತ್ಮತ್ವವೂ ಕೂಡುತ್ತದೆ. ಯಾ ವಾಗ ಜ್ಞೇಯವಾಯಿತೋ ಅದು ಶ್ರಿಯಃಪತಿಯ ರೂಪವಾದ ದಿವ್ಯಮಙ್ಗಳವಿಗ್ರಹವೇ ಆಗಿರ ಬೇಕೇ ವಿನಾ ನಿರ್ಗುಣ ಬ್ರಹ್ಮವು ವಿಶೇಷಣರಹಿತವಾದುದು ಎಂದಿಗೂ ಜ್ಞೇಯವು ಆಗಲಾ ರದು. ಸಾಕ್ಷಾತ್ಕಾರವೂ ಅಸಾಧ್ಯವು; ನಿರ್ಗುಣ ಬ್ರಹ್ಮವಾದಿಗಳೇ ಸಾಕ್ಷಾತ್ಕಾರ ಹೇಗೆಂಬು ದನ್ನು ಗ್ರಹಿಸಲಾರರು, ತಿಳಿಸಲೂಲಾರರು. ಸಗುಣ ಬ್ರಹ್ಮವಾದಿಗಳಾದ ನಮಗೇನೋ ಅದು ಅಸಾಧ್ಯವೆಂದು ತೋರುತ್ತದೆ. ಹೀಗೆ ಪರಮಾತ್ಮನೂ ಜ್ಞಾತಾ ಮತ್ತು ಜ್ಞೇಯವೂ ಆದುದ ರಿಂದ, ಆತನು ಬರೀ ಜ್ಞಾನಮಾತ್ರವೆಂದು ಹೇಳುವ ವಾದವು ನಿರಸ್ತವು **ಪರಂಧಾಮ ಚ ತ್ವಮೇವ**-ಲಕ್ಷ್ಮಿಯೊಂದಿಗೆ ಇರುವ ಅತ್ಯದ್ಭುತ ಪರರೂಪವಾಗಿ ಶ್ರೀ ವಾಸುದೇವರೂಪದಲ್ಲಿ ಸರ್ವೋತ್ಕೃಷ್ಟವಾದ ದಿವ್ಯ ತೇಜೋರೂಪನೂ ನೀನೇ; ಅಥವಾ ದಿವ್ಯಪ್ರಾಪ್ಯಸ್ಥಾನವೂ ನೀನೇ; ಆದುದರಿಂದ ಹೀಗೆ **ವಿಶ್ವಂ**-ಸಮಸ್ತ ವಿಶ್ವವೂ, **ತ್ವಮೇವ**-ನೀನೇ, ಸರ್ವವಿಶ್ವಾತ್ಮಕನೂ ನೀನೇ ಎಂದು ಅರ್ಜುನನು ಸ್ತೋತ್ರಮಾಡಿರುತ್ತಾನೆ. ಹೀಗೆ ಅರ್ಥ ಹೇಳಿದರೆ ಈ ವಿಶ್ವ ಶಬ್ದದಿಂದ ಲೀಲಾ ವಿಭೂತಿ ನಿತ್ಯ ವಿಭೂತಿಗಳೆರಡೂ ಹೇಳಲ್ಪಟ್ಟಿತೆಂದು ಭಾವಿಸಬೇಕಾಗುತ್ತದೆ. ಹಾಗೆ ಅರ್ಥವೋ ಎಂದರೆ ವಿಶ್ವ ಶಬ್ದಕ್ಕೆ ಧಾತುವ್ಯುತ್ಪತ್ತಿಯಿಂದ ಪರಿಪೂರ್ಣತ್ವವೆಂಬ ಅರ್ಥವಾಗು ತ್ತದೆಯಾದುದರಿಂದ **"ಸ್ವಾಭಾವಿಕಾನವಧಿಕಾತಿಶಯ ಮಾಙ್ಗಲ್ಯೈಕತಾನೈಃ ಸ್ವರೂಪ ರೂಪಗುಣ ವಿಭವೈಃ ಪರಿಪೂರ್ಣ ಇತ್ಯರ್ಥಃ"** ಎಂದು ವಿಶ್ವ ಶಬ್ದವನ್ನು ಪರಮಾತ್ಮನಿಗೆ ಅನ್ವಯಿಸಿದರೆ ಹೀಗೆ ಅರ್ಥಬೋಧ ಉಂಟಾಗುತ್ತದೆ. ಉಭಯ ವಿಭೂತಿಗಳಿಂದ ಪರಿಪೂರ್ಣ ತ್ವವು ಆಗ ದ್ಯೋತಿತವು. ಇಂತಹ ಪರಿಪೂರ್ಣತ್ವ ದಶೆಯನ್ನು ಬೋಧಿಸುವ ಆಶಯ ದಿಂದಲೇ ಮಹರ್ಷಿಯು ಸಹಸ್ರನಾಮದಲ್ಲಿ **ಓಂ ವಿಶ್ವಾಯನಮಃ** ಎಂದು ಪ್ರಥಮತಃ ಪ್ರಯೋಗಿಸಿರುತ್ತಾರೆ; ನಿರ್ಗುಣವಾದಕ್ಕೆ ಸಹಸ್ರನಾಮ ಪಠನವೇ ಕೂಡುವದಿಲ್ಲವು. ಇಂತಹ ಸ್ತೋತ್ರಗಳಿಂದ ಅರ್ಜುನನು ಶ್ರೀ ಕೃಷ್ಣಭಗವಾನರವರ ಸಮುಪದೇಶಗಳನ್ನು ಚನ್ನಾಗಿ ಗ್ರಹಿಸಿದ ಪ್ರಾಜ್ಞನೆಂದು ತೋರಿಸಿಕೊಂಡು, ಮುಂದಿನ ಪರಮೋಪದೇಶಗಳಿಗೂ ಅರ್ಹನೆಂಬು ದನ್ನೂ ಇದರಿಂದ ವ್ಯಕ್ತಪಡಿಸಿರುತ್ತಾನೆ. ಶ್ರೀ ಕೃಷ್ಣನು ವಿಷ್ಣ್ವವತಾರಿಯಾಗಿ, ಆತನಿಗೆ ಸರ್ವವ್ಯಾಪ್ತಿಯೂ **ತ್ವಯಾ ತತಂ ವಿಶ್ವಂ** ಎಂದು ಹೇಳಿರುವದರಿಂದ ಶ್ರೀ ಮಹಾವಿಷ್ಣುವೇ ಪರತತ್ವವೇ ವಿನಾ ಇತರರು ಅಲ್ಲವೆಂಬ **"ಅಧಿಕಂ ಮೇನಿರೇ ವಿಷ್ಣುಂ"** (ರಾ ಬಾ.೭೬-೧೯) ಎಂಬ ಮಹರ್ಷಿಯ ವಾಕ್ಯಾನುಸಾರ, ವಿಷ್ಣುವಿನ ಸರ್ವೋತ್ತಮತ್ವವು ಬೋಧಿಸಲ್ಪಟ್ಟಿತು. **ತ್ವಮೇವ**-ನೀನೇ, **ಪರಂಚಧಾಮ**-ಶ್ರೀಸ್ಥವಾದಸ್ಥಾನವು, ಪ್ರಾಪ್ಯಸ್ಥಾನವು, ದಿವ್ಯ ವೈಕುಂಠವು

**ಭಾ. ಜಗತಿ ಸರ್ವೋ ವೇದಿತಾ, ವೇದ್ಯಂ ಚ ಸರ್ವಂ, ತ್ವಮೇವ, ಏವಂ ಸರ್ವಾತ್ಮತಯಾ ಽವಸ್ಥಿತಸ್ತ್ವಮೇವ ಪರಂಚ ಧಾಮ-ಸ್ಥಾನಂ, ಪ್ರಾಪ್ಯಸ್ಥಾನ ಮಿತ್ಯರ್ಥಃ । ತ್ವಯಾ ತತಂ ವಿಶ್ವಂ ಅನನ್ತರೂಪಮ್ ! ತ್ವಯಾತ್ಮತ್ವೇನ ವಿಶ್ವಂ ಚಿದಚಿದ್ಮಿಶ್ರಂ ಜಗತ್, ತತಂ ವ್ಯಾಪ್ತಮ್ ॥೩೮॥**

ಎಂದರೆ ಶುದ್ಧಸತ್ವಾತ್ಮಕನು ನೀನೇ; ಆದುದರಿಂದ ಈ ವಿಶ್ವವೆಲ್ಲಾ, **ತ್ವಯಾ ತತಂ**-ನಿನ್ನಿಂದ ವ್ಯಾಪ್ತವು. ಈ ಶ್ಲೋಕದಲ್ಲಿ ಎಲ್ಲವೂ ಪರಮಾತ್ಮನಿಗೆ ಶರೀರವೆಂದೂ "**ತತ್ಸರ್ವಂವೈಹರೇಸ್ತನುಃ**" ಎಂಬ ಉಪದೇಶವು ಹೇಳಲ್ಪಟ್ಟು, ಎಲ್ಲಕ್ಕೂ ಆತನು ಆತ್ಮಾವೆಂದೂ, "**ಯಸ್ಯಾವ್ಯಕ್ತಂ ಶರೀರಂ ಯಸ್ಯಾಕ್ಷರಂ ಶರೀರಮ್ ಏಷಸಾರಭೂತಾಂತರಾತ್ಮಾಽಪಹತಪಾಪ್ಮಾದಿವ್ಯೋದೇವ ಏಕೋನಾರಾಯಣಃ**" (ಸುಬಾಲ ೭) ಇತ್ಯಾದಿ ಉಪನಿಷತ್ತಿನ ಅರ್ಥವನ್ನು ತಾನು ಗ್ರಹಿಸಿದೆನೆಂದು ಅರ್ಜುನನು ತಿಳಿಸುತ್ತಾನೆ. ಇದೇ ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಪ್ರತಿತಂತ್ರವು, ತಳಹದಿಯು; ಈ ಶರೀರಾತ್ಮಸಂಬಂಧವು ವಿಶ್ವಕ್ಕೂ ಪರಮಾತ್ಮನಿಗೂ ಇರುವದರಿಂದ ವಿಶಿಷ್ಟಾದ್ವೈತಿಗಳಿಗೆ ಸರ್ವಶ್ರುತಿವಾಕ್ಯಗಳೂ ಸಮಂಜಸವು. ಇತರ ಸಿದ್ಧಾಂತಿಗಳು ಇಂತಹ ಘಟಕಶ್ರುತಿಗಳಿಗೆ ಪ್ರಧಾನವನ್ನು ಕೊಡದೇ ಇರುವದರಿಂದ ಅವರಿಗೆ ಶ್ರುತಿವಾಕ್ಯಗಳಲ್ಲಿ ಪರಸ್ಪರ ವಿರೋಧವು ತೋರಿಬರುತ್ತದೆ. "**ಸದೇವಸೋಮ್ಯೇದಮಗ್ರಆಸೀತ್**" "**ದ್ವಾಸುಪರ್ಣಾ**" "**ಭೋಕ್ತಾಭೋಗ್ಯಂ ಪ್ರೇರಿತಾರಂ ಚಮತ್ವಾ**" "**ಆನೀತವಾತಗ್ಂ ಸ್ವಧಯಾತದೇಕಮ್** ಎಂಬ ವಾಕ್ಯಗಳಲ್ಲಿ ಹೇಳಿರುವ ಒಂದು, ಎರಡು, ಮೂರು, ನಾಲ್ಕು, ಎಂದು ಹೇಳುವವೆಲ್ಲಾ ನಮಗೆ ಸಮಂಜಸವು ಮತ್ತು "**ಸರ್ವಂಖಲ್ವಿದಂಬ್ರಹ್ಮ**" "**ಐತದಾತ್ಮ್ಯಮಿದಂ ಸರ್ವಮ್**" "**ಜಗತ್ಸ್ಥಃ**" ಇತ್ಯಾದಿಗಳಲ್ಲಿನ ಸಾಮಾನಾಧಿಕರಣ್ಯವು ನಮಗೆ ವೇದ್ಯವು.

**ಭಾಷ್ಯಾರ್ಥವು :—ಜಗತಿ**-ಜಗತ್ತಿನಲ್ಲಿ, **ಸರ್ವೋ ವೇದಿತಾ**-ಸಮಸ್ತ ತಿಳಿಯುವ ಅಧಿಕಾರಿಗಳೂ, **ವೇದ್ಯಂ ಚ ಸರ್ವಂ**-ತಿಳಿಯಲ್ಪಡತಕ್ಕ ಸರ್ವ ವಸ್ತುವೂ **ತ್ವಮೇವ**-ನೀನೇಸರಿ ಹೀಗೆ ಹೇಳಿದುದರಿಂದ ಜಗತ್ತಿನಲ್ಲಿ ಕಾರ್ಯಾವಸ್ಥೆಯಲ್ಲಿರುವ ತಿಳಿಯಲು ಯೋಗ್ಯತೆಯುಳ್ಳ ಸಮಸ್ತ ಚೇತನ ವರ್ಗವೂ, ಅವರಿಂದ ಜ್ಞೇಯವಾದ ಎಲ್ಲಾ ಕಾರ್ಯವರ್ಗವೂ, ನೀನೇ ಎಂಬ ತಾತ್ಪರ್ಯವು. ಹೀಗೆ ಸಾಮಾನಾಧಿಕರಣ್ಯವನ್ನು ಹೇಳುವದರಿಂದ ಸ್ವರೂಪೈಕ್ಯವು ಹೇಳಲ್ಪಟ್ಟಿತೆಂದು ಹೇಳಲು ಸಾಧ್ಯವಿಲ್ಲವು, ಏಕೆಂದರೆ ತ್ವಯಾತತಂ ಇದಂ ವಿಶ್ವಂ ಎಂದು ವ್ಯಾಪ್ಯವ್ಯಾಪಕ ಭಾವವನ್ನು ಬೋಧಿಸುವ ಭೇದವು ಶ್ರುತವಾಗಿರುವದರಿಂದ; ಹೀಗೆ ಗೀತೆಯು ಅಭೇದವನ್ನು ಎಲ್ಲಿಯೂ ಉಪಪಾದಿಸಿಲ್ಲವು, **ಏವಂ**-ಈ ಪ್ರಕಾರವಾಗಿ, **ಸರ್ವಾತ್ಮತಯಾವಸ್ಥಿತಃ**-"**ಅಹಮಾತ್ಮಾಗುಡಾಕೇಶ**" ಎಂದಾರಂಭಿಸಿ ಹೇಳಿರುವಹಾಗೆ ಸಮಸ್ತಕ್ಕೂ ಆತ್ಮಾವಾಗಿರುವ, **ತ್ವಮೇವ**-ನೀನೇ; **ಪರಂಚ**-ಸರ್ವೋತ್ಕೃಷ್ಟವಾದ, **ಧಾಮ**-ಎಂದರೆ ಸ್ಥಾನವೂ ಸಹ, ನೀನೇ ಎಂದರೆ ಪ್ರಾಪ್ಯಸ್ಥಾನವೂ ನೀನೇ ಎಂಬ ತಾತ್ಪರ್ಯವು. ಧಾಮ ಶಬ್ದಕ್ಕೆ ಇತರ ಅರ್ಥಗಳು ಯಾವುವೂ ಇಲ್ಲಿ ಸರಿಹೋಗುವದಿಲ್ಲವಾದುದರಿಂದ, ಸ್ಥಾನವೆಂದೇ ಅರ್ಥಮಾಡಿ ಪ್ರಾಪ್ಯಸ್ಥಾನವೆಂದು ಅರ್ಥಮಾಡಿರುತ್ತಾರೆ ದಿವ್ಯ ವೈಕುಂಠವು ಅಪ್ರಾಕೃತ ಸ್ಥಾನವಾಗಿ ಸರ್ವೋತ್ಕೃಷ್ಟವೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. "**ಅರಶ್ಚ ಹವೈಣ್ಯಶ್ಚಾರ್ಣವಾ ಬ್ರಹ್ಮಲೋಕೇತೃತೀಯಸ್ಯಾಮಿತೋ ದಿವಿ। ತದೈರಂ ಮದೀಯಂ ಸರಃ, ತದಶ್ವತ್ಥಸ್ಸೋಮಸವನಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಮ್**" ಛಾಂಲ ೫ ೩ ರಲ್ಲಿ ದಿವ್ಯ ವೈಕುಂಠದಲ್ಲಿ ಅಪ್ರಾಕೃತಗಳಾದ ಅರಣ್ಯ ಶಬ್ದಗಳಿಂದ ಹೇಳಲ್ಪಟ್ಟ ಎರಡು ಸಮುದ್ರ

**ಭಾ. ಅವ. ಅತಸ್ತ್ವಮೇವ ವಾಯ್ವಾದಿ ಶಬ್ದ ವಾಚ್ಯ ಇತ್ಯಾಹ—**

ಗಳಿವೆ ಎಂದೂ, ಅದು ದಿವ್ಯತೇಜಸ್ಸುಳ್ಳ ಮೂರನೆಯ ಲೋಕವೆಂದೂ, ಮರ್ತ್ಯಲೋಕ ಅಂತರಿಕ್ಷಲೋಕಗಳು ಕಳೆದು ಮೂರನೆಯ ಲೋಕವೆಂಬ ಭಾವವು; ಅಲ್ಲಿ ಐರಂ ಮದೀಯವೆಂಬ ದಿವ್ಯಸರಸ್ಸೂ, ಸೋಮ ಸವನವೆಂಬ ಅಶ್ವತ್ಥವೃಕ್ಷವೂ, ಬ್ರಹ್ಮವಿತ್ತುಗಳಿಂದಲೇ ಹೊಂದಲು ಸಾಧ್ಯವಾದ ಪರಬ್ರಹ್ಮ ಪಟ್ಟಣವೂ ಎಲ್ಲಾ ಉಂಟೆಂದು ಹೇಳಲ್ಪಟ್ಟಿರುತ್ತದೆ. ಅಲ್ಲಿ ಸಹಸ್ರ ಸ್ತಂಭಗಳಿಂದ ವಿರಾಜಿಸುವ ಹಿರಣ್ಯಮಂಟಪ ಉಂಟೆಂದೂ ಅಲ್ಲಿ ಶೇಷ ಪರ್ಯಂಕದಲ್ಲಿ ಲಕ್ಷ್ಮಿಯೊಂದಿಗೆ ಕೋಟಿಸೂರ್ಯ ಪ್ರಕಾಶನಾಗಿ ನಿತ್ಯ ಮುಕ್ತರುಗಳಿಂದ ಸೇವಿತನಾಗಿ ಶ್ರೀ ವಾಸುದೇವನಿದ್ದಾನೆಂದೂ ಹೀಗೆ ಛಾಂದೋಗ್ಯದಲ್ಲೂ ಮತ್ತು ಕೌಷೀತಕೀಯಲ್ಲೂ ಹೇಳಿರುತ್ತದೆ. ಇದನ್ನೇ ಶ್ರೀ ವೈಕುಂಠಗದ್ಯದಲ್ಲಿ ಶ್ರೀ ಯತಿವರ್ಯರು ವರ್ಣಿಸಿರುತ್ತಾರೆ. ಅದು ಅಪ್ರಾಕೃತವಾದುದರಿಂದ **ನಕಾಲಸ್ತತ್ರ ವೈಪ್ರಭುಃ**-ಕಾಲತತ್ವದಿಂದ ಅದಕ್ಕೆ ವಿಕಾರ ಎಂದರೆ ಚ್ಯುತಿ ಇಲ್ಲವೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದಲೇ **ವೈಕುಂಠೇತು ಪರೇ ಲೋಕೇ ಶ್ರಿಯಾ ಸಾರ್ಧಂ ಜಗತ್ಪತಿಃ। ಆಸ್ತೇ ವಿಷ್ಣುರಚಿಂತ್ಯಾತ್ಮಾ ಭಕ್ತೈರ್ಭಾಗವತೈಸ್ಸಹ** ಎಂದು ಹೇಳಿರುವಹಾಗೆ **ಪರಂಚಧಾಮವೂ** ನೀನೇ ಎಂಬ ಪ್ರಯೋಗವು. ಶ್ರೀಮಚ್ಛಂಕರಾಚಾರ್ಯರೂ **ಇದಕ್ಕೆ ಪರಮಂ ಪದಂ ಐಶ್ವರಂ** ಎಂದೇ ಭಾಷ್ಯವನ್ನು ಬರೆದಿರುತ್ತಾರೆ. ಹೀಗೆ ಎಲ್ಲವನ್ನೂ ವ್ಯಾಪಿಸಿರುವಿ ಎಂದು ಹೇಳುತ್ತಾನೆ. **ತ್ವಯಾ ತತಂ ವಿಶ್ವ ಮನಂತರೂಪಮ್** ಎಂದರೆ **ತ್ವಯಾತ್ಮತ್ವೇನ**-ನಿನ್ನಿಂದ ಆತ್ಮಾವಾಗಿ, **ವಿಶ್ವಂಚಿದಚಿನ್ಮಿಶ್ರಂ-ಮೂರು ವಿಧ ಚಿತ್**-ಮೂರು ವಿಧ ಅಚಿತ್ತುಗಳ ಮಿಶ್ರವಾದ ಸಮಸ್ತ ವಿಶ್ವವೂ **ತತಂ**-ಎಂದರೆ **ವ್ಯಾಪ್ತಮ್**-ವ್ಯಾಪಿಸಲ್ಪಟ್ಟಿರುತ್ತದೆ. ಹೀಗೆಲ್ಲಾ ಹೇಳಿರುವದರಿಂದ ಅರ್ಜುನನು ಮಹಾ ಪ್ರಾಜ್ಞನೆಂದು ಭಾವಿಸತಕ್ಕದ್ದು. ನಿಪುಣತರವಾಗಿ ಗೀತೋಪದೇಶವನ್ನು ಗ್ರಹಿಸಿದನೆಂಬುದು ವ್ಯಕ್ತವು.

**ಭಾಷ್ಯಾವತಾರಿಕೆಯ ಅರ್ಥವು**:—**ಅತಃ**-ಆ ಕಾರಣದಿಂದ ಎಂದರೆ ಎಲ್ಲಾ ವಿಶ್ವವೂ ನಿನಗೆ ಶರೀರವಾಗಿ, ನೀನು ಅವಕ್ಕೆಲ್ಲಾ ಆತ್ಮಾವಾಗಿರುವದರಿಂದಲೇ, **ತ್ವಮೇವ**-ನೀನೇ, ಸಾಮಾನಾಧಿಕರಣ್ಯದಿಂದ, **ವಾಯ್ವಾದಿ ಶಬ್ದವಾಚ್ಯಃ**-ವಾಯುವೇಮೊದಲಾದ ಸರ್ವಶಬ್ದಗಳಿಂದಲೂ ನೀನೇ ಹೇಳಲ್ಪಡುವವನು, **ಇತ್ಯಾಹ** ಎಂಬದಾಗಿ ಅರ್ಜುನನು ಹೇಳುತ್ತಾನೆ. ಶರೀರವನ್ನು ಬೋಧಿಸುವ ಶಬ್ದಗಳು ಶರೀರಿಯನ್ನೂ ಬೋಧಿಸುತ್ತವೆ ಮನುಷ್ಯ ಶಬ್ದವು ಶರೀರವನ್ನು ಹೇಳುವಂತಾದ್ದಾಗಿದ್ದರೂ, ಹೇಗೆ ಅದರಲ್ಲಿರುವ ಆತ್ಮಾವನ್ನೂ ಬೋಧಿಸುತ್ತದೋ ಹಾಗೆ ಎಂಬ ಭಾವವು. ಆದುದರಿಂದ ವಿಶ್ವದ ಸರ್ವ ಶಬ್ದಗಳೂ ತತ್ತಚ್ಛರೀರಕ ಪರಮಾತ್ಮನನ್ನೇ ಬೋಧಿಸುತ್ತವೆ ಹೀಗೆಯೇ ಶ್ರೀ ಪರಾಶರರು ತಮ್ಮ ಶಿಷ್ಯರಾದ ಮೈತ್ರೇಯರಿಗೆ "**ಯದಂಬು ವೈಷ್ಣವಃ ಕಾಯಃ**" ಎಂದೂ, "**ತತ್ಸರ್ವಂ ವೈಹರೇಸ್ತನು**" ಎಂದೂ ವಿಶ್ವಶರೀರಕತ್ವವನ್ನು ಪರಮಾತ್ಮನಿಗೆ ವಿಶದವಾಗಿ ಹೇಳಿ, ಕಡೆಗೆ ಸಾಮಾನಾಧಿಕರಣ್ಯದಿಂದ ತದಾತ್ಮಕತ್ವವನ್ನೂ ಸರ್ವಶಬ್ದ ವಾಚ್ಯತ್ವವನ್ನೂ ಉಪದೇಶಿಸುತ್ತಾರೆ "**ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋದಿಶಶ್ಚ। ನದ್ಯಸ್ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ**" (ವಿ. ಪು. ೨.೧೨.೩೮) ಪರಮಾತ್ಮನಿಗೆ ತಾದಾತ್ಮ್ಯವನ್ನೂ ಸರ್ವಶಬ್ದವಾಚ್ಯತ್ವವನ್ನೂ ಉಪಪಾದಿಸಿರುತ್ತಾರೆ ಹೀಗೆ ಸರ್ವಶಬ್ದ ವಾಚ್ಯತ್ವಕ್ಕೆ ನಿಬಂಧನವು, ವಿಶ್ವಕ್ಕೂ ಪರಮಾತ್ಮನಿಗೂ ಶರೀರಾತ್ಮಭಾವವು; ಆ ಕಾರಣದಿಂದಲೇ ಸಾಮಾನಾಧಿಕರಣ್ಯವೂ ಎಂದು ವಿಶದವಾಗಿ ತಿಳಿಸುತ್ತಾರೆ ಇದನ್ನೇ ಮೊದಲು ತನ್ನ ಶಿಷ್ಯರಿಗೆ ಸಙ್ಗ್ರಹವಾಗಿ

ಮೂ. ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ॥

ಭಾ ಸರ್ವೇಷಾಂ ಪ್ರಪಿತಾಮಹಸ್ತ್ವಮೇವ. ಪಿತಾಮಹಾದಯಶ್ಚ ; ಸರ್ವಾಸಾಂ ಪ್ರಜಾನಾಂ ಪಿತರಃಪ್ರಜಾಪತಯಃ, ಪ್ರಜಾಪತೀನಾಂ ಪಿತಾ - ಹಿರಣ್ಯಗರ್ಭಃ ಹಿರಣ್ಯಗರ್ಭಸ್ಯಾಪಿ ಪಿತಾ ತ್ವಂ-ಪ್ರಜಾನಾಂ ಪ್ರಪಿತಾಮಹಃ ; ಪಿತಾಮಹಾದೀನಾಂ ಆತ್ಮತಯಾ ತತ್ತಚ್ಛಬ್ದ ವಾಚ್ಯಸ್ತ್ವಮೇವೇತ್ಯರ್ಥ ॥ ೩೯ ॥

ಜಗಚ್ಚ ಸಃ-ಆ ಪರಬ್ರಹ್ಮವೇ ಜಗತ್ತು (ವಿ. ಪು. ೧೧-೩೧) ಎಂದು ಪ್ರತಿಜ್ಞಾವಾಕ್ಯವಾಗಿ ಹೇಳಿದ್ದರು. ಆದುದರಿಂದ ಜಗಚ್ಛಬ್ದವಾಚ್ಯನೂ ಅವನೇ ಎಂಬ ಭಾವವೂ ಸೂಚಿತವು ಇದರಂತೆಯೇ ಅರ್ಜುನನೂ ಮುಂದೆ ೪೦ ನೆಯ ಶ್ಲೋಕದಲ್ಲಿ " ತತೋಽಸಿ ಸರ್ವಃ " ಎಂದು ಹೇಳಿ ಸ್ತೋತ್ರವನ್ನು ಮುಗಿಸುತ್ತಾನೆ.

**ಮೂಲಕ್ಕೆ ಅರ್ಥವು :**—ಸರ್ವಶಬ್ದ ವಾಚ್ಯತ್ವವು ನಿನಗೆ ಉಂಟಾಗಿರುವುದು ಹೇಗೆಂದು ತಿಳಿದಿದ್ದೇನೆಂದರೆ— ಎಲ್ಲವೂ ನಿನಗೆ ಶರೀರವಾಗಿ, ಎಲ್ಲಕ್ಕೂ ನೀನು ಆತ್ಮಾವಾಗಿರುವುದರಿಂದ, ಶರೀರವಾಗಿರುವ ವಿಶ್ವದ ಸಮಸ್ತವನ್ನೂ ಬೋಧಿಸುವ ಪದಗಳು ಶರೀರಿಯಾದ ನಿನ್ನನ್ನೇ ಬೋಧಿಸುವದರಿಂದ ಸರ್ವಶಬ್ದವಾಚ್ಯನೇ ನೀನೆಂದು ತಿಳಿಸುವದಕ್ಕಾಗಿ, ವಾಯುವೂ ಯಮನೂ ಅಗ್ನಿಯೂ ಮೊದಲಾದವೆಲ್ಲಾ ನೀನೇ ಎಂದು ತಿಳಿದಿದ್ದೇನೆಂದು ಅರಿಕೆ ಮಾಡಿಕೊಳ್ಳುತ್ತಾನೆ— **ವಾಯುವೂ, ಯಮನೂ, ಅಗ್ನಿಯೂ, ವರುಣನೂ, ಶಶಾಂಕಃ** ಎಂದರೆ ಚಂದ್ರನೂ, ಇದು ಸೂರ್ಯನಿಗೂ ಉಪಲಕ್ಷವು, **ಪ್ರಜಾಪತಿಃ** - ಪ್ರಜೋತ್ಪತ್ತಿಯಲ್ಲಿ ನಿಯಮಿಸಲ್ಪಟ್ಟ ದಕ್ಷನೂ, ಅಥವಾ ಮಕ್ಕಳಿಗೆ ಸ್ವಾಮಿಗಳಾದ ತಂದೆಯೂ **ಪ್ರಪಿತಾಮಹಶ್ಚ** ಅವರುಗಳ ತಂದೆಯೂ ಸಹ ಎಂದೂ ಅರ್ಥ ಹೇಳಬಹುದು. ಆದರೆ ಯಮ ಅಗ್ನಿ ಚಂದ್ರರು ಇಲ್ಲಿ ಹೇಳಲ್ಪಟ್ಟಿರುವದರಿಂದ " **ಸೋಮೋ ಪಿತೃವಾ, ಯಮೋಽಙ್ಗಿರಸ್ವಾ ಅಗ್ನಿಕವ್ಯವಾಹನ** " ನೆಂದು ಹೇಳಿರುವ ಮಂತ್ರಾನುಸಾರವಾಗಿ, ಪಿತೃದೇವಾತ್ಮಕನೂ ನೀನೇ ಎಂಬ ಭಾವವು. ಸರ್ವಪಿತೃವೂ ನೀನೇ, ಪಿತಾಮಹನಾದ ಚತುರ್ಮುಖನೂ ನೀನೇ, ಹೀಗೆ ಎಲ್ಲರಿಗೂ ಆತ್ಮಾವಾಗಿರುವ ಪ್ರಪಿತಾಮಹನಾಗಿ ನೀನೇ ಎಂಬ ಭಾವವು ಸರಸವಾಗಿ ಹೇಳಿದಂತಾಯಿತು. ಇದು ಇತರ **ಪ್ರಜಾಪತಿ** ಗಳಿಗೂ ಉಪಲಕ್ಷಣವು, ಪ್ರಜಾಪತಿಶಬ್ದಕ್ಕೆ ಬದಲಾಗಿ **ಪ್ರಪಿತಾಮಹಶ್ಚ** - ಆ ಪಿತಾಮಹರಿಗೂ ತಂದೆಯಾಗಿ ಪ್ರಪಿತಾಮಹನೆಂದು ಹೇಳಿಸಿಕೊಳ್ಳುವ ಚತುರ್ಮುಖನೂ ಸಹ, **ತ್ವಂ** - ನೀನೇ ; ಒಬ್ಬಮನುಷ್ಯನಿಗೆ ತಂದೆ, ಆತನಿಗೆ ತಂದೆ, ಹೀಗೆ ಚತುರ್ಮುಖನವರೆಗೂ ಎಲ್ಲರೂ ನೀನೇ ಎಂದರೆ ಸರ್ವಜೀವತತ್ವಕ್ಕೂ ಆತ್ಮಾವಾದವನು ನೀನೇ ಎಂಬ ಭಾವವು.

**ಭಾಷ್ಯಾರ್ಥವು :-ಸರ್ವೇಷಾಂ ಪ್ರಪಿತಾಮಹಸ್ತ್ವಮೇವ** ಎಲ್ಲರಿಗೂ ಪ್ರಪಿತಾಮಹನೂ ಕೂಡಾ ನೀನೇ ಎಂದು ಹೇಳಿದಂತಾಯಿತು, ಎಂದು ಮುಂದೆ ಹೇಳುತ್ತಾರೆ **ಪಿತಾಮಹಾದಯಶ್ಚ** - ಪಿತಾಮಹನೇ ಮೊದಲಾದವರೆಲ್ಲರೂ ನೀನೇ ; **ಸರ್ವಾಸಾಂ ಪ್ರಜಾನಾಂ** - ಸಮಸ್ತ ಪ್ರಜೆಗಳ, **ಪಿತರಃ**-ತಂದೆಗಳು, **ಪ್ರಜಾಪತಯಃ**-ಪ್ರಜಾಪತಿಶಬ್ದದಿಂದ ಹೇಳಲ್ಪಟ್ಟವರು, ಅವರೆಲ್ಲಾ ನೀನೇ. **ಪ್ರಜಾಪತೀನಾಂ**-ಪ್ರಜಾಪತಿಗಳಿಗೆಲ್ಲಾ, **ಪಿತಾ**-ತಂದೆಯಾದ**ಹಿರಣ್ಯಗರ್ಭನು** ಎಂದರೆ ಚತುರ್ಮುಖಬ್ರಹ್ಮನು, **ಪ್ರಜಾನಾಂ ಪಿತಾಮಹಃ**-ಪ್ರಜೆಗಳಿಗೆಲ್ಲಾ ಪಿತಾಮಹನೆಂದು ಹೇಳಲ್ಪಟ್ಟಿರುವವನು, **ಹಿರಣ್ಯಗರ್ಭಸ್ಯಾಪಿ ಪಿತಾ**-ಆ ಚತುರ್ಮುಖನಿಗೂಕೂಡ ತಂದೆಯಾದವನೂ, **ತ್ವಂ**-ನೀನೇ. ಆದುದರಿಂದ **ಪ್ರಜಾನಾಂ ಪ್ರಪಿತಾಮಹಃ**-ಪ್ರಜೆಗಳಿಗೆಲ್ಲಾ ಪ್ರಪಿತಾ

**ಮೂ. ನಮೋನಮಸ್ತೇಽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಽಪಿ ನಮೋನಮಸ್ತೇ ॥**
**ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತುತೇ ಸರ್ವತ ಏವ ಸರ್ವ ॥**

ಮಹನೆನಿಸಿರುತ್ತೀಯೆ. ಹೀಗೆ **ಪಿತಾಮಹಾದೀನಾಂ**-ಚತುರ್ಮುಖಬ್ರಹ್ಮನೇ ಮೊದಲಾದವರಿಗೆಲ್ಲಾ **ಆತ್ಮತಯಾ** - ಆತ್ಮಾವಾಗಿರುವದರಿಂದ, **ತತ್ತಚ್ಛಬ್ದವಾಚ್ಯಃ** – ಆಯಾಶಬ್ದಗಳಿಂದ ಹೇಳಲ್ಪಡುವವನೆಲ್ಲಾ, **ತ್ವಮೇವೇತ್ಯರ್ಥಃ** - ನೀನೇ ಎಂಬ ಅಭಿಪ್ರಾಯವು. ಸರ್ವಶಬ್ದ ವಾಚ್ಯತ್ವಕ್ಕೆ ನಿಬಂಧನವು ಸಾಮಾನಾಧಿಕರಣ್ಯಮೂಲಕ ವ್ಯವಹಾರವು, ಅದಕ್ಕೆ ಕಾರಣವು ವಿಶ್ವವೆಲ್ಲಾ ಶರೀರವಾಗಿ, ಆತನು ಆತ್ಮಾವಾಗಿರುವುದೇ ಎಂಬ ಭಾವವು. ॥ ೩೯ ॥

**ಮೂಲಕ್ಕೆ ಅರ್ಥವು** :—ಯಾವಾಗ ಅತ್ಯದ್ಭುತ ವಿಶ್ವರೂಪಾಕಾರವನ್ನು ನೋಡಿದನೋ ಮತ್ತು ಸರ್ವ ಪ್ರವೃತ್ತಿಯೂ ಭಗವದಧೀನವಾಗಿ ತತ್ಸಙ್ಕಲ್ಪಾಯತ್ತವಾಗಿ ನಡೆಯುವದನ್ನೂ ಅರಿತನೋ ಆಗ ಭಯವೇನು, ಹರ್ಷವೇನು, ಎರಡೂ ಉಂಟಾಯಿತು. ಶ್ರೇಯಸ್ಸನ್ನುಂಟು ಮಾಡುವದಕ್ಕಾಗಿ ಹಿತವರ್ತನೆಯನ್ನು ಯಾವಾಗಮಾಡಿದನೋ, ಆಗ ಕೃತಜ್ಞತಾಭಾವದಿಂದ ಪ್ರೇರಿತನಾಗಿ ತನ್ನದಾಸ್ಯಭಾವವನ್ನು ದಂಡವತ್ಪ್ರಣಾಮಗಳಮೂಲಕವಾಗಿ ತೋರಿಸಬೇಕೆಂಬ ಭಾವದಿಂದ ಅನೇಕಸಲ ನಮಸ್ಕಾರವನ್ನು ಮಾಡುತ್ತಾನೆ. **ತೇ** - ಇಂತಹ ಭಕ್ತವಾತ್ಸಲ್ಯ ದಿಂದ ಪ್ರೇರಿತನಾಗಿ ಪರಮ ಹಿತವನ್ನು ಮಾಡುತ್ತಿರುವ ನಿನಗೆ; **ಸಹಸ್ರಕೃತ್ವಃ** - ಸಾವಿರ ಸಲವಾಗಿ, **ನಮೋ ನಮಸ್ತೇ** ನಮಸ್ಕಾರಗಳಾಗಲಿ, ಎಂದರೆ ಅವುಗಳನ್ನು ಸಮರ್ಪಿಸುತ್ತೇನೆಂಬ ಭಾವವು. **ಪುನಶ್ಚ** - ಕಾಲಭೇದದಿಂದ ಪುನಃ ನಮಸ್ಕಾರವು, **ಭೂಯೋಽಪಿ** - ಒಂದೇ ದಿನದಲ್ಲೇ ನಮಸ್ಕಾರ ಮಾಡಿಬಿಡುವವನಲ್ಲವು, ನನ್ನ ಕೃತಜ್ಞತೆಗಾಗಿ, **ಭೂಯೋಽಪಿ** - ಪುನಃ ಪುನಃ ಅಪಿ ಶಬ್ದದಿಂದ ಪದೇ ಪದೇ ನಡೆಸುತ್ತೇನೆಂಬ ಭಾವವು ದ್ಯೋತಿತವು. **ನಮೋನಮಸ್ತೇ** ನಿನಗೆ ಪುನಃಪುನಃ ನಮಸ್ಕಾರವು. ಇಷ್ಟು ಮಹೋಪಕಾರಿಗೆ ಯಾವಜ್ಜೀವವೂ ನಮಸ್ಕರಿಸಿ ದರೂ ಕೃತಜ್ಞತೆಗೆ ಸಾಲದು ಎಂದು ತಿಳಿಸುತ್ತದೆಂಬ ಭಾವವು ತೋರಿಬರುತ್ತದೆ. ಈಗೇನೋ ವಿಶ್ವರೂಪವನ್ನು ತೋರಿಸಿದ್ದೀಯೇ, ಅಭಿಮುಖ್ಯವುಂಟು ; ಪುನಃ ಪುನಃ ನಮಸ್ಕರಿಸುವೆನು, ಅದು ಇಲ್ಲದ ಕಾಲದಲ್ಲಿ, ನೀನು ನನಗೆ ಮುಂದೆಯೂ ಇರುತ್ತೀಯೇ ಹಿಂದೆಯೂ ಇರುತ್ತಿಯೇ ನಾಲ್ಕು ದಿಕ್ಕುಗಳಲ್ಲೂ, ಮೇಲೂ ಕೆಳಗೂ ಇರುವದರಿಂದ ಎಲ್ಲಾ ಕಡೆಗೂ ನಿನಗೆ ನಮಸ್ಕಾರವು. ಈ ವಿಶ್ವರೂಪದಿಂದಲೂ ನೀನು ಎಲ್ಲಾಕಡೆಯಲ್ಲೂ ಇರುವಹಾಗೆ ತೋರಿಸಿರುತ್ತೀಯೆ, ಎಂದು ಹೇಳುತ್ತಾರೆ. **ನಮಃ ಪುರಸ್ತಾತ್**-ಮುಂದುಗಡೆಯೂ ನಿನಗೆ ನಮಸ್ಕಾರವು, **ಅಥ**-ಅನಂತರ, **ಪೃಷ್ಠತಃ**-ಹಿಂದೆಯೂ ನಮಸ್ಕಾರವು, ಯಾರಿಗೆ ಮುಂದು ಹಿಂದು ಹೇಳಲ್ಪಟ್ಟಿತೆಂಬ ವಿವೇಚನೆಯಲ್ಲಿ ವಿಶ್ವರೂಪಧಾರಿಯಾಗಿ ಎಲ್ಲಾ ಕಡೆಯಲ್ಲೂ ಸರ್ವೇಶ್ವರನು ಇರುವದರಿಂದ, ತನ್ನ ಮುಂದೆಯೂ ತನ್ನ ಹಿಂದೆಯೂ ಸಹ ಆ ವಿಶ್ವರೂಪವಿರುವದರಿಂದ, ಅರ್ಜುನನಾದ ತನ್ನ ಮುಂದೆ ಇರುವ ತನ್ನ ಹಿಂದೆ ಇರುವ ಭಗವಂತನಿಗೆ ನಮಸ್ಕಾರವೆಂಬ ಭಾವವು. ಅದೇಕೆ ಮುಂದೆ ಹಿಂದೆ ಸಹ ನಮಸ್ಕಾರವು ಎಂದು ಕೇಳಿದರೆ, **ನಮೋಽಸ್ತುತೇ ಸರ್ವತಃ**-ನೀನು ಎಲ್ಲಾ ಕಡೆಯಲ್ಲೂ ಇರುವಹಾಗೆ ತೋರಿಬರುವದರಿಂದ ಎಲ್ಲಾ ಕಡೆಯಲ್ಲೂ ನಿನಗೆ ನಮಸ್ಕಾರವು, ಆದುದರಿಂದಲೇ ಸಂಧ್ಯೋಪಾಸನಗಳಲ್ಲಿ **ಪ್ರಾಚ್ಯೈದಿಶೇನಮಃ** ಎಂದಾರಂಭಿಸಿ, **ಊರ್ಧ್ವಾಯನಮಃ, ಅಧರಾಯನಮಃ** ಎಂದು ಹೇಳುವಹಾಗೆ **ಸರ್ವತಃ**-ಎಲ್ಲಾ ಕಡೆಯಲ್ಲೂ ಶ್ರೀ ಮಹಾವಿಷ್ಣುವಿಗೆ ನಮಸ್ಕಾರವು. ಆ ಕಾರಣದಿಂದಲೇ ಅರ್ಜುನನು, **ಹೇ ಸರ್ವ**-ಓ ಸರ್ವಾತ್ಮಕನೇ ಎಂದು ಸಂಬೋಧಿಸುತ್ತಾನೆ; ಹೀಗೆ ಸಂಬೋಧಿಸಿದುದರಿಂದ ತನ್ನ ಆಶಯ

ವೇನು ಎಂಬುದನ್ನೂ ಮುಂದೆ **ಸರ್ವಂ ಸಮಾಪ್ನೋಷಿ ತತೋಽಸಿಸರ್ವಃ** ಎಂಬಲ್ಲಿ ಸರ್ವಃ ಎಂದು ಹೇಳಲ್ಪಡಲು ಕಾರಣವೇನೆಂಬುದನ್ನೂ ತಾನೇ ವ್ಯಕ್ತಮಾಡುತ್ತಾನೆ. ಸರ್ವ ಚಿದ ಚಿದಾತ್ಮಕವಾದ ವಿಶ್ವವೂ ತನಗೆ ಶರೀರವಾಗಿ ತಾನು ಯಾವುದನ್ನೂ ವಿಸ್ಮೃತಿಯೇ ಮೊದ ಲಾದವುಗಳಿಲ್ಲದೆ, ಉಪೇಕ್ಷಿಸದೆ, ಹೀಗೆ ಎಲ್ಲಾದಕ್ಕೂ ಆತ್ಮಾವಾಗಿರುವದರಿಂದ ಸರ್ವಸಾಮಾ ನಾಧಿಕರಣ್ಯವಿರುವದರಿಂದ ಸರ್ವಶಬ್ದವಾಚ್ಯತ್ವಉಂಟಾಗುವದರ ಮೂಲಕ **ಸರ್ವನು. ಈ** ಸರ್ವಶಬ್ದವು ಪರಮಾತ್ಮನಿಗೆ ವಿಷ್ಣು ಸಹಸ್ರನಾಮದಲ್ಲಿ ೨೫ ನೆಯ ನಾಮವು, ಅಲ್ಲಿ **ಈ** ಗೀತಾ ಶ್ಲೋಕವೇ ಭಾಷ್ಯದಲ್ಲಿ ಉದಾಹೃತವು. **ಸೃಗತೌ** ಎಂಬ ಧಾತುವಿನಿಂದ ಉಂಟಾದುದಾಗಿ, **"ಸರ್ವೇಗತ್ಯರ್ಥಾಃ ಜ್ಞಾನಾರ್ಥಾಃ"** ಎಂದಿರುವದರಿಂದ ಧಾತುವು ಜ್ಞಾನವಾಚಕವು; ಎಲ್ಲವೂ ತನಗೆ ಶರೀರವು, ತಾನು ಎಲ್ಲಕ್ಕೂ ಆತ್ಮನು, ಎಂಬ ಜ್ಞಾನವು ಸದಾ ಇರುವದರಿಂದ, ಆತನು **ಸರ್ವನೆನಿಸುವನು. "ಸರ್ವಸ್ಯ ಚ ಸದಾ ಜ್ಞಾನಾತ್ ಸರ್ವಮೇನಂ ಪ್ರಚಕ್ಷತೇ"** ಎಂಬ ನಿರ್ವಚನವು ಅನುಸಂಧೇಯವು. **ಈ** ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ನಮಸ್ಕಾರಗಳು ಕಾಲ ವನ್ನು ಮನಸ್ಸಿನಲ್ಲಿಟ್ಟೂ ಉತ್ತರಾರ್ಧದಲ್ಲಿ ದೇಶವನ್ನು ಮನಸ್ಸಿನಲ್ಲಿಟ್ಟೂ ಹೇಳಲ್ಪಟ್ಟವೆಂದು ಭಾವಿಸಿ, ಓ ವಿಶ್ವಾತ್ಮಕನಾಗಿ ಸರ್ವ ಶಬ್ದವಾಚ್ಯನಾಗಿ ಸರ್ವ ಎಂಬ ಸಂಬೋಧನೆಗೆ ಅರ್ಹನೇ! ಮಹೋಪಕಾರಿಯಾದ ನಿನಗೆ ಕೃತಜ್ಞತಾಸೂಚಕವಾಗಿ ಸರ್ವಕಾಲ ಸರ್ವದೇಶಗಳಲ್ಲೂ ನಮ ಸ್ಕಾರಮಾಡಿದರೂ ತೀರದೆಂದು ಅರಿಕೇ ಮಾಡಿಕೊಂಡಿರುತ್ತಾನೆ. **ಈ** ಶ್ಲೋಕದಲ್ಲಿ **ಸಹಸ್ರಕೃತ್ವಃ** ಎಂಬ ಪದವು, ಮಂತ್ರ ಪುನಶ್ಚರಣೆ ಗಾಯಿತ್ರ್ಯಾದಿ ಮಂತ್ರಜಪ ಇವುಗಳಹಾಗೆ **"ನಮೋ ನಮಃ"** ಎಂದು ಸಾವಿರಸಲ ಮಾಡತಕ್ಕದ್ದೆಂದು ತೋರಿಬರುತ್ತದೆ. ಅಷ್ಟುಸಲ ದಂಡವತ್ಪ್ರ ಣಾಮಗಳಿಗೆ ಯುದ್ಧಾರಂಭದಲ್ಲಿ ಅನುಕೂಲವಿಲ್ಲದುದರಿಂದ **"ನಮೋನಮಃ"** ಎಂಬ ಮಂತ್ರದ ಸಹಸ್ರಾವರ್ತಿ ಗಾಯತ್ರ್ಯಾದಿ ಮಂತ್ರಗಳಹಾಗೆ ಪುನಶ್ಚರಣೆಯು, **ನಮೋವಾಕ ಮಧೀಮಹೇ** ಎಂದು ಶ್ರೀ ದೇಶಿಕರವರು ಹೇಳಿರುವ ಹಾಗೆ ಬೋಧಿತವು. ಇದರಲ್ಲಿ ಮೊದಲಿನ ನಮಸ್ಸು ಅಖಂಡ ನಮಸ್ಸು ತಾನು ಸರ್ವೇಶ್ವರನಲ್ಲಿ ಮಾಡಿದ ಶರಣಾಗತಿಯ ಅನುಷ್ಠಾನದ ಅನುವಾದರೂಪವಾಗಿ ತನ್ನ ನಿರುಪಾಧಿಕ ಶೇಷತ್ವವನ್ನು ಬೋಧಿಸುತ್ತದೆ. ಎರಡನೆಯ **ನಮಃ** ಎಂಬುದು ಸಖಂಡ ನಮಸ್ಸು, **ಮಃ ನ** ಎಂದಾಗುತ್ತದೆ, ಅಂತಹ ಕೈಙ್ಕರ್ಯವು ತನ ಗಲ್ಲವೆಂಬ ಮಮತಾ ತ್ಯಾಗವನ್ನು, **ನಮಮ** ಎಂಬ ಶಬ್ದಗಳಿಂದ ಬೋಧಿತವಾದ ಅರ್ಥವನ್ನು ತಿಳಿಸುತ್ತದೆ, ಆದುದರಿಂದ **ನಮೋ ನಮಃ** ಎಂದು ಎರಡುಸಲ ಹೇಳುವ ಮಂತ್ರವು ಅರ್ಥ ಗರ್ಭಿತವಾದುದು. ಇದು ಸಹಸ್ರಾವರ್ತಿ ಆವರ್ತಿಸತಕ್ಕದ್ದೆಂಬ ಭಾವವೂ ತೋರಿಬರುತ್ತದೆ. **ನಮೋ ನಮಃ** ಎಂಬಲ್ಲಿ ಎರಡು ಪದಗಳಿಗೂ ಒಂದೇ ಅರ್ಥವೆಂದು ಅಭಿಪ್ರಾಯವಾದು ದಾದರೆ, ಕೃತಜ್ಞತಾಸೂಚಕ ಪ್ರಣಾಮವು ಒಂದೇಸಲ ಮಾಡತಕ್ಕದ್ದಲ್ಲವು, ಪುನಃಪುನಃ ಮಾಡತಕ್ಕದ್ದೆಂದೂ ಹಾಗೆ ಪುನಃ ಪುನಃ ಮಾಡುವಾಗ **"ಪ್ರದಕ್ಷಿಣ ನಮಸ್ಕಾರಾ ಯುಗ್ಮೇ ನೈವ ಕುರ್ಯಾತ್"** ಎಂದು ಶಾಸ್ತ್ರವನ್ನನುಸರಿಸಿ ಮಾಡತಕ್ಕದ್ದೆಂಬುದೂ ಸೂಚಿತವು. **ಶ್ರೀ** ಭಾಷ್ಯಕಾರರ ಕಾಲದಲ್ಲಿ ನಮಸ್ಕರಿಸುವ ಸಂಪ್ರದಾಯವು ಒಂದೇ ಸಲವೇ, ಅನೇಕಸಲವೇ ಎಂಬ ಸಂದೇಹದಲ್ಲಿ ಗುರುಪರಂಪರಾ ಸಾರದ ೮, ೯ ನೆಯ ಪುಟಗಳನ್ನು ಪರಾಂಬರಿಸಿ ಒಂದು ಪ್ರಣಾಮದಿಂದಲೇ ಕೃಪಾಸಾಗರನು ಪ್ರಸನ್ನನಾದರೂ, ಕೃತಜ್ಞತಾಪ್ರದರ್ಶನಕ್ಕೆ ಅನೇಕಸಲ ಪ್ರಣಾಮಗಳೇ ಅವಶ್ಯಕವು ಎಂಬುದನ್ನು ಈ ಶ್ಲೋಕವು ಶಿಕ್ಷಿಸುತ್ತದೆ

**ಭಾ. ಅತ್ಯದ್ಭುತಾಕಾರಂ ಭಗವನ್ತಂದೃಷ್ಟ್ವಾ ಹರ್ಷೋತ್ಫುಲ್ಲನಯನೋಽತ್ಯನ್ತ ಸಾಧ್ವ ಸಾವನತ ಸ್ಸರ್ವತೋ ನಮಸ್ಕರೋತಿ ॥೩೯॥**

---

**ಮೂ. ಅನಂತವೀರ್ಯಾ ಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿಸರ್ವಃ ॥**

---

**ಭಾಷ್ಯಾರ್ಥವು :—**ಹೀಗೆ ಅರ್ಜುನನು ಪುನಃಪುನಃ ನಮಸ್ಕರಿಸಲು ಕಾರಣವೇನೆಂದರೆ ಹೇಳುತ್ತಾರೆ—**ಅತ್ಯದ್ಭುತಾಕಾರಂ**-ಅತ್ಯಂತ ಅದ್ಭುತವಾದ ಆಕಾರವುಳ್ಳ, **ಭಗವನ್ತಂದೃಷ್ಟ್ವಾ** ಭಗವಂತನನ್ನು ನೋಡಿ, ಅತಿಮಾನುಷವಾದ ಆಕಾರವುಳ್ಳವನೆಂದು ಯಾವಾಗ ನೋಡಿದನೋ ಆಗ ಆತನಲ್ಲಿ ಭಕ್ತಿ ವಿಶ್ವಾಸಗಳೂ, ತನ್ಮೂಲಕವಾಗಿ ಹರ್ಷವೂ, ಅಥವಾ ತನಗೆ ಐಹಿಕ ಶ್ರೇಯಸ್ಸೇ ಮೊದಲಾದವುಗಳನ್ನುಂಟುಮಾಡುವುದನ್ನು ಸೂಚಿತವಾದುದರಿಂದಾಗಲಿ ಹರ್ಷವೂ, ಅಥವಾ ಇಂತಹ ವಿಶ್ವರೂಪದರ್ಶನಕ್ಕೆ ತನ್ನಂತಹ ಸಾಮಾನ್ಯ ಪುರುಷನನ್ನು ಯೋಗ್ಯನನ್ನಾಗಿ ಭಾವಿಸಿದನೇ, ಇಂತಹ ಪರತ್ವವನ್ನು ಹೊಂದಿದ್ದರೂ, ಈತನ ಸೌಲಭ್ಯವೇನು, ಸೌಶೀಲ್ಯ ವೇನು, ವಾತ್ಸಲ್ಯವೇನು, ಔದಾರ್ಯವೇನು ಎಂದಾಗಲಿ ಹರ್ಷವುಂಟಾಯಿತೆಂದು ಹೇಳಿ, ಅದ ಕ್ಕಾಗಿ ಕೃತಜ್ಞತಾಭಾವದಿಂದ ಸರ್ವತಃ ನಮಸ್ಕಾರಮಾಡುತ್ತಾನೆಂದು ಹೇಳುತ್ತಾರೆ—**ಹರ್ಷೋತ್ಫುಲ್ಲ ನಯನಃ**-ಹರ್ಷದಿಂದ ವಿಕಸಿತವಾದ ಕಣ್ಣುಗಳುಳ್ಳ ಅರ್ಜುನನು, **ಅತ್ಯನ್ತ ಸಾಧ್ವಸಾವನತಃ**-ಅತ್ಯಂತ ಭಯದಿಂದ ನಮ್ರನಾಗಿ, **ಸರ್ವತಃ**-ಎಲ್ಲಾ ಕಡೆಯಲ್ಲೂ, **ನಮಸ್ಕರೋತಿ**-ತಾನೇ ಪ್ರದಕ್ಷಿಣೆಯನ್ನು ಮಾಡುತ್ತಾ ನಮಸ್ಕಾರ ಮಾಡುತ್ತಾನೆ ॥೩೯॥

**ಮೂಲಕ್ಕೆ ಅರ್ಥವು :—**ಸರ್ವವಿಶ್ವವೂ ತನಗೆ ಶರೀರವೆಂದೂ, ತಾನು ಎಲ್ಲಕ್ಕೂ ಆತ್ಮಾವೆಂದೂ, ಪರಮಾತ್ಮನು ಅರ್ಜುನನಿಗೆ ಉಪದೇಶಿಸಿದನು ; ಆದರಿಂದಲೇ ಸಮಸ್ತಕ್ಕೂ ಪರಮಾತ್ಮನು ಆಧಾರವು. ತಾನು ಆಧೇಯನು ; ಆತನು ನಿಯಾಮಕನು, ತಾನು ನಿಯಾಮ್ಯನು, ಆತನು ಶೇಷಿಯು ಸ್ವಾಮಿಯು, ತಾನು ಶೇಷನು ದಾಸನು ; ಇತ್ಯಾದಿಗಳನ್ನು ಗ್ರಹಿಸಿದುದನ್ನೆಲ್ಲಾ ಹಿಂದೆ ಆಯಾಸ್ಥಳಗಳಲ್ಲಿ ಅರಿಕೆಮಾಡಿಕೊಂಡರು. ೧೦ ನೆಯ ಅಧ್ಯಾಯದ ೩೯ ನೆಯ ಶ್ಲೋಕದಲ್ಲಿ ಪರಮಾತ್ಮನು ಈ ವಿಶ್ವಕ್ಕೆಲ್ಲಾ ಆತ್ಮಾವಾಗಿರುವ ಭಾವವನ್ನು ಹೇಳಿದುದರಿಂದ, ಪರಮಾತ್ಮನಿಗೆ ವಿಶ್ವದೊಂದಿಗೆ ಸಾಮಾನಾಧಿಕರಣ್ಯವೂ ಆದರಿಂದ ಸರ್ವ ಶಬ್ದವಾಚ್ಯತ್ವವೂ ಬೋಧವಾಗುವ ಹಾಗೆ ಶ್ರೀ ಕೃಷ್ಣಭಗವಾನರವರು ಹೇಳಿದ್ದರು. ಅದನ್ನೇ ಗ್ರಹಿಸಿದವನಾಗಿ, ಆದರಿಂದ ಹಿಂದಿನ ಶ್ಲೋಕದಲ್ಲಿ, ಸರ್ವ ಎಂದು ಸಂಬೋಧಿಸಿ, ಭಗವಂತನು ಸರ್ವನು ಹೇಗೆ ಎಂಬುದನ್ನು ಅನುವಾದಮಾಡಿ ಹೇಳುತ್ತಾನೆ.—

**ಹೇ ಅನಂತ ವೀರ್ಯ**-ಇಲ್ಲಿ ಅನಂತವೀರ್ಯ ಎಂದು ಸಂಬೋಧಿಸಿ, ನೀನು ಅಮಿತವಿಕ್ರಮನು ಎಂದು ಹೇಳಲು ಪ್ರಸಕ್ತಿ ಏನೆಂದು ಪರ್ಯಾಲೋಚಿಸಿದರೆ, ಅರ್ಜುನನು ಅನುವಾದಮಾಡಿ ಹೇಳುವ ಸರ್ವಶಬ್ದವಾಚ್ಯತ್ವಕ್ಕೆ ಸಹಕಾರಿಯಾದ ಪದಗಳೆಂದೇ ಚನ್ನಾಗಿ ತೋರಿಬರುತ್ತದೆ. ಓ ಅಪರಿಮಿತವಾದ ವೀರ್ಯವುಳ್ಳವನೇ, ಈ ಸಂಬೋಧನೆಯು ಏತಕ್ಕೆ ಎಂದರೆ, ಪರಮಾತ್ಮನು ಈ ನಿಕೃಷ್ಟಗಳಾದ ಚೇತನಾಚೇತನಗಳ ಸಂಬಂಧವನ್ನು ಹೊಂದಿ, ಅವುಗಳನ್ನು ತನಗೆ ಶರೀರವಾಗಿ ಮಾಡಿಕೊಂಡು, ಅವುಗಳಿಗೆಲ್ಲಾ ತಾನು ಆತ್ಮಾವಾಗಿ, ಹೀಗೆ ಅವುಗಳೊಂದಿಗೆ ಏಕೀಭವಿಸಿರುತ್ತಾನೆ ; ಅಚಿತ್ತು ಸ್ವರೂಪಸ್ವಭಾವವಿಕಾರವುಳ್ಳದ್ದು. ಚೇತನನಿಗೆ **"ಪ್ರಕೃತಿಸ್ಥೋಽಪಿ ಪುರುಷಃ**-(ಜೀವಾತ್ಮನು) **ನಾಜ್ಯತೇ ಪ್ರಾಕೃತೈರ್ಗುಣೈಃ"** ಎಂದೂ, (ಭಾಗ ೩-೭೭.೧) **"ಪರಂಜ್ಯೋತಿ ರುಪಸಂಪದ್ಯ ಸ್ವೇನರೂಪೇಣಾಭಿ ನಿಷ್ಪದ್ಯತೇ"** (ಛಾಂ. ೮-೧೨.೨)

ಎಂದೂ ಹೇಳಿರುವಹಾಗೆ, ಸ್ವರೂಪವಿಕಾರವಿಲ್ಲದೆ ಸ್ವಭಾವವಿಕಾರ ಮಾತ್ರ ಉಂಟು. ಹೀಗೆ ನಾಸ್ತಿ ಅಸ್ತಿ ಶಬ್ದಗಳಿಂದ ಗ್ರಹಿಸಲ್ಪಡುವ ಹೇಯ ವಸ್ತುಗಳ ಸಂಬಂಧವು, ನಿನಗೆ ಸದಾ ಇದ್ದರೂ, ಅವುಗಳ ದಶೆಯಿಂದ ನಿರ್ವಿಕಾರವಾಗಿರುವ ಶಕ್ತಿಯು ನಿನಗಿರುವದರಿಂದ, **ಹೇ ಅನಂತವೀರ್ಯ** ಎಂಬ ಸಂಬೋಧನೆಯು, **ಅಚಿತ್ತು** ಕೆಸರು ರೂಪವಾದುದು- **ಚಿತ್ತು** ವಜ್ರದ ಹಾಗೆ ಇರುವದು, ಈ ಕೆಸರಿನಲ್ಲಿ ಬಿದ್ದಿರುವದರಿಂದ ಕೆಸರು ಅಂಟಿರುತ್ತದೆ ಜ್ಞಾನಕರ್ಮಾನುಷ್ಠಾನಗಳಿಂದ ಆ ಕೆಸರನ್ನು ತೊಳೆಯಬಹುದು. ತೊಳೆದನಂತರ "**ಸ್ವೇನರೂಪೇಣಾಭಿನಿಷ್ಪದ್ಯತೇ**" ಎಂದು ಶ್ರುತಿಯು ಹೇಳುತ್ತದೆ. ಇವುಗಳೊಂದಿಗೆ ಇರುವ ಪರಮಾತ್ಮನು ಇನ್ನೂ ವಿಜಾತೀಯ ವಜ್ರವು, ಪದ್ಮ ಪತ್ರದಹಾಗೆ ಅವಕ್ಕೆ ಕೆಸರು ಅಂಟುವದೇ ಇಲ್ಲವು ಎಂದು ಗ್ರಹಿಸತಕ್ಕದ್ದು. ಇಷ್ಟೇಅಲ್ಲವು. **ಅಮಿತವಿಕ್ರಮಸ್ತ್ವಂ**- ನೀನು ಇಷ್ಟೆಂದು **ಹೇಳಲು** ಸಾಧ್ಯವಲ್ಲದ ಪರಾಕ್ರಮವುಳ್ಳವನು, ಇದರಿಂದ ನೀನು ಎಲ್ಲಾ ಅನಂತಗಳಾದ **ಚಿದಚಿತ್ತು**ಗಳಿಗೂ ಆತ್ಮಾವಾಗಿ, ಅವುಗಳನ್ನೆಲ್ಲಾ ಪ್ರವೇಶಿಸಿ, ಧರಿಸಿ, ನಿಯಮಿಸುವ ಬಲವುಳ್ಳವನು ಈ ಅದ್ಭುತ ಪರಾಕ್ರಮವು ನಿನ್ನನ್ನು ಬಿಟ್ಟರೆ ಇನ್ನಾರಿಗೂ ಇಲ್ಲವೆಂಬ ಭಾವವು. ಈ ಎರಡು ನಾಮಗಳನ್ನು ವಿಷ್ಣು ಸಹಸ್ರನಾಮದಲ್ಲೂ ಮಹರ್ಷಿಯು ಪ್ರಯೋಗಿಸಿರುತ್ತಾರೆ. **ಅನಂತವೀರ್ಯ** ಶಬ್ದಕ್ಕೆ ಬದಲಾಗಿ **ಮಹಾವೀರ್ಯಃ** ಎಂಬ ಪ್ರಯೋಗವಿರುತ್ತದೆ, ಎರಡರರ್ಥ**ವೂ** ಒಂದೇ. ಹೀಗೆ ಚಿದಚಿದ್ವಸ್ತುಗಳೆಲ್ಲಕ್ಕೂ ಆತ್ಮಾವಾಗಿ ಸಂಬಂಧವಿದ್ದರೂ ನಿರ್ವಿಕಾರನಾಗಿ ಎಲ್ಲವನ್ನೂ ನಿಯಮಿಸುವ ಪರಾಕ್ರಮವುಳ್ಳವನಾಗಿ, **ಸರ್ವಂ ಸಮಾಪ್ನೋಷಿ**-ವಿಶ್ವದಲ್ಲಿರುವ ಸಮಸ್ತವನ್ನೂ ನೀನು ಶರೀರವಾಗಿ ಹೊಂದಿ ಅವುಗಳಲ್ಲಿ ವ್ಯಾಪಿಸಿರುವೆ. **ತತಃ**-ಆ ಕಾರಣದಿಂದಲೇ. **ಸರ್ವಃ ಅಸಿ**-ಸರ್ವವೂ ನೀನೆ ಆಗಿದ್ದೀ, ಸರ್ವವೆಂಬ ಶಬ್ದ ವಾಚ್ಯನೂ ನೀನೇ ಎಂಬ ಭಾವವು ಸರ್ವವೂ ಆತನೇಯಾದುದರಿಂದ ಸರ್ವಶಬ್ದವಾಚ್ಯತ್ವವೂ ಆತನಿಗೆ ಉಂಟು ಎಂಬುದು ಮುಖ್ಯ ತಾತ್ಪರ್ಯವು. ರಥವೆಂದರೆ ತಚ್ಛರೀರಕ ಪರಮಾತ್ಮನು ಎಂದೂ, ಬಾಲನೆಂದರೆ ತಚ್ಛರೀರಕ ಪರಮಾತ್ಮನೂ ಎಂದೂ ಹೇಳಲ್ಪಟ್ಟಿತು. ಹೀಗೆ ಸರ್ವ ಶಬ್ದವಾಚ್ಯತ್ವಕ್ಕೂ ಹೇತು ಯಾವುದೆಂದರೆ, **ಸರ್ವಂ ಸಮಾಪ್ನೋಷಿ**-ಸಮಸ್ತ ವಿಶ್ವವನ್ನೂ ಆತ್ಮಾವಾಗಿ ಹೊಂದಿರುವದು ಎಂದು ಹೇಳಿರುತ್ತಾರೆ. ಈ ಅಭಿಪ್ರಾಯವನ್ನನುಸರಿಸಿಯೇ ಶ್ರೀ ದೇಶಿಕರವರೂ ಈ ಮುಂದಿನ ಶ್ಲೋಕದಲ್ಲಿ ಸರ್ವಶಬ್ದವಾಚ್ಯತ್ವಕ್ಕೆ ಹೇತುವನ್ನು ಉಪಪಾದಿಸಿರುತ್ತಾರೆ. "**ವಿಶ್ವಂ ಶುಭಾಶ್ರಯವದೀಶವಪುಸ್ತ್ವದೀಯಂ ಸರ್ವಾಗಿರಸ್ತ್ವಯಿಪತಂತಿ ತತೋಽಸಿ ಸರ್ವಃ**" ಎಂದು ಶರಣಾಗತಿ ದೀಪಿಕೆಯ ೭ ನೆಯ ಶ್ಲೋಕದಲ್ಲಿ ಹೇಳಿರುತ್ತಾರೆ. **ಹೇ ಈಶ**-ಓ ಸರ್ವಕ್ಕೂ ಸ್ವಾಮಿಯಾಗಿ ನಿಯಾಮಕನಾಗಿರುವ ಸರ್ವೇಶ್ವರನೇ, **ಶುಭಾಶ್ರಯವತ್**-ನಿನ್ನ ದಿವ್ಯಮಙ್ಗಳ ವಿಗ್ರಹದಹಾಗೆ, **ವಿಶ್ವಂ**-ವಿಶ್ವವೆಲ್ಲವೂ, **ವಪುಸ್ತ್ವದೀಯಂ**-ನಿನಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಯಾವಾಗಲೂ ಶರೀರವು, ಇದರಿಂದ ನೀನು ಎಲ್ಲಕ್ಕೂ ಆತ್ಮಾವೆಂಬುದನ್ನು ಬಹು ಚನ್ನಾಗಿ ಹಿಂದಿನ ಆರನೆಯ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ; ಆದುದರಿಂದಲೇ ಸಾಮಾನಾಧಿಕರಣ್ಯವು ಎಂದು ಹೇಳುತ್ತಾರೆ. **ಸರ್ವಾಗಿರಃ**-ಎಲ್ಲಾ ವಿಶ್ವದ ಚಿದಚಿತ್ತುಗಳನ್ನೂ ವ್ಯವಹರಿಸುವ ಮಾತುಗಳೆಲ್ಲಾ **ತ್ವಯಿಪತಂತಿ**-ನಿನ್ನಲ್ಲೇ ಬಂದು ಬೀಳುತ್ತವೆ, ನಿನ್ನನ್ನೇ ಬೋಧಿಸುತ್ತವೆ, ಎಂಬ ಭಾವವು. ಆದುದರಿಂದಲೇ **ತತೋಽಸಿಸರ್ವಃ**-ನೀನು **ಸರ್ವಃ** ಎಂದು ಹೇಳಿಸಿಕೊಂಡು, ಸರ್ವ ಶಬ್ದ ವಾಚ್ಯತ್ವವು ನಿನಗೆ ಸಲ್ಲುತ್ತದೆಂದು ಹೇಳಿರುತ್ತಾರೆ. **ಅನಂತವೀರ್ಯಾಮಿತವಿಕ್ರಮಃ** ಎಂಬುದನ್ನು ಒಂದೇ ಪದವಾಗಿ ಶ್ರೀಮಚ್ಛಂಕರಾಚಾರ್ಯರು ಭಾವಿಸಿರುತ್ತಾರೆ, ಆಗ ವೀರ್ಯಕ್ಕೆ ಅನಂತ ವಿಶೇಷಣವೂ, ವಿಕ್ರಮಕ್ಕೆ ಅಮಿತ ವಿಶೇಷಣವೂ ಏಕೆ ಎಂಬುದನ್ನು

**ಭಾ. ಅನನ್ತವೀರ್ಯ-ಅಪರಿಮಿತ ವೀರ್ಯ, ಅಪರಿಮಿತ ಪರಾಕ್ರಮಸ್ತ್ವಂ ಸರ್ವ ಮಾತ್ಮತಯಾ ಸಮಾಪ್ನೋಷಿ, ತತಸ್ಸರ್ವೋಽಸಿ, ಯತಸ್ತ್ವಂ ಸರ್ವಂಚಿದಚಿದ್ವಸ್ತುಜಾತ ಮಾತ್ಮತಯಾ ಸಮಾಪ್ನೋಷಿ, ಅತಃ ಸರ್ವಸ್ಯ ಚಿದಚಿದ್ವಸ್ತುಜಾತಸ್ಯ ತ್ವಚ್ಛರೀರ ತಯಾ ತ್ವತ್ಪ್ರಕಾರತ್ವಾತ್ಸರ್ವಪ್ರಕಾರ ಸ್ತ್ವಮೇವ, ಸರ್ವಶಬ್ದವಾಚ್ಯೋಽಸೀತ್ಯರ್ಥಃ;**

ತಿಳಿಸಬೇಕಾಗುತ್ತದೆ; ಆದಕ್ಕಾಗಿ ಅನಂತ ವೀರ್ಯವುಳ್ಳವನಾಗಿದ್ದರೂ ಮಂದ ಪರಾಕ್ರಮಿಯಾಗ ಬಹುದು, ಹಾಗಲ್ಲದೆ ಅಮಿತಪರಾಕ್ರಮಿಯು ಎಂದರ್ಥಮಾಡಿರುತ್ತಾರೆ.

**ಭಾಷ್ಯಾರ್ಥವು:**—ಮೊದಲು ಮೂಲಕ್ಕೆ ಅನ್ವಯವನ್ನು ಪ್ರದರ್ಶಿಸಿ, ಅದಕ್ಕೆ ಭಾಷ್ಯವನ್ನು ಅನುಗ್ರಹಿಸುತ್ತಾರೆ—**ಹೇ ಅನಂತವೀರ್ಯ** ಎಂದರೆ ಅಪರಿಮಿತವಾದ ವೀರ್ಯವುಳ್ಳವನೇ, ವೀರ್ಯವೆಂದರೆ ಎಂತಹ ಪ್ರವೃತ್ತಿಯಲ್ಲೂ ವಿಕಾರವನ್ನು ಹೊಂದದೇ ಇರುವ ಶಕ್ತಿಯು; ಹಿಂದೆಯೇ ಅವತಾರಿಕೆಯಲ್ಲಿ ಇದು ಉಪಪಾದಿತವು, ಅಪರಿಮಿತವಾದ ಪರಾಕ್ರಮವುಳ್ಳವನು ನೀನು, ಇಲ್ಲಿ ಪರಾಕ್ರಮವು ಯಾವುದು ಎಂದರೆ, ತನ್ನ ಸಙ್ಕಲ್ಪಮಾತ್ರದಿಂದಲೇ ನಿರ್ವಹಿಸುವ ಶಕ್ತಿಯು; ತಾನು ಎಲ್ಲವನ್ನೂ ವ್ಯಾಪಿಸಿರುವದರಿಂದ, ಅವುಗಳ ಧಾರಣೆ, ನಿಯಮನಾದಿಗಳೇ ಇಲ್ಲಿ ಮುಖ್ಯವಾಗಿ ಪರಾಕ್ರಮಶಬ್ದದಿಂದ ಬೋಧಿತವು. ತನ್ನ ಸಙ್ಕಲ್ಪಾನುಸಾರವಾಗಿ ಅಪ್ರತಿಹತವಾಗಿ ಇದನ್ನೆಲ್ಲಾ ನಡೆಸುವ ಸಾಮರ್ಥ್ಯವು, ಅದನ್ನುಳ್ಳವನು ನೀನು, **ಸರ್ವಂ**-ಸಮಸ್ತವನ್ನೂ **ಆತ್ಮತಯಾ**-ಅವುಗಳಿಗೆ ಆತ್ಮಾವಾಗಿರುವದರಿಂದ, **ಸಮಾಪ್ನೋಷಿ**-ಅವುಗಳನ್ನೆಲ್ಲಾ ಚನ್ನಾಗಿ ವ್ಯಾಪಿಸಿ ಅವುಗಳೊಂದಿಗೇನೇ ಇರುತ್ತೀಯೇ, ಇತರರು **ಏಕೇನ ಆತ್ಮನಾವ್ಯಾಪ್ನೋಷಿ** ಎಂದು ಚೇತನದಲ್ಲೂ ಒಂದೇ ಆತ್ಮವೇ ಇರುವದು ಎಂದರ್ಥಮಾಡಿ, ಅದಕ್ಕೆ ವಿವರಣವಾಗಿ **"ತ್ವಯಾವಿನಾ ಭೂತಂ ನ ಕಿಂಚಿತ್ ಅಸ್ತೀತ್ಯಭಿಪ್ರಾಯಃ"** ಎಂದರೆ ನೀನಲ್ಲದೆ ಇನ್ನು ಯಾವುದೂ ಇಲ್ಲವೆಂಬಭಿಪ್ರಾಯವನ್ನು ತೋರಿಸಿರುತ್ತಾರೆ. **ಸರ್ವಂ**-ಎಂಬುದು ಕರ್ಮವು, **ತ್ವಂ** ಎಂಬುದು ಕರ್ತೃವು, **ಸಮಾಪ್ನೋಷಿ** ಎಂದು ಕ್ರಿಯಾಪದವಿರುತ್ತದೆ. ನೀನು ಎಲ್ಲವನ್ನೂ ವ್ಯಾಪಿಸಿರುತ್ತೀಯೇ ಎಂದರ್ಥವಾಗುವಾಗ, ನೀನಲ್ಲದೆ ಇನ್ನು ಯಾವುದೂ ಇಲ್ಲವೆಂಬ ತಾತ್ಪರ್ಯವು ಹೇಗಾಗುತ್ತದೆ? ಹಾಗೆ ಸರ್ವೇಶ್ವರನೊಬ್ಬನೇ ಇರುವದು, ನಾನೂ ಸರ್ವೇಶ್ವರನೇ, ಹೀಗೆ ಸ್ವತ್ವ ಇಲ್ಲದ ಸ್ವಾಮಿ ಎಂದು ಭಾವಿಸಿದರೂ, **ತತೋಽಸಿ ತತೋಽಸಿ ಸರ್ವಃ** ಎಂದು ನಿಗಮನ ವಾಕ್ಯವು ಹೇಗೆ ಕೂಡಿರುತ್ತದೆ? ಪ್ರತಿಜ್ಞಾವಾಕ್ಯವು ಪರಮಾತ್ಮನೊಬ್ಬನಲ್ಲದೆ ಇನ್ನು ಯಾವುದೂ ಇಲ್ಲ ಎಂದಾದರೆ, ನಿಗಮನ ವಾಕ್ಯವು **ತತೋಽಸಿ ಸರ್ವಃ** ಹೇಗಾದೀತು? **ತತೋಽಸಿ ಏಕಃ** ಎಂದಲ್ಲವೇ ನಿಗಮನ ವಾಕ್ಯವಿರಬೇಕು. ಅರ್ಜುನನೇನೂ ದಡ್ಡನಲ್ಲವು, ಶ್ರೀಕೃಷ್ಣನ ಉಪದೇಶವು ಅದ್ವೈತವಾಗಿದ್ದ ಪಕ್ಷದಲ್ಲಿ **ತತೋಽಸಿ ಏಕಃ** ಎಂದಲ್ಲವೇ ಹೇಳಬೇಕಾಗಿತ್ತು. ಹಾಗಾದರೆ ಅರ್ಜುನನಿಗೆ ಇಷ್ಟುದೂರ ಉಪದೇಶಿಸಿದ್ದರೂ ಭ್ರಮಜ್ಞಾನ ಹೋಗಲಿಲ್ಲವು, ಸಂಪೂರ್ಣವಾಗಿ ದಡ್ಡನೆಂದು ಹೇಳಬೇಕಾಗುತ್ತದೆ. ಅದ್ವೈತೋಪದೇಶವೇ ಎಲ್ಲಿಯೂ ಇಲ್ಲದೆ, ಭೇದೋಪದೇಶವೇ ಸರ್ವತ್ರವಿರುವದರಿಂದ **ತತೋಽಸಿ ಸರ್ವಃ** ಎಂದು ಹೇಳಿರುತ್ತಾನೆಂಬುದು ಸ್ಪಷ್ಟವು. ಇಷ್ಟುಮಾತ್ರವೇ ಅಲ್ಲದೆ ಬೃಹದಾರಣ್ಯಕ (೫-೭-೨೨) ಮಾಧ್ಯಂದಿನ ಪಾಠವಾದ **"ಯೋ ಆತ್ಮನಿತಿಷ್ಠನ್, ಆತ್ಮನೋಽನ್ತರೋ, ಯಂ ಆತ್ಮಾ ನ ವೇದ, ಯಸ್ಯಾತ್ಮಾ ಶರೀರಂ, ಯೋಽತ್ಮಾನಮನ್ತರೋ ಯಮಯತ್ಯೇಷತ ಆತ್ಮಾನ್ತ ರ್ಯಾಮ್ಯಮೃತಃ"** ಎಂಬ ಶೃತಿವಾಕ್ಯಕ್ಕೂ ವಿರೋಧವಾಗುತ್ತದೆ. ಈ ವಾಕ್ಯದಲ್ಲಿ ಎರಡು ಆತ್ಮರುಗಳು ಇರುವಹಾಗೆ ಹೇಳಿರುತ್ತದೆ, ಅದರಲ್ಲೊಬ್ಬನು ತನ್ನದೇಹಕ್ಕೆ ಆತ್ಮಾ, ಇನ್ನೊಂದು ತನ್ನ

**ಧಾ. (೧) "ತ್ವಮಕ್ಷರಂ ಸದಸತ್" (೨) "ವಾಯುರ್ಯಮೋಽಗ್ನಿಃ" ಇತ್ಯಾದಿ ಸರ್ವ ಸಾಮಾನಾಧಿಕರಣ್ಯ ನಿರ್ದೇಶಸ್ಯಾತ್ಮತಯಾ ವ್ಯಾಪ್ತಿರೇವ ಹೇತುರಿತಿ ಸುವ್ಯಕ್ತ ಮುಕ್ತಮ್ - "ತ್ವಯಾತತಂ ವಿಶ್ವಮನಂತರೂಪ," "ಸರ್ವಂ ಸಮಾಪ್ನೋಷಿ ತತೋಽಸಿಸರ್ವಃ" ಇತಿ ಚ ॥ ೪೦ ॥**

ಆತ್ಮಾವಿಗೂ ಆತ್ಮಾ ಎಂದು ಸ್ಫುಟವಾಗಿ ಬೋಧಿಸುತ್ತದೆ. ಈ ವಾಕ್ಯಕ್ಕೆ ಒಂದೇ ಆತ್ಮವಿರುವುದೆಂಬ ಅಭಿಪ್ರಾಯವು ವಿರೋಧವು. ಹಾಗೆಯೇ **"ಅನ್ತಃ ಪ್ರವಿಷ್ಟಶ್ಶಾಸ್ತಾ ಜನಾನಾಂ"** (ಅರಣ್ಯಕ) **"ಭೋಕ್ತಾಭೋಗ್ಯಂ ಪ್ರೇರಿತಾರಂ ಚ ಮತ್ವಾ"** (ಶ್ವೇ ೧ ೧೨) ಎರಡು ವಿಧ ಆತ್ಮರುಗಳುಂಟೆಂದು ವಿವೇಕಿಸಿ ಹೇಳುತ್ತವೆ. **"ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ"** (ಶ್ವೇ.೧೬) ಎಂಬಲ್ಲಿ ಭೇದವು ಇನ್ನೂ ಸುಸ್ಪಷ್ಟವು. ಹಾಗೆಯೇ **ಜ್ಞಾಜ್ಞೌದ್ವಾವಜಾ ಈಶನೀಶಾ" "ದ್ವಾಸುಪರ್ಣಾ"** ಇತ್ಯಾದಿ ಶೃತಿಗಳಿಗೂ ಏಕಾತ್ಮವಾದವು ವಿರೋಧವು; **"ಉತ್ತಮಃಪುರುಷಸ್ತ್ವನ್ಯಃ" "ಹೃದ್ದೇಶೇಽರ್ಜುನತಿಷ್ಠತಿ। ಭ್ರಾಮಯರ್ನ್ ಸರ್ವಭೂತಾನಿ" ಅಹಮಾತ್ಮಾಗುಡಾಕೇಶ ಸರ್ವಭೂತಾಶಯಸ್ಥಿತಃ" "ಮಾಮುಪೇತ್ಯ ಮಹಾತ್ಮಾನಃ" "ಅಹಂತ್ವಾ ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ" "ನ ತ್ವೇವಾಹಂ ಜಾತುನಾಸಂ"** ಇತ್ಯಾದಿ ಸ್ಮೃತಿವಾಕ್ಯಗಳಿಗೂ ವಿರೋಧವಾಗುತ್ತದೆ. ಬಾಧ್ಯ ಬಾಧಕ ಭಾವದಿಂದ ಇವೆಲ್ಲವೂ ನಮಗೆ ಸಮಂಜಸವು ಎಂದರೆ ಶೃತಿವಾಕ್ಯಗಳಿಗೆ ಪರಸ್ಪರ ವಿರೋಧವಿಲ್ಲದೆ ಸರ್ವಸಾಮಂಜಸ್ಯವಿರುವಾಗ ಬಾಧ್ಯ ಬಾಧಕ ಭಾವವನ್ನು ಕಲ್ಪಿಸಬಹುದೋ? **ನ ಹಿಂಸ್ಯಾತ್, ಪಶುಮಾಲಭೇತ** ಈ ವಾಕ್ಯಗಳು ಪರಸ್ಪರ ವಿರುದ್ಧವಾಗಿ ತೋರಿದರೂ, ಸಾಮಾನ್ಯ ವಿಶೇಷಪ್ರಕರಣ ಭೇದಗಳಿಂದ ಸಾಮಂಜಸ್ಯವೇ ಇರುವಾಗ ಬಾಧ್ಯ ಬಾಧಕವನ್ನು ಆರೋಪಿಸುವುದು ಯುಕ್ತವಲ್ಲವು. ಶೃತಿಯು ವಿಹಿತವಾದ ವಿಧಿ ಮತ್ತು ಉಪದೇಶವಾಕ್ಯಗಳಲ್ಲಿ ಬಾಧ್ಯವಾದುದನ್ನು ಎಂದಿಗೂ ಹೇಳಲಾರದು. ಉಪನಿಷದ್ವಾಕ್ಯಗಳಿಗೆ ಅಂತಹ ಭಾವವನ್ನು ಕಲ್ಪಿಸಿದರೆ ಅವುಗಳ ಮಾಹಾತ್ಮ್ಯೆಯೇ ಹೊರಟುಹೋಯಿತು. ಎಲ್ಲಾ ಉಪನಿಷದ್ವಾಕ್ಯಗಳು ಪರಸ್ಪರ ವಿರೋಧವಿಲ್ಲದೆ ಇರುವುವು ಎಂದು ಪೂರ್ಣ ನಂಬಿಕೆಯನ್ನಿಟ್ಟು ಅವುಗಳಿಗೆ ಪರಸ್ಪರ ವಿರೋಧವಿಲ್ಲದಹಾಗೆ ಅರ್ಥಮಾಡುವುದು ಶಾಸ್ತ್ರ ವಿಪಶ್ಚಿತ್ವಕ್ಕೆ ಯೋಗ್ಯವಾದುದು.

**ಅತಃ** - ಆಕಾರಣದಿಂದ **ಸರ್ವಸ್ಯ ಚಿದಚಿದ್ವಸ್ತುಜಾತಸ್ಯ** - ಸಮಸ್ತ ಚಿದಚಿದ್ವಸ್ತುಗಳೂ **ತ್ವಚ್ಛರೀರತಯಾ** - ಸರ್ವೇಶ್ವರನಾದ ನಿನಗೆ ಶರೀರವಾಗಿರುವದರಿಂದ **ತ್ವತ್ಪ್ರಕಾರತ್ವಾತ್**- ನಿನಗೆ ಸಂಬಂಧಪಟ್ಟವುಗಳಾದುದರಿಂದ, ಎಂದರೆ ನಿನಗೆ ಅಪೃಥಕ್ಸಿದ್ಧವಿಶೇಷಣಗಳಾಗಿರುವದರಿಂದ **ಸರ್ವಪ್ರಕಾರ ಸ್ತ್ವಮೇವ** - ಸಮಸ್ತಕ್ಕೂ ಸಂಬಂಧಿಸಿ ವಿಶೇಷ್ಯವಾಗಿರುವವನು ನೀನೇ **ಸರ್ವಶಬ್ದವಾಚ್ಯೋಽಸಿ** - ಸಮಸ್ತ ಶಬ್ದಗಳಿಂದಲೂ ಹೇಳಲ್ಪಡುವವನು ನೀನೇ ಎಂಬ **ತಾತ್ಪ**ರ್ಯವು. (೧) **"ತ್ವಮಕ್ಷರಂ ಸದಸತ್"** ನೀನೇ ಅಕ್ಷರ, ಸತ್, ಅಸತ್ ಶಬ್ದವಾಚ್ಯನು. ಈ ಶಬ್ದಗಳ ಅರ್ಥಗಳು ಹಿಂದೆಯೇ ಕೊಡಲ್ಪಟ್ಟಿವೆ. **ವಾಯುರ್ಯಮೋಽಗ್ನಿಃ** - ನೀನೇ ವಾಯು, ಯಮ, ಅಗ್ನಿಯು, ಇತ್ಯಾದಿ **ಸಾಮಾನಾಧಿಕರಣ್ಯ ನಿರ್ದೇಶಾತ್** - ಹೀಗೆಲ್ಲಾ ಸಾಮಾನಾಧಿಕರಣ್ಯವು ಹೇಳಲ್ಪಟ್ಟಿರುವದರಿಂದ, **ಆತ್ಮತಯಾ ವ್ಯಾಪ್ತಿರೇವ**-ಆ ಚಿದಚಿತ್ತುಗಳಿಗೆ ಆತ್ಮಾವಾಗಿರುವ ವ್ಯಾಪ್ತಿಯೇ, **ಹೇತುರಿತಿ**-ಕಾರಣವೆಂಬುದಾಗಿ, **ಸುವ್ಯಕ್ತಮುಕ್ತಂ** ತುಂಬಾ ಸ್ಪಷ್ಟವಾಗಿ ಹೇಳಲ್ಪಟ್ಟಿತು. ಎಲ್ಲಿ ಹೇಳಲ್ಪಟ್ಟಿತೆಂದರೆ—ಹಿಂದೆಯೂ ಹೇಳಲ್ಪಟ್ಟಿರು

(೧) ಗೀ ೧೧-೩೭ (೨)ಗೀ. ೧೧-೩೯.

ತ್ತದೆಂದೂ, ಈಗಲೂ ಹೇಳಲ್ಪಟ್ಟಿತೆಂದೂ, ಪ್ರಮಾಣಗಳನ್ನು ಪ್ರದರ್ಶಿಸುತ್ತಾರೆ. (೨) **"ತ್ವಯಾ ತತಂ ವಿಶ್ವಮನಂತರೂಪ"** (೩೮) ಎಂದು ಹೇಳಿರುವದೇ ಈಗಲೂ ಅನುವಾದ ಮಾಡಿ **ಸರ್ವಂ ಸಮಾಪ್ನೋಷಿ ತತೋಽಸಿಸರ್ವಃ** ಎಂದು ಹೇಳುತ್ತಾರೆ. ಸರ್ವಶಬ್ದವಾಚ್ಯತ್ವ ಉಂಟಾಗುವದಕ್ಕೆ ಕಾರಣವನ್ನು ಬಹು ಸ್ಫುಟವಾಗಿ ಉಪಪಾದಿಸಿ ಹೇಳುತ್ತಾರೆ ಕಾರಣವು ಶರೀರಾತ್ಮಭಾವವೇ ವಿನಾ ಇನ್ನು ಯಾವುದೂ ಅಲ್ಲವು ವಿಶ್ವವೆಲ್ಲಾ ಭಗವಂತನಿಗೆ ಶರೀರವು, ಭಗವಂತನು ಅವುಗಳಿಗೆಲ್ಲಾ ಆತ್ಮಾ ಆದುದರಿಂದ ಮನುಷ್ಯನೆಂಬ ಶಬ್ದವು ದೇಹವನ್ನು ಕುರಿತು ಹೇಳಿದುದಾದರೂ, ಆ ಮನುಷ್ಯನಲ್ಲಿರುವ ಆತ್ಮಾವನ್ನು ಹೇಗೆ ಹೇಳುತ್ತದೋ ಹಾಗೆಯೇ ವಿಶ್ವದ ಎಲ್ಲಾ ವಸ್ತುಗಳನ್ನೂ ಬೋಧಿಸುವ ಶಬ್ದಗಳೂ, ಅವುಗಳಿಗೆ ಆತ್ಮಾವಾಗಿರುವ ಭಗವಂತನನ್ನೇ ತತ್ತಚ್ಛರೀರಕ ಪರಮಾತ್ಮನೆಂದೇ ಬೋಧಿಸುತ್ತವೆ ಇದರಿಂದ ಭಗವಂತನಿಗೆ ಸರ್ವ ಸಾಮಾನಾಧಿಕರಣ್ಯವೂ, ಸರ್ವಶಬ್ದ ವಾಚ್ಯತ್ವವೂ ಕೂಡುತ್ತದೆಂದು ಉಪಪಾದಿಸುತ್ತಾರೆ. ಈ ಅರ್ಥವೇ ಹಿಂದೆ ೩೮ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಅದೇ ಈ ಶ್ಲೋಕದಲ್ಲೂ **ಸರ್ವಂ ಸಮಾಪ್ನೋಷಿ ತತೋಽಸಿಸರ್ವಃ** ಎಂದು ಅನುವಾದಮಾಡಲ್ಪಟ್ಟು ಸರ್ವಶಬ್ದವಾಚ್ಯತ್ವವು ಭಗವಂತನಿಗೆ ಉಂಟಾಗುವದಕ್ಕೆ **"ಅಹಮಾತ್ಮಾ ಗುಡಾಕೇಶ"** ಎಂದು ಹೇಳಿರುವಹಾಗೆ ವಿಶ್ವಕ್ಕೆಲ್ಲಾ ಆತ್ಮಾವಾಗಿರುವದರಿಂದ ಎಂದು ಸುವ್ಯಕ್ತವಾಗಿ ಹೇಳಿರುತ್ತಾನೆ. ಶರೀರಾತ್ಮಭಾವದಿಂದ ಹೀಗೆ ಸಾಮಾನಾಧಿಕರಣ್ಯವನ್ನು ಹೇಳಿರುವುದು ಶ್ರುತಿಗಳಲ್ಲಿ ಅನೇಕಸ್ಥಳಗಳಲ್ಲಿ ಕಂಡು ಬರುತ್ತದೆ. ಪುರುಷಸೂಕ್ತದಲ್ಲಿ **"ಸಭೂಮಿಂ ವಿಶ್ವತೋವೃತ್ವಾ"** ಎಂದುಹೇಳಿ **"ಪುರುಷ ಏವೇದಂ ಸರ್ವಂ" "ಆತ್ಮೈವೇದಂ ಸರ್ವಂ"** (ಛಾಂ. ೭-೨೫-೨) **"ನಾರಾಯಣ ಏವೇದಂ ಸರ್ವಂ"** (ನಾರಾಯಣೋಪನಿಷತ್ತು) ಪುರುಷನೇ ಈ ಸಮಸ್ತ ವಿಶ್ವವೂ ಎಂದೂ ಸಾಮಾನಾಧಿಕರಣ್ಯವು ಹೇಳಲ್ಪಟ್ಟಿತು. ಹಾಗೆಯೇ ಮುಂದೆ **"ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿವಾ, ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ"** ಎಂದು ಸರ್ವ ವ್ಯಾಪ್ತಿಯನ್ನು ೧೦ನೆಯ ಅನುವಾಕದಲ್ಲಿ ಹೇಳಿ, ೧೧ರಲ್ಲಿ **ಸಬ್ರಹ್ಮಾ ಸಶಿವಸ್ಸೇಂದ್ರಸ್ಸೋಽಕ್ಷರಃ ಪರಮಸ್ಸ್ವರಾಟ್** ಎಂದು ಸಾಮಾನಾಧಿಕರಣ್ಯವನ್ನು ಬೋಧಿಸಿತು. ಇದು ಬಹು ಸುಸ್ಪಷ್ಟವು, ಎಲ್ಲಿ ಎಂದರೆ ಛಾಂದೋಗ್ಯದಲ್ಲಿ. **"ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ವಮಸಿ ಶ್ವೇತಕೇತೋ ಇತಿ"** (ಛಾಂ. ೬-೮-೭) ಚಿದಚಿತ್ತುಗಳಿಗೂ ಪರಮಾತ್ಮನಿಗೂ ಯಾವಾಗಲೂ ಶರೀರಾತ್ಮಭಾವವು ಇದ್ದೇ ಇರುತ್ತದೆ. ಆದುದರಿಂದ ಹಿಂದೆ **ಸನ್ಮೂಲಾಃ** ಇತ್ಯಾದಿವಾಕ್ಯಗಳಿಂದ ಶರೀರಾತ್ಮಭಾವವನ್ನು ಹೇಳಿ, ಅನಂತರ **ಐತದಾತ್ಮ್ಯಂ** - ಇವೆಲ್ಲವೂ ಪರಮಾತ್ಮನನ್ನೇ ಆತ್ಮಾವಾಗಿ ಹೊಂದಿರುವದರಿಂದ ಸರ್ವವಿಶ್ವ ಸಾಮಾನಾಧಿಕರಣ್ಯ ಉಂಟಾಗುವದರಿಂದ, ನಿನಗೂ ಆತನೇ ಆತ್ಮಾವಾಗಿರುವದರಿಂದ, ನೀನೂ ಆತನೇ ಎಂದು ಸಾಮಾನಾಧಿಕರಣ್ಯವು ಬೋಧಿಸಲ್ಪಟ್ಟಿತೆಂದು ಬಹುಸುಲಭವಾಗಿಯೂ ಸ್ಫುಟವಾಗಿಯೂ ಅರ್ಥವು ಹೊರಡುತ್ತದೆ. ಸ್ವರೂಪೈಕ್ಯವನ್ನು ಶ್ರುತಿಯು ಇಲ್ಲಿ ಬೋಧಿಸಿತು. ಎಂದು ಹೇಗೆ ಅರ್ಥಮಾಡುತ್ತಾರೋ ತಿಳಿಯದು. **ಇದಂ ಸರ್ವಂ** ಎಂಬಲ್ಲಿ ಚಿತ್ತಾದ ಜೀವತತ್ವವೂ ಅಂತರ್ಗತವು. **ಐತದಾತ್ಮ್ಯಂ** ಎಂದು ಹೇಳಿರುವದರಿಂದ ಈ ಜೀವಾತ್ಮನಿಗೂ ಪರಮಾತ್ಮನು ಆತ್ಮಾ ಎಂದು ಹೇಳಿದಂತಾಯಿತು. ಇದರಿಂದ ಜೀವಾತ್ಮ ಪರಮಾತ್ಮ ಭೇದವೇ ಹೇಳಲ್ಪಟ್ಟಿತೇ ವಿನಾ ಸ್ವರೂಪೈಕ್ಯವು ಹೇಳಲ್ಪಡಲಿಲ್ಲವು. ಅದರೆ ಕಾರಣಾವಸ್ಥೆಯಲ್ಲಿ ಸೂಕ್ಷ್ಮ ಚಿದಚಿದ್ವಿಶಿಷ್ಟತೆಯು, ಕಾರ್ಯಾವಸ್ಥೆಯಲ್ಲಿ **ಬಹುಸ್ಯಾಂ** ಎಂದು ಹೇಳಿರುವ ರೀತ್ಯಾ ಸ್ಥೂಲ ಚಿದಚಿದ್ವಿಶಿಷ್ಟತೆಯು, ಹೀಗೆ ಶ್ರುತಿಸೂತ್ರಗಳು ಕಾರಣಕ್ಕೂ ಕಾರ್ಯಕ್ಕೂ ಅನನ್ಯತ್ವವನ್ನು ಉಪದೇಶಿಸುವದರಿಂದ ಸಾಮಾನಾಧಿಕರಣ್ಯವು

ಮೂ. **ಸಖೇತಿ ಮತ್ವಾಪ್ರಸಭಂ ಯದುಕ್ತಂ ಹೇಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇಮಂ ಮಯಾ ಪ್ರಮಾದಾತ್ಪ್ರಣಯೇನವಾಪಿ॥४೧**
**ಯಚ್ಚಾವಹಾಸಾರ್ಥ ಮಸತ್ಕೃತೋಽಸಿ ವಿಹಾರಶಯ್ಯಾಸನ ಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂತತ್ಕ್ಷಾಮಯೇತ್ವಾಮಹಮಪ್ರಮೇಯಂ॥४೨**

ಕೂಡುತ್ತದಲ್ಲಾ, ಹಾಗಲ್ಲವೇ **"ತತ್ವಮಸಿ"** ಎಂಬಲ್ಲಿ ಹೇಳಿದ ಸಾಮಾನಾಧಿಕರಣ್ಯವು? ಹೀಗಿರುವಾಗ **ಸಾಮಾನಾಧಿಕರಣ್ಯ ನಿರ್ದೇಶಸ್ಯ ಆತ್ಮತಯಾ ವ್ಯಾಪ್ತಿರೇವ ಹೇತುಃ** ಎಂದು ಹೇಗೆ ಹೇಳಲ್ಪಟ್ಟಿತು ? ಎಂದರೆ ಈ ಎರಡು ಅವಸ್ಥೆಯಲ್ಲೂ ಶರೀರಾತ್ಮಭಾವವೇ ಇರುವದರಿಂದ ಹಾಗೆ ಪ್ರಯೋಗವು. **"ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ "** ಇತ್ಯಾದಿ ಪ್ರಮಾಣಗಳಲ್ಲಿ ತೋರಿಬರುವ ಸಾಮಾನಾಧಿಕರಣ್ಯವೂ ಈ ವಿಧವಾದುದೇ. ಕಾರಣಕಾರ್ಯರೂಪವಾಗಿ ಐಕ್ಯವು ತೋರಿಬಂದರೂ ಆ ಕಾರಣ ಕಾರ್ಯಗಳಲ್ಲೂ ಈ ಶರೀರಾತ್ಮ ಭಾವವೇ ಸಾಮಾನಾಧಿಕರಣ್ಯಕ್ಕೂ, ಸರ್ವಶಬ್ದ ವಾಚ್ಯತ್ವಕ್ಕೂ, ಹೇತುವು ಎಂದು ಅವಧಾರಣದೊಂದಿಗೆ ಇಲ್ಲಿ ಹೇಳಲ್ಪಟ್ಟಿತು. ನಾರಾಯಣಾನುವಾಕದಲ್ಲೂ ಹೀಗೆಯೇ **"ನಾರಾಯಣಾದ್ಬ್ರಹ್ಮಾಜಾಯತೇ, ನಾರಾಯಣಾದ್ರುದ್ರೋ ಜಾಯತೇ"** ಹೀಗೆ ಕಾರಣ ಕಾರ್ಯ ರೂಪಸಂಬಂಧವನ್ನು ಹೇಳಿ **"ಬ್ರಹ್ಮಾನಾರಾಯಣಃ ಶಿವಶ್ಚನಾರಾಯಣಃ"** ಇತ್ಯಾದಿ ವಾಕ್ಯಗಳಿಂದ ಸಾಮಾನಾಧಿಕರಣ್ಯವು ಹೇಳಲ್ಪಟ್ಟಿರುತ್ತದೆ. ಕಾರಣಾವಸ್ಥೆಯಲ್ಲೂ ಕಾರ್ಯಾವಸ್ಥೆಯಲ್ಲೂ ಈ ಶರೀರಾತ್ಮಭಾವವು ಸದಾ ಇರುವದರಿಂದಲೇ, **ತತೋಽಸಿಸರ್ವಃ** ಈ ಆತ್ಮಾವಾಗಿರುವ ವ್ಯಾಪ್ತಿಯೇ ಈ ಸಾಮಾನಾಧಿಕರಣ್ಯ ಸರ್ವಶಬ್ದ ವಾಚ್ಯತ್ವಗಳಿಗೆ ಕಾರಣವೆಂದು **ಏವ** ಎಂಬ ಅವಧಾರಣದೊಂದಿಗೆ ಸುಸ್ಪಷ್ಟವಾಗಿ ಉಪದೇಶಿಸಲ್ಪಟ್ಟಿತು.

**ಮೂಲಕ್ಕೆ ಅರ್ಥವು:—" ಶ್ರೀ ಕೃಷ್ಣಮಹಾತ್ಮ್ಯ ಮಪಾರಮದ್ಭುತಂ "** ಎಂದು ಹೇಳಿರುವಹಾಗೆ, ಅತ್ಯದ್ಭುತ ವಿಸ್ಮಯ ಭಯ ಮುಂತಾದವುಗಳನ್ನುಂಟುಮಾಡುವ ವಿಶ್ವರೂಪ ದರ್ಶನದಿಂದ ಶ್ರೀ ಕೃಷ್ಣನು ಪರತತ್ವವೆಂಬುದು ಯಾವಾಗ ಚನ್ನಾಗಿ ದೃಢಪಟ್ಟಿತೋ, ಆಗ ಬಂಧುವೆಂದೂ ಸಖನೆಂದೂ ಭಾವಿಸಿ, ಆತನಲ್ಲಿ ಸಂಪೂರ್ಣ ಭಕ್ತಿವಿಶ್ವಾಸಗಳನ್ನು ತೋರಿಸದೆ ಇದ್ದ ಅಪರಾಧಕ್ಕಾಗಿ, ಕ್ಷಮಿಸು ಎಂದು ಎರಡು ಶ್ಲೋಕಗಳಿಂದ ಅರ್ಜುನನು ದೈನ್ಯದಿಂದ ಬೇಡುತ್ತಾನೆ. ಅದಕ್ಕಾಗಿ ಮುಂದೆ ४४ ನೆಯ ಶ್ಲೋಕದಲ್ಲಿ ಶರಣಾಗತಿಯನ್ನನುಷ್ಠಿಸಿ ४४ ನೆಯ ಶ್ಲೋಕದಲ್ಲಿ (೧) ಅಪರಾಧಪರಿಹಾರವನ್ನೂ (೨) ४೫ ರಲ್ಲಿ ಪ್ರಾಪ್ಯವಾದ ಪರರೂಪ ಪ್ರದರ್ಶನವನ್ನೂ ಹೀಗೆ ಎರಡು ವರಗಳನ್ನು ಬೇಡುತ್ತಾನೆ, **ತವ**-ಸರ್ವೇಶ್ವರನಾಗಿ ನಿಸ್ಸಮಾಭ್ಯಧಿಕನಾಗಿ ರಾಜಾಧಿರಾಜನಾಗಿರುವ, **ಇಮಂ ಮಹಿಮಾನಂ**-ಸರ್ವ ಜಗತ್ಕಾರಣನಾಗಿ, ಸರ್ವವ್ಯಾಪ್ತಿಯಿಂದ ಸರ್ವಕ್ಕೂ ಆತ್ಮಾವಾಗಿ ನಿಯಾಮಕನಾಗಿರುವದರಿಂದ, ಅನಂತ ವೀರ್ಯತ್ವ ಅಮಿತವಿಕ್ರಮತ್ವ ಪದಗಳಲ್ಲಿ ತೋರಿಬರುವ ಈ ಮಹಿಮೆಯನ್ನು, **ಪ್ರಮಾದಾತ್** - ಮೊದಲೂಕೂಡ ಸ್ವಲ್ಪಮಟ್ಟಿಗೆ ನಿನ್ನ ಮಹಿಮೆಯು ತಿಳಿಯದೇ **ಇರಲಿಲ್ಲವು,** ರಾಜಸೂಯ ಸಭೆಯಲ್ಲಿ ಶಿಶುಪಾಲವಧೆ, ಅನೇಕ ಪೂತನಾದಿ ದುಷ್ಟರ ವಧೆಗಳು, ನಮಗೆ ಬಂದ ವಿಪತ್ತುಗಳಿಂದ ಮೋಚನ, ಇವೇ ಮೊದಲಾದ ಅತಿಮಾನುಷ ಕೃತ್ಯಗಳಿಂದಲೇ ನಿನ್ನ ಪರತ್ವವನ್ನು ಕಂಡಿದ್ದೆನು, ಆದರೂ ಕರ್ಮಪ್ರಾಬಲ್ಯದಿಂದುಂಟಾದ, **ಪ್ರಮಾದಾತ್** **ಪ್ರಮಾದ ಬುದ್ಧಿಯಿಂದಲೂ ಎಂದರೆ ಜಾಗರೂಕನಾಗಿಲ್ಲದುದರಿಂದಲೂ ಮತ್ತು ಪ್ರಣಯೇನ**

**ವಾಪಿ**-ಬಾಂಧವ್ಯಮೂಲಕವಾಗಿ ಬಹುಕಾಲದಿಂದ ಬಂದ ಸ್ನೇಹದಿಂದಲೂ, **ವಾ ಅಪಿ**-ಎಂಬ ಅವ್ಯಯಗಳಿಂದ ಸಮುಚ್ಚಯರೂಪದಲ್ಲಿ ಈ ಎರಡೂ ಕಾರಣಗಳೂ ತನ್ನ ಅಪರಾಧಕ್ಕೆ ಹೇತುಗಳು ಎಂದು ಹೇಳಿಕೊಳ್ಳುತ್ತಾನೆ, ಇಂತಹ ಮಹಿಮೆಯನ್ನು, **ಅಜಾನತಾ**-ತಿಳಿಯದಿರುವ, **ಮಯಾ**-ನನ್ನಿಂದ, **ಸಖೇತಿ ಮತ್ವಾ** - ಸ್ನೇಹಿತನೆಂದು ಭಾವಿಸಿ, **ಹೇ ಕೃಷ್ಣ** - ಪರತತ್ತ್ವವಾದ ನಿಮ್ಮನ್ನು ಏಕವಚನದಲ್ಲಿ ಹೇ ಕೃಷ್ಣನೇ ಎಂದೂ, ಪರತತ್ತ್ವವಾದ ನಿಮ್ಮನ್ನು ಸಾಧಾರಣ ಮನುಷ್ಯನಾದ ಕೃಷ್ಣನೆಂದೂ, **ಹೇ ಯಾದವ** ಸರ್ವಲೋಕಕ್ಕೂ ಪಿತಾಮಹನಾದ ನಿಮ್ಮನ್ನು ಯದುಕುಲದಲ್ಲಿ ಹುಟ್ಟಿದವನೇ ಎಂದೂ, ಅಥವಾ ಯದುಕುಲಾಂಬೋಧಿಗೆ ಶಶಾಂಕಪ್ರಾಯರಾಗಿ, ಯಾದವಸಾರ್ವಭೌಮರಾಗಿರುವವರನ್ನು ಸುಮ್ಮನೆ ಹೇ ಯಾದವಾ ಎಂದೂ **ಹೇ ಸಖೇತಿ** - ದಾಸ್ಯವೇ ನನಗೆ ಸ್ವರೂಪವಾಗಿರುವಾಗ ಸಮಭಾವವನ್ನಾರೋಪಿಸಿಕೊಂಡು ಓ ಸ್ನೇಹಿತನೇ ಎಂದೂ, ಹೀಗೆಲ್ಲಾ ದೌಷ್ಟ್ಯದಿಂದಲೂ ಬುದ್ಧಿಮಾಂದ್ಯದಿಂದಲೂ ಅಗೌರವವಾಗಿ ಎಂಬ ತಾತ್ಪರ್ಯವು. **ಯತ್** - ಯಾವುದು, **ಪ್ರಸಭಂ** - ಹೆಮ್ಮೆಯಿಂದ, **ಉಕ್ತಂ** - ಹೇಳಲ್ಪಟ್ಟಿತೋ, **ತತ್** - ಆ ಅಪರಾಧವನ್ನೂ, ಮತ್ತು ಮುಂದಿನ ಶ್ಲೋಕದಲ್ಲಿ ಹೇಳಲ್ಪಡುವ ಅಪರಾಧವನ್ನೂ ಸಹ, **ಕ್ಷಾಮಯೇ**-ಕ್ಷಮಿಸಿ ಎಂದು ಪ್ರಾರ್ಥಿಸುತ್ತೇನೆ, ಎಂಬ ಕ್ರಿಯಾಪದವು ಮುಂದಿನ ಶ್ಲೋಕದಲ್ಲಿದೆ. ಕರ್ಮಪ್ರಾಬಲ್ಯದಿಂದುಂಟಾದ ಪ್ರಮಾದದಿಂದಲೂ, ಪ್ರಣಯದಿಂದಲೂ ಅರ್ಜುನನು ಪರಮಾತ್ಮನನ್ನು ಪುರಸ್ಕರಿಸದೆ ಪ್ರವರ್ತಿಸಿ ಅನೇಕ ಕ್ಲೇಶಗಳನ್ನು ಅನುಭವಿಸುವದಕ್ಕೆ ಮಹಾಭಾರತದಲ್ಲೇ ಅನೇಕ ನಿದರ್ಶನಗಳುಂಟು. ಪುರಸ್ಕರಿಸಿ ಬಹುಮಾನಿಸಿದುದರಿಂದ ಅಪಾರ ಶ್ರೇಯಸ್ಸನ್ನು ಹೊಂದಿದುದಕ್ಕೂ ನಿದರ್ಶನಉಂಟು. ಲೀಲಾಸಾರಥಿಯಾಗಿ ಅರ್ಜುನನು ಹೋಗಿ ಶ್ರೀ ಕೃಷ್ಣಭಗವಾನರವರ ಪಾದದ ಬಳಿ ಕುಳಿತು ಪ್ರಾರ್ಥಿಸಿ ಪುರಸ್ಕರಿಸಿದುದು, ಲೀಲಾಸಾರಥ್ಯ, ಯುದ್ಧದಲ್ಲಿ ಜಯ, ರಾಜ್ಯಪ್ರಾಪ್ತಿ ಮೊದಲಾದ ಶ್ರೇಯಃಪರಂಪರೆಗಳಿಗೆ ಕಾರಣವಾಯಿತು. ವಿಪ್ರನಮಕ್ಕಳನ್ನು ಬದುಕಿಸಿಕೊಡುತ್ತೇನೆಂದು ಹೆಮ್ಮೆಯಿಂದ ಮಾಡಿದ ಶಪಥವೂ, ಪಾಶುಪತಾಸ್ತ್ರವನ್ನು ಪಡೆದುದೂ, ಮತ್ತು ಐರಾವತವನ್ನು ತಂದುದೂ, ಇವೆಲ್ಲಾ ಪರಮಾತ್ಮನನ್ನು ಪುರಸ್ಕರಿಸದೆ ಮಾಡಿ ಕಷ್ಟಕ್ಕೆ ಒಳಗಾದ ಪ್ರವೃತ್ತಿಗಳಿಗೆ ನಿದರ್ಶನಗಳು. ॥ ೪೧ ॥

**ಹೇ ಅಚ್ಯುತ**-"**ಯಸ್ಮಾನ್ನಚ್ಯುತ ಪೂರ್ವೋಽಹಮಚ್ಯುತಸ್ತೇನ ಕರ್ಮಣಾ**" "**ತಸ್ಮಾಹಂ ನ ಪ್ರಣಶ್ಯಾಮಿ**" (ಗೀ ೬-೩೦) "**ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ**" (ರಾ. ಯು. ೧೮-೩) ಇತ್ಯಾದಿ ಪ್ರಮಾಣಗಳಲ್ಲಿ ಉಪಪಾದಿತವಾಗಿರುವಹಾಗೆ ಭಕ್ತರುಗಳ ದೆಶೆಯಿಂದ ಎಂದಿಗೂ ಜಾರಿಹೋಗದೆ ಇರುವ ಸ್ವಾಮಿಯೇ! ಭಕ್ತರುಗಳಿಗೆ ನಾಶವೆಂದಿಗೂ ಇಲ್ಲವೆಂದು ಸಙ್ಕಲ್ಪಿಸಿರುವ ಸ್ವಾಮಿಯೇ! ಎಂಬರ್ಥವು. **ವಿಹಾರ ಶಯ್ಯಾಸನ ಭೋಜನೇಷು** - ಹಾಸಿಗೆಯಲ್ಲಿರುವಾಗಲೂ, ಆಸನದಲ್ಲಿ ಕುಳಿತಿರುವಾಗಲೂ, ಭೋಜನವನ್ನು ಸ್ವೀಕರಿಸುವಾಗಲೂ, ಇಂತಹ ಅವಸರಗಳಲ್ಲಿ, ನೀವು **ಏಕಃ** ಒಬ್ಬರೇ ಇರುವಾಗ ಅಥವಾ **ಸಮಕ್ಷಂ** - ಇತರರ ಸಮಕ್ಷದಲ್ಲಿರುವಾಗಲೇ ಆಗಲೀ, **ಅಪಹಾಸಾರ್ಥಂ** - ಪರಿಹಾಸ್ಯಕ್ಕಾಗಿ **ಅಸತ್ಕೃತೋಽಸಿಯತ್** - ಅವಮರ್ಯಾದೆಯನ್ನು ಹೊಂದಿಸಲ್ಪಟ್ಟಿರುವಿರಿ, ಯಾವುದೋ **ತತ್**-ಅಂತಹ ಅಪರಾಧ ಸಮೂಹವನ್ನು **ಅಪ್ರಮೇಯಂ**-"**ಸಗುಣೋ ನಿರ್ಗುಣೋ ವಿಷ್ಣೋರ್ಜ್ಞಾನದೃಶ್ಯೋಽಹ್ಯಸೌಸ್ಮೃತಃ**" ಹೇಯಪ್ರತ್ಯನೀಕನಾಗಿಯೂ ಕಲ್ಯಾಣ ಗುಣಾಕರನಾಗಿಯೂ ಇರುವ ರೂಪ ವಿಭೂತಿಗಳಿಂದಲೂ ಪರಿಪೂರ್ಣನಾಗಿರುವ ಪರಬ್ರಹ್ಮವನ್ನು ನಮ್ಮ ಪ್ರಾಕೃತ ಕರಣಗಳಿಂದ ಪರಿಚ್ಛೇದಿಸಿ ತಿಳಿಯಲು ಸಾಧ್ಯವಿಲ್ಲದೆ ನನಗೆ ದಯಪಾಲಿಸಿದಹಾಗೆ ಜ್ಞಾನ

ಚಕ್ಷುಸ್ಸಿನಿಂದಮಾತ್ರವೇ ಗ್ರಹಿಸಲು ಸಾಧ್ಯವಾಗಿರುವ. **ತ್ವಾ**-ತಮ್ಮನ್ನು, **ಕ್ಷಾಮಯೇ**-ಕ್ಷಮಿಸ ಬೇಕಾಗಿ ಪ್ರಾರ್ಥಿಸುತ್ತೇನೆ. ಈ ಶ್ಲೋಕಗಳಲ್ಲಿ ಸಖನೆಂದು ಭಾವಿಸಿ ದಾಸ್ಯಭಾವವೇ ಸ್ವರೂಪ ವಾಗಿರುವವನು ಸಮತ್ವ ಬುದ್ಧಿಯಿಂದ ನೋಡಿದೇನೆ, ಹಾಗೆ ಭಾವಿಸಿದುದು ಮಹಾಪರಾಧ ವಾಯಿತೇ ಎಂದು ಶೋಕಿಸಿ, ಅರ್ಜುನನು ಕ್ಷಮಾಪಣೆಯನ್ನು ಕೇಳಿ ಕೊಂಡಿದುದೇನೋ ಯುಕ್ತವಾದುದು ಆದರೆ ಪರಮ ಪುರುಷನು ಇಂತಹ ಅತ್ಯಂತ ಶೇಷ ಭಾವವನ್ನು ಪ್ರದರ್ಶಿಸಿ ದವನ ವಿಷಯದಲ್ಲಿ ತನಗೆ ಸಮನಾಗಿಯೇ ಭಾವಿಸುವನೆಂಬುದು, **"ದ್ವಾಸುಪರ್ಣಾ ಸಯುಜಾಸಖಾಯಾ"** (ಮುಂ. ೩ ೧. ೨.) ಈ ಜೀವಾತ್ಮ ಪರಮಾತ್ಮರ ಸಮಾಚೀನವಾದ ಜ್ಞಾನ ಸ್ವರೂಪ ಗುಣಗಳಿಂದಲೂ ಜ್ಞಾನ ಕರ್ಮಗಳನ್ನೇ ರೆಕ್ಕೆಯಾಗಿ ಉಳ್ಳ ಸುಪರ್ಣರು, ಪಕ್ಷಿಗಳು, **ಸಯುಜೌ**-ಶೇಷಿಶೇಷಸಂಬಂಧವಿರುವದರಿಂದಲೇ ಇಬ್ಬರೂ ಒಟ್ಟಿಗೇನೆ ದೇಹದಲ್ಲಿರುವವರು, **ಸಖಾಯೌ**-ಹೀಗೆ ಸ್ವಾಮಿದಾಸತ್ವ ಸಂಬಂಧವು ನಿರುಪಾಧಿಕವಾಗಿ ಶಾಶ್ವತವಾಗಿರುವದರಿಂದಲೇ ಅವರಿಬ್ಬರೂ ಪರಮ ಮೈತ್ರಿಯುಳ್ಳವರೆಂದೂ ಹೇಳಲ್ಪಟ್ಟಿರುತ್ತದೆ. ಅರ್ಜುನ ಭಾವನೆಯಿಂದ ಸಖತ್ವವು ನಿಂದ್ಯವೇ ವಿನಾ, ಈ ಶ್ರುತಿಯು ಹೇಳಿರುವ ಭಾವನೆಯಲ್ಲಿ ಯುಕ್ತವೇಸರಿ. **ಇವು** ಗಳನ್ನನುಸರಿಸಿಯೆ, ಇತರ ಶ್ರುತಿ, ಸ್ಮೃತಿ ವಾಕ್ಯಗಳುಂಟು. **"ಸರ್ವಸ್ಯ ಶರಣಂ ಸುಹೃತ್"** ಎಂಬ ಶ್ರುತಿವಾಕ್ಯದ ಸುಹೃಚ್ಛಬ್ದಕ್ಕೆ ಇದೀಗ ತಾತ್ಪರ್ಯವು ಹಾಗೆಯೇ ಇದೇ ಗೀತೆಯಲ್ಲೇ **ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸಚ ಮಮ ಪ್ರಿಯಃ** ಎಂದು ಇರುತ್ತದೆ. ಶ್ರೀಮದ್ರಾಮಾಯಣದಲ್ಲಿ **ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ** ಎಂದು ಇದೆ. ಶ್ರೀ ವಿಭೀಷಣನು, ತನಗೂ ಪರತತ್ವವಾದ ಶ್ರೀರಾಮನಿಗೂ ಸಹ ನಿರುಪಾಧಿಕ ಶೇಷ ಶೇಷಿಭಾವದಿಂದ ಇಬ್ಬರಿಗೂ ಪರಸ್ಪರ ಪ್ರೀತಿಯುಂಟೆಂದು ತಿಳಿದ ಮಹಾಪ್ರಾಜ್ಞನು; **ಈ ತಿಳುವಳಿಕೆಯಿಂದ** ಬಂದವನನ್ನು ಎಂದಿಗಾದರೂ ಬಿಟ್ಟೇನೆ ಎಂದು ಶ್ರೀರಾಮನು ಹೇಳಿರು **ತ್ತಾನೆ**. ಹೀಗೆ ಸ್ವಾಮಿ ಮಹಿಮೆಯನ್ನು ತಿಳಿದು ತನಗೆ ಪರಮ ಹಿತವನ್ನುಂಟುಮಾಡುವ ಪ್ರಿಯಸಖನೆಂದು ಭಾವಿಸುವದು ನಿಂದ್ಯವಲ್ಲವು, ಅಂತವರನ್ನು ಉದಾರರೆಂದು ಕೂಡ ಶ್ರೀ ಕೃಷ್ಣಭಗವಾನರವರು ಕೊಂಡಾಡಿರುತ್ತಾರೆ. **ಮಹಿಮಾನಂ ಅಜಾನನ್**-ಅಂತಹ ಮಹಿಮೆ ಯನ್ನು ತಿಳಿಯದೆ, **ಸಖಾ**-ತನಗೆ ಸಮನೆಂದು ಭಾವಿಸೋಣವು ನಿಂದ್ಯವು

ಸಮತ್ವವೇ ನಿಂದ್ಯವಾಗಿರುವಾಗ ತಾನೇ ಪರಮಾತ್ಮನೆಂದು ಭಾವಿಸೋಣವು ಇನ್ನೂ ನಿಂದ್ಯವಲ್ಲವೇ? ಇಬ್ಬರೂ ಒಂದೇಯಾಗಿದ್ದರೆ ಪರಿತಾಪ ಏಕೆ? ಹಾಗೆ ಪರಿತಾಪಪಡುವವನ ಸಮಾಧಾನಾರ್ಥವಾಗಿ ನೀನೂ ಸಹ ಒಂದೇ ಎಂದು ಸಮಾಧಾನವನ್ನು ಶ್ರೀ ಕೃಷ್ಣನು ಮಾಡಬಹುದಾಗಿತ್ತಲ್ಲಾ ಹಾಗೆ ಏಕೆ ಹೇಳಲಿಲ್ಲವು? ಮುಂದಿನ ಶ್ಲೋಕದಲ್ಲಿ ನಿಸ್ಸಮಾಭ್ಯಧಿಕ ನೆಂದು ಸ್ತೋತ್ರಮಾಡುತ್ತಾನೆ ಆ ಸ್ಮೃತಿಯೂ ಈ ಶ್ರುತಿಯೂ ಎರಡೂ ಉಪಪನ್ನವಾಗಬೇಕಾ ದರೆ, ವಸ್ತ್ವಂತರಗಳಾಗಿ ಭೂತಗಳು ಇದ್ದೇತೀರಬೇಕಷ್ಟೇ. ಒಂದು ಸ್ಕೂಲಿನ ತರಗತಿಯಲ್ಲಿ ಒಬ್ಬನೇ ಹುಡುಗನಿದ್ದರೆ, ಅವನೇ ಎಲ್ಲರಿಗಿಂತಲೂ ಮೊದಲನೇಯವನೆಂದು ಹೇಳಿದಂತೆ ಹಾಸ್ಯಾಸ್ಪದವಾಗುವದಿಲ್ಲವೇ? ಕ್ಷಮಿಸು ಎಂಬ ಪ್ರಾರ್ಥನೆಯೇ ಸ್ವಾಮಿಭೃತ್ಯನ್ಯಾಯವನ್ನು ಸ್ಥಾಪಿಸಿ, **"ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿಸ್ಥಿತಂ"** ಎಂಬ ಪ್ರಮಾಣ ವಾಕ್ಯದ, **"ಜ್ಞಾ ಜ್ಞೌ ದ್ವಾವಜೌ ಈಶನೀಶೌ** ಎಂಬ ಶ್ರುತಿವಾಕ್ಯದ, ಅರ್ಥಗಳನ್ನು ಬೋಧಿಸುತ್ತವೆ ವ್ಯಾವಹಾರಿಕ ಸತ್ಯವು ಎಂದು ಹೇಳಿ, ಆದರಿಂದ ಈ ಸರ್ವ ಪೂರ್ವ ಪಕ್ಷ ಗಳನ್ನೆಲ್ಲಾ ವಾರಣಮಾಡಿಬಿಡುತ್ತೇವೆ ಎಂದರೆ ಸತ್ಯವು ವ್ಯಾವಹಾರಿಕ, ಪಾರಮಾರ್ಥಿಕವೆಂದು ಎರಡು ತೆರವೆಂದು ಹೇಳುವದು ಒಪ್ಪತಕ್ಕ ಮಾತಾಗುವದಿಲ್ಲವು. ಒಂದೇ ವಿಷಯದಲ್ಲಿ ಪಾರ ಮಾರ್ಥಿಕ ವ್ಯಾವಹಾರಿಕವೆಂಬ ಎರಡು ವಿಧ ಭಾವನೆಯನ್ನು ತರಲು ಸಾಧ್ಯವಿಲ್ಲವು. ॥೪೨॥

**ಭಾ ತವಾನನ್ತವೀರ್ಯತ್ವಾಮಿತವಿಕ್ರಮತ್ವ ಸರ್ವಾನ್ತರಾತ್ಮತ್ವಸ್ರಷ್ಟೃತ್ವಾದಿಕೋ ಯೋ ಮಹಿಮಾ, ತಮಿಮ ಮಜಾನತಾ ಮಯಾ ಪ್ರಮಾದಾನ್ಮೋಹಾತ್ ಪ್ರಣಯೇನ- ಚಿರಪರಿಚಯೇನವಾ, ಸಖೇತಿ ಮಮ ವಯಸ್ಯ ಇತಿ, ಮತ್ವಾ, ಹೇ ಕೃಷ್ಣ, ಹೇ ಯಾದವ, ಹೇ ಸಖೇ ಇತಿ, ತ್ವಯಿ ಪ್ರಸಭಂ-ವಿನಯಾಪೇತಂ, ಯದುಕ್ತಮ್ ;**

---

**ಭಾಷ್ಯಾರ್ಥವು :**— ಹಿಂದೆ ೪೦ ನೆಯ ಶ್ಲೋಕದಲ್ಲಿ ಅರ್ಜುನನು ಸ್ವಾಮಿಯ ಮಹಿಮೆಯನ್ನು **ಅನನ್ತವೀರ್ಯಾಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ** ಎಂದು ಕೊಂಡಾಡಿದುದನ್ನು ಜ್ಞಾಪಿಸಿ, ಪ್ರಥಮತಃ **"ಅಜಾನತಾ ಮಹಿಮಾನಂ ತವೇಮಂ ಮಯಾ"** ಎಂಬುದಕ್ಕೆ ವ್ಯಾಖ್ಯಾನವನ್ನು ದಯಪಾಲಿಸುವ ಸಂದರ್ಭದಲ್ಲಿ ಮಹಿಮೆ ಎಂತಾದ್ದೆಂಬುದನ್ನು ಅನುವಾದಮಾಡಿ ಹೇಳುತ್ತಾರೆ.—**ತವ**-ಸರ್ವೇಶ್ವರನಾದ ನಿನ್ನ **ಅನಂತವೀರ್ಯತ್ವವೇನು, ಅಮಿತವಿಕ್ರಮತ್ವವೇನು,** ಇವುಗಳಿಗೆ ಅರ್ಥವು ಹಿಂದೆ ಬರೆಯಲ್ಪಟ್ಟಿರುತ್ತದೆ, ಸರ್ವಾಂತರಾತ್ಮತ್ವ, **ಸ್ರಷ್ಟೃತ್ವಾದಿಕಃ**-ಸಮಸ್ತವಿಶ್ವವನ್ನು ಸೃಷ್ಟಿಸೋಣ, ಆದಿಶಬ್ದದಿಂದ, ಪಾಲನ ಪ್ರಳಯವೇ ಮೊದಲಾದವು, **ಯೋ ಮಹಿಮಾ**-ಯಾವ ಮಹಿಮೆಯುಂಟೋ, **ತಮಿಮಂ**-ಅಂತಹ ಇದನ್ನು, **ಅಜಾನತಾ**-ತಿಳಿಯದಿರುವ, **ಮಯಾ**-ನನ್ನಿಂದ, **ಪ್ರಮಾದಾತ್** ಎಂದರೆ **ಮೋಹಾತ್**-ಭ್ರಮೆಯಿಂದಲೂ ಮತ್ತು **ಪ್ರಣಯೇನ** ಎಂದರೆ **ಚಿರಪರಿಚಯೇನ ವಾ**-ಬಹುಕಾಲದಿಂದ ಬಂದ ಪರಿಚಯದಿಂದಲೂ, **ಸಖೇತಿ**-ಎಂದರೆ **ಮಮ ವಯಸ್ಯ ಇತಿ**-ನನ್ನ ಸ್ನೇಹಿತನೆಂದು, **ಮತ್ವಾ**-ಭಾವಿಸಿ **ಹೇ ಕೃಷ್ಣ ಹೇ ಯಾದವ ಹೇ ಸಖೇತಿ**-ಎಲೋ ಕೃಷ್ಣನೇ, ಯಾದವನೇ, ಸ್ನೇಹಿತನೇ ಎಂಬದಾಗಿ, **ತ್ವಯಿ**-ಇಂತಹ ಅಪಾರ ಮಹಿಮೆಯುಳ್ಳ ನಿನ್ನಲ್ಲಿ, **ಪ್ರಸಭಂ** ಎಂದರೆ **ವಿನಯಾಪೇತಂ**-ವಿನಯ ಭಾವವಿಲ್ಲದೆ ಎಂದರೆ ಅಹಂಕಾರದಿಂದ, **ಯದುಕ್ತಮ್**-ಯಾವುದು ಹೇಳಲ್ಪಟ್ಟಿತೋ, ಮತ್ತು **ಯಚ್ಚ**-ಯಾವ **ಪರಿಹಾಸಾರ್ಥಮ್** - ಪರಿಹಾಸಕ್ಕಾಗಿ, **ಸರ್ವದೈವ ಸತ್ಕಾರಾರ್ಹಸ್ತ್ವಂ** - ಯಾವಾಗಲೂ ಸತ್ಕಾರಕ್ಕೇ ಯೋಗ್ಯನಾದ ನೀನು, **ಅಸತ್ಕೃತೋಽಸಿ** - ತಿರಸ್ಕರಿಸಲ್ಪಟ್ಟಿರುತ್ತೀಯೋ, **ಸಹಕೃತೇಷು ವಿಹಾರಶಯ್ಯಾಸನ ಭೋಜನೇಷು ಚ**-ಒಟ್ಟಿಗೆ ಮಾಡಲ್ಪಟ್ಟ ಆಟವೇನು, ಮಲಗೋಣವೇನು, ಆಸನದಲ್ಲಿ ಕೂತಿರೋಣವೇನು, ಭೋಜನವೇನು, ಇವುಗಳಲ್ಲೆಲ್ಲಾ, **ಏಕಾನ್ತೇವಾ**-ಇನ್ನು ಯಾರೂ ಇಲ್ಲದೆ, ನಾವಿಬ್ಬರೇ ಏಕಾಂತವಾಗಿರುವಾಗಲಾಗಲಿ, **ಸಮಕ್ಷಂವಾ**-ಇತರರ ಸಮಕ್ಷವಲ್ಲೇ ಯಾಗಲಿ, **ಯದಸತ್ಕೃತೋಽಸಿ**-ತಿರಸ್ಕರಿಸಲ್ಪಟ್ಟಿರುವೆ ಎಂಬುದು ಯಾವುದುಂಟೋ, **ತತ್ಸರ್ವಂ**-ಅವೆಲ್ಲವನ್ನೂ, **ಅಪ್ರಮೇಯಂ**-ಅಪರಿಚ್ಛೇದ್ಯನಾದ, **ತ್ವಾಂ**-ನಿನ್ನನ್ನು, **ಅಹಂ**-ಮಹಾಪರಾಧಿಯಾದ ನಾನು, **ಕ್ಷಾಮಯೇ**-ಕ್ಷಮೆಯನ್ನು ಕೇಳಿಕೊಳ್ಳುತ್ತೇನೆ. ತುಂಬಾ ಪರಿಚಯವಿದ್ದು ವಿಹಾರ ಶಯ್ಯಾಸನ ಭೋಜನ ಕಾಲಗಳಿಗೆ ಒಟ್ಟಿಗಿರುವದರಿಂದ, ತುಂಬಾ ಮಹಿಮೆಯುಳ್ಳವನಲ್ಲಿ ಗೌರವವು ಕಮ್ಮಿಯಾಗುವದೆಂಬುದು ಲೋಕದಲ್ಲಿ ಪ್ರಸಿದ್ಧವು. ಹಿತ್ತಲಿನ ಗಿಡ ಮದ್ದಲ್ಲವೆಂದು ಹೇಳುವ ಲೋಕೋಕ್ತಿಯುಂಟು. ಹಾಗೆ ಅರ್ಜುನನು ಕೃಷ್ಣನಿಗೆ ಸೋದರತ್ತೆಯಮಗನಾಗಿ ಹೀಗೆ ಸಂಬಂಧವಿದ್ದುದರಿಂದ ಆಹಾರವಿಹಾರ ಶಯ್ಯಾದಿಗಳಲ್ಲಿ ಒಟ್ಟಿಗೆ ಅನ್ವಯವಿದ್ದುದರಿಂದ ಶ್ರೀಕೃಷ್ಣಭಗವಾನರವರ ಅತಿಮಾನುಷದಿವ್ಯ ಚೇಷ್ಟಿತೆಗಳು ಪ್ರಸಿದ್ಧವಾಗಿದ್ದರೂ, ಅವರ ಪರತ್ವವನ್ನು ಮರೆತು, ಮೋಹದಿಂದ ಸರಿಯಾದ ಸತ್ಕಾರವನ್ನು ತೋರಿಸದೇ ಇರುವ ಅಪರಾಧಕ್ಕಾಗಿ ಕ್ಷಮೆಯನ್ನು ಬೇಡುತ್ತಾನೆ ಪರತತ್ವವನ್ನು ವಸುದೇವನು ಮನೆಯಲ್ಲೇ ಇಟ್ಟುಕೊಂಡಿದ್ದರೂ, ತೀರ್ಥಯಾತ್ರಾಕಾಲದಲ್ಲಿ ಅನೇಕ ಋಷಿಗಳೆಲ್ಲಾ ಸೇರಿರುವಾಗ

**ಭಾ. ಯಚ್ಚ ಪರಿಹಾಸಾರ್ಥಂ ಸರ್ವದೈವ ಸತ್ಕಾರೋಽರ್ಹಸ್ತ್ವಮಸತ್ಕೃತೋಽಸಿ; ವಿಹಾರ ಶಯ್ಯಾಸನ ಭೋಜನೇಷು ಚ ಸಹಕೃತೇಷ್ವೇಕಾನ್ತೇ ವಾ ಸಮಕ್ಷಂ ವಾ ಯದ ಸತ್ಕೃತೋಽಸಿ; ತತ್ಸರ್ವಂ ತ್ವಾಮಪ್ರಮೇಯಮಹಂ ಕ್ಷಾಮಯೇ ॥೪೧, ೪೨॥**

---

**ಮೂ. ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯಪ್ರತಿಮಪ್ರಭಾವ ॥**

---

ಆತನು ಶ್ರೀ ನಾರದರನ್ನು ಪ್ರಶ್ನಿಸುತ್ತಾನೇನೆಂದರೆ — ಕರ್ಮಗಳಿಂದ ಕರ್ಮನಾಶವು, "**ಕರ್ಮಣಾ ಕರ್ಮನಿರ್ಹಾರೋ ಯಥಾಸ್ಯಾನ್ನಸ್ತದುಚ್ಯತಾಮ್**" (೧೦.೮೪. ೨೯) ಹೇಗೆ ಉಂಟಾಗುತ್ತದೆ? ಅದನ್ನು ದಯಮಾಡಿ ತಿಳಿಸಿ. ಕೆಸರನ್ನು ಕೆಸರಿನಿಂದ ತೊಳೆಯಬಹುದೇ ಎಂದು ಕೇಳಲು; ಆಗ ನಾರದರು ನಕ್ಕು "**ಸನ್ನಿಕೃಷ್ಟೋ ಹಿ ಮರ್ತ್ಯಾನಾಮನಾದರಣ ಕಾರಣಮ್**" ಮಹಿಮೆಯುಳ್ಳ ವಸ್ತುವು ತುಂಬಾ ಸಮೀಪದಲ್ಲಿದ್ದರೆ, ಅದರ ಮಾಹಾತ್ಮ್ಯ ಯನ್ನು ಭಾವಿಸದೇ ತಿರಸ್ಕಾರ ಉಂಟಾಗುತ್ತದೆ; ಲೋಕಗುರುವು ಮನೆಯಲ್ಲಿದ್ದರೂ, ಆತ ನನ್ನು ಬಿಟ್ಟು ನನ್ನನ್ನು ಕೇಳುತ್ತೀಯೇ ಎಂದು ಹೇಳಿ, ಉತ್ತರವನ್ನು ಹೇಳುತ್ತಾರೆ — "ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳನ್ನು ಫಲಾಭಿಸಂಧಿ ರಹಿತನಾಗಿ ಅನುಷ್ಠಿಸಿ, ಸರ್ವ ಕರ್ಮಾರಾಧ್ಯನಾದ ಶ್ರೀಕೃಷ್ಣನಲ್ಲಿ ಸಮರ್ಪಿಸಿದರೆ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಗಳಾದ ಪುಣ್ಯಪಾಪ ಕರ್ಮಗಳ ನಾಶ ಉಂಟಾಗುತ್ತದೆಂಬ ತಾತ್ಪರ್ಯವು. ಹೀಗೆ ಅನುಷ್ಠಿ ಸಿದ ನಿತ್ಯಕರ್ಮಾನುಷ್ಠಾನವು ಕೆಸರಲ್ಲವು. ಚನ್ನಾಗಿ ಪವಿತ್ರೀಕರಿಸುವ ಶಕ್ತಿಯುಳ್ಳದು" ಎಂಬದಾಗಿ ಶ್ರೀ ನಾರದರು ಹೇಳಿದರು, ಅದು ಕರ್ದಮವಾಗುವದಿಲ್ಲವು. ಗಂಗಾನದಿಯ ಪುಣ್ಯತೀರ್ಥವಹಾಗೆ ಅಕರ್ದಮವು

**ಮೂಲಕ್ಕೆ ಅರ್ಥವು :**— ಪರತ್ವ ಸೌಲಭ್ಯಾದಿಗಳಿಂದ ವಿರಾಜಿಸುವ ಶ್ರೀ ಕೃಷ್ಣಭಗವಾನ ನಿಗೂ ತನಗೂ ಎಂದಿಗೂ ತಪ್ಪದಿರುವ ಸಂಬಂಧವು ಪಿತಾ ಪುತ್ರ ಅಥವಾ ಗುರುಶಿಷ್ಯರೂಪ ಸಂಬಂಧವೆಂದು ಉಪಪಾದಿಸಿ, ಹೀಗೆ ಮಹತ್ತಾದ ಕಲ್ಯಾಣಗುಣಗಳಯೋಗ ಮತ್ತು ಅತ್ಯದ್ಭುತ ವಿಭೂತಿಗಳಿಂದ ಸೇರಿರೋಣ, ಸರ್ವ ವಿಶ್ವಕ್ಕೂ ಕಾರಣಭೂತನಾಗಿ, ಆತ್ಮಾವಾಗಿ, ನಿಯಾಮಕ ನಾಗಿರೋಣ, ಇವುಗಳಿಂದ ನಿನಗೆ ಸಮರೂ ಇಲ್ಲ, ಅಧಿಕರೂ ಇಲ್ಲವೆಂದು ಅರ್ಜುನನು ಸ್ತೋತ್ರ ಮಾಡುತ್ತಾನೆ. ಈ ಸಂದರ್ಭದಲ್ಲಿ ಶಾಸ್ತ್ರಜ್ಞರು ಹೇಳುವ ಪರಮಾತ್ಮ ಜೀವಾತ್ಮರುಗಳಿಗಿರುವ ನವವಿಧ ಸಂಬಂಧಗಳಲ್ಲಿ ಪಿತಾ ಪುತ್ರಸಂಬಂಧವನ್ನು ಉಪಪಾದಿಸಿ ಹೇಳುತ್ತಾನೆ. ಹಾಗೆಯೇ ಗುರುಶಿಷ್ಯ ಸಂಬಂಧವೂ ತಾದೃಶವಾದುದೇ ಎಂದು ಹೇಳಿ, ಸರ್ವೇಶ್ವರನು ಲೋಕಗುರು ಎಂಬರ್ಥ ವನ್ನೂ ಉಪಪಾದಿಸುತ್ತಾನೆ.— **ಚರಾಚರಸ್ಯ** - ಅಚಿದ್ವಿಶಿಷ್ಟಗಳಾದ ಜಙ್ಗಮ ಸ್ಥಾವರಗಳಾದ, **ಅಸ್ಯ ಲೋಕಸ್ಯ**-ಈ ಲೋಕದ ಜನರಿಗೆ, **ಪಿತಾಸಿ**-ಜನಕನಾಗಿ ರಕ್ಷಕನಾಗಿ ವೃದ್ಧಿಹೊಂದಿಸುವ ನಾಗಿ ಹಿತಪ್ರವರ್ತಕನಾದ ಉಪಕಾರಕನಾಗಿರುವ ನಿರುಪಾಧಿಕ ತಂದೆಯಾಗಿದ್ದೀಯೇ. ಶಾಸ್ತ್ರ ಗಳಲ್ಲಿ ನಿನ್ನನ್ನು **ಲೋಕಪಿತಾ** ಎಂದು ಹೇಳುತ್ತದೆ; ಏಕೆಂದರೆ, ತಂದೆಯು ಲೋಕದಲ್ಲಿ ಮಗ ನಿಗೆ ಅನ್ನಬಟ್ಟೆಗಳನ್ನು ಕೊಟ್ಟು, ವಿದ್ಯೆಯನ್ನು ಕಲಿಸಿ, ಹಿತ ಪ್ರವರ್ತಕನಾಗಿ ಹೀಗೆ ನಾನಾ ವಿಧ ವಾಗಿ ಹೇಗೆ ಉಪಕಾರಕನೋ, ಹಾಗೆಯೇ ಸರ್ವೇಶ್ವರನು ಚೇತನನಿಗೆ ಕರಣಕಳೇಬರ ಯೋಗ ವನ್ನುಂಟುಮಾಡಿ, ಜ್ಞಾನ ವಿವೇಕಗಳನ್ನು ಕೊಟ್ಟು, ಶಾಸ್ತ್ರಗಳನ್ನು ಕಲ್ಪಿಸಿ, ಶಾಸ್ತ್ರೋಪದೇಶ ಕರನ್ನುಂಟುಮಾಡಿ. ಐಹಿಕಾದಿ ಭೋಗಗಳೇನು, ಇಹಪರ ಸುಖಗಳೇನು ಹೀಗೆಲ್ಲಾ ಪರಮೋ

ಪಕಾರಕನಾಗಿರುವದರಿಂದ ಆತನು ಲೋಕಪಿತಾ ಎಂದು ಹೇಳಿಸಿಕೊಳ್ಳುವನು ಎಂಬ ಭಾವವು. ಉಪಾಧಿಮೂಲಕ ಮಾತ್ರ ಪಿತಾವಾಗಿರುವವನು ಸರ್ವೇಶ್ವರ ಸಙ್ಕಲ್ಪ ಮೂಲಕವಾಗಿಯೇ ತನ್ನ ಪುತ್ರನಿಗೆ ಹಿತವನ್ನುಂಟುಮಾಡುವನು. ನಿರುಪಾಧಿಕ ಪಿತಾವಾದ ಸರ್ವೇಶ್ವರನ ವಿಷಯದಲ್ಲಿ ಹೇಳತಕ್ಕದ್ದೇನಿರುತ್ತದೆ. ಆ ಕಾರಣದಿಂದ ಲಕ್ಷ್ಮಣನು ಹೇಳುತ್ತಾನೆ. "**ಅಹಂತಾವನ್ಮಹಾರಾಜೇ ಪಿತೃತ್ವಂ ನೋಪಲಕ್ಷಯೇ। ಭ್ರಾತಾ ಭರ್ತಾ ಚ ಬಂಧುಶ್ಚ ಪಿತಾ ಚ ಮಮ ರಾಘವಃ**" (ರಾ. ಅ. ೫೮-೩೧) ದಶರಥ ಮಹಾರಾಜರಲ್ಲಿ ಸರಿಯಾದ ಪಿತೃಭಾವವು ನನಗೆ ಕಾಣಬರಲಿಲ್ಲವು; ಸೋಪಾಧಿಕ ಪಿತೃತ್ವವೆಂಬ ಭಾವವು; ಅದು ಹೇಗೆಂದರೆ ದಶರಥನು ಸೋಪಾಧಿಕ ಪಿತಾವಾದುದರಿಂದಲೇ ತನ್ನ ಹಿರೇಮಗನನ್ನು ಕಾಡಿಗೆ ಅಟ್ಟಿದನು. ಹಾಗೆಯೇ ಜರಾಸಂಧನು ಎರಡು ಭಾಗವಾಗಿ ಜನಿಸಿದ್ದರಿಂದ ತಂದೆಯು ತನಗೆ ಅಶುಭಸೂಚಕವೆಂದು ಬಿಸಾಡಿಸಿಬಿಟ್ಟು, ಅನಂತರ ಜರಾ ಎಂಬುವಳಿಂದ ಆ ಎರಡು ಹೋಳುಗಳು ಒಟ್ಟಿಗೆ ಸೇರಿಸಲ್ಪಟ್ಟುದುದರಿಂದ ಬೆಳೆದು ವೃದ್ಧಿಯನ್ನು ಹೊಂದಿದನು. ಹಾಗೆಯೇ ಯಜ್ಞಕ್ಕಾಗಿ ನರಪಶು ಬೇಕಾದುದರಿಂದ ಅಂಬರೀಷನು ಹೋಗಿ ಋಚೀಕರನ್ನು ಯಾಚಿಸಲಾಗಿ, ಅವರು ಮೂರುಜನ ಮಕ್ಕಳಲ್ಲಿ ಜೇಷ್ಠನನ್ನು ತಾವು ಕೊಡಲಾರನೆಂದೂ, ಅವರ ಪತ್ನಿಯು ಕನಿಷ್ಠನನ್ನು ಕೊಡಲಾಗುವದಿಲ್ಲವೆಂದೂ ಹೇಳಲು; ಆಗ ಋಚೀಕರು ತಮ್ಮ ನಡುಕಲವನಾದ ಶುನಶ್ಶೇಫನನ್ನು ರಾಜನಿಗೆ ವಿಕ್ರಯಿಸಿದರು. ಹಾಗೆಯೇ ವಿಶ್ವಾಮಿತ್ರರು ತಮ್ಮ ಮಕ್ಕಳನ್ನು ಚಂಡಾಲರಾಗೆಂದು ಶಪಿಸಿದರು. ಯಯಾತಿಯು ತನ್ನ ಮಕ್ಕಳನ್ನು ಕುರಿತು ಅವರ ಯವ್ವನವನ್ನು ಪ್ರಾರ್ಥಿಸಿ, ಅವರುಗಳನ್ನು ಕ್ಲೇಶಪಡಿಸಿದನು. ಹಿರಣ್ಯಕಶಿಪುವು ತನ್ನ ಮಗನಾದ ಪ್ರಹ್ಲಾದನನ್ನು ನಾನಾ ಬಗೆಯಾದ ಚಿತ್ರಹಿಂಸೆಗೆ ಗುರಿಮಾಡಿದನು. ಹೀಗೆಲ್ಲಾ ಸೋಪಾಧಿಕ ತಂದೆಗಳ ಪ್ರವೃತ್ತಿಗಳುಂಟು. ನಿರುಪಾಧಿಕಪಿತೃತ್ವವೆಲ್ಲಿ ಎಂದರೆ ಎಷ್ಟು ಪಾಪಗಳಿದ್ದರೂ ಪರಿಗಣಿಸದೆ ಭರ್ತಾವಾಗಿಯೂ, ಸರ್ವವಿಧ ಬಂಧುವಾಗಿಯೂ, ಜ್ಯೇಷ್ಠಭ್ರಾತಾವಾಗಿ ಪಿತೃಸಮನಾಗಿ ನಿರುಪಾಧಿಕ ಪಿತಾವಾಗಿರುವವನು ಯಾರೆಂದರೆ, **ಮಮ ರಾಘವಃ**-ನನಗೆ ಸ್ವಾಮಿಯಾಗಿರುವ ಶ್ರೀರಾಮನೆಂದು, ಲಕ್ಷ್ಮಣನು ಹೇಳಿಕೊಂಡಿರುತ್ತಾನೆ. ಶ್ರೀ ಕೃಷ್ಣಭಗವಾನರವರು ಹಿಂದೆ "**ಪಿತಾಮಹಸ್ಯ ಜಗತಃ**" (ಗೀ. ೯-೧೭) ಎಂದು ಉಪದೇಶಿಸಿದುದನ್ನೇ ಅನುವಾದಮಾಡಿ ಅರ್ಜುನನು ಹೇಳುತ್ತಾನೆ ಶ್ರುತಿಯಲ್ಲೂ "**ಯೋನಃ ಪಿತಾ ಜನಿತಾ ಯೋ ವಿಧಾತಾ**" (ಋ. ೧೦.೮೨-೩ ಯಜು. ೪-೬ ೨) ಎಂದು ಈ ಸಂಬಂಧವು ಬೋಧಿಸಲ್ಪಟ್ಟಿರುತ್ತದೆ. **ಈ ಪಿತಾಸಿ** ಎಂಬ ಪ್ರಯೋಗದಿಂದ ಜಗತ್ಕಾರಣತ್ವವೂ ಸಹ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಆದುದರಿಂದಲೇ ಜಗತ್ಕಾರಣತ್ವಾದಿ ನಿನಗಿರುವದರಿಂದಲೇ **ಗರೀಯಾನ್**-ಪರಮಶ್ರೇಷ್ಠನು, **ತ್ವಂ**-ನೀನೇ, **ಈ** ಲೋಕಕ್ಕೂ, **ಗುರುಃ**- "**ನಾರಾಯಣಂ ಲೋಕಗುರುಂ ಪ್ರಪನ್ನಃ**" (ಭಾಗ ೧೧. ೫. ೪೧) ಎಂದೂ "**ತಮಿಮಂ ಸರ್ವಸಂಪನ್ನಂ ಆಚಾರ್ಯಂ ಪಿತರಂ ಗುರುಂ**" ಎಂದೂ, (ಭಾರ ಸಭಾ. ೪೧-೨೧) ಎಂದೂ, "**ಮಮಾಪ್ಯಖಿಲಲೋಕಾನಾಂ ಗುರುರ್ನಾರಾಯಣೋಗುರುಃ**" "ಆತನು ಎಲ್ಲರಿಗೂ ಗುರುವು, ಆತನಿಗಾದರೋ ಯಾರೂ ಗುರುವಲ್ಲವು." ಎಂದೂ (ವಿ. ಪು. ೫-೧-೧೫) ಇರುವ ಹಾಗೆ ಆದಿಗುರುವಾದುದರಿಂದ, **ಪೂಜ್ಯಃ**-ಎಲ್ಲರಿಗಿಂತಲೂ ವಿಶೇಷವಾಗಿ ಪೂಜಿಸಲ್ಪಡಲು ಅರ್ಹನು. ಶ್ರೀಮನ್ನಾರಾಯಣನು ಲೋಕಗುರುವೆಂದು ಹೇಳಲು ಅನೇಕ ಕಾರಣಗಳುಂಟು.—೧. ಆತನು ತನ್ನ ಮಗನಾದ ಚತುರ್ಮುಖನಿಗೆ ವೇದಗಳನ್ನೂ ಅವುಗಳ ಅರ್ಥಗಳನ್ನೂ ಉಪದೇಶಿಸಿದುದರಿಂದಲೂ, ೨. ಆ ಚತುರ್ಮುಖನಿಂದ ಆತನ ಮಗನಾದ ಸನತ್ಕುಮಾರನಿಗೂ, ಹಾಗೆಯೇ ಗುರುಶಿಷ್ಯ ಕ್ರಮದಲ್ಲಿ ಪರಂಪರಯಾ

ಉಚ್ಚಾರಣಾನುಚ್ಚಾರಣೆಯ ರೂಪದಲ್ಲಿ ನಾರದ ಪರಾಶರ ಶುಕಶೌನಕಾದಿಗಳ ಮೂಲಕ ಈ ಬ್ರಹ್ಮವಿದ್ಯೆಯು ಶಿಥಿಲವಾಗದಹಾಗೆ ಕಾಪಾಡಿದುದರಿಂದಲೂ, ೩. ವ್ಯಾಸಾದಿಗಳ ಅನುಪ್ರವೇಶ ಮೂಲಕವಾಗಿ ಬ್ರಹ್ಮಸೂತ್ರ, ಭಾರತ, ಭಗವದ್ಗೀತಾ ಮೊದಲಾದವುಗಳನ್ನೂ, ಇತಿಹಾಸ ಪುರಾಣಗಳನ್ನೂ ರಚಿಸುವಹಾಗೆ ಮಾಡಿದುದರಿಂದಲೂ, ೪. ತಾನೇ ಹಂಸ, ಮತ್ಸ್ಯ, ಹಯ ಗ್ರೀವ ಶ್ರೀ ಕೃಷ್ಣಾದ್ಯವತಾರಗಳಲ್ಲಿ ಶಾಸ್ತ್ರೋಪದೇಶವನ್ನು ಮಾಡಿದುದರಿಂದಲೂ, ೫. ಮಹಾ ಭಾಗವತೋತ್ತಮರಾದ ಭೀಷ್ಮಾದಿಗಳನ್ನು ಇಂತಹ ಶಾಸ್ತ್ರಾರ್ಥಗಳನ್ನೇ ಉಪದೇಶಿಸುವಹಾಗೆ ಮಾಡಿದುದರಿಂದಲೂ, ೬. ಭಗವಚ್ಛಾಸ್ತ್ರವಾದ ಪಾಂಚರಾತ್ರಾಗಮ ಮೂಲಕವಾಗಿ ಶಾಸ್ತ್ರಾರ್ಥ ಗಳನ್ನು ವ್ಯವಸ್ಥೆಪಡಿಸಿದುದರಿಂದಲೂ, ೭. ಆಳ್ವಾರಾಚಾರ್ಯರುಗಳ ಮೂಲಕ ಶಾಸ್ತ್ರಾರ್ಥ ಗಳನ್ನು ಪ್ರಚುರಪಡಿಸಿದುದರಿಂದಲೂ, ೮. ಎಲ್ಲಾ ಕಾಲದಲ್ಲೂ ಭಾಗವತೋತ್ತಮರು ಅವತರಿಸಿ ಜ್ಞಾನಶೂನ್ಯರಿಗೆ ಜ್ಞಾನೋಪದೇಶವನ್ನು ಉಪದೇಶಿಸುವ ಹಾಗೆ ಮಾಡಿರುವದರಿಂದಲೂ, ಶ್ರೀಮನ್ನಾರಾಯಣನು ಆದಿಗುರುವು. ಗುರುಪರಂಪರಾಸಾರವನ್ನು ನೋಡಿ, ಯಾವಾಗ ಸರ್ವಲೋಕದವರೂ ಸೃಜ್ಯವರ್ಗಕ್ಕೆ ಸೇರಿ **"ಬ್ರಹ್ಮಾಜಾಯತೇ ರುದ್ರೋ ಜಾಯತೇ ಇಂ ದ್ರೋ ಜಾಯತೇ"** ಎಂದೂ, **ಏತೌದ್ವೌ ವಿಬುಧಶ್ರೇಷ್ಠೌ ಪ್ರಸಾದಕ್ರೋಧಜೌ ಸ್ಮೃತೌ। ತದಾದರ್ಶಿತ ಪಂಥಾನೌ ಸೃಷ್ಟಿಸಂಹಾರಕಾರಕೌ"** (ಮೋಕ್ಷ ೧೭೯.೧೯) ಎಂದೂ, **"ಸಬ್ರಹ್ಮ ಕಾಸ್ಸರುದ್ರಾಶ್ಚ ಸೇಂದ್ರಾದೇವಾಮಹರ್ಷಯಃ। ಅರ್ಚಯನ್ತಿ ಸುರಶ್ರೇಷ್ಠಂ ದೇವಂ ನಾರಾಯಣಂ ಹರಿಂ"** (ಮೋಕ್ಷ ೧೭೯-೩೦೪) ಎಂದೂ, ಹೀಗೆಲ್ಲಾ ನೂರಾರು ಪ್ರಮಾಣ ಗಳಿರುವದರಿಂದ, ನೀನು ಇವೆಲ್ಲಕ್ಕಿಂತಲೂ ಸರ್ವೋತ್ಕೃಷ್ಟನೆಂದು ನಿಸ್ಸಮಾಭ್ಯಧಿಕ ಶ್ರುತ್ಯರ್ಥ ವನ್ನು ಅನುವಾದಮಾಡಿ ನಿನಗೆ ಸಮರೇ ಇಲ್ಲವು, ಇನ್ನು ನಿನಗಿಂತ ಅಧಿಕರು ಎಂಬುದು ಇಲ್ಲವೇ ಇಲ್ಲವೆಂದು ಅರಿಕೆಮಾಡಿಕೊಳ್ಳುತ್ತಾನೆ — **ಲೋಕತ್ರಯೇಪಿ** - ಮೇಲಿನ ಎಲ್ಲಾ ಲೋಕದಲ್ಲೂ, ಹಾಗೆಯೇ ಮಧ್ಯದ, ಕೆಳಗಿನ ಲೋಕಗಳಲ್ಲೂ, ಹೀಗೆ ಮೂರು ಲೋಕಗಳಲ್ಲೂ ಅಥವಾ ಕೃತಕ (ಲೀಲಾ ವಿಭೂತಿ), ಅಕೃತಕ (ನಿತ್ಯವಿಭೂತಿ), ಕೃತಕಾಕೃತಕವೆಂಬದಾಗಿ ಮೂರು ಲೋಕಗಳಲ್ಲೂ, ಅಥವಾ ಬದ್ಧಮುಕ್ತ ನಿತ್ಯರಾದ ಮೂರುವಿಧ ಜನರಲ್ಲಿಯೂ, **ತ್ವದನ್ಯಃ**-ನಿನಗಿಂತಲೂ ಬೇರೆಯವನಾಗಿ, **ತ್ವತ್ಸಮಃ**-ನಿನಗೆ ಸಮನಾದವನು, **ನಾಸ್ತಿ**-ಇಲ್ಲವು, ಹಾಗಾದ ನಂತರ, **ಅಭ್ಯಧಿಕಃ**-ನಿನಗಿಂತಲೂ ಉತ್ತಮನಾದವನು, **ಕುತಃ**-ಎಲ್ಲಿರುವನು? ಇಲ್ಲವೇ ಇಲ್ಲವೆಂಬುದು ಕೈಮುತಿಕನ್ಯಾಯಸಿದ್ಧವು. ನಿನಗೆ ಸಮರೇ ಇಲ್ಲವೆಂದರೆ, ಇನ್ನು ಅಧಿಕರಿರುವರೇ ಎಂಬ ತಾತ್ಪರ್ಯವು ಆದುದರಿಂದ **ಹೇ ಅಪ್ರತಿಮಪ್ರಭಾವ!** - ಓ ಅಸದೃಶ ವಾದ ಪ್ರಭಾವವುಳ್ಳವನೇ ಎಂದು ಸಂಬೊಧಿಸಿ, ಮುಂದಿನ ಶ್ಲೋಕದಲ್ಲಿ ಪ್ರಣಾಮವನ್ನೆಸಗಿ ಪ್ರಸನ್ನನಾಗು ಎಂದು ಪ್ರಾರ್ಥಿಸುತ್ತಾನೆ. ಈ ಉತ್ತರಾರ್ಧದಿಂದ **"ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ"** ಎಂಬ ಶ್ರುತ್ಯರ್ಥವು ಉಪಪಾದಿಸಲ್ಪಟ್ಟಿತು. ಇದರಿಂದ ಶ್ರೀ ಕೃಷ್ಣನೇ ಪರತತ್ವ ವೆಂದು ಆತನಿಗೆ ಸಮರೂ ಅಧಿಕರೂ ಯಾರೂ ಇಲ್ಲವೆಂದು ಹೇಳಿದಂತಾಯಿತು. ಆದುದರಿಂದ ಈತನು ಸಗುಣಬ್ರಹ್ಮನು, ಬೇರೆ ನಿರ್ಗುಣಬ್ರಹ್ಮನೊಬ್ಬನುಂಟೆಂದು ಹೇಳುವ ವಾದಕ್ಕೆ ಪ್ರತ್ಯುತ ವಿರುದ್ಧವು ಈ ಶ್ಲೋಕವು. ಶ್ರೀಕೃಷ್ಣನಿಗಿಂತ ಮೇಲಾದ ಪರಶಿವನೊಬ್ಬನುಂಟು ಎಂದು ಹೇಳುವ ವಾದವೂ ಇದರಿಂದ ನಿರಸ್ತವು. ಪುರುಷಸೂಕ್ತದಲ್ಲಿ ಪರಮಾತ್ಮನಿಗೆ ಜಗತ್ಕಾರಣತ್ವ ವನ್ನೂ, ಸರ್ವಾತ್ಮಕತ್ವವನ್ನೂ, ಸರ್ವನಿಯಮನತ್ವಾದಿಗಳನ್ನೂ ಉಪಪಾದನೆಯನ್ನು ಮಾಡಿ, ಶ್ರುತಿಗಳಲ್ಲಿ ವಿಶ್ವಾಕ್ಷ, ವಿಶ್ವ, ಶಂಭು, ಅಕ್ಷರ, ಹರಿ, ಅಚ್ಯುತ, ಶಿವ, ಪರಂಜ್ಯೋತಿಸ್ ಇವೇ ಮೊದಲಾದ ಸರ್ವ ವೇದ ಪ್ರತಿಪಾದ್ಯ ನಾಮಗಳೆಲ್ಲಾ ನಾರಾಯಣನನ್ನೇ ಬೋಧಿಸುತ್ತವೆ

ಎಂದು ಹೇಳಿ, ಆ ನಾರಾಯಣನು ಯಾರು ಎಂಬ ಅಪೇಕ್ಷೆಯಲ್ಲಿ, **"ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂದು ಲಕ್ಷ್ಮೀಪತಿತ್ವವನ್ನು ಸ್ವರೂಪ ನಿರೂಪಕ ಧರ್ಮವಾಗಿ ಹೇಳಿರುವದರಿಂದ, ಶ್ರೀಮನ್ನಾರಾಯಣನೇ ಪರದೇವತೆಯೆಂದು ಹೇಳಿದಂತಾಯಿತು. ಹಾಗೆಯೇ ಮೋಕ್ಷಧರ್ಮದಲ್ಲಿ, **"ಕುತಸ್ಸೃಷ್ಟಮಿದಂ ಸರ್ವಂ ಜಗತ್ಸ್ಥಾವರ ಜಙ್ಗಮಂ। ಪ್ರಳಯೇಚಕಮಭ್ಯೇತಿ ತನ್ಮೇ ಬ್ರೂಹಿ ಪಿತಾಮಹ"** (ಭಾರ. ಮೋಕ್ಷ) "ಯಾರಿಂದ ಈ ಜಗತ್ತೆಲ್ಲಾ ಸೃಷ್ಟಿಸಲ್ಪಟ್ಟವು, ಯಾರನ್ನು ಕುರಿತು ಪ್ರಳಯದಲ್ಲಿ ಸ್ಥಾವರ ಜಂಗಮಾತ್ಮಕ ಜಗತ್ತೆಲ್ಲಾ ಹೋಗಿ ಸೇರುತ್ತವೆ" ಎಂಬ ಯುಧಿಷ್ಠಿರ ಪ್ರಶ್ನೆಗೆ, ಶ್ರೀ ಭೀಷ್ಮರು ಹೇಳುತ್ತಾರೆ.—**"ನಾರಾಯಣೋ ಜಗನ್ಮೂರ್ತಿರಂತರಾತ್ಮಾ ಸನಾತನಃ"** ಎಂದು ಪ್ರಾರಂಭಿಸಿ ಆತನೇ ಪರತತ್ತ್ವವೆಂದು ಉಪದೇಶಿಸಿರುತ್ತಾರೆ. ಹಾಗೆಯೇ ವಿದ್ವತ್ಸಭೆಯಲ್ಲಿ ಪರತತ್ತ್ವನಿರ್ಣಯ ಸಂದರ್ಭದಲ್ಲಿ **ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃಪುನಃ। ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ। ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಯತೇ। ವೇದಶಾಸ್ತ್ರಾತ್ಪರಂ ನಾಸ್ತಿ ನದೈವಂ ಕೇಶವಾತ್ಪರಮ್॥** ಇಲ್ಲಿ ಕೇಶವನೇ ಪರತತ್ತ್ವವೆಂದು ಭುಜವನ್ನೆತ್ತಿ ಮಹಾಸಭೆಯಲ್ಲಿ ಸರ್ವಜ್ಞರು ಹೇಳಿರುತ್ತಾರೆ. ಕೇಶವ ಶಬ್ದಕ್ಕೆ ವ್ಯುತ್ಪತ್ತಿ ಹೇಗೆಂದರೆ—**"ಕ ಇತಿ ಬ್ರಹ್ಮಣೋನಾಮ, ಈಶೋಹಂ ಸರ್ವದೇಹಿನಾಂ। ಆವಾಂ ತವಾಂಗೇ ಸಂಭೂತೌ ತಸ್ಮಾತ್ಕೇಶವನಾಮವಾನ್** (ಹರಿ. ೧೩೧-೪೮) ಕ ಎಂಬುದು ಚತುರ್ಮುಖನ ಹೆಸರು, ಸಮಸ್ತ ಚೇತನರಿಗೂ ಈಶನಾದುದರಿಂದ ನನ್ನನ್ನು ಈಶನೆಂದು ಕರೆಯುತ್ತಾರೆ. ಇದು ಸರ್ವೇಶ್ವರನನ್ನು ಕುರಿತು ಹೇಳುವ ರುದ್ರವಾಕ್ಯವು; **ಆವಾಂ**-ನಾವಿಬ್ಬರೂ, **ತವಾಂಗೇ ಸಂಭೂತೌ**-ನಿನ್ನ ಶರೀರದಿಂದ ಉತ್ಪನ್ನರಾದವರು, ಆದುದರಿಂದ ನೀನು ಕೇಶವನೆಂಬ ನಾಮವನ್ನುಳ್ಳವನೆಂದು ಇರುತ್ತದೆ. ವಾಲ್ಮೀಕಿ ಮಹರ್ಷಿಯು ಅನೇಕ ಕಡೆಗಳಲ್ಲಿ ವಿಷ್ಣುವಿನ ನಿಸ್ಸಮಾಭ್ಯಧಿಕತ್ವವನ್ನು ಸ್ಥಾಪಿಸಿರುತ್ತಾರೆ; **"ಬ್ರಹ್ಮಾಸ್ವಯಮ್ಭೂ"** (ರಾ. ಸುಂ. ೫೧-೪೫) ಎಂಬ ಶ್ಲೋಕದಲ್ಲಿ ಬ್ರಹ್ಮ ರುದ್ರೇಂದ್ರಾದಿಗಳಿಗಿಂತ ವಿಷ್ಣುವಿನ ಅವತಾರಿಯಾದ ಶ್ರೀರಾಮನು ಅಧಿಕನೆಂದು ಹೇಳಲ್ಪಟ್ಟಿತು; ಸೀತೆಯು ಅಗ್ನಿಪ್ರವೇಶಮಾಡಿದ ಸಂದರ್ಭದಲ್ಲಿ ಶ್ರೀರಾಮನನ್ನು ಕುರಿತು ಚತುರ್ಮುಖನು **"ಭವಾನ್ ನಾರಾಯಣೋ ದೇವಃ"** ಎಂದೂ, **"ಸೀತಾಲಕ್ಷ್ಮೀರ್ಭವಾನ್ ವಿಷ್ಣುಃ"** ಎಂದೂ ಹೇಳಿರುತ್ತಾನೆ. ಶ್ರೀ ವ್ಯಾಸರ ತಂದೆಯಾದ ಶ್ರೀ ಪರಾಶರರು ಜಗತ್ಕಾರಣನಾಗಿ ಜಗದ್ವ್ಯಾಪಿಯಾಗಿರುವ ಶ್ರೀ ಮಹಾವಿಷ್ಣುವೇ ಪರತತ್ತ್ವವೆಂದು ಸ್ಥಾಪಿಸಿರುತ್ತಾರೆ; ಹರಿಶಬ್ದಾರ್ಥದ ಉಪಪಾದನೆಯಲ್ಲಿ **"ಬ್ರಹ್ಮಾಣಮಿನ್ದ್ರಂ ರುದ್ರಂ ಚ ಯಮಂ ವರುಣಮೇವ ಚ। ನಿಗೃಹ್ಯ ಹರತೇ ಯಸ್ಮಾತ್ತಸ್ಮಾದ್ಧರಿರಿಹೋಚ್ಯತೇ** ಎಂದು ಬ್ರಹ್ಮರುದ್ರಾದಿಗಳಿಗಿಂತ ಸರ್ವೋತ್ಕೃಷ್ಟನೆಂದು ತಮ್ಮ ಶಿಷ್ಯರಿಗೆ ತಿಳಿಸಿರುತ್ತಾರೆ; ಜಗತ್ತೆಲ್ಲಾ **"ವಿಷ್ಣೋಸ್ಸಕಾಶಾದುದ್ಭೂತಂ"** ವಿಷ್ಣುವೇ ಕಾರಣನೆಂದು ಉಪದೇಶಿಸಿರುತ್ತಾರೆ. **"ಯದ್ವೈಕಿಂಚನ ಮನುರವದತ್ತದ್ಭೇಷಜಂ"** ಎಂದು ಮನುವಿನ ಉಕ್ತಿಗೆ ಪ್ರಾಮಾಣ್ಯವನ್ನು ಶ್ರುತಿಯೇ ಉಪದೇಶಿಸಿರುವದರಿಂದ, ಜಗತ್ಸೃಷ್ಟಿಯನ್ನು ಬೋಧಿಸುವ ಸಂದರ್ಭದಲ್ಲಿ,

**"ಆಪೋನಾರಾ ಇತಿ ಪ್ರೋಕ್ತಾ ಆಪೋವೈ ನರಸೂನವಃ।**
**ತಾಯದಸ್ಯಾಯನಂ ಪೂರ್ವಂ ತೇನ ನಾರಾಯಣಸ್ಸ್ಮೃತಃ॥**

ಎಂದು ಹೇಳಿರುವದರಿಂದ ಶ್ರೀಮನ್ನಾರಾಯಣನೇ, ಜಗತ್ಕಾರಣನಾಗಿ, ನಿರ್ವಿಕಾರನಾಗಿ ಎಲ್ಲವನ್ನೂ ಶರೀರವಾಗಿ ಹೊಂದಿ, ಎಲ್ಲವನ್ನೂ ವ್ಯಾಪಿಸಿ ಎಲ್ಲಕ್ಕೂ ಆತ್ಮಾವಾಗಿ, ನಿಯಮನಾದಿಗಳನ್ನು ನಡೆಸುವದರಿಂದ ಆತನೇ ಪರತತ್ತ್ವವೆಂದು ಹೇಳಿರುತ್ತಾರೆ. ಇದೂ ಅಲ್ಲದೆ, ತಂದೆ

**ಭಾ. ಅಪ್ರತಿಮಪ್ರಭಾವ, ತ್ವಮಸ್ಯ ಸರ್ವಸ್ಯ ಚರಾಚರಸ್ಯ ಲೋಕಸ್ಯ ಪಿತಾಸಿ; ಅಸ್ಯ**

ಯಾದ ಶ್ರೀ ವ್ಯಾಸಮಹರ್ಷಿಯಿಂದ ಉಪದೇಶಿಸಲ್ಪಟ್ಟ ಶ್ರೀಮದ್ಭಾಗವತವನ್ನು ಶ್ರೀ ಶುಕರು ಪರೀಕ್ಷಿದ್ರಾಜನಿಗೆ ಉಪದೇಶಿಸಿ ಭಾಗವತಾಂತ್ಯದಲ್ಲಿ ಎಂದರೆ ದ್ವಾದಶಸ್ಕಂದದ ದ್ವಾದಶಾಧ್ಯಾಯ ದಲ್ಲಿ, **ಅನಂತವೀರ್ಯನಾಗಿ, ಅಪ್ರತಿಮಪ್ರಭಾವನಾಗಿರುವ** ಮಙ್ಗಳಕರವಾದ ದಿವ್ಯಾದ್ಭುತ ಚೇಷ್ಟಿತಗಳನ್ನು ಕೇಳಿ, ಜ್ಞಾನ ಭಕ್ತಿ ವೈರಾಗ್ಯಗಳಿಂದ ಪರಿಪೂರ್ಣರಾಗಿ ಆನಂದಾಶ್ರುಗಳನ್ನು ಸ್ರವಿಸುತ್ತಲಿರುವ ಅಲ್ಲಿ ನೆರದಿರುವ ಬ್ರಹ್ಮವಿತ್ತುಗಳನ್ನು ಕುರಿತು ಹೇಳುತ್ತಾರೇನೆಂದರೆ—

**ಯೂಯಂ ದ್ವಿಜಾಗ್ರ್ಯ ಬತಭೂರಿಭಾಗಾ ಯಚ್ಛಶ್ವದಾತ್ಮನ್ಯಖಿಲಾತ್ಮಭೂತಮ್ ।**
**ನಾರಾಯಣಂ ದೇವ ಮದೇವಮೀಶ ಮಜಾಸ್ರಭಾಜೋಽಭಜತಾಭಿವೇಶ್ಯ ॥೫೫॥** ಹೀಗೆ ಹೇಳಿರುವದರಿಂದ ಶ್ರೀಮನ್ನಾರಾಯಣನೇ ದೇವನೆಂದೂ, ಈಶನೆಂದೂ, ಆ ಕಾರಣ ಆತನು ನಿಸ್ಸಮಾಭ್ಯಧಿಕನಾದುದರಿಂದ ಆತನು **ಅದೇವನೆಂದೂ,** ಎಂದರೆ ತನಗೆ ಯಾವ ದೇವನೂ ಇಲ್ಲದವನೆಂದೂ ಹೇಳಲ್ಪಟ್ಟಿರುತ್ತದೆ. ಆದುದರಿಂದ ಶ್ರೀ ಕೃಷ್ಣನೇ ನಾರಾಯಣನು, ಆತನೇ ಸರ್ವೇಶ್ವರನು, ಆತನ ಮೇಲೆ ನಿರ್ಗುಣನಾದ ಒಬ್ಬ ಈಶನುಂಟು ಎಂಬ ವಾದಕ್ಕೆ ಆಧಾರವೇ ಇಲ್ಲವು. ಹೀಗೆ ಶ್ರುತಿ, ಸ್ಮೃತಿ ಪುರಾಣೇತಿಹಾಸ ಪ್ರಮಾಣಗಳೆಲ್ಲಾ ಶ್ರೀಮನ್ನಾರಾಯಣನಿಗೇ ನಿಸ್ಸಮಾಭ್ಯಧಿಕತ್ವವನ್ನೂ ಸ್ಥಾಪಿಸುವದರಿಂದ, ಪ್ರಕೃತ ಲಕ್ಷ್ಮೀನಾರಾಯಣರೇ ರುಕ್ಮಿಣೀ ಕೃಷ್ಣರಾಗಿ ಅವತರಿಸಿರುವದರಿಂದ ನಿಸ್ಸಮಾಭ್ಯಧಿಕತ್ವವು ಶ್ರೀ ಕೃಷ್ಣಭಗವಾನರವರಿಗೆ ಸಲ್ಲುತ್ತದೆ. ಆದುದರಿಂದ ಶ್ರೀಕೃಷ್ಣಭಗವಾನರಿಗಿಂತ ಬೇರೆಯಾಗಿ ಪಾರಮಾರ್ಥಿಕ ಪರತತ್ತ್ವ ಉಂಟೆಂಬ ವಾದವು ಕೂಡುವದಿಲ್ಲವು. ಪುರುಷಸೂಕ್ತವು ಸರ್ವ ಶ್ರುತಿಗಳ ಸಾರವು, ಆದಕ್ಕೇ ಈ ವಾದವು ರುಚಿಸುವದಿಲ್ಲವು. ಹೀಗೆ ವೇದಾರ್ಥಗಳನ್ನೆಲ್ಲಾ ಕ್ರಮಪಡಿಸಿ ಹೇಳುವ ಈ ಅತ್ಯದ್ಭುತವಾದ ಗೀತಾಚಾರ್ಯೋಪದೇಶರೂಪವಾಗಿ ಉಪನಿಷತ್ಸಾರವಾದ ಈ ಗೀತಾಶಾಸ್ತ್ರಕ್ಕೂ ಈ ವಾದವು ಇಷ್ಟವಿಲ್ಲವು.

**ಭಾಷ್ಯಾರ್ಥವು :**—ಶ್ರೀ ಕೃಷ್ಣಭಗವಾನರವರನ್ನು **ಅಪ್ರತಿಮ ಪ್ರಭಾವ !**-ಅಸದೃಶವಾದ ಮಾಹಾತ್ಮ್ಯಯುಳ್ಳವನೇ ಎಂದು ಸಂಭೋಧಿಸಿ. ಅದು ಹೇಗೆ ಎಂಬುವನ್ನು ತನಗೆ ತೋಚಿದ ಮಟ್ಟಿಗೆ ಉಪಪಾದಿಸಿ ಅರ್ಜುನನು ಅರಿಕೆಮಾಡಿಕೊಳ್ಳುತ್ತಾನೆ—ಈ **ಅಪ್ರತಿಮ ಪ್ರಭಾವ** ವೆಂಬ ಸಂಬೋಧನೆಯ ತಾತ್ಪರ್ಯವೇನೆಂದರೆ,—ನಾನು ಪ್ರಮಾದದಿಂದ ನಡೆಸಿದ ಅಪರಾಧಗಳಿ ಗಾಗಿ ಕ್ಷಮಿಸು ಎಂದು ಬೇಡುವದೇನೋ ನ್ಯಾಯವು. ನೀನು ಕ್ಷಮಿಸುತ್ತೀಯೋ ಇಲ್ಲವೋ ಎಂಬ ಸಂದೇಹವೇನಾದರೂ ಉಂಟೋ? ಎಂದರೆ ತನಗೆ ಈಷದಪಿ ಸಂದೇಹವಿಲ್ಲವೆಂಬ ಭಾವವನ್ನು ಈ ಶ್ಲೋಕದಲ್ಲಿ ಉಪಪಾದಿಸಿ ಮುಂದಿನ ಶ್ಲೋಕದಲ್ಲಿ **ಸೋಢುಮ್ ಅರ್ಹಸಿ** ಎಂದು ಪ್ರಾರ್ಥಿ ಸುತ್ತಾನೆ. ಈ ಶ್ಲೋಕವೂ ಮುಂದಿನ ಶ್ಲೋಕವೂ ಸಹ ನಿಸ್ಸಮಾಭ್ಯಧಿಕತ್ವವನ್ನು ಶ್ರೀ ಮಹಾ ವಿಷ್ಣುವಿಗೆ ಸ್ಥಾಪಿಸಿ, ಅಪರಾಧಗಳ ಕ್ಷಮಾಪಣೆ ಮೂಲಕ ಉಪಾಯಾನುಷ್ಠಾನದೊಂದಿಗೆ ಪ್ರಸ ನ್ನತೆಯನ್ನು ಬೇಡಿ, ಅದರೊಂದಿಗೆ ನಿನ್ನ ಪ್ರಾಕೃತರೂಪ ದರ್ಶನವನ್ನು ತೋರು ಎಂದು ಪ್ರಾರ್ಥಿ ಸುವ ಪ್ರಕರಣವಾದುದರಿಂದ, ಶ್ರೀ ಭಾಷ್ಯಕಾರರು ತಮ್ಮ ಶರಣಾಗತಿ ಗದ್ಯದಲ್ಲಿ ಅನುಸಂಧೇಯ ಶ್ಲೋಕಗಳನ್ನಾಗಿ ಭಾವಿಸಿ ಸೇರಿಸಿರುತ್ತಾರೆ; ನಿನಗೆ ನಿರತಿಶಯ ಮಾಹಾತ್ಮ್ಯಯು ಹೇಗೆಂದರೆ—**ತ್ವಂ**-ನೀನು, **ಅಸ್ಯ**-ಈ ಪರಿದೃಶ್ಯವಾದ, **ಸರ್ವಸ್ಯ ಚರಾಚರಸ್ಯ**-ಸಮಸ್ತ ಜಙ್ಗಮ ಸ್ಥಾವ ರಾತ್ಮಕಗಳಾದ ಪ್ರಾಣಿಗಳನ್ನುಳ್ಳ, **ಲೋಕಸ್ಯ**-ಲೋಕಕ್ಕೆ, **ಪಿತಾಸಿ**-ತಂದೆಯಾಗಿದ್ದೀ, ಸ್ಥಾವರ ಗಳನ್ನೂ ಕೂಡ ಸೇರಿಸಿ ಹೇಳಿರುವದು, ಶ್ರುತಿಯ **ಜನಯಿತಾ** ಎಂಬರ್ಥವನ್ನೂ ಸಹ **ಪಿತಾ** ಶಬ್ದಕ್ಕೆ ಹೇಳುವದು ಉಚಿತವೆಂಬ ಭಾವನೆಯು. ಇದು, “**ಅಹಂ ಬೀಜಪ್ರದಃ**

**ಭಾ. ಲೋಕಸ್ಯ ಗುರುಶ್ಚಾಸಿ; ಅತಸ್ತ್ವಮಸ್ಯ ಚರಾಚರಸ್ಯ ಲೋಕಸ್ಯ ಗರೀಯಾನ್ ಪೂಜ್ಯತಮಃ; ನತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪಿ –**

---

**ಪಿತಾ"** ಎಂದೂ, (ಗೀ. ೧೪. ೪.) **"ಪಿತಾಽಹ ಮಸ್ಯ ಜಗತಃ"** ಎಂದೂ (ಗೀ. ೯. ೧೭.) ಮುಂದೆಯೂ ಹಿಂದೆಯೂ ಉಪಪಾದಿತವು. **ಅಸ್ಯ ಲೋಕಸ್ಯ**-ಈ ಸರ್ವ ಪ್ರಾಣಿವರ್ಗಕ್ಕೂ, **ಗುರುಶ್ಚಾಸಿ**-ಗುರುವಾಗಿದ್ದೀ, **ಅತಃ**-ಹೀಗೆ ತಂದೆಯೂ ಆಗಿ, ಗುರುವೂ ಆಗಿರುವದರಿಂದ, ಹೀಗೆ ಎಲ್ಲಾ ಜ್ಞಾನ ವಿವೇಕಾದಿಗಳುಳ್ಳ ಪುರುಷರಿಗಿಂತ, **ಗರೀಯಾನ್**-ಸರ್ವೋತ್ಕೃಷ್ಟನೂ ಎಂದರೆ **ಪೂಜ್ಯತಮಃ**-ಅತ್ಯಂತ ಪೂಜ್ಯನು; ಲೋಕದಲ್ಲಿ ಸ್ವಾಮಿ ಸಙ್ಕಲ್ಪರೀತ್ಯಾ ಇತರರ ಮೂಲಕವೂ ಉಪಕಾರಗಳನ್ನು ಹೊಂದುವದರಿಂದ ಶ್ರೇಷ್ಠರೂ ಹೌದು, ಪೂಜ್ಯರೂ ಹೌದು, ಆದರೆ ಅವರುಗಳುಂಟುಮಾಡುವ ಫಲಗಳು ಅಲ್ಪಾಸ್ಥಿರಗಳು. ಶಾಶ್ವತ ಸುಖಾದಿಗಳಿಗೆ ಹೇತು ವಾದ ಪರಮ ನಿಶ್ರೇಯಸರೂಪ ಉಪಕಾರವನ್ನುಂಟುಮಾಡುವವನೂ, ಅದಕ್ಕೆ ಬೇಕಾದ ಜ್ಞಾನವನ್ನು ಕೊಟ್ಟು, ಅಜ್ಞಾನಾಂಧಕಾರವನ್ನು ಹೋಗಲಾಡಿಸುವವನೂ, ಆದುದರಿಂದ ಆತನು **ಗರೀಯಾನ್ - ಪೂಜ್ಯತಮಃ** ಎಂದು ಹೇಳಲ್ಪಟ್ಟನು. ಆ ಸರ್ವೋತ್ಕೃಷ್ಟತೆಯೂ ಸರ್ವಪೂಜ್ಯತಮತ್ವವೂ ಮುಂದೆಯೂ ಉಪಪಾದಿಸಲ್ಪಡುತ್ತದೆಂದು ಉತ್ತರಾರ್ಧಕ್ಕೆ ವ್ಯಾಖ್ಯಾನ ವನ್ನು ದಯಪಾಲಿಸುತ್ತಾರೆ—**ನತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪಿ** ಎಂದರೆ, **ತ್ವದನ್ಯಃ**-ನಿನಗಿಂತ ಬೇರೆಯಾದವನು, **ಕಾರುಣ್ಯಾದಿನಾ**-ಕಾರುಣ್ಯವೇ ಮೊದ ಲಾದವುಗಳಿಂದ, ಆದಿ ಶಬ್ದದಿಂದ ಸೌಲಭ್ಯ, ಸೌಶೀಲ್ಯ, ವಾತ್ಸಲ್ಯಾದಿ ಆಶ್ರಯೋಪಯುಕ್ತ ಕಲ್ಯಾಣಗುಣಗಳು ಹೇಳಲ್ಪಟ್ಟವು, **ನತ್ವತ್ಸಮೋಽಸ್ತಿ**-ನಿನಗೆ ಸಮರಾದವರೂ ಯಾರೂ ಇಲ್ಲವು; ಸಮರೇ ಇಲ್ಲದಿರುವಾಗ ಇನ್ನು **ಕುತೋಽಭ್ಯಧಿಕಃ**-ನಿನಗಿಂತ ಅಧಿಕರು ಎಲ್ಲಿರುವರು? ಸಮರೂ ಅಧಿಕರೂ ಯಾರೂ ಇಲ್ಲವೆಂಬ ಭಾವವು. ಹೀಗೆ ನಿನಗಿಂತ ಸಮರೂ ಇಲ್ಲವು, ಅಧಿಕರೂ ಇಲ್ಲವು ಎಂದು ಶ್ರುತಿವಾಕ್ಯಕ್ಕೆ ಸಾರ್ಥಕ್ಯವು ಏರ್ಪಡಬೇಕಾದರೆ, ಸಮರೂ ಅಲ್ಲದೆ, ಅಧಿಕರೂ ಇರುವರೇ ಮಿಕ್ಕವರೆಲ್ಲರೂ ಎಂಬರ್ಥವು ಸ್ವತಸ್ಸಿದ್ಧವಾದುದು. ಈ ಅಭಿಪ್ರಾಯವೇ **"ತಮೀಶ್ವ ರಾಣಾಂ ಪರಮಂ ಮಹೇಶ್ವರಮ್"** (ಶ್ವೇತಾ) ಎಂಬ ಶ್ರುತಿ ವಾಕ್ಯದಲ್ಲೂ ವ್ಯಕ್ತವು ಇತರ ಈಶ್ವರರು ಇದ್ದರಲ್ಲವೇ ಈತನು ಮಹೇಶ್ವರನು? ಆದುದರಿಂದ ಏಕಾತ್ಮವಾದಕ್ಕೆ ಈ ಶ್ರುತಿಯು ಅನುಕೂಲಿಸದು ಇಂತಹ ಆಶ್ರಯೋಪಯುಕ್ತ ಕಲ್ಯಾಣಗುಣ ಯೋಗವುಳ್ಳವನೀಗ ಆಶ್ರಯಿ ಸಲು ಯೋಗ್ಯನಾದವನು. ನಿರ್ಗಂಧಕುಸುಮದೋಪಾದಿಯಲ್ಲಿರುವ ನಿರ್ಗುಣನು ಯೋಗ್ಯನೇ ಎಂಬುದನ್ನು ಪ್ರಾಜ್ಞರು ಪರಿಶೀಲಿಸಬಹುದು. ಶ್ರೀ ಯಾಮುನಮುನಿಗಳು **"ತವಾಮೃತಸ್ಯಂದಿನಿ ಪಾದಪಙ್ಕಜೇ ನಿವೇಶಿತಾತ್ಮಾ ಕಥಮನ್ಯದಿಚ್ಛತಿ । ಸ್ಥಿತೇಽರವಿಂದೇ ಮಕರಂದನಿರ್ಭರೇ ಮಧುವ್ರತೋ ನೇಕ್ಷುರಕಂ ಹಿ ವೀಕ್ಷತೇ"** ಈ ಜೀವಾತ್ಮನು ಭ್ರಮರದೋಪಾದಿಯಲ್ಲಿ ಅಮೃತ ವನ್ನು ಸ್ರವಿಸುವ ನಿನ್ನ ಪಾದಕಮಲದಲ್ಲಿ ಸಕ್ತವಾದವನು, ಏನೂ ಗುಣವಿಲ್ಲದೆ ಮಕರಂದವೇ ಇಲ್ಲದಿರುವ ಮುತ್ತುಗದಹೂವು ಅಥವಾ ಮುಳ್ಳುಗಿಡದ ನಿರ್ಗಂಧಕುಸುಮವು, ನೋಡಲು ಕೆಂಪಗೆ ಚನ್ನಾಗಿದೆ ಎಂದು ಭ್ರಮರವು ಹುಡಿಕಿಕೊಂಡು ಹೋಗುತ್ತದೆಯೇ? ಈ ಆಶ್ರಯಿ ಸಲುಪಯುಕ್ತವಾದ ದಯಾವಾತ್ಸಲ್ಯಾದಿಕಲ್ಯಾಣಗುಣಗಳಿಂದಲೂ ಮಹತ್ತಾದ ವಿಭವೈಶ್ವರ್ಯ ಗಳಿಂದಲೂ ಯುಕ್ತನಾದ ಸರ್ವೋತ್ಕೃಷ್ಟನಾಗಿ ಪೂಜ್ಯತಮನಾದ ನಿನ್ನನ್ನು ಆಶ್ರಯಿಸದೆ ನಮ್ಮ ಹಾಗೆಯೇ ಬದ್ಧರಾದ ಬ್ರಹ್ಮರುದ್ರಾದಿಗಳನ್ನು, ಸೃಜ್ಯವರ್ಗಕ್ಕೆ ಸೇರಿದವರನ್ನು, ಆಶ್ರಯಿಸುವದು ವಿವೇಕವೋ ಎಂಬ ತಾತ್ಪರ್ಯವು. ಲೋಕತ್ರಯದಿಂದ ಸೃಜ್ಯವರ್ಗವು ಕಾರ್ಯರೂಪವಾಗಿ

**ಭಾ. ತ್ವದನ್ಯಃ ಕಾರುಣ್ಯಾದಿನಾ ಕೇನಾಪಿ ಗುಣೇನ ನತ್ವತ್ಸಮೋಸ್ತಿ, ಕುತೋಭ್ಯಧಿಕಃ ?**

ರುವದು ಹೇಳಲ್ಪಟ್ಟಿತೆಂದರೆ ನಿಸ್ಸಮಾಭ್ಯಧಿಕತ್ವವು ಸಿದ್ಧವು. ಏಕೆಂದರೆ, ಅತ್ಯಂತ ಪಾರತಂತ್ರ್ಯ, ಕರ್ಮವಶ್ಯತ್ವವೇ ಮೊದಲಾದವುಗಳಿಂದ ಏನನ್ನೂ ಮಾಡಲು ಶಕ್ತಿಯಿಲ್ಲದ ಪ್ರಭುವೆನಿಸುವ ಈ ಜೀವನೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ ಲೋಕತ್ರಯದಲ್ಲೂ ಸಮಸ್ತ ಪ್ರವೃತ್ತಿಗಳೂ ಸ್ವಾಮಿ ಸಙ್ಕಲ್ಪಾಯತ್ತವಾಗಿ, ಆತನ ನಿಗ್ರಹಾನುಗ್ರಹ ರೂಪವಾದವುಗಳು. ಹೀಗಿರುವಾಗ ಆತನಿಗೆ ಸಮರಾಗಲಿ ಅಧಿಕರಾಗಲಿ ಆಗಲಾರರೆಂಬುದು ವ್ಯಕ್ತವು. ಲೋಕತ್ರಯ ಶಬ್ದಕ್ಕೆ **ಲೋಕ್ಯತೇ ಅನೇನ** ಎಂಬ ವ್ಯುತ್ಪತ್ತಿಯಿಂದ ಮೂರು ವೇದಗಳು ಹೇಳಲ್ಪಟ್ಟವೆಂದು ಭಾವಿಸಿ. ಈ ವೇದಗಳಲ್ಲಿ ನಿನಗೆ ಸಮರಾಗಲಿ ಅಧಿಕರಾಗಲಿ ಉಂಟೆಂದು ಎಲ್ಲಿಯಾದರೂ ಹೇಳಿದೆಯೋ ಎಂದರೆ ಎಲ್ಲಿಯೂ ಇಲ್ಲವೆಂಬ ಭಾವವೂ ಸೂಚಿತವು. ಯಾವಾಗ ಇತರ ಚೇತನರೊಂದಿಗೆ ಹೋಲಿಸಿ ಸಮರೂ ಅಧಿಕರೂ ಇಲ್ಲವೆಂದು ಇಲ್ಲಿ ಹೇಳಬೇಕಾಗಿದೆಯೋ, ಆಗ ಸತ್ಯರಾಗಿರುವ ಇತರ ಆತ್ಮವರ್ಗ ಉಂಟೆಂದು ಒಪ್ಪಲೇ ಬೇಕು. ಈ ಶ್ಲೋಕವು ಮಿಥ್ಯಾವಾದಕ್ಕೆ ವಿಶೇಷ ಬಾಧಕವು. ಹೀಗೆ ಯಾವಾಗ ನಿಸ್ಸಮಾಭ್ಯಧಿಕತ್ವವು ಪರತತ್ವವಾದ ಶ್ರೀ ಕೃಷ್ಣನಿಗೆ ಹೇಳಲ್ಪಟ್ಟಿತೋ ಆಗ (೧) ಎಲ್ಲಾ ಆತ್ಮವು ಒಂದೇ (೨) ಎಲ್ಲಾ ದೇವತೆಗಳೂ ಒಂದೇ (೩) ಬ್ರಹ್ಮ ವಿಷ್ಣು ಶಿವರೆಂಬ ತ್ರಿಮೂರ್ತಿಗಳು ಸಮರು, (೪) ಈ ಮೂರರಲ್ಲಿ ರುದ್ರನು ಸರ್ವೋತ್ಕೃಷ್ಟನೆಂದೂ (೫) ಈ ತ್ರಿಮೂರ್ತಿಗಳು ವ್ಯಾವಹಾರಿಕವಾಗಿ ಸತ್ಯವು, ಪಾರಮಾರ್ಥಿಕ ಸತ್ಯವಾಗಿ ಪರಶಿವನೊಬ್ಬನುಂಟೆಂದೂ (೬) ಹಿರಣ್ಯಗರ್ಭ, ಶಿವ, ಶಂಭು ಶಬ್ದಗಳಿಂದ ಹೇಳಲ್ಪಟ್ಟವರು ಜಗತ್ತಿಗೆ ಕಾರಣಭೂತರೆಂದು ಶ್ರುತಿಗಳಲ್ಲಿ ಹೇಳಿರುವದರಿಂದ ಚತುರ್ಮುಖರುದ್ರರೂಪಿಗಳಾಗಿಯೂ ಜಗತ್ಕಾರಣರಾಗಿರಬಹುದೆಂದೂ, ಹೀಗೆಲ್ಲಾ ಹೇಳುವ ಅಭಿಪ್ರಾಯಗಳೆಲ್ಲಾ ನಿರಾಕರಿಸಲ್ಪಟ್ಟವು. ಶಾಸ್ತ್ರಜ್ಞರಾದ ಪ್ರಾಜ್ಞರು ಈ ಅಭಿಪ್ರಾಯಗಳನ್ನೆಲ್ಲಾ ಅಙ್ಗೀಕರಿಸುವದಿಲ್ಲವೆಂದು ಶ್ರೀ ನಿಗಮಾನ್ತರು ತಿಳಿಸಿರುತ್ತಾರೆ.—**"ಆತ್ಮೈಕ್ಯಂ ದೇವತೈಕ್ಯಂ ತ್ರಿಕ ಸಮಧಿಗಣಾ ತುಲ್ಯತೈಕ್ಯಂ ತ್ರಯಾಣಾ ಮನ್ಯತ್ರೈಶ್ವರ್ಯಮಿತ್ಯಾದ್ಯನಿಪುಣ ಫಣಿತೀರಾದ್ರಿಯನ್ತೇ ನ ಸಂತಃ"** ಹಾಗಾದರೆ ನಿಸ್ಸಮಾಭ್ಯಧಿಕನು ಯಾರೆಂದರೆ ಹೇಳುತ್ತಾರೆ. **"ತ್ರಯ್ಯನ್ತೈರೇಕಕಂಠ್ಯಾತ್ತದನುಗುಣಮನುವ್ಯಾಸ ಮುಖ್ಯೋಕ್ತಿಭಿಶ್ಚ ಶ್ರೀಮಾನ್ನಾರಾಯಣೋ ನಃ ಪತಿರಖಿಲತನುರ್ಮುಕ್ತಿದೋ ಮುಕ್ತಭೋಗ್ಯಃ".** ಐಕಕಂಠ್ಯದಿಂದ ಎಲ್ಲಾ ವೇದಗಳೂ, ಅದಕ್ಕನುಗುಣವಾಗಿ ಉಪಬ್ರಹ್ಮಣರೂಪದಲ್ಲಿ ಹೇಳಲ್ಪಟ್ಟ ಮನು ವ್ಯಾಸ ಮೊದಲಾದವರ ಮುಖ್ಯವಾದ ಉಕ್ತಿಗಳಿಂದಲೂ, ಇಲ್ಲಿ ಮೊದಲಾದ ಎಂದು ಹೇಳಿರುವದರಿಂದ ಪರಾಶರ ಶುಕ ಶೌನಕ ವಾಲ್ಮೀಕಾದಿಗಳು ಹೇಳಲ್ಪಟ್ಟರು, ಇಂತಹ ಮಹರ್ಷಿಗಳ ದಿವ್ಯಸೂಕ್ತಿಯಿಂದಲೂ, ಈ ನಿಸ್ಸಮಾಭ್ಯಧಿಕನು ಲಕ್ಷ್ಮೀನಾರಾಯಣನು ; ಇವನೇ **ಪತಿಂ ವಿಶ್ವಸ್ಯ** ಎಂದು ಹೇಳಿರುವಾಗ ನಮಗೆಲ್ಲಾ ಸ್ವಾಮಿಯಾದ ಸರ್ವೇಶ್ವರನು ; ಅವನು ಎಂತವನೆಂದರೆ, **ಅಖಿಲತನುಃ**-ಎಲ್ಲಾ ವಿಶ್ವವನ್ನೂ ಶರೀರವಾಗಿ ಹೊಂದಿ, ಅವುಗಳಿಗೆ ಆತ್ಮಾವಾಗಿ ಸತ್ತಾ ಸ್ಥಿತಿ ನಿಯಮನಾದಿಗಳನ್ನು ವಹಿಸಿದವನು ; **ಮುಕ್ತಿದೋಮುಕ್ತಭೋಗ್ಯಃ**-ನಮಗೆ ಸಿದ್ಧೋಪಾಯನಾಗಿ ಮೋಕ್ಷಮಾರ್ಗವನ್ನು ತೋರಿಸಿ ಉಪಾಯಾನುಷ್ಠಾನವನ್ನು ಮಾಡಿಸುವನು, ಅವನೇ ಪರಿಪೂರ್ಣ ಬ್ರಹ್ಮಾನುಭವರೂಪವಾದ ನಿರತಿಶಯವಾದ ಶಾಶ್ವತವಾದ ಆನಂದವನ್ನುಂಟುಮಾಡುವ ಪರಮ ಪ್ರಾಪ್ಯನೆಂದು ಹೇಳಿರುತ್ತಾರೆ.

ಆಗಲಿ, **ತ್ರಯನ್ತ್ಯೈ ರೇಕಕಂಠ್ಯಾ**-ವೇದಗಳೆಲ್ಲಾ ಐಕ ಕಂಠ್ಯದಿಂದ ನಾರಾಯಣನೇ ಪರತತ್ವವೆಂದು ಬೋಧಿಸುತ್ತದೆಂದು ಹೇಳಿದರಲ್ಲಾ, ಹಾಗೆ ಐಕಕಂಠ್ಯವು ತೋರುವದಿಲ್ಲವಲ್ಲಾ ?

ಏಕೆಂದರೆ ಜಗತ್ಕಾರಣತ್ವಾದಿಗಳ ಮೂಲಕ ಪರತತ್ವವು ಅನೇಕ ಶಬ್ದಗಳಿಂದ ಹೇಳಲ್ಪಡುತ್ತದೆ. ಹೇಗೆಂದರೆ—**"ಹಿರಣ್ಯಗರ್ಭಸ್ಸಮವರ್ತತಾಗ್ರೇ"** (ಯಜುಷಿ ೪. ೧. ೩೧) **"ಸದೇವ ಸೋಮ್ಯೇದ ಮಗ್ರ ಆಸೀತ್"** (ಛಾಂ ೬ ೨) **ಆತ್ಮಾವಾ ಇದಮಗ್ರ ಆಸೀತ್"** (ಐತರೇಯ. ೧. ೧) **"ಬ್ರಹ್ಮಾವಾ ಇದಮಗ್ರಆಸೀತ್"** (ವಾಜಸ. ೩. ೪.) **ಏಕೋಹವೈ ನಾರಾಯಣ ಆಸೀತ್, "ನ ಬ್ರಹ್ಮಾನೇಶಾನಃ"** (ಮಹೋಪನಿಷತ್) **ಯದಾತಮಸ್ತನ್ನ ದಿವಾನ ರಾತ್ರಿರ್ನ ಸನ್ನಚಾ ಸಚ್ಛಿವ ಏವ ಕೇವಲಃ"** [ಶ್ವೇತಾ. ೪] **"ಯದಾಚರ್ಮವದಾ ಕಾಶಂ ವೇಷ್ಟಯಿಷ್ಯಂತಿ ಮಾನವಾಃ । ತದಾಶಿವ ಮವಿಜ್ಞಾಯ ದುಃಖಸ್ಯಾನ್ತೋ ಭವಿಷ್ಯತಿ"** (ಶ್ವೇತ. ೩) **ತಸ್ಮಾದಿನ್ದ್ರ ಉತ್ತರಃ"** [ಬೃ ೪ ೫.] **ಇನ್ದ್ರೋಮಾಯಾಭಿಃ ಪುರುರೂಪ ಈಯತೇ"** ಎಂದು ಇಂದ್ರಶಬ್ದವಾಚ್ಯನು ಪರಬ್ರಹ್ಮವೆಂದೂ **"ಸರ್ವಾಣಿ ಹವಾ ಇಮಾನಿ ಭೂತಾನಿ ಪ್ರಾಣಮೇವಾಭಿ ಸಂವಿಶನ್ತಿ"** [ಛಾಂ. ೧. ೧೧] **"ಆಕಾಶೋ ವೈ ಹ ನಾಮರೂಪಯೋರ್ನಿರ್ವಹಿತಾ"** [ಛಾಂ. ೮. ೧೪.] **ಶಮ್ಭುರಾಕಾಶ ಮಧ್ಯೇ ಧ್ಯೇಯಃ"** [ಅ. ಶಾಖಾ] ಎಂದು ಹೀಗೆ ಹಿರಣ್ಯಗರ್ಭ, ಸತ್, ಆತ್ಮಾ, ಬ್ರಹ್ಮ, ನಾರಾಯಣ, ಶಂಭು, ಶಿವ, ಇಂದ್ರ, ಆಕಾಶ, ಪ್ರಾಣ ಮೊದಲಾದ ಶಬ್ದಗಳು ಶ್ರುತಿಗಳಲ್ಲಿ ಪರತತ್ವವೆಂದು ಹೇಳುವವರಿಂದ, ಬ್ರಹ್ಮನ ನಾಭಿ ಕಮಲದಿಂದುತ್ಪನ್ನನಾದ ಚತುರ್ಮುಖನೂ, ರುದ್ರ ಶಿವ ಶಂಭು ಶಬ್ದಗಳಿರುವದರಿಂದ ಬ್ರಹ್ಮನ ಪುತ್ರನಾದ ರುದ್ರನೂ, ಪರತತ್ವವೆಂದೂ, ಇಂದ್ರನೇ ಪರತತ್ವವೆಂದೂ ಹೇಳುವ ವಾದಗಳು ಪರಸ್ಪರ ವಿರುದ್ಧಗಳಾಗುವದರಿಂದ ಅಪಸಿದ್ಧಾಂತಗಳು, ಇವುಗಳಿಗೆಲ್ಲಾ ಐಕಕಂಠ್ಯವನ್ನು ಕಲ್ಪಿಸಬೇಕಾದರೆ, ಅವುಗಳಿಗೆಲ್ಲಾ ವ್ಯುತ್ಪತ್ತಿಮೂಲಕವಾಗಿಯಾಗಲಿ ಶ್ರುತಿಯಲ್ಲಿ ಹೇಳಿರುವದಕ್ಕನುಗುಣವಾಗಿಯಾಗಲಿ ಅರ್ಥಹೇಳಿ, ಪುರುಷಸೂಕ್ತದಲ್ಲಿ ಹೇಳಿರುವಹಾಗೆ ಸರ್ವ ಶಬ್ದಗಳೂ ನಾರಾಯಣನನ್ನೇ ಬೋಧಿಸುತ್ತವೆಂದು ಅರ್ಥಮಾಡುವದು ಸರ್ವ ಸಮಂಜಸವು. ಹಿರಣ್ಯಗರ್ಭನೆಂದರೆ ಪ್ರಕಾಶಮಾನವಾದ ದಿವ್ಯ ವೈಕುಂಠವಾಸಿ, ಅಥವಾ ಕಲ್ಯಾಣಗುಣ ಮಹೋದಧಿಯು, ಹಿತವಾಗಿಯೂ ರಮಣೀಯವಾಗಿರುವದು ಯಾವುದೋ ಅದು ಹಿರಣ್ಯವು, ಕಲ್ಯಾಣಗುಣಾಕರತ್ವವು, ಅದನ್ನು ಗರ್ಭದಲ್ಲಿವುಳ್ಳವನು. ಅಥವಾ ಮುಂಡಕ. ೩. ೧. ೨ ರಲ್ಲಿ ಹೇಳಿರುವಹಾಗೆ **"ರುಕ್ಮವರ್ಣನು" "ಯದಾಪಶ್ಯಃ ಪಶ್ಯತೇ ರುಕ್ಮವರ್ಣಂ"** ಎಂದಿರುತ್ತವೆ **ಸತ್** ಎಂಬುದರಿಂದ **"ತಮೋದೇವೇ ಏಕೀ ಭವತಿ"** ಇತ್ಯಾದಿ ಇತರ ಶ್ರುತಿಗಳಿಂದ ವ್ಯಕ್ತಪಡುವ ಚಿದಚಿದ್ವಿಶಿಷ್ಟ ಪರಬ್ರಹ್ಮನು, **ಶಿವನೆಂದರೆ**-ಚಿದಚಿತ್ತುಗಳಿಂದ ಸೇರಿದ್ದರೂ ಮಹಾಪರಿಶುದ್ಧನಾಗಿ ಹೇಯಪ್ರತ್ಯನೀಕನಾಗಿರುವ ಪರಮಾತ್ಮನು, **"ಶಿವಂಕರ್ಮಾಸ್ತು" "ಶಿವೋಸ್ತುತೇ ಪನ್ಥಾಃ"** ಎಂಬಲ್ಲಿ ಅರ್ಥಹೇಗೋ ಹಾಗೆ ಎಂದು ಭಾವಿಸತಕ್ಕದ್ದು. **ಶಂಭು** ಶಬ್ದಕ್ಕೆ ಮಙ್ಗಳಪ್ರದನಾದ ಪರಮಾತ್ಮನೆಂಬರ್ಥವು ರುದ್ರಶಬ್ದಕ್ಕೆ ಪ್ರಳಯಕಾಲದಲ್ಲಿ ಚೇತನರಿಗೆ ಕ್ಲೇಶವುಂಟಾಗುವದರಿಂದ ಹಾಗೆ ಪ್ರಯೋಗವು, ಈ ಶಬ್ದಗಳೆಲ್ಲಾ ವಿಷ್ಣು ಸಹಸ್ರನಾಮದಲ್ಲಿ ಪರಮಾತ್ಮನಿಗೆ ಪ್ರಯೋಗಿಸಲ್ಪಟ್ಟಿವೆ. ಹಾಗೆಯೇ ಪ್ರಾಣಶಬ್ದವು ಜಗತ್ಪ್ರಾಣಯಿತೃತ್ವರೂಪವಾದ ಅಸಾಧಾರಣ ಧರ್ಮವುಳ್ಳವನನ್ನು ಬೋಧಿಸುತ್ತವೆ. ಆಕಾಶ ಶಬ್ದಕ್ಕೂ **ಆಕಾಶತೇ**-ಸ್ವಸ್ಮೈಪ್ರಕಾಶತೇ, ತನಗೆ ತಾನೇ ಪ್ರಕಾಶಿಸುವದರಿಂದಲಾಗಲಿ ಅಥವಾ **ಆಕಾಶಯತಿ**-ತಾನು ಎಲ್ಲವನ್ನೂ ಪ್ರಕಾಶಗೊಳಿಸುವದರಿಂದಲಾಗಲಿ ತನಗೆ ಎಲ್ಲವೂ ಪ್ರಕಾಶಿಸುವದರಿಂದಲಾಗಲಿ ಅಥವಾ ಆಕಾಶಕ್ಕೆ ಆತ್ಮಾವಾಗಿಯಾಗಲಿ, ಪರಮಾತ್ಮನಲ್ಲೇ ಅನ್ವಯವು. (ಬ್ರ. ಸೂ. ೧-೧-೨೩) ಹೀಗೆ ಸಾಮಂಜಸ್ಯವನ್ನು ಪ್ರಾಜ್ಞರು ಅವಲಂಬಿಸತಕ್ಕದ್ದಾಗಿರುತ್ತದೆ. ಆದರೆ ಈ ನಿಸ್ಸಮಾಭ್ಯಧಿಕತ್ವವನ್ನು ಈ ಶ್ಲೋಕವು ಉಪಪಾದಿಸಿರುವದ

ರಿಂದ ಶ್ವೇತಾಶ್ವತರ (೩) ವಾಕ್ಯವಾದ **"ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನಜ್ಯಾಯೋಽಸ್ತಿ ಕಿಂಚಿತ್ । ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಸ್ತೇನೇದಂ ಪೂರ್ಣಂ ಪುರುಷೇಣ ಸರ್ವಂ । ತತೋ ಯದುತ್ತರತರಂ ತದರೂಪಮನಾಮಯಂ । ಯಏತ ದ್ವಿದುರಮೃತಾಸ್ತೇಭವನ್ತಿ । ಅಥೇತರೇ ದುಃಖಮೇವಾಪಿಯನ್ತಿ । ಸರ್ವಾನನಶಿರೋಗ್ರೀವ ಸರ್ವಭೂತ ಗುಹಾಶಯಃ । ಸರ್ವವ್ಯಾಪೀಚ ಭಗವಾನ್ ತಸ್ಮಾತ್ಸರ್ವಗತಶ್ಶಿವಃ"** ಎಂಬುದರ ಉಪಪಾದನವಾಗಿ ತೋರುವದಿಲ್ಲವೇ? ಈ ವಾಕ್ಯದಲ್ಲಿ **ತತಃ ಯದುತ್ತರತರಂ** - ಪೂರ್ವೋಕ್ತನಾದ ಪುರುಷನಿಗಿಂತ **ಉತ್ತರತರಂ** - ಶ್ರೇಷ್ಠವಾದುದ್ಯಾವುದು ಎಂಬಪೇಕ್ಷೆಯಲ್ಲಿ, **ಸರ್ವಗತಶ್ಶಿವಃ** ಎಂದು ಹೇಳಿರುವದರಿಂದ ರುದ್ರನೇ ಪರತತ್ವವು ಎಂದು ಕೆಲವರು ಭಾವಿಸುವರು ; ಸಗುಣ ಬ್ರಹ್ಮಕ್ಕಿಂತ ಉತ್ಕೃಷ್ಟನಾಗಿ ಪರಶಿವ ನಾಮಕನಾಗಿರುವ ನಿರ್ಗುಣ ಬ್ರಹ್ಮನುಂಟು ಎಂದು ಪೂರ್ವಪಕ್ಷದ ಈ ವಾಕ್ಯಕ್ಕೆ ಸಿದ್ಧಾನ್ತಾಭಿಪ್ರಾಯವೇನೆಂದರೆ? ಅದೇ ಶ್ವೇತಾಶ್ವತರದಲ್ಲೇ **" ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ "** ಎಂಬರ್ಥದ ಉಪಪಾದನೆಯಾಗಿರುತ್ತದೆ. ಇದನ್ನೇ **ಯಸ್ಮಾತ್ಪರಂ ನಾಪರಮಸ್ತಿ ಕಶ್ಚಿತ್** ಎಂಬುದರಿಂದ **ಅಣೋರಣೀಯಾನ್ಮಹತೋ ಮಹೀಯಾನ್** ಎಂಬುದರರ್ಥವು ಬೋಧಿತವು ; ಆನಂದ ಪಾರವಶ್ಯದಿಂದ, **ವೃಕ್ಷ ಇವಸ್ತಬ್ಧಃ** ಪರಿಪೂರ್ಣನಾಗಿ, ದಿವಿ-ಪರಮಾಕಾಶದಲ್ಲಿ, **ಏಕಸ್ತಿಷ್ಠತಿ**-ಪರಮಾತ್ಮನಿರುತ್ತಾನೆ ಆ ಪುರುಷನಿಂದ **ತೇನಪುರುಷೇಣ, ಇದಂ ಸರ್ವಂ ಪೂರ್ಣಂ** ಎಂದು **ಪುರುಷ ಏವೇದಗ್ಂ ಸರ್ವಂ** ಎಂಬುದರ ಅರ್ಥವು ಹೇಳಲ್ಪಟ್ಟಿತು. **ತತಃ**-ಆ ಕಾರಣದಿಂದ **ಉತ್ತರತರಂ**-ಸರ್ವೋತ್ಕೃಷ್ಟನು ಯಾವುದೆಂದರೆ, **ಯತ್ ;** ಪೂರ್ವೋಕ್ತ ಪುರುಷಶಬ್ದವಾಚ್ಯನು ಯಾರೋ ಅವನೇ, **ಉತ್ತರತರಂ** - ಸರ್ವೋತ್ಕೃಷ್ಟನು ; ಆ ಉತ್ತರತರವಾದ ಪುರುಷತ್ವವೆಂತಾದ್ದೆಂದರೆ, **ಅರೂಪಂ**-ಪ್ರಾಕೃತರೂಪವಿಲ್ಲದುದು, **ಅನಾಮಯಂ**-ವ್ಯಾಧಿರಹಿತವಾದುದು, **ಯೇ ಏತತ್ ಉತ್ತರತರತ್ವೇನ ವಿದುಃ** ಯಾರು ಈ ಸರ್ವಶ್ರೇಷ್ಠನನ್ನು ಉಪಾಸನೆ ಮಾಡುತ್ತಾರೋ, **ತೇ ಅಮೃತಾಭವನ್ತಿ**-ಅವರು ಶಾಶ್ವತವಾದ ದಿವ್ಯ ವೈಕುಂಠವನ್ನು ಹೋಗಿ ಸೇರುವರು ; ಅನಂತರ **ಸರ್ವಾನನಶಿರೋಗ್ರೀವಃ** ಇತ್ಯಾದಿಗಳಿಂದ **ಸಹಸ್ರಶೀರ್ಷಾಪುರುಷಃ** ಎಂಬುದರರ್ಥವನ್ನು ಹೇಳಿ ಎಲ್ಲಾ ಜೀವಾತ್ಮರ ದಹರಗುಹೆಯಲ್ಲಿರುವವನೆಂದು ಹೇಳಿ, ಎಲ್ಲರಿಗೂ ಆತ್ಮಾವಾಗಿ ಇದ್ದಾನೆ, ಆತನು ಸರ್ವವ್ಯಾಪಿಯು ಎಂದು ಹೇಳಿ, ಹೀಗೆ ಹೇಯ ಪದಾರ್ಥದಲ್ಲೂ ವ್ಯಾಪ್ತಿ ಇದ್ದರೂ ಆತನು ಹೇಯಪ್ರತ್ಯನೀಕನೆಂದು ತಿಳಿಸುವದಕ್ಕಾಗಿ **ಸರ್ವಗತಶ್ಶಿವಃ** ಎಂಬ ಪ್ರಯೋಗವು ಇಲ್ಲಿ ಶಿವ ಶಬ್ದವು **ಮಙ್ಗಳಾನಾಂಚ ಮಙ್ಗಳವು** ಎಂಬರ್ಥವನ್ನು ಬೋಧಿಸುತ್ತದೇ ವಿನಾ, ರುದ್ರಪರವಲ್ಲವು.

ಹಾಗೆಯೇ **"ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಮ್ । ಯದ್ವೇದಾದೌ ಸ್ವರಪ್ರೋಕ್ತೋ ವೇದಾಂತೇಚಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸಮಹೇಶ್ವರಃ"** (ತೈ. ನಾ ೧೨) ಇಲ್ಲಿಯೂ ಕೂಡ **ತತ್ರಾಪಿ ದಹ್ರಂ** ಎಂಬುದರಿಂದ ಪರಮಾತ್ಮನನ್ನು ಹೇಳಿ, **ತಸ್ಮಿನ್ಯದಂತಸ್ತದುಪಾಸಿತವ್ಯಂ** - ಅವನಲ್ಲಿ ಅಂತರ್ಯಾಮಿತ್ವೇನ ಯಾವುದು ಉಂಟೋ, ಅದನ್ನು ಉಪಪಾದಿಸತಕ್ಕದ್ದೆಂದು ಹೇಳಿ, ಅಂತಹ ಉಪಾಸ್ಯವು ಯಾವುದು ಎಂಬಪೇಕ್ಷೆಯಲ್ಲಿ, **ಯಃ ಪರಮೇಶ್ವರಃ** ಎಂದು ಹೇಳಿರುವದರಿಂದ, ರುದ್ರನೇ ಪರಬ್ರಹ್ಮವೆಂದು ಕೆಲವರು ಹೇಳುವರು ; ಮಹೇಶ್ವರ ಶಬ್ದವು ಮಹಾನ್ ಆದ ಸರ್ವೇಶ್ವರನನ್ನು ಬೋಧಿಸುತ್ತದೆ. ವೇದಾದಿಯಲ್ಲಿ ಹೇಳಲ್ಪಡುವ ಪ್ರಣವದ ಅಕಾರವಾಚ್ಯನೆಂದು **ಯದ್ವೇದಾದೌ ಸ್ವರಪ್ರೋಕ್ತೋ**

**ಮೂ. ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ ತ್ವಾಮಹಮೀಶಮೀಡ್ಯಂ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವಸೋಢುಂ॥**

ಎಂದು ಹೇಳಿರುವದರಿಂದ, ಅಕಾರವಾಚ್ಯನು ವಿಷ್ಣುವೇ; ರುದ್ರನಲ್ಲವೆಂದು ಅನೇಕ ಪ್ರಮಾಣಗಳಿರುವದರಿಂದ ಇದೂ ಹೇಯಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾಗಿರುವ ಶ್ರೀ ಮಹಾವಿಷ್ಣುವೇ ಉಪಾಸ್ಯನೆಂದು ಈ ಶ್ರುತಿಯೂ ಹೇಳುತ್ತದೆ ಇದಕ್ಕೆ ಅರ್ಥ ಹೇಗೆಂದರೆ, **ದಹರಂ**-ಸೂಕ್ಷ್ಮವಾಗಿ, **ವಿಪಾಪ್ಮಂ**- ಕಲ್ಮಷರಹಿತನಾಗಿ, **ಪರವೇಶ್ಮಭೂತಂ**-ಶ್ರೇಷ್ಠ ಗೃಹಭೂತನಾಗಿರುವ, **ಪುರಮಧ್ಯಸಂಸ್ಥಂ**-ಈ ಚೇತನ ಕ್ಷೇತ್ರರೂಪವಾಗಿರುವ ಶರೀರದ ಮಧ್ಯದಲ್ಲಿರುವ, **ಯತ್ಪುಂಡರೀಕಂ**-ಯಾವ ದಹರ ಪುಂಡರೀಕವುಂಟೋ, **ತತ್ರಾಪಿದಹರಂ** - ಅದಕ್ಕಿಂತಲೂ ಸೂಕ್ಷ್ಮವಾಗಿರುವ, **ಗಗನಂ**- ಪರಮಾಕಾಶಶಬ್ದವಾಚ್ಯನಾದ ಪರಬ್ರಹ್ಮವು, ಅಥವಾ ಸ್ವಯಂ ಪ್ರಕಾಶನಾದ ಪರಬ್ರಹ್ಮನು, **ವಿಶೋಕಃ**-ಶೋಕರಹಿತನಾಗಿ, ಪುಲ್ಲಿಂಗ ನಿರ್ದೇಶವು ಛಾಂದಸಃ, **ತಸ್ಮಿನ್**-ಆ ಪರಬ್ರಹ್ಮನಲ್ಲಿ, **ಯದನ್ತಃ**-ಯಾವ ಅಪಹತ ಪಾಪ್ಮತ್ವಾದಿ ಕಲ್ಯಾಣಗುಣಜಾತವುಂಟೋ. **ತತ್**-ಅದೂ ಸಹ, **ಉಪಾಸಿತವ್ಯಂ**-ಉಪಾಸನೆ ಮಾಡತಕ್ಕದ್ದೆಂದು ವಿಧಿಸಿರುತ್ತದೆ. ಕಲ್ಯಾಣಗುಣಗಣ ಮತ್ತು ವಿಭೂತಿಗಳಿಂದ ಪರಿಪೂರ್ಣನಾದ ಪರಬ್ರಹ್ಮನೇ ಉಪಾಸ್ಯನೆಂದು ಎಲ್ಲಾ ಕಡೆಯಲ್ಲೂ ವಿಧಿಸಲ್ಪಟ್ಟಿರುತ್ತದೆ. ಇದೇ ಸರಿಯಾದ ಅರ್ಥವೆಂಬುದು ಛಾಂದೋಗ್ಯದ (೮-೧) **"ದಹರೋಽಸ್ಮಿನ್ನನ್ತರ ಆಕಾಶಃ"** ಎಂಬ ವಾಕ್ಯಾರ್ಥವನ್ನು ಚನ್ನಾಗಿ ಪರಿಶೀಲಿಸಿದರೆ ವ್ಯಕ್ತಪಡುತ್ತದೆ. ಹೀಗೆ ಸರ್ವ ಶ್ರುತ್ಯರ್ಥಗಳೂ ಸಮಂಜಸವಾದುದರಿಂದ **"ತ್ರ್ಯಮ್ಬಕೇಕಕಂಠ್ಯೈಃ"** ಎಂದು ಪ್ರಯೋಗಿಸಿದರು.

ಆದುದರಿಂದ ಕಲ್ಯಾಣಗುಣಮಹೋದಧಿಯಾಗಿಯೂ, ಹೇಯ ಪ್ರತ್ಯನೀಕನಾಗಿಯೂ, ಸರ್ವಸ್ರಷ್ಟಾವಾಗಿಯೂ, ಸರ್ವರಕ್ಷಕನಾಗಿಯೂ, ಸರ್ವಶರೀರಕನಾಗಿಯೂ, ಸರ್ವಕ್ಕೂ ಆತ್ಮಾವಾಗಿಯೂ, ಸತ್ತಾಸ್ಥಿತಿ ಪ್ರವೃತ್ತಿಗಳಿಗೆಲ್ಲಾ ಕಾರಣಭೂತನಾಗಿರುವ ಶ್ರೀಕೃಷ್ಣ ಭಗವಾನರವರೇ ಪರತತ್ವವು ಆತನಮೇಲೆ ಇನ್ನು ಯಾವ ಪರತತ್ವವಿಲ್ಲವೆಂದು ಘಂಟಾಘೋಷವಾಗಿ ಈ ಅದ್ಭುತಶ್ಲೋಕವಾದ **"ಪಿತಾಸಿ ಲೋಕಸ್ಯ"** ಎಂಬುದು ತಿಳಿಸುತ್ತದೆಂಬುದು ವಿಶಿಷ್ಟಾದ್ವೈತ ಸಿದ್ಧಾಂತವು ಇಲ್ಲಿ ಉಪಪಾದಿಸಿರುವ ಅಭಿಪ್ರಾಯಗಳೆಲ್ಲವನ್ನೂ ನಮ್ಮಾಳ್ವಾರ್ರವರು **"ಒನ್ರುಂ ದೇವುಂ"** ಎಂಬ ಹತ್ತು ಪಾಶುರಗಳಿಂದ ಗಾನಮಾಡಿರುತ್ತಾರೆ ಪರಮಾತ್ಮನಿಗೆ ಅಸಾಧಾರಣಗಳಾಗಿ ಶ್ರುತಿಯಲ್ಲಿ ಹೇಳಿರುವ ಸರ್ವಧರ್ಮಗಳೂ ಮೇಲೆ ವಿವರಿಸಿರುವಹಾಗೆ ಶ್ರೀ ಕೃಷ್ಣನಲ್ಲೇ ಇರುವದರಿಂದ ಆತನೇ ಪರತತ್ವವು. ಆತನು ಸಗುಣನು. ಈ ಸಗುಣ ಪರಮಾತ್ಮನೆಂಬುದು ವ್ಯಾವಹಾರಿಕವಾಗಿ ಸತ್ಯವು, ನಿರ್ಗುಣನಾಗಿ ಪಾರಮಾರ್ಥಿಕವಾಗಿ ಸತ್ಯವು ಬೇರೆ ಉಂಟೆಂಬುದು ಎಂಬ ವಾದವೂ ಈ ಶ್ಲೋಕದಿಂದ ನಿರಸ್ತವು.

**ಮೂಲಕ್ಕೆ ಅರ್ಥವು:**—ಹೀಗೆ ಲೋಕಪಿತಾವಾಗಿ ಸರ್ವೋತ್ಕೃಷ್ಟನಾಗಿ ಸರ್ವ ರಕ್ಷಕನಾಗಿ, ಲೋಕಗುರುವಾಗಿ ಪರಮ ಹಿತೋಪದೇಶಿಯಾದುದರಿಂದ ಪೂಜ್ಯತಮನಾಗಿಯೂ ಇರುವದರಿಂದ ನಿನಗೆ ಯಾರೂ ಸಮರೂ ಅಧಿಕರೂ ಇಲ್ಲವು. ಆದುದರಿಂದಲೇ ನೀನೇ **"ತ್ವಮೇವ ಮಾತಾ ಚ ಪಿತಾ ತ್ವಮೇವ ತ್ವಮೇವ ಬಂಧುಶ್ಚ ಗುರುಸ್ತ್ವಮೇವ। ತ್ವಮೇವ ವಿದ್ಯಾ ದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮ ದೇವದೇವ॥** ಎಂದು ಶ್ರೀ ಯತಿವರ್ಯರು ಶರಣಾಗತಿ ಗದ್ಯದಲ್ಲಿ ಹೇಳಿರುವಹಾಗೆ ಸರ್ವವಿಧ ಬಂಧುವು ಎಂದು ತಿಳಿಸಿ ಸರ್ವಾಪರಾಧಗಳನ್ನೂ ಕ್ಷಮಿಸು ಎಂದು ಅನಿಷ್ಟನಿವೃತ್ತಿಗಾಗಿ ಶರಣಾಗತಿಯನ್ನು ಮಾಡುತ್ತಾನೆ ಹಿಂದೆ

(೧೯. ೨. ೭) ನೆಯ ಶ್ಲೋಕದಲ್ಲಿ ಮಾಡಿದ ಶರಣಾಗತಿಯು ಸರಿಯಾದ ಜ್ಞಾನವಿಲ್ಲದೇ ಎಂದು ಶೋಕಿಸಿ ಜ್ಞಾನೋಪದೇಶಕ್ಕಾಗಿ **"ಶಾಧಿಮಾಂ"** ಎಂದು ಪ್ರಾರ್ಥಿಸಿದ ಶರಣಾಗತಿಯು ಪುನಃ ಗೀತೋಪದೇಶಾಂತ್ಯದಲ್ಲಿ ಶ್ರೀ ಕೃಷ್ಣ ಭಗವಾನರವರು ಉಪದೇಶಿಸಿರುವದು ಭಕ್ತಿಯೋಗಾಂಗಕ ಶರಣಾಗತಿಯೂ ಮತ್ತು ಸ್ವತಂತ್ರ ಪ್ರಪತ್ತಿಯೂ, ಇನ್ನೂ ಕರ್ಮಯೋಗಾದಿಗಳಲ್ಲೀ ಇಳಿಯು ಲಿಲ್ಲವಾದುದರಿಂದ **"ಕರಿಷ್ಯೇವಚನಂ ತವ"** ತಮ್ಮ ಉಪದೇಶಾನುಸಾರವಾಗಿ ಮಾಡುವೆನು ಎಂದು ಹೇಳಿರುತ್ತಾನೆ. ಕರ್ಮಯೋಗಕ್ಕೆ ಸೇರಿದ ಕ್ಷತ್ರಿಯಧರ್ಮವಾದ ದುಷ್ಟನಿಗ್ರಹಕ್ಕಾಗಿ ಯುದ್ಧಾರಂಭವನ್ನು ಅರ್ಜುನನು ಮಾಡಿದನೆಂದು ಗ್ರಹಿಸತಕ್ಕದ್ದಾಗಿರುತ್ತದೆ. **ತಸ್ಮಾತ್**-ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಕಾರಣದಿಂದ ಎಂದರೆ ಲೋಕಪಿತಾವಾಗಿ ಸರ್ವೋಪಕಾರಕ ನಾಗಿಯೂ, ಸರ್ವರಕ್ಷಕನಾಗಿಯೂ, ಲೋಕಗುರುವಾಗಿಯೂ, ಸರ್ವಹಿತೋಪದೇಶಮಾಡುವವ ನಾಗಿಯೂ, ಸರ್ವೋತ್ಕೃಷ್ಟನಾಗಿಯೂ, ಪೂಜ್ಯತಮನಾಗಿಯೂ, ಆಶ್ರಯೋಚಿತವಾದ ಕಲ್ಯಾಣ ಗುಣ ಮಹೋದಧಿಯಾಗಿಯೂ ಇರುವದರಿಂದ, ನಿನಗೆ ಸಮರೂ ಅಧಿಕರೂ ಇಲ್ಲದೆ ಹೀಗೆ ಅಪ್ರತಿಮಪ್ರಭಾವವುಳ್ಳವನಾಗಿರುವದರಿಂದಲೇ, **ಅಹಂ**-ಅನನ್ಯಗತಿಕನಾಗಿ, ರಕ್ಷಕಾಂತರ ರಿಲ್ಲದೆ, ನಿನಗೆ ಶೇಷಭೂತನಾಗಿ ನಿನ್ನನ್ನೇ ನಂಬಿರುವ ನಾನು, **ಪ್ರಣಮ್ಯ**-ನಮಸ್ಕರಿಸಿ ಶರಣಾ ಗತಿಯನ್ನನುಷ್ಠಿಸಿ, **ಕಾಯಂ ಪ್ರಣಿಧಾಯ**-ಶರೀರವನ್ನು ದಂಡವತ್ತಾಗಿ ಕೆಳಗೆ ಬೀಳಿಸಿ ಎಂದರೆ ನಿನ್ನ ಪಾದಗಳಿಗೆರಗಿ, (ಇದು ಮೋಕ್ಷಪ್ರಾಪ್ತಿಗಾಗಿ ಮಾಡಲ್ಪಟ್ಟ ಸಂದರ್ಭದಲ್ಲಿ **ಓಮಿತ್ಯಾತ್ಮಾನಂ ಯುಂಜೀತ** ಎಂದು ಹೇಳಿರುವ ವಿಧಿವಾಕ್ಯಕ್ಕೆ ಕಟ್ಟುಬಿದ್ದು **ಈ** ಆತ್ಮಾ ವನ್ನು ನಿನ್ನ ಪಾದದಲ್ಲಿ ಸಮರ್ಪಿಸಿ ಎಂದರ್ಥವಾಗುತ್ತದೆ ; ಇದಕ್ಕೆ ಪ್ರಪದನ, ಭರನ್ಯಾಸ, ಆತ್ಮ ನಿಕ್ಷೇಪ, ಸ್ವತಂತ್ರಪ್ರಪತ್ತಿ, ಶರಣಾಗತಿ, ಸಾಧ್ಯಭಕ್ತಿ ಇತ್ಯಾದಿ ಹೆಸರುಗಳುಂಟು ;) **ಈಶಂ**-ಸರ್ವನಿಯಾಮಕನಾಗಿಯೂ, ಇದರಿಂದ ಸರ್ವವ್ಯಾಪ್ತಿಯೂ, ಸರ್ವಸ್ವಾಮಿತ್ವವೂ ಹೇಳಲ್ಪಟ್ಟಿತು, **ಈಡ್ಯಂ**-ನೀನು ಮಾಡುತ್ತಿರುವ ಮಹೋಪಕಾರಕಗಳಿಗೆ ಕೃತಜ್ಞತಾಸೂಚಕವಾಗಿ ಸ್ತುತಿಸಲು ಯೋಗ್ಯನಾಗಿರುವ, **ತ್ವಾಂ**-ಕಾರುಣ್ಯವಾತ್ಸಲ್ಯಾದಿ ಗುಣಗಳಿಂದ ಭಕ್ತಪ್ರಿಯನಾಗಿರುವ ನಿನ್ನನ್ನು **ಪ್ರಸಾದಯೇ**-ಪ್ರಸನ್ನನಾಗು ಎಂದು ಪ್ರಾರ್ಥಿಸುತ್ತೇನೆ; ಪ್ರಸನ್ನನಾಗುವದರಿಂದ ಏನನ್ನು ಅನುಗ್ರಹಿಸು ಎಂದು ಕೇಳುತ್ತಿಯೇ ಎಂದರೆ ಉತ್ತರಾರ್ಧದಿಂದ ಹೇಳುತ್ತಾರೆ ; **ಹೇ ದೇವ**-ಲೀಲಾವಿಭೂತಿಯಲ್ಲಿ ತುಂಬಾ ಮಮತೆಯುಳ್ಳ ಸರ್ವೇಶ್ವರನೇ ! **ಸೋಢುಂ ಅರ್ಹಸಿ**-ನಾನು ಮಾಡಿರುವ ಸರ್ವಾಪರಾಧಗಳನ್ನೂ ಕ್ಷಮಿಸಿ ಕಾಪಾಡಲು ಅರ್ಹನಾಗಬೇಕು ಎಂದು ಆಕಿಂಚನ್ಯ ದಿಂದ ಬೇಡುತ್ತಾನೆ. ಇಷ್ಟಪ್ರಾಪ್ತಿಗೆ ಅನಿಷ್ಟವಾದ ವಿರೋಧಿವರ್ಗವು ಪ್ರತಿಬಂಧಕವು; ಅವು ಮಹಾಪರಾಧಗಳು; ಅವುಗಳನ್ನು ತೊಲಗಿಸು ಎಂದು ಪ್ರಾರ್ಥನಾಪೂರ್ವಕ ಶರಣಾಗತಿಯು ಲೋಕದಲ್ಲಿರುವವರೇ ಶರಣಾಗತಿಯನ್ನು ಮಾಡಿದರೆ ರಕ್ಷಿಸುತ್ತಾರೆಂದು ಎರಡು ದೃಷ್ಟಾಂತ ಗಳನ್ನು ಕೊಡುತ್ತಾನೆ. ಹೀಗಿರುವಾಗ **"ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂಮಮ"** ಎಂದೂ **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ"** **"ದೋಷೋ ಯದ್ಯಪಿ ತಸ್ಯಸ್ಯಾತ್ಸತಾಮೇತದಗರ್ಹಿತಂ"** ಎಂದೂ (ರಾ. ಯು ೧೮.) ಶರಣಾಗತರ ಕೋರಿಕೆಯನ್ನು ಸಲ್ಲಿಸುವದೇ ನನ್ನ ಮುಖ್ಯ ವ್ರತವೆಂದು ದೃಢಸಂಕಲ್ಪನಾಗಿರುವ ನೀನು **"ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚ"** ಎಂದು ಹೇಳುವದೇನೂ ಹೆಚ್ಚಲ್ಲವೆಂದು ಹೇಳುತ್ತಾರೆ. ಎರಡು ದೃಷ್ಟಾಂತಗಳು ಯಾವುವೆಂದರೆ— (೧) **ಪಿತೇವ ಪುತ್ರಸ್ಯ**- ಲೋಕದಲ್ಲೇ ಪುತ್ರನಾದವನು ಎಷ್ಟು ಅಧರ್ಮಿಯಾಗಿ ಅಪರಾಧಿಯಾಗಿದ್ದರೂ **ಪುತ್ರನ ಅಪರಾಧಗಳನ್ನೆಲ್ಲ ಮನ್ನಿಸುವ, ಪಿತೇವ-ತಂದೆಯಹಾಗೆ, ಸೋಢುಮರ್ಹಸಿ**-ಇಲ್ಲಿ

ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ನವವಿಧ ಸಂಬಂಧದಲ್ಲಿ ಪಿತಾ ಪುತ್ರ ಸಂಬಂಧವು ಉಪದಿಷ್ಟವು (೨) **ಸಖೇವ ಸಖ್ಯುಃ**-ಲೋಕದಲ್ಲಿ ಒಬ್ಬನು ತನ್ನ ಸ್ನೇಹಿತನಿಗೆ ಮಹಾಪರಾಧವನ್ನು ಮಾಡಿದರೆ, ಅಯ್ಯಾ ಮಣ್ಣು ತಿನ್ನುವ ಕೆಲಸವನ್ನು ಮಾಡಿಬಿಟ್ಟೆನು, ನನ್ನ ಮಹಾಪರಾಧವನ್ನು ಕ್ಷಮಿಸಲೇಬೇಕೆಂದು ಆತನಿಗೆ ಶರಣಾಗತನಾದರೆ ಮನ್ನಿಸುವುದುಂಟು ; ಅದನ್ನು ಮನಸ್ಸಿನಲ್ಲಿಟ್ಟು ಹೇಳುತ್ತಾನೆ—ಸ್ನೇಹಿತನ ಮಹಾಪರಾಧಗಳನ್ನು ಕ್ಷಮಿಸುವ ಸ್ನೇಹಿತನ ಹಾಗೂ ಕ್ಷಮಿಸು. ಇಲ್ಲಿ **ಪ್ರಿಯಾಯ**-ನನಗೆ ಪ್ರಿಯವನ್ನು ಮಾಡುವುದಕ್ಕಾಗಿ, **ಪ್ರಿಯಃ ಅರ್ಹಸಿ**-ಪ್ರಿಯನಾಗಿರಲು ಅರ್ಹನು, ಹೀಗೆ ಹೇಳಿರುವುದರಿಂದ, **ಸರ್ವೇಶ್ವರನು** ಪ್ರಿಯನಾದ ಭರ್ತಾ, ಜೀವಾತ್ಮನಾದ ತಾನು ಭಾರ್ಯಾ, ಹೀಗೆ ಭರ್ತೃ ಭಾರ್ಯಾ ಸಂಬಂಧವು ಎಲ್ಲಾ ಸಂಬಂಧಗಳಿಗಿಂತ ಪರಮಪರಸ್ಪರವಾದ ಅನುರಾಗಪ್ರದರ್ಶಕ ಸಂಬಂಧವಾಗಿ ದೋಷಾದರ್ಶನಕ್ಕೆ ಯೋಗ್ಯವಾದ ಸಂಬಂಧವು ; ಇದೂ ಸಹ ಹೇಳಲ್ಪಟ್ಟಿತೆಂದು **ಪ್ರಿಯಃ ಪ್ರಿಯಾಯ** ಎಂಬ ಪದಗಳಿಂದ ಸೂಚಿತವೆಂದು ಶ್ರೀ ಶಂಕರಾಚಾರ್ಯರು ಅರ್ಥಮಾಡಿರುತ್ತಾರೆ. ತನ್ನ ಪ್ರಿಯಳಾದ ಭಾರ್ಯೆಯ ಅಪರಾಧವನ್ನು ಭರ್ತಾವಾದ ಪ್ರಿಯನು ವಾಲ್ಲಭ್ಯಾತಿಶಯದಿಂದ ಮನ್ನಿಸುವಹಾಗೂ, **ಸೋಢುಮರ್ಹಸಿ** ಎಂದು ಪ್ರಾರ್ಥಿಸುತ್ತಾನೆ. ಭರ್ತೃ ಭಾರ್ಯಾ ಸಂಬಂಧವು ವೇದಾಂತದಲ್ಲಿ ಹೇಳಲ್ಪಟ್ಟಿರುತ್ತದೆ. ಜೀವನು ಸ್ತ್ರೀಪ್ರಾಯನೆಂದೂ ಪರಮಪುರುಷನು ಪುರುಷಪ್ರಾಯನೆಂದೂ ಹೇಳಲ್ಪಟ್ಟಿರುತ್ತದೆ. ಇದರಿಂದಲೇ ಪರಮಭಕ್ತರೆಲ್ಲಾ ಗೋಪಿಕಾಸ್ತ್ರೀಯರಾಗಿ ಹುಟ್ಟಿ ಶ್ರೀ ಕೃಷ್ಣನಲ್ಲಿ ನಿರತಿಶಯ ಭಕ್ತಿಯನ್ನು ತೋರಿಸಿ ಸದ್ಗತಿಯನ್ನು ಹೊಂದಿರುತ್ತಾರೆ. ಈ ಸಂಬಂಧವನ್ನೇ ಆಳ್ವಾರಾಚಾರ್ಯರುಗಳು ಬಹುವಾಗಿ ಕೊಂಡಾಡಿ, ಪತಿವ್ರತಾಸ್ತ್ರೀಯು ತನ್ನ ಭರ್ತಾವಿನಲ್ಲಿ ಹೇಗೆ ನಿರತಿಶಯ ಭಕ್ತಿ ವಿಶ್ವಾಸಗಳನ್ನು ತೋರಿಸಿ, ತದೇಕಚಿತ್ತಳಾಗಿ ಪರಮೈಕಾಂತ್ಯದಿಂದ ಧ್ಯಾನಿಸುತ್ತಾ ಇರುವಳೋ ಹಾಗೆ ತಾವೂ ಎಂದು ಭಾವಿಸಿ ಆನಂದಿಸಿದುದನ್ನು ತಮ್ಮ ತಮ್ಮ ಗ್ರಂಥಗಳಲ್ಲಿ ವ್ಯಕ್ತಪಡಿಸಿರುತ್ತಾರೆ. ಆಗಲಿ, ಈಗ ಉಪಪಾದಿತ ಅರ್ಥವೇನೋ ಸ್ವಾರಸ್ಯವೇ. ಆದರೆ **ಪ್ರಿಯಃ ಪ್ರಿಯಾಯಾಃ** ಎಂದು ಇದ್ದುದಾದರೆ ಸ್ವಾರಸ್ಯವೇ ಸರಿ. ಹಾಗಿಲ್ಲವಲ್ಲಾ ಎಂದರೆ, ಪ್ರಿಯನು ಪ್ರಿಯಮಾಡುವದಕ್ಕಾಗಿ ಎಂದಿರುವದರಿಂದ, ಯಾರಿಗೆ ಪ್ರಿಯಮಾಡುವದು ಎಂಬಲ್ಲಿ ತನ್ನ ಪ್ರಿಯಳಿಗೆ ಎಂದು ಧ್ವನ್ಯರ್ಥವು ಉಂಟಾಗುವದರಿಂದ ಹಾಗೆ ವ್ಯಾಖ್ಯಾನವಿರಬಹುದು. ಆತನು ಪುರುಷನು, **ಸ್ತ್ರೀಪ್ರಾಯ ಮಿತರತ್** ಎಂಬ ಭಾವವು

ಈ ಜೀವಾತ್ಮನು ಕೇವಲ ಪರತಂತ್ರನಾಗಿ ತನಗೆ ಸರ್ವವಿಧ ಸುಖಗಳನ್ನೂ ಪರಮಾತ್ಮನಿಂದ ಹೊಂದಿದವನಾಗಿ, ಆತನಿಗೆ ಪರಮಪ್ರಿಯನಾಗಿ ಆತನೊಂದಿಗೆ ಸೇರಿಕೊಂಡಿರುವುದರಿಂದ ಪರಮಾತ್ಮನಿಗೂ ಆತನಿಗೂ ಸಂಬಂಧವು ಒಂಭತ್ತು ವಿಧವೆಂದು **"ಪಿತಾ ಚ ರಕ್ಷಕಶ್ಶೇಷೀ ಭರ್ತಾಜ್ಞೇಯೋ ರಮಾಪತಿಃ । ಸ್ವಾಮ್ಯಾಧಾರೋ ಮಮಾತ್ಮಾ ಚ ಭೋಕ್ತಾಚಾದ್ಯ ಮನೂದಿತಃ"** ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಲಕ್ಷ್ಮೀಪತಿಯಾದ ನಾರಾಯಣನು ಜೀವಾತ್ಮನಿಗೆ ೧. ಪಿತಾ ೨. ರಕ್ಷಕ ೩. ಶೇಷೀ ೪. ಭರ್ತಾ ೫. ಜ್ಞೇಯವಸ್ತು ೬. ಸ್ವಾಮಿಯು ೭. ಆಧಾರ ೮. ಆತ್ಮಾ ಎಂದರೆ ಶರೀರಿ ೯. ಭೋಕ್ತಾ ಎಂದು ಹೇಳಲ್ಪಟ್ಟಿರುವುದರಿಂದ, ಇದಕ್ಕನುಗುಣವಾಗಿ ಜೀವಾತ್ಮನು ೧. ಪುತ್ರನು ೨. ರಕ್ಷ್ಯನು ೩. ಶೇಷನು ೪. ಭಾರ್ಯಾ ೫. ಜ್ಞಾತಾ ೬. ಸ್ವಂ, ಆತನ ಸ್ವತ್ತು ೭. ಆಧೇಯನು ೮. ಆತನಿಗೆ ಶರೀರವು ೯. ಆತನಿಗೆ ಭೋಗ್ಯನು ಎಂಬದಾಗಿ ಸಂಬಂಧಗಳು ; ಇವುಗಳೆಲ್ಲಾ ಶ್ರುತಿ ಸ್ಮೃತಿ ಪುರಾಣಾದಿಗಳಲ್ಲಿ ಉಪಪಾದಿತವು. ಆದುದರಿಂದ ಪರಮಾತ್ಮನು ಈ ಜೀವಾತ್ಮನಿಗೆ ಸರ್ವವಿಧ ಬಂಧುವೆಂದು ಕೊಂಡಾಡಲ್ಪಟ್ಟಿರುತ್ತಾನೆ. ಶ್ರೀ ಯಾಮುನ ಮುನಿಗಳು ಶ್ರಿಯಃಪತಿಯನ್ನೇ ಸರ್ವವಿಧ

ಬಂಧುವೆಂದು **"ಪಿತಾತ್ವಂ ಮಾತಾತ್ವಂ"** ಎಂಬ ಶ್ಲೋಕದಲ್ಲಿ ಉಪಪಾದಿಸಿ ತಾವು ತದೀಯರೆಂದೂ, ಅವನ ಭೃತ್ಯರೆಂದೂ, ಕೈಙ್ಕರ್ಯಮಾಡುವ ಪರಿಜನವೆಂದೂ ಅವನನ್ನೆ ಗತಿಯಾಗಿ ಉಳ್ಳವರೆಂದೂ ಹೇಳಿ, ಆತನಲ್ಲಿ ಸರ್ವಭರವನ್ನೂ ಸಮರ್ಪಿಸಿರುತ್ತಾರೆ. ಇವುಗಳೆಲ್ಲಾ ಈ ಗೀತೆಯಲ್ಲೇ ಉಪಪಾದಿತವೆಂದು ಪ್ರಮಾಣಗಳನ್ನು ಉದಾಹರಿಸಬಹುದು. ಆದರೆ ಗ್ರಂಥ ವಿಸ್ತರಭಯದಿಂದ ಉದಾಹರಿಸಲಿಲ್ಲವು. ಪ್ರಾಜ್ಞರೇ ಅವುಗಳನ್ನು ಗ್ರಹಿಸಬಹುದು.

ಈ ಸಂದರ್ಭದಲ್ಲಿ ಅರ್ಜುನನು ತಾನು ಇಷ್ಟುದಿನವೂ ಶ್ರೀಕೃಷ್ಣನೊಂದಿಗೆ ಇದ್ದು, ಪರತತ್ವವೆಂಬ ಭಾವನೆ ಇಲ್ಲದೆ, ಅಥವಾ ಸ್ವಲ್ಪಮಟ್ಟಿಗೆ ಊಹೆ ಇದ್ದರೂ ನಿರ್ಣಯವಾಗಿ ತಿಳಿಯದೆ ಅಥವಾ ತಿಳಿದಿದ್ದರೂ ಪ್ರಮಾದದಿಂದಲೋ ಹೇಗೋ ಅನೇಕಾಪರಾಧಗಳನ್ನು ಮಾಡಿರುತ್ತೇನೆಂದು ನಂಬಿ ಕ್ಷಮಿಸು ಎಂದೂ, ಮತ್ತು ನಿನ್ನ ದಿವ್ಯ ವೈಕುಂಠದಲ್ಲಿರುವ ಪರರೂಪವನ್ನೂ, ತೋರಿಸು ಎಂದು ಶರಣಾಗತಿಯನ್ನನುಷ್ಠಿಸಿರುತ್ತಾನೆ. ಶರಣಾಗತಿಯು ಆತ್ಮನಿಕ್ಷೇಪರೂಪವಾಗಿ ಅಙ್ಗಿಯು ಇದು ಐದು ಅಂಗಗಳುಳ್ಳದ್ದು; ಅವು ಯಾವುವೆಂದರೆ— **"ಆನುಕೂಲ್ಯಸ್ಯ ಸಙ್ಕಲ್ಪಃ ಪ್ರಾತಿಕೂಲ್ಯಸ್ಯವರ್ಜನಂ । ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವವರಣಂ ತಥಾ । ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ"** (ಅಹಿ. ೬) ೧. ಶಾಸ್ತ್ರವಿಧಿಗಳಿಗೆ ಅನುಕೂಲವಾಗಿ ನಡೆಯುವನೆಂಬ ಸಙ್ಕಲ್ಪವು. ೨. ಪ್ರತಿಕೂಲವಾಗಿ ನಡೆಯುವದಿಲ್ಲವು ೩. ಸರ್ವೇಶ್ವರನು ಕಾಪಾಡುವನೆಂಬ ಪೂರ್ಣ ನಂಬಿಕೆ, ಇದಕ್ಕೆ ಮಹಾವಿಶ್ವಾಸವೆಂದು ಹೆಸರು. ೪. **ಗೋಪ್ತೃತ್ವವರಣಂ**-ಕಾಪಾಡು ಎಂಬ ಪ್ರಾರ್ಥನೆಯು. ೫. ನನಗೆ ಇನ್ನ್ಯಾರೂ ಗತಿ ಇಲ್ಲವು ಎಂಬ ಕಾರ್ಪಣ್ಯವು, ಹೀಗೆ ಐದು ಅಂಗಗಳಿಂದ ಕೂಡಿದ ೬. ಆತ್ಮನಿಕ್ಷೇಪವೇ ಶರಣಾಗತಿಯು, ಹೀಗೆ **ಷಡ್ವಿಧಾ**-ಹೀಗೆ ಆರು ವಿಷಯಗಳನ್ನುಳ್ಳದುದು, ಇವೆಲ್ಲವೂ ಈಗ ಅರ್ಜುನನು ಮಾಡಿರುವ ಶರಣಾಗತಿಯಲ್ಲಿವೆ. ಹೇಗೆಂದರೆ— ಹಿಂದೆ ಏನೊ ತಿಳಿಯದೆ ಹೇ ಕೃಷ್ಣ ಹೇ ಯಾದವ ಹೀಗೆಲ್ಲಾ ಮರ್ಯಾದೆ ಇಲ್ಲದಹಾಗೆ ಹೇಳಿ ಮಹಾಪರಾಧಗಳಿಗೆ ಗುರಿಯಾದೆನು, ಕ್ಷಮಿಸು, ಪ್ರಸನ್ನನಾಗು ಎಂದು ಯಾವಾಗ ಬೇಡಿದನೋ ಆಗ ಇನ್ನು ಮುಂದೆ ಆನುಕೂಲನಾಗಿಯೇ ಇರುವೆನು, ಪ್ರತಿಕೂಲನಾಗಿರುವದಿಲ್ಲವೆಂದು ಹೇಳಿದಂತಾಗುವದರಿಂದ ಮೊದಲಿನ ಎರಡು ಅಙ್ಗಗಳು ಸಿದ್ಧಿಸಿದವು. ಆತನನ್ನು ಈಶನೆಂದು ಹೇಳಿರುವದರಿಂದ ಸರ್ವಸಮರ್ಥನಾಗಿ ಕಾಪಾಡುವನೆಂಬ ನಂಬಿಕೆಯು ಸಿದ್ಧವು. ವಿಶ್ವರೂಪದಲ್ಲೇ ತನಗೆ ಪೂರ್ಣಶ್ರೇಯಸ್ಸನ್ನು ಅನುಗ್ರಹಿಸುವನೆಂಬ ಭರವಸೆ ಇರುವದರಿಂದಲೂ, ಭಕ್ತವತ್ಸಲನು ತಾನು ಮುಂದೆ ಕೋರುವ ಪರರೂಪವನ್ನು ತೋರಿಸುವನೆಂಬ ಮಹಾವಿಶ್ವಾಸವು ಸಿದ್ಧವು; ಮತ್ತು ದೃಷ್ಟಾಂತಗಳಿಂದ ಲೋಕದ ಸಾಧಾರಣ ಜನವಾದ ಪಿತಾ, ಸಖಾ ಮೊದಲಾದವರೇ ಅಪರಾಧಗಳನ್ನು ಮನ್ನಿಸುವದನ್ನು ಕಂಡಿರುವಾಗ, ಮಹಾ ಉದಾರಿಯಾಗಿ, ಕೃಪಾಳುವಾಗಿ, ಭಕ್ತವಾತ್ಸಲ್ಯಾದಿಗಳಿಂದ ಕೂಡಿರುವ ನೀನು ಭಕ್ತಾಭೀಷ್ಟದಾಯಕನೆಂಬುದು ಒಂದು ದೊಡ್ಡದೇ ಎಂಬ ಭಾವವು ವ್ಯಕ್ತವಾದುದರಿಂದಲೂ ಮಹಾ ವಿಶ್ವಾಸವು ಸಿದ್ಧವು, (೪) ಗೋಪ್ತೃತ್ವವರಣವು **" ಅರ್ಹಸಿ ದೇವಸೋಢುಂ "** ಎಂಬುದರಿಂದ ವ್ಯಕ್ತವು. (೫) **ನತ್ವತ್ಸಮೋಸ್ತ್ಯಭ್ಯಧಿಕಃ ಕುತೋನ್ಯಃ** ಎಂದು ಹೇಳಿರುವದರಿಂದ ನೀನೇ ಸರ್ವಾಧಿಕನಾದುದರಿಂದ ನಿನ್ನ ಬಿಟ್ಟರೆ ಗತಿಯು ಇನ್ನು ಯಾರುಇದ್ದಾರೆ ಎಂಬ ಕಾರ್ಪಣ್ಯವು ಸೂಚಿತವು; (೬) **ಪ್ರಣಮ್ಯ ಪ್ರಣಿಧಾಯ ಕಾಯಂ** ಎಂಬುದರಿಂದ ಅಂಗಿಯಾದ ಆತ್ಮನಿಕ್ಷೇಪವು ಹೇಳಲ್ಪಟ್ಟಿತು. ಆದುದರಿಂದ ಇದು ಶರಣಾಗತಿ ಎಂದು ಹೇಳಲ್ಪಡಲು ಏನೊಂದೂ ನ್ಯೂನತೆ ಇಲ್ಲವು. ಈ ಶ್ಲೋಕದ ಶರಣಾಗತಿಯು ಮೋಕ್ಷಕ್ಕಾಗಿ ಅಲ್ಲವಾದುದರಿಂದ ಆತ್ಮನಿಕ್ಷೇಪದಲ್ಲಿ ವ್ಯತ್ಯಾಸವು. ಭರನ್ಯಸನವು

**ಭಾ. ಯಸ್ಮಾತ್ ತ್ವಂ ಸರ್ವಸ್ಯ ಪಿತಾ ಪೂಜ್ಯತಮೋ ಗುರುಶ್ಚ, ಕಾರುಣ್ಯಾದಿ ಗುಣೈಶ್ಚ**

ನ್ಯಾಸವಿದೆ ಎಂದು ಹೇಳಿಸಿಕೊಂಡು ಸ್ವತಂತ್ರವಾಗಿ ಒಂದು ಉಪಾಯವಾಗಲು ಅಭ್ಯಂತರವಿಲ್ಲವೆಂಬ ಭಾವವೂ, ದ್ಯೋತಿತವು. ಈ ವಿದ್ಯೆಯು ಕಠಶ್ರುತಿ ತೈತ್ತಿರೀಯಾದಿಗಳಲ್ಲಿ ಹೇಳಲ್ಪಟ್ಟು, ಶ್ರೀಮದ್ರಾಮಾಯಣ, ಭಾಗವತ ಭಾರತ ಪಾದ್ಮಪುರಾಣಾದಿಗಳಲ್ಲಿ ಉಪಬ್ರಹ್ಮಿತವು. ಶಾಂಡಿಲ್ಯಸ್ಮೃತಿ, ಲಕ್ಷ್ಮೀತಂತ್ರ ಅಹಿರ್ಬುಧ್ನಸಂಹಿತೆ ಪಾಂಚರಾತ್ರಾದಿಗಳಲ್ಲೂ ಸಹ ಉಪಪಾದಿತವು. ಆಳ್ವಾರಾಚಾರ್ಯರುಗಳು ಇದರ ಮಹಿಮೆಯನ್ನೂ ವಿಶೇಷವಾಗಿ ಕೊಂಡಾಡಿರುತ್ತಾರೆ ಇಲ್ಲಿ **ಅರ್ಹಸಿ ದೇವಸೋಢುಂ** ಎಂಬಲ್ಲಿ ದೇವಶಬ್ದವು ಧಾತ್ವರ್ಥದಿಂದ ಲೀಲಾವಿಭೂತಿಯಲ್ಲಿ ಸರ್ವೇಶ್ವರನಿಗಿರುವ ಪರಮಾದರವನ್ನು ಬೋಧಿಸುತ್ತದೆ. ಇಂತವನು ಅಪರಾಧಗಳನ್ನು ಮನ್ನಿಸಿ ಬಿಟ್ಟು ಮೋಕ್ಷಪ್ರಾಪ್ತಿಗೆ ಸಹಾಯಮಾಡಿದರೆ ತನಗೆ ಪ್ರಿಯವಾದ ಲೀಲಾವಿಭೂತಿಗೆ ನ್ಯೂನತೆಯನ್ನುಂಟುಮಾಡಿಕೊಂಡ ಹಾಗಾಗುವದಿಲ್ಲವೇ? ಅಂತವನು **ಸೋಢುಮರ್ಹಸಿ**-ಹೇಗಾಗುವನು? ಎಂದು ಆಕ್ಷೇಪತಂದರೆ, ಮರಳಿನಲ್ಲಿ ಸೇತುವೆಯನ್ನು ಕಟ್ಟುವದು ಲೀಲೆಯಾದರೂ ಅದನ್ನಳಿಸಿ ಬಿಡುವದೂ ಹೇಗೆ ಲೀಲೆಯಾಗುವದರಲ್ಲಿ ಸಂದೇಹವಿಲ್ಲವೋ, ಹಾಗೆಯೇ ಸರ್ವೇಶ್ವರನಿಗೆ ಚೇತನನನ್ನು ಕೆಲವು ಕಾರಣಗಳಿಂದ ಇಲ್ಲಿ ಇಟ್ಟಿರುವದು ಲೀಲೆಯಾದರೂ, ಕಾರಣಾಂತರಗಳಿಂದ ಇಲ್ಲಿನ ಬಂಧನವನ್ನು ತಪ್ಪಿಸಿ ನಿತ್ಯ ವಿಭೂತಿಗೆ ಕಳುಹಿಸುವದೂ ಸಹ ಲೀಲೆಯೇ ಎಂದು ಭಾವಿಸತಕ್ಕದ್ದು. ಈ ಅಭಿಪ್ರಾಯವನ್ನು ಈ **ದೇವ** ಶಬ್ದವು ಸೂಚಿಸುತ್ತದೆ ಆದರೆ ಹೀಗೆ ಚೇತನರು ಇಲ್ಲಿಂದ ನಿತ್ಯವಿಭೂತಿಗೆ ಹೋಗುತ್ತಾಬಂದರೆ ಲೀಲಾವಿಭೂತಿಯೇ ಉಪಯೋಗವಿಲ್ಲದೆ ಆಗುವದಿಲ್ಲವೇ? ಎಂದರೆ ಚಿದಚಿನ್ಮಿಶ್ರವಾದ ಪ್ರಕೃತಿಗೆ ಆನಂತ್ಯವಿರುವದರಿಂದ ಅಂತಹ ಅವಸ್ಥೆಯುಂಟಾಗಲು ಅವಕಾಶವಿಲ್ಲವು. **ಏಷೋಣುರಾತ್ಮಾ** ಎಂದು ಶ್ರುತಿಯು ಚೇತನನನ್ನು ಅಣುರೂಪವುಳ್ಳವನೆಂದು ಬೋಧಿಸುವದರಿಂದ, ನಮ್ಮ ಒಬ್ಬರ ದೇಹದಲ್ಲೇ ಕೋಟ್ಯಾನುಕೋಟಿ ಚೇತನರೂಪ ಅಣುಗಳಿರಬಹುದಾದುದರಿಂದ ಲೀಲಾ ವಿಭೂತಿಯು ಅನುಪಯೋಗವಾಗುತ್ತದೆಂಬ ಭಯಕ್ಕೆ ಕಾರಣವೇ ಇಲ್ಲವು. ಮಳೆಬಂದ ಮಾರನೆಯದಿನ ಭೂಮಿಯ ರಂಧ್ರಗಳಿಂದ ಅಸಂಖ್ಯಾತವಾದ ಹುಳುಗಳು ಉತ್ಪನ್ನವಾಗಿ ಸಾಯುವುವು. ಅಪರಾಧಗಳನ್ನು ಪರಿಹರಿಸಿ **"ಪ್ರಸಾದಯೇತ್ವಾಂ" "ಅಹಣ್ಮದೇವಸೋಢುಮ್"** ಎಂಬದಾಗಿ ಪ್ರಾರ್ಥಿಸಿದರೆ, **ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎಂದು ಹೇಳಬೇಕಾದ ಕರುಣಾವಾತ್ಸಲ್ಯ ಸೌಶೀಲ್ಯ ಸೌಲಭ್ಯಾದಿ ಕಲ್ಯಾಣಾದಿಗುಣಗಳು ತನಗುಂಟೆಂದು ಪ್ರದರ್ಶಿಸಲು ಲೀಲಾವಿಭೂತಿಯೇ ತನಗೆ ಸರಿಯಾದ ಸ್ಥಳವೆಂದು ಭಾವಿಸಿರುವನೆಂದು ತಿಳಿದು ಅರ್ಜುನನು **ದೇವ** ಎಂಬ ಸಂಬೋಧನೆಯನ್ನು ಪ್ರಯೋಗಿಸಿರುತ್ತಾನೆ. ನಿತ್ಯವಿಭೂತಿಯಲ್ಲಿ **ಅರ್ಹಸಿ ದೇವಸೋಢುಮ್** ಎಂಬ ಪ್ರಾರ್ಥನೆಯು ನಿನಗೆ ದೊರೆಯಲಾರದು. ಈ ಲೀಲಾವಿಭೂತಿಯಲ್ಲೇ ನನ್ನಂತಾವನಿಂದಲೇ ಇಂತಹ ಪ್ರಾರ್ಥನೆಯು ನಿನಗೆ ದೊರೆಯಬಹುದು. ಆದುದರಿಂದ ನಿನ್ನ ಕ್ಷಮಾಗುಣವು ನನ್ನನ್ನು ಉದ್ಧಾರಮಾಡಲಿ ಎಂಬ ಭಾವನೆಯು.

**ಭಾಷ್ಯಾರ್ಥವು :—ತಸ್ಮಾತ್**-ಎಂಬ ಪದದ ಅರ್ಥವೇನೆಂಬುದನ್ನು ವ್ಯಕ್ತಪಡಿಸುತ್ತಾರೆ. **ಯಸ್ಮಾತ್**-ಯಾವಕಾರಣದಿಂದ, **ತ್ವಂ**-ನೀನು, **ಸರ್ವಸ್ಯಪಿತಾ**-ಸಮಸ್ತರಿಗೂ ಹಿತ ಪ್ರವರ್ತನೆಯಲ್ಲಿ ಬದ್ಧಾದರನಾದ ತಂದೆಯೋ. ಹಾಗೆಯೇ ಜ್ಞಾನವಿವೇಕಾದಿಗಳನ್ನು ಕೊಟ್ಟು ಕಾಪಾಡುವ, **ಪೂಜ್ಯತಮನಾದ ಗುರುವೋ,** ಮತ್ತು **ಕಾರುಣ್ಯಾದಿ ಗುಣೈಶ್ಚ ಸರ್ವಾಧಿಕೋಸಿ**-ಆಶ್ರಯಿಸಲು ಯೋಗ್ಯವಾದ ಕಾರುಣ್ಯ, ಆದಿ ಶಬ್ದದಿಂದ ವಾತ್ಸಲ್ಯ ಸೌಲಭ್ಯ ಸೌಶೀಲ್ಯಾದಿ

**ಭಾ. ಸರ್ವಾಧಿಕೋಽಸಿ, ತಸ್ಮಾತ್ ತ್ವಾಮೀಶಮೀಡ್ಯಂ, ಪ್ರಣಮ್ಯ ಪ್ರಣಿಧಾಯ ಚ ಕಾಯಂ, ಪ್ರಸಾದಯೇ; ಯಥಾ ಕೃತಾಪರಾಧಸ್ಯಾಪಿ ಪುತ್ರಸ್ಯ ಯಥಾಚ ಸಖ್ಯುಃ, ಪ್ರಣಾಮಪೂರ್ವಂ ಪ್ರಾರ್ಥಿತಃ ಪಿತಾ ವಾ ಪ್ರಸೀದತಿ; ತಥಾ ತ್ವಂ ಪರಮ ಕಾರುಣಿಕಃ ಪ್ರಿಯಃ ಪ್ರಿಯಾಯ ಮೇ ಸರ್ವಂ ಸೋಢುಮರ್ಹಸಿ ||೪೪||**

---

ಗಳು ಹೇಳಲ್ಪಟ್ಟವು, ಇಂತಹ ಕಲ್ಯಾಣ ಗುಣಗಳಿಂದ ಕೂಡಿರುವದರಿಂದ ಸಮಸ್ತರಿಗಿಂತಲೂ ಅಧಿಕನಾಗಿದ್ದೀಯೋ, **ತಸ್ಮಾತ್**-ಆ ಕಾರಣದಿಂದ, ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟದುದೆಲ್ಲಾ **ತಸ್ಮಾತ್** ಎಂಬ ಶಬ್ದದಿಂದ ಗೃಹೀತವೆಂದು ತೋರಿಸುವದಕ್ಕಾಗಿ " **ಯಸ್ಮಾತ್** " ಎಂದಾರಂಭಿಸಿ ಅನುವಾದಮಾಡಿರುತ್ತಾರೆ, **ತ್ವಾಂ ಈಶಂ ಈಡ್ಯಂ**-ಸರ್ವ ನಿಯಾಮಕನಾಗಿ ಮಹೋಪಕಾರಕನಾಗಿರುವದರಿಂದ ಕೃತಜ್ಞತಾಪೂರ್ವಕವಾಗಿ ಸ್ತುತಿಸಲು ಅರ್ಹನಾಗಿರುವ ನಿನ್ನನ್ನು, **ಪ್ರಣಮ್ಯ**-ಅಂಜಲಿ ಬದ್ಧ ಪೂರ್ವಕವಾಗಿ ಪ್ರಪದನವನ್ನನುಷ್ಠಿಸಿ, ಕೃತಜ್ಞತಾ ಪೂರ್ವಕವಾಗಿ **ಪ್ರಣಿಧಾಯ ಕಾಯಂ**-ದಂಡವತ್ಪ್ರಣಾಮವನ್ನು ಸಾಷ್ಟಾಂಗಪೂರ್ವಕವಾಗಿ ಸಮರ್ಪಿಸಿ, **ಪ್ರಸಾದಯೇ**-ಪ್ರಸನ್ನನಾಗು, ಎಂದು ಬೇಡುವೆನು ; ಅನುಗ್ರಹಿಸು ಎಂದು ಬೇಡುತ್ತೇನೆಂಬ ತಾತ್ಪರ್ಯವು. ಇಲ್ಲಿ ತಾನು ಮಹಾಪರಾಧಿಯು, ಭಗವಂತನನ್ನು ಪ್ರಾರ್ಥಿಸಿದರೆ ಮಹಾ ಕ್ಷಮಾ ಗುಣನಿಧಿಯಾದುದರಿಂದ ತನ್ನನ್ನು ಕ್ಷಮಿಸುವೆನೆಂದು ಮನಸ್ಸಿನಲ್ಲಿ ಭಾವಿಸಿದನೋ, ಅದನ್ನೇ ಬಾಯಿಂದಲೂ ಹೇಳಿ, ಕರ್ಮದಿಂದಲೂ ಬೇಡುತ್ತಾನೆ; ಆದುದರಿಂದ ಪ್ರಸಾದಯೇ ಸೋಢುಮರ್ಹಸಿ ಎಂದು ಬಾಯಲ್ಲೂ ಹೇಳಿ, ಪ್ರಣಿಧಾಯಕಾಯಂ ಎಂಬುದರಿಂದ ಕರ್ಮದಿಂದಲೂ ತೋರಿಸಿರುತ್ತಾರೆ— ಇದನ್ನೇ ಶ್ರುತಿಯು ಬೋಧಿಸುತ್ತದೆ,—" **ಯದ್ಧಿ ಮನಸಾ ಚೇತಯತೇ ತದ್ವಾಚಾವದತಿ ಮನಸೀತ್ಯಾಹ, ಯದ್ಧಿ ಮನಸಾಭಿಗಚ್ಛತಿ ತತ್ಕರೋತಿ ಧೀರಸೀತ್ಯಾಹ, ಯದ್ಧಿಮನಸಾ ಧ್ಯಾಯತಿ ತದ್ವಾಚಾ ವದತಿ** " (ಯಜುಷಿ. ೬.೯.೭) ಎಂಬದಾಗಿ. "**ಯನ್ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ** " ಎಂಬುದೂ ಏಕಾರ್ಥ್ಯಉಳ್ಳದುದು. ಇದರಿಂದ ಅರ್ಜುನನು ಋಜುವಾದ ಪ್ರವೃತ್ತಿಯುಳ್ಳವನೆಂದು ತೋರಿಸಿಕೊಂಡಿರುತ್ತಾನೆ. ಯಾವ ಅನುಗ್ರಹವನ್ನು ಮಾಡಬೇಕೆಂದರೆ ತಿಳಿಸುತ್ತಾನೆ. **ಯಥಾ**-ಹೇಗೆ, **ಕೃತಾಪರಾಧಸ್ಯಾಪಿ ಪುತ್ರಸ್ಯ**-ಅಪರಾಧಮಾಡಿದ ಪುತ್ರನ ವಿಷಯದಲ್ಲೂ, **ಯಥಾಚ ಸಖ್ಯುಃ** ಇಲ್ಲಿ **ಯಥಾಚ ಕೃತಾಪರಾಧಸ್ಯ ಸಖ್ಯುಃ** ಎಂದು ಇಟ್ಟುಕೊಳ್ಳಬೇಕು, ಹೇಗೆ ಅಪರಾಧಮಾಡಿದ ಮಿತ್ರನ ವಿಷಯದಲ್ಲೂ, **ಪ್ರಣಾಮಪೂರ್ವಕವಾಗಿ ಪ್ರಾರ್ಥಿತಃ**-ಪ್ರಾರ್ಥಿಸಲ್ಪಟ್ಟ **ಪಿತಾವಾ**-ತಂದೆಯಾಗಲೀ **ವಾ** ಎಂಬುದರಿಂದ **ಸಖಾವು** ಹೇಳಲ್ಪಟ್ಟನು. **ಪ್ರಸೀದತಿ**-ಪ್ರಸನ್ನನಾಗಿ ಅಪರಾಧವನ್ನು ಕ್ಷಮಿಸುವನೋ, **ತಥಾ**-ಹಾಗೆ, **ತ್ವಂ**-ನೀನು, ಪರಮ ಕಾರುಣಿಕನಾಗಿ, **ಪ್ರಿಯಃ**-ಪ್ರಿಯನಾದವನಾಗಿ, **ಪ್ರಿಯಾಯ ಮೇ**-ನನಗೆ ಪ್ರಿಯ ಉಂಟಾಗುವದಕ್ಕೋಸ್ಕರ **ಸರ್ವಂ ಸೋಢುಮರ್ಹಸಿ**-ಈ ಸಮಸ್ತಾಪರಾಧವನ್ನು ಕ್ಷಮಿಸಲು ಯೋಗ್ಯನಾಗಿರುವೆ ಎಂದು ಪ್ರಾರ್ಥನೆಯು. ನೀನು ಹಿಂದೆಯೇ **ಪ್ರಿಯೋಹಿ ಜ್ಞಾನಿನೋತ್ಯರ್ಥಮಹಂ, ಸ ಚ ಮಮಪ್ರಿಯಃ**, ಹೀಗೆ ಪರಸ್ಪರ ಪ್ರಿಯಭಾವವನ್ನು ನೀನು ಉಪದೇಶಿಸಿರುವದರಿಂದ ನನಗೆ ಪ್ರಿಯನಾಗಿರುವ ನೀನು ನಿನ್ನ ಕಾರುಣ್ಯಾತಿಶಯದಿಂದ ನನಗೆ ಪ್ರಿಯ್ಯವನ್ನುಂಟುಮಾಡುವದಕ್ಕಾಗಿ ಸರ್ವಾಪರಾಧಗಳನ್ನೂ ಕ್ಷಮಿಸು ಎಂದು ಬೇಡುತ್ತಾನೆ. ಲೋಕದಲ್ಲಿ ಪುತ್ರನು ತಪ್ಪಾಯಿತು ಎಂದರೆ ಪಿತಾವೇ ಸಾಪರಾಧಿಯಾದ ಪುತ್ರನನ್ನು ಮನ್ನಿಸಿ ಕಾಪಾಡುವದನ್ನು ಕಂಡಿರುವೆವು. ಹಾಗೆಯೇ ಮಿತ್ರನೂ ತಪ್ಪಾಯಿತು ಕಾಪಾಡು ಎಂದರೆ

**ಮೂ. ಅದೃಷ್ಟಪೂರ್ವಂಹೃಷಿತೋಽಸ್ಮಿದೃಷ್ಟ್ವಾಭಯೇನಚ ಪ್ರವ್ಯಥಿತಂ ಮನೋಮೇ।**
**ತದೇವ ಮೇದರ್ಶಯ ದೇವರೂಪಂ ಪ್ರಸೀದ ದೇವೇಶ ಜಗನ್ನಿವಾಸ॥ ೪೫.**

ತನ್ನ ಮಿತ್ರನ ಅಪರಾಧವನ್ನು ಮನ್ನಿಸಿ ಕಾಪಾಡಿರುವದನ್ನು ಕಂಡಿರುವೆವು. ಈಗ ನಿನ್ನಲ್ಲಿ ಮಹಾಪರಾಧಿಯು ನಾನು ಕಾಪಾಡು ಎಂದು ಶರಣಾಗತಿಯನ್ನು ಈಗ ಮಾಡಿರುತ್ತೇನೆ, ಇದು ಎಂದಿಗೂ ವಿತಥವಾಗಲಾರದು. ಸಾಪರಾಧಿಯಾದ ನನ್ನ ಅಪರಾಧಗಳನ್ನು ಕ್ಷಮಿಸುತ್ತೀಯೆ ಎಂಬುದು, ನಿನ್ನ ಮಹತ್ತಾದ ಕಲ್ಯಾಣಗುಣಯೋಗ ಮಾಹಾತ್ಮ್ಯೆಯಿಂದಲೇ ವ್ಯಕ್ತವೆಂಬ ಭಾವವು. ಈ ಸಂದರ್ಭದಲ್ಲಿ **"ಪುಣ್ಯಂ ಯತ್ತ್ವಪೂಜನಂ ಭವತಿ ಚೇತ್ ತತ್ಕರ್ತುರಿಷ್ಟೇ ಕೃತೇ ತಸ್ಮಾದ್ರಂಗಪತೇ ಕೃತಪ್ರತಿಕೃತಂ ಸರ್ವೇಽಪಿ ತತ್ಕುರ್ವತೇ। ಪಾಪಂಚೇದಪರಾಧ ಮೇವ ಭವತಸ್ತತ್ಕರ್ತೃ ಸಂರಕ್ಷಣೇ ಕ್ಷಾಂತಿಸ್ತೇ ನಿರುಪಾಧಿಕಾ ನಿರುಪಮಾ ಲಕ್ಷ್ಯೀಶ ತತ್ಕ್ಷಮ್ಯತಾಂ"** (ಕ್ಷಮಾ.) ಎಂದು ಕ್ಷಮಾ ಷೋಡಶಿಯಲ್ಲಿ ಹೇಳಿರುವದು ಅನುಸಂಧೇಯವು ಇದರರ್ಥವೇನೆಂದರೆ, " ಪೂರ್ವಜನ್ಮ ಸುಕೃತಾದಿಗಳಿಂದ ನಿನ್ನನ್ನು ಪೂಜಿಸಿ ಪ್ರಾರ್ಥಿಸಿದರೆ, ಹೀಗೆ ಪೂಜಿಸಿದನಲ್ಲಾ ಎಂದು ಭಾವಿಸಿ ಆತನ ಕೋರಿಕೆಯನ್ನು ನೀನು ಸಲ್ಲಿಸುತ್ತೀಯೇ; ಇದು ಹೇಗಾಯಿತೆಂದರೆ, ಆತನ ಸುಕೃತಕ್ಕೆ ಪ್ರತಿಯಾಗಿ ನೀನು ಉಪಕರಿಸಿದೆ, ಇದು ಕೃತ ಪ್ರತಿಕೃತವಾಯಿತು. ಇದನ್ನು ಲೋಕದಲ್ಲಿ ಎಲ್ಲರೂ ಮಾಡುತ್ತಾರೆ. ನಿನ್ನಲ್ಲಿ ಮಾಹಾತ್ಮ್ಯೆಯು ಏನಾಯಿತು ? ಮಾಹಾತ್ಮ್ಯೆಯು ಯಾವಾಗ ಎಂದರೆ, ಯಾವಾಗಲೂ ಅಪರಾಧಗಳನ್ನೇ ಮಾಡು ತ್ತಿರುವ ನನ್ನನ್ನು ಕೃಪಯಾ ನೋಡಿ ಅಪರಾಧಗಳನ್ನೆಲ್ಲಾ ಮನ್ನಿಸಿ ರಕ್ಷಿಸಿದುದಾದರೆ ಆಗೀಗ ನಿನ್ನ ಕ್ಷಮಾಗುಣವು, ನಿರುಪಾಧಿಕವಾದುದು, ನಿರತಿಶಯವಾದುದು ಎಂದು ಹೇಳಿಸಿಕೊಂಡು, ಆ ಕ್ಷಮಾಗುಣಕ್ಕೆ ಯೋಗ್ಯವಾದ ಲಕ್ಷ್ಯವು ದೊರೆಯುವದು, ಆದುದರಿಂದ ಓ ರಂಗನಾಥನೇ ಕ್ಷಮಿಸು " ಎಂದು ದೈನ್ಯದಿಂದ ಬೇಡುತ್ತಾರೆ. ಶ್ರೀ ಯತಿವರ್ಯರು ಉತ್ತರಾರ್ಧದಲ್ಲಿ ಎರಡೇ ದೃಷ್ಟಾಂತವನ್ನು ಭಾವಿಸಿರುತ್ತಾರೆ, ಎರಡೇ ಸಲ ಇವ ಎಂದಿರುವದರಿಂದ, **ತ್ವಂ ಪ್ರಿಯಃ ಪ್ರಿಯಾಯ ಮೇ** ಎಂದು ಸಾಮಂಜಸ್ಯ ಉಂಟಾಗುವಹಾಗೆ ವ್ಯಾಖ್ಯಾನಮಾಡಿರುತ್ತಾರೆ. ಇದ ರಿಂದ ಸರ್ವೇಶ್ವರನ ಪರಮ ಕಾರುಣ್ಯವು ಉಪಪಾದಿಸಲ್ಪಟ್ಟಿದುದರಿಂದ **ಪರಮಕಾರುಣಿಕಃ ತ್ವಂ** ಎಂದು ವ್ಯಾಖ್ಯಾನವು.

**ಮೂಲಕ್ಕೆ ಅರ್ಥವು :**—ಈ ಎಂದಿಗೂ ನೋಡದೇ ಇರುವ ಈ ಅತ್ಯದ್ಭುತವಾದ ವಿಶ್ವ ರೂಪವನ್ನು ನೋಡಿ ತುಂಬಾಹರ್ಷಗೊಂಡೆನು, ಆದರೂ ಆ ರೂಪದಿಂದ ಭಯವಿಹ್ವಲನಾಗಿ ರುವದರಿಂದ ಆರೂಪವನ್ನು ಕೃಪಯಾ ಮರೆಸಿ, ಇನ್ನೊಂದು ಸೌಮ್ಯರೂಪವಾಗಿ ನಿತ್ಯಮುಕ್ತ ರುಗಳಿಗೆ ಯಾವಾಗಲೂ ಸೇವೆಯನ್ನೀಯುವ, **ತದೇವ**-ಆ ಪ್ರಸಿದ್ಧವಾದ ಪರವಾಸುದೇವ ರೂಪವನ್ನು ನೋಡಬೇಕೆಂಬ ಕುತೂಹಲವುಳ್ಳವನಾಗಿರುತ್ತೇನೆ, ದಯವಿಟ್ಟು ತೋರಿಸು ಎಂದು ಹೇಳಿ, ಮುಂದಿನ ಶ್ಲೋಕದಲ್ಲಿ ಆ **ತದೇವರೂಪ** ವೆಂತಾದ್ದೆಂಬುದನ್ನು ಉಪಪಾದಿಸಿ ಹೇಳುತ್ತಾನೆ.—**ಅದೃಷ್ಟಪೂರ್ವಂ**-ಹಿಂದೆ ಇದಕ್ಕೆ ಮೊದಲು ಎಂದಿಗೂ ನೋಡದೇ ಇರುವ ಪರಮಾದ್ಭುತ ವಿಶ್ವರೂಪವನ್ನು, **ದೃಷ್ಟ್ವಾ**-ಕಂಡು **ಹೃಷಿತೋಽಸ್ಮಿ**-ಸಂತುಷ್ಟನಾಗಿದ್ದೇನೆ, ಮತ್ತು **ಮೇ ಮನಃ**-ನನ್ನ ಮನಸ್ಸು, **ಭಯೇನ**-ಆ ಹರ್ಷದೊಂದಿಗೆ ಭಯದಿಂದಲೂ ಕೂಡ, **ಪ್ರವ್ಯಥಿತಶ್ಚ**-ವಿಶೇಷವಾಗಿ ಕ್ಲೇಶವನ್ನು ಹೊಂದಿದೆ. ಸರ್ವ ವಿಶ್ವವೂ ನಿನ್ನ ಬಾಯಿಯ ಏಕ ದೇಶದಲ್ಲೂ, ಮತ್ತು ಶತ್ರು ಪಕ್ಷದವರೆಲ್ಲಾ ನಿನ್ನ ಬಾಯಿಯನ್ನು ಪ್ರವೇಶಿಸಿ ಹತರಾಗಿರು ವದನ್ನು ಇನ್ನೊಂದು ಕಡೆಯಲ್ಲೂ ಕಂಡು, ಹೀಗೆ ನಿನ್ನ ರೂಪವು ಉಗ್ರವಾಗಿರುವದನ್ನು

**ಭಾ. ಅದೃಷ್ಟ ಪೂರ್ವ ಮತ್ಯದ್ಭುತ ಮತ್ಯುಗ್ರಂ ಚ ತವ ರೂಪಂ ದೃಷ್ಟ್ವಾ ಹೃಷಿತೋಸ್ಮಿ-ಪ್ರೀತೋಸ್ಮಿ; ಭಯೇನ ಪ್ರವ್ಯಥಿತಂ ಚ ಮೇಮನಃ; ಅತಸ್ತದೇವತವ ಸುಪ್ರಸನ್ನಂ ರೂಪಂ ಮೇ ದರ್ಶಯ ; ಪ್ರಸೀದ ದೇವೇಶ ಜಗನ್ನಿವಾಸ ಮಯಿ ಪ್ರಸಾದಂ ಕುರು, ದೇವಾನಾಂ ಬ್ರಹ್ಮಾದೀನಾಮುಪೀಶ, ನಿಖಿಲ ಜಗದಾ ಶ್ರಯ ಭೂತ ॥೪೫॥**

---

ಕಂಡು ಭಯವನ್ನು ಹೊಂದಿರುವೆನು. ಇನ್ನೂ ಹೆಚ್ಚು ಭಯಂಕರವಾದ ಸಂದರ್ಭಗಳು ಇನ್ನು ಏನೇನುಂಟೋ? ಆಕಾರಣದಿಂದ ಇದು ಸಾಕು ಎಂಬ ಭಾವದಿಂದ, **ಹೇ ದೇವ-**ಲೀಲಾ ವಿಭೂತಿಯಲ್ಲಿ ಕ್ರೀಡಿಸುವವನೇ **ತದೇವರೂಪಂ**-ಗೀತಾರ್ಥವನ್ನೆಲ್ಲಾ ಗರ್ಭೀಕರಿಸಿ ಹೇಳಿದ ಅಮೋಘೋಪದೇಶವಾದ **ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು । ಮಾಮೇ ವೈಷ್ಯಸಿ** ಎಂದು ನನ್ನನ್ನೇ ಹೊಂದುವೆ ಎಂದು ಪರಮ ಹಿತೋಪದೇಶ ಮಾಡಿದೆಯಲ್ಲಾ, ಆ ಪ್ರಾಪ್ಯರೂಪವಾಗಿ ಮಹಾ ಪ್ರಸಿದ್ಧವಾಗಿ **ಕೌಷೀತಕೀ** ಮೊದಲಾದ ಉಪನಿಷತ್ತುಗಳಲ್ಲೂ, ಹಾಗೆಯೇ ಪುರಾಣೇತಿಹಾಸಗಳಲ್ಲೂ, ಪ್ರಸಿದ್ಧವಾಗಿ ವರ್ಣಿಸಿರುವ ಪ್ರಾಪ್ಯರೂಪವನ್ನೂ ದಯವಿಟ್ಟು ತೋರಿಸು ಎನ್ನುತ್ತಾನೆ. ಹೀಗೆ **ತದೇವ** ಎಂಬುದಕ್ಕೆ ಪ್ರಸಿದ್ಧ ಪ್ರಾಪ್ಯರೂಪವೆಂದು ಅರ್ಥಹೇಳದೆ, ಇತರರು ಮಾಡಿರುವಹಾಗೆ ಪೂರ್ವ ಪರಾಮರ್ಶಿತ್ವವೆಂಬರ್ಥವನ್ನು **ತತ್** ಎಂಬ ಶಬ್ದಕ್ಕೆ ಹೇಳಿದರೆ, ಮುಂದೆ ಇರುವ ಶ್ಲೋಕಗಳಲ್ಲಿರುವ ಅನೇಕ ಪದಗಳಿಗೆ ಅರ್ಥವು ಕೂಡುವದಿಲ್ಲವು ಅವುಗಳನ್ನು ಪ್ರಾಪ್ಯಸ್ಥಳಗಳಲ್ಲಿ ಉಪಪಾದಿಸುವೆವು; ಸಾವಧಾನದಿಂದ ಗಮನಿಸಬೇಕೆಂಬ ಪ್ರಾರ್ಥನೆಯು ಇಲ್ಲಿಯೇ **ಪ್ರಸೀದ** ಎಂಬ ಶಬ್ದದಲ್ಲಿ ತೋರುವ ಅನುಗ್ರಹವು ಪೂರ್ಣವಾಗುವದಿಲ್ಲವು **ಭಯನಿವೃತ್ತಿ** ಮಾತ್ರವೇ ಅನುಗ್ರಹವೆಂದು ಭಾವಿಸಬೇಕಾಗುತ್ತದೆ. ಆ ಶಾಂತರೂಪವನ್ನೇ, **ಮೇ-**ನನಗೆ **ದರ್ಶಯ**-ಕೃಪಯಾ ತೋರಿಸು, **ಹೇ ದೇವೇಶ**-ಓ ದೇವತೆಗಳಿಗೆಲ್ಲಾ ಸ್ವಾಮಿಯಾದವನೇ! ಹಾಗೆಯೇ **ಜಗನ್ನಿವಾಸ!**-ಈ ಜಗತ್ತಿಗೆಲ್ಲಾ ಆಶ್ರಯಭೂತನಾದವನೇ! **ಪ್ರಸೀದ**-ಪ್ರಸನ್ನನಾಗಿ ಅನುಗ್ರಹಿಸು ಎಂದು ಅರ್ಜುನನು ಪ್ರಾರ್ಥಿಸುತ್ತಾನೆ. ಹೀಗೆ ಈ ಶರಣಾಗತಿಯಿಂದ ಅಪರಾಧರೂಪಾನಿಷ್ಟನಿವೃತ್ತಿಯನ್ನೂ ಇಷ್ಟಪ್ರಾಪ್ತಿರೂಪ ಪ್ರಾಪ್ಯದರ್ಶನವನ್ನೂ ಪ್ರಾರ್ಥಿಸಿರುತ್ತಾನೆ. ಭಕ್ತಿಯೋಗಕ್ಕೆ ಧ್ಯೇಯರೂಪವಾಗಿ ಸುಪ್ರಸನ್ನರೂಪವಾಗಿ ಪ್ರಾಪ್ಯರೂಪವಾಗಿ ಅನಾದಿಯಾಗಿ ಯಾವಾಗಲೂ ಒಂದೇ ರೂಪವಾಗಿದ್ದುಕೊಂಡು ಶಾಶ್ವತವಾಗಿ, ಹೀಗೆ ಪ್ರಸಿದ್ಧವಾಗಿರುವ ರೂಪವನ್ನು ತೋರಿಸು ಎಂದು ಪ್ರಾರ್ಥಿಸುತ್ತಾನೆ.

**ಭಾಷ್ಯಾರ್ಥವು : — ಅದೃಷ್ಟಪೂರ್ವಂ**-ಹಿಂದೆ ಯಾವಾಗಲೂ ನೋಡದೇ ಇರುವ, **ಅತ್ಯದ್ಭುತವಾದ** ಮತ್ತು **ಅತ್ಯುಗ್ರಂಚ**-ತುಂಬಾ ಕ್ರೂರವಾದ, **ತವರೂಪಂ ದೃಷ್ಟ್ವಾ**-ನಿನ್ನ ವಿಶ್ವರೂಪವನ್ನು ನೋಡಿ, **ಹೃಷಿತೋಸ್ಮಿ**-ಎಂದರೆ **ಪ್ರೀತೋಸ್ಮಿ**-ಸಂತುಷ್ಟನಾದೆನು, **ಭಯೇನ**-ಭಯದಿಂದ, **ಮೇಮನಃ**-ನನ್ನಮನಸ್ಸು, **ಪ್ರವ್ಯಥಿತಂಚ**-ಕ್ಲೇಶವನ್ನು ಹೊಂದಿದುದೂ ಆಯಿತು, ಇಲ್ಲಿ ಅರ್ಜುನನ ಮನಸ್ಸು ಪ್ರೀತವಾದುದು ಮತ್ತು ಪ್ರವ್ಯಥಿತವಾದುದೂ ಸಹ ಆಯಿತೆಂದು ಹೇಳಿಕೊಂಡನಲ್ಲಾ ಅದಕ್ಕೆ ಕಾರಣವನ್ನು ತಿಳಿಸುವದಕ್ಕಾಗಿ ಭಗವಂತನ ರೂಪಕ್ಕೆ **ಅತ್ಯದ್ಭುತಂ, ಅತ್ಯುಗ್ರಂ** ಎಂಬ ಎರಡು ವಿಶೇಷಣಗಳನ್ನು ಕೊಟ್ಟಿರುತ್ತಾರೆ. ಅತ್ಯದ್ಭುತವಾದುದರಿಂದ **ಹೃಷೀತನೂ,** ಅತ್ಯುಗ್ರವಾದುದರಿಂದ **ಪ್ರವ್ಯಥಿತನೂ** ಆದೆನು ಎಂಬ ಭಾವವು. ಹೀಗೆ ಅರ್ಜುನನಿಗೆ ಭಯೋತ್ಪಾದನವಾದುದರಿಂದಲೇ ಈ ಉಗ್ರರೂಪವನ್ನು ಉಪಸಂಹರಿಸಿ ಸೌಮ್ಯ

**ಮೂ. ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ ॥೪೬॥**

ರೂಪವನ್ನವಲಂಬಿಸು ಎಂದು ಉತ್ತರಾರ್ಧದ ಪ್ರಾರ್ಥನೆಗೆ ಪೂರ್ವಾರ್ಧವು ಕಾರಣವೆಂದು ತಿಳಿಸುವದಕ್ಕಾಗಿ **ಅತಃ** ಎಂದಾರಂಭಿಸಿ ವ್ಯಾಖ್ಯಾನಮಾಡುತ್ತಾರೆ. **ಅತಃ**-ಆ ಕಾರಣದಿಂದ, **ತದೇವ**-ಎಂದರೆ **ತವ ಸುಪ್ರಸನ್ನಂ ರೂಪಂ**-ಅನುಗ್ರಹ ಸೂಚಕವಾಗಿ ಸೌಮ್ಯವಾಗಿರುವ ನಿನ್ನ ರೂಪವನ್ನು ಎಂದರೆ ನಿತ್ಯವಿಭೂತಿಯು ಪರರೂಪವನ್ನು, **ಮೇದರ್ಶಯ**-ನನಗೆ ದಯಮಾಡಿ ತೋರಿಸು ; **ಹೇ ದೇವೇಶ ! "ತಂ ದೇವತಾನಾಂ ಪರಮಂಚ ದೈವತಂ"** (ಶ್ವೇತ ೬ ೭) ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಸರ್ವದೇವತೆಗಳಿಗಿಂತಲೂ ಸರ್ವೋತ್ಕೃಷ್ಟ ದೈವತವೆಂದರೆ ಪರತತ್ವವಾದವನೇ, ಇಲ್ಲಿಯೂ **ತಂ** ಎಂಬುದು ಪ್ರಸಿದ್ಧಾರ್ಥವನ್ನು ಬೋಧಿಸುತ್ತದೆ. ಅದನ್ನೇ ಉಪಪಾದಿಸುತ್ತಾರೆ—**ದೇವಾನಾಂ - ಬ್ರಹ್ಮಾದೀನಾಮಪಿ ಈಶ** - ಸರ್ವನಿಯಾಮಕನಾದ ಪರಬ್ರಹ್ಮನೇ ಮೊದಲಾದ ಸರ್ವದೇವತೆಗಳಿಗೂ ನಿಯಾಮಕನಾದವನೇ, ಸ್ವಾಮಿಯಾದವನೇ, **ಜಗನ್ನಿವಾಸ** ಎಂದರೆ **ನಿಖಿಲಜಗದಾಶ್ರಯಭೂತ**-ಸಮಸ್ತ ಜಗತ್ತಿಗೂ ಆಶ್ರಯಭೂತನಾದವನೇ, **ಪ್ರಸೀದ** ಎಂದರೆ **ಮಯಿಪ್ರಸಾದಂ ಕುರು** ನನ್ನಲ್ಲಿ ಅನುಗ್ರಹವನ್ನು ಮಾಡು. **ಜಗನ್ನಿವಾಸ** ಎಂಬುದಕ್ಕೆ ಸರ್ವಜಗತ್ತನ್ನೂ ಆಶ್ರಯವಾಗಿ ಉಳ್ಳವನೆಂದು ಬಹುವ್ರೀಹಿ ಅರ್ಥವನ್ನೂ ಹೇಳಬಹುದು ; ಇದರಿಂದ ಸಮಸ್ತ ಜಗತ್ತನ್ನೂ ವ್ಯಾಪಿಸಿ ಅದಕ್ಕೆ ಆತ್ಮಾವಾಗಿರುವವನು ಎಂಬರ್ಥವಾಗುತ್ತದೆ. ಆದರೆ ಹಿಂದೆ ೧೩ ನೆಯ ಶ್ಲೋಕವಾದ **"ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ"** ಎಂಬುದನ್ನು ಮನಸ್ಸಿನಲ್ಲಿಟ್ಟು ತತ್ಪುರುಷಾರ್ಥವನ್ನು ಬೋಧಿಸುತ್ತಾರೆಂದು ತಿಳಿಯತಕ್ಕದ್ದು. ಈ ಶ್ಲೋಕದಲ್ಲಿ **ಹೃಷಿತಂ ಪ್ರವ್ಯಥಿತಂ** ಎಂದು ಹರ್ಷಶೋಕಗಳುಳ್ಳದ್ದಾಯಿತು. ತನ್ನ ಮನಸ್ಸು ಎಂದು ಪರಸ್ಪರ ವಿರುದ್ಧಭಾವವು ಮನಸ್ಸಿಗೆ ಹೇಗೆ ಎಂದಾಕ್ಷೇಪಿಸಬಹುದು. ಅರ್ಜುನಜ್ಞಾನದ ಅವಸ್ಥೆಯು ನಿತ್ಯವಲ್ಲವು ; ಅದು ಅತ್ಯುಗ್ರವೇ ಎಂದು ತೋರಿದಾಗ ಕ್ಲೇಶವೂ ಅತ್ಯಾಶ್ಚರ್ಯವಾದುದೇ ಎಂದು ತೋರಿದಾಗ ಹರ್ಷವೂ ಉಂಟಾಗುವದರಲ್ಲಿ ಏನೊಂದು ವಿರುದ್ಧವಾದುದು ಇಲ್ಲವು. ಆದರೆ ಮುಕ್ತನಿತ್ಯರುಗಳ ಮತ್ತು ಈಶ್ವರಜ್ಞಾನವಾದರೋ ನಿತ್ಯವಾದವು. ಇಲ್ಲಿ ಶ್ರೀ ಯತಿವರ್ಯರು **ತದೇವ**-ಎಂಬುದಕ್ಕೆ **ತವ ಸುಪ್ರಸನ್ನಂರೂಪಂ** ಎಂದು ಹೇಳಿರುವದರಿಂದ ಹಿಂದಿನ ಮಾನುಷ ರೂಪವೆಂದೇ ಹೇಳಿದರೆಂದು ಸಾಧಿಸುವದು ಸಾಧ್ಯವಿಲ್ಲವು. ಶ್ರೀ ನಿಗಮಾನ್ತದೇಶಿಕರವರು, **ಪೂರ್ವಪ್ರಸಿದ್ಧಾಕಾರ ಪರಾಮರ್ಶಿತ್ವವು** ತಚ್ಛಬ್ದಾರ್ಥವೆಂದು ತಿಳಿಸುತ್ತಾರೆ, ಆದುದರಿಂದ ಪರರೂಪವು. **ತದೇವ** ಎಂಬುದಕ್ಕೆ ಪೂರ್ವಪ್ರಸಿದ್ಧವಾದ ಆಕಾರವನ್ನು ಸೂಚಿಸುತ್ತದೆಂದು ಹೇಳಿರುತ್ತಾರೆ.

**ಮೂಲಕ್ಕೆ ಅರ್ಥವು ;**—ಈ ಉಗ್ರರೂಪವನ್ನು ಉಪಸಂಹಾರಮಾಡಿ ಪ್ರಪನ್ನರು ಮುಖ್ಯವಾಗಿ ಹೊಂದುವ ಸುಪ್ರಸನ್ನರೂಪವನ್ನು ಅನುಗ್ರಹಿಸು ಎಂದು ಹಿಂದಿನ ಶ್ಲೋಕದಲ್ಲಿ ಪ್ರಾರ್ಥಿಸಿದನು ; ತಾನು ಬೇಡಿದ ರೂಪವು ಎಂತಾದ್ದೆಂದು ಅರಿಕೆ ಮಾಡಿಕೊಳ್ಳುತ್ತಾನೆ—ಶ್ರೀ ಕೃಷ್ಣಭಗವಾನರವರು ೭ನೆಯ ಅಧ್ಯಾಯದಲ್ಲಿ ತಮ್ಮ ಸ್ವರೂಪದ ಮಾಹಾತ್ಮ್ಯೆಯನ್ನೂ ೮ ನೆಯ ಅಧ್ಯಾಯದಲ್ಲಿ ತನ್ನ ಉಪಾಸನದ ಮಾಹಾತ್ಮ್ಯೆಯನ್ನೂ, ಪ್ರಕಟಿಸಿದರು. ಶಾಸ್ತ್ರಜ್ಞಾನವುಳ್ಳ ಪ್ರಾಜ್ಞನಾದ ಅರ್ಜುನನು ಶಾಸ್ತ್ರಗಳಲ್ಲಿ ಪ್ರಾಪ್ಯರೂಪವು ಉಪಪಾದಿತವಾದುದನ್ನು ತಿಳಿದವನಾದುದರಿಂದ, ಈ ಸುಸಮಯದಲ್ಲೇ, ಅಂತಹ ಅದ್ಭುತವಾದ, ಮತ್ತು ಎಂದೂ ಯಾರೂ ಈ

ಲೋಕದಲ್ಲೇ ನೋಡದಿರುವ ಪ್ರಾಪ್ಯರೂಪವಾದ ಪರರೂಪವನ್ನು ನೋಡಬೇಕೆಂಬ ಕುತೂಹಲ ಯುಕ್ತನಾಗಿ ಪ್ರಾರ್ಥಿಸುತ್ತಾನೆ.—**ಹೇ ಸಹಸ್ರಬಾಹೋ**-ಓ ಸಹಸ್ರ ಬಾಹುಗಳನ್ನುಳ್ಳ, **ವಿಶ್ವ ಮೂರ್ತೇ**-ವಿಶ್ವಶರೀರಕನಾಗಿ ವಿಶ್ವರೂಪವನ್ನು ಧರಿಸಿರುವ ಶ್ರೀ ಕೃಷ್ಣನೇ, **ಅಹಂ**-ಭೀತ ನಾದ ನಾನು, **ತ್ವಾಂ**-ಭಕ್ತಾನುಗ್ರಹಮಾಡುವ ಸಙ್ಕಲ್ಪವುಳ್ಳ ನಿನ್ನನ್ನು, **ಕಿರೀಟಿನಂ**-ಶಿರಸ್ಸಿನಲ್ಲಿ ಕಿರೀಟವನ್ನುಳ್ಳವನನ್ನಾಗಿಯೂ, **ಗದಿನಂ**-ಎಡಗಡೆಯ ಕೈಯಲ್ಲಿ **ಕೌಮೋದಕೀ ಎಂಬ** ಗಧಾಯುಧವನ್ನುಳ್ಳವನನ್ನಾಗಿಯೂ, **ಚಕ್ರಹಸ್ತಂ** ಸುದರ್ಶನವೆಂಬ ಚಕ್ರಾಯುಧದಿಂದ ಕೂಡಿದ ಬಲಗೈಯನ್ನುಳ್ಳವನನ್ನಾಗಿಯೂ ಇದರಿಂದ ಇನ್ನೊಂದು ಎಡಗೈಯಿಂದ ಪಾಂಚಜನ್ಯ ವೆಂಬ ಶಂಖವನ್ನುಳ್ಳವನನ್ನಾಗಿಯೂ, ಇನ್ನೊಂದು ಬಲಗೈಯಿಂದ ಪದ್ಮವನ್ನುಳ್ಳವನನ್ನಾ ಗಿಯೂ ಎಂದು ಹೇಳಿದಂತಾಯಿತು ಹೀಗೆ ಇರುವು **ತ್ವಾಂ**-ನಿನ್ನನ್ನು, **ತಥೈವ**-ಮೇಲಿನ ಶ್ಲೋಕದಲ್ಲಿ ಹೇಳಿದ ಸುಪ್ರಸನ್ನರೂಪದಿಂದ **ದ್ರಷ್ಟುಮಿಚ್ಛಾಮಿ** - ನೋಡಲಪೇಕ್ಷಿಸುತ್ತೇನೆ ಹೀಗೆ ಪಂಚಾಯುಧಗಳಿಂದ ಕೂಡಿದ ನಿನ್ನ ಸೌಮ್ಯರೂಪವನ್ನು ನೋಡಬೇಕಾದರೆ ಆ ಆಯು ಧಗಳನ್ನು ಧರಿಸುವದಕ್ಕಾಗಿ ಚತುರ್ಭುಜಗಳಿಲ್ಲದೆ ಆಗುವದಿಲ್ಲವಾದುದರಿಂದ ಚತುರ್ಭುಜಗ ಳುಳ್ಳ ನಿನ್ನ ದಿವ್ಯರೂಪವನ್ನು ದಯಮಾಡಿ ತೋರಿಸೆಂದು ಬೇಡುತ್ತಾನೆ. ಹೀಗೆ **ಚತುರ್ಭು ಜೇನ**-ನಾಲ್ಕು ಭುಜಗಳನ್ನುಳ್ಳ, **ತೇನೈವ ರೂಪೇಣ**-ಮೋಕ್ಷದಶೆಯಲ್ಲಿ ಸೇವೆಯನ್ನೀಯುವ ಅಂತಹ ಪ್ರಸಿದ್ಧವಾದ ದಿವ್ಯಮಙ್ಗಳ ವಿಗ್ರಹದೊಂದಿಗೆ, ಇದು ಹಿಂದಿನ **ತತ್** ಎಂಬ ಶಬ್ದದ ತೃತೀಯೆಯು, **ಭವ**-ಆಗು ಎಂದು ಪ್ರಾರ್ಥಿಸುತ್ತಾನೆ. ಅಥವಾ, **ತಥೈವ**-ಎಂದರೆ ವಿಶ್ವರೂಪ ದರ್ಶನವನ್ನು ಹೇಗೆ ಅನುಗ್ರಹಿಸಿದೆಯೋ ಅದರ ಹಾಗೆಯೇ ಮುಂದೆ ಈಗ ನಾನು ಪ್ರಾರ್ಥಿಸುವ ರೂಪವನ್ನು ಅನುಗ್ರಹಿಸು ಎಂಬ ಭಾವವು. ಹಿಂದೆ ೧೭ ನೆಯ ಶ್ಲೋಕದಲ್ಲೂ "**ಕಿರೀಟಿನಂ ಗದಿನಂ ಚಕ್ರಿಣಂಚ**" ಎಂಬಲ್ಲಿ ಕಿರೀಟ ಗದಾ ಚಕ್ರಾದಿ ಆಯುಧಗಳಿಂದ ಕೂಡಿದ ರೂಪ ವನ್ನು ತೋರಿಸಿದೆ. ಈಗ ನನ್ನ ಪ್ರಾರ್ಥನೆ ಏನಂದರೆ ಪ್ರಾಪ್ಯರೂಪವು "**ಸಹಸ್ರಬಾಹೂದರ ರೂಪವುಳ್ಳದ್ದಲ್ಲವು.**" ಚತುರ್ಭುಜಗಳನ್ನುಳ್ಳದ್ದೆಂದು ಶಾಸ್ತ್ರವಿಹಿತವಾದುದು. ಅಂತಹ ದಿವ್ಯವೈಕುಂಠದ ಶಾಶ್ವತರೂಪವನ್ನು ತೋರಿಸು ಎಂದು ಕೇಳುತ್ತಾನೆ. **ದ್ರಷ್ಟುಮಿಚ್ಛಾಮಿ** ಎಂಬ ಪ್ರಯೋಗವು, ಆಶ್ರಿತನು ಯಾವುದನ್ನಪೇಕ್ಷಿಸಿದರೆ ಸಾಕು, ಅದನ್ನು ನಡೆಸಿಕೊಡದೇ ಇರುವದಿಲ್ಲವು ಎಂಬ ಭಾವವನ್ನು ಉಪಪಾದಿಸುತ್ತದೆ. ಹೀಗೆ ಚತುರ್ಭುಜವನ್ನುಳ್ಳೋಣವು ಸರ್ವೇಶ್ವರನಾದ ಪರಮ ಪುರುಷನಿಗೆ ಅಸಾಧಾರಣರೂಪವೆಂಬುದನ್ನು ತಿಳಿಸುತ್ತದೆ. ಉಪಾ ಸ್ಯವು ಎಂತಾದ್ದೆಂಬ ಪ್ರಸಂಗದಲ್ಲಿ "**ಕವಿಂಪುರಾಣಮನುಶಾಸಿತಾರಂ**" ಎಂಬುದು ಐಶ್ವರ್ಯಾ ರ್ಥಿಯ ಧ್ಯಾನ್ಯವಿಷಯವಾದುದೆಂದು ಹಿಂದೆ ೮ ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿತು ಮುಮುಕ್ಷುವಾದ ಜ್ಞಾನಿಯ ಉಪಾಸ್ಯವು, ಹೇಗಿರಬೇಕೆಂಬುದು "**ಕಿರೀಟಿನಂ ಗದಿನಂ ಚಕ್ರ ಹಸ್ತಂ**" ಎಂಬದಾಗಿ ಇಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂದ ಈ ಸುಸಮಯದಲ್ಲೇ ಸ್ವಾಮಿ ಕೃಷ್ಣನು ತುಂಬಾ ಅನುಗ್ರಹವನ್ನು ವರ್ಷಿಸುತ್ತಿರುವ ಸಮಯದಲ್ಲೇ ಆ ಪ್ರಾಪ್ಯರೂಪವು ಯಾವುದು ಎಂದು ತಿಳಿದರೆ ತುಂಬಾ ಅನುಕೂಲವೆಂದು ಭಾವಿಸಿ, "**ಇಚ್ಛಾಮಿತ್ವಾಂ ದ್ರಷ್ಟು ಮಹಂತಥೈವ**" ಎಂದು ಹೇಳಿ **ಚತುರ್ಭುಜೇನ ಭವ** ಎಂದು ಪ್ರಾರ್ಥಿಸಿದರೆ, **ಮಾನುಷ** ರೂಪವನ್ನು ನೋಡಲಪೇಕ್ಷಿಸಿದನೆಂದು ಅರ್ಥಮಾಡುವದು ಕಷ್ಟವು. ಇಚ್ಛೆಯು ಅಪ್ರಾಪ್ತ ವಾದುದು ಪ್ರಾಪ್ತಿಯಲ್ಲೇ. ಹಾಗಿಲ್ಲದಿದ್ದರೆ **ಉಪಸಂಹರ** ವೆಂದು ಇಷ್ಟುಮಾತ್ರ ಹೇಳಿದ್ದರೆ ಸಾಕಾಗಿತ್ತು. ಅಥವಾ **ಪೂರ್ವರೂಪಂ ದರ್ಶಯ** ಎಂದು ಇಷ್ಟುಮಾತ್ರ ಹೇಳಿದ್ದರೂ **ಸಾಕಾಗಿತ್ತು. ಇಚ್ಛಾಮಿತ್ವಾಂ ದ್ರಷ್ಟುಂ** ಎಂದೂ ಹೇಳಿ, ಅನಂತರ ಅತಿಮಾನುಷ ರೂಪ

ವಾಗಿರುವ **ಚತುರ್ಭುಜೇನ ಭವ** ಎಂದೂ ಹೇಳಿರುವದರಿಂದಲೂ ಮತ್ತು ಆರೂಪವು ಎಂತಾದ್ದೆಂಬ ಆಶಯದಲ್ಲಿ **" ಕಿರೀಟಿನಂ ಗದಿನಂ "** ಎಂದು ಹೀಗೆಲ್ಲಾ ವಿಸ್ತರಿಸಿ ಹೇಳಿರುವದರಿಂದ ಧ್ಯೇಯರೂಪವಾದ ಪರವಾಸುದೇವರೂಪವನ್ನು ನೋಡಲು ಇಚ್ಛೈಸಿ ಪ್ರಾರ್ಥಿಸಿರುತ್ತಾನೆಂದು ಭಾವಿಸತಕ್ಕದ್ದಾಗಿರುತ್ತದೆ. ಆದರೆ ಪೂರ್ವಪರಾಮರ್ಶಿತ್ವವು ಅರ್ಥವಾದರೆ **ತೇನೈವ ರೂಪೇಣ ಚತುರ್ಭುಜೇನ** ಎಂದು ಮೂಲದಲ್ಲಿರುವದರಿಂದ, ಚತುರ್ಭುಜವುಳ್ಳ ಆಕೃತಿಯನ್ನು ಹಿಂದೆ ಅರ್ಜುನನು ನೋಡಿರಬೇಕೆಂದು ಅರ್ಥವಾಗುವದಿಲ್ಲವೇ ? ಇದರಿಂದ ಚತುರ್ಭುಜತ್ವವೇ ಶ್ರೀ ಕೃಷ್ಣನಿಗೆ ಸಾಧಾರಣರೂಪವೆಂದು ಏರ್ಪಡುವದಿಲ್ಲವೋ ಎಂದರೆ ಚತುರ್ಭುಜವುಳ್ಳ ಮಾನುಷ್ಯವು ಅಲೌಕಿಕವು. ಶ್ರೀ ಕೃಷ್ಣಾವತಾರದ ವೈಲಕ್ಷಣ್ಯವೇನೆಂದರೆ—ತನ್ನ ಅಂಗಸಂಗಾದಿಗಳನ್ನೂ, ಸರಸಸಲ್ಲಾಪಾದಿಗಳನ್ನೂ ಪ್ರಾರ್ಥಿಸಿದ ಮಹರ್ಷಿಗಳಿಗೂ, ಪ್ರಪನ್ನರಿಗೂ ಮಾತ್ರ ಚತುರ್ಭುಜತ್ವೇನ ಆವಿಷ್ಕಾರವು. ಆದರೂ ಇದು ಪರವಾಸುದೇವರೂಪವೆಂದು ಹೇಳಲು ಆಗುವದಿಲ್ಲವು. ಪರತ್ವಸೂಚಕವೆಂದು ಭಾವಿಸಬಹುದು. ಪೂರ್ವಾರ್ಧದಲ್ಲಿ **ಕಿರೀಟಿನಂ ಗದಿನಂ ಚಕ್ರಹಸ್ತಂ** ಎಂದು ಹೀಗೆಲ್ಲಾ ಹೇಳಿ, **ತೇನೈವ ರೂಪೇಣ** - ಅಂತಹ ರೂಪದಿಂದ ಎಂದು ಹೇಳಿದರೆ ಪೂರ್ವಾರ್ಧದಲ್ಲಿ ವಿಸ್ತರಿಸಿ ಹೇಳಲ್ಪಟ್ಟ ರೂಪದಿಂದಲೇ ಎಂದು ಅರ್ಥ ಮಾಡಲು ಸಾಧ್ಯವಾಗುತ್ತದೆ ; ಮತ್ತು ಸಾಮಂಜಸ್ಯವು ಪ್ರಾಪ್ತವಾಗುವದರಿಂದ ಹಾಗೆ ಅರ್ಥವನ್ನು ಮಾಡಬಹುದು. ಅಥವಾ **ತೇನ ರೂಪೇಣೈವ** ಎಂಬುದರಿಂದ **ತತ್** ಎಂಬ ಶಬ್ದದ ತೃತೀಯೆಯಾಗಿ ಪ್ರಸಿದ್ಧಿಯಿಂದ ಪರಮಾತ್ಮನ ಪರರೂಪವು ಬೋಧಿತವಾಗಿ ದಿವ್ಯವೈಕುಂಠದಲ್ಲಿ ಮುಕ್ತರಿಗೆ ತೋರಿಸುವ ಸ್ವಕೀಯ ರೂಪದಿಂದ ಎಂಬರ್ಥವು. ಹಿಂದಿನ ಶ್ಲೋಕದಲ್ಲೂ, **ತದೇವಮೇ ರೂಪಂ** ಎಂಬಲ್ಲೂ ಪ್ರಸಿದ್ಧಿಯಿಂದ ಹೇಳಲ್ಪಟ್ಟದುದೇ ಇಲ್ಲಿ ವಿಸ್ತರಿಸಿ **"ಕಿರೀಟಿನಂ ಗದಿನಂ"** ಹೇಳಲ್ಪಟ್ಟಿತೆಂದೂ ಭಾವಿಸಬಹುದು. ಆದರೆ **ತದೇವರೂಪವೆಂದೂ ತೇನೈವರೂಪವೆಂದೂ** ಹೇಳಿರುವದು ಪೂರ್ವಪರಾಮರ್ಶಿತ್ವವನ್ನು ಅಪೇಕ್ಷಿಸುವದಿಲ್ಲವೇ ? ಎಂದರೆ ಆಗ, **ತದೇವ ತೇನೈವ** ಎಂದು ಹೇಳುವದಕ್ಕೆ ಹಿಂದೆ ಅರ್ಜುನನಿಗೆ ಈ ರೂಪವನ್ನು ತೋರಿಸಿದ್ದರೆಂಬ ಅರ್ಥ ಉಂಟಾಗುತ್ತದೆ. ಹಾಗೆ **ಚತುರ್ಭುಜಾಕೃತಿಯನ್ನು** ಹಿಂದೆ ಅರ್ಜುನನಿಗೆ ತೋರಿಸಿದ್ದರೆಂಬ ಪ್ರಮಾಣವು ಯಾವುದೋ ತಿಳಿಯದು. ಇಲ್ಲಿ **ತೇನ** ಎಂಬುದು ಪ್ರಸಿದ್ಧಾರ್ಥವುಳ್ಳ **ತತ್** ಶಬ್ದದ ತೃತೀಯೆ ಎಂಬ ಭಾವನೆಯೇ ಸರಿಯಾದುದು.. **"ತತ್ತ್ವಮಸಿ" "ತದೈಕ್ಷತ ಬಹುಸ್ಯಾಂ"** ( ಛಾಂ ೬ ೨ ೩ ), **"ತದನ್ವೇಷ್ಟವ್ಯಂ"** ( ಛಾಂ. ೮.೧ ೧.) **"ತದಪೋಸೃಜತ"** ( ಛಾಂ. ೬. ೨ ೩.), **"ತದ್ಯ ಇತ್ಥಂ ವಿದುಃ"** ( ಛಾಂ. ೫ ೧೦. ೧.), **"ತದೇವಶುಕ್ರಂತದ್ಬ್ರಹ್ಮ"** ( ಕಠ. ೨. ೫. ೮.) ಇತ್ಯಾದ್ಯನೇಕ ಪ್ರಯೋಗಗಳಲ್ಲಿ ತಚ್ಛಬ್ದವು ಪ್ರಸಿದ್ಧಾರ್ಥದಿಂದ ಪರಮಾತ್ಮನನ್ನು ಬೋಧಿಸುವದರಿಂದ, **ತೇನೈವ ರೂಪೇಣ** ತಚ್ಛಬ್ದವಾಚ್ಯನಾದ ನಿನಗೇನೇ ಅಸಾಧಾರಣವಾದ ರೂಪದಿಂದ ಎಂಬರ್ಥವು ಇಲ್ಲಿ ತೋರಿಬರುತ್ತದೆ. ವಾಸುದೇವಮೂರ್ತಿಯಾಗಿ ದಿವ್ಯ ವೈಕುಂಠದಲ್ಲಿ ನಿತ್ಯಮುಕ್ತರುಗಳಿಗೆ ಸೇವೆಯನ್ನೀಯುವ ದಿವ್ಯಮಙ್ಗಳವಿಗ್ರಹವು ಎಂಬರ್ಥವು ಮುಂದೆ ೧೭ನೆಯ ಅಧ್ಯಾಯಾಂತ್ಯದಲ್ಲಿ **" ಓಂ ತತ್ಸತ್ "** ಎಂಬ ಮನ್ತ್ರದಲ್ಲಿ ತಚ್ಛಬ್ದವು ಪರಮಾತ್ಮನನ್ನೇ ಬೋಧಿಸುತ್ತದೆಂದು ಹೇಳಲ್ಪಡುವುದು. ತಚ್ಛಬ್ದ ಪುಲ್ಲಿಂಗವೂ ಪರಮಾತ್ಮನನ್ನೇ ಬೋಧಿಸುತ್ತದೆ. ಹಾಗೆಯೂ ಸಹಸ್ರಾರು ಪ್ರಯೋಗಗಳುಂಟು. **ತದೇವ ಮೇದರ್ಶಯ** ಎಂದು ಹಿಂದಿನ ಶ್ಲೋಕದಲ್ಲೂ, ಈ ಶ್ಲೋಕದಲ್ಲೂ **"ಇಚ್ಛಾಮಿತ್ವಾಂ ದ್ರಷ್ಟುಮಹಂ ತಥೈವ"** ಎಂದು ಯಾವಾಗ ಪ್ರಾರ್ಥನೆಯನ್ನು ಮಾಡಿದನೋ ಆಗ, ಪರಮಭಕ್ತನ ಪ್ರಾರ್ಥನೆಯನ್ನು ಸಲ್ಲಿಸುವದರಲ್ಲೇ ಬದ್ಧಾದರನಾದ

ಶ್ರೀ ಕೃಷ್ಣನು ಮುಂದಿನ ಶ್ಲೋಕದಲ್ಲಿ ಒಡನೆಯೇ **"ಪರಂರೂಪಂ ದರ್ಶಿತಮಾತ್ಮಯೋಗಾತ್"** ಪರಶಬ್ದದಿಂದ ಹೇಳಲ್ಪಟ್ಟ ಪರವಾಸುದೇವರೂಪವು ತೋರಿಸಲ್ಪಟ್ಟಿತು ಎಂಬುದು ವ್ಯಕ್ತವು. ಇದೂ ಅಲ್ಲದೆ, ಅದೇ ಶ್ಲೋಕದಲ್ಲೇ ಈಗ ತೋರಿಸಿರುವ ರೂಪವು **"ತ್ವದನ್ಯೇನ ನದೃಷ್ಟಪೂರ್ವಮ್"** ನೀನಲ್ಲದೆ ಇನ್ನು ಯಾರಿಗೂ ಈ ರೂಪವನ್ನು ಈ ಲೋಕದಲ್ಲೇ ತೋರಲಿಲ್ಲವೆಂದು ಹೇಳಿರುವದರಿಂದಲೂ ವಿಶ್ವರೂಪಕ್ಕೆ ಅನ್ವಯಿಸಲು ಸಾಧ್ಯವಿಲ್ಲವು; ಏಕೆಂದರೆ ಯುದ್ಧವನ್ನು ನೋಡಲು ಬಂದ ಸಿದ್ಧರೂ ಸಾಧ್ಯರೇ ಮೊದಲಾದವರೆಲ್ಲಾ ವಿಶ್ವರೂಪವನ್ನು ನೋಡಿದರೆಂದು ಹೇಳಲ್ಪಟ್ಟಿರುತ್ತದೆ. (ಶ್ಲೋಕ ೨೧-೨೩) ಇದು **"ತ್ವದನ್ಯೇನ ನದೃಷ್ಟಪೂರ್ವಮ್"** ಎಂಬುದರಿಂದ ಪೂರ್ವದ ಎಲ್ಲರೂ ನೋಡುತ್ತಿದ್ದ ಕೃಷ್ಣಾವತಾರಿಯ ರೂಪವೆಂದೂ ಹೇಳಲು ಸಾಧ್ಯವಿಲ್ಲವು. ಆದುದರಿಂದ ಪರರೂಪವನ್ನು ನೋಡಬೇಕೆಂದು ಪ್ರಾರ್ಥಿಸಿದ ಒಡನೆಯೇ ಭಕ್ತವತ್ಸಲನು ತೋರಿದನೆಂದರ್ಥಮಾಡುವದು ಸ್ವಾರಸ್ಯವು. ಮತ್ತು ಅರ್ಜುನನು **"ತದೇವ ಮೇ ದರ್ಶಯ"** ಎಂದು ಪ್ರಾರ್ಥಿಸಿದುದಕ್ಕೆ ಅನುಸಾರವಾಗಿ, ಭಕ್ತವತ್ಸಲನು **"ತದೇವ ಮೇ ರೂಪಮಿದಂ ಪ್ರಪಶ್ಯ"** ಎಂದು ೪೯ನೆಯ ಶ್ಲೋಕದಲ್ಲಿ ಹೇಳಿರುತ್ತಾನೆ. ಶ್ರೀ ವ್ಯಾಸಮಹರ್ಷಿಯ ಉಕ್ತಿಗಳೆಲ್ಲಾ ಬಹು ಗೂಢವಾದವು. ಹಾಗೆ ಮೊದಲು ಗೋಪ್ಯವಾಗಿ ಹೇಳಿಬಿಟ್ಟು, ಅದು ಎಲ್ಲಿ ವೇದ್ಯವಾಗದೇಹೋದೀತೋ ಎಂಬ ಭಯದಿಂದ, ಅನೇಕ ಸಂದರ್ಭಗಳಲ್ಲಿ ಮುಂದೆ ತಾವೇ ವ್ಯಕ್ತಪಡಿಸುವ ಪದ್ಧತಿ ಉಂಟೆಂದು ಹಿಂದೆಯೇ ಉಪಪಾದಿಸಿ ಶ್ರುತಿಗಳಲ್ಲೂ ಇದೇ ಪ್ರಕ್ರಿಯೆಯೇ ಉಂಟೆಂದು ವ್ಯಕ್ತಪಡಿಸಿದ್ದೇನೆ. ಹೀಗೆ ಪರರೂಪವನ್ನು ಅರ್ಜುನನಿಗೆ ತೋರಿಸಿದರೆಂಬುದನ್ನು ಸೂಕ್ಷ್ಮವಾಗಿ ತಿಳಿಯಪಡಿಸಿ, ಮುಂದಿನ ಸಂಜಯವಾಕ್ಯವಾದ ೫೦ನೆಯ ಶ್ಲೋಕದಿಂದ ಸಂದೇಹನಿವೃತ್ತಿಯನ್ನು ಮಾಡುತ್ತಾರೆ. ಅಲ್ಲಿ **"ಸ್ವಕಂ ರೂಪಂದರ್ಶಯಾಮಾಸ ಭೂಯಃ"** ಮತ್ಸ್ಯ, ಕೂರ್ಮ, ನರಸಿಂಹ, ವಾಮನ, ರಾಮ, ಕೃಷ್ಣಾದಿ ಮನುಷ್ಯ ರೂಪಗಳು **ಸ್ವಕಂ** ರೂಪಗಳಲ್ಲವು. ನಿತ್ಯವಾಗಿರಲಿ ಎಂಬ ಸಙ್ಕಲ್ಪದಿಂದ ಉಂಟಾದ ರೂಪವಾದ **ಸ್ವಕಂ ರೂಪಂ** ಯಾವುದೆಂದರೆ ತನಗೆ ಮಾತ್ರವೇ ಅಸಾಧಾರಣವಾದುದಾಗಿ ಶಾಶ್ವತವಾಗಿ ಸೃಷ್ಟಿಸ್ಥಿತಿಲಯಗಳಿಗೆ ಸೇರದ ಪರಮಪುರುಷನ **ಪರವಾಸುದೇವ** ರೂಪವು. ಇದು **"ಆದ್ಯಂ"** ಎಂದು ಹೇಳಲ್ಪಟ್ಟಿರುತ್ತದೆ. (ಗೀ.೧೧-೪೭) ೫೦ ನೆಯ ಶ್ಲೋಕದ **ಭೂಯಃ** ಎಂಬ ಪದವು. ಈ ರೂಪವೇ ಎರಡನೆಯ ಸಲ ತೋರಲ್ಪಟ್ಟುದುದು ಎಂಬುದನ್ನು ಸ್ಥಾಪಿಸುತ್ತದೆ ಇದು **ವಾಸುದೇವರೂಪವೇ** ಎಂದು ವ್ಯಕ್ತಗೊಳಿಸುವದಕ್ಕಾಗಿ, **ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ"** (೫೦) ಎಂದು ವಾಸುದೇವ ಶಬ್ದಪ್ರಯೋಗದಿಂದ ತೋರುವ ಧ್ವನ್ಯರ್ಥದಿಂದ ವಾಸುದೇವರೂಪವೇ ತೋರಿದುದು ಎಂಬುದು ಸುವ್ಯಕ್ತವು. ಆ ೫೦ ನೆಯ ಶ್ಲೋಕದ ಉತ್ತರಾರ್ಧದಿಂದ **ಭೂತ್ವಾಪುನಃ** ಎಂಬುದರಿಂದ ಪರವಾಸುದೇವನನ್ನು ತೋರಿದನಂತರ ಮನುಷ್ಯರೂಪವನ್ನು ತಾಳಿದರೆಂಬುದು ವ್ಯಕ್ತಪಡುತ್ತದೆ ಈ ಅಭಿಪ್ರಾಯವು ೫೧ ನೆಯ ಶ್ಲೋಕದಲ್ಲಿರುವ **" ದೃಷ್ಟ್ವೇದಂ ಮಾನುಷಂ ರೂಪಮ್"** ಎಂಬ ಅರ್ಜುನೋಕ್ತಿಯಿಂದ ವ್ಯಕ್ತಪಡುತ್ತದೆ. ಅಲ್ಲಿಂದ ೫೨, ೫೩, ೫೪ ನೆಯ ಶ್ಲೋಕಗಳಲ್ಲಿರುವ ಭಗವದುಕ್ತಿಯೂ ಕೂಡ ಈ ಪರರೂಪವನ್ನು ಕುರಿತೇ ಎಂದು ಭಾವಿಸಬೇಕಾಗಿದೆ. ಹೀಗೆ ವಸುದೇವ ದೇವಕಿಯರಿಗೆ ಶ್ರೀ ಕೃಷ್ಣಭಗವಾರ್ನರವರು ಸೇವೆಯನ್ನಿತ್ತರೆಂದು ಶ್ರೀ ಮದ್ಭಾಗವತದಲ್ಲಿ **" ತಮದ್ಭುತಂ ಬಾಲಕ ಮಂಬುಜೇಕ್ಷಣಂ ಚತುರ್ಭುಜಂ ಶಂಖಗದಾದ್ಯುಧಾಯುಧಮ್"** ಎಂಬುದಾಗಿ ಹೇಳಲ್ಪಟ್ಟಿರುತ್ತದೆ. ಇದು ಅತಿಮಾನುಷರೂಪದಿಂದ ಕಂಸನ ಭಯಕ್ಕಾಗಿ ದೇವಕೀ ದೇವಿಯು ಈ ಅಲೌಕಿಕ ರೂಪವನ್ನು ತ್ಯಜಿಸಿ ಮಾನುಷಾಕೃತಿಯನ್ನು ತಾಳು

ಎಂದು ಈ ಶ್ಲೋಕದಿಂದ ಪ್ರಾರ್ಥಿಸುತ್ತಾಳೆ— **ಉಪಸಂಹರ ವಿಶ್ವಾತ್ಮನ್ ಅದೋರೂಪ ಮಲೌಕಿಕಂ। ಶಂಖ ಚಕ್ರ ಗದಾಪದ್ಮಶ್ರಿಯೋಜುಷ್ಟಂ ಚತುರ್ಭುಜಮ್** " (ಭಾಗ.೧೦, ೩.೨೯) ಇದು ಅಲೌಕಿಕರೂಪವೆಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ **ಶ್ರಿಯೋಜುಷ್ಟಂ** ಎಂದರೆ ಲಕ್ಷ್ಮೀಯೊಂದಿಗೆ ಸೇರಿದ ರೂಪವು ; ಮುಖ್ಯಾರ್ಥವು ಸರಿಹೋಗುವಾಗ ಲಾಕ್ಷಣಿಕಾರ್ಥವನ್ನು ಹೇಳುವದು ಅನ್ಯಾಯವು. ಇಂತಹ ರೂಪವನ್ನೇ ಅರ್ಜುನನು ವಿಶ್ವರೂಪ ಪ್ರದರ್ಶನಾನಂತರ ಪ್ರಾರ್ಥಿಸಿದುದು ಹೀಗೆ ಅರ್ಥಮಾಡದಿದ್ದರೆ ಈ ಮೋಕ್ಷಶಾಸ್ತ್ರಕ್ಕೆ ಮಾಹಾತ್ಮ್ಯೆಯೇ ಇಲ್ಲವಾಯಿತು. ಏಕೆಂದರೆ ಗೀತಾ ಶಾಸ್ತ್ರವು ಪ್ರಾಪ್ಯವನ್ನೇ ಬೋಧಿಸಲಿಲ್ಲವೆಂದಾಗುತ್ತದೆ. ಇದೇ ಗೀತೆಯಲ್ಲೇ " **ಅವಜಾನಂತಿಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ। ಪರಂ ಭಾವ ಮಜಾನಂತಃ ಮಮಭೂತ ಮಹೇಶ್ವರಮ್** " (ಗೀ. ೯. ೧೧) ಎಂದಿರುವದರಿಂದ, ಅಲೌಕಿಕವಾಗಿ ಯಾವಾಗಲೂ ಚತುರ್ಭುಜ ಯುಕ್ತನಾಗಿರಲಿಲ್ಲವೆಂದೂ, ಸಮಯಗಳಲ್ಲಿ ಅವುಗಳೊಂದಿಗೆ ಯುಕ್ತನಾಗಿ ತನ್ನ ಭಕ್ತರಿಗೆ ಸೇವೆಯನ್ನು ಕೊಡುತ್ತಿದ್ದರು ಎಂದು ತೋರಿಬರುತ್ತದೆ. ಹೀಗೆ ತನ್ನ ಪರಮ ಪುರುಷರೂಪವನ್ನು ಅರ್ಹರಾದವರಿಗೆ ತೋರುವದೇ ಈ ಅವತಾರಕ್ಕೆ ವೈಲಕ್ಷಣ್ಯವು. ಪ್ರಣಯ ಕಲಹವನ್ನು ವರ್ಣಿಸುವ ಸಂದರ್ಭದಲ್ಲಿ, ರುಕ್ಮಿಣಿಯು ಪತಿಯ ನಿಷ್ಠುರೋಕ್ತಿಯನ್ನು ಸಹಿಸದೆ ನೆಲದಲ್ಲಿ ಬಿದ್ದಾಗ, ಆಗ ಶ್ರೀಕೃಷ್ಣನು **"ಪರ್ಯಂಕಾದವರುಹ್ಯಾಶು ತಾಮುತ್ಥಾಪ್ಯ ಚತುರ್ಭುಜಃ। ಕೇಶಾನ್ ಸಮೂಹ್ಯ ತದ್ವಕ್ತ್ರಂ ಪ್ರಾಮೃಜತ್ಪದ್ಮಪಾಣಿನಾ ॥ ಪ್ರಮೃಜ್ಯಾಶ್ರುಕಳೇ ನೇತ್ರೇಸ್ತನೌ ಚೋಪಹತಾ ಶುಚಾ। ಆಶ್ಲಿಷ್ಯ ಬಾಹುನಾ ರಾಜನ್ನನನ್ಯ ವಿಷಯಾಂ ಸತೀಂ** " (ಭಾಗ ೧೦ ೬೦. ೨೫. ೨೭) ನಾಲ್ಕು ಭುಜಗಳುಳ್ಳವನಾಗಿ, ರುಕ್ಮಿಣೀ ದೇವಿಯನ್ನು ಎರಡು ಕೈಗಳಿಂದಲೂ ಎತ್ತಿ, ಕೇಶವನ್ನು ಕಟ್ಟಿ, ಕಣ್ಣುಗಳನ್ನು ಒರಿಸಿ ಹೀಗೆಲ್ಲಾ ಮಾಡಿದುದರಿಂದ ನಾಲ್ಕು ಕೈಗಳೂ ಸಾರ್ಥಕ್ಯವನ್ನು ಹೊಂದಿದವೆಂದು ಹೇಳುವ ಸಂದರ್ಭದಲ್ಲಿ ಶ್ರೀ ವೀರ ರಾಘವೀಯ ವ್ಯಾಖ್ಯಾನದಲ್ಲಿ, **"ಚತುರ್ಭುಜಃ-ಉತ್ಥಾಪನಾಶ್ಲೇಷಣ ವಕ್ತ್ರಪರಿಮಾರ್ಜನಾರ್ಥ ಮಾವಿಷ್ಕೃತ ಚತುರ್ಭುಜ ಇತ್ಯರ್ಥಃ"** ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಯಾವಾಗಬೇಕೋ ಆಗ ಚತುರ್ಭುಜಾವಿಷ್ಕಾರವೂ ಮಿಕ್ಕ ಕಾಲದಲ್ಲಿ ಮಾನುಷಾಕೃತಿಯನ್ನನುಸರಿಸಿ ದ್ವಿಭುಜತ್ವವೂ ಎಂದು ಭಾವಿಸುವದು ಯುಕ್ತವಾಗಿ ತೋರುತ್ತದೆ ಆದರೆ ಯಾವಾಗಲೂ ಚತುರ್ಭುಜಾಕೃತಿಯೇ ಶ್ರೀಕೃಷ್ಣಭಗವಾನರವರಿಗೆ ಸಹಜರೂಪವು, ಪುಣ್ಯವಾನಗಳು ಮಾತ್ರ ಚತುರ್ಭುಜ ಯುಕ್ತನನ್ನಾಗಿ ಕಾಣುವರು, ಪಾಪಿಷ್ಠರು ಕಾಣುವದಿಲ್ಲವೆಂದರೆ, ಯಾವಾಗಲೂ ಚತುರ್ಭುಜನಾಗಿರುವವನಿಗೆ ಇಲ್ಲಿ ವಿಶೇಷಿಸಿ **"ಕಿರೀಟಿನಂ ಗದಿನಂ"** ಎಂಬ ಹೇಳಿಕೆ ಏಕೆ? ಎಂದರೆ ನಿರುತ್ತರವಾಗುತ್ತದೆ. ಮಾನುಷಾವತಾರಕ್ಕೆ ಪ್ರತ್ಯುತ ವಿರುದ್ಧವೇಷವೂ ಆಗುತ್ತದೆ. ಅವತಾರಗಳಲ್ಲಿ, ಯಾವ ಅವತಾರವೋ ಅದಕ್ಕೆ ಅನುಗುಣವಾದ ತನುವು ಇರತಕ್ಕದ್ದು. ಆದರೆ ತನ್ನ ಸತ್ಯಸಙ್ಕಲ್ಪಾನುಗುಣವಾಗಿ ಶಕ್ತಿಯು ಮಾತ್ರ ಉಂಟೆಂದು " **ಏವಂ ಮನುಷ್ಯ ಪದವೀಂ ಅನುವರ್ತಮಾನೋ ನಾರಾಯಣೋಽಖಿಲ ಭವಾಯ ಗೃಹೀತ ಶಕ್ತಿಃ** " ಎಂದು (ಭಾಗವತ ೧೦-೬೯-೪೪ ರಲ್ಲಿ) ಹೇಳಲ್ಪಟ್ಟಿರುತ್ತದೆ. ಆದುದರಿಂದ ಚತುರ್ಭುಜವುಳ್ಳ ಪರರೂಪದಲ್ಲಿ ಸೇವೆಯನ್ನು ದಯಪಾಲಿಸೆಂಬುದು ಅರ್ಜುನಪ್ರಾರ್ಥನೆಯು. ಅರ್ಜುನನಿಗೆ ಮುಖ್ಯವಾಗಿ ಶಂಖ ಚಕ್ರ ಗದಾ ಪದ್ಮಗಳುಳ್ಳ ಚತುರ್ಭುಜದಿಂದ ಯುಕ್ತವಾದ ದಿವ್ಯಮಙ್ಗಳ ವಿಗ್ರಹವನ್ನು ನೋಡಬೇಕೆಂಬಾಶೆಯು ಆತನಿಗೆ ಇತ್ತೆಂಬುದು ಇಲ್ಲಿನ **ಚತುರ್ಭುಜೇನ ಇಚ್ಛಾಮಿ ತ್ವಾಂ ದ್ರಷ್ಟುಂ** ಎಂಬ ಪದಗಳಿಂದ ತೋರಿಬರುತ್ತದೆ. ಹಾಗಿಲ್ಲದಿದ್ದರೆ ಚತು

ಭುರ್ಜನ ಎಂದು ಮುಖ್ಯವಾಗಿ ಹೇಳಬೇಕಾದ ಆವಶ್ಯಕತೆ ಇರಲಿಲ್ಲವು. ನಿನ್ನನ್ನು ನಿನ್ನ ಪೂರ್ವರೂಪದಿಂದಿರುವ ಶಾಂತಮೂರ್ತಿಯನ್ನು ನೋಡಬೇಕೆಂದು ಪ್ರಾರ್ಥಿಸುತ್ತಿದ್ದನು. ಮೊದಲಿನ ಮಾನುಷಾಕೃತಿಯನ್ನೇ ಅಪೇಕ್ಷಿಸಿದ್ದರೆ, ಚತುರ್ಭುಜೇನ ಎಂಬ ಪ್ರಯೋಗಕ್ಕೆ ಅನುಕೂಲವಿಲ್ಲದೆ ಹೋಗುವದೂ ಅಲ್ಲದೆ, ಪ್ರಾರ್ಥನೆಗೇನೇ ಕಾರಣವಿಲ್ಲವು. ತಾನಾಗಿಯೇ ಮೊದಲಿನ ರೂಪವನ್ನೇ ಹೊಂದುತ್ತಾನೆಂಬುದು ಸಿದ್ಧವು ಹಾಗಾದರೆ ದೇವಕಿಯು ಏಕೆ ಮಾನುಷರೂಪವನ್ನೇ ತಾಳು ಎಂದು ಪ್ರಾರ್ಥಿಸಿದಳೆಂದು ಆಕ್ಷೇಪಿಸಬಹುದು. ಅದು ಅವತಾರಾರಂಭ ಸಮಯವು, ತನಗೆ ಸೇವೆಯನ್ನಿತ್ತ ಹಾಗೆಯೇ ಎಲ್ಲಿ ಇದ್ದುಬಿಡುತ್ತಾನೋ, ಅಂತಹ ಬಾಲನನ್ನು ಕಂಡು ಕಂಸನು ಏನು ಮಾಡುತ್ತಾನೋ ಎಂಬ ಭಯವು ದೇವಕಿಯನ್ನು ತುಂಬಾ ಬಾಧಿಸುತ್ತಿದ್ದುದರಿಂದ ಹಾಗೆ ಪ್ರಾರ್ಥನೆ ಎಂದು ಭಾವಿಸತಕ್ಕದ್ದು. ಆದುದರಿಂದ ನಾವು ಗ್ರಹಿಸತಕ್ಕದ್ದೇನೆಂದರೆ—ಸಾಧಾರಣವಾಗಿ ಶ್ರೀ ಕೃಷ್ಣನು ಎಲ್ಲರಹಾಗೂ ದ್ವಿಭುಜವುಳ್ಳವನಾಗಿಯೇ ಇರುತ್ತಿದ್ದನೆಂದೂ ಸಮಯಗಳಲ್ಲಿ ತನ್ನಿಷ್ಟಾನುಸಾರ ಚತುರ್ಭುಜಗಳನ್ನು ಸ್ವೀಕರಿಸುತ್ತಿದ್ದನೆಂದೂ ಊಹಿಸಬೇಕಾಗಿದೆ. **"ಉಪಸಂಹರ ಸರ್ವಾತ್ಮನ್ ರೂಪಮೇತಚ್ಚತುರ್ಭುಜಮ್ । ಜಾನಾತು ಮಾವತಾರಂ ತೇ ಕಂಸೋಽಯಂ ದಿತಿಜನ್ಮಜಃ ।"** ಎಂಬುದರ (ವಿ. ಪು. ೫. ೩. ೧೩.) ವಿಷ್ಣುಚಿತ್ತೀಯ ವ್ಯಾಖ್ಯಾನದಲ್ಲಿ **"ಚತುರ್ಭುಜತ್ವಮೇವ ನರಕ ಶಿಶುಪಾಲ ಪೌಂಡ್ರಕ ವಧಾದಿಷು ಪ್ರಸಿದ್ಧೇಃ"** ಎಂದು ನರಕಾಸುರ, ಶಿಶುಪಾಲ, ಪೌಂಡ್ರಕ ಇವರನ್ನು ವಧಿಸುವದೇ ಮೊದಲಾದ ಕಾಲದಲ್ಲಿ ಮಾತ್ರ ಚತುರ್ಭುಜಯುಕ್ತನಾಗಿ ಸೇವೆಯನ್ನಿತ್ತನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಭಾಗವತದಲ್ಲೂ **"ಉಪಸಂಹರ ವಿಶ್ವಾತ್ಮನ್ನದೋರೂಪಮಲೌಕಿಕಂ । ಶಂಖಚಕ್ರಗದಾಪದ್ಮ ಶ್ರಿಯಾಜುಷ್ಟಂ ಚತುರ್ಭುಜಮ್"** ಚತುರ್ಭುಜತ್ವವು ಮಾನುಷಾವತಾರಕ್ಕೆ ಅಲೌಕಿಕವೆಂದು ಹೇಳಲ್ಪಟ್ಟಿರುತ್ತದೆ **"ಮಾನುಷ ಧರ್ಮರೂಪ"** ನೆಂಬ ಪ್ರಯೋಗವನ್ನು ವಿ. ಪು. ೫. ೨೫ ೧. ರಲ್ಲಿ ಕಾಣಬಹುದು. ಯಾವಾಗಲೂ ಮಾನುಷಧರ್ಮರೂಪನಿಗೆ ಚತುರ್ಭುಜತ್ವವು ವಿರುದ್ಧವಲ್ಲವೇ ?

ಈ ಶ್ಲೋಕದಲ್ಲಿ ಚತುರ್ಭುಜವನ್ನು ಹೇಳಿರುವದು ಪ್ರದರ್ಶನಾರ್ಥವಾಗಿ ಎಂದು ಭಾವಿಸಿ, ಕಿರೀಟಿಯಾಗಿ ದಿವ್ಯಾಭರಣಾಯುಧಗಳಿಂದ ಸಮೇತನಾಗಿಯೂ, ದಿವ್ಯ ಕಿರೀಟಧಾರಿಯಾಗಿಯೂ, ಶ್ರೀವತ್ಸಾಙ್ಕನಾಗಿಯೂ, ವನಮಾಲಾಯುತನಾಗಿಯೂ, ದಿವ್ಯ ಪೀತಾಂಬರಧಾರಿಯಾಗಿಯೂ ನೋಡಲು ನನಗೆ ಅಪೇಕ್ಷೆಯುಂಟೆಂದು ಹೇಳಿದಂತಾಯಿತು. ಇಂತಹ ಪ್ರಾಸ್ಯವನ್ನು ಶ್ರೀ ಪರಾಶರರು ವರ್ಣಿಸಿರುತ್ತಾರೆ ಹೇಗೆಂದರೆ—**"ಪ್ರಸನ್ನ ವದನಂ ಚಾರು ಪದ್ಮಪತ್ರೋಪಮೇಕ್ಷಣಮ್ । ಸುಕಪೋಲಂ ಸುವಿಸ್ತೀರ್ಣ ಲಲಾಟಫಲಕೋಜ್ಜ್ವಲಮ್ । ಸಮಕರ್ಣಾನ್ತವಿನ್ಯಸ್ತ ಚಾರುಕುಂಡಲಭೂಷಣಮ್ । ಕಂಬುಗ್ರೀವಂ ಸುವಿಸ್ತೀರ್ಣ ಶ್ರೀವತ್ಸಾಂಕಿತವಕ್ಷಸಮ್ । ವಲಿತ್ರಿಭಂಗಿನಾ ಮಗ್ನನಾಭಿನಾಹ್ಯುದರೇಣ ಚ ।"** ಇತ್ಯಾದಿ. ಅರ್ಥವು ಸ್ಪಷ್ಟವು. ಮಾನುಷಾವತಾರಕ್ಕೆ ಪ್ರತ್ಯುತ ವಿರುದ್ಧವಾದುದು ಚತುರ್ಭುಜತ್ವದಿಂದ ಕೂಡಿದ ವೇಷವಾಗುತ್ತದೆ. ಅವತಾರಗಳಲ್ಲಿ, ಯಾವ ಅವತಾರವೋ ಅದಕ್ಕನುಗುಣವಾದ ತನುವೂ ಅವಯವಗಳೂ ಇರತಕ್ಕದ್ದು. ಮನುಷ್ಯನಿಗೆ ನಾಲ್ಕು ಕೈಗಳಿಲ್ಲವಾದುದರಿಂದ ಶ್ರೀ ಕೃಷ್ಣನು ಯಾವಾಗಲೂ ದ್ವಿಭುಜದಿಂದ ಇದ್ದು ಮಹರ್ಗಳಿಗೆ ಮಾತ್ರ ಚತುರ್ಭುಜಸೇವೆ ಎಂದು ಗ್ರಹಿಸತಕ್ಕದ್ದೇ ತತ್ವವು ಶ್ರೀಪರಾಶರರು ಪಂಚಮಸ್ಕಂದದಲ್ಲಿ ಹೇಳಿರುವದೇನೆಂದರೆ-ಯಾವ ಜಾತಿಯಲ್ಲಿ ಮತ್ಸ್ಯ ಕೂರ್ಮ ವರಾಹಾದಿಗಳಲ್ಲಿ ಅವತಾರವೋ, ಅದಕ್ಕನುಗುಣವಾದ ಅವಯವಗಳೇ ವಿನಾ ವಿಜಾತಿಯಾಗಿ ಅಲ್ಲವು. ಆದರೆ ದಿವ್ಯಚೇಷ್ಟಿತಗಳು ಮಾತ್ರ ಅವುಗಳಿಗೆ

**ಭಾ. ತಥೈವ ಪೂರ್ವವತ್, ಕಿರೀಟಿನಂ ಗದಿನಂ ಚಕ್ರಹಸ್ತಂ ತ್ವಾಂ ದ್ರಷ್ಟುಮಿಚ್ಛಾಮಿ;**

ಮೀರಿದವು. ಹಾಗಾದರೆ ನೃಸಿಂಹಾವತಾರವು ವಿಜಾತೀಯವು ಹೇಗೆ? ಎಂದರೆ ಅದು ಮಾತ್ರ ಚತುರ್ಮುಖನ ವಶಕ್ಕನುಗುಣವಾಗಿ ಅವತಾರವು.

ಈ ಆಯುಧಗಳನ್ನು ಸರ್ವೇಶ್ವರನು ಏತಕ್ಕಾಗಿ ಧರಿಸಿರುವನು ಎಂದರೆ ಶ್ರೀಪರಾಶರರು ಅಸ್ತ್ರ ಭೂಷಣಾಧ್ಯಾಯದಲ್ಲಿ, ಇವುಗಳೆಲ್ಲಾ ವಿಶ್ವಗಳಲ್ಲಿರುವ ೨೪ ವಿಧ ಜಡ ತತ್ವಗಳನ್ನೂ, ೨೫ ನೆಯದಾದ ಚೇತನತ್ವವನ್ನೂ, ತಾನು ಯಾವಾಗಲೂ ಅಪೃಥಕ್ಸಿದ್ಧವಿಶೇಷಣವಾಗಿ ಧರಿಸಿರುವದನ್ನು ಈ ಅಸ್ತ್ರಭೂಷಣಾದಿರೂಪದಲ್ಲಿ ತೋರಿಸುತ್ತಾನೆಂದೂ, ಮತ್ತು **"ಪ್ರಾಣಿನಾಂ ಶ್ರೇಯಸೇ"** ಎಂದು ಪ್ರಾಣಿಗಳ ಶ್ರೇಯಸ್ಸಿಗಾಗಿ, ಸರ್ವೇಶ್ವರನು ಧರಿಸಿರುತ್ತಾನೆಂದೂ ಶ್ರೀ ಪರಾಶರರು ಹೇಳಿರುತ್ತಾರೆ. ಅಂಬರೀಷರು ಪರಮಭಾಗವತರಾದುದರಿಂದ ಅವರಿಗೆ ಯಾವ ವಿಪತ್ತೂ ಬರದಹಾಗೆ ಅವರ ಸಂರಕ್ಷಣಾರ್ಥವಾಗಿ ಸರ್ವೇಶ್ವರನು ತನ್ನ ಚಕ್ರವನ್ನು ಕಳುಹಿಸಿದ್ದನೆಂಬ ಇತಿಹಾಸವುಂಟು. ಆದುದರಿಂದ ಪಂಚಾಯುಧಗಳನ್ನು ಸ್ಮರಿಸುವದರಿಂದಲಾಗಲಿ ಸ್ತೋತ್ರ ಪಠನದಿಂದಲಾಗಲಿ ಸಮಸ್ತ ಭಯ ದುಃಖಾದಿಗಳು ತೊಲಗುತ್ತವೆಂಬ ಪ್ರತೀತಿಯುಂಟು. ನಿತ್ಯವೂ ಸಹಸ್ರನಾಮ ಪಠನವನ್ನು ಮಾಡಿ ಅನಂತರ ಪಂಚಾಯುಧ ಸ್ತೋತ್ರವನ್ನು **"ಸ್ಫುರತ್ಸಹಸ್ರಾರ"** ವೆಂದಾರಂಭಿಸಿ ಹೇಳಿದುದಾದರೆ **"ವನೇ ರಣೇ ಶತ್ರು ಜಲಾಗ್ನಿ ಮಧ್ಯೇ ಯದೃಚ್ಛಯಾಪತ್ಸು ಮಹಾಭಯೇಷು । ಇದಂ ಪಠನ್ ಸ್ತೋತ್ರಮನಾ ಕುಲಾತ್ಮಾಸುಖೀಭವೇತ್ತತ್ಕೃತ ಸರ್ವರಕ್ಷಃ"** ಇಂತಹ ಫಲಗಳೆಲ್ಲಾ ದೊರೆಯುತ್ತವೆ ಎಂದು ಹೇಳಲ್ಪಟ್ಟಿರುತ್ತದೆ. **"ಗೃಹೀತ ಶಾರ್ಙ್ಗಃ ಪರಿವೃತ್ತಚಕ್ರಃ ಪ್ರಕೋಣಖಡ್ಗಃ ಪ್ರಗೃಹೀತ ಶಂಖಃ । ಶ್ರೀಮಾನ್ ಸಮಾರೂಢ ವಿಹಂಗರಾಜಃ ಶ್ರೀರಂಗರಾಜಃ ಪಥಿನೋ ಸಹಾಯಃ"** ಎಂದು ಚತುರ್ಭುಜನಾಗಿ ಆಯುಧಪಾಣಿಯಾಗಿ ವಿಗಹಾರೂಢನಾಗಿರುವ ಸ್ವಾಮಿಯ ಧ್ಯಾನವು ಸರ್ವ ವಿಪತ್ಪರಿಹಾರಿಯು ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಅರ್ಜುನನು ದಿವ್ಯಾಯುಧಗಳಿಂದ ಕೂಡಿದ ಚತುರ್ಭುಜರೂಪನಾಗಿ ಸಂದರ್ಶನವನ್ನು ಕೊಡು ಎಂದು ಪ್ರಾರ್ಥಿಸಿರುತ್ತಾನೆ. **ಚತುರ್ಭುಜೇನ ಸಹಸ್ರಬಾಹೋ ಭವವಿಶ್ವಮೂರ್ತೇ** ಎಂಬ ಪ್ರಯೋಗದಿಂದ ಈಗ ಸಹಸ್ರ ಬಾಹುಗಳಿಂದ ವಿಶ್ವರೂಪವನ್ನು ತೋರಿಸಿದವನಿಗೆ ಚತುರ್ಭುಜಾಕೃತಿಯನ್ನು ಹೊಂದಿ ದಿವ್ಯ ವೈಕುಂಠದ ಪರವಾಸುದೇವಮೂರ್ತಿಯಾಗಿ ದಾಸನಿಗೆ ಸೇವೆಯನ್ನೀಯುವದೊಂದು ಕಷ್ಟವೇ ಎಂಬ ಕವಿ ಚಮತ್ಕಾರವನ್ನು **ಸಹಸ್ರಬಾಹೋ** ಎಂಬ ಸಂಬೋಧನೆಯು ಸೂಚಿಸುತ್ತದೆ

**ಭಾಷ್ಯಾರ್ಥವು :—ತಥೈವ**-ಹಾಗೆಯೇ ಎಂದರೆ **ಪೂರ್ವವತ್**-ಮೊದಲಿನ ಹಾಗೆಯೇ ಎಂದರೆ ಮೊದಲು ವಿಶ್ವರೂಪವನ್ನು ತೋರಿಸಿದ ಹಾಗೆಯೇ, **ಪೂರ್ವವತ್** ಎಂದರೆ ಹಿಂದೆ ನೋಡಿದ ಹಾಗೆಯೇ ಎಂಬರ್ಥವೂ ಆಗುತ್ತದೆ. ಆಗ **ಚತುರ್ಭುಜೇನ** ಹಿಂದೆ ಅರ್ಜುನನು ನೋಡಿದ್ದನೆಂದಾಗುತ್ತದೆ. ನೋಡಿದ್ದನ್ನೇ ತೋರಿಸು ಎಂಬಲ್ಲಿ ಪ್ರಾರ್ಥನೆ ಏನಿರುತ್ತದೆ? ಎಂಬ ಪ್ರಶ್ನೆಗೆ ಉತ್ತರವಿಲ್ಲವಾಗುತ್ತದೆ. **ಕಿರೀಟಿನಂ** - ಕಿರೀಟವನ್ನುಳ್ಳವನನ್ನಾಗಿಯೂ, **ಗದಿನಂ**- ಕೌಮೋದಕೀ ಎಂಬ ಗದೆಯನ್ನುಳ್ಳವನನ್ನಾಗಿಯೂ, **ಚಕ್ರಹಸ್ತಂ**-ಹಸ್ತದಲ್ಲಿ ಸುದರ್ಶನಚಕ್ರವನ್ನುಳ್ಳವನನ್ನಾಗಿಯೂ, **ತ್ವಾಂ** - ನಿನ್ನನ್ನು, **ದ್ರಷ್ಟುಮಿಚ್ಛಾಮಿ** - ನೋಡಲಪೇಕ್ಷಿಸುತ್ತೇನೆ. ಉಗ್ರರೂಪವಿಲ್ಲದೆ ಸೌಮ್ಯರೂಪದಿಂದ ಸುಪ್ರಸನ್ನನಾಗಿ ಪರಮ ನಿಶ್ಶ್ರೇಯಸ್ಸನ್ನು ಅನುಗ್ರಹಿಸುವಹಾಗೆ ನೋಡಲಪೇಕ್ಷಿಸುತ್ತೇನೆಂಬ ಭಾವವು. ಹೀಗೆ ಇವೆಲ್ಲಾ ಆಯುಧಗಳನ್ನೂ ಧರಿ

**ಭಾ. ಅತಸ್ತೇನೈವ - ಪೂರ್ವಸಿದ್ಧೇನ ಚತುರ್ಭುಜೇನ ರೂಪೇಣ ಯುಕ್ತೋಭವ; ಸಹಸ್ರಬಾಹೋ, ವಿಶ್ವಮೂರ್ತೇ - ಇದಾನೀಂ ಸಹಸ್ರಬಾಹುತ್ವೇನ ವಿಶ್ವಶರೀರತ್ವೇನ ದೃಶ್ಯಮಾನರೂಪಸ್ತ್ವಂ ತೇನೈವರೂಪೇಣ ಯುಕ್ತೋಭವೇತ್ಯರ್ಥಃ॥೪೬॥**

ಸಿರುವ ರೂಪವನ್ನು ನೋಡಬೇಕಾದರೆ ಚತುರ್ಭುಜವು ಆವಶ್ಯಕವೆಂಬುದನ್ನು ಸೂಚಿಸುವದಕ್ಕಾಗಿ, ಪೂರ್ವಾರ್ಧಾಭಿಪ್ರಾಯವು ಹೇತುವೆಂದು ತೋರಿಸುವದಕ್ಕಾಗಿ **ಅತಃ** ಎಂದಾರಂಭಿಸಿ ಉತ್ತರಾರ್ಧಕ್ಕೆ ವ್ಯಾಖ್ಯಾನವನ್ನು ದಯಪಾಲಿಸಿರುತ್ತಾರೆ. **ಅತಃ**-ಆ ಕಾರಣದಿಂದ, **ತೇನೈವ** ಎಂದರೆ **ಪೂರ್ವಸಿದ್ಧೇನ**-ಆ ಮೊದಲೇ ಇದ್ದ, ಆ ವಿಶೇಷಾವಸರಗಳಲ್ಲಿ ಸಿದ್ಧವಾದ, **ರೂಪೇಣ ಯುಕ್ತೋಭವ**-ರೂಪದಿಂದ ಕೂಡಿದವನಾಗು ; **ಹೇ ಸಹಸ್ರಬಾಹೋ**-ಸಹಸ್ರಬಾಹುಗಳಿಂದ ಈಗ ತೋರುತ್ತಿರುವನೇ, **ವಿಶ್ವಮೂರ್ತೇ**-ವಿಶ್ವರೂಪನೇ, ಈ ಶ್ಲೋಕ ತಾತ್ಪರ್ಯವನ್ನೂ ಈ ಸಂಬೋಧನೆಗಳ ತಾತ್ಪರ್ಯವನ್ನೂ ಸಂಗ್ರಹವಾಗಿ ತಿಳಿಸುತ್ತಾರೆ—**ಇದಾನೀಂ**-ಈಗ, **ಸಹಸ್ರಬಾಹುತ್ವೇನ**-ಸಹಸ್ರಗಳಾದ ಬಾಹುಗಳನ್ನು ಹೊಂದಿರುವದರಿಂದಲೂ ಮತ್ತು **ವಿಶ್ವಶರೀರತ್ವೇನ** - ವಿಶ್ವವನ್ನೆಲ್ಲಾ ಶರೀರವಾಗಿ ಹೊಂದಿ, ಅವುಗಳಿಗೆಲ್ಲಾ ಆತ್ಮಾವಾಗಿರುವದರಿಂದಲೂ, **ದೃಶ್ಯಮಾನರೂಪಸ್ತ್ವಂ**-ತೋರುತ್ತಿರುವ ರೂಪವುಳ್ಳ ನೀನು, **ತೇನೈವರೂಪೇಣ**-ಅಂತಹ ರೂಪದಿಂದಲೇ ಎಂದರೆ ಕಿರೀಟಿಯಾಗಿಯೂ ಗದಿಯಾಗಿಯೂ, ಹೀಗೆ ಕಿರೀಟ, ಗದೆ, ಶಂಖ, ಚಕ್ರ ಮೊದಲಾದ ದಿವ್ಯಾಯುಧ ದಿವ್ಯಾಭರಣಗಳಿಂದ, **ಯುಕ್ತೋಭವೇತ್ಯರ್ಥಃ**-ಯುಕ್ತನಾದವನಾಗು ಎಂಬ ತಾತ್ಪರ್ಯವು. ಇಲ್ಲಿ **ತೇನೈವ ರೂಪೇಣ ಭವ** ಎಂದು ಇರುವದರಿಂದ ತೃತೀಯೆಯು ಕರಣಾರ್ಥದಲ್ಲಿ ಉಪಯೋಗಿಸಿಲ್ಲವು, ಸಹಯೋಗಾರ್ಥದಲ್ಲಿ ಹೇಳಿರುವದು ಎಂದು ತಿಳಿಸುವದಕ್ಕಾಗಿ **ರೂಪೇಣ ಯುಕ್ತೋ ಭವ**-ಎಂದು ವ್ಯಾಖ್ಯಾನವನ್ನು ತೋರಿಸಿರುತ್ತಾರೆ. ಇಲ್ಲಿ ನಾವು ಮುಖ್ಯವಾಗಿ ಗ್ರಹಿಸತಕ್ಕ ಅಂಶವೇನೆಂದರೆ—ಉಗ್ರರೂಪವನ್ನು ತ್ಯಜಿಸಿ ಸೌಮ್ಯರೂಪವನ್ನು ಧರಿಸು ಎಂದು ಪ್ರಾರ್ಥಿಸುವದರಲ್ಲಿ ಅರ್ಜುನನು ದಿವ್ಯಾಯುಧಗಳಿಂದ ಯುಕ್ತವಾದ ಚತುರ್ಭುಜಗಳುಳ್ಳ ಸೌಮ್ಯರೂಪವನ್ನು ಧರಿಸಿಕೋ ಮಹಾನುಭಾವನೇ ಎಂದು ಪ್ರಾರ್ಥಿಸಿರುತ್ತಾನೆ. ಈ ಚತುರ್ಭುಜಯುಕ್ತ ರೂಪವೇನು, ಶ್ರೀ ಕೃಷ್ಣನು ಯಾವಾಗಲೂ ಮನುಷ್ಯಾವತಾರಿಯಾಗಿದ್ದರೂ ಧರಿಸಿದ ರೂಪವೇ ; ಇಲ್ಲವೇ ಎಲ್ಲಾ ಮನುಷ್ಯರ ಹಾಗೂ ದ್ವಿಭುಜದಿಂದಲೇ ಇದ್ದನೇ ಎಂಬ ವಿಷಯವು ವಿಚಾರಿಸತಕ್ಕದ್ದಾಗಿದೆ. ಕಂಸವಧೆಯವರೆಗೂ ದ್ವಿಭುಜತ್ವವು. ಅನಂತರ ಚತುರ್ಭುಜತ್ವವೆಂಬ ಅಭಿಪ್ರಾಯವನ್ನು ಶ್ರೀ ಯತಿವರ್ಯರು ಮುಂದೆ ೫೦ ನೆಯ ಶ್ಲೋಕದಲ್ಲಿ ಪ್ರಕಟಿಸಿರುತ್ತಾರೆಂದು ಕೆಲವರು ಹೇಳುವರು. ಕಂಸವಧೆಯವರೆಗೂ ಎರಡು ಭುಜದಿಂದ ಇದ್ದು, ಅದಾದ ಮಾರನೆಯ ದಿನವೇ ಏಕಾಏಕಿ ನಾಲ್ಕುಭುಜವನ್ನು ತಾಳಿದರೆಂಬುದು ತುಂಬಾ ಅಲೌಕಿಕವಾದುದರಿಂದ ಹಾಗೆ ಅವರ ಅಭಿಪ್ರಾಯವಲ್ಲವು. ಹಾಗೆ ಆವಿಷ್ಕಾರವಾದರೆ ಎಲ್ಲರಿಗೂ ಪರತ್ವವನ್ನು ಪ್ರಕಟನೆಮಾಡಿದಹಾಗೆ ಅಭಿಪ್ರಾಯವಾಗುವದರಿಂದ, ಶ್ರೀ ಯತಿವರ್ಯರ ಅಭಿಪ್ರಾಯವೇನೆಂದರೆ ; ಕಂಸವಧೆಯವರೆಗೂ ಯಾವ ಭಾಗವತೋತ್ತಮರಿಗೂ ಕೂಡ ಚತುರ್ಭುಜಾವಿಷ್ಕಾರವನ್ನು ತೋರಿಸಲಿಲ್ಲವೆಂದೂ, ಕಂಸವಧಾ ನಂತರವೇ ಬೇಕಾದ ಪ್ರಪನ್ನರಿಗೆಲ್ಲಾ ಚತುರ್ಭುಜಾವಿಷ್ಕಾರದಿಂದ ಸೇವೆಯನ್ನಿತ್ತರೆಂದೂ ಭಾವಿಸತಕ್ಕದ್ದಾಗಿರುತ್ತದೆ. ಹಾಗಲ್ಲದಿದ್ದರೆ "**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್**" "**ನಾಹಂ ಪ್ರಕಾಶಸ್ಸರ್ವಸ್ಯ**" ಇತ್ಯಾದಿ ಪ್ರಮಾಣಗಳಿಗೆ ವಿರುದ್ಧವಾಗುತ್ತದೆ. ಚತುರ್ಭುಜತ್ವವು ಅಮಾನುಷ ಶರೀರತ್ವವನ್ನು ಪ್ರಕಟಿಸುತ್ತದೆ. ಈಗಲೂ ಲೀಲಾಸಾರಥಿ

**ಶ್ರೀ ಭಗವಾನುವಾಚ—**

**ಮೂ. ಮಯಾಪ್ರಸನ್ನೇನ ತವಾರ್ಜುನೇದಂ ರೂಪಂಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ ಯನ್ಮೇತ್ವದನ್ಯೇನ ನದೃಷ್ಟಪೂರ್ವಂ ॥**

ಯಾಗಿರುವಾಗಲೂ ಚತುರ್ಭುಜಗಳು ಳ್ಳವನಾಗಿಯೇ ಇದ್ದನೆಂದು ನಿರ್ಣಯಮಾಡಲು ಆಧಾರ ವೇನೂ ಇಲ್ಲವು ಆದುದರಿಂದ ಅವತಾರ ಕಾಲದಲ್ಲಿ ದೇವಕಿ ವಸುದೇವರಿಗೂ, ಪ್ರಣಯ ಕಲಹದಲ್ಲಿ ರುಕ್ಮಿಣೀದೇವಿಗೂ, ವಧೆಯ ಕಾಲದಲ್ಲಿ ನರಕಾಸುರ ಶಿಶುಪಾಲ ಪೌಂಡ್ರಿಕರಿಗೂ, ಅನುಗ್ರಹ ಕಾಲದಲ್ಲಿ ಯಶೋದೆ, ಅಕ್ರೂರ, ವಿದುರ, ಉದ್ಧವಾದಿಗಳಿಗೂ ಹೀಗೆ ಚತುರ್ಭು ಜತ್ವವೂ, ಅವತಾರಾಂತ್ಯದಲ್ಲಿ ಜರನೆಂಬ ವ್ಯಾಧನಿಗೂ, ಮಿಕ್ಕ ಕಾಲಗಳಲ್ಲಿ ಸಾಧಾರಣ ಮನು ಷ್ಯಾಕೃತಿಯಹಾಗೆ ದ್ವಿಭುಜತ್ವವೂ ಎಂದು ಭಾವಿಸಿದರೇನೇ ಶ್ರೀ ಕೃಷ್ಣನು ಮನುಷ್ಯಾವತಾರಿ ಎಂಬ ಹೇಳಿಕೆಯು ಸಮಂಜಸವಾಗುತ್ತದೆ. **"ಅಹಂವೋ ಬಾಂಧವೋಜಾತಃ"** ಎಂಬ ಸರ್ವೇಶ್ವರನ ಹೇಳಿಕೆಗೂ ಸರಿಹೋಗುತ್ತದೆ. ಈಗ ಅರ್ಜುನನು ಪ್ರಾರ್ಥಿಸಿರುವ ರೂಪವು ಚತುರ್ಭುಜಯುಕ್ತವಾದುದೆಂಬುದರಲ್ಲಿ ಸಂದೇಹವಿಲ್ಲವು. ಹಾಗೆಯೇ ಲೀಲಾಸಾರಥಿಯಾಗಿ ಯುದ್ಧಕಾಲದಲ್ಲೂ ಇದ್ದನೆಂಬುದಕ್ಕೆ ಪ್ರಮಾಣವಿಲ್ಲವಾದುದರಿಂದ, ಪ್ರಾಪ್ಯರೂಪವನ್ನು ಅರ್ಜುನ ಪ್ರಾರ್ಥನಾನುಸಾರ ತೋರಿ ಅನಂತರ ಪುನಃ ದ್ವಿಭುಜತ್ವಯುಕ್ತವಾದ ಆಕಾರವನ್ನೇ ಸ್ವೀಕರಿ ಸಿದನೆಂದು ನಂಬಬೇಕಾಗುತ್ತದೆಯಲ್ಲದೆ, ಮೂಲದಲ್ಲೂ ಹಾಗೆಯೇ ವ್ಯಕ್ತವಾಗಿ ಹೇಳಲ್ಪ ಟ್ಟಿರುತ್ತದೆ. ॥ ೪೬ ॥

**ಮೂಲಕ್ಕೆ ಅರ್ಥವು :—ಶ್ರೀ ಭಗವಾನ್ ಉವಾಚ-**ಲಕ್ಷ್ಮೀಯುಕ್ತನಾದ ಭಗವಂತನು ಹೇಳುತ್ತಾನೆ.—ಇದು ಭಕ್ತವಾತ್ಸಲ್ಯಾತಿರೇಕವನ್ನು ಪ್ರದರ್ಶಿಸುವ ಶ್ಲೋಕವು. ಭಗವಂತನಾದ ಶ್ರೀ ಕೃಷ್ಣಭಗವಾನರವರು ಪರಮಕಾರುಣಿಕನಾದ ತನ್ನಲ್ಲಿರುವ ಭಕ್ತವಾತ್ಸಲ್ಯತೆಯನ್ನು ಪ್ರದ ರ್ಶಿಸುತ್ತಾ ಪರರೂಪವನ್ನು ಒಡನೆ ತಾಳಿ, ಹೇಳುತ್ತಾರೆ.—ನಿನ್ನ ಆ ಭಯಂಕರವಾದ ವಿಶ್ವ ರೂಪ ದರ್ಶನವು ಸಾಕು, **ಪ್ರಸೀದ** ಎಂದು ಪ್ರಾರ್ಥಿಸಿ, ಕಿರೀಟ ಶಂಖ ಚಕ್ರ ಗದಾ ಪದ್ಮ ಮೊದಲಾದ ದಿವ್ಯಾಯುಧ ದಿವ್ಯಾಭರಣಗಳಿಂದಲೂ, ಚತುರ್ಭುಜಗಳಿಂದಲೂ ಯುಕ್ತವಾದ ಪ್ರಸಿದ್ಧವಾದ **"ತದ್ರೂಪಂ"** ಪರರೂಪವನ್ನು ನೋಡಬೇಕೆಂದು ಅಪೇಕ್ಷಿಸಿದುದರಿಂದ, ಭಕ್ತ ಪರಾಧೀನನಾಗಿ ನಿನ್ನ ಶರಣಾಗತಿಯಿಂದ ಪ್ರಸನ್ನನಾದ ನನ್ನಿಂದ ಈ ಪರರೂಪವು ನಿನಗೆ ತೋರಿಸಲ್ಪಟ್ಟಿತು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ.—**ಹೇ ಅರ್ಜುನ**-ಓ ಅರ್ಜುನನೇ, **ಪ್ರಸನ್ನೇನ**-ತುಂಬಾ ಅಪರಾಧಗಳನ್ನು ಮಾಡಿರುತ್ತೇನೆ, ಅವುಗಳನ್ನು ಕ್ಷಮಿಸು ಎಂದು ಪ್ರಾರ್ಥಿಸಿ, ಶರಣಾಗತನಾದ ನಿನ್ನಲ್ಲಿ ವಾತ್ಸಲ್ಯಾತಿರೇಕವುಂಟಾಗಿ, ಹಿಂದೆ (೪೫ ನೆಯ ಶ್ಲೋಕ ದಲ್ಲಿ) **"ತದೇವ ಮೇ ದರ್ಶಯ ದೇವರೂಪಂ ಪ್ರಸೀದ"** ಎಂದೂ ಮತ್ತು ಅಂತಹ ಪರ ರೂಪವನ್ನು ವರ್ಣಿಸಿ **ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ** ಎಂದೂ ಪ್ರಾರ್ಥಿಸಿದುದ ರಿಂದ, **ಪ್ರಸನ್ನೇನ** - ಪ್ರೀತನಾಗಿ ಭಕ್ತಾನುಗ್ರಹವನ್ನು ಒಡನೆಯೇ ಸಲ್ಲಿಸಬೇಕೆಂದಿರುವ, **ಮಯಾ**-ನನ್ನಿಂದ, **ಇದಂ ಪರಂ ರೂಪಂ**-ಈ ನೀನು ಪ್ರಾರ್ಥಿಸಿದ ಪರರೂಪವು ಎಂದರೆ ದಿವ್ಯವೈಕುಂಠದಲ್ಲಿ ನಿತ್ಯಮುಕ್ತರುಗಳಿಂದ ಸೇವಿತನಾಗಿರುವ ಈ ಪರವಾಸುದೇವ ರೂಪವು, **ಆತ್ಮಯೋಗಾತ್**-ಸತ್ಯಸಂಕಲ್ಪನಾಗಿರುವ ನನ್ನ ಯೋಗಬಲದಿಂದ, **ದರ್ಶಿತಂ**-ಇಗೋ ಕೇಳಿದ ಒಡನೆಯೇ ತೋರಿಸಲ್ಪಟ್ಟಿತು. ಆ ಪರರೂಪವೆಂತಾದ್ದೆಂದರೆ ವರ್ಣಿಸುತ್ತಾರೆ.—**ತೇಜೋ ಮಯಂ**-ಸಹಸ್ರಾದಿತ್ಯರು ಏಕಕಾಲದಲ್ಲಿ ಉದಿಸಿದಹಾಗೆ ತೇಜೋಮಯವಾದುದು, ಆದುದ

ರಿಂದಲೇ ಶ್ರೀ ಯತಿವರ್ಯರು **"ಕೃತ್ಸ್ನಂ ಜಗದುದ್ಭಾಸಯಂತಂ"** ಎಂದು ವರ್ಣಿಸಿರುತ್ತಾರೆ — ಇನ್ನು ಎಂತಾದ್ದೆಂದರೆ, **ವಿಶ್ವಂ**-ಸಹಸ್ರನಾಮದ ಮೊದಲಿನ ನಾಮದಲ್ಲಿ **ಓಂ ವಿಶ್ವಾಯ ನಮಃ** ಎಂದು ಹೇಳಿರುವಹಾಗೆ, ಕಲ್ಯಾಣಗುಣಗಣಯೋಗವೇನು, ನಿತ್ಯವಿಭೂತಿಯ **ಯೋಗವೇನು** ಇವುಗಳಿಂದ ಪರಿಪೂರ್ಣವಾದುದು, **ಅನಂತಂ**-ಅಪರಿಚ್ಛೇದ್ಯವಾದುದು, **ಆದ್ಯಮ್**-ಮೊದಲಿನಿಂದಲೂ ಶಾಶ್ವತವಾದ ರೂಪವು, **ದರ್ಶಿತಂ**-ಇಗೋ ಒಡನೆಯೇ ತೋರಿಸಲ್ಪಟ್ಟಿತು ಎಂದು ಹೇಳುವದಕ್ಕಾಗಿ ಭೂತಕಾಲವ್ಯಪದೇಶವು. ಭಕ್ತಾನುಗ್ರಹದಲ್ಲಿ ಭಗವಂತನಿಗಿರುವ ಕಾಲ ವಿಳಂಬಾಸಹಿಷ್ಣುತೆಯು ಬಹು ಸ್ವಾರಸ್ಯವಾಗಿ ಇಲ್ಲಿ ಪ್ರದರ್ಶಿಸಲ್ಪಟ್ಟಿತು ; ಆ ರೂಪವು ಇನ್ನೂ ಎಂತಾದ್ದೆಂದರೆ— **ಯನ್ಮೇತ್ವದನ್ಯೇನ ನದೃಷ್ಟಪೂರ್ವಂ, ತ್ವದನ್ಯೇನ** - ನೀನಲ್ಲದೆ ಇನ್ನು ಯಾರಿಂದಲೂ ನೋಡದಿರುವ ರೂಪವು. ಅನೇಕರು ಮಾಡಿರುವ ಅರ್ಥದಲ್ಲಿ ಇದು ವಿಶ್ವರೂಪವೆಂದು ಅರ್ಥಮಾಡಿರುತ್ತಾರೆ. ಹಾಗೆ ಅರ್ಥಮಾಡುವದಕ್ಕೆ **ಯನ್ಮೇ ತ್ವದನ್ಯೇನ ನದೃಷ್ಟಪೂರ್ವಮ್** ಎಂಬೀ ಪ್ರಯೋಗವು ಪ್ರತ್ಯುತ ವಿರುದ್ಧವು ಯುದ್ಧವನ್ನು ನೋಡಬೇಕೆಂದು ಬಂದ ಸುರಸಂಘ ಸಿದ್ಧಸಾಧ್ಯರೇ ಮೊದಲಾದವರೆಲ್ಲಾ ಈ ವಿಶ್ವರೂಪವನ್ನು ಸ್ವಾಮಿದತ್ತ ದಿವ್ಯ ಚಕ್ಷುಸ್ಸಿನಿಂದ ಅರ್ಜುನನಹಾಗೆಯೇ ನೋಡಿದ್ದಾರಾದುದರಿಂದ, (ಶ್ಲೋ. ೨೧. ೧೪. ೩೬) ಇದು ವಿಶ್ವರೂಪವನ್ನೇ ಕುರಿತು ಹೇಳಿದುದೆಂದು ಅರ್ಥಮಾಡಲು ಸಾಧ್ಯವೇ ಇಲ್ಲವು ಆದರೆ ಮುಖ್ಯವಾಗಿ ಅರ್ಜುನನಿಗಾಗಿಯೇ ಈ ವಿಶ್ವರೂಪವನ್ನು ತೋರಿಸಿದುದು ; ಇತರರೇನೋ ನೋಡಿದರು. ಅದಕ್ಕಾಗಿ **ತ್ವದನ್ಯೇನ ನದೃಷ್ಟಪೂರ್ವಂ** ಎಂದು ಹೇಳಿದರು ಎಂದು ಸಮಾಧಾನವಲ್ಲದುದನ್ನು ಸಮಾಧಾನವಾಗಿ ಭಾವಿಸಿದರೂ, ಆಗಲೂ ವಿರೋಧವು ತಪ್ಪಲಿಲ್ಲವು. ಏಕೆಂದರೆ ಹಿಂದೆ ಯಶೋದೆಗೆ ತೋರಿಸಿರುತ್ತಾರೆ. ಆದುದರಿಂದ ಈಗ ತೋರಿದುದು ಪರ ವಾಸುದೇವರೂಪವೆಂದು ಅರ್ಥಮಾಡಿದರೆ ಸರ್ವಸಾಮಂಜಸ್ಯವು ಉಂಟಾಗುತ್ತದೆ.

ಆಗಲಿ **"ತ್ವದನ್ಯೇನ ನದೃಷ್ಟಪೂರ್ವಮ್"** ಎಂದು ಸ್ವಾಮಿ ಹೇಳಿಕೊಂಡು, ಯಾರಿಗೂ ತೋರಿಸದೇ ಇರುವ ಪರರೂಪವನ್ನು ಈ ಅರ್ಜುನನಿಗೆ ತೋರಿಸಬಹುದೋ ? ಶ್ರೀ ಕೃಷ್ಣ ಭಗವಾನರವರು ಹಾಗಾದರೆ ಪಕ್ಷಪಾತಿಯೋ ? ಎಂದರೆ ಹಾಗಲ್ಲವು ; ಅರ್ಜುನನು ಇನ್ನೂ ಉಪಾಯಾನುಷ್ಠಾನವನ್ನು ಮಾಡದೇ ಇದ್ದರೂ, ಪರಮಭಕ್ತನಾಗಿ ಎರಡುಸಲ ಸ್ವಾಮಿಯಲ್ಲಿ ಶರಣಾಗತಿಯನ್ನು ಅನುಷ್ಠಿಸಿರುತ್ತಾನೆ ಎರಡನೆಯ ಅಧ್ಯಾಯದಲ್ಲಿ ತನಗೆ ಸರಿಯಾದ ಜ್ಞಾನವಿಲ್ಲವೇ ಎಂದು ಶೋಕಿಸಿ ಒಳ್ಳೇಜ್ಞಾನವನ್ನು ಕೊಡು, **" ಶಾಧಿಮಾಂ ತ್ವಾಂ ಪ್ರಪನ್ನಂ "** ಎಂದು ಬೇಡಿರುತ್ತಾನೆ ಪುನಃ ಸಹಸ್ರಾಪರಾಧಗಳನ್ನು ನಿನಗೆ ಮಾಡಿರುತ್ತೇನೆಂದು ಹೇಳಿಕೊಂಡು ಅವುಗಳನ್ನೆಲ್ಲಾ ಕ್ಷಮಿಸು ಎಂದು ಈ ಅಧ್ಯಾಯದಲ್ಲೇ **" ತಸ್ಮಾತ್ಪ್ರಣಮ್ಯ "** ಎಂಬಲ್ಲಿ ಪುನಃ ಶರಣಾಗತಿಯನ್ನು ಮಾಡಿರುತ್ತಾನೆ. ಇಂತಹಭಕ್ತಿಯು ಈ ಅರ್ಜುನನಲ್ಲಿ ಆದಿಯಿಂದಲೂ ಇದ್ದುದರಿಂದ **"ಮಮ ಪ್ರಾಣಾಹಿ ಪಾಂಡವಾಃ"** ಎಂದು ಈತನನ್ನೂ ಈತನ ಸಹೋದರರನ್ನೂ ಶ್ಲಾಘಿಸಿರುತ್ತಾರೆ. ಇದೂ ಅಲ್ಲದೆ ನರಾವತಾರಿಯಾಗಿ ನಾರಾಯಣಾವತಾರಿಯಾದ ಶ್ರೀ ಕೃಷ್ಣನ ಉದ್ದೇಶಗಳನ್ನು ನಡೆಸಲು ಸಹಾಯಕನಾಗಿ ಬಂದು ತನಗೆ ಮಾಡಿದ ಉಪದೇಶದಿಂದ ಲೋಕೋಜ್ಜೀವನ ಉಂಟಾಗಲಿ ಎಂಬುದು ಸ್ವಾಮಿ ಸಙ್ಕಲ್ಪವು. ಈಗ ಪ್ರಾಪ್ಯರೂಪವು ಎಂತಾದ್ದೆಂದು ಚನ್ನಾಗಿ ಎಲ್ಲರಿಗೂ ವ್ಯಕ್ತವಾಗಲಿ, ಎಂದು ಅದನ್ನು **" ಕಿರೀಟಿನಂ ಗದಿನಂ "** ಎಂದು ಉಪಪಾದಿಸಿದ ರೀತಿಯಲ್ಲಿ ವರ್ಣಿಸಿ, ಅಂತಹ ರೂಪವನ್ನು ಈ ನರಾವತಾರಿಗೆ ಮಾತ್ರ ತೋರಿಸಿದನು, ಇನ್ನು ಯಾರಿಗೂ ತೋರಲಿಲ್ಲವೆಂಬುದು ಎಂದಿಗೂ ಪಕ್ಷಪಾತವಾಗುವದಿಲ್ಲವು ಇನ್ನು ಯಾರಾದರೂ ಸಾಮಾನ್ಯ ಮನುಷ್ಯರಿಗೆ ತೋರಿದರೆ, ಆಗೀಗ ಪಕ್ಷಪಾತವು. ಹೀಗೆ ಈ ಪರ

ರೂಪವನ್ನು ಅರ್ಜುನನಿಗೆ ತೋರಿಸಿದ ಉದ್ದೇಶ್ಯವೇನೆಂದರೆ—ಈ ಪರರೂಪವು ಹೀಗಿದೆ ಎಂದು ಊಹಿಸಿ ಉಪಾಸನಮೂಲಕ ಮುಂದೆಹೇಳುವ ಹಾಗೆ "**ಭಕ್ತ್ಯಾತ್ವನನ್ಯಯಾ**" (ಶ್ಲೋ.೫೪) ಸಾಕ್ಷಾತ್ಕರಿಸಿದರೆ, ದೇಹಾವಸಾನಾನಂತರ ಅರ್ಚಿರಾದಿ ಮಾರ್ಗದ ಮೂಲಕ ಪ್ರಾಪ್ಯವು ದೊರೆಯುತ್ತದೆ ಎಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಇದೇ ಮುಂದೆ ವಿಶದವಾಗಿ ಹೇಳಲ್ಪಡುತ್ತದೆ.—"**ಮಯಾ ಪ್ರಸನ್ನೇನ**" ಎಂಬ ಪ್ರಯೋಗದಿಂದ ತೋರಿಬರುವ ಶಾಸ್ತ್ರಾರ್ಥವೇನೆಂದರೆ–ಇದರಿಂದ "**ನಾಯಮಾತ್ಮಾಪ್ರವಚನೇನ ಲಭ್ಯೋ ನಬಹುನಾಶ್ರುತೇನ। ಯಮೇವೈಷವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವೃಣುತೇ ತನೂಂ ಸ್ವಾಂ॥**" (ಮುಂ. ೩. ೨. ೩) ಎಂದು ಹೇಳಿರುವ ಶಾಸ್ತ್ರಾರ್ಥವು ಬೋಧಿಸಲ್ಪಟ್ಟಿತು. ಕೇವಲ ಶ್ರವಣ ಮನನ ನಿಧಿಧ್ಯಾಸನಗಳಿಂದ ಮಾತ್ರವೇ ಸರ್ವೇಶ್ವರನು ಅನುಗ್ರಹಿಸುವದಿಲ್ಲವು. ಯಾವ ಉಪಾಸಕನು ತನಗೆ ಪ್ರಿಯತಮನಾಗಿ ಅರ್ಹನೆಂದು ಭಾವಿಸುವನೋ. ಅಂತವನಿಗೀಗ ತನ್ನ ಸಾಕ್ಷಾತ್ಕಾರವನ್ನುಂಟುಮಾಡಿ ಕೊಡುವನು ಎಂಬುದೂ ಉಪದೇಶಿಸಲ್ಪಟ್ಟಿತು. ಆದುದರಿಂದ ಸಾಧ್ಯೋಪಾಯದಿಂದ ಪ್ರೀತನಾದ ಶ್ರಿಯಃಪತಿಯೇ ಸಿದ್ಧೋಪಾಯನಾಗಿ ಎಲ್ಲವನ್ನೂ ಅನುಗ್ರಹಿಸುವನು ಎಂಬ ಪರಮ ಶಾಸ್ತ್ರಾಭಿಪ್ರಾಯವನ್ನು ಇಲ್ಲಿ ಗ್ರಹಿಸತಕ್ಕದ್ದು. ಆದುದರಿಂದ "**ಯೇಚ ವೇದವಿದೋ ವಿಪ್ರಾಯೇಚಾಧ್ಯಾತ್ಮ ವಿದೋ ಜನಾಃ। ತೇ ವದಂತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಂ**" ಎಂಬ ಪ್ರಮಾಣವು ಅನುಸಂಧೇಯವು. ವೇದಾರ್ಥಗಳನ್ನೆಲ್ಲಾ ಚನ್ನಾಗಿ ಪರಿಶೀಲಿಸಿದವರೂ, ಬ್ರಹ್ಮವಿದ್ಯೆಯನ್ನು ಅಧಿಕರಿಸಿದವರೂ, ಶಾಸ್ತ್ರಜನ್ಯ ಜ್ಞಾನ.ವಿವೇಕೋತ್ಥಜ್ಞಾನವುಳ್ಳ ಮಹಾತ್ಮರುಗಳೂ, ಸಿದ್ಧೋಪಾಯನಾದ ಶ್ರಿಯಃಪತಿಯೇ ಸಾಧ್ಯೋಪಾಯಗಳಿಂದ ವಶೀಕೃತನಾಗಿ ಪಾರಲೌಕಿಕ ಶ್ರೇಯಸ್ಸನ್ನು ಅನುಗ್ರಹಿಸುವನೆಂಬುದೇ ಪರಮಾರ್ಥವೆಂದು ಉಪದೇಶಿಸಿರುತ್ತಾರೆ. ಇದು ಮುಖ್ಯಶಾಸ್ತ್ರಾರ್ಥವಾದುದರಿಂದ ಎಲ್ಲರೂ ಮನಸ್ಸಿನಲ್ಲಿಡತಕ್ಕ ಹಿತೋಪದೇಶವು.

ಆದುದರಿಂದ ಓ ಅರ್ಜುನನೇ ನೀನು ಪರಮಭಕ್ತನು, ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ಆದುದರಿಂದ ನಿನಗೆ ಅನುಗ್ರಹಮಾಡಿ ಇತರರಿಗೆ ಯಾರಿಗೂ ಸಾಮಾನ್ಯವಾಗಿ ತೋರಿಸದೇ ಇರುವ ಅತ್ಯದ್ಭುತ ಆಶ್ಚರ್ಯವಾದ ನನ್ನ ಪರರೂಪವನ್ನು ತೋರಿಸಿರುವೆನು. ಆ ರೂಪ ಸಾಕ್ಷಾತ್ಕಾರದಿಂದ ನೀನು ಗ್ರಹಿಸತಕ್ಕ ಅಂಶಗಳು ಯಾವುವೆಂದರೆ (೧) ನಾನು ವಿಲಕ್ಷಣ ತೇಜೋಮಯನಾದುದರಿಂದ ಸರ್ವ ವಸ್ತುಗಳಿಗೂ ಸತ್ತಾ ಪ್ರಕಾಶಾದಿಗಳನ್ನು ಕೊಡುವವನು; ಇದರಿಂದ ಚಿತ್ತಿಗೂ ಕೂಡ ಜ್ಞಾನಪ್ರದನೂ ನಾನೇ ಎಂದು ಹೇಳಿದಂತಾಯಿತು. (೨) ನಾನು ವಿಶ್ವ ಶರೀರಕನಾಗಿ ವಿಶ್ವಾತ್ಮಕನು, ಕಲ್ಯಾಣಗುಣ ವಿಭೂತಿಯೋಗಗಳಿಂದ ಪರಿಪೂಣನು. (೩) ಆದಿ ಮಧ್ಯಾಂತ ರಹಿತನು. (೪) ಸರ್ವ ಜಗತ್ಕಾರಣನು, ಇಂತಹ ಸರ್ವೋತ್ಕೃಷ್ಟತೆಯುಳ್ಳ ದಿವ್ಯ ಮಙ್ಗಳವಿಗ್ರಹಯುಕ್ತನು ಎಂಬುವುಗಳು. ಹೀಗೆ ಪರಮ ಭಕ್ತನ ಪ್ರೀತ್ಯತಿಶಯದಿಂದ ಪ್ರೀತನಾಗಿ ನನ್ನ ಇಂತಹ ರೂಪ ಪ್ರದರ್ಶನದಲ್ಲಿ ಏನಾದರೂ ನನಗೆ ಕಷ್ಟವೋ, ಅಥವಾ ಅದಕ್ಕೇನಾದರೂ ಪ್ರತಿಹತಿ ಉಂಟೋ ಎಂದರೆ, ಹಾಗೇನೂ ಇಲ್ಲವೆಂದು, **ಆತ್ಮಯೋಗಾತ್**-ನಾನು ಸತ್ಯಸಙ್ಕಲ್ಪನಾದುದರಿಂದ ಸಙ್ಕಲ್ಪಮಾತ್ರದಿಂದಲೇ ಹಾಗೆ ಅನುಗ್ರಹಿಸಲು ಶಕ್ತನೆಂದು ಹೇಳಿ ಕೊಂಡಾಡಿರುತ್ತಾರೆ.

ಈ ಶ್ಲೋಕದಲ್ಲಿರುವ **ರೂಪ ಪರಂ ದರ್ಶಿತ ಮಾತ್ಮಯೋಗಾತ್** ಎಂಬಲ್ಲಿರುವ **ಪರ** ಶಬ್ದವ ಶ್ರೇಷ್ಠವಾಚೀ ಎಂದು ಅರ್ಥಮಾಡಿ ವಿಶ್ವರೂಪಕ್ಕೆ ಅನ್ವಯವೆಂದು ಎಲ್ಲರೂ ಭಾಷ್ಯವನ್ನು ಬರೆದಿರುತ್ತಾರೆ. ಪರರೂಪವು ಸ್ವಾಮಿಯ ಐದು ವಿಧ ದಿವ್ಯಮಙ್ಗಳ ವಿಗ್ರಹಗಳಾದ

**ಭಾ ಯನ್ಮೇ ತೇಜೋಮಯಂ-ತೇಜಸಾಂ ರಾಶಿಂ- ವಿಶ್ವಂ-ವಿಶ್ವಾತ್ಮಭೂತಂ, ಅನನ್ತಂ-ಅಂತರಹಿತಂ, ಪ್ರದರ್ಶನಾರ್ಥಮಿದಂ, ಆದಿಮಧ್ಯಾನ್ತರಹಿತಂ, ಆದ್ಯಂ-ಮದ್ವ್ಯತಿರಿಕ್ತಸ್ಯ ಕೃತ್ಸ್ನಸ್ಯಾಧಿಭೂತಂ, ತ್ವದನ್ಯೇನ ಕೇನಾಪಿ ನದೃಷ್ಟಪೂರ್ವಂ ರೂಪಂ, ತದಿದಂ ಪ್ರಸನ್ನೇನ ಮಯಾ ಮದ್ಭಕ್ತಾಯ ತೇ ದರ್ಶಿತಮ್, ಆತ್ಮಯೋಗಾತ್-ಆತ್ಮನಸ್ಸತ್ಯ ಸಙ್ಕಲ್ಪತ್ವ ಯೋಗಾತ್ ॥೪೭॥**

---

**ಪರ, ವ್ಯೂಹ, ಹಾರ್ದ, ವಿಭವ, ಅರ್ಚಾವತಾರಗಳಲ್ಲಿ** ಮೊದಲನೆಯದಾಗಿ ಪ್ರಾಪ್ಯರೂಪವಾಗಿ ಶಾಶ್ವತವಾದ ರೂಪವು. ಅಂತಹ ಮುಖ್ಯಾರ್ಥವಿದ್ದರೂ ಅದನ್ನು ತ್ಯಜಿಸಿ ಸಾಧಾರಣವಾದ ಶ್ರೇಷ್ಠವೆಂಬ ಅರ್ಥವನ್ನು ಹೇಳಬಹುದೋ? ಮುಖ್ಯಾರ್ಥವೇ ಸರ್ವ ಸಮಂಜಸವಾಗಿರುವಾಗ ಸಾಧಾರಣಾರ್ಥವೇಕೆ? ॥೪೭॥

**ಭಾಷ್ಯಾರ್ಥವು :—ಯತ್**-ಯಾವ ಮಹಾ ಪ್ರಸಿದ್ಧವಾದ ಮಾಹಾತ್ಮ್ಯೆಯುಳ್ಳ **ಮೇ**-ಸರ್ವೇಶ್ವರನಾದ ನನ್ನ, **ತೇಜೋಮಯಂ**-ಇಲ್ಲಿ ಮಯಟ್ ಪ್ರತ್ಯಯವು ಪ್ರಾಚುರ್ಯವನ್ನು ಬೋಧಿಸುತ್ತದೆಂದು **ತೇಜಸಾಂ ರಾಶಿಂ** ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ, ತೇಜಸ್ಸಿನ ರಾಶಿಯಾಗಿರುವ, **ವಿಶ್ವಂ** ಎಂದರೆ **ವಿಶ್ವಾತ್ಮಭೂತಂ**-ವಿಶ್ವಕ್ಕೆಲ್ಲಾ ಆತ್ಮಾವಾಗಿರುವ, **ಅನನ್ತಂ** ಎಂದರೆ **ಅಂತರಹಿತಂ** ಅಂತವಿಲ್ಲದಿರುವ. ಇಲ್ಲಿ ಅಂತವೆಂದು ಹೇಳಿರುವದರಿಂದ, **ಪದರ್ಶನಾರ್ಥಮಿದಂ**-ಉಪಲಕ್ಷಣವಾಗಿ ಹೇಳಿರುತ್ತದೆ, ಆದುದರಿಂದ **ಅಂತರಹಿತಂ** ಎಂದು ಹೇಳಿರುವದರಿಂದ, **ಆದಿಮಧ್ಯಾಂತರಹಿತ** ವಾದ ವೆಂಬರ್ಥವು, **ಆದ್ಯಂ** ಎಂದರೆ **ಮದ್ವ್ಯತಿರಿಕ್ತಸ್ಯ ಕೃತ್ಸ್ನಸ್ಯಾಧಿಭೂತಂ** ನನಗಿಂತ ಬೇರೆಯಾದ ಸಮಸ್ತಕ್ಕೂ ಮೂಲಭೂತವಾಗಿರುವ ; ಇದು ಮಿಥ್ಯಾವಾದಕ್ಕೆ ಅನುಕೂಲವಿಲ್ಲವೆಂದು ಹೇಳುವ ಪ್ರಯೋಗವು, ಆತನಿಗೆ ವ್ಯತಿರಿಕ್ತವಾದುವು ಇದ್ದರಲ್ಲವೇ **ಆದ್ಯಂ** ಎಂಬ ಪ್ರಯೋಗವು ಕೂಡುತ್ತದೆ ಬೇರೆ ಯಾವುದೂ ಇಲ್ಲದಿದ್ದರೆ **ಆದ್ಯಂ** ಎಂಬ ಪ್ರಯೋಗವೇ ನಿರರ್ಥಕವಾಗುತ್ತದೆ; ಈಶ್ವರನಲ್ಲದೆ, ಈಶ್ವರನಿಂದ ವ್ಯಾಪ್ತವಾದ **ಭೋಕ್ತಾ ಭೋಗ್ಯ** ರೂಪದಲ್ಲಿ ಲೀಲಾವಿಭೂತಿ ಇದೆಯೆಂದು ಶ್ರುತಿಯು ಹೇಳುವದರಿಂದ ಮಿಥ್ಯಾವಾದ ನಿರಾಕರಣೆಗಾಗಿ, **ಕೃತ್ಸ್ನಸ್ಯ ಅಧಿಭೂತಂ** ಎಂಬ ಪ್ರಯೋಗವು, **ತ್ವದನ್ಯೇನ ಕೇನಾಪಿ ನದೃಷ್ಟಪೂರ್ವಂ**-ನರಾವತಾರಿಯಾದ ನಿನ್ನಂತವನಲ್ಲದೆ ಇನ್ನು ಯಾರಿಂದಲೂ ಹಿಂದೆ ನೋಡದೇ ಇರುವ, ಯಾವ ರೂಪವೋ, **ತದಿದಂ**-ಅಂತಹ ಈ ರೂಪವನ್ನು, **ಪ್ರಸನ್ನೇನ**-ನಿನ್ನ ಅತಿಶಯವಾದ ಭಕ್ತಿಯಿಂದ ಸುಪ್ರೀತನಾದ, **ಮಯಾ**-ನನ್ನಿಂದ, **ಮದ್ಭಕ್ತಾಯ ತೇ**-ನನ್ನ ಭಕ್ತನಾದ ನಿನಗೆ, **ದರ್ಶಿತಂ**-ತೋರಿಸಲ್ಪಟ್ಟಿತು ; ಹೇಗೆ ತೋರಿಸಲ್ಪಟ್ಟಿತು ಎಂದರೆ, **ಆತ್ಮಯೋಗಾತ್**-ಎಂದರೆ **ಆತ್ಮನಃ ಸತ್ಯಸಙ್ಕಲ್ಪತ್ವ ಯೋಗಾತ್**-ನನ್ನ ಸತ್ಯಸಙ್ಕಲ್ಪತ್ವದ ಮಹಿಮೆಯಿಂದ ತೋರಿಸಲ್ಪಟ್ಟಿತು ಎಂಬ ಭಾವವು. ಸರ್ವೇಶ್ವರನು ಎಲ್ಲರಿಗೂ ವಿಮರ್ಶೆಇಲ್ಲದೆ ಅನುಗ್ರಹಿಸುವದಿಲ್ಲವು; ಹಾಗೆ ಅನುಗ್ರಹಿಸಿದುದಾದರೆ ವೈಷಮ್ಯ ನೈರ್ಘೃಣ್ಯದೋಷಗಳಿಗೆ ಗುರಿಯಾಗುವದರಿಂದ ಇಂತಹ ದರ್ಶನವು ನರಾವತಾರಿಯಾಗಿರುವ ಅಧಿಕಾರಿಗೆ ಮಾತ್ರವೇ ವಿನಾ ಇನ್ನು ಯಾರಿಗೂ ಈ ಲೋಕದಲ್ಲಿ, ತೋರಿಸಿಲ್ಲವೆಂದು ತಿಳಿಸುವದಕ್ಕಾಗಿಯೇ **ತೇ** ಎಂಬುದಕ್ಕೆ **ಮದ್ಭಕ್ತಾಯತೇ** ಎಂದು ವ್ಯಾಖ್ಯಾನಮಾಡಿ, **ಕೇನಾಪಿನದೃಷ್ಟಪೂರ್ವಂ** ಎಂದು ಹೇಳಲ್ಪಟ್ಟಿತು. **ಆತ್ಮಯೋಗಾತ್** ಎಂಬಲ್ಲಿ **ಯೋಗ** ಶಬ್ದಕ್ಕೆ ಮಹಿಮೆ ಅಥವಾ ಶಕ್ತಿಯೆಂಬರ್ಥವು, **ಆತ್ಮಯೋಗಾತ್**-ಸ್ವಶಕ್ತಿಯಿಂದಲೇ, ನನ್ನರೂಪವು ತೋರಿಸಲ್ಪಟ್ಟಿತು ಎಂದು ಹೇಳಿದರು. ಆ ಸ್ವಶಕ್ತಿ ಎಂತಾದ್ದೆಂದರೆ ಸತ್ಯ ಸಙ್ಕಲ್ಪರೂಪವಾದುದೆಂದು ವ್ಯಕ್ತಪಡಿಸಿದರು. ಹೀಗೆ ತೋರಿಸುವದೇನು ತಮಗೆ ಶ್ರಮಸಾಧ್ಯವಾದದಲ್ಲವೆಂದೂ ಅದು ಸಙ್ಕಲ್ಪಮಾತ್ರದಿಂದಲೇ ನಡೆಯು

**ಭಾ ಅವ. ಅನನ್ಯ ಭಕ್ತಿ ವ್ಯತಿರಿಕ್ತೈಸ್ಸರ್ವೈ ರಪ್ಯುಪಾಯೈರ್ಯಥಾವಸ್ಥಿತೋಽಹಂ ದ್ರಷ್ಟುಂ ನಶಕ್ಯ ಇತ್ಯಾಹ**—

ತಕ್ಕದ್ದೆಂದೂ, ಇಂತಹ ಸಙ್ಕಲ್ಪಕ್ಕೆ ಅಧಿಕಾರಿಯಲ್ಲಿ ನಿರತಿಶಯ ಪ್ರೀತಿಯೂ, ಅದರಿಂದ ತನ್ನ ಪ್ರಸನ್ನತೆಯೂ, ಇವೆರಡೇ ಹೇತುವಾಗಿ, ಯಾವಾಗ ಇವೆರಡೂ ಇತ್ತೋ, ಆಗ ತನ್ನ ಸಙ್ಕಲ್ಪವು, ಅಪ್ರತಿಹತನಾಗಿ, ಸತ್ಯಸಙ್ಕಲ್ಪನೆಂದೆನಿಸುತ್ತದೆಂದೂ ಹೇಳಿದಂತಾಯಿತು ಹಿಂದೆ ಅರ್ಜುನನು **ಚತುರ್ಭುಜೇನ ಸಹಸ್ರ ಬಾಹೋಭವ**, ಸಾಹಸ್ರಬಾಹುವಿನ ರೂಪವನ್ನು ತೋರಿಸಿದವನಿಗೆ ಚತುರ್ಭುಜತ್ವೇನ ಆವಿಷ್ಕಾರವು ಒಂದು ಕಷ್ಟವೇ ಎಂಬ ಅಭಿಪ್ರಾಯವು ಸೂಚಿತವು. ಅದನ್ನೇ ಈಗ ಸರ್ವೇಶ್ವರನೂ ತನ್ನ ಸಙ್ಕಲ್ಪಮಾತ್ರದಿಂದಲೇ ಅಘಟಿತಘಟನಾ ರೂಪಶಕ್ತಿ ಮಾಹಾತ್ಮ್ಯಯುಳ್ಳ ಪರಮ ಪುರುಷನಿಗೆ ಇಂತಹ ಪರರೂಪವನ್ನು ತೋರಿಸುವದು ಒಂದು ಕಷ್ಟವೇ; ಎಂಬ ಭಾವವು ತೋರಿಬರುತ್ತದೆ ಅಧಿಕಾರಿಯು ಭಕ್ತಿಯನ್ನು ಮಾಡಬೇಕು, ಸರ್ವೇಶ್ವರನು ಸುಪ್ರೀತನಾಗಬೇಕು. ಆಗೀಗ ಸರ್ವೇಶ್ವರನ ಪ್ರಸನ್ನತೆಯು, ಫಲಪ್ರದವಾಗುವ ಅನುಗ್ರಹವು. ಎಂಬುದು ಸಾರಾಂಶವು

**ಭಾಷ್ಯಾವತಾರಿಕೆಯ ಅರ್ಥವು :** ಹಿಂದಿನ ಶ್ಲೋಕದಲ್ಲಿ **ತ್ವದನ್ಯೇನ ನದೃಷ್ಟಪೂರ್ವಂ** ಈಗ ನೀನಲ್ಲದೆ ಇನ್ನು ಯಾರೂ ನೋಡಲು ಸಾಧ್ಯವಿಲ್ಲದುದು ಈಗ ನಾನು ತೋರಿದ ರೂಪವು ಎಂದು ಹೇಳಿದರು. ಅದನ್ನೇ ವ್ಯಕ್ತಪಡಿಸಿ ಅನನ್ಯ ಭಕ್ತಿಯಲ್ಲದೆ ಇನ್ನು ಯಾವ ಉಪಾಯದಿಂದಲೂ ನನ್ನ ಯಥಾವತ್ತಾದ ಸ್ವರೂಪವನ್ನು ತಿಳಿಸುವ ಪರರೂಪವನ್ನು ತಿಳಿಸುವ ಪರರೂಪದ ಸಂದರ್ಶನವು ಸಾಧ್ಯವಲ್ಲವೆಂದು ಹೇಳುತ್ತಾರೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. **ಅನನ್ಯಭಕ್ತಿವ್ಯತಿರಿಕ್ತೈಃ** ಇನ್ನು ಯಾವುದರಲ್ಲೂ ಭಕ್ತಿ ಇಲ್ಲದೆ ನನ್ನೊಬ್ಬನಲ್ಲೇ ಇಡಲ್ಪಟ್ಟ ಏಕಾಂತಭಕ್ತಿಗಿಂತ ಬೇರೆಯಾದ, **ಸರ್ವೈರಪ್ಯುಪಾಯೈಃ**-ಮಿಕ್ಕ ಎಲ್ಲಾ ವಿಧ ಉಪಾಯಗಳಿಂದಲೂ **ಯಥಾವಸ್ಥಿತೋಽಹಂ** ಯಥಾವತ್ತಾದ ರೂಪವುಳ್ಳವನಾಗಿ, ನಾನು **ದ್ರಷ್ಟುಂ** ಸಾಕ್ಷಾತ್ಕರಿಸಲು **ನಶಕ್ಯ ಇತ್ಯಾಹ**–ಸಾಧ್ಯವಲ್ಲವೆಂದು ಹೇಳುತ್ತಾರೆ. ಆದರೆ ಭರನ್ಯಾಸವೂ ಒಂದು ಪರಮ ಪ್ರಾಪ್ಯವನ್ನು ಹೊಂದಿಸುವ ಮುಖ್ಯೋಪಾಯವಾಯಿತಲ್ಲಾ, ಅಂತಹ ಭರನ್ಯಾಸದಿಂದಲೂ, ಯಥಾವಸ್ಥಿತನಾಗಿರುವ ಸರ್ವೇಶ್ವರನು ಸಾಕ್ಷಾತ್ಕರಿಸಲ್ಪಡಲು ಸಾಧ್ಯವಲ್ಲವೋ ಎಂದರೆ ಅಲ್ಲಿಯೂ ಭಕ್ತಿರೂಪಾಪನ್ನ ಉಪಾಸನವಿಲ್ಲದುದರಿಂದ ಪರಮಾತ್ಮ ಸಾಕ್ಷಾತ್ಕಾರ ಸಿದ್ಧಿಯು ಇಲ್ಲಿಯೇ ಇಲ್ಲವಾದುದರಿಂದ, **ಅನನ್ಯಭಕ್ತಿ ವ್ಯತಿರಿಕ್ತೈ ಸರ್ವೈ ರಪ್ಯುಪಾಯೈಃ** ಎಂದು ಪ್ರಯೋಗಿಸಿರುತ್ತಾರೆ ಇಂತಹ ಪರಮಾತ್ಮ ಸಾಕ್ಷಾತ್ಕಾರ ರೂಪ ಸುಖವು ಭರನ್ಯಾಸಕ್ಕೆ ಇಲ್ಲವು, ಅನನ್ಯಭಕ್ತಿಯುಳ್ಳ ಉಪಾಸನಕ್ಕೆ ಮಾತ್ರವೇ ಉಂಟೆಂದು **"ಭಜನ ಸುಖ ಮೋಕ್ಷಸ್ಯ ವಿಪುಲಂ"** ಎಂದು ಕೊಂಡಾಡಿ **"ಪರಿಮಿತರಸಾಜೀವಿತ ದಶಾ"** ಭರನ್ಯಾಸಕ್ಕೆ ಅಂತಹ ಸುಕೃತವಿಲ್ಲವೆಂದು ಹೇಳಿರುತ್ತಾರೆ. ಆದರೆ ಭರನ್ಯಾಸದಲ್ಲೂ ಕೂಡ ಸರಿಯಾದ ಉಪಾಸನವು ಇಲ್ಲದಿದ್ದರೂ ಅಷ್ಟಾಕ್ಷರಾದಿ ಮಂತ್ರ ಜಪಕಾಲಗಳಲ್ಲಿ ಪರಮಪುರುಷನ ಧ್ಯಾನವು ವಿಹಿತವಾದುದರಿಂದ ಪರಮ ಪುರುಷ ಸಾಕ್ಷಾತ್ಕಾರವು ಲಭಿಸಬಹುದು. ಆದುದರಿಂದಲೇ ಶ್ರೀ ಯತಿವರ್ಯರು ಭರನ್ಯಾಸವನ್ನೇ ದ್ವಯಮಂತ್ರ ಪುರಸ್ಸರವಾಗಿ ಸ್ವೀಕರಿಸಿದರೂ, ಶರಣಾಗತಿ ಗದ್ಯದಲ್ಲಿ **"ಜ್ಞಾನಿನಂ ಮಾಂ ಕುರುಷ್ವ"** ಎಂದೂ **"ಪರಮಭಕ್ತಿಯುಕ್ತಂ ಮಾಂ ಕುರುಷ್ವ"** ಎಂದೂ **"ಪರಭಕ್ತಿ ಪರಜ್ಞಾನ ಪರಮಭಕ್ತ್ಯೈಕ ಸ್ವಭಾವಂ ಕುರುಷ್ವ"** ಎಂದೂ ಪ್ರಾರ್ಥಿಸಿರುತ್ತಾರೆ. ಇಂತಹ ಅನನ್ಯಭಕ್ತಿ ಎಂದರೆ ಪರಮೈಕಾನ್ತ ಭಕ್ತಿಯೂ

ಪ್ರಪದನವನ್ನು ಅನುಷ್ಠಿಸಿದವನಿಗೂ ಲಭಿಸಬಹುದು. ಆದರೆ ಉಪಾಸನಾ ನಿಷ್ಠನಹಾಗೆ ಇಂತಹ ಭಕ್ತಿರೂಪ ಅವಸ್ಥೆಯು ಲಭಿಸಿಯೇ ತೀರಬೇಕೆಂಬ ಆವಶ್ಯಕತೆಯು ಮಾತ್ರವಿಲ್ಲವು ನಮ್ಮಾಳ್ವಾರವರು ಶರಣಾಗತಿಯನ್ನು ಅನುಷ್ಠಿಸಿದರೂ, ಪರಮಾತ್ಮ ಧ್ಯಾನದಿಂದ ಇಂತಹ ಉತ್ಕೃಷ್ಟ ದೆಶೆಯನ್ನು ಹೊಂದಿ ಆರ್ತರಾಗಿ ಪರಮ ಪುರುಷ ಸಾಯುಜ್ಯವನ್ನು ಹೊಂದಿದರು.

**"ಇತ್ಯಾದಿ ಶ್ಲೋಕತ್ರಯೋದಿತಜ್ಞಾನಿನಂ ಮಾಂ ಕುರುಷ್ವ"** ಎಂದು ಪ್ರಾರ್ಥಿಸಿರುವ ಪರಿಂದಲೇ **"ಚತುರ್ವಿಧಾ ಭಜಂತೇ ಮಾಂ ಜನಾ ಸ್ಸುಕೃತಿನೋಽರ್ಜುನ । ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ"** ಎಂಬ ನಾಲ್ಕು ವಿಧ ವಿಭಾಗವು ಪ್ರಪತ್ತಿ ನಿಷ್ಠರಲ್ಲೂ ಉಂಟು ಎಂಬುದು ಸ್ಪಷ್ಟವು. ಅದನ್ನನುಸರಿಸಿಯೇ, **ಚತುರ್ವಿಧಾ ಭಜಂತೇ** ಎಂದು ಹೇಳಿದರೇ ವಿನಾ **ಉಪಾಸತೇ** ಎಂದು ಹೇಳಲಿಲ್ಲವು. ಎರಡು ವಿಧ ಉಪಾಯಗಳಿಗೂ ಅನ್ವಯಿಸಲಿ ಎಂದೇ ಶ್ರೀ ಗೀತಾಚಾರ್ಯರ ಮತ್ತು ಮಹರ್ಷಿಯ ಅಭಿಪ್ರಾಯವು. ಹಿಂದಿನ ಶ್ಲೋಕದಲ್ಲಿ ನಾಲ್ಕು ಜನರು **ನಪ್ರಪದ್ಯನ್ತೇ** ಎಂದು ಹೇಳಿ, ಮುಂದಿನ ಶ್ಲೋಕದಲ್ಲಿ **"ಚತುರ್ವಿಧಾ ಭಜಂತೇ ಮಾಂ"** ಎಂದು ಹೇಳಿರುವದರಿಂದ **ಪ್ರಪದ್ಯನ್ತೇ ಭಜಂತೇ** ಎಂಬ ಪದಗಳು ಸಮಾನಾಭಿಪ್ರಾಯದಲ್ಲಿ ಹೇಳಲ್ಪಟ್ಟಿವೆಂಬುದು ಸ್ಪಷ್ಟವು.

ಹೀಗೆ ಶರಣಾಗತಿ ಗದ್ಯದಲ್ಲಿ ಶ್ರೀ ಯತಿವರ್ಯರು **"ಜ್ಞಾನಿನಂ ಮಾಂ ಕುರುಷ್ವ"** ಎಂದೂ. **ಪರಭಕ್ತಿ ಪರಜ್ಞಾನ ಪರಮಭಕ್ತ್ಯೆಕಯುಕ್ತಂ ಮಾಂ ಕುರುಷ್ವ** ಎಂದೂ, ಪ್ರಾರ್ಥಿಸಿರುವವರಿಂದ, ಕೆಲವರು ಶ್ರೀ ಯತಿವರ್ಯರನ್ನು ಭಕ್ತಿಯೋಗನಿಷ್ಠರೆಂದೇ ಭಾವಿಸಿ ಅಂಗಶರಣಾಗತಿಯನ್ನು ಮಾಡಿದರೆಂದು ಹೇಳುವರು. ಶರಣಾಗತಿ ಗದ್ಯವನ್ನು ಚೆನ್ನಾಗಿ ಪರಿಶೀಲಿಸುವದರಿಂದಲೂ, ಮತ್ತು ಶ್ರೀ ಯಾಮುನ ಮುನಿಗಳನ್ನು, ಇವರು ಪರಮಗುರುವಾಗಿ ಭಾವಿಸಿರುವಾಗ, ಅವರು **"ನ ಧರ್ಮನಿಷ್ಠೋಽಸ್ಮಿ"** ಎಂಬ ಶ್ಲೋಕದಲ್ಲಿ ಕಾರ್ಪಣ್ಯವನ್ನು ಪ್ರದರ್ಶಿಸಿ, ಶರಣಾಗತಿಯನ್ನನುಷ್ಠಿಸಿರುವದರಿಂದ ಶ್ರೀ ಯತಿವರ್ಯರೂ ಶರಣಾಗತಿನಿಷ್ಠರೇ ಆಗಿರಬೇಕಾಗಿರುವದರಿಂದಲೂ, ಮತ್ತು ಶ್ರೀ ಯತಿವರ್ಯರು ತಮ್ಮ ಆಚಾರ್ಯರಾದ ತಿರುಕ್ಕೋಟ್ಟಿಯೂರ್ ನಂಬಿಯವರಿಂದ ದ್ವಯ ಮುಂತಾದ ಮನ್ತ್ರಗಳ ರಹಸ್ಯಾರ್ಥಗಳನ್ನೆಲ್ಲಾ ಸಂಗ್ರಹಿಸಿದುದರಿಂದಲೂ, **"ಅತ್ರದ್ವಯಂ"** ಎಂಬಲ್ಲಿ ಶ್ರೀ ಯತಿವರ್ಯರು ಪ್ರಪದನಾನುಷ್ಠಾನವನ್ನು ಮಾಡಿದರೇ ವಿನಾ, ಭಕ್ತಿಯೋಗ ನಿಷ್ಠರಲ್ಲವು.

ಹಿಂದೆ ಹೇಳಲ್ಪಟ್ಟ **"ನಾಯಮಾತ್ಮಾ"** ಶ್ರುತಿಯೇ ಈ ಮುಂದಿನ ಶ್ಲೋಕಗಳಿಂದ ಉಪಪಾದಿಸಲ್ಪಡುತ್ತದೆಂದು ಈ ಅಧ್ಯಾಯಾಂತ್ಯದಲ್ಲಿ ಶ್ರೀ ಭಾಷ್ಯಕಾರರು ವ್ಯಕ್ತಪಡಿಸಿರುತ್ತಾರೆ.

**ಮೂಲಕ್ಕೆ ಅರ್ಥವು:—ಹೇ ಕುರುಪ್ರವೀರ** - ಕುರುವಂಶದಲ್ಲಿ ವೀರಾಗ್ರೇಸರನಾದ ಅರ್ಜುನನೇ, **ಏವಂ ರೂಪಃ** - ನೀನು ಈಗ ನೋಡಿದ ಯಥಾರ್ಥವಾದರೂಪವುಳ್ಳ, **ಅಹಂ** - ನಾನು, **ತ್ವದನ್ಯೇನ** - ನಾರಾಯಣಾವತಾರಿಯಾದ ನನಗೆ ಸಹಾಯಕನಾಗಿ ನರಾವತಾರಿಯಾಗಿರುವ ನೀನಲ್ಲದೆ ಬೇರೇಯವನಿಂದ, **ನೃಲೋಕೇ** - ಈ ಭೂಲೋಕದಲ್ಲಿ, **ದ್ರಷ್ಟುಂ** - ಸಾಕ್ಷಾತ್ತಾಗಿ ನೋಡಲ್ಪಡಲು, **ವೇದಯಜ್ಞಾಧ್ಯಯನೈಃ** - ಕೇವಲ ವೇದಗಳ ಜ್ಞಾನದಿಂದಲೂ, ಯಜ್ಞಾನುಷ್ಠಾನಗಳಿಂದಲೂ, ವೇದಾಧ್ಯಯನಗಳಿಂದಲೂ, ಇದರಿಂದ ಶ್ರವಣ ಮನನಾದಿಗಳೂ, ಕರ್ಮಾನುಷ್ಠಾನಗಳೂ ಹೇಳಲ್ಪಟ್ಟವು, ಕೇವಲ ಇವುಗಳೆಲ್ಲವುಗಳಿಂದಲೂ, **ನಶಕ್ಯಃ** - ಸಾಧ್ಯನಲ್ಲವು, **ನದಾನೈಃ** - ಕೇವಲ ಸತ್ಪಾತ್ರದಲ್ಲಿ ಮಾಡಿದ ದಾನಗಳಿಂದಲೂ ಸಾಧ್ಯನಲ್ಲವು, **ನ ಚ ಕ್ರಿಯಾಭಿಃ** - ಅಗ್ನಿ ಹೋತ್ರಾದಿ ಹೋಮಗಳಿಂದಲೂ ಸಾಧ್ಯನಲ್ಲವು, **ನ ತಪೋಭಿಃ ರುಗ್ರೈಃ** - ಕ್ರೂರಗಳಾದ ಅನಶನವ್ರತ ಮೊದಲಾದ ತಪಸ್ಸಿನಿಂದಲೂ ಸಾಧ್ಯನ

**ಮೂ. ನವೇದ ಯಜ್ಞಾಧ್ಯಯನೈರ್ನದಾನೈಃ ನಚಕ್ರಿಯಾಭಿರ್ನತಪೋಭಿರುಗ್ರೈಃ।**
**ಏವಂ ರೂಪ ಶ್ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ॥೪೮॥**

ಲ್ಲವು, ಆದರೆ ಕರ್ಮಯೋಗಕ್ಕೆ ಇವೆಲ್ಲಾ ಸಹಕಾರಿಯೆಂದು ಹೇಳಲ್ಪಟ್ಟಿತಲ್ಲಾ, ಇಲ್ಲಿ ಹೇಳಿರುವುದು ಅದಕ್ಕೆ ವಿರುದ್ಧವಾಯಿತಲ್ಲಾ ಎಂದರೆ, ಸಹಕಾರಿಯಲ್ಲವೆಂದು ಇಲ್ಲಿ ನಿಷೇಧಿಸಲ್ಪಡಲಿಲ್ಲವು. ಆದುದರಿಂದಲೇ ಯಾವಾಗ ಅವುಗಳಿಂದ ನಾನು ನೋಡಲ್ಪಡಲು ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿತೋ, ಆಗ ಬರೀ ಅವುಗಳಿಂದಲೇ ಸಾಧ್ಯವಲ್ಲವೆಂದೇ ಅರ್ಥಮಾಡತಕ್ಕದ್ದಾಗಿರುತ್ತದೆ. ಹಾಗಾದರೆ ಯಜ್ಞದಾನ, ತಪಸ್ಸುಗಳು ನಿರರ್ಥಕವಲ್ಲವೋ ಎಂದರೆ ಅತ್ಯಾವಶ್ಯಕವು; ಅವುಗಳಿಲ್ಲದೆ ಎಂದರೆ ಕರ್ಮಯೋಗವಿಲ್ಲದೆ ಭಕ್ತಿಯೋಗವಿಲ್ಲವು. ಕರ್ಮಯೋಗಮಾತ್ರದಿಂದಲೇ ಮೋಕ್ಷವಿಲ್ಲದಿದ್ದರೂ ಅದು ಆವಶ್ಯಕ ಹೇಗೆಂದರೆ ಹಿಂದೆಯೂ **"ಯಜ್ಞಾಯಾಚಾರತಃ ಕರ್ಮ ಸಮಗ್ರಂ ಪ್ರವಿಲೀಯತೇ"** (ಗೀ. ೪. ೨೩.) ಎಂಬಲ್ಲೂ, ಮುಂದೆಯೂ **"ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ"** (ಗೀ. ೧೮. ೫.) ಎಂಬಲ್ಲೂ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಪಾಪಗಳ ನಿವಾರಣೆಗಾಗಿಯೂ, ಅತ್ಯಾವಶ್ಯಕವೇ. **"ಕಷಾಯೇ ಕರ್ಮಭಿಃ ಪಕ್ವೇ ತತೋಜ್ಞಾನಂ ಪ್ರವರ್ತತೇ", "ಧರ್ಮೇಣ ಪಾಪಮಪನುದತಿ"** ಇತ್ಯಾದಿ ಪ್ರಮಾಣಗಳು ಅನುಸಂಧೇಯವು. ಪ್ರಕೃತವಿಷಯವೇನೆಂದರೆ ಬರೀ ಇವುಗಳಿಂದ ಪ್ರಾಪ್ಯವಾದ ನನ್ನನ್ನು ಹೊಂದಲು ಸಾಧ್ಯವಿಲ್ಲವು. ಅನನ್ಯಭಕ್ತಿಯಿಂದ ಮಾತ್ರವೇ ಸಂತುಷ್ಟನಾದ ನಾನು ಹೊಂದಲ್ಪಡಲು ಸಾಧ್ಯವೇ ವಿನಾ ಅನ್ಯಥಾ ಇಲ್ಲವೆಂಬ ಶಾಸ್ತ್ರಾರ್ಥವನ್ನು ಬೋಧಿಸಿದರು. **ನೃಲೋಕೇ** ಸಾಧ್ಯವಿಲ್ಲವೆಂದು ಹೇಳಿದುದರಿಂದ ದೇವಲೋಕದಲ್ಲಿ ಕೇವಲ ಇವುಗಳಿಂದಲೇ ನೋಡಲ್ಪಡಲು ಸಾಧ್ಯವೋ? ಎಂದರೆ, ನೃಲೋಕವೆಂಬುದು ವೈಕುಂಠೇತರಲೋಕಗಳಿಗೆ ಉಪಲಕ್ಷಣವೆಂದು ಭಾವಿಸಿ ಅಲ್ಲಿಯೂ ಸಾಧ್ಯವಿಲ್ಲವೆಂದು ಭಾವಿಸತಕ್ಕದ್ದು. ಹಾಗಾದರೆ ವೈಕುಂಠಲೋಕದಲ್ಲಿ ಹೇಗೆ? ಎಂದರೆ ಅಲ್ಲಿ ಮಾತ್ರ ಸಾಕ್ಷಾತ್ತಾಗಿ ಸಾಧ್ಯವು; ಅಲ್ಲಿ ಅನಂತರ ಯಾವ ಉಪಾಯಾನುಷ್ಠಾನವೂ ಬೇಕಿಲ್ಲವು; ಅಲ್ಲಿ ಶಾಸ್ತ್ರವಶ್ಯತೆಯೂ ಇಲ್ಲವು. ಶಾಸ್ತ್ರವಶ್ಯತೆಯೆಲ್ಲಾ ತದಿತರಲೋಕಗಳಿಗೆ ಎಂದು ತಿಳಿಯತಕ್ಕದ್ದಾಗಿರುತ್ತದೆ. ಏಕೆಂದರೆ ಅಲ್ಲಿ ವಿರುದ್ಧಾಚರಣೆಯೇ ಇಲ್ಲವು. ಇಲ್ಲಿ **ಕುರುಪ್ರವೀರ** ಎಂಬ ಸಂಬೋಧನೆಯಿಂದ, ಮಹಾ ಸುಕೃತಿಯಾದ ಕುರುವಿನ ವಂಶದಲ್ಲಿ ನೀನು ಶ್ರೇಷ್ಠನಾದ ಪ್ರಯುಕ್ತ ನೀನು ವಿಶೇಷ ಭಕ್ತಿಯುಳ್ಳವನಾದುದರಿಂದ, ಈ ವಿಶ್ವರೂಪ ಪರರೂಪ ದರ್ಶನ ಸುಕೃತವು ನಿನಗೆ ಲಭಿಸಿತು; ನಿನ್ನ ವಂಶದವರೂ ಕೂಡ ಮಹಾ ಸುಕೃತಿಗಳು ಎಂಬ ಭಾವವೂ ಸೂಚಿತವು. ಅರ್ಜುನನ ಕೈಯಲ್ಲಿ ಹೇಗಾದರೂಮಾಡಿ ಯುದ್ಧ ಮಾಡಿಸಲೇ ಬೇಕು ಎಂಬುದು ಶ್ರೀ ಕೃಷ್ಣಭಗವಾನರವರ ಸ್ಥಿರಸಙ್ಕಲ್ಪವು; ಅದಕ್ಕಾಗಿಯೂ **ಕುರುಪ್ರವೀರ** ಎಂಬ ಸಂಬೋಧನೆಯು; ವಿಶ್ವರೂಪದಲ್ಲಿ ನಾನೇ ತೋರಿಸಿದಹಾಗೆ ನಿನಗೆ ಜಯವು ಸಿದ್ಧವು, ಆದುದರಿಂದ ನೀನು ಕುರುಪ್ರವೀರನೆಂದು ಲೋಕದಲ್ಲಿ ಖ್ಯಾತಿಯು ಸ್ಥಿರವಾಗಿ ನಿನಗೆ ನಿಲ್ಲುವದೆಂಬ ಭಾವವನ್ನೂ ಈ ಸಂಬೋಧನೆಯು ಸೂಚಿಸುತ್ತದೆ.

**ನೃಲೋಕೇ ದ್ರಷ್ಟುಂ ತ್ವದನ್ಯೇನ** ಎಂದು ಹೇಳಿರುವದರಲ್ಲಿ ಇನ್ನೊಂದು ಸ್ವಾರಸ್ಯವನ್ನು ಗ್ರಹಿಸತಕ್ಕದ್ದಾಗಿರುತ್ತದೆ. ವಿಶ್ವರೂಪವನ್ನು ಅಲ್ಲಿ ನೆರೆದಿರುವ ದೇವತೆಗಳೂ ಮಹರ್ಷಿಗಳೂ ಮುಂತಾದವರು ನೋಡಿದಹಾಗೆ ಈ ಪರರೂಪವನ್ನು ಅವರು ಏಕೆ ನೋಡಲಿಲ್ಲವು? ಎಂದರೆ ಅರ್ಜುನನಿಗೆ ಕೊಟ್ಟಹಾಗೆ ದಿವ್ಯ ಚಕ್ಷುಸ್ಸನ್ನು ಅವರಿಗೂ ದಯಪಾಲಿಸಿದ್ದರಾದುದರಿಂದ ಅವರೂ ಸಾಕ್ಷಾತ್ತಾಗಿ ವಿಶ್ವರೂಪವನ್ನು ನೋಡಿದರು. ವಿಶ್ವರೂಪದ ಉಪಸಂಹಾರದೊಂದಿಗೆ ಅವರ ದಿವ್ಯ ಚಕ್ಷುಸ್ಸೂ ಸಹ ಸ್ವಾಮಿ ಸಙ್ಕಲ್ಪದಿಂದ ಉಪಸಂಹೃತವೆಂದು ಭಾವಿಸತಕ್ಕ

**ಭಾ. ಏವಂ ರೂಪೋ - ಯಥಾವಸ್ಥಿತೋಽಹಂ, ಮಯಿ ಭಕ್ತಿ ಮತಸ್ತ್ವತ್ತೋऽನ್ಯೇನ - ಏಕಾಂತಕ (ಐಕಾನ್ತಿ ಕಾತ್ಯಂತಿಕ) ಭಕ್ತಿ ರಹಿತೇನ ಕೇನಾಪಿ ಪುರುಸೇಣ ವೇದ ಯಜ್ಞಾದಿಭಿಃ ಕೇವಲೈರ್ದ್ರಷ್ಟುಂ ನಶಕ್ಯಮ್. ||೪೮||**

ಪ್ಪಾಗಿರುತ್ತದೆ. ಆದುದರಿಂದಲೇ ಅರ್ಜುನನೊಬ್ಬನೇ ಈ ಪರರೂಪವನ್ನು ಸಾಕ್ಷಾತ್ತಾಗಿ ನೋಡಿದನು.

ಇಲ್ಲಿ **ಅಹಂ ನೃಲೋಕೇ ದ್ರಷ್ಟುಂತ್ವದನ್ಯೇನ ನಶಕ್ಯಃ** ಎಂದು ಗೀತಾಚಾರ್ಯರು ಹೇಳಿರುವದರ ಮುಖ್ಯತಾತ್ಪರ್ಯವೇನೆಂದರೆ ? ಉಪಾಸನದಿಂದ ತನ್ನ ಸಾಕ್ಷಾತ್ಕಾರವು ಅನೇಕ ರಾದ ಮುಕ್ತಿಯನ್ನು ಹೊಂದುವವರಿಗೆ ಇಲ್ಲಿಯೇ ಉಪಾಸ್ಯ ದಿವ್ಯ ಮಙ್ಗಳ ವಿಗ್ರಹಾನುಸಾರ ವಾಗಿ ಲಭಿಸಬಹುದು. ಆದರೆ ನೀನಲ್ಲದ ಇನ್ನು ಯಾರೂ **ಪ್ರತ್ಯಕ್ಷವಾಗಿ** ಈ ಲೋಕದಲ್ಲೇ ಈ ಪ್ರಾಪ್ಯರೂಪವನ್ನು ನೋಡಲು ಸಾಧ್ಯವಿಲ್ಲವು ; ಮುಕ್ತಿಯನ್ನು ಹೊಂದಿದಾಗಲೇ ಸಾಧ್ಯವೇ ವಿನಾ ಈ ಲೋಕದಲ್ಲೇ ಎಂದಿಗೂ ಸಾಧ್ಯವಿಲ್ಲವೆಂಬುದು ಮುಖ್ಯಾಭಿಪ್ರಾಯವು. **ನೃಲೋಕೇ ನಶಕ್ಯಃ** ಎಂದು ಹೇಳಿರುವದರಿಂದ ಇದು ವಿಶ್ವರೂಪವೆಂದು ಅನ್ವಯಿಸಲು ಸರ್ವಾತ್ಮನಾ ಕೂಡುವುದಿಲ್ಲವು ; ವಿಶ್ವರೂಪವನ್ನು ಇತರರಿಗೂ ತೋರಿಸಿರುವದರಿಂದ.

**ಭಾಷ್ಯಾರ್ಥವು:—ಏವಂ ರೂಪಃ** ಎಂದರೆ **ಯಥಾವಸ್ಥಿತೋಽಹಂ** - ಸರಿಯಾದ ಸ್ವರೂಪ ಪ್ರದರ್ಶಕರೂಪವುಳ್ಳ ನಾನು. ಇದರಿಂದ ಅವತಾರದ ಮಾನುಷರೂಪವೂ ಕೂಡ ಅಪ್ರಾಕೃತವಾದರೂ, ಅದು ಯಥಾವಸ್ಥಿತ ಭಾವವನ್ನು ಪ್ರದರ್ಶಿಸಲಾರದಾದುದರಿಂದ, ಯಥಾವ ಸ್ಥಿತರೂಪವು ಪರವಾಸುದೇವರೂಪವು ಎಂದು ಭಾವಿಸತಕ್ಕದ್ದು. **ಮಯಿ ಭಕ್ತಿಮತಸ್ತ್ವತ್ತಃ** - ನನ್ನಲ್ಲಿ ವಿಶೇಷ ಭಕ್ತಿಯುಳ್ಳ ನಿನಗಿಂತಲೂ, ಇನ್ನೂ ಕರ್ಮಯೋಗವನ್ನೇ ಸರಿಯಾಗಿ ಅನುಷ್ಠಿ ಸದೇ ಇರುವಾಗ **ಭಕ್ತಿಮತಃ** ಎಂಬ ಪ್ರಯೋಗವು ಹೇಗೆ ? ಎಂದರೆ **ನರಾವತಾರಿಯಾಗಿ ಭಕ್ತಿಮಾರ್ಗ** ಆದುದರಿಂದ ಎಂಬ ಭಾವವು. **ಅನ್ಯೇನ** - ಇತರನಿಂದ ಎಂದರೆ **ಏಕಾಂತ ಭಕ್ತಿರಹಿತೇನ ಕೇನಾಪಿ ಪುರುಷೇಣ** - ಇಂತಹ ಏಕಾಂತ ಭಕ್ತಿಯಿಲ್ಲದ ಯಾವ ಸಾಧಾರಣ ಪುರುಷನಿಂದಾಗಲಿ, ಮೇಲೆ ಹೇಳಿದ **ಕೇವಲ ವೇದ ಯಜ್ಞಾದಿಗಳಿಂದ,** ಇಲ್ಲಿ ಆದಿಶಬ್ದದಿಂದ ಮೂಲದಲ್ಲಿ ಹೇಳಿರುವ, ಅಧ್ಯಯನ, ದಾನ, ಕ್ರಿಯಾ, ತಪಸ್ಸುಗಳು ಹೇಳಲ್ಪಟ್ಟವು, **ದ್ರಷ್ಟುಂ** - ಸಾಕ್ಷಾತ್ತಾಗಿ ನೋಡಲು **ನಶಕ್ಯಂ** - ಸಾಧ್ಯವಲ್ಲವು. **"ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾऽನಾಶಕೇನ"** (ಬೃ. ೬. ೪. ೨೨.) ಎಂಬಲ್ಲಿ ಯಜ್ಞದಾನ ತಪಸ್ಸುಗಳು ವೇದಾಧ್ಯಯನ ಇವೆಲ್ಲವೂ ಪರಬ್ರಹ್ಮವನ್ನು ತಿಳಿಯಲು ಸಾಧನವೆಂದು ಹೇಳಿರುವಾಗ, ಇಲ್ಲಿ ಅವುಗಳನ್ನು ನಿಷೇಧಿಸಿ ಹೇಳಿದುದು ಹೇಗೆ ? ಎಂದು ಆಕ್ಷೇಪ ಬಂದೀತೆಂದೇ ಇವುಗಳಿಂದ ಮಾತ್ರವೇ ಸಾಧ್ಯವಿಲ್ಲವೆಂದು ಹೇಳುವದಕ್ಕಾಗಿ **ಕೇವಲ** ಶಬ್ದ ವನ್ನು ಉಪಯೋಗಿಸಿರುತ್ತಾರೆ. ಇವುಗಳು ಸಹಕಾರಿಯಾಗಿ ಆಗಬಹುದು. ಹಾಗಾದರೆ ಏತರಿಂದ ಸಾಧ್ಯವೆಂದರೆ, ಐಕಾಂತಿಕ ಭಕ್ತಿಯಿಂದಲೇ ಮನಸ್ಸಿನ ಮೂಲಕ ಸಾಕ್ಷಾತ್ಕರಿಸುವದು ಸಾಧ್ಯ ವೆಂದು ಹೇಳಿದರು ; ಅಷ್ಟು ಮಾತ್ರವೇ ಅಲ್ಲವು ; ಅಂತಹ ಭಕ್ತಿಯಿಂದ ಆತನು ಸುಪ್ರೀತ ನಾಗಿ ಅನುಗ್ರಹೋನ್ಮುಖನಾಗಬೇಕು. ಹೀಗಾದರೇನೇ ಸಾಧ್ಯವೇ ವಿನಾ ಅನ್ಯಥಾ ಸಾಧ್ಯವಲ್ಲ ವೆಂದೂ, ಉಪದೇಶಿಸಿದರು. ಶ್ರೀಕೃಷ್ಣನನ್ನು ಮನುಷ್ಯಾವತಾರಿಯಾಗಿ ಎಲ್ಲರೂ ಏನೊಂದೂ ವ್ಯತ್ಯಾಸವಿಲ್ಲದೆ ನೋಡುತ್ತಾರೆ, ಅದು ಎಲ್ಲರಿಗೂ ಬೀದಿಯಲ್ಲಿ ಹೋಗುತ್ತಿದ್ದರೆ ಸಾಧ್ಯವಾಗಿದೆ ಯಲ್ಲಾ ಎಂದರೆ ಆ ರೂಪವು ಮರೆಸಿಕೊಂಡಿರುವ ರೂಪವು ; **ಅಹಂ ವೋ ಬಾಂಧವೋ ಜಾತಃ** ಎಂದು ಹೇಳಲನುಕೂಲವಾದುದು ; ಯಥಾವದವಸ್ಥಿತವಾದುದಲ್ಲವು. ಸರ್ವೇಶ್ವರನ

**ಮೂ. ಮಾ ತೇ ವ್ಯಥಾ ಮಾ ಚ ವಿಮೂಢಭಾವೋ ದೃಷ್ಟ್ವಾ ರೂಪಂ ಘೋರ ಮೀದೃ ಙ್ಮಮೇದಮ್ । ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವ ಮೇ ರೂಪ ಮಿದಂ ಪ್ರಪಶ್ಯ ॥** ೪೯.

ಯಥಾವಸ್ಥಿತ ಸ್ವರೂಪವನ್ನು ಬೋಧಿಸುವ ರೂಪವಲ್ಲವು; ಆದುದರಿಂದಲೇ **ಏವಂ ರೂಪಃ** ಎಂಬುದಕ್ಕೆ **ಯಥಾವಸ್ಥಿತರೂಪಃ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಪರತ್ವವನ್ನೂ ತನ್ನ ಕಲ್ಯಾಣಗುಣಯೋಗ, ವಿಭೂತಿ ಮೊದಲಾದ ಮಹದೈಶ್ವರ್ಯಗಳ ಯೋಗವನ್ನೂ ಹೊಂದಿರುವ ರೂಪವೇ ಧ್ಯೇಯವು, ಅಂತಹ ರೂಪಸಾಕ್ಷಾತ್ಕಾರದಿಂದ ಆತನು ಪ್ರಸನ್ನನಾದರೇನೇ ಫಲಪ್ರದ ನಾಗುವನು ಎಂದು ಉಪದೇಶಿಸಲ್ಪಟ್ಟಿತು. ॥ ೪೮ ॥

**ಮೂಲಕ್ಕೆ ಅರ್ಥವು:—**ಅರ್ಜುನನು ಶ್ರೀಕೃಷ್ಣನ ದಿವ್ಯಾಯುಧಗಳಿಂದ ಶೋಭಿಸುವ ಚತುರ್ಭುಜಗಳಿಂದೊಪ್ಪುವ ಸೌಮ್ಯವಾದ ಪರರೂಪವನ್ನು ನೋಡಬೇಕೆಂದು ಅಪೇಕ್ಷಿಸಿದುದ ರಿಂದ, ಭಕ್ತವಾತ್ಸಲ್ಯ ವಿವಶನಾದ ಸ್ವಾಮಿಯು ಅನುಗ್ರಹಿಸಿ, ತಾನು ಚತುರ್ಭುಜದಿಂದಿರುವ ಆಕೃತಿಯನ್ನು ತೋರಿಸಿ, ಹಿಂದಿನ ಘೋರವಾದ ವಿಶ್ವರೂಪದರ್ಶನದಿಂದ ನೀನು ಭೀತಿಯನ್ನೂ ಕ್ಲೇಶವನ್ನೂ ಬಹಳವಾಗಿ ಹೊಂದಿದೆ; ಅವುಗಳ ನಿವಾರಣಾರ್ಥವಾಗಿ ನೀನು ಶರಣಾಗತಿಯನ್ನನು ಷ್ಠಿಸಿ, **ಪ್ರಸೀದದೇವೇಶ** ಎಂದು ಹೇಳಿ, **ತದೇವ ಮೇದರ್ಶಯ ರೂಪಂ** ಎಂದು ಪ್ರಸಿದ್ಧ ವಾದ ಪರವಾಸುದೇವರೂಪವನ್ನು ತೋರು ಎಂದು ಪ್ರಾರ್ಥಿಸಿದಿಯಾದುದರಿಂದ, ನಿನ್ನಲ್ಲಿ ನನಗೆ ಪ್ರೀತ್ಯತಿಶಯವಿರುವದರಿಂದ ಒಡನೇ ಪರರೂಪವನ್ನು ತೋರಿಸಿರುತ್ತೇನೆ ನೋಡು ಎಂದು ಅದೇ ಪದಗಳನ್ನೇ ಪ್ರಯೋಗಿಸಿ, **"ಪುನಸ್ತ್ವಂ ತದೇವಮೇರೂಪ ಮಿದಂ ಪ್ರಪಶ್ಯ"** ನೀನು ಪುನಃ ಕೇಳಿದ ಆ ಪ್ರಸಿದ್ಧವಾದ ಪರರೂಪವನ್ನು ತೋರಿಸಿರುವೆನು; ಚೆನ್ನಾಗಿ ಮನದಣಿಯುವಹಾಗೆ ನೋಡು ಎಂದು ನಿಗಮನದಲ್ಲಿ ಹೇಳುತ್ತಾರೆ — **ಈದೃಕ್** – ದಂಷ್ಟ್ರಾಕರಾಳ ವಕ್ತ್ರಾದಿಗಳಿಂದ ಯುಕ್ತವಾಗಿ ಹೀಗೆ. **ಘೋರಂ** – ಭಯಂಕರವಾದ. **ಮಮ ಇದಂ ರೂಪಂ** – ನನ್ನ ಈ ವಿಶ್ವರೂಪವನ್ನು, **ದೃಷ್ಟ್ವಾ** – ಕಂಡು, **ಮಾತೇವ್ಯಥಾ** – ನಿನಗೆ ಮನೋವ್ಯಾಕುಲವು ಬೇಕಿ ಲ್ಲವು; ಹಿಂದೆ ಅರ್ಜುನನು ತನ್ನ ಮನಸ್ಸು ಕ್ಲೇಶವನ್ನು ಹೊಂದಿದೆ ಎಂದು ಹೇಳಿದ್ದನು; ಇನ್ನು ನಿನಗೆ ಮನಃಕ್ಲೇಶವು ಬೇಡವೆಂದು ಸಮಾಧಾನಮಾಡುತ್ತಾರೆ; **ಮಾಚ ವಿಮೂಢ ಭಾವಃ** – ನಿನಗೆ ಭಯಾದಿಗಳಿಂದುಂಟಾದ ಮನಸ್ಸಿನ ಮೋಹಭಾವವೂ ಬೇಡವು; **ವ್ಯಪೇತಭೀಃ** – ಹೋಗ ಲ್ಪಟ್ಟ ಭಯವುಳ್ಳವನಾಗಿಯೂ, **ಪ್ರೀತಮನಾಃ** – ಸಂತೋಷಚಿತ್ತನಾಗಿಯೂ ಎಂದರೆ ಶಾಂತ ಮನಸ್ಕನಾಗಿಯೂ ಎಂಬ ಭಾವವು, **ತ್ವಂ** – ನೀನು. **ಇದಂ** – ಈ **ತದೇವರೂಪಂ** – ನೀನು ಪ್ರಾರ್ಥಿಸಿದ ಪ್ರಸಿದ್ಧವಾದ ಪರರೂಪವಾದ ದಿವ್ಯಾಯುಧಗಳಿಂದ ಸೇರಿದ ಚತುರ್ಭುಜಗಳುಳ್ಳ ಆ ರೂಪವನ್ನೇ **ಪ್ರಪಶ್ಯ** – ಮನದಣಿಯುವಂತೆ ನೋಡು. ಎರಡನೆಯ ಸಲ ಈಗ ತೋರುವ ರೂಪವು ದಿವ್ಯಾಭರಣ, ದಿವ್ಯಾಯುಧಗಳಿಂದಲೂ ಚತುರ್ಭುಜದಿಂದಲೂ ಒಪ್ಪುವ ರೂಪವು. ಅಂತಹ ದಂಷ್ಟ್ರಾಕರಾಳ ವಕ್ತ್ರಾದಿಗಳಿಂದ ಕೂಡಿದ ಘೋರರೂಪವನ್ನು ತ್ಯಜಿಸಿ, ಶಾಸ್ತ್ರಗಳಲ್ಲಿ ಪ್ರಾಪ್ಯರೂಪವು ಶಾಸ್ತ್ರವಾಗಿ ಚತುರ್ಭುಜಯುಕ್ತವಾಗಿ ಉಂಟೆಂದು ಉಪದಿಷ್ಟ ವಾದುದರಿಂದ, ಅದನ್ನು ನೋಡಬೇಕೆಂದು ಪ್ರಾರ್ಥಿಸಿದನಾದುದರಿಂದ, ಆ ರೂಪವು ಇಲ್ಲಿ ಪ್ರದ ರ್ಶಿಸಿರುತ್ತೇನೆ ಎಂಬ ಭಾವವು. ಮುಂದಿನ ೫೧ ನೆಯ ಶ್ಲೋಕದಲ್ಲಿ ಮಾನುಷರೂಪವನ್ನು ಎಂದರೆ ಎಲ್ಲರ ಹಾಗೂ ದ್ವಿಭುಜದಿಂದಿರುವ ರೂಪವನ್ನು ಧರಿಸಿದರೆಂದು ಹೇಳಲ್ಪಟ್ಟಿರುತ್ತದೆ. ಈಗ ತೋರಿಸಿದ ರೂಪವು ಯಾವುದೆಂದರೆ ಮುಂದಿನ ಸಂಜಯೋಕ್ತಿಯಿಂದ ವ್ಯಕ್ತಪಡುತ್ತದೆ. **ಸ್ವಕಂರೂಪಂ ದರ್ಶಯಾಮಾಸ ಭೂಯಃ - ಭೂಯಃ** ಎಂದರೆ ಎರಡನೆಯ ಸಲ, **ಸ್ವಕಂ**

**ರೂಪಂ** – ಶಂಖ, ಚಕ್ರ, ಗದಾಪದ್ಮಾದಿಗಳಿಂದಲೂ ಚತುರ್ಭುಜದಿಂದಲೂ ಒಪ್ಪುವ ಪರಮ ಪುರುಷನಾದ ತನ್ನ ಪರವಾಸುದೇವ ರೂಪವೇ ತನಗೆ **ಸ್ವಕಂ ರೂಪಂ** – ಪರಬ್ರಹ್ಮನಾದ ತನ್ನ ಅಸಾಧಾರಣರೂಪವು. ಮಾನುಷರೂಪವೂ ಮತ್ತು ಮೀನ ಕೂರ್ಮಾದಿ ರೂಪಗಳೂ ಸ್ವಕಂರೂಪ ವಲ್ಲವು; ಆರೋಪಿತವಾದುವು. ಉತ್ತರಾರ್ಧದಲ್ಲಿ **ಭೂತ್ವಾಪುನ ಸ್ಸೌಮ್ಯ ವಪುಃ** ಎಂದು ಇನ್ನೊಂದು ಸಲ ರೂಪಭೇದವನ್ನು ಹೊಂದಿರುವದಾಗಿ **ಭೂತ್ವಾ ಪುನಃ** ಎಂದು ಹೇಳಿರುವದ ರಿಂದ, ತನ್ನ ಚತುರ್ಭುಜದ ರೂಪವನ್ನು ತೋರಿಸಿ, ಪುನಃ ಮಾನುಷರೂಪವನ್ನು ಒಡನೆ ತಾಳಿದ ರೆಂದು ತೋರಿಬರುತ್ತದೆ. ಹೀಗೆ ಅರ್ಥಮಾಡದಿದ್ದರೆ, **ದರ್ಶಯಾಮಾಸ ಭೂಯಃ** ಎಂದೂ, **ಭೂತ್ವಾ ಪುನಸ್ಸೌಮ್ಯವಪುಃ** ಎಂದೂ ಹೇಳಿರುವುದರಿಂದ ಪುನರುಕ್ತಿ ದೋಷಕ್ಕೆ ಕಾರಣವಾಗು ತ್ತದೆ. ಅದೂ ಅಲ್ಲದೆ ಚತುರ್ಭುಜ ಯುಕ್ತರೂಪವನ್ನು ನೋಡಬೇಕೆಂದು ಪ್ರಾರ್ಥಿಸಿದ ಭಕ್ತನ ಕೋರಿಕೆಯನ್ನು ಸಲ್ಲಿಸಲಿಲ್ಲವೆಂಬ ಅಪವಾದಕ್ಕೂ ಶ್ರೀ ಕೃಷ್ಣಭಗವಾನರವರು ಗುರಿಯಾಗುವರು. ಕಾಲಯವನ, ಮುಚುಕುಂದ ಪೌಂಡ್ರಕ ವಾಸುದೇವ, ಶಿಶುಪಾಲ, ಅಕ್ರೂರ, ಅವತಾರೋಪ ಸಂಹಾರಕಾಲದಲ್ಲಿ ಜರಾ ಎಂಬ ವ್ಯಾಧನಿಗೂ ಚತುರ್ಭುಜದ ಆವಿಷ್ಕಾರವು ಆ ಕಾಲದಲ್ಲಿ ಮಾತ್ರ ಉಂಟೆಂದು ಭಾವಿಸತಕ್ಕದ್ದು. ಆಯಾ ಅವಸರಗಳಲ್ಲಿ ಧರಿಸಿದುದಕ್ಕೆ ಪ್ರಮಾಣವುಂಟು. ಹಾಗೆ ಚತುರ್ಭುಜತ್ವವೇ ಸಾಮಾನ್ಯರೂಪವಾದರೆ ಅತಿಮಾನುಷರೂಪವಾಯಿತೇ ವಿನಾ ಮಾನು ಷರೂಪವಾಗಲಿಲ್ಲವು.. ಇದೇ ಗೀತೆಯಲ್ಲಿರುವ **"ಮಾನುಷೀಂ ತನುಮಾಶ್ರಿತಮ್ । ಪರಂ ಭಾವ ಮಜಾನನ್ತಃ"** (ಗೀ. ೯-೧೧.) ಎಂಬುದಕ್ಕೂ **"ನಾಹಂ ಪ್ರಕಾಶಸ್ಸರ್ವಸ್ಯ"** (ಗೀ. ೭-೨೫.) ಎಂಬುದಕ್ಕೂ, **"ಮಾಂತುವೇದನಕಶ್ಚನ"** (ಗೀ. ೭-೨೬.) ಇತ್ಯಾದಿ ಪ್ರಯೋಗ ಗಳಿಗೂ **"ಅಹಂ ವೋಬಾಂಧವೋಜಾತಃ"** (ವಿ. ಪು ೫. ೧೩. ೧೨ ) ಇತ್ಯಾದ್ಯನೇಕ ಪ್ರಯೋಗಗಳಿಗೂ, ವಿರುದ್ಧವಾಗುತ್ತದೆ. ಶ್ರೀ ಪರಾಶರರು **ಮನುಷ್ಯತ್ವೇಽಪಿ ತಿಷ್ಠತಾ"** ಎಂದು ಪ್ರಯೋಗಿಸಿರುವದಕ್ಕೂ ವಿರುದ್ಧವಾಗುತ್ತದೆ ಚತುರ್ಭುಜವಿದ್ದೂ ಮಾನುಷತ್ವ ಏಕೆ ಕೂಡದು ? ದ್ವಿಭುಜತ್ವವು ಮಾನುಷತ್ವಕ್ಕೆ ಪ್ರಸಿದ್ಧವಾದುದರಿಂದ ಚತುರ್ಭುಜತ್ವವಾದವು ಕೂಡುವದಿಲ್ಲವು ಪ್ರಾಪ್ತಾವಸರಗಳಲ್ಲಿ ಚತುರ್ಭುಜತ್ವದ ಆವಿಷ್ಕಾರವು, ಅಲ್ಲಲ್ಲೇ **ಚತುರ್ಭುಜಃ** ಎಂಬ ಪ್ರಯೋಗ ದಿಂದ ಪ್ರೋಕ್ತವು. ಆದರೆ ಆ ಕಾಲದಲ್ಲಿ ಬಾಣಾದಿ ಕೆಲವರಿಗೆ ಹೆಚ್ಚಾದ ಭುಜಗಳಿದ್ದವೆಂದು ಪುರಾ ಣಪ್ರಸಿದ್ಧಿ ಇದೆಯಲ್ಲಾ, ಎಂದರೆ, ಇವು ಅಸುರ ಸಂತತಿಗಳಲ್ಲಿ ಹೇಳಲ್ಪಟ್ಟಿತೇ ವಿನಾ ಮನುಷ್ಯ ಸಂತತಿಯಲ್ಲಿ ಹೇಳಲ್ಪಡಲಿಲ್ಲವು. ಈ ಆಕ್ಷೇಪಗಳ ಸಮಾಧಾನಾರ್ಥವಾಗಿ ಈಗ ತೋರಿಸಿದ ರೂಪವು ಪರರೂಪದ ಚತುರ್ಭುಜಾಕೃತಿಯು ಎಂದೇ ಅರ್ಥಮಾಡುವದು ಯುಕ್ತವು. ಆದುದ ರಿಂದ **ತದೇವಮೇದರ್ಶಯ ದೇವರೂಪಂ** (೪೫) ಎಂದರೆ **"ಕಿರೀಟಿನಂ ಗದಿನಂ"** ಎಂದು ನೀನು ಬೇಡಿದೆಯಲ್ಲಾ, ದಿವ್ಯಾಯುಧಗಳಿಂದಲೂ ಚತುರ್ಭುಜದಿಂದಲೂ ಇರುವ ರೂಪವು ಯಾವುದೋ **ತದೇವರೂಪಂ** – ಪ್ರಸಿದ್ಧವಾದ ಆ ರೂಪವನ್ನೇ, **ಪ್ರಪಶ್ಯ** – ಚನ್ನಾಗಿ ಮನ ದಣಿಯುವಹಾಗೆ ನೋಡು ಎಂಬ ತಾತ್ಪರ್ಯವು ಅರ್ಜುನನ ಪ್ರಾರ್ಥನೆಯಾದ **ತದೇವ ಮೇ ದರ್ಶಯ** (೪೫) ಎಂಬುದಕ್ಕೆ ಅನುಸಾರವಾಗಿ ಭಗವದ್ವಾಕ್ಯವೂ **ತದೇವ ಮೇ ರೂಪ ಮಿದಂ ಪ್ರಪಶ್ಯ** ವೆಂದಿರುವದು ಸಾಭಿಪ್ರಾಯವಾದುದು, ಈ ರೂಪವು ನಿನಗೆ ಅಲ್ಪಕಾಲಾವಧಿಯುಳ್ಳ ದಾದುದರಿಂದ ಅದನ್ನು ಚನ್ನಾಗಿ ನೋಡು ಎಂಬ ಭಾವವು **ತದೇವ ಮೇ ರೂಪ ಮಿದಂ ಪ್ರಪಶ್ಯ** ಎಂಬುದರಿಂದ ಪೂರ್ವದ ಮನುಷ್ಯರೂಪವನ್ನು ನೋಡು ಎಂದು ಹೇಳಿದರೆಂದು ಅರ್ಥಮಾಡಲು ಸಾಧ್ಯವಿಲ್ಲವು. ಏಕೆಂದರೆ, ಹಿಂದಿನ ಮನುಷ್ಯರೂಪವನ್ನು ತಾಳಿದರೆ ಅದನ್ನು ಯಾವಾಗಲೂ ಮುಂದಕ್ಕೆ ನೋಡುತ್ತಲೇ ಇರುತ್ತಾನೆ. ಅದನ್ನು **ಪಶ್ಯ** – ನೋಡು ಎಂದು

ಹೇಳತಕ್ಕದ್ದೇನಿದೆ ? ಇಷ್ಟೇ ಅಲ್ಲದೆ **ಪ್ರಪಶ್ಯ ಪಕರ್ಶ್ಣೇಣಪಶ್ಯ** ಚನ್ನಾಗಿ ನೋಡು ಎಂದು ಹೇಳಲಿಕ್ಕೆ ಕಾರಣವೇನಿದೆ ? ಆ ಪರರೂಪವನ್ನು ತೋರಿ ಅನಂತರ ಬೇಗ ಉಪಸಂಹಾರಮಾಡುವ ಪ್ರಕರಣವಿದ್ದರಲ್ಲವೇ, ಜಾಗರೂಕತೆಯಿಂದ ಚನ್ನಾಗಿ ನೋಡು ಎಂದು **ಪ್ರ** ಎಂಬ ಉಪಸರ್ಗಕ್ಕೆ ಸಾರ್ಥಕ್ಯವನ್ನು ಹೇಳಬಹುದು, ಈ ವಿಷಯದಲ್ಲಿ ನಿಷ್ಪಕ್ಷಪಾತಿಗಳಾದ ಪ್ರಾಜ್ಞರು ಸಾಮಂಜಸ್ಯವನ್ನು ವಿವೇಕಿಸಿ ಗ್ರಹಿಸತಕ್ಕದ್ದಾಗಿರುತ್ತದೆ. ಅದೂ ಅಲ್ಲದೆ ತದೇವ ಎಂಬಲ್ಲಿ **ತತ್** ಶಬ್ದವು ಪರಬ್ರಹ್ಮನನ್ನು ಬೋಧಿಸಿ, ಆತನ ನಿತ್ಯವಾದ ಪರರೂಪವನ್ನು ಬೋಧಿಸುತ್ತದೆ.

ಇಲ್ಲಿ **ಮಾತೇವ್ಯಥಾ ಮಾಚವಿಮೂಢಭಾವಃ** ಎಂದು ಹೇಳಿರುವದರಿಂದ ಕೃಪಾಮಹೋದಧಿಯು ಭಕ್ತನಿಗೆ ಈಷದಪಿ ಮನಃ ಕ್ಲೇಶವನ್ನಾಗಲಿ, ಭಯವನ್ನಾಗಲಿ ಸಹಿಸುವನಲ್ಲವೆಂದೂ, ಅದನ್ನೂ ಒಡನೆ ಪರಿಹರಿಸುವನೆಂಬ ಭಾವವೂ ಸೂಚಿತವು. ಉಪಾಯಾನುಷ್ಠಾನದಿಂದ, ಪ್ರಾರಬ್ಧ ಕರ್ಮಗಳಿಂದ ಪ್ರಾಪ್ತವಾಗುವ ಕ್ಲೇಶ ಭಯಾದಿಗಳು ವಿನಾ ಮಿಕ್ಕ ಪಾಪಗಳೆಲ್ಲಾ ನಾಶವಾಗುತ್ತವೆ. ಪ್ರಾರಬ್ಧ ಕರ್ಮಗಳ ಕ್ಲೇಶಾದಿಗಳೇನಾದರೂ ಇದ್ದರೆ ಅವುಗಳ ಅನುಭವಕ್ಕಾಗಿಯೇ ಈ ದೇಹವು ಪ್ರಾಪ್ತವಾಗಿರುವದರಿಂದ ಅವುಗಳನ್ನು ಅನುಭವಿಸಲೇ ಬೇಕೆಂದೇರ್ಪಡುತ್ತದೆ. ಆದರೆ ಅಂತಹ ಕ್ಲೇಶಗಳೂ ಬೇಡವೆಂದು ಉಪಾಯಾನುಷ್ಠಾನ ಮಾಡಿದರೆ ಭಕ್ತವತ್ಸಲನು ಅವುಗಳನ್ನೂ ಪರಿಹರಿಸುವನೆಂಬುದರಲ್ಲಿ ಸಂದೇಹವಿಲ್ಲವು. ಆದುದರಿಂದಲೇ ಮಹಾ ಭಕ್ತನಾಗಿ ಐಕಾಂತ್ಯ ಭಕ್ತಿಯಿಂದ ಆತನನ್ನು ಧ್ಯಾನಿಸಿ ಪ್ರಾರಬ್ಧ ಕರ್ಮಗಳಿಂದ ಪ್ರಾಪ್ತವಾಗುವ ಕ್ಲೇಶವೂ ಬೇಡವೆಂದು ಶರಣಾಗತಿಪೂರ್ವಕವಾಗಿ ಪ್ರಾರ್ಥಿಸಿದರೆ, ಆಗ ಅಂತಹ ಕ್ಲೇಶಗಳ ಪರಿಹಾರವೂ ಉಂಟಾಗುತ್ತದೆಂದು **"ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ"** ಎಂದು ಮುಂದೆ ಹೇಳುವ ಅರ್ಥವೂ ಇಲ್ಲೇ ಏನಾದರೂ ಸೂಚಿತವೋ ಎಂಬ ಹಾಗೆ **"ಮಾತೇವ್ಯಥಾ"** ಎಂಬ ಪ್ರಯೋಗವಾಗಿರುತ್ತದೆ. ಆ ಭಕ್ತನು ಹೇಗಿರಬೇಕೆಂದು ಸರ್ವೇಶ್ವರನ ಇಷ್ಟವೇನೆಂದರೆ, **ವ್ಯಪೇತಭೀಃ, ಪ್ರೀತಮನಾಃ** - ಹೀಗೆ ಇರಬೇಕೆಂಬುವದು ಸತ್ಯಸಙ್ಕಲ್ಪನ ಅಭಿಪ್ರಾಯವು. **"ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ"** ಎಂಬುದೇ ಆ ಪ್ರಭುವಿನ ಸತ್ಯಸಙ್ಕಲ್ಪವಾದುದರಿಂದ **ವ್ಯಪೇತಭೀಃ** ಆಗು ಎಂದು ಹೇಳಿರುವದು ಆತನ ಕೃಪಾ ಪ್ರಭಾವವೇ. **"ರೂಪಂ ಘೋರಂ"** ಎಂಬುದರಿಂದ ಸರ್ವೇಶ್ವರನು ಭಕ್ತರ ವಿಷಯದಲ್ಲಿ ಅತಿ ಕೋಮಲ ಹೃದಯನೆಂದು ತೋರಿದರೂ ಅಭಕ್ತರಾದ ಪಾಪಿಗಳ ವಿಷಯದಲ್ಲಿ (ಇದಕ್ಕೆ ದುರ್ಯೋಧನಾದಿಗಳೇ ಸಾಕ್ಷಿಯು) ಕ್ರೂರನಾದ ಶಾಸ್ತಾ ಎಂಬ ಶಾಸ್ತ್ರಾರ್ಥವನ್ನೂ ಸಹ ಗ್ರಹಿಸಬಹುದು. **ಮಾತೇವ್ಯಥಾ** ನಿನ್ನಂತಹ ಭಕ್ತನಾದವನಿಗೆ ವ್ಯಥೆ ಬೇಡ ಎಂದು ಹೇಳಿದುದರಿಂದ ಭಕ್ತನಲ್ಲದೆ ಲೋಕಕಂಟಕರಾದ ದುರ್ಯೋಧನಾದಿಗಳಿಗೆ ಹಾಗಲ್ಲವು. ಅವರುಗಳನ್ನು ಶಿಕ್ಷಿಸದೇ ಬಿಡಲು ಮನಸ್ಸಿಲ್ಲದೆ, ತಾನೇ ಸಂಧಿಗೆ ಹೋಗಿ, ಸಂಧಿಯಾಗದಹಾಗೆ ಮಾಡಿ, ಈಗ ಸಾರಥಿಯಾಗಿ ಅವರುಗಳನ್ನು ವಧಿಸು ಎಂದು ಆಜ್ಞಾಪಿಸುತ್ತಿದ್ದಾನೆ. ಹೀಗೆ ರಹಸ್ಯಾರ್ಥಗಳೂ ಈ ಶ್ಲೋಕದಿಂದ ವ್ಯಕ್ತಪಡುತ್ತವೆ.

**ಭಾಷ್ಯಾರ್ಥವು:—ಈದೃಶಘೋರರೂಪದರ್ಶನೇನ** - ಇಂತಹ ಎಂದರೆ ಈಗ ನೀನು ನೋಡಿದ, ದಂಷ್ಟ್ರಾಕರಾಳವಕ್ತ್ರಾದಿಗಳಿಂದ ಯುಕ್ತವಾದುದರಿಂದ, ಅನೇಕರು ನಾಶವಾಗುವ ಹಾಗೂ ತೋರಿಬಂದ ಘೋರರೂಪವನ್ನು ನೋಡುವದರಿಂದ, **ತೇ** - ನಿನಗೆ **ಯಾವ್ಯಥಾ ವರ್ತತೇ** - ಯಾವ ವ್ಯಥೆಯುಂಟೋ ಮತ್ತು **ಯಶ್ಚ ವಿಮೂಢಭಾವೋ, ವರ್ತತೇ** - ಯಾವ ಮೋಹ ಭಾವವು ಉಂಟೋ, **ತದುಭಯಂ** ಅವೆರಡೂ, **ಮಾಭೂತ್** - ಇನ್ನು ಮುಂದೆ ಆಗದಿರಲಿ, ಏಕೆಂದರೆ ನಿನ್ನ ಇಷ್ಟಾನುಸಾರ ಆ ಘೋರರೂಪವನ್ನು ಉಪಸಂಹಾರಮಾಡಿರುತ್ತೇನೆಂಬ

**ಭಾ. ಈದೃಶ ಘೋರರೂಪದರ್ಶನೇನ ತೇ ಯಾವ್ಯಥಾ, ಯಶ್ಚವಿಮೂಢಭಾವೋ, ವರ್ತತೇ, ತದುಭಯಂ ಮಾಭೂತ್ ; ತ್ವಯಾಭ್ಯಸ್ತ ಪೂರ್ವಮೇವ ಸೌಮ್ಯರೂಪಂ ದರ್ಶಯಾಮಿ, ತದೇನೇವಂ ಮಮರೂಪಂ ಪ್ರಪಶ್ಯ ||** || ೪೯ ||

ತಾತ್ಪರ್ಯವು. ಘೋರರೂಪದ ಉಪಸಂಹಾರವಿಲ್ಲದೆ ಸುಮ್ಮನೆ **ಮಾಭೂತ್** ಎಂದು ಹೇಳಿದ ಮಾತ್ರದಲ್ಲಿ ಅವುಗಳು ತೊಲಗಲಾರವು. **ಮಾಭೂತ್ತೆಂದು** ಎಷ್ಟು ಉಪದೇಶಿಸಿದರೂ, ಸಿದ್ಧಿಸ ಲಾರದು. ತಿಮಿರದೋಷವಿರುವವರೆಗೂ ದ್ವಿಚಂದ್ರಜ್ಞಾನವು ಹೇಗೆ ತಪ್ಪಿದ್ದಲ್ಲವೋ ಹಾಗೆ ಎಂದು ತಿಳಿಯತಕ್ಕದ್ದು. ಆದುದರಿಂದ ಆ ಘೋರರೂಪವನ್ನು ಉಪಸಂಹಾರಮಾಡಿ ಹೇಳುವ ಮಾತೆಂದು ಭಾವಿಸತಕ್ಕದ್ದು. **ತ್ವಯಾಭ್ಯಸ್ತ ಪೂರ್ವಮೇವ ಸೌಮ್ಯರೂಪಂ** - ನಿನ್ನಿಂದ ಅಭ್ಯಸಿಸಲ್ಪಟ್ಟ ಪೂರ್ವದ ಸೌಮ್ಯರೂಪವನ್ನೇ, **ದರ್ಶನಯಾಮಿ** - ತೋರಿಸುವೆನು, **ತ್ವಯಾ** ಎಂದು ಹಿಡಿದು, **ದರ್ಶನಯಾಮಿ** ಎಂಬುವವರೆಗೂ ತಾತ್ಪರ್ಯವನ್ನು ತಿಳಿಸಿರುತ್ತಾರೆ. **ತದೇವ** ಎಂಬುದರಿಂದ ತೋರಿಬರುವ ಅರ್ಥವಾಗಿ **ತ್ವಯಾಭ್ಯಸ್ತ ಪೂರ್ವಮೇವ ಸೌಮ್ಯರೂಪಂ** ಎಂಬ ದಾಗಿ ಭಾಷ್ಯವು. ಮುಂದಿನ ಶ್ಲೋಕದಲ್ಲಿ. **ಸೌಮ್ಯವಪುಃ** - ಎಂಬುದನ್ನನುಸರಿಸಿ ಇಲ್ಲಿ **ಸೌಮ್ಯ ರೂಪಂ** ಎಂಬ ಪ್ರಯೋಗವು. **ದರ್ಶಯಾಮಿ** ಎಂಬುದು ಪ್ರ**ಪಶ್ಯ** ಎಂಬುದರ ವ್ಯಾಖ್ಯಾನವು. ಏಕೆಂದರೆ ತೋರಿಸಿದರೆ ತಾನೇ **ಪ್ರಪಶ್ಯ** ಎಂದು ಹೇಳಬಹುದು. **ತದೇವೇದಂ ಮಮರೂಪಂ** ಅಂತಹ ಈಗ ನಾನು ತೋರಿಸುತ್ತಿರುವ ನನ್ನ ರೂಪವನ್ನು, **ಪ್ರಪಶ್ಯ** - ನೋಡು. ಇಲ್ಲಿ ಶ್ರೀ ಯತಿವರ್ಯರ ಭಾಷ್ಯದಲ್ಲಿ ಈಗ ತೋರಿಸಿದ ರೂಪವೇನು ಚತುರ್ಭುಜ ಉಳ್ಳದ್ದೋ ಇಲ್ಲವೋ ಎಂಬುದು ವ್ಯಕ್ತಪಡುವದಿಲ್ಲವು. ಈ ಸಂದೇಹವನ್ನು ಸ್ವಾಮಿಯವರು ಮುಂದಿನ ಶ್ಲೋಕ ಭಾಷ್ಯದಲ್ಲಿ ವ್ಯಕ್ತಪಡಿಸುತ್ತಾರೆ, ಅಲ್ಲಿ ವಾಸುದೇವದೇವಕಿಯರಿಗೆ ಚತುರ್ಭುಜಗಳಿಂದ ಸೇವೆ ಯನ್ನಿತ್ತವರೆಂದೂ, ಅವರುಗಳೂ ಕಂಸಭಯದಿಂದ **ಉಪಸಂಹರ** ಎಂದು ಪ್ರಾರ್ಥಿಸಿದ ನಂತರ ದ್ವಿಭುಜಾಕೃತಿಯನ್ನು ಪರಿಗ್ರಹಿಸಿದರೆಂದೂ, ಕಂಸ ಭಯನಿವೃತ್ತಿಯಾದ ನಂತರ ಚತುರ್ಭುಜತ್ವವೇ ಸಾಮಾನ್ಯರೂಪವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಆಗ ಅತಿ ಮಾನುಷವೆಂದಾಗುವದಿಲ್ಲವೇ ಎಂಬ ಪೂರ್ವಪಕ್ಷವನ್ನು ಯಾರಾದರೂ ತರಬಹುದು. ಅದಕ್ಕೆ ಸಮಾಧಾನವಾಗಿ ಯಾವಾಗಲೂ ಚತುರ್ಭುಜದಿಂದಿದ್ದರೂ, ಸಾಧಾರಣರಾದವರಿಗೆಲ್ಲಾ ದ್ವಿಭುಜ ದಿಂದಲೇ ತೋರುತ್ತಿದ್ದರೆಂದು ಹೇಳಬೇಕಾಗುತ್ತದೆ. ಆದರೆ ಸಮಯಾಂತರಗಳಲ್ಲಿ ಮಾತ್ರ ಚತುರ್ಭುಜ ದರ್ಶನವೆಂದೂ ಸಾಮಾನ್ಯ ಪಾಮರರಿಗೆಲ್ಲಾ ದ್ವಿಭುಜತ್ವ ದರ್ಶನವೆಂದೂ ಭಾವಿಸು ವುದೂ ಯುಕ್ತವಾಗಿಯೇ ತೋರುತ್ತದೆ. ಶ್ರೀ ಶಂಕರಾಚಾರ್ಯರೂ ಇಲ್ಲಿ ತೋರಿಸಲ್ಪಟ್ಟ ರೂಪವು ಚತುರ್ಭುಜ ಯುಕ್ತರೂಪವೆಂದೇ ಅರ್ಥಮಾಡಿರುತ್ತಾರೆ

**ಮೂಲಕ್ಕೆ ಅರ್ಥವು** :— ಸಂಜಯರು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾರೆ. ಚತು ರ್ಭುಜಗಳಿಂದಲೂ ಪಂಚಾಯುಧಗಳಿಂದಲೂ ಒಪ್ಪುವ, ತನಗೇನೇ ಅಸಾಧಾರಣವಾದ, ಧ್ಯಾನಕ್ಕೆ ಯೋಗ್ಯವಾಗಿಯೂ ಪ್ರಾಪ್ಯವಾಗಿಯೂ ಇರುವ, ರೂಪವನ್ನು ಯಾವಾಗ ಪ್ರಾರ್ಥಿಸಿದನೋ, ಅದನ್ನು ತೋರಿಸಿಬಿಟ್ಟು, ಅನಂತರ ಯಥಾಪ್ರಕಾರ ಸೌಮ್ಯರೂಪವಾಗಿ ಎಲ್ಲಾ ಮನುಷ್ಯರ ಹಾಗೆ ಸಾಮಾನ್ಯ ಮಾನುಷಾಕೃತಿಯನ್ನು ಶ್ರೀ ಕೃಷ್ಣಭಗವಾನ್ರವರು ವಹಿಸಿದವರೆಂದು ಧೃತ ರಾಷ್ಟ್ರನಿಗೆ ಹೇಳುತ್ತಾರೆ.— ಪೂರ್ವಾರ್ಧದಿಂದ ಸಂಜಯರು ಧೃತರಾಷ್ಟ್ರನನ್ನು ಕುರಿತು, ಶ್ರೀ ಕೃಷ್ಣಭಗವಾನ್ರವರಿಗೆ ಅರ್ಜುನನ ವಿಷಯದಲ್ಲಿ ಎಷ್ಟು ಪರಮಾನುಗ್ರಹವು ಹಿಂದೆ ವಿಶ್ವರೂಪ ವನ್ನು ತೋರಿಸಿದರೆಂದು ಹಿಂದೆಯೇ ನಿನಗೆ ಅರಿಕೆಮಾಡಿಕೊಂಡೆನು. ೩೫ನೆಯ ಶ್ಲೋಕ ನೋಡಿ. ಅದನ್ನು ನೋಡಿದ ನಂತರ ಪ್ರಾಪ್ಯವಾಗಿ ಪ್ರಸಿದ್ಧಿ ಹೊಂದಿದ ಪರರೂಪವನ್ನು

**ಸಂಜಯ ಉವಾಚ—**

**ಮೂ. ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ಸ್ವಕಂರೂಪಂದರ್ಶಯಾಮಾಸಭೂಯಃ**
**ಆಶ್ವಾಸಯಾಮಾಸಚ ಭೀತಮೇನಂ ಭೂತ್ವಾಪುನಸ್ಸೌಮ್ಯವಪುರ್ಮಹಾತ್ಮಾ ॥೫೦॥**

ತೋರಿಸು ಎಂದು ಅರ್ಜುನನು ಕೇಳಿದ ಒಡನೆಯೇ ಅದನ್ನೂ ಕೂಡ ಭಕ್ತವತ್ಸಲನು ಪುನಃ ಕೃಪಯಾ ತೋರಿಸಿದನು ಎಂದು ಪೂರ್ವಾರ್ಧದಿಂದ ತಿಳಿಸಿ, ಉತ್ತರಾರ್ಧದಿಂದ ಪುನಃ ಮನುಷ್ಯ ರೂಪವನ್ನು ತಾಳಿದನು ಎಂದು ತಿಳಿಸುತ್ತಾರೆ. ಹೀಗೆ ತಿಳಿಸುವದರಲ್ಲಿ ಸಂಜಯರ ಆಶಯ ವೇನೆಂದರೆ? ಈಗಲಾದರೂ ತನ್ನ ಮಗನಿಗೆ ಇದನ್ನು ತಿಳಿಸಿ, ಕೃಷ್ಣನಿಗೆ ಶರಣಾಗತನಾಗಿ, ಪಾಂಡವರ ರಾಜ್ಯವನ್ನು ಕೊಟ್ಟುಬಿಟ್ಟು ಸುಖದಿಂದ ಬಾಳಲಿ ಎಂಬುದೇ ಈ ಪರಮಭಾಗವತರ ಅಭಿಲಾಷೆಯು ಎಂದು ಭಾವಿಸತಕ್ಕದ್ದು. ಇಲ್ಲಿ **"ವಾಸುದೇವ"** ಶಬ್ದಪ್ರಯೋಗವು ಸಾಭಿಪ್ರಾಯವಾಗಿ ಸ್ವಾರಸ್ಯವಾದುದು. ಧ್ವನ್ಯರ್ಥ ಮೂಲಕವಾಗಿ ಗೂಢಾರ್ಥಪ್ರಯೋಗ ಚತುರರಾದ ಶ್ರೀ ವೇದವ್ಯಾಸರು, **"ತದೇವ ಮೇ ದರ್ಶಯ ದೇವ ರೂಪಂ"** ಎಂಬುದರಿಂದ ನಿತ್ಯವಾದ ತಮಗೇನೇ ಅಸಾಧಾರಣವಾದ ಪ್ರಸಿದ್ಧವಾದ ಪರರೂಪವಾದ **ವಾಸುದೇವ** ರೂಪವೆಂದೇ ಗ್ರಹಿಸಲಿ ಎಂಬ ಭಾವದಿಂದ ಹಾಗೆ ಪ್ರಯೋಗವು. ಇದೇ ತಮ್ಮ ಸ್ವಕಂರೂಪವು, **ವಾಸುದೇವಃ** - ವಸುದೇವ ಪುತ್ರನಾದ ಶ್ರೀ ಕೃಷ್ಣಭಗವಾನರವರು, ಇಲ್ಲಿ **ವಾಸುದೇವಃ** ಎಂಬ ಪ್ರಯೋಗವು ಏತಕ್ಕೆಂದರೆ? ಅರ್ಜುನನು ದಿವ್ಯಾಭರಣಾಯುಧಗಳಿಂದೊಪ್ಪುವ ಚತುರ್ಭುಜಗಳಿಂದ ಕೂಡಿದ ರೂಪವಾಗಿ, **ಸ್ವಕಂರೂಪಂ**-ತನಗೇನೇ ಅಸಾಧಾರಣವಾಗಿ ನಿತ್ಯ ವಿಭೂತಿಯಲ್ಲಿ ನಿತ್ಯಮುಕ್ತರುಗಳಿಗೆ ಸೇವೆಯನ್ನೀಯುವ **ಪರವಾಸುದೇವ** ರೂಪವಾದುದರಿಂದ, **ವಾಸುದೇವಃ** - ಪರವಾಸುದೇವಮೂರ್ತಿಯಾಗಿ ಅರ್ಜುನನಿಗೆ ಸೇವೆಯನ್ನಿತ್ತನು. ಎಂದು ಧೃತರಾಷ್ಟ್ರನಿಗೆ ತಿಳಿಸಬೇಕೆಂಬ ಉದ್ದೇಶದಿಂದ ಹಾಗೆ ಪ್ರಯೋಗವು. ಹೀಗೆ ನಿರತಿಶಯಕೃಪೆಯು ಅರ್ಜುನನಲ್ಲಿರುವಾಗ ನಿಮ್ಮವರಿಗೆ ಎಲ್ಲಿ ಜಯವು? ಅರ್ಜುನನಿಗೇನೇ ಜಯವೆಂದು ಮುಂದೆ ಹೇಳುವದಕ್ಕಾಗಿ **ಪರವಾಸುದೇವ** ಮೂರ್ತಿಯಾಗಿ ಅರ್ಜುನನಿಗೆ ಸೇವೆಯನ್ನಿತ್ತನು ಆ ಭಕ್ತವತ್ಸಲನು, ಎಂದು ಹೇಳುವದು ಮುಖ್ಯವಾದುದರಿಂದ, **ವಾಸುದೇವಃ** ಎಂಬ ಪ್ರಯೋಗವು. ಉತ್ತಮ ಕಾವ್ಯಗಳಿಗೆ ಇಂತಹ ವ್ಯಂಗ್ಯವು ಮುಖ್ಯ ಲಕ್ಷಣವು. **ಇತಿ** - ಈ ಪ್ರಕಾರವಾಗಿ, ಹಿಂದಿನ ಶ್ಲೋಕದಲ್ಲಿ ಹೇಳಿದ ಹಾಗೆ ಎಂಬರ್ಥವು, **ಅರ್ಜುನಂ** - ಭಕ್ತನಾದ ಅರ್ಜುನನನ್ನು ಕುರಿತು, **ತಥೋಕ್ತ್ವಾ** - ನಿನ್ನ ಇಷ್ಟದಂತೆಯೇ ಆಗಲಿ ಎಂದು, **ಉಕ್ತ್ವಾ** - ಹೇಳಿ, **ಭೂಯಃ** - **ಪುನಃ** ಎಂದರೆ ವಿಶ್ವರೂಪ ಸೇವೆಯು ಮೊದಲನೆಯ ಸಲವು, ಈಗ ಇನ್ನೊಂದುಸಲ, **ಸ್ವಕಂ ರೂಪಂ** ತನಗೇನೇ ಅಸಾಧಾರಣವಾಗಿ, ಧ್ಯೇಯರ ಚಿತ್ತವನ್ನಾಕರ್ಷಿಸುವ, ಮತ್ತು ನಿತ್ಯಮುಕ್ತರುಗಳಿಗೆ ಬಹು ಭೋಗ್ಯವಾಗಿರುವ, ಹೀಗೆ ತನಗೇನೇ ನಿತ್ಯವಾಗಿ ಅಸಾಧಾರಣವಾಗಿರುವ, ದಿವ್ಯ ತೇಜೋಮಯವಾಗಿ, ಅನುಗ್ರಹವನ್ನು ವರ್ಷಿಸುವಹಾಗೆ ದಿವ್ಯ ಕಣ್ಣುಗಳ ಸೊಬಗಿನಿಂದ ತೋರುತ್ತಿರುವ ಪರವಾಸುದೇವರೂಪವನ್ನು, **ದರ್ಶಯಮಾಸ**-ಪರಮಕೃಪಯಾ ತೋರಿಸಿದನು. ಮಾನುಷರೂಪವು **"ಸ್ವಕಂರೂಪ"** ವಲ್ಲವು, ಆರೋಪಿತರೂಪವು ; ಈಗ ಮಾನುಷವಾಗಿರಬಹುದು, ಇನ್ನೊಂದುವೇಳೆ ಮತ್ಸ್ಯ ಕೂರ್ಮ, ವರಾಹ, ನಾರಸಿಂಹ ರೂಪವಾಗಿರಬಹುದು. ಸ್ವಕಂರೂಪವು, ಯಾವುದೆಂದರೆ ಪರವಾಸುದೇವ ರೂಪವು; ಹೀಗೆ ಬದಲಾವಣೆಯನ್ನು ಹೊಂದದೇ ತನಗೇನೇ ಅಸಾಧಾರಣವಾದ ಶಾಶ್ವತವಾದ ಅನಾದಿಸಿದ್ಧವಾದ ರೂಪವು ; ಆದುದರಿಂದಲೇ **ಸ್ವಕಂ** ಎಂಬ ಪ್ರಯೋಗವು. ಅವತಾರರೂಪಗಳು **"ಅವತಾರಾಹ್ಯ ಸಂಖ್ಯಾತಾ ಹರೇಃ ಸ್ಸತ್ವನಿಧೇ ರ್ದ್ವಿಜಾಃ"** ಎಂಬ ಶೌನಕ ವ್ಯಾಖ್ಯಾನುಸಾರವಾಗಿ (ಭಾಗ. ೧. ೩. ೨೬) ಅಸಂಖ್ಯೇಯಗಳು. ಆದುದರಿಂದ

ಅವು ಸ್ವಕಂ ರೂಪಂ ಎಂದು ಏಕವಚನದಿಂದ ನಿರ್ದೇಶಿಸಲು ಅಸಾಧ್ಯವಾದವುಗಳು. ಇದನ್ನು ತೋರಿಸುದುದರಿಂದಲೂ, ಅನಂತರ ದ್ವಿಭುಜಾಕೃತಿಯನ್ನು ಧರಿಸಿ ಮಾನುಷರೂಪವನ್ನು ಧರಿಸಿದ ರೆಂದು ೫೧ ನೆಯ ಶ್ಲೋಕದಲ್ಲಿರುವದರಿಂದಲೂ, ಭೀತನಾಗಿದ್ದ ಅರ್ಜುನನನ್ನು ಮಾತೃವ ದ್ವಾತ್ಸಲ್ಯಯುಕ್ತ ಪರಮಾತ್ಮನು, ತಾಯಿಯ ಮೊಗುವನ್ನು ಸಮಾಧಾನ ಮಾಡುವಹಾಗೆ ಸಮಾಧಾನಮಾಡಿದನೆಂದು ಹೇಳುತ್ತಾರೆ.—**ಮಹಾತ್ಮಾ** - ಮಹತ್ತಾದ ಸತ್ಯಸಙ್ಕಲ್ಪವುಳ್ಳ ಶ್ರೀ ಕೃಷ್ಣಭಗವಾನರು, **ಭೀತಮೇನಂ** ವಿಶ್ವರೂಪದರ್ಶನದಿಂದ ಭೀತನಾದ ಈ ಅರ್ಜುನನನ್ನು, **ಪುನಃ ಸೌಮ್ಯವಪುರ್ಭೂತ್ವಾ** - ಇನ್ನು ಒಂದು ಸಲ ಸೌಮ್ಯವಾದ ಶರೀರವುಳ್ಳವನಾಗಿ, ಇದು ಮಾನುಷ ಶರೀರವೆಂಬುದು ಮುಂದಿನ ಶ್ಲೋಕದಲ್ಲಿ ಅರ್ಜುನವಾಕ್ಯದಿಂದ ಸುಸ್ಪಷ್ಟವು, **"ದೃಷ್ಟ್ವೇದಂ ಮಾನುಷಂ ರೂಪಂ ತವಸೌಮ್ಯಂ ಜನಾರ್ದನ"** ಎಂಬ **ಸೌಮ್ಯಂ ಮಾನುಷಂ** ಶಬ್ದಪ್ರಯೋಗಗಳಿಂದ ಚತುರ್ಭುಜತ್ವವನ್ನು ಉಪಸಂಹಾರಮಾಡಿ ದ್ವಿಭುಜತ್ವ ವನ್ನು ಸ್ವೀಕರಿಸಿದರೆಂದು ವ್ಯಕ್ತಪಡುತ್ತದೆ. ನಾಲ್ಕು ಭುಜಗಳಿದ್ದರೆ ಮಾನುಷರೂಪವಾಗುವದಿ ಲ್ಲವು, ಸೌಮ್ಯಭಾವರೂ ಆಗಬಹುದು. ಆದುದರಿಂದ ದ್ವಿಬಾಹುಯುಕ್ತ ಆಕೃತಿಯನ್ನು ಎಲ್ಲಾ ಮನುಷ್ಯರ ಹಾಗೆ ಹೊಂದಿದರೆಂದೇ ಈ ಉತ್ತರಾರ್ಧಕ್ಕೆ ಅರ್ಥಮಾಡಬೇಕಾದ ಆವಶ್ಯಕತೆಯು ತೋರಿಬರುತ್ತದೆ. ಹೀಗೆ ಮಾನುಷರೂಪವನ್ನು ಪುನಃ ತಾಳಿ, ಅರ್ಜುನನನ್ನು **ಆಶ್ವಾಸಯಾ ಮಾಸ** ಸಮಾಧಾನಮಾಡಿದರು. ಮಾನುಷರೂಪವನ್ನು ತಾಳಿದರೆಂದು ಇಲ್ಲಿ ಹೇಳಿರುವದರಿಂದ **ತದೇವ ಮೇ ದರ್ಶಯ** ಎಂದು ಹಿಂದೆ ೪೫ ರಲ್ಲಿ ಪ್ರಾರ್ಥಿಸಲ್ಪಟ್ಟರೂಪವು ಮನುಷ್ಯರೂಪ ವೆಂದು ಹೇಳಲು ಸಾಧ್ಯವಿಲ್ಲವು. ಹಾಗೆ ಪ್ರಯೋಗವೂ ಇಲ್ಲವು. **ತಥೋಕ್ತ್ವಾ** ಎಂಬ ಪ್ರಯೋಗವು, ಹಾಗೆಯೇ ಆಗಲಿ ಎಂಬರ್ಥವನ್ನು ಸೂಚಿಸುವದರಿಂದ, ಭಕ್ತ ಪರಾಧೀನನಾಗಿ ಭಕ್ತನ ಇಷ್ಟಾನುಸಾರ ನಡೆಯುವನೇ ವಿನಾ, ಅನ್ಯಥಾ ಇಲ್ಲವೆಂಬ ಭಾವವನ್ನು ಸೂಚಿಸುತ್ತದೆ. ಈ ಸಂಜಯ ವಾಕ್ಯದಲ್ಲಿ ಪೂರ್ವಾರ್ಧದಲ್ಲಿ ಹೇಳಿರುವಹಾಗೆ ಮೊದಲು ಪರವಾಸುದೇವ ಮೂರ್ತಿ ಯನ್ನು ಧರಿಸಿದಹಾಗೂ ಆ ಮೇಲೆ ಉತ್ತರಾರ್ಧದಲ್ಲಿ ಹೇಳಿರುವಹಾಗೆ ಮನುಷ್ಯಾಕೃತಿಯನ್ನು ಧರಿಸಿದಹಾಗೂ, ಅರ್ಥಮಾಡದೆ, ಒಂದೇ ರೂಪವನ್ನು ಶ್ರೀ ಕೃಷ್ಣಭಗವಾನ್ರವರು ಅನುಗ್ರಹಿಸಿ ದರು ಎಂದು ಹೇಳಿ ಪೂರ್ವಾರ್ಧದಿಂದ ಅವರು ತಮ್ಮ ಸ್ವಕೀಯವಾದ ಪೂರ್ವದ ರೂಪವನ್ನು **ಭೂಯಃ** - ತೋರಿಸಿದರೆಂದು ಏಕೆ ಅರ್ಥಮಾಡಕೂಡದು? ಎಂದರೆ, ಆಗ ಪೂರ್ವಾರ್ಧದಲ್ಲಿ ರುವ **ಭೂಯಃ** ಎಂಬುದಕ್ಕೂ, ಉತ್ತರಾರ್ಧದಲ್ಲಿ **ಭೂತ್ವಾಪುನಃ** ಎಂದು ಹೇಳಿರುವದಕ್ಕೂ ಪುನರುಕ್ತಿದೋಷವನ್ನಾರೋಪಿಸಿದಹಾಗೆ ಆಗುತ್ತದೆ. ಸಾಮಂಜಸ್ಯವೂ ದೂರೀಕೃತವಾಗು ತ್ತದೆ. ಸಂಜಯರೇ ಹಿಂದೆ ಧೃತರಾಷ್ಟ್ರನಿಗೆ ೩೫ ನೆಯ ಶ್ಲೋಕದಲ್ಲಿ ವಿಶ್ವರೂಪವನ್ನು ತೋರಿಸಿ ದರೆಂದು ಹೇಳಿರುವಾಗ ಪುನಃ ವಿಶ್ವರೂಪವನ್ನು ತೋರಿಸಿದರೆಂದು ಅರ್ಥಮಾಡಬಹುದೋ? ನಾವು ಹೇಳಿದ ಹಾಗೆ ಪರವಾಸುದೇವ ರೂಪವನ್ನು ತೋರಿ ಅನಂತರ ಮನುಷ್ಯಾಕೃತಿಯನ್ನು ವಹಿಸಿದರು ಎಂದು ಅರ್ಥಮಾಡಿದರೆ, **ಭೂಯಃ** ಮತ್ತು **ಭೂತ್ವಾ ಪುನಃ** ಎರಡೂ ಸಮಂಜ ಸಾರ್ಥವುಳ್ಳವುಗಳಾಗುವುವು. **ವಾಸುದೇವ** ಶಬ್ದವೂ **ಸ್ವಕಂರೂಪಂ** ಎಂಬ ಪ್ರಯೋಗವೂ ಸ್ವಾರಸ್ಯವುಳ್ಳವುಗಳಾಗುವುವು. ಅದೇನು ಈತನು ಹೀಗೆ ರೂಪಗಳನ್ನು ತಾಳಿದನು; ಎಂದರೆ ಆತನು **ಮಹಾತ್ಮಾ** - ಮಹತ್ತಾದ ಸತ್ಯ ಸಙ್ಕಲ್ಪತ್ವಾದಿ ಸ್ವರೂಪವುಳ್ಳವನು; ಸತ್ಯ ಸಙ್ಕಲ್ಪ ನಿಗೆ ಹೀಗೆ ಎರಡನ್ನೂ ಪ್ರದರ್ಶಿಸುವದೇನೋ ಕಷ್ಟವಿಲ್ಲವು. ||೫೦||

**ಭಾಷ್ಯಾರ್ಥವು—ಏವಂ** - ಈ ರೀತಿಯಲ್ಲಿ, **ಪಾಂಡುತನಯಂ** - ಅರ್ಜುನನನ್ನು **ಭಗವಾನ್** - ಹೇಯಪ್ರತ್ಯನೀಕನಾದ ಷಾಡ್ಗುಣ್ಯ ಪರಿಪೂರ್ಣನಾಗಿರುವ, ಶ್ರೀ ಪರಾಶರರು ಭಗ

ಭಾ. ಏನಂ ಪಾಂಡುತನಯಂ ಭಗವಾನ್ ವಸುದೇವ ಸೂನು ರುಕ್ತ್ವಾ, ಭೂಯಃ ಸ್ವಕೀಯಮೇವ - ಚತುರ್ಭುಜಮ್ ರೂಪಂ ದರ್ಶಯಾಮಾಸ; ಅಪರಿಚಿತ ಸ್ವರೂಪದರ್ಶನೇನ ಭೀತಮೇನಂ ಪುನರಪಿ, ಪರಿಚಿತಸೌಮ್ಯ ವಪುರ್ಭೂತ್ವಾಆಶ್ವಾಸಯಾಮಾಸ ಚ ಮಹಾತ್ಮಾ - ಸತ್ಯಸಙ್ಕಲ್ಪಃ। ಅಸ್ಯಸರ್ವೇಶ್ವರಸ್ಯ ಪರಮಪುರುಷಸ್ಯ ಪರಸ್ಯಬ್ರಹ್ಮಣೋ ಜಗದುಪ್ರಕೃತಿ ಮರ್ತ್ಯಸ್ಯ ವಸುದೇವಸೂನೋಃ ಚತುರ್ಭುಜ ಮೇವ ಸ್ವಕೀಯಂ ರೂಪಂ ; ಕಂಸಾದ್ಭೀತ ವಸುದೇವ ಪ್ರಾರ್ಥನೇನ, ಆಕಂಸ ವಧಾತ್ ಭುಜದ್ವಯ ಮುಪಸಂಹೃತಮ್, ಪಶ್ಚಾದಾವಿಷ್ಕೃತಂಚ. "ಜಾತೋಽಸಿ ದೇವದೇವೇಶ ಶಙ್ಖಚಕ್ರ ಗದಾಧರ। ದಿವ್ಯಂ ರೂಪಮಿದಂ ದೇವ ಪ್ರಸಾದೇನೋ

ಪಚ್ಛಬ್ದವು ಸರ್ವೇಶ್ವರನನ್ನು ಕುರಿತು ಹೇಳುವಾಗ ಇದೀಗ ಅರ್ಥವೆಂದು ಬೋಧಿಸಿರುತ್ತಾರೆ. (ವಿ. ಪು. ೬. ೫. ೭೯) **ವಸುದೇವಸೂನುಃ** - ವಸುದೇವ ಪುತ್ರರಾದ ಶ್ರೀ ಕೃಷ್ಣಭಗವಾನರವರು, **ಉಕ್ತ್ವಾ** ಹೇಳಿ, ಏನನ್ನು ಹೇಳಿ ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿರುವದನ್ನು ತಿಳಿಸಿ, **ಭೂಯಃ** - ಪುನಃ ಎಂದರೆ ವಿಶ್ವರೂಪ ದರ್ಶನಾನಂತರ ಇನ್ನೊಂದು ಸಲ, **ಸ್ವಕೀಯಮೇವ** - ತನಗೇನೇ ಅಸಾಧಾರಣವಾದ, **ಚತುರ್ಭುಜಂರೂಪಂ** - ನಾಲ್ಕು ಬಾಹುಗಳಿಂದೊಪ್ಪುವ ರೂಪವನ್ನು, **ದರ್ಶಯಾಮಾಸ** - ತೋರಿಸಿದನು ; ಮುಂದೆ ಉತ್ತರಾರ್ಧದ ಅರ್ಥವನ್ನು ದಯಪಾಲಿಸುತ್ತಾರೆ—ಮೂಲದಲ್ಲಿ **ಭೀತಮೇನಂ** ಎಂಬುದಕ್ಕೆ ಕಾರಣವನ್ನು ತಿಳಿಸುತ್ತಾರೆ—**ಅಪರಿಚಿತ** ಸ್ವರೂಪ **ದರ್ಶನೇನ** - ತನಗೆ ಪರಿಚಯವಿಲ್ಲದಿರುವ ಸ್ವರೂಪವನ್ನು ವಿಶ್ವರೂಪದಲ್ಲಿ ಕಂಡದುದರಿಂದ, **ಭೀತಂ ಏನಂ** - ಭಯಪಟ್ಟ ಈ ಅರ್ಜುನನನ್ನು, **ಪುನರಪಿ** - ಇನ್ನೊಂದು ಸಲ, **ಪರಿಚಿತ ಸೌಮ್ಯವಪುರ್ಭೂತ್ವಾ** - ಅರ್ಜುನನಿಗೆ ನೋಡಿದ ಪರಿಚಯವುಳ್ಳ ಸೌಮ್ಯವಾದ ಮನುಷ್ಯ ರೂಪವುಳ್ಳವನಾಗಿ ಆಗಿ, **ಮಹಾತ್ಮಾ** - ಮಹತ್ತಾದ ಸಙ್ಕಲ್ಪವುಳ್ಳ ಎಂದರೆ ಸತ್ಯಸಙ್ಕಲ್ಪರಾದ ವಸುದೇವ ಪುತ್ರರು, **ಆಶ್ವಾಸಯಾಮಾಸ** - ಸಮಾಧಾನವನ್ನು ಮಾಡಿದರು. **ಅಸ್ಯ** - ಈ ಸರ್ವೇಶ್ವರನಾಗಿ, ಪರಮ ಪುರುಷನಾಗಿರುವ ಪರಬ್ರಹ್ಮನಿಗೆ ಈಗ **ಜಗದುಪಕೃತಿ ಮರ್ತ್ಯಸ್ಯ** - ಜಗತ್ತಿಗೆ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಧರ್ಮಸಂಸ್ಥಾಪನೆ ಹೀಗೆ ಉಪಕರಿಸುವದಕ್ಕಾಗಿ ಮಾನುಷಾವತಾರಿಯಾಗಿ ವಸುದೇವನಿಗೆ ಪುತ್ರನಾಗಿರುವ ಶ್ರೀ ಕೃಷ್ಣನಿಗೆ, **ಚತುರ್ಭುಜಮೇವ** - ನಾಲ್ಕು ಬಾಹುಗಳನ್ನು ಹೊಂದಿರುವದೇ, **ಸ್ವಕೀಯಂ ರೂಪಂ** - ತನಗೇನೇ ಅಸಾಧಾರಣವಾದ ಪರರೂಪವು. **ಕಂಸಾದ್ಭೀತವಸುದೇವ ಪ್ರಾರ್ಥನೇನ** - ಕಂಸನ ದೆಶೆಯಿಂದ ಭಯಪಟ್ಟ ವಸುದೇವನ ಪ್ರಾರ್ಥನೆಯಿಂದ, **ಆಕಂಸವಧಾತ್** - ಕಂಸನನ್ನು ವಧಿಸುವವರೆಗೂ, **ಭುಜದ್ವಯಂ ಉಪಸಂಹೃತಂ** - ಎರಡು ಭುಜಗಳು ಮರೆಸಲ್ಪಟ್ಟಿದ್ದವು, **ಪಶ್ಚಾತ್** - ಕಂಸವಧಾನಂತರ, **ಅವಿಷ್ಕೃತಂಚ** - ಸಮಯಗಳಲ್ಲಿ ಶಿಶುಪಾಲ, ಪೌಂಡ್ರಕ ಮೊದಲಾದವರುಗಳನ್ನು ಸಂಹರಿಸಿದ ಕಾಲದಲ್ಲೂ ಮುಚುಕುಂದ ಅಕ್ರೂರ ಗೋಪಿಕಾಸ್ತ್ರೀಯರು ಮತ್ತು ವತ್ಸಾಪಹಾರ ಕಾಲದಲ್ಲಿ ಬ್ರಹ್ಮನಿಗೂ, ಹೀಗೆ ಬೇಕಾದ ಸಮಯಗಳಲ್ಲಿ, **ಆವಿಷ್ಕೃತಂ** - ಆವಿಷ್ಕರಿಸಲ್ಪಟ್ಟಿತು. ಇದೀಗ ಕೃಷ್ಣಾವತಾರದ ವೈಲಕ್ಷಣ್ಯವು. ಹಾಗೆ ಅಭಿಪ್ರಾಯಪಡುವುದಕ್ಕೆ ಪ್ರಮಾಣಉಂಟೆಂದು ಉದಾಹರಿಸುತ್ತಾರೆ; "**ದೇವದೇವೇಶ** - ದೇವತೆಗಳಿಗೆಲ್ಲಾ ಶ್ರೇಷ್ಠರಾದ ಚತುರ್ಮುಖ ಬ್ರಹ್ಮರುದ್ರೇಂದ್ರಾದಿಗಳಿಗೂ ನಿಯಾಮಕನಾದ ಶಂಖ ಚಕ್ರಗದಾದಿ ದಿವ್ಯಾಯುಧಗಳನ್ನು ಧರಿಸಿರುವ, **ಹೇ ದೇವ** - ಓ ಲೀಲಾವಿಭೂತಿಯಲ್ಲಿ ಆಸಕ್ತಿಯುಳ್ಳವನೇ ! ಅಥವಾ ನಿರತಿಶಯ ಪ್ರಕಾಶವುಳ್ಳವನೇ ! **ದಿವ್ಯಂರೂಪಮಿದಂ** - ಈ ಅದ್ಭುತರೂಪವನ್ನು, **ಪ್ರಸಾದೇನ** - ಅನುಗ್ರಹಮಾಡಿ, **ಉಪಸಂಹರ** - ಸಾಕುಮಾಡು ಎಂದೂ, "**ಹೇ ವಿಶ್ವಾತ್ಮನ್** - ಓ ವಿಶ್ವಕ್ಕೆಲ್ಲಾ ಆತ್ಮಾವಾಗಿರು

ಭಾ. ಪಸಂಹರ" (೧) "ಉಪಸಂಹರ ವಿಶ್ವಾತ್ಮನ್ ರೂಪಮೇತತ್ ಚತುರ್ಭುಜಮ್" ಇತಿಹಿ ಪ್ರಾರ್ಥಿತಮ್. ಶಿಶುಪಾಲಸ್ಯಾಪಿ ದ್ವಿಷತೋಽನವರತ ಭಾವನಾ ವಿಷಯ ಚತುರ್ಭುಜಮೇವ ವಸುದೇವಸೂನೋಃ ರೂಪಮ್ (೨) "ಉದಾರ ಪೀವರ ಚತುರ್ಬಾಹುಂ ಶಂಖ ಚಕ್ರ ಗದಾಧರಮ್" ಇತಿ; ಅತಃ ಪಾರ್ಥೇ ನಾತ್ರ "ತೇನೈವ ರೂಪೇಣ ಚತುರ್ಭುಜೇನ" ಇತ್ಯುಚ್ಯತೇ || ೫೦ ||

ಪವನೇ, **ರೂಪಮೇತಚ್ಚತುರ್ಭುಜಂ** - ಈ ನಾಲ್ಕು ಭುಜಗಳುಳ್ಳ ರೂಪವನ್ನು, **ಉಪಸಂಹರ** - ಬಿಟ್ಟುಬಿಡು" **ಇತಿ ಹಿ ಪ್ರಾರ್ಥಿತಮ್** - ಎಂದಲ್ಲವೇ ಪ್ರಾರ್ಥಿಸಲ್ಪಟ್ಟಿದುದು; **"ಜಾನಾತು ಮಾವತಾರಂತೇ ಕಂಸೋಽಯಂ ದಿತಿ ಜನ್ಮಜಃ"** ಎಂಬುದು ಉತ್ತರಾರ್ಧವು. ಈ ದೈತ್ಯಕುಲದಲ್ಲಿ ಹುಟ್ಟಿದ ಕಂಸನು ನಿನ್ನ ಅವತಾರವನ್ನು ತಿಳಿಯದೇ ಇರಲಿ, ಎಂಬುದು ಇದರ ತಾತ್ಪರ್ಯವು. ಕಂಸನು ಉಗ್ರಸೇನನ ಮಗನೆಂದು ಹೇಳುತ್ತಾರಲ್ಲಾ **ದಿತಿ ಜನ್ಮಜಃ** ಹೇಗೆ? ಎಂದರೆ ದ್ರುಮಿಳನೆಂಬ ದೈತ್ಯನು ಉಗ್ರಸೇನನ ವೇಷವನ್ನು ಧರಿಸಿ, ಉಗ್ರಸೇನ ಭಾರ್ಯೆಯನ್ನು ಮೋಸಗೊಳಿಸಿದುದರಿಂದ ಕಂಸನು ಅವಳಲ್ಲಿ ಹುಟ್ಟಿದನೆಂದು ಹರಿವಂಶದಲ್ಲಿ ಹೇಳಿರುತ್ತದೆ. ಕಂಸನು ಕ್ರೂರ ದೈತ್ಯನಾದುದರಿಂದ ಶ್ರೀ ಕೃಷ್ಣನಿಂದ ವಧಿಸಲ್ಪಟ್ಟನು. ಇದರ ವ್ಯಾಖ್ಯಾನದಲ್ಲಿ ವಿಷ್ಣು ಚಿತ್ತೀಯರು **"ಕಂಸವಧಾಂತಂ ದ್ವಿಭುತ್ವೋಪ ಲಬ್ಧೇಃ, ಪರಮಾರ್ಥತಸ್ತು ಚತುರ್ಭುಜತ್ವಮೇವ ನರಕ ಶಿಶುಪಾಲ ಪೌಂಡ್ರಕ ವಧಾದಿಷು ಪ್ರಸಿದ್ಧೇಃ"** ಎಂದು ಈ ಶ್ಲೋಕ ವ್ಯಾಖ್ಯಾನದಲ್ಲಿ ತಮ್ಮ ಅಭಿಪ್ರಾಯವನ್ನು ಶ್ರೀ ಯತಿವರ್ಯರ ಅಭಿಪ್ರಾಯವಹಾಗೆ, ಸೂಚಿಸಿರುತ್ತಾರೆ. ಆಯಾ ಅವಸರಗಳಲ್ಲಿ ಚತುರ್ಭುಜವೆಂಬುದು ವಿಷ್ಣು ಚಿತ್ತೀಯರ ಅಭಿಪ್ರಾಯವು. **ಶಿಶುಪಾಲಸ್ಯಾಪಿ** - ಶಿಶುಪಾಲನಿಗೂ ಕೂಡ, **ದ್ವಿಷತಃ** - ಸರ್ವೇಶ್ವರನನ್ನು ದ್ವೇಷಿಸುತ್ತಿದ್ದುದರಿಂದ, **ವಸುದೇವ ಸೂನೋಃ ರೂಪಂ** - ವಸುದೇವ ಪುತ್ರನಾಗಿ ಅವತರಿಸಿದ ಶ್ರೀ ಕೃಷ್ಣನರೂಪವು, **ಅನವರತ ಭಾವನಾ ವಿಷಯ ಚತುರ್ಭುಜಮೇವ** - ಯಾವಾಗಲೂ ಚಿಂತಿಸುವುದಕ್ಕೆ ವಿಷಯವಾದುದು ನಾಲ್ಕು ಭುಜಗಳುಳ್ಳದು; ಇಲ್ಲಿ **ದ್ವಿಷತಃ ಅನವರತ ಭಾವನಾವಿಷಯ ಚತುರ್ಭುಜಂ;** ಎಂದಿರುವದರಿಂದ, ದ್ವೇಷಿಯಾಗಿದ್ದರೂ ಮನಸ್ಸಿನ ಭಾವನೆಯು ಮುಖ್ಯವಾದುದರಿಂದ, ಊಟಮಾಡುವಾಗಲೂ, ನಡೆಯುತ್ತಿರುವಾಗಲೂ ಕೂತಿರುವಾಗಲೂ, ಸದಾ ಅದೇ ರೂಪವನ್ನು ಧ್ಯಾನಿಸುತ್ತಿದ್ದುದರಿಂದ ಸರ್ವೇಶ್ವರನು ತನ್ನ ಯಥಾರ್ಥ ರೂಪವನ್ನು ದ್ವೇಷಿಯಾಗಿದ್ದರೂ ಪ್ರದರ್ಶಿಸಿರುತ್ತಾರೆಂಬ ಭಾವವು; ದ್ವೇಷವೂ ಕೂಡ ಶಾಪ ಪ್ರಯುಕ್ತವಾದುದರಿಂದ ಅಂತಹ ದ್ವೇಷಿಯ ವಿಷಯದಲ್ಲೂ ಸ್ವಾಮಿಗೆ ಅನುಗ್ರಹವೇ. ಇದನ್ನೇ ಶುಕಮಹರ್ಷಿಯೂ ಹೇಳಿರುತ್ತಾರೆ—(ಭಾಗ. ೧೦. ೭೪. ೪೭.) **"ಜನ್ಮತ್ರಯಾನುಗುಣಿತ ವೈರ ಸಂರಬ್ಧಯಾ ಧಿಯಾ ಧ್ಯಾಯಂ ಸ್ತನ್ಮಯತಾಂ ಯತೋ ಭಾವೋ ಹಿ ಭವ ಕಾರಣಂ"** ಹೀಗೆ ಸರ್ವೇಶ್ವರನ ಶುಭಾಶ್ರಯವನ್ನು ಕುರಿತ ಭಾವವು, **ಭವಕಾರಣಂ - ಶುಭಭವಕಾರಣಂ ಬಭೂವ,** ನಿರತಿಶಯ ಶುಭಫಲವನ್ನು ಹೊಂದಲು ಕಾರಣವಾಯಿತು ಎಂಬರ್ಥವು, ಏಕೆಂದರೆ ಶಿಶುಪಾಲನಾಗಿದ್ದ ಆತನು ದಿವ್ಯ ತೇಜೋ ರೂಪವನ್ನು ಹೊಂದಿದವನಾಗಿ, **ವಾಸುದೇವ ಮುಪಾವಿಶತ್** - ವಾಸುದೇವನನ್ನು ಹೋಗಿ ಸೇರಿದನು, ಎಂದರೆ ಪ್ರಾಪ್ಯವನ್ನಾಗಿ ಹೊಂದಿದನು, ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಪೌಂಡ್ರಕನೂ ಕೂಡ ಶ್ರೀ ಕೃಷ್ಣ ಸ್ವರೂಪವನ್ನೇ ದ್ವೇಷಿಯಾಗಿ ಚಿಂತಿಸುತ್ತಾ ಇದ್ದುದರಿಂದ ಪ್ರಾಣವಿಯೋಗಕಾಲದಲ್ಲಿ ಅಂತಹ ಚತುರ್ಭುಜಾಕೃತಿಯನ್ನೇ ಕಂಡನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಹೇಳಲ್ಪಟ್ಟಿರುವದೆಂದು

(೧) ವಿ. ಪು. ೫. ೩. ೧೩.　(೨) ವಿ. ಪು. ೪-೧೫. ೧೩.

ವಿಷ್ಣುಪುರಾಣ ಪ್ರಮಾಣವನ್ನು ಉದಾಹರಿಸುತ್ತಾರೆ—ಉದಾರ - ಆಜಾನು ಲಂಬಿಯಾಗಿ ಬಹು ದೀರ್ಘವಾಗಿ, **ಪೀವರ** - ದಪ್ಪವಾದ. **ಚತುರ್ಬಾಹು ಶಂಖಚಕ್ರ ಗಧಾಧರಂ** ನಾಲ್ಕು ಬಾಹು ಗಳಿಂದಲೂ ಶಂಖ ಚಕ್ರಗದಾ ಮೊದಲಾದವುಗಳನ್ನು ಧರಿಸಿರುವವನನ್ನು, **ಇತಿಹಿ ಉಚ್ಯತೇ** - ಎಂದಲ್ಲವೇ ಹೇಳಲ್ಪಟ್ಟಿರುತ್ತದೆ; ಮೇಲೆ ಉದಾಹರಿಸಿರುವದು ಗದ್ಯರೂಪವಾದುದು; ಪೂರಾ ವಾಕ್ಯವು ಹೇಗೆಂದರೆ **"ತಚ್ಚರೂಪ ಮುತ್ಫುಲ್ಲ ಪದ್ಮದಳಾಮುಲಾಕ್ಷ ಮತ್ಯುಜ್ಜ್ವಲ ಪೀತ ವಸ್ತ್ರಧಾರ್ಯ ಮಲಕಿರೀಟ ಕೇಯೂರ ಹಾರ ಕಟಕಾದಿ ಶೋಭಿತ ಮುದಾರ ಚತು ರ್ಬಾಹು ಶಂಖ ಚಕ್ರ ಗದಾಧರ ಮತಿಪ್ರರೂಢ ವೈರಾನುಭಾವಾದಟನ ಭೋಜನ ಸ್ನಾನಾಸನ ಶಯನಾದಿಷ್ವ ಶೇಷಾವಸ್ಥಾಂತರೇಷು ನಾನ್ಯತ್ರೋಪಯಯೌ ವಸ್ಯಚೇ ತಸಃ"** ಶ್ರೀ ಕೃಷ್ಣನ ವಿಷಯದಲ್ಲಿ ಅತ್ಯಂತ ದ್ವೇಷವು ಆತನಿಗೆಲ್ಲಾ ಅವಸ್ಥೆಯಲ್ಲೂ ಸ್ಥಿರವಾಗಿ ನಿಂತು, ಆತನನ್ನೇ ಈ ಮೇಲೆ ಹೇಳಿದ ರೂಪವುಳ್ಳವನಾಗಿ ಚಿಂತಿಸುತ್ತಿದ್ದನೆಂದು ಹೇಳಿರುವದ ರಿಂದ, ಅಂತಹ ರೂಪವುಳ್ಳ ಭಗವಂತನನ್ನೇ ಕಡೆಗೆ ಸಾಕ್ಷಾತ್ಕರಿಸಿದನೆಂದು ಆ ರೂಪದಲ್ಲಿರುವ **"ಭಗವಂತ ಮದ್ರಾಕ್ಷೀತ್"** ಎಂದು ಹೇಳಲ್ಪಟ್ಟಿರುತ್ತದೆ, ಹಾಗೆಯೇ ಭಾರತ ಸಭಾಪರ್ವದಲ್ಲಿ (ಭಾರ ಸಭಾ. ೭೧-೨) **"ರರಕ್ಷಭಗವಾನ್ ಶೌರಿಃ ಶಂಖಚಕ್ರ ಗದಾಧರಃ"** ಎಂದು ಹೇಳಲ್ಪ ಟ್ಟಿರುವದರಿಂದ ಮಹತ್ತಾದ ಸಮಯಗಳಲ್ಲಿ ಚತುರ್ಭುಜ ಯುಕ್ತನಾಗಿ ಶಂಖ ಚಕ್ರ ಗದಾಧಾರಿ ಯಾಗಿರುತ್ತಿದ್ದರೆಂದು ತೋರಿಬರುತ್ತದೆ. ಹೀಗೆ ಅನೇಕ ದೃಷ್ಟಾಂತಗಳನ್ನು ಉದಾಹರಿಸ ಬಹುದು. ಶ್ರೀ ಕೃಷ್ಣಭಗವಾನರವರು ಭೀಮನ ಮೂಲಕ ಜರಾಸಂಧನ ವಧೆಯನ್ನು ಮಾಡಿಸಿ, ಆತನು ಸೆರೆಯಲ್ಲಿಟ್ಟಿದ್ದ ರಾಜನ್ಯ ವರ್ಗವನ್ನೆಲ್ಲಾ ಬಿಡಿಸಿದಾಗ ಅವರು ತುಂಬಾ ಕೃತಜ್ಞತೆಯಿಂದ ಸ್ತೋತ್ರಮಾಡಿ ಶರಣಾಗತರಾದಾಗ ಭಕ್ತವತ್ಸಲನು ಅವರಿಗೆ ಸೇವೆಯಿತ್ತುದನ್ನು ಮಹರ್ಷಿಯು ವರ್ಣಿಸಿರುತ್ತಾರೆ. ಹೇಗೆಂದರೆ—**"ದದೃಶುಸ್ತೇ ಘನಶ್ಯಾಮಂ ಪೀತಕೌಶೇಯ ವಾಸಸಂ। ಶ್ರೀ ವತ್ಸಾಙ್ಕಂ ಚತುರ್ಬಾಹುಂ ಪದ್ಮಪತ್ರನಿಭೇಕ್ಷಣಂ। ಚಾರುಪ್ರಸನ್ನವದನಂ ಸ್ಫುರನ್ಮಕರಕುಂಡಲಂ। ಪದ್ಮಹಸ್ತಂ ಗದಾಶಙ್ಖ ರಥಾಂಗೈ ರುಪಲಕ್ಷಿತಮ್। ಕಿರೀಟ ಹಾರ ಕಟಕ ಕಟಿಸೂತ್ರಾಂಗದಾನ್ವಿತಂ। ಭ್ರಾಜದ್ವರಮಣಿಗ್ರೀವಂ ನಿವೀತಂ ವನ ಮಾಲಯಾ"** ಇದನ್ನು ಕಂಡು ಪರಮರ್ಷಿತರಾಗಿ ಆ ರಾಜನ್ಯ ವರ್ಗವೆಲ್ಲಾ ಸ್ವಾಮಿಯಲ್ಲಿ ಮೋಕ್ಷಾರ್ಥಿಗಳಾಗಿ ಶರಣಾಗತಿಯನ್ನನುಷ್ಠಿಸಿದರೆಂದು ಹೇಳಲ್ಪಟ್ಟಿರುತ್ತದೆ.

ಭಾಷ್ಯದಲ್ಲಿ "**ಅಸ್ಯ ಸರ್ವೇಶ್ವರಸ್ಯ** ಎಂದಾರಂಭಿಸಿ, **ಚತುರ್ಭುಜಮೇವ ಸ್ವಕೀಯಂ ರೂಪಮ್** ಎಂದು ಮುಗಿಸಿದ ವಾಕ್ಯವು, ಅರ್ಥಗರ್ಭಿತವಾದುದು. ಅನೇಕ ಶಿಷ್ಟರೂ, ಮಹರ್ಷಿ ಗಳೂ ಗೋಪಿಕಾಸ್ತ್ರೀಯರು ಇವರುಗಳಿಗೆಲ್ಲಾ ನಿರತಿಶಯಾನಂದವನ್ನು ಇಲ್ಲಿಯೇ ನಿತ್ಯವಿಭೂತಿ ಯಲ್ಲಿಯ ಹಾಗೆ ಉಂಟುಮಾಡುವದು **"ಪರಿತ್ರಾಣಾಯ ಸಾಧೂನಾಂ"** ಎಂಬಲ್ಲಿ ಹೇಳಿರುವ ಹಾಗೆ ಕರುಣಾ ಮಹೋದಧಿಯ ಮುಖ್ಯೋದ್ದೇಶವು. ಅಂತವರಿಗೆಲ್ಲಾ ಅನುಗ್ರಹಿಸುವ ಕಾಲದಲ್ಲೆಲ್ಲಾ, ಚತುರ್ಭುಜಯುಕ್ತ ದಿವ್ಯ ಮಙ್ಗಳ ವಿಗ್ರಹ ಸಂದರ್ಶನವನ್ನೇ ಸಾಧಾರಣವಾಗಿ ಈ ಅವತಾರದಲ್ಲಿ ಅನುಗ್ರಹಿಸುತ್ತಿದ್ದರಾದುದರಿಂದ, **ಚತುರ್ಭುಜಮೇವ** ಕೃಷ್ಣಾವತಾರಿಯಾ ಗಿರುವ ತನಗೆ ಮಾತ್ರವೇ ಅಸಾಧಾರಣವಾದ ರೂಪವೆಂದು ಬಹು ಸ್ವಾರಸ್ಯವಾಗಿ ಉಪಪಾದಿಸಿ ರುತ್ತಾರೆ, ಇದಕ್ಕೆ ನಿದರ್ಶನವಾಗಿ ಮುಚುಕುಂದರಿಗೆ ಪ್ರಸನ್ನರಾದಾಗ **ಚತುರ್ಭುಜಂ ರೋಚ ಮಾನಂ ವೈಜಯನ್ತ್ಯಾಚಮಾಲಯಾ"** ಎಂದು ಪ್ರಯೋಗವಿರುತ್ತದೆ. ಇಂತಹ ಅಮೋಘ ರೂಪವನ್ನೇ ಅರ್ಜುನನು ನೋಡಬೇಕೆಂದು ಪ್ರಾರ್ಥಿಸಿದುದು ಎಂಬುದು ಇವೆಲ್ಲಾ ಕಾರಣ ಗಳಿಂದಲೂ ವ್ಯಕ್ತಪಡುತ್ತದೆಂದು, **ಅತಃ** ಎಂಬ ವಾಕ್ಯದಿಂದ ಈ ಶ್ಲೋಕ ಭಾಷ್ಯವನ್ನು ಮುಗಿಸಿ

ರುತ್ತಾರೆ. **ಅತಃ** - ಆ ಕಾರಣದಿಂದಲೇ, **ಪಾರ್ಥೇನ** - ಅರ್ಜುನನಿಂದ, **ಅತ್ರ** - ಈ ಸಂದರ್ಭದಲ್ಲಿ **ತೇನೈವರೂಪೇಣ ಚತುರ್ಭುಜೇನ** - ತೇನೈವ ರೂಪೇಣ ಎಂಬುದನ್ನು ಚತುರ್ಭುಜೇನ ಎಂದು ವಿಶೇಷಿಸಿ, **ಇತ್ಯುಚ್ಯತೇ** - ಹೀಗೆ ಹಿಂದೆ ೪೬ ನೆಯ ಶ್ಲೋಕದಲ್ಲಿ ಹೇಳಿರುತ್ತದೆ.

ಆದುದರಿಂದ ಶ್ರೀಯತಿವರ್ಯರ ಅಭಿಪ್ರಾಯವು ಕಂಸವಧೆಯವರೆಗೂ ಎರಡು ಭುಜದಿಂದಿದ್ದರು; ವಧೆಯಾದ ಮಾರನೆಯ ದಿನ ಚತುರ್ಭುಜತ್ವೇನ ಆದರು ಎಂದಲ್ಲವು. ಚತುರ್ಭುಜತ್ವೇನವೇ ಕಂಸವಧಾನಂತರ ಎಲ್ಲರಿಗೂ ತೋರುತ್ತಿದ್ದರೆಂದು ಹೇಳುವದಕ್ಕೆ ಯಾವ ಪ್ರಮಾಣವೂ ಇಲ್ಲವು. ಇತರ ಅವತಾರಗಳಿಗಿಂತ ಕೃಷ್ಣಾವತಾರಕ್ಕೆ ವೈಲಕ್ಷಣ್ಯವೇನೆಂದರೆ ಮಹರ್ಷಿಗಳೇ ಗೋಪಿಕಾಸ್ತ್ರೀಯರಾಗಿ ಅವತರಿಸಿದುದರಿಂದ ಅವರಿಗೆ ಅಂಗಸಂಗ ಸಲ್ಲಾಪಾದಿಗಳನ್ನು ಕೊಡುವದಾಗಿ ವಾಗ್ದಾನ ಮಾಡಿದ್ದರಿಂದ ಅವರಿಗೆ ಮಾತ್ರವೇ ತನ್ನ ಪರತ್ವವನ್ನು ಚತುರ್ಭುಜಾವಿಷ್ಕಾರದಿಂದ ಪ್ರದರ್ಶಿಸಿ ಆನಂದವನ್ನುಂಟುಮಾಡುತ್ತಿದ್ದರು. ಯಾವಾಗಲೂ ಮಾನುಷಾಕೃತಿಯಿಂದ ದ್ವಿಭುಜತ್ವವೇ. ಯಾವಾಗಲೂ ಚತುರ್ಭುಜತ್ವೇನವಿದ್ದರೆಂಬುದು, ಸಂಪೂರ್ಣವಾಗಿ ಅಲೌಕಿಕ ವಿಷಯವಾಗುತ್ತದೆ ಶ್ರೀ ಯತಿವರ್ಯರು ಈ ಅಭಿಪ್ರಾಯವನ್ನು ಎಂದಿಗೂ ಅನುಮೋದಿಸಲಾರರು. ಕಂಸವಧೆಯವರೆಗೂ, ಕಂಸನಿಂದ ಭಯವು ಮಾತಾಪಿತೃಗಳಿಗೆ ಇದ್ದುದರಿಂದ ಚತುರ್ಭುಜಾ ವಿಷ್ಕಾರಮೂಲಕ ತಮ್ಮ ಪರತ್ವವನ್ನು ಯಾವ ಮಹತ್ಮರಿಗೂ ತೋರಿಸಲಿಲ್ಲವು. ತದನಂತರವೇ ಯೋಗ್ಯರಿಗೆ ಚತುರ್ಭುಜಾವಿಷ್ಕಾರವೆಂಬುದು ಶ್ರೀ ಯತಿವರ್ಯರ ಅಭಿಪ್ರಾಯವೆಂದು ಇಟ್ಟುಕೊಂಡರೆ ಸರ್ವಸಾಮಂಜಸ್ಯವು ದೊರೆಯುತ್ತದೆ. ಇದೇ ಅವರ ಅಭಿಪ್ರಾಯವಾಗಿರಬಹುದು. ಆದುದರಿಂದಲೇ ಯಾವ ಯಾವ ಸಂದರ್ಭದಲ್ಲಿ ಚತುರ್ಭುಜ ಪ್ರದರ್ಶನವನ್ನು ಅನುಗ್ರಹಿಸಿದರೆಂದು ಹೇಳಬೇಕೋ, ಅಲ್ಲೆಲ್ಲಾ **ಚತುರ್ಭುಜಃ** ಎಂಬ ಪ್ರಯೋಗವಿರುತ್ತದೆ. ಇದಕ್ಕೆ ವ್ಯಾಖ್ಯಾತೃಗಳು **ಆವಿಷ್ಕೃತ ಚತುರ್ಭುಜಃ** ಎಂದು ಭಾಷ್ಯವನ್ನು ಬರೆದಿರುತ್ತಾರೆ. (ಭಾಗ. ೧೦. ೬೦. ೨೬) ಶ್ಲೋಕ ವ್ಯಾಖ್ಯಾನವನ್ನು ಪರಂಬರಿಸಿ.

ಆಗಲಿ ಹೀಗೆ ಶ್ರೀ ಯತಿವರ್ಯರ ವ್ಯಾಖ್ಯಾನಕ್ಕೆ ಅರ್ಥಮಾಡಲು ಹೇಗೆ ಸಾಧ್ಯವು ? **"ಅಪರಿಚಿತ ಸ್ವರೂಪದರ್ಶನೇನ ಭೀತಮೇನಂ, ಪರಿಚಿತಸೌಮ್ಯ ವಪುರ್ಭೂತ್ವಾ, ಆಶ್ವಾಸಯಾಮಾಸ ಮಹಾತ್ಮಾ"** ಎಂದು ಇದೆಯಲ್ಲಾ ? ಅಪರಿಚಿತ ಸ್ವರೂಪ ದರ್ಶನವೆಂಬುದರಿಂದ ವಿಶ್ವರೂಪವನ್ನು ಹೇಳಿ, **ಪರಿಚಿತ ಸೌಮ್ಯವಪುರ್ಭೂತ್ವಾ** ಎಂಬುದರಿಂದ ಯಾವಾಗಲೂ ಇರುವ ರೂಪವು ಹೇಳಲ್ಪಟ್ಟಿತಲ್ಲವೇ? ಎಂದರೆ ಸತ್ಯವು. ಇದು ಮಾನುಷ ರೂಪವು; ಮುಂದಿನ ಅರ್ಜುನವಾಕ್ಯದಿಂದಲೂ ವ್ಯಕ್ತಪಡುತ್ತದೆ. ಹಾಗಾದರೆ ಪರರೂಪವನ್ನು ತೋರಿಸಿದರು ಎಂಬುದನ್ನು ವ್ಯಾಖ್ಯಾನದಲ್ಲಿ ಎಲ್ಲಿ ಗ್ರಹಿಸುವಿರಿ? ಎಂದು ಕೇಳಿದರೆ, ಇದರ ಹಿಂದಿನ ವಾಕ್ಯವಾದ **ಭೂಯಃ ಸ್ವಕೀಯಮೇವ ಚತುರ್ಭುಜರೂಪಂ ದರ್ಶಯಾಮಾಸ"** ಎಂಬುದರಿಂದ ಪರಮಪುರುಷನಿಗೆ ಚತುರ್ಭುಜತ್ವವೇ ಸ್ವಕೀಯರೂಪವೆಂದೇ ಸ್ವಾರಸ್ಯವಾಗಿ, ಹೇಳಿರುತ್ತಾರೆ ಈ ಚತುರ್ಭುಜರೂಪವೇ **"ಪರಿಚಿತ ಸೌಮ್ಯವಪುಃ"** ಎಂದರ್ಥಮಾಡಿದರೆ ಭ್ರಮಕ್ಕೆ ಕಾರಣವಾಗುತ್ತದೆ. ಸಂಜಯ ವಾಕ್ಯದ ಪೂರ್ವಾರ್ಧದಿಂದ ಚತುರ್ಭುಜತ್ವದಿಂದ ಕೂಡಿದ ಪರರೂಪವು ಹೇಳಲ್ಪಟ್ಟಿತೆಂದೂ, ಉತ್ತರಾರ್ಧದಿಂದ **ಸೌಮ್ಯ ವಪುಃ** ಎಂಬುದರಿಂದ ಮಾನುಷರೂಪವೂ ಹೇಳಲ್ಪಟ್ಟಿತೆಂದು ಭಾವಿಸಿದರೆ ಸರ್ವಸಾಮಂಜಸ್ಯ ಉಂಟಾಗುವದರಿಂದ ಅದೇ ಶ್ರೀ ಯತಿವರ್ಯರ ಅಭಿಪ್ರಾಯವೆಂದು ಹೇಳಬಹುದು. ಸಂಜಯವಾಕ್ಯದ ಪೂರ್ವಾರ್ಧದಿಂದ ಪರಮಪುರುಷನ ಅಸಾಧಾರಣವಾದ ಚತುರ್ಭುಜದಿಂದ ಒಪ್ಪುವ ರೂಪವೂ, ಉತ್ತರಾರ್ಧದಿಂದ ಅನಂತರ ತಾಳಿದ ಮಾನುಷ ರೂಪವೂ ವ್ಯಾಖ್ಯಾತವೆಂದು ಭಾವಿಸತಕ್ಕದ್ದು. ಅದೂ

**ಅರ್ಜುನ ಉವಾಚ—**

**ಮೂ. ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತ ಸ್ಸಚೇತಾಃ ಪ್ರಕೃತಿಂಗತಃ ॥** ೫೧.

ಅಲ್ಲದೆ, ಹಿಂದೆ ೪೭ ನೆಯ ಶ್ಲೋಕದಲ್ಲಿ **ರೂಪಂ ಪರಂ ದರ್ಶಿತಂ** ಎಂದು **ಪರ** ಶಬ್ದವಿರುವದ ರಿಂದ, ಅದರ ಮುಖ್ಯಾರ್ಥವು ವೈಕುಂಠರೂಪವಾದ ಚತುರ್ಭುಜವೆಂಬುದು ಸಿದ್ಧವು.

**ಮೂಲಕ್ಕೆ ಅರ್ಥವು:—** ಸಂಜಯ ವಾಕ್ಯದ ಪೂರ್ವಾರ್ಧದಿಂದ ಚತುರ್ಭುಜರೂಪ ಗ್ರಹಣವೂ, ಉತ್ತರಾರ್ಧದಿಂದ ಸಾಮಾನ್ಯ ಮಾನುಷರೂಪದ್ವಿಭುಜ ಗ್ರಹಣವೂ ಹೇಳಲ್ಪಟ್ಟ ವೆಂಬುದು ಈ ಮುಂದಿನ ಅರ್ಜುನವಾಕ್ಯದಿಂದ ವ್ಯಕ್ತಪಡುತ್ತದೆ. **ದೃಷ್ಟ್ವೇದಂ ಮಾನುಷಂ ರೂಪಂ** ಎಂದಿಲ್ಲಿ ಇರುವದರಿಂದ, **ಸ್ವಕಂ ಚತುರ್ಭುಜಂ ರೂಪಂ** ಮಾನುಷರೂಪವಾಗದೆ ಅಮಾನುಷರೂಪವಾಗುತ್ತದೆಯಾದುದರಿಂದ, ಸ್ವಭಕ್ತರಿಗೆ ಸಾಧಾರಣವಾಗಿ ತೋರಿಸುವ ಚತು ರ್ಭುಜಾಕೃತಿಯನ್ನು ಮರೆಸಿ, ಹಿಂದೆ ಮನುಷ್ಯ ರೂಪದಿಂದ ಲೀಲಾಸಾರಥಿಯಾದ ರೂಪವನ್ನು ಶ್ರೀ ಕೃಷ್ಣಭಗವಾನರವರು ತಾಳಿದರೆಂದು ಅರ್ಜುನವಾಕ್ಯದಿಂದ ವ್ಯಕ್ತಪಡುತ್ತದೆ. ಈ ಸೌಮ್ಯ ರೂಪವನ್ನು ಪುನಃ ನೋಡುವದರಿಂದ ತನಗೆ ಚಿತ್ತ ಸ್ವಾಸ್ಥ್ಯವು ಉಂಟಾಯಿತೆಂದು ಭಕ್ತವತ್ಸಲ ನಲ್ಲಿ ಅರಿಕೆಮಾಡಿಕೊಳ್ಳುತ್ತಾನೆ. **ಹೇ ಜನಾರ್ದನ** - ಸಾಧು ಜನಗಳಿಗೆ ಶತ್ರುಗಳಾದವರನ್ನು ಆ ಸಾಧುಜನರಿಂದ ಅಪೇಕ್ಷಿಸಲ್ಪಡದೇನೇ ನಾಶಮಾಡುವನೇ !! ಈ ಸಂಬೋಧನೆಯಿಂದ ಭಕ್ತ ನಾದ ತನ್ನ ಶತ್ರುಗಳಾಗಿ ಲೋಕಕಂಟಕರಾದವರನ್ನು ನಾಶಮಾಡಬೇಕೆಂಬ ಸ್ಥಿರಸಙ್ಕಲ್ಪ ಯುಕ್ತನಾದವನೆಂದು ವಿಶ್ವರೂಪದರ್ಶನದಿಂದ ತೋರಿಬಂದುದರಿಂದ ಹಾಗೆ ಸಂಬೋಧನೆಯು ಎಂದು ಭಾವಿಸಬಹುದು ; ಇಂತಹ ಸಙ್ಕಲ್ಪಕ್ಕೆ ವಿರುದ್ಧವಾಗಿ ಅಂತಹ ಶತ್ರುಗಳನ್ನು ರಕ್ಷಿಸಲು, ಇನ್ನು ಯಾರಿಗೂ ಶಕ್ತಿ ಇಲ್ಲವೆಂಬುದು **"ಬ್ರಹ್ಮಾ ಸ್ವಯಂಭೂ ಶ್ಚತುರಾನನೋವಾ"** ಎಂಬ ಶ್ಲೋಕದಲ್ಲಿ (ರಾಮಾ. ಸು. ೫೧-೪೫) ಉಪಪಾದಿತವಾಗಿರುವಹಾಗೆ ಸಿದ್ಧವು. **ಇದಂ** - ಈಗ ನಾನು ಪ್ರತ್ಯಕ್ಷನಾಗಿ ನೋಡುತ್ತಿರುವ ನಿರತಿಶಯ ಲಾವಣ್ಯ ಮೊದಲಾದವುಗಳಿಂದ ವಿಲಕ್ಷಣ ವಾದ, **ತವ** - ನಿನ್ನ, **ಸೌಮ್ಯಂ** - ಪರಮ ಶಾಂತತೆಯನ್ನುಳ್ಳ, **ಮಾನುಷಂ ರೂಪಂ** - ಮನು ಷ್ಯಾಕೃತಿಯನ್ನು **ದೃಷ್ಟ್ವಾ** - ಕಂಡು, **ಇದಾನೀಂ** - ಈಗ, **ಸಚೇತಾಃ** - ಸ್ವಸ್ಥವಾದ ಮನಸ್ಸು ಳ್ಳವನಾಗಿ, **ಸಂವೃತೋಽಸ್ಮಿ** - ಬದುಕಿದವನಾದೆನು ; **ಪ್ರಕೃತಿಂ ಗತೋಽಸ್ಮಿ** - ನನ್ನ ನೈಜವಾದ ಅವಸ್ಥೆಯನ್ನು ಹೊಂದಿದವನು ಆದೆನು. **ಇದಂ ಮಾನುಷಂ** ಎಂದು ಹೇಳಿರುವದರಿಂದ ಮಾನುಷರೂಪದಲ್ಲೂ ವೈಲಕ್ಷಣ್ಯ ಉಂಟೆಂಬುದು ವ್ಯಕ್ತಪಡುತ್ತದೆ. ಶ್ರೀರಾಮನು ಯದ್ಯಪಿ ಮನುಷ್ಯರೂಪದಲ್ಲೇ ಇದ್ದರೂ **"ಚಂದ್ರಕಾಂತಾನನಂ ರಾಮ ಮತೀವ ಪ್ರಿಯದರ್ಶನಂ । ರೂಪೌದಾರ್ಯ ಗುಣೈಃ ಪುಂಸಾಂ ದೃಷ್ಟಿಚಿತ್ತಾಪಹಾರಿಣಮ್"** (ರಾಮಾ. ಅಯೋಧ್ಯಾ. ೩-೨೮) ಎಂದು ಹೇಳಿರುವಹಾಗೆ ಎಲ್ಲಾ ಮನುಷ್ಯರಿಗಿಂತಲೂ ವಿಸಜಾತೀಯನು. **ಜನಾರ್ದನ, ಸೌಮ್ಯಂ** ಎಂಬ ಪದಗಳು ಕ್ರೌರ್ಯವನ್ನೂ ಪ್ರಸನ್ನತೆಯನ್ನೂ ಪರಸ್ಪರ ವಿರುದ್ಧ ಧರ್ಮಗಳನ್ನು ಬೋಧಿಸುವದರಿಂದ ದುಷ್ಟರ ವಿಷಯದಲ್ಲಿ ಕ್ರೌರ್ಯವೂ ಶಿಷ್ಟರ ವಿಷಯದಲ್ಲಿ ಪರಮಾನುಗ್ರಹವೂ ಬೋಧಿತವು. ನೃಸಿಂಹಾವತಾರವು ಯದ್ಯಪಿ ಬಹು ಕ್ರೂರವಾದ ಅವತಾರವೆಂದೆನಿಸಿದರೂ, ಅದೇ ಕಾಲದಲ್ಲೇ ಭಕ್ತಾಗ್ರೇಸರರಾದ ಪ್ರಹ್ಲಾದರಲ್ಲಿ ವಿಶೇಷ ವಾತ್ಸಲ್ಯವು ಪ್ರದರ್ಶಿಸಲ್ಪ ಟ್ಟಿತು, ಎಂದು ಮಹರ್ಷಿಗಳು ವರ್ಣಿಸಿರುತ್ತಾರೆ. **ಸಂವೃತ್ತಸ್ಸಚೇತಾಃ** ಎಂಬ ಪ್ರಯೋಗವು ಭಯದಿಂದ ಬಿಡುಗಡೆಯನ್ನು ಹೊಂದಿದುದು ಈಗ ಬದುಕಿದಹಾಗಾಯಿತು ಎಂಬ ಭಾವವನ್ನು

**ಭಾ. ಅನವಧಿಕಾತಿಶಯ ಸೌಂದರ್ಯ ಸೌಕುಮಾರ್ಯ ಲಾವಣ್ಯಾದಿಯುಕ್ತಂ ತವೈವಾ ಸಾಧಾರಣಂ ಮನುಷ್ಯತ್ವ ಸಂಸ್ಥಾನ ಸಂಸ್ಥಿತ ಮತಿಸೌಮ್ಯಮಿದಂ ತವರೂಪಂ ದೃಷ್ಟ್ವಾ, ಇದಾನೀಂ ಸಚೇತಾ ಸ್ಸಂವೃತ್ತೋಽಸ್ಮಿ ಪ್ರಕೃತಿಂ ಗತಶ್ಚ ॥ ೫೧ ॥**

ಸೂಚಿಸುತ್ತದೆ. **ಪ್ರಕೃತಿಂಗತಃ** ಎಂದು ಈಗ ಹೇಳಿರುವದರಿಂದ ಹಿಂದೆ ತನ್ನ ಸ್ವಭಾವವೇ ವ್ಯತ್ಯಸ್ತವಾಗಿತ್ತೆಂಬುದೂ ತೋರಿಬರುತ್ತದೆ.

**ಭಾಷ್ಯಾರ್ಥವು:—ಮೊದಲು ಇದಂ ಮಾನುಷಂ ರೂಪಂ** - ಎಂದಿರುವದರಿಂದ, **ಇದಂ** ಎಂಬ ಪದವು ಮನುಷ್ಯ ಜಾತೀಯನಾಗಿದ್ದರೂ ವಿಶೇಷ ವೈಲಕ್ಷಣ್ಯವನ್ನು ಬೋಧಿಸುತ್ತದೆಂದು **ಇದಂ** ಪದಕ್ಕೆ ವ್ಯಾಖ್ಯಾನಮಾಡುತ್ತಾರೆ.—ಅಸಾಧಾರಣತ್ವ ಹೇಗೆಂದರೆ, **ಅನವಧಿಕ** - ಅವಧಿ ಇಲ್ಲದ, **ಅತಿಶಯ** - ಅತಿಶಯವನ್ನು ಹೊಂದಿದ, ಸೌಂದರ್ಯ, ಸೌಕುಮಾರ್ಯ, ಲಾವಣ್ಯ ಇವುಗಳೇ ಮೊದಲಾದವುಗಳಿಂದ, **ಯುಕ್ತಂ** - ಕೂಡಿಕೊಂಡಿರುವ, **ತವೈವಾಸಾಧಾರಣಂ** ನಿನಗೆ ಮಾತ್ರವೇ ಅಸಾಧಾರಣವಾದ, **ಮನುಷ್ಯತ್ವ ಸಂಸ್ಥಾನಂ ಸಂಸ್ಥಿತಂ** - ಮನುಷ್ಯ ಜಾತಿಯ ಅವಯವಗಳುಳ್ಳ, **ಅತಿಸೌಮ್ಯಂ** - ತುಂಬಾ ಶಾಂತವಾದ, **ಇದಂ ತವ ರೂಪಂ** - ಇಂತಹ ಈ ನಿನ್ನ ರೂಪವನ್ನು **ದೃಷ್ಟ್ವಾ** - ಕಂಡು, **ಇದಾನೀಂ** - ಈಗ, **ಸಚೇತಾಃ** - ಶಾಂತ ಮನಸ್ಕನಾಗಿ, **ಸಂವೃತ್ತೋಽಸ್ಮಿ** - ಬದುಕಿದವನಾಗಿದ್ದೇನೆ. **ಪ್ರಕೃತಿಂ ಗತಶ್ಚ** - ಸ್ವಾಭಾವಿಕ ವಾದ ಅವಸ್ಥೆಯನ್ನು ಹೊಂದಿದವನೂ ಆಗಿರುತ್ತೇನೆ. ಈ ಲೋಕದಲ್ಲಿ ಜೀವಾತ್ಮರುಗಳು ಮಾನುಷರೂಪವನ್ನೆತ್ತುವದು, ಅವರವರುಗಳ ಕರ್ಮಾನುಸಾರ ಪ್ರಾರಬ್ಧ ಫಲಾನುಭವಕ್ಕಾಗಿ; ಹಾಗೆ ಅಲ್ಲದೆ ಸ್ವಸಙ್ಕಲ್ಪಾಯತ್ತವಾದ ಸ್ವಾತಂತ್ರ್ಯದಿಂದ ಪರಮಾತ್ಮನು ಅವತರಿಸುವದಾ ದರೋ, ಅಜಹತ್ಸ್ವ ಸ್ವಭಾವನಾಗಿ ಅಸದೃಶ ಆತ್ಮಗುಣಗಳೇನು, ದೇಹಗುಣಗಳೇನು ಇವು ಗಳಿಂದೊಪ್ಪುತ್ತಾ ವಿಲಕ್ಷಣನಾಗಿ, **"ಸಾಕ್ಷಾನ್ಮನ್ಮಥಮನ್ಮಥಃ"** ಎಂದು ಹೇಳಿರುವಹಾಗೆ ದೃಷ್ಟಿ ಚಿತ್ತಾಪಹಾರಿಯಾಗಿರುವನೆಂದು **ಅನವಧಿಕಾತಿಶಯ** ಎಂದಾರಂಭಿಸಿ ಹೇಳುತ್ತಾರೆ. **ತವೈವಾ ಸಾಧಾರಣಂ** ಎಂದು ಹೇಳಲು ಕಾರಣವೇನೆಂದರೆ? ಆತನ **ಜನ್ಮಕರ್ಮಗಳು** ಕರ್ಮ ಕೃತಗಳಲ್ಲದೆ ದಿವ್ಯಗಳಾಗಿರುವವು ಎಂದು ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದ ಅವತಾರ ರಹಸ್ಯಾರ್ಥವನ್ನು ಜ್ಞಾಪಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆದುದರಿಂದಲೇ ಶ್ರೀ ಪರಾಶರರು ಸರ್ವೇಶ್ವರನ ರೂಪವು ಅವತಾರಕಾಲಗಳಲ್ಲೂ **"ನ ಭೂತ ಸಂಘಸಂಸ್ಥಾನೋ ದೇಹೋಽಸ್ಯಪರಮಾತ್ಮನಃ"** ಎಂದು ಹೇಳಿರುತ್ತಾರೆ. **"ನ ತಸ್ಯ ಪ್ರಾಕೃತಾಮೂರ್ತಿ ರ್ಮಾಂಸಮೇಧೋಽಸ್ಥಿ ಸಂಭವಾ"** ಎಂಬ ವರಾಹ ಪುರಾಣೋಕ್ತಿಯೂ ಇದೆ. ಪ್ರಾಣಿವರ್ಗ ವಲ್ಲೆಲ್ಲಾ ಮಹತ್ತಾದ ಜ್ಞಾನ ವಿವೇಕಗಳಿಂದ ಶೋಭಿಸುವಂತಾದ್ದು ಮನುಷ್ಯರೂಪವು. ಆದು ದರಿಂದಲೇ ಸೌಮ್ಯರೂಪವೆಂದು ಹೇಳಲ್ಪಟ್ಟಿತು. ಹೀಗಿದ್ದರೂ ಈರ್ಷಾಸೂಯೆಗಳಿಂದ ಪ್ರೇರಿತ ರಾಗಿ ಪರಸ್ಪರ ದ್ವೇಷಿಗಳಾಗಿ ಘೋರರಾಕ್ಷಸರಹಾಗೆ ಗುಣಪ್ರವೃತ್ತಿಗಳನ್ನು ಹೊಂದಿ ದುರ್ಯೋ ಧನ ದುಶ್ಶಾಸನಾದಿ ದುಷ್ಟ ಚತುಷ್ಟಯರಹಾಗೆ ನಟಿಸುತ್ತಿರುವದು ಪರಮಶೋಚನೀಯವಾ ದುದು. ಸಂಘ ಸಂಘದವರಿಗೂ ಜಾತಿ ಜಾತಿಯವರಿಗೂ ಪರಸ್ಪರ ಮಿತ್ರತೆಗೆ ಬದಲಾಗಿ ಈಗ ಎಲ್ಲಿ ನೋಡಿದರೂ ಪರಸ್ಪರ ದ್ವೇಷಾಸೂಯಗಳೇ ಹೆಚ್ಚಿ ಹೋಗಿ ಮನುಷ್ಯತ್ವವು ಸೌಮ್ಯವಾದು ದೆಂದರೆ ನಂಬತಕ್ಕದ್ದಲ್ಲವು. ಆದರೆ ಶ್ರೀ ಕೃಷ್ಣಭಗವಾನರವರಲ್ಲಿ ಹೇಯಪ್ರತ್ಯನೀಕತ್ವವೂ ಕಲ್ಯಾಣಗುಣಾಕರತ್ವವೂ ಇರುವದರಿಂದ, **ಮಾನುಷಂ ಅತಿಸೌಮ್ಯಮಿದಂ ತವರೂಪಂ** ಎಂಬ ವ್ಯಾಖ್ಯಾನದಲ್ಲಿ ನಿರತಿಶಯ ಸಾಮಂಜಸ್ಯವು ತೋರಿಬರುತ್ತದೆ. ೪೬ ನೆಯ **ಮೊದಲು ಗೊಂಡು ೫೧ ನೆಯ ಶ್ಲೋಕಾಂತ್ಯದವರೆಗೂ ಇರುವ ೬ ಶ್ಲೋಕಗಳ ಅಭಿಪ್ರಾಯವೇನೆಂಬುದನ್ನು**

ಶ್ರೀ ಭಗವಾನುವಾಚ—

**ಮೂ. ಸುದುರ್ದರ್ಶ ಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನ ಕಾಂಕ್ಷಿಣಃ ॥** ೫೨.

ವಿಮರ್ಶಿಸಿ ತಿಳಿಯತಕ್ಕದ್ದಾಗಿರುತ್ತದೆ. ಅರ್ಜುನನಿಗೆ ಶ್ರೀ ಕೃಷ್ಣಭಗವಾನರವರು ತೋರಿಸಿದುದು ವಿಶ್ವರೂಪ ಒಂದೆಯೇ? ಇಲ್ಲವೇ ಎರಡೇ? ವಿಶ್ವರೂಪವಾದ ನಂತರ ಮಾನುಷರೂಪವೇ ತೋರಿದರೆಂದು ಅರ್ಥಮಾಡಿದರೆ, ವಿಶ್ವರೂಪ ಒಂದೇ ತೋರಿದರೆಂದಾಗುತ್ತದೆ. ಆದರೆ ಅರ್ಜುನನು ೪೬ ನೆಯ ಶ್ಲೋಕದಲ್ಲಿ ಕಿರೀಟ ಗದಾದಿವ್ಯಾಯುಧ ದಿವ್ಯಭೂಷಣಗಳಿಂದ ಕೂಡಿದ ಪ್ರಾಪ್ಯನಾದ ಪರರೂಪ ಚತುರ್ಭುಜಾಕೃತಿಯನ್ನು ತೋರಿಸು ಎಂದು ಪರವಾಸುದೇವರೂಪವಾಗಿ ಧ್ಯೇಯರೂಪವನ್ನು ನೋಡಲು ಕುತೂಹಲವುಳ್ಳವನಾಗಿ, ಬಹು ಆದರದಿಂದ ಕೇಳಿಕೊಳ್ಳುತ್ತಾನೆ. ಭಕ್ತವತ್ಸಲನು ಈ ಆಕೃತಿಯನ್ನು ತೋರಿಸಿದರೇ ಇಲ್ಲವೇ ಎಂಬ ಚರ್ಚೆಯಲ್ಲಿ ೪೭, ೪೮ ನೆಯ ಶ್ಲೋಕದಲ್ಲಿ ಅವನು ಕೇಳುವ ಪರತ್ವವನ್ನು ತೋರಿಸುವ ಆ **"ರೂಪಂ ಪರಂ"** ಪರರೂಪವಾದ ಪ್ರಾಪ್ಯವು ಮಾತ್ರವೇ ವೇದ್ಯವೇ ವಿನಾ ಇನ್ನು ಯಾರಿಗೂ ಮುಕ್ತಿ ಹೊಂದಿದವರಿಗೆ ಈ ಭೂಲೋಕದಲ್ಲಿ ವೇದ್ಯವಲ್ಲವೆಂದು ಹೇಳಿದರು. ಆದರೆ ಅರ್ಜುನನು ನಿಷ್ಪನ್ನಯೋಗಿಯಲ್ಲದಿದ್ದರೂ ಅವನಿಗೆ ತೋರಿಸಿದುದು ಹೇಗೆ? ಎಂದರೆ **ತ್ವದನ್ಯೇನ** ಎಂಬುದರಿಂದ ನಿನ್ನ ವಿಷಯವು ಬೇರೆಯಾದುದು; ನೀನು ಈ ಅವತಾರಕ್ಕೆ ಸಹಕಾರಿಯಾಗಿ ನೀನು ನರನಾಗಿಯೂ ನಾನು ನಾರಾಯಣನಾಗಿಯೂ ಅವತರಿಸಿರುವುದರಿಂದ, ನಿನ್ನಂತಹ ಪ್ರಿಯನಿಗೆ ಏನೋ ತೋರಿಸಬಹುದು, ಇತರರಿಗೆ ಸಾಧ್ಯವಿಲ್ಲವೆಂದು ಹೇಳಿದರು. ಅಂತಹ ಪರರೂಪಪ್ರಾಪ್ತಿಗೆ (೧) ಭಕ್ತಿಯೋಗನಿಷ್ಠನಾಗಿರಬೇಕು. (೨) ಅದರಿಂದ ಭಗವಂತನು ಸುಪ್ರೀತನಾಗಿ ಪ್ರಸನ್ನನಾಗಬೇಕು ಇವೆರಡೇ ಮುಖ್ಯವೇ ವಿನಾ ಕೇವಲ ವೇದಯಜ್ಞಾಧ್ಯಯನ ದಾನ ಜಪ ಹೋಮ ಇವುಗಳಿಂದಲೇ ಸಾಧ್ಯವಿಲ್ಲವೆಂದು ಮುಂದೆ ತಿಳಿಸುತ್ತಾರೆ. ಮುಂದೆ ಹೇಳುವ ಶ್ಲೋಕಗಳೆಲ್ಲಾ ಈ ಪ್ರಾಪ್ಯರೂಪವನ್ನು ಕುರಿತದ್ದೇ ಎಂಬುದರಲ್ಲಿ ಏನೊಂದೂ ಸಂದೇಹವಿಲ್ಲವು. ಆದುದರಿಂದ ಪರರೂಪವು ತೋರಿಸಲ್ಪಟ್ಟಿತು ಎಂಬುದು ವ್ಯಕ್ತವು. ಶ್ರೀ ಭಾಷ್ಯಕಾರರ ವ್ಯಾಖ್ಯಾನವನ್ನೂ ಚೆನ್ನಾಗಿ ವಿಮರ್ಶಿಸಿ ನೋಡಿದರೆ ಈ ಅಭಿಪ್ರಾಯವೇ ಏರ್ಪಡುತ್ತದೆ. ಪರರೂಪ ಎಂಬ ಪದಕ್ಕೆ ಮುಖ್ಯಾರ್ಥವಾದ ವಾಸುದೇವ ರೂಪವೆಂದೇ ಅರ್ಥಮಾಡಬೇಕೇ ವಿನಾ ಬೇರೆ ಅರ್ಥವು ಸರಿಯಲ್ಲವು.

ಆದರೆ ಕೆಲವರು ಶ್ರೀ ಕೃಷ್ಣಭಗವಾನರವರಿಗೆ ಮಾತಾ ಪಿತೃಗಳ ಇಷ್ಟಪ್ರಕಾರ ಕಂಸವಧೆಯವರೆಗೇ ದ್ವಿಭುಜದಿಂದಿದ್ದರು. ಅನಂತರ ಚತುರ್ಭುಜವನ್ನೂ ಯಾವಾಗಲೂ ತಾಳಿದ್ದರು ಎಂದು ಹೇಳುವರು. (೧) ಇದು ಅಲೌಕಿಕ ವಿಷಯವಾಗುತ್ತದೆ. (೨) ಪರತ್ವವನ್ನು ಎಲ್ಲರಿಗೂ ತೋರಿದಂತಾಗುತ್ತದೆ. ಆಗ ಹಿಂದೆ ಉಪಪಾದಿಸಿದ ರೀತಿಯಲ್ಲಿ **"ಮಾನುಷೀಂ ತನುಮಾಶ್ರಿತಮ್ ಪರಂಭಾವ ಮಜಾನನ್ತಃ" "ನಾಹಂಪ್ರಕಾಶ ಸ್ಸರ್ವಸ್ಯ"** ಇತ್ಯಾದಿ ಪ್ರಮಾಣಗಳಿಗೆ ವಿರೋಧವಾಗುತ್ತವೆ. ಇವಕ್ಕೆ ಸಮಾಧಾನವಾಗಿ ಎಲ್ಲರಿಗೂ ದ್ವಿಭುಜತ್ವದಿಂದಲೇ ತೋರುತ್ತಿದ್ದರು; ಭಕ್ತರುಗಳಿಗೆ ಮಾತ್ರ ಚತುರ್ಭುಜತ್ವೇನ ತೋರುತ್ತಿದ್ದರು ಎಂದು ಹೇಳಬೇಕಾಗುತ್ತದೆ. ಹೀಗೆ ಹೇಳುವುದು ಗುರುವಾದ ವಿಷಯವು; ಯಾವಾಗಲೂ ಮಾನುಷಾಕೃತಿಯಲ್ಲಿದ್ದು ಯಾರಿಗೆ ಚತುರ್ಭುಜತ್ವೇನ ಅನುಗ್ರಹಿಸಬೇಕೋ ಅವರಿಗೆ ಮಾತ್ರ ತೋರಿದರು ಎಂಬುದು ಲಘುವಾದ ವಿಷಯವು. ಗುರುವಾದುದನ್ನು ತ್ಯಾಗಮಾಡಿ ಲಘುವಾದುದನ್ನೇ ಪರಿಗ್ರಹಿಸತಕ್ಕ

ದೆಂಬುದು ವಾದಪ್ರಕ್ರಿಯೆಯಲ್ಲುಂಟು. ಇರುವ ವಿಷಯವೆಲ್ಲಾ ಚರ್ಚಿಸಲ್ಪಟ್ಟಿರುತ್ತದೆ. ಹೇಗೆ ಸೂಕ್ತವೋ ಹಾಗೆ ಗ್ರಹಿಸಬಹುದು. ನಿರ್ಬಂಧ ವಿಲ್ಲವು. ||೫೧||

**ಮೂಲಕ್ಕೆ ಅರ್ಥವು:**—ದಿವ್ಯಾಭರಣ ದಿವ್ಯಾಯುಧಗಳಿಂದಲೂ ಕಿರೀಟ ವನಮಾಲೆ ಪೀತಪಾಷಾದಿಗಳಿಂದಲೂ ಒಪ್ಪುವ ದಿವ್ಯರೂಪವನ್ನು ತೋರಿಸಿ, ದ್ವಿಭುಜಯುಕ್ತ ಮಾನುಷಾ ಕೃತಿಯನ್ನು ಧರಿಸಿ, ತಮ್ಮ ಚತುರ್ಭುಜ ಯುಕ್ತರೂಪವೇ ತನ್ನನ್ನು ಧ್ಯಾನಿಸುವ ಪರಮೈಕಾಂತಿ ಗಳಿಗೆಲ್ಲಾ ಧ್ಯೇಯವಸ್ತುವಾಗಿರುವದರಿಂದ, ದೇವತೆಗಳು ಮೊದಲುಗೊಂಡು ಸರ್ವ ಉಪಾಸಕರೂ ಈ ನನ್ನ ಸ್ವಕೀಯವಾದ ಪರರೂಪದ ಸದಾ ದರ್ಶನ ಕಾಂಕ್ಷಿಗಳಾಗಿರುತ್ತಾರೆಂದು ಶ್ರೀ ಭಗವಾನರ ವರು ಅರ್ಜುನನಿಗೆ ಹೇಳುತ್ತಾರೆ.—ಶ್ರೀಯಃಪತಿಯಾದ ಕೃಷ್ಣ ಭಗವಾನರವರು ಹೇಳುತ್ತಾರೆ— **ಯತ್**-ಧ್ಯಾನಯೋಗಿಗಳಿಗೆಲ್ಲಾ ಪರಮಧ್ಯೇಯವಾದುದೆಂದು ಯಾವ ಪ್ರಸಿದ್ಧವಾದ, **ಮಮ**- ನನಗೆ ಸ್ವಕೀಯವಾಗಿರುವ, **ಇದಂ ರೂಪಂ ದೃಷ್ಟವಾನಸಿ** - ಈ ಎರಡನೆಯ ಸಲ ಯಾವುದನ್ನು ತೋರಿಸಿದೆನೋ, ಅಂತಹ **ಇದಂ ರೂಪಂ** – ಈ ರೂಪವನ್ನು, **ದೃಷ್ಟವಾನಸಿ** – ನೀನು ನೋಡಿದೆ ಎಂಬುದು ಯಾವುದುಂಟೋ, **ತತ್** – ಆ ರೂಪವು (ತತ್ ಎಂದು) ಇಟ್ಟುಕೊಳ್ಳಬೇಕು, **ಸುದುರ್ದರ್ಶಂ** – ಬಹಳ ಕಷ್ಟದಿಂದಲೂ ಸಾಕ್ಷಾತ್ತಾಗಿ ನೋಡಲು ಅಸಾಧ್ಯವು, ಏಕಾಂತ ಭಕ್ತಿಯುತ ಉಪಾಸನದಿಂದ ಲಭ್ಯವೇ ವಿನಾ ಸಾಧಾರಣವಾಗಿ ಇಲ್ಲವು ಎಂಬ ಭಾವವು. ಇದನ್ನೇ ಉತ್ತರಾರ್ಧದಿಂದ ಸಮರ್ಥಿಸಿ ಹೇಳುತ್ತಾರೆ,-- **ಅಸ್ಯರೂಪಸ್ಯ** - ಈಗ ತೋರಿಸಿದ ರೂಪದ, ಎಂದರೆ ರೂಪವನ್ನು, **ಅಸ್ಯ** ಎಂದಿರುವದರಿಂದ ಸನ್ನಿಹಿತವಾದ ರೂಪವು ಬೋಧಿತವೇ ವಿನಾ ಮೊದಲು ತೋರಿಸಿದ ವಿಶ್ವರೂಪವಲ್ಲವು, ಅದು ಉದ್ದೇಶ್ಯವಾದುದಾದರೆ **ಇದಂರೂಪಂ, ಅಸ್ಯರೂಪಸ್ಯ** ಎಂಬ ಪ್ರಯೋಗಗಳು ಸರಿಹೋಗುವದಿಲ್ಲವು ; ತದನಂತರ ಇನ್ನೊಂದು ರೂಪವು ಚತುರ್ಭುಜಯುಕ್ತ ವಾಸುದೇವರೂಪ ತೋರಿಸಲ್ಪಟ್ಟಿರುವದರಿಂದ, **ದೇವಾ ಅಪಿ**-ದೇವತೆಗಳೂ ಕೂಡ, **ಅಸ್ಯರೂಪಸ್ಯ** – ಈ ಚತುರ್ಭುಜ ರೂಪದ, **ನಿತ್ಯಂ ದರ್ಶನಕಾಂಕ್ಷಿಣಃ** – ಸದಾ ನೋಡಬೇಕೆಂಬ ಅಪೇಕ್ಷೆಯುಳ್ಳವರಾಗಿದ್ದಾರೆ. ನೀನು ಈ ಚತುರ್ಭುಜಯುಕ್ತರೂಪವನ್ನು ನೋಡಿದುದೇನೂ ಹೆಚ್ಚಲ್ಲವು. ದೇವತೆಗಳೂ ಕೂಡ ಅಪೇಕ್ಷಿಸುತ್ತಾರೆಂದು ಹೇಳಿರುತ್ತಾರೆ. ಇಲ್ಲಿ **ದೇವಾಃ** ಎಂಬ ಪ್ರಯೋಗದಿಂದ ಇನ್ನೊಂದು ಅಭಿಪ್ರಾಯವೂ ಸೂಚಿತವು ; ದೇವತೆ ಗಳಿಗೂ ಕೂಡ ಉಪಾಸನೆಯಲ್ಲಿ ಅಧಿಕಾರ ಉಂಟೆಂದು ಹೇಳುವ **"ತದುಪರ್ಯಪಿ ಬಾದರಾ ಯಣ ಸ್ಸಂಭವಾತ್"** ೧. ೩. ೨೫ ಎಂಬ ಬ್ರಹ್ಮಸೂತ್ರಾರ್ಥವೂ ಇಲ್ಲಿ ಉಪದೇಶಿಸಲ್ಪಟ್ಟಿತು. **ತತ್** – ಬ್ರಹ್ಮೋಪಾಸನವು, **ಉಪರ್ಯಪಿ** – ಮನುಷ್ಯರಿಗಿಂತಲೂ ಮೇಲಿರುವ ದೇವಾದಿಗಳಿಗೂ ಉಂಟೆಂದು, **ಬಾದರಾಯಣಃ** - ಶ್ರೀ ವ್ಯಾಸ ಮಹರ್ಷಿಗಳು ತಿಳಿದರು ಏಕೆಂದರೆ **ಸಂಭವಾತ್** - ಅರ್ಥಿತ್ವಸಾಮರ್ಥ್ಯಗಳೆರಡೂ ಅವರಿಗೂ ಉಂಟಾದುದರಿಂದ, ಎಂಬುದು ಸೂತ್ರಾರ್ಥವು. **ಕಾಂಕ್ಷಿಣಃ** ಎಂದು ಹೇಳಿರುವದರಿಂದ ಉಪಾಸನಫಲವಾಗಿ ಪ್ರಾಪ್ಯಪ್ರಾಪ್ತಿಯೂ, **ನಿತ್ಯಂ** ಎಂದು ಹೇಳಿರುವದರಿಂದ, ಮುಕ್ತದೆಶೆಯಲ್ಲಿ ಯಾವಾಗಲೂ ನೋಡುತ್ತಿರಬೇಕೆಂಬ ಆಶೆಯೂ, ಈ ಮನುಷ್ಯರಾದ ಉಪಾಸನ ನಿಷ್ಠರಹಾಗೆ, ದೇವತೆಗಳಾದ ಉಪಾಸನ ನಿಷ್ಠರಿಗೂ ಉಂಟು ಎಂದು ಹೇಳಿದಂತಾಯಿತು. ಅವರುಗಳೂ ಕೂಡ ದಿವ್ಯವೈಕುಂಠದಲ್ಲಿ ನಿತ್ಯದರ್ಶನ ನಿತ್ಯಸೇವೆ ನಿತ್ಯಾನುಭವ ಕಾಂಕ್ಷಿಗಳು ಎಂಬ ಭಾವಗಳೂ ಸೂಚಿತವು. ಈ ದೇವತೆಗಳೂ ಪ್ರಾಪ್ಯವನ್ನು ಹೊಂದಬೇಕೆಂಬ ಅಭಿಲಾಷೆಯುಳ್ಳವರು ಎಂದು ಅರ್ಥ ಹೇಳಬೇಕಾಗಿರುವದರಿಂದ, ಅಸ್ಯ ರೂಪಸ್ಯ ಎಂಬುದಕ್ಕೆ ವಿಶ್ವರೂಪವೆಂದು ಅರ್ಥಮಾಡಲು ಸಾಧ್ಯವಿಲ್ಲವು ; ಆದುದರಿಂದ ಪ್ರಾಪ್ಯ ವಾದ ಪರರೂಪವೆಂದೇ ಅರ್ಥವನ್ನು ಮಾಡಬೇಕಾಗಿರುವದರಿಂದ, ಅರ್ಜುನನಿಗೆ ಈ ಪ್ರಾಪ್ಯ

**ಭಾ. ಮಮೇದಂ - ಸರ್ವಸ್ಯ ಪ್ರಶಾಸನೇಽವಸ್ಥಿತಂ ಸರ್ವಾಶ್ರಯಂ ಸರ್ವಕಾರಣಭೂತಂ ರೂಪಂ ಯದ್ದೃಷ್ಟವಾನಸಿ, ತತ್ಸುದುರ್ದರ್ಶಂ - ನಕೇನಾಪಿ ದ್ರಷ್ಟುಂ ಶಕ್ಯಮ್ ; ಅಸ್ಯ ರೂಪಸ್ಯ ದೇವಾ ಅಪಿ ನಿತ್ಯ ದರ್ಶನ ಕಾಂಕ್ಷಿಣಃ, ನತು ದೃಷ್ಟವಂತಃ ||೫೨||**

ವಾದ ಪರರೂಪವೂ ತೋರಲ್ಪಟ್ಟಿತೆಂಬುದು ಸ್ಪಷ್ಟವು. **ಸುದುರ್ದರ್ಶಂ** ಎಂದು ಹೇಳಿರುವದ ರಿಂದ, ನೀನೇನೋ ಅತ್ಯರ್ಥಪ್ರಿಯನೆಂದು ಭಾವಿಸಿ ನರನಾರಾಯಣಾವತಾರದಲ್ಲಿ, ನೀನು ನರ ನಾಮದರಿಂದ ನಿನಗೇನೋ ಲಭಿಸಿತು ಎಂದರೆ ಎಲ್ಲರಿಗೂ ಲಭಿಸತಕ್ಕದ್ದಲ್ಲವು ; ತುಂಬಾ ಕಷ್ಟಪಟ್ಟು ಬಹುಕಾಲ ಐಕಾಂತ್ಯದಿಂದ ಉಪಾಸಿಸಿದರೆ ಅಲ್ಲವೇ ಲಭಿಸೀತು. ಮೊದಲು ಭಕ್ತಿ ಯೋಗವನ್ನವಲಂಬಿಸುವದಕ್ಕೇನೇ **"ಬಹೂನಾಂ ಜನ್ಮನಾಮನ್ತೇ"** ಎಂದು ಬಹು ಜನ್ಮಗಳು ಕಳೆಯಬೇಕು ; ಅದು ಸಿದ್ಧಿಸಬೇಕಾದರೆ ಒಂದೆರಡು ಜನ್ಮಗಳಾದರೂ ಆಗಬಹುದು ; ಆದುದ ರಿಂದ "**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ | ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿತತ್ವತಃ**" ಎಂಬಲ್ಲಿ ಹೇಳಿರುವಹಾಗೆ ದರ್ಶನ ಸಿದ್ಧಿಯು ಅತಿಕಷ್ಟವು ಎಂದು ಹೇಳುವದಕ್ಕಾಗಿ **ಸುದುರ್ದರ್ಶಂ** ಎಂಬ ಪ್ರಯೋಗವು. **ದುರ್ದರ್ಶಂ** ಎಂಬುದು ದುರ್ಲಭತ್ವ ವನ್ನು ಬೋಧಿಸುತ್ತದೆ. **ಸುದುರ್ದರ್ಶಂ** ಎಂಬುದು ಅತ್ಯಂತ ದುರ್ಲಭತ್ವವನ್ನ ಬೋಧಿಸು ತ್ತದೆ. **"ತಂ ದುರ್ದರ್ಶಂ ಗೂಢಂ"** ಎಂಬ ಕಠೋಪನಿಷತ್ತಿನ (೨-೧೨) ಅರ್ಥವು ಉಪ ಪಾದಿತವು.

ಈ ಶ್ಲೋಕದಿಂದ, ದೇವತೆಗಳೂ ಕೂಡ ನಮ್ಮ ಹಾಗೆ ಜೀವಾತ್ಮರೆಂದೂ, ಅವರೂ ಕೂಡ ನಮಗಿಂತ ಸ್ವಲ್ಪಮಟ್ಟಿಗೆ ಹೆಚ್ಚಿನ ಸುಕೃತಿಗಳಾಗಿದ್ದರೂ, ಉಪಾಯಾನುಷ್ಠಾನವನ್ನು ಮಾಡಿಯೇ ಪ್ರಾಪ್ಯವನ್ನು ಹೊಂದತಕ್ಕದ್ದೆಂದೂ, ಹಾಗೆ ಉಪಾಯಾನುಷ್ಠಾನವನ್ನು ಮಾಡದೇ ಇದ್ದ ಪಕ್ಷ ದಲ್ಲಿ, **ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶನ್ತಿ"** ಎಂದು ಹೇಳಿರುವಹಾಗೆ, ಅಲ್ಲಿನ ಸುಕೃತವು ಕಳೆದನಂತರ ಇಲ್ಲಿಗೆ ಬರುತ್ತಾರೆಂದೂ, ಆದರೆ ಅದರೊಳಗೇ ಉಪಾಯಾನುಷ್ಠಾನವನ್ನು ಮಾಡಿ ದರೆ, ಇಲ್ಲಿಗೆ ಬರದೇ, ಅಲ್ಲಿಂದಲೇ ದಿವ್ಯ ವೈಕುಂಠವನ್ನು ಸೇರುವರೆಂದೂ, ಶಾಸ್ತ್ರಾಭಿಪ್ರಾಯವು ಬೋಧಿತವು.

**ಭಾಷ್ಯಾರ್ಥವು:—ಮಮ** - ನನ್ನ, **ಇದಂ** - ಎಂದರೆ **ಸರ್ವಸ್ಯ ಪ್ರಶಾಸನೇ** - ಸಕ್ಕ ರನ್ನು ನಿಯಮಿಸೋಣದರಲ್ಲಿ, **ಅವಸ್ಥಿತಂ** - ಇರುವ, **ಸರ್ವಾಶ್ರಯಂ** - ಸಮಸ್ತ ಚಿದಚಿತ್ತಿಗೂ ಆಶ್ರಯವಾದ, **ಸರ್ವಕಾರಣ ಭೂತಂ** - ಸಮಸ್ತ ವಿಶ್ವಕ್ಕೂ ಕಾರಣವಾಗಿರುವ ರೂಪವನ್ನೂ' ಇಲ್ಲಿ ರೂಪವೇ ಸರ್ವ ನಿಯಮನತ್ವ ಸರ್ವಾಶ್ರಯತ್ವ ಸರ್ವ ಕಾರಣತ್ವಗಳನ್ನು ಹೊಂದಿರುತ್ತದೆಂದು ಹೇಳಬೇಕಾಗಿ ಬರುವದರಿಂದ, ರೂಪವನ್ನು ಹೊಂದಿರುವವನಾಗಿ ಎಂದರ್ಥಮಾಡಬಹುದು. **ಯತ್ ರೂಪಂ** - ಯಾವ ರೂಪವನ್ನು, **ದೃಷ್ಟವಾನಸಿ** - ನೋಡಿದವನಾದೆಯೋ, **ತತ್** - **"ಕಾರಣಂತು ಧ್ಯೇಯಃ"** ಎಂಬಲ್ಲಿ ಹೇಳಲ್ಪಟ್ಟಿರುವ ಹಾಗೆ ಆ ಉಪಾಸ್ಯರೂಪವೂ, ಇದರಿಂದ ಶ್ರೀ ಯತಿವರ್ಯರೂ ಪ್ರಾಪ್ಯರೂಪವೆಂದೇ ವ್ಯಾಖ್ಯಾನವನ್ನು ಮಾಡಿರುತ್ತಾರೆ; ಪ್ರಾಪ್ಯರೂಪವು, **ಸುದುರ್ದರ್ಶಂ** ಎಂದರೆ, **ನ ಕೇನಾಪಿ ದ್ರಷ್ಟುಂಶಕ್ಯಂ** - ಈ ಮರ್ತ್ಯಲೋಕದಲ್ಲೇ ಯಾವ ಮನುಷ್ಯರಿಂದಲೂ ಸಾಕ್ಷಾತ್ತಾಗಿ ನೋಡಲಶಕ್ಯವು. ಹೀಗೆ ಹೇಳಿದುದರಿಂದ ಪ್ರಾಪ್ಯರೂಪವೂ ಅರ್ಜುನನಿಂದ ನೋಡಲ್ಪಟ್ಟಿತೆಂಬುದು ಶ್ರೀ ಭಾಷ್ಯಕಾರರ ಅಭಿಪ್ರಾಯವು ; ಏಕೆಂದರೆ ಉಪಾಸ ನದಿಂದ ಪರಮಪುರುಷ ಸಾಕ್ಷಾತ್ಕಾರವು ಈ ಲೋಕದಲ್ಲೇ ಶಕ್ಯವಾದುದರಿಂದ, **ಅಸ್ಯರೂಪಸ್ಯ**- ಈ ರೂಪವನ್ನು, **ದೇವಾ ಅಪಿ** - ದೇವತೆಗಳೂ ಕೂಡ, **ನಿತ್ಯಂ** - ಸದಾ, **ದರ್ಶನ ಕಾಂಕ್ಷಿಣಃ**- ಸಾಕ್ಷಾತ್ತಾಗಿ ನೋಡಬೇಕೆಂಬ ಕುತೂಹಲವುಳ್ಳವರಾಗಿದ್ದಾರೆ, ಅವರಿರುವ ಸ್ಥಳದಲ್ಲೇ ಉಪಾ

**ಭಾ. ಅ. ಕುತಇತ್ಯತ್ರಾಹ—**

**ಮೂ. ನಾಹಂ ವೇದೈರ್ನ ತಪಸಾ ನದಾನೇನ ನಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩.**
**ಭಕ್ತ್ಯಾತ್ವನನ್ಯಯಾ ಶಕ್ಯ ಅಹ ಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪.**

ಸನ ಕಾಲದಲ್ಲಿ ಸಾಕ್ಷಾತ್ಕಾರವೂ, ಅನಂತರ ಅರ್ಚಿರಾದಿಮಾರ್ಗ ಪ್ರಾಪ್ಯಪ್ರಾಪ್ತಿಗಳಾದನಂತರ ನಿತ್ಯವಿಭೂತಿಯಲ್ಲೂ ಸಹ ತಮಗೆ ಯಾವಾಗಲೂ ದರ್ಶನವೂ ಆಗುತ್ತಲೇ ಇರಬೇಕೆಂಬ ಆಶೆಯುಳ್ಳವರಾಗಿರುತ್ತಾರೆ; ಎಂದು ಹೇಳಿರುವದರಿಂದ, ದರ್ಶನಪ್ರಾಪ್ತಿ ಇನ್ನೂ ಲಭಿಸಲಿಲ್ಲವೆಂಬುದು ವ್ಯಕ್ತಪಡುವದರಿಂದ ತಾತ್ಪರ್ಯವನ್ನು ಸೂಚಿಸುತ್ತಾರೆ—**ನತು ದೃಷ್ಟಂವತಃ** - ನೋಡಬೇಕೆಂಬ ಇನ್ನೂ ಆಶೆಯುಳ್ಳವರಾಗಿರುತ್ತಾರೆಯೇ ವಿನಾ ಇನ್ನೂ ಸಾಕ್ಷಾತ್ತಾಗಿ ನೋಡಲಿಲ್ಲವೆಂಬರ್ಥವು; ಏಕೆಂದರೆ ಸರಿಯಾದ ಸಾಕ್ಷಾತ್ತಾಗಿ ದರ್ಶನವು ಮುಕ್ತದೆಶೆಯಲ್ಲಿ ಮಾತ್ರವೇ ಆದುದರಿಂದ ಮುಕ್ತದೆಶೆಯಲ್ಲೀಗ ಪರಿಪೂರ್ಣಬ್ರಹ್ಮವನ್ನು ಸಾಕ್ಷಾತ್ತಾಗಿ ನೋಡಲು ಸಾಧ್ಯವೆಂಬ ಭಾವವು. **"ನ ಚಕ್ಷುಷಾ ಪಶ್ಯತಿ ಕಶ್ಚನೈನಂ"** (ಕಠ. ೬. ೯ ಎಂಬ ಶ್ರುತ್ಯರ್ಥವು ಉಪಪಾದಿತವು. ನಿತ್ಯವಾಗಿ ಯಾವಾಗಲೂ ಸಾಕ್ಷಾತ್ಕಾರವು ಮುಕ್ತದೆಶೆಯಲ್ಲಾದರೂ, ಪ್ರತಿನಿತ್ಯವೂ ಉಪಾಸನಾ ವೇಳೆಯಲ್ಲಿ ಪರಮಪುರುಷ ಸಾಕ್ಷಾತ್ಕಾರ ಉಂಟೆಂಬುದು **"ಅಮೃತ ಇಹ ಭವತಿ"** (ಪು. ಸೂ.) **"ಅತ್ರಬ್ರಹ್ಮ ಸಮಶ್ನುತೇ"** (ಕಠ. ೬. ೧೪) ಎಂಬ ಶ್ರುತಿಗಳಿಂದಲೂ, ಉಪಾಸಕರ ಅನುಭವದಿಂದಲೂ ವ್ಯಕ್ತವು.

**ಭಾಷ್ಯಾವತಾರಿಕೆಯ ಅರ್ಥವು:—**ಹಿಂದಿನ ಶ್ಲೋಕದಲ್ಲಿ ದೇವತೆಗಳೂ ಕೂಡ ದರ್ಶನ ಕಾಂಕ್ಷಿಗಳಾಗಿದ್ದಾರೆಯೇ ವಿನಾ ನನ್ನನ್ನು ಸಾಕ್ಷಾತ್ತಾಗಿ ನೋಡಲಿಲ್ಲವೆಂದು ಅರ್ಥಮಾಡಿದರು. **ಕುತಇತ್ಯತ್ರಾಹ** - ಆ ಪರರೂಪವು **ಸುದುರ್ದರ್ಶ**ವಾಗಲು, ಏತಕ್ಕೆ ಹಾಗೆ ಎಂದರೆ ಹೇಳುತ್ತಾರೆ; ಅವರುಗಳು ಮಾಡುವವೆಲ್ಲಾ ಉಪಾಯಗಳಲ್ಲವು. ನನ್ನನ್ನು ಸಾಕ್ಷಾತ್ಕರಿಸಿ, ಪರಮಪದವನ್ನು ಸೇರಿ ನನ್ನನ್ನು ಯಾವಾಗಲೂ ನೋಡುತ್ತಲೂ, ಸೇವೆಮಾಡುತ್ತಲೂ, ಅನುಭವಿಸುತ್ತಲೂ, ಹೀಗೆ ನಿತ್ಯದರ್ಶನ ಬೇಕಾದರೆ ಅದಕ್ಕೆ ಮುಖ್ಯೋಪಾಯವೇನೆಂದರೆ ಹೇಳುತ್ತೇನೆ ಕೇಳು ಎನ್ನುತ್ತಾರೆಂಬ ಭಾವವು. **"ನಾನ್ಯಃ ಪನ್ಥಾ ವಿದ್ಯತೇ ಅಯನಾಯ"** ಪರಬ್ರಹ್ಮಪ್ರಾಪ್ತಿಗೆ ಆ ಉಪಾಯವನ್ನು ಬಿಟ್ಟರೆ ಬೇರೆ ಉಪಾಯವಿಲ್ಲವೆಂದು ತಿಳಿಸುತ್ತಾರೆ. ಶರಣಾಗತಿಯು ಅಙ್ಗರೂಪವಾಗಿಯಾಗಲಿ ಅಙ್ಗಿರೂಪವಾಗಿಯಾಗಲಿ ಇಲ್ಲದುದು ಉಪಾಯವಾಗುವದಿಲ್ಲವೆಂಬ ಭಾವವನ್ನು ಮನಸ್ಸಿನಲ್ಲಿಟ್ಟು ಮುಂದಿನ ಎರಡು ಶ್ಲೋಕಗಳು ಹೇಳಲ್ಪಡುತ್ತವೆ ಎಂಬ ತಾತ್ಪರ್ಯವು.

**ಮೂಲಕ್ಕೆ ಅರ್ಥವು:—**ಹಿಂದಿನ ಶ್ಲೋಕದಲ್ಲಿ ಆತನ ಸ್ವಕೀಯ ಚತುರ್ಭುಜಾಕೃತಿಯನ್ನು ಸಾಕ್ಷಾತ್ಕರಿಸುವದೂ, ಪರಮ ಪದದಲ್ಲಿ ಸದಾ ನೋಡುತ್ತಿರುವದೂ, ಸುಲಭವಲ್ಲವು; ನಿನಗೇನೋ ಲಭಿಸಿತು ಎಂದರೆ ಎಲ್ಲರಿಗೂ ದಿವ್ಯ ಚಕ್ಷುಸ್ಸಿಲ್ಲವಾದುದರಿಂದ ಲಭಿಸತಕ್ಕದ್ದಲ್ಲವು ಎಂದು ಹೇಳಿದರು. ಈ ಮುಂದಿನ ಎರಡು ಶ್ಲೋಕಗಳಿಂದಲೂ ಅನೇಕರು ಮೋಕ್ಷಪ್ರಾಪ್ತಿಗೆ ಸಾಧ್ಯೋಪಾಯವನ್ನು ನಾನಾ ಬಗೆಯಲ್ಲಿ ತಪ್ಪಾಗಿ ತಿಳಿದಿರುತ್ತಾರೆ. ಅನನ್ಯ ಭಕ್ತಿಯಿಂದ ಸಾಙ್ಗ ಉಪಾಯಾನುಷ್ಠಾನವೇ ವಿನಾ, ಇನ್ಯಾವ ವಿಧದಿಂದಲೂ ತಾನು ಪ್ರಾಪ್ಯನಲ್ಲವು. ಇತರಗಳಾದ ವೇದಾಧ್ಯಯನವೇನು, ಯಜ್ಞದಾನ ತಪಸ್ಸೇನು, ನಾಮ ಸಂಕೀರ್ತನವೇನು, ತೀರ್ಥಯಾತ್ರೆಗಳೇನು ಇವು ಯಾವುವೂ ಸಾಕ್ಷಾತ್ತಾದ ಉಪಾಯಗಳಲ್ಲವು. ಇವೂ ಬೇಕೆಂದು ಹೇಳಿದೆ

ಯಲ್ಲಾ ಎಂದರೆ ಇವು ಅನನ್ಯ ಭಕ್ತಿಯಾದ ಉಪಾಸನಕ್ಕೆ ಸಹಕಾರಿಗಳಾಗಿ ಅಙ್ಗವಾಗಬಹುದೇ ವಿನಾ, ಅವುಗಳೇ ಸಾಕ್ಷಾತ್ತಾಗಿ ಮೋಕ್ಷಪ್ರಾಪ್ತಿಗೆ ಸಾಧನವಲ್ಲವು. ಅಂಗಶರಣಾಗತಿಯೊಂದಿಗೆ ಮಾಡುವ ಭಕ್ತಿದ್ವಾರಾ ಸಾಧನವೇ ವಿನಾ ತಾವೇ ಸಾಧನ ಎಂದಿಗೂ ಇಲ್ಲವೆಂಬ ಕಠಮುಂಡ ಕೋಪನಿಷತ್ತುಗಳಲ್ಲಿ ಹೇಳಲ್ಪಟ್ಟ ತತ್ತ್ವೋಪದೇಶವನ್ನು ಮಾಡಿ ನಿಗಮನಮಾಡುತ್ತಾರೆ. ಈ ಶ್ರುತಿಯು ಹಿಂದೆಯೂ ಉದಾಹರಿಸಲ್ಪಟ್ಟಿರುತ್ತದೆ. ಶ್ರೀ ಯತಿವರ್ಯರು ಈ ಶ್ರುತಿವಾಕ್ಯವನ್ನು ಪೂರ್ಣವಾಗಿ ಭಾಷ್ಯದಲ್ಲಿ ಉದಾಹರಿಸುತ್ತಾರೆ. ಈ ಅನನ್ಯ ಭಕ್ತಿರೂಪವಾದ ಧ್ಯಾನವೇ ಸಾಧ್ಯೋಪಾಯವೆಂದು ಹೇಳಿದರೂ ಅದೂ ವ್ಯಾಜಮಾತ್ರವು. ಇದರಿಂದ ಶ್ರೀಯಃಪತಿಯು ಪ್ರೀತನಾಗಿ ಪ್ರಸನ್ನನಾದರೇನೇ ಪ್ರಾಪ್ಯವು ಲಭ್ಯವು. ಇದೂ ಸಹ ಹಿಂದೆಯೇ ಉಪಪಾದಿತವು. ಇವನೇನೋ ಉಪಾಸನೆಯನ್ನು ಮಾಡಬಹುದು. ಯಾವ ಕಾರಣದಿಂದಾಗಲಿ, ಅದರಿಂದ ಭಗವಂತನು ಸುಪ್ರೀತನಾಗದೆ ಹೋದರೆ, ಮುಕುಂದನು ಮುಕ್ತಿಯನ್ನೀಯನು. ಪರೀಕ್ಷೆಗೆ ಅನೇಕರು ಯತ್ನಿಸಬಹುದು; ತೇರ್ಗಡೆ ಹೊಂದಲು ಪರೀಕ್ಷಾಕರ್ತೃವು ಸುಪ್ರೀತನಾದರಲ್ಲವೇ ಆಗುತ್ತದೆ ಇಲ್ಲದಿದ್ದರೆ ಹೇಗೆ ಸಿದ್ಧಿಸುವದಿಲ್ಲವೋ ಹಾಗೆಯೇ ಇಲ್ಲಿಯೂ ಎಂದು ತಿಳಿಯತಕ್ಕದ್ದು. ಇಂತಹ ಅಮೋಘೋಪದೇಶವು ಈ ಅಧ್ಯಾಯದ ಕೊನೆಯ ಶ್ಲೋಕವಲ್ಲಿ, ಸಾಧ್ಯೋಪಾಯದಿಂದ ತಾನು ಪ್ರೀತನಾಗುವದು ಹೇಗೆ ಎಂಬುದು ಹೇಳಲ್ಪಟ್ಟು, ಹೀಗೆ ಈ ಮುಂದಿನ ಮೂರು ಶ್ಲೋಕಗಳಲ್ಲೂ ಉಪಾಯವು ಉಪಪಾದಿತವಾಗಿ ನಿಗಮನವು. ಶ್ರೀ ಕೃಷ್ಣಭಗವಾನರವರು ಅಧ್ಯಾಯಾಂತಗಳಲ್ಲಿ ನಿಗಮನಮಾಡಿ ಹೇಳುವ ವಿಷಯಗಳೆಲ್ಲಾ ಅಮೋಘವಾಗಿ ಜ್ಞಾಪಕದಲ್ಲಿಡುವದಕ್ಕಾಗಲಿ ಅನುಷ್ಠಿಸುವದಕ್ಕಾಗಿಯಾಗಲಿ ಅರ್ಹಗಳಾಗಿವೆ.

ಈ ಶ್ಲೋಕಗಳಿಗೆ ವ್ಯಾಖ್ಯಾನವನ್ನು ಹೇಳುವವರು ಮುಖ್ಯವಾಗಿ ೪೮ ನೆಯ ಶ್ಲೋಕವನ್ನು ಜ್ಞಾಪಕಕ್ಕೆ ತಂದುಕೊಳ್ಳತಕ್ಕದ್ದು. ಇವೆರಡೂ ಒಂದೇ ಅರ್ಥವುಳ್ಳಶ್ಲೋಕಗಳು ಇಷ್ಟು ಸಮೀಪದಲ್ಲೇ ಎರಡು ಸಮಾನಾರ್ಥಗಳುವುಳ್ಳ ಶ್ಲೋಕಗಳಿದ್ದರೆ ಪುನರುಕ್ತಿದೋಷವು ಪ್ರಾಪ್ತವಾಗುವದಿಲ್ಲವೇ ? ಶ್ರೀ ವ್ಯಾಸಮಹರ್ಷಿಯು ಇಂತಹ ಆಕ್ಷೇಪಣೆಗಳಿಗೆ ಒಳಗಾಗುವರೇ ? ಆದುದರಿಂದ ಅಂತಹ ದೋಷಕ್ಕೆ ಅವಕಾಶವಿಲ್ಲದಹಾಗೆಯಲ್ಲವೇ ಅರ್ಥವನ್ನು ಹೇಳಬೇಕು. ಹಿಂದೆ ಹೇಳಿದುದು ಪರಮಪುರುಷನನ್ನು ಸಾಕ್ಷಾತ್ತಾಗಿ ನೋಡುವ ಪರಿಪೂರ್ಣಬ್ರಹ್ಮಾನುಭವವನ್ನು ಕುರಿತದ್ದೆಂದೂ, ಇಲ್ಲಿ ಹೇಳಿರುವದು ಸಾಧಾರಣವಾಗಿ ಉಪಾಸಕರಿಗೆ ಧ್ಯೇಯವಸ್ತುವಾದ ರೂಪದ ಸಾಕ್ಷಾತ್ಕಾರವಿಷಯವೆಂದೂ, ಅರ್ಥಮಾಡುವದೇ ನ್ಯಾಯವು. ಅರ್ಜುನನು ಮುಖ್ಯವಾಗಿ ದಿವ್ಯಾಭರಣಾಯುಧಗಳಿಂದಲೂ, ಕಿರೀಟವನಮಾಲೆಗಳಿಂದಲೂ ಪರಮಲಾವಣ್ಯಾತಿಶಯದಿಂದಲೂ ಕೂಡಿರುವ ಚತುರ್ಭುಜಾಕೃತಿಯನ್ನು ಅಪೇಕ್ಷಿಸಿದುದರಿಂದ **ಭೂಯಃ** ತೋರಿಸಿದ ಪರರೂಪದ ದರ್ಶನವೆಂದೇ ಅರ್ಥಮಾಡಬೇಕಾಗುತ್ತದೆ. ಈ ರೂಪವೂ **ಸುದುರ್ದರ್ಶವು ;** ಎಲ್ಲರಿಗೂ ಸಾಧಾರಣವಾಗಿ ಪ್ರಪನ್ನರಲ್ಲದವರಿಗೆ ಲಭಿಸತಕ್ಕದ್ದಲ್ಲವು. ಉಪಾಯಾನುಷ್ಠಾನದಿಂದ ತಾನು ಪ್ರೀತನಾದರೇನೇ ಸಿಕ್ಕತಕ್ಕದ್ದು. ಇಲ್ಲದಿದ್ದರೆ ಇಲ್ಲವೆಂದು ಹೇಳುತ್ತಾರೆ. ಸ್ವಾಧ್ಯಾಯದಾನ ತಪ ಇಜ್ಯೆಗಳಿಂದ ಈಗ ನೀನು ನೋಡಿದ ರೂಪವು ಲಭಿಸುವದಿಲ್ಲವು ; ಎಂದರೆ ಅವು ನಿರರ್ಥಕವು, ಬೇಡಲೇ ಬೇಡವೋ ಎಂದರೆ, ಕರ್ಮಯೋಗೋಪದೇಶಮಾಡಿದ ಸ್ಥಳದಲ್ಲಿ ಇವೆಲ್ಲಾ ಕರ್ಮಯೋಗಪ್ರಭೇದಗಳಾಗಿ ವಿಧಿಸಲ್ಪಟ್ಟವು. ಹಾಗಾದರೆ ಈಗ ಹೇಳಿದುದು ಏನು ? ಎಂದರೆ ಕರ್ಮಯೋಗವು ಕರ್ಮಾನುಷ್ಠಾನವು ; ಭಕ್ತಿಯೋಗಕ್ಕೆ ಅಙ್ಗಮಾತ್ರವೇ ; ಆದುದರಿಂದಲೇ ಜ್ಞಾನಸ್ವರೂಪವಾದ ಪರಮಾತ್ಮಸಾಕ್ಷಾತ್ಕಾರವು ಸಿದ್ಧಿಸದು. ಇದೇ ಸಿದ್ಧಿಸದೆ ಹೋದರೆ ದರ್ಶನವೆಲ್ಲಿಯದು ? ಇದು ಸಿದ್ಧಿಸಬೇಕಾದರೆ **ಭಕ್ತ್ಯಾತ್ವನನ್ಯಯಾ** ಎಂದು ಹೇಳಿರುವಹಾಗೆ ತೈಲ

ಧಾರಾವದವಚ್ಛಿನ್ನ ಪರಮಾತ್ಮಸಾಕ್ಷಾತ್ಕಾರರೂಪ ಭಕ್ತಿಯೋಗದಿಂದಲ್ಲದೆ ಅನ್ಯಥಾವಿಲ್ಲವೆಂದು ಉಪದೇಶವು.

**ಹೇ ಅರ್ಜುನ** - ಓ ಅರ್ಜುನನೇ, **ಯಥಾ** - ಹೇಗೆ ಶಂಖ ಚಕ್ರಗದಾಧರನಾಗಿ ಕಿರೀಟಿ ಪೀತಾಂಬರ ಧಾರಿಯಾಗಿ ಚತುರ್ಭುಜಯುಕ್ತನಾಗಿ, **ಮಾಂ** - ನನ್ನನ್ನು **ದೃಷ್ಟವಾನಸಿ** - ನೋಡಿದವನಾಗಿದ್ದೀಯೋ, **ಏವಂ ವಿಧಃ** - ಹೀಗೆ ಇರುವ, ಹೇಗೆ? ಎಂದರೆ **ಕಿರೀಟಿನಂ ಗದಿನಂ ಚತುರ್ಭುಜಂ** ಎಂದೆಲ್ಲಾ ನೀನು ಪ್ರಾರ್ಥಿಸಿದುದಕ್ಕಾಗಿ ನಿನಗೆ ತೋರಿಸಿದ ಈ ವಿಧದಲ್ಲಿರುವ ನಾನು, ಹೀಗೆ **ಏವಂ ವಿಧಃ** ಎಂದು ಹೇಳಿರುವದರಿಂದಲೂ ಈ ಎರಡನೆಯ ಸಲ ಧರಿಸಿದುದು, ಸ್ವಕೀಯವಾದ ಪರರೂಪ **ಚತುರ್ಭುಜಾಕೃತಿ** ಎಂಬುದು ವ್ಯಕ್ತವು ; ಇಂತಹ **ಅಹಂ**- ನಾನು, **ವೇದೈಃ** - ಕೇವಲ ವೇದಗಳ ಜ್ಞಾನದಿಂದಾಗಲಿ, ವೇದಾಧ್ಯಯನದಿಂದಾಗಲಿ, ಅಧ್ಯಾಪನದಿಂದಲಾಗಲಿ, **ದ್ರಷ್ಟುಂ** - ನೋಡಲ್ಪಡಲು, **ನಶಕ್ಯಃ** - ಸಾಧ್ಯವಲ್ಲವು, **ನತಪಸಾ** - ಕೇವಲ ತಪಸ್ಸಿನಿಂದಲೂ ಸಾಧ್ಯವಲ್ಲವು; **ನಚೇಜ್ಯಯಾ** - ಕೇವಲ ಯಜ್ಞಯಾಗಾದಿ ಕರ್ಮಗಳಿಂದಲೂ, ಸಂಧ್ಯಾವಂದನಾದಿಗಳು ಭಗವದಾರಾಧನ ವೈಶ್ವದೇವಾದಿಗಳು, 'ಇಂತಹ ನಿತ್ಯ ಕರ್ಮಾನುಷ್ಠಾನಗಳಿಂದ ಮಾತ್ರವೇ ಸಾಧ್ಯವಲ್ಲವು, ಹಾಗಾದರೆ ಉಪಾಯವು ಯಾವುದು ಎಂದರೆ ಹೇಳುತ್ತಾರೆ,—ಯಾವ ಸಾಧ್ಯೋಪಾಯದಿಂದ ಪ್ರೀತನಾಗುವದರ ಮೂಲಕ ಸಾಧ್ಯವೆಂದರೆ ಮುಂದಿನ ಶ್ಲೋಕದಿಂದ ಹೇಳುತ್ತಾರೆ,—**ಹೇ ಪರಂತಪ** - ಓ ಶತ್ರುಗಳನ್ನು ತಪಿಸುವಹಾಗೆ ಮಾಡುವವನೇ! ವಿಶ್ವರೂಪವನ್ನು ತೋರಿಸಿ, ದುರ್ಯೋಧನಾದಿಗಳಿಗೆ ನಾಶವೆಂಬುದು ಸಿದ್ಧವು ಎಂದು ಏರ್ಪಟ್ಟನಂತರ ನೀನು ನನ್ನ ಮಾತಿನ ಪ್ರಕಾರ ಶತ್ರುಗಳನ್ನು ತಪಿಸುವಹಾಗೆ ಮಾಡುವಿ ಎಂದು ಹೇಳುವಹಾಗೆ **ಪರಂತಪ** ಎಂಬ ಸಂಬೋಧನೆಯು. ಹಿಂದೆ **ಯದ್ವಾಜಯೇಮ ಯದಿವಾ ನೋಜಯೇಯುಃ** (ಗೀ. ೨. ೬) ಎಂಬ ಅಪನಂಬಿಕೆಯಿಂದ ಮಾತಾಡಿದ್ದೀ, ಹಾಗೆ ಅಪನಂಬಿಕೆ ಬೇಡ, ನೀನು ನಿಜವಾಗಿಯೂ ಶತ್ರು ತಾಪಕನು ಎಂದು ಹೇಳುವಹಾಗೆ **ಪರಂತಪ** ಎಂಬ ಸಂಬೋಧನೆಯು. ಎರಡು ಶ್ಲೋಕಕ್ಕೂ ಏಕಾನ್ವಯವಾದುದರಿಂದ, ಈ ಚತುರ್ಭುಜದ ಸಾಕ್ಷಾತ್ಕಾರವು ಕೇವಲ ಯಾವುಗಳಿಂದ ಸಿದ್ಧಿಸುವದಿಲ್ಲವೆಂಬುದನ್ನು ೫೩ ನೆಯ ಶ್ಲೋಕದಲ್ಲಿ ಹೇಳಿ, ೫೪ ನೆಯ ಶ್ಲೋಕದಲ್ಲಿ ಯಾವುದರಿಂದ ಸಾಧ್ಯವೆಂಬುದನ್ನು ಸ್ಪಷ್ಟಪಡಿಸುವದಕ್ಕಾಗಿ, ಸಂಗತಿ ಪ್ರಕರಣವೂ ಒಂದೇ ಎಂದು ತೋರಿಸುವದಕ್ಕಾಗಿ **ಏವಂ ವಿಧಃ ಅಹಂ** ಎಂಬುದನ್ನು ಇನ್ನೊಂದುಸಲ ಹೇಳುತ್ತಾರೆ. ಇಂತಹ ಧ್ಯೇಯಸ್ವರೂಪನಾಗಿ ಚತುರ್ಭುಜಾಕೃತಿಯುಳ್ಳ ನಾನು, **ಭಕ್ತ್ಯಾತ್ವನನ್ಯಯಾ** ನಾನಲ್ಲದೆ ಇತರ ದೇವತೆ, ಇತರ ವಿಷಯೋಪಭೋಗಗಳು, ಇವು ಯಾವುದರಲ್ಲೂ ಸಕ್ತವಾಗದೇ ಇರುವ ಭಕ್ತಿಯಿಂದಲೇ, **ತತ್ತ್ವತಃ** - ಯಥಾರ್ಥವಾಗಿ ನಾನು ಹೇಗೆ ಇದ್ದೇನೋ ಹಾಗೆ, **ಜ್ಞಾತುಂ** - ತಿಳಿಯಲೂ, ಎಂದರೆ ಉಪಾಸನೆಯು ಜ್ಞಾನರೂಪವಾದುದರಿಂದ ಉಪಾಸಿಸುವದಕ್ಕೂ ಎಂಬರ್ಥವು, **ದ್ರಷ್ಟುಂ** - ಹಾಗೆಯೇ ಯಥಾರ್ಥವಾಗಿ ಸಾಕ್ಷಾತ್ಕರಿಸಲು, **ಪ್ರವೇಷ್ಟುಂ** - ಹಾಗೆಯೇ ಯಥಾರ್ಥವಾಗಿ ಪ್ರಾಪ್ಯಸ್ಥಾನವನ್ನು ಪ್ರವೇಶಿಸಲೂ ಕೂಡ, **ಶಕ್ಯಃ** - ಸಾಧ್ಯವಾದವನು. ಇಲ್ಲಿ **ಭಕ್ತ್ಯಾತ್ವನನ್ಯಯಾ** ಎಂಬ ಪ್ರಯೋಗವು ಎರಡು ವಿಧ ಉಪಾಯಾನುಷ್ಠಾನಗಳಾದ ಉಪಾಸನ ಪ್ರಪದನಗಳಿಗೂ ಆವಶ್ಯಕವೆಂದು ತೋರಿಬರುತ್ತದೆ. ಐಕಾಂತಿಕ ಭಕ್ತಿ ಎಂಬುದರಿಂದ ಅನ್ಯದೇವತಾ ಸಂಬಂಧವಿಲ್ಲದೇ ಇರಬೇಕು. ಉಪಾಸನದಲ್ಲೂ ಶರಣಾಗತಿಯು ಅಙ್ಗವಾಗಿಯೂ ಪ್ರಪದನದಲ್ಲಿ ಅಙ್ಗಿಯಾಗಿಯೂ ಅನನ್ಯಗತಿತ್ವದ ಆವಶ್ಯಕತೆಯುಂಟು. ಹೀಗೆ ಅನನ್ಯ ಗತಿತ್ವದಿಂದ ಉಪಾಸನೆಯು ಕ್ಷಿಪ್ರದಲ್ಲೇ ಪರಮಾತ್ಮಪ್ರಸನ್ನತೆಯನ್ನು ಹೊಂದುವಹಾಗೆ ಮಾಡುತ್ತದೆ. ತದೇಕಧ್ಯಾನವಾಗಿ ಚಾತಕವೃತ್ತಿ

ಯನ್ನವಲಂಬಿಸೋಣವು ಎರಡು ವಿಧ ಅಧಿಕಾರಿಗಳಿಗೂ ಆವಶ್ಯಕವು. ಹಿಂದಿನ ಶ್ಲೋಕದಲ್ಲಿ ವೇದ ಯಜ್ಞ ದಾನ ತಪಸ್ಸೇ ಮೊದಲಾದವುಗಳಿಂದ, **ದ್ರಷ್ಟುಂ** ಪರಮಾತ್ಮನ ಸ್ವಕೀಯವಾಗಿ ಯಥಾರ್ಥವಾದ ಪ್ರಾಪ್ಯರೂಪದ ಸಾಕ್ಷಾತ್ಕಾರ ದೊರೆಯುವದಿಲ್ಲವೆಂದು ಹೇಳಿದನಂತರ ಮುಂದಿನ ಶ್ಲೋಕದಲ್ಲಿ **ಭಕ್ತ್ಯಾತ್ವನನ್ಯಯಾ ದ್ರಷ್ಟುಂ ಶಕ್ಯಃ** ಎಂದು ಅಷ್ಟೇ ಹೇಳದೆ, **ಜ್ಞಾತುಂ ದ್ರಷ್ಟುಂ ಪ್ರವೇಷ್ಟುಂ** ಎಂದು ಹೇಳಲು ಕಾರಣವೇನೆಂದರೆ ? ಆ ಸಾಕ್ಷಾತ್ಕಾರಕ್ಕೆ ಸಾಧನವಾದ ಭಕ್ತಿಯೋಗವು ತೈಲಧಾರೆಯಹಾಗೆ ನಿರಂತರವಾದ ಸ್ಮೃತಿರೂಪವಾಗಿರುವ ಜ್ಞಾನಸಂತತಿ ವಿಶೇಷವಾದುದರಿಂದ, **ಜ್ಞಾತುಂ** ಎಂಬ ಪ್ರಯೋಗವು ; ಇದರಿಂದ ಪರಮ ಪುರುಷ ಸಾಕ್ಷಾತ್ಕಾರವು ಲಭಿಸುವದರಿಂದ **ದ್ರಷ್ಟುಂ** ಎಂಬ ಪ್ರಯೋಗವು. **ಪ್ರವೇಷ್ಟುಂ** ಎಂಬ ಪ್ರಯೋಗಕ್ಕೆ ಕಾರಣವೇನೆಂದರೆ, ಹೀಗೆ ಸಾಕ್ಷಾತ್ಕಾರ ಯಾವಾಗ ಉಂಟಾಯಿತೋ ಆಗ ಪ್ರಾಪ್ಯಸ್ಥಾನಕ್ಕೆ ಅರ್ಚಿರಾದಿಗತಿದ್ವಾರಾ ಪ್ರವೇಶವು ದೊರೆಯುತ್ತದೆ ಎಂದು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು. ಪ್ರಥಮತಃ ಸಾಧನವಾಗಿ ಜ್ಞಾನರೂಪ ಭಕ್ತಿಯೋಗವು, ತದನಂತರ ಸಾಕ್ಷಾತ್ಕಾರವು, ಅದರ ಫಲವಾಗಿ ಪರಮಪದ ಪ್ರವೇಶವು ; ಆದುದರಿಂದಲೇ ಜ್ಞಾತುಂ ದ್ರಷ್ಟುಂ ಪ್ರವೇಷ್ಟುಂ ಎಂಬ ಮೂರು ಪ್ರಯೋಗಗಳು. ಈ ಜ್ಞಾನರೂಪ ಉಪಾಸನೆಯು **ಪರಭಕ್ತಿ** ಎಂಬ ಹೆಸರನ್ನು ಹೊಂದಿರುತ್ತದೆ. ಈ **ಪರಭಕ್ತಿಯು** ಮುಂದಕ್ಕೆ ವೃದ್ಧಿ ಹೊಂದುತ್ತಾ ಸಾಕ್ಷಾತ್ಕಾರ ಉಂಟಾದ ಅವಸ್ಥೆಯೇ **ಪರಜ್ಞಾನ**ವೆನಿಸುತ್ತದೆ. ಅನಂತರ ಪರಮ ಪುರುಷನನ್ನಗಲಿ ಒಂದು ಮುಹೂರ್ತವು ಇರಲಾರನೆಂಬ ಭಕ್ತಿಯ ಪರಾಕಾಷ್ಠಾದಶೆಯು ಲಭಿಸುತ್ತದೆ ಇದಕ್ಕೆ ಶಾಸ್ತ್ರಗಳಲ್ಲಿ **ಪರಮಭಕ್ತಿ** ಎಂದು ಹೆಸರು. ಇದು ಉಂಟಾದ ಒಡನೆಯೇ ದೇಹಾವಸಾನವೂ. ಅರ್ಚಿರಾದಿಗತಿಯೂ ವೈಕುಂಠಪ್ರಾಪ್ತಿಯೂ ಕ್ರಮವಾಗಿ ಲಭಿಸುತ್ತವೆ. **ಪ್ರವೇಷ್ಟುಂ** ಎಂಬುದರಿಂದ ಇವೆಲ್ಲಾ ಬೋಧಿತವಾಗಿ ಅನಂತರ ಉಂಟಾಗುವ ಪರಿಪೂರ್ಣ ಬ್ರಹ್ಮಾನುಭವವೂ ಸೂಚಿಸಲ್ಪಟ್ಟಿತು. ಶ್ರೀ ಪರಾಶರರು ಈ ಮೂರನ್ನೂ ಹೀಗೆಯೇ **"ಸಜ್ಞಾಯತೆ ಯೇನತದಸ್ತದೋಷಂ ಶುದ್ಧಂಪರಂ ನಿರ್ಮಲಮೇಕ ರೂಪಂ । ಸಂದೃಶ್ಯತೇವಾಧಿಗಮ್ಯತೇವಾ ತದ್ಜ್ಞಾನ ಮಜ್ಞಾನಮತೋಽನ್ಯದುಕ್ತಮ್"** (ವಿ. ಪು. ೬. ೫. ೮೭) ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. ಇದರರ್ಥಕ್ಕೆ ಹಿಂದೆ ನೆಯ ಶ್ಲೋಕವನ್ನು ನೋಡಿ. **ಜ್ಞಾಯತೇ, ಸಂದೃಶ್ಯತೇ, ಅಧಿಗಮ್ಯತೇ** ಎಂದು **ಜ್ಞಾತುಂ, ದ್ರಷ್ಟುಂ, ಪ್ರವೇಷ್ಟುಂಚ** ಎಂಬಲ್ಲಿ ತೋರಿಬರುವ । ಅರ್ಥಗಳನ್ನೇ ಹೇಳಿದುತ್ತಾರೆ. ಸ್ವಾಮಿ ಪ್ರಸನ್ನನಾಗಬೇಕಾದರೆ ಬರೀ **ಭಕ್ತಿಯೂ** ಸಾಲದು. ಅದು ಅನನ್ಯ ಭಕ್ತಿಯಾದರೇನೇ ಸರ್ವೇಶ್ವರನು ಮೆಚ್ಚಿ ಪ್ರೀತನಾಗುವನು. ಇದೇ **"ಭಕ್ತ್ಯೋಽಪಿ ವಾಸುದೇವಸ್ಯ ಶಾರ್ಙ್ಗಿಣಃ ಪರಮಾತ್ಮನಃ । ಲೋಕೇಶಸ್ಯ ವಿನಿರ್ಮುಕ್ತಃ ಮುಕ್ತೋ ಭವತಿ ನಾನ್ಯಥಾ"** ಎಂಬ ದಿವ್ಯ ಸೂಕ್ತಿಯಲ್ಲೂ ಉಪಪಾದಿತವು ಅನನ್ಯತ್ವ ಇಲ್ಲದ ಭಕ್ತಿಯೋಗದಿಂದ ಎಂದರೆ ಆರ್ತನೂ ಅರ್ಥಾರ್ಥಿ ಇವರುಗಳು ಮಾಡುವ ಭಕ್ತಿಯೋಗದಲ್ಲಿ ಅನನ್ಯತ್ವವಿಲ್ಲದುದರಿಂದ, ಮೋಕ್ಷಪ್ರಾಪ್ತಿ ಫಲವಿಲ್ಲವು, ಆದರೂ ಪರಮಾತ್ಮನ ಭಜನ ರೂಪಸುಕೃತವು ವಿತಥವಾಗದು, ಕಾಲಾನುಕಾಲದಲ್ಲಿ ಭಗವಂತನ ಪೂರ್ಣಾನುಗ್ರಹವನ್ನೂ ಮೋಕ್ಷವನ್ನೂ ಹೊಂದಿಸುವದರಲ್ಲಿ ಸಂದೇಹವಿಲ್ಲವು. ಐಹಿಕ ಕಾಮಗಳಲ್ಲಿ ಆಸಕ್ತಿಯೂ ಅದಕ್ಕಾಗಿ ಅನ್ಯ ದೇವತಾ ಭಜನೆಯೂ ಇವುಗಳು ಯಾವುದೂ ಇಲ್ಲದಿದ್ದರೆ ಆಗೀಗ ಆತನು ಪ್ರೀತನಾಗುವನು ಎಂಬ ಪ್ರತ್ಯರ್ಥವನ್ನೂ ಸಹ, ಈ **ಅನನ್ಯಯಾ** ಎಂಬ ಶಬ್ದದಿಂದ ಗ್ರಹಿಸಬಹುದು. ಹಾಗಾದರೆ, **ದೃಷ್ಟವಾನಸಿ ಮಾಂ ಯಥಾ** ಎಂಬುದರಿಂದ ಅರ್ಜುನನಿಗೆ ತೋರಿಸಿದುದೇನು ಪಕ್ಷ

**ಭಾ. ವೇದೈಃ ಅಧ್ಯಾಪನ ಪ್ರವಚನಾಧ್ಯಯನ ಶ್ರವಣ ಜಪವಿಷಯೈಃ ಯಾಗ ದಾನ ಹೋಮ ತಪೋ ಭಿಶ್ಚ, ಮದ್ಭಕ್ತಿ ವಿರಹಿತೈಃ ಕೇವಲೈಃ ಯಥಾವದವಸ್ಥಿತೋಽಹಂ ದ್ರಷ್ಟುಮಶಕ್ಯಃ; ಅನನ್ಯಯಾ ತು ಭಕ್ತ್ಯಾ ತತ್ತ್ವತಃ ಶಾಸ್ತ್ರೈರ್ಜ್ಞಾತುಂ ತತ್ತ್ವತಃ**

ಪಾತವೋ ಎಂದರೆ ಹಾಗಲ್ಲವು. ತನ್ನ ಅಂಶವೂ ಆತನಲ್ಲಿದ್ದು ಲೋಕಹಿತಕ್ಕಾಗಿಯೇ ನರನೆಂದೆನಿಸಿ, ತಾನು ನಾರಾಯಣನಾಗಿ ಅವತರಿಸಿರುವದರಿಂದ ಅಂತಹ ಅನುಗ್ರಹವು ಎಂದು ಭಾವಿಸತಕ್ಕದ್ದಾಗಿರುತ್ತದೆಂದು ಹಿಂದೆಯೇ ಹೇಳಿದೆವು. ಈ ಶ್ಲೋಕಾರ್ಥವೇ ಭಾಗವತದಲ್ಲೂ ಉಪಬೃಹ್ಮಣವು. ಮಹಾ ಭಾಗವತನಾದ ಪ್ರಹ್ಲಾದನು ದೈತ್ಯಾಸುತಾನದಲ್ಲಿ ಹೇಳುತ್ತಾನೇನಂದರೆ **"ನ ದಾನಂ ನತಪೋ ನೇಜ್ಯಾ ನಶೌಚಂ ನ ವ್ರತಾನಿಚ। ಪ್ರೀಯತೇಽನುಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಂ"** ॥ (ಭಾಗ. ೭. ೭. ೫೧) ದಾನವಾಗಲಿ ತಪಸ್ಸಾಗಲಿ ಯಜ್ಞಯಾಗಾದಿಗಳಾಗಲಿ, ಶೌಚವಾಗಲಿ ವ್ರತಗಳಾಗಲಿ, ಇದರೊಂದಿಗೆ ಮುಂದಿನ ಶ್ಲೋಕದಲ್ಲಿ ಬ್ರಾಹ್ಮಣತ್ವ ದೇವತ್ವ ಋಷಿತ್ವಗಳೇಯಾಗಲಿ ಇವು ಯಾವುವೂ ಶ್ರೀ ಹರಿಯನ್ನು ಮೆಚ್ಚಿಸಲಾರವು. ಅನನ್ಯವಾದ ಅಮಲವಾದ ಭಕ್ತಿಯೊಂದರಿಂದಲೇ, **"ನಾನ್ಯಃಪನ್ಥಾ ವಿದ್ಯತೇ ಅಯನಾಯ"** ಎಂದು ಶ್ರುತಿಯು ಹೇಳುವಹಾಗೆ, ಶ್ರೀ ಹರಿಯು ಪ್ರೀತನಾಗುವನು; ಮಿಕ್ಕಿದ್ದೆಲ್ಲವೂ ಕೇವಲ ವೇಷವೇ ವಿನಾ ಕಾರ್ಯಕಾರಿಯಲ್ಲವು. ಇದರಿಂದ ಮುಖ್ಯವಾಗಿ ಗ್ರಹಿಸತಕ್ಕ ವಿಷಯವೇನೆಂಬುದನ್ನು ಶ್ರುತಪ್ರಕಾಶಿಕಾ ಚಾರ್ಯರು **"ನಾಹಂ ವೇದೈರಿತ್ಯಾದಿನಾ ಭಕ್ತಿ ವ್ಯತಿರಿಕ್ತೋಪಾಯ ನಿಷೇಧ ಉಕ್ತಃ"** ಎಂದು ಹೇಳಿರುತ್ತಾರೆ. ಇದರಿಂದ ಕರ್ಮಯೋಗದ ತಪಸ್ಸು ದಾನ ಯಜ್ಞಾದಿ ಕಲಾಪಗಳು ಉಪಾಯವಾಗಲಾರವೆಂಬ ಭಾವವು ಸೂಚಿತವು; ಅವ್ಯವಹಿತೋಪಾಯವು ಭಕ್ತಿಯೋಗವೆಂದೇ ತಿಳಿಯತಕ್ಕದ್ದು. ದಾನ ತಪ ಇಜ್ಯಾ ಮೊದಲಾದವುಗಳು ಕರ್ಮಗಳು ಮಾತ್ರವೇ; ಆದುದರಿಂದ ಅಙ್ಗವೇ ವಿನಾ ಸ್ವತಃ ಉಪಾಯವಲ್ಲವು. ಹಾಗಾದರೆ ಉಪಾಯವು ಯಾವುದು ಎಂದರೆ ಅದು ಪರಮಾತ್ಮ ಸಾಕ್ಷಾತ್ಕಾರ ರೂಪ ಜ್ಞಾನರೂಪವಾಗಿರಬೇಕಾಗಿರುವದರಿಂದ, **ಭಕ್ತ್ಯಾತ್ವನನ್ಯಯಾ** ಎಂಬ ಪ್ರಯೋಗದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸುವ ಉಪಾಸನವೇ, ಸಾಕ್ಷಾತ್ತಾದ ಉಪಾಯವೆಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು** :—**ವೇದೈಃ**-ವೇದಗಳಿಂದ ಎಂದರೆ, ಅವುಗಳ ಅಧ್ಯಾಪನ-ವೇದಗಳನ್ನೂ ಅವುಗಳ ಅರ್ಥಗಳನ್ನೂ ಉಪದೇಶಿಸುವದು, **ಪ್ರವಚನ** ವೆಂದರೆ ಹೇಳುವುದು, **ಅಧ್ಯಯನ** ವೆಂದರೆ ತಾನೇ ವೇದವನ್ನು ಹೇಳುವುದು, ಶ್ರವಣವೆಂದರೆ ಕೇಳುವುದು, **ಜಪವಿಷಯೈಃ** - ಜಪಕ್ಕೆ ಯೋಗ್ಯವಾದ ಮನ್ತ್ರಗಳಿಂದಲೂ ಮತ್ತು ಯಾಗ, ದಾನ, ಹೋಮ ತಪಸ್ಸುಗಳಿಂದಲೂ **ಮದ್ಭಕ್ತಿವಿರಹಿತೈಃ** - ನನ್ನ ವಿಷಯವಾದ ತೈಲಧಾರವದವಚ್ಛಿನ್ನ ಸ್ಮೃತಿ ಸಂತಾನ ರೂಪ ಏಕಾಂತ ಧ್ಯಾನವಿಲ್ಲದ, **ಕೇವಲೈಃ** - ಬರೀ ಇವುಗಳಿಂದಲೇ ಎಂಬ ಭಾವವು, ಇವುಗಳು ಸರ್ವಥಾ ತಿರಸ್ಕರಣೀಯಗಳಲ್ಲವೆಂಬ ಭಾವದಿಂದ ಬರೀ ಇವುಗಳಿಂದಲೇ ಎಂದು ಹೇಳಲ್ಪಟ್ಟಿತು; **ಯಥಾವಸ್ಥಿತೋಽಹಂ ದ್ರಷ್ಟುಮಶಕ್ಯಃ** - ನಾನು ಯಥಾವತ್ತಾಗಿ ಹೇಗಿದ್ದೇನೋ ಹಾಗೆ ಸಾಕ್ಷಾತ್ಕರಿಸಲ್ಪಡಲು ಶಕ್ಯನಲ್ಲವು, ಈಗಿರುವ ಮಾನುಷಾಕೃತಿಯಲ್ಲವೆಂದು ಹೇಳುವದಕ್ಕಾಗಿ **ಯಥಾವಸ್ಥಿತೋಽಹಂ** ಎಂದು ಹೇಳಲ್ಪಟ್ಟಿತು. ಇದರಿಂದ ನಾನು ಹೊಂದಿರುವ ರೂಪವು ಸ್ವಸಙ್ಕಲ್ಪದಿಂದ ಆರೋಪಿತವೆಂದು ಹೇಳಿದಂತಾಯಿತು. ಹಿಂದೆ ಈ ಮಾನುಷಾದಿ ರೂಪಗಳೂ ಸಹ ಅಜಹತ್ಸ್ವ ಸ್ವಭಾವ ಉಳ್ಳವು ಎಂದು ಹೇಳಿದುದಕ್ಕೆ ಇದು ವಿರೋಧವಾಗಲಿಲ್ಲವೇ ? ಎಂದರೆ ಇವುಗಳೂ ದಿವ್ಯಮಙ್ಗಳವಿಗ್ರಹಗಳೇ ಸರಿ. ಆದರೂ ಇದರಿಂದ ಆತನ ಯಥಾವತ್ತಾದ ರೂಪವೆಂದೇನೂ ಹೇಳಿದಂತಾಗಲಿಲ್ಲವು. ಮತ್ಸ್ಯಾದಿ ವಿಭವರೂಪಗಳು ಪರಮಾತ್ಮನ ಯಥಾ

**ಭಾ. ಸಾಕ್ಷಾತ್ಕರ್ತುಂ, ತತ್ವತಃ ಪ್ರವೇಷ್ಟುಂಚ ಶಕ್ಯಃ। ತಥಾಚ ಶ್ರುತಿಃ - (೧) "ನಾಯಮಾತ್ಮಾ ಪ್ರವಚನೇನ ಲಭ್ಯೋ ನಮೇಧಯಾ ನಬಹು ನಾ ಶ್ರುತೇನ। ಯಮೇವೈಷವೃಣತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣತೇ ತನೂಂ ಸ್ವಾಮ್" ಇತಿ ॥**

ಪತ್ತಾದ ರೂಪವನ್ನು ತೋರಿಸಲಾರೆವೆಂಬ ಭಾವವು ಒಬ್ಬ ಭಕ್ತನು ತನಗೆ ಇಷ್ಟವಾದ ರೂಪದಲ್ಲಿ ಒಂದು ಶಿಲಾವಿಗ್ರಹವನ್ನು ಮಾಡಿಸಿ, ಭಗವಚ್ಛಾಸ್ತ್ರರೀತ್ಯಾ ಪ್ರತಿಷ್ಠೆಯನ್ನು ಮಾಡಿಸಿದರೆ, ಸರ್ವೇಶ್ವರನು ಆ ಬಿಂಬಾಕೃತಿಗನುಗುಣವಾಗಿ ದಿವ್ಯಮಙ್ಗಳ ವಿಗ್ರಹವನ್ನುಳ್ಳವನಾಗಿ ಅದನ್ನು ಪ್ರವೇಶಮಾಡುವನೆಂದು ಭಗವಚ್ಛಾಸ್ತ್ರದಲ್ಲಿ ಹೇಳಿರುತ್ತದೆ. ಅಂತಹ ಆಕೃತಿಯು ತನ್ನ ಯಥಾವಸ್ಥಿತರೂಪವು ಹೇಗೆ ಅಲ್ಲವೋ, ಹಾಗೆಯೇ ಈ ಮಾನುಷರೂಪವೂ ಎಂದು ಭಾವಿಸತಕ್ಕದ್ದು. ಈ ಯಜ್ಞದಾನ ಹೋಮಾದಿಗಳು ಸಾಕ್ಷಾತ್ಕಾರಾದಿಗಳಿಗೆ ಬೇಕಾದ ಭಕ್ತಿಯೋಗಕ್ಕೆ ಸಹಕಾರಿಗಳೆಂಬುವದರಲ್ಲಿ ಸಂದೇಹವಿಲ್ಲವು; ಇದನ್ನು ಸೂಚಿಸುವುದಕ್ಕಾಗಿಯೇ **ಕೇವಲೈಃ** ಎಂಬ ಪ್ರಯೋಗವು. ಮೂಲದಲ್ಲಿ ಕೇವಲ ಶಬ್ದವಿಲ್ಲದಿದ್ದರೂ ಇದು ಇಲ್ಲಿ ಅಭಿಪ್ರೇತವು ಏಕೆಂದರೆ **"ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿಯಜ್ಞೇನ ದಾನೇನ ತಪಸಾಽನಾಶಕೇನ"** (ಬೃ. ಉಪ. ೬. ೪. ೨೨) ಎಂಬಿವೇ ಮೊದಲಾದ ಶ್ರುತಿಗಳಿಗೆ ಅನುಸಾರವಾಗಿ ಭಕ್ತಿಯೋಗಕ್ಕೆ ಇವು ಉಪಕಾರಗಳೆಂದು ಭಾವಿಸತಕ್ಕದ್ದು.

ಹಾಗಾದರೆ ಇನ್ನು ಏತರಿಂದ ಈ ಸಾಕ್ಷಾತ್ಕಾರವು ಸಾಧ್ಯವೆಂದರೆ ಹೇಳುತ್ತಾರೆ.— ಸಾಧ್ಯೋಪಾಯದ ಅಂಗಿಯು ಅವಶ್ಯಕವೆನ್ನುತ್ತಾರೆ. **ಅನನ್ಯಯಾತುಭಕ್ತ್ಯಾ** - ಇಲ್ಲಿ **ತು** ಶಬ್ದವು ಮೇಲಿನವುಗಳಾದ ಅಂಗಗಳನ್ನು ವ್ಯಾವರ್ತಿಸಿ ಭಕ್ತಿಯೋಗಕ್ಕಾದರೋ ಯಥಾವತ್ತಾದ ಸಾಕ್ಷಾತ್ಕಾರವನ್ನು ಸಾಧಿಸಿಕೊಡುವ ಶಕ್ತಿಯುಂಟು ಎಂದು ಬೋಧಿಸುತ್ತದೆ, **ಅನನ್ಯಯಾತು ಭಕ್ತ್ಯಾ** - ಇತರ ಐಹಿಕ ವಿಷಯಗಳಲ್ಲೇಯಾಗಲಿ ಅನ್ಯದೇವತೆಗಳಲ್ಲಾಗಲಿ, ಹೀಗೆ ಯಾವುದರಲ್ಲೂ ಸಕ್ತವಾಗದ ಪರಮೈಕಾಂತಿ ಭಕ್ತಿಯೋಗದಿಂದಲಾದರೋ **ತತ್ವತಃಶಾಸ್ತ್ರೈರ್ಜ್ಞಾತುಂ** - ಯಥಾರ್ಥವಾಗಿ ಶಾಸ್ತ್ರಗಳಿಂದ ತಿಳಿಯುವುದಕ್ಕೂ, **ತತ್ತ್ವತಸ್ಸಾಕ್ಷಾತ್ಕರ್ತುಮ್** - ನಿನ್ನ ಯಥಾರ್ಥವಾದ ರೂಪವನ್ನು ಸಾಕ್ಷಾತ್ಕರಿಸುವದಕ್ಕೂ, **ತತ್ತ್ವತಃ ಪ್ರವೇಷ್ಟುಂ** - ಹೇಗೆ ಯಥಾವತ್ತಾಗಿ ಕಲ್ಯಾಣ ಗುಣಗಳ ಮತ್ತು ವಿಭೂತಿಗಳ ಯೋಗದಿಂದ ಪರಿಪೂರ್ಣನಾಗಿರುವ ಪ್ರಾಪ್ಯವನ್ನು ಮುಕ್ತ ದಶೆಯಲ್ಲಿ ದಿವ್ಯ ವೈಕುಂಠವನ್ನು ಪ್ರವೇಶಿಸಿ ಅನುಭವಿಸುವದಕ್ಕೂ **ಶಕ್ಯಃ** - ಸಾಧ್ಯವು. ಶ್ರುತ್ಯರ್ಥವೂ ಹಾಗೆಯೇ ಎಂದು ಪ್ರಮಾಣವನ್ನು ಉದಾಹರಿಸುತ್ತಾರೆ. **ತಥಾಚ ಶ್ರುತಿಃ** - ಹಾಗೇಯೇ ಶ್ರುತಿ ಪ್ರಮಾಣವೂ ಇರುತ್ತದೆ. **"ನಾಯಮಾತ್ಮಾ"** ಇತ್ಯಾದಿ ಇದರರ್ಥವು ಹಿಂದೆಯೇ ೪೭ ನೆಯ ಶ್ಲೋಕದಲ್ಲಿ ಉಪಪಾದಿತವು. ಹೀಗೆ **ತತ್ವತಃ ಪ್ರವೇಷ್ಟುಂ** ಎಂಬುದರಿಂದ ಪರರೂಪದೊಂದಿಗೆ ಸಾಯುಜ್ಯವೂ ಅದರ ಪರಿಪೂರ್ಣಬ್ರಹ್ಮಾನುಭವವೂ ಬೋಧಿತವಾದುದರಿಂದ, ವ್ಯೂಹ ವಿಭವ ಮೊದಲಾದರೂಪಗಳ ಪ್ರಾಪ್ತಿಯು ವ್ಯವಚ್ಛೇದಿಸಲ್ಪಟ್ಟಿತು. ಇಂತಹ ಯಥಾರ್ಥವಾದ ರೂಪವನ್ನು ಯಾಮುನಮುನಿಗಳು ತಮ್ಮ ಸ್ತೋತ್ರ ರತ್ನದ ೩೧ ರಿಂದ ೪೭ ನೆಯ ಶ್ಲೋಕಾಂತ್ಯದವರೆಗೂ ವರ್ಣಿಸಿರುತ್ತಾರೆ. ಶ್ರೀ ಭಾಷ್ಯಕಾರರು ಶರಣಾಗತಿ ಗದ್ಯದಲ್ಲೂ, ವೈಕುಂಠಗದ್ಯದಲ್ಲೂ ವರ್ಣಿಸಿರುತ್ತಾರೆ. ಶ್ರೀ ನಾರದರು ಅರ್ಭಕನಾದ ಧ್ರುವನಿಗೆ ಆರೂಪವನ್ನು ಉಪದೇಶಿಸಿರುತ್ತಾರೆ. ಕಪಿಲರು ಅದನ್ನೇ ತಮ್ಮ ತಾಯಿಯಾದ ದೇವಹೂತಿಗೆ ವರ್ಣಿಸಿರುತ್ತಾರೆ. ಇದೇ ಸ್ವಕೀಯವಾದ ಪರರೂಪವು. ಈ ಶ್ಲೋಕಗಳ ಅಭಿಪ್ರಾಯವನ್ನೇ ಪರಮಭಾಗವತರಾದ ಪ್ರಹ್ಲಾದರು ತಮ್ಮ ಸ್ನೇಹಿತರಾದ ದೈತ್ಯಬಾಲರಿಗೆ **"ನದಾನಂ ನ ತಪೋ**

(೧) ಕಠ ೧. ೨. ೨೩. ಮುಂ. ೩. ೨. ೩.

**ಮೂ. ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಸ್ಸಙ್ಗವರ್ಜಿತಃ ।**
**ನಿರ್ವೈರ ಸ್ಸರ್ವಭೂತೇಷು ಯ ಸ್ಸಮಾಮೇತಿ ಪಾಂಡವ ॥** ೫೫.

**ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಶ್ವರೂಪಾದಿ ದರ್ಶನಯೋಗೋನಾಮ ಏಕಾದಶೋಽಧ್ಯಾಯಃ ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.**

---

**ನೇಜ್ಯಾ**" ಎಂದು ಮೇಲೆ ಉದಾಹರಿಸಿರುವ ಶ್ಲೋಕದಲ್ಲಿ ಉಪದೇಶಿಸಿರುತ್ತಾರೆಂದು ಹೇಳಲ್ಪಟ್ಟಿರುತ್ತದೆ. ಶ್ರಿಯಃಪತಿಯು ಇವು ಯಾವುಗಳಿಂದಲೂ ಪ್ರೀತನಾಗದಿದ್ದರೆ ಇನ್ನು ಯಾವುದರಿಂದ ಪ್ರೀತನಾಗುವನು ಎಂದರೆ **ಅಮಲಯಾ ಭಕ್ತ್ಯಾ** - ವಿಷಯಗಳಲ್ಲಾಗಲಿ ಅನ್ಯದೇವತೆಗಳಲ್ಲಾ ಸಕ್ತವಾಗಿರುವ ಭಕ್ತಿಯು ಮಲಯುಕ್ತವಾದುದು, ಅಮಲವಾಗಬೇಕಾದರೆ ಅದು **ಅನನ್ಯವಾಗಿರುವ ಭಕ್ತಿಯಿಂದಲೇ ವಿನಾ ಅನ್ಯಥಾ ಅಲ್ಲವು** ಹಾಗಾದರೆ ಅವುಗಳನ್ನೆಲ್ಲಾ ಅನುಷ್ಠಿಸುವದೇನು ? ಎಂದರೆ **ಅನ್ಯದ್ವಿಡಂಬನಂ** - ಮಿಕ್ಕಿದ್ದೆಲ್ಲವೂ ಬರೀ ನಟನೆಯು ಆದುದರಿಂದ **ಭಕ್ತಿಂ ಕುರುತ** - ಶ್ರೀ ಹರಿಯಲ್ಲಿ ಶರಣಾಗತಿಯುಕ್ತ ಭಕ್ತಿಯೋಗವನ್ನಾಗಲಿ ಮಾಡಿ, ಅಥವಾ ಐಕಾಂತಿಕ ಭಕ್ತಿಯಿಂದ ಶರಣಾಗತಿಯನ್ನಾಗಲಿ ಮಾಡಿ, ಎಂಬದಾಗಿ, ಸಾಧ್ಯೋಪಾಯಾನುಷ್ಠಾನವನ್ನು ಶರಣಾಗತಿಯುಕ್ತವಾಗಿ ಮಾಡಿ ಎಂಬ ಅಮೋಘೋಪದೇಶವು. ಹೀಗೆ ಉಪಾಸನ ಭರನ್ಯಾಸನಗಳೇ ಉಪಾಯಗಳು ಮಿಕ್ಕವೆಲ್ಲಾ ಇವುಗಳಿಗೆ ಸಹಾಯಗಳೇ ವಿನಾ ಉಪಾಯಗಳಲ್ಲವು. ಈ ಸಾಧ್ಯೋಪಾಯಗಳು ಆವಶ್ಯಕವಾದರೂ, ಜಡಗಳಾದ ಈ ಅನುಷ್ಠಾನಗಳು ಫಲವನ್ನು ಕೊಡಲಾರವು; ಇವುಗಳೂ ವ್ಯಾಜ ಮಾತ್ರಗಳೇ. ಕರ್ಮದಿಂದುತ್ಪನ್ನವಾದ ಅಪೂರ್ವವು ಫಲವನ್ನು ಕೊಡುತ್ತದೆಂಬ ವಾದವು ಇದರಿಂದ ನಿರಸ್ತವು ಫಲಪ್ರದನು ಯಾರೆಂದರೆ ಈ ವ್ಯಾಜಗಳಾದ ಸಾಧ್ಯೋಪಾಯಗಳಿಂದ ಸುಪ್ರೀತನಾದ ಸಿದ್ಧೋಪಾಯನಾದ ಶ್ರಿಯಃಪತಿಯೇ ವಿನಾ, ಇನ್ನು ಯಾರೂ ಅಲ್ಲವೆಂಬುದು ಈ ಶ್ಲೋಕಗಳ ಸಾರಭೂತಾರ್ಥವು. ಇಲ್ಲಿ **ಪ್ರವೇಷ್ಟುಂ** ಎಂಬ ಪದವು ಸ್ವರೂಪೈಕ್ಯಾರ್ಥವನ್ನು ಬೋಧಿಸಲಾರದು. ಶ್ರೀಮಚ್ಛಂಕರಾಚಾರ್ಯರವರು **ಪ್ರವೇಷ್ಟುಂಚ ಎಂಬುದಕ್ಕೆ ಮೋಕ್ಷಂಚಗನ್ತುಂ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಮುಂದಿನ ಶ್ಲೋಕದಲ್ಲಿ ಈ **ಪ್ರವೇಷ್ಟುಂ** ಎಂಬ ಪದವನ್ನು **ಮಾಮೇತಿ** ಎಂದರೆ ನನ್ನನ್ನು ಬಂದು ಸೇರಿ ಪ್ರಾಪ್ಯವಾಗಿ ಹೊಂದುವನು ಎಂದು ವ್ಯಾಖ್ಯಾನ ಮಾಡಲ್ಪಟ್ಟಿರುತ್ತದೆ.

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕದಲ್ಲಿ ಕೇವಲ ವೇದದಾನ ತಪೋಯಜ್ಞಾದಿಗಳು ಮುಕ್ತಿಯನ್ನು ಸಾಧಿಸಲಾರವೆಂದೂ ಹೇಳಿ, ಹಾಗೆ ಪರಮಪುರುಷನಾದ ತಾನು ಪ್ರೀತನಾಗಬೇಕಾದರೆ ಏನು ಮಾಡಬೇಕೆಂದು ಹೇಳಿ, ಹಾಗೆ ಮಾಡಿದರೇನೆ ಮೋಕ್ಷಸಿದ್ಧಿಯು ಎಂದು ತಿಳಿಸಿ, ಈ ಅಧ್ಯಾಯವನ್ನು ನಿಗಮನಮಾಡುತ್ತಾರೆ.—ಆ ಭಕ್ತಿಯೋಗನಿಷ್ಠನು ಹೇಗಿದ್ದರೆ ಆತನು ನನಗೆ ಅತ್ಯರ್ಥ ಪ್ರಿಯನಾಗುವನೆಂದರೆ **ಯಃ** ಯಾವ ಭಕ್ತಿಯೋಗನಿಷ್ಠನು, ಇದು ಭಕ್ತಿಯೋಗ ಪ್ರಕರಣವಾದುದರಿಂದ ಹಾಗೆ ಅರ್ಥವು, **ಮತ್ಕರ್ಮಕೃತ್** - ನನ್ನ ಕರ್ಮವೆಂದು ಅವುಗಳನ್ನು ಮಾಡುವನಾಗಿ ಎಂದರೆ ನನ್ನ ಪ್ರೀತ್ಯರ್ಥವಾಗಿ ನನ್ನ ಆರಾಧನ ರೂಪವೆಂದು ಭಾವಿಸಿ ವೇದದಲ್ಲಿ ವಿಧಿಸಿರುವ ಆಜ್ಞಾನುಜ್ಞಾರೂಪ ಕರ್ಮಗಳನ್ನೆಲ್ಲಾ ನನಗೆ ಕೈಙ್ಕರ್ಯವೆಂದು ಭಾವಿಸಿ ಕರ್ಮಯೋಗವನ್ನು ಮಾಡುವನೋ, ಆದುದರಿಂದ ಸಂಙ್ಕಲ್ಪದಲ್ಲಿ ಭಗವತ್ಪ್ರೀತ್ಯರ್ಥಂ ಭಗವತ್ಕೈಂಕರ್ಯ ರೂಪಂ ಎಂದು ಸಾಧಾರಣವಾಗಿ ಹೇಳುವ ಸಂಪ್ರದಾಯವುಂಟು; **ಮತ್ಪರಮಃ** - ಸಕಲ ಕರ್ಮಗಳನ್ನೆಲ್ಲಾ ನಡೆಸುವದು ನನಗಾಗಿಯೇ ಎಂದು ಭಾವಿಸುವನೋ,

**ಮದ್ಭಕ್ತಃ**-ನನ್ನಲ್ಲೇ ಸದಾಸಕ್ತವಾದ ಮನಸ್ಸುಳ್ಳವನಾಗಿ ಉಪಾಸಿಸುತ್ತಾ, ಮಿಕ್ಕ ಕಾಲಗಳಲ್ಲಿ ಆತನನ್ನು ಸ್ತುತಿಸುವದೇನು, ಅರ್ಚನ ನಮಸ್ಕಾರಾದಿಗಳೇನು, ಹೀಗೆ ಅನ್ಯ ದೇವತೆಗಳನ್ನಾಶ್ರಯಿಸದೆ ನನ್ನಲ್ಲೇ ನಿರತಿಶಯ ಪ್ರೀತಿಯುಳ್ಳವನಾಗಿರುವನೋ, **ಸಙ್ಗವರ್ಜಿತಃ** - ಯಾವ ಐಹಿಕಗಳಲ್ಲಾಗಲಿ ಸಂಗವಿಲ್ಲದವನಾಗಿ **ಪರಮಾತ್ಮನಿಯೋರಕ್ತೋ ವಿರಕ್ತೋಽಪರಮಾತ್ಮನಿ** ಎಂದು ಹೇಳಿರುವಹಾಗೆ ಪರಮಾತ್ಮನಲ್ಲದೆ ಇನ್ನು ಯಾವುದರಲ್ಲೂ ಸಂಬಂಧವಿಲ್ಲದವನಾಗಿ, ಐಹಿಕಗಳಲ್ಲೂ ಅನ್ಯದೇವತೆಗಳು ಇದನ್ನು ಕೊಡುತ್ತಾರೆಂದು ಅವರುಗಳಲ್ಲೂ, ಹೀಗೆ ಯಾವುದರಲ್ಲೂ ಸಂಬಂಧವಿಲ್ಲದವನಾಗಿದ್ದಾನೋ, ಮತ್ತು **ಸರ್ವಭೂತೇಷು** - ಸರ್ವಪ್ರಾಣಿಗಳಲ್ಲೂ **ನಿರ್ವೈರಃ** - ಅವರುಗಳಿಂದ ತೊಂದರೆ ಪರಿಭವ ಕ್ಲೇಶಾದಿಗಳುಂಟಾದರೂ ಅವುಗಳಲ್ಲಿ ದ್ವೇಷವಿಲ್ಲದವನಾಗಿದ್ದಾನೋ, **ಸಃ** -- ಆ ಭಕ್ತಿಯೋಗಿಯು **ಹೇ ಪಾಂಡವ** - ಓ ಪಾಂಡುಪುತ್ರನೇ, **ಮಾಮೇತಿ** - ನನ್ನನ್ನೇ ಪ್ರಾಪ್ಯವಾಗಿ ಹೊಂದುವನು. ಹೀಗೆ **ಏತಿ** ಎಂಬುದು, ಪ್ರಾಪ್ಯನೂ ಪ್ರಾಪ್ತಾ ಎಂಬದಾಗಿ ಭೇದವನ್ನು ಹೇಳುವದರಿಂದ, ಪ್ರಾಪ್ತಾ ಜೀವಾತ್ಮನು, ಪ್ರಾಪ್ಯನು ಪರಮಾತ್ಮನು ಇವರುಗಳು ಬೇರೆಬೇರೆ ಎಂದು ಹೇಳಲ್ಪಟ್ಟಿತು. ಹಿಂದಿನ ಶ್ಲೋಕದಲ್ಲಿ **ಪ್ರವೇಷ್ಟುಂ** ಎಂಬುದರಿಂದ ಎರಡಕ್ಕೂ ಸ್ವರೂಪೈಕ್ಯವನ್ನು ಹೇಳುವವರಿಗೆ **ಮಾಮೇತಿ** ಎಂಬ ಪ್ರಯೋಗವು ಪ್ರಬಲ ವಿರೋಧವು. ಜೀವಾತ್ಮನು ಅಣುವು. ಕರ್ಮಬದ್ಧನು, ದಾಸನು ; ಪರಮಾತ್ಮನು ವಿಭುವು, ಅಕರ್ಮವಶ್ಯನಾಗಿ ಸರ್ವತಂತ್ರನು ; ಎಲ್ಲಕ್ಕೂ ಸಮಗೂ ಸಹ ಸ್ವಾಮಿಯು. ಹೀಗೆ ಪರಸ್ಪರ ಭೇದವೇ ಇರುವಾಗ ಸ್ವರೂಪೈಕ್ಯವು ಸಾಧ್ಯವಿಲ್ಲವು. **ಮತ್ಕರ್ಮಕೃತ್** ಎಂದು ಹೇಳಿರುವದರಿಂದ ಆಜ್ಞಾ ಕರ್ಮಗಳನ್ನು ಸಾಧ್ಯೋಪಾಯಾನುಷ್ಠಾನ ಮಾಡುವವನೂ ಕೂಡ ಬಿಡತಕ್ಕದ್ದಲ್ಲವೆಂದು ತೋರಿಬರುತ್ತದೆ. ಇದರಿಂದ ಪರಮೈಕಾಂತಿಯಾಗಿ ಧ್ಯಾನದಲ್ಲಿರುವವನಿಗೆ ಸಂಧ್ಯಾವಂದನಾದಿಗಳು ಬೇಕಿಲ್ಲವೆಂಬ ವಾದವು ನಿರಸನಮಾಡಲ್ಪಟ್ಟಿತು. ಅನುಜ್ಞಾ ಕೈಙ್ಕರ್ಯಗಳನ್ನೂ ಶಾಸ್ತ್ರವಿಹಿತ ವಿಧಿಗಳಿಗನುಸಾರವಾಗಿ ನಡೆಸುವದರಿಂದಲೂ ಸ್ವಾಮಿ ಪ್ರೀತನಾಗುವನು. ಇವುಗಳೆಲ್ಲಾ ಹಿಂದೆಯೇ ಹೇಳಲ್ಪಟ್ಟಿವೆ. **"ತತ್ಕುರುಷ್ವ ಮದರ್ಪಣಂ"** ಎಂಬಲ್ಲಿ ಇವೆಲ್ಲಾ ಅಂತರ್ಗತವು. **ಮತ್ಪರಮಃ** - ಸರ್ವಕರ್ಮಗಳಿಗೂ ಸರ್ವಶೇಷಿಯಾಗಿ ಪ್ರಧಾನ ಫಲಿಯು ಸರ್ವೇಶ್ವರನು. ಎಲ್ಲವನ್ನೂ ಮಾಡುವದೂ ಅವನ ಪ್ರಯೋಜನಕ್ಕಾಗಿಯೇ. ಪ್ರಣವದಲ್ಲೇ ಈ ಅಭಿಪ್ರಾಯವು ಅಕಾರವಾಚ್ಯನಾದ ಶ್ರಿಯಃಪತಿಯಾದ ವಿಷ್ಣುವಿಗೇನೇ ಈ **ಮಕಾರ** ವಾಚ್ಯನಾದ ದಾಸನಾದ ಜೀವಾತ್ಮನು ಎಂಬುದು ವ್ಯಕ್ತವು. **ಉ** ಎಂಬುದು ಅವಧಾರಣವು ; **ಮಕಾರವಾಚ್ಯೋ ಜೀವಃ ಅಯ್ಯೈವ,** ಈ ಜೀವಾತ್ಮನು ಪರಮಾತ್ಮನಿಗೆ ದಾಸನೇ ಆಗಿ ಅವನಸ್ವತ್ತಾದ ನಂತರ ಆತನು ಮಾಡುವ ಸರ್ವವೂ ಕೈಙ್ಕರ್ಯಗಳಾಗಿ ಪರಿಣಮಿಸಿ **ನಾರಾಯಣಾಯ**-ಶ್ರೀಮನ್ನಾರಾಯಣನಿಗೇ ವಿನಾ, **ನಮಃ, ಮಃ ನ, ನಮಮ**-ನನಗಲ್ಲವೆಂಬುದು ಮೂಲ ಮಂತ್ರದಿಂದ ತೋರಿಬರುತ್ತದೆ. ಆದುದರಿಂದಲೇ ಸರ್ವೇಶ್ವರನೇ ಪ್ರಧಾನ ಫಲಿಯು. ಆದರೆ ಮೋಕ್ಷಾರ್ಥಿಯಾದ ಜೀವನು, ತನ್ನ ಪ್ರಯೋಜನವನ್ನು ಉದ್ದೇಶಿಸಿಯೇ, ಸಾಧ್ಯೋಪಾಯಾನುಷ್ಠಾನವನ್ನೂ, ಮತ್ತು ಅದಕ್ಕೆ ಸಹಕಾರಿಗಳಾದ ಆಜ್ಞಾನುಜ್ಞಾ ಕರ್ಮಗಳನ್ನೂ ಅನುಷ್ಠಿಸುತ್ತಿರುವಾಗ ಪರಮಾತ್ಮನು ಹೇಗೆ ಉದ್ದೇಶ್ಯನಾಗಿ ಪ್ರಧಾನಫಲಿಯು ? ಎಂದಾಕ್ಷೇಪ ತಂದರೆ, ಸರ್ವೇಶ್ವರನಿಗೆ ಹೀಗೆ ತನ್ನ ಪುತ್ರನಾಗಿ ಶೇಷನಾಗಿರುವ ಜೀವಾತ್ಮನು ಪರಮಶ್ರೇಯಸ್ಸಿಗೆ ಸಾಧನಭೂತವಾದ ಉಪಾಯರೂಪವಾದ ಮತ್ತು ಅವುಗಳಿಗೆ ಸಹಕಾರಿಯಾದ ಕರ್ಮಗಳನ್ನು ಅನುಷ್ಠಿಸಿ, ಬಂಧಕ್ಕೊಳಗಾಗದ ಪದವಿಯನ್ನು ಹೊಂದಿ, ಸರ್ವೇಶ್ವರನಾದ ತನಗೆ ಸಮಾನವಾದ ಆನಂದವನ್ನು ಹೊಂದಲು ಅರ್ಹನಾಗುವನೋ, ಆಗ ಲೋಕದಲ್ಲಿ ಪಿತಾ ಹೇಗೆ ತನ್ನ ಮಗನು ಮಹತ್ವದ

ವಿಯನ್ನು ಹೊಂದಿದರೆ ಆನಂದಿಸುವನೋ, ಹಾಗೆಯೇ ಈ ಲೋಕಪಿತಾ ಕೂಡ ಅಪಾರವಾಗಿ ಆನಂದಿಸುವನು; ಆದುದರಿಂದ ಸರ್ವವೂ **ಮತ್ಪರಮಃ** ಎಂದೇ ಪ್ರಪನ್ನನು ಭಾವಿಸುವನು; ನಾನೇ ಅವನಿಗೆ ಪರಮಉದ್ದೇಶ್ಯನು, ಪ್ರಧಾನ ಫಲಿಯು ಎಂಬ ತಾತ್ಪರ್ಯವು.

**ಮದ್ಭಕ್ತಃ** - ಪ್ರಪನ್ನನು ನನ್ನಲ್ಲೇ ಭಕ್ತಿಯನ್ನಿಟ್ಟಿರುವವನು; ಧ್ಯಾನಕಾಲದಲ್ಲೂ ತೈಲ ಧಾರಾವದವಿಚ್ಛಿನ್ನ ಸಂತತಸ್ಮೃತಿರೂಪಜ್ಞಾನವುಳ್ಳವನಾಗಿ, ಮನಸ್ಸು ನನ್ನಲ್ಲೇಸಕ್ತವಾಗಿ, ನನ್ನನ್ನೇ ಕ್ಲಿಪ್ತಕಾಲಗಳಲ್ಲಿ ಉಪಾಸಿಸುವನಾಗಬೇಕು; ಮತ್ತು ಧ್ಯಾನದಿಂದ ವಿರತಿಯುಂಟಾದ ಕಾಲದಲ್ಲೂ **"ಕಥಯನ್ತಶ್ಚ ಮಾಂ ನಿತ್ಯಂ"** (ಗೀ. ೧೦.೯) ಎಂಬ ಶ್ಲೋಕದಲ್ಲಿ ಉಪಪಾದಿಸಿದ ಹಾಗೆ ನನ್ನ ಪ್ರೀತಿಗಾಗಿಯೇ ಸ್ತೋತ್ರವೇನು, ಕೈಂಕರ್ಯವೇನು, ಆರಾಧನವೇನು, ಮತ್ಕಥಾ ಶ್ರವಣವೇನು, ನನ್ನ ಮಹಾತ್ಮ್ಯೆಯನ್ನು ಉಪದೇಶಿಸುವದೇನು, ಹೀಗೆ ಸರ್ವಇಂದ್ರಿಯಗಳಿಗೂ ಸಾರ್ಥಕ್ಯವನ್ನು ನನ್ನಲ್ಲೇ ಅನ್ವಯಿಸಿಕೊಳ್ಳುವನು. **"ವಾಣೀ ಗುಣಾನುಕಥನೇ ಶ್ರವಣಂ ಕಥಾಯಾಂ ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ। ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ ದೃಷ್ಟಿ ಸ್ಸತಾಂ ಚ ದರ್ಶನೇಸ್ತು ಭವತ್ತನೂನಾಂ"॥** ಎಂದು ನಳಕೂಬರರು ಶ್ರೀಕೃಷ್ಣನನ್ನು ಕುರಿತು ಹೇಳುವ (ಭಾಗ. ೧೦-೩೮) ಶ್ಲೋಕವು ಈ ಸಂದರ್ಭದಲ್ಲಿ ಅನುಸಂಧೇಯವು:—ನಮ್ಮ ವಾಕ್ಕು ನಿನ್ನ ಕಲ್ಯಾಣಗುಣಗಳ ಸ್ತೋತ್ರದಲ್ಲೂ, ಕಿವಿಯು ನಿನ್ನ ಅತ್ಯದ್ಭುತ ದಿವ್ಯಚೇಷ್ಟಿತಗಳನ್ನು ಕೇಳುವುದರಲ್ಲೂ, ಕೈಗಳು ನಿನ್ನ ಆರಾಧನ ರೂಪ ಕರ್ಮಗಳಲ್ಲೂ, ಮನಸ್ಸು ನಿನ್ನ ಪಾದಕಮಲಗಳನ್ನು ಸ್ಮರಿಸುವುದರಲ್ಲೂ, ಓ ಜಗತ್ತನ್ನೇ ನಿವಾಸವಾಗಿವುಳ್ಳ ಶ್ರೀ ಕೃಷ್ಣನೇ ಶಿರಸ್ಸು ನಿನ್ನ ಪ್ರಣಾಮದಲ್ಲೂ, ನಮ್ಮ ದೃಷ್ಟಿಯು ನಿನ್ನ ಗರ್ಭ ಭೂತರಾಗಿಯೂ ನಿನಗೆ ಶರೀರಪ್ರಾಯರಾಗಿಯೂ ಇರುವ ಪರಮ ಭಾಗವತರ ಸಂದರ್ಶನದಲ್ಲೂ ಪ್ರವರ್ತಿಸುವಹಾಗೆ ಮಾಡು ಎಂದು ಪ್ರಾರ್ಥಿಸುತ್ತಾರೆ. **ಮುಕುಂದಮಾಲೆಯಲ್ಲೂ "ಜಿಹ್ವೇ ಕೀರ್ತಯ"** ಎಂಬ ಶ್ಲೋಕದಲ್ಲೂ, ಹೀಗೆಯೇ ಉಪಪಾದಿತವು. ಹೀಗೆ ಸರ್ವಕಾಲದಲ್ಲೂ ಸರ್ವೇಂದ್ರಿಯಗಳೂ ನನ್ನಲ್ಲೇ ಸಾರ್ಥಕ್ಯವನ್ನು ಹೊಂದಿ, ಬೇರೆಕಡೆ ಪ್ರವರ್ತಿಸವೇ ಹೀಗೆ ಯಾವ ಪ್ರಪನ್ನನು ಸಾಧ್ಯೋಪಾಯವನ್ನನುಷ್ಠಿಸುವನೋ, ಎಂಬುದು ತಾತ್ಪರ್ಯವು. ಹೀಗೆ ಭಕ್ತಿಯೋಗನಿಷ್ಠನ ಭಕ್ತಿಯಲ್ಲಿ ವಿಶೇಷವಾದ ಐಕಾಂತ್ಯವಿರಬೇಕು. ಪತಿವ್ರತಾ ಶಿರೋಮಣಿಯು ಸದಾ ಪತಿಪರಾಯಣಳಾಗಿ, ಹೇಗೆ ಪತಿಯನ್ನೇ ಚಿಂತಿಸುತ್ತಾ ಇರುವಳೋ, ಹಾಗೆಯೇ ಐಕಾಂತಿಯೂ ಶ್ರಿಯಃಪತಿಯನ್ನೂ ಚಿಂತಿಸುತ್ತಿರಬೇಕೆಂದು ಭಾವಿಸತಕ್ಕದ್ದು. ಸೀತೆಯು ಅಶೋಕ ವನದಲ್ಲಿ ಹೇಗಿದ್ದಳೆಂದರೆ? ಮಹರ್ಷಿಯು ವರ್ಣಿಸಿರುತ್ತಾರೆ.—**"ಕಾಮಭೋಗೈಃ ಪರಿತ್ಯಕ್ತಾ ಹೀನಾ ಬಂಧುಜನೇನ ಚ। ಧಾರಯತ್ರಾತ್ಮನೋದೇಹಂ ತತ್ಸಮಾಗಮ ಕಾಂಕ್ಷಿಣೀ। ನೈಷಾಪಶ್ಯತಿ ರಾಕ್ಷಸ್ಯೋನೈತಾ ಪುಷ್ಪಫಲದ್ರುಮಾ। ಏಕಸ್ಥಹೃದಯಾನೂನಂ ರಾಮಮೇವಾನು ಪಶ್ಯತಿ॥"** ಪತಿಯಲ್ಲಿ ಮಾತ್ರವೇ ಸಕ್ತವಾದ ಮನಸ್ಸುಳ್ಳ ಸಾಧ್ವಿಯಾದುದರಿಂದ, ಕಾಮ ಭೋಗಗಳನ್ನೂ ಬಂಧುಗಳನ್ನೂ ಎಲ್ಲವನ್ನೂ ತ್ಯಜಿಸಿ, ಪ್ರತಿಕೂಲರಾದ ರಾಕ್ಷಸ ಸ್ತ್ರೀಯರು ತೊಂದರೆ ಮಾಡುತ್ತಿದ್ದುದನ್ನೂ ಪರಿಗಣಿಸದೆ ಅನುಕೂಲಳಾದ ಮನೋಹರವಾದ ಪುಷ್ಪಗಳನ್ನೂ, ಬಹು ಮಾಧುರ್ಯವಾದ ಹಣ್ಣುಗಳುಳ್ಳ ಅಲ್ಲಿರುವ ವೃಕ್ಷಗಳನ್ನೂ ನೋಡಲಿಲ್ಲವು; ಮನಸ್ಸು ಚಿಂತಿಸುತ್ತಾ ಇದ್ದುದು ರಾಮನೊಬ್ಬನನ್ನೇ; ಆದುದರಿಂದ ಅವನೊಬ್ಬನನ್ನೇ ನೋಡುತ್ತಿದ್ದಳು" ಎಂದು ಹೇಳಿರುವಹಾಗೆ ಪ್ರಪನ್ನನೂ ಕೂಡ ಪರಮಪುರುಷನೊಬ್ಬನನ್ನೇ ನೋಡುವನೇ ವಿನಾ, ಈ ಲೋಕದ ಅನುಕೂಲ ಪ್ರತಿಕೂಲಾದಿ ವರ್ಗಗಳು ಯಾವುದನ್ನೂ ನೋಡನು, (ರಾಮಾ. ಸುಂದರ. ೧೬. ೨೫). **"ಮನಸ್ವೀಕಾರ್ಯಾರ್ಥೀ ನಗಣಯತಿ ದುಃಖಂ ನಚಸುಖಂ"** ಎಂದು ಹೇಳಿರುವಹಾಗೆ ಇರತಕ್ಕದ್ದು.

**ಸಙ್ಗವರ್ಜಿತಃ** - ಭಗವತ್ಪ್ರಾಪ್ತಿಗಿಂತ ಇತರವಾದವುಗಳಲ್ಲಿ ಸಙ್ಗವಿಲ್ಲದವನಾಗಿರಬೇಕು. ಅದಕ್ಕೆ ಪರಮವೈರಾಗ್ಯವಿರಬೇಕು. ಇಲ್ಲಿನ ಸುಖಗಳೂ, ಸ್ವರ್ಗಾದಿ ಸುಖಗಳೆಲ್ಲವೂ ಆತನಿಗೆ ಅಲ್ಪಾಸ್ಥಿರಗಳಾದುದರಿಂದ ತುಚ್ಛವಾದವುಗಳೆಂಬ ಭಾವವಿರಬೇಕು ಎಂದು ಏರ್ಪಟ್ಟಿತು. **"ನನಾಕಪೃಷಂ ನಚಸಾರ್ವಭೌಮಂ ನಪಾರಮೇಷ್ಠ್ಯಂ ನರಸಾದಿಪತ್ಯಂ। ನಯೋಗ ಸಿದ್ಧೀ ರಪುನರ್ಭವಂ ವಾ ವಾಂಛಂತಿ ಯತ್ಪಾದರಜಃ ಪ್ರಪನ್ನಾಃ"** ॥ ಎಂದು ಹೇಳಿರುವ ಹಾಗೆ ಪ್ರಪನ್ನರು ಸ್ವರ್ಗಲೋಕ ಪದವಿಯನ್ನಾಗಲಿ, ಇಹಲೋಕಾಧಿಪತ್ಯವನ್ನಾಗಲಿ, ಕುಬೇರನ ಅಣಿಮಾದ್ಯೈಶ್ವರಗಳನ್ನಾಗಲಿ **ಅಪುನರ್ಭವಂವಾ** ಎಂದರೆ ಜಿಜ್ಞಾಸುವಿಗೆ ಉಂಟಾಗುವ ಕೈವಲ್ಯವನ್ನಾಗಲಿ, ಅಪೇಕ್ಷಿಸುವದಿಲ್ಲವೆಂದು ಹೇಳಲ್ಪಟ್ಟಿರುತ್ತದೆ. (ಭಾ. ೧೦. ೧೬. ೩೭.) ಅಗಲಿ ಈತನಿಗೆ ದೇಹಯಾತ್ರೆಯು ನಡೆಯಬೇಕು, ಮಾತಾ, ಪಿತಾ, ಕಳತ್ರ, ಪುತ್ರಾದಿಗಳೇನು, ನಿರ್ಗತಿಗರಾದ ಹತ್ತಿರದ ಬಂಧುಗಳೇನು, ಇವರುಗಳ ಪೋಷಣೆಯನ್ನೆಲ್ಲಾ ಸರ್ವೇಶ್ವರನೇ ಈ ಪ್ರಪನ್ನನ ತಲೆಗೆ ಕಟ್ಟಿರುತ್ತಾನೆ. ಇದನ್ನೆಲ್ಲಾ ವಹಿಸಿ, ಅದಕ್ಕೆ ಬೇಕಾದ ಧನಾರ್ಜನೆ ಮುಂತಾದ್ದು ಬೇಡವೇ ? **ಸಙ್ಗವರ್ಜಿತಃ** ಹೇಗಾಗುತ್ತದೆ ? ಎಂಬಾಕ್ಷೇಪತಂದರೆ, ಇವುಗಳಲ್ಲಿ ಲಿಪ್ತನಾಗದೆ, ಐಹಿಕ ಮಮತೆ ಏನೂ ಇಲ್ಲದೆ, ತಾಯಿ ತಂದೆ ಗುರುಗಳ ಶುಶ್ರೂಷೆಯು **ಮಾತೃದೇವೋ ಪಿತೃದೇವೋ ಭವ** ಇತ್ಯಾದಿ ವಿಧ್ಯನುಸಾರವಾಗಿ ಭಗವದಾರಾಧನೆ ರೂಪವೆಂದೂ, ತಾನು ಮಾಡುವ ಆಜ್ಞಾನುಜ್ಞಾ ಸರ್ವಕರ್ಮಗಳೂ ಅವನ ಆರಾಧನೆಯೇ ಎಂದೂ, ಭಾವಿಸಿ ಮಾಡಿದರೂ ಪ್ರತ್ಯವಾಯುವಿಲ್ಲವೆಂದು **ಮುಕ್ತಸಙ್ಗಸ್ಸಮಾಚರ** (ಗೀ. ೩.೯) ಎಂಬಲ್ಲಿ ಶ್ರೀ ಯತಿವರ್ಯರು ದಯಪಾಲಿಸಿರುವ ಭಾಷ್ಯವನ್ನು ಪರಾಂಬರಿಸಿ. ಮುಖ್ಯವಾಗಿ ಪ್ರಪನ್ನನು ಐಹಿಕದಲ್ಲಿ ಲಿಪ್ತನಾಗಕೂಡದು **ಸಙ್ಗವರ್ಜಿತಃ** - ಎಂಬಲ್ಲಿ ವಿಷಯೋಪ ಭೋಗ ಮೊದಲಾದ ಸಙ್ಗಗಳು ದೂಷಿಸಲ್ಪಟ್ಟವೇ ವಿನಾ, ಸಾಧುಗಳ ಸಙ್ಗವೂ ಆಚಾರ್ಯರ ಸಙ್ಗವೂ ನಿಷೇಧಿಸಲ್ಪಡಲಿಲ್ಲವು. ಮೊದಲು ಹೇಳಿದವುಗಳ ಸಙ್ಗವು ಬಂಧಹೇತುವು, ಎರಡನೆಯ ಸಙ್ಗವು ಬಂಧ ವಿಮೋಚನಕ್ಕೆ ಹೇತುವು. ಈ ಎರಡನೆಯದು ಆವಶ್ಯಕವು, ನಿಷೇಧಿಸಲ್ಪಡಲಿಲ್ಲವೆಂದು ಭಾವಿಸತಕ್ಕದ್ದು. ಈ ಸಂದರ್ಭದಲ್ಲಿ **"ಸಙ್ಗೋಹಿ ಸಂಸೃತೇರ್ಹೇತುಃ ಅಸತ್ಸುವಿಹಿತೋಽಧಿಯಾ। ಸ ಏವಸಾಧುಷು ಕೃತೋ ನಿಸ್ಸಙ್ಗತ್ವಾಯ ಕಲ್ಪತೇ"** ಎಂಬ ಭಾಗವತ ಶ್ಲೋಕವನು ಸಂಧೇಯವು.

**ನಿರ್ವೈರಸ್ಸರ್ವಭೂತೇಷು** - ಸರ್ವ ಪ್ರಾಣಿಗಳೂ ಸರ್ವೇಶ್ವರನ ಸ್ವತ್ತು, ಆತನ ಶರೀರವು ; ಅವುಗಳಿಗೆಲ್ಲಾ ಆತನೇ ಆತ್ಮಾ; ಹೀಗಿರುವಾಗ ಅವುಗಳಿಗೆ ಪ್ರತಿಕೂಲವಾಗಿರುವದೇ ತಪ್ಪು. ಅವುಗಳೊಂದಿಗೆ ಬದ್ಧ ದ್ವೇಷವನ್ನು ಬೆಳೆಸಬಹುದೋ ? ಕೂಡದೆಂದು ಸಿದ್ಧವು. ಆಗಲಿ ನಾವಾಗಿ ದ್ವೇಷಮಾಡಕೂಡದೆಂಬುದನ್ನು ಒಪ್ಪೋಣ. ಇನ್ನೊಬ್ಬನಿಂದ ನಿಷ್ಕಾರಣವಾಗಿ ಬೈಯ್ಯುವದು, ತೊಂದರೆಯಾಗುವಹಾಗೆ ಪ್ರವರ್ತಿಸುವದು, ಇತ್ಯಾದಿ ಪರಿಭವ ಕ್ಲೇಶಗಳು ಉಂಟಾದರೆ ಆಗ ಅವರ ಮೇಲೆ ಕೋಪವನ್ನೂ ವೈರವನ್ನೂ ತೋರಿಸಿ, ಅದಕ್ಕೆ ಪ್ರತಿಕೂಲಾಚರಣೆಯನ್ನು ಅನುಷ್ಠಿಸಬೇಡವೇ ? ಎಂದರೆ ಪ್ರಪನ್ನನಿಗೆ ಮುಖ್ಯವಾಗಿ ಸ್ವನಿಷ್ಠಾಭಿಜ್ಞಾನವಿರಬೇಕು. ಯಾರಿಂದಲಾಗಲಿ ಈತನಿಗೆ ತೊಂದರೆಯುಂಟಾದರೂ ಅವರಲ್ಲಿ ವೈರವನ್ನು ಬೆಳೆಸಕೂಡದು. ಆದುದರಿಂದಲೇ ಮಂಥರೆಯನ್ನು ಕೊಲ್ಲಲೆತ್ನಿಸಿದ ಶತ್ರುಘ್ನನನ್ನು ತಡೆದು ಭರತರು ಬುದ್ಧಿವಾದವನ್ನು ಹೇಳಿದರು. ಹಾಗೆಯೇ ಅಣ್ಣನು ರಾಜ್ಯಭ್ರಷ್ಟನಾಗಿ ಅರಣ್ಯಕ್ಕೆ ತೆರಳಬೇಕಾಗಿ ಬಂತಲ್ಲಾ ಎಂದು ಕಡುಕೋಪದಿಂದಿರುವ ಲಕ್ಷ್ಮಣನನ್ನು ಕುರಿತು, **ಮಾಚಲಕ್ಷ್ಮಣ ಸಂತಾಪಂ ಕಾರ್ಷೀರ್ಲಕ್ಷ್ಮ್ಯಾಂ ವಿಪರ್ಯಯೇ। ರಾಜ್ಯಂ ವಾ ವನವಾಸೋವಾ ವನವಾಸೋ ಮಹೋ**

**ಭಾ. ವೇದಾಧ್ಯಯನಾದಿ ಸರ್ವಾಣಿ ಕರ್ಮಾಣಿ ಮದಾರಾಧನ ರೂಪಾಣೀತಿ ಯಃಕರೋತಿ, ಸಮತ್ಕರ್ಮಕೃತ್; ಮತ್ಪರಮಃ-ಸರ್ವೇಷಾಮಾರಂಭಾಣಾ ಮಹಮೇವ ಪರಮೋ ದಯಃ"** (ರಾಮಾ. ಅಯೋಧ್ಯಾ. ೨೨. ೨೭) ರಾಜ್ಯಲಕ್ಷ್ಮಿಯು ಕೈಬಿಟ್ಟುಹೋಯಿತೆಂದು ವ್ಯಸನಪಡಬೇಡ, ರಾಜ್ಯವೋ ವನವಾಸವೋ, ಯಾವುದು ಪ್ರಾಪ್ತಿಯಾದರೂ ಕೋಪವೈರಾದಿ ಗಳು ಕೂಡದು; ಏತಕ್ಕೆಂದರೆ ಸುಖದುಃಖ, ಲಾಭಾ ಲಾಭಗಳಲ್ಲಿ ಸಮಚಿತ್ತತೆ ಬೇಕು, ಹೀಗೆ ನಡೆಯುವವೆಲ್ಲಾ **"ನನುದೈವಸ್ಯ ಕರ್ಮತತ್"** ದೈವಾಜ್ಞೆಯಂತೆ ನಡೆಯುತ್ತದೆಂಬುದು ಸಿದ್ಧ ವೆಂಬ ದೃಢನಂಬಿಕೆಯು ಇರತಕ್ಕದ್ದು. ಎಂದು ಶ್ರೀರಾಮಚಂದ್ರ ಪ್ರಭುವು ಉಪದೇಶಿಸಿದರು. ಅಂತಹ ವಿಪತ್ತುಗಳ ನಿವಾರಣೆಯೂ, ಪರಿಭವಾದಿಗಳ ವಾರಣೆಯೂ ಇಲ್ಲಿ ನಿರ್ವೈರಃ ಎಂಬುದ ರಿಂದ ನಿಷೇಧಿಸಲ್ಪಡಲಿಲ್ಲವು; ಕ್ರೋಧವೈರಗಳು ಕೂಡದೆಂದು ಉಪದೇಶಿಸಲ್ಪಟ್ಟಿತು. ಅಂತಹ ಪ್ರಪನ್ನನಿಗೆ ಸ್ವನಿಷ್ಠಾಭಿಜ್ಞಾನವಿರಬೇಕೆಂದು ಉಪದೇಶಿಸಲ್ಪಟ್ಟಿತು. ಅಂತವನು ಹೇಗೆ ಇಂತಹ ಪರಿಭವಾದಿ ದುಃಖಗಳನ್ನು ಕ್ರೋಧವೈರಗಳಿಗೆ ಮನಕೊಡದೆ ಭಾವಿಸಬಹುದು ಎಂದರೆ.—

೧. ಇತರರು ಮಾಡಿದ ಅಪಕೃತಿಯಿಂದ, ಮನೋವಿಕಾರಹೊಂದದೆ, ಕರ್ಮಾನುಸಾರ ಫಲಪ್ರದನಾದ ಸರ್ವೇಶನಿಗೆ ತಾನು ಅನನ್ಯಾರ್ಹಶೇಷನು, ಮತ್ತು ಪರತಂತ್ರನೆಂಬ ಜ್ಞಾನದಿಂ ದಿರತಕ್ಕದ್ದು. ೨. ಇಂತಹ ಪರಿಭವಾದಿಗಳಿಂದ ಸರ್ವೇಶ್ವರನು ಪರಮಕೃಪಯಾ ಮಹತ್ತಾದ ಪ್ರಾರಬ್ಧ ಕರ್ಮವನ್ನು ತಪ್ಪಿಸಿದವನೆಂಬ ಜ್ಞಾನವಿರತಕ್ಕದ್ದು. ೩. ಹೀಗೆ ಮಾಡಿದವನು ತನಗೆ ಪರಮ ಉಪಕಾರವನ್ನು ಮಾಡಿದನೆಂಬ ಕೃತಜ್ಞತೆಯು ಅವನಲ್ಲಿರಬೇಕು. ಪರಿಭವಕ್ಕೆ ಏನೋ ನ್ಯೂನತೆ ನನ್ನಲ್ಲಿರಬೇಕು ; ಅದನ್ನು ತೋರಿಸಿದವನೆಂದಾಗಲಿ ಉಪಕಾರ ಸ್ಮರಣೆ ಇರಬೇಕು. ಅಥವಾ **ಶಪ್ಯಮಾನಸ್ಯ ಯತ್ಪಾಪಂ ಶಪಂತಮಧಿಗಚ್ಛತಿ** (ಭಾರ. ಆರಂ. ೧೦೦. ೬೪.) ಯಾವನು ನಮ್ಮನ್ನು ಬೈಯ್ಯುವನೋ, ಇದು ಇತರ ಕ್ರೂರ ಪ್ರವೃತ್ತಿಗಳಿಗೂ ಉಪಲಕ್ಷಣವು, ಅವನು ತನ್ನ ಸುಕೃತಗಳನ್ನು ನಮಗೆ ಕೊಟ್ಟು, ನಮ್ಮ ಪಾಪಗಳನ್ನು ಕೊಂಡುಹೋಗುವ ನೆಂದು ಶಾಸ್ತ್ರ ಪಚ್ಚುಯಿರುವದರಿಂದ, ಆತನು ಮಹದುಪಕಾರಿ ಎಂಬ ಭಾವನೆ ಇರಬೇಕು. ೪. ಒಂದು ವೇಳೆ ನಿಷ್ಕಾರಣವಾಗಿಯೇ ಈ ಪರಿಭವಾದಿಗಳನ್ನು ಆತನು ಮಾಡಿದರೂ "ಅಯ್ಯೋ ಅಜ್ಞನೇ ಜ್ಞಾನಶೂನ್ಯನೇ ! ಇಷ್ಟು ತಿಳಿವಳಿಕೆಯಿಲ್ಲದೆ ಹೀಗೆ ಮಾಡಿದನೇ" ಎಂದು ಆತನಲ್ಲಿ ಪಶ್ಚಾತ್ತಾಪವಿರಬೇಕೇ ವಿನಾ ವೈರಕೂಡದೆಂದು ಹೇಳಿದಂತಾಯಿತು. ಹೀಗೆ ಅಭಿಪ್ರಾಯಗಳ ನ್ನಿಟ್ಟು ಪ್ರತಿಕೂಲರಲ್ಲಿ ದ್ವೇಷ ಬೆಳಿಸದೇ, ಅವರುಗಳಲ್ಲೂ ಇತರ ಸರ್ವಭೂತಗಳಲ್ಲೂ ಕೃಪಾ ಯುಕ್ತನಾಗಿ ಇರಬೇಕೆಂದು **ನಿರ್ವೈರಸ್ಸರ್ವಭೂತೇಷು** ಎಂಬಲ್ಲಿ ಉಪದೇಶಿಸಲ್ಪಟ್ಟಿತೆಂದು ತಿಳಿ ಯತಕ್ಕದ್ದು. ಇಲ್ಲಿ ಸರ್ವಶಬ್ದವಿರುವದರಿಂದ ಅಪಕಾರಿಗಳಲ್ಲೂ ವೈರವಿಲ್ಲದೆ ಅನುಕೂಲ ಬುದ್ಧಿ ಇರಬೇಕೆಂಬುದು ಸುಸ್ಪಷ್ಟವು. **"ಉಪಕಾರಿಷು ಯಸ್ಸಾಧುಃ ಸಾಧುತ್ವೇತಸ್ಯ ಕೋಗುಣಃ। ಅಪಕಾರಿಷು ಯಸ್ಸಾಧುಃ ಸಸಾಧುಸ್ಸದ್ಭಿರುಚ್ಯತೇ"** ॥ ಎಂಬ ದಿವ್ಯ ಸೂಕ್ತಿಯು ಇಲ್ಲಿ ಅನುಸಂಧೇಯವು.

ಹೀಗೆಲ್ಲಾ ಯಾವನು ಇರುತ್ತಾನೋ, ಸಃ – ಅವನೇ, **ಮಾಮೇತಿ.** ಇತರರು ಹೊಂದ ಲಾರರು. ಇದನ್ನೇ ಶ್ರುತಿಯು **"ನಾನ್ಯಃಪನ್ಥಾ ವಿದ್ಯತೇ ಅಯನಾಯ"** ಎಂಬುದರಿಂದ ಉಪ ದೇಶಿಸುತ್ತದೆ. ಈ ಶ್ಲೋಕತಾತ್ಪರ್ಯವೂ, ೯ ನೆಯ ಅಧ್ಯಾಯಾಂತ್ಯ ಶ್ಲೋಕ ತಾತ್ಪರ್ಯವೂ ಒಂದೇಯಾಗಿರುವದರಿಂದ ಇದು ಆ ಶ್ಲೋಕದ ಅನುವಾದವೆಂದು ಭಾವಿಸತಕ್ಕದ್ದು. ಶ್ರೀ ಗೀತಾ ಶಾಸ್ತ್ರದ ಸಾರತಮವಾದ ಹಿತೋಪದೇಶವಾದುದರಿಂದ, ಮುಖ್ಯವಾಗಿ ಮನಸ್ಸಿನಲ್ಲಿಟ್ಟು ತದನು

**ಭಾ. ದ್ದೇಶ್ಯೋ ಯಸ್ಯಸಃ - ಮತ್ಪರಮಃ, ಮದ್ಭಕ್ತಃ - ಅತ್ಯರ್ಥ ಮತ್ಪ್ರಿಯತ್ವೇನ ಮತ್ಕೀರ್ತನ ಸ್ತುತಿಧ್ಯಾನಾರ್ಚನ ಪ್ರಣಾಮಾದಿಭಿ ರ್ವಿನಾ ಆತ್ಮಧಾರಣ ಮಲಭ ಮಾನೋ ಮದೇಕ ಪ್ರಯೋಜನತಯಾಯ ಸ್ಸತತಂತಾನಿ ಕರೋತಿ, ಸಮದ್ಭಕ್ತಃ;**

ಗುಣವಾಗಿ ವರ್ತಿಸುವದು ಆವಶ್ಯಕವೆಂದು ಸೂಚಿಸುವದಕ್ಕಾಗಿ ಆವರ್ತಿಯು. ಇಷ್ಟುಮಾತ್ರವೇ ಅಲ್ಲವು. ಆವರ್ತಿಗೆ ಇನ್ನೊಂದು ಮುಖ್ಯ ಕಾರಣವೂ ಉಂಟು ; ಏನೆಂದರೆ ಈ ಉಪಾಯಾನು ಷ್ಠಾನದಲ್ಲಿ ವಿಶೇಷ ಪ್ರೀತಿಯೂ, ಭಕ್ತಿ ವಿವೃದ್ಧಿಯೂ ಉಂಟಾಗಬೇಕಾದರೆ, ಶ್ರಿಯಃಪತಿಯ ಮಾಹಾತ್ಮ್ಯವು ನಿರತಿಶಯ ಕಲ್ಯಾಣ ಗುಣಗಣಯೋಗದಿಂದಲೂ ವಿವಿಧ ವಿಚಿತ್ರ ವಿಭೂತಿ ದ್ವಯಗಳಿಂದಲೂ ಅಪಾರವಾದುದೂ ಅತ್ಯದ್ಭುತವಾದುದೂ ಎಂಬ ಪ್ರಾಜ್ಞತೆಯಿಂದ ಸೇರಿರಬೇ ಕೆಂದು ಹೇಳಿ, ಪರಮಹಿತನಾದ ಉಪಾಯಾನುಷ್ಠಾನವನ್ನು ಇನ್ನೊಂದು ಸಲ ಅನುವಾದಮಾಡಿ ಹೇಳಿದರೆಂದು ಭಾವಿಸತಕ್ಕದ್ದು. ಇದೇ ಗೀತೆಯ ಸಾರಭೂತವಾದ ಹಿತೋಪದೇಶವಾದುದ ರಿಂದ ಇನ್ನೊಂದು ಸಲ ೧೮ನೆಯ ಅಧ್ಯಾಯದ ೬೪, ೬೫ ರಲ್ಲಿ ಜ್ಞಾಪಿಸಿ, ಈ ಹಿತೋಪದೇಶವು **"ಸರ್ವಗುಹ್ಯತಮಮ್"** ಎಂದು ಕೊಂಡಾಡಿರುತ್ತಾರೆ. ಇಲ್ಲಿ ಹೇಳಲ್ಪಟ್ಟ ಉಪದೇಶವು ಲಘೂ ಪಾಯವಾದ ಭರನ್ಯಾಸಕ್ಕೂ ಅನ್ವಯಿಸುತ್ತದೆ. ಆವಾಗ ಭಕ್ತಿ ಶಬ್ದಕ್ಕೆ ಉಪಾಸನವೆಂಬ ಅರ್ಥವಲ್ಲವು, ವಿಶೇಷ ಪ್ರೀತಿ ಎಂಬರ್ಥವು.

**ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ**

---

**ಭಾಷ್ಯಾರ್ಥವು:**—**ಮತ್ಕರ್ಮಕೃತ್** ಎಂಬುದಕ್ಕೆ ವ್ಯಾಖ್ಯಾನವನ್ನು ಅನುಗ್ರಹಿಸುತ್ತಾರೆ,— **ವೇದಾಧ್ಯಯನಾದಿ ಸರ್ವಾಣಿ ಕರ್ಮಾಣಿ**-ವೇದಾಧ್ಯಯನವೇ ಮೊದಲಾದ ಸಮಸ್ತ ಕರ್ಮಗ ಳನ್ನೂ, **ಮದಾರಾಧನರೂಪಾಣೀತಿ**-ನನ್ನ ಆರಾಧನ ರೂಪವಾದುವು ಎಂದು, **ಯಃಕರೋತಿ**- ಯಾವನು ಮಾಡುತ್ತಾನೋ, **ಸಃ ಮತ್ಕರ್ಮಕೃತ್**-ಅವನು ನನ್ನ ಕರ್ಮಗಳನ್ನೇ ಮಾಡು ತ್ತಾನೆಂದು ಹೇಳಿಸಿಕೊಳ್ಳುವನು. ವೇದಾಧ್ಯಯನವೂ ದ್ವಿಜನಿಗೆ ಆವಶ್ಯಕವಾದುದರಿಂದ ಅದನ್ನು ಇಲ್ಲಿ ಹೇಳಿರುತ್ತಾರೆ. **ನಾಹಂ ವೇದೈಃ** ಎಂಬುದರಿಂದ ಅದು ಮೋಕ್ಷಪ್ರಾಪ್ತಿಗೆ ಸಾಕ್ಷಾತ್ತಾಗಿ ಉಪಾಯವಲ್ಲವೆಂದು ಹೇಳಿದರೆ, ಆದರ ಆವಶ್ಯಕತೆಯೇ ಇಲ್ಲವೆಂದು ಹೇಳ ಲ್ಪಟ್ಟಿತೆಂದು ಭಾವಿಸತಕ್ಕದ್ದಲ್ಲವೆಂದು ತಿಳಿಸುವದಕ್ಕಾಗಿ, **"ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ"** ಎಂಬ ಶ್ರುತ್ಯರ್ಥದ ಉಪಬೃಹ್ಮಣ ವನ್ನು ಮಾಡಿರುತ್ತಾರೆಂದು ತಿಳಿಯತಕ್ಕದ್ದು. ಇವುಗಳೆಲ್ಲಾ ಉಪಾಯಾನುಷ್ಠಾನಕ್ಕೆ ಉಪ ಕಾರಕಗಳು. ಅದೂ ಅಲ್ಲದೆ ಬ್ರಹ್ಮಯಜ್ಞವನ್ನು ಪ್ರತಿದಿನವೂ ಸಪತ್ನೀಕ ಬ್ರಾಹ್ಮಣನು ಮಾಡಿಯೇ ತೀರಬೇಕು, ಅದಕ್ಕೆ ವೇದಾಧ್ಯಯನವು ಅಙ್ಗವು. ಆದುದರಿಂದಲೂ ತನ್ನ ಶಾಖಾ ವಿಷಯವಾದ ವೇದಾಧ್ಯಯನವು ಆವಶ್ಯಕವು. ಇಲ್ಲಿ ಆದಿ ಶಬ್ದದಿಂದ ಹಿಂದೆ ಹೇಳಿದ ಆಜ್ಞಾನು ಜ್ಞಾರೂಪ ಕರ್ಮಗಳೂ ಹೇಳಲ್ಪಟ್ಟವು. ಅವುಗಳನ್ನೆಲ್ಲಾ ನನ್ನ ಕೈಙ್ಕರ್ಯರೂಪದಲ್ಲಿ ನನ್ನ ಆರಾಧನ ರೂಪದಲ್ಲಿ, ನನ್ನ ಪ್ರೀತ್ಯರ್ಥವಾಗಿ ಮಾಡತಕ್ಕದ್ದೆಂದು ಹೇಳಲ್ಪಟ್ಟಿತು. **ಮತ್ಪರಮಃ**- ಎಂದರೆ **ಸರ್ವೇಷಾಮಾರಂಭಾಣಾಂ** - ಸಮಸ್ತಗಳಾದ ಪ್ರಾರಂಭಿಸಲ್ಪಟ್ಟ ಕಾರ್ಯಗಳಿಗೆ, **ಅಹಮೇವ** - ನಾನೇ, **ಪರಮೋದ್ದೇಶ್ಯೋಯಸ್ಯಸಃ** - ನಾನೇ ಉದ್ದೇಶ್ಯನೆಂಬುದು ಯಾರಿಗೋ ಅವನು, ಎಂದರೆ ಸರ್ವ ಕರ್ಮಾರಂಭಗಳಲ್ಲೂ ನಾನೇ ಉದ್ದೇಶ್ಯನು ಎಂಬ ಭಾವವು, **ಭಗವತ್ಪ್ರೀತ್ಯರ್ಥಂ ಭಗವತ್ಕೈಙ್ಕರ್ಯರೂಪಂ ಕರ್ಮಕರಿಷ್ಯೇ** ಎಂದೇ ಸರ್ವ ಕರ್ಮಾ ರಂಭಗಳಲ್ಲೂ ಸಙ್ಕಲ್ಪವು. ಇತರ ಅರ್ಥಗಳಿಗಿಂತ ಕರ್ಮಾನುಷ್ಠಾನ ಸಂದರ್ಭದಲ್ಲ ಈ ಅರ್ಥವೇ

**ಭಾ. ಸಙ್ಗವರ್ಜಿತಃ - ಮದೇಕ ಪ್ರಿಯತ್ವೇನೇತರ ಸಙ್ಗಮಸಹಮಾನಃ; ನಿರ್ವೈರ ಸ್ಸರ್ವ ಭೂತೇಷು - ಮತ್ಸಂಶ್ಲೇಷ ವಿಯೋಗೈಕ ಸುಖದುಃಖ ಸ್ವಭಾವತ್ವಾ ತ್ಸ್ವದುಃಖಸ್ಯ ಸ್ವಾಪರಾಧ ನಿಮಿತ್ತತ್ವಾನು ಸಂಧಾನಾಚ್ಚ ಸರ್ವಭೂತಾನಾಂ ಪರಮಪುರುಷ ಪರ**

ಸಮಂಜಸವಾದುದು. ಶೇಷಭೂತನಾದ ಕಿಂಕರನು ಮಾಡುವದೆಲ್ಲಾ ಸ್ವಾಮಿಗೇನೇ ಕೈಙ್ಕರ್ಯ ರೂಪವೆಂಬ ಭಾವನೆಯೇ ಇಲ್ಲಿ ಯುಕ್ತವಾದುದು. ಆಜ್ಞಾನುಜ್ಞಾ ಕರ್ಮಗಳೆಲ್ಲಾ ಆತನಿಗೆ ಕೈಙ್ಕರ್ಯಗಳೆಂಬ ಭಾವನೆಯಿರತಕ್ಕದ್ದೇನೋ ಯುಕ್ತವು. ತಾನು ಮಾಡುವ ಕೆಲವು ಆವಶ್ಯಕ ಗಳಾದ ದೇಹ ಯಾತ್ರೆಯ ಸಂಬಂಧವಾದ ಕರ್ಮಗಳ ವಿಷಯದಲ್ಲಿ ಹೇಗೆ ಎಂದರೆ **ತತ್ಕುರುಷ್ವ ಮದರ್ಪಣಂ** ಎಂದು (ಗೀ. ೯-೨೭) ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಆದುದರಿಂದ ಕರ್ಮ ಗಳಲ್ಲಿ ಕರ್ತೃತ್ವ, ಮಮತಾ, ಫಲಾದಿಗಳನ್ನು ತ್ಯಾಗಮಾಡಿ, ಭಗವದರ್ಪಣಬುದ್ಧಿಯಿಂದ ಮಾಡತಕ್ಕದ್ದೆಂದು ಹಿಂದೆ ಹೇಳಿದುದು ಸ್ಮಾರಿತವು. **ಮದ್ಭಕ್ತಃ** ಎಂಬುದರಿಂದ ಉಪದೇಶಿ ಸಲ್ಪಟ್ಟ ಅರ್ಥವನ್ನು ಬೋಧಿಸುತ್ತಾರೆ.—ಭಕ್ತಿಯ ಪರಾಕಾಷ್ಠಾದಶೆಯಲ್ಲಿ ಪ್ರಪತ್ತಿ ಎಂಥಾ ದ್ದೆಂದು ತಿಳಿಸುತ್ತಾರೆ. **ಅತ್ಯರ್ಥ ಮತ್ಪ್ರಿಯತ್ವೇನ** - ಭಕ್ತನಾದವನು ಇಷ್ಟೆಂದು ಹೇಳಲು ಸಾಧ್ಯವಲ್ಲದಷ್ಟು ನನ್ನನ್ನು ಪ್ರೀತಿಸುವನಾದುದರಿಂದ, **ಮತ್ಕೀರ್ತನಸ್ತುತಿ ಧ್ಯಾನಾರ್ಚನ ಪ್ರಣಾಮಾದಿಭಿರ್ವಿನಾ** - ನನ್ನ ದಿವ್ಯಚೇಷ್ಟಿತಗಳನ್ನು ಗಾನದೊಂದಿಗೆ ಹಾಡುವದು, ನನ್ನ ಮಹಾತ್ಮ್ಯಗಳನ್ನು ಸ್ತೋತ್ರಗಳ ಮೂಲಕ ಕೊಂಡಾಡುವುದು, ಧ್ಯಾನ - ಪರಮೈಕಾಂತಿಕನಾಗಿ ಗುಣ ವಿಭವೈಶ್ವರಾದಿಗಳಿಂದ ಯುಕ್ತನಾದ ನನ್ನ ದಿವ್ಯಮಙ್ಗಳ ವಿಗ್ರಹವನ್ನು ಧ್ಯಾನಿಸುವದು, ನನ್ನ ದಿವ್ಯಮಙ್ಗಳ ವಿಗ್ರಹಕ್ಕೆ ಷೋಡಶೋಪಚಾರಗಳನ್ನೆಸಗುವದು, ನಮಸ್ಕರಿಸುವದು, ಇವೇ ಮೊದಲಾದವುಗಳಿಲ್ಲದೆ, **ಆತ್ಮಧಾರಣಂ** - ಶರೀರಧಾರಣೆಯನ್ನು, **ಅಲಭಮಾನಃ** - ಹೊಂದದ ವನಾಗಿ **ಮದೇಕ ಪ್ರಯೋಜನತಯಾ** - ನಾನೇ ಮುಖ್ಯ ಪ್ರಯೋಜನವೆಂಬ ಭಾವನೆಯಿಂದ, **ಯಃ** - ಯಾವ ಭಕ್ತಿಯೋಗ ನಿಷ್ಠನು, **ಸತತಂ** - ಯಾವಾಗಲೂ, ಐಹಿಕಗಳಲ್ಲಿ ಆತನು ಪ್ರವ ರ್ತಿಸುವನಲ್ಲವಾದುದರಿಂದ **ಸತತಂ** ಎಂದು ಹೇಳಲ್ಪಟ್ಟಿತು ; ದೇಹಧಾರಣೆಗೆ ಅನ್ನಪಾನಾದಿಗಳು ಹೇಗೆ ಅತ್ಯಾವಶ್ಯಕವೋ, ಅವುಗಳಿಲ್ಲದಿದ್ದರೆ ಆತ್ಮಧಾರಣೆಯು ಹೇಗೆ ಅಸಾಧ್ಯವೋ, ಹಾಗೆ ನನ್ನ ಕೀರ್ತನ ಸ್ತೋತ್ರ ಧ್ಯಾನಾರ್ಚನಾದಿಗಳಿಲ್ಲದಿದ್ದರೆ ಆತನು ಜೀವಿಸಲೇಲಾರನು, ಹಾಗೆ ಪರ ಮಾತ್ಮನಲ್ಲೇ ಯಾವಾಗಲೂ ಸಕ್ತವಾದ ಮನಸ್ಸುಳ್ಳವನೆಂಬ ತಾತ್ಪರ್ಯವು ; **ಸಃ** - ಅಂತವನೇ **ಮದ್ಭಕ್ತಃ** - ನನ್ನ ಪ್ರಿಯ ಭಕ್ತನು. **ಸಙ್ಗವರ್ಜಿತಃ** - ಹೀಗೆ ಸದಾ ಪರಮಾತ್ಮನಲ್ಲೇ ಸಕ್ತ ವಾದ ಮನಸ್ಸುಳ್ಳವನಾದುದರಿಂದ ತದ್ವ್ಯತಿರಿಕ್ತವಾದವುಗಳಲ್ಲಿ **ಸಙ್ಗವರ್ಜಿತನು** ಎಂದು ಹೇಳುತ್ತಾರೆ.—ಹೀಗೆ ಹೇಳಿದುದರಿಂದ ಅಂತಹ ಕೀರ್ತನಸ್ತೋತ್ರಾರ್ಚನಾದಿಗಳು ದೊರೆಯುವ ಭಾಗವತ ಗೋಷ್ಠಿಗಳ ಮತ್ತು ಈ ವಿಷಯದಲ್ಲಿ ಉಪದೇಶಾದಿಗಳು ದೊರೆಯುವ ಆಚಾರ್ಯದೇಶಿ ಕರುಗಳ ಸಙ್ಗವು ನಿರಾಕರಿಸಲ್ಪಡಲಿಲ್ಲವು ; ಇಂತಹ ಸಙ್ಗವು ಪರಮೋಪಾದೇಯವೆಂದು ಭಾವಿಸತಕ್ಕದ್ದು. **ಮದೇಕಪ್ರಿಯ ತ್ವೇನೇತರಸಙ್ಗಮಸಹಮಾನಃ** - ನಾನೊಬ್ಬನೇ ಆತನಿಗೆ ಪ್ರಿಯವಸ್ತುವಾದುದರಿಂದ ಇತರವಾದವುಗಳ ಸಙ್ಗವನ್ನು ಸಹಿಸಲಾರದವನು ; ಇಲ್ಲಿ **ಇತರ ಸಙ್ಗ** ವೆಂಬುದರಿಂದ ಐಹಿಕ ಸುಖಭೋಗಾದಿಗಳಿಗೆ ಬೇಕಾದ ಶಬ್ದಾದಿ ವಿಷಯಗಳ ಸಙ್ಗವು ದೂಷಿಸಲ್ಪಟ್ಟಿತು ; **ನಿರ್ವೈರಸ್ಸರ್ವಭೂತೇಷು** ಎಂಬುದರ ತಾತ್ಪರ್ಯವೇನೆಂದರೆ, **ಮತ್ಸಂ ಶ್ಲೇಷ ವಿಯೋಗೈಕ ಸುಖದುಃಖ ಸ್ವಭಾವತ್ವಾತ್** - ನನ್ನೊಂದಿಗೆ ಮತ್ತು ನನ್ನ ಸಂಬಂಧ ವಾದ ಕೀರ್ತನಾದಿಗಳೊಂದಿಗೆ ಸೇರಿರುವಿಕೆಯೇ ಸುಖವೆಂಬದಾಗಿಯೂ, ನನ್ನೊಂದಿಗೂ ನನ್ನ ಸಂಬಂಧವಾದವುಗಳೊಂದಿಗೂ ಅಗಲಿರುವಿಕೆಯೇ ದುಃಖವೆಂಬದಾಗಿಯೂ ಭಾವಿಸುವದರಿಂದ,

**ಭಾ. ತಂತ್ರಾನುಸಂಧಾನಾಚ್ಚ ಸರ್ವಭೂತೇಷು ವೈರನಿಮಿತ್ತಾಭಾವಾತ್ತೇಷು ನಿರ್ವೈರಃ ಯಃ; ಏವಂ ಭೂತಸ್ಸ, ಮಾಮೇತಿ - ಮಾಂ ಯಥಾವಸ್ಥಿತಂ ಪ್ರಾಪ್ನೋತಿ; ನಿರಸ್ತಾಽವಿದ್ಯಾದ್ಯಶೇಷದೋಷ ಗಂಧೋಮದೇಕಾನುಭವೋ ಭವತೀತ್ಯರ್ಥಃ ||೫೫||**

**ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ**

**ಏಕಾದಶೋಽಧ್ಯಾಯಃ.**

**ಶ್ರೀಮತೇ ರಾಮಾನುಜಾಯ ನಮಃ.**

**ಸ್ವದುಃಖಸ್ಯ ಸ್ವಾಪರಾಧನಿಮಿತ್ತತ್ವಾನುಸಂಧಾನಾಚ್ಚ** - ಐಹಿಕಗಳ ಮೂಲಕವೇನಾದರೂ ತನಗೆ ದುಃಖಪ್ರಾಪ್ತಿಯುಂಟಾದರೆ ಅದು ತನ್ನ ಪ್ರಾರಬ್ಧ ಕರ್ಮಕ್ಕೆ ಸೇರಿದ ಅಪರಾಧ ಮೂಲಕವಾಗಿ ಉಂಟಾಯಿತೆಂಬ ಅನುಸಂಧಾನವುಳ್ಳವನಾದುದರಿಂದಲೂ, ಮತ್ತು **ಸರ್ವಭೂತಾನಾಂ ಪರಮಪುರುಷ ಪರತಂತ್ರಾನು ಸಂಧಾನಾಚ್ಚ** - ಸಮಸ್ತ ಪ್ರಾಣಿಗಳೂ, ಅವರವರುಗಳ ಕರ್ಮಗಳಿಗನುಸಾರವಾಗಿ ಸಙ್ಕಲ್ಪಿಸುವ ಪರಮ ಪುರುಷನಿಗೆ ಪರತಂತ್ರರೆಂಬ ಅನುಸಂಧಾನದಿಂದಲೂ ಸಹ, ಎಂದರೆ ನಮಗೆ ಯಾರ ಮೂಲಕವಾಗಿಯಾಗಲಿ ತೊಂದರೆ ಮೊದಲಾದವುಗಳುಂಟಾದರೆ, ದುಷ್ಕೃತಗಳಿಗನುಸಾರವಾಗಿ, ಅವರು ಸ್ವಾಮಿ ಸಙ್ಕಲ್ಪಾನುಸಾರವಾಗಿ ಅತನಿಗೆ ಪರತಂತ್ರರಾಗಿ ಈ ತೊಂದರೆಗಳನ್ನು ಕೊಟ್ಟರು ಎಂಬ ಅನುಸಂಧಾನವುಳ್ಳವರಾದುದರಿಂದಲೂ ಎಂಬರ್ಥವು; ಹೀಗೆ ಅನುಸಂಧಾನಗಳನ್ನುಳ್ಳ ಭಕ್ತನಾಗಿರುವದರಿಂದ, **ವೈರನಿಮಿತ್ತಾಭಾವಾತ್** - ದ್ವೇಷಕ್ಕೆ ಕಾರಣವೇ ಇಲ್ಲದುದರಿಂದ, **ತೇಷುನಿರ್ವೈರಃ ಯಃ** - ಹಾಗೆ ಎಲ್ಲಾ ಪ್ರಾಣಿಗಳಲ್ಲೂ ವೈರವಿಲ್ಲದವನು ಯಾರೋ; ಭಕ್ತಿನಿಷ್ಠನಿಗೆ ವೈರ ಉಂಟಾಗಲು ಕಾರಣವೇ ಇಲ್ಲವೆಂದು ಉಪಪಾದನೆಯನ್ನು ಮಾಡಿದರು :—**ಕಾರಣಾಭಾವಾತ್ ಕಾರ್ಯಾಭಾವಃ** ಎಂಬ ನ್ಯಾಯ ರೀತ್ಯಾ, ಯಾವಾಗ ವೈರಕ್ಕೆ ಕಾರಣವೇ ಇಲ್ಲವೋ, ಆಗ ವೈರವಾದ ಕಾರ್ಯವೂ ಇಲ್ಲವೆಂದು ಮೂರು ಹೇತುಗಳಿಂದ ಉಪಪಾದಿಸುತ್ತಾರೆ:—ಒಂದನೆಯದು-ಅಂತಹ ಭಕ್ತಿಯೋಗನಿಷ್ಠನಿಗೆ ಪರಮ ಪುರುಷನ ಸಂಶ್ಲೇಷರೂಪವಾದ ಧ್ಯಾನವೂ ಅವುಗಳಿಗೆ ಸಂಬಂಧಿಸಿದವುಗಳಾದ ಕೀರ್ತನ ಸ್ತೋತ್ರಾದಿಗಳೊಂದಿಗೆ ಸೇರಿರುವದೇ ಆತನಿಗೆ ಸುಖವು, ಇವುಗಳಿಲ್ಲದಿರುವದೇ ಆತನಿಗೆ ದುಃಖವು, ಹೀಗಿರುವಾಗ ಇತರ ಸುಖ ದುಃಖಗಳನ್ನು ಪರಿಗಣಿಸದೇ ಇರುವವನಿಗೆ ಇತರರಿಂದುಂಟಾಗುವ ದುಃಖವೂ ಅದಕ್ಕಾಗಿ ವೈರವೂ ಇವುಗಳುಂಟಾಗಲು ಕಾರಣವೇ ಇಲ್ಲವು. ಎರಡನೆಯದು, ತನಗೆ ಯಾರಾದರೂ ಸಕಾರಣವಾಗಿಯೋ ನಿಷ್ಕಾರಣವಾಗಿಯೋ ವೈರವನ್ನು ಬೆಳಸಿ ತೊಂದರೆ ಮಾಡಿದರೆ, ತನ್ನ ಅಪರಾಧವೇನೋ ಇರಬೇಕು, ಇಲ್ಲದಿದ್ದರೆ ಹಾಗೆ ಎಂದಿಗೂ ತೊಂದರೆ ಕೊಡನು ಎಂಬ ಅನುಸಂಧಾನವಿರುವದರಿಂದ, ಆತನ ದ್ವೇಷಕ್ಕೆ ಪ್ರತಿಯಾಗಿ ಈತನೂ ವೈರವನ್ನು ತೋರಿಸುವದಿಲ್ಲವು. ಮೂರನೆಯದು, ಎಲ್ಲರೂ ಸ್ವಾಮಿ ಸಙ್ಕಲ್ಪಕ್ಕೆ ಪರತಂತ್ರರು, ಆತನ ಸಙ್ಕಲ್ಪವಿಲ್ಲದೆ ಯಾವುದೂ ನಡೆಯುವುದಿಲ್ಲವು; ಆದುದರಿಂದ ತಮ್ಮ ಪೂರ್ವ ದುಷ್ಕೃತಾನುಗುಣವಾಗಿ ಸ್ವಾಮಿ ಸಙ್ಕಲ್ಪ ಉಂಟಾಗಿ ತದನುಗುಣವಾಗಿ ಇವರು ನಮಗೆ ತೊಂದರೆಯನ್ನು ಕೊಟ್ಟಿರುತ್ತಾರೆ. ಅವರೂ ಪರತಂತ್ರರು, ಅವರೇನು ಮಾಡ್ಯಾರು ? ಅವರು ನಿರಪರಾಧಿಗಳೇ ಎಂಬ ಅನುಸಂಧಾನವಿದ್ದರೆ, ವೈರಕ್ಕೆ ಕಾರಣವೇ ಇಲ್ಲದಿರುವಾಗ ಕಾರ್ಯವಾದ ವೈರವು ಹೇಗೆ ಜನಿಸೀತು ? ಎಂಬ ಭಾವವು. ಸೀತೆಯು ಹಾಗೆಯೇ ಆಂಜನೇಯನಿಗೆ ಉಪದೇಶಿಸಿರುತ್ತಾಳೆ.—ರಾವಣ ವಧಾನಂತರ ಸೀತೆಯನ್ನು ನೋಡಿ ಈ ದುಷ್ಟ ರಾಕ್ಷಸ ಸ್ತ್ರೀಯರು ನಿನಗೆ ಚಿತ್ರಹಿಂಸೆಯನ್ನು ಕೊಟ್ಟದುದನ್ನು ನಾನು ಕಣ್ಣಾರ ಕಂಡಿರುವದರಿಂದ, ಅವರ

ವಧೆಗಾಗಿ ಅನುಜ್ಞೆಯನ್ನು ದಯಪಾಲಿಸು ಎಂದು ಆಂಜನೇಯನು ಹೇಳಲು; ಅದಕ್ಕೆ ಸೀತೆಯು **ಧರ್ಮಸಂಹಿತ**ವಾದ ಮಾತನ್ನು ಹೇಳುತ್ತಾಳೆ.—**"ರಾಜ ಸಂಶ್ರಯ ವಶ್ಯಾನಾಂ ಕುರ್ವಂತೀನಾಂ ಪರಾಜ್ಞಯಾ। ವಿಧೇಯಾನಾಂಚ ದಾಸೀನಾಂ ಕಃಕುಪ್ಯೇ ದ್ವಾನರೋತ್ತಮ। ಭಾಗ್ಯ ವೈಷಮ್ಯಯೋಗೇನ ಪುರಾದುಶ್ಚರಿತೇನಚ। ಮಯ್ಯೈತತ್ಪ್ರಾಪ್ಯತೇ ಸರ್ವಂ ಸ್ವಕೃತಂ ಹ್ಯುಪಭುಜ್ಯತೇ"** "ರಾಜನನ್ನಾಶ್ರಯಿಸಿರುವದರಿಂದ ಇವರು ಆತನಿಗೆ ವಿಧೇಯರು, ಹೀಗೆ **ಪರಾಜ್ಞಯಾ** ಇತರರ ಆಜ್ಞೆಗೆ ಒಳಗಾಗಿ, ಇನ್ನೊಂದರ್ಥವು, ಸರ್ವೇಶ್ವರನ ಆಜ್ಞೆಗೆ ಒಳಪಟ್ಟವರಾಗಿ, ತೊಂದರೆ ಮಾಡುವವರ ವಿಷಯದಲ್ಲಿ, ಯಾವನಾಗಲಿ ಪ್ರಾಜ್ಞನಾದವನು ಕೋಪಿಸುವನೇನೈಯ್ಯಾ? ಭಾಗ್ಯವೈಷಮ್ಯದಿಂದ ಹಿಂದೆ ದುಷ್ಕೃತವನ್ನು ಮಾಡಿದುದರಿಂದ ನನಗೆ ಈ ತೊಂದರೆಯಲ್ಲಾ ಉಂಟಾಯಿತು; ಹೀಗೆ ತನ್ನ ಅಪರಾಧದ ಫಲವನ್ನು **ಮಾಡಿದುಣ್ಣೋ ಮಹರಾಯಾ** ಎಂದು ಹೇಳಿರುವ ಹಾಗೆ ಅನುಭವಿಸಲೇ ಬೇಕಷ್ಟೇ" ಆದುದರಿಂದ ಪರಮ ಧರ್ಮವನ್ನು ಸೂಚಿಸುತ್ತೇನೆ, ಕೇಳು; **ನಪರಃ ಪಾಪಮಾದತ್ತೇ ಪರೇಷಾಂ ಪಾಪಕರ್ಮಣಾ"** "**ಪರೇಷಾಂ ಪಾಪಕರ್ಮಣಾಂ**-ಇತರರನ್ನುದ್ವೇಶಿಸಿ ಪಾಪವನ್ನು ಮಾಡುವವರಿಗೆ, **ಪರಃ** ಪ್ರಾಜ್ಞನಾಗಿ ಶ್ರೇಷ್ಠನಾದ ಪುರುಷನು, **ನಪಾಪಮಾದತ್ತೇ** - ಪಾಪವನ್ನು ಹೊಂದುವದಿಲ್ಲ" ವೆಂದು ಬೋಧಿಸಿ, ಮುಂದೆ ಅಮೋಘವಾದ ಅಭಯಪ್ರಧಾನರೂಪವಾದ "**ಪಾಪಾನಾಂ ವಾ**" ಎಂಬ ಶ್ಲೋಕವನ್ನು ಹೇಳಿರುತ್ತಾಳೆ. ಇದು ಇಲ್ಲಿ ಅನುಸಂಧೇಯವು. **ಏವಂಭೂತಃ ಯಃ** - ಮೇಲೆ ಹೇಳಲ್ಪಟ್ಟ ಐದನ್ನೂ ಅನುಷ್ಠಿಸುವವನು ಯಾರೋ ಎಂದರೆ ಯಾವ ಭಕ್ತನೋ. **ಸಃ** - ಅವನು, **ಮಾಮೇತಿ** ಎಂದರೆ **ಮಾಂ ಯಥಾವಸ್ಥಿತಂ ಪ್ರಾಪ್ನೋತಿ** - ಹಿಂದೆ **ಪ್ರವೇಷ್ಟುಂಚ** ಎಂದು ಹೇಳಿದುದರ ವ್ಯಾಖ್ಯಾನವು, ಆದುದರಿಂದ ಸಾಯುಜ್ಯವು ಹೇಳಿತೇ ವಿನಾ ಸ್ವರೂಪೈಕ್ಯವು ಹೇಳಲ್ಪಡಲಿಲ್ಲವು, ಇಲ್ಲಿ **ಮಾಂ** ಎಂಬುವನೇ ಬೇರೆ, **ಏತಿ** - ನನ್ನನ್ನು ಹೊಂದುವಭಕ್ತನೇ ಬೇರೆ ಎಂದು ಪ್ರಾಪ್ಯಪ್ರಾಪ್ತೃಗಳನ್ನು ಪೃಥಕ್ಕರಿಸಿಯೇ ಹೇಳಲ್ಪಟ್ಟಿರುತ್ತದೆ. **ಮಾಂ ಏತಿ** - ನನ್ನನ್ನು ಹೊಂದುವನು ಎಂಬರ್ಥವುಳ್ಳ ಪದಗಳಿಗೆ ಸ್ವರೂಪೈಕ್ಯವನ್ನು ಹೇಳಲು ಹೇಗಾಗುತ್ತದೋ ತಿಳಿಯದು. ಗೀತಾ ಶಾಸ್ತ್ರವು ಸ್ವರೂಪೈಕ್ಯ ಹೇಳುವ ವಾದಕ್ಕೆ ಸ್ವಲ್ಪವೂ ಅನುಕೂಲವನ್ನು ಕೊಟ್ಟಿಲ್ಲವು. **ಮಾಮೇತಿ** ಎಂದರೆ ನಾನು ಹೇಗೆ ಸ್ವಕೀಯ ರೂಪವುಳ್ಳವನಾಗಿ ದಿವ್ಯ ವೈಕುಂಠದಲ್ಲಿ ಪರವಾಸುದೇವನಾಗಿ ಲಕ್ಷ್ಮಿಯೊಂದಿಗೆ ಸೇರಿ ನಿತ್ಯಮುಕ್ತರುಗಳಿಗೆ ಸೇವೆಯನ್ನೀಯುತ್ತಾ, ಅವರ ಕೈಙ್ಕರ್ಯಗಳನ್ನು ಪರಿಗ್ರಹಿಸುತ್ತಾ, ಅವರಿಗೆ ಪರಿಪೂರ್ಣ ಬ್ರಹ್ಮಾನುಭವವನ್ನುಂಟುಮಾಡುತ್ತಾ, ಹೀಗೆ ಯಥಾವಸ್ಥಿತನಾಗಿದ್ದೇನೆಯೋ, ಅಂತಹ ನನ್ನನ್ನು ಹೊಂದುವನು. ನನ್ನೊಂದಿಗೆ ಸಾಯುಜ್ಯವನ್ನು ಹೊಂದಿ, ಸಮಾನ ಧರ್ಮವನ್ನು ಹೊಂದಿ, ಸಾರ್ಷ್ಟಿತೆಯನ್ನೂ ಎಂದರೆ ಸಮಾನಾನಂದವನ್ನೂ ಸಹ ಹೊಂದುವನು ಎಂಬದಾಗಿ ಸ್ಫುತ್ಯರ್ಥವು. ಇದನ್ನೇ ಸಙ್ಗ್ರಹವಾಗಿ ತಿಳಿಸುತ್ತಾರೆ. **ನಿರಸ್ತಾವಿದ್ಯಾದಿ ದೋಷಗಂಧಃ, ಅವಿದ್ಯಾ** ಎಂದರೆ ಅಜ್ಞಾನ, ಆದಿ ಪದದಿಂದ ಅದಕ್ಕೆ ಕಾರಣಭೂತವಾದ ಪ್ರಕೃತಿಸಂಬಂಧ, ಪುಣ್ಯಪಾಪರೂಪ ಕರ್ಮ ಇವೇ ಮೊದಲಾದ ದೋಷಗಂಧಗಳಿಂದ ನಿವೃತ್ತನಾಗಿ, ಇದರಿಂದ ಜ್ಞಾನ ತಿರೋಧಾನ ಉಂಟಾಗಿದ್ದುದು ತೊಲಗಿ ಪ್ರಾಕೃತ ದೇಹ ಬಂಧದಿಂದ ನಿವಾರಣೆಯನ್ನು ಹೊಂದಿ, ಸ್ವಸ್ವರೂಪಾವಿರ್ಭಾವ, ಎಂದರೆ ಗುಣಾಷ್ಟಕಗಳ ಯೋಗ ಇವುಗಳಿಂದ ಶೋಭಿಸುವವನಾಗಿ, ಎಂಬ ಭಾವವು, **ಅಶೇಷ ದೋಷಗಂಧಃ** ಎಂದು ಹೇಳಿರುವದರಿಂದ, ಕರ್ಮಯೋಗದ ಮೂಲಕ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದಪಾಪಗಳು ಹಿಂದೆಯೇ ತೊಲಗುತ್ತವೆಂದು ಹೇಳಿ, ಇತರ ಬಂಧಕ ಪುಣ್ಯಪಾಪಗಳೂ ಕೂಡ ತೊಲಗುತ್ತವೆ ಎಂಬ ಭಾವದಿಂದ **ಅಶೇಷ** ಶಬ್ದವು **ಗಂಧ** ಶಬ್ದದಿಂದ

ಸವಾಸನವಾಗಿ ಎಲ್ಲವೂ ಲವಮಾತ್ರವೂ ಇಲ್ಲದೆ ತೊಲಗುತ್ತದೆಂಬಭಿಪ್ರಾಯವನ್ನು ತೋರಿಸಿರುತ್ತಾರೆ. ಶ್ರುತಿಯೂ, **ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂಬಲ್ಲಿ ಹೇಳಿರುವಹಾಗೆ ಅಶೇಷ ಪುಣ್ಯಪಾಪಗಳು ತೊಲಗುತ್ತವೆ. ಅನಂತರ ಸಾಯುಜ್ಯ ಸಾರ್ಷ್ಟಿತೆಗಳ ಪ್ರಾಪ್ತಿಯು ಎಂಬ ಭಾವವು. ಇದನ್ನೇ ಮುಂದಿನ ವಾಕ್ಯದಿಂದ ಸೂಕ್ಷ್ಮವಾಗಿ ತಿಳಿಸುತ್ತಾರೆ. **ಮದೇಕಾನುಭವೋ ಭವತೀತ್ಯರ್ಥಃ** - ಪರಿಪೂರ್ಣ ಬ್ರಹ್ಮನಾದ ನನ್ನ ಅನುಭವ ಉಳ್ಳವನಾಗುವನು ಎಂಬ ತಾತ್ಪರ್ಯವು. ಈ ಅನುಭವವು ಎಲ್ಲಾ ಮುಕ್ತಿಹೊಂದುವ ಭಕ್ತಿಯೋಗ ನಿಷ್ಠರಿಗೂ ಒಂದೇಯಾಗಿ ಇಲ್ಲಿ ಹೇಳಿರುವದರಿಂದ ಆನಂದ ತಾರತಮ್ಯ ವಾದಕ್ಕೂ ಅವಕಾಶವಿಲ್ಲವೆಂದು ಹೇಳಿದಂತಾಯಿತು. ಆತನೊಂದಿಗೆ ಸಾಯುಜ್ಯವೂ ಎಲ್ಲಾ ಮುಕ್ತರಿಗೂ ಉಂಟೆಂದು ಹೇಳುವಾಗ, ತರತಮ ವ್ಯತ್ಯಾಸ ಭಾವವನ್ನು ಊಹಿಸಲು ಇಲ್ಲಿ ಅನುಕೂಲವಿಲ್ಲವು. ಎಲ್ಲಾ ಮುಕ್ತರಿಗೂ ಒಂದೇ ವಿಧವಾದ ಪರಿಪೂರ್ಣ ಬ್ರಹ್ಮಾನುಭವವನ್ನು ಹೇಳುವವರಿಗೆ **ಮಾಮೇತಿ** ಎಂಬ ವಾಕ್ಯವು ಸರ್ವಸಮಂಜಸವು **ಮಾಮೇತಿ** ಎಂಬ ಸಂದರ್ಭದಲ್ಲಿ ಶ್ರುತಿಗಳು ಏನು ಹೇಳುತ್ತದೆಂಬುದಕ್ಕೆ ಶ್ರೀ ದೇಶಿಕರು ಎರಡು ಮೂರು ಪ್ರಮಾಣಗಳನ್ನು ಉದಾಹರಿಸಿರುತ್ತಾರೆ. (೧) **ನಿರಂಜನಃ ಪರಮಂ ಸಾಮ್ಯಮುಪೈತಿ** - ಸಮಾನ ಧರ್ಮವನ್ನು ಹೊಂದುವನು, ಎಂಬುದರಿಂದ ಗುಣಾಷ್ಟಕಗಳೊಂದಿಗೆ ಸ್ವಸ್ವರೂಪಾವಿರ್ಭಾವ ಉಂಟಾಗಿ **"ಭೋಗಮಾತ್ರಸಾಮ್ಯಲಿಂಗಾಚ್ಚ"** ಎಂಬ ಸೂತ್ರದಲ್ಲಿ ಹೇಳಿರುವಹಾಗೆ, ಸಮಾನ ಭೋಗವುಳ್ಳವನಾಗುವನು. ರಾಜಪುತ್ರನಿಗೆ ರಾಜ್ಯಾಡಳಿತವಿಲ್ಲದಿದ್ದರೂ ರಾಜನೊಂದಿಗೆ ಹೇಗೆ ಸಮಾನ ಭೋಗ ಉಂಟೋ, ಹಾಗೆಯೇ ಈ ಭಕ್ತಿಯೋಗ ನಿಷ್ಠನು ಮುಕ್ತನಾದಾಗ ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳಲ್ಲಿ ಅನ್ವಯವಿಲ್ಲದಿದ್ದರೂ ಭೋಗದಲ್ಲಿ ಮಾತ್ರ ಸಾಮ್ಯವನ್ನು ಹೊಂದುವನು. (೨) **"ನ ಪಶ್ಯೋಮೃತ್ಯುಂ ಪಶ್ಯತಿ ನರೋಗಂ ನೋತ ದುಃಖತಾಂ । ಸರ್ವಂ ಹ ಪಶ್ಯಃ ಪಶ್ಯತಿ ಸರ್ವ ಮಾಪ್ನೋತಿ ಸರ್ವಶಃ"** (ಛಾಂ. ೭. ೨೬. ೨) ಬ್ರಹ್ಮದರ್ಶಿಯು ಯಾವ ವಿಧವಾದ ದುಃಖಗಳನ್ನೂ ಅನುಭವಿಸುವದಿಲ್ಲವು ; ಏಕೆಂದರೆ ಯಾವದೂ ಪ್ರತಿಕೂಲವಲ್ಲವು ; ಎಲ್ಲವೂ ಅನುಕೂಲವಾಗುವವರಿಂದ, ಸರ್ವಸಾಕ್ಷಾತ್ಕರ್ತವಾಗಿ ಸಜಲ್ಪಮಾತ್ರದಿಂದಲೇ ಸಙ್ಕಲ್ಪಿಸಿದವುಗಳನ್ನೆಲ್ಲಾ ಹೊಂದುವನು ; **ಜಕ್ಷನ್ ಕ್ರೀಡನ್** ಎಂದು ಹೇಳಿರುವಹಾಗೆ ಆನಂದವನ್ನು ಹೊಂದುವನು. (೩) **"ಸಂಪ್ರಾಪ್ಯೈನ ಮೃಷಯೋಜ್ಞಾನತೃಪ್ತಾಃ ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ । ತೇ ಸರ್ವಗಂ ಸರ್ವತಃ ಪ್ರಾಪ್ಯಧೀರಾ ಯುಕ್ತಾತ್ಮಾನ ಸ್ಸರ್ವಮೇವಾ ವಿಶನ್ತಿ ।"** (ಮುಂಡ ೩. ೨. ೮) **ಋಷಯಃ** - ತತ್ವದರ್ಶಿಗಳು, **ಏನಂ ಸಂಪ್ರಾಪ್ಯ** - ಈ ಪರಮಾತ್ಮನನ್ನು ಜೀವದಶೆಯಲ್ಲಿ ಸಾಕ್ಷಾತ್ಕರಿಸಿ, ಅನುಭವಿಸಿ, **ಜ್ಞಾನತೃಪ್ತಾಃ** - ಆ ಪರಮಾತ್ಮನ ಅನುಭವರೂಪ ಜ್ಞಾನದಿಂದ ಸಂತುಷ್ಟರಾಗಿ, **ಕೃತಾತ್ಮಾನಃ** - ಕೃತಕೃತ್ಯತೆಯನ್ನು ಹೊಂದಿದವರಾಗಿ, **ವೀತರಾಗಾಃ**-ಯಾವ ವಿಷಯೋಪ ಭೋಗಗಳಲ್ಲೂ ಆಶೆಯಿಲ್ಲದವರಾಗಿ, ಆದುದರಿಂದ **ಪ್ರಶಾಂತಾಃ** - ಇಂದ್ರಿಯಗಳ ಹಾವಳಿಯಿಲ್ಲದೆ ಶಾಂತರಾಗಿ, ಯಾರು ಇರುತ್ತಾರೋ, ಅವರು **ಸರ್ವಗಂ** - ಅಂತರ್ಬಹಿರ್ವ್ಯಾಪ್ತಿ ಮೂಲಕ ಎಲ್ಲವನ್ನೂ ವ್ಯಾಪಿಸಿರುವ ಪರಮಾತ್ಮನನ್ನು, **ಪ್ರಾಪ್ಯ** - ದೇಶವಿಶೇಷದಲ್ಲಿ ಹೊಂದಿದವರಾಗಿ, **ಯುಕ್ತಾತ್ಮಾನಃ** - ಅವಿರ್ಭವಿಸಿದ ಬ್ರಹ್ಮರೂಪ ವಿಶಿಷ್ಟ ದೇಹವುಳ್ಳವರಾಗಿ, **ಧೀರಾಃ ಸರ್ವಮೇವಾ ವಿಶನ್ತಿ** - ಧರ್ಮಭೂತಜ್ಞಾನದಿಂದ ರಮಿಸುವವರಾಗಿ, ಸಮಸ್ತಾನುಭವವನ್ನೂ ಹೊಂದುವರು, ಎಂದರೆ ಪರಿಪೂರ್ಣ ಬ್ರಹ್ಮಾನುಭವವನ್ನು ಹೊಂದುವರು ಎಂಬ

ರ್ಥವು. ಪರಿಪೂರ್ಣ ಬ್ರಹ್ಮಾನುಭವವೆಂದರೇನು ಎಂಬುದಕ್ಕೆ ಶ್ರೀಮದ್ರಹಸ್ಯತ್ರಯಸಾರದ ಪರಿಪೂರ್ಣ ಬ್ರಹ್ಮಾನುಭವಾಧಿಕಾರಕ್ಕೆ ದಾಸನು ಬರೆದಿರುವ ವ್ಯಾಖ್ಯಾನವನ್ನು ಪರಾಂಬರಿಸಬಹುದು.

ಇಂತು ಭಗವದ್ರಾಮಾನುಜರಿಂದ ವಿರಚಿತವಾದ ಶ್ರೀಮದ್ಗೀತಾಭಾಷ್ಯಕ್ಕೆ
ಶ್ರೀ ನಿಗಮಾಂತದೇಶಿಕ ವಿರಚಿತ ತಾತ್ಪರ್ಯಚಂದ್ರಿಕೆಯ ಅಭಿಪ್ರಾಯಗಳೊಂದಿಗೆ

ತಿರುನಾರಾಯಣಪುರಂ **ಸಿ. ಯಂ. ವಿಜಯರಾಘವಶರ್ಮನ**
**ಆಚಾರ್ಯ ಹೃದಯಾನ್ವೇಷಿಣೀ**
ಎಂಬ ಕನ್ನಡ ಅರ್ಥ ತಾತ್ಪರ್ಯಾದಿಗಳೂ ಸಮಾಪ್ತವಾದುವು.

**ಶ್ರೀಮತೇ ರಾಮಾನುಜಾಯ ನಮಃ.**
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ
ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ

---

*

# ಹನ್ನೊಂದನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

ಹಿಂದಿನ ಅಧ್ಯಾಯದಲ್ಲಿ, ಭಕ್ತಿಯೋಗ ನಿಷ್ಪತ್ತಿಗೂ ಅದರ ವಿವೃದ್ಧಿಗೂ ಸರ್ವ ಚಿದಚಿತ್ತು ಗಳಿಗಿಂತಲೂ ವಿಲಕ್ಷಣನಾಗಿ, ಕಲ್ಯಾಣ ಗುಣಾಕರನಾಗಿ, ತಾನಲ್ಲದ ಮಿಕ್ಕವಿಶ್ವವೆಲ್ಲಾ ತನ್ನ ವಿಭೂತಿಗೆ ಸೇರಿದುದಾಗಿ, ಅವೆಲ್ಲವೂ ತನಗೆ ಶರೀರವಾಗಿ, ತಾನು ಎಲ್ಲಕ್ಕೂ ಆತ್ಮಾವಾಗಿ, ಅವು ಗಳ ಸತ್ತಾ ಸ್ಥಿತಿ ನಿಯಮನಾದಿಗಳಿಗೆಲ್ಲಾ ಕಾರಣಭೂತನೆಂದು ಶ್ರೀ ಕೃಷ್ಣಭಗವಾನ್ ಉಪದೇಶಿಸಿ ದರು. ಇದನ್ನೆಲ್ಲಾ ಕೇಳಿ ತಿಳಿದ ಅರ್ಜುನನು, ಹಾಗೆ ಸರ್ವ ವಿಶ್ವಕ್ಕೂ ನಿಯಾಮಕನಾಗಿ ಕಲ್ಯಾಣಗುಣವಿಭೂತಿಗಳಿಂದ ಯುಕ್ತನಾಗಿರುವ ಪರಮೈಶ್ವರವನ್ನು ಸಾಕ್ಷಾತ್ತಾಗಿ ವಿಶ್ವರೂಪದ ಮೂಲಕ ನೋಡಬೇಕೆಂಬ, ಮತ್ತೂ ಹಾಗೆಯೇ ಭಕ್ತಿಯೋಗ ಸಿದ್ಧಿಯಿಂದುಂಟಾಗುವ ಪ್ರಾಪ್ಯ ರೂಪವನ್ನೂ ನೋಡಬೇಕೆಂಬ, ಕುತೂಹಲಯುಕ್ತನಾಗಿ **ಅರ್ಜುನನು ಹೇಳುತ್ತಾನೆ** ಏನೆಂದರೆ.--

೧. ದೇಹವೇ ಆತ್ಮಾ ಎಂಬ ಭ್ರಮೆಯಿಂದ ಕೂಡಿದ್ದ ನನಗೆ, ಪರಮ ಕರುಣಾಳುವಾದ ನೀನು ಅನುಗ್ರಹಮಾಡುವದಕ್ಕಾಗಿ, ಪರಮ ರಹಸ್ಯವಾಗಿರುವ ಅಧ್ಯಾತ್ಮ ಶಾಸ್ತ್ರವನ್ನು **"ನತ್ವೇ ವಾಹಂ ಜಾತು ನಾಸಂ"** ಎಂದು ಆರಂಭಿಸಿ, ಈ ೧೦ ನೆಯ ಅಧ್ಯಾಯಾಂತ್ಯದವರೆಗೂ ಮಾಡಿದ ಯಾವ ಉಪದೇಶ ಉಂಟೋ, ಅದರ ಮಾಹಾತ್ಮ್ಯೆಯಿಂದ ದೇಹಾತ್ಮ ಭ್ರಮವೇ ಮೊದಲಾದ ಸರ್ವಭ್ರಮವೂ ಸಂಪೂರ್ಣವಾಗಿ ತೊಲಗಿತು.

೨. ಸಪ್ತಮಾಧ್ಯಾಯದಿಂದ ಆರಂಭಿಸಿ ದಶಮಾಧ್ಯಾಯಾಂತ್ಯದವರೆಗೂ, ನಿನಗಿಂತ ಬೇರೆಯಾದ ಸಮಸ್ತ ಭೂತಗಳ ಸೃಷ್ಟಿಲಯಾದಿಗಳೆಲ್ಲಾ ನಿನ್ನಿಂದಲೇ ಸಾಕ್ಷಾತ್ತಾಗಿ ವಿಸ್ತಾರ ವಾಗಿ ಹೇಳಲ್ಪಟ್ಟವಷ್ಟೇ. ಓ ಕಮಲಪತ್ರದಹಾಗೆ ಕಣ್ಣುಗಳುಳ್ಳ ಶ್ರೀ ಕೃಷ್ಣನೇ! ಸರ್ವಚೇತನಾ ಚೇತನ ವಸ್ತುಗಳಿಗೂ ಶೇಷಿಯಾಗಿ ಕಲ್ಯಾಣ ಗುಣಗಣ ಯೋಗದಿಂದ ಸರ್ವ ಶ್ರೇಷ್ಠನಾಗಿ, ಸರ್ವಕ್ಕೂ ಆಧಾರಭೂತನಾಗಿ, ಸರ್ವಕ್ಕೂ ಸತ್ತಾದಾಯಕನಾಗಿ, ನಿಯಾಮಕನಾಗಿ, ಇರುವ ನಿನ್ನ ಶಾಶ್ವತವಾದ ಮಾಹಾತ್ಮ್ಯೆಯನ್ನು ಸಹ ನಿನ್ನಿಂದಲೇ ವಿಸ್ತಾರವಾಗಿ ಕೇಳಿದನಷ್ಟೇ.

೩. ಸರ್ವ ವಿಶ್ವಕ್ಕೂ ನಿಯಾಮಕನಾಗಿಯೂ ಸ್ವಾಮಿಯಾಗಿಯೂ ಇರುವವನೇ! ಯಾವ ವಾತ್ಸಲ್ಯಾತಿರೇಕದಿಂದ ಕರುಣಾಸಾಗರನಾದ ನೀನು, ನಿನ್ನ ಮಾಹಾತ್ಮ್ಯೆಯ ವಿಷಯವಾಗಿ ಹೇಗೆ ನೀನಿರುವವನ್ನು ಯಥಾರ್ಥವಾಗಿ ಹೇಳಿದೆಯೋ, ಹಾಗೆಯೇ ಓ ಪುರುಷ ಶ್ರೇಷ್ಠನೇ! ನಿನ್ನ ಪಾರಮೈಶ್ವರ್ಯದಿಂದ ಕೂಡಿರುವ ಅಂತಹ ರೂಪವನ್ನು ನೋಡಲು ಇಚ್ಛಿಸುತ್ತೇನೆ. ನೀನು ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣನಾಗಿಯೂ, ನೀನು ಎಲ್ಲಕ್ಕೂ ಅಸಾಧಾರಣಶಾಸ್ತಾ ವಾಗಿಯೂ, ಎಲ್ಲಕ್ಕೂ ವಿಲಕ್ಷಣನಾಗಿಯೂ, ಕಲ್ಯಾಣ ಗುಣ ಗುಣಯೋಗದಿಂದ ರಕ್ಷಕನಾ ಗಿಯೂ ಹೇಗೆ ಇದ್ದೀಯೋ, ಅಂತಹ ಸ್ಥಿತಿಯನ್ನು ಪ್ರದರ್ಶಿಸುವ ರೂಪವನ್ನು ನೋಡಲು ಇಚ್ಛಿಸುತ್ತೇನೆ.

೪. ಓ ಸ್ವಾಮಿಯೇ! ಹಾಗೆ ಎಲ್ಲಾದಕ್ಕೂ ಸ್ರಷ್ಟಾವಾಗಿ, ಸರ್ವ ನಿಯಾಮಕನಾಗಿ, ಸರ್ವಕ್ಕೂ ಆಧಾರಭೂತನಾಗಿರುವ ರೂಪವನ್ನು ಅಶಕ್ತನಾದ ನಾನು ನೋಡಲು ಸಾಧ್ಯವೆಂದು ನಿನಗೆ ತೋರಿದರೆ, ಓ ಅಂತಹ ಕಲ್ಯಾಣಗುಣಗಳ ಮತ್ತು ಮಹತ್ತಾದ ವಿಭೂತಿಗಳ ಯೋಗ ವನ್ನು ಹೊಂದಿರುವವನೇ! ಅಂತಹ ಶಾಶ್ವತವಾದ ಮಾಹಾತ್ಮ್ಯೆಯುಳ್ಳ ನಿನ್ನ ರೂಪವನ್ನು ಸ್ವಲ್ಪವೂ ನ್ಯೂನತೆ ಇಲ್ಲದೆ ದಯವಿಟ್ಟು ತೋರಿಸು.

೫. ಹೀಗೆ ಪರಮ ಕುತೂಹಲಯುಕ್ತನಾಗಿ, ಗದ್ಗದ ಸ್ವರಯುಕ್ತನಾಗಿ, ತುಂಬಾ ವಿನ

ಯದಿಂದ ಯಾವಾಗ ಅರ್ಜುನನು ಪ್ರಾರ್ಥಿಸಿದನೋ, ಆಗ ಲಕ್ಷ್ಮೀಯುಕ್ತ ಭಗವಂತನು ಹೇಳು ತ್ತಾನೆ.—ನಮ್ಮ ಸೋದರತ್ತೆಯ ಮಗನಾಗಿ ನನ್ನ ಪ್ರೇಮಕ್ಕೆ ಪಾತ್ರನಾದ ಪಾರ್ಥನೇ! ನಿನ್ನ ಅಭಿಲಾಷೆಯಂತೆ ಇಗೋ ನೋಡು, ನೂರು ಮತ್ತು ಸಹಸ್ರವಾಗಿ ಹೀಗೆ ನಾನಾವಿಧಗಳಾಗಿ ಅಪ್ರಾಕೃತಗಳಾಗಿ ಬಿಳೀ ಕಪ್ಪು ಕೆಂಪು ಮೊದಲಾದ ನಾನಾ ಬಣ್ಣಗಳುಳ್ಳ, ನಾನಾ ವಿಧಗ ಳಾದ ಅವಯವಗಳನ್ನೂ ನೋಡು.

೬. ಓ ಭರತಕುಲೋದ್ಭೂತನಾದ ಅರ್ಜುನನೇ! ಈ ನನ್ನ ಒಂದು ರೂಪನಲ್ಲೇ ದ್ವಾದ ಶಾದಿತ್ಯರನ್ನೂ, ಅಷ್ಟವಸುಗಳನ್ನೂ, ಏಕಾದಶ ರುದ್ರರನ್ನೂ, ಇಬ್ಬರಾದ ಅಶ್ವಿನೀ ದೇವತೆಗ ಳನ್ನೂ, ನಲವತ್ತೊಂಭತ್ತು ಮರುದ್ಗಣವನ್ನೂ, ಹಾಗೆಯೇ ಈ ಲೋಕದಲ್ಲೇ ಪ್ರತ್ಯಕ್ಷವಾಗಿ ನೋಡಿದುದನ್ನೂ, ನೋಡದೇ ಇರುವದನ್ನೂ, ಹಾಗೆಯೇ ಇತರ ಲೋಕಗಳಲ್ಲೂ ಇರುವ ವಸ್ತು ಗಳನ್ನೂ, ಆಶ್ಚರ್ಯಕರವಾದವುಗಳನ್ನೂ ಸಹ ನೋಡು.

೭. ಈ ನನ್ನ ಶರೀರದ ಏಕದೇಶದಲ್ಲೇ ಚರಾಚರವಸ್ತುಗಳಿಂದ ಕೂಡಿದ ಸಮಸ್ತ ಜಗ ತ್ತನ್ನೂ ನೋಡು. ಓ ನಿದ್ರೆಯನ್ನು ಅಥವಾ ತಮೋಗುಣವನ್ನು ಜಯಿಸಿದ ಅರ್ಜುನನೇ! ಇನ್ನೂ ಯಾವಯಾವುದನ್ನು ನೋಡಲಪೇಕ್ಷಿಸುತ್ತೀಯೋ, ಅವೆಲ್ಲವನ್ನೂ ನೋಡು.

೮. ನಾನು ನನ್ನ ದೇಹದ ಏಕದೇಶದಲ್ಲೇ ಸಮಸ್ತ ಜಗತ್ತನ್ನೂ ತೋರಿಸಬಲ್ಲೆನು. ಆದರೆ ನೀನು ನಿಯತವಾಗಿ ಪರಿಮಿತವಾದ ವಸ್ತುವನ್ನು ಮಾತ್ರ ಗ್ರಹಿಸುವ ಈ ಪ್ರಾಕೃತ ಮಾನುಷ ಚಕ್ಷುಸ್ಸಿನಿಂದ, ನನ್ನ ಅಪರಿಮಿತವಾಗಿ ಅನಂತ ಮಾಹಾತ್ಮ್ಯೆಯುಳ್ಳ ಸರ್ವವನ್ನೂ ನೋಡಲು ನಿನಗೆ ಸಾಧ್ಯವಿಲ್ಲವು. ನಿನ್ನಲ್ಲಿರುವ ಪ್ರೀತ್ಯತಿಶಯದಿಂದ ನಿನಗೆ ಅಪ್ರಾಕೃತ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸುವೆನು. ನನಗಿರುವ ಮಹತ್ತಾದ ಕಲ್ಯಾಣಗುಣಗಳ ಯೋಗವೇನು, ವಿವಿಧ ವಿಚಿತ್ರ ವಿಭೂತಿಗಳ ಯೋಗವೇನು ಇವುಗಳ ಮಾಹಾತ್ಮ್ಯೆಯನ್ನು ಅವಲೋಕಿಸು.

೯. ಇವನ್ನು ಕಂಡು ಸಂಜಯರು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾರೆ--

ಓ ರಾಜನೇ, ಹೀಗೆ ಹೇಳಿದವರಾಗಿ ಮಹತ್ತಾದ ಕಲ್ಯಾಣ ಗುಣಯೋಗದಿಂದಲೂ ವಿವಿಧ ವಿಚಿತ್ರ ವಿಭೂತಿಯೋಗದಿಂದಲೂ ಕೂಡಿದ ಶ್ರೀ ಹರಿಯು, ತನ್ನ ಅತ್ತೆಯಾದ ಪೃಥುವಿನ ಮಗ ನಾಗಿ ತನ್ನ ಪ್ರೀತಿಗೆ ಪಾತ್ರನಾಗಿರುವ ಅರ್ಜುನನಿಗೆ ಇಂತಹ ಸರ್ವ ವಿಶ್ವಶರೀರಕನಾಗಿಯೂ ನಿಯಾಮಕನಾಗಿಯೂ ಇರುವ ಅತ್ಯದ್ಭುತ ರೂಪವನ್ನು ತೋರಿಸಿದನು.

೧೦-೧೧. ಅದು ಎಂತಹ ವಿಚಿತ್ರವಾದ ರೂಪವೆಂಬುದನ್ನು ಸಂಜಯರು ಧೃತರಾಷ್ಟ್ರನಿಗೆ ವರ್ಣಿಸುತ್ತಾರೆ.—ಅನೇಕ ಮುಖಗಳನ್ನೂ ಅನೇಕ ಕಣ್ಣುಗಳನ್ನುಳ್ಳದ್ದಾಗಿಯೂ ಆ ಕಾರಣ ದಿಂದ ಅನೇಕಾಶ್ಚರ್ಯವಾದ ನೋಟವನ್ನುಳ್ಳದ್ದಾಗಿಯೂ ಅನೇಕಗಳಾದ ಅಪ್ರಾಕೃತಗಳಾದ ಆಭರಣಗಳನ್ನುಳ್ಳದ್ದಾಗಿಯೂ, ಅಪ್ರಾಕೃತಗಳಾದ ಅನೇಕ ಓಡಿಯಲ್ಪಟ್ಟ ಆಯುಧಗಳನ್ನುಳ್ಳ ದ್ದಾಗಿಯೂ, ಅಪ್ರಾಕೃತಗಳಾದ ಹಾರಗಳನ್ನೂ ಪಿತಾಂಬರಗಳನ್ನೂ ಧರಿಸಿರುವದಾಗಿಯೂ, ದಿವ್ಯ ಗಂಧಗಳ ಅನುಲೇಪವುಳ್ಳದ್ದಾಗಿಯೂ, ಸಮಸ್ತಾಶ್ಚರ್ಯದಿಂದ ತುಂಬಿರುವ ತೇಜೋ ಮಯವಾಗಿಯೂ, ಅಪರಿಚ್ಛೇದ್ಯವಾಗಿಯೂ, ವಿಶ್ವದ ಸಕಲ ದಿಕ್ಕುಗಳ ಕಡೆಯಲ್ಲೂ ಮುಖಗಳ ನ್ನುಳ್ಳದ್ದಾಗಿಯೂ, ಅರ್ಜುನನು **ಅಪಶ್ಯತ್** ಎಂದರೆ ಕಂಡನು ಎಂದು ಮುಂದೆ ೧೩ ನೆಯ ಶ್ಲೋಕದಲ್ಲಿ ಇದೆ.

೧೨. ಆಕಾಶದಲ್ಲಿ ಸಹಸ್ರ ಸೂರ್ಯರುಗಳು ಒಂದೇ ಕಾಲದಲ್ಲಿ ಉದಿಸಿದುದಾದರೆ ಎಷ್ಟು ತೇಜಸ್ಸು ಉಂಟಾಗುತ್ತದೋ, ಅಂತಹ ತೇಜೋಮಯನಾದ ಮಹಾತ್ಮನಾದ ವಿಶ್ವರೂಪನ ತೇಜಸ್ಸಿಗೆ ಒಂದುವೇಳೆ ಸದೃಶವೆಂದು ಹೇಳಿದರೂ ಹೇಳಬಹುದು.

೧೩. ಅಂತಹ ಅಗಾಧವಾದ ದಿವ್ಯ ಮಙ್ಗಳ ವಿಗ್ರಹದ ಒಂದು ಅಲ್ಪಭಾಗದಲ್ಲಿ, ನಾನಾ ಬಗೆಯಾಗಿ ವಿಭಾಗಿಸಲ್ಪಟ್ಟಿರುವ ಸಮಸ್ತ ಜಗತ್ತನ್ನೂ, ಎಲ್ಲಾ ದೇವತೆಗಳಿಗಿಂತಲೂ ಸರ್ವೋತ್ಕೃಷ್ಟ ಪರದೇವತೆಯಾದ ನಾರಾಯಣನ ಶರೀರದಲ್ಲಿ, ಪಾಂಡುಪುತ್ರನಾದ ಅರ್ಜುನನು ಕಂಡನು.

೧೪. ಅನಂತರ ಆ ಧನಂಜಯನೆಂಬ ಹೆಸರುಳ್ಳ ಅರ್ಜುನನು ತುಂಬಾ ಆಶ್ಚರ್ಯಯುಕ್ತನಾಗಿ ಅದರಿಂದುಂಟಾದ ಪುಲುಕಾಂಚಿಕ ಶರೀರವುಳ್ಳವನಾಗಿ, ದೇವನಾದ ವಿಶ್ವಮೂರ್ತಿಗೆ ನಮಸ್ಕರಿಸಿ ಅಂಜಲಿ ಬದ್ಧನಾಗಿ ಅರಿಕೆ ಮಾಡಿಕೊಳ್ಳುತ್ತಾನೆ.

೧೫. ಅರ್ಜುನನು ಹೇಳುತ್ತಾನೆ ಏನೆಂದರೆ.—

ಹೇ ದೇವ! ಲೀಲಾ ವಿಭೂತಿಯಲ್ಲಿ ಕ್ರೀಡಿಸುವವನೇ! ಈ ಅದ್ಭುತವಾದ ನಿನ್ನ ಶರೀರದಲ್ಲಿ ಸಮಸ್ತ ದೇವತೆಗಳನ್ನೂ, ಹಾಗೆಯೇ ಸಮಸ್ತ ಪ್ರಾಣಸಮೂಹಗಳನ್ನೂ, ನಿನ್ನ ನಾಭೀಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನೂ, ಅವನ ಮಗನಾದ ರುದ್ರನನ್ನೂ, ಸಮಸ್ತ ಋಷಿಗಳನ್ನೂ, ಪ್ರಕಾಶಿಸುತ್ತಿರುವ ವಾಸುಕಿ ತಕ್ಷಕರೇ ಮೊದಲಾದವರುಗಳನ್ನೂ, ನಾನು ನೋಡುತ್ತೇನೆ.

೧೬. ಓ ವಿಶ್ವರೂಪಧಾರಿಯಾಗಿಯೂ ಸಕಲ ವಿಶ್ವಕ್ಕೂ ನಿಯಾಮಕನಾದವನೇ! ಅನೇಕ ಬಾಹುಗಳನ್ನೂ ಉದರಗಳನ್ನೂ ಮುಖಗಳನ್ನೂ ನೇತ್ರಗಳನ್ನೂ ಉಳ್ಳವನನ್ನಾಗಿಯೂ, ಎಲ್ಲಾ ಕಡೆಯಲ್ಲೂ ಅನಂತವಾದ ಅವಯವಗಳನ್ನುಳ್ಳವನನ್ನಾಗಿಯೂ, ಆದಿ ಮಧ್ಯಾಂತಗಳಿಲ್ಲದ ಶರೀರವುಳ್ಳವನಾಗಿಯೂ, ನಿನ್ನನ್ನು ನೋಡುತ್ತೇನೆ. ಇದರಿಂದ ಕಟಿಪ್ರದೇಶಮಾತ್ರ ಒಂದು; ಮೇಲೆಯೂ ಕೆಳಗೂ ಅನೇಕ ಅವಯವಗಳನ್ನುಳ್ಳ ರೂಪವು. ಅದನ್ನು ಕಂಡನು ಎಂಬ ಭಾವವು.

೧೭. ಆ ವಿಶ್ವರೂಪವನ್ನೂ ಇನ್ನೂ ವರ್ಣಿಸುತ್ತಾನೆ.—ಪ್ರತಿಯೊಂದು ಶಿರಸ್ಸಿನಲ್ಲೂ ಕಿರೀಟವನ್ನು ಧರಿಸಿರುವವನನ್ನಾಗಿಯೂ, ಅಲ್ಲಲ್ಲೇ ಕೈಗಳಲ್ಲಿ ಗದೆ ಚಕ್ರಾಯುಧಗಳನ್ನು ಧರಿಸಿರುವನನ್ನಾಗಿಯೂ, ತೇಜಸ್ಸಿನಿಂದ ತುಂಬಿದವನನ್ನಾಗಿಯೂ, ಎಲ್ಲಾ ಕಡೆಯಲ್ಲೂ ತನ್ನ ತೇಜಸ್ಸನ್ನು ಹರಡುವವನನ್ನಾಗಿಯೂ, ಆ ಕಾರಣದಿಂದ ದೃಷ್ಟಿಸಿ ನೋಡಲು ಈ ಅಪ್ರಾಕೃತ ನೇತ್ರದಿಂದಲೂ ಸಾಧ್ಯವಿಲ್ಲದವನನ್ನಾಗಿಯೂ, ಎಲ್ಲಾ ಕಡೆಯಲ್ಲೂ ಪ್ರಜ್ವಲಿಸುವ ಸೂರ್ಯಾಗ್ನಿಗಳ ತೇಜಸ್ಸನ್ನುಳ್ಳವನನ್ನಾಗಿಯೂ, ಹೀಗೆಲ್ಲಾ ಕಾರಣದಿಂದಲೂ ಅಸದೃಶನನ್ನಾಗಿಯೂ ನಿನ್ನನ್ನು ನೋಡುತ್ತಿದ್ದೇನೆ.

೧೮. ಉಪನಿಷತ್ತುಗಳಲ್ಲಿ ನಿಸ್ಸಮಾಭ್ಯಧಿಕನನ್ನಾಗಿಯೂ, ಉಪಾಸ್ಯನನ್ನಾಗಿಯೂ, ಅಕ್ಷರ ಶಬ್ದವಾಚ್ಯನನ್ನಾಗಿಯೂ, ಹೇಳಿರುವವನು ನೀನೇ ಎಂಬುದು ನನ್ನ ಅಭಿಪ್ರಾಯವು. ಈ ವಿಶ್ವಕ್ಕೆಲ್ಲಾ ಶ್ರೇಷ್ಠನಾದ ಆಧಾರಭೂತನೂ ನೀನೇ, ವ್ಯಯರಹಿತನಾಗಿ ಶಾಶ್ವತನಾಗಿರುವವನೂ ನೀನೇ. ಶಾಶ್ವತವಾದ ವೈದಿಕ ಧರ್ಮಗಳನ್ನೆಲ್ಲಾ ಇಂತಹ ಅವತಾರಗಳ ಮೂಲಕ ರಕ್ಷಿಸಿ ಸಂಸ್ಥಾಪನೆಯನ್ನು ಮಾಡುವವನೂ ನೀನೇ. **"ವೇದಾಹಮೇತಂ ಪುರುಷಂ ಮಹಾನ್ತಂ"** ಎಂದು ಶ್ರುತಿಯಲ್ಲಿ ಕೊಂಡಾಡಲ್ಪಟ್ಟ ಶಾಶ್ವತನಾದ ಪರಮಪುರುಷನೇ, ಯದುಕುಲತಿಲಕನಾಗಿ ಅವತರಿಸಿರುವವನು ನೀನೇ ಎಂಬುದು ನನ್ನ ಸ್ಥಿರವಾದ ನಂಬಿಕೆಯು.

೧೯. ಆದಿಮಧ್ಯಾನ್ತರಹಿತನಾಗಿಯೂ, ಅವಧಿ ಇಲ್ಲದ ಅತಿಶಯವುಳ್ಳ ವೀರ್ಯವೇ ಮೊದಲಾದ ಷಾಡ್ಗುಣ್ಯವುಳ್ಳವನನ್ನಾಗಿಯೂ, ವೀರ್ಯವೆಂದರೆ ಸರ್ವ ಧಾರಣ ನಿಯಮನಾದಿ ಅನೇಕ ವ್ಯಾಪಾರಗಳಿದ್ದರೂ ಸ್ವಲ್ಪವೂ ವಿಕಾರವಿಲ್ಲದವನಾಗಿಯೂ, ಅಸಂಖ್ಯೇಯಗಳಾದ ಬಾಹುಗಳನ್ನುಳ್ಳವನಾಗಿಯೂ, ಭಕ್ತರ ವಿಷಯದಲ್ಲಿ ಚಂದ್ರನಹಾಗೆ ಕೋಮಲವಾದ ಅನುಗ್ರಹಿಸುವ ನೇತ್ರವನ್ನೂ, ದುಷ್ಟರ ವಿಷಯದಲ್ಲಿ ಸೂರ್ಯನಹಾಗೆ ತಪಿಸುತ್ತಿರುವ ನಿಗ್ರಹವನ್ನುಂಟು

ಮಾಡುವ ನೇತ್ರವನ್ನೂ, ಹೊಂದಿರುವನನ್ನಾಗಿಯೂ, ಪ್ರಜ್ವಲಿಸುವ ಕಾಲಾಗ್ನಿಯ ಹಾಗೆ ಸಂಹಾರವನ್ನುಂಟುಮಾಡುವ ಮುಖವನ್ನುಳ್ಳವನಾಗಿಯೂ, ತೇಜಸ್ಸೆಂದರೆ ಇತರರನ್ನೆಲ್ಲಾ ನಿಗ್ರಹಿಸುವ ಸಾಮರ್ಥ್ಯವು, ಇಂತಹ ತೇಜಸ್ಸಿನಿಂದ ವಿಶ್ವವನ್ನೆಲ್ಲಾ ತಪಿಸುವಹಾಗೆ ಮಾಡುವನನ್ನಾಗಿಯೂ, ಹೀಗೆ ಸರ್ವಕ್ಕೂ ಆಧಾರಭೂತನನ್ನಾಗಿ, ಸರ್ವ ಸೃಷ್ಟಿ, ಸ್ಥಿತಿ, ನಿಯಮನ, ಸಂಹಾರಾದಿಗಳಿಗೆ ಕಾರಣಭೂತನಾಗಿರುವ ನಿನ್ನನ್ನು ಈಗ ನೋಡುತ್ತಿದ್ದೇನೆ.

೨೦ ಇಂತಹ ನಿನ್ನ ರೂಪವನ್ನು ನೋಡಿ, ಯುದ್ಧವನ್ನು ನೋಡಲು ಬಂದಿರುವ ದೇವಾದಿಗಳೂ ನಾನೂ ಸಹ ಭಯದಿಂದ ವ್ಯಾಕುಲರಾಗಿದ್ದೇವೆ ಎಂದು ಅರ್ಜುನನು ತಿಳಿಸುತ್ತಾನೆ.—ದ್ಯಾವಾ ಪೃಥಿವೀಗಳ ಮಧ್ಯೆ ಇರುವ, ಮೇಲಿನ, ಕೆಳಗಿನ, ಎಲ್ಲಾ ಲೋಕಗಳೂ ಎಲ್ಲಾ ದಿಕ್ಕುಗಳೂ ಸಹ ನಿನ್ನೊಬ್ಬನಿಂದ ವ್ಯಾಪಿಸಲ್ಪಟ್ಟಿರುತ್ತದೆ. ಓ ಅಪರಿಚ್ಛೇದ್ಯ ಸ್ವರೂಪಸ್ವಭಾವಗಳನ್ನುಳ್ಳ ಮಹಾನುಭಾವನೇ ! ಅದ್ಭುತವಾಗಿಯೂ ಕ್ರೂರವಾಗಿಯೂ ಇರುವ ಈ ನಿನ್ನ ರೂಪವನ್ನು ಕಂಡು, ಯುದ್ಧವನ್ನು ನೋಡಬೇಕೆಂದು ಬಂದಿರುವ ಚತುರ್ಮುಖ ಬ್ರಹ್ಮನೇ ಮೊದಲಾದ ದೇವತೆಗಳೂ, ಅಸುರರೂ, ಪಿತೃಗಣ ಸಿದ್ಧ ಗಂಧರ್ವ ಯಕ್ಷರಾಕ್ಷಸರ ಗುಂಪುಗಳಲ್ಲಿ ಅನುಕೂಲರಾದವರೂ ಪ್ರತಿಕೂಲರಾದವರೂ, ಎರಡೂ ಅಲ್ಲದವರೂ, ಹೀಗೆ ಮೂರು ಪಂಗಡದವರೂ ಎಲ್ಲರೂ ಸ್ವಾಮಿ ದತ್ತ ದಿವ್ಯಚಕ್ಷುಸ್ಸಿನಿಂದ ಭೀತರಾಗಿ ತುಂಬಾ ಕ್ಲೇಶವನ್ನು ಹೊಂದಿದ್ದಾರೆ. ಇವರೆಲ್ಲರಿಗೂ ಏಕೆ ತೋರಿಸಿದುದು ಎಂದರೆ ಅದರಿಂದ ತನ್ನ ಅದ್ಭುತಶಕ್ತಿಯಲ್ಲಿ ಅರ್ಜುನನಿಗೆ ಪೂರ್ಣ ನಂಬಿಕೆಯುಂಟಾಗುವದಕ್ಕಾಗಿ ಎಂದು ಭಾವಿಸತಕ್ಕದ್ದು.

೨೧. ಅರ್ಜುನನು ಯುದ್ಧ ನೋಡುವದಕ್ಕಾಗಿ ಬಂದವರ ಅವಸ್ಥೆಯನ್ನೇ ಪುನಃ ವರ್ಣಿಸಿ ಹೇಳುತ್ತಾನೆ—ಈ ಉತ್ಕೃಷ್ಟರಾದ ದೇವತೆಗಳ ಸಮೂಹವೆಲ್ಲವೂ, ಈ ನಿನ್ನ ಉಗ್ರವಾದ ವಿಶ್ವರೂಪವನ್ನು ನೋಡಿ, ನೀನು ಪರತತ್ವವೇ ಎಂದು ಭಾವಿಸಿ, ನಿನ್ನನ್ನು ಆಶ್ರಯಿಸಲು ಬರುತ್ತಿದ್ದಾರೆ. ಇನ್ನು ಕೆಲವರು ಭಯಪಟ್ಟವರಾಗಿ ರಕ್ಷಿಸು ಎಂದು ಅಂಜಲಿಬದ್ಧರಾಗಿರುತ್ತಾರೆ. ಸರ್ವರಿಗೂ ಮಂಗಳವಾಗಲಿ ಎಂದು ಹೇಳಿ ಮಹರ್ಷಿಸಿದ್ಧ ಸಂಘದವರು ವಿಪುಳಗಳಾದ ಸ್ತೋತ್ರಗಳ ಮೂಲಕ ನಿನ್ನನ್ನು ಸ್ತುತಿಸುತ್ತಾ ಇರುತ್ತಾರೆ.

೨೨. ಏಕಾದಶ ರುದ್ರರೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಸಾಧ್ಯರೂ, ವಿಶ್ವೇದೇವರುಗಳೂ, ಅಶ್ವಿನೀ ದೇವತೆಗಳೂ, ನಲವತ್ತೊಂಭತ್ತು ಮರುದ್ಗಣಗಳೂ, ಪಿತೃದೇವತೆಗಳೂ, ಮತ್ತು ಗಂಧರ್ವರೂ, ಯಕ್ಷರೂ, ಅಸುರರೂ, ಸಿದ್ಧರೂ, ಹೀಗೆ ಇವರ ಎಲ್ಲಾ ಸಮೂಹಗಳೂ, ನಿನ್ನನ್ನು ಆಶ್ಚರ್ಯಯುಕ್ತರಾಗಿ ನೋಡುತ್ತಿದ್ದಾರೆ.

೨೩. ಇವರುಗಳೆಲ್ಲಾ ಹೇಗೆ ಭಯ ವಿಹ್ವಲರಾಗಿದ್ದಾರೋ, ಹಾಗೆಯೇ ನಾನೂ ಸಹ ಭಯದಿಂದ ಖೇದವನ್ನು ಹೊಂದಿರುವೆನೆಂದು ಹೇಳಿಕೊಳ್ಳುತ್ತಾನೆ.—ಓ ಮಹತ್ತಾದ ಬಾಹುಶಕ್ತಿಯುಳ್ಳ ಪರಮ ಪುರುಷನೇ! ಅನೇಕ ಮುಖಗಳನ್ನೂ ನೇತ್ರಗಳನ್ನೂ ಉಳ್ಳ, ಅನೇಕ ಬಾಹುಗಳನ್ನೂ, ತೊಡೆಗಳನ್ನೂ, ಪಾದಗಳನ್ನೂ ಉಳ್ಳ, ಅನೇಕ ಜಠರಗಳನ್ನುಳ್ಳ ಅನೇಕ ಕ್ರೂರಗಳಾದ ಕೋರೆ ಹಲ್ಲುಗಳನ್ನುಳ್ಳ ಈ ನಿನ್ನ ಅದ್ಭುತವಾದ ರೂಪವನ್ನು ನೋಡಿ, ಈಗ ಯುದ್ಧಕಾಂಕ್ಷಿಗಳಾಗಿ ಬಂದಿರುವ ದೇವತೆಗಳೇ ಮೊದಲಾದವರೂ ನಾನೂ ಸಹ ತುಂಬಾ ವ್ಯಾಕುಲವನ್ನು ಹೊಂದಿದವರಾಗಿದ್ದೇವೆ.

೨೪. ದಿವ್ಯ ವೈಕುಂಠವನ್ನು ಮುಟ್ಟುವ ಎಂದರೆ ದಿವ್ಯ ವೈಕುಂಠದವರೆಗೂ ಇರುವ, ಸಮಸ್ತ ಚೇತನಾ ಚೇತನದಿಂದ ಕೂಡಿದ ಸಮಸ್ತ ಪ್ರಕೃತಿ ಮಂಡಲವನ್ನು ಆಶ್ರಯಿಸಿರುವ ಬಹು ಪ್ರಕಾಶವಾಗಿರುವ ಅನೇಕ ವರ್ಣಗಳುಳ್ಳ, ಅತಿ ವಿಶಾಲವಾಗಿ ಅಗಾಧವಾಗಿ ತೆರೆಯಲ್ಪಟ್ಟ

ಮುಖವುಳ್ಳವನಾಗಿರುವ, ಪ್ರಜ್ವಲಿಸುವ ವಿಶಾಲಗಳಾದ ಕಣ್ಣುಗಳುಳ್ಳ, ರೂಪವುಳ್ಳವನಾಗಿರುವ, ನಿನ್ನನ್ನು ಕಂಡು, ಓ ಸರ್ವವ್ಯಾಪಿಯಾದ ವಿಷ್ಣುವೇ! ಅತ್ಯಂತ ಭಯಗೊಂಡ ಮನಸ್ಸನ್ನು ಹೊಂದಿದವರಾಗಿ ಕ್ಲೇಶವನ್ನು ಹೊಂದಿರುವದರಿಂದ ದೇಹಧಾರಣೆಗೆ ಬೇಕಾದ ಮನಸ್ಸಿನ ಸ್ಥೈರ್ಯವೇ ಇಲ್ಲವಾಗಿರುತ್ತದೆ. ಸರ್ವೇಂದ್ರಿಯಗಳ ಮೂಲಕವಾಗಿ . ಶಾಂತಿಯೂ ಇಲ್ಲ ವಾಗಿರುತ್ತದೆ.

೨೫. ಓ ಜಗತ್ತುಗಳಿಗೆಲ್ಲಾ ಆವಾಸ ಭೂತನೇ! ಬಹು ಕ್ರೂರವಾದ ಕೋರೆದಾಡೆಗಳ ನ್ನುಳ್ಳ, ಪ್ರಳಯಕಾಲದ ಕಾಲಾಗ್ನಿ ಸದೃಶಗಳಾಗಿಯೂ ಇರುವ, ನಿನ್ನ ಮುಖಗಳನ್ನು ನೋಡು ವುದರಿಂದಲೇ, ನನಗೆ ದಿಕ್ಕುಗಳು ಯಾವುವೂ ತೋಚುವದಿಲ್ಲವು. ದೇಹ ಸುಖವನ್ನೂ ಹೊಂದಲೇ ಇಲ್ಲವು. ಓ ದೇವತೆಗಳಿಗೂ ನಿಯಾಮಕನಾದವನೇ! ಕರುಣಿಸಿ ಪ್ರಸನ್ನನಾಗು.

೨೬-೭. ಇದುವರೆಗೂ ಲೀಲಾ ಸಾರಥಿಯ ಪಾರಮ್ಯೈಶ್ವರವನ್ನು ಪ್ರದರ್ಶಿಸುವ ಸರ್ವ ಸೃಷ್ಟಿ ಸ್ಥಿತಿ ಲಯಗಳಿಗೂ ಆತನು ಅಧಿಕಾರಿ ಎಂದೂ, ಎಲ್ಲವನ್ನೂ ವ್ಯಾಪಿಸಿ, ಎಲ್ಲಕ್ಕೂ ಸತ್ತಾ ನಿಯಮನಾದಿಗಳಿಗೆ ಆತನು ಕಾರಣನೂ ಎಂಬುವನ್ನು ತೋರಿಸುವ ರೂಪವನ್ನು ಕಂಡೆನೆಂದು ಹೇಳಿಕೊಂಡನು. ಮುಂದೆ ಧಾರ್ತರಾಷ್ಟ್ರಾದಿ ಸರ್ವ ದುಷ್ಟರ ನಾಶದ ಮೂಲಕ ಭೂಭಾರಾವ ತರಣಕ್ಕಾಗಿ ಪರಮ ಪುರುಷನಾದ ನೀನು ಅವತರಿಸಿರುವದೆಂಬ ದೃಶ್ಯವನ್ನೂ ಕೂಡ ನಿನ್ನರೂಪ ದಲ್ಲಿ ಕಂಡೆನೆಂದು ಅರ್ಜುನನು ಮುಂದಿನ ಎರಡು ಶ್ಲೋಕಗಳ ಮೂಕಲ ಅರಿಕೆಮಾಡಿಕೊಳ್ಳು ತ್ತಾನೆ.—ಸೈನ್ಯದೊಂದಿಗೆ ಯುದ್ಧ ಸಹಾಯಕ್ಕಾಗಿ ಬಂದ ಸಮಸ್ತ ರಾಜರ ಸಮೂಹದಿಂದ ಸೇರಿದ ಧೃತರಾಷ್ಟ್ರರ ಪುತ್ರರಾದ ಇವರೆಲ್ಲರೂ, ಮತ್ತು ಭೀಷ್ಮರೂ, ದ್ರೋಣರೂ, ಸೂತಪುತ್ರ ನಾದ ಕರ್ಣನೂ, ಇವರುಗಳನ್ನು ಹೇಳಿದುದರಿಂದ ದುಷ್ಟ ಚತುಷ್ಟಯಕ್ಕೆ ಸೇರಿದ ಶಕುನಿಯೂ ನಮ್ಮ ಸಂಘಕ್ಕೆ ಸೇರಿದ ಕೆಲವು ಯೋಧಮುಖ್ಯರೊಡನೆಯೂ, ಬಹು ಭಯಂಕರಗಳಾಗಿ ಅತಿ ಕ್ರೂರಗಳಾದ ಕೋರೆದಾಡೆಗಳನ್ನುಳ್ಳ ನಿನ್ನ ಮುಖಗಳನ್ನೂ ತ್ವರೆಗೊಂಡವರಾಗಿ ಪ್ರವೇಶಿಸಿರು ತ್ತಾರೆ. ಇನ್ನು ಕೆಲವರು ಪುಡಿ ಪುಡಿಯಾದ ಶಿರಸ್ಸುಗಳನ್ನುಳ್ಳವರಾಗಿ, ನಿನ್ನ ಹಲ್ಲುಗಳ ಮಧ್ಯ ಗಳಲ್ಲಿ ಸಿಕ್ಕಿಕೊಂಡವರಾಗಿ ತೋರಿಬರುತ್ತಾರೆ.

೨೮. ಅದು ಹೇಗೆ ತ್ವರೆಯಿಂದ ಬಂದು ನಿನ್ನ ಬಾಯಲ್ಲಿ ಬೀಳುತ್ತಾರೆಂಬುದನ್ನು ಎರಡು ದೃಷ್ಟಾಂತಗಳ ಮೂಲಕ ತಿಳಿಸುತ್ತಾರೆ.—ನದಿಗಳ ಅನೇಕ ಪ್ರವಾಹಗಳು ಸಮುದ್ರಕ್ಕೆ ಅಭಿ ಮುಖಳಾಗಿ ತ್ವರೆಯಿಂದ, ಹೇಗೆ ಓಡಿಹೋಗುತ್ತವೋ, ಹಾಗೆಯೇ ಈ ಭೂಲೋಕದ ವೀರರಾದ ಯೋಧರೆಲ್ಲರೂ ಜ್ವಲಿಸುತ್ತಿರುವ ನಿನ್ನ ಮುಖಗಳನ್ನು ಬಹುತ್ವರೆಯಿಂದ ಪ್ರವೇಶಿಸಿರುತ್ತಾರೆ.

೨೯. ಮತ್ತು ವಿಶೇಷವಾಗಿ ಜ್ವಲಿಸುವ ಅಗ್ನಿಯಲ್ಲಿ ಶಲಭ ಹುಳುಗಳು, ತುಂಬಾ ವೇಗ ವುಳ್ಳವುಗಳಾಗಿ ತಮ್ಮ ನಾಶಕ್ಕಾಗಿ ಹೇಗೆ ತ್ವರೆಯಿಂದ ತಾವೇ ಬಂದು ಬೀಳುತ್ತವೋ, ಹಾಗೆಯೇ ಈ ಜನರೆಲ್ಲರೂ ವಿಶೇಷ ತ್ವರೆಯುಳ್ಳವರಾಗಿ ತಮ್ಮ ನಾಶಕ್ಕಾಗಿ ಪ್ರಜ್ವಲಿಸುತ್ತಿರುವ ನಿನ್ನ ಬಾಯಿಗಳಲ್ಲಿ ಬಂದು ಬೀಳುತ್ತಿದ್ದಾರೆ.

೩೦. ಓ ಸರ್ವವ್ಯಾಪಿಯಾದ ವಿಷ್ಣುವೇ! ಪ್ರಜ್ವಲಿಸುತ್ತಿರುವ ನಿನ್ನ ಮುಖಗಳಿಂದ ಯುದ್ಧ ಮಾಡುವದಕ್ಕಾಗಿ ಬಂದ ಸಮಸ್ತರಾಜರೇನು, ಯೋಧರೇನು, ಹೀಗೆ ಎಲ್ಲರನ್ನೂ ನುಂಗುವವನಾಗಿ ನಾಲಿಗೆಗಳಿಂದ ಅವರ ರಕ್ತವನ್ನು ನೆಕ್ಕುತ್ತಲಿದ್ದೀ. ಸಮಸ್ತ ಜಗತ್ತನ್ನೂ ಮಹತ್ತಾದ ಪ್ರಕಾಶದಿಂದ ತುಂಬಿರುವದರಿಂದ ಸಹಿಸಲು ಅಸಾಧ್ಯವಾಗಿ ಕ್ರೂರವಾಗಿರುವ ಆ ಕಾಂತಿಗಳು ಲೋಕವನ್ನೆಲ್ಲಾ ತಪಿಸುತ್ತಾ ಇವೆ.

೩೧. ಹೀಗೆ ಅತ್ಯುಗ್ರರೂಪವನ್ನು ಧರಿಸಿಕೊಂಡು ತೋರುವದರಲ್ಲಿ ತಮ್ಮ ಉದ್ದೇಶ್ಯ

ವೇನೆಂಬುದನ್ನು ದಯವಿಟ್ಟು ತಿಳಿಸಿ. ಸರ್ವ ದೇವತೆಗಳಿಗಿಂತಲೂ ಶ್ರೇಷ್ಠರಾದ ತಮಗೆ ನಮಸ್ಕಾರವು. ಪ್ರಸನ್ನತೆಯನ್ನು ಪ್ರಾರ್ಥಿಸುವೆನು. ಸಮಸ್ತಕ್ಕೂ ಆದಿಕಾರಣ ಭೂತರಾದ ತಮ್ಮ ಉದ್ದೇಶ್ಯವನ್ನು ತಿಳಿಯಲಪೇಕ್ಷಿಸುತ್ತೇನೆ. ತಮ್ಮ ಈ ಪ್ರವೃತ್ತಿಯನ್ನು ತಿಳಿಯದವನಾಗಿದ್ದೇನೆ.

೩೨. ಅರ್ಜುನನು ಪ್ರಾರ್ಥಿಸಿದುದು ಆತನ ಸಕಲ ಯೋಗಗಳಿಂದ ಕೂಡಿರುವ ವಿಶ್ವರೂಪದ ದರ್ಶನವು. ಅದರೊಂದಿಗೆ ಈ ಘೋರ ರೂಪವನ್ನು ತೋರಲು ಏನು ಉದ್ದೇಶ್ಯವೆಂದು ಅರ್ಜುನನು ಅರಿಕೆ ಮಾಡಿಕೊಳ್ಳಲು ಶ್ರೀ ಕೃಷ್ಣಭಗವಾನ್ರವರು ಹೇಳುತ್ತಾರೆ. ಸಮಸ್ತರ ಆಯುಃಪರಿಮಿತಿಯನ್ನು ಗಣನೆ ಮಾಡುವವನಾದುದರಿಂದ, ನನ್ನನ್ನು ಕಾಲನೆಂದು ವ್ಯವಹರಿಸುತ್ತಾರೆ. ಪ್ರಕೃತ ಧೃತರಾಷ್ಟ್ರರ ಪುತ್ರರಾದ ದುರ್ಯೋಧನಾದಿಗಳ ಅವಸಾನಕ್ಕೆ ಇನ್ನು ಎಷ್ಟು ವಯಸ್ಸುಂಟೆಂದು ಎಣಿಸುತ್ತಾ ಅವರನ್ನು ನಾಶಮಾಡುವವನಾಗಿ ಈ ಘೋರರೂಪದಿಂದ ಪ್ರವೃದ್ಧನಾಗಿ, ಯುದ್ಧದಲ್ಲಿ ನೆರೆದಿರುವ ದುಷ್ಟ ಜನಗಳನ್ನು ಕೊಲ್ಲುವದಕ್ಕಾಗಿ ಪ್ರವರ್ತಿಸಿದವನಾಗಿದ್ದೇನೆ. ನೀನು ಯುದ್ಧಮಾಡದಿದ್ದರೂ ಶತ್ರು ಪಕ್ಷದ ಯೋಧರು ಯಾರು ಇರುತ್ತಾರೋ, ಅವರೆಲ್ಲರೂ ಇನ್ನು ಬದುಕಿರಲಾರರು.

೩೩. ನನ್ನ ಸಙ್ಕಲ್ಪಾನುಸಾರವೇ ಎಲ್ಲವೂ ನಡೆಯುವದು ನಿಸ್ಸಂಶಯವಾದನಂತರ ನೀನೇ ನನ್ನ ಸಙ್ಕಲ್ಪಾನುಸಾರವಾಗಿ ಏಕೆ ನಡೆಸಕೂಡದು ? ಎನ್ನುತಾರೆ.—ಆದುದರಿಂದ ನೀನು ಅದರೊಂದಿಗೆ ಯುದ್ಧ ಮಾಡಲು ಏಳು. ಶತ್ರುಗಳನ್ನು ಜಯಿಸಿ ಯಶಸ್ಸನ್ನು ಹೊಂದು. ಧರ್ಮದಿಂದ ಕೂಡಿರುವ ಮತ್ತು ಆ ಕಾರಣದಿಂದ ಸರ್ವ ಸಮೃದ್ಧಿಯಿಂದ ಕೂಡಿರುವ ರಾಜ್ಯವನ್ನು ಅನುಭವಿಸು. ಈ ಮೊದಲೇ ನಾಶವಾಗಲೆಂದು ಉದ್ದೇಶಿಸಲ್ಪಟ್ಟವರಾಗಿದ್ದಾರೆ. ಓ ಎಡಗೈಯಿಂದಲೂ ಬಾಣಪ್ರಯೋಗಮಾಡುವ ಶಕ್ತಿಯುಳ್ಳ ಅರ್ಜುನನೇ ! ಅವರುಗಳ ನಾಶಕ್ಕೆ ನೀನು ನಿಮಿತ್ತ ಮಾತ್ರಕ್ಕೆ ನಿಲ್ಲು.

೩೪. ದ್ರೋಣರನ್ನೂ ಭೀಷ್ಮರನ್ನೂ ಜಯದ್ರಥನನ್ನೂ ಕರ್ಣನನ್ನೂ ಹಾಗೆಯೇ ಇನ್ನೂ ಇತರ ಯೋಧಮುಖ್ಯರನ್ನೂ ಸಹ, ನನ್ನಿಂದಲೇ ಎಂದರೆ ನನ್ನ ಸಙ್ಕಲ್ಪದಿಂದಲೇ ನಷ್ಟರಾಗಿರುತ್ತಾರಾದುದರಿಂದ, ಅವರು ಗುರುಗಳು, ಬಂಧುಗಳು, ಅಂತವರನ್ನು ಕೊಲ್ಲುವುದು ಅಧರ್ಮವೇ ಇತ್ಯಾದಿ ನಿನಗೆ ವ್ಯಥೆಗೆ ಕಾರಣವಿಲ್ಲವು ; ನೀನು ಕಾರುಣ್ಯದಿಂದಲೂ ಸ್ನೇಹದಿಂದಲೂ ವ್ಯಥೆ ಪಡುವದು ಯುಕ್ತವಲ್ಲವು. ಆದುದರಿಂದ ಅಂತಹ ಶಂಕಾಗಳನ್ನು ತ್ಯಜಿಸಿ ಯುದ್ಧವನ್ನು ಮಾಡು. ನಿನ್ನ ಶತ್ರುಗಳನ್ನು ಖಂಡಿತವಾಗಿಯೂ ಜಯಿಸುವಿ, ಸಂದೇಹಬೇಡ.

೩೫. ಈ ಸಂದರ್ಭದಲ್ಲಿ ಸಂಜಯರು ಧೃತರಾಷ್ಟ್ರನಿಗೆ ಹೇಳುತ್ತಾರೆ.—ಬ್ರಹ್ಮ ರುದ್ರಾದಿಗಳಿಗೂ ಸ್ವಾಮಿಯಾದ, ಆಶ್ರಿತವಾತ್ಸಲ್ಯ ಜಲಧಿಯಾದ, ಕೇಶವನ ಮಾತನ್ನು ಕೇಳಿ ಇಂದ್ರನಿಂದ ಕಿರೀಟವನ್ನು ಪಡೆದ ಕಿರೀಟಿಯಾದ ಅರ್ಜುನನು, ಭೀತರಲ್ಲೆಲ್ಲಾ ಅತಿಭೀತನಾಗಿ ಆಕಾರಣದಿಂದ ನಡಗುವವನಾಗಿ, ನಮಸ್ಕಾರವನ್ನು ಮಾಡಿ, ಅಂಜಲಿ ಬದ್ಧನಾಗಿ ಗದ್ಗದಸ್ವರದಿಂದ ಪುನಃ ಶ್ರೀ ಕೃಷ್ಣ ಭಗವಾನ್ರವರನ್ನು ಕುರಿತು ಅರಿಕೆಮಾಡಿಕೊಂಡನೇನೆಂದರೆ.—

೩೬. ಸರ್ವರ ಇಂದ್ರಿಯಗಳಿಗೂ ಅವರುಗಳ ಕರ್ಮಾನುಸಾರ ನಿಯಾಮಕನಾಗಿ ಹೃಷೀಕೇಶನೆನಿಸುವವನೇ ! ಯುದ್ಧವನ್ನು ನೋಡಬೇಕೆಂಬ ಆಶೆಯಿಂದ ಬಂದಿರುವ ದೇವಗಂಧರ್ವ ಸಿದ್ಧರೇ ಮೊದಲಾದ ಸಾಧುಲೋಕವು ನಿಮ್ಮ ಅನುಗ್ರಹದಿಂದ, ನಿಮ್ಮ ಪರಮೈಶ್ವರವನ್ನು ಪ್ರದರ್ಶಿಸುವ ರೂಪವನ್ನು ಕಂಡು, ಮತ್ತು ನಿಮ್ಮ ಮಾಹಾತ್ಮೆಯಿಂದುಂಟಾದ ಪ್ರಶಂಸೆಯನ್ನು ಕಂಡು, ತುಂಬಾ ಸಂತೋಷಚಿತ್ತರಾಗಿಯೂ ನಿಮ್ಮಲ್ಲಿ ತುಂಬಾ ಭಕ್ತಿಯುಳ್ಳವರಾಗಿಯೂ ಇದ್ದಾರೆ. ಪ್ರತಿಕೂಲರಾದ ರಾಕ್ಷಸರಾದ ದುಷ್ಟರ ಸಮೂಹವಾದರೋ, ತುಂಬಾ ಭಯಪಟ್ಟ

ವರಾಗಿ ದಿಕ್ಕು ದಿಕ್ಕುಗಳಿಗೆ ಓಡಿಹೋಗುತ್ತಿವೆ. ಸಿದ್ಧರ ಸಮೂಹವೆಲ್ಲಾ ನಿಮಗೆ ನಮಸ್ಕರಿಸು ತ್ತಲಿದ್ದಾರೆ. ಇವೆಲ್ಲಾ ಅವರವರ ಸುಕೃತ ದುಷ್ಕೃತಗಳಿಗನುಸಾರವಾಗಿ ನ್ಯಾಯವಾದುದೇ.

೩೭|| ಅದು ಹೇಗೆ ನ್ಯಾಯವಾದುದೆಂದರೆ? ಇಬ್ಬರಿಗೂ ಅನ್ವಯಿಸುವಹಾಗೆ ಅರ್ಜುನನು ಹೇಳುತ್ತಾನೆ.—ಅನುಕೂಲರಾದ ಆ ದೇವತೆಗಳೂ ಸಿದ್ಧರೂ, ಮೊದಲಾದವರು ಇಂತಹ ಮಹಾ ತ್ಮಾವಾಗಿ ಸರ್ವಶ್ರೇಷ್ಠನಾಗಿ ಎಲ್ಲಾದಕ್ಕೂ ಆದಿಕಾರಣನಾಗಿರುವ ಪರಬ್ರಹ್ಮನಾದ ನಿಮಗೆ ನಮಸ್ಕರಿಸದೇ ಇರಲು ಹೇಗೆ ಸಾಧ್ಯವು ? ನಮಸ್ಕರಿಸಿಯೇ ನಮಸ್ಕರಿಸತಕ್ಕವರು. ಏಕೆಂದರೆ ಅವರು ಪರಮ ಸುಕೃತಿಗಳು. ದುಷ್ಕೃತಿಗಳಿಗೆ ಅನ್ವಯಿಸುವಾಗ ಅರ್ಥವು ಹೇಗೆಂದರೆ,- ಅಂತಹ ಮಹಾತ್ಮಾವಾಗಿ ಸರ್ವಶ್ರೇಷ್ಠರಾಗಿ ಸರ್ವಕ್ಕು ಆದಿಕಾರಣರಾಗಿ ನೀವು ಇದ್ದರೂಕೂಡ, ಪ್ರತಿಕೂಲರಾದ ರಾಕ್ಷಸರೇ ಮೊದಲಾದವರು ತಮಗೆ ಯಾವ ಕಾರಣದಿಂದ ನಮಸ್ಕರಿಸದೇ, ದಿಕ್ಕು ದಿಕ್ಕುಗಳಿಗೆ ಓಡಿಹೋಗುವರೋ ? ಎಂದರೆ ಅವರ ದುರದೃಷ್ಟವು ಅಷ್ಟು ಪ್ರಬಲವಾದು ದೆಂಬ ಭಾವವು.

೩೭-೩೭|| ಸರ್ವೇಶ್ವರನಾಗಿ ಪರಮೈಶ್ವರ್ಯವುಳ್ಳ ಮೂರ್ತಿಯನ್ನು ಅರ್ಜುನನು ಸ್ತೋತ್ರಮಾಡುತ್ತಾನೆ.—ಓ ದೇಶಕಾಲವಸ್ತು ಪರಿಚ್ಛಿತ್ತಿ ರಹಿತನೇ ? ಬ್ರಹ್ಮಾದಿ ಸಮಸ್ತ ದೇವತೆಗಳಿಗೂ ಸ್ವಾಮಿಯೇ ! ಸಮಸ್ತ ಜಗತ್ತನ್ನೂ ನಿವಾಸವಾಗಿ ಉಳ್ಳವನೇ ! ಅಥವಾ ಸಮಸ್ತ ಜಗತ್ತಿಗೂ ಆಶ್ರಯಭೂತನೇ! ಪ್ರಸಿದ್ಧನಾಗಿ ಶ್ರುತಿಗಳಲ್ಲಿ ನಾಶರಹಿತನಾಗಿರುವದರಿಂದ ಅಕ್ಷರಶಬ್ದವಾಚ್ಯನೇ ! ಅಥವಾ ಅಕ್ಷರಶಬ್ದವಾಚ್ಯವಾಗಿ ಸ್ವರೂಪನಾಶವಿಲ್ಲದ ಜೀವತತ್ವಕ್ಕೆ ಆತ್ಮಾವಾಗಿರುವವನೇ ! **ಸತ್,** ಅಸಚ್ಛಬ್ದಗಳಿಂದ ಹೇಳಲ್ಪಟ್ಟ ಕಾರ್ಯ ಕಾರಣ ಭಾವದಿಂದಿ ರುವದೆಲ್ಲಾ ನೀನೇ, ಎಂದರೆ ನಾಮರೂಪ ವಿಭಾಗವನ್ನು ಹೊಂದಿ ಕಾರ್ಯಾವಸ್ಥೆಯಲ್ಲಿರುವದು ಸಚ್ಛಬ್ದವಾಚ್ಯವು, ನಾಮರೂಪ ವಿಭಾಗಕ್ಕೆ ಅನರ್ಹವಾಗಿ ಕಾರಣಾವಸ್ಥೆಯಲ್ಲಿರುವದು, ಅಸಚ್ಛಬ್ದವಾಚ್ಯವು, ಹೀಗೆ ಸದಸಚ್ಛಬ್ದಗಳಿಂದ ಹೇಳಲ್ಪಡುವವನೂ ನೀನೇ. **ತತ್ಪರಂ** ಎಂದರೆ ಆ ಪ್ರಕೃತಿಗೂ ಪ್ರಕೃತಿ ಸಂಬಂಧವುಳ್ಳ ಬದ್ಧಾತ್ಮರಿಗಿಂತ ಮೇಲಾದ ಮುಕ್ತಾತ್ಮರಿಗೂ ಆತ್ಮಾವಾಗಿರುವವನು ನೀನೇ. ದೇವತೆಗಳೇ ಮೊದಲಾದವರಿಗೂ ಮೂಲಪುರುಷನೂ ನೀನೇ. ಎಲ್ಲಾ ಜೀವಾತ್ಮರೂ ಸ್ತ್ರೀಪ್ರಾಯವಾಗಿ, ನೀನೊಬ್ಬನೇ ಎಲ್ಲರಿಗೂ ನಿಯಾಮಕನಾಗಿ ಪುರುಷ ಸೂಕ್ತದಲ್ಲಿ ಹೇಳಲ್ಪಟ್ಟ ಪುರುಷ ಶಬ್ದವಾಚ್ಯನೂ ನೀನೇ. ಸನಾತನನಾಗಿರುವವನೂ ನೀನೇ, ಸಮಸ್ತ ವಿಶ್ವವೂ ನಿನ್ನಲ್ಲಿದ್ದು ಅವುಗಳಿಗೆ ಆತ್ಮಾವಾಗಿ ಆಧಾರಭೂತನೂ ನೀನೇ.

೩೮. ಜಗತ್ತಿನಲ್ಲಿ ಸಮಸ್ತ ತಿಳಿಯುವವರೂ, ತಿಳಿಯಲ್ಪಡತಕ್ಕವೂ ಎಲ್ಲವೂ ನೀನೇ, ಎಂದರೆ ಅವಕ್ಕೆಲ್ಲಾ ಆತ್ಮಾವಾಗಿರುವವನು ನೀನೇ ಎಂಬ ಭಾವವು. ಸರ್ವೋತ್ಕೃಷ್ಟವಾದ ಪ್ರಾಪ್ಯಸ್ಥಾನವೂ ನೀನೇ. ಓ ಅಪರಿಚ್ಛೇದ್ಯ ಸ್ವರೂಪನೇ ! ಹೀಗೆ ನೀನೇ ಎಲ್ಲಕ್ಕೂ ಆತ್ಮಾ ವಾಗಿ ಈ ಸಮಸ್ತವನ್ನು ವ್ಯಾಪಿಸಿರುತ್ತೀಯೇ.

೩೮|| ಎಲ್ಲವನ್ನೂ ವ್ಯಾಪಿಸಿರುವದರಿಂದ, ಸಮಸ್ತರಿಗೂ ಪ್ರಪಿತಾಮಹನೂ ಮತ್ತು ಪಿತಾಮಹಾದಿಗಳೆಲ್ಲರೂ ನೀನೇ. ಪ್ರಜೆಗಳ ತಂದೆಗಳೂ ನೀನೇ. ಪ್ರಜಾಪ್ರತಿಗಳೂ ನೀನೇ. ಆ ಪ್ರಜಾಪತಿಗಳಿಗೂ ಪಿತಾವಾದ ಚತುರ್ಮುಖ ಬ್ರಹ್ಮನೂ ನೀನೇ. ಹಾಗೆಯೇ ವಾಯುವೂ, ಯಮನೂ, ಅಗ್ನಿಯೂ, ವರುಣನೂ, ಚಂದ್ರನೂ ಎಲ್ಲಾ ದೇವತೆಗಳೂ ನೀನೇ ; ಎಂದರೆ, ಅವರಿಗೆಲ್ಲಾ ಸತ್ತಾದಾಯಕನಾಗಿ ಆತ್ಮಾವಾಗಿರುವದರಿಂದ ನೀನು ಈ ವಿಶ್ವದ ಸರ್ವಶಬ್ದ ವಾಚ್ಯನೂ ನೀನೇ ಎಂಬ ಭಾವವು.

೩೯-೩೯॥ ಅರ್ಜುನನು ಪರಮಾತ್ಮನ ಮಾಹಾತ್ಮ್ಯೆಯನ್ನು ತೋರುವ ಪಾರಮ್ಯೈಶ್ವರವನ್ನು ಕಂಡು ನಮಸ್ಕರಿಸುತ್ತಾನೆ.—ಓ ಮಹಾತ್ಮನೇ! ನಿನಗೆ ಸಹಸ್ರ ಸಲ ಪ್ರಣಾಮವು; ನಿನಗೆ ಪುನಃ ಪುನಃ ಅನೇಕ ಸಲ ನಮಸ್ಕಾರವು (ಇದರಿಂದ ಏಕ ನಮಸ್ಕಾರವು ಉಚಿತವಲ್ಲವೆಂದಾಯಿತು.) ಶ್ರುತಿಗಳಿಗನುಸಾರವಾಗಿ, ಲೀಲಾಸಾರಥಿಯು ೭ನೆಯ ಅಧ್ಯಾಯದಲ್ಲಿ ತನ್ನ ಮಹತ್ತಾದ ಸ್ವರೂಪ ಸ್ವಭಾವಗಳ ವಿಷಯವಾಗಿ ಮಾಡಿದ ಉಪದೇಶವನ್ನು ಜ್ಞಾಪಕವಲ್ಲಿಟ್ಟು ಹೇಳುತ್ತಾನೆ. ಎಲ್ಲಾ ವಿಶ್ವದ ವಸ್ತುಗಳಿಗೂ ಆತ್ಮಾವಾಗಿರುವದರಿಂದ ಸರ್ವಶಬ್ದವಾಚ್ಯನಾಗಿರುವವನೇ; ಹಿಂದೆಯೂ ಮುಂದೆಯೂ ಮೇಲೂ ಕೆಳಗೂ ಎಲ್ಲಾ ಕಡೆಯಲ್ಲೂ ನಿನಗೆ ನಮಸ್ಕಾರವು.

೪೦. ಸರ್ವವೂ ನೀನೇ ಎಂದು ಸಾಮಾನಾಧಿಕರಣ್ಯದಿಂದ ಹೇಳಿದುದನ್ನು ಅರ್ಜುನನು ಸ್ಪಷ್ಟಪಡಿಸುತ್ತಾನೆ.—ನೀನು ಅಪರಿಮಿತವಾದ ವೀರ್ಯ ಮತ್ತು ಪರಾಕ್ರಮವುಳ್ಳವನು, ವೀರ್ಯವೆಂದರೆ ಸರ್ವ ವಿಶ್ವದ ಸರ್ವ ಪ್ರವೃತ್ತಿಗಳಿಗೂ ಕಾರಣನಾಗಿದ್ದರೂ ಸ್ವಲ್ಪವಾಗಲಿ ವಿಕಾರವಿಲ್ಲದಿರುವಿಕೆಯು. ನೀನು ಸಮಸ್ತವನ್ನೂ ಶರೀರವಾಗಿ ಹೊಂದಿ, ಅವುಗಳನ್ನೆಲ್ಲಾ ವ್ಯಾಪಿಸಿ, ಅವುಗಳಿಗೆಲ್ಲಾ ಆತ್ಮಾವಾಗಿ ಹೀಗೆ ವಿಶ್ವದಲ್ಲಿರುವ ನಾನಾ ಪ್ರಕಾರವಾಗಿ ತೋರಿಬರುವದರಿಂದ ಸರ್ವವೂ ನೀನೇ ಆಗಿ, ಸರ್ವಶಬ್ದವಾಚ್ಯತ್ವವು ನಿನಗುಂಟು. ಎಲ್ಲವನ್ನೂ ವ್ಯಾಪಿಸಿ, ಎಲ್ಲಕ್ಕೂ ಆತ್ಮಾವಾಗಿರುವದೇ ಸಾಮಾನಾಧಿಕರಣ್ಯಕ್ಕೆ ಹೇತುವೆಂದು ಇಲ್ಲಿ ಸ್ಪಷ್ಟವಾಗಿ ಉಪದೇಶಿಸಲ್ಪಟ್ಟಿತು.

೪೧-೪೨ ಶ್ರೀ ಕೃಷ್ಣ ಪರಮಾತ್ಮನ ಇಂತಹ ಅದ್ಭುತ ಮಾಹಾತ್ಮ್ಯೆಯನ್ನು ವಿವೇಕಿಸಿ ತಿಳಿಯದೆ ಅನೇಕಾಪಚಾರಗಳಿಗೆ ತಾನು ಗುರಿಯಾದೆನು ಎಂದು ಭಾವಿಸಿ, ಅವುಗಳನ್ನೆಲ್ಲಾ ಕ್ಷಮಿಸಿ ಎಂದು, ಮುಂದಿನ ಎರಡು ಶ್ಲೋಕಗಳಿಂದ ಬೇಡುತ್ತಾನೆ.—ಇಂತಹ ತಮ್ಮ ಅಪರಿಮಿತ ಮಾಹಾತ್ಮ್ಯೆಯನ್ನು ಅರಿಯದ ನನ್ನಿಂದ ಸಾಧಾರಣ ಸ್ನೇಹಿತನೆಂದು ಭಾವಿಸಿ, ವಿನಯವಿಲ್ಲದೆ ಅಹಂಕಾರದಿಂದ ಓ ಕೃಷ್ಣನೇ! ಓ ಯಾದವನೇ! ಓ ಸಖನೇ! ಹೀಗೆಲ್ಲಾ ಕರೆದು, ಭ್ರಮದಿಂದಲೂ ಸ್ನೇಹದಿಂದಲೂ ಅಪಹಾಸ್ಯಮಾಡುವ ಭಾವನೆಯಿಂದಲೂ ಏನನ್ನು ಹೇಳಿರುತ್ತೇನೋ, ಮತ್ತು ಜೊತೆಯಲ್ಲಿ ಆಟವೇನು, ಮಲಗುವದೇನು, ಭೋಜನವೇನು, ಈ ಕಾಲಗಳಲ್ಲಿ ಒಬ್ಬನೇ ಇರುವಾಗಲೂ ಮತ್ತು ಇತರರ ಸಮಕ್ಷದಲ್ಲೂ, ಓ ನಾಶರಹಿತನೇ! ಯಾವ ಯಾವ ಅವಮರ್ಯಾದೆಯಿಂದ ನೋಡಿರುತ್ತೇನೋ, ಅವೆಲ್ಲವನ್ನೂ ಕೃಪಯಾ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ.

೪೩. ಈ ಅಪರಾಧ ಕ್ಷಮಾಪಣೆಗಾಗಿ ಈ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನರವರನ್ನು, ಕೊಂಡಾಡಿ, ಮುಂದಿನ ಶ್ಲೋಕದಲ್ಲಿ ಶರಣಾಗತಿಯನ್ನನುಷ್ಠಿಸಿ ಅದರ ಫಲವಾಗಿ ಅಪರಾಧ ಪರಿಹಾರವನ್ನು ಬೇಡಿ, ೪೫ನೆಯ ಶ್ಲೋಕದಲ್ಲಿ ವಿಶ್ವರೂಪವನ್ನು ತೋರಿದ ಹಾಗೆಯೇ ತಮ್ಮ ಅಮೋಘವಾದ ಪ್ರಾಪ್ಯರೂಪವನ್ನು ದಯವಿಟ್ಟು ಪ್ರದರ್ಶಿಸಿ ಎಂದು ಬೇಡುತ್ತಾನೆ.—ಅಸದೃಶ್ಯ ಪ್ರಭಾವವುಳ್ಳವನೇ! ಈ ಚರಾಚರಗಳೆಂದರೆ ಜಂಗಮ ಸ್ಥಾವರಗಳನ್ನುಳ್ಳ ಈ ಸಮಸ್ತ ಜಗತ್ತಿಗೂ ತಾವು ಲೋಕಹಿತವನ್ನುಂಟುಮಾಡುವ ಪಿತವಾಗಿದ್ದೀರಿ. ಆದುದರಿಂದ ಸಮಸ್ತರಿಂದಲೂ ತಾವು ಪೂಜಿಸಲ್ಪಡಲು ಯೋಗ್ಯರು. ತಾವೇ ಇಂತಹ ಅದ್ಭುತ ಉಪದೇಶದ ಮೂಲಕ ಅವರುಗಳ ಅಜ್ಞಾನಂಧಕಾರವನ್ನು ತೊಲಗಿಸಿ ಶಾಸ್ತ್ರಜ್ಞಾನ ವಿವೇಕ ಜ್ಞಾನವನ್ನುಂಟುಮಾಡುವ ಲೋಕಗುರುವು. ಎಲ್ಲರಿಗಿಂತಲೂ ನೀವೇ ಸರ್ವಶ್ರೇಷ್ಠರು; ಏಕೆಂದರೆ ಮೂರು ಲೋಕದಲ್ಲೂ, ತಮಗೆ ಬೇರೆಯಾರೂ ಸಮರೂ ಇಲ್ಲವು, ಹೀಗಿರುವಾಗ ತಮಗಿಂತ ಅಧಿಕರೂ ಎಲ್ಲಿ ಇದ್ದಾರೇ?

೪೪. ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ **ಪ್ರಸಾದಯೇ, ಪ್ರಸೀದ** ಎಂಬ ಸಮಾನಾರ್ಥಕ ಪದಗಳಿಂದ ತಮ್ಮ ಎರಡು ಪ್ರಾರ್ಥನೆಗಳನ್ನೂ ತಿಳಿಸುತ್ತಾನೆ.—ಇಲ್ಲಿ ಅನಿಷ್ಟ

ನಿವರ್ತ್ತನೆಯನ್ನೂ, ಮುಂದೆ ಇಷ್ಟಪ್ರಾಪ್ತಿಯನ್ನೂ, ಬೇಡುತ್ತಾನೆ.—ಯಾವ ಕಾರಣದಿಂದ ತಾವು ಲೋಕಹಿತೈಷಿಗಳಾದ ಪಿತಾವಾಗಿಯೂ, ಗುರುವಾಗಿಯೂ ಪೂಜ್ಯತಮರಾಗಿಯೂ ಎಲ್ಲರಿಗಿಂತಲೂ ಸರ್ವೋತ್ಕೃಷ್ಟರಾಗಿಯೂ ಇದ್ದೀರೋ **ತಸ್ಮಾತ್** - ಆ ಕಾರಣದಿಂದ, ಸರ್ವನಿಯಂತಾವಾಗಿ ಸರ್ವಸ್ತುತಿಗೂ ಅರ್ಹರಾಗಿರುವ ತಮಗೆ ಶರಣಾಗತನಾಗಿ, ಈ ಶರೀರದಿಂದ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಪಿತಾವಾದವನು ತನ್ನ ಪುತ್ರನ ಅಪರಾಧವನ್ನೂ, ಪ್ರಿಯ ಸ್ನೇಹಿತನು ತನ್ನ ಸ್ನೇಹಿತನ ಉಪರಾಧವನ್ನೂ, ಹೇಗೆ ಮನ್ನಿಸುವನೋ, ಹಾಗೆಯೇ ಓ ಲೀಲಾ ವಿಭೂತಿಯಲ್ಲಿ ರಮಿಸುವವನೇ! ಹೀಗೆ ಅತ್ಯಂತ ಪ್ರಿಯನಾದ ನೀನು ನನಗೆ ಹಿತವನ್ನುಂಟುಮಾಡುವದಕ್ಕಾಗಿ ನನ್ನ ಸರ್ವಾಪರಾಧವನ್ನೂ ಕ್ಷಮಿಸಿ ಅನುಗ್ರಹಿಸಬೇಕೆಂದು ಪ್ರಾರ್ಥನೆಯು.

೪೫. ಹಿಂದೆ ಯಾವಾಗಲೂ ನೋಡದಿರುವ ಈ ಮಹತ್ತಾದ ವಿಶ್ವರೂಪವನ್ನು ನೋಡಿ, ಸಂತೋಷಗೊಂಡವನಾದೆನು; ಮತ್ತು ನನ್ನ ಮನಸ್ಸೂ ಭಯದಿಂದ ಕಳವಳಗೊಂಡಿದೆ. ಓ ದೇವತೆಗಳಿಗೆಲ್ಲಾ ನಿಯಾಮಕನೇ! **ಜಗನ್ನಿವಾಸ** - ಜಗತ್ತಿಗೆಲ್ಲಾ ಆಧಾರಭೂತನೇ! ಈಗ ತಾವು ಬೋಧಿಸಿದ ಭಕ್ತಿಯೋಗದಿಂದ ಪ್ರಾಪ್ತವಾಗುವ ಪ್ರಸಿದ್ಧವಾದ ಪ್ರಾಪ್ಯರೂಪವನ್ನೂ ಅನುಗ್ರಹಿಸಿ ತೋರಿಸು.

೪೬. ತಾನು ನೋಡಬೇಕೆಂದಿರುವ ಆ ಪ್ರಸಿದ್ಧ ರೂಪವೆಂತಾದ್ದೆಂದರೆ ಹೇಳುತ್ತಾನೆ—ದಿವ್ಯ ಕಿರೀಟವನ್ನು ಧರಿಸಿದವನಾಗಿಯೂ, ಗದಾಯುಧವನ್ನು ಹಿಡಿದವನಾಗಿಯೂ, ಚಕ್ರಾಯುಧವನ್ನುಳ್ಳವನಾಗಿಯೂ, ಇರುವ ಆ ಪ್ರಸಿದ್ಧ ರೂಪವನ್ನು, ಈ ವಿಶ್ವರೂಪವನ್ನು ಹೇಗೆ ನೋಡಿದೆನೋ, ಹಾಗೆಯೇ ನೋಡಬೇಕೆಂಬ ವಿಶೇಷ ಕುತೂಹಲವುಂಟು. ಚತುರ್ಭುಜಗಳುಳ್ಳ ಅಂತಹ ಪ್ರಸಿದ್ಧವಾದ ರೂಪದಿಂದ ತೋರುವವನಾಗು. ಈಗ ಓ ವಿಶ್ವಮೂರ್ತಿಯಾಗಿ ಸಹಸ್ರ ಬಾಹುಗಳನ್ನು ಧರಿಸಿರುವವನೇ, ಈ ನಾಲ್ಕು ಭುಜಗಳಿಂದ ಸೇವೆಯನ್ನು ಕೊಡುವದೇನೋ ನಿನಗೆ ಕಷ್ಟವಲ್ಲವು.

೪೭. ಯಾವಾಗ ಅರ್ಜುನನು ಹೀಗೆ ಪ್ರಾರ್ಥಿಸಿದನೋ, ಭಕ್ತವತ್ಸಲನಾದ ಲಕ್ಷ್ಮೀಯುಕ್ತ ಭಗವಂತನು ಹೇಳುತ್ತಾನೇನೆಂದರೆ—ಓ ಅತ್ಯರ್ಥ ಪ್ರಿಯನಾದ ಅರ್ಜುನನೇ, ನಿನ್ನ ಭಕ್ತಿಗೆ ಮೆಚ್ಚಿದವನಾಗಿ ನೀನು ಪ್ರಾರ್ಥಿಸಿದ ಪರರೂಪವೂ ಇಗೋ ತೋರಿಸಲ್ಪಟ್ಟಿತು. ಅದು ಬಹಳ ತೇಜೋಮಯವಾದುದು, ಸಮಸ್ತ ಐಶ್ವರ ಮತ್ತು ಗುಣ ಯೋಗದಿಂದಲೂ ಪರಿಪೂರ್ಣವಾಗಿ ನಿತ್ಯಮುಕ್ತರಿಗೆ ಆನಂದಪ್ರದವಾದುದು; ಅನಂತವಾದುದು; ಆದಿಮಧ್ಯಾನ್ತರಹಿತವಾಗಿ ಅನಾದಿಯಾಗಿ ಶಾಶ್ವತವಾಗಿರುವಂತಾದ್ದು. ಅದು ನೀನಲ್ಲದೆ ಇನ್ನು ಯಾರೊಬ್ಬರಿಂದಲೂ ಇಲ್ಲಿ ನೋಡಲ್ಪಡದೆ ಇರುವಂತಾದ್ದು.

೪೮. ಸಾಕ್ಷಾತ್ತಾಗಿ ಹೇಗೆ ಇದೆಯೋ ಹಾಗೆ ಈ ಪರರೂಪವನ್ನು ಈ ಮನುಷ್ಯಲೋಕದಲ್ಲೇ ಪ್ರತ್ಯಕ್ಷವಾಗಿ ಕಾಣಲು ಯಾರಿಂದಲೂ ಯಾವ ಉಪಾಯದಿಂದಲೂ ಸಾಧ್ಯವಿಲ್ಲವೆನ್ನುತ್ತಾರೆ—ಮನಸ್ಸಿನಿಂದ ಸಾಕ್ಷಾತ್ಕರಿಸಬಹುದೇ ವಿನಾ ಪ್ರತ್ಯಕ್ಷವಾಗಿ ನೋಡಲು ಸಾಧ್ಯವಿಲ್ಲವೆಂದು ಹೇಳುತ್ತಾರೆ.—ವೇದಗಳ ಅಧ್ಯಯನ ಅಧ್ಯಾಪನ ಅರ್ಥಗ್ರಹಣ ಮೊದಲಾದವುಗಳಿಂದಾಗಲಿ, ಪಂಚ ಮಹಾ ಯಜ್ಞಾನುಷ್ಠಾನಗಳಿಂದಾಗಲಿ, ಸತ್ಪಾತ್ರದಾನದಿಂದಾಗಲಿ, ಇನ್ನು ಯಾವ ಸದನುಷ್ಠಾನಗಳಿಂದಾಗಲಿ, ಅನಶನವ್ರತ ಮೊದಲಾದ ತಪಸ್ಸುಗಳಿಂದಾಗಲಿ, ಈ ಮಾನುಷಲೋಕದಲ್ಲೇ ಇದ್ದುಕೊಂಡು ಈಗ ನಿನಗೆ ತೋರಿಸಿದ ಪರರೂಪವನ್ನು ಸಾಕ್ಷಾತ್ತಾಗಿ ನೋಡಲು ಯಾರಿಂದಲೂ ಸಾಧ್ಯವಿಲ್ಲವು.

೪೯. ನಿನಗೆ ಭಯವೂ ವ್ಯಥೆಯೂ ಉಂಟಾಗಿದೆ ಎಂದು ಹೇಳಿದೆಯಾದುದರಿಂದ ಈಗ ನಾನು ಉಪಸಂಹಾರಮಾಡಿದರಿಂದ ಈ ನನ್ನ ಘೋರರೂಪದಿಂದ ನಿನಗೆ ವ್ಯಥೆಯೂ ಬೇಡವು,

ಮನಃಕ್ಲೇಶವೂ ಬೇಡವು. ಭಯ ಮೊದಲಾದವುಗಳಿಂದ ಬಿಟ್ಟವನಾಗಿ, ಹರ್ಷಚಿತ್ತನಾಗಿ, ಪುನಃ ಈಗ ತೋರಿಸುತ್ತಿರುವ, ನೀನು **ತದೇವ ಮೇ ದರ್ಶಯ** ಎಂದು ಪ್ರಾರ್ಥಿಸಿದ ಮೇರಿಗೆ, **ತದೇವ ಮೇ ರೂಪಂ** ಆ ನನ್ನ ಪ್ರಸಿದ್ಧ ಪರರೂಪವನ್ನೇ ತೋರಿಸಿರುತ್ತೇನೆ. **ಪ್ರಪಶ್ಯ** ಸಾವಧಾನದಿಂದ ಚನ್ನಾಗಿ ಅವಲೋಕಿಸು.

೫೦. ಈ ಎರಡನೆಯ ಸಲ ತೋರಿಸಿದ ಅದ್ಭುತ ದೃಶ್ಯವನ್ನು ಕಂಡು ಸಂಜಯರು ಧೃತರಾಷ್ಟ್ರನನ್ನು ಕುರಿತು ಶ್ರೀ ಕೃಷ್ಣಭಗವರ್ವಾರವರಿಗೆ ಅರ್ಜುನನಲ್ಲಿ ಎಷ್ಟು ಕೃಪಾ ವಾತ್ಸಲ್ಯವು? ತುಂಬಾ ಅದ್ಭುತವಾದುದೆಂದು ತಿಳಿಸುತ್ತಾರೆ.—ಈ ಪ್ರಕಾರವಾಗಿ ಪರವಾಸುದೇವ ಮೂರ್ತಿಯೇ ವಸುದೇವ ಸೂನನೂ ಆಗಿರುವದರಿಂದ ಅರ್ಜುನನನ್ನು ಕುರಿತು ನಿನ್ನ ಇಷ್ಟದಂತೆಯೇ ಆಗಲಿ ಎಂದು ಹೇಳಿ, ತನಗೇನೇ ಅಸಾಧಾರಣವಾಗಿ ಶಾಶ್ವತವಾಗಿರುವ ಪರವಾಸುದೇವ ರೂಪವನ್ನು ಎರಡನೆಯ ಸಲ ತೋರಿಸಿದನು. ಮತ್ತು ವಿಶ್ವರೂಪದರ್ಶನದಿಂದ ಭಯಹೊಂದಿದವನನ್ನು ಸಮಾಧಾನಗೊಳಿಸದನು. ಮಹತ್ತಾದ ಸತ್ಯ ಸಙ್ಕಲ್ಪವುಳ್ಳ ಶ್ರೀ ಕೃಷ್ಣನು ಪುನಃ ಸೌಮ್ಯರೂಪ ವಾದ ಮಾನುಷ ಶರೀರವನ್ನು ಹೊಂದಿದನು. ಇಲ್ಲಿ ವಾಸುದೇವ ಶಬ್ದಾರ್ಥ ಗೌರವದಿಂದ ವಾಸುದೇವ ರೂಪವೇ ಎರಡನೆಯ ಸಲ ತೋರಿಸಲ್ಪಟ್ಟಿದೆಂಬುದು ಸುಸ್ಪಷ್ಟವು.

೫೧. ಯಾವಾಗ ಅರ್ಜುನ ಪ್ರಾರ್ಥನೆಯಪ್ರಕಾರ ಪ್ರಾಪ್ಯರೂಪವನ್ನು ತೋರಿ ಅನಂತರ ಮಾನುಷ ಶರೀರವನ್ನು ಧರಿಸಿದನೋ, ಆಗ ತನಗೆ ಚಿತ್ತ ಸಮಾಧಾನ ದೊರಿಯಿತೆಂದು ಅರ್ಜು ನನು ಭಗವಂತನನ್ನು ಕುರಿತು ಹೇಳುತ್ತಾನೆ.—ಓ ಶಿಷ್ಟಪರಿಪಾಲನೆಗಾಗಿ ದುಷ್ಟರನ್ನು ನಿಗ್ರಹಿಸು ವವನೇ! ಈಗ ನೀನು ತೋರಿಸಿದ ಹಿಂದಿನ ಸೌಮ್ಯವಾದ ಮಾನುಷ ರೂಪವನ್ನು ಕಂಡು ಚಿತ್ತ ಸಮಾಧಾನವನ್ನು ಹೊಂದಿ ಬದುಕಿದಹಾಗೆ ಭಾವಿಸುವೆನು, ನನ್ನ ನೈಜ ಸ್ವಭಾವವನ್ನು ಹೊಂದಿದೆನು.

೫೨. ಮುಂದಿನ ಮೂರು ಶ್ಲೋಕಗಳಿಂದ ಶ್ರೀ ಕೃಷ್ಣಭಗವರ್ವಾರವರು ತಾವು ಎರಡನೆಯ ಸಲ ತೋರಿದ ಪ್ರಾಪ್ಯರೂಪದ ಮಾಹಾತ್ಮ್ಯೆಯನ್ನು ಅರ್ಜುನನಿಗೆ ತಿಳಿಸುತ್ತಾರೆ.—ಈಗ ಎರಡ ನೆಯ ಸಲ ನನ್ನನ್ನು ಪ್ರಾರ್ಥಿಸಿ ಯಾವ ಪ್ರಾಪ್ಯರೂಪವನ್ನು ಪ್ರತ್ಯಕ್ಷವಾಗಿ ಕಂಡೆಯೋ ಅದನ್ನು ಕಾಣುವದು ವಿಶೇಷ ಕಷ್ಟತರವು. ಬ್ರಹ್ಮಾದಿ ಸರ್ವ ದೇವತೆಗಳಿಗೂ ಕೂಡ ಅದು ಇನ್ನೂ ಸಿದ್ಧಿಸಿಲ್ಲವು. ಅವರುಗಳೂ ಕೂಡ ಈ ಲೋಕದಹಾಗೆಯೇ ಭಕ್ತಿಯೋಗ ಮೂಲಕವಾಗಿ ಉಪಾಸಿಸಿ, ನನ್ನನ್ನು ಶಾಶ್ವತವಾಗಿ ಯಾವಾಗಲೂ ನೋಡುತ್ತಿರಬೇಕೆಂಬ ಅಪೇಕ್ಷೆಯುಳ್ಳವ ರಾಗಿರುತ್ತಾರೆ.

೫೩. ಅದೇನು ದೇವತೆಗಳೂ ಕೂಡ ಇನ್ನೂ ಹೊಂದದೆ ಇರುವದು? ಎಂದರೆ ತಿಳಿಸು ತ್ತಾರೆ.—ನಾನು ಕೇವಲ ವೇದಾಧ್ಯಯನಾಧ್ಯಾಪನಗಳಿಂದಾಗಲಿ ಕೇವಲ ಅನಶನಾದಿ ವ್ರತ ಗಳಿಂದಲಾಗಲಿ ಕೇವಲ ಇಂತಹ ಯಾವ ಅನುಷ್ಠಾನಗಳಿಂದಲಾಗಲಿ ದಾನಗಳಿಂದಲಾಗಲಿ, ಕೇವಲಯಜ್ಞಯಾಗಾದ್ಯನುಷ್ಠಾನಗಳಿಂದಲಾಗಲಿ ನೀನು ಪ್ರತ್ಯಕ್ಷವಾಗಿ ಕಂಡಹಾಗೆ, ಇತರರು ಯಾರಿಗೂ ಸಾಕ್ಷಾತ್ಕರಿಸಲು ಸಾಧ್ಯವಿಲ್ಲ.

೫೪. ಹಾಗಾದರೆ ಪ್ರಾಪ್ಯವನ್ನು ಹೊಂದಿ ನನ್ನನ್ನು ಸಾಕ್ಷಾತ್ತಾಗಿ ನೋಡಲು ಸಾಕ್ಷಾ ತ್ತಾದ ಉಪಾಯವು ಯಾವುದೆಂದರೆ ತಿಳಿಸುತ್ತಾರೆ.—ಯಾವ ಐಹಿಕಗಳಲ್ಲಾಗಲೀ ಅನ್ಯದೇವತೆ ಗಳಲ್ಲಾಗಲಿ ಮನಸ್ಸನ್ನು ಇಡದಿರುವ ಪರಮೈಕಾಂತ ಭಕ್ತಿಯಿಂದಲೇ, ನನ್ನನು ಉಪಾಸಿಸು ವದಕ್ಕೂ, ಆ ಭಕ್ತಿಯು ವೃದ್ಧಿಹೊಂದಿ ನನ್ನನ್ನು ಸಾಕ್ಷಾತ್ಕರಿಸುವದಕ್ಕೂ ಮುಕ್ತಿಯನ್ನು

ಹೊಂದಿ ನನ್ನ ಪರಮಪದವನ್ನು ಪ್ರವೇಶಿಸಿ ಪರಿಪೂರ್ಣ ಬ್ರಹ್ಮಾನುಭವವನ್ನು ಹೊಂದುವದಕ್ಕೂ, ಸಾಧ್ಯವೇ ವಿನಾ, ಅನ್ಯಥಾ ಇಲ್ಲವು.

೫೫. ಆದುದರಿಂದ ನನ್ನ ಪರಮಹಿತೋಪದೇಶವು ಏನೆಂದರೆ.—ಯಾವನು ವೇದಾಧ್ಯಯನವೇ ಮೊದಲಾದ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ನನ್ನ ಆರಾಧನರೂಪವೆಂದು ಭಾವಿಸಿ ಫಲಸಂಗ ಕರ್ತೃತ್ವಗಳನ್ನು ತ್ಯಜಿಸಿ ಅನುಷ್ಠಿಸುವನೋ; ಮತ್ತು ಸಮಸ್ತ ಆರಂಭಿಸಲ್ಪಟ್ಟ ಕರ್ಮಗಳಿಗೂ ನಾನೇ ಉದ್ದೇಶ್ಯನೆಂದು ಭಾವಿಸುವನೋ; ಅತ್ಯರ್ಥ ಪ್ರೀತಿಯಿಂದ ನನ್ನನ್ನು ಏಕಾಂತ್ಯಭಕ್ತಿಯಿಂದ ಉಪಾಸಿಸಿ ಮಿಕ್ಕಕಾಲಗಳಲ್ಲಿ ನನ್ನ ಕೀರ್ತನ ಸ್ತುತಿ ಅರ್ಚನ ಪ್ರಣಾಮಾದಿಗಳನ್ನು ಮಾಡುತ್ತಾ, ನನ್ನಲ್ಲೇ ನಿರತಿಶಯ ಭಕ್ತಿಯುಳ್ಳವನಾಗುವನೋ; ಐಹಿಕೋಪಭೋಗಗಳಲ್ಲೂ ಅನ್ಯದೇವತೆಗಳಲ್ಲೂ ಸಂಗವಿಲ್ಲದವನಾಗುತ್ತಾನೋ! ಸಮಸ್ತ ಪ್ರಾಣಿಗಳೂ ನನಗೆ ಶರೀರವಾಗಿ ನಾನು ಆತ್ಮಾವಾಗಿರುವೆನೆಂಬ ಭಾವದಿಂದ ಯಾವ ಪ್ರಾಣಿಯನ್ನೂ ದ್ವೇಷಿಸದೇ ಇರುತ್ತಾನೋ; ಓ ಪಾಂಡುತನಯನಾದ ಅರ್ಜುನನೇ, ಅಂತವನು ನನ್ನನ್ನೇ ಹೊಂದುವನು. ಪರಮ ಪದವನ್ನು ಸೇರಿ, ನನ್ನ ಸಾಯುಜ್ಯವನ್ನು ಹೊಂದಿ, ಯಾವಾಗಲೂ ಪರಮಪುರುಷನಾದ ನನಗೆ ಸಮಾನವಾದ ಆನಂದವನ್ನು ಹೊಂದಿ ಪುನರಾವೃತ್ತಿ ಶಂಕಾವಿಲ್ಲದ ಶಾಶ್ವತ ಪದವನ್ನು ಹೊಂದುವನು ಎಂಬರ್ಥವು. ಇದೇ ಶ್ರೀ ಗೀತಾವಿನ ಪರಮಹಿತೋಪದೇಶವು.

ಹನ್ನೊಂದನೆಯ ಅಧ್ಯಾಯವು ಸಮಾಪ್ತವು.

ಶ್ರೀನಿವಾಸಮಹಾದೇಶಿಕಾಯನಮಃ



ಶ್ರೀ ಯಾಮುನ ಮುನಯೇ ನಮಃ

# ಶ್ರೀಮದ್ಗೀತಾರ್ಥಸಙ್ಗ್ರಹೇ

## ಏಕಾದಶಾಧ್ಯಾಯ ಸಙ್ಗ್ರಹ ಶ್ಲೋಕಃ

---

**ಏಕಾದಶೇ ಸ್ವಯಾಥಾತ್ಮ್ಯ (ಮಾಹಾತ್ಮ್ಯ) ಸಾಕ್ಷಾತ್ಕಾರಾವಲೋಕನಮ್ ।**
**ದತ್ತ ಮುಕ್ತಂ ವಿದಿಪ್ರಾಪ್ತ್ಯೋರ್ಭಕ್ತ್ಯೇಕೋಪಾಯತಾ ತಥಾ ॥** ೧೫.

**ಅರ್ಥವು:—ಏಕಾದಶೇ** – ಹನ್ನೊಂದನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆಂದರೆ ತಿಳಿಸುತ್ತಾರೆ.—

೧. **ಸ್ವಯಾಥಾತ್ಮ್ಯ ಸಾಕ್ಷಾತ್ಕಾರಾವಲೋಕನಮ್ ದತ್ತಂ** – ತಾನು ಹೇಗೆ ಇದ್ದಾನೋ ಅದರಂತಹ ದಿವ್ಯ ಮಙ್ಗಳದ ಸಾಕ್ಷಾತ್ಕಾರಕ್ಕೆ ಬೇಕಾದ, **ಅವಲೋಕನಂ**-ದಿವ್ಯ ಚಕ್ಷಸ್ಸು, **ದತ್ತಂ** - ಕೊಡಲ್ಪಟ್ಟಿದುದು **ಉಕ್ತಂ** – ಹೇಳಲ್ಪಟ್ಟಿತು. (ಗೀ. ೧೧. ೮) **"ದಿವ್ಯಂ ದದಾಮಿತೇ ಚಕ್ಷುಃ"** ಎಂಬಲ್ಲಿ ಹೇಳಿದರ್ಥವು ಸಙ್ಗ್ರಹೀತವು. ಹೀಗೆ ಹೇಳಿದುದರಿಂದ ಪರಮಾತ್ಮನ ಗುಣ ವಿಭವಗಳ ಯೋಗದಿಂದ ಮಾಹಾತ್ಮ್ಯಯನ್ನು ತೋರಿಸುವ ದಿವ್ಯರೂಪದ ಪ್ರಾರ್ಥನೆಯು, ಅನಂತರ ಭಕ್ತಪ್ರಾರ್ಥನೆಗನುಗುಣವಾಗಿ ವಿಶ್ವರೂಪ ಪ್ರದರ್ಶನವೂ, ಅದರಿಂದ ಭೂತ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ನಡೆಯುವ ವಿಷಯಗಳೂ, ಧಾರ್ತರಾಷ್ಟ್ರರ ನಾಶವೂ ಪಾಂಡವರ ಜಯವೂ ಇವುಗಳನ್ನೆಲ್ಲಾ ನೋಡಿ ಭೀತಿಗೊಂಡು, ಅನಂತರ ದಿವ್ಯವೈಕುಂಠದಲ್ಲಿ ನಿತ್ಯಮುಕ್ತರುಗಳಿಗೆ ಪ್ರದರ್ಶಿಸುವ ತನ್ನ ಸ್ವಾಭಾವಿಕವಾದ ಚತುರ್ಭುಜಾಕೃತಿಯನ್ನು ದಿವ್ಯಾಯುಧಾಭರಣ, ಮಕುಟ ವನಮಾಲಾಪೀತವಾಸಾದಿಗಳಿಂದ ಯುಕ್ತವಾದುದನ್ನಾಗಿ ನೋಡಬೇಕೆಂಬ ಪ್ರಾರ್ಥನೆಯೂ, ಹೀಗೆ ಎರಡು ವಿಭೂತಿಯ ಮಾಹಾತ್ಮ್ಯಯ ಪ್ರದರ್ಶನವೂ ಅನಂತರ ಮಾನುಷಾಕೃತಿಯ ಗ್ರಹಣವೂ ಎಲ್ಲವೂ ಇದರಲ್ಲೇ ಅಂತರ್ಗತವು. ಹೀಗೆ ಇವೆರಡು ರೂಪಗಳ ಅವಲೋಕನಗಳಿಗೂ ದಿವ್ಯ ಚಕ್ಷುಸ್ಸು ಅವಶ್ಯಕವೆಂದು ತಿಳಿಯತಕ್ಕದ್ದು.

೨. **ತಥಾ** – ಹಾಗೆಯೇ **ವಿದಿ ಪ್ರಾಪ್ತ್ಯೋಃ** - ಉಪಾಸನೆಯ ಮೂಲಕ ಸಾಕ್ಷಾತ್ಕಾರವೇನು, ಅದರಿಂದುಂಟಾಗುವ ಪ್ರಾಪ್ತಿಯೇನು, ಇವೆರಡಕ್ಕೂ **ಭಕ್ತ್ಯೇಕೋಪಾಯತಾ** - ಭಕ್ತಿಯೋಗವೇ ಮುಖ್ಯವಾದ ಉಪಾಯವೆಂಬುದೂ, **ಉಕ್ತಾ** – ಹೇಳಲ್ಪಟ್ಟಿತು. **ಉಕ್ತಂ ಚ ಉಕ್ತಾ ಚ ಉಕ್ತಂ** ಎಂಬದಾಗಿ ಇಲ್ಲಿ ವಿಗ್ರಹವಾಕ್ಯರೀತ್ಯಾ ಇಲ್ಲಿ **ಉಕ್ತಾ** ಎಂದು ಸ್ತ್ರೀಲಿಂಗ ಪ್ರಯೋಗವನ್ನು ಇಟ್ಟುಕೊಳ್ಳತಕ್ಕದ್ದು. ಇದರಿಂದ ಭಕ್ತಿಯೋಗವೇ ಮುಖ್ಯೋಪಾಯವೆನ್ನುವದರಿಂದ, **ವೇದ ಹೋಮ ದಾನಯಾಗ ತಪಸ್ಸೇ** ಮೊದಲಾದವುಗಳು ಈ ಸಾಧ್ಯೋಪಾಯಕ್ಕೆ ಸಹಕಾರಿಯೇ ವಿನಾ ಸಾಕ್ಷಾತ್ತಾಗಿ ಉಪಾಯವಲ್ಲವೆಂದು ಹೇಳಿದಂತಾಯಿತು. **"ಕಲೌ ಸಂಕೀರ್ತ್ಯ ಕೇಶವಂ"** ಎಂದು ಹೇಳಿದ್ದರೂ, ಸಂಕೀರ್ತನೆಯೂ ಸಾಕ್ಷಾತ್ತಾಗಿ ಉಪಾಯವಲ್ಲವು. ಅದೂ ಕೂಡ ಉಪಾಯಾನುಷ್ಠಾನಕ್ಕೆ ಸಹಕಾರಿಯೆಂದೇ ಭಾವಿಸತಕ್ಕದ್ದು. ಇದರಿಂದ ಶರಣಾಗತಿಯಿಲ್ಲದ ಯಾವುದೂ ಉಪಾಯವಾಗುವುದಿಲ್ಲವು. ಆದುದರಿಂದ ಭಕ್ತಿಯೋಗಕ್ಕೆ ಶರಣಾಗತಿಯು ಅಙ್ಗವಾಗಿರುವುದರಿಂದ **ಭಕ್ತ್ಯೇಕೋಪಾಯತಾ** ಎಂಬ ಪ್ರಯೋಗವು

(೫೨. ೫೩. ೫೪. ಶ್ಲೋಕಗಳರ್ಥವು) ಇದರ ಅನುಷ್ಠಾನವು ಮಾತ್ರವೇ ಸಾಲದು, ಇದು ಅನನ್ಯವಾದುದಾಗಿ ಇದರಿಂದ ಪರಮ ಪುರುಷನು ಪ್ರೀತನಾಗಬೇಕು. **"ಭಕ್ತ್ಯೈಕೋಪಯುತಾ"** ಎಂಬ ಪ್ರಯೋಗದಿಂದ ಭಕ್ತಿಯು ಎರಡು ಉಪಾಯಗಳಿಗೂ ಆವಶ್ಯಕವಾಗಿರುವದರ ಮೂಲಕ ಎರಡು ಉಪಾಯಗಳೂ ಹೇಳಲ್ಪಟ್ಟವೆಂದು ಭಾವಿಸಬಹುದು. (೫೪), ಆದುದರಿಂದ ಸದಾ **"ಮತ್ಕರ್ಮಕೃತ್ ಮತ್ಪರಮಃ"** ಇತ್ಯಾದಿಗಳಿಂದ ಹೇಳಲ್ಪಟ್ಟದೂ ಸಹ ಇದರಲ್ಲೇ ಗರ್ಭಿತವು. (೫೫). ಆ ಪ್ರಾಪ್ತಿಯ ಸ್ವರೂಪವು ಎಂತಾದ್ದೆಂಬುದೂ ಸಹ ಸೂಚಿತವು. **ಪ್ರವೇಷ್ಟುಂ,** ಮಾಮೇತಿ ಇತ್ಯಾದಿ ಪ್ರಯೋಗಗಳಿಂದ ದೇಶ ವಿಶೇಷ ಪ್ರವೇಶದೊಂದಿಗೆ ಸಾಯುಜ್ಯ ಸಾರ್ಷ್ಟಿತಾಗಳು ಹೇಳಲ್ಪಟ್ಟವು. ಆತನಿಗೆ ಉಂಟಾಗುವ ಅರ್ಚಿರಾದಿಗತಿ ಮತ್ತು ಅಪುನರಾವೃತ್ತಿ ಮೊದಲಾದವುಗಳು ಹಿಂದೆಯೇ ೮ನೆಯ ಅಧ್ಯಾಯದ ೨೩-೨೬ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟವು.

**ಶ್ರೀಮತೇ ಯಾಮುನಮುನಯೇ ನಮಃ**

—— o ——

ಶ್ರಿಯೈ ನಮಃ
ಶ್ರೀನಿವಾಸಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ

# ಶ್ರೀಮದ್ಭಗವದ್ಗೀತಾಯಾಂ

## ದ್ವಾದಶೋಽಧ್ಯಾಯಃ

---

**ಭಾ. ಅವ. ಭಕ್ತಿಯೋಗನಿಷ್ಠಾನಾಂ ಪ್ರಾಪ್ಯಭೂತಸ್ಯ ಪರಸ್ಯ ಬ್ರಹ್ಮಣೋ ಭಗವತೋ ನಾರಾಯಣಸ್ಯ ನಿರಙ್ಕುಶೈಶ್ವರ್ಯಂ ಸಾಕ್ಷಾತ್ಕರ್ತುಕಾಮಾಯಾಽರ್ಜುನಾಯಾನವಧಿಕಾತಿಶಯಕಾರುಣ್ಯೌದಾರ್ಯ ಸೌಶೀಲ್ಯಾದಿಗುಣಸಾಗರೇಣ ಸತ್ಯಸಙ್ಕಲ್ಪೇನ ಭಗವತಾಸ್ವೈಶ್ವರ್ಯಂ ಯಥಾವದವಸ್ಥಿತಂ ದರ್ಶಿತಂ ಉಕ್ತಂಚ ತತ್ತ್ವತೋ ಭಗವ**

**ಭಾಷ್ಯಾವತಾರಿಕೆಯ ಅರ್ಥವು :**—ಈ ಹನ್ನೆರಡನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸುವದಕ್ಕೆ ಸಙ್ಗತಿ ಬೇಕಾದುದರಿಂದ ಪೂರ್ವಾಧ್ಯಾಯದಲ್ಲಿ ಏನು ಹೇಳಲ್ಪಟ್ಟಿತೆಂಬುದನ್ನು ಪ್ರಥಮತಃ ಅನುವಾದಮಾಡಿ ಹೇಳುತ್ತಾರೆ— ಹನ್ನೊಂದನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟವು ಯಾವುವೆಂದರೆ—

೧. **ಭಕ್ತಿಯೋಗನಿಷ್ಠರಿಗೆ, ಪ್ರಾಪ್ಯಭೂತನಾದ, ಪರಬ್ರಹ್ಮನಾದ, ಭಗವಂತನಾದ ನಾರಾಯಣನ ನಿರಙ್ಕುಶೈಶ್ವರ್ಯಂ** - ಅಪ್ರತಿಹತ ಮಾಹಾತ್ಮ್ಯೆಯುಳ್ಳ ಐಶ್ವರ್ಯವನ್ನು, ಅದು ಎಂತಾದ್ದೆಂದರೆ, ಆಶ್ರಯೋಪಯುಕ್ತವೇ ಮೊದಲಾದ ಕಲ್ಯಾಣಗುಣಯೋಗ ಅಪರಿಮಿತ ವಿಚಿತ್ರಾದ್ಭುತೋಭಯವಿಭೂತಿಯೋಗ ಇವುಗಳಿಂದ ಕೂಡಿದ ಐಶ್ವರ್ಯವನ್ನು, **ಸಾಕ್ಷಾತ್ಕರ್ತುಕಾಮಾಯ** - ಸಾಕ್ಷಾತ್ಕರಿಸಬೇಕೆಂಬ ಆಶೆಯುಳ್ಳ, **ಅರ್ಜುನಾಯ** - ಅರ್ಜುನನಿಗೋಸ್ಕರ, **ಅನವಧಿಕಾತಿಶಯ** - ಅವಧಿಯಿಲ್ಲದ ಅತಿಶಯವುಳ್ಳ, ಕಾರುಣ್ಯ, ಔದಾರ್ಯ, ಸೌಶೀಲ್ಯ ಇವೇ ಮೊದಲಾದ, **ಗುಣಸಾಗರೇಣ** - ಗುಣಗಳಿಗೆ ಸಮುದ್ರಪ್ರಾಯನಾದ, ಸತ್ಯಸಙ್ಕಲ್ಪನಾದ, ಭಗವಂತನಿಂದ, **ಸ್ವೈಶ್ವರ್ಯಂ** - ತನ್ನ ಮಹತ್ತಾದ ಐಶ್ವರ್ಯವು, **ಯಥಾವಸ್ಥಿತಂ**-ಹೇಗಿದೆಯೋ ಹಾಗೆ, **ದರ್ಶಿತಮ್** - ತೋರಿಸಲ್ಪಟ್ಟಿತು. ಕಲ್ಯಾಣಗುಣಯೋಗ, ಅತ್ಯದ್ಭುತ ವಿಚಿತ್ರ ವಿಭೂತಿ ದ್ವಯಗಳಯೋಗ, ಇವುಗಳುಳ್ಳ ಮಹದೈಶ್ವರ್ಯವು, ವಿಶೇಷ ಭಕ್ತಿಯಿಂದ ಪ್ರಾರ್ಥಿಸಿದ ಅರ್ಜುನನಿಗೆ ಭಕ್ತಪರವಶನಾದ ಸ್ವಾಮಿಯು ತಾನು ಅನುಗ್ರಹಿಸಿದ ದಿವ್ಯಚಕ್ಷುಸ್ಸಿನ ಮೂಲಕ ತೋರಿಸಿದನು ಎಂಬರ್ಥವು. ಮೊದಲಿನ ವಿಶ್ವರೂಪ ಮೂಲಕ ಮುಖ್ಯವಾಗಿ ಲೀಲಾವಿಭೂತಿ ವಿಷಯವಾದ ಸ್ವೈಶ್ವರ್ಯವೆಲ್ಲಾ ತೋರಿಸಲ್ಪಟ್ಟಿತು. ಹಾಗೆಯೇ ಪರರೂಪವನ್ನು ಅರ್ಜುನನ ಪ್ರಾರ್ಥನೆಯ ಮೇರೆಗೆ ತೋರುವಾಗ ನಿತ್ಯವಿಭೂತಿಯ ಐಶ್ವರ್ಯವೂ ತೋರಿಸಲ್ಪಟ್ಟಿತು. ಆದರೆ ಈ ಸಾಕ್ಷಾತ್ಕಾರಗಳೂ ಉಪಾಸನೆಯೂ ಯಾರಲ್ಲಿ ಪೂರ್ಣತೆಯನ್ನು ಹೊಂದಿ **"ವಿನಿಷ್ಪನ್ನ ಸಮಾಧಿ"** ಎಂದು ಹೇಳಿಸಿಕೊಳ್ಳುವರೋ, ಅವರಿಗೆ ಲಭ್ಯವಾಗಿರುವಾಗ, ಹಾಗಲ್ಲದೆ ಓಂ ಪ್ರಥಮದಲ್ಲೇ **"ಯೋಗಯುಕ್ತಂ"**ದು ಕೂಡಾ ಹೇಳಿಸಿಕೊಳ್ಳದೆ, ಇನ್ನೂ ಕರ್ಮಯೋಗಾರಂಭದಲ್ಲಿರುವವನಿಗೆ ಹೇಗೆ ಸಾಕ್ಷಾತ್ತಾಗಿ ತೋರಿಸಿದರು ? ಎಂದರೆ, ಸರ್ವೇಶ್ವರನು ಧರ್ಮ ಸಂಸ್ಥಾಪನೆಗಾಗಿ ಅವತರಿಸಿ ತನ್ನಂಶವುಳ್ಳ **ನರಾವತಾರಿಗೆ** ಉಪದೇಶಿಸಿದುದು ಲೋಕ ಹಿತಾರ್ಥವಾಗಿ

**ಭಾ. ಜ್ಞಾನದರ್ಶನ ಪ್ರಾಪ್ತೀನಾ ಮೈಕಾನ್ತಿಕಾತ್ಯಂತಿಕ ಭಗವದ್ಭಕ್ತ್ಯೈಕಲಭ್ಯತ್ವಂ** ಯಾವುದರಿಂದ ಯುಕ್ತವೆಂದೇ ಭಾವಿಸತಕ್ಕದ್ದು. ಇದನ್ನು ಮನಸ್ಸಿನಲ್ಲಿಟ್ಟೇ ಎಂತವರಿಗೆ ಮಾತ್ರವೇ ಸಾಕ್ಷಾತ್ಕಾರವೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸಿ, ಹಾಗೆಯೇ ಶ್ರೀ ಕೃಷ್ಣ ಭಗವಾನರವರೂ ಹೇಳುತ್ತಾರೆಂದು ಉಪದೇಶಿಸುತ್ತಾರೆ. ಶ್ರೀ ಪರಾಶರರು ವಿಷ್ಣುಪುರಾಣದ ೬.೭. ೩೩ರಲ್ಲಿ ಮುಮುಕ್ಷುವಾದ ಯೋಗಿಯನ್ನು ಅವಸ್ಥಾ ಭೇದದಿಂದ ಎರಡು ವಿಧವೆಂದು ಹೇಳುತ್ತಾರೆ. **"ಯೋಗಯುಕ್ಪ್ರಥಮಂ ಯೋಗೀ ಯುಂಜಾನೋಽಹ್ಯಭಿಧೀಯತೇ। ವಿನಿಷ್ಪನ್ನಸಮಾಧಿಸ್ತು ಪರಂಬ್ರಹ್ಮೋಪಲಬ್ಧಿವಾನ್"** ಪರಮಾತ್ಮ ಸಾಕ್ಷಾತ್ಕಾರ ಉಂಟಾದವನು ವಿನಿಷ್ಪನ್ನ ಸಮಾಧಿಯು. ಈ ಎರಡನೇಯವನಿಗೆ ಮುಕ್ತಿಯು ಆ ಜನ್ಮದಲ್ಲೇ, ಮೊದಲನೇಯವನಾದ ಯೋಗಯುಕ್ಕಿಗೆ ಜನ್ಮಾಂತರ ವಿಳಂಬ ಉಂಟಾದರೂ ಉಂಟಾಗಬಹುದು. **ಸ್ವೈಶ್ವರ್ಯಂ ಯಥಾವಸ್ಥಿತವ್ ದರ್ಶಿತವ್** - ಈ ತನ್ನ ಐಶ್ವರ್ಯವೆಲ್ಲಾ **ಯಥಾವಸ್ಥಿತಂ** ಎಂಬುದರಿಂದ ಮಿಥ್ಯಾತ್ವವಾದವನ್ನು ನಿರಾಕರಿಸಿ ಹೇಳಿದಂತೆ ತೋರುತ್ತದೆ. ಏಕೆಂದರೆ ಲೀಲಾ ವಿಭೂತಿರೂಪ ಸ್ವೈಶ್ವರ್ಯವು, ಒಂದು ಕಾಲದಲ್ಲಿ ಸ್ಥೂಲರೂಪದಲ್ಲಿ ಅತಿ ವಿಕಾಸತೆಯನ್ನು ಹೊಂದಿ, ಪ್ರಳಯಕಾಲದಲ್ಲಿ ಸೂಕ್ಷ್ಮದಶೆಯಲ್ಲಿ ಅತಿ ಸಂಕೋಚವನ್ನು ಹೊಂದುತ್ತದೆ; ನಿತ್ಯ ವಿಭೂತಿರೂಪ ಐಶ್ವರ್ಯವಾದರೋ, ಯಾವಾಗಲೂ ನಿರವಧಿಕಾತಿಶಯ ಪ್ರಕಾಶತೆಯನ್ನು ಸರ್ವದಾ ಹೊಂದಿಯೇ ಇರುವದರಿಂದ, ಇದಕ್ಕೆ ಚ್ಯುತಿಯೇ ಇಲ್ಲವೆಂಬ ಭಾವವನ್ನು ಸೂಚಿಸುವದಕ್ಕಾಗಿಯೂ **ಸ್ವೈಶ್ವರ್ಯಂ ಯಥಾವಸ್ಥಿತಂ ದರ್ಶಿತವ್** ಎಂದು ಹೇಳಲ್ಪಟ್ಟಿತು ಹೀಗೆ ಲೀಲಾ ವಿಭೂತಿಗಾದರೂ ಒಂದು ಕಾಲದಲ್ಲಿ ವಿಕಾಸವೂ ಇನ್ನೊಂದು ಕಾಲದಲ್ಲಿ ನ್ಯೂನತೆಯೂ ಉಂಟಾಗಬಹುದು. ಆದರೆ ಮಹಾನುಭಾವನ ಕಲ್ಯಾಣ ಗುಣಗಳಿಗೆ ಯಾವ ಕಾಲದಲ್ಲೂ ಯಾವ ಕಾರಣದಿಂದಲೂ ಲೋಪವಿರುವುದಿಲ್ಲವೆಂದು ಹೇಳುವದಕ್ಕಾಗಿ ಮುಂದೆ **"ನಿರವಧಿಕಾ"** ಎಂದಾರಂಭಿಸಿ **ದರ್ಶಿತಂ"** ಎಂಬುದರವರೆಗೂ ವಾಕ್ಯವು. **ಕಾರುಣ್ಯೌದಾರ್ಯ ಸೌಶೀಲ್ಯಾದಿ ಗುಣಸಾಗರೇಣ** ಎಂಬ ಪ್ರಯೋಗವು ಇನ್ನೂ ಏತಕ್ಕೆಂದರೆ, ಭಕ್ತಾನುಗ್ರಹಕ್ಕೆ ಬೇಕಾದ ಕಲ್ಯಾಣಗುಣ ಮಹೋದಧಿ ಎಂದು ತೋರಿಸುವದಕ್ಕಾಗಿಯೂ ಹಾಗೆ ಪ್ರಯೋಗವೆಂದೂ ಭಾವಿಸತಕ್ಕದ್ದು.

೨. ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವದು ಇನ್ನು ಏನೆಂದರೆ ತಿಳಿಸುತ್ತಾರೆ-- **ತತ್ವತಃ ಭಗವಜ್ಞಾನದರ್ಶನ ಪ್ರಾಪ್ತೀನಾಂ** - ಯಥಾರ್ಥವಾಗಿ ಭಗವಂತನ ವಿಷಯವಾದ ಶಾಸ್ತ್ರ ಮೂಲಕವಾದ ತತ್ವಜ್ಞಾನವೂ ಯಾವಾಗ ಉಂಟಾಯಿತೋ, ಆಗ ವಿವೇಕೋತ್ಥ ಜ್ಞಾನವೂ ಹೇಳಲ್ಪಟ್ಟಿತು, ಹೀಗೆ ಶಾಸ್ತ್ರಜನ್ಯ ತತ್ವಜ್ಞಾನ ಮತ್ತು **ವಿವೇಕೋತ್ಥ ಜ್ಞಾನ** ಇವುಗಳೇನು, **ದರ್ಶನ** - ಯಥಾರ್ಥವಾದ ಸಾಕ್ಷಾತ್ಕಾರ ಮತ್ತು **ಪ್ರಾಪ್ತೀನಾಂ** - ಪ್ರಾಪ್ತಿಗಳು, ಇವುಗಳಿಗೆ ಎಂದರೆ ತತ್ವಜ್ಞಾನ ಮತ್ತು ದರ್ಶನಪ್ರಾಪ್ತಿಗಳಿಗೆ, ಇವು ಹಿಂದಿನ ಅಧ್ಯಾಯದ ೫೪ನೆಯ ಶ್ಲೋಕದಲ್ಲಿ **ಜ್ಞಾತುಂ ದ್ರಷ್ಟುಂಚ ತತ್ವೇನ ಪ್ರವೇಷ್ಟುಂಚ** ಎಂದು ಹೇಳಿದುದರ ಸಂಗ್ರಹವು, ಇವುಗಳ **ಐಕಾನ್ತಿಕಾತ್ಯಂತಿಕಾ ಭಗವದ್ಭಕ್ತ್ಯೈಕ ಲಭ್ಯತ್ವವ್**-ಏಕಾಂತವಾದ ಅವಧಿ ಇಲ್ಲದಷ್ಟು ತೈಲಧಾರಾವದಚ್ಛಿನ್ನ ಸ್ಮೃತಿಸಂತಾನ ರೂಪ ಭಕ್ತಿಯಿಂದ ಉಪಾಸನ ಮಾತ್ರದಿಂದಲೇ ಪ್ರಾಪ್ತಿಯೂ, ಸಹ, **ಉಕ್ತಂಚ** - ಹೇಳಲ್ಪಟ್ಟಿತು. **ಭಕ್ತ್ಯೈಕ ಲಭ್ಯತ್ವವ್** ಎಂಬುದರಿಂದಲೇ ವೇದ ತಪೋದಾನ ಯಾಗಾದಿಗಳು ವ್ಯಾವರ್ತಿಸಲ್ಪಟ್ಟವು. ಐಕಾಂತಿಕಾತ್ಯಂತಿಕವೆಂದು ಹೇಳಿದುದರಿಂದ ಭಗವತ್ಪ್ರೀತಿಯನ್ನು ಸಾಧಿಸಿಕೊಡುವಂತಾದ್ದಾಗಿರಬೇಕೆಂದೂ ಹೇಳಿದಂತಾಯಿತು.

ಭಾ. **ಅನನ್ತರಮಾತ್ಮಪ್ರಾಪ್ತಿ ಸಾಧನ ಭೂತಾದಾತ್ಮೋಪಾಸನಾತ್ ಭಕ್ತಿರೂಪಸ್ಯ ಭಗವದುಪಾಸನಸ್ಯ ಸ್ವಸಾಧ್ಯ ನಿಷ್ಪಾದನೇ ಶೈಘ್ರ್ಯಾತ್ಸು ಸುಖೋಪಾದಾನತ್ವಾಚ್ಚ ಶ್ರೈಷ್ಠ್ಯಂ, ಭಗವದುಪಾಸನೋಪಾಯಶ್ಚ, ತದಶಕ್ತಸ್ಯಾಕ್ಷರನಿಷ್ಠತಾ, ತದಪೇಕ್ಷಿತಾಶ್ಚೋಚ್ಯನ್ತೇ। ಭಗವದುಪಾಸನಸ್ಯ ಪ್ರಾಪ್ಯಭೂತೋಪಾಯಸ್ಯ ಶ್ರೈಷ್ಠ್ಯಾತ್ ಶ್ರೈಷ್ಠ್ಯಂತು"ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂ ತರಾತ್ಮನಾ। ಶ್ರದ್ಧಾವಾನ್ ಭಜತೇ ಯೋಮಾಂ ಸಮೇ ಯುಕ್ತತಮೋ ಮತಃ" ಇತ್ಯತ್ರೋಕ್ತಂ.** (ಗೀ. ೬-)

ಮುಂದೆ ಈ ಹನ್ನೆರಡನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡುತ್ತದೆಂಬುದನ್ನು ಶ್ರೀ ಆಳವಂದಾರ್ರವರ ಸಙ್ಗ್ರಹ ಶ್ಲೋಕದಲ್ಲಿ ಹೇಳಿರುವದನ್ನೇ ಅನುಸರಿಸಿ ಹೇಳುತ್ತಾರೆ— **ಅನಂತರಂ** - ಆಮೇಲೆ ಎಂದರೆ ಈ ೧೨ನೆಯ ಅಧ್ಯಾಯದಲ್ಲಿ (೧) **ಆತ್ಮಪ್ರಾಪ್ತಿ ಸಾಧನ ಭೂತಾತ್** - ಪ್ರಕೃತಿವಿಯುಕ್ತವಾಗಿ ಸ್ವಸ್ವರೂಪದಿಂದಿರುವ ಜೀವಾತ್ಮಪ್ರಾಪ್ತಿಗೆ ಸಾಧನವಾದ, **ಆತ್ಮೋಪಸನಾತ್** - ಜೀವಾತ್ಮ ಸ್ವರೂಪ ವಿಷಯವಾದ ಉಪಾಸನಕ್ಕಿಂತಲೂ, ಎಂದರೆ ಜಿಜ್ಞಾಸುವು ತನ್ನ ಆತ್ಮವು ಭಗವಂತನಿಗೆ ಶರೀರವಾಗಿ, ಪ್ರಕೃತಿ ವಿಯುಕ್ತದೆಶೆಯಲ್ಲಿ ಬಹು ಪರಿಶುದ್ಧನಾಗಿರುವನೆಂಬ ಭಾವನೆಯಿಂದ ನಡೆಸುವ ಆತ್ಮೋಪಾಸನೆಗಿಂತಲೂ, **ಭಕ್ತಿರೂಪಸ್ಯ** - ಭಕ್ತಿರೂಪವಾದ, **ಭಗವದುಪಾಸನಸ್ಯ** - ಭಗವಂತನ ಉಪಾಸನಕ್ಕೆ, **ಸ್ವಸಾಧ್ಯನಿಷ್ಪಾದನೇ** - ಈ ಉಪಾಸನೆಯಿಂದ, ಸಾಧಿಸಲ್ಪಡುವದನ್ನುಂಟುಮಾಡುವದರಲ್ಲಿ, ಎಂದರೆ ಭಗವತ್ಪ್ರಾಪ್ತಿಯನ್ನುಂಟುಮಾಡುವದರಲ್ಲಿ, **ಶೈಘ್ರ್ಯಾತ್** - ಕಾಲವಿಳಂಬವಿಲ್ಲದಿರುವದರಿಂದಲೂ, -**ಸುಸುಖೋಪಾದಾನತ್ವಾಚ್ಚ** - ಬಹು ಸುಖವಾಗಿ ಉಪಾಸನವನ್ನು ಅವಲಂಬಿಸಬಹುದಾದುದರಿಂದಲೂ, **ಶ್ರೈಷ್ಠ್ಯಂ** - ಇಂತಹ ಉಪಾಸನೆಗೆ ಶ್ರೇಷ್ಠತ್ವವೂ, ಮತ್ತು (೨) **ಭಗವದುಪಾಸನೋಪಾಯಶ್ಚ** - ಭಗವಂತನ ಉಪಾಸನರೂಪವಾದ ಸಾಧ್ಯೋಪಾಯವು ಕೈಗೂಡುವದಕ್ಕೆ ಹೇಳಲ್ಪಟ್ಟ ಉಪಾಯವು, ಎಂದರೆ ಮನಸ್ಸನ್ನು ಪರಮಾತ್ಮನಲ್ಲೇ ಸ್ಥಿರವಾಗಿ ಇಟ್ಟು ಐಕಾನ್ತಿಕಾತ್ಯನ್ತಿಕ ಭಕ್ತಿ ಉಂಟಾಗಲು ಸಾಧನವನ್ನು, (೩) **ತದಶಕ್ತಸ್ಯ** - ಹೀಗೆ ಉಪಾಸನವನ್ನು ತತ್ಸಾಧನವನ್ನು ಅನುಷ್ಠಿಸಲು ಅಶಕ್ತನಿಗೂ, ಐಕಾನ್ತ ಭಕ್ತಿಯನ್ನು ಮಾಡಲು ಅಶಕ್ತನಿಗೆ ಎಂದರೆ ಮನಸ್ಸನ್ನು ಪರಮಾತ್ಮನಲ್ಲೇ ಅವಿಚ್ಛಿನ್ನವಾಗಿ ಇಡಲು ಅಸಮರ್ಥನಾದವನಿಗೆ ಕೊನೆಗೆ, **ಅಕ್ಷರನಿಷ್ಠತಾ** - ಪ್ರಕೃತಿ ವಿಯುಕ್ತ ಆತ್ಮಾವನ್ನು ಕುರಿತು ಪ್ರಥಮಷಟ್ಕದ ೬ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಆತ್ಮಸ್ವರೂಪ ಧ್ಯಾನವೂ, **ತದಪೇಕ್ಷಿತಾಶ್ಚ** - ಅವುಗಳಿಗೆ ಬೇಕಾದವುಗಳೂ, ಇವು ಯಾವುವು ಎಂದರೆ ಹಿಂದೆ ಪ್ರಥಮಷಟ್ಕದಲ್ಲ ಉಪಪಾದಿತವಾದ ಆತ್ಮಾವಲೋಕನವನ್ನುಂಟುಮಾಡುವ ಕರ್ಮಯೋಗವೇನು, ಅದಕ್ಕೆ ಬೇಕಾದ ಆತ್ಮ ವಿಷಯವಾದ ಜ್ಞಾನವೇನು, ಇವೇ ಮೊದಲಾದವು ಕೂಡ, **ಉಚ್ಯನ್ತೇ** - ಹೇಳಲ್ಪಡುವುವು. ಇಲ್ಲಿ **ಚ** ಕಾರದಿಂದ, ಮುಖ್ಯೋಪದೇಶವಾದ ದ್ವಾದಶಾಧ್ಯಾಯಾಂತ್ಯ ಶ್ಲೋಕವು ಸಙ್ಗೃಹೀತವೆಂದೂ ಭಾವಿಸಬಹುದು. **ಮೋಕ್ಷ** ಪ್ರಾಪ್ತಿಗಾಗಿ ಮಾಡುವ ಈ ಭಗವದುಪಾಸನವೇ ಇತರ ಎಲ್ಲಾ ಉಪಾಸನೆಗಳಿಗಿಂತ ಶ್ರೇಷ್ಠವೆಂಬುದು ಹಿಂದೆಯೇ ಷಷ್ಠೋಽಧ್ಯಾಯಾಂತ್ಯ ಶ್ಲೋಕದಲ್ಲಿ ಸಙ್ಗ್ರಹವಾಗಿ ಹೇಳಲ್ಪಟ್ಟಿತೆಂದೂ, ಈಗ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.— **ಭಗವದುಪಾಸನಸ್ಯ** - ಹೀಗೆ ಭಗವಂತನ ಉಪಾಸನಕ್ಕೆ, **ಪ್ರಾಪ್ಯಭೂತೋಪಾಸ್ಯ ಶ್ರೈಷ್ಠ್ಯಾತ್** - ಅದಕ್ಕೆ ಪ್ರಾಪ್ಯನಾದ ಉಪಾಸ್ಯನಾದ ಪರಮಪುರುಷನ ಸರ್ವಶ್ರೇಷ್ಠತೆಯಿರುವದರಿಂದಲೇ, ಶ್ರೈಷ್ಠ್ಯಂತು— ಆ ಶ್ರೇಷ್ಠತೆಯಾದರೋ **"ಯೋಗಿನಾಮಪಿ"** ಇತ್ಯತ್ರೋಕ್ತಮ್ - ಎಂಬಲ್ಲಿ ಹಿಂದೆಯೇ ಹೇಳಲ್ಪಟ್ಟಿತು. ಆರನೆಯ ಅಧ್ಯಾಯದ

ಕೊನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು ; ಅದನ್ನು ಮುಂದೆ ಉದಾಹರಿಸುತ್ತಾರೆ.—ಭಕ್ತಿಯೋಗ ನಿಷ್ಠನಾಗಿ **ಯುಕ್ತತಮನಾ**ದರೂ **ವಿನಿಷ್ಪನ್ನ ಸಮಾಧಿ**ಯಾದರೇನೇ ಅದೇ ಜನ್ಮದಲ್ಲೇ ವಿಳಂಬವಿಲ್ಲದ ಮುಕ್ತಿಯೆಂದು ಹೇಳಲ್ಪಡುತ್ತದೆ. ಉಪಾಸನೆಗಳಲ್ಲೆಲ್ಲಾ ಯಾವ ಉಪಾಸನವು ಸರ್ವ ಶ್ರೇಷ್ಠವೆಂದರೆ ಜ್ಞಾನಿಯಾದ ಭಕ್ತಿಯೋಗನಿಷ್ಠನ ಉಪಾಸನೆಯೇ. ಆತನು **ವಿನಿಷ್ಪನ್ನ ಸಮಾಧಿ**ಯಾಗಿ ಪರಮಾತ್ಮ ಸಾಕ್ಷಾತ್ಕಾರವು ಆತನಿಗೆ ಉಂಟಾದರೆ ವಿಳಂಬವಿಲ್ಲದೆ ಮುಕ್ತಿಯೂ ಲಭಿಸುತ್ತದೆ ಎಂದು ತಿಳಿಯತಕ್ಕದ್ದು. ಈ ಭಗವದುಪಾಸನೆಯ ಶ್ರೈಷ್ಠ್ಯವೇ ಈ ೧೨ನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ನಿಗಮನರೂಪದಲ್ಲಿ ಹೇಳಲ್ಪಟ್ಟಿರುತ್ತದೆ. **"ಯೋಗಿನಾಮಪಿ"** ಎಂಬ ಶ್ಲೋಕಾರ್ಥಕ್ಕೆ ಗೀತಾ ೬ನೆಯ ಅಧ್ಯಾಯ ಕೊನೆಯ ಶ್ಲೋಕವನ್ನು ಪರಾಂಬರಿಸಿ. ಹಿಂದೆಯೇ ಶ್ರೈಷ್ಠ್ಯವು ಹೇಳಲ್ಪಟ್ಟಿದ್ದರೆ ಪುನಃ ಇಲ್ಲಿ ಹೇಳಿರುವದು ಪುನರುಕ್ತಿಯೆಂದು ಭಾವಿಸತಕ್ಕದ್ದಲ್ಲವು. ಈಗ ಪ್ರಕರಣವೇನೆಂದರೆ, ೭ನೆಯ ಅಧ್ಯಾಯದಲ್ಲಿ (೧೬ನೆಯ ಶ್ಲೋಕ) ಭಕ್ತಿಯೋಗಿಗಳು ನಾಲ್ಕು ಜನವೆಂದು ಹೇಳಿ, ೮ನೆಯ ಅಧ್ಯಾಯದಲ್ಲಿ ಆರ್ತನೂ ಅರ್ಥಾರ್ಥಿಯೂ ಅಲ್ಪಾಸ್ಥಿರಫಲಕಾಂಕ್ಷಿಗಳಾದುದರಿಂದ ಅವರಿಗೆ ಮೋಕ್ಷವಿಲ್ಲವೆಂದೂ (೮-೬ನೆಯ ಶ್ಲೋಕ) ಜಿಜ್ಞಾಸು ಮತ್ತು ಜ್ಞಾನಿಗಳಿಗೆ ಮಾತ್ರ ಅಪುನರಾವೃತ್ತಿ ಮೂಲಕ ಮೋಕ್ಷವೆಂದೂ, ೮-೧೫ ೧೫ ೨೧ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟವು. ಹೀಗೆ ಇವರಿಬ್ಬರಿಗೂ ಮೋಕ್ಷವೆಂದು ಹೇಳಿದುದನ್ನು ಅರ್ಜುನನು ಮನಸ್ಸಿನಲ್ಲಿಟ್ಟಿದ್ದನು. ಆದರೇನೆ ಅಧ್ಯಾಯಾಂತ್ಯದಲ್ಲೂ ಮತ್ತು ೧೧ನೆಯ ಅಧ್ಯಾಯಾಂತ್ಯದಲ್ಲೂ ಜ್ಞಾನಿಯಾಗಿ ತನ್ನನ್ನು **"ಭಕ್ತ್ಯಾತ್ವನನ್ಯಯಾ"** ಉಪಾಸಿಸತಕ್ಕದ್ದೆಂದು ಯಾವಾಗ ಉಪದೇಶಿಸಿದರೋ, ಆಗ ಅರ್ಜುನನು ಏಕಾಂತ್ಯ ಭಕ್ತಿಯಿಂದ ಉಪಾಸಿಸಲು ಮನಸ್ಸು ಚಂಚಲವೇ ಎಂದು ಭಾವಿಸಿ, ಜ್ಞಾನಿಯಾಗಿ ನಿನ್ನನ್ನು ಉಪಾಸಿಸಿ ಮೋಕ್ಷಹೊಂದುವದು ಸುಲಭವೇ ಅಥವಾ ಜಿಜ್ಞಾಸುವಾಗಿ ನಿನ್ನ ಶರೀರವಾದ ಆತ್ಮಾವನ್ನು ಉಪಾಸನೆಯನ್ನು ಮಾಡಿ ಮೋಕ್ಷವನ್ನು ಹೊಂದುವದು ಸುಲಭವೇ ಎಂದು ಕೇಳುವದು ಪ್ರಕರಣವಾದುದರಿಂದ **ಪುನರುಕ್ತಿ**ಯಲ್ಲವು. ಆದರೆ ೮ನೆಯ ಅಧ್ಯಾಯದ ೧೪ನೆಯ ಶ್ಲೋಕದಲ್ಲೇ ಜ್ಞಾನಿಯಾಗಿ ತನ್ನನ್ನು ಉಪಾಸಿಸುವದು **ಸುಲಭ**ವೆಂದು ಹೇಳಿದ್ದರೂ, ಅದನ್ನೇ ವಿಶದವಾಗಿ ತಿಳಿಯುವದಕ್ಕಾಗಿ ಅರ್ಜುನನು ಪ್ರಶ್ನಿಸುತ್ತಾನೆಂದು ಭಾವಿಸತಕ್ಕದ್ದು. ಇವೆರಡು ಉಪಾಸನೆಗಳಲ್ಲಿ ಯಾವುದರ ಮೂಲಕ ಶೀಘ್ರ ಫಲಪ್ರಾಪ್ತಿಯೆಂದು ಪ್ರಾಜ್ಞನು ಭಾವಿಸುವನು ? ಎಂದು ಅರ್ಜುನನು ಪ್ರಶ್ನಿಸುವದರಿಂದಲೇ, ಇವೆರಡು ಉಪಾಸನೆಗಳು ಹಿಂದೆ ಹೇಳಲ್ಪಟ್ಟಿರಬೇಕೆಂಬುದು ಸಿದ್ಧವು. ಲಕ್ಷ್ಮಿಯ ಉಪಾಸನೆ ಎಂದಾಗಲಿ, ನಿರ್ಗುಣಬ್ರಹ್ಮೋಪಾಸನೆಯೆಂದಾಗಲಿ, ಅರ್ಥಮಾಡಿದರೆ ಹಿಂದೆ ಹೇಳದಿರುವದರಿಂದ, ಅಪ್ರಸ್ತುತ ಪ್ರಶಂಸೆಯಾಗುತ್ತದೆ.

**ಮೂಲಕ್ಕೆ ಅರ್ಥವು** :—ಅರ್ಜುನನು ಪ್ರಶ್ನಿಸುತ್ತಾನೆ ಏನೆಂದರೆ. ಹಿಂದೆ ಪಂಚಾಗ್ನಿ ವಿದ್ಯಾನಿಷ್ಠನಿಗೆ ಉಪಾಸ್ಯವು ಪ್ರಕೃತಿವಿಯುಕ್ತ ವಿಶುದ್ಧನಾದ ಜೀವಾತ್ಮನಾದುದರಿಂದ, ಅವನಿಗೂ ಇಂತಹ ವಿಶುದ್ಧಾತ್ಮವೇ ಪ್ರಾಪ್ಯವಾದುದರಿಂದ ತದ್ದ್ವಾರಾ ಆತನಿಗೂ **ಪು**ನರಾವರ್ತಿಯಿಲ್ಲದೆ ಮೋಕ್ಷಪ್ರಾಪ್ತಿಯುಂಟೆಂದು ಹಿಂದೆ ೮ನೆಯ ಅಧ್ಯಾಯದ ೨೧ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇದು **"ಯೇ ಚೇಮೇರಣ್ಯೇ ಶ್ರದ್ಧಾಂತಪ ಇತ್ಯುಪಾಸತೇ"** ಎಂಬ ಛಾಂ. ೫.೧೦ ೧ ಉಪನಿಷನ್ಮಂತ್ರದಲ್ಲಿಯೂ ವ್ಯಕ್ತವು. ಇಲ್ಲಿ ಸದಾ ಮತ್ಕರ್ಮಕೃನ್ಮತ್ಪರಮನಾಗಿರುವ ಭಕ್ತಿಯೋಗನಿಷ್ಠನಿಗೂ ಅದೇ ಮುಕ್ತಿಯೇ ಹೇಳಲ್ಪಟ್ಟಿತು. ಎರಡಕ್ಕೂ ಫಲವು ಒಂದಾದನಂತರ ಯಾವುದನ್ನಾದರೂ ಒಂದನ್ನು ಅವಲಂಬಿಸಬಹುದೆಂದು ಏರ್ಪಟ್ಟಿತು. ಇವೆರಡು ವಿಧ ಉಪಾಸಕರಲ್ಲಿ ಯಾವ ಉಪಾಸಕರು ಪ್ರಾಜ್ಞರೆಂದು ಕೇಳುತ್ತಾನೆ.—ಆದರೆ **ಉದಾರಾಸ್ಸರ್ವ ಏವೈತೇ**

**ಅರ್ಜುನ ಉವಾಚ—**

**ಮೂ. ಏವಂ ಸತತ ಯುಕ್ತಾಯೇ ಭಕ್ತಾಸ್ತ್ವಾಂ ಪರ್ಯುಪಾಸತೇ।**
**ಯೇ ಚಾ ಪ್ಯಕ್ಷರ ಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ॥** ೧.

**ಜ್ಞಾನೀತ್ವಾತ್ಮೈವ ಮೇಮತಂ** ಎಂದು ಜ್ಞಾನಿಯಲ್ಲಿ ತನಗೆ ಪ್ರೀತಿ ಹೆಚ್ಚು ಎಂದು ಹಿಂದೆಯೇ ಹೇಳಲ್ಪಟ್ಟಿತು. ಈಗ ಅರ್ಜುನನು ಕೇಳುವದೇನೆಂದರೆ ಎರಡರ ಫಲವೂ ಒಂದೇಯಾದನಂತರ ಯಾವ ಉಪಾಸಕನಾದರೆ ಸುಲಭವೂ ಮತ್ತು ಶೀಘ್ರಫಲವೂ ಎಂಬ ಪ್ರಶ್ನೆಯು; ಇದು ನ್ಯಾಯ ವಾದುದೇ. ಪ್ರಾಜ್ಞನು ಯಾವ ಮಾರ್ಗವನ್ನವಲಂಬಿಸುವದು ಉತ್ತಮವೆಂಬುದು ಅರ್ಜುನನ ಆಶಯವು. ಆದುದರಿಂದ ಕೇಳುತ್ತಾನೆ ತೈಲಧಾರಾವತ್ ಅವಿಚ್ಛಿನ್ನಸ್ಮೃತಿ ಸಂತಾನರೂಪ ವಾಗಿರುವ ಮನಸ್ಸಿನ ಐಕಾಂತ್ಯವು ಜ್ಞಾನಿಗೆ ಬೇಕಾದುದರಿಂದ, ಅದಕ್ಕಿಂತ ಜಿಜ್ಞಾಸುವಾಗಿ ಅಕ್ಷರಮವ್ಯಕ್ತೋಪಾಸನವು ಸುಲಭವೆಂದು ಉತ್ತರವನ್ನು ಕೊಟ್ಟರೆ, ಹಾಗೆಯೇ ಮಾಡೋಣ ವೆಂಬ ಆಶಯದಿಂದ ಪ್ರಶ್ನಿಸುತ್ತಾನೆ. ಅದಕ್ಕೆ ಸ್ವಾಮಿಯ ಉತ್ತರವು ಏನೆಂದರೆ—ಜ್ಞಾನಿಯಾಗಿ ಐಕಾಂತ್ಯಭಕ್ತಿಯಿಂದ ಉಪಾಸನವೇ ಸುಲಭವೂ ಅಲ್ಲದೆ ಶೀಘ್ರಫಲಪ್ರದವೂ ಎಂಬುದು

**ಏವಂ** - ಈಗ ನೀನು ಉಪದೇಶಿಸಿದ ರೀತಿಯಲ್ಲಿ ಮದ್ಭಕ್ತನಾಗಿ **"ಭಕ್ತ್ಯಾತ್ವನನ್ಯಯಾ"** ಎಂದೂ ಮತ್ಕರ್ಮಕೃನ್ಮತ್ಪರಮನಾಗಿ ಮದ್ಭಕ್ತನಾಗಿ ನಿರ್ವೈರನಾಗಿ ಐಕಾಂತ್ಯ ಭಕ್ತಿಯಿಂದ ಧ್ಯಾನಿಸುವವರಾಗಿರುವ, **ಸತತಯುಕ್ತಾನಾಂ** - ಯಾವಾಗಲೂ ಕೀರ್ತನ, ಶ್ರವಣ, ಅರ್ಚನ ನಮಸ್ಕಾರಾದಿಗಳನ್ನೂ ಮಾಡುತ್ತಾ, **ಯೇ ಭಕ್ತಾಃ** - ಯಾವ ಭಕ್ತಿಯೋಗನಿಷ್ಠರು, **ತ್ವಾಂ** - ನಿನ್ನನ್ನು, **ಪರ್ಯುಪಾಸತೇ** - ಐಕಾಂತ್ಯ ಭಕ್ತಿಯಿಂದ ಉಪಾಸನೆ ಮಾಡುತ್ತಾರೋ, ಮತ್ತು **ಅವ್ಯಕ್ತಂ ಅಕ್ಷರಮಪಿ** - ಪ್ರಕೃತಿವಿಯುಕ್ತ ಜೀವಾತ್ಮ ಸ್ವರೂಪವನ್ನು ಚಕ್ಷುರಾದೀಂದ್ರಿಯ ಗಳಿಗೂ ವ್ಯಕ್ತವಲ್ಲದ ಪರಿಶುದ್ಧಾತ್ಮಸ್ವರೂಪವು ದಿವ್ಯಮಙ್ಗಳವಿಗ್ರಹಯುಕ್ತನಾದ ಪರಮಾತ್ಮನಿಗೆ ಶರೀರವೆಂದು ಭಾವಿಸಿ ಆತ್ಮೋಪಾಸನೆಯನ್ನು, **ಯೇ ಭಕ್ತಾಃ** - ಯಾವ ಜಿಜ್ಞಾಸುವೆಂದೂ ಪಂಚಾಗ್ನಿ ವಿದ್ಯಾನಿಷ್ಠರೆಂದೂ ಹಿಂದೆ ಕರೆಯಲ್ಪಟ್ಟ ಭಕ್ತಿಯೋಗನಿಷ್ಠರು, **ಪರ್ಯುಪಾಸತೇ** - ಉಪಾಸನೆ ಮಾಡುತ್ತಾರೋ, **ತೇಷಾಂ** - ಹೀಗೆ ಎರಡು ವಿಧರಾದ ಉಪಾಸಕರಲ್ಲಿ **ಕೇ** - ಯಾರು, **ಯೋಗವಿತ್ತಮಾಃ** - ಪ್ರಾಜ್ಞರಾದ ಯೋಗಿಗಳು ? ಇಲ್ಲಿ **ಏವಂ** ಎಂಬುದರಿಂದ ಏಕಾದಶಾಧ್ಯಾಯದ ಕೊನೆಯ ಶ್ಲೋಕವು ಸಙ್ಗೃಹೀತವು. **ಸತತಯುಕ್ತಾಃ** ಎಂದು ಹೇಳಿ ದುದರಿಂದ **"ಸತತಂ ಕೀರ್ತಯಂತೋಮಾಂ"** (ಗೀ. ೯.೧೪) ಎಂಬ ಶ್ಲೋಕಾರ್ಥವೂ **"ಮಚ್ಚಿತ್ತಾ ಮದ್ಗತಃ ಪ್ರಾಣಾ"** (ಗೀ. ೧೦.೯) ಎಂಬ ಶ್ಲೋಕಾರ್ಥವೂ ಸಹ ಸ್ಮಾರಿತವು, **ಸತತ ಯುಕ್ತಾಃ** ಎಂದು ಹೇಳಿರುವದರಿಂದ ಪರಮಾತ್ಮ ವ್ಯತಿರಿಕ್ತ ವಿಷಯಗಳಲ್ಲಿ ರತಿಯಿಲ್ಲದ ವರೆಂದು **ಭಕ್ತ್ಯಾತ್ವನನ್ಯಯಾ** ಎಂಬುದರಿಂದ ಹೇಳಲ್ಪಟ್ಟವರು. ಇಲ್ಲಿ ಅಕ್ಷರ ಶಬ್ದಕ್ಕೆ ಪ್ರಕೃತಿ ವಿಯುಕ್ತ ಜೀವಾತ್ಮನೆಂದೇ **"ಕೂಟಸ್ಥೋಽಕ್ಷರ ಉಚ್ಯತೇ"** ಎಂದು ಮುಂದೆ (ಗೀ. ೧೫-೧೬) ಹೇಳಿರುವ ಹಾಗೆ, ಅರ್ಥ ಮಾಡಬೇಕಾಗಿದೆ. ಅಕ್ಷರ ಶಬ್ದಕ್ಕೆ ಪರಮಾತ್ಮ, ಜೀವಾತ್ಮ, ಪ್ರಕೃತಿ ಮೊದಲಾದ ಅರ್ಥಗಳುಂಟು, ಈ ಗೀತೆಯಲ್ಲೇ ಅಕ್ಷರ ಶಬ್ದವು ಪರಮಾತ್ಮನನ್ನೂ ಬೋಧಿಸುವ ಪ್ರಕರಣವುಂಟು. (ಗೀ. ೮-೧೧). ಆದರೆ ಪ್ರಕರಣಾನುಗುಣವಾಗಿ ಇಲ್ಲಿ ಪರಮಾ ತ್ಮೋಪಾಸನಕ್ಕಿಂತ ಹಿಂದೆ ಹೇಳಲ್ಪಟ್ಟ ಬೇರೆ ವಿಧವಾದ ಉಪಾಸನೆಯೆಂದು ಅನ್ವಯಿಸಬೇಕಾಗಿ ರುವದರಿಂದ ಪ್ರಕೃತಿವಿಯುಕ್ತ ಜೀವಾತ್ಮೋಪಾಸನೆಯು ಹಿಂದೆ ಹೇಳಲ್ಪಟ್ಟಿರುವದರಿಂದ ಅದೇ, ಇಲ್ಲಿ ಹೇಳಲ್ಪಟ್ಟಿತೆಂದೇ ಅರ್ಥಮಾಡಬೇಕಾಗಿರುತ್ತದೆ. ಈ ಅಕ್ಷರ ಅವ್ಯಕ್ತ ಶಬ್ದಗಳೆರಡೂ

ಕೇವಲನಿಗೆ ಉಪಾಸ್ಯವಾದ ಪ್ರಕೃತಿವಿಯುಕ್ತ ದಿವ್ಯಾತ್ಮ ಸ್ವರೂಪವನ್ನೇ ಬೋಧಿಸುತ್ತವೆ. ಗೀ. ೮ನೆಯ ಅಧ್ಯಾಯದ ೩ನೆಯ ಮತ್ತು ೨೧ನೆಯ ಶ್ಲೋಕಗಳನ್ನು ಪರಾಂಬರಿಸಿ. ಅಕ್ಷರ, ಅವ್ಯಕ್ತ ಶಬ್ದಗಳು ನಿರ್ಗುಣ ಬ್ರಹ್ಮವನ್ನು ಬೋಧಿಸುತ್ತವೆ ಎಂದು ಅಭಿಪ್ರಾಯಪಟ್ಟರೆ ಪೂರ್ವಾರ್ಧದ ಸಗುಣ ಬ್ರಹ್ಮೋಪಾಸನೆಯನ್ನು ನಿರಾಕರಿಸಿ, ನಿರ್ಗುಣ ಬ್ರಹ್ಮೋಪಾಸನೆಯೇ ಭಗವಂತನ ಉತ್ತರದಲ್ಲಿ ಸ್ತುತಿಸಲ್ಪಟ್ಟಿರಬೇಕಾಗಿತ್ತು. ಹಾಗಿಲ್ಲದೆ ಪೂರ್ವಾರ್ಧದಲ್ಲಿ ಹೇಳಿದ ಉಪಾಸಕರನ್ನೇ **ಯುಕ್ತತಮಾ ಮತಾಃ** ಎಂದು ಮುಂದಿನ ಶ್ಲೋಕದಲ್ಲಿ ಹೇಳಿಬಿಟ್ಟಿರುವದರಿಂದಲೂ ಸಗುಣ ನಿರ್ಗುಣ ಬ್ರಹ್ಮೋಪಾಸನೆಗಳು ವಿವೇಕಿಸಲ್ಪಟ್ಟವೆಂದು ಅರ್ಥಮಾಡಲು ಸಾಧ್ಯವೇ ಇಲ್ಲವು. ಏಕೆಂದರೆ ನಿರ್ಗುಣಬ್ರಹ್ಮ ವಿಷಯವಾದ ಉಕ್ತಿಯೇ ಇಲ್ಲವು. ನಿರ್ಗುಣ ಬ್ರಹ್ಮವು ಅಯಥಾರ್ಥವಾದ ವಿಷಯವು. ಏಕೆಂದರೆ ಅಂತಹ ಪರಬ್ರಹ್ಮವನ್ನು ಕುರಿತು ಶಾಸ್ತ್ರವೂ, ಗುರುಗಳೂ, ಬೋಧಿಸಲಾರರು; ಹೀಗಿರುವಾಗ ಅದರ ಉಪಾಸನೆಯು ತಾನೇ ಹೇಗೆ ? ಯಾವಾಗ ಸ್ವರೂಪ ಶೋಧಕವಾಕ್ಯಗಳು, ಶ್ರುತಿ, ಸ್ಮೃತಿ, ಇತಿಹಾಸ ಪುರಾಣಗಳಲ್ಲಿ ವಿಪುಳಗಳಾಗಿವೆಯೋ ಆಗ ಪರಬ್ರಹ್ಮನು ಸಗುಣನೇ ವಿನಾ ನಿರ್ಗುಣನೆಂದಿಗೂ ಅಲ್ಲವು ಎಂಬುದು ಸಿದ್ಧವು. ಅದರ ನಿರ್ಗುಣನೆಂಬ ಪ್ರಯೋಗವನ್ನು ಶಾಸ್ತ್ರದಲ್ಲಿ ಕಂಡಿರುವೆವು, ಅಲ್ಲವೆ ? ಎಂದರೆ ಆಗ ಪ್ರಾಕೃತ ಹೇಯಗುಣರಹಿತನೆಂಬರ್ಥವು. ಮೂಲದ **ಏನಂ** ಎಂಬ ಪದವೇ ಪೂರ್ವಪರಾಮರ್ಶಿತ್ವವನ್ನೇ ಅಪೇಕ್ಷಿಸುತ್ತದೆ. ಇನ್ನು ಕೆಲವರು ಅಕ್ಷರ ಅವ್ಯಕ್ತ ಶಬ್ದಗಳಿಂದ ಲಕ್ಷ್ಮಿಯು ಹೇಳಲ್ಪಟ್ಟಳೆಂದು ಭಾವಿಸಿ, ಪರಮಾತ್ಮೋಪಾಸನೆಗೂ ಲಕ್ಷ್ಮ್ಯುಪಾಸನೆಗೂ ಇರುವ ವೈಲಕ್ಷಣ್ಯವನ್ನು ಕುರಿತು ಅರ್ಜುನನು ಪ್ರಶ್ನೆಮಾಡುತ್ತಾನೆಂದು ಹೇಳುವರು. ಇದೂ ಸರಿಯಲ್ಲವು. ಲಕ್ಷ್ಮಿಯನ್ನು ಬೋಧಿಸಲು ಶ್ರೀ ವ್ಯಾಸಮಹರ್ಷಿಗೆ ಪದಗಳೇ ಸಿಕ್ಕದೆ ಪುಲ್ಲಿಂಗ ಪದಗಳ ಮೂಲಕ ಲಕ್ಷ್ಮಿಯನ್ನು ನಿರ್ದೇಶಿಸಿ ಹೇಳಿದರೆಂಬುದು ಹೇಗೆ ಸಮಂಜಸವೋ ತಿಳಿಯದು. ಅದೂ ಅಲ್ಲದ ಅರ್ಜುನನು ಈ ಎರಡು ಉಪಾಸನೆಗಳಲ್ಲಿ ಯಾವುದು ಉತ್ತಮವೆಂದು ಕೇಳಿದರೆ ಇವೆರಡೂ ಹಿಂದೆ ಹೇಳಲ್ಪಟ್ಟಿರಬೇಕು. ಅಷ್ಟು ಮಾತ್ರವೇ ಅಲ್ಲದೆ ಎರಡಕ್ಕೂ ಫಲ ಒಂದೇ ಆಗಿರಬೇಕು. ಜಿಜ್ಞಾಸುವು, ಅಕ್ಷರಾವ್ಯಕ್ತನನ್ನು ಪರಮಾತ್ಮನಿಗೆ ಶರೀರವೆಂದು ಭಾವಿಸಿ, ಅಂತಹ ಆತ್ಮಸ್ವರೂಪ ಪ್ರಾಪ್ತಿಗಾಗಿ ಅಕ್ಷರಾವ್ಯಕ್ತವನ್ನು ಉಪಾಸಿಸುವನು; ಈತನು ಆತ್ಮಪ್ರಾಪ್ತಿಗಾಗಿ ಉಪಾಸಿಸುವನು ; ಇಂತಹ ಆತ್ಮಪ್ರಾಪ್ತಿಗಾಗಿ ಉಪಾಸಿಸುವರೂ ಅಪ್ರತೀಕಾಲಂಬನರಾದುದರಿಂದ ಇವರಿಗೂ ಅಪುನರಾವೃತ್ತಿಯೇ ಎಂದೂ ಶ್ರುತಿಯಲ್ಲೂ ಬ್ರಹ್ಮಸೂತ್ರದಲ್ಲೂ, ಇಲ್ಲಿಯೂ ಸಹ, ಉಪಪಾದಿತವು. ಆದುದರಿಂದ ಅಕ್ಷರ ಅವ್ಯಕ್ತಶಬ್ದಗಳಿಂದ ಪ್ರಕೃತಿವಿಯುಕ್ತ ಪ್ರತ್ಯಗಾತ್ಮನು ಹೇಳಲ್ಪಟ್ಟನೆಂದು ಭಾವಿಸುವದೇ ಯುಕ್ತವು. ಈ ಭಕ್ತಿಯೋಗದಲ್ಲಿ ಪರಮಾತ್ಮೋಪಾಸನೆಯೇ ಪ್ರಕರಣಕ್ಕೆ ಬೇಕಾದುದು. ಹೀಗಿರುವಾಗ ಬಹು ಹಿಂದೆ ೮ನೇ ಅಧ್ಯಾಯದಲ್ಲಿ ವಿಶದವಾಗಿ ಹೇಳಲ್ಪಟ್ಟ ಅಕ್ಷರನಿಷ್ಠನನ್ನು ಇಲ್ಲಿ ತರಲು ಕಾರಣವೇನೆಂಬುದು ನ್ಯಾಯವಾದ ಪ್ರಶ್ನೆಯು. ಈ ಪರಮಾತ್ಮೋಪಾಸನೆಯಿಂದ ಅತನು ಪ್ರೀತನಾಗಿ ತನ್ನ ಸಾಕ್ಷಾತ್ಕಾರವು ಸಿದ್ಧಿಸಿದರೆ ಮುಕ್ತಿಯುಂಟು. ಹಾಗಿಲ್ಲದಿದ್ದರೆ ಪುನರ್ಜನ್ಮವುಂಟು, ಸೌಭರಿ ಆದಿಭರತರಿಗೆ ಪ್ರಾಪ್ತವಾದಹಾಗೆ. ಈ ಅಕ್ಷರನಿಷ್ಠನಿಗಾದರೆ ಹಾಗಲ್ಲದೆ ಆತ್ಮಪ್ರಾಪ್ತಿಯೂ ಅಲ್ಲಿಂದ ಮೋಕ್ಷಪ್ರಾಪ್ತಿಯೂ ಹಿಂದೆ ೮-೨೧ರಲ್ಲಿ ಹೇಳಲ್ಪಟ್ಟಿರುವದರಿಂದ, ಈ ಆತ್ಮೋಪಾಸನೆಯಲ್ಲಿ ಪರಮಾತ್ಮೋಪಾಸನೆಯಲ್ಲಿರುವ ಹಾಗೆ ಪ್ರತಿಬಂಧಕಗಳಿಲ್ಲದಿರುವದರಿಂದ, ಅದೇ ಏಕೆ ಕೂಡದು? ಎಂದೆನಿಸಿ, ಈ ಎರಡು ಉಪಾಸನೆಗಳೂ ಮುಕ್ತಿದಾಯಕಗಳಾದುದರಿಂದ ಪುನಸ್ಸಂಸಾರರೂಪದ ವಿಳಂಬವಿಲ್ಲದೆ ಶೀಘ್ರವಾಗಿ

ಮೋಕ್ಷ ಬೇಕೆಂಬುವವನು ಈ ಎರಡು ಉಪಾಸನೆಗಳಲ್ಲಿ ಯಾವುದನ್ನು ಅವಲಂಬಿಸತಕ್ಕದ್ದೆಂಬು ದನ್ನು ನ್ಯಾಯವಾಗಿ ಪ್ರಾಜ್ಞತೆಯಿಂದ ಪ್ರಶ್ನಿಸುವೆನು.

ಈ ಶ್ಲೋಕಕ್ಕೆ ಸರಿಯಾದ ಅರ್ಥವು, ಅವರ ಅಭಿಪ್ರಾಯವನ್ನು ಸರಿಯಾಗಿ ಪರಿಶೀಲಿಸಿದರೆ, ಬಹು ಸುಲಭವಾಗಿ ದೊರೆಯುತ್ತದೆ. ಹೇಗೆಂದರೆ— **ಏವಂ ಯೇ ಭಕ್ತಾಃ ಸತತಯುಕ್ತಾಃ ತ್ವಾಂ ಪರ್ಯುಪಾಸತೇ, ಯೇಚಭಕ್ತಾಃ ಅಕ್ಷರಮವ್ಯಕ್ತಮಪಿ ಪರ್ಯುಪಾಸತೇ, ತೇಷಾಂ ಕೇ ಯೋಗವಿತ್ತಮಾಃ"?** ಎಂಬುದು ಪ್ರಶ್ನೆಯು. ಭಕ್ತರು ನಾಲ್ಕು ವಿಧವು ಆರ್ತನೂ, ಅರ್ಥಾರ್ಥೀ, ಜಿಜ್ಞಾಸುವು, ಜ್ಞಾನಿಯು. ಇವರುಗಳಲ್ಲಿ ಮೊದಲು ಇಬ್ಬರಿಗೂ ಮೋಕ್ಷವಿಲ್ಲದಿರುವದ ರಿಂದ ಅವರು ಇಲ್ಲಿ ಉದ್ದೇಶ್ಯರಲ್ಲವು. ಮಿಕ್ಕ ಭಕ್ತರು ಜ್ಞಾನಿಯೂ ಜಿಜ್ಞಾಸುವೂ ಇವರಿಬ್ಬ ರಿಗೂ ಮೋಕ್ಷವೆಂದು ಹಿಂದೆ ಹೇಳಲ್ಪಟ್ಟಿರುತ್ತದೆ. ಆದುದರಿಂದ ಅರ್ಜುನನ ಪ್ರಶ್ನೆಯು ಇಷ್ಟೇ? ಜ್ಞಾನಿಯಾಗಿ ನಿನ್ನನ್ನು ಉಪಾಸಿಸಿದರೆ ಮೋಕ್ಷವೆಂದು ಹಿಂದೆ ಹೇಳಿದ ಹಾಗೆ ಮಾಡುವದು ಉತ್ತಮವೋ? ಜಿಜ್ಞಾಸುವಾಗಿ ಎಂದರೆ ಪಂಚಾಗ್ನಿ ವಿದ್ಯಾನಿಷ್ಠನಾಗಿ ಉಪಾಸಿಸಿ ಮೋಕ್ಷ ಹೊಂದುವದು ಉತ್ತಮವೋ ಎಂದು ಅರ್ಜುನನು ಕೇಳುತ್ತಾನೆ—ಇದಕ್ಕೆ ಉತ್ತರವು ಎರಡನೆ ಯದು ಬೇಡ, ಜ್ಞಾನಿಯಾಗಿಯೇ ಉಪಾಸಿಸು ಎಂಬದಾಗಿ. ಹೀಗೆ ಇದೇ ಈ ಶ್ಲೋಕದ ಸಮಂಜಸವಾಗಿ ಸುಲಭವಾಗಿ ತೋರುವ ಅರ್ಥವು. ಇದನ್ನು ಅರ್ಥವೆಂದು ದೃಢಪಡಿಸಿಕೊಳ್ಳಲು ಸ್ವಲ್ಪ ಉಪನಿಷತ್ತು ಮತ್ತು ವ್ಯಾಸಸೂತ್ರಗಳ ಜ್ಞಾನವು ಅತ್ಯಾವಶ್ಯಕವು ಛಾಂದೋಗ್ಯ ಶ್ರುತಿಯು (ಛಾಂ. ೫-೧೦-೧) ಹೇಳುತ್ತದೇನೆಂದರೆ—**"ತದ್ಯ ಇತ್ಥಂವಿದು ರೇಚೇಮೇಽರಣ್ಯೇ ಶ್ರದ್ಧಾಂತಪ ಇತ್ಯುಪಾಸತೇ, ತೇಽರ್ಚಿಷಮಭಿಸಂಭವಂತಿ"** ಎಂಬದಾಗಿ. ಇದರರ್ಥವೇ ನೆಂದರೆ—**ತತ್** ಎಂದರೆ ಹಿಂದೆ ಹೇಳಲ್ಪಟ್ಟ ಪರಿಶುದ್ಧ ಪ್ರತ್ಯಗಾತ್ಮ ಸ್ವರೂಪವನ್ನು, **ಯೇ** - ಯಾರು **ಇತ್ಥಂ ವಿದುಃ** - ಹಿಂದೆ ಹೇಳಿದ ಪ್ರಕಾರವಾಗಿ ಉಪಾಸಿಸುತ್ತಾರೋ, ಇವರು ಯಾರು ಎಂದರೆ, ಪಂಚಾಗ್ನಿ ಬ್ರಹ್ಮವಿದ್ಯೆಯಲ್ಲಿ ಹೇಳಿರುವಹಾಗೆ, ಈ ಜೀವಾತ್ಮನು ಬದ್ಧನಾಗಿ ಹುಟ್ಟಲು ದ್ಯು, ಪರ್ಜನ್ಯ, ಪೃಥಿವೀ, ಪುರುಷ, ಯೋಷಿತ್ತೆಂಬ ಐದು ಅಗ್ನಿಗಳಲ್ಲಿ, ಶ್ರದ್ಧಾ, ಸೋಮ, ವೃಷ್ಟಿ ಅನ್ನ, ರೇತಸ್ಸುಗಳನ್ನು ಹೋಮ ಮಾಡಿದರೆ, ಆಗ ಜೀವಾತ್ಮನು ಪುರುಷ ಶಬ್ದವಾಚ್ಯ ನಾಗಿ ಜನಿಸುವನಾದುದರಿಂದ, ಅಂತಹ ಜುಗುಪ್ಸಿತ ದೇಹವನ್ನು ಹೊಂದಿದ ಜೀವಾತ್ಮನಾದ ತಾನು ಅಂತಹ ಪ್ರಕೃತಿರೂಪ ದೇಹಕ್ಕಿಂತ ವಿಲಕ್ಷಣನೆಂದೂ, ತಾನು ಬ್ರಹ್ಮಾತ್ಮಕನೆಂದೂ ತಿಳಿದು ಯಾವನು ತನ್ನ ಆತ್ಮನನ್ನು ಉಪಾಸಿಸುವನೋ, ಮತ್ತು **ಅರಣ್ಯೇ** - ಅರಣ್ಯದಲ್ಲಿದ್ದು ಕೊಂಡು ಎಂದರೆ ನಿರ್ಜನ ಪ್ರದೇಶದಲ್ಲಿದ್ದುಕೊಂಡು, **ಶ್ರದ್ಧಾಂತಪ ಇತ್ಯುಪಾಸತೇ** ಎಂದರೆ **"ಶ್ರದ್ಧಾಂಪುರಸ್ಕೃತ್ಯತಪ ಶಬ್ದಿತಂ ಬ್ರಹ್ಮೋಪಾಸತೇ"** (ರಂಗ. ಭಾಷ್ಯವು) ಶ್ರದ್ಧಾಪೂರ್ವಕ ವಾಗಿ ತಪಶ್ಶಬ್ದದಿಂದ ಬೋಧಿತನಾದ ಪರಬ್ರಹ್ಮನ ದಿವ್ಯಮಂಗಳ ವಿಗ್ರಹವನ್ನು ಉಪಾಸಿಸು ತ್ತಾನೋ, ಇವರಿಬ್ಬರೂ **"ತೇಽರ್ಚಿಷಮಭಿಸಂಭವಂತಿ"** - ಅರ್ಚಿರಾದಿಗತಿಯ ಮೂಲಕ ಮೋಕ್ಷ ವನ್ನೇ ಹೊಂದುವರೆಂದು ಹೇಳಲ್ಪಟ್ಟಿದೆ. ಶ್ರೀ ಯತಿವರ್ಯರ ಭಾಷ್ಯವನ್ನನುಸರಿಸಿಯೇ ಹೀಗೆ ವ್ಯಾಖ್ಯಾನವು. ಶ್ರೀ ಭಾಷ್ಯಕಾರರ ವ್ಯಾಖ್ಯಾನವೇನೆಂದರೆ? **ಛಾಂದೋಗ್ಯೇ, "ಯ ಇತ್ಥಂ ವಿದುರಿತಿ ಪಂಚಾಗ್ನಿವಿದ್ಯಾನಿಷ್ಠಾನ್", "ಯೇಚೇಮೇ" ಇತ್ಯಾದಿನಾ ಶ್ರದ್ಧಾಪೂರ್ವಕಂ ಬ್ರಹ್ಮೋಪಾಸೀನಾನಾಂ ಶ್ಚೋದ್ದಿಶ್ಯ ಅರ್ಚಿರಾದಿಕಾಗತಿ ರುಪದಿಶ್ಯತೇ"** ಎಂಬದಾಗಿ. ಮೇಲೆ ಹೇಳಿದುದೇ ಅರ್ಥವು. ಪಂಚಾಗ್ನಿ ವಿದ್ಯಾನಿಷ್ಠರಾದ ಉಪಾಸಕರಿಗೂ ಬ್ರಹ್ಮೋಪಾಸ ಕರಿಗೂ ಇಬ್ಬರಿಗೂ ಅರ್ಚಿರಾದಿಗತಿ ಮೂಲಕವಾಗಿ ಮೋಕ್ಷವು. ಈ ಅಭಿಪ್ರಾಯವನ್ನೇ ಶ್ರೀ ಪರಾಶರರೂ ಉಪದೇಶಿಸುತ್ತಾರೆ. ವಿ. ಪು. ೧೭-೩ಎನ್ನು ನೋಡಿ. ಬ್ರಹ್ಮಸೂತ್ರದಲ್ಲೂ

ಇದೇ ಅಭಿಪ್ರಾಯವು.—**ಅಪ್ರತೀಕಾಲಂಬನಾ್ ನಯತೀತಿ ಬಾದರಾಯಣಃ ಉಭಯಥಾಪಿ ದೋಷಾತ್ತತ್ಕ್ರತುಶ್ಚ"** (ಬ್ರ. ಸೂ. ೪.೩.೩೨) ಎಂಬಲ್ಲಿ ಬಹು ನಿಪುಣವಾಗಿ ಉಪಪಾದಿತವು. ಯಾವ ಯಾವ ಉಪಾಸಕರಿಗೆ ಮೋಕ್ಷವೆಂಬ ಚರ್ಚೆಯಲ್ಲಿ **ಬಾದರಿ** ಎಂಬುವರು ಪರಬ್ರಹ್ಮಕಾರ್ಯವಾದ ಪ್ರತೀಕವಾದ ಚತುರ್ಮುಖನನ್ನು ಉಪಾಸಿಸುವವರು ಮೋಕ್ಷವನ್ನು ಹೊಂದುವರು ಎಂದು ಹೇಳಿದರು. ಇದು ಶ್ರುತಿವಿರುದ್ಧವೆಂದು ಹೇಳಿ, ಜೈಮಿನ್ಯಾಚಾರ್ಯರು **"ಪರಂ ಜೈಮಿನಿರ್ಮುಖ್ಯತ್ವಾತ್"** ಎಂಬ ಸೂತ್ರದಲ್ಲಿ ಪರಮಾತ್ಮೋಪಾಸಕರು ಮಾತ್ರವೇ ಮೋಕ್ಷವನ್ನು ಹೊಂದುವರೆಂದು ಹೇಳಿದರು. ಇವೆರಡು ಅಭಿಪ್ರಾಯಗಳೂ ಶ್ರುತಿವಿರುದ್ಧವೆಂದು ಹೇಳಿ, ಶ್ರೀ ವ್ಯಾಸಮಹರ್ಷಿಯು **"ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣಃ ಉಭಯಥಾಪಿ ದೋಷಾತ್ ತತ್ಕ್ರತುಶ್ಚ"** (ಸೂ. ೪. ೩. ೧೪) ಎಂಬ ಸೂತ್ರದಿಂದ ಸಿದ್ಧಾನ್ತಿಸಿದರು. ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹವನ್ನು ಉಪಾಸಿಸುವರಿಗೆಲ್ಲಾ ಮೋಕ್ಷವು ಎಂದು ಹೇಳಿ, ಬಾದರಿ ಮತ್ತು ಜೈಮಿನ್ಯಾಚಾರ್ಯರುಗಳ ಅಭಿಪ್ರಾಯಗಳೆರಡರಲ್ಲೂ ಶ್ರುತಿ ವಿರುದ್ಧ ದೋಷವಿರುವದರಿಂದ ಸರಿಯಲ್ಲವೆಂದು ಸಿದ್ಧಾನ್ತಿಸಿ ಹೇಳಿದರು. ಪರಮಾತ್ಮನ ದಿವ್ಯಮಙ್ಗಳ ವಿಗ್ರಹವನ್ನು ಉಪಾಸಿಸುವ **ಅಪ್ರತೀಕಾಲಂಬನರು** ಎರಡು ವಿಧವು. ಹೇಗೆಂದರೆ—

(೧) **"ಸ್ವಾತ್ಮ ಶರೀರಕೆ ಬ್ರಹ್ಮ ಕೇಚನ"** ಇವರು ನಾವೆಲ್ಲಾ ಪರಬ್ರಹ್ಮನಿಗೆ ಶರೀರವೆಂದು ತಿಳಿದು ಪರಬ್ರಹ್ಮನನ್ನು ಅನನ್ಯಭಕ್ತಿಯಿಂದ ಉಪಾಸಿಸುವವರು ಕೆಲವರು. ಇವರೇ ಜ್ಞಾನಿಗಳೆಂದು ಈ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟವರು. ಸದ್ವಿದ್ಯಾದಹರ ವಿದ್ಯಾನಿಷ್ಠರುಗಳು.

(೨) **"ಬ್ರಹ್ಮಾತ್ಮಕೆ ಸ್ವಾತ್ಮಾನಂ ಇತರೇ"** - ಪರಬ್ರಹ್ಮನು ತಮಗೆ ಆತ್ಮಾವೆಂದು ಪರಿಶುದ್ಧಾತ್ಮ ಪ್ರಾಪ್ತಿಗಾಗಿ ಆತ್ಮಾವನ್ನು ಉಪಾಸಿಸುವರು. ಇವರು ಪಂಚಾಗ್ನಿ ವಿದ್ಯಾನಿಷ್ಠರೇ ಮೊದಲಾದವರು. ಇವರು ಈ ಶ್ಲೋಕದ ಉತ್ತರಾರ್ಧದಲ್ಲಿ ಹೇಳಲ್ಪಟ್ಟವರು. ಪ್ರತರ್ದನ ವಿದ್ಯಾನಿಷ್ಠರೂ ಮಧುವಿದ್ಯಾನಿಷ್ಠರೂ ಇದರಲ್ಲೇ ಸೇರಿದವರು ; ಇವರಿಗೆಲ್ಲಾ ಮೋಕ್ಷವುಂಟು, ಹೀಗೆ ಇವರಿಬ್ಬರಾದ ಅಪ್ರತೀಕೋಪಾಸಕರಿಗೂ ಮೋಕ್ಷವೆಂದು ಎಲ್ಲಿ ಶ್ರುತಿಯಲ್ಲಿ ಹೇಳಿದೆ ಎಂದರೆ **"ತದ್ಯ ಇತ್ಥ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾಂತಪ ಇತ್ಯುಪಾಸತೇ ತೇಽರ್ಚಿಷಮಭಿ ಸಂಭವನ್ತಿ"** (ಛಾಂ. ೫. ೧೦. ೧) ಇದರರ್ಥವು ಮೇಲೆ ವ್ಯಕ್ತಪಡಿಸಲ್ಪಟ್ಟಿರುತ್ತದೆ. ಬ್ರ. ಸೂ. ೩-೩-೩೨ಕ್ಕೆ ವೇದಾಂತಸಾರದ ಭಾಷ್ಯವನ್ನು ನೋಡಿ.

ಈಗ ಅರ್ಜುನನ ಪ್ರಶ್ನೆ ಏನೆಂದರೆ—ಜಿಜ್ಞಾಸುವಾದ ಪಂಚಾಗ್ನಿ ವಿದ್ಯಾನಿಷ್ಠನಿಗೂ ಜ್ಞಾನಿಗೂ ಸಹ, ಶ್ರುತಿಯು ಮೋಕ್ಷವುಂಟೆಂದು ಹೇಳಿರುವದರಿಂದ ಜ್ಞಾನಿಯಾಗಿ ಉಪಾಸಿಸಲು ಐಕಾನ್ತ್ಯ ಭಕ್ತಿಯೂ, ಮನಸ್ಸನ್ನು ಯಾವಾಗಲೂ ಆತನಲ್ಲೇ ಇಟ್ಟಿರುವದೂ, ಅವಶ್ಯಕವಾದುದರಿಂದ, ಜಿಜ್ಞಾಸುವಾಗಿ ನಿನ್ನನ್ನು ಉಪಾಸಿಸಬಹುದೇ ಎಂಬ ಮನೋಭಿಪ್ರಾಯದಿಂದ, ಜ್ಞಾನಿಯಾಗಿ ಉಪಾಸಿಸುವದು ಸುಲಭವೇ ? ಶೀಘ್ರಫಲಪ್ರದವೇ ? ಜಿಜ್ಞಾಸುವಾಗಿ ಉಪಾಸಿಸುವದು ಸುಲಭವೇ ? ಶೀಘ್ರ ಫಲಪ್ರದವೇ ? ಎಂದು ಕೇಳುತ್ತಾನೆ, **"ತೇಷಾಂ ಕೇ ಯೋಗವಿತ್ತಮಾಃ"** ಎಂಬ ಪ್ರಯೋಗದ ಮೂಲಕವಾಗಿ ಎಂದು ತಿಳಿಯತಕ್ಕದ್ದು. ಆದುದರಿಂದ ಇದು ತುಂಬಾ ಶಾಸ್ತ್ರಾರ್ಥಗಳನ್ನು ಒಳಗೊಂಡ ಶ್ಲೋಕವು ; ಸ್ಮೃತಿಸೂತ್ರಗಳ ಅವಬೋಧವಿಲ್ಲದವರು ಈ ಶ್ಲೋಕಾರ್ಥವನ್ನು ತಿಳಿಯಲಾರರು. ಮನಸ್ಸಿನ ಐಕಾಂತ್ಯ ಕಷ್ಟದಿಂದ ಪ್ರೇರಿತನಾಗಿ ಅರ್ಜುನನು ಹೀಗೆ ಪ್ರಶ್ನಿಸಿದನು ಎಂದು ಹೇಳಲು ಸಾಧನವೇನು? ಎಂದು ಕೇಳಿದರೆ, ಸರ್ವಜ್ಞರಾದ ಶ್ರೀ ಕೃಷ್ಣಭಗವಾನರವರು ಅರ್ಜುನನ ಇಂಗಿತವನ್ನು ತಿಳಿದುಕೊಂಡು ಮುಂದೇ

**ಭಾ. ಏವಂ - "ಮತ್ಕರ್ಮಕೃತ್" ಇತ್ಯಾದಿನೋಕ್ತೇನ ಪ್ರಕಾರೇಣ, ಸತತಯುಕ್ತಾಃ-ಭಗವಂತಂ ತ್ವಾಮೇವ ಪರಂಪ್ರಾಪ್ಯಂಮನ್ವಾನಾಃ, ಯೇ ಭಕ್ತಾಃ, ತ್ವಾಂ-ಸಕಲೇ ವಿಭೂತಿಯುಕ್ತ ಮನವಧಿಕಾತಿಶಯ ಸೌಂದರ್ಯ ಸೌಶೀಲ್ಯ ಸಾರ್ವಜ್ಞ್ಯ ಸತ್ಯಸಙ್ಕಲ್ಪ ತ್ವಾದ್ಯನಂತಗುಣಸಾಗರಂ ಪರಿಪೂರ್ಣ ಮುಪಾಸತೇ; ಯೇ ಚಾ ಪ್ಯಕ್ಷರಂ-ಪ್ರತ್ಯಗಾತ್ಮ ಸ್ವರೂಪಂ, ತದೇವ ಚಾವ್ಯಕ್ತಂ - ಚಕ್ಷುರಾದಿಕರಣಾನಭಿವ್ಯಕ್ತ ಸ್ವರೂಪ**

ಇದೇ ಅಧ್ಯಾಯದ ೫ನೆಯ ಶ್ಲೋಕದಲ್ಲಿ ಜಿಜ್ಞಾಸುವಾಗಿ ಉಪಾಸನವು ನಿನಗೆ ಬೇಡ, ಅದು **ಕ್ಲೇಶೋಧಿಕತರ**ವೆಂದು ಹೇಳಿ, ೬, ೭ನೆಯ ಶ್ಲೋಕಗಳಲ್ಲಿ ಜ್ಞಾನಿಯಾಗಿ ಉಪಾಸಿಸುವದೇ **"ನಚಿರಾತ್"** ಪ್ರಾಪ್ಯವನ್ನು ಹೊಂದಿಸುತ್ತದೆಂದು ಸ್ಥಾಪಿಸಿ, ಆದುದರಿಂದ ೮ನೆಯ ಶ್ಲೋಕದಲ್ಲಿ **"ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ"** ನನ್ನಲ್ಲೇ ಮನಸ್ಸಿನ ಐಕಾಂತ್ಯವನ್ನಿಟ್ಟೇ ತೀರಬೇಕು, ಓ ಅರ್ಜುನನೇ, ಹಾಗೆ ಮಾಡುವದೇನೂ ಕಷ್ಟವಿಲ್ಲವೆಂದೂ ಹೇಳಿ, ೯ನೆಯ ಶ್ಲೋಕದಲ್ಲಿ **"ಅಥಚಿತ್ತಂ ಸಮಾಧಾತುಂ ನಶಕ್ನೋಷಿ ಮಯಿಸ್ಥಿರಮ್"** ನನ್ನಲ್ಲೇ ಮನಸ್ಸನ್ನು ಸ್ಥಿರವಾಗಿ ಇಡುವದಕ್ಕೆ ಕಷ್ಟವೆಂದು ನಿನಗೆ ತೋರಿದರೆ ಅದು ಸುಲಭವಾಗಿ ಉಂಟಾಗುವದಕ್ಕೆ ಮೂರು ಉಪಾಯಗಳನ್ನು ಹೇಳಿಕೊಡುವೆನೆಂದು ಕೃಪಾಜಲಧಿಯು ವಾತ್ಸಲ್ಯಯುಕ್ತನಾಗಿ ತಿಳಿಸುತ್ತಾನೆ.

**ಭಾಷ್ಯಾರ್ಥವು :—ಏವಂ** - ಹೀಗೆ ಎಂದರೆ **ಮತ್ಕರ್ಮಕೃತ್ ಇತ್ಯಾದಿನಾ ಉಕ್ತೇನ ಪ್ರಕಾರೇಣ** - ಎಂಬಿವೇ ಮೊದಲಾದುದರಿಂದ ಹೇಳಲ್ಪಟ್ಟ ರೀತಿಯಲ್ಲಿ, **ಸತತ ಯುಕ್ತಾಃ** - ಯಾವಾಗಲೂ ಪರಮಾತ್ಮನಲ್ಲೇ ಇಟ್ಟ ಮನಸ್ಸುಳ್ಳವರಾಗಿ ಎಂದರೆ ಅನನ್ಯಭಕ್ತಿಯುಳ್ಳವರಾಗಿ, **ಯೇ ಭಕ್ತಾಃ** - ಯಾವ ಭಕ್ತಿಯೋಗ ನಿಷ್ಠರು, **ಭಗವಂತಂ ತ್ವಾಮೇವ** - ಭಗವಂತನಾದ ನಿನ್ನನ್ನೇ, **ಪರಂಪ್ರಾಪ್ಯಂ ಮನ್ವಾನಾಃ** - ಶ್ರೇಷ್ಠನಾದ ಪ್ರಾಪ್ಯನೆಂದು ತಿಳಿದವರಾಗಿ, **ತ್ವಾಂ**-ನಿನ್ನನ್ನು ಎಂದರೆ ಹಿಂದೆ ಕಲ್ಯಾಣಗುಣ ಯೋಗ ಮಹತ್ವಾದ ವಿಭೂತಿದ್ವಯದ ಯೋಗವೇನು ಹೀಗೆ ಪರಿಪೂರ್ಣನಾದ ಪರಬ್ರಹ್ಮವೇ ಉಪಾಸ್ಯವೂ ಪ್ರಾಪ್ಯವೂ ಎಂಬುದನ್ನು ಜ್ಞಾಪಿಸುವದಕ್ಕಾಗಿ, ತ್ವಾಂ ಎಂಬಲ್ಲಿ ತೋರುವ ಉಪಾಸ್ಯನೂ ಪ್ರಾಪ್ಯನೂ ಎಂತವನೆಂಬುದನ್ನು ಉಪಪಾದಿಸಿರುತ್ತಾರೆ.—ಅಥವಾ **ಪರ್ಯುಪಾಸತೇ** ಎಂದಿರುವದರಿಂದ **ಪರಿ** ಎಂಬ ಉಪಸರ್ಗದಿಂದಲೂ ಈ ಪರಿಪೂರ್ಣತ್ವವು ಹೇಗೆ ಎಂಬುದನ್ನು ವ್ಯಕ್ತಪಡಿಸುತ್ತಾರೆ. **ಸಕಲ ವಿಭೂತಿಯುಕ್ತಂ**-ಸಕಲ ವಿಭೂತಿಯಿಂದಲೂ ಕೂಡಿದವನಾಗಿ, ಇಲ್ಲಿ **ಸಕಲ ವಿಭೂತಿ** ಎಂಬಲ್ಲಿ ಸಕಲ ಶಬ್ದವಿರುವದರಿಂದ ನಿತ್ಯವಿಭೂತಿಯ ಪರರೂಪ ಮುಂತಾದವುಗಳೂ ನಿಯಾಮ್ಯವರ್ಗಗಳೂ ತೋರಿಸಲ್ಪಟ್ಟವೆಂಬುದೇ ಶ್ರೀ ಯತಿವರ್ಯರ ಅಭಿಪ್ರಾಯವೆಂದೇ ಭಾವಿಸತಕ್ಕದ್ದಾಗಿರುತ್ತದೆ. ಆದುದರಿಂದ ಪರರೂಪವೂ ಇದು ಉಪಲಕ್ಷಣವಾಗಿ ನಿತ್ಯವಿಭೂತಿಯ ನಿಯಾಮ್ಯವರ್ಗವೂ, ನಿತ್ಯಮುಕ್ತರುಗಳಿಂದ ಸೇವ್ಯವಾದ ರೂಪವೂ ತೋರಲ್ಪಟ್ಟತೆಂದು ಅರ್ಥಮಾಡಿದರಲ್ಲವೇ **ಸಕಲ ವಿಭೂತಿ** ಎಂಬ ಭಾಷ್ಯಕ್ಕೆ ಸಮಂಜಸವಾಗುತ್ತದೆ? ಹೀಗೆ ಹೇಳಿದರಲ್ಲವೇ **ಪರಿಪೂರ್ಣಮುಪಾಸತೇ** ಎಂಬ ಭಾಷ್ಯಕ್ಕೂ ಸರಿಹೋಗುತ್ತದೆ? **ಅನವಧಿಕಾತಿಶಯ .... ಸಾಗರಂ** - ಅವಧಿಯಿಲ್ಲದ ಅತಿಶಯವುಳ್ಳ ಸೌಂದರ್ಯ, ಸೌಶೀಲ್ಯ, ಸರ್ವಜ್ಞತೆ, ಸತ್ಯಸಙ್ಕಲ್ಪತ್ವವೇ ಮೊದಲಾದ ಅನಂತಗಳಾದ ಕಲ್ಯಾಣಗುಣಗಳಿಗೆ ಮಹೋದಧಿಯಾಗಿ ಹೀಗೆ **ಪರಿಪೂರ್ಣಂ** - ಹೀಗೆ ಪರಿಪೂರ್ಣ ಬ್ರಹ್ಮನಾದ ನಿನ್ನನ್ನು, **ಉಪಾಸತೇ** - ಉಪಾಸಿಸುತ್ತಾರೋ, ಮತ್ತು **ಯೇಚಾಪಿ** - ಇನ್ನು ಯಾರಾದರೋ, **ಅಕ್ಷರಂ** ಎಂದರೆ **ಪ್ರತ್ಯಗಾತ್ಮಸ್ವರೂಪಂ** - ಪ್ರಕೃತಿವಿಯುಕ್ತನಾಗಿ ಪರಿಶುದ್ಧನಾದ ಜೀವಾತ್ಮಸ್ವರೂಪವನ್ನು, **ತದೇವ ಚ ಅವ್ಯಕ್ತಂ** - ಅದನ್ನೇ, ಅವ್ಯಕ್ತಶಬ್ದದಿಂದ

**ಭಾ. ಮುಪಾಸತೇ ; ತೇಷಾಮುಭಯೇಷಾಂ ಕೇ ಯೋಗವಿತ್ತಮಾಃ - ಕೇ ಸ್ವಸಾಧ್ಯಂ ಪ್ರತಿ ಶೀಘ್ರಗಾಮಿನ ಇತ್ಯರ್ಥಃ । "ಭವಾಮಿ ನಚಿರಾತ್ಪಾರ್ಥ" ಇತ್ಯುತ್ತರತ್ರ ಶೈಘ್ರ್ಯ ವಿಷಯಮಿತಿ ಹಿ ವ್ಯಜ್ಞಯಿಷ್ಯತೇ ॥೧॥**

ಹೇಳಿಸಿಕೊಳ್ಳುವ ಜೀವಾತ್ಮಸ್ವರೂಪವನ್ನೇ, ಅದು ಏತಕ್ಕೆ ಅವ್ಯಕ್ತವೆಂದು ಹೇಳಿಸಿಕೊಳ್ಳುತ್ತದೆ ಎಂದರೆ, **ಚಕ್ಷುರಾದಿ ಕರಣಾನಭಿವ್ಯಕ್ತಂ** - ಬಾಹ್ಯ ಚಕ್ಷುಸ್ಸೇ ಮೊದಲಾದ ಇಂದ್ರಿಯಗಳಿಗೆ ಗೋಚರವಾಗದೇ ಇರುವ ಜೀವಾತ್ಮಸ್ವರೂಪವನ್ನೇ, ಇಲ್ಲಿ **ಅವ್ಯಕ್ತಂ** ಎಂಬುದು ಅಕ್ಷರ ಶಬ್ದಕ್ಕೆ ವಿಶೇಷಣವು. ಹಾಗೆ ತಿಳಿಯದೆ, **ಅಕ್ಷರಂಚ ಉಪಾಸತೇ, ಅವ್ಯಕ್ತಂಚ ಉಪಾಸತೇ** ಎಂದು ಬೇರೆ ಬೇರೆ ಉಪಾಸಕರೆಂದು ಭಾವಿಸುವದು ಸರಿಯಲ್ಲವೆಂದು ತಿಳಿಸುವದಕ್ಕಾಗಿ, **ತದೇವಚ** ಎಂಬ ಪ್ರಯೋಗವು ಹೀಗೆ **ತೇಷಾಂ ಉಭಯೇಷಾಂ** - ಅವರಲ್ಲಿ ಎಂದರೆ ಈ ಎರಡು ವಿಧ ಉಪಾಸಕರಲ್ಲಿ, **ಕೇ ಯೋಗಸತ್ತಮಾಃ** ಎಂದರೆ **ಕೇ ಸ್ವಸಾಧ್ಯಂ ಪ್ರತಿ ಶೀಘ್ರಗಾಮಿನಃ** - ಯಾರು ತನ್ನಿಂದ ಈಗ ಸಾಧ್ಯವಾದುದನ್ನು ಕುರಿತು ಎಂದರೆ ಪ್ರಾಪ್ಯವನ್ನು ಶೀಘ್ರವಾಗಿ ಹೋಗಿ ಸೇರುವರು ? **ಇತ್ಯರ್ಥಃ** - ಎಂಬ ತಾತ್ಪರ್ಯವು ; ಸಾಧ್ಯವೆಂದರೆ ಪ್ರಾಪ್ಯವು. ಈ ಇಬ್ಬರು ಉಪಾಸಕರುಗಳಿಗೂ ಪ್ರಾಪ್ಯವು ತತ್ಕ್ರತುನ್ಯಾಯದ ಪ್ರಕಾರ ಸ್ವಲ್ಪಕಾಲಮಾತ್ರ ಬೇರೆ ಬೇರೆಯಾದುದರಿಂದ **ಸ್ವಸಾಧ್ಯಂಪ್ರತಿ** ಎಂಬ ಭಾಷ್ಯವು. ಜ್ಞಾನಿಗೆ ಪರಮಪುರುಷನು ಪ್ರಾಪ್ಯವು. ಜಿಜ್ಞಾಸುವಿಗೆ ಪರಿಶುದ್ಧಾತ್ಮಸ್ವರೂಪವು ಪ್ರಾಪ್ಯವು. ಆದರೆ ಕೊನೆಗೆ ಇಬ್ಬರಿಗೂ ಮೋಕ್ಷವೇ ಎಂದು ತಿಳಿಯತಕ್ಕದ್ದು. ಹೀಗೆ ಎರಡಕ್ಕೂ ಕೊನೆಗೆ ಒಂದೇ ಫಲವಿಲ್ಲದಿದ್ದರೆ ಪ್ರಶ್ನೆಗೆ ಕಾರಣವೇ ಇಲ್ಲವು. ಇಲ್ಲಿ ಮೂರು ವಿಧ ಉಪಾಸನೆಯು ಹೇಳಲ್ಪಟ್ಟವೆಂದು ಅರ್ಥಮಾಡಲು ಮೂರು ಯಚ್ಛಬ್ದವಿಲ್ಲವು ಎರಡೇ ಇರುತ್ತವೆ. ಅವ್ಯಕ್ತಶಬ್ದವು ಪ್ರತ್ಯಗಾತ್ಮನನ್ನು ಬೋಧಿಸುವ ಪ್ರಮಾಣ ಉಂಟೋ ? ಎಂದರೆ ಯಮಸ್ಮೃತಿಯಲ್ಲಿ, **'ಪಂಚವಿಶಂಕ ಮವ್ಯಕ್ತಂ ಷಡ್ವಿಂಶಃ ಪುರುಷೋತ್ತಮಃ । ಏತಜ್ಜ್ಞಾತ್ವಾ ವಿಮುಚ್ಯನ್ತೇ ಯತಯ ಶ್ಶಾನ್ತ ಬುದ್ಧಯಃ"** ಎಂದು ಹೇಳಿದೆ ಎಂಬುದಾಗಿ ಶ್ರೀ ದೇಶಿಕರವರು ಉದಾಹರಿಸಿರುತ್ತಾರೆ. ಅಚಿತ್ತತ್ವಗಳನ್ನು ೨೪ ವಿಧವಾಗಿ ಭಾಗಿಸಿರುತ್ತಾರೆ, ೨೫ ನೆಯ ತತ್ವವು ಜೀವಾತ್ಮನು, ೨೬ ನೆಯ ತತ್ವವು ಪರಮಾತ್ಮನು ; ಹೀಗೆ ವಿವೇಕಿಸಿ ಈ ಜೀವಾತ್ಮ ಪರಮಾತ್ಮ ಸ್ವರೂಪಗಳ ಯಾಥಾತ್ಮ್ಯವನ್ನು ತಿಳಿದವರು ಉಪಾಯಾನುಷ್ಠಾನದ ಮೂಲಕ ಮುಕ್ತಿಯನ್ನು ಹೊಂದುವರೆಂದು ಹೇಳಲ್ಪಟ್ಟಿದೆ. ಹಾಗೆಯೇ ಅಕ್ಷರ ಶಬ್ದಕ್ಕೂ ಉಪನಿಷತ್ತಿನಲ್ಲಿಯೂ ಪ್ರಯೋಗವುಂಟು. **ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ, ಕ್ಷರಾತ್ಮಾನೌ ಈಶತೇ ದೇವ ಏಕಃ"** ಕ್ಷರವೆಂದು ಹೇಳಿಸಿಕೊಳ್ಳುವದು ಪ್ರಕೃತಿಯು, ಅಕ್ಷರನು, ಸ್ವರೂಪನಾಶವಿಲ್ಲದ ಜೀವಾತ್ಮನು, ಆದುದರಿಂದ ಅಮೃತನೆಂಬ ವಿಶೇಷಣವು, ಈ ಕ್ಷರಾಕ್ಷರಗಳೆರಡನ್ನೂ ಶರೀರವಾಗಿ ಹೊಂದಿ, ಆತ್ಮಾವಾಗಿ ನಿಯಮಿಸುವವನು ಸರ್ವೇಶ್ವರನು ಎಂಬುದು ಈ ಶ್ರುತ್ಯರ್ಥವು. ಜೀವಾತ್ಮನು ಅಣುವು, ಆತನು ಪೂರ್ವಕರ್ಮಾನುಗುಣವಾಗಿ ಪ್ರತಿಸಂಬಂಧವನ್ನು ಹೊಂದಿ ಶರೀರವನ್ನು ಧರಿಸಿದಾಗ ಆತನು ವ್ಯಕ್ತನಲ್ಲದಿದ್ದರೂ ಆತನ ಶರೀರವು ವ್ಯಕ್ತವು ; ಯಾವಾಗ ಪ್ರಕೃತಿ ಸಂಬಂಧವೇ ತೊಲಗಿ ಅಕ್ಷರಶಬ್ದವಾಚ್ಯನಾದನೋ, ಆಗ ನಮ್ಮ ಇಂದ್ರಿಯಗಳಿಂದ ಗೋಚರನೇ ಅಲ್ಲವು. ದಿವ್ಯ ಚಕ್ಷುಸ್ಸಿನಿಂದಲೇ ಸಾಕ್ಷಾತ್ಕರಿಸಬೇಕೇ ವಿನಾ ಅನ್ಯಥಾ ಅಲ್ಲವೆಂದು ತಿಳಿಸುವದಕ್ಕಾಗಿ ಅವ್ಯಕ್ತನಾದ **ಅಕ್ಷರನು** ಎಂದು ಹೇಳಲ್ಪಟ್ಟಿತು. ಯಾವಾಗ ಪ್ರಕೃತಿಯಿಂದ ಬಿಡುಗಡೆಯೋ ಆಗ **ಪುನಃ** ಕ್ಷರವೆಂದರೆ ಜನ್ಮವನ್ನು ಹೊಂದಿ **"ಜಾಯತೇ ಮ್ರಿಯತೇ"** ಇತ್ಯಾದಿ ಅವಸ್ಥಾ ವಿಕಾ

**ಶ್ರೀ ಭಗವಾನುವಾಚ—**

**ಮೂ. ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾ ತೇ ಮೇ ಯುಕ್ತತಮಾ ಮತಾಃ ॥ ೨.**

ರಾದಿಗಳಿಲ್ಲವಾದುದರಿಂದ ಅಕ್ಷರಶಬ್ದ ಪ್ರಯೋಗವು. ಇದನ್ನೇ ಮುಂದೆ ಹೇಳುತ್ತಾರೆ.— **"ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ"** ಎಂಬಲ್ಲಿ ಇದು ಸ್ಪಷ್ಟವು. (ಗೀ. ೧೫-೧೬)

**ಯೋಗವಿತ್ತಮಾಃ** - ಯೋಗಿಗಳಲ್ಲಿ ಪ್ರಾಜ್ಞರು ಯಾರು ಎಂಬರ್ಥ ಉಂಟಾಗುವಾಗ, **ಶೀಘ್ರಗಾಮಿನಃ** ಎಂದು ಹೇಗೆ ಅರ್ಥಮಾಡಿದಿರಿ ? ಎಂಬಾಕ್ಷೇಪಬಂದೀತೆಂದು ಭಾವಿಸಿ ಸಮಾಧಾನವನ್ನು ಹೇಳುತ್ತಾರೆ.—ಅವರಲ್ಲಿ ಶೀಘ್ರಗಾಮಿಗಳು ಎಂಬ ಆಧಿಕ್ಯವು ಯಾರಿಗೆ ಎಂಬುದನ್ನು ತಿಳಿಸುತ್ತಾರೆ. ಪ್ರಾಪ್ಯದಪ್ರಾಪ್ತಿಯಲ್ಲಿ ಮೊದಲಿನ ಜ್ಞಾನಿಯ ಉಪಾಸನೆಯಲ್ಲಿ ಶೈಘ್ರ್ಯವು ಉಪಪಾದಿಸಲ್ಪಟ್ಟಿರುತ್ತದೆಂದು ಸಪ್ರಮಾಣವಾಗಿ ತಿಳಿಸುತ್ತಾರೆ. **"ಭವಾಮಿನಚಿರಾತ್ಪಾರ್ಥ" ಇತ್ಯುತ್ತರತ್ರ** - ಎಂದು ಮುಂದೆ ೭ ನೆಯ ಶ್ಲೋಕದಲ್ಲಿ **ಯೋಗವಿತ್ತಮತ್ವಂ** - ಪರಬ್ರಹ್ಮಪ್ರಾಪ್ತಿಗಾಗಿ ಮಾಡುವ ಉಪಾಸನೆಗೆ ಆಧಿಕ್ಯವು, **ಶೈಘ್ರ್ಯವಿಷಯಮಿತಿ ಹಿ** - ಪ್ರಾಪ್ಯವನ್ನು ಶೀಘ್ರವಾಗಿ ಹೊಂದಿಸುವ ವಿಷಯವನ್ನು ಕುರಿತು ಎಂಬದಾಗಲ್ಲವೇ, **ವ್ಯಂಜಯಿಷ್ಯತೇ** - ಪ್ರಕಟಿಸಲ್ಪಡುತ್ತದೆ. ಅಭಿಪ್ರಾಯವೇನೆಂದರೆ ಮುಂದೆ ೭ ನೆಯ ಶ್ಲೋಕದಲ್ಲಿ ಮೋಕ್ಷಾರ್ಥಿಯಾದ ಭಕ್ತಿಯೋಗನಿಷ್ಠನಾಗಿ **"ವಿನಿಷ್ಪನ್ನ ಸಮಾಧಿ"** ಯಾದವನಿಗೆ ಈ ಜನ್ಮದಲ್ಲೇ ದೇಹಾವಸಾನಾನಂತರವೇ ಶೀಘ್ರದಲ್ಲೇ ಪ್ರಾಪ್ಯಪ್ರಾಪ್ತಿ ಎಂದು ಹೇಳಿರುವದರಿಂದ, ಆ ಆಧಿಕ್ಯವನ್ನೇ ಮನಸ್ಸಿನಲ್ಲಿಟ್ಟು ಯಾವವಿಧವಾದಯೋಗವು ಉತ್ತಮವು, ಉಪಾದೇಯವು ? ಎಂಬ ಆಶಯದಿಂದ ಪ್ರಶ್ನೆಯು. ಒಡನೆಯೇ ಶ್ರೀ ಕೃಷ್ಣಭಗವಾನರವರು ಮುಂದೆ. ಎರಡನೆಯ ಶ್ಲೋಕದಲ್ಲೇ, ತಮ್ಮ ಉಪಾಸನವೇ ಉತ್ತಮವಾದುದೆಂದು ತಿಳಿಸುತ್ತಾರೆ. ಹೇಗೆ ಉತ್ತಮವೆಂಬುದು ಮೇಲೆ ಹೇಳಿದ ರೀತಿಯಲ್ಲಿ ೭ ನೆಯ ಶ್ಲೋಕದಲ್ಲಿ ಸುಸ್ಪಷ್ಟವು. ಯಾವ ಉಪಾಸನೆಯಿಂದ ಭಗವತ್ಪ್ರೀಣನವು ಶೀಘ್ರದಲ್ಲಿ ಉಂಟಾಗಿ ಶೀಘ್ರದಲ್ಲಿ ಪ್ರಾಪ್ಯವು ದೊರೆಯುತ್ತದೋ, ಅದು ತಾನೇ ಉತ್ತಮವೆಂದು ಹೇಳಿಸಿಕೊಳ್ಳಲು ಅರ್ಹವು. ಈ ಶ್ಲೋಕದ ಉತ್ತರಾರ್ಧದಲ್ಲಿ, **"ಯೇ ಭಕ್ತಾಃ ಅಕ್ಷರ ಮವ್ಯಕ್ತಮಪಿ ಉಪಾಸತೇ"** ಎಂದು ಹೇಳಿರುವದರಿಂದ, ನಾಲ್ಕು ಜನ ಭಕ್ತಿಯೋಗ ನಿಷ್ಠರಲ್ಲಿ ಜಿಜ್ಞಾಸುವಿಗೂ ಜ್ಞಾನಿಗೂ ಮೋಕ್ಷವು ಎಂದು, ಹಿಂದೆ ೭ ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವದರಿಂದ, ಇವರಿಬ್ಬರಲ್ಲಿ ಜ್ಞಾನಿಯು ಈ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟಿರುವದರಿಂದ, ಉತ್ತರಾರ್ಧದಿಂದ ಹೇಳಲ್ಪಟ್ಟವರು ಉಳಿದ ಜಿಜ್ಞಾಸುವೇ ಎಂಬುದು ಸಿದ್ಧವು. ಇವರುಗಳು ಬ್ರಹ್ಮಾತ್ಮಕಸ್ವಾತ್ಮೋಪಾಸಕರು ಎಂದರೆ ಪರಮಾತ್ಮನೇ ತಮಗೆ ಆತ್ಮಾವೆಂದು ಭಾವಿಸಿ ತಮ್ಮ ಆತ್ಮಾವನ್ನು ಉಪಾಸಿಸುವರು. ಇವರಿಬ್ಬರೂ ಬ್ರಹ್ಮವಿದ್ಯಾನಿಷ್ಠರುಗಳಾಗಿ ಅಪ್ರತೀಕಾಲಂಬನರಾದುದರಿಂದ ಇವರಿಗೂ ಮೋಕ್ಷವು. ಪಂಚಾಗ್ನಿವಿದ್ಯಾನಿಷ್ಠರೂ, ಮಧು ವಿದ್ಯಾನಿಷ್ಠರೂ, ಪ್ರತರ್ದನವಿದ್ಯಾ ನಿಷ್ಠರೂ, ಇವರುಗಳೆಲ್ಲಾ **ಅವ್ಯಕ್ತಾಕ್ಷರ** ಉಪಾಸನೆಗೆ ಸೇರಿದವರೆಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು:—** ಲಕ್ಷ್ಮೀಯುಕ್ತನಾದಭಗವಂತನು ಅರ್ಜುನಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ. **ಯೇ** - ಯಾವ ಭಕ್ತಿಯೋಗ ನಿಷ್ಠರು, **ಮನಃ** - ಮನಸ್ಸನ್ನು, **ಮಯಿ** - ನನ್ನಲ್ಲೇ **ಆವೇಶ್ಯ** - ಇಟ್ಟು, ಇದರಿಂದ, ಇತರ ಐಹಿಕ ವಿಷಯೋಪಭೋಗಗಳಲ್ಲಿ ವೈರಾಗ್ಯವು ಸೂಚಿಸಲ್ಪ

ಟ್ಟಿತು, ಇತರವಾದವುಗಳಲ್ಲಿ ಮನಸ್ಸನ್ನು ಇಟ್ಟರೆ, **ಮಯ್ಯಾವೇಶ್ಯಮನಃ** ಎಂದು ಹೇಳಿಸಿ ಕೊಳ್ಳುವದಿಲ್ಲವು, ನಿರಂತರವಾಗಿ ಮನಸ್ಸು ಆತನಲ್ಲೇ ಸಕ್ತವಾಗಿರಬೇಕು. ಇದರ ಅಭಿಪ್ರಾಯವು ಹಿಂದೆಯೇ **ಅನನ್ಯಚೇತಾಸ್ಸತತಂ** (ಗೀ. ೮. ೧೪) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ; ಆದುದ ರಿಂದಲೇ **ನಿತ್ಯಯುಕ್ತಾಃ** - ಪರಮಾತ್ಮನೊಂದಿಗೇನೇ ನಿರಂತರವೂ ಇರಬೇಕೆಂಬ ಆಶೆಯುಳ್ಳ ಮೋಕ್ಷಾರ್ಥಿಗಳು, **ಪರಯಾ** - ಅತ್ಯಂತ ಶ್ರೇಷ್ಠವಾದ, **ಶ್ರದ್ಧಯಾ** - ಮಹಾ ವಿಶ್ವಾಸದಿಂದ, **ಉಪೇತಾಃ** - ಕೂಡಿದವರಾಗಿ, **ಉಪಾಸತೇ** - ಉಪಾಸನೆಯನ್ನು ಮಾಡುತ್ತಾರೋ, **ತೇ** - ಅವರು **ಯುಕ್ತತಮಾಃ** - ಯೋಗಿಗಳಲೆಲ್ಲಾ ಅತ್ಯಂತ ಶ್ರೇಷ್ಠರು. ಆದುದರಿಂದ, **ಮೇ** - ನನಗೆ - **ಮತಾಃ** - ತುಂಬಾ ಇಷ್ಟರಾದವರು, ಹಾಗೆ ಒಬ್ಬನು ಇಷ್ಟವು ಇನ್ನೊಬ್ಬನು ಇಷ್ಟ ವಿಲ್ಲವು; ಹೀಗೆಲ್ಲಾದರೋ ಉಂಟೋ? ಎಂದರೆ, ಸುಕೃತ ವಿಶೇಷ ತಾರತಮ್ಯದಿಂದ ಹಾಗೆ ಉಂಟು, ಸಾಧ್ಯೋಪಾಯದ ಸರ್ವೋತ್ಕೃಷ್ಟತೆಯು ಇವರಲ್ಲಿರುವದರಿಂದ, ಅವರು ನನ್ನ ಕೃಪಾ ವನ್ನು ತನ್ಮೂಲಕ ಸಂಪಾದಿಸಿಕೊಳ್ಳುವದರಿಂದ ಅವರು ನನಗೆ ತುಂಬಾ ಅಭಿಮತರಾಗುತ್ತಾ ರೆಂಬ ಭಾವ. ಇದೇ **"ಜ್ಞಾನೀತ್ವಾತ್ಮೈವ ಮೇಮತಮ್"** ಎಂಬಲ್ಲಿ ಹಿಂದೆಯೇ ಹೇಳಲ್ಪಟ್ಟಿತು.

(೧) ಅನನ್ಯ ಚೇತಸ್ಸನ್ನುಳ್ಳವನಾಗಿಯೂ (೨) ನಿರಂತರ ಐಕಾಂತಿಕ ಭಕ್ತಿ ವಿಶ್ವಾಸ ಗಳಿಂದ ಕೂಡಿರುವ ಉಪಾಸಕರು ನನ್ನನ್ನು ನಿತ್ಯಯೋಗಕ್ಕಾಗಿ ಧ್ಯಾನಿಸಿದರೆ ಅವರಿಗೆ ಬಹು ಸುಕರನಾಗಿ ಸುಲಭವಾಗಿ ಶೀಘ್ರದಲ್ಲಿ ಪ್ರಾಪ್ಯನಾಗುವೆನು ಎಂದು ಹೇಳಿರುತ್ತಾರೆ. ಇದು ಹಿಂದೆ ೮-೧೪ ನೆಯ ಶ್ಲೋಕವಾದ **ಅನನ್ಯ ಚೇತಾಸ್ಸತತಂ ನಿತ್ಯಯುಕ್ತಾ ಉಪಾಸತೇ। ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ"** ಎಂಬಲ್ಲಿ ಹೇಳಿದುದೇ ಇಲ್ಲಿಯೂ ಹೇಳಲ್ಪಟ್ಟಿ ತೆಂದು ಭಾವಿಸತಕ್ಕದ್ದು. ಹಾಗೆ ಹಿಂದೆ ಶ್ರೀ ಕೃಷ್ಣಭಗವಾನರವರು ಉಪದೇಶಿಸಿದ ವಿಷಯದಲ್ಲಿ ಪುನಃ ಅರ್ಜುನನ ಪ್ರಶ್ನೆಯು ನ್ಯಾಯವೋ ಎಂದು ಆಕ್ಷೇಪಿಸಿದರೆ, ನಾಲ್ಕು ವಿಧ ಭಕ್ತಿಯೋಗ ನಿಷ್ಠರಲ್ಲಿ **ಅರ್ಥಾರ್ಥಿಗೂ ಆರ್ತನಿಗೂ** ದೇಹತ್ಯಾಗಾನಂತರ ಮೋಕ್ಷವಿಲ್ಲವೆಂದೂ, **ಜಿಜ್ಞಾಸು ವಿಗೂ ಜ್ಞಾನಿಗೂ** ಮೋಕ್ಷಪ್ರಾಪ್ತಿಯುಂಟೆಂದೂ ಹೇಳಿದ್ದರು. ಜಿಜ್ಞಾಸುವಿಗೆ ಪ್ರತ್ಯಗಾತ್ಮ ಸ್ವರೂಪ ಪ್ರಾಪ್ತಿ ದ್ವಾರಾ ಮೋಕ್ಷವೇ ವಿನಾ ಪುನರಾವರ್ತಿಯಿಲ್ಲವೆಂದೂ ಹೇಳಿದ್ದರು, ಮೋಕ್ಷಾ ರ್ಥಿಯಾದ ಭಕ್ತಿಯೋಗನಿಷ್ಠನಿಗೆ ಅನನ್ಯ ಭಕ್ತಿಯಿಂದ ತಾನು ಸುಪ್ರೀತನಾದರೆ ಆಗ ತನ್ನ ಪ್ರಾಪ್ತಿ ರೂಪವಾದ ಮೋಕ್ಷವೆಂದು ೧೧ ನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ **"ಮತ್ಕರ್ಮಕೃತ್ ಮತ್ಪರಮಃ"** ಎಂಬ ಶ್ಲೋಕದಲ್ಲಿ, **ಯಃ** - ಯಾವನು ಹೀಗೆಲ್ಲಾ ಇರುತ್ತಾನೋ. **ಸಃ** - ಅಂತವನು **ಮಾಮೇತಿ** - ನನ್ನನ್ನು ಹೊಂದುವನು ಎಂದು ಹೇಳಿದರು. ಸಾಧಾರಣರಾಗಿರುವ ಕಾಮ್ಯ ಫಲಾಪೇಕ್ಷೆಯುಳ್ಳ ಭಕ್ತಿಯೋಗನಿಷ್ಠರು ಆರ್ತನೂ ಅರ್ಥಾರ್ಥಿಗಳೂ ತನ್ನನ್ನು ಹೊಂದ ಲಾರರು; ಅಂತವರಿಗೆ ಯೋಗನಿಷ್ಪತ್ತಿ ಇಲ್ಲದುದರಿಂದ ಪುನರ್ಜನ್ಮ ಉಂಟಾಗುತ್ತದೆ; ಆದರೆ ಮುಂದೆ ಯೋಗನಿಷ್ಪತ್ತಿಯನ್ನು ಹೊಂದಿ ತನ್ನನ್ನು ಕ್ರಮೇಣ ಹೊಂದಬಹುದೆಂಬರ್ಥವು ಸೂಚಿ ತವು. ಜಿಜ್ಞಾಸುವಿಗೆ ಈ ತೊಂದರೆ ಇಲ್ಲದೆ ಕೈವಲ್ಯದಲ್ಲಿ ಆತ್ಮಪ್ರಾಪ್ತಿ ಮೂಲಕ ಮೋಕ್ಷವೇ ಸಿದ್ಧವೆಂದಾಯಿತು. ಈ ಮೋಕ್ಷಾರ್ಥವಾದ ಉಪಾಸನೆಯಲ್ಲಿ ಯೋಗ ನಿಷ್ಪತ್ತಿಯಿಂದ ಭಗವ ತ್ಪ್ರೀಣನ ಉಂಟಾದರೇನೇ ಮೋಕ್ಷವು, ಇಲ್ಲವಾದರೆ ಮುಂದಕ್ಕೆ ಪುನರ್ಜನ್ಮವು ಎಂದಾದನಂತರ, ಅರ್ಜುನನು ನ್ಯಾಯವಾಗಿ ಪ್ರಶ್ನಿಸತಕ್ಕದ್ದೇನೆಂದರೆ—ನಿತ್ಯಯೋಗವನ್ನು ಅಪೇಕ್ಷಿಸುವ ಮೋಕ್ಷಾರ್ಥಿಯು ಯಾವ ವಿಧದಲ್ಲಿ ಶೀಘ್ರವಾಗಿ ನಿನ್ನನ್ನು ಹೊಂದಬಹುದು? ತಿಳಿಸು ಎನ್ನು ತ್ತಾನೆ. ಶ್ರೀ ದೇಶಿಕರವರು ವ್ಯಕ್ತವಾಗಿ ಹಿಂದಿನ ಶ್ಲೋಕದಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧ ನಿಷ್ಠರಿಗೂ ಬೇರೆ ಬೇರೇ ಫಲ ಉಂಟೆಂದು ಇಲ್ಲಿ ಭಾವಿಸತಕ್ಕದ್ದಲ್ಲವೆಂದೂ ಹಾಗ ಭಿನ್ನ ಫಲ

ವಾದರೆ ಪ್ರಶ್ನೆಯೇ ಕೂಡುವದಿಲ್ಲವೆಂದೂ ಹೇಳಿರುತ್ತಾರೆ. ಈ ಅಭಿಪ್ರಾಯದ ಹಾಗೆಯೇ ಶ್ರೀ ಯತಿವರ್ಯರೂ ಸಹ **"ಸ್ವಸಾಧ್ಯನಿಷ್ಪಾದನೇ ಶೈಘ್ರ್ಯಾತ್"** ಎಂದು ವ್ಯಾಖ್ಯಾನವನ್ನು ಮಾಡಿರುವದರಿಂದ **ಸ್ವಸಾಧ್ಯ ನಿಷ್ಪಾದನವು** ಎರಡಕ್ಕೂ ಉಂಟೆಂದು ಏರ್ಪಟ್ಟಿತು. ಬೇರೇ ಬೇರೇ ಫಲವಾದ ಪಕ್ಷದಲ್ಲಿ ಜ್ಞಾನಿಗೆ ಮೋಕ್ಷವೆಂಬುದು ಸಂಪ್ರತಿಪನ್ನವಾಗಿ ಅನೇಕಾವರ್ತಿ ಹೇಳಲ್ಪಟ್ಟ ವಿಷಯವಾಗಿ ಮತ್ತು ಸ್ವಲ್ಪ ಹಿಂದೆಯೇ **"ಭಕ್ತ್ಯಾ ತ್ವನನ್ಯಯಾ"** ಎಂಬಲ್ಲೂ ಹೇಳಿದನಂತರ, ಅರ್ಜುನನು ಪ್ರಶ್ನಿಸಿದರೆ ಅರ್ಜುನನನ್ನು ಪ್ರಾಜ್ಞನಲ್ಲವೆಂದು ಹೇಳಬೇಕಾಗುತ್ತದೆ. ಬಹು ಪ್ರಾಜ್ಞನಾಗಿ ಅರ್ಜುನನು ಇಲ್ಲಿ ಪ್ರಶ್ನಿಸಿರುತ್ತಾನೆಯಾದುದರಿಂದ ಪೂರ್ವಾರ್ಧ ನಿಷ್ಠರಿಗೂ ಉತ್ತರಾರ್ಧನಿಷ್ಠರಿಗೂ ಮೋಕ್ಷವೇ ಫಲವೆಂದು ಸ್ಪಷ್ಟವಾಗಿರುತ್ತದೆ. ಹಿಂದೆ **ತಸ್ಯಾಹಂ ಸುಲಭಃ ಪಾರ್ಥ** ಎಂದು ಹೇಳಿದೆಯಲ್ಲಾ ಅದನ್ನು ಮರೆತು ವಿಸ್ಮೃತಿಯಿಂದ ಅರ್ಜುನನು ಪ್ರಶ್ನಿಸಿದನೇ ? ಎಂದರೆ ಹಾಗೂ ಅಲ್ಲವು. ಅದರ ಸ್ಥಿರೀಕರಣಾರ್ಥವಾಗಿಯೇ ? ಎಂದರೆ ಹಾಗೂ ಅಲ್ಲವು. ಹಿಂದೆ ಎಲ್ಲಿಯೂ ಈ ಎರಡು ಉಪಾಸಕರಿಗೆ ಇರುವ ವೈಲಕ್ಷಣ್ಯವು ಹೇಳಲ್ಪಡದೇ ಇರುವದರಿಂದ, ಪ್ರಾಜ್ಞನಾದ ಅರ್ಜುನನು ಪ್ರಶ್ನಿಸಿ ತಿಳಿಯುತ್ತಾನೆ. ಈ ಪ್ರಾಜ್ಞನ ಪ್ರಶ್ನೆಯಿಂದ ಅನನ್ಯ ಭಕ್ತಿಗೆ ಬೇಕಾದ ಸ್ಥಿರವಾದ ಚಿತ್ತಸಮಾಧಾನಕ್ಕೆ ಬೇಕಾದ ಸಾಧನಗಳನ್ನು ಕೇಳಿ ತಿಳಿಯುತ್ತಾನೆಂದು ಭಾವಿಸತಕ್ಕದ್ದು. ಹೀಗೆ ಎರಡಕ್ಕೂ ಒಂದೇ ಫಲವಾಗಿದ್ದರೂ, ನಮ್ಮಲ್ಲಿ ಕೆಲವರು ಪೂರ್ವಾರ್ಧದಿಂದ ಜ್ಞಾನಿಯು ಹೇಳಲ್ಪಟ್ಟನೆಂದೂ, ಉತ್ತರಾರ್ಧದಿಂದ ಕರ್ಮಯೋಗ ನಿಷ್ಠನು ಹೇಳಲ್ಪಟ್ಟನೆಂದೂ, ಅರ್ಥಮಾಡುವದು ಅತ್ಯಾಶ್ಚರ್ಯಕರವಾದುದು.

ಈ ಅರ್ಜುನನ ಪ್ರಶ್ನೆಗೆ ಶ್ರಿಯಃಪತಿಯು ಸರಿಯಾದ ಉತ್ತರವನ್ನು ಇಲ್ಲಿ ಹೇಳಿರುತ್ತಾರೆ. ಜ್ಞಾನಿಯಾದ ಭಕ್ತಿಯೋಗ ನಿಷ್ಠರ ಉಪಾಸನೆಯೇ ಸುಲಭವು, ಕ್ಲೇಶವೂ ಇಲ್ಲವು, ಅದಕ್ಕೆ ಮುಖ್ಯವಾಗಿ ಬೇಕಾದುವು ಎರಡೇ (೧) ಅನನ್ಯ ಚೇತಸ್ಸು (೨) ಪರಮ ಶ್ರದ್ಧಾ. ಇವೆರಡು ಮಾತ್ರ ಇದ್ದು ಉಪಾಸನೆ ಮಾಡಿದರೆ ಯೋಗ ನಿಷ್ಪತ್ತಿಯಿಂದ ಕ್ಷಿಪ್ರದಲ್ಲೇ ದೇಹಾವಸಾನದಲ್ಲಿ ಮೋಕ್ಷ ಉಂಟಾಗಿ ನನ್ನನ್ನು ಹೊಂದುವರು ಎಂದು ಉತ್ತರವನ್ನಿತ್ತರು. ಮನಸ್ಸೇ ಮುಖ್ಯವಾದುದು ಅದು ಯಾವಾಗಲೂ ಹೇಗಿರಬೇಕೆಂದು (೧. ೯. ೨೨. ನೆಯ ಶ್ಲೋಕದಲ್ಲಿ) **"ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ"** ಎಂಬಲ್ಲಿ ಹೇಳಲ್ಪಟ್ಟಿತು. ಇದನ್ನೇ ಶ್ರೀ ಪರಾಶರರು **"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಙ್ಗಿ ಮುಕ್ತ್ಯೈ ನಿರ್ವಿಷಯಂ ಮನಃ"** ಬಂಧಕ್ಕೂ, ಮೋಕ್ಷಕ್ಕೂ ಸಹ ಮನಸ್ಸೇ ಕಾರಣವೆಂದು ಹೇಳಿ, ವಿಷಯಗಳಲ್ಲಿ ಪ್ರವರ್ತಿಸಿದರೆ ಬಂಧಕ್ಕೂ, ಹಾಗೆ ವಿಷಯಾಸಕ್ತಿ ಹೋದರೆ ಮುಕ್ತಿಗೂ ಕಾರಣವಾಗುತ್ತದೆಂದು ಹೇಳಿ, ಅನಂತರ **"ವಿಷಯೇಭ್ಯಃ ಸಮಾಹೃತ್ಯ ವಿಜ್ಞಾನಾತ್ಮಾ ಮನೋ ಮುನಿಃ । ಚಿಂತಯೇನ್ಮುಕ್ತಯೇ ತೇನ ಬ್ರಹ್ಮಭೂತಂ ಪರೇಶ್ವರಂ"** **ಮನಃ** - ಮನಸ್ಸನ್ನು, **ವಿಷಯೇಭ್ಯ ಸಮಾಹೃತ್ಯ** - ವಿಷಯಗಳ ದೆಸೆಯಿಂದ ತಡೆದು, **ವಿಜ್ಞಾನಾತ್ಮಾ** - ಪರಮಾತ್ಮ ಜೀವಾತ್ಮರುಗಳ ಸ್ವರೂಪ ವೈಲಕ್ಷಣ್ಯವನ್ನು ಚೆನ್ನಾಗಿ ತಿಳಿದ ಶಾಸ್ತ್ರ ಜನ್ಯ ಮತ್ತು ವಿವೇಕಜನ್ಯ ಜ್ಞಾನಸ್ವರೂಪನು, **ಮುನಿಃ** - ಮನನಶೀಲನಾದವನು, ಮುಕ್ತಿಯನ್ನು ಹೊಂದುವದಕ್ಕಾಗಿ ಪರಬ್ರಹ್ಮನನ್ನೇ ಚಿಂತಿಸತಕ್ಕದ್ದೆಂದು ಹೇಳಿರುತ್ತಾರೆ. ಆದುದರಿಂದಲೇ **ಮಯ್ಯಾವೇಶ್ಯ ಯೇ ಮಾಂ ಉಪಾಸತೇ** ಎಂಬ ಪ್ರಯೋಗವು. ಹಿಂದೆ ಪ್ರಥಮ ಶ್ಲೋಕದಲ್ಲಿ ಹೇಳಿದ ಎರಡು ವಿಧ ಉಪಾಸಕರಲ್ಲಿ **ಯೋಗವಿತ್ತಮತ್ವವು** ಯಾರಲ್ಲಿ ಎಂಬ ಅರ್ಜುನಪ್ರಶ್ನೆಗೆ, ಹಿಂದಿನ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಿದ ಉಪಾಸಕರೇ ಯೋಗವಿತ್ತಮರೆಂದು, **ಯುಕ್ತತಮಾಃ** ಎಂಬ ಪ್ರಯೋಗದಿಂದ ಉಪದೇಶಿಸಲ್ಪಟ್ಟುದರಿಂದ, ಉತ್ತರಾರ್ಧದಲ್ಲಿ ಹೇಳಲ್ಪಟ್ಟ

**ಭಾ. ಅತ್ಯರ್ಥ ಮತ್ಪ್ರಿಯತ್ವೇನ ಮನೋ ಮಯ್ಯಾವೇಶ್ಯ ಶ್ರದ್ಧಯಾ ಪರಯೋಪೇತಾಃ ನಿತ್ಯಯುಕ್ತಾಃ - ನಿತ್ಯಯೋಗಂ ಕಾಂಕ್ಷಮಾಣಾಃ ಯೇ ಮಾಮುಪಾಸತೇ ಪ್ರಾಪ್ಯ ವಿಷಯಂ ಮನೋ ಮಯ್ಯಾವೇಶ್ಯ ಯೇ ಮಾ ಮುಪಾಸತ ಇತ್ಯರ್ಥಃ, ತೇ ಯುಕ್ತತಮಾಃ ಮೇ ಮತಾಃ - ಮಾಂಸುಖೇನಾಚಿರಾತ್ಪ್ರಾಪ್ನುವಂತೀತ್ಯರ್ಥಃ ||**

ಉಪಾಸಕರು ಯುಕ್ತತಮರಲ್ಲವು, ಅವರಲ್ಲಿ ಯೋಗಪಿತ್ತಮತ್ವವಿಲ್ಲವೆಂಬುದು ವ್ಯಕ್ತವು, ಅದು ಏತರಿಂದೆಂದರೆ ಇವರ ಪ್ರಾಪ್ಯವು ಪ್ರಥಮತಃ ನಾನಲ್ಲವು, ನನಗೆ ಶರೀರವಾಗಿರುವ ಪ್ರಕೃತಿ ವಿಯುಕ್ತ ಪ್ರತ್ಯಗಾತ್ಮನು. ಆದುದರಿಂದ ಉಪಾಸನೆಯು ಸುಲಭವಲ್ಲವು ; ಶೀಘ್ರವೂ ಅಲ್ಲವು ; **ಕ್ಲೇಶೋಧಿಕತರ**ವೆಂದು ಮುಂದೆ ೫ ನೆಯ ಶ್ಲೋಕದಲ್ಲಿ ಹೇಳಲ್ಪಡುತ್ತದೆ.

**ಭಾಷ್ಯಾರ್ಥವು** :—**ಅತ್ಯರ್ಥಮತ್ಪ್ರಿಯತ್ವೇನ** - ಇಷ್ಟೆಂದು ಹೇಳಲು ಸಾಧ್ಯವಲ್ಲದಷ್ಟು ನನ್ನ ವಿಷಯದಲ್ಲಿ ಪ್ರೀತಿಯುಳ್ಳುದರಿಂದ, **ಮನಃ** - ಮನಸ್ಸನ್ನು, **ಮಯ್ಯಾವೇಶ್ಯ** - ನನ್ನಲ್ಲೇ ಇಟ್ಟು, **ಪರಯಾ ಶ್ರದ್ಧಯಾ** - ಸರ್ವೋತ್ಕೃಷ್ಟ ಶ್ರದ್ಧೆಯಿಂದ, **ಉಪೇತಾಃ** - ಕೂಡಿದವರಾಗಿ, **ನಿತ್ಯಯುಕ್ತಾಃ** ಎಂದರೆ **ನಿತ್ಯಯೋಗಂ ಕಾಂಕ್ಷಮಾಣಾಃ** - ನನ್ನೊಂದಿಗೆ ನಿತ್ಯಯೋಗವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವರಾಗಿ, ಎಂದರೆ ಪ್ರಾಪ್ಯವನ್ನು ಕ್ಷಿಪ್ರದಲ್ಲೇ ಹೊಂದಬೇಕೆಂಬ ತ್ವರಾತಿಶಯವುಳ್ಳವರಾಗಿ, **ಯೇ ಮಾ ಮುಪಾಸತೇ** - ಯಾರು ನನ್ನನ್ನು ಎಂದರೆ ದಿವ್ಯಮಙ್ಗಳ ವಿಗ್ರಹಯುಕ್ತನಾದ ನನ್ನನ್ನು ಉಪಾಸನೆ ಮಾಡುತ್ತಾರೋ, ಇವರ ತಾತ್ಪರ್ಯವೇನೆಂಬುವನ್ನು ವ್ಯಕ್ತಪಡಿಸುತ್ತಾರೆ.—'**ಪ್ರಾಪ್ಯ ವಿಷಯಂ ಮನಃ** - ಪ್ರಾಪ್ಯ ವಿಷಯಕವಾದ ಮನಸ್ಸನ್ನು ಪ್ರಾಪ್ಯನಾದ ಪರಿಪೂರ್ಣ ಬ್ರಹ್ಮನಾದ ನನ್ನನ್ನು ಹೊಂದಬೇಕೆಂಬ ಸಙ್ಕಲ್ಪವುಳ್ಳ ಮನಸ್ಸನ್ನು, **ಮಯ್ಯಾ ವೇಶ್ಯ ಯೇ ಮಾಂ ಉಪಾಸತೇ ಇತ್ಯರ್ಥಃ** - ನನ್ನಲ್ಲೇ ಇಟ್ಟು ಯಾರು ನನ್ನನ್ನಾದರೆ ಉಪಾಸಿಸುತ್ತಾರೋ ಎಂಬ ಅಭಿಪ್ರಾಯವು, **ತೇ** - ಅಂತವರು, **ಯುಕ್ತತಮಾಃ ಮೇ ಮತಾಃ** - ಯುಕ್ತತಮರಾಗಿ ತನಗೆ ಪ್ರಿಯರಾದವರು ಎಂದರೆ **ಮಾಂ ಸುಖೇನಾ ಚಿರಾತ್ಪ್ರಾಪ್ನುವಂತೀತ್ಯರ್ಥಃ** - ನನ್ನನ್ನು ಸುಲಭವಾಗಿ ಶೀಘ್ರದಲ್ಲೇ ಎಂದರೆ ಉಪಾಯಾನುಷ್ಠಾನವೂ ಸುಕರವಾಗಿ ಬೇರೆ ಜನ್ಮಗಳಿಲ್ಲದೆ ದೇಹಾವಸಾನವಾದ ಒಡನೆಯೇ ಹೊಂದುತ್ತಾರೆಂಬ ತಾತ್ಪರ್ಯವು. **ಭಗವಂತನೇ ತನಗೆ ಪ್ರಾಪ್ಯವು** ಆತನೊಂದಿಗೇನೇ ಶೀಘ್ರದಲ್ಲಿ ಸಂಶ್ಲೇಷಹೊಂದಿ ನಿತ್ಯಯೋಗವನ್ನು ತನಗೆ ಲಭಿಸಬೇಕೆಂದು ಪರಮ ಶ್ರದ್ಧೆಯುಳ್ಳ ಮನಸ್ಸುಳ್ಳವನು ಯಾರೋ, ಅವನೀಗ ಶೀಘ್ರದಲ್ಲಿ ವಿನಿಷ್ಪನ್ನಯೋಗನಾಗಿ ನನ್ನನ್ನು ಸುಲಭವಾಗಿ ಹೊಂದುವನು ; ನನ್ನ ಸಾಯುಜ್ಯವನ್ನು ಹೊಂದುವನು ಎಂಬ ತಾತ್ಪರ್ಯವು. ಇಂತಹ ಜ್ಞಾನಿಯಾದ ಭಕ್ತಿಯೋಗನಿಷ್ಠನಿಗೆ ತಾನೇ ಪ್ರಾಪ್ಯವೆಂದು ತಿಳಿಸುವದಕ್ಕಾಗಿ **ಪ್ರಾಪ್ಯ ವಿಷಯಂ ಮನಃ** ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ. ಆದುದರಿಂದ ಇನ್ನೊಂದು ವಿಧ ಉಪಾಸಕರಿಗೆ ಉಪಾಸನದ ಕಾಲದಲ್ಲಿ ತಾನು ಪ್ರಾಪ್ಯ ವಿಷಯವಲ್ಲವೆಂಬುದು ಸೂಚಿತವು. ಅವರಿಗೆ ಪ್ರಾಪ್ಯವು ತತ್ಕ್ರತುನ್ಯಾಯದ ಪ್ರಕಾರ ಪರಿಶುದ್ಧ ಪ್ರತ್ಯಗಾತ್ಮವು ; ಇದಾದನಂತರ ಪುನರಾವೃತ್ತಿಯಿಲ್ಲದ ತನ್ನ ಪ್ರಾಪ್ತಿಯು ಎಂದು ತಿಳಿಯ ತಕ್ಕದ್ದು. ಹೀಗೆ ಸ್ವಲ್ಪ ವಿಳಂಬವೂ, ಸಿದ್ಧಿಯುಂಟಾಗುವವರಲ್ಲೂ ಸ್ವಲ್ಪ ಕಷ್ಟವೂ, ಉಂಟೆಂದು ಮುಂದೆ ಹೇಳಲ್ಪಡುತ್ತದೆ. ಇವರು ಜಿಜ್ಞಾಸುಗಳು. ವಿಶೇಷ ಶ್ರದ್ಧೆಯಿಂದ ಪರಮಾತ್ಮೋಪಾಸನೆಯನ್ನು ಮಾಡುವರೇ ಸರ್ವಶ್ರೇಷ್ಠರೆಂದು ಇಷ್ಟು ಮಾತ್ರ ಹೇಳಲ್ಪಟ್ಟಿದೆ ; ಆದರೆ ಯತಿವರ್ಯರು **ಸುಖೇನ ಅಚಿರಾತ್ಪ್ರಾಪ್ನುವಂತಿ** ಎಂಬ ವ್ಯಾಖ್ಯಾನಕ್ಕೆ ಕಾರಣವೇನು ? ಎಂದರೆ, ಮುಂದೆ ೭ ನೆಯ ಶ್ಲೋಕದಲ್ಲಿ ಈ ತನ್ನ ಪ್ರಾಪ್ತಿಗಾಗಿ ತನ್ನನ್ನು ಉಪಾಸಿಸುವರಿಗೆ **"ಭವಾಮಿನಚಿರಾತ್ಪಾರ್ಥ ಮಯ್ಯಾವೇಶಿತ**

**ಚೇತಸಾಂ"** ಎಂದು ಶೀಘ್ರ ಮೋಕ್ಷಪ್ರಾಪ್ತಿಯು ಹೇಳಲ್ಪಟ್ಟಿರುವದರಿಂದ, ಅದನ್ನು ಮನಸ್ಸಿನಲ್ಲಿಟ್ಟು ತಾತ್ಪರ್ಯವನ್ನು ದಯಪಾಲಿಸುತ್ತಾರೆ. **ಮಾಂ ಸುಖೇನ** ಎಂದು ಹೇಳಿರುವದು ಹಿಂದೆ ೧೪ನೆಯ ಶ್ಲೋಕದಲ್ಲಿ **"ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯಯೋಗಿನಃ"** ಎಂದು ಹೇಳಿರುವುದನ್ನು ಜ್ಞಾಪಕಕೊಡುವದಕ್ಕಾಗಿ ಪ್ರಯೋಗವೆಂದು ಭಾವಿಸತಕ್ಕದ್ದು, ಬೇರೇ ಕಡೆ **"ಪ್ರತಿ ಬುದ್ಧಸ್ತು ಮೋಕ್ಷಭಾಕ್"** ಎಂಬ ಪ್ರಮಾಣಾರ್ಥವೂ ಇಲ್ಲಿ ಉಪಪಾದಿತವು. ಈತನು ಪ್ರತಿ ಬುದ್ಧನು ಹೇಗೆ ಎಂದರೆ ಪ್ರಾಪ್ಯವನ್ನು ಹೊಂದುವದರಲ್ಲಿ (೧) ಸುಲಭತ್ವವೂ (೨) ಶೀಘ್ರತ್ವವೂ ಇರುವದರಿಂದ ಎಂಬ ಭಾವವು. **ಪ್ರಾಪ್ಯವಿಷಯಂಪುನಃ** ಎಂದು ಇಲ್ಲಿ ಹೇಳಿರುವದರಿಂದ **ಅಕ್ಷರಮವ್ಯಕ್ತೋ**ಪಾಸನೆಗೂ ಭಗವದುಪಾಸನೆಗೂ ಪ್ರಾಪ್ಯದಲ್ಲಿರುವ ತಾತ್ಕಾಲಿಕ ವ್ಯತ್ಯಾಸವು, ತತ್ಕ್ರತುನ್ಯಾಯದಿಂದ ಹೇಳಲ್ಪಟ್ಟಿತು ಜ್ಞಾನಿಗೆ ಪ್ರಾಪ್ಯವು, ವಿಶ್ವಶರೀರಕ ಭಗವಂತನನ್ನೇ ಉಪಾಸಿಸುವದರಿಂದ ಆತನೇ. ಪರಮ ಬ್ರಹ್ಮಾತ್ಮಕನಾದ ಪರಿಶುದ್ಧಾತ್ಮನೇ ಅಕ್ಷರ ನಿಷ್ಠನಿಗೆ ಪ್ರಾಪ್ಯವಾದುದರಿಂದ, ತತ್ಕ್ರತುನ್ಯಾಯದ ಪ್ರಕಾರ ಪೂರ್ವಭಾವಿಯಾಗಿ ಪ್ರಾಪ್ಯವು ಪರಿಶುದ್ಧಾತ್ಮನಾಗಿ, ಅನಂತರ ಪರಮಪುರುಷನೇ ಪ್ರಾಪ್ಯವು ಎಂಬ ವೈಲಕ್ಷಣ್ಯವು **ಪ್ರಾಪ್ಯವಿಷಯಂ ಪುನಃ** ಎಂಬ ಪ್ರಯೋಗದಿಂದ ಸೂಚಿತವು. ಈ ಶ್ಲೋಕದಲ್ಲಿ **ನಿತ್ಯಯುಕ್ತಾಃ** ಎಂಬುದಕ್ಕೆ **ನಿತ್ಯಯೋಗಂ ಕಾಂಕ್ಷಮಾಣಾಃ** ಎಂದು ಭಾಷ್ಯವು, ಹಿಂದೆ ಈ ಶ್ಲೋಕಾಭಿಪ್ರಾಯವನ್ನೇ ಹೊಂದಿರುವ ೮-೧೪ ನೆಯ ಶ್ಲೋಕದಲ್ಲಿರುವ **"ನಿತ್ಯಯುಕ್ತಸ್ಯ"** ಎಂಬಲ್ಲಿಯೂ **ನಿತ್ಯಯೋಗಂ ಕಾಂಕ್ಷಮಾಣಸ್ಯ** ಎಂದೇ ಭಾಷ್ಯವಿರುತ್ತದೆ. ಪರಾಂಬರಿಸಬಹುದು. ಈ ಶ್ಲೋಕದಲ್ಲಿ ದಹರಾದಿ ಬ್ರಹ್ಮವಿದ್ಯೆಗಳಿಗೂ ಪಂಚಾಗ್ನ್ಯಾದಿ ಬ್ರಹ್ಮವಿದ್ಯೆಗಳಿಗೂ ಇರುವ ವೈಲಕ್ಷಣ್ಯವು ಪ್ರದರ್ಶಿಸಲ್ಪಟ್ಟಿತೆಂಬುದು ಮುಖ್ಯ ತಾತ್ಪರ್ಯವು.

**ಮೂಲಕ್ಕೆ ಅರ್ಥವು** :—ಮುಂದಿನ ಮೂರು ಶ್ಲೋಕಗಳಿಂದ ಜಿಜ್ಞಾಸುವಿನ ಉಪಾಸನೆಗೆ ದೇಹ ವಿಯೋಗದಲ್ಲಿ ಮೊದಲು ಪ್ರತ್ಯಗಾತ್ಮ ಸ್ವರೂಪ ಪ್ರಾಪ್ತಿಯೂ, ತದನಂತರ ಪರಮ ಪುರುಷ ಪ್ರಾಪ್ತಿಯೂ ಉಂಟೆಂದು ಹೇಳಿ, ಈ ಉಪಾಸಕರಿಗೆ ಕ್ಲೇಶವುಂಟೆಂದೂ ತತ್ಪ್ರಾಪ್ತಿಯು ದೇಹಿಗಳಿಗೆ ಕಷ್ಟತರವೆಂದೂ ನಿರಾಕರಿಸಿ, ಸಾಕ್ಷಾತ್ಪರ ಬ್ರಹ್ಮಪ್ರಾಪ್ತಿಗಾಗಿಯೇ ಉಪಾಸನಮಾಡುವವರನ್ನು ೬, ೭ ನೆಯ ಶ್ಲೋಕಗಳಲ್ಲಿ ಶ್ಲಾಘಿಸುತ್ತಾರೆ.—ಈ ಮೂರು ಶ್ಲೋಕಗಳಲ್ಲಿ ೩ ನೆಯ ಶ್ಲೋಕದಲ್ಲಿ ಪ್ರಕೃತಿ ವಿಯುಕ್ತ ಆತ್ಮಸ್ವರೂಪ ವೆಂತಾದ್ದೆಂದು ಹಿಂದೆ ಹೇಳಿದುವನ್ನೆಲ್ಲಾ ಅನುವಾದಮಾಡಿ ಹೇಳಿ, ಅಂತಹ ಆತ್ಮಸ್ವರೂಪವನ್ನು ಹೇಗೆ ಉಪಾಸಿಸತಕ್ಕದ್ದೆಂಬುದನ್ನು, ಹಿಂದೆ ಹೇಳಿದುವನ್ನೇ ಇಲ್ಲಿ ಪುನಃ ೪ ನೆಯ ಶ್ಲೋಕದಲ್ಲಿ ಅನುವಾದಮಾಡಿ ಹೇಳಿ, ಆ ಕಾರಣದಿಂದ ಅಂತಹ ಉಪಾಸಕರಿಗೆ ಕ್ಲೇಶೋಧಿಕವು ಹೇಗೆಂಬುದು ಈ ಐದನೆಯ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಮುಂದಿನ ಮೂರು ಶ್ಲೋಕಗಳೂ ಅಕ್ಷರ ನಿಷ್ಠನನ್ನು ಕುರಿತವುಗಳಾದುದರಿಂದ ಒಟ್ಟಿಗೆ ವ್ಯಾಖ್ಯಾನವು **ಇಂದ್ರಿಯಗ್ರಾಮಂ** - ಇಂದ್ರಿಯಗಳ ಸಮೂಹವನ್ನೆಲ್ಲಾ, **ಸನ್ನಿಯಮ್ಯ** - ಐಹಿಕ ವಿಷಯೋಪಭೋಗಗಳ ಸಂಬಂಧದ ಲೇಶವೂ ಇಲ್ಲದಹಾಗೆ ಚನ್ನಾಗಿ ತಡೆದು, **ಸರ್ವತ್ರ ಸಮಬುದ್ಧಯಃ** - ಎಲ್ಲಾ ಪ್ರಾಣಿಗಳಲ್ಲಿರುವ ಆತ್ಮರುಗಳು ಜ್ಞಾನೈಕಾಕಾರತಯಾ ಸಮರೆಂಬ ಬುದ್ಧಿಯುಳ್ಳವರಾಗಿ, ಆದುದರಿಂದ, **ಸರ್ವಭೂತಹಿತೇರತಾಃ** - ತನಗೆ ಅನುಕೂಲಿಸಿದರೆ ಸರ್ವ ಪ್ರಾಣಿಗಳಿಗೂ ಹಿತಮಾಡಲು ಆಸಕ್ತಿಯುಳ್ಳವರಾಗಿ **ಯೇತು** - ಯಾವ ಭಕ್ತಿಯೋಗ ನಿಷ್ಠರಾದರೋ, ಇಲ್ಲಿ **ತು** ಶಬ್ದವು ಜ್ಞಾನಿಯಾದ ಭಕ್ತಿಯೋಗ ನಿಷ್ಠರನ್ನು ವ್ಯಾವರ್ತಿಸಿ ಹೇಳುತ್ತದೆ, **ಅಕ್ಷರಂ** - ಪ್ರಕೃತಿ ವಿಯುಕ್ತನಾದನಂತರ ಕ್ಷರಣ ಸ್ವಭಾವವಿಲ್ಲದೆ ವಿಕಾರವಿಲ್ಲದ ಸ್ವರೂಪವುಳ್ಳ, **ಅನಿರ್ದೇಶ್ಯಂ** - ದೇಹದೊಂದಿಗೆ ನಿರ್ದೇಶಿಸಲು ಸಾಧ್ಯವೇ ವಿನಾ, ದೇಹವಿಲ್ಲದ ಸ್ಥಿತಿ

**ಮೂ. ಯೇತ್ವಕ್ಷರ ಮನಿರ್ದೇಶ್ಯ ಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗ ಮಚಿನ್ತ್ಯಂ ಚ ಕೂಟಸ್ಥ ಮಚಲಂ ಧ್ರುವಂ ॥** ೩.
**ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥** ೪.
**ಕ್ಲೇಶೋಧಿಕತರ ಸ್ತೇಷಾ ಮವ್ಯಕ್ತಾ ಸಕ್ತ ಚೇತಸಾಮ್ ।**
**ಅವ್ಯಕ್ತಾ ಹಿ ಗತಿ ರ್ದುಃಖಂ ದೇಹವದ್ಭಿ ರವಾಪ್ಯತೇ ॥** ೫.

ಯಲ್ಲಿ ಅಣುರೂಪವಾಗಿ ನಿರ್ದೇಶಿಸಲು ಸಾಧ್ಯವಿಲ್ಲದಿರುವ, **ಅವ್ಯಕ್ತಂ** - ಚಕ್ಷುರಾದಿ ಇಂದ್ರಿಯಗಳಿಗೆ ಗೋಚರನಲ್ಲದಿರುವ, **ಸರ್ವತ್ರಗಂ** - ಪ್ರತಿಯೊಂದು ಪ್ರಾಣಿಯಲ್ಲೂ ಎಂದರೆ ದೇವ ಮನುಷ್ಯ **ತಿರ್ಯಜ್** ಸ್ಥಾವರಭೇದಗಳಲ್ಲಿ ಹೀಗೆ ಎಲ್ಲಾ ದೇಹಗಳನ್ನು ಹೊಂದುವನಾಗಿ, **ಅಚಿನ್ತ್ಯಂ**- ಹಾಗಿದ್ದರೂ ಸ್ವರೂಪವೆಂತಾದ್ದೆಂದು ಊಹಿಸಲು ತುಂಬಾ ಕಷ್ಟವಾದ, **ಕೂಟಸ್ಥಂ**- ದೇಹಸಂಬಂಧವಿಲ್ಲದಿದ್ದರೆ ಏನೊಂದೂ ಕೆಲಸಮಾಡಲು ಸಾಧ್ಯವಿಲ್ಲದೆ ಸುಮ್ಮನಿರುವ, ಅಥವಾ ದೇವಾದಿ ಅನೇಕ ಶರೀರಗಳ ಸಂಬಂಧವಿದ್ದರೂ ಅವುಗಳಿಂದ ಸಂಬಂಧಿಸಲ್ಪಡದ ತನ್ನ ಜ್ಞಾನ ಸ್ವರೂಪವು ಒಂದೇ ವಿಧವಾಗಿರುವ ಅಥವಾ ಸ್ವರೂಪವಿಕಾರವಿಲ್ಲದೆ ಜ್ಞಾನೈಕಾಕಾರತೆಯುಳ್ಳ, ಶಾಶ್ವತವಾದ ಸ್ವರೂಪವನ್ನುಳ್ಳ, **ಅಚಲಂ** - ಆ ಕಾರಣದಿಂದಲೇ ವಿಕಾರ ಹೊಂದದೇ ಇರುವ, ಅಥವಾ ವಿಜಾತೀಯ ದೇಹಸಂಬಂಧಗಳಿದ್ದರೂ ಅವುಗಳ ಸಂಬಂಧ ಯಾವುದೂ ಇಲ್ಲದಿರುವ, ಆ ಕಾರಣದಿಂದ **ಅಚಲಂ** ಪರಿಣಾಮಾದಿಗಳನ್ನು ಹೊಂದದ, ಆ ಕಾರಣದಿಂದಲೇ, **ಧ್ರುವಂ** - ಶಾಶ್ವತನಾಗಿ ನಿತ್ಯನಾಗಿರುವ, ಇಂತಹ ಪರಿಶುದ್ಧ ಪ್ರತ್ಯಗಾತ್ಮಸ್ವರೂಪವನ್ನು, **ಉಪಾಸತೇ** - ಉಪಾಸಿಸುತ್ತಾರೋ, **ತೇ** - ಅವರೂ ಕೂಡ, ತತ್ಕ್ರತುನ್ಯಾಯ ಪ್ರಕಾರ ಇವರಿಗೆ ಪರಿಶುದ್ಧ ಪ್ರತ್ಯಗಾತ್ಮವೇ ಪ್ರಾಪ್ಯವಾದರೂ, **ಮಾಮೇವ ಪ್ರಾಪ್ನುವಂತಿ** - ಅವರಿಗೆ ಹಿಂದೆಯೇ ೮-೧೧ ರಲ್ಲಿ ಪುನರಾವರ್ತಿ ಇಲ್ಲವೆಂದು ಹೇಳಿರುವವರಿಂದ, ಅವರೂ ಕೂಡ ಕ್ರಮೇಣ ನನ್ನನ್ನೇ ಸೇರುವರು. ಇವರಿಗೆ ಪ್ರತ್ಯಗಾತ್ಮಸ್ವರೂಪವೇ ತತ್ಕ್ರತುನ್ಯಾಯದ ಪ್ರಕಾರ ಪ್ರಾಪ್ಯವಾದರೂ, ಅದನ್ನು ಈ ಪಂಚಾಗ್ನಿ ವಿದ್ಯಾನಿಷ್ಠರಾದ ಪ್ರತ್ಯಗಾತ್ಮೋಪಾಸಕರೂ ಹೊಂದಿದ ನಂತರ, **ಮಾಮೇವ ಪ್ರಾಪ್ನುವಂತಿ** - ನನ್ನನ್ನೇ ಹೊಂದುವರು ಎಂದು ಹೇಳಲ್ಪಟ್ಟಿತು. ಪೂರ್ವೋಪಾಸಕರನ್ನು, **ಯುಕ್ತತಮಾಃ** - ಎಂದು ಶ್ಲಾಘಿಸಲ್ಪಟ್ಟುದುದು ಹೇಗೆ ಎನ್ನುತ್ತೀಯೋ, ಹೇಳುತ್ತೇನೆ, ಕೇಳು ಎನ್ನುತ್ತಾರೆ— **ಅವ್ಯಕ್ತಾಸಕ್ತ ಚೇತಸಾಂ** - ಹೀಗೆ ಚಕ್ಷುರಾದಿ ಇಂದ್ರಿಯಗಳಿಗೆ ಗೋಚರನಲ್ಲದ ಪ್ರತ್ಯಗಾತ್ಮಸ್ವರೂಪೋಪಾಸನೆಯಲ್ಲಿ ಸಂಬಂಧಿಸಲ್ಪಟ್ಟ ಮನಸ್ಸುಳ್ಳವರಿಗೆ **ಕ್ಲೇಶಃ** - ಉಪಾಸನದಲ್ಲಿರುವ, ಕಷ್ಟವು, **ಅಧಿಕ ತರಃ** ತುಂಬಾ ಹೆಚ್ಚಾದುದು, ಅದು ಹೇಗೆ ಎನ್ನುತ್ತೀಯೋ ? **ಹಿ** - ಯಾವಕಾರಣದಿಂದ, **ದೇಹವದ್ಭಿಃ** - ದೇಹಮೂಲಕವಾಗಿ ಜ್ಞಾನ ತಿರೋಧಾನ ಉಂಟಾದವರಿಗೆ, **ಅವ್ಯಕ್ತಾ** - ಪ್ರತ್ಯಗಾತ್ಮರೂಪವಾದ, **ಗತಿಃ** - ಪ್ರಾಪ್ಯದ ಪ್ರಾಪ್ತಿಯು, **ದುಃಖಂ ಯಥಾ ತಥಾ** - ಸುಲಭ ಸಾಧ್ಯವಲ್ಲದೆ ಬಹು ಕಷ್ಟದಿಂದ, **ಅವಾಪ್ಯತೇ**- ಹೊಂದಲ್ಪಡುತ್ತದೆಯಷ್ಟೇ. ದೇಹಸಂಬಂಧವಿಲ್ಲದ ಪ್ರತ್ಯಗಾತ್ಮಸ್ವರೂಪದ ಸಾಕ್ಷಾತ್ಕಾರವು ಸುಲಭವಲ್ಲವು. ಪರಮಾತ್ಮನ ಪರವಾಸುದೇವರೂಪದಲ್ಲಿ ದಿವ್ಯಮಙ್ಗಳವಿಗ್ರಹರೂಪವು ಚತುರ್ಭುಜ ದಿವ್ಯಾಭರಣಾಯುಧಗಳಿಂದ ಒಪ್ಪುತ್ತಾ ಪೀತಾಂಬರ ಮಕುಟ ವನಮಾಲಾದಿಂದ ಶೋಭಿತವಾಗಿ ಅನುಗ್ರಹ ಮಯಳಾದ ಲಕ್ಷ್ಮಿಯಿಂದ ಕೂಡಿರುವ ಮೂರ್ತಿಯಾದುದರಿಂದ,

ಅಂತಹ ದಿವ್ಯರೂಪಸಾಕ್ಷಾತ್ಕಾರವು ಸುಲಭವಾದುದರಿಂದ ಪ್ರಾಪ್ಯ ಪ್ರಾಪ್ತಿಯಲ್ಲಿ ಕಷ್ಟವಿಲ್ಲವು, ಶೀಘ್ರದಿಂದ ಲಭಿಸಬಹುದೆಂದು ಹೇಳಲ್ಪಟ್ಟಿತು.

ಈ ಶ್ಲೋಕಗಳ ಅಭಿಪ್ರಾಯವನ್ನು ಮೂರು ಸಿದ್ಧಾನ್ತಿಗಳೂ ಮೂರು ವಿಧವಾಗಿ ತಿಳಿಸಿದರು. ಅಧ್ಯಾಯದ ಪ್ರಥಮ ಶ್ಲೋಕದ ಉತ್ತರಾರ್ಧದಲ್ಲೂ ಮೂರು ಶ್ಲೋಕಗಳಲ್ಲೂ ಅಮೂರ್ತಿ ಮತ್ತಾದ ಪರಬ್ರಹ್ಮೋಪಾಸನೆಯು ಹೇಳಲ್ಪಟ್ಟಿತೆಂದು ಶ್ರೀಮಚ್ಛಂಕರಾಚಾರ್ಯರು ಭಾವಿಸಿದರು. ಶ್ರೀ ಯತಿವರ್ಯರಾದರೋ ಅಮೂರ್ತಿಮತ್ತಾದ ಪರಬ್ರಹ್ಮಾತ್ಮಕವಾದ ಜೀವಾತ್ಮೋಪಾಸನೆಯು ಹೇಳಲ್ಪಟ್ಟಿತೆಂದೂ ಹಿಂದೆ ಹೇಳಲ್ಪಟ್ಟ ಜಿಜ್ಞಾಸುವೇ ಇಲ್ಲಿ ಹೇಳಲ್ಪಟ್ಟನೆಂದೂ ಭಾವಿಸಿದರು. ಇಂತವರ ಉಪಾಸನೆಯು ಕ್ಲೇಶೋಧಿಕತರವು ಹೇಗೆ ಎಂಬುದಕ್ಕೆ ಈ ಇಬ್ಬರು ಮಹಾನುಭಾವರೂ ಅಮೂರ್ತಿಮತ್ತಾದ ಸ್ವರೂಪವಾದುದರಿಂದ ಸಾಕ್ಷಾತ್ಕಾರವು ಕಷ್ಟವೆಂದು ಭಾವಿಸಿದರು. ಇಲ್ಲಿ ಉಪಯೋಗಿಸಿರುವ ಅಕ್ಷರ, ಅವ್ಯಕ್ತಶಬ್ದಗಳೂ, ಮತ್ತು ಅವುಗಳಿಗೆ ಕೊಟ್ಟಿರುವ ವಿಶೇಷಣಗಳಾದ, **ಅನಿರ್ದೇಶ್ಯಂ, ಸರ್ವತ್ರಗಂ, ಅಚಿನ್ತ್ಯಂ, ಕೂಟಸ್ಥಂ, ಅಚಲಂ, ಧ್ರುವಂ,** ಈ ಆರೂ, ಪರಮಾತ್ಮನಿಗೂ, ಪ್ರತ್ಯಗಾತ್ಮನಿಗೂ ಅನ್ವಯಿಸಬಹುದಾಗಿರುವದರಿಂದಲೂ, ಹಾಗೆ ಎರಡಕ್ಕೂ ಅನ್ವಯಿಸಲೂ ಸಹ ಪ್ರಮಾಣಗಳು ಸಿಕ್ಕುವದರಿಂದಲೂ ಹೀಗೆ ಭಿನ್ನಾಭಿಪ್ರಾಯಗಳಿಗೆ ಕಾರಣವಾಗಿದೆ. **ಸರ್ವತ್ರಗಂ** ಎಂಬುದು ವಿನಾ, ಮಿಕ್ಕ ಐದು ವಿಶೇಷಣಗಳೇನೂ ಎರಡಕ್ಕೂ ಸರಿಹೋಗುತ್ತದೆ; **ಸರ್ವತ್ರಗಂ** ಎಂಬುದರಿಂದ ವಿಭುವಾಗಿ ಸರ್ವವ್ಯಾಪ್ತಿಯಿರುವದರಿಂದ ಪರಮಾತ್ಮನಲ್ಲವೇ, ಇದರಿಂದ ಬೋಧಿಸಲ್ಪಟ್ಟಿರುವದು ಎಂದರೆ **ಸರ್ವತ್ರಗಂ** ಎಂದರೆ ಜೀವಾತ್ಮನೂ, ಅಸಂಖ್ಯೇಯಗಳಾದ ಜನ್ಮವೆತ್ತಿರುವದರಿಂದ ಅನೇಕ ಸಲ ದೇವ ಮನುಷ್ಯ ತಿರ್ಯಕ್, ನಾನಾವಿಧ ಸ್ಥಾವರಾದಿ ಶರೀರೋತ್ಪತ್ತಿಗಳುಳ್ಳವನಾದುದರಿಂದ **ಸರ್ವತ್ರಗಂ ;** ಹೀಗೆ ಅಚಿತ್ತನಿಂದಲೇ ಈ ಚಿತ್ತು ಸೇರಿರುವದರಿಂದ ಅಣುವಾದರೂ ಈ ಚಿತ್ತು ಎಲ್ಲಾ ಕಡೆಯಲ್ಲೂ ಅಚಿತ್ತನೊಂದಿಗೆ ಸೇರಿಕೊಂಡಿರುತ್ತದೆಂಬ ಭಾವವು. ಇದಕ್ಕೆ ಶ್ರುತಿಪ್ರಮಾಣವು:—**"ಅನೇನ ಜೀವೇನಾತ್ಮನಾ ನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ."** ಇದರಿಂದ ಜೀವಾತ್ಮನೂ **"ಸರ್ವತ್ರಗ"ನು.** ಈ ಎರಡು ಅಭಿಪ್ರಾಯಗಳಲ್ಲಿ ಯಾವುದು ಸಮಂಜಸವೆಂದು ಪರ್ಯಾಲೋಚಿಸಿದರೆ, **ತೇ ಪ್ರಾಪ್ನುವಂತಿ ಮಾಮೇವ** ಎಂಬ ಪ್ರಯೋಗವಿರುವದರಿಂದ, ನಿರ್ಗುಣ ಬ್ರಹ್ಮೋಪಾಸನವು ಇಲ್ಲಿ ವಿಧೇಯವಾಗಿದ್ದ ಪಕ್ಷದಲ್ಲಿ, ಅದರ ಉಪಾಸನೆಯು ಅಮೂರ್ತಿತ್ವದಿಂದ ಕ್ಲೇಶವು ಅಧಿಕತರವಾದರೂ, ಇದೇ ಪರಮಾರ್ಥಿಕವಾದ ಉಪಾಸನೆಯಾದುದರಿಂದ, ಪರಬ್ರಹ್ಮಪ್ರಾಪ್ತಿಯು ಸುಲಭವಾದ ಸಗುಣೋಪಾಸನಕ್ಕಿಂತಲೂ ನಿಸ್ಸಂಶಯವಾಗಿ ಲಭ್ಯವಾಗುವದರಿಂದ, ಇದೇ ಶ್ಲಾಘಿಸಲ್ಪಟ್ಟಿರಬೇಕಾಗಿತ್ತು. ಶ್ರೀ ಕೃಷ್ಣಭಗವಾನರವರು ಇದನ್ನು ನಿರಾಕರಿಸಿರುತ್ತಾರೆ. ಮತ್ತು **ಮಾಮೇವ** ಎಂಬಲ್ಲಿರುವ ಅವಧಾರಣಕ್ಕೇ ಕಾರಣವಿಲ್ಲವು; **ಮಾಂ ಪ್ರಾಪ್ನುವಂತಿ** ಎಂದು ಹೇಳಿದರೆ ಸಾಕಾಗಿತ್ತು ; ಅಥವಾ **ಮಾಂ ಪ್ರಾಪ್ನುವಂತಿ ಹಿ** ಎಂದು ಹೇಳಿದ್ದರೆ ಇನ್ನೂ ಸಮಂಜಸವಾಗುತ್ತಿತ್ತು. ಹಾಗಿಲ್ಲದೆ **ಮಾಮೇವ ಪ್ರಾಪ್ನುವಂತಿ** - ಹಾಗೂ ನನ್ನನ್ನೇ ಹೊಂದುವರು ಎಂದು ಹೇಳಿರುವದರಿಂದ, ಅವರಿಗೂ ಕೂಡ ನಾನೇ ಕೊನೆಗೆ ಪ್ರಾಪ್ಯವು ಎಂಬರ್ಥವು ಉಂಟಾಗುವದರಿಂದಲೇ, ಅಂತವರಿಗೆ ತತ್ಕ್ರತುನ್ಯಾಯದ ಪ್ರಕಾರ ಭಿನ್ನ ಪ್ರಾಪ್ಯವಾದರೂ ಕೊನೆಗೆ ನನ್ನ ಪ್ರಾಪ್ತಿಯೇ ಉಂಟಾಗುತ್ತದೆಂಬ ಅರ್ಥ ವ್ಯಕ್ತವಾದುದರಿಂದ, ಉಪಾಸ್ಯವು ಭಿನ್ನವಾಗಿ ಹಿಂದೆ ಜಿಜ್ಞಾಸು ಶಬ್ದದಿಂದ ಹೇಳಲ್ಪಟ್ಟ ಪಂಚಾಗ್ನಿವಿದ್ಯಾನಿಷ್ಠನೆಂದೇ ಅರ್ಥಮಾಡುವದು ಪರಮ ಸಮಂಜಸವಾದುದು. ಶ್ರುತಿಯೂ ಕೂಡ ಈ ಪ್ರತ್ಯಗಾತ್ಮೋಪಾಸಕನಿಗೂ ಪರಬ್ರಹ್ಮೋಪಾಸಕನಿಗೂ ಕೂಡ ಪುನ

ರಾವರ್ತಿಯಿಲ್ಲದ ಪರಬ್ರಹ್ಮಪ್ರಾಪ್ತಿ ಎಂದು **"ತದ್ಯ ಇತ್ಥಂ ವಿದುಃ"** ಎಂದು ಹಿಂದೆಯೇ ಉದಾಹರಿಸಲ್ಪಟ್ಟ ಛಾಂದೋಗ್ಯವಾಕ್ಯವೂ ಮತ್ತು ೮ ನೆಯ ಅಧ್ಯಾಯದ ೨ ನೆಯ ಶ್ಲೋಕವೂ ಬೋಧಿಸುತ್ತದೆಯಾದುದರಿಂದ ಸಮಂಜಸವಾದುದೆಂದು ತೋರುತ್ತದೆ. ಆದರೆ ಅರ್ಜುನನು ಈ ವಿಷಯವನ್ನು ಎತ್ತಲು ಸಙ್ಗತಿ ಏನಿದೆ ಎಂದಾಕ್ಷೇಪಿಸಿದರೆ, ಅದಕ್ಕೆ ಸಙ್ಗತಿಯುಂಟೆಂದು ಹಿಂದೆ ಈ ಅಧ್ಯಾಯದ ಅವತಾರಿಕೆಯಲ್ಲಿ ತೋರಿಸಿರುತ್ತೇವೆ. ಶ್ರೀ ಕೃಷ್ಣಭಗವಾನರವರು ಏಕಾದಶಾಧ್ಯಾಯಾಂತ್ಯದಲ್ಲಿ ಭಕ್ತಿರೂಪ ಉಪಾಸನದಿಂದಲೇ ತಾನು ಲಭ್ಯನೆಂದೂ, ಹಾಗೆ ಲಭ್ಯನಾಗಲು ಭಕ್ತಿಯು ಅನನ್ಯವಾದುದಾಗಿ ಮನಸ್ಸನ್ನು ತನ್ನಲ್ಲಿಯೇ ಇಟ್ಟು ಉಪಾಸಿಸಿದರೇನೇ ಸಾಧ್ಯವೇ ವಿನಾ, ಅನ್ಯಥಾ ಇಲ್ಲವು, ಎಂದರೆ ಹಾಗಿಲ್ಲದವನಿಗೆ ಪುನರ್ಜನ್ಮವುಂಟಾಗುತ್ತವೆಂದು ಹೇಳಿದಂತಾಯಿತು. ಹಿಂದೆ ಪಂಚಾಗ್ನಿ ವಿದ್ಯಾನಿಷ್ಠನಾದ ಜಿಜ್ಞಾಸುವಿಗೆ ಈ ತೊಂದರೆ ಇಲ್ಲದೆ ಆತ್ಮಪ್ರಾಪ್ತಿಯೂ, ಅನಂತರ ಪುನರಾವರ್ತಿಯಿಲ್ಲದ ಪರಬ್ರಹ್ಮಪ್ರಾಪ್ತಿಯು ಎಂದು ಹೇಳಿದುದರಿಂದ, ನಿಸ್ಸಂಶಯವಾಗಿ ಮೋಕ್ಷಪ್ರಾಪ್ತಿಯು ಇದರಲ್ಲಿ ತೋರುವದರಿಂದ ಇದೇ ಏನಾದರೂ ಉತ್ತಮವೋ, ಎಂದು ಅರ್ಜುನನು ಸಂದೇಹದಿಂದ ಪ್ರಶ್ನಿಸುತ್ತಾನೆ. ಅರ್ಜುನನ ಅಭಿಪ್ರಾಯವನ್ನು ನಿರಾಕರಿಸಿ, ಆ ಉಪಾಸನದಲ್ಲಿ ಪ್ರತ್ಯಗಾತ್ಮಸ್ವರೂಪ ಪ್ರಾಪ್ತಿಯೇ ದುಷ್ಕರವು, ಇದರಲ್ಲಾದರೋ ಈ ಪರಬ್ರಹ್ಮೋಪಾಸನೆಯಿಂದ ಪರಬ್ರಹ್ಮಪ್ರಾಪ್ತಿಯು ಸುಕರವಾದುದರಿಂದ ಶೀಘ್ರವಾಗಿ ಲಭಿಸುತ್ತದೆಂದು ಉತ್ತರವನ್ನು ದಯಪಾಲಿಸುತ್ತಾರೆ. ಈ ಎರಡನೆಯ ಶ್ಲೋಕದಲ್ಲಿ **"ಮಯ್ಯಾವೇಶ್ಯ ಮನೋ ಯೇ ಮಾಂ"** ಎಂದಾರಂಭಿಸಿರುವದರಿಂದ ಇನ್ನೊಂದು ಉಪಾಸನೆಯಲ್ಲಿ **ಮಯ್ಯಾವೇಶ್ಯಮನ**ದ ಭಾವವು ಇಲ್ಲವೆಂದು ತೋರಿಬರುವದರಿಂದಲೂ, ಮುಂದಿನ ಶ್ಲೋಕದಲ್ಲಿ **"ಯೇ ತ್ವಕ್ಷರಂ"** ಎಂದು ಉಪಾಸ್ಯವು ಬೇರೆಯಾಗಿ, **ಮಯಿ** ಎಂಬುದಕ್ಕಿಂತ ಬೇರೆಯಾದುದೆಂಬ ಭಾವವು ತೋರಿಬರುವದರಿಂದಲೂ, ಶ್ರೀ ಯತಿವರ್ಯರ ಅಭಿಪ್ರಾಯವೇ ಸಮಂಜಸವೆಂಬುದು ವ್ಯಕ್ತಪಡುತ್ತದೆ ಇದೂ ಅಲ್ಲದೆ, ಕೂಟಸ್ಥವೆಂಬ ವಿಶೇಷಣವನ್ನು ಈ ಉಪಾಸ್ಯಕ್ಕೆ ಕೊಟ್ಟಿರುವದರಿಂದ, ಪರಮಾತ್ಮನು ಬದ್ಧಮುಕ್ತರುಗಳಿಗಿಂತ ವಿಲಕ್ಷಣನೆಂದು ಹೇಳುವ ಸಂದರ್ಭದಲ್ಲಿ **ಕೂಟಸ್ಥೋಽಕ್ಷರ ಉಚ್ಯತೇ । ಉತ್ತಮಃಪುರುಷಸ್ತ್ವನ್ಯಃ"** ಎಂಬಲ್ಲಿ (ಗೀ. ೧೫-೧೬) ಬಹು ಸ್ಫುಟವಾಗಿ ಈ ಕೂಟಸ್ಥ ಅಕ್ಷರ ಶಬ್ದಗಳಿಂದ ಹೇಳಲ್ಪಟ್ಟವನು ಉತ್ತಮಪುರುಷನಾದ ಪರಮಾತ್ಮನಿಗಿಂತ ಬೇರೆ ಎಂದು ಹೇಳಿರುವದರಿಂದ, ನಿರ್ಗುಣ ಪರಬ್ರಹ್ಮೋಪಾಸನೆ ಎಂದು ನಿರ್ಧರಿಸುವದಕ್ಕೆ ಸಾಧ್ಯವೇ ಇಲ್ಲವು. ಶ್ರೀ ಮಧ್ವಾಚಾರ್ಯರಾದರೋ ಕ್ಲೇಶವು ಅಧಿಕತರವೆಂದು ಹೇಳಿದ ಉಪಾಸನೆಯು ಮಹಾಲಕ್ಷ್ಮಿಯ ಉಪಾಸನೆಯೆಂದು ಭಾವಿಸಿದರು. ಲಕ್ಷ್ಮಿಯ ಉಪಾಸನೆಯು ಹೇಗೆ ಕ್ಲೇಶವೋ ತಿಳಿಯಲಿಲ್ಲವು. **ಅಕ್ಷರ ಅವ್ಯಕ್ತ**ವೆಂಬ ಪುಲ್ಲಿಂಗ ಶಬ್ದಗಳು ಇವುಗಳಿಗೆ ಕೊಟ್ಟಿರುವ ಆರು ವಿಶೇಷಣಗಳೂ ಪುಲ್ಲಿಂಗದಲ್ಲಿರುವದರಿಂದ ಶ್ರೀ ವ್ಯಾಸಮಹರ್ಷಿಗೆ ಸ್ತ್ರೀಲಿಂಗವಾಚಕ ಶಬ್ದಗಳು ದೊರೆಯದೇ ಇಂತಹ ಪುಲ್ಲಿಂಗ ಪದಗಳಿಂದಲೇ ನಿರ್ದೇಶಿಸಿ ಹೇಳಿದರೆಂದು ಭಾವಿಸುವದು ಸ್ವಲ್ಪ ಸಾಹಸ ವಿಷಯವಾದುದರಿಂದ ಹೆಚ್ಚು ಚರ್ಚೆಯು ಈ ವಿಷಯದಲ್ಲಿ ಅನಾವಶ್ಯಕವು ಅದೂ ಅಲ್ಲದೆ ಈ ಲಕ್ಷ್ಮಿಯ ಉಪಾಸನವು ಹಿಂದೆ ಪ್ರಸ್ತುತವಾಗಿಯೂ ಇಲ್ಲವು. ಲಕ್ಷ್ಮಿಯ ಉಪಾಸನವೇ ಹೇಳಲ್ಪಟ್ಟಿತೆಂಬುದಕ್ಕೆ ಸಙ್ಗತಿಯೇ ದುರ್ಲಭವಾಗುತ್ತದೆ. ಅರ್ಜುನನ ಪ್ರಶ್ನೆಯು ಸಕಾರಣವಾಗಿರಬೇಕು ; ಪ್ರಸ್ತುತವಾಗಿರಬೇಕು. ಆ ವಿಷಯವು ಸ್ವಲ್ಪ ವಿವಾದಾಸ್ಪದವಾಗಿರಬೇಕು. ಲಕ್ಷ್ಮಿಯು ಪರಮಾತ್ಮನಿಗೆ ಅಧೀನಳಾಗಿ ನಿತ್ಯಾನಪಾಯಿನಿಯಾದುದರಿಂದ ಲಕ್ಷ್ಮಿ ಇಲ್ಲದ ಪರಮಾತ್ಮೋಪಾಸನೆಯೇ ಇಲ್ಲವು. ಪರಿಪೂರ್ಣ ಬ್ರಹ್ಮೋಪಾಸನೆಯಾಗಿರಬೇಕಾದರೆ ಸರ್ವ ವಿಶೇಷಣಗಳಾದ ಲಕ್ಷ್ಮೀ

**ಭಾ. ಯೇ ತ್ವಕ್ಷರಂ - ಪ್ರತ್ಯಗಾತ್ಮಸ್ವರೂಪಂ, ಅನಿರ್ದೇಶ್ಯಂ - ದೇಹಾದನ್ಯತಯಾ ದೇವಾದಿ ಶಬ್ದಾನಿರ್ದೇಶ್ಯಂ, ತತ ಏವ ಚಕ್ಷುರಾದಿಕರಣಾನಭಿವ್ಯಕ್ತಂ, ಸರ್ವತ್ರಗ ಮಚಿನ್ತ್ಯಂಚ - ದೇವಾದಿ ಹೇಷು ವರ್ತಮಾನಾನಾಮಪಿ ತದ್ವಿಸಜಾತೀಯ ತಯಾ**

ಕಲ್ಯಾಣ ಗುಣಗಣ, ವಿಭೂತಿಗಳಿಂದ ವಿಶಿಷ್ಟನಾದ ಪರಮ ಪುರುಷನೇ ಉಪಾಸ್ಯನು. ಇದರಿಂದ ಶ್ರಿಯಃಪತಿಯೇ ಉಪಾಸ್ಯವೆಂಬುದು ವ್ಯಕ್ತವಾಗಿರುವಾಗ, ಲಕ್ಷ್ಮಿಯ ಉಪಾಸನೆಯನ್ನು ಪೃಥಕ್ಕರಿಸಿ ಹೇಳುವದೇ ಸರಿಯಲ್ಲವು; ಆಕೆಯು ಸಹಧರ್ಮಚಾರಿಣಿಯು; ಆತನೊಂದಿಗೆ ಸೇರಿ ಇಬ್ಬರೂ ಮೋಕ್ಷ ಮೊದಲಾದವುಗಳನ್ನು ಕೊಡುವ ಸರ್ವ ವ್ಯಾಪಾರಗಳನ್ನುಳ್ಳವರು. ಆದರೆ "**ಶ್ರಿಯಂ ವಸಾನಾ ಅಮೃತತ್ವಮಾರ್ಯ**" ಎಂಬದಾಗಿ ಪೃಥಕ್ಕರಿಸಿ ಹೇಳಿದೆಯಲ್ಲಾ ಇದರ ಅಭಿಪ್ರಾಯವೇನು? ಎಂದರೆ "**ಜಾತವೇದೋ ಮಮಾವಹ**" ಎಂದು ಶ್ರೀಸೂಕ್ತದಲ್ಲೇ ಹೇಳಿರುವದರಿಂದ ಜಾತವೇದನಾದ ಶ್ರೀಮನ್ನಾರಾಯಣನು ಲಕ್ಷ್ಮೀ ಕೃಪೆಯನ್ನು ಉಂಟು ಮಾಡುವಹಾಗೆ ಮಾಡಲಿ ಎಂದಿರುವದರಿಂದ ಇಲ್ಲಿಯೂ ನಿತ್ಯಾನಪಾಯಿನಿ ಎಂಬುದೇ ಬೋಧಿತವಾಗುವದರಿಂದ ಆಕ್ಷೇಪಕ್ಕೆ ಕಾರಣವಿಲ್ಲವು. ಪುರುಷಕಾರ ರೂಪದಲ್ಲಿ ಆಕೆಯು ಪೃಥಕ್ಕಾಗಿ ಭಾವ್ಯಳು. ಆದುದರಿಂದ ಪೂರ್ವಪಕ್ಷಕ್ಕೆ ಕಾರಣವಿಲ್ಲವು. ಶ್ರೀಯಃಪತಿಯ ಉಪಾಸನದಲ್ಲೇ ಯೋಗವಿತ್ತಮತ್ವವು ಎಂಬುದು ವ್ಯಕ್ತನಾದ ವಿಷಯದಲ್ಲಿ ಇಂತಹ ಪ್ರಶ್ನೋದಯಕ್ಕೇನೇ ಕಾರಣವಿಲ್ಲವಾಗುತ್ತದೆ.

**ಭಾಷ್ಯಾರ್ಥವು:—ಯೇತು**-ಯಾವ ಭಕ್ತಿಯೋಗ ನಿಷ್ಠನಾದರೋ ಜಿಜ್ಞಾಸುವೆಂದೆನಿಸಿ, **ಅಕ್ಷರಂ** ಎಂದರೆ ಸ್ವರೂಪವಿಕಾರವಿಲ್ಲದ ಪ್ರತ್ಯಗಾತ್ಮನ ಪರಿಶುದ್ಧ ಸ್ವರೂಪವನ್ನು, ಅದು ಎಂತಾದ್ದೆಂದರೆ ಆರು ವಿಶೇಷಣಗಳನ್ನು ಕೊಟ್ಟಿರುತ್ತಾರೆ, ಈ ವಿಶೇಷಣಗಳಿಗೆ ಪರಸ್ಪರ ಹೇತು ಹೇತುಮದ್ಭಾವಗಳು ಇರುತ್ತವೆ, ಪರಿಶೀಲಿಸತಕ್ಕದ್ದು. ಪ್ರತ್ಯಗಾತ್ಮನು ಇಂತಹ ಸ್ವಭಾವಗಳನ್ನುಳ್ಳವನೆಂದು ಹಿಂದೆಯೇ ಹೇಳಲ್ಪಟ್ಟಿರುವದರಿಂದ ಅದರ ಅನುವಾದವಾಗಿ ಭಾವಿಸತಕ್ಕದ್ದು. **ಅನಿರ್ದೇಶ್ಯಂ** ಎಂದರೆ **ದೇಹಾದನ್ಯತಯಾ ದೇವಾದಿಶಬ್ದಾzನಿರ್ದೇಶ್ಯಂ** - ದೇಹಕ್ಕಿಂತಲೂ ಈ ಪ್ರತ್ಯಗಾತ್ಮನು ಬೇರೆಯಾದುದರಿಂದ, ದೇವಾದಿಪದದಿಂದ ಮನುಷ್ಯ ತಿರ್ಯಕ್ ವೃಕ್ಷ ಶಬ್ದಗಳಿಂದ ನಿರ್ದೇಶಿಸಲ್ಪಡದೇ ಇರುವವನು, ಒಂದು ಜನ್ಮದಲ್ಲಿ ದೇವನಾಗಿರಬಹುದು, ಇನ್ನೊಂದು ಜನ್ಮದಲ್ಲಿ ಮನುಷ್ಯನಾಗಬಹುದು, ಅನಂತರ ತಿರ್ಯಕ್ಕಾಗಿ, ಹೀಗೆಲ್ಲಾ ಶರೀರಗಳು ಒಬ್ಬ ಪ್ರತ್ಯಗಾತ್ಮನಿಗೆ ಅನೇಕಸಲ ಬರಬಹುದಾದುದರಿಂದ ಇವುಗಳಿಂದ ನಿರ್ದೇಶಿಸಲು ಸಾಧ್ಯವಿಲ್ಲವು. ಹಾಗೆಯೇ ಶ್ರೀ ಪರಾಶರರು "**ಪುಮಾನ್ನದೇವೋ ನನರೋ ನತಿರ್ಯಙ್ ನಚಪಾದಪಃ । ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮ ಯೋನಯಃ**" (ವಿ. ಪು.) ಈ ಪ್ರತ್ಯಗಾತ್ಮನು ದೇವನೂ ಅಲ್ಲವು, ಮನುಷ್ಯನೂ ಅಲ್ಲವು, ತಿರ್ಯಕ್ಕೂ ಅಲ್ಲವು, ವೃಕ್ಷವೂ ಅಲ್ಲವು, ಶರೀರಾಕೃತಿ ಭೇದಗಳೆಲ್ಲಾ ತೋರಿಬರುತ್ತವಲ್ಲಾ ಅವೇನು ಎಂದರೆ, ಅವು ಪ್ರಾರಬ್ಧ ಕರ್ಮಮೂಲಕಗಳಾಗಿ ಉಂಟಾದವು" ಎಂದು ಹೇಳಿರುತ್ತಾರೆ, **ತತ ಏವ** - ಆ ಕಾರಣದಿಂದಲೇ ಅವ್ಯಕ್ತನೆಂದು ಹೇಳುತ್ತಾರೆ - ಅವ್ಯಕ್ತವೆಂದರೆ **ಚಕ್ಷುರಾದಿ ಕರಣಾ ನಭಿವ್ಯಕ್ತಂ** - ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರವಲ್ಲದುದು, ದೇಹವು ಚಕ್ಷುರಾದಿ ಕರಣಗ್ರಾಹ್ಯವೇ ವಿನಾ, ಆ ದೇಹದಲ್ಲಿರುವ ಅಣುವಾದ ಆತ್ಮನಲ್ಲವು, **ಸರ್ವತ್ರಗ ಮಚಿನ್ತ್ಯಂಚ** ಈ ಪ್ರಯೋಗಗಳ ತಾತ್ಪರ್ಯವನ್ನು ತಿಳಿಸುತ್ತಾರೆ.—**ದೇವಾದಿ ದೇಹಗಳಲ್ಲಿ, ವರ್ತಮಾನ ಮಪಿ** - ಇದ್ದರೂ ಕೂಡ, **ತದ್ವಿಸಜಾತೀಯತಯಾ** - ಅವುಗಳಿ

**ಭಾ. ತೇನ ತೇನ ರೂಪೇಣ ಚಿಂತಯಿತು ಮನರ್ಹಂ, ತತ ಏವ ಕೂಟಸ್ಥಂ - ಸರ್ವಸಾಧಾರಣಂ, ತತ್ತದ್ದೇವಾದ್ಯ ಸಾಧಾರಣಾ ಕಾರಾ ಸಂಬದ್ಧ ಮಿತ್ಯರ್ಥಃ ; ಅಪರಿಣಾ**

ಗಿಂತ ವಿಲಕ್ಷಣವಾಗಿ ಬೇರೆಯಾದುದರಿಂದ, **ತೇನ ತೇನ ರೂಪೇಣ** - ಆ ಆ ಆಕಾರದಿಂದು **ಚಿಂತಯಿತುಂ** - ಯೋಚಿಸಿ ತಿಳಿಯಲು, **ಅನರ್ಹಂ** - ಸಾಧ್ಯವಿಲ್ಲದ, **ತತ ಏವ** - ಆ ಕಾರಣ ದಿಂದಲೇ, **ಕೂಟಸ್ಥಂ** ಎಂದರೆ **ಸರ್ವ ಸಾಧಾರಣಂ** - ಎಲ್ಲಾ ಆತ್ಮರುಗಳು ಜ್ಞಾನೈಕಾಕಾರತೆಯಿಂದ ಒಂದೇ ಸಮನಾಗಿರುವ, ಇವರ ತಾತ್ಪರ್ಯವನ್ನು ವ್ಯಕ್ತಪಡಿಸುತ್ತಾರೆ. — **ತತ್ತದ್ದೇವಾದ್ಯ ಸಾಧಾರಣಾಕಾರಾ ಸಂಬದ್ಧ ಮಿತ್ಯರ್ಥಃ** - ಆಯಾಯಾ ದೇವ ಮೊದಲಾದ, ಎಂಬುದರಿಂದ ಮನುಷ್ಯ, ತಿರ್ಯಕ್, ಸ್ಥಾವರ ರೂಪ ಆಕಾರಗಳು ಹೇಳಲ್ಪಟ್ಟವು, ಇಂತಹ ಅಸಾಧಾರಣ ಆಕಾರಗಳಿಂದ ಕಟ್ಟಲ್ಪಡದೇ ಇರುವ ಎಂಬ ಅರ್ಥವು, ಜೀವಾತ್ಮನಿಗೆ ಸರ್ವಸಾಧಾರಣ ರೂಪವು ಯಾವುದೆಂದರೆ ಜ್ಞಾನತ್ವಾದಿ ಗುಣಾಷ್ಟಕಗಳೊಂದಿಗೆ ಕೂಡಿರುವರೂಪವು. ಸಾಧಾರಣವಲ್ಲದ ರೂಪವು ಯಾವುದೆಂದರೆ ದೇವ, ಮನುಷ್ಯ, ತಿರ್ಯಕ್ಸ್ಥಾವರ ದೇಹಗಳಿಂದಸೇರಿ, ಭಿನ್ನ ಭಿನ್ನವಾಗಿ ತೋರೋಣವು. ಇವು ಪ್ರಾರಬ್ಧ ಕರ್ಮಗಳ ಮೂಲಕ ಉಂಟಾದವು ಎಂಬ ಶ್ರೀ ಪರಾಶರೋಕ್ತಿಯು ಹಿಂದೆ ಉದಾಹರಿಸಲ್ಪಟ್ಟಿರುತ್ತದೆ, ಈ ಅಭಿಪ್ರಾಯವು ಬಹು ಸ್ವಾರಸ್ಯವಾಗಿ **"ಪ್ರಕೃತಿಸ್ಥೋಹಿ ಪುರುಷಃ ನಾಜ್ಯತೇ ಪಾಕೃತೈರ್ಗುಣೈಃ"** ಎಂಬ ಭಾಗವತ ಶ್ಲೋಕದಲ್ಲಿ ಉಪಪಾದಿತವು (ಭಾಗ. ೩. ೨೭. ೧) **ಪುರುಷಃ** - ಈ ಪರಿಶುದ್ಧ ಸ್ವರೂಪವುಳ್ಳ ಜೀವಾತ್ಮನು, **ಪ್ರಕೃತಿಸ್ಥೋಹಿ** - ದೇಹದಲ್ಲಿ ಬದ್ಧನಾಗಿದ್ದರೂ, **ಪ್ರಾಕೃತೈರ್ಗುಣೈಃ** - ಆ ಪ್ರಕೃತಿ ಸಂಬಂಧಗಳಾದ ದೇಹದ ಸತ್ವರಜಸ್ತಮೋಗುಣಗಳಿಂದ, **ನಾಜ್ಯತೇ** - ಸ್ಪರ್ಶಿಸಲ್ಪಡುವದಿಲ್ಲವು. ವಜ್ರವು ಕೆಸರಿನಲ್ಲಿ ಬಿದ್ದರೂ ಹೇಗೆ ಅದರ ಸ್ವರೂಪವು ಕೆಡುವದಿಲ್ಲವೋ ಹಾಗೇ. ಇದರ ಉತ್ತರಾರ್ಧವಾದ **"ಅವಿಕಾರಾದ ಕರ್ತೃತ್ವಾನ್ನಿರ್ಗುಣತ್ವಾಜ್ಜಲಾರ್ಕವತ್"** ಎಂಬಲ್ಲಿ ಮೂರು ಹೇತುಗಳೂ ಒಂದು ದೃಷ್ಟಾಂತವೂ ಹೇಳಲ್ಪಟ್ಟಿರುತ್ತವೆ. ವಿಶೇಷ ವೇದಾಂತಾರ್ಥಗರ್ಭಿತವಾಗಿರುವದರಿಂದಲೂ, ಗ್ರಂಥವಿಸ್ತರ ಭಯದಿಂದಲೂ ಇದರ ಅರ್ಥವನ್ನು ಜ್ಞಾನಿಗಳಿಂದ ಕೇಳಿ ತಿಳಿಯತಕ್ಕದ್ದೆಂದು ಭಾವಿಸಿ ವಿಸ್ತರಿಸಲಿಲ್ಲವು ಆದುದರಿಂದಲೇ **ಅಪರಿಣಾಮಿತ್ವೇನ** ಎಂದಾರಂಭಿಸಿ ಅಚಲ ಶಬ್ದಕ್ಕೆ ವ್ಯಾಖ್ಯಾನವು ; **ಅಚಲಂ** ಎಂದರೆ ಪರಿಣಾಮ ರಹಿತವೆಂಬರ್ಥವೇ ವಿನಾ ಚಲಿಸದೇ ಇರತಕ್ಕದ್ದು ಎಂಬರ್ಥವಲ್ಲವು, ಪ್ರಕೃತಿ ವಿಯುಕ್ತವಾದರೂ, ಅನಂತರ ಅಪ್ರಾಕೃತಶರೀರಪ್ರಾಪ್ತಿಯೊಂದಿಗೆ ಚಲನ ಉಂಟು. **"ಜಕ್ಷತ್ ಕ್ರೀಡನ್ ರಮಮಾಣಃ"** ಇತ್ಯಾದಿ ಶ್ರುತಿಗಳು ಚಲನ ಉಂಟೆಂದು ಹೇಳುತ್ತವೆ. ಪರಿಣಾಮ ಉಂಟಾಗುವದಕ್ಕೆ ಪದಾರ್ಥಗಳಿಗೆ ಸನ್ನಿಕರ್ಷವಿರಬೇಕು. ಇಲ್ಲಿ ಯಾವರೋ ದೇಹದ ವಿಕಾರಗಳು ಆತ್ಮಾವಿಗೆ ಸಂಬಂಧಿಸುವದಿಲ್ಲವು. ಏಕೆಂದರೆ ದೇಶಕಾಲ ಸ್ವಭಾವ ವಿಪ್ರಕರ್ಷಗಳಿರುವದರಿಂದ ; ವಿಪ್ರಕರ್ಷವೆಂದರೆ ದೂರವಾಗಿರುವದರಿಂದ ; ವಜ್ರವು ಕೆಸರಿನಲ್ಲಿ ಬಿದ್ದರೂ ಕೆಸರು ವಜ್ರವನ್ನು ವ್ಯಾಪಿಸಿರಲಾರದಾದುರಿಂದ ದೇಶ ವಿಪ್ರಕರ್ಷ ಉಂಟು. ಹಾಗೆಯೇ ಆತ್ಮನೂ ದೇಹದಲ್ಲಿದ್ದರೂ ಪ್ರಕೃತಿಯು ಆತ್ಮಾವನ್ನು ವ್ಯಾಪಿಸಲಾರದಾಗಿ. ಜಲದಲ್ಲಿ ಸೂರ್ಯ ಪ್ರತಿಬಿಂಬಗಳಿದ್ದರೂ, ಜಲವು ಸೂರ್ಯನನ್ನು ವ್ಯಾಪಿಸದೇ ಇರುವದರಿಂದ ಜಲಗತ ದೋಷಗಳು ಹೇಗೆ ಸೂರ್ಯನನ್ನು ಸ್ಪರ್ಶಿಸಲಾರವೋ, ಹಾಗೆಯೇ ಪ್ರಕೃತಿ ದೋಷಗಳು ಆತ್ಮಾವನ್ನು ಸ್ಪರ್ಶಿಸಲಾರವು ; ಈ ಅಭಿಪ್ರಾಯವೇ **ಕೂಟಸ್ಥಮಚಲಂ** - ಎಂಬ ಪದಗಳಿಂದ ಬೋಧಿತವು. ಆತ್ಮನು ಅನಾದಿಯಾಗಿದ್ದುಕೊಂಡು ದೇಹಗಳು ಈಚೀಚಿಗೆ ಬಂದವುಗಳಾದುದರಿಂದ ಕಾಲ ವಿಪ್ರಕರ್ಷವಿರುವದರಿಂದಲೂ ಆತ್ಮಾವಿಗೆ ವಿಕಾರವಿಲ್ಲವು. ಇದು **ಧ್ರುವಂ** ಎಂಬುದರಿಂದ

**ಭಾ. ಮಿತ್ವೇನ ಸ್ವಾಸಾಧಾರಣಾಕಾರಾನ್ನ ಚಲತಿ-ನಚ್ಯವತ ಇತಚ್ಯಲಂ; ತತ ಏವ ಧ್ರುವಂ ನಿತ್ಯಂ ; ಸನ್ನಿಯಮ್ಯೇನ್ದ್ರಿಯಗ್ರಾಮಂ-ಚಕ್ಷುರಾದಿಕಂ ಇಂದ್ರಿಯಗ್ರಾಮಂ ಸರ್ವಂ ಸ್ವವ್ಯಾಪಾರೇಭ್ಯ ಸ್ಸನ್ನಿಯಮ್ಯ ಸರ್ವತ್ರಸಮಬುದ್ಧಯಃ - ಸರ್ವತ್ರದೇವಾದಿ ವಿಷ ಮಾಕಾರೇಷು ದೇಹೇಷ್ವನಸ್ಥಿತೇಷು ಆತ್ಮಸು ಜ್ಞಾನೈಕಾಕಾರತಯಾ ಸಮ**

ಹೇಳಲ್ಪಟ್ಟಿತು. ಆತ್ಮನ ಸ್ವಭಾವವೂ ಬೇರೆ ಬೇರೆಯಾದುದರಿಂದ ಸ್ವಭಾವ ವಿಪ್ರಕರ್ಷವೂ ಉಂಟು. ಇದನ್ನೇ ಭಾಗವತ ಶ್ಲೋಕದಲ್ಲಿ **ನಿರ್ಗುಣತ್ವಾತ್ - ಪ್ರಾಕೃತಗುಣ ರಹಿತತ್ವಾತ್** ಎಂಬುದರಿಂದ ಹೇಳಲ್ಪಟ್ಟಿತು. ಈ ಅಭಿಪ್ರಾಯವೂ ಕೂಡ **ಕೂಟಸ್ಥಮಚಲಂ ಧ್ರುವಂ** ಎಂಬ ವಿಶೇಷಣಗಳಲ್ಲೇ ಅಂತರ್ಗತವು. **ಅಪರಿಣಾಮಿತ್ವೇನ -** ಈ ಪ್ರತ್ಯಗಾತ್ಮನ ಸ್ವರೂಪವು ವಿಕಾರವನ್ನು ಹೊಂದುವದಿಲ್ಲವಾದುದರಿಂದ, **ಸ್ವಾಸಾಧಾರಣಾಕಾರಾತ್** ತನಗೇನೇ ಅಸಾಧಾರಣವಾದ ಆಕಾರವಿರುವದರಿಂದ, ಅದು ಯಾವುದೆಂದರೆ ಜ್ಞಾನ ಸ್ವರೂಪನಾಗಿ ಜ್ಞಾನ ಗುಣಕನಾಗಿರುವದರಿಂದ, **ನಚಲತಿ** ಎಂದರೆ **ನಚ್ಯವತೇ ಇತ್ಯಚಲಂ** - ಹೇಳಿಸಿಕೊಳ್ಳುತ್ತದೆ, **ತತ** ಏವ **ಧ್ರುವಂ** ಎಂದರೆ ಆ ಕಾರಣದಿಂದಲೇ **ನಿತ್ಯಂ** - ನಿತ್ಯವಾದುದು ; ಇಂತಹ **ಅಕ್ಷರಂ** ಪರಿಶುದ್ಧವಾದ ಜೀವಾತ್ಮ ಸ್ವರೂಪವನ್ನು, ಅದು ಪರಮಾತ್ಮ ಶರೀರವೆಂದು ಭಾವಿಸಿ, **ಯೇ** - ಯಾವ ಭಕ್ತಿಯೋಗ ನಿಷ್ಠರು **ಉಪಾಸತೇ** - ಉಪಾಸಿಸುತ್ತಾರೋ, ಇದರಿಂದ ಪಂಚಾಗ್ನಿ ವಿದ್ಯಾ, ಪ್ರತರ್ದನವಿದ್ಯಾ, ಮಧುವಿದ್ಯಾ, ನಿಷ್ಠರುಗಳು ಹೇಳಲ್ಪಟ್ಟರು. ಇವರು ಹೇಗೆ ಉಪಾಸಿಸಬೇಕೆಂಬುದನ್ನು ಹಿಂದೆ ಹೇಳಿದುದನ್ನೇ ಅನುವಾದ ಮಾಡಿ ಹೇಳುತ್ತಾರೆ, **ಸನ್ನಿಯಮ್ಯೇಂದ್ರಿಯಗ್ರಾಮಂ** ಎಂದರೆ **ಚಕ್ಷುರಾದಿಕಂ ಇಂದ್ರಿಯಗ್ರಾಮಂ ಸರ್ವಂ ಸ್ವವ್ಯಾಪಾರೇ ಭ್ಯಃ ಸನ್ನಿಯಮ್ಯ** - ಕಣ್ಣೇ ಮೊದಲಾದ ಸಮಸ್ತಗಳಾದ ಏಕಾದಶೇಂದ್ರಿಯಗಳನ್ನೂ, ಅವುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಪ್ರವರ್ತಿಸುವ ವ್ಯಾಪಾರಗಳಿಂದ ಚೆನ್ನಾಗಿ ನಿರೋಧಿಸಿ, ತಡೆದು, **ಸರ್ವತ್ರ ಸಮ ಬುದ್ಧಯಃ** ಎಂಬುದಕ್ಕೆ ವ್ಯಾಖ್ಯಾನವನ್ನು ದಯಪಾಲಿಸುತ್ತಾರೆ,—**ಸರ್ವತ್ರ** ಎಂದರೆ **ದೇವಾದಿ ವಿಷಮಾಕಾರೇಷು ದೇಹೇಷು ಅನಸ್ಥಿತೇಷು ಆತ್ಮಸು** - ಉತ್ಕೃಷ್ಟ ನಿಕೃಷ್ಟರೂಪದಲ್ಲಿ ವ್ಯತ್ಯಾಸ ಹೊಂದಿದ ಆಕಾರಗಳುಳ್ಳ ದೇಹಗಳಲ್ಲಿರುವ ಆತ್ಮರುಗಳಲ್ಲಿ, **ಜ್ಞಾನೈಕಾಕಾರತಯಾ** - ಎಲ್ಲಾ ಜ್ಞಾನಸ್ವರೂಪವುಳ್ಳದಾಗಿ, ಜ್ಞಾನಗುಣವನ್ನು ಹೊಂದಿರುವದರಿಂದ, **ಸಮಬುದ್ಧಯಃ -** ಸಮವಾದ ಬುದ್ಧಿಯುಳ್ಳವರಾಗಿರುವವರಾಗಿ, ಹಿಂದೆ **"ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ । ಶುನಿಚೈವ ಶ್ವಪಾಕೇಚ ಪಂಡಿತಾಸ್ಸಮದರ್ಶಿನಃ"** ಎಂಬ ಶ್ಲೋಕದಲ್ಲಿ ಅತ್ಯುತ್ಕೃಷ್ಟ ದೇಹ ಮೊದಲುಗೊಂಡು ಅತ್ಯಂತ ನೀಚದೇಹದಲ್ಲಿರುವ ಆತ್ಮರುಗಳೆಲ್ಲಾ ಜ್ಞಾನ ಸ್ವರೂಪರಾಗಿ ಜ್ಞಾನಗುಣಕರಾಗಿ ಪರಿಶುದ್ಧರಾದುದರಿಂದ ಜೀವಾತ್ಮರೆಲ್ಲಾ ಸಮರೆಂಬ ಬುದ್ಧಿ ಇರಬೇಕೇ ವಿನಾ, ಒಬ್ಬನಲ್ಲಿ ಪ್ರೀತಿ, ಇನ್ನೊಬ್ಬನಲ್ಲಿ ದ್ವೇಷಗಳಿರಕೂಡದೆಂಬ ಉಪದೇಶವು ಇಲ್ಲಿ ಸ್ಮಾರಿತವು ; ಇಲ್ಲ ಮುಖ್ಯಾಭಿಪ್ರಾಯವು ಪ್ರತಿಕೂಲಾಚರಣೆಯು ಕೂಡದೆಂಬುದು. ಹೀಗೆ ಎಲ್ಲಾ ಪ್ರಾಣಿಗಳಲ್ಲೂ ಸಮಬುದ್ಧಿಯುಳ್ಳವರಾಗುತ್ತಾರೋ, ಆಗ ಸ್ವತ ಏವ **ಸರ್ವಭೂತಹಿತೇ ರತಾಃ** ಆಗುತ್ತಾರೆಂದು, **ತತಏವ** ಎಂದು ಪ್ರಯೋಗಿಸಿ ವ್ಯಾಖ್ಯಾನಮಾಡುತ್ತಾರೆ- ಆದರೆ ಎಲ್ಲಾ ಪ್ರಾಣಿಗಳಿಗೂ ಹಿತಮಾಡಲು ಆಸಕ್ತಿಯುಳ್ಳವರಾಗುವ ಶಕ್ತಿಯು ಪರಮಾತ್ಮನಿಗೊಬ್ಬನಿಗೇವಿನಾ, ಇನ್ನು ಯಾವ ಪ್ರಪನ್ನನಿಗೂ ಸಾಧ್ಯವಿಲ್ಲದುದರಿಂದ ಸರ್ವಪ್ರಾಣಿಗಳಲ್ಲೂ ದ್ವೇಷಬುದ್ಧಿ ಇಲ್ಲದಿದ್ದರೆ, ಹಿತಬುದ್ಧಿಯುಂಟೆಂದು ಭಾವಿಸಬಹುದೆಂದೆನಿಸಿ ಹಾಗೆ ವ್ಯಾಖ್ಯಾನ ಮಾಡುತ್ತಾರೆ. **ತತಏವ** - ಹಾಗೆ ಸಮ ಬುದ್ಧಿಯುಳ್ಳವರಾಗಿರುವದರಿಂದಲೇ, **ಸರ್ವ ಭೂತ**

**ಭಾ. ಬುದ್ಧಯಃ, ತತ ಏವ ಸರ್ವಭೂತ ಹಿತೇರತಾಃ-ಸರ್ವಭೂತಾ ಹಿತ ರತಿತ್ವಾನ್ನಿವೃತ್ತಾಃ, ಸರ್ವ ಭೂತಹಿತ ರತಿತ್ವಂ ಹ್ಯಾತ್ಯನೋದೇವಾದಿ ವಿಷಮಾಕಾರಾಭಿಮಾನ ನಿಮಿತ್ತಂ, ಯ ಏವ ಮಕ್ಷರ ಉಪಾಸತೇ, ತೇಪಿ ಮಾಂ ಪ್ರಾಪ್ನುವಂತ್ಯೇವ-ಮತ್ಸ**

**ಹಿತೇ ರತಾಃ** ಸಮಸ್ತ ಪ್ರಾಣಿಗಳಿಗೂ ಹಿತವನ್ನು ಮಾಡಬೇಕೆಂಬುದರಲ್ಲೇ ಆಸಕ್ತಿಯುಳ್ಳವರಾಗಿ, ಎಂದರೆ, **ಸರ್ವಭೂತಾಹಿತರತಿತ್ವಾ ನ್ನಿವೃತ್ತಾಃ** - ಸರ್ವ ಪ್ರಾಣಿಗಳಿಗೂ ಅನಿಷ್ಟವನ್ನುಂಟುಮಾಡುವ ಆಸಕ್ತಿಯಿಂದ ನಿವೃತ್ತರಾಗಿ, ಹೀಗೆ ವ್ಯತಿರೇಕರೀತಿಯಲ್ಲಿ ಅರ್ಥಮಾಡಲು ಕಾರಣವೇನೆಂಬುದನ್ನು ತಿಳಿಸುತ್ತಾರೆ.—**ಸರ್ವ ಭುತಾಹಿತ ರತಿತ್ವಂಹಿ ಆತ್ಮನಃ ದೇವಾದಿ ವಿಷಮಾಕಾರಾಭಿಮಾನ ನಿಮಿತ್ತಂ** - ಸರ್ವ ಪ್ರಾಣಿಗಳಿಗೂ ಅಹಿತವನ್ನು ಮಾಡುವದರಲ್ಲಿ ಆಸಕ್ತಿಯಾದರೋ, ಆತ್ಮರುಗಳು **ದೇವ ಮನುಷ್ಯ ತಿರ್ಯಗಾದಿ** ವ್ಯತ್ಯಸ್ತಗಳಾದ ದೇಹವುಳ್ಳವರೆಂಬ ಅಜ್ಞಾನಮೂಲಕವಾದುದು. ಹಾಗೆ ಅಜ್ಞಾನವಿಲ್ಲದೆ ಉತ್ಕೃಷ್ಟ ನಿಕೃಷ್ಟ ದೇಹಗಳನ್ನು ಹೊಂದಿರುವ ಆತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ ಸಮರು ಎಂಬ ಸಮಬುದ್ಧಿಯುಳ್ಳವರಾಗುವರೋ, ಆಗ ಯಾವ ಪ್ರಾಣಿಯನ್ನೂ ದ್ವೇಷಿಸರು, ಅವುಗಳಿಗೆ ತಮ್ಮ ಕೈಲಾದ ಮಟ್ಟಿಗೆ ಹಿತವನ್ನು ಮಾಡುವುದರಲ್ಲೇ ಅವರಿಗೆ ಆಸಕ್ತಿಯುಂಟಾಗುತ್ತದೆಂಬ ಭಾವವು. ಹಾವು ಚೇಳುಗಳೂ ಕೂಡ ಪ್ರಾರಬ್ಧ ಕರ್ಮಮೂಲಕ ಪಾಪಿಗಳಾಗಿವೆ ಎಂದು ಭಾವಿಸಿ, ಅವುಗಳಿಂದ ದೂರವಾಗಿರುವವರೇ ವಿನಾ ಅವುಗಳನ್ನು ಕೊಲ್ಲಲಾರರು ಎಂಬ ಭಾವವು. ತಿರ್ಯಕ್ಕುಗಳ ವಿಷಯದಲ್ಲೇ ಇಂತಹ ಭಾವನೆಯು ಇದ್ದನಂತರ ನಿಕೃಷ್ಟಜಾತಿಯಲ್ಲಿ ಜನ್ಮವೆನ್ನೆತ್ತಿದ ಕ್ರೂರ ಕರ್ಮಿಗಳನ್ನೂ ಕೂಡ, ಅಜಾತ ಶತ್ರುವಾದ ಧರ್ಮರಾಯನು ತನ್ನ ಶತ್ರುಗಳಾದ ದುರ್ಯೋಧನಾದಿಗಳನ್ನೂ ದ್ವೇಷಿಸಿದ ಹಾಗೆ, ದ್ವೇಷಿಸರು. ಅವು ಇಂತಹ ಭಕ್ತಿಯೋಗನಿಷ್ಠರಾದ ಜಿಜ್ಞಾಸುಗಳು ಜೀವಾತ್ಮಸ್ವರೂಪವು ಪರಮಾತ್ಮ ಶರೀರವೆಂದು ಭಾವಿಸಿ, ಆತನ ದಿವ್ಯಮಙ್ಗಳ ವಿಗ್ರಹದೊಂದಿಗೆ ಅಂತಹ ಪರಿಶುದ್ಧಾತ್ಮ ಸ್ವರೂಪ ಪ್ರಾಪ್ತಿಗಾಗಿ ತನ್ನ ಆತ್ಮಾವನ್ನು ಯಾರು ಉಪಾಸಿಸುತ್ತಾರೋ, **ತೇಪಿ** - ಅವರೂ ಕೂಡ, **ಮಾಂ ಪ್ರಾಪ್ನು ವಂತ್ಯೇವ** - ಅವರಿಗೆ ಪ್ರಥಮತಃ ಪ್ರಾಪ್ಯವು ಜೀವಾತ್ಮ ಸ್ವರೂಪವೇ ಆದರೂ, ಅಲ್ಲಿಂದ ಅವರಿಗೂ ಪುನರಾವೃತ್ತಿ ಇಲ್ಲವೆಂದು ಛಾಂದೋಗ್ಯದಲ್ಲೂ ಇಲ್ಲೂ ೮ ನೆಯ ಅಧ್ಯಾಯದ ೨೧ ನೆಯ ಶ್ಲೋಕದಲ್ಲೂ ಹೇಳಿರುವದರಿಂದ, **ಮಾಂ ಪ್ರಾಪ್ನುವಂತ್ಯೇವ** - ನನ್ನನ್ನೇ ಕೊನೆಗೆ ಹೊಂದುತ್ತಾರೆಯಷ್ಟೇ. ಮೂಲದಲ್ಲಿ **ಪ್ರಾಪ್ನುವಂತಿ ಮಾಮೇವ** ಎಂದು ಇರುವದರಿಂದ ನನ್ನನ್ನೇ ಹೊಂದುತ್ತಾರೆ. ಕ್ರಮೇಣ ನಾನೇ ಪ್ರಾಪ್ಯನು ಎಂಬರ್ಥವು ಉಂಟಾಗುವದರಿಂದ ಮೊದಲು ಅವರಿಗೆ ನಾನು ಪ್ರಾಪ್ಯನಲ್ಲವು, ಆದರೂ ನಾನೇ ಅನಂತರ ಪ್ರಾಪ್ಯನಾಗುವನೆಂಬರ್ಥವು ಸುಲಲಿತವಾಗಿಯೇ ಉಂಟಾಗುತ್ತದೆ. ಆದರೆ ಕೆಲವರು ಎರಡು ವಿಧ ಅಧಿಕಾರಿಗಳ ವಿಷಯದಲ್ಲೂ ಪರಮಾತ್ಮನೇ ಉಪಾಸ್ಯನೆಂದು ಭಾವಿಸಿ, ಎರಡನೆಯ ಶ್ಲೋಕದಲ್ಲಿ ಹೇಳಿರುವವರು ಸುಗುಣ ಬ್ರಹ್ಮೋಪಾಸಕರೆಂದೂ, ಈ ಮೂರು ಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟವರು ನಿರ್ಗುಣ ಬ್ರಹ್ಮೋಪಾಸಕರೆಂದು ಅಭಿಪ್ರಾಯಪಡುವರು. ಇದಕ್ಕೆ ಅವಕಾಶವಿಲ್ಲದ ಹಾಗೆ, **ಮಾಂ ಪ್ರಾಪ್ನುವಂತ್ಯೇವ** - ಮೊದಲು ನಾನು ಪ್ರಾಪ್ಯವಲ್ಲದಿದ್ದರೂ ಕ್ರಮೇಣ ನನ್ನನ್ನೂ ಹೊಂದಿಯೇ, ಹೊಂದುವರು ಎಂದು ಭಾಷ್ಯವನ್ನು ಬರೆದಿರುತ್ತಾರೆ. ಹಾಗೆ ನಿರ್ಗುಣ ಬ್ರಹ್ಮೋಪಾಸನೆಯು ಹೇಳಲ್ಪಟ್ಟಿದ್ದರೆ, **ಏವ** ಕಾರಕ್ಕೆ ಕಾರಣವೇ ಇಲ್ಲವು. ಈ **ಏವ** ಕಾರದ ಮೂಲಕ ಸಗುಣೋಪಾಸಕರಿಗೇ ಶೀಘ್ರವಾಗಿ ಪ್ರಾಪ್ಯದ ಪ್ರಾಪ್ತಿಯು, ನಿರ್ಗುಣೋಪಾಸಕರಿಗೆ ವಿಳಂಬವು, ಎಂಬರ್ಥವುಂಟಾಗುವದರ ಮೂಲಕ ಸಗುಣೋ

ಪಾಸನವನ್ನು ನಿರಾಕರಿಸಿ ನಿರ್ಗುಣೋಪಾಸನೆಯನ್ನು ಹೇಳುವವರಿಗೆ ಈ ಶ್ಲೋಕಗಳು ವಿರುದ್ಧ ವಾಗುತ್ತವೆ ಅವರೂ ನನ್ನನ್ನೂ ಹೊಂದುವರು ಎಂಬುದರಿಂದ ಸ್ವಲ್ಪ ಸಾವಕಾಶದಿಂದ ನನ್ನನ್ನು ಸೇರುವರೆಂಬ ಅಭಿಪ್ರಾಯವು ತೋರಿಬರುತ್ತದೆ. **ಮಾಂ ಪ್ರಾಪ್ನುವಂತ್ಯೇವ** ಎಂಬುದರ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ.—**ಮತ್ಸಮಾನಾಕಾರಂ ಅಸಂಸಾರಿಣಂ ಆತ್ಮಾನಂ ಪ್ರಾಪ್ನುವಂತ್ಯೇವೇತರ್ಥಃ -** ಸರ್ವಜ್ಞತ್ವ ಸತ್ಯಸಙ್ಕಲ್ಪತ್ವಾದಿ ಗುಣಾಷ್ಟಕಗಳೊಂದಿಗೆ ಸ್ವಸ್ವರೂಪಾವಿರ್ಭಾವವನ್ನು ಹೊಂದಿ, ಪುನಃ ಸಂಸಾರ ಬಂಧವಿಲ್ಲದ ತಮ್ಮ ನೈಜವಾದ ಸ್ವರೂಪ ವನ್ನು ಹೊಂದುವರು ಎಂಬ ತಾತ್ಪರ್ಯವು ; ಅಂತಹಸ್ಥಿತಿಯಲ್ಲಿ ಅರ್ಚಿರಾದಿಗತಿಮೂಲಕ ದಿವ್ಯ ವೈಕುಂಠಪ್ರಾಪ್ತಿಯೂ, ಪರವಾಸುದೇವನೆಂದು ಹೇಳಿಸಿಕೊಳ್ಳುವ ಶ್ರಿಯಃ ಪತಿಗೆ ನಾನಾವಿಧ ಕೈಙ್ಕರ್ಯಗಳನ್ನೆಸಗುವ ಪರಮಶ್ರೇಯಸ್ಸೂ, ಪರಿಪೂರ್ಣ ಬ್ರಹ್ಮಾನುಭವರೂಪ ನಿರತಿಶಯಾ ನಂದವೂ ಪ್ರಾಪ್ತವಾಗುತ್ತವೆಂಬ ಭಾವದಿಂದ, **"ಮತ್ಸಮಾನಾಕಾರಂ"** ಇತ್ಯಾದಿ ಭಾಷ್ಯವು. ಇಲ್ಲಿ **ಮತ್ಸಮಾನಾಕಾರಂ ಆತ್ಮಾನಂ ಪ್ರಾಪ್ನುವಂತಿ** ಎಂದು ವ್ಯಾಖ್ಯಾನವನ್ನು ಮಾಡಲು ಕಾರಣವೇನೆಂದು ಆಲೋಚಿಸಿದರೆ, ಬದ್ಧದಶೆಯಲ್ಲೂ ಪರಮಾತ್ಮನಿಗೆ ಶರೀರವಾಗಿ ಜೀವಾತ್ಮರು ಪರಮಾತ್ಮನೊಂದಿಗೇನೇ ಇರುತ್ತಾರೆ ; ಈ ಮುಕ್ತ ದಶೆಯಲ್ಲೂ ಪರಮಾತ್ಮನಿಗೆ ಶರೀರವಾಗಿರು ತ್ತಾರೆ ; ಆದರೆ ಮುಕ್ತದಶೆಯಲ್ಲಿ ವೈಲಕ್ಷಣ್ಯವೇನು ? ಎಂದರೆ ಈ ಲೋಕವು ತಪ್ಪಿ ಬೇರೆ ಲೋಕ ಪ್ರಾಪ್ತಿಯುಂಟಾಗುವುದರಿಂದ ಸೃಷ್ಟಿ ಲಯಾದಿಗಳಿಗೆ ಸಿಲುಕದೆ ಇರೋಣವೂ, ಹೇಯ ಶರೀರವು ತೊಲಗಿ ಅಪ್ರಾಕೃತ ಶರೀರವು ಇಚ್ಛಾನುಗುಣ ಉಂಟಾಗೋಣವೂ, ದೇಶವಿಶೇಷದಲ್ಲಿ ಪರಬ್ರಹ್ಮ ಸಮೀಪದಲ್ಲಿರೋಣವೂ, ಪರಮಾತ್ಮನಿಗೆ ಕೈಂಕರ್ಯವನ್ನೆಸಗೋಣವೂ, **ಅಹಂ ಬ್ರಹ್ಮಾಸ್ಮಿ**- ನಾನು ಪರಬ್ರಹ್ಮ ಶರೀರವಾಗಿ ಪರಬ್ರಹ್ಮಾತ್ಮಕನು, ನಾನೂ ಪರಬ್ರಹ್ಮ ಶರೀರಕನೇ ಎಂಬ ಪರಿ ಪೂರ್ಣ ಬ್ರಹ್ಮಾನುಭವವೂ ಉಂಟಾಗುತ್ತದೆ. ಈ ಅನುಭವದಲ್ಲಿ ಪರಬ್ರಹ್ಮನಿಗಿಂತ ತಾನು ಬೇರೆ ಯಾದವನೇ ಎಂಬ ಭಾವನೆಯಿಂದ ಅನುಭವವೇ, ಅಥವಾ ಆತನೊಂದಿಗೆ ಸೇರಿದವನಾಗಿ ಎಂಬ ವಿಚಾರದಲ್ಲಿ, **"ಅವಿಭಾಗೇನ ದೃಷ್ಟತ್ವಾತ್"** (೪-೪.೪)ಎಂಬ ಸೂತ್ರವು ಏನೊಂದೂ ವಿಭಾಗವ ವಿಲ್ಲದೆ ತಾನು ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವೆಂಬ ಭಾವನೆಯಿಂದ ಅನುಭವವೆಂದು ಬೋಧಿಸುತ್ತದೆ. ಆದರೆ, **ಸೋಶ್ನುತೇ ಸರ್ವಾನ್ ಕಾಮಾನ್ ಬ್ರಹ್ಮಣಾ ವಿಪಶ್ಚಿತಾ"** (ತೈ. ಆನಂದ ೧.೨) ಎಂಬಲ್ಲಿ ಪರಬ್ರಹ್ಮನೊಂದಿಗಿರುವನು ಎಂದೂ, **"ನಿರಂಜನಃ ಪರಮಂ ಸಾಮ್ಯ ಮುಪೈತಿ"** (ಮುಂಡಕ. ೩. ೧. ೩.) ಗುಣಗಳಲ್ಲೂ ಭೋಗದಲ್ಲೂ ಸಮಭಾಗವನ್ನು ಹೊಂದುವ ನೆಂದೂ, ಇದೇ ಗೀತೆಯಲ್ಲೇ (೧ ೧೪. ೨) **"ಮಮಸಾಧರ್ಮ್ಯ ಮಾಗತಾಃ"** ಎಂದು ಸಮಾನ ಧರ್ಮಪ್ರಾಪ್ತಿಯನ್ನು ಹೊಂದುವನೆಂದೂ ಹೇಳಿರುವದರಿಂದ ಪೃಥಕ್ಕೆಂಬ ಅನುಭವವಾಗಿ ತೋರು ತ್ತದೆಯಲ್ಲವೇ ಎಂದರೆ ಮೊದಲಿನ ಶ್ರುತಿಯು ಪರಮಾತ್ಮನೊಂದಿಗೆ ಈ ಮುಕ್ತನಿಗೆ ಅನುಭವ ವೆಂದು ಹೇಳುವದೇನೂ, ಈ **ಅವಿಭಾಗೇನ** ಅನುಭವವೆಂಬ ಅಭಿಪ್ರಾಯಕ್ಕೆ ವಿರೋಧವಿಲ್ಲವು **ಸಾಮ್ಯ ಶ್ರುತಿ ಸಾಧರ್ಮ್ಯಸ್ಮೃತಿ**ಗಳೂ ಕೂಡ ಪರಮಾತ್ಮನಿಗೆ ಸಮಾನ ಧರ್ಮ ಗಳನ್ನು ಬೋಧಿಸಿದ ಮಾತ್ರಕ್ಕೆ ಪೃಥಕ್ಕಾದ ಅನುಭವವೆಂದು ಹೇಳಲಾಗುವದಿಲ್ಲವಾದುದ ರಿಂದ ಅನುಭವವು ಅಪೃಥಕ್ಕಾದ ಭಾವನೆಯಾದುದರಿಂದ, **ಅಹಂ ಬ್ರಹ್ಮಾಸ್ಮಿ** ಎಂದೇ ಭಾವಿಸತಕ್ಕದ್ದಾಗಿರುತ್ತದೆ. ಅದ್ವೈತಿಗಳು ಈ ಸೂತ್ರವು ಸ್ವರೂಪೈಕ್ಯವನ್ನು ಬೋಧಿಸಿತು ಎಂದು ತಪ್ಪಾಗಿ ಭಾವಿಸುವರು. ಅಂತಹ ಮುಕ್ತಿದಶೆಯನ್ನೇ ಈ ಜಿಜ್ಞಾಸುಗಳೂ, ಕೂಡ, ಮೊದಲು ಪ್ರಾಪ್ಯವು ಬೇರೆಯಾಗಿದ್ದರೂ, ಕೊನೆಗೆ ನನ್ನನ್ನೇ ಹೊಂದುವರೆಂದು **"ಮಾಂ ಪ್ರಾಪ್ನುವಂತ್ಯೇವ"** ಎಂದು ವ್ಯಾಖ್ಯಾನಮಾಡಿರುತ್ತಾರೆ. ಭಗವಂತನೇ ಕೊನೆಗೆ

**ಭಾ. ಮಾನಾಕಾರ ಮಸಂಸಾರಿಣ ಮಾತ್ಮಾನಂ ಪ್ರಾಪ್ನುವಂತ್ಯೇವೇತ್ಯರ್ಥಃ;(೧)"ಮಮ ಸಾಧರ್ಮ್ಯಮಾಗತಾಃ" ಇತಿ ಹಿ ವಕ್ಷ್ಯತೇ ? (೨) "ಶ್ರೂಯತೇ ಚ, ನಿರಞ್ಜನಃ ಪರಮಂಸಾಮ್ಯಮುಪೈತಿ" ಇತಿ। ತಥಾ ಅಕ್ಷರ ಶಬ್ದನಿರ್ದಿಷ್ಟಾ ತ್ಕೂಟಸ್ಥಾದನ್ಯತ್ವಂ ಪರಸ್ಯ ಬ್ರಹ್ಮಣೋವಕ್ಷ್ಯತೇ (೩) "ಕೂಟಸ್ಥೋಽಕ್ಷರ ಉಚ್ಯತೇ ಉತ್ತಮಃ ಪುರುಷ**

ಪ್ರಾಪ್ಯವಾದರೆ ಆತನೊಂದಿಗೆ ಸಾಮ್ಯ ಪ್ರಾಪ್ತಿಯು ಲಭಿಸುತ್ತದೆಂದು ಗೀತೆಯಲ್ಲಿ ಎಲ್ಲಿ ಹೇಳಿದೆ ? ಎಂದರೆ ಪ್ರಮಾಣವನ್ನು ಉದಾಹರಿಸುತ್ತಾರೆ. **"ಮಮಸಾ ಧರ್ಮ್ಯ ಮಾಗತಾಃ"** ನನ್ನೊಂದಿಗೆ ಸಮಾನ ಧರ್ಮವನ್ನು ಹೊಂದುತ್ತಾರೆ, **ಇತಿ** - ಎಂದು ಶ್ರೀ ಕೃಷ್ಣಭಗವಾನರವರು, **ವಕ್ಷ್ಯತೇ ಹಿ** - ಹೇಳಿರುತ್ತಾರೆಯಷ್ಟೇ. ಆ ಶ್ಲೋಕವನ್ನು ಪರಾಂಬರಿಸಿ. ಆ ಶ್ಲೋಕವು ಶ್ರುತ್ಯರ್ಥವನ್ನು ಅನುಸರಿಸಿ ಅನುಗ್ರಹಿಸಲ್ಪಟ್ಟಿದುದು ಎಂದು ಪ್ರದರ್ಶಿಸುವದಕ್ಕಾಗಿ ಶ್ರುತಿಯನ್ನು ಉದಾಹರಿಸುತ್ತಾರೆ.—**"ನಿರಂಜನಃ ಪರಮಂ ಸಾಮ್ಯಂ ಉಪೈತಿ** - ಉಪಾಯಾನುಷ್ಠಾನದಿಂದ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿದವನಾಗಿ ಪರಮಾತ್ಮನೊಂದಿಗೆ ಸಾಮ್ಯವನ್ನು ಹೊಂದುವನು" **ಇತಿ** - ಎಂಬದಾಗಿ, **ಶ್ರೂಯತೇಚ** - ಶ್ರುತಿಯಲ್ಲೂ ಹೇಳಲ್ಪಟ್ಟಿರುತ್ತದೆ ಎರಡು ಅಸಮವಾದ ವಸ್ತುಗಳಿಗೇನೇ ಕೆಲವು ವಿಷಯಗಳಲ್ಲಿ ಸಮಭಾವವಿದ್ದರೆ, ಆ ಎರಡು ಭಿನ್ನ ವಸ್ತುಗಳೂ ಆ ವಿಷಯಗಳಲ್ಲಿ ಮಾತ್ರವೇ ಸಮವೆಂದು ಹೇಳಬಹುದು. ಆ ಕತ್ತೆಯ ಮರಿಯು ಕುದುರೆಯ ಮರಿಯಹಾಗೆಯೇ ಇದೆ ಎಂದು ಹೇಳುವಾಗ, ಅಸಮತ್ವವು ಅವುಗಳಿಗೆ ಸಿದ್ಧವು ; ಮರಿಯಾಗಿರುವ ಅವಸ್ಥೆಯಲ್ಲಿ ಎರಡೂ ಒಂದೇ ವಿಧವಾದ ಸೌಂದರ್ಯವುಳ್ಳವೆಂಬ ಭಾವವು ತೋರಿಬರುತ್ತದೆ. ಯಾವಾಗ **ಮಮಸಾಧರ್ಮ್ಯಮಾಗತಾಃ** ಎಂದು ಹೇಳಲ್ಪಟ್ಟಿತೋ, ಆಗ ಜೀವಾತ್ಮನೇ ಬೇರೇ ಎಂಬುದು ಸ್ಥಾಪಿತವು. ಗುಣಾಷ್ಟಕಗಳ ಆವಿರ್ಭಾವದಿಂದಲೂ, ಸಮಾನ ಭೋಗದಿಂದಲೂ ಸಾಮ್ಯವು. ಇದನ್ನೇ ಶ್ರೀ ವೇದವ್ಯಾಸರು, **"ಭೋಗಮಾತ್ರ ಸಾಮ್ಯಲಿಂಗಾಚ್ಚ"** ಎಂಬ ಸೂತ್ರದಲ್ಲಿ ಹೇಳಿದರು. ಹಾಗಾದರೆ **ಅಸಮತ್ವವು** ಯಾವ ವಿಷಯದಲ್ಲಿ ಎಂದರೆ, **"ಜಗದ್ವ್ಯಾಪಾರವರ್ಜಂ"** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದರು. ಇದಲ್ಲದೆ ಸ್ವರೂಪದಲ್ಲಿ ಅಣುತ್ವ ವಿಭುತ್ವ ಭೇದಗಳೂ ಇನ್ನೂ ಅನೇಕ ಭೇದಗಳೂ ಉಂಟು. ಇಲ್ಲಿ **ಸಾದರ್ಮ್ಯಂ** ಎಂದರೆ **ಸಮಾನಧರ್ಮತಾ** ಎಂಬುದು ಸರಸವಾಗಿ ಅರ್ಥವಾದರೂ, ಶ್ರೀಮಚ್ಛಂಕರಾಚಾರ್ಯರು **ಸಾಧರ್ಮ್ಯಂ** ಎಂದರೆ ಸ್ವರೂಪವೆಂದೂ, **ಸಮಾನ ಧರ್ಮತಾ** ಎಂಬರ್ಥವಲ್ಲವೆಂದೂ ಅರ್ಥಮಾಡಿದರು ; ಹೀಗೆ ಸರಿಯಾದ ಅರ್ಥವನ್ನು ಹೇಳದೆ ಇರುವುದಕ್ಕೆ ಕಾರಣವೇನೆಂದರೆ, ಗೀತಾಶಾಸ್ತ್ರದಲ್ಲಿ ಬೇಧವು ಅಂಗೀಕರಿಸಲಿಲ್ಲವೆಂಬ ಹೇತುವನ್ನು ಕೊಟ್ಟಿರುತ್ತಾರೆ. ಮುಂದೆ ಪ್ರಾಪ್ತಸ್ಥಳದಲ್ಲಿ ಗೀತೆಯಲ್ಲಿ ಐಕ್ಯವು ಎಲ್ಲಿಯೂ ಹೇಳಿಲ್ಲವೆಂದೂ, ಜೀವಾತ್ಮ ಪರಮಾತ್ಮ ಭೇದವೇ ಹೇಳಲ್ಪಟ್ಟಿರುವದೆಂದೂ ಸಪ್ರಮಾಣವಾಗಿ ಉಪಪಾದಿಸುವೆವು. ಇದು ಹಾಗಿರಲಿ ; **ಸಾಧರ್ಮ್ಯ** ಶಬ್ದಕ್ಕೆ ಸ್ವರೂಪವೆಂಬರ್ಥವು ಹೇಗೋ ಪ್ರಾಜ್ಞರೇ ಪರಿಶೀಲಿಸಬಹುದು. ಹಾಗೆ ಐಕ್ಯವನ್ನು ಹೊಂದಿದ ಆತ್ಮನಿಗೆ, **ಜಗದ್ವ್ಯಾಪಾರವರ್ಜಂ** - ಎಂಬ ಸೂತ್ರವು ಹೇಗೆ ತಾನೇ ಕೂಡುತ್ತದೋ ತಿಳಿಯದು. ಆತನಿಗೆ ಹಾಗೆ ಐಕ್ಯವನ್ನು ಹೇಳಿದರೆ, **ಜಗತ್ ಕ್ರೀಡಿರಮಮಾಣಃ** ಎಂಬ ಶ್ರುತಿಗೆ ಗತಿ ಏನು ? **"ಆನಂದಮಯಮಾತ್ಮಾನ ಮುಪಸಂಕ್ರಾಮತಿ"** (ತೈ. ಆನಂದ) ಮತ್ತು **"ಬ್ರಹ್ಮವಿದಾಪ್ನೋತಿ ಪರಮ್" "ಸದಾಪಶ್ಯನ್ತಿ ಸೂರಯಃ"** ಇತ್ಯಾದ್ಯನೇಕ ಶ್ರುತಿಗಳಿಗೂ ಈ ಸ್ವರೂಪೈಕ್ಯವಾದವು ಕೂಡುವದಿಲ್ಲವು.

(೧) ಗೀ. ೧೪-೨. (೨) ಮುಂ. ೩-೧-೩. (೩) ಗೀ. ೧೫.'೧೬.

**ಭಾ. ಸ್ತ್ವನ್ಯಃ" ಇತಿ । (೪) "ಅಥಪರಾಯಯಾ ತದಕ್ಷರ ಮಧಿಗಮ್ಯತೇ" ಇತ್ಯಕ್ಷರ ವಿದ್ಯಾಯಾಂತು, ಅಕ್ಷರಶಬ್ದ ನಿರ್ದಿಷ್ಟಂ ಪರಮೇವಬ್ರಹ್ಮಭೂತ ಯೋನಿತ್ವಾದೇಃ।**

ಆದುದರಿಂದ ಇಲ್ಲಿ ಅಕ್ಷರಶಬ್ದದಿಂದ ನಿರ್ಗುಣಬ್ರಹ್ಮವು ಹೇಳಲಿಲ್ಲವು; ಪ್ರಕೃತಿವಿಯುಕ್ತ ವಾದ ಪರಿಶುದ್ಧವಾದ ಜೀವಾತ್ಮಸ್ವರೂಪವು ಹೇಳಲ್ಪಟ್ಟಿತೆಂಬುದೇ ಅಭಿಪ್ರಾಯವು. ಅದಕ್ಕೇ ನಾದರೂ ಈ ಗೀತೆಯಲ್ಲೇ ಸಾಧಕಪ್ರಮಾಣಗಳುಂಟೋ ಎಂದರೆ ಉಂಟು ಎಂದು ಪ್ರಮಾಣ ವನ್ನು ಮುಂದೆ ಉದಾಹರಿಸುತ್ತಾರೆ.—**ತಥಾ** - ಹಾಗೆಯೇ, **ಅಕ್ಷರ ಶಬ್ದ ನಿರ್ದಿಷ್ಟಾತ್** - ಅಕ್ಷರ ಶಬ್ದದಿಂದ ಹೇಳಲ್ಪಟ್ಟ, **ಕೂಟಸ್ಥಾತ್** - ಪ್ರಕೃತಿವಿಯುಕ್ತನಾಗಿ ಸ್ವಸ್ವರೂಪಾವಿರ್ಭಾವ ವುಳ್ಳ ಜ್ಞಾನಾದಿಗುಣಗಳಿಂದ ಶೋಭಿಸುವ ಶಾಶ್ವತಸ್ವರೂಪನಾದ ಜೀವಾತ್ಮನಿಗಿಂತ, **ಪರಸ್ಯ ಬ್ರಹ್ಮಣಃ** - ಪರಬ್ರಹ್ಮನ, **ಅನ್ಯತ್ವಂ** - ಬೇರೆಯಾಗಿರೋಣವು, ಮುಂದಿನ ಪ್ರಮಾಣದಲ್ಲಿ, **ವಕ್ಷ್ಯತೇ** - ಹೇಳಲ್ಪಟ್ಟಿರುತ್ತದೆ. ಆ ಪ್ರಮಾಣವು ಯಾವುದೆಂದರೆ.—**"ಕೂಟಸ್ಥೋ ಅಕ್ಷರ ಉಚ್ಯತೇ"** ಇಲ್ಲಿ ಅಕ್ಷರ ಶಬ್ದದಿಂದ ಸ್ವರೂಪಪರಿಣಾಮ ರಹಿತನಾದ ಜೀವಾತ್ಮನು ಹೇಳಲ್ಪಟ್ಟಿ ರುವದರಿಂದ ಆತನು ಯಾರೆಂದರೆ **ಕೂಟಸ್ಥಃ** - ದೇವ ಮನುಷ್ಯಾದಿ ದೇಹ ಪ್ರಾಪ್ತಿಯಿಲ್ಲದೆ, ತನಗೆ ಸ್ವಾಭಾವಿಕವಾದ ಸ್ವರೂಪವಾದ ಜ್ಞಾನತ್ವ ಮತ್ತು ಇತರ ಗುಣಾಷ್ಟಕಗಳಿಂದ ಸ್ವಸ್ವರೂ ಪಾವಿರ್ಭಾವವನ್ನುಳ್ಳವನು. ಆದುದರಿಂದ ಮುಕ್ತಾತ್ಮನು ಪ್ರಕೃತಿವಿಯುಕ್ತ ಜೀವಾತ್ಮನು, ಆದುದರಿಂದ **ಉತ್ತಮಃ ಪುರುಷಸ್ತ್ವನ್ಯಃ** - ಪರಮ ಪುರುಷನಾದರೋ ಕ್ಷರಾಕ್ಷರ ಬದ್ಧಮುಕ್ತ ರುಗಳಿಗಿಂತಲೂ ವಿಲಕ್ಷಣವಾಗಿ ಬೇರೆಯಾದವನು" **ಇತಿ** - ಎಂಬ ಪ್ರಮಾಣವು, **ವಕ್ಷ್ಯತೇ** - ಹೇಳಲ್ಪಟ್ಟಿರುತ್ತದೆ.

ಆದರೆ ಮುಂಡಕ ೧. ೧. ೫ ರಲ್ಲೂ ಇನ್ನೂ ಇತರ ಕಡೆಗಳಲ್ಲೂ ಅಕ್ಷರ ಶಬ್ದದಿಂದ ಪರ ಬ್ರಹ್ಮನಲ್ಲವೇ ಹೇಳಲ್ಪಟ್ಟಿರುವುದು ? ಆದುದರಿಂದ, ಪರಬ್ರಹ್ಮಪರವಾಗಿಯೇ ಏಕೆ ಅರ್ಥಮಾಡ ಕೂಡದು ? ಎಂದಾಕ್ಷೇಪಿಸಿದರೆ ಪ್ರಕರಣಾನುಗುಣವಾಗಿ ಕೂಟಸ್ಥ, ಅಕ್ಷರಶಬ್ದಗಳಿಂದ ನಿರ್ದಿಷ್ಟ ನಾದವನು ಪ್ರಕೃತಿವಿಯುಕ್ತ ಜೀವಾತ್ಮನೇ ವಿನಾ ಪರಬ್ರಹ್ಮನೆಂದು ಅರ್ಥಮಾಡಲು ಸಾಧ್ಯ ವಿಲ್ಲವು ; ಏಕೆಂದರೆ ಪೂರ್ವಾರ್ಧದಲ್ಲಿ ಪರಮಾತ್ಮನು ಹೇಳಲ್ಪಟ್ಟಿರುವದರಿಂದ, ಉತ್ತರಾರ್ಧದಲ್ಲಿ ಹೇಳಲ್ಪಟ್ಟಿರುವವನು ಪ್ರಕರಣವಶಾತ್ ಜೀವಾತ್ಮನು. ಮುಂಡಕ ವಾಕ್ಯದಲ್ಲಾದರೋ ಪ್ರಕರ ಣವಶಾತ್, ಅಕ್ಷರ ಶಬ್ದವಾಚ್ಯನು ಪರಬ್ರಹ್ಮನೆಂಬುದೇ ಸರಿಯೆಂದೂ ಹೇಳುತ್ತಾರೆ—ಆದರೆ, **ಅಥ ಪರಾ ಯಯಾ ತದಕ್ಷರ ಮಧಿಗಮ್ಯತೇ" ಇತ್ಯಕ್ಷರವಿದ್ಯಾಯಾಂತು** - ಎಂದು ಹೇಳುವ ಅಕ್ಷರ ವಿದ್ಯೆಯಲ್ಲಿಯಾದರೋ, **ಅಕ್ಷರಶಬ್ದನಿರ್ದಿಷ್ಟಂ** - ಅಕ್ಷರ ಶಬ್ದದಿಂದ ಹೇಳಲ್ಪ ಟ್ಟಿರುವವನು, **ಪರಮೇವ ಬ್ರಹ್ಮ** - ಪರಬ್ರಹ್ಮನೆಂಬುದೇ ಸರಿಯು. ಏಕೆಂದರೆ, ಅದಕ್ಕೆ ಕಾರಣವನ್ನು ತಿಳಿಸುತ್ತಾರೆ—**ಭೂತಯೋನಿತ್ವಾದೇಃ** - ಭೂತಗಳಿಗೆಲ್ಲಾ ಸೃಷ್ಟಿಕರ್ತಾ ವಾಗಿ ಕಾರಣಭೂತನೇ ಮೊದಲಾದ ವಿಶೇಷಣಗಳನ್ನು ಕೊಟ್ಟಿರುವುದರಿಂದ ; ಆ ಶ್ರುತಿ ಯಲ್ಲಿ ಮುಂದಕ್ಕೆ **"ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ"** ಎಂದಿರುವದರಿಂದ, ಸರ್ವಭೂತಗಳಿಗೂ **ಮೂಲಕಾರಣನು** ಎಂದು ಹೇಳಿರುವದರಿಂದ ಅಕ್ಷರ ಶಬ್ದದಿಂದ ಮುಂಡಕದಲ್ಲಿ ಹೇಳಿರುವದು ಪರಮಾತ್ಮನೇ ವಿನಾ ಜೀವಾತ್ಮನಲ್ಲವು. **"ತದ್ವೈತ ದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತಿ"** (ಬೃ. ೫. ೮. ೮.) ಎಂಬಲ್ಲಿ ಅಕ್ಷರ ಶಬ್ದವು ಪರಮಾತ್ಮವಾಚಕವೆಂದೇ ಪ್ರಕರಣಾನುಗುಣವಾಗಿ ಅಕ್ಷರಾಧಿಕರಣದಲ್ಲಿ ನಿರ್ಧರಿಸಲ್ಪ

(೪) ಮುಂ. ೧. ೧. ೫.

**ಭಾ. ತೇಷಾ ಮವ್ಯಕ್ತಾ ಸಕ್ತಚೇತಸಾಂ ಕ್ಲೇಶಸ್ತ್ವಧಿಕತರಃ, ಅವ್ಯಕ್ತಾ ಹಿ ಗತಿಃ - ಅವ್ಯಕ್ತವಿಷಯಾ ಮನೋವೃತ್ತಿಃ, ದೇಹವದ್ಭಿಃ - ದೇಹಾತ್ಮಾಭಿಮಾನಯುಕ್ತೈಃ ದುಃಖೇ ನಾ ವಾಪ್ಯತೇ; ದೇಹವನ್ತೋ ಹಿ ದೇಹಮೇವಾಽತ್ಮಾನಂ ಮನ್ಯನ್ತೇ ||೩, ೪, ೫||**

ಟ್ಟಿರುತ್ತದೆ. ಆದರೆ **ಕ್ಷರಂಪ್ರಧಾನ ಮಮೃತಾಕ್ಷರಂ ಹರಃ, ಕ್ಷರಾತ್ಮಾನಾ ವೀಶತೇ ದೇವ ಏಕಃ"** ಎಂಬ ಶ್ವೇತಾಶ್ವತರ ವಾಕ್ಯದಲ್ಲಿ (೧ ೧೦) **"ಕ್ಷರಂ** ಎಂದು ಹೇಳಿಸಿಕೊಳ್ಳುವದು ಪ್ರಧಾನವು, ವಿಕಾರವುಳ್ಳದಾದುದರಿಂದ ಅದಕ್ಕೆ ಹಾಗೆ ಹೆಸರು; **ಅಮೃತಾಕ್ಷರಂ ಹರಃ** - ಇಂತಹ ಭೋಗ್ಯವಾದ ಪ್ರಧಾನವನ್ನು ಅಪಹರಿಸುವ ಎಂದರೆ ಭೋಗ್ಯವಾಗಿ ಭಾವಿಸುವ, ನಾಶರಹಿತನಾದ ಅಕ್ಷರಶಬ್ದವಾಚ್ಯನಾದ ಜೀವಾತ್ಮನು; ಮತ್ತು -**"ಅಕ್ಷರಾತ್ಪರತಃ ಪರಃ"** ಎಂಬಲ್ಲಿ ಪ್ರಧಾನಕ್ಕಿಂತ **ಪರನು** - ಶ್ರೇಷ್ಠನಾದ ಜೀವಾತ್ಮನು **ಪರತಃ** - ಅವನಿಗಿಂತ, **ಪರಃ**-ಶ್ರೇಷ್ಠನಾದವನು ಪರಮಾತ್ಮನೆಂದು ಅರ್ಥಮಾಡಬೇಕಾಗಿರುವದರಿಂದ ಇಲ್ಲಿ ಅಕ್ಷರ ಶಬ್ದವಾಚ್ಯವು ಪ್ರಧಾನವು, ಪ್ರಕೃತಿಯು. ಹೀಗೆ ಪ್ರಕರಣಾನುಗುಣವಾಗಿ ಅರ್ಥ ಹೇಳಬೇಕಾಗಿರುವದರಿಂದ **ಕೂಟಸ್ಥನಾದ ಅಕ್ಷರನೆಂಬುದರಿಂದ** ಪ್ರಕೃತಿವಿಯುಕ್ತ ಶುದ್ಧ ಸ್ವರೂಪವುಳ್ಳ ಪ್ರತ್ಯಗಾತ್ಮನು ಹೇಳಲ್ಪಟ್ಟನು. ಆದುದರಿಂದ ಈ ಕ್ಷರಾಕ್ಷರಗಳೆರಡನ್ನೂ **ಈಶತೇ ದೇವ ಏಕಃ** - ಒಬ್ಬನಾದ ಲೀಲಾಪರನಾದ ಸರ್ವೇಶ್ವರನು ನಿಯಮಿಸುತ್ತಾನೆ," ಎಂದಿರುವದರಿಂದ, ಇಲ್ಲಿ ಅಕ್ಷರಶಬ್ದ ವಾಚ್ಯನು ಜೀವಾತ್ಮನು. ಏಕೆಂದರೆ ಶ್ರುತಿಯು **ಕ್ಷರಾಕ್ಷರೇ** ಎಂದು ಹೇಳುವದಕ್ಕೆ ಬದಲಾಗಿ **ಕ್ಷರಾತ್ಮಾನೌ** ಎಂದು ಹೇಳಿರುವದರಿಂದಲೂ, ಪರಮಾತ್ಮನನ್ನು ಪೃಥಕ್ಕರಿಸಿ **ದೇವ ಏಕಃ** ಎಂದು ಹೇಳಿರುವದರಿಂದಲೂ, **ಅಕ್ಷರನು** ಜೀವಾತ್ಮನು. ಹೀಗೆ ಅಕ್ಷರ ಶಬ್ದಕ್ಕೆ ಪ್ರಕೃತಿ ಎಂದೂ, ಪ್ರಕೃತಿವಿಯುಕ್ತ ಚೇತನನೆಂದೂ, ಪರಬ್ರಹ್ಮವೆಂದೂ, ಅರ್ಥವಾಗುತ್ತದೆ **ಅಕ್ಷರಂ ತಮಸಿ ಲೀಯತೇ** ಎಂಬಲ್ಲಿ ಅಕ್ಷರಶಬ್ದವು ಚಿತ್ತಿನೊಂದಿಗೆ ಸೇರಿದ ಅಚಿತ್ತು ಎಂಬರ್ಥವು. **ಕೂಟಸ್ಥೋಽಕ್ಷರ ಉಚ್ಯತೇ** ಎಂಬಲ್ಲಿ ಅಂತಹ ಪರಿಶುದ್ಧ ಜೀವಾತ್ಮನು ಹೇಳಲ್ಪಟ್ಟನು. **"ಅಥಪರಾ"** ಎಂಬ ವಾಕ್ಯದಲ್ಲಿ ಪರಮಾತ್ಮನು ಬೋಧಿಸಲ್ಪಟ್ಟನು. ಹೀಗೆ ಪ್ರಕರಣಾನುಗುಣವಾಗಿ ಅರ್ಥಮಾಡತಕ್ಕದ್ದು ಯುಕ್ತವು ಎಂಬ ಭಾವವು. ಸರ್ವ ಭೂತಗಳಿಗೂ ಸೃಷ್ಟಿಕರ್ತಾವಾದವನು ಪರಮಾತ್ಮನೇ ವಿನಾ ಜೀವಾತ್ಮನಾಗುವದಿಲ್ಲವಾದುದರಿಂದ ಹಾಗೆ ಅರ್ಥಮಾಡತಕ್ಕದ್ದು. ಇಲ್ಲಿಯಾದರೋ, **"ಕೂಟಸ್ಥೋಕ್ಷರ ಉಚ್ಯತೇ; ಉತ್ತಮಃ ಪುರುಷಸ್ತ್ವನ್ಯಃ"** ಎಂದು ಪರಮಾತ್ಮನಿಗಿಂತ ಬೇರೆಯಾದವನೆಂದು ಸ್ಪಷ್ಟವಾಗಿ ಹೇಳಿರುವದರಿಂದ ಪ್ರಕೃತಿವಿಯುಕ್ತನಾದ ಮುಕ್ತಾತ್ಮನೆಂದೇ ಅರ್ಥಮಾಡತಕ್ಕದ್ದಾಗಿರುತ್ತದೆ. ಈ ಅಭಿಪ್ರಾಯವನ್ನೇ ಮುಂದೆ ಉಪಪಾದಿಸಿ ಹೇಳುತ್ತಾರೆ. ಈ ಸಂದರ್ಭದಲ್ಲಿ ಕೊಟ್ಟಿರುವ ಕೆಲವು ವಿಶೇಷಣಗಳು ಪರಮಾತ್ಮನಿಗೆ ಅನ್ವಯಿಸಲು ಸಾಧ್ಯವಿಲ್ಲವಾದುದರಿಂದ ಪ್ರಕೃತಿವಿಯುಕ್ತಾತ್ಮನೆಂದೇ ಅರ್ಥಮಾಡಬೇಕಾಗಿದೆ ಎಂದು ಹೇಳುತ್ತಾರೆ—**ಅವ್ಯಕ್ತಾಸಕ್ತಚೇತಸಾಂ**-ಚಕ್ಷುರಾದಿ ಇಂದ್ರಿಯಗಳಿಗೆ ಗೋಚರವಲ್ಲದ ಪ್ರತ್ಯಗಾತ್ಮ ಸ್ವರೂಪೋಪಾಸನೆಯಲ್ಲಿ ಸಕ್ತವಾದ ಮನಸ್ಸುಳ್ಳ, **ತೇಷಾಂ** - ಆ ಜಿಜ್ಞಾಸುವೇ ಮೊದಲಾದವರಿಗೆ, **ಕ್ಲೇಶಸ್ತ್ವಧಿಕ ತರಃ** - ಕ್ಲೇಶವಾದರೋ ಬಹು ಹೆಚ್ಚು; ಏಕೆಂದರೆ ಕಾರಣವು ಹೇಳಲ್ಪಡುತ್ತದೆ—**ಅವ್ಯಕ್ತಾಹಿಗತಿಃ** ಎಂದರೆ **ಅವ್ಯಕ್ತ ವಿಷಯಾಗತಿಃ** - ಇಂದ್ರಿಯಕ್ಕೆ ಗೋಚರವಲ್ಲದ ಪರಿಶುದ್ಧವಾದ ಪ್ರತ್ಯಗಾತ್ಮ ರೂಪ ಪ್ರಾಪ್ಯವು, **ದೇಹವದ್ಭಿಃ** ಎಂದರೆ **ದೇಹಾತ್ಮಾಭಿಮಾನಯುಕ್ತೈಃ** - ದೇಹವೇ ಆತ್ಮಾ ಎಂಬ ಅಭಿಮಾನದಿಂದ ಕೂಡಿರುವವರಿಗೆ,

**ಭಾ. ಅವ. ಭಗವನ್ತಮುಪಾಸೀನಾನಾಂ ಯುಕ್ತತಮತ್ವಂ ಸುವ್ಯಕ್ತಮಾಹ—**

**ದುಃಖೇನ ಅವಾಪ್ಯತೇ** - ತುಂಬಾ ಕಷ್ಟದಿಂದ ಹೊಂದಲ್ಪಡುತ್ತದೆ; **ದೇಹವಂತೋಽಪಿ** - ಎಷ್ಟೇ ಜ್ಞಾನವನ್ನು ಸಂಪಾದಿಸಿದ್ದರೂ ಕೂಡ ದೇಹದಿಂದ ಕೂಡಿರುವವರು **ದೇಹಮೇವಾತ್ಮಾನಂ ಮನ್ಯಂತೇ** - ದೇಹವೇ ಆತ್ಮಾ ಎಂದು ತಿಳಿಯುತ್ತಾರೆ. ದೇಹಸುಖವನ್ನು ಬಿಟ್ಟಿರಲಾರರು, ವಿಷಯೋಪಭೋಗಗಳನ್ನು ತ್ಯಜಿಸಲಾರರು. ವಿಶ್ವಾಮಿತ್ರ, ವಸಿಷ್ಠ, ಪರಾಶರಾದಿಗಳೂ ಕೂಡ ನಿದರ್ಶನವು. ಆದುದರಿಂದ ಜಿಜ್ಞಾಸುವಾಗಿ ಪ್ರಕೃತಿವಿಯುಕ್ತನಾದ ಆತ್ಮಾ ಪರಮಾತ್ಮನ ಶರೀರವೆಂದು ಭಾವಿಸಿ, ಅದನ್ನು ಸಾಕ್ಷಾತ್ಕರಿಸುವದು ಸುಲಭವಲ್ಲವಾದುದರಿಂದ ಅದು ಅಷ್ಟು ಉತ್ತಮವಲ್ಲವು. ಈ ಅಕ್ಷರೋಪಾಸನಾಭಿಪ್ರಾಯವು ಹೇಗೆಂದರೆ ಪ್ರಕೃತಿವಿಯುಕ್ತ ಪರಿಶುದ್ಧ ಜೀವಾತ್ಮನೇ ತನಗೆ ಪ್ರಾಪ್ಯವೆಂದೂ, ತತ್ಪ್ರಾಪಕನು ಪರಮಾತ್ಮನೆಂದೂ, ಪರಬ್ರಹ್ಮಾತ್ಮಕನಾದ ಜೀವಾತ್ಮನು ಉಪಾಸ್ಯವು. ಆದುದರಿಂದ ನನ್ನನ್ನೇ ಪ್ರಾಪ್ಯವಾಗಿ ಸರ್ವಶರೀರಕನಾದ ಪರಮಾತ್ಮನಾದ ನನ್ನ ಉಪಾಸನೆಯೇ ಸುಕರವು. ಶೀಘ್ರ ಮೋಕ್ಷದಾಯಕವು ಎಂದು ಮುಂದಿನ ಎರಡು ಶ್ಲೋಕಗಳಿಂದ ಉಪಪಾದಿಸುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು :—ಭಗವನ್ತಮುಪಾಸೀನಾನಾಂ**-ಭಗವತ್ಪ್ರಾಪ್ತಿಗಾಗಿ ಭಗವಂತನನ್ನು ಉಪಾಸನೆ ಮಾಡುವವರಿಗೆ, **ಯುಕ್ತತಮತ್ವಂ** - ಅತ್ಯಂತೌಚಿತ್ಯವನ್ನು, **ಸುವ್ಯಕ್ತಮಾಹ** - ಮುಂದಿನ ಎರಡು ಶ್ಲೋಕಗಳಿಂದಲೂ ಬಹು ವ್ಯಕ್ತವಾಗಿ ಶ್ರೀ ಕೃಷ್ಣ ಭಗವಾನರವರು ಉಪದೇಶಿಸುತ್ತಾರೆ.—ಕೆಲವರು ಇದೂ ಅಕ್ಷರ ಶಬ್ದದಿಂದ ನಿರ್ದೇಶಿಸಲ್ಪಟ್ಟ ನಿರ್ಗುಣೋಪಾಸನ ವಿಷಯವೆಂದು ಭಾಷ್ಯ ಬರೆದಿರುತ್ತಾರೆ. ಆ ಭಾಷ್ಯವು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಈ ಅವತಾರಿಕೆಯೆಂದು ಭಾವಿಸತಕ್ಕದ್ದು. ಹೀಗೆ ತಮ್ಮ ಅಭಿಪ್ರಾಯಕ್ಕೆ ಸಾಧಕವೇನಾದರೂ ಉಂಟೋ ಎಂದರೆ **ಯೇತು ಸರ್ವಾಣಿ ಕರ್ಮಾಣಿ** ಎಂದು ಮುಂದಿನ ಶ್ಲೋಕವನ್ನು **ತು** ಶಬ್ದಮೂಲಕ ಪ್ರಾರಂಭಿಸಿರುವದರಿಂದ, **ತು** ಶಬ್ದವು ಹಿಂದಿನ ಪಕ್ಷವಾದ ಅಕ್ಷರ ಪ್ರಾಪ್ತಿಯ ಉಪಾಸನವನ್ನು ವ್ಯಾವರ್ತಿಸಿ ಹೇಳುತ್ತಾರೆಂಬುದು ಸುವ್ಯಕ್ತವು. ಆದುದರಿಂದಲೇ **ಸುವ್ಯಕ್ತಮಾಹ** ಎಂಬ ಪ್ರಯೋಗವು. ಅಕ್ಷರ ಪ್ರಾಪ್ತಿಗಾಗಿ ಮಾಡುವದೂ ಭಗವದುಪಾಸನವಲ್ಲವೋ ? ಎಂದರೆ, ಅದು ಭಗವಂತನ ದಿವ್ಯಮಙ್ಗಳ ವಿಗ್ರಹಯುಕ್ತ ಆತ್ಮೋಪಾಸನೆಯು; ಫಲವು ಅಕ್ಷರಪ್ರಾಪ್ತಿಯು. ಇಲ್ಲಿಯಾದರೋ ಬ್ರಹ್ಮಪ್ರಾಪ್ತಿಯು, ಹೀಗೆ ಫಲದಲ್ಲಿ ವ್ಯತ್ಯಾಸವು. **ಯುಕ್ತತಮತ್ವವು** ಹೇಗೆ ? ಎಂದರೆ ನಿರತಿಶಯ ಫಲಪ್ರಾಪ್ತಿರೂಪ ಭಗವತ್ಪ್ರಾಪ್ತಿಯನ್ನೇ ಸುಕರವಾಗಿಯೂ ಶೀಘ್ರವಾಗಿಯೂ ಉಂಟುಮಾಡುತ್ತದೆಯಾದುದರಿಂದ ಪರಮೌಚಿತ್ಯವು ಎಂಬ ಭಾವವು. ಅರ್ಜುನನು ಪ್ರತ್ಯಗಾತ್ಮಪ್ರಾಪ್ತಿಗಾಗಿ ಉಪಾಸನದಲ್ಲಿ ಪುನರ್ಜನ್ಮವಿಲ್ಲದೆ ಕೊನೆಗೆ ಪರಬ್ರಹ್ಮಪ್ರಾಪ್ತಿಯೇ ಉಂಟಾಗುವದರಿಂದಲೂ ಮತ್ತು **"ಅವ್ಯಕ್ತೋಽಕ್ಷರ ಇತ್ಯುಕ್ತಃ ತಮಾಹುಃ ಪರಮಾಂಗತಿಂ"** ಎಂದೂ (ಗೀ. ೮. ೨೧) ಹಿಂದೆ ಹೇಳಲ್ಪಟ್ಟದುದರಿಂದಲೂ ಸಹ, ಈ ಉಪಾಸನೆಯಲ್ಲಿ ವಿಳಂಬವಿಲ್ಲವು ಎಂದೂ, ಅರ್ಜುನನು ತಪ್ಪಾಗಿ ಭಾವಿಸಿ, ಭಗವತ್ಪ್ರಾಪ್ತಿಗಾಗಿ ಭಗವದುಪಾಸನದಲ್ಲಿ ಮನಸ್ಸಿನ ಐಕಾಂತ್ಯ ಉಂಟಾಗದೆ ಪುನರ್ಜನ್ಮಾದಿಗಳು ಉಂಟಾದರೂ ಉಂಟಾಗಬಹುದು, ಅದರಿಂದ ವಿಳಂಬ ಉಂಟಾದರೂ ಉಂಟಾಗಬಹುದು ಎಂದೂ, ಸಂದೇಹದಿಂದಿದ್ದನು. ಈಗ ಆ ಸಂದೇಹವನ್ನು ಹೋಗಲಾಡಿಸಿ, ನನ್ನ ಪ್ರಾಪ್ತಿಗಾಗಿ ನನ್ನ ಉಪಾಸನೆಯನ್ನೇ ಸರಿಯಾಗಿ ಮಾಡಿ, ನನ್ನ ಪ್ರೀತಿಯನ್ನು ಸಂಪಾದಿಸುವದೇ ಬಹು ಸುಕರವು. ಶೀಘ್ರ ಫಲದಾಯಕವು, ಎಂದು ಉಪದೇಶಿಸುತ್ತಾರೆ ಎಂದು ಅವತಾರಿಕೆಯನ್ನು ಅನುಗ್ರಹಿಸಿರುತ್ತಾರೆ.

**ಮೂ. ಯೇತು ಸರ್ವಾಣಿ ಕರ್ಮಾಣಿ ಮಯಿ ಸನ್ನಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥**
**ತೇಷಾ ಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾ ತ್ಪಾರ್ಥ ಮಯ್ಯಾವೇಶಿತಚೇತಸಾಂ ॥**

**ಮೂಲಕ್ಕೆ ಅರ್ಥವು :**—ಹಿಂದೆ ಅಕ್ಷರಪ್ರಾಪ್ತಿಗಾಗಿ ಉಪಾಸ್ಯವು, ಭಗವದಾತ್ಮಕನಾಗಿ ಅಕ್ಷರನಾದ ಪ್ರಕೃತಿವಿಯುಕ್ತ ಜೀವಾತ್ಮನು ಅವ್ಯಕ್ತ ಕೂಟಸ್ಥವಾದ ಅವಸ್ಥೆಯುಳ್ಳವನಾದುದರಿಂದ ಅವನ ಸ್ವರೂಪವನ್ನು ಮನಸ್ಸಿನಲ್ಲಿಟ್ಟು **ಕ್ಲೇಶೋಧಿಕತರ**ವೆಂದು ನಿರಾಕರಿಸಲ್ಪಟ್ಟಿತು. ಆದುದರಿಂದ ಕ್ಲೇಶವಿಲ್ಲದೆ ಸುಕರವಾಗಿ ಅದಕ್ಕಿಂತಲೂ ಬೇಗನೆ ಭಗವತ್ಪ್ರಾಪ್ತಿಯನ್ನುಂಟು ಮಾಡುವ ಉಪಾಸನೆಯು ತನ್ನ ಉಪಾಸನೆಯೇ ಎಂದು ಹೇಳುವವರಾಗಿ, ಅದರ ವಿಷಯದಲ್ಲೇ ಹಿಂದೆ ಹೇಳಿದುದನ್ನೇ ಅನುವಾದಮಾಡಿ ಹೇಳಿ, ಜ್ಞಾಪಕಕ್ಕೆ ತರುತ್ತಾರೆ. ಅರ್ಜುನನು ಈ ಎರಡು ವಿಧ ಉಪಾಸಕರಲ್ಲಿ ಯುಕ್ತತಮರು ಯಾರೆಂದು ಪ್ರಶ್ನಿಸಿದನು (೧೨-೧). ಅದಕ್ಕೆ ಎರಡನೆಯ ಶ್ಲೋಕಲ್ಲೇ ಉತ್ತರವನ್ನು ಹೇಳಿದ್ದರೂ, **ಸಹೇತುಕವಾಗಿ** ಈ ಎರಡು ಶ್ಲೋಕಗಳಿಂದ ಉತ್ತರವೆಂದು ಭಾವಿಸತಕ್ಕದ್ದು—**ತು** ಶಬ್ದವು ಅಕ್ಷರ ಪ್ರಾಪ್ತಿಗಾಗಿ ಹೇಳಲ್ಪಟ್ಟ ಉಪಾಸನಕ್ಕಿಂತ, ಈ ಭಗವತ್ಪ್ರಾಪ್ತಿಗಾಗಿ ಉಪಾಸನವು ವಿಲಕ್ಷಣವಾದುದು ಎಂದು ಹೇಳುವದಕ್ಕಾಗಿ ಪ್ರಯೋಗಿಸಲ್ಪಟ್ಟಿರುತ್ತದೆ. **ಯೇತು** - ಯಾವ ಉಪಾಸಕರಾದರೋ, **ಸರ್ವಾಣಿ ಕರ್ಮಾಣಿ** - ಸಮಸ್ತ ಲೌಕಿಕವೈದಿಕ ಕರ್ಮಗಳನ್ನೂ, ಅವುಗಳು ಯಾವುವೆಂದರೆ—ದೇಹಧಾರಣೆ ಪೋಷಣೆಗೂ, ತನಗೆ ಸೇರಿದವರಾಗಿ ಭಗವಂತನಿಂದ ನಿಯಮಿಸಲ್ಪಟ್ಟ ಸುತದುಹಿತೃ ಕಳತ್ರಾದಿಗಳ ಯೋಗಕ್ಷೇಮಕ್ಕೂ, ಲೋಕದ ಜನರಿಗೆ ಹಿತವನ್ನುಂಟುಮಾಡುವವಕ್ಕೂ, ಬೇಕಾದ ಸಮಸ್ತ ಲೌಕಿಕ ಕರ್ಮಗಳನ್ನೂ, ಮತ್ತು ಸ್ನಾನಸಂಧ್ಯಾವಂದನೆ, ದೇವತಾರ್ಚನೆ ಮೊದಲಾದ ನಿತ್ಯ ನೈಮಿತ್ತಿಕರೂಪ ಅಜ್ಞಾನುಜ್ಞಾ ವೈದಿಕ ಕರ್ಮಗಳನ್ನೂ, ಲೋಕೋಪಕಾರವಾದ ಯಜ್ಞದಾನ ಹೋಮ ಮೊದಲಾದ ಸಮಸ್ತ ವೈದಿಕ ಕರ್ಮಗಳನ್ನೂ, ಹೀಗೆ ಸಮಸ್ತ ಕರ್ಮಗಳನ್ನೂ, **ಮಯಿ ಸನ್ನ್ಯಸ್ಯ** - **"ಯತ್ಕರೋಷಿ"** ಎಂದಾರಂಭಿಸಿ **"ತತ್ಕುರುಷ್ವಮದರ್ಪಣಂ"** ಎಂದೂ **"ಮಯಿ ಸರ್ವಾಣಿ ಕರ್ಮಾಣಿಸನ್ನ್ಯಸ್ಯಾಧ್ಯಾತ್ಮಚೇತಸಾ"** ಎಂದೂ (ಗೀ. ೩. ೩೦) ಹೇಳಿರುವ ಹಾಗೆ, ನನ್ನಲ್ಲಿ ಯಾವ ಫಲಾಕಾಂಕ್ಷೆಯೂ ಇಲ್ಲದೆ, ನನ್ನಲ್ಲಿ ಸಮರ್ಪಿಸಿ, **ಮತ್ಪರಾಃ**-ಐಹಿಕಗಳಲ್ಲಿ ಸ್ವಲ್ಪವೂ ಪ್ರೀತಿಯಿಲ್ಲದೆ, ಅವು ತನ್ನ ಕರ್ತವ್ಯಗಳು ಮಾಡತಕ್ಕವುಗಳಾದುವರಿಂದ ಮಾಡಿದೆವು, ಎಂದು ಐಹಿಕದಲ್ಲಿ ವಿರಕ್ತಬುದ್ಧಿಯೊಂದಿಗೆ, ನಾನೇ ಸರ್ವವೂ, ನಾನೇ ತನಗೆ ಕೊನೆಗೆ ಪ್ರಾಪ್ಯವೆಂದೂ ಭಾವಿಸಿ, ನನ್ನಲ್ಲಿ ಮಾತ್ರವೇ ವಿಶ್ವಾಸವುಳ್ಳವರಾಗಿ, **ಅನನ್ಯೇನೈವ ಯೋಗೇನ** - ಪರಮಾತ್ಮನಲ್ಲದೆ ಬೇರೆ ಇನ್ನು ಯಾವ ಪ್ರಯೋಜನವೂ ಇಲ್ಲದಿರುವ ಭಕ್ತಿಯೋಗದಿಂದ, **ಮಾಂ** - ನನ್ನನ್ನು, **ಧ್ಯಾಯನ್ತಃ**-ಧ್ಯಾನಿಸುವವರಾಗಿ, ಇದು ಭರನ್ಯಾಸಕ್ಕೂ ಉಪಲಕ್ಷಣವಾಗಿ ಧ್ಯಾಯನ್ತಃ ಎಂಬ ಪ್ರಯೋಗವಿರುತ್ತದೆ. ಇಲ್ಲಿ ಹೇಳಿರುವ ಧ್ಯಾನವು, **"ಸತತಂ ಕೀರ್ತಿಯಂತೋ ಮಾಂ** (ಗೀ.    ) ಎಂಬ ಶ್ಲೋಕದಲ್ಲಿ ಹೇಳಿರುವ ಹಾಗೂ ಮತ್ತು **"ಶ್ರವಣಂ ಕೀರ್ತನಂ ವಿಷ್ಣೋಸ್ಸ್ಮರಣಂ ಪಾದಸೇವನಂ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ"** ಎಂದ ಹೇಳಿರುವಹಾಗೂ, ಮತ್ತು **ಶೃಣೋತಿ ಕಥಯತ್ಯಸೌ ಪರಿಚಿನೋತಿ ಸಂಪೃಚ್ಛತೇ । ಸಮರ್ಚ್ಚಯತಿಗಾಯತಿ ಸ್ಪೃಶತಿಪಶ್ಯತಿ ಸ್ತೌತಿಚ । ಇತೀತ ನಿಯತಾದರೋ ಮುರಭಿದಂಘ್ರಿಸೇವಾರಸೇ"** ಎಂದು ಹೇಳಿರುವಹಾಗೂ, ಇವೆಲ್ಲವನ್ನೂ

**ಭಾ. ಯೇತು ಲೌಕಿಕಾನಿ ದೇಹಯಾತ್ರಾ ಶೇಷಭೂತಾನಿ ದೇಹಧಾರಣಾರ್ಥಾನಿ ಚಾಶನಾದೀನಿ ಕರ್ಮಾಣಿ, ವೈದಿಕಾನಿ ಚ ಯಾಗದಾನ ಹೋಮತಪಃ ಪ್ರಭೃತೀನಿ**

ಉಪಾಸನೇತರ ಕಾಲಗಳಲ್ಲಿ ಮಾಡುತ್ತಾ ಹೀಗೆ ಧ್ಯಾನಿಸುವರಾಗಿ, **ಮಾಂ** - ಚತುರ್ಭುಜಾಕೃತಿಯುಳ್ಳ ಶಂಖ ಚಕ್ರಾದಿಗಳಿಂದಲೂ ಕಲ್ಯಾಣಗುಣ ವಿಭವಾದಿಗಳಿಂದಲೂ, ಲಕ್ಷ್ಮಿಯಿಂದಲೂ, ಕೂಡಿ ಪರಿಪೂರ್ಣನಾಗಿ, ಹೀಗೆ ನಿನಗೆ ತೋರಿದ ಆಕೃತಿಯುಳ್ಳ ನನ್ನನ್ನು ಉಪಾಸಿಸುತ್ತಾರೋ, **ತೇಷಾಂ**-ಅಂತಹ ಜ್ಞಾನಿ ಎನಿಸುವ ನನಗೆ ಅತ್ಯರ್ಥ ಪ್ರಿಯರಾದ ಭಕ್ತಿಯೋಗನಿಷ್ಠರುಗಳಾದ, **ಮಯ್ಯಾವೇಶಿತ ಚೇತಸಾಂ** - ವಿಷಯಾಂತರಗಳಲ್ಲಿ ಪ್ರವೇಶಿಸದಹಾಗೆ ಅಥವಾ ಪ್ರಾಪ್ಯಾಂತರಗಳಲ್ಲಿ ಹೋಗದಹಾಗೆ ನನ್ನ ಪ್ರಾಪ್ತಿಗಾಗಿಯೇ ನನ್ನಲ್ಲಿಟ್ಟ ಮನಸ್ಸುಳ್ಳವರಿಗೆ, **ಅಹಂ** - ಅಂತಹ ಉಪಾಸನದಿಂದ ಸುಪ್ರೀತನಾದ ನಾನು, **ಮೃತ್ಯುಸಂಸಾರ ಸಾಗರಾತ್** - ಪುನಃ ಪುನಃ ಜನ್ಮ ಮರಣಾದಿ ರೂಪವಾದ ಸಂಸಾರವೆಂಬ ಸಾಗರದಿಂದ, **ಸಮುದ್ಧರ್ತಾ** - ಅದರಲ್ಲಿ ಬಿದ್ದು ತೇಲಾಡುತ್ತಿರುವವನನ್ನು ನೋಡಿ ಕೈಹಿಡಿದು ಎತ್ತುವಂತವನು, **ಭವಾಮಿ** - ಆಗುವೆನು. **"ಮಗ್ನಾನಾಂ ಭವಿನಾಂ ಸಮುತ್ತಾರಾಯ ನಾರಾಯಣಃ"** ಎಂದು ಹೇಳಿರುವಹಾಗೆ, ಆತನ ಸುಸಙ್ಕಲ್ಪವೇ ಹೀಗೆ ಸಂಸಾರ ಸಾಗರದಲ್ಲಿ ಮುಳುಗಿದವರನ್ನು ಮೇಲಕ್ಕೆ ಎತ್ತುವದಾದುದರಿಂದ, **"ಅಹಂ ಸಮುದ್ಧರ್ತಾ ಮೃತ್ಯು ಸಂಸಾರಸಾಗರಾತ್"** ಎಂಬ ಪ್ರಯೋಗವು. **"ಅಮೃತಸ್ಯೇಷಸೇತು"** ಎಂಬ ಮುಂಡಕವಾಕ್ಯವು ಇಲ್ಲಿ (೨. ೨. ೫) ಉಪಪಾದಿಸಲ್ಪಟ್ಟಿತು. ಇಂತಹ ಭಕ್ತಿಯೋಗನಿಷ್ಠರೇ ಯೋಗಸತ್ತಮರು, ಅವರಿಗೆ ಕ್ಲೇಶೋಧಿಕವಿಲ್ಲವು; ಸುಖವಾಗಿ ಬಹು ಶೀಘ್ರವಾಗಿ ನಾನು ಪಶ್ಯನಾಗಿ ಅವರಿಗೆ ಪ್ರಾಪ್ಯನಾಗಿ ಮುಂದಕ್ಕೆ ಮೃತ್ಯುಸಂಸಾರದ ಭಯವಿಲ್ಲದಹಾಗೆ ಮಾಡುವೆನು ಎಂಬ ಭಾವವು. ಜ್ಞಾನೀ ಎನಿಸುವ ಭಕ್ತಿಯೋಗನಿಷ್ಠನಾಗಿ ಈ ಸಂಸಾರಸಾಗರದಲ್ಲಿ ಮುಳುಗಿರುವವನನ್ನು ಕೈಹಿಡಿದು ಎತ್ತಿ, ನಾನು ನನ್ನ ಪ್ರಾಪ್ತಿಯುಂಟಾಗುವ ಹಾಗೆ ಮಾಡುವೆನು ಎಂದು ಪರಮಕೃಪಯಾ ಹೇಳಿದರು. ಹಾಗೆ ಮಾಡಲು ಆ ಭಕ್ತಿಯೋಗನಿಷ್ಠನು ಮಾಡತಕ್ಕದ್ದೇನೆಂದರೆ— ತನ್ನ, ತನಗೆ ಸೇರಿದವರ, ಮತ್ತು ತನ್ನಿಂದ ಸಾಧ್ಯವಾದ ಇತರರ, ಪೋಷಣಾರ್ಥವಾಗಿ ಮಾಡಬೇಕಾದ ಧನಾರ್ಜನೆ ಮೊದಲಾದ ಸಕಲ ಲೌಕಿಕ ವ್ಯಾಪಾರಗಳನ್ನೂ, ಮತ್ತು ನಿತ್ಯನೈಮಿತ್ತಿಕ ರೂಪ ಆಜ್ಞಾ ಕೈಙ್ಕರ್ಯಗಳೇನು, ಭಗವದ್ಭಾಗವತ ಕೈಙ್ಕರ್ಯರೂಪ ಅನುಜ್ಞಾ ಕೈಙ್ಕರ್ಯಗಳೇನು, ಯಜ್ಞ ದಾನ ಹೋಮಾದಿ ಕರ್ಮಗಳೇನು, ಹೀಗೆ ಸಮಸ್ತ ಲೌಕಿಕ ವೈದಿಕ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸತಕ್ಕದ್ದು. ಹೀಗೆ ಮಾಡುವದರಲ್ಲಿ ಈಷದಪಿ ತನಗೆ ಫಲಾಕಾಂಕ್ಷೆ ಇರಕೂಡದು. ಇತರ ಪ್ರಾಪ್ತಿಗಳಲ್ಲಿ ಆಶೆಯನ್ನು ತೊರೆದು ಪರಮಾತ್ಮನನ್ನು ಉಪಾಸಿಸತಕ್ಕದ್ದು. ಉಪಾಸನೇತರ ಕಾಲಗಳಲ್ಲೂ **"ಸತತಂ ಕೀರ್ತಯಂತೋಮಾಂ"** ಎಂಬ ಶ್ಲೋಕದಲ್ಲಿ ಹೇಳಿರುವಹಾಗೆ ಅನುಷ್ಠಾನ ಪರನಾಗಿ ಯಾವಾಗಲೂ ಪರಮಾತ್ಮನನ್ನೇ ಧ್ಯಾನಿಸುವ ಪರಮೈಕಾಂತಿಯಾಗಿರಬೇಕು. ಹೀಗಿದ್ದರೆ ತಾನು ಸುಪ್ರೀತನಾಗಿ ಮುಕ್ತಿಯನ್ನು ಶೀಘ್ರವಾಗಿ ಕೊಡುವೆನು ಎಂದು ಉಪದೇಶಿಸಿದರು ||೬೭||

**ಭಾಷ್ಯಾರ್ಥವು :—** ಯಾರು ಯುಕ್ತತಮರು, ಜ್ಞಾನಿಗಳೋ ಜಿಜ್ಞಾಸುಗಳೋ ಎಂಬ ಅರ್ಜುನನ ಪ್ರಶ್ನೆಗೆ ಜ್ಞಾನಿಗಳೇ ಯುಕ್ತತಮರೆಂದು ಉತ್ತರವನ್ನು ದಯಪಾಲಿಸುತ್ತಾರೆ— ಯಾವ ಭಕ್ತಿಯೋಗ ನಿಷ್ಠರಾದವರೋ, ಮುಂದೆ **ಸರ್ವಾಣಿ ಕರ್ಮಾಣಿ** ಎಂಬುದರಿಂದ ಹೇಳಲ್ಪಟ್ಟ ಕರ್ಮಗಳು ಯಾವುದೆಂಬುದನ್ನುಪಪಾದಿಸಿ ಹೇಳುತ್ತಾರೆ. **ಲೌಕಿಕ**ಗಳಾದ **ದೇಹಯಾತ್ರಾ ಶೇಷಭೂತಾನಿ** - ದೇಹಯಾತ್ರೆಗೆ ಆವಶ್ಯಕಗಳಾದ ಸಮಸ್ತಗಳಾದ, ಮತ್ತು **ದೇಹಧಾರಣಾ**

**ಭಾ. ಸರ್ವಾಣಿ ಸಕಾರಣಾನಿ ಸ್ವೋದ್ದೇಶ್ಯಾನ್ಯಧ್ಯಾತ್ಮಚೇತಸಾಮಯಿ ಸನ್ನ್ಯಸ್ಯ,ಮತ್ಪರಾಃ-ಮದೇಕ ಪ್ರಾಪ್ಯಾಃ, ಅನನ್ಯೇನೈವಯೋಗೇನ-ಅನನ್ಯ ಪ್ರಯೋಜನೇನ ಯೋಗೇನ, ಮಾಂ ಧ್ಯಾಯನ್ತಉಪಾಸತೇ-ಧ್ಯಾ ನಾರ್ಚನ.ಪ್ರಣಾಮಸ್ತುತಿ ಕೀರ್ತನಾದೀನಿ ಸ್ವಯ ಮೇವಾ ತ್ಯರ್ಥಪ್ರಿಯಾಣಿ ಪ್ರಾಪ್ಯಸಮಾನಿ ಕುರ್ವನ್ತೋ ಮಾಮುಪಾಸತ ಇತ್ಯ ರ್ಥಃ; ತೇಷಾಂ ಮತ್ಪ್ರಾಪ್ತಿ ವಿರೋಧಿತಯಾ ಮೃತ್ಯುಭೂತಾ ತ್ಸಂಸಾರಾಖ್ಯಾ ತ್ಸಾಗರಾ ದಹ ಮಚಿರೇಣೈವ ಕಾಲೇನ ಸಮುದ್ಧರ್ತಾ ಭವಾಮಿ. ||೬, ೭||**

---

**ರ್ಥಾನಿಚ** - ದೇಹಧಾರಣೆಗೆ ಪ್ರಯೋಜನಕರಗಳಾದ, **ಅಶನಾದೀನಿ ಕರ್ಮಾಣಿ** - ಆಹಾರ ಸ್ವೀಕಾರವೇ ಮೊದಲಾದ ಕರ್ಮಗಳನ್ನೂ, **ವೈದಿಕಾನಿಚ** - ಮತ್ತು ವೈದಿಕ ಕರ್ಮಗಳಾದ, ಯಾಗ, ದಾನ, ತಪಸ್ಸೇ **ಪ್ರಭೃತೀನಿ** - ಮೊದಲಾದ, ಈ ಮೊದಲಾದ ಎಂಬುದರಿಂದ ನಿತ್ಯ ನೈಮಿತ್ತಿಕ ರೂಪವಾದ ಆಜ್ಞಾ ಕೈಙ್ಕರ್ಯಗಳೂ, ಭಗವದ್ಭಾಗವತ ಕೈಙ್ಕರ್ಯ ರೂಪ ಅನುಜ್ಞಾ ಕೈಙ್ಕರ್ಯಗಳೂ ಹೇಳಲ್ಪಟ್ಟವು; ಹೀಗೆ **ಸರ್ವಾಣಿ** - ಸಮಸ್ತಗಳಾದ ಕರ್ಮಗಳೂ ಮತ್ತು **ಸಕಾರಣಾನಿ** - ಮೇಲಿನ ದೇಹಧಾರಣಾದಿಗಳಿಗೆ ಕಾರಣಭೂತಗಳಾದ ಎಂದರೆ ದ್ರವ್ಯಾ ರ್ಜನೆ ಕೃಷ್ಯಾದಿ ಕರ್ಮಗಳೂ ಮತ್ತು **ಸ್ವೋದ್ದೇಶಾನಿ** - ತನಗಾಗಿ ಉದ್ದೇಶ್ಯವುಳ್ಳವುಗಳಾದ ಸ್ವರ್ಗಾದಿ ಫಲಗಳನ್ನು ಕೊಡಬಹುದಾದ ಯಜ್ಞಾದಿಗಳನ್ನೂ ಸಹ, **ಅಧ್ಯಾತ್ಮಚೇತಸಾಃ** - ಪರ ಮಾತ್ಮನಲ್ಲಿಟ್ಟ ಮನಸ್ಸುಳ್ಳವರಾಗಿ, ಎಂದರೆ ಅವುಗಳಲ್ಲಿ ಸ್ವರ್ಗಾದುಪಭೋಗ ಫಲಾಭಿಸಂಧಿ ಯಿಲ್ಲದೆ ಅವು ಪರಮಾತ್ಮನಾದ ನನಗಾಗಿಯೇ ಎಂಬ ಭಾವವನ್ನಿಟ್ಟು ನಾನು ಇವುಗಳಿಂದ ಸುಪ್ರೀತನಾಗುವೆನೆಂಬ ಸಙ್ಕಲ್ಪವುಳ್ಳವರಾಗಿ, **ಮಯಿಸನ್ನ್ಯಸ್ಯ** - ಸರ್ವ ಕರ್ಮಾರಾಧ್ಯನಾದ ನನ್ನಲ್ಲಿ ಅವೆಲ್ಲವನ್ನೂ ಸಮರ್ಪಿಸಿ, **ಮತ್ಪರಾಃ** ಎಂದರೆ **ಮದೇಕ ಪ್ರಾಪ್ಯಾಃ** - ನಾನೇ ಮುಖ್ಯವಾದ ಪ್ರಾಪ್ಯವಾಗಿವುಳ್ಳ ಎಂದರೆ ನಾನೇ ಪರಮ ಪ್ರಾಪ್ಯವೆಂದು ಭಾವಿಸಿ ನನ್ನನ್ನೇ ಮುಖ್ಯವಾಗಿ ಬಯಸುವವರಾಗಿ ಎಂಬ ಭಾವವು. ಇತರ ಐಹಿಕಾಮುಷ್ಮಿಕ ಪ್ರಾಪ್ತಿಯಲ್ಲಿ ಅವರಿಗೆ ಸ್ವಲ್ಪವೂ ಅಭಿಲಾಷೆಯಿಲ್ಲದೆ, ನನ್ನ ಪ್ರಾಪ್ತಿಯನ್ನೇ ಚಾತಕ ಪಕ್ಷಿಯ ವೃತ್ತಿಯನ್ನನುಸರಿಸಿ ಬಯಸುವವರು ಎಂಬ ತಾತ್ಪರ್ಯವು. ಇಲ್ಲಿ **ಸರ್ವಾಣಿ ಕರ್ಮಾಣಿ ಸ್ವೋದ್ದೇಶ್ಯಾನ್ಯಧ್ಯಾತ್ಮ ಚೇತಸಾ ಮಯಿಸನ್ನಸ್ಯ"** ಎಂಬ ವ್ಯಾಖ್ಯಾನವು **"ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾ ಧ್ಯಾತ್ಮ ಚೇತಸಾ"** ಎಂದು ಹಿಂದೆ (೩-೩೦) ನೆಯ ಶ್ಲೋಕವನ್ನು ಮನಸ್ಸಿನಲ್ಲಿಟ್ಟು ಹೇಳಲ್ಪಟ್ಟಿ ತೆಂಬುದು ಸ್ಪಷ್ಟವು. **ಅನನ್ಯೇನೈವ ಯೋಗೇನ** ಎಂದರೆ **ಅನನ್ಯ ಪ್ರಯೋಜನೇನ ಯೋಗೇನ** - ಭಗವತ್ಪ್ರಾಪ್ತಿಯನ್ನುಂಟುಮಾಡುವ ಈ ಭಕ್ತಿಯೋಗಕ್ಕೆ ಇನ್ನು ಯಾವ ಪ್ರಯೋ ಜನವೂ ಇಲ್ಲದೇ ಉಪಾಸನವೇ ಸ್ವಯಂ ಪ್ರಯೋಜನವೆಂಬ ಭಾವವು, ಅಂತಹ ಭಕ್ತಿಯೋಗ ದಿಂದ, **ಮಾಂಧ್ಯಾಯನ್ತ ಉಪಾಸತೇ** - ಧ್ಯಾನವೇ ಉಪಾಸನೆಯಲ್ಲವೇ ಎಂದರೆ ಎರಡೂ ಒಂದೇ ಅರ್ಥವುಳ್ಳವುಗಳಲ್ಲವೆಂದು, **"ಧ್ಯಾಯನ್ತಃ"** ಎಂಬ ಶಬ್ದಾರ್ಥವನ್ನು ವಿವರಿಸಿ ಹೇಳು ತ್ತಾರೆ. **ಧ್ಯಾನ** - ಧ್ಯಾನಿಸುವದು, ಸ್ಮರಿಸುವದು, ಅರ್ಚನವು, ಪ್ರಣಾಮವು, **ಸ್ತುತಿ** - ಸ್ತೋತ್ರವು **ಕೀರ್ತನಾದೀನಿ**-ಹೊಗಳೋಣವು ಅಥವಾ ಗಾನಮಾಡೋಣವೇ ಮೊದಲಾದವುಗ ಳನ್ನು, **ಸ್ವಯಮೇವ ಅತ್ಯರ್ಥಪ್ರಿಯಾಣಿ** - ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ಪ್ರಿಯ ಗಳನ್ನಾಗಿಯೂ, ಎಂದರೆ, ಕರ್ಮಗಳೇ ಅತ್ಯಂತ ಪ್ರಿಯಗಳಾಗಿರುವುದರಿಂದ ಫಲಾದಿ ಅನ್ಯಾ ಪೇಕ್ಷೆಯಿಲ್ಲವೆಂಬ ಭಾವವು, ಮತ್ತು **ಪ್ರಾಪ್ಯಸಮಾನಿ** - ನನ್ನ ಪಾಪ್ತಿಗೆ ಸಮಾನವಾದವುಗಳ ನ್ನಾಗಿಯೂ ಭಾವಿಸಿ, ನನ್ನ ಪ್ರಾಪ್ತಿಯುಂಟಾದರೆ ಎಷ್ಟು ಆನಂದವೋ ಹಾಗೆ ಆ ಕರ್ಮಗಳನ್ನು

ನನ್ನ ಪ್ರಾಪ್ಯದೆಶೆಯಲ್ಲಿ ಮಾಡುವ ಕೈಙ್ಕರ್ಯಗಳಾಗಿ ಭಾವಿಸಿ, ಎಂಬರ್ಥವು, **"ತಮೇವಂ ವಿದ್ವಾನಮೃತ ಇಹ ಭವತಿ"** ಎಂಬ ಶ್ರುತಿಯು **ಪ್ರಾಪ್ಯಸಮ**ವೆಂದೇ ಬೋಧಿಸುತ್ತದೆ. ಯಾರು ನನ್ನನ್ನು **ಉಪಾಸತೇ ಇತ್ಯರ್ಥಃ**-ಉಪಾಸಿಸುತ್ತಾರೋ ಎಂಬ ತಾತ್ಪರ್ಯವು ಇಲ್ಲಿ **ಧ್ಯಾಯಂತಃ** ಎಂದು ಮೂಲದಲ್ಲಿ ಹೇಳಲ್ಪಟ್ಟಿರುವದು ಉಪಲಕ್ಷಣವಾಗಿ **"ಸತತಂ ಕೀರ್ತಯಂತೋ ಮಾಂ"** ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಭಗವಂತನನ್ನೇ ಅನನ್ಯ ಮನಸ್ಕರಾಗಿ ಮಾಡುವ ಕೀರ್ತನ, ಶ್ರವಣ ಅರ್ಚನ ಮೊದಲಾದವುಗಳಿಗೆಲ್ಲಾ ಸಙ್ಗ್ರಹಕವೆಂಬ ಭಾವದಿಂದ, ಹೀಗೆ ಭಾಷ್ಯವು. **ತೇಷಾಂ** - ಅಂತಹ ಭಕ್ತಿಯೋಗ ನಿಷ್ಠರಿಗೆ, **ಮತ್ಪ್ರಾಪ್ತಿ ವಿರೋಧಿತಯಾ** - ನನ್ನ ಪ್ರಾಪ್ತಿಗೆ ವಿರೋಧವಾಗಿರುವದರಿಂದ, **ಮೃತ್ಯು ಭೂತಾತ್** - ಜನನ ಮರಣಗಳಿಗೆ ಆಕರವಾಗಿ ಮೃತ್ಯು ರೂಪವೆನಿಸುವ, **ಸಂಸಾರಾಖ್ಯಾತ್**-ಸಂಸಾರವೆಂದು ಹೇಳಿಸಿಕೊಳ್ಳುವ **ಸಾಗರಾತ್**-ಇಂತಹ ದುಸ್ತರವಾದ ಸಮುದ್ರದಿಂದ, **ಮೃತ್ಯುಸಂಸಾರ ಸಾಗರಾತ್** ಎಂಬಲ್ಲಿ ಸಂಸಾರವು ಮೃತ್ಯು ರೂಪವೆಂದು ಏಕೆ ಹೇಳಲ್ಪಟ್ಟಿತೆಂದರೆ, ಅದನ್ನು ತಿಳಿಸುವದಕ್ಕಾಗಿಯೇ **ಮತ್ಪ್ರಾಪ್ತಿ ವಿರೋಧಿತಯಾ ಮೃತ್ಯುಸಂಸಾರ**ವೆಂಬ ಸಾಗರವೆಂದು ವ್ಯಾಖ್ಯಾನ ಮಾಡಿರುತ್ತಾರೆ, **ಅಹಂ** - ಭಕ್ತಿ ಯೋಗದಿಂದ ಸುಪ್ರೀತನಾದ ನಾನು, **ಅಚಿರೇಣೈವ ಕಾಲೇನ** - ಬಹು ಶೀಘ್ರವಾಗಿಯೇ, **ಸಮುದ್ಧರ್ತಾ** - ಕೈಹಿಡಿದು ಮೇಲಕ್ಕೆ ಎತ್ತುವಂತವನು, **ಭವಾಮಿ** - ಆಗುವೆನು. ಇಲ್ಲಿ **ನ** ಎಂಬುದು ಕ್ರಿಯಾಪದಕ್ಕೆ ಸೇರಿದುದಲ್ಲವೆಂದೂ, **ಚಿರೇಣ** ಎಂಬುದರೊಂದಿಗೆ ಸೇರಿಸತಕ್ಕದ್ದೆಂದೂ, ತಿಳಿಸುವದಕ್ಕಾಗಿ **ಅಚಿರೇಣೈವ ಕಾಲೇನ** ಎಂಬ ಭಾಷ್ಯವು. ಬದ್ಧದೆಶೆಯು ಮೃತ್ಯುವು, ಭಯರೂಪವಾದುದು, ಕ್ಲೇಶಕರವಾದುದು ; ಭಗವತ್ಪ್ರಾಪ್ತಿರೂಪ ಮುಕ್ತಿಯಲ್ಲಿ ಅಮೃತತ್ವವೂ ಅಭಯವೂ ನಿರತಿಶಯ ಸುಖವೂ ಉಂಟು, ಆದುದರಿಂದ ಸಂಸಾರದಲ್ಲಿ ಹೇಯತ್ವವನ್ನು ಪ್ರದರ್ಶಿಸುವದಕ್ಕಾಗಿ **ಮೃತ್ಯುರೂಪ ಸಂಸಾರ**ವೆಂದು ಹೇಳಲ್ಪಟ್ಟಿತು ಈ ಸಂದರ್ಭದಲ್ಲಿ ಮುಕುಂದ ಮಾಲೆಯ ಈ ಶ್ಲೋಕಗಳು ಅನುಸಂಧೇಯಗಳು.—

**ಭವ ಜಲಧಿ ಮಗಾಧಂ ದುಸ್ತರಂ ನಿಸ್ತರೇಯಂ ಕಥ ಮಹ ಮಿತಿ ಚೇತೋಮಾಸ್ಮಗಾಃ ಕಾತರತ್ವಮ್। ಸರಸಿಜ ದೃಶಿ ದೇವೇ ತಾವಕೀ ಭಕ್ತಿರೇಕಾ ನರಕಭಿದಿ ನಿಷಣ್ಣಾ ತಾರಯಿಷ್ಯತ್ಯವಶ್ಯಮ್ ||೧೩|| ತೃಷ್ಣಾ ತೋಯೇ ಮದನಪವನೋದ್ಧೂತ ಮೋಹೋರ್ಮಿಮಾಲೇ। ದಾರಾವರ್ತೇ ತನಯ ಸಹಜ ಗ್ರಾಹ ಸಂಘಾಕುಲೇ ಚ। ಸಂಸಾರಾಖ್ಯೇ ಮಹತಿ ಜಲಧೌ ಮಜ್ಜತಾಂ ನಸ್ತ್ರಿಧಾಮರ್। ಪಾದಾಂಭೋಜೇ ವರದಭವತೋ ಭಕ್ತಿನಾವಂ ಪ್ರಯಚ್ಛ ||೧೪||**

ಈ ಶ್ಲೋಕಗಳಭಿಪ್ರಾಯವೇನೆಂದರೆ,—ಓ ಮನಸ್ಸೇ! ಸಂಸಾರ ಸಮುದ್ರವು ಅಗಾಧವಾಗಿ ದಾಟಲಶಕ್ಯವಾದುದು ; ಅಂತಾದ್ದನ್ನು ದಾಟುವದು ಹೇಗೆಂದು ನೀನು ಕಳವಳ ಪಡಬೇಡ ; ದೇವನಾಗಿ ಸರಸಿಜಾಕ್ಷನಾಗಿ ನರಕಾಸುರನನ್ನು ಮರ್ದಿಸಿದ ಶ್ರೀ ಕೃಷ್ಣನಲ್ಲಿಟ್ಟ ನಿನ್ನ ಭಕ್ತಿಯು ಖಂಡಿತವಾಗಿಯೂ ನಿನ್ನನ್ನು ದಾಟಿಸುತ್ತದೆ. ಓ ಭಗವಂತನೇ! ಅಂತಹ ಮಹತ್ತಾದ ಸಂಸಾರ ಸಮುದ್ರದಲ್ಲಿ ಮುಳುಗಿರುವವರನ್ನು ರಕ್ಷಿಸಲು ನಿನ್ನ ಪಾದಕಮಲದಲ್ಲಿ ಭಕ್ತಿ ಎಂಬ ನಾವೆಯನ್ನು ಕೊಡು, ಆ ಸಮುದ್ರವೆಂತಾದ್ದೆಂದರೆ ಆಶೆಯೆಂಬ ನೀರನ್ನುಳ್ಳದು, ಸಮುದ್ರಕ್ಕೆ ಎಷ್ಟು ನೀರು ಸೇರಿದರೂ ಹೇಗೆ ಅದಕ್ಕೆ ತೃಪ್ತಿಯಿಲ್ಲವೋ ಹಾಗೆ ಈ ಸಂಸಾರದಲ್ಲಿ ಆಶೆಗೂ ತೃಪ್ತಿಯಿರುವದಿಲ್ಲವೆಂಬ ಭಾವವು ; ಮನ್ಮಥನೆಂಬ ಎಂದರೆ ಕಾಮವೆಂಬ ಗಾಳಿಯಿಂದ ಎಬ್ಬಿಸಲ್ಪಟ್ಟ ಮೋಹವೆಂಬ ತರಂಗಗಳುಳ್ಳದು. ಹೆಂಡತಿಯೇ ಈ ಸಮುದ್ರದಲ್ಲಿ ಒಂದು ಸುಳಿಯು, ಮುಳುಗಿಸಿ ಬಿಡುವಂ

**ಮೂ. ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ, ನ ಸಂಶಯಃ ||** ೮.

ತಾದ್ದು, ಮಗ ಮತ್ತು ಸಹೋದರರೇ ಮೊಸಳೆಯ ಗುಂಪುಗಳು, ಇಂತವುಗಳುಳ್ಳದಾದುದರಿಂದ ಈ ಸಂಸಾರವು ಮೃತ್ಯುರೂಪವಾದುದು, ಆದುದರಿಂದ ಭಕ್ತಿ ಎಂಬ ನಾವೆಯನ್ನು ಕೊಟ್ಟು ಸಮುದ್ರದಲ್ಲಿ ಮುಳಿಗಿಹೋಗಿರುವವರನ್ನು ಮೇಲಕ್ಕೆ ಎತ್ತಿ ಕಾಪಾಡು" ಎಂಬದಾಗಿ. ಇದರಿಂದ ಸಂಸಾರವು ಮೃತ್ಯುರೂಪ ಅಗಾಧ ದುಸ್ತರ ಸಾಗರವೆಂದೂ ಅದನ್ನು ಸುಲಭವಾಗಿ ದಾಟಲು ಸಾಧ್ಯೋಪಾಯವು ಭಕ್ತಿಯೋಗರೂಪ ನಾವೆಯೆಂದೂ ಅಂತಹ ದುಸ್ತರ ಸಾಗರದಲ್ಲಿ ಮುಳುಗಿದವನೆನ್ನೆತ್ತಿ ನಾವೆಯಲ್ಲಿಟ್ಟು ಅದನ್ನು ದಾಟಿಸುವವನು ಸಿದ್ಧೋಪಾಯನಾದ ಮುಕುಂದನೆಂದೂ ಹೇಳಲ್ಪಟ್ಟಿತು. **ನೃದೇಹ ಮಾದ್ಯ ಸುಲಭಂ ಸುದುರ್ಲಭಂ ಪ್ಲವಂ ಸುಕಲ್ಪಂ ಗುರು ಕರ್ಣಧಾರಮ್ । ಮಯಾನುಕೂಲೇನ ನಭಸ್ವತೇರಿತಂ ಪುಮಾರ್ನ ಭವಾಬ್ಧಿಂ ನತರೇತ್ಸ ಆತ್ಮಹಾ ||** (ಭಾಗ) ಎಂಬ ಭಗದುಕ್ತಿಯು ಅನುಸಂಧೇಯವು. ಸರ್ವೇಶ್ವರನಿಂದ ನಿರ್ಮಿತವಾದ ಈ ಮಾನುಷದೇಹವು ಅನಾದಿಯಾಗಿ ಸುಕೃತಪರಿಪಾಕದಿಂದುಂಟಾದ ದೋಣಿಯು, ಅದನ್ನು ನಡೆಸುವದಕ್ಕೆ ಸರ್ವೇಶ್ವರನು ಶಾಸ್ತ್ರಜ್ಞಾನವುಳ್ಳ ಗುರುವನ್ನುಂಟುಮಾಡಿ ಕೊಟ್ಟಿರುತ್ತಾನೆ. ಅದಕ್ಕೆ ಅನುಕೂಲವಾದ ಗಾಳಿ ಯಾವುದು ಎಂದರೆ ತಾನೇ. ಹೀಗೆ ತಾನೇ ನಿಂತು, ಸಂಸಾರ ಸಮುದ್ರದ ಆಚೆ ದಡಕ್ಕೆ ಈ ದೇಹದಲ್ಲಿ ನರಳುತ್ತಿರುವ ಜೀವಾತ್ಮನನ್ನು ಕರೆದುಕೊಂಡು ಸೇರಿಸಲಿಕ್ಕೆ ಕಾದಿದ್ದಾನೆ. ಇಂತಹ ಸುಸಮಯದಲ್ಲಿ ಹೀಗೆ ಮಾಡಿಕೊಳ್ಳದವನು ತನ್ನ ಆತ್ಮಾವನ್ನು ತಾನೇ ನಾಶಪಡಿಸಿಕೊಳ್ಳುವನಾಗುತ್ತಾನೆ" ಎಂಬುದು ಈ ಶ್ಲೋಕದ ತಾತ್ಪರ್ಯವು. ಹಾಗೆಯೇ **"ಭೀಮೇ ನಿತ್ಯಂ ಭವ ಜಲನಿಧೌ ಮಜ್ಜತಾಂ ಮಾನವಾನಾಂ"** ಎಂಬ ದಯಾಶತಕ ಶ್ಲೋಕವನ್ನೂ (೪೬) ಪರಾಂಬರಿಸಿ. ||೬, ೭||

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕಗಳಲ್ಲಿ ಸರ್ವ ಕರ್ಮಸನ್ಯಾಸ ಪೂರ್ವಕವಾಗಿ ನನ್ನಲ್ಲಿ ಅವುಗಳನ್ನೆಲ್ಲಾ ಸಮರ್ಪಿಸಬೇಕೆಂದೂ, ಮತ್ಪರನಾಗಿರಬೇಕೆಂದೂ, ಭಕ್ತಿಯೋಗವು ಅನನ್ಯವಾಗಿ ಸತತ ಧ್ಯಾನಯುಕ್ತವಾಗಿ ಉಪಾಸನೆಯಿಂದ ಕೂಡಿದ್ದರೆ, ನಾನು ಆಗ ಮೃತ್ಯು ಸಾಗರದಿಂದ ಎತ್ತುವ **ಸಮುದ್ಧರ್ತಾ ಭವಾಮಿ** ಎಂದೂ, ಹೇಳಿಕೊಂಡರು. ಆದರೆ ಹೀಗೆ ಮಾಡುವದು ತುಂಬಾ ಕಷ್ಟತರವೆಂದು ಅರ್ಜುನನು ಭಾವಿಸಿರುವನೆಂಬುದನ್ನು ಶ್ರೀ ಕೃಷ್ಣ ಭಗವಾರ್ನರವರು ತಮ್ಮ ಸರ್ವಜ್ಞತೆಯಿಂದ ತಿಳಿದು, ಇದೇನೂ ಕಷ್ಟವಲ್ಲವು, ಸುಲಭವಾಗಿಯೇ ಸಿದ್ಧಿಸುತ್ತದೆ. ಸ್ವಲ್ಪ ಅಭ್ಯಾಸ ರೀತಿಯಲ್ಲಿ ಮನಸ್ಸನ್ನು ಐಹಿಕಗಳಿಂದ ತಿರುಗಿಸಿ, ನನ್ನಲ್ಲೇ ಇಟ್ಟುಬಿಡು ; ಆಗ ವಿವೇಕ ಜನಕವಾದ ಧರ್ಮಭೂತ ಜ್ಞಾನವೂ ನನ್ನಲ್ಲೇ ನಿಂತುಹೋಗುತ್ತದೆ. ತದನಂತರ ಮೇಲೆ ಹೇಳಿದುದೆಲ್ಲಾ ಸುಲಭವಾಗಿ ಸಿದ್ಧಿಸುತ್ತದೆ. ಕ್ಷಿಪ್ರದಲ್ಲೇ ಮುಕ್ತಿಯನ್ನು ಹೊಂದುತ್ತೀಯೆ ; ಈ ವಿಷಯದಲ್ಲಿ ನಿನಗೆ ಶಂಶಯವು ಬೇಕಿಲ್ಲವೆಂದು ಉಪದೇಶಿಸುತ್ತಾರೆ.—ಹಿಂದೆ (೮-೭) ರಲ್ಲಿ ಹೇಳಿದ **"ಮಯ್ಯರ್ಪಿತ ಮನೋಬುದ್ಧಿಃ ಮಾಮೇವೈಷ್ಯಸ್ಯ ಸಂಶಯಃ"** ಎಂಬಭಿಪ್ರಾಯವನ್ನೇ ಇಲ್ಲೂ ಅನುವಾದ ಮಾಡಿ ಉಪದೇಶಿಸುತ್ತಾರೆ.— **ಮಯ್ಯೇವ ಮನ ಆಧತ್ಸ್ವ**-ಹಿಂದೆ **"ಆತ್ಮೈವ ಹ್ಯಾತ್ಮನೋ ಬನ್ಧುಃ ಆತ್ಮೈವ ರಿಪುರಾತ್ಮನಃ"** (ಗೀ. ೬. ೫) ಎಂಬಲ್ಲಿ ಬಂಧ ಮೋಕ್ಷಗಳಿಗೆ ಮನಸ್ಸೇ ಪ್ರಧಾನವೆಂದೂ, ಅದು ಶತ್ರುವಾಗಿ ಮೃತ್ಯು ಸಂಸಾರದಲ್ಲಾಗಲೀ ಮುಳುಗಿಸಬಹುದು, ಅಥವಾ ಬಂಧುವಾಗಿ ಪರಮ ನಿಶ್ರೇಯಸ್ಸನ್ನಾಗಲಿ ಹೊಂದಿಸಬಹುದೆಂದೂ, ಹೇಳಲ್ಪಟ್ಟಿತ್ತು. ಶ್ರೀ ಪರಾಶರರೂ ಹಾಗೆಯೇ **ಹೇಳಿ**

ರುತ್ತಾರೆ. ಬಂಧಕ್ಕೂ ಮೋಕ್ಷಕ್ಕೂ ಸಹ ಮನಸ್ಸೇ ಕಾರಣವು, ಅದಕ್ಕೆ ವಿಷಯ ಸಜ್ಞವುಂಟಾದರೆ ಅದು ಬಂಧಕವು; ವಿಷಯ ಸಜ್ಞವಿಲ್ಲದೆ ಪರಮಾತ್ಮನಲ್ಲಿ ಸಕ್ತವಾದರೆ ಮುಕ್ತಿಗೆ ಹೇತುವು, ಹೀಗೆ ಮನಸ್ಸು ಮುಖ್ಯವಾದುದರಿಂದ, ಅಂತಹ **ಮನಃ** – ಮನಸ್ಸನ್ನು, **ಮಯಿ** – ನನ್ನಲ್ಲೇ, **ಆಧತ್ಸ್ವ** – ಸ್ಥಿರವಾಗಿ ನಿಲ್ಲಿಸು; ಇಲ್ಲಿ **ಮಯ್ಯೇವ** ಎಂದು **ಏ**ವಕಾರವಿರುವದರಿಂದ, ವಿಷಯಗಳಿಗೆ ಓಡಿಹೋಗದ ಹಾಗೆ ತಡೆದು ಅಭ್ಯಾಸದಿಂದ ಮನಸ್ಸು ಯಾವಾಗಲೂ ನನ್ನ ವಿಷಯಕವಾಗಿಯೇ ಇರಲಿ ಎಂಬ ಭಾವವು. ಮನಸ್ಸು ಹೀಗೆ ಪರಮಾತ್ಮನಲ್ಲೇ ಸ್ಥಿರವಾಗಿ ನಿಲ್ಲುವಹಾಗೆ ಮಾಡಬೇಕಾದರೆ, **ಮಯಿಬುದ್ಧಿಂ ನಿವೇಶಯ,** **ಮಯಿ** – ನನ್ನಲ್ಲೇ, **ಬುದ್ಧಿಂ** – ವಿವೇಕವನ್ನು ಕೊಡುವ ಆತ್ಮಜ್ಞಾನವನ್ನು, ಧರ್ಮಭೂತಜ್ಞಾನವನ್ನು, **ನಿವೇಶಯ** – ಇಡು, ಮನಸ್ಸಿಗೂ ಬುದ್ಧಿಗೂ ಪರಸ್ಪರ ಸಂಬಂಧವುಂಟು. ಮನಸ್ಸು ಒಳ್ಳೇ ವಿಷಯದಲ್ಲಿ ಪ್ರವರ್ತಿಸದೇ ಇದ್ದರೆ, ವಿವೇಕರೂಪವಾದ ಈ ಆತ್ಮಜ್ಞಾನವು ಸರಿಯಲ್ಲವೆಂದು ನಿರೋಧಿಸಬಹುದು. ಆದುದರಿಂದಲೇ ಶ್ರುತಿಯು **"ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಏವಚ"** (ಕಠ. ೬. ೩) ಎಂದು ಹೇಳಿ ಅಧ್ಯವಸಾಯ ರೂಪವಾದುದರಿಂದ ಬುದ್ಧಿಯನ್ನು ಸಾರಥಿ ಎಂದು ರೂಪಕಮಾಡಿ ಹೇಳಿ, ಆತನ ಕೈಗೆ ಮನಸ್ಸೆಂಬ ಲಗಾಮನ್ನು ಕೊಟ್ಟು ದುಷ್ಟೇಂದ್ರಿಯ ರೂಪ ತುಂಟ ಕುದುರೆಗಳನ್ನು ತನ್ನ ಸ್ವಾಧೀನದಲ್ಲಿಡುವದಕ್ಕಾಗಿ ಎಂದು ಭಾವಿಸತಕ್ಕದ್ದು. ಪರಮಾತ್ಮನಲ್ಲೇ ಮನಸ್ಸಿರಬೇಕೆಂದು ಬುದ್ಧಿಯು ಉತ್ಪನ್ನವಾಗಿ ಅಂತಹ ಅಧ್ಯವಸಾಯವುಂಟಾದರೆ, ಎಲ್ಲವೂ ಅನಂತರ ಕೈಗೂಡುತ್ತದೆಂಬ ಭಾವದಿಂದ, **ಮಯಿ ಬುದ್ಧಿಂ ನಿವೇಶಯ** ಎಂದು ಹೇಳಲ್ಪಟ್ಟಿತು. ಆದುದರಿಂದ ಮನಸ್ಸು, ಬುದ್ಧಿ ಎರಡೂ ಒಂದೇ ಅಲ್ಲವು; ಈ ಹೇಳಿಕೆಗೆ ಜ್ಞಾನಾಗ್ರೇಸರರ ಪ್ರಮಾಣ ಉಂಟು—**"ಚಿತ್ತಮೇಕಾದಶಂ ವಿದ್ಧಿ ಬುದ್ಧಿರ್ದ್ವಾದಶಮಿಾಭವೇತ್"** (ಭಾರ. ಶಾನ್ತಿ. ೨೨೨. ೨೯). ದಶೇಂದ್ರಿಯಗಳ ಮೂಲಕ ಮನಸ್ಸಿಗೆ ಸಂಬಂಧಿಸಿದ ವಿಷಯವು ಬುದ್ಧಿಯ ಮೂಲಕವಾಗಿ ಆತ್ಮಾವಿಗೆ ಗೋಚರವಾಗುತ್ತದೆಯಾದುದರಿಂದ, **ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ** ಎಂದು ಎರಡನ್ನೂ ಪೃಥಕ್ಕರಿಸಿ ಹೇಳಿದರು. ಬುದ್ಧಿ ಯಾವುದು? ಮನಸ್ಸು ಯಾವುದು? ಎಂಬುದನ್ನು ವಿಮರ್ಶಿಸಿ ತಿಳಿಯಬೇಕೆಂಬ ಆಶಯದಿಂದ ಯುಧಿಷ್ಠರರು ಅಜಗರನನ್ನು ಅಜಗರ ಸಂವಾದದಲ್ಲಿ ಕೇಳುತ್ತಾರೆ. **"ಮನಸಶ್ಚಾಪಿ ಬುದ್ಧೇಶ್ಚ ಬ್ರೂಹಿಮೇ ಲಕ್ಷಣಂ ಪರಮ್"** ಎಂಬುದು ಯುಧಿಷ್ಠಿರ ಪ್ರಶ್ನೆಯು. ಅದಕ್ಕೆ ಸರ್ಪನ ಉತ್ತರವು. **"ಬುದ್ಧಿರಾತ್ಮಾನುಗಾತೀವ ಉತ್ಪಾತೇನ ವಿಧೀಯತೇ।"** ಎಂದು ಹೇಳಿ, **"ಬುದ್ಧಿರುತ್ಪದ್ಯತೇ ಕಾರ್ಯಾನ್ಮನಸ್ತೂತ್ಪನ್ನಮೇವಹಿ। ಬುದ್ಧೇರ್ಗುಣ ವಿಧಾನೇನ ಮನಸ್ತದ್ಗುಣವದ್ಭವೇತ್"** ಹೀಗೆ ಬುದ್ಧಿಗೂ ಮನಸ್ಸಿಗೂ ಇರುವ ವ್ಯತ್ಯಾಸವು ಹೇಳಲ್ಪಟ್ಟಿರುತ್ತದೆ. (ಭಾರ. ವನ. ೧೮೩. ೨೪. ೨೬) ಬುದ್ಧಿಯು ವಿವೇಕಯುಕ್ತವಾದರೆ ಅದರಿಂದ ಪ್ರೇರಿತವಾದ ಮನಸ್ಸು ವಿವೇಕ ಮಾರ್ಗದಲ್ಲೇ ಪ್ರವರ್ತಿಸುತ್ತದೆ. **ಅತ ಊರ್ಧ್ವಂ**-ಅದಕ್ಕನಂತರದಲ್ಲಿ ಎಂದರೆ ವಿವೇಕ ಜ್ಞಾನದಿಂದ ಅಧ್ಯವಸಾಯವುಂಟಾಗಿ ಮನಸ್ಸು ಯಾವಾಗಲೂ ನನ್ನಲ್ಲೇ ಯಾವಾಗ ಇರುವಂತಾದ್ದಾಯಿತೋ, ಅನಂತರ ಸರ್ವ ಸಿದ್ಧಿಯೂ ಉಂಟಾಗುತ್ತದೆಂದು ಹೇಳುತ್ತಾರೆ.—**ನಿವಸಿಷ್ಯಸಿ ಮಯ್ಯೇವ** - ನನ್ನಲ್ಲೇ ನೀನು ಯಾವಾಗಲೂ ವಸಿಸುತ್ತಿರುವಿ, ಎಂದರೆ ಸದಾ ನನ್ನ ಸ್ಮೃತಿಯೇ ಇರುವದಾಗಿ ನನ್ನನ್ನೇ ಪ್ರಾಪ್ಯವಾಗಿ ಹೊಂದಬೇಕೆಂಬ ಉತ್ಕಟೇಚ್ಛೆಯು ಉಂಟಾಗುತ್ತದೆ, ಅದು ಕೀರ್ತನ ಅರ್ಚನ ನಮಸ್ಕಾರ ಭಜನ ಉಪಾಸನಾದಿಗಳಲ್ಲಿ ಪ್ರವೃತ್ತಿಯನ್ನುಂಟುಮಾಡಿ, ನನ್ನನ್ನೇ ಹೊಂದುವ ಹಾಗೆ ಮಾಡುತ್ತದೆಂಬ ಭಾವವು. ಆದುದರಿಂದ ಆ ಮುಸ್ತರವಾದ

ಸಂಸಾರವನ್ನು ಸುಲಭವಾಗಿ ಕ್ಲೇಶವಿಲ್ಲದೆ ಶೀಘ್ರವಾಗಿ ನೀನು ದಾಟಬಹುದು; ಈ ವಿಷಯದಲ್ಲಿ **ನಸಂಶಯಃ** – ಸಂಶಯವಿಲ್ಲವು, ನೀನು ಸಂಶಯಪಡ ಕೆಲಸವಿಲ್ಲವು. **ನಸಂಶಯಃ** ಎಂಬ ಪ್ರಯೋಗದಿಂದ ಅರ್ಜುನನಿಗೆ ಸಂಶಯವಿತ್ತೆಂಬುದು ಸುವ್ಯಕ್ತವು. ಆದುದರಿಂದಲೇ **ಕೇ ಯೋಗಸತ್ತಮಾಃ** ಎಂಬ ಪ್ರಶ್ನೆಯು. ಆತನಿಗೆ ಈ ವಿಧವಾದ ಉಪಾಸನೆಯು ಸುಲಭವೋ ಅಲ್ಲವೋ, ಕ್ಷಿಪ್ರ ಫಲದಾಯಕವೋ ಅಲ್ಲವೋ ಎಂಬ ಸಂಶಯಗಳಿದ್ದವು; ತನ್ನಿವಾರಣಾರ್ಥ ವಾಗಿ ಸುಲಭತ್ವವನ್ನೂ ಕ್ಷಿಪ್ರ ಪ್ರಾಪ್ಯದ ಪ್ರಾಪ್ತಿಯನ್ನೂ ಬೋಧಿಸುವದಕ್ಕಾಗಿ ಈ ಶ್ಲೋಕವು ಪ್ರಯುಕ್ತವೆಂದು ತಿಳಿಯತಕ್ಕದ್ದು. ಆದರೆ ಬುದ್ಧಿಯನ್ನು ಸಾರಥಿಯನ್ನಾಗಿಯೂ, ಮನಸ್ಸನ್ನು ಅದರ ಕೈಯಲ್ಲಿರುವ ಲಗಾಮನ್ನಾಗಿಯೂ ಹೇಳಿದರೆ, ಮೊದಲು ಬುದ್ಧಿಯನ್ನು ಹೇಳಿ, ಅನಂತರ ಮನಸ್ಸನ್ನು ಕುರಿತು ಹೇಳಬೇಡವೋ? ಎಂದರೆ ಎಷ್ಟು ವಿವೇಕ ಜ್ಞಾನವಿದ್ದರೂ, ಮನಸ್ಸು ಇಂದ್ರಿಯಗಳ ಕಡೆಗೂ ವಿಷಯೋಪಭೋಗಗಳ ಕಡೆಗೂ ಓಡಿಹೋಗುತ್ತದೆಯಾದುದರಿಂದ, ಮನಸ್ಸಿನ ನಿಗ್ರಹವು ತುಂಬಾ ಪ್ರಧಾನವಾದುದರಿಂದ ಅದನ್ನು ಮೊದಲು **ಮಯ್ಯೇವ ಮನ ಆಧತ್ಸ್ವ** ಎಂದು ಹೇಳಿ, ಅನಂತರ **ಮಯಿ ಬುದ್ಧಿಂ ನಿವೇಶಯ** ಎಂದು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. **ಮಯ್ಯೇವ ಮನ ಆಧತ್ಸ್ವ** ಎಂಬಲ್ಲಿರುವ **ಮಯಿ** ಎಂಬುವದಕ್ಕೆ ವಿಶ್ವ ರೂಪನಾದ ನನ್ನಲ್ಲಿ ಮನಸ್ಸನ್ನು ಇಡು ಎಂದು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ; ಇದಕ್ಕೆ ಕಾರಣವು ಏನೆಂದರೆ ವಿಶ್ವರೂಪಪ್ರದರ್ಶನಾನಂತರ ಅರ್ಜುನನು ಪ್ರಾರ್ಥಿಸಿ ಉಪಾಸ್ಯವಾಗಿಯೂ ಪ್ರಾಪ್ಯವಾಗಿಯೂ ಇರುವ **"ಪರಂ"** (ಗೀ. ೧೧. ೪೭) ಎಂದೂ, **"ಸ್ವಕಂ"** (ಗೀ. ೧೧–೫೦) ಎಂದೂ ವ್ಯಕ್ತವಾಗಿ ಹೇಳಿರುವ ರೂಪವನ್ನೂ ಪ್ರದರ್ಶಿಸಿದನೆಂಬ ಅರ್ಥವು ಅವಗಾಹನೆಗೆ ಬಾರ ದಿರುವದೇ. ಇಲ್ಲಿ ಉಪಾಸನಾರಂಭಕ್ಕೆ ಪ್ರಯೋಜನ ರೂಪವಾದ ಮನಸ್ಸನ್ನು ಪ್ರಾಪ್ಯನಾದ ಪರಮ ಪುರುಷನಲ್ಲಿ ಸೇರಿಸೋಣವು ಉದ್ದೇಶ್ಯವಾದುದರಿಂದ ಹಾಗೆ ಅರ್ಥಮಾಡುವದಕ್ಕೆ ಕಾರ ಣವಿಲ್ಲವು. ಅದೂ ಅಲ್ಲದೆ ವಿಶ್ವರೂಪ ಪ್ರದರ್ಶನಕ್ಕೆ ಕಾರಣವು, ಉಪಾಸ್ಯ ದೇವತಾ ರೂಪ ವನ್ನು ನೋಡಲಿ ಎಂಬ ಭಾವದಿಂದಲ್ಲವು ತನ್ನ ಕಲ್ಯಾಣಗುಣಯೋಗ, ವಿಭೂತ್ಯೈಶ್ವರ್ಯ ಯೋಗ ಇವುಗಳ ಮೂಲಕ ತನ್ನ ಮಾಹಾತ್ಮ್ಯೆಯು ಅರ್ಜುನನಿಗೆ ವಿದಿತವಾಗಲಿ ಎಂದೂ, ಮತ್ತು ಯುದ್ಧದಲ್ಲಿ ಅರ್ಜುನನಿಗೆ ಜಯವೂ ಧಾರ್ತರಾಷ್ಟ್ರರಿಗೆ ಅಪಜಯವೂ ತನ್ನ ಸಙ್ಕಲ್ಪಮಾ ತ್ರದಿಂದಲೇ ಸಿದ್ಧವು, ಅರ್ಜುನನಾದ ತಾನು ಸುಮ್ಮನೆ ನಿಮಿತ್ತ ಮಾತ್ರವೆಂದೂ, ಗೊತ್ತಾಗಲಿ ಎಂಬ ಭಾವದಿಂದ ಎಂದು ತಿಳಿಯತಕ್ಕದ್ದು. ಆತನಿಗೆ ಉಪಾಸ್ಯ ದೇವತೆ ಯಾವುದೆಂದರೆ ಶಂಖ ಚಕ್ರಾದಿ ದಿವ್ಯಾಯುಧ, ದಿವ್ಯಭೂಷಣ ಪೀತಾಂಬರ, ವನಮಾಲೆ, ಕಿರೀಟ ಮೊದಲಾದವುಗ ಳಿಂದ ಕೂಡಿ ಚತುರ್ಭುಜದಿಂದ ಒಪ್ಪುವ, ಲಕ್ಷ್ಮೀಯುಕ್ತನಾಗಿ ದಿವ್ಯ ಮಙ್ಗಳ ವಿಗ್ರಹದಿಂದ ಯುಕ್ತನಾಗಿರುವ ರೂಪವು; ಇದನ್ನಲ್ಲವೇ ಆತನು ಉಪಾಸ್ಯ ದೇವತೆಯೆಂದೂ, ಪ್ರಾಪ್ಯವೆಂದೂ, ತಿಳಿದು, ವಿಶ್ವರೂಪ ದರ್ಶನಾನಂತರ, ಆ ದಿವ್ಯ ಪ್ರಸಿದ್ಧ ರೂಪವನ್ನೂ ಪ್ರದರ್ಶಿಸು; **"ಕಿರೀ ಟಿನಂ ಗದಿನಂ ಚಕ್ರಹಸ್ತ ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ"** ಎಂದು ಅರ್ಜುನನು ಪ್ರಾರ್ಥಿಸಲು; ಅದಕ್ಕೆ ಕರುಣಾನಿಧಿಯು, ೪೯ ನೆಯ ಶ್ಲೋಕದಲ್ಲಿ **ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವ ಮೇ ರೂಪ ಮಿದಂ ಪ್ರಪಶ್ಯ"** ಆತನಿಗೆ ಉಪಾಸ್ಯ ರೂಪವನ್ನೂ ತೋರಿಸಿರುತ್ತಾರೆ. **ಅತ ಊರ್ಧ್ವಂ ನಿವಸಿಷ್ಯಸಿ** ಎಂಬುದಕ್ಕೆ ದೇಹಾವಸಾನಾಂತರ ನನ್ನಲ್ಲಿ ಸ್ವರೂಪೈಕ್ಯವನ್ನು ಹೊಂದುವಿ ಎಂದು ಕೆಲವರು ಅರ್ಥಮಾಡಿರುತ್ತಾರೆ. ಇದು ಸರಿಯಲ್ಲವು ಕ್ರಮೇಣ ನನ್ನಲ್ಲಿಯೇ ನನ್ನ ಸಾನ್ನಿಧ್ಯದಲ್ಲೇ ನಿತ್ಯವಿಭೂತಿಯಲ್ಲಿ, ದೇಹಾವಸಾನಾನಂತರ **"ನಚ ಪುನರಾವರ್ತತೇ"**

**ಭಾ. ಅತೋಽತಿಶಯಿತ ಪುರುಷಾರ್ಥತ್ವಾತ್ಸುಲಭತ್ವಾದಚಿರ ಲಭ್ಯತ್ವಾಚ್ಚ, ಮಯ್ಯೇವ ಮನ ಆಧತ್ಸ್ವ - ಮಯಿ ಮನಸ್ಸಮಾಧಾನಂ ಕುರು ; ಮಯಿಬುದ್ಧಿಂ ನಿವೇಶಯ- ಅಹಮೇವ ಪರಮಪ್ರಾಪ್ಯ ಇತ್ಯಧ್ಯವಸಾಯಂ ಕುರು ; ಅತ ಊರ್ಧ್ವಂ ಮಯ್ಯೇವ ನಿವಸಿಷ್ಯಸಿ - ಅಹಮೇವ ಪರಮ ಪ್ರಾಪ್ಯ ಇತ್ಯಧ್ಯವಸಾಯ ಪೂರ್ವಕ ಮನೋ ನಿವೇಶನಾನನ್ತರ ಮೇವ ಮಯಿ ನಿವಸಿಷ್ಯಸೀತ್ಯರ್ಥಃ ॥೮॥**

ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಸರ್ವದಾ ವಾಸಮಾಡಿಕೊಂಡಿರುವಿ ಎಂಬರ್ಥವು. **ಅತಃ** - ಎಂದರೆ ಮನಸ್ಸನ್ನೂ ಬುದ್ಧಿಯನ್ನೂ ನನ್ನಲ್ಲಿಟ್ಟನಂತರ ಎಂಬರ್ಥವು : ದೇಹಾವಸಾನವೆಂಬ ಅಭಿಪ್ರಾಯವಲ್ಲವು. ಪರಮಾತ್ಮನಾದ ನನ್ನಲ್ಲಿ ವಸಿಸುವಿ ಎಂಬರ್ಥದಿಂದ ಜೀವಾತ್ಮ, ಪರಮಾತ್ಮ ಭೇದವೇ ತೋರಿಬರುತ್ತದೆ. **"ನಿರಂಜನಃ ಪರಮಂ ಸಾಮ್ಯಮುಪೈತಿ" "ನಾರಾಯಣ ಸಾಯುಜ್ಯ ಮವಾಪ್ನೋತಿ"** ಇತ್ಯಾದಿ ಶ್ರುತಿಗಳಿಗೂ, ಮತ್ತು **"ಮಾಮೇತಿ"** (ಗೀ. ೧೧. ೫೫) ಇತ್ಯಾದಿ ಗೀತೆಯ ಭಗವದುಕ್ತಿಗಳಿಗೂ ಅನುಗುಣವಾಗಿಯಲ್ಲವೇ **ನಿವಸಿಷ್ಯಸಿ** ಎಂಬುದಕ್ಕೂ ಅರ್ಥವನ್ನು ಮಾಡುವದು ನ್ಯಾಯವು.

**ಭಾಷ್ಯಾರ್ಥವು**:—ಹಿಂದೆ ಹೇಳಿದುದನ್ನೇ ಸಮರ್ಥಿಸಿ, ಆ ಕಾರಣದಿಂದ ನೀನು ಸಿದ್ಧಿಯನ್ನು ಸುಲಭವಾಗಿಯೂ ಶೀಘ್ರವಾಗಿಯೂ ಹೊಂದಬೇಕಾದರೆ ನೀನು ಮಾಡತಕ್ಕದ್ದೇನೆಂಬುದನ್ನು ತಿಳಿಸುತ್ತಾರೆ ಎಂಬ ಭಾವದಿಂದ, **ಅತಃ** ಎಂದಾರಂಭಿಸಿ, ಭಾಷ್ಯವನ್ನು ಬರೆಯುತ್ತಾರೆ. **ಅತಃ** - ಆ ಕಾರಣದಿಂದ, ಯಾವ ಕಾರಣದಿಂದವೆಂಬುದನ್ನು ಮೂರು ಪಂಚಮ್ಯಂತಪದಗಳಿಂದ ವ್ಯಕ್ತಪಡಿಸುತ್ತಾರೆ. (೧) **ಅತಿಶಯಿತ ಪುರುಷಾರ್ಥತ್ವಾತ್** - ತುಂಬಾ ಅತಿಶಯವಾದ ತನ್ನ ಪ್ರಾಪ್ತಿರೂಪ ಪುರುಷಾರ್ಥವನ್ನುಳ್ಳೋಣದರಿಂದಲೂ, (೨) **ಸುಲಭತ್ವಾತ್** - ಸುಲಭವಾಗಿರುವದರಿಂದಲೂ, (೩) **ಅಚಿರಲಭ್ಯತ್ವಾಚ್ಚ** - ಶೀಘ್ರವಾಗಿ ಲಭಿಸುವದರಿಂದಲೂ, **ಮಯ್ಯೇವ ಮನಆಧತ್ಸ್ವ** ಎಂದರೆ **ಮಯಿ ಮನ ಸ್ಸಮಾಧಾನಂ ಕುರು** - ಮನಸ್ಸು ನನ್ನಲ್ಲಿ ಸಮಾಧಾನವನ್ನು ಹೊಂದುವಹಾಗೆ ಮಾಡು, ಎಂದರೆ ಸಮಾಧ್ಯುಪಕ್ರಮಕ್ಕೆ ಅನುಕೂಲಮಾಡಿಕೋ ಎಂಬ ಭಾವವು. ಇದರಿಂದ ಮನಸ್ಸು ವಿಷಯೋಪಭೋಗಗಳಲ್ಲಿ ಪ್ರವರ್ತಿಸಕೂಡದೆಂಬುದು ಸೂಚಿತವು. ಹಾಗೆ ಪ್ರವರ್ತಿಸಿದರೆ ಮನಸ್ಸಮಾಧಾನವಿರುವುದಿಲ್ಲವು. ಮನಸ್ಸು ಆಗ **ಚಂಚಲಂ ಹಿ ಮನಃ ಕೃಷ್ಣ"** (ಗೀ. ೬-೩೪) ಎಂಬ ಅರ್ಜುನೋಕ್ತಿಯ ಪ್ರಕಾರ ಚಾಂಚಲ್ಯವನ್ನು ಹೊಂದಿ, **"ಕಾಮ ಏಷ ಕ್ರೋಧ ಏಷಃ"** (೩-೩೭) ಎಂದು ಹೇಳಲ್ಪಟ್ಟ ಪರಿಪಂಥಿಗಳ ವಶವನ್ನು ಹೊಂದುತ್ತದೆಂಬ ಭಾವವು. ಇಲ್ಲಿ **ಮನಸ್ಸಮಾಧಾನಂ ಕುರು** ಎಂದು **ಆಧತ್ಸ್ವ** ವೆಂಬುದಕ್ಕೆ ಭಾಷ್ಯವು ಹೇಗೆಂದರೆ ? ಮುಂದಿನ ಶ್ಲೋಕದಲ್ಲಿ **ಅಥ ಚಿತ್ತಂ ಸಮಾಧಾತುಂ ನಶಕ್ನೋಷಿ** ಎಂದಿರುವದರಿಂದ, **ಮನ ಆಧತ್ಸ್ವ** ವೆಂಬುದರಿಂದ **ಚಿತ್ತ ಸಮಾಧಾನವೇ** ಬೋಧಿತವೆಂದು ಪ್ರದರ್ಶಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. **ಮಯಿ ಬುದ್ಧಿಂ ನಿವೇಶಯ** ಎಂದರೆ **ಅಹಮೇವ ಪರಮಪ್ರಾಪ್ಯ ಇತ್ಯಧ್ಯವಸಾಯಂ ಕುರು**-ನಾನೇ ಸರ್ವ ಶ್ರೇಷ್ಠನಾದ ಪ್ರಾಪ್ಯವೆಂಬ ನಿಶ್ಚಯ ಸಙ್ಕಲ್ಪವನ್ನು ಮಾಡು, ಎಂದರೆ ಅಂತಹ ನಿಶ್ಚಯ ಜ್ಞಾನವನ್ನು ಹೊಂದು; ಇಲ್ಲಿ ಮನಸ್ಸಿಗೂ ಬುದ್ಧಿಗೂ ಇರುವ ವೈಲಕ್ಷಣ್ಯವನ್ನು ಪ್ರದರ್ಶಿಸುವದಕ್ಕಾಗಿ **ಇತ್ಯಧ್ಯವಸಾಯಂ ಕುರು** ಎಂಬ ವ್ಯಾಖ್ಯಾನವು. ಆ ನಿಶ್ಚಯಜ್ಞಾನವೆಂತಾದ್ದೆಂಬುದನ್ನು **ಅಹಮೇವ ಪರಮ ಪ್ರಾಪ್ಯಂ** ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ. **ಅತ ಊರ್ಧ್ವಂ** ಹೀಗೆ ಪ್ರವೃತ್ತಿಯುಂಟಾದನಂತರ, ಅದನ್ನೇ ಉಪಪಾದಿಸುತ್ತಾರೆ.—**ಅಹಮೇವ ಪರಮಪ್ರಾಪ್ಯ ಇತ್ಯಧ್ಯವಸಾಯ ಪೂರ್ವಕ ಮನೋ ನಿವೇಶನಾನನ್ತರ ಮೇವ** - ನಾನೇ ಪರಮ ಪ್ರಾಪ್ಯನೆಂಬ ನಿಶ್ಚಯವಾದ ಸಙ್ಕಲ್ಪ

**ಮೂ. ಅಥ ಚಿತ್ತಂ ಸಮಾಧಾತುಂ ನಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸ ಯೋಗೇನ ತತೋ ಮಾ ಮಿಚ್ಛಾಪ್ತುಂ ಧನಞ್ಜಯ ॥** ೯.

ಪೂರ್ವಕವಾದ ಮನಸ್ಸನ್ನು ನನ್ನಲ್ಲೇ ಇಟ್ಟ ಒಡನೆಯೇ, ಇದರಿಂದ **ಅತ ಊರ್ಧ್ವಂ** ಎನ್ನುವದಕ್ಕೆ ಇತರರು ಮಾಡಿರುವ ಶರೀರಪಾತನಾನಂತರ ಇತ್ಯಾದಿ ಅರ್ಥಗಳು ವ್ಯಾವರ್ತಿಸಲ್ಪಟ್ಟವು; **ಮಯಿ ನಿವಸಿಷ್ಯ ಸೀತ್ಯರ್ಥಃ** - ನೀನು ನನ್ನಲ್ಲಿಯೇ ಇರುತ್ತೀಯೇ ಎಂದರೆ, ನನ್ನಲ್ಲೇ ಸದಾ ಮನಸ್ಸು ಹೀಗೆ ಇರುವದರಿಂದ ಸತತ ಕೀರ್ತನ ಭಜನ ಧ್ಯಾನ ಉಪಾಸನಾದಿಗಳನ್ನು ಮಾಡುತ್ತಾ ಪರಮೈಕಾಂತಿಯಾಗಿರುವೆ; ಆದರಿಂದ ಪ್ರಾಪ್ಯವು ಸುಲಭವಾಗಿಯೂ ಶೀಘ್ರವಾಗಿಯೂ ದೊರೆಯುವದರಲ್ಲಿ ಸಂದೇಹವಿಲ್ಲವೆಂಬುದು ಸಾರಭೂತಾಭಿಪ್ರಾಯವು. ಅಥವಾ **ಮಯಿ ನಿವಸಿಷ್ಯಸಿ** ಎಂದರೆ ಮುಕ್ತನು ಹೇಗೆ ನನ್ನನ್ನು ಅನುಭವಿಸುತ್ತಾ ಇರುವನೋ ಹಾಗೆ ಇಲ್ಲಿಯೇ ನನ್ನನ್ನು ಅನುಭವಿಸುತ್ತಾ ಆನಂದದಿಂದಿರುವಿ; **"ತಮೇವಂ ವಿದ್ವಾನ್ ಅಮೃತ ಇಹ ಭವತಿ"** ಎಂಬಲ್ಲಿ ಹೇಳಿರುವ ಹಾಗೆ ಇರುವಿ ಎಂಬರ್ಥವು. ಅಥವಾ ದೃಷ್ಟಾದೃಷ್ಟ ಸರ್ವಪ್ರಕಾರ ರಕ್ಷಕನಾದ ನನ್ನಲ್ಲೇ ಆಚಾರ್ಯನಲ್ಲಿ ಶಿಷ್ಯನು ಹೇಗೋ, ತಂದೆಯಲ್ಲಿ ಪುತ್ರನು ಹೇಗೋ, ಹಾಗೆ ನನ್ನಲ್ಲಿ ಇರುವವನಾಗಿ ಎಂದರೆ ನನ್ನನ್ನೇ ನಂಬಿದವನಾಗಿ ನಿರ್ಭಯನಾಗಿ ಇರುವಿ ಎಂಬ ಭಾವವು. ಇಲ್ಲಿ **ಅಧ್ಯವಸಾಯ ಪೂರ್ವಕ ಮನೋನಿವೇಶನ** ಎಂಬ ವ್ಯಾಖ್ಯಾನದಿಂದ ಈ ಅಧ್ಯವಸಾಯವು ಮನೋನಿವೇಶನಕ್ಕೆ ಕಾರಣವೆಂದು ಮೇಲೆ ಉದಾಹರಿಸಲ್ಪಟ್ಟ **"ಬುದ್ಧಿಂತು ಸಾರಥಿಂ"** ಎಂಬ ಕಠಶ್ರುತ್ಯಭಿಪ್ರಾಯವು ವ್ಯಕ್ತಗೊಳಿಸಲ್ಪಟ್ಟಿತು. ಇದರಿಂದ ತನ್ನ ಪ್ರಾಪ್ತಿಗಾಗಿಯೇ ಮಾಡುವ ಉಪಾಸನೆಯೇ ಮೇಲೆ ಹೇಳಿದ ಮೂರು ಕಾರಣಗಳಿಂದಲೂ ಸರ್ವಶ್ರೇಷ್ಠವೆಂದು ಹೇಳಿದಂತಾಯಿತು. ಜ್ಞಾನಿಯಾಗಿ ತನ್ನ ಉಪಾಸನವೇ ಸರ್ವಶ್ರೇಷ್ಠವೆಂದು ನಿಶ್ಚಯಜ್ಞಾನ ಉಂಟಾಗಲಿ ಎಂಬ ಭಾವನೆಯಿಂದಲೇ ಮೂಲದಲ್ಲಿ **ನಸಂಶಯಃ** ಎಂದು ಹೇಳಲ್ಪಟ್ಟಿತು. ಇದರಿಂದ ಅರ್ಜುನನಿಗೆ ಪ್ರಬಲ ಸಂಶಯವಿತ್ತೂ ಎಂಬುದೂ, ಆದಕ್ಕಾಗಿಯೇ ಪ್ರಥಮ ಶ್ಲೋಕದಲ್ಲಿ ಪ್ರಶ್ನೆಯೂ ಎಂಬುದೂ ವ್ಯಕ್ತವು.

**ಮೂಲಕ್ಕೆ ಅರ್ಥವು:—** ಹಿಂದಿನ ಶ್ಲೋಕದಲ್ಲಿ ನನ್ನನ್ನೇ ಹೊಂದಬೇಕೆಂಬ ಅಧ್ಯವಸಾಯಪೂರ್ವಕವಾಗಿ ಮನಸ್ಸನ್ನು ನನ್ನಲ್ಲಿಟ್ಟು ಅದರಿಂದ ಮನಸ್ಸಮಾಧಾನವನ್ನು ಪೊಂದಿ ನೀನು ಉಪಾಸಿಸಿದರೆ, ನನ್ನ ಪ್ರಾಪ್ತಿಯು ಸುಲಭವಾಗಿಯೂ ಶೀಘ್ರವಾಗಿಯೂ ದೊರೆಯುತ್ತದೆಂದು ಹೇಳಿದರು. ಅಂತಹ ಚಿತ್ತ ಸಮಾಧಾನವು ದೊರೆಯುವದು ಸಾಧ್ಯವೇ ಎಂದು ಅರ್ಜುನನು ಶಙ್ಕಿಸಿರುವನೆಂದು ತಮ್ಮ ಸರ್ವಜ್ಞತೆಯಿಂದ ತಿಳಿದು, ಈ ಚಿತ್ತಸಮಾಧಾನಕ್ಕೆ ಪ್ರಥಮತಃ ನೀನು ಶಕ್ತನಲ್ಲದಿದ್ದರೂ, ಅಭ್ಯಾಸದಿಂದುಂಟಾಗುತ್ತದೆ, ಭಯಪಡಬೇಡವೆಂದು ಹೇಳುತ್ತಾರೆ— ಅಥವಾ ಚಿತ್ತವು ಚಂಚಲವಾಗಿ, ಸಮಾಧಾನವನ್ನುಂಟುಮಾಡಿಕೊಳ್ಳುವದು ಸ್ವಲ್ಪ ಕಷ್ಟವಾದರೆ ಅದಕ್ಕೆ ಸುಲಭವಾಗಿ ಸಾಧನೋಪಾಯವನ್ನು ಹೇಳುವೆನೆಂದು ಪರಮ ಕೃಪಯಾ ಹೇಳುತ್ತಾರೆಂದಾಗಲಿ ಸಙ್ಗತಿಯನ್ನು ಸೂಚಿಸಬಹುದು. ಮನಸ್ಸನ್ನು ಪರಮ ಪುರುಷನಾದ ನಿನ್ನಲ್ಲಿ ನಿಲ್ಲಿಸುವದು ಹೇಗೆ ಸಾಧ್ಯವೆಂಬ ಸಂದೇಹದಿಂದಲ್ಲವೇ, ಯಾವ ಉಪಾಸನೆಯನ್ನು ಕೈಕೊಳ್ಳಲಿ ಎಂದು ನೀನು ನನ್ನನ್ನು ಪ್ರಶ್ನಿಸಿದುದು? ಆದರೂ ನನ್ನಲ್ಲೇ ಮನಸ್ಸನ್ನಿಟ್ಟೇ ತೀರಬೇಕೆಂದು, ಪುನಃ **ಮಯ್ಯೇವ ಮನ ಆಧತ್ಸ್ವ** ಎಂಬುದೇ ನನ್ನ ಉತ್ತರವು. ಕಣ್ಣು, ಕಿವಿ, ನಾಲಿಗೆ ಮೊದಲಾದ ಇಂದ್ರಿಯಗಳೆಲ್ಲಾ ಪ್ರೀತಿಕರವಾದ ಐಹಿಕ ಭೋಗಗಳಲ್ಲೇ ಪ್ರವರ್ತಿಸುವಹಾಗೆ ಮನಸ್ಸು ಮಾಡುತ್ತದೆ. ಬಹುಕಾಲದಿಂದ ಬಂದ ಉಪಭೋಗಗಳಲ್ಲಿ ಮನಸ್ಸು ಓಡದೆ, ನಿಮ್ಮಲ್ಲೇ ಹೇಗೆ ಸ್ಥಿರವಾಗಿ ನಿಂತೀತು? ನನ್ನನ್ನು ಧ್ಯಾನಿಸು, ಉಪಾಸಿಸು ಎನ್ನುತ್ತೀರಿ. ಇದಕ್ಕೆ ಮನಸ್ಸು ನಿಮ್ಮಲ್ಲೇ

ಸ್ಥಿರವಾಗಿ ನಿಲ್ಲಬೇಕು. ಇದು ಹೇಗೆ ಸಾಧ್ಯವು ? ಎಂದು ಕ್ಲೇಶಪಡುತ್ತಿರುವ ಅರ್ಜುನನನ್ನು ಕುರಿತು ಕೃಪಾಂಭೋಧಿಯಾದ ಶ್ರೀ ಕೃಷ್ಣನು ತನ್ನಲ್ಲೇ ಮನಸ್ಸು ನಿಲ್ಲುವಹಾಗೆ ಮಾಡಲು ಉಪಾಯಗಳನ್ನು ಉಪದೇಶಿಸುತ್ತಾರೆ.—**ಅಥ** - ಹಿಂದೆ ಹೇಳಿದುದು ಸಾಗದಿದ್ದರೆ ಇನ್ನೂ ಹೇಳುವೆನು ಕೇಳು ಎಂಬ ತಾತ್ಪರ್ಯದಿಂದ **ಅಥ** - ಶಬ್ದ ಪ್ರಯೋಗವು. ಒಂದು ವೇಳೆ, **ಮಯಿ** - ನನ್ನಲ್ಲೇ, **ಸ್ಥಿರಂ** - ಸ್ಥಿರವಾಗಿ, **ಚಿತ್ತಂ** - ಮನಸ್ಸು, **ಸಮಾಧಾತುಂ** - ಚನ್ನಾಗಿ ಇಡಲು, **ನಶಕ್ನೋಷಿ** - ಸಮರ್ಥನಾಗದೆ ಹೋದರೆ, ಅಥವಾ ಅಥ ಎಂಬುದನ್ನು ಪ್ರಶ್ನಾರ್ಥಕ ವಾಕಗಿಯೂ ಭಾವಿಸಬಹುದು, ಹೇಗೆಂದರೆ ನನ್ನಲ್ಲಿ ಸ್ಥಿರವಾಗಿರೋಣ ಹೇಗೋ ಹಾಗೆ ಮನಸ್ಸ ನ್ನಿಡಲು ಸಾಧ್ಯವಿಲ್ಲವೆನ್ನುತ್ತೀಯೋ ? **ತತಃ** ಆ ಕಾರಣದಿಂದ ಹೇಳುತ್ತೇನೆ ಕೇಳು ಎಂದಾಗಲಿ ಅರ್ಥಮಾಡಬಹುದು **ಹೇ ಧನಂಜಯ** - ಓ ಅರ್ಜುನನೇ! **ತತಃ** - ಆ ಕಾರಣದಿಂದಲೇ ಎಂದರೆ ನನ್ನಲ್ಲೇ ಸ್ಥಿರವಾಗಿ ಚಿತ್ತವನ್ನು ಇಡಲು ಸಾಧ್ಯವಿಲ್ಲದ ಕಾರಣದಿಂದಲೇ, **ಅಭ್ಯಾಸ ಯೋಗೇನ** - ಅಭ್ಯಾಸ ರೂಪದಲ್ಲಿ ನನ್ನನ್ನು ಸ್ಮರಿಸುವದರಿಂದ, **ಮಾಂ** - ಈ ಮೇಲೆ ಹೇಳಿದ ಕಲ್ಯಾಣಗುಣಯೋಗವೇನು, ಮಹತ್ತಾದ ವಿಭೂತ್ಯೈಶ್ವರದ ಯೋಗವೇನು ಇವುಗಳನ್ನುಳ್ಳ ನನ್ನನ್ನು, **ಆಪ್ತುಂ** - ಪ್ರಾಪ್ಯವನ್ನಾಗಿ ಹೊಂದಲು, **ಇಚ್ಛ** - ಅಪೇಕ್ಷಿಸು ; ಹೀಗೆ ಮಾಡುತ್ತಾ ಬಂದರೆ, ಅಭ್ಯಾಸದಿಂದ ಕ್ರಮೇಣ ನಿನಗೆ ಬೇಕಾದ ಚಿತ್ತಸಮಾಧಾನವು ದೊರೆಯುವದು. ಮೊದಲೇ ಬೇಗನೆ ಚಿತ್ತಸಮಾಧಾನ ಉಂಟಾಗದಿದ್ದ ಪಕ್ಷದಲ್ಲಿ, ನಾನು ಈಗ ಹೇಳಿದಹಾಗೆ, ನಾನು ಆಶ್ರಿತೋಚಿತ ಕಲ್ಯಾಣಮಹೋದಧಿಯು ಎಂಬ ಸ್ಮೃತ್ಯಭ್ಯಾಸದಿಂದ ನನ್ನನ್ನು ಉಪಾ ಸನಾ ಮಾಡುತ್ತಾ ಬಂದರೆ, ನನ್ನನ್ನೇ ಪ್ರಾಪ್ಯವಾಗಿ ಹೊಂದಬೇಕೆಂಬ ಇಚ್ಛಾ ಉಂಟಾದರೆ, ಸ್ವತಏವ ಚಿತ್ತ ಸಮಾಧಾನವು ಬಂದೇ ಬರುತ್ತದೆಂಬ ಭಾವವು ಭಾಷ್ಯದಲ್ಲಿ ನಿರತಿಶಯ ಪ್ರೇಮಗರ್ಭ ಸ್ಮೃತ್ಯಭ್ಯಾಸ ಯೋಗವೆಂದು ಇದಕ್ಕೆ ವ್ಯಾಖ್ಯಾನಮಾಡಿ, **ಮಾಂ** ಎಂಬುದರ ವ್ಯಾಖ್ಯಾನದಲ್ಲಿ ಅನೇಕ ಕಲ್ಯಾಣ ಗುಣ ಗಣಗಳಿಗೆ ನಿಧಿ ಎಂದು ವ್ಯಾಖ್ಯಾನಮಾಡಿರುತ್ತಾರೆ. ಇದ ರಿಂದ, **"ತಸ್ಮಿನ್ಯದನ್ತಸ್ತದುಪಾಸಿತವ್ಯಂ"** (ತೈ. ನಾ ೧೨) ಎಂಬ ಮತ್ತು **"ತಸ್ಮಿನ್ಯದನ್ತ ಸ್ತದ ನ್ವೇಷ್ಟವ್ಯಂ** (ಛಾಂ. ೮. ೧. ೧) ಎಂಬ ಉಪನಿಷದ್ವಾಕ್ಯಗಳಿಗೆ ಶ್ರೀ ಭಾಷ್ಯಕಾರರ ಅಭಿಪ್ರಾ ಯದ ಪ್ರಕಾರ, ಶ್ರೀಮನ್ನಾರಾಯಣನು ಮಾತ್ರವೇ ಅಲ್ಲದೆ, ಆತನ ಕಲ್ಯಾಣ ಗುಣಗಳೂ ಸಹ ಉಪಾಸ್ಯವಾದುದರಿಂದ, ಕಲ್ಯಾಣ ಗುಣನಿಧಿಯೆಂದು ಸ್ಮೃತ್ಯಭ್ಯಾಸ ಮಾಡಿದುದಾದರೆ ಮನಸ್ಸು ಪರಮಾತ್ಮನಲ್ಲೇ ನಿಲ್ಲುತ್ತದೆಂಬ ಭಾವವು. ಇದು **"ಆದರಾದಲೋಪಃ"** ಎಂಬ (೩. ೩. ೩೯) ನೆಯ ಶಾರೀರಕ ಸೂತ್ರದಲ್ಲಿ ಉಪಪಾದಿತವು ಆದುದರಿಂದ ಉಪಾಸ್ಯನು ಕಲ್ಯಾಣ ಮಹೋ ದಧಿ ಎಂದೇ ಭಾವಿಸಿ ಉಪಾಸಿಸಿದರೆ, ಮನಸ್ಸು ನನ್ನಲ್ಲೇ ನಿಲ್ಲುತ್ತದೆಂಬ ಭಾವವು. ಇದರಿಂದ ನಿರ್ಗುಣವಾದಕ್ಕೆ ಅವಕಾಶವಿಲ್ಲವು. ಆ ಕಾರಣದಿಂದಲೇ **"ಸ ಏಷ ನೇತಿ ನೇತ್ಯಾತ್ಮಾ"** (ಬೃ. ೬. ೪. ೨೨) ಎಂದು ನಿಷೇಧಿಸಲ್ಪಟ್ಟ ವಿಷಯವು, ಪ್ರಾಕೃತಗುಣ ನಿಷೇಧಪರವಾದುದು ಎಂದು ಭಾವಿಸತಕ್ಕದ್ದಾಗಿರುತ್ತದೆ. ಇದೂ ಅಲ್ಲದೆ, ಸಗುಣೋಪಾಸನೆಗೇನೇ **"ತಮೇವಂ ವಿದ್ವಾನಮೃತ ಇಹ ಭವತಿ"** ಎಂಬ ವಾಕ್ಯದಲ್ಲಿ ಮುಕ್ತಿಸಮತ್ವವು ಹೇಳಲ್ಪಟ್ಟಿರುವದರಿಂದ, ಇದೇ ಪಾರಮಾರ್ಥಿಕವಾದುದೇ ವಿನಾ ವ್ಯಾವಹಾರಿಕವಲ್ಲವು ಇಲ್ಲಿ **ಧನಂಜಯ** ಎಂಬ ಸಂಬೋಧನೆಯು ಸಾಭಿಪ್ರಾಯವಾದುದಾಗಿ ತೋರುತ್ತದೆ. ರಾಜಸೂಯಯಾಗಕ್ಕೆ ಬೇಕಾದ ಧನವನ್ನು ಜಯಿಸುವದರಲ್ಲಿ ನೀನು ಸಮರ್ಥನೇನೋ ಹೌದು, ನಿನಗೆ ಮನೋಜಯವು ಅಷ್ಟು ಸುಲಭವಲ್ಲವು, ಅದು ಕ್ರಮೇಣ ಬರತಕ್ಕದ್ದಾಗಿರುತ್ತದೆಂದು ಸೂಚಿಸುವದಕ್ಕಾಗಿ, ಧನಂಜಯ ಎಂಬ ಸಂಬೋಧನೆಯು. **ಧನಂಜಯ**ನಾಗುವದು ಸುಲಭವು; ಚಂಚಲ ಮನಸ್ಸನ್ನು ನಿರೋ

**ಭಾ. ಅಥ ಸಹಸೈವ ಮಯಿ ಸ್ಥಿರಂ ಚಿತ್ತಂ ಸಮಾಧಾತುಂ ನಶಕ್ನೋಷಿ, ತತೋಽಭ್ಯಾಸ ಯೋಗೇನ ಮಾ ಮಾಪ್ತು ಮಿಚ್ಛ-ಸ್ವಾಭಾವಿಕಾ ನವಧಿಕಾತಿಶಯ ಸೌಂದರ್ಯ ಸೌಶೀಲ್ಯ ಸೌಹಾರ್ದ ವಾತ್ಸಲ್ಯ ಕಾರುಣ್ಯ ಮಾಧುರ್ಯ ಗಾಂಭೀರ್ಯೌದಾರ್ಯ ಶೌರ್ಯ ವೀರ್ಯ ಪರಾಕ್ರಮ ಸರ್ವಜ್ಞ ಸತ್ಯಕಾಮತ್ವ ಸತ್ಯಸಙ್ಕಲ್ಪತ್ವ ಸರ್ವೇಶ್ವರ್ಯತ್ವ ಸಕಲ**

ಧಿಸಿ ಸ್ಥಿರವಾಗಿ ನನ್ನಲ್ಲಿಡುವದು ಅಷ್ಟು ಸುಲಭವಲ್ಲವೆಂಬ ಭಾವವು ದ್ಯೋತಿತವು. ಇಲ್ಲಿ ಶ್ರೀ ಕೃಷ್ಣಪರಮಾತ್ಮನು ತನ್ನ ಪರಮ ಭಕ್ತರಾದ ಉದ್ಧವರಿಗೆ ಮಾಡಿದ ಹಿತೋಪದೇಶವಾದ **"ಅಭ್ಯಾಸೇನಾತ್ಮನೋ ಯೋಗೀ ಧಾರಯೇದಚಲಂ ಮನಃ"** (ಭಾಗ ೧೧. ೨೦. ೧೮) ಎಂಬುದು ಅನುಸಂಧೇಯವು. ಆದುದರಿಂದ **ಅಭ್ಯಾಸ ಯೋಗೇನ ತತೋ ಮಾ ಮಿಚ್ಛಾಪ್ತುಂ ಧನಞ್ಜಯ** ಎಂಬ ಪರಮ ಹಿತೋಕ್ತಿಯು. ಮನೋಜಯವು ಕಷ್ಟವೆಂದು ಹಿಂದೆಯೇ ಅರ್ಜುನನು ಹೇಳಿಕೊಂಡಿರುತ್ತಾನೆ.—**"ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ । ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್"** (ಗೀ. ೬. ೩೪) ಮನೋ ನಿಗ್ರಹವು ಸುದುಷ್ಕರವೆಂದು ಒಪ್ಪಿರುತ್ತಾನೆ. ಇದರಿಂದ ಭಕ್ತಿಯೋಗನಿಷ್ಠನಿಗೆ ಚಿತ್ತ ಸಮಾಧಾನವು ಮುಖ್ಯವೆಂದೂ, ಅದನ್ನುಂಟುಮಾಡಿಕೊಳ್ಳುವದು ಸ್ವಲ್ಪ ಕಷ್ಟವೆಂದೂ, ಅದು ಒಡನೆ ಉಂಟಾಗದ ಪಕ್ಷದಲ್ಲಿ ಆತನ ಮಹತ್ತಾದ ಕಲ್ಯಾಣಗುಣಗಳ ಸ್ಮೃತಿಯಿಂದಲೂ ಉಂಟಾಗುತ್ತದೆ. ಇಲ್ಲಿ ಕಲ್ಯಾಣಗುಣ ಯೋಗವು ಅನುಗ್ರಹ ಮಯಳಾದ ಲಕ್ಷ್ಮಿಯೊಂದಿಗೆ ಇರುವ ನಿತ್ಯ ಯೋಗಕ್ಕೂ ಉಪಲಕ್ಷಣವೆಂದು ಭಾವಿಸತಕ್ಕದ್ದು. ಆದುದರಿಂದಲೇ **ಮಯಿ** ಎಂಬುದಕ್ಕೆ ಅನೇಕ ಕಲ್ಯಾಣ ಗುಣಗಳನ್ನು ಉದಾಹರಿಸಿ **"ಅಸಂಖ್ಯೇಯಗುಣಸಾಗರೇ ಹೇಯ ಪ್ರತ್ಯನೀಕೇಮಯಿ"** ಎಂಬ ಭಾಷ್ಯವು. ಕ್ರಮೇಣ ಅಭ್ಯಾಸ ಯೋಗದಿಂದಲೂ ಪರಮಾತ್ಮನನ್ನು ಹೊಂದಬೇಕೆಂಬ ಉತ್ಕಟೇಚ್ಛೆಯಿಂದ ಸುಲಭವಾಗಿ ಚಿತ್ತಸಮಾಧಾನವು ಉಂಟಾಗುತ್ತದೆಂದೂ ಹೇಳದಂತಾಯಿತು.

**ಭಾಷ್ಯಾರ್ಥವು:—**ಹಿಂದೆ ಹೇಳಿದುದಕ್ಕೆ ವಿಕಲ್ಪವಾಗಿ ಮುಂದೆ ಉಪದೇಶವಲ್ಲವು ಎಂದೂ, ಹಿಂದೆ ಹೇಳಿದುದಕ್ಕೆ ಸಾಧನಭೂತವಾದ ಉಪದೇಶವೆಂಬ ಅಭಿಪ್ರಾಯದಿಂದ ಈ ಶ್ಲೋಕವು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದೆಂದೂ, ವ್ಯಾಖ್ಯಾನಮಾಡಿರುತ್ತಾರೆ.—ವಿಷಯಗಳಲ್ಲೇ ಪ್ರವರ್ತಿಸಿ, ವಿಷಯವಾಸನಾ ಸಂಬಂಧವಿರುವ ಮನಸ್ಸಿಗೆ ಭಕ್ತಿಯೋಗದಲ್ಲಿಳಿದ ಉತ್ತರ ಕ್ಷಣವೇ ಚಿತ್ತ ಸಮಾಧಾನವನ್ನುಂಟುಮಾಡಿಕೊಳ್ಳುವದು ಸುಲಭವೇ? ನನ್ನ ಪ್ರಾಪ್ತ್ಯಕ್ಕಾಗಿ ಮಾಡುವ ಉಪಾಸನೆಯು ಸುಲಭವೂ ಶೀಘ್ರ ಫಲದಾಯಕವೂ ಎಂದು ಹೇಳಿದರಲ್ಲಾ ಅದು ಹೇಗೆ? ಎಂದು ಅರ್ಜುನನು ಪುನಃ ಪ್ರಶ್ನಿಸಬಹುದೆಂದು ಯೋಚಿಸಿ, ಶ್ರೀ ಕೃಷ್ಣಭಗವಾನರವರೇ ಅಂತಹ ಚಿತ್ತಸಮಾಧಾನವು ದೊರೆಯುವದು ಸುಲಭವೇ ಎಂದೇ ಭಾವಿಸಿ, ಅದು ದೊರೆಯುವ ಉಪಾಯಗಳನ್ನು ಬೋಧಿಸುತ್ತಾರೆ.—**ಅಥ** - ಒಂದು ವೇಳೆ, **ಸಹಸೈವ** - ಬೇಗನೇ, **ಮಯಿ** - ನನ್ನಲ್ಲಿ **ಸ್ಥಿರಂ** - ಸ್ಥಿರವಾಗಿರೋಣವು ಹೇಗೋ ಹಾಗೆ, ಇದು ಕ್ರಿಯಾ ವಿಶೇಷಣವು **ಚಿತ್ತಂ ಸಮಾಧಾತುಂ** - ಮನಸ್ಸನ್ನು ಸಂಪೂರ್ಣವಾಗಿ ಇಡಲು, **ನಶಕ್ನೋಷಿ** - ನಿನಗೆ ಸಾಮರ್ಥ್ಯವಿಲ್ಲವಾದರೆ, ಇಲ್ಲಿ **ಸಹಸೈವ** ಎಂಬ ಭಾಷ್ಯದ ಅಭಿಪ್ರಾಯವೇನೆಂದರೆ, ಶ್ರೀ ಕೃಷ್ಣಭಗವಾನರವರೇ ಅನೇಕ ಭಕ್ತಿಯೋಗನಿಷ್ಠರಿಗೆ ಬೇಕಾದ ಚಿತ್ತಸಮಾಧಾನವು ಒಡನೆಯೇ ಪ್ರಾಪ್ತವಾಗುವದು ಸ್ವಲ್ಪ ಕಷ್ಟವೆಂದೂ ಕ್ರಮೇಣ ಬರತಕ್ಕದ್ದೆಂದೂ, ಒಪ್ಪಿಕೊಂಡು ಹೇಳುವ ಮಾತೆಂದು ತಿಳಿಸುವದಕ್ಕಾಗಿ, **ಸಹಸೈವ** ಎಂಬ ಪ್ರಯೋಗವು. ಹಾಗಾದರೆ ಆ ಚಿತ್ತ ಸಮಾಧಾನ ಉಂಟಾಗಲು ಉಪಾಯವೇನೆಂಬುದನ್ನು ತಿಳಿಸುತ್ತಾರೆ.—**ತತಃ** - ಆ ಕಾರಣದಿಂದ **ಅಭ್ಯಾಸ**

**ಭಾ. ಕಾರಣತ್ವಾದ್ಯಸಂಖ್ಯೇಯ ಗುಣಸಾಗರೇ ನಿಖಿಲಹೇಯಪ್ರತ್ಯನೀಕೇ ಮಯಿ ನಿರತಿಶಯ ಪ್ರೇಮಗರ್ಭ ಸ್ಮೃತ್ಯಭ್ಯಾಸ ಯೋಗೇನ ಸ್ಥಿರಂ ಚಿತ್ತ ಸಮಾಧಾನಂ ಲಬ್ಧ್ವಾ ಮಾಂ ಪ್ರಾಪ್ತುಮಿಚ್ಛ ॥೯॥**

**ಯೋಗೇನ** – ಕ್ಲಿಪ್ತಕಾಲಗಳಲ್ಲಿ, ಪುನಃ ಪುನಃ ಪ್ರತಿದಿನವೂ ಮಾಡುವ ಅಭ್ಯಾಸರೂಪ ವಾದ ಯೋಗದಿಂದ, ಉಪಾಸನೆಯಿಂದ, **ಅಭ್ಯಾಸ** ಮಾಡುವದು ಹೇಗೆ? ಎಂದರೆ ಮನಸ್ಸನ್ನು ಸ್ವಲ್ಪಕಾಲ ಪರಮ ಪುರುಷನ ದಿವ್ಯಮಙ್ಗಳ ವಿಗ್ರಹದ ಧ್ಯಾನದಲ್ಲಿಟ್ಟರೆ ಅದು ಬೇರೆ ಕಡೆಗೆ ಹೋಗದಹಾಗೆ ಪರಮಪುರುಷನ ಕಲ್ಯಾಣಗುಣಗಳ ಸ್ಮೃತಿಯಿಂದ ಅಲ್ಲೇ ಸ್ವಲ್ಪ ಕಾಲ ಸ್ಥಿರವಾಗಿ ನಿಲ್ಲುತ್ತದೆ. ಇಂತಹ ಅಭ್ಯಾಸರೂಪವಾದ ಯೋಗದಿಂದ **ಮಾಂ** – ಲಕ್ಷ್ಮೀ ಕಲ್ಯಾಣ ಗುಣಗಳ ವಿಭೂತಿಗಳ ಮಹತ್ತಾದ ಐಶ್ವರ್ಯವುಳ್ಳ ನನ್ನನ್ನು, **ಆಪ್ತುಂ** – ಹೊಂದಲು, **ಇಚ್ಛ** – ಅಪೇಕ್ಷಿಸು ; ಇದರ ಅಭಿಪ್ರಾಯವೇನೆಂಬುದನ್ನು ಉಪಪಾದಿಸುತ್ತಾರೆ—ಸ್ವಾಭಾವಿಕಗಳಾದ ಮತ್ತು ಅವಧಿಯಿಲ್ಲದ ಅತಿಶಯವುಳ್ಳ ಸೌಂದರ್ಯ ವಾತ್ಸಲ್ಯ ಕಾರುಣ್ಯ ಮಾಧುರ್ಯ ಔದಾರ್ಯ ಶೌರ್ಯ ವೀರ್ಯ ಪರಾಕ್ರಮಾದಿ ಅಸಂಖ್ಯೇಯಗಳಾದ ಕಲ್ಯಾಣಗುಣಗಣ ಮಹೋದಧಿಯಾಗಿಯೂ, ಈ ಕಲ್ಯಾಣಗುಣಗಳ ಅರ್ಥಕ್ಕೆ ಪ್ರಥಮಾವತಾರಿಕೆಯನ್ನು ಪರಾಂಬರಿಸಿರಿ. **ನಿಖಿಲಹೇಯ ಪ್ರತ್ಯನೀಕೇ** – ಸಮಸ್ತ ಹೇಯ ಗುಣಗಳಿಗೆಲ್ಲಾ ಪ್ರತಿಭಟನಾದ ಎಂದರೆ ಅವುಗಳ ಗಂಧವೇ ಇಲ್ಲದಿರುವ, **ಮಯಿ** – ನನ್ನಲ್ಲಿ, **ನಿರತಿಶಯ ಪ್ರೇಮಗರ್ಭಸ್ಮೃತಿ** – ನಿರತಿಶಯವಾದ ಪರಮಾತ್ಮನಲ್ಲಿಟ್ಟ ಪ್ರೀತಿ ಎಂದರೆ ಭಕ್ತಿರೂಪ ಜ್ಞಾನದ ಪುನಃಪುನಃ ಆವೃತ್ತಿಯಿಂದ ಸ್ಮೃತಿ ಸಂತಾನ ರೂಪವೆನ್ನುವ, **ಅಭ್ಯಾಸಯೋಗೇನ** – ಅಭ್ಯಾಸ ರೂಪೋಪಾಸನೆಯಿಂದ, **ಸ್ಥಿರಂ** – ಸ್ಥಿರವಾದ, **ಚಿತ್ತಸಮಾಧಾನ** ವನ್ನು, **ಲಬ್ಧ್ವಾ** – ಹೊಂದಿ, **ಮಾಂ ಪ್ರಾಪ್ತು ಮಿಚ್ಛ** – ನನ್ನನ್ನು ಹೊಂದಲು ಇಚ್ಛಿಸು, **"ಚಿತ್ತಸಮಾಧಾನಂ ಲಬ್ಧ್ವಾ ಮಾಂ ಆಪ್ತುಂ ಇಚ್ಛ"** ಎಂದು ಹೇಳಿದುದರಿಂದ ಒಡನೆ ಪರಬ್ರಹ್ಮ ಪ್ರಾಪ್ತಿಯು ಲಭಿಸುವದಿಲ್ಲವು, ಐಕಾಗ್ರ್ಯ ಚಿತ್ತತೆಯನ್ನು ಹೊಂದಿ ಉಪಾಸಿಸಿ ಪರಬ್ರಹ್ಮ ಸಾಕ್ಷಾತ್ಕಾರ ಉಂಟಾದರೆ, ಆಗೀಗ ದೇಹಾವಸಾನಾನಂತರ ಪರಬ್ರಹ್ಮ ಪ್ರಾಪ್ತಿ ಎಂಬ ಭಾವವನ್ನು ಸೂಚಿಸಿರುತ್ತಾರೆ. ಹೀಗೆ ಇಷ್ಟು ಕಲ್ಯಾಣಗುಣಯೋಗವನ್ನೂ ಹೇಯಪ್ರತ್ಯನೀಕತ್ವವನ್ನೂ ಹೇಳಿರುವದರ ಅಭಿಪ್ರಾಯವೇನು ? ಎಂದರೆ, ಮುಕ್ತಿಯಲ್ಲಿ ಬೇಕಾದುದು ಪರಿಪೂರ್ಣ ಬ್ರಹ್ಮನೊಂದಿಗೆ ಸಾಯುಜ್ಯವು ; ಇದೇ ಪ್ರಾಪ್ತಿಯು. ಪ್ರಾಪ್ಯನು ಹೀಗಿರುವದರಿಂದ ಉಪಾಸ್ಯದೇವತೆಯೂ ಕಲ್ಯಾಣಗುಣಯೋಗವೇನು, ವಿಭೂತಿಯೋಗವೇನು, ಲಕ್ಷ್ಮಿಯ ನಿತ್ಯ ಯೋಗವೇನು, ಹೀಗೆ ಇವುಗಳಿಂದ ಪರಿಪೂರ್ಣನಾಗಿರತಕ್ಕದ್ದು. ಆದುದರಿಂದ ಇಂತಹವನನ್ನೇ ಪ್ರತಿದಿನವೂ ಕ್ಲಿಪ್ತಕಾಲಗಳಲ್ಲಿ ಉಪಾಸಿಸತಕ್ಕದ್ದೆಂದು ಸೂಚಿಸುವದಕ್ಕಾಗಿ ಇಷ್ಟು ವಿವರಣೆಯು. ಇಲ್ಲಿ ಹೇಳಿರುವ ಗುಣಗಳೆಲ್ಲಾ, ಭಕ್ತಿಯೋಗನಿಷ್ಠನಾಗಿರುವನು ಆಶ್ರಯಿಸುವದಕ್ಕೂ, ಅವನಿಗೆ ಸಿದ್ಧಿಯನ್ನುಂಟುಮಾಡುವದಕ್ಕೂ ಉಪಯುಕ್ತಗಳಾದವು ಅವುಗಳಲ್ಲಿ ಕೆಲವು ದೇಹ ಸಂಬಂಧಗಳಾಗಿ ಭಕ್ತಾಕರ್ಷಕಗಳಾದ ದಿವ್ಯಮಙ್ಗಳ ವಿಗ್ರಹಕ್ಕೆ ಸೇರಿದವು. ಮಿಕ್ಕವು ಆತ್ಮ ಗುಣಗಳು. ಇವು ಭಕ್ತಾನುಗ್ರಹಕ್ಕೆ ಉಪಯುಕ್ತಗಳಾದವು. ಇಂತಹ ಕಲ್ಯಾಣಗುಣಗಣ ಮಹೋದಧಿಯನ್ನು ಯಾವ ಗುಣಗಳೂ ಇಲ್ಲದವನೆಂದು ಏಕೆ ಕೆಲವರು ಹೇಳುತ್ತಾರೋ ಎಂದು ಚಿನ್ತಿಸುವೆವು. ಸಕಲ ಕಾರಣತ್ವವನ್ನೂ ಕೂಡ ಈ ಗುಣ ಗಣಗಳೊಂದಿಗೆ ಹೇಳಿರುವುದು, ತನಗೂ ಸಹ ಕಾರಣನು ಎಂಬನುಸಂಧಾನದಿಂದ ಲೋಕಪಿತಾ ಎಂಬ ಭಾವನೆಯುಂಟಾಗಿ ಸೋಪಾಧಿಕ ಪಿತಾವಿನಲ್ಲೇ ವಿಶೇಷ ಪ್ರೀತ್ಯತಿಶಯವು ಸುಪುತ್ರನಿಗಿರುವಾಗ, ಇನ್ನು ನಿರುಪಾಧಿಕ ಪಿತಾವಿನಲ್ಲಿ ಇನ್ನೆಷ್ಟು ಪ್ರೀತಿ ಇರಬೇಕೆಂಬುದನ್ನು ಸೂಚಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಸೋಪಾಧಿಕ ಪಿತಾ

ವಿನಲ್ಲಿ ಯದ್ಯಪಿ ಅನೇಕ ದೋಷಗಳಿರುವುವು. ಆದರೂ ಅಂತವರಲ್ಲಿ ಪ್ರೀತ್ಯತಿಶಯವು ನೆಲೆಗೊಂಡಿರುತ್ತದೆ. **"ಪಿತಾಹಮಸ್ಯಜಗತಃ"** ಎಂದು ಹೇಳಿರುವಹಾಗೆ ಲೋಕ ಪಿತಾವಿನಲ್ಲಿ ಹುಡುಕಿದರೂ ದೋಷಗಂಧವಿಲ್ಲವು, ಅಂತವನಲ್ಲಿ ನಿರತಿಶಯ **ಪ್ರೇಮಗರ್ಭಸ್ಮೃತಿ** ಯುಂಟಾಗುವದೇನೂ ಆಶ್ಚರ್ಯವಲ್ಲವೆಂಬುದೂ ಈ ಪ್ರಯೋಗಗಳಿಂದ ಸೂಚಿತವು. ಎಂತಹ ಉತ್ಕೃಷ್ಟ ಗುಣಗಳಿದ್ದರೂ, ಅವುಗಳ ಮಧ್ಯದಲ್ಲಿ ಸ್ವಲ್ಪ ಹೇಯಗುಣವಿದ್ದುದಾದರೆ, ಉಪಾದೇಯವಾಗದೆ ಧ್ಯಾನಕ್ಕೆ ಅನರ್ಹವಾಗಬಹುದು. ಚತುರ್ಮುಖಾದಿ ಸರ್ವ ಚೇತನರಿಗೆ ಇಂತಹ ಹೇಯ ಪ್ರತ್ಯನೀಕತ್ವವೂ ಕಲ್ಯಾಣಗುಣಾಕರತ್ವವೂ ಇಲ್ಲವಾದುದರಿಂದ ಧ್ಯಾನಕ್ಕೆ ಅನರ್ಹರೆಂದು ಹೇಳಿ ಬಾದರಿಯ ಅಭಿಪ್ರಾಯವು ತಿರಸ್ಕರಿಸಲ್ಪಟ್ಟಿತು. ಆದುದರಿಂದಲೇ ಭಾಷ್ಯದಲ್ಲಿ **"ನಿಖಿಲಹೇಯ ಪ್ರತ್ಯನೀಕೇ ಮಯಿ"** ಎಂಬ ಪ್ರಯೋಗವು. ಇಂತಹ ಮಹಾತ್ಮ್ಯೆಯೆಲ್ಲಾ ಅನ್ಯದೇವತಾ ಉಪಾಸನಕ್ಕೂ, ಆತ್ಮಾವಲೋಕನೋದ್ದಿಶ್ಯವಾದ ಉಪಾಸನೆಗೂ (ಅಧ್ಯಾಯ ೬) ಇಲ್ಲವು ಎಂಬ ಭಾವವೂ ತೋರುತ್ತದೆ. ಇದನ್ನೇ **ನಿರತಿಶಯಪ್ರೇಮಗರ್ಭ** ವೆಂಬ ಪ್ರಯೋಗದಿಂದ ವ್ಯಕ್ತಪಡಿಸುತ್ತಾರೆ. ಯೋಗವೆಂದರೆ, ಮನಸ್ಸನ್ನು ಪುನಃ ಪುನಃ ಉಪಾಸ್ಯ ದೇವತೆಯಲ್ಲಿ ಸ್ಥಾಪಿಸೋಣವು, ಇದಕ್ಕೆ ಅಭ್ಯಾಸವೆಂದೂ ಹೆಸರು. ಆದುದರಿಂದ **ಅಭ್ಯಾಸಯೋಗ** ವೆಂದರೆ ಅಭ್ಯಾಸರೂಪವಾದ ಯೋಗವೆಂಬರ್ಥವು. ಇಂತಹ ಅಭ್ಯಾಸದಿಂದಲೂ, ವಿಷಯಗಳಲ್ಲಿ ವೈರಾಗ್ಯ ಭಾವದಿಂದಲೂ, ಚಿತ್ತನಿರೋಧವುಂಟಾಗಿ ಅನಂತರ ಚಿತ್ತ ಸಮಾಧಾನ ದೊರೆಯುತ್ತದೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಗೀ. ೬ ೩೫ ರಲ್ಲಿ **"ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ । ಅಭ್ಯಾಸೇನತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ"** ಎಂದೂ, ಮತ್ತು ೮-೮ರಲ್ಲಿ **"ಅಭ್ಯಾಸಯೋಗಯುಕ್ತೇನ ಚೇತಸಾನಾನ್ಯಗಾಮಿನಾ"** ಎಂದೂ ಹೇಳಲ್ಪಟ್ಟಿರುತ್ತದೆ. ಇದರಿಂದ ಚಿತ್ತ ಸಮಾಧಾನಕ್ಕೆ ಅಭ್ಯಾಸಯೋಗವೂ ವಿಷಯಗಳಲ್ಲಿ ಪ್ರವರ್ತಿಸಿದಹಾಗೆ ವೈರಾಗ್ಯವೂ ಎರಡೂ ಆವಶ್ಯಕವೆಂದು ಹೇಳಿದಂತಾಯಿತು. ಅಭ್ಯಾಸರೂಪ ಯೋಗವು ಕೈ ಗೂಡುವದಕ್ಕೆ ಐಕಾಂತ್ಯವು ಮುಖ್ಯವು. **"ಕೀರಿಟಿನಂ ಗದಿನಂ ಚಕ್ರಹಸ್ತಂ"** ಎಂಬ ಶ್ಲೋಕದಲ್ಲಿ ಹೇಳಿರುವ ಹಾಗೆ ಒಂದು ದಿವ್ಯಮಙ್ಗಳ ವಿಗ್ರಹರೂಪದ ಆಲಂಬನವು ಪ್ರಥಮತಃ ಅತ್ಯಾವಶ್ಯಕವೆಂಬ ಭಾವವು ತೋರಿಬರುತ್ತದೆ. ಶುಭಾಶ್ರಯವು ಆತ್ಮಗುಣಗಳಿಂದಲೂ ದೇಹ ಗುಣಗಳಿಂದಲೂ ಯುಕ್ತವಾಗಿ, ಆಶ್ರಿತೋಪಯುಕ್ತವಾಗಿ ಧ್ಯಾನಾರ್ಹವಾಗಿರಬೇಕು. ಅದಕ್ಕಾಗಿಯೇ ಛಾಂದೋಗ್ಯದ ಅಷ್ಟಮ ಪ್ರಪಾಠಕದಲ್ಲಿ **"ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶ ಸ್ತಸ್ಮಿನ್ಯ ದನ್ತಸ್ತದ ನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ"** ಬ್ರಹ್ಮಪುರವಾದ ಉಪಾಸಕನ ದೇಹದಲ್ಲಿ ಹೃದಯದ ದಹರ ಪುಂಡರೀಕ ವೆಂಬುದೇ ಒಂದು ಆಯತನವು ; ಅದರಲ್ಲಿ ಆಕಾಶ ಶಬ್ದವಾಚ್ಯನಾಗಿ ತೇಜೋಮಯನಾದ ಪರಮಾತ್ಮಸಿದ್ದಾನೆ ; ಆತನೂ ಆತನಲ್ಲಿರುವ ಕಲ್ಯಾಣಗುಣಗಳೂ ಸಹ ಉಪಾಸಿಸತಕ್ಕವು ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ತೈತ್ತರೀಯದಲ್ಲೂ **"ದಹರಂ ವಿಪಾಪ್ಮಂ ಪರವೇಶ್ಮ ಭೂತಂ ಯತ್ಪುಂಡರೀಕಂ ಪರಮಧ್ಯ ಸಂಸ್ಥಂ । ತತ್ರಾಪಿ ದಹರಂ ಗಗನಂ ವಿಶೋಕಂ ತಸ್ಮಿನ್ಯ ದಂತಸ್ತದುಪಾಸಿತವ್ಯಂ"** ಎಂದು ಇದೇ ಅಭಿಪ್ರಾಯವೇ ಹೇಳಲ್ಪಟ್ಟಿರುತ್ತದೆ. ಈ ಶ್ರುತ್ಯರ್ಥಗಳನ್ನು ಮನಸ್ಸಿನಲ್ಲಿಟ್ಟೇ **ಅಭ್ಯಾಸಯೋಗಕ್ಕೆ** ಒಂದು ಕಮನೀಯ ವಿಗ್ರಹವೂ ಅದನ್ನು ಹೊಂದಿರುವ ಪರಮಾತ್ಮನು ಹೇಯಪ್ರತ್ಯನೀಕನಾಗಿಯೂ ಕಲ್ಯಾಣ ಗುಣಾಕರನಾಗಿಯೂ ಇರಬೇಕೆಂದು ತಿಳಿಸುವದಕ್ಕಾಗಿಯೂ, ಮತ್ತು ಮೂಲದ **ಮಯಿ** ಎಂಬ ಪದ ವ್ಯಾಖ್ಯಾನವಾಗಿಯೂ, ಆತನ ಆತ್ಮಗುಣ ಮತ್ತು ಆಶ್ರಿತೋಪಯುಕ್ತಗುಣ, ಇವುಗಳನ್ನೆಲ್ಲಾ ವಿಸ್ತರವಾಗಿ ತಿಳಿಸಿರುತ್ತಾರೆ.

**ಮೂ. ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮ ಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦.**

ಇಂತಹ ಮೂರ್ತಿಯಲ್ಲಿ ಮನಸ್ಸನ್ನಿಟ್ಟರೆ, ಐಕಾಂತ್ಯವೂ ದೊರೆತು, ಚಿತ್ತ ಸಮಾಧಾನವು ಲಭಿಸುತ್ತದೆ ಎಂಬ ಭಾವವು ॥ ೯ ॥

**ಮೂಲಕ್ಕೆ ಅರ್ಥವು :—** ಹಿಂದಿನ ಶ್ಲೋಕದಲ್ಲಿ ಭಕ್ತಿಯೋಗಕ್ಕೆ ಉಪಯುಕ್ತವಾದ ಚಿತ್ತ ಸಮಾಧಾನವು ಒಡನೆಯೇ ಉಂಟಾಗದಿದ್ದರೆ ಅಭ್ಯಾಸಯೋಗವನ್ನಾಚರಿಸು, ಕ್ರಮೇಣ ಚಿತ್ತ ಸಮಾಧಾನವು ದೊರೆಯುತ್ತದೆಂದು ಹೇಳಿದರು. ಮನಸ್ಸಿಗೆ ಇಂದ್ರಿಯಗಳ ಮೂಲಕ ಉಪಭೋಗಕರ್ಮಗಳಲ್ಲೇ ಪ್ರವೃತ್ತಿ ಇರುವದರಿಂದ, ಈ ಅಭ್ಯಾಸಯೋಗಕ್ಕೆ ಬೇಕಾದ ನಿರಂತರ ಸ್ಮರಣವೂ ಪ್ರಾಪ್ತವಾಗುವದು ನಿನಗೆ ಕಷ್ಟವಾದರೆ, ಅಂತಹ ಕರ್ಮಗಳನ್ನು ನಿರಾಕರಿಸಿ, ನನಗೆ ಕೈಂಕರ್ಯರೂಪಗಳಾಗಿರುವ ಕರ್ಮಗಳನ್ನೇ ಆಚರಿಸು, ಹೀಗೆ ಮಾಡುವದರಿಂದ ನನ್ನಲ್ಲಿ ಅತಿಶಯಿತ ಪ್ರೀತಿಯುಂಟಾಗಿ ಅಭ್ಯಾಸಯೋಗವೂ ತನ್ಮೂಲಕ ಚಿತ್ತ ಸಮಾಧಾನವೂ ಲಭಿಸುತ್ತವೆ. ಕೊನೆಗೆ ನನ್ನ ಪ್ರಾಪ್ತಿಯೂ ಸಿದ್ಧಿಸುತ್ತದೆ ಎಂದು ಉಪದೇಶಿಸುತ್ತಾರೆ.—**ಅಭ್ಯಾಸೇಽಪ್ಯಸಮರ್ಥೋಽಸಿ** - ನೀನು ಒಂದು ವೇಳೆ ಇಂತಹ ನನ್ನ ಸ್ಮರಣರೂಪ ಅಭ್ಯಾಸಯೋಗಕ್ಕೂ ಸಹ ಕೂಡಲೇ ಸಮರ್ಥನಲ್ಲದೇ ಹೋದರೆ, ಅಥವಾ ಹಿಂದಿನ ಶ್ಲೋಕದಲ್ಲಿರುವ ಹಾಗೆ **"ಅಥ"** ಶಬ್ದವನ್ನಿಟ್ಟುಕೊಂಡು ಪ್ರಶ್ನೆಯಾಗಿಯಾದರೂ ಭಾವಿಸಿ, ನೀನು ಹಿಂದೆ ಹೇಳಿದ ಅಭ್ಯಾಸಯೋಗಕ್ಕೂ ಸಮರ್ಥನಲ್ಲವೆಂದೇನಾದರೂ ಹೇಳುತ್ತೀಯೋ ? ಆಗ, ಎಂದೂ ಅರ್ಥಮಾಡಬಹುದು. **ಮತ್ಕರ್ಮ ಪರಮೋ ಭವ** - ನನಗೆ ಅತ್ಯಂತ ಪ್ರೀತಿಯಿಂದ ಮಾಡುವ ಶ್ರೇಷ್ಠಗಳಾದ ಕರ್ಮಗಳನ್ನುಳ್ಳವನಾಗು ; ಎಂದರೆ ಅಂತಹ ಕರ್ಮಗಳಲ್ಲೇ ಮುಖ್ಯವಾಗಿ ನಿರತನಾಗಿರು. ಹೀಗೆ **ಮದರ್ಥಂ** - ನನ್ನ ಉದ್ದಿಶ್ಯವಾಗಿಯೇ. **ಕರ್ಮಾಣಿ** - ಅಂತಹ ಕರ್ಮಗಳನ್ನು, ಅವು ಯಾವುವು ಎಂಬುದನ್ನು ಭಾಷ್ಯದಲ್ಲಿ ವಿಶದವಾಗಿ ತಿಳಿಸುತ್ತಾರೆ, **ಕುರ್ವನ್ನಪಿ** - ಮಾಡಿದರೂ ಕೂಡ, **ಸಿದ್ಧಿಮವಾಪ್ಸ್ಯಸಿ** - ಅಭ್ಯಾಸಯೋಗ ಚಿತ್ತ ಸಮಾಧಾನಗಳ ಮೂಲಕ ನನ್ನನ್ನು ಪ್ರಾಪ್ಯವಾಗಿ ಹೊಂದುವ ಸಿದ್ಧಿಯನ್ನು ಹೊಂದುವಿ, ಇಲ್ಲಿ ಬೇಕಾದ ಸಿದ್ಧಿ ಯಾವುದು ಎಂದರೆ **ಪ್ರಥಮತಃ** ಪ್ರಕರಣಕ್ಕೆ ಬೇಕಾಗಿರುವ **ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ** ಎಂಬಲ್ಲಿ ಹೇಳಲ್ಪಟ್ಟ ಚಿತ್ತವನ್ನೂ ಬುದ್ಧಿಯನ್ನೂ ಪರಮಾತ್ಮನಲ್ಲಿಡುವದು. ಇವರಿಂದ ಭಕ್ತಿಯೋಗ ನಿಷ್ಪತ್ತಿಯೂ ಪ್ರಾಪ್ಯವೂ ಕ್ರಮೇಣ ಲಭಿಸುತ್ತವೆ, ಎಂಬ ಅಭಿಪ್ರಾಯಗಳೂ ಸಹ **ಸಿದ್ಧಿ ಅವಾಪ್ಸ್ಯಸಿ** ಎಂಬುದರಿಂದ ಸೂಚಿತವು. ಇಲ್ಲಿ **ಮದರ್ಥಂ** - ಎಂಬಲ್ಲಿ ಈತನು ಮಾಡುವ ಪ್ರದಕ್ಷಿಣೆ, ನಮಸ್ಕಾರ, ಸ್ತೋತ್ರ, ದೀಪಾರೋಪಣ, ಪುಷ್ಪ ಮಾಲಾಸಮರ್ಪಣ, ಅಭಿಷೇಕ, ಅರ್ಚನೆ, ಮೊದಲಾದವುಗಳೇನೂ ಸ್ವಾಮಿಯ ಪ್ರಯೋಜನಕ್ಕಾಗಿ ಅಲ್ಲವು; ಪರಿಪೂರ್ಣಕಾಮನಿಗೆ ಇವುಗಳಿಂದೇನೂ ಆಗತಕ್ಕದ್ದಿಲ್ಲವು ; ಇವುಗಳಿಂದ ಆತನು ಸುಪ್ರೀತನಾಗುವದರಿಂದ, ಮಾಡುವ ಅಧಿಕಾರಿಗೆ ಫಲಸಿದ್ಧಿಯುಂಟಾಗುತ್ತದೆ. ತಾನು ಪ್ರೀತನಾಗುವದೇ ಪ್ರಯೋಜನವಾದುದರಿಂದ **ಮದರ್ಥಂ** ಎಂಬ ಪ್ರಯೋಗವು. **ಮದರ್ಥಂ** - ಎಂಬಲ್ಲಿ ಇನ್ನೂ ಸ್ವಲ್ಪ ಸ್ವಾರಸ್ಯವು ತೋರಿಬರುತ್ತದೆ. ತನ್ನ ಭಕ್ತರಾದ ಭಾಗವತ ಗೋಷ್ಠಿಗೆ ಮಾಡಿದ ಸರ್ವವಿಧ ಕೈಂಕರ್ಯಗಳೂ ಕೂಡ ಮದರ್ಥವೆಂದು ಭಾವಿಸುವೆನಾದುದರಿಂದ, **ಮದರ್ಥಂ** ಎಂಬುದರಲ್ಲಿ ಈ ಕೈಂಕರ್ಯಗಳೂ ಅಂತರ್ಗತವೆಂದು ಭಾವಿಸತಕ್ಕದ್ದು. ಈ ಭಾವವು ತಿಳಿಯದೆ ಗೀತೆಯಲ್ಲಿ ಭಾಗವತ ಕೈಂಕರ್ಯವು ತುಂಬಾ ಶ್ಲಾಘಿಸಲ್ಪಡಲಿಲ್ಲವೆಂದು ಕೆಲವರು ಭಾವಿಸುವರು. ಮುಂದೆಯೂ ೧೬ನೆಯ ಅಧ್ಯಾಯ

ದಲ್ಲಿ "**ದೇವ ದ್ವಿಜ ಗುರುಪ್ರಾಜ್ಞಪೂಜನ**"ವನ್ನು ಶಾರೀರ ತಪಸ್ಸಾಗಿ ಕೊಂಡಾಡಲ್ಪಟ್ಟಿರುತ್ತದೆ. ಮತ್ತು "**ತದ್ವಿದ್ಧಿ ಪ್ರಣಿಪಾತೇನ**" ಎಂದು, (ಗೀ. ೪. ೩೪) ರಲ್ಲೂ ಭಾಗವತ ಮಾಹಾತ್ಮ್ಯೆಯು ಪ್ರದರ್ಶಿಸಲ್ಪಟ್ಟಿರುತ್ತದೆ. ಹಾಗೆಯೆ ಭಾಗವತದಲ್ಲೂ, ೧೧-೧೧-೪೦ ರಿಂದ ಆರಂಭಿಸಿ, ಸಮ್ಮಾರ್ಜನ, ಉಪಲೇಪಾದಿಗಳನ್ನು ಹೇಳಿ "**ಯದ್ಯದಿಷ್ಟತಮಂ ಲೋಕೇಯಚ್ಚಾಪಿ ಪ್ರಿಯ ಮಾತ್ಮನಃ। ತತ್ತನ್ನಿವೇದಯೇನ್ಮಹ್ಯಂತದ ನನ್ತ್ಯಾಯ ಕಲ್ಪತೇ**" ಎಂದು ಉಪದೇಶಿಸಿ, "**ಇಷ್ಟಾಪೂರ್ತೇನ ಮಾಮೇವ ಯೋಯಜೇತ ಸಮಾಹಿತಃ। ಲಭತೇ ಮಯಿ ಸದ್ಭಕ್ತಿಂ ಮತ್ಸ್ಮೃತಿಂ ಸಾಧುಸೇವಯಾ**" ಎಂದು ಸಾಧು ಸೇವಯಾ ಎಂಬುದರಿಂದ ಮುಗಿಸಿರುತ್ತಾರೆ. ಅಗ್ನಿಮುಖದಿಂದ ಪ್ರೀತನಾಗುವುದಕ್ಕಿಂತ ಬ್ರಾಹ್ಮಣ ಮುಖದಿಂದ ಪ್ರೀತನಾಗುವುದು ಹೆಚ್ಚು ಎಂಬ ಭಾವವು. ಇವು ಇಲ್ಲಿ ಅನುಸಂಧೇಯವು. **ಮತ್ಕರ್ಮ ಪರ**ನುನಾಗು ಎಂದು ಹೇಳಿರುವದರಿಂದ ಅಂತಹ ಕೈಙ್ಕರ್ಯಗಳನ್ನು ಮಾಡದಿದ್ದರೆ ತನಗೆ ಪ್ರಾಣವೇ ನಿಲ್ಲದು ಎಂಬ ಭಾವನೆಯೂ ಇರತಕ್ಕದ್ದೆಂದು ಹೇಳಿದಂತಾಯಿತು. ಇಲ್ಲಿ **ಸಿದ್ಧಿಮವಾಪ್ಸ್ಯಸಿ** ಎಂದಿರುವದರಿಂದ ವ್ಯಾವಹಾರಿಕ ಸಿದ್ಧಿ ಪಾರಮಾರ್ಥಿಕ ಸಿದ್ಧಿ ಎಂಬ ದ್ವಿವಿಧ ಸಿದ್ಧಿಯುಂಟೆಂದು ಹೇಳಲು ಅವಕಾಶವೇ ಇಲ್ಲವು. ಸಿದ್ಧಿ ಎಲ್ಲಾ ಒಂದೇ ವಿಧವು, ಪರಮಸಾಮ್ಯರೂಪ ಸಿದ್ಧಿಯು. ಈ ಸಂದರ್ಭದಲ್ಲಿ ಈ ವಿಧವಾಗಿಯೇ ಶ್ರೀ ಕೃಷ್ಣಭಗವಾನರವರು ಉದ್ಧವರಿಗೆ ಉಪದೇಶಿಸಿರುತ್ತಾರೆ. "**ಶ್ರದ್ಧಾಮೃತ ಕಥಾಯಾಂ ಮೇ ಶಶ್ವನ್ಮದ್ಗುಣಕೀರ್ತನಂ। ಪರಿನಿಷ್ಠಾ ತು ಪೂಜಾಯಾಂ ಸ್ತುತಿಭಿಃ ಸ್ತವನಂ ಮಮ ॥ ಆದರಃ ಪರಿಚರ್ಯಾಯಾಂ ಸರ್ವಾಙ್ಗೈ ರಪಿ ವನ್ದನಮ್। ಮದ್ಭಕ್ತ ಪೂಜಾಭ್ಯಧಿಕಾ ಸರ್ವಭೂತೇಷು ಮನ್ಮತಿಃ। ಮದರ್ಥೇಷ್ವಙ್ಗ ಚೇಷ್ಟಾಚ ವಚಸಾ ಮದ್ಗುಣೇರಣಂ। ಮಯ್ಯರ್ಪಣಂಚ ಮನಸ ಸ್ಸರ್ವಕಾಮವಿವರ್ಜನಂ। ಮದರ್ಥೇರ್ಥಪರಿತ್ಯಾಗೋ ಭೋಗಸ್ಯಚ ಸುಖಸ್ಯ ಚ। ಇಷ್ಟಂದತ್ತಂ ಹುತಂ ಭುಕ್ತಂ ಮದರ್ಥಂಯದ್ವ್ರತಂ ತಪಃ। ಏವಂಧರ್ಮೈ ಮನುಷ್ಯಾಣಾ ಮುದ್ಧವಾತ್ಮ ನಿವೇದನಮ್। ಮಯಿ ಸಂಜಾಯತೇ ಭಕ್ತಿಃ ಕೋನ್ಯೋರ್ಥೋ ಸ್ಯಾವಶಿಷ್ಯತೇ ॥** ಎಂದರೆ "ನನ್ನ ಅಮೃತ ತುಲ್ಯವಾದ ಕಥಾ ಶ್ರವಣದಲ್ಲಿ ಆದರವೂ, ಯಾವಾಗಲೂ ನನ್ನ ಕಲ್ಯಾಣಗುಣಗಳ ಕೀರ್ತನವೂ, ನನ್ನ ಜನ್ಮಕರ್ಮಗಳ ಸ್ತುತಿಯಿರುವ ಸ್ತೋತ್ರವೂ, ಭಗವನ್ಮಂದಿರ ಸಮ್ಮಾರ್ಜನೆಯೂ, ಷೋಡಶೋಪಚಾರಗಳಿಂದ ಕೂಡಿದ ನನ್ನ ಅರ್ಚನೆಯೂ, ಅಷ್ಟಾಙ್ಗಸಂಯುತ ನಮಸ್ಕಾರಗಳೂ, ನನ್ನ ಭಕ್ತರಾದ ಭಾಗವತರ ಪೂಜೆಯೂ, ಸಮಸ್ತ ಪ್ರಾಣಿವರ್ಗವು ಮದಾತ್ಮಕವೆಂಬ ಭಾವವೂ, ನನಗೆ ಬೇಕಾದ ತುಲಸೀ ಪುಷ್ಪಾದ್ಯಾರ್ಜನಾದಿ ವ್ಯಾಪಾರಗಳೂ, ಲೌಕಿಕೋಕ್ತಿಗಳಲ್ಲೂ ಕೂಡ ನನ್ನ ಗುಣಾನುಕಥನವೂ, ಎಲ್ಲವನ್ನೂ ನನ್ನಲ್ಲಿ ಸಮರ್ಪಿಸೋಣವೂ, ಮನಸ್ಸಿನ ಸಮಸ್ತ ಕಾಮಗಳ ಪರಿತ್ಯಾಗವೂ, ನನ್ನ ಕೈಙ್ಕರ್ಯಗಳಿಗಾಗಿ ದ್ರವ್ಯವನ್ನೂ ಸುಖವನ್ನೂ ಭೋಗವನ್ನೂ ಸಹ ಪರಿತ್ಯಾಗ ಮಾಡೋಣವೂ, ಪುತ್ರ ಪಶ್ವಾದಿ ಸುಖಗಳು ಪ್ರಾಪ್ತವಾಗಿದ್ದರೆ ಪರಮಾತ್ಮನದು ಎಂಬ ಭಾವವೂ, ಇಂತಹ ಪ್ರವೃತ್ತಿಯಿದ್ದುದಾದರೆ **ಮಯಿ ಸಂಜಾಯತೇ ಭಕ್ತಿಃ** – ನನ್ನಲ್ಲಿ ಭಕ್ತಿಯುಂಟಾಗುತ್ತದೆ; ಎಂದರೆ ಮನಸ್ಸು ಅವಿಚ್ಛಿನ್ನವಾಗಿ ನನ್ನಲ್ಲಿ ನಿಲ್ಲುತ್ತದೆ ಎಂಬ ಭಾವವು.

**ಭಾಷ್ಯಾರ್ಥವು :**— ಹಿಂದೆ ಹೇಳಿದ ಅಭ್ಯಾಸ ಯೋಗವನ್ನೂ ಕೂಡ ಸಾಧಿಸಿಕೊಳ್ಳುವದಕ್ಕೆ ಪ್ರಥಮತಃ ಶಕ್ತಿಯಿಲ್ಲದಿದ್ದರೆ ಏನನ್ನು ಮಾಡತಕ್ಕದ್ದೆಂಬ ವಿಷಯದಲ್ಲಿ ಆ ಚಿತ್ತ ಶಾನ್ತಿಯನ್ನೂ ಅಭ್ಯಾಸ ಯೋಗವನ್ನೂ, ಸಾಧಿಸಿಕೊಡುವ ಸಾಧನವನ್ನು ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿರುವ ಹಾಗೆ ಇಲ್ಲಿಯೂ ಅಥ ಶಬ್ದದ ಅನುಷಙ್ಗವು ಉಂಟೆಂದು ತೋರಿಸುವದಕ್ಕಾಗಿ

**ಭಾ. ಅಥೈವಂ ವಿಧ ಸ್ಮೃತ್ಯಭ್ಯಾಸೇಽಪ್ಯಸಮರ್ಥೋಽಸಿ, ಮತ್ಕರ್ಮಪರಮೋಭವ - ಮದೀಯಾನಿ ಕರ್ಮಾಣ್ಯಾಲಯನಿರ್ಮಾಣೋಽದ್ಯಾನಕರಣ ಪ್ರದೀಪಾರೋಪಣ ಮಾಽರ್ಜನಾಭ್ಯುಕ್ಷಣೋಪಲೇಪನ ಪುಷ್ಪಾಹರಣ ಪೂಜಾಪ್ರವರ್ತನ ನಾಮ ಸಂಕೀರ್ತನ ಪ್ರದಕ್ಷಿಣಸ್ತುತಿ ನಮಸ್ಕಾರಾದೀನಿ, ತಾನ್ಯತ್ಯರ್ಥ ಪ್ರಿಯತ್ವೇನಾ ಚರ;**

**ಅಥ** ಎಂದಾರಂಭಿಸಿ ಭಾಷ್ಯವನ್ನು ಬರೆಯುತ್ತಾರೆ. **ಅಥೈವಂವಿದಸ್ಮೃತ್ಯಭ್ಯಾಸೇಪ್ಯ ಸಮರ್ಥೋಽಸಿ** - ಹೀಗೆ ಹಿಂದೆ ಹೇಳಿದಹಾಗೆ ನನ್ನ ಕಲ್ಯಾಣಗುಣಗಳಾದಿಯೋಗ ಸ್ಮರಣದೊಂದಿಗೆ ಸೇರಿದ ಅಭ್ಯಾಸರೂಪ ಉಪಾಸನೆಗೂ ಕೂಡ ಅಸಮರ್ಥನು ನಾನು ಎಂದೇನಾದರೂ ಹೇಳುವೆಯೋ, ಅದಕ್ಕೂ ಉಪಾಯವನ್ನು ಹೇಳಿಕೊಡುವೆನು ಕೇಳು:—ನನ್ನ ಪ್ರೀತ್ಯರ್ಥವಾಗಿ ನನಗೆ ಕೈಙ್ಕರ್ಯರೂಪ ಕರ್ಮಗಳನ್ನು ಪ್ರಥಮತಃ ಮಾಡುತ್ತಾ ಬಂದರೆ, ಅಂತಹ ಸುಕೃತದ ಫಲವಾಗಿ ನನ್ನ ಸ್ಮೃತಿರೂಪ ಅಭ್ಯಾಸಯೋಗವೂ ತನ್ಮೂಲಕ ಚಿತ್ತ ಸ್ವಾಸ್ಥ್ಯತೆಯೂ ಉಂಟಾಗಿ ಪ್ರಾಪ್ಯವು ಸಿದ್ಧಿಸುತ್ತದೆಂದು ಉಪದೇಶಿಸುತ್ತಾರೆ,— **ಮತ್ಕರ್ಮ ಪರಮೋಭವ** - ನನ್ನ ಸಂಬಂಧವಾದವುಗಳಾಗಿ ನನ್ನ ಪ್ರೀತ್ಯರ್ಥ ಕರ್ಮಗಳೇ ಪ್ರಧಾನವಾಗಿವುಳ್ಳವನಾಗು, ಅವುಗಳಲ್ಲಿ ನಿರತನಾಗು ಎಂಬ ಭಾವವು, ಅವನ್ನೇ ಉಪಪಾದಿಸಿ ಆಕರ್ಮಗಳಾವುವೆಂದು ತಿಳಿಸುತ್ತಾರೆ. **ಮದೀಯಾನಿ ಕರ್ಮಾಣಿ** - ನನ್ನ ಸಂಬಂಧವಾದ ಕರ್ಮಗಳು ಎಂದರೆ ಕಿಂಕರನಾಗಿ ನೀನು ಮಾಡುವ ಕೈಙ್ಕರ್ಯಗಳು, ಅವು ಯಾವುವೆಂದರೆ **ಆಲಯ ನಿರ್ಮಾಣ** - ದೇವಸ್ಥಾನವನ್ನು ಕಟ್ಟಿಸುವದು, **ಉದ್ಯಾನ ಕರಣ** - ದೇವರಿಗೆ ಹೂವು ತುಲಸಿಗಳಿಗಾಗಿ ಉದ್ಯಾನವನವನ್ನೇರ್ಪಡಿಸುವದು, **ಪ್ರದೀಪಾರೋಪಣ** - ಭಗವತ್ಸನ್ನಿಧಿಯಲ್ಲಿ ಪ್ರಕಾಶವಾಗಿ ದೀಪವನ್ನು ಹತ್ತಿಸಿಡೋಣವೂ **ಮಾರ್ಜನ** - ದೇವಾಲಯವನ್ನು ಗುಡಿಸೋಣವೂ, **ಅಭ್ಯುಕ್ಷಣ** - ಪುಣ್ಯಾಹ ಜಲದಿಂದ ಪ್ರೋಕ್ಷಿಸುವದು, **ಉಪಲೇಪನ** - ದೇವಾಲಯವನ್ನು ಸಾರಿಸುವದು, **ಪುಷ್ಪಾಹರಣ** - ತೋಟದಿಂದ ದೇವರಿಗಾಗಿ ಪುಷ್ಪವನ್ನು ಕುಯಿದು ತರೋಣವು, **ಪೂಜಾಪ್ರವರ್ತನ** - ದೇವರ ಪೂಜೆಯಲ್ಲಿ ಪ್ರವೃತ್ತಿಯು, **ನಾಮ ಸಂಕೀರ್ತನ** - ಭಗವಂತನ ನಾಮ ಸಂಕೀರ್ತನೆಯು, ಇದರಿಂದ ಅಷ್ಟೋತ್ತರ ಸಹಸ್ರನಾಮ ಪಠನಗಳು ಹೇಳಲ್ಪಟ್ಟವು, ಪ್ರದಕ್ಷಿಣೆಯನ್ನು ಮಾಡುವದು, ಸ್ತುತಿ-ಸ್ತೋತ್ರ ಪಾಠಗಳ ಮೂಲಕ ಸ್ತುತಿಸುವದು **ನಮಸ್ಕಾರಾದೀನಿ** - ನಮಸ್ಕಾರವೇ ಮೊದಲಾದವುಗಳು, **ತಾನಿ** - ಅವುಗಳನ್ನೆಲ್ಲಾ, **ಅತ್ಯರ್ಥ ಪ್ರಿಯತ್ವೇನ** - ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ಪ್ರಿಯವಾಗಿ, **ಆಚರ** - ಆಚರಿಸು. ಮನಸ್ಸು ಇಂದ್ರಿಯಗಳಿಗೆ ವಶವಾಗಿ ವಿಷಯೋಪ ಭೋಗಗಳಲ್ಲೇ ಸಕ್ತವಾಗಿದ್ದ ವಾಸನಾಬಲದಿಂದ ಅಭ್ಯಾಸಯೋಗಕ್ಕೆ ಅಸಮರ್ಥನೆಂದು ಭಾವಿಸಿದುದಾದರೆ, ನನಗೆ ತುಂಬಾ ಪ್ರಿಯವೆಂದು ಭಾವಿಸಿ ನನ್ನ ಕರ್ಮಗಳನ್ನೇ ಮಾಡುತ್ತಾ ಬಂದರೆ, ಅಭ್ಯಾಸಯೋಗವೂ ಉಂಟಾಗಿ ಚಿತ್ತ ಸಮಾಧಾನವೂ ದೊರೆಯುತ್ತದೆಂದು ಉಪದೇಶಿಸಿದರು; ಅಂತಹ ಕರ್ಮಗಳಿಗೆ ದೇವಾಲಯವನ್ನೇ ಕುರಿತು ಹೋಗಲು ಸಾಧ್ಯವಿಲ್ಲದಿದ್ದರೆ, ಮನೆಯಲ್ಲೇ ಅರ್ಚಿಸಲ್ಪಡುವ ದೇವರಿಗೂ ಇಂತಹ ಕೈಙ್ಕರ್ಯಗಳನ್ನೂ ಕೂಡ ಮಾಡಬಹುದು; ದೇವಾಲಯವನ್ನು ಕಟ್ಟುವದಕ್ಕೂ, ಅಲ್ಲಿ ದೇವತಾರ್ಚನೆಗಳು ಸಾಙ್ಗವಾಗಿ ನಡೆಯುವದಕ್ಕೂ, ಬೇಕಾದ ಏರ್ಪಾಡುಗಳನ್ನೆಸಗಲು ಅನೇಕರಿಗೆ ಶಕ್ತಿಯಿರಲಾರದು. ದೇವತಾರ್ಚನೆಗಾಗಿ ಒಂದು ಒಳ್ಳೇ ಕೊಠಡಿಯನ್ನು ನಿರ್ಮಾಣ ಮಾಡಿಕೊಳ್ಳಲು ಅನೇಕರಿಗೆ ಶಕ್ತಿಯಿರಬಹುದು. ಅದನ್ನಾದರೂ ಮಾಡಬಹುದು; ನಂದನವನಕರಣ, ಸಮ್ಮಾರ್ಜ್ಜನ, ಪುಷ್ಪಾಹರಣ ಮೊದಲಾದವುಗಳನ್ನು ತನ್ನಿಂದ ಅರ್ಚನೀಯ ದೇವರಿಗೂ ಸಹ ನಡೆಸಬಹುದು; ಆದರೆ ದೇವಾಲಯವನ್ನು ಕುರಿತು

**ಭಾ. ಅತ್ಯರ್ಥಪ್ರಿಯತ್ವೇನ ಮದರ್ಥ ಕರ್ಮಾಣಿ ಕುರ್ವನ್ನಪಿ ಅಚಿರಾದಭ್ಯಾಸಯೋಗ ಪೂರ್ವಿಕಾಂ ಮಯಿ ಸ್ಥಿರಾಂ ಚಿತ್ತಸ್ಥಿತಿಂ ಲಬ್ಧ್ವಾ ಮತ್ಪ್ರಾಪ್ತಿರೂಪಾಂ ಸಿದ್ಧಿ ಮವಾಪ್ಸ್ಯಸಿ ||೧೦||**

ಹೇಳಿದುದು ಹೇಗೆ ? ಎಂದರೆ ಸಾಧು ಸಮಾಗಮ ದೊರೆಯುವದರಿಂದ ಅದಕ್ಕೆ ಹೆಚ್ಚು ಮಾಹಾತ್ಮ್ಯೆಯು. **ಮತ್ಕರ್ಮಪರಮೋಭವ** ಎಂದು ಹೇಳಿರುವದರಿಂದ ಮೋಕ್ಷಾರ್ಥಿಯಾದ ಜ್ಞಾನಿಗೆ **ಮತ್ಕರ್ಮ ಪರತ್ವವೇ** ಸ್ವರೂಪವು, ಅನ್ಯದೇವತಾ ಕರ್ಮಪರತ್ವವು ಸರ್ವಥೈವ ಕೂಡದೆಂಬುದು ದ್ಯೋತಿತವು. ಶರಣಾಗತಿಯ ಸ್ವರೂಪಕ್ಕೆ ಅದು ಪ್ರಬಲ ವಿರುದ್ಧವಾದುದು. ಈ ಸಂದರ್ಭ ದಲ್ಲಿ ಅನ್ಯದೇವತೆಗಳ ಆರಾಧನವೂ ಸಾಧುವೆಂದು ಕೆಲವರು ಹೇಳುವ ಪಕ್ಷವನ್ನು ವಿಶಿಷ್ಟಾದ್ವೈತಿಗಳು **ಅ**ಙ್ಗೀಕರಿಸುವದಿಲ್ಲವು. ಶ್ರೀ ಕೃಷ್ಣಭಗವಾನರವರೇ ಅಂತಹ ಅನ್ಯ ದೇವತಾ ಭಜನ ಮಾಡುವವರನ್ನು **"ನಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ"** (ಗೀ. ೭. ೧೫) ಎಂಬಲ್ಲೂ ಮತ್ತು **"ಯಜನ್ತ್ಯವಿಧಿಪೂರ್ವಕಂ"** (ಗೀ. ೯. ೨೩.) ಎಂಬಲ್ಲೂ ದುಷ್ಕೃತಿಗಳೆಂದೂ, ತಿಳಿಯದವರೆಂದೂ, ನಿಂದಿಸಿರುತ್ತಾರೆ. ಏಕೆಂದರೆ ಆ ಅನ್ಯ ದೇವತೆಗಳಿಗೆ ಮೋಕ್ಷ ಕೊಡುವ ಶಕ್ತಿಯಿಲ್ಲದೆ ಇರುವದರಿಂದ ; **"ಅನ್ತವತ್ತು ಫಲಂ ತೇಷಾಂ"** (ಗೀ. ೭. ೨೩) ಅವರುಗಳು ಕೊಡುವ ಫಲಗಳು ಅಲ್ಪಾಸ್ಥಿರಗಳಾದವು ಎಂದು ಹೇಳಿ, **ಮದ್ಭಕ್ತಾಯಾನ್ತಿ ಮಾಮಪಿ** ಎಂದು ತನ್ನ ಭಜಿಸುವರಾದರೋ ಮಹತ್ತಾದ ಶಾಶ್ವತವಾದ ಮೋಕ್ಷವನ್ನು ಎಂದಿಗಿದ್ದರೂ ಹೊಂದತಕ್ಕವರೆಂದು ಕೊಂಡಾಡಿರುತ್ತಾರೆ. ಹೀಗೆ ಮತ್ಕರ್ಮ ಪರತ್ವದ ಸುಕೃತವು ಈತನಿಗೆ ಅಭ್ಯಾಸಯೋಗವನ್ನುಂಟುಮಾಡಿ ಚಿತ್ತ ಸಮಾಧಾನವನ್ನು ಒದಗಿಸಿಕೊಡುತ್ತದೆಂಬುದರಲ್ಲಿ ಸಂದೇಹವಿಲ್ಲವೆಂಬ ತಾತ್ಪರ್ಯವು. ಮುಂದೆ ಉತ್ತರಾರ್ಥಾಭಿಪ್ರಾಯವನ್ನು ತಿಳಿಸುತ್ತಾರೆ. **ಅತ್ಯರ್ಥ ಪ್ರಿಯತ್ವೇನ ಮದರ್ಥಂ ಕರ್ಮಾಣಿ ಕುರ್ವನ್ನಪಿ-**ಇಷ್ಟೆಂದು ಹೇಳಲು ಸಾಧ್ಯವಿಲ್ಲದಷ್ಟು ಪ್ರಿಯವಾಗಿ ನನಗಾಗಿಯೇ ನನ್ನ ನಾನಾವಿಧ ಆರಾಧನ ರೂಪವಾದ ಕೈಙ್ಕರ್ಯಗಳನ್ನು ಮಾಡಿದರೂ ಕೂಡ, **ಅಚಿರಾತ್** - ಶೀಘ್ರವಾಗಿಯೇ, **ಅಭ್ಯಾಸಯೋಗ ಪೂರ್ವಿಕವಾದ, ಮಯಿಸ್ಥಿರಾಂ ಚಿತ್ತಸ್ಥಿತಿಂ ಲಬ್ಧ್ವಾ** - ಉಪಾಸನೆಗೆ ಬೇಕಾದ, ನನ್ನಲ್ಲಿ ಸ್ಥಿರವಾದ ಏಕಾಂತವಾದ ಚಿತ್ತ ಸ್ಥಿತಿಯನ್ನು ಹೊಂದಿದವನಾಗಿ, ಎಂದರೆ ಮೇಲೆ ಹೇಳಲ್ಪಟ್ಟ ಸ್ಥಿರವಾದ ಚಿತ್ತ ಸಮಾಧಾನವನ್ನು ಹೊಂದಿದವನಾಗಿ. **ಮತ್ಪ್ರಾಪ್ತಿ ರೂಪಂ ಸಿದ್ಧಿಂ** - ನನ್ನ ಪ್ರಾಪ್ತಿರೂಪ ಮೋಕ್ಷವನ್ನು, ಇಲ್ಲಿ ಸಿದ್ಧಿ ಶಬ್ದವು ಮೋಕ್ಷವಲ್ಲದೆ ಇನ್ನು ಯಾವ ಸಿದ್ಧಿಯನ್ನೂ ಬೋಧಿಸುವದಿಲ್ಲವೆಂದು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. **ಅವಾಪ್ಸ್ಯಸಿ-**ಹೊಂದುವಿ. ಈ ಕರ್ಮಗಳನ್ನು ತುಂಬಾ ಶ್ರದ್ಧೆಯಿಂದಲೂ ಭಕ್ತಿಯಿಂದಲೂ ಮಾಡಬೇಕೆಂದೂ, ಹಾಗೆ ಮಾಡುವದರಿಂದ ಸರ್ವೇಶ್ವರನು ಸುಪ್ರೀತನಾಗಿ, ಆತನ ಅನುಗ್ರಹವುಂಟಾಗುವಹಾಗೆ ಮಾಡತಕ್ಕದ್ದೆಂದೂ, **ಮತ್ಕರ್ಮ ಪರಮಃ** ಎಂಬುದರಿಂದ ವ್ಯಕ್ತವೆಂದು ತಿಳಿಸುವದಕ್ಕಾಗಿ **ಅತ್ಯರ್ಥ ಪ್ರಿಯತ್ವೇನ ಮದರ್ಥಂ** ಎಂಬ ವ್ಯಾಖ್ಯಾನವು. ಉಪಾಸನದ ನಿಷ್ಪತ್ತಿಗೋಸ್ಕರ ಚಿತ್ತ ಸಮಾಧಾನ ಬೇಕಾಗಿ, ಅದಿಲ್ಲದುದರಿಂದ ಅಭ್ಯಾಸಯೋಗ ಬೇಕಾಗಿ, ಅದೂ ಕಷ್ಟವಾದುದರಿಂದ ಭಗವತ್ಕೈಙ್ಕರ್ಯಗಳನ್ನು ಮಾಡಬೇಕಾಗಿ, ಹೀಗೆಲ್ಲಾ ಸಾಧನೋಪಾಯಗಳನ್ನು ಹೇಳಿದುದರಿಂದ ಕಾಲವಿಳಂಬವಾಗುತ್ತದೆಂದು ನೀನು ಭಯಪಡುವ ಕೆಲಸವಿಲ್ಲವು ಎಂದು ತಿಳಿಸುವದಕ್ಕಾಗಿ **"ಅಚಿರಾತ್"** ಎಂಬ ಪ್ರಯೋಗವು. ಇದು ಮೂಲದಲ್ಲಿ ಎಲ್ಲಿ ಹೇಳಲ್ಪಟ್ಟಿದೆ ? ಎಂದರೆ, **ಕರ್ಮಾಣಿ ಕುರ್ವನ್ ಸಿದ್ಧಿಂ ಅವಾಪ್ಸ್ಯಸಿ** ಎಂದು ಒಡನೆ ಸಿದ್ಧಿಯು ಹೇಳಲ್ಪಟ್ಟಿರುವದರಿಂದ ಶೈಘ್ರ್ಯವು

**ಮೂ. ಅಥೈ ತದಪ್ಯ ಶಕ್ತೋಽಸಿ ಕರ್ತುಂ ಮದ್ಯೋಗ ಮಾಶ್ರಿತಃ ।**
**ಸರ್ವ ಕರ್ಮ ಫಲತ್ಯಾಗಂ ತತಃಕುರು ಯತಾತ್ಮವಾನ್ ॥** ೧೧.

ದ್ಯೋತಿತವು. ಈ ಅಭಿಪ್ರಾಯವು ಮೊದಲೇ **ಭವಾಮಿ ನಚಿರಾತ್ಪಾರ್ಥ** ಎಂಬಲ್ಲಿಯೂ ವ್ಯಕ್ತವು. ಶೀಘ್ರದಲ್ಲೇ ನನ್ನನ್ನು ಹೊಂದುವಿ ಎಂದು ಹೇಳಿರುವದರಿಂದ, ಹಾಗೆ ಹೊಂದುವದಕ್ಕೆ ಅಭ್ಯಾಸಯೋಗ ಚಿತ್ತ ಸಮಾಧಾನಗಳು ಯೋಗದ ಆರಂಭ ನಿಷ್ಪತ್ತಿಗಳಿಗೆ ಬೇಕಾಗಿರುವದರಿಂದ, ಯೋಗನಿಷ್ಪತ್ತಿಯಿಲ್ಲದೆ ಭಗವತ್ಪ್ರಾಪ್ತಿಯಿಲ್ಲದುದರಿಂದಲೂ, **ಅಭ್ಯಾಸಯೋಗಪೂರ್ವಿಕಾಂ ಮಯಿಸ್ಥಿರಾಂ ಚಿತ್ತಸ್ಥಿತಿಂ ಲಬ್ಧ್ವಾ** ಎಂಬ ಭಾಷ್ಯವು. ಪ್ರತಿ ಕರ್ಮವೂ ಬಹು ಶ್ರದ್ಧೆಯಿಂದಲೂ ಪ್ರೀತಿಯಿಂದಲೂ ಮಾಡಲ್ಪಡುವದರಿಂದ ಭಗವಂತನಲ್ಲೇ ಸ್ಮೃತಿಯುಂಟಾಗಿ ಅಭ್ಯಾಸಯೋಗ ಪೂರ್ವಕವಾದ ಚಿತ್ತಸ್ವಾಸ್ಥ್ಯವು ದೊರೆಯುವದರ ಮೂಲಕ ಸಿದ್ಧಿಯುಂಟಾಗುತ್ತದೆಂಬ ಭಾವವು. **ಕುರ್ವನ್ನಪಿ** ಎಂದು ಇರುವದರಿಂದಲೂ, ವ್ಯಾಜರೂಪವಾದ ಸಾಧ್ಯೋಪಾಯದ ಆವಶ್ಯಕವು ಉಂಟು, ಇವೆಲ್ಲಾ ಅದಕ್ಕೆ ಸಹಕಾರಿಗಳು ಎಂದು ತೋರಿಸುವದಕ್ಕಾಗಿಯೂ **ಅಭ್ಯಾಸಯೋಗ ಪೂರ್ವಿಕಾಂ ಮಯಿಸ್ಥಿರಾಂ ಸ್ಥಿತಿಂ ಲಬ್ಧ್ವಾ,** ಎಂದು ಹೇಳಿರುತ್ತಾರೆ. ಇದರಿಂದ ಹೀಗೆ **ಅನನ್ಯಚೇತಸರಾಗಿ** ಮಾಡತಕ್ಕದ್ದೇನಾದರೂ ಉಂಟೋ ? ಎಂದರೆ, ಹಿಂದೆ ಹೇಳಿದ **ಧ್ಯಾಯನ್ತ ಉಪಾಸತೇ** (೬ನೆಯ ಶ್ಲೋಕ) ಎಂಬಲ್ಲಿ ಹೇಳಿರುವ ಧ್ಯಾನೋಪಾಸನ**ಗಳು** ಆವಶ್ಯಕವು ಆ ಉಪಾಯವು ಕೈಗೂಡುವದಕ್ಕಾಗಿ ಇವೆಲ್ಲಾ ಸಾಧನಗಳಾಗಿ ಉಪದೇಶಿ**ಸಿ**ರುತ್ತಾರೆ. ಹೀಗೆಲ್ಲಾ ಮಾಡಿದರೇನೇ ನಿಷ್ಪನ್ನ ಯೋಗಾಧಿಕಾರಿಯಾಗುವನು ಎಂಬ ತಾತ್ಪರ್ಯವು ಅಸಾಧ್ಯವಾಗಿದ್ದ ಅಭ್ಯಾಸಯೋಗವು ಹೀಗೆ ಮತ್ಕರ್ಮಗಳನ್ನು ಮತ್ಪ್ರೀತಿಗಾಗಿ ಅನುಷ್ಠಿಸಿದುದರಿಂದ, ಸ್ಮೃತಿಯೂ ನನ್ನಲ್ಲಿ ನೆಲಗೊಂಡು ಈ ಅಭ್ಯಾಸಯೋಗವೂ ಲಭಿಸಿ ಚಿತ್ತ ಶಾನ್ತಿಯುಂಟಾಗಿ, ಉಪಾಸನೆಯೂ ನಿಷ್ಪನ್ನವಾಗುತ್ತದೆಂಬುದು ಈ ಶ್ಲೋಕದ ಮುಖ್ಯ ತಾತ್ಪರ್ಯವು.

**ಮೂಲಕ್ಕೆ ಅರ್ಥವು:—**ಆಗಲಿ ಇಂತಹ ಮತ್ಕರ್ಮಗಳಿಗೂ ಅಸಮರ್ಥನಾದರೆ, ಅಭ್ಯಾಸಯೋಗ, ಚಿತ್ತಶಾನ್ತಿ, ಉಪಾಸನ ನಿಷ್ಪತ್ತಿಗಳು ಉಂಟಾಗುವ ಬಗೆ ಹೇಗೆ ಎಂದರೆ ಹೇಳುತ್ತಾರೆ—ಭಕ್ತಿಯೋಗವನ್ನೇ ಅವಲಂಬಿಸಲೇ ಬೇಕು ಎಂಬುದೇನೋ ಸ್ಥಾಪಿತವು. ಅದರ ಸಿದ್ಧಿಗಾಗಿ ಚಿತ್ತಶಾಂತಿ ಬೇಕೆಂದಾಯಿತು, ಪ್ರಥಮತಃ ಅದು ದೊರೆಯದಿದ್ದರೆ ಅಭ್ಯಾಸಯೋಗವನ್ನು ಕೈಕೊಳ್ಳಬೇಕು ; ಅದಕ್ಕೂ ಸಾಧ್ಯವಿಲ್ಲದಿದ್ದರೆ, ಮತ್ಕರ್ಮಗಳನ್ನು ಅತ್ಯರ್ಥಪ್ರಿಯತ್ವೇನ ಮದರ್ಥವಾಗಿ ಮಾಡು ಎಂದರು. ಅದಕ್ಕೂ ಸಾಧ್ಯವಿಲ್ಲದಿದ್ದರೆ ತಾನು ಹಿಂದೆ ಕರ್ಮಯೋಗ ಭೇದಗಳನ್ನು ವಿವರಿಸಿ, ಅವುಗಳಲ್ಲಿ ಯಾವುದು ಸಾಧ್ಯ**ವೋ** ಅದನ್ನು ಮಾಡು ಎಂದು ಹೇಳಿದುದನ್ನು ಜ್ಞಾಪಕ ಕೊಡುವವರಾಗಿ, ಆ ಕರ್ಮಗಳನ್ನೇ ಫಲಾದಿ ತ್ಯಾಗ ಪೂರ್ವಕವಾಗಿ ಅನುಷ್ಠಿಸಿದರೆ ಇವೆಲ್ಲವೂ ಸಿದ್ಧಿಸುತ್ತವೆ. ನೀನು ನಿಷ್ಪನ್ನಯೋಗಿಯಾಗುವಿ ಯಾವಾಗ ನಿಷ್ಪನ್ನಯೋಗಿ**ಯಾ**ದೆಯೋ, ಆಗ ದೇಹಾವಸಾನದಲ್ಲೇ ವಿಳಂಬವಿಲ್ಲದೆ ಭಗತ್ಪ್ರಾಪ್ತಿಯು ಸಿದ್ಧವು ಎಂದು ಹೇಳುತ್ತಾರೆ—**ಮದ್ಯೋಗಮಾಶ್ರಿತಃ**-ಮುಕ್ತಿಗೆ ಮುಖ್ಯವಾದ ಸಾಧನೋಪಾಯವಾದ ಭಕ್ತಿಯೋಗ**ವನ್ನೇ**ನೋ ಆಶ್ರಯಿಸಿದವನಾಗಿ, **ಅಥೇ ತದಪ್ಯ ಶಕ್ತೋಽಸಿ**-ಹಿಂದೆ ಹೇಳಿದಹಾಗೆ ಮತ್ಕರ್ಮಪರಮನಾಗಿ, ನನಗೆ ಅತ್ಯರ್ಥ ಪ್ರಿಯಗಳಾದ ನನ್ನ ಆರಾಧನಾ ರೂಪಗಳಾದ ಕೈಙ್ಕರ್ಯಗಳನ್ನು ಮಾಡಲು ಒಂದು ವೇಳೆ ಅಶಕ್ತನಾದರೂ, ಹೀಗೆ ಹೇಳಿದುದರಿಂದ ಭಕ್ತಿಯೋಗ ನಿಷ್ಪತ್ತಿಯಿಲ್ಲದೆ **ಮುಕ್ತಿ** ಇಲ್ಲವೆಂದು ಹೇಳುವ **"ನಾನ್ಯಃಪನ್ಥಾ ವಿದ್ಯತೇ ಅಯನಾಯ"** ಎಂಬ ಪುರುಷಸೂಕ್ತ ವಾಕ್ಯಾರ್ಥವು, **ಯೋಗಮಾಶ್ರಿತಃ** ಎಂದು ಪ್ರಾಧಾನ್ಯೇನ ಹೇಳಿದ ಪ್ರಯೋಗದಿಂದ

ಸ್ಕಾರಿತವು. ಹೀಗೆ ಇಂತಹ ಕರ್ಮಗಳಿಗೂ ಅಶಕ್ತನಾದರೆ ಏನು ಮಾಡತಕ್ಕದ್ದೆಂದರೆ, **ತತಃ**- ಆ ಕಾರಣದಿಂದ ಎಂದರೆ ಮದಾರಾಧನಭೂತ ಕರ್ಮಗಳನ್ನು ಅತ್ಯಂತ ಶ್ರದ್ಧಾ ಪ್ರೀತಿಗಳಿಂದ ಮಾಡಲು ಶಕ್ತನಾಗದಿರುವದರಿಂದ, **ಯತಾತ್ಮವಾನ್** - ನಿಗ್ರಹಿಸಿದ ಮನಸ್ಸುಳ್ಳವನಾಗಿ, ಕರ್ಮ ಯೋಗಕ್ಕೆ ಬೇಕಾದ ಎಲ್ಲಾ ಇಂದ್ರಿಯಗಳನ್ನೂ ಜಯಿಸಿದವನಾಗಿ, ನಾನು ಈ ಕರ್ಮಗಳನ್ನು ಮಾಡುತ್ತೇನೆ, ನನ್ನ ಪ್ರಯೋಜನಗಳಿಗಾಗಿಯೇ ಇವು ಎಂಬ ಮನೋಭಿಪ್ರಾಯಗಳಿಲ್ಲದವ ನಾಗಿ, **ಸರ್ವಕರ್ಮ ಫಲತ್ಯಾಗಂ ಕುರು**-ಸಮಸ್ತ ಕರ್ಮದ ಫಲತ್ಯಾಗವನ್ನು ಮಾಡು, ಎಂದರೆ ಫಲಾಭಿಸಂಧಿಯಿಲ್ಲದೆ ಆ ಕರ್ಮಯೋಗದ ಕರ್ಮಗಳನ್ನಾದರೂ **"ಮಯಿ ಸರ್ವಾಣಿ ಕರ್ಮಾಣಿ"** (ಗೀ. ೩. ೩೦.) ಎಂಬಲ್ಲಿ ಹೇಳಿರುವಹಾಗೆ, ನನ್ನಲ್ಲಿ ಸಮರ್ಪಿಸಿಬಿಡು ಎಂಬ ಭಾವವು. ಈ ಸರ್ವಕರ್ಮ ಯಾವುದೆಂದರೆ ? ಕರ್ಮಯೋಗವನ್ನೇ ಅನುಷ್ಠಿಸಿ ಜನಕಾದಿಗಳಹಾಗೆ ಭಕ್ತಿಯೋ ಗಾರಂಭಕ್ಕೆ ಅನುಕೂಲ ಮಾಡಿಕೊಳ್ಳಬೇಕೆಂದು ಉಪದೇಶಿಸಿದ ಸಂದರ್ಭದಲ್ಲಿ ಕರ್ಮಯೋಗಕ್ಕೆ ಸಂಬಂಧಿಸಿದ ಸರ್ವಕರ್ಮಗಳಾದ ನಿತ್ಯನೈಮಿತ್ತಿಕಗಳಿಂದ ಕೂಡಿದ **"ದೈವಮೇವಾ ಪರೇ"** ಎಂಬಲ್ಲಿ ಹೇಳಿದ ಕರ್ಮಾನುಷ್ಠಾನವು, ಇಲ್ಲಿ ಹೇಳಲ್ಪಟ್ಟವು. ಅವುಗಳಲ್ಲಿ ಮಮತಾಕರ್ತೃತ್ವ ಫಲ ಗಳನ್ನು ತ್ಯಾಗಮಾಡಿ ಅವುಗಳನ್ನೆಲ್ಲಾ ನನ್ನಲ್ಲಿ ಸಮರ್ಪಿಸುವದಲ್ಲದೆ, ಆತ್ಮನು ದೇಹಕ್ಕಿಂತ ವಿಲಕ್ಷಣನಾಗಿ ಜ್ಞಾನೈಕಾಕಾರತೆಯಿಂದ ಸರ್ವರಲ್ಲೂ ಸಮವೆಂಬ ಅನುಸಂಧಾನವೂ ಇರ ಬೇಕೆಂದು ಹಿಂದೆಯೇ ಉಪದೇಶಿಸಿ, ಇದು ಭಕ್ತಿಯೋಗೋತ್ಪತ್ತಿಗೆ ಆವಶ್ಯಕವೆಂದು ಹೇಳಿ ಇದ್ದೇನು ; ಅಷ್ಟಾದರೂ ಮಾಡುತ್ತಾ ಬಂದರೂ ನಿನಗೆ ಬೇಕಾದ ಅಭ್ಯಾಸವೂ ಚಿತ್ತಸ್ವಾಸ್ಥ್ಯ ತೆಯೂ ಎಲ್ಲವೂ ಒದಗಿ ಭಕ್ತಿಯೋಗ ನಿಷ್ಪತ್ತಿಯುಂಟಾಗುವದರಲ್ಲಿ ಸಂದೇಹವಿಲ್ಲವು ಎಂಬ ತಾತ್ಪರ್ಯವು. **ಯತಾತ್ಮವಾನ್** - ಇಲ್ಲಿ ಏಕಾಂತ್ಯವುಳ್ಳ ಮನಸ್ಸುಳ್ಳವನೆಂದು ಅರ್ಥಮಾಡ ಕೂಡದು, ಏಕೆಂದರೆ ಚಿತ್ತಸಮಾಧಾನವು ಸಾಧ್ಯವಿಲ್ಲದಿದ್ದರೆ ಏನು ಮಾಡತಕ್ಕದ್ದೆಂಬ ಆಶಯ ದಲ್ಲಿ ಸಾಧನಾಂತರಗಳನ್ನು ಬೋಧಿಸುವ ಸಂದರ್ಭದಲ್ಲಿ, **ಯತಾತ್ಮವಾನ್** - ಎಂದರೆ ಚಿತ್ತ ಸ್ವಾಸ್ಥ್ಯವನ್ನು ಹೊಂದಿದವನಾಗಿ ಎಂದು ಅರ್ಥಮಾಡುವದು ಯುಕ್ತವಲ್ಲವು. ಚಿತ್ತ ಸ್ವಾಸ್ಥ್ಯ ವಿಲ್ಲದುದಕ್ಕೆ ಏನು ಔಷಧಿಯು ಎಂದರೆ ಚಿತ್ತ ಸ್ವಾಸ್ಥ್ಯವೇ ಎಂದು ಹೇಳಿದ ಉತ್ತರದಹಾಗೆ ಅಸ ಮಂಜಸವಾಗುತ್ತದೆ ; ಆದುದರಿಂದ ನಿಗ್ರಹಿಸಿದ ಮನಸ್ಸುಳ್ಳವನಾಗಿ, ಹಿಂದೆ ಹೇಳಿದ ಕರ್ಮ ಗಳನ್ನು ಮದಾರಾಧನರೂಪವಾಗಿ ಮಾಡಲು ಅಸಮರ್ಥನಾದರೆ, **ಮದ್ಯೋಗಮಾಶ್ರಿತಃ ಭವ,** ಎಂದು ಭವ ಶಬ್ದವನ್ನು ಅಧ್ಯಾಹಾರವನ್ನು ಮಾಡಿಕೊಂಡು, ಅನ್ಯದೇವತಾ ಭಜನವನ್ನು ನನ್ನ ಪ್ರೀತ್ಯರ್ಥವಾಗಿ ಮಾಡು ಎಂದು ಹೇಳಿದರೆಂದು ಅರ್ಥಮಾಡಿರುತ್ತಾರೆ, ಇದು ಗೀತಾಭಿಪ್ರಾಯಕ್ಕೆ ಕೊಡುವದಿಲ್ಲವು, ಏಕೆಂದರೆ, **"ಅನ್ತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ"** (ಗೀ. ೭, ೨೩) ಎಂಬಲ್ಲಿ ಅಂತರವನ್ನು **ಅಲ್ಪಮೇಧಸ್ಸುಳ್ಳ**ವರೆಂದು ನಿಂದಿಸಿ ಇಲ್ಲಿ ಅನ್ಯದೇವತಾ ರಾಧನೆಯನ್ನು ಮಾಡು ಎಂದಲ್ಲಿಯಾದರೂ ಉಪದೇಶಿಸಿಯಾರೆ ? ಇನ್ನು ಕೆಲವರು **ಮದ್ಯೋಗ ಮಾಶ್ರಿತಃ** - ಮಾಡುವ ಕರ್ಮಗಳನ್ನು ಸಮರ್ಪಿಸೋಣವು ಮದ್ಯೋಗವು ; ಇದನ್ನು ಆಶ್ರಯಿ ಸಿದವನಾಗಿ ಎಂದು ಅರ್ಥಮಾಡಿರುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಿದುದೇ ಆತನಲ್ಲಿ ಕರ್ಮ ಗಳನ್ನು ಸಮರ್ಪಣೆಯು, ಅದಕ್ಕೆ ನೀನು ಅಸಮರ್ಥನಾದರೆ, ಆ ಕರ್ಮಗಳನ್ನೇ ನನ್ನಲ್ಲಿ ಸಮರ್ಪಿಸು ಎಂದು ಹೇಳುವದರಲ್ಲಿ ಸಾಮಂಜಸ್ಯವು ಹೇಗೋ ದಾಸನಿಗೆ ತಿಳಿಯದು.. ಆದುದ ರಿಂದ **ಅಶಕ್ತೋಸಿ** ಎಂಬುದರಿಂದ ತೋರಿಬರುವ **ತ್ವಂ** ಎಂಬ ಪದಕ್ಕೆ ವಿಶೇಷಣವನ್ನಾಗಿ ಅನ್ವಯಿಸಿ, ಪೂರ್ವಾಪರ ವಿರೋಧಗಳಿಲ್ಲದಹಾಗೆ **ಭಕ್ತಿಯೋಗವನ್ನಾಶ್ರಯಿಸಿದವನಾಗಿ** ಎಂದರ್ಥ ಮಾಡಿ, ಉತ್ತರಾರ್ಧದಿಂದ ಆ ಅಶಕ್ತತೆಗೆ ಪರಿಹಾರವನ್ನು ಹೇಳಿರುತ್ತಾರೆಂದು ಅರ್ಥ

ಮಾಡುವದು ಸರ್ವ ಸಮಂಜಸವಾಗಿ ತೋರುತ್ತದೆ ಆದುದರಿಂದ **ಮದ್ಯೋಗಮಾಶ್ರಿತಃ** ಎಂಬ ಪ್ರಯೋಗವು ಉಪಾಯ ನಿಷ್ಪತ್ತಿಗೆ ಬೇಕಾದ ಸಾಧನಾಂತರವನ್ನು ಬೋಧಿಸುವದಿಲ್ಲವು. ಹಾಗಾದರೆ **ಮದ್ಯೋಗ** ವೆಂದರೆ ಯಾವುದು ? ಎಂದರೆ ೬ನೆಯ ಅಧ್ಯಾಯಾಂತ್ಯ ಶ್ಲೋಕದಲ್ಲಿ ಹೇಳಲ್ಪಟ್ಟ **ಯುಕ್ತತಮ** ನೆಂದು ಹೇಳಿಸಿಕೊಳ್ಳುವ ಯೋಗವೇ **ಮದ್ಯೋಗವು ; ತನ್ನ ಉಪಾಸನೆಯೇ ಉಪಾಸನೆಯು ;** ಇದರಿಂದ ಆತ್ಮಾವಲೋಕನ ಸಿದ್ಧಿಗಾಗಿ ವಿಧಿಸಲ್ಪಟ್ಟ ಅಕ್ಷರಶಬ್ದ ವಾಚ್ಯನಾದ ಜೀವಾತ್ಮೋಪಾಸನೆಯೂ, ಅನ್ಯದೇವತಾ ಉಪಾಸನೆಯೂ ವ್ಯಾಪ ರ್ತಿಸಲ್ಪಟ್ಟವು. ಸರ್ವ ಕರ್ಮ ಫಲತ್ಯಾಗವನ್ನು ಸಾಧನವಾಗಿ ವಿಧಿಸಿರುವ ಕರ್ಮ ಶಬ್ದವು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ **ಮತ್ಕರ್ಮ ಪರಮಃ** ಎಂಬಲ್ಲಿ ಹೇಳಲ್ಪಟ್ಟ ಕರ್ಮವನ್ನು ವ್ಯಾವ ರ್ತಿಸಿ ಅರ್ಥಮಾಡುವದೂ ಉಚಿತವು. ಇಲ್ಲದಿದ್ದರೆ ಪರಸ್ಪರ ವಿರುದ್ಧಾರ್ಥವು ಪ್ರಾಪ್ತವಾಗು ತ್ತದೆ. ಅದೂ ಅಲ್ಲದೆ ಹಿಂದೆ ಹೇಳಿದ ನಾಲ್ಕು ಶ್ಲೋಕಗಳಲ್ಲೂ ಉಪದೇಶಿಸಲ್ಪಟ್ಟ ಸಾಧನಾಂ ತರಗಳೂ ಉಪಾಯಾಂತರಗಳೆಂದೂ ಕೆಲವರು ಭಾವಿಸುವರು. ಹಾಗೆ ಉಪಾಯಾಂತರಗಳು ಹೇಳಲ್ಪಟ್ಟವೆಂದು ಭಾವಿಸಿದರೆ **"ನಾನ್ಯಃಪನ್ಥಾ ವಿದ್ಯತೇಽಯನಾಯ"** ಎಂಬ ಶ್ರುತಿಗೆ ವಿರುದ್ಧ ವಾಗುವದಿಲ್ಲವೇ ? ಅಂತಹ ವಿರೋಧವನ್ನು ತಪ್ಪಿಸಬೇಕಾದರೆ ಇವುಗಳೆಲ್ಲಾ ಆ ಉಪಾಯಕ್ಕೆ ಸಾಧನಗಳೆಂದು ಅರ್ಥಮಾಡುವದು ಉಚಿತವಲ್ಲವೇ ? ಉಪಾಯಗಳು ಎರಡೇ ಎಂದು ಹಿಂದೆ ಹೇಳಿದುದನ್ನೇ ಇನ್ನೊಂದು ಸಲ ಹೇಳುವೆವು. ಒಂದು ಗುರೂಪಾಯವಾದ ಯೋಗವು ; ಇದು ಯಾವಜ್ಜೀವವೂ ಮಾಡತಕ್ಕದ್ದು ; ಗೀತೆಯಲ್ಲಿ ವಿಶೇಷವಾಗಿ ಉಪದೇಶಿಸಿರುವದು- ಇದಕ್ಕೆ ಕರ್ಮಯೋಗವು ಅಙ್ಗವಾಗಿರುವದರಿಂದ, ಅರ್ಜುನನಿಗೆ ಅದನ್ನು ಬೋಧಿಸಿ ಯುದ್ಧಮಾಡಿಸಲು ಅನುಕೂಲಿಸುತ್ತದೆಂದು ಸರ್ವೇಶ್ವರನು ಉಪದೇಶಿಸಿರುತ್ತಾರೆ. ಆದುದರಿಂದ ಈ ಗೀತೆಯನ್ನು **ಯೋಗಶಾಸ್ತ್ರ**ವೆಂದೂ (ಭಕ್ತಿಯೋಗವೆಂದೂ) **ಶ್ರೀ ಕೃಷ್ಣಾ ಅರ್ಜುನ ಸಂವಾದ**ವೆಂದೂ ಅಧ್ಯಾಯಾಂತ್ಯಗಳಲ್ಲಿ ಹೇಳಲ್ಪಟ್ಟಿರುತ್ತದೆ. ಇನ್ನೊಂದು ಲಘೂಪಾಯವು, ಇದಕ್ಕೆ ಭರನ್ಯಾಸ, ಪ್ರಪತ್ತಿ, ಶರಣಾಗತಿ, ಪ್ರಪದನ ಇತ್ಯಾದಿ ಹೆಸರುಗಳುಂಟು ; ಇದು ಗುರುವಿನ ಮೂಲಕ ಸಕೃ ದನುಷ್ಠೇಯವು ; ಇದಕ್ಕೆ ಕರ್ಮಯೋಗವು ಅಙ್ಗವಲ್ಲದುದರಿಂದ ಸಾಕ್ಷಾತ್ತಾಗಿ ಉಪದೇಶಿಸಿಲ್ಲವು. ಆದರೆ ಅರ್ಜುನನೇ ತನಗೆ ಸರಿಯಾದ ಜ್ಞಾನವಿಲ್ಲವೇ ಎಂದು ಶೋಕಿಸಿ ಸರಿಯಾದ ಜ್ಞಾನಕ್ಕಾಗಿ **"ಶಾಧಿಮಾಂ ತ್ವಾಂಪ್ರಪನ್ನಂ"** ಎಂದು ಪ್ರಾರ್ಥಿಸಿ ಶರಣಾಗತಿಯನ್ನನುಷ್ಠಿಸಿದ್ದಾನೆ ; **ಪುನಃ** ೧೧ನೆಯ ಅಧ್ಯಾಯಾಂತ್ಯದಲ್ಲೂ **"ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ"** ಎಂಬಲ್ಲಿ ಅಪರಾಧ ಪರಿಹಾರಕ್ಕಾಗಿಯೂ, ಪ್ರಾಪ್ಯರೂಪ ಪ್ರದರ್ಶನಕ್ಕಾಗಿಯೂ ಶರಣಾಗತಿಯನ್ನು ಅನು ಷ್ಠಿಸಿರುತ್ತಾನೆ. ಆದರೆ ಮೋಕ್ಷಕ್ಕಾಗಿ ಮಾಡಲಿಲ್ಲವು. ಆದರೆ ಕೊನೆಗೆ ಚರಮಶ್ಲೋಕದಲ್ಲೂ, ಮಧ್ಯದಲ್ಲೂ, **"ತೇಪಿಯಾನ್ತಿ ಪರಾಂಗತಿಂ"** (ಗೀ. ೧೦-೩೨) ಎಂಬಲ್ಲೂ ಈ ಶರಣಾಗತಿಯು ಉಪದಿಷ್ಟವು. ಪ್ರಾಪ್ತಸ್ಥಳದಲ್ಲಿ ಇದನ್ನು ವ್ಯಕ್ತಪಡಿಸಿರುವೆವು. ಈ ಲಘೂಪಾಯವು ಶ್ರುತಿ ಯಲ್ಲೂ ಸ್ಮೃತಿಗಳಲ್ಲೂ ಇತಿಹಾಸಗಳಲ್ಲೂ ಭಗವಚ್ಛಾಸ್ತ್ರಗಳಲ್ಲೂ ಉಪಪಾದಿತವು. ಶ್ರೀಮದ್ರಾಮಾಯಣವು ಮೊದಲಿನಿಂದ ಕೊನೆಯವರೆಗೂ ಶರಣಾಗತಿ ಶಾಸ್ತ್ರವೇ. ಗುರೂಪಾ ಯವು ಶಕ್ತರಾದ ತ್ರೈವರ್ಣಿಕರಿಗೆ ಮಾತ್ರವೇ. ಸ್ತ್ರೀ ಶೂದ್ರ ಪಂಚಮ ಮೊದಲಾದ ಸರ್ವ ವರ್ಣದವರಿಗೂ ಉಪಯುಕ್ತವಾದುದು ಲಘೂಪಾಯವು. ಆದುದರಿಂದ ಈ ನಾಲ್ಕು ಶ್ಲೋಕ ಗಳಿಂದಲೂ ಉಪಾಯಾಂತರಗಳು ಬೋಧಿತವೆಂದು ಹೇಳುವದು ಶಾಸ್ತ್ರಾನುಮತಿಯಿಲ್ಲದ ಅಭಿ ಪ್ರಾಯವು. ಭಕ್ತಿಯೋಗನಿಷ್ಪತ್ತಿಯು ಆಗಲೇಬೇಕು. ಭಕ್ತಿಯೋಗವು ಸಿದ್ಧಿಸಲು ಮನಸ್ಸು ಪರಮಪುರುಷನಲ್ಲೇ ಸಕ್ತವಾಗಿರಬೇಕು. ಹಾಗೆ ಮನಸ್ಸು ಪರಮಪುರುಷನಲ್ಲೇ ಸಕ್ತವಾಗುವ

ದಕ್ಕೆ ಸಾಧನಗಳನ್ನು ಬಹು ಕೃಪಯಾ ಉಪದೇಶಿಸಿದರೇ ವಿನಾ, ಬೇರೇ ಉಪಾಯಗಳನ್ನು **ಹೇಳಲಿಲ್ಲವು.** ಇವು ಸಾಕ್ಷಾತ್ ಮೋಕ್ಷಪ್ರಾಪ್ತಿಗೆ ಅವ್ಯವಹಿತ ಉಪಾಯಗಳೆಂಬ ಭ್ರಮವು **ಕೂಡದು.** ಅದೂ ಅಲ್ಲದೆ, ಜೀವಾತ್ಮೋಪಾಸನೆಯನ್ನು ೨ನೆಯ ಶ್ಲೋಕದಲ್ಲೇ ನಿಂದಿಸಿಬಿಟ್ಟು **ಪುನಃ** ಅದನ್ನೇ ಅನುಷ್ಠಿಸು ಎಂದು ಎಲ್ಲಿಯಾದರೂ ಹೇಳಿ, ಸ್ವವಾಕ್ಯವಿರೋಧವನ್ನುಂಟು **ಮಾಡಿಕೊಳ್ಳುವರೇ?** ಕರ್ಮಯೋಗವು ಭಕ್ತಿಯೋಗಜನಕವೆಂದೇ ಅನೇಕ ಪ್ರಮಾಣಗಳಿವೆಯೇ ಹೊರ್ತು ಕರ್ಮಯೋಗವು ಸಾಕ್ಷಾತ್ತಾಗಿ ಸಾಧನವೆಂಬುದಕ್ಕೆ ಯಾವಪ್ರಮಾಣವೂ ಇರುವುದಿಲ್ಲವು. ೨೩೦-೨ನೆಯ ಪುಟಗಳನ್ನು ನೋಡಿ. ಈ ಮುಂದಿನ ಪ್ರಮಾಣಗಳು ಈ ಸಂದರ್ಭದಲ್ಲಿ ಅನುಸಂಧೇಯಗಳು:—೧ **"ಕಷಾಯೇ ಕರ್ಮಭಿಃಪಕ್ವೇ ತತೋಜ್ಞಾನಂ ಪ್ರವರ್ತತೇ"** ೨ **"ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಽಮೃತ ಮಶ್ನುತೇ"** ೩ **"ತಪೋವಿದ್ಯಾಚ ವಿಪ್ರಸ್ಯನಿಶ್ಶ್ರೇಯಸ ಕರಾವುಭೌ। ತಪಸಾಕಲ್ಮಷಂ ಹಂತಿ ವಿದ್ಯಯಾ ಜ್ಞಾನಮಶ್ನುತೇ"** (ಮನುಃ) **೪. "ಶುದ್ಧಭಾವಂಗತೋ ಭಕ್ತ್ಯಾಶಾಸ್ತ್ರಾದ್ವೇದ್ಮಿ ಜನಾರ್ದನಂ"** (ಭಾರತ ಉ.) **೫. "ಯಜ್ಞೇನ ದಾನೇನ ತಪಸಾಽನಾಶಕೇನ ಬ್ರಾಹ್ಮಣಾ ವಿವಿದಿಷನ್ತಿ"** (ಬೃ. ೬-೪-೨೨) **೬. "ಕಷಾಯ ಪಜ್ತ್ತಿಃಕರ್ಮಾಣಿ ಜ್ಞಾನಂತು ಪರಮಾಗತಿಃ" (೭) ಧರ್ಮೇಣ ಪಾಪಮಪನುದತಿ;** ಇತ್ಯಾದಿಗಳು. ಸ್ವಾಮಿ ದೇಶಿಕರವರು ನ್ಯಾಯಸಿದ್ಧಾಂಜನದಲ್ಲಿ, ಕರ್ಮಯೋಗವು ಎಂದಿಗೂ ಅವ್ಯವಹಿತ ಉಪಾಯವಲ್ಲವೆಂದು, **"ನಾಹಂ ವೇದೈರ್ನ ತಪಸಾ"** ಎಂಬ ಲೀಲಾಸಾರಥಿಯ ವಾಕ್ಯವನ್ನನುಸರಿಸಿ, **"ಕರ್ಮಾಪಿ ನ ಕೇವಲಂ ಜ್ಞಾನ ಸಮುಚ್ಚಿತಂ ವಾ ಮುಕ್ತಿಹೇತುಃ"** ಬರೀ ಕರ್ಮಯೋಗವೇ ಆಗಲಿ, ಅಥವಾ ಜ್ಞಾನಯೋಗ ಸಹಕೃತವಾಗಿಯಾಗಲಿ, ಮೋಕ್ಷಕ್ಕೆ ಹೇತುವಾಗುವದಿಲ್ಲವು ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ. ಹೀಗಿದ್ದರೂ ಕರ್ಮಯೋಗವೂ ಸಾಕ್ಷಾದುಪಾಯವೆಂದು ಇಲ್ಲಿಯೂ ಪ್ರಥಮ ಶ್ಲೋಕದ ಉತ್ತರಾರ್ಧದಲ್ಲೂ ಹೇಳಲ್ಪಟ್ಟಿತೆಂದು ಪಂಡಿತರೂ ಕೂಡ ಅಭಿಪ್ರಾಯಪಟ್ಟಿರುವದು ಆಶ್ಚರ್ಯವು.

**ಭಾಷ್ಯಾರ್ಥವು**:—ಹಿಂದಿನ ಶ್ಲೋಕದಲ್ಲಿ ನನ್ನ ಕೈಙ್ಕರ್ಯರೂಪ ಕರ್ಮಗಳನ್ನು ಶ್ರದ್ಧೆಯಿಂದ ಮಾಡುತ್ತಾ ಬಂದರೆ ಅಭ್ಯಾಸಯೋಗ ಪೂರ್ವಕವಾಗಿ ನನ್ನಲ್ಲೇ ಮನಸ್ಸು ಸ್ಥಿರವಾಗಿ ನಿಂತು ನನ್ನ ಪ್ರಾಪ್ತಿಗೆ ಬೇಕಾದ ಭಕ್ತಿಯೋಗವು ಸಿದ್ಧಿಸುತ್ತದೆಂದು ಹೇಳಿದರು. ಅದಕ್ಕೂ ನೀನು ಅಸಮರ್ಥನಾದ ಪಕ್ಷದಲ್ಲಿ, ಹಿಂದೆ ಆರು ಅಧ್ಯಾಯಗಳಲ್ಲಿ ನಿನಗೆ ಉಪದೇಶಿಸಿದ ಕರ್ಮಯೋಗವನ್ನೇ ಫಲ ಸಂಗಕರ್ತೃತ್ವಾದಿಗಳನ್ನು ತ್ಯಾಗಮಾಡಿ ನನ್ನಲ್ಲಿ ಅರ್ಪಣ ಬುದ್ಧ್ಯಾ ಅನುಷ್ಠಿಸಿದರೆ, ಭಕ್ತಿಯೋಗ ಪ್ರತಿಬಂಧಕ ಪಾಪಗಳು ತೊಲಗಿ, ಭಕ್ತಿಯೋಗಕ್ಕೆ ಬೇಕಾದ ಐಕಾಂತ್ಯ ಪರಭಕ್ತಿಗಳು ಸಿದ್ಧಿಸುತ್ತವೆ, ಎಂದು ಹಿಂದೆ ಹೇಳಿದುದನ್ನೇ ಜ್ಞಾಪಕ ಕೊಟ್ಟು, ಹಾಗೆ ಮಾಡಿದರೇ ಸಾಕು, ನಿನಗೆ ಇಷ್ಟಾರ್ಥ ಸಿದ್ಧಿಯುಂಟೆಂದು ಹೇಳುತ್ತಾರೆ.—ಮುಖ್ಯವಾಗಿ ನೀನು ಕ್ಷತ್ರಿಯನಾಗಿ ನಿನಗೆ ವಿಹಿತವಾದ ಧರ್ಮ ಯುದ್ಧಾದಿ ಕೈಂಕರ್ಯಗಳನ್ನೂ ಆಜ್ಞಾನುಜ್ಞಾ ಕೈಂಕರ್ಯಗಳನ್ನೂ ನನ್ನ ಪ್ರೀತಿಗಾಗಿ ಮಾತ್ರ ಅನುಷ್ಠಿಸಿದರೆ ನಿನಗೆ ಭಕ್ತಿಯೋಗವು ಸಿದ್ಧಿಸುತ್ತದೆನ್ನುತ್ತಾರೆ.—ಹಿಂದೆ ಹೇಳಿದುದಕ್ಕೂ ಅಸಮರ್ಥನಾದರೆ, ಅದಕ್ಕೂ ಸುಲಭವಾದ ಮನಸ್ಸಮಾಧಾನಕ್ಕೆ ಬೇಕಾದ ಸಾಧನೋಪಾಯವನ್ನು ಹೇಳುತ್ತಾರೆಂಬ ಭಾವದಿಂದ **ಅಥ** ಎಂದಾರಂಭಿಸಿ, ಭಾಷ್ಯವನ್ನು ಬರೆಯುತ್ತಾರೆ. ಹಿಂದಿನ ಶ್ಲೋಕದಲ್ಲಿರುವಹಾಗೆ **ಅಥ** ಎಂಬುದನ್ನು ಪ್ರಶ್ನಾರ್ಥಕವಾಗಿಯೂ, ಭಾವಿಸಬಹುದು; ಉತ್ತರಾರ್ಧಕ್ಕೆ ಅನ್ವಯವನ್ನು ಸೂಚಿಸಿ ಅರ್ಥ ಬರೆಯುತ್ತಾರೆ, **ಮದ್ಯೋಗ ಮಾಶ್ರಿತ್ಯ** ಎಂಬುದು ತಾವು ಈಗ ಹೇಳಹೋಗುವ ಸಾಧನೋಪಾಯಕ್ಕೆ ಸೇರಿದ ಪ್ರಯೋಗವಲ್ಲವೆಂದೂ, ಉಪಾಸನಾಧಿಕಾರಿಯನ್ನು ಬೋಧಿಸುತ್ತದೆಂದೂ, ತಿಳಿಸುವುದಕ್ಕಾಗಿ ಮೊದಲಿನಲ್ಲೇ ಸೇರಿಸಿ

**ಭಾ. ಅಥಮದ್ಯೋಗ ಮಾಶ್ರಿತ್ಯೈತದಪಿ ಕರ್ತುಂ ನಶಕ್ನೋಽಷಿ-ಮದ್ಗುಣಾನುಸಂಧಾನ ಕೃತ ಮದೇಕಪ್ರಿಯತ್ವಾಕಾರಂ ಭಕ್ತಿಯೋಗಮಾಶ್ರಿತ್ಯ ಭಕ್ತಿಯೋಗಾಙ್ಕುರ ರೂಪಮೇತನ್ಮತ್ಕರ್ಮಾಪಿ ಕರ್ತುಂ ನಶಕ್ನೋಽಷಿ, ತತೋಽಕ್ಷರಯೋಗ ಮಾತ್ಮ ಸ್ವಭಾವಾನುಸಂಧಾನರೂಪಂ ಪರಭಕ್ತಿಜನನಂ ಪೂರ್ವಷಟ್ಕೋದಿತ ಮಾಶ್ರಿತ್ಯ ತದುಪಾಯತಯಾ ಸರ್ವಕರ್ಮ ಫಲತ್ಯಾಗಂ ಕುರು ; ಮತ್ಪ್ರಿಯತ್ವೇನ ಮದೇಕ**

ಅನ್ವಯವನ್ನು ತೋರಿಸಿರುತ್ತಾರೆ.—**ಅಥಮದ್ಯೋಗಮಾಶ್ರಿತ್ಯ.... ನಶಕ್ನೋಽಷಿ** ಎಂಬುದರ ತಾತ್ಪರ್ಯವೇನೆಂದರೆ—**ಮದ್ಗುಣಾನುಸಂಧಾನಕೃತ** - ನನ್ನ ಮಹತ್ತಾದ ಕಲ್ಯಾಣಗುಣ ಯೋಗದ ಅನುಸಂಧಾನದಿಂದ ಮಾಡಲ್ಪಟ್ಟ, **ಮದೇಕ ಪ್ರಿಯತ್ವಾಕಾರಂ** ಇನ್ಯಾರಿಗೂ ಅಲ್ಲದೆ ನನಗೇನೇ ಪ್ರಿಯವಾಗಿರುವ ವಿಶೇಷ ಭಾವವುಳ್ಳ, **ಭಕ್ತಿಯೋಗಮಾಶ್ರಿತ್ಯ** - ಭಕ್ತಿಯೋಗವ ನ್ನವಲಂಬಿಸಿ, ಇದರ ತಾತ್ಪರ್ಯವೇನೆಂಬುದನ್ನು ಇನ್ನೂ ಚನ್ನಾಗಿ ವ್ಯಕ್ತಪಡಿಸುತ್ತಾರೆ—**ಭಕ್ತಿ ಯೋಗಾಙ್ಕುರ ರೂಪಂ** - ಆ ಭಕ್ತಿಯೋಗವು ಅಙ್ಕುರಿಸುವ ಹಾಗೆ ಮಾಡುವ, **ಏತನ್ಮತ್ಕ ರ್ಮಾಪಿ** - ಹಿಂದಿನ ಶ್ಲೋಕದಲ್ಲಿ ಸಾಧನತ್ವೇನ ಹೇಳಲ್ಪಟ್ಟ ನನ್ನ ಕರ್ಮಗಳನ್ನೂ ಸಹ **ಕರ್ತುಂ ನಶಕ್ನೋಽಷಿ** - ಮಾಡಲು ನಿನಗೆ ಸಾಮರ್ಥ್ಯವಿಲ್ಲದೇ ಹೋದರೆ, **ತತಃ** - ಆ ಕಾರಣದಿಂದ **ಆತ್ಮ ಸ್ವಭಾವಾನುಸಂಧಾನ ರೂಪಂ**- ಪ್ರಕೃತಿವಿಯುಕ್ತ ದೆಶೆಯಲ್ಲಿ ಈ ಪ್ರತ್ಯಗಾತ್ಮನು (ಜೀವಾತ್ಮನು) ಎಷ್ಟು ಪರಿಶುದ್ಧನು, ಎಷ್ಟು ಮಹತ್ತಾದ ಸ್ವಭಾವದಿಂದ ಸ್ವಸ್ವರೂಪವು ಆವಿರ್ಭವಿಸಿ ಕಂಗೊಳಿ ಸುವನೆಂಬ ಅನುಸಂಧಾನ ರೂಪವಾದ **ಪೂರ್ವಷಟ್ಕೋದಿತಂ** ಮೊದಲಿನ ಆರು ಅಧ್ಯಾಯಗಳಲ್ಲಿ ಹೇಳಲ್ಪಟ್ಟ **ಪರಭಕ್ತಿ ಜನನಂ** - ಈ ಭಕ್ತಿಯೋಗಕ್ಕೆ ಬೇಕಾದ ಶ್ರೇಷ್ಠವಾದ ಪ್ರೀತ್ಯತಿಶಯದ ಉತ್ಪತ್ತಿಗೆ ಕಾರಣ ಭೂತವಾದ **ಅಕ್ಷರಯೋಗಂ** - ಆತ್ಮಾವಲೋಕನವನ್ನು **ಆಶ್ರಿತ್ಯ** - ಅವ ಲಂಬಿಸಿ, **ತದುಪಾಯತಯಾ** - ಆ ಪರಭಕ್ತಿಯಿಂದ ಕೂಡಿದ ಉಪಾಸನೆಗೆ ಸಾಧನವಾಗಿರುವ ದರಿಂದ, **ಸರ್ವ ಕರ್ಮ ಫಲತ್ಯಾಗಂ ಕುರು** - ನೀನು ಮಾಡುತ್ತಿರುವ ಕರ್ಮಯೋಗದ ಕರ್ಮ ಗಳಲ್ಲಿ ಹಿಂದೆ ಹೇಳಿದಹಾಗೆ ಕರ್ತೃತ್ವ ಮಮತಾ ಫಲಗಳ, **"ಬ್ರಹ್ಮಾರ್ಪಣಂ ಬ್ರಹ್ಮಹವಿಃ"** ಎಂಬಲ್ಲೂ (ಗೀ. ೪-೨೪) ಮತ್ತು **"ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂತ್ಯಕ್ತ್ವಾ ಕರೋ ತಿಯಃ। ಲಿಪ್ಯತೇ ನ ಸ ಪಾಪೇನ"** (ಗೀ. ೫-೧೦) ಎಂಬಲ್ಲೂ **"ಯೋಗಿನಃ ಕರ್ಮಕುರ್ವನ್ತಿ ಸಙ್ಗಂ ತ್ಯಕ್ತ್ವಾತ್ಮಶುದ್ಧಯೇ"** (ಗೀ, ೫-೧೧) ಎಂಬಲ್ಲೂ ಹೇಳಿರುವಹಾಗೆ **ತ್ಯಾಗಂ ಕುರು** - ತ್ಯಾಗವನ್ನು ಮಾಡು. ಹೇಗಿದ್ದರೂ ಭಕ್ತಿಯೋಗಾರಂಭಕ್ಕೆ ಒಂದು ವೇಳೆ ಜ್ಞಾನಯೋಗವು ಕಷ್ಟತರವಾಗಿ ಪರಿಣಮಿಸಿದರೂ, ಕರ್ಮಯೋಗವು ಬಿಟ್ಟಿದ್ದೇ ಅಲ್ಲವು. ಅದು ಮುಖ್ಯಾಙ್ಗವಾದುದ ರಿಂದ ಮಾಡಲ್ಕೇ ತೀರಬೇಕೆಂದು ಹಿಂದಿನ ಷಟ್ಕದಲ್ಲಿ ಹೇಳಲ್ಪಟ್ಟಿತು. ಭಕ್ತಿಯೋಗವು ಅಙ್ಕುರಿಸುವದಕ್ಕೆ ಪ್ರತ್ಯಗಾತ್ಮನ ಪರಿಶುದ್ಧ ಸ್ವಭಾವಜ್ಞಾನವೂ, ಅದನ್ನು ಹೊಂದಬೇಕೆಂಬ ಆಶೆಯ ಜ್ಞಾನವೂ ಬೇಕೆಂದು ಹೇಳಿ, ತಾನು ಮಾಡುವ ಕರ್ಮಯೋಗ ಸಂಬಂಧವಾದ ಅನುಷ್ಠಾನ ಗಳನ್ನೆಲ್ಲಾ ಪರಮಾತ್ಮನಲ್ಲಿ ಸಮರ್ಪಿಸಿ, ಅವುಗಳಲ್ಲಿ ಕರ್ತೃತ್ವ ಮಮತಾ ಫಲಗಳನ್ನು ತ್ಯಜಿಸ ತಕ್ಕದ್ದೆಂದು ಹೇಳಿದ್ದರು. ಈಗ ಹೇಳುವದೇನೆಂದರೆ? ಹೀಗೆ ಹಿಂದೆ ಆರು ಅಧ್ಯಾಯಗಳಲ್ಲಿ ಉಪದೇಶಿಸಿದ ಕರ್ಮಯೋಗವನ್ನೇ ನೀನು ಮಾಡುತ್ತಾ ಬಂದರೆ, ತಾನಾಗಿಯೇ ಪರಭಕ್ತಿಯು ಜನಿಸಿ ಭಕ್ತಿಯೋಗಾರಂಭಕ್ಕೆ ಬೇಕಾದ ಚಿತ್ತ ಸಮಾಧಾನವು, ಕೈಗೂಡುತ್ತದೆ ; ಎಂಬುದು.

ಆತ್ಮಾನುಸಂಧಾನವು ಸ್ವತಃ ಮೋಕ್ಷದಾಯಕವಲ್ಲವು, ಅದರ ಪ್ರಯೋಜನವೇನು ಎಂದರೆ **ಪರಭಕ್ತಿ ಜನನಂ**-ಪರಭಕ್ತಿಯನ್ನುಂಟುಮಾಡುವದೆಷ್ಟೋ ಅಷ್ಟೇ ಎಂಬ ಭಾವವು. **ಮದ್ಯೋಗ**

**ಭಾ. ಪ್ರಾಪ್ಯತಾ ಬುದ್ಧಿರ್ಹಿ ಪ್ರಕ್ಷೀಣಾಶೇಷ ಪಾಪಸ್ಯೈವ ಜಾಯತೇ ; ಯತಾತ್ಮವಾನ್ - ಯತಮನಸ್ಕಃ ; ತತೋಽನಭಿಸಂಹಿತ ಫಲೇನ ಮದಾರಾಧನರೂಪೇಣಾ ನುಷ್ಠಿತೇನ ಕರ್ಮಣಾ ಸಿದ್ಧೇನಾತ್ಮಧ್ಯಾನೇನ ನಿವೃತ್ತಾವಿದ್ಯಾದಿ ಸರ್ವತಿರೋಧಾನೇ ಮಚ್ಛೇ**

**ಮಾಶ್ರಿತಃ** ಎಂದು ಮೂಲದಲ್ಲಿರುವ ಪ್ರಯೋಗವು, (೧) ಅರ್ಜುನಪ್ರಶ್ನೆಯಲ್ಲಿ ಪೂರ್ವಾರ್ಧದಲ್ಲಿ ಹೇಳಿದ ತನ್ನ ವಿಷಯವಾದ ಯೋಗವು ಯುಕ್ತತಮವೆಂಬ ಭಾವವನ್ನು ಇನ್ನೊಂದು ಸಲ ಅನುವಾದ ಮೂಲಕ ಸಮರ್ಥಿಸುತ್ತದೆ; ಮತ್ತು (೨) ಕರ್ಮಯೋಗದ ಆಜ್ಞಾಕೈಂಕರ್ಯಗಳು ಭಕ್ತಿಯೋಗಾನುಷ್ಠಾನದಲ್ಲೂ ಅನುವರ್ತಿಸತಕ್ಕದ್ದೆಂಬುದನ್ನೂ (೩) ಇದರಿಂದ ಅಕ್ಷರ ಯೋಗವು ವ್ಯವಚ್ಛೇದಿಸಲ್ಪಟ್ಟಿತೆಂಬುದನ್ನೂ, ಸೂಚಿಸುತ್ತದೆ. **ಭಕ್ತಿಯೋಗಾಂಕುರರೂಪಂ** ಎಂದು ಹೇಳಿರುವವರಿಂದ, ಕರ್ಮಯೋಗವು ಪರಮಾತ್ಮನಲ್ಲಿ ಭಕ್ತಿಯು ಅಂಕುರಿಸುವಹಾಗೆ ಮಾಡುತ್ತದೆಂದೂ, ಅದು ಬೆಳೆದು ಆತ್ಮಾವಲೋಕನ ಉಂಟಾದ ಕಾಲದಲ್ಲಿ ಶ್ರೇಷ್ಠವಾದುದಾಗಿ ಪರಭಕ್ತಿ ಎನಿಸುತ್ತದೆಂದೂ, ಅನಂತರ ಪರಮ ಪುರುಷ ಸಾಕ್ಷಾತ್ಕಾರ ಉಂಟಾದಾಗ ಪರಜ್ಞಾನವೆಂದೆನಿಸಿ, ಅನಂತರ ಪರಬ್ರಹ್ಮಪ್ರಾಪ್ತಿಯುಂಟಾಗಬೇಕೆಂಬ ಉತ್ಕಟೇಚ್ಛಾರೂಪವಾದ ಪರಮ ಭಕ್ತಿಯಾಗಿ ಸಸಿಯು ದೊಡ್ಡ ವೃಕ್ಷವಾದಹಾಗೆ, ಅತ್ಯಂತ ವೃದ್ಧಿಯನ್ನು ಹೊಂದುತ್ತವೆಂಬುದೂ **ಈ ಅಂಕುರ** ಶಬ್ದದಿಂದ ಸೂಚಿತವು ಇಲ್ಲಿ **ಪೂರ್ವಷಟ್ಕೋದಿತಂ** ಎಂದು ಹೇಳಿದುದರ ಅಭಿಪ್ರಾಯವೇನೆಂದರೆ—ದ್ವಿತೀಯ ಷಟ್ಕೋದಿತ ವಲ್ಲವೆಂದೂ, ದ್ವಿತೀಯಷಟ್ಕದಲ್ಲಿ ಹೇಳಿದ ಅಕ್ಷರಯೋಗವಾದ ಜಿಜ್ಞಾಸುವಿನ ಯೋಗವಲ್ಲವೆಂದೂ, ಹೇಳುವದು ಪ್ರಾಸಂಗಿಕವು. ಮೊದಲಿನ ಆರು ಅಧ್ಯಾಯಗಳಿಂದ ಹೇಳಿದುದು ಕರ್ಮಯೋಗವೂ ಆತ್ಮಧ್ಯಾನವೂ. ಪರಬ್ರಹ್ಮೋಪಾಸನ ಮತ್ತು ಪಂಚಾಗ್ನಿವಿದ್ಯಾ ಮೊದಲಾದ ಯೋಗವಲ್ಲವು. ಇದರಿಂದ ಏನನ್ನು ಹೇಳಿದಂತಾಯಿತು ಎಂದರೆ, **ಮತ್ಪ್ರಿಯತ್ವೇನ** - ಹೀಗೆ ಫಲಸಂಗವನ್ನು ತ್ಯಾಗಮಾಡುವವರಿಂದ, ಈ ಕರ್ಮಾನುಷ್ಠಾನವೆಲ್ಲಾ ನನಗೆ ಪ್ರಿಯವಾಗಿರುವವರಿಂದ, **ಮದೇಕ ಪ್ರಾಪ್ಯತಾ ಬುದ್ಧಿರ್ಹಿ ಪ್ರಕ್ಷೀಣಾಶೇಷಪಾಪಸ್ಯೇವ ಜಾಯತೇ** - ನನ್ನನ್ನೇ ಹೇಗಾದರೂ ಹೊಂದಿಯೇ ತೀರಬೇಕೆಂಬ ಬುದ್ಧಿಯು, ಆ ಕರ್ಮಯೋಗದಿಂದ ನಶಿಸಿ ಹೋದ ಪಾಪವುಳ್ಳ ಅಧಿಕಾರಿಗೆ ಉಂಟಾಗುತ್ತವೆಂಬುದು ನಿಶ್ಚಯವಷ್ಟೇ. ಹೀಗೆ ಪರಭಕ್ತಿಯಿಂದ ಫಲಾಭಿಸಂಧಿರಹಿತನಾಗಿ ಕರ್ಮಯೋಗ ನಿಷ್ಠನಾಗಿರುವವನಿಗೆ ಭಕ್ತಿಯೋಗಾರಂಭಕ್ಕೆ ಬೇಕಾದ ವಿಘ್ನೋಪಶಮನ ಪೂರ್ವಕವಾಗಿ ಪರಜ್ಞಾನ ಉದಿಸುವದು ನಿಸ್ಸಂದೇಹವು ; ತದನಂತರ ಉಪಾಸನವೇ ಸುಲಭವಾಗಿ ಕೈಗೂಡುತ್ತದೆ ಎಂಬ ಭಾವವು. ಹೀಗೆ ಫಲಸಂಗವನ್ನು ತೊರೆಯುವದರಲ್ಲಿ ನೀನು **ಯತಾತ್ಮವಾನ್** ಆಗಿರಬೇಕೆಂದು ಹೇಳಲ್ಪಟ್ಟಿತು, **ಯತಾತ್ಮವಾನ್** ಎಂದರೆ **ಯತಮನಸ್ಕಃ** - ನಿಗ್ರಹಿಸಿದ ಮನಸ್ಸುಳ್ಳವನಾಗಿ ತ್ಯಾಗವನ್ನು ಮಾಡು ಎಂದು ಉಪದೇಶಿಸಿದರು; ಆ ಕರ್ಮಗಳು ಇತರ ಅಲ್ಪಾಸ್ಥಿರ ಸ್ವರ್ಗಾದಿ ಫಲಗಳನ್ನು ಕೊಡಬಹುದು ; ಅವುಗಳಿಗೆ ಆಶೆಪಡದೆ, ಮನಸ್ಸನ್ನು ನಿಗ್ರಹಿಸಿ ಫಲತ್ಯಾಗವನ್ನು ಮಾಡತಕ್ಕದ್ದೆಂದು ಇಲ್ಲಿ ಹೇಳಲ್ಪಟ್ಟಿತು. ಮುಂದೆ ಶ್ಲೋಕತಾತ್ಪರ್ಯವನ್ನು ಸಙ್ಗ್ರಹವಾಗಿ ತೋರಿಸುತ್ತಾರೆ. **ತತಃ** - ಆ ಕಾರಣದಿಂದ, **ಮತ್ಕರ್ಮ ಪರಮ** ನಾಗಲು ಅಸಮರ್ಥತೆಯಿದ್ದ ಪಕ್ಷದಲ್ಲಿ, ಆ ಕಾರಣದಿಂದ, **ಅನಭಿಸಂಹಿತಫಲೇನ** - ಫಲದಲ್ಲಿ ಸಂಬಂಧವನ್ನು ತ್ಯಾಗಮಾಡುವದರಿಂದ, **ಮದಾರಾಧನ ರೂಪದಿಂದ ಅನುಷ್ಠಿಸಲ್ಪಟ್ಟ, ಕರ್ಮಣಾ** - ಆ ಕರ್ಮಯೋಗದ ಕರ್ಮದಿಂದಲೇ, **ಸಿದ್ಧೇನಾತ್ಮಧ್ಯಾನೇನ** - ಲಭಿಸುವ ಪ್ರತ್ಯಗಾತ್ಮಸ್ವರೂಪದ ಸ್ಮೃತಿಯಿಂದ, **ನಿವೃತ್ತಾವಿದ್ಯಾದಿ ಸರ್ವತಿರೋಧಾನೇ** - ಅಜ್ಞಾನ, ಆದಿಶಬ್ದದಿಂದ ಪ್ರಾರಬ್ಧಕರ್ಮ ವಾಸನಾ ಮೊದ

**ಭಾ. ಷತ್ವೈಕಸ್ವರೂಪೇ ಪ್ರತ್ಯಗಾತ್ಮನಿ ಸಾಕ್ಷಾತ್ಕೃತೇ ಸತಿ, ಮಯಿ ಪರಾಭಕ್ತಿಃ ಸ್ವಯಮೇವೋತ್ಪದ್ಯತೇ ; ತಥಾ ಚ ವಕ್ಷ್ಯತೇ - (೧) "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" ಇತ್ಯಾರಭ್ಯ, (೨) "ವಿಮುಚ್ಯ ನಿರ್ಮಮ ಶ್ಶಾನ್ತೋ ಬ್ರಹ್ಮ ಭೂಯಾಯ ಕಲ್ಪತೇ। ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನಕಾಂಕ್ಷತಿ।**

ಲಾದವು ಹೇಳಲ್ಪಟ್ಟವು, ಇಂತಹ ಅಜ್ಞಾನವೇ ಮೊದಲಾದವುಗಳಿಂದುಂಟಾದ ಜ್ಞಾನತಿರೋಧಾನವುಳ್ಳ ಎಂದರೆ ಅಜ್ಞಾನವೆಲ್ಲಾ ಕಳೆದು ಹೋಗಿ ಸುಜ್ಞಾನ ಉಂಟಾಗಿರುವ, ಅಥವಾ **ಅವಿದ್ಯಾ** ಎಂದರೆ ಸಂಸಾರಕ್ಕೆ ಕಾರಣಭೂತವಾದ ಪ್ರಾರಬ್ಧ ಕರ್ಮವು, ಆದಿಶಬ್ದದಿಂದ ಅಜ್ಞಾನ, ಕರ್ಮವಾಸನಾ ಮೊದಲಾದವು ಹೇಳಲ್ಪಟ್ಟಿತೆಂದು ಭಾವಿಸಬಹುದು. ಶ್ರೀ ಪರಾಶರರು, (ವಿ. ಪು. ೬-೭-೬೧) **"ಅವಿದ್ಯಾ ಕರ್ಮ ಸಂಜ್ಞಾನ್ಯಾ ತೃತೀಯಾಶಕ್ತಿ ರಿಷ್ಯತೇ। ಯಯಾ ಕ್ಷೇತ್ರಜ್ಞಶಕ್ತಿ ಸ್ಸಾವೇಷ್ಟಿತಾ ನೃಪ ಸರ್ವಗಾ। ಸಂಸಾರತಾಪಾ ನಖಿಲಾನವಾಪ್ನೋತ್ಯತಿಸಂತತಾನ್"** ಎಂಬಲ್ಲಿ ಕರ್ಮವೆಂದೇ ಅರ್ಥಮಾಡಿ, ಇದರಿಂದ ಬಂಧಿಸಲ್ಪಟ್ಟ ಕ್ಷೇತ್ರಜ್ಞನು ಅನೇಕ ಸಂಸಾರ ತಾಪಗಳನ್ನೆಲ್ಲಾ ಅನುಭವಿಸುವನೆಂದು ಹೇಳಿರುತ್ತಾರೆ. **ಮಚ್ಛೇಷತ್ವೈಕ ಸ್ವರೂಪೇ** - ನನಗೆ ಮಾತ್ರವೇ ಶೇಷಭೂತವಾದ ಸ್ವರೂಪವುಳ್ಳ, **ಪ್ರತ್ಯಗಾತ್ಮನಿ** - ಜೀವಾತ್ಮನು, **ಸಾಕ್ಷಾತ್ಕೃತೇ ಸತಿ** - ಸಾಕ್ಷಾತ್ಕರಿಸಲ್ಪಡಲಾಗಿ, (ಇದು ಕರ್ಮಯೋಗದಿಂದುಂಟಾಗುವ ಪ್ರಯೋಜನವೆಂದು ಹಿಂದಿನ ಷಟ್ಕದಲ್ಲಿ ಹೇಳಲ್ಪಟ್ಟಿರುತ್ತದೆ.) **ಮಯಿ ಪರಾಭಕ್ತಿಃ** - ನನ್ನಲ್ಲಿ ಶ್ರೇಷ್ಠವಾದ ಏಕಾಂತ ಭಕ್ತಿಯು, **ಸ್ವಯಮೇವ ಉತ್ಪದ್ಯತೇ** - ತಾನಾಗಿಯೇ ಹುಟ್ಟುತ್ತದೆ; ಆಗ ಮಿಕ್ಕ ಎಲ್ಲವುಗಳ ಪ್ರಾಪ್ತಿಯೂ, ಕ್ರಮೇಣ ಉಂಟಾಗುತ್ತದೆ. ಆತ್ಮಜ್ಞಾನದಿಂದ ಪರಮಾತ್ಮ ಭಕ್ತಿಯು **ಸ್ವಯಮೇವ ಉತ್ಪದ್ಯತೇ** ತಾನಾಗಿಯೇ ಅಙ್ಕುರಿಸಿ ವೃದ್ಧಿಹೊಂದುತ್ತದೆಂದು ಹೇಳಲ್ಪಟ್ಟಿತಲ್ಲಾ. ಅದು ಹೇಗೆಂದರೆ? ಜೀವಾತ್ಮನಿಗೂ ಪರಮಾತ್ಮನಿಗೂ ಸ್ವಭಾವದಲ್ಲಿ ಸಂಪೂರ್ಣವಾಗಿ ಸಮತ್ವ ಇಲ್ಲದಿದ್ದರೂ, ವಿಶೇಷ ಸಾಮ್ಯವುಂಟು. ತನ್ನ ಸ್ವಭಾವವನ್ನು ಯಾವಾಗ ಚನ್ನಾಗಿ ಅರಿತನೋ, ಪರಮಾತ್ಮನ ಸ್ವಭಾವವು ಹಾಗೆಯೇ ಎಂದು ತಿಳಿಯುಲು ಅನುಕೂಲವಾಗುತ್ತದೆ. ಹೇಗೆಂದರೆ ರಾಜಕುಮಾರನೂ ರಾಜನೂ ಸ್ವಭಾವದಲ್ಲಿ ಇಬ್ಬರೂ ಸಮರು. ಬಾಲ್ಯದಲ್ಲಿ ರಾಜಕುಮಾರನು ಆಟವಾಡುತ್ತಾ ಪಿತೃಗೃಹದಿಂದ ತಪ್ಪಿಸಿಕೊಂಡು ಬಂದು ಒಬ್ಬ ಶಬರನ ಕುಟೀರದ ಬಂಧದಲ್ಲಿ ಬಂದು ಸಿಲುಕಿದರೆ, ರಾಜನಿಗೆ ಸಮಾನವಾದ ಧರ್ಮಗಳು ತನ್ನಲ್ಲಿವೆ ಎಂದು ತಿಳಿದು, ಬಾಲ್ಯಹೋಗಿ ಯವ್ವನ ದಶೆಯು ಉಂಟಾದನಂತರ, ತನ್ನ ಪಿತಾ ಎಲ್ಲಿದ್ದಾನೋ ಅಲ್ಲಿಗೆ ತಾನು ಹೋಗಿ ಸೇರಬೇಕೆಂಬ ಉತ್ಕಟೇಚ್ಛಾ ತಾನಾಗಿಯೇ ಹೇಗೆ ಉಂಟಾಗುತ್ತದೋ ಹಾಗೆ ಎಂಬ ಅಭಿಪ್ರಾಯದಿಂದ **ಸ್ವಯಮೇವ ಉತ್ಪದ್ಯತೇ** ಎಂದು ವ್ಯಾಖ್ಯಾನ ಮಾಡಿರುತ್ತಾರೆ ಇದರಿಂದ ಈ ಅಧ್ಯಾಯದ ಪ್ರಥಮ ಶ್ಲೋಕದಲ್ಲಿ **"ಯೇಚಾಪ್ಯಕ್ಷರ ಮವ್ಯಕ್ತಂ"** ಎಂದು **ಅವ್ಯಕ್ತನುಕ್ಷರ** ಶಬ್ದಗಳಿಂದ ಹೇಳಲ್ಪಟ್ಟ ಪಂಚಾಗ್ನಿ ವಿದ್ಯಾ ಮೊದಲಾದ ಯೋಗಗಳಲ್ಲೂ ಪರಿಶುದ್ಧ ಆತ್ಮಪ್ರಾಪ್ತಿಯುಂಟಾಗಿ, ತನ್ಮೂಲಕವಾಗಿ ಪರಭಕ್ತಿ ಜನನದ್ವಾರಾ ಪರಮಾತ್ಮ ಪ್ರಾಪ್ತಿಯೂ ಲಭಿಸುತ್ತದೆಂಬ ಭಾವವೂ ವ್ಯಕ್ತವು. ಹೀಗೆ ಆತ್ಮಜ್ಞಾನದಿಂದ ಫಲಾಭಿಸಂಧಿ ತ್ಯಾಗವು ಪರಾಭಕ್ತಿಯನ್ನುಂಟುಮಾಡುತ್ತದೆಂದು ಹೇಳಿದರಲ್ಲಾ, ಹಾಗೆ ಎಲ್ಲಿ ಹೇಳಿರುತ್ತದೆ ಎಂದು ಕೇಳಿದರೆ, ಅಂತಹ ಪ್ರಮಾಣಗಳನ್ನು ಉದಾಹರಿಸುತ್ತಾರೆ.— ಅಂತಹ ಫಲಾಭಿಸಂಧಿರಹಿತವಾದ ಕರ್ಮಾನುಷ್ಠಾನದಿಂದಲೇ ಸಿದ್ಧಿಯುಂಟು ಎಂದು **"ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ"** (ಗೀ. ೩-೨೦) ಎಂಬಲ್ಲಿ ಹೇಳಿದ ಅರ್ಥವನ್ನು

(೧) ಗೀ. ೧೮. ೪೬. (೨) ಗೀ. ೧೮. ೫೩-೪.

**ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ" ಇತಿ ॥ ೧೧ ॥**

**ಪು**ನಃ ೧೮ ನೇ ಅಧ್ಯಾಯದಲ್ಲೂ ತೋರಿಸಿದವರಾಗಿ, ಅದು ಹೇಗೆ ಪರಾಭಕ್ತಿಯನ್ನುಂಟುಮಾಡಿ ಸಂಸಿದ್ಧಿದಾಯಕವೆಂದು ಅದೇ ಅಧ್ಯಾಯದ ಮುಂದಿನ ಶ್ಲೋಕಗಳಿಂದ ಪ್ರದರ್ಶಿಸುತ್ತಾರೆ.— ಹಿಂದೆ ಹೇಳಿದುದರ ಅನುವಾದವೆಂದು ಈ ಪ್ರಮಾಣಗಳನ್ನು ಭಾವಿಸತಕ್ಕದ್ದು. ಆದರೆ ಹಿಂದೆ ಹೇಳಿದುದನ್ನು ಬಿಟ್ಟು ಮುಂದೆ ಹೇಳಿರುವದನ್ನು ಉದಾಹರಿಸಿದುದು ಏಕೆ? ಎಂದರೆ ಅನುವಾದ ದಲ್ಲಿ ಸಙ್ಗ್ರಹಿಸುವದರಿಂದ ಪ್ರಮಾಣಗಳ ಪರಸ್ಪರ ಸಂಬಂಧವು ಚನ್ನಾಗಿ ದ್ಯೋತಿತವೆಂಬಭಿ ಪ್ರಾಯದಿಂದ ಈ ಪ್ರಮಾಣಗ್ರಹಣವು. ಹಿಂದೆಯೂ ಹೇಳಿದುದಲ್ಲದೆ ಮುಂದೆಯೂ ಅನುವಾದ ಮುಖೇನ ಸಮರ್ಥಿಸಲ್ಪಟ್ಟಿರುತ್ತದೆಂದು **ತಥಾಚ ವಕ್ಷ್ಯತೇ**- ಎಂದು ಹೇಳುತ್ತಾರೆ. ಈ ಅಭಿ ಪ್ರಾಯವೇ ಮುಂದೆ ಹೇಳಲ್ಪಡುತ್ತದೆ. **ಸ್ವಕರ್ಮಣಾ** – ತಮ್ಮ ತಮ್ಮ ಕರ್ಮಗಳಿಂದಲೇ **ತಮಭ್ಯರ್ಚ್ಯ** – ಆತನನ್ನು ಆರಾಧಿಸಿದವರಾಗಿ, ಹೇಗೆ ಎಂದರೆ ಕರ್ಮ, ಕರ್ತೃತ್ವ, ಫಲಾಧಿಗಳನ್ನು ನನ್ನಲ್ಲಿ ಸಮರ್ಪಿಸಿ ಆರಾಧಿಸುವರಾಗಿ, **ಸಿದ್ಧಿಂ ವಿನ್ದತಿ ಮಾನವಃ** – ನನ್ನ ಅನುಗ್ರಹದಿಂದ ನನ್ನ ಪ್ರಾಪ್ತಿಯನ್ನು ಹೊಂದುವನು" ಎಂದು, **ಆರಭ್ಯ** - ಆರಂಭಿಸಿ, **ವಿಮುಚ್ಯ** – ಕಾಮ ಕ್ರೋಧಾದಿ ಗಳನ್ನು ಎಂದು ಹಿಂದೆ ಇದೆ, ಇವುಗಳನ್ನೆಲ್ಲಾ ಪರಿತ್ಯಾಗಮಾಡಿ, **ನಿರ್ಮಮಃ** – ಆತ್ಮಾವಲ್ಲದ ಇತರ ಭೋಗ್ಯವಸ್ತುಗಳಲ್ಲಿ ಮಮತೆ ಇಲ್ಲದವನಾಗಿ, **ಶಾನ್ತಃ** – ಬಹಿರೀಂದ್ರಿಯಗಳಿಗೂ ವಶ ನಾಗದೆ, ತಾನು ಈ ವಸ್ತುಗಳಿಗಿಂತಲೂ ವಿಲಕ್ಷಣನೆಂಬ ಜ್ಞಾನಯುಕ್ತನಾಗಿ, ಹೀಗೆ ಭಕ್ತಿಯೋಗ ದಲ್ಲಿಳಿದು ಪರಮಾತ್ಮೋಪಾಸನೆಯನ್ನು ಮಾಡುವ ಜ್ಞಾನಿಯು, **ಬ್ರಹ್ಮಭೂಯಾಯ ಕಲ್ಪತೇ**- ತನ್ನ ಶುದ್ಧಾತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಿದವನಾಗುತ್ತಾನೆ, ಹೀಗೆ **ಬ್ರಹ್ಮಭೂತಃ** – ತನ್ನ ನೈಜಸ್ವರೂಪವನ್ನು ತಿಳಿದು ತಾನು ಪರಮಾತ್ಮನಿಗೆ ಶೇಷನು ಅಧೀನನೆಂದು ತಿಳಿದವನು, **ಪ್ರಸ ನ್ನಾತ್ಮಾ** – ಶಾನ್ತಿಯನ್ನು ಹೊಂದಿದ ಮನಸ್ಸುಳ್ಳವನು, ಈ ಲೋಕದ ವಸ್ತುಗಳಲ್ಲಿ ಅನುಕೂಲ ಪ್ರತಿಕೂಲ ಜ್ಞಾನವಿಲ್ಲದುದರಿಂದ, **ನಕಾಂಕ್ಷತಿ** – ಯಾವುದನ್ನೂ ಅಪೇಕ್ಷಿಸುವದಿಲ್ಲವು; ಐಹಿಕ ಭೋಗಗಳು ಯಾವುವೂ ಆತನಿಗೆ ಬೇಕಾಗಿ ಇಲ್ಲವು, **ನಶೋಚತಿ** – ಇಲ್ಲದುದಕ್ಕಾಗಿ ಶೋಕಿಸು ವದಿಲ್ಲವು. **ಸರ್ವಭೂತೇಷು** – ಅನುಕೂಲ ಪ್ರತಿಕೂಲರೂ ಮತ್ತು ಅನುಭಯರೂ ಆದ ಸರ್ವ ಪ್ರಾಣಿಗಳಲ್ಲೂ, **ಸಮಃ** – ಜ್ಞಾನೈಕಾಕಾರತೆಯಿಂದಲೂ, ಎಲ್ಲರೂ ಸರ್ವೇಶ್ವರನ ಸ್ವತ್ತಾಗಿರುವದ ರಿಂದಲೂ, ಸಮರು ಎಂದು ಸಮಭಾವವುಳ್ಳವನಾಗಿರುವವನು, ನಾಲ್ಕುವಿಧ ಸಮಭಾವವು ಕರ್ಮ ಯೋಗಿಗೆ ಇರಬೇಕೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. (ಗೀ. ೬. ೨೯-೩೨ ಶ್ಲೋಕಗಳನ್ನು ನೋಡಿ) **ಮದ್ಭಕ್ತಿಂ ಲಭತೇ ಪರಾಂ** – ನನ್ನಲ್ಲೀ ಶ್ರೇಷ್ಠವಾದ ಏಕಾಂತ ಭಕ್ತಿಯುಳ್ಳವನಾಗು ವನು; **ಇತಿ**-ಎಂದು ಹೇಳಲ್ಪಟ್ಟಿರುತ್ತದೆ. ಬ್ರಹ್ಮಭೂತನಾಗುವದರಿಂದ ಪರಾಭಕ್ತಿಯು ಲಭಿಸುತ್ತ ದೆಂದು ಹೀಗೆ ಹೇಳಿ, ಮುಂದೆ ಪರಮಾತ್ಮಪ್ರಾಪ್ತಿಯು ಹೇಗೆ ಉಂಟಾಗುತ್ತದೆಂದು ಇಲ್ಲಿ ನಾಲ್ಕು ಶ್ಲೋಕಗಳಿಂದ ಉಪದೇಶಿಸಿದುದನ್ನೆಲ್ಲಾ ಒಂದೇ ಶ್ಲೋಕದಲ್ಲಿ ಅಲ್ಲಿ ಸಙ್ಗ್ರಹಿಸಿ ಹೇಳುತ್ತಾರೆ ಅದು ಯಾವುದೆಂದರೆ **ಚೇತಸಾಸರ್ವಕರ್ಮಾಣಿ ಮಯಿ ಸನ್ನ್ಯಸ್ಯ** ಎಂಬುದರಿಂದ ಈ ಶ್ಲೋಕಾ ರ್ಥವೂ, **ಮತ್ಪರಃ** ಎಂಬುದರಿಂದ ಹಿಂದಿನ ಶ್ಲೋಕಾರ್ಥವೂ, **ಬುದ್ಧಿಯೋಗಮುಪಾಶ್ರಿತ್ಯ** – ಎಂಬುದರಿಂದ ಅದರ ಹಿಂದಿನ ಶ್ಲೋಕದಲ್ಲಿ ಹೇಳಿದ ಅಭ್ಯಾಸ ಯೋಗಾಭಿಪ್ರಾಯವೂ, **ಮಚ್ಚಿತ್ತ ಸ್ಸತತಂಭವ** ವೆಂಬುದರಿಂದ ಅದರ ಹಿಂದಿನಶ್ಲೋಕದಲ್ಲಿ ಹೇಳಲ್ಪಟ್ಟಯೋಗ ನಿಷ್ಪತ್ತಿಗೆ ಬೇಕಾದ ಚಿತ್ತಸಮಾಧಾನವು ಅನುವಾದಮಾಡಿ ಹೇಳಲ್ಪಟ್ಟಿರುತ್ತದೆ. ಇದು ೧೮ನೆಯ ಅಧ್ಯಾಯದ ೫೭ ನೆಯ ಶ್ಲೋಕವು. ಅದರ ಮುಂದೆ, ಯಾವಾಗ ಮಚ್ಚಿತ್ತರಾದರೋ ಆಗ **"ತೇಷಾಮಹಂ ಸಮುದ್ಧರ್ತಾ ಮೃತ್ಯು ಸಂಸಾರಸಾಗರಾತ್"** ಎಂದು ಇಲ್ಲಿ ೭ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ

**ಮೂ. ಶ್ರೇಯೋ ಹಿ ಜ್ಞಾನ ಮಭ್ಯಾಸಾ ಜ್ಞಾನಾ ದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗ ಸ್ತ್ಯಾಗಾ ಚ್ಛಾಂತಿರನನ್ತರಮ್ ॥ ೧೨.**

ಅಭಿಪ್ರಾಯವನ್ನೂ ಅನುವಾದ ಮಾಡಿ, **"ಮಚ್ಚಿತ್ತ ಸ್ಸರ್ವದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ"** ಎಂಬ (ಗೀ. ೧೮. ೫೮) ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಆಗಲಿ ಈ ಅಭಿಪ್ರಾಯಗಳು, ಹಿಂದೆಯೂ ಎಲ್ಲಿ ಹೇಳಲ್ಪಟ್ಟಿವೆ ಎಂದರೆ **"ಲಭನ್ತೇ ಬ್ರಹ್ಮ ನಿರ್ವಾಣಂ ಋಷಯಃ ಕ್ಷೀಣಕಲ್ಮಷಾಃ । ಛಿನ್ನ ದ್ವೈಧಾಯತಾತ್ಮಾನಃ"** (ಗೀ. ೫. ೨೫) ಎಂಬಲ್ಲಿಯೂ, **ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ** (ಗೀ. ೩. ೧೯) ರಲ್ಲೂ ಸಹ ಕರ್ಮ ಯೋಗದಿಂದ ಆತ್ಮಾನುಭವವೂ, **"ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ,"** ಕರ್ಮ ಯೋಗವು ಆತ್ಮಾವಲೋಕನ ಪರಭಕ್ತಿ ನಿಷ್ಪತ್ತಿ ಮೊದಲಾದ ಮೋಕ್ಷೋಪಾಯಕ್ಕೆ ಸಾಧನವೆಂದೂ ಹೇಳಿದುತ್ತದೆ.

ಆದುದರಿಂದ ನಿಷ್ಪನ್ನಯೋಗಿಗೇನೇ ಮೋಕ್ಷವು. ಆ ಭಕ್ತಿಯೋಗ ನಿಷ್ಪತ್ತಿ ತನ್ನ ಶಕ್ತ್ಯನುಸಾರ, ಈ ಮೂರುವಿಧ ಸಾಧನೆಗಳಲ್ಲಿ ಯಾವುದರಲ್ಲಿ ತನಗೆ ಯೋಗ್ಯತೆಯುಂಟೋ ಅದನ್ನು ಅವಲಂಬಿಸಿ, ಭಕ್ತಿಯೋಗವನ್ನು ಸುಲಭವಾಗಿಯೂ ಶೀಘ್ರವಾಗಿಯೂ ಸಾಧಿಸಬಹುದು. ಆ ಕಾರಣದಿಂದ ತನ್ನ ಉಪಾಸನೆಯಲ್ಲೇ ಯುಕ್ತತಮತ್ವವು ಎಂದರೆ ಸರ್ವ ಶ್ರೇಷ್ಠತೆಯುಂಟು ಎಂಬುದು ಶ್ರೀ ಗೀತಾಚಾರ್ಯರ ಉಪದೇಶವು. ॥ ೧೧ ॥

**ಅವತಾರಿಕೆಯು.**—ಹಿಂದಿನ ಮೂರು ಶ್ಲೋಕಗಳಿಂದಲೂ ಕಷ್ಟವಾದ ಭಕ್ತಿಯೋಗಾರಂಭಕ್ಕೆ ಆವಶ್ಯಕವಾದ ಚಿತ್ತ ಸಮಾಧಾನದಿಂದ ಮನಸ್ಸನ್ನೂ ಬುದ್ಧಿಯನ್ನೂ ಪರಮಾತ್ಮನಲ್ಲಿಡಲು ಅಶಕ್ತತೆಯಿಂದ ಚಂದ್ರನನ್ನು ನೋಡಿ ಆತನನ್ನು ಹೊಂದಬೇಕೆಂಬ ಆಶೆಯಿಂದ ದುಃಖಿಸುವ ಬಾಲನ ತೆರದಿ ಶೋಕಿಸುತ್ತಿದ್ದ ಅರ್ಜುನನಿಗೆ, ಚಿತ್ತ ಸಮಾಧಾನವನ್ನು ಹೊಂದಿ ಆತನನ್ನು ಧ್ಯಾನಿಸುವ ಸಾಧನಗಳು ಅಭ್ಯಾಸ, ಮತ್ಕರ್ಮ ಪರತ್ವ, ಸರ್ವಕರ್ಮ ಫಲತ್ಯಾಗವೆಂದು ಆಯಾ ಅಧಿಕಾರಿಗಳಗನುಗುಣವಾಗಿ ಉಪದೇಶಿಸಿದರು. ಈಗ ಈ ಶ್ಲೋಕದಲ್ಲಿ ಈ ಸಾಧನಗಳಲ್ಲಿ ಕೊನೆಗೆ ಹೇಳಿದ ಸರ್ವಕರ್ಮ ಫಲತ್ಯಾಗವೇ ಅತ್ಯುತ್ತಮ ಸಾಧನವೆಂದೂ, ಅದನ್ನೇ ನೀನು ಅವಲಂಬಿಸಬಹುದು ಎಂದೂ, ಹೇಳಿ ಈ ಕೊನೆಯ ಸಾಧನವಾದ ಸರ್ವಕರ್ಮ ಫಲತ್ಯಾಗವನ್ನವಲಂಬಿಸಿದರೆ ನಿನಗೆ ಭಕ್ತಿಯೋಗವು ಖಂಡಿತವಾಗಿಯೂ ಕೈಗೂಡುತ್ತದೆ ಎಂದು ಅದನ್ನೇ ಅನುವಾದ ಮಾಡಿ ಉಪದೇಶಿಸುತ್ತಾರೆ. ಮೊದಲಿನ ಆರು ಅಧ್ಯಾಯಗಳಿಂದಲೂ ಹೇಳಲ್ಪಟ್ಟ ಕರ್ಮಯೋಗವನ್ನೇ ಅನುಷ್ಠಿಸುತ್ತಾ ಬಂದರೆ, ಭಕ್ತಿಯೋಗಾರಂಭಕ್ಕೆ ವಿಘ್ನಗಳಾದ ಪಾಪಗಳೆಲ್ಲವೂ ತೊಲಗುವದರಿಂದ, ಆತ್ಮಾವಲೋಕನ ಸಿದ್ಧಿಯುಂಟಾಗಿ, ನನ್ನ ಅನುಗ್ರಹದಿಂದ ಬುದ್ಧಿಯೋಗವೂ, ಐಕಾಂತ್ಯವೂ ಲಭಿಸುವದರಿಂದ ಪರಭಕ್ತಿಯು ಸಿದ್ಧಿಸುತ್ತದಾದುದರಿಂದ ಈ ವಿಷಯದಲ್ಲಿ ನೀನು ಚಿಂತಿಸಬೇಕಾದ ಕೆಲಸವಿಲ್ಲವೆಂದು ಪರಮಕೃಪಯಾ ಉಪದೇಶಿಸುತ್ತಾರೆ.—

**ಮೂಲಕ್ಕೆ ಅರ್ಥವು**—ಹಿಂದೆ ಹೇಳಿದ ಸರ್ವ ಕರ್ಮಫಲತ್ಯಾಗರೂಪಕರ್ಮಯೋಗವೇ ನಿನಗೆ ಹಿತವನ್ನುಂಟುಮಾಡುವದರಲ್ಲಿ ಸರ್ವೋತ್ಕೃಷ್ಟ ಸಾಧನವೆಂದು ಶ್ಲಾಘಿಸುತ್ತಾರೆ— **ಅಭ್ಯಾಸಾತ್**- ಪರಮಾತ್ಮೋಪಾಸನದಲ್ಲಿ ಆತನ ಕಲ್ಯಾಣ ಗುಣಗಳ ಸ್ಮರಣ ಮೊದಲಾದವುಗಳ ಮೂಲಕ ಮಾಡುವ ಉಪಾಸನಕ್ಕಿಂತಲೂ, ಇಲ್ಲಿ ಪ್ರಯೋಗಿಸಿರುವ **ಅಭ್ಯಾಸಾತ್** ಎಂಬ ಪ್ರಯೋಗವು ಉಪಲಕ್ಷಣಾರ್ಥವಾಗಿ ಉಪಯೋಗಿಸಿರುವದರಿಂದ **ಮತ್ಕರ್ಮ ಪರತ್ವಕಿಂತಲೂ** ಎಂದೂ ಇಟ್ಟುಕೊಳ್ಳತಕ್ಕದ್ದು. **ಜ್ಞಾನಂ** - ತನ್ನ ಆತ್ಮ ಸಾಕ್ಷಾತ್ಕಾರ ರೂಪಜ್ಞಾನವು, **ಶ್ರೇಯೋಹಿ** -

ಉಪಾಸನಸಿದ್ಧಿಗೆ ಉಪಯುಕ್ತವಾಗುವದರಿಂದ, ತುಂಬಾ ಒಳ್ಳೇದು. ಮುಮುಕ್ಷುವಿಗೆ ಸುಕರವಾಗಿ ಹಿತಕರವಾದುದು ಎಂಬರ್ಥವು. ಪರಮಾತ್ಮೋಪಾಸನೆಗೆ ಬೇಕಾದ ಚಿತ್ತೈಕಾಗ್ರತೆ ಉಂಟಾಗುವದು ಕಷ್ಟವು, ಆದುದರಿಂದ ಆತ್ಮ ಸಾಕ್ಷಾತ್ಕಾರವು ಭಕ್ತಿಯೋಗಕ್ಕೆ ಅಙ್ಗವಾಗಿ, ಭಕ್ತಿಯೋಗಕ್ಕೆ ಸಾಧಕವಾಗಿಯೂ ಹಿಂದೆಯೇ ಹೇಳಲ್ಪಟ್ಟಿರುವದಲ್ಲದೆ, ದಹರವಿದ್ಯಾದಿಗಳಲ್ಲೂ ಶ್ರುತಿಗಳಲ್ಲಿ ಈ ಉಪದೇಶವು ಹಿಂದೆಯೇ ವ್ಯಕ್ತಪಡಿಸಿರುತ್ತದೆ. ಮೂರನೆಯ ಅಧ್ಯಾಯದ ಅವತಾರಿಕೆಯನ್ನು ಪರಾಂಬರಿಸಿ. ಆದರೆ ಇಂತಹ ಜ್ಞಾನಯೋಗ ನಿಷ್ಠೆಯು ಕಷ್ಟವೆಂದೂ **"ಕರ್ಮಜ್ಯಾಯೋ ಹ್ಯಕರ್ಮಣಃ** (ಗೀ. ೩. ೮.) ಎಂಬಲ್ಲಿ ಜ್ಞಾನ ನಿಷ್ಠೆಗಿಂತಲೂ ಕರ್ಮನಿಷ್ಠೆಯೇ ಸುಕರವೆಂದು ಪರಮಕೃಪಯಾ ಉಪದೇಶಿಸಿದನ್ನು ಮನಸ್ಸಿನಲ್ಲಿಟ್ಟು ಮುಂದಕ್ಕೆ ಹೇಳುತ್ತಾರೆ.— **ಜ್ಞಾನಾದ್ಧ್ಯಾನಂ ವಿಶಿಷ್ಯತೇ - ಜ್ಞಾನಾತ್** - ಆತ್ಮ ಸಾಕ್ಷಾತ್ಕಾರ ರೂಪವಾದ ಜ್ಞಾನಯೋಗನಿಷ್ಠೆಗಿಂತಲೂ, **ಧ್ಯಾನಂ** - ಆತ್ಮಸ್ವರೂಪವಿಷಯಕ ಚಿಂತನವು, ಆರನೆಯ ಅಧ್ಯಾಯದಲ್ಲಿ ಹೇಳಿದುದು ; **ವಿಶಿಷ್ಯತೇ** - ಸುಕರವಾಗಿ ಉತ್ತಮವು, ಸುಲಭವೆಂಬ ಭಾವವು. ಇದು **ಶ್ರೇಯಃ** ಎಂದು ಹೇಳಿರುವದರ ಅರ್ಥವೇ. **ಧ್ಯಾನಾತ್** - ಇಂತಹ ಕೇವಲ ಆತ್ಮಸ್ವರೂಪ ಚಿಂತನೆಕ್ಕಿಂತಲೂ, **ಕರ್ಮಫಲತ್ಯಾಗಃ** - ಆತ್ಮ ಯಾಥಾತ್ಮ್ಯ ಜ್ಞಾನದೊಂದಿಗೆ ಕರ್ಮಯೋಗದ ಸರ್ವಕರ್ಮಗಳನ್ನೂ ಫಲಾಭಿಸಂಧಿ ರಹಿತನಾಗಿ ನನ್ನ ಪ್ರೀತ್ಯರ್ಥವಾಗಿ ಅನುಷ್ಠಿಸೋಣವು, **ವಿಶಿಷ್ಯತೇ** - ಅದಕ್ಕೂ ಸುಲಭವಾಗಿ ಉತ್ತಮವು ; ಎಲ್ಲಾದಕ್ಕಿಂತಲೂ ಉತ್ತಮವು, ಆದುದರಿಂದ ಮನಸ್ಸನ್ನೂ ಬುದ್ಧಿಯನ್ನೂ ನನ್ನಲ್ಲಿಡಲು ಕೊನೆಯಲ್ಲಿ ಹೇಳಿದ ಸಾಧನವಾದ ಸರ್ವಕರ್ಮ ಫಲತ್ಯಾಗವನ್ನು ಎಂದರೆ ಫಲಾಬಿಸಂಧಿ ರಹಿತವಾದ ಕರ್ಮಯೋಗಾನುಷ್ಠಾನವನ್ನು ಮಾಡುತ್ತಾ ಬಂದರೆ ನಿನಗೆ ಎಲ್ಲವೂ ಕ್ರಮವಾಗಿ ಕೈಗೂಡುತ್ತಾ ಬರುತ್ತದೆ ಎಂದು, ಮುಂದೆ **ತತಶ್ಶಾನ್ತಿರನನ್ತರಂ** ಎಂಬ ಅರ್ಥಗರ್ಭಿತ ವಾಕ್ಯದಿಂದ ತಿಳಿಸುತ್ತಾರೆ. **ತತಃ** ತನ್ಮೂಲಕವಾಗಿ ಎಂದರೆ **ಈ ಸರ್ವಕರ್ಮಫಲತ್ಯಾಗ** ಸಾಧನ ಮೂಲಕವಾಗಿ, **ಅನಂತರಂ** - ಕ್ಷಿಪ್ರದಲ್ಲೇ, **ಶಾನ್ತಿಃ** - ಭಕ್ತಿಯೋಗವನ್ನವಲಂಬಿಸಲು ಬೇಕಾದ ಮನಶ್ಶಾನ್ತತೆಯುಂಟಾಗುತ್ತದೆ ಯಾವಾಗ ಮನಶ್ಶಾನ್ತತೆಯು ನನ್ನ ಕೃಪೆಯಿಂದುಂಟಾಯಿತೋ, ಆಗ ನಿನಗೆ ಭಕ್ತಿಯೋಗಾರಂಭಕ್ಕೂ, ತದಬಿವೃದ್ಧಿಗೂ, ತನ್ನಿಷ್ಪತ್ತಿಗೂ, ಬೇಕಾದ ಮನಶ್ಶಾನ್ತತೆಯುಂಟಾಗುತ್ತದೆ. ಯಾವಾಗ ಮನಶ್ಶಾನ್ತತೆಯು ನನ್ನ ಕೃಪೆಯಿಂದುಂಟಾಯಿತೋ, ಆಗ ನಿನಗೆ ಭಕ್ತಿಯೋಗಾರಂಭಕ್ಕೂ, ತದಭಿವೃದ್ಧಿಗೂ, ತನ್ನಿಷ್ಪತ್ತಿಗೂ, ಬೇಕಾದ ಎಲ್ಲಾ ಸಾಧನಗಳೂ ಲಭಿಸುತ್ತವೆ. ಹೇಗೆಂದರೆ ಯಾವಾಗ **ಆತ್ಮಧ್ಯಾನವು** ಎಂದರೆ ಆತ್ಮ ಯಾಥಾತ್ಮ್ಯ ಚಿಂತನೆಯು ಲಭಿಸಿತೋ, ಆಗ ಜ್ಞಾನವು ಎಂದರೆ ಭಕ್ತಿಯೋಗಕ್ಕೆ ಬೇಕಾದ ಜೀವಾತ್ಮಸಾಕ್ಷಾತ್ಕಾರವು ಎಂದರೆ ಆತ್ಮಾವಲೋಕನವು ಲಭಿಸುತ್ತದೆ ತನ್ಮೂಲಕ ಮನಸ್ಸಿನ ಶಾನ್ತತೆ ದೊರೆಯುವದರಿಂದ ಉಪಾಸನವು ಕೈಗೂಡುತ್ತವೆಂಬ ಭಾವವು. ಇಲ್ಲಿ ಬೇಕಾದುದು ಚಿತ್ತಸ್ವಾಸ್ಥ್ಯವು. ಅದಕ್ಕೆ ಸರ್ವೋತ್ಕೃಷ್ಟ ಸಾಧನವು, ಯಾವುದೆಂದರೆ ಆತ್ಮಯಾಥಾತ್ಮ್ಯಜ್ಞಾನದೊಂದಿಗೆ ಸರ್ವ ಕರ್ಮಫಲ ತ್ಯಾಗದೊಂದಿಗೆ ಭಗವದರ್ಪಣ ಬುದ್ಧಿಯಿಂದ ಅನುಷ್ಠಿಸುವ ಕರ್ಮಯೋಗವೆಂದು ಹೇಳಿದರು. ಇದರಿಂದ ಒಡನೆಯೇ ಆತ್ಮಧ್ಯಾನವೇನು ಆತ್ಮಜ್ಞಾನವೇನು ಚಿತ್ತಶಾಂತತೆ ಏನು, ಸುಕರವಾಗಿ ಪರಭಕ್ತಿಯೇನು, ಇವೆಲ್ಲಾ ಜನಿಸುತ್ತವೆ ಎಂಬ ಭಾವವು. ಆದುದರಿಂದ ಓ ಅರ್ಜುನನೇ ನೀನು ಅವಲಂಬಿಸತಕ್ಕದ್ದು ಹಿಂದಿನ ಶ್ಲೋಕದಲ್ಲಿ ಹೇಳಿದ ಸಾಧನವೇ ಎಂದು ತಿಳಿಸಿದರು. ಇದೂ ಹಿಂದೆಯೇ **"ನಿಯತಂಕುರುಕರ್ಮತ್ವಂ"** ಎಂಬಲ್ಲೂ ಮತ್ತು **"ಕುರುಕರ್ಮೈವತಸ್ಮಾತ್ತ್ವಂ"** ಎಂಬಲ್ಲೂ, ಹೇಳಿದುದನ್ನೇ ಇಲ್ಲಿ ಅನುವಾದ ಮಾಡಿ ಉಪದೇಶಿಸಿದರು. **ಈ ಸಾಧನದ ಮೂಲಕ ಸರ್ವವೂ ಸಿದ್ಧಿಸುತ್ತದೆ ಎಂಬಭಿಪ್ರಾಯವು ;**

**ಭಾ. ಅತ್ಯರ್ಥಪ್ರೀತಿ ವಿರಹಿತಾ ತ್ಕರ್ಕಶರೂಪಾತ್ ಸ್ಮೃತ್ಯಭ್ಯಾಸಾ ದಕ್ಷರಯಾಥಾ ತ್ಮ್ಯಾನುಸಂಧಾನ ಪೂರ್ವಕಂ ತದಾಪರೋಕ್ಷ್ಯಜ್ಞಾನ ಮೇವಾತ್ಮಹಿತತ್ವೇ ವಿಶಿಷ್ಯ ತೇ ; ಆತ್ಮಾಪರೋಕ್ಷ್ಯಜ್ಞಾನಾ ದಪ್ಯ ನಿಷ್ಪನ್ನರೂಪಾ ತ್ತದುಪಾಯ ಭೂತಾऽತ್ಮ**

ಹಿಂದೆಯೇ ೨-೫೧ ನೆಯ ಶ್ಲೋಕವಾದ **"ಕರ್ಮಜಂ ಬುದ್ಧಿಯುಕ್ತಾಹಿ ಫಲಂ ತ್ಯಕ್ತ್ವಾಮನೀಷಿಣಃ। ಜನ್ಮಬಂಧ ವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಂ"** ಎಂಬಲ್ಲಿನ ಅರ್ಥವನ್ನೇ ಇಲ್ಲಿ ಸ್ಪಷ್ಟೀಕರಿಸಿದರು.

**ಭಾಷ್ಯಾರ್ಥವು :**—ಶೀಘ್ರ ಫಲದಾಯವಾಗುವಹಾಗೆ ಉಪಾಸನೆಯನ್ನು ಆರಂಭಿಸಲು ತನಗೆ ಸಾಮರ್ಥ್ಯವಿಲ್ಲವೇ ಎಂಬ ದುಃಖವನ್ನು ಹೋಗಲಾಡಿಸುವದಕ್ಕಾಗಿ, ಉಪಾಸನೆಯು ಶೀಘ್ರದಲ್ಲಿ ಕೈಗೂಡುವದಕ್ಕಾಗಿ **"ಸರ್ವಕರ್ಮಫಲತ್ಯಾಗ"** ರೂಪವಾದಕರ್ಮಯೋಗಸಾಧನವನ್ನು ಶ್ಲಾಘಿಸಿ ಅದನ್ನೇ ನೀನು ಅವಲಂಬಿಸತಕ್ಕದ್ದೆಂದು ಉಪದೇಶಿಸುತ್ತಾರೆ. ಕರ್ಮಯೋಗವನ್ನು ಅನುಷ್ಠಿಸು ; ಕ್ಷತ್ರಿಯನಿಗೆ ಕರ್ತವ್ಯವಾದ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ನಿತ್ಯ ನೈಮಿತ್ತಿಕಗಳೊಂದಿಗೆ ನೀನು ಅನುಷ್ಠಿಸತಕ್ಕದ್ದು ಎಂದು ಪದೇ ಪದೇ ಪಲ್ಲವಿಯ ರೂಪದಲ್ಲಿ ತಿಳಿಸುತ್ತಾರೆ. ನೀನು ಹೀಗೆ ವಿಹಿತ ಕರ್ಮಗಳನ್ನು ಫಲಾಭಿ ಸಂಧಿ ರಹಿತನಾಗಿ ಪರಮಾತ್ಮನಾದ ನನ್ನಲ್ಲಿ ಸಮರ್ಪಿಸಿಬಿಟ್ಟರೆ, ಭಕ್ತಿಯೋಗಕ್ಕೆ ಬೇಕಾದ ಐಕಾಂತ್ಯಕ್ಕೆ ಪ್ರತಿಬಂಧಕ ಪಾಪಗಳೆಲ್ಲಾ ನನ್ನ ಅನುಗ್ರಹದಿಂದ ತೊಲಗಿ, ಐಕಾಂತ್ಯಕ್ಕೆ ಬೇಕಾದ ಚಿತ್ತಶಾಂತತೆಯು ಉಂಟಾಗಿ, ಪರಭಕ್ತಿಯು ನೆಲೆಗೊಳ್ಳುತ್ತದೆಂದು ಇನ್ನೊಂದು ಸಲ ಹಿಂದೆ ಹೇಳಿದುದನ್ನೆಲ್ಲಾ ಸ್ಮೃತಿಪಥಕ್ಕೆ ತರುತ್ತಾರೆ.— **ಅತ್ಯರ್ಥ ಪ್ರೀತಿ ವಿರಹಿತಾತ್** - ನಿರತಿಶಯ ಪ್ರೀತಿಯು ಇಲ್ಲದಿರುವ, ಆ ಕಾರಣದಿಂದ, **ಕರ್ಕಶ ರೂಪಾತ್** - ಕ್ಲೇಶವಾಗಿ ತೋರುವ, **ಸ್ಮೃತ್ಯಭ್ಯಾಸಾತ್** ಭಗವಂತನ ಸ್ಮರಣ ರೂಪ ದಿವ್ಯ ಮಂಗಳವಿಗ್ರಹದ ಉಪಾಸನೆಗಿಂತಲೂ ಇದು, **ಅಭ್ಯಾಸಾತ್** - ಎಂಬುದರ ವ್ಯಾಖ್ಯಾನವು, **"ಆರಂಭಣ ಸಂಶೀಲನಂ ಪುನಃ ಪುನಃ ಅಭ್ಯಾಸಃ"** ಎಂದು ಶ್ರೀ ಯತಿವರ್ಯರು ವ್ಯಾಖ್ಯಾನ ಮಾಡಿರುತ್ತಾರೆ (ಶ್ರೀ ಭಾಷ್ಯ ೧. ೧. ೧.) ಆರಂಭಣವೆಂದರೆ ಆಲಂಬನವು, ಶುಭಾಶ್ರಯವು ; ಅದರ ಪುನಃ ಪುನಃ ಸಂಶೀಲನವು ಅಭ್ಯಾಸವು. ಮುಂದೆ **ಶ್ರೇಯೋಹಿ ಜ್ಞಾನಂ** ಎಂಬುದಕ್ಕೆ ಅರ್ಥವನ್ನು ಬರೆಯುತ್ತಾರೆ.—**ಅಕ್ಷರ ಯಾಥಾತ್ಮ್ಯಾನು ಸಂಧಾನ ಪೂರ್ವಕಮ್ ತದಾಪರೋಕ್ಷ್ಯ ಜ್ಞಾನಮೇವ** - ಪರಿಶುದ್ಧ ಸ್ವರೂಪ ಸ್ವಭಾವಗಳುಳ್ಳ ಪ್ರತ್ಯಗಾತ್ಮನ ಅನುಸಂಧಾನ ಪೂರ್ವಕವಾಗಿ ಆ ಪ್ರತ್ಯಗಾತ್ಮನನ್ನು ಸಾಕ್ಷಾತ್ಕರಿಸಿದ ಜ್ಞಾನವೆ, ಎಂದರೆ ಜ್ಞಾನಯೋಗನಿಷ್ಠೆಯಾಗಲಿ, ಅಥವಾ ಆತ್ಮಾವಲೋಕನವಾಗಲಿ, **ಆತ್ಮಹಿತತ್ವೇ ವಿಶಿಷ್ಯತೇ** - ತನ್ನ ಆತ್ಮಾವಿಗೆ ಹಿತವನ್ನುಂಟುಮಾಡುವದರಲ್ಲಿ ವಿಶೇಷ ಭಾವವನ್ನು ಹೊಂದಿರುತ್ತದೆ, ಎಂದರೆ ಆತ್ಮಹಿತ ವಿಷಯದಲ್ಲಿ ಉತ್ತಮವಾದುದು. ಹೀಗೆ ಅರ್ಥಮಾಡಲು ಸಾಧನವೇನೆಂದರೆ ಜ್ಞಾನಯೋಗವು ಆತ್ಮಸಾಕ್ಷಾತ್ಕಾರರೂಪ ಜ್ಞಾನವನ್ನು ಸಾಧಿಸಿಕೊಡುತ್ತದೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಇದು ಹಿಂದೆಯೇ ವ್ಯಕ್ತವಾದ ವಿಷಯವಾದುದರಿಂದ **ಶ್ರೇಯೋಹಿ** ಎಂಬಲ್ಲಿ **ಹಿ** ಶಬ್ದವು. ಅದೂ ಅಲ್ಲದೆ ದಹರ ವಿದ್ಯೆಯಲ್ಲಿ ಆತ್ಮ ಸಾಕ್ಷಾತ್ಕಾರವು ವಿದ್ಯಾರಂಭಕ್ಕೆ ಅಙ್ಗವಾಗಿ ಶ್ರುತಿಯಲ್ಲಿ ಉಪಪಾದಿತವು. ಆದುದರಿಂದ ವ್ಯಕ್ತವಿಷಯವನ್ನು ಅನುವಾದಮಾಡಿ ಹೇಳುವದಕ್ಕಾಗಿ **ಹಿ** ಶಬ್ದವು. ಮೂರನೆಯ ಅಧ್ಯಾಯದ ಅವತಾರಿಕೆಯಲ್ಲಿ ಇದು ವ್ಯಕ್ತವು. ಮಹತ್ತಾದ ಪ್ರೀತಿ ವಿಶ್ವಾಸದಿಂದ ಮಾಡುವ ಕಾರ್ಯವಾದರೆ ಅದು ಚೆನ್ನಾಗಿ ಅನುಷ್ಠಿಸಲ್ಪಡುತ್ತದೆ, ಪ್ರೀತಿಯು ಇಲ್ಲದಿದ್ದರೆ ಅನುಷ್ಠಾನವು ಕ್ಲೇಶಾವಹವೆಂಬುದು ವ್ಯಕ್ತವು, ಈ ಅಭಿಪ್ರಾಯದಿಂದಲಾದರೂ **ಹಿ** ಶಬ್ದವು ಹಾಗೆ

**ಭಾ. ಧ್ಯಾನ ಮೇವಾ ತ್ಮಹಿತತ್ವೇ ವಿಶಿಷ್ಯತೇ; ತದ್ಧ್ಯಾನಾದಪ್ಯನಿಷ್ಪನ್ನರೂಪಾ ತ್ತದು ಪಾಯಭೂತಂ ಫಲತ್ಯಾಗೇನಾ ನುಷ್ಠಿತಂ ಕರ್ಮೈವ ವಿಶಿಷ್ಯತೇ; ಅನಭಿಸಂಹಿತ ಫಲಾ ದನುಷ್ಠಿತಾತ್ ಕರ್ಮಣೋऽನನ್ತರ ಮೇವ ನಿರಸ್ತಪಾಪತಯಾ ಮನಸ ಶ್ಶಾನ್ತಿ**

ಪ್ರೀತಿ ಇಲ್ಲದೇ ಇರುವದಕ್ಕೆ ಕಾರಣವು, ಪ್ರತಿಬಂಧಕ ಪಾಪ ನಿವೃತ್ತಿಯು ಇನ್ನೂ ಆಗಿಲ್ಲವಾದು ದರಿಂದ ಪಿತ್ತೋಪಹತನಾಗಿ ಪಿತ್ತಶಮನವಿಲ್ಲದಿರುವವನಿಗೆ ಪುಷ್ಟಿಕರವಾದ ಹಾಲು ಹೇಗೆ ಕಹಿಯೋ, ಹಾಗೆ ಈತನಿಗೆ ಕ್ಲೇಶರೂಪವೆಂಬ ಭಾವವು. **ಅನಿಷ್ಪನ್ನರೂಪಾತ್** - ಇನ್ನೂ ನಿಷ್ಪನ್ನವಾಗದ, **ಆತ್ಮಾ ಪರೋಕ್ಷ್ಯ ಜ್ಞಾನಾದಪಿ** - ಪ್ರತ್ಯಗಾತ್ಮ ಸಾಕ್ಷಾತ್ಕಾರ ರೂಪಜ್ಞಾನಕ್ಕಿಂತಲೂ **ತದುಪಾಯಭೂತ** - ಅಂತಹ ಜ್ಞಾನಕ್ಕೆ ಸಾಧನವಾದ, **ಆತ್ಮಧ್ಯಾನಮೇವ** - ಆತ್ಮಧ್ಯಾನವೇ ಎಂದರೆ ಆತ್ಮಸ್ವರೂಪ ಚಿನ್ತನವೇ, **ಆತ್ಮಹಿತತ್ವೇ ವಿಶಿಷ್ಯತೇ** - ಆತ್ಮಾವಿಗೆ ಹಿತವನ್ನುಂಟುಮಾಡುವದರಲ್ಲಿ ಉತ್ತಮವಾದುದೆಂದು ವಿಶೇಷಿಸಿ ಹೇಳಲ್ಪಟ್ಟಿರುತ್ತದೆ; ಈ ಆತ್ಮ ಧ್ಯಾನವು ಯಾವುದೆಂದರೆ ಆತ್ಮಾವಲೋಕನ ಸಿದ್ಧಿಗಾಗಿ ೬ ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದುದು. ಹಿಂದೆಯೇ ನಿನಗೆ ಜ್ಞಾನಯೋಗವು ಕಷ್ಟವು, ಆದುದರಿಂದ ಕರ್ಮಯೋಗದಿಂದಲೇ ಆತ್ಮಾವಲೋಕನ ಸಿದ್ಧಿಯುಂಟೆಂದು ಹೇಳಿದುದು ಜ್ಞಾಪಿಸಲ್ಪಟ್ಟಿತು. (೩. ೩೫.) **ಅನಿಷ್ಪನ್ನ ರೂಪಾತ್** - ಇನ್ನೂ ಉಂಟಾಗದೇ ಇರುವ, **ತದ್ಧ್ಯಾನಾದಪಿ** - ಆ ಪ್ರತ್ಯಗಾತ್ಮಧ್ಯಾನಕ್ಕಿಂತಲೂ, **ತದುಪಾಯಭೂತಂ** - ಆ ಆತ್ಮಧ್ಯಾನಕ್ಕೆ ಸಾಧನವಾದ, **ಫಲತ್ಯಾಗೇನಾನುಷ್ಠಿತಂ ಕರ್ಮೈವ** - ಫಲಾಭಿಸಂಧಿಯನ್ನು ತ್ಯಾಗಮಾಡಿ ಅನುಷ್ಠಿಸಿದ ಕರ್ಮವೇ, ಎಂದರೆ ಕರ್ಮ ಯೋಗವೇ, **ವಿಶಿಷ್ಯತೇ** ಆತ್ಮಹಿತವನ್ನುಂಟುಮಾಡುವದರಲ್ಲಿ ಉತ್ತಮವೆಂದು ಸುಲಭವೆಂದು, ವಿಶೇಷಿಸಿ ಹೇಳಲ್ಪಟ್ಟಿರುತ್ತದೆ, ಇಲ್ಲಿ ಹೇಳಿರುವ ಅಭ್ಯಾಸ, ಜ್ಞಾನ ಧ್ಯಾನಗಳು ಕೇವಲ ಅಭ್ಯಾಸ ಜ್ಞಾನ ಧ್ಯಾನಗಳೆಂದು ಭಾವಿಸತಕ್ಕದ್ದಲ್ಲವು; ಇವುಗಳೊಂದಿಗೆ ಕ್ಲಿಪ್ತಕಾಲಗಳಲ್ಲಿ ಭಗವದುಪಾಸನೆಯೂ ವಿಹಿತವೆಂದು ಭಾವಿಸತಕ್ಕದ್ದು; ಇದು ಪೆರಿಯ ಆಂಡರ್ವ ಎಂಬ ಯತಿ ಶ್ರೇಷ್ಠರ ಅಭಿಪ್ರಾಯವು. ಮುಂದೆ **ತ್ಯಾಗಾಚ್ಛಾನ್ತಿರನನ್ತರಂ** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ. **ಅನುಷ್ಠಿತಾತ್** - ಅನುಷ್ಠಿಸಲ್ಪಟ್ಟ, **ಅನಭಿಸಂಹಿತಫಲಾತ್** - ತ್ಯಾಗಮಾಡಲ್ಪಟ್ಟ ಫಲವುಳ್ಳ, **ಕರ್ಮಣಃ** - ಕರ್ಮದ ಮೂಲಕವಾಗಿಯೇ, **ಅನನ್ತರಮೇವ** - ಒಡನೆಯೇ ಎಂದರೆ ಶೀಘ್ರವಾಗಿಯೇ, **ನಿರಸ್ತ ಪಾಪತಯಾ** - ಅಂತಹ ಕರ್ಮಾನುಷ್ಠಾನದಿಂದ ಪ್ರತಿಬಂಧಕ ಪಾಪವೆಲ್ಲಾ ಕಳೆಯುವದರಿಂದ, **ಮನಸಶ್ಶಾನ್ತಿ ರ್ಭವಿಷ್ಯತಿ** - ಮನಸ್ಸಿಗೆ ಶಾನ್ತಿಯು ದೊರೆಯುತ್ತದೆ. ಇದರಿಂದ ಫಲಿತಾರ್ಥವೇನು ಎಂಬುದನ್ನು ತಿಳಿಸುತ್ತಾರೆ. **ತ್ಯಾಗಾತ್ ಶಾನ್ತಿರ್ವಿಶಿಷ್ಯತೇ** ಎಂದು ಮುಂದಿನ ಕ್ರಮವನ್ನನುಸರಿಸಿ ಅರ್ಥ ಬರೆಯದೆ, **ತ್ಯಾಗಾಚ್ಛಾನ್ತಿ ರನಂತರಂ ಭವಿಷ್ಯತಿ** ಎಂದು ವ್ಯಾಖ್ಯಾನ ಹೇಗೆ ಎಂದಾಕ್ಷೇಪಿಸಬಹುದೆಂದು ಭಾವಿಸಿ, ಮುಂದೆ ಸಮಾಧಾನವನ್ನು ಬರೆಯುತ್ತಾರೆ. ಅತ್ಯುತ್ತಮ ಸಾಧನರೂಪವಾದ ಕರ್ತೃತ್ವ ಮಮತಾ ಫಲಾಭಿಸಂಧಿ ರಹಿತವಾದ ಕರ್ಮಾನುಷ್ಠಾನವು ಯಾವಾಗ ಮಾಡಲ್ಪಟ್ಟಿತೋ, ಅದರ ಫಲವಾಗಿ ಮನಶ್ಶಾನ್ತಿಯು ದೊರೆಯುತ್ತದೆಂದು ಹೇಳಬೇಕಾಗಿರುವದರಿಂದ **ತ್ಯಾಗಾತ್ ಶಾನ್ತಿರ್ಭವಿಷ್ಯತಿ** ಎಂಬುದು ಸರಿಯೇ ವಿನಾ, **ವಿಶಿಷ್ಯತೇ** ಎಂದು ಹೇಳಲು ಮಾರ್ಗವಿಲ್ಲವು. **ವಿಶಿಷ್ಯತೇ** ಎಂದು ಅನ್ವಯಿಸಿದರೆ, **ಮನಶ್ಶಾನ್ತಿಯು ಕಷ್ಟವೇ** ಎಂದು ಶೋಕಿಸಿದವನಿಗೆ ಮನಶ್ಶಾನ್ತಿಯನ್ನೇ ಮಾಡು, ಅದೇ ಅತ್ಯುತ್ತಮ ಸಾಧನೋಪಾಯವೆಂದು ಹೇಳುವಹಾಗೆ ಆಗಿ ಹಾಸ್ಯಾಸ್ಪದವಾಗುತ್ತದೆ. ಮೂಲದಲ್ಲಿ **ತ್ಯಾಗಾಚ್ಛಾಂತಿರ್ವಿಶಿಷ್ಯತೇ** ಎಂದು ಹೇಳಲು ಸಾಧ್ಯವಿತ್ತು. ಆದರೂ ಹಾಗೆ ಹೇಳದೆ

**ತ್ಯಾಗಾಚ್ಛಾನ್ತಿರನನ್ತರಂ** ಎಂದು ಹೇಳಿರುವದರಿಂದ ಅನ್ವಯಕ್ರಮವು ಹಾಗಲ್ಲವೆಂದೂ, ಅಭಿಪ್ರಾಯವು ಬೇರೇ ಎಂದೇ, ಹೇಳಿದಂತಾಯಿತು. ಇನ್ನು ಕೆಲವರು ಶಾನ್ತಿ ಎಂದರೆ ಮನಸಃ ಶಾನ್ತಿ ಎಂದು ಅರ್ಥಮಾಡದೆ, ಜೀವನ್ಮುಕ್ತಿಯು ಪ್ರಾಪ್ತವಾಗುತ್ತದೆಂದು ಅಭಿಪ್ರಾಯಪಟ್ಟಿರುತ್ತಾರೆ. ಇನ್ನೂ ಪರ್ವತದ ಹತ್ತಿರ ಹೋಗುವದು ಹೇಗೆ ಎಂದು ಯೋಚಿಸುತ್ತಾ ಅದಕ್ಕೆ ಸಾಧನವನ್ನು ಹುಡುಕುವವನಿಗೆ ಕರ್ಮಫಲತ್ಯಾಗ ಮಾಡಿ ಅನುಷ್ಠಿಸುವ ಕರ್ಮಯೋಗದಿಂದಲೇ ಜೀವನ್ಮುಕ್ತಿಯೇ ಉಂಟಾಗುತ್ತದೆಂಬ ಹೇಳಿಕೆಯು, ಪರ್ವತಾಗ್ರಕ್ಕೇನೇ ಒಂದೇ ಹಾರಿಕೆಯಿಂದ ನೆಗೆದರೆ ಫಲ ಸಿದ್ಧಿಯು ಎಂದು ಹೇಳಿದಂತಾಗುತ್ತದೆ.

**ಅಥಚಿತ್ತಂ ಸಮಾಧಾತುಂ ನಶಕ್ನೋಷಿ** ಎಂದು ಆರಂಭಿಸಿ ಹೇಳಿದ ನಾಲ್ಕು ಶ್ಲೋಕಗಳು, ಭಕ್ತಿಯೋಗಕ್ಕೆ ಅಶಕ್ತನಾದ ಅಧಿಕಾರಿಯನ್ನು ಕುರಿತು ಹೇಳಿದುದೆಂದು ಅಭಿಪ್ರಾಯಪಟ್ಟು, ಭಕ್ತಿಯೋಗಕ್ಕೆ ಅನಧಿಕಾರಿಗೆ ಬೇರೇ ಸಾಧನಗಳು ಹೇಳಲ್ಪಟ್ಟವೆಂದು, ಇನ್ನು ಕೆಲವರು ಭಾವಿಸುವರು. ಇದಕ್ಕೆ ಕಾರಣವೇನೆಂದರೆ ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕದಲ್ಲಿ **ಅಶಕ್ತಸ್ಯಾತ್ಮ ನಿಷ್ಠತಾ** ಎಂದಿರುವದಕ್ಕೆ, ಅಶಕ್ತತೆ ಎಲ್ಲಿ ಹೇಳಿದೆ ಎಂದು ಮೂಲದಲ್ಲಿ ನೋಡಿ, **ಚಿತ್ತ** ಸಮಾಧಾನಕ್ಕೆ ಅಶಕ್ತತಾ ಎಂದು ಅರ್ಥಮಾಡದೆ, ಭಕ್ತಿಯೋಗಕ್ಕೇನೆ ಅಶಕ್ತತೆ ಎಂದರ್ಥಮಾಡಿರುವದೇ ಈ ಭ್ರಮಕ್ಕೆ ಕಾರಣವು. ಸಙ್ಗ್ರಹ ಶ್ಲೋಕದಲ್ಲಿ ಎಲ್ಲವನ್ನೂ ವಿಶದೀಕರಿಸಿ ಹೇಳಲು ಹೇಗೆ ಸಾಧ್ಯವು ? ಭಕ್ತಿಯೋಗನಿಷ್ಠೆಗೆ ಅಶಕ್ತನಾದವನಿಗೆ ಪ್ರಪತ್ತಿ ಮಾರ್ಗವು ಎಂದರೆ ಸ್ವತಂತ್ರ ಶರಣಾಗತಿಯು ಎಂದು ಶಾಸ್ತ್ರಗಳಲ್ಲಿ ಕಂಠೋಕ್ತವಾಗಿ ಹೇಳಿರುವದಕ್ಕೆ ಇದು ವಿರೋಧವಾಗುತ್ತದೆ. ಭಕ್ತಿಯೋಗಕ್ಕೆ ಚಿತ್ತಸಮಾಧಾನವು ಆವಶ್ಯಕವು ; ಅದೂ ಇಲ್ಲದೆ ತನ್ನ ಉಪಾಸನೆಯಲ್ಲದೆ ಬೇರೆ ಮಾರ್ಗವೇ ಇಲ್ಲವೆಂದು **"ಮಯ್ಯೇವ ಮನ ಆಧತ್ಸ್ವ । ಮಯಿಬುದ್ಧಿಂ ನಿವೇಶಯ"** ಎಂದು **ಏವ** ಕಾರದಿಂದ ತಿಳಿಸಿ, ಹಾಗೆ ಮನಸ್ಸು ಇಡುವದಕ್ಕೆ ಮಾರ್ಗಗಳನ್ನು ಮೂರು ಶ್ಲೋಕಗಳಿಂದ ತಿಳಿಸಿ ಮೂರನೆಯ ಸಲ ಹೇಳಿದುದೇ ಚಿತ್ತ ದೌರ್ಬಲ್ಯವಿರುವವನಿಗೆ ಪರಮೌಷಧಿ ಎಂದು ಹೇಳಲ್ಪಟ್ಟು, **ಅಥಶಾನ್ತಿರನಂತರಂ** ಎಂಬುದರಿಂದ ಬೇಕಾದ ಚಿತ್ತೈಕಾಂತ್ಯವು ಲಭಿಸಿ ಭಕ್ತಿಯೋಗವು ಅಙ್ಕುರಿಸುತ್ತದೆ ಎಂದು ಹೇಳಲ್ಪಟ್ಟಿರುತ್ತದೆ. **ಈ ಚಿತ್ತೈಕಾಂತ್ಯವು** ಬೇಕೆಂದು ಮುಂದೆ ೧೪ನೆಯ ಶ್ಲೋಕದಲ್ಲಿ **"ಮಯ್ಯರ್ಪಿತ ಮನೋಬುದ್ಧಿಃ"** ಎಂಬಲ್ಲಿಯೂ, ಇನ್ನೂ ಅನೇಕ ಸ್ಥಳಗಳಲ್ಲೂ ಉಪಪಾದಿತವು. ಆದುದರಿಂದ ಭಕ್ತಿಯೋಗಕ್ಕೆ ಅಶಕ್ತನಾದವನಿಗೆ ಕಲ್ಪಿಸಿಹೇಳಿದ ಸಾಧನಗಳೆಂದು ಅರ್ಥಮಾಡುವದು ಯುಕ್ತವಲ್ಲವು. ಶ್ರೀ ಭಾಷ್ಯಕಾರರೂ ಶ್ರೀ ನಿಗಮಾನ್ತದೇಶಿಕರೂ ಸಾಧನಾಂತರಗಳೆಂದೇ ಹೇಳಿರುತ್ತಾರೆಂದು ತಮ್ಮ ಈ ಅಭಿಪ್ರಾಯ ಸಮರ್ಥನೆಗಾಗಿ ಹೇಳಿಕೊಳ್ಳುವರು. ಈ ಇಬ್ಬರುಮಹನೀಯರ ಅಭಿಪ್ರಾಯಗಳು ಹಾಗಲ್ಲವು; ಮೂಲದ ವ್ಯಾಖ್ಯಾನವನ್ನು ನೋಡಿ, ಆದುದರಿಂದ ಫಲಪ್ರಾಪ್ತಿಗಳಲ್ಲಿ ಪ್ರಥಮ ಸೋಪಾನವು, ವಿರೋಧಿರೂಪ ಪರಿಹಾರಮೂಲಕ ಮನಶ್ಶಾನ್ತಿಯು. **ಅನನ್ತರಂ**ಎಂಬ ಪದಸ್ವಾರಸ್ಯದಿಂದ ಹೀಗೆ ಕರ್ಮಯೋಗವು ಲಭಿಸಿದರೆ, ಹಿಂದೆ ಹೇಳಿದವುಗಳೆಲ್ಲವೂ ಕ್ರಮವಾಗಿ ಸಿದ್ಧಿಸುವುವು, ಅವು ಯಾವುವೆಂದರೆ ಆತ್ಮಧ್ಯಾನವು, ಆತ್ಮಸಾಕ್ಷಾತ್ಕಾರವು ಮನಶ್ಶಾನ್ತಿಯು,ಭಕ್ತಿ ವೃದ್ಧಿ ಮೂಲಕ ಉಪಾಸನಾರಂಭವಾದ ಪರಭಕ್ತಿಯಪ್ರಾಪ್ತಿಯು, ತದ್ವೃದ್ಧಿಯಿಂದ ಪರಮಾತ್ಮಸಾಕ್ಷಾತ್ಕಾರ, ಅಲ್ಲಿಂದ ಪರಮಭಕ್ತಿಯು, ಮೋಕ್ಷವು, ಹೀಗೆ ಎಲ್ಲಾ ಸಿದ್ಧಿಸುವುವು. ಆದುದರಿಂದ ಫಲಪ್ರಾಪ್ತಿಯಲ್ಲಿ ಪ್ರಥಮ ಸೋಪಾನವು ಮನಶ್ಶಾನ್ತಿ ಪ್ರಾಪ್ತಿಯೆಂದು ವ್ಯಾಖ್ಯಾನವನ್ನು ಅನುಗ್ರಹಿಸುತ್ತಾರೆ—ಅದರ ಸಿದ್ಧಿಯಿಂದ ಎಲ್ಲವೂ ಸಿದ್ಧಿಸುತ್ತದೆಂಬಬಿಪ್ರಾಯವು. **ಶಾನ್ತೇ ಮನಸಿ** – ಮನಸ್ಸು ಶಾನ್ತತೆಯನ್ನು ಹೊಂದಲಾಗಿ, **ಆತ್ಮಧ್ಯಾನವು ಸಂಸ**

**ಭಾ. ರ್ಥನಿಷ್ಪತ್ತಿ; ಶಾನ್ತೇಮನಸಿ ಆತ್ಮಧ್ಯಾನಂ ಸಂಪತ್ಸ್ಯತೇ; ಧ್ಯಾನಾಚ್ಚ ತದಾ ಪರೋಕ್ಷ್ಯಃ; ತದಾಪರೋಕ್ಷ್ಯಾತ್ಪರಾಭಕ್ತಿ ರಿತಿ, ಭಕ್ತಿಯೋಗಾಭ್ಯಾಸಾಶಕ್ತಸ್ಯಾತ್ಮ ನಿಷ್ಠೈವ ಶ್ರೇಯಸೀ; ಆತ್ಮನಿಷ್ಠಸ್ಯಾಪ್ಯ ಶಾನ್ತಮನಸೋ ನಿಷ್ಠಾಪ್ರಾಪ್ತಯೇಽನ್ತರ್ಗ ತಾತ್ಮಜ್ಞಾನಾನಭಿಸಂಹಿತ ಫಲಕರ್ಮ ನಿಷ್ಠೈವ ಶ್ರೇಯಸೀತ್ಯರ್ಥಃ ||೧೨||**

**ತ್ಸ್ಯತೇ** - ಲಭಿಸುತ್ತದೆ ; **ಧ್ಯಾನಾಚ್ಚ** - ಆತ್ಮಧ್ಯಾನದಿಂದಲಾದರೋ, **ತದಾಪರೋಕ್ಷ್ಯಮ್** - ಆ ಆತ್ಮ ಸಾಕ್ಷಾತ್ಕಾರವು ಎಂದರೆ ಆತ್ಮಾವಲೋಕನವು ಉಂಟಾಗುತ್ತದೆ ; **ತದಾಪರೋಕ್ಷ್ಯಾತ್ಪರಾಭಕ್ತಿಃ** - ಅಂತಹ ಆತ್ಮ ಸಾಕ್ಷಾತ್ಕಾರದಿಂದ ಪರಭಕ್ತಿಯು ಉತ್ಪನ್ನವಾಗುತ್ತದೆ; ಇತಿ- ಹೀಗಿರುವದರಿಂದ, **ಭಕ್ತಿಯೋಗಾಭ್ಯಾಸಾಶಕ್ತಸ್ಯ**-ಮೊದಲೇ ನೆಟ್ಟಗೆ ಭಕ್ತಿಯೋಗಾಭ್ಯಾಸಕ್ಕೆ ಅಶಕ್ತನಾದವನಿಗೆ, **ಆತ್ಮನಿಷ್ಠೈವ ಶ್ರೇಯಸೀತ್ಯರ್ಥಃ** - ಆತ್ಮನಿಷ್ಠೆಯೇ ಎಂದರೆ ಕರ್ಮಯೋಗವೇ, ಅತ್ಯುತ್ತಮವಾದ ಸಾಧನವು ಎಂಬುದು ತಾತ್ಪರ್ಯವು. **ಆತ್ಮನಿಷ್ಠಸ್ಯಾಪಿ**-ಆತ್ಮಾವಲೋಕನ ಸಿದ್ಧಿಗಾಗಿ ಆತ್ಮಧ್ಯಾನ ಮಾಡುವವನಿಗೆ, **ಅಶಾನ್ತಮನಸಃ-ಶಾನ್ತ** ಮನಸ್ಸಿಲ್ಲದವನಾಗಿದ್ದ ಪಕ್ಷದಲ್ಲಿ, **ನಿಷ್ಠಾಪ್ರಾಪ್ತಯೇ**-ಆತ್ಮನಿಷ್ಠೆಯು ಉಂಟಾಗುವದಕ್ಕಾಗಿಯೂ, **ಅಂತರ್ಗತಾತ್ಮಜ್ಞಾನಾನಭಿಸಂಹಿತ ಫಲಕರ್ಮನಿಷ್ಠೈವ ಶ್ರೇಯಸೀತ್ಯರ್ಥಃ**-ಅದರಲ್ಲೇ ಸೇರಿದ ಆತ್ಮಜ್ಞಾನವುಳ್ಳ ಫಲಾಭಿಸಂಧಿ ರಹಿತವಾದ ಕರ್ಮನಿಷ್ಠೆಯೇ ಶ್ರೇಯಸ್ಕರವಾದುದು. ಹಿಂದೆ ಜಿಜ್ಞಾಸುವಿನ ಉಪಾಸನವು ಉತ್ತಮವೋ, ಜ್ಞಾನಿಯ ಉಪಾಸರವು ಉತ್ತಮವೋ ಎಂದು ಅರ್ಜುನನು ಪ್ರಶ್ನಿಸಿದ್ದನು. ಅದರ ಉತ್ತರವಾಗಿ ತನ್ನ ಉಪಾಸನೆಯೇ ಉತ್ತಮವೆಂದು ಉತ್ತರವನ್ನು ಹೇಳಿದರು. ಈ ಉಪಾಸನೆಯು ಶೀಘ್ರವಾಗಿ ಲಭಿಸುವದು ಹೇಗೆ ಎಂಬುದು ಈಗ ವಕ್ತವ್ಯಾಂಶವು ; ಕರ್ಮಯೋಗವು ಅಙ್ಗವಾಗಿ ಆತ್ಮಧ್ಯಾನದಿಂದ ಭಕ್ತಿಯೋಗವನ್ನವಲಂಬಿಸುವದು ಒಂದು ಪಕ್ಷವು; ಇನ್ನೊಂದು ಕರ್ಮಯೋಗದಿಂದ ಜ್ಞಾನಯೋಗವನ್ನು ಹೊಂದಿ, ಅದಕ್ಕಾಗಿ ಆತ್ಮೋಪಾಸನೆಯನ್ನು ಮಾಡಿ ಆತ್ಮಸಾಕ್ಷಾತ್ಕಾರ ಹೊಂದಿ ಭಕ್ತಿಯೋಗವನ್ನು ಅವಲಂಬಿಸುವದು ಇನ್ನೊಂದು ಪಕ್ಷವು. ಎರಡರಿಂದಲೂ ಆತ್ಮಾವಲೋಕನವು ಉಂಟಾಗುತ್ತದೆ. ಕರ್ಮಯೋಗದಿಂದ ಆತ್ಮಧ್ಯಾನದ ಮೂಲಕ ಆತ್ಮಾವಲೋಕನವು ಲಭಿಸುತ್ತದೆ ; ಭಕ್ತಿಯೋಗಕ್ಕೆ ಇದರಿಂದ ಉಂಟಾಗುವ ಪರಮ ಲಾಭವೇನೆಂದರೆ ? ಚಿತ್ತ ಸ್ವಾಸ್ಥ್ಯವು ದೊರೆಯುತ್ತದೆ. ಚಿತ್ತಸ್ವಾಸ್ಥ್ಯವು ಯಾವಾಗ ಉಂಟಾಯಿತೋ, ಭಕ್ತಿಯೋಗದಲ್ಲಿ ಅಭ್ಯಾಸ ಉಂಟಾಗುತ್ತದೆ. ಅನಂತರ ಪರಭಕ್ತಿ ಪರಜ್ಞಾನ ಪರಮ ಭಕ್ತಿಗಳುಂಟಾಗಿ ಭಕ್ತಿಯೋಗ ನಿಷ್ಪತ್ತಿಯು ಲಭಿಸುತ್ತದೆ.

ಆದುದರಿಂದ ನೀನು ಐಕಾಂತ್ಯ ಭಕ್ತಿಯಿಂದ ಉಪಾಸನೆಯು ಹೇಗೆ ಎಂದು ನೀನು ಯೋಚಿಸುವ ಕೆಲಸವಿಲ್ಲವು ; ಭಕ್ತಿಯೋಗದಲ್ಲಿಳಿಯಬೇಕೆಂಬ ಸಂಕಲ್ಪದಿಂದ ಪರಮಾತ್ಮ ಧ್ಯಾನವನ್ನು ಮಾಡುವದರ ಜೊತೆಗೇನೇ ಕರ್ಮಯೋಗವನ್ನು ಕರ್ತೃತ್ವ ಮಮತಾ ಫಲತ್ಯಾಗಗಳ ಮೂಲಕ ಮಾಡುತ್ತಾ ಬಂದರೆ ಕ್ಷಿಪ್ರವಲ್ಲೇ ಪ್ರತಿಬಂಧಕ ಪಾಪಪರಿಹಾರ ಮೂಲಕ ಆತ್ಮಧ್ಯಾನವೂ, ಆತ್ಮಾವಲೋಕನ ಪ್ರಾಪ್ತಿಯೂ, ಮನಶ್ಶಾನ್ತತೆಯೂ, ಭಕ್ತಿಯೋಗಾಭ್ಯಾಸವೂ, ಎಲ್ಲವೂ ಕ್ರಮವಾಗಿ ದೊರೆಯುತ್ತದೆಂದು ಹೇಳಿದರು. ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವೇ ಅರ್ಜುನನಾದ ನಿನಗೆ ಸರ್ವಶ್ರೇಷ್ಠವಾದ ವ್ಯವಹಿತೋಪಾಯವೆಂದು ಹೇಳಿದ್ದರು ಅದನ್ನೇ ಇಲ್ಲಿಯೂ ಸಮರ್ಥಿಸಿ ಇದನ್ನು ನೀನು ಸರಿಯಾಗಿ ಅನುಷ್ಠಿಸಿದರೆ ಅವ್ಯವಹಿತೋಪಾಯವಾದ ಭಕ್ತಿಯೋಗಕ್ಕೆ ಮೂಲಭೂತವಾದ ಅಂಕುರವಾಗಿ ಪರಿಣಮಿಸುವದರಲ್ಲಿ ಸಂದೇಹವಿಲ್ಲವಾದುದರಿಂದ ನನ್ನ ಉಪಾಸನವೇ ಸುಲಭವಾದುದು, ಶೀಘ್ರ ಫಲದಾಯಕವು ಎಂದು ಉಪದೇಶಿಸಿದರು, ಅರ್ಜುನನ

**ಭಾ. ಅವ. ಅನಭಿಸಂಹಿತ ಫಲಕರ್ಮ ನಿಷ್ಠಸ್ಯೋಪಾದೇಯಾನ್ ಗುಣಾನಾಹ—**

ಕೈಯಲ್ಲಿ ಯುದ್ಧವನ್ನು ಮಾಡಿಸುವದು ಮುಖ್ಯವಾದುದರಿಂದ, ದಿವ್ಯ ಮಙ್ಗಳ ವಿಗ್ರಹಯುಕ್ತ ಪರಮ ಪುರುಷನು ತನಗೆ ಆತ್ಮಾವಾಗಿದ್ದಾನೆ ಎಂದು ಮಾಡಿದ ಆತ್ಮೋಪಾಸನೆಯು ಸ್ವಲ್ಪ ಕ್ಲೇಶ ಯುಕ್ತವಾದುದರಿಂದ, ಅಂತಾದ್ದನ್ನು ಬಿಟ್ಟು, ಸುಲಭವಾದ ಕರ್ಮಫಲತ್ಯಾಗದಿಂದ ಕೂಡಿದ ಕರ್ಮಾಙ್ಗಕವಾಗಿ ನನ್ನ ಉಪಾಸನೆಯನ್ನು ಮಾಡಿದರೆ, ಶೀಘ್ರದಲ್ಲೇ ನಿನಗೆ ಎಲ್ಲವೂ ಸಿದ್ಧಿಸುತ್ತ ದೆಂಬ ಶ್ಲೋಕಾಭಿಪ್ರಾಯವು ಉಪದೇಶಿಸಲ್ಪಟ್ಟಿತು

**ಭಾಷ್ಯಾವತಾರಿಕೆಯ ಅರ್ಥವು** :—ಉಪಾಸನದ ಅಙ್ಕುರ ವೃದ್ಧಿ ನಿಷ್ಪತ್ತಿಗಳಿಗೆ ಬೇಕಾ ಡುದು ಫಲಾಭಿಸಂಧಿರಹಿತವಾದ ಕರ್ಮನಿಷ್ಠೆಯಿಂದುಂಟಾಗುವ ಚಿತ್ತಶಾನ್ತತೆಯಂದು ಸ್ಥಾಪಿಸಿ ದರು. ಅಂತಹ ಕರ್ಮನಿಷ್ಠನು ಹೇಗಿರಬೇಕು ? ಆತನಲ್ಲಿ ಎಂತಹ ಗುಣಗಳಿರಬೇಕು ? ಎಂಬು ದನ್ನು ಮುಂದಿನ ಶ್ಲೋಕಗಳಿಂದ ತಿಳಿಸುತ್ತಾರೆ. ಅಥವಾ, ಇಂತಹ ಫಲಾಭಿಸಂಧಿರಹಿತ ಕರ್ಮ ನಿಷ್ಠೆಯಿಂದ ಪ್ರತಿಬಂಧಕ ಪಾಪಗಳು ತೊಲಗಿ ಪರಿಶುದ್ಧನಾಗುವದರ ಮೂಲಕ ಎಂತಹ ಉತ್ಕೃಷ್ಟ ಗುಣಗಳು ಆತನಲ್ಲಿ ಕ್ರಮವಾಗಿ ಉಂಟಾಗಿ ಅಂತವನು ಹೇಗೆ ತನಗೆ ಪ್ರಿಯಭಕ್ತನಾ ಗುವನೆಂದೂ ಅವತಾರಿಕೆಯಾಗಬಹುದು. ಅಂತಹ ಉತ್ಕೃಷ್ಟ ಗುಣಗಳುಳ್ಳವನ ಉಪಾಸನೆ ಯಿಂದ ತಾನು ಪ್ರೀತನಾಗುವೆನು ; ಅಂತಹ ಭಕ್ತನು ನನ್ನ ಅನುಗ್ರಹಕ್ಕೆ ಪಾತ್ರನಾಗುವನು ಎಂದು ಉಪದೇಶಿಸುತ್ತಾರೆ—ತಾನು ಪ್ರೀತನಾದರೇನೇ ತಾನು ಪ್ರಾಪ್ಯನು ಎಂದು ಹಿಂದೆ ಹೇಳಿ ದ್ದರು. ಹೀಗೆ ಫಲಾಭಿಸಂಧಿರಹಿತ ಕರ್ಮಾನುಷ್ಠಾನದ ಮೂಲಕ ಚಿತ್ತ ಸ್ವಾಸ್ಥ್ಯವನ್ನು ಹೊಂದಿ, ಈ ಮುಂದೆ ನಾನು ಹೇಳುವ ಸ್ವಭಾವವುಳ್ಳವನಾದರೆ ಆತನು ನನಗೆ ಅತ್ಯಂತ ಪ್ರಿಯನಾಗು ವನು ; ಅಂತವನಿಗೆ ನನ್ನ ಅನುಗ್ರಹವು ಸಿದ್ಧವು ಎಂದು ಅವತಾರಿಕೆಯನ್ನು ದಯಪಾಲಿಸು ತ್ತಾರೆ—ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿಡಲು ಸಾಧ್ಯವಿಲ್ಲದ ಅಶಕ್ತನಿಗೆ ಫಲಾಭಿಸಂಧಿರಹಿತ ಕರ್ಮಯೋಗವೇ ಪರಮ ಶ್ರೇಯಸ್ಕರವಾದುದೆಂದು ಹೇಳಿದೆನು. ಅಂತಹ ಕರ್ಮಯೋಗನಿಷ್ಠನಿಗೆ ಉಂಟಾಗುವ ಮಹತ್ತಾದ ಗುಣಗಳು ಯಾವುವೆಂದರೆ ಹೇಳುತ್ತಾರೆ.—**ಅನಭಿಸಂಹಿತಫಲ ಕರ್ಮನಿಷ್ಠಸ್ಯ**-ಫಲಾಪೇಕ್ಷೆಯಿಲ್ಲದ ಕರ್ಮನಿಷ್ಠನಿಗೆ, **ಉಪಾದೇಯಾನ್ ಗುಣಾನ್ ಆಹ**-ಉಚಿತ ವಾದ ಗುಣಗಳನ್ನು ತಿಳಿಸುತ್ತಾರೆ—ಇತರರ ಅವತಾರಿಕೆಯು ಸರಿಯಲ್ಲವೆಂದು ಭಾವಿಸತಕ್ಕ ದ್ದೆಂದು ಹೇಳುವದಕ್ಕಾಗಿಯೂ ಈ ಅವತಾರಿಕೆಯನ್ನು ಕೊಟ್ಟಿರುತ್ತಾರೆಂದು ಭಾವಿಸತಕ್ಕದ್ದು. ಇತರರು ಅಭಿಪ್ರಾಯ ಪಡುವ ಹಾಗೆ ನಿರ್ಗುಣ ಬ್ರಹ್ಮೋಪಾಸಕನಿಗೆ ಉಂಟಾಗುವ ಗುಣಗಳು ಹೇಳಲ್ಪಟ್ಟು ಇಂತಹ ಭಕ್ತನೇ ತಮಗೆ ಪ್ರಿಯನೆಂದು ಶ್ರೀ ಕೃಷ್ಣನು ಹೇಳಿದರು ಎಂಬ ಅರ್ಥವು ಸರಿಯಾದುದಲ್ಲವೆಂದು ತಿಳಿಸುವದಕ್ಕಾಗಿ ಎಂದೂ ಭಾವಿಸತಕ್ಕದ್ದು. ಹೀಗಿದ್ದರೇನೇ ಸರ್ವೇಶ್ವ ರನು ಅಂತಹ ಭಕ್ತಿಯೋಗ ನಿಷ್ಠನನ್ನು ಪ್ರೀತಿಸುವನು, ಅವು ಇಲ್ಲದಿದ್ದರೆ ಇಲ್ಲವೆಂಬ ಭಾವವೂ, ತೋರಿಬರುತ್ತದೆ. ಅವು ಸ್ವತಃ ಕರ್ಮಯೋಗ ನಿಷ್ಠೆಯಲ್ಲಿನ ಆತ್ಮಜ್ಞಾನದಿಂದಲೇ ಉಂಟಾಗು ತ್ತವೆ ಎಂಬುದೂ ಸೂಚಿತವು.

**ಮೂಲಕ್ಕೆ ಅರ್ಥವು** :—ಸ್ವಾಮಿಯು ಪ್ರೀತನಾಗಿ ಇವನನ್ನು ಅನುಗ್ರಹಿಸಬೇಕಾದರೆ ಯೋಗಿಯಲ್ಲಿರಬೇಕಾದ ಗುಣಗಳಾವುವೆಂದರೆ.—**ಸರ್ವಭೂತಾನಾಂ** - ಸಮಸ್ತ ಪ್ರಾಣಿಗಳನ್ನೂ **ಅದ್ವೇಷ್ಟಾ** - ದ್ವೇಷಿಸದಿರುವವನಾಗಿಯೂ, ಅವರು ಒಂದುವೇಳೆ ತನಗೆ ದ್ವೇಷಿಗಳಾದರೆ, ಆಗಲೂ ನಮ್ಮ ಪ್ರಾರಬ್ಧಾನುಗುಣವಾಗಿ ದ್ವೇಷಿಸಿದರು, ಅವರಹಾಗೆ ನಾವೂ ನಡೆಯಕೂಡದು, ನಾವು ದ್ವೇಷಿಸಬಾರದು ಎಂಬ ಬುದ್ಧಿಯಿರಬೇಕು ; ಯಾರಿಗಾಗಲಿ ಪ್ರತಿಕೂಲನಾಗಿರಕೂಡದು;

**ಮೂ. ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರ ಸ್ಸಮದುಃಖಸುಖಃ ಕ್ಷಮೀ ॥ ೧೩.**
**ಸನ್ತುಷ್ಟ ಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿ ರ್ಯೋ ಮದ್ಭಕ್ತ ಸ್ಸ ಮೇ ಪ್ರಿಯಃ ॥ ೧೪.**

ಎಲ್ಲರಿಗೂ ತಾನು ಅನುಕೂಲನಾಗಿರಬೇಕೆಂಬ ಸಙ್ಕಲ್ಪವುಳ್ಳವನಾಗಿರಬೇಕು. ದ್ವೇಷಿಸೋಣ ಬೇಡ, ಅಂತವರ ವಿಷಯದಲ್ಲೂ ಕೂಡ ಉದಾಸೀನನಾಗಿಯೂ ಇರದೆ, **ಮೈತ್ರಃ**-ಮಿತ್ರಭಾವ ವನ್ನು ತೋರಿಸಿ ಎಲ್ಲಾ ಪ್ರಾಣಿಗಳ ವಿಷಯದಲ್ಲೂ ಸ್ನೇಹಪರನಾಗಿಯೂ ಹೀಗೆ ಅನುಕೂಲನಾ ಗಿರಬೇಕು. **ಸರ್ವಭೂತಾನಾಂ** ಎಂಬುದು **ಅದ್ವೇಷ್ಟಾ, ಮೈತ್ರಃ, ಕರುಣಃ** ಎಂಬುವದ ರೊಂದಿಗೆಲ್ಲಾ ಅನ್ವಯಿಸತಕ್ಕದ್ದಾಗಿ ಮಧ್ಯೆ ಇರುತ್ತದೆ. ಇಷ್ಟು ಮಾತ್ರವೇ ಅಲ್ಲದೆ **ಕರುಣ ಏವಚ** - ದುಃಖಿತರಾದ ಪ್ರಾಣಿಗಳ ವಿಷಯದಲ್ಲಿ ಪರಿತಾಪ ಹೊಂದಿದವನಾಗಿ ಅವರ ದುಃಖ ನಿವಾರಣೆಗಾಗಿ ಕಾರುಣ್ಯವನ್ನು ಹೊಂದಿದವನಾಗಿರತಕ್ಕದ್ದು. **ನಿರ್ಮಮಃ ನಿರಹಂಕಾರಃ** - ಮಮಕಾರ ಅಹಂಕಾರಗಳಿಲ್ಲದವನಾಗಿಯೂ, ನನ್ನ ಪದಾರ್ಥಗಳು, ನನ್ನವರು, ನನ್ನ ಸಂಬಂಧಿಗಳು, ಎಂಬ ಅಭಿಮಾನವು ಮಮಕಾರವೆನಿಸುವದು ; ಇವೆಲ್ಲಾ ಪರಮಾತ್ಮನ ಸ್ವತ್ತು, ನಾನೂ ಕೂಡ ಅವನ ಸ್ವತ್ತು, ಹೀಗೆ ಎಲ್ಲವೂ ಅವನದೇ, **ನಮಮ** ನನ್ನದಾಗಿ ಯಾವುದೂ ಇಲ್ಲವು, ಎಂದು ಭಾವಿಸುವವನು **ನಿರ್ಮಮನು ;** ಪ್ರಪನ್ನನಿಗೆ ಮಮಕಾರವು ಸರ್ವಾತ್ಮನಾ ಕೂಡದು, ಆತನ ಸ್ವರೂಪಕ್ಕೆ ತುಂಬಾ ವಿರುದ್ಧವೆಂದು **"ದ್ವ್ಯಕ್ಷರಸ್ತು ಭವೇನ್ಮೃತ್ಯುಃತ್ರ್ಯಕ್ಷರಂ ಬ್ರಹ್ಮಣಃಪದಂ । ಮಮೇತಿದ್ವ್ಯಕ್ಷರೋಮೃತ್ಯುಃ ನಮಮೇತಿ ಚ ಶಾಶ್ವತಮ್"** ಎಂಬ ಪ್ರಮಾಣವು ಬೋಧಿಸುತ್ತದೆ. **ಮಮ** ಎಂಬ ಹೇಳುವ ಎರಡಕ್ಷರವು ಮೃತ್ಯು ಸ್ವರೂ ಪವು, ಬಂಧಕವು; **ನಮಮ** ಎಂಬ ಅಭಿಸಂಧಿಯು ಶಾಶ್ವತ ಪರಮಪದಕ್ಕೆ ಸೋಪಾನವು. ತಾನು ಸ್ವತಂತ್ರನು, ತಾನೇ ಸಾಧಿಸಿದೆನು ಎಂಬುದೇ ಅಹಂಕಾರವು. ಸ್ವಾಮಿ ಸಙ್ಕಲ್ಪಾಯುತ್ತವಾಗಿ ಎಲ್ಲವೂ ನಡೆಯುತ್ತದೆ, ನಾನು ಪರತಂತ್ರನು ಎಂಬ ವಿವೇಕವುಳ್ಳವನು **ನಿರಹಂಕಾರನು;** ಆದುದ ರಿಂದಲೇ **ಸಮದುಃಖಸುಖಃ** - ಹೀಗೆ ಸ್ವಾಮಿ ಸಙ್ಕಲ್ಪಾಯತ್ತವಾಗಿ ಎಲ್ಲವೂ ನಡೆಯುವದ ರಿಂದ ತನಗೆ ಪ್ರಾರಬ್ಧ ಕರ್ಮಾನುಗುಣವಾಗಿ ಅನುಕೂಲಾವಸ್ಥೆಯೂ ಪ್ರತಿಕೂಲಾವಸ್ಥೆಯೂ ಉಂಟಾಗಿದೆ ಎಂದು ಭಾವಿಸಿ, ದುಃಖವಾದ ಪ್ರತಿಕೂಲಾವಸ್ಥೆಯಲ್ಲಿ ಶೋಕಿಸದೆ, ಸುಖವಾದ ಅನುಕೂಲಾವಸ್ಥೆಯಲ್ಲಿ ಹಿಗ್ಗದೆ, ಒಂದೇ ವಿಧ ಚಿತ್ತ ಸಮಾಧಾನವನ್ನು ಹೊಂದಿರುವವನಾ ಗಿಯೂ, ಆದುದರಿಂದಲೇ **ಕ್ಷಮೀ** - ಕ್ಷಮಾಗುಣವುಳ್ಳವನಾಗಿಯೂ, ಲಾಭಾಲಾಭ ಶೀತೋಷ್ಣ ಸುಖದುಃಖ ಮಾನಾಪಮಾನ ಮುಂತಾದುವುಗಳೆಲ್ಲಾ ಸಹನಗುಣವುಳ್ಳವನಾಗಿ, **ಸತತಂ** - ಯಾವಾಗಲೂ, **ಸನ್ತುಷ್ಟಃ** - ಯದೃಚ್ಛಾಲಾಭದಿಂದಲೇ ಸಂತೋಷಯುಕ್ತನಾಗಿಯೂ, **ಯತಾತ್ಮಾ** - ಮನಸ್ಸು ಪರಮಾತ್ಮನಲ್ಲಿ ಅಲ್ಲದೆ ಇತರ ವಿಷಯಗಳಲ್ಲಿ ಪ್ರವರ್ತಿಸಲು ಯತ್ನಿಸ ಬಹುದು, ಆಗ ನಿಗ್ರಹಿಸಲ್ಪಟ್ಟ ಮನಸ್ಸುಳ್ಳವನಾಗಿ, **ದೃಢನಿಶ್ಚಯಃ** - ಈ ಭಕ್ತಿಯೋಗನಿಷ್ಠೆ ಯಿಂದ ತಾನು ಖಂಡಿತವಾಗಿಯೂ ಮುಕ್ತನಾಗುವೆನೆಂಬ ಶಾಸ್ತ್ರದಲ್ಲಿ ಮಹಾ ವಿಶ್ವಾಸವುಳ್ಳವನಾ ಗಿಯೂ, **ಮಯ್ಯರ್ಪಿತ ಮನೋಬುದ್ಧಿಃ** - ಹೀಗೆ ನನ್ನಲ್ಲೇ ಸಮರ್ಪಿಸಲ್ಪಟ್ಟ ಮನಸ್ಸನ್ನೂ ಬುದ್ಧಿಯನ್ನೂ ಉಳ್ಳವನಾಗಿಯೂ, **ಯೋಗೀ** - ಫಲಾಭಿಸಂಧಿರಹಿತ ಕರ್ಮಯೋಗನಿಷ್ಠನಾ ಗಿರುವ ಭಕ್ತಿಯೋಗಾವಲಂಬಿಯು, **ಯಃ** - ಯಾರೋ, **ಸಃ** - ಅಂತಹ ಫಲಾಭಿಸಂಧಿರಹಿತ ನಾದ ಕರ್ಮನಿಷ್ಠೆಯಿಂದ ಕೂಡಿದ ಭಕ್ತಿಯೋಗದಲ್ಲಿಳಿದವನು, **ಮೇಪ್ರಿಯಃ** - ನನ್ನ ಪ್ರೀತಿಗೆ

**ಭಾ. ಅದ್ವೇಷ್ಟಾ ಸರ್ವಭೂತಾನಾಂ - ವಿದ್ವಿಷತಾ ಮುಪಕುರ್ವತಾಮಪಿ ಸರ್ವೇಷಾಂ ಭೂತಾನಾಂ ಅದ್ವೇಷ್ಟಾ - ಮದಪರಾಧಾನುಗುಣ ಮೀಶ್ವರಪ್ರೇರಿತಾನ್ಯೇತಾನಿ**

ಪಾತ್ರನು. ಹೀಗೆ ಫಲಾಭಿಸಂಧಿರಹಿತ ಕರ್ಮನಿಷ್ಠೆಯನ್ನಿಟ್ಟುಕೊಂಡು ಭಕ್ತಿಯೋಗರೂಪೋಪಾಸನೆಯನ್ನವಲಂಬಿಸಿದವನಿರುವನು. ಹೀಗೆ ಈ ಎರಡು ಶ್ಲೋಕಗಳಲ್ಲಿ ಹೇಳಲ್ಪಟ್ಟ ಬುದ್ಧಿ ಚಿತ್ತ ವೃತ್ತಿ ವ್ಯಾಪಾರಗಳುಳ್ಳವನಾದರೆ, ಆತನು ನನ್ನ ಪ್ರೀತಿಗೆ ಪಾತ್ರನಾಗುವನು ಎಂದು ಹೇಳಲ್ಪಟ್ಟಿತು. ಯಾವಾಗ ನನ್ನ ಪ್ರೀತಿಗೆ ಪಾತ್ರನಾದನೋ ಆಗ ಆತನಿಗೆ ಬೇಕಾದ ಚಿತ್ತೈಕಾಂತ್ಯವೂ ಯೋಗ ವಿವೃದ್ಧಿ ನಿಷ್ಪತ್ತಿಗಳೂ ಪರಮಾತ್ಮ ಸಾಕ್ಷಾತ್ಕಾರವೂ ದೇಹಾವಸಾನಾನಂತರ ಅರ್ಚಿರಾದಿ ಗತಿಮೂಲಕ ದಿವ್ಯ ವೈಕುಂಠ ಪ್ರಾಪ್ತಿ ಮೊದಲಾದವುಗಳೂ ಎಲ್ಲವೂ ಲಭಿಸುವದರಲ್ಲಿ ಸಂದೇಹವಿಲ್ಲವೆಂಬುದೂ ಸೂಚಿತವು. ಈ ಗುಣಗಳನ್ನು ಹೇಳುವದರಲ್ಲಿ "**ಅದ್ವೇಷ್ಟಾ**" ಎಂದು ಪ್ರಾರಂಭಿಸಿ ಹೇಳಿರುವದರಿಂದ ಹೇತು, ಹೇತುಮದ್ಭಾವಗಳು ತೋರುವದರಿಂದ, ಅದ್ವೇಷದಿಂದ ಮೈತ್ರಿಯು, ಅದರಿಂದ ಕಾರುಣ್ಯವೂ ಹೀಗೆ ಪ್ರಾಪ್ತವಾಗುತ್ತದೆಂದು ತೋರಿಬರುತ್ತದೆ ಯಾದುದರಿಂದ, ಇಷ್ಟೆಲ್ಲಾ ಗುಣಗಳನ್ನು ಸಂಪಾದಿಸಿಕೊಳ್ಳುವದು ಹೇಗೆ ಎಂಬ ಅಧೈರ್ಯ ಶಙ್ಕಾ ಮೊದಲಾದವುಗಳಿಗೆ ಕಾರಣವಿಲ್ಲದುದರಿಂದ, ಇಂತಹ ಉಪಾಸನೆಯ ಸುಕರವು ಶೀಘ್ರ ಫಲದಾಯಿಕವೆಂದು ಹಿಂದೆ ಹೇಳಿದುದಕ್ಕೆ ಇದರಿಂದ ವಿರೋಧವೇನೂ ಇಲ್ಲವೆಂದೂ ಭಾವಿಸತಕ್ಕದ್ದು. ||೧೩. ೧೪||

**ಭಾಷ್ಯಾರ್ಥವು** :—ಹಿಂದೆ ಫಲಾಭಿಸಂಧಿರಹಿತ ಕರ್ಮಯೋಗ ವಿಶಿಷ್ಟ ಭಕ್ತಿಯೋಗವನ್ನು ಅನುಷ್ಠಿಸುವದೇ ಸುಕರವು ಎಂದು ಹೇಳಿದರು. ಮುಂದೆ ಈ ಎರಡು ಶ್ಲೋಕಗಳಲ್ಲಿ ಅಂತಹ ಭಕ್ತಿಯೋಗಾರಂಭಕನು ಯಾವ ಯಾವ ಗುಣಗಳಿಂದ ಯುಕ್ತನಾದರೆ ಇಂತಹ ಫಲಾಭಿಸಂಧಿರಹಿತವಾದ ಕರ್ಮನಿಷ್ಠೆಯಿಂದ ಕೂಡಿದ ಉಪಾಸನೆಯಿಂದ ತಾನು ಪ್ರೀತನಾಗುವೆನೆಂದು ಹೇಳುತ್ತಾರೆ. ಹಾಗೆಯೇ ಇವೆರಡಲ್ಲದೆ ಮುಂದಿನ ಐದು ಶ್ಲೋಕಗಳಲ್ಲೂ ಎಂತಹ ಸ್ವಭಾವಗಳುಳ್ಳ ಈ ಫಲತ್ಯಾಗಮಾಡಿದ ಕರ್ಮನಿಷ್ಠೆಯಿಂದ ಕೂಡಿ ಉಪಾಸಿಸುವನು ಪ್ರಿಯನಾಗುವೆನೆಂದು ಹೇಳಿ, ಅತೀವ ಪ್ರಿಯನು ಯಾರೆಂಬುದನ್ನು ತಿಳಿಸುವದಕ್ಕಾಗಿ, ಈ ಅಧ್ಯಾಯದಲ್ಲಿ ಎರಡನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಯುಕ್ತತಮರು ಯಾರೋ ಅವರೇ, ನನಗೆ ಅತೀವ ಪ್ರಿಯರಾದವರೆಂದು ಹೇಳಿ ನಿಗಮನಮಾಡಿ, ಪ್ರತಿಜ್ಞಾ ನಿಗಮನ ವಾಕ್ಯಗಳಿಗೆ ಐಕಕಂಠ್ಯವನ್ನುಪಪಾದಿಸಿ ಅಧ್ಯಾಯವನ್ನೂ ಹಾಗೆಯೇ ದ್ವಿತೀಯ ಷಟ್ಕವನ್ನೂ ಮುಗಿಸುತ್ತಾರೆ.—

**ಅದ್ವೇಷ್ಟಾ ಸರ್ವಭೂತಾಂ** - ಸರ್ವ ಭೂತಗಳನ್ನೂ ದ್ವೇಷಿಸದೇ ಇರುವವನಾಗಿ, ನಮ್ಮಲ್ಲಿ ನಿಷ್ಕಾರಣವಾಗಿ ದ್ವೇಷಿಸಿದವನನ್ನೂ ದ್ವೇಷಿಸದೇ ಇರಬೇಕೇ ? ಎಂದರೆ, ಸುಮ್ಮನೆ **ವಿದ್ವಿಷತಾಂ** - ದ್ವೇಷಿಸುವರನ್ನು ಮಾತ್ರವೇ ಅಲ್ಲದೆ, **ಅಪಕುರ್ವತಾಮಪಿ** - ಸಾಕ್ಷಾತ್ತಾಗಿ ಅಪಕಾರವನ್ನೂ ಮಾಡುವವರನ್ನೂ ಕೂಡ, **ಅದ್ವೇಷ್ಟಾ** - ದ್ವೇಷಿಸದೇ ಇರುವನಾಗಿ, ನಮ್ಮನ್ನು ದ್ವೇಷಿಸದೇ ಇದ್ದರೆ ಸುಮ್ಮನೆ ಇರಬಹುದು, ಪ್ರತ್ಯುತ ಅಪಕಾರವನ್ನೇ ಮಾಡುತ್ತಿದ್ದರೆ, ಅಂತವರನ್ನು ನಾವು ದ್ವೇಷಿಸದೇ ಇರಲು ಸಾಧ್ಯವೆ? ಎಂದರೆ, ಮುಂದೆ ಹೇಳುವ ಅನುಸಂಧಾನವುಳ್ಳವನಾದರೆ ಸಾಧ್ಯವೆಂದು ಹೇಳುತ್ತಾರೆ; **ಮದಪರಾಧಾನುಗುಣಂ ಈಶ್ವರಪ್ರೇರಿತಾನಿ ಭೂತಾನಿ ದ್ವಿಷನ್ತಿ ಅಪಕುರ್ವನ್ತಿಚ ಇತಿ ಅನುಸಂದಧಾನಃ** - ನಾನು ಸ್ವಾಮಿಗೆ ಅಪರಾಧವನ್ನು ಹಿಂದೆ ಮಾಡಿರುತ್ತೇನೆ, ಅದಕ್ಕನುಗುಣವಾಗಿ ಈಶ್ವರನಿಂದ ಪ್ರೇರಿತರಾಗಿ ನನ್ನನ್ನು ಈ ಪ್ರಾಣಿಗಳು ದ್ವೇಷಿಸುತ್ತಾರೆ, ಅಲ್ಲದೆ ಅಪಕಾರವನ್ನೂ ಮಾಡುತ್ತಾರೆ ಎಂಬ ಅನುಸಂಧಾನವುಳ್ಳವನಾಗಿ ಅವರುಗಳನ್ನು ದ್ವೇಷಿಸದೇ ಇರುವವನಾಗಿ ಎಂಬ ತಾತ್ಪರ್ಯವು. ಅವರುಗಳು ದ್ವೇಷಿಸಿ

**ಭಾ. ಭೂತಾನಿ ದ್ವಿಷಂತ್ಯಪಕುರ್ವನ್ತಿ ಚೇತ್ಯನುಸನ್ಧಧಾನಃ, ತೇಷು ದ್ವಿಷತ್ಸ್ವಪಕುರ್ವತ್ಸು ಚ ಸರ್ವೇಷು ಭೂತೇಷು ಮೈತ್ರೀಂ ಮತಿಂ ಕುರ್ವನ್-ಮೈತ್ರಃ, ತೇಷ್ವೇವ ದುಃಖಿತೇಷು ಕರುಣಾಂ ಕುರ್ವನ್-ಕರುಣಃ, ನಿರ್ಮಮಃ-ದೇಹೇನ್ದ್ರಿಯೇಷು ತತ್ಸಂಬಂ**

---

ದರೆ **"ಬದ್ಧವೈರಾಣಿ ಭೂತಾನಿ ದ್ವೇಷಂ ಕುರ್ವನ್ತಿ ಚೇತ್ತತಃ। ಶೋಚ್ಯಾನ್ಯಹೋತಿ ಮೋಹೇನ ವ್ಯಾಪ್ತಾನೀತಿ ಮನೀಷಿಣಾ"** ಇತರರು ಬದ್ಧವೈರಿಗಳಾಗಿ ದ್ವೇಷವನ್ನು ಮಾಡಿದರೆ ಅಹೋ, ಇವರುಗಳು ಎಷ್ಟು ಅಜ್ಞಾನದಿಂದ ಮೋಹಿತರು, ಕರ್ಮ ಪರಿಪಾಕವು ಅವರಿಗೆ ಎಷ್ಟು ಬಲಿಷ್ಠವಾದುದೆಂಬ ಪರಿತಾಪವಿರಬೇಕೆಂದು ಹೇಳಲ್ಪಟ್ಟಿರುತ್ತದೆ. ಹಾಗೆ ಅಜ್ಞಾನವು ಅವರಲ್ಲಿರುವದರಿಂದ **"ಸುತರಾಂ ಅನುಕಮ್ಪ್ಯೇತ"** ಅಂತವರಲ್ಲಿ ಅಜ್ಞಾನವಿದೆಯೇ ಎಂದು ದಯೆಯನ್ನು ತೋರಿಸತಕ್ಕದ್ದೆಂದು ಉಪದೇಶಿಸಲ್ಪಟ್ಟಿರುತ್ತದೆ. ಅಥವಾ ನನ್ನಲ್ಲಿ ನಿಶ್ಚಯವಾಗಿಯೂ ಏನಾದರೂ ದೋಷಗಳಿವೆಯೋ ಏನೋ? ಅದಕ್ಕಾಗಿಯೇ ಹೀಗೆ ದ್ವೇಷಿಸುತ್ತಾರೆಂಬ ಅನುಸಂಧಾನವಿರಬೇಕು; ಅಂತವರು ದೋಷಪ್ರಕಟನೆ ಮಾಡಿದರಲ್ಲಾ ಎಂಬ ಕೃತಜ್ಞತಾಭಾವವನ್ನೂ ತೋರಿಸತಕ್ಕದ್ದೆಂದೂ ಉಪದೇಶಿಸಲ್ಪಟ್ಟಿರುತ್ತದೆ. ಹೀಗೆ ಭಾವನೆಗಿಂತ ಶ್ರೀ ಯತಿವರ್ಯರ ಭಾವನೆಯು ಇನ್ನೂ ಶ್ಲಾಘ್ಯತರವಾದುದು, ನನ್ನ ದುಷ್ಕರ್ಮವೇನೋ ಇತ್ತು, ಅದು ಸರ್ವೇಶ್ವರನು ಪರಮ ಕೃಪಯಾ ಹೀಗೆ ಸುಲಭವಾಗಿ ಕಳೆದುಹೋಗಲೆಂದು ಸಙ್ಕಲ್ಪಿಸಿ, ಅವರು ನನ್ನನ್ನು ದ್ವೇಷಿಸುವಹಾಗೆಯೂ, ಅಲ್ಪಾಪಕಾರವನ್ನು ಮಾಡುವಹಾಗೆಯೂ, ಮಾಡಿರುತ್ತಾನೆಂಬ ಅನುಸಂಧಾನವಿರಬೇಕೆಂದು ಉಪದೇಶಿಸಿರುತ್ತಾರೆ. ಆದರೆ, ಶ್ರೀ ಕೃಷ್ಣನೇ **"ದ್ವಿಷದನ್ನಂ ನ ಭೋಕ್ತವ್ಯಂ"** ಎಂದು ಹೇಳಿ ದುರ್ಯೋಧನನನ್ನು ದ್ವೇಷಿಸಲಿಲ್ಲವೇ ಎಂಬ ಆಕ್ಷೇಪತಂದರೆ, ದುರ್ಯೋಧನನು ಪ್ರತ್ಯಕ್ಷವಾಗಿ ತನ್ನನ್ನು ದ್ವೇಷಿಸಲಿಲ್ಲವು, **"ಪಾಂಡವಾನ್ ದ್ವಿಷಸೇ ರಾಜನ್ ಮಮ ಪ್ರಾಣಾಹಿ ಪಾಂಡವಾಃ"** ಎಂದು ಹೇಳಿರುವದರಿಂದ, ತನ್ನನ್ನು ದ್ವೇಷಿಸಿದವರನ್ನು ತಾನು ದ್ವೇಷಿಸುವದಿಲ್ಲವು, ತನ್ನ ಪ್ರಿಯ ಭಕ್ತನನ್ನು ದ್ವೇಷಿಸಿದವರನ್ನು ಮನ್ನಿಸಿಬಿಡುವ ಶಕ್ತಿಯು ತನಗಿಲ್ಲವೆಂದೂ ಆ ಭಕ್ತರಿಗೇ ಉಂಟೆಂದು ಉಪದೇಶಿಸಿರುತ್ತಾನೆ. ರಾವಣನು ತನ್ನನ್ನು ದ್ವೇಷಿಸಿದವನು, **"ಯದಿವಾ ರಾವಣಸ್ಸ್ವಯಂ"** ಎಂದು ಹೇಳಿ ಬಿಟ್ಟುಬಿಡಬಹುದು, ಅದೂ ಅಲ್ಲದೆ ಸರ್ವೇಶ್ವರನು ನ್ಯಾಯಾಧಿಪತಿ, ಮಾಜಿಸ್ಟ್ರೇಟ್ ಪದವಿಯಲ್ಲಿರುವವನು, ಅಪರಾಧಾನುಗುಣವಾಗಿ ಶಿಕ್ಷಿಸುವ ಕೆಲಸವು ಅವನದು· ನಾವು ಅಂತವನ ಪದವಿಯಲ್ಲಿಲ್ಲವು. ಆತನು ಹೇಗೂ ಶಿಕ್ಷಿಸುವನು, ಆತನ ಪದವಿಯನ್ನು ನಾವು ಆರೋಪಿಸಿಕೊಳ್ಳುವದು ಹಾಸ್ಯಾಸ್ಪದವೆಂಬ ಭಾವವೂ ತೋರಿಬರುತ್ತದೆ. ಹೀಗೆ ಫಲಾಭಿಸಂಧಿರಹಿತ ಕರ್ಮಾನುಷ್ಠಾನದೊಂದಿಗೆ ಉಪಾಸನವನ್ನಾರಂಭಿಸುವವನು, **ಅದ್ವೇಷ್ಟಾ** - ದ್ವೇಷವಿಲ್ಲದವನಾಗಿಯೂ, **ತೇಷು ದ್ವಿಷತ್ಸು ಅಪಕುರ್ವತ್ಸು ಚ** - ಆ ಚೇತನರು ದ್ವೇಷಿಸಿ ಅಪಕಾರವನ್ನು ಮಾಡಿದವರಾದರೂ ಕೂಡ, ಅವರಲ್ಲೂ ಮತ್ತು **ಸರ್ವಭೂತೇಷು** – ಸಮಸ್ತ ಚೇತನರಲ್ಲೂ, **ಮೈತ್ರೀಂ ಮತಿಂ ಕುರ್ವನ್**–ಸ್ನೇಹ ಬುದ್ಧಿಯನ್ನು ಮಾಡುವವನಾಗಿ, **ಮೈತ್ರಃ** - ಸ್ನೇಹಪರನಾದವನಾಗಿಯೂ; **ತೇಷ್ವೇವ ದುಃಖಿತೇಷು ಕರುಣಾಂಕುರ್ವನ್** – ಆ ಪ್ರಾಣಿಗಳೂ ದುಃಖಿತರಾದರೆ ಸಾಧ್ಯವಾದಷ್ಟು ಅವರ ದುಃಖವನ್ನು ತಪ್ಪಿಸಲು ಯತ್ನಮಾಡಿ ಹೀಗೆ ಕರುಣೆಯನ್ನು ತೋರಿದವನಾಗಿ, **ಕರುಣಃ**-ಕರುಣೆಯು ಎಂದೆನಿಸಿದವನಾಗಿಯೂ, ಕಾರುಣ್ಯ ಶಬ್ದಕ್ಕೆ ತನಗೆ ಯಾವ ಪ್ರಯೋಜನದ ಉದ್ದೇಶ್ಯವಿಲ್ಲದೆ ಇತರರ ದುಃಖವನ್ನು ಹೋಗಲಾಡಿಸಬೇಕೆಂಬ ಇಚ್ಛೆಯು, ಎಂಬರ್ಥವು; **ನಿರ್ಮಮಃ** ಎಂದರೆ **ದೇಹೇಂದ್ರಿಯ**ಗಳಲ್ಲೂ, **ತತ್ಸಂಬಂಧಿಷು ಚ** - ಅದಕ್ಕೆ ಸಂಬಂಧಪಟ್ಟ ವಸ್ತುಗಳಲ್ಲೂ ತನ್ನ

**ಭಾ. ಧಿಷು ಚ ನಿರ್ಮಮಃ, ನಿರಹಙ್ಕಾರಃ-ದೇಹಾತ್ಮಾಭಿಮಾನ ರಹಿತಃ ತತ ಏವ ಸಮ ದುಃಖಸುಖಃ-ಸುಖದುಃಖಾಗಮಯೋಃ ಸಾಂಙ್ಕಲ್ಪಿಕಯೋಃ ಹರ್ಷೋದ್ವೇಗ**

ದೆಂಬ ಮಮತೆ ಇಲ್ಲದವನಾಗಿಯೂ, ದೇಹೇಂದ್ರಿಯಗಳೂ ತತ್ಸಂಬಂಧವಾದವುಗಳೂ ಸಹ ತನಗೆ ಕರ್ಮೋಪಾಧಿಯಿಂದ ಪ್ರಾಪ್ತವಾದವು; ಎಲ್ಲವೂ ಸರ್ವೇಶ್ವರನ ಪರಾಪರಾ ಪ್ರಕೃತಿಗೆ ಸಂಬಂಧಪಟ್ಟವಾಗಿ ಆತನಿಗೆ ಶರೀರವಾಗಿ ಆತನ ಸ್ವತ್ತು ಎಂಬ ಜ್ಞಾನಮೂಲಕವಾಗಿ ಅವುಗಳಲ್ಲಿ ಮಮತಾ ತ್ಯಾಗಮಾಡಿದವನಾಗಿ, **ನಿರಹಙ್ಕಾರಃ** - ಎಂದರೆ **ದೇಹಾತ್ಮಾಭಿಮಾನರಹಿತಃ** - ದೇಹವೇ ಆತ್ಮಾ ಎಂಬ ಅಭಿಮಾನವಿಲ್ಲದವನಾಗಿ, ಸ್ವತಂತ್ರಾತ್ಮ ಭ್ರಾಂತಿಯಿಲ್ಲದವನಾಗಿ ಸರ್ವೇಶ್ವರ ಸಙ್ಕಲ್ಪಾಯುತ್ತವಾಗಿ ಎಲ್ಲವೂ ನಡೆಯುತ್ತವೆ ಎಂಬ ಜ್ಞಾನವುಳ್ಳವನಾಗಿ, **ತತ ಏವ**- ಆ ಕಾರಣದಿಂದಲೇ, ತಾನು ಹೀಗೆ ನಿರ್ಮಮ ನಿರಹಂಕಾರನಾಗಿ ಸ್ವತಂತ್ರನಲ್ಲದೆ ಸರ್ವೇಶ್ವರನಿಗೆ ಎಲ್ಲವೂ ತಾನೂ ಸಹ ಅಧೀನನಾಗಿರುವದರಿಂದಲೇ, ಮತ್ತು **ಸಮದುಃಖಸುಖಃ** ಎಂದರೆ **ಸಾಙ್ಕಲ್ಪಿಕಯೋಃ ಸುಖದುಃಖಾಗಮಯೋಃ**-ಪರಮಾತ್ಮನಿಂದ ಸಙ್ಕಲ್ಪಿಸಲ್ಪಟ್ಟ ಸುಖ ದುಃಖಗಳುಂಟಾಗುವುಗಳಲ್ಲಿ, **ಹರ್ಷೋದ್ವೇಗರಹಿತಃ**-ಹರ್ಷ ಮತ್ತು ಶೋಕಗಳಿಲ್ಲದವನಾಗಿಯೂ ಇದೂ ಹಿಂದೆಯೇ **"ನಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯಚಾಪ್ರಿಯಂ"** (ಗೀ. ೫. ೨೦) ಎಂದೂ, **"ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ"** ಎಂದೂ **"ಸುಖದುಃಖೇ ಸಮೇಕೃತ್ವಾ"** ಎಂದೂ ಸಹ, ಉಪದೇಶಿಸಲ್ಪಟ್ಟಿರುತ್ತದೆ. ಮುಂದೆಯೂ (ಗೀ. ೧೨. ೧೭.) ನೆಯ ಶ್ಲೋಕದಲ್ಲೂ, **"ಯೋನ ಹೃಷ್ಯತಿ"** ಎಂಬಲ್ಲಿ ಜ್ಞಾಪಿಸಲ್ಪಡುತ್ತದೆ. ಸುಖದುಃಖಗಳಲ್ಲಿ ಸಮಭಾವವು ಹೇಗೆ ಉಂಟಾಗಬಹುದು ಎಂಬುದನ್ನು ಶ್ರೀ ಪರಾಶರರು (ವಿ. ಪು. ೨. ೬. ೪೭) ಹೇಳುತ್ತಾರೆ.—**ವಸ್ತ್ವೇಕಮೇವ ದುಃಖಾಯ ಸುಖಾಯೇರ್ಷ್ಯೋದ್ಭವಾಯ ಚ। ಕೋಪಾಯ ಚ ಯತಸ್ತಸ್ಮಾದ್ವಸ್ತುವಸ್ತ್ವಾತ್ಮಕಂ ಕುತಃ। ತದೇವಪ್ರೀತಯೇಭೂತ್ವಾ ಪುನರ್ದುಃಖಾಯ ಜಾಯತೇ। ತದೇವಕೋಪಾಯಯತಃ ಪ್ರಸಾದಾಯ ಚ ಜಾಯತೇ। ತಸ್ಮಾದ್ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಂ। ಮನಸಃ ಪರಿಣಾಮೋಯಂ ಸುಖದುಃಖಾದಿ ಲಕ್ಷಣಂ"** ಇದರಭಿಪ್ರಾಯವೇನೆಂದರೆ, ಒಂದು ವಸ್ತುವೇ ಸುಖ, ದುಃಖ, ಕೋಪ ಪ್ರಸಾದ ಮೊದಲಾದವುಗಳನ್ನೆಲ್ಲಾ ಉಂಟುಮಾಡಬಹುದು, ಆ ವಸ್ತುವಿನ ಸ್ವರೂಪವೇ ದುಃಖ ಸುಖಕರವಾದುದು ಎಂದಲ್ಲವು. ದ್ರವ್ಯ ಒಂದೇ ಅನುಕೂಲಗಳನ್ನು ಕಲ್ಪಿಸಿ ಸುಖವನ್ನುಂಟುಮಾಡಬಹುದು; ಕಳ್ಳರು ಬಂದು ಹೊಡೆದು ಕಿತ್ತುಕೊಂಡು ಹೋಗುವದರಿಂದ ದ್ರವ್ಯವು ದುಃಖಕ್ಕೆ ಕಾರಣವಾಗಬಹುದು; ಬಹಳ ದ್ರವ್ಯವನ್ನು ತಾನೇ ಇಟ್ಟುಕೊಂಡನೆಂದು ಭ್ರಾತೃಗಳಿಗೆ ಕೋಪಕ್ಕೆ ಕಾರಣವಾಗದು; ದೇವ ಭಾಗವತ ವಿನಿಯೋಗದಿಂದ ಪ್ರಸನ್ನತೆಗೆ ಕಾರಣವಾಗಬಹುದು. ದ್ರವ್ಯದಲ್ಲೇ ಈ ಧರ್ಮಗಳಿಲ್ಲವು. ಮನೋ ವಿಕಾರಾನುಗುಣವಾಗಿ ಸುಖದುಃಖಗಳುಂಟಾಗುವದರಿಂದ ಅಂತಹ ವಿಕಾರವಿಲ್ಲದಿರುವದೇ ಸಮತ್ವವು. ಹಾಗೆಯೇ ಶಾಂತಿ ಪರ್ವದಲ್ಲಿ (ಭಾ. ಶಾನ್ತಿ ೧೭೫-೫) **"ತಯೋರೇಕ ತರೋರಾಶಿಃ ಯದ್ಯೇನ ಮುಪಸನ್ನಮೇತತ್। ನಸುಖಂ ಪ್ರಾಪ್ಯ ಸಂಹೃಷ್ಯೇದ್ದುಃಖಂ ಪ್ರಾಪ್ಯ ನ ಸಂಜ್ವರೇತ್".** ಹಾಗೆಯೇ ಶ್ರೀಮದ್ರಾಮಾಯಣದಲ್ಲೂ (ಅಯೋಧ್ಯಾ. ೨೨ ೨೭.) **"ಮಾಚಲಕ್ಷ್ಮಣ ಸನ್ತಾಪಂ ಕಾರ್ಷೀರ್ಲಕ್ಷ್ಮ್ಯಾಃ ವಿಪರ್ಯಯೇ। ರಾಜ್ಯಂ ವಾ ವನವಾಸೋವಾ ವನವಾಸೋ ಮಹೋದಯಃ"** ಎಂದು ಶ್ರೀ ರಾಮನು ಲಕ್ಷ್ಮಣನಿಗೆ ಹೇಳುವ ವಾಕ್ಯವು. ಹಾಗೆ ನೋಡಿದರೆ ಇವರುಗಳು ಸರ್ವವಿಧ ಮಾಹಾತ್ಮ್ಯ ಯಶಸ್ಸೇ ಮೊದಲಾದವುಗಳಿಗೆ ವನವಾಸವೇ ಹೇತುವಾಯಿತು. ಅದು ಏತಕ್ಕೆ ಸುಖದುಃಖ

**ಭಾ. ರಹಿತಃ, ಕ್ಷಮೀ-ಸ್ಪರ್ಶಪ್ರಭವಯೋ ರವರ್ಜನೀಯಯೋ ರಪಿ ತಯೋರ್ವಿಕಾರ ರಹಿತಃ, ಸಂತುಷ್ಟಃ-ಯದೃಚ್ಛೋಪನತೇನ ಯೇನಕೇನಾಪಿ ದೇಹಧಾರಣ ದ್ರವ್ಯೇಣ ಸನ್ತುಷ್ಟಃ, ಸತತಂ ಯೋಗಿ-ಸತತಂ ಪ್ರಕೃತಿವಿಯುಕ್ತಾತ್ಮಾನುಸಂಧಾನ**

---

ಗಳಲ್ಲಿ ಸಮಭಾವವಿರಬೇಕೆಂಬುದಕ್ಕೆ **"ಸುಖದುಃಖೇ ಭಯಕ್ರೋಧೌ ಲಾಭಾಲಾಭೌ ಜಯಾಜಯೌ । ಯಚ್ಚ ಕಿಂಚಿತ್ತಥಾಭೂತಂ ನನುದೈವಸ್ಯ ಕರ್ಮತತ್"** ಸುಖದುಃಖಗಳೇ ಮೊದಲಾದವಿವೆಲ್ಲವೂ ಪ್ರಾಪ್ತವಾಗುವದು ಸ್ವಾಮಿಸಙ್ಕಲ್ಪಕ್ಕೆ ಅಧೀನವಾದ ಪ್ರಾರಬ್ಧ ಕರ್ಮಾನು ಗುಣವಾಗಿಯಾದುದರಿಂದ, ನಮ್ಮ ಹರ್ಷ ಶೋಕಗಳೇನೂ ಕಾರ್ಯಕಾರಿಯಲ್ಲವೆಂಬ ಭಾವವು ಸೂಚಿತವು. **ಕ್ಷಮೀ** ಎಂದರೆ **ಅವರ್ಜನೀಯಯೋಃ** - ತಪ್ಪಿದಲ್ಲವಾದ, **ಸ್ಪರ್ಶಪ್ರಭವ ಯೋರಪಿ** - ಸ್ಪರ್ಶಮೂಲಕವಾಗಿ ಉಂಟಾಗುವ ಸುಖ ದುಃಖಗಳಲ್ಲೂ ಸಹ **ವಿಕಾರ ರಹಿತಃ** ಮನೋವಿಕಾರವಿಲ್ಲದವನಾಗಿ ಎಂದರೆ ಸ್ವಾಮಿ ಸಙ್ಕಲ್ಪ ಮೂಲಕ ಉಂಟಾದ ಈ ಸ್ಪರ್ಶ ಸಂಬಂಧದಿಂದ ಪ್ರಾಪ್ತವಾದ ಸುಖದುಃಖಗಳಿಂದ ಮನೋವಿಕಾರ ರಹಿತನಾಗಿ ಎಂದರೆ ಸಹಿಸಿ ಕೊಳ್ಳುವವನಾಗಿ, **ಸನ್ತುಷ್ಟಃ** - ಸಂತೋಷಚಿತ್ತನಾಗಿ, ಹೇಗೆಂದರೆ, **ಯದೃಚ್ಛೋಪ ನತೇನ ಯೇನ ಕೇನಾಪಿ ದೇಹಧಾರಣದ್ರವ್ಯೇಣ ಸನ್ತುಷ್ಟಃ** - ತಾನಾಗಿಯೇ ಸ್ವಾಮಿಯ ಅನುಗ್ರಹದಿಂದ ಪ್ರಾಪ್ತವಾದ ಯಾವುದೋ ಒಂದು ಕಾರಣದಿಂದ ಒದಗಿದ ದೇಹಧಾರಣಕ್ಕೆ ಬೇಕಾದ ದ್ರವ್ಯದಿಂದ ಸಂತುಷ್ಟಚಿತ್ತನಾಗಿ, ಇದೂ ಹಿಂದೆಯೇ **"ಯದೃಚ್ಛಾಲಾಭಸಂತುಷ್ಟೋದ್ವಂದ್ವಾತೀತೋ ವಿಮತ್ಸರಃ"** (ಗೀ. ೪. ೧೨) ಎಂದು ಹೇಳಲ್ಪಟ್ಟಿರುತ್ತದೆ. **ಯದೃಚ್ಛೋಪನತೇನ** ಎಂದು ಹೇಳಿರುವದರಿಂದ ಈತನು ಪ್ರಯತ್ನ ಮಾಡಬಾರದೆಂದು ಹೇಳಲ್ಪಡಲಿಲ್ಲವು; ಎಷ್ಟು ತನಗೆ ಲಭ್ಯವೋ ಅಷ್ಟರಿಂದಲೇ ಪ್ರೀತನಾಗಿ ಎಂಬ ಭಾವವು. ಈ ಸಂದರ್ಭ ದಲ್ಲಿ **"ನಾಹಾರಂ ಚಿನ್ತಯೇತ್ಪ್ರಾಜ್ಞೋ ಧರ್ಮಮೇವಾ ನುಚಿನ್ತಯೇತ್ । ಆಹಾರೋಹಿ ಮನುಷ್ಯಾಣಾಂ ಜನ್ಮನಾಸಹ ಜಾಯತೇ"** ಎಂದು ಪರಾಶರ ಗೀತಾವಾಕ್ಯವು ಅನುಸಂಧೇಯವು; **ಯೇನಕೇನಾಪಿ ದೇಹಧಾರಣ ದ್ರವ್ಯೇಣ** ಎಂಬ ಪ್ರಯೋಗವು ಮುಂದೆ ೧೯ ನೆಯ ಶ್ಲೋಕದಲ್ಲಿ ಮಾಡುವ **"ಸನ್ತುಷ್ಟೋ ಯೇನ ಕೇನಚಿತ್"** ಎಂಬ ಅನುವಾದವನ್ನು ಮನಸ್ಸಿನಲ್ಲಿಟ್ಟು ಮಾಡಲ್ಪಟ್ಟಹಾಗೆ ತೋರುತ್ತದೆ; ಮೋಕ್ಷಪರ್ವದಲ್ಲಿ (೨೫೧-೧೨) **ಯೇನ ಕೇನಾ ಚಿದಾಚ್ಛನ್ನೋ ಯೇನಕೇನಾ ಚಿದಾಶಿತಃ । ಯತ್ರಕ್ವಚನ ಶಾಯೀ ಸ್ಯಾತ್ತಂ ದೇವಾ ಬ್ರಾಹ್ಮಣಂ ವಿದುಃ"** ಬ್ರಹ್ಮವಿತ್ತಾದವನನ್ನು ಹೇಗೆ ತಿಳಿಯುತ್ತಾರೆಂಬ ವಿಷಯದಲ್ಲಿ, ಅಂತವನು ಹರಕುಬಟ್ಟೆಯೋ ಯಾವುದರಿಂದಲೋ ಮಾನವನ್ನು ಕಾಪಾಡಿಕೊಳ್ಳುವನು, ಯಾವ ಆಹಾರವು ವಿಹಿತವಾದುದು ಸಿಕ್ಕಿತೋ ಅದರಿಂದಲೇ ತೃಪ್ತನಾಗುವನು, ಯಾವುದೋ ಒಂದು ಸ್ಥಳ ನೆಲವಾದರೂ ಸರಿಯೇ ಅಲ್ಲಿ ಮಲಗುವನು, ಇಂತವನೇ ಬ್ರಹ್ಮವಿತ್ತು; ಹಾಗೆಯೇ ಭಾರತ ಅಜಗರೋಪಾಖ್ಯಾನದಲ್ಲಿ **"ನಸನ್ನಿ ಪತಿತಂ ಧರ್ಮ್ಯ ಮುಪಭೋಗಂ ಯದೃಚ್ಛಯಾ । ಪ್ರತ್ಯಾಚಕ್ಷೇ ನಚಾಪ್ಯೇನ ಮನುರುಂಧೇ ಸುದುರ್ಲಭಮ್"** ನನ್ನ ಇಚ್ಛೆಯಿಲ್ಲದೆ ಭಗವತ್ಸಙ್ಕಲ್ಪ ಮೂಲಕ ಉಂಟಾಗಿ ಧರ್ಮದಿಂದ ಯುಕ್ತವಾದ ಆಹಾರಾದ್ಯುಪಭೋಗವನ್ನು ತ್ಯಾಗಮಾಡುವದಿಲ್ಲವು ಎಂದರೆ ಪರಿಗ್ರಹಿಸುವನು, ಹೊಂದಲಸಾಧ್ಯವಾದುದನ್ನು ಎಂದಿಗೂ ಅಪೇಕ್ಷಿಸುವದಿಲ್ಲವು, ಅವುಗಳಲ್ಲಿ ಆಶೆಯನ್ನಿಟ್ಟು ಅದಕ್ಕಾಗಿ ಪ್ರಯಾಸಪಟ್ಟು ಧನಾರ್ಜನಾದಿಗಳನ್ನು ಮಾಡುವದಿಲ್ಲವೆಂಬ ತಾತ್ಪರ್ಯವು. **"ಯದೃಚ್ಛಾಲಾಭತುಷ್ಟಸ್ಯ ತೇಜೋವಿಪ್ರಸ್ಯ ವರ್ಧತೇ"** ಎಂಬುದು ಭಾಗವತ ವಾಕ್ಯವು. **ಸತತಂ ಯೋಗೀ** ಎಂದರೆ **ಸತತಂ ಪ್ರಕೃತಿ**

**ಭಾ. ಪರ, ಯತಾತ್ಮಾ-ನಿಯಮಿತಮನೋವೃತ್ತಿಃ, ದೃಢನಿಶ್ಚಯಃ-ಅಧ್ಯಾತ್ಮ ಶಾಸ್ತ್ರೋದಿತೇಷು ಅರ್ಥೇಷು ದೃಢನಿಶ್ಚಯಃ, ಮಯ್ಯರ್ಪಿತ ಮನೋಬುದ್ಧಿಃ - ಭಗವಾನ್ ವಾಸುದೇವ ಏವಾನಭಿಸಂಹಿತ ಫಲೇನಾನುಷ್ಠಿತೇನ ಕರ್ಮಣಾಆರಾಧ್ಯತೇ, ಆರಾಧಿ**

---

**ಏಯುಕ್ತಾತ್ಮಾನುಸಂಧಾನ ಪರಃ** - ಯಾವಾಗಲೂ ಪ್ರಕೃತಿಯಿಂದ ಬಿಡುಗಡೆ ಹೊಂದಿದ ಆತ್ಮಾ ಎಷ್ಟು ಪರಿಶುದ್ಧನೆಂಬ ಅನುಸಂಧಾನದಲ್ಲಿ ಆಸಕ್ತನಾದವನಾಗಿಯೂ, ಇಲ್ಲಿ ಫಲಾಭಿಸಂಧಿ ರಹಿತ ಕರ್ಮ ಯೋಗಾಂಗಕ ಭಕ್ತಿಯೋಗದ ಪ್ರಶಂಸೆಯಾಧುದರಿಂದ ಹಾಗೆ ವ್ಯಾಖ್ಯಾನ ಮಾಡಿದ್ದಾರೆ; ಯೋಗೀ ಎಂದರೆ ಭಕ್ತಿಯೋಗನಿಷ್ಠನೆಂದು ಅರ್ಥಮಾಡುತ್ತೇವೆ ಎಂದರೆ, ಅಭ್ಯಂತರವೇನೂ ಇಲ್ಲವು, ಆಗಲೂ ಇಲ್ಲಿ ಪ್ರಶಂಸಿಸಲ್ಪಟ್ಟಿರುವ ಭಕ್ತಿಯೋಗಾರಂಭಕನು ಫಲಾಭಿಸಂಧಿ ರಹಿತ ಕರ್ಮಯೋಗ ನಿಷ್ಠನೇಯಾದುದರಿಂದ ಹಾಗೂ ನಾವು ಅರ್ಥಮಾಡಬಹುದು, ಆದರೆ **ಯೋಗೀ** ಎಂಬುದರಿಂದ ಕರ್ಮಯೋಗದಲ್ಲಿರುವವನೆಂಬ ಅರ್ಥವುಂಟಾಗುವದರಿಂದ, ಹೇಗೆ ಭಕ್ತಿಯೋಗವನ್ನು ಆರಂಭಿಸತಕ್ಕದ್ದು, ಯಾವ ಸಾಧನೋಪಾಯದ ಮೂಲಕ ಎಂಬುದು ಪ್ರಕರಣವಾದುದರಿಂದ ಯತಿವರ್ಯರ ಅರ್ಥವೇ ಸರ್ವ ಸಮಂಜಸವಾದುದು, ಕರ್ಮಯೋಗಕ್ಕೆ ಆತ್ಮಜ್ಞಾನವು ಆವಶ್ಯಕವು, **ಯತಾತ್ಮಾ** ಎಂದರೆ **ನಿಯಮಿತ ಮನೋವೃತ್ತಿಃ** - ನಿಯಮಿಸಲ್ಪಟ್ಟ ಮನೋವ್ಯಾಪಾರ ಉಳ್ಳವನಾಗಿಯೂ, ಆತ್ಮಚಿನ್ತನವಿರುವವನಿಗೆ ಅನಾತ್ಮ ಚಿನ್ತನೆಯು ಕೂಡದು ಎಂದರೆ ಐಹಿಕ ಚಿನ್ತನೆಯು ಕೂಡದು, ಎಂದು ತಿಳಿಸುವದಕ್ಕಾಗಿ **"ಯತಾತ್ಮಾ"** ಎಂಬ ಪ್ರಯೋಗವು; ಇಲ್ಲಿ ಆತ್ಮಾ ಎಂದರೆ ಮನಸ್ಸು; ಯಾವಾಗ ಮನಸ್ಸು ನಿಗ್ರಹಿಸಲ್ಪಟ್ಟಿತೋ ಸರ್ವೇಂದ್ರಿಯಗಳೂ ನಿಗ್ರಹಿಸಲ್ಪಟ್ಟವೆಂದು ಹೇಳಿದಂತಾಯಿತು, **"ವಾಚಂಯಚ್ಛ ಮನೋಯಚ್ಛ ಯಚ್ಛಪ್ರಾಣೇಂದ್ರಿಯಾಣಿಚ । ಆತ್ಮಾನಂ ಆತ್ಮಾನಾಯಚ್ಛನಭೂಯಃ ಕಲ್ಪಸೇಧ್ವನೇ ॥** (ಭಾಗ. ೧೦-೧೬.೪೨) ಅರ್ಥವು ವ್ಯಕ್ತವು; ಆದರೆ **ಆತ್ಮಾನಂ ಆತ್ಮನಾಯಚ್ಛ** ಎಂದರೆ ಮನಸ್ಸನ್ನು ನಿನ್ನ ಆತ್ಮಾವಿನ ವಿವೇಕರೂಪ ಧರ್ಮಭೂತ ಜ್ಞಾನದಿಂದ ನಿಗ್ರಹಿಸು. ಮನಸ್ಸನ್ನು ನೀನೇ ವಿವೇಕ ಜ್ಞಾನದಿಂದ ನಿಗ್ರಹಿಸತಕ್ಕದ್ದೆಂಬ ಭಾವವು. ಹೀಗೆ ನಿಗ್ರಹಿಸಿದುದಾದರೆ ಪುನಃ ಸಂಸಾರ ಮಾರ್ಗದಲ್ಲೇ ನೀನು ಸುತ್ತುವುದಿಲ್ಲವೆಂಬ ತಾತ್ಪರ್ಯವು. **ದೃಢನಿಶ್ಚಯಃ**-ದೃಢವಾದ ನಿಶ್ಚಯಬುದ್ಧಿಯುಳ್ಳವವನಾಗಿಯೂ, ಏತರಲ್ಲಿ ಎಂದರೆ **ಅಧ್ಯಾತ್ಮ ಶಾಸ್ತ್ರೋದಿತೇಷು** - ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಹೇಳಿರುವದರಲ್ಲಿ, ಅವುಗಳಲ್ಲಿ ಪರಿಪೂರ್ಣ ನಂಬಿಕೆಯಿರಬೇಕು; ಅದರಲ್ಲಿ ಸಂಶಯವಿರಕೂಡದು, **ಸಂಶಯಾತ್ಮಾವಿನಶ್ಯತಿ** ಎಂದು ಸಂಶಯಾವಿಷ್ಟನಿಗೆ ಅನಿಷ್ಟವು ಹೇಳಲ್ಪಟ್ಟಿರುತ್ತದೆ; ಯಾವಾಗ ಯತಾತ್ಮಾವಾಗಿಯೂ ದೃಢನಿಶ್ಚಯವುಳ್ಳವನಾದನೋ ಆಗ, **ಮಯ್ಯರ್ಪಿತ ಮನೋಬುದ್ಧಿಃ** ನನ್ನಲ್ಲೇ ಸಮರ್ಪಿಸಲ್ಪಟ್ಟ ಮನಸ್ಸು ಬುದ್ಧಿಗಳನ್ನುಳ್ಳವನಾಗಿಯೂ, ಇದರ ತಾತ್ಪರ್ಯವನ್ನು ತಿಳಿಸುತ್ತಾರೆ—ಭಗವಂತನಾದ ವಾಸುದೇವನು, **ಅನಭಿಸಂಹಿತ ಫಲೇನ ಅನುಷ್ಠಿತೇನ ಕರ್ಮಣಾ ಆರಾಧ್ಯತೇ** - ಫಲ ಸಂಬಂಧವಿಲ್ಲದೆ ಅನುಷ್ಠಿಸಲ್ಪಟ್ಟ ಕರ್ಮದಿಂದ ಆರಾಧಿಸಲ್ಪಡುವವನು, **ಆರಾಧಿತಶ್ಚ** - ಹೀಗೆ ಆರಾಧಿಸಲ್ಪಟ್ಟವನಾಗಿ, **ಮಮಾತ್ಮಾಪರೋಕ್ಷ್ಯಂ** - ಪರಮಾತ್ಮನಾದ ನನ್ನ ಸಾಕ್ಷಾತ್ಕಾರವನ್ನು, **ಸಾಧಯಿಷ್ಯತೀತಿ** - ಸಾಧಿಸಿಕೊಳ್ಳುವವನಾದುದರಿಂದ, **ಮಯ್ಯರ್ಪಿತ ಮನೋಬುದ್ಧಿಃ** ಎಂದು ಹೇಳಲ್ಪಟ್ಟಿತು. ಭಗವಂತನು ಯೋಗಿಯು ಮಾಡುವ ಕರ್ಮಾನುಷ್ಠಾನದಿಂದ ಆರಾಧಿಸಲ್ಪಡುವನು, ಅದರಿಂದ ಆತನೇ ಪ್ರೀತನಾಗುವನು. ಅದರಿಂದ ಆತನೇ ಉಪಾಯಾನುಷ್ಠಾನವಿರೋಧವರ್ಗವನ್ನೆಲ್ಲಾ **ಹೋಗಲಾಡಿಸುವನು;**

**ಭಾ. ತಸ್ಯ ಮಮಾ ತ್ಮಾಪರೋಕ್ಷ್ಯಮ್ ಸಾಧಯಿಷ್ಯತೀತಿ ಮಯ್ಯರ್ಪಿತ ಮನೋಬುದ್ಧಿಃ, ಯ ಏವಂ ಭೂತೋ ಮದ್ಭಕ್ತಃ - ಏವಂ ಕರ್ಮಯೋಗೇನ ಮಾಂ ಭಜಮಾನೋ ಯಃ, ಸ ಮೇ ಪ್ರಿಯಃ ||೧೩, ೧೪||**

ಉಪಾಸನೆಯು ಕೈಗೂಡುವಹಾಗೆ ಮಾಡುವನು; ಇಂತಹ ಅನುಸಂಧಾನ ಮಾಡುವದೇ **ಮಯ್ಯರ್ಪಿತ ಮನೋಬುದ್ಧಿ** ಎಂದು ಹೇಳಲ್ಪಟ್ಟಿತು. ಹೀಗೆ ಆರಾಧ್ಯನಾಗಿ, ಪ್ರೀತನಾಗಿ, ಅನಿಷ್ಟ ನಿವೃತ್ತಿಮೂಲಕ ಇಷ್ಟಪ್ರಾಪ್ತಿಯನ್ನುಂಟುಮಾಡುವದಕ್ಕೆ ಉಪಯುಕ್ತ ಗುಣಗಳು ಸ್ವಾಮಿಯಲ್ಲುಂಟೆಂದು ತಿಳಿಸುವ ಉಭಯ ಲಿಙ್ಗತ್ವವನ್ನು ಬೋಧಿಸುವ **ಭಗವಚ್ಛಬ್ದವು,** ಪರಮಾತ್ಮನು ಕಲ್ಯಾಣಗುಣಾಕರನೂ ಹೇಯಪ್ರತ್ಯನೀಕನೂ ಎಂದು ತಿಳಿಸುತ್ತದೆ. ನಿರ್ಗುಣನಿಗೆ ಭಗವಚ್ಛಬ್ದವು ಎಂದಿಗೂ ಸಲ್ಲದು. ಆದರೆ ಕರ್ಮಗಳಲ್ಲಿ ಅನ್ಯದೇವತಾತ್ಮಕನಾಗಿಯಲ್ಲವೇ ಆರಾಧ್ಯನು ಎಂದರೆ **"ಅಹಂಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವಚ"** ಎಂದು (ಗೀ. ೯. ೨೪) ಹೇಳಿರುವಹಾಗೆ ಅವರುಗಳಿಗೆಲ್ಲಾ ಅಂತರ್ಯಾಮಿಯಾಗಿ ತಾನೇ ಇದ್ದುಕೊಂಡು, ಆ ಯಜ್ಞಗಳಿಗೆ ಭೋಕ್ತಾವಾಗಿ, ಆವುಗಳಿಂದ ಆರಾಧಿತನಾಗಿ, ತಾನೇ ಫಲಪ್ರದನಾಗಿರುವೆನೆಂಬುದನ್ನು ಬೋಧಿಸುವದಕ್ಕಾಗಿ **ಭಗವಾನ್ ವಾಸುದೇವಃ** ಎಂಬ ಪ್ರಯೋಗಗಳು ಅಥವಾ ವಸುದೇವ ಪುತ್ರನಾಗಿ ಶ್ರೀ ಕೃಷ್ಣನಾಗಿ ಅವತರಿಸಿರುವ ತಾನೇ ಉಪದೇಶಿಕನಾದುದರಿಂದ **ಭಗವಾನ್ ವಾಸುದೇವಃ** ಎಂಬ ಪ್ರಯೋಗವೆಂದಾಗಲಿ ಭಾವಿಸಬಹುದು. ಈಗ ಹೀಗೆ ಹೇಳಿದುದರಲ್ಲಿ, ಮನಸ್ಸಿನಿಂದ ಆರ್ಪಣವು, ಆರಾಧಿಸಲ್ಪಡುವನೆಂಬ ಮನೋಭಾವವೇ; ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿರೂಪ ಫಲಪ್ರದನು ವಾಸುದೇವನೆಂಬ ದೃಢ ನಿಶ್ಚಯವೇ, ಬುದ್ಧ್ಯರ್ಪಣವು ಎಂದು ಭಾವಿಸತಕ್ಕದ್ದು. **ಅನಭಿಸಂಹಿತ ಕರ್ಮಾನುಷ್ಠಾನ** ದಿಂದಲೇ ತಾನು ಸುಪ್ರೀತನಾಗಿ ಅನಿಷ್ಟ ನಿವೃತ್ತಿ ಮೂಲಕ ಇಷ್ಟ ಪ್ರಾಪ್ತಿಫಲವು ದೊರೆಯುವದು; ಹಾಗಿಲ್ಲದಿದ್ದರೆ ಕರ್ಮಗಳಿಗೆ ಯಾವಫಲವೋ, ಅಂತಹ ಅಂತವತ್ತಾದ ಫಲಪ್ರಾಪ್ತಿಯು ದೊರೆಯುತ್ತದೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. **ಮನಸ್ಸು** ಪ್ರಧಾನೇಂದ್ರಿಯವು, **ಬುದ್ಧಿಯು** ಆತ್ಮಗುಣವು ಬುದ್ಧಿಯು ಹೇಳಿದಹಾಗೆ ಮನಸ್ಸಿನ ಪ್ರವೃತ್ತಿಯೂ, ಇಂದ್ರಿಯಗಳ ವ್ಯಾಪಾರಗಳೂ ನಡೆಯುತ್ತವೆ. ಈ ಬುದ್ಧಿಯೇ ಆತ್ಮಾವಾದ ರಥಿಗೆಸಾರಥಿಯು. ಈ ಸಾರಥಿಯು ಒಳ್ಳೇಯವನಾಗಿದ್ದರೆ ಮನಸ್ಸು ಲಗಾಮಾಗಿ ದುಷ್ಟಮಾರ್ಗದಲ್ಲಿ ಓಡುವ ಇಂದ್ರಿಯಗಳಾದ ದುಷ್ಟಾಶ್ವಗಳನ್ನು ಓಡಿಹೋಗದಹಾಗೆ ತಡೆಯುತ್ತದೆ. **"ದ್ರವತೋಽಮಾರ್ಗಮಾಸಾದ್ಯ ಹಯಾನಿವಸುಸಾರಥಿಃ"** ಎಂದು ಮಹರ್ಷಿಯು ಬುದ್ಧಿಯನ್ನು ಸಾರಥಿಯಾಗಿಯೇ ರೂಪಕಮಾಡಿ ಹೇಳಿರುತ್ತಾರೆ. ಕೆಟ್ಟಮಾರ್ಗದಲ್ಲಿ ಓಡಿಹೋಗುವ ಇಂದ್ರಿಯಗಳೆಂಬ ದುಷ್ಟಾಶ್ವಗಳನ್ನು ಮನಸ್ಸೆಂಬ ಲಗಾಮಿನಿಂದ ತಡೆದು ಒಳ್ಳೇಮಾರ್ಗದಲ್ಲಿ ಹೋಗುವಹಾಗೆ ಮಾಡುವಂತಾದ್ದು ಯಾವುದೆಂದರೆ? ಈ ಒಳ್ಳೇಸಾರಥಿಯಾದ ಬುದ್ಧಿಯು. ಹೀಗೆ ಯಾವಾಗ ಮನಸ್ಸೂ ಬುದ್ಧಿಯೂ ತಡೆಯಲ್ಪಟ್ಟವೋ, ಆಗ ಮಯ್ಯರ್ಪಿತ ಮನೋಬುದ್ಧಿಯುಳ್ಳವನಾಗುವನೆಂಬ ಭಾವವು; **ಯಃ ಏವಂ ಭೂತೋ ಮದ್ಭಕ್ತಃ** - ಯಾವನು ಮೇಲೆ ಹೇಳಿದಹಾಗೆ ನನ್ನನ್ನು ಉಪಾಸಿಸುವನೋ ಎಂದರೆ, **ಏವಂ ಕರ್ಮಯೋಗೇನ್ನ ಮಾಂ ಭಜಮಾನೋ ಯಃ** - ಹೀಗೆ ಫಲಾಭಿಸಂಧಿರಹಿತ ಕರ್ಮಾನುಷ್ಠಾನವುಳ್ಳ ಕರ್ಮಯೋಗದಿಂದ ನನ್ನನ್ನು ಉಪಾಸಿಸುವನು ಯಾವನೋ, **ಸಃ** - ಅವನು, **ಮೇಪ್ರಿಯಃ** - ನನಗೆ ಪ್ರಿಯನಾಗುವನು ಎಂದರೆ ಇಂತಹ ಉಪಾಸನದಿಂದ ನಾನು ಪ್ರೀತನಾಗುವದರಿಂದ, **ವಿನಿಷ್ಪನ್ನ ಸಮಾಧಿಯಾಗಿ** ಅವನಿಗೆ ಮೋಕ್ಷವು ಶೀಘ್ರದಲ್ಲೇ ಲಭಿಸುವದು ಎಂಬುದು **ತಾತ್ಪರ್ಯವು.**

**ಮೂ. ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ |**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯ ಸ್ಸ ಚ ಮೇ ಪ್ರಿಯಃ || ೧೫.**

**ಅದ್ವೇಷ್ಟ್ರಾದಿಗುಣ**ಗಳಿರುವದಕ್ಕೆ ಒಳ್ಳೆನಿದರ್ಶನವು ಅಜಾತ ಶತ್ರುವಾದ ಯುಧಿಷ್ಠಿರನು. ಫಲಾಭಿಸಂಧಿರಹಿತ ಕರ್ಮಯೋಗಾನುಷ್ಠಾನದಿಂದ, ಮನಸ್ಸೂ ಬುದ್ಧಿಯೂ ಸಹ ತನ್ನಲ್ಲೇ ಹೇಗೆ ಸ್ಥಿರವಾಗಿ ನಿಲ್ಲುತ್ತದೆಂಬುದನ್ನು ತಿಳಿಸುವದಕ್ಕಾಗಿ ಈ ಎರಡು ಶ್ಲೋಕಗಳೂ ಪ್ರಯುಕ್ತವೆಂದು ಬೋಧಿಸುವದಕ್ಕಾಗಿಯೇ ಕೊನೆಯಲ್ಲಿ **ಮಯ್ಯರ್ಪಿತ ಮನೋಬುದ್ಧಿಃ** ಎಂಬ ಪ್ರಯೋಗವು. ಕರ್ಮಯೋಗವನ್ನು ಫಲಾದಿ ಸಂಗ ರಹಿತನಾಗಿ ಮಾಡುತ್ತಾ ಬಂದು, ಉಪಾಸನಾರಂಭವನ್ನೂ ನಡೆಸಿದರೆ, ಈ ಗುಣಗಳು ಉತ್ಪನ್ನವಾಗಿ ನನ್ನ ಪ್ರಿಯಭಕ್ತನಾಗುವನೆಂದು ಹೇಳಿದರು. ಮುಂದಿನ ಶ್ಲೋಕಗಳಲ್ಲಿ ಹಾಗೆಯೇ ಇನ್ನೂ ಉತ್ಕೃಷ್ಟಗುಣಗಳು ಜನಿಸಿ ಹೆಚ್ಚು ಭಕ್ತಿಯುಂಟಾಗಿ ನನಗೆ ಇನ್ನೂ ಹಿತನಾದ ಭಕ್ತನಾಗುವನೆಂದು ಹೇಳುತ್ತಾರೆ.

**ಮೂಲಕ್ಕೆ ಅರ್ಥವು:—**ಈ ಫಲಾಭಿಸಂಧಿ ರಹಿತ ಕರ್ಮಯೋಗನಿಷ್ಠನಾಗಿರುವ ಉಪಾಸಕನು, ಇನ್ನೂ ಎಂತಹ ಉತ್ಕೃಷ್ಟಗುಣಗಳನ್ನು ಹೊಂದಿ, ನನ್ನಲ್ಲೇ ಮನಸ್ಸು ಬುದ್ಧಿಗಳನ್ನಿಟ್ಟ ಹೇಗೆ ಉಪಾಸಿಸುತ್ತಾ ನನಗೆ ಪ್ರಿಯನಾಗುವನು ಎಂದರೆ ಹೇಳುತ್ತಾರೆ. ಹಾಗೆ ಪ್ರಿಯನಾಗುವದರಿಂದ ಲಾಭವೇನೆಂದರೆ—ಶೀಘ್ರದಲ್ಲಿ ಯೋಗನಿಷ್ಪತ್ತಿಯ ಮೂಲಕ **ಮೋಕ್ಷ**ವೆಂಬ ಭಾವವು. ಅಥವಾ ಇನ್ನೊಂದು ವಿಧವಾಗಿಯೂ ಅವತಾರಿಕೆಯನ್ನು ಕೊಡಬಹುದು:—ಹಿಂದೆ **ಅದ್ವೇಷ್ಟಾ, ಮೈತ್ರಃ, ಕರುಣ, ನಿರ್ಮಮೋನಿರಹಂಕಾರಃ, ಕ್ಷಮೀ,** ಹೀಗೆಲ್ಲಾ ಈ ಫಲಾಭಿ ಸಂಧಿ ರಹಿತ ಕರ್ಮನಿಷ್ಠೆಯುಳ್ಳ ಉಪಾಸಕನಿದ್ದರೆ ನನಗೆ ಪ್ರಿಯನಾಗುವನು; ನಾನು ಆಗ ಫಲಪ್ರದನಾಗುವೆನೆಂದು ಹೇಳಿದರು; ಈ ಗುಣಗಳು ಈತನಲ್ಲಿ ಉಂಟೆಂದು ಹೇಗೆ ಊಹಿಸಬಹುದು? ಈತನಲ್ಲಿ ಉತ್ಪನ್ನವಾಗಿದೆ ಎಂಬುದಕ್ಕೆ ಗುರುತೇನು? ಎಂದರೆ, ಲೋಕವ್ಯವಹಾರಗಳಲ್ಲಿ ಈತನು ಯಾರಿಗಾಗಲಿ ಮನಸಾವಾಚಾ ಕಾಯೇನವಾ ಅಪರಾಧಗಳನ್ನು ಮಾಡಿ ಯಾರಿಗೂ ಯಾವವಿಧ ಕ್ಲೇಶವನ್ನೂ ಮಾಡದಿರುವನು; ಹೀಗೆ ಇದ್ದರೆ, ಆ ಕಾರಣದಿಂದ ಈತನಿಗೆ ಹರ್ಷವಾಗಲಿ, ಅಮರ್ಷವಾಗಲಿ, ಭಯವಾಗಲಿ, ಕ್ಲೇಶವಾಗಲಿ ಯಾವುದು ಇಲ್ಲದಿದ್ದರೆ, ಆಗೀಗ ಹಿಂದೆ ಹೇಳಿದ ಗುಣಗಳೆಲ್ಲಾ ಆತನಲ್ಲಿವೆ ಎಂದು ತಿಳಿಯಬಹುದು; ಅಂತವನು ನನಗೆ ಪ್ರಿಯನಾಗುವನು, ನನ್ನ ಅನುಗ್ರಹಕ್ಕೆ ಪಾತ್ರನಾಗುವನೆಂದು ಹೇಳುತ್ತಾರೆಂದೂ ಅವತಾರಿಕೆಯನ್ನು ಕೊಡಬಹುದು. ಅಥವಾ ಅದ್ವೇಷ್ಟ್ರಾದಿಗಳಿಂದುಂಟಾಗುವ ಪ್ರಯೋಜನವೇನೆಂಬುದನ್ನು ತಿಳಿಸುತ್ತಾರೆಂದಾಗಲಿ ಅಥವಾ ಫಲಾಭಿಸಂಧಿರಹಿತ ಕರ್ಮಯೋಗನಿಷ್ಠನೇ ತನಗೆ ಹೇಗೆ ಪ್ರಿಯನಾಗುವನೆಂದಾಗಲಿ, ಅವತಾರಿಕೆಗಳನ್ನು ಕೊಡಬಹುದು. ಈ ಶ್ಲೋಕವು ಬೇರೆ ಅಧಿಕಾರಿಯನ್ನು ಕುರಿತು ಹೇಳಿತೆಂದು ಭಾವಿಸಕೂಡದು. ಹಿಂದೆ ಹೇಳಿದ ಫಲಾಭಿಸಂಧಿರಹಿತ ಕರ್ಮನಿಷ್ಠೆಯುಳ್ಳ ಉಪಾಸಕನನ್ನು ಕುರಿತೇ ಹೇಳಿದುದು. **ಯಸ್ಮಾತ್** - ಯಾವ ಫಲಾಭಿಸಂಧಿರಹಿತ ಕರ್ಮನಿಷ್ಠೆಯುಳ್ಳ ಉಪಾಸಕನಿಂದ, **ಲೋಕಃ** - ಜನವು, **ನೋದ್ವಿಜತೇ** - ಮನಸ್ಸಿನ ವಾಕ್ಕಿನ, ಕಾಯಿಕ ಅಪರಾಧಗಳ ಮೂಲಕ ಕ್ಲೇಶವನ್ನು ಹೊಂದುವದಿಲ್ಲವೋ, ಹೀಗೆ ಎಲ್ಲರ ವಿಷಯದಲ್ಲೂ ಪರಮ ಮೈತ್ರಿ ಇದ್ದು ಯಾರೊಬ್ಬರಿಗೂ ಪ್ರತಿಕೂಲನಾಗದೆ ಅನುಕೂಲವಾಗಿಯೇ ಇದ್ದಾನೋ, ಆ ಕಾರಣದಿಂದಲೇ **ಯಃ** - ಆ ಕರ್ಮಯೋಗ ನಿಷ್ಠೆಯಿರುವ ಉಪಾಸಕನು, **ಲೋಕಾತ್** - ಲೋಕದ ಜನದಿಂದ, **ನೋದ್ವಿಜತೇ**-ಕ್ಲೇಶಪಡುವದಿಲ್ಲವೋ, ಯಾವಾಗ ಈತನು ಎಲ್ಲರನ್ನೂ ಅನುಕೂಲವಾಗಿ ನೋಡುವನೋ ಆಗ ಅವರೂ ಅನುಕೂಲವಾಗಿಯೇ ನೋಡುವರು ಎಂಬ ಭಾವವು. ಹೀಗೆ ಯಾವಾಗ ಆಯಿತೋ, ಆಗ ಆತನು **ಹರ್ಷಾಮರ್ಷ ಭಯೋದ್ವೇಗೈಃ ಮುಕ್ತಃ** - ಅವನಿಗೆ ಯಾರಿಂದಲೂ ಹರ್ಷವೂ

ಯಾರಿಂದಲೂ **ಅಮರ್ಷ**ವೆಂದರೆ ಸಹನೆ ಇಲ್ಲದುದರಿಂದುಂಟಾಗುವ ಕೋಪವೂ, ಹಾಗೆಯೇ ಭಯವೂ, ಆ ಕ್ಲೇಶದಿಂದುಂಟಾಗುವ ಕಾಯಕಂಪನವೂ, ಇವುಗಳಿಂದ ಬಿಡಲ್ಪಟ್ಟಿರುವವನು, **ಯಃ** – ಹೀಗೆ ಯಾವ ಕರ್ಮನಿಷ್ಠೆಯುಳ್ಳ ಉಪಾಸಕನೋ, **ಸಃ** – ಅವನು ಪ್ರಿಯನು, ಅಂತ ವನು ಪ್ರಿಯನಾಗುವದರಿಂದ ನನ್ನ ಅನುಗ್ರಹಕ್ಕೆ ಪಾತ್ರನಾಗುವನು.

ಹಿಂದಿನ ಅಧ್ಯಾಯದ ೫೩-೫೪ ನೆಯ ಶ್ಲೋಕಗಳಲ್ಲಿ ಭಕ್ತಿಯೋಗದಲ್ಲಿಳಿಯದೆಯೂ, ಎಂದರೆ, ಉಪಾಸನವಿಲ್ಲದೆಯೂ, ಅದರಿಂದ ತಾನು ಪ್ರೀತನಾಗದೆಯೂ ಮುಕ್ತಿಯು ದೊರಕದು ಎಂದು ಹೇಳಿ, ಅನಂತರ ಈ ಅಧ್ಯಾಯದ ಹಿಂದಿನ ಶ್ಲೋಕಗಳಲ್ಲಿ ಫಲಾಭಿಸಂಧಿರಹಿತ ಕರ್ಮ ನಿಷ್ಠೆಯಿಂದ ಕೂಡಿದ ಉಪಾಸನೆಯೇ ಚಿತ್ತ ಸಮಾಧಾನಕ್ಕೆ ಸರ್ವೋತ್ತಮವಾದ ಉಪಾಯ ವೆಂದು ಹೇಳಿ, ಈಗ ಅಂತಹ ಉಪಾಸಕನಲ್ಲಿ ಎಂತಹ ಗುಣಗಳಿದ್ದರೆ ತಾನು ಪ್ರೀತನಾಗುವದರ ಮೂಲಕ ತನ್ನ ಅನುಗ್ರಹವುಂಟಾಗುವದು ಎಂಬುದನ್ನು ತಿಳಿಸುತ್ತಾರೆಂಬುದು ಸಙ್ಗತಿಯು. ೧೩ ರಿಂದ ೧೯ ನೆಯ ಶ್ಲೋಕಾಂತ್ಯದವರೆಗೂ ಯಾವ ಸಂದರ್ಭಗಳಲ್ಲಿ ತಾನು ಸುಪ್ರೀತನಾಗುವ ದರಿಂದ ಆ ಅಧಿಕಾರಿಯು ಪ್ರಿಯನಾಗುವನೆಂದು ಹೇಳಿ, ಕೊನೆಯ ಶ್ಲೋಕದಲ್ಲಿ ಅತೀವಪ್ರಿ ಯನು ಯಾರು ಎಂಬುದನ್ನು ತಿಳಿಸುತ್ತಾರೆ. ಈ ಶ್ಲೋಕದಲ್ಲಿ ಅಂತಹ ಕರ್ಮನಿಷ್ಠೆಯುಳ್ಳ ಉಪಾ ಸಕನು ಎಲ್ಲರಿಗೂ ಅನುಕೂಲವಾಗಿಯೇ ಇರುವದರಿಂದ, ಎಲ್ಲರೂ ತನ್ನ ವಿಷಯದಲ್ಲೂ ಅನು ಕೂಲವಾಗಿರುವಹಾಗೆ ಈ ಉಪಾಸಕನ ಲೋಕ ಪ್ರವೃತ್ತಿ ಇರಬೇಕು. ಅರಿಷಡ್ವರ್ಗಗಳಿಗೆ ವಶ ನಾಗದೆ, ಯಾರನ್ನೂ ದ್ವೇಷಿಸದೆ, ಅಹಂಕಾರ ಮಮಕಾರಗಳಿಲ್ಲದೆ, ದುಃಖಸುಖಗಳಿಲ್ಲದೆ, ಶತ್ರು ವಾಗಿ ಯಾರಾದರೂ ಕಂಡರೂ ಕೂಡ ವಿಕಾರತೆಯಿಲ್ಲದ ಮನಸ್ಸಿನ ಸಮಭಾವಶಾಂತಿಗಳಿರ ಬೇಕೆಂದು ಯಾವಾಗ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತೋ, ಆಗ ಆತನ ಲೋಕ ಪ್ರವೃ ತ್ತಿಯೂ ಈ ಶ್ಲೋಕದಲ್ಲಿ ಹೇಳಿದಂತಿರತಕ್ಕದು. ಲೋಕಕ್ಕೆ ಉದ್ವೇಗವನ್ನುಂಟುಮಾಡುವ ಪ್ರವೃತ್ತಿಯು ಬಹುನಿಂದಿತವು. ಮಹರ್ಷಿಯೂ ಹಾಗೆಯೇ **"ಉದ್ವೇಜನೀಯೋ ಲೋಕಾನ್ಯೈ ನೃಶಂಸಃ ಪಾಪಕರ್ಮಕೃತ್ । ತ್ರಯಾಣಾ ಮಪಿ ಲೋಕಾನಾ ಮೀಶ್ವರೋಽಪಿ ನ ತಿಷ್ಠತಿ"** ಯಾವನು ಲೋಕದಜನರನ್ನು ಹಿಂಸಿಸಿನೃಶಂಸನಾಗಿ ಪಾಪಕರ್ಮವನ್ನು ಮಾಡುವನೋ, ಅವನು ಮೂರು ಲೋಕಕ್ಕೆ ಒಡೆಯನಾದರೂ ಬಾಳುವದಿಲ್ಲವು" ಎಂದು ನಿಂದಿಸಿರುತ್ತಾರೆ. ಸಾಮಾನ್ಯ ಮನುಷ್ಯನೇ ಹೀಗೆ ನಿಂದಿತನಾದರೆ, ಪ್ರಪನ್ನನು ಲೋಕೋದ್ವೇಗವನ್ನುಂಟುಮಾಡುವ ಕೆಲಸ ಮಾಡಿದರೆ ಸ್ವರೂಪಕ್ಕೆ ಹಾನಿಯು ಎಂದು ಹೇಳತಕ್ಕದ್ದೇನಿದೆ. ಅಂತವನಿಗೆ ಭಗವದನುಗ್ರವು ಎಂದಿಗೂ ದೊರಕದು. ಪಾಪಭೀತನಾಗಿ **ಲೋಕಕ್ಕೆ** ಯಾವ ವಿಧ ಸಂಕಟವನ್ನೂ ಉಂಟುಮಾ ಡದಿರುವ ಫಲಾಭಿಸಂಧಿರಹಿತ ಕರ್ಮಯೋಗ ನಿಷ್ಠೆಯಿಂದ ಯುಕ್ತನಾದ ಉಪಾಸಕನು ನನ್ನ ಅನು ಗ್ರಹಕ್ಕೆ ಪಾತ್ರನು ಎಂದು ಹೇಳಿದರು. ಈ ಗುಣಗಳಿಗೆ ಸಪ್ತರ್ಷಿಗಳನ್ನು ನಿದರ್ಶನವನ್ನಾಗಿ ಊಹಿಸಬಹುದು. ಈ ಭಾಷ್ಯದಲ್ಲಿ **ಏವಂ ಭೂತಃ ಸೋಽಪಿ ಮಮಪ್ರಿಯಃ"** ಎಂದು **ಅಪಿ** ಶಬ್ದವಿರುವದರಿಂದ, ಹಿಂದಿನ ಗುಣಗಳಲ್ಲದೆ ಈ ಗುಣವಿರುವ ಅಧಿಕಾರಿಯೂ ಭಕ್ತನಾಗಿ ಪ್ರಿಯ ನೆಂದು ಹೇಳಲ್ಪಟ್ಟಿತೆಂದು ತೋರುತ್ತದೆ. ಆದರೆ **ಅಪಿ** ಶಬ್ದವು ಮೂಲದ ಚಕಾರಾರ್ಥವೆಂದು ಭಾವಿಸಬಹುದು. ಹೀಗಾಗುವಂತವನೂ ನನಗೆ ಭಕ್ತನಾಗಿ ಪ್ರಿಯನಾಗುವನು ಎಂಬರ್ಥವನ್ನು ಮನಸ್ಸಿನಲ್ಲಿಟ್ಟು **ಅಪಿ** ಎಂದು ಪ್ರಯೋಗಿಸಿರಬಹುದು. ಅಥವಾ ಚಕಾರವನ್ನು **"ಹರ್ಷಾಮ ರ್ಷಭಯೋದ್ವೇಗೈಃ ಮುಕ್ತಶ್ಚ"** ಎಂದು ಮುಕ್ತಶಬ್ದಕ್ಕೆ ಸೇರಿಸಿ ಅರ್ಥಮಾಡಬಹುದು. ಲೋಕೋದ್ವೇಜನವನ್ನು ಹೆಚ್ಚಾಗಿ ಮಾಡಿದವರಲ್ಲಿ ರಾವಣ ದುರ್ಯೋಧನಾದಿಗಳನ್ನು ದೃಷ್ಟಾಂತ ವಾಗಿ ಹೇಳಬಹುದು. ಅದು ಇಲ್ಲದವರಲ್ಲಿ ಪ್ರಹ್ಲಾದಾದಿಗಳು ದೃಷ್ಟಾಂತವು. ಹೀಗೆ ಸರ್ವಾನು

**ಭಾ. ಯಸ್ಮಾತ್ - ಕರ್ಮನಿಷ್ಠಾತ್ ಪುರುಷಾನ್ನಿಮಿತ್ತ ಭೂತಾಲ್ಲೋಕೋನೋದ್ವಿಜತೇ - ಯೋ ಲೋಕೋ ದ್ವೇಗಕರಂ ಕರ್ಮಕಿಂಚಿದಪಿ ನಕರೋತೀತ್ಯರ್ಥಃ ; ಲೋಕಾಚ್ಚ ನಿಮಿತ್ತ ಭೂತಾದ್ಯೋ ನೋದ್ವಿಜತೇ - ಯಮುದ್ದಿಶ್ಯ ಸರ್ವಲೋಕೋ ನೋದ್ವೇಗ ಕರಂ ಕರ್ಮಕರೋತಿ, ಸರ್ವಾವಿರೋಧಿತ್ವ ನಿಶ್ಚಯಾತ್, ಅತ ಏವ ಕಂಚನ ಪ್ರತಿ ಹರ್ಷೇಣ, ಕಂಚನ ಪ್ರತ್ಯಮರ್ಷೇಣ, ಕಂಚನ ಪ್ರತಿಭಯೇನ, ಕಂಚನ ಪ್ರತ್ಯು ದ್ವೇಗೇನ ಮುಕ್ತಃ ; ಏವಂ ಭೂತೋ ಯಃ ಸೋಽಪಿ ಮಮಪ್ರಿಯಃ ॥ ೧೫ ॥**

ಕೂಲನಾಗಿ ಯಾರ ಮನಸ್ಸನ್ನೂ ಕೂಡ ನೋಯಿಸದೆ, ಲೋಕದಲ್ಲಿ ವರ್ತಿಸುವದು, ತುಂಬಾ ಕಷ್ಟವು. ಇದೇ ಪರಮ ಧರ್ಮ ರಹಸ್ಯವು—**"ಶ್ರೂಯತಾಂ ಧರ್ಮ ಸರ್ವಸ್ವಂ ಶ್ರುತ್ವಾಚಾಪ್ಯ ವಧಾರ್ಯತಾಂ । ಆತ್ಮನಃ ಪ್ರತಿಕೂಲಾನಿ ಪರೇಷಾಂ ನಸಮಾಚರೇತ್"** ಎಂಬುದು ಅನು ಸಂಧೇಯವು. ನಿಷ್ಕಾಮಕರ್ಮಯೋಗದಿಂದ ಇಂತಹ ಉತ್ಕೃಷ್ಟ ದಶೆಯು ಪ್ರಾಪ್ತವಾಗಿ, ಬುದ್ಧಿಯೂ ಮನಸ್ಸೂ ನನ್ನಲ್ಲೇ ಸಕ್ತವಾಗಿ ಭಕ್ತಿಯೋಗವು ಅನುಷ್ಠಿಸಲ್ಪಟ್ಟರೆ, ನನಗೆ ಪ್ರಿಯ ನಾಗುವನು ಎಂಬುದು ತಾತ್ಪರ್ಯವು. ॥ ೧೫ ॥

**ಭಾಷ್ಯಾರ್ಥವು:—**ಹಿಂದಿನ ಎರಡು ಶ್ಲೋಕಗಳಲ್ಲೂ ಹೇಳಿದ ಕರ್ಮಯೋಗ ನಿಷ್ಠನ ಗುಣ ಗಳಿಂದುಂಟಾಗುವ ಫಲವಾದ, ಲೋಕಕ್ಕೆ ಕ್ಲೇಶವನ್ನುಂಟುಮಾಡುವ ಕರ್ಮಗಳಿಂದ ನಿವೃತ್ತಿಯೂ, ಅಂತಹ ನಿವೃತ್ತಿಯಿಂದ ಆತನು ಹೇಗೆ ಲೋಕದ ಜನರಿಂದಲೂ ತನ್ನಿಂದಲೂ ಕೂಡ ಮಾನನೀ ಯನಾಗಿ, ತನ್ನ ಪ್ರೀತಿಗೆ ವಿಷಯನಾಗುವನೆಂಬುದನ್ನು ಶ್ರೀ ಕೃಷ್ಣಭಗವಾನರವರು ತಿಳಿಸುತ್ತಾರೆ. ಆದುದರಿಂದ ಇದು ಹಿಂದಿನ ಸ್ಥಿತಿಗಿಂತ ಉತ್ಕೃಷ್ಟ ದಶೆಯು. ಹಿಂದಿನ ಶ್ಲೋಕದಲ್ಲೂ **ಯಃ** ಎಂಬ ಪ್ರಯೋಗವೂ ಇಲ್ಲಿಯೂ **ಯಃ** ಎಂದಿರುವದರಿಂದ ಬೇರೆಬೇರೆ ಅಧಿಕಾರಿಗಳು ಹೇಳಲ್ಪ ಟ್ಟರೆಂದು ಭಾವಿಸತಕ್ಕದ್ದಲ್ಲವು; ಹಿಂದೆ ಹೇಳಿದ ಫಲಾಭಿಸಂಧಿರಹಿತ ಕರ್ಮಯೋಗನಿಷ್ಠನ ವಿಷಯ ವಾಗಿಯೇ ಇಲ್ಲಿಯೂ ಹೇಳಿರುವದು ಎಂಬ ಅಭಿಪ್ರಾಯದಿಂದ, **ಯಸ್ಮಾತ್** ಎಂಬುವದಕ್ಕೆ ವ್ಯಾಖ್ಯಾನವನ್ನು ಮಾಡುತ್ತಾರೆ. **ಯಸ್ಮಾತ್** ಎಂದರೆ **ಕರ್ಮನಿಷ್ಠಾತ್ ಪುರುಷಾನ್ನಿಮಿತ್ತ ಭೂತಾತ್** - ಯಾವ ಫಲಾಭಿಸಂಧಿರಹಿತ ಕರ್ಮನಿಷ್ಠನಾದ ಪುರುಷನ ಮೂಲಕವಾಗಿ, **ಲೋಕಃ**- ಜನರು, **ನೋದ್ವಿಜತೇ** ಎಂದರೆ **ಯೋ ಲೋಕೋ ದ್ವೇಗಕರಂ ಕರ್ಮ ಕಿಂಚಿದಪಿ ನಕ ರೋತೀತ್ಯರ್ಥಃ** - ಯಾವನು ಲೋಕದ ಜನರಿಗೆ ಕ್ಲೇಶವನ್ನುಂಟುಮಾಡುವ ಕರ್ಮವನ್ನು ಸ್ವಲ್ಪವೂ ಕೂಡ ಮಾಡುವದಿಲ್ಲವೋ ಎಂಬರ್ಥವು, ಮತ್ತು ಆ ಕಾರಣದಿಂದಲೇ, **ಲೋಕಾಚ್ಚ ನಿಮಿತ್ತ ಭೂತಾತ್** - ಕಾರಣಭೂತರಾದ ಲೋಕದ ಜನರಿಂದಲೂ ಕೂಡ, **ಯೋ ನೋ ದ್ವಿಜತೇ** ಎಂದರೆ **ಯಮುದ್ದಿಶ್ಯ ಸರ್ವಲೋಕೋ ನೋದ್ವೇಗಕರಂ** ಕರ್ಮ **ಕರೋತಿ** - ಯಾವ ಅಂತಹ ಯಾರಿಗೂ ಕ್ಲೇಶವನ್ನು ಕೊಡದ ಮನುಷ್ಯನನ್ನು ಕುರಿತು ಸಮಸ್ತ ಜನರೂ ಕ್ಲೇಶಕರವಾದ ಕರ್ಮವನ್ನು ಮಾಡುವದಿಲ್ಲವೋ, ಏಕೆಂದರೆ, **ಸರ್ವಾವಿರೋಧಿತ್ವನಿಶ್ಚಯಾತ್** - ಎಲ್ಲರಿಗೂ ಪ್ರತಿಕೂಲನಾಗಕೂಡದೆಂಬ ನಿಶ್ಚಯಜ್ಞಾನವುಳ್ಳವನಾದುದರಿಂದ, **ಅತ ಏವ** - ಆ ಕಾರಣದಿಂದಲೇ **ಕಂಚನಪ್ರತಿ ಹರ್ಷೇಣ** - ಯಾರನ್ನು ಕುರಿತು ಹರ್ಷದಿಂದಲೂ, **ಕಂಚನ ಪ್ರತ್ಯ ಮರ್ಷೇಣ** - ಯಾರನ್ನು ಕುರಿತು ಕೋಪದಿಂದಲೂ, **ಕಂಚನಪ್ರತಿಭಯೇನ** - ಯಾರನ್ನು ಕುರಿತು ಭಯದಿಂದಲಾಗಲಿ, **ಕಂಚನಪ್ರತಿ ಉದ್ವೇಗೇನ** - ಯಾರನ್ನು ಕುರಿತು ಕ್ಲೇಶದಿಂದುಂಟಾಗುವ ಶರೀರಕಂಪನದಿಂದಲಾಗಲಿ, **ಮುಕ್ತಃ** - ಬಿಡಲ್ಪಡುತ್ತಾನೋ, **ಏವಂ ಭೂತೋ ಯಃ** - ಹೀಗಿರುವವನು ಯಾವ ಕರ್ಮಯೋಗನಿಷ್ಠನೋ, **ಸೋಽಪಿ** - ಅವನೂ

**ಮೂ. ಅನಪೇಕ್ಷ ಶ್ಶುಚಿ ರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಮ್ಭಪರಿತ್ಯಾಗೀ ಯೋ ಮದ್ಭಕ್ತ ಸ್ಸ ಮೇ ಪ್ರಿಯಃ ॥ ೧೬.**

ಕೂಡ, **ಮಮಪ್ರಿಯಃ** - ನನ್ನ ಪ್ರೀತಿಗೆ ಪಾತ್ರನಾದ ಭಕ್ತನಾಗುವನು. ಇಲ್ಲಿ **ಲೋಕೋ ದ್ವೇಗಕರಂ ಕಿಂಚಿತ್** - ಎಂದು ಹೇಳಿರುವದರಿಂದ ಕಾಯಕ್ಲೇಶವು ಹಾಗಿರಲಿ ಪರುಷವಾಕ್ಕು, ನಿಂದನೆಗಳಿಂದ ಮನಸ್ಸು ನೋಯುವಹಾಗೆ ಮಾಡುವದುಕೂಡ ಕೂಡದೆಂದು ಹೇಳಿದಂತಾ ಯಿತು. ಎಲ್ಲರಿಗೂ ಅನುಕೂಲವಾಗಿರಬೇಕು, ಆ ಕಾರಣದಿಂದ ತನಗೆ ಎಲ್ಲರೂ ಅನುಕೂಲರಾ ಗಿರಬೇಕು. ಹೀಗೆ ಇರುವವನಾಗಿ ಫಲಾಭಿಸಂಧಿರಹಿತ ಕರ್ಮಯೋಗನಿಷ್ಠನಾದರೆ, ತನಗೆ ಪ್ರೀತಿ ಪಾತ್ರನಾಗಿ ಮನಶ್ಶಾನ್ತಿಯನ್ನು ಹೊಂದಿ ಯೋಗಾರಂಭಕನಾಗುವನೆಂಬ ಭಾವವು. ಹೀಗೆ ಈ ಗುಣಗಳಿಂದಲೂ ತನಗೆ ಪ್ರಿಯನಾಗುವನೆಂದು ಹೇಳಿಕೊಂಡರು. ಇಲ್ಲಿ ನಾವು ವಿಚಾರಮಾಡ ಬೇಕಾದ ಮುಖ್ಯ ವಿಷಯವೇನೆಂದರೆ—ಯಾವ ಕರ್ಮಯೋಗನಿಷ್ಠನು ಭಗವಂತನಿಗೆ ಪ್ರಿಯನಾ ಗುವನು ? ಹಾಗೆ ಪ್ರಿಯನಾಗುವದರ ಮೂಲಕ ಮನಶ್ಶಾನ್ತಿಯಿಂದ ಭಕ್ತಿಯೋಗನಿಷ್ಠೆಗೆ ಅನು ಗೃಹೀತನಾಗುವನು ? ಎಂದು ೧೩-೧೪ ನೆಯ ಶ್ಲೋಕಗಳಲ್ಲೂ ೧೫ ನೆಯ ಶ್ಲೋಕದಲ್ಲೂ, ೧೬ ನೆಯ ಶ್ಲೋಕದಲ್ಲೂ, ೧೭ ನೆಯ ಶ್ಲೋಕದಲ್ಲೂ ೧೮-೧೯ ನೆಯ ಶ್ಲೋಕಗಳಲ್ಲೂ ಹೇಳಲ್ಪ ಟ್ಟಿರುತ್ತದೆ. ಕೆಲವು ಸಂದರ್ಭದಲ್ಲಿ **ಯೋಮದ್ಭಕ್ತ ಸ್ಸ ಮೇ ಪ್ರಿಯಃ"** ಎಂದಿರುತ್ತದೆ; ಇನ್ನೊಂದು ಸಂದರ್ಭದಲ್ಲಿ **"ಭಕ್ತಿಮಾನ್ ಯಸ್ಸಮೇಪ್ರಿಯಃ"** ಎಂದೂ, **ಭಕ್ತಿಮಾನ್ ಮೇ ಪ್ರಿಯೋ ನರಃ** ಎಂದೂ ಹೇಳಲ್ಪಟ್ಟಿರುತ್ತದೆ. ಕರ್ಮಯೋಗನಿಷ್ಠನೇ ಇಲ್ಲೆಲ್ಲಾ ಹೇಳಲ್ಪಟ್ಟಿ ತೆಂಬುದು ಸ್ಪಷ್ಟವು. ಆದರೆ, ಅರ್ಥವೆಲ್ಲಾ ಒಂದೇ, ಹೀಗೆ ಹೇಳಿರುವದರಿಂದ ನಿಷ್ಕಾಮ ಕರ್ಮ ಯೋಗಿಗೆ ಇವೆಲ್ಲಾ ಗುಣಗಳು ಸಿದ್ಧಿಸಬಹುದೆಂಬ ಭಾವವು. ಹಿಂದೆ ಜ್ಞಾನಯೋಗಾಧಿಕಾರಿಯ ತರತಮ ಭೇದಗಳನ್ನು ಹೇಳಿದಹಾಗೆ, ಈ ನಾಲ್ಕು ಕಡೆಯಲ್ಲಿ, **"ಯೋ ಮದ್ಭಕ್ತ ಸ್ಸ ಮೇ ಪ್ರಿಯಃ"** ಎಂಬುದರಿಂದ ಕರ್ಮಯೋಗದ ಉತ್ತರೋತ್ತರ ಪರಾಕಾಷ್ಠಾ ದಶೆಯು ಹೇಳಲ್ಪಟ್ಟಿ ತೆಂದೂ ಅರ್ಥಮಾಡಬಹುದು. ಹೀಗೆ ಅರ್ಥಮಾಡಲು ಸಾಧನವೇನು ? ಎಂದರೆ ೨೦ ನೆಯ ಕೊನೆಯ ಶ್ಲೋಕದಲ್ಲಿ **"ಭಕ್ತಾಸ್ತೇಽತೀವಮೇ ಪ್ರಿಯಾಃ"** ಎಂದಿರುವದರಿಂದ, ಅಲ್ಲಿ ಪ್ರಿಯ ತ್ವದ ಪರಾಕಾಷ್ಠಾದಶೆಯು ಹೇಳಲ್ಪಟ್ಟಿರುವದರಿಂದ, ಇವೆಲ್ಲಾ ಉತ್ತರೋತ್ತರ ಪ್ರಿಯತ್ವಾಧಿ ಕ್ಯವು ಹೇಳಲ್ಪಟ್ಟಿತೆಂಬ ಭಾವವು ಸೂಚಿತವು. ಶ್ರೀ ಯತಿವರ್ಯರು ೧೮ ನೆಯ ಶ್ಲೋಕದ ಭಾಷ್ಯ ದಲ್ಲಿ **"ತತೋ ವ್ಯತಿರಿಕ್ತೋ ವಿಶೇಷ ಉಚ್ಯತೇ"** ಎಂದು ಹೇಳಿರುವದರಿಂದಲೂ ಉತ್ತರೋ ತ್ತರ ಉತ್ಕೃಷ್ಟ ದಶೆ ಎಂಬುದು ಸ್ಪಷ್ಟವು. ಈ ಶ್ಲೋಕಗಳಿಂದ ಸಾರಭೂತವಾದ ಅಭಿಪ್ರಾಯವು ನಮ್ಮ ಗ್ರಹಣೆಗೆ ಯೋಗ್ಯವಾದುದು ಯಾವುದೆಂದರೆ ? ವಿಹಿತಕರ್ಮಗಳು ಯಾವುವು ಎಂದರಿತು, ಅವುಗಳನ್ನು ಶ್ರದ್ಧೆಯಿಂದ ತನ್ನ ಸ್ವಾಮಿಯಾದ ಭಗವಂತನ ಆರಾಧನರೂಪವೆಂದು ಭಾವಿಸಿ, ಫಲಾಭಿಸಂಧಿಯಿಲ್ಲದೆ ಕರ್ಮಗಳನ್ನು ಅನುಷ್ಠಿಸಿ ಸ್ವಾಮಿಯಲ್ಲಿ ಯಾವಾಗ ಸಮರ್ಪಿಸಿಬಿಡುವನೋ, ಅಂತವನಲ್ಲಿ ಇಂತಹ ಕಲ್ಯಾಣಗುಣಗಳು ಆವಿರ್ಭವಿಸಿ, ಕ್ರಮೇಣ ಉತ್ಕೃಷ್ಟದಶೆಯನ್ನು ಹೊಂದುತ್ತಾ ತನ್ಮೂಲಕ ತನಗೆ ತುಂಬಾ ಪ್ರಿಯನಾದವನಾಗುವನು ; ಅಂತವನನ್ನು ಕೈಬಿಡದೆ ಉಪಾಯಾನುಷ್ಠಾನಕ್ಕೆ ಯೋಗ್ಯನನ್ನಾಗಿ ಮಾಡಿ, ತನ್ನ ಕೃಪೆಯಿಂದಲೇ ಅದು ಪೂರ್ಣವಾಗಿ, ತನ್ನ ಸಾಯುಜ್ಯವನ್ನು ಕ್ರಮೇಣ ಹೊಂದುವನೆಂದೂ ಉಪದೇಶಿಸಿದರು. ॥ ೧೫ ॥

**ಮೂಲಕ್ಕೆ ಅರ್ಥವು:**—ಈ ಕರ್ಮನಿಷ್ಠೆಯಿಂದ ಉಪಾಸಿಸುವನು ಇನ್ನೂ ಉತ್ಕೃಷ್ಟನಾಗಿ ತನಗೆ ಪ್ರಿಯನಾಗುವನೆಂದು ತಿಳಿಸುತ್ತಾರೆ. ಈ ಶ್ಲೋಕಗಳು ವಿಕಲ್ಪದಿಂದ ಬೇರೆ ಬೇರೆ ಅಧಿಕಾರಿಯನ್ನುದ್ದೇಶಿಸಿ ಹೇಳಿದುದಲ್ಲವೆಂದು ಇನ್ನೊಂದುಸಲ ಜ್ಞಾಪಿಸುವೆವು. ಇವೆಲ್ಲಾ

**ಭಾ. ಅನಪೇಕ್ಷಃ - ಆತ್ಮವ್ಯತಿರಿಕ್ತೇ ಕೃತ್ಸ್ನೇ ವಸ್ತುನ್ಯ ನಪೇಕ್ಷಃ, ಶುಚಿಃ -ಶಾಸ್ತ್ರ ವಿಹಿತದ್ರವ್ಯ ವರ್ಧಿತ ಕಾಯಃ, ದಕ್ಷಃ - ಶಾಸ್ತ್ರೀಯ ಕ್ರಿಯೋಪಾದನ ಸಮರ್ಥಃ,**

ಕರ್ಮಯೋಗ ನಿಷ್ಠನನ್ನು ಕುರಿತ ಹೇಳಿಕೆಯೇ. **ಅನಪೇಕ್ಷಃ** - ಅಪೇಕ್ಷಾ ಶೂನ್ಯನಾಗಿಯೂ, ಈತನು ಕರ್ಮಯೋಗನಿಷ್ಠನಾದುದರಿಂದ ಪರಿಶುದ್ಧಾತ್ಮ ಸ್ವರೂಪಾವಲೋಕನದಲ್ಲಿ ಅಪೇಕ್ಷೆಯೂ ತದ್ದ್ವಾರಾ ಭಗವಂತನ ಉಪಾಸನದಲ್ಲೂ ಅಪೇಕ್ಷೆಯುಂಟಾಗುವದರಿಂದ, ಇವುಗಳನ್ನು ಬಿಟ್ಟು ಮಿಕ್ಕ ಎಲ್ಲಾ ಐಹಿಕ ಕಾಮ ಭೋಗಗಳನ್ನೆಲ್ಲಾ ತೊರದವನಾಗುವನು ಎಂಬ ಭಾವವು. ಯಾವಾಗ ಕಾಮ ಉಂಟಾಯಿತೋ, ಆಗ ಕ್ರೋಧ ಮೋಹ ಎಲ್ಲವೂ ಉಂಟಾಗಿ ನಾಶವಾಗುವನೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಸತ್ಸಙ್ಗವೂ, ಆಚಾರ್ಯರುಗಳ ಗುರುಗಳ ಸಙ್ಗವು ಮುಖ್ಯವಾಗಿ ಬೇಕು, ಇವುಗಳು ಅನಪೇಕ್ಷ ಶಬ್ದದಿಂದ ವ್ಯಾವರ್ತಿಸಲ್ಪಡಲಿಲ್ಲವೆಂದು ಭಾವಿಸತಕ್ಕದ್ದು ; ಪರಮಾಚಾರ್ಯರುಗಳ ಪ್ರಸನ್ನತೆಯು ಈತನಿಗೆ ಉಪಾಸನಾ ವೃದ್ಧಿ ನಿಷ್ಪತ್ತಿಗಳಿಗೆ ಅತ್ಯಂತ ಸಾಧನವು. **ಶುಚಿಃ** - ಪರಿಶುದ್ಧನಾಗಿ, ಯಾವ ಪಾರಿಶುದ್ಧ್ಯವು ಹೇಳಲ್ಪಟ್ಟಿದುದ್ದು ಎಂದರೆ ದೇಹದ ಅಂತರ್ಬಹಿರ್ಪಾರಿ ಶುದ್ಧ್ಯವೆಂದು ಭಾವಿಸಬಹುದು ; ಆಹಾರವು ಸತ್ವಯುಕ್ತವಾಗಿ ಪರಿಶುದ್ಧವಾಗಿ ಧರ್ಮದಿಂದ ಗಳಿಸಿದ ದ್ರವ್ಯದಿಂದ ಪೋಷಿತವಾಗಿದ್ದರೆ, ಆಗೀಗ ದೇಹಪವಿತ್ರತೆಯುಂಟಾಯಿತೆಂದು ಭಾವಿಸಬಹುದು. **ಆಹಾರಶುದ್ಧೌ ಸತ್ವಶುದ್ಧಿಃ, ಸತ್ವ ಶುದ್ಧೌ ಧ್ರುವಾಸ್ಮೃತಿಃ"** ಎಂಬ ಶ್ರುತಿಯನ್ನು ಮನಸ್ಸಿನಲ್ಲಿಟ್ಟು **ಶುಚಿಃ** ಎಂದು ಇಲ್ಲಿ ಹೇಳಲ್ಪಟ್ಟಿತು ; ಎಂದರೆ ಶಾಸ್ತ್ರಾನುಮತಿಯಿರುವ ಧರ್ಮದಿಂದ ಗಳಿಸಲ್ಪಟ್ಟ ದ್ರವ್ಯದಿಂದ ಪೋಷಿಸಲ್ಪಟ್ಟ ದೇಹವುಳ್ಳವನಾಗಿ, ಹೀಗೆ ಶುಚಿರ್ಭೂತನಾಗಿಯೂ, **ದಕ್ಷಃ** ಎಂದರೆ ಸಮರ್ಥನಾಗಿ, ಶಾಸ್ತ್ರೀಯಾನುಷ್ಠಾನಗಳು ಯಾವುವು ಆವಶ್ಯಕವೋ ಅವುಗಳನ್ನು ಅವಸಾದ ಸ್ವಲ್ಪವೂ ಇಲ್ಲದೆ ಅನುಷ್ಠಿಸುವ ಸಾಮರ್ಥ್ಯವುಳ್ಳವನಾಗಿ, **ಉದಾಸೀನಃ** - ಶಾಸ್ತ್ರೀಯಗಳಾದರೂ ತನಗೆ ಆವಶ್ಯಕಗಳಲ್ಲದ ಕರ್ಮಗಳಲ್ಲಿ ಉದಾಸೀನನಾಗಿ, **ಗತವ್ಯಥಃ** - ಶಾಸ್ತ್ರೀಯವಾಗಿ ತಾನು ಆವಶ್ಯಕವಾಗಿ ಈ ಯೋಗನಿಷ್ಪತ್ತಿಗೆ ಬೇಕಾದವುಗಳನ್ನು ಮಾಡುವದರಲ್ಲಿ ಸ್ವಲ್ಪ ದೇಹಾಸುಖಗಳಿದ್ದರೂ, ಅವುಗಳನ್ನು ಪರಿಗಣಿಸದೆ, ಹೋಗಲ್ಪಟ್ಟ ವ್ಯಥೆಯುಳ್ಳವನಾಗಿಯೂ, **ಸರ್ವಾರಂಭಪರಿತ್ಯಾಗೀ**-ಅನೇಕ ಯೋಗ್ಯವಾದ ಕರ್ಮಾರಂಭಗಳು ಇರಬಹುದು, ಅಂತವುಗಳು ಇನ್ನೂ ಪೂರ್ವವಯಸ್ಕರಿಗೆ ಯೋಗ್ಯವೇ ವಿನಾ, ಹೀಗೆ ಉಪಾಯಾನುಷ್ಠಾನದಲ್ಲಿರುವವನಿಗೆ ಸ್ವರೂಪ ಯೋಗ್ಯವಾದವುಗಳಲ್ಲವಾದುದರಿಂದ ಅಂತಹ ಸಮಸ್ತ ಕರ್ಮಾರಂಭವನ್ನೂ ತ್ಯಾಗಮಾಡಿದವನಾಗಿಯೂ, **ಯಃ**-ಯಾವ ಈ ಫಲಾಭಿ ಸಂಧಿರಹಿತ ಕರ್ಮನಿಷ್ಠೆಯಿಂದ ಕೂಡಿದವನಾಗಿ ನನ್ನ ಉಪಾಸಕನಿರುವನೋ, **ಸಃ**-ಅಂತಹ ಭಕ್ತಿಯೋಗನಿಷ್ಠನು, **ಮೇ ಪ್ರಿಯಃ**-ನನಗೆ ಪ್ರಿಯನಾಗಿ ನನ್ನ ಅನುಗ್ರಹಕ್ಕೆ ಪಾತ್ರನಾಗುವನು. ಈ ಶ್ಲೋಕದಲ್ಲಿ ಹೇಳಿರುವ ಕರ್ಮಯೋಗನಿಷ್ಠನ ಅವಸ್ಥೆಯು ಹಿಂದೆ ಹೇಳಿದವೆರಡು ಅವಸ್ಥೆಗಿಂತಲೂ ಶ್ರೇಷ್ಠವಾದ ದಶೆಯೆಂದು ಭಾವಿಸಬಹುದು. ಅನಪೇಕ್ಷನಾಗಿರುವದಕ್ಕೆ ನಿದರ್ಶನವನ್ನು ಜನಕಾಂಬರೀಷಾದಿ ರಾಜರ್ಷಿಗಳನ್ನು ಇಟ್ಟುಕೊಳ್ಳಬಹುದು. **ಅನ್ಯತ್ರೋದಾಸೀನಃ** ಎಂಬುವದಕ್ಕೆ **"ಮಿಥಿಲಾಯಾಂ ಪ್ರದೀಪ್ತಾಯಾಂ ನಮೇ ಕಿಂಚನ ದಹ್ಯತೇ"** ಎಂದು ಹೇಳಿದ ಜನಕರನ್ನೇ ನಿದರ್ಶನವನ್ನಾಗಿಟ್ಟುಕೊಳ್ಳಬಹುದು.

**ಭಾಷ್ಯಾರ್ಥವು:—ಅನಪೇಕ್ಷಃ** ಎಂದರೆ **ಆತ್ಮ ವ್ಯತಿರಿಕ್ತೇ ಕೃತ್ಸ್ನೇ ವಸ್ತುನಿ ಅನಪೇಕ್ಷಃ** - ಪ್ರತ್ಯಗಾತ್ಮನಲ್ಲದ ಇತರ ಸಮಸ್ತ ವಸ್ತುಗಳಲ್ಲೂ ಅಪೇಕ್ಷೆಯಿಲ್ಲದವನಾಗಿಯೂ, ಇದರಿಂದ ಪರಮಾತ್ಮ, ಸತ್ಸಙ್ಗ, ಗುರೂಪಸದನಾದಿಗಳು ವ್ಯಾವರ್ತಿಸಿ ಹೇಳಲ್ಪಡಲಿಲ್ಲವು. ತನ್ನ ಕರ್ಮಯೋಗ ಉಪಾಸನಗಳಿಗೆ ಸಾಧನವಾಗಿ ಹೇಳಲ್ಪಟ್ಟವು ಯಾವುದೂ ವ್ಯಾವರ್ತಿಸಿ ಹೇಳ

**ಭಾ. ಅನ್ಯತ್ರೋದಾಸೀನಃ, ಗತವ್ಯಥಃ - ಶಾಸ್ತ್ರೀಯ ಕ್ರಿಯಾ ನಿರ್ವೃತ್ತಾವವರ್ಜನೀಯ ಶೀತೋಷ್ಣ ಪರುಷ ಸ್ಪರ್ಶಾದಿ ದುಃಖೇಷು ವ್ಯಥರಹಿತಃ, ಸರ್ವಾರಂಭ ಪರಿತ್ಯಾಗೀ ಶಾಸ್ತ್ರೀಯ ವ್ಯತಿರಿಕ್ತ ಸರ್ವಕರ್ಮಾರಂಭ ಪರಿತ್ಯಾಗೀ ಯಃ ಏವಂ ಭೂತೋ ಮದ್ಭಕ್ತಃ, ಸಮೇ ಪ್ರಿಯಃ ॥ ೧೬ ॥**

ಲ್ಪಡಲಿಲ್ಲವೆಂದೂ, ಭಾವಿಸತಕ್ಕದ್ದು ; **ಶುಚಿಃ** - ಎಂದರೆ **ಶಾಸ್ತ್ರವಿಹಿತ ದ್ರವ್ಯ ವರ್ಧಿತ ಕಾಯಃ**- ಶಾಸ್ತ್ರದಲ್ಲಿ ವಿಹಿತವೆಂದು ಹೇಳಲ್ಪಟ್ಟ ಮಾರ್ಗದಿಂದ ಆರ್ಜಿತ ದ್ರವ್ಯದಿಂದ ವೃದ್ಧಿ ಹೊಂದಿದ ಶರೀರವುಳ್ಳವನಾಗಿಯೂ, ರಾಜಸ ತಾಮಸಾಹಾರಗಳನ್ನು ತ್ಯಾಗಮಾಡಿ, ಧರ್ಮಯುಕ್ತವಾದ ಮಾರ್ಗದಿಂದ ಸಂಪಾದಿಸಿದ ಧನದಿಂದುಂಟಾದ ಆಹಾರದಿಂದ ದೇಹವನ್ನು ಬೆಳಿಸಿದರೆ ಅದು ಸತ್ವಮಾರ್ಗದಲ್ಲೇ ಪ್ರವರ್ತಿಸುವಹಾಗೆಮಾಡಿ, ಮನೋ ಬುದ್ಧಿಗಳು ಮಲರಹಿತಗಳಾಗಿ ಪರಿ ಶುದ್ಧವಾಗಿರುವದರಿಂದ, ಈತನು ಶುಚಿಯಾಗಿರುವನು ; ಆ ಆಹಾರವೂ ಕೂಡ ಭಗವನ್ನಿವೇದಿತ ವಾಗಿ ಸಂಸ್ಕಾರವನ್ನು ಹೊಂದಿದ್ದರೆ ಪರಮ ಪಾವನತ್ವವು ಉಂಟಾಗಿ ಈ ಯೋಗನಿಷ್ಠನನ್ನು ಸರಿಯಾದ ಮಾರ್ಗದಲ್ಲಿ ಪ್ರವರ್ತಿಸುವಹಾಗೆ ಮಾಡುತ್ತದೆ. ಕುಮಾರ್ಗದಿಂದ ಸಂಪಾದಿಸಿದ ದ್ರವ್ಯದಿಂದುಂಟಾದ ಆಹಾರವು ರಾಜಸ ತಾಮಸ ಭಾಗಗಳನ್ನು ಹೆಚ್ಚಿಸಿ, ಈತನ ಆತ್ಮನಾಶಕ್ಕೆ ಕಾರಣವಾಗುತ್ತದೆ. ಆದುದರಿಂದಲೇ ಪ್ರಪನ್ನರು ಸಿಕ್ಕಿದವರ ಮನೆಗಳಲ್ಲೆಲ್ಲಾ ಊಟಮಾಡಲು ಭಯಪಟ್ಟು ಅಂತಹ ಅನ್ನವನ್ನು ಸ್ವೀಕರಿಸುವದಿಲ್ಲವು. ಇದು ಹಾಗಿರಲಿ, ಹೋಟೆಲಿನ ತಿಂಡಿ ಗಳ ಕಾಲವು ಈಗ ಪ್ರಾಪ್ತವಾಗಿರುವದರಿಂದ, ಇದರಿಂದುಂಟಾಗುವ ಅನರ್ಥವು ಇಷ್ಟೆಂದು ಹೇಳಲೇ ಕೆಲಸವಿಲ್ಲವು ; ಸ್ವರ್ಣಸ್ತೇಯಿಯಾದ ಅಕ್ಕಸಾಲೆಯು ಕೊಟ್ಟ ಧನದಿಂದ ಒಬ್ಬ ಶಿಷ್ಯನು ತನ್ನ ಪರಮನಿಷ್ಠೆಯುಳ್ಳ ಆಚಾರ್ಯನಾದ ಯತಿಗೆ ಮಾಡಿದ ಆತಿಥ್ಯದಿಂದ, ಯತಿಗೆ ಬುದ್ಧಿ ಭ್ರಮೆ ವುಂಟಾಗಿ, ಅವರು ಚಿನ್ನದ ಸರವನ್ನು ಕದ್ದರೆಂಬ ಇತಿಹಾಸ ಉಂಟು. **ದಕ್ಷಃ** ಎಂದರೆ, **ಶಾಸ್ತ್ರೀಯ ಕ್ರಿಯೋಪಾದಾನ ಸಮರ್ಥಃ** - ಶಾಸ್ತ್ರೀಯವಾಗಿ ತಾನು ಮಾಡಬೇಕಾಗಿರುವ ಕರ್ಮಗಳನ್ನು ಶಾಸ್ತ್ರಾನುಗುಣವಾಗಿ ನಡೆಸುವದರಲ್ಲಿ ಸಮರ್ಥನು, ಎಲ್ಲಾ ಶಾಸ್ತ್ರೀಯ ಕರ್ಮ ಗಳು ವಿವಕ್ಷಿತವಲ್ಲವು ; ತನಗೆ ಬೇಕಾದವು ಮಾತ್ರವೇ ಪರಿಗ್ರಾಹ್ಯವೆಂದು ಭಾವಿಸತಕ್ಕದ್ದು. **ಅನ್ಯತ್ರೋದಾಸೀನಃ** - ಇತರ ಕ್ರಿಯೆಗಳಲ್ಲಿ ಉದಾಸೀನನಾಗಿರುವನಾಗಿಯೂ, **ಗತವ್ಯಥಃ** ಎಂದರೆ ವ್ಯಥೆಯಿಲ್ಲದವನಾಗಿ, ಏತರಲ್ಲಿ ವ್ಯಥೆಯಿಲ್ಲದವನಾಗಿ ಎಂದರೆ ಹೇಳುತ್ತಾರೆ-**ಶಾಸ್ತ್ರೀಯ ಕ್ರಿಯಾನಿರ್ವೃತ್ತಾವವರ್ಜನೀಯ ಶೀತೋಷ್ಣಪರುಷಸ್ಪರ್ಶಾದಿ ದುಃಖೇಷು ವ್ಯಥರಹಿತಃ**- ಶಾಸ್ತ್ರದಲ್ಲಿ ಹೇಳಿರುವದಕ್ಕೆ ಸರಿಯಾಗಿ ಕರ್ಮಗಳನ್ನು ನೆರವೇರಿಸುವದರಲ್ಲಿ ಶೀತೋಷ್ಣರೂಪದಲ್ಲಿ ಯಾಗಲಿ ಕಠಿನ ಸ್ಪರ್ಶವೇ ಮೊದಲಾದವುಗಳ ಮೂಲಕ ಉಂಟಾಗುವ ವ್ಯಥೆಯಿಲ್ಲದವನಾಗಿಯೂ, ಪ್ರಾತಸ್ನಾನಾದಿಗಳು ಬಹು ತಣ್ಣಗೆ ಕ್ಲೇಶಾವಹವಾಗಿರಬಹುದು, ಮಧ್ಯಾಹ್ನ ಕಳೆದನಂತರ ಊಟವು ಆಯಾಸವನ್ನುಂಟುಮಾಡಬಹುದು, ಇಂತವುಗಳನ್ನು ಪರಿಗಣಿಸದೇ ಇರುವವ ನಾಗಿಯೂ, ಎಂಬರ್ಥವು **ಸರ್ವಾರಂಭ ಪರಿತ್ಯಾಗೀ** ಎಂದರೆ **ಶಾಸ್ತ್ರೀಯ ವ್ಯತಿರಿಕ್ತ ಸರ್ವಕರ್ಮಾ ರಂಭ ಪರಿತ್ಯಾಗೀ** - ಶಾಸ್ತ್ರೀಯಗಳಲ್ಲದ ಇತರ ಸಮಸ್ತ ಕರ್ಮಗಳ ಪ್ರಾರಂಭವನ್ನೂ ಪರಿತ್ಯಾಗ ಮಾಡಿದವನಾಗಿ ; ಇವನಿಗೆ ಎಂತಹ ಕರ್ಮಾರಂಭಗಳು ಯೋಗ್ಯವು, ಎಂದರೆ, ಶಾಸ್ತ್ರವಿಹಿತಗಳಾದ ಆಜ್ಞಾನುಜ್ಞಾ ಕೈಂಕರ್ಯರೂಪಗಳಾದ ಕರ್ಮಗಳೂ, ಆಚಾರ್ಯ ಗುರು ಮಾತಾಪಿತೃ ಶುಶ್ರೂಷಾದಿ ಕರ್ಮಗಳೂ, ಲೋಕಹಿತಕರವಾದ ಕರ್ಮಗಳೂ, ಇವುಗಳ ಆರಂಭಗಳು ಪರಿತ್ಯಾಗವಲ್ಲವು ; ಇತರ ಕರ್ಮಗಳ ಆರಂಭವೀಗ ಪರಿತ್ಯಾಗ ಮಾಡತಕ್ಕವುಗಳು ; **ದೇವ ಪಿತೃಕಾರ್ಯಾಭ್ಯಾಂ ನಪ್ರ**

**ಮೂ. ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯ ಸ್ಸ ಮೇ ಪ್ರಿಯಃ ॥** ೧೭.

**ಮುದಿತವ್ಯಂ** ಎಂದೂ, **ಮಾತೃದೇವೋಭವ ಪಿತೃದೇವೋಭವ, ಆಚಾರ್ಯದೇವೋಭವ ಅತಿಥಿದೇವೋಭವ** ಎಂಬ ವಿಧಿವಾಕ್ಯಗಳು ಇರುವದರಿಂದ, ಇಂತಹ ಕರ್ಮಾರಂಭ ಪರಿತ್ಯಾಗವೂ ಸರ್ವಾತ್ಮನಾ ಕೂಡದು ; ಇಂತವುಗಳನ್ನು ವ್ಯಾವರ್ತಿಸಿ ಹೇಳಿದುದು **ಸರ್ವಾರಂಭ ಪರಿತ್ಯಾಗೀ** ಎಂಬ ಪ್ರಯೋಗವೆಂದು ಭಾವಿಸತಕ್ಕದ್ದು. **ಯಃ ಏವಂ ಭೂತಃ ಮದ್ಭಕ್ತಃ**-ಯಾವ ಫಲಾಭಿಸಂಧಿರಹಿತ ಕರ್ಮನಿಷ್ಠೆಯಿಂದ ಕೂಡಿ ನನ್ನ ಭಕ್ತನಾಗಿ ಉಪಾಸನಾರಂಭವನ್ನು ಮಾಡುವನೋ, **ಸಃ** - ಅವನು, **ಮೇ ಪ್ರಿಯಃ** - ನನಗೆ ಪ್ರಿಯನಾಗುವನು ; ಅನುಗ್ರಹಕ್ಕೆ ಪಾತ್ರನಾಗುವನು. ಅನುಗ್ರಹವು ಯಾವುದೆಂದರೆ ಚಿತ್ತಶಾಸ್ತ್ರತೆಯಿಂದ ಭಕ್ತಿಯೋಗವು ಕೈಗೂಡುವಹಾಗೆ ಮಾಡುವದೇ. ಬುದ್ಧಿಯೂ ಮನಸ್ಸೂ ನನ್ನಲ್ಲಿ ಸ್ಥಿರವಾಗಿ ನಿಂತು ಭಕ್ತಿಯೋಗದಲ್ಲಿ ಅಭಿನಿವೇಶ ಉಂಟಾಗಿ ಕೊನೆಗೆ ಮೋಕ್ಷಪ್ರಾಪ್ತಿಯೇ ಅನುಗ್ರಹವು. ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಕರ್ಮಯೋಗನಿಷ್ಠನಿಗಿಂತ ಇದು ಉತ್ಕೃಷ್ಟದೆಶೆಯು.

**ಮೂಲಕ್ಕೆ ಅರ್ಥವು :**—ಆ ಫಲಾಭಿಸಂಧಿರಹಿತ ಕರ್ಮನಿಷ್ಠೆಯುಳ್ಳ ಉಪಾಸಕನು ಇನ್ನೂ ಉತ್ತಮ ಸ್ಥಿತಿಗೆ ಬಂದರೆ ಹೇಗಿರುವನೆಂಬುದನ್ನು ಉಪದೇಶಿಸುತ್ತಾರೆ.—ಆತನು ಸಂತೋಷವನ್ನೂ ದ್ವೇಷವನ್ನೂ ಶೋಕವನ್ನೂ ಆಶೆಯನ್ನೂ ಪ್ರದರ್ಶಿಸುವದಿಲ್ಲವೆಂದೂ, ಪುಣ್ಯ ಪಾಪರೂಪಗಳಾದ ಕರ್ಮಗಳಿಂದ ದೂರೀಕೃತನಾಗಿಯೂ ಇರುವನೆಂದೂ ಉಪದೇಶಿಸುತ್ತಾರೆ—**ಯಃ** - ಯಾವ ಈ ಕರ್ಮನಿಷ್ಠೆಯುಳ್ಳ ಉಪಾಸಕನು, **ನಹೃಷ್ಯತಿ** - ಸ್ವಾಮಿ ಕೃಪೆಯಿಂದ ಸಂತೋಷಕ್ಕೆ ಕಾರಣವಿರುವಹಾಗೆ ತೋರುವ ಒಳ್ಳೇಪದವಿ, ವಿಶೇಷ ದ್ರವ್ಯ, ಪುತ್ರಾದಿಗಳ ಪ್ರಾಪ್ತಿ, ಖ್ಯಾತಿ ಲಾಭ ಮುಂತಾದವುಗಳು ಉಂಟಾದರೂ ಹಿಗ್ಗುವದಿಲ್ಲವೋ, **ನದ್ವೇಷ್ಟಿ** - ತನಗೆ ಅಪ್ರಿಯ ಉಂಟಾದರೂ ಅದಕ್ಕೆ ಕಾರಣಭೂತವಾದುದನ್ನು ದ್ವೇಷಿಸುವದಿಲ್ಲವೋ, **ನಶೋಚತಿ** - ದುಃಖಕ್ಕೆ ಕಾರಣಭೂತವಾದುದು ಪ್ರಾಪ್ತವಾದರೂ ದುಃಖಿಸುವದಿಲ್ಲವೋ, **ನಕಾಂಕ್ಷತಿ** - ಮನಸ್ಸನ್ನು ಆಕರ್ಷಿಸಿ ಆಶೆಯನ್ನುಂಟುಮಾಡುವದಿದ್ದರೂ, ಅದನ್ನು ಅಪೇಕ್ಷಿಸುವದಿಲ್ಲವೋ, ಅಕ್ರೂರರನ್ನು ಕುರಿತು ನಿನಗೆ ಏನುಬೇಕೋ ಅದನ್ನು ಕೇಳಿಕೋ ಎಂದರೆ ಅದಕ್ಕೆ ಅಕ್ರೂರರು ಶ್ರೀ ಕೃಷ್ಣನನ್ನು ಕುರಿತು ಹೇಳುತ್ತಾರೆ.—ಏನಾದರೂ ಕೇಳಿಕೊಂಡರೆ ಈ ಲೋಕದಲ್ಲೇ ಇರುವಹಾಗೆ ಮಾಡಬೇಕೆಂಬುದು ನಿನ್ನ ಅಭಿಪ್ರಾಯವೇ ? ಆದುದರಿಂದ **"ಛಿನ್ಧ್ಯಾಶುನಸ್ಸುತ ಕಳತ್ರ ಧನಾಪ್ತಗೇಹದೇಹಾದಿ ಮೋಹರಶನಾಂ ಭವದೀಯ ಮಾಯಾಮ್"** (ಭಾಗ. ೧೦-೪೮-೨೮) ನನಗೆ ಯಾವ ಆಶೆಯು ಇರಕೂಡದು, ಹಾಗೆ ಮಾಡತಕ್ಕ ಆಶೆ ಎಂಬ ಹಗ್ಗವನ್ನೇ ಛೇದಿಸಿಬಿಡು ; ನನಗೆ ಯಾವ ಆಶೆಯೂ ಇಲ್ಲವು ; ನಾನೂ ಕೇಳುವದೂ ಇಲ್ಲವೆಂದು ಉತ್ತರವನ್ನಿತ್ತರು. ಶ್ರೀ ನಿಗಮಾಂತದೇಶಿಕರವರೂ ತಾವು ಯಾವ ಪುರುಷಾರ್ಥವನ್ನೂ **"ವಾಚಾನ ಯಾಚಮಹೇ"** ತಮ್ಮ ವಾಕ್ಕಿನಿಂದ ಬೇಡುವದಿಲ್ಲವೆಂದು ಹೇಳಿಕೊಂಡಿರುತ್ತಾರೆ. **ಶುಭಾಶುಭಪರಿತ್ಯಾಗೀ** - ಪುಣ್ಯಪಾಪ ರೂಪಫಲಗಳುಳ್ಳವನ್ನು ಪರಿತ್ಯಾಗಮಾಡುವನೋ, ಇಂತಹ **ಭಕ್ತಿಮಾನ್** - ಹಿಂದೆಲ್ಲಾ **ಭಕ್ತಃ** ಎಂದು ಹೇಳಿದುವರ ಬದಲಾಗಿ ಇಲ್ಲಿ **ಭಕ್ತಿಮಾನ್ ಯಃ** - ಇಂತಹ ಭಕ್ತಿಯೋಗನಿಷ್ಠನು ಯಾರೋ, **ಸಃ** - ಅವನು, **ಮೇ ಪ್ರಿಯಃ** - ನನಗೆ ಪ್ರಿಯನಾದವನು, ನನ್ನ ಅನುಗ್ರಹಕ್ಕೆ ಪಾತ್ರನಾದವನಾಗುವನು, ಹಿಂದೆ ೧೩, ೧೪ ನೆಯ ಶ್ಲೋಕಗಳಲ್ಲಿ ಹೇಳಿರುವದರ ಪುನರುಕ್ತಿಯೆಂದು ಇದನ್ನು ಭಾವಿಸತಕ್ಕದ್ದಲ್ಲವು. ಅಲ್ಲಿ ಹೇಳಿರುವದು ಕರ್ಮಯೋಗನಿಷ್ಠನ ಸಾಧಾ

ರಣ ಗುಣಗಳು. ಇಲ್ಲಿ ಹೇಳಿರುವದು ಪ್ರತಿಬಂಧಕವಸ್ತು ಸಾನ್ನಿಧ್ಯದಲ್ಲೂ ವಿಕಾರ ಶೂನ್ಯತೆಯು. ಅಲ್ಲಿ ಹೇಳಿರುವದು ಸಾಧಾರಣವಾಗಿ ಚಿತ್ತವಿಕಾರಕ್ಕೆ ಕಾರಣವಿಲ್ಲದ ಸಂದರ್ಭವು ಇಲ್ಲಿಯಾದರೋ ಚಿತ್ತವಿಕಾರಕ್ಕೆ ಕಾರಣವಾದ ವಸ್ತು ಸಾನ್ನಿಧ್ಯವಿರುವ ವಿಷಯವು. ಹೀಗೆ ವೈಲಕ್ಷಣ್ಯವು. ಶುಭಾಶುಭ ಪರಿತ್ಯಾಗೀ ಎಂಬುದರಿಂದ ಪುಣ್ಯ ಪಾಪಗಳನ್ನು ಪರಿತ್ಯಾಗ ಮಾಡಬೇಕೆಂದು ಹೇಳಲ್ಪಟ್ಟಿತು. ಇದರಿಂದ ಅಂತಹ ಕರ್ಮಗಳನ್ನು ಮಾಡತಕ್ಕದ್ದಲ್ಲವೆಂಬ ಭಾವವು; ಎರಡೂ ಬಂಧಕಗಳಾದುದರಿಂದ ತ್ಯಾಗಮಾಡಬೇಕೆಂಬ ಭಾವವು ಪಾಪವೇನೋ ಬಂಧಕವು, ಸರ್ವಾತ್ಮನಾ ಕೂಡದೆಂಬುದನ್ನು ಒಪ್ಪಿಕೊಳ್ಳಬಹುದು. ಆದರೆ, ಸುಕೃತಗಳು ಹೇಗೆ ಬಂಧಕಗಳು ಎಂದರೆ, ಸುಕೃತಗಳಿಂದ ಸ್ವರ್ಗಾದಿ ಐಹಿಕ ಸುಖಪ್ರಾಪ್ತಿಯುಂಟಾಗುತ್ತದೆ; ಸ್ವರ್ಗ ಲೋಕಾನುಭವವಾದನಂತರ, **ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ** ಎಂದಿರುವದರಿಂದ ಪುನಃ ಇನ್ನೂ ಇರುವ ಪ್ರಾರಬ್ಧ ಕರ್ಮಫಲಾನುಭವಕ್ಕಾಗಿ ಇಲ್ಲಿಗೆ ಬಂದು ಜನ್ಮವೆತ್ತುವದರಿಂದ ಬಂಧಕವು; ಹಾಗೆಯೇ ದಾನ ತಪಸ್ಸುಗಳು ಪುಣ್ಯ ಕೆಲಸಗಳಾಗಿ ಬಂಧಕಗಳು; ಆದರೆ ಅವುಗಳನ್ನೇ ಫಲಾಭಿಸಂಧಿಯಿಲ್ಲದೆ ಮಾಡಿದರೆ ಬಂಧಕವಲ್ಲವಲ್ಲಾ ಏಕೆಮಾಡಕೂಡದೆಂದರೆ, ಈತನು ಮೋಕ್ಷಾರ್ಥಿಯಾಗಿ ಇನ್ನು ಯಾವ ಫಲಗಳೂ ಖ್ಯಾತಿ ಮೊದಲಾದುವು ಯಾವುವೂ ಬೇಕಾಗಿಲ್ಲದುದರಿಂದಲೂ, ಇಂತಹ ಪುಣ್ಯ ಕಾರ್ಯಗಳಿಗೆ ಸಮಯವನ್ನು ಕೊಟ್ಟುಬಿಟ್ಟರೆ, ತನ್ನ ಕರ್ಮನಿಷ್ಠೆ ಉಪಾಸನ, ಸದಾ ಆತ್ಮಚಿನ್ತನೆ ಪರಮಾತ್ಮನ ಭಜನೆ ಮೊದಲಾದವುಗಳಿಗೆ ಕಾಲವು ದೊರೆಯದೇ ಹೋಗುವದರಿಂದ ತ್ಯಾಜ್ಯವು. ಆದುದರಿಂದ ಪುಣ್ಯ ಪಾಪಗಳೆರಡೂ ಬಂಧಕವೆಂದು ಶ್ರುತಿಯೂ ಹೇಳಿ, ಅವೆರಡನ್ನೂ ಈತನು ಉಪಾಯಾನುಷ್ಠಾನದಿಂದ ಕಳೆದುಕೊಳ್ಳಬೇಕೆಂದು **"ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂದು (ಮುಂ. ೩. ೧. ೩.) ಹೇಳುತ್ತದೆ. ಹೀಗಿರುವದರಿಂದ ಪ್ರಪನ್ನನು ಪುಣ್ಯ ಕೆಲಸಗಳಲ್ಲೂ ಪ್ರವೃತ್ತಿಯನ್ನು ಬಿಡಬಹುದು. ಆದರೆ ಒಬ್ಬ ಪ್ರಪನ್ನನು ಪ್ರಾತಸ್ಸ್ನಾನಕ್ಕಾಗಿ ಕೆರೆಗೆ ಹೋಗಿದ್ದ ಕಾಲದಲ್ಲಿ ಒಬ್ಬ ಬಾಲನು ನೀರಿನಲ್ಲಿ ಬಿದ್ದು ಒದ್ದಾಡುತ್ತಿದ್ದರೆ, ಆ ಬಾಲನನ್ನು ನೀರಿನಿಂದ ಮೇಲಕ್ಕೆ ಎತ್ತಿ ಪ್ರಾಣ ಸಂರಕ್ಷಣೆಯನ್ನು ಮಾಡಿದರೆ ಬಂಧಕವಾದ ಪುಣ್ಯ ಕೆಲಸವಾಗುತ್ತದೆಂದು ಭಾವಿಸಿ ತಟಸ್ಥನಾಗಿರಬೇಕೆಂದು ಇಲ್ಲಿ ಉಪದೇಶಿಸಲಿಲ್ಲವು ಆ ಬಾಲನನ್ನು ಬದುಕಿಸುವ ಶಕ್ತಿಯಿದ್ದರೂ ಬದುಕಿಸದೆ ಹೋದರೆ ಪ್ರತ್ಯವಾಯವು. ಬದುಕಿಸಿ, ಶ್ರೀ ಕೃಷ್ಣಾರ್ಪಣಮಸ್ತು ಎಂದು ಹೇಳಿ, ಧನಖ್ಯಾತಿ ಮೊದಲಾದವುಗಳಿಗೆ ಆಶೆ ಪಡದಿದ್ದರೆ, ಬಂಧಕವಾಗುವದಿಲ್ಲವು. ಹಾಗೆಯೇ ಬಡವರಿಗೆ, ದೀನರಿಗೆ, ರೋಗಿಗಳಿಗೆ ಮಾಡುವ ಸಹಾಯಗಳೂ ಕೂಡ ಶ್ರೀ ಕೃಷ್ಣಾರ್ಪಣಮಸ್ತು ಎಂಬುದರಿಂದ ಬಂಧಕವಾಗುವದಿಲ್ಲವು; ಮೋಕ್ಷಾರ್ಥಿಯು ತನ್ನ ಕರ್ಮಾನುಷ್ಠಾನ, ಪರಮಾತ್ಮ ಭಜನ, ಉಪಾಸನಾದಿಗಳಿಗೆ ಅವಿರೋಧೇನ ಮಾಡುವದು ಬಂಧಕವಲ್ಲವು. ಆದರೆ ಆದಿ ಭರತರು ಮೃಗಶಾಬವನ್ನು ನೀರಿನಲ್ಲಿ ಮುಳುಗಿಹೋಗುತ್ತದೆಂದು ಕಾಪಾಡಿದುದು, ಅವರಿಗೆ ಬಂಧಕವಾಗಿ ಪರಿಣಮಿಸಲಿಲ್ಲವೇ ? ಎಂದರೆ ಅವರು ಅದನ್ನು ಬದುಕಿಸಿಬಿಟ್ಟು, ಶ್ರೀ ಹರಿಯು ಪ್ರೀತನಾಗಲಿ ಎಂದು ಹೇಳಿ ಸುಮ್ಮನಿರದೆ, ಅದರಲ್ಲೇ ವಿಶೇಷ ಮಮತೆಯನ್ನು ಇಟ್ಟದುದರಿಂದ ಬಂಧಕವಾಯಿತು. ಆದರೆ ಲೋಕಹಿತಕ್ಕಾಗಿ ಸುಕೃತಗಳನ್ನು ಮಾಡಬೇಡವೇ? ಎಂದರೆ ಮಾಡತಕ್ಕದ್ದೇ. ತ್ಯಾಗವನ್ನು ಹೇಳಿದರೆ ಬಂಧಕವಲ್ಲವು; ಆದರೆ, ಅನೇಕ ಬುಭುಕ್ಷುಗಳು ಉಂಟು, ಅವರುಗಳಿಗೆ ಅದನ್ನು ಬಿಡಬಹುದು. ಮುಮುಕ್ಷುವು ವೈರಾಗ್ಯ ಭಕ್ತಿಗಳನ್ನವಲಂಭಿಸಿದವನಾದುದರಿಂದ ಆತನಿಗೆ ಬೇಕಾಗಿಲ್ಲವು. ಅನೇಕರು ಲೋಕ ವ್ಯವಹಾರಗಳನ್ನು ಅಪರವಯಸ್ಸಿನಲ್ಲಿ ತ್ಯಾಗಮಾಡಿ ವೈರಾಗ್ಯವನ್ನು ಅವಲಂಬಿಸಿ ಪರಮಾತ್ಮನನ್ನು ಹೊಂದುವ

**ಭಾ. ಯೋನ ಹೃಷ್ಯತಿ - ಯನ್ಮನುಷ್ಯಾಣಾಂ ಹರ್ಷನಿಮಿತ್ತಂ ಪ್ರಿಯಜಾತಂ ತತ್ಪ್ರಾಪ್ಯ ಯಃ - ಕರ್ಮಯೋಗೀ ನಹೃಷ್ಯತಿ, ಯಚ್ಚಾಪ್ರಿಯಂ ತತ್ಪ್ರಾಪ್ಯ ನದ್ವೇಷ್ಟಿ ಯಚ್ಚ ಮನುಷ್ಯಾಣಾಂ ಶೋಕನಿಮಿತ್ತಂ ಭಾರ್ಯಾಪುತ್ರ ವಿತ್ತಕ್ಷಯಾದಿಕಂ ತತ್ಪ್ರಾಪ್ಯ ನಶೋಚತಿ, ತಥಾ ವಿಧ ಮಪ್ರಾಪ್ತಂಚ ನಕಾಂಕ್ಷತಿ, ಶುಭಾಶುಭಪರಿತ್ಯಾಗೀ -**

---

ಉಪಾಯಗಳನ್ನು ಸ್ವೀಕರಿಸುವದನ್ನು ಕಂಡಿರುವೆವು. ಆದರೆ ನಿವೃತ್ತಿಹೊಂದಿದ ಜಡ್ಜಿಯು ಲಾಯರಾಗಿ ಕೆಲಸ ಮಾಡುವದೂ, ನಿವೃತ್ತನಾದ ಇಂಜನಿಯರು ಕಂಟ್ರಾಕ್ಟದಾರನಾಗುವದೂ ಇವೆಲ್ಲಾ ಸರಿಯಲ್ಲವು. ಆದುದರಿಂದ **ಶುಭಾಶುಭಪರಿತ್ಯಾಗೀ** ಎಂದು ಹೇಳಲ್ಪಟ್ಟಿತು. ಇದಕ್ಕೆ ಒಳ್ಳೇ ನಿದರ್ಶನವಾಗಿ ರೈಕ್ವರನ್ನು ಹೇಳಬಮುದು.

**ಭಾಷ್ಯಾರ್ಥವು** :—ಕರ್ಮಯೋಗನಿಷ್ಠನು ಹಿಂದಿನದಕ್ಕಿಂತ ಇನ್ನೂ ಉತ್ಕೃಷ್ಟದೆಶೆಯನ್ನು ಹೊಂದಿ ನನಗೆ ಪ್ರಿಯನಾಗುವನೆಂದು ಹೇಳುತ್ತಾರೆ.—ಈತನ ಪ್ರಾರಬ್ಧಾನುಗುಣವಾಗಿ ಪರಮಾತ್ಮ ಸಙ್ಕಲ್ಪದಿಂದುಂಟಾದ ಪ್ರಿಯಾಪ್ರಿಯಗಳಲ್ಲಿ ಹರ್ಷಶೋಕಾದಿಗಳಿಲ್ಲದವನಾಗಿಯೂ, ಮತ್ತು ನಿಷಿದ್ಧವಲ್ಲದವುಗಳಲ್ಲೂ ಕೂಡ ವಾಂಛೆಯೂ, ಪುಣ್ಯಾಪಾಪರೂಪ ಕರ್ಮಗಳಲ್ಲಿ ಆಸಕ್ತಿ ಇಲ್ಲದವನಾಗಿಯೂ, ಇರುವ ಕರ್ಮನಿಷ್ಠೆಯುಳ್ಳ ಉಪಾಸಕನು ನನಗೆ ಅತಿ ಪ್ರಿಯನು, ಅಂತವನಿಗೆ ನಾನು ಅನುಗ್ರಾಹಕನು ಎಂದು ಹೇಳುತ್ತಾರೆ—**ಯೋ ನ ಹೃಷ್ಯತಿ** - ಯಾವನು ಸಂತೋಷಿಸುವದಿಲ್ಲವೋ ಯಾವ ಸಂದರ್ಭನಲ್ಲಿ ಎಂದರೆ ಉಪಪಾದಿಸುತ್ತಾರೆ.—**ಮನುಷ್ಯಾಣಾಂ** - ಮನುಷ್ಯರಿಗೆ, ಹರ್ಷನಿಮಿತ್ತವಾದ **ಪ್ರಿಯಜಾತಂ** - ಪ್ರಿಯವಾದ ವಸ್ತು ಸಮೂಹವು, **ಯತ್** - ಯಾವುದೋ, **ತತ್ಪ್ರಾಪ್ಯ** - ಅದನ್ನು ಹೊಂದಿಯೂ, **ಯಃ** - ಯಾವ, **ಕರ್ಮಯೋಗೀ** - **ಕರ್ಮಯೋಗಿಯು** ಎಂದರೆ ಕರ್ಮಯೋಗ ನಿಷ್ಠೆಯನ್ನವಲಂಬಿಸಿದ ಉಪಾಸಕನು, **ನಹೃಷ್ಯತಿ** - ಸಂತೋಷವನ್ನು ಹೊಂದುವದಿಲ್ಲವೋ, ಒಗ್ಗುವದಿಲ್ಲವೋ, **ಮತ್ತು ಯಚ್ಚಾಪ್ರಿಯಂ** - ಯಾವುದು ಅಪ್ರಿಯವಾದುದೋ, **ತತ್ಪ್ರಾಪ್ಯ**-ಅಂತಾದ್ದನ್ನು ಹೊಂದಿ, **ನದ್ವೇಷ್ಟಿ**-ದ್ವೇಷಿಸುವದಿಲ್ಲವೋ, ಮತ್ತು **ಯಚ್ಚ ಮನುಷ್ಯಾಣಾಂ ಶೋಕನಿಮಿತ್ತಂ ಭಾರ್ಯಾಪುತ್ರ ವಿತ್ತಕ್ಷಯಾದಿಕಂ** - ಸಾಧಾರಣ ಮನುಷ್ಯರಿಗೆ ಶೋಕಕ್ಕೆ ಕಾರಣವಾಗಿರುವ ಹೆಂಡತಿ ಮಗ ಮತ್ತು ದ್ರವ್ಯನಾಶಗಳುಳ್ಳದು ಯಾವುದೋ, **ತತ್ಪ್ರಾಪ್ಯ ನಶೋಚತಿ** - ಅದನ್ನು ಹೊಂದಿದರೂ ಶೋಕಿಸುವದಿಲ್ಲವೋ, **ತಥಾವಿಧಂ** - ಹಾಗೆಯೇ ಸಾಧಾರಣ ಮನುಷ್ಯರಿಗೆ ಈ ಮೇಲೆ ಹೇಳಿದವೆಲ್ಲಾ ಇಲ್ಲದಿರುವದರಿಂದ ಅವರು ಅಪೇಕ್ಷಿಸುವದು ಯಾವುದೋ ಅದು, **ಅಪ್ರಾಪ್ತಂಚ** - ಹಾಗೆ ತನಗೆ ಇಲ್ಲವಾದರೂ ಅದನ್ನು **ನಕಾಂಕ್ಷತಿ**-ಬೇಕೆಂದು ಆಶೆಪಡುವದಿಲ್ಲವೋ, ಸಾಧಾರಣವಾಗಿ, ಮನಸ್ಸಿನಲ್ಲಿ ಅವುಗಳ ಆಶೆಯು ನೆಟ್ಟಿಬಿಟ್ಟರೆ, ತನ್ಮೂಲಕವಾಗಿ ವ್ಯಥೆಯು ತಪ್ಪದು. ಶ್ರೀ ಪರಾಶರರು (ವಿ. ಪು. ೧. ೧೭. ೬೬) **ಯಾವತಃ ಕುರುತೇ ಜಂತುಸ್ಸಬಂಧಾನ್ಮನಸಃ ಪ್ರಿಯಾ । ತಾವಂತೋಸ್ಯ ನಿಖನ್ಯಂತೇ ಹೃದಯೇ ಶೋಕಶಂಕವಃ**" ಎಲ್ಲಿವರೆಗೆ ಪ್ರಾಣಿಗೆ ಮನಸ್ಸಿಗೆ ಪ್ರಿಯವಾದವುಗಳ ಸಂಬಂಧವು ಉಂಟಾಗುತ್ತದೋ ಅಲ್ಲಿವರೆಗೆ ಆತನ ಹೃದಯದಲ್ಲಿ ಶೋಕವೆಂಬ ಗೂಟಗಳು ನೆಟ್ಟಿರುತ್ತವೆ" ಎಂದು ಹೇಳಿರುತ್ತಾರೆ. ಆಶೆಯು ಹೃದಯವನ್ನು ಆವರಿಸಿಬಿಟ್ಟರೆ, ಆ ಆಶೆಗೆ ತೃಪ್ತಿಯೇ ಇರುವದಿಲ್ಲವು. **"ನಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ"** ಮನಸ್ಸು ಕಾಮದಲ್ಲಿ ಸ್ವಲ್ಪ ಪ್ರವರ್ತಿಸಿಬಿಟ್ಟರೆ, ಅನಂತರ ಎಷ್ಟು ಅನುಭವಿಸಿದರೂ ತೃಪ್ತಿಯಿಲ್ಲದಂತಾಗುತ್ತದೆ. ಹಾಗೆಯೇ **"ಪೂರ್ಣೇಷು ಪೂರ್ಣೇಷು ಪುನರ್ನವಾನಾಮುತ್ಪತ್ತಯಸ್ಸಂತಿ ಮನೋ**

**ಭಾ. ಪಾಪವತ್ಪುಣ್ಯಸ್ಯಾಪಿ ಬಂಧಕಹೇತುತ್ವಾ ವಿಶೇಷತ್ವಾತ್ ಉಭಯ ಪರಿತ್ಯಾಗೀ, ಯ ಏವಂ ಭೂತೋ ಭಕ್ತಿಮಾನ್, ಸ ಮೇ ಪ್ರಿಯಃ ||೧೭||**

**ರಥಾನಾಂ"** ಮನೋರಥಗಳು ಪೂರ್ಣವಾದ ಹಾಗೆಲ್ಲಾ ಪುನಃ ಪುನಃ ಹೊಸದಾಗಿ ಉತ್ಪನ್ನ ವಾಗುತ್ತಲೇ ಇರುವುವು. ಹೀಗೆ ಆಶೆಯನ್ನು ನಿಗ್ರಹಿಸುವದು ಕಷ್ಟವಾದರೂ, **ನಕಾಂಕ್ಷತಿ** ಎಂದು ಮನೋರಥಗಳನ್ನು ಸಂಪೂರ್ಣವಾಗಿ ಪರಿತ್ಯಾಗ ಮಾಡಬೇಕೆಂದು ಹೇಳಲ್ಪಟ್ಟಿತು. **ಶುಭಾಶುಭ ಪರಿತ್ಯಾಗೀ** ಎಂದರೆ **ಪಾಪವತ್** - ಪಾಪ ಹೇಗೋ ಹಾಗೆ, **ಪುಣ್ಯಸ್ಯಾಪಿ** - ಪುಣ್ಯಕ್ಕೂ ಕೂಡ, **ಬಂಧಕ ಹೇತುತ್ವಾ ವಿಶೇಷತ್ವಾತ್** - ಬಂಧಕಕ್ಕೆ ಕಾರಣವಾಗಿರುವದರ ಲ್ಲೇನೂ ವಿಶೇಷವಿಲ್ಲದುದರಿಂದ, **ಉಭಯ ಪರಿತ್ಯಾಗೀ** - ಯಾವನು ಈ ಪುಣ್ಯ ಪಾಪಗಳೆರ ಡನ್ನೂ ಪರಿತ್ಯಾಗ ಮಾಡಿರುವನೋ, ಇಲ್ಲಿ ಶುಭ ಶಬ್ದಕ್ಕೆ ಪುಣ್ಯವೆಂದೂ ಅಶುಭ ಶಬ್ದಕ್ಕೆ ಪಾಪ ವೆಂಬ ಅರ್ಥ ಹೇಗೆ ಎಂದರೆ ಹಾಗೆ ಮಹರ್ಷಿಯ ಪ್ರಯೋಗವುಂಟು. ಶ್ರೀಮದ್ರಾಮಾಯಣ ದಲ್ಲಿ ರಾವಣ ವಧಾನಂತರ ಮಂಡೋದರೀ ಪ್ರಲಾಪದಲ್ಲಿ **"ಶುಭಕೃಚ್ಛುಭ ಮಾಪ್ನೋತಿ ಪಾಪಕೃತ್ಪಾಪಮಶ್ನುತೇ। ವಿಭೀಷಣ ಸ್ಸುಖಂ ಪ್ರಾಪ್ತಸ್ತ್ವಂ ಪ್ರಾಪ್ತಃ ಪಾಪಮೀದೃಶಂ** (ರಾ. ಯುದ್ಧ. ೧೧೪-೨೬) ಪುಣ್ಯಮಾಡಿದವನು ಪುಣ್ಯಫಲವನ್ನು ಹೊಂದುವನು, ಪಾಪಮಾಡಿ ದವನು ಪಾಪ ಫಲವನ್ನು ಹೊಂದುವನು, ಎಂಬಲ್ಲಿ ಪಾಪಶಬ್ದಕ್ಕೆ ಪ್ರತಿದ್ವಂದಿಯಾಗಿ ಉಪಯೋ ಗಿಸಲ್ಪಟ್ಟಿರುವದರಿಂದ ಶುಭವೆಂದರೆ ಪುಣ್ಯವು, ಅಶುಭವು ಅದಕ್ಕೆ ವಿರುದ್ಧವಾದುದಾಗಿ ಪಾಪವು. ಹಾಗೆಯೇ ಬೃಹದಾರಣ್ಯಕ ಶ್ರುತಿಯಲ್ಲೂ ೬. ४. ೫. ರಲ್ಲಿ **"ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋಭವತಿ" "ಪುಣ್ಯಃ ಪುಣ್ಯೇನ ಕರ್ಮಣಾಭವತಿ ಪಾಪಃ ಪಾಪೇನ ಕರ್ಮಣಾ"** ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಆಂಜನೇಯನನ್ನು ಕುರಿತು ಹೇಳುವ ಸೀತಾವಾಕ್ಯದಲ್ಲೂ, **"ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ। ಕಾರ್ಯಂಕರುಣ ಮಾರ್ಯೇಣ ನಕಶ್ಚಿನ್ನಾಪರಾಧ್ಯತಿ"** (ರಾ. ಯುದ್ಧ. ೧೧೭-೪೪) ಶುಭ ಶಬ್ದವು ಪಾಪಕ್ಕೆ ಪ್ರತಿದ್ವಂದಿಯಾಗಿಯೇ ಪ್ರಯೋಗಿಸಲ್ಪಟ್ಟಿರುತ್ತದೆ. ಸುಕೃತಮಾಡಿ ಸ್ವರ್ಗಾದಿ ಫಲ ಗಳನ್ನು ಹೊಂದಿದರೂ, ಮೋಕ್ಷವಿಲ್ಲದುದರಿಂದ ಬಂಧಕಗಳೇ ಎಂದು ತಿಳಿಸುವದಕ್ಕಾಗಿಯೇ. **ಬಂಧಕ ಹೇತುತ್ವಾ ವಿಶೇಷಾತ್** ಎಂಬ ಪ್ರಯೋಗವು. ಪುಣ್ಯವೂ ಕೂಡ ಪಾಪಕ್ಕೆ ಸಮಾ ನವು; ಎರಡೂ ಬಂಧಕಗಳಾದುದರಿಂದ ಮೋಕ್ಷವನ್ನು ಹೊಂದುವವನು ಎರಡನ್ನೂ ಕಳೆದು ಕೊಳ್ಳುವುದು ಆವಶ್ಯಕವೆಂದು ಶ್ರುತಿಯು **"ಪುಣ್ಯಪಾಪೇವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂದು ಹೇಳಿರುವದರಿಂದ, ಈ ಕರ್ಮನಿಷ್ಠೆಯುಳ್ಳ ಉಪಾಸಕನೂ ಕೂಡ, **ಶುಭಾಶುಭ ಪರಿತ್ಯಾಗೀ** ಯಾಗಿರಬೇಕೆಂದು ಹೇಳಲ್ಪಟ್ಟಿತು. ಹಾಗೆಯೇ ಪುನಃ ಶ್ರುತಿಯು **"ಸುಕೃತ ದುಷ್ಕೃತೇಧೂನುತೇ"** ಎಂದು ಹೇಳಿರುತ್ತದೆ. (ಕೌ ೧.) ಸುಕೃತ ಫಲದ ನಾಶವೂ ಮುಕ್ತನಾಗುವನಿಗೆ ಹೇಳಲ್ಪಟ್ಟಿರುತ್ತದೆ; ಆದುದರಿಂದ ಪುಣ್ಯವನ್ನೂ ಪಾಪದೊಡನೆಯೇ **"ಸೇರಿಸಿ ಸರ್ವೇ ಪಾಪ್ಮಾನೋಽತೋನಿವರ್ತನ್ತೇ"** (ಛಾಂ. ೮. ४. ೧) ಶ್ರುತಿಯು ಸಮಸ್ತ ಪಾಪಗಳು ಎಂದು ಹೇಳಿರುತ್ತದೆ; ಈ ಅಭಿಪ್ರಾಯವನ್ನೇ **"ಇತರಸ್ಯಾಪ್ಯೇವಮ ಅಸಂಶ್ಲೇಷಃ ಪಾತೇತು"** ಎಂಬ ಬ್ರಹ್ಮಸೂತ್ರವು (४. ೧. ೧४) ಉಪಪಾದಿಸುತ್ತದೆ. ಪುಣ್ಯಕ್ಕೂ ಕೂಡ ಮೋಕ್ಷವಿರೋಧಿತ್ವವಿರುವದರಿಂದ ಮುಕ್ತನಾಗುವನಿಗೆ ಅವುಗಳ ಅಶ್ಲೇಷ ವಿನಾಶಗಳನ್ನೂ ಶ್ರುತಿ ಗಳು ಬೋಧಿಸುತ್ತವೆ. ಸುಕೃತ ಫಲಗಳಾದ ಅನ್ನ ಆಯುರಾರೋಗ್ಯ ಸ್ವರ್ಗಪ್ರಾಪ್ತಿ ಮುಂತಾದ ಫಲಗಳೂ ದೇಹಾವಸನಾನಂತರ ಬಿಟ್ಟುಹೋಗುತ್ತವೆಂಬ ಭಾವವು. ಹೀಗೆ ದೇಹಾವಸಾನ ಕಾಲದಲ್ಲಿ ಪುಣ್ಯಪಾಪಗಳ ಅಶ್ಲೇಷ ವಿನಾಶವಿದ್ದುದ್ದಾದರೆ, ಅವು ತಾನಾಗಿಯೇ ತೊಲಗುವದ

ಮೂ. ಸಮಶ್ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ।
ಶೀತೋಷ್ಣ ಸುಖದುಃಖೇಷು ಸಮ ಸ್ಸಙ್ಗವಿವರ್ಜಿತಃ॥ ೧೮.
ತುಲ್ಯನಿನ್ದಾಸ್ತುತಿರ್ಮೌನೀ ಸನ್ತುಷ್ಟೋ ಯೇನ ಕೇನ ಚಿತ್।
ಅನಿಕೇತ ಸ್ಸ್ಥಿರಮತಿ ರ್ಭಕ್ತಿಮಾನ್ ಮೇ ಪ್ರಿಯೋ ನರಃ॥ ೧೯.

ರಿಂದ ಶುಭಾಶುಭ ಪರಿತ್ಯಾಗಿಯಾಗಿ ಏಕೆ ಇರಬೇಕೆಂದು ಪೂರ್ವಪಕ್ಷತಂದರೆ **"ಪ್ರಕ್ಷಾಳನಾದ್ಧಿ ಪಂಕಸ್ಯ ದೂರಾದಸ್ಪರ್ಶನಂವರಮ್"** ಎಂದು ಹೇಳಿರುವಹಾಗೆ ಕೆಸರು ತುಳಿದು ಕಾಲು ತೊಳೆಯುವದಕ್ಕಿಂತ, ಕೆಸರನ್ನು ತುಳಿಯದೇ ಇರುವದು ಉಚಿತವಲ್ಲವೇ? ಕೆಸರು ತುಳಿದ ಹಾಗೆ ಪುಣ್ಯಪಾಪಗಳನ್ನು ಮಾಡುವದು ಮುಮುಕ್ಷುವಿಗೆ ಸ್ವರೂಪಹಾನಿಯು. ಪುಣ್ಯಪಾಪಗಳೆರಡೂ ಬೇಡಿಗಳಾಗಿ ಬಂಧಕಗಳೇ, ಪಾಪಗಳು ಕಬ್ಬಿಣ ಬೇಡಿಗಳಾದರೆ, ಪುಣ್ಯಗಳೂ ಚಿನ್ನದ ಬೇಡಿಗಳೇ ಎಂಬ ಭಾವವು. **ಯಃ ಏವಂ ಭೂತೋ ಭಕ್ತಿಮಾನ್** - ಯಾವ ಕರ್ಮಯೋಗ ನಿಷ್ಠನು ಹೀಗಿರುವವನಾಗಿ ನನ್ನನ್ನು ಭಕ್ತಿಪೂರ್ವಕವಾಗಿ ಉಪಾಸಿಸುವನೋ, **ಸ ಮೇ ಪ್ರಿಯಃ**- ಅಂತಪನೀಗ ನನಗೆ ಪ್ರಿಯನಾಗುವನು, ನನ್ನನುಗ್ರಹಕ್ಕೆ ಪಾತ್ರನಾಗುತನು ಎಂಬ ಭಾವವು. ನನ್ನ ಪ್ರೀತಿಯನ್ನು ಸಂಪಾದಿಸುವದಕ್ಕಾಗಿ ಹಿಂದೆ ೧೩ನೆಯ ಶ್ಲೋಕದಿಂದ ಹೇಳಿದಹಾಗೆಲ್ಲಾ ಇರಬೇಕೆಂದು ಉಪದೇಶಿಸಿದರು. ॥೧೭॥

**ಮೂಲಕ್ಕೆ ಅರ್ಥವು :—** ಹೀಗೆ ಕರ್ಮಯೋಗನಿಷ್ಠನಾದ ಉಪಾಸಕನು ಇನ್ನೂ ಹೇಗೆ ಇರುವನು ಎಂದರೆ ಹೇಳುತ್ತಾರೆ.—ಮುಂದಿನ ಎರಡು ಶ್ಲೋಕಗಳಿಗೂ ಏಕಾನ್ವಯವಾಮದ ರಿಂದ ಒಟ್ಟಿಗೆ ಅರ್ಥವನ್ನು ಹೇಳಬೇಕಾಗಿರುತ್ತದೆ. ಹಿಂದೆ ೮ನೆಯ ಶ್ಲೋಕವಲ್ಲಿ **"ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ"** ಎಂದು ಮನೋಬುದ್ಧಿಗಳು ತನ್ನಲ್ಲಿಯೇ ಇರಬೇಕೆಂದು ಹೇಳಿದರು. ಅನಂತರ **"ಅಥಚಿತ್ತಂ ಸಮಾಧಾತುಂ ನಶಕ್ನೋಷಿ"** ಎಂದಾರಂಭಿಸಿ, ಕರ್ಮಯೋಗ ನಿಷ್ಠೆಯಿಂದ ಯುಕ್ತವಾದ ಭಕ್ತಿಯೋಗವೇ ಅತ್ಯುತ್ತಮವು, ಚಿತ್ತಬುದ್ಧಿಗಳ ಸಮಾಧಾನವನ್ನು ಕ್ರಮೇಣ ಉಂಟುಮಾಡುವದು ಎಂದು ಇಲ್ಲಿ ಪ್ರದರ್ಶಿಸುತ್ತಾರೆ; ಅದಕ್ಕಾಗಿಯೇ **ಸ್ಥಿರಮತಿಃ** - ಬುದ್ಧಿಯು ಈ ಪ್ರಕಾರವಾಗಿ ಸ್ಥಿರವಾದುದಾಗುವದೆಂದು ಮುಗಿಸುವದರಿಂದ, ಬುದ್ಧಿಗೆ ಅಧೀನವಾದ ಮನಸ್ಸೂ ಕೂಡ ಶಾಂತತೆಯನ್ನು ಹೊಂದಿ, ತನ್ನಲ್ಲಿಯೇ ಮನೋ ಬುದ್ಧಿಗಳೆರಡೂ ಇರುತ್ತವೆಂದು ಹೇಳುತ್ತಾರೆ.—ಸ್ಥಿರಮತಿಯು ಹೇಗಾಗುವನೆಂದರೆ ತಿಳಿಸುತ್ತಾರೆ.—ಆದುದರಿಂದ ಕರ್ಮಯೋಗ ನಿಷ್ಠನ ಉತ್ಕೃಷ್ಟಾವಸ್ಥೆಯು ಇಲ್ಲಿ ಹೇಳಲ್ಪಡುತ್ತದೆ. **ಯಃ** - ಯಾವ ಕರ್ಮಯೋಗನಿಷ್ಠೆಯುಳ್ಳ ಉಪಾಸಕನು, **ಶತ್ರೌ ಚ ಮಿತ್ರೇ ಚ** - ಶತ್ರುರಲ್ಲೂ ಮಿತ್ರರಲ್ಲೂ, ಸಹ, **ಸಮಃ** - ಮನಸ್ಸಿನ ವಿಕಾರವಿಲ್ಲದೆ ಧರ್ಮರಾಜನ ಹಾಗೆ ಸಮಭಾವದಿಂದಿರುತ್ತಾನೆಯೋ, ಮಿತ್ರರಹಾಗೆ ಎಲ್ಲರನ್ನೂ ಭಾವಿಸುವನೋ, ಎಂಬ ಭಾವವು; **ತಥಾ** - ಹಾಗೆಯೇ, **ಮಾನಾಪಮಾನಯೋಃ** - ಇತರರು ಸನ್ಮಾನಿಸಿದರೂ ಸರಿ, ಅಪಮಾನ ಮಾಡಿದರೂ ಸರಿ, **ಸಮಃ** - ಸಮಭಾವವುಳ್ಳ ಮನಸ್ಸುಳ್ಳವನೋ ಹಾಗೆಯೇ, **ಶೀತೋಷ್ಣ ಸುಖ ದುಃಖ**ಗಳಲ್ಲೂ, **ಸಮಃ**-ಚಿತ್ತವಿಕಾರವಿಲ್ಲದೆ ಸಮನಾಗಿರುವನೋ, **ಸಙ್ಗ ವಿವರ್ಜಿತಃ**- ಐಹಿಕಗಳಾಗಿ ಬಂಧಕಗಳಾದವುಗಳ ಸಙ್ಗವಿಲ್ಲದವನಾಗಿಯೂ, **ತುಲ್ಯನಿಂದಾಸ್ತುತಿಃ**-ಇತರರು ಮಾಡಬಹುದಾದ ನಿಂದೆಸ್ತುತಿ ಎರಡನ್ನೂ ಸಮವಾಗಿ ನೋಡುವವನಾಗಿ ಎಂದರೆ ಸ್ತುತಿಯಿಂದ ಹಿಗ್ಗದೆ, ನಿಂದೆಯಿಂದ ಶೋಕಿಸದೆ, **ಮೌನೀ** - ಹಾಗೆಯೇ ತಾನು ಯಾರನ್ನೂ ಸ್ತುತಿಸದೆಯೂ ನಿಂದಿಸದೆಯೂ ಮೌನದಿಂದಿರುವವನಾಗಿ, **ಸನ್ತುಷ್ಟೋ ಯೇನ ಕೇನಚಿತ್** - ದ್ರವ್ಯವು ಸಾಲದೆಂದು ಯಾರನ್ನೂ ಯಾಚಿಸದೆ ಕೊಡದವರನ್ನು ನಿಂದಿಸದೆ, ಸ್ವಾಮಿದತ್ತವಾದದು ಎಷ್ಟೋ

ಅಷ್ಟರಿಂದ ತೃಪ್ತನಾಗಿಯೂ, **ಅನಿಕೇತಃ** - ಮನೆಯ ವಿಷಯ ಸ್ಪೃಹಾರಹಿತನಾಗಿಯೂ ಏಕೆಂದರೆ ಆತ್ಮವಿಷಯಿಕ ಧ್ಯಾನಾವಸ್ಥನಾಗಿರುವದರಿಂದ, ಹೀಗೆಲ್ಲಾ ಇದ್ದುಕೊಂಡಿರುವದರಿಂದ, **ಸ್ಥಿರಮತಿಃ** - ಸ್ಥಿರವಾದ ಬುದ್ಧಿಯುಳ್ಳವನೋ ಎಂದರೆ ಹಿಂದೆ ಹೇಳಿದಹಾಗೆ ಚಂಚಲವಲ್ಲದೆ, **"ಮಯ್ಯೇವ ಮನ ಆಧತ್ಸ್ವ, ಮಯಿಬುದ್ಧಿಂ ನಿವೇಶಯ"** ಎಂದೂ **"ಮಯ್ಯರ್ಪಿತ ಮನೋಬುದ್ಧಿಃ"** ಎಂದೂ ಹಿಂದೆ ಉಪದೇಶಿದಹಾಗೆ, ನನ್ನಲ್ಲೇ ಸ್ಥಿರವಾದ ಮನಸ್ಸು ಬುದ್ಧಿ ಯುಳ್ಳವನಾಗಿ, **ಯಃ ನರಃ** - ಯಾವ ಕರ್ಮಯೋಗ ನಿಷ್ಠನಾಗಿರುವ ಮನುಷ್ಯನು ಅಥವಾ **ನರಮತೀತಿ ನರಃ** ಎಂಬ ವ್ಯುತ್ಪತ್ತಿ ಮೂಲಕ ಐಹಿಕದಲ್ಲಿ ರಮಿಸದ ಮುಮುಕ್ಷುವು. **ಭಕ್ತಿಮಾನ್**-ಯಾವನು ಉಪಾಸಿಸುವನೋ, **ಸಮೇ ಪ್ರಿಯಃ**- ಅವನೇ ನನಗೆ ಪ್ರಿಯನಾದ ವನು, ನನ್ನ ಅನುಗ್ರಹಕ್ಕೆ ಪಾತ್ರನಾದವನು. ಆದರೆ ಇಲ್ಲಿ ಹೇಳಿರುವುವು ಕೆಲವೆಲ್ಲಾ ಹಿಂದೆ ೧೩-೧೪ನೆಯ ಶ್ಲೋಕಗಳಲ್ಲಿರುವದರ ಪುನರುಕ್ತಿಗಳಾಗಿ ತೋರುವುವು. ಆದರೆ ಪುನರುಕ್ತಿ ದೋಷಕ್ಕೆ ಮಹಾ ಕವಿಯು ಗುರಿಯಾಗುವರಲ್ಲವಾದುದರಿಂದ ಪುನರುಕ್ತಿಯಿಲ್ಲದಹಾಗೆ ನಯನ ಮಾಡುವದು ವ್ಯಾಖ್ಯಾತೃವಿನ ಕರ್ತವ್ಯವು. ಶ್ರೀ ವ್ಯಾಸರು ಪುನರುಕ್ತಿ ದೋಷಕ್ಕೆ ಗುರಿಯಾ ಗರು, ಆದರೆ ಅನುವಾದವೆಂದು ಸಮಾಧಾನವನ್ನು ಹೇಳುವೆವು ಎಂದರೆ, ಇಷ್ಟು ಸನ್ನಿಕರ್ಷ ದಲ್ಲೇ ಅನುವಾದವೆಂತಾದ್ದೆಂಬ ಆಕ್ಷೇಪಣೆಯುಂಟಾಗಬಹುದು. ಅನುವಾದವು ಉಪಸಂಹಾರ ಮಾಡುವ ಸಂದರ್ಭದಲ್ಲಿ ಉಚಿತವೇ ಸರಿ; ಈಗ ಅಧ್ಯಾಯವನ್ನು ಮುಗಿಸಿ ಅಧ್ಯಾಯೋಪ ಕ್ರಮದಲ್ಲಿ ಪ್ರತಿಜ್ಞಾ ವಾಕ್ಯರೂಪದಲ್ಲಿ ಹೇಳಿದುದನ್ನೇ, ಈಗ ಸಮರ್ಥನೆಮಾಡಿ ಉಪಸಂಹಾರ ಮಾಡುವ ಸಂದರ್ಭವಾದುದರಿಂದ ಉಚಿತವೇ ಎಂದು ಏಕೆ ಒಪ್ಪಿಕೊಳ್ಳಕೂಡದು? ಎಂದರೆ, ಅವುಗಳಿಗೂ ಇಲ್ಲಿ ಹೇಳಿರುವದಕ್ಕೂ ವೈಲಕ್ಷಣ್ಯವನ್ನು ಕಲ್ಪಿಸಬಹುದು. **ಸಮಶ್ಶತ್ರೌಚ ಮಿತ್ರೇಚ** ಎಂಬುದು ಇಲ್ಲಿ ಇರುವ **ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ"** ಎಂಬುದಕ್ಕೆ ಸಮವಾಗಿರುವಹಾಗೆ ತೋರಿಬರುತ್ತದೆ. ಅಲ್ಲಿ ಹೇಳಿದುದರ ಅಭಿಪ್ರಾಯವು, ತಾನೇ ಕೆಲವ ರನ್ನು ದ್ವೇಷಿಸುವದು ಸರಿಯಲ್ಲವೆಂದು ಹೇಳಲ್ಪಟ್ಟಿತು. ಇಲ್ಲಾದರೋ ಶತ್ರುವೆಂದೂ ಮಿತ್ರ ನೆಂದೂ ಹೇಳಿಕೊಂಡು ತೋರ್ಪಡಿಸುವರಲ್ಲೂ ಸಮಭಾವವಿರಬೇಕೆಂದು ಹೇಳಲ್ಪಟ್ಟಿತು. ಆದು ದರಿಂದ ಎರಡಕ್ಕೂ ವ್ಯತ್ಯಾಸವು. ಅಲ್ಲಿ **ಸಮದುಃಖ ಸುಖೀ** ಎಂದು ಹೇಳಿರುವದು **ಶೀತೋಷ್ಣ ಸುಖ ದುಃಖೇಷು ಸಮಃ** ಎಂದು ಇಲ್ಲಿ ಹೇಳಿರುವದಕ್ಕೆ ಸಮವಾಗಿ ತೋರು ತ್ತದೆ; ಇಲ್ಲಿ ಹೇಳಲ್ಪಟ್ಟಿರುವದು ದುಃಖ ಸುಖಗಳು ಪ್ರಾಪ್ತಗಳಾಗಿ ಅವುಗಳಿಂದ ವಿಕಾರ ಹೊಂದದ ಭಾವವು ಹೇಳಲ್ಪಟ್ಟಿತು. ಅಲ್ಲಿಯಾದರೋ ಈತನಿಗೆ ಶೀತ ಉಷ್ಣ, ಸುಖದುಃಖ ಭಾವನೆಯೇ ಇಲ್ಲದ ಅವಸ್ಥೆಯು ಹೇಳಲ್ಪಟ್ಟಿತು. ಅಲ್ಲಿ **ನಿರ್ಮಮಃ** ಎಂದೂ, ಇಲ್ಲಿ **ಸಙ್ಗ ವಿವರ್ಜಿತಃ** ಎಂದೂ ಇರುವದರಿಂದ ಏಕಾರ್ಥವುಳ್ಳವುಗಳಾಗಿ ತೋರುತ್ತವೆ. ಇಲ್ಲಿ ಅವುಗಳ ಸಂಬಂಧವುಂಟಾಗಿದ್ದರೂ ಮಮಕಾರ ಕೂಡದೆಂದು ಉಪದೇಶವು; ಅಲ್ಲಿ ಸಂಬಂಧವೇ ಇಲ್ಲದ ಅವಸ್ಥೆಯು ಹೇಳಲ್ಪಟ್ಟಿತು. ಹೀಗೆ ವೈಲಕ್ಷಣ್ಯವನ್ನು ಊಹಿಸಬಹುದು. ಮಾನಾವಮಾನ ಗಳಲ್ಲಿ ಸಮಭಾವ ಉಂಟಾಗುವುದು ಸಾಮಾನ್ಯವಲ್ಲವು, ಒಬ್ಬನು ಅವಮಾನವಾಗಿ ಮಾತಾಡಿ ದರೆ ತಡೆಯದೆ ಪ್ರತಿಯಾಗಿ ಅವಮಾನಕರವಾದ ಮಾತುಗಳನ್ನುಪ್ರಯೋಗಿಸಿ ಬಿಡುತ್ತೇವೆ. ಆದರೆ ಪ್ರಪನ್ನನಿಗೆ ಮುಖ್ಯವಾಗಿ ಇತರರಿಂದುಂಟಾದ ಪರಿಭವಗಳಲ್ಲಿ ಕ್ಷಮಾಗುಣವಿರಬೇಕು. ಅದು ಇದ್ದರೇನೇ ಈತನಿಗೆ ಸ್ವನಿಷ್ಠಾಭಿಜ್ಞಾನ ಉಂಟೆಂದು ಹೇಳಬಹುದು; ಅಂತಹ ಸಂದರ್ಭ ಗಳಲ್ಲಿ ಈ ಪ್ರಪನ್ನನು ವಿಷಾದ, ಕ್ರೋಧಾದಿಗಳಿಗೆ ಆಸ್ಪದನಾಗದೆ, ಆತನ ಭಾವನೆಯು ಹೇಗಿರಬೇಕು? ಎಂದರೆ (೧) ನಮ್ಮಂತವರ ಪರಿಭವಾದಿಗಳಿಂದ ತನ್ನ ಆತ್ಮನಷ್ಟವನ್ನು ಮಾಡಿ

ಕೊಂಡು ಅನ್ಯಾಯವಾಗಿ ಭಗವನ್ನಿಗ್ರಹಕ್ಕೆ ಪಾತ್ರನಾಗಿ ಅನಿಷ್ಟಫಲವನ್ನು ಹೊಂದುವನೇ ಎಂಬ ಪರಿತಾಪವಿರಬೇಕು. (೨) ತನ್ನಲ್ಲೇನಾದರೂ ದೋಷಗಳಿತ್ತೋ ಏನೋ, ಅದನ್ನು ಜ್ಞಾಪಕಕ್ಕೆ ಕೊಟ್ಟನೆಂಬ ಸ್ಮರಣೆಯಿರಬೇಕು. (೩) ನನ್ನ ಪ್ರಾರಬ್ಧಾನುಗುಣವಾಗಿ ಈಶ್ವರ ಪ್ರೇರಿತನಾಗಿ ಈ ಅಲ್ಪಶಿಕ್ಷಾರೂಪ ಪರಿಭವವನ್ನು ಸರ್ವೇಶ್ವರನುಂಟುಮಾಡಿದನು, ಸ್ವಾಮಿಯು ಪರಮ ಕರುಣಾ ಶಾಲಿಯು ಎಂದು ಭಾವಿಸಿ ಮನಶ್ಶಾಂತತೆಯಿರಬೇಕು. (೪) **"ಶಪ್ಯಮಾನಸ್ಯ ಯತ್ಪಾಪಂ ಶಪನ್ತ ಮಧಿಗಚ್ಛತಿ"** (ಭಾರತವಾಕ್ಯವು) ಎಂದಿರುವದರಿಂದ ನನ್ನಲ್ಲಿರುವ ಪಾಪವನ್ನು ಆತನು ತೆಗೆದುಕೊಳ್ಳುವದಕ್ಕಾಗಿ ಹೀಗೆ ಬೈದಿದ್ದಾನೆ; ಆತನು ಆ ಕಾರಣದಿಂದ ಮಹೋಪಕಾರಿಯು ಎಂಬ ಭಾವನೆಯಿರತಕ್ಕದ್ದು. (೫) ಈ ಪ್ರಾರಬ್ಧವನ್ನು ಅನುಭವಿಸುವದಕ್ಕಾಗಿಯೂ ಈ ದೇಹ ವಾದುದರಿಂದ ಸರ್ವೇಶ್ವರನ ಕೃಪೆಯಿಂದ ಪ್ರಾರಬ್ಧಭಾಗವು ಈ ರೀತಿಯಲ್ಲಿ ಕಳೆದುಹೋಯಿತು ಎಂಬ ಮನಸ್ಸಮಾಧಾನವೂ ಇರತಕ್ಕದ್ದು. **ಶೀತೋಷ್ಣ ಸುಖದುಃಖಗಳಲ್ಲಿ ಸಮಭಾವವು** ಹೇಗೆ ಉಂಟಾಗುತ್ತದೆ ಎಂದರೆ, ಈ ಭೂಲೋಕಕ್ಕೆ ತಾನು ಬಂದಿರುವದು ಮುಂದಿನ ಅಮೋಘ ವಾದ ದುಃಖರಹಿತವಾದ ಶಾಶ್ವತವಾದ ಪದವಿಯನ್ನು ಸಂಪಾದಿಸುವದಕ್ಕಾಗಿ ಎಂದು ಭಾವಿಸಿ, ಆದುದರಿಂದ ತಾನು ಇಲ್ಲಿರುವದು ಅಲ್ಪಕಾಲವೇ, ಅಷ್ಟರಲ್ಲಿ **"ಕ್ವಚಿತ್ಪೃಥ್ವೀಶಯ್ಯಃ ಕ್ವಚಿದಪಿ ಚಪರ್ಯಙ್ಕಶಯನಃ ಕ್ವಚಿಚ್ಛಾಖಾಹಾರೀ ಕ್ವಚಿದಪಿಚ ಶಾಲ್ಯೋದನರುಚಿಃ"** ಎಂದು ಹೇಳಿ ರುವಹಾಗೆ ಸ್ವಾಮಿ ಅನುಗ್ರಹದಿಂದ ಬಂದುದು ಪೃಥ್ವೀಶಯ್ಯಾಯಾದರೇನು, ಪರ್ಯಙ್ಕಶಯನ ವಾದರೇನು ಶಾಖಾಹಾರವಾದರೇನು, ಶಾಲ್ಯೋದನ ಊಟ ಸಿಕ್ಕಿದರೇನು, ಹರಕು ಬಟ್ಟೆಯಾ ದರೇನು, ಪೀತಾಂಬರ ವಸ್ತ್ರಸಿಕ್ಕರೇನು? ನಾನು ಕಾರ್ಯಾರ್ಥಿಯು, **"ಮನಸ್ವೀಕಾರ್ಯಾರ್ಥೀ ನಗಣಯತಿ ದುಃಖಂ ನ ಚಸುಖಮ್"** ಎಂದು ಹೇಳಿರುವಹಾಗೆ ಇದು ಸುಖ ಇದು ದುಃಖ ವೆಂಬ ಭಾವವಿಲ್ಲದೆಯೇ ಇರುವೆನೆಂಬ ಭಾವವು. **ಸಙ್ಗವಿವರ್ಜಿತಃ** ಎಂಬಲ್ಲಿ ಕೆಲವು ಸಙ್ಗಗಳು ತಪ್ಪಿದ್ದಲ್ಲವು; ಪ್ರಥಮತಃ ದೇಹಯಾತ್ರೆಯು ನಡೆಯಬೇಕು; **ಕಳತ್ರಸುತ ಸೋದರಾದಿ**ಗಳ ಸಂಬಂಧವು ಸ್ವಾಮಿ ಸಙ್ಕಲ್ಪದಿಂದುಂಟಾಗಿರುತ್ತದೆ; ಹೇಗೆಲ್ಲಾ ಸಙ್ಗಗಳಿದ್ದರೂ ಅವುಗಳಿಗಾಗಿ ಎಷ್ಟುಮಾತ್ರ ಈತನ ಇತಿ ಕರ್ತವ್ಯತಾ ಉಂಟೋ, ಅಷ್ಟು ಮಾತ್ರ ಭಗವದರ್ಪಣವಾಗಿ ನಡೆಸಿ, ಅವುಗಳಲ್ಲಿ ಲಿಪ್ತನಾಗದೆ ವೈರಾಗ್ಯಭಾವದಿಂದಿರಬೇಕು. ಅದೂ ಅಲ್ಲದೆ, ತನಗೆ ಇತಿ ಕರ್ತವ್ಯ ತೆಯಿಲ್ಲದಿರುವ ವಿಷಯಗಳಲ್ಲಿ ಸಙ್ಗವನ್ನು ಹುಡುಕಿಕೊಂಡು ಹೋಗಬಾರದು; ಏಕೆಂದರೆ **ಸಙ್ಗೋಹಿ ಸಂಸೃತೇರ್ಹೇತು ರಸತ್ಸು ವಿಹಿತೋಽಧಿಯಾ"** ಎಂದು ಹೇಳಿರುವಹಾಗೆ ಅಜ್ಞಾನದಿಂದ ಅಸತ್ತುಗಳಲ್ಲಿ ಮಾಡಿದ ಸಙ್ಗವು ಸಂಸಾರಕ್ಕೆ ಹೇತುವಾಗುತ್ತದೆ; ಆನರೆ **ಸ ಏವ ಸಾಧುಷು ಕೃತೋ ನಿಸ್ಸಙ್ಗತ್ವಾಯ ಕಲ್ಪತೇ"** ಆ ಸಙ್ಗವೇ ಸಾಧು ವಿಷಯಗಳಲ್ಲೂ ಮತ್ತು ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದ ಯುಕ್ತರಾದ ಮಹಾನುಭಾವರುಗಳಲ್ಲೂ ಮಾಡಿದುದಾದರೆ, ಸಂಸಾರ ನಿವೃತ್ತಿಗೆ ಹೇತುವಾಗುತ್ತದೆ ಎಂದು ಭಾಗವತದಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂದ **ಸಙ್ಗವಿವರ್ಜಿತಃ** - ಪುನಸ್ಸಂಸಾರಕ್ಕೆ ಹೇತುವಾಗುವ ಸಙ್ಗದಿಂದ ವಿವರ್ಜಿತಃ ಎಂಬುದು ಅರ್ಥವು. ಮುಕ್ತಿಗೆ ಹೇತುವಾಗುವ ಸಙ್ಗವು ವ್ಯಾವರ್ತಿಸಲ್ಪಡಲಿಲ್ಲವು. ಮನೋ ವಿಕಾರಕ್ಕೆ ಕಾರಣವಿದ್ದರೂ ವಿಕಾರವಿಲ್ಲದಿರುವಂತಹ ಸಙ್ಗವಿವರ್ಜಿತವು ಶ್ಲಾಘನೀಯವು. ಕೀಚಕ ಸನ್ನಿ ಕರ್ಷದಲ್ಲೂ ದ್ರೌಪದಿಯ ಶೀಲವು ಶ್ಲಾಘನೀಯವಾದುದು. ಇಂತಹ ಮನಸ್ಥೈರ್ಯವು ಋಷ್ಯ ಶೃಂಗರಿಗೂ ವಿಶ್ವಾಮಿತ್ರ ವ್ಯಾಸಾದಿಗಳಿಗೂ ಇಲ್ಲವಾಯಿತು. **ತುಲ್ಯನಿಂದಾಸ್ತುತಿಃ** - ನಿಂದಾ ಸ್ತುತಿಗಳೆರಡರಲ್ಲೂ ಏಕಭಾವನೆಯುಳ್ಳವನಾಗಿ, ಎಂದರೆ ಸನ್ಮಾನಕ್ಕೇ ಆಗಲಿ ನಿಂದೆಗೇ ಆಗಲಿ ತಾನು ಮಾತ್ರವೇ ಕಾರಣನಲ್ಲವು, ಪ್ರಾರಬ್ಧಾನುಗುಣವಾಗಿ ಸ್ವಾಮಿ ಸಙ್ಕಲ್ಪಕ್ಕಧೀನವಾಗಿ

**ಭಾ. (೧) ಅದ್ವೇಷ್ಟಾ ಸರ್ವಭೂತಾನಾಂ" ಇತ್ಯಾದಿನಾ, ಶತ್ರುಮಿತ್ರಾದಿಷು ದ್ವೇಷಾದಿ ರಹಿತತ್ವಮುಕ್ತಮ್; ಅತ್ರ ತೇಷು ಸನ್ನಿಹಿತೇಷ್ವಪಿ ಸಮಚಿತ್ತತ್ವಂ ತತೋ ವ್ಯತಿ ರಿಕ್ತೋ ವಿಶೇಷ ಉಚ್ಯತೇ; ಆತ್ಮನಿ ಸ್ಥಿರಮತಿತ್ವೇನ ನಿಕೇತನಾದಿ ಷ್ವಸಕ್ತ ಇತ್ಯ**

ಎಲ್ಲವೂ ನಡೆಯುತ್ತದೆ; ಇದಕ್ಕೆ ತಾನು ಪರಿತಾಪ ಪಡುವದು ವ್ಯರ್ಥವೂ ಎಂಬ ಜ್ಞಾನವಿದ್ದು ದಾದರೆ, ಎರಡರಿಂದಲೂ ಈತನ ಮನಸ್ಸು ವಿಕಾರವನ್ನು ಹೊಂದುವದಿಲ್ಲವು. ಸ್ತುತಿಯಿಂದ ಹರ್ಷವೂ, ನಿಂದೆಯಿಂದ ಖೇದವೂ ಪ್ರಾಪ್ತವಾಗುವದಿಲ್ಲವು. ಈಗ ನಾವು ಬರೆಯುವ ಭಾಷ್ಯವು ಸರಿಯಲ್ಲವೆಂದು ಕೆಲವರು ನಿಂದಿಸಬಹುದು, ಬಹು ಶ್ಲಾಘ್ಯವಾಗಿದೆ ಎಂದು ಕೆಲವರು ಸ್ತೋತ್ರ ಮಾಡಬಹುದು, ಸರ್ವೇಶ್ವರನಿಗೆ ದಾಸಭೂತನಾಗಿ ಅವನು ದಯಪಾಲಿಸಿದ ಶಾಸ್ತ್ರಜನ್ಯಜ್ಞಾನ, ವಿವೇಕಜನ್ಯ ಜ್ಞಾನಗಳ ಮೂಲಕ ಅವನೇ ನಿಂತು ಬರೆಸುವನಾದುದರಿಂದ ನಿಂದೆಯಿಂದ ಖೇದ ವಿಲ್ಲವು, ಶ್ಲಾಘನೆಯಿಂದ ಹರ್ಷವಿಲ್ಲವು; ಹೀಗೆ ಭಾವನೆಯನ್ನು ಹೊಂದಿರುವನೇ **ತುಲ್ಯನಿಂದಾ ಸ್ತುತಿ**ಯಾಗುವನು. ಹೀಗೆಲ್ಲಾ ಭಾವನೆಯಿಂದ ಕೂಡಿದ್ದರೆ **ಸ್ಥಿರಮತಿ**ಯಾಗುವನು, ಪರಮಾತ್ಮ ನಲ್ಲೇ ಇಡಲ್ಪಟ್ಟ ಬುದ್ಧಿಯುಳ್ಳವನಾಗುವನು, ಇಂತಹ ಕರ್ಮಯೋಗನಿಷ್ಠೆಯಿರುವ **ಭಕ್ತಿಮಾನ್** - ಭಕ್ತಿಯೋಗನಿಷ್ಠನು ಎಂದರೆ ಉಪಾಸಕನು ಯಾರೋ, ಅವನು ನನಗೆ ಪ್ರಿಯ ನಾಗುವದರಿಂದ ಅವನಿಗೆ ಅನುಗ್ರಹವೆಂಬುದು ಸಿದ್ಧವು.

**ಭಾಷ್ಯಾರ್ಥವು** :—ಈ ಎರಡು ಶ್ಲೋಕಗಳಲ್ಲೂ ಚಿತ್ತಬುದ್ಧಿಗಳ ಸಮಭಾವವು ನಾನಾ ವಿಧಾವಸ್ಥೆಗಳಲ್ಲೂ ಇರಬೇಕೆಂದುಪದೇಶಿಸಿ, ಇಂತಹ ಮನೋಬುದ್ಧಿಗಳ ಸ್ಥೈರ್ಯದಿಂದ ಕೂಡಿದ ಶಾಂತತೆಯು ಉಪಾಸನೆಗೆ ಅತ್ಯಾವಶ್ಯಕವೆಂದುಪದೇಶಿಸಿ ಅಂತವನೇ **ಮಯ್ಯರ್ಪಿತ ಮನೋ ಬುದ್ಧಿ**ಯಾಗುವದರ ಮೂಲಕ, ಉಪಾಸನೆಯ ಕೊನೆಯನ್ನು ಕಂಡು, ನನ್ನ ಅನುಗ್ರಹಕ್ಕೆ ಪಾತ್ರನಾಗುವನೆಂಬ ಅಮೋಘವಾದ ಉಪದೇಶವನ್ನು ಮಾಡುತ್ತಾರೆ. ಪುನರುಕ್ತಿದೋಷವನ್ನು ಕೆಲವರು ಆರೋಪಿಸಬಹುದೆಂದು ಭಾವಿಸಿ ಅದನ್ನು ಪರಿಹರಿಸುತ್ತಾರೆ.—**"ಅದ್ವೇಷ್ಟಾ ಸರ್ವಭೂ ತಾನಾಂ," ಇತ್ಯಾದಿನಾ** -"ಎಂಬುದರಿಂದ **ಶತ್ರು ಮಿತ್ರಾದಿಷು** - ಶತ್ರು ಮಿತ್ರರೇ ಮೊದಲಾ ದವರಲ್ಲಿ, **ದ್ವೇಷಾದಿ ರಹಿತತ್ವಂ** - ದ್ವೇಷವೇ ಮೊದಲಾದವುಗಳ, ಈ ಮೊದಲಾದವು ಎಂಬುದ ರಿಂದ ಕ್ರೋಧ, ಕಲಹಗಳೂ, ವಿಶೇಷ ಸ್ನೇಹಾದಿಗಳು ಹೇಳಲ್ಪಟ್ಟವು, ಇವುಗಳಿಲ್ಲದಿರೋಣವು, **ಉಕ್ತಂ** - ಹೇಳಲ್ಪಟ್ಟಿತು, **ಅತ್ರ** - ಈ ಸಂದರ್ಭದಲ್ಲಾದರೋ ಎಂದರೆ **ಸಮಶ್ಶತ್ರೌಚ ಮಿತ್ರೇಚ** ಎಂಬಲ್ಲಿಯಾದರೋ, **ತೇಷು ಸನ್ನಿಹಿತೇಷ್ವಪಿ** - ಆ ಶತ್ರುಮಿತ್ರರು ಎದುರಿಗೇ ಇದ್ದರೂ ಕೂಡ, **ಸಮ ಚಿತ್ತತ್ವಂ** - ವಿಕಾರವಿಲ್ಲದೆ ಶಾಂತವಾಗಿರುವ ಮನಸ್ಸಿನ ಸಮಭಾವವು, **ತತೋವ್ಯತಿರಿಕ್ತೋ ವಿಶೇಷಃ** - ಅಲ್ಲಿ ಹೇಳಿದುದಕ್ಕಿಂತಲೂ ಉತ್ಕೃಷ್ಟವಾದ ಮನಸ್ಸಿನ ಭಾವ ವಿಶೇಷವು, **ಉಚ್ಯತೇ** - ಹೇಳಲ್ಪಡುತ್ತದೆ. ಮುಂದೆ ಹೇಳುವ ಮಾನಾವಮಾನ, ಶೀತೋಷ್ಣ, ಸುಖದುಃಖ ಮೊದಲಾದವುಗಳೂ ಸನ್ನಿಹಿತವಾದವುಗಳೇ ಬೋಧಿಸಲ್ಪಡುವದರಿಂದ, ಶತ್ರು ಮಿತ್ರರ ವಿಷಯವೂ ಸಹ ಸನ್ನಿಹಿತ ವಿಷಯವೆಂದೇ ಭಾವಿಸತಕ್ಕದ್ದೆಂಬ ವ್ಯಾಖ್ಯಾನವು. ಮನೋ ಬುದ್ಧಿಗಳ ವಿಕಾರಕ್ಕೆ ಅವುಗಳನ್ನುಂಟುಮಾಡುವ ಕಾರಣಗಳು ಸನ್ನಿಹಿತವಾಗಿದ್ದರ ಲ್ಲವೇ ಅತಿಶಯವು, ಅಂತಹ ಸಂದರ್ಭದಲ್ಲೂ ಅವುಗಳ ಶಾಂತತೆಯು ಇದ್ದಪಕ್ಷದಲ್ಲಿ ತುಂಬಾ ಶ್ಲಾಘನೀಯವೆಂಬಭಿಪ್ರಾಯದಿಂದ **ತತೋವ್ಯತಿರಿಕ್ತ ವಿಶೇಷವೆಂದು** ವ್ಯಾಖ್ಯಾನ ಮಾಡಲ್ಪ ಟ್ಟಿತು. ಪರಪುರುಷನ ವಂಚನೆಗೆ ಸಿಕ್ಕಿದ್ದರೂ ಸಾಧ್ವಿಯು ತನ್ನ ಪತಿವ್ರತಾಧರ್ಮವನ್ನು ಕಾಪಾಡಿ

(೧) ಗೀ. ೧೨-೧೩

**ಭಾ. ನಿಕೇತಃ ; ತತ ಏವ ಮಾನಾವಮಾನಾದಿಷ್ವಪಿ ಸಮಃ ; ಯ ಏವಂ ಭೂತೋ ಭಕ್ತಿಮಾರ್ಗ, ಸ ಮೇ ಪ್ರಿಯಃ ||೧೮, ೧೯||**

ಕೊಳ್ಳುವದೂ, ಇತರರ ದ್ರವ್ಯವೂ ತನಗೆ ಸುಲಭವಾಗಿ ಸಿಕ್ಕಿದ್ದರೂ ಅದನ್ನು ಅಪಹರಿಸದಿರುವದೂ ಶ್ಲಾಘನೀಯವಾದವುಗಳಲ್ಲವೇ ? ಎಂಬ ತಾತ್ಪರ್ಯವು. ಇಲ್ಲಿ ಶ್ರೀ ಯತಿವರ್ಯರು **"ತತೋಽಪ್ಯತಿರಿಕ್ತವಿಶೇಷ"**ವೆಂಬ ಪ್ರಯೋಗದಿಂದ ೧೩-೧೪ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟ ಅವಸ್ಥೆಗಿಂತ ಉತ್ತರೋತ್ತರ ಶ್ಲೋಕಗಳಲ್ಲಿ ಹೇಳಲ್ಪಟ್ಟವು ಶ್ಲಾಘ್ಯತರವಾದುದೆಂದೂ, ಕರ್ಮಯೋಗವು ಸಿದ್ಧಿಸುತ್ತಾ ಬರುವದರ ಉಪಪಾದನೆಯೆಂದೂ, ಸುಲಭವಾಗಿ ಗ್ರಹಿಸಬಹುದು. ಶೀತೋಷ್ಣ ಮೊದಲಾದವುಗಳು ದೂರದಲ್ಲಿರುವಾಗ ಸಮಭಾವದಿಂದಿರಬೇಕೆಂಬ ಭಾವನೆಗಿಂತಲೂ, ಅವುಗಳ ಸಾನ್ನಿಧ್ಯ ಉಂಟಾದಾಗ ಅಂತಹ ಭಾವನೆಯು ಶ್ಲಾಘ್ಯತರವು. ಹೀಗೆಯೇ ಇತರ ಸಂದರ್ಭದಲ್ಲೂ ಊಹಿಸತಕ್ಕದ್ದೆಂಬ ಭಾವದಿಂದ ಅವುಗಳಿಗೆ ವ್ಯಾಖ್ಯಾನವನ್ನು ದಯಪಾಲಿಸಲಿಲ್ಲವಾಗಿ ತೋರುತ್ತದೆ. ಇಲ್ಲಿ **ಮೌನೀ** ಎಂಬುದರಿಂದ ಮನನವನ್ನು ಹೇಳಬೇಕಾದುದಿಲ್ಲವು, ಏಂಂದರೆ **ಸ್ಥಿರಮತಿಃ** ಎಂಬುದರಿಂದ ಆತನಲ್ಲೇ ಇಡಲ್ಪಟ್ಟ ಮನಸ್ಸು ಬುದ್ಧಿಯುಳ್ಳವನಾಗುವದರಿಂದ, ಮನನ ಶೀಲತ್ವವು ಹೇಳಿದಂತೇಯಾಯಿತು, ಮುನಿಯ ಭಾವವನ್ನು ಹೊಂದಿದವನು ಮೌನೀ ಎಂದು ಅರ್ಥಮಾಡುವದು ಇಲ್ಲಿಗೆ ಸರಿಯಲ್ಲವು. **ಮೌನೀ** ಎಂದರೆ **ಮೂಕಃ**-ಮಾತನಾಡದೇ ಇರುವವನೆಂದು ಅರ್ಥಮಾಡುವದು ಪರಸ್ಪರಬೋಧೆ ಸತತ ಕೀರ್ತನೆ ಮೊದಲಾದವುಗಳಿರಬೇಕೆಂದು ಹೇಳಿದ ಉಪದೇಶಕ್ಕೆ ವಿರುದ್ಧವಾಗುತ್ತದೆ. ಕಾಲ ವಿಶೇಷಗಳಲ್ಲಿ ಮೌನವ್ರತವನ್ನವಲಂಬಿಸತಕ್ಕದ್ದೆಂದೇ ಅರ್ಥಮಾಡಬಹುದು, ಆದರೆ ಆ ಅರ್ಥವು ಯುಕ್ತವಾದರೂ ಪೂರ್ವೋತ್ತರಹೇಳಿದವುಗಳಿಗೆ ಸಙ್ಗತಿಯು ಏರ್ಪಡುವದಿಲ್ಲವು. ಲೋಕದಲ್ಲಿ ನಿಂದಿಸುವರನ್ನು ನಿಂದಿಸುವರು, ಸ್ತೋತ್ರಮಾಡಿದವರನ್ನು ಸ್ತೋತ್ರಮಾಡುವರು, ಆಕಾರಣದಿಂದ **ತುಲ್ಯನಿಂದಾಸ್ತುತಿಯು** ಹೇಗೆ ಎಂದರೆ ಆ ಸಂದರ್ಭಗಳಲ್ಲಿ **ಮೌನಿ**ಯಾಗಿರುವದೇ ; ಎರಡಕ್ಕೂ ಮನಸ್ಸನ್ನು ಕೊಡದೇ ಸುಮ್ಮನಿರುವದು ಎಂದು ಅರ್ಥವನ್ನು ಮಾಡಬಹುದು. **ಸಂತುಷ್ಟೋ ಯೇನ ಕೇನಚಿತ್** ಎಂಬುದು ಹಿಂದೆ **ಸಂತುಷ್ಟ ಸ್ಸತತಂ ಯೋಗೀ** ಎಂದು ೧೪ನೆಯ ಶ್ಲೋಕದಲ್ಲಿ ಹೇಳಿರುವದರೊಂದಿಗೆ ಪುನರುಕ್ತಿವಾರಣೆಗಾಗಿ, **ತುಲ್ಯನಿಂದಾಸ್ತುತಿಯೊಂದಿಗೇನೆ ಸಂತುಷ್ಟೋಯೇನ ಕೇನಚಿತ್** ಎಂಬುದನ್ನೂ ಅನ್ವಯಿಸಬಹುದು. ನಿಂದಾಸ್ತುತಿ ಎರಡಕ್ಕೂ ಮನಸ್ಸನ್ನು ಕೊಡದೆ ಇರತಕ್ಕದ್ದು, ಅದು ಹೇಗೆಂದರೆ **ಸಂತುಷ್ಟೋಯೇನ ಕೇನಚಿತ್**-ನಿಂದೆಯೋ ಸ್ತುತಿಯೋ ಯಾವುದು ಉಂಟಾದರೂ, ಅದರಿಂದಲೇ ತೃಪ್ತನಾಗಿರುವದೇ ಮೌನಿಯಾಗಿರೋಣವು ಎಂಬ ತಾತ್ಪರ್ಯವು. ಅಥವಾ **ಯದೃಚ್ಛಾ ಲಾಭಸಂತುಷ್ಟಃ** ಎಂಬಲ್ಲಿ ಹೇಳಿರುವಹಾಗೆ, ಸ್ವಾಮಿಯಿಂದ ಅನುಗ್ರಹಿಸಲ್ಪಟ್ಟದುದರಲ್ಲಿ ತೃಪ್ತನಾಗಿ, **ಆತ್ಮನಿ ಸ್ಥಿರಮತಿತ್ವೇನ** - ಆತ್ಮಾವಲೋಕನದಲ್ಲೇ ಸ್ಥಿರವಾದ ಬುದ್ಧಿ ಇರೋಣದರಿಂದ, **ನಿಕೇತನಾದಿಷು** - ಮನೆ ಮೊದಲಾದವುಗಳಲ್ಲಿ, **ಅಸಕ್ತಃ** - ಸಙ್ಗರಹಿತನಾದವನು ಯಾರೋ, **ಇತಿ ಅನಿಕೇತಃ** - ಆತನು ಅನಿಕೇತನೆಂದು ಹೇಳಿಸಿಕೊಳ್ಳುವನು, ಇಲ್ಲಿ ತತ್ಸಂಬಂಧ ಫಲಗಳು ಕ್ಷಣಿಕಗಳಾದುದರಿಂದ ಇವು ಆದಿಶಬ್ದ ಪ್ರಯೋಗವು, ಇಲ್ಲಿ **ಅನಿಕೇತಃ** ಎಂದು ಹೇಳಿರುವದರಿಂದ ಸನ್ಯಾಸಿಗೆ ಮನೆಯಿಲ್ಲದೆ ಮೂರು ದಿನಗಳಿಗಿಂತ ಹೆಚ್ಚಾಗಿ ಒಂದು ಸ್ಥಳದಲ್ಲಿರಕೂಡದೆಂಬ ವಿಧಿ ಇರುವದರಿಂದ, ಇದು ಸನ್ಯಾಸಿಯ ವಿಷಯವೆಂದು ಅಭಿಪ್ರಾಯಪಡುವದು ಯುಕ್ತವಲ್ಲವು ; ವೈರಾಗ್ಯವಿರುವ ಮೋಕ್ಷಾರ್ಥಿಯೂ ಗೃಹಸ್ಥನಾಗಿದ್ದರೂ ಮನೆಯ ಸಂಬಂಧ ವಿಷಯಗಳಿಂದ ದೂರೀಕೃತನಾಗಿರುವದು ಆವಶ್ಯಕವು. ಗೃಹಸ್ಥರಾದ

**ಭಾ. ಅವ. ಅಸ್ಮಾದಾತ್ಮನಿಷ್ಠಾದ್ಭಕ್ತಿಯೋಗನಿಷ್ಠಸ್ಯ ಶ್ರೈಷ್ಠ್ಯಮ್ ಪ್ರತಿಪಾದಯನ್ ಯಥೋಪಕ್ರಮ ಮುಪಸಂಹರತಿ—**

ರಾಜರೂ, ರಾಜ್ಯವನ್ನು ತಮ್ಮ ಮಕ್ಕಳಲ್ಲಿ ಒಪ್ಪಿಸಿಬಿಟ್ಟು, ಅರಣ್ಯಕ್ಕೆ ಹೋಗಿ ವೈರಾಗ್ಯದಿಂದ ಉಪಾಯಾನುಷ್ಠಾನವನ್ನು ಮಾಡಿ ಮುಕ್ತಿಯನ್ನು ಹೊಂದಿದರೆಂದು, ಇತಿಹಾಸಗಳಲ್ಲಿ ಉಪಪಾದಿತವು. ಇಕ್ಷ್ವಾಕು ವಂಶೀಯರ ಚರಿತ್ರೆಯನ್ನು ಬರೆಯಲು ಮಾಹಾತ್ಮ್ಯ ಏನು ಎಂದು ಹೇಳುವ ಸಂದರ್ಭದಲ್ಲಿ, ಈ ಗೃಹಸ್ಥರಾದ ರಾಜರು **"ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ"** (ರಘುವಂಶ ಪ್ರಥಮಸರ್ಗವು) ಅರಮನೆ ರಾಜ್ಯ ಮೊದಲಾದವುಗಳಲ್ಲಿ ಸಂಬಂಧವನ್ನು ತ್ಯಜಿಸಿ, ಭಕ್ತಿಯೋಗದಿಂದ ಮುಕ್ತಿಯನ್ನು ಹೊಂದಿರುತ್ತಾರೆಂದು ಕವಿಶ್ರೇಷ್ಠನು ಶ್ಲಾಘಿಸಿರುತ್ತಾನೆ. ಮನೆಯನ್ನು ಬಿಟ್ಟು ಹೋಗುವದರಲ್ಲೂ, ಕಾವಿಶಾಟಿ, ತ್ರಿದಂಡ, ಕಮಂಡಲುಗಳ ಧಾರಣೆಯಲ್ಲೂ ವೈರಾಗ್ಯವಿರುವದಿಲ್ಲವು. ಮನೋಬುದ್ಧಿಗಳ ಮೂಲಕ ವೈರಾಗ್ಯವುಂಟಾಗತಕ್ಕದ್ದಾದುದರಿಂದ, ಮನೆಯಲ್ಲಿದ್ದುಕೊಂಡೇ ಮನೆಯ ಸಂಬಂಧಗಳಲ್ಲಿ ಲಿಪ್ತನಾಗದೆ ವೈರಾಗ್ಯಭಾವದಿಂದಿರಬಹುದೆಂದು ಸೂಚಿಸುವದಕ್ಕಾಗಿ, **ನಿಕೇತನಾದಿಷು ಅಸಕ್ತಃ** - ಎಂಬ ವ್ಯಾಖ್ಯಾನವು ಹೀಗೆ ಗೃಹಸ್ಥಾಶ್ರಮದಲ್ಲೇ ಇದ್ದುಕೊಂಡೇ ನಿರ್ಲಿಪ್ತರಾಗಿ ಪರಮಪ್ರೀಯನ್ನನ್ನು ಸಾಧಿಸಿಕೊಳ್ಳಬಹುದೆಂಬ ಭಾವವನ್ನು ಮನಸ್ಸಿನಲ್ಲಿಟ್ಟೇ ಮೋಕ್ಷಧರ್ಮದಲ್ಲಿ ಗೃಹಸ್ಥಾಶ್ರಮವು ಮಹತ್ತಾದ ಆಶ್ರಮವೆಂದು ಕೊಂಡಾಡಲ್ಪಟ್ಟಿರುತ್ತದೆ. ವಿಭೀಷಣನು ಶರಣಾಗತಿಯನ್ನನುಷ್ಠಿಸುವಾಗ **"ಪರಿತ್ಯಕ್ತಾ ಮಯಾಲಂಕಾ ಮಿತ್ರಾಣಿ ಚ ಧನಾನಿವೈ"** ಎಂದು ಪರಮ ವೈರಾಗ್ಯವನ್ನು ಪ್ರದರ್ಶಿಸಿದುದುರಿಂದ ಈತನು ಲಂಕಾರಾಜ್ಯಾಧಿಪತಿಯಾಗಿಯೇ ಇದ್ದರೂ ಈತನಲ್ಲಿ ವೈರಾಗ್ಯ ಉಂಟೆಂದು ಭಾವಿಸಿ, ಲಕ್ಷ್ಮಣನನ್ನು ಕರೆದು. **"ಸಮುದ್ರಾಜ್ಜಲಮಾನಯ! ತೇನ ಚೇಮಂ ಮಹಾಪ್ರಾಜ್ಞಂ ಅಭಿಷಿಂಚ ವಿಭೀಷಣಂ"** ಎಂದು ಹೇಳಿ ಲಂಕಾರಾಜ್ಯದಪಟ್ಟಾಭಿಷೇಕವನ್ನು ಮಾಡಿಸಿದನು. ಪರಮವೈರಾಗ್ಯನಿಧಿಗಳಾದ ಶ್ರೀ ದೇಶಿಕರು ಯತ್ಯಾಶ್ರಮವನ್ನು ಅವಲಂಬಿಸಲಿಲ್ಲವು. ಆದುದರಿಂದ **"ಅದ್ವೇಷ್ಟಾ"** ಎಂದು ಆರಂಬಿಸಿ ಹೇಳಿದುವೆಲ್ಲಾ ಅಕ್ಷರೋಪಾಸಕನಾದ ಸನ್ಯಾಸಿಯನ್ನು ಕುರಿತು ಹೇಳಿದುದು ಎಂಬ ಕೆಲವರ ಅಭಿಪ್ರಾಯಕ್ಕೆ ಆಧಾರವೇ ಇಲ್ಲವು. ಸನ್ಯಾಸಿಗಳೂ ಗೃಹಸ್ಥರೂ ಸಹ ಬ್ರಹ್ಮವಿದ್ಯೆಯಲ್ಲಿ ಸಮವಾಗಿ ಅಧಿಕಾರಿಗಳೆಂಬುದು ಉಪನಿಷತ್ತು ಮತ್ತು ಸೂತ್ರಾಭಿಪ್ರಾಯವು. || ೧೮, ೧೯ ||

**ಭಾಷ್ಯಾವತಾರಿಕೆಗೆ ಅರ್ಥವು** :—೧೧ ನೆಯ ಅಧ್ಯಾಯಾಂತ್ಯದಲ್ಲಿ ಶ್ರೀ ಕೃಷ್ಣಭಗವಾನರವರು ಹೇಳಿದುದೇನೆಂದರೆ, ನನ್ನ ಪ್ರಾಪ್ತಿಯು ಲಭಿಸಬೇಕಾದರೆ (೧) ಭಕ್ತಿಯೋಗನಿಷ್ಠನಾಗಿ ನನ್ನನ್ನು ಉಪಾಸಿಸಬೇಕು, (೨) ಅದರಿಂದ ನಾನು ಪ್ರೀತನಾಗಬೇಕು. ಹೀಗೆ ಎರಡೂ ಸೇರಿದರೇನೆ ನನ್ನ ಪ್ರಾಪ್ತಿಯು ಎಂದು ಹೇಳಿದರು. ಸ್ವಾಮಿಯು ಪ್ರೀತನಾಗುವದು ಸುಲಭವಲ್ಲವೇ ಎಂದು ಶಙ್ಕಿಸಿ, ಹಿಂದೆ ಪ್ರತ್ಯಗಾತ್ಮೋಪಾಸಕನಾದ ಜಿಜ್ಞಾಸುವಿಗೂ ಪುನರಾವೃತ್ತಿಯಿಲ್ಲದ ಮೋಕ್ಷವೆಂದು ಉಪದೇಶಿಸಿದುದನ್ನು ಸ್ಮರಿಸಿದವನಾಗಿ, ಜಿಜ್ಞಾಸುವಿನ ಭಕ್ತಿಯೋಗ ನಿಷ್ಠೆಯು ಉತ್ತಮವೋ, ನಿನ್ನನ್ನು ಉಪಾಸಿಸುವ ಜ್ಞಾನಿಯ ಭಕ್ತಿಯೋಗನಿಷ್ಠೆಯು ಉತ್ತಮವೋ, ಎಂದು ಅರ್ಜುನನು ಈ ಅಧ್ಯಾಯದ ಪ್ರಥಮ ಶ್ಲೋಕದಲ್ಲಿ ಪ್ರಶ್ನಿಸಿದನು ; ಇದಕ್ಕೆ ಉತ್ತರವನ್ನು ಎರಡನೆಯ ಶ್ಲೋಕದಲ್ಲೇ ಪ್ರತಿಜ್ಞಾ ವಾಕ್ಯರೂಪದಲ್ಲಿ ಜ್ಞಾನಿಯಾಗಿ ನನ್ನಲ್ಲೇ ಮನಸ್ಸನ್ನಿಟ್ಟು ನನ್ನ ನಿತ್ಯ ಯೋಗವನ್ನು ಅಪೇಕ್ಷಿಸುತ್ತಾ, ಶ್ರದ್ಧೆಯಿಂದ ನನ್ನನ್ನೇ ಯಾರು ಉಪಾಸಿಸುತ್ತಾರೋ, ಅವರೇ ಸುಕರವಾಗಿ ಶೀಘ್ರವಾಗಿ ನನ್ನ ಪ್ರೀತಿಗೆ ಪಾತ್ರರಾಗಿ ನನ್ನನ್ನು ಹೊಂದುವದರಿಂದ, ಜ್ಞಾನಿಯ ಭಕ್ತಿಯೋಗನಿಷ್ಠೆಯೇ ಉತ್ತಮವೆಂದು ಹೇಳಿದನು. ಅನಂತರ ಈ ಪ್ರತಿಜ್ಞಾವಾಕ್ಯದ

**ಮೂ. ಯೇತು ಧರ್ಮ್ಯಾಮೃತ ಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾ ಸ್ತೇ ತೀವ ಮೇ ಪ್ರಿಯಾಃ ॥ ೨೦.**

**ಓಂತತ್ಸದಿತಿ ಶ್ರೀಮದ್ಭಗವದ್ಗೀತಾಸೂ ಪನಿಷತ್ಸು ಪರಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭಕ್ತಿಯೋಗೋನಾಮ ದ್ವಾದಶೋಽಧ್ಯಾಯಃ**
**ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ**

---

ಉಪಪಾದನೆಗಾಗಿಯೇ ಈ ಅಧ್ಯಾಯೋದ್ದೇಶ್ಯವು; ಈ ಉಪಪಾದನೆಯಲ್ಲಿ ಮೂರು ಶ್ಲೋಕಗಳಿಂದ ಜಿಜ್ಞಾಸುವಿನ ಅಕ್ಷರೋಪಾಸನೆಯು **ಕ್ಲೇಶೋಧಿಕತರ** ವೆಂದು ನಿಂದಿಸಲ್ಪಟ್ಟಿತು. ಅನಂತರ ಮೂರು ಶ್ಲೋಕಗಳಿಂದ ನನ್ನ ಉಪಾಸನೆಯೇ ಸುಕರವಾಗಿ ಸುಲಭವಾಗಿ ಕ್ಲೇಶವಿಲ್ಲ ಮವೆಂದು ಹೇಳಿದರು. ಅನಂತರ ನಾಲ್ಕು ಶ್ಲೋಕಗಳಿಂದ ಅದನ್ನು ಸಾಧಿಸುವದೇನೂ ಕಷ್ಟ ವಿಲ್ಲವು; ಉಪಾಸನಾಭ್ಯಾಸಮಾಡುತ್ತಾ ಬಂದರೇ ಸಿದ್ಧಿಸುತ್ತದೆಂದು ಹೇಳಿ, ಅದಕ್ಕೂ ಶಕ್ತಿ ಇಲ್ಲ ದಿದ್ದರೆ ವಿಶೇಷ ಪ್ರೀತಿಯಿಂದ ನನಗೆ ಆಲಯನಿರ್ಮಾಣ ದೀಪಾರೋಪಣಾದಿ ನನಗೆ ಪ್ರಿಯವಾದ ಕರ್ಮಗಳನ್ನು ಮಾಡಿದರೆ, ಅಭ್ಯಾಸವು ಕೈಗೂಡಿ ಚಿತ್ತ ಸಮಾಧಾನವು ಲಭಿಸುತ್ತದೆಂದು ಹೇಳಿದರು ಇದಕ್ಕೂ ನೀನು ಅಸಮರ್ಥನಾದರೆ ನಾನು ಪೂರ್ವ ಷಟ್ಕದಲ್ಲಿ ಉಪದೇಶಿಸಿದ ನಿಷ್ಕಾಮ ರೂಪವಾದ ಆಜ್ಞಾನುಜ್ಞಾ ಕೈಂಕರ್ಯಗಳನ್ನು ಮಾಡಿ ನನ್ನಲ್ಲೇ ಸಮರ್ಪಿಸಿದರೆ ಭಕ್ತಿಯೋಗಾ ರಂಭಕ್ಕೆ ಪ್ರತಿಬಂಧಕಗಳಾಗಿದ್ದ ಪಾಪಗಳು ತೊಲಗಿ, ಭಕ್ತಿಯೋಗವು ಅಂಕುರಿಸಬೇಕಾದ **ಚಿತ್ತ** ಸ್ವಾಸ್ಥ್ಯವು ನನ್ನ ಕೃಪಯಾಲಭಿಸುತ್ತದೆಂದು ಹೇಳುತ್ತಾ, ಎಲ್ಲಕ್ಕಿಂತಲೂ ಚಿತ್ತೈಕಾಗ್ರತೆಗೆ ಸುಲಭ ಸಾಧನವು, ಫಲಾಭಿ ಸಂಧಿರಹಿತ ಕರ್ಮಯೋಗನಿಷ್ಠೆಯಿಂದ ಕೂಡಿದ ಉಪಾಸನವೇ ಸುಕರವಾಗಿ ಶೀಘ್ರವಾಗಿ ಫಲಕಾರಿಯೆಂದು ಸ್ಥಾಪಿಸಿ, ಅದರಿಂದಲೇ ತಾನು ಸುಪ್ರೀತನಾಗುವ ನೆಂದು ಈ ಅಧ್ಯಾಯದಲ್ಲಿ ಹೇಳತಕ್ಕದ್ದನ್ನು ಹೇಳಿದರು. ಈಗ ಮೊದಲು ಮಾಡಿದ ಪ್ರತಿಜ್ಞಾ ವಾಕ್ಯವನ್ನೇ ಸಮರ್ಥಿಸಿ ನಿಗಮನ ಮಾಡಬೇಕಾದುದು ಆವಶ್ಯಕವಾದುದರಿಂದ, ಓ ಅರ್ಜುನನೇ ಇಷ್ಟೆಲ್ಲಾ ನಿನಗೆ ಈ ಅಧ್ಯಾಯದಲ್ಲಿ ಉಪದೇಶಿಸಿದ ಸಾರಾಂಶವು, ನಿನಗೆ ಹಿಂದೆ ಎರಡನೆಯ ಶ್ಲೋಕದಲ್ಲೇ ತಿಳಿಸಿದ ಹಾಗೆ, ಜಿಜ್ಞಾಸುವಿನ ಬ್ರಹ್ಮವಿದ್ಯೆಯಾದ ಅಕ್ಷರೋಪಾಸನೆಗಿಂತ, ಜ್ಞಾನಿ ಯಾಗಿ, ಯಾವ ಭಕ್ತಿಯೋಗನಿಷ್ಠನು ಮನೋ ಬುದ್ಧಿಗಳನ್ನು ನನ್ನಲ್ಲಿಟ್ಟು ಶ್ರದ್ಧೆಯಿಂದ ನನ್ನನ್ನೇ ಉಪಾಸಿಸುತ್ತಾನೋ, ಆತನೇ ನನಗೆ ಅತ್ಯಂತ ಪ್ರಿಯನಾಗಿ ನನ್ನ ಅನುಗ್ರಹಕ್ಕೆ ಪಾತ್ರನಾಗುವ ನೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ.— **ಅಸ್ಮಾದಾತ್ಮನಿಷ್ಠಾತ್** - ಜಿಜ್ಞಾಸುವಿನ ಅಕ್ಷರೋಪಾಸಕನಕ್ಕಿಂತಲೂ, **ಭಕ್ತಿಯೋಗ ನಿಷ್ಠಸ್ಯ ಶ್ರೈಷ್ಠ್ಯಮ್ ಪ್ರತಿಪಾದಯನ್** - ಈ ಅಧ್ಯಾಯದಲ್ಲಿ ಜ್ಞಾನಿಯಾದ ಭಕ್ತಿಯೋಗ ನಿಷ್ಠನ ಶ್ರೇಷ್ಠತೆಯನ್ನು ಸಮರ್ಥಿಸಿ ಹೇಳಿದವ ರಾಗಿ, **ಯಥೋಪಕ್ರಮಂ** - ಹಿಂದೆ ಎರಡನೆಯ ಶ್ಲೋಕದಲ್ಲಿ ಅರ್ಜುನ ಪ್ರಶ್ನೆಗೆ ಉತ್ತರವಾಗಿ ಪ್ರತಿಜ್ಞಾ ವಾಕ್ಯರೂಪದಲ್ಲಿ ಹೇಳಿ ಹೇಗೆ ಪ್ರಾರಂಭಿಸಿದ್ದರೋ, ಹಾಗೆಯೇ ಈಗ **ಉಪಸಂಹರತಿ**- ನಿಗಮನ ವಾಕ್ಯರೂಪದಲ್ಲಿ ಹೇಳಿ ಮುಗಿಸುತ್ತಾರೆ. ಎರಡನೆಯ ಶ್ಲೋಕದಲ್ಲಿ ಹೇಳಿದುದರ ಅಭಿಪ್ರಾಯವನ್ನೇ ಈ ಅಧ್ಯಾಯಾಂತ್ಯದ ಶ್ಲೋಕವೂ ಸ್ಥಾಪಿಸುತ್ತದೆ ಎಂಬ ಅಭಿಪ್ರಾಯವು. ಅದು ಹೇಗೆ ಎಂಬುದು ಶ್ಲೋಕಕ್ಕೆ ಭಾಷ್ಯ ಬರೆದನಂತರ ತೋರಿಬರುತ್ತದೆ.

**ಮೂಲಕ್ಕೆ ಅರ್ಥವು**:—ಅರ್ಜುನ ಪ್ರಶ್ನೆಗೆ ನಿಗಮನರೂಪದಲ್ಲಿ ಉತ್ತರವು. ಜಿಜ್ಞಾಸುವು ಪ್ರಾಜ್ಞನೋ, ಜ್ಞಾನಿಯು ಪ್ರಾಜ್ಞನೋ, ಎಂಬುದಕ್ಕೆ ನನ್ನ ಉಪಾಸಕನಾದ ಜ್ಞಾನಿಯೇ

ಪ್ರಾಜ್ಞನೆಂದು ಸ್ಥಾಪಿಸಿ ಅಧ್ಯಾಯವನ್ನು ಮುಗಿಸುತ್ತಾರೆ. **ಯೇ** - ಯಾವ, **ಭಕ್ತಾಃ** - ಕರ್ಮ ನಿಷ್ಠೆಯುಳ್ಳ ಜ್ಞಾನಿಯಾದ ಭಕ್ತಿಯೋಗನಿಷ್ಠರು, **ಧರ್ಮ್ಯಾಮೃತಂ** - ಶಾಸ್ತ್ರೋಕ್ತ ಧರ್ಮದಿಂದ ಕೂಡಿದ ಉಪಾಯವಾಗಿಯೂ, ಜರಾಮರಣ ವರ್ಜಿತವಾಗಿ ಶಾಶ್ವತ ಮೋಕ್ಷ ಸುಖಕ್ಕೆ ಹೇತುವಾಗಿಯೂ ಇರುವ, ಅಥವಾ ಅಮೃತಫಲರೂಪವಾಗಿಯೂ, ಇರುವ **ಇದಂತು** - ಕರ್ಮಯೋಗನಿಷ್ಠನ ಉಪಾಸನೆಯನ್ನಾದರೋ, **ಯಥೋಕ್ತಮ್** - ನಾನು ಈಗ ಉಪದೇಶಿಸಿದರೀತಿಯಲ್ಲಿ, **ಶ್ರದ್ದಧಾನಾಃ** - ತುಂಬಾ ಶ್ರದ್ಧೆಯಿಂದ ಕೂಡಿದವರಾಗಿಯೂ, **ಮತ್ಪರಮಾಃ** - ನಾನೇ ಪರಮ ಪ್ರಾಪ್ಯವೆಂದು ಭಾವಿಸಿ ನನ್ನನ್ನೇ ಧ್ಯಾನಿಸುವರಾಗಿ, **ಪರ್ಯುಪಾಸತೇ** - ಚನ್ನಾಗಿ ನಾನು ಮೆಚ್ಚುವಂತೆ ಉಪಾಸಿಸುತ್ತಾರೋ, **ಇದಂತು ಪರ್ಯುಪಾಸತೇ** ಎಂಬ ಪ್ರಯೋಗವು **ಪಾಕಂ ಪಚತಿ** - ಎಂಬ ಪ್ರಯೋಗದಹಾಗೆ; **ತೇ** - ಅಂತಹ ಉಪಾಸಕರು, **ಮೇ** - ನನಗೆ, **ಅತೀವ ಪ್ರಿಯಾಃ** - ತುಂಬಾ ಪ್ರಿಯರು, ಅದರಿಂದ ನಾನು ವಿಶೇಷಪ್ರೀತನಾಗಿ ಅವರುಗಳಿಗೆ ಶೀಘ್ರದಲ್ಲೇ ಅನುಗ್ರಹಿಸುವನೆಂಬ ಭಾವವು. ಇಲ್ಲಿ **ತು** ಶಬ್ದವು **ಅಕ್ಷರೋಪಾಸಕ**ನಾದ ಜಿಜ್ಞಾಸುವಿನ ಉಪಾಸನೆಯನ್ನು ವ್ಯಾವರ್ತಿಸಿ ಹೇಳುತ್ತದೆ. **ಯೇತು** ಎಂದು ಅನ್ವಯಿಸುವದಕ್ಕಿಂತ, **ಇದಂತು** ಎಂದು ಅನ್ವಯಿಸುವದು ಅರ್ಜುನನ ಪ್ರಶ್ನೆಯಲ್ಲಿ ಅಡಗಿದ ಎರಡು ವಿಧ ಉಪಾಸನೆಗಳಲ್ಲಿ, ಒಂದನ್ನು ವ್ಯಾವರ್ತಿಸಿ ಇನ್ನೊಂದಕ್ಕೆ ಮಾಹಾತ್ಮ್ಯೆಯನ್ನು ಬೋಧಿಸುವದಕ್ಕಾಗಿ ಎಂದು **ಇದಂ** ಎಂಬುವರೊಂದಿಗೆ ಸೇರಿಸುವದು ಯುಕ್ತವು **"ಪ್ರಿಯೋಹಿ ಜ್ಞಾನಿನೋಽತ್ಯರ್ಥ ಮಹಂ ಸಚ ಮಮ ಪ್ರಿಯಃ"** ಎಂದೂ (ಗೀ. ೭. ೧೭,) **"ಜ್ಞಾನೀತ್ವಾತ್ಮೈವ ಮೇ ಮತಮ್"** ಎಂದೂ ಹೇಳಿರುವಹಾಗೆ ತುಂಬಾ ಪ್ರಿಯರೆಂಬ ತಾತ್ಪರ್ಯವು. ಈ ಅಧ್ಯಾಯದ ಪ್ರಥಮ ಶ್ಲೋಕದಲ್ಲಿನ ಅರ್ಜುನ ಪ್ರಶ್ನೆಗೆ ದ್ವಿತೀಯ ಶ್ಲೋಕದಲ್ಲಿ ಪ್ರತಿಜ್ಞಾರೂಪದಲ್ಲಿ ಉತ್ತರವು; ಅಲ್ಲಿಂದ ಅದರ ಸಮರ್ಥನೆಯು; ಈ ಅಧ್ಯಾಯಾಂತ್ಯ ಶ್ಲೋಕದಲ್ಲಿ ಪ್ರತಿಜ್ಞಾವಾಕ್ಯದ ಸ್ಥಾಪನೆಯಿಂದ ನಿಗಮನವು. ಆದುದರಿಂದ ದ್ವಿತೀಯ ಶ್ಲೋಕವೂ ಈ ಶ್ಲೋಕಕ್ಕೂ ಐಕ ಕಂಠ್ಯವಿರುತ್ತದೆ, ಹೇಗೆಂದರೆ ಅಲ್ಲಿರುವ **ನಿತ್ಯಯುಕ್ತಾಃ** ಎಂಬಲ್ಲಿರುವ ಅಭಿಪ್ರಾಯವು **ಮತ್ಪರಮಾಃ** ಎಂಬಲ್ಲೂ, ಅಲ್ಲಿ **ಶ್ರದ್ಧಯಾ ಪರಯೋಪೇತಾಃ** ಎಂದು ಹೇಳಲ್ಪಟ್ಟಿದುದು, ಇಲ್ಲಿ **ಶ್ರದ್ದಧಾನಾಃ** ಎಂಬಲ್ಲೂ, ಅಲ್ಲಿ **ತೇಮೇ ಯುಕ್ತತಮಾಃ** ಎಂದು ಹೇಳಿರುವವೇ, **ಭಕ್ತಾಸ್ತೇ ತೀವ ಮೇ ಪ್ರಿಯಾಃ** ಎಂದೂ, ಇಲ್ಲಿ ಹೇಳಿರುತ್ತದೆ. ಹೀಗೆ ಈ ೧೨ ನೆಯ ಭಕ್ತಿಯೋಗಾಧ್ಯಾಯದ ಸಾರಭೂತಾರ್ಥವಾಗಿ, ಈಗ ಇದುವರೆಗೂ ಮಾಡಿದ ಉಪದೇಶದಿಂದ ನಾವು ಮುಖ್ಯವಾಗಿ ಗ್ರಹಿಸತಕ್ಕ ಅಂಶವೇನೆಂದರೆ? ಫಲಾಭಿಸಂಧಿರಹಿತವಾದ ಕರ್ಮಯೋಗ ನಿಷ್ಠೆಯಿಂದ ಕೂಡಿದ ಪರಮಾತ್ಮೋಪಾಸನೆಯೇ ಪರಪೂತ್ಮನನ್ನು ಹೊಂದುವದಕ್ಕೆ ಸುಲಭವಾದ ಸುಕರವಾದ ಮುಖ್ಯಸಾಧ್ಯೋಪಾಯವು ಎಂಬುದು. ಅದು **"ಅದ್ವೇಷ್ಟಾ"** ಎಂದು ಆರಂಭಿಸಿಹೇಳಿದಹಾಗೆ ಕರ್ಮಯೋಗನಿಷ್ಠೆಯ ಅಧಿಕಾರಿಯಲ್ಲಿ ಕ್ರಮವಾಗಿ, ಉತ್ಕೃಷ್ಟ ಗುಣಗಳನ್ನು ವೃದ್ಧಿಗೊಳಿಸಿ, ನನಗೆ ವಿಶೇಷಪ್ರಿಯನನ್ನಾಗಿ ಮಾಡುತ್ತದೆ. ಆದುದರಿಂದಲೇ ಧರ್ಮ್ಯಂ ಎಂದು ಹೇಳಲ್ಪಟ್ಟಿತು. ಅನಂತರ ಅದು ಪರಭಕ್ತಿ ಪರಜ್ಞಾನ ಪರಮ ಭಕ್ತಿ ಜನಕವಾಗಿ ನನ ಸಾಯುಜ್ಯವನ್ನೇ ಹೊಂದಿಸುತ್ತಾದುದರಿಂದ **ಅಮೃತಂ** ಎಂದು ಹೇಳಲ್ಪಟ್ಟಿತು. ಜೀವನ್ಮುಕ್ತಿ ದಶೆಯನ್ನುಂಟುಮಾಡುತ್ತದೆಂಬ ಅರ್ಥವಲ್ಲವು. **"ಅಮೃತಸ್ಯ ಏಷಸೇತುಃ"** ಎಂಬ (ಮುಂ ೩.) ವಾಕ್ಯದಲ್ಲಿ ಅಮೃತ ಶಬ್ದವು ಮೋಕ್ಷವನ್ನು ಬೋಧಿಸುವಹಾಗೆ, ಇಲ್ಲೂ **ಅಮೃತಂ** ಎಂಬುದರಿಂದ **ಮೋಕ್ಷ ಪ್ರಾಪಕ** ಎಂದರೆ ಪ್ರಾಪ್ಯಪಾಪಕವೆಂಬರ್ಥವು. ಈ ಉಪನಿಷತ್ತಿನ ಅರ್ಥವು, ಇಂತಹ ತನ್ನ ಉಪಾಸನದಿಂದ ಪ್ರೀತನಾದ ಪರಮಾತ್ಮನೇ ಪ್ರಾಪಕನು, ಪ್ರಾಪ್ಯನು ಎಂಬುದು;

ಭಾ. **ಧರ್ಮ್ಯಂ ಚಾಮೃತಂಚೇತಿ - ಧರ್ಮ್ಯಾಮೃತಂ, ಯೇತು ಪ್ರಾಪ್ಯಸಮಂ ಪ್ರಾಪಕಂ - ಭಕ್ತಿಯೋಗಂ, ಯಥೋಕ್ತಂ (೧) "ಮಯ್ಯಾವೇಶ್ಯ ಮನೋ ಯೇ ಮಾಂ" ಇತ್ಯಾದಿನೋಕ್ತೇನ ಪ್ರಕಾರೇಣ ಉಪಾಸತೇ, ತೇ ಭಕ್ತಾಃ ಅತಿತರಾಂ ಮಮ ಪ್ರಿಯಾಃ ॥ ೨೦ ॥**

**ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ದ್ವಾದಶೋಽಧ್ಯಾಯಃ.**

**ಶ್ರೀಮತೇ ರಾಮಾನುಜಾಯ ನಮಃ**

---

ಇದನ್ನೇ ಈ **"ಧರ್ಮ್ಯಾಮೃತಂ"** ಎಂಬ ಪ್ರಯೋಗವು ಸೂಚಿಸುತ್ತದೆ. ತಾನು ಶೀಘ್ರದಲ್ಲೇ ಸುಪ್ರೀತನಾಗಿ ಆತನಿಗೆ ಪ್ರಾಪ್ಯನಾಗುವನು ಎಂದು ಉಪದೇಶಿಸಲ್ಪಟ್ಟಿತು. ಮೂವತ್ತೆರಡು ಬ್ರಹ್ಮವಿದ್ಯೆಗಳಲ್ಲಿ ಸಾಕ್ಷಾತ್ತಾಗಿ ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹೋಪಾಸನಾರೂಪ ಬ್ರಹ್ಮವಿದ್ಯೆಗಳೇ ಸುಕರವಾಗಿ ಮೋಕ್ಷಾರ್ಥಿಗೆ ಯೋಗ್ಯವಾದವೆಂಬ ಭಾವವು, ಈ ಅಧ್ಯಾಯದಲ್ಲಿ ಸ್ಥಾಪಿಸಲ್ಪಟ್ಟಿತು. ಈ ಉಪಾಸನೆಯು **ಧರ್ಮ್ಯಂ** ಎಂದು ಹೇಳಲ್ಪಟ್ಟಿತು, ಏಕೆಂದರೆ **ಧರ್ಮಾದನಪೇತಂ** - ಧರ್ಮವನ್ನು ಬಿಟ್ಟಿದ್ದಲ್ಲವು. ಧರ್ಮ ಶಬ್ದಕ್ಕೆ **"ಲೋಕಾನಾಂ ತ್ವಂ ಪರೋಧರ್ಮಃ"** (ರಾ ಯುದ್ಧ ೧೨೦-೧೪) ಎಂಬಲ್ಲೂ **"ತೇವದನ್ತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಮ್"** (ಭಾರ. ವನ) ಎಂಬಲ್ಲೂ, ಹೇಳಿರುವ ಹಾಗೆ ಶ್ರೀ ಕೃಷ್ಣನಾದ ತಾನೇ ಸಿದ್ಧೋಪಾಯನಾಗಿ ನಿಂತು **ಧರತೀತಿ ಧರ್ಮಃ** ಎಂಬ ವ್ಯುತ್ಪತ್ತಿಯ ಮೂಲಕ ಮುಕ್ತಿಯನ್ನು ಸಾಧಿಸಿ ಕೊಡುವವನು ಎಂಬರ್ಥವು. ಅಂತಹ ಸಿದ್ಧೋಪಾಯನಿಂದ ಕೂಡಿದುದಾಗಿಯೂ ಅಮೃತವಾಗಿಯೂ ಎಂದರೆ ಶಾಶ್ವತ ಫಲದಾಯಿಕವಾಗಿಯೂ, ಇರುವ ಇಂತಹ ಉಪಾಸನವು ಈ ನನ್ನ ದಿವ್ಯ ಮಙ್ಗಳ ವಿಗ್ರಹದ ಉಪಾಸನೆಯು ಎಂಬ ಭಾವವು. ಇದರಿಂದ ಪ್ರಾಪಕ ಮತ್ತು ಪ್ರಾಪ್ಯರೂಪವಾದುದು ಎಂಬ ಭಾವವು **ಧರ್ಮ್ಯಾಮೃತಂ** ಎಂಬ ಪ್ರಯೋಗದಿಂದ ಹೇಳಲ್ಪಟ್ಟಿತು. ಅಂತಹ ಉಪಾಸನವನ್ನು ಅವಲಂಬಿಸುವದರಿಂದಲೇ ಆತನು ಜ್ಞಾನಿಯು.

**ಭಾಷ್ಯಾರ್ಥವು:**—ಧರ್ಮ್ಯಾಮೃತಂ ಎಂಬುದು ಕರ್ಮಧಾರಯವೆಂದು ತೋರಿಸುವದಕ್ಕಾಗಿ **ಧರ್ಮ್ಯಂಚ ಅಮೃತಂಚ ಧರ್ಮ್ಯಾಮೃತಂ** ಎಂಬ ವ್ಯಾಖ್ಯಾನವು; **ಧರ್ಮಾದನಪೇತಂ** ಧರ್ಮದಿಂದಲೇ ಕೂಡಿದುದು ಯಾವುದೋ, ಅದು **ಧರ್ಮ್ಯಂ** ಎಂದೆನಿಸುತ್ತದೆ. ಶಾಸ್ತ್ರ ಚೋದಿತ ಧರ್ಮದಿಂದ ಕೂಡಿದುದು, ಇದರಿಂದ ಶಾಸ್ತ್ರೋಕ್ತವಾಗಿ ಮೋಕ್ಷಾರ್ಥ ಸಾಧನ ರೂಪವಾದುದಾಗಿ ಇರುವ ಎಂಬರ್ಥವು. **ಅಮೃತ** ಶಬ್ದವು ಫಲರೂಪ ಮೋಕ್ಷವನ್ನು ಬೋಧಿಸುತ್ತದೆ; ಆದುದರಿಂದ ಮೋಕ್ಷದಹಾಗೆ ಭೋಗ್ಯವಾಗಿ, ಉಪಾಸನಕಾಲದಲ್ಲಿ ಉಂಟಾಗುವ ಸುಖವು ನಿರತಿಶಯವಾದುದು ಎಂದು ಹೇಳಲ್ಪಟ್ಟಿತು. ಆದುದರಿಂದ **"ತಮೇವಂ ವಿದ್ವಾನಮೃತ ಇಹ ಭವತಿ"** ಎಂದು ಶ್ರುತಿಯು ಈ ಭೋಗ್ಯತ್ವವನ್ನು ಕೊಂಡಾಡಿರುತ್ತದೆ. ಶ್ರೀ ದೇಶಿಕರವರೂ ಈ ಉಪಾಸನ ಸುಖವು **"ಭಜನಸುಖಮೇಕಸ್ಯ ವಿಪುಲಂ"** ಎಂದು ಕೊಂಡಾಡಿರುತ್ತಾರೆ. ಶ್ರುತಿಯೂ **"ಮಾನಸ ಮಿತಿ ವಿದ್ವಾಂಸಃ ತಸ್ಮಾದ್ವಿದ್ವಾಂಸ ಏವ ಮಾನಸೇರಮನ್ತೇ"** ಎಂಬಲ್ಲಿ ಹಾಗೆಯೇ ಹೇಳಿರುತ್ತದೆ. ಜೀವನ್ಮುಕ್ತನು ಎಂಬರ್ಥವಲ್ಲವು, ಜೀವದೆಶೆಯಲ್ಲೇ ಸಂಪೂರ್ಣ ಮುಕ್ತನ ಭಾವವು ಅಸಾಧ್ಯವು, **ಯೇತು** - ಯಾರಾದರೇ, **ಪ್ರಾಪ್ಯಸಮಂ** - ಪ್ರಾಪ್ಯಕ್ಕೆ ಸಮವಾಗಿ ಮಾಡುವ, **ಪ್ರಾಪಕಂ ಭಕ್ತಿಯೋಗಂ**-ಸಾಧ್ಯೋಪಾಯವಾಗಿರುವ, ಭಕ್ತಿಯೋಗವನ್ನು, **ಯಥೋಕ್ತಂ,** ಎಂದರೆ **"ಮಯ್ಯಾವೇಶ್ಯ ಮನೋಯೇಮಾಂ" ಇತ್ಯಾದಿನಾ-**

ಎಂಬಿವೇ ಮೊದಲಾದುದರಿಂದ ನನ್ನನ್ನು, **ಉಕ್ತೇನಪ್ರಕಾರೇಣ** - ಹಿಂದೆ ೧೩ ನೆಯ ಶ್ಲೋಕ ದಿಂದಾರಂಭಿಸಿ ಹೇಳಿದ ಪ್ರಕಾರವಾಗಿ, **ಉಪಾಸತೇ** - ಉಪಾಸಿಸುತ್ತಾರೋ, **ತೇ ಭಕ್ತಾಃ** - ಅಂತಹ ಫಲಾಭಿಸಂಧಿರಹಿತಕರ್ಮನಿಷ್ಠೆಯಿಂದ ಕೂಡಿದ ಉಪಾಸಕರು, **ಅತಿತರಾಂ ಮಮ ಪ್ರಿಯಾಃ** - ನನಗೆ ಅತ್ಯಂತ ಪ್ರಿಯರು. **ಅರ್ಥಾರ್ಥಿಯೂ ಆರ್ತನೂ ಭಕ್ತರೇ; ಹಾಗೆಯೇ ಜಿಜ್ಞಾಸುವೂ ಭಕ್ತನೇ;** ಆದರೆ ಇವರುಗಳು ಅತಿತರಾಂ ಪ್ರಿಯರಾಗುವದಿಲ್ಲವು, **"ಉದಾರಾಃ ಸರ್ವ ಏವೈತೇ"** ಎಂದು ಇಷ್ಟುಮಾತ್ರವೇ ಶ್ಲಾಘಿಸಲ್ಪಟ್ಟಿತು. ಹಾಗಾದರೆ ಇವರು ಯಾರು ಎಂದರೆ ಹಿಂದೆ **"ಜ್ಞಾನೀತ್ವಾತ್ಮೈವ ಮೇ ಮತಮ್"** ಎಂದು ಹೇಳಲ್ಪಟ್ಟವರು. ನನ್ನ ಉಪಾ ಸಕರಾಗಿ ನನ್ನಲ್ಲೇ ಇಟ್ಟ ಮನೋಬುದ್ಧಿಗಳನ್ನುಳ್ಳವರಾದುದರಿಂದ, **ಅತಿತರಾಂ ಮಮ ಪ್ರಿಯಾಃ** - ಅತ್ಯಂತ ನನಗೆ ಇಷ್ಟರಾದವರು, ಅವರಿಗೆ ಅನುಗ್ರಹವೆಂಬುದು ಸಿದ್ಧವು ಎಂಬ ತಾತ್ಪರ್ಯವು. ಇಂತಹ ಜ್ಞಾನಿಯೇ ಪೂರ್ವ ಷಟ್ಕದ ಅಂತ್ಯ ಶ್ಲೋಕವಲ್ಲೂ **"ಯುಕ್ತತಮೋ ಮತಃ"** ಎಂದೂ ಹೇಳಲ್ಪಟ್ಟವನು. ಈ ಶ್ಲೋಕವು ಹಿಂದೆ ಅರ್ಜುನನಿಗೆ ಹೇಳಿದ ಉತ್ತರವನ್ನೇ ನಿಗಮನದಲ್ಲಿ ಹೇಳುತ್ತದೆಂದು ಭಾವಿಸದೆ, ಕೆಲವರು **"ಅದ್ವೇಷ್ಟಾ ಸರ್ವಭೂತಾನಾಂ"** ಎಂದು ಹಿಂದೆ ಹೇಳಿದುದರ ಉಪಸಂಹಾರವೆಂದು ಹೇಳುವರು. ಇದು ಹೇಗೆ ಕೊಡುತ್ತದೋ ತಿಳಿ ಯದು. **"ಅದ್ವೇಷ್ಟಾ"** ಎಂದಾರಂಭಿಸಿದ ಶ್ಲೋಕಗಳಲ್ಲಿ ಮನಶ್ಯಾನ್ತಿ ಇಲ್ಲದ ಉಪಾಸಕನು ಹೇಗೆ ವರ್ತಿಸಿದರೆ ಚಿತ್ತಸಮಾಧಾನವುಂಟಾಗಿ ತನ್ನ ಅನುಗ್ರಹಕ್ಕೆ ಪಾತ್ರನಾಗುವನೆಂದು ಏಳು ಶ್ಲೋಕಗಳಿಂದ ಉಪಪಾದಿಸಿ ಹೇಳಿರುತ್ತಾರೆ. ಅವೆಲ್ಲಾ ಈ ಶ್ಲೋಕದಲ್ಲಿ ಎಲ್ಲಿ ಅಡಗಿವೆ? ಅರ್ಜುನ ಪ್ರಶ್ನೆಗೆ ಅಧ್ಯಾಯಾಂತ್ಯದಲ್ಲಿ ನಿಷ್ಕರ್ಷೆಯಿಂದ ಉತ್ತರವನ್ನು ಹೇಳಿ ಮುಗಿಸಬೇಡವೇ ? ಪ್ರತಿಜ್ಞಾ ವಾಕ್ಯಕ್ಕೂ ನಿಗಮನ ವಾಕ್ಯಕ್ಕೂ ಐಕಕಂಠ್ಯವು ವಿಶದವಾಗಿ ತೋರುವದರಿಂದ ಬೇರೆ ವಿಧವಾಗಿ ಅರ್ಥಮಾಡುವದಕ್ಕೆ ಮಾರ್ಗವೇ ಇಲ್ಲವು, ಆದುದರಿಂದ ಶ್ರೀ ಯತಿವರ್ಯರು ಈ ಶ್ಲೋಕಕ್ಕೆ ಅವತಾರಿಕೆಯಾಗಿ, **"ಅಸ್ಮಾದಾತ್ಮನಿಷ್ಠಾದ್ಭಕ್ತಿಯೋಗ ನಿಷ್ಠಸ್ಯ ಶ್ರೈಷ್ಠ್ಯಂ ಪ್ರತಿಪಾದಯರ್ನ ಯಥೋಪಕ್ರಮ ಮುಪಸಂಹರತಿ"** ಎಂಬ ಸಮಂಜಸ ವಾಕ್ಯವನ್ನು ತಮ್ಮ ಗುರುಗಳ ಸಙ್ಗ್ರಹ ಶ್ಲೋಕವನ್ನನುಸರಿಸಿ ಅನುಗ್ರಹಿಸಿರುತ್ತಾರೆ.—

**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯನಮಃ**

ಇಂತು ಬ್ರಹ್ಮವಿದ್ಯೆಯಾದ ಗೀತೋಪನಿಷತ್ತಿನ ಭಕ್ತಿಯೋಗವೆಂಬ
ಹನ್ನೆರಡನೆಯ ಅಧ್ಯಾಯದ ಮೂಲ ಮತ್ತು ಭಾಷ್ಯಗಳಿಗೆ
ರಿಟೈರ್ಡು ಎಜ್ಯುಕೇಷನಲ್ ಸರ್ಕಲ್ ಇನ್ಸ್ಪೆಕ್ಟರು ತಿರುನಾರಾಯಣಪುರಂ

**ಸಿ. ಯಂ. ವಿಜಯರಾಘವಶರ್ಮನ**

**ಆಚಾರ್ಯ ಹೃದಯಾನ್ವೇಷಿಣೀ**

ಎಂಬ ಕನ್ನಡ ಅರ್ಥ ತಾತ್ಪರ್ಯಾದಿಗಳೂ ಸಮಾಪ್ತವಾದುವು.

**ಶ್ರೀಮತೇ ಶ್ರೀನಿವಾಸಮಹಾದೇಶಿಕಾಯನಮಃ**

*

## ಶ್ರೀಮದ್ಯಾಮುನಮುನಿ ಪ್ರಣೀತ

# ಶ್ರೀಮದ್ಗೀತಾರ್ಥಸಙ್ಗ್ರಹೇ

### ದ್ವಾದಶಾಧ್ಯಾಯ ಸಙ್ಗ್ರಹ ಶ್ಲೋಕಃ

---

**ಭಕ್ತೇಃ ಶ್ರೈಷ್ಠ್ಯ ಮುಪಾಯೋಕ್ತಿ ರಶಕ್ತಸ್ಯಾತ್ಮನಿಷ್ಠತಾ ।**
**ತತ್ಪ್ರಕಾರಾ ಸ್ತ್ವತಿ ಪ್ರೀತಿ ರ್ಭಕ್ತೇ ದ್ವಾದಶ ಉಚ್ಯತೇ ॥** ೧೬.

ಶ್ರೀಮದ್ಯಾಮುನ ಮುನಯೇ ನಮಃ

---

ಈ ಹನ್ನೆರಡನೆಯ ಅಧ್ಯಾಯದಲ್ಲಿ ಹೇಳಿರುವುದನ್ನು ಸಙ್ಗ್ರಹವಾಗಿ ಸೂಚಿಸುತ್ತಾರೆ - ಶ್ರೀ ಯತಿವರ್ಯರು ೧೨ ನೆಯ ಅಧ್ಯಾಯಾದಿಯಲ್ಲಿ ದಯಪಾಲಿಸಿದ ಅವತಾರಿಕೆಯಲ್ಲೇ **"ಅನಂತರ ಮಾತ್ಮಪ್ರಾಪ್ತಿಸಾಧನಭೂತಾತ್"** ಎಂದು ಆರಂಭಿಸಿದ ವಾಕ್ಯದ ಮೂಲಕ ಈ ಸಙ್ಗ್ರಹ ಶ್ಲೋಕಾರ್ಥವನ್ನೇ ವ್ಯಕ್ತಪಡಿಸಿರುತ್ತಾರೆ. ಈ ಅಧ್ಯಾಯದಲ್ಲಿ ಹೇಳಿರುವದು,

೧. **ಭಕ್ತೇಃ ಶ್ರೈಷ್ಠ್ಯಂ** - ಜ್ಞಾನಿಯ ಭಕ್ತಿಯೋಗದ ಶ್ರೈಷ್ಠ್ಯವು. ಅರ್ಜುನ ಪ್ರಶ್ನೆಯು ಸಹೇತುಕವಾದುದು, ಜಿಜ್ಞಾಸುವಿನ ಉಪಾಸನದಲ್ಲಿ ಸಾಕ್ಷಾತ್ತಾಗಿ ಭಗವಂತನೇ ಪ್ರಾಪ್ಯವಲ್ಲದಿದ್ದರೂ, ಕ್ರಮೇಣವಾಗಿ ಪುನರಾವರ್ತಿಯಿಲ್ಲದ ಮೋಕ್ಷಪ್ರಾಪ್ತಿಯೂ, ಜ್ಞಾನಿಯ ಉಪಾಸನಕ್ಕೂ ಮೋಕ್ಷ ಫಲವೇ ಹೇಳಲ್ಪಟ್ಟು ಭಗವಂತನು ಸುಪ್ರೀತನಾದರೇನೆ ಮೋಕ್ಷವೆಂದು ಹೇಳಿದುದರಿಂದ, ಇವೆರಡರಲ್ಲಿ ಯಾವುದು ಉತ್ತಮವೆಂಬ (೧ನೆಯಶ್ಲೋಕ) ಪ್ರಶ್ನೆಗೆ, ಜ್ಞಾನಿಯ ಉಪಾಸನೆಯೇ ಶ್ರೇಷ್ಠವೆಂದು ಹೇಳಲ್ಪಟ್ಟಿತು (೨ನೆಯ ಶ್ಲೋಕ)೩,೪,೫ನೆಯ ಶ್ಲೋಕಗಳಲ್ಲಿ ಜಿಜ್ಞಾಸುವಿನ ಉಪಾಸನೆಗೆ ಶ್ರೈಷ್ಠ್ಯವನ್ನು ನಿರಾಕರಿಸಿ ೬, ೭ ರಲ್ಲಿ ತಮ್ಮ ಉಪಾಸನೆಗೆ ಶ್ರೇಷ್ಠ್ಯವೆಂದು ಸಮರ್ಥಿಸುತ್ತಾರೆ. ಉಪಸಂಹಾರ ರೂಪವಾದ ಕೊನೆಯ ಶ್ಲೋಕದಲ್ಲೂ (೨೦. ಶ್ಲೋ) **ಭಕ್ತೇಃ ಶ್ರೈಷ್ಠ್ಯವೇ** ಹೇಳಲ್ಪಟ್ಟಿತು.

೨. **ಉಪಾಯೋಕ್ತಿಃ** - ಆ ಭಕ್ತಿಯೋಗದ ಆರಂಭ ವಿವೃದ್ಧಿಗಳಿಗೆ ಬೇಕಾದ ಸಾಧನದ ಹೇಳಿಕೆಯು. **"ಮಯ್ಯೇವ ಮನ ಆಧತ್ಸ್ವ"** ವೆಂಬ ಶ್ಲೋಕದಲ್ಲಿ (೮) ಮನೋ ಬುದ್ಧಿಗಳನ್ನು ನನ್ನಲ್ಲಿ ಇಡು ಎಂದು ಹೇಳಿದುದರಿಂದ, ಇವೇ ಸಾಧನವು, ಅದರ ಉಕ್ತಿಯು. ಇದನ್ನು ಸಾಧಿಸುವದಕ್ಕೆ ಉಪಾಯಗಳು ನಾಲ್ಕು ಶ್ಲೋಕಗಳಲ್ಲಿ ಹೇಳಲ್ಪಟ್ಟವು. ಮನಸ್ಸನ್ನೂ ಬುದ್ಧಿಯನ್ನು ನನ್ನಲ್ಲಿಡಲು ನಿನಗೆ ಕಷ್ಟವಾದರೆ, ನನ್ನ ದಿವ್ಯಮಙ್ಗಳವಿಗ್ರಹದ ಸ್ಮೃತ್ಯಭ್ಯಾಸವನ್ನೂ ಮಾಡುತ್ತಾ ಬಂದರೆ ಅವು ಲಭಿಸುತ್ತವೆ. (ಶ್ಲೋ. ೯). ಅದೂ ಸಾಧ್ಯವಿಲ್ಲದಿದ್ದರೆ ನನಗೆ ಪ್ರಿಯಗಳಾದ ಕೈಙ್ಕರ್ಯಗಳನ್ನು ಮಾಡುತ್ತಾ ಬಂದರೆ ನನ್ನ ಅನುಗ್ರಹದಿಂದ ಚಿತ್ತ ಸಮಾಧಾನವು ದೊರೆಯುತ್ತದೆ. (ಶ್ಲೋ ೧೦). ಇದಕ್ಕೂ ಅಶಕ್ತನಾದರೆ ಫಲಾಭಿಸಂಧಿರಹಿತ ಕರ್ಮಯೋಗನಿಷ್ಠನಾಗಿ ಅವುಗಳನ್ನೆಲ್ಲಾ ನನ್ನಲ್ಲೇ ಸಮರ್ಪಿಸಿದರೆ ನಿನಗೆ ಬೇಕಾದ ಚಿತ್ತ ಸಮಾಧಾನವು ದೊರೆಯುತ್ತದೆ (೧೧).

೩. **ಅಶಕ್ತಸ್ಯ ಆತ್ಮನಿಷ್ಠತಾ "ಅಥಚಿತ್ತಂ ಸಮಾಧಾತುಂ"** (ಶ್ಲೋಕ ೯ ರಿಂದ ೧೨ ರವರಿಗೆ) ಭಗವಂತನಲ್ಲಿ ಚಿತ್ತ ಸ್ವಾಸ್ಥ್ಯ ಇಲ್ಲದಿದ್ದರೆ ಭಗವದ್ಗುಣಾಭ್ಯಾಸವೂ, (೯) ಇದಕ್ಕೂ ಅಶಕ್ತತೆ ಇದ್ದರೆ ಭಗವತ್ಕೈಙ್ಕರ್ಯಗಳೂ, (೧೦) ಇದಕ್ಕೂ ಅಶಕ್ತತೆಯಾದರೆ ಫಲಾಭಿಸಂಧಿರಹಿತವಾದ ಕರ್ಮಯೋಗ ನಿಷ್ಠೆಯೂ. (೧೧-೨೦) ಹೀಗೆ ತುಂಬಾ ಅಶಕ್ತನಿಗೆ ಫಲಾಭಿಸಂಧಿರಹಿತ ಕರ್ಮಯೋಗವೇ ಚಿತ್ತ ಸಮಾಧಾನಕ್ಕೆ ಪರಮಸಾಧನವು.

೪. **ತತ್ಪ್ರಕಾರಾಃ** - ಎಂಬುದರಿಂದ **"ಅದ್ವೇಷ್ಟಾ ಸರ್ವಭೂತಾನಾ"** ಎಂದು ಆರಂಭಿಸಿ ಹೇಳಲ್ಪಟ್ಟ ಆ ಕರ್ಮಯೋಗನಿಷ್ಠನ ಪ್ರಕಾರಗಳು ಎಂದರೆ ಉತ್ತರೋತ್ತರ ಶ್ಲಾಘ್ಯಗುಣಗಳುಂಟಾಗಿ ಅದರಿಂದ ಚಿತ್ತಸಮಾಧಾನ, ಉಪಾಸನೆಗಳು ಕೈಗೂಡಿ, ಭಗವಂತನಿಗೆ ಪ್ರಿಯನಾಗುವ ಪ್ರಕಾರಗಳು ಹೇಳಲ್ಪಟ್ಟವು. (ಶ್ಲೋಕ. ೧೩ ರಿಂದ ೧೯.)

೫. **"ಭಕ್ತೇ ಅತಿಪ್ರೀತಿಃ** - ಭಕ್ತನಲ್ಲಿ ಅತ್ಯಂತ ಪ್ರೀತಿಯು. ಹಾಗೆ ಪ್ರೀತಿಯುಂಟಾಗುವದಕ್ಕೆ ಆತನು ಹೇಗಿರಬೇಕೆಂದು, ೧೩ನೆಯ ಶ್ಲೋಕದಲ್ಲಿ **"ಅದ್ವೇಷ್ಟಾ"** ಎಂದಾರಂಭಿಸಿ ೧೯ನೆಯ ಶ್ಲೋಕಾಂತ್ಯವರೆಗೂ ಹೇಳಿ ಉಪಾಸಕನು ಹೀಗಿದ್ದರೇನೆ ನನ್ನ ಪ್ರೀತಿಯನ್ನು ಸಂಪಾದಿಸಿಕೊಂಡು ನನ್ನ ಅನುಗ್ರಹವನ್ನು ಹೊಂದುವನು. ಈ ಗುಣಗಳೆಲ್ಲಾ ಉತ್ತರೋತ್ತರ ಉತ್ಕೃಷ್ಟವಾಗುವುವು, ಅವು ನನ್ನ ಕೃಪೆಯಿಂದಲೇ ಕರ್ಮಯೋಗನಿಷ್ಠೆಯನ್ನು ಮಾಡುತ್ತಾ ಭಕ್ತಿಯೋಗದಲ್ಲಿರಬೇಕೆಂದಿರುವವನಿಗೆ, ಲಭಿಸುತ್ತವೆ. ಆದುದರಿಂದ **ಭಕ್ತೇ ಅತಿ ಪ್ರೀತಿಃ** - ಜಿಜ್ಞಾಸುವಿಗಿಂತ ಜ್ಞಾನಿಯಾದ ಉಪಾಸಕನಲ್ಲಿ ಅತ್ಯಂತ ಪ್ರೀತಿಯು (ಶ್ಲೋ. ೨೦)

ಶ್ರೀ ಮತೇ ನಿಗಮಾನ್ತ ಮಹಾದೇಶಿಕಾಯ ನಮಃ

---

## ಹನ್ನೆರಡನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು

ಹಿಂದಿನ ಅಧ್ಯಾಯದಲ್ಲಿ, ಸರ್ವೇಶ್ವರನ, ಮಹತ್ತಾದ ಲೀಲಾವಿಭೂತಿ ನಿತ್ಯವಿಭೂತಿಗಳಿಂದಲೂ ಕಲ್ಯಾಣಗುಣ ಯೋಗದಿಂದಲೂ ಕೂಡಿದ ವಿಶ್ವರೂಪವನ್ನು, ಹಾಗೆಯೇ ಆತನು ನಿತ್ಯವಿಭೂತಿಯಲ್ಲಿ ನಿತ್ಯಮುಕ್ತರುಗಳಿಂದ ಸೇವಿತನಾಗಿ ಪರಿಪೂರ್ಣಬ್ರಹ್ಮಾನಂದವನ್ನನುಭವಿಸುವ ಆತನಿಗೇನೇ ಅಸಾಧಾರಣವಾದ ಶಾಶ್ವತವಾದ ಪರರೂಪವನ್ನೂ ನೋಡಬೇಕೆಂಬ ಅರ್ಜುನ ಪ್ರಾರ್ಥನೆಗಳಿಗೆ ಕಟ್ಟುಬಿದ್ದು, ಎರಡು ರೂಪಗಳನ್ನೂ ಭಕ್ತವತ್ಸಲನು ತೋರಿಸಿ, ಅಂತಹ ಪ್ರಾಪ್ಯವನ್ನು ಹೊಂದಬೇಕಾದರೆ, ಕೇವಲ ನಿತ್ಯನೈಮಿತ್ತಿಕಾದಿ ಯಜ್ಞದಾನ ಹೋಮ ತಪಸ್ಸುಗಳಿಂದ ಆಗುವದಿಲ್ಲವೆಂದು ಹೇಳಿ, ಭಗವದುಪಾಸನವನ್ನು ಅನನ್ಯಭಕ್ತಿಯಿಂದ ಮಾಡಿದರೇನೇ ವಶ್ಯನೇ ವಿನಾ ಅನ್ಯಥಾ ಇಲ್ಲವೆಂದು ತಿಳಿಸಿದನು. ಅದಕ್ಕೆ ಅರ್ಜುನನು ತೈಲಧಾರೆಯಹಾಗೆ ಸತತಮನಸ್ಸನ್ನಿಟ್ಟು ಭಕ್ತಿಮಾಡುವದು ಕಷ್ಟವೆಂಬ ಭಾವದಿಂದ, ಹಿಂದೆ ಹೇಳಿದ ಬ್ರಹ್ಮವಿದ್ಯಾನಿಷ್ಠರಾದ ಜಿಜ್ಞಾಸುವಿಗೂ ಜ್ಞಾನಿಗೂ ಮೋಕ್ಷವುಂಟೆಂದು ಎಂಟನೆಯ ಅಧ್ಯಾಯದಲ್ಲಿ ಹೇಳಿದುದನ್ನು ಜ್ಞಾಪಕದಲ್ಲಿಟ್ಟು, ಜ್ಞಾನಿಯಾಗಿ ನಿನ್ನನ್ನು ಉಪಾಸಿಸುವದು ಸುಕರವಾಗಿ ಶೀಘ್ರಫಲದಾಯಕವೇ ? ಅಥವಾ ಜಿಜ್ಞಾಸುವಾಗಿ ಉಪಾಸಿಸುವದು ಶೀಘ್ರಫಲದಾಯಕವೇ, ಎಂದು ಪ್ರಶ್ನಿಸುತ್ತಾನೆ. ಇದಕ್ಕೆ ಉತ್ತರವಾಗಿ ಜಿಜ್ಞಾಸುವಿನ ಉಪಾಸನೆಯು ಕ್ಷಿಪ್ರಫಲದಾಯಕವೂ ಅಲ್ಲವು ; ಮತ್ತು ಕ್ಲೇಶೋಧಿಕತರ ಉಳ್ಳದ್ದು; ಆದುದರಿಂದ ಮನಸ್ಸನ್ನು ನನ್ನಲ್ಲೇ ಇಟ್ಟು ಜ್ಞಾನಿಯಾಗಿ ಉಪಾಸಿಸತಕ್ಕದ್ದೇ ಕ್ಷಿಪ್ರಫಲದಾಯಕವೆಂದು ಶ್ರೀ ಕೃಷ್ಣಭಗವಾನ್ ಉಪದೇಶಿಸಿ, ಹಾಗೆ ಮನಸ್ಸನ್ನು ತನ್ನಲ್ಲೇ ಇಡಲು ಹೇಗೆ ಸಾಧ್ಯವೆಂಬುದನ್ನು ಕಾರುಣ್ಯಾತಿರೇಕದಿಂದ ಭಕ್ತವತ್ಸಲನು ತಿಳಿಸುತ್ತಾನೆ.

೧. ಅರ್ಜುನನು ಪ್ರಶ್ನಿಸುತ್ತಾನೆ --ಹಿಂದೆ ನೀವು ಉಪದೇಶಿಸಿದಹಾಗೆ, ಯಾವಾಗಲೂ ನಿಮ್ಮಲ್ಲೇ ಸಕ್ತವಾದ ಮನಸ್ಸನ್ನುಳ್ಳವರಾಗಿ ಅನನ್ಯಭಕ್ತಿಯಿಂದ ನಿಮ್ಮ ದಿವ್ಯಮಙ್ಗಳವಿಗ್ರಹವನ್ನು ಚೆನ್ನಾಗಿ ಉಪಾಸನೆಯನ್ನು ಮಾಡುವವರು ಯಾರೋ, ಛಾಂದೋಗ್ಯಾದಿಗಳಲ್ಲೂ ಬ್ರಹ್ಮಸೂತ್ರದಲ್ಲೂ ಹೇಳಿರುವಹಾಗೆ ಪ್ರಕೃತಿವಿಯುಕ್ತ ಪ್ರತ್ಯಗಾತ್ಮವನ್ನು ಪ್ರಾಪ್ಯವಾಗಿ ಬೇಡಿ ಪರಮಾತ್ಮನನ್ನು ಪ್ರಾಪಕನನ್ನಾಗಿ ಭಾವಿಸಿ ಯಾರು ಉಪಾಸಿಸುತ್ತಾರೋ, ಇವರಿಬ್ಬರಲ್ಲಿ ಯಾರ

ಪ್ರಾಜ್ಞರು ? ಎಂದರೆ ಯಾರಿಗೆ ಸುಕರವಾಗಿ ಶೀಘ್ರವಾಗಿ ವೈಕುಂಠಪ್ರಾಪ್ತಿಯು ? ಎಂದು ಕೇಳುತ್ತಾನೆ. ದಹರಾದಿ ಕೆಲವು ಬ್ರಹ್ಮವಿದ್ಯೆಗಳಲ್ಲಿ ಪರಮಾತ್ಮನ ದಿವ್ಯಮಙ್ಗಳವಿಗ್ರಹವೇ ಪ್ರಾಪ್ಯವಾಗಿ ವಿಧಿಸಲ್ಪಟ್ಟಿವೆ ಇನ್ನು ಕೆಲವು ಪಂಚಾಗ್ನಿ ವಿದ್ಯೆಯೇ ಮೊದಲಾದವುಗಳಲ್ಲಿ ಆತ್ಮಪ್ರಾಪ್ತಿಯುಂಟಾಗಿ ಅನಂತರ ಪರಬ್ರಹ್ಮಪ್ರಾಪ್ತಿಯು. ಹೀಗೆ ಇರುವ ಎರಡು ವಿಧ ಬ್ರಹ್ಮವಿದ್ಯೆಗಳಲ್ಲಿ ಯಾವುದು ಸುಕರತ್ವದಿಂದಲೂ ಶೀಘ್ರ್ಯದಿಂದಲೂ ಉತ್ತಮವು ? ಎಂಬುದು ಪ್ರಶ್ನೆಯು.

೨. ಶ್ರೀ ಭಗವಾನ್ ಉತ್ತರವನ್ನು ದಯಪಾಲಿಸುತ್ತಾರೆ.—ಇಷ್ಟೆಂದು ಹೇಳಲು ಸಾಧ್ಯವಿಲ್ಲದ ನಿರತಿಶಯ ಪ್ರೀತಿಯಿಂದ, ಮನಸ್ಸನ್ನು ನಿರಂತರವಾಗಿ ನನ್ನಲ್ಲೇ ಇಟ್ಟು, ಶ್ರದ್ಧೆಯಿಂದ ನನ್ನೊಂದಿಗೆ ದಿವ್ಯ ವೈಕುಂಠದಲ್ಲಿ ನಿತ್ಯಯೋಗವನ್ನು ಬಯಿಸುವವರಾಗಿ, ನಾನೇ ತಮಗೆ ಪರಮ ಪ್ರಯೋಜನವೆಂದು ಭಾವಿಸಿದವರಾಗಿ, ನನ್ನ ದಿವ್ಯ ಮಙ್ಗಳವಿಗ್ರಹವನ್ನೇ ಉಪಾಸಿಸುವ ಜ್ಞಾನಿಗಳಾದ ಭಕ್ತರು ಯಾರೋ, ಅವರೇ ಯುಕ್ತತಮರು ಎಂದರೆ ಸುಖವಾಗಿ ಶೀಘ್ರದಲ್ಲಿ ನನ್ನನ್ನೇ ಬಂದು ಸೇರುವವರಾದುದರಿಂದ, ಅವರೇ ಪ್ರಾಜ್ಞರೆಂಬುದು ನನ್ನ ಅಭಿಪ್ರಾಯವು.

೩, ೪, ೫, ಮುಂದಿನ ಮೂರು ಶ್ಲೋಕಗಳಿಂದ ಪಂಚಾಗ್ನಿ ವಿದ್ಯೆ, ಪ್ರತರ್ದನವಿದ್ಯೆ, ಮೊದಲಾದವುಗಳಲ್ಲಿ ಜಿಜ್ಞಾಸುವಾಗಿ ಮಾಡುವ ಉಪಾಸನೆಯು ಆತ್ಮಪ್ರಾಪ್ತಿಯುಂಟಾಗಿ ಅನಂತರ ಮೋಕ್ಷದಾಯಿಕವಾದರೂ ಸುಕರವಲ್ಲವು, ಫಲದಲ್ಲಿ ವಿಳಂಬವು, ಕ್ಲೇಶವುಳ್ಳದೆಂದು ಹೇಳುತ್ತಾರೆ.

ಯಾರು ನಾಶರಹಿತನಾದ, ಮತ್ತು ದೇಹವೇ ಮೊದಲಾದವುಗಳಿಗಿಂತ ವಿಲಕ್ಷಣನಾಗಿರುವದರಿಂದ ದೇವಮನುಷ್ಯನೇ ಮೊದಲಾದ ಶಬ್ದಗಳಿಂದ ನಿರ್ದೇಶಿಸಲು ಸಾಧ್ಯವಲ್ಲದ ಆ ಕಾರಣದಿಂದಲೇ ಚಕ್ಷುರಾದಿ ಇಂದ್ರಿಯಗಳಿಗೆ ಗೋಚರನಲ್ಲದ, ದೇವಾದಿ ದೇಹಗಳಲ್ಲೆಲ್ಲಾ ಇದ್ದರೂ ಕೂಡ, ಅದಕ್ಕಿಂತ ಬೇರೆಯಾಗಿ, ಹೀಗಿರುವನೆಂದು ಚಿಂತಿಸಲು ಕೂಡ ಕಷ್ಟವಾಗಿರುವ, ಮತ್ತು ಹೀಗೆ ಶರೀರಭೇದಗಳಿದ್ದರೂ ಎಲ್ಲಾ ಆತ್ಮರುಗಳೂ ಸಮವಾಗಿ ಒಂದೇ ವಿಧವಾದ ಆಕಾರದಿಂದಿರುವ, ಹೇಯವಾದ ದೇಹದಿಂದ ಕೂಡಿದ್ದರೂ ಚಲಿಸದೆ ಎಂದರೆ ಪರಿಣಾಮವನ್ನು ಹೊಂದದಿರುವ, ಆಕಾರಣದಿಂದ ನಿತ್ಯವಾಗಿರುವ ಜೀವಾತ್ಮಸ್ವರೂಪವನ್ನು, ಚಕ್ಷುರಾದಿ ಇಂದ್ರಿಯಗಳ ಸಮೂಹವನ್ನೆಲ್ಲಾ ವಿಷಯಗಳಲ್ಲಿ ಪ್ರವರ್ತಿಸುವ ವ್ಯಾಪಾರಗಳಿಂದ ನಿಗ್ರಹಿಸಿ, ದೇವಾದಿ ವಿಷಮ ಶರೀರಗಳಲ್ಲೆಲ್ಲಾ ಆತ್ಮರುಗಳೆಲ್ಲಾ ಜ್ಞಾನಸ್ವರೂಪರಾಗಿ ಜ್ಞಾನಗುಣವುಳ್ಳವರಾಗಿ ಸಮರೆಂದು ಭಾವಿಸಿ, ಆ ಕಾರಣದಿಂದಲೇ ಸರ್ವ ಪ್ರಾಣಿಗಳಿಗೂ ಹಿತಮಾಡುವದರಲ್ಲೇ ಆಸಕ್ತಿಯುಳ್ಳವರಾಗಿ, ಎಂದರೆ ಅಹಿತವನ್ನು ಮಾಡದೇ, ಹೀಗೆ ಯಾರೂ (ಜೀವಾತ್ಮಸ್ವರೂಪವನ್ನು) ಉಪಾಸಿಸುತ್ತಾರೋ, ಅಂಥವರೂ ಕೂಡ (ಜಿಜ್ಞಾಸಾದಿಗಳೂ ಕೂಡ) ನನ್ನನ್ನೇ ಕೊನೆಗೆ ಹೊಂದುತ್ತಾರೆ; ಎಂದರೆ ತತ್ಕ್ರತುನ್ಯಾಯದ ಪ್ರಕಾರ ಪ್ರಕೃತಿವಿಯುಕ್ತ ಪರಿಶುದ್ಧಾತ್ಮ ಸ್ವರೂಪವನ್ನು (ಕೈವಲ್ಯವನ್ನು) ಹೊಂದಿ, ಅನಂತರ ನನ್ನ ಸಾಯುಜ್ಯವನ್ನೇ ಪಡೆಯುತ್ತಾರೆ. ಇಂತಹ ಅಶಕ್ಯವಾದ ಜೀವಾತ್ಮ ಸ್ವರೂಪವನ್ನು (ನನ್ನ ದಿವ್ಯಮಙ್ಗಳ ವಿಗ್ರಹದೊಂದಿಗೆ ನನಗೆ ಶರೀರವೆಂಬ ಭಾವದಿಂದ) ಬದ್ಧ ಜೀವರು ಉಪಾಸಿಸುವದು ತುಂಬ ಕಷ್ಟತರವಾದುದು. ಏಕೆಂದರೆ ದೇಹವುಳ್ಳವರಾದುದರಿಂದ ದೇಹವೇ ಆತ್ಮಾ ಎಂಬ ಭ್ರಮೆಯು ಅನುಸರಿಸಿ ಅವರಿಗೆ ಬರುತ್ತದೆ.

೬, ೭. ಆದುದರಿಂದ ದಿವ್ಯಮಙ್ಗಳ ವಿಗ್ರಹಯುಕ್ತನಾಗಿ ಲಕ್ಷ್ಮೀ, ಕಲ್ಯಾಣಗುಣಗಣ, ವಿಭೂತಿ ಇವುಗಳಿಂದ ಪರಿಪೂರ್ಣನಾದ ತನ್ನನ್ನು ಸಾಕ್ಷಾತ್ತಾಗಿ ಉಪಾಸಿಸುವವರೇ ಪ್ರಾಜ್ಞರೆಂದು ಹೇಳುತ್ತಾರೆ.—ಯಾವ ಉಪಾಸಕರಾದರೋ, ದೇಹಯಾತ್ರೆಗೆ ಬೇಕಾದ, ಮತ್ತು ಸುತ ಕಳತ್ರಾದಿ ರಕ್ಷಣರೂಪವಾದ, ಇತಿ ಕರ್ತವ್ಯಗಳಾದ ಮತ್ತು ವೈದಿಕಗಳಾದ, ಅಜ್ಞಾನುಜ್ಞಾ

ಕೈಂಕರ್ಯಗಳಿಂದ ಹೀಗೆ ಎಲ್ಲಾ ಕರ್ಮಗಳ ಕರ್ತೃತ್ವ ಮಮತಾಫಲಗಳನ್ನು ತ್ಯಾಗಮಾಡಿ, ಅವುಗಳನ್ನೆಲ್ಲಾ ನನ್ನಲ್ಲಿ ಸಮರ್ಪಿಸಿ, ನಾನೇ ಮುಖ್ಯ ಪ್ರಾಪ್ಯವೆಂದು ಭಾವಿಸಿದವರಾಗಿ, ಅನನ್ಯ ಪ್ರಯೋಜನರಾಗಿ ವಿಶೇಷ ಭಕ್ತಿಯಿಂದ, ಪರಿಪೂರ್ಣನಾದ ನನ್ನನ್ನು ಉಪಾಸಿಸುತ್ತಾರೋ, ಮತ್ತು ಉಪಾಸನ ವ್ಯತಿರಿಕ್ತ ಕಾಲದಲ್ಲೂ ನನ್ನ ಸ್ಮರಣ, ಕೀರ್ತನ, ಅರ್ಚನ, ಧ್ಯಾನಾದಿಗಳನ್ನು ಅತ್ಯಂತ ಶ್ರದ್ಧಾವಿಶ್ವಾಸಗಳಿಂದ ಮಾಡುತ್ತಾರೋ, ಅಂತಹ ಸಂಸಾರ ಸಾಗರದಲ್ಲಿ ಬಿದ್ದಿರುವವರನ್ನು ಕ್ಷಿಪ್ರದಲ್ಲೇ ಮೇಲಕ್ಕೆ ಎತ್ತಿ ರಕ್ಷಿಸುವೆನು.

೮. ಆದುದರಿಂದ ನೀನು ಐಹಿಕಗಳೇನು, ಅನ್ಯದೇವತೆಗಳೇನು, ಅವುಗಳಲ್ಲಿ ಮನಸ್ಸನ್ನಿಡದೆ ನನ್ನಲ್ಲೇ ಮನಸ್ಸನ್ನಿಡು; ನಿನ್ನ ವಿವೇಕ ಬುದ್ಧಿಯನ್ನು ನನ್ನಲ್ಲೇ ನೆಲಿಸುವಹಾಗೆ ಮಾಡು ಎಂದರೆ ನಾನೇ ತುಂಬಾ ಹಿತಚಿಂತಕನೂ ಪ್ರಾಪ್ಯನೂ ಎಂಬ ವಿವೇಕ ಜ್ಞಾನವನ್ನು ಹೊಂದು. ಹೀಗೆ ನೀನು ಮಾಡಿದುದಾದರೇ, ನೀನು ಯಾವಾಗಲೂ ಇಲ್ಲಿಯೂ, ಅನಂತರವೂ, ಪ್ರಾಪ್ಯನಾದ ನನ್ನಲೇ ವಸಿಸುವೆ. ಎಂದರೆ ನನ್ನ ಸಾನ್ನಿಧ್ಯವನ್ನು ಹೊಂದುವಿ. ಆದುದರಿಂವ ಮನಸ್ಸೂ ಬುದ್ಧಿಯೂ ಎರಡನ್ನೂ ನನ್ನಲ್ಲೇ ಇಡತಕ್ಕದ್ದು.

೯. ಹೀಗೆ ಮನಸ್ಸನ್ನೂ ಬುದ್ಧಿಯನ್ನೂ ಇಡಲು ನಿನಗೆ ಕಷ್ಟವಾಗಿ ತೋರಿದರೆ, ಹಾಗೆ ಅವೆರಡನ್ನೂ ನನ್ನಲ್ಲೇ ಇಡುವದಕ್ಕೆ ಸಾಧನಗಳನ್ನು ಹೇಳುವೆನೆಂದು ಪರಮಕೃಪಯಾ ಮೂರು ಶ್ಲೋಕಗಳಿಂದ ಉಪದೇಶಿಸುತ್ತಾರೆ.—ರಾಜಸೂಯ ಯಾಗಕ್ಕೆ ಬೇಕಾದ ಧನವನ್ನೆಲ್ಲಾ ಸುಲಭವಾಗಿ ಜಯಿಸಿ ಧನಂಜಯನೆನಿಸಬಹುದು, ಆದರೆ, ಮನಸ್ಸನ್ನು ಜಯಿಸುವದೇನೂ ಅಷ್ಟು ಸುಲಭವಲ್ಲವು; ಹೀಗೆ ಸ್ಥಿರವಾಗಿ ಚಿತ್ತ ಸಮಾಧಾನವನ್ನು ಹೊಂದಲು ನೀನು ಅಸಮರ್ಥನಾದರೆ, ನನ್ನ ದಿವ್ಯಮಙ್ಗಳ ವಿಗ್ರಹವನ್ನು ಪುನಃ ಪುನಃ ಚಿನ್ತನ ಮಾಡುತ್ತಾ ಬಂದು, ನಾನು ಎಂತಹ ಕಲ್ಯಾಣಗುಣಾಕರನು, ಎಂತಹ ಭಕ್ತವತ್ಸಲನು, ಅಂತವನನ್ನು ಹೊಂದಬೇಕೆಂದು ಪ್ರೀತಿಯಿಂದ ಅಪೇಕ್ಷಿಸು, ಉಪಾಸನವು ಕೈಗೂಡುತ್ತದೆ.

೧೦. ಇಂತಹ ಸ್ಮೃತ್ಯಭ್ಯಾಸವನ್ನು ಮಾಡುವದಕ್ಕೂ ನೀನು ಅಶಕ್ತನಾದರೆ, ನನ್ನ ಕೈಙ್ಕರ್ಯ ರೂಪ ಕರ್ಮಗಳನ್ನು ಮಾಡುವದರಲ್ಲಿ ನಿರತನಾಗು. ಅವು ಯಾವುವೆಂದರೆ ದೇವಾಲಯ ನಿರ್ಮಾಣ, ಉದ್ಯಾನವನವನ್ನು ಏರ್ಪಡಿಸೋಣ, ನನಗಾಗಿ ಆಲಯದಲ್ಲಿ ದೀಪವನ್ನು ಹಚ್ಚೋಣ, ಆಲಯವನ್ನು ಗುಡಿಸೋಣ, ಸಾರಿಸೋಣ, ಪುಷ್ಪವನ್ನು ತಂದು ಸಮರ್ಪಿಸೋಣ, ಪೂಜೆಗೆ ಸಹಾಯ ಮಾಡೋಣ, ಅಷ್ಟೋತ್ತರ ಶತನಾಮಗಳನ್ನು ಹೇಳೋಣ, ಪ್ರದಕ್ಷಿಣೆ ನಮಸ್ಕಾರವನ್ನು ಮಾಡೋಣ, ಇವೇ ಮೊದಲಾದ ಕರ್ಮಗಳನ್ನು ನನ್ನ ಪ್ರೀತಿಗಾಗಿ ತುಂಬಾ ಭಕ್ತಿ ವಿಶ್ವಾಸದಿಂದ ಮಾಡಿದುದಾದರೆ ನನ್ನ ಕೃಪೆಯಿಂದ ಶೀಘ್ರದಲ್ಲೇ ಸ್ಮೃತ್ಯಭ್ಯಾಸಪೂರ್ವಕವಾಗಿ ನನ್ನಲ್ಲೇ ಚಿತ್ತ ಸ್ವಾಸ್ಥ್ಯವನ್ನು ಹೊಂದಿ ನನ್ನ ಪ್ರಾಪ್ತಿರೂಪಸಿದ್ಧಿಯನ್ನು ಪಡೆಯುವಿ.

೧೧. ಆಗಲಿ, ಇಂತಹ ನನ್ನ ಕೈಙ್ಕರ್ಯಗಳನ್ನೂ ಮಾಡಿಕೊಂಡು, ನನ್ನನ್ನು ಉಪಾಸಿಸುವ ಯತ್ನಮಾಡಲೂ ನಿನಗೆ ಸಾಧ್ಯವಿಲ್ಲವಾದರೆ, ನಾನು ಹಿಂದೆ ಆರು ಅಧ್ಯಾಯಗಳಿಂದಲೂ ಉಪದೇಶಿಸಿದ ಕರ್ತೃತ್ವ ಮಮತಾ ಫಲತ್ಯಾಗಗಳ ಪೂರ್ವಕವಾಗಿ ನಿತ್ಯನೈಮಿತ್ತಿಕಾದಿ ಆಜ್ಞಾನುಜ್ಞಾ ಕೈಙ್ಕರ್ಯಗಳನ್ನೇ ಅನುಷ್ಠಿಸುತ್ತಾ, ಐಹಿಕಗಳಲ್ಲಿ ಮನಸ್ಸು ಪ್ರವೇಶಿದಹಾಗೆ ನಿಗ್ರಹಿಸಿ, ಆ ಕರ್ಮಗಳನ್ನೂ ತ್ಯಾಗಪೂರ್ವಕ ನನ್ನಲ್ಲೇ ಸಮರ್ಪಿಸಿ, ಅನುಷ್ಠಿಸು ಎಂದು ಹೇಳಿದ ಕರ್ಮಯೋಗವನ್ನೇ ಅನುಷ್ಠಿಸುತ್ತಾ ಬಂದರೆ, ಭಕ್ತಿಯೋಗಕ್ಕೆ ಪ್ರತಿಬಂಧಕ ಪಾಪಗಳು ತೊಲಗಿ, ಆತ್ಮಾವಲೋಕನ ಉಂಟಾಗಿ ಭಕ್ತಿಯೋಗಕ್ಕೆ ಬೇಕಾದ ಚಿತ್ತ ಸಮಾಧಾನವು ದೊರೆತು ಎಲ್ಲಾ ಸಿದ್ಧಿಯೂ ದೊರೆಯುತ್ತದೆ.

೧೨. ಭಕ್ತಿಯೋಗಕ್ಕೆ ಬೇಕಾದ ಚಿತ್ತ ಸಮಾಧಾನ ದೊರೆಯುವದಕ್ಕೆ, ಹಿಂದೆ ೯-೧೧ನೆಯ ಶ್ಲೋಕಗಳಲ್ಲಿ ಹೇಳಿದ ಸಾಧನಗಳಿಗಿಂತ, ಈ ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ ಕರ್ಮಯೋಗವನ್ನು ಮಾಡುತ್ತಾ ಬರುವದೇ ಸರ್ವ ಸುಲಭವಾದ ಸಾಧನವೆಂದು ಸಿದ್ಧಾನ್ತಿಸಿ ಹೇಳುತ್ತಾರೆ.—ಮೊದಲಿಗೆ ಸ್ವಲ್ಪ ಕಷ್ಟತರವಾಗಿ ತೋರುವ ಪರಮಾತ್ಮನ ದಿವ್ಯ ಮಙ್ಗಳದ ಸ್ಮೃತ್ಯಾಭ್ಯಾಸಕ್ಕಿಂತಲೂ ಪರಿಶುದ್ಧಾತ್ಮ ಸ್ವರೂಪಾನುಸಂಧಾನ ಪೂರ್ವಕವಾದ ಆತ್ಮಸಾಕ್ಷಾತ್ಕಾರವೇ ಭಕ್ತಿಯೋಗ ಸಿದ್ಧಿಗೆ ಸುಲಭವಾದ ಸಾಧನವು; ಇಂತಹ ಆತ್ಮ ಸಾಕ್ಷಾತ್ಕಾರ ಉಂಟಾಗದಿರುವ ಸ್ಥಿತಿಯಲ್ಲಿ, ಅದಕ್ಕಿಂತಲು, ಪರಿಶುದ್ಧಾತ್ಮ ಸ್ವರೂಪಧ್ಯಾನವೇ (ಆರನೆಯ ಅಧ್ಯಾಯದಲ್ಲಿ ಹೇಳಿದುದು) ಸುಲಭವಾದ ಸಾಧನವು ; ಇಂತಹ ಆತ್ಮಧ್ಯಾನವು ಇನ್ನೂ ಉಂಟಾಗದಿರುವ ಸ್ಥಿತಿಯಲ್ಲಿ, ಅದಕ್ಕೆ ಕಾರಣಭೂತವಾದ ಕರ್ತೃತ್ವ ಮಮತಾ ಫಲತ್ಯಾಗ ಪೂರ್ವಕವಾಗಿ ಭಗವದರ್ಪಣ ಬುದ್ಧಿಯಿಂದ ಮಾಡುವ ಕರ್ಮಯೋಗವೇ ಸುಲಭವಾಗಿ ಹಿತವಾದ ಸಾಧನವು. ಇದನ್ನು ನಡೆಸುತ್ತಾ ಬಂದರೆ ನಿನಗೆ ಬೇಕಾದ ಚಿತ್ತೈಕಾಗ್ರ್ಯವು ಸ್ವತಏವ ಲಭಿಸುತ್ತದೆ. ಹೇಗೆಂದರೆ ಕರ್ಮಯೋಗಾನುಷ್ಠಾನದಿಂದ ಪ್ರತಿಬಂಧಕ ಪಾಪವು ತೊಲಗಿ ಆತ್ಮಧ್ಯಾನವೂ, ತನ್ಮೂಲಕ ಆತ್ಮಾವಲೋಕನವೂ, ಸ್ಮೃತ್ಯಭ್ಯಾಸವೂ, ಪರಭಕ್ತಿಪ್ರಾಪ್ತಿಯೂ, ಅಲ್ಲಿಂದ ಭಕ್ತಿಯೋಗ ನಿಷ್ಪತ್ತಿಯೂ ಪರಬ್ರಹ್ಮಪ್ರಾಪ್ತಿಯೂ ಎಲ್ಲವೂ ಕ್ರಮವಾಗಿ ಲಭಿಸುತ್ತವೆ. ಆದುದರಿಂದ ಭಕ್ತಿಯೋಗಕ್ಕೆ ಬೇಕಾದ ಚಿತ್ತೈಕಾಗ್ರತೆ ಇಲ್ಲದವನಿಗೆ, ಕರ್ಮಯೋಗವೇ ಸುಲಭವಾಗ ಸಾಧನವು.

೧೩. ೧೪. ಹೀಗೆ ಚಿತ್ತೈಕಾಗ್ರತೆಗಾಗಿ ಕರ್ಮಯೋಗವನ್ನು ಅನುಷ್ಠಿಸುವವನಿಗೆ ಉಂಟಾಗುವ ಮಹತ್ತಾದ ಗುಣಗಳಯೋಗವು ಯಾವುದೆಂದು ಹೇಳಿ, ಅಂತವನೇ ತನಗೆ ತುಂಬಾ ಪ್ರಿಯಭಕ್ತನಾಗುವನೆಂದು, ಅವನಿಗೆ ಉಂಟಾಗುವ ಉತ್ತರೋತ್ತರೋತ್ಕರ್ಷವನ್ನು ಕ್ರಮೇಣ ಬೋಧಿಸುತ್ತಾರೆ.—ಸರ್ವ ಪ್ರಾಣಿಗಳಲ್ಲೂ, ಅವರು ದ್ವೇಷಿಸಲಿ, ಅಪಕಾರಮಾಡಲಿ, ತಾನು ದ್ವೇಷವಿಲ್ಲದವನಾಗಿ, ಆ ಕಾರಣದಿಂದ ಎಲ್ಲರಿಗೂ ಅನುಕೂಲನಾಗಿ ಸ್ನೇಹಭಾವದಿಂದಿರುವನಾಗಿ, ಪ್ರತಿಫಲವನ್ನಪೇಕ್ಷಿಸದೇ ಪ್ರಾಣಿಗಳ ದುಃಖವನ್ನು ಹೋಗಲಾಡಿಸುವದಕ್ಕೆ ಬೇಕಾದ ಕಾರುಣ್ಯವನ್ನು ಹೊಂದಿದವನಾಗಿ, ಎಲ್ಲವೂ ಪರಮಾತ್ಮನದೇ ಎಂಬದಾಗಿ ಯಾವುದರಲ್ಲೂ ಮಮತಾ ಇಲ್ಲದವನಾಗಿ, ಎಲ್ಲವೂ ಸ್ವಾಮಿ ಸಙ್ಕಲ್ಪಾನುಗುಣ ನಡೆಯುವದರಿಂದ, ಸುಖದಲ್ಲಿ ಹಿಗ್ಗದೆ, ದುಃಖದಲ್ಲಿ ಕ್ಲೇಶಪಡದೆ, ಸಮಭಾವದಿಂದಿರುವನಾಗಿ, ಹೀಗೆ ಭಗವತ್ಸಙ್ಕಲ್ಪಾನುಗುಣವಾಗಿ ಎಲ್ಲವೂ ಉಂಟಾಗುವದರಿಂದ ದುಃಖ, ನಷ್ಟ ಮೊದಲಾದವುಗಳನ್ನೆಲ್ಲಾ ಸಹಿಸಿಕೊಳ್ಳುವನಾಗಿ, ಯಾವಾಗಲೂ ಸ್ವಾಮಿಯು ಕೊಟ್ಟದ್ದರಲ್ಲಿ ತೃಪ್ತನಾಗಿ, ಮನಸ್ಸನ್ನು ನಿಗ್ರಹಿಸುವವನಾಗಿ, ಪ್ರಕೃತಿವಿಯುಕ್ತ ದೆಶೆಯಲ್ಲಿ ತಾನು ಮಹಾ ಪರಿಶುದ್ಧನೆಂಬ ಅನುಸಂಧಾನವಿರುವ ಯೋಗಿಯಾಗಿ, ಅಧ್ಯಾತ್ಮ ಶಾಸ್ತ್ರೋಪದೇಶದಲ್ಲಿ ದೃಢ ನಂಬಿಕೆಯುಳ್ಳವನಾಗಿ, ಹೀಗೆ ಕರ್ಮಯೋಗ ಮೂಲಕ ನಡೆಸಿದ ಕರ್ಮಗಳಿಂದ ಶ್ರೀ ವಾಸುದೇವನು ಆರಾಧಿಸಲ್ಪಟ್ಟು ತನಗೆ ಆತ್ಮಾವಲೋಕನ ಸಿದ್ಧಿಯನ್ನು ಅನುಗ್ರಹಿಸುವನೆಂದು ಆತನಲ್ಲೇ ಸಮರ್ಪಿಸಿದ ಮನಸ್ಸನ್ನೂ ಬುದ್ಧಿಯನ್ನೂ ಹೊಂದಿದವನಾಗಿ, ಹೀಗೆ ಯಾವನು ಕರ್ಮಯೋಗದ ಮೂಲಕ ಭಕ್ತಿಯೋಗವನ್ನು ಸಾಧಿಸಲು ಯತ್ನಿಸುವನೋ, ಅಂತವನೇ ನನಗೆ ಪ್ರಿಯನಾಗುವನು.

೧೫. ಇನ್ನೂ ಎಂತಹ ಗುಣಯೋಗವನ್ನು ಹೊಂದಿ ಉತ್ಕೃಷ್ಟನಾಗುವನೆಂದರೆ ತಿಳಿಸುತ್ತಾರೆ.—ಯಾವ ಸರ್ವೋತ್ಕೃಷ್ಟ ಕರ್ಮಯೋಗವನ್ನು ಅವಲಂಬಿಸುವದರ ಮೂಲಕ ಲೋಕದ

ಜನರ ಕಾಯ ವಾಕ್ಕು ಮನಸ್ಸುಗಳಿಗೆ ಈಷದಪಿ ಹಿಂಸೆ ಮಾಡದಹಾಗೆ ಇರುತ್ತಾನೋ, ಮತ್ತು ಆ ಕಾರಣದಿಂದಲೇ ಯಾರಿಗೂ ತಾನು ವಿರೋಧಿಯಲ್ಲದುದರಿಂದ ಲೋಕದ ಜನರೂ ಸಹ ಈತನ ಮನೋ ವಾಕ್ಕಾಯಗಳಿಗೆ ಹಿಂಸೆಯನ್ನುಂಟುಮಾಡುವದಿಲ್ಲವೋ, ಆದುದರಿಂದಲೇ ಯಾರ ಮೂಲಕವಾಗಿಯೂ ಹರ್ಷವಾಗಲಿ, ಅಸಹನವಾಗಲಿ, ಭಯವಾಗಲಿ ಕ್ಲೇಶವಾಗಲಿ ಇಲ್ಲದಿರುವನು ಯಾವನೋ, ಅಂತಹ ಯೋಗಿಯು ನನಗೆ ಪ್ರಿಯಭಕ್ತನಾಗುವನು.

೧೬. ಇನ್ನೂ ಹೇಗೆ ಉತ್ಕೃಷ್ಟನಾಗಿ ನನ್ನ ಪ್ರಿಯಭಕ್ತನಾಗುವನು ಎಂದರೆ ತಿಳಿಸುತ್ತಾರೆ.—ಆತನಿಗೆ ಪರಿಶುದ್ಧನಾದ ಆತ್ಮಾನುಸಂಧಾನದಲ್ಲಿ ಅಪೇಕ್ಷೆಯಾದುದರಿಂದ, ತದ್ವ್ಯತಿರಿಕ್ತವಾದ ಐಹಿಕ ವಿಷಯಗಳಲ್ಲಿ ಅಪೇಕ್ಷೆಯಿಲ್ಲದವನಾಗಿಯೂ, ಶಾಸ್ತ್ರವಿಹಿತವಾದ ಮಾರ್ಗದಿಂದ ಗಳಿಸಿದ ದ್ರವ್ಯದಿಂದ ಬೆಳಿಸಿದ ಶರೀರವುಳ್ಳವನಾಗುವದರಿಂದ ಶುಚಿಯಾಗಿಯೂ, ಶಾಸ್ತ್ರೀಯ ಕರ್ಮಗಳನ್ನು ಮಾಡಲು ಸಮರ್ಥನಾಗಿಯೂ, ಮಿಕ್ಕವುಗಳಲ್ಲಿ ಉದಾಸೀನನಾಗಿಯೂ, ವಿಹಿತ ಕರ್ಮಗಳನ್ನನುಷ್ಠಿಸುವಾಗ ಪ್ರಾಪ್ತವಾಗುವ ಶೀತೋಷ್ಣಾದಿಗಳಲ್ಲಿ ವ್ಯಥೆ ಇಲ್ಲದವನಾಗಿಯೂ ಶಾಸ್ತ್ರೀಯ ವ್ಯತಿರಿಕ್ತಗಳಾದ ಸಮಸ್ತ ಕರ್ಮಾರಂಭವನ್ನೂ ಪರಿತ್ಯಾಗಮಾಡಿದವನಾಗಿ, ಯಾವನು ಕರ್ಮಯೋಗವನ್ನು ಅನುಷ್ಠಿಸುವನೋ ಅವನು ನನಗೆ ಪ್ರಿಯಭಕ್ತನಾಗುವನು.

೧೭. ಇನ್ನೂ ಎಂತವನಾಗುವೆನೆಂದರೆ ತಿಳಿಸುತ್ತಾರೆ.—ಯಾವ ಕರ್ಮಯೋಗಿಯು ಹರ್ಷನಿಮಿತ್ತವಾದುದು ಪ್ರಾಪ್ತವಾದರೂ ಸಂತೋಷವನ್ನು ಹೊಂದುವದಿಲ್ಲವೋ, ಅಪ್ರಿಯವಾದುದು ಉಂಟಾದರೂ ದ್ವೇಷಿಸುವದಿಲ್ಲವೋ, ಪುಣ್ಯ ಪಾಪರೂಪ ಶುಭಾ ಶುಭ ಕರ್ಮಗಳನ್ನು ಪರಿತ್ಯಾಗ ಮಾಡುತ್ತಾನೋ, ಅವನು ಭಕ್ತಿಯುಕ್ತನಾಗುವದರಿಂದ ನನಗೆ ತುಂಬಾ ಪ್ರಿಯನಾಗುವನು.

೧೮. ೧೯. ಹಿಂದೆ ಅದ್ವೇಷ್ಟಾ ಮೊದಲಾದ ಗುಣಯುಕ್ತನೆಂದು ಹೇಳಿದುದಕ್ಕಿಂತ, ಇನ್ನೂ ಉತ್ಕೃಷ್ಟಾವಸ್ಥೆಯನ್ನು ಹೊಂದಿದವನಾಗುವನೆಂದೂ ಅಂತಹ ಕರ್ಮಯೋಗಿಯು ಅತ್ಯಂತ ಪ್ರಿಯನಾಗುವನೆಂದೂ, ಹೇಳುತ್ತಾರೆ.—ಅಲ್ಲಿ ಹೇಳಿರುವದು ಸಾಮಾನ್ಯವಾಗಿ ಅಂತಹ ಗುಣಗಳುಂಟಾಗುತ್ತವೆಂದು ಹೇಳಲ್ಪಟ್ಟಿತು. ಇಲ್ಲಿ ಹೇಳುವದಾದರೋ ಆ ಗುಣಗಳಿಗೆ ಪ್ರತ್ಯುತ ವಿರುದ್ಧ ವಿಷಯಗಳಿದ್ದರೂ, ಅಂತಹ ಉತ್ಕೃಷ್ಟ ಗುಣಗಳು ಸ್ಥಿರವಾಗಿ ನೆಲಸಿರುವುವೆಂದು ಹೇಳಲ್ಪಡುತ್ತದೆ. ಪುರುಷರು ಇಲ್ಲದೇನೇ ಇರುವ ಸ್ಥಳದಲ್ಲಿ ಸಾಧ್ವಿಯಾಗಿರುವದಕ್ಕಿಂತ ಪುರುಷರ ಮಧ್ಯದಲ್ಲೂ ಪತಿಪಾರಾರ್ಥ್ಯ ಗುಣವು ನೆಲಸಿದ್ದರೆ ಉತ್ಕೃಷ್ಟವು ಹೇಗೋ ಹಾಗೆ ಎಂದು ಭಾವಿಸತಕ್ಕದ್ದು.—ಶತ್ರುವಿನಲ್ಲೂ ಮಿತ್ರನಲ್ಲೂ ಸಮವಾಗಿ, ಶತ್ರುವನ್ನು ದ್ವೇಷಿಸದೆ, ಮಿತ್ರನನ್ನು ವಿಶೇಷ ಭಾವದಿಂದ ಕಾಣದೆ, ಶೀತ ಉಷ್ಣ ಸುಖ ದುಃಖಗಳನ್ನುಂಟುಮಾಡುವ ವಸ್ತುಗಳ ಮಧ್ಯದಲ್ಲೂ ಏಕರೀತಿಯಿಂದ ಇರುವವನಾಗಿ, ಯಾವ ಐಹಿಕ ವಸ್ತುಗಳಲ್ಲೂ ಸಙ್ಗವಿಲ್ಲದವನಾಗಿ, ಎಂದರೆ ಅವುಗಳ ಮಧ್ಯೆದಲ್ಲಿದ್ದರೂ ಅವುಗಳಲ್ಲಿ ಲಿಪ್ತನಾಗದೆ, ಯಾರಾದರೂ ನಿಂದಿಸಿದರಾಗಲಿ ಸ್ತೋತ್ರಮಾಡಿದರಾಗಲಿ ಸಮಭಾವದಿಂದಿರುವವನಾಗಿ, ಸ್ವಾಮಿ ಅನುಗ್ರಹದಿಂದ ದೊರೆತ ದ್ರವ್ಯಾದಿಗಳಿಂದಲೇ ಸಂತುಷ್ಟನಾಗಿ, ಗೃಹಾದಿ ಸಂಬಂಧಗಳಲ್ಲಿ ಲಿಪ್ತನಾಗದೇ, ಅವುಗಳಿಂದ ವಿಕಾರಹೊಂದದೇ, ಸ್ಥಿರಚಿತ್ತನಾಗಿ ಯಾವ ಕರ್ಮಯೋಗಿಯು ಇರುತ್ತಾನೋ, ಅವನು ನನ್ನಲ್ಲಿ ಭಕ್ತಿಯುಳ್ಳವನಾಗಿ ಉಪಾಸನಾರಂಭವನ್ನು ಮಾಡಿ ನನಗೆ ವಿಶೇಷ ಪ್ರಿಯನಾಗುವನು.

೨೦. ಇವರೆಲ್ಲರಿಗಿಂತ ತುಂಬಾ ಶ್ರೇಷ್ಠರಾಗಿ ತನಗೆ ನಿರತಿಶಯ ಪ್ರಿಯರು ಯಾರೆಂಬುದನ್ನು ಹೇಳಿ ಅಧ್ಯಾಯವನ್ನು ನಿಗಮನಮಾಡಿ ಹೇಳುತ್ತಾರೆ.—ಯಾವ ಕರ್ಮಯೋಗಿಗಳಾ

ದರೋ ಸರ್ವ ಕರ್ಮಾರಾಧ್ಯನಾದ **"ಕೃಷ್ಣಂ ಧರ್ಮಂ ಸನಾತನಂ"** ಎಂಬಲ್ಲಿ ಹೇಳಿರುವಹಾಗೆ ಭಗವಂತನನ್ನೇ ಸಿದ್ಧೋಪಾಯನಾದ ಪ್ರಾಪಕನನ್ನಾಗಿ ಒದಗಿಸಿಕೊಡುವ ಮತ್ತು ಪ್ರಾಪ್ಯವನ್ನು ಸಾಧಿಸಿಕೊಡುವ, ಭಕ್ತಿಯೋಗದಲ್ಲಿಳಿದು ತುಂಬಾ ಶ್ರದ್ಧೆಯುಳ್ಳವರಾಗಿ ಉಪಾಸಿಸುತ್ತಾರೋ, ಮತ್ತು ಮಿಕ್ಕ ಕಾಲಗಳಲ್ಲಿ ನನ್ನ ಕಲ್ಯಾಣಗುಣಕೀರ್ತನೆ, ನನ್ನ ದಿವ್ಯ ಚೇಷ್ಟಿತಗಳನ್ನು ಕೊಂಡಾಡೋಣ, ಅವುಗಳ ಶ್ರವಣ, ನನ್ನ ಆರಾಧನೆ, ಹೀಗೆ ಯಾವಾಗಲೂ ನನ್ನಲೇ ನಿರತನಾಗಿರುವರು ಯಾರೋ, ಅವರೇ ನಿರತಿಶಯ ಪ್ರಿಯರು. ಆದುದರಿಂದ ಕರ್ಮಯೋಗವನ್ನನುಷ್ಠಿಸಿ ಭಕ್ತಿಯೋಗಿಯಾಗು ಎಂಬ ಉಪದೇಶವು.

ಹನ್ನೆರಡನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು ಸಂಪೂರ್ಣವು.

ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ

——o——

# PRESS OPINION

## Kannada Exposition of the Gita

SRIMAD BHAGAVAD GITA - Thriteeya Shatka, Part 3 : By C. M. Vijiaraghavachar. (Pp. 1629 to 2220. Author, No. 3. North Public Sq. Road."Bharadwaja Asramam." Basavanagudi, Bangalore Price Rs. 4.)

Mr. C. M. Vijiaraghavacharya, who in his 82nd year, is actively engaged in philosophical pursuits, has now placed before the public the third part of his critical and expository discussion of the Gita, according to the "Visishtadvaita" school of traditional interpretation, written in Kannada language. It may be recalled that the first volume of the work known as "Acharya-hridaya-anveshinee" was noticed in THE HINDU in 1939 and the second in 1942. Mr. Acharya has kept his own critical and expository discussion strictly close to Ramanuja's "Gita Bhashya," Vedanta-Desika's "Tatparya - chandrika" and Yamuna's "Gita-arthasara". The stanzas of the Gita have been done into Kannada and the import of each is thorougly and systematically discussed in the light of the classic, traditional interpretations. The volume under notice contains as subject-matter five chapters of the Gita, 13-14-15-16 and 17, and 1 learn the 18th chapter could not be included on account of certain printing difficulties. It may be stated without even the slightest exaggeration that the title of the work is fully justified and substantiated in view of the actual performance of the author who has fully assimilated the excellent and unexceptionable contents of the classics of Ramanuja, Vedanta - Desika and Yamuna.

The 13th chapter of the Gita is believed to throw an apple of discord and the vexata quaestio has been-what is the correct interpretation of the intriguing term "Kshetragnya"? It is well known that the term has been interpreted by Sankara in support of his Monism or Monistic Absolutism and such an interpretation has been challenged and refuted by Ramanuja and his commentators. After a complete and full dress discussion Mr. Vijiaraghavacharya clinches the matter thus - "Ekatma vadavanna helovarige Sruti Smriti Itihasa Purana vakyagaligella virodhavaguttadendu vistarisi heliddayitu" (p. 1825). Mr. Acharya maintains that the monistic or absolutistic interpretation of the term "Kshetrajnya" focussed and converging on identity between the finite self (jiva) and the Infinite (Iswara), has to be rejected as being flatly contradictory to the consolidated import of the

several sacred texts like Sruti, Smriti, et hoc. Whatever European and American Experimental Psychologists may assert in support of unmitigated Behaviorism, the Vedanta insists on the recognition of a non-material entity or entities subject to the countless vicissitudes of transmigratory career.

As the concluding stanza indicates, the 15th chapter contains an exposition of the valued secret doctrine for the guidance of genuine aspirants. ("Guhyatamamssastram".) This chapter considerably reinforces the conclusions indicated in the 13th and particularly the two celebrated stanzas "Dvavimau-Purushau...." and "Uttamah-Purushastu-anayah...." (Chap 15-16-17) convey the truth that the transmigrating entity is not identical with the Absolute, and summing up the central and cardinal conclusion in illuminating and incisive language, Mr. Acharya points out that unless the erring and struggling finite selves put forth sufficient spiritual endeavour in order to earn the grace of the Supreme Lord of the Universe, they can never hope to secure freedom from apparently endless cycles of births and deaths. Such grace, however, cannot be had for the merest asking. It is all hard and uphill task. A programme of spiritual training and practice is sketched in this chapter. (Stanzas 4 and 5 "Tatah-padma......puranee" and "Nirmanamoha-avyoma-tat".) Mr. Acharya has made it strikingly clear that Ramanuja's insistence on the practice of the spiritual programme is philosophically uncompromising and withal quite unexceptionable. He writes: "Aatana anugrahakke patraraguvadakke ee Adhyada 4-5 slokagalalli heliruva upayanushtanavannu madidarene Mokshavu..." (p.2033).

Notwithstanding the direct an unequivocal statements contained in the Githa, some have administered a pacifistic orientation to the doctrine that in certain contexts it becomes a sacred duty to fight the forces of evil, hypocrisy and humbug. To every spritual aspirant two courses of conduct are open. One course is dictated and determined by self-willed egotism or egotistic self-willedness (Kama-Kara). The other is revealed and proclaimed by consolidated wisdom ot the ages crystallised in sacred scriptures that are understood as the direction and command of the Supreme Lord (Sastravidhi). It is the latter course alone that would lead one to the promised land of Spritual bliss and unalloyed happiness. In the particular context of the Mahabharata Arjuna was told, that fight he must, as a "Kshatriya". If he ran away, he would be ridiculed as a coward. Expounding the Lord's message to Arjuna, Mr. Acharya forcibly puts the con-

